

# ಶ್ರೀಮನ್ಮಹಾಭಾರತಮ್

ವಿದ್ವಾನ್ ಘೂಳೀ ಕಷ್ಣಮೂರ್ತ್ಯಾಚಾರ್ಯ






# ಶ್ರೀಮನ್ಮಹಾಭಾರತಮ್

ಗ್ರಂಥಕರ್ತರು :

**ಭಾಗವತರತ್ನಂ ವಿದ್ವಾನ್ ಘೂಳೀ ಕೃಷ್ಣಮೂರ್ತ್ಯಾಚಾರ್ಯ**



ಪ್ರಕಾಶಕರು:

**ಶ್ರೀಮದಾನಂದತೀರ್ಥ ವಿದ್ಯಾಪೀಠ**

ಶ್ಯಾ॥ ಸಾರಣಪ್ಪ ರಸ್ತೆ, ದೊಡ್ಡಬೊಮ್ಮಸಂದ್ರ

ವಿದ್ಯಾರಣ್ಯಪುರ ಅಂಚೆ

ಬೆಂಗಳೂರು - ೫೬೦ ೦೯೭.

# ಪ್ರಥಮ ಮುದ್ರಣದ ಮುನ್ನುಡಿಯಿಂದ

ಶ್ರೀ ಲಕ್ಷ್ಮೀವೆಂಕಟೇಶನ ದಿವ್ಯಾನುಗ್ರಹದಿಂದಲು, ಶ್ರೀ ಘೂಳೀ ಪ್ರಾಣೇಶ ಭಾರತೀರಮಣರ ದಿವ್ಯ ಕೃಪೆಯಿಂದಲು, ಶ್ರೀ ರಾಘವೇಂದ್ರತೀರ್ಥ ಗುರುರಾಜರ ಕರುಣೆಯಿಂದಲು, ಶ್ರೀ ಸತ್ಯಧ್ಯಾನ ಗುರುವರರ ಆಶೀರ್ಬಲದಿಂದಲು, ಅಸ್ಮಾದಾಚಾರ್ಯ, ಪೂಜ್ಯ ಶ್ರೀ ಹುಲಗೀ ಹುಚ್ಚಾಚಾರ್ಯರವರ ಅವ್ಯಾಜ ಕೃಪೆಯಿಂದಲು ಶ್ರೀ ಮನ್ಮಹಾಭಾರತ ಗ್ರಂಥವು ಸಂಪೂರ್ಣವಾಯಿತು.

ಶ್ರೀ ವೈಶಂಪಾಯನ ಶ್ರೀ ಶುಕರಾದಿ ಮಹಾನುಭಾವರಿಂದ ಅನುವಾದಿಸಲ್ಪಟ್ಟ ಶ್ರೀ ಭಾರತವನ್ನು ನನ್ನಂತಹ ಪಾಮರನು, ನನ್ನಂತಹ ಮಂದಮತಿಯು ವಚನದಲ್ಲಿ ಅನುವಾದಿಸುವುದೆಂದರೆ ಅತ್ಯಂತ ಸಾಹಸವೇ ಸರಿ. ಆದರೂ ಕ್ರಿಮಿಯಿಂದ ರಾಜ್ಯವಾಳಿಸಿದ ಶ್ರೀ ವೇದವ್ಯಾಸದೇವನ ದಿವ್ಯ ಕರುಣಾಮೃತಶೀಕರವು ನನ್ನ ಮೇಲೆ ಹರಿದು ಈ ಸದ್ಗ್ರಂಥವನ್ನು ಬರೆಯಿಸಿತು. ಲೇಖನಿಯು ಬರೆದಂತೆ ನಾನೂ ಬರೆದಿರುವೆನು. ಅಮೃತವನ್ನು ಬಡಿಸುವ ಸೌಟಿಗೆ ಅಮೃತದ ಸವಿಗೊತ್ತೇ? ಆದರೂ ಆ ಭಾಗ್ಯವನ್ನೆನಗಿತ್ತು ಸುಜನತತಿಗೆ ಶ್ರೀ ಭಾರತಾಮೃತವನ್ನು ಉಣಿಸಿದ ಶ್ರೀಹರಿವಾಯುಗುರುಗಳ ಅಪಾರ ಕುರುಣೆಗೆ ಶಿರಬಾಗಿ, ಕೃತಜ್ಞನಾಗಿ ನಮಿಸಿ, ಶ್ರೀಮನ್ಮಹಾಭಾರತವನ್ನು ನಮ್ಮ ಆಚಾರ್ಯರವರ ಕರಕಮಲಗಳಲ್ಲಿಟ್ಟು ಶ್ರೀಹರಿವಾಯುಗುರುಗಳಿಗೆ ಸಮರ್ಪಿಸಿರುವೆನು.

ವಿದ್ವಜ್ಜನರಿಗೆ ವಿಜ್ಞಾಪಿಸುವುದು, ಅವರು ಜನರಿಗೆ ಉಪದೇಶಿಸುವುದು. ಜ್ಞಾನ ದುರ್ಲಭವಾದ ಕಾಲದಲ್ಲಿ ಕಿಂಚಿತ್ ಆದರೂ ಚಿಂತೆಯಿಲ್ಲ. ಶ್ರೀ ವೇದವ್ಯಾಸರ ಸೇವೆ ಮಾಡುವುದು - ಈ ಉಪದೇಶಗಳಿಂದ ರಚಿತವಾದ ಶ್ರೀ ಭಾರತಾಮೃತವು ಸಹೃದಯ ಸುಜನರ ಮನ್ನಣೆಗೆ - ಕೊನೆಗೆ ಒಪ್ಪಿಗೆಗೆ ಪಾತ್ರವಾದರೆ - ನಾನು ಚರಿತಾರ್ಥನೆಂದು ತಿಳಿಯುವೆನು.

ಬರೆಯಲು ಪ್ರಾರಂಭಿಸಿದುದು ಶ್ರೀ ಶ್ರೀನಿವಾಸನ ಅಡಿದಾವರೆಯ ನೆರಳಲ್ಲಿ. ಮುಗಿಸಿದುದೂ ಬೆಟ್ಟದೊಡೆಯನ ದಿವ್ಯ ಶ್ರೀ ಚರಣಾರವಿಂದ ಸಾನ್ನಿಧ್ಯದಲ್ಲಿ! ಅರ್ಪಿಸಿದುದೂ ಶ್ರೀ ಶ್ರೀನಿವಾಸ ದಿವ್ಯ ಶ್ರೀಪಾದಪದ್ಮಗಳಲ್ಲಿ, ಬ್ರಹ್ಮೋತ್ಸವದ ಪುಣ್ಯಕಾಲದಲ್ಲಿ (೧೯೭೧). ಬರುವ ಪುಣ್ಯವಿದ್ದರೆ ಅದು ನಮ್ಮ ಪೂಜ್ಯ ಆಚಾರ್ಯರ ಹೃದಯಮೂರ್ತಿ ಶ್ರೀ ಸತ್ಯಧ್ಯಾನತೀರ್ಥ ಮಹಾಪ್ರಭುಗಳದು. ಮತ್ತೆ ತದಂತರ್ಗತ ಶ್ರೀ ಮಂತ್ರಾಲಯ ಗುರುಸಾರ್ವಭೌಮರಿಗೆ ಸೇರಿದ್ದು, ಶ್ರೀಹರಿ ಗುರುಗಳಲ್ಲಿ ತಲೆಬಾಗಿ ನಿಂತು, ಕೈಜೋಡಿಸಿ, 'ಸ್ವಾಮಿನ್ ! ಶ್ರೀನಿವಾಸ ಪ್ರಾಣೇಶ ! ಗುರುರಾಜ ! ನಮೋ ನಮಃ ನನ್ನನ್ನು ನಿಮ್ಮ

ಅಡಿದಾವರೆಯ ಭಕ್ತರ ಭಕ್ತನನ್ನಾಗಿ ಸ್ವೀಕರಿಸಿ, ಕರುಣಿಸಿ, ನನ್ನ ಸರ್ವಾಪರಾಧಗಳನ್ನು ಮನ್ನಿಸಿ, ಜ್ಞಾನ-ಭಕ್ತಿ ವೈರಾಗ್ಯ ಭಾಗ್ಯವನ್ನಿತ್ತು ಉದ್ಧರಿಸೆಂದು ಬೇಡುವುದೊಂದೇ ನಮ್ಮದು.

ಈ ಮಹತ್ಕಾರ್ಯವನ್ನು ಸಾಂಗವಾಗಿ ಶ್ರೀಹರಿ ಗುರುಚರಣ ಸರಸಿಜಾರ್ಪಿತ ವಾಗುವಂತೆ ಸಾಗಗೊಳಿಸಿದ ಮತ್ತು ಆಶೀರ್ವದಿಸಿದ ಮಹಾನುಭಾವರಿಗೆ ನಾನು ಚಿರಋಣಿ ಯಾಗಿರುವೆನು.

ಶ್ರೀ ಮುಳಬಾಗಿಲು, ಸಾಗರಕಟ್ಟೆ, ಮಂತ್ರಾಲಯ, ಪೇಜಾವರ, ಫಲಿಮಾರು, ಭಂಡಾರಕೇರಿ, ಉತ್ತರಾದಿ ಮಠಗಳ ಶ್ರೀಮಾನ್ ಶ್ರೀಪಾದಂಗಳವರಿಗೆ ಅವರ ಆಶೀರ್ವಾದಗಳಿಗಾಗಿ ಅಭಿನಮಿಸುತ್ತಿರುವೆನು.

– ಘೂಳೀ ಕೃಷ್ಣಮೂರ್ತಾಚಾರ್ಯ

# ದ್ವಿತೀಯ ಮುದ್ರಣದ ಮುನ್ನುಡಿ

ಆಚಾರ್ಯ ಘೂಳೀಯವರ ಸಮಗ್ರ ಕನ್ನಡ ಮಹಾಭಾರತದ ಪ್ರತಿಗಳು ಮುಗಿದು ಈಗಾಗಲೇ ಮೂವತ್ತು ವರ್ಷಗಳಾಗಿವೆ. ಇದನ್ನು ಮತ್ತೆ ಅಚ್ಚುಕಟ್ಟಾಗಿ ಮುದ್ರಿಸಿ ಸಾರ್ವಜನಿಕರಿಗೆ ತಲುಪಿಸುವ ವಿದ್ಯಾಪ್ರಸಾರದ ಕೈಂಕರ್ಯವನ್ನು ಡಾ|| ಬಿ. ಎನ್. ವಾಸುದೇವರಾಯರು ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಸುಮಾರು ಎರಡು ಸಾವಿರ ಪುಟಗಳಲ್ಲಿ ಮಹಾಭಾರತ ಗದ್ಯವನ್ನು ಎರಡು ಸುಂದರ ಸಂಪುಟಗಳಲ್ಲಿ ಹೊರತಂದು ಭಾರತ ಪ್ರೇಮಿಗಳಿಗೆ ಮಹೋಪಕಾರ ಮಾಡಿದ್ದಾರೆ.

ಮೊದಲ ಸಂಪುಟದಲ್ಲಿ ಮಹಾಭಾರತದ ಆದಿ ಪಂಚಕಗಳಿದ್ದರೆ ಈ ಎರಡನಯ ಸಂಪುಟದಲ್ಲಿ ಯುದ್ಧ ಪಂಚಕಗಳೂ ಹಾಗೂ ಯುದ್ಧಾನಂತರದ ಅಷ್ಟಪರ್ವಗಳೂ ಇವೆ. ಇವನ್ನೆಲ್ಲ ಪ್ರಮಾಣವರಿತು ಸೊಗಸಾಗಿ ಸಂಗ್ರಹಿಸಿ ಸುಂದರವಾದ ಸರಳಾನುವಾದ ಮಾಡಿಕೊಟ್ಟಿರುವ ಶ್ರೀ ಘೂಳೀಯವರನ್ನು ಮುಂದಿನ ತಲೆಮಾರು ಕೃತಜ್ಞತೆಯಿಂದ ಸ್ಮರಿಸುವಂತಾಗಲೆಂದು ಹಾರೈಸುತ್ತೇನೆ.

ವ್ಯಾಸರ '**ಮನಸ್ಸಾಗರ ಸಂಭೂತ**'ವಾದ ಮಹಾಭಾರತದಂಥ '**ಸರ್ವಮಂಗಲ ಮಹೀಯಸೀ**' ಎನಿಸಿಕೊಂಡ ಗ್ರಂಥವನ್ನು ವಿಶ್ವದ ಬೇರೆ ಭಾಷೆಗಳ ಮಹಾಕಾವ್ಯಗಳೊಂದಿಗೆ ಹೋಲಿಸುವುದು ಕೂಡ ಸರಿಯಲ್ಲ , ಏಕೆಂದರೆ

**ಪರ್ವತೇ ಪರಮಾಣೌ ಚ**
**ಪದಾರ್ಥತ್ವಂ ಪ್ರತಿಷ್ಠಿತಂ**

ಪರಮಾಣುವೂ ಒಂದು ಪದಾರ್ಥ, ಪರ್ವತವೂ ಒಂದು ಪದಾರ್ಥ. ಆದರೆ ಅವೆರಡಕ್ಕೆ ಹೋಲಿಕೆ ಎಲ್ಲಿ? ಪರ್ವತ ಪರ್ವತವೇ ಎಂಬಂತೆ ಮಹಾಭಾರತ ಮಹಾಭಾರತವೇ. ಗ್ರಂಥವಿಸ್ತಾರದಲ್ಲಿ, ವಿಷಯ ವೈವಿಧ್ಯದಲ್ಲಿ ವಸ್ತುಗೌರವದಲ್ಲಿ ಅದಕ್ಕೆ ಸಾಟಿಯಾದ ಗ್ರಂಥ ಯಾವುದೂ ಇಲ್ಲ. ಇದರ ಮಹತ್ತಿಗೆ ಇನ್ನೊಂದು ಕಾರಣವೂ ಇದೆ. ಭಾರತ ಎಂದರೆ ನಮ್ಮ ಪುರಾತನ ವೈದಿಕ ಸಂಸ್ಕೃತಿ ಧರ್ಮನಿಬಂಧನೆಗಳಿಗೆ ಒಂದು ಪೌರಾಣಿಕ ರೂಪ ಕಲ್ಪನೆ ಎನ್ನುತ್ತಾರೆ. ಇದನ್ನೇ 'ಉಪಬೃಂಹಣ' ಎನ್ನುವುದೂ ಉಂಟು.

ಎರಡನೆಯ ಈ ಸಂಪುಟದಲ್ಲಿ ಯುದ್ಧ ಮತ್ತು ಯುದ್ಧಾ ನಂತರದ ಪಾಂಡವರ - ಯಾದವರ ಕಥಾನಕಗಳಿವೆ. ಯುದ್ಧ ವಿವರಗಳೇ ಅಲ್ಲದೆ ಭೀಷ್ಮ ಪರ್ವದಲ್ಲಿ ಬರುವ ಭಗವದ್‌ಗೀತೆಯಲ್ಲಿ ಶ್ರೀಕೃಷ್ಣನು ಕರ್ಮ, ಭಕ್ತಿ, ಧ್ಯಾನ, ಜ್ಞಾನ ಚತುಷ್ಟಯಗಳನ್ನು

ನಿಖಿಲಾರ್ಥಸಾಧಕಗಳನ್ನಾಗಿ ವಿವರಿಸಿರುವುದರಿಂದ ಇದರ ಅಧ್ಯಾತ್ಮಿಕ ಮಹತ್ತ್ವವೂ ಹೆಚ್ಚಿನದೇ ಆಗಿದೆ. ದ್ರೋಣಪರ್ವದಲ್ಲಿ ವೀರ, ರೌದ್ರ, ಕರುಣರಸಗಳ ಸಮಗ್ರ ಪ್ರತಿಪಾದನೆಯಿದೆ. ಕರ್ಣಪರ್ವವು ಅದೃಷ್ಟಹೀನತೆಯ ವ್ಯಾಖ್ಯೆ ಎನ್ನಬಹುದು. ಕೌರವನ ದುಃಸ್ಥಿತಿ ಹಾಗೂ ಭೀಮ-ಸುಯೋಧನರ ಗದಾಯುದ್ಧಗಳೇ ಗದಾಪರ್ವದ ವಸ್ತುವಾಗಿದೆ. ಸೌಪ್ತಿಕ ಪರ್ವವು ಅಶ್ವತ್ಥಾಮನ ಇರುಳ ಚಟುವಟಿಕೆಗಳ ಕರುಳಿರಿಯುವ ಕ್ರೌರ್ಯಗಳಿಗೆ ಕನ್ನಡಿ ಹಿಡಿಯುತ್ತದೆ. ಪರಾಕ್ರಮ ಪ್ರದರ್ಶನದ ನಂತರ ಬಿದ್ದ ಹೆಣಗಳ ರಾಶಿಯ ಚಿತ್ರವು ಆ ಸೈನಿಕರ ಹೆಂಡತಿಯರನ್ನು ಮಾತೆಯರನ್ನು ಕಾಣಿಸುವ ಕರುಣ ರಸಾತ್ಮಕವಾದ ಚಿತ್ರಣಗಳಿಂದ ಸ್ತ್ರೀಪರ್ವವು ಇಡಿಕಿರಿದಿದೆ. ಹೀಗೆ ಪರ್ವದಿಂದ ಪರ್ವಕ್ಕೆ ಬೆಳೆಯುವ ಭಾರತವು ಅಶ್ವಮೇಧ ಪರ್ವದಲ್ಲಿ ಪಾಂಡವ ವೀರ ಅರ್ಜುನನ ಪರಾಭವ ಮಾಲೆಯನ್ನು ಚಿತ್ರಿಸಿದರೆ, ಅನುಶಾಸನ ಪರ್ವದಲ್ಲಿ ರಾಜನೀತಿ, ಧರ್ಮ, ಅನುಷ್ಠಾನ ವೇದಾಂತಗಳ ಸಾರವನ್ನು ಕೊಡುವುದರಲ್ಲಿ ಯಶಸ್ವಿಯಾಗಿದೆ. ಶಾಂತಿ ಪರ್ವದಲ್ಲಿ ಧರ್ಮರಾಜನ ಪಟ್ಟಾಭಿಷೇಕದ ವಿಷಯವೇ ಅಲ್ಲದೆ ಆಪದ್ಧರ್ಮ-ಮೋಕ್ಷಧರ್ಮಗಳ ಪ್ರಸಕ್ತಿಯೂ ವರ್ಣಿತವಾಗಿದೆ. ಹೀಗೆಯೇ ಆಶ್ರಮವಾಸಿಕ, ಮೌಸಲಪರ್ವಗಳಲ್ಲಿ ಧೃತರಾಷ್ಟ್ರಾದಿಗಳ ಮರಣ ವೃತ್ತಾಂತದ ವಿವರಗಳೂ ಯಾದವರ ಯಾದವೀಕಲಹದ ವಿಚಾರಗಳೂ ಪ್ರಸ್ತುತಗೊಂಡಿವೆ. ಕೊನೆಯ ಮಹಾಪ್ರಸ್ಥಾನಿಕ ಹಾಗೂ ಸ್ವರ್ಗಾರೋಹಣ ಪರ್ವಗಳು ಪಾಂಡವರ ಮಹಾಪ್ರಸ್ಥಾನವನ್ನೂ ಸ್ವರ್ಗ-ನರಕ ವಿಷಯವನ್ನು ತಿಳಿಸಿಕೊಡುತ್ತವೆ. ಇಷ್ಟು ದೀರ್ಘ ಕಥನವನ್ನು ಘೂಳೀಯವರು ಮೂಲಭಾರತ ಹಾಗೂ ಆಚಾರ್ಯ ಮಧ್ವರ ವ್ಯಾಖ್ಯಾನಗಳ ಸಹಾಯದಿಂದ ಸರಳ ಕನ್ನಡದಲ್ಲಿ ಸೊಗಸಾಗಿ ಸಂಗ್ರಹಿಸಿಕೊಟ್ಟಿದ್ದಾರೆ. ಮೂಲಭಾರತದ ಒಟ್ಟು ಆಶಯಕ್ಕೆ ಕುಂದುಬರದಂತೆ ಅರ್ಥಚ್ಯುತಿಯಾಗದಂತೆ ಸಾರರೂಪಿಯಾದ ಸಂಗ್ರಾಹಾನುವಾದವನ್ನು ನಮ್ಮ ಕನ್ನಡಿಗರಿಗೆ ಒದಗಿಸಿ ಕೃತಕೃತ್ಯರಾಗಿದ್ದಾರೆ.

ನಮ್ಮ ಇಂದಿನ ಯುವಕ ಯುವತಿಯರು ಈ ಮಹಾಭಾರತವನ್ನು ಓದಿ ವ್ಯಾಸರ ರಚನಾ ವೈಶಿಷ್ಟ್ಯವನ್ನೂ ಭಾವ ವೈಶಾಲ್ಯವನ್ನೂ ಪಾತ್ರ ನಿರ್ವಹಣ ಕೌಶಲವನ್ನೂ ಕಲಾತ್ಮಕತೆಯನ್ನೂ ಅರ್ಥಮಾಡಿಕೊಳ್ಳುವಂತಾಗಲಿ ಎಂದು ಹಾರೈಸುತ್ತೇನೆ. ಆಗಾಗ ಇಂಥ ಅನುವಾದ ಗ್ರಂಥಗಳು ಪ್ರಚುರವಾಗುತ್ತಿದ್ದರೆ ನಮ್ಮ ಸಾಂಸ್ಕೃತಿಕ ಪರಂಪರೆ ಜೀವಂತವಾಗಿ ಮೆರೆಯಲು ಸಾಧ್ಯವಾದೀತು. ಏಕೆಂದರೆ ಮಹಾಭಾರತವು ಭರತಖಂಡದ ಸಂಸ್ಕೃತಿಯ ಪ್ರದರ್ಶನಾಲಯವಾಗಿದೆ. ಇದು ನಮ್ಮ ಬದುಕಿನಲ್ಲಿ ಎಷ್ಟು ಮಹತ್ತ್ವಪೂರ್ಣವಾಗುತ್ತದೆ ಎಂಬುದನ್ನು ಮಹಾಭಾರತದ ಆದಿಪರ್ವದ ಎರಡನೆಯ ಸಂಧಿಯ ೨೪೫ನೇ ಶ್ಲೋಕ ಸಮರ್ಥವಾಗಿ ವಿವರಿಸುತ್ತದೆ.

**ಕ್ರಿಯಾಗುಣಾನಾಂ ಸರ್ವೇಷಾಂ ಇದಮಾಖ್ಯಾನಮಾಶ್ರಯಃ**
**ಇಂದ್ರಿಯಾಣಾಂ ಸಮಸ್ತಾನಾಂ ಚಿತ್ರಾ ಇವ ಮನಃಕ್ರಿಯಾಃ**

ಇಂದ್ರಿಯಗಳ ಚಟುವಟಿಕೆಗಳಿಗೆ ನೆರವೀಯುವ ಮನಃಕ್ರಿಯೆಯಂತೆ ಎಲ್ಲ ಮಾನವ ಚಟುವಟಿಕೆಗಳಿಗೆ ಈ ಮಹಾಭಾರತ ನೆರವು ನೀಡುತ್ತದೆ. ಆದುದರಿಂದ ಈ ಗ್ರಂಥವನ್ನು ಮನನ ಮಾಡಿಕೊಂಡರೆ ಮನಸ್ಸಿನ ಆಳವಾದ ಶುದ್ಧವಾದ ಧೃತಿ ಎಂಬ ಸರೋವರದಲ್ಲಿ, ಸತ್ಯತೀರ್ಥದಲ್ಲಿ ಸ್ನಾನಮಾಡಬಹುದು ಎಂದು ಭೀಷ್ಮರು ಶಾಂತಿಪರ್ವದಲ್ಲಿ ಧರ್ಮರಾಯನಿಗೆ ಹೇಳಿದ್ದಾರೆ:

**"ಅಗಾಧೇ ವಿಮಲೇ ಶುದ್ಧೇ ಸತ್ಯತೀರ್ಥೇಧೃತಿಹ್ರದೇ**
**ಸ್ನಾತವ್ಯಂ ಮಾನಸೇ ತೀರ್ಥೇ ಸತ್ವಮಾಲಂಬ ಶಾಶ್ವತಂ"**

ಮಹಾಭಾರತವನ್ನು "A great source of Universal Knowledge" ಎಂದು ಶ್ರೀ ತಾದಾನಿಯವರು ಕರೆದಿದ್ದಾರೆ. ನಮ್ಮ ದೇಶದ ಉತ್ತರ ಮೇರೆಯಲ್ಲಿ ಹಿಮಾಲಯ ನಮ್ಮ ಶ್ರೀರಕ್ಷೆಗಿರುವಂತೆ ಶ್ರೀಮನ್ಮಹಾಭಾರತವು ನಮ್ಮ ಮನೋರಕ್ಷೆಗೆ ಸಿದ್ಧವಾಗಿ ನಿಂತಿದೆ. ಶ್ರೀ ಘೂಳೀಯವರ ಈ ಸರಳ ಸಮರ್ಪಕ ಗದ್ಯಾನುವಾದವು ಎಲ್ಲರ ಮನೆ-ಮನಗಳನ್ನು ಬೆಳಗಲಿ ಎಂದೂ ಇಂಥ ಗ್ರಂಥಪ್ರಕಾಶನ ಮಾಡಲು ಮುಂದೆ ಬಂದಿರುವವರ ಆಶಯ ನೆರವೇರಲೆಂದೂ ಹಾರೈಸುತ್ತೇನೆ.

**ಪ್ರೊ॥ ಅ. ರಾ. ಮಿತ್ರ**

ಸ್ವಭಾನು ಸಂ॥ ಶ್ರಾವಣ ಶುದ್ಧ ನವಮಿ.
೭-೮-೨೦೦೩.

# ಪ್ರಕಾಶಕರ ನುಡಿ

ನಮ್ಮ ಪ್ರಕಾಶನದ ವತಿಯಿಂದ ೩೩ನೇ ಕುಸುಮವಾಗಿ ವೇ|| ಬ್ರ|| ಘೂಳೀ ಕೃಷ್ಣಮೂರ್ತ್ಯಾಚಾರ್ಯರ ಶ್ರೀಮದ್ಭಾಗವತಮ್ ಬೃಹದ್ಗ್ರಂಥ ಪ್ರಕಟಗೊಂಡು ಈಗಾಗಲೇ ಹದಿನಾರು ವರುಷಗಳೇ ಕಳೆದುಹೋದವು.

ವೇ|| ಬ್ರ|| ಘೂಳೀ ಕೃಷ್ಣಮೂರ್ತ್ಯಾಚಾರ್ಯರನ್ನು ನಮಗೆ ಪರಿಚಯಿಸಿ ಅವರ ಪಾಂಡಿತ್ಯದ ಬಗ್ಗೆ ಮನವರಿಕೆ ಮಾಡಿಕೊಟ್ಟವರು ಪ್ರಸಿದ್ಧ ಗಮಕ ವಿದ್ವಾಂಸರೂ, ಹಿರಿಯ ಸಾಹಿತಿಗಳೂ ನಮ್ಮ ಹಿತಚಿಂತಕರೂ ಆಗಿದ್ದ ಕಿ|| ಶೇ|| ಮೈ. ಶೇ. ಅನಂತ ಪದ್ಮನಾಭರಾಯರು. ಅವರ ಸಲಹೆಯಂತೆ ಆಗ ಭಾಗವತ ಮಹಾಗ್ರಂಥವು ಹೊರಬರಲು ಕಾರಣವಾಯಿತು. ಈಗ ಅವರ ಮಕ್ಕಳಾದ ಗಮಕಕಲಾ ಕೇಸರಿ ಎಂ. ಎ. ಜಯರಾಮರಾಯರು ನಮ್ಮ ಸಲಹೆಗಾರರಾಗಿ ಶ್ರಮಿಸುತ್ತಿದ್ದಾರೆ.

ಅದರಂತೆ ಮತ್ತೊಂದು ಬೃಹದ್ಗ್ರಂಥ ಘೂಳೀ ಕೃಷ್ಣಮೂರ್ತ್ಯಾಚಾರ್ಯರ ಶ್ರೀಮನ್ಮಹಾಭಾರತಮ್ ಈಗ ಎರಡು ಸಂಪುಟಗಳಲ್ಲಿ ೩೪ - ೩೫ನೇ ಪ್ರಕಟಣೆಯಾಗಿ ನಮ್ಮ ಪ್ರಕಾಶನದಿಂದ ಪ್ರಕಟಗೊಳ್ಳುತ್ತಿರುವುದು ನಮ್ಮ ಸುದೈವ. ಈಗಾಗಲೇ ಇದರ ಪ್ರಥಮ ಸಂಪುಟವಾಗಿ ಆದಿ-ಸಭಾ-ವನ-ವಿರಾಟ-ಉದ್ಯೋಗ ಪರ್ವಗಳ ಕಥಾವಿವರಣೆ ತಮ್ಮ ಕೈಸೇರಿದೆ. ಈಗ ಎರಡನೆ ಸಂಪುಟ ನಿಮ್ಮ ಕೈಸೇರುತ್ತಿದೆ. ಈ ಶ್ರೀಮನ್ಮಹಾಭಾರತದ ಎರಡನೆಯ ಸಂಪುಟ ಹೊರಬರಲು ಶ್ರೀ ಎಂ. ಎ. ಜಯರಾಂರಾವ್ ಅವರು ಕಾಯಾ ವಾಚಾ ಮನಸಾ ದುಡಿದಿದ್ದಾರೆ.

ಶ್ರೀ ಘೂಳೀ ಆಚಾರ್ಯರ ಶ್ರೀಮದ್ಭಾಗವತಮ್ ಗ್ರಂಥ ಅತ್ಯಂತ ಜನಪ್ರಿಯವಾಗಿ ಈಗ ಅದರ ಪ್ರತಿಗಳೆಲ್ಲ ಮುಗಿಯುತ್ತಾ ಬಂದಿವೆ. ಅದೇ ರೀತಿಯ ಜನಪ್ರಿಯತೆಯನ್ನು ಈ ಮಹಾಸಂಪುಟಗಳೂ ಗಳಿಸುತ್ತವೆಂಬ ಆಶಯ ನಮ್ಮದು. ಕಾರಣ ಇಂದು ಮಹಾಭಾರತದ ಕಥಾ ಪ್ರಸಂಗಗಳು ಕಾವ್ಯರೂಪದಲ್ಲಿ ಹೊರಬಂದಿವೆ. ಆದರೆ ಎಲ್ಲ ವಿವರಗಳನ್ನೊಳಗೊಂಡು ಸಟೀಕಾ ತಾತ್ಪರ್ಯ ಸಹಿತ ಸರಳವಾದ ಕನ್ನಡದಲ್ಲಿ ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯ ಶೈಲಿಯಲ್ಲಿ ರಚಿಸಲ್ಪಟ್ಟ ಗ್ರಂಥವೆಂದರೆ ಇದೊಂದೇ. ಇದಕ್ಕಾಗಿ ವೇ|| ಬ್ರ|| ಘೂಳೀ ಆಚಾರ್ಯರಿಗೆ ನಾವು ಕೃತಜ್ಞರಾಗಿರಬೇಕು. ಇವರು 'ಭಾಗವತರತ್ನಂ' ಎಂದೇ ಪ್ರಸಿದ್ಧರಾಗಿ ಸಂಸ್ಕೃತ-ಕನ್ನಡ ಭಾಷೆಗಳೆರಡರಲ್ಲೂ ಅಪ್ರತಿಮ ಪಾಂಡಿತ್ಯ ಹೊಂದಿದ್ದು ಭಾರತ, ಭಾಗವತ, ಅಷ್ಟಾದಶ ಪುರಾಣಗಳೆಲ್ಲವನ್ನೂ ಓದಿ, ಮಥಿಸಿ, ಮನನ ಮಾಡಿಕೊಂಡವರು. ಮಧ್ವಶಾಸ್ತ್ರಭೂಷಣ ಎಂದೇ ಖ್ಯಾತರಾಗಿದ್ದ ಹುಲಿಗಿ ರಾಘವೇಂದ್ರಾಚಾರ್ಯರು, ನ್ಯಾಯವೇದಾಂತರತ್ನಂ ಹುಲಿಗಿ ಹುಚ್ಚಾಚಾರ್ಯರಂಥ ಪ್ರಕಾಂಡ ಪಂಡಿತರ ಶಿಷ್ಯರಾಗಿ ನ್ಯಾಯ, ವೇದಾಂತ, ತರ್ಕ ಶಾಸ್ತ್ರಾದಿ ಗ್ರಂಥಗಳನ್ನು ಅಧ್ಯಯನ ಮಾಡಿದಂಥ ಪರಮ ಮೇಧಾವಿಗಳಾಗಿದ್ದವರು. ಅಷ್ಟೇ ಸಾಲದೆಂಬಂತೆ

# ಅರ್ಪಣೆ



ನಮ್ಮ ಪರಮಪೂಜ್ಯ ತಂದೆಯವರಾದ ಆಯುರ್ವೇದ ಪಂಡಿತರತ್ನ

**ದಿ|| ಶ್ಯಾನುಭೋಗ್ ನಾರಣಪ್ಪನವರ**

**ಸ್ಮರಣಾರ್ಥ**

ಈ ಗ್ರಂಥವನ್ನು ಭಕ್ತಿಯಿಂದ ಸಮರ್ಪಿಸಲಾಗಿದೆ

**ಮಹಾಶಾಲಾ ಡಾ|| ಬಿ.ಎನ್. ವಾಸುದೇವರಾವ್**

ಪ್ರಕಾಶಕರು

ಶ್ರೀಮದುತ್ತರಾದಿ ಮಠಾಧೀಶರಾಗಿದ್ದ ಶ್ರೀ ಶ್ರೀ ಸತ್ಯಧ್ಯಾನತೀರ್ಥರ ಪರಮ ಶಿಷ್ಯರಾಗಿ ಅವರ ಅಪಾರ ಅನುಗ್ರಹಕ್ಕೆ ಪಾತ್ರರಾಗಿದ್ದವರು.

ಶ್ರೀಯುತ ಘೂಳೀ ಆಚಾರ್ಯರು ಕೇವಲ ಶಾಸ್ತ್ರಪರಿಣತರೂ, ಗ್ರಂಥಕರ್ತರೂ ಮಾತ್ರವಲ್ಲದೆ ಉತ್ತಮ ವಾಗ್ಮಿಗಳೂ ಸಹ ಆಗಿದ್ದವರು. ಅವರ ಪುರಾಣಾದಿ ಪ್ರವಚನಗಳನ್ನು ಇಂದಿಗೂ ಜ್ಞಾಪಿಸಿಕೊಳ್ಳುತ್ತೇವೆ.

ಇವರ ಸುಪುತ್ರರಾದ ವೇ|| ಬ್ರ|| ಬದರೀನಾಥಾಚಾರ್ಯ ಘೂಳಿಯವರೂ ತಂದೆಯ ಜಾಡಿನಲ್ಲೆ ಹೆಜ್ಜೆಯಿಟ್ಟು ತಾವೂ ಶಾಸ್ತ್ರಪರಿಣತರಾಗಿ, ಪ್ರವಚನಕಾರರಾಗಿ ಜನಪ್ರಿಯರಾಗಿದ್ದಾರೆ. ತಂದೆಯವರಿಂದ ರಚಿತ ಶ್ರೀಮನ್‌ಮಹಾಭಾರತಮ್ ಕೃತಿಯ ಪ್ರಕಟನಾ ಕಾರ್ಯದಲ್ಲಿ ಅವರ ಪಾತ್ರವು ಇದ್ದು ತನ್ಮೂಲಕ ಗುರು ಋಣ ಹಾಗೂ ಪಿತೃ ಋಣವನ್ನು ತೀರಿಸುತ್ತಿದ್ದಾರೆ.

ಈ ಗ್ರಂಥಕ್ಕೆ ನಮ್ಮ ಕೋರಿಕೆಯಂತೆ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟಂತಹ ಪ್ರೊ|| ಅ. ರಾ. ಮಿತ್ರ ಅವರಿಗೆ ಅನಂತ ಧನ್ಯವಾದಗಳು.

ಈ ಗ್ರಂಥದ ಮುದ್ರಣದ ಜವಾಬ್ದಾರಿಯನ್ನು ವಹಿಸಿಕೊಂಡು ಅತ್ಯಲ್ಪ ಕಾಲದಲ್ಲಿ ಅಂದವಾಗಿ ಈ ಸಂಪುಟವನ್ನು ಮುದ್ರಿಸಿಕೊಟ್ಟಿರುವ ಮಯೂರ್ ಪ್ರಿಂಟ್-ಆ್ಯಡ್ಸ್‌ನ ಮಾಲೀಕರೂ, ಸಹೃದಯಿಗಳೂ ಆಗಿರುವ ಸನ್ಮಾನ್ಯ ಬಿ. ಎಲ್. ಶ್ರೀನಿವಾಸ ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಈ ಮಹತ್ಕಾರ್ಯದಲ್ಲಿ ಶ್ರೀ ಜಿ. ವಿ. ಕೃಷ್ಣ ಅವರು ಸಕ್ರಿಯವಾಗಿ ಭಾಗವಹಿಸಿ ಉಪಕರಿಸಿದ್ದಾರೆ. ಅವರಿಗೂ ನಾವು ಆಭಾರಿಯಾಗಿದ್ದೇವೆ.

ಇದರ ಪ್ರಕಟಣಾ ಸಂದರ್ಭದಲ್ಲಿ ಭಾರತದ ಬಿಡಿ ಸಂಪುಟಗಳನ್ನು ಕೊಟ್ಟು ಮುದ್ರಣಕ್ಕೆ ನೆರವಾದ ಶ್ರೀ ಬಿ. ಹೆಚ್. ಪ್ರಾಣೇಶರಾಯರ ಸುಪುತ್ರರಾದ ಶ್ರೀ ಭಟ್ಟರಹಳ್ಳಿ ರಮಾನಾಥ ಅವರಿಗೆ ನಮ್ಮ ವಿಶೇಷ ಧನ್ಯವಾದಗಳು.

ಇದು ಮನೆ ಮನೆಯಲ್ಲೂ ಇರಬೇಕಾದಂತಹ ಸದ್ಗ್ರಂಥ. ಪಂಡಿತಪಾಮರರಾದಿಯಾಗಿ ಸರ್ವರೂ ಏಕಮುಖವಾಗಿ ಇದನ್ನು ಬರಮಾಡಿಕೊಳ್ಳುವರೆಂದು ಆಶಿಸುವ,

ಸಜ್ಜನ ವಿಧೇಯ

**ಮಹಾಶಾಲಾ ಡಾ|| ಬಿ. ಎನ್. ವಾಸುದೇವರಾವ್**

ಪ್ರಕಾಶಕರು ಹಾಗೂ ಅಧ್ಯಕ್ಷರು

ಶ್ರೀಮದಾನಂದತೀರ್ಥ ವಿದ್ಯಾಪೀಠ
ಶ್ಯಾ|| ನಾರಣಪ್ಪ ರಸ್ತೆ, ದೊಡ್ಡ ಬೊಮ್ಮಸಂದ್ರ,
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು - ೫೬೦ ೦೯೭
ಶ್ರಾವಣ ಶುದ್ಧ ನವಮಿ, ಸ್ವಭಾನು ಸಂವತ್ಸರ
ಬುಧವಾರ, ತಾ|| ೬-೮-೨೦೦೩.

# ವಿಷಯಾನುಕ್ರಮಣಿಕೆ

---o---

## ೬. ಭೀಷ್ಮ ಪರ್ವ

## ೭. ದ್ರೋಣ ಪರ್ವ

## ೮. ಕರ್ಣ ಪರ್ವ

## ೯. ಶಲ್ಯ ಪರ್ವ



## ೧೦. ಗದಾ ಪರ್ವ



## ೧೧. ಸೌಪ್ತಿಕ ಸ್ತ್ರೀ ಪರ್ವ

## ಸ್ತ್ರೀ ಪರ್ವ



## ೧೨. ಶಾಂತಿ ಪರ್ವ



### ರಾಜಧರ್ಮ

## ಆಪದ್ಧರ್ಮ



## ಮೋಕ್ಷ ಧರ್ಮ

## ೧೩. ಆನುಶಾಸನಿಕ ಪರ್ವ

## ೧೪. ಅಶ್ವಮೇಧಿಕ ಪರ್ವ



## ೧೫. ಆಶ್ರಮವಾಸಿಕ ಪರ್ವ

## ೧೬. ಮೌಸಲ ಪರ್ವ



## ೧೭. ಮಹಾಪ್ರಸ್ಥಾನಿಕ ಪರ್ವ



## ೧೮. ಸ್ವರ್ಗಾರೋಹಣ ಪರ್ವ

# ಶ್ರೀಮನ್ಮಹಾಭಾರತಮ್

## ೬. ಭೀಷ್ಮಪರ್ವ

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್॥**

### ೧. ಶ್ರೀ ವ್ಯಾಸವಚನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು.

ರಾಜನ್! ಶ್ರೀಕೃಷ್ಣ ಭಕ್ತರಾದ ಪಾಂಡವರು ಸಮರ್ಥರಾದರೂ ಸತ್ಯಧರ್ಮ ಪರರಾಗಿ, ಮಾತಿನಂತೆ ವನವಾಸಾಜ್ಞಾತವಾಸಗಳನ್ನು ಮುಗಿಸಿದರು. ತಮ್ಮದಾದ ರಾಜ್ಯವನ್ನು ತಮಗೆ ತಿರುಗಿ ಕೊಡದ ದುರ್ಯೋಧನನಿಂದ ಯುದ್ಧಮಾಡಲು ಸಿದ್ಧರಾದರು. ಅವರಿಗೆ ಭಗವಂತನು ಉಪದೇಶಾದಿ ಸಹಾಯವನ್ನಿತ್ತು ಸಲಹಿದನು. ಕೊನೆಗೆ ಆಯುಧವನ್ನು ಪಿಡಿಯುವುದಿಲ್ಲವೆಂದ ಶ್ರೀಹರಿಯು ಭಕ್ತವತ್ಸಲತೆಯನ್ನು ತೋರಿ ಆಯುಧವನ್ನು ಪಿಡಿದು ಭೀಷ್ಮನ ಮೇಲೇರಿ ಬಂದನು.

ಇಂತಹ ಶ್ರೀಕಾಂತನ ಅಪ್ರಮೇಯ ಮಹಿಮೆಯನ್ನು ಕೇಳಿ ಸಾಕೆನಿಸದ ಜನಮೇಜಯನು 'ಮುಂದೆ ಧರ್ಮರಾಜನೇನು ಮಾಡಿದನು? ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧವೆಂತು, ಎಷ್ಟುದಿನ ನಡೆಯಿತು. ?' ಎಂದು ಕೇಳಿದನು. ವೈಶಂಪಾಯನನಿಂತೆಂದನು:

ಪಾಂಡವಸೇನೆಯು ಕುರುಕ್ಷೇತ್ರದ ಬಯಲಿನ ಪಶ್ಚಿಮಭಾಗದಲ್ಲಿ ಪ್ರಾಙ್ಮುಖವಾಗಿ ನೆಲೆಸಿತು. ಕುರುಕ್ಷೇತ್ರದಲ್ಲಿ ನೆರೆದಿದ್ದ ಉಭಯ ಸೈನ್ಯಗಳಲ್ಲಿ ಭೂಮಂಡಲದ ಯುವಕಕ್ಷತ್ರಿಯರೆಲ್ಲರಿದ್ದರು. ಬಾಲವೃದ್ಧರನ್ನು ಬಿಟ್ಟು ಸರ್ವ ಜಂಬೂದ್ವೀಪದ ವೀರರೆಲ್ಲರು ಅಲ್ಲಿ ಯುದ್ಧಾಕಾಂಕ್ಷಿಗಳಾಗಿ ಬಂದಿದ್ದರು. ಅವರಿಗೆ ಬೇಕಾದ ಶಯನಾಸನ ಭೋಜನವಸನಭೂಷಣಗಳನ್ನು ಕೌರವ - ಧರ್ಮರಾಜರು ಒದಗಿಸಿದ್ದರು.

ಧರ್ಮರಾಜನು ಶ್ವೇತಚ್ಛತ್ರದ ಅಡಿಯಲ್ಲಿ ನಿಂತು, ನಕ್ಷತ್ರಗಣದಿ ಚಂದ್ರಮನಂತೆ ವಿರಾಜಿಸಿದನು. ಅವನ ಸೈನ್ಯವು ಉತ್ಸಾಹಭರಿತವಾಗಿ, ಶಂಖಗಳನ್ನೂದುತ್ತಿತ್ತು. ಶ್ರೀಕೃಷ್ಣ ಧನಂಜಯ ಭೀಮರು ಪಾಂಚಜನ್ಯ ದೇವದತ್ತ ಪೌಂಡ್ರಗಳನ್ನು ಊದಿದರು. ಅನಂತ ವಿಜಯವನ್ನೂದಿದ ಧರ್ಮರಾಜನನ್ನನುಸರಿಸಿ ಸಕಲ ಸೇನೆಯು ಶಂಖಧ್ವಾನ ಸಿಂಹ ಗರ್ಜನೆಗಳನ್ನು ಮಾಡಿದಾಗ ಪುಟ್ಟಿದ ಘೋರ ಶಬ್ದದಿಂದ ಕಿವಿಗಡಚಿಕ್ಕಿ ಕೌರವಸೇನೆಯು ತತ್ತರಿಸಿತು.

ಎರಡು ಸಾಗರಗಳು ಢಿಕ್ಕೊಳ್ಳುವಂತೆ ತೋರುವ ಎರಡು ಸೈನ್ಯಗಳು ಎದುರು

ಬದಿರಾಗಿ ನಿಂತಾಗ, ಸೇನಾಪ್ರಮುಖರು ಕಲೆತು ಯುದ್ಧಮರ್ಯಾದೆಗಳನ್ನು ನಿಯಮಗಳನ್ನು ನಿರ್ಣಯಿಸಿದರು. ಯುದ್ಧವು ಮುಗಿದಾಗಲು, ವಿರಾಮಗಳಲ್ಲಿಯು ವೈರವಿಲ್ಲ. ಪರಾಙ್ಮುಖನನ್ನು, ನಿರಾಯುಧನನ್ನು, ಶರಣಾಗತನನ್ನು ಕೊಲ್ಲಲಾಗದು ; ಪರರಿಂದ ಕಡಿದಾಡುವವನನ್ನು ಬಡಿಯಬಾರದು. ಸಮರಾದವರನ್ನೆ ಆರಿಸಿ ಕಾದಲಬಹುದು; ಮಾತಿಗೆ ಮಾತೇ ಉತ್ತರವಾಗಿರಬೇಕು, ಬಾಣಪ್ರಯೋಗವಾದಾಗ ಬಾಣಪ್ರಯೋಗ. ವಿಹ್ವಲರನ್ನು, ದೀನರನ್ನು ನಿದ್ರಾಪಾನ ವಿಸರ್ಜನಾದಿ ವ್ಯಾಪಾರನಿರತರನ್ನು ಕೊಲ್ಲಬಾರದು. ಸೂತತುರಗ ಶಿಲ್ಪಾಚಕ ವೈದ್ಯರನ್ನು ಕೊಲ್ಲಬಾರದು, ಭೇರ್ಯಾದಿ ವಾದಕರನ್ನು ಹಿಂಸಿಸಬಾರದು. ಇತ್ಯಾದಿ ನಿಬಂಧನೆಗಳನ್ನು ಮಾಡಿಕೊಂಡು, ಉಭಯ ಸೈನಿಕರು ಅಂದು ಪರಸ್ಪರ ಮಿಲಿತರಾಗಿ ಆನಂದದಿಂದಿದ್ದರು.

ಭಗವಾನ್ ವೇದವ್ಯಾಸರು ಮಹಾಘೋರ ಸಂಗ್ರಾಮವು ಜರುಗುವುದೆಂದು ತಿಳಿದು, ಧೃತರಾಷ್ಟ್ರನನ್ನು ಏಕಾಂತದಲ್ಲಿ ಕಂಡು, ಇಂತೆಂದರು: 'ರಾಜನ್! ಕಾಲದಿಂದ ಪಕ್ವರಾಗಿರುವ ರಾಜನ್ಯರು ಕುರುಕ್ಷೇತ್ರದಲ್ಲಿ ಫಲಗಳಂತೆ ಪಟ ಪಟ ಉದುರಿ ಬೀಳುವರು. ಕಾಲ ಬಲದಿಂದ ಅಳಿಸಿಹೋಗುವ ಜನರಿಗಾಗಿ ಶೋಕಿಸಿ ಫಲವಿಲ್ಲ, ಸುಮ್ಮನೆ ಚಿಂತಿಸಬೇಡ ! ದೈವ ಸಂಕಲ್ಪಕ್ಕೆದುರಿಲ್ಲ, ಸಂಗ್ರಾಮವನ್ನು ನೋಡಬೇಕೆಂದಿದ್ದರೆ ಹೇಳು! ನಿನಗೆ ಕಣ್ಣುಗಳು ಬರುವಂತೆ ಅನುಗ್ರಹಿಸುವೆನು' ಎಂದ ಭಗವಂತನಿಗೆ ಧೃತರಾಷ್ಟ್ರನು 'ಬ್ರಹ್ಮರ್ಷಿವರ ! ಜ್ಞಾತಿವಧವಾಗುವುದನ್ನು ನೋಡಲಾರೆನು. ನಡೆಯುವ ರಣ ವಿಶೇಷಗಳನ್ನು ಕೇಳಿ ತಿಳಿಯುವಂತೆ ಅನುಗ್ರಹಿಸು! ಸಾಕು ! 'ಎಂದನು.

ಆಗ ವರದರಾಜರಾದ ವೇದವ್ಯಾಸರು ಸಂಜಯನನ್ನು ಕರೆದು, ಅವನಿಗೆ ದಿವ್ಯದರ್ಶನ ಶ್ರವಣಾದಿ ಜ್ಞಾನವನ್ನಿತ್ತು ಧೃತರಾಷ್ಟ್ರ! ಸಂಜಯನು ನಿನಗೆ ತಿಳಿಸುವನು. ಹಗಲು ರಾತ್ರಿ ಎನ್ನದೆ, ಒಳಹೊರಗೆನ್ನದೆ, ಎಲ್ಲರ ಮನದ ಆಲೋಚನೆಗಳನ್ನೂ ತಿಳಿದು ನಡೆಯುವುದೆಲ್ಲವನ್ನೂ ಇವನು ನಿನಗೆ ತಿಳಿಸುವನು. ಇವನಿಗೆ ಶ್ರಮವಾಗದಿರುವುದು. ಕೌರವ-ಪಾಂಡವ ಯುದ್ಧವು ಧರ್ಮಯುದ್ಧವು. ಇದರ ಕಥೆಯನ್ನು ನಾನು ಪ್ರಪಂಚದಲ್ಲಿ ಪ್ರಚುರಪಡಿಸಿ, ಅವರ ಕೀರ್ತಿಯೂ ಹರಡುವಂತೆ ಮಾಡುವೆನು. ಎಲ್ಲಿ ಧರ್ಮವೋ ಅಲ್ಲಿ ಜಯವಾಗುವುದು. ಚಿಂತಿಸಬೇಡ! ಭೂಭಾರವನ್ನು ಇಳಿಸುವ ಶ್ರೀಹರಿಯ ಸಂಕಲ್ಪವಿದು! ಮಹಾಜನ ಕ್ಷಯವಾಗುವುದು. ಶ್ಯೇನಗೃಧ್ರಕಾಕಾದಿಗಳು ಹಿಂಡುಗಟ್ಟಿ ಕೂಗುತ್ತಾ ತಿರುಗುತ್ತಿವೆ. ಯುದ್ಧವಾಗುವುದಿದೆ ಎಂದು ಕ್ರೂರಮೃಗಗಳು ಕಾದಿವೆ. ದಕ್ಷಿಣದಿಂದ ಕಂಕಾದಿ ಪಕ್ಷಿಗಳು ಹಾರಿ ಬರುತ್ತಿವೆ. ಸೂರ್ಯ ಚಂದ್ರರ ಮಂಡಲಗಳು ಕಪ್ಪುಗೂಡು ಕಟ್ಟಿಕೊಂಡಿವೆ. ದಿಕ್ಕುಗಳು ಕತ್ತಲು ಕವಿದಂತಿವೆ. ದಿನಕ್ಷಯಗಳು ಕಾಣುತ್ತಿವೆ. ಕಾರ್ತಿಕಹುಣ್ಣಿಮೆಯಂದು ಕೂಡ ಪ್ರಭಾಹೀನನಾದ ಚಂದ್ರನನ್ನು ಕಂಡ ನಾನು ಕುರುಕುಲಕ್ಷಯವಾಗುವುದೆಂದು ತಿಳಿದಿರುವೆನು. ದುಷ್ಟರೆಲ್ಲರು ನಷ್ಟರಾಗುವರು, ಸುಜನರಾದ ಪಾಂಡವರಿಗೆ ಜಯವಾಗುವುದು.

ಅಮಾವಾಸ್ಯೆಯಲ್ಲಾಗುವ ಪಾಪಗ್ರಹಯುಕ್ತವಾದ ನಕ್ಷತ್ರ ಸಂಯೋಗದಿಂದಲು,

ಅಂದು ಕ್ಷಯತಿಥಿಯಾಗುವುದರಿಂದಲು, ರಾಜರು, ರಾಜ-ಪುತ್ರರು, ವೀರರು ರಣರಂಗದಲ್ಲಿ ವೀರಶಯನವನ್ನು ಹೊಂದುವರೆಂದು ಕಾಣುತ್ತಿದೆ. ಆಕಾಶವು ರಕ್ತವರ್ಣವಾಗಿದೆ. ಹಂದಿಬೆಕ್ಕುಗಳ ಜಗಳದ ಶಬ್ದಗಳು ರಾತ್ರಿಯೆಲ್ಲ ಕೇಳಬರುತ್ತಿವೆ. ಗುಡಿಯಲ್ಲಿ ದೇವಪ್ರತಿಮೆಗಳು ಕಂಪಿಸಿ, ರಕ್ತಕಾರಿ, ಬೀಳುತ್ತಿವೆ. ಕೆಲವು ನಕ್ಕಂತೆ, ಅತ್ತಂತೆ ಕಾಣಬರುತ್ತಿವೆ. ಹೊಡೆಯದೆ ದುಂದುಭಿಗಳು ತಾವಾಗಿ ಮೊಳಗುತ್ತಿವೆ. ಕೋಗಿಲೆ, ಗಿಳಿ, ಸಾರಸ, ನವಿಲು ಮುಂತಾದ ಪಕ್ಷಿಗಳು ದಾರುಣಾರವವನ್ನು ಮಾಡುತ್ತಿವೆ. ಶಲಭಗಳು ಅಸಂಖ್ಯಾತವಾಗಿವೆ. ಮೇಘಗಳು ರಕ್ತ-ಮಾಂಸಗಳನ್ನು ಕರೆಯುತ್ತಿವೆ. ಅರುಂಧತಿಯು ವಸಿಷ್ಠ ನಕ್ಷತ್ರವನ್ನು ಹಿಂದುಮಾಡಿ ತ್ವರಿತವಾಗಿ ನಡೆಯುತ್ತಿದೆ. ಶನೈಶ್ಚರನು ರೋಹಿಣೀ ನಕ್ಷತ್ರವನ್ನು ಪೀಡಿಸುತ್ತಿರುವನು. ಚಂದ್ರನು ಶಶಚಿಹ್ನರಹಿತನಾಗಿರುವನು. ಮೋಡಗಳಿಲ್ಲದೆ ಸಿಡಿಲು ಬಡಿಯುತ್ತಿದೆ. ವಾಹನಗಳು ಕಣ್ಣೀರಿಡುತ್ತಿವೆ. ಕತ್ತೆ ಆಕಳುಗಳ ಸಂಯೋಗವಾಗುತ್ತಿದೆ. ಸುತರು ಮಾತೃಸಮಾನರನ್ನು ಕೂಡುತ್ತಿದ್ದಾರೆ. ಕ್ರೂರ ಮೃಗ ಪಕ್ಷಿಗಳೊಂದೆಡೆ ಕಲೆತು ತಿನ್ನುತ್ತಿವೆ. ಮೂರು ಕೊಂಬು, ನಾಲ್ಕು ಕಣ್ಣು ಐದು ಪಾದ, ಎರಡು ತಲೆ, ಎರಡು ಬಾಲ ಇಂತಹ ಪಶುಗಳು ಹುಟ್ಟುತ್ತಿವೆ. ನಾಯಿಯು ನರಿಮರಿಯನ್ನು ಪ್ರಸವಿಸುತ್ತಿದೆ. ಒಂದೇ ಸಲ ನಾಲ್ಕಾರು ಹೆಣ್ಣುಮಕ್ಕಳು ಹುಟ್ಟುತ್ತಿದ್ದಾರೆ. ಅವರು ಹುಟ್ಟಿದ ತತ್‌ಕ್ಷಣ ನಗುತ್ತಾ ಕುಣಿಯುತ್ತಿರುವರು. ನೀಚರು ಸಜ್ಜನರನ್ನು ನೋಡಿ ನಗೆಯಾಡಿ, ಅವಮಾನಿಸುತ್ತಿರುವರು. ವೃಕ್ಷಗಳಲ್ಲಿ ಪದ್ಮ-ಕುಮುದೋತ್ಪಲಗಳು ಹುಟ್ಟುತ್ತಿವೆ. ಬಿರುಗಾಳಿ ಬಿಡದೆ ಬೀಸುತ್ತಿದೆ; ಮೇಲೆದ್ದ ಕೆಂಧೂಳಿ, ಹಾಗೇ ವ್ಯಾಪಿಸಿರುವುದು. ರಾಹುಕೇತುಗಳು ಸಮಸಪ್ತಕ ರಾಶಿಗಳನ್ನು ಬಿಟ್ಟು ಧಾವಿಸುತ್ತಿರುವರು. ಇದೆಲ್ಲವೂ ಮಹದನಿಷ್ಟವನ್ನು ಸೂಚಿಸುತ್ತಿವೆ. ಪುಷ್ಯದಲ್ಲಿ ಕೇತುವು, ಮಘೆಯಲ್ಲಿ ವಕ್ರೀ ಕುಜ, ಶ್ರವಣದಲ್ಲಿ ಗುರು, ಜ್ಯೇಷ್ಠಾ ನಕ್ಷತ್ರದಲ್ಲಿ ರವಿ ಚಂದ್ರರು ಇಂತು ಗ್ರಹಗಳು ಅಪಸವ್ಯಾದಿ ಮಾರ್ಗದಿಂದ ಸಂಚರಿಸುತ್ತಿವೆ. ರಾಹುವು ಸದಾವಕ್ರಿಯಾಗಿ ಸರ್ವತೋಭದ್ರ ಚಕ್ರದಲ್ಲಿ ಹೊಕ್ಕು, ಸ್ವಾತಿಯಲ್ಲಿ ನಿಂತು ರೋಹಿಣಿಯನ್ನು ಪೀಡಿಸುತ್ತಿರುವನು. ಮಘೆಯಲ್ಲಿರುವ ಅಂಗಾರಕನು ವಕ್ರಾನುವಕ್ರನಾಗಿ ಗುರುವಿರುವ ಶ್ರವಣ ನಕ್ಷತ್ರವನ್ನು ಪೂರ್ಣದೃಷ್ಟಿಯಿಂದ ನೋಡುತ್ತಿರುವನು. ಬೆಳೆದು ನಿಂತಿರುವ ಭತ್ತದ ಪೈರಿನಲ್ಲಿ ಐದು ತಲೆ(ತೆನೆ)ಗಳು ಇತರ ಧಾನ್ಯಗಳಲ್ಲಿ ನೂರು ತೆನೆಗಳು ಕಾಣುತ್ತಿವೆಯಾಗಲಿ ಗಟ್ಟಿ ಕಾಳಿಲ್ಲ. ಜಗತ್ತನ್ನು ಪೋಷಿಸುವ ಮಾತೆಯಂತಿರುವ ಗೋವುಗಳ ಹುದುಗಿನಿಂದ ರಕ್ತವೇ ಹರಿದು ಬರುತ್ತಿದೆ. ಧನುಸ್ಸುಗಳು ಉರಿದಂತಿವೆ. ಖಡ್ಗಗಳು ಬಿಸಿ ಏರಿವೆ. ಶಸ್ತ್ರಗಳು ಅಗ್ನಿವರ್ಣಗಳಾಗಿ ಭಯವನ್ನು ಸೂಚಿಸುತ್ತಿವೆ. ಪೃಥಿವಿಯು ರಕ್ತಪ್ರವಾಹಪೂರ್ಣವಾಗುವುದು. ಮೃಗ ಪಕ್ಷಿಗಳು ವಿಕಾರವಾಗಿ ಕೂಗುತ್ತಿವೆ. ಕಾಗೆ, ಕೊಕ್ಕರೆ, ಗೂಬೆಗಳು, ರೌದ್ರ ಶಬ್ದವನ್ನು ಮಾಡುತ್ತಾ ರಾತ್ರಿಯಲ್ಲಿ ಸಂಚರಿಸುತ್ತಿವೆ. ಗುರುಶನೈಶ್ಚರರು ಶ್ರವಣ ಮತ್ತು ಉತ್ತರಾ ನಕ್ಷತ್ರಗಳಲ್ಲಿದ್ದು ತಿರ್ಯಗ್ವೇಧದಿಂದ ವಿಶಾಖೆಯನ್ನು ಪೀಡಿಸುತ್ತಿರುವರು. ಶುಕ್ರನು ಉತ್ತರಾಭಾದ್ರೆಯನ್ನು ಪರಿಘವೆಂಬ ಉಪಗ್ರಹದಿಂದ ಕೂಡಿ ಆಕ್ರಮಿಸಲಿರುವನು. ಶತಪದಚಕ್ರದಲ್ಲಿ ಶ್ರವಣದ ಖಿ, ಖು, ಖೇ

ಎಂಬ ಮೂರು (ಅಂತ್ಯ) ಪಾದಗಳಿಂದ ತಿ ತು ತೇ ಎಂಬ ವಿಶಾಖೆಯ ಮೂರು (ಮೊದಲು) ಪಾದಗಳು ಪೀಡಿಸಲ್ಪಡುತ್ತಿರುವವು. ಚಂದ್ರಾದಿತ್ಯಗ್ರಹಣಗಳು ತ್ರಯೋದಶಿಯಲ್ಲಿ ಕಂಡುಬರುತ್ತಿವೆ. ತಿಥಿದ್ವಯಕ್ಷಯದ ಫಲವಿದು; ಇಂತಾಗುವುದರಿಂದ ಲೋಕಕ್ಷಯವು ಸೂಚಿತವಾಗುತ್ತಲಿದೆ.

ಚಿತ್ರಾಸ್ವಾತ್ಯಂತರದಲ್ಲಿ ನಿಂದು ರಾಹುವು ಅಲ್ಲಿಂದ ಹದಿನೆಂಟನೆಯ ಸಾಮುದಾಯಿಕವಾದ ನಕ್ಷತ್ರವಾದ ರೋಹಿಣಿಯನ್ನೂ, ಹದಿನಾರನೆಯ ಕೃತ್ತಿಕೆಯನ್ನೂ ಪೀಡಿಸುತ್ತಿರುವನು. ಚಿತ್ತೆಯಿಂದ ರೋಹಿಣಿಯು ಹದಿನೆಂಟನೆಯದಾಗಿಯು, ಸ್ವಾತಿಯಿಂದ ಕೃತ್ತಿಕೆ ಹದಿನಾರನೆಯದಾಗಿಯು ಸರ್ವತೋಭದ್ರ ಚಕ್ರದಲ್ಲಿ ಪ್ರತ್ಯಕ್ಷವಾಗಿವೆ. ಬಾಲದ ಚುಕ್ಕಿಗಳು ತೋರುತ್ತಿವೆ. ಅಶ್ವಿನ್ಯಾದಿ ನವನಕ್ಷತ್ರಗಳು ಉತ್ತರದ ಅಶ್ವಪತಿಛತ್ರವೆಂಬರು. ಮಘಾದಿ ನವ ನಕ್ಷತ್ರಗಳು ಪೂರ್ವದ ಗಜಪತಜ ಛತ್ರವೆಂಬುವರು. ಮೂಲಾದಿ ನವನಕ್ಷತ್ರಗಳು ದಕ್ಷಿಣದ ನರಪತಿ ಛತ್ರವೆಂಬರು. ನಕ್ಷತ್ರ ಕ್ಷತ್ರರಿಲ್ಲ ಮತ್ತು ಕ್ಷತ್ರಿಯರ ಚಾಮರ ವ್ಯಜನ ಕಲಶ ವೀಣಾಛತ್ರದಂಡಗಳು; ಆಸನ ಕೀಲ ರಜ್ಜುಗಳು, ಆಯುಧಶಾಸನಗಳು ಇಲ್ಲವಾಗುವವೆಂದು ಸೂಚಿಸುವ ಪಾಪಗ್ರಹಗಳು ಪ್ರಬಲವಾಗಿವೆ. ಮಘಾಕುಜ, ಫಲ್ಗುನಿಶನಿಗಳು ಕಲಶಸ್ಥಾನದಲ್ಲಿ ಗಜಪತಿಕ್ಷಯವನ್ನೂ, ಕೃತ್ತಿಕಾ ರೋಹಿಣೀ ಪೀಡೆಯು ಅಶ್ವಪತಿಕ್ಷಯವನ್ನೂ, ಶ್ರವಣ ಭಾದ್ರಪದಗಳಲ್ಲಿರುವ ಶುಕ್ರ ಬೃಹಸ್ಪತಿಗಳು ನರಪತಿಕ್ಷಯವನ್ನೂ ಸಾಧಿಸುವರು. ಉತ್ತರದ ರಾಜರು, ರಾಜಪುತ್ರರು ಸಂಪೂರ್ಣ ನಷ್ಟರಾಗುವರು. ದಕ್ಷಿಣ ಪೂರ್ವಗಳ ರಾಜರು ಸತ್ತರೂ ಅವರ ಪುತ್ರರು ಕೆಲವರು ಉಳಿಯುವರು.

ಮಘಾಕುಜ, ಸ್ವಾತೀ - ಸೂರ್ಯ ಚಂದ್ರ ಬುಧ ರಾಹುಗಳು, ಉತ್ತರ - ಶನಿ, ಶ್ರವಣ- ಗುರು; ಪೂರ್ವಾಭಾದ್ರ - ಶುಕ್ರ; ಕೃತ್ತಿಕ ಕೇತು - ಇಂತು ಮಹಾಭಾರತ ಯುದ್ಧ ಕಾಲೀನವಾದ ಗ್ರಹ ಕುಂಡಲಿ. (ನನಗೆ ತೋಚಿದಷ್ಟು ತಿಳಿಸಿರುವೆನು.) ಇಲ್ಲಿ ಚಂದ್ರನ ಗಮನವು ಬದಲಾಗುತ್ತಿರುತ್ತದೆ.

ಯುದ್ಧಕಾಲದಲ್ಲಿ ರವಿಜ್ಯೇಷ್ಠಾಗತನು, ಚಂದ್ರನು ಮೃಗಶಿರಾಗತನು ಆಗಿದ್ದರು. ಮೇಲೆ ತೋರಿದ ಗ್ರಹಗತಿಯಿಂದ ಪೂರ್ವ ಛತ್ರದ ರಾಜರು ಪೂರ್ಣ ನಾಶವಾಗುವರು. ಹಸ್ತಿನಾವತಿಯು ದೇಹಲೀ ದೀಪನ್ಯಾಯದಿಂದ ಗಜಪತಿಛತ್ರ , ಅಶ್ವಪತಿ ಛತ್ರಗಳಲ್ಲಿ ಎರಡರಲ್ಲಿಯೂ ಬರುವದು. ಅಲ್ಲಿ ಮಹಾನಾಶವಾಗುವುದು.

ಒಂದೇ ತಿಂಗಳಲ್ಲಿ ಪೂರ್ಣಿಮಾ ದಿನದಿ ಚಂದ್ರಗ್ರಹಣವಾಗಿದ್ದು ಮತ್ತೆ ಅದೇ ಅಮಾವಾಸ್ಯೆಯ ದಿನ ಮತ್ತೆ ಚಂದ್ರ ಸೂರ್ಯರಿಬ್ಬರೂ ರಾಹುಗ್ರಸ್ತರಾಗುವ ದುರ್ಯೋಗವು ಈಗ ಬಹುಕಾಲವಾದ ಮೇಲೆ ಬಂದಿದೆ. ದುರ್ಯೋಧನಾದಿಗಳ ದುರ್ನೀತಿಫಲವನ್ನುಂಡು, ಜಗತ್ತಿನ ವೀರರೆಲ್ಲ ಸಾಯಬೇಕಾಗಿದೆ. ಮನೆಗಳಿಂದ ಹೊರಬಂದು ಕವಿಯುತ್ತಿರುವ ಕತ್ತಲಿನಲ್ಲಿ ಕೊಳ್ಳಿಗಳನ್ನು ಹಿಡಿದು ಕಾದಾಡುವ ರಾಜನ್ಯರ ರಕ್ತವನ್ನು ಕುಡಿಯುವ ತೃಷೆಯಿಂದ ಭೂಮಿಯು ಕುದಿಯುತ್ತಿದೆ. ಕೈಲಾಸಮಂದಿರ ಹಿಮಾಚಲಗಳಿಂದ ವಿಲಕ್ಷಣ ಶಬ್ದಗಳು

ಕೇಳಬರುತ್ತಿವೆ. ಭೂಮಿಯ ಕಂಪದಿಂದ ನಾಲ್ಕುಸಾಗರಗಳು ಹೋಳುಗಳಾಗಿ ಬಿಗಡುತ್ತಿವೆ. ಬಿರುಗಾಳಿಗೆ ಗಿಡಗಳು ಬೇರೊಡನೆ ಉರುಳುತ್ತಿವೆ. ದೇವಾಲಯ ಗೋಪುರಗಳು, ಕೋಟೆಗಳು ಕೊತ್ತಲಗಳು ಮುರಿದುಬೀಳುತ್ತಿವೆ. ಧ್ವಜಗಳು ಹೊಗೆ ಚಿಮ್ಮುತ್ತಿವೆ. ವಾಯಸಗಳು ಅಪ್ರದಕ್ಷಿಣವಾಗಿ ಹಾರಾಡುತ್ತಿವೆ. ತುರಗವಾರಣಗಳ ದೃಷ್ಟಿಗಳು ದೀನವಾಗಿವೆ. ಧೃತರಾಷ್ಟ್ರ! ಕಾಲಬಲದಿಂದ ಕಾಲನ ಕಾಲಕಸವಾಗುವ ಕೌರವಾದಿ ವೀರಕುಲವನ್ನು ನೋಡುತ್ತಾ ಕಡುದುಃಖಪಡುವಂತಾದುದು ನಿನ್ನ ಪುತ್ರಪ್ರೇಮ ಫಲವೆಂದು ತಿಳಿ!'

ಆಗ ಧೃತರಾಷ್ಟ್ರನು 'ತಂದೇ! ಅದೃಷ್ಟನಿಯಾಮಕನಾದ ಭಗವಂತನ ಇಚ್ಛೆಯಂತಾಗಲಿ ! ನಾನೇನೂ ಮಾಡುವಂತಿಲ್ಲ. ಕುರುಕ್ಷೇತ್ರದಲ್ಲಿ ವೀರಶಯನವನ್ನಲಂಕರಿಸಿದ ರಾಜರಿಗೆ ಸ್ವರ್ಗದಲ್ಲಿ ನಿರರ್ಗಳ ಸುಖವು ಕಾದಿದೆ' ಎಂದನು. ಆ ಮಾತನ್ನಾಲಿಸಿ ಶ್ರೀ ವೇದವ್ಯಾಸರು "ನಿಜ! ಶಾಶ್ವತರಾರೂ ಅಲ್ಲ. ಆದರೆ ಜ್ಞಾತಿಬಂಧು ಜನರು ನಾಶವಾಗದಂತೆ ಸರಿಯಾದ ಮಾರ್ಗದಲ್ಲಿ ನಡೆಸುವುದು ನಿನಗೆ ಸಾಧ್ಯವಿತ್ತು. ಜ್ಞಾತಿವಧವನ್ನು ಮಾಡಲಿರುವ ದುಷ್ಟಪುತ್ರರನ್ನು ಪ್ರೋತ್ಸಾಹಿಸಿ ನನಗೆ ಅಪ್ರಿಯವನ್ನು ಮಾಡಿರುವೆ ತಿಳಿ! ಕುಲವನ್ನು ನಾಶಪಡಿಸುವ ಪುತ್ರನನ್ನು ಕೊಂದು, ಕುಲವನ್ನು ಉಳಿಸದೆ, ಕಾಲಕಾಲ ಎಂದು ಗಳಗಳ ಅಳುವ ನಿನ್ನಿಂದ ಮಹಾನರ್ಥವಾಗಲಿದೆ. ರಾಜ್ಯಲೋಭದಿಂದ ಸಾಯಲಿರುವ ಸುತರನ್ನು ನಿಗ್ರಹಿಸಿ, ಧರ್ಮಕೀರ್ತಿ ಸ್ವರ್ಗಗಳನ್ನು ಗಳಿಸು! ಪಾಂಡವರು ರಾಜ್ಯಭಾಗವನ್ನು ಹೊಂದಲಿ! ಕ್ಷತ್ರಿಯಾದಿ ಪ್ರಜರು ಶಾಂತರಾಗಿ ಬಾಳಲಿ!" ಎಂದರು.

ಅವರ ಮಾತಿಗೆ ಮನಗೊಡದೆ ಅಂಧರಾಜನು 'ತಾತ! ನಾನೂ ನಿನ್ನಂತೆಯೇ ತಿಳಿದು, ಶುಭಾಶುಭಗಳನ್ನರಿತಿರುವೆನು. ಆದರೆ ಲೋಕದ ಜನವು ಸ್ವಾರ್ಥದಲ್ಲಿ ಮೋಹಿತವಾಗುವುದು ಸ್ವಭಾವವಲ್ಲವೇ? ಲೋಕದ ಜನರಲ್ಲಿ ಒಬ್ಬನಾದ ನನಗೆ ಮಾತ್ರ ಅಭಿಮಾನ ತ್ಯಾಗವಾಗುವುದೇ? ಅಧರ್ಮವನ್ನು ಮಾಡಗೊಡಲಾರದೆ, ಕಡುಮಕ್ಕಳನ್ನು ಹಿಡಿದಿಡಲಾರದೆ ತೊಳಲುವ ನನ್ನನ್ನು ಕರುಣಿಸಿ ಕಾಪಾಡು! ಹಾಳು ಮಕ್ಕಳು! ನನ್ನ ಮಾತಿಗೆ ಕಿವಿಗೊಡದೆ ಕೆಡಲಿರುವರು. ಏನುಮಾಡಲಿ?' ಎಂದನು.

'ಸರೀ! ನಿನ್ನಿಷ್ಟ!' ವೆಂದು ವೇದವ್ಯಾಸರು 'ಮತ್ತೇನು ಕೇಳುವೆ? ಹೇಳು!' ಎಂದರು. ಧೃತರಾಷ್ಟ್ರನು 'ಸಂಗ್ರಾಮ ವಿಜಯಗಳಲ್ಲಿ ತೋರುವ ಲಕ್ಷಣಗಳಾವುವು?' ಎಂದು ಕೇಳಿದನು. ವ್ಯಾಸರಿಂತೆಂದರು: 'ರಾಜನ್! ಕೇಳು, ರಣ ವಿಜಯಿಗಳು ಪ್ರಸನ್ನತೇಜರಾಗಿರುವರು. ಅವರ ಅಗ್ನಿಹೋತ್ರಗಳಲ್ಲಿ ಅಗ್ನಿಜ್ವಾಲೆಗಳು ಪ್ರದಕ್ಷಿಣಾಕಾರವಾಗಿ ಹೊಗೆ ಇಲ್ಲದೆ, ಶಾಂತವಾಗಿ ಉರಿಯುತ್ತಿರುವವು. ಆಹುತಿಗಳು ಪುಣ್ಯಗಂಧಗಳಾಗಿರುವವು. ಶಂಖಭೇರಿ ಮೃದಂಗ ಘೋಷಗಳು ಗಂಭೀರವಾಗಿರುವವು. ಪುಷ್ಪವಂತರು ಶುದ್ಧರಶ್ಮಿಗಳಾಗಿ ದಿವಾರಾತ್ರಗಳಲ್ಲಿ ಬೆಳಗುವರು. ಗಜತುರಗಗಳ ಹೇಷಾಘೀಂಕಾರಗಳು ಮಧುರವಾಗಿ ಕೇಳಿಬರುವವು. ಅವರ ಸೇನೆಯು ಪ್ರಹೃಷ್ಟವಾಗಿ, ಬಾಡದ ಪೂಮಾಲೆಗಳಿಂದ ಶೋಭಿಸುತ್ತಿರುವುದು. ವಾಯುಮೇಘಪಕ್ಷಿಗಳು ಜಯಶಾಲಿಗಳನ್ನನುಸರಿಸಿ ಬರುವವು.

ಅಲ್ಪವಾದರೇನು, ಸೇನಾಪತಿಯ ಸಿಂಹಗರ್ಜನವನ್ನು ಅನುಸರಿಸಿ ಗರ್ಜಿಸುವ ವೀರಸೇನೆಯು ಏಕಮತಿಕವಾಗಿರುವುದರಿಂದ ಎಂತಹ ಮಹಾಸೇನೆಯನ್ನೂ ಗೆದ್ದುಬಿಡುವುದು. ಅವರೆದುರಿಗೆ ಬಿದ್ದ ಭಟರು ಮಹಾಪ್ರವಾಹದಲ್ಲಿ ಸಿಕ್ಕ ಮೃಗಗಳಂತೆ ಕಂಗೆಟ್ಟು ನಾಶವಾಗುವರು. ಭೀತರಿಗೆ ಜಯವಿಲ್ಲ, ಧರ್ಮಪರರಿಗೆ ಭೀತಿಯಿಲ್ಲ. ಓಡಿಹೋಗುವ ಸೈನಿಕರನ್ನು ನಿಲ್ಲಿಸಿ ಕಾದಿಸುವ ಶೂರರಿಲ್ಲ. ಶತ್ರುವಧೆಯಿಂದ ಬರುವ ವಿಜಯವು ಅಧಮವು. ಭೇದದಿಂದ ಮಧ್ಯಮ ಜಯವು. ಸಾಮದಾನಗಳಿಂದಾಗುವ ಜಯವು ಶ್ರೇಷ್ಠವೆಂದು ತಿಳಿ! ಧರ್ಮಪರರು, ಸಂಘಶಕ್ತಿಯನ್ನರಿತವರು. ನಿಸ್ಸಂಶಯರು, ಸಂಹೃಷ್ಟರು ಆದ ಐವತ್ತೇ ವೀರರು ಮಹಾಸೈನ್ಯವನ್ನು ನಾಶಮಾಡಬಲ್ಲರು. ಹಿಂದಿರುಗದೆ ಕಾದಾಡುವ ಗಂಡುಗಲಿಗಳು ಐದಾರು ಜನರಾದರೂ ಸಾಕು, ನಿಸ್ಸಹಾಯಶೂರರಾದುದರಿಂದ ಮಹತ್ಸೇನೆಯನ್ನು ನಿಶ್ಶೇಷಗೊಳಿಸಿ, ಜಯಕೀರ್ತಿಕಾಂತೆಯರನ್ನು ವರಿಸಬಲ್ಲರು. ಗರುಡನಿಂದ ಅವರೀ ಪಾಠವನ್ನು ಕಲಿತಿರುವರು. ಜಯವು ಧ್ರುವವಲ್ಲ ನಿಜ! ಅದು ದೈವಸಹಾಯವಿದ್ದವರಿಗೆ ಸಿಗುವುದು.' ಇಂತು ಪೇಳಿ ಶ್ರೀ ವೇದವ್ಯಾಸರು ಹೊರಟುಹೋದರು.

## ೨. ಭುವನಕೋಶ ವರ್ಣನೆ

ಧೃತರಾಷ್ಟ್ರನು ಸಲ್ಪಕಾಲ ಆಲೋಚಿಸಿ ನಿಟ್ಟುಸಿರಿಟ್ಟು ಸಂಜಯನನ್ನು ಕರೆದು 'ಸೂತ! ಶ್ರೀ ವೇದವ್ಯಾಸರಿತ್ತ ದಿವ್ಯಜ್ಞಾನವು ನಿನಗಿದೆ. ಯುದ್ಧಾಭಿನಂದಿಗಳಾಗಿ ಬಂದಿರುವ ಮಹೀಪಾಲರು ಅಸಂಖ್ಯಾತರಾಗಿರುವರು. ಜೀವದಾಶೆ ತೊರೆದು, ಪರಸ್ಪರವಾಗಿ ಕಡಿದಾಡಿ, ಯಮ ಮಂದಿರ ಪ್ರಾಂಗಣವನ್ನು ತುಂಬಲಿರುವ ರಾಜರು ಯಾರ್‍ಯಾರು? ಕುರುಕ್ಷೇತ್ರದಲ್ಲಿ ಬಂದಿರುವ ವೀರವರರು ಯಾವ್ಯಾವ ದೇಶಗಳಿಂದ ಬಂದವರು? ಅವರ ಪ್ರಭಾವವೆಂತಹದು?' ಎಂದು ಕೇಳಿದನು.

ಸಂಜಯನು, 'ಮಹಾರಾಜ! ನನಗೆ ಶ್ರೀ ವ್ಯಾಸಾನುಗ್ರಹದಿಂದ ತಿಳಿದಷ್ಟು ಮಾತ್ರ ಹೇಳುವೆನು. ಕೇಳು! "ತಂವಾ ಏತಂ ಸೇತುಂ ತೀರ್ತ್ವಾ ಅಂಧಸ್ಸನ್ನನಂಧೋಭವತಿ" ಎಂಬ ಶ್ರುತಿ ವಚನದಂತೆ ಶ್ರೀಹರಿಯ ದಿವ್ಯಜ್ಞಾನವನ್ನು ಗುರು ಕರುಣೆಯಿಂದ ತಿಳಿದವನು ಸಂಸಾರ - ಸಾಗರವನ್ನು ಭಕ್ತಿ ನೌಕೆಯಿಂದ ದಾಟಿ, ಮುಂದೆಯೂ ಭಕ್ತನಾಗಿ ಶ್ರೀಹರಿಲೋಕದಲ್ಲಿ ಅಜ್ಞಾನಾದಿ ಸರ್ವದೋಷಮುಕ್ತನಾಗುವನು. ಇಂತಹ ಶ್ರೀಹರಿ ಸರ್ವೋತ್ತಮತ್ವ ಜ್ಞಾನವು ಶ್ರೀವ್ಯಾಸಪ್ರಸಾದದಿಂದಲೇ ಲಭ್ಯವಾಗಿದೆ. ಶ್ರೀವ್ಯಾಸರಿಗೆ ನಮೋನಮಃ.

ಭೂತಗಳು ಜಂಗಮಸ್ಥಾವರಗಳೆಂದು ಎರಡು ವಿಧ. ಜಂಗಮಗಳು ಅಂಡಜ, ಸ್ವೇದಜ, ಜರಾಯುಜಗಳೆಂದು ಮೂರು ವಿಧ. ಪಕ್ಷಿ ಸರ್ಪಾದಿಗಳು ಅಂಡಜಗಳು; ಯೂಕಾಲಿಕ್ಷಾದಿಗಳು ಸ್ವೇದಜಗಳು. ಪಶುಮನುಜಾದಿಗಳು ಜರಾಯುಜಗಳು. ನಾನಾ ರೂಪಧರವಾದ ಜರಾಯುಜಗಳಲ್ಲಿ ಹದಿನಾಲ್ಕು ಮುಖ್ಯ ಭೇದಗಳಿವೆ. ಅವರಲ್ಲಿ

ಮಾನವರು ಶ್ರೇಷ್ಠರು. ಗ್ರಾಮ್ಯಪಶುಗಳಲ್ಲಿ ಮನುಜರಂತೆ, ಅರಣ್ಯವಾಸಿ ಪಶುಗಳಲ್ಲಿ ಸಿಂಹವು ಶ್ರೇಷ್ಠವು. ಜೀವರೆಲ್ಲರು ಅನ್ಯೋನ್ಯರನ್ನು ಉಪಜೀವಿಸಿ ಶರೀರಧಾರಣ ಮಾಡಿರುವರು.

ಉದ್ಭಿಜ್ಜಗಳು ಸ್ಥಾವರಗಳು. ಅವು ವೃಕ್ಷ(ಅಶ್ವತ್ಥ), ಗುಲ್ಮ(ಕುಶ), ಲತಾ(ಮಾಲತೀ), ವಲ್ಲೀ (ಕುಂಬಳ), ತೃಣಜಾತಿ (ವೇಣು)ಗಳೆಂದು ಐದು ವಿಧ. ಮೂಲ ಕಾರಣವಾದ ಪ್ರಕೃತಿಯ ಪಂಚಭೂತಗಳೊಂದಿಗೆ, ಅವುಗಳ ವಿಕಾರವಾದ ಚತುರ್ವಿಧಭೂತಗಳು ಅಂದರೆ ಹದಿನಾಲ್ಕು (ಅಂಡಜ ಜರಾಯುಜಗಳು) ಮತ್ತು ಐದು (ಸ್ವೇದಜ ಉದ್ಭಿಜ್ಜಗಳು) ಕಲೆತು ಇಪ್ಪತ್ನಾಲ್ಕು ಸಂಖ್ಯಾಕವಾದ ಕಾರ್ಯಕಾರಣ ಜಾತವೆಲ್ಲವು ಶ್ರೀಹರಿಯ ಅಧೀನವು. ಗಾಯತ್ರಿಯ ಇಪ್ಪತ್ನಾಲ್ಕು ಅಕ್ಷರಗಳು ಅವನ ಮಹಿಮೆಯನ್ನೇ ಗಾನ ಮಾಡುತ್ತಿವೆ. ಭಕ್ತ ಸಂರಕ್ಷನಾದ ಶ್ರೀ ಗಾಯತ್ರೀ ನಾಮಕ ನಾರಾಯಣನು ಸರ್ವವೇದ ಮುಖ್ಯಾರ್ಥನಾಗಿರುವನು. ಎಲ್ಲ ಭೂತಗಳು ಅವನ ಕೋಟ್ಯಂಶದಷ್ಟೂ ಅಲ್ಲ. ಅವನ ಮೂರು ದಿವ್ಯ ಸ್ವರೂಪಾಂಶಗಳು ಶ್ವೇತದ್ವೀಪ ವೈಕುಂಠಾನಂತಾಸನಗಳಲ್ಲಿ ವಿರಾಜಮಾನವಾಗಿವೆ. ಅವನ ಇಚ್ಛೆಯಿಂದ ನಿರ್ಮಿತವಾಗಿರುವ ಜಂಗಮಸ್ಥಾವರಗಳೆಲ್ಲವೂ, ಅವನಿಂದ ಭಿನ್ನವಾಗಿ ಅವನಿಂದ ಜನ್ಮಪೋಷಣ ಸಂಹಾರಾದಿಗಳನ್ನು ಹೊಂದುತ್ತಾ ಅವನ ಅಧೀನವಾಗಿವೆ. ಇಂತಹ ಶ್ರೀಶನ ರಾಜ್ಯವಾದ ಭೂಮಂಡಲದ ಒಂದು ತುಂಡಿಗಾಗಿ ಆಶೆಪಟ್ಟು ಕಡಿದಾಡಿ ಸಾಯುವ ರಾಜರನ್ನು ಕಂಡು ಆಶ್ಚರ್ಯವಾಗಿದೆ. ಶ್ರೀಹರಿನಿರ್ಮಿತವಾದ ಭೂಮಿಯಿಂದಾ ಹುಟ್ಟಿ , ಭೂಮಿಯಿಂದಾ ಬೆಳೆದು, ಭೂಮಿಯಲ್ಲಿ ಸೇರಿಪೋಗುವ ರಾಜರು ಭೂಮಿಗಾಗಿ ಕಡಿದಾಡಿ ನಷ್ಟರಾಗುತ್ತಿರುವರು. ರಣಯಜ್ಞದಲ್ಲಿ ಪಶುಗಳಾಗಿ ನಿಂತು ಪ್ರಾಣಾರ್ಪಣ ಮಾಡುತ್ತಿರುವ ರಾಜಾದಿಜೀವರು ಶ್ರೀಹರಿಪೂಜೆ ಎಂದರಿತು ಧರ್ಮಯುದ್ಧವನ್ನು ಮಾಡಿದರೆ ಮುಕ್ತಿಯನ್ನು ಪಡೆಯುವರು.

ಸೂಕ್ಷ್ಮತಮವಾದ ಭಗವಂತನ ದಿವ್ಯಜ್ಞಾನವಾಗಬೇಕಾದರೆ ಸ್ಥೂಲರೂಪವನ್ನು ಮೊದಲು ಚಿಂತಿಸಿ, ತಿಳಿಯಬೇಕಾಗಿದೆ. ಪ್ರತಿಮೆಯಂತೆ ಭಗವಂತನ ಸನ್ನಿಧಾನಯುಕ್ತನಾದ ಬ್ರಹ್ಮಾಂಡವನ್ನು, ಅಲ್ಲಿರುವ ನದೀ ಪರ್ವತ ದ್ವೀಪ ಸಮುದ್ರ ಪಾತಾಲ ಜ್ಯೋತಿಸ್ಸಮೂಹಗಳನ್ನು, ಅವುಗಳ ನಾಮರೂಪ ಪ್ರಮಾಣಗಳನ್ನು ಯಥಾಮತಿ ವರ್ಣಿಸುವೆನು, ಕೇಳು!

ಸ್ವತಂತ್ರನು, ನಿರ್ವಿಕಾರನು, ಸರ್ವೇಶನು, ಸರ್ವಜ್ಞನು, ಜೀವಜಡಾತ್ಮಕ ಪ್ರಪಂಚ ವಿಲಕ್ಷಣನು ಆದ ಶ್ರೀ ನಾರಾಯಣನು ಮಹದಂಕಾರ ಪಂಚಭೂತಾದಿ ಪದಾರ್ಥಗಳನ್ನು ಪ್ರಕೃತಿಯ ಮೂರು ಗುಣಗಳಿಂದ ನಿರ್ಮಿಸಿದನು. ನಿಮಿತ್ತಕಾರಣನಾದ ಶ್ರೀಶನಿಗೆ ತ್ರಿಗುಣದ ಪ್ರಕೃತಿಯು ಉಪಾದಾನವಾಗಿರುವ ಜಗವೆಲ್ಲವೂ ಸರ್ವದಾ ಅಧೀನವಾಗಿದೆ. ಆಕಾಶದ ಗುಣವು ಶಬ್ದವು; ವಾಯುಗುಣಗಳು ಶಬ್ದಸ್ಪರ್ಶರೂಪರಸಗಳು; ಭೂ ಗುಣಗಳು ಶಬ್ದಸ್ಪರ್ಶ ರೂಪರಸ ಗಂಧಗಳು. ಇಂತು ಜನಕ ಗುಣಗಳನ್ನು ತನ್ನ ಗುಣವನ್ನು ಕೂಡ ಹೊಂದಿರುವ ಪಂಚಭೂತಗಳಿಲ್ಲದ ವಸ್ತುವಿಲ್ಲ. ಹೊರಗೆ ಭೋಗ್ಯವಾಗಿರುವ ಭೂತಪಂಚಕವು

ಶರೀರದಲ್ಲಿಯೂ ಶಬ್ದಸ್ಪರ್ಶ ರೂಪರಸ ಗಂಧ ರೂಪವಾಗಿ ಪ್ರವೇಶಿಸಿ ಭೋಗ್ಯವಾಗಿ, ಜೀವಧಾರಕವೆನಿಸಿದೆ. ಪ್ರಳಯದಲ್ಲಿ ಗುಣ ಸೌಮ್ಯವಾದಾಗ, ಪ್ರಕೃತಿಬಂಧದಿಂದ ಬಿಡಲ್ಪಟ್ಟ ಯೋಗ್ಯ ಜೀವನು, ಎಲ್ಲೆಡೆ ವ್ಯಾಪಿಸಿದ್ದರೂ ಸ್ವಗತಭೇದವಿವರ್ಜಿತನಾದ ಶ್ರೀರಮಣನ ಅತ್ಯರ್ಥ ಪ್ರಸಾದದಿಂದ ಮುಕ್ತನಾಗುವನು. ಗುಣವೈಷಮ್ಯವೆಂದರೆ ಸೃಷ್ಟಿಕಾಲ; ಆಗ ಪ್ರಕೃತಿಯ ಭೂತಗಳಿಂದ ಜೀವಶರೀರಪೋಷಣವಾಗಬೇಕಾಗಿರುವುದು. ತತ್ವಸೃಷ್ಟಿಯು ತಾರತಮ್ಯ ಕ್ರಮವನ್ನು ಅನುಸರಿಸಿ ಆಗುವುದು. ತತ್ವಲಯವು ವ್ಯುತ್ಕ್ರಮವನ್ನನುಸರಿಸಿ, ಸ್ವೋತ್ತಮರಲ್ಲಿ ಆಗುವುದು. ಭೂತಪಂಚಕವು ಮಹಾ ಮಹಿಮೋಪೇತವಾಗಿದೆ ಎಂದ ಮೇಲೆ ಅವನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ಶ್ರೀ ಚತುರ್ಮುಖವಂದ್ಯನ ಮಹಿಮೆಯನ್ನು ಅನಂತ ಅಪರಿಮೇಯ ಅದ್ಭುತವೆಂದು ಹೇಳಬೇಕೆ?

ತರ್ಕದಿಂದಲು, ಸೂರ್ಯಾದಿಗಳ ಸಂಚಾರದಿಂದಲು, ದೇಶ-ಭೇದದಿಂದಲು, ದಿನ ಮಾನ ಭೇದದಿಂದಲು, ಪಾದಚ್ಛಾಯಾಭೇದದಿಂದಲು, ಗಣನೆಮಾಡಿ ಕೆಲ ಬುದ್ಧಿವಂತರು ಕಂದುಕಾಕಾರವೀ ಭೂಗೋಳವೆಂದರೆ, ಕೆಲವರು ಚತುರರು ಚತುರಸ್ರ ಚಕ್ರಾಕಾರವೆಂಬರು. ಕೆಲರು ತ್ರಿಕೋಣಾಕಾರವೆಂಬರು. ಅಚಿಂತ್ಯವಾದುದನ್ನು ಕೇವಲ ತರ್ಕದಿಂದ ಹೇಳಬಾರದು. ತರ್ಕಾಂತರದಿಂದ ತರ್ಕಬಾಧೆಯು ಬರಬಹುದು. ಕಂದುಕಾಕಾರವಾಗಿರುವ ಜಗತೀತಲದ ಸರ್ವದೇಶವು ಪ್ರಾಣಿಮಯವಾಗಬಲ್ಲದು. ವಿಶೇಷಾಕರ್ಷಣ ಶಕ್ತಿಯಿಂದ ಎಲ್ಲ ಜೀವರು ತಮ್ಮ ಕೆಳಗೆ ಭೂಮಿಯಿದೆ ಎಂದು, ಮೇಲೆ ಆಕಾಶವಿದೆ ಎಂದು ತಿಳಿಯಲು ಇದೇ ಕಾರಣ. ಸರ್ವಜ್ಞರಾದ ವೇದವ್ಯಾಸರು ವಿವಿಧಗ್ರಂಥಗಳಲ್ಲಿ ತಿಳಿಸಿರುವ ವಿವಿಧಪ್ರಮಾಣಗಳನ್ನೂ ಯೋಜನಗಣನಾ ವಿಧಾನವನ್ನೂ ವಿಚಾರಿಸಿ ತಿಳಿಯಬೇಕಾಗಲಿ, ಭುವನ ಕೋಶವಿವರವನ್ನು ಶುಷ್ಕತರ್ಕದಿಂದ ಸಾಧಿಸಲಾಗದು. ಪರಮಾತ್ಮನಂತೆ ತನ್ನಿರ್ಮಿತ ಭುವನಕೋಶ ಜ್ಞಾನವು, ಶ್ರೀಹರಿಗಲ್ಲದೆ, ಮತ್ತಾರಿಗೂ ಸಾಕಲ್ಯೇನ ಆಗಲಾರದು.

ಜಂಬೂದ್ವೀಪವು ವರ್ತುಲಾಕಾರವಾಗಿರುವ ಲವಣಸಮುದ್ರದಿಂದ ಸುತ್ತಲ್ಪಟ್ಟಿದೆ. ಅಲ್ಲಿ ವರ್ಷಪುರ, ನದೀನದ, ಪರ್ವತಗ್ರಾಮಗಳು, ಧನಧಾನ್ಯಗಳು, ಪುಷ್ಪಫಲಗಳು, ಪುರಖೇಟಗಳು ಪುಷ್ಕಲವಾಗಿವೆ. ಈ ಜಂಬೂದ್ವೀಪವು ಲಕ್ಷ ಯೋಜನಾತ್ಮಕವೆಂಬುವರು. ಗೋಲದಂತಿರುವ ಜಂಬೂದ್ವೀಪವು ತನಗೆ ಹಿಡಿದ ಕನ್ನಡಿಯಂತಿರುವ ಚಂದ್ರಮಂಡಲದಿ ಪ್ರತಿಬಿಂಬಿಸಿರುವುದು. ಅಂತೆಯೇ ಶ್ರೀಶನ ಸ್ಥೂಲಪ್ರತಿಮಾಕಾರವಾಗಿರುವ ಬ್ರಹ್ಮಾಂಡವನ್ನು ಚಂದ್ರಾಭಿಮನ್ಯವಾದ ಮನೋದರ್ಪಣದಲ್ಲಿ ಚಿಂತಿಸಿ ತಿಳಿಯಬೇಕು. ಭೂತಭೌತಿಕಕಾರ್ಯವೆಲ್ಲವೂ ಶ್ರೀಹರಿ ಭಿನ್ನವೂ, ತದಧೀನವೂ ಆಗಿದೆ. ಅವನು ಸರ್ವಪಾಲಕನಾಗಿ ಅಪಶ್ಯಬ್ದವಾಚ್ಯನಾಗಿರುವನು. ಅವನಿಗೆ ಅಧೀನನಾಗಿರುವ ಜೀವನು ಒಂದೇ ಪಿಪ್ಪಲ ವೃಕ್ಷದಲ್ಲಿರುವ ಪಕ್ಷಿಯಂತೆ ಕರ್ಮಫಲವನ್ನುಂಡು ಕೃಶವಾಗುವನು; ಅದೇ ಪಿಪ್ಪಲವೃಕ್ಷದಲ್ಲಿರುವ ಸ್ವತಂತ್ರ ಪಕ್ಷಿಯಂತೆ ಶ್ರೀಶನು ಕರ್ಮಫಲವಾದ ದುಃಖವನ್ನು ಧಿಕ್ಕರಿಸಿ ಕೇವಲಾನಂದ ಪೂರ್ಣನಾಗಿರುವನು.

ಪಂಚಾಶತ್‌ಕೋಟಿ ಯೋಜನ ಭೂಮಂಡಲವನ್ನು ಯೋಜನ

ಗಣನಾವೈವಿಧ್ಯದಿಂದ ಎರಡೂವರೆ ಕೋಟಿ ಎಂತಲು, ಲಕ್ಷಯೋಜನ ಜಂಬೂದ್ವೀಪವನ್ನು ಐದು ಸಾವಿರವೆಂತಲು, ಒಂಭತ್ತು ಸಾವಿರ ಯೋಜನ ಭರತಖಂಡವನ್ನು ನನ್ನೂರೈವತ್ತು ಯೋಜನ (ಆರು ಮೈಲು) ವೆಂತಲು ಎಲ್ಲ ಭೂಮಂಡಲವು ಐದು ಸಾವಿರ ಯೋಜನದ ವ್ಯಾಸ ಉಳ್ಳದ್ದೆಂತಲು (ವಿಂಶಾಂಶ ಕಡಿಮೆಮಾಡಿ) ತಿಳಿಯಬೇಕು. ಆಗ ಭರತಖಂಡವು ಉತ್ತರದ ಹಿಮಾಲಯದ ಎರಡು ಕೊನೆಗಳಿಂದ ಸೆಳೆದ ಲಂಕಾರೇಖೆಗಳಿಂದ ತ್ರಿಕೋಣಾಕಾರವೆಂಬುವ ವಚನವೂ ಸಂವಾದಿತವಾಗುವುದು. ಯೋಜನದ ಲೆಕ್ಕ ಬೇರೆ ಬೇರೆ ಆಗುತ್ತಿರುವುದು. (ಮೈಲು ಹೋಗಿ ಕಿಲೋಮೀಟರು ಆಗಿಲ್ಲವೇ?).

ಜಂಬೂದ್ವೀಪದಲ್ಲಿ ಹಿಮಾಲಯ, ಹೇಮಕೂಟ, ನಿಷಧ, ನೀಲ, ಶ್ವೇತ, ಶೃಂಗವಂತಗಳೆಂಬ ಪರ್ವತಗಳು ಭಾರತವರ್ಷದಲ್ಲಿವೆ. ಹಿಮಾಲಯ ಹೇಮಕೂಟಗಳ ಮಧ್ಯದಲ್ಲಿ ಹೈಮವತ; ಹೇಮಕೂಟ ನಿಷಧಗಳ ಮಧ್ಯದಲ್ಲಿ ಹರಿವರ್ಷ; ನಿಷಧ ನೀಲ ಗಳ ಮಧ್ಯದಲ್ಲಿ ಮೇರು; ಅದಕ್ಕೆ ಪೂರ್ವದಲ್ಲಿ ಮಾಲ್ಯವಂತ (ಪರ್ವತ ಸಮುದ್ರದವರೆ ಗೂ); ಪಶ್ಚಿಮದಲ್ಲಿ ಗಂಧಮಾದನ ಪರ್ವತ (ಸಮುದ್ರದವರೆಗೂ); ಇರುವುದು. ಮೇರು ಪರ್ವತವು ಕನಕಮಯವಾಗಿ (84,000) ಅಂದರೆ 4,200 ಯೋಜನ ಎತ್ತರವಿರುವುದು. ಅದರ ಸುತ್ತಲೂ ಭದ್ರಾಶ್ವ ಕೇತುಮಾಲ, ರಮ್ಯಕ, ಉತ್ತರ ಕುರು, ಕಿಂಪುರುಷ ಖಂಡಗ ಳಿರುವವು. ಕಿಂಪುರುಷವೇ ಹೈಮವತವೆನಿಸುವುದು. ಭರತ ವರ್ಷವೇ ಎಲ್ಲ ವರ್ಷಗಳಿಗೂ ಶ್ರೇಷ್ಠವಾಗಿದೆ; ಏಕೆಂದರೆ ಅದೇ ಪುಣ್ಯಸಾಧನ ಭೂಮಿಯಾಗಿದೆ. ಮಿಕ್ಕವು ಭೋಗಸ್ಥಾನ ಗಳಾಗಿವೆ.

ಮೇರು ಪರ್ವತದಲ್ಲಿ ಕನಕಪಕ್ಷಗಳಾಗಿರುವ ವಾಯಸಗಳನ್ನು ಕಂಡು, ಸುಮುಖ ನೆಂಬ ಗರುಡಕುಮಾರನು ಆ ದೇಶವನ್ನು ಬಿಟ್ಟು ಉತ್ತರ ಕುರುಖಂಡವನ್ನು ಸೇರಿದನು. ಮೇರುವನ್ನು ಸೂರ್ಯ ಚಂದ್ರನಕ್ಷತ್ರಚಕ್ರಾದಿ ಜ್ಯೋತಿಸ್ಸಮುದಾಯವು ಪ್ರದಕ್ಷಿಣಾಕಾರವಾಗಿ

ದ ಕೂಡಿ ದೇವಕಿನ್ನರ ಗಂಧರ್ವರು ಕ್ರೀಡಿಸುತ್ತಿರುವರು. ಬ್ರಹ್ಮರುದ್ರೇಂದ್ರಾದಿ ವೃಂದಾ ರಕರು ಅಲ್ಲಿಗೆ ಬಂದು ದಿವ್ಯಯಾಗಗಳಲ್ಲಿ ಶ್ರೀಹರಿಯ ಮಹಿಮೆಯನ್ನು ಪಾಡುವರು. ಕಶ್ಯಪಾದಿ ಋಷಿವರರು ಪರ್ವಕಾಲಗಳಲ್ಲಿ ಬಂದು ಯಜ್ಞಗಳನ್ನು ಮಾಡುವರು. ಅಲ್ಲಿ ದೈತ್ಯ ಗುರುವಾದ ಶುಕ್ರಾಚಾರ್ಯನ ರತ್ನ ಪರ್ವತಗಳಿವೆ. ಅವನಿಂದ ಚತುರ್ಥಾಂಶವನ್ನು ಪಡೆದ ಕುಬೇರನು, ತನ್ನ ನಿಧಿಯ ಷೋಡಶಾಂಶವನ್ನು ಮನುಜರಿಗಿತ್ತು ತಣಿಸುವನು. ಅದರ ಉತ್ತರದಲ್ಲಿ ಕರ್ಣಿಕಾರವನವಿದೆ. ಅಲ್ಲಿ ಉಮಾಸಹಾಯನಾದ ಭಗವಾನ್ ನೀಲ ಲೋಹಿತನು ದಿವ್ಯತಪೋನಿರತನು, ನಾರಾಯಣಧ್ಯಾನಪರನು ಆಗಿರುವನು. ಇದೆಲ್ಲವನ್ನೂ ಉಗ್ರತಪಸ್ಸಿದ್ಧರಾದ ಸುಜನರು ನೋಡಬಲ್ಲರು. ಇತರರಿಗೆ ಇವಾವೂ ಗೋಚರವಾಗದಿರುವವು. ಆ ಶೈಲಶಿಖರದಿಂದ ಹರಿದು ಬರುವ ಮಂದಾಕಿನಿ, ಗಂಗೆ, ಭಾಗೀರಥಿ ಎಂಬ ನಾಮಾಂತರಗಳಿಂದ ಶಿವನ ಜಟೆಯನ್ನು ಅಲಂಕರಿಸಿ, ಕೆಳಗಿಳಿದು, ಭಾರತವರ್ಷದಲ್ಲಿರುವ ಜನರನ್ನು ಪಾವನಗೊಳಿಸುತ್ತಾ ಹರಿದು, ಪೂರ್ವಸಮುದ್ರವನ್ನು

ಸೇರುವಳು. ಗಂಧಮಾದನದಲ್ಲಿ ಕುಬೇರನು ಯಕ್ಷರಾಕ್ಷಸರಿಂದ ಕೂಡಿ, ಸಂತಸದಿಂದಿರುವನು. ಪುಣ್ಯಜನಲೋಕದ ಜನರು ಹೃಷ್ಟರಾಗಿ, ಅನೇಕ ಸಾವಿರ ವರ್ಷಗಳು ಜೀವಿಸುವರು. ಉತ್ಪಲ ವರ್ಣಸುಂದರನಾರಿಯರಿಂದ ಕೂಡಿ ತೇಜೋಮಯರಾದ ಗಂಧರ್ವರು ಕ್ರೀಡಿಸುವ ಪುಷ್ಪೋದ್ಯಾನಗಳು ಹೇರಳವಾಗಿ, ಕುಬೇರಪಾಲಿತವಾಗಿರುವವು.

ಹೇಮಕೂಟದ ಬಿಂದುಸರಸ್ತೀರದಲ್ಲೇ ಭಗೀರಥನು ತಪವನ್ನು ಮಾಡಿ ಭಾಗೀರಥಿಯನ್ನು ಪ್ರತ್ಯಕ್ಷೀಕರಿಸಿಕೊಂಡನು. ಅಲ್ಲಿ ಇಂದ್ರನು ಮಣಿಮಯ ಯೂಪಗಳನ್ನು ಸ್ಥಾಪಿಸಿ ಯಜ್ಞಗಳನ್ನು ಮಾಡಿದನು. ಚತುರ್ಮುಖ ಬ್ರಹ್ಮದೇವನು ಸಕಲಭೂತ ಸೇವಿತನಾಗಿ ಅಲ್ಲಿ ವಿರಾಜಿಸಿರುವನು. ನರನಾರಾಯಣರ ತಪೋಭೂಮಿಯೂ ಅಲ್ಲೇ ಇದೆ. ರುದ್ರನೂ ಅಲ್ಲಿ ನೆಲೆಸಿರುವನು. ದೇವನದಿ ಬ್ರಹ್ಮಲೋಕದಿಂದಿಳಿದು ಬಂದು, ಅಲ್ಲಿ ಭೂಮಿಯನ್ನು ಮುಟ್ಟಿ ಮುಂದೆ ಹರಿಯುವಳು. ವಸ್ವಾಕಸಾರೆ, ನಲಿನಿ, ಸರಸ್ವತೀ, ಜಂಬೂನದೀ, ಶೀತಾ, ಗಂಗಾ, ಸಿಂಧುಗಳೆಂಬ ಏಳು ನದಿಗಳು, ಲೋಕೋಪಕರಾರ್ಥವಾಗಿ ಈಶನಿಂದ ನಿರ್ಮಿತವಾಗಿವೆ. ಏಳೂ ಗಂಗಾನದಿಯ ಪ್ರಭೇದಗಳೆನಿಸಿ ಲೋಕವಿಖ್ಯಾತವಾಗಿವೆ.

ಹಿಮವಂತದಲ್ಲಿ ರಕ್ಷಕರು, ಹೇಮಕೂಟದಲ್ಲಿ ಗುಹ್ಯಕರು, ನಿಷಧಪರ್ವತದಲ್ಲಿ ನಾಗರು, ಗೋಕರ್ಣಗಿರಿಯಲ್ಲಿ ತಪೋಧನರು, ಶ್ವೇತದಲ್ಲಿ ದೇವಾಸುರರು, ನಿಷಧಗಿರಿಯಲ್ಲಿ ಗಂಧರ್ವರು, ನೀಲದಲ್ಲಿ ಬ್ರಹ್ಮರ್ಷಿಗಳು, ಶೃಂಗವಂತದಲ್ಲಿ ದೇವತೆಗಳು (ವ್ಯವಹಾರ ನಿರತರಾಗಿ) ಇರುವರು. ಇಂತು ಏಳು ವರ್ಷಗಳನ್ನು ಅಲ್ಲಿರುವ ಜಂಗಮ-ಸ್ಥಾವರ ಭೂತಗಳನ್ನು ನಿನಗೆ ನಿರೂಪಿಸಿದೆನು. ಶ್ರದ್ಧೆಯಿಂದ ಭಜಿಸಿದವನಿಗೆ ಅದೃಷ್ಟವಾದ ಲೋಕಗಳೂ ಕ್ರಮವಾಗಿ ಪ್ರಾಪ್ತವಾಗಲಹುದು. ಎಲ್ಲ ಲೋಕಗಳು ಪರಮಾತ್ಮನ ಸ್ಥೂಲರೂಪವೆಂದು ಮೊದಲೇ ತಿಳಿಸಿರುವೆನು.

ಪುರುಷನಾಮಕ ಪರಮಾತ್ಮನ ಬಲಕುಕ್ಷಿಯನ್ನಾಶ್ರಯಿಸಿ ಭರತಖಂಡವು ಎಡಕುಕ್ಷಿಯನ್ನಾಶ್ರಯಿಸಿ ಇರಾವತವರ್ಷವೂ ನಿಂತಿವೆ. ಪೂರ್ಣಸುಖನಾದ ಅವನ ಕರ್ಣಗಳನ್ನಾಶ್ರಯಿಸಿ ಅರ್ಚಿರಾದಿ ಮಾರ್ಗ ಪ್ರಾಪ್ಯವಾದ ಸತ್ಯಲೋಕವು, ಧೂಮಾದಿ ಮಾರ್ಗಪ್ರಾಪ್ಯವಾದ ಸ್ವರ್ಗ ಪಿತೃ ಲೋಕಗಳೂ ನೆಲಸಿವೆ. ಅಗ್ನಿಯು ಯಾರ ಮುಖದಿಂದ ಜನಿಸಿ ಬಂದನೋ, ಯಾವನ ನಯನಗಳಿಂದ ಚಂದ್ರ-ಸೂರ್ಯರು ಉದಿಸಿದರೋ, (ಪಿತೃಯಾನ ದೇವಯಾನಗಳು), ಕರ್ಣಗಳಿಂದ ಸ್ವರ್ಗ ಸತ್ಯಲೋಕಗಳು, ತತ್ಪಾಲಕರು ಜನಿಸಿದರೋ, ಯಾವನ ವಾಣಿಯಿಂದ ವೇದಗಳು ಪ್ರಾದುರ್ಭೂತವಾದವೋ, ಯಾವನ ಪ್ರಾಣದಿಂದ ಮುಖ್ಯ ವಾಯುವು ಪುಟ್ಟಿದನೋ, ಯಾವನ ಪಾದದಿಂದ ಪೃಥಿವಿ ಪುಟ್ಟಿದಳೋ, ಯಾವನ ಹೃದಯದಿಂದ ಬ್ರಹ್ಮನುದಿಸಿದನೋ, ಯಾವನ ಮನಸ್ಸಿನಿಂದ ರುದ್ರನು ಪುಟ್ಟಿದನೋ, ಅಂತಹ ವಿಶ್ವವ್ಯಾಪ್ತನಾದ, ಸರ್ವಭೂತಾಂತರ್ಯಾಮಿಯಾದ ಶ್ರೀನಾರಾಯಣನಿಗೆ ನಮಸ್ಕಾರವು. ಜಂಬೂದ್ವೀಪದ ಮಲಯ ಪರ್ವತವೂ ಶ್ರೀಶನ ಆರಾಮುದಂತಿದೆ. ಅಲ್ಲಿ ತಾವ್ರು (ರಜಸ್ಸು-ಮನಃ), ಪರ್ಣ (ವಸ್ತ್ರ ಭೋಜನ ಫಲ-ಪುಷ್ಪಾದಿಗಳು) ಶಿಲಾ (ಮನೆ)ಗಳಿವೆ. ಇಂತು ಶ್ರೀಹರಿಯ ಮಹಾ ವೈಭವವನ್ನು ಚೆನ್ನಾಗಿ ತಿಳಿದು ಚಿಂತಿಸು! ಧೃತರಾಷ್ಟ್ರ!

ಮೇರುವಿಗೆ ಉತ್ತರವಾಗಿ ಮತ್ತು ನೀಲಗಿರಿಗೆ ದಕ್ಷಿಣವಾಗಿ ಉತ್ತರ ಕುರು ಖಂಡವಿದೆ. ಅಲ್ಲಿ ವೃಕ್ಷಗಳು ಮಧುರಫಲಗಳು, ಸುಗಂಧಿ ಪುಷ್ಪಗಳು ಆಗಿವೆ. ಕೆಲ ವೃಕ್ಷಗಳು ಕಲ್ಪತರುಗಳಂತೆ ಸರ್ವಕಾಮಫಲಗಳಾಗಿವೆ. ಕೆಲವು ಸದಾ ಕ್ಷೀರಧಾರೆಯನ್ನು ಸುರಿಸುವವು. ಆ ಕ್ಷೀರವು ಅಮೃತೋಪಮವಾಗಿರುವುದು. ಕೆಲ ವೃಕ್ಷಗಳಿಂದ ವಸ್ತ್ರಗಳು, ಆಭರಣಗಳು ಲಭಿಸುತ್ತಿವೆ. ಭೂಮಿಯು ಮಣಿಮಯವಾಗಿದೆ. ಮರಳು ಕಾಂಚನಕಣಗಳಾಗಿವೆ. ನದಿಗಳು ಕೆಸರಿಲ್ಲದೆ ಅಮೃತಜಲಭರಿತವಾಗಿ ಹರಿಯುತ್ತಿವೆ. ಮಿಥುನವು ಪುಟ್ಟಿ ತುಲ್ಯರೂಪಗುಣೋಪೇತವಾಗಿದ್ದು ಬಾಳಿ, ಅಗಲದೆ, ಹನ್ನೊಂದುಸಾವಿರ ವರ್ಷ ಜೀವಿಸುವುದು. ಅವರು ಮೃತರಾದಾಗ ಭಾರುಂಡವೆಂಬ ತೀಕ್ಷ್ಣತುಂಡ ಪಕ್ಷಿಗಳು ಅವರನ್ನು ಹೊತ್ತು ಒಯ್ದು ಕಂದರಗಳಲ್ಲಿ ಹಾಕಿಬಿಡುವವು.

ಮೇರುಪಾರ್ಶ್ವದಲ್ಲಿ ಭದ್ರಾಶ್ವ ಖಂಡವಿದೆ. ಅಲ್ಲಿ ಭದ್ರಶಾಲವನವಿದೆ; ಕಾಲಾಮ್ರವೆಂಬ ದೊಡ್ಡ ಮಾವಿನಮರವಿದೆ. ಯೋಜನದ ಎತ್ತರವಿರುವ ಆ ಮಹಾವೃಕ್ಷವು ನಿತ್ಯ ಪುಷ್ಪಫಲೋಪೇತವಾಗಿ, ಸಿದ್ಧಚಾರಣ ಸೇವಿತವಾಗಿದೆ. ಪುರುಷರು ಶ್ವೇತವರ್ಣರು, ಮಹಾಬಲರು ಆಗಿರುವರು. ಸ್ತ್ರೀಯರೂ ಕುಮುದವರ್ಣಸುಂದರಿಯರಾಗಿರುವರು. ನೃತ್ಯಗೀತ ವಿಶಾರದೆಯರಾದ ಚಂದ್ರವದನೆಯರು ಕಾಲಾಮ್ರ ರಸಪಾನದಿಂದ ನಿತ್ಯಯೌವನರಾಗಿ, ರಮಣರಿಂದ ಕೂಡಿ ಕ್ರೀಡಿಸುವರು.

ನೀಲಗಿರಿಗೆ ದಕ್ಷಿಣದಲ್ಲಿ, ನಿಷಧಗಿರಿಗೆ ಉತ್ತರದಲ್ಲಿ ಸುದರ್ಶನವೆಂಬ ಜಂಬೂ ವೃಕ್ಷವಿದೆ. ಸರ್ವಕಾಮಿತ ಫಲಪ್ರದವಾದ ಆ ಮಹಾ ವೃಕ್ಷವು ಹತ್ತು ಸಾವಿರದ ಒಂದುನೂರು ಯೋಜನದ ಎತ್ತರವುಳ್ಳದ್ದು ಸಿದ್ಧಚಾರಣ ಸೇವಿತವೂ ಆಗಿದೆ. ಒಂದೂವರೆ ಸಾವಿರ ಅರತ್ನಿ(ಮೊಳ)ಗಳ ಸುತ್ತಳತೆಯುಳ್ಳ ಆ ವೃಕ್ಷದ ಫಲಗಳು ಒಂದುಕಾಲುನೂರು ಅರತ್ನಿಗಳಷ್ಟು ದಪ್ಪವಾಗಿ, ಪಕ್ವವಾದಾಗ ಒಡೆದು, ಕೆಳಗೆ ಬೀಳುವವು. ಅವುಗಳ ರಸವೇ ಜಾಂಬೂನದ (ಬಂಗಾರ)ವೆನಿಸುವುದು. ಆ ನದಿಯು ಮೇರುವನ್ನು ಸುತ್ತಿ ಉತ್ತರ ಕುರುಖಂಡವನ್ನು ಪ್ರವೇಶಿಸುವುದು. ಅಲ್ಲಿ ಮಾನವರು ತರುಣಾದಿತ್ಯವರ್ಣರು, ಮಹಾಬಲರು ಆಗಿರುವರು. ಮಾಲ್ಯವಂತನೆಂಬ ಗಿರಿಯ ಕೋಡಿನಲ್ಲಿ ಸಂವರ್ತಕನೆಂಬ ಕಾಲಾಗ್ನಿಯು ಸದಾ ಬೆಳಗುತ್ತಿರುವನು. ಅದರ ಸಮೀಪದ ಗಂಡಿಕಾ ಪರ್ವತದ ಕಂದರದಲ್ಲಿ ಸ್ವರ್ಗ ಲೋಕದಿಂದ ಪುಣ್ಯಕ್ಷಯವಾದಾಗ ಕೆಳಗಿಳಿದು ಬಂದ ಪುಣ್ಯಶೀಲರು ಮತ್ತೆ ತಪಸ್ಸನ್ನು ಮಾಡಿ, ಲೋಕಹಿತವನ್ನು ಸಾಧಿಸಿ ತಾವು ಸಿದ್ಧರಾಗಿ, ಆದಿತ್ಯಮಂಡಲವನ್ನು ಪ್ರವೇಶಿಸುವರು. ಅರವತ್ತು ಆರು ಸಾವಿರ ಋಷಿವರರು ಅರುಣನ ಮುಂದೆ, ಸೂರ್ಯಾಂತರ್ಗತ ಶ್ರೀಹರಿಯನ್ನು ಗಾಯತ್ರೀ ಮಂತ್ರದಿಂದ ಸ್ತುತಿಸುತ್ತಾ ಪೋಗುತ್ತಿರುವ ವಾಲಖಿಲ್ಯಾದಿಗಳು ಎಂದು ಖ್ಯಾತರಾಗಿ ಇಲ್ಲಿ ಮಾಡಿದ ತಪೋಮಹಿಮೆಯಿಂದಲು, ಸೂರ್ಯನಾರಾಯಣನ ಉಪಾಸನಾಬಲದಿಂದಲು, ಬಹುಕಾಲವಾದ ಮೇಲೆ ಶಶಿಮಂಡಲವನ್ನು ಹೊಕ್ಕು, ಮುಕ್ತರಾಗುವರು. ಶಶಿಮಂಡಲವೆಂದರೆ ಅರ್ಚಿರಾದಿಮಾರ್ಗದ ಕೊನೆಯ ಹಂತವಾದ ಸತ್ಯಲೋಕವೆಂದು ತಿಳಿಯಬೇಕು.

ಶ್ವೇತನಿಷಧಗಳ ಮಧ್ಯದಲ್ಲಿ ರಮಣಕವರ್ಷವಿದೆ. ನೀಲನಿಷಧಗಳ ಮಧ್ಯದಲ್ಲಿ ಹಿರಣ್ಮಯ ವರ್ಷವಿದೆ. ಅಲ್ಲಿ ಪಕ್ಷಿರಾಜನಿರುವನು. ಅಲ್ಲಿ ಮನುಜರು ಹತ್ತುಸಾವಿರದ ಹದಿನೈದುನೂರು ವರ್ಷಗಳ ಕಾಲ ಸುಖವಾಗಿ ಬಾಳುವರು. ಅಲ್ಲಿ ವಿಚಿತ್ರವಾದ ಮೂರು ಪರ್ವತ ಶೃಂಗಗಳು ರತ್ನಮಯವು, ಕನಕಮಯವು, ರತ್ನಮಯವು ಆಗಿವೆ. ದಿವ್ಯ ಭವನದಲ್ಲಿ ಸ್ವಯಂಪ್ರಭಾದೇವಿಯು ವಾಸಮಾಡುತ್ತಿರುವಳು. ಶೃಂಗವತ್ಪರ್ವತದ ಉತ್ತರಕ್ಕೆ ಐರಾವತವೆಂಬ ವರ್ಷವಿದೆ. ಅಲ್ಲಿ ಸೂರ್ಯನ ಬೆಳಕಿಲ್ಲ. ಕೇವಲ ಚಂದ್ರ ತಾರೆಯರ ತಿಳಿಬೆಳಕಿನಲ್ಲಿ ಬೆಳೆವ ಮಾನವರು ಮುಪ್ಪನ್ನರಿಯರು. ಜಿತೇಂದ್ರಿಯರಾದ ಮನುಜರಲ್ಲಿ ಪದ್ಮಗಂಧಮನೋಹರರಾಗಿ, ಹದಿಮೂರುಸಾವಿರ ವರ್ಷ ಜೀವಿಸುವರು. ಕ್ಷೀರ ಸಮುದ್ರದ ಉತ್ತರದಲ್ಲಿ ಶ್ವೇತದ್ವೀಪವಿದೆ. ಅದು ಕನಕಮಯವಾಗಿದೆ. ಅಲ್ಲಿ ಶ್ರೀಹರಿಯು ನೆಲೆಸಿರುವನು. ಅವನ ರಥಕ್ಕೆ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನಃ, ಬುದ್ಧಿ, ಪ್ರಾಣ, ಮಹತ್ತು, ಅವಿದ್ಯಾ ಕಾಮಕರ್ಮಗಳೆಂಬ ಅಷ್ಟಚಕ್ರಗಳಿವೆ. ಆ ರಥವು ಭೂತಮಯವಾಗಿ ಅಚೇತನವಾದರೂ, ಜೀವೇಶರಿಬ್ಬರಿಂದ ಅಧಿಷ್ಠಿತವಾದಾಗ, ಶೀಘ್ರಗಾಮಿಯಾಗಿ, ಚೇಷ್ಟಾವಂತವಾಗಿದೆ. ಅಗ್ನಿಯಂತೆ ಸಂಸಾರ ದುಃಖಪ್ರದವಾಗಿದ್ದರೂ ವಾಸನಾಜಾಲಾವೃತವಾಗಿ ಮನೋಹರವಾಗಿದೆ. ಸರ್ವಭೂತಪ್ರಭುವಾದ ಶ್ರೀನಾರಾಯಣನು ಜಂಗಮಸ್ಥಾವರ ಜೀವ-ಜಾತವನ್ನು ಸೃಜಿಸಿ, ಪಾಲಿಸಿ, ನಿಯಮಿಸಿ, ಸಂಹರಿಸುತ್ತಿರುವನು. ಜೀವನಿಂದ ಕರ್ಮವನ್ನು ಮಾಡಿಸಿ, ತಾನು ಸ್ವತಂತ್ರಕರ್ತನಾಗಿರುವುದರಿಂದ ಕರ್ಮಲೇಪವಿಲ್ಲದೆ, ಕೇವಲ ಸುಖ ಮಾತ್ರ ಭೋಜನನಾಗಿರುವನು. ಶ್ರೀಹರಯೇನಮಃ".

ಧೃತರಾಷ್ಟ್ರನು 'ಸಂಜಯ! ಕಾಲಕ್ಕೆದುರಿಲ್ಲ. ಕಾಲನಾಮಕ ಶ್ರೀಹರಿಯೇ ಸ್ವತಂತ್ರನು. ಸರ್ವಜ್ಞನು, ಸರ್ವ ಭೂತಾಂತರ್ಯಾಮಿಯೂ ಸರ್ವತ್ರ ವ್ಯಾಪ್ತನೂ ಆದ ಶ್ರೀಶನ ಮಹಿಮೆಯನ್ನು ನೆನೆದು ಆಶ್ಚರ್ಯಭಯ ಸಂಭ್ರಮಾನ್ವಿತನಾಗಿರುವೆನು. ಭಾರತವರ್ಷದಲ್ಲಿ ನಿಂತಿರುವ ಕೌರವಪಾಂಡವರ ಸೇನೆಗಳು - ತಾವು ಶಾಶ್ವತವೆಂದು ಭ್ರಮಿಸಿ - ಹಿಡಿಮಣ್ಣಿಗಾಗಿ ಕಾದಾಡಿ, ಸಾಯಲಿವೆ. ನರನಾರಾಯಣಾವತಾರರಾದ ಅರ್ಜುನ ವಾಸುದೇವರು, ಮುಖ್ಯ ಪ್ರಾಣಾವತಾರನಾದ ಭೀಮಸೇನನು ಭೂ ಭಾರವನ್ನಿಳುಹಲೆಣಿಸಿ ಸಂಹರಿಸುವಾಗ ಯಾರೂ ಉಳಿಯಲಾರರೆಂದು ತೋರುತ್ತಿದೆ. ಪಾಂಡವರಾದರೂ ರಾಜ್ಯಲೋಭವನ್ನು ಬಿಟ್ಟು ಶಾಂತರಾಗಿದ್ದಿದ್ದರೆ ಈ ಅನರ್ಥವಾಗುತ್ತಿದ್ದಿಲ್ಲ' ಎಂದನು.

ಸಂಜಯನಿಂತೆಂದನು: 'ರಾಜನ್ ! ಪಾಂಡವರಲ್ಲ ರಾಜ್ಯ ಲೋಭಿಗಳು. ನಿನ್ನ ಮಕ್ಕಳು ಕೇಳಿದ ಐದು ಗ್ರಾಮಗಳನ್ನಾದರೂ ಕೊಡದೆ, ಕಾದಿ, ಸಮೂಲವಾಗಿ ನಾಶವಾಗಲಿರುವರು. ಶಕುನಿ ಮುಂತಾದ ದುಷ್ಟರಾಜರ ಕುಚೇಷ್ಟೆಯ ಫಲವಿದು.

ಭರತವರ್ಷವು ಅತ್ಯಂತ ಪವಿತ್ರವಾದುದು. ಇಂದ್ರಾದಿ ದೇವತೆಗಳಿದನ್ನು ಯಜ್ಞ ಭೂಮಿ ಎಂದು ಪ್ರೀತಿಸುವರು. ಇಲ್ಲಿ ಆಳಿ ಹೋದರು ರಾಜಾಧಿರಾಜರು. ಆದಿರಾಜನಾದ ಮನು, ಪೃಥು, ಇಕ್ಷ್ವಾಕು, ಅಂಬರೀಷ, ಸಗರ, ಶಿಬಿ, ಪುರೂರವ, ನೃಗ, ಕುಶಿಕ, ಗಾಧಿ, ದಿಲೀಪ, ಮುಂತಾದ ಚಕ್ರವರ್ತಿಗಳು ಈ ಕರ್ಮ ಭೂಮಿಯನ್ನು ಪಾಲಿಸಿ, ಬಿಟ್ಟು ಹೋದರು.

ಭಾರತವರ್ಷದಲ್ಲಿ ಮಹೇಂದ್ರ, ಮಲಯ, ಸಹ್ಯ, ಶಕ್ತಿವಂತ, ಋಕ್ಷವಂತ, ವಿಂಧ್ಯ, ಪಾರಿಯಾತ್ರಗಳೆಂಬ ಏಳು ಕುಲಪರ್ವತಗಳಿವೆ. ಪ್ರತ್ಯಂತ ಪರ್ವತಗಳಲ್ಲಿ ಸಾವಿರಾರು ನಿಂತಿವೆ. ಗಂಗಾ, ಸಿಂಧು, ಸರಸ್ವತಿ, ಗೋದಾವರಿ, ಯಮುನಾ, ಬಾಹುದಾ, ಶತದ್ರು, ಚಂದ್ರಭಾಗಾ, ತುಂಗಭದ್ರಾ, ದೃಷದ್ವತಿ, ವಿಪಾಶಾ, ವಿಪಾಪಾ, ವೇತ್ರವತಿ, ವೇದವತಿ, ಕೃಷ್ಣವೇಣೀ, ಇರಾವತಿ, ವಿತಸ್ತಾ, ಪಯೋಷ್ಣೀ, ದೇವಿಕಾ, ವೇದಸ್ಮೃತಾ, ಕರೀಷಣೀ, ಗೋಮತೀ, ಧೂತಪಾಪಾ, ಗಂಡಕೀ, ಮಹಾನದಿ, ಕೌಶಕೀ, ಸರಯೂ, ಚರ್ಮಣ್ವತೀ, ಶರಾವತೀ, ಪಯೋಷ್ಣೀ, ಭೀಮರಥಿ, ಕಾವೇರಿ, ವಾಣೀ, ಶತಬಲಿ, ನೀವಾರಾ, ತಾಮ್ರಪರ್ಣಿ, ಕೃತಮಾಲಾ, ಪಾಪಹರಾ, ಪಲಾಶಿನೀ ಅಸಿಕ್ನೀ, ಸದಾನೀರಾ, ಪಿನಾಕಿನೀ, ಶುಕ್ತಿಮತೀ, ವಿಶ್ವಾಮಿತ್ರಾ, ಪಿಂಜಲಾ, ವೇಣು, ವಿದಿಶಾ, ಕಪಿಲಾ, ಭಾರದ್ವಾಜಿ, ಶೋಣಾ, ಬಾಹುದಾ, ಸ್ವರ್ಣಮುಖೀ; ತಮಸಾ, ವರುಣಾ ಅಸೀನೀಲಾ, ಮಾನವೀ ಮೊದಲಾದ ಮಹಾನದಿಗಳು ಇಲ್ಲಿ ಹರಿಯುತ್ತಿವೆ. ಅಪ್ರಕಾಶವಾಗಿರುವ ನದಿಗಳು ಇನ್ನೂ ಸಾವಿರಾರಿವೆ.

ಕುರುಪಾಂಚಾಲ, ಶಾಲ್ವ, ಮದ್ರ, ಜಾಂಗಲ, ಶೂರಸೇನ, ಪುಲಿಂದ ಮತ್ಸ್ಯ, ಕೌಶಲ್ಯ, ಕುಂತಿ, ಚೇದಿ, ಕರೂಷ, ಭೋಜ ಸಿಂಧು ದಶಾರ್ಣ ಉತ್ಕಲ, ಪಾಂಚಾಲ, ಮದ್ರಕ, ಕಳಿಂಗ, ಕಾಶಿ, ಜಾಠರ, ಕುಕುರ, ಅವಂತಿ, ವಿದರ್ಭ, ಅಶ್ವಕ, ಶಕ, ಬರ್ಬರ, ಅಂಗ, ವಂಗ, ವಿದೇಹ, ಮಗಧ, ಬಾಹ್ಲೀಕ ಆಭೀರ, ಕೇಕಯ, ಆಂಧ್ರ, ಕಿರಾತ, ನಿಷಾದ, ನಿಷಧ ಆನರ್ತ ಕುಂತಲ, ಕಾನ್ಯಕುಬ್ಜ ಸಮೀರ, ಕಾಶ್ಮೀರ, ಸಿಂಧು ಸಾವೀರ, ಗಾಂಧಾರ, ಆಭೀಸಾರ, ಉವಾತ, ಉರಗ, ಕುಲಿಂದ, ಕುಶಬಿಂದು, ಜಾಂಗಲ, ಪಾರ್ವತೀಯ, ದ್ರಾವಿಡ, ಕೇರಳ, ಕರ್ಣಾಟಕ, ಚೋಲ, ಮಾಲವ, ಸಮಂಗ, ಕರಕ, ತ್ರಿಗರ್ತ ಮೊದಲಾದ ದೇಶಗಳು ಭಾರತ ವರ್ಷದಲ್ಲಿ ನೆಲಸಿವೆ. ಉತ್ತರದಲ್ಲಿರುವ ಯವನ, ಚೀನ, ಕಾಂಬೋಜ, ಮ್ಲೇಂಛದೇಶಗಳ ಜನರು ಬಹು ಕ್ರೂರರು. ಅವರಲ್ಲದೆ ಪಶ್ಚಿಮದಲ್ಲಿ ಹೂಣ, ಪಾರಶಿಕ, ಪಹ್ಲವ, ಗಿರಿಗಹ್ವರ, ದೇಶದ ಜನರೂ ಭಾರತದ ಪರಿಸರದಲ್ಲಿರುವರು.

ಧರ್ಮಾರ್ಥ ಕಾಮಗಳನ್ನು ಕೊಡುವ ಧೇನುವಿನಂತಿರುವ ಭರತಭೂಮಿಗಾಗಿ ಕಡಿದಾಡಿ, ಪ್ರಾಣಗಳನ್ನರ್ಪಿಸಲು ನಿಂತಿರುವ ರಾಜರು ಮಾಂಸ ಖಂಡಕ್ಕೆ ಜಗಳ ಮಾಡುವ ಸಾರಮೇಯಗಳಂತೆ, ರೇಗಿ, ಕೂಗಿ, ಕಚ್ಚಿ ಕಡಿದಾಡಿ ಕೊನೆಗೆ ಭೂಮಿಯಲ್ಲಿ ಬಿದ್ದು ಮಣ್ಣಾಗಿ ಹೋಗುವವರು. ಮನುಜ ಮಾತ್ರನಿಗೆ ವಿಚಾರಿಸಿ ನೋಡಲು ತೃಪ್ತಿ ಎಂಬುದೊಂದಿಲ್ಲ. ಭೂಮಿಯ ತುಂಡಿಗಾಗಿ, ತಂದೆ ಮಕ್ಕಳು, ಅಣ್ಣತಮ್ಮಂದಿರು, ಮಿತ್ರರು ಯುದ್ಧವಾಡಿ, ರಣರಂಗದಲ್ಲಿ ನಿಹತರಾಗಿ, ತಮ್ಮ ದೇಹವನ್ನು ಭೂಮಿಯಲ್ಲಿ ಬಿಟ್ಟು ತಾವು ಕೀರ್ತಿಕಾಯರಾಗಿ, ಸ್ವರ್ಗಾದಿ ಪುಣ್ಯಲೋಕಗಳನ್ನು ಹೊಂದಲಿರುವರು.

ಭರತವರ್ಷದ ಆಯುಃಪ್ರಮಾಣವನ್ನು ಕೇಳು. ಕೃತ ತ್ರೇತಾದ್ವಾಪರಕಲಿಗಳೆಂಬ ನಾಲ್ಕು ಯುಗಗಳಲ್ಲವೇ! ಕೃತಯುಗದ ಪ್ರಮಾಣ ನಾಲ್ಕು ಸಾವಿರ ವರ್ಷ. ತ್ರೇತಾಯುಗ ಮೂರುಸಾವಿರ ವರ್ಷಗಳು. ದ್ವಾಪರ ಎರಡು ಸಾವಿರವಾದರೆ, ಕಲಿಯು ಒಂದೇ ಸಾವಿರ ವರ್ಷಗಳೆಂದು ತಿಳಿ! ಕೃತಯುಗದ ಜನರು ಪ್ರಿಯದರ್ಶಿಗಳು, ಧರ್ಮಿಷ್ಠರು, ಧನವಂತರು,

ಮಹಾಬಲರು, ಬಹುಪ್ರಾಜರು, ಸತ್ಯವಾದಿಗಳು, ಆಗಿರುವರು. ತ್ರೇತೆಯಲ್ಲಿ ಬಹುಶೂರರಾದ ಚಕ್ರವರ್ತಿಗಳು, ಯಜಯಾಗಾದಿ ನಿರತರಾಗಿ, ವರ್ಣಾಶ್ರಮ ಧರ್ಮಪಾಲನ ತತ್ಪರರಾಗಿರುವರು. ದ್ವಾಪರದಲ್ಲಿ ಧರ್ಮದ ತಪಶ್ಶೌಚದಯಾಸತ್ಯಗಳೆಂಬ ನಾಲ್ಕುಪಾದಗಳಲ್ಲಿಯು ಅರ್ಧಾಂಶವು ನಷ್ಟವಾಗುವುದು. ರಾಜರು ಪರಸ್ಪರ ಜಯೈಷಿಗಳಾಗಿ, ಅಸೂಯಾ ಕ್ರೋಧಲೋಭ ವಶರಾಗುವರು. ಕಲಿಯುಗದಲ್ಲಿ ಸ್ಮಯ, ದುಸ್ಸಂಗ, ಮದಗಳೆಂಬ ಅಧರ್ಮ ಪಾದಗಳಿಂದ ತಪಃ ಶೌಚ, ದಯೆಗಳೆಂಬ ಧರ್ಮಪಾದಗಳು ಕೆಟ್ಟು ಹೋಗುವವು. ಅನೃತದಿಂದ ಸತ್ಯವೂ ಕ್ರಮವಾಗಿ ಕೆಡುತ್ತ ಹೋದಂತೆ ಕಲಿಕಾಲದ ಉಪಟಳವು ಹೆಚ್ಚಾಗುವದು. ಜನರು ಲೋಭಿಗಳು, ಅನೃತವಾದಿಗಳು, ಅಸೂಯಾಮಾನ ಮದಾನ್ವಿತರು ಆಗಿ ಅಧರ್ಮದಲ್ಲಿ ತೊಡಗುವರು.

ರಾಜನ್! ಚತುರ್ದಲಕಮಲ ಸದೃಶಾಕಾರವಾಗಿರುವ ಜಂಬೂದ್ವೀಪದ ವಿಷ್ಕಂಭವು ಹದಿನೆಂಟುಸಾವಿರದ ಆರುನೂರು ಯೋಜನವೆಂಬರು. ಇದು ಪತ್ರಗಳ ಅಂತರ್ಭಾಗದ ಪರ್ವತಾಕಾರವಾಗಿರುವ ಭಾಗದ ಪರಿಧಿ. ದಲಗಳು ಐದುಸಾವಿರ ಯೋಜನ; ಇಂತು ಲವಣಸಮುದ್ರ ಸಹಿತವಾದ ಜಂಬೂದ್ವೀಪದ ವ್ಯಾಸವು ಹದಿನೈದುಸಾವಿರ ಯೋಜನವಾಗುವುದು. ಅದರ ಸುತ್ತಲೂ ಲವಣ ಸಮುದ್ರವಿದೆ. ಜಂಬೂದ್ವೀಪದ ವಿಸ್ತಾರವನ್ನು ಲಕ್ಷಯೋಜನಪರಿಮಿತವೆಂದು ಯೋಜನಗಣನಾಭೇದದಿಂದ ಹೇಳುವರು. ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ ದ್ವೀಪಗಳು ಕ್ರಮವಾಗಿ ದ್ವಿಗುಣ ವಿಸ್ತಾರವಾಗಿ, ಲವಣ, ಇಕ್ಷು, ಸುರಾ, ಸರ್ಪಿ ದಧಿ, ಕ್ಷೀರ ಶುದ್ಧೋದಕ ಸಮುದ್ರಗಳಿಂದ ಆವರಿಸಲ್ಪಟ್ಟಿವೆ. ಅವು ಕೂಡ ಕ್ರಮವಾಗಿ ಒಂದು, ಎರಡು, ನಾಲ್ಕು, ಎಂಟು, ಹದಿನಾರು, ಮೂವತ್ತೆರಡು, ಅರವತ್ನಾಲ್ಕು ಲಕ್ಷ ಯೋಜನ ವಿಸ್ತಾರವಾಗಿವೆ.

ಶಾಕದ್ವೀಪದಲ್ಲಿ ಮಲಯ, ಜಲಧಾರ, ರೈವತಕ, ಶ್ಯಾಮ, ಮೊದಲಾದ ಪರ್ವತಗಳಿವೆ. ಮಲಯದಲ್ಲಿ ಮೇಘಗಳು ಪುಟ್ಟುತ್ತಿವೆ. ಜಲಧಾರದಿಂದ ತಂದ ನೀರೇ ವಾಸವನಿಂದ ಮೇಘರೂಪವಾಗಿ ಪರಿವರ್ತಿಸಲ್ಪಟ್ಟು ನಮಗೆ ವರ್ಷಾಕಾಲದಿ ಮಳೆಯಾಗಿ ಬೀಳುತ್ತಿದೆ. ರೈವತಕದಲ್ಲಿ ರೇವತೀದೇವಿಯು ಬ್ರಹ್ಮನ ಆಜ್ಞೆಯಂತೆ ವಿರಾಜಿಸುವಳು. ಶ್ಯಾಮಪರ್ವತ ಪ್ರಭಾವದಿಂದ ಅಲ್ಲಿ ಬೆಳೆದ ಅನ್ನಾದಿಗಳನ್ನು ಸ್ವೀಕರಿಸುವ ಮನುಜರು, ಗೌರರು, ಪೀತರು, ಕೃಷ್ಣರು ಆಗದೇ ಶ್ಯಾಮವರ್ಣರಾಗುತ್ತಿರುವರು. ಅಲ್ಲಿ ದುರ್ಗ ಶೈಲ ಮಹೋದಯ ಕೇಸರ ಪರ್ವತಗಳೂ ಇವೆ. ಕೇಸರ ಪರ್ವತದಲ್ಲಿಂದ ವಾತಗಳು ಜನಿಸಿ, ವ್ಯಾಪಿಸುವವು. ಅಲ್ಲಿ ಶಂಕರನು ನೆಲೆಸಿರುವನು. ಜನರು ಸ್ವಧರ್ಮದಿಂದ ನಿರತರಾಗಿರುವರು. ಜರಾಮೃತ್ಯುದೂರರಾಗಿ ಭೋಗರತರಾಗಿರುವರು. ಕುಮಾರೀ, ಶೀತಾ, ವೇಣಿಕಾ, ಮಣಿಜಲಾ, ಚಕ್ಷು, ವರ್ಧನಿಕಾ ಮೊದಲಾದ ನದಿಗಳಲ್ಲಿ ಪ್ರವಹಿಸುತ್ತಿವೆ. ಮೃಗದೇಶದಲ್ಲಿ ವಿಪ್ರರು, ಮಶಕದೇಶದಲ್ಲಿ ರಾಜನ್ಯರು, ಮಾನಸದೇಶದಿ ವೈಶ್ಯರು, ಮಂದಗದೇಶದಲ್ಲಿ ಶೂದ್ರರು ವಾಸಿಸುತ್ತಾ ಸ್ವಭಾವದಿಂದಲೇ ಧರ್ಮನಿರತರಾಗಿರುವರು.

ಪ್ಲಕ್ಷವೃಕ್ಷ, ಕುಶಸ್ತಂಧ, ಶಾಲ್ಮಲೀತರು, ಕ್ರೌಂಚವೃಕ್ಷ, ಶಾಕಸ್ತಂಭ, ಪುಷ್ಕರ (ಕಮಲ) ಗಳಿರುವ ಮಿಕ್ಕ ಆರು ದ್ವೀಪಗಳು ಪುಣ್ಯಜನನಿವಾಸಯೋಗ್ಯವಾಗಿವೆ. ಕ್ರೌಂಚದ್ವೀಪದ ಗೋಮಂತಗಿರಿಯಲ್ಲಿ ನಿತ್ಯವೂ ಕಮಲಲೋಚನನಾದ ನಾರಾಯಣನು ಮುಕ್ತರೊಡಗೂಡಿ ಕ್ರೀಡಿಸುತ್ತಿರುವನು. ಕುಶದ್ವೀಪದಲ್ಲಿ ದ್ಯುತಿಮಾನ್ ಎಂಬ ಗಿರಿ ಇದೆ ಮತ್ತು ಕುಮುದ, ಪುಷ್ಪವಂತ, ಕುಶೇಶಯ, ಹರಿಗಿರಿ ಎಂಬ ಬೆಟ್ಟಗಳೂ ಇವೆ. ಅಲ್ಲಿ ಔದ್ಭಿದ, ವೇಣುಮಂಡಲ, ಸುರಥಾಕಾರ, ಕಂಬಲ, ಧೃತಿಮಾನ್, ಪ್ರಭಾಕರ, ಕಾಪಿಲಗಳೆಂಬ ವರ್ಷಗಳಿವೆ. ದೇವಗಂಧರ್ವರ ವಿಹಾರಭೂಮಿಯಾದ ಕುಶದ್ವೀಪದಲ್ಲಿ ದಸ್ಯುಗಳಿಲ್ಲ; ಮ್ಲೇಂಛರಿಲ್ಲ. ಕ್ರೌಂಚದ್ವೀಪದ ಕ್ರೌಂಚಗಿರಿಯಲ್ಲದೆ ಅಲ್ಲಿ ವಾಮನ, ಅಂಧಕಾರ, ಮೈನಾಕ, ಗೋವಿಂದ, ನಿಬಿಡ ಎಂಬ ಗಿರಿಗಳಿವೆ. ಕುಶಲ ಮನೋನುಗ, ಉಷ್ಣ ಪ್ರಾವರಕ, ಮುನಿ, ದುಂದುಭಿಸ್ವನ ಮೊದಲಾದ ದೇಶಗಳಿರುವ ಕ್ರೌಂಚದ್ವೀಪದಲ್ಲಿ ದೇವಋಷಿಜನರು ಸುಖವಾಗಿರುವರು. ಬ್ರಹ್ಮಚರ್ಯ, ಸತ್ಯ, ಇಂದ್ರಿಯ ನಿಗ್ರಹಗಳಿಂದ ಜಂಬೂದ್ವೀಪದ ಜನರಕ್ಕಿಂತಲು ಕ್ರಮವಾಗಿ ದ್ವಿಗುಣಿತವಾಗುವ ಆಯುಃ - ಪ್ರಮಾಣದಿಂದ ಯುಕ್ತರಾಗಿ ಇತರ ದ್ವೀಪಗಳ ಜನರು ಶ್ರೀಹರಿ ಶಾಸನಕ್ಕೊಳಪಟ್ಟು ಸಕಲಭೋಗಭರಿತರಾಗಿರುವರು. ಅವರಿಗೆ ಸಿದ್ಧಾನ್ನವು ಬೇಕಾದಾಗ ಸಿಗುತ್ತಿರುವುದು.

ಲೋಕಾಲೋಕ ಪರ್ವತವೆಂಬ ಸಪ್ತದ್ವೀಪಗಳಿಗಾಚೆ ಇರುವ ಭೂಖಂಡದಲ್ಲಿ ದಿಗ್ಗಜಗಳು ಭಗವಂತನಿತ್ತ ದಿವ್ಯಶಕ್ತಿಯಿಂದ ಭೂಮಂಡಲವನ್ನು ಧರಿಸಿ ನಿಂತಿರುವವು. ಬೇಕಾದಂತೆ ಬೀಸುವ ಬಿರುಗಾಳಿಗಳನ್ನು ತುಂಡಾಗ್ರದಿಂದ ಬಂಧಿಸಿ ಹೀರಿ, ಐರಾವತ, ಸುಪ್ರತೀಕ, ಕುಮುದ, ವಾಮನ ಪ್ರಮುಖ ದಿಗ್ಗಜಗಳು ಮತ್ತೆ ಮೆಲ್ಲಕ್ಕೆ ಬಿಡುವವು. ಮುಖ್ಯ ಪ್ರಾಣಾಧಾರವಾಗಿ ದಿಗ್ಗಜಗಳು ನಿಂತಿವೆ.

ಈಗ ಜ್ಯೋತಿಶ್ಚಕ್ರವನ್ನು ಸಂಗ್ರಹವಾಗಿ ವಿವರಿಸುವೆನು! ರಾಹು ಮಂಡಲವು ಮೂವತ್ತಾರುಸಾವಿರ ಯೋಜನದ ಪರಿಧಿ ಉಳ್ಳದ್ದಾಗಿದೆ. ಅದಕ್ಕಿಂತಲೂ ಹೆಚ್ಚಾಗಿ ಅಂದರೆ ಅರವತ್ತು ಸಾವಿರ ಯೋಜನದ ಪರಿಧಿಯುಳ್ಳ ಚಂದ್ರನೂ, ಇನ್ನೂ ಹೆಚ್ಚಾಗಿ ಸೂರ್ಯನು ಐನೂರು ಸಾವಿರ ಯೋಜನದ ಪರಿಧಿಯುಳ್ಳವನಾಗಿಯೂ ಮೇಲಿರುವರು. ಮಹಾರಾಜ! ಶಾಸ್ತ್ರಚಕ್ಷುಸ್ಸಿಗೆ ಗೋಚರವಾಗುವುದನ್ನು ಮಾತ್ರ ತಿಳಿಸಿರುವೆನು. ಇಂತು ಶ್ರೀಹರಿನಿರ್ಮಿತವಾಗಿ, ಶ್ರೀಶಾಧೀನವಾಗಿರುವ ಭೂಮಂಡಲಕ್ಕಾಗಿ ಬಡಿದಾಡುವ ರಾಜನ್ಯರನ್ನು ಕಂಡು ಆಶ್ಚರ್ಯಶೋಕಭರಿತನಾಗಿರುವೆನು. ಭರತಶ್ರೇಷ್ಠ! ಭೂಮಿಯ ವಿವರವನ್ನು ಸರ್ವತ್ರ ವ್ಯಾಪ್ತನಾಗಿರುವ ಶ್ರೀಶನ ಸ್ಥೂಲರೂಪ (ಪ್ರತಿಮೆಯಂತೆ) ವೆಂದು ತಿಳಿದವನು, ಶ್ರೀಮಂತನು, ಸಾಧು-ಸಮ್ಮತನು, ಆಯುರ್ಬಲ ಕೀರ್ತಿ ಜಯವಂತನೂ ಆಗುವನು. ಅವನ ಪಿತೃಗಳಿಗೆ ಪುಣ್ಯಲೋಕವಾಗುವುದು. ಪಿತೃ-ದೇವತಾಪ್ರಸಾದದಿಂದ ಅವನೂ ಸಂತಾನ ಸಂಪತ್ಸಮನ್ವಿತನಾಗಿ ಚಿರಕಾಲ ಬಾಳುವನು.

## ೩. ಭೀಷ್ಮಪಾತ - ಧೃತರಾಷ್ಟ್ರ ಪ್ರಶ್ನೆ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು.

ರಾಜನ್! ಹತ್ತು ದಿನಗಳ ಯುದ್ಧವಾಯಿತು. ಮಾರ್ಗಶಿರ ಬಹುಳ ಅಷ್ಟಮಿಯ ಸಾಯಂಕಾಲ ಸಂಜಯನು ರಣರಂಗದಿಂದ ಹಿಂದಿರುಗಿ ಬಂದು ಧೃತರಾಷ್ಟ್ರನಿಗಿಂತೆಂದನು:

'ರಾಜನ್! ನಾನು ಸಂಜಯನು. ಪಿತಾಮಹನು ರಣರಂಗದಲ್ಲಿ ಬಿದ್ದನು. ಕೌರವಪಿತಾಮಹನು, ಸರ್ವಧನುರ್ಧಾರಿವರನು ಆದ ಭೀಷ್ಮನೀಗ ಶರತಲ್ಪಗತನಾಗಿರುವನು. ಯಾವ ವೀರವರನ ಭುಜಬಲವನ್ನು ನಂಬಿ ನಿನ್ನ ಮಗನು ಜೂಜಾಡಿದನೋ, ಯಾವ ಧೈರ್ಯಶಾಲಿಯು ಕಾಶೀಪುರದಿ ನೆರೆದ ರಾಜರನ್ನು ಗೆದ್ದು ಕಾಶಿರಾಜ ಸುತೆಯರನ್ನು ತಮ್ಮನಿಗಾಗಿ ತಂದನೋ, ಯಾವ ಧರ್ಮತತ್ಪರನು ಶ್ರೀ ಪರಶುರಾಮನೊಡನೆ ಹೆದರದೆ ಕಾದಾಡಿ ಮೆಚ್ಚಿಸಿದನೋ ಆ ಭೀಷ್ಮನಿನ್ನಿಲ್ಲ. ಶ್ರೀ ಭಾರ್ಗವನಿಂದಲು ಸಾಯದವನು ಇಂದು ಶಿಖಂಡಿಯಿಂದ ಪಾತಿತನಾಗಿರುವನು. ಮಹೇಂದ್ರನಂತೆ ಶೂರನು, ಹಿಮವಂತನಂತೆ ಸ್ಥಿರನು, ಸಮುದ್ರದಂತೆ ಗಂಭೀರನು, ಧರೆಯಿಂತೆ ಕ್ಷಮಾಶೀಲನು ಆದ ಭೀಷ್ಮನು ಶರಪಂಜರದ ಮೇಲೆ ಶಯನಿಸಿರುವನು. ಶರಗಳೇ ಕೋರೆಗಳಾಗಿ, ಧನುಸ್ಸೆ ಹನುಭಯಂಕರಮುಖವಾಗಿ, ಖಡ್ಗವೇ ನಾಲಿಗೆಯಾಗಿ, ಹಾರಿಬರುವ ಸಿಂಹದಂತಿದ್ದ ನಿಮ್ಮ ತಂದೆ ಇಂದು ಪಾಂಚಾಲನಿಂದ ಬೀಳಿಸಲ್ಪಟ್ಟನು. ಸಿಂಹವನ್ನು ಕಂಡ ಗೋಗಣದಂತೆ ಹೆದರಿದ್ದ ಪಾಂಡವಸೈನಿಕರೊಡನೆ ಹತ್ತು ದಿನಗಳು ಕಡಿದಾಡಿ ಸುದುಷ್ಕರ ವೀರವಿಹಾರವನ್ನು ಗೈದು ದಿನಕ್ಕೆ ಒಂದರ್ಬುದ ಸೈನ್ಯವನ್ನು ನಾಶಪಡಿಸಿದ ಪಿತಾಮಹನು ಬಿರುಗಾಳಿಗೆ ಸಿಕ್ಕ ಗಿಡದಂತೆ ಉರುಳಿಬಿದ್ದಿರುವನು. ನಿನ್ನ ದುರ್ಮಂತ್ರದ ಫಲವಾಗಿ ಭೀಷ್ಮ ಸೂರ್ಯನು ಅಸ್ತಂಗತನಾದನು.'

ಆ ಮಾತನ್ನಾಲಿಸಿ ಧೃತರಾಷ್ಟ್ರನು ಕಂಗೆಟ್ಟು ಕಣ್ಣೀರಿಟ್ಟನು. ಅವನು ಎದೆಯೊಡೆದು ಸಂಜಯನನ್ನು ಕಂಡು 'ಸಂಜಯ! ಏನಂದೆ? ಭೀಷ್ಮನು ಶಿಖಂಡಿಯಿಂದ ಹತನಾದನೇ? ರಥದಿಂದ ಆ ಮಹಾವೀರನೆಂತು ಕೆಳಗೆ ಬಿದ್ದನು? ತಂದೆಗಾಗಿ ರಾಜ್ಯ ವಿವಾಹಗಳನ್ನು ಬಿಟ್ಟ ವೀರ ಬ್ರಹ್ಮಚಾರಿಯು ಬೀಳಲು ನನ್ನ ಮಕ್ಕಳ ಗತಿ ಏನಾಯಿತು? ಅವರೆಂತು ಚಿಂತಿಸಿದರು? ನಿನ್ನ ಮನಸ್ಸಿಗೆ ವ್ಯಥೆಯಾಗಲಿಲ್ಲವೇ? ನನಗಂತೂ ದುಃಖಾವೇಗದಿಂದ ದಿಕ್ಕೇ ತೋಚದಂತಾಗಿದೆ.

ಭೀಷ್ಮನು ಸರ್ವ ಸೇನಾಪತಿಯಾಗಿದ್ದನಲ್ಲವೇ ಅವನ ಚಕ್ರರಕ್ಷರಾಗಿದ್ದವರಾರು? ಯಾರು ಆ ವೀರನನ್ನು ಹಿಂಬಾಲಿಸಿ ಹೊರಟ ವೀರರು? ಪರ ಸೈನ್ಯವನ್ನು ಸೂರ್ಯನು ಕತ್ತಲನ್ನಂತೆ - ಸೀಳುತ್ತಾ ಮುನ್ನಡೆಯುವ ಗಂಡುಗಲಿಯ ಅಂಗರಕ್ಷಕರಾರೂ ಇದ್ದಿಲ್ಲವೇ? ಎಲ್ಲವನ್ನೂ ಕಣ್ಣಾರೆ ಕಂಡು ಬಂದಿರುವ ನಿನ್ನಿಂದ ಭೀಷ್ಮಪತನದ ವಿವರವನ್ನು ಕೇಳಬಯಸುತ್ತಿರುವೆನು.

ಶಕ್ರನಂತೆ ಶರವರ್ಷವನ್ನು ಸುರಿಸುವ ಮಹಾಶೂರ, ಜಾಮದಗ್ನ್ಯನನ್ನು ಎದುರಿಸಿ

ನಿಂತ ಮಹಾಧೀರ, ಸಾವಿರ ಮಹಾರಥಿಕರೊಡನೆ ನಿಸ್ಸಹಾಯವಾಗಿ ಕಾದಬಲ್ಲ ಸಾಹಸಿ-ನಮ್ಮ ಭೀಷ್ಮನಿನ್ನಿಲ್ಲದಂತಾದನೇ ? ಸಂಜಯ ! ದ್ರೋಣನಂತಹ ಧನುರಾಚ್ಯಾರನಿದ್ದೂ ಹೀಗಾಯಿತೇ ? ಕೃಪನಂತಹ ವೀರವರನಿದ್ದೂ ಹೀಗಾಯಿತೇ ? ಆಹಾ ! ನನ್ನ ಮಗನ ದುಃಖಾಶ್ರುಗಳನ್ನು ಯಾರಿನ್ನು ಒರೆಸುವರು ? ಕೆಲಸಕ್ಕೆ ಬಾರದ ಶಿಖಂಡಿಯ ಬಾಣಶೀಕರಗಳಿಗೆ ಭೀಷ್ಮಪರ್ವತವು ಕರಗಿಹೋಯಿತೇ ? ಅಶ್ವತ್ಥಾಮನಾದರೂ ಇದನ್ನು ತಡೆಯಲಿಲ್ಲವೇ ? ಸಂಜಯ ! ಹೇಳು ! ಮನಸ್ಸಿನ ವ್ಯಥೆಯು ಅಪಾರವಾಗಿದೆ. ನನ್ನ ವೀರರು ಯಾರೂ ಪಿತಾಮಹನನ್ನು ಸಂರಕ್ಷಿಸದಾದರೇ? ಅಯ್ಯೋ ! ಈ ನನ್ನ ಗುಂಡಿಗೆ ಕಲ್ಲು ಬಂಡೆಯೇ ಏನು ! ಇಂತಹ ದುರ್ವೃತ್ತಾಂತವನ್ನು ಕಿವಿಯಾರೆ ಕೇಳಿ, ಇನ್ನೂ ಸಾವಿರ ಚೂರಾಗದೆ ಉಳಿದಿದೆಯಲ್ಲ ! ಸತ್ಯ ಧರ್ಮ, ಮೇಧಾ, ಇಂದ್ರಿಯ ಜಯ, ನೀತಿ, ಹರಿಭಕ್ತಿ ಮುಂತಾದ ಸುಗುಣ ಮಹಿಮೆಗಳಿಗೆ ಖಣಿಯಾದ ಕುರುಕುಲಾಗ್ರಣಿಗಿಂತಹ ಪಾಡೆ ? ಬಾಣ-ತರಂಗಸಂತತವು, ಅಸ್ತ್ರ ತಿಮಿಂಗಿಲವು, ಧನುಷ್ಟಂಕಾರ ಘನಘೋಷವು, ರಥಾಚಕ್ರಾವರ್ತವು, ಅಕ್ಷಯಪರಾಕ್ರಮ ಸಂಪನ್ನವು, ಬ್ರಹ್ಮಚರ್ಯಬಡಬಾಗ್ನಿಭೀಷಣವು, ಅದ್ವೀಪವು, ಅಪ್ಲವವು, ಹಯಗಜಾಕುಲವು, ಪದಾತಿಮತ್ಸ್ಯಭೀಕರವು ಆದ ಭೀಷ್ಮಮಹಾಸಾಗರವು ಇಂದು ಶಿಖಂಡಿಕೂಪದಲ್ಲಿ ಅಡಗಿಹೋಯಿತೇ ? ಯಾರಾರು ಆ ಮಹಾವೀರನೊಡನೆ ಕಾದಿದರು ? ಯಾರು ಅವನಿಂದ ಸಂಹೃತರಾದರು ? ಹತ್ತು ದಿನದ ಸಂಗ್ರಾಮರಂಗದಿ ನನ್ನ ತಂದೆ ಎಂತು ವಿಹರಿಸಿದನು ? ದುರ್ಯೋಧನನ ಹಿತಕ್ಕಾಗಿ ಕೊನೆಗೆ ಪ್ರಾಣಗಳನ್ನೇ ಅರ್ಪಿಸಿದ ನಮ್ಮಪ್ಪ, ನನ್ನನ್ನು ಸಾಕಿಸಲಹಿದ ಪ್ರೇಮಿ, ನನ್ನವರಿಗಾಗಿ ರಾಜ್ಯವನ್ನು ಬಿಟ್ಟ ಸ್ವಾರ್ಥತ್ಯಾಗಿ, ಕುರುಕುಲರಕ್ಷಣಮಹಾದುರ್ಗ, ಪಾಂಡವರನ್ನು ಮಾತ್ರ ಕೊಲ್ಲೆನೆನ್ನುವ ಮಹಾನ್ಯಾಯಶೀಲ, ದೇವತೆಗಳಿಗೂ ದುರ್ಜಯನಾದ ಮಹಾಪರಾಕ್ರಮಿ, ಹಾ ! ಸಂಜಯ ! ಅಂತಹ ಭೀಷ್ಮನನ್ನಗಲಿ ಆ ದುರ್ವಾರ್ತೆಯನ್ನರುಹಲು ಬಂದೆಯಾ ? ಅಂತಹ ಸುಗುಣಮಣಿಯನ್ನು ಪಾಂಡವರು ಎಂತು ಹೊಡೆದು ಕೆಡಹಿದರು ? ಸಾಕಿದ ಕೈಯನ್ನು ಕೆಡಹಿದ ಅವರ ಕಠಿಣಹೃದಯವೇನು ಶಿಲೆಯೋ ? ಇನ್ನಾರೆನ್ನ ಮಗನಿಗೆ ರಕ್ಷಕರು ? ಇನ್ನಾರ ವೀರ್ಯವನ್ನವಲಂಬಿಸಿ ಅವನು ಜಯವನ್ನು ಗಳಿಸಲಾದೀತು ?

ದೇವತೆಗಳು ದಾನವರಿಗೆ ಹೆದರಿ ದೇವವ್ರತನ ಸಹಾಯ ಪಡೆಯುತ್ತಿದ್ದರು. ದೇವವ್ರತನ ಮುಖ ದರ್ಶನದಿಂದಲೇ ಶಂತನು ರಾಜನ ಶೋಕದೈನ್ಯಗಳೆಲ್ಲ ದೂರವಾದವು. ಸ್ವಧರ್ಮನಿರತನು, ಶುಚಿವ್ರತನು, ವೇದ-ವೇದಾಂಗ ಚತುರನು, ಸರ್ವಾಸ್ತ್ರ ಶಸ್ತ್ರವಿಶಾರದನು, ವಿನಯಾದಿಸುಗುಣೋಪೇತನು ಆದ ಶಾಂತನವನು ಬಿದ್ದನೆಂದ ಮೇಲೆ ಆಯಿತೆಲ್ಲ ಬಲವೂ ಬಿದ್ದು ನಾಶವಾದಂತೇ ಸರಿ ! ಸಂಜಯ ! ಧರ್ಮದಕಿಂತಲು ಅಧರ್ಮವೇ ಬಲವಂತವೆಂಬರದು ನಿಜ ! ವೃದ್ಧನು, ಪಿತಾಮಹನು ಆದ ಭೀಷ್ಮನನ್ನು ಕೊಂದು ಪಾಂಡವರು ರಾಜ್ಯವನ್ನು ಬೇಡುತ್ತಿರುವರಲ್ಲ ! ಎಂತಹ ಅನ್ಯಾಯ ! ಸಂಜಯ ! ನಿಜವಾಗಿ ಭೀಷ್ಮನು ಶರತಲ್ಪಗತನಾದನೇ ? ಹೇಳು ! ಇಂದ್ರ ಸಮವೀರನು, ಪರಶುರಾಮ ಶಿಷ್ಯನು,

ಪರವೀರಯಮತುಲ್ಯನು ಆದ ಭೀಷ್ಮನನ್ನು ಶಿಖಂಡಿ ಕೆಡವಿದನೆಂದರೆ, ಇದಕಿಂತ ಅವಿಶ್ವಸನೀಯವಾದುದುಂಟೇ ? ಇರಲಿ. ಗೋಪನಿಲ್ಲದ ಗೋವುಗಳಂತೆ ಭೀಷ್ಮನಿಲ್ಲದ ನನ್ನ ಮಗನ ಸೈನ್ಯವು ನಿರ್ಗತಿಕವಾಯಿತಲ್ಲ ! ಭೀಷ್ಮನು ಬಿದ್ದಮೇಲೆ ಮಿಕ್ಕ ನಾವೆಲ್ಲರು ಬದುಕಿದ್ದೂ ಸತ್ತಂತೆಯೇ ಸರಿ ! ಸಮುದ್ರದ ಆಚೆ ದಡದಲ್ಲಿ ನಿಂತ ಪಾಂಥರು, ತಮ್ಮನ್ನು ಸ್ವದೇಶಕ್ಕೆ ಸೇರಿಸುವ ನಾವೆ ನಡುಕಡಲಿನಲ್ಲಿ ಒಡೆದು ಚೂರಾಗಲು ನೋಡುತ್ತಾ ಶೋಕಿಸುವಂತೆ, ನನ್ನವರೂ ದಿಕ್ಕೆಟ್ಟು ಅಳುತ್ತಿರುವಂತಾಯಿತು. ಅಸ್ತ್ರಶಸ್ತ್ರ ಪಾಂಡಿತ್ಯ, ವಿದ್ಯಾವಿನಯ ಸಂಪತ್ತಿ ತಪೋಮೇಧಾ ಬಲ, ಧೃತಿ ತ್ಯಾಗಬಾಹುಲ್ಯ ಯಾವುದೂ ಮೃತ್ಯುವಿಗೆದುರಲ್ಲ. ಅದರ ಕಾಲ ಕರಾಳದಂಷ್ಟ್ರಗಳಿಗೆ ಸಿಕ್ಕು ಪುಡಿಯಾಗದವರಿಲ್ಲ. ಸೂರ್ಯನು ಮುಣುಗಲು ಕತ್ತಲು ಕವಿದಂತೆ, ಭೀಷ್ಮಪಾತದಿಂದ ಮತಿಗೆಟ್ಟು ದುರ್ಯೋಧನನು ಮುಂದೇನು ಮಾಡಿದನು ? ಯಾರವನಿಗೆ ಧೈರ್ಯವನ್ನಿತ್ತರು ? ಕ್ಷತ್ರ ಧರ್ಮವು ದಾರುಣವಾದುದು ! ತಾತನನ್ನು ಕೆಡಹಿ ಮೊಮ್ಮಕ್ಕಳು ರಾಜ್ಯವನ್ನು ಬೇಡುತ್ತಿರುವರು ! ಪರಾಕ್ರಮ ಶರಣರೇ ಆಗಲೀ ರಾಜರು ಬಂಧುಬಾಂಧವ ವಿಚಾರಣರಲ್ಲ. ದುರ್ಯೋಧನ, ದುಶ್ಶಾಸನ, ಕರ್ಣ ಶಕುನಿಗಳೀಗ ಏನು ಆಲೋಚಿಸಿರುವರು ? ಶರೀರಗಳೇ ಫಲಕವಾಗಿ, ಬಾಣಗಳೇ ಅಕ್ಷಗಳಾಗಿ, ಪ್ರಾಣಗಳೇ ಪಣಗಳಾಗಿ, ಭಯಂಕರವಾಗಿರುವ ಯುದ್ಧ ದ್ಯೂತದಲ್ಲಿ ನನ್ನ ಮಗನಿಗೆ ಈಗ ಯಾರು ಸಹಾಯಕರಾಗಿರುವರು ? ಆಗ ಗೆದ್ದವರೀಗ ಸೋಲಬೇಕೆಂದು ತೋರುತ್ತಿದೆ. ದೇವವ್ರತನ ಪತನವನ್ನು ಕೇಳಿ ನನ್ನ ಮನಕ್ಕೆ ಶಾಂತಿ ಇಲ್ಲ. ಸಂಗ್ರಾಮರಂಗದ ವೃತ್ತಾಂತವನ್ನೆಲ್ಲ ಹೇಳು ! ಧೈರ್ಯವಹಿಸಿ ಎಲ್ಲವನ್ನೂ ಕೇಳಲು ಸಿದ್ಧನಾಗಿರುವೆನು. ನನ್ನ ಅವಿವೇಕದ ಗಾಳಿಗೆ ರೇಗಿದ ದುರ್ಯೋಧನನ ಅಧರ್ಮಾಗ್ನಿಯು ಈಗ ವಂಶವನ್ನೆಲ್ಲ ಸುಡಲು ತೊಡಗಿದೆ. ಹೇಳು ' ಎಂದನು.

ಸಂಜಯನೂ ರಾಜನ ಶೋಕವನ್ನು ಕಂಡು ಅನುತಾಪದಿಂದ ನೊಂದು ಕಣ್ಣೀರಿಟ್ಟು ಇಂತೆಂದನು: 'ರಾಜನ್ ! ದುರ್ಯೋಧನನನ್ನು ನಿಂದಿಸಿ ಫಲವಿಲ್ಲ. ಕೇಳು ! ಮನುಜರೆಲ್ಲರೂ ತಮ್ಮ ತಮ್ಮ ದುಶ್ಚರಿತೆಗಳ ಫಲವನ್ನು ತಾವೇ ಉಣ್ಣುವರು. ಮನುಜ ಲೋಕದಲ್ಲಿ ನಿಂದ್ಯಕರ್ಮವನ್ನಾಚರಿಸಿದವನು ವಧ್ಯನಾಗುವನು. ಅಂತೆಯೇ ನಿನ್ನ ಪುತ್ರರು ಮಾಡಬಾರದ ದುಷ್ಕೃತ್ಯಗಳನ್ನೆಸಗಿ, ಇಂದು ಸಹನೆ ಮೀರಿ ಮೇಲೇರಿಬರುವ ಪಾಂಡವಾಗ್ನಿಗೆ ಶಲಭಗಳಾಗಿ ಹೋಗುತ್ತಿರುವರು. ಅವರಿಗಾಗಿ ಬಂದ ರಾಜರೇ ಅಲ್ಲದೇ ಅವರೇರಿ ಬಂದ ಆನೆ ಕುದುರೆಗಳು ಅವರ ಹಿಂದೆ ನಿಂದ ಸೈನಿಕರು ಕೂಡ ಸಂಪೂರ್ಣ ನಾಶವಾಗುವ ಸಮಯವು ಬಂದಿದೆ. ದೈವಸಂಕಲ್ಪಕ್ಕೆದುರಿಲ್ಲ. ಸುಮ್ಮನೆ ಕೂತು ಅತ್ತಮಾತ್ರದಿಂದ ಅದು ನಿವಾರಿತವಾಗುವುದಿಲ್ಲ.

ಶ್ರೀವೇದವ್ಯಾಸರಿಗೆ ನಮಸ್ಕರಿಸಿ, ಅವರಿತ್ತ ದಿವ್ಯಜ್ಞಾನದಿಂದ ಎಲ್ಲವನ್ನರಿತು ನಿನಗೆ ನಿರೂಪಿಸುವೆನು, ದೃಢಚಿತ್ತನಾಗಿ ಕೇಳು ! ಶ್ರೀವ್ಯಾಸಪ್ರಸಾದದಿಂದ ನನಗೆ ದೂರದರ್ಶನ, ದೂರಶ್ರವಣ, ಪರಚಿತ್ತ ವಿಜ್ಞಾನ, ಅತೀತಾನಾಗತ ಪರಿಜ್ಞಾನ, ನಿರಭಿಮಾನ, ಹಾಕುವ ಅಸ್ತ್ರಗಳ ವಿಜ್ಞಾನ, ಆಕಾಶಗಮನ, ಅಸ್ತ್ರಶಸ್ತ್ರಾದಿಗಳಿಂದ ರಕ್ಷಣ ವೊದಲಾದ ಮಹಾಗುಣಗಳು ಲಭಿಸಿವೆ.

## ೪. ವ್ಯೂಹರಚನೆ - ದುರ್ಗಾಸ್ತುತಿ

ಸಂಜಯನಿಂತೆಂದನು :

'ರಾಜನ್ ! ಕೌರವ ಪಾಂಡವ ಸೇನೆಗಳು ಯುದ್ಧಸನ್ನದ್ಧವಾಗಿ ನಿಂತಿರುವದನ್ನು ನೋಡಿ ನಿನ್ನ ಪುತ್ರನು ದುಶ್ಶಾಸನನಿಗಿಂತಾಜ್ಞಾಪಿಸಿದನು: 'ದುಶ್ಶಾಸನ ! ಭೀಷ್ಮರಕ್ಷಣೆಗಾಗಿ ರಥಿಕರನ್ನು ನಿಯಮಿಸು ! ಪಾಂಡವರಿಂದ ಕೂಡಿ ಕಾದಬೇಕೆಂಬ ನನ್ನ ಬಹುಕಾಲದ ಕೋರಿಕೆ ಇಂದು ಕೈಗೂಡಿ ಬಂದಿದೆ. ಭೀಷ್ಮರಕ್ಷಣೆಗಿಂತ ಕರ್ತವ್ಯವಿನ್ನೊಂದಿಲ್ಲ. ಆತನನ್ನು ನಾವು ಕಾಪಾಡಿದರೆ ಆತನು ನಿಃಶಂಕವಾಗಿ ಸೋಮಕ- ಸೃಂಜಯರನ್ನು ನಾಶಮಾಡುವನು. ಶಿಖಂಡಿಯೊಬ್ಬನಿಂದ ಮಾತ್ರ 'ನಾನು ಯುದ್ಧಮಾಡೆ'ನೆಂದು ಆತನು ಹೇಳಿರುವನು. ಅವನು ಸ್ತ್ರೀಪೂರ್ವನಂತೆ ! ಶಿಖಂಡಿಯನ್ನು ನಿರ್ಲಕ್ಷಿಸದೆ ಮೊದಲು ಸಂಹರಿಸಿಬಿಟ್ಟರೆ ಭೀಷ್ಮನ ಮಾರ್ಗವು ಸುಗಮವಾಗುವುದು. ರಕ್ಷಿತನಾಗದ ಭೀಷ್ಮನನ್ನು - ಸಿಂಹವನ್ನು ನರಿಯಂತೆ - ಶಿಖಂಡಿಯು ಸಂಹರಿಸಬಹುದು, ಆದುದರಿಂದ ಭೀಷ್ಮನನ್ನು ಸರ್ವವೀರರು ಸರ್ವಪಾರ್ಶ್ವಗಳಲ್ಲಿಯು ನಿಂದು ಕಾಪಾಡುತ್ತಿರಲಿ ! ಯುಧಾಮನ್ಯು ಉತ್ತಮೌಜರಿಂದ ರಕ್ಷಿತನಾಗಿರುವ ಅರ್ಜುನನು ಶಿಖಂಡಿಯನ್ನು ಸಾವಿರ ಕಣ್ಣಿಟ್ಟು ಕಾಪಾಡುತ್ತಿರುವನಂತೆ. ಆ ನೀಚನ ಕೈಲಿ ಭೀಷ್ಮನನ್ನು ಸಾಯಗೊಡಬೇಡಿ!'.

ಮರುದಿನ ಬೆಳಗಾಗುತ್ತಿರಲು ಸಕಲ ಸೈನ್ಯಗಳು ರಣದುಂದುಭಿಧ್ವಾನವನ್ನು ಕೇಳಿ, ರಣ ಕಣಕ್ಕಿಳಿದು ನಿಂದವು. ಕುದುರೆ ಕೆನೆತಗಳು, ಆನೆಗಳ ಘೀಂಕಾರಗಳು, ಸೈನಿಕರ ಸಿಂಹನಾದಗಳು, ರಥಗಳ ಚಕ್ರಧ್ವಾನಗಳು ಭೂ ನಭೋಂತರಾಳದಿ ವ್ಯಾಪಿಸಿದವು. ಶಸ್ತ್ರಕವಚಗಳ ಝಣ ಝಣ ಧ್ವಾನಗಳು, ತಮ್ಮ ಕಾಂತಿಯೊಡನೆ ಮಿಂಚುಸಿಡಿಲುಗಳಂತೆ ವ್ಯಾಪಿಸಿದವು. ಯೋಧರು ಧನುರ್ಬಾಣ, ಶಕ್ತಿ ಶೂಲ, ಪರಶು, ಗದಾ, ತೋಮರ, ಪರಿಘ, ಮುದ್ಗರ, ಖಡ್ಗ ಭಲ್ಲಾದಿ ವಿವಿಧಾಯುಧಗಳನ್ನು ಧರಿಸಿ, ಗಜತುರಗರಥಸೇನೆಯೊಡನೆ ನಡೆದು ಬಂದರು. ಬಹು ವಿಧಾಕಾರಗಳಾದ ಧ್ವಜಗಳು ಹಾರಾಡುತ್ತಿದ್ದವು. ತಲ ಬಂಧವನ್ನು ಕಟ್ಟಿ ತೂಣಗಳನ್ನು ಧರಿಸಿ ಧನುರ್ಧಾರಿ ವೀರರು ಸಾವಿರಗಟ್ಟಲೆ ಸಾಲಾಗಿ ಉಭಯಸೇನೆಗಳಲ್ಲಿ ನಿಂತಿದ್ದರು. ಶಕುನಿ, ಶಲ್ಯ, ಆವಂತ್ಯ, ಜಯದ್ರಥ, ಕೈಕೇಯ, ಸುದಕ್ಷಿಣ, ಶ್ರುತಾಯು, ಜಯತ್ಸೇನ, ಬೃಹದ್ಬಲ ಕೃತವರ್ಮರು, ಅಕ್ಷೋಹಿಣೀಪತಿಗಳಾಗಿ ಪರಸೇನಾಮುಖದಲ್ಲಿ ವಿರಾಜಿಸಿದರು. ಯುದ್ಧಮರಣದೀಕ್ಷಿತರಾದಂತೆ ಕೃಷ್ಣಾಜಿನಗಳನ್ನು ಬೆನ್ನಿಗೆ ಕಟ್ಟಿ ಉದ್ಯತಾಯುಧಪಾಣಿಗಳಾದ ಮಹಾರಥರು, ಭೀಷ್ಮನನ್ನನುಸರಿಸಿ ಬಂದರು.

ಬಿಳಿಯ ರುಮಾಲನ್ನಿಟ್ಟು ಬಿಳಿಯ ಕವಚವನ್ನು ಧರಿಸಿ ಭೀಷ್ಮನು ಶ್ವೇತಚ್ಛತ್ರದ ರಥದಲ್ಲಿ ತಾಲಧ್ವಜವನ್ನೇರಿಸಿ, ಬಿಳಿಯ ಕುದುರೆಗಳನ್ನು ಕಟ್ಟಿ ಕೂತು, ಸಿಂಹ, ಗರ್ಜನವನ್ನು ಮಾಡುತ್ತಾ ಬಂದಾಗ, ಸೃಂಜಯ ಪಾಂಚಾಲರು, ಬಾಯ್ತೆರೆದು ಮೇಲೆರಗುವ ಸಿಂಹವನ್ನು ಕಂಡ ಹುಲ್ಲೆಗಳಂತೆ ಎದೆಗುಂದಿ ನಡುಗಿದರು. ಇಂತು ನಿಂತ ಹನ್ನೊಂದಕ್ಷೌಹಿಣಿಯ ಕೌರವಸೇನೆಗೆದುರಾಗಿ ಏಳಕ್ಷೌಹಿಣಿಯ ಪಾಂಡವ ಸೇನೆಯು ನಿಂತಾಗ ಎರಡು ಸಮುದ್ರಗಳು ಢೀಕೊಡುತ್ತಿರುವಂತೆ ತೋರಿತು.

ವೈಶಂಪಾಯನನು, 'ಅಂದು ಮಾರ್ಗಶಿರ ಶುದ್ಧ ತ್ರಯೋದಶಿ ಉಪರಿಚತುರ್ದಶಿ. ಪಿತೃದೈವತ್ಯವಾದ ಮಘೆ ವಿಷಯನಾಗಿ, ಅಂದರೆ ಪಿತೃಲೋಕದಲ್ಲಿ ವಿಶೇಷ ಸನ್ನಿಧಾನಯುಕ್ತನಾಗಿ ಚಂದ್ರನು, ಯುದ್ಧ ಮೃತರಾದ ವೀರರಿಗೆ ಉತ್ತಮ ದೇಹ ಪ್ರದಾನಮಾಡಲು ಕಾದಿದ್ದನು. ಯುದ್ಧಾರಂಭವು ತ್ರಯೋದಶಿಯಿಂದಾಗಿ, ಹತ್ತನೆಯ ದಿನವಾದ ಅಷ್ಟಮಿಯಂದು ಭೀಷ್ಮ ಪಾತವಾಯಿತು. ಮಾರ್ಗಶಿರ ಬಹುಳ ತ್ರಯೋದಶಿಯಂದು ದ್ರೋಣನು ಹತನಾದನು. ಮಾರ್ಗಶಿರ ಬಹುಳ ಅಮಾವಾಸ್ಯೆ - ಉಪರಿಪಾಡ್ಯಮಿಯ ದಿನ ದುರ್ಯೋಧನನು ಸತ್ತನು. ರಣಾರಂಭದ ದಿನವಾದ ತ್ರಯೋದಶಿಯಂದು ಮೃಗಶಿರಾ ನಕ್ಷತ್ರದ ಎರಡು ಪಾದಗಳಲ್ಲಿ ಕೌರವರು ಕಾದಲಾರಂಭಿಸಿದರು. ಅದು ವೃಷರಾಶಿಯು, ಶುಕ್ರದೈವತ್ಯವು ಆಗಿ ಅವರು ಅಸುರರೆಂದು ಸೂಚಿಸಿತು. ಮೃಗಶಿರಾ 34 ಪಾದಗಳಲ್ಲಿ ಬುಧದೈವತ್ಯವಾದ ಮಿಥುನ ರಾಶಿಯ ಸಮಯದಲ್ಲಿ ಪಾಂಡವರು ಅಂದರೆ ದೇವಪಕ್ಷದವರು ಕಾದಲಾರಂಭಿಸಿದರು. ಮಾರ್ಗಶಿರ ಶುಕ್ಲದಲ್ಲಿ ಪಂಚಮೀ ಉಪರಿಷಷ್ಠಿ ಮತ್ತು ತ್ರಯೋದಶಿ ಉಪರಿಚತುರ್ದಶಿಯು ಬಂದು ಹದಿಮೂರು ದಿನಗಳ ಪಕ್ಷವಾಗಿ ಮಹೋಪದ್ರವಕರವೆಂದು ಸೂಚಿತವಾಯಿತು. ಮತ್ತೆ ಬಹುಳ ಪಕ್ಷದಲ್ಲಿ ಒಂದು ತಿಥಿಯು ವೃದ್ಧವಾಗಿ ಅಮಾವಾಸ್ಯೇಷ್ಟಿಯು, ಹದಿನೆಂಟನೇ ದಿನವೇ ಆಯಿತು. ಅಂದು ಶ್ರವಣ ನಕ್ಷತ್ರವಿದ್ದು ವಿಷ್ಣು ಪಕ್ಷದವರಿಗೆ - ಪಾಂಡವರಿಗೆ ಜಯಪ್ರದವಾಯಿತು. ಮಾರ್ಗಶಿರ ಬಹುಳ ಅಷ್ಟಮಿಯಿಂದ ನಲವತ್ತೆರಡು ದಿನಗಳ ಕಾಲ ಶರಪಂಜರ ಶಯಿತನಾಗಿದ್ದು ಭೀಷ್ಮನು ಮಾಘ ಶುದ್ಧ ಅಷ್ಟಮಿಯ ದಿನ ಶರೀರತ್ಯಾಗವನ್ನು ಮಾಡಿದನು. ನವಮಿಯಿಂದ ಅಮಾವಾಸ್ಯೆಗೆ ಆರು ದಿನಗಳು, ಅಲ್ಲಿಂದ ಪುಷ್ಯ 29 ದಿನಗಳು ಅಲ್ಲಿಂದ ಮಾಘದ ಏಳು ದಿನಗಳು ಕಲೆತು ನಲವತ್ತೆರಡು ದಿನಗಳೆಂದು ತಿಳಿಯಬೇಕು. ಪುಷ್ಯ ನಕ್ಷತ್ರವಿರುವ ಕಾರ್ತಿಕ ಬಹುಳ ಪಂಚಮಿಯ ದಿನ ಸೇನಾನಿರ್ಯಾಣವಾಗಿದೆ. ಅಂದೇ ಬಲರಾಮದೇವನು ತೀರ್ಥಯಾತ್ರೆಗೆ ಹೊರಟು ನಲವತ್ತೆರಡು ದಿನಗಳಾಗುವಾಗ ಭಾರತಯುದ್ಧದ ಕೊನೆಯ ದಿನ, ಅಂದರೆ ಮಾರ್ಗಶಿರದ ಅಮಾವಾಸ್ಯೆ ದಿನ ಶ್ರವಣ ನಕ್ಷತ್ರದಲ್ಲಿ ಮತ್ತೆ ರಣರಂಗದಲ್ಲಿ ಕಾಲಿಟ್ಟನು. ಶ್ರೀಕೃಷ್ಣನು ಕಾರ್ತಿಕ ಶುದ್ಧ ದ್ವಾದಶಿಯಂದು ಸಂಧಿಯನ್ನು ಸಾಧಿಸಲಾಗದೆ ಹಿಂದಿರುಗಿ ಉಪಪ್ಲಾವ್ಯವನ್ನು ಸೇರಿದನು. ಅಂದು ರೇವತೀ ನಕ್ಷತ್ರವಿತ್ತು. ಮಾರ್ಗಶಿರ ಶುದ್ಧ ಏಕಾದಶಿಯ ದಿನ ಸೇನಾ ಸನ್ನಾಹ ಶಸ್ತ್ರಸಂಪಾತ ಪರೀಕ್ಷೆಗಳು ನಡೆಯುತ್ತಿರಲು, ಒಂದು ಕಡೆ ಶ್ರೀಕೃಷ್ಣನು ಭಕ್ತನಾದ ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಿಸಿದನು.

ಜನಮೇಜಯ ! ಸಂಜಯನು ಮತ್ತೆ ಧೃತರಾಷ್ಟ್ರನಿಗೆ ಹೇಳತೊಡಗಿದನು. 'ರಾಜನ್ ! ಅಂದು ಸೂರ್ಯನು ಎರಡು ಮಂಡಲವಿದ್ದಂತೆ ಕಂಡುಬಂದನು. ದಿಕ್ಕುಗಳು ಉರಿದೇಳುವಂತೆ ತೋರಿದವು, ಗೋಮಾಯು ವಾಯಸಗಳು ಮಾಂಸ ಶೋಣಿತ ಲೋಭದಿಂದ ವಿಕಾರವಾಗಿ ಕೂಗುತ್ತಾ ಬಂದವು, ಪ್ರತಿ ನಿತ್ಯವು ಭೀಷ್ಮದ್ರೋಣರು ಪ್ರಾತಃಕಾಲದಲ್ಲಿ ಶುಚಿರ್ಭೂತರಾಗಿ, ಕರ್ಮಸಾಕ್ಷಿಯಾದ ಸೂರ್ಯನಿಗಭಿಮುಖವಾಗಿ ನಿಂತು 'ಪಾಂಡುಪುತ್ರರಿಗೆ ಜಯವಾಗಲಿ!' ಎಂದು ಪ್ರಾರ್ಥಿಸುತ್ತಿದ್ದರು. ಅವರು ನಿನ್ನ ಸುತನ ಕಡೆ

ಕಾದಿದರೆಂದರೆ, ಕೊಟ್ಟಮಾತಿಗೆಂದು ತಿಳಿ ! ಅವರು ದೇಹಗಳನ್ನು ನಿಮಗಾಗಿ ಬಿಡಲು ಸಿದ್ಧರಾಗಿದ್ದರಾಗಲಿ, ತಮ್ಮ ಮನಸ್ಸನ್ನು ನಿಮಗೆ ಮಾರಿದವರಲ್ಲ.

ಭೀಷ್ಮನು ಸರ್ವ ಸೈನಿಕರನ್ನು ಕಂಡು, ಕೈಯೆತ್ತಿ, ಇಂತು ಘೋಷಿಸಿದನು: 'ವೀರವರರೇ! ಇಂದು ನಿಮಗಾಗಿ ಸ್ವರ್ಗದ್ವಾರವು ತೆರೆದಿಡಲ್ಪಟ್ಟಿದೆ ವೀರರಾಗಿ ಕಡಿದಾಡಿ ಗೆಲ್ಲುವುದಿಲ್ಲದಿರೆ ಮಡಿದು ಶಕ್ರಪುರಿಯನ್ನು ಸೇರುವುದು - ಯಾವುದಾದರೂ ಸರಿ. ನಮಗೆ ಮೂರನೆಯ ಮಾರ್ಗವಿಲ್ಲ. ನಮ್ಮ ಪೂರ್ವಜರು ನಡೆದುಹೋದ ರಾಜಮಾರ್ಗವಿದು. ಅವ್ಯಗ್ರಚಿತ್ತರಾಗಿ ಭಯಪಡದೆ, ಕಾದಿ, ವೀರಸ್ವರ್ಗವನ್ನು ಸೂರೆಗೊಳ್ಳಿರಿ ! ವೀರ ಸಂಗ್ರಾಮಜಿತರಾಗಿ ನಾಭಾಗ, ಯಯಾತಿ, ಮಾಂಧಾತೃ, ನಹುಷರು ಪಡೆದ ಸದ್ಗತಿಯು ನಮಗಾಗಿ ಕಾದಿದೆ. ಮನೆಯಲ್ಲಿ ವ್ಯಾಧಿಯಿಂದ ಸಾಯುವುದು ಕ್ಷತ್ರಿಯರಿಗಲ್ಲ. ಅಸ್ತ್ರಮರಣವು ನಮಗೆ ಅಭ್ಯರ್ಥಿತವಾಗಿದೆ. ಏಳಿ ! ಶತ್ರುಗಳನ್ನು ಚೆಂಡಾಡಿ ! ಯಶವನ್ನು ಗಳಿಸಿ ! ಮಹಾಜನ ಋಣವನ್ನು ತೀರಿಸುವ ಸಮಯ ಬಂದಿದೆ !'

ಭೀಷ್ಮನ ಮಾತನ್ನಾಲಿಸಿ, ರಾಜರಾದಿ ಸಕಲ ಸೈನಿಕರು ಸಿಂಹಗರ್ಜನ ಮಾಡಿ, ತಮ್ಮ ತಮ್ಮ ಸೇನಾವ್ಯೂಹಗಳಲ್ಲಿ ನಿಂತು, ಮೆಲ್ಲನೆ ರಣರಂಗದ ಕಡೆ ತೆರಳಿದರು. ಭೀಷ್ಮನ ಮೇಲಿನ ಸಿಟ್ಟಿನಿಂದ ಅಸ್ತ್ರ ಸನ್ಯಾಸವನ್ನು ಮಾಡಿದ್ದ ಕರ್ಣನು ಅಮಾತ್ಯ ಬಂಧುಯುತನಾಗಿ ರಣರಂಗದಿಂದ ದೂರ ಸರಿದಿದ್ದನು. ಇಂತು ಕರ್ಣರಹಿತರಾಗಿ ನಿನ್ನ ಸುತರು ಚತುರಂಗ ಬಲಸಮನ್ವಿತರಾಗಿ ಕುರುಕ್ಷೇತ್ರದ ಕಡೆಗೆ ನಡೆದರು. ಆಯುಧಕಾಂತಿಗಳಿಂದಲು, ಗಜತುರಗರಥಗಳಿಂದಲು ಕೂಡಿ ಕದಲುವ ಆ ಮಹಾಸೇನೆಯು ಉರಿಯುವ ಬೆಟ್ಟಗಳೇ ನಡೆದು ಬರುವಂತಿತ್ತು.

ಕನಕತಾಲ ವೃಕ್ಷ ಮತ್ತು ಪಂಚತಾರೆಗಳಿಂದೊಪ್ಪುವ ಧ್ವಜವನ್ನೆತ್ತಿದ ರಥದಲ್ಲಿ ವಿಮಲಾದಿತ್ಯನಂತೆ ಬೆಳಗುತ್ತಾ, ಪಿತಾಮಹನು ಸರ್ವಸೇನಾಪತ್ಯವನ್ನು ವಹಿಸಿ ನಡೆದನು. ಅವನ ಆಜ್ಞೆಯಂತೆ, ಹೇಳಿದೆಡೆ ನಿಂತು ಶ್ರುತಾಯುಧ, ಚಿತ್ರಸೇನ, ಪುರುಮಿತ್ರ, ವಿವಿಂಶತಿ, ಶಲ್ಯ, ಭೂರಿಶ್ರವ, ವಿಕರ್ಣರೆಂಬ ಮಹಾರಥರು ಏಳು ಜನ ಅಶ್ವತ್ಥಾಮನನ್ನನುಸರಿಸಿ ಬಂದರು. ಅಶ್ವತ್ಥಾಮನ ಕನಕರಥವು ಸಿಂಹ (ಬಾಲ ಎತ್ತಿದ) ಧ್ವಜದಿಂದ ಅಲಂಕೃತವಾಗಿತ್ತು. ಬಂಗಾರದ ಕಮಂಡಲು ವಿಭೂಷಿತವಾದ ಧ್ವಜವಿರುವ ಕನಕರಥಕ್ಕೆ ಕೆಂಪು ಕುದುರೆಗಳನ್ನು ಕಟ್ಟಿ ದ್ರೋಣನು ಕೂತು ಬರುತ್ತಿದ್ದನು. ನಾಗಧ್ವಜದ ಮಣಿಮಯ ರಥಾರೂಢನಾಗಿ ದುರ್ಯೋಧನನು, ಕಾಲಿಂಗ ಕಾಂಭೋಜಾದಿ ವೀರರಾಜ ಪರಿವೃತನಾಗಿ ತೆರಳಿದನು. ಕೃಪಾಚಾರ್ಯನು ವೃಷಭಧ್ವಜದ ರಥದಲ್ಲಿ ಬಾಣ ಕಾರ್ಮುಕಧರನಾಗಿ ನಡೆದನು. ಕರ್ಣನ ಅನುಮತಿಯಿಂದ ಅವನ ಮಗನಾದ ವೃಷಸೇನನು ಸಾವಿರ ಮಹಾರಥರೊಡನೆ ಕೃಪನನ್ನು ಹಿಂಬಾಲಿಸಿ ಬಂದನು. ಜಯದ್ರಥನು ವಾರಾಹ ಧ್ವಜದ ರಥದಲ್ಲಿ ಕೂತು ಹತ್ತು ಸಾವಿರ ಆನೆಗಳ ಬಲವನ್ನೂ, ಅರವತ್ತು ಸಾವಿರ ರಥಿಕರನ್ನೂ ಕರೆತಂದ ಕಳಿಂಗಪತಿಯಾದ ಕೇತುಮಂತನೊಡನೆ ತನ್ನ ಅಮಿತ ಸೈನ್ಯವನ್ನೂ ಸೇರಿಸಿ, ರಣೋತ್ಸಾಹಿಯಾಗಿ ನಡೆದನು. ಕೇತುಮಂತನು ಭದ್ರಗಜಾರೂಢನಾಗಿ ಮೇಘದ ಮಧ್ಯದಲ್ಲಿದ್ದ ಸೂರ್ಯನಂತೆ

ವಿರಾಜಿಸಿದನು. ಅವನಂತೆಯೇ ಭಗದತ್ತನು ಸಪ್ರತೀಕವೆಂಬ ದಿವ್ಯಗಜವನ್ನೇರಿ ವಿಂದಾನುವಿಂದರೊಡನೆ ಕೂಡಿ, ಕೇತುಮಂತನನ್ನು ಅನುಸರಿಸಿದನು.

ಶಂಖದುಂದುಭಿ ನಿರ್ಘೋಷದೊಡನೆ ಬೆರೆತ ಯೋಧರ ಸಿಂಹನಾದಗಳು ರೋದಸೀ ಕುಹರವನ್ನು ಸೀಳಿದವು. ರಥನೇಮಿ ಘಾತದಿಂದ ಭೂಮಿಯು ಬಿರುಕು ಬಿಟ್ಟಂತಾಯಿತು. ಸೈನ್ಯಪಾದಘಟ್ಟನದಿಂದ ಭೂಮಿಯು ಕಂಪಿಸಿತು. ಮಿಂಚಿನಿಂದ ಪೊಳೆವ ಮೇಘಗಳಂತೆ, ರಥಗಳು ಆಭರಣ ಕವಚಶಸ್ತ್ರಗಳಿಂದ ಪ್ರಕಾಶಿಸಿದವು. ಕನಕಾಂಗದ ಭೂಷಿತರಾಗಿ ಕಿರೀಟಗಳನ್ನಿಟ್ಟು ರಾಜರು ಉರಿಯುವ ಅಗ್ನಿಕುಂಡಗಳಂತೆ ಕಂಗೊಳಿಸಿದರು. ದುಶ್ಶಾಸನ, ದುರ್ವಿಷಹ, ದುರ್ಮುಖ, ವಿಕರ್ಣ ದುಸ್ಸಹ, ವಿವಿಂಶತಿ, ಚಿತ್ರಸೇನರೆಂಬ ನಿನ್ನ ಸುತರು ಭೀಷ್ಮನನ್ನು ಹಿಂದೆ ನಿಂತು ಸಂರಕ್ಷಿಸುತ್ತಿದ್ದರು. ಅವರಿಗೆ ಸಹಾಯಕರಾಗಿ ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವ, ಶಲ್ಯರು ನಡೆದು ಬಂದರು. ಮಾಗಧ ಅವರನ್ನು ರಥಾನೀಕದೊಡನೆ ಅನುಸರಿಸಿದನು. ರಥದ ಚಕ್ರರಕ್ಷಕರು, ಗಜಗಳ ಪಾದರಕ್ಷಕರು ಸೇರಿ ಅರವತ್ತು ಲಕ್ಷ ಯೋಧರು ಧನುಶ್ಚರ್ಮಖಡ್ಗಪಾಣಿಗಳಾಗಿ ಬರುತ್ತಿದ್ದರು. ಇಂತಹ ನಿನ್ನ ಪುತ್ರನ ಸೇನೆಯು ಯಮುನೆಯಂತೆ ಅಗಾಧವಾಗಿ ಬಂದು, ಗಂಗೆಯಂತಿರುವ ಪಾಂಡವಸೇನೆಗಭಿಮುಖವಾಯಿತು."

ಧೃತರಾಷ್ಟ್ರನು 'ಸಂಜಯ ! ಹನ್ನೊಂದಕ್ಷೌಹಿಣಿಯ ಪ್ರಬಲವಾದ ನಮ್ಮ ಸೇನೆಯೊಂದಿಗೆ ಏಳಕ್ಷೌಹಿಣಿಯ ಸೇನೆಯುಳ್ಳ ಯುಧಿಷ್ಠಿರನು ಎಂತು ಕಾದುವ ಧೈರ್ಯಮಾಡಿದನು ? ದೇವಗಂಧರ್ವಾಸುರಮಾನವಾದಿ ವಿವಿಧ ವ್ಯೂಹಗಳನ್ನು ರಚಿಸಬಲ್ಲ ಪಿತಾಮಹನೊಡನೆ ಕಾದಲು ಅವನು ಯಾವ ವ್ಯೂಹವನ್ನು ರಚಿಸಿದನು ? ಎಂದು ಕೇಳಿದನು. ಸಂಜಯನಿಂತೆಂದನು :

'ರಾಜನ್ ! ಕೇಳು ! ಧಾರ್ತರಾಷ್ಟ್ರರ ಪ್ರಚಂಡ ಸೇನೆಯನ್ನು ಕಂಡು ಧರ್ಮರಾಜನು ಎದೆಗುಂದದೆ, ಅರ್ಜುನನಿಗಿಂತೆಂದನು : 'ಅರ್ಜುನ ! ಬೃಹಸ್ಪತಿಯ ವಚನದಂತೆ ವಿವಿಧ ಬುದ್ಧಿಗಳಾದ ಬಹುಸಂಖ್ಯಾಕರನ್ನು ಏಕಮತಿಕರಾದ ಅಲ್ಪಸಂಖ್ಯಾಕರೂ ಗೆಲ್ಲಬಹುದಾಗಿದೆ. ಸೂಚೀ ಮುಖ ವ್ಯೂಹವನ್ನೋ, ವಜ್ರವ್ಯೂಹವನ್ನೋ ಹಬ್ಬಿಸಿ, ಶತ್ರುಗಳನ್ನು ತಾಕುವುದು ಯುಕ್ತವೆಂದು ತೋರುತ್ತಿದೆ.' ಆ ಮಾತನ್ನಾಲಿಸಿ, ಧನಂಜಯನು ವಜ್ರಪಾಣಿಯೇ ಕಲಿಸಿದ ಅಚಲ ವಜ್ರವ್ಯೂಹದಲ್ಲಿ ಸೈನ್ಯವನ್ನು ನಿಲ್ಲಿಸಿದನು. ರಾಜನ್ ! ಮಹಾ ವಾತದಂತೆ ದುಃಸಹನಾಗಿ ಭೀಮಸೇನನು ಪುರೋಗಾಮಿಯಾಗಿ ನಡೆದಾಗ ನಿನಗೇಕೆ ಭಯ ? ಆ ಪುರುಷಸತ್ತ್ವಮನೆದುರಾಗಿ ನಿಲ್ಲುವ ವೀರರಾವಲೋಕದಲ್ಲಿಯೂ ಇಲ್ಲ. ಯುದ್ಧೋಪಾಯವಿಚಕ್ಷಣನಾದ ಭೀಮನನ್ನು ಅವನ ಗದೆಯನ್ನು ನೋಡಿ - ಸಿಂಹವನ್ನು ಕಂಡ ಜಿಂಕೆಗಳಂತೆ - ಕೌರವರು ಓಡಿಹೋಗುವರು. ಆ ಮಹಾಬಲನನ್ನು ಆಶ್ರಯಿಸಿ - ಪ್ರಾಕಾರವನ್ನಾಶ್ರಯಿಸಿದ ರಾಜರಂತೆ - ನಾವು ಸುರಕ್ಷಿತರಾಗಿರುವೆವು. ಸಂಕ್ರುದ್ಧನಾದ ವೃಕೋದರನನ್ನು ಕಣ್ಣೆತ್ತಿ ನೋಡುವ ವೀರರು ಯಾವ ಲೋಕದಲ್ಲಿಯೂ ಇಲ್ಲ. ಇನ್ನು ಮುಂದೆ ನಿಂತು ಕಾದುವವರಂತೂ ದೂರತೋಪಾಸ್ತವೆಂದೇ ತಿಳಿ !' ಎಂದು ಅರ್ಜುನನು ವ್ಯೂಹವಾಗಿ ರಚಿಸಲ್ಪಟ್ಟ ತನ್ನ ಸೇನೆಯನ್ನು ಧರ್ಮಜನಿಗೆ ತೋರಿಸಿದನು.

ಭೀಮಸೇನನು ಗದಾಪಾಣಿಯಾಗಿ ಆ ಸೇನಾಮುಖದಲ್ಲಿ ಅಗ್ರಣಿಯಾಗಿದ್ದನು. ಅವನಿಗೆ ಹಿಂದೆ ಅಂಗರಕ್ಷಕರಾಗಿ, ಧೃಷ್ಟದ್ಯುಮ್ನ, ನಕುಲ, ಸಹದೇವ, ಧೃಷ್ಟಕೇತು, ವಿರಾಟರು ಹೊರಟರು. ಮಾದ್ರೀಪುತ್ರರು ಚಕ್ರರಕ್ಷಕರಾದರು ; ಅಭಿಮನ್ಯು ದ್ರೌಪದೇಯರು ಪೃಷ್ಠರಕ್ಷಣತತ್ಪರರಾದರು. ಧೃಷ್ಟದ್ಯುಮ್ನನು ಅವರನ್ನು ರಕ್ಷಿಸುತ್ತಾ ಬಂದನು. ಅವನ ಹಿಂದೆ ಶಿಖಂಡಿಯು ಅರ್ಜುನಕೇಶವ ರಕ್ಷಿತನಾಗಿ, ಭೀಷ್ಮನನ್ನು ಕೊಲ್ಲುವ ಪಣತೊಟ್ಟು ನಡೆದನು.

ಮಹಾಬಲನಾದ ಯುಯುಧಾನನು ಅರ್ಜುನನ ಪೃಷ್ಠರಕ್ಷಕನಾಗಿರಲು ಯುಧಾಮನ್ಯೂತ್ತಮೌಜಸರು ಚಕ್ರರಕ್ಷಕರಾಗಿದ್ದರು. ಭೀಮಸೇನನು ಗದಾಧಾರಿಯಾಗಿ, ಮೈಯುಬ್ಬಿಸಿ ವೇಗದಿಂದ ಕೌರವ ಸಮುದ್ರವನ್ನು ಶೋಷಿಸುವಂತೆ, ಹೊರಟಿರುವುದನ್ನು ಕಂಡು ಉತ್ಸಾಹಾನಂದಭರಿತನಾಗಿ ಅರ್ಜುನನು 'ಅಣ್ಣ ! ನಿನ್ನ ಕಡೆ ನೋಡುತ್ತಿರುವರಾ ಧೃತರಾಷ್ಟ್ರನ ಸುತರು ! ಅವರು ನಿನ್ನ ಭಾಗವಲ್ಲವೇ ? ' ಎಂದನು. ಧರ್ಮರಾಜನು ಸೈನ್ಯಮಧ್ಯದಲ್ಲಿ ಮಹಾಸೇನಾರಕ್ಷಿತನಾಗಿ ತೆರಳಿದನು. ಯಜ್ಞಸೇನ ವಿರಾಟರು ಅವನನ್ನು ಹಿಂಬಾಲಿಸುತ್ತಿದ್ದರು. ಎಲ್ಲರ ರಥಧ್ವಜಗಳಿಗೂ ಎತ್ತರವಾಗಿ ವಿರಾಜಿಸುವ ಅರ್ಜುನನ ಧ್ವಜದಲ್ಲಿ ಮಹಾಕಪಿಯು ತಾನಾಗಿ ಬಂದು ನೆಲಸಿ ಭಯಂಕರಾರಾವದಿಂದ ನಿನ್ನ ಸುತರು ಕಂಗೆಡುವಂತೆ ಗರ್ಜಿಸಿದನು.

ಭೀಮಸೇನನ ಮುಂಭಾಗದಲ್ಲಿ ಅನೇಕ ಸಾಹಸ್ರ ಶತಸಂಖ್ಯರಾದ ಪದಾತಿಗಳು ವಿವಿಧಾಯುಧಗಳನ್ನು ಧರಿಸಿ ನಡೆದರು. ಮಳೆಗರೆವ ಮೇಘಗಳೋ, ಮಳೆಗಾಲದ ಬೆಟ್ಟಗಳೋ ಎಂಬಂತಿರುವ ಸಾವಿರಾರು ಮದ್ದಾನೆಗಳು ಭೀಮಸೇನನ ಮುಂಭಾಗದಲ್ಲಿ ನಡೆದವು. ಭಯಂಕರ ಗದಾದಂಡವನ್ನು ಹಿಡಿದ ಭೀಮನು ಪ್ರಳಯ ಕಾಲದ ಯಮನಂತೆ ಭಯಂಕರನಾಗಿ, ಸೂರ್ಯನಂತೆ ದುರ್ನಿರೀಕ್ಷಿತನಾಗಿ, ಅಗ್ನಿಯಂತೆ ತಾಪಕರನಾಗಿ ಬರುತ್ತಿರಲು ಅವನನ್ನು ಪ್ರತಿ ವೀರರು ಸಮೀಪಿಸುವುದಿರಲಿ, ಕಣ್ಣೆತ್ತಿ ನೋಡಲು ಕೂಡ ಅಶಕ್ತರಾಗಿ ತತ್ತರಿಸಿದರು. ಗಾಂಡೀವಪಾಣಿಯಾದ ಅರ್ಜುನನು ರಚಿಸಿದ ವಜ್ರವ್ಯೂಹವು ಅಭೇದ್ಯವಾಗಿತ್ತು. ಪಾಂಡವರ ಸೇನೆಗೆ ಹಿಂದಿನಿಂದ ವಾತಪೋತಗಳು ಸುಳಿದಾಡಿದವು.

ಕೌರವ ಸೈನ್ಯಕ್ಕೆ ಪ್ರತಿವಾತವು ಬಡಿದು, ಕಣ್ಣಿಗೆ ಕೆಂಧೂಳಿಯನ್ನೆರಚಿತು. ಮೇಘವಿಲ್ಲದೆ ಮಿಂಚಿನಬಳ್ಳಿಗಳು ತಲೆದೋರಿದವು. ದಿಕ್ಕುಗಳಲ್ಲಿ ಕತ್ತಲು ಕವಿಯಿತು. ಆಕಾಶದಿಂದ ಮಹೋಲ್ಕೆಗಳು ಪ್ರಾಚೀಮುಖವಾಗಿ ಹಾರಿ, ಹುಟ್ಟುತ್ತಿರುವ ಸೂರ್ಯನನ್ನು ಬಡಿಯುವಂತೆ ತೋರಿದವು. ಸೂರ್ಯನು ಪುಟ್ಟಿದ ಮೇಲೂ ಕಾಂತಿಹೀನನಾಗಿದ್ದನು. ಭೂಮಿಯು ಕಂಪಿಸಿತು. ಧ್ವಜಗಳು ಬಿರುಗಾಳಿಗೆ ಕಂಪಿಸಿದವು. ಆಯುಧಪತಾಕಾರಥ ಕಿಂಕಿಣೀ ಭೂಷಣಗಳು ಝಣ ಝಣ ಧ್ವಾನ ಮಾಡಿದವು. ಮುಂದೆ ನಿಂತಿರುವ ಭೀಮಸೇನನನ್ನು ಕಂಡು ನಿನ್ನ ಮಗನ ಸೈನಿಕರು ತಲೆ ತಿರುಗಿದಂತಾಗಿ, ಕುಸಿದು ಬಿದ್ದರು.

ರಾಜನ್ ! ಸೈನ್ಯಗಳೆರಡೂ ಹರ್ಷಿತವಾಗಿದ್ದವು. ಎರಡರಲ್ಲಿಯೂ ಮಹಾವೀರರಿದ್ದರು. ಎರಡೂ ಭೀಮ ಭಯಂಕರವಾಗಿದ್ದವು ; ಎರಡೂ ಸ್ವರ್ಗವನ್ನು ಸೇರಲು ಹಾತೊರೆಯುತ್ತಿದ್ದವು; ಎರಡರಲ್ಲಿಯೂ ಕಾಪುರುಷರಂತೆ ಸತ್ಪುರುಷರೂ ಇದ್ದರು.

ಕೌರವಸೇನೆ ಪಶ್ಚಿಮದಿಗಭಿಮುಖವಾಗಿಯು, ಪಾಂಡವಸೇನೆಯು ಪೂರ್ವದಿಗಭಿಮುಖವಾಗಿಯು ದಾನವಸೇನೆಗಳಂತೆ ನಿಂತಿದ್ದವು. ದುರ್ಯೋಧನನು ಪ್ರಭಿನ್ನಕರಟಾಮುಖವಾದ ವಾರಣವನ್ನೇರಿ, ಕುರುಸೈನ್ಯಮಧ್ಯದಿ, ವಂದಿಮಾಗಧರಿಂದ ಸ್ತೂಯಮಾನನಾಗಿದ್ದನು. ಅವನ ಮುಂದು ಶಕುನಿಯು, ಎಲ್ಲರಿಗೂ ಮುಂದಾಗಿ ಶ್ವೇತಚ್ಛತ್ರದಡಿಯ ರಥದಲ್ಲಿ ಭೀಷ್ಮನು ನಿಂತಿದ್ದನು. ದುರ್ಯೋಧನನ ಹಿಂದೆ ದ್ರೋಣನು ಶೋಣಾಶ್ವಗಳ ರಥದಲ್ಲಿ ಕೂತು ಬಂದನು. ಜಯದ್ರಥ, ಭೂರಿಶ್ರವ, ಶಲ್ಯ, ಪುರುಮಿತ್ರಾದಿಗಳು ಸೈನ್ಯಮಧ್ಯದಲ್ಲಿರುವ ಕೌರವರಾಜನಿಗೆ ಅಂಗರಕ್ಷಕರಾಗಿದ್ದರು. ಕೃಪಾಚಾರ್ಯನು ಭೀಷ್ಮನಿಗೆ ಎಡಗಡೆ ಶಕಕಿರಾತಯವನ ಸೈನ್ಯವನ್ನು ನಡೆಸುತ್ತಿದ್ದನು. ಸಂಸಪ್ತಕರು ತ್ರಿಗರ್ತರೊಡಗೂಡಿ ಸೇನಾಪತಿಯ ಬಲಗಡೆ ಮಹಾಸೇನೆಯೊಡನೆ ಬರುತ್ತಿದ್ದರು.

ಇಂತಹ ಮಹಾಸೇನೆಯನ್ನು ನೋಡಿ ವಿಷಾದಚಕಿತನಾಗಿ, ಧರ್ಮರಾಜನು ಅರ್ಜುನನನ್ನು ಕರೆದು ಇಂತೆಂದನು: 'ಅರ್ಜುನ ! ನೋಡಿದೆಯಾ ಕುರುಸೇನೆಯನ್ನು ? ಭೀಷ್ಮನಿಂದ ರಚಿತವಾದ ಅಭೇದ್ಯವ್ಯೂಹದಲ್ಲಿ ನಿಂತ ಧಾರ್ತರಾಷ್ಟ್ರರ ಸೇನೆಯನ್ನು ನಾವು ಎಂತು ಗೆಲ್ಲಲಾಗುವುದು. ನನಗೇಕೋ ಭಯ ಸಂಶಯಗಳು ತಲೆದೋರುತ್ತಿವೆ ! ' ಎಂದನು. ಆ ಮಾತನ್ನಾಲಿಸಿ ಅರ್ಜುನನು ಅಣ್ಣನ ವಿಷಾದವನ್ನು ಗಮನಿಸಿ 'ಅಣ್ಣ ! ಪ್ರಜ್ಞಾಬಲದಿಂದಲು ಸಂಖ್ಯೆಯಲ್ಲಿಯೂ ಶತ್ರುಸೇನೆ ಹೆಚ್ಚಾಗಿದೆ ನಿಜ ! ಆದರೂ ನಾವೇ ಜಯಿಸುವೆವು ಕೇಳು - ಶ್ರೀಕೃಷ್ಣಮಹಿಮೆಯನ್ನು ! ಹಿಂದೆ ದೇವಾಸುರ ಯುದ್ಧವಾಯಿತು. ಆಗ ಸಂಶಯಿತರಾದ ದೇವತೆಗಳನ್ನು ನೋಡಿ ಬ್ರಹ್ಮದೇವನು 'ದೇವತೆಗಳಿರಾ ! ಹೆದರಬೇಡಿ ! ಬಲವೀರ್ಯಗಳಿಂದ ಮಾತ್ರ ಜಯವಾಗದು. ಸತ್ಯ, ಧರ್ಮ, ಕೀರ್ತಿ, ದೈವಬಲಗಳಿಂದ ಜಯವಾಗುವುದು. ಧರ್ಮಾಧರ್ಮಗಳನ್ನು, ಲೋಭವಿತರಣೆಗಳನ್ನು, ಕ್ರೋಧಶಯಗಳನ್ನು ಅರಿತು ಧರ್ಮದಾನಶಮಯುಕ್ತರಾಗಿರಿ ! ಎಲ್ಲಿ ಧರ್ಮವಿರುವುದೋ ಅವರಿಗೆ ಜಯವಾಗುವುದು. ಅಹಂಕಾರವನ್ನು ಬಿಟ್ಟು ದೈವವನ್ನು ನಂಬಿ ಉತ್ಸಾಹದಿಂದ ಹೋರಾಡಿ ! ' ಎಂದು ಅವರನ್ನು ಹುರಿದುಂಬಿಸಿದನು. ನಾರದನೂ 'ಕೃಷ್ಣನಿದ್ದೆಡೆ ಜಯ'ವೆಂದು ತಿಳಿಸಿರುವನು. ಶಂಕೆಪಡಬೇಡ ! ಜಯವು ಶ್ರೀಕೃಷ್ಣನ ದಾಸನಂತೆ ಅವನನ್ನು ಹಿಂಬಾಲಿಸಿ ಬರುವುದು. ನೀತಿ - ನಿಯಮ ವಿನಯ ನಿಧಿಯಾದ ಶ್ರೀಕೃಷ್ಣನಲ್ಲಿ ವಿಜಯವು ಆಶ್ರಯಿಸಿ ನಿಂತಿದೆ. ಅಮಿತ ತೇಜನಾದ ಗೋವಿಂದನು ಶತ್ರುಗಳಿಗೆ ಹೆದರುವವನಲ್ಲ. ಸುರಾಸುರ ಸಂಗ್ರಾಮದಲ್ಲಿ ಕೃಷ್ಣಪಕ್ಷವನ್ನು ವಹಿಸಿದ ವೃಂದಾರಕರು ಗೆದ್ದರು. 'ಕೃಷ್ಣನನ್ನು ಗೆಲ್ಲುವೆವು ಕೊಲ್ಲುವೆವು' ಎಂದು ಮೇಲೇರಿ ಬಂದ ದಾನವರು ಮಡಿದರು. ಶ್ರೀಹರಿ ಪ್ರಸಾದದಿಂದ ಇಂದ್ರನು ತ್ರಿಲೋಕಪತಿಯಾಗಿರುವನು. ಅಂತಹ ತ್ರಿದಿವೇಶನು, ಅಂತಹ ಜಯಶೀಲನು, ಅಂತಹ ದಿವ್ಯತೇಜನು ಆದ ನಮ್ಮ ಶ್ರೀಕೃಷ್ಣನು ನಿನಗೆ ಜಯವನ್ನೀಯಲು ನಿಶ್ಚಯಿಸಿ ನಿಂತಿರುವಾಗ ನೀನೇಕೆ ಹೆದರುವೆ ? ' ಎಂದನು.

ಆಗ ಶಿಖಂಡಿಯನ್ನು ಸೈನ್ಯ ಮಧ್ಯದಲ್ಲಿಟ್ಟು ಅವನಿಗೆ ರಕ್ಷಕನಾಗಿ ಅರ್ಜುನನು

ತೆರಳಿದನು. ಮುನ್ನಡೆವ ಧೃಷ್ಟದ್ಯುಮ್ನನಿಗೆ ಭೀಮಸೇನನು ರಕ್ಷಕನಾಗಿದ್ದನು. ಬಲಗಡೆ ಸೈನ್ಯವು ಸಾತ್ಯಕಿಪಾಲಿತವಾಗಿತ್ತು. ದಿವ್ಯಾಯುಧಸಮನ್ವಿತವು, ಕನಕ ರತ್ನಚಿತ್ರಿತವು ಆದ ತನ್ನ ರಥವನ್ನೇರಿ ಧರ್ಮರಾಜನು, ಶ್ವೇತಚ್ಛತ್ರದಡಿಯಲ್ಲಿ ನಿಂತು, ವಿಪ್ರವರರ ವೇದೋಕ್ತಾಶೀರ್ವಾದಗಳನ್ನು ಸ್ವೀಕರಿಸಿದನು. ಜಪ, ಮಂತ್ರ, ಹೋಮ ಓಷಧೀಕ್ರಿಯಗಳನ್ನು ಮಾಡಿ, ವಿಪ್ರಾದಿ ಕುಶಲ ವಿದ್ವರು ಸ್ವಸ್ತಿಯನ್ನು ಆಶಾಸಿಸಿದರು. ಗೋಧನ, ರತ್ನ, ಕನಕ, ಪುಷ್ಪ ಫಲಾದಿಗಳನ್ನು ವಿಪ್ರವರರಿಗೆ ದಾನವಿತ್ತು ಧರ್ಮರಾಜನು, ದೇವಸೇನೆಯಲ್ಲಿರುವ ಮಹೇಂದ್ರನಂತೆ ವಿರಾಜಿಸಿದನು. ಸೂರ್ಯಕಾಂತಸಹಸ್ರವು, ಶತಘಂಟವು, ಕನಕರತ್ನಚಿತ್ರವು, ಶ್ವೇತಹಯವು ಆದ ದಿವ್ಯರಥದಲ್ಲಿ ಕೂತು ಅರ್ಜುನನು ಗಾಂಡೀವವನ್ನು ಹಿಡಿದಿದ್ದನು. ಶ್ರೀಕೃಷ್ಣನು ರಥಯುಗದಲ್ಲಿ ತೋತ್ರವೇತ್ರಪಾಣಿಯಾಗಿ ವಿರಾಜಿಸಿದನು. ಸೇನೆಗೆ ಅಧಿನೇತನಾಗಿ ನಡೆಸುವ ಭೀಮಸೇನನು ಮಹಾಭಯಂಕರರೂಪನಾಗಿ, ಗದೆಯನ್ನು ಹಿಡಿದು ನಡೆದನು. ಭುಜಬಲದಿಂದಲೇ ಕಾದಿ ನರ ನಾಗರಥಗಳನ್ನು ನಾಶಮಾಡಬಲ್ಲ ಭೀಮಸೇನನು ಸಾಯುಧನಾದನೆಂದರೆ ಹೇಳಬೇಕೆ ? ಸಿಂಹಖೇಲಗತಿಯಿಂದ ನಡೆಯುವ ವೃಕೋದರನು ಮಹೇಂದ್ರ ವಿಕ್ರಮದಿಂದ ರಣರಂಗದಲ್ಲಿ ನುಗ್ಗುವನೆಂದರಿತ ಶತ್ರುವೀರರು ಕೆಸರಿನ ಕೊಳದಲ್ಲಿ ಸಿಕ್ಕಿಬಿದ್ದ ಮದ್ದಾನೆಗಳಂತೆ ಒದ್ದಾಡಿದರು. ಸಿಂಹವನ್ನನುಸರಿಸಿ ಬರುವ ಹುಲಿಗಳಂತೆ ನಿನ್ನವರು ರಣೋತ್ಸಾಹಭರಿತರಾಗಿ ಸಿಂಹನಾದವನ್ನು ಮಾಡಿದರು.

ರಣರಂಗದಿ ನಿಂತ ಅರ್ಜುನನನ್ನು ನೋಡಿ ವಾಸುದೇವನು 'ಪಾರ್ಥ ! ಕುರು ವಂಶಲಲಾಮನಾದ ಭೀಷ್ಮನು ಶತ್ರುಸೇನಾಪತಿಯಾಗಿರುವನು. ಸಿಂಹದಂತೆ ಹಾರಿ ಬಂದು ಮೇಲೆರಗುವ ಪಿತಾಮಹನಿಗೆದುರಾಗಿ ನಿಲ್ಲಬಲ್ಲ ವೀರರಿಲ್ಲ. ಅನೇಕ ಯಜ್ಞಗಳನ್ನು ಮಾಡಿರುವ ಕುರುಪಿತಾಮಹನನ್ನು ಸಾಮಾನ್ಯನೆಂದು ತಿಳಿಯಲಾಗದು. ಅವನನ್ನು ಸುತ್ತುಗಟ್ಟಿ ಕಾಪಾಡುತ್ತಿರುವ ಕಾಲಾಳುಗಳನ್ನು ಕಾದಿ ಕಡಿದು, ಕುರುಸೇನಾಪತಿಯನ್ನು ಮುಟ್ಟಬೇಕಾಗಿದೆ. ನೋಡು ! ಶುಚಿಯಾಗಿ ಆಚಮಿಸಿ, ರಣಮುಖದಲ್ಲಿ ನಿಂತು, ಶತ್ರುಜಯಕಾರಿಣಿಯು, ಸರ್ವಕಷ್ಟತಾರಿಣಿಯು ಆದ ದುರ್ಗಾದೇವಿಯನ್ನು ಸ್ತುತಿಸು !' ಎಂದನು.

ಅರ್ಜುನನು ರಥದಿಂದಿಳಿದು, ಕೈಕಾಲು ತೊಳೆದು, ಆಚಮಿಸಿ, ಶುಚಿಯಾಗಿ, ಕೈಜೋಡಿಸಿ, ದುರ್ಗಾದೇವಿಯನ್ನು ಮನದಿನಿಲ್ಲಿಸಿ, ಭಕ್ತಿಯಿಂದ ಇಂತು ಸ್ತುತಿಸಿದನು:

"ಅಂಬ ! ದುರ್ಗೆ ! ಲೋಕಜನನಿ ! ಮಂದರಶೈಲನಿಲಯೇ ! ನಿನಗೆ ನಮಃ. ನಿನ್ನಿಂದ ಸಿದ್ಧ ಜನರು ಪರಮಪದವನ್ನು ಸೇರಿ ಸುಖಿಸುವರು. ನೀನು ನಿತ್ಯಾಪರೋಕ್ಷಿತಶ್ರೀಶಳಾಗಿರುವೆ ! ಮಂದಾರವನವಾಸಿನಿ ! ನಾರಾಯಣ ಪ್ರಿಯೆ ! ನಿತ್ಯಬ್ರಹ್ಮಚಾರಿಣಿಯಮ್ಮ ನೀನು ! ನಿನಗೆ ಜರೆಯಿಲ್ಲ; ಮರಣವಿಲ್ಲ; ಕಾಲಚಕ್ರವು ನಿನ್ನಿಂದ ತಿರುಗುವುದು. ಕಪಾಲಧರನಾದ ರುದ್ರನಿಗೆ ಪದವೀಪ್ರದಳಾಗಿ, ಕಪಿಲ ವರ್ಣಳಾಗಿ, ಕೃಷ್ಣಪಿಂಗಳ ಭಾಸುರತೇಜಳಾಗಿ, ಮಂಗಳಪ್ರದಳಾಗಿರುವ ಭದ್ರಕಾಲಿ ! ನಮೋ ನಮಃ. ಚಂಡ

ಪ್ರಚಂಡನಾಗಿ ಪ್ರಳಯವನ್ನು ತಂದೊಡ್ಡುವ ಶ್ರೀ ನೃಸಿಂಹನ ಅರ್ಧಾಂಗಿಯಮ್ಮ! ನಿನಗೆ ಶಿರಬಾಗಿ ಜಯವಿತ್ತು ಕಾಪಾಡೆಂದು ಬೇಡುತ್ತಿರುವೆನು. ಸಂಸಾರದಿಂದಲು ಸಂಕಟದಿಂದಲು ತರಿಸಿ ಸುಖಿಸಲು ನಿನ್ನ ಚರಣವೇ ಕಾರಣವಾಗಿದೆ. ಕಾತ್ಯಾಯನಿ! ಕತನ ವಂಶವನ್ನು ಅಲಂಕರಿಸಿದೆ! ದುಷ್ಟರಿಗೆ ಕ್ರೂರಳು, ಸುಜನರಿಗೆ ಜಯಪ್ರದಳು ಆಗಿರುವೆ! ಶಿಖಿ ಪಿಚ್ಛವನ್ನು ದಿವ್ಯಾಭರಣ ಸುಮ ಮಾಲೆಗಳನ್ನು ಧರಿಸಿರುವೆ! ಶೂಲಹಸ್ತೆ! ಪ್ರಶಸ್ತೆ! ನಂದಗೋಪ ಕುಲದಿ ಜನಿಸಿ ಅನುಜೆ ಎನಿಸಿದೆ ಶ್ರೀ ಶನಿಗೆ! ಸರ್ವಸೌಭಾಗ್ಯಲಕ್ಷಣ ಲಕ್ಷಿತೇ! ಲಕ್ಷ್ಮೀ! ಪೀತಾಂಬರಧಾರಿಣಿ! ಮಹಿಷಾಸುರಮರ್ದಿನಿ! ಪೀತವಾಸಿನಿ! ಭಯಂಕರ ವದನಗಹ್ವರದಿಂದ ಸಿಂಹನಾದವನ್ನು ಮಾಡುತ್ತಾ ರಕ್ತ ಬೀಜಾದಿ ದುಷ್ಟದಾನವರನ್ನು ಮರ್ದಿಸಿದ ಜನಾರ್ದನಪ್ರಿಯೇ! ವಾಸುದೇವ ವಲ್ಲಭೇ! ದೇವತೆಗಳನ್ನು ಕಮಲನೇತ್ರದಿಂದಲು ನೋಡಿ ರಕ್ಷಣ ಪೋಷಣ ಶಿಕ್ಷಣಗಳನ್ನು ಮಾಡುವ ಜಗದೀಶ್ವರಿ! ಬ್ರಾಹ್ಮಣಪ್ರಿಯೇ! ಜಾತವಾದುದೆಲ್ಲ ಅರಿತ ಸರ್ವಜಳು, ಜಂಬೂದ್ವೀಪದ ಭರತ ಖಂಡದಲ್ಲಿ ವಿವಿಧ ದೇವಾಲಯಗಳಲ್ಲಿ ನೆಲಸಿರುವ ಭಕ್ತಪಾಲನ ದಕ್ಷಳು ಆದ ನಿನಗೆ ನಮಸ್ಕಾರವು.

ಅಂತಹ ಮಹಾಲಕ್ಷ್ಮೀ ಸ್ವರೂಪಳಾದ ದುರ್ಗಾದೇವಿಯ ಸನ್ನಿಧಾನದಿಂದ ದುರ್ಗೆ ಎನಿಸಿ, ದುರ್ಗಮಸಂಕಟಗಳಿಂದ, ನಂಬಿದ ಸುಜನರನ್ನು ಪಾರುಗಾಣಿಸುವ ಪಾರ್ವತೀದೇವಿ! ನಿನಗೆ ನಮಸ್ಕಾರ! ಅಂಬ! ಉಮೆ! ಶಂಕರಿ! ಬ್ರಹ್ಮವಿದ್ಯೆಗೆ ನಿಧಿಯು, ಕುಜನರಿಗೆ ಅಜಾನಾನ್ಯಥಾಜಾನಪ್ರದೆಯು, ಸ್ಕಂದಗಣಪತಿ ಶಕ್ರಜನನಿಯು, ವೇದವಿದ್ಯಾ ಪ್ರದಾಯಿನಿಯು ಸರಸ್ವತಿ ಸನ್ನಿಧಾನ ಪಾತ್ರೆಯು ಪರಮಪವಿತ್ರೆಯು ಆದ ಲೋಕ ಜನನಿ! ನನ್ನ ಮೊರೆಯನ್ನಾಲಿಸು ಜಯವಿತ್ತು ನಮ್ಮನ್ನು ಪಾಲಿಸು! ಕಾಂತಾರಭಯ, ಶತ್ರುಭಯ ಸಂಸಾರಭಯಗಳನ್ನು ನಿವಾರಿಸಬಲ್ಲ ಶಿವನವಲ್ಲಭೇ! ಪಾತಾಳತಲವಾಸಿನಿ! ದಾನವನಾಶಿನಿ ತುಷ್ಟಿ ಪುಷ್ಟಿ ಶ್ರೀ, ಹ್ರೀ ಸಿದ್ಧಿಜಯ ಜಾನ, ಪ್ರಭಾವ, ಪ್ರಭೆ, ಧೃತಿ ದೀಪ್ತಿ ದಾಂತಿ, ಶಾಂತಿ ಭೂತಿ ಮುಂತಾದ ಸುಗುಣಗಳಿಗೆ ಆಕರವಾಗಿರುವ ನಿನ್ನ ಚರಣಾರವಿಂದಗಳಿಗೆ ನಮೋನಮಃ."

ಇಂತು ಸ್ತುತಿಸುವ ಕುಂತಿನಂದನನಿಗೆ ಪ್ರತ್ಯಕ್ಷಳಾಗಿ ಶ್ರೀದುರ್ಗಾದೇವಿಯು ಗೋವಿಂದನ ಮುಂದೆ ನಿಂತು ವಂದಿಸಿ, ಅರ್ಜುನನಿಗೆ ಪ್ರಸನ್ನಳಾದಳು. ಅಂತರಿಕ್ಷಗತಳಾದ ದೇವಿಯು ಮೇಘಗಂಭೀರರವದಿಂದ 'ಪಾರ್ಥ! ಶತ್ರುಗಳನ್ನು ಜಯಿಸುವೆ ಚಿಂತಿಸ ಬೇಡ! ನಾರಾಯಣನಾದ ಶ್ರೀಕೃಷ್ಣನು ನರನಾದ ನಿನಗೆ ನಿತ್ಯಸಹಾಯನಾಗಿರುವನು. ಸಾಕ್ಷಾದಿಂದ್ರನೂ ನಿನ್ನನ್ನು ಗೆಲ್ಲಲಾರನು. ಭೀಮಸೇನ ಕೃಷ್ಣರ ಸಹಾಯದಿಂದ ಬೇಗನೆ ಜಯಲಕ್ಷ್ಮಿಯನ್ನು ಪೊಂದುವೆ!' ಎಂದು ನುಡಿದು ಅಂತರ್ಹಿತಳಾದಳು. ಅರ್ಜುನನು ಜಯವು ಸಿದ್ಧವೆಂದು ನಂಬಿ, ಆನಂದಿಸಿದನು.

ಪ್ರಾತಃಕಾಲದಲ್ಲಿ ಶುಚಿರ್ಭೂತರಾಗಿ ಈ ದುರ್ಗಾಸ್ತುತಿಯನ್ನು ಪಠಿಸುವವರೂ

ಕೇಳುವವರೂ ಯಕ್ಷರಕ್ಷಃಪಿಶಾಚಾದಿ ಪೀಡಾ ಮುಕ್ತರಾಗುವರು. ಶತ್ರು, ಸರ್ಪ, ದುಷ್ಟರಾಜರ ಕಾಟವಿಲ್ಲದೆ ಅವರು ಸುಖಿಸುವರು. ಆರೋಗ್ಯ ಬಲ ಕಾಂತಿ ಚಿರಾಯುಃಪ್ರದವಾದ ದುರ್ಗಾಸ್ತುತಿಯನ್ನು ನಾನು ಶ್ರೀವ್ಯಾಸಪ್ರಸಾದದಿಂದ ತಿಳಿದಿರುವೆನು.

ಧೃತರಾಷ್ಟ್ರ ? ನಿನ್ನ ಸುತರು ದುರಾತ್ಮರು. ಕ್ರೋಧಲೋಭ ವಶರಾಗಿ ಪಾಂಡವರಿಂದ ಕಡಿದಾಡಿ ಸಾಯುವರು. ಅವರಿಗೆ ತಮ್ಮ ಕುತ್ತಿಗೆಯನ್ನು ಸುತ್ತಿರುವ ಕಾಲಪಾಶದ ಅರಿವಿಲ್ಲದಂತಾಗಿದೆ. ಶ್ರೀವೇದವ್ಯಾಸ, ನಾರದ, ಕಣ್ವ, ಪರಶುರಾಮ, ಮೊದಲಾದ ಮಹನೀಯರು ಹೇಳಿದ ಹಿತನುಡಿಗಳಿಗೆ ಕಿವಿಗೊಡದೆ ನಿನ್ನ ಸುತನು ಅನರ್ಥಕ್ಕೀಡಾಗುತ್ತಿರುವನು. ಎಲ್ಲಿ ಧರ್ಮವೋ ಅಲ್ಲಿ ಕೀರ್ತಿ; ಎಲ್ಲಿ ಕೀರ್ತಿಯೋ ಅಲ್ಲಿ ಶ್ರೀಃ ಎಲ್ಲಿ ಧರ್ಮವೋ ಅಲ್ಲಿ ಕೃಷ್ಣ; ಎಲ್ಲಿ ಕೃಷ್ಣನೋ ಅಲ್ಲಿ ಜಯ' ಎಂದು ಸಂಜಯನು ನುಡಿದನು.

## ೫. ಶ್ರೀ ಭಗವದ್ಗೀತೆ - ಅರ್ಜುನ ವಿಷಾದಯೋಗ

ಭಗವಾನ್ ಶ್ರೀಕೃಷ್ಣನು, ಇಂದ್ರಾಂಶಸಂಭೂತನು, ತನಗೆ ಪ್ರಿಯತಮನು ಆದ ಅರ್ಜುನನಿಗೆ 'ನಾರಾಯಣದ್ವೇಷಿ, ತದನು ಬಂಧಿಗಳನ್ನು ನಿಗ್ರಹಿಸುವದಕ್ಕಾಗಿ ಮಾಡುವ ಯುದ್ಧವು ಸರ್ವಸಾಧಾರಣ ಧರ್ಮವೇ ಆಗಿದೆ. ಮತ್ತು ಕ್ಷತ್ರಿಯರಿಗೆ ವಿಶೇಷವಾಗಿ ಪರಮಧರ್ಮವಾಗಿದೆ. ಹೀಗಿರಲು ಬಂಧುಸ್ನೇಹದಿಂದ ಅದನ್ನು ಅಧರ್ಮವೆಂದು ಶಂಕಿಸಿ, ಯುದ್ಧವಿಮುಖನಾದಂತಾದ ಅರ್ಜುನನ್ನು ನಿಮಿತ್ತಮಾಡಿಕೊಂಡು, ಶ್ರೀಹರಿ ಭಗವದ್ಭಕ್ತರ ಶುಶ್ರೂಷೆ, ಅನಸೂಯೆ, ಭಕ್ತಿ ಸ್ವವರ್ಣಾಶ್ರಮವಿಹಿತ ಸತ್ಕಾರ್ಮಾನುಷ್ಠಾನ, ಭಗವಂತನಲ್ಲಿ ಸರ್ವಸುಕರ್ಮಫಲ ಸಮರ್ಪಣೆ, ಶಾಸ್ತ್ರ ವಿಚಾರನಿಷ್ಠೆ ಮೊದಲಾದ ಸದ್ಧರ್ಮವನ್ನು ನಿರೂಪಿಸಿ ಸರ್ವಸುಜನರನ್ನು ಉದ್ಧರಿಸಲು 'ಭಗವದ್ಗೀತೆಯನ್ನು' ಉಪದೇಶಿಸಿದನು.

ಶಾಸ್ತ್ರಗಳಲ್ಲಿ ಶ್ರೀ ಭಾರತವು ರಮ್ಯವಾಗಿದೆ. ಭಾರತವೆಂದರೆ ಪಂಚಮವೇದವೆನಿಸಿ ಸರ್ವವೇದಪುರಾಣಾದಿಸಾರವೆಂದು ಪ್ರಖ್ಯಾತವಾಗಿದೆ. ಭಾರತದಲ್ಲಿ ಗೀತೆ ಮತ್ತು ವಿಷ್ಣು ಸಹಸ್ರನಾಮಸ್ತುತಿ ಎಂಬ ಎರಡು ಘಟ್ಟಗಳು ಸಾರತರವಾಗಿವೆ. ಸಾಕ್ಷಾತ್ಪದ್ಮನಾಭನ ಮುಖ ಪದ್ಮದಿಂದ ಹೊರಹೊಮ್ಮಿ ಬಂದ ಗೀತೆಗೆ ಮಿಗಿಲಾದ ಗ್ರಂಥವಿಲ್ಲ. ತಾಪತ್ರಯ ದುಃಖಿತರಾಗಿ, ಸಾಂಸಾರಿಕಾಂಧಕಾರದಲ್ಲಿ ತೊಳಲುತ್ತ , ಸುಜನರು ಕಷ್ಟಪಡುತ್ತಲಿರುವುದನ್ನು ಕಂಡು, ಕರುಣಾವರುಣಾಲಯರಾದ ಶ್ರೀವೇದವ್ಯಾಸರು, ಸಕಲ ಸುಜನರಿಗೆ ಸದ್‌ಜಾನವನ್ನಿತ್ತು, ತತ್ತದ್ಯೋಗ್ಯ ಸ್ವರೂಪ ಸುಖವನ್ನು ಹೊಂದಿಸಲು ಸಾಧಕವಾದ ಶ್ರೀಗೀತೆಯನ್ನು ಶ್ರೀಕೃಷ್ಣನು ಪಾರ್ಥನಿಗೆ ಹೇಳಿದ್ದನ್ನೇ, ಶ್ರೀ ಭಾರತದಲ್ಲಿ ಶ್ಲೋಕರೂಪವಾಗಿ ಗ್ರಥನಮಾಡಿರುವರು. ಶ್ರೀವೇದವ್ಯಾಸರೇ ಶ್ರೀಕೃಷ್ಣನಲ್ಲವೇ ? ಅಂತೆಯೇ ಅವರಿಂದ ರಚಿತವಾಗಿರುವ ಶ್ರೀಗೀತೆಯು ಪರಮಾಪ್ತವಾಕ್ಯವಾಗಿ ಪರಮಪ್ರಮಾಣವಾಗಿದೆ. ಅಂತಹ

ಗೀತೆ ಸರ್ವೋಪನಿಷತ್ಸಾರವು, ಬ್ರಹ್ಮಸೂತ್ರಪದವಿನಿಶ್ಚಿತವು, ಯಥಾರ್ಥಜ್ಞಾನೋಪದೇಶಕವು ಆಗಿದೆ. ಆದಕ್ಕೆ ಶ್ರೀಮದಾನಂದತೀರ್ಥಭಗವತ್ಪಾದರು ಗೀತಾಭಾಷ್ಯ ತಾತ್ಪರ್ಯನಿರ್ಣಯಗಳನ್ನು ಬರೆದಿರುವರು. ಅವನ್ನು ವಿವರಿಸಲು ಶ್ರೀ ಟೀಕಾಕೃತ್ಪಾದರು ಟೀಕೆಯನ್ನೂ, ಶ್ರೀ ಮಂತ್ರಾಲಯ ಗುರುರಾಜರು ಮಂದೋಪಕಾರಕವು, ಟೀಕಾಭಾಷ್ಯಾದಿ ದಿವ್ಯಾರ್ಥ ಸಂಗ್ರಾಹಕವು ಆದ ಗೀತಾವೃತ್ತಿ ಎಂಬ ಗ್ರಂಥರಾಜವನ್ನೂ ಬರೆದಿರುವರು.

1. ಯುದ್ಧಾರಂಭವಾಗಲಿದ್ದಾಗ ಅರ್ಜುನನು ಗುರುಬಾಂಧವರನ್ನು ಕೊಲ್ಲಲಾರದೆ, ಅಭಿಮಾನದಿಂದ ಧರ್ಮಯುದ್ಧವನ್ನು ಕೂಡ ಅಧರ್ಮವೆಂದು ತಿಳಿದು, ವಿಷಾದದಿಂದ ಯುದ್ಧವಿಮುಖನಾದಂತಾಗುವನು.

2. ಶ್ರೀಕೃಷ್ಣನು ಅವನಿಗೆ ಜೀವೇಶರ ನಿತ್ಯತ್ವವನ್ನು, ಜೀವರ ಅಸ್ವಾತಂತ್ರ್ಯವನ್ನು ಜ್ಞಾನದಿಂದ ಅಭಿಮಾನತ್ಯಾಗವನ್ನು, ನಿಷ್ಕಾಮಕರ್ಮವನ್ನು, ಜ್ಞಾನಿ ಲಕ್ಷಣವನ್ನು ವರ್ಣಿಸಿದನು.

3. ಜ್ಞಾನಸಾಧನವಾದುದು ಸ್ವೋಚಿತಕರ್ಮಾನುಷ್ಠಾನವೇ ಸ್ವಕರ್ಮವನ್ನು ಭಗವತ್ಪ್ರೀತಿಗಾಗಿ ತಪ್ಪದೆ ಮಾಡಬೇಕು.

4. ಜ್ಞಾನಕರ್ಮಾದಿಂದ್ರಿಯ ದೇವತೆಗಳಿಗೆ ಶ್ರೇಷ್ಠರಾದ ಬುದ್ಧ್ಯಾದಿ ದೇವತೆಗಳಿಗೆ ಮಿಗಿಲಾದವನು ಶ್ರೀಹರಿ; ಶ್ರೀಶನೇ ಸರ್ವೋತ್ತಮನು, ಸರ್ವಜ್ಞನು. ಕರ್ಮಗಳು ವಿವಿಧವಾದರೂ ಅವುಗಳ ಫಲಜ್ಞಾನವೇ; ಅಂತಹ ಜ್ಞಾನದಿಂದಲೇ ಶ್ರೀಮುಖ್ಯ ಪ್ರಾಣವಲ್ಲಭನ ಪ್ರಸಾದ.

5. ಕಾಮಾದಿವರ್ಜನರೂಪಸನ್ಯಾಸ, ಶ್ರವಣಮನನ ಫಲಸಮರ್ಪಣ ಧ್ಯಾನಾದಿ ಈಶ್ವರಾರಾಧನ ಕರ್ಮಾನುಷ್ಠಾನರೂಪತ್ಯಾಗ, ಎರಡೂ ಕರ್ಮಯೋಗದ ಎರಡು ಅವಶ್ಯಕ ಭಾಗಗಳು.

6. ಇಂದ್ರಿಯ ಜಯ, ಕಾಮಾದಿ ವರ್ಜನ ರೂಪಸನ್ಯಾಸದಿಂದ ಕೂಡಿದ ಶಾಸ್ತ್ರಶ್ರವಣಾದಿಗಳಿಂದ ಜ್ಞಾನ, ಅದರಿಂದ ಧ್ಯಾನ, ಅದರಿಂದ ಭವರೋಗನಿವಾರಕವಾದ ಭಗವದಪರೋಕ್ಷ ಮೋಕ್ಷಗಳು.

7. ಅಪರೋಕ್ಷಜ್ಞಾನಕ್ಕೆ ಬಹಿರಂಗಸಾಧನವಾದ ಕಾಮಾದಿ ವರ್ಜನ, ಅಂತರಂಗಸಾಧನವಾದ ಶ್ರವಣಮನನಧ್ಯಾನಗಳು ಕೂಡ ಭಕ್ತಿಯಿಂದ ಕೂಡಿದ್ದರೇನೇ ಫಲಪ್ರದ. ಶ್ರೀಹರಿಯು ತಾನಾಗಿ ಪ್ರಸನ್ನನಾಗಬೇಕು, ಭಕ್ತಿರಹಿತರಿಗೆ ಅವನು ಸಿಗನು.

8. ಅಂತಕಾಲದಲ್ಲಿ ಶ್ರೀಹರಿಯನ್ನು ಸ್ಮರಿಸಿದವರಿಗೆ ಸದ್ಗತಿಯಾಗುವುದು. ಸ್ಮರಣೋಪಾಯದಿಂದ ಅವನ ಪ್ರಾಪ್ತಿ; ಶ್ರೀಹರಿಲೋಕವನ್ನು ಜ್ಞಾನಿಗಳು ಸೇರುವ ಮಾರ್ಗಾದಿಗಳು.

9. ಭಗವಂತನು ಸರ್ವತ್ರ ವ್ಯಾಪ್ತನು ಸೃಷ್ಟಿ ಸಂಹಾರಗಳ ಸ್ವತ್ರಂಕರ್ತನು. ಅವನ ಅಧೀನವಿನ್ನೆಲ್ಲ ಜಗವು. ಅವನು ಸರ್ವನಿಯಾಮಕನು. ಅವನಿಗೆ ಕರ್ಮ ಲೇಪವಿಲ್ಲ, ಅಸುರರು

ಅವನನ್ನು ಅನ್ಯಥಾ ತಿಳಿದು ಅಂಧಂತಮವನ್ನು, ಸುಜೀವರು ಯಥಾರ್ಥವಾಗಿ ತಿಳಿದು ಸ್ವಯೋಗ್ಯ ಮೋಕ್ಷಾನಂದವನ್ನು ಹೊಂದುವರು.

10. ವಿಶಿಷ್ಟಾಧಿಕಾರಿಗಳು ಉಪಾಸಿಸಲು ಯೋಗ್ಯವಾದ ಭಗವಂತನ ವಿಭೂತಿ ರೂಪಗಳು. ವಿಭೂತಿರೂಪಸನ್ನಿಧಾನದಿಂದಲೇ ಆಯಾ ವಸ್ತುಗಳು ತಂತಮ್ಮ ಜಾತಿಯಲ್ಲಿ ಉತ್ತಮವೆನಿಸಿದೆ. ಅವುಗಳ ನಾಮರೂಪಕ್ರಿಯೆಗಳೆಲ್ಲವೂ ಶ್ರೀ ಭಗವಂತನ ಅಧೀನವಾದುವು.

11. ವ್ಯಾಪ್ತ್ಯೋಪಾಸಕರು ಭಜಿಸಲು ಯೋಗ್ಯವಾದ ಶ್ರೀಶನ ವಿಶ್ವರೂಪದ ವರ್ಣನೆ ಅವನ ಅನಂತ ಮಹಿಮೆ.

12. ಶ್ರೀ ದೇವೀಭರ್ತನಾದ ಶ್ರೀ ನಾರಾಯಣನ ಉಪಾಸನೆಯೇ ಸುಲಭ, ಶೀಘ್ರ ಫಲಕಾರಿ, ಮತ್ತು ಉಭಯೋಪಾಸನಾಫಲಪ್ರದವಾದುದರಿಂದ ಭಕ್ತರು ಕೇವಲ ಶ್ರೀದೇವಿಯನ್ನಲ್ಲದೆ, ಶ್ರೀ ರಮೇಶನನ್ನು ಭಜಿಸಿ, ಸರ್ವಶ್ರೇಯೋಭಾಜನರಾಗುವರು.

13. ಕ್ಷೇತ್ರ ವಿವರಣೆ; ಅದರ ವಿಕಾರಗಳು; ಕ್ಷೇತ್ರಜ್ಞನ ಮಹಿಮೆ. ಅವನನ್ನು ತಿಳಿದ ಜ್ಞಾನಿಗಳ ಲಕ್ಷಣ; ಜ್ಞಾನಫಲ.

14. ತ್ರಿಗುಣ - ಅಂದರೆ ಸತ್ವರಜಸ್ತಮೋಗುಣಗಳ ಸ್ವರೂಪ, ಅವುಗಳ ಕಾರ್ಯ, ಫಲಗಳ ವರ್ಣನೆ. ಗುಣಾತೀತನಾಗಲು ಉಪಾಯ.

15. ಸಂಸಾರ ಸ್ವರೂಪ. ಜಗತ್ತೆಂಬ ಅಶ್ವತ್ಥದ ವರ್ಣನೆ. ಸಂಸಾರ ತರಣೋಪಾಯ. ಶ್ರೀಹರಿ ಸರ್ವೋತ್ತಮತ್ವ, ಜೀವಜಡಾತ್ಯಂತ ಭಿನ್ನತ್ವ, ಶ್ರೀಪತಿತ್ವ, ಮುಖ್ಯಪ್ರಾಣ ನಿಯಾಮಕತ್ವ, ಸರ್ವಜಗಜ್ಜನ್ಮಾದಿ ಸ್ವತಂತ್ರಕಾರಣತ್ವ, ಮುಕ್ತಿ ದಾತೃತ್ವ ಶಾಸ್ತ್ರಸಾರ ನಿರೂಪಣೆ.

16. ದೈವೀ ಸಂಪತ್ತು; ಆಸುರೀ ಸಂಪತ್ತುಗಳ ವರ್ಣನೆ. ಆಸುರೀ ಸಂಪತ್ತಿನ ಅನರ್ಥಫಲ. ಶಾಸ್ತ್ರವೇ ಅನುಸರಣೀಯವಾಗಿದೆ, ಸ್ವಬುದ್ಧಿ ಕುತರ್ಕಗಳಲ್ಲ. ಶ್ರೀಹರಿಯೇ ಸಚ್ಛಾಸ್ತ್ರಪ್ರವರ್ತಕನು.

17. ಸತ್ತ್ವಾದಿ ಗುಣಗಳ ವಿವರಣೆ. ಶ್ರದ್ಧೆ ಆಹಾರಯಜ್ಞ, ತಪಃ (ತ್ರಿವಿಧ) ದಾನಗಳ ಸಾತ್ವಿಕತೆ, ರಾಜಸತೆ, ತಾಮಸತೆಗಳ ವರ್ಣನೆ; ತತ್ಫಲ ಕಥನ.

18. ಮಹಾಪುರುಷಾರ್ಥವಾದ ಮೋಕ್ಷಕ್ಕೆ ಜ್ಞಾನವೇ ಸಾಧನ ಜ್ಞಾನವು. ಶ್ರವಣಾದಿಗಳಿಂದಲೇ ಜನ್ಯವು. ಶ್ರವಣಾದಿಗಳು ಭಕ್ತಿಯುತವಾಗಿರಬೇಕು. ಭಕ್ತಿಗೆ ಇಂದ್ರಿಯನಿಗ್ರಹ, ಕರ್ಮಫಲ ತ್ಯಾಗಗಳು ಸಾಧನವಾಗಿವೆ; ಮಹಿಮಾಜ್ಞಾನವಿಲ್ಲದಿರೆ ಭಕ್ತಿಯೇ ಇಲ್ಲ. ಅಂತಹ ಭಕ್ತಿಯಿಂದ ಪ್ರಸನ್ನನಾಗಿ, ಶ್ರೀಮುಖ ಪ್ರಾಣವಲ್ಲಭನು ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು ದಯಪಾಲಿಸುವನು.

ಇಂತು ಹದಿನೆಂಟು ಅಧ್ಯಾಯಗಳಿಂದ ಕೂಡಿದ ಗೀತೆಯನ್ನು ಶ್ರೀಭಾರತ

ಪಾರಿಜಾತ ಮಧುವನ್ನು ಶ್ರೀ ಕೃಷ್ಣಾರ್ಜುನ ಸಂವಾದವನ್ನು ಶ್ರೀ ವೇದವ್ಯಾಸರು ರಚಿಸಿ, ಭೀಷ್ಮಪರ್ವದಲ್ಲಿ ಗ್ರಥಿಸಿದರು. ಅದನ್ನು ಅವರ ಅನುಗ್ರಹದಿಂದ ಕೇಳಿ, ತಿಳಿದು ಬಂದ ಸಂಜಯನು ಧೃತರಾಷ್ಟ್ರನಿಗೆ ಹೇಳಿದನು. ಭೀಷ್ಮಪಾತವಾದುದನ್ನು ಕೇಳಿದ ಧೃತರಾಷ್ಟ್ರನು ಮೊದಲಿನಿಂದ ನಡೆದುದೆಲ್ಲವನ್ನೂ ಕೇಳಲಿಚ್ಛಿಸಿ, ಸಂಜಯನಿಗಿತೆಂದನು:

'ಸಂಜಯ ! ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಕಲೆತು ನನ್ನವರು ಮತ್ತು ಪಾಂಡವರು ಯುದ್ಧವಾಡಲು ತೊಡಗಿದರಲ್ಲ ! ಎಂತಹ ವಿಪರೀತ ? ನನ್ನವರು ಪಾಪಿ ಶಕುನಿ (ಮಾಮ)ಗೆ ಮನಸೋತು ಕಾದಾಡ ಬಂದರೆ ಬರಲಿ ! ಧರ್ಮವಂತರೆನಿಸಿದ ಪಾಂಡವರೂ ಅಂತಹ ಪುಣ್ಯ ಭೂಮಿಯಲ್ಲಿ ಕ್ರೋಧ ಹಿಂಸೆಗಳ ಪ್ರಳಯ ತಾಂಡವವನ್ನು ಆಡಲು ನಿಂತುದಾಶ್ಚರ್ಯಕರವಾಗಿದೆ ! ಇರಲಿ ! ಹೇಳು ! ಏನೇನು ನಡೆಯಿತೆಂಬುದನ್ನು !'

ಇಂತು ಸರ್ವಪ್ರಸಿದ್ಧವಾಗಿ ಶ್ರೀಕೃಷ್ಣಪ್ರಿಯರೆನಿಸಿದ ಪಾಂಡವರಲ್ಲಿ ಅನ್ಯಾಯವನ್ನು ಗಣಿಸಿ, ಅವರಿಗೆ ಅಪಜಯವಾಗಲೆಂದು ಮನಸಾ ಬೇಡುವ ಧೃತರಾಷ್ಟ್ರನಿಗೆ ಸಂಜಯನು ನಕ್ಕು ನುಡಿದುದನ್ನು ಜನಮೇಜಯನಿಗೆ ವೈಶಂಪಾಯನನು ನಿರೂಪಿಸಿದನು.

'ರಾಜನ್ ! ಕೇಳು ! ರಾಜಾ ದುರ್ಯೋಧನನು ವ್ಯೂಹಗಳಾಗಿ ನಿಂತಿರುವ ಸೈನ್ಯಗಳಲ್ಲಿ ಪಾಂಡವಸೈನ್ಯದ ಕಡೆ ದಿಟ್ಟಿಸಿ ನೋಡಿ, ತಾನಾಗಿ ಆಚಾರ್ಯನನ್ನು ಸಮೀಪಿಸಿ, ತನ್ನ ಮನಕ್ಕೆ ತೋಚಿದಂತೆ. ಇಂತು ಮಾತಾಡಿದನು.

'ಆಚಾರ್ಯರೇ ! ಕಂಡಿರೇ ಪಾಂಡವ ಸೈನ್ಯವನ್ನು? ಪಾಂಡುಪುತ್ರರ ಆಚಾರ್ಯರಲ್ಲವೇ ತಾವು ! ನೋಡಿ ಅವರ ಸೈನ್ಯವೆಷ್ಟು ದೊಡ್ಡದಾಗಿ ಕಾಣುತ್ತಿದೆ. ಅದರ ಸೇನಾಪತಿ ಯಾರು ಗೊತ್ತೇ? ತಮ್ಮ ಮಿತ್ರ-ಅಲ್ಲ ಶತ್ರು-ನಾದ ದ್ರುಪದ ರಾಜನ ಮಗ, ಧೃಷ್ಟದ್ಯುಮ್ನ ! ಅವನೂ ತಮ್ಮ ಶಿಷ್ಯನೇ ! ಗುರುಗಳನ್ನು ಕೊಲ್ಲಲು ಹುಟ್ಟಿರುವ ಕೆಟ್ಟ ಧೃಷ್ಟದ್ಯುಮ್ನನಿಗೆ ಅರಿತರಿತೂ ಎಲ್ಲ ಅಸ್ತ್ರಗಳನ್ನೂ ಕೊಟ್ಟು ಕೆಟ್ಟಿರಿ !.

ಇರಲಿ ! ನೋಡಿ ! ಅಲ್ಲಿ ಭೀಮಾರ್ಜುನ ಸಮರೆನಿಸಿದ ಯುಯುಧಾನ, ವಿರಾಟ ದ್ರುಪದ, ಧೃಷ್ಟಕೇತು, ಚೇಕಿತಾನ, ಕಾಶಿರಾಜ, ಪುರುಜಿತ, ಕುಂತಿಭೋಜ, ಶೈಬ್ಯ, ಯುಧಾಮನ್ಯು, ಉತ್ತಮೌಜ, ಅಭಿಮನ್ಯು, ದ್ರೌಪದೀಕುಮಾರರು ಮೊದಲಾದ ಮಹಾರಾಥರು ಯುದ್ಧಸನ್ನದ್ಧರಾಗಿ ನಿಂತಿರುವರು.

ನಮ್ಮಲ್ಲಿಯೂ ವೀರರಿರುವರು. ತಾವು, ಪಿತಾಮಹ, ನಮ್ಮ ಕರ್ಣ, ಕೃಪರು, ಅಶ್ವತ್ಥಾಮರು, ವಿಕರ್ಣ, ಭೂರಿಶ್ರವರೇ ಮುಂತಾದ ಮಹಾರಥರು ನನಗಾಗಿ ಕಾದಾಡಿ, ಕೊನೆಗೆ ಮಡಿಯಲು ಸಿದ್ಧರಾಗಿರುವರು. ಪಿತಾಮಹನಿಂದ ರಕ್ಷಿತವಾಗಿರುವ ನಮ್ಮ ಸೈನ್ಯವು ಸಂಖ್ಯೆಯಲ್ಲಿ ಹೆಚ್ಚಾದರೂ, ಶತ್ರುಧ್ವಂಸಪ್ರತಿಜ್ಞಾಪ್ರಚಂಡನಾದ ಭೀಮಸೇನನಿಂದ ರಕ್ಷಿತವಾಗಿರುವ ಪಾಂಡವಸೇನೆಯನ್ನು ಗೆಲ್ಲುವಷ್ಟು ಸಮರ್ಥವಾಗಿಲ್ಲ. ಆದುದರಿಂದ ತಾವೆಲ್ಲರೂ, ಮರ್ಮಸ್ಥಾನಗಳಲ್ಲಿ ನಿಂತು, ಸೇನಾಪತಿಯಾದ ಭೀಷ್ಮನನ್ನು ಕಾಪಾಡುತ್ತಿರಿ!

ಆತನು ಶಿಖಂಡಿಯ ಬಾಣಕ್ಕೆ ತುತ್ತಾಗದಂತೆ ನೋಡಿಕೊಳ್ಳಿರಿ ! ಪಿತಾಮಹನು ಪಾಂಡವಪ್ರೇಮಿಯಾದರೂ, ಒಂದು ದಿನಕ್ಕೆ ಸಾವಿರ ರಥಿಕರನ್ನೂ ಹತ್ತುಸಾವಿರ ಪದಾತಿಗಳನ್ನೂ ಕೊಲ್ಲುವೆನೆಂದು ಪ್ರತಿಜ್ಞೆಗೈದಿರುವನು.'

ಇಂತು ವಿಷಣ್ಣನಾಗಿ ಮಾತನಾಡಿದ ರಾಜನಿಗೆ ಮನದಿ ಹರ್ಷವನ್ನು ತುಂಬಲೆಣಿಸಿ, ಭೀಷ್ಮನು ಸಿಂಹನಾದವನ್ನು ಮಾಡಿ ಶಂಖವನ್ನೂದಿದನು. ದೈವವಾದ ಶ್ರೀಕೃಷ್ಣ ಗುರುವಾದ ಭೀಮಸೇನ, ರಾಜನಾಗಿದ್ದ ದುರ್ಯೋಧನ ಇವರು ಮೂವರನ್ನು ನೆನೆದು ಕರ್ತವ್ಯಪರಾಯಣನಾದ ಪಿತಾಮಹನ ಶಂಖಧ್ವನಿಯನ್ನು ಕೇಳಿ, ಸಕಲ ಕುರುಸೇನೆಯು ಶಂಖಗಳನ್ನೂದಿತು. ಭೇರೀಪಣವಾನಕ ಗೋಮುಖಗಳ ಶಬ್ದಗಳು ನಭದಲ್ಲಿ ವ್ಯಾಪಿಸಿದವು.

ಆಗ ದಿವ್ಯಕಾಂಚನ ರಥದಲ್ಲಿ ಶ್ವೇತವಾಹನನಾದ ಅರ್ಜುನನೊಡನೆ ಶ್ರೀರಮಾಧವನಾದ ಕೃಷ್ಣನು ಕೂತು, ರಣರಂಗವೇ ಪ್ರತಿಧ್ವನಿಸುವಂತೆ ಪಾಂಚಜನ್ಯವನ್ನೂದಿದನು. ಧನಂಜಯನು ದೇವದತ್ತವನ್ನೂ, ಭೀಮಕರ್ಮನಾದ ವೃಕೋದರನು ಪೌಂಡ್ರವನ್ನೂ, ಯುಧಿಷ್ಠಿರನು ಅನಂತವಿಜಯವನ್ನೂ, ನಕುಲ-ಸಹದೇವರು ಸುಘೋಷಮಣಿಪುಷ್ಪಕಗಳನ್ನೂ, ಕಾಶ್ಯ, ಶಿಖಂಡಿ, ಧೃಷ್ಟದ್ಯುಮ್ನ ವಿರಾಟ, ದ್ರುಪದ, ಸಾತ್ಯಕಿ, ಮುಂತಾದ ಮಹಾವೀರರು ತಂತಮ್ಮ ಶಂಖಗಳನ್ನೂ ಒಮ್ಮೆಲೇ ಊದಿದಾಗ, ಮೇಲೆದ್ದ ಭಯಂಕರ ಘೋಷವು ಕಿವಿಗೆ ಬಡಿದು, ದಿಕ್ಕೆಟ್ಟು ಕಂಪಿಸಿ, ನಿನ್ನವರು 'ಆಯಿತು ! ಕುರುಕುಲವಿನ್ನಿಲ್ಲ' ಎಂದು ಪರಿತಪಿಸಿದರು.

ಶ್ರೀಕೃಷ್ಣಕೃಪೆಯು ಮುಂದಾಗಿ, ಶ್ರೀ ಹನಮತ್ಕೃಪೆಯು ಮೇಲಾಗಿ ಶ್ರೀ ಭೀಮ ಕೃಪೆಯು ಹಿಂದಾಗಿ ಸಂರಕ್ಷಿಸುತ್ತಿರಲು ವಿಜಯನು ಶಸ್ತ್ರಸಂಪಾತ ಪರೀಕ್ಷೆಯು ನಡೆಯುತ್ತಿರಲು, ಧನುಷ್ಪಾಣಿಯಾಗಿ ರಥದಿ ಕೂತು, ಹೃಷಿಕೇಶನ ಪ್ರೇರಣೆಯಂತೆ ಶ್ರೀಕೃಷ್ಣನಿಗಿಂತೆಂದನು : 'ಅಚ್ಯುತ ! ನಿಲ್ಲಿಸೆನ್ನ ರಥವನ್ನು ಎರಡೂ ಸೇನೆಗಳ ಮಧ್ಯದಲ್ಲಿ ! ನೋಡುವೆನು ನಾನಾರ ಜತೆಯಾಗಿ ಕಾದಬೇಕೆಂದು. ದುರ್ಬುದ್ಧಿಯಾದ ದುರ್ಯೋಧನನಿಂದ ಇಂತಹ ಅನರ್ಥ ಇಂತಹ ಪ್ರಾಣಹಾನಿ ಕುಲನಾಶವಾಗಲಿದೆ !'

ಆ ಮಾತನ್ನಾಲಿಸಿ, ವಾಸುದೇವನು ನಸುನಕ್ಕು ರಥವನ್ನು ಸೇನೆಗಳ ಮಧ್ಯದಲ್ಲಿ ಭೀಷ್ಮದ್ರೋಣರಿಗಭಿಮುಖವಾಗಿ ನಿಲ್ಲಿಸಿ 'ಪಾರ್ಥ ! ನೋಡು ನೋಡು, ಕಲೆತಿರುವ ಕುರುಬಲವನ್ನು !' ಎಂದು ಮೂದಲಿಸಿದನು. ಅರ್ಜುನನು ಎರಡು ಸೇನೆಗಳಲ್ಲಿರುವ ಗುರುಹಿರಿಯರನ್ನು ನೋಡಿದನು. ಭೂರಿಶ್ರವನೇ ಮೊದಲಾದ ಪಿತೃಜನರು, ಭೀಷ್ಮ ಸೋಮದತ್ತಾದಿ ಪಿತಾಮಹರು, ಬಾಹ್ಲೀಕನೇ ಮೊದಲಾದ ಪ್ರಪಿತಾಮಹರು; ದ್ರೋಣಾದಿ ಆಚಾರ್ಯರು, ಶಲ್ಯ ಶಕುನ್ಯಾದಿ ಮಾತುಲರು, ಧರ್ಮ ದುರ್ಯೋಧನಾದಿ ಭ್ರಾತೃ ಜನರು, ಅಭಿಮನ್ಯು ವೃಷಸೇನ ಘಟೋತ್ಕಚ ಲಕ್ಷಣಾದಿ ಪುತ್ರರು. ಕೃಷ್ಣಾಶ್ವತ್ಥಾಮಾದಿ ಸ್ನೇಹಿತರು, ದ್ರುಪದಾದಿ ಶ್ವಶುರರು; ವಿರಾಟಾದಿ ಸುಹೃದರು. ಅವನ ಕಣ್ಣಿಗೆ ಬಿದ್ದರು. ಆಗ ಪಾರ್ಥನು ಕೃಪಾವಿಷ್ಟನಾಗಿ, ವಿಷಾದವು ಮನಸ್ಸರದಿಂದಲುಕ್ಕಿ ಹರಿಯಲು, ದಿಕ್ಕು ತೋಚದಂತಾದನು.

'ಕೃಷ್ಣ ! ಯುದ್ಧ ಮಾಡಲು ನಿಂತಿರುವ ಸ್ವಜನರನ್ನು ಕಂಡು, ಕರ್ತವ್ಯ ಮೂಢನಾಗಿರುವೆನು. ನನ್ನ ಕಣ್ಣಿಗೆ ಕತ್ತಲು ಕವಿಯುತ್ತಿದೆ. ನನ್ನ ಅಂಗಗಳು ನಡುಗುತ್ತಿವೆ. ಮೈನವಿರೇಳುತ್ತಿದೆ. ಧನಸ್ಸು ಕೈಯಿಂದ ಜಾರಿ ಬೀಳುತ್ತಿದೆ. ಮೈ ಸುಡುವಂತೆ ಭಾಸವಾಗುತ್ತಿದೆ. ವೀರಾಸನದಲ್ಲಿ ಕೂಡಲಾರೆನು. ತಲೆತಿರುಗಿದಂತೆ ಆಗುತ್ತಿದೆ. ನನ್ನ ಮನವೆನ್ನ ವಶವಿಲ್ಲ. ಕೇಶವ ! ಆಗುವ ದುಷ್ಟ ಶಕುನಗಳನ್ನು ಕಂಡರೆ ಭಯವಾಗುತ್ತಿದೆ. ಈ ಯುದ್ಧದಿಂದ ಶ್ರೇಯಸ್ಸಾಗುವುದಿಲ್ಲ. ಸ್ವಜನರನ್ನು ಕೊಲ್ಲಬೇಕಾಗಿರುವ ಈ ಯುದ್ಧವೆನಗೆ ಬೇಡವಾಗಿದೆ. ಜಯವಾದರೂ ಬಂಧು ಹತ್ಯದಿಂದ ಅದು ಅಪಜಯದಂತೆಯೇ ದುಃಖಪ್ರದವಾಗುವುದು. ನನಗೆ ಜಯ ಬೇಡ. ರಾಜ್ಯ ಬೇಡ ರಾಜ್ಯದ ಭೋಗಗಳಾಶೆ ಎನಗಿಲ್ಲ. ಎಲ್ಲರನ್ನು ಕೊಂದು ನಾವು ಬದುಕಿದ್ದರೂ ಏನೂ ಫಲ ? ಅಂತಹ ಜೀವಿತವೇ ನನಗೆ ಬೇಡ ! ರಾಜ್ಯವನ್ನು ಪಡೆದು ಭೋಗಗಳನ್ನು ಪಡೆದು ಯಾರಿಂದ ಕೂಡಿ ಸುಖಿಸಲಹುದೋ ಅಂತಹ ಬಂಧು ಮಿತ್ರಾಚಾರ್ಯರು ಧನಪ್ರಾಣಗಳನ್ನು ಪಣವಾಗಿಟ್ಟು ತ್ಯಜಿಸಿ, ರಣ ಕಣಕ್ಕಿಳಿದು ನಿಂತಿರುವವರು. ಇವರನ್ನು ಸಂಹರಿಸಲಾರೆನು. ನನ್ನನ್ನೇ ಅವರು ಕೊಂದರೂ ಚಿಂತೆಯಿಲ್ಲ. ಮೂರು ಲೋಕದ ರಾಜ್ಯಕ್ಕಾಗಿಯೂ ಇಂತಹ ಬಂಧು ಹನನವನ್ನು ಮಾಡಲಾರೆನು. ಇನ್ನು ಈ ಮಹೀ ಖಂಡಕ್ಕಾಗಿ, ಇಷ್ಟು ಕ್ರೂರ ಹಿಂಸೆಯನ್ನು ನಾನು ಮಾಡುವೆನೇ ?

ನಿಜ ! ಇವರು ಆತತಾಯಿಗಳು ಅಹುದು. ಮನೆಗೆ ಬೆಂಕಿಯಿಟ್ಟರು, ಅನ್ನದಿ ವಿಷವಿಟ್ಟರು, ಧನ ರಾಜ್ಯಗಳನ್ನು ಮೋಸದಿಂದ ಕಸಿದು ವನಕ್ಕಟ್ಟಿದರು. ದಾರಾವ ಮಾನಕ್ಕೆ ಹೇಸದೆ ಕ್ಷೇತ್ರವನ್ನು ಹರಿಸಲು ನಾಚದೆ ಕಡುಖೂಳರಾಗಿ ವರ್ತಿಸಿದರು. ಈಗ ಯುದ್ಧವೆಂದು ಶಸ್ತ್ರಪಾಣಿಗಳಾಗಿ ಹುಚ್ಚೆದ್ದು ಕುಣಿಯುತ್ತಿರುವರು. ಆದರೂ ದೊಡ್ಡಪ್ಪನ ಮಕ್ಕಳಾದ ಇವರನ್ನು ಕೊಲ್ಲುವದು ಪಾಪವೇ ಆದೀತು ! ನಾನಂತೂ ಖಂಡಿತವಾಗಿ ಬಂಧುಜನರನ್ನು ಕೈಯಾರೆ ಕೊಲ್ಲಲಾರೆನು. ಅವರನ್ನು ಕೊಂದೆನೆಂದರೆ ಮಾಧವ ! ಇನ್ನೆಲ್ಲಿ ನಮಗೆ ಸುಖ? ಇನ್ನೆಲ್ಲಿಯ ಶಾಂತಿ ? ಲೋಭದಿಂದ ಮತಿಗೆಟ್ಟು ಕುರುಡರಂತೆ ಅವರು ಆ ಮಾರ್ಗದಲ್ಲಿ ನಡೆದರೆ ನಡೆಯಲಿ ! ಎಲ್ಲವನ್ನರಿತ ನಾವು ಕುಲಕ್ಷಯಕಾರಣವಾದ ರಣವನ್ನು ಮಾಡಬಹುದೇ ? ಮಿತ್ರದ್ರೋಹ, ಆಚಾರ್ಯಹತ್ಯೆ ಮುಂತಾದ ಘೋರ ಪಾಪಗಳಿಗೆ ಉಡಿ ಹಿಡಿಯಬಹುದೇ ?

ಕುಲಕ್ಷಯವಾದೊಡೆ ಕುಲಧರ್ಮಗಳು ಹಾಳಾಗುವವು. ಸನಾತನವಾದ ಧರ್ಮಗಳು ಕೆಟ್ಟವೆಂದರೆ, ಅಧರ್ಮದ ಘೋರ ಹಿಡಿತದಿಂದ ಕುಲವನ್ನುಳಿಸಲಾಗುವದೇ? ಅಧರ್ಮದ ನಗ್ನ ನರ್ತನಶಾಲೆಯಲ್ಲಿ ಕುಲಸ್ತ್ರೀಯರು ದೂಷಿತರಾಗುವರು. ದುಷ್ಟರಾದ ಸ್ತ್ರೀ ಜನರಿಂದ ವರ್ಣಸಂಕರವಾಗುವುದು. ಸಂಕರವೇ ನರಕದ ಹೆದ್ದಾರಿ. ಆಗ ಕುಲನಾಶಕರಿಂದ ಕುಲ ಪರಂಪರೆಯ ಸದಾಚಾರಗಳು ಕೆಟ್ಟು, ಅವರ ಪಿತೃಗಳು ಪಿಂಡೋದಕಕ್ರಿಯಾರಹಿತರಾಗಿ, ನರಕದಲ್ಲಿ ಬೀಳುವಂತಾಗುವುದು. ಜಾತಿ ಧರ್ಮಗಳು ಕುಲ-ಧರ್ಮಗಳು ಉಪದೇಶಕರಿಲ್ಲದೆ, ಸಂಪ್ರದಾಯ ಪ್ರವರ್ತಕರಿಲ್ಲದೆ ಹಾಳಾಗುವವು. ಆಗ ನರರು ಘೋರ ನರಕಗಳಲ್ಲಿ ಬಿದ್ದು ನರಳುವಂತಹ ಪ್ರಸಂಗ ಬರುವುದು.

ಆಹಾ ! ಎಂತಹ ಪಾಪಕಾರ್ಯವನ್ನು ಮಾಡಲು ತೊಡಗಿದೆವು ! ರಾಜ್ಯದ ಲೋಭ, ಸುಖದ ಆಶೆ ಕಲೆತು ನಮ್ಮಿಂದ ಬಂಧುಹನನ ಪಾಪವನ್ನು ಮಾಡಿಸಲಿರುವವರಲ್ಲ, ಕೃಷ್ಣ! ಕೇಳಿಲ್ಲಿ! ನನಗೆ ಯುದ್ಧವು ಬೇಕಾಗಿಲ್ಲ. ಒಂದು ವೇಳೆ ನಾನು ಸುಮ್ಮನೆ ಕೂತಾಗ, ಶತ್ರುಗಳು ಮೇಲೇರಿ ಬಂದು, ನನ್ನನ್ನು ಕೊಂದರೂ, ಅದರಿಂದ ನನಗೆ ಶ್ರೇಯವೇ ಆಗುವುದೆಂದು ನಿಶ್ಚಯಿಸಿರುವೆನು. ಆಗ ಬಂಧುಹತ್ಯಾ ಪಾಪದಿಂದ ದೂರನಾಗಿ, ರಣಮರಣವನ್ನಪ್ಪಿ ನಾನು ವೀರಸ್ವರ್ಗವನ್ನು ಸೂರೆಗೊಳ್ಳಬಹುದಾಗಿದೆ. ಬಂಧು ಹತ್ಯೆಯಿಂದ ಇಲ್ಲಿ ಅಪಕೀರ್ತಿ, ಅಲ್ಲಿ ನರಕ. ಯುದ್ಧತ್ಯಾಗದಿಂದ ಇಲ್ಲಿ ಕೀರ್ತಿ; ಅಲ್ಲಿ ಸ್ವರ್ಗ; ಆದುದರಿಂದ ಸ್ವಾಮೀ ! ನಾನು ಯುದ್ಧ ಮಾಡುವುದಿಲ್ಲ' ಇಂತು ಹೇಳಿ, ಅರ್ಜುನನು ಬಾಣಚಾಪಗಳನ್ನು ರಥದಲ್ಲಿಟ್ಟು ವಿಷಾದಪರೀತ ಮಾನಸನಾಗಿ ಸುಮ್ಮನೇ ಕೂತನು.

## ೬. ಶ್ರೀಭಗವದ್ಗೀತೆ - ಸಾಂಖ್ಯಯೋಗ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು.

ರಾಜನ್ ! ಇಂತು ಕಣ್ಣೀರಿಡುತ್ತಾ ರಣವಿಮುಖನಾದ ಅರ್ಜುನನನ್ನು ನೋಡಿ ಶ್ರೀಭಗವಂತನಿಂತೆಂದನು :

'ಅರ್ಜುನ, ಎಂತಹ ಮೋಹವೆಂತಹ ಅಜ್ಞಾನ ! ಇದೇಕೆ ನಿನಗೆ ಬಂತು. ಅನಾರ್ಯರಂತೆ ಅಜ್ಞಾನಮಗ್ನನಾಗಬೇಡ ! ಕೀರ್ತಿಸ್ವರ್ಗಗಳನ್ನು ದೂರ ಸರಿಸುವ ರಣಹೇಡಿತನವನ್ನೇಕೆ ವರಿಸುವೆ ? ಇದು ನಿನ್ನಂತಹ ಮಹಾವೀರನಿಗೆ ಸರಿಯಲ್ಲ. ಕ್ಷಣಿಕವಾಗಿ ತಲೆದೋರಿ ನಿನ್ನ ತಲೆ ಕೆಡಿಸಿದ ಈ ಹೃದಯದೌರ್ಬಲ್ಯವನ್ನು ದೂರ ಮಾಡು ! ಏಳು ! ಯುದ್ಧಸನ್ನದ್ಧನಾಗು !'

ಅರ್ಜುನನು ಸ್ನೇಹವಶನಾಗಿ ವಾಸುದೇವನು ನುಡಿದ ಹಿತವನ್ನರಿಯಲಾರದೆ ಮತ್ತೆ 'ಶ್ರೀಕೃಷ್ಣ ! ಪೂಜ್ಯರಾದ ಭೀಷ್ಮ ದ್ರೋಣಾದಿಗಳನ್ನು ಬಾಣಗಳಿಂದ ಹೇಗೆ ನೋಯಿಸಲಿ ? ಅವರೆಂತಹ ಮಹಾನುಭಾವರು ! ನಮ್ಮನ್ನೆಷ್ಟು ಅಕ್ಕರೆಯಿಂದ ಸಾಕಿ ಸಲುಹಿದರು ! ಸೂರ್ಯಸಮತೇಜರಾದ ಅವರನ್ನು ಕೊಂದು, ಅವರು ಬೇಡುವ ಸಿರಿ-ಸಂಪತ್ತುಗಳಿಗೆ ಅವರನ್ನು ಎರವು ಮಾಡಿ, ಅವನ್ನು ಅಬ್ಬ ! ಅವರ ರಕ್ತದ ಕಲೆಗಳಿಂದ ಕಲುಷಿತವಾಗಿರುವ ಭೋಗಗಳನ್ನು ನಾವು ಉಣ್ಣುವುದಕ್ಕಿಂತ; ಬಿಕ್ಕೆ ಬೇಡಿ ಜೀವಿಸಿರುವುದು ಲೇಸು.

ಕೃಷ್ಣ ! ಅವರನ್ನು ನಾವು ಜಯಿಸುವೆವೋ ಅವರೇ ನಮ್ಮನ್ನು ಜಯಿಸುವರೋ ಯಾರಿಗೆ ಗೊತ್ತು ? ಯುದ್ಧಜಯವು ಅನಿಶ್ಚಿತವಲ್ಲವೇ ? ಯಾರನ್ನು ಕೊಂದು ನಾವೇ ಬದುಕಿರಲಾಗದೋ, ಅಂತಹ ಬಂಧು ಮಿತ್ರಾದಿಗಳು ಬಂದು ರಣರಂಗದ ಮುಂದೆ ನಿಂತಾಗ, ನಾವೇ ಹಿಂಜರಿದು ಬಿಟ್ಟುಕೊಡುವುದು ಒಳಿತಲ್ಲವೇ? ನೀನೇ ಹೇಳು ! ಇಷ್ಟೆಲ್ಲ ದೋಷಗಳನ್ನು ಕಂಡು ನನ್ನ ರಣಪಾಂಡಿತ್ಯವೆಲ್ಲವೀಗ ಕುಂಠಿತವಾಗಿದೆ. ಧರ್ಮವನ್ನು

ನಿಶ್ಚಯಿಸಿ ನನಗೆ ಉಪದೇಶಿಸು ! ಸ್ವಾಮೀ ! ನಾನು ನಿನ್ನ ಮೈದುನನಲ್ಲ, ಶಿಷ್ಯನೆಂದು ತಿಳಿ! ನನ್ನನ್ನು ಶಾಸಿಸು ! ನಿನ್ನನ್ನೇ ನಂಬಿರುವ ಭಕ್ತನನ್ನು ಸರಿಯಾದ ದಾರಿಯಲ್ಲಿ ಜ್ಞಾನದ ದೀಪತೋರಿ ನಡೆಸು ! ಶೋಕಾವೇಗದಿಂದ ನನ್ನ ಇಂದ್ರಿಯಗಳು ನಿಸ್ತೇಜಸ್ಕವಾಗಿವೆ. ಶತ್ರುರಹಿತವು ಸುಖಸಹಿತವು ಆದ ಸುರರಾಜ್ಯವೇ ಸಿಕ್ಕರೂ, ನನ್ನ ಶೋಕನಾಶವಾಗದು. ನಿನ್ನ ವಚನಾಮೃತದಿಂದಲೇ ನನ್ನ ಅಜ್ಞಾನ ಶೋಕಗಳು ನಾಶವಾಗಬೇಕಾಗಿದೆ.

ಇಂತು ಯುದ್ಧವಿಮುಖನಾದ ಪಾರ್ಥನನ್ನು ನೋಡಿ ಶ್ರೀಕೃಷ್ಣನು ನಸುನಕ್ಕು ಸೇನಾಮಧ್ಯದಲ್ಲಿ ಅಳುತ್ತಾ ಕೂತ ಅರ್ಜುನನ್ನು ನೆವಮಾಡಿ, ಸಕಲ ಸುಜನರಿಗೆ ದಿವ್ಯಜ್ಞಾನವನ್ನು ತತ್ಸಾಧನ ಕರ್ಮವನ್ನು ಫಲವಾದ ಭಕ್ತಿಮುಕ್ತಿಗಳನ್ನು ತಿಳಿಸುವ ಕೃಪೆಮಾಡಿ, 'ಶ್ರೀ ಕೃಷ್ಣನೇ ಸರ್ವೋತ್ತಮನು ಅಮಿತ ಬಲಜ್ಞಾನಾನಂದ ದಿವ್ಯವಿಗ್ರಹನು. ಅವನ ಮಹಿಮೆಯ ಜ್ಞಾನದಿಂದ ಭಕ್ತಿ; ಸ್ವಹಿತ ಕರ್ಮಾನುಷ್ಠಾನ, ತತ್ಫಲ ಸಮರ್ಪಣದಿಂದ ಅಂತಃಕರಣ ಶುದ್ಧಿ; ಅರ್ಜುನಾದಿ ಸುಜೀವರು ಭಗವದಾರಾಧನರೂಪವಾದ ಸ್ವವಿಹಿತ ಕರ್ಮವನ್ನು ಬಿಡದೆ ಮಾಡಬೇಕು. ನಾರಾಯಣ ದ್ವೇಷಿಗಳು (ದುರ್ಯೋಧನಾದಿಗಳು) ಮತ್ತು ಅವರ ಅನುಬಂಧಿಗಳು (ಭೀಷ್ಮದ್ರೋಣಾದಿಗಳು) ಮೊದಲಾದ ದುಷ್ಟರನ್ನು ನಿಗ್ರಹಿಸುವುದೇ ಕ್ಷತ್ರಿಯರಿಗೆ ವಿಶೇಷ ಧರ್ಮ; ಅಂತಹ ಧರ್ಮವನ್ನು ಬಂಧು ಸ್ನೇಹದಿಂದ ಮತಿಗೆಟ್ಟು ಅಧರ್ಮವೆಂದು, ತಿಳಿದು, ಧರ್ಮ ವಿಮುಖನಾಗುವುದೊಳಿತಲ್ಲ. ನಾರಾಯಣ ಪ್ರೀತಿಕರವಾದ ಧರ್ಮಕ್ಕೆ ವಿರುದ್ಧವಾದುದೆಲ್ಲವು ಅಧರ್ಮವೇ, ಅದನ್ನು ಮಾಡುವುದೂ ಒಳಿತಲ್ಲ' ಎಂಬಿತ್ಯಾದಿ ಗೀತಾಶಾಸ್ತ್ರವನ್ನು ಉಪದೇಶಿಸಿದನು.

ಅರ್ಜುನ ! ಯಾರನ್ನು - ಪಾಪಿಗಳನ್ನು - ನೋಡಿ ಅಯ್ಯೋ ! ಎಂದು ದುಃಖಪಡುವೆಯೋ, ಅವರು ಶೋಚನೀಯರೇ ಅಲ್ಲ. ವಧಾರ್ಹರಾದವರನ್ನು ಕೊಲ್ಲುವುದಿಲ್ಲವೆಂಬುವ ನೀನು ನಿನ್ನ ಮನಸ್ಸಿಗೆ ಬಂದಂತೆ, ಯುಕ್ತಿಗಳನ್ನು ತೋರಿ ಮಾತಾಡಿದರೆ ಅದು ಪಂಡಿತ ಜನರಿಗೆ ಸಮ್ಮತವಾಗಲಾರದು. ಪಂಡಿತರಂತೆ ಮಾತಾಡಿದ ಮಾತ್ರ ಪಂಡಿತರಾಗಲಾರರು. ಪ್ರಾಜ್ಞರು ಶ್ರೀನಾರಾಯಣ ದ್ವೇಷಿಗಳನ್ನು ನಿಗ್ರಹಿಸಲು ನಡೆಯುವ ಯುದ್ಧವನ್ನು ಧರ್ಮವೆಂದೇ ತಿಳಿದು ಪೇಳುವರಾಗಲಿ, ನಿನ್ನಂತೆ ಅಧರ್ಮವೆಂದು ಪೇಳರು.

ಮನುಜರಾರೂ ಜೀವಿಸಿರುವವರನ್ನು ನೋಡಿ ಅಳುವುದಿಲ್ಲ, ಸತ್ತವರನ್ನು ನೋಡಿ ಅಳುವರುಂಟು; ಆದರೆ ಪಂಡಿತರಾದವರು ಜೀವದಿಂದಿರುವವರನ್ನು ನೋಡಿ ದುಃಖ ಪಡದಿರುವಂತೆಯೇ, ಸತ್ತವರನ್ನು ನೋಡಿ ಕೂಡ ದುಃಖಪಡರು. ನೀನೋ ಇವರೆಲ್ಲ ಆಸನ್ನವಿನಾಶರಾಗಿರುವರು - ನಾಳೆನಾಡಿದ್ದು ಸಾಯಬಹುದು - ಎಂದು ಇಂದೇ ಅಳುತ್ತಿರುವೆ ! ನಿನ್ನಂತಹ ದಡ್ಡನನ್ನು ನಾನು ಕಂಡಿಲ್ಲ.

ಇರಲಿ ! ನೀನು ಅಳುವುದು ಜೀವರು ನಾಶವಾಗುವರೆಂತಲೋ, ದೇಹವು ನಾಶವಾಗುವುದೆಂತಲೋ ? ದೇಹವಿದ್ದರೂ ಅದರಲ್ಲಿ ಜೀವನಿಲ್ಲವೆಂಬುವ ಸತ್ಯ ಸರ್ವ ಪ್ರತ್ಯಕ್ಷ ಸಿದ್ಧವಾಗಿರಲು, ದೇಹವೇ ಜೀವನೆಂಬ ದಡ್ಡರ ಮಾತನ್ನು ಬಿಡು ! ಜೀವನು

ಸಾಯುವನೆಂದರೆ, ಅದು ಸರ್ವಥಾ ಸುಳ್ಳು. ಜೀವನು ಅನಾದಿನಿತ್ಯನು, ನಾನು ಅನಾದಿ ಅನಂತನಹುದೋ ? ಅಹುದು ! ನನ್ನಂತೆಯೇ ಎಲ್ಲ ಜೀವರು ಸ್ವರೂಪದಿಂದ ಅನಾದಿನಿತ್ಯರು. ಅನಾದಿಕಾಲದಿಂದ ನನ್ನಂತೆ ಜೀವರೆಲ್ಲರಿರುವರು, ಅನಂತಕಾಲದವರೆವಿಗೂ ನಾಶವಿಲ್ಲದೆ ಇರುವರು. ಹೀಗಿರಲು ಜೀವರು ಸಾಯುವರೆಂದು ನೀನು ಅಳಬಹುದೇ ಹೇಳು ! ನಿತ್ಯರಾದ ಜೀವರಿಗೆ ಸ್ವಾಮಿಯಾದ ನಾನು ಪರಮನಿತ್ಯನಾಗಿರುವೆನು. ಇದು ಶ್ರುತಿಯ ಮಾತು. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಅಪೂರ್ಣತೆ ಎಂಬ ನಾಲ್ಕು ವಿಧವಾದ ನಾಶವೂ ಎನಗಿಲ್ಲ. ಜೀವರಿಗೆ ಅನಿತ್ಯತ್ವ ಮಾತ್ರವಿಲ್ಲ. ಮಿಕ್ಕ ಮೂರು ವಿಧ ನಾಶಗಳುಂಟಾದುದರಿಂದಲೇ ಜೀವರು, ಅಲ್ಪರು, ಅಸ್ವತಂತ್ರರು ಆಗಿರುವರು. ನಾನು ಸ್ವತಂತ್ರನು ಸರ್ವೋತ್ತಮನು, ಸರ್ವಜ್ಞನು ಆಗಿರುವೆನು. ಬಿಂಬನಾದ ನನ್ನನ್ನು ಆಶ್ರಯಿಸಿ ಪ್ರತಿಬಿಂಬರಾದ ಜೀವರಿರುವರು. ನನ್ನಂತೆ ಯತ್ಕಿಂಚಿತ್ ಸಾದೃಶ್ಯವಿದ್ದರೂ ಅತ್ಯಂತ ವಿಲಕ್ಷಣರು, ಅಸ್ವತಂತ್ರರು ಆದ ಜೀವರಿಗೆ ಶರೀರ ನಾಶವಿದೆ; ಆದರೂ ಅವರಿಗೆ ಸ್ವರೂಪದಿಂದ ನಾಶವಿಲ್ಲ. ಜೀವನೇ ದೇಹವೆಂಬ ಅಜ್ಞಾನದಿಂದ ದೇಹ ನಾಶವಾದರೆ ತಾನು ಸತ್ತನೆಂದು ತಿಳಿಯುವ ಮೂರ್ಖರಂತೆ ಅಳುವುದು ಸರಿಯಲ್ಲ. ಒಬ್ಬ ಜೀವನಿಗೆ ಅನೇಕ ದೇಹಗಳು ಬರುತ್ತವೆ, ಹೋಗುತ್ತವೆ. ಶರೀರಯೋಗವೇ ಜನನ; ಶರೀರ ವಿಯೋಗವೇ ಮರಣ. ಬಾಲ್ಯಾವಸ್ಥಾವಿಶಿಷ್ಟದೇಹವು ನಾಶವಾಗಿ ಯೌವನದೇಹವು ಬರುವುದು. ಅದೂ ಹೋಗಿ ವೃದ್ಧಾಪ್ಯ ವಿಶಿಷ್ಟ ದೇಹವು ಬರುವುದು. ಆದರೂ ಒಳಗಿರುವ ಜೀವನಿಗೆ ನಾಶವಿಲ್ಲವೆಂದು ಪ್ರತ್ಯಭಿಜ್ಞೆ ತೋರುವುದು. ಅಂತೆಯೇ ಒಂದು ದೇಹವು ಬಿದ್ದು ಬೇರೊಂದು ದೇಹವು ಬಂದರೆ ಆತ್ಮಾನಾತ್ಮವಿವೇಕವುಳ್ಳ ಜೀವನು ದುಃಖ ಪಡುವುದಿಲ್ಲ. ಮತ್ತೇನೆಂದರೆ ಧನವನ್ನಿತ್ತು ಹೊಸವಸ್ತುವನ್ನು ತಂದು ಆನಂದಿಸುವವರಂತೆ ಬುದ್ಧಿವಂತನು ಜೀರ್ಣದೇಹವು ಹೋಗಿ ಹೊಸದೇಹವು ಬಂದೇ ಬರುವುದೆಂದರಿತು, ದೇಹನಾಶಕ್ಕಾಗಿ ದುಃಖಪಡನು.

ಅರ್ಜುನ ! ಇಂದ್ರಿಯ ವಿಷಯಗಳ ಸಂಪರ್ಕವಾದ ಮಾತ್ರದಿಂದ ಸುಖ ದುಃಖಗಳಾಗುತ್ತವೆಂದು ತಿಳಿಯಬೇಡ! ಸುಖದುಃಖಗಳು ಮನೋಗತ ಧರ್ಮಗಳು. ಮನಸ್ಸು ಅಭಿಮಾನಯುಕ್ತವಾಗಿ ಆಸಕ್ತವಾದಾಗಲೇ ವಿಷಯೇಂದ್ರಿಯ ಸಂಯೋಗವು ಸುಖವನ್ನೋ, ದುಃಖವನ್ನೋ ಕೊಡಲು ಸಮರ್ಥವಾಗುವುದು. ಇಲ್ಲದಿರೆ ಇಲ್ಲ. ಅಭಿಮಾನದಿಂದಲೇ ದುಃಖ, ಅಭಿಮಾನದಿಂದಲೇ ಸುಖ, ನಾನಲ್ಲದುದನ್ನು ನಾನೆಂದು ತಿಳಿಯುವುದು ಅಹಂಕಾರ; ನನ್ನದಲ್ಲದುದನ್ನು ನನ್ನದೆಂದು ತಿಳಿಯುವುದು ಮಮಕಾರ. ಈ ಎರಡು ವಿಧ ಅಭಿಮಾನದಿಂದ ನರನು ಕ್ಲೇಶಭಾಜನನಾಗುವನು. ಅಭಿಮಾನ ಬಿಟ್ಟವನಿಗೆ ಯಾವ ವಿಕಾರವೂ ಇಲ್ಲ. ಮಲಗಿರುವಾಗಲೂ, ಪೂರಾ ಮಲಗಿರದ ತ್ವಗಿಂದ್ರಿಯ ವ್ಯಾಪಾರವಿದ್ದರೂ, ಅಭಿಮಾನವಿಲ್ಲದುದರಿಂದ ಜೀವನಿಗೆ ಚಂದನಾದಿ ಸ್ಪರ್ಶದಿಂದ ಸುಖಾದಿಗಳಾಗುವುದಿಲ್ಲ. ಜಾಗ್ರದ್ದಶೆಯಲ್ಲಿಯೂ ಅಭಿಮಾನವಿದ್ದಲ್ಲಿಯೇ ಮನವು ಆಸಕ್ತವಾಗಿ ಸುಖ-ದುಃಖಾದಿಗಳನ್ನು ಕೊಡುವುದು. ಸುಖ-ದುಃಖಾದಿಗಳನ್ನೀವ ಮಾತ್ರಾಸ್ಪರ್ಶಗಳು

ಆಗಾಗ ಬರುವವು ಮತ್ತೆ ನಾಶವಾಗುವವು. ಅವುಗಳಲ್ಲಿ ನಾವಿಡುವ ಅಭಿಮಾನದಿಂದಲೇ ನಾವು ಸುಖ-ದುಃಖಾದಿಗಳನ್ನು ಹೊಂದುತ್ತಿರುವೆವು.

ಶತ್ರುಗೃಹದಾಹವು ಸಂತೋಷಕಾರಣವೇಕೆ? ಸ್ವಗೃಹದಾಹವು ದುಃಖಕಾರಣವೇಕೆ? ಹೇಳು ! ಸ್ವಪರರೂಪ ಅಭಿಮಾನದಿಂದಲೇ ಅಲ್ಲವೇ ? ಆದುದರಿಂದ ಮಾತ್ರಾಸ್ಪರ್ಶಗಳು ಬಂದರೂ ಅದರಿಂದಾಗುವ ಸುಖ-ದುಃಖ ರೂಪ ಮನೋವಿಕಾರಕ್ಕೆಡೆಗೊಡದೆ, ರಾಗ-ದ್ವೇಷಗಳನ್ನು ಬಿಟ್ಟು ಸ್ವವಿಹಿತ ಕರ್ಮವನ್ನು ಮಾಡಿ, ಶ್ರೀಹರಿಗರ್ಪಿಸಿದವನು, ಜ್ಞಾನಿ ಎನಿಸಿ ಮುಕ್ತಿಯನ್ನು ಹೊಂದಲು ಯೋಗ್ಯನಾಗುವನು. ದುಃಖವು ಬೇಡವೆನಿಸುವಂತೆ ವಿಷಯ ಸುಖವೂ ಬೇಡವೆನಿಸಿದರೆ ಆಗ ನರನು ಅಭಿಮಾನ ರಹಿತನಾಗಿ ಶ್ರೀಹರಿಪ್ರಸಾದಪಾತ್ರನಾಗುವನು. ಅರ್ಜುನ ! ನೀನು ಮಾಡುವದು ಧರ್ಮಯುದ್ಧವಾಗಿದೆ. ಧರ್ಮವನ್ನು ನಡೆಸಿದವನಿಗೆ ದುಃಖ ನರಕಗಳಿಲ್ಲ. ಪಾಪವನ್ನು ಮಾಡಿದವನಿಗೆ ಸುಖಸ್ವರ್ಗಗಳಿಲ್ಲ. ಇದು ಕೇವಲ ನನ್ನ ಮಾತಲ್ಲ. ಸಂಪ್ರದಾಯವನ್ನು ನಿಶ್ಚಯಿಸಿ ನಡೆಸುವ ಜ್ಞಾನಿಜನರು ಹೀಗೇ ತಿಳಿದಿರುವರು.

ಶ್ರೀಹರಿಯು ಚತುರ್ವಿಧ ನಾಶರಹಿತನು ; ಸರ್ವತ್ರ ವ್ಯಾಪ್ತನು, ಪರಶಾಪಾದಿಗಳಿಂದಲು ಅವನಿಗೆ ವೃದ್ಧಿಹ್ರಾಸಾದಿಗಳಿಲ್ಲ. ಅಕಾರಾದಿ ವರ್ಣಗಳು, ಕಾಲ, ಅವ್ಯಕ್ತತತ್ವ, ಆಕಾಶಗಳಂತೆ ಅವನು ಅನಾದಿನಿತ್ಯನು, ನಿರ್ವಿಕಾರನು, ಅಪ್ರಮೇಯ ಮಹಿಮನು ಆದ ಶ್ರೀನಾರಾಯಣನ ಪ್ರೀತಿಗೋಸುಗವಾದರೂ, ಅವನ ಪೂಜೆಯೆಂದರಿತು ಸ್ವಧರ್ಮವಾದ ಯುದ್ಧಕರ್ಮವನ್ನು ಮಾಡು ! ಸ್ವರೂಪವೇ ಉಪಾಧಿಯಾಗಿರುವುದರಿಂದ ಉಪಾಧಿಗೂ ಬಿಂಬನಿಗೂ ಸನ್ನಿಧಿಯು ನಿತ್ಯವಾಗಿರುವುದರಿಂದ ಪ್ರತಿಬಿಂಬನಾದ ಜೀವನು ಅನಾದಿ ನಿತ್ಯನೆಂದು ತಿಳಿ ! ಅಂತಹ ನಿತ್ಯಜೀವ ಸ್ವರೂಪವನ್ನು ಕೊಲ್ಲುವೆನೆಂದವನು, ಜೀವನು ಸತ್ತನೆಂಬುವನು ಇವರೀರ್ವರೂ ಮೂಢರೆಂದು ತಿಳಿ ! ಅವರಿಗೆ ಶ್ರೀಹರಿ ಸ್ವತಂತ್ರನೆಂಬ ಜ್ಞಾನವಾಗಲಿ, ಜೀವನು ನಿತ್ಯನಾದರೂ ತದಧೀನ ತತ್ಸದೃಶನೆಂಬ ಜ್ಞಾನವಾಗಲಿ ಇಲ್ಲ ಎಂದು ವೇದವೇ ಹೇಳುತ್ತಿದೆ. ಜೀವನು ಸ್ವರೂಪದಿಂದ ಜನನ ರಹಿತನು, ಮರಣರಹಿತನು; ಶಶ್ವದೇಕಪ್ರಕಾರವಾದ ಶ್ರೀಶನು ತಾನಾಗಿ ಅವತರಿಸುವನು; ಆದರೆ ಜೀವನು ಅನೇಕ ಶರೀರಗಳನ್ನು ಕರ್ಮಾನುಸಾರವಾಗಿ ಹೊಂದಿ, ಅವುಗಳನ್ನು ಶ್ರೀಶೇಚ್ಛೆಯಂತೆ ಕಾಲ ಬಂದಾಗ ತ್ಯಜಿಸುವನು. ಅವನು ಪರತಂತ್ರನು. ಶ್ರೀಶನು ಸರ್ವದೋಷವಿದೂರನು. ಸ್ವರೂಪಭೂತದಿವ್ಯದೇಹನು, ಜನನ ಮರಣಾದಿ ರಹಿತನು, ಸರ್ವಜೀವನಿಯಾಮಕನು, ಸ್ವತಂತ್ರನು ಎಂದರಿತ ಜ್ಞಾನಿಯು 'ನಾನು ಕೊಂದೆನು - ನಾನು ಸತ್ತೆನು', ಎಂಬ ಇಲ್ಲದ ಕರ್ತೃತ್ವವನ್ನು ಹೊಂದದೆ ಸರ್ವವು ಸರ್ವದಾ ಸರ್ವೇಶನ ವಶವೆಂದರಿತು, ನಿಷಿದ್ಧಕರ್ಮಗಳನ್ನು ಬಿಟ್ಟು, ಸತ್ಕರ್ಮಫಲವನ್ನು ಶ್ರೀಶನಿಗೆ ಮುಖ್ಯಪ್ರಾಣವಲ್ಲಭನಿಗೆ ಕೊಟ್ಟು ತಾನು ಜೀವನ್ಮುಕ್ತನಾಗಿ ನಿಶ್ಚಿಂತನಾಗಿರುವನು. ಲೋಕದಲ್ಲಿ ಅಳಿಸುವುದು ಉಳಿಸುವುದು ಶ್ರೀಹರಿಯೇ ಆಗಲಿ, ಜೀವನಲ್ಲ. ಅಸ್ವತಂತ್ರ ಜೀವರು ಕೊಲ್ಲುವುದನ್ನು, ಕಾಪಾಡುವುದನ್ನು ಸ್ವತಂತ್ರವಾಗಿ ಮಾಡಲಾರರು.

ಹಳೆಯ ಬಟ್ಟೆಯನ್ನು ಬಿಟ್ಟು ಹೊಸದನ್ನುಟ್ಟು ನಲಿವವರನ್ನು ನೋಡು! ಬಟ್ಟೆ ಪೂರ್ಣ ಬಿಡದಿರುವಂತೆ ಒಳಗೆ ಲಿಂಗಶರೀರವಂತೂ ಇದ್ದೇ ಇದೆ. ಜೀವನು ದೇಹವಲ್ಲ. ಅವನ ಸ್ವರೂಪವು ನಿತ್ಯವು. ಅದನ್ನು ಯಾರೂ ಸುಡಲಾರರು, ಒಣಗಿಸಲಾರರು. ದೇಹವು ಹುಟ್ಟಿದೆ - ಸಾಯುತ್ತಿದೆ. ಅಂತಹ ದೇಹನಾಶವನ್ನು ಯಾರೂ ತಪ್ಪಿಸಲಾರರು. ಜೀವರ ಶರೀರಗಳು ಜೀವರದಲ್ಲ; ಅವು ಪ್ರಕೃತಿಯವು. ಪ್ರಕೃತಿಯಿಂದ ಬಂದು, ಮತ್ತೆ ಪ್ರಕೃತಿಯಲ್ಲೇ ಸೇರಿಹೋಗುವ ಶರೀರಕ್ಕೆ ನೀನೇಕೆ ಅಳುವೆ?

ಉಟ್ಟಬಟ್ಟೆಯನ್ನು ಬಿಟ್ಟು- ಬೇರೆ ವಸ್ತ್ರವನ್ನುಟ್ಟಂತೆ ಜ್ಞಾನಿಜೀವನು ಜೀರ್ಣ ಶರೀರವನ್ನು ಬಿಟ್ಟು ನೂತನಶರೀರವನ್ನು ಪೊಂದುವನು. ಆಗ ಅವನು ಶರೀರ ನಾಶದ ದುಃಖವನ್ನು ಪೊಂದುವುದಿಲ್ಲ. ಜೀವಸ್ವರೂಪವು ಅನಾದಿ ನಿತ್ಯವಾದುದರಿಂದ ಅದನ್ನು ಯಾರೂ ಎಂದಿಗೂ ವರಶಾಪಾದಿ ಬಲವತ್ಕಾರಣದಿಂದ ಕೂಡ ನಾಶಮಾಡಲಾರರೆಂದು ನಂಬಿ ಶ್ರೀಹರಿಶರಣನಾದ ಸುಜೀವನಿಗೆ ದುಃಖವೇ ಇಲ್ಲ. ಅವ್ಯಕ್ತೈಕ ಸ್ವಭಾವನಾದರೂ, ಶ್ರೀಹರಿಯು ರಾಮಕೃಷ್ಣಮತ್ಸ್ಯಾದಿ ರೂಪಗಳಿಂದ ತಾನಾಗಿ ಸ್ವೇಚ್ಛೆಯಿಂದ ಅವತರಿಸುವನು. ಅವನನ್ನು ಭಜಿಸಿದವನೂ ಅವನಂತೆ ದೋಷರಹಿತನಾಗಿ ಯಥಾಯೋಗ್ಯವಾದ ಸ್ವರೂಪಭೂತ ಬಲಜ್ಞಾನಾನಂದಾದಿಗಳನ್ನು ಶ್ರೀಶನ ದಯದಿಂದ ಪಡೆದು ಸುಖಿಸುವನು.

ಅರ್ಜುನ! ಹುಟ್ಟುಳ್ಳವನು ಸಾಯುವನಿದು ನಿಜ! ಸತ್ತವನು ಮತ್ತೆ ಪುಟ್ಟುವನಿದೂ ದಿಟ! ಇಂತಹ ಸಂಸಾರಚಕ್ರವು ಲಿಂಗಶರೀರಭಂಗಪರ್ಯಂತವಾಗಿ ತಿರುಗುವುದೆಂದು ತಿಳಿ! ಇಂದಲ್ಲದಿರೆ ಎಂದಾದರೊಂದು ದಿನ ಸಾಯದಿರರು ನಿನ್ನ ಭೀಷ್ಮಾದಿಗಳು. ಅಂತಹವರಿಗಾಗಿ ಶೋಕಿಸುತ್ತಾ ಧರ್ಮಯುದ್ಧವನ್ನು ಬಿಡುವುದು ನಿನಗೆ ಸರಿಯಲ್ಲ. ಎಲ್ಲ ಭೂತಶರೀರಗಳು ಪ್ರಕೃತಿಯಿಂದ ಬಂದಿವೆ. ಪ್ರಕೃತಿಯನ್ನು ಉಪಜೀವಿಸಿ ನಿಂತಿವೆ. ಕೊನೆಗೆ ತಪ್ಪದೇ ಪ್ರಕೃತಿಯಲ್ಲೇ ಸೇರಿ ನಾಶವಾಗುತ್ತಿವೆ. ಇಂತಹ ಅನಿತ್ಯ ದೇಹಗಳಿಗಾಗಿ ನೀನು ಅಳುವುದು ತರವಲ್ಲ. ಜೀವರು ನಿತ್ಯರು ಅವರನ್ನಾರೂ ಕೊಲ್ಲಲಾರರೆಂದು ಮೊದಲೇ ತಿಳಿಸಿರುವೆನು. ಇನ್ನೇತಕ್ಕೆ ನಿನ್ನ ಶೋಕ! ಶೋಕತಾಪಗಳಿಗೊಳಗಾಗಿ ಕರ್ತವ್ಯವಿಮುಖನಾಗಬೇಡ! ಅಹಂ ಮಮತೆಗಳನ್ನು ಜೀವನ ಜ್ಞಾನನಾಶಕಗಳೆಂದು ತಿಳಿ!

ನಾನು ಹೇಳಿದ ಪ್ರಮೇಯವು ಅತ್ಯಂತ ಗಹನವಾದುದು. ಜೀವೇಶ್ವರರ ದಾಸ ಸ್ವಾಮಿ ಭಾವಗಳನ್ನು ಅರಿತವರು ಬಹು ವಿರಳ. ಅರಿತು ಪೇಳುವವರಿನ್ನೂ ವಿರಳ. ಪೇಳಿ, ತಿಳಿದು ನಡೆದು ನಡೆಸುವವರು ಬಹು ದುರ್ಲಭರೆಂದು ತಿಳಿ! ಆಶ್ಚರ್ಯತಮನು ಧನ್ಯತಮನು ಆದ ಶ್ರೀ ವಲ್ಲಭನ ಮಹಿಮೆ ಅಚಿಂತ್ಯಾದ್ಭುತವಾಗಿದೆ. ಆದುದರಿಂದ ಅವನ ಪೂಜೆಯೆಂದರಿತು ಸ್ವಧರ್ಮವಾದ ಯುದ್ಧವನ್ನು ಭಯವಿಷಾದರಹಿತನಾಗಿ ಮಾಡು! ಆ ಫಲವನ್ನವನಿಗೆ ಕೊಡು! ಕ್ಷತ್ರಿಯರಿಗೆ ಧರ್ಮಯುದ್ಧಕಿಂತಲು ಶ್ರೇಯಸ್ಕರವಿನ್ನೊಂದಿಲ್ಲ. ಸ್ವರ್ಗದ್ವಾರವನ್ನು ತೆರೆದಿಡುವ ಧರ್ಮಸಂಗ್ರಾಮದ ಸದವಕಾಶ ನಿನಗೆ ದೊರಕಿದೆ. 'ನಾನೆಂಬ' ದುರಹಂಕಾರವನ್ನು ಬಿಟ್ಟು ಶ್ರೀಹರಿಪ್ರೀತಿಗಾಗಿ ಶತ್ರುಸಂಹಾರ ಮಾಡು! ಧರ್ಮವನ್ನು

ನಿಲ್ಲಿಸು ! ಅಧರ್ಮವನ್ನು ಉರುಳಿಸು ! ಹಾಗೆ ಮಾಡದಿದ್ದರೆ ತಪ್ಪದೆ ಅಪಕೀರ್ತಿಯನ್ನೂ, ಪಾಪವನ್ನೂ ಪೊಂದುವೆ ! ಸಂಭಾವಿತನಾದ ನಿನಗೆ ಅಪಕೀರ್ತಿಯು ಮರಣದಕಿಂತಲು ದುಃಖಕರವಲ್ಲವೇ ? ಕೇಳು ! ರಣದಿಂದ ವಿಮುಖನಾದ ನಿನ್ನನ್ನು ದಯಾವಂತನೆಂದು ಯಾರೂ ಮೆಚ್ಚುವುದಿಲ್ಲ; ಮತ್ತೇನೆಂದರೆ ಅಂಜುಬುರುಕನೆಂದು ಎಲ್ಲರೂ ನಿನ್ನನ್ನು ನೋಡಿ ನಗುವರು. ಆಡಬಾರದ ಮಾತುಗಳನ್ನಾಡಿ ನಿಂದಿಸುವರು. ಏಕೀ ಹೇಡಿತನ ನಿನಗೆ ? ಸತ್ತರೆ ಸ್ವರ್ಗವಿದೆ, ಜಯಿಸಿದರೆ ಕೀರ್ತಿ ರಾಜ್ಯಸುಖಗಳು ಕಾದಿವೆ. ಏಳೇಳು ! ಪಿಡಿ ಬಿಲ್ಲನ್ನು ! ವೈಷಯಿಕ ಸುಖವೂ ಮೋಕ್ಷವಿರೋಧಿಯಾಗಿರುವುದರಿಂದ ದುಃಖದಂತೆಯೇ ನಿಂದ್ಯವಾಗಿದೆ. ಲಾಭಾಲಾಭಗಳನ್ನು ಜಯಾಪಜಯಗಳನ್ನು ಶ್ರೀಹರಿಯ ಅಧಿ ೕನವೆಂದು ತಿಳಿದು, ಏನು ಬಂದರೂ ಗೋವಿಂದನಿತ್ತುದೆಂದು ನಿರ್ವಿಕಾರನಾಗಿ ಸ್ವೀಕರಿಸಿ, ಸ್ವ-ಕರ್ತವ್ಯವನ್ನು ಬಿಡದೆ ಮಾಡು ! ನಿನಗೆಂತು ಪಾಪವಾಗುವುದೋ ನಾನು ನೋಡುವೆನು. ಇಲ್ಲಿಯವರೆವಿಗೂ ನಿನಗೆ ಯಥಾರ್ಥಜ್ಞಾನವನ್ನು ತಿಳಿಸಿಕೊಟ್ಟೆನು. ಈಗ ಅಂತಹ ಸಮೀಚೀನಜ್ಞಾನವು ಯಾವುದರಿಂದ ಹುಟ್ಟಿ ಸ್ಥಿರವಾಗಿ ನಿಲ್ಲಬಲ್ಲುದೋ ಆ ಜ್ಞಾನಸಾಧನವನ್ನೂ ನಿರೂಪಿಸುವೆನು ಕೇಳು ! ನನ್ನ ಮಾತಿನಂತೆ ನಡೆದವನಿಗೆ ಕರ್ಮಬಂಧವಿಲ್ಲ.

ವಿಷ್ಣುಧರ್ಮವೆನಿಸುವ ನಿಷ್ಕಾಮ ಕರ್ಮವಾದ ಜ್ಞಾನೋಪಾಯಕ್ಕೆ ಸಮನಾದುದಿಲ್ಲ. ಶ್ರೀಹರಿಪೂಜೆಯೇ ಎನಿಸುವ ಅಂತಹ ನಿಷ್ಕಾಮ ಕರ್ಮವನ್ನು ದೊಡ್ಡಭಾಗವತ ಧರ್ಮವೆಂಬುವರು. ಅದನ್ನು ಸ್ವಲ್ಪವಾಗಿ ನಡೆಸಿದವನಿಗೂ ಮಹಾನರ್ಥ ನಿವಾರಣವಾಗುವುದು, ಶ್ರೇಯಸ್ಸಾಗುವುದು. ವೇದನಿಶ್ಚಯ ಜ್ಞಾನವಿಲ್ಲದವರಿಗೆ ವಿರುದ್ಧ ನಾನಾ ವಿಷಯವಾದ ಮಾರ್ಗಗಳು ಗೋಚರಿಸಬಹುದು ; ಆದರೆ ವೇದ ನಿಶ್ಚಯಜ್ಞಾನವಂತರಿಗೆ ಒಂದೇ ಮಾರ್ಗ. ಭಗವಂತನ ಯಥಾರ್ಥಜ್ಞಾನಕ್ಕೆ ನಿಷ್ಕಾಮ ಕರ್ಮವೇ ಸಾಧನ; ಮತ್ತೊಂದಲ್ಲ. ಕಾಮ್ಯಕರ್ಮಗಳನ್ನು ಬಿಡುವುದೇ ಸನ್ಯಾಸವು. ವಿಹಿತಕರ್ಮಫಲವನ್ನು ಶ್ರೀಹರಿಗೆ ಕೊಡುವುದೇ ತ್ಯಾಗವು. ಇವೆರಡು ಕಲೆತರೆ ಅದು ನಿಷ್ಕಾಮ ಕರ್ಮವಾಗುವುದು. ಅದರ ಫಲವೇ ವೈರಾಗ್ಯ. ವೈರಾಗ್ಯವಿಲ್ಲದವನು ಸಾವಿರ ವೇದಗಳನ್ನೋದಿ ಪೇಳಿದರೂ ಏನೂ ಪ್ರಯೋಜನವಿಲ್ಲ.

ವೇದಗಳನ್ನೋದಿ ಅದರ ಆಪಾತತಃ ತೋರುವ ಇಂದ್ರಸ್ವರ್ಗಾದಿ ಪ್ರತಿಪಾದಕ ಅರ್ಥಗಳನ್ನು ಮಾತ್ರ ತಿಳಿದು, ಕಾಮ್ಯಕರ್ಮಗಳನ್ನು ಮಾಡಿದವರಿಗೆ ಮೋಕ್ಷವಿಲ್ಲ. ಅವರಿಗೆ ಬೇಕಾದುದು ಸ್ವರ್ಗವೇ, ಮೋಕ್ಷವಲ್ಲ. ಅಂತಹ ರಾಜಸರು ಸ್ವರ್ಗಭೋಗ, ಭೂ-ಸಂಪತ್ತುಗಳನ್ನು ಕೋರಿ, ವೇದವನ್ನು ಕಾಮ್ಯಕರ್ಮಫಲಾದಿ ಪ್ರತಿಪಾದಕವೆಂದು ತಿಳಿದು ಕರ್ಮಗಳನ್ನು ಮಾಡಿ, ತತ್ಫಲರೂಪವಾಗಿ ಬಂದ ಜನ್ಮ-ಪರಂಪರೆಯನ್ನು ಹೊಂದುತ್ತಿರುವರು. ಅರ್ಜುನ ! ಸರ್ವವೇದಗಳು ಶ್ರೀಹರಿ ಪ್ರೀತಿಯನ್ನು ಉದ್ದೇಶಿಸಿ ಸಕಲ ಕರ್ಮಗಳನ್ನು ಪೇಳುತ್ತಿವೆ. ಸರ್ವಕಲ್ಯಾಣಗುಣಪೂರ್ಣನಾದ ಶ್ರೀಹರಿಯಲ್ಲಿ ಮನವಿಡು ! ಮರೆಯದೆ ಸರ್ವವಿಹಿತಕರ್ಮಫಲವನ್ನು ಅವನ ಕೈಲಿಡು ! ಶಾಸ್ತ್ರ ವಿರುದ್ಧ ವಿಷಯವನ್ನು

ಮನಃಪೂರ್ವಕವಾಗಿ ಬಿಡು ! ಅವನ ಚರಣಾರವಿಂದದಲ್ಲಿ ನಿನ್ನ ಶಿರವಿಡು ! ಅವನು ನಿನ್ನ ಯೋಗಕ್ಷೇಮಗಳನ್ನು ತಾನಾಗಿ ವಹಿಸಿ ಕಾಪಾಡುವನು. ಸಣ್ಣ ಬಾವಿಯಲ್ಲಾಗುವ ಸ್ನಾನ ಪಾನಾದಿ ಪ್ರಯೋಜನಗಳು ಮಹಾಸುಧಾ ಸಮುದ್ರದಲ್ಲಿ ಆಗದಿರುವವೇ? ಶ್ರೀಹರಿಯನ್ನು ನಂಬಿದವನಿಗೆ ಸಂಸಾರದ ಸುಖಗಳೇಕೆ, ಮೋಕ್ಷಸುಖವು ಕೂಡ ಬೇಗ ಸಿಗುವುದು. ಸಂಶಯಪಡಬೇಡ ! ಆದುದರಿಂದ ಅಲ್ಪವು ಅಸ್ಥಿರವು ಆದ ಫಲವನ್ನು ಕೊಡುವ ಕಾಮ್ಯಕರ್ಮವನ್ನು ಮಾಡದೆ, ಅನಂತವು ಶಾಶ್ವತವು ಆದ ಮೋಕ್ಷ ಸುಖವನ್ನೀವ ನಿಷ್ಕಾಮಕರ್ಮವನ್ನು ಮಾಡು ! ಶ್ರೀಹರಿಯು ಶ್ರೀರಮಾಧವನೆಂದು ತಿಳಿ ! ಅವನು ಪ್ರಸನ್ನನಾದರೆ ದುರ್ಲಭವೆಂಬುದೊಂದುಂಟೇ ? ಅವನೆದುರಿಗೆ, ಅವನನ್ನು ಬಿಟ್ಟು ಅನ್ಯತುಚ್ಛ ವಸ್ತುಗಳನ್ನು ಬೇಡುವವನಷ್ಟು ದಡ್ಡನಿನ್ನೊಬ್ಬನಿರುವನೇ ? ಎಲ್ಲವೂ ಶ್ರೀಶನಿಗಾಗಿ; ಶ್ರೀಶನು ಶ್ರೀಶನಿಗಾಗಿಯೇ ಬೇರಲ್ಲ. ಆ ಮಹಾಪ್ರಭುವನ್ನು ಮೆಚ್ಚಿಸುವ ಕರ್ಮದಲ್ಲಿ ನಿನಗಧಿ ಕಾರವಾಗಲಿ, ಕರ್ಮದ ಫಲ ಬೇಡುವಲ್ಲಿಲ್ಲ. ಕರ್ಮಫಲಪ್ರದನು ಶ್ರೀಹರಿಯೇ ! ಅವನೇ ಜೀವನೆಂದು ತಿಳಿಯಬೇಡ ! ಜೀವನು ಕರ್ಮಫಲಪ್ರದನಲ್ಲ. ಫಲ ಉಂಟಾದುದರಿಂದಲೇ ಕರ್ಮವನ್ನು ಮಾಡುವೆನಿಲ್ಲದಿರೆ ಇಲ್ಲವೆಂಬುವ ಬಾಲಬುದ್ಧಿಯು ಉಚಿತವಲ್ಲ. ಫಲವಿಲ್ಲದ ಕರ್ಮವನ್ನು ಮಾಡಲಾರೆನೆಂದು ವಿಹಿತಕರ್ಮವನ್ನು ಬಿಟ್ಟರೆ ಸುಖವಿಲ್ಲ.

ಜೀವನಿಗೆ ಕರ್ಮವನ್ನು ಮಾಡುವಲ್ಲಿ ಅಧಿಕಾರವಿದೆ; ಆಗಲಿ ಫಲವನ್ನು ಬೇಡುವಲ್ಲಿಲ್ಲ. ಫಲವನ್ನು ಕೊಡುವವನು ಶ್ರೀಶನು. ಅವನು ಸ್ವತಂತ್ರನು, ಬೇಡಿದ್ದನ್ನು ಕೊಡಲು ಜೀವಾಧೀನನಲ್ಲ. ಹಿತವನ್ನರಿತು ಕೊಡುವ ಸರ್ವಜ್ಞನಾಗಲಿ ! ತನ್ನ ತಾನೇ ಕಟ್ಟಿಕೊಳ್ಳುವ ಜೀವನಲ್ಲ. ನಿಷ್ಕಾಮಕರ್ಮವೆಂದರೆ 1. ಜ್ಞಾನಪೂರಕವು, ಶ್ರೀಶಪ್ರೀತಿಗಾಗಿ ಸಂಕಲ್ಪಿತವಾದುದು, 2. ಶ್ರೀಹರಿಗುರು ಸ್ಮರಣಪೂರ್ವಕಮಾಡಿದುದು, 3. ಶ್ರೀಹರಿಗೆ ಸಮರ್ಪಿತವಾದ ಫಲ ಉಳ್ಳದ್ದು ಆಗಿದೆ. ಅದೂ ಸ್ವಧರ್ಮವಾಗಿರಲು ಬೇಕು, ಫಲಾಪೇಕ್ಷೆ ಇಲ್ಲದವನಿಗೆ ಕರ್ಮಗಳಿಂದ ಹಾನಿ ಲಾಭಗಳಿಲ್ಲ. ನಿರ್ವಿಕಾರನಿಗೆ ಪುಣ್ಯ ಪಾಪ ಲೇಪವಿಲ್ಲ. ಅವನು ಶಾಸ್ತ್ರಶ್ರವಣಫಲವಾದ ವೈರಾಗ್ಯಜ್ಞಾನಭಕ್ತಿಗಳನ್ನು ಪಡೆಯುವನು. ಕರ್ಮಫಲವನ್ನು ಬಿಡು ! ಕರ್ಮವನ್ನಲ್ಲ ! ಅಭಿಮಾನವನ್ನು ಬಿಡು ! ಕರ್ತವ್ಯವನ್ನಲ್ಲ. ಶ್ರೀಹರಿಪ್ರೀತಿಗಾಗಿ ವಿಹಿತ ಕರ್ಮವನ್ನು ಮಾಡು ! ಕರ್ಮದಿಂದ ಅಂತಃಕರಣಶುದ್ಧಿ; ಅದರಿಂದ ಶ್ರವಣಾದಿಜನ್ಯ ಜ್ಞಾನಸಿದ್ಧಿ; ಕರ್ಮಫಲವು ಜ್ಞಾನಫಲದಕಿಂತಲು ಅಲ್ಪವಾದರೂ ಕರ್ಮವಿಲ್ಲದವನಿಗೆ ಜ್ಞಾನವೇ ಇಲ್ಲ, ಜ್ಞಾನವಿಲ್ಲದೆ ಮೋಕ್ಷವಿಲ್ಲ. ಆದುದರಿಂದ ಫಲಾಪೇಕ್ಷೆಯನ್ನು ತೊರೆದು ಸತ್‌ಕರ್ಮಗಳನ್ನು ಮಾಡು ! ಜ್ಞಾನವಂತನು ಫಲಾಶೆಯನ್ನು ಬಿಟ್ಟು ಶ್ರೀಹರಿ ಪೂಜೆ ಎಂದು ಸತ್‌ಕರ್ಮಗಳನ್ನು ಮಾಡಿ, ಶ್ರೀಹರಿ ಮುಖ್ಯ ಪ್ರಾಣವಲ್ಲಭನಿಗೆ ತತ್ಫಲವನ್ನರ್ಪಿಸಿ, ಯೋಗಿ ಎನಿಸುವನು. ಅವನಿಗೆ ಕರ್ಮಯೋಗವು ಕೈಗೂಡಿದೆಯೆಂದು ತಿಳಿ ! ಅಂತಹ ಬುದ್ಧಿವಂತನು ಶಾಸ್ತ್ರಜ್ಞಾನದಿಂದ ಶ್ರೀಶನನ್ನು ಸರ್ವೋತ್ತಮನೆಂದು ತಿಳಿದು ಜನನ ಬಂಧ ಮರಣ ಪಾಶಮುಕ್ತನಾಗಿ ಶಾಶ್ವತ ವಿಷ್ಣುಲೋಕವನ್ನು ಪೊಂದಿ ನಿತ್ಯ ಸುಖಿಯಾಗಿರುವನು. ಸರ್ವವಿಧವಾದ ಅನ್ಯಥಾ ಜ್ಞಾನದೋಷಗಳಿಂದ ರಹಿತನಾದ ಮನುಜನು ಆಗ ತಾನು ಜ್ಞಾನಿಜನರಿಂದ ಕೇಳಿದ

ಮತ್ತು ಕೇಳುವ ಎಲ್ಲ ಶಾಸ್ತ್ರಗಳ ಮುಖ್ಯತಾತ್ಪರ್ಯವಾದ ಶ್ರೀಹರಿ ಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಜ್ಞಾನವನ್ನು ಚನ್ನಾಗಿ ಪೊಂದಿದಂತಾಗಿ, ಕೃತಾರ್ಥನಾಗುವನು. ಆಗ ಅವನ ಬುದ್ಧಿಯು ಅಸಚ್ಛಾಸ್ತ್ರಗಳಿಂದ ಚಲಿತವಾಗದೆ, ಸ್ಥಿರವಾಗುವುದು. ಅಂತಹವನೇ ಯೋಗಿ ಎನಿಸುವನು."

ಅರ್ಜುನನು 'ಶ್ರೀಕೃಷ್ಣ ! ಅಪರೋಕ್ಷಜ್ಞಾನಿಯ ಲಕ್ಷಣವೇನು ? ಮನಸ್ಸಮಾಧಾನ ವನ್ನು ಹೊಂದಿದ ಜ್ಞಾನಿಯು ಅಸಂಪ್ರಜ್ಞಾತ ಸಮಾಧಿಯನ್ನು ಹೊಂದಿ, ಶ್ರೀಹರಿಯನ್ನು ಕಾಣುವನೆಂಬರು. ಅಂತಹವನ ಪ್ರವೃತ್ತಿ ಹೇಗಿರುವುದು ? ಬ್ರಹ್ಮಾ ಪರೋಕ್ಷದಿಂದ ಪರಮಾನಂದ ಮಗ್ನನಾಗಿ, ಇತರ ಪ್ರಪಂಚವನ್ನು ಮರೆತಿರುವ ಯೋಗಿಯು ಭಾಷಣ, ಗಮನ ಉಪವೇಶನಾದಿ ವ್ಯವಹಾರವನ್ನು ಮಾಡುವುದೇಕೆ ? ಎಂತು ? ಶುಕಾದಿ ಯೋಗಿಜನರು ವ್ಯವಹಾರವನ್ನು ಮಾಡಿರುವುದಂತೂ ಕಂಡಿದೆ' ಎಂದು ಕೇಳಿದನು. ಶ್ರೀಭಗವಂತನಿಂತೆಂದನು :

'ಸ್ಥಿತಪ್ರಜ್ಞನ ಲಕ್ಷಣವನ್ನು ಕೇಳು ! ಮನದಲ್ಲಿ ಮಾಡುವ ಕಾಮ ಕ್ರೋಧಾದಿಗಳನ್ನು ಪೂರ್ತಿ ಬಿಟ್ಟು, ಶ್ರೀಹರಿಪ್ರಸಾದದಿಂದ ಮನದಿ ಭಗವದ್ದರ್ಶನವನ್ನು ಪಡೆದು ಆನಂದದಿಂದಿರುವವನೇ ಸ್ಥಿತಪ್ರಜ್ಞನು. ಅವನು ದುಃಖಗಳು ಬಂದಾಗ ಉದ್ವೇಗವನ್ನು ಹೊಂದನು. ಸುಖಗಳು ಬಂದಾಗ ಉದ್ರೇಕವನ್ನೂ ಹೊಂದನು. ಸುಖಗಳಿಗಾಗಿ ಪರಿದಾಡನು. ಅಶೋಭನವಸ್ತುವನ್ನು ಶೋಭನವೆಂಬ ರಾಗವನ್ನು, ಶ್ರೀಹರಿ ರಕ್ಷಣದಿಂದ ಭಯವನ್ನು, ಸುಜನರಲ್ಲಿ ಕ್ರೋಧವನ್ನು ಬಿಟ್ಟವನೇ ಅಪರೋಕ್ಷಜ್ಞಾನಿಯು. ಅವನಿಗೆ ದುರಭಿಮಾನವಿರುವುದಿಲ್ಲ. ಶುಭವನ್ನು ಅಭಿನಂದಿಸುವ ಅಥವಾ ಅಶುಭವನ್ನು ದ್ವೇಷಿಸುವ ಮನೋದೌರ್ಬಲ್ಯವು ಅವನನ್ನು ಸೋಕುವುದಿಲ್ಲ. ಜ್ಞಾನಿಯು ತನ್ನ ಇಂದ್ರಿಯಗಳನ್ನು ಶಬ್ದಾದಿ ವಿಷಯಗಳಿಂದ - ಕೂರ್ಮವು ತನ್ನ ಅಂಗಗಳನ್ನಂತೆ ಅನಾಯಾಸವಾಗಿ ಸೆಳೆದು ನಿಗ್ರಹಿಸಿಟ್ಟಿರುವನು. ಜ್ಞಾನಾರ್ಥಿಗೆ ಕಾಮಾದಿಜಯವು ಪ್ರಯತ್ನ ಸಾಧ್ಯವಾಗಿದೆ. ಜ್ಞಾನಿಗೆ ಅದು ಅನಾಯಾಸದಿಂದ ಬಂದಿರಲು ಶ್ರೀಶ-ದಯವೇ ಕಾರಣ.

ಇಂದ್ರಿಯ ಜಯವು ದುಸ್ಸಾಧ್ಯವು. ಕೇವಲ ಆಹಾರಾದಿವರ್ಜನದಿಂದ ಅದು ಸಾಧ್ಯವಲ್ಲ. ಆಹಾರವನ್ನು ಬಿಟ್ಟರೆ ಸಾಲದು. ಆಹಾರಾದಿ ವಿಷಯಗಳಲ್ಲಿರುವ ಅಭಿಲಾಷೆ (ರಾಗ) ಪೂರ್ಣವಾಗಿ ಸಾಯಬೇಕು. ಅಂತಹ ವಿಷಯ ನಿವೃತ್ತಿಯು ಅಪರೋಕ್ಷಜ್ಞಾನಿಗೆ ಮಾತ್ರ ಸಾಧ್ಯವಾಗಿದೆ. ಕೇಳು ! ಎಲ್ಲ ಇಂದ್ರಿಯಗಳಲ್ಲಿ ಜಿಹ್ವೆ, ಉಪಸ್ಥಗಳು ದುರ್ಜಯಗಳು. ಅದರಲ್ಲಿಯೂ ಜಿಹ್ವೆಯನ್ನು ಜಯಿಸಲಾಗದು. ಜಿಹ್ವಾ ಜಯವು ಕೂಡ ಅಪರೋಕ್ಷಜ್ಞಾನಿಗೆ ಮಾತ್ರ ಸುಲಭವಾಗಿದೆ. ಇಂದ್ರಿಯಗಳು ಬಹು ಕೆಟ್ಟವು. ಅವು ಪ್ರಮಾದವನ್ನು ಮಾಡಿಸಿ ದುಃಖಪಡಿಸುವವು. ವಿಷಯಗಳ ಕಡೆಗೆ ಮನವನ್ನು ಸೆಳೆದು ಪ್ರತ್ಯಾಹಾರವನ್ನು ಕೆಡಿಸುವವು. ಆದುದರಿಂದ ಮಹಾ ಪ್ರಯತ್ನದಿಂದ ಇಂದ್ರಿಯ ನಿಗ್ರಹವನ್ನು ಸಂಪಾದಿಸಬೇಕಾಗಿದೆ; ಭಗವಂತನೇ ಸರ್ವೋತ್ತಮನೆಂದು ತಿಳಿದು, ಶ್ರೀಹರಿ ವಶನಾಗಿ, ಅವನನ್ನೇ ಸ್ಮರಿಸುತ್ತಾ ಇರುವ ಸುಜನನು ಇಂದ್ರಿಯ ಮನೋಜಯವನ್ನು

ಪೊಂದಿ, ಕಾಮಾದಿದೋಷಗಳಿಂದ ರಹಿತನಾಗುವನು. ಶ್ರೀಹರಿಯ ಅಪರೋಕ್ಷಜ್ಞಾನವೇ ರಸನಾದಿ ಇಂದ್ರಿಯಗಳ ಕಡಿವಾಣ. ವಿಷಯ-ಧ್ಯಾನದಿಂದ ಸಂಗ ಅಂದರೆ ಅಲ್ಲಿ ಸ್ನೇಹವು ಪುಟ್ಟುವುದು. ಸ್ನೇಹದಿಂದ ಕಾಮ, ಕಾಮದಿಂದ ಕ್ರೋಧ ಅದರಿಂದ ಅವಿವೇಕ; ಅದರಿಂದ ಧರ್ಮಸ್ಮೃತಿಯು ಹಾಳಾಗುವುದು. ಆಗ ಬುದ್ಧಿಯು ನಷ್ಟವಾಗಿ, ಕಾರ್ಯಾಕಾರ್ಯ ಜ್ಞಾನವಾಗದಂತಾಗುವುದು. ಅದರಿಂದ ನರನು ಅಕಾರ್ಯಗಳನ್ನು ಮಾಡಿ, ನರಕಭಾಜನನಾಗುವನು.

ರಾಗ ದ್ವೇಷಗಳನ್ನು ಬಿಟ್ಟು ಜೀವಧಾರಣ ಮಾತ್ರವಾಗುವಂತೆ, ವಿಷಯಗಳನ್ನು ಸ್ವೀಕರಿಸುತ್ತಾ, ಮನವನ್ನು ನಿಗ್ರಹಿಸಿದವನಿಗೆ ಮನಶ್ಶಾಂತಿ ದೊರೆಯುವುದು. ಮನಃ ಪ್ರಸಾದವಂತನಿಗೆ ಶ್ರೀಹರಿಯ ಪ್ರಸಾದವಾಗುವುದು. ಅದರಿಂದ ಅವನ ಎಲ್ಲ ದುಃಖಗಳು ವಿಕಾರವನ್ನು ಪುಟ್ಟಿಸಲಾರದೆ, ವಿಫಲವಾಗುವವು. ಆಗ ಯೋಗಿಯು ಅಪರೋಕ್ಷಜ್ಞಾನವನ್ನು ಪೊಂದಿ ಸುಖವಾಗಿರುವನು. ಮನಃಪ್ರಸಾದವಿಲ್ಲದವನಿಗೆ ಚಿತ್ತನಿರೋಧವಿಲ್ಲದವನಿಗೆ ಧ್ಯಾನವಿಲ್ಲ, ಧ್ಯಾನವಿಲ್ಲದಿದ್ದರೆ ಅಪರೋಕ್ಷಜ್ಞಾನವಿಲ್ಲ, ಅದಿಲ್ಲದಿರೆ ಮುಕ್ತಿ ಇಲ್ಲ, ಮುಕ್ತಿಯಾಗದೆ ನಿತ್ಯ ಸ್ವರೂಪ ಭೂತ ಸುಖವಿಲ್ಲ. ಆದುದರಿಂದ ಮನೋನಿಗ್ರಹವನ್ನು ಮೊದಲು ಸಂಪಾದಿಸಬೇಕು.

ಮನೋನಿಗ್ರಹವಿಲ್ಲದವನ ಜ್ಞಾನವು-ಸಮುದ್ರದಲ್ಲಿ ಗಾಳಿಗೆ ಹೊಯ್ದಾಡುವ ನೌಕೆಯಂತೆ ಹರಿದು ಹೋಗುತ್ತಿರುವುದು. ಮನವನ್ನು ಇಂದ್ರಿಯಗಳತ್ತ ಧಾವಿಸಲು ಬಿಡದೆ ಶ್ರೀಹರಿಯಲ್ಲಿಡು ! ಇತರರು ಎಚ್ಚತ್ತು ಬೇಡುವ ವಿಷಯಗಳಿಗೆ ವಿಮುಖನಾಗಿ ಮಲಗಿದಂತೆ ಇರುವನಾವನೋ, ಇತರರು ಮಲಗಿ ಮರೆತಿರುವ ಮಾಧವನ ಮನನವನ್ನು ಬಿಡದೆ ಮಾಡುತ್ತಾ ಎಚ್ಚತ್ತಿರುವನಾವನೋ, ಅಂತಹವನನ್ನು ಅಪರೋಕ್ಷ ಜ್ಞಾನಿ ಎಂದು ತಿಳಿ ! ಅವನು ಸಮುದ್ರದಂತಿರುವನು. ಬಂದು ಬೀಳುವ ನದಿಯ ನೀರಿಗೆ ಆಶೆಪಡದೆ, ಕರೆಯದೆ, ಮುಂದೆ ಸಾಗದೆ, ಬಂದು ಬಿದ್ದ ನೀರಿನಿಂದ ಉಬ್ಬದೆ, ವೃದ್ಧಿ ವಿಶೇಷವಿಲ್ಲದೆ, ನೀರು ಬರದಿರೆ ಕುಗ್ಗದೆ, ಏಕ ಪ್ರಕಾರವಾಗಿರುವ ಸಮುದ್ರದಂತೆ, ಅಪರೋಕ್ಷಜ್ಞಾನಿಯು ವಿಷಯಗಳನ್ನು ಬೇಡನು, ಬಂದಾಗ ಶ್ರೀಹರೀಚ್ಛೆಯಿಂದ ಬಂದವೆಂದು ಸ್ವೀಕರಿಸಿ, ಸುಖಕ್ಕೆ ಹಿಗ್ಗದೆ, ದುಃಖಕ್ಕೆ ಕುಗ್ಗದೆ, ನಿರ್ವಿಕಾರನಾಗಿರುವನು. ಅಂತಹವನು ತನ್ನಲ್ಲಿರುವ ಸಮುದ್ರಶಯನನ ದರ್ಶನದಿಂದ ಜನಿತವಾದ ಆನಂದ ತರಂಗಗಳಿಂದ ತುಂದಿಲನಾಗಿರುವನು. ಕುತ್ಸಿತ ಕಾಮರತನಿಗೆ ಅಂತಹ ಆನಂದವೆಂದಿಗೂ ಸಿಗಲಾರದು. ಆದುದರಿಂದ ಅರ್ಜುನ ! ಸರ್ವದುಷ್ಟ ಕಾಮಗಳನ್ನು ಬಿಡು ! ಮಮತಾಹಂಕಾರ ದೂರನಾಗು ! ಶ್ರೀಹರಿಯನ್ನು ನಂಬಿ ವಿಹಿತ ಕರ್ಮವನ್ನು ಮಾಡು ! ನಿನಗೆ ಮುಕ್ತಿ ಕಟ್ಟಿಟ್ಟ ಗಂಟೆಂದು ತಿಳಿ ! ಇಂತು ಪರಬ್ರಹ್ಮನ ಜ್ಞಾನವನ್ನು, ಅಪರೋಕ್ಷಿಯ ಲಕ್ಷಣವನ್ನು ನಿನಗೆ ಪೇಳಿದೆನು. ಇದನ್ನರಿತವನಿಗೆ ಸಂಸಾರ ವೇದನೆಗಳಿಲ್ಲ. ಅಂತಕಾಲದಲ್ಲಿ ಬ್ರಹ್ಮಜ್ಞಾನವಂತನಾಗಿ, ಶರೀರವನ್ನು ಬಿಟ್ಟವನಿಗೆ ಮತ್ತೆ, ಜನನವಿಲ್ಲ, ಪ್ರಕೃತಿ ನಿರ್ಮಿತ ಶರೀರವಿಲ್ಲದ, ದಿವ್ಯ ಕಲ್ಯಾಣಗುಣ ಮಂಗಳತಮರೂಪನಾದ ಶ್ರೀಹರಿಯನ್ನು ಅವನು

ಹೊಂದಿ ತತ್ಪ್ರಸಾದದಿಂದ ಜೀವನ್ಮುಕ್ತನೆನಿಸಿ ಪ್ರಾರಬ್ಧ ಕರ್ಮವನ್ನು ಮಾತ್ರ ಅನುಭವಿಸಿ ಅನಂತರ ಮುಕ್ತನಾಗುವನೆಂದು ತಿಳಿ !.

## ೭. ಶ್ರೀ ಭಗವದ್ಗೀತೆ ೩. ಕರ್ಮಯೋಗ.

ಅರ್ಜುನನು 'ಶ್ರೀಕೃಷ್ಣ ! ಕರ್ಮಕ್ಕಿಂತಲೂ ಜ್ಞಾನವು ಶ್ರೇಷ್ಠವೆಂದು ನೀನು ಹೇಳುವದಾದರೆ ನನ್ನನ್ನು ಕರ್ಮಮಾರ್ಗದಲ್ಲಿ ಏಕೆ ಕೆಡಹುವೆ ? ಮತ್ತು ಹಿಂಸಾರೂಪವಾದ ಯುದ್ಧ ಕರ್ಮವನ್ನು ಏಕೆ ಮಾಡು ಎನ್ನುವೆ ? ಕರ್ಮಜ್ಞಾನಿಗಳಲ್ಲಿ ಶ್ರೇಯಸ್ಕರವಾವುದೋ ಅದನ್ನು ಹೇಳು !' ಎಂದು ಕೇಳಿದನು. ಶ್ರೀ ಭಗವಂತನಿಂತೆಂದನು:

'ಲೋಕದ ಸಾಧಕರಲ್ಲಿ ಜ್ಞಾನಯೋಗಿಗಳು, ಕರ್ಮಯೋಗಿಗಳು ಎಂದು ಎರಡು ವಿಧ. ಜ್ಞಾನಯೋಗಿಗಳಾದ ಸನಕಾದಿಗಳು ಕರ್ಮವು ಸ್ವಲ್ಪವಾಗಿರುವವರು. ಅವರು ಜಪಧ್ಯಾನಾದಿಗಳಿಂದ ಮುಕ್ತರಾಗುವರು. ಕರ್ಮಯೋಗಿಗಳಲ್ಲಿರುವ ಜ್ಞಾನಕರ್ಮಗಳಲ್ಲಿ ಕರ್ಮಭಾಗವೇ ಹೆಚ್ಚು ಜನಕಪ್ರಿಯವ್ರತಾದಿಗಳು ಕರ್ಮಯೋಗಿಗಳು. ಕರ್ಮವನ್ನು ಮಾಡುತ್ತಲೇ ಇದ್ದು ಅವರು ಸ್ವಯೋಗ್ಯ ಜ್ಞಾನದಿಂದ ಮೋಕ್ಷವನ್ನು ಪೊಂದುವರು. ಕರ್ಮಸಹಿತ ಜ್ಞಾನದಿಂದಲೇ ಎಲ್ಲರಿಗೂ ಮುಕ್ತಿ. ನೀನು ಕರ್ಮಯೋಗಾಧಿಕಾರಿಯಾಗಿರುವೆ ! ಕರ್ಮವನ್ನು ಪೂರಾ ಬಿಡುವುದರಿಂದ ನೈಷ್ಕರ್ಮ್ಯ ಅಂದರೆ ಮೋಕ್ಷ ಇಲ್ಲ. ಕರ್ಮಫಲವನ್ನು ಬಿಡುವುದರಿಂದ ಅದೆ. ಕಾಮ್ಯಕರ್ಮದಿಂದಲೂ ಮೋಕ್ಷವಿಲ್ಲ. ಕರ್ಮವನ್ನು ಪೂರಾ ಬಿಟ್ಟರೆ, ಅನಂತ ಜನ್ಮಗಳ ಕರ್ಮಫಲವನ್ನುಣ್ಣಬೇಕಾಗಿರುವುದರಿಂದ, ಜೀವನು ಆಯಾ ಕರ್ಮದಿಂದ ಬರುವ ದೇಹಗಳನ್ನು ಹೊಂದುತ್ತಲೇ ಇರುವನು. ಆದುದರಿಂದ ನಿಷ್ಕಾಮ ಕರ್ಮವನ್ನೇ ಮಾಡಬೇಕು. ಅದೇ ಮೋಕ್ಷ ಸಾಧನವಾದ ಜ್ಞಾನದ ಮಾರ್ಗ. ಅದರಿಂದ ಅಂತಃಕರಣ ಶುದ್ಧಿ ವಿಷಯ ವೈರಾಗ್ಯಗಳು ಪುಟ್ಟುವವು. ಆಗ ಶ್ರವಣಮನನ ಧ್ಯಾನಗಳಾದರೆ ಜ್ಞಾನವಾಗುವುದು. ಜ್ಞಾನದಿಂದ ಶ್ರೀಶ ಪ್ರಸಾದವು, ಅದರಿಂದ ಮೋಕ್ಷವಾಗುವುದು. ಶ್ರೀಶ ಭಕ್ತಿರಹಿತವಾದ ನಿಷ್ಕಾಮ ಕರ್ಮವು ಕೂಡ ಮೋಕ್ಷ ಕಾರಣವೆನಿಸಲಾರದು. ಯತಿಯಾದ ಮಾತ್ರಕ್ಕೆ ಮೋಕ್ಷವು ಸಿದ್ಧವೆಂದು ತಿಳಿಯಬೇಡ. ಅರ್ಜುನ ! ಸನ್ಯಾಸವು ಮನಸ್ಸಮಾಧಾನವನ್ನು ತಂದು ಶ್ರೀ ಹರಿಪ್ರೀತಿದ್ವಾರಾ ಮುಕ್ತಿಹೇತುವಾಗಬಲ್ಲುದಾಗಲಿ ಸಾಕ್ಷಾತ್ಸಾಧನವಲ್ಲ.

ಯಾವ ಜೀವನಾಗಲಿ ಚೇತನನಾದುದರಿಂದ ಕರ್ಮವನ್ನು ಮಾಡದೆ ಕ್ಷಣವಾದರೂ ಇರಲಾಗದು. ಸ್ವತಂತ್ರಕರ್ತನಾದ ಶ್ರೀಹರಿಯು ಜೀವನಿಂದ ಪ್ರಕೃತಿಶರೀರದಲ್ಲಿ ಕರ್ಮಗಳನ್ನು ಮಾಡಿಸುತ್ತಲೇ ಇರುವನು. ಕರ್ಮೇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸಿನಿಂದ ವಿಷಯಗಳನ್ನು ಧ್ಯಾನಿಸುವ ನರನು ದಾಂಭಿಕನೆಂದು ತಿಳಿ ! ವರ್ಣಗಳಿಗೂ, ಆಶ್ರಮಗಳಿಗೂ ಉಚಿತವಾದ ಕರ್ಮಗಳನ್ನು ಮನೋನಿಗ್ರಹದಿಂದ ಆಚರಿಸಿ ಫಲವನ್ನು ನಮಗೆ ಸಮರ್ಪಿಸಿದವನು ಕರ್ಮಯೋಗದ ವಿಶಿಷ್ಟಫಲವನ್ನು ಪೊಂದುವನು. ಅಂತಹವನಿಗೆ ಕರ್ಮಬಂಧವಿಲ್ಲ. ಆದುದರಿಂದ ಅರ್ಜುನ ! ನಿಯಮಿತವಾದ ಕರ್ಮವನ್ನು ಬಿಡದೆ ಮಾಡು ! ಕರ್ಮವೇ ಮಾಡುವುದಿಲ್ಲವೆಂದವನಿಗೆ ಜೀವನವೇ ನಿಂತುಹೋದೀತು ! ಶ್ರೀಹರಿ ಪ್ರೀತಿಗಾಗಿ

ಕರ್ಮಗಳನ್ನು ಮಾಡದವನು ಕರ್ಮಫಲವನ್ನು ತಪ್ಪದೆ ಉಣ್ಣಬೇಕಾಗುವುದು. ಆದುದರಿಂದ ಫಲಾಶೆಯನ್ನು ತೊರೆದು, ವಿಹಿತಕರ್ಮವನ್ನು ಮಾಡುವುದೇ ಸರಿಯಾದುದು.

ಹಿಂದೆ ಬ್ರಹ್ಮದೇವನು ಶ್ರೀಹರಿಯ ಆಜ್ಞೆಯಂತೆ, ಯಜ್ಞಗಳನ್ನೂ ಪ್ರಜ್ಞರನ್ನೂ ಸೃಜಿಸಿ, ಪ್ರಜರು ದೇವತೆಗಳನ್ನು ಪೂಜಿಸಲಿ ! ದೇವತೆಗಳು ಪ್ರಜರಿಗೆ ಬೇಕಾದ ಮಳೆ ಬೆಳೆ ಮುಂತಾದ ಸುಖಗಳನ್ನು ಕೊಡಲಿ ! ಎಂದಾಜ್ಞಾಪಿಸಿದನು. ಆದುದರಿಂದ ಯಜ್ಞಾದಿಸತ್ಕರ್ಮಗಳಿಂದ ದೇವತೆಗಳನ್ನು ಸಂತೋಷ ಪಡಿಸಿದವರು. ಪಾಪಮುಕ್ತರಾಗಿ ಸುಖಪಡುವರು. ಅವರು ಕೊಟ್ಟ ಅಮೃತಾನ್ನವನ್ನು ಅವರಿಗೆ ಕೊಡದೆ ಉಂಬುವ ನರನು ಪಾಪವನ್ನೇ ಉಣ್ಣುತ್ತಿರುವನು.

ಭೂತ ಶರೀರಗಳು ಅನ್ನದಿಂದಾಗುವವು. ಅನ್ನವು ಪರ್ಜನ್ಯದಿಂದ; ಪರ್ಜನ್ಯನು ಯಜ್ಞದಿಂದ; ಮೇಘಚಕ್ರಾಭಿಮಾನಿ ಪರ್ಜನ್ಯನಾಮಕ ಆದಿತ್ಯನು ಯಜಮಾನನಿತ್ತ ಹವಿರಾದಿ ದಾನದಿಂದ ಪ್ರೀತನಾಗಿ ವೃಷ್ಟಿಯನ್ನು ಕೊಡುವನು. ಯಜ್ಞವು ತದಂಗ ಕ್ರಿಯಾಕಲಾಪದಿಂದ ಸಾಂಗವಾಗುವುದು. ಕರ್ಮವು ವೇದದಿಂದ ಅಂದರೆ ವೇದದಿಂದ ಚನ್ನಾಗಿ ತಿಳಿಯಲ್ಪಟ್ಟ ಪರಬ್ರಹ್ಮನೇ ವೇದೋಕ್ತ ಸತ್ಕರ್ಮಗಳನ್ನು ಪ್ರೇರಕನಾಗಿ ಮಾಡಿಸುವನು. ಅಂತಹ ವೇದಗಳು ಭೂತಗಳಿಂದ ಉಚ್ಚರಿಸಲ್ಪಟ್ಟು ವ್ಯಕ್ತವಾಗುವವು. ಇಂತು ಯಜ್ಞಗಳಿಂದ ಪ್ರೀತನಾಗುವ ಪರಬ್ರಹ್ಮನು ಯಜ್ಞವ್ಯಕ್ತನೆನಿಸಿ ಯಜ್ಞದಲ್ಲಿ ನಿಂತಿರುವನು. ಯಜ್ಞಾನುಷ್ಠಾನದಿಂದ ಚಕ್ರವು ನಡೆದು, ಭೂತಗಳು ಬದುಕಿರಲು ಕಾರಣವಾಗುವುದು. ಇದನ್ನು ಕರ್ಮದಿಂದ ನಡೆಸುವುದು ಸುಜನರ ಕರ್ತವ್ಯವಾಗಿದೆ. ಜಗದ್ರಕ್ಷಕನಾದ ನನ್ನ ಅನ್ನ ಚಕ್ರವನ್ನು ಕರ್ಮಯಜ್ಞ ವೇದಗಳದ್ವಾರಾ ನಡೆಸದೆ ಅವನ್ನು ನಿಲ್ಲಿಸುವನು ಪಾಪಿ ಎನಿಸಿ, ವ್ಯರ್ಥವಾಗಿ ಜೀವಿಸುತ್ತಿರುವನು. ಕೊನೆಗೆ ನರಕಭಾಜನನಾಗುವನು. ಗೃಹಸ್ಥರಿಗೆ ಯಜ್ಞದಾನ ತಪೋರೂಪ ಕರ್ಮವಿದ್ದಂತೆ, ಬ್ರಹ್ಮಚಾರಿ, ವಾನಪ್ರಸ್ಥರಿಗೂ, ಮತ್ತು ಸನ್ಯಾಸಿಗಳಿಗೂ ಕೂಡ ಅನ್ನದಾನ, ವಿದ್ಯಾದಾನ, ಅಭಯದಾನಗಳು, ಅಧ್ಯಯನ ಪ್ರವಚನ ಧ್ಯಾನಗಳು, ಕೃಚ್ಛ್ರಚಾಂದ್ರಾಯಣಾದಿ ತಪಗಳು ಉಂಟು; ಆದುದರಿಂದ ಅವರು ಕೂಡ ತಕ್ಕ ಕರ್ಮಗಳನ್ನು ಶ್ರೀಹರಿ ಪ್ರೀತಿಗಾಗಿ ಮಾಡಿ ಅನ್ನ ಚಕ್ರವನ್ನು ನಡೆಸುವುದವಶ್ಯಕವಾಗಿದೆ.

ಅಸಂ ಪ್ರಜ್ಞಾತ ಸಮಾಧಿಸ್ಥ ಅಪರೋಕ್ಷಜ್ಞಾನಿಗೆ ಮಾತ್ರ ಕರ್ಮವನ್ನು ಮಾಡದಿರುವುದರಿಂದ ಬಾಧಕವಿಲ್ಲ. ಅವನಿಗೆ ಕರ್ಮದಿಂದಾಗುವ ಪ್ರಯೋಜನವಿಲ್ಲ. ಆದರೂ ಅಂತಹವನು ಕೂಡ ಮಿಕ್ಕ ಕಾಲದಲ್ಲಿ (ಅಸಂಪ್ರಜ್ಞಾತನಲ್ಲದಿರುವಾಗ) ವಿಹಿತ ಕರ್ಮವನ್ನು ಮಾಡಲೇಬೇಕು. ಕರ್ಮವನ್ನು ಬಿಡುವುದರಿಂದ ಅವನಿಗೆ ಮೋಕ್ಷದಲ್ಲಿ ಆನಂದವು ಕಡಿಮೆ ಆಗುವುದು. ಮುಕ್ತರು ಕೂಡ ಸ್ವೇಚ್ಛೆಯಿಂದ ಕರ್ಮವನ್ನು ಮಾಡಿ, ಕೃಷ್ಣನನ್ನು ಫಲಾಪೇಕ್ಷೆ ಇಲ್ಲದೆ ಪೂಜಿಸುವರು. ಆದುದರಿಂದ ಅಸಕ್ತನಾಗಿ ಕರ್ಮವನ್ನು ಮಾಡು ! ಅದರಿಂದ ಶ್ರೀಹರಿಯು ಪ್ರೀತನಾಗುವನು.

ಲೋಕವನ್ನು ಸರಿಯಾದ ಮಾರ್ಗದಲ್ಲಿ ನಡೆಸುವುದು ಹಿರಿಯರ ಕರ್ತವ್ಯವಲ್ಲವೇ ? ಶ್ರೇಷ್ಠರು ಮಾಡಿದಂತೆ, ಮಾಡಿದ್ದನ್ನು ಇತರರು ಮಾಡುವರು. ಆದುದರಿಂದ ಶ್ರೇಷ್ಠರು

ತಾವು ನಡೆದು, ನುಡಿದು, ನಡೆಸಬೇಕು. ಪಾರ್ಥ ! ನನಗೆ ಕರ್ಮ ಬಿಟ್ಟರೆ ಪಾಪವಿಲ್ಲ, ಮಾಡಬೇಕೆಂಬ ವಿಧಿಯಿಲ್ಲ, ಮಾಡಿದರೆ ಪುಣ್ಯವಿಲ್ಲ. ಆದರೂ ಸ್ವಯಂಪೂರ್ಣನೂ, ನಿತ್ಯಸುಖಿನು ಆದ ನಾನು ಕೂಡ ಕರ್ಮಮಾಡಿ, ಉಪದೇಶಿಸಿ, ಇತರರನ್ನೂ ಸತ್ಕರ್ಮಮಾರ್ಗದಿ ನಡೆಸುತ್ತಿರುವೆನು. ಆದುದರಿಂದ ಕರ್ಮಗಳನ್ನು ಫಲಾಪೇಕ್ಷೆ ಇಲ್ಲದೆ ಶ್ರೀಹರಿ ಪ್ರೀತಿಗೆಂದು ಮಾಡು ! ಬಿಡು ಸಂಶಯವನ್ನು ! ಸಂಕರವಾಗಿ ಲೋಕದ ಜನರು ನಾಶವಾಗದೆ ಉಳಿಯಲು ನಾನೇ ಕರ್ಮಮಾಡಿ ಮಾರ್ಗದರ್ಶನ ಮಾಡುವಾಗ, ನೀನು ವಿಹಿತಕರ್ಮವನ್ನು ಬಿಡಬಹುದೇ ?

ಇತರರು ಫಲಾಸಕ್ತಿಯಿಂದ ಮಾಡುವರು; ಆದರೆ ಪಂಡಿತರು ಮಮತಾ ಪರಿತ್ಯಾಗವನ್ನು ಮಾಡಿ, ತಾವು ವಿಹಿತ ಕರ್ಮವನ್ನು ಮಾಡಿ, ಇತರರನ್ನೂ ನಡೆಸುವರು. ಕರ್ಮಾನುಷ್ಠಾನವು ಅನಾವಶ್ಯಕವೆಂದು ಪಾಮರರು ತಿಳಿದು ಕೆಡದಂತೆ, ಜ್ಞಾನಿಯು ಸರ್ವ ಕರ್ಮಗಳನ್ನು ಚನ್ನಾಗಿ ಭಕ್ತಿಯಿಂದ ಮಾಡುತ್ತಿರಬೇಕು. ಕರ್ಮವು ಶ್ರೀಹರಿ ಪ್ರೇರಿತವಾಗಿ, ಅವನಿತ್ತ ಜ್ಞಾನಪೂರ್ವಕವಾಗಿ, ಅವನಿತ್ತ ಪ್ರಕೃತಿಯ ಭೌತಿಕ ದೇಹೇಂದ್ರಿಯಗಳಿಂದ ನಡೆಯುವುದು. ಹೀಗಿರಲು ಸ್ವತಂತ್ರ ಶ್ರೀಶನನ್ನು ಮರೆತು, ನಾನೇ ಕರ್ತನೆಂಬ ಮೂಢನು ಕರ್ಮಬದ್ಧನಾಗುವನು.

ತತ್ವಜ್ಞಾನಿಯು ಶ್ರೀಹರಿಯೇ ಸ್ವತಂತ್ರಕರ್ತನು, ತಾನು ಅಸ್ವತಂತ್ರಕರ್ತನು, ಕರ್ಮವು ಪ್ರಕೃತಿಯ ದೇಹೇಂದ್ರಿಯಾದಿಗಳಿಂದ ಮಾಡಲ್ಪಡುವುದು ಎಂದು ತಿಳಿದು, ಭಗವದಿಚ್ಛೆಯಂತೆ ಇಂದ್ರಿಯಗಳು ವಿಷಯಗಳನ್ನು ಸ್ವೀಕರಿಸಿ, ಸುಖ-ದುಃಖಾದಿಗಳನ್ನೀಯುತ್ತಿರುವುದರಿಂದ ಜೀವನು ಅಸ್ವತಂತ್ರನು ಎಂದು ತಿಳಿವನು. ಆಗ ಅವನ ಕರ್ತೃತ್ವಾಭಿಮಾನವು ನಾಶವಾಗಿ, ಅವನು ಸಂಸಾರಮುಕ್ತನಾಗುವನು. ತಾವೇ ಸ್ವತಂತ್ರರೆಂದು ತಿಳಿದು ಅಭಿಮಾನದಿಂದ ಕರ್ಮಫಲದಲ್ಲಿ ಆಸಕ್ತರಾದ ಅಯೋಗ್ಯರಿಗೆ ಸನ್ಮಾರ್ಗವನ್ನು ಪೇಳಲು ಜ್ಞಾನಿಯು ಪ್ರಯತ್ನಿಸಬಾರದು. ಹಾಗೆ ಮಾಡಿದರೂ ಅದು ವ್ಯರ್ಥವೇ ಆಗುವುದು. ಆದುದರಿಂದ ಅರ್ಜುನ ! ನನ್ನಲ್ಲಿ ಸರ್ವಸತ್ಕರ್ಮ ಸಮರ್ಪಣೆ ಮಾಡು ! ನನ್ನ ಪ್ರೇರಣೆಯಂತೆ ನಡೆ ! ಅಹಂ ಮಮಕಾರಗಳನ್ನು ಬಿಡು ! ವಿಹಿತವಾಗಿರುವ ಯುದ್ಧ ಕರ್ಮವನ್ನು ವಿಷ್ಣುಭಕ್ತಿಗಾಗಿ ಜ್ಞಾನಕ್ಕಾಗಿ ಮಾಡು ! ನೀ ಮಾಡುವ ಯುದ್ಧವೂ ನನ್ನ ಪೂಜೆ ಎಂದು ತಿಳಿ !

ಇಂತು ನಿಷ್ಕಾಮಕರ್ಮವನ್ನು ಶ್ರದ್ಧೆಯಿಂದ ಮಾಡಿ ನನ್ನನ್ನು ಪೂಜಿಸುವ ಭಕ್ತರು ಕರ್ಮಬಂಧದಿಂದ ಬಿಡಲ್ಪಡುವರು. ನಾ ಪೇಳಿದಂತೆ ಕೇಳದಿರುವ ಕುಮತಿಗಳು ಜ್ಞಾನ ರಹಿತರಾಗಿ ಕೆಡುವರು. ಜೀವಸ್ವಭಾವವು ಬಲೀಯವು ತನ್ನ ಸ್ವಭಾವ, ಪೂರ್ವ ಸಂಸ್ಕಾರ, ಪ್ರಕೃತ ದೇಹಗಳಂತೆ ಜೀವನು ಕರ್ಮಗಳನ್ನು ಮಾಡುವನು. ಅವನಿಗೆ ಮನೋನಿಗ್ರಹವು ಏನೂ ಮಾಡಲಾರದು. ಆದುದರಿಂದಲೇ ದುರ್ಜನರಿಗೆ ಹೇಳಿ ಫಲವಿಲ್ಲವೆಂದು ನಿನಗೆ ನಿರೂಪಿಸಿದೆನು. ಪಂಡಿತರು ಕೂಡ ರಾಗ-ದ್ವೇಷಗಳಿಗೊಳಗಾಗಿ ನಾ ಪೇಳಿದ ನಿಷ್ಕಾಮಕರ್ಮವನ್ನು ಬಿಡುವರೆಂದಮೇಲೆ ಇತರರ ಪಾಡೇನು ? ಇಂದ್ರಿಯಗಳಿಂದ ವಿಷಯಗಳಲ್ಲಿ ರಾಗದ್ವೇಷಗಳು ಮನಸ್ಸಿನ ದ್ವಾರಾ ಹುಟ್ಟುವವು. ಇಂದ್ರಿಯಗಳನ್ನು

ವಶದಲ್ಲಿಟ್ಟು ಮನಸ್ಸನ್ನು ನನ್ನಲ್ಲಿಟ್ಟವನು, ಸ್ವಧರ್ಮಾನುಷ್ಠಾನದಿಂದ ಮುಕ್ತನಾಗುವನು. ಸ್ವಧರ್ಮವು ದೋಷಯುಕ್ತವೆಂದು ತೋರಿದರೂ ಶ್ರೇಯಸ್ಕರವೇ ಆಗಿದೆ. ವಿಧರ್ಮವನ್ನು ಎಷ್ಟು ಚನ್ನಾಗಿ ಮಾಡಿದರೂ ಶ್ರೇಯಸ್ಕರವಲ್ಲ.'

ಅರ್ಜುನನು 'ರಾಗದ್ವೇಷಗಳಿಗೆ ವಶವಾಗಬಾರದೆಂದೆ !' ಅತಿ ಪ್ರಯತ್ನದಿಂದ ಅರಿಷಡ್ವರ್ಗವನ್ನು ಜಯಿಸಬೇಕಾಗಿದೆ ಅಲ್ಲವೇ ? ಅದರಲ್ಲಿ ಬಹು ಕೆಟ್ಟವನಾರು ? ಪಾಪವನ್ನು ಮಾಡಲಿಚ್ಛೆಯಿಲ್ಲದಿದ್ದರೂ, ನರನು ಒಂದೊಂದು ಸಲ ಬಲಾತ್ಕಾರವಾಗಿ ಮಾಡುವನಲ್ಲ! ಅಂತು ಪ್ರೇರಿಸುವ ಶತ್ರುವಾರು?' ಎಂದು ಕೇಳಿದನು.

ಶ್ರೀಭಗವಂತನಿಂತೆಂದನು : 'ಅರ್ಜುನ ! ಆರು ಶತ್ರುಗಳಲ್ಲಿ ಕಾಮಕ್ರೋಧರು ಪ್ರಬಲರು; ಅದರಲ್ಲಿ ದುಷ್ಟಕಾಮನು (ಕಾಲನೇಮಿ) ಕಡುಪಾಪವನ್ನು ಹಿಡಿದು ಮಾಡಿಸುವನು. ಕ್ರೋಧನು (ವಿಪ್ರಚಿತ್ತಿ) ಅವನಿಂದ ಹುಟ್ಟಿ ಮಾಡಬಾರದ ಪಾಪಗಳನ್ನು ಮಾಡಿಸುವನು. ಕಾಮವನ್ನು ಕೊಟ್ಟು ಉಣಿಸಿ ಪೂರೈಸಲಾಗದು; ಅವನು ಕೊಟ್ಟಷ್ಟೂ ಬೇಡುವನು, ಉಂಡಷ್ಟೂ ತೃಪ್ತನಾಗದೆ ತಿನ್ನಲೆಣಿಸುವನು. ಅಂತಹ ಕಾಮವೇ ಪ್ರಬಲ ಶತ್ರುವು. ಅವರೀರ್ವರು ಐಹಿಕ ಪಾರತ್ರಿಕ ಶ್ರೇಯಸ್ಸನ್ನು ಕೆಡಿಸುವವರು. ಅವರಿಗೆ ವಶನಾಗದೆ, ಇಂದ್ರಿಯ ಜಯವನ್ನು, ಮನೋನಿಗ್ರಹವನ್ನು ಸಂಪಾದಿಸಿ, ಜ್ಞಾನ-ವಿಜ್ಞಾನನಾಶಕರಾದ ಕಾಮ-ಕ್ರೋಧಗಳನ್ನು ಹತ್ತಿಟ್ಟು ಕೊಲ್ಲು!

ಅಗ್ನಿಗೆ ಹೊಗೆ ಮುಚ್ಚಿರುವಂತೆ ಉತ್ತಮ ಜೀವರ ಮೇಲಿರುವ ಅಜ್ಞಾನಾವರಣ; ಕನ್ನಡಿಗೆ ಕೆಸರಿನಂತೆ ರಾಜಸ ಜೀವರ ಅಜ್ಞಾನ; ಮಾಸವು ಕೂಸನ್ನು ಮುಚ್ಚಿದಂತೆ ತಾಮಸರ ಅಜ್ಞಾನ, ಈ ಅಜ್ಞಾನವು ಇಂದ್ರಿಯ ಜಯದಿಂದಲ್ಲದೆ ನಾಶವಾಗದು. ಕಾಮನು ಇಂದ್ರಿಯಮನೋಬುದ್ಧಿಗಳಲ್ಲಿ, ಗುಹೆಯಲ್ಲಿ ಹುಲಿಯಂತೆ ಅಡಗಿ ಕೂತಿರುವನು. ಇವನು ಜೀವರ ಜ್ಞಾನವನ್ನು ಕೆಡಿಸಿ, ಅವರನ್ನು ಪಾಪ ಮಾರ್ಗದಿ ನಡೆಸುವನು. ಆದುದರಿಂದ ಕಾಮಗುಹೆಯಾದ ಇಂದ್ರಿಯಗಳನ್ನು ಮೊದಲು ವಶದಲ್ಲಿ ತಂದು, ಮನವನ್ನು ನಿಗ್ರಹಿಸಿ, ದುಷ್ಟಕಾಮನನ್ನು ಸಂಹರಿಸು ! ನಿಷ್ಕಾಮ ಕರ್ಮವೇ ಅವನನ್ನು ಕೊಲ್ಲುವ ಖಡ್ಗ. ಇಂದ್ರಿಯ ದೇವತೆಗಳಾದ ಚಂದ್ರ, ಕುಬೇರ, ಸೂರ್ಯ, ವರುಣ, ಅಶ್ವಿನೀದ್ವಯ, ಅಗ್ನಿ, ಇಂದ್ರ, ಜಯಂತ, ಯಮ, ದಕ್ಷ, ಮೊದಲಾದವರಕ್ಕಿಂತಲು, ಅರ್ಥಾಭಿಮಾನಿಗಳಾದ ಸೌಪರ್ಣಿ ವಾರುಣಿ, ಉಮಾದೇವಿಯರು ಶ್ರೇಷ್ಠರು: ಅವರಕಿಂತಲು ಮನೋಭಿಮಾನಿಗಳಾದ ಗರುಡ ಶೇಷರುದ್ರರು ಶ್ರೇಷ್ಠರು; ಅವರಿಗೂ ಶ್ರೇಷ್ಠಳು ಬುದ್ಧಿದೇವಿಯಾದ ಸರಸ್ವತಿಯು. ಆಕೆಗೂ ಶ್ರೇಷ್ಠನು ಮಹದಭಿಮಾನಿ ಬ್ರಹ್ಮನು; ಭಾರತೀ ವಾಯು ದೇವರೇ ಸರಸ್ವತೀ ಬ್ರಹ್ಮರು (ಆಗುವರು). ಅವರಿಗೂ ಶ್ರೇಷ್ಠಳು ಅವ್ಯಕ್ತ ತತ್ವಮಾನಿನಿ ರಮಾದೇವಿ. ಆಕೆಗೂ ಶ್ರೇಷ್ಠನು ಶ್ರೀ ನಾರಾಯಣನು. ಅವನಿಗೆ ಸಮರೇ ಇಲ್ಲವೆಂದ ಮೇಲೆ, ಇನ್ನು ಶ್ರೇಷ್ಠರಿಲ್ಲವೇ ಇಲ್ಲ; ಇಂತಹ ದೇವತಾಪ್ರಸಾದದಿಂದ ಇಂದ್ರಿಯ ಜಯ ಮನೋಜಯಗಳು; ಇವರಿಗೆ ಸ್ವಾಮಿಯಾದ ಶ್ರೀಹರಿಯನ್ನು ತಿಳಿದು, ಅವನ ದಯದಿಂದ ಶತ್ರುನಾದ ದುಷ್ಟಕಾಮನನ್ನು ಸಂಹರಿಸಿ, ಮುಕ್ತನಾಗಬಹುದು ತಿಳಿ !

## ೮. ಶ್ರೀ ಭಗವದ್ಗೀತೆ ೪. ಜ್ಞಾನಯೋಗ

ಶ್ರೀ ಭಗವಂತನು ನಿರೂಪಿಸಿದನು:

'ಅರ್ಜುನ ! ನನ್ನಿಂದ ಪೇಳಲ್ಪಟ್ಟ ನಿವೃತ್ತ ಕರ್ಮವೇ ಜ್ಞಾನೋಪಾಯವಾಗಿದೆ. ಅದನ್ನು ಬಿಟ್ಟರೆ ನರಕಾದ್ಯನರ್ಥಗಳಾಗುವವು. ಶ್ರೀಹರಿಯೇ ಸರ್ವೋತ್ತಮನೆಂದು ನಂಬಿ, ಅವನಿಗೆ ಫಲವನ್ನರ್ಪಿಸಿ, ಅವನ ಪೂಜೆಗಾಗಿ ಸಂಕಲ್ಪಿಸಿ ಮಾಡುವ ವಿಹಿತ ಕರ್ಮಯೋಗವನ್ನು ಹಿಂದೆ ನಾನು ಸೂರ್ಯನಿಗೆ ಉಪದೇಶಿಸಿದೆನು. ಸೂರ್ಯನು ತನ್ನ ಮಗನಾದ ವೈವಸ್ವತಮನುವಿಗೆ, ಅವನು ತನ್ನ ಸುತನಾದ ಇಕ್ಷ್ವಾಕುವಿಗೆ ಪೇಳಿದರು. ಇಂತು ಉಪದೇಶ ಪರಂಪರೆಯಿಂದ ಅದನ್ನು ರಾಜರು, ಋಷಿಗಳು ತಿಳಿದು, ನಡೆಸಿದರು. ಇಂತಹ ಕರ್ಮಯೋಗವು ಕಾಲಬಲದಿಂದ ಲೋಕದಲ್ಲಿ ನಷ್ಟವಾಯಿತು. ಆದುದರಿಂದ ಈಗ ನೀನು ಭಕ್ತನೆಂದು ಪರಿಗಣಿಸಿ, ನಿನ್ನಲ್ಲಿ ಪ್ರೀತಿಯಿಂದ ಅವ್ಯಯ ಫಲಕವಾದ ನಿವೃತ್ತ ಕರ್ಮಯೋಗವನ್ನು ನಿನಗೆ ಉಪದೇಶಿಸಿದೆನು. ಸ್ವತಂತ್ರನು ಸರ್ವಜ್ಞನು ಆದ ಭಗವಂತನನ್ನು ಅಸ್ವತಂತ್ರನು ಅಲ್ಪಜ್ಞನು ಆದ ಜೀವನು ನಿವೃತ್ತ ಕರ್ಮದಿಂದಲೇ ಪೂಜಿಸಬೇಕು.'

ಅರ್ಜುನನು, 'ಶ್ರೀಕೃಷ್ಣ! ಜೀವೇಶ್ವರರಿಬ್ಬರೂ ನಿತ್ಯರೆಂದೆ ! ಅವರಿಗಿರುವ ಭೇದವೂ ನಿತ್ಯವೆಂದೆ ! ಅದನ್ನು ಚೆನ್ನಾಗಿ ತಿಳಿಸು ! ನೀನು ಹಿಂದೆ ಸೂರ್ಯನಿಗೆ ಕರ್ಮಯೋಗವನ್ನು ಹೇಳಿದೆ ಎಂದು ಹೇಗೆ ತಿಳಿಯಲಿ ? ನೀನೀಗ ದೇವಕೀಪುತ್ರನೆನಿಸಿರುವೆ. ಸೂರ್ಯನು ಬಹಳ ಪೂರ್ವದವನು. ಆದುದರಿಂದ ಸೂರ್ಯನು ನಿನ್ನಿಂದ ಉಪದೇಶವನ್ನೆಂತು ಪೊಂದಲಹುದು? ' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು: 'ಅರ್ಜುನ ! ನಾನು ಚತುರ್ವಿಧನಾಶರಹಿತನು. ಇದೇ ಶರೀರದಿಂದ ಯಾವಾಗಲೂ ಇರುವೆನು. ಜೀವರು ಹಾಗಲ್ಲ; ಅವರು ಹುಟ್ಟಿ ಸಾಯುತ್ತಿರುವರು. ನಾನು ಬಹುಸಲ ಅವತರಿಸುವೆನು. ನೀನೂ ಬಹುಸಲ ಹುಟ್ಟಿರುವೆ ! ನನ್ನ ಅವತಾರಗಳು, ನಿನ್ನ ಹುಟ್ಟುಗಳೆಲ್ಲವೂ ನನಗೆ ಸಂಪೂರ್ಣವಾಗಿ ತಿಳಿದಿವೆ. ನಿನಗೆ ನಿನ್ನ ವಿಷಯವೇ ತಿಳಿದಿಲ್ಲ. ಇಂತು ನಾನು ಸರ್ವಜ್ಞನು, ಶಶ್ವದೇಕಪ್ರಕಾರನು ಸರ್ವಪ್ರಭುವು ಆಗಿರುವೆನು. ಸ್ವೇಚ್ಛೆಯಿಂದ ನಾನು ವಸುದೇವಾದಿಗಳನ್ನು ನಿಮಿತ್ತ ಮಾಡಿಕೊಂಡು, ಪ್ರಾದುರ್ಭವಿಸಿರುವೆನು. ಜೀವರಂತೆ ನನಗೆ ಜನನ-ಮರಣಗಳಿಲ್ಲ. ನನ್ನ ಅವತಾರ ಕಾರ್ಯದಿಂದ ನನಗೆ ಏನೂ ಪ್ರಯೋಜನವಿಲ್ಲ. ನಾನು ಧರ್ಮದ ಗ್ಲಾನಿ, ಅಧರ್ಮದ ವೃದ್ಧಿಯು ಆದಾಗ ನನ್ನಿಂದ ನಾನೇ ಅವತರಿಸುವೆನು. ಇದು ನನ್ನ ಸ್ವಭಾವ ಮತ್ತು ಲೀಲೆ. ಅವತಾರಪ್ರಯೋಜನವು ಜೀವರಿಗೆ. ನನಗೆ ಸೃಷ್ಟಿಕರ್ತನಿಲ್ಲ, ಸಂಹಾರಕನೂ ಇಲ್ಲ. ಸಾಧುಗಳನ್ನು ರಕ್ಷಿಸುವುದು ; ದುಷ್ಟರನ್ನು ಶಿಕ್ಷಿಸುವುದು ; ಆ ರೀತಿಯಾಗಿ ಧರ್ಮವನ್ನು ನಿಲ್ಲಿಸುವುದು; ಇದೇ ನನ್ನ ಅವತಾರದ ಪ್ರಯೋಜನ. ಜೀವರು ಇಂತು ನನ್ನ ದಿವ್ಯಜನ್ಮ ಪಾವನಕರ್ಮಗಳನ್ನು ತಿಳಿದು, ಭಕ್ತರಾಗಿ, ಕೊನೆಗೆ ಮುಕ್ತರಾಗಿ ಸುಖಿಸುವರು. ಅವರಿಗೂ ಜನನ-ಮರಣಗಳು ದೂರವಾಗುವವು.

ರಾಗ-ದ್ವೇಷಗಳನ್ನು ಬಿಟ್ಟು, ನನ್ನ ಸರ್ವೋತ್ತಮತ್ವವನ್ನರಿತು, ನನ್ನನ್ನೇ ನಂಬಿ

ಬಹುಜೀವರು ಪಾಪಮುಕ್ತರಾಗಿ ತಮಗೆ ಯೋಗ್ಯವಾದ ಮುಕ್ತಿಯನ್ನು ಸಾಯುಜ್ಯಾದಿಗಳನ್ನು ಹೊಂದಿರುವರು. ಜೀವರ ಸೇವೆಗೆ ತಕ್ಕ ಸ್ವರ್ಗ-ಮೋಕ್ಷ ಭೂ ಭೋಗಾದಿ ಫಲಗಳನ್ನು ಕೊಡುವ ಸ್ವತಂತ್ರ ಪ್ರಭುವು ನಾನೇ ಎಂದು ತಿಳಿ. ಅನ್ಯ ದೇವತೆಗಳನ್ನು ಭಜಿಸಿದ ತ್ರೈವಿದ್ಯರು ಕರ್ಮಫಲವನ್ನು ಬೇಡಿ; ಸರ್ವಯಜ್ಞಭೋಕ್ತನಾದ ನನಗೆ ಆ ಕರ್ಮವನ್ನು ಸಮರ್ಪಿಸುವುದರಿಂದ ನನ್ನ ಭಕ್ತರೇ ಆಗಿರುವರು; ಅಂತೆಯೇ ಅವರಿಗೆ ಅವರ ಕರ್ಮಫಲವಾದ ಸುಖಗಳನ್ನು ನಾನೇ ಆಯಾ ದೇವತೆಗಳಲ್ಲಿ ನಿಂತು, ತದ್ವಾರಾ ಕೊಡುವೆನು. ಕರ್ಮಫಲವನ್ನು ಪೂರ್ಣವಾಗಿ ನನಗಿತ್ತು ಏನೂ ಬೇಡದ ಭಕ್ತರಾದರೆ, ಅವರಿಗೆ ಮೋಕ್ಷವನ್ನೇ ಕೊಡುವೆನು. ತ್ರೈವಿದ್ಯರಿಗೆ ಮೋಕ್ಷಫಲವಾಗುವುದಿಲ್ಲ.

ಸತ್ವಾದಿಗುಣ ವಿಭಾಗದಿಂದಲು, ಕರ್ಮವಿಭಾಗದಿಂದಲು ಕೂಡಿದ ನಾಲ್ಕು ವರ್ಣಗಳನ್ನು ನಾನೇ (ಮೂಲರೂಪಿ) ಸೃಜಿಸಿ, ಪ್ರಕಟೀಕರಿಸಿರುವೆನು. ವರ್ಣಗಳು ನಿತ್ಯ, ಕಲ್ಪಿತವಲ್ಲ. ಜೀವವಿಲಕ್ಷಣನಾದ ನನಗೆ ಜನನ-ಮರಣಗಳಿಲ್ಲ, ಕರ್ಮಲೇಪವಿಲ್ಲ. ನನಗೆ ಕರ್ಮಫಲದಲ್ಲಿ ಅಭಿನಿವೇಶವೇ ಇಲ್ಲ. ಇಂತು ನನ್ನನ್ನು ತಿಳಿದು, ಉಪಾಸಿಸುವ ಭಕ್ತನಿಗೆ ಕರ್ಮಲೇಪವಿಲ್ಲವೆಂದ ಮೇಲೆ, ಈಶನಾದ ನನಗುಂಟೇ ? ಪೂರ್ವದ ಋಷಿಗಳು ಕೂಡ ವಿಹಿತ ಕರ್ಮವನ್ನು ಮೋಕ್ಷದ ಆನಂದ ವೃದ್ಧಿಗಾಗಿ ಮಾಡಿರುವರು. ಅಂತು ನಡೆದು ಬಂದ ಕರ್ಮಮಾರ್ಗವನ್ನು ಜ್ಞಾನಿಯಾದ ನೀನೂ ಬಿಡದೆ ನಡೆಸು !

ಕರ್ಮಾಕರ್ಮವಿಕರ್ಮಗಳ ಜ್ಞಾನವು ದುರ್ಲಭವಾಗಿದೆ. ಅಶುಭವನ್ನು ಬಿಡಿಸಿ ಮೋಕ್ಷವನ್ನು ಕೊಡಿಸುವ ಕರ್ಮ ಸ್ವರೂಪವನ್ನು ನಿನಗೆ ಹೇಳುವೆನು. ಕರ್ಮವೆಂದರೆ ನಿಷ್ಕಾಮ ಕರ್ಮವೇ, ಅಕರ್ಮವೆಂದರೆ ವಿಹಿತ ಕರ್ಮವನ್ನು ಬಿಡುವುದು ; ಅದನ್ನು ಸರ್ವಥಾ ಮಾಡಬೇಡ ! ವಿಕರ್ಮವೆಂದರೆ ಇತರರಿಗೆ ವಿಹಿತವಾದ ಕರ್ಮ; ಇದೂ ತ್ಯಾಜ್ಯವೇ ಸರಿ ! ವಿಧಿ ವಿರುದ್ಧ ಕರ್ಮವಂತೂ ಪಾಪ ಸಾಧನವಾಗಿದೆ. ತಾನು ಕರ್ಮವನ್ನು ಮಾಡುವಾಗಲೂ ಶ್ರೀಹರಿಯೇ ಸ್ವತಂತ್ರ ಕರ್ತನೆಂದು ತಿಳಿದವನಿಗೆ ಕರ್ಮಲೇಪವಿಲ್ಲ. ತಾನು ಕರ್ಮವಿಲ್ಲದೆ ಮಲಗಿದ್ದಾಗಲೂ ಶ್ರೀಹರಿ ಮುಖ್ಯ ಪ್ರಾಣರು, ಶ್ವಾಸಾದಿ ಕರ್ಮವನ್ನು ಮಾಡಿಸುವರೆಂದು ತಿಳಿದವನೂ ಕರ್ಮಫಲವನ್ನು ಪೊಂದದಿರುವನು. ಫಲಕಾಮನವನ್ನು ಬಿಟ್ಟು ವಿಹಿತಕರ್ಮವನ್ನು ಶ್ರೀಹರಿ ಪೂಜೆ ಎಂದು ಮಾಡಿದವನೇ ಪಂಡಿತನು. ಕರ್ಮ ಫಲವನ್ನು ಬಿಟ್ಟರೆ ಸಾಲದು, ಫಲದಲ್ಲಿರುವ ಆಸಕ್ತಿಯನ್ನು ಪೂರಾ ಬಿಡಬೇಕು. ಅಭಿಮಾನರಹಿತನು, ಸಂತುಷ್ಟನು, ಮನೋನಿಗ್ರಹಯುತನು, ಭಕ್ತನು ಆದ ಸಜ್ಜನನು ಶರೀರಯಾತ್ರೆಗಾಗಿ ಕರ್ಮಗಳನ್ನು ಮಾಡಿದರೂ, ಅವುಗಳ ಫಲಲೇಪವು ಅವನಿಗಾಗದಿರುವುದು. ಅಂತಹವನಿಗೆ ಪಾಪವಿಲ್ಲ. ಶ್ರೀಹರಿ ಪ್ರೀತಿಗಾಗಿ ಅವನು ಮಾಡಿದ ಕರ್ಮಗಳು ಅವನಿಗೆ ಜನ್ಮಾಂತರವನ್ನು ಕೊಡಲಾರವು. ಅವು ಸಂಚಿತ ಆಗಾಮಿ ಎಂಬ ಕರ್ಮ ಫಲಗಳು ಶ್ರೀಹರಿಯ ಅಪರೋಕ್ಷವಾದ ತತ್‌ಕ್ಷಣ ನಾಶವಾಗುವವು. ದರ್ವೀಪಿಠರಾದಿ ಸಾಧನಗಳು, ಆಜ್ಯಾದಿ ಹವಿಸ್ಸು ಅಗ್ನಿ ಯಜಮಾನ, ದಕ್ಷಿಣೆ, ಫಲ-ಮುಂತಾದವೆಲ್ಲವೂ ಶ್ರೀ ಪರಬ್ರಹ್ಮನ ಆಧೀನವೆಂದರಿತು, ಯಜ್ಞಾದಿ ಕರ್ಮಗಳನ್ನು ಮಾಡಿದವನು ಜ್ಞಾನವನ್ನೂ ಪಡೆದು ಮುಕ್ತನಾಗುವನು. ಅವನಿಗೆ: ಕರ್ತೃತ್ವ ಭ್ರಾಂತಿ ಇಲ್ಲ; ಸ್ವಾಮಿತ್ವ ಭ್ರಮೆಯೂ ಇಲ್ಲ; ಅಂತಹವನೇ ಜ್ಞಾನಿ ಎನಿಸುವನು.

ಕೆಲವರು (ಯತಿಗಳು) ಭಗವದುಪಾಸನವನ್ನೇ ಯಜ್ಞವೆಂದು ತಿಳಿದು ಮಾಡುವರು. ಕೆಲವರು ಯಜ್ಞನಾಮಕ ಶ್ರೀಶಾಧೀನವೆಲ್ಲವು ಎಂದರಿತು ಸ್ವಾತಂತ್ರ್ಯಾಭಿಮಾನವನ್ನು ಬಿಟ್ಟು ಅಗ್ನಿಹೋತ್ರಾದಿ ಕರ್ಮಗಳನ್ನು ಯಜ್ಞನಾಮಕ ಶ್ರೀಶ ಪ್ರೀತಿಗಾಗಿ ಮಾಡುವರು. ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಶ್ರೀಹರಿ ಆರಾಧನೆಗಾಗಿ ಹೋಮಿಸುವರು ಕೆಲವರು. ಜ್ಞಾನದಿಂದ ಕೆಲವರು, ಪ್ರಾಣಾಯಾಮದಿಂದ ಕೆಲವರು, ಕೃಚ್ಛ್ರಚಾಂದ್ರಾಯಣಾದಿ ವ್ರತಗಳಿಂದ ಕೆಲವರು-ಇಂತು ಅನೇಕರು ಸ್ವಯೋಗ್ಯವಿಹಿತ ಕರ್ಮಗಳನ್ನು ಶ್ರೀಹರಿ ಪ್ರೀತಿಗಾಗಿ ಮಾಡುವರು. ಅವೆಲ್ಲವೂ ಯಜ್ಞಗಳೇ ಎನಿಸುವವು. ಇವರಲ್ಲಿ ಜ್ಞಾನಿಗಳೇ ಶ್ರೇಷ್ಠರು. ಜ್ಞಾನಿಗಳು ಕೂಡ ಕರ್ಮಗಳನ್ನು ಬಿಡದೆ ಮಾಡುವರು. ಯಜ್ಞಭೇದಗಳನ್ನರಿತು ಯಾವುದಾದರೊಂದು ವಿಧ ಯಜ್ಞದಿಂದ ಶ್ರೀಶನನ್ನು ಆರಾಧಿಸಿದವರು ಪಾಪಮುಕ್ತರಾಗಿ, ಪರಬ್ರಹ್ಮನ ಲೋಕವನ್ನು ಪೊಂದಿ ಮುಕ್ತರಾಗುವರು. ಯಾವ ವಿಧವಾದ ಯಜ್ಞವನ್ನೂ ಮಾಡದವನಿಗೆ ಈ ಲೋಕದ ಸುಖವೇ ಇಲ್ಲವೆಂದ ಮೇಲೆ ಪರಲೋಕದ ಸುಖವು ಉಂಟೇ ? ಎಲ್ಲ ಯಜ್ಞಗಳೂ ಹರಿಪೂಜೆ ಎಂದ ಮೇಲೆ, ಅವೆಲ್ಲವೂ ವಿಹಿತ ಕರ್ಮರೂಪವೇ ಆಗಿರಲು, ಮತ್ತು ಉಪಾಸನಾದಿ ಜ್ಞಾನ ಯಜ್ಞವು ಕೂಡ ಕರ್ಮವೇ ಆಗಿರಲು, ನೀನು ನಿನಗೆ ವಿಹಿತವಾದ ಯುದ್ಧಾಖ್ಯ ಸತ್ಕರ್ಮವನ್ನು ಬಿಡಬಾರದು.

ದ್ರವ್ಯಮಯ ಯಜ್ಞಗಳಕಿಂತಲು ಜ್ಞಾನಯಜ್ಞವೇ ಶ್ರೇಯಶಸ್ಕರವು. ಸರ್ವಕರ್ಮಗಳು ಕೂಡ ಜ್ಞಾನವಾದಾಗ ಪೂರ್ಣ ಫಲಕವಾದವೆನಿಸುವವು. ಅಂತಹ ಜ್ಞಾನವನ್ನು ತತ್ತ್ವಜ್ಞರೆನಿಸಿ ಪ್ರಖ್ಯಾತರಾದ ವೈಷ್ಣವಾಚಾರ್ಯವರ್ಯರನ್ನು ಸೇವಿಸಿ, ಅವರ ದಿವ್ಯೋಪದೇಶದಿಂದ ಸಂಪಾದಿಸು ! ಜ್ಞಾನದಿಂದಲೇ ಅಜ್ಞಾನದ ನಾಶ. ಜ್ಞಾನವಾಗಲು ನಿನಗೆ ನನ್ನ ಸರ್ವಾಧಾರತ್ವ, ಸರ್ವ, ಕರ್ತೃತ್ವ, ಸರ್ವಸ್ವಾಮಿತ್ವ ರೂಪವಾದ ಮಹಿಮೆಯ ಅಪರೋಕ್ಷವಾಗುವುದು.

ಜ್ಞಾನವು ಹಡಗಿನಂತೆ ಸಂಸಾರದ ಪಾಪಸಾಗರವನ್ನು ದಾಟಿಸಿ ಬಿಡುವುದು ; ಅಗ್ನಿಯಂತೆ ಪಾಪಕರ್ಮಗಳನ್ನು ಸುಟ್ಟುಬಿಡುವುದು. ಜ್ಞಾನಕ್ಕೆ ಸಮನಾದ ಶ್ರೇಯಸ್ಸಾಧನವಿನ್ನೊಂದಿಲ್ಲ. ಇಂದ್ರಿಯಜಯ, ಶ್ರದ್ಧೆ ಭಕ್ತಿ - ಇವು ಉಳ್ಳವನಿಗೆ ಜ್ಞಾನವು ಲಭಿಸುವುದು. ಅಜ್ಞಾನಿಯು ಸಂಸಾರ ಗಹನದಲ್ಲಿ ನಷ್ಟವಾಗುವನು. ಅನ್ಯಥಾ ಜ್ಞಾನಿಯು ತಮಸ್ಸನ್ನು ಸೇರಿ ದುಃಖಿ ಭಾಜನನಾಗುವನು. ತತ್ತ್ವ ವಿಷಯಕ ಸಂಶಯವಂತನಿಗೆ ಈ ಲೋಕ ಪರಲೋಕಗಳ ಸುಖವಿಲ್ಲ.

ಆದುದರಿಂದ ಜ್ಞಾನಯೋಗವನ್ನು ಆವಲಂಬಿಸಿ, ಸಂಶಯಾದಿ ಪಾಶಗಳನ್ನು ಕಡಿದು, ವಿಹಿತ ಕರ್ಮವನ್ನು ಮಾಡು !

## ೬. ಶ್ರೀ ಭಗವದ್ಗೀತೆ ೫. ಸನ್ಯಾಸ ಯೋಗ

ಅರ್ಜುನನು "ಶ್ರೀಶ ! ಫಲಕಾಮನಾದಿವರ್ಜನ ರೂಪವಾದ ಸನ್ಯಾಸವನ್ನೂ ವಿಹಿತ

ಕರ್ಮಾನುಷ್ಠಾನವೆಂಬ ಯೋಗವನ್ನೂ ಹೇಳಿರುವೆ. ಅವುಗಳಲ್ಲಿ ಯಾವುದು ಅಧಿಕ ಫಲಪ್ರದವೋ ಹೇಳು ! ಸನ್ಯಾಸವೇ ಹೆಚ್ಚೆಂದರೆ ಅದನ್ನೇ ಸ್ವೀಕರಿಸಿ, ಕಾಮದ್ವೇಷಯುತವಾದ ಯುದ್ಧವೆಂಬ ವಿಹಿತಕರ್ಮವನ್ನು ಬಿಟ್ಟುಬಿಡುತ್ತೇನೆ. ಅಥವಾ ಸನ್ಯಾಸವೆಂದರೆ ಜ್ಞಾನಪ್ರಧಾನ ಯತ್ಯಾಶ್ರಮ, ಯೋಗವೆಂದರೆ ಕರ್ಮಪ್ರಧಾನ ಗೃಹಸ್ಥಾಶ್ರಮ ಎಂದಾದರೆ ನಾನು ಶ್ರೇಷ್ಠವಾದ ಸನ್ಯಾಸವನ್ನೇ ಸ್ವೀಕರಿಸುತ್ತೇನೆ" ಎಂದು ಕೇಳಿದನು.

ಶ್ರೀಕೃಷ್ಣನು 'ಅರ್ಜುನ ! ಸನ್ಯಾಸವೆಂದರೆ ಯತ್ಯಾಶ್ರಮವಲ್ಲ; ನಾ ಪೇಳುವ ಯೋಗವೂ ಗೃಹಸ್ಥಾಶ್ರಮವೆಂದಲ್ಲ, ಸನ್ಯಾಸವೆಂದರೆ ದುಷ್ಟ ಕಾಮಾದಿವರ್ಜನ: ಯೋಗವೆಂದರೆ ಶ್ರೀಶಗರ್ಪಿಸಲು ಮಾಡುವ ವಿಹಿತ ಕರ್ಮಾನುಷ್ಠಾನವೆಂದು ತಿಳಿ ! ಇವುಗಳಲ್ಲಿ ಯಾವುದನ್ನು ಬಿಡಲಿ, ಯಾವುದನ್ನು ಮಾಡಲಿ ? ಎಂಬ ಪ್ರಶ್ನೆಯೇ ಇಲ್ಲ, ಅವೆರಡೂ ಕಲೆತು ಮೋಕ್ಷಫಲ ಸಾಧಕವೆಂದು ತಿಳಿ ! ರಾಗದ್ವೇಷಗಳನ್ನು ಬಿಟ್ಟವನೇ ನಿತ್ಯ ಸನ್ಯಾಸಿಯು; ಸುಖದುಃಖಾದಿಗಳಿಂದಾಗುವ ಮನೋ ವಿಕಾರಕ್ಕೆಡೆಗೊಡದೆ ಅವನು ಸುಖವಾಗಿ ಕರ್ಮಬಂಧ ಮುಕ್ತನಾಗುವನು. ರಾಗದ್ವೇಷ ವರ್ಜನವನ್ನೇ ವೈರಾಗ್ಯವೆಂಬರು. ಅದರಂತೆ ಅವಶ್ಯ ಕರ್ಮಾನುಷ್ಠಾನ ರೂಪಯೋಗವು ಕೂಡ ಜ್ಞಾನ ಸಾಧನವಾಗಿದೆ. ಜ್ಞಾನಮಾರ್ಗ ಕರ್ಮಮಾರ್ಗಗಳೆಂದರೆ ವಿರುದ್ಧ ಮಾರ್ಗಗಳಲ್ಲ. ಅವುಗಳಲ್ಲಿ ಒಂದನ್ನಾದರೂ ಚನ್ನಾಗಿ ಮಾಡಿದವನು ಎರಡರ ಫಲವಾದ ಮೋಕ್ಷವನ್ನು ಪೊಂದುವನು. ಹೇಗೆಂದರೆ ಕರ್ಮದಲ್ಲಿ ಜ್ಞಾನವಿಲ್ಲದಿಲ್ಲ, ಜ್ಞಾನವೂ ಕರ್ಮಸಹಿತವಾಗೇ ಇದೆ. ಕರ್ಮಯೋಗಿಗಳು ಕೂಡ ಜ್ಞಾನದ್ವಾರಾ ಸಿದ್ಧಿಯನ್ನು ಪೊಂದುವರು. ಅವರಿಗೆ ಜ್ಞಾನಾಧಿಕಾರವಿದೆ. ಯತಿಗೆ ಕೂಡ ಜ್ಞಾನದಂತೆ ಉಪಾಸನಾದಿ ಕರ್ಮಾಧಿಕಾರವೂ ಇದೆ. ಮಾಡಿದ ಕರ್ಮಗಳ ಫಲವನ್ನು ಶ್ರೀಶನಿಗರ್ಪಿಸುವುದೇ ಅವರ ಕರ್ಮಯೋಗ ಕರ್ಮವನ್ನು ಜ್ಞಾನಕ್ಕೆ ಸಾಧನವಾಗುವಂತೆ ಫಲಾಸಕ್ತಿ ಇಲ್ಲದೆ ಮಾಡುವನು ಜ್ಞಾನವನ್ನೂ ಹೊಂದುವನು. ಪರಮಾತ್ಮ ಸಮರ್ಪಣೆ ಮಾಡುವ ಯೋಗ್ಯಕರ್ಮಾನುಷ್ಠಾನವಿಲ್ಲದಿರೆ, ಕೇವಲ ಕಾಮಾದಿ ವರ್ಜನ ರೂಪ ಸನ್ಯಾಸವು ಪುರುಷಾರ್ಥ ಸಾಧನವಾಗಲಾರದೆ, ದುಃಖವನ್ನೇ ತಂದೊಡ್ಡುವುದು.

ಶ್ರೀಶನು ಸರ್ವಾಂತರ್ಯಾಮಿ, ಎಂದು ವಿಹಿತಕರ್ಮವನ್ನು ಮಾಡಿದ ವೈರಾಗ್ಯ ಭಕ್ತಿಭರಿತನಿಗೆ ಕರ್ಮಲೇಪನವಿಲ್ಲ. ದರ್ಶನ, ಶ್ರವಣ, ಭೋಜನ, ಗಮನ, ಸ್ಪರ್ಶನ, ಗಂಧಗ್ರಹಣ, ನಿದ್ರಾಶ್ವಸನ, ಭಾಷಣ, ವಿಸರ್ಜನ, ಗ್ರಹಣ, ಮೈಥುನ ಮೊದಲಾದ ಸರ್ವ ವ್ಯಾಪಾರಗಳಲ್ಲಿಯು, ನಾನು ಸ್ವತಂತ್ರನಲ್ಲ; ಶ್ರೀಹರಿಯೇ ಸ್ವತಂತ್ರನು: ಅವನಿಂದ ಪ್ರೇರಿತರಾದ ತತ್ವದೇವತೆಗಳಿಂದ ನಡೆಸಲ್ಪಡುವ ಇಂದ್ರಿಯಗಳು, ಕರ್ಮಾನುರೂಪವಾಗಿ ಬಂದ ವಿಷಯಗಳನ್ನು ಸ್ವೀಕರಿಸುತ್ತಿವೆ - ಎಂದು ಅನುಸಂಧಾನವನ್ನು ಪಡೆದವನು ಪದ್ಮಪತ್ರವು ನೀರಿನಲ್ಲಿದ್ದೂ ಲೇಪವಿಲ್ಲದಿರುವಂತೆ, ಸಂಸಾರದಲ್ಲಿದ್ದೂ ಕರ್ಮಲೇಪವಿಲ್ಲದಿರುವನು. ಕರ್ಮಯೋಗಿಯು ತ್ರಿಕರಣ ಶುದ್ಧಿಯಿಂದ ಮಾಡಿದ ಕರ್ಮಗಳನ್ನೂ ಫಲವನ್ನು ಬಿಟ್ಟು ಶ್ರೀಹರಿಗೆ ಸಮರ್ಪಿಸಿ, ಫಲಾಪೇಕ್ಷೆಯನ್ನು ಪರಿವರ್ಜಿಸಿ, ಅಂತಃಕರಣ ಶುದ್ಧಿಯನ್ನು ಪಡೆದು, ಯೋಗ್ಯಶ್ರವಣಾದಿಗಳನ್ನು ಮಾಡಿ ಜ್ಞಾನಿ ಎನಿಸುವನು.

ಅಭಿಮಾನದಿಂದ ದುಃಖ; ಅಭಿಮಾನ ವರ್ಜನದಿಂದ ಸುಖ. ಇದನ್ನರಿತ ಕಾಮಾದಿವರ್ಜನ ರೂಪ ಸನ್ಯಾಸಕ್ಕೆ, ಭಗವದರ್ಪಣ ಬುದ್ಧಿಯಿಂದ ಮಾಡುವ ವಿಹಿತ ಕರ್ಮಾನುಷ್ಠಾನ ರೂಪಯೋಗವು ಜೋಡಾದರೆ ಆಗ ಜ್ಞಾನದ್ವಾರಾ ಸ್ವರೂಪಾನಂದಾವಿರ್ಭಾವವೆಂಬ ಮುಕ್ತಿಯು ಸಿಗುವುದು. ಶ್ರೀಹರಿಯೇ ನನ್ನಲ್ಲಿ ನಿಂತು ಮುಖ್ಯ ಪ್ರಾಣಾದಿ ದೇವತೆಗಳ ದ್ವಾರಾ, ನನ್ನ ಶ್ರೇಸ್ಸಿಗಾಗಿಯೇ, ಸರ್ವಶುಭಕರ್ಮಗಳನ್ನು ಮಾಡಿಸುತ್ತಿರುವನೆಂದು ತಿಳಿದು, ವಿಹಿತಕರ್ಮವನ್ನು ಬಿಡದೆ, ಜಿತೇಂದ್ರಿಯನಾಗಿ, ಮಾಡಿದ ಯೋಗಿಯು, ನವದ್ವಾರಗಳುಳ್ಳ ಮನುಜ ದೇಹದಲ್ಲಿ ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮಲೇಪವಿಲ್ಲದವನಾಗಿ ಸುಖವಾಗಿರುವನು.

ಜೀವನಿಗೆ ಕರ್ಮ ಮಾಡುವಲ್ಲಿ ಸ್ವಾತಂತ್ರ್ಯವಿಲ್ಲ, ಕರ್ಮದ ಫಲವನ್ನು ಆಶಿಸಿ ಪಡೆಯುವಲ್ಲಿ ಸ್ವಾತಂತ್ರ್ಯವಿಲ್ಲ. ಶ್ರೀಹರಿಯೇ ಸ್ವತಂತ್ರನು, ಸರ್ವಜ್ಞನಾದ ಶ್ರೀಶನಿಗೆ ಜೀವನಿಗೇನಿತ್ತರೆ ಹಿತವಾಗುವುದೋ ಗೊತ್ತು. ಶ್ರೀಹರಿಯು ಸ್ವತಂತ್ರನಾದುದರಿಂದಲೇ ಯಾರ ಪುಣ್ಯ-ಪಾಪಗಳ ಸಂಬಂಧವೂ ಅವನಿಗಿಲ್ಲ. ಜೀವರು ಅಸ್ವತಂತ್ರರಾದುದರಿಂದ ಸರ್ವ ಸ್ವಾಮಿಯನ್ನು ತಿಳಿಯದೆ, ಅಜ್ಞಾನದಿಂದ ಕರ್ಮಬದ್ಧರಾಗಿ, ಫಲಾಶದಿಂದ ಹುಟ್ಟಿ ಸಾಯುತ್ತಾ, ಸಂಸರಿಸುವರು. ಜ್ಞಾನವನ್ನು ಸಂಪಾದಿಸಿ, ಶ್ರೀಹರಿ ಭಕ್ತರಾದವರು, ಸಕಲ ಪಾಪ ದೂರರಾಗಿ, ಮುಕ್ತರಾಗುವರು. ಅವರ ಜ್ಞಾನವು ಸೂರ್ಯನಂತೆ ಅಜ್ಞಾನತಮವನ್ನು ಕಳೆಯಲು ಸಮರ್ಥವಾಗಿ ಬೆಳಗುತ್ತಿರುವುದು. ಶ್ರೀಹರಿಯನ್ನೇ ಸ್ಮರಿಸುತ್ತಾ, ಅವನೇ ಸ್ವಾಮಿ, ಮುಖ್ಯ ಪ್ರಾಣವಲ್ಲಭನೇ, ನನಗೆ ಗತಿ, ಎಂಬ ಅನುಸಂಧಾನವು ಸಂತತವಾದಾಗ ಅಪರೋಕ್ಷಜ್ಞಾನವಾಗುವುದು. ಅಂತಹ ಜ್ಞಾನಿಗಳು ತಮ್ಮ ಜ್ಞಾನಬಲದಿಂದ ಸರ್ವಪಾಪಗಳನ್ನು ನಾಶಮಾಡಿಕೊಂಡು ಶ್ರೀಶಾನುಗ್ರಹದಿಂದ - ಪ್ರಾರಬ್ಧವನ್ನೂ ಅನುಭವಿಸಿ ಕಳೆದುಕೊಂಡು, ಹಿಂದಿರುಗಿ ಬಾರದ ವೈಕುಂಠಾದಿ ಲೋಕಗಳಲ್ಲಿ ಮುಕ್ತರಾಗಿ ಸುಖವಾಗಿರುವರು. ಅಂತಹ ಜ್ಞಾನಿಗಳು ಸಂಸಾರಾವಸ್ಥೆಯಲ್ಲಿಯು, ಶ್ರೀಹರಿಗೆ ಸ್ವಗತ ಭೇದವಿಲ್ಲವೆಂದು ತಿಳಿದು ಸರ್ವತ್ರ, ಜ್ಞಾನಾನಂದಾದಿ ಗುಣಗಳಿಂದ ಶ್ರೀಶನು ತನಗೇ ತಾನೇ ಸಮನೆಂದು ಕಾಣುತ್ತಾ, ಶ್ರೀ ರಮಣನಿಗೆ ಸಮ ಅಂದರೆ ಮಾಯಾದೇವೀ ಸಹಿತನೆಂಬರೆಂದು ಮನವರಿತು, ಎಲ್ಲೆಲ್ಲಿದ್ದರೂ ನಿರ್ದೋಷನಾದುದರಿಂದ ಶ್ರೀಹರಿಯನ್ನು ಸಮನೆಂಬರೆಂದು ನಂಬಿ, ಭಜಿಸುವರು. ಬ್ರಾಹ್ಮಣನಲ್ಲಿ, ಚಂಡಾಲನಲ್ಲಿ; ಆನೆಯಲ್ಲಿ, ನೊಣದಲ್ಲಿ; ಆಕಳಿನಲ್ಲಿ, ನಾಯಿಯಲ್ಲಿ; ಎಲ್ಲ ಕಡೆಯು ಶ್ರೀಶನು ನಿರ್ದೋಷಗುಣಪೂರ್ಣನಾಗೇ ಇರುವನು. ಶ್ರೀಶನಿಗೆ ಸ್ವಗತ ಭೇದವಿಲ್ಲ; ಅಧಿಷ್ಠಾನಭೇದವಿದೆ: ಅದನ್ನರಿತು ತಕ್ಕಂತೆ ಪೂಜಿಸುವವನೇ ವಿದ್ವಾಂಸನು.

ವಿದ್ವಾಂಸನು ಶ್ರೀಹರಿಯು ಗುಣಪೂರ್ಣನೆಂದು ತಿಳಿಯಬೇಕು. ಎಲ್ಲ ಇಂದ್ರಿಯ ಸುಖಗಳೂ ಕೊನೆ ಉಳ್ಳವುಗಳು ಮತ್ತು ದುಃಖವನ್ನೇ ಪುಟ್ಟಿಸಿ ಪೋಗುವವು ; ಶರೀರಪಾತವಾಗದ ಮುನ್ನ ಇಂದ್ರಿಯಗಳನ್ನು ಜಯಿಸಿ, ಕಾಮಕ್ರೋಧಗಳ ವೇಗವನ್ನು ತಡೆದು, ಶಾಂತನಾಗಿ ಶ್ರೀಹರಿಯನ್ನು ಭಜಿಸಿದ ಜ್ಞಾನಿಯು ಬೇಗನೆ ಮುಕ್ತನಾಗುವನು. ಅಂತಹವನಿಗೆ ಕಾಮಾದ್ಯುಪದ್ರವಗಳ ಉಪಟಳ ನಿಂತು ಅಂತಹವನಿಗೆ ಸ್ವರೂಪ

ಸುಖವಾಗುವುದು. ಭಗವದ್ದರ್ಶನದಿಂದ ಅಮಿತ ಸುಖವನ್ನು ಹೊಂದಿ ಜ್ಞಾನಿಯು ಹೊರಪ್ರಪಂಚವನ್ನೆಲ್ಲ ಮರೆತಿರುವನು. ಅದನ್ನೇ ಅಸಂಪ್ರಜ್ಞಾತ ಸಮಾಧಿ ಎಂಬುವರು. ಆಗಲೇ ಅಂತಹ ಚಿರಕಾಲದ ಸಮಾಧಿಯಲ್ಲಿ ಶ್ರೀಶನ ಅಪರೋಕ್ಷವಾಗುವುದು. ಅಂತಹ ಜ್ಞಾನಿಗೆ ಕರ್ಮಫಲದ ಭಯವಿಲ್ಲ, ರಾಗ ದ್ವೇಷಗಳ ಕಾಟವಿಲ್ಲ, ಅನ್ಯಥ್ಯಾಜ್ಞಾನದ ಸೋಂಕಿಲ್ಲ ಮನಸ್ಸಿನ ಪರಿದಾಟವಿಲ್ಲ. ಸರ್ವದೇಶಕಾಲಗಳಲ್ಲಿಯು ಶಶ್ವದೇಕಪ್ರಕಾರನಾಗಿರುವ ಗುಣಪೂರ್ಣನು, ಪ್ರಾಕೃತ ದೇಹೇಂದ್ರಿಯ ರಹಿತನು, ತನ್ನ ಸ್ವಾಮಿಯು, ಮುಖ್ಯಪ್ರಾಣಾಂತರ್ಯಾಮಿಯು ಆದ ಶ್ರೀಹರಿಯ ನಿರಂತರ ದರ್ಶನದಿಂದ ಜನಿತವಾದ ಆನಂದದಿಂದ ತುಂದಿಲನಾಗಿ, ಅವನು ಶ್ರೀಹರಿರಕ್ಷಿತನಾಗಿ ನಿಶ್ಚಿಂತನಾಗಿರುವನು.

ಶ್ರೋತ್ರಾದಿಂದ್ರಿಯ ವಿಷಯಗಳು ದುಃಖಸಂಪಾದಕಗಳೆಂದು ಅವನ್ನು ಇಂದ್ರಿಯಗಳಿಂದ ದೂರ ಮಾಡಿ, ಪ್ರತ್ಯಾಹಾರದಿಂದ ಇಂದ್ರಿಯಗಳನ್ನು ಜಯಿಸಿ, ಭ್ರೂಮಧ್ಯದ ನಾಸಿಕಾಗ್ರವನ್ನವಲೋಕಿಸುತ್ತಾ, ಪ್ರಾಣಾಪಾನಗಳನ್ನು ವಶಪಡಿಸಿ ಕುಂಭಕದಲ್ಲಿ ತಂದು ಮನಸ್ಸಿನಿಂದ ಶ್ರೀಹರಿಗುಣಗಳನ್ನು ಮಾಣದೆ ನೆನೆದು, ಬುದ್ಧಿಯಿಂದ ಶ್ರೀಶನ ಪಾದಾರವಿಂದ ಸಾನ್ನಿಧ್ಯವನ್ನು ಬೇಡುವ ನರನು ಜೀವನ್ಮುಕ್ತನೆನಿಸುವನು. ಜ್ಯೋತಿಷ್ಟೋಮಾದಿ ಯಜ್ಞಫಲವನ್ನೂ ಕೃಚ್ಛ್ರಚಾಂದ್ರಾಯಣಾದಿ ತಪಃಫಲವನ್ನೂ ಕೈಕೊಂಬ ಸರ್ವಲೋಕದ ಸರ್ವೋತ್ತಮ ಪ್ರಭುವಾದ ಶ್ರೀ ಹರಿಯೇ ಧ್ಯಾನ ವಿಷಯನು. ಅವನು ಸರ್ವಭೂತಗಳಿಗೂ, ಅಂತರ್ಯಾಮಿಯಾಗಿ ಅತ್ಯಂತ ಶ್ರೇಷ್ಠನು, ಅನಿಮಿತ್ತ ಬಂಧವು ಆಗಿರುವನು. ಅವನನ್ನು ಅಂತು ತಿಳಿದವನೇ ಮುಕ್ತನಾಗುವನು.

## ೧೦. ಶ್ರೀ ಭಗವದ್ಗೀತೆ ೬. ಆತ್ಮಸಂಯಮಯೋಗ (ಧ್ಯಾನಯೋಗ)

ಶ್ರೀ ಭಗವಂತನಿಂತೆಂದನು.

'ಅರ್ಜುನ ! ಕರ್ಮಫಲದಲ್ಲಿ ಆಸಕ್ತಿಯನ್ನು ಬಿಟ್ಟು, ವರ್ಣಾಶ್ರಮ ವಿಹಿತ ಕರ್ಮಗಳನ್ನು ಮಾಡುವವನೇ ಸನ್ಯಾಸಿ; ಅವನೇ ಯೋಗಿ. ಎಲ್ಲ ಕ್ರಿಯೆಗಳನ್ನು ಬಿಟ್ಟ ಮಾತ್ರಕ್ಕೆ, ಅವನು ಸನ್ಯಾಸಿ ಆಗುವುದಿಲ್ಲ. ಸನ್ಯಾಸವೆಂಬುದು ಯೋಗದ ಪೂರ್ವ ಭಾವಿಯಾದ ಒಂದು ಅವಶ್ಯಕಭಾಗಃ ಸಂಕಲ್ಪವಿಟ್ಟು ಅಂದರೆ ಕಾಮಾದಿ ವರ್ಜನವಿಲ್ಲದೆ ಕರ್ಮಮಾಡುವನು ಯೋಗಿ ಅಂದರೆ ಜ್ಞಾನೋಪಾಯವಂತನಾಗಲಾರನು.

ಸ್ವಯೋಗ್ಯ ಸಂಪೂರ್ಣನಾದ ಜ್ಞಾನವನ್ನು ಬೇಡುವ ಪರೋಕ್ಷ ಜ್ಞಾನಿ, ಅಂತಃಕರಣಶುದ್ಧಿಗಾಗಿ ಕರ್ಮವನ್ನು ಮಾಡಲೇಬೇಕು. ಆಗ ಅಪರೋಕ್ಷಜ್ಞಾನ. ಅಂದ-ಮೇಲೆ ಅಪರೋಕ್ಷವಾಗುವವರೆವಿಗೂ, ಕರ್ಮವನ್ನು ಮಾಡುವುದು ಅವಶ್ಯವಾಗಿದೆ. ಅಪರೋಕ್ಷಜ್ಞಾನವಾದ ಮೇಲೆ ಮಾಡುವ ಧ್ಯಾನ ವಾಖ್ಯಾನ ಪೂಜಾದಿ ಕರ್ಮವು ಮೋಕ್ಷದಲ್ಲಿ ಸುಖಾತಿಶಯಕ್ಕೆ ಕಾರಣವಾಗುವುದರಿಂದ ಅನಾವಶ್ಯಕವಲ್ಲ. ಜ್ಞಾನಾರ್ಥಿಯಾದವನು ಉತ್ತಮಾಧಮಮಧ್ಯಮರಾಗಿರುವ ಸುಜನರ ಶುಶ್ರೂಷೆ ಎಂಬ ಕರ್ಮವನ್ನು ತತ್ತದ್ಯೋಗ್ಯತೆಗೆ

ತಕ್ಕಂತೆ ಮಾಡುವುದವಶ್ಯವೆಂದು ತಿಳಿ! ಜ್ಞಾನಿಯು ಸ್ವೋತ್ತಮ ಸೇವೆಯಿಂದಲೇ ಕೃತಕೃತ್ಯನಾಗಿರುವನು. ಪ್ರಯತ್ನವಿಲ್ಲದೆ ಇಂದ್ರಿಯಗಳು ವಿಷಯಗಳತ್ತ ಓಡದಿರುವಂತೆ ನಿಗ್ರಹಿಸಿ ನಡೆಯುವನು ಯೋಗಾರೂಢನು. ಅವನೇ ಅಪರೋಕ್ಷಜ್ಞಾನವಂತನೆನಿಸುವನು.

ವಿಷಯಾಸಕ್ತವಾದ ಮನಸ್ಸೇ ಶತ್ರುವಾಗುವದು. ಅದೇ ಮನಸ್ಸು ಶ್ರೀಹರಿಸಕ್ತವಾದರೆ ಬಂಧುವಾಗಿ ಮೋಕ್ಷಾದಿ ಹಿತವನ್ನು ತಂದುಕೊಡುವದು. ಆದುದರಿಂದ ಮನಸ್ಸಿನಿಂದ ಶ್ರೀಶನನ್ನು ಧ್ಯಾನಿಸಿ ಜೀವನು ತಾನಾಗಿ, ತನ್ನನ್ನು ಉದ್ಧರಿಸಿಕೊಂಡು ಸಕಲಪುರುಷಾರ್ಥಭಾಜನನಾಗಬೇಕು. ಮನಸ್ಸಿನಿಂದ ಕುವಿಷಯಗಳನ್ನು ನೆನೆಯುತ್ತಾ ನರಕಭಾಜನನಾಗಬಾರದು. ಮನೋಜಯವಂತನು ಶಾಂತನಾಗಿರುವನು. ಶೀತೋಷ್ಣ ಸುಖದುಃಖ ಮಾನಾಪಮಾನಗಳೆಂಬ ದ್ವಂದ್ವಗಳೊದಗಿದಾದ ಅವನು ಮನೋವಿಕಾರವನ್ನು ಹೊಂದುವುದಿಲ್ಲ. ಲೋಷ್ಟಾಶ್ಮಕಾಂಚನಗಳ ಪ್ರಾಪ್ತಿಯಿಂದ ಅವನಿಗೆ ವಿಕಾರವಿಲ್ಲ. ಸುಹೃನ್ಮಿತ್ರಶತ್ರುಮಧ್ಯಸ್ಥರು, ತಾವಾಗಿ ಅಂತಾಗಲು ಸ್ವತಂತ್ರರಲ್ಲ. ಅವರಲ್ಲಿ ಶ್ರೀಹರಿಯು ಕರ್ಮಸಮಫಲವನ್ನು ಕೊಡಲು ತತ್ತದ್ಯೋಗ್ಯವಾಗಿ ಶತ್ರುತ್ವ ಮಿತ್ರತ್ವಗಳನ್ನು ಪುಟ್ಟಿಸುತ್ತಿರುವ ಸ್ವತಂತ್ರ ಪ್ರಭುವೆಂದು ತಿಳಿದವನು ಉತ್ತಮ ಯೋಗಿಯು. ಅಂತಹವನು ದೇವಮಾನವ ದಾನವ ಜೀವರಲ್ಲಿ ಶಾಸ್ತ್ರ ವಿಹಿತವರ್ತನಾಗಿ, ಮಿತ್ರನು ಉದಾಸೀನನು, ಶತ್ರುವು ಆಗಿ ಸಮನೆನಿಸುವನು. ಅಂತಹ ಯೋಗಿಯು ಧ್ಯಾನಸಕ್ತನಾಗಿರುವನು.

ಯೋಗಿಯು ಏಕಾಂತದಲ್ಲಿ, ಏಕಾಗ್ರಮನಸ್ಕನಾಗಿ, ಸುಖಸ್ಥಿರವಾದ ಆಸನವನ್ನು ಹಾಕಿಕೊಂಡು, ಭಕ್ತಿಯಿಂದ ಭಯವಿಲ್ಲದೆ, ವೈರಾಗ್ಯ ಬಲದಿಂದ ಮನುಸ್ಸು ವಿಷಯಗಳಲ್ಲಿ ಬಿಡದೆ, ಜ್ಞಾನಬಲದಿಂದ ನನ್ನಲ್ಲಿಟ್ಟು ನನ್ನ ಕಲ್ಯಾಣ ತಮರೂಪವನ್ನೇ ಚಿಂತಿಸಬೇಕು. ಆಸನವೂ ತಗ್ಗೂ ಎತ್ತರವೂ ಅಲ್ಲದೆ ಸಮವಾಗಿರಬೇಕು. ದೇಶವು ಶುಚಿಯಾಗಿರಬೇಕು. ಮೊದಲು ಕುಶಾಸನ, ಅದರ ಮೇಲೆ ಅಜಿನ, ಅದರ ಮೇಲೆ ವಸ್ತ್ರವಿರಬೇಕು. ದೇಹವು ಬಾಗದೆ ಸ್ಥಿರವಾಗಿರಬೇಕು. ಯೋಗಿಯು ಧ್ಯಾನಕಾಲದಲ್ಲಿ ತನ್ನ ಮೂಗಿನ ಮೇಲ್ತುದಿ ಎಂದರೆ ಭ್ರೂಮಧ್ಯ ಪ್ರದೇಶವನ್ನು ನೋಡುತ್ತಾ ದಿಕ್ಕುಗಳಿಗೆ ದೃಷ್ಟಿಯನ್ನು ಹರಿಬಿಡದಿರಬೇಕು. ಅಂತಹ ಯೋಗಿಯು ನನ್ನ ಪ್ರಸಾದದಿಂದ ಪರಮ ಸುಖ ರೂಪ ಮೋಕ್ಷವನ್ನು ಪೊಂದುವನು.

ತಿಂಡಿಬಾಕನಿಗೆ ಯೋಗವಿಲ್ಲ. ಉಣದೇ ಬಿಟ್ಟವನಿಗೆ ಏಕಾಗ್ರತೆ ಇಲ್ಲ. ಅತಿ ನಿದ್ರೆ ಮಾಡುವನಿಗೂ, ಸದಾ ಎಚ್ಚರದಿಂದಿರುವವನಿಗೂ ಯೋಗವು ಕೈಗೂಡುವುದಿಲ್ಲ. ಆಹಾರವಿಹಾರಾದಿಗಳಲ್ಲಿ ಮಿತವಾಗಿರುವವನಿಗೆ ಧ್ಯಾನಯೋಗವು ಸುಕರವಾಗುವುದು. ಯೋಗದಲ್ಲಿ ಹಿಡಿದ ಮನವು ನಿರ್ವಾತಸ್ಥಲದಲ್ಲಿರುವ ದೀಪದಂತೆ ಹೊಯ್ದಾಡದೆ, ಶಾಂತವಾಗಿರುವುದು. ಇಂದ್ರಿಯಗಳಿಂದಲ್ಲದೆ ಬುದ್ಧಿಯ ಪ್ರಸನ್ನತೆಯಿಂದ ಶ್ರೀಹರಿ ದರ್ಶನವಾದಾಗ, ಅವನು ಹೊರಗಿನ ಪ್ರಪಂಚವನ್ನು ಮರೆವನು. ಶ್ರೀಹರಿಚರಣಾರವಿಂದ ದರ್ಶನ ಸುಖದಕಿಂತಲು ಹೆಚ್ಚಾದ ಸುಖವು ಅವನಿಗಿಲ್ಲ. ಆಗ ಅವನು ಎಂತಹ ದುಃಖವು ಬಂದರೂ ವಿಕಾರವನ್ನು ಹೊಂದುವುದಿಲ್ಲ. ಧ್ಯಾನದಿಂದ ಚಲಿಸುವುದಿಲ್ಲ. ದುಃಖದ ವಿಕಾರವಾಗದಂತೆ ಮಾಡಿಕೊಳ್ಳುವ ಶಕ್ತಿ ಅವನಿಗೆ ಉಂಟಾಗಿರುತ್ತದೆ.

ಧ್ಯಾನವು ಸಿಗಬೇಕಾದರೆ, ಕಾಮವರ್ಜನ ರೂಪ ವೈರಾಗ್ಯವು ಅತ್ಯಂತಾವಶ್ಯಕವು. ಸಂಕಲ್ಪದಿಂದ ಹುಟ್ಟುವ ದುಷ್ಟಕಾಮುಗಳನ್ನು ಪೂರ್ಣವಾಗಿ ಬಿಟ್ಟು, ಮನದಿಂದ ಇಂದ್ರಿಯಗಳನ್ನು ವಿಷಯಗಳತ್ತ ಓಡದಂತೆ ನಿಗ್ರಹಿಸಿ, ಮೆಲ್ಲ ಮೆಲ್ಲಗೆ ಬುದ್ಧಿ ಬಲದಿಂದ ಶ್ರೀಶನನ್ನು ಚಿಂತಿಸುವವನಿಗೆ ಧ್ಯಾನ ಸಿದ್ಧಿಯಾಗುವುದು. ಅವನು ಪಾಪರಹಿತನಾಗಿ, ಪರಬ್ರಹ್ಮನ ಅಪರೋಕ್ಷದಿಂದ ಅನಂತ ಸುಖವನ್ನು ಪೊಂದುವನು.

ಶ್ರೀಹರಿಯು ಸರ್ವ ಭೂತಾಂತರ್ಯಾಮಿಯಾಗಿರುವನು. ಎಲ್ಲ ಭೂತಗಳು ಶ್ರೀಶನ ಆಧಾರದಿಂದ ಜೀವಿಸುತ್ತಿವೆ. ಶ್ರೀಹರಿಗೆ ಸ್ಥಾನಭೇದದಿಂದಾಗುವ ಸ್ವಗತ ಭೇದವಿಲ್ಲ; ಇಂತು ಚಿಂತಿಸಿ ಧ್ಯಾನಿಸಬೇಕು. ಶ್ರೀಹರಿ ಭಕ್ತರಿಗೆ ಸುಖೇಚ್ಛೆ-ತನ್ನಂತೆಯೇ ಇರುವುದು. ತನ್ನಂತೆಯೇ ಅವರಿಗೂ ದುಃಖವೂ ಅಪ್ರಿಯವಾಗುವುದು. ಎಂದ ಮೇಲೆ ತಾನು ಅವರಿಗೆ ಅಪ್ರಿಯವನ್ನು ಮಾಡಬಾರದು. ತಿಳಿದು ನಡೆಯುವವನೇ ಜ್ಞಾನಿವರನು.

ಅರ್ಜುನನು, 'ಶ್ರೀಶ ! ನೀನು ಪೇಳಿದ ಧ್ಯಾನಯೋಗವು ದುಸ್ಸಾಧ್ಯವೆಂದು ತೋರುತ್ತಿದೆ. ಏಕೆಂದರೆ ಮನಸ್ಸು ಚಂಚಲವಾಗಿದೆ. ದೇಹೇಂದ್ರಿಯಗಳ ಕ್ಷೋಭವನ್ನು ತಂದೊಡ್ಡಿ ವಶವಾಗದಿರುವ ಸ್ವಭಾವ ಅದರದು; ವಿಷಯವಾಸನೆಯಿಂದ ಕಟ್ಟಿ ಮನಸ್ಸನ್ನು ಸಾಧು ವಿಷಯಗಳಲ್ಲಿ ಅಂದರೆ ಧ್ಯಾನಾದಿಗಳಲ್ಲಿ ಇಡುವುದು ಅಶಕ್ಯವಾಗಿದೆ. ಗಾಳಿಯನ್ನು ಕಟ್ಟಿಡಲಾಗದಂತೆ ಮನಸ್ಸನ್ನು ಜಯಿಸುವುದು ಕಷ್ಟ. ಅದನ್ನು ನಿನ್ನಲ್ಲಿ ನಿಲ್ಲಿಸುವುದೆಂತು ?' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು :

'ನಿಜ ! ಅರ್ಜುನ ಮನಸ್ಸು ಅತಿ ಚಂಚಲವಾಗಿದೆ. ಆದರೂ ಅದನ್ನು ವೈರಾಗ್ಯ ಬಲದಿಂದ ನಿರ್ಬಂಸಿ, ಅಭ್ಯಾಸದಿಂದ ಶ್ರೀಹರಿಯಲ್ಲಿ ಮೆಲ್ಲನೆ ಇಡಬಹುದು. ಮನೋಜಯವಿಲ್ಲದವನಿಗೆ ಧ್ಯಾನವೇ ಇಲ್ಲ. ಆದುದರಿಂದ ಮನವನ್ನು ನಿಗ್ರಹಿಸಿ, ಧ್ಯಾನಯೋಗವನ್ನು ಸಾಧಿಸಬೇಕು.'

ಅರ್ಜುನನು ಮತ್ತೆ 'ಶ್ರೀಶ ! ಧ್ಯಾನದ ಮಧ್ಯದಲ್ಲಿ ಮನವು ಚಂಚಲವಾಗಿ, ಧ್ಯಾನವು ಕೆಟ್ಟುಹೋಗುತ್ತಿರುವುದು. ಅವನಿಗೆ ಜ್ಞಾನವಾಗುವುದೋ ಇಲ್ಲವೊ ? ಹೇಳು ! ಗಾಳಿಗೆ ಕೆಡುವ ಮೇಘದಂತೆ, ಅವನು ಧ್ಯಾನಯೋಗದಿಂದ ಭ್ರಷ್ಟನಾಗುವನೇನು ? ನಿನ್ನ ಹೊರತಿನ್ನಾರೂ ನನ್ನ ಸಂಶಯವನ್ನು ಬಿಡಿಸಬಲ್ಲವರಿಲ್ಲ' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು :

'ಪಾರ್ಥ ! ಧ್ಯಾನಯೋಗಿಗೆ ಒಂದು ವೇಳೆ ವಿಘ್ನಗಳು ಬಂದರೂ, ಅವನಿಗೆ ಇಲ್ಲಿ ಹಾನಿಯಿಲ್ಲ; ಅಲ್ಲಿ ಪಾಪವಿಲ್ಲ. ಶುಭಕಾರ್ಯವನ್ನು ಮಾಡಿದವನಿಗೆ ದುರ್ಗತಿಯಾಗುವುದಿಲ್ಲ. ಪುಣ್ಯವಂತನಾದ ಅವನು ಪುಣ್ಯದ ಸುಖಲೋಕಗಳಲ್ಲಿ ಬಹು ಕಾಲವಿದ್ದು ಮತ್ತೆ ಶುಚಿ ಶ್ರೀಮಂತರ ಅಥವಾ ಶ್ರೀಮಂತ ಶುಚಿಗಳ, ಅಂದರೆ ಜ್ಞಾನಿಗಳ ಕುಲದಲ್ಲಿ ಹುಟ್ಟುವನು. ಇಂತಹ ಅಭಿಜಾತ್ಯವು ದುರ್ಲಭವೆಂದು ತಿಳಿ ! ಅಷ್ಟೇ ಸಾಲದು. ಅಲ್ಲಿ ಕೂಡ ಅವನು ಸಂಸ್ಕಾರದಿಂದ ಬಂದ ಧ್ಯಾನವನ್ನು ಅಭ್ಯಾಸ ಬಲದಿಂದ ತನಗೆ

ತಾನಾಗಿ ಮುಂದುವರಿಸಿ, ಕೊನೆಗೆ ಮುಕ್ತನಾಗುವನು. ಯೋಗದ ಬಲವುಳ್ಳವನು ವೇದದ ವಿಧಿನಿಷೇಧಗಳಿಗೆ ಅತೀತನಾಗಿ, ಸ್ವಭಾವದಿಂದಲೇ ಶ್ರೀಶರತನಾಗಿ ಪಾಪಮುಕ್ತನಾಗುವನೆಂದ ಮೇಲೆ, ಯೋಗಸಿದ್ಧನು ಮುಕ್ತಪ್ರಾಯನೆಂದು ಹೇಳಬೇಕೆ?

ಅಗ್ನಿಷ್ಟೋಮಾದಿ ಯಾಗವನ್ನು ಮಾಡಿದವರಕಿಂತಲು ಧ್ಯಾನಯೋಗಿಯೇ ಲೇಸು. ಕೃಚ್ಛ್ರ ಚಾಂದ್ರಾಯಣಾದಿ ತಪೋಯುಕ್ತರಾದರೂ ಧ್ಯಾನವಿಲ್ಲದ ಅಯೋಗಿ ಜ್ಞಾನಿಗಳಿಗೂ ಧ್ಯಾನವುಳ್ಳ ಜ್ಞಾನಿಯು ಲೇಸು. ಧ್ಯಾನಯೋಗವು ಕರ್ತೃ ಜ್ಞಾನಯೋಗಗಳ ಕೊನೆ ಮೆಟ್ಟಿಲಾಗಿ, ಉತ್ತಮವೆನಿಸಿದೆ. ಅಪರೋಕ್ಷ ಜ್ಞಾನವನ್ನು ಪಡೆಯಲು ಸಾಧನವಾದುದು ಧ್ಯಾನಯೋಗವೇ ಎಂದು ತಿಳಿ ! ಎಲ್ಲ ಯೋಗಿಗಳ ಮಧ್ಯದಲ್ಲಿ ಶ್ರದ್ಧಾಸಹಿತನಾಗಿರುವ ನನ್ನ ಭಕ್ತನೇ ಉತ್ತಮನು. ಭಕ್ತರಲ್ಲಿಯೂ ನನ್ನ ಸೇವಾರತನು ಯುಕ್ತತರನು. ಅವರಲ್ಲಿಯೂ ಫಲಕಾಮನೆಯನ್ನು ಬಿಟ್ಟು ನನ್ನ ಪ್ರೀತಿಗಾಗಿಯೇ ನನ್ನನ್ನು ಸೇವಿಸುವ ಏಕಾಂತ ಭಕ್ತನು ಯೋಗಿಜನೋತ್ತಮನು.

## ೧೦. ಶ್ರೀ ಭಗವದ್ಗೀತೆ ೭. ಜ್ಞಾನವಿಜ್ಞಾನ ಯೋಗ

ಶ್ರೀ ಭಗವಂತನಿಂತೆಂದನು :

'ಅರ್ಜುನ ! ಭಕ್ತಿಯಿಂದ ನನ್ನನ್ನು ಭಜಿಸುವವನಿಗೆ ಸಂಶಯಗಳು ದೂರವಾಗಿ, ನಿಜವಾದ ಜ್ಞಾನವು ಲಭಿಸುವುದು. ಮನುಜ ದುರ್ಲಭವಾದ ಜ್ಞಾನ ವಿಜ್ಞಾನಗಳನ್ನು ನಿನಗೆ ಹೇಳುವೆನು. ಜ್ಞಾನಕ್ಕಾಗಿ ಯತ್ನಿಸುವ ಮನುಜರಲ್ಲಿ ಸಾವಿರದಲ್ಲಿ ಒಬ್ಬನಿಗೆ ತತ್ವಜ್ಞಾನವಾಗುವುದು.

ನನ್ನಿಂದ ಪ್ರೇರಿತವಾಗಿ ಪ್ರಕೃತಿಯು ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು ಬುದ್ಧಿ ಅಹಂಕಾರ, (ಮಹತ್ತು) ಎಂದು ಎಂಟು ವಿಧವಾಗಿದೆ. ಮಹತ್ತೂ ಕಲೆತು ಒಂಭತ್ತು ವಿಧವಾಗಿರುವ ಜಡ ಪ್ರಕೃತಿಯೇ ಅಲ್ಲದೆ, ಅದಕ್ಕೆ ಸ್ವಾಮಿನಿಯು, ಭಿನ್ನಳೂ, ಜೀವರನ್ನು ಧರಿಸುವುದರಿಂದ ಜೀವನಾಮಕಳು, ಮುಕ್ತರಿಗೂ ಉತ್ತಮಳು ಆದ ಲಕ್ಷ್ಮೀದೇವಿಯೂ ನನ್ನ ವಶವೆಂದು ತಿಳಿ! ಆಕೆ ಜೀವರನ್ನು ಪಡೆಯುವ ತಾಯಿಯಾಗಿರುವಳು; ನಾನು ತಂದೆಯಾಗಿರುವೆನು. ನಾನೇ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುವ ಸ್ವತಂತ್ರ ಪ್ರಭುವು. ಧನಂಜಯ ! ನನಕಿಂತಲೂ ಉತ್ತಮರಿಲ್ಲ, ನನ್ನಲ್ಲಿ ಜೀವ ಜಡಾತ್ಮಕ ಜಗವೆಲ್ಲವೂ - ಸೂತ್ರದ ಆಧಾರದಿಂದ ನಿಂತಿರುವ ಮಣಿಗಣದಂತೆ, ಬೀಳದೆ, ಚನ್ನಾಗಿ ನಿಂತಿದೆ. ಜಲದಲ್ಲಿ ರಸ ಸ್ವರೂಪನು ನಾನು. ಸೂರ್ಯಚಂದ್ರರ ಕಾಂತಿ ನನ್ನದು-ನಾನಿತ್ತದ್ದು. ವೇದಗಳಲ್ಲಿ ಪ್ರಣವನು (ಓಂ) ಆಕಾಶದಲ್ಲಿ ಶಬ್ದ ಶಬ್ದನಿಯಾಮಕನು. ನಾನು; ಮನುಜರಲ್ಲಿ ಪ್ರಾಗಲ್ಭ್ಯ ವಿಶೇಷವಿರುವುದೆನ್ನಿಂದ ಪೃಥ್ವಿಯಲ್ಲಿ ಶುಭಗಂಧನು ನಾನೇ, ಅಗ್ನಿಗೆ ತೇಜವನ್ನು ನಾನಿತ್ತಿರುವೆನು. ಸರ್ವಭೂತಗಳ ಜೀವನವನ್ನು ನಡೆಸುವನು ನಾನು. ಎಲ್ಲ ಸುಗುಣಗಳ ಸ್ವಾಮಿಯು ನಾನೆಂದು ತಿಳಿ ! ಬುದ್ಧಿವಂತರ ಬುದ್ಧಿ ತೇಜೋವಂತರ ತೇಜ, ಬಲವಂತರ ಬಲ, ಎಲ್ಲವೂ ಕಾಮರಾಗರೂಪದೋಷದ

ಸೋಂಕಿಲ್ಲದ ನನ್ನ ಬುದ್ಧಿ ತೇಜೋಬಲಗಳ ಭಿನ್ನಾಂಶಗಳೆಂದೂ, ನಾನಿಲ್ಲದೆ ಅವೂ ಇಲ್ಲವೆಂದೂ ತಿಳಿ ! ನಾನು ಧರ್ಮವಿರುದ್ಧವಾದ ಕಾಮದಲ್ಲಿ ಸುಖಪ್ರದನಾಗಿರುವೆನು.

ಸಾತ್ವಿಕರಾಜಸತಾಮಸವೆಂಬ ಮೂರು ವಿಧ ಪದಾರ್ಥಗಳು ನನ್ನಿಂದ ಸೃಷ್ಟವಾಗಿ, ನನ್ನ ಆಧಾರದಿಂದ ನಿಂತಿವೆ; ನನ್ನನ್ನು ಉಪಜೀವಿಸಿ, ನನ್ನಿಂದ ಪ್ರೇರಿತವಾಗಿ, ನನ್ನ ಅಧೀನವಾಗಿವೆ. ಅವನ್ನು ಆಧಾರಿಸಿ ನಾನು ನಿಂತಿಲ್ಲ. ಇಂತು ತ್ರಿಗುಣ ವಿಕಾರವಸ್ತುಗಳಿಂದ ಆಕರ್ಷಿತವಾಗಿ ಜಗವು ಮೋಹ ಮಗ್ನವಾಗಿರುವುದು. ಸತ್ವರಜಸ್ತಮೋಗುಣಗಳ ದೇಹವು ಬರಲು, ಅಹಂಕಾರ ಮಮಕಾರಗಳಿಂದ ಕೂಡಿ, ಅಜ್ಞಾನಿಗಳಾದ ಜನರು, ತಮ್ಮಂತೇ ನಾನೂ ಜೀವನೆಂದು ತಿಳಿಯುವರು; ಅವರು ನನ್ನ ಸರ್ವೋತ್ತಮತ್ವವನ್ನರಿಯದಿರುವರು. ಇದು ನನ್ನ ಬಂಧಕ ಶಕ್ತಿಯ ಪ್ರಭಾವ. ಅರ್ಜುನಾ ! ನನ್ನನ್ನು ಪೂರ್ಣವಾಗಿ ನಂಬಿ, ಶರಣಾಗತರಾದವರು. ಈ ನನ್ನ ಬಂಧಕ ಶಕ್ತಿಯನ್ನು (ಮಾಯೆಯನ್ನು) ದಾಟಿ, ಪಾರಾಗಿ ಜ್ಞಾನಿಗಳೆನಿಸಿಸುವರು. ಅಸುರ ಸ್ವಭಾದವರು ನನ್ನ ಮಾಯೆಗೆ ಸಿಲುಕಿ, ಸಂಸಾರದಲ್ಲಿ ನರಳುವರು: ಕೊನೆಗೆ ತಮಸ್ಸಿಗೆ ಬೀಳುವರು. ಅವರ ಸ್ವಭಾವಕ್ಕೆ ತಕ್ಕ ಗತಿಯು ಅವರಿಗಾಗುವುದು ಸಹಜವಲ್ಲವೇ ?

ಅರ್ಜುನ ! ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ನಾಲ್ಕು ವಿಧ ಭಜಕರಿರುವರು. ಅವರಲ್ಲಿ ಜ್ಞಾನಿಯೇ ಶ್ರೇಷ್ಠನು. ಅವನೆಂದರೆ ನನಗೆ ಬಲು ಪ್ರೀತಿ. ಅವನಿಗೆ ನನ್ನಕಿಂತಲು ಪ್ರೀತಿ ಪಾತ್ರವಿನ್ನೊಂದಿಲ್ಲ. ಸಂಸಾರ ದುಃಖಗಳಿಂದ ನೊಂದು ಜ್ಞಾನಕ್ಕಾಗಿ ಆರ್ತನಾದವನು ಜಿಜ್ಞಾಸುವಾಗುವನು. ಅವನು ಇತರ ವಸ್ತುವನ್ನು ಬಿಟ್ಟು ಪರಮಾರ್ಥ ಸತ್ಯವಾದ ಜಗತ್ತಿಗೆ ಪ್ರಭುವಾದ ಶ್ರೀಹರಿಯೇ ಅರ್ಥ (ಬೇಡಲು ಯೋಗ್ಯ) ಎಂದು ತಿಳಿವನು. ಅಂತಹ ವೈರಾಗ್ಯ ಭಕ್ತಿಭರಿತನಿಗೆ ಜ್ಞಾನವು ಸಿಗುವುದು. ಅಂತಹವನು ಬಲು ಜನುಮಗಳ ಸಾಧನ ಸಂಪೂರ್ತಿಯಾದ ಮೇಲೆ, ಶ್ರೀವಾಸುದೇವನೇ ಸರ್ವ ಕಲ್ಯಾಣಗುಣ ಪೂರ್ಣನು, ಅವನೇ ಸರ್ವ ಸ್ವಾಮಿಯು, ಶ್ರೀ ಬದರೀನಾಥನೇ ಸರ್ವಾಂತರ್ಯಾಮಿಯು ಎಂದು ತಿಳಿದು ಮುಕ್ತನಾಗುವನು. ಇಂತಹ ಜ್ಞಾನಿಯು ದುರ್ಲಭನು.

ಬಹುಜನರು ಕಾಮಗಳನ್ನು ಬೇಡಿ, ಇತರ ದೇವತೆಗಳನ್ನು ಭಜಿಸುವರು. ಭಗವಂತನ ಸರ್ವೋತ್ತಮತ್ವವನ್ನು ತಿಳಿಯದೆ: ಅನೇಕ ವಿಧಾಗಮಗಳಲ್ಲಿ ಹೇಳಿದ ನಿಯಮಗಳನ್ನು ಅವಲಂಬಿಸಿ, ಅವರು ಅನ್ಯ ದೇವತೆಗಳನ್ನು ಭಜಿಸುವರು, ರಾಜಸರು ವಿಷ್ಣುತತ್ವಜ್ಞಾನವಿಲ್ಲದೆ, ತಾಮಸರಂತೆ ವಿಪರೀತಜ್ಞಾನವಿಲ್ಲದೆ ಕಾರಣ ವಿಶೇಷದಿಂದ ಬ್ರಹ್ಮರುದ್ರಾದಿಗಳನ್ನು ಶ್ರದ್ಧೆಯಿಂದ ಪೂಜಿಸುವರು: ಅಂತಹವರ ಅನ್ಯದೇವತಾ ಶ್ರದ್ಧೆಯನ್ನು ನಾನು ಖಂಡಿಸದಿರುವೆನು. ಅವರೂ ಅಂತೆಯೇ ಅನ್ಯದೇವತೆಗಳನ್ನು ಭಜಿಸಿ, ತಮಗೆ ಬೇಕಾದ ಕಾಮಿತಗಳನ್ನು ಪೊಂದುವರು. ಆ ಕಾಮಿತಗಳು ಕೂಡ ಆಯಾ ದೇವತೆಗಳಲ್ಲಿರುವ ನನ್ನಿಂದಲೇ ಎಂದು ತಿಳಿ ! ಇತರ ದೇವತೆಗಳು ಸ್ವತಂತ್ರರಲ್ಲ, ಅವರಿಗೆ ಫಲವನ್ನು ತಾವಾಗಿ ಕೊಡುವ ಸಾಮರ್ಥ್ಯವಿಲ್ಲ. ಸಾತ್ವಿಕರಾದರೆ ಅವರು ಮೊದಲು ಅನ್ಯದೇವತೆಗಳನ್ನು ಭಜಿಸಿ, ಕಾಮಿತಗಳನ್ನು ಪಡೆದರೂ, ಕೊನೆಗೆ ಗುರೂಪದೇಶದಿಂದ ವಿಷ್ಣುತತ್ವಜ್ಞಾನವನ್ನು

ಪೊಂದಿ, ಕಾಮಿತಗಳನ್ನು ಬೇಡುವುದನ್ನು ಬಿಟ್ಟು ವೈರಾಗ್ಯ ಭಕ್ತಿ ಜ್ಞಾನಭರಿತರಾಗಿ, ಶ್ರೀವಿಷ್ಣುವನ್ನೇ ಸರ್ವೋತ್ತಮನೆಂದು ಪೂಜಿಸಿ, ಶ್ರೀ ಹರಿಯ ಪ್ರಸಾದದಿಂದ ಮುಕ್ತರಾಗುವರು. ಇತರ ದೇವತೆಗಳು ಕೊಡುವ ಫಲವೂ ಸ್ವಲ್ಪವಾಗಿರುವುದು ಮತ್ತು ಅದು ಶಾಶ್ವತವೂ ಅಲ್ಲ.

ವಿಷ್ಣೂತ್ಕರ್ಷವನ್ನರಿತೂ, ಇತರ ದೇವಭಜಕರು ಆಯಾ ಬ್ರಹ್ಮರುದ್ರಾದಿ ದೇವತೆಗಳನ್ನೇ ಹೊಂದುವರು. ಶ್ರೀಶ ಭಕ್ತರು ದೇವತೆಗಳ ದ್ವಾರಾ ಶ್ರೀಹರಿ ಲೋಕವನ್ನು ಸೇರುವರು. ಆದುದರಿಂದ ಶ್ರೀಹರಿಯನ್ನು ಪ್ರಧಾನನೆಂದರಿತು ಅರ್ಚಿಸಿ, ಇತರ ದೇವತೆಗಳನ್ನು ಪರಿವಾರವೆಂದು ಪೂಜಿಸುವವನು ಬುದ್ಧಿವಂತನೆಂದು ತಿಳಿ ! ನಾಶರಹಿತನು ಸರ್ವೋತ್ತಮನು ಆದ ನಾರಾಯಣನನ್ನೂ ಜೀವನೆಂದು ತಿಳಿದವರಷ್ಟು ಬುದ್ಧಿ ಹೀನರಿನ್ನಿಲ್ಲ. ಅಂತಹವರ ಬುದ್ಧಿಯನ್ನು ಅಂತೆಯೇ ಪ್ರೇರಿಸುವ ನಾನು ಸ್ವತಂತ್ರನು, ಸರ್ವ ಜೀವ ಪ್ರೇರಕನು, ತತ್ತದ್ಯೋಗ್ಯ ಫಲಪ್ರದನು ಆಗಿರುವೆನು. ಇಂತಹ ತಾಮಸರು ಮೂಢರಾಗಿ ನನ್ನ ಜ್ಞಾನವನ್ನು ಪಡೆಯಲಾರದೆ ದುಃಖಮಯ ತಮಸ್ಸಿನಲ್ಲಿ ಬೀಳುವರು.

ನನ್ನ ಸ್ವರೂಪ ಸಾಮರ್ಥ್ಯ; ದುರ್ಗಾ(ಲಕ್ಷ್ಮೀ) ದೇವಿಯ ಮಾಯಾ, ಪ್ರಕೃತಿ ಬಂಧನ, ಅನಾದ್ಯವಿದ್ಯೆ - ಇವು ಕಾರಣವಾಗಿ ಜೀವರು ನನ್ನನ್ನು ಕಾಣಲಾರರು. ನಾನು ಭೂತವರ್ತಮಾನ ಭವಿಷ್ಯಗಳನ್ನೆಲ್ಲ ಸ್ವತಃ ಪೂರ್ಣವಾಗಿ ತಿಳಿದಿರುವ ಸರ್ವಜ್ಞನು. ನನ್ನನ್ನು ಯಾರೂ ಪೂರ್ಣವಾಗಿ ತಿಳಿಯಲಾರರು. ಯಾರ ಪಾಪವು ಸವೆದಿರುವದೋ, ಯಾರು ತಿತಿಕ್ಷುಗಳೋ, ಯಾರು ದೃಢ ಭಕ್ತಿಯಿಂದ ನನ್ನನ್ನು ಭಜಿಸುವರೋ, ಅಂತಹ ಸುಜೀವರಿಗೆ ನನ್ನ ಜ್ಞಾನವಾಗುವುದು. ಅವರು ಜರಾಮರಣರೂಪ ಸಂಸಾರದ ಬಂಧದಿಂದ ಬಿಡುಗಡೆಯನ್ನು ಬಯಸಿ, ನನ್ನನ್ನು ತಿಳಿದು, ಕೊನೆಗೆ ಮೋಕ್ಷದ ಬೇಡಿಕೆಯನ್ನೂ ಬಿಟ್ಟು ಕೇವಲ ನನ್ನ ಪ್ರೀತಿಗಾಗಿ ಸಕಲ ಸತ್ಕರ್ಮಗಳನ್ನು ಮಾಡುತ್ತಾ, ನನ್ನ ಪ್ರಸಾದ ಪಾತ್ರರಾಗುವರು. ಅಧಿಭೂತ, ಅಧಿದೈವ, ಅಧಿಯಜ್ಞ, ಅಧ್ಯಾತ್ಮನೆಂಬ ರೂಪಗಳಿಂದ ಅಂತರ್ಯಾಮಿಯಾಗಿ ನಿಂತು ನಡೆಸುವ ನನ್ನನ್ನು ಅವರು ಅಂತ್ಯಕಾಲದಲ್ಲಿಯೂ ಸ್ಮರಿಸಿ ಮುಕ್ತರಾಗುವರು.

## ೧೨. ಶ್ರೀ ಭಗವದ್ಗೀತೆ - ೮. ಅಕ್ಷರಬ್ರಹ್ಮ ಯೋಗ

ಅರ್ಜುನನು, 'ಶ್ರೀಕೃಷ್ಣ! ಬ್ರಹ್ಮನ ಲಕ್ಷಣವೇನು ? ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ ಎಂದರೇನು ? ಈ ದೇಹದಲ್ಲಿ ಅಧಿಯಜ್ಞನು ಯಾರು ? ಎಂತಿರುವನು? ನಮಗೆ ಮರಣಕಾಲದಿ ನಿನ್ನ ಸ್ಮರಣೆ ಹೇಗಾಗಲಹುದು ? ಅದರಿಂದ ಫಲವೇನು ? ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು: 'ಅಕ್ಷರನಾದ ನಾನೇ ಬ್ರಹ್ಮನು. ನನಗೆ ಚತುರ್ವಿಧ ನಾಶಗಳೂ ಇಲ್ಲ. ಅಧ್ಯಾತ್ಮನೆಂದರೆ ಜೀವನೂ, ಅವನಿಗೆ ಉಪಕರಿಸುವ ದೇಹ ಚಿತ್ತೇಂದ್ರಿಯಾದಿಗಳೂ ಅಹುದು. ಜೀವಾಂತರ್ಯಾಮಿಯಾದ ಪರಮಾತ್ಮನಿಗೂ ಅಧ್ಯಾತ್ಮನೆಂಬುವರು. ಚೇತನಾಚೇತನ ಸರ್ವವಸ್ತುಗಳನ್ನು ಪುಟ್ಟಿಸುವ ಶ್ರೀಹರಿಯ

ವ್ಯಾಪಾರವೇ ಕರ್ಮವೆನಿಸುವುದು. ಅಧಿಭೂತವೆಂದರೆ ದೇಹೇಂದ್ರಿಯಗಳು ಸ್ವೀಕರಿಸುವ ವಸ್ತುಗಳು. ಅಧಿದೈವತವೆಂದರೆ (ಪುರುಷ) ಜೀವಾಭಿಮಾನಿಗಳಾದ ಸಂಕರ್ಷಣ ಚತುರ್ಮುಖರು ಮತ್ತು ಇಂದ್ರಿಯ ದೇವತೆಗಳೂ ಅಧಿದೈವತರಾಗಿರುವರು. ಅಧಿಯಜ್ಞನೆಂದರೆ ನಾನೇ ಎಂದು ತಿಳಿ ! ದೇಹದಲ್ಲಿದ್ದೂ ಸುಖ ಮಾತ್ರ ಭೋಜನನಾಗಿ, ಸ್ವತಂತ್ರನಾಗಿ ವಿರಾಜಿಸುವ ನನ್ನನ್ನು ಜೀವ ಜಡಭಿನ್ನನೆಂದು ತಿಳಿ ! ನನ್ನನ್ನು ಸರ್ವತ್ರ ವ್ಯಾಪ್ತನೆಂತಲು, ಸ್ವತಂತ್ರನೆಂದೂ, ಸರ್ವ ಜೀವ ನಿಯಾಮಕನು, ಸರ್ವ ದೇಹೇಂದ್ರಿಯಾದಿ ಪ್ರೇರಕನು, ರಮಾಬ್ರಹ್ಮಾದಿ ಸರ್ವದೇವ ವಂದ್ಯನು ಎಂದು ತಿಳಿದು, ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ, ಶರೀರವನ್ನು ಬಿಡುವ ಸುಜೀವನು ನಿರ್ದುಃಖಾನುಭವರೂಪ ಮೋಕ್ಷವನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ. ಏನನ್ನು ಅಂತ್ಯಕಾಲದಲ್ಲಿ ನೆನೆಯುವನೋ, ಜೀವನು ಅದೇ ವಸ್ತುವನ್ನು ಹೊಂದುವನು. ಆದುದರಿಂದ ಸದಾ ನನ್ನನ್ನೇ ಸ್ಮರಿಸು ! ಅಭ್ಯಾಸದಿಂದ ಭಕ್ತಿಯು ಹುಟ್ಟಿ ಹೆಚ್ಚಾಗುವುದು. ಅರ್ಜುನ ! ನನ್ನಲ್ಲಿಡು ನಿನ್ನ ಮನಸ್ಸಿನ ಚಿಂತನವನ್ನು, ಬುದ್ಧಿಯ ಜ್ಞಾನದಿಂದ ನಾನೇ ಗತಿ ಎಂದು ನಿಶ್ಚಯಿಸು ! ಅನನ್ಯ ಚಿಂತನದಿಂದ ಕ್ರಮವಾಗಿ ನನ್ನ ಜ್ಞಾನವಾಗಿ ನನ್ನ ಲೋಕವನ್ನು ಪೊಂದುವೆ !

ಶ್ರೀಶನು - ಸರ್ವಜ್ಞನು, ಅನಾದಿ ನಿತ್ಯನು, ಸರ್ವಪ್ರವರ್ತಕನು, ಅತಿಸೂಕ್ಷ್ಮನು, ಪೋಷಕನು, ಅಚಿಂತ್ಯಾದ್ಭುತ ಮಹಿಮೋಪೇತನು, ಸೂರ್ಯಕೋಟಿ ಪ್ರಕಾಶನು, ಮೃತ್ಯುನಿಯಾಮಕನು - ಆಗಿರುವನೆಂದು ಸದಾ ಚಿಂತಿಸುವ ನನ್ನ ಭಕ್ತನಿಗೆ ನನ್ನ ವೈಕುಂಠ ಧಾಮವು ಸಿಗುವುದು ಯೋಗಧಾರಣದಿಂದ 'ಓಂ' ಎಂಬ ನನ್ನ ಹೆಸರನ್ನು ಉಚ್ಚರಿಸಿ - 'ವೇದವೇದ್ಯ ! ಮುನಿ ಜನ ಶರಣ್ಯ ! ಬ್ರಹ್ಮಾದಿವಂದಿತ ! ಓ ರಮಾಪತೇ!...' ಎಂದು ನನ್ನ ಗುಣಗಳನ್ನು ಚಿಂತಿಸಿ, ಪ್ರಾಣ ಬಿಟ್ಟವನು ಉತ್ತಮ ಲೋಕವನ್ನು ಪೊಂದುವನು. ಅಂತಹ ನಿತ್ಯಭಕ್ತನಿಗೆ ನನ್ನ ಸ್ಮರಣೆಯು ಅಂತ್ಯಕಾಲದಿ ಒದಗಿಸಿ, ನಾನು ಅವನಿಗೆ ಸುಲಭವಾಗಿ ಸಿಗುವೆನು. ನನ್ನ ಲೋಕವನ್ನು ಸೇರಿದವನಿಗೆ ಮತ್ತೆ ಜನನವಿಲ್ಲ; ಮತ್ತೆ ದುಃಖಾದಿಗಳಿಲ್ಲ. ಅಂತಹ ಮಹಾತ್ಮರು ಅಪರೋಕ್ಷಜ್ಞಾನದಿಂದ ನನ್ನನ್ನು ಕಂಡು, ಮುಕ್ತರಾಗಿ, ಮತ್ತೆ ಸಂಸಾರ ಕೂಪದಿ ಬೀಳದೆ, ಸುಖವಾಗಿರುವರು ಕೌಂತೇಯ ! ಮೇರುಸ್ಥ ಬ್ರಹ್ಮ ಸದನದಿಂದ ಆರಂಭಿಸಿ, ಕೆಳಗಿನ ಲೋಕಗಳಲ್ಲಿರುವುದರಿಂದ, ಅವರಿಗೆ ಪುನರ್ಜನ್ಮವಿಲ್ಲ. ಆದರೂ ಅವರು ಕೂಡ ಅಂಶದಿಂದ ಇಳಿದು ಬರುವುದುಂಟು. ಅಂತೆಯೇ ನನ್ನ ವೈಕುಂಠಾದಿ ಲೋಕಗಳನ್ನು ಸೇರಿದವನಿಗೆ ಅಂದರೆ ಮುಕ್ತನಿಗೆ ಮತ್ತೆ ಜನ್ಮವಿಲ್ಲವೆಂದು ನಾನು ಪೇಳಿದೆನು. ಮುಕ್ತನಾಗಲು ನನ್ನ ಪ್ರಸಾದವು ಆವಶ್ಯಕವಾಗಿದೆ. ಅದಕ್ಕಾಗಿ ವಿಹಿತ ಕರ್ಮಾನುಷ್ಠಾನ, ಶಾಸ್ತ್ರ ಶ್ರವಣ, ಭಗವದ್ಧ್ಯಾನ, ಅಂತ್ಯಕಾಲ ಸ್ಮರಣ, ಹರಿಗುರುಭಕ್ತಿ ಇವೆಲ್ಲವು ಅವಶ್ಯಕವಾಗಿವೆ.

ಸಾವಿರಮಹಾಯುಗಗಳಾದರೆ ಬ್ರಹ್ಮದೇವನ ಹಗಲು; ಆ ಚತುರ್ಮುಖನ ಆಯುವು ಎರಡು ಪರಾರ್ಧಗಳು (ನೂರು ವರ್ಷ) ಅಂತಹ ಬ್ರಹ್ಮನನ್ನು ಕೂಡ ಸೃಜಿಸಿ ದ್ವಿಪರಾರ್ಧವಾದ ಮೇಲೆ ಸಂಹರಿಸಿದಾಗ ಪರಬ್ರಹ್ಮನ ರಾತ್ರಿಯಾಯಿತೆಂಬರು. ಅದೂ ಉಪಚರಿತವಾಗಿ ಎಂದು ತಿಳಿ ! ಇಂತು ಬ್ರಹ್ಮಾದಿ ಜಗತ್ಸರ್ಜನ, ಪಾಲನ, ಸಂಹರಣ ಲೀಲಾ ಸುಂದರನಾದ

ಶ್ರೀಹರಿಗೆ ಜನನವಿಲ್ಲ; ಲಯವಿಲ್ಲ. ಅವನು ಸ್ವತಂತ್ರನು. ಇತರ ಜೀವರು ಶರೀರದಿಂದ ನಾಶವಾದರೂ ಅವನು ಯಾವ ವಿಧವಾದ ನಾಶವೂ ಇಲ್ಲದೆ, ಶಶ್ವದೇಕಸ್ವರೂಪನಾಗಿರುವನು. ಜೀವರು ಅವನ ಹಗಲು ಅಂದರೆ ಸೃಷ್ಟಿಕಾಲದಲ್ಲಿ ಬ್ರಹ್ಮಪೂರ್ವರಾಗಿ ಹುಟ್ಟುವರು. ರಾತ್ರಿ ಅಂದರೆ ಪ್ರಳಯವಾದಾಗ ಬ್ರಹ್ಮನ ದ್ವಾರಾ ಲಯವನ್ನು ಹೊಂದುವರು. ಅಂತು ನಾಶವಿಲ್ಲದ ಶ್ರೀಹರಿಯನ್ನು ಅಕ್ಷರನೆಂಬುವರು. ಅಂತಹ ಶ್ರೀಹರಿಯು ವ್ಯಾಪ್ತನಾಗಿ, ಸರ್ವ ಜೀವರಿಗಾಧಾರನಾಗಿರುವನು. ಅವನಲ್ಲಿ ಇತರ ರಮಾದಿ ದೇವತೆಗಳಲ್ಲಿ ಮಾಡುವ ಭಕ್ತಿಗಿಂತ ಹೆಚ್ಚು ಭಕ್ತಿಯನ್ನು ಮಾಡಿದವನು ಮುಕ್ತನಾಗುವನು.

ಅಗ್ನಿ ಅರ್ಚಿ, ಅಹಸ್ಸು ಹುಣ್ಣಿಮೆ, ಶುಕ್ಲಪಕ್ಷ ಉತ್ತರಾಯಣ, ಸಂವತ್ಸರ, ಸೂರ್ಯ, ದಕ್ಷ, ಇಂದ್ರ, ರುದ್ರ, ಸರಸ್ವತೀ ಬ್ರಹ್ಮರನ್ನು ಸೇರಿ, ಅವರ ದಯದಿಂದ ವಿಷ್ಣು ಭಕ್ತನು, ಮರಣಕಾಲದಲ್ಲಿ ಅರ್ಚಿರಾದಿ ಮಾರ್ಗದೇವತೆಗಳನ್ನು ಮೇಲೆ ತಿಳಿಸಿದಂತೆ ಸ್ಮರಿಸಿ, ಕೊನೆಗೆ ಪರಬ್ರಹ್ಮನನ್ನು ಹೊಂದುವನು.

ಧೂಮ, ರಾತ್ರಿ, ಅಮಾವಾಸ್ಯೆ, ಕೃಷ್ಣಪಕ್ಷ, ದಕ್ಷಿಣಾಯಣ, ಚಂದ್ರ ಇತ್ಯಾದಿ ಮಾರ್ಗದಲ್ಲಿ ಪೋಗಿ, ಸ್ವರ್ಗದಲ್ಲಿ ತಾನು ಮಾಡಿದ ಪುಣ್ಯ ಫಲವನ್ನುಂಡು ಪ್ರವೃತ್ತಿ ಕರ್ಮನಿರತನು (ಧೂಮಾಧಿ ಮಾರ್ಗ) ಮತ್ತೆ ಹುಟ್ಟುವನು.

ಆದುದರಿಂದ ಈ ಮಾರ್ಗಗಳಲ್ಲಿ ಮುಕ್ತಿ ಕಾರಣವಾದ ದೇವಯಾನವನ್ನು ಹಿಡಿದು ಮುಕ್ತನಾಗಲು, ಅಜ್ಞಾನ ಲೋಭಾದಿಗಳನ್ನು ಬಿಟ್ಟು ಸದಾ ನನ್ನನ್ನು ಭಕ್ತಿಯಿಂದ ಭಜಿಸು! ಅಪರೋಕ್ಷಜ್ಞಾನಿಯು ಅಂತೇ ತಿಳಿದು, ಎಂದಿಗೂ ನನ್ನನ್ನು ಮರೆಯದಿರುವನು. ಸ್ವವಿಹಿತ ಕರ್ಮಕರಣ, ಫಲಸಮರ್ಪಣ, ಜ್ಞಾನ, ಭಕ್ತಿಗಳನ್ನು ಬಿಟ್ಟರೆ, ಮುಕ್ತಿಗೆ ಬೇರೆ ಉಪಾಯವಿಲ್ಲ. ಭಗವಂತನ ಅಧ್ಯಾತ್ಮಾದಿ ಸ್ವರೂಪವನ್ನು, ಅಶೇಷ ಜಗಜ್ಜನಕತ್ವವನ್ನು ಅರ್ಚಿರಾದಿಮಾರ್ಗಪ್ರಾಪ್ಯತ್ವವನ್ನು ತಿಳಿದ ಮನುಜನು ವೇದಾಧ್ಯಯನ, ಯಜ್ಞಾನುಷ್ಠಾನ ಕೃಚ್ಛ್ರಚಾಂದ್ರಾಯಣಾದಿ ತಪಶ್ಚರಣಗಳಿಂದ ಬರುವ ಪುಣ್ಯ ಫಲದಕಿಂತಲು ಅತಿಶಯ ಫಲವನ್ನು ಪೊಂದುವನು.

## ೧೩. ಶ್ರೀ ಭಗವದ್ಗೀತೆ ೯. ಭಕ್ತಿ-ರಾಜವಿದ್ಯಾ ಯೋಗ

ಶ್ರೀ ಭಗವಂತನಿಂತೆಂದನು :

'ಅರ್ಜುನ ! ಉತ್ತಮಾಧಿಕಾರಿ ಎಂದು ನಿನಗೆ ಮಹಾ ರಹಸ್ಯವಾದ ತತ್ವವನ್ನು ಉಪದೇಶಿಸುವೆನು, ಕೇಳು ! ಭಗವಂತನ ಮಹಿಮೆ ಅತಿ ಚಿತ್ರವಾಗಿದೆ. ಅಸೂಯಾದಿ ದೋಷ ರಹಿತನಿಗೆ ಇದನ್ನು ಹೇಳಬೇಕು. ಇದು ವಿದ್ಯೆಗಳಲ್ಲಿ ಮುಖ್ಯವಾದುದು. ಅತ್ಯಂತ ಗೋಪ್ಯವಾದುದರಿಂದಲೇ ಇದನ್ನು ರಾಜವಿದ್ಯೆ ರಾಜಗುಹ್ಯವೆಂಬುವರು. ಇಂತಹ ಪಾವನ ವಿದ್ಯೆಯಿಂದ ಸರ್ವೇಂದ್ರಿಯ ಪ್ರೇರಕನು ಶ್ರೀಹರಿಯೇ ಎಂಬ ಜ್ಞಾನವಾಗುವುದು. ಭಗವದಪರೋಕ್ಷ ಜ್ಞಾನ ಸಾಧನವಾದ ಪರೋಕ್ಷ

ಜ್ಞಾನವನ್ನು ಪುಟ್ಟಿಸುವ ಈ ವಿದ್ಯೆಯನ್ನು ಕಲಿಯದೆ ಮನುಜರು ಶ್ರದ್ಧಾರಹಿತರಾಗಿ ಜನನಮರಣರೂಪ ಸಂಸಾರದಲ್ಲಿ ನರಳುವರು. ಅವರಿಗೆ ನನ್ನ ಜ್ಞಾನವಾಗುವುದಿಲ್ಲ. ಶ್ರದ್ಧೆಯಿಂದ ಕೇಳು !

ನಾನು ಜಗತ್ತಿನಲ್ಲಿ ತುಂಬಿನಿಂತಿರುವೆನು; ಹೊರಗೂ ಇರುವೆನು, ಆದರೂ ನನ್ನ ಜ್ಞಾನವು ಜೀವರಿಗೆ ಆಗದಿರುವುದೆಂದರೆ ಇದು ಪ್ರಾಕೃತಸ್ಪರ್ಶಾದಿ ರಹಿತನಾದೆನ್ನ ಮಹಿಮೆ ಎಂದು ತಿಳಿ ! ನನ್ನ ದೇಹವು ಬೇರಲ್ಲ ನಾನು ಬೇರಲ್ಲ ನಾನು ಭೂತಗಳನ್ನು ಭರಿಸುವೆನು, ಭೂತಗಳ ಸ್ವಾಮಿಯಾಗಿರುವೆನಾಗಲಿ, ಅವರ ಅಧೀನನಾಗಿಲ್ಲ. ಅಪ್ರಾಕೃತನಾಗಿರುವ ದಿವ್ಯ ಮಂಗಳ ವಿಗ್ರಹನು (ನಾನು), ಜೀವರಿಗಿರುವ ಜನನ, ಮರಣ, ಪ್ರಾಕೃತಸುಖ, ದುಃಖಾದಿ ವಿಕಾರಗಳು ನನಗಿಲ್ಲ. ಆಕಾಶದಂತೆ ಸರ್ವತ ವ್ಯಾಪ್ತನು, ವಾಯುವಿನಂತೆ ನಿರ್ಲಿಪ್ತನು ಆಗಿ ನಾನು ಜೀವರನ್ನು ಸೃಜಿಸುವೆನು. ಅಭಿಮಾನವಿಲ್ಲದ ನನಗೆ ಸೃಷ್ಟ್ಯಾದಿ ಕರ್ಮಗಳಿಂದ ಲೇಪವಿಲ್ಲ. ಸುಖರೂಪನಾದ ನನಗೆ ದುಃಖವಿಲ್ಲ. ನನ್ನ ಅಧೀನಳಾದ ಲಕ್ಷ್ಮಿಯು, ತನ್ನ ಪ್ರಕೃತಿಯ ಮೂರು ಗುಣಗಳಿಂದ ಜಗವನ್ನು ನಿರ್ಮಿಸುವಳು. ನಾನು ಉಪಾದಾನಾದಿ ಕಾರಣಗಳಿಲ್ಲದಿದ್ದರೂ ಜಗವನ್ನು ಸೃಜಿಸಬಲ್ಲೆನು; ಆದರೂ ಶ್ರೀದೇವಿಗೆ ಜಗಜ್ಜನನೀತ್ವವನ್ನು ಕೊಡುವ ನನ್ನ ಸತ್ಯ ಸಂಕಲ್ಪದಂತೆ ಲೀಲೆಗಾಗಿ, ಆಕೆಯ ದ್ವಾರಾ ಸೃಜಿಸುವೆನು. ಸರ್ಜನಾದಿ ವ್ಯಾಪಾರದಿಂದ ನನಗೆ ಪ್ರಯೋಜನವಿಲ್ಲ. ಆಯಾಸವಿಲ್ಲ.

ನಾನು ಸಾಕ್ಷಾತ್ತಾಗಿಯು ಸ್ವತಂತ್ರನಾಗಿಯು ಸೃಜಿಸುವೆನು. ನನ್ನ ಅಧಿಪತ್ಯದಲ್ಲಿರುವ ಲಕ್ಷ್ಮೀದೇವಿಯು ಚರಾಚರ ಜಗವನ್ನು ಗುಣಗಳಿಂದ ಸೃಜಿಸುವಳು. ಇಂತು ನಮ್ಮೀರ್ವರಿಂದ ಜಗತ್ತಿಗೆ ಸೃಷ್ಟಿಲಯಗಳು ಸಂಭವಿಸುವವು. ಸರ್ವಲೋಕ ಪ್ರಭುವು, ಲಕ್ಷ್ಮೀರಮಣನು ಆದ ನನ್ನ ಮಹಿಮೆಯನ್ನರಿಯದೆ, ಮೂಢ ಮನುಜರು ನನ್ನನ್ನೂ ಮನುಜನೆಂದು ತಿಳಿದು-ಕೆಡುವರು. ಮಹಾತ್ಮರಾದ ಸುಜನರು ನನ್ನನ್ನು ಭಕ್ತಿಯಿಂದ ಭಜಿಸುವರು. ವ್ಯರ್ಥಾಭಿಮಾನದಿಂದ, ಕೆಟ್ಟು ಪ್ರವೃತ್ತಾದಿ ಕರ್ಮಗಳನ್ನು ಮಾಡಿ, ನನ್ನ ಯಥಾರ್ಥಜ್ಞಾನವಿಲ್ಲದೆ, ಅಸುರ ಸ್ವಭಾವದ ಜನರು ನಿತ್ಯನರಕವನ್ನು ಪೊಂದುವರು ; ಸುಜನರು ಅಭಿಮಾನ ಬಿಟ್ಟು ನಿವೃತ್ತ ಕರ್ಮವನ್ನೇ ಮಾಡಿ, ನನ್ನನ್ನು ಸರ್ವೋತ್ತಮನೆಂದು ತಿಳಿದು ಮುಕ್ತಿ ಸುಖವನ್ನು ಪೊಂದುವರು.

ಸುಜನರು ನನ್ನ ಕಥೆಯನ್ನು ಶ್ರದ್ಧೆಯಿಂದ ಕೇಳುವರು; ಹೇಳುವರು; ನನಗೆ ನಮಸ್ಕರಿಸುವರು; ತಮ್ಮ ಪುಣ್ಯ ಸುಖಗಳನ್ನು ನನ್ನ ಪ್ರೀತಿಯನ್ನು ಬಯಸಿ, ನನಗೆ ಸಮರ್ಪಿಸುವರು. ಶಾಸ್ತ್ರ ಶ್ರವಣ ಪ್ರವಚನ ರೂಪ ಯಜ್ಞದಿಂದ ನನ್ನನ್ನು ಪೂಜಿಸುವರು. ಒಂದೇ ಆಗಿರುವ ಶ್ರೀನಾರಾಯಣನು, ವಾಸುದೇವಾದಿ ಚತುರ್ಮೂರ್ತಿಯು, ಕೇಶವಾದಿ ಚತುರ್ವಿಂಶತಿ ಮೂರ್ತಿಯು, ಅಜಾದ್ಯನಂತ ಮೂರ್ತಿಯು, ವಿಶ್ವಾದಿ ಸಹಸ್ರ ಮೂರ್ತಿಯು, ಮತ್ಸ್ಯಾದಿ ದಶಮೂರ್ತಿಯು, ಆಗಿ ಸ್ವಗತಭೇದವಿಲ್ಲದೆ, ಲೋಕಕಲ್ಯಾಣಕ್ಕಾಗಿಯು, ದುಷ್ಟ ಶಿಕ್ಷೆಗಾಗಿಯು ಅವತರಿಸುವನೆಂದು ಅವರು ತಿಳಿಯುವರು.

ಶ್ರೀಹರಿಗೆ ಜನನವಿಲ್ಲ; ಲಯವಿಲ್ಲ. ಅವನು ಸ್ವತಂತ್ರನು. ಇತರ ಜೀವರು ಶರೀರದಿಂದ ನಾಶವಾದರೂ ಅವನು ಯಾವ ವಿಧವಾದ ನಾಶವೂ ಇಲ್ಲದೆ, ಶಶ್ವದೇಕಸ್ವರೂಪನಾಗಿರುವನು. ಜೀವರು ಅವನ ಹಗಲು ಅಂದರೆ ಸೃಷ್ಟಿಕಾಲದಲ್ಲಿ ಬ್ರಹ್ಮಪೂರ್ವರಾಗಿ ಹುಟ್ಟುವರು. ರಾತ್ರಿ ಅಂದರೆ ಪ್ರಳಯವಾದಾಗ ಬ್ರಹ್ಮನ ದ್ವಾರಾ ಲಯವನ್ನು ಹೊಂದುವರು. ಅಂತು ನಾಶವಿಲ್ಲದ ಶ್ರೀಹರಿಯನ್ನು ಅಕ್ಷರನೆಂಬುವರು. ಅಂತಹ ಶ್ರೀಹರಿಯು ವ್ಯಾಪ್ತನಾಗಿ, ಸರ್ವ ಜೀವರಿಗಾಧಾರನಾಗಿರುವನು. ಅವನಲ್ಲಿ ಇತರ ರಮಾದಿ ದೇವತೆಗಳಲ್ಲಿ ಮಾಡುವ ಭಕ್ತಿಗಿಂತ ಹೆಚ್ಚು ಭಕ್ತಿಯನ್ನು ಮಾಡಿದವನು ಮುಕ್ತನಾಗುವನು.

ಅಗ್ನಿ, ಅರ್ಚಿ, ಅಹಸ್ಸು ಹುಣ್ಣಿಮೆ, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ಸೂರ್ಯ, ದಕ್ಷ, ಇಂದ್ರ, ರುದ್ರ, ಸರಸ್ವತೀ ಬ್ರಹ್ಮರನ್ನು ಸೇರಿ, ಅವರ ದಯದಿಂದ ವಿಷ್ಣು ಭಕ್ತನು, ಮರಣಕಾಲದಲ್ಲಿ ಅರ್ಚಿರಾದಿ ಮಾರ್ಗದೇವತೆಗಳನ್ನು ಮೇಲೆ ತಿಳಿಸಿದಂತೆ ಸ್ಮರಿಸಿ, ಕೊನೆಗೆ ಪರಬ್ರಹ್ಮನನ್ನು ಹೊಂದುವನು.

ಧೂಮ, ರಾತ್ರಿ, ಅಮಾವಾಸ್ಯೆ, ಕೃಷ್ಣಪಕ್ಷ, ದಕ್ಷಿಣಾಯಣ, ಚಂದ್ರ ಇತ್ಯಾದಿ ಮಾರ್ಗದಲ್ಲಿ ಪೋಗಿ, ಸ್ವರ್ಗದಲ್ಲಿ ತಾನು ಮಾಡಿದ ಪುಣ್ಯ ಫಲವನ್ನುಂಡು ಪ್ರವೃತ್ತಿ ಕರ್ಮನಿರತನು (ಧೂಮಾಧಿ ಮಾರ್ಗ) ಮತ್ತೆ ಹುಟ್ಟುವನು.

ಆದುದರಿಂದ ಈ ಮಾರ್ಗಗಳಲ್ಲಿ ಮುಕ್ತಿ ಕಾರಣವಾದ ದೇವಯಾನವನ್ನು ಹಿಡಿದು ಮುಕ್ತನಾಗಲು, ಅಜ್ಞಾನ ಲೋಭಾದಿಗಳನ್ನು ಬಿಟ್ಟು, ಸದಾ ನನ್ನನ್ನು ಭಕ್ತಿಯಿಂದ ಭಜಿಸು! ಅಪರೋಕ್ಷಜ್ಞಾನಿಯು ಅಂತೇ ತಿಳಿದು, ಎಂದಿಗೂ ನನ್ನನ್ನು ಮರೆಯದಿರುವನು. ಸ್ವವಿಹಿತ ಕರ್ಮಕರಣ, ಫಲಸಮರ್ಪಣ, ಜ್ಞಾನ, ಭಕ್ತಿಗಳನ್ನು ಬಿಟ್ಟರೆ, ಮುಕ್ತಿಗೆ ಬೇರೆ ಉಪಾಯವಿಲ್ಲ. ಭಗವಂತನ ಅಧ್ಯಾತ್ಮಾದಿ ಸ್ವರೂಪವನ್ನು, ಅಶೇಷ ಜಗಜ್ಜನಕತ್ವವನ್ನು, ಅರ್ಚಿರಾದಿಮಾರ್ಗಪ್ರಾಪ್ಯತ್ವವನ್ನು ತಿಳಿದ ಮನುಜನು ವೇದಾಧ್ಯಯನ, ಯಜ್ಞಾನುಷ್ಠಾನ ಕೃಚ್ಛ್ರ ಚಾಂದ್ರಾಯಣಾದಿ ತಪಶ್ಚರಣಗಳಿಂದ ಬರುವ ಪುಣ್ಯ ಫಲದಕಿಂತಲು ಅತಿಶಯ ಫಲವನ್ನು ಪೊಂದುವನು.

## ೧೩. ಶ್ರೀ ಭಗವದ್ಗೀತೆ ೯. ಭಕ್ತಿ-ರಾಜವಿದ್ಯಾ ಯೋಗ

ಶ್ರೀ ಭಗವಂತನಿಂತೆಂದನು :

'ಅರ್ಜುನ ! ಉತ್ತಮಾಧಿಕಾರಿ ಎಂದು ನಿನಗೆ ಮಹಾ ರಹಸ್ಯವಾದ ತತ್ವವನ್ನು ಉಪದೇಶಿಸುವೆನು, ಕೇಳು ! ಭಗವಂತನ ಮಹಿಮೆ ಅತಿ ಚಿತ್ರವಾಗಿದೆ. ಅಸೂಯಾದಿ ದೋಷ ರಹಿತನಿಗೆ ಇದನ್ನು ಹೇಳಬೇಕು. ಇದು ವಿದ್ಯೆಗಳಲ್ಲಿ ಮುಖ್ಯವಾದುದು. ಅತ್ಯಂತ ಗೋಪ್ಯವಾದುದರಿಂದಲೇ ಇದನ್ನು ರಾಜವಿದ್ಯೆ ರಾಜಗುಹ್ಯವೆಂಬುವರು. ಇಂತಹ ಪಾವನ ವಿದ್ಯೆಯಿಂದ ಸರ್ವೇಂದ್ರಿಯ ಪ್ರೇರಕನು ಶ್ರೀಹರಿಯೇ ಎಂಬ ಜ್ಞಾನವಾಗುವುದು. ಭಗವದಪರೋಕ್ಷ ಜ್ಞಾನ ಸಾಧನವಾದ ಪರೋಕ್ಷ

ಜ್ಞಾನವನ್ನು ಪುಟ್ಟಿಸುವ ಈ ವಿದ್ಯೆಯನ್ನು ಕಲಿಯದೆ ಮನುಜರು ಶ್ರದ್ಧಾರಹಿತರಾಗಿ ಜನನಮರಣರೂಪ ಸಂಸಾರದಲ್ಲಿ ನರಳುವರು. ಅವರಿಗೆ ನನ್ನ ಜ್ಞಾನವಾಗುವುದಿಲ್ಲ. ಶ್ರದ್ಧೆಯಿಂದ ಕೇಳು !

ನಾನು ಜಗತ್ತಿನಲ್ಲಿ ತುಂಬಿನಿಂತಿರುವೆನು; ಹೊರಗೂ ಇರುವೆನು, ಆದರೂ ನನ್ನ ಜ್ಞಾನವು ಜೀವರಿಗೆ ಆಗದಿರುವುದೆಂದರೆ ಇದು ಪ್ರಾಕೃತಸ್ಪರ್ಶಾದಿ ರಹಿತನಾದೆನ್ನ ಮಹಿಮೆ ಎಂದು ತಿಳಿ ! ನನ್ನ ದೇಹವು ಬೇರಲ್ಲ ನಾನು ಬೇರಲ್ಲ. ನಾನು ಭೂತಗಳನ್ನು ಭರಿಸುವೆನು, ಭೂತಗಳ ಸ್ವಾಮಿಯಾಗಿರುವೆನಾಗಲಿ, ಅವರ ಅಧೀನನಾಗಿಲ್ಲ. ಅಪ್ರಾಕೃತನಾಗಿರುವ ದಿವ್ಯ ಮಂಗಳ ವಿಗ್ರಹನು (ನಾನು), ಜೀವರಿಗಿರುವ ಜನನ, ಮರಣ, ಪ್ರಾಕೃತಸುಖ, ದುಃಖಾದಿ ವಿಕಾರಗಳು ನನಗಿಲ್ಲ. ಆಕಾಶದಂತೆ ಸರ್ವತ ವ್ಯಾಪ್ತನು, ವಾಯುವಿನಂತೆ ನಿರ್ಲಿಪ್ತನು ಆಗಿ ನಾನು ಜೀವರನ್ನು ಸೃಜಿಸುವೆನು. ಅಭಿಮಾನವಿಲ್ಲದ ನನಗೆ ಸೃಷ್ಟ್ಯಾದಿ ಕರ್ಮಗಳಿಂದ ಲೇಪವಿಲ್ಲ. ಸುಖರೂಪನಾದ ನನಗೆ ದುಃಖವಿಲ್ಲ. ನನ್ನ ಅಧೀನಳಾದ ಲಕ್ಷ್ಮಿಯು, ತನ್ನ ಪ್ರಕೃತಿಯ ಮೂರು ಗುಣಗಳಿಂದ ಜಗವನ್ನು ನಿರ್ಮಿಸುವಳು. ನಾನು ಉಪಾದಾನಾದಿ ಕಾರಣಗಳಿಲ್ಲದಿದ್ದರೂ ಜಗವನ್ನು ಸೃಜಿಸಬಲ್ಲೆನು; ಆದರೂ ಶ್ರೀದೇವಿಗೆ ಜಗಜ್ಜನನೀತ್ವವನ್ನು ಕೊಡುವ ನನ್ನ ಸತ್ಯ ಸಂಕಲ್ಪದಂತೆ ಲೀಲೆಗಾಗಿ, ಆಕೆಯ ದ್ವಾರಾ ಸೃಜಿಸುವೆನು. ಸರ್ಗಾದಿ ವ್ಯಾಪಾರದಿಂದ ನನಗೆ ಪ್ರಯೋಜನವಿಲ್ಲ, ಆಯಾಸವಿಲ್ಲ.

ನಾನು ಸಾಕ್ಷಾತ್ತಾಗಿಯು ಸ್ವತಂತ್ರನಾಗಿಯು ಸೃಜಿಸುವೆನು. ನನ್ನ ಅಧಿಪತ್ಯದಲ್ಲಿರುವ ಲಕ್ಷ್ಮೀದೇವಿಯು ಚರಾಚರ ಜಗವನ್ನು ಗುಣಗಳಿಂದ ಸೃಜಿಸುವಳು. ಇಂತು ನಮ್ಮೀರ್ವರಿಂದ ಜಗತ್ತಿಗೆ ಸೃಷ್ಟಿಲಯಗಳು ಸಂಭವಿಸುವವು. ಸರ್ವಲೋಕ ಪ್ರಭುವು, ಲಕ್ಷ್ಮೀರಮಣನು ಆದ ನನ್ನ ಮಹಿಮೆಯನ್ನರಿಯದೆ, ಮೂಢ ಮನುಜರು ನನ್ನನ್ನೂ ಮನುಜನೆಂದು ತಿಳಿದು-ಕೆಡುವರು. ಮಹಾತ್ಮರಾದ ಸುಜನರು ನನ್ನನ್ನು ಭಕ್ತಿಯಿಂದ ಭಜಿಸುವರು. ವ್ಯರ್ಥಾಭಿಮಾನದಿಂದ, ಕೆಟ್ಟು ಪ್ರವೃತ್ತಾದಿ ಕರ್ಮಗಳನ್ನು ಮಾಡಿ, ನನ್ನ ಯಥಾರ್ಥಜ್ಞಾನವಿಲ್ಲದೆ, ಅಸುರ ಸ್ವಭಾವದ ಜನರು ನಿತ್ಯನರಕವನ್ನು ಪೊಂದುವರು ; ಸುಜನರು ಅಭಿಮಾನ ಬಿಟ್ಟು ನಿವೃತ್ತ ಕರ್ಮವನ್ನೇ ಮಾಡಿ, ನನ್ನನ್ನು ಸರ್ವೋತ್ತಮನೆಂದು ತಿಳಿದು ಮುಕ್ತಿ ಸುಖವನ್ನು ಪೊಂದುವರು.

ಸುಜನರು ನನ್ನ ಕಥೆಯನ್ನು ಶ್ರದ್ಧೆಯಿಂವ ಕೇಳುವರು; ಹೇಳುವರು; ನನಗೆ ನಮಸ್ಕರಿಸುವರು; ತಮ್ಮ ಪುಣ್ಯ ಸುಖಗಳನ್ನು ನನ್ನ ಪ್ರೀತಿಯನ್ನು ಬಯಸಿ, ನನಗೆ ಸಮರ್ಪಿಸುವರು. ಶಾಸ್ತ್ರ ಶ್ರವಣ ಪ್ರವಚನ ರೂಪ ಯಜ್ಞದಿಂದ ನನ್ನನ್ನು ಪೂಜಿಸುವರು. ಒಂದೇ ಆಗಿರುವ ಶ್ರೀನಾರಾಯಣನು, ವಾಸುದೇವಾದಿ ಚತುರ್ಮೂರ್ತಿಯು, ಕೇಶವಾದಿ ಚತುರ್ವಿಂಶತಿ ಮೂರ್ತಿಯು, ಅಜಾದ್ಯನಂತ ಮೂರ್ತಿಯು, ವಿಶ್ವಾದಿ ಸಹಸ್ರ ಮೂರ್ತಿಯು, ಮತ್ಸ್ಯಾದಿ ದಶಮೂರ್ತಿಯು, ಆಗಿ ಸ್ವಗತಭೇದವಿಲ್ಲದೆ, ಲೋಕಕಲ್ಯಾಣಕ್ಕಾಗಿಯು, ದುಷ್ಟ ಶಿಕ್ಷೆಗಾಗಿಯು ಅವತರಿಸುವನೆಂದು ಅವರು ತಿಳಿಯುವರು.

ಯಜ್ಞದ ದೀಕ್ಷೆ, ಹೋಮ, ಮಂತ್ರ, ಆಜ್ಯ, ಅಗ್ನಿ ಆಹುತಿ ಮೊದಲಾದವೆಲ್ಲ ನನ್ನ ಪ್ರೀತಿಗಾಗಿಯೇ ಎಂದು ತಿಳಿ ! ನಾನು ಜಗದ ತಾಯಿ-ತಂದೆ ಗುರು. ನನ್ನನ್ನು ಓಂ ಎಂದು ಕರೆಯುವರು. ಮೂರು ವೇದಗಳು ನನ್ನನ್ನೇ ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದಿಸುತ್ತಿವೆ. ನಾನೇ ಗತಿಪ್ರದನಾದ ಪ್ರಭುವು. ಕರ್ಮಗಳನ್ನು ಸಾಕ್ಷಾತ್ತಾಗಿ ನೋಡಿ, ಯೋಗ್ಯ ಫಲವನ್ನೀವ ಸರ್ವಜ್ಞನು; ಶರಣಾಗತರ ಅನಿಮಿತ್ತ ಬಂಧು, ಪ್ರಲಯ ಸೃಜನಗಳ ಸ್ವತಂತ್ರಕರ್ತ ಸರ್ವಾಧಾರಕನು. ಪ್ರಕೃತಿಯು ತಂದಿತ್ತ ಜಗತ್ತನ್ನು ಹೊಟ್ಟೆಯಲ್ಲಿಟ್ಟು ಪ್ರಳಯವಾದ ಮೇಲೆ, ಅದನ್ನು ಮತ್ತೆ ಹೊರಗೆಡಹುವ ನಿಮಿತ್ತ ಕಾರಣನು, ನಿರ್ವಿಕಾರನು, ನಾನೇ. ನನ್ನಿಂದ ಮಳೆ, ನನ್ನಿಂದ ಬಿಸಿಲು, ನನ್ನಿಂದ ಕಾಂತಿ ; ನನ್ನಿಂದಲೇ ಮೃತ್ಯುರೂಪ ಸಂಸಾರ; ನನ್ನಿಂದ ಮೋಕ್ಷಾನಂದ.

ಇಂತಹ ನನ್ನಿಂದ-ನನ್ನನ್ನು ಯಜ್ಞಾದಿ ಕರ್ಮಗಳಿಂದ ಸಂತೋಷಪಡಿಸಿ, ಸ್ವರ್ಗವನ್ನು ಬೇಡುವರು - ಅವರಿಗೆ ನಾನು ಅದನ್ನೇ ಕೊಡುವೆನು. ಪುಣ್ಯಫಲವು ಸವೆದಾಗ, ಅವರಿಗೆ ಮತ್ತೆ ಜನನ ಮರಣ ರೂಪ ಸಂಸಾರವು ಕಾದಿರುವುದು. ಏನನ್ನೂ ಬೇಡದೆ, ನನ್ನ ಪ್ರೀತಿಯನ್ನು ಬಯಸಿ ಶ್ರೀಮುಖ್ಯ ಪ್ರಾಣಾವತಾರರಾದ ಶ್ರೀ ಮಧ್ವರ ಮತದಂತೆ ನಾನು ಸರ್ವೋತ್ತಮನೆಂದರಿತು ಭಜಿಸುವವರ ಯೋಗಕ್ಷೇಮಗಳನ್ನು ನಾನು ನೋಡಿಕೊಳ್ಳುವೆನು. ಪ್ರವೃತ್ತಿಕರ್ಮ ನಿರತರಾದ ತ್ರೈವಿದ್ಯರು ಅನ್ಯದೇವತೆಗಳನ್ನು ಶ್ರದ್ಧೆಯಿಂದ ಭಜಿಸುತ್ತಾ ಇದ್ದರೂ, ಕೊನೆಗೆ ನನಗೆ ಆ ಕರ್ಮಫಲವನ್ನು ಸಮರ್ಪಿಸುವರಾದುದರಿಂದ, ಅವರೂ ನನ್ನನ್ನೇ ಪೂಜಿಸಿದಂತಾಯಿತು. ಭಾಗವತರು ಸರ್ವಯಜ್ಞಗಳ ಪ್ರಭುವು, ಪ್ರವರ್ತಕ, ತತ್ತದ್ದೇವತಾಂತರ್ಯಾಮಿ, ಸ್ವತಂತ್ರಫಲಪ್ರದನೆಂದು ತಿಳಿದು ಪೂಜಿಸುವರು. ತ್ರೈವಿದ್ಯರು ನನ್ನ ಪುರುಷೋತ್ತಮತ್ವವನ್ನು ಚನ್ನಾಗಿ ತಿಳಿಯದೆ, ಯಜ್ಞಾದಿ ಫಲಪ್ರದರು ಅನ್ಯದೇವತೆಗಳೆಂದು ತಿಳಿದು, ನಶ್ವರ ಸ್ವರ್ಗಾದಿಗಳನ್ನು ಹೊಂದಿ ಮತ್ತೆ ಭೂಮಿಗಿಳಿವರು. ದೇವತೆಗಳ ಪೂಜಕರು ದೇವಲೋಕವನ್ನು ಪಿತೃಯಜ್ಞರತರು ಪಿತೃಲೋಕವನ್ನು, ಯಕ್ಷಮಾತೃಕಾದಿ ಪೂಜಾನಿಷ್ಠರು ಯಕ್ಷಾದಿ ಲೋಕವನ್ನು ಹೊಂದುವರಾಗಲಿ, ನನ್ನ ಭಕ್ತರಂತೆ ವಿಷ್ಣುಲೋಕವು ಅವರಿಗೆ ಸಿಗದು.

ನನ್ನ ಪೂಜೆ ದುಷ್ಕರವಲ್ಲ. ದ್ರೌಪದಿಯಂತೆ ಎಲೆಯನ್ನೋ, ಸುದಾಮ ಗಜರಾಜರಂತೆ ಹೂವನ್ನೋ, ಶಬರಿಯಂತೆ ಹಣ್ಣನ್ನೋ, ರಂತಿದೇವನಂತೆ ನೀರನ್ನೋ, ಭಕ್ತಿಯಿಂದ ಕೊಟ್ಟವರ ಭಕ್ತಿಗೆ ಮೆಚ್ಚಿ ನಾನು ಸ್ವೀಕರಿಸುವೆನು. ಆದುದರಿಂದ ನೀನು ಮಾಡುವ ಭೋಜನ, ಪಾನ, ಹೋಮ, ದಾನ, ಧ್ಯಾನಾದಿ ಸಕಲ ಪುಣ್ಯ ಕರ್ಮಗಳ ಫಲವನ್ನು ಭಕ್ತಿಯಿಂದ ನನಗರ್ಪಿಸು ! ಇದೇ ಸರ್ವ ಪಾಪ ಪುಣ್ಯ ಕರ್ಮಗಳು ಬಂಧಿಸಿ ಮತ್ತೆ ಜನ್ಮ ಕೊಡದಂತೆ ಮಾಡುವ ಸುಗಮೋಪಾಯವು. ಫಲಾಸಕ್ತಿಯಿಲ್ಲದೆ ಮಾಡಿದ ಕರ್ಮಗಳು ಬಂಧಕವಲ್ಲ. ನನಗೆ ವೈಷಮ್ಯವಿಲ್ಲ. ನಾನು ನಿಷ್ಕರುಣನಲ್ಲ. ಆದರೂ ಅವರವರ ಯೋಗ್ಯತೆಗೆ, ಅವರ ಕರ್ಮಗಳಂತೆ ಫಲವನ್ನು ಕೊಡುವ ನಾನು ಸಮನೆಂದು ಖ್ಯಾತನಾಗಿರುವೆನು. ಜೀವರು ಮಾಡುವ ದ್ವೇಷ ಪ್ರೇಮಗಳಷ್ಟೇ ನಾನು ಮಾಡುತ್ತಾ ಹೆಚ್ಚು ಮಾಡದಿರುವೆನು: ಆದುದರಿಂದಲೇ ನನ್ನನ್ನು ಸಮನೆಂಬರು. ಪಾಪಿ ಸಂಗದಿಂದ

ಪಾಪವನ್ನೆಸಗಿದ ಯೋಗ್ಯ ಜೀವರನ್ನು, ನಾನು ಬಿಡದೆ ಕಾಪಾಡಿ, ಪಾಪ ಮುಕ್ತರನ್ನಾಗಿಸುವೆನು. ಕೌಂತೇಯ ! ನನ್ನ ಭಕ್ತನೆಂದಿಗೂ ಹಾಳಾಗನು, ನರಕಾದ್ಯನರ್ಥವನ್ನು ಪೊಂದನು. ದೇವ ಋಷ್ಯಾದಿಗಳು ಅಂತಹ ಭಕ್ತರಾದುದರಿಂದ, ಅವರು ಒಂದು ವೇಳೆ ಪಾಪಾಚಾರವನ್ನೆಸಗಿದರೂ ಅವರಿಗೆ ನರಕವಾಗದಂತೆ, ನಾನು ಕಾಪಾಡುವೆನು. ಸ್ತ್ರೀವೈಶ್ಯಶೂದ್ರಾದಿಗಳು ಕೂಡ, ಪೂರ್ವಪಾಪದಿಂದ ಆ ಜನ್ಮದಲ್ಲಿ ಹುಟ್ಟಿದ್ದರೂ, ಸ್ವರೂಪದಿಂದ ಉತ್ತಮ ಜೀವರಾಗಿದ್ದರೆ, ಅವರು ಕೂಡ ನನ್ನನ್ನು ಭಜಿಸಿ ಮುಕ್ತಿಯನ್ನು ಹೊಂದುವರು ಅಂದ ಮೇಲೆ ಬ್ರಾಹ್ಮಣರು, ರಾಜರ್ಷಿಗಳು-ಭಕ್ತರಾದರೆ ಮುಕ್ತರಾಗುವರೆಂದು ಹೇಳಬೇಕೆ ? ನನಗೆ ಭಕ್ತಿ ಬೇಕು. ಅದಿಲ್ಲದ ದಾನ ಜಪ ತಪೋವಿದ್ಯಾ ಕುಲಯಾತ್ರಾ ವೇದಾಧ್ಯಯನ, ಪ್ರವಚನಾದಿಗಳೆಲ್ಲವು ನನ್ನ ಪ್ರೀತಿಗೆ ಕಾರಣವಲ್ಲ. ಇತರರು ಮಾಡುವ ಭಕ್ತಿಯಿಲ್ಲದ ರತ್ನಾದಿ ಪೂಜೆಗಳಿಂದ ನಾನು ಪ್ರೀತನಾಗದಿರುವೆನು. ಭಕ್ತಿಗೆ ಸಾಧನವಾದ ಮನುಜ ದೇಹವು ಬಂದಾಗ, ಅದು ಅನಿತ್ಯವೆಂದು ತಿಳಿದು, ಬೇಗನೆ ವಿರಕ್ತನಾಗಿ, ಜ್ಞಾನಪೂರ್ವಕವಾದ ಭಕ್ತಿಯಿಂದ, ನನ್ನನ್ನು ಭಜಿಸಿದ ನರನು ಮುಕ್ತನಾಗುವನು.

ಅರ್ಜುನಾ ! ನನ್ನಲ್ಲಿ ಮನವಿಡು ! ನನ್ನ ಪ್ರೀತಿಗಾಗಿ ಕರ್ಮಗಳನ್ನು ಮಾಡು ! ನನ್ನ ಭಕ್ತನಾಗು ! ನನಗೆ ನಮಸ್ಕರಿಸು ! ಕೊನೆಗೆ ನನ್ನ ಲೋಕವನ್ನು ಹೊಂದಿ ಸುಖಿಸುವೆ!'

## ೧೪. ಭಗವದ್ಗೀತೆ ೧೦. ವಿಭೂತಿಯೋಗ.

ಶ್ರೀ ಭಗವಂತನು ನುಡಿದನು :

'ಅರ್ಜುನ ! ನಿನ್ನಲ್ಲಿ ಪ್ರೀತಿಯಿಂದ ನಾನಾಡುವ ಹಿತದ ಮಾತನ್ನು ಕೇಳು ! ಸರ್ವದೇವ ಋಷಿನರಾದಿ ಜೀವರ ಪ್ರಭುವಾದ ನನ್ನ ಮಹಿಮೆಯನ್ನು ಬ್ರಹ್ಮಾದಿ ದೇವತೆಗಳು ಕೂಡ, ಸಾಕಲ್ಯೇನ ತಿಳಿದಿಲ್ಲ. ನಾನು ಸರ್ವೇಶನು, ಪ್ರಾಣಜನಕನು, ಜನ್ಮಾದಿ ದೋಷದೂರನು, ದೇವ ಋಷ್ಯಾದಿ ಸುಜೀವ ವಂದ್ಯನು ಎಂದು ತಿಳಿದವನು ಭ್ರಾಂತಿಹೀನನಾಗಿ, ಸರ್ವಪಾಪಗಳಿಂದ ಮುಕ್ತನಾಗುವನು. ನನ್ನಿಂದ ಜೀವರಿಗೆ-ಬುದ್ಧಿ ಜ್ಞಾನ, ಕ್ಷಮೆ, ಸತ್ಯ, ದಮ, ಶಮ, ಅಹಿಂಸೆ, ತಿತಿಕ್ಷೆ, ಕೀರ್ತಿ, ಅಕೀರ್ತಿ - ಆಗುತ್ತಿರುವವು. ನನ್ನಿಂದಲೇ ಸುಖದುಃಖಗಳು, ನನ್ನಿಂದಲೇ ಭಯಾಭಯಗಳು ಉಂಟಾಗುವವು. ನನ್ನಿಂದ ಬ್ರಹ್ಮಕ್ಷತ್ರಿಯ ವೈಶ್ಯಶೂದ್ರಾದಿ ವರ್ಣಗಳು ತದಭಿಮಾನಿಗಳಾದ ಬ್ರಹ್ಮ, ವಾಯು, ಕುಬೇರ, ಅಶ್ವಿನ್ಯಾದಿ ದೇವತೆಗಳು, ನನ್ನಿಂದ ಸೃಷ್ಟರಾಗುವರು. ಅಂತೇ ಪೂರ್ವಮನ್ವಂತರದ ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬ ಸಪ್ತರ್ಷಿಗಳನ್ನೂ ಬ್ರಹ್ಮಾದಿ ದೇವತೆಗಳ ದ್ವಾರಾ, ನಾನೇ ಸೃಜಿಸಿದೆನು. ಅವರಿಂದ ಎಲ್ಲ ಪ್ರಜರು ನನ್ನ ಪ್ರೇರಣೆಯಂತೆ ಸೃಷ್ಟರಾದರು. ಇಂತು ಸರ್ವಸುರಾದ್ಯುತ್ತಮನಾದ ನನ್ನ ಮಹಿಮೆಯನ್ನು ಅಲ್ಲಲ್ಲಿ ನಿಂತು ಪ್ರೇರಕನಾಗಿರುವ ನನ್ನ ವಿವಿಧ ರೂಪಗಳ ಪ್ರಭಾವವನ್ನು ಚನ್ನಾಗಿ ತಿಳಿದವನ ಧ್ಯಾನಯೋಗವು, ಚಂಚಲವಾಗದೆ, ಸ್ಥಿರವಾಗುವುದು.

ನಾನು ಜಗತ್ತಿನ ಜನನ ಮರಣಗಳನ್ನಲ್ಲದೆ, ನಿಯಮನವನ್ನೂ ಮಾಡುವೆನು.

ನಾನಿರದಿರೆ ಏನೂ ನಡೆಯದು. ನನ್ನನ್ನು ನಿತ್ಯವೂ ಪ್ರೀತಿಪೂರ್ವಕವಾಗಿ, ಶ್ರವಣ ಪ್ರವಚನಗಳಿಂದ ಭಜಿಸುವ ಜ್ಞಾನಿ ಜೀವರಿಗೆ, ನಾನು ಅಪರೋಕ್ಷ ಜ್ಞಾನವನ್ನು ಕೊಡುವೆನು. ಮತ್ತು ಅವರನ್ನು ಸಂಸಾರದಿಂದ ಉದ್ಧರಿಸಿ, ಕಾಪಾಡುವೆನು. ಅವರಲ್ಲಿ ದಯೆದೋರಿ, ಅವರ ಅಜ್ಞಾನದ ಕತ್ತಲನ್ನು-ತತ್ಫಲವಾದ ಸರ್ವಕ್ಲೇಶಗಳನ್ನು ಜ್ಞಾನ ದೀಪದಿಂದ ದಾರಿ ತೋರಿ ದಾಟಿಸಿ, ಮೋಕ್ಷಾನಂದವನ್ನು ದಯಪಾಲಿಸುವೆನು.'

ಅರ್ಜುನನು 'ಪರಮಪುರುಷ ! ನಾರದ ದೇವಲಾಸಿತರು ನಿನ್ನನ್ನು ಸರ್ವೋತ್ತಮ, ಗುಣಪೂರ್ಣ ಪರಮಪಾವನ, ಅನಾದಿ ಮಧ್ಯ ನಿಧನ, ದೇವಾಧಿದೇವ, ಸರ್ವಸ್ವಾಮಿ, ವಿಭೂತಿ ರೂಪಗಳಿಂದ ಶ್ರೇಷ್ಠತ್ವಪ್ರದಾಯಕ ಎಂದು ತಿಳಿದು ಉಪದೇಶಿಸುವರು. ಸ್ವಯಂ ಶ್ರೀ ವ್ಯಾಸರೂಪದಿಂದ ನೀನೂ ಪೇಳಿರುವೆ. ಈಗ ನೀನು ಪೇಳಿದುದೆಲ್ಲ ನಿಜವೆಂಬ ವಿಶ್ವಾಸವೆನಗಿದೆ. ನಿನ್ನನ್ನು ನೀನೇ ತಿಳಿದಿರುವೆ ! ದೇವಮಾನವದಾನವರು ನಿನ್ನನ್ನು ಚನ್ನಾಗಿ ತಿಳಿಯಲಾರರು. ಜಗನ್ನಾಥ ! ನಿನ್ನ ದಿವ್ಯ ವಿಭೂತಿ ರೂಪಗಳನ್ನು ನನಗೆ ತಿಳಿಸಿ ಕೊಡು ! ಎಲ್ಲಿ ಯಾವ ರೂಪದಿಂದ ನಿಯಾಮಕನಾಗಿ, ಎಂತು ನಡೆಸುವೆಯೋ ಎಂಬ ನಿನ್ನ ಮಹಿಮೆಯನ್ನು ಇನ್ನೂ ಹೇಳು ! ನಿನ್ನ ದಿವ್ಯ ಮಹಿಮೆಯನ್ನು ಕೇಳುವ ನನ್ನ ಮನಸ್ಸಿಗೆ ತೃಪ್ತಿ ಇಲ್ಲ. ಅಮೃತದಂತೆ ಸವಿಯಾದ ನಿನ್ನ ಉಪದೇಶದಿಂದ ನನ್ನನ್ನು ಉದ್ಧರಿಸು !' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು :

'ಅರ್ಜುನಾ ! ನನ್ನ ವಿಭೂತಿ ರೂಪಗಳನ್ನೆಲ್ಲ ಹೇಳಲು ಯಾರಿಗೂ ಸಾಧ್ಯವಿಲ್ಲ. ಸಂಗ್ರಹವಾಗಿ ಹೇಳುವೆನು ಕೇಳು ! ಸರ್ವ ಜೀವರಲ್ಲಿಯು ನಾನು ಬಿಂಬನಾಗಿ, ನಿರ್ಲಿಪ್ತನಾಗಿ, ಜೀವಧಾರಕನಾಗಿ, ನಿಂತಿರುವೆನು. ನನ್ನ ವಿಭೂತಿಗಳು ಎರಡು ವಿಧ: ರಾಮ, ಕೃಷ್ಣ ಕಪಿಲ, ಪರಶುರಾಮ, ಮಹಿದಾಸ ಮುಂತಾದವು ಪ್ರತ್ಯಕ್ಷ ರೂಪಗಳು. ಜೀವರಲ್ಲಿ, ಒಂದು ವಸ್ತುವು ಶ್ರೇಷ್ಠವಾಗಿದ್ದರೆ, ಅದಕ್ಕೆ ಆ ಶ್ರೇಷ್ಠತೆಯನ್ನು ಕೊಟ್ಟು ಅದರಲ್ಲಿರುವ ಅಂತರ್ಯಾಮಿ ವಿಭೂತಿ ರೂಪಗಳು ಅಪ್ರತ್ಯಕ್ಷಗಳು. ವಸ್ತುಗಳಿಗೆ ನಾಮರೂಪಕ್ರಿಯೆಗಳು ನನ್ನಿಂದ ಬಂದವಾಗಿವೆ. ಆಯಾ ಜಾತಿಯಲ್ಲಿ ಹೆಚ್ಚಿನವರನ್ನು ಕೇಳು ! ಆ ಹಿರಿಮೆ ನನ್ನ ವಿಭೂತಿ ರೂಪದ ಸಾನ್ನಿಧ್ಯದಿಂದ ಎಂದು ತಿಳಿ !

ಆದಿತ್ಯರಲ್ಲಿ ನಾನು ವಿಷ್ಣುವು (ವ್ಯಾಪ್ತನು); ಜ್ಯೋತಿಗಳಲ್ಲಿ ರವಿ (ವೇದರವದಿಂದ ತಿಳಿಯಲ್ಪಡುವವನು); ಮರುತ್ತುಗಳಲ್ಲಿ ಮರೀಚಿ (ಮರೀ ಎಂಬ ಮೇಘವನ್ನು ಚಾಲನ ಮಾಡುವ ವಾಯು): ನಕ್ಷತ್ರಗಳಲ್ಲಿ ಶಶಿ (ಅತಿ ಸುಖಿ); ವೇದಗಳಲ್ಲಿ ಸಾಮ (ಸರ್ವತ್ರ ಸಮಸುಖಾನಂದರೂಪ); ದೇವತೆಗಳಲ್ಲಿ ವಾಸವ (ಸರ್ವದೇಶಸ್ಥಿತ) ; ಇಂದ್ರಿಯಗಳಲ್ಲಿ ಮನಃ (ಜ್ಞಾನರೂಪ); ಭೂತಗಳಲ್ಲಿ ಚೇತನಾ (ಚೇತೋ ನಿಯಾಮಕ) ; ರುದ್ರರಲ್ಲಿ ಶಂಕರ (ಸುಖಕಾರಣ) ; ಯಕ್ಷರಾಕ್ಷಸರಲ್ಲಿ ವಿತ್ತೇಶ (ವಿತ್ತಸ್ವಾಮಿ) ; ವಸುಗಳಲ್ಲಿ ಪಾವಕ (ಶುದ್ಧಿಕರ್ತಾ) ; ಶಿಖರಗಳಲ್ಲಿ ಮೇರು (ಅನ್ಯಪ್ರೇರಕ ರಹಿತ) ; ಪುರೋಹಿತರಲ್ಲಿ ಬೃಹಸ್ಪತಿ (ದೊಡ್ಡವರಿಗೂ ಸ್ವಾಮಿ) ; ಸೇನಾಪತಿಗಳಲ್ಲಿ ಸ್ಕಂದ (ಜಗನ್ನಿಯಾಮಕ) ; ಸರಸ್ಸುಗಳಲ್ಲಿ

ಸಾಗರ (ಸಾರಭೋಕ್ತಾ) ; ಮಹರ್ಷಿಗಳಲ್ಲಿ ಭೃಗು (ಶತ್ರುಭರ್ಜಕ) ; ಮಾತುಗಳಲ್ಲಿ ಪ್ರಣವ -ಓಂ ಎಂಬ ಏಕಾಕ್ಷರ (ಮುಖ್ಯನು, ನಾಶರಹಿತನು); ಯಜ್ಞಗಳಲ್ಲಿ ಜಪ (ಹುಟ್ಟಿದವರನ್ನು ಪಾಲಿಸುವವನು) ; ಸ್ಥಾವರಗಳಲ್ಲಿ ಹಿಮಾಲಯ (ಹ್ರೀ, - ದುರ್ಗಾಲಕ್ಷ್ಮೀದೇವಿಯರಿಗೆ ಆಶ್ರಯ); ಸರ್ವ ವೃಕ್ಷಗಳಲ್ಲಿ ಅಶ್ವತ್ಥ (ಅಶ್ವದಂತೆ ಇರುವ ಹಯಗ್ರೀವ) ; ದೇವರ್ಷಿಗಳಲ್ಲಿ ನಾರದ (ನರರು ಕೋರುವ ಜ್ಞಾನಾದಿಗಳನ್ನು ಕೊಡುವವನು); ಗಂಧರ್ವರಲ್ಲಿ ಚಿತ್ರ ರಥ (ವಿಚಿತ್ರವಾದ ಅಧಿ ದೇವಾದಿರಥವಂತನು); ಸಿದ್ಧರಲ್ಲಿ ಕಪಿಲ (ಸುಖರೂಪ, ಪಾಲಕ, ಲಯಕರ್ತಾ) ; ಅಶ್ವಗಳಲ್ಲಿ ಉಚ್ಚೈಃಶ್ರವ (ಉತ್ಕೃಷ್ಟ ಕೀರ್ತಿ) ; ಗಜೇಂದ್ರರಲ್ಲಿ ಐರಾವತ (ಐರವೆಂಬ ಅಮೃತ ಸರಸ್ಸಿಗೆ ಸ್ವಾಮಿನಿಯಾದ ಲಕ್ಷ್ಮೀದೇವಿಗೆ ರಕ್ಷಕನು) ; ನರರಲ್ಲಿ ನರಾಧಿಪ (ನರರರಾಜ); ಆಯುಧಗಳಲ್ಲಿ ವಜ್ರ (ಸರ್ವದೋಷ ವರ್ಜಿತ); ಧೇನುಗಳಲ್ಲಿ ಕಾಮಧೇನು (ಕಾಮಿತ ದಾತಾ); ಸರ್ಪಗಳಲ್ಲಿ ವಾಸುಕಿ (ವಾಸ ಸುಖಪ್ರದ); ಪ್ರಜನನ ಕಾರಣರಲ್ಲಿ ಕಂದರ್ಪ (ಸುಖಗಳನ್ನು ಅನುಭವಿಸುವವನು); ನಾಗರಲ್ಲಿ ಅನಂತ (ದೇಶ ಕಾಲ ಗುಣಗಳಿಂದ ಅನಂತನು); ಜಲ ಜಂತುಗಳಲ್ಲಿ ವರುಣ (ಶ್ರೇಷ್ಠ ಸುಖದ) ; ಪಿತೃಗಳಲ್ಲಿ ಅರ್ಯಮಾ (ಎಲ್ಲವನ್ನು ಅರಿತವನು) ; ಶಾಸಕರಲ್ಲಿ ಯಮ (ನಿಯಮನ ಕರ್ತೃ) ; ದೈತ್ಯರಲ್ಲಿ ಪ್ರಹ್ಲಾದ (ಪ್ರಕೃಷ್ಟಾನಂದ); ನಾಶಕರಲ್ಲಿ ಕಾಲ (ಎಲ್ಲವನ್ನೂ ಅಳೆದು ತಿಳಿಯುವವ) ; ಮೃಗಗಳಲ್ಲಿ ಮೃಗೇಂದ್ರ (ಹುಡುಕುವ ಭಕ್ತರ (ಸ್ವಾಮಿ) ; ಪಕ್ಷಿಗಳಲ್ಲಿ ಗರುಡ-ವೈನತೇಯ (ನಮಿಸುವವರಿಗೆ ಸಿಗುವವನು) ; ಬೀಸುವ ವೇಗಿಗಳಲ್ಲಿ ಪವನ (ಶೋಧಕ, ಲೋಕ ಪಾಲಕ ಭಜನೀಯ) ; ಶಸ್ತ್ರಧಾರಿಗಳಲ್ಲಿ ರಾಮ (ಲೋಕ ಸುಖಕಾರಣ); ಮೀನ ಜಾತಿಯಲ್ಲಿ ಮಕರ (ಇತರರ ಜ್ಞಾನವನ್ನು ಅಲ್ಪವಾಗಿರಿಸುವವನು); ನದಿಗಳಲ್ಲಿ ಗಂಗೆ ಜಾಹ್ನವೀ (ಸಂಸಾರತಾಪ ಬಿಡಿಸಿ ಕಾಪಾಡುವವನು); ವಿದ್ಯೆಗಳಲ್ಲಿ ಬ್ರಹ್ಮ ವಿದ್ಯೆ - ಅಧ್ಯಾತ್ಮ ವಿದ್ಯೆ (ಜೀವಸ್ವಾಮಿ ಎಂದು ತನ್ನನ್ನು ತಿಳಿಸುವವನು) ; ಭೂತಗಳಿಗೆ ಸೃಷ್ಟಿ ಸ್ಥಿತಿ ಸಂಹಾರ ಕಾರಣ ನಾನೇ. ಜಲ್ಪಾದಿವಾದಗಳಲ್ಲಿ ವಾದನು (ಮಾತನ್ನಾಡಿಸುವವನು); ಅಕ್ಷರಗಳಲ್ಲಿ ಅಕಾರ (ಅ ಎಂದು ಕರೆಸಿಕೊಳ್ಳಲ್ಪಡುವವನು) ; ಸೃಷ್ಟ್ಯಾದಿ ಕರ್ತೃಗಳಲ್ಲಿ ಸ್ವತಂತ್ರಕರ್ತೃ; ಸಮಾಸಗಳಲ್ಲಿ ದ್ವಂದ್ವ (ಒಳ ಹೊರಗೆ ಕಾಲ ಪುರುಷರೂಪ ದ್ವಯದಿಂದ ಇರುವವನು); ಅಕ್ಷಯಗಳಲ್ಲಿ ಕಾಲ (ಸಂಹಾರಕ) ; ವ್ಯಾಪ್ತರಲ್ಲಿ ಧಾತ (ಧಾರಕ ಪೋಷಕ) ; ಸರ್ವ ಹರರಲ್ಲಿ ಮೃತ್ಯು (ಮಾರಕ) ; ಹುಟ್ಟುವವರಿಗೆ ಉದ್ಭವ (ಉದ್ಭಾವಕ): ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಕ್ಷಮಾ, ಧೃತಿ ಎಂಬ ನಾರಿಯರು (ಕೀರ್ತನೀಯ; ಆಶ್ರಯ; ವಕ್ತಾ ಸ್ಮರಣೀಯ, ಬುದ್ಧಿ ಶಕ್ತಿಪ್ರದ, ಕ್ಷಮಾರೂಪ, ಧೈರ್ಯಪ್ರದ); ಸಾಮಗಳಲ್ಲಿ ಬ್ರಹತ್ಸಾಮ (ಶ್ರೇಷ್ಠ ಸಾರರೂಪ, ಅಮೇಯ ಮಹಿಮೆ); ಛಂದಸ್ಸುಗಳಲ್ಲಿ ಗಾಯತ್ರಿ (ಗಾಯಕ ಜ್ಞಾನಿರಕ್ಷಕ); ಮಾಸಗಳಲ್ಲಿ ಮಾರ್ಗಶೀರ್ಷ (ಜಿಜ್ಞಾಸ್ಯರಲ್ಲಿ ಉತ್ತಮ) ; ಋತುಗಳಲ್ಲಿ ಕುಸುಮಾಕರ = ವಸಂತ (ಜ್ಞಾನವನ್ನು ಹೆಚ್ಚು ಕಡಿಮೆ ಮಾಡುವವನು); ಕಾಪಟ್ಯಗಳಲ್ಲಿ ದ್ಯೂತ (ಕ್ರೀಡಾಪರ); ಪಾಂಡವರಲ್ಲಿ ಅರ್ಜುನ = ಧನಂಜಯ (ಧನವನ್ನು ಜಯಿಸುವವನು); ಮುನಿಗಳಲ್ಲಿ ವ್ಯಾಸರು (ವಿಶಿಷ್ಟನು ಸರ್ವಗತನು); ಯಾದವರಲ್ಲಿ ವಾಸುದೇವ (ಸರ್ವತ್ರವಾಸ ಮಾಡುವವನು - ಕ್ರೀಡಾದಿ ಗುಣ ವಿಶಿಷ್ಟನು); ಇನ್ನು ಜಯ,

ಸತ್ವ, ಮೌನ, ವ್ಯವಸಾಯ, ತೇಜಸ್ಸು, ಮೊದಲಾದ ಗುಣಗಳಿಗೆ ನಾನೇ ಮುಖ್ಯಸ್ವಾಮಿಯಾಗಿರುವೆನು); ಕವಿಗಳಲ್ಲಿ ಶುಕ್ರ (ಉಶನಾ ಕವಿ ಸರ್ಗಾದಿ ಇಚ್ಛೆ ಮಾಡುವನು); ದಮವಂತರಲ್ಲಿರುವ ದಂಡ; ಜಯಾಕಾಂಕ್ಷಿಗಳ ನೀತಿ, ರಹಸ್ಯಗಳಲ್ಲಿ ಮೌನ, ಜ್ಞಾನವಂತರ ಜ್ಞಾನ ಎಲ್ಲವೂ ನಾನು ಕೊಟ್ಟ ನನ್ನ ಗುಣಗಳ ಭಿನ್ನಾಂಶಗಳೆಂದು ತಿಳಿ ! ಇಲ್ಲಿ ವಾಸವ, ಉಶನಾ, ಧನಂಜಯ, ಯಜ್ಞ, ವಜ್ರ, ಸಾಮಗಳು ತಮ್ಮ ಜಾತಿಯ ಏಕ ದೇಶದಲ್ಲಿ ಮಾತ್ರ ಶ್ರೇಷ್ಠರಾಗಿರುವರು. ಅವರಕಿಂತಲು ಸ್ವಜಾತಿ ಶ್ರೇಷ್ಠರು ಇರುವರು. ವಾಸನವನಕಿಂತಲು ರುದ್ರ ಪ್ರಾಣರು, ಶುಕ್ರನಕಿಂತಲು ಬೃಹಸ್ಪತಿ, ಧನಂಜಯನಕಿಂತಲು ಭೀಮಸೇನ, ಯಜ್ಞಮಾತ್ರದಕಿಂತಲು ಜ್ಞಾನಯಜ್ಞ ಆಯುಧ ವಜ್ರದಕಿಂತಲು ವಿಭೂತಿ ರೂಪಗಳಿಂದ ವಿರಾಜಿಸುತ್ತಿವೆ. ಸರ್ವಭೂತಗಳ ನಿಮಿತ್ತ ಕಾರಣನು ನಾನೇ; ನನ್ನ ಹೊರತು ಚರಾಚರವಾದ ಜಗವನ್ನು ನಡೆಸುವ ಸ್ವತಂತ್ರ ಪ್ರಭುವಿನ್ನಿಲ್ಲ.

ನನ್ನ ವಿಭೂತಿ ರೂಪಗಳನ್ನು ನಾಮ ನಿರ್ದೇಶದಿಂದಲೂ, ಗುಣ ನಿರ್ವಚನದಿಂದಲು ತಿಳಿಸಿರುವೆನು. ಕೇಳು ! ನನ್ನ ವಿಭೂತಿ ರೂಪಗಳಿಗೆ ಕೊನೆಯಿಲ್ಲ; ಅಂತೆಯೇ ಸಂಗ್ರಹವಾಗಿ ನಿನಗೆ ತಿಳಿಸಿರುವೆನು. ನನ್ನ ವಿಭೂತಿ ರೂಪದ ಸನ್ನಿಧಾನದಿಂದ, ಆಯಾ ವಸ್ತುಗಳು ತಂತಮ್ಮ ಜಾತಿಯಲ್ಲಿ ಶ್ರೇಷ್ಠವೆನಿಸಿವೆ. ಲೋಕದಲ್ಲಿ ಶ್ರೀ, ಕಾಂತಿ, ಜ್ಞಾನ, ವೃದ್ಧಿ ಸೌಂದರ್ಯ-ಮೊದಲಾದ ಸುಗುಣ ಉಳ್ಳ ವಸ್ತುಗಳಿಗೆ ಶ್ರೇಷ್ಠತೆಯನ್ನಿತ್ತು ಪೊರೆಯುವವನು ನಾನೆಂದು ತಿಳಿ ! ಸಾವಿರ ಮಾತೇಕೆ? ಕೇಳು ! ಎಲ್ಲವನ್ನೂ ವ್ಯಾಪಿಸಿ ನಿಂತ ನನ್ನ ಮಹಿಮೆಯ ಕೋಟ್ಯಂಶವಾದರೂ, ನನ್ನಿಂದ ಭಿನ್ನವಾಗಿ, ನನ್ನಿಂದ ಗುಣಗಳನ್ನು ಹೊಂದುತ್ತಿರುವ ಜಗತ್ತಿನ ಜೀವರಿಗೆ ಇಲ್ಲವೆಂದು ನಿಶ್ಚಯಿಸಿ, ನನ್ನನ್ನು ಭಜಿಸು !'

## ೧೫. ಶ್ರೀ ಭಗವದ್ಗೀತೆ ೧೧. ವಿಶ್ವರೂಪ ವರ್ಣನ

ಅರ್ಜುನನು 'ಕಮಲನೇತ್ರ ! ನಿನ್ನ ಅಧ್ಯಾತ್ಮ ವಿಷಯಕೋಪದೇಶವನ್ನು ಕೇಳಿ ಧನ್ಯನಾದೆನು. ನನಗಿದ್ದ ಬಂಧುಮೋಹವು ನಷ್ಟವಾಯಿತು. ಭೂತಗಳ ಜನನಮರಣ ವಿಚಾರವನ್ನೂ ನಿನ್ನ ಮಹಾಮಹಿಮೆಯನ್ನೂ ಕೇಳಿದೆನು. ನೀ ಹೇಳಿದುದೆಲ್ಲವು ಪರಮ ಪ್ರಾಮಾಣಿಕವಾಗಿದೆ. ನಿನ್ನ ದಿವ್ಯ ರೂಪವನ್ನು ನನಗೆ ನೋಡಿಸು ! ನಾನು ಅದನ್ನು ನೋಡಲು ಶಕ್ತನಾಗುವಂತೆ ಮಾಡು !' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು :

'ಪಾರ್ಥ ! ಅತ್ಯಾಶ್ಚರ್ಯಕರವು, ಆದಿತ್ಯಾದಿ ಸರ್ವದೇವತಾ ಧಾರವು, ನಾನಾ ವರ್ಣಾಕಾರವು, ಜಗದ್ವ್ಯಾಪ್ತವು ಆದ ನನ್ನ ವಿಶ್ವರೂಪವನ್ನು ನೋಡು ! ಆದಿತ್ಯರು-ವಸುಗಳು, ಮರುತ್ತರು, ಅಶ್ವಿನಿಗಳು ಮೊದಲಾದ ಸಚರಾಚರವಾದ ಜಗವನ್ನೆಲ್ಲ ನನ್ನ ವಿಶ್ವ ರೂಪದ ಏಕದೇಶದಲ್ಲಿ ನೋಡು ! ಅರ್ಜುನ ! ನಿನ್ನ ಮಾಂಸದ ಕಣ್ಣಿನಿಂದ ನನ್ನನ್ನು ನೋಡಲಾರೆ ! ನಿನಗೆ ದಿವ್ಯಚಕ್ಷುಸ್ಸನ್ನು ಕೊಡುವೆನು. ನೋಡು ನನ್ನ ವಿಚಿತ್ರ ಸ್ವರೂಪ ವೈಭವ ಸಾಮರ್ಥ್ಯಗಳನ್ನು !'

ಸಂಜಯನು 'ಮಹಾರಾಜ ! ಇಂತು ನುಡಿದು ಶ್ರೀಭಗವಂತನು ಪಾರ್ಥನಿಗೆ ತನ್ನ ದಿವ್ಯ ವಿಶ್ವರೂಪವನ್ನು ತೋರಿಸಿದನು. ಅನಂತ ಶಕ್ತಿ ಸಂಪನ್ನವು, ಅನೇಕ ಮುಖನಯನಕರ ಪಾದಾದ್ಯವಯವ ಸುಂದರವು, ದಿವ್ಯಾಭರಣ ಭೂಷಿತವು, ಆಯುಧ ಕೋಟಿ ವಿಲಸಿತ ಹಸ್ತವು, ದಿವ್ಯಗಂಧ ಲೇಪನವು, ದಿವ್ಯಮಾಲ್ಯಾಂಬರ ಧರವು ಆದ ತನ್ನ ವಿಶ್ವರೂಪವನ್ನು ಶ್ರೀಶನು ತೋರಿದಾಗ ಕೋಟಿ ಸೂರ್ಯರು ಒಂದೇ ಸಲ ಹುಟ್ಟಿದರೆ ಆಗುವ ಕಾಂತಿಪುಂಜವು ಅರ್ಜುನನ ಕಣ್ಣು ಕುಕ್ಕಿತು. ಪಾರ್ಥನು ಆಶ್ಚರ್ಯ ಭಯ ಸಂಭ್ರಮಭರಿತನಾದನು. ಅವನ ಮೈ ನವಿರೆದ್ದಿತು. ಶಿರಸಾಬಾಗಿ ನಮಿಸಿ ಅರ್ಜುನನಿಂತೆಂದನು :

"ದೇವ ದೇವ ! ದೇವತೆಗಳನ್ನು ಎಲ್ಲರನ್ನೂ, ಸರ್ವ ಚರಾಚರ ಜಗವನ್ನೂ, ಬೇರೆ ಬೇರೆಯಾಗಿ ನಿನ್ನಲ್ಲಿ ನೋಡುತ್ತಿರುವೆನು. ಬ್ರಹ್ಮದೇವನನ್ನು, ಆತನ ತೊಡೆಯಲ್ಲಿ ಕೂತ ರುದ್ರನನ್ನು, ದೇವ ಋಷಿ ನಾರದರನ್ನೂ, ಎಲ್ಲರನ್ನೂ ನಿನ್ನಲ್ಲಿ ಕಂಡೆನು. ಎಷ್ಟು ಮುಖ, ಎಷ್ಟು ಕಣ್ಣುಗಳು! ಆದಿಮಧ್ಯಾಂತರಹಿತನು, ಅನಂತ ಪಾದ ಬಾಹುಕರ್ಣನೇತ್ರಾದ್ಯಂಗಸರ್ವಾಂಗ ಸುಂದರನು, ಕಿರೀಟ, ಗದಾ ಚಕ್ರ ವಿಲಸಿತನು ಆದ ನಿನ್ನ ದಿವ್ಯ ದರ್ಶನವಾಯಿತು. ನೋಡಲಾಗದೀ ನಿನ್ನ ಅಗ್ನಿ ಸೂರ್ಯ ಕೋಟಿ ಸಮತೇಜೋಮಯ ರೂಪವನ್ನು !

ನಾಶ ರಹಿತ ! ವೇದವೇದ್ಯ ! ಜಗನ್ನಿಧಾನ ! ನಾಶರಹಿತ ! ಶಾಶ್ವತ ಧರ್ಮ ರಕ್ಷಕ ! ಲಕ್ಷ್ಮೀ ವಕ್ಷ ! ಪೂರ್ಣ ಷಡ್ಗುಣಭರಿತ ! ನನಗೆ (ದೇಶದಿಂದ) ಆದಿ ಇಲ್ಲ ; ಮಧ್ಯವಿಲ್ಲ, ಅಂತವಿಲ್ಲ - ಅನಂತ ವೀರ್ಯನು, ಶಶಿಸೂರ್ಯ ನೇತ್ರನು, ಅಗ್ನಿಮುಖನು ಆದ ನಿನ್ನಿಂದ ಜಗವೆಲ್ಲ ಬೆಳಗುತ್ತಿದೆ. ಸ್ವರ್ಗಾದಿ ಮೇಲಿನ ಲೋಕಗಳಲ್ಲಿಯು, ಭೂರಾದಿ ಕೆಳ ಲೋಕಗಳಲ್ಲಿಯು ಎಲ್ಲೆಡೆ ವಿಸ್ಮಯ ಭಯಂಕರ ರೂಪದಿಂದ ವ್ಯಾಪಿಸಿರುವ ನಿನ್ನನ್ನು ನೋಡಿ ಭಕ್ತರು ದುಷ್ಟ ಸಂಹಾರ ಭೂಭಾರ ಹರಣಗಳಿಗೆ ಅವತರಿಸುವ ನಿನ್ನ ಮಹಿಮೆಯನ್ನು ಚಿಂತಿಸಿ, ಮೊದಲು ಭಯಪಟ್ಟಂತಾದರೂ, ಆಮೇಲೆ ನೋಡಿ ನೋಡಿ, ಆನಂದಪಡುತ್ತಿರುವರು. ಅಭಕ್ತರಿಗೆ ನಿನ್ನ ದಿವ್ಯರೂಪದ ದರ್ಶನವೇ ಇಲ್ಲ; ಆದರೂ ಜನರು ಮನಸಾ ನಿನ್ನ ಸಂಹಾರಕ ಶಕ್ತಿಯನ್ನು ನೆನೆದು ಭಯಭೀತರಾಗಿರುವರು.

ಮುಕ್ತ ದೇವತೆಗಳು ನಿನ್ನಲ್ಲಿ ಪ್ರವೇಶಿಸುತ್ತಿರುವರು. ಕೆಲವರು ಭಯ ಭಕ್ತಿಗಳಿಂದ ಕೈ ಜೋಡಿಸಿ, ಸ್ತುತಿಸುತ್ತಿರುವರು. ಋಷಿಗಳು ವೇದವಚನಗಳಿಂದ ಪೊಗಳುತ್ತಿರುವರು. ಬ್ರಹ್ಮ ರುದ್ರಾದಿ ದೇವತೆಗಳು ಗಂಧರ್ವ ಯಕ್ಷ ಸಿದ್ಧ ವಿಶ್ವೇದೇವ ವಸುರುದ್ರಾದಿಗಳು ನಿನ್ನ ದಿವ್ಯ ರೂಪವನ್ನು ಸ್ವಯೋಗ್ಯತೆಯಂತೆ ನೋಡಿ ಆಶ್ಚರ್ಯಪಟ್ಟು, ನಮಿಸಿ, ಕೈ ಮುಗಿದು ಸ್ತುತಿಸುತ್ತಿರುವರು.

ಮುಗಿಲು ಮೀರಿ ಬೆಳೆದ, ಅನೇಕ ವರ್ಣ ವಿಚಿತ್ರವಾದ, ಬಾಯ್ತೆರೆದ ಉರಿಗಣ್ಣಿನ, ಅನಂತ ಕರಪಾದಾದಿ ದಿವ್ಯಾಂಗವಾದ ನಿನ್ನ ಈ ರೂಪವು ಭಯಂಕರವಾಗಿದೆ. ನನಗೆ ಮನಸ್ಸಮಾಧಾನವಿಲ್ಲ, ದಿಕ್ಕು ತೋಚದಂತಾಗಿದೆ. ಎಷ್ಟು ಪ್ರಕಾಶ ! ಏನು ಭಯಂಕರ ಮುಖ ! ಕೋರೆಗಳನ್ನು ಮಸೆಯುವ ನಿನ್ನ ಮುಖಗಳು ಪ್ರಳಯಾಭೀಲವಹ್ನಿಜ್ವಾಲೆಗಳನ್ನು ಹೊರ ಹೊಮ್ಮಿಸುತ್ತಿವೆ ! ಜಗನ್ನಿವಾಸ ! ಪ್ರಸನ್ನನಾಗು ! ಇದೇನು ! ಈ ಧಾರ್ತರಾಷ್ಟ್ರರು

ಎಲ್ಲ ರಾಜರು, ಭೀಷ್ಮದ್ರೋಣ ಕರ್ಣರು, ನಮ್ಮ ಕಡೆಯವರಾದ ವಿರಾಟ ದ್ರುಪದಾದಿವೀರರು - ಎಲ್ಲರು ತ್ವರೆಯಿಂದ-ನಿನ್ನ ತೆರೆದ ಮುಖದಲ್ಲಿ ಹೋಗಿಬಿಡುತ್ತಿರುವರು. ಕೆಲವರು ದಂತಗಳಿಗೆ ಸಿಕ್ಕು ತಲೆಯೊಡೆದು, ಮಡಿಯುತ್ತಿರುವರು. ನದಿಯ ಜಲಗಳು ಸಮುದ್ರವನ್ನಂತೆ, ಪತಂಗಗಳು ಉರಿಯುವ ಅಗ್ನಿಯನ್ನಂತೆ-ನಾನಾಭೂತಗಳು ನಿನ್ನ ಮುಖಗಳನ್ನು ಹೊಕ್ಕು ನಾಶವಾಗುತ್ತಿವೆ ! ನಾಲಿಗೆ ಚಾಚಿ, ಅವರನ್ನು ನುಂಗುವ, ತೇಜೋರಾಶಿಯಿಂದ ಜಗವನ್ನೆಲ್ಲ ತುಂಬಿರುವ, ಲೋಕಗಳನ್ನು ತಪಿಸುವ ನೀನಾರು ? ದೇವ ! ಏಕೀ ಭಯಂಕರ ರೂಪ ? ಪ್ರಸನ್ನನಾಗು ! ಏನು ಮಾಡಲಿರುವೆ ?"

ಶ್ರೀ ಭಗವಂತನಿಂತೆಂದನು :

"ಅರ್ಜುನ ! ನಾನು ಕಾಲ ನಾಮಕನು. ಲೋಕದ ದುಷ್ಟರನ್ನೆಲ್ಲ ಸಂಹರಿಸಲು ನಿಂತು ಬೆಳೆದಿರುವೆನು. ಎರಡು ಸೈನ್ಯಗಳಲ್ಲಿರುವ ಯೋಧರಲ್ಲಿ, ನೀನಾದಿ ಕೆಲವರಲ್ಲದೆ-ಮತ್ತಿನ್ನಾರೂ ಉಳಿಯುವದಿಲ್ಲ. ಏಳು ! ನಾನೇ ಆಯುವನ್ನು ಹರಿಸಿ ಕೊಂದು ಬಿಟ್ಟಿರುವ ಈ ವೀರರನ್ನು ರಣದಲ್ಲಿ ಸಂಹರಿಸು ! ಕೀರ್ತಿಯನ್ನು ಗಳಿಸು ! ರಾಜ್ಯವನ್ನು ಭೋಗಿಸು ! ನೀನು ನಿಮಿತ್ತಮಾತ್ರನೆಂದು ತಿಳಿದು, ನನ್ನ ಭೂಭಾರಹರಣ ಕಾರ್ಯದಲ್ಲಿ ಪ್ರಧಾನಾಂಗನಾಗಿರುವ ಭೀಮಸೇನನಂತೆ, ಯಥಾಶಕ್ತಿ ಉಪಾಂಗನಾಗಿ, ಯುದ್ಧವನ್ನು ಮಾಡು ! ವ್ಯಥೆ ಬಿಡು ! ಜಯಿಸುವೆ !"

ಸಂಜಯನು, 'ರಾಜನ್ ! ಕೇಶವನ ವಚನವನ್ನಾಲಿಸಿ, ಅರ್ಜುನನು ನಡುಗುತ್ತಾ ಕೈ ಜೋಡಿಸಿ, ನಮಸ್ಕರಿಸಿದನು. ಮತ್ತು ಕಂಠದ ಸೆರೆ ಬಿಗಿದು ಮಾತಾಡಲಾರದೆ-ಮತ್ತೆ ವಂದಿಸಿ, ಮೆಲ್ಲನೆ ಇಂತು ಸ್ತುತಿಸಿದನು :

'ಹೃಷೀಕೇಶ ! ನಿನ್ನ ದಿವ್ಯಕೀರ್ತಿಚಂದ್ರಿಕೆಯಿಂದ ಲೋಕವೆಲ್ಲವು ಆನಂದಿಸಿ-ನಿನ್ನನ್ನು ಪ್ರೇಮಿಸುತ್ತಿದೆ. ಇದು ಸರಿಯಾದದ್ದೇ ! ರಾಕ್ಷಸಾದಿ ದುಷ್ಟರು ಓಡಿಹೋಗುತ್ತಿರುವರು. ಸಿದ್ಧರು ನಮಸ್ಕರಿಸುತ್ತಿರುವರು. ಏಕೆ ನಮಸ್ಕರಿಸಲಿಕ್ಕಿಲ್ಲ ? ಮಹಾತ್ಮ ! ಜಗತ್ಸರ್ಜನ ಕಾರಣನಾದ ಬ್ರಹ್ಮ ದೇವನಿಗೂ ನೀನು ತಂದೆಯಾಗಿರುವೆ ! ಅಂತೆಯೇ ಸರ್ವೋತ್ತಮನಾಗಿ ಪುರುಷೋತ್ತಮನೆನಿಸಿರುವೆ ! ದೇವೇಶ ! ಜಗನ್ನಿವಾಸ ! ನಾಶರಹಿತನು, ಕಾರ್ಯಕಾರಣಾತ್ಮಕವಾದ ಜಗತ್ತಿಗೆ ಭಿನ್ನನು, ವಿಶ್ವ ಕಾರಣನು, ವೇದ ಮುಖ್ಯಾರ್ಥನು, ಸರ್ವಜ್ಞನು, ಪ್ರಭುವರನು ಆದ ನಿನಗೆ ನಮಸ್ಕಾರವು ! ನಿನ್ನ ಪ್ರಕಾಶವು ಅಸೀಮವಾಗಿದೆ. ನಿನ್ನ ರೂಪ ಗುಣಗಳು ಅನಂತವಾಗಿವೆ. ವಾಯು, ಯಮ, ಅಗ್ನಿ-ವರುಣ ಶಶಾಂಕ, ಪ್ರಜಾಪತಿ, ರುದ್ರ, ಬ್ರಹ್ಮರಲ್ಲಿ ತತ್ತನ್ನಾಮ ಶಕ್ತಿಪ್ರದನಾಗಿ ನೀನಿರುವೆ. ರುದ್ರಪ್ರಾಣಾದಿ ಸರ್ವ ದೇವತೆಗಳಿಗೂ ಪ್ರಭುವಾದ ನಿನಗೆ ನಮಃ ! ಸರ್ವವನ್ನು ವ್ಯಾಪಿಸಿ ನಿಂತ ನಿನ್ನನ್ನು ಜ್ಞಾನಿಗಳು ಸರ್ವನೆಂಬುವರು. ಸರ್ವವಿಲಕ್ಷಣನಾದ ನಿನ್ನನ್ನು, ಸರ್ವಾಂತರ್ಯಾಮಿಯಾದ ನಿನ್ನನ್ನು 'ಸಮ' ನೆಂಬುವರು. ಕೃಷ್ಣ ! ಸ್ನೇಹ ಭಾವದಿಂದ ನಿನ್ನ ಮಹಿಮೆಯನ್ನು ಮರೆತು-ಮಾಡಿದ ಅಪರಾಧವನ್ನು ಕ್ಷಮಿಸು ! ವಿಹಾರ, ಶಯನ, ಆಸನಾದಿ ಸಮಯಗಳಲ್ಲಿ, ನಿನ್ನನ್ನು ಕಡೆಗಣಿಸಿರಬಹುದು. ಕೈ ಜೋಡಿಸಿ ಬೇಡುವೆನು. ನನ್ನ ಸರ್ವಾಪರಾಧಗಳನ್ನು ಕ್ಷಮಿಸು !

ಲೋಕಕ್ಕೆಲ್ಲ ನೀನೇ ತಂದೆ ! ನಿನಗೆ ಸಮರಿಲ್ಲ, ಅಧಿಕರಿನ್ನೆಲ್ಲಿ ? ಅಪ್ರತಿಮ ಪ್ರಭಾವನೆಂದು ತಿಳಿದು ಬೇಡುವ ನನ್ನ ಮೊರೆಯನ್ನಾಲಿಸು ! ಶ್ರೀ ಹರೇ ತಂದೆ ಮಗನನ್ನಂತೆ, ಮಿತ್ರನು ಮಿತ್ರನನ್ನಂತೆ, ಗಂಡನು ಪ್ರಿಯಳನ್ನಂತೆ, ತಪ್ಪೆಣಿಸದೆ ಕಾಪಾಡು ! ಕೈ ಬಿಡಬೇಡ! ಸಾಕೀ ಅತ್ಯದ್ಭುತ ರೂಪವನ್ನು ಇನ್ನು ನೋಡಲಾರೆನು. ಪ್ರಸನ್ನನಾಗು ! ಕಿರೀಟದಿಂದಲು, ಶಂಖ ಚಕ್ರ ಗದಾ ಪದ್ಮಗಳಿಂದಲೂ ಶೋಭಿಸುವ ನಮ್ಮ ಚತುರ್ಭುಜ ವಾಸುದೇವನಾಗಿ, ಕಾಣಿಸು ! ನಮೋ ನಮಃ !'

ಇಂತು ಸ್ತುತಿಸುವ ಭಕ್ತನಿಗೆ ಭಗವಂತನಿಂತೆಂದನು : 'ಅರ್ಜುನ ! ಪ್ರಸನ್ನನಾಗಿ, ನಾನಾಗಿ ತೋರಿಸಿದುದರಿಂದ ನನ್ನ ವಿಶ್ವರೂಪದರ್ಶನವು ನಿನಗಾಯಿತು. ತೇಜೋಮಯವು, ವಿಶ್ವವ್ಯಾಪ್ತವು, ಪೂರ್ಣ ಗುಣವು ಆದ ನನ್ನ ವಿಶ್ವರೂಪವನ್ನು ನೀನು ಕಂಡಂತೆ, ಅವರ ಜೀವರಾರೂ ಕಾಣಲಾರರು. ಇಂದ್ರರೂಪದಿಂದ ನೀನು ಕಂಡಿರುವೆ ! ಭೀಷ್ಮಾದಿ ಸುಜೀವರೆಲ್ಲರು ತಂತಮ್ಮ ಯೋಗ್ಯತೆಯಂತೆ ನನ್ನ ವಿಶ್ವರೂಪವನ್ನು ಕಂಡಿರುವರು.

ಎಷ್ಟು ವೇದಗಳೋದಿದರೇನು ? ಯಾವ ಯಜ್ಞಗಳನ್ನು ಮಾಡಿದರೇನು ? ಏನು ಕರ್ಮಗಳನ್ನಾಚರಿಸಿದರೇನು ? ಯಾವ ದಾನವಿತ್ತರೇನು ? ಭಕ್ತಿವಂತನಾಗದವನಿಗೆ ಈ ನನ್ನ ದಿವ್ಯದರ್ಶನವು ಆಗುವುದಿಲ್ಲ. ಭಯವನ್ನು ಬಿಡು ! ಸಮಾಹಿತನಾಗು ! ನೋಡಿಲ್ಲಿ ಮತ್ತೆ ನಿನ್ನ ಕೃಷ್ಣನಾಗಿ ನಿಂತಿರುವ ನನ್ನನ್ನು !'

ಇಂತು ನುಡಿದು ಯಥಾಪೂರ್ವದ ಶ್ರೀ ಕೃಷ್ಣ ಸುಂದರನಾಗಿ ನಿಂತ ಸ್ವಾಮಿಯನ್ನು ಕಂಡು, ಅವನಿಂದ ಆಶ್ವಾಸಿತನಾಗಿ, ಅರ್ಜುನನಿಂತೆಂದನು:

'ಶ್ರೀಶ ! ಈಗ ಸಮಾಧಾನವಾಯಿತು ! ಮನುಜನಂತೆ ತೋರುವೆ ಆಗಲಿ ನೀನು ಸಾಕ್ಷಾತ್ ಶ್ರೀಹರಿಯು. ಜನಾರ್ಧನ ! ಪ್ರಸನ್ನಚಿತ್ತನಾದೆನು. ಆ ನಿನ್ನ ದಿವ್ಯರೂಪವನ್ನು ನೆನೆದರೆ ಮೈ ಜುಮ್ಮೆನಿಸುತ್ತಿದೆ.'

ಶ್ರೀಭಗವಂತನಿಂತೆಂದನು : 'ಅದ್ಭುತವಾದ ನನ್ನ ದಿವ್ಯರೂಪವನ್ನು ದೇವತೆಗಳೂ ನಿತ್ಯವೂ ನೋಡಲು ಕೌತುಕರಾಗಿರುವರು. ವೇದಾಧ್ಯಯನ ದಾನ ವ್ರತ ಜಪಾದಿಗಳನ್ನು ಭಕ್ತಿಯಿಂದ ಮಾಡಿದವರೇ ನನ್ನನ್ನು ಕಾಂಬುವರು. ಭಕ್ತಿಯಿಲ್ಲದ ದಾನಾದಿಗಳಿಂದ ಪ್ರಯೋಜನವಿಲ್ಲ. ಕೇಳು ನನ್ನ ಮಾತನ್ನು ! ಭಕ್ತರಲ್ಲಿ ವೈರ ಮಾಡಬೇಡ. ನನ್ನ ಪ್ರೀತಿಗಾಗಿ ಕರ್ಮಗಳನ್ನು ಮಾಡು ! ನಾನೇ ಸರ್ವೋತ್ತಮನೆಂದು ತಿಳಿದು ಕರ್ಮಫಲವನ್ನು ನನಗೆ ಸಮರ್ಪಿಸು. ನನ್ನ ಭಕ್ತನಾಗು. ದುಷ್ಟರ ಸಂಗ ಬಿಡು. ಇಂತು ಮಾಡಿದವನಾರೇ ಆಗಲಿ ಅವನು ನನ್ನ ಲೋಕವನ್ನು ಸೇರುವನು.'

## ೧೬. ಶ್ರೀ ಭಗವದ್ಗೀತೆ ೧೨. ಭಕ್ತಿಯೋಗ

ಅರ್ಜುನನು ಕೇಳಿದನು 'ಶ್ರೀಕೃಷ್ಣ ! ಶ್ರೀದೇವಿಯು ನಿತ್ಯಮುಕ್ತಳು. ನಾಶ ರಹಿತಳಾದುದರಿಂದ ಅಕ್ಷರಳು. ಪ್ರಕೃತಿನಿಯಾಮಕಳಾಗಿ, ಬ್ರಹ್ಮಾದಿ ದೇವವಂದ್ಯಳು. ಸರ್ವಜ್ಞಳು, ನಿತ್ಯಯೌವನಳಾದ ಆ ಜನನಿಯು ಮುಕ್ತಿಯನ್ನೀವಳೆಂದು ವೇದವು

'ಶ್ರೀಯಂವಸಾನಾ ಅಮೃತತ್ವಮಾಯನ್' ಎಂಬಲ್ಲಿ ಸಾರುತ್ತಿದೆ, ನೀನೇ ಮುಕ್ತಿಪ್ರದನೆಂದು 'ತಮೇವಂ ವಿದ್ವಾನಮೃತ ಇಹ ಭವತಿ' ಎಂಬ ವೇದವು ಸಾರುತ್ತಿದೆ. ಕರ್ಮಗಳನ್ನರ್ಪಿಸಿ, ಜ್ಞಾನಪೂರ್ವಕ ಸುದೃಢಭಕ್ತಿಯಿಂದ ನಿನ್ನ ಪೂಜಿಸುವವರಿಗೆ ಮೋಕ್ಷವು ಸಿಗುವಂತೆ ಶ್ರೀಲಕ್ಷ್ಮೀದೇವಿಯನ್ನು ಭಜಿಸುವವರಿಗೂ ಮೋಕ್ಷ ಸಿಗುವುದಾದರೆ ಯಾರ ಉಪಾಸನೆಯು ಸುಕರವೋ ಪೇಳು.

ಶ್ರೀಕೃಷ್ಣನು 'ಅರ್ಜುನ ! ಅವಕ್ತತತ್ವದೇವಿಯಾದ ಶ್ರೀದೇವಿಯನ್ನು ಮೋಕ್ಷಕ್ಕಾಗಿ ಉಪಾಸಿಸುವರಿಗಿಂತ ನನ್ನ ಉಪಾಸಕರೇ ಮೋಕ್ಷೋಪಾಯವನ್ನರಿತವರಲ್ಲಿ ಶ್ರೇಷ್ಠರು. ಏಕೆಂದರೆ ಶ್ರೀದೇವಿಯ ಉಪಾಸನೆ ಕಷ್ಟಸಾಧ್ಯ. ಅತಿಸೂಕ್ಷ್ಮಳು, ಅನಿರ್ದೇಶ್ಯಳು, ಅವ್ಯಕ್ತಳು, ವ್ಯಾಪ್ತಳು ಆದ ಲಕ್ಷ್ಮೀದೇವಿಯನ್ನೂ ವಿಷ್ಣು ಸರ್ವೋತ್ತಮತ್ವಜ್ಞಾನಪೂರ್ವಕ ವಿಷ್ಣುಭಕ್ತಿಯಿಂದ ಭಜಿಸಿದವರಿಗೇ ಮೋಕ್ಷವನ್ನು ಕೊಡುವಳು. ಅವಳ ದ್ವಾರಾ ನನ್ನ ಉಪಾಸನೆಯು ಬಹು ಕಷ್ಟತರವಾದುದು. ನನ್ನ ಉಪಾಸನೆಯು ಅಷ್ಟಲ್ಲ. ಇಂದ್ರಿಯ ನಿಗ್ರಹ ಸದಾಚಾರಗಳು ಅಷ್ಟು ಕ್ಲೇಶಕರವಾಗುವಷ್ಟಿರದಿದ್ದರೂ ನನ್ನ ಉಪಾಸನೆಯನ್ನು ಸಾಧಿಸುವುದು ಸುಕರವು ಮತ್ತು ಶ್ರೇಯಸ್ಕರವೂ ಆಗಿದೆ. ನನ್ನ ಬಿಟ್ಟು ಕೇವಲ ಶ್ರೀದೇವಿಯನ್ನು ಭಜಿಸುವವರು ಕೂಡ ಕೊನೆಗೆ ಇಂದ್ರಿಯ ಜಯ ಸದಾಚಾರ ಸರ್ವಭೂತಹಿತಸಮಬುದ್ಧಿಗಳಿಂದ ಶ್ರಿದೇವೀಪ್ರಸಾದವನ್ನೂ ಅದರಿಂದ ನನ್ನ ಪ್ರಸಾದವನ್ನೂ ಹೊಂದಿಯೇ ಮುಕ್ತನಾಗಬೇಕು. ನಾನು ಕೊಡದ ಮುಕ್ತಿಯನ್ನು ಶ್ರಿದೇವಿಯು ಕೊಡುವಳೆಂದು ತಿಳಿಯಬೇಡ.

ಎಲ್ಲ ವಸ್ತುಗಳನ್ನು ನನಗೆ ಸಮರ್ಪಿಸಿ, ನಾನೇ ಸರ್ವೋತ್ತಮನೆಂದು ನಂಬಿ, ಅನನ್ಯಭಕ್ತಿಯಿಂದ ನನ್ನನ್ನು ಧ್ಯಾನಿಸಿ, ಉಪಾಸಿಸುವ ಸುಜೀವರನ್ನು ನಾನು ಬೇಗನೇ ಜನನ ಮರಣರೂಪ ಸಂಸಾರಸಾಗರದಿಂದ ಬಿಡಿಸಿ, ಉದ್ಧರಿಸುವೆನು. ಶ್ರೀದೇವೀ ಬ್ರಹ್ಮರುದ್ರಾದಿಗಳು ನನ್ನ ಪರಿವಾರವೆಂದು ತಿಳಿದು ಅಂಗದೇವತಾರೂಪವಾಗಿ ಅವರನ್ನೂ ಪೂಜಿಸಿ, ಅನಂತರ ನನ್ನನ್ನೂ ಉಪಾಸಿಸುವ ಜನರು ಶ್ರೀಲಕ್ಷ್ಮೀನಾರಾಯಣರ ಉಪಾಸನೆಯ ಫಲವಾದ ಉಭಯರ ಪರಮಪ್ರಸಾದವನ್ನು ಪೊಂದಿ ಬೇಗನೇ ಮುಕ್ತರಾಗುವರು. ವಿಷ್ಣುಸಹಿತನಾಗಿ ತನ್ನನ್ನು ಪೂಜಿಸಿದವರಿಗೆ ಶ್ರೀದೇವಿಯು ಬಲು ಪ್ರಸನ್ನಳಾಗುವಳು. ಆದುದರಿಂದಲೇ ಶ್ರೀದೇವೀರಮಣನಾದ ನನ್ನಲ್ಲಿ ಮನವಿಟ್ಟು ಧ್ಯಾನಿಸು. ನನ್ನ ವಿಷಯಕವಾದ ಜ್ಞಾನವನ್ನಾರ್ಜಿಸು ! ಮುಕ್ತನಾಗುವೆ. ಅದು ಸಾಧ್ಯವಾಗುವವರೆಗೂ ಅಭ್ಯಾಸ ಮಾಡು. ಧ್ಯಾನದ ಅಭ್ಯಾಸಕ್ಕೆ ಅಸಮರ್ಥನಾದವನು ಅದಕ್ಕಾಗಿ ಸಕಲಕರ್ಮಗಳನ್ನೂ ನನ್ನ ಆರಾಧನೆ ಎಂದು ಆಚರಿಸಬೇಕು. ಅದೂ ಕೈಲಾಗದಿದ್ದರೆ ಮಾಡುವ ಪೂಜಾದಿ ಸುಕರ್ಮಫಲಗಳನ್ನು ಬೇಡದಂತೆ ಮನಸ್ಸನ್ನು ನಿಗ್ರಹಿಸಿ ನನಗರ್ಪಿಸಬೇಕು.

ಅಜ್ಞಾನದ ಅಭ್ಯಾಸದಕಿಂತ ಜ್ಞಾನ ಲೇಸು. ಬರಿಯ ಜ್ಞಾನಕ್ಕಿಂತಲು ಧ್ಯಾನ ಲೇಸು. ಧ್ಯಾನದಲ್ಲಿ ನಿಷ್ಕಾಮವಾದ ಧ್ಯಾನ ಶ್ರೇಷ್ಠ ಅದರಿಂದಲೇ ಅಪರೋಕ್ಷ ಜ್ಞಾನ; ಅದರಿಂದ

ಮೋಕ್ಷ. ಅದಕ್ಕಾಗಿ ಸಾಧನಗಳನ್ನು ಹೇಳುವೆನು ಕೇಳು. ಸರ್ವಭೂತಗಳನ್ನು ಅಪ್ರಿಯವೆಸಗದೆ ಸಮನಾಗಿ ನೋಡುವುದು. ಕ್ಲೇಶದಿಂದ ರಕ್ಷಿಸುವುದು (ಮೈತ್ರಿ) ಕರುಣೆ. ನನ್ನದೆಂಬ ಸ್ವಾತಂತ್ರ್ಯ ಬುದ್ಧಿಯನ್ನು ಮಾಡದಿರುವುದು ಇಲ್ಲದ ಗುಣಗಳನ್ನು ತೋರದಿರುವುದು. ವಿಷಯಸುಖವುಕೂಡ ದುಃಖದಂತೆ ಹೇಯವೆಂದು ತಿಳಿಯುವುದು; ಸಹನೆ, ವಿಷಯದಲ್ಲಿ ಅಲಂಬುದ್ಧಿ ಕರ್ಮ, ಧ್ಯಾನಗಳನ್ನು ಬಿಡದೆ ಮಾಡುವುದು, ಮನಸ್ಸನ್ನು ನಿಗ್ರಹಿಸುವುದು, ತತ್ವನಿಶ್ಚಯಜ್ಞಾನ ಇವೆಲ್ಲವೂ ಜ್ಞಾನಸಾಧನಗಳಾಗಿವೆ.

ನನ್ನಲ್ಲಿಟ್ಟ ಮನೋ ಬುದ್ಧಿಗಳನ್ನು ವಿಷಯಗಳತ್ತ ಬಿಡದವನು ನನ್ನ ಪ್ರೀತಿಯ ಭಕ್ತನು. ಲೋಕವನ್ನಂಜಿಸದೆ ಸರ್ವವೂ ಈಶಾಧೀನವೆಂದರಿತು ಲೋಕಕ್ಕಂಜದೆ ಹರ್ಷದುಃಖಗಳಿಂದಾಗುವ ಉದ್ರೇಕ ಉದ್ವೇಗಗಳನ್ನು ಜಯಿಸಿ, ಮನೋವಿಕಾರವಿಲ್ಲದೆ ಇರುವ ಭಕ್ತನು ನನ್ನ ಪ್ರೀತಿಪಾತ್ರನು. ಭಗವತ್ಪ್ರೀತಿಯನ್ನು ಹೊರತು ಅನ್ಯವನ್ನು ಬೇಡದವನು. ಬಾಹ್ಯಾಭ್ಯಾಂತರ ಶುದ್ಧಿವಂತನು ಭಗವತ್ಸೇವಾದಕ್ಷನು. ಕರ್ತವ್ಯವಾದ ಉಪಕಾರಾಪಕಾರಗಳನ್ನು ಉದಾಸೀನತೆಯಿಂದ ನೋಡುವವನು. ಇತರರ ಅಪಕಾರದಿಂದ ಮನಃಕ್ಲೇಶಪಡದವನು, ವಿಷ್ಣು ವಿರುದ್ಧ ಸರ್ವಕರ್ಮಗಳನ್ನು ಮಾಡದವನು, ಸುಖದ ಹಿಗ್ಗು ದುಃಖದ ಕುಗ್ಗುಗಳಿಲ್ಲದ ಸಮಚಿತ್ತನು, ಜ್ಞಾನಭಕ್ತಿಗಳನ್ನು ಮಾತ್ರ ಬೇಡುವವನು, ಶುಭಕರ್ಮಫಲವನ್ನು ಅರ್ಪಿಸುವವನು, ಅಶುಭಕರ್ಮದ ಪಶ್ಚಾತ್ತಾಪದಿಂದ ಅದನ್ನೆಲ್ಲ ಬಿಟ್ಟವನು - ಇವರೆಲ್ಲ ನನಗೆ ಪ್ರೀತಿಪಾತ್ರರಾದ ಭಕ್ತರು.

ನನ್ನ ಭಕ್ತರು ಶತ್ರುಮಿತ್ರರಲ್ಲಿ ಸಮರಾಗಿ ಅಂದರೆ ಅವರು ಮಾಡುವದೆಲ್ಲವೂ ಶ್ರೀಹರಿಪ್ರೇರಣೆಯಿಂದ ಎಂದರಿತು, ಹೆಚ್ಚು ಮೈತ್ರಿದ್ವೇಷಗಳನ್ನು ಮಾಡದೆ, ಶೀತೋಷ್ಣ ಸುಖದುಃಖ, ಮಾನಾಪಮಾನ, ನಿಂದಾಸ್ತುತಿಗಳನ್ನು ಹೇಯವೆಂದು ಜರಿದು ಮನಸ್ಸಮಾಧಾನದಿಂದಿರುವರು. ಶ್ರೀಶನಿತ್ತುದರಿಂದ ಅವರಿಗೆ ಸಂತುಷ್ಟಿ ಶ್ರೀನಿವಾಸನೇ ಅವರಿಗೆ ಆಶ್ರಯ. ಕುಕರ್ಮಗಳಿಂದ ಚಂಚಲವಾಗಿರುವುದು ಅವರ ಹರಿಭಕ್ತಿ ಜ್ಞಾನಗಳು.

ಇಂತು ನಾವೇಳಿದ ಧರ್ಮದ ಸಾರವನ್ನು, ಧ್ಯಾನದ ಸಾಧನವನ್ನು, ಭಕ್ತಿಯ ರೀತಿಯನ್ನು ತಿಳಿದು ಜನನ-ಮರಣವರ್ಜಿತನು, ಮೋಕ್ಷಪ್ರದನು ಆದ ನನ್ನನ್ನು ಭಕ್ತಿಯಿಂದ ಭಜಿಸುವ ಸುಜನರು ನನಗೆ ಅತ್ಯಂತ ಪ್ರೀತಿ ಪಾತ್ರರಾಗುವರು.'

## ೧೭. ಶ್ರೀ ಭಗವದ್ಗೀತೆ ೧೩. ಕ್ಷೇತ್ರಕ್ಷೇತ್ರಜ್ಞ ಯೋಗ

ಅರ್ಜುನನು 'ಶ್ರೀಕೇಶವ ! ಪ್ರಕೃತಿ ಎಂದರೇನು ? ಪುರುಷನಾರು ? ಕ್ಷೇತ್ರ, ಕ್ಷೇತ್ರಜ್ಞರನ್ನೂ ನನಗೆ ವಿವರವಾಗಿ ಪೇಳು!' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು. 'ಕುಂತೀನಂದನ ! ಪರಮಾತ್ಮನ ವಾಸಸ್ಥಾನವಾದ ಶರೀರವೇ ಕ್ಷೇತ್ರವು. ನಾನು ಕ್ಷೇತ್ರಜ್ಞನೆನಿಸಿ, ಸರ್ವ ಶರೀರನಿಯಾಮಕನು, ಅವ್ಯಕ್ತಾದಿ ಸಕಲ ತತ್ವಸ್ವಾಮಿಯು ಆಗಿರುವೆನು. ಶರೀರವು ಅವ್ಯಕ್ತಾದಿ ತತ್ವಪರಿಣಾಮವಾಗಿದೆ. ಮತ್ತು

ಜೀವನಿಗೆ ಹಿಂಸಾಭಯ ಮೃತ್ಯುಜರಾದಿ ಪ್ರದವಾಗಿದೆ. ಕ್ಷೇತ್ರ ಕ್ಷೇತ್ರಜ್ಞರ ಜ್ಞಾನವು ಅತ್ಯವಶ್ಯಕವಾಗಿದೆ. ಏಕೆಂದರೆ ಅದು ನನ್ನ ಜ್ಞಾನಸಾಧನವೇ ಆಗಿದೆ.

ಕ್ಷೇತ್ರವೆಂದರೇನು, ಕ್ಷೇತ್ರವು ಎಂತಹುದು, ಅದರ ವಿಕಾರಗಳಾವುವು, ಯಾವನಿಂದ ನಡೆಸಲ್ಪಡುವದು, ಅವನಾರು; ಎಂತಹ ಪ್ರಭಾವನು ಅವನದು ಈ ವಿಷಯಗಳನ್ನು ಕೇಳು ! ಇದೂ ಋಷಿಗಳಿಂದ ವರ್ಣಿಸಲ್ಪಟ್ಟಿದೆ. ವೇದಗಳಿಂದ ಪ್ರತಿಪಾದಿಸಲ್ಪಟ್ಟಿದೆ, ನ್ಯಾಯಗ್ರಥಿತ ಬ್ರಹ್ಮಸೂತ್ರಗಳಿಂದಲು ನಿರ್ಣಯಿಸಲ್ಪಟ್ಟಿದೆ.

ಮಹಾಭೂತಗಳು ಐದು, ಅಹಂಕಾರ, ಬುದ್ಧಿ ಅವ್ಯಕ್ತ ಮಹತ್ತು ಹತ್ತು ಇಂದ್ರಿಯಗಳು, ಮನಸ್ಸು ಶಬ್ದಾದಿಗಳೈದು; ಎಲ್ಲವೂ ಕಲೆತು ಇಪ್ಪತ್ತೈದು ತತ್ವಗಳು. ಇಚ್ಛೆ, ದ್ವೇಷ, ಸುಖ, ದುಃಖ, ದೇಹ, ಮನೋವ್ಯಾಪ್ತಿ ಧೈರ್ಯ, ಇವು ಏಳು ವಿಕಾರಗಳು. ಎಲ್ಲ ೩೨ ಕಲೆತು ಕ್ಷೇತ್ರವೆನಿಸುವುದು. ಆಕಾಶಕ್ಕೆ ವಿಘ್ನೇಶನು, ವಾಯುವಿಗೆ ಮರೀಚಿ (ಮುಖ್ಯ ವಾಯುಪುತ್ರ), ಅಗ್ನಿಗೆ ವಹ್ನಿ; ಜಲಕ್ಕೆ ವರುಣ; ಭೂಮಿಗೆ ಧರಾ ಶನಿರಾಜರು; ಅಹಂಕಾರಕ್ಕೆ ರುದ್ರನು; ಮಹತ್ತತ್ವಕ್ಕೆ ಬ್ರಹ್ಮ; ಬುದ್ಧಿಗೆ ಉಮೆ ಸರಸ್ವತಿ; ಅವ್ಯಕ್ತಕ್ಕೆ ಶ್ರೀದೇವಿ; ಮನಸ್ಸಿಗೆ ಸ್ಕಂದೇಂದ್ರರು, ಅನಿರುದ್ಧ; ಕರ್ಣದಲ್ಲಿ ಚಂದ್ರ, ಚರ್ಮಕ್ಕೆ ವಾಯುಸುತ ಪ್ರಾಣ, ಕಣ್ಣಿಗೆ ರವಿ, ನಾಲಿಗೆಗೆ ವರುಣ, ಮೂಗಿಗೆ ಅಶ್ವಿನೀದೇವದ್ವಯ; ವಾಕ್ಕಿಗೆ ಅಗ್ನಿ; ಕೈಗಳಿಗೆ ವಾಯುಪುತ್ರ ಮರುತರು, ದಕ್ಷ ; ಪಾದಗಳಿಗೆ ಇಂದ್ರಪುತ್ರರಾದ ಶಂಭುಯಜ್ಞರು; ಗುದಕ್ಕೆ ಯಮ, ಉಪಸ್ಥಕ್ಕೆ ರುದ್ರಮನುಗಳು; ಶಬ್ದಕ್ಕೆ ಬೃಹಸ್ಪತಿಪ್ರಾಣರು; ಸ್ಪರ್ಶಕ್ಕೆ ಅಪಾನ, ರೂಪಕ್ಕೆ ವ್ಯಾನ, ರಸಕ್ಕೆ ಉದಾನ; ಗಂಧಕ್ಕೆ ಸಮಾನ, ಇಚ್ಛೆಗೆ ಶ್ರೀದೇವಿ ಭಾರತೀಯರು, ದ್ವೇಷಕ್ಕೆ ಕಲಿ; ದುಃಖಕ್ಕೆ ದ್ವಾಪರ; ಸುಖಕ್ಕೆ ಮುಖ್ಯ ಪ್ರಾಣ; ಧೈರ್ಯಕ್ಕೆ ಸರಸ್ವತೀ ಭಾರತೀಯರು; ಚೇತನೆಗೆ ಶ್ರೀದೇವಿ, ದೇಹಕ್ಕೆ ಇತರ ಜೀವಚೇತನರು ಅಭಿಮಾನಿಗಳಾಗಿರುವರು.

ಕ್ಷೇತಜ್ಞನಾದ ಶ್ರೀಹರಿಯನ್ನು ತಿಳಿಯಬೇಕಾದರೆ, ಈ ಸಾಧನಗಳನ್ನು ಅನುಷ್ಠಿಸಿದವನು ಅಧಿಕಾರಿ ಎನಿಸುವನು.

ಅಮಾನಿತ್ವ (ಆತ್ಮಶ್ಲಾಘನರಾಹಿತ್ಯ); ಅದಂಭಿತ್ವ (ಮಹತ್ವಾ ಪ್ರದರ್ಶನ); ಅಹಿಂಸಾ (ಶಾಸ್ತ್ರನಿಷಿದ್ಧ ಹಿಂಸಾವರ್ಜನ); ಕ್ಷಾಂತಿ (ಪರಾಪಕಾರ ಸಹನ); ಅರ್ಜವ (ಸನ್ಮಾರ್ಗದಿ ಮನೋವಾಕ್ಕರ್ಮದಿಂದ ಏಕಪ್ರಕಾರತೆ), ಆಚಾರ್ಯೋಪಾಸನೆ (ಜ್ಞಾನಿಸೇವಾ); ಶೌಚ (ಬಾಹ್ಯಾಭ್ಯಂತರಶುದ್ಧಿ); ಸ್ಥೈರ್ಯ (ವಿಷ್ಣುಧರ್ಮದಲ್ಲಿ ಅಚಂಚಲತೆ); ಆತ್ಮವಿನಿಗ್ರಹ (ಮನಸ್ಸನ್ನು ದುರ್ವಿಷಯಗಳಲ್ಲಿ ಬಿಡದಿರುವುದು); ಇಂದ್ರಿಯಾರ್ಥಗಳಾದ ಶಬ್ದಾದಿಗಳಲ್ಲಿ ವೈರಾಗ್ಯ (ಹೇಯತಾಬುದ್ಧಿ); ಅನಹಂಕಾರ, (ಕರ್ತೃತ್ವಭ್ರಾಂತಿವರ್ಜನ); ಜನ್ಮಮೃತ್ಯುಜರಾವ್ಯಾಧಿಗಳಲ್ಲಿ ದುಃಖ ಮತ್ತು ದೋಷವೆಂಬ ಚಿಂತನೆ; ಆಸಕ್ತಿ (ಪುತ್ರ ದಾರಾದಿಗಳಲ್ಲಿ ದುರಭಿಮಾನವರ್ಜನ); ಪುತ್ರದಾರಗೃಹಾದಿಗಳಲ್ಲಿ ಮಮತಾ ತ್ಯಾಗ-ಸ್ವಾಮಿತ್ವ ಭ್ರಾಂತಿರಾಹಿತ್ಯ) ; ನಿತ್ಯವೂ ಸಮಚಿತ್ತತ್ವ (ಹರ್ಷವಿಷಾದಗಳ ಉಗ್ಗ

ಕುಗ್ಗಿಳಿಲ್ಲದಿರುವಿಕೆ); ಇಷ್ಟಾನಿಷ್ಟಗಳಲ್ಲಿ ವಿಕಾರರಾಹಿತ್ಯ, ನನ್ನಲ್ಲಿ ಶ್ರೀಹರಿಯಲ್ಲಿ ಅಚಂಚಲವಾದ ಭಕ್ತಿ; ಜನಸಮ್ಮರ್ದಹೀನಶುದ್ಧಸ್ಥಾನದಲ್ಲಿ ವಾಸ, ಪರಮಾತ್ಮಜ್ಞಾನದಲ್ಲಿ ಅತ್ಯಾದರ, ಅಪರೋಕ್ಷಜ್ಞಾನಕ್ಕಾಗಿ ಶಾಸ್ತ್ರಪರ್ಯಾಲೋಚನೆ; ಇವು ಇಪ್ಪತ್ತು ಧರ್ಮಗಳು ಜ್ಞಾನಸಾಧನಗಳು ಎಂದು ತಿಳಿ ! ಇದಕ್ಕೆ ವಿರುದ್ಧವಾದ ಮಾನ, ದಂಭ, ಹಿಂಸಾ, ಕಾಪಟ್ಯ, ಚಾಂಚಲ್ಯ, ವಿಷಯಾಸಕ್ತಿ ಸಂಸಾರಲಂಪಟತಾ ಮೊದಲಾದವು ಜಾನನಾಶಕವೆಂದು ತಿಳಿ !

ಈಗ ನಿನಗೆ ಎಲ್ಲ ಯೋನಿಗಳಲ್ಲಿಯೂ ಜನನ-ಮರಣ ಜರಾವ್ಯಾಧಿ ದುಃಖಾದಿಗಳು ತಪ್ಪಿದ್ದಲ್ಲವೆಂದು ತಿಳಿಸಿ ಅವನ್ನು ತಪ್ಪಿಸಿ ಮೋಕ್ಷವನ್ನೀವ ಶ್ರೀಹರಿಯ ಗುಣಗಳನ್ನು ಹೇಳುವೆನು.

ಶ್ರೀಹರಿಯು ಅನಾದಿ ನಿತ್ಯನು; ಗುಣಪೂರ್ಣನು, ಕಾರ್ಯಕಾರಣರೂಪ ಜಗತ್ತಿಗೆ ವಿಲಕ್ಷಣನು, ಸರ್ವತ್ರವ್ಯಾಪ್ತನು, ಕರ್ಣಾದೀಂದ್ರಿಯ ವಿದೂರನು, ಸತ್ವಾದಿ ಗುಣವಿಕಾರರಹಿತನು, ಪ್ರಾಕೃತ ದೇಹೇಂದ್ರಿಯಗುಣ ಕರ್ಮಾದಿಹೀನನು, ಸರ್ವತ್ರ ವ್ಯಾಪ್ತನು, ಅನಂತ ಪಾಣಿಪಾದ ನೇತ್ರಶಿರೋಮುಖ ಶ್ರುತಿವಿಲಸಿತನು, ಸರ್ವೇಂದ್ರಿಯಗಳಿಂದ ಸರ್ವಗಮನಾದಿ ವ್ಯಾಪಾರವಂತನು, ಅಪ್ರಾಕೃತ ಮಂಗಳವಿಗ್ರಹನು, ಸರ್ವಶಕ್ತನು, ಅಂತರ್ಬಹಿಃ ಸರ್ವತ್ರ ಶಶ್ವದೇಕಪ್ರಕಾರನು, ಆನಂದಜಾನವೀರ್ಯಶ್ರೀಯಶೋ ವಿಜ್ಞಾನಾದಿ ಅನಂತ ಕಲ್ಯಾಣಗುಣಸ್ವರೂಪನು, ಭಿನ್ನ ಭಿನ್ನ ಜೀವರನ್ನು ನಡೆಸುವ ಒಬ್ಬನೇ ಆಗಿರುವ ಸ್ವಾಮಿಯು, ಸ್ವಗತ ಭೇದ ವಿವರ್ಜಿತನು, ಜನನ ಪ್ರಳಯ ಸ್ವತಂತ್ರಕರ್ತನು, ಸೂರ್ಯಾದಿ ಭಾಸಕನು, ಮುಖ್ಯ ಪ್ರಾಣಪ್ರೇರಕನು, ಸರ್ವಾಂತರ್ಯಾಮಿಯು, ಲಕ್ಷ್ಮೀಪತಿಯು ಎಂದು ತಿಳಿದು ಉಪಾಸಿಸಬೇಕು. ಇಂತು ತಿಳಿದ ಭಕ್ತನು ಮುಕ್ತನಾಗುವನು.

ಜೀವನೂ ಅನಾದಿ ನಿತ್ಯನು, ಪ್ರಕೃತಿಯೂ ನಿತ್ಯವೇ. ಚೇತನಾಚೇತನ ಜಗವೆಲ್ಲ ಪ್ರಕೃತಿಯಿಂದ ಬಂದುದೆಂದು ತಿಳಿ ! ಶ್ರೀದೇವಿಯು ತನ್ನ ಪ್ರಕೃತಿಯಿಂದ ಮಾಡಿಕೊಟ್ಟ ಶರೀರಗಳಲ್ಲಿ ಜೀವರಿರುವರು. ಅಲ್ಲಿದ್ದು ಸುಖ-ದುಃಖಾದಿ ವಿಕಾರಗಳನ್ನು ವಿಷಯರೂಪವಾಗಿ ಪಡೆಯುವ ಜೀವನು, ಅಂತರ್ಯಾಮಿಯಾದ ಶ್ರೀಹರಿ ಅಧೀನನಾಗಿ, ಸ್ವಕರ್ಮಾನುರೂಪವಾಗಿ ಆತನಿತ್ತ ಸುಖ-ದುಃಖಾದಿಗಳನ್ನು ಪೊಂದುತ್ತಿರುವನು. ಜೀವನಿಗೆ ವಿಷಯಾಭಿಲಾಷೆಯೇ ಬಂಧಕವು. ಅದರಿಂದಲೇ ಅವನು ಅನೇಕ ಉತ್ತಮಾಧಮ ಯೋನಿಗಳಲ್ಲಿ ಹುಟ್ಟುತ್ತಾ ಸಾಯುತ್ತಿರುವನು. ಇಂತು ಅಸ್ವತಂತ್ರನಾದ ಜೀವನು ಎಂದು ಜೀವಭಿನ್ನವಾದ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು, ಸರ್ವಕರ್ಮಫಲಸಮರ್ಪಣಾ ಸಹಿತವಾದ ಜ್ಞಾನ ಭಕ್ತಿ ವೈರಾಗ್ಯಗಳಿಂದ ಭಜಿಸುವನೋ, ಅಂದೇ ಅವನು ಜ್ಞಾನವನ್ನು ಹೊಂದಿ, ಅಪರೋಕ್ಷವನ್ನೂ ಕ್ರಮವಾಗಿ ಪೊಂದಿ, ಮುಕ್ತನಾಗುವನು. ಅವನಿಗೆ ಮತ್ತೆ ಜನನವಿಲ್ಲ. ಅಪರೋಕ್ಷಜ್ಞಾನಿಯು ಯಥೇಷ್ಟಾಚಾರವಂತನಾದರೂ ಕೂಡ ಅವನಿಗೆ ಬಾಧಕವಿಲ್ಲ. ಸದಸತ್ಪ್ರವೃತ್ತಿಯಿಂದ ಅವನಿಗೆ ಲಾಭ-ಹಾನಿಗಳಿಲ್ಲ. ಅವನು ಸ್ವಭಾವದಿಂದಲೇ ಅಸದಾಚಾರ ದೂರನಾಗಿ, ಜ್ಞಾನಭಕ್ತಿಯುತನಾಗಿಯೇ, ಸ್ವಯೋಗ್ಯಮಾರ್ಗದಿಂದ

ಶ್ರೀಹರಿಯನ್ನು ಭಜಿಸಿ ಮುಕ್ತನಾಗುವನು. ಕೆಲವರು ನಿಷ್ಕಾಮ ಕರ್ಮದಿಂದಲು, ಕೆಲವರು ಶ್ರವಣ ಮನನಾದಿಗಳಿಂದಲು, ಕೆಲವರು ವೇದೋಕ್ತ ಭಗವತ್ ಸ್ವರೂಪಧ್ಯಾನದಿಂದಲು, ಎಲ್ಲರೂ ಸತ್ಕರ್ಮಾನುಷ್ಠಾನದಿಂದ ವೈರಾಗ್ಯವನ್ನು ಶ್ರವಣಮನನಾದಿಗಳಿಂದ ಪರೋಕ್ಷಜ್ಞಾನವನ್ನು ಧ್ಯಾನದಿಂದ ಅಪರೋಕ್ಷಜ್ಞಾನವನ್ನೂ ಹೊಂದುವರು ಮತ್ತು ಸ್ವಯೋಗ್ಯಮುಕ್ತಿಯನ್ನು ಪಡೆಯುವರು. ಭಕ್ತರಾಗದವರಿಗೆ ಯಾವ ಕರ್ಮಧ್ಯಾನಗಳಿಂದಲೂ ಏನು ಪ್ರಯೋಜನವಿಲ್ಲ. ಧ್ಯಾನದಲ್ಲಿ ಅಶಕ್ತರು ಶ್ರವಣಮನನಗಳಿಂದ ತಿಳಿದು ಧ್ಯಾನಿಸಬೇಕು. ಅದೂ ಕೈಲಾಗದವರು ವಿಹಿತಕರ್ಮಾನುಷ್ಠಾನವನ್ನು ಮಾಡಿ, ಆಮೇಲೆ ಶ್ರವಣಾದಿಗಳನ್ನು ನಿಯಮಿತಧ್ಯಾನವನ್ನು ಮಾಡಿ ಮುಕ್ತರಾಗಬೇಕು.

ಜಗತ್ತಿನಲ್ಲಿ ಪುಟ್ಟುವ ಜೀವಜಾತವೆಲ್ಲವೂ ಚಿತ್‌ಪ್ರಕೃತಿ ಮತ್ತು ಶ್ರೀಹರಿ. ಇವರ ಸಂಯೋಗದಿಂದ ಶರೀರಾದಿಗಳನ್ನು ಹೊಂದುತ್ತಿದೆ ಎಂದು ತಿಳಿ ! ಜನನ-ಮರಣಾದಿ ದೋಷಸಹಿತ ಜೀವಸಹಿತ ಶರೀರಗಳಲ್ಲಿದ್ದರೂ ಶ್ರೀಹರಿಯು ಸರ್ವದೋಷರಹಿತನು, ಸರ್ವತ್ರ ವ್ಯಾಪ್ತನು, ಚೇತನಾಚೇತನ ಜಗದ್ವಿಲಕ್ಷಣನು, ಎಂದು ತಿಳಿದವನು, ನಿರ್ದೋಷಾಶೇಷಸದ್ಗುಣನಾದ ಶ್ರೀಹರಿಯ ಪ್ರಸಾದಪಾತ್ರನಾಗುವನು. ಶ್ರೀಹರಿಯು ರಮಾದೇವಿಯ ದ್ವಾರಾ ಜಗಜ್ಜನ್ಮಾದಿ ಸ್ವತಂತ್ರಕರ್ತನು, ಜೀವರು ಅಸ್ವತಂತ್ರಕರ್ತರು, ಶ್ರೀಹರಿಗೆ ಕರ್ಮಫಲಲೇಪವಿಲ್ಲವೆಂದು ತಿಳಿದವನು ಮುಕ್ತನಾಗುವನು.

ಶ್ರೀಶನೇ ಜೀವನ ಅನಾದಿ ಯೋಗ್ಯತೆಯನ್ನನುಸರಿಸಿ ಪುಣ್ಯಪಾಪಾದಿ ಕರ್ಮಗಳನ್ನು ಮಾಡಿಸುವನು. ಅದಕ್ಕೆ ತಕ್ಕ ಫಲವನ್ನು ಕೊಡುವನು. ಅವನಿಗೆ ವೈಷಮ್ಯವಿಲ್ಲ. ಮತ್ತು ಅವನು ನಿಷ್ಕರುಣನಲ್ಲ. ಅವನು ಸರ್ವ ಜೀವರಿಗೆ ಆಧಾರನು, ಸರ್ವ ಜೀವರು ಪರಸ್ಪರ ಭಿನ್ನರು, ಸದಾ ವಿಷ್ಣುವಿನ ಆಧೀನರು ಎಂದು ತಿಳಿದ ಜ್ಞಾನಿಭಕ್ತನು ಮುಕ್ತನಾಗುವನು. ಶ್ರೀಶನಿಗೆ ವೃದ್ಧಿಹ್ರಾಸಗಳಿಲ್ಲ, ಶರೀರಾಭಿಮಾನವಿಲ್ಲ. ಅವನ ದೇಹವು ಜಡವಲ್ಲ, ಅವನಿಂದ ಅದು ಭಿನ್ನವಲ್ಲ. ಅವನಿಗೆ ದೇಹಯೋಗ ರೂಪ ಆದಿ ಇಲ್ಲ, ವಿಯೋಗರೂಪ ಮರಣವಿಲ್ಲ, ಸತ್ವಾತಿಗುಣವಿಕಾರವಲ್ಲದೆ, ಜ್ಞಾನಾನಂದಾದಿ ಕಲ್ಯಾಣಗುಣಗಳೇ ದೇಹವಾಗಿರುವ ಸ್ವಾಮಿಗೆ ಯಾವ ದೋಷದ ಸೋಂಕೂ ಇಲ್ಲ. ಅವನೇ ಸರ್ವ ಕರ್ಮ ಫಲದಾತನು, ಫಲಭೋಕ್ತನು, ಸರ್ವೇಶ್ವರನು ನೀಚೋಚ್ಚಾದಿ ದೇಹಗಳಲ್ಲಿ ಅಂತರ್ಯಾಮಿಯಾಗಿದ್ದರೂ ಶ್ರೀಶನಿಗೆ ಆ ದೇಹದ ನೀಚೋಚ್ಚಭಾವಗಳಿಲ್ಲ, ಜೀವನಂತೆ ಜನನ-ಮರಣಗಳಿಲ್ಲ, ಕರ್ಮಲೇಪವಿಲ್ಲ. ಅವನು ಜಗತ್ತನ್ನು ಬೆಳಗುವ ಸೂರ್ಯನಂತೆ ಕ್ಷೇತ್ರದಲ್ಲಿದ್ದು ಕ್ಷೇತ್ರಜ್ಞನೆನಿಸಿ, ಸರ್ವೇಂದ್ರಿಯ ವ್ಯಾಪಾರವನ್ನು ನಡೆಸಿ, ಜ್ಞಾನವನ್ನೀಯುತ್ತಿರುವನು. ಇಂತು ಕ್ಷೇತ್ರ - ಕ್ಷೇತ್ರಜ್ಞರ ಭೇದವನ್ನು ಕ್ಷೇತ್ರಜ್ಞನ ಮಹಿಮೆಯನ್ನು ಜೀವರ ಬಂಧಮೋಕ್ಷ ಪ್ರಕಾರವನ್ನು ನಿನಗೆ ನಿರೂಪಿಸಿದೆನು. ಇದನ್ನು ತಿಳಿದವರೇ ಜ್ಞಾನಿಗಳು. ಅವರೇ ಮುಕ್ತರಾಗುವರು.

## ೧೮. ಶ್ರೀ ಭಗವದ್ಗೀತೆ ೧೪. ಗುಣತ್ರಯ ವಿಭಾಗ ಯೋಗ

ಶ್ರೀ ಭಗವಂತನಿಂತೆಂದನು:

"ಅರ್ಜುನ ! ಉತ್ತಮವಾದ ಜ್ಞಾನವನ್ನು ಹೇಳುವೆನು, ಕೇಳು ! ಇದನ್ನು ತಿಳಿದು ಮನನ ಮಾಡಿ ಸುಜನರೆಷ್ಟೋ ಜನ ಮುಕ್ತರಾಗಿರುವರು. ಮುಕ್ತರಾದವರು ಪ್ರಳಯದಿ ದುಃಖವನ್ನೂ, ಸೃಷ್ಟಿಕಾಲದಿ ಜನನವನ್ನೂ ಹೊಂದದೆ, ಸುಖವಾಗೇ ಇರುವರು. ಚಿತ್ಪ್ರಕೃತಿಯಾದ ಮಹಾಲಕ್ಷ್ಮಿಯು ನನ್ನ ಸತಿ. ಅವಳನ್ನು ಮಹದ್ಬ್ರಹ್ಮವೆಂಬರು. ಸೃಷ್ಟಿಕಾಲವು ಬಂದಾಗ, ನಾನು ಅವಳಲ್ಲಿ ಇಪ್ಪತ್ತುನಾಲ್ಕು ತತ್ವಾಂಶಯುತರಾದ ಜೀವರನ್ನು ನನ್ನ ಉದರದಿಂದ ತೆಗೆದು ಇಡುವೆನು. ಆಗ ಅವಳಿಂದ ಜೀವರಿಗೆ ದೇಹಯೋಗ ರೂಪವಾದ ಜನ್ಮವು ಸಂಭವಿಸುವುದು. ದೇವದಾನವ ಮಾನವ ತಿರ್ಯಗಾದಿ ಯೋನಿಗಳಲ್ಲಿ ಹುಟ್ಟುವ ಎಲ್ಲ ಜೀವರಿಗೂ ಲಕ್ಷ್ಮೀದೇವಿಯು ಜನನಪ್ರದಳಾದ ತಾಯಿ, ನಾನು ಬೀಜಪ್ರದನಾದ ತಂದೆ.

ಬಂಧಜ್ಞಾನವಿಲ್ಲದಿರೆ, ಅದರಿಂದ ಬಿಡಿಸಿಕೊಳ್ಳಬೇಕೆನ್ನುವ ಹಂಬಲವೇ ಹುಟ್ಟುವುದಿಲ್ಲ. ಬಂಧವು ಪ್ರಕೃತಿಮಯವಾಗಿದೆ. ಜಡಪ್ರಕೃತಿಯ ಸತ್ವರಜಸ್ತಮವೆಂಬ ಮೂರು ಗುಣಗಳು ದೇಹದಲ್ಲಿ ಜೀವರನ್ನು ಬಂಧಿಸುವವು. ಅವು ಶ್ರೀ ಭೂ ದುರ್ಗಾ ಎಂಬ ರಮಾದೇವಿಯ ಮೂರು ರೂಪಗಳಿಂದ ಅಭಿಮನ್ಯಮಾನವೆಂದು ತಿಳಿ ! ಸತ್ವವು ದೇವಜೀವರನ್ನು, ರಜವು ಮಾನವರನ್ನು, ತಮವು ದಾನವರನ್ನು ಬಂಧಿಸುವವು. ಸತ್ವವು ಪ್ರಕಾಶಕವಾಗದೆ. ಅದು ವ್ಯಾಧ್ಯಾದಿಗಳಿಲ್ಲದಂತೆ ಮಾಡಿ, ತತ್ವಜ್ಞಾನವನ್ನು ಪುಟ್ಟಿಸಿ, ಸುಖಜ್ಞಾನಗಳ ಸಂಗದಿಂದ ದೇವಜೀವರನ್ನು ಬಂಧಿಸುವುದು. ರಜವು ರಾಗಾತ್ಮಕವಾಗಿದೆ. ಅದು ದುರಾಶೆ, ಸಂಗಗಳನ್ನು ಪುಟ್ಟಿಸಿ, ಕರ್ಮಸಂಗದಿಂದ ಮಾನವಜೀವರನ್ನು ಬಂಧಿಸುವುದು. ತಮವು ಅಜ್ಞಾನಮಯವಾಗಿದೆ. ಅದು ಮಿಥ್ಯಾಜ್ಞಾನವನ್ನು ಪುಟ್ಟಿಸಿ, ಪ್ರಮಾದ, ಆಲಸ್ಯ ನಿದ್ರಾದಿಗಳಿಂದ ದೈತ್ಯರನ್ನು ಬಂಧಿಸುವುದು.

ಸತ್ವವು ಸುಖವಿಷಯದಲ್ಲಿಯು, ರಜವು ಕರ್ಮವಿಷಯದಲ್ಲಿಯು, ತಮವು ಜ್ಞಾನವನ್ನು ಮುಚ್ಚಿ ಧರ್ಮವನ್ನು ಅಧರ್ಮವೆಂದು ತಿಳಿವ ಪ್ರಮಾದ ವಿಷಯದಲ್ಲಿಯು ಬಂಧಿಸಿ ನಡೆಸುವಾಗ ಶ್ರೀಭೂದುರ್ಗಾದೇವಿಯರ ಪ್ರೇರಣೆಯಂತೆ ಎಂದು ತಿಳಿ ! ಈ ಗುಣಗಳಲ್ಲಿ ಆಗಾಗ ವೃದ್ಧಿಹ್ರಾಸಗಳಾಗುತ್ತಿರುವವು. ಸತ್ವವು ಶ್ರೀಶೇಚ್ಛೆಯಂತೆ ರಜಸ್ತಮಗಳನ್ನು ತುಳಿದಿಟ್ಟು ವೃದ್ಧಿಯಾದಾಗ, ದೇಹದಲ್ಲಿ ಪ್ರಕಾಶಜ್ಞಾನಗಳಾಗುವವು. ರಜವು ಸತ್ವತಮಗಳನ್ನು ತುಳಿದಿಟ್ಟು ವೃದ್ಧಿಯಾದಾಗ, ಲೋಭ, ಕಾಮ್ಯಕರ್ಮ, ಆಶೆ, ಕರ್ಮಾರಂಭಗಳು ಹುಟ್ಟುವವು. ತಮವು ಸತ್ವರಜಗಳನ್ನು ತುಳಿದಿಟ್ಟು ವೃದ್ಧಿಯಾದಾಗ ಇಂದ್ರಿಯ ವಿಕಲತೆ, ಪ್ರಯತ್ನ ಹೀನತೆ, ಅಶ್ರದ್ಧೆ ವಿಪರೀತ ಜ್ಞಾನಗಳು ಹುಟ್ಟುವವು.

ಸತ್ವವು ವೃದ್ಧವಾದಾಗ ಮೃತನಾದ ಜೀವನು ವಿಷ್ಣು ಭಕ್ತಿಯುತರಾದ ಸಾತ್ವಿಕ ಕುಲದಿ ಹುಟ್ಟುವನು. ರಜೋವೃದ್ಧಿಯಲ್ಲಿ ಮೃತನು ಕರ್ಮಿಗಳ ದೇಹವನ್ನು, ತಮೋ

ಗುಣವೃದ್ಧಿಯಲ್ಲಿ ಮೃತನು ದೈತಕುಲದೇಹವನ್ನು ಹೊಂದುವನು. ಸಾತ್ವಿಕ ಕರ್ಮದ ಫಲವು ದುಃಖಗಂಧಹೀನವಾದ ಸುಖವಾಗಿದೆ. ರಾಜಸ ಕರ್ಮದ ಫಲವು ದುಃಖ ಮಿಶ್ರ ಸುಖವಾಗಿದೆ. ತಾಮಸ ಕರ್ಮದ ಫಲವು ಅಜ್ಞಾನದುಃಖಗಳಾಗಿವೆ. ಸತ್ವದಿಂದ ಪರಾಪರ ತತ್ವಜ್ಞಾನ, ರಜದಿಂದ ವಿಷಯಾಸಕ್ತಿ ಮತ್ತು ಅಜ್ಞಾನ, ತಮದಿಂದ ಪ್ರಮಾದ ಮೋಹ ಮಿಥ್ಯಾ ಜ್ಞಾನಗಳು ಸಂಭವಿಸುವವು.

ಸತ್ವಾದಿಗುಣಗಳು ಜ್ಞಾನಲೋಭ ಪ್ರಮಾದಾದಿಗಳ ದ್ವಾರಾ ಹುಟ್ಟಿಸುವ ಫಲಗಳನ್ನು ಕೇಳು ! ಸಾತ್ವಿಕರು ಜ್ಞಾನದಿಂದ ಮೇಲಿರುವ ಜನ ಆದಿಲೋಕಗಳನ್ನು ಸೇರುವರು. ರಾಜಸರು ಕಾಮ್ಯಕರ್ಮದಿಂದ ಮಧ್ಯದಲ್ಲಿ ಸ್ವರ್ಗಭೂಮಿಗಳಲ್ಲಿರುವರು. ಕೆಟ್ಟ ತಾಮಸರು ಅಜ್ಞಾನನಿಷ್ಠರಾಗಿ, ನಿರಯವನ್ನು ಸೇರುವರು. ಗುಣಗಳೇ ಸ್ವಂತವಾಗಿ ಫಲವನ್ನು ಕೊಡುವವೆಂದು ತಿಳಿಯಬೇಡ ! ಗುಣಗಳು ಪರಿಣಾಮಕರ್ತೃಗಳಾದರೂ, ಅವನ್ನು ಪ್ರೇರಿಸಿ ನಡೆಸುವ ಪರಮಾತ್ಮನು ಸ್ವತಂತ್ರನೆಂದು ತಿಳಿಯುವವನೇ ಜ್ಞಾನಿಯು. ಅಂತಹವನು ಜ್ಞಾನಾನಂದಾತ್ಮಕವಾದ ಮೋಕ್ಷಪದವಿಯನ್ನು ಯಥಾ ಯೋಗ್ಯವಾಗಿ ಪೊಂದುವನು. ನನ್ನ ಪ್ರಸಾದದಿಂದ ಅವನು ಮುಕ್ತನಾಗುವನು. ಇಂತು ಗುಣಗಳ ಕಾರ್ಯವನ್ನರಿತು, ತ್ರಿಗುಣಾತೀತನಾಗಲು ಪ್ರಯತ್ನಿಸಿದ ಜೀವನು ಶ್ರೀಹರಿಯ ದಯದಿಂದ ಸಾಧನ ಸಂಪತ್ತಿ ಪೂರ್ಣವಾಗಲು ಜನನ ಮರಣ ಜರಾ ದುಃಖಗಳಿಂದ ವಿಮುಕ್ತನಾಗಿ, ಮೋಕ್ಷಸುಖವನ್ನು ಪೊಂದುವನು."

ಅರ್ಜುನನು ! "ಭಗವನ್ ಸತ್ವಾದಿ ಗುಣವಿಕಾರಗಳನ್ನು ಹೊಂದದೆ ಇರುವ ಗುಣಾತೀತನ ಲಕ್ಷಣಗಳಾವುವು? ಪ್ರಭೋ ! ಅವನ ಆಚರಣೆ ಎಂತಿರುವುದು ? ಗುಣಗಳನ್ನು ಮೀರಿ ಜಯಿಸುವ ಸಾಧನವಾವುದು?" ಎಂದು ಕೇಳಿದನು.

ಶ್ರೀ ಭಗವಂತನೆಂದನು : 'ಗುಣಾತೀತನು, ಗುಣಧರ್ಮಗಳಾದ ಜ್ಞಾನ, ಕರ್ಮ, ಅಜ್ಞಾನಾದಿಗಳಿಗೆ ಅಪೇಕ್ಷಿಸನು; ಬಂದರೆ ದ್ವೇಷಿಸನು. ಆದರೆ ಸ್ಥೂಲಗುಣಗಳಿಂದಾಗುವ ಪ್ರಕಾಶ ಪ್ರವೃತ್ತಿಮೋಹಗಳನ್ನು ಹೊಂದಿ, ಪ್ರಾಯಃ ದ್ವೇಷಿಸದೆ ಹೆಚ್ಚಾಗಿ ದ್ವೇಷಿಸದ ಇತರರಲ್ಲಿರುವ ಪ್ರಕಾಶಜ್ಞಾನಾದಿ ಗುಣಗಳನ್ನು ದ್ವೇಷಿಸದೆ, ಮೋಹಾದಿ ದೋಷಗಳು ಅವರಿಗೆ ಆಗಲೆಂದು ಅಪೇಕ್ಷಿಸದೆ ಇರುವವನು ಗುಣಾತೀತನು. ಇತರರ ಇಷ್ಟಹಾನಿಯನ್ನೂ ಅನಿಷ್ಟಪ್ರಾಪ್ತಿಯೂ ಬೇಡದವನು ಗುಣಾತೀತನು. ಶ್ರೀಹರಿಯ ವಿಷಯಕ ಜ್ಞಾನ ಪ್ರಯತ್ನಗಳನ್ನು ಬೇಡಿ, ಶ್ರೀಹರಿ ವಿಷಯಕವಾದ ಅಜ್ಞಾನವನ್ನು ಬೇಡದೆ, ಹರಿಸ್ಮೃತಿರತನಾದವನು ಗುಣಾತೀತನು. ಅವನು ವಿಷ್ಣುಧರ್ಮ ನಿಷ್ಠನಾಗಿ, ಶ್ರೀಹರೀಚ್ಛೆಯಿಂದ ಗುಣಕಾರ್ಯವಾಗುವುದೆಂದು ತಿಳಿದು, ಉದಾಸೀನನಂತೆ ನಿರ್ಲಿಪ್ತನಾಗಿ, ತಾನು ನಿರ್ವಿಕಾರನಾಗಿರುವನು. ಸುಖಕ್ಕೆ ಉಬ್ಬದೆ, ದುಃಖಕ್ಕೆ ಕುಗ್ಗದೆ ಪ್ರಿಯಾಪ್ರಿಯಗಳು ಬಂದರೆ ಶ್ರೀಹರೀಚ್ಛೆಯೆಂದು ಸ್ವೀಕರಿಸಿ, ನಿಶ್ಚಿಂತನಾಗಿರುವನು. ಆತ್ಮಸ್ತುತಿಯನ್ನು, ಪರನಿಂದೆಯನ್ನು ಮಾಡದಿರುವನು. ವಿಷ್ಣು-ವಿರುದ್ಧ ಧರ್ಮಗಳನ್ನು ಎಂದಿಗೂ ಆಚರಿಸದಿರುವನು. ಕಾಂಚನವು ಕೂಡ ಕಲ್ಲಿನಂತೆ ಮಣ್ಣಿನ ಹೆಂಟೆಯಂತೆ ಹೇಯವೆಂದು ತಿಳಿದಿರುವನು. ವಿಷ್ಣುಭಜನಾದಿ

ಸತ್ಕಾರ್ಯಗಳಲ್ಲಿ ದುಃಖಕಷ್ಟಾದಿಗಳು ಬರುವಂತಾದರೂ ಬಿಡನು. ವಿಷ್ಣು ಭಜನೆ ಬಿಟ್ಟಾಗ ಆಗುವ ಸುಖವನ್ನು ಬಯಸದಿರುವವನು. ಲೋಕದ ಪುರುಷಾರ್ಥವು ನಾಶವಾಗುವಂತಾದರೂ ಶ್ರೀಶಭಜನಾದಿಗಳನ್ನು ಬಿಡದಿರುವನು. ಪ್ರಿಯಾಪ್ರಿಯಗಳು, ಸ್ತುತಿನಿಂದೆಗಳು, ಮಾನಾಪಮಾನಗಳು, ಮಿತ್ರತ್ವಶತ್ರುತ್ವಗಳು ಸಂಭವಿಸಿದರೂ ಬಿಡದೆ, ಭಕ್ತಿಯಿಂದ ಶ್ರೀಹರಿ ಭಜನವನ್ನು ಏಕಪ್ರಕಾರವಾಗಿ ಮಾಡುತ್ತಲಿರುವನು. ಎಷ್ಟು ಲಾಭವಿದ್ದರೂ ಅವೈಷ್ಣವಕರ್ಮಾರಂಭವನ್ನು ಎಂದಿಗೂ ಮಾಡದಿರುವನು.

ಎಂದಿಗೂ ಬಿಡದ ಭಕ್ತಿಯಿಂದ, ಏನನ್ನೂ ಬೇಡದೆ, ನಾನೇ ಸರ್ವೋತ್ತಮನೆಂದು ತಿಳಿದು ಭಜಿಸುವ ಜೀವನು ನನ್ನ ಉತ್ತಮ ಭಕ್ತನಾಗಿ, ಗುಣಾತೀತನೆನಿಸುವನು. ಅಂತಹವನು ಶ್ರೀಲಕ್ಷ್ಮೀದೇವಿಯ ಕೃಪೆಗೆ ಪಾತ್ರನಾಗಿ, ಮುಂದೆ ಶ್ರೀದೇವಿಗೂ, ಮುಖ್ಯ ಪ್ರಾಣನಿಗೂ, ಮುಕ್ತಜೀವರಿಗೂ ವಲ್ಲಭನಾದ ನನ್ನನ್ನೂ ಪೊಂದಿ ಮುಕ್ತನಾಗುವನು. ನಾನೇ ಸರ್ವದೇವೋತ್ತಮನು, ನನ್ನಿಂದ ಅಧಿಕರಿಲ್ಲ. ನನ್ನನ್ನು ನಿಷ್ಕಾಮಕರ್ಮಜ್ಞಾನಭಕ್ತಿಗಳಿಂದ ಮಾತ್ರ ಪ್ರಸನ್ನೀಕರಿಸಿಕೊಳ್ಳಬಹುದು. ನನ್ನ ಪ್ರಸಾದದಿಂದಲೇ ದುಃಖಾಸಂಭಿನ್ನವಾದ ಸುಖರೂಪಮೋಕ್ಷವೆಂದು ತಿಳಿ !'

## ೧೯. ಶ್ರೀ ಭಗವದ್ಗೀತೆ ೧೫. ಪುರಾಣಪುರುಷೋತ್ತಮ ಯೋಗ

ಶ್ರೀ ಭಗವಂತನಿಂತೆಂದನು:

'ಅರ್ಜುನಾ ! ಸಂಸಾರಹೇತುಭೂತವಾದ ಪ್ರಕೃತ್ಯಾದಿ ಜಗತ್ತಿನ ಸ್ವರೂಪವನ್ನು ನಿನಗೆ ನಿರೂಪಿಸಿದೆನು. ಪ್ರಕೃತಿಬಂಧವನ್ನು ಬಿಡಿಸಿಕೊಳ್ಳಬೇಕಾದ ಸಾಧನವನ್ನು ಹೇಳುವೆನು. ಕೇಳು !

ಹಿಂದೆ ನಾನು ಪೇಳಿದ ಕ್ಷೇತ್ರವೆಂಬುವ ಜಗದ್‌ವೃಕ್ಷವು ಊರ್ಧ್ವ ಎಂದರೆ ಬಲು ಸರ್ವೋತ್ತಮನಾದ ನನ್ನನ್ನು ಆಧಾರಿಸಿ, ನನ್ನ ಸಾಮರ್ಥ್ಯದಿಂದ ನಿಂತಿದೆ. ಜಗತ್ತು ಒಂದೇ ವಿಧವಾಗಿ ಇರುವುದಿಲ್ಲವಾದುದರಿಂದ ಅದಕ್ಕೆ ಅಶ್ವತ್ಥವೆಂಬ ಹೆಸರಿದೆ. ಅದಕ್ಕೆ ಸುತ್ತಿ ಗಿಡವನ್ನು ಹಿಡಿದ ಮಣ್ಣಿನಲ್ಲಿರುವ ಶಕ್ತಿಯಂತೆ, ನಾನು ಆಧಾರನಾಗಿ, ಬೇರಂತೆ ಹಿಡಿದಿರುವೆನು. ಲಕ್ಷ್ಮೀದೇವಿಯು ಕೂಡ ನನ್ನಂತೆ ಆಧಾರಳಾಗಿ ಇರುವಳು. ಇನ್ನು ಜಡಪ್ರಕೃತಿಯು ಆ ಗಿಡದ ಬೇರಾಗಿ, ತನ್ನ ಮೂರು ಗುಣಗಳ ಸಾರದಿಂದ, ಆ ಜಗದುಪಾದಾನವಾಗಿ ಬೆಳೆಸುತ್ತಿದೆ. ಇತರ ದೇವತೆಗಳು ಅದಕ್ಕೆ ರೆಂಬೆಗಳು. ವೇದವೇ ಎಲೆಗಳು. ಕಾಮಮೋಕ್ಷಗಳೆಂಬ ಎರಡು ಫಲಗಳು. ಈ ವೃಕ್ಷವು ನಾಶರಹಿತವು, ಪ್ರವಾಹತಃ ನಿತ್ಯ ಎಂದು ತಿಳಿದವನೇ ಜ್ಞಾನಿಯು.

ಶಾಖಾಭೂತರಾದ ಮಹತ್ತೇ ಮೊದಲಾದ ಎಂಟು ಪದಾರ್ಥಗಳು ತಮ್ಮಕಿಂತಲು ಕಡಿಮೆಯಾದ ಮತ್ತು ತಮ್ಮ ಕಾರ್ಯವಾದ ಭೂತಶರೀರಗಳಲ್ಲಿಯು ಮತ್ತು ತಮ್ಮ ಕಾರಣವಾದ ಅವ್ಯಕ್ತದಲ್ಲಿಯು (ಸೂಕ್ಷ್ಮ) ವ್ಯಾಪಿಸಿ ನಿಂತಿವೆ. ಅವು ಸತ್ವಾದಿ ಗುಣಗಳಿಂದ ಬೆಳೆಯುತ್ತಿವೆ.

ತಾತ್ಕಾಲಿಕ ಸುಖವನ್ನೀವ ವಿಷಯಗಳೇ (ಶಬ್ದ ಸ್ಪರ್ಶರೂಪರಸಗಂಧಗಳು) ಆ ಗಿಡದ ಚಿಗುರೆಲೆಗಳು ಮೂಲಕಾರಣನಾದ ಶ್ರೀಹರಿಯು ತನ್ನ ವಿವಿಧ ರೂಪಗಳಿಂದ ಜಡಾಜಡ ಪ್ರಕೃತಿಗಳನ್ನು, ಸತ್ವಾದಿ ಗುಣಗಳನ್ನು, ಮಹದಾದಿ ತತ್ವಗಳನ್ನು ವ್ಯಾಪಿಸಿ, ಆಯಾ ಕರ್ಮಗಳ ಫಲದಾತನಾಗಿರುವನು.

ಇಂತಹ ಜಗತ್ತಿನ ರೂಪವು ಸವಿಕಾರವಾಗಿರುವುದರಿಂದ, ಯಥಾಸ್ಥಿತವಾದ ಅದರ ಅರಿವು ಜೀವರಿಗಾಗುವುದಿಲ್ಲ. ಜಗಜ್ಜನ್ಮಸಂಹಾರಗಳನ್ನು ಮಾಡುವುದರಿಂದ ಆದಿ ಅಂತ ಎನಿಸಿಕೊಂಡ ಶ್ರೀಹರಿಯು, ಜಗತ್ತಿನಲ್ಲಿ ವ್ಯಾಪ್ತನಾಗಿದ್ದರೂ, ಸ್ವಶಕ್ತಿಯಿಂದ ಕಾಣುವುದಿಲ್ಲ. ಅವನು ಗುಣಾತೀತನು, ಜಗತ್ತಿನ ಆದಿನಾಶಗಳಂತೆ ಅವನೂ ಕಾಣಲಾಗದವನಾಗಿರುವನು. ಇಂತಹ ಜಗದ್ವೃಕ್ಷವನ್ನು ವೈರಾಗ್ಯಜ್ಞಾನ ಶಸ್ತ್ರದಿಂದ ಕಡಿದು (ದೂರಮಾಡಿ), ಭಕ್ತಿಯನ್ನು ಸಂಪಾದಿಸಬೇಕು. ವಿಷ್ಣುವು ಪ್ರಕೃತ್ಯಾದಿ ಜಗದ್ವಿಲಕ್ಷಣನು, ಸ್ವತಂತ್ರನು. ಜಗತ್ತು ಪರತಂತ್ರವು ಮತ್ತು ಅನೇಕ ಭೇದಯುಕ್ತವು, ಪ್ರವಾಹತಃ ನಿತ್ಯವು. ಎಂದು ವಿವೇಕಿಸಿ ತಿಳಿಯಬೇಕು. ಅಂತಹ ಜ್ಞಾನಭಕ್ತಿಗಳಿಂದ ಶ್ರೀಹರಿಯನ್ನು ಶಾಸ್ತ್ರಶ್ರವಣಮನನಾದಿಗಳಿಂದ ವಿಚಾರಿಸಿ ತಿಳಿಯಬೇಕು. ಸಂಸಾರವೃಕ್ಷವನ್ನು ಬೆಳೆಸಿ, ಪೋಷಿಸಿ, ನಾಶಪಡಿಸುವ ಶ್ರೀಹರಿಯು ಜಗತ್ತನ್ನು ಪ್ರವಾಹತಃ ನಿತ್ಯವಾಗಿ, ಅಸ್ವತಂತ್ರವಾಗಿ ಇಟ್ಟಿರುವನು. ಇಂತು ವಿಚಾರಿಸಿ ಶ್ರೀಹರಿಗುರು ಭಕ್ತನಾದವನು ಮುಕ್ತನಾಗಿ, ಮತ್ತೆ ಹಿಂತಿರುಗಿ ಬರನು.

ಸಂಸಾರದ ಜನನ-ಮರಣಗಳಿಂದ ದೂರನಾಗಲು ಸಾಧನವನ್ನು ಹೇಳುವೆನು. ದುಷ್ಟಾಭಿಮಾನವನ್ನು ದುಷ್ಟ ಸಂಗವನ್ನು ಬಿಡಬೇಕು. ಅಂತರ್ಯಾಮಿ ಶ್ರೀಹರಿಯಲ್ಲಿ ಎಡೆಬಿಡದೆ ಭಕ್ತಿಯನ್ನು ಮಾಡಬೇಕು. ದುಷ್ಟವಾದ ಪ್ರವೃತ್ತಿಕರ್ಮವನ್ನು ಮಾಡಬಾರದು. ಶೀತೋಷ್ಣಾದಿಗಳಿಂದ ಆಗುವ ಸುಖದುಃಖರೂಪವಿಕಾರವನ್ನು ಅಡಗಿಸಿ, ಜ್ಞಾನವನ್ನು ಸಂಪಾದಿಸಬೇಕು. ಅಂತಹ ಜ್ಞಾನಿಗಳು ಸಂಸಾರ ಬಂಧವನ್ನು ಕಡಿದುಕೊಂಡು, ನಾಶರಹಿತನಾದ ಶ್ರೀಹರಿಯಲೋಕವನ್ನು ಸೇರುವರು. ಶ್ರೀಹರಿಯು ಸ್ವಪ್ರಕಾಶನಾಗಿರುವನು. ಅವನನ್ನು ಸೂರ್ಯ-ಚಂದ್ರಾದಿಗಳು, ಬೆಳಗಿ ತೋರಲಾರರು. ಅವನೇ ಅವರನ್ನು ಬೆಳಗುವನು. ಅವನನ್ನು ಸೇರಿದವರಿಗೆ ಮತ್ತೆ ಸಂಸಾರವಿಲ್ಲ.

ಜೀವನು ಶ್ರೀಹರಿಯ ಭಿನ್ನಾಂಶನು. ಶ್ರೀಹರಿಯ ಪ್ರತಿಬಿಂಬರಾದ ಬ್ರಹ್ಮಾದಿ ಜೀವರೆಲ್ಲರು ತದಧೀನರು, ತತ್ಸದೃಶರು ಮತ್ತು ತದ್ಭಿನ್ನರು ಆಗಿರುವರು. ಜೀವನು ಅನಾದಿನಿತ್ಯನು. ಆದರೂ ಅವನಿಗೆ ಅನಾದ್ಯವಿದ್ಯೆ ಕಾಮ್ಯಕರ್ಮಗಳಿಂದ ದೇಹವು ಬಂದಿದೆ. ಅದರಲ್ಲಿರುವ ಮನಸ್ಸು ಪಂಚಜ್ಞಾನೇಂದ್ರಿಯಗಳ ವಶವಾಗಿ ಜೀವನು ವಿಷಯಗಳತ್ತ ಧಾವಿಸಿ, ಕೆಡುತ್ತಿರುವನು. ಮರಣವಾದಮೇಲೂ, ಜೀವನ ಹಿಂದೆ ಸೂಕ್ಷ್ಮರೂಪದಿಂದ ಇಂದ್ರಿಯಗಳಿದ್ದೇ ಇರುವವು. ಅಂತಹ ಇಂದ್ರಿಯಗಳಲ್ಲಿ ಪ್ರೇರಕನಾಗಿ ಹೃಷೀಕೇಶನು ವಿಷಯಗಳಿಂದಾಗುವ ಸುಖವನ್ನು ಮಾತ್ರ (ಸ್ವಾಖ್ಯರಸ) ಭೋಗಿಸುವನು. ಶ್ರೀಹರಿಗೆ ದುಃಖಲೇಪವಿಲ್ಲ. ಜೀವನು ಶರೀರವನ್ನು ಪ್ರವೇಶಿಸುವಲ್ಲಿಯು ಬಿಡುವಲ್ಲಿಯು ಸ್ವತಂತ್ರನಲ್ಲ. ಶ್ರೀಹರಿಯೇ ಚಕ್ಷುರಾದಿ ಸರ್ವೇಂದ್ರಿಯ ನಿಯಾಮಕನು. ಜೀವನು ಶರೀರವನ್ನು

ಪ್ರವೇಶಿಸುವಾಗ, ಅವನಿಗೆ ಸ್ವಾಮಿಯಾಗಿ ಕರ್ಮದಿಂದ ಆ ಶರೀರವನ್ನು ಕೊಟ್ಟ ಶ್ರೀಶನು ಪುಷ್ಪಗಂಧವನ್ನು ವಾಯುವಿನಂತೆ ಸೂಕ್ಷ್ಮೇಂದ್ರಿಯಾಂಶಗಳನ್ನು ತಂದಿಡುವನು. ಶರೀರವನ್ನು ಬಿಟ್ಟಾಗಲು ಸೂಕ್ಷ್ಮೇಂದ್ರಿಯಾಂಶಗಳನ್ನು ಆದೇಹದಿಂದ ಸೆಳೆದು ಜೀವನೊಡನೆ ಲೋಕಾಂತರವನ್ನು ಸೇರಿಸುವನು. ಇಂದ್ರಿಯಗಳು ಒಂದಂಶದಿಂದ ಅಧಿದೈವವನ್ನು ಹೊಂದಿ, ಒಂದಂಶದಿಂದ ಜೀವನ ಹಿಂದೇ ಇದ್ದು ಮತ್ತೆ ಶರೀರವು ಬಂದಾಗ, ಉಪಚಯವನ್ನು ಹೊಂದುವವು. ಮುಕ್ತಿಯಾದ ಮೇಲೆ ಬಾಹ್ಯೇಂದ್ರಿಯಗಳಿಲ್ಲ. ಅಲ್ಲಿಯವರೆಗೂ ನಡೆಯುವ ಮನಸ್ಸು ಕಣ್ಣು ಕಿವಿ, ಚರ್ಮ, ನಾಲಿಗೆ, ಮೂಗು ಮೊದಲಾದ ಇಂದ್ರಿಯ ವ್ಯಾಪಾರಗಳನ್ನು ಶ್ರೀಹರಿಯು, ಆಯಾ ದೇವತೆಗಳ ದ್ವಾರಾ ನಡೆಸುವನು. ಶ್ರೀಹರಿಯು ಶಬ್ದಾದಿ ವಿಷಯಗಳಲ್ಲಿ ಶುಭಗಳನ್ನೇ ಸ್ವೀಕರಿಸುವನು. ಅವನು ಭೋಜನ, ಗಮನ, ದೇಹತ್ಯಾಗ ಮೊದಲಾದ ಕರ್ಮಗಳನ್ನು ದೇಹದಲ್ಲಿದ್ದು ಮಾಡಿಸುತ್ತಿದ್ದರೂ, ಮೂಢ ಮಾನವರು ಅವನನ್ನು ಕಾಣದಿರುವರು. ಭಕ್ತಿರಹಿತರು ಎಷ್ಟು ಪ್ರಯತ್ನಿಸಿದರೂ ಅವನನ್ನು ನೋಡಲಾರರು. ಜ್ಞಾನಿಗಳು ಮಾತ್ರ ಅವನ ಪ್ರಸಾದದಿಂದ ಅಂತರ್ಯಾಮಿಯಾಗಿರುವ ಶ್ರೀಶನನ್ನು ಕಾಣುವರು.

ಅವನ ಮಹಿಮೆ ದೊಡ್ಡದು. ಆದಿತ್ಯನ ತೇಜ, ಚಂದ್ರಮನ ಕಾಂತಿ, ಅಗ್ನಿಯ ತಾಪ ಎಲ್ಲವೂ ಅವನ ಅಧೀನ; ಅವನು ಕೊಟ್ಟದ್ದು. ಭೂಮಿಯಲ್ಲಿ ಭೂಮಗುಣನು ಇದ್ದು ಸಕಲ ಜೀವರನ್ನು ಧರಿಸಿ ಪೋಷಿಸುವನು. ಚಂದ್ರನಲ್ಲಿ ಆನಂದಮಯನು ಇದ್ದು ಸಸ್ಯಾದಿಗಳನ್ನು ಬೆಳೆಸುವನು. ಅವುಗಳ ರಸವನ್ನು ಜೀವರಿಗೆ ಕೊಡುವನು. ತಿಂದ ಅನ್ನವು ಜೀರ್ಣವಾಗುವಂತೆ ಜಠರಾಗ್ನಿಯನ್ನು ಉದ್ದೀಪಿಸಿ, ವೈಶ್ವಾನರನಾಗಿ ಪ್ರಾಣದೇಹಗಳಲ್ಲಿ ಪ್ರಾಣಾಪಾನಗಳನ್ನು ಪ್ರೇರಿಸುತ್ತಾ ಉರಿಯುತ್ತಿರುವನು. ಎಲ್ಲರಲ್ಲಿಯು ಹೃದಯಗುಹೆಯಲ್ಲಿ ನಿಯಾಮಕನಾಗಿ ನಿರ್ಲಿಪ್ತನಾಗಿರುವನು. ಶ್ರೀಹರಿಯಿಂದಲೇ ಜೀವರಿಗೆ ಜ್ಞಾನ, ಅಜ್ಞಾನ. ಅವನೇ ಸರ್ವವೇದ ಮುಖ್ಯಾರ್ಥನು. ಅವನೇ (ಶ್ರೀಕೃಷ್ಣನೇ) ವ್ಯಾಸರೂಪದಿಂದ ವೇದಾಂತಾದಿ ಸಚ್ಛಾಸ್ತ್ರಗಳನ್ನು ರಚಿಸಿದನು. ವೇದಗಳ ಅರ್ಥವನ್ನು ಚನ್ನಾಗಿ ಅರಿತಿರುವವನೆಂದರೆ ಶ್ರೀಹರಿಯೇ ಸರಿ !

ಲೋಕದಲ್ಲಿ ಕ್ಷರ, ಅಕ್ಷರ ಎಂಬ ಎರಡು ವಿಧ ಚೇತನರು ಇರುವರು. ಅವರೆಲ್ಲರೂ ಅಸ್ವತಂತ್ರರು. ಕ್ಷರ ಎಂದರೆ ನಾಶಹೊಂದುವ ದೇಹವುಳ್ಳ ಚತುರ್ಮುಖಾದಿ ಜೀವರು. ಅಕ್ಷರ ಎಂದರೆ ನಾಶರಹಿತಳು, ನಿರ್ವಿಕಾರಳು, ವ್ಯಾಪ್ತಳು ಆದ ಮಹಾಲಕ್ಷ್ಮಿಯು. ಪುರುಷನಂತೆ ಮಹಾಶಕ್ತಿಯುತಳಾದ ಲಕ್ಷ್ಮಿದೇವಿಯನ್ನು ಅಕ್ಷರ ಪುರುಷಳೆಂಬವರು. ಕ್ಷರಾಕ್ಷರರನ್ನಾಳುವ ಉತ್ತಮ ಪುರುಷನು ಬೇರೊಬ್ಬನಿರುವನು. ಅವನು ಲೋಕತ್ರಯವನ್ನು ವ್ಯಾಪಿಸಿ, ಎಲ್ಲರನ್ನು ಧರಿಸಿ ಪೋಷಿಸುತ್ತಿರುವ ಪರಮಾತ್ಮನೆಂದು ತಿಳಿ ! ನಾನು ಕ್ಷರಕಿಂತಲು, ನಿತ್ಯಮುಕ್ತಳಾದ ಅಕ್ಷರ (ರಮಾದೇವಿ)ಳ ಕಿಂತಲು ಉತ್ತಮನಾಗಿರುವೆನಾದುದರಿಂದ, ವೇದದಲ್ಲಿಯೂ, ಲೋಕದಲ್ಲಿಯೂ, ಪುರುಷೋತ್ತಮನೆಂದು ಪ್ರಖ್ಯಾತನಾಗಿರುವೆನು ಇಂತು ಪುರುಷೋತ್ತಮನಾಗಿರುವ ನನ್ನನ್ನು ಅಜ್ಞಾನ ಅನ್ಯಥಾ ಜ್ಞಾನಗಳಿಲ್ಲದೆ ತಿಳಿದವನು, ಎಲ್ಲ ಶಾಸ್ತ್ರಗಳ ಸಾರವನ್ನರಿತಿರುವನು.

ಅರ್ಜುನ ! ಸರ್ವಾಂತರ್ಯಾಮಿಯು, ಸರ್ವಸ್ವಾಮಿಯು ಆದ ನನ್ನ ಮಹಿಮೆಯನ್ನು ತಿಳಿದವನೇ ಬುದ್ಧಿವಂತನು. ಅವನೇ ಕೃತಕೃತ್ಯನು. ಇದು ಶಾಸ್ತ್ರದ ಸಾರ. ಇದು ಪರಮ ಗೋಪ್ಯ. ಶ್ರೀಹರಿಯೇ ಸರ್ವೋತ್ತಮನು. ಅವನಿಂದ ಸೃಷ್ಟವಾದ ಚೇತನಾಚೇತನಾತ್ಮಕ ಜಗತ್ತು ಸತ್ಯವು. ಚೇತನರಲ್ಲಿ ತಾರತಮ್ಯವು ಇದೆ. ಅದು ಮುಕ್ತಿಯಲ್ಲಿಯೂ ಇರುವ ಸ್ವಾಭಾವಿಕ ಗುಣವು. ಜೀವರು ಶ್ರೀ ಹರಿಯ ಅಧೀನರು. ಜ್ಞಾನದಿಂದ ಶ್ರೀಹರಿಪ್ರಸಾದ, ಪ್ರಸಾದದಿಂದ ಮುಕ್ತಿ. ಮೋಕ್ಷವೆಂದರೆ ಸ್ವರೂಪಸುಖ ಪ್ರಾಪ್ತಿ ಅದಕ್ಕೆ ಸಾಧನವಾದುದು ನಿರ್ಮಲಭಕ್ತಿ. ವೇದಸತ್ತರ್ಕ ಪ್ರತ್ಯಕ್ಷಗಳೇ ಪ್ರಮಾಣಗಳು. ಶ್ರೀಹರಿಯು ಸರ್ವವೇದ ಮುಖ್ಯಪ್ರತಿಪಾದ್ಯನು. ಇಂತು ತಿಳಿದವರು ಮುಕ್ತರಾಗುವರು.

## ೨೦. ಶ್ರೀ ಭಗವದ್ಗೀತೆ ೧೬. ದೇವಾಸುರ ಸಂಪದ್ವಿಭಾಗ

ಶ್ರೀ ಭಗವಂತನಿಂತೆಂದನು:

'ಅರ್ಜುನ ! ನಿನಗೆ ದೈವೀ ಸಂಪತ್ತಿನವರ ಲಕ್ಷಣವನ್ನು ಹೇಳುವೆನು, ಕೇಳು ! ತಾನು ಹೆದರದೆ, ಇತರರು ಹೆದರುವಂತೆ ವರ್ತಿಸದೆ ಇರುವ ಅಭಯ, ಚಿತ್ತಪ್ರಸಾದ, ಜ್ಞಾನನಿಷ್ಠೆ ದಾನ, ದಮ, ಯಜ್ಞ, ವೇದಾಧ್ಯಯನ, ಆರ್ಜವ, ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ದಯಾ, ಮಾರ್ದವ, ನಿಷಿದ್ಧಕರಣಲಜ್ಜೆ ಚಾಪಲ್ಯರಾಹಿತ್ಯ, ತೇಜ, ಕ್ಷಮೆ, ಧೃತಿ, ಶೌಚ, ದಂಭವರ್ಜನ, ಮೊದಲಾದ ಸುಗುಣಗಳು ದೇವ ಸ್ವಭಾವದವರಿಗೆ ಇರುವವು.

ದಂಭ, ದರ್ಪ, ದುರಭಿಮಾನ, ಕ್ರೋಧ, ಪಾರುಷ್ಯ, ಅಜ್ಞಾನ ಮೊದಲಾದವು ಅಸುರ ಸ್ವಭಾವದವರ ಗುಣಗಳು. ದೈವೀ ಸಂಪತ್ತಿನಿಂದ ಮೋಕ್ಷ ; ಅಸುರೀ ಸಂಪತ್ತಿನಿಂದ ಸಂಸಾರ ಬಂಧ ಮತ್ತು ತಮಸ್ಸು. ಅರ್ಜುನ ! ಚಿಂತೆ ಮಾಡಬೇಡ ! ನೀನು ದೈವೀ ಸ್ವಭಾವದವನಾಗಿರುವೆ. ಇರಲಿ ! ಇನ್ನು ಅಸುರ ಸ್ವಭಾವದವರ ಗುಣವನ್ನು ವಿಸ್ತಾರವಾಗಿ ವರ್ಣಿಸುವೆನು ಕೇಳು !

ಅಸುರರು ವಿಹಿತ ಕರ್ಮಗಳನ್ನು ಮಾಡರು. ನಿಷಿದ್ಧವನ್ನು ಬಿಡರು. ಅವರಿಗೆ ಶೌಚವಿಲ್ಲ, ಆಚಾರವಿಲ್ಲ. ಸತ್ಯವಂತೂ ಬಲು ದೂರ. ಅವರು ಈ ಜಗತ್ತನ್ನು ಅಸತ್ಯವೆಂಬುವರು; ಜಗತ್ಕಾರಣನಾದ ಭಗವಂತನು ಇಲ್ಲವೆಂಬುವರು. ಇದ್ದರೂ ಅವನು ನಿರ್ಗುಣನೆಂಬುವರು. ಜಗತ್ತು ಅವಿದ್ಯಾಕಲ್ಪಿತವೆಂಬುವರು. ಇತ್ಯಾದಿ ಮಿಥ್ಯಾಜ್ಞಾನದಿಂದ ಕೆಟ್ಟ ಬುದ್ಧಿಯುಳ್ಳ ಅಸುರರು ಘೋರ ಕರ್ಮನಿರತರಾಗುವರು. ಅವರು ಕಲ್ಯಾದಿ ಯುಗಗಳಲ್ಲಿ ಪ್ರಬಲರಾಗಿ ಜಗನ್ನಾಶವನ್ನು ಸಾಧಿಸುವರು. ದೇವ ಬ್ರಾಹ್ಮಣ ಸುಜನರನ್ನು ದ್ವೇಷಿಸುವರು.

ಅಸುರರ ಕಾಮವು ದುಷ್ಪೂರವಾಗಿರುವುದು. ದಂಭ, ದುರಭಿಮಾನ, ಮೋಹಗಳಿಂದ ಕೆಟ್ಟ ವ್ರತಗಳನ್ನು ಮಾಡುವರು. ಅವರ ಚಿಂತೆ ಪ್ರಳಯದವರಿಗೂ, ಅವರ ಕಾಮ ಭೋಗವೇ ಅವರಿಗೆ ಸರ್ವ ಪ್ರಯೋಜನವು. ಅನ್ಯಾಯದಿಂದ

ಧನವನ್ನಾರ್ಜಿಸಲು, ಪರಪೀಡೆಗೂ ಅಂಜದೆ ಇನ್ನೂ ಬೇಕು, ಇನ್ನೂ ಬೇಕೆಂಬ ದುರಾಶೆಯಿಂದ, ಕಾದಾಡುತ್ತಿರುವರು.

"ಇಷ್ಟು ಸಂಪಾದಿಸಿರುವೆನು; ಇನ್ನೂ ಸಂಪಾದಿಸುವೆನು ; ಇದು ಇದೆ; ಇನ್ನೂ ಬರಲಿ ; ಇಂತಹ ಶತ್ರುವು ನನ್ನಿಂದ ಹತನಾದನು ; ಇನ್ನೂ ಶತ್ರುಗಳನ್ನು ಕೊಲ್ಲುವೆನು. ನಾನೇ ಈಶ್ವರನು; ನಾನೇ ಸುಖಿ; ನಾನೇ ಸಿದ್ಧ; ನನ್ನಂತೆ ಬಲವಂತರಿಲ್ಲ, ನನ್ನಂತೆ ಕುಲವಂತರಿಲ್ಲ, ನನ್ನಂತೆ ಧನವಂತರಿಲ್ಲ. ದಾನಗಳನ್ನು ಕೊಟ್ಟೆನು. ಯಜ್ಞಗಳನ್ನು ಮಾಡಿರುವೆನು ಎಂದು ಇತ್ಯಾದಿ ಚಿತ್ತವಿಭ್ರಾಂತಿಯಿಂದ ಕೂಡಿ, ತಿಳಿಯದಿರುವರು. ಆತ್ಮ ಸಂಭಾವಿತರಾಗಿ ಅವರೂ ಯಜ್ಞಗಳನ್ನು ಮಾಡುವರು. ನನ್ನ ಪ್ರೀತಿಗಲ್ಲ, ಅಲ್ಲಿ ವಿಧಿವಿಹಿತ ಕರ್ಮಗಳೂ ಇರುವುದಿಲ್ಲ. ಅವರು ಇತರರಿಗೆ ದ್ರೋಹವನ್ನು ಬಗೆಯುತ್ತಿರುವರು. ಅಹಂಕಾರ, ಬಲ, ದರ್ಪಗಳ ಕುಟಿಲತಾಂಡವ ಭೂಮಿಯಾಗಿರುವುದು ಅವರ ಹೃದಯ ರಂಗ.

ಇಂತಹ ದುಷ್ಟರನ್ನು, ಭಗವದ್‌ಭಗವದ್ಭಕ್ತ ದ್ವೇಷಿಗಳನ್ನು ನಾನು ನರಕಗಳಲ್ಲಿಟ್ಟು ಅವರ ಪಾಪಫಲವಾದ ದುಃಖವನ್ನೇ ಕೊಟ್ಟಿರುವೆನು. ಕೊನೆಗೆ ಅಸುರರು ಎಷ್ಟು ಜನ್ಮಗಳಾದರೂ, ನನ್ನ ಜ್ಞಾನವಿಲ್ಲದೆ, ಅಂಧಂತಮಸ್ಸನ್ನು ಹೊಂದಿ, ಶಾಶ್ವತ ದುಃಖಭಾಜನರಾಗುವರು.

ನರಕದ ಹೆಬ್ಬಾಗಿಲಂತೆ ಇರುವವು ಕಾಮ, ಕ್ರೋಧ, ಲೋಭಗಳು. ಅವನ್ನು ವಿವೇಕಿಯು ಬಿಡಬೇಕು; ಬಿಟ್ಟವನು ತನ್ನ ಶ್ರೇಯವನ್ನು ತಾನು ಸಂಪಾದಿಸಿ ಕೊಂಡಂತಾಗಿ, ಕ್ರಮವಾಗಿ ಜ್ಞಾನಾದ್ವಾರಾ ಮುಕ್ತನಾಗುವನು. ಅವನ್ನು ಬಿಡದೆ ಶಾಸ್ತ್ರವಿಧಿಯನ್ನು ಬಿಟ್ಟು ತನ್ನಿಚ್ಛೆಯಂತೆ ನಡೆದವನಿಗೆ ಇಲ್ಲಿ ಸುಖ ಕೀರ್ತಿಗಳಿಲ್ಲ; ಅಲ್ಲಿ ಮೋಕ್ಷವಿಲ್ಲ. ಆದುದರಿಂದ ಕಾರ್ಯಾಕಾರ್ಯಗಳ ವಿಷಯದಲ್ಲಿ ಶಾಸ್ತ್ರದಂತೆ, ಅದನ್ನರಿತ ಸುಜನರ ಮಾತಿನಂತೆ ನಡೆಯಬೇಕು.

## ೨೧. ಶ್ರೀ ಭಗವದ್ಗೀತೆ ೧೭. ಶ್ರದ್ಧಾತ್ರಯ ವಿಭಾಗ

ಅರ್ಜುನನು, 'ಶ್ರೀಶ ! ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಪೂಜಾದಿಕಾರ್ಯಗಳನ್ನು ಮಾಡುವವರು ಎಂತಹರು ? ಅವರಿಗಾಗುವ ಗತಿ ಯಾವುದು ? ' ಎಂದು ಕೇಳಿದನು.

ಶ್ರೀ ಭಗವಂತನಿಂತೆಂದನು : 'ಅರ್ಜುನ ! ಶ್ರದ್ಧೆಯು ಮೂರು ವಿಧವಾಗಿದೆ. ಅವು ಇರುವ ಜೀವರೂ ಮೂರು ವಿಧ. ಸ್ವಭಾವದಿಂದಲೇ ಜೀವರು ಸಾತ್ವಿಕರು, ರಾಜಸರು, ತಾಮಸರು ಆಗಿರುವರು. ಸ್ವಭಾವಕ್ಕೆ ತಕ್ಕಂತೆ ಶ್ರದ್ಧೆ ಅದರಂತೆ ಫಲವೂ ಇರುವುದು.

ಸಾತ್ವಿಕರು ಶಾಸ್ತ್ರವಿಧಾನವನ್ನು ತಿಳಿಯದಿದ್ದರೂ ಸ್ವಭಾವವಾದ ಶ್ರದ್ಧೆಯಿಂದ ದೇವತೆಗಳನ್ನೇ ಪೂಜಿಸುವರು. ರಾಜಸರು ಸ್ವಭಾವದಿಂದಲೇ ಯಕ್ಷರಾಕ್ಷಸರನು

ಪೂಜಿಸುವರು. ತಾಮಸರು ಭೂತಪ್ರೇತಗಳನ್ನು ಕುರಿತು ಯಜ್ಞಾದಿ ಪೂಜೆ ಮಾಡುವರು. ದೇವಯಾಜಿಗಳು ವಿಷ್ಣುಭಕ್ತರಾಗಿರುವುದರಿಂದ ಮೋಕ್ಷವನ್ನು ಪೊಂದುವರು. ರಾಜಸರು ಸ್ವರ್ಗಪ್ರತಿನಿಧಿಯಾಗಿರುವ ಸಾಂಕಲ್ಪಿಕ ಸ್ವರ್ಗವನ್ನು ಪಡೆದು ಮತ್ತೆ ಸಂಸರಿಸುವರು. ತಾಮಸರು ಶಿವ ಪರಿವಾರ ಪಿಶಾಚಪ್ರಮಥರಾಗಿ ಕೊನೆಗೆ ತಮಸ್ಸನ್ನು ಪೊಂದುವರು.

ತಾಮಸರು ಶಾಸ್ತ್ರವಿಹಿತವಲ್ಲದ ಘೋರ ತಪಸ್ಸನ್ನು ಮಾಡಿ, ಶರೀರದಲ್ಲಿರುವ ಶ್ರೀಶ ಶ್ರೀದೇವಿ ಬ್ರಹ್ಮಾದಿ ತತ್ವದೇವತೆಗಳನ್ನು ನಿರ್ಲಕ್ಷಿಸಿ, ಅವಿವೇಕಿಗಳಾಗುವರು. ದಂಭದಿಂದಲು, ಕಾಮರಾಗದಿಂದಲು ಮಾಡಿದ ಅವರ ತಪವು ಹಿಂಸಾಮಯವಾಗಿರುವುದು.

ಆಹಾರ, ಯಜ್ಞ, ದಾನ, ತಪಸ್ಸುಗಳೂ ತ್ರಿವಿಧವಾಗಿವೆ. ಆಯುಸ್ಸನ್ನು ಮನೋನಿಗ್ರಹವನ್ನು, ಆರೋಗ್ಯವನ್ನು, ಸುಖವನ್ನು ಕೊಡುವ ಸ್ನಿಗ್ಧವು, ಸ್ಥಿರವು, ರಸಪೂರ್ಣವು ಆದ ಆಹಾರವು ಸ್ವಾತಿಕರಿಗೆ ಸ್ವಾಭಾವಿಕವಾಗಿ ಪ್ರಿಯವಾಗಿರುವುದು. ಕಾರ, ಹುಳಿ, ಉಪ್ಪು ಅತಿಯಾಗಿರುವ, ಬಹು ಬಿಸಿಯಾದ, ದಾಹಕವು ಆದ ಆಹಾರವನ್ನು ರಾಜಸರು ಬಯಸುವರು. ಅದು ದುಃಖವನ್ನೂ ರೋಗವನ್ನೂ ಕೊಡುವುದಾಗಿದೆ. ಹಳಸಿದ, ನೀರಸವಾದ, ದುರ್ವಾಸನೆ, ಉಳ್ಳ, ಎಂಜಲದ ಅಪವಿತ್ರವಾದ ಆಹಾರಗಳು ತಾಮಸರಿಗೆ ಪ್ರಿಯವಾಗಿರುತ್ತದೆ. ಅವು ಅಜ್ಞಾನವನ್ನು ಮಿಥ್ಯಾಜ್ಞಾನವನ್ನು ಕೊಡುವವೆಂದು ತಿಳಿ !

ಶಾಸ್ತ್ರವಿಹಿತವು, ಫಲಾಪೇಕ್ಷಾರಹಿತವು ಆಗಿರುವ ಕರ್ಮವನ್ನು ಮಾಡುವವನು ಸಾತ್ವಿಕನು. ಫಲಕ್ಕಾಗಿಯೇ ದಂಭದಿಂದ ಕರ್ಮಗಳನ್ನು ಮಾಡುವವನು ರಾಜಸನು. ವಿಧಿ ವಿರುದ್ಧವು, ಕ್ರೂರವು ಆದ ಕರ್ಮವನ್ನು ಪಾತ್ರದಾನವಿಲ್ಲದೆ, ಮಂತ್ರದಕ್ಷಿಣೆಗಳಿಲ್ಲದೆ, ಶ್ರದ್ಧೆಯಿಲ್ಲದೆ ಮಾಡುವವನು ತಾಮಸನು.

ದೇವಬ್ರಾಹ್ಮಣಪೂಜೆ, ಶೌಚ, ಆರ್ಜವ, ಅಹಿಂಸೆ, ಬ್ರಹ್ಮಚರ್ಯಗಳು ಶಾರೀರಕ ತಪಸ್ಸು; ಹೆದರಿಸದ ಮಾತು, ಸತ್ಯಪ್ರಿಯವಚನ, ಹಿತನುಡಿ, ವೇದಾಧ್ಯಯನಗಳು, ವಾಚನಿಕ ತಪಸ್ಸು; ಮನಶ್ಶುದ್ಧಿ ಸಮಾಧಾನ, ಸೌಮ್ಯಗುಣ, ಮೌನ, ಕಾಮವರ್ಜನಗಳು ಮಾನಸಿಕ ತಪಸ್ಸು; ಈ ಮೂರುವಿಧ ತಪವನ್ನು ಫಲಾಪೇಕ್ಷೆಯಿಲ್ಲದೆ, ಶ್ರೀಹರಿಪ್ರೀತಿಗಾಗಿ ಮಾಡಿದರೆ ಸಾತ್ವಿಕತಪವಾಗುವದು. ಗೌರವಪೂಜೆಗಳಿಗಾಗಿ, ದಂಭದಿಂದ ಮಾಡಿದರೆ ರಾಜಸ ತಪವಾಗುವುದು. ಹಠದಿಂದ ಪರಪೀಡೆಗಾಗಿ ಮಾಡಿದರೆ ತಾಮಸ ತಪಸ್ಸಾಗುವುದು.

ದಾನವೂ ತ್ರಿವಿಧವಾಗಿದೆ. ಉಪಕಾರಾಪೇಕ್ಷೆಯಿಲ್ಲದೆ, ದೇಶಕಾಲಗಳನ್ನರಿತು ಪಾತ್ರರಿಗೆ ಕೊಡುವ ದಾನವು ಸಾತ್ವಿಕ. ಪ್ರತ್ಯುಪಕಾರವನ್ನು ಬಯಸಿ, ಫಲಾಶೆಯಿಂದ ಕೊಡುವ ದಾನವು ರಾಜಸ. ದೇಶಕಾಲಗಳನ್ನು ಲೆಕ್ಕಿಸದೆ ಅಪಾತ್ರರಿಗೆ ಕೊಡುವುದು, ತಿರಸ್ಕಾರದಿಂದ ಕೊಡುವುದು ಕೂಡ, ತಾಮಸದಾನವಾಗಿದೆ.

'ಓಂ, ತತ್ ಸತ್' ಎಂದು ಶ್ರೀಹರಿಯ ಮೂರು ನಾಮಗಳು. ಓಂ ಎಂದರೆ ಗುಣಪೂರ್ಣ, ಜಗದಾಶ್ರಯ. ತತ್ ಎಂದರೆ ವ್ಯಾಪ್ತ ವೇದವೇದ್ಯ. ಸತ್ ಎಂದರೆ ನಿರ್ದೋಷ ಕಲ್ಯಾಣ ಗುಣಪೂರ್ಣ. ಅಂತಹ ಶ್ರೀರಮಣನು ತನ್ನ ಪೂಜೆಯನ್ನು ಸುಜನರು ಮಾಡಿ, ಉದ್ಧೃತರಾಗಲೆಂದು ವೇದಗಳನ್ನು ಪ್ರಕಟಿಸಿ, ಬ್ರಹ್ಮಾದಿ ವಿಪ್ರಾಂತ ಸುಜೀವರಿಗೆ ಉಪದೇಶಿಸಿದನು. ಅವರು ಯಜ್ಞಗಳಿಂದ ಅವನನ್ನು ಪೂಜಿಸುವ ದಾರಿಯನ್ನು ತೋರಿ, ಲೋಕವನ್ನು ಕಾಪಾಡಿದರು. ಆದುದರಿಂದ ಯಜ್ಞ, ದಾನ, ತಪಃಕರ್ಮಾದಿಗಳನ್ನು ಪ್ರಾರಂಭಿಸುವಾಗ ಬ್ರಹ್ಮವಾದಿಗಳು ಹರಿಃ ಓಂ ಎಂದೇ ಉಚ್ಚರಿಸುತ್ತಿರುವರು. ಫಲಾಕಾಂಕ್ಷೆಯಿಲ್ಲದೆ ಯಜ್ಞಾದಿ ಸತ್ಕರ್ಮವನ್ನು ಮಾಡುವವರೇ ಮೋಕ್ಷಯೋಗ್ಯರೆಂದು ತಿಳಿ.

ಅರ್ಜುನ ! ಸತ್ ಎಂದರೆ ಇವೆ ಎಂದರ್ಥ. ಸತ್ ಎಂದರೆ ಚನ್ನಾಗಿದೆ, ಸಾಧುವಾಗಿದೆ ಎಂದರ್ಥ. ಸತ್ಕರ್ಮ ಎಂದರೆ ಮಂಗಲಕರವಾದ ಪ್ರಶಸ್ತಕಾರ್ಯವೆಂದು ತಿಳಿ ! ಆದುದರಿಂದ ಮಂಗಲಕರವಾದ ಕಾರ್ಯಗಳಲ್ಲಿ ಸತ್ ಎಂದು ಶ್ರೀಹರಿಗೆ ವಂದಿಸಿ, ಪ್ರಾರಂಭಿಸಿದವರಿಗೆ ಶ್ರೀಹರಿಪ್ರೀತಿಯೆಂಬ ಫಲವಿದೆ. ಅವರ ಕಾರ್ಯ ಸಾಧುವಾಗಿ, ಅಂದರೆ ನಿರ್ದೋಷವಾಗಿ ಫಲಕಾರಿಯಾಗಿ ನೆರವೇರುವದು. ಇಂತು ತಿಳಿದು ಸುಜನರೆಲ್ಲರೂ ಸತ್ಕಾರ್ಯಗಳ ಆದಿಮಧ್ಯಾಂತಗಳಲ್ಲಿಯು ಶ್ರೀಹರಿಯನ್ನು ವಂದಿಸಿ 'ಓಂ ತತ್ ಸತ್' ಎಂದು ನುಡಿದು, ಅದರಿಂದ ಶ್ರೀಹರಿಯ ಪ್ರಸಾದ ಪ್ರಾಪ್ತರಾಗುವರು. ಅವರ ಕಾರ್ಯವು ಮಹಾಫಲಪ್ರದವಾಗುವುದು.

ಅರ್ಜುನ ! ಅಶ್ರದ್ಧೆಯಿಂದ ಮಾಡಿದ ಯಜ್ಞ, ದಾನ, ತಪಸ್ಸುಗಳೆಲ್ಲವೂ ಅಸತ್ ಎನಿಸುವವು. ಅಸತ್ ಕರ್ಮಕ್ಕೆ ಇಹಲೋಕದ ಸುಖವಿಲ್ಲ; ಪರಲೋಕ ಸುಖವೂ ಇಲ್ಲ.'

## ೨೨. ಶ್ರೀ ಭಗವದ್ಗೀತೆ ೧೮. ಸಂನ್ಯಾಸ ಯೋಗ

ಅರ್ಜುನನು 'ಸನ್ಯಾಸ, ತ್ಯಾಗಗಳನ್ನು ವಿವರಿಸು ಪ್ರಭೋ ! 'ಎಂದು ಕೇಳಿದನು.

ಶ್ರೀಭಗವಂತನಿಂತೆಂದನು : 'ಕಾಮ್ಯಕರ್ಮಗಳನ್ನು ಬಿಡುವುದು ಸನ್ಯಾಸವೆಂದು ಜ್ಞಾನಿಗಳು ಹೇಳುವರು. ಪರಮಾತ್ಮನ ಪ್ರೀತಿಗಾಗಿ ಸರ್ವಕರ್ಮಗಳನ್ನೂ ವಿಹಿತವಾಗಿ ಮಾಡಿ, ಆ ಸುಕರ್ಮಗಳ ಫಲವನ್ನು ಶ್ರೀಹರಿಗೆ ಸಮರ್ಪಿಸುವದೇ ಸರಿಯಾದ ತ್ಯಾಗ. ದೋಷಕರ್ಮವನ್ನು ಮಾಡಕೂಡದೆಂದು ಕೆಲ ಬುದ್ಧಿವಂತರು ಪೇಳುವರು. ಕೆಲವರು ಯಜ ದಾನತಪಃಕರ್ಮಗಳನ್ನು ಬಿಡಬಾರದೆಂದು ಪೇಳುವರು. ನನ್ನ ನಿರ್ಣಯವನ್ನು ಕೇಳು ! ತ್ಯಾಗವು ಮೂರು ವಿಧವಾಗಿದೆ. ಫಲತ್ಯಾಗ, ಆಸಕ್ತಿ ತ್ಯಾಗ, ಕರ್ತೃತ್ವದಲ್ಲಿ ಸ್ವಾತಂತ್ರ್ಯ ಭ್ರಾಂತಿತ್ಯಾಗಗಳಿಂದ ಮಾಡಿದ ಯಜ್ಞಾದಿ ಕರ್ಮವು ಬಂಧಕವಲ್ಲ; ಮೋಚಕವೇ ಆಗಿದೆ. ಯಜ್ಞದಾನ ತಪಸ್ಸಾದಿ ವಿಹಿತಕರ್ಮವನ್ನು ಸರ್ವಥಾ ಪರಿತ್ಯಾಗ

ಮಾಡಬಾರದು. ಆದುದರಿಂದ ಅಪರೋಕ್ಷಿಗಳು ಮುಕ್ತಿಯಲ್ಲಿ ಆನಂದಾತಿಶಯವನ್ನು ಪಡೆಯುವರು.

ಎಲ್ಲ ವರ್ಣದವರು, ಎಲ್ಲ ಆಶ್ರಮದವರು, ವಿಹಿತಕರ್ಮವನ್ನು ಬಿಡಬಾರದು. ಯತಿಗಳಿಗೂ ಜ್ಞಾನಾಧ್ಯಯನ, (ಯಜ್ಞ)ಪ್ರವಚನ ವಿದ್ಯಾಭಯದಾನ, ಬ್ರಹ್ಮಚರ್ಯಾದಿ ತಪಸ್ಸು ಇದ್ದೇ ಇದೆ. ಸ್ತ್ರೀ ಶೂದ್ರಾದಿಗಳೂ ವಿಷ್ಣುನಾಮಸ್ಮರಣರೂಪ ಯಜ್ಞವನ್ನು ಸತ್ಯವಚನ, ದಾನ ಉಪವಾಸಾದಿ ತಪಸ್ಸುಗಳನ್ನು ಮಾಡಬೇಕು. ನಿಯತಕರ್ಮವನ್ನು ಬಿಡುವುದು ತಾಮಸತ್ಯಾಗ ; ಅದರಿಂದ ನರಕಾದ್ಯನರ್ಥವಾಗುವುದು. ಕಾಯಕ್ಲೇಶಭಯದಿಂದ ಕರ್ಮವನ್ನು ಬಿಟ್ಟುಬಿಡುವುದು ರಾಜಸತ್ಯಾಗ. ಅಂತಹ ತ್ಯಾಗ ಮಾಡಿದವನಿಗೆ ಫಲವಾದ ಶ್ರೀಹರಿಪ್ರೀತಿಯು ದೊರಕಲಾರದು. ಕರ್ತವ್ಯಕರ್ಮವನ್ನು ಆಸಕ್ತಿ ಇಲ್ಲದೆ ಮಾಡಿ, ಶ್ರೀಹರಿಗೆ ಫಲವನ್ನರ್ಪಿಸಿದವನು ಸಾತ್ವಿಕ ತ್ಯಾಗವನ್ನು ಮಾಡಿದವನು. ಸಾತ್ವಿಕನು ತಾತ್ಕಾಲಿಕ ಸುಖದ ಕಡೆ ಗಮನ ಕೊಡನು. ಕಾಯಕ್ಲೇಶವೆಂದು ವಿಹಿತ ಕರ್ಮವನ್ನು ಬಿಡನು. ಪೂರ್ವಾರ್ಜಿತಪುಣ್ಯಫಲಗಳನ್ನು ಅಪೇಕ್ಷಿಸನು. ಪರಾಪರತತ್ವ ವಿಷಯದಲ್ಲಿಯು, ಭಗವದ್ಧರ್ಮಾನುಷ್ಠಾನದಲ್ಲಿಯು ಸಂದೇಹ ಪ್ರಮಾದಗಳನ್ನು ಮಾಡದಿರುವನು. ಅವನು ಸಕಲ ವಿಹಿತ ಕರ್ಮಫಲವನ್ನು ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀವೇಂಕಟೇಶನ ಚರಣಾರವಿಂದಗಳಿಗೆ ಭಕ್ತಿಯಿಂದ ಸಮರ್ಪಿಸುವನು.

ಕರ್ಮವನ್ನು ಮಾಡದೇನೇ ಇರಲು ದೇಹಧಾರಿಗೆ ಶಕ್ಯವೇ ಇಲ್ಲ. ಕರ್ಮವನ್ನು ಮಾಡಿ, ಫಲವನ್ನು ಭಗವಂತನಿಗಿತ್ತ ಧನ್ಯನೇ ನಿಜವಾದ ತ್ಯಾಗಿ. ಕರ್ಮಫಲವನ್ನು ಬಿಡದವನಿಗೆ ಸ್ವರ್ಗನರಕ ಭೂಮಿಗಳು, ಬಿಟ್ಟವನಿಗೆ ಅವಿಲ್ಲ. ಅವನಿಗೆ ಮೋಕ್ಷವಾಗುವದು.

ಒಂದು ಕರ್ಮ ನಡೆಯಬೇಕಾದರೆ ಐದು ಕಾರಣಗಳು ಬೇಕೆಂದು ಕಪಿಲಹರಿಯು ಬೆಸಗೊಂಡ ಸಾಂಖ್ಯ ಸಿದ್ಧಾಂತದಲ್ಲಿ ಹೇಳಲ್ಪಟ್ಟಿದೆ. ಅವಿಲ್ಲದಿರೆ ಕರ್ಮಸಿದ್ಧಿಯಿಲ್ಲ. ಅವನ್ನರಿತು ನಡೆದವನಿಗೆ ಕರ್ತೃತ್ವ ಭ್ರಾಂತಿಯಿಲ್ಲ. ಕೇಳು ! ದೇಹವಿರಬೇಕು. ಕೂಡುವ ಭೂಮಿ ಇರಬೇಕು. ಮಾಡಿಸುವ ಶ್ರೀಹರಿ, ಮಾಡುವ ಜೀವ ಇರಬೇಕು. ಇಂದ್ರಿಯಗಳು, ಗಂಧಮಾಲ್ಯಾದಿ ಕರಣಗಳಿರಬೇಕು. ಅಧಿಷ್ಠಾನ, ಕರ್ತಾಕರಣ, ಚೇಷ್ಟಾ ದೈವವೆಂಬ ಐದು ಕಾರಣಗಳು. ಶರೀರ ವಾಕ್ ಮನಗಳಿಂದ ಮಾಡುವ ಎಲ್ಲ ಪುಣ್ಯಪಾಪಕರ್ಮಗಳಿಗೂ ಅವಶ್ಯವಾಗಿವೆ. ಇಂತು ಐದು ಬೇರೆ-ಬೇರೆ ಕಾರಣಗಳಿರುವಾಗ, ಜೀವನು ತಾನೋರ್ವನೇ ಸ್ವತಂತ್ರಕರ್ತನೆಂದು ತಿಳಿದರೆ, ಅವನಂತಹ ದುರಹಂಕಾರಿ ಮತ್ತೊಬ್ಬನಿಲ್ಲ. ಅಂತಹವನಿಗೆ ಕರ್ಮಲೇಪವಾಗದೆ ಇರದು. ಆದುದರಿಂದ ಅಹಂಕಾರವಿಲ್ಲದೆ ಶ್ರೀಹರಿಯೇ ಸ್ವತಂತ್ರ ಕರ್ತನೆಂದರಿತವನು. ಏನು ಮಾಡಿದರೂ ಅವನಿಗೆ ಕರ್ಮಲೇಪವಾಗದಿರುವುದು. ವಿಶ್ವಸಂಹಾರಕ್ಕೆಂದು ಸೃಷ್ಟರಾದ ಯಮರುದ್ರಾದಿ ದೇವತೆಗಳು ಇಂತು ಭ್ರಾಂತಿಯಿಲ್ಲದವರು ಮತ್ತು ಅಪರೋಕ್ಷಿಗಳು ಆಗಿರುವುದರಿಂದ, ಅವರು ವಿಶ್ವಸಂಹಾರವನ್ನು ಮಾಡಿದರೆ

ಕರ್ಮಲೇಪ ರಹಿತರಾಗಿರುವರು. ಅವರಿಗೆ ಅದೇ ಶ್ರೀಹರಿಪೂಜೆ. ನಿಜವಾದ ಭಕ್ತನು ಸಂತತ ಶ್ರೀಹರಿಸ್ಮರಣೆಯಿಂದ ಪಾಪವನ್ನೇ ಮಾಡದಿರುವನು.

ವೇದದಲ್ಲಿ ಪೇಳಿರುವ ಕರ್ಮವಿಧಾನವು, ಜ್ಞಾನ, ಅಂದರೆ ವಿಧಿಯನ್ನು ತಿಳಿಸುವುದು. ಜ್ಞೇಯ ಅಂದರೆ ಇಚ್ಛಾಪ್ರಯತ್ನರೂಪಪ್ರವೃತ್ತಿ. ಮತ್ತು ಪುರುಷಾರ್ಥ, ಪರಿಜ್ಞಾತಾ ಅಂದರೆ ಸರ್ವಜ್ಞ ಸರ್ವಪ್ರೇರಕನಾದ ಈಶ್ವರ ಸನ್ನಿಧಾನದಿಂದ ಕೂಡಿರುವ ಜೀವರಾಶಿ. ಈ ಮೂರನ್ನು ನಿಮಿತ್ತ ಮಾಡಿ, ಪ್ರವರ್ತಿಸುತ್ತದೆ. ಈಶ್ವರಪ್ರೇರಣೆಯಂತೆ ಪುರುಷಾರ್ಥವನ್ನು ಹೊಂದಲೆಣಿಸಿದ ಜೀವರು ವಿಧಿಯನ್ನು ತಿಳಿಯಲೆಂದು ಕರ್ಮಚೋದನೆ, ಅಸ್ವತಂತ್ರನು ಅಮುಕ್ತನು ಆದ ಜೀವನೇ ವಿಧಿನಿಷೇಧಗಳಿಗೆ ವಿಷಯನು. ಈಶ್ವರನಲ್ಲ. ಜಡವೂ ಅಲ್ಲ. ಮುಕ್ತರಿಗೆ ವಿಧಿನಿಷೇಧಗಳಿಲ್ಲ. ಕರ್ಮಸಂಗ್ರಹವನ್ನೂ ಕೇಳು ! ಕರಣ, ಕರ್ಮ, ಕರ್ತಾ ಎಂಬ ಮೂರು ಕಾರಣಗಳಿದ್ದರೇನೇ ಕರ್ಮವು ಮಾಡಲ್ಪಡುವುದು. ಕರಣ ಅಂದರೆ ಇಂದ್ರಿಯ ಸ್ರುಕ್ ಸ್ರುವಾದಿಗಳು, ಮತ್ತು ದೇಹ, ದೇಶ, ಅದೃಷ್ಟಗಳು. ಕರ್ಮವೆಂದರೆ ಹಸ್ತಾದಿ ಚೇಷ್ಟೆ ಕರ್ತಾ ಎಂದರೆ ಜೀವನು ಮತ್ತು ಶ್ರೀಹರಿ, ಇಂತು ಐದು ಕಾರಣಗಳೂ ಸಂಗ್ರಹವಾಗಿ ಮೂರಾಗಿ ಹೇಳಲ್ಪಟ್ಟವೆಂದು ತಿಳಿ !

ಜ್ಞಾನ, ಕರ್ಮ, ಕರ್ತಾ, ಬುದ್ಧಿ ಧೈರ್ಯ ಇವುಗಳಲ್ಲಿ ಸಾತ್ವಿಕ, ರಾಜಸ, ತಾಮಸವೆಂಬ ಮೂರು ವಿಧಗಳುಂಟು.

ಸರ್ವಭೂತಗಳು ಪರಸ್ಪರ ಭಿನ್ನವಾಗಿವೆ. ಅವರಲ್ಲಿ ತಾರತಮ್ಯವು ಉಂಟು. ಜೀವಜಡರಲ್ಲಿಯು ತದ್ಭಿನ್ನನಾಗಿ, ತದಾಧಾರನಾಗಿ ಶ್ರೀಹರಿಯು ಸರ್ವೋತ್ತಮನಾಗಿರುವನು. ಶ್ರೀಹರಿಗೆ ಸ್ವಗತಭೇದವಿಲ್ಲ- ಎಂದು ತಿಳಿಯುವುದು ಸಾತ್ವಿಕ ಜ್ಞಾನವು . ಜೀವಜಡರ ಭೇದವನ್ನರಿತರೂ ಶ್ರೀಹರಿಯ ಸರ್ವೋತ್ತಮತ್ವವನ್ನು ಚನ್ನಾಗಿ ತಿಳಿಯದಿರುವುದು ರಾಜಸಜ್ಞಾನವು. ಜೀವನನ್ನು ಬ್ರಹ್ಮನೆಂದು ತಿಳಿಯುವದೂ, ಜೀವವನ್ನು ಜಗವೆಂದು ತಿಳಿಯುವದೂ, ಯುಕ್ತಿಶೂನ್ಯವಾದುದೂ, ಸದಸದ್ವಿಲಕ್ಷಣತ್ವಾದಿ ಅಸತ್ಯಾರ್ಥ ಕಲ್ಪನಾಯುತವಾದುದೂ, ಬಹಳ ಅಲ್ಪವಾಗಿ ತಿಳಿಯುವುದೂ, ಶ್ರೀಶನನ್ನು ಜಗವೆಂದು ತಿಳಿಯುವದೂ ತಾಮಸಜ್ಞಾನವು.

ಕರ್ಮದಲ್ಲಿ ಸಾತ್ವಿಕವಾದುದೆಂದರೆ, ಹರಿಸರ್ವೋತ್ತಮತ್ವ ಜ್ಞಾನ ಭಕ್ತಿಗಳಿಂದ ಸ್ವವರ್ಣಾಶ್ರಮೋಚಿತವಾದುದಾಗಿ, ಶ್ರೀಹರಿಯಲ್ಲಿ ಸಮರ್ಪಿತವಾದುದು. ಅಂತಹ ಕರ್ಮವನ್ನು ಮಾಡಿದರೆ ಮೋಕ್ಷಾದಿ ಫಲವು ಉಂಟು; ಮಾಡದಿರೆ ಪ್ರತ್ಯವಾಯವಿದೆ. ನನ್ನದೆಂಬ ಫಲಸ್ನೇಹವಿಲ್ಲದೆ, ಕೀರ್ತಿ ಬಂದರೆ ಹಿಗ್ಗದೆ, ಅಕೀರ್ತಿ ಬಂದರೆ ಕುಗ್ಗದೆ ಮಾಡುವ ಕರ್ಮವನ್ನು ಸಾತ್ವಿಕವೆಂಬುವರು. 'ನಾನು ಮಾಡಿದ ಕರ್ಮ ಫಲವಾಗಲಿ' ಎಂಬ ಆಶೆಯಿಂದಲು, ಕರ್ತೃತ್ವಾಭಿಮಾನದಿಂದಲು, ಬಹಳಾಯಾಸ ಪಟ್ಟು ಮಾಡುವ ಕರ್ಮವು ರಾಜಸವೆನಿಸುವುದು. ಇನ್ನೊಂದು ಕರ್ಮವನ್ನು ಅನುಬಂಧಿಸಿ, ನಾಶವನ್ನೂ ಪರಪೀಡೆಯನ್ನೂ ಲೆಕ್ಕಿಸದೆ, ತನ್ನ ಸಾಮರ್ಥ್ಯವನ್ನು ಅಳೆದು ತಿಳಿಯದೆ, ಮೋಹಾಜ್ಞಾನದಿಂದ ಮಾಡುವ ಕರ್ಮವು ತಾಮಸವು.

ಫಲಸ್ನೇಹರಹಿತನು, ಭಗವದದೀನವೆಲ್ಲವೆಂದು ತಿಳಿದು 'ಅಹಂಕರ್ತಾ' ಎಂಬ ದುರಭಿಮಾನವನ್ನು ಬಿಟ್ಟವನು, ಸುಕರ್ಮ ಮಾಡುವಲ್ಲಿ ಒದಗುವ ಕಷ್ಟವನ್ನು ಸಹಿಸುವನು, ಉತ್ಸಾಹಭರಿತನು, ಫಲಾಫಲಗಳಲ್ಲಿ ಮನೋವಿಕಾರರಹಿತನು, ಆದವನು ಸಾತ್ವಿಕ ಕರ್ತನು. ಕೀರ್ತ್ಯಾದಿಕಾಮನೆ ಉಳ್ಳವನು ಕರ್ಮಫಲವನ್ನು ಆಶಿಸುವನು ಮಾಡಬೇಕಾದ ದ್ರವ್ಯವ್ಯಯವನ್ನು ಮಾಡಲಂಜುವ ಲೋಭಿ, ಹಿಂಸಾಸ್ವಭಾವದವನು, ಫಲಾಫಲಗಳಲ್ಲಿ ಹರ್ಷ ಶೋಕಸಹಿತನು ಆದವನು ರಾಜಸಕರ್ತನು. ಭಗವದರ್ಪಣವಿಲ್ಲದವನು, ಭಕ್ತಿರಹಿತನು, ವಿನಯರಹಿತನು ಗೂಢದ್ವೇಷಿ, ನೀಚ - ಕರ್ಮಕಾರಿ, ಕರ್ತವ್ಯ ವಿಮುಖ, ಮನೋದುರ್ಬಲ, ಇತರರ ದೋಷಸೂಚಕ, ಆದವನು ತಾಮಸಕರ್ತನು.

ಬುದ್ಧಿ ಧೃತಿಗಳ ತ್ರೈವಿಧ್ಯವನ್ನೂ ಕೇಳು ! ಪ್ರವೃತ್ತಿ ನಿವೃತ್ತಿಗಳನ್ನು ಕಾರ್ಯಕಾರ್ಯಗಳನ್ನು ಅದರಿಂದಾಗುವ ಬಂಧ ಮೋಕ್ಷಗಳನ್ನು ಭಯಾಭಯಗಳನ್ನು ತಿಳಿಯಲು ಉಪಕರಿಸುವ ಬುದ್ಧಿಯು ಸಾತ್ವಿಕವು. ಧರ್ಮಾಧರ್ಮಗಳನ್ನು ಕಾರ್ಯಾಕಾರ್ಯಗಳನ್ನು ತಿಳಿಯುವಲ್ಲಿ ಯಥಾರ್ಥವೇ ಆಗಿರದೆ, ಕೆಲವು ಕಾಲ ಸರಿಯಾಗಿಯು, ಕೆಲಕಾಲ ಅಯಥಾರ್ಥವಾಗಿಯು ತಿಳಿಸುವ ಬುದ್ಧಿಯು ರಾಜಸವು. ಅಧರ್ಮವನ್ನು ಧರ್ಮವೆಂತಲು, ಹೀಗೆಯೇ ಎಲ್ಲ. ವಸ್ತುಗಳನ್ನು ವಿಪರೀತವಾಗಿ ತಿಳಿಯುವ ಬುದ್ಧಿಯು ತಾಮಸವು. ಧೈರ್ಯದ ತ್ರೈವಿಧ್ಯವನ್ನೂ ತಿಳಿ ! ಹರಿಭಕ್ತಿಯಿಂದ, ವಿಹಿತ ವಿಷಯಗಳಲ್ಲಿ ಮನಸ್ಸಿನ ಪ್ರಾಣಗಳ, ಇಂದ್ರಿಯಗಳ ಕ್ರಿಯೆಗಳನ್ನು ಹಿಡಿದು ನಿಲ್ಲಿಸುವುದು ಸಾತ್ವಿಕ ಧೈರ್ಯವು. ಧರ್ಮಕಾಮಾರ್ಥಗಳನ್ನು ಚಿಂತಿಸುತ್ತಾ ಫಲಸಂಗವನ್ನು ಬಿಡದಿರುವುದು ರಾಜಸ ಧೈರ್ಯವು. ಅತಿ ನಿದ್ರೆ, ಭಯ, ಶೋಕ, ದುರ್ಬಲ ಮನಸ್ಸು ಮದಗಳನ್ನು ಮತ್ತು ಭಗವದ್ದ್ವೇಷಾದಿ ನಿಷಿದ್ಧಗಳನ್ನು ನಿಲ್ಲಿಸಿ, ಬಿಡದಿರುವುದು ತಾಮಸ ಧೈರ್ಯವು.

ಸುಖವೂ ಮೂರು ವಿಧ. ಪ್ರಯಾಸ ಸಾಧ್ಯವಾಗಿದ್ದು ಕೊನೆಗೆ ಅಮೃತ ಸಮವಾಗುವ ಸುಖವೂ, ಅನಾಯಾಸವಾಗಿ ಇಂದ್ರಿಯ ನಿಗ್ರಹವಾದಾಗ ಸಿಗುವ ಮನಸ್ಸಮಾಧಾನದ ಸುಖವೂ ಶ್ರೀಹರಿಯ ಅನುಗ್ರಹದಿಂದ ಬಂದ ಸುಖವೂ ಸಾತ್ವಿಕ ಸುಖವೆಂದು ತಿಳಿ ! ವಿಷಯೇಂದ್ರಿಯ ಸಂಯೋಗದಿಂದಾಗುವ ಸುಖ, ಮೊದಲು ಅಮೃತವಾಗಿ ಕೊನೆಗೆ ವಿಷದಂತೆ ದುಃಖಕರವಾದ ಸುಖ ; ಇವು ರಾಜಸ. ಸರ್ವದಾ ಮೋಹಕವಾಗಿ, ಮಾಂದ್ಯ, ಅಧರ್ಮದ ಲಾಭ, ನಿದ್ರೆಗಳಿಂದ ಬರುವ ಸುಖವೂ ತಾಮಸ. ತ್ರಿಗುಣಕೃತವಿಕಾರವಿಲ್ಲದ ಪದಾರ್ಥವು ಈ ಜಗದಲ್ಲೇ ಇಲ್ಲ.

ಈಗ ಬ್ರಾಹ್ಮಣಾದಿ ವರ್ಣಗಳ ಸ್ವಭಾವವನ್ನು ಹೇಳುವೆನು. ಶಮ, ದಮ, ತಪಸ್ಸು ಶೌಚ, ಕ್ಷಮೆ, ಆರ್ಜವ, ಜ್ಞಾನ , ವಿಜ್ಞಾನ ಆಸ್ತಿಕ್ಯ - ಇವು ಬ್ರಾಹ್ಮಣ ವರ್ಣದ ಸ್ವಾಭಾವಿಕ ಧರ್ಮಗಳು. ಅನ್ಯರಲ್ಲಿ ಪ್ರಯತ್ನ ಸಾಧ್ಯವಾಗಿವೆ. ಶೌರ್ಯ, ತೇಜ, ಧೃತಿ, ದಾಕ್ಷ್ಯ, ಯುದ್ಧದಲ್ಲಿ ವಿಮುಖನಾಗದಿರುವುದು, ದಾನ, ಹರಿ ಭಕ್ತಿ ಇವು ಕ್ಷತ್ರಿಯರ ಸ್ವಾಭಾವಿಕ ಧರ್ಮಗಳು - ಕೃಷಿ ಗೋರಕ್ಷೆ, ವಾಣಿಜ್ಯ, ಇವು ವೈಶ್ಯ ದರ್ಮಗಳು. ಪರಿಚರ್ಯಾತ್ಮಕ ಕರ್ಮವೇ ಶೂದ್ರ ಧರ್ಮವಾಗಿದೆ.

ಬ್ರಾಹ್ಮಣಾದಿ ವರ್ಣದವರು ತಮ್ಮ ತಮ್ಮ ಧರ್ಮವನ್ನು ಬಿಡದೆ ನಡೆಸುವುದರಿಂದ ಜ್ಞಾನವನ್ನು ಹೊಂದಿ, ಮುಕ್ತರಾಗುವರು. ಜಗಜ್ಜನ್ಮಾದಿ ಕಾರಣನು, ಸರ್ವತ್ರವ್ಯಾಪ್ತನು ಆದ ಶ್ರೀ ನಾರಾಯಣನು ಸ್ವಧರ್ಮರತರಿಗೆ ಮೋಕ್ಷವನ್ನೀಯುವನು. ಸ್ವಾಭಾವಿಕ ಕರ್ಮದಲ್ಲಿ ಕಾಯಕ್ಲೇಶಾದಿ ದೋಷವಿದೆ ಎಂದು ಬಿಡಬಾರದು. ಎಲ್ಲರ ಧರ್ಮದಲ್ಲಿಯು ಯಾವುದೋ ಒಂದು ದೋಷವಿದ್ದೇ ಇದೆ. ಸ್ವಧರ್ಮವನ್ನು ಚನ್ನಾಗಿ ಮಾಡಲಾಗದಿದ್ದರೂ, ಸ್ವಲ್ಪ ಮಾತ್ರದಿಂದಲೇ ಶ್ರೀಹರಿಯು ಪ್ರೀತನಾಗುವನು. ಎಷ್ಟು ಚನ್ನಾಗಿ ಮಾಡಲ್ಪಟ್ಟರೂ ಪರಧರ್ಮವು ಹರಿಪ್ರೀತಿಜನಕವಾಗಲಾರದು.

ಮನಸ್ಸನ್ನು ನಿಗ್ರಹಿಸಿ, ವಿಷಯಗಳತ್ತ ಹರಿಗೊಡಬಿಡದೆ, ವೈಷಯಿಕ ಸುಖದಂತೆ ಸ್ವರ್ಗಾದಿ ಕ್ಷುದ್ರ ಪರಲೋಕಸುಖವೂ ಹೇಯವೆಂದು ಕೋರದೆ, ಸರ್ವಕರ್ಮ ಸಮರ್ಪಣವನ್ನು ಮಾಡಿದ ಹರಿಭಕ್ತನು ಮೋಕ್ಷವನ್ನು ಹೊಂದುವನು. ಬ್ರಹ್ಮಪ್ರಸಾದಸಾಧನಗಳನ್ನು ಕೇಳು! ಬುದ್ಧಿಯು ವಿಷಯಾಸಕ್ತವಾಗಬಾರದು. ಮನಸ್ಸನ್ನು ವಿಷಯಗಳತ್ತ ಓಡದಂತೆ ನಿಗ್ರಹಿಸಬೇಕು. ರಾಗದ್ವೇಷಗಳ ಹೊಯ್ದಾಟ ನಿಲ್ಲಬೇಕು. ಜನಸಮ್ಮರ್ದರಹಿತ ಸ್ಥಲದಲ್ಲಿರಬೇಕು. ಲಘುವಾದ ಆಹಾರವನ್ನು ಸ್ವೀಕರಿಸಬೇಕು. ವಾಕ್ಕಾಯಚಿತ್ತಗಳನ್ನು ಸದ್ವಿಷಯಗಳಲ್ಲಿಡಬೇಕು. ನಿತ್ಯವೂ ಧ್ಯಾನರತನಾಗಿಬೇಕು. ವೈರಾಗ್ಯವಂತನಾಗಿರಬೇಕು. ಕರ್ತೃತ್ವಾಭಿಮಾನವನ್ನು, ವಿಷಯಾಭಿಲಾಷೆಯನ್ನು, ಕ್ರೋಧವನ್ನು, ದುಷ್ಟಪ್ರತಿಗ್ರಹವನ್ನು ಬಿಡಬೇಕು. ತನ್ನ ಯೋಗ್ಯತೆಯನ್ನರಿತು ಪ್ರಯತ್ನಿಸಬೇಕು. ಭೀತಿ ಹೇತುವನ್ನರಿತು ಎಚ್ಚರದಿಂದಿರಬೇಕು. ಮಮತೆ ಬಿಡಬೇಕು. ರೇಗಿಸಿದರೂ ರೇಗಬಾರದು. ಇಂತಹವನು ಸರ್ವದಾ ಹರಿರತಮಾನಸನಾಗುವನು. ಅಂತಹ ಲಕ್ಷ್ಮೀನಾರಾಯಣ ಭಕ್ತನ ಮನವು ಅನಾಯಾಸವಾಗಿ ವಿಷಯ ವಿಮುಖವಾಗಿರುವುದು. ಅಂತಹವನು ಏನನ್ನೂ ಬೇಡನು; ಏನು ಬಂದರೂ ಭಯಪಡನು. ಸರ್ವಭೂತಗಳಲ್ಲಿಯು ಶ್ರೀಶನನ್ನು ಕಾಣುವ ಸುಜೀವನು ನನ್ನ ದಿವ್ಯಭಕ್ತಿಯನ್ನು ಪೊಂದುವನು. ಅರ್ಜುನಾ ! ಭಕ್ತಿಯಿಂದ ನನ್ನ ಅಪರೋಕ್ಷವೆಂದು ತಿಳಿ ! ಮೊದಲು ದೇಶಕಾಲ ಗುಣಗಳಿಂದ ಅನಂತವಾಗಿರುವ ನನ್ನ ದಿವ್ಯರೂಪ ನಾಮಗಳನ್ನು ಸರಿಯಾಗಿ, ತನ್ನ ಯೋಗ್ಯತೆಯಂತೆ ತಿಳಿದು, ಅಪರೋಕ್ಷಿಯಾದ ನಂತರ ನನ್ನನ್ನು ಸೇರುವನು. ನನ್ನನ್ನೇ ಸರ್ವೋತ್ತಮನೆಂದು ನನಗೆ ಸರ್ವಸತ್ಕರ್ಮಫಲವನ್ನರ್ಪಿಸಿ, ಭಕ್ತಿಯಿಂದ ಭಜಿಸಿದವನು ನನ್ನ ಪ್ರಸಾದ ಪಾತ್ರನಾಗಿ, ಮುಕ್ತನಾಗುವನು. ಬರಿಯ ವಿಹಿತಕರ್ಮವನ್ನು ಮಾಡಿದರೆ ಸಾಲದು, ಅದನ್ನು ನನಗರ್ಪಿಸಬೇಕು. ಅಷ್ಟೇ ಸಾಲದು. ನನ್ನ ಸರ್ವೋತ್ತಮತ್ವವನ್ನು ತಿಳಿದು, ಚಿತ್ತವನ್ನಿಟ್ಟು ಧ್ಯಾನಿಸಿದವನೇ ನನ್ನ ಪ್ರಸಾದದಿಂದ, ನನ್ನನ್ನು ಕಂಡು ಮುಕ್ತನಾಗುವನು.

ಆದುದರಿಂದ ಅರ್ಜುನ ! ನನ್ನಲ್ಲಿ ಸರ್ವಕರ್ಮಗಳ ಫಲವನ್ನು ಅರ್ಪಿಸು ! ನನ್ನಲ್ಲಿ ಮನವನ್ನಿಟ್ಟು, ನಿನ್ನ ಸಾಂಸಾರಿಕ ದುಃಖಗಳೆಲ್ಲವೂ ದೂರವಾಗುವಂತೆ ವಿರಕ್ತನಾಗಿ, ಶ್ರವಣಾದಿಗಳಿಂದ ಜ್ಞಾನವನ್ನು ಸಂಪಾದಿಸು ! ಆಗ ಭಕ್ತ ಸತ್ತಮನಾಗುವೆ ! ನನ್ನ

ಪ್ರಸಾದಪಾತ್ರನೂ ಆಗುವೆ ! ಇಷ್ಟು ಹೇಳಿದರೂ, ಕೇಳದಿದ್ದರೆ, ನೀನು ಪುರುಷಾರ್ಥ ದೂರನಾಗಿ ಕೆಡುವೆ !

ನೀನು ಯುದ್ಧವೆಂಬ ಸ್ವಧರ್ಮವನ್ನು ಬಿಟ್ಟು ಬಿಡಬೇಕೆಂದರೂ, ಶ್ರೀಶೇಚ್ಛೆಯು ನಿನ್ನಿಂದ ಯುದ್ಧ ಮಾಡಿಸೇ ಬಿಡುವುದು. ನಿನ್ನ ಸ್ವಭಾವದಿಂದಲು, ಕರ್ಮ ಸಂಸ್ಕಾರಗಳಿಂದಲು ಪ್ರೇರಿತನಾಗಿ ನೀನು ಸ್ವಧರ್ಮವಾದ ಯುದ್ಧವನ್ನು ಮಾಡಲೇಬೇಕಾಗುವುದು. ತಿಳಿ !

ಸರ್ವಭೂತಗಳಲ್ಲಿಯು ಹೃದಯಗುಹಾವಾಸಿಯಾಗಿ, ಎಲ್ಲ ಜೀವರನ್ನು ನಡೆಸುವ ಸ್ವತಂತ್ರಪ್ರಭುನಾದ ನಾರಾಯಣನೇ ನಾನೆಂದು ತಿಳಿದು, ಕೃಷ್ಣಾ ! ಎಂದು ನನಗೆ ಶರಣಾಗತನಾಗು ! ನನ್ನ ಪ್ರಸಾದದಿಂದ ಪಾಪಮುಕ್ತನೂ, ಮುಕ್ತನೂ ಆಗುವೆ !

ಇಂತು ನಿನಗೆ ಪರಮರಹಸ್ಯವಾದ ಕರ್ಮ, ಜ್ಞಾನ, ಭಕ್ತಿ, ಧ್ಯಾನಯೋಗಗಳನ್ನು ನಿರೂಪಿಸುವ ಶ್ರೀಗೀತೆಯನ್ನು ಉಪದೇಶಿಸಿರುವೆನು. ನೀನೂ ಚೆನ್ನಾಗಿ ವಿಚಾರಿಸಿ, ನಿನಗೆ ತೋರಿದಂತೆ ಮಾಡು !

ಒಂದು ಕಿವಿಮಾತು ಕೇಳು ! ನೀನು ನನ್ನ ಪ್ರಿಯಭಕ್ತನೆಂದರಿತು, ನಿನ್ನ ಹಿತವನ್ನು ನುಡಿಯುವೆನು. ನನ್ನಲ್ಲಿ ಮನವಿಟ್ಟು ಧ್ಯಾನಮಾಡು ! ನನ್ನ ಸರ್ವೋತ್ತಮತ್ವವನ್ನರಿತು ಉತ್ತಮ ಭಕ್ತಿ ಮಾಡು. ನನಗಾಗಿ ಯಜ್ಞಾದಿ ಶುಭ ಕರ್ಮಗಳನ್ನು ಜ್ಞಾನದಿಂದ ಆಚರಿಸು ! ನನ್ನಲ್ಲಿ ಸರ್ವಕರ್ಮ ಫಲ ಸಮರ್ಪಣೆಯನ್ನು ಮಾಡು ! ನಿನಗೆ ಶ್ರೇಯವಾಗುವುದು. ನನಗೆ ನಮಸ್ಕರಿಸಿ ಶರಣಾಗತನಾಗು ! ಎಲ್ಲ ಅವೈಷ್ಣವಧರ್ಮಗಳನ್ನು ಬಿಡು ! ನೀ ಮಾಡಿದ ವಿಹಿತ ಕರ್ಮಗಳ ಫಲವನ್ನು ಬಿಡು ನನ್ನ ಚರಣಪೀಠದಲ್ಲಿ ! ನನ್ನ ಅಡಿದಾವರೆಗಳಿಗೆ ವಂದಿಸು ! ನಾನು ನಿನ್ನನ್ನು ಸರ್ವಸಾಂಸಾರಿಕ ವ್ಯಸನಗಳಿಂದಲು, ಪಾಪ ದುಃಖಗಳಿಂದಲು ಕೂಡ ಬಿಡಿಸಿ, ಉದ್ಧರಿಸುವೆನು. ಇನ್ನು ನಿನಗೆ ಶೋಕಭಯಗಳಿಲ್ಲ ! ತಿಳಿ !

ಈ ಗೀತಾಮೃತವನ್ನು ಅಭಕ್ತರಿಗೆ, ದಾಂಭಿಕರಿಗೆ, ತಪೋಹೀನರಿಗೆ , ಗುರುಸೇವಾಹೀನರಿಗೆ, ಹರಿಗುರು ಸುಜನ ದ್ವೇಷಿಗಳಿಗೆ ಹೇಳಿಕೊಡಬೇಡ ! ಅರ್ಜುನ ! ನನ್ನ ಭಕ್ತರಿಗೆ ಯಾರೇ ಆಗಲಿ, ಸಜ್ಜನರಿಗೆ ಉಪದೇಶಿಸುವವನು ನನ್ನ ಸುಭಕ್ತನಾಗಿ, ಜ್ಞಾನದಿಂದ ನನ್ನ ಲೋಕವನ್ನು ಹೊಂದುವನು. ಅಂತಹ ಸಜ್ಜನ ಸಹಾಯಕನಾದ ಭಕ್ತನಕಿಂತಲು ನನಗೆ ಪ್ರಿಯರಿಲ್ಲ. ಈ ಗೀತಾ ಶಾಸ್ತ್ರವನ್ನು ಓದಿದವನು ನನ್ನನ್ನು ಜ್ಞಾನ ಯಜ್ಞದಿಂದ ಪೂಜಿಸುತ್ತಿರುವನು. ಶ್ರದ್ಧೆಯಿಂದ ಅಸೂಯಾ ಮತ್ಸರಗಳನ್ನು ತೊರೆದು, ಕೇಳಿದವನು ಕೂಡ ನನ್ನದಾದ ಸುಖಮಯ ಪುಣ್ಯ-ಲೋಕಗಳನ್ನು ಹೊಂದಿ ಯಥಾಯೋಗ್ಯವಾಗಿ ಆನಂದಿಸಿ, ಮುಕ್ತನಾಗಿರುವನು.

ಪಾರ್ಥ ! ಏಕಾಗ್ರಮನಸ್ಕನಾಗಿ ನನ್ನ ಉಪದೇಶವನ್ನು ಕೇಳಿದೆಯಾ ? ನಿನ್ನ ಅಜ್ಞಾನಮೋಹಗಳು ನಷ್ಟವಾದವೇ ?" ಇಂತು ಭಗವಂತನು ಪೇಳಿ ನೋಡಲು, ಶ್ರೀಶನಿಗೆ

ವಂದಿಸಿ, ಅರ್ಜುನನು 'ಪ್ರಭೋ ! ನಷ್ಟವಾಯಿತೆನ್ನ ಮೋಹ ! ನನ್ನ ಮನಸ್ಸು ನಿನ್ನಧೀನವಾಗಿದೆ ಮತ್ತು ಶುದ್ಧವೂ ಆಗಿದೆ. ಶ್ರೀಕೃಷ್ಣ ! ನಿನ್ನ ಅನುಗ್ರಹಕ್ಕೇನೆಂಬೆ ! ನನ್ನ ಸಂದೇಹಗಳೆಲ್ಲ ದೂರವಾದವು. ನಿನ್ನ ಮಾತಿನಂತೆ ನಡೆಯುವೆನು ರಮಾರಮಣ ! ನಿನಗೆ ನಮಸ್ಕಾರ ಶತವು' ಎಂದು ಮತ್ತೆ ನಮಸ್ಕರಿಸಿದನು.

ಸಂಜಯನು ನುಡಿದನು :

'ಧೃತರಾಷ್ಟ್ರನೇ ಕೇಳು ! ಇಂತು ಪಾಂಡವ ವಾಸುದೇವರ ಪವಿತ್ರ ಸಂವಾದವನ್ನು ನಾನು ಕೇಳಿದೆನು. ಆನಂದದಿಂದ ನನ್ನ ಮೈನವಿರೆದ್ದಿದೆ. ಕಣ್ಣಲ್ಲಿ ಆನಂದ ಬಿಂದುಗಳು ಮೂಡಿ ಬರುತ್ತಿವೆ. ನನಗೆ ಸಂಭ್ರಮವಾಗುತ್ತಿದೆ. ಇದೆಲ್ಲ ಜ್ಞಾನವು ಶ್ರೀವೇದವ್ಯಾಸದೇವರ ಪ್ರಸಾದವೆಂದು ಮನಗಂಡು, ಯೋಗೇಶನಾದ ಶ್ರೀಕೃಷ್ಣನಿಗೂ, ವಾಸಿಷ್ಠಕೃಷ್ಣನಿಗೂ ನಮಸ್ಕರಿಸುತ್ತಿರುವೆನು.

ರಾಜನ್ ! ಕೇಶವಾರ್ಜುನರ ಸಂವಾದ ಗೀತಾಮೃತವನ್ನು ನೆನೆನೆನೆದು ನನಗೆ ಆತ್ಮಾನಂದವಾಗುತ್ತಿದೆ. ಆಹಾ ! ಆ ದಿವ್ಯ ವಿಶ್ವರೂಪವನ್ನು ನೆನೆದು ಆಶ್ಚರ್ಯವಾಗುತ್ತಿದೆ. ನನ್ನ ಆನಂದಕ್ಕೆ ಎಣೆ ಇಲ್ಲ.

ರಾಜನ್ ! ಕೇಳು ! ಎಲ್ಲಿ ಯೋಗೇಶ್ವರನಾದ ಕೃಷ್ಣನೋ, ಎಲ್ಲಿ ಗದಾಪಾಣಿಯಾದ ಭೀಮಸೇನನೋ ಎಲ್ಲಿ ಗಾಂಡೀವಧನುರ್ಧಾರಿಯಾದ ಅರ್ಜುನನೋ ಅಲ್ಲಿ ಶ್ರೀಃ, ಅಲ್ಲಿ ವಿಜಯ, ಅಲ್ಲಿ ಐಶ್ವರ್ಯ; ಅಲ್ಲೇ ಸರ್ವಶ್ರೇಯಗಳೆಂದು ನಾನು ನಿಶ್ಚಯಿಸಿರುವೆನು.'

## ೨೩. ಭೀಷ್ಮ ಪರಾಕ್ರಮ - ಪ್ರಥಮ ದಿನ

ಶ್ರೀವೈಶಂಪಾಯನನು 'ಜನಮೇಜಯ ! ಇಂತು ನಿನಗೆ ಗೀತೆಯನ್ನು ನಿರೂಪಿಸಿದೆನು. ಶ್ರೀಭಗವಂತನ ಮುಖಪದ್ಮದಿಂದ ಹೊರಬಂದ ಗೀತೆಗೆ ಮೀರಿದ ಶಾಸ್ತ್ರವಿಲ್ಲ. ಅದರಲ್ಲಿ ಎಲ್ಲ ವೇದಗಳ ಸಾರವಿದೆ. ಸರ್ವವೇದಗಳಲ್ಲಿಯೂ ಶ್ರೀಹರಿಯೇ ಸರ್ವೋತ್ತಮನೆಂದು ಪ್ರತಿಪಾದಿತವಾಗಿದೆ. ಸರ್ವತೀರ್ಥಗಳಲ್ಲಿ ಗಂಗೆ, ಸರ್ವಜೀವರಲ್ಲಿ ಮುಖ್ಯ ಪ್ರಾಣ, ಸರ್ವಮಂತ್ರಗಳಲ್ಲಿ ಗಾಯತ್ರೀ, ಸರ್ವದೇವತೆಗಳಲ್ಲಿ ಶ್ರೀಹರಿಯು ಉತ್ತಮವಾಗಿರುವಂತೆ ಸರ್ವಶಾಸ್ತ್ರಗಳಲ್ಲಿಯೂ ಗೀತೆ ಮುಖ್ಯವಾಗಿದೆ. ಗೀತಾ, ಗಂಗಾ, ಗಾಯತ್ರೀ, ಗೋವಿಂದ ಎಂಬ ನಾಲ್ಕು ಗಕಾರಯುಕ್ತ ನಾಮಗಳನ್ನು ನೆನೆದವನಿಗೆ ಪಾಪವಿಲ್ಲ. ಭಾರತಪಾರಿಜಾತ ಸುರತರುವಿನ ಪುಷ್ಪಸಾರವೇ ಗೀತೆ. ಅಂತಹ ಗೀತೆಯನ್ನು ಅರ್ಜುನನ ನೆವದಿಂದ ಸುಜನರಿಗೆ ತಿಳಿಸಿದ ಶ್ರೀಕೃಷ್ಣನಿಗೆ ಶಿರಸಾ ನಮಸ್ಕರಿಸುತ್ತಿರುವೆನು.

ರಾಜನ್ ! ಸಂಜಯನು ಮುಂದೆ ನಡೆದ ರಣವೃತ್ತಾಂತವನ್ನು ಧೃತರಾಷ್ಟ್ರನಿಗೆ ಹೇಳಿದನು' ಎಂದನು.

ಸಂಜಯನಿಂತೆಂದನು : 'ಧೃತರಾಷ್ಟ್ರ ! ಬಾಣಗಾಂಡೀವಧರನಾಗಿ ನಿಂತ ಪಾಂಡವ

ಮಧ್ಯಮನನ್ನು ನೋಡಿ ಪಾಂಡವ ಸೃಂಜಯರಾದಿ ಯೋಧರು ಶಂಖಗಳನ್ನೂದಿ, ಸಿಂಹನಾದವನ್ನು ಮಾಡಿದರು; ಭೇರಿದುಂಧುಭಿ ಕಾಹಳಗಳ ಶಬ್ದವು ಭೂನಭೋಂತರದಿ ವ್ಯಾಪಿಸಿತು. ದೇವಗಂಧರ್ವ ಪಿತೃಸಿದ್ಧಚಾರಣರು ಯುದ್ಧವನ್ನು ನೋಡಬೇಕೆಂಬ ಕುತೂಹಲದಿಂದ ಬಂದು ಅಂಬರದಿ ನಿಂತರು. ಋಷಿಗಳೂ ಬಂದು ಇಂದ್ರನ ಹಿಂದೆ ನಿಂತಿದ್ದರು.

ಆಗ ಧರ್ಮರಾಜನು ಉಭಯ ಸೈನ್ಯಗಳನ್ನು ನೋಡಿ, ಶ್ರೀಕೃಷ್ಣನಿಗೆ ನಮಿಸಿ, ರಥದಿಂದಿಳಿದನು. ಆತನು ಕವಚವನ್ನು ಬಿಚ್ಚಿಟ್ಟು, ಆಯುಧಗಳನ್ನು ಧರಿಸದೆ, ಪಿತಾಮಹನಿದ್ದೆಡೆಗೆ ಕೈಮುಗಿದಿಟ್ಟು ನಡೆದನು. ಅದನ್ನು ನೋಡಿ, ಭೀಮಾರ್ಜುನ ನಕುಲಸಹದೇವರೂ ರಥಗಳಿಂದಿಳಿದು ಹಿಂಬಾಲಿಸಿದರು. ವಾಸುದೇವನೂ ಅನುಸರಿಸಿ ಹೊರಟನು. ಕೌತುಕದಿಂದ ಕೆಲರಾಜರು ಧರ್ಮರಾಜನನ್ನು ಹಿಂಬಾಲಿಸಿದರು. ರಾಜನ್ ! ಎಲ್ಲಿಗೆ ಹೊರಟಿರುವೆ ? ಶತ್ರುಸೈನ್ಯಗಳು ಉದ್ಯತಾಯುಧರಾಗಿರಲು ಅವರನ್ನು ಲೆಕ್ಕಿಸದೆ ನಿರಾಯುಧನಾಗಿ, ಹೊರಟಿರಲು ಕಾರಣವೇನು ? ಯುದ್ಧ ಮಾಡುವುದನ್ನು ಬಿಟ್ಟು ಬರುವಂತಹ ಕೆಲಸವಾದರೂ ಯಾವದು ? ಎಂದು ಕೇಳುವ ಸೋದರರ ಮಾತಿಗೆ ಮಾರ್ನುಡಿಯದೆ ಧರ್ಮರಾಜನು ವಾಗ್ಯತನಾಗಿ ಪಿತಾಮಹನ ಕಡೆ ಪ್ರಾಙ್ಮುಖನಾಗಿ ನಡೆದನು.

ಶ್ರೀಕೃಷ್ಣನು 'ಭೀಮಸೇನ ? ಧರ್ಮರಾಜನ ಅಭಿಪ್ರಾಯವು ಗೊತ್ತಾಯಿತು ಕೇಳು ! ಭೀಷ್ಮದ್ರೋಣಕೃಪಶಲ್ಯರಾದಿ ಗುರುಹಿರಿಯರನ್ನು ವಂದಿಸಿ, ಯುದ್ಧಾನುಜ್ಞೆಯನ್ನು ಪಡೆಯಲು ಹೊರಟಿರುವನು. ಅಂತಹ ಪೂಜ್ಯರಿಗೆ ವಂದಿಸಿ, ಅವರ ಅಪ್ಪಣೆ ಪಡೆದು ಕಾದುವ ರಾಜನು ಜಯವನ್ನು ಪಡೆಯುವನೆಂದು ಶಾಸ್ತ್ರಸಂಪ್ರದಾಯಗಳಿವೆ ಎಂದನು.

ಧೃತರಾಷ್ಟ್ರ ! ಇಂತು ಬರುವ ಮಹಾರಾಜನನ್ನು ಕಂಡು ಕುರುಸೇನೆಯ ಕೆಲ ಸೈನಿಕರು 'ಏನಿದಾಶ್ಚರ್ಯ ! ಧರ್ಮರಾಜನು ಯುದ್ಧ ಮಾಡಲು ಅಂಜಿ, ಶರಣಾಗಿ ಬಂದಂತಿದೆ. ಭೀಮಾರ್ಜುನ ನಕುಲ ಸಹದೇವರಂತಹ ವೀರ ಸೋದರರಿರಲು ಶ್ರೀಕೃಷ್ಣನಂತಹ ಮಿತ್ರನಿರಲು ಈತನೇಕೆ ಹೆದರಿದಂತಾಗಿರುವನು ? ಇಂತಹ ಹೇಡಿತನವಿವನಿಗೆ ಸಲ್ಲದು ಎಂದು ಅನೇಕ ವಿಧವಾಗಿ ಮಾತಾಡಿಕೊಂಡರು. ಕೆಲವರು ಪಾಂಡವರನ್ನು ಹೇಡಿಗಳೆಂದು ಧಿಕ್ಕರಿಸಿದರು. ಕೆಲವರು ಅವರನ್ನೇ ನೋಡುತ್ತಾ 'ಏನು ನುಡಿವರೋ ? ಭೀಷ್ಮನೇನು ಬದಲೀವನೋ' ಎಂದು ಕೌತುಕದಿಂದ ಕಾದಿದ್ದರು.

ಶರಧಾರಿ ವೀರಪರಂಪರೆಯನ್ನು ದಾಟಿ ಧರ್ಮರಾಜನು ಸಪರಿವಾರನಾಗಿ, ಭೀಷ್ಮನನ್ನು ಸಮೀಪಿಸಿ, ಪಾದಗಳಿಗೆ ಮುಟ್ಟಿ ವಂದಿಸಿದನು. 'ಮಹಾನುಭಾವ ! ನಿನ್ನಿಂದ ಯುದ್ಧಾನುಜ್ಞೆ ಪಡೆಯಲು ಬಂದಿರುವೆನು. ನಿನ್ನ ಕೃಪಾಕಟಾಕ್ಷವನ್ನು ಬೀರಿ ನಮ್ಮನ್ನು ಆಶೀರ್ವದಿಸು ಎಂದು ಕೈಮುಗಿದು ಬೇಡಿದನು. ಭೀಷ್ಮನು ಪಾಂಡವರ ಸೌಜನ್ಯವನ್ನು ಕಂಡು, ಹರ್ಷಪರವಶನಾದನು. 'ರಾಜನ್! ಇಂತು ಬರದಿದ್ದರೆ ನಿನಗೆ ಅಪಜಯವಾಗಲೆಂದು ಶಪಿಸಿಬಿಡುತ್ತಿದ್ದೆನು, ಪ್ರೀತನಾಗಿರುವೆನು. ವತ್ಸ! ಜಯಶಾಲಿಯಾಗು ! ಬೇಕಾದ ವರವನ್ನೂ

ಬೇಡು ! ನಿನ್ನಂತಹ ನಯವಿನಯವಂತನಿಗೆ ಅಪಜಯವಿಲ್ಲ, ಪುರುಷನು ಅರ್ಥದಾಸನಾಗಿರುವನು; ಅರ್ಥವೂ ಯಾರಿಗೂ ಬಾಗದು. ಅರ್ಥದಿಂದ ಕೌರವರಿಗೆ ಅಧೀನನಾಗಿರುವೆನು. ಏನು ಮಾಡಲಿ ! ಅವರಿಗಾಗಿ ಅವರಿಂದ ಬೆಳೆದ ಈ ದೇಹವನ್ನು ರಣದಲ್ಲಿ ಕೊಡಬೇಕಾಗಿದೆ. ಯುದ್ಧಸಹಾಯವನ್ನು ಬಿಟ್ಟು ಬೇಕಾದುದನ್ನು ಬೇಡು !' ಎಂದನು. ಧರ್ಮರಾಜನು 'ತಾತ ! ನಿನ್ನ ಕರುಣೆಗೆ ನಮೋ ನಮಃ ! ನೀನು ಅಪರಾಜಿತನಿರುವೆ ! ಸ್ವಚ್ಛಂದ ಮರಣನೂ ಆಗಿರುವೆ ! ಇಂತಹ ನಿನ್ನನ್ನು ಜಯಿಸದೆ ನಮಗೆ ಜಯವೆಂತು ? ಹೇಳು !' ಎಂದು ಪ್ರಾರ್ಥಿಸಿದನು.

ಭೀಷ್ಮನು, 'ವತ್ಸ ! ರಣರಂಗದಲ್ಲಿ ವೀರವಿಹಾರಗೈವ ನನ್ನನ್ನು ಸಾಕ್ಷಾತ್ ಪುರಂದರನೂ ಜಯಿಸಲಾರನು. ನನಗೆ ಮೃತ್ಯುಕಾಲವಿನ್ನೂ ಸಮೀಪಿಸಿಲ್ಲ. ಕೆಲ ದಿನ ಬಿಟ್ಟು ಬಾ !' ಎಂದನು. ಧರ್ಮಜನು ಆತನಿಗೆ ಮತ್ತೆ ನಮಿಸಿ, ಅಲ್ಲಿಂದ ಹೊರಟು ದ್ರೋಣಾಚಾರ್ಯರನ್ನು ಸಮೀಪಿಸಿದನು. ನಮಸ್ಕರಿಸಿ ರಣಾನುಮತಿಯನ್ನು ಬೇಡಿದ ಧರ್ಮರಾಜನಿಗೆ ಆಚಾರ್ಯರಿಂತೆಂದರು:

'ರಾಜನ್ ! ಇಂತು ಬರದಿದ್ದರೆ ನಿನಗೆ ಅಪಜಯವಾಗಲೆಂದು ಶಪಿಸಿ ಬಿಡುತ್ತಿದ್ದೆನು. ಪ್ರೀತನಾಗಿರುವೆನು ವತ್ಸ ! ಜಯಶಾಲಿಯಾಗು ! ಮಾಡು ನನ್ನೊಡನೆ ಯುದ್ಧ ! ಅರ್ಥಾಧೀನನಾಗದವನಿಲ್ಲ, ಅರ್ಥಕ್ಕಾಗಿ ಪುರುಷನು ಇತರರ ದಾಸನಾಗಿ, ಧರ್ಮಾಧರ್ಮ ನಿರ್ಣಯದಲ್ಲಿ ಅಶಕ್ತನಾಗಿರುವನು. ಏನು ಮಾಡಲಿ ! ಕೌರವರಿಂದ ಬೆಳೆದು ಅವರಿಗಾಗಿ ಸಾಯಲು ಅವಶ್ಯವಾಗಿರುವ ನನ್ನಿಂದ ಬೇರೊಂದು ವರವನ್ನು ಬೇಡು !' ಧರ್ಮರಾಜನು 'ಬ್ರಹ್ಮಜ್ಞಾನಿವರರೇ ! ಹಾಗೇ ಆಗಲಿ ! ನಮ್ಮ ಹಿತವನ್ನು ನಿಮ್ಮ ಕೈಲಿಡುತ್ತಿರುವೆನು. ನಮ್ಮನ್ನು ಆಶೀರ್ವದಿಸಿ ಕಳಿಸಿ !' ಎಂದು ಪ್ರಾರ್ಥಿಸಿದನು. ದ್ರೋಣರ ಕಣ್ಣು ತುಂಬಿ ಬಂತು. 'ರಾಜನ್ ! ಶ್ರೀಹರಿಯೇ ನಿನ್ನ ಮಂತ್ರಿಯಾಗಿರುವನು. ನೀನೇ ಜಯಿಸುವೆ ! ಎಲ್ಲಿ ಧರ್ಮವೋ ಅಲ್ಲಿ ಶ್ರೀಕೃಷ್ಣ ! ಎಲ್ಲಿ ಕೃಷ್ಣನೋ ಅಲ್ಲಿ ಜಯ ! ನಡೆ ಯುದ್ಧವಾಡು ! ಬೇಕಾದುದಿನ್ನೇನನ್ನಾದರೂ ಬೇಡು !' ಎಂದ ಆಚಾರ್ಯರಿಗೆ ಧರ್ಮರಾಜನು 'ನೀವು ಅಪರಾಜಿತರಾಗಿರುವಿರಿ ! ಇಂತಹ ನಿಮ್ಮನ್ನು ಜಯಿಸದೆ ನಮಗೆ ಜಯವೆಂತು ? ಹೇಳಿ !' ಎಂದು ಕೇಳಿಕೊಂಡನು.

ದ್ರೋಣರಿಂತೆಂದರು: 'ರಾಜನ್ ! ರಣದಲ್ಲಿ ಧನುರ್ಬಾಣಧರನಾಗಿ ನಿಂತ ನನ್ನನ್ನು ಸಂಹರಿಸುವ ವೀರನನ್ನು ನಾನು ಕಾಣೆನು. ಶಸ್ತ್ರವನ್ನು ಬಿಟ್ಟು, ಪ್ರಾಯೋಪವಿಷ್ಟನಾಗಿರುವಾಗ ಮಾತ್ರ ನನ್ನನ್ನು ಕೊಲ್ಲಬಹುದು. ಮಹದಪ್ರಿಯವಾದ ವೃತ್ತಾಂತವನ್ನು ಕೇಳದೆ ನಾನು ಶಸ್ತ್ರವನ್ನು ಬಿಡೆನು. ಶಸ್ತ್ರ ಬಿಟ್ಟು ಯೋಗಬಲದಿಂದ ದೇಹವನ್ನು ಬಿಡುವ ನನ್ನ ದೇಹವನ್ನಾವನು ಕೊಂದರೇನು ? ಆದರೆ ಅಂತಹ ಅಪ್ರಿಯ ವಾಕ್ಯವನ್ನು ನಿನ್ನಂತಹ ವಿಶ್ವಸನೀಯರು ಹೇಳಿದಾಗ ಮಾತ್ರ ನಂಬುವೆನು' ಇಂತು ನುಡಿದ ಆಚಾರ್ಯರಿಗೆ ವಂದಿಸಿ ಧರ್ಮರಾಜನು, ಅವರ ಅಪ್ಪಣೆ ಪಡೆದು ಕೃಪರನ್ನು ಸಮೀಪಿಸಿದನು. ಅವರಿಗೆ ನಮಸ್ಕರಿಸಿ 'ಗುರೋ ! ನಿನ್ನ ಅನುಜ್ಞೆ ಪಡೆಯಲು ಬಂದಿರುವೆನು. ಜಯವಾಗುವಂತೆ ಆಶೀರ್ವದಿಸು !' ಎಂದು ಬೇಡಿದನು.

ಕೃಪರಿಂತೆಂದರು, ' ಧರ್ಮರಾಜ! ಇಂತು ಬರದಿದ್ದರೆ, ನಿನಗೆ ಅಪಜಯವಾಗಲೆಂದು ಶಪಿಸಿಬಿಡುತ್ತಿದ್ದೆನು. ಪ್ರೀತನಾಗಿರುವೆನು. ಅರ್ಥದಾಸರಾಗಿರುವವರು ಪುರುಷರು ! ಅರ್ಥವು ಆರಿಗೂ ದಾಸನಲ್ಲ. ಕೌರವರಿತ್ತ ಅರ್ಥಕ್ಕಾಗಿ ಅವರ ಕಡೆ ಕಡಿದಾಡುವ, ನನ್ನಿಂದ ಯುದ್ಧ ಸಹಾಯವನ್ನು ಬಿಟ್ಟು ಬೇರೊಂದು ವರವನ್ನು ಬೇಡು ! ಆ ಮಾತನ್ನಾಲಿಸಿ ಧರ್ಮರಾಜನು 'ಸ್ವಾಮಿ ! ಅದೇ ಕೇಳಲು ಬಂದಿರುವೆನು. ತಮ್ಮನ್ನು ಜಯಿಸುವ ಉಪಾಯವಾವುದು?' ಎಂದು ಮುಂದೆ ಮಾತಾಡಲಾರದೆ ಕಣ್ಣೀರಿಡುತ್ತ ನಿಂತನು. ಕೃಪರೂ ಖಿನ್ನರಾದರು. 'ರಾಜನ್ ! ಗೊತ್ತಾಯಿತು ನನ್ನನ್ನು ಯಾರೂ ಕೊಲ್ಲಲಾರರು. ನಾನು ಅವಧ್ಯನಿರುವೆನು. ತಿಳಿ ! ಆದರೂ ನಿನಗೆ ಜಯವಾಗುವುದು. ನಡೆ ! ' ಎಂದ ಆಚಾರ್ಯರಿಗೆ ವಂದಿಸಿ ಧರ್ಮರಾಜನು ಶಲ್ಯನನ್ನು ಕಂಡು, ವಂದಿಸಿ, ಯುದ್ಧಾನುಜ್ಞೆ ಬೇಡಿದನು.

ಶಲ್ಯನು 'ಧರ್ಮರಾಜ ! ಇಂತು ಬರದಿದ್ದರೆ ನಿನಗೆ ಅಪಜಯವಾಗಲೆಂದು ಶಪಿಸಿಬಿಡುತ್ತಿದ್ದೆನು. ಪ್ರೀತನಾಗಿರುವೆನು. ಅರ್ಥದಾಸರಾದ ಪುರುಷರಿಗೆ ಅರ್ಥವು ದಾಸನಾಗದು. ಕೌರವನ ಉಪಚಾರಕ್ಕಾಗಿ ವಂಚಿತನಾಗಿ, ಅವರ ಕಡೆ ನಿಂತು ಕಾದುವ ನನ್ನಿಂದ ಯುದ್ಧ ಸಹಾಯವನ್ನು ಬಿಟ್ಟು ಬೇಕಾದ ವರವನ್ನು ಬೇಡು ! ' ಎಂದನು. ಧರ್ಮರಾಜನು 'ಮಹಾರಾಜ ! ನಮಗೆ ಸೋದರಮಾವನಾಗಿರುವ ನಿನ್ನಿಂದ ಹಿತವಾಗಲೆಂದು ಬಯಸುವುದು ತಪ್ಪಲ್ಲವಲ್ಲ ! ಕರ್ಣ ಸಾರಥಿಯಾಗಿ, ಅವನ ತೇಜೋಭಂಗವನ್ನು ಸಾಧಿಸು ! ನಮಗೆ ಜಯವಾಗುವಂತೆ ಆಶೀರ್ವದಿಸು !' ಎಂದು ಪ್ರಾರ್ಥಿಸಿದನು. ಶಲ್ಯನು ಕಣ್ಣೀರಿಟ್ಟು 'ರಾಜನ್ ! ಜಯಶಾಲಿಯಾಗುವೆ ! ನಿನ್ನ ಕೋರಿಕೆಯಂತೆ ನಡೆಯುವುದು. ಹೋಗು ! 'ಎಂದನು.

ಧರ್ಮರಾಜನು ಅಲ್ಲಿಂದ ಹಿಂದಿರುಗಿ, ತನ್ನ ಸೈನ್ಯವನ್ನು ಸೇರಪೋದನು. ಆಗ ಶ್ರೀಕೃಷ್ಣನು ಕರ್ಣನನ್ನು ಸಮೀಪಿಸಿ, 'ರಾಧೇಯ ! ಭೀಷ್ಮ ವಿಧೇಯನಾಗಲೊಲ್ಲದೆ, ನೀನು ಯುದ್ಧವನ್ನು ಆಡುವುದಿಲ್ಲವೆಂದಿರುವೆಯಂತೆ ! ಭೀಷ್ಮನು ಮೃತನಾಗುವವರೆಗೂ ಪಾಂಡವರ ಕಡೆ ಕಾದಾಡಿ, ನಮಗೆ ಸಹಾಯ ಮಾಡು ! ಅವರೇನು ನಿನಗೆ ಬೇರೆಯವರಲ್ಲ, ಆ ಮೇಲೆ ಧಾರ್ತರಾಷ್ಟ್ರರಿಗೆ ನೆರವಾಗುವೆಯಂತೆ !' ಎಂದನು. ಕರ್ಣನು ನಕ್ಕು, ಕೇಶವ ! ನಾನು ಜೀವದಿಂದಿರುವವರೆಗೂ ದುರ್ಯೋಧನನಿಗೆ ಅಹಿತವನ್ನು ಮಾಡಲಾರೆನು. ಆಯಿತು ! ಇಂತು ಕುಂತೀಸುತರ ಹಿತವನ್ನು ಸತತ ಸಾಧಿಸುವ ನಿನ್ನಿಂದ ಪಾಂಡವರು ಗೆಲ್ಲುವರು; ಕೌರವರನ್ನು ಕೊಲ್ಲುವರು ! ಸ್ವಾಮೀ ! ನಾನು ನನ್ನ ಮಿತ್ರನಿಗಾಗಿ ಸಾಯಲಿರುವೆನು ! ' ಎಂದನು. ಶ್ರೀಶನು ಪಾಂಡವರಿಂದ ಕೂಡಿ ತನ್ನ ಸೇನೆಯನ್ನು ಸೇರಿದನು.

ಆಗ ಸೈನ್ಯಗಳ ಮಧ್ಯದಿ ನಿಂತು ಧರ್ಮರಾಜನು 'ಯಾವನು ಧರ್ಮವನ್ನರಿತು ಅಧರ್ಮವನ್ನು ಬಿಟ್ಟು ಬರುವನೋ ಅವನು ನಮಗೆ ಮಿತ್ರನಾಗುವನು ' ಎಂದು ಉದ್ಘೋಷಿಸಿದನು. ಯುಯುತ್ಸುವೆಂಬ ಧೃತರಾಷ್ಟ್ರಸುತನು (ವೈಶ್ಯಾಪುತ್ರ) ಧರ್ಮಜನನ್ನು

ಸೇರಿ, 'ರಾಜನ್ ! ನಾನು ನಿನಗೆ ಸಹಾಯನಾಗಿ ಕೌರವರನ್ನು ಮೆಟ್ಟಿಕ್ಕುವೆನು. ನನ್ನನ್ನು ಸ್ವೀಕರಿಸು !' ಎಂದು ಬೇಡಿದನು. ಧರ್ಮರಾಜನು 'ಬಾ ಬಾ ! ಯುಯುತ್ಸು! ಮಂದ ಬುದ್ಧಿಗಳಾದ ನಿನ್ನ ಅಣ್ಣಂದಿರ ಕೂಡ ಕಾದಾಡೋಣ ! ನೀನು ಉಳಿಯುವುದರಿಂದ ಧೃತರಾಷ್ಟ್ರನ ವಂಶವು ಬೆಳೆಯಲಿ ! ಅವನಿಗೆ ನೀರು ಕೊಡಲು, ನೀನಾದರೂ ಇರು !'ಎಂದು, ಅವನನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡನು.

ಧರ್ಮರಾಜಾದಿಗಳು ರಥಾರೂಢರಾಗಿ ಯುದ್ಧಸನ್ನದ್ಧರಾದುದನ್ನು ಕಂಡು, ಧೃಷ್ಟದ್ಯುಮ್ನಾದಿವೀರರು ಹರ್ಷದಿಂದ ಸಿಂಹನಾದ ಮಾಡಿದರು. ಪೂಜ್ಯರನ್ನು ಪೂಜಿಸುವ ಪಾಂಡವರ ಧೀರೋದಾತ್ತ ವರ್ತನವೂ ಅಲ್ಲಿ ನೆರೆದಿದ್ದ ಸರ್ವ ಜನರ ಮೆಚ್ಚುಗೆಗೆ ಪಾತ್ರವಾಯಿತು. ಭೇರಿ ಭಾಂಕಾರಗಳು, ದುಂದುಭಿ ಧಣಂಧಣ ಧ್ವಾನಗಳು, ಶಂಖರವಗಳೊಡನೆ ಕಾಳಗವು ಪ್ರಾರಂಭವಾಯಿತು.

ದುಶ್ಶಾಸನನು ರಾಜರಾಜನ ವಚನದಂತೆ ಭೀಷ್ಮನನ್ನು ಹಿಂಬಾಲಿಸಿ, ರಕ್ಷಕನಾಗಿದ್ದನು. ಭೀಮಸೇನನ ಹಿಂದೆ ನಡೆಯುವ ಪಾಂಡವ ಪಾಂಚಾಲ ಸೇನೆಗಳು ಭೀಷ್ಮನನ್ನು ಮುತ್ತಲು ತವಕಿಸಿ ಮುಂದೆ ನಡೆದವು. ಕೌರವ ಸೇನೆ ಮೊದಲು ಯುದ್ಧವನ್ನು ಪ್ರಾರಂಭಿಸಿತು. ಎರಡು ಸೇನೆಗಳು ಕಲೆತಾಗ ಸಮುದ್ರಗಳೆರಡು ಕಲೆತಂತೆ ಅಲ್ಲೋಲಕಲವಾಯಿತು. ಗಜಘೀಂಕಾರಗಳೊಡನೆ ಹಯ ಹೇಷಾರವಗಳು ಮುಗಿಲು ಮುಟ್ಟಿದವು. ಪ್ರಳಯ ಮಾರುತಕ್ಕೆ ಕಂಪಿಸುವ ಎರಡು ವನಗಳು ಢೀಕೊಟ್ಟಂತೆ ಕಾಣುವ ಸೇನೆಗಳ ಪದಘಟ್ಟನಗಳಿಂದ ಭೂಮಿಯು ನಡುಗಿತು.

ಭೀಮಸೇನನು ಗೋವೃಷದಂತೆ ಗರ್ಜಿಸಿ ಮೇಲೆರಗಿದಾಗ, ಸಿಂಹನಾದಗಳು, ಘೀಂಕಾರಗಳು, ಹೇಷಾರವಗಳು, ಭಾಂಕಾರಗಳು ಮೊದಲಾದ ಎಲ್ಲ ಶಬ್ದಗಳನ್ನು ಮೀರಿ ಅಡಗಿಸಿದ ಆ ಮಹಾಬಲನ ಸಿಂಹನಾದದಿಂದ ಸಕಲ ಸೈನಿಕರು ಎದೆಗುಂದಿದರು. ಕೆಲರು ವಜ್ರಾತಿಕಠೋರವಾದ ಆ ಶಬ್ದವನ್ನು ಕೇಳಿ, ಮೂರ್ಛಿತರಾದರು. ಸಿಡಿಲಿನಂತೆ ಬಡಿದ ಭಯಂಕರ ಭೀಮಾರವದಿಂದ ಕಿವಿಗಳು ಗಡಚಿಕ್ಕಿ ಸೈನಿಕರು ಬಿದ್ದರು, ಅಶ್ವಗಜಾದಿ ಪಶುಗಳು ಶಕೃನ್ಮೂತ್ರಗಳನ್ನು ಮಾಡಿ, ದಿಗ್ಭ್ರಾಂತವಾಗಿ ನಿಂತವು.

ಬಂಧು ಸ್ನೇಹದಿಂದ ಪ್ರಥಮ ಪ್ರಹಾರವನ್ನು ಮಾಡಲೊಲ್ಲದ ಭೀಮಸೇನನನ್ನು ದುರ್ಯೋಧನ, ದುಶ್ಶಾಸನ, ವಿಕರ್ಣ ದುರ್ಮುಖ, ದುಸ್ಸಹ, ಸಹ, ಧುರ್ಮರ್ಷಣ, ವಿವಿಂಶತಿ, ಚಿತ್ರಸೇನ, ಪುರುಮಿತ್ರ, ಜಯ, ಭೂರಿಗಳು ಮುತ್ತಿ ಶರವರ್ಷದಲ್ಲಿ ಮುಳುಗಿಸಿದರು. ಮಹಾಗಿರಿಗೆ ಮೇಘಗಳು ಮುತ್ತಿದಂತೆ ಬರುವ ಕೌರವರನ್ನು ಬಾಧಿಸದಿರುವ ಭೀಮಸೇನನ ಧೈರ್ಯ ಸಾಹಸಗಳನ್ನು ಕಂಡು, ದ್ರೌಪದೇಯರು, ಅಭಿಮನ್ಯು, ನಕುಲ, ಸಹದೇವ, ಧೃಷ್ಟದ್ಯುಮ್ನರು ಮುಂದೆ ಬಂದು ಕೌರವಯೂಥ ಪತಿಗಳನ್ನು ತಡೆದರು. ಆಗ ನಡೆದ ಯುದ್ಧದಲ್ಲಿ ದ್ರೋಣ ಶಿಷ್ಯರ ರಣ ಪಾಂಡಿತ್ಯವನ್ನು ಲಾಘವವನ್ನು ಲಕ್ಷ್ಯತಾಡನವನ್ನು ಶರಮೋಚನ ಕೌಶಲವನ್ನು ಕಂಡು ನಾನು ಬೆರಗಾದೆನು.

ಆಕಾಶದಿಂದುರುಳುವ ಕೊಳ್ಳಿಗಳಂತೆ ಹಾರುವ ಶರಜಾಲದಿಂದಲು, ಮಿಂಚಿನಂತೆ ಪೊಳೆವ ಧನಸ್ಸುಗಳಿಂದಲು, ರಥನೇಮಿಗಳ ಗರ್ಜನದಿಂದಲು, ರಣರಂಗವು ತುಂಬಿ ಮಳೆಗರೆವ ಆಕಾಶದಂತಾಯಿತು. ಸಂರಂಭದಿಂದ ಕಡಿದಾಡುವ ಜ್ಞಾತಿಗಳ ಪರಸ್ಪರ ಹಿಂಸೆಯು ಅತಿ ದಾರುಣವಾಯಿತು. ನೋಡುತ್ತಾ ನಿಂತ ರಾಜನ್ಯರು ಬೆರಗಾದರು. ಧನುಗಳು ಸರ್ಪಗಳಾಗಿ, ಸಿಂಹಗರ್ಜನವು ಘೋಷವಾಗಿ, ಖಡ್ಗಗಳು ಕಚ್ಛಪಗಳಾಗಿ, ಸೈನಿಕರು ಅಲೆಗಳಾಗಿ, ಕುರುಪಾಂಡವ ಸೇನೆಗಳು, ಗಾಳಿಗೆ ತೂಗುವ ಸಮುದ್ರಗಳಂತೆ ಕಂಗೊಳಿಸಿದವು. ಸೈನ್ಯವು ನಡೆದಂತೆ ಮೇಲೆದ್ದ ಧೂಳಿಯು ಮುಚ್ಚಿ ಸೂರ್ಯನು ಕಾಣದಂತಾದನು.

ಅಂದು ತ್ರಯೋದಶಿ ಬೆಳಿಗ್ಗೆ ಯುದ್ಧವು ಆರಂಭವಾಯಿತು. ಶಾಂತನವನು ಧನಂಜಯನನ್ನು, ಸಾತ್ಯಕಿಯು ಕೃತವರ್ಮನನ್ನು, ಅಭಿಮನ್ಯುವು ಬೃಹದ್ಬಲನನ್ನು (ಕೋಶಲರಾಜ), ದುರ್ಯೋಧನನು ಭೀಮಸೇನನನ್ನು, ನಕುಲನು ವಿಕರ್ಣನನ್ನು, ಸಹದೇವನು ದುಶ್ಶಾಸನನನ್ನು, ಧರ್ಮರಾಜನು ಶಲ್ಯನನ್ನು, ದ್ರುಪದನು ದ್ರೋಣನನ್ನು, ಶಂಖನು (ಉತ್ತರನ ಅಣ್ಣ) ಭೂರಿಯನ್ನು, ದುರ್ಮುಖಾದಿ ಕೌರವ ಪುತ್ರರು ದ್ರೌಪದೇಯರನ್ನು, ಧೃಷ್ಟಕೇತುವು ಬಾಹ್ಲೀಕನನ್ನು, ಘಟೋತ್ಕಚನು ಅಲಂಬುಷನನ್ನು, ಶಿಖಂಡಿಯು ಅಶ್ವತ್ಥಾಮನನ್ನು, ಭಗದತ್ತನು ವಿರಾಟನನ್ನು, ಕೇಕಯನಾದ ಬೃಹತ್‌ಕ್ಷತ್ರನು ಕೃಪನನ್ನು, ಚೇಕಿತಾನನು ಸುಶರ್ಮನನ್ನು ಎದುರಿಸಿ ಕಾದತೊಡಗಿದರು. ಸಮರವು ಘೋರವಾಯಿತು.

ಶಕುನಿಯು ಧರ್ಮಜ ತನೂಜನಾದ ಪ್ರತಿವಿಂಧ್ಯನನ್ನು ಮದಗಜವನ್ನು ಸಿಂಹದಂತೆ ಮುತ್ತಿದನು. ಸುದಕ್ಷಿಣನು (ಕಾಂಬೋಜರಾಜ) ಸಹದೇವ ಸುತನಾದ ಶ್ರುತಕರ್ಮನನ್ನು, ಇರಾವಂತನು ಶ್ರುತಾಯುವನ್ನು, ಕುಂತಿಭೋಜನು ಆವಂತ್ಯರಾದ ವಿಂದಾನುವಿಂದರನ್ನು ಮುತ್ತಿ ಕಾದಿದರು. ಬಾಣಗಳ ಸುರಿಮಳೆಯಾಯಿತು. ಬಿಲ್ಲುಗಳು, ಮುರಿಯಲ್ಪಡಲು ಬೇರೆ ಬಿಲ್ಲುಗಳನ್ನು ಪಿಡಿದೆ ಪ್ರತಿ ವೀರರನ್ನು ಬಾಣವರ್ಷದಿ ಪೀಡಿಸುವ ವೀರರ ರಣವಿಹಾರದಿಂದ, ರಣರಂಗವು ಭೀಭತ್ಸವಾಯಿತು. ಗದಾ ಶಕ್ತಿ ಮುಸಲ ಪರಿಘ ಪ್ರಾಸ ಖಡ್ಗಾದಿ ವಿವಿಧಾಯುಧಗಳ ಝಣ ಝಣತ್ಕಾರದೊಡನೆ ಶಿರಗಳುದುರಿದವು. ರಕ್ತದ ಕಾಲುವೆಗಳು ಹರಿದು ಸಮಂತ ಪಂಚಕದ ಮಡುವುಗಳು ನೆತ್ತರು ಕೆರೆಗಳಾದವು. ಸಿಂಹನಾದಗಳೊಡನೆ ಆರ್ತರವಗಳು, ಭೇರೀದುಂದುಭಿಧ್ವಾನಗಳೊಡನೆ ಗೃಧ್ರಜಂಬುಕಾದಿಗಳ ವಿಚಿತ್ರ ಚೀತ್ಕಾರಗಳು ಎಲ್ಲೆಡೆ ಹರಡಿದವು.

ಉತ್ತರನು ನಿನ್ನ ಮಗನಾದ ವೀರಬಾಹುವಿನೊಡನೆ ಕಾದು ಅವನನ್ನು ಸೋಲಿಸಿದನು. ಧೃಷ್ಟಕೇತುವು ಉಲೂಕನನ್ನು ಬಾಣ ವರ್ಷದಲ್ಲಿ ಮುಣುಗಿಸಿದನು. ಪ್ರಾರಂಭದಲ್ಲಿ ಮಧುರ ದರ್ಶನವಾಗಿದ್ದ ಸಮರವು ಬರಬರುತ್ತಾ ಭಯಂಕರವಾಯಿತು ದಂತಿಯೂಥಗಳು ನಡೆಯುವ ಬೆಟ್ಟಗಳಂತೆ ಮೇಲೇರಿ ಬಂದಾಗ, ಸಾವಿರಾರು ಭಟರು, ಅವುಗಳ ಕಾಲಿಗೆ ಸಿಕ್ಕು ನುಚ್ಚುನೂರಾದರು. ಅಶ್ವಿಕರು ಎಲ್ಲೆಡೆ ನೋಡಿದರೂ ಕಾಣಸಿಗುತ್ತಾ

ರಥಿಕರೊಡನೆ ಮತ್ತು ಪತ್ತಿಗಳೊಡನೆ ಕಡಿದಾಡಿದರು. ತಂದೆ-ಮಗ, ಅಣ್ಣ-ತಮ್ಮ, ಮಾವ-ಅಳಿಯ, ಭಾವ-ಮೈದುನ ಎಂಬ ಭಾವನೆಯನ್ನು ದೂರ ಮಾಡಿ, ಮಿತ್ರರೆಂದು ಮೆತ್ತಗಾಗದೆ, ಕಾದುವ ಶೂರರು ಆವೇಶ ಬಂದವರಂತೆ ಕಡಿದಾಡಿ ಕೊಂದು ಸತ್ತರು. ರಥದ ನೊಗೆಗೆ ತಾಗಿಸಿ, ನೊಗೆಯನ್ನೇರಿ ಬಂದು ಪರರಥಿಕನನ್ನು ಕಡಿದು ಬಿಸುಟುವ ಸಾಹಸಿಕರು, ಕುದುರೆಗಳ ಸವಾರರನ್ನು ಬಗಲಿಗೆ ಬಂದಾಗ ಚೆಂಡಾಡಿ ಉರುಳಿಸುವ ರಥಿಕವರರು, ಆನೆಗಳ ಸೊಂಡಿಲವನ್ನು ಕಾಲುಗಳನ್ನು ಕಡಿದು ಕೆಡಹುವ ಕಾಲ್ಬಟರು, ಅವರನ್ನು ಆನೆಗಳಿಂದ ತುಳಿಸುವ ಗಜವಾಹನರು. ರಣರಂಗವನ್ನು ತುಂಬಿ ವಿಹರಿಸಿದರು. ಗಜವನ್ನು ಮುತ್ತಿ ಮೇಲೇರುವವನ ಅಂಬಾರಿಯನ್ನು ಕೆಳಗೆ ಸೆಳೆದು ಬೀಳಿಸುವ ಗಜಗಳು, ಸೊಂಡಿಲವು ಕಡಿಯಲ್ಪಟ್ಟಾಗ ಘೀಂಕರಿಸುತ್ತಾ ಹುಚ್ಚೆದ್ದು ಓಡಿ, ಎಷ್ಟೋ ಭಟರನ್ನು, ಅಶ್ವಗಳನ್ನು ನಾಶಮಾಡಿದವು. ವಿಕೃತ ಸ್ವರದಿಂದ ಕೂಗಿ ಕೆಳಗೆ ಬೀಳುವ ಗಜಾಶ್ವಗಳ ಕಳೇಬರಗಳಿಂದ ರಥ ಗಮನವು ಕುಂಠಿತವಾಯಿತು.

ಖಡ್ಗ ಚರ್ಮಗಳನ್ನು ಪಿಡಿದು ಕಾದುವ ಶೂರರು ಹುಂಕರಿಸುತ್ತಿದ್ದರು. ಸೋತವರು ಓಡುತ್ತಿದ್ದರು; ಅವರನ್ನು ಹಿಂಬಾಲಿಸಿ ಕೊಲ್ಲುವ ಕ್ರೂರಭಟರು, ಇತರ ವೀರರ ಕೈಗೆ ಸಿಕ್ಕು ತಾವೂ ಹತರಾದರು. ಭಯಂಕರವಾದ ಆರ್ತನಾದಗಳಿಂದ ರಣರಂಗವು ಪ್ರೇತಾವಾಸವಾಯಿತು. ಕಾಲು, ಕೈ ತಲೆ, ಭುಜ ಪಾರ್ಶ್ವಗಳು ನೆಲದಲ್ಲಿ ಉರುಳಾಡಿದವು. ರಥ ಚಕ್ರದಿ ಸಿಕ್ಕವರು ಪುಡಿಯಾದವರು; ಅವರ ಕರುಳು ಹೊರಬಂದವು; ಕಣ್ಣುಗುಡ್ಡೆಗಳು ಉಬ್ಬಿ ನಿಂತವು; ಬಾಯಲ್ಲಿ ರಕ್ತವನ್ನು ಕಾರುತ್ತಾ ಬಡಿದಾಡಿ ಸಾಯುವ ಸೈನಿಕರ ಸಂಖ್ಯೆ ಅಪರಿಮಿತವಾಯಿತು. 'ನೀರು ನೀರೆ'ಂದು ಕಿರಚುವ ಭಟರನ್ನು ಕೇಳುವವರಿಲ್ಲ, ಬಂಧುತ್ವವನ್ನು ಮರೆತು, ಮೈತ್ರಿಯನ್ನು ತೊರೆದು, ಕೊಂದು ತಿರುಗುವ ವೀರರನ್ನು ಸಂಹರಿಸುವ ಅಶ್ವಿಕರು, ಅವರನ್ನು ಕೊಲ್ಲುವ ರಥಿಕರು, ಅವರನ್ನು ತುಳಿದು ನಾಶಪಡಿಸುವ ಮದಗಜಗಳು, ಅವನ್ನು ಮರ್ಮಭೇದಬಾಣಗಳಿಂದ ಪೀಡಿಸಿ ಓಡಿಸುವ ಮಹಾರಥರು ಪರಸ್ಪರ ಜಯಾಭಿಲಾಷೆಯಿಂದ ಕಾದಿ, ರಣರಂಗದಿ ವೀರಶಯನವನ್ನಲಂಕರಿಸಿದರು.

ಭೀಷ್ಮನ ಕನಕ ರಥವು, ಪಂಚತಾರೆಗಳಿಂದಲು ತಾಲವೃಕ್ಷದಿಂದಲು ಒಪ್ಪುವ ಧ್ವಜದಿಂದ ಶೋಭಿಸುತ್ತಾ ಎಲ್ಲ ಕಡೆಯೂ ತಾನಾಗಿ ಕಾಣಬರುತ್ತಿತ್ತು. ಆತನ ರಥ ಮಾರ್ಗವು ಮೃತಭಟಾಕ್ರಾಂತವಾಯಿತು. ಆತನ ವೀರ ವಿಹಾರವು ಅತುಲವಾಯಿತು. ಆತನ ಧಾಟಿಯನ್ನು ತಡೆಯುವ ವೀರರಿಲ್ಲವೆಂದೆನಿಸಿತು.

ಮಧ್ಯಾನ್ಹವಾಗುತ್ತಿರಲು ಭೀಷ್ಮನ ಪ್ರತಾಪವು ದುಸ್ಸಹವಾಯಿತು. ದುರ್ಮುಖ, ಕೃತವರ್ಮ, ಕೃಪ, ಶಲ್ಯ, ವಿವಿಂಶತಿಗಳಾತನ ಬೆಂಗಾವಲಾಗಿ ನಿಂತು, ಶತ್ರುಭಟರನ್ನು ವಾರಿಸಿದರು. ಭೀಷ್ಮನು ಮಾರಣತಾಂಡವನ್ನು ಮಾಡತೊಡಗಿದನು. ಮಾರಿಗೌತಣವಿತ್ತಂತೆ, ಯಮರಾಜನನ್ನು ಕರೆಯಿಸಿದಂತೆ, ಭಯಂಕರ ಸಂಹಾರ ಕಾರ್ಯವನ್ನು ಮಾಡುತ್ತ ಮುಂದೆ ಸಾಗುವ ಭೀಷ್ಮನನ್ನು ಅಭಿಮನ್ಯುವು ತಡೆದು ನಿಲ್ಲಿಸಿ, ಆರ್ಭಟಿಸಿದನು. ಕನಕಚಿತ್ರಿತವಾದ ಕರ್ಣಿಕಾರಧ್ವಜವು ತಾಲಧ್ವಜವನ್ನು ಅಪವಾರಿಸಿ ನಿಲ್ಲಿಸಿತು. ಅಭಿಮನ್ಯುವು ಒಂದು

ಬಾಣದಿಂದ ಕೃಪನನ್ನೂ, ಒಂದರಿಂದ ಕೃತವರ್ಮನನ್ನೂ, ಐದರಿಂದ ಶಲ್ಯನನ್ನೂ ಹೊಡೆದನು. ಒಂದು ಭಲ್ಲದಿಂದ ದುರ್ಮುಖನ ಸಾರಥಿಯನ್ನು ಕೆಡಹಿದನು. ಒಂದರಿಂದ ಕೃಪನ ಧನುವನ್ನು ಮುರಿದನು. ಅವನ ಶರಲಾಘವವನ್ನು ಕಂಡು ದೇವತೆಗಳು ಕೂಡ ಮೆಚ್ಚಿದರು. ಭೀಷ್ಮಾದಿ ವೀರರು ಅವನ ರಣಕೌಶಲವನ್ನು ಕಂಡು ಎರಡನೇ ಧನಂಜಯನೇ ಬಂದನೆಂದು ತಿಳಿದರು. ಅಲಾತಚಕ್ರದಂತೆ ಮೆರೆಯುವ ಅಭಿಮನ್ಯುವಿನ ಧನುಸ್ಸಿನಿಂದ ಹೊರಹೊಮ್ಮುವ ಶರಜ್ವಾಲೆಗಳಿಂದ ದಿಕ್ಕುಗಳು ಉರಿದಂತೆ ತೋರಿದವು.

ಭೀಷ್ಮನು ಒಂಭತ್ತು ಬಾಣಗಳಿಂದ ಅಭಿಮನ್ಯುವಿನನ್ನು ತಾಡಿಸಿ, ಮೂರರಿಂದ ಅವನ ಧ್ವಜವನ್ನು ಕೆಡಹಿ, ಮೂರರಿಂದ ಅವನ ಸಾರಥಿಯನ್ನು ಪೀಡಿಸಿದನು. ಕೃಪನೂ ಕೃತವರ್ಮಶಲ್ಯರೂ ಅವನನ್ನು ಮುತ್ತಿ ಬಾಣಗಳಿಂದ ಹೊಡೆದರು. ಇಂತು ಪಂಚರಥಿಕರು ಮುತ್ತಲು ಹೆದರದೆ ಸೌಭದ್ರನು ಶರವರ್ಷದಿಂದ ನಾಲ್ವರನ್ನು ದೂರಸರಿಸಿ, ಭೀಷ್ಮನೊಡನೆ ಕಾದಾಲಾರಂಭಿಸಿದನು. ಒಂಭತ್ತು ಬಾಣಗಳಿಂದ ಭೀಷ್ಮನ ತಾಲಧ್ವಜವನ್ನು ಕಡಿದು ನೆಲಕ್ಕುರುಳಿಸಿದ ಅಭಿಮನ್ಯುವಿನ ಪರಾಕ್ರಮವನ್ನು ಭೀಮನು ಮೆಚ್ಚಿ ಸಿಂಹನಾದವನ್ನು ಮಾಡಿದನು. ಭೀಷ್ಮನು ಕುಪಿತನಾಗಿ ಮಹಾಸ್ತ್ರಗಳನ್ನು ಸೃಜಿಸಿ ಶರಜಾಲದಿಂದ ಅಭಿಮನ್ಯುವಿನನ್ನು ಮುಚ್ಚಿದನು. ಆಗ ಕುಮಾರನನ್ನು ರಕ್ಷಿಸಲೆಂದು ವಿರಾಟ, ಉತ್ತರ, ಧೃಷ್ಟದ್ಯುಮ್ನ, ಭೀಮಸೇನ, ಕೈಕಯ, ಸಾತ್ಯಕಿ, ದ್ರುಪದ ಮೊದಲಾದ ಹತ್ತು ಜನ ಮಹಾರಥರು ಒಮ್ಮೆಗೆ ಬಂದು ಭೀಷ್ಮನೊಡನೆ ಹೋರಾಡಿದರು.

ಭೀಷ್ಮನು ಭೀಮಸೇನನ ಬಂಗಾರದ ಸಿಂಹಧ್ವಜವನ್ನುರುಳಿಸಿ, ಗರ್ಜಿಸಿದನು. ಭೀಮಸೇನನು ವಿಜೃಂಭಿಸಿ ಮೂರು ಬಾಣಗಳಿಂದ ತಾತನನ್ನೂ, ಒಂದರಿಂದ ಕೃಪನನ್ನೂಎಂಟರಿಂದ ಕೃತವರ್ಮನನ್ನೂ ಹೊಡೆದನು. ಉತ್ತರಕುಮಾರನು ಅದನ್ನು ಕಂಡು ವಿಜೃಂಭಿಸಿ ಮದಗಜಾರೂಢನಾಗಿ ಮದ್ರರಾಜನನ್ನು ಮುತ್ತಿದನು. ಶಲ್ಯನು ಮೇಲೇರಿ ಬರುವ ಮದ್ದಾನೆಯನ್ನು ತಿವಿಯಲು, ಅದು ಘೀಳಿಡುತ್ತಾ ಅವನ ರಥವನ್ನು ಮುಂಗಾಲಿನಿಂದ ತುಳಿದೇರಿ, ಅವನ ಕುದುರೆಗಳನ್ನು ಸವರಿ ಸಂಹರಿಸಿತು. ಶಲ್ಯನು ಸಿಟ್ಟಿನಿಂದ ಶಕ್ತಿಯನ್ನು ಪ್ರಯೋಗಿಸಿ, ಉತ್ತರನನ್ನು ಸಂಹರಿಸಿದನು. ಮತ್ತು ಆನೆಯ ಸೊಂಡಿಲನ್ನು ಕಡಿದನು. ಅದು ಘೋರವಿಕಾರವಾಗಿ ಚೀರಿ, ಕೆಳಗುರುಳಿತು. ಶಲ್ಯನು ಕೃತವರ್ಮನ ರಥವನ್ನೇರಿ ನಿಂತನು.

ಉತ್ತರನ ಮೃತಿಯನ್ನು ಕಂಡು, ಅವನ ಸೋದರನಾದ ಶ್ವೇತನು ಕುಪಿತನಾಗಿ ಸಪ್ತಮಹಾರಥರ ಧನುಸ್ಸುಗಳನ್ನು ಒಂದೇ ಸಲ ಮುರಿದನು. ಬೇರೆ ಧನುಸ್ಸುಗಳನ್ನು ಅವರು ಪಿಡಿದಾಗ ಅವನ್ನೂ ತುಂಡರಿಸಿ, ಅವರು ಬಿಟ್ಟ ಏಳು ಶಕ್ತಿಗಳನ್ನು ಕೆಡಹಿ, ಕುದುರೆಗಳನ್ನು ಕೊಂದು, ಧ್ವಜಗಳನ್ನು ಉರುಳಿಸಿ, ಸಾರಥಿಗಳನ್ನು ಪೀಡಿಸಿ, ಶ್ವೇತನು ಮಹಾವೇಗದಿಂದ ಶಲ್ಯನನ್ನು ಸಮೀಪಿಸಿದನು. ತಮ್ಮನನ್ನು ಕೊಂದನೆಂಬ ಸೇಡಿನಿಂದ ಶ್ವೇತನು ಶಲ್ಯನನ್ನು ಬಾಣವರ್ಷದಲ್ಲಿ ಮುಣುಗಿಸುತ್ತಿರಲು, ದುರ್ಯೋಧನ ಭೀಷ್ಮ ಪ್ರಮುಖರು ಅವನನ್ನು ಮೃತ್ಯುಮುಖದಿಂದ ತಪ್ಪಿಸಲು ಧಾವಿಸಿದರು. ಭೀಷ್ಮನ ಶರವರ್ಷದಲ್ಲಿ

ದ್ರುಪದಾದಿ ಪಾಂಡವ ವೀರರು ಮುಳುಗಿ ದಿಗ್ಭ್ರಾಂತರಾದರು. ಭೀಮಸೇನನು ಅವರ ಭಯವನ್ನು ನಿವಾರಿಸಿ, ನಿರಾಯುಧನಾಗಿ ರಥದಿಂದಿಳಿದು ಆನೆಗಳಿಂದ ಆನೆಗಳನ್ನು ಕುದುರೆಗಳಿಂದ ಕುದುರೆಗಳನ್ನು ಕುಪ್ಪಳಿಸಿ, ರಥಗಳನ್ನು ಕೈಯಿಂದ ಸವರಿ ಪದಾತಿಗಳನ್ನು ನಾಶಮಾಡಿದನು. ಆತನ ಪರಾಕ್ರಮಾಗ್ನಿಗೆ ಕೌರವ ಸೈನಿಕರು ಶಲಭಗಳಾದರು. ಭೀಷ್ಮನೂ ಪಾಂಡವರಥಿಕರನ್ನು ಸಾವಿರಾರು ಜನರನ್ನು ನಾಶಪಡಿಸಿ, ಒಂದು ದಿನಕ್ಕೆ ಅಯುತಭಟರನ್ನು ಕೊಲ್ಲುವೆನೆಂಬ ತನ್ನ ಪ್ರತಿಜ್ಞೆಯನ್ನು ಪಾಲಿಸಿ, ಇನ್ನೂ ಅಧಿಕವಾಗಿಯೇ ಸಂಹರಿಸಿ, ಸತ್ಯವಾಗಿಸಿದನು.

ಭೀಮ ಭೀಷ್ಮರ ವಿಜೃಂಭಣೆಗೆ ತಾಳಲಾರದೆ ಕುರು ಪಾಂಡವ ಸೇನೆಗಳು ಚೆಲ್ಲಾಚೆದರಾದವು. ರಥಗಳು ಮುರಿದು ಬಿದ್ದವು. ಸತ್ತ ರಥಿಕರನ್ನು ಸ್ವೀಕರಿಸಿ ಹೋಗುವ ಸಾರಥಿಗಳಿಂದಲು, ಸವಾರರಿಲ್ಲದೆ ಓಡುವ ಕುದುರೆಗಳಿಂದಲು, ಸತ್ತು ಬಿದ್ದ ಆನೆಗಳಿಂದಲು, ಕೈಲಿ ಪಿಡಿದ ಖಡ್ಗವನ್ನು ಬಿಡದೆ ಹಿಡಿದಿದ್ದ ಮುಂಡಗಳಿಂದಲು, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಖಡ್ಗ, ಶೂಲ, ಧನುರ್ಬಾಣ, ಶಕ್ತಿ ತೋಮರಾದಿ ಆಯುಧಗಳಿಂದಲು ರಣರಂಗವೆಲ್ಲ ಭೀರುಗಳಿಗೆ ಭಯಪ್ರದವಾಗಿಯೂ, ವೀರರಿಗೆ ಉತ್ಸವಪ್ರದವಾಗಿಯು ಕಾಣಿಸಿತು. ಯುದ್ಧರಂಗದ ಕೋಲಾಹಲದಲ್ಲಿ ನಾಮಗೋತ್ರಾದಿ ಕೀರ್ತನ ಶಬ್ದಗಳು ಕೇಳ ಬರದಾದವು. ಒಬ್ಬ ಭಟನಾದರೂ ಗಾಯಗೊಳ್ಳದವನು ಅಲ್ಲಿ ಇದ್ದಿಲ್ಲ.

ಆಗ ಶ್ವೇತನು ಶತ್ರುಗಳ ಶಿರಗಳನ್ನುರುಳಿಸುತ್ತಾ ಮುಂದೆ ನಡೆದಂತೆ ಅವನ ಹಿಂದೆ ಕಂಕಾಳಗಳು ಹರಡಿದಂತಾಗುತ್ತಿತ್ತು. ಕೌರವ ಸೈನ್ಯದಲ್ಲಿ ಅವನ ಪರಾಕ್ರಮವನ್ನು ನೋಡಿ ಹೆದರದವರೆಂದರೆ ಭೀಷ್ಮ ದ್ರೋಣಾದಿ ಕೆಲವರು ಮಾತ್ರ. ಭೀಷ್ಮನು ಅಸುರರನ್ನು ಚಕ್ರಪಾಣಿಯಂತೆ, ಪಾಂಡವ ವೀರರನ್ನು ನಾಶಮಾಡುತ್ತ ಶ್ವೇತನನ್ನು ಮುತ್ತಿ ಅವನನ್ನು ತಡೆದನು. ಶ್ವೇತನು ಗಾಂಗೇಯನನ್ನು ಬಿಟ್ಟು ಆತನಿಗೆ ಸಹಾಯಕರಾಗಿ ಬಂದ ದುರ್ಯೋಧನಾದಿ ವೀರರನ್ನು ಬಾಣ ಜಾಲದಿಂದ ಪೀಡಿಸಿ, ಅವರನ್ನು ಓಡಿಸಿ, ಮತ್ತೆ ಭೀಷ್ಮನನ್ನು ಕೂಡಿ ಕಾದಿದನು. ವೃತ್ರವಾಸವರಂತೆ ಅವರೀರ್ವರು ಹೋರಾಡಿದರು. ಶ್ವೇತನು ಏಳು ಬಾಣಗಳಿಂದ ಆತನ ಧನಸ್ಸನ್ನು ಮುರಿದು ಹತ್ತು ತುಂಡಾಗಿಸಿ ಕೆಡಹಿದನು: ಒಂದು ಬಾಣದಿಂದ ತಾತನ ತಾಲ ಧ್ವಜವನ್ನು ಕೆಡಹಿ ಆರ್ಭಟಿಸಿದನು. ಪಾಂಡವರದನ್ನು ಕಂಡು ಹರ್ಷದಿಂದ ಶಂಖಗಳನ್ನೂದಿದರು. ದುರ್ಯೋಧನನು ಕ್ರೋಧಾವಿಷ್ಟನಾಗಿ, ವೀರವರರಿಂದ ಕೂಡಿ, ತಾತನ ಸಹಾಯಕ್ಕೆಂದು ಬಂದನು. ಬಾಹ್ಲೀಕ, ಕೃತವರ್ಮ, ಕೃಪ, ಶಲ್ಯ, ಸಹದೇವ, ವಿಕರ್ಣ, ಚಿತ್ರಸೇನ, ವಿವಿಂಶತಿ ಮೊದಲಾದ ಮಹಾರಥರು ನಾಲ್ಕು ನಿಟ್ಟಿನಿಂದ ಶ್ವೇತನನ್ನು ಮುತ್ತಿ ಬಾಣವರ್ಷವನ್ನು ಸುರಿಸಿದರು. ಶ್ವೇತನು ಹಿಂಜರಿಯದೆ ಅವರ ಬಾಣಗಳನ್ನು ಮಧ್ಯೇ ಮಾರ್ಗದಲ್ಲೇ ತುಂಡರಿಸಿ, ಸಿಂಹವು ಆನೆಗಳನ್ನಂತೆ, ಅವರನ್ನು ಓಡಿಸಿ, ಭೀಷ್ಮನನ್ನು ಮುತ್ತಿ ಹಲವು ಬಾಣಗಳಿಂದ ಆತನನ್ನು ಪೀಡಿಸಿದನು; ಆತನ ಧನುಸ್ಸನ್ನು ಖಂಡಿಸಿದನು. ಅದನ್ನು ನೋಡಿ, ಕೌರವರು ವ್ಯಥಿತರಾದರು. ಶ್ವೇತನಿಂದ ಭೀಷ್ಮನು ಜಿತನಾಗುವನೇನೋ ಎಂಬ ಶಂಕೆ ಅವರಿಗೆ ಮೂಡಿತು. ಭೀಷ್ಮನು

ಕ್ರೋಧಾನಿಲನಾಗಿ ನಾನಾಸಾಯಕಗಳಿಂದ ಶ್ವೇತನ ಧನುವನ್ನು ಮುರಿದು ಸಾರಥಿ ಕುದುರೆಗಳನ್ನು ಕೊಂದು, ಧ್ವಜವನ್ನು ಮುರಿದು ಕೆಡಹಿ, ಕೊನೆಗೆ ಶ್ವೇತನನ್ನೂ ಒಂದು ಬಾಣದಿಂದ ಗಾಯಗೊಳಿಸಿದನು.

ಶ್ವೇತನು ಕುಪಿತನಾಗಿ ಶಕ್ತಿಯನ್ನು ಪ್ರಯೋಗಿಸಿದನು. ಭೀಷ್ಮನು ಅದನ್ನು ತುಂಡರಿಸಿದನು. ಶ್ವೇತನು ಸರಿಯದೆ, ಗದೆಯನ್ನು ಪಿಡಿದು, ಭೀಷ್ಮನ ಮೇಲೇರಿ ಹೋದನು. ಪರ್ವತವನ್ನು ಢೀ ಕೊಡುವ ಮಹಾ ಪ್ರವಾಹದಂತೆ ಬರುವ ಶ್ವೇತನ ವೇಗವು ಅಸಹ್ಯವೆಂದು ತಿಳಿದು, ಭೀಷ್ಮನು ರಥದಿಂದ ಕೆಳಗೆ ಧುಮುಕಿದನು. ಶ್ವೇತನ ಗದೆಯು ಸೂತ ತುರಗ ಧ್ವಜ ರಥ ಕೂಬರಗಳನ್ನು ಪುಡಿ ಮಾಡಿತು. ಭೀಷ್ಮನು ಬೇರೊಂದು ರಥವನ್ನೇರಿ, ಕಾಲಾಂತಕನಂತೆ ಕೆಂಗಣ್ಣನಾಗಿ, ಶ್ವೇತನನ್ನು ತಾಕಿದನು. 'ಭೀಷ್ಮ ! ಮಹಾಬಾಹೋ ! ಶ್ವೇತನನ್ನು ತಡಮಾಡದೆ ಸಂಹರಿಸು ! ಇದೀಗ ಅವನ ಅಪಜಯ ಕಾಲವಾಗಿದೆ' ಎಂಬ ದೂತನ ನುಡಿಯನ್ನು ಕೇಳಿ, ಪಿತಾಮಹನು ಉತ್ಸಾಹಭರಿತನಾಗಿ ಶ್ವೇತನಿಗೆ ಸಹಾಯರಾಗಿ ಬರುವ ಸಾತ್ಯಕಿ, ಧೃಷ್ಟದ್ಯುಮ್ನ ಧೃಷ್ಟಕೇತು ಪ್ರಮುಖ ವೀರರನ್ನು ಶರವರ್ಷದಿಂದ ದೂರ ಮಾಡಿ, ಶ್ವೇತನನ್ನು ಐದು ಬಾಣಗಳಿಂದ ಹೊಡೆದನು. ಶ್ವೇತನು ಖಡ್ಗದಿಂದಲೇ ಪಿತಾಮಹನ ಧನುಸ್ಸನ್ನು ಮುರಿದನು. ಕುಪಿತನಾದ ಗಾಂಗೇಯನು, ಭೀಮಸೇನನ ಅರವತ್ತು ಬಾಣಗಳನ್ನು ತುಂಡರಿಸಿ ಅಭಿಮನ್ಯು ಮುಂತಾದ ವೀರರು ಮುತ್ತಲು ಒತ್ತರಿಸಿ, ಭಾರ ಸಾಧನವಾದ ಶರದಲ್ಲಿ ಬ್ರಹ್ಮಾಸ್ತ್ರವನ್ನಭಿಮಂತ್ರಿಸಿ, ಪ್ರಯೋಗಿಸಿದನು. ಅದು ಶ್ವೇತನ ದೇಹವನ್ನು ಹೊಕ್ಕು ಹೊರಬಂದು, ಅವನ ಪ್ರಾಣ ಪಕ್ಷಿಯು ಹಾರಿ ಹೋಗಲು ಮಾರ್ಗವನ್ನು ತೋರಿತು. ಶ್ವೇತ ಸೇನಾಪತಿಯ ಮೃತಿಯನ್ನು ಕಂಡು ಪಾಂಡವರು ನಿರ್ವಿಣ್ಣರಾದರು. ಕೌರವರು ವಾದಿತ್ರನಿನದಗಳಿಂದ ನರ್ತಿಸಿ ಗರ್ಜಿಸಿದರು. ಆಗ ಅರ್ಜುನನು ಪಾಂಡವ ಸೈನ್ಯವು ಹಿಂದೆ ಸರಿದು ಬರುವಂತೆ, ಶಂಖವನ್ನೂದಿದನು. ಎರಡು ಸೈನ್ಯಗಳೂ ಅವಹಾರವನ್ನು ಮಾಡಿ ಶಿಬಿರಗಳು ಸೇರಿದವು.

ಸಂಜಯನ (ಪ್ರಥಮದಿನ ಪೂರ್ವಾಹ್ಣದ) ಯುದ್ಧವರ್ಣನವನ್ನು ಕೇಳಿ, ಧೃತರಾಷ್ಟ್ರನು, 'ಸಂಜಯ ! ಶ್ವೇತನು ಮೃತನಾದುದನ್ನು ಕೇಳಿ, ನನಗೆ ಸಂತಸವಾಗಿದೆ. (ಆದರೆ ಭೀಷ್ಮಪಾತವನ್ನು ನೆನೆದು ವ್ಯಸನವಾಗುತ್ತಿದೆ). ಮೊದಲಿನಿಂದಲು ಭೀಷ್ಮನು ಯುದ್ಧವಿಮುಖನಾಗಿದ್ದನು. ಜ್ಞಾತಿವಧ ದೋಷವನ್ನರಿತು ಆಚಾರ್ಯ ಕೃಪರೂ ಯುದ್ಧವನ್ನಾಡಬೇಡವೆಂದು ದುರ್ಯೋಧನನಿಗೆ ಹಿತವನ್ನುರುಹಿದರು. ನಾನೂ ಹೇಳಿದೆನು. ಗಾಂಧಾರಿಯು ಬಣ್ಣಿಸಿ ಹೇಳಿದಳು. ವಿದುರನಂತೂ ಸದಾ ವಂಚನೆಯ ಗಂಟು ಸಂಚಯಕ್ಕೆ ಬಾರದೆಂದು ಅಘೋರಿಸಿದನು. ಪಾಂಡವರೂ ಸಂಧಿಗೆ ಕಾತರರಾಗಿದ್ದರು. ವಾಸುದೇವನೇ ರಾಯಭಾರಿಯಾಗಿ ಬಂದು, ಐದು ಹಳ್ಳಿಗಳನ್ನಿತ್ತರೆ ಸಾಕೆಂದನು. ಪರಶುರಾಮ ವೇದವ್ಯಾಸರು, ಕಣ್ವಾದಿಮುನಿಗಳು ದುಷ್ಟ ಹಠವನ್ನು ಬಿಡಲು ಉಪದೇಶಿಸಿದರು. ಆದರೂ ನನ್ನ ಮಗ ಕೇಳಲಿಲ್ಲ. ಅವನಿಗೆ ಕರ್ಣನ ಮಾತು ರುಚಿಸಿತು. ಶಕುನಿಯ ಮಾಯೆ ಹಿಡಿಸಿತು. ಅದರಿಂದ ಇಷ್ಟು ಅನರ್ಥವಾಗುತ್ತಿದೆ.

ನನಗೆ ಭೀಮಾರ್ಜುನರಿಬ್ಬರದೇ ಭಯ ! ಧನಂಜಯನು ರಣಧೀರನು, ಶರವೇಗದುಸ್ಸಹನು ಅಹುದು. ಅವನ ಅಸ್ತ್ರಗಳು ವಜ್ರಾಶನಿಸಮಗಳು. ಅವನ ಮಿತ್ರ ಶ್ರೀಕೃಷ್ಣ! ಅವನ ಸಂರಕ್ಷಕ ಗದಾಪಾಣಿ ಭೀಮಸೇನ ! ಸೇನಾಪತಿ ಧೃಷ್ಟದ್ಯುಮ್ನ ಎಲ್ಲವನ್ನೂ ಕಂಡು ನಾನು ಹೆದರುತ್ತಿರುವೆನು. ಶ್ವೇತಮೃತಿಯನ್ನು ಕಂಡು ಪಾಂಡವರೇನು ಮಾಡಿದರು ಹೇಳು !' ಎಂದು ಕೇಳಿದನು.

ಸಂಜಯನಿಂತೆಂದನು : 'ರಾಜನ್ ! ಕೇಳು ನಿನ್ನ ಅವನೀತಿಯ ಫಲವನ್ನು ! ದುರ್ಯೋಧನನ ಮೇಲೆ ದೋಷವಿಟ್ಟು, ನೀನು ನಿರಪರಾಧಿ ಎಂದು ತಿಳಿದು ಮಾತಾಡಬೇಡ ! ನೀರು ಹೋದಮೇಲೆ ಕಟ್ಟೆ ಕಟ್ಟಿದಂತಾದೀತು ನಿನ್ನ ಕಥೆ. ಮನೆ ಉರಿದೇಳುತ್ತಿರಲು ಬಾವಿ ತೋಡಿಸ ಹೊರಟವನಂತೆ ಮಾತಾಡುತ್ತಿರುವೆ !

ಅಂದು ಮೊದಲನೆಯ ದಿನದ ಮಧ್ಯಾಹ್ನದಲ್ಲಿ ಮತ್ತೆ ಉಭಯಸೇನೆಗಳು ಕಲೆತು ಹೋರಾಡಿದವು. ವಿರಾಟಪುತ್ರನಾದ ಶಂಖನು ಶಲ್ಯನ ಮೇಲಿನ ಸೇಡಿನಿಂದ ಅವನನ್ನು ಮುತ್ತಿ ಘೋರನಾರಾಚಗಳಿಂದ ಪೀಡಿಸಿದನು. ಮೃತ್ಯುಮುಖದಲ್ಲಿ ಬಿದ್ದಂತೆ ತೋರಿದ ಶಲ್ಯನನ್ನು ಕೌರವಮಹಾರಥರು ಏಳು ಜನ, ಶಂಖನಿಗೆ ಅಡ್ಡಬಂದು, ಕಾಪಾಡಿದರು. ಬೃಹದ್ಬಲ (ಕೋಶಲರಾಜ), ಜಯತ್ಸೇನ (ಮಾಗಧ), ರುಕ್ಮರಥ (ಶಲ್ಯಪುತ್ರ), ವಿಂದಾನುವಿಂದರು, ಸುದಕ್ಷಿಣ, ಜಯದ್ರಥರ ಬಾಣವರ್ಷವನ್ನು ಖಂಡಿಸಿ, ಶಂಖನು ಏಳು ಭಲ್ಲಗಳಿಂದ ಅವರ ಧನುಗಳನ್ನು ಮುರಿದನು. ಆಗ ಭೀಷ್ಮನು ತಾಲಮಾತ್ರ ಧನುವನ್ನು ಪಿಡಿದು, ಶಂಖನನ್ನು ಮುತ್ತಿದನು. ಸಿಡಿಲು ಸಿಡಿಲಿಗೆ ಬಡಿದಂತೆ ಕಡಿದಾಡುವ ಶಂಖ ಭೀಷ್ಮರ ಕಾಳಗವು ಬಲು ಭಯಂಕರವಾಯಿತು.

ಶಲ್ಯನು ರಥದಿಂದಿಳಿದು ಬಂದು ಶಂಖನ ನಾಲ್ಕು ಕುದುರೆಗಳನ್ನು ಗದೆಯಿಂದ ಹೊಡೆದು ಕೆಡಹಿದನು. ಶಂಖನು ಸಂಭ್ರಮದಿಂದ ರಥದಿಂದಿಳಿದು, ಪಾರ್ಥನ ರಥವನ್ನು ಸೇರಿ ಕೂತನು. ಭೀಷ್ಮನು ಹೊಗೆ ಇಲ್ಲದ ಅಗ್ನಿಯಂತೆ ಉರಿಯುತ್ತಾ ಬಾಣಜ್ವಾಲೆಗಳಿಂದ ಪಾಂಚಾಲ ಕೇಕಯ ಸೃಂಜಯರನ್ನೂ, ಕೇರಳ ಪ್ರಭದ್ರಕಮತ್ಸ್ಯಭಟರನ್ನೂ ನಾಶಪಡಿಸಿದನು. ಶಿಶಿರಾವಸಾನದಲ್ಲಿ ಉರಿದೇಳುವ ದಾವಾಗ್ನಿಗೆ ಸಿಕ್ಕವನದಂತೆ ಪಾಂಡವ ಸೇನೆ ನಷ್ಟವಾಯಿತು. ಎಲ್ಲಿ ನೋಡಿದರಲ್ಲಿ ಕಂಕಾಳಗಳು, ರಕ್ತದ ನದಿಗಳು, ಛಿನ್ನವಿಚ್ಛಿನ್ನ ಶರೀರಾಂಗಗಳು ಹರಡಿದ್ದು, ಹಾಹಾಕಾರಗಳಿಂದ ರಣ ಭೂಮಿಯು ಘೋರ ದರ್ಶನವಾಯಿತು. ಮಧ್ಯಂದಿನ ಮಾರ್ತಾಂಡನಂತೆ ಪ್ರಚಂಡ ಪ್ರತಾಪನಾದ ಭೀಷ್ಮನನ್ನು ಕಣ್ಣೆತ್ತಿ ನೋಡಲಾರದೆ, ಪಾಂಡವ ವೀರರು ಭಯಪೀಡಿತರಾದರು. ಸಿಂಹಪೀಡಿತವಾದ ಧವಳ ಧೇನುವಿನಂತೆ ನಡುಗುತ್ತಾ, ನಿರುತ್ಸಾಹವಾಗಿರುವ ಸೈನ್ಯವನ್ನೂ ಎಡೆಬಿಡದೆ ಶರಜಾಲವನ್ನು ಬೀರುವ ಭೀಷ್ಮನನ್ನೂ ಕಂಡು ಹಿಂಸೆ ನೋಡಲಾರದೆ ಮರೆಯಾದನೆಂಬಂತೆ ಸೂರ್ಯನು ಅಸ್ತಂಗತನಾದನು. ಆಗ ಧರ್ಮರಾಜನು ಸೈನ್ಯಾವಹಾರ ಮಾಡಿ, ಶಿಬಿರಕ್ಕೆ ಹಿಂದಿರುಗಿದನು.

## ೨೪. ದ್ವಿತೀಯ ದಿನ ಯುದ್ಧ- ಭೀಮಾರ್ಜುನ ವಿಕ್ರಮ.

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು. 'ರಾಜನ್ ! ಉಭಯ ಸೇನೆಗಳು ಶಿಬಿರಗಳಲ್ಲಿ ಸೇರಿ ನಿಂತವು. ಧರ್ಮರಾಜನು ಶ್ರೀಕೃಷ್ಣನ ಶಿಬಿರವನ್ನು ಮುಟ್ಟಿ ತನ್ನೆಲ್ಲ ಸೋದರ ಮಿತ್ರರು ಕೇಳುತ್ತಿರಲು, ಜನಾರ್ದನನಿಗಿಂತೆಂದನು:

'ಶ್ರೀಕೃಷ್ಣ! ಭೀಷ್ಮನ ಭೀಮಪರಾಕ್ರಮದಿಂದ ಸತ್ತ ಯೋಧರನ್ನು ನೆನೆದು ನನಗೆ ಎದೆ ಒಡೆದಂತಾಗಿದೆ. ಗ್ರೀಷ್ಮದ ಸೂರ್ಯನಂತೆ ಎದ್ದುರಿವ ಭೀಷ್ಮನನ್ನು ನಾವೆಂತು ಜಯಿಸಲಾದೀತೋ ತಿಳಿಯದಾಗಿದೆ. ಯಮನನ್ನು ರಣರಂಗದಿ ನಿಂತು ಸೋಲಿಸಲಹುದು; ವಜ್ರಪಾಣಿಯನ್ನು ಓಡಿಸಲಹುದು; ವರುಣ ಕುಬೇರನನ್ನು ಭಯಪಡಿಸಲಹುದು; ಆದರೆ ಭೀಷ್ಮನನ್ನಲ್ಲ. ಭೀಷ್ಮನೆಂಬ ಅಗಾಧ ಸಮುದ್ರದಲ್ಲಿ ಬಿದ್ದು ಪಾರುಗಾಣದಿರುವ ನಮಗೆ ನೀನಲ್ಲದಿನ್ನಾರು ರಕ್ಷಕರು ? ಅಥವಾ ಯುದ್ಧವನ್ನು ಬಿಟ್ಟು, ವಾನಪ್ರಸ್ಥನಾಗಿ ಹೋಗಿಬಿಡಲಾ? ನನ್ನ ರಾಜ್ಯಲಾಭಕ್ಕಾಗಿ, ನಿರಪರಾಧಿ ಭಟರನ್ನು ಮಿತ್ರರಾಜರನ್ನು ಬಲಿಕೊಡಲಾರೆನು. ಭೀಷ್ಮನೆಂಬ ಹೆಬ್ಬುಲಿಯ ಬಾಯಿತುತ್ತಾಗುತ್ತಿರುವ ವೀರರನ್ನು ನೋಡಿ, ನನಗೆ ಜಯಾಶೆ ದೂರವಾಗಿದೆ. ಜ್ವಾಲಾಭೀಲವಹ್ನಿ ಮುಖದಲ್ಲಿ ಪತಂಗಗಳಂತೆ ನನ್ನವರು ಭೀಷ್ಮಶರ ಜ್ವಾಲೆಗಳಿಗೆ ಭಸ್ಮೀಭೂತರಾಗುತ್ತಿರುವುದನ್ನು ನೋಡಲಾರೆನು. ನನ್ನ ತಮ್ಮಂದಿರೂ ಶರಪೀಡಿತರಾಗಿರುವರು. ನನಗಾಗಿ ರಾಜ್ಯಭ್ರಷ್ಟರಾಗಿ, ವನವಾಸವನ್ನನುಭವಿಸಿದರು. ನಾನಾ ಕ್ಲೇಶಗಳನ್ನು ಪಟ್ಟರು. ಅಂತಹವರನ್ನು ಕೈಯಾರ ಭೀಷ್ಮ ಮೃತ್ಯುವದನದಲ್ಲಿ ನೂಕಲಾರೆನು.

ಭೀಮಸೇನನೊಬ್ಬನು ಮಾತ್ರ ನಿರ್ಭಯನಾಗಿ, ಕೇವಲ ಬಾಹುವೀರ್ಯದಿಂದ ವಿಜೃಂಭಿಸಿ ಕಾದಿ, ಶತ್ರುಗಳನ್ನು ನಾಶಪಡಿಸುತ್ತಿರುವನು. ಆ ಮಹಾನುಭಾವನು ನಿಜ ಕ್ಷತ್ರ ಧರ್ಮವನ್ನು ಎಂದಿಗೂ ಬಿಡನು. ಶುದ್ಧ ಭಾಗವತ ಧರ್ಮ ನಿರತನಾದ ವೃಕೋದರನೆಂದಿಗೂ ಅನ್ಯಾಯ ಯುದ್ಧವನ್ನು ಮಾಡನು. ಅವನಿಗೆ ದಂಡ್ಯರಲ್ಲಿ ತನ್ನವರು ಹೆರರೆಂಬ ವೈಷಮ್ಯವಿಲ್ಲ. ಆದರೆ ಈ ನಿನ್ನ ಮೈದುನನು ಸಾಕಷ್ಟು ಸಾಹಸ ತೋರದಿರುವನು. ಭೀಷ್ಮನು ಕೊಲ್ಲುವ ನಮ್ಮ ಭಟರನ್ನು ನೋಡಿಯು, ವಿಕ್ರಮಿಸದಿರುವನು. ತಾತ, ಆಚಾರ್ಯ, ವಿಪ್ರ ಮಾತುಲರೆಂಬ ಅಭಿಮಾನವನ್ನಿವನು ಬಿಡಲಾರದಂತಿದೆ. ಇಂತಿರಲು ನಮಗೆಂತು ಜಯ ? ನಿನ್ನ ಪ್ರಸಾದದಿಂದ ಗೋವಿಂದ ! ಪಾಂಡವರು ಶತ್ರುನಾಶವನ್ನು ಸಾಧಿಸ ಬೇಕಾಗಿದೆ. ನಿನ್ನ ದಯದಿಂದ ರಾಜ್ಯವನ್ನು ಪಡೆದು, ಸುಖಿಸಬೇಕಾಗಿದೆ !'

ಆ ಮಾತನ್ನಾಲಿಸಿ, ಶ್ರೀಕೃಷ್ಣನು ಧರ್ಮರಾಜನ ಮನದಿ ಉತ್ಸಾಹ ತುಂಬುತ್ತಾ "ರಾಜನ್ ! ಹೆದರಬೇಡ ! ನಿನ್ನ ತಮ್ಮಂದಿರು ಹೇಡಿಗಳಲ್ಲ, ಲೋಕವಿಖ್ಯಾತ ಶೂರರು. ನಿನ್ನ ಸ್ನೇಹಿತ ರಾಜರು ವಂಚಕರಲ್ಲ, ನಿನಗಾಗಿ ಪ್ರಾಣವನ್ನೀಯಲು ಸಿದ್ಧರಾಗಿರುವ ಮಹೋದಾರ ವೀರರು. ನಾನೂ ನಿನಗೆ ಹಿತವಾಗಬಯಸುತ್ತಿರುವೆನು. ಸಾತ್ಯಕಿ, ವಿರಾಟ, ದ್ರುಪದ, ಧೃಷ್ಟದ್ಯುಮ್ನರೆಲ್ಲರು ನಿನ್ನ ಹಿತಸಾಧಕರು. ಧೃಷ್ಟದ್ಯುಮ್ನರೆಂದರೆ ಸಾಮಾನ್ಯನಲ್ಲ, ಆ ಮಹಾರಥನು ನಿನಗೆ ಸೇನಾಧಿಪತಿಯಾಗಿರಲು ಹೆದರುವ ಕೆಲಸವಿಲ್ಲ. ಶಿಖಂಡಿಯು

ಭೀಷ್ಮಮಾರಣಕಾರಣನಾಗಿರುವನು" ಎಂದು ನುಡಿದನು. ಆ ಮಾತನ್ನು ಕೇಳಿ, ಧರ್ಮರಾಜನು ಧೃಷ್ಟದ್ಯುಮ್ನನಿಗಿಂತೆಂದನು :

'ಪ್ರಿಯ ಧೃಷ್ಟದ್ಯುಮ್ನ ! ಕೇಳು ! ವಾಸದೇವನಿಗೆ ಸಮ್ಮತವಾದ ನೀನೆನಗೆ ಸೇನಾಪ್ರಣೀತನಾಗಿರುವೆ. ಕಾರ್ತಿಕೇಯನನ್ನು ಪಡೆದ ದೇವೇಂದ್ರನಂತೆ, ನಿನ್ನನ್ನು ಪೊಂದಿ ನಾನು ಕೃತಾರ್ಥನಾದೆನು. ವಿಕ್ರಮಿಸಿ, ಶತ್ರುಗಳನ್ನು ಸಂಹರಿಸಿ, ಕೀರ್ತಿ ಗಳಿಸು ! ಭೀಮಸೇನನು, ಅರ್ಜುನನು, ನಾನು ನಿನಗೆ ಸಹಾಯಕರಾಗಿ ಬರುವೆವು'.

ಧೃಷ್ಟದ್ಯುಮ್ನನು ಉತ್ಸಾಹಭರಿತನಾಗಿ ಸಭಿಕರನ್ನು ಉದ್ದೇಶಿಸಿ ಇಂತೆಂದನು: 'ನಾನು ದ್ರೋಣನನ್ನು ಕೊಲ್ಲಲೆಂದೇ ಶಿವ ವರದಿಂದ ಹುಟ್ಟಿರುವೆನು. ಭೀಷ್ಮ ಜಯದ್ರಥ ಶಲ್ಯರನ್ನು ಕೊಲ್ಲದೆ ನಾನು ಬಿಡುವವನಲ್ಲ. ನಮ್ಮ ಸೋದರನಾದ ಶಿಖಂಡಿಯು ಭೀಷ್ಮನನ್ನು ಕೆಡಹುವನಿದು ನಿಜ ! ನೀವೆಲ್ಲರೂ ಒಮ್ಮನದಿಂದ ನಿಂತು ಕಾದಿರಿ ! ಕಾದಿರಿ ! ನಮಗೆ ಜಯವಾಗುವುದು.' ಆ ಮಾತನ್ನಾಲಿಸಿ, ಸೇರಿದ್ದ ರಾಜರು ಹರ್ಷೋದ್ಗಾರವನ್ನು ಮಾಡಿದರು.

ಮರುದಿನ ಬೆಳಗಾಗಲು, ಧೃಷ್ಟದ್ಯುಮ್ನನು ಧರ್ಮರಾಜನ ಅನುಜ್ಞೆಯಂತೆ ಕ್ರೌಂಚಾರುಣ ವ್ಯೂಹವನ್ನು ಹರವಿದನು. ದೇವಾಸುರ ಯುದ್ಧದಲ್ಲಿ ಬೃಹಸ್ಪತಿಯ ಉಪದೇಶದಿಂದ ಇಂದ್ರನು ಕಲಿತು ಹಬ್ಬಿಸಿದ ವ್ಯೂಹವದು. ಅದರ ಮುಂಭಾಗದಲ್ಲಿ ಅರ್ಜುನನು ಇಂದ್ರದತ್ತವಾದ ಪತಾಕೆಗಳಿಂದಲು, ಕಪಿಧ್ವಜದಿಂದಲು, ಅಲಂಕೃತವಾದ ರಥದಲ್ಲಿ ಕೂತು ವಿರಾಜಿಸಿದನು. ಸೈನ್ಯಸಹಿತರಾದ ಕುಂತಿಭೋಜ - ಧೃಷ್ಟಕೇತುಗಳು ಕ್ರೌಂಚದ ಕಣ್ಣುಗಳ ಸ್ಥಾನದಲ್ಲಿ ನಿಂತರು. ದ್ರುಪದನು ಶಿರಃಸ್ಥಾನದಿ ಶೋಭಿಸಿದನು. ದಾಶಾರ್ಣಕ ಕಿರಾತಪ್ರಭದ್ರಕರು ಕುತ್ತಿಗೆಯಲ್ಲಿ ನಿಂತರು. ಧರ್ಮರಾಜನು ಪಟ್ಟಚ್ಚರನಿಷಾದ ಪೌಂಡ್ರರಿಂದ ಕೂಡಿ, ವ್ಯೂಹದ ಬೆನ್ನುಭಾಗದಲ್ಲಿದ್ದನು. ಭೀಮಸೇನನು ಬಲರೆಕ್ಕೆಯಾಗಿರಲು, ಧೃಷ್ಟದ್ಯುಮ್ನನು ಎಡರೆಕ್ಕೆಯಲ್ಲಿದ್ದನು. ದ್ರೌಪದೇಯರು, ಅಭಿಮನ್ಯು, ಸಾತ್ಯಕಿಯರು ದರದಯವನ ಚೋಲ ಪಾಂಡ್ಯಭಟರಿಂದ ಕೂಡಿ ಬಲರೆಕ್ಕೆಯ ಪುಕ್ಕಳಂತಿದ್ದರು. ನಕುಲ ಸಹದೇವರು ಮಲದ, ದಾಶಕ, ಕಾರು, ಶಬಲ, ಮಾಲುಕ, ಭಟರಿಂದ ಕೂಡಿ, ಎಡರಕ್ಕೆಯ ಪುಕ್ಕಳಂತಿದ್ದರು. ರೆಕ್ಕೆಗೆ ಹತ್ತುಸಾವಿರ ರಥಗಳು, ಶಿರದಲ್ಲಿ ಲಕ್ಷರಥಿಕರು, ಬೆನ್ನಿಗೆ ಇಪ್ಪತ್ತು ಸಾವಿರ, ಕುತ್ತಿಗೆಯಲ್ಲಿ ಲಕ್ಷ ಎಪ್ಪತ್ತು ಸಾವಿರ ರಥಿಕರು ನಡೆದರು. ಅವರ ಹಿಂದೆ ಮುಂದೆ ಕೂಡ ಮದ್ದಾನೆಗಳು ಸಾವಿರಾರು ನಡೆವ ಬೆಟ್ಟಗಳಂತೆ ತೂಗುತ್ತಾ ಬಂದವು. ವಿರಾಟಕಾಶಿರಾಜರು ಮೂವತ್ತು ಲಕ್ಷ ರಥಿಕರಿಂದಲು, ಲಕ್ಷಗಜಗಳಿಂದಲು ಕೂಡಿ, ಅವಸರ ಸೈನ್ಯವಾಗಿ ಹಿಂದೆ ಬರುತ್ತಿದ್ದರು. ಸೈನ್ಯದ ಧ್ವಜಪಾತಕೆಗಳಿಂದಲು, ಶ್ವೇತಛತ್ರಗಳಿಂದಲು, ಅಂಬಾರಿಗಳಿಂದಲು, ಎತ್ತಿಪಿಡಿದಿದ್ದ ಆಯುಧಗಳಿಂದಲು, ಆಕಾಶವು, ವಿತಾನದಂತೆ ಶೋಭಿಸಿತು.

ಅಭೇದ್ಯವಾದ ಕ್ರೌಂಚವ್ಯೂಹವನ್ನು ಒಡ್ಡಿಬರುವ ಪಾಂಡ ಸೇನೆಯನ್ನು ನೋಡಿ, ನಿನ್ನ ಮಗ ದುರ್ಯೋಧನನು ಆಚಾರ್ಯಾದಿಸ್ವಯೂಥಪತಿಗಳನ್ನು ಸೋದರರನ್ನು ಕೂಡಿಸಿ,

'ವೀರರೇ ! ಪಾಂಡವರು ಕ್ರೌಂಚವ್ಯೂಹವನ್ನು ಹರಡಿರುವರು. ಆದರೂ ನಾವು ಹಿಂದೆಗೆಯಲಾಗದು. ಭೀಷ್ಮಸಂರಕ್ಷಿತವಾದ ನಮ್ಮ ಸೇನೆಯ ಸಂಖ್ಯೆ ಹೆಚ್ಚಾದರೂ, ಭೀಮ ಸಂರಕ್ಷಿತವಾದ ಅವರ ಸೇನೆಯನ್ನು ಗೆಲ್ಲಲಾರದೆಂದು ತೋರುತ್ತಿದೆ. ಆದುದರಿಂದ ನೀವೆಲ್ಲರು ಪಿತಾಮಹನನ್ನು ಅವರ ಕೈಗೆ ಬೀಳದಂತೆ ಕಾಪಾಡುತ್ತಿರಿ !' ಎಂದಾಜ್ಞಾಪಿಸಿದನು. ಆಗ ಭೀಷ್ಮ ದ್ರೋಣರು ಮಹಾವ್ಯೂಹವನ್ನೊಡ್ಡಿ ಪಾಂಡವ ಸೇನೆಯನ್ನು ತಾಕಿದರು. ದೇವಸೈನ್ಯದ ಸುರರಾಜನಂತೆ ಭೀಷ್ಮನು ಮುನ್ನಡೆದನು. ಆತನನ್ನು ಅನುಸರಿಸಿ ದ್ರೋಣನು ಕುಂತಲವಿದರ್ಭಮೇಕಲ ಕರ್ಣ ಪ್ರಾವರಣಭಟರಿಂದ ಕೂಡಿ, ಹೊರಟನು. ಶಕುನಿಸಸೈನ್ಯವಾಗಿ ಆಚಾರ್ಯರನ್ನು ಹಿಂದಿನಿಂದ ರಕ್ಷಿಸುತ್ತಾ ನಡೆದನು. ಅಶ್ವಾತಕವಾಮನಾದಿ ಭಟರಿಂದ ಕೂಡಿ ದುರ್ಯೋಧನನು, ಅವನ ಸೋದರರು ಕೇಕೇಗಳು ಹಾಕುತ್ತಾ ಹೊರಟರು. ಭೂರಿಶ್ರವ, ಶಲ, ಶಲ್ಯ, ಭಗದತ್ತ ವಿಂದಾನುವಿಂದರು ಎಡಪಕ್ಕದಲ್ಲಿರಲು, ಭೂರಿ, ಸುಕರ್ಮ, ಸುದಕ್ಷಿಣ, ಶತಾಯು, ಶ್ರುತಾಯು, ಮುಂತಾದವರು ಬಲಪಕ್ಕಲ್ಲಿ ನಡೆದರು. ಅಶ್ವತ್ಥಾಮನು ಕೃತವರ್ಮ ಗೌತಮರಿಂದ ಕೂಡಿ ವಿಶೇಷ ಸೈನ್ಯವಾಗಿ ಬರುತ್ತಿದ್ದನು. ಕೇತುಮಾನ್, ಸುದಾನ, ಕಾಶ್ಯರು ಅವನಿಗೆ ಸಹಾಯಕರಾಗಿ ನಡೆದರು.

ಶಂಖಧ್ವಾನ, ಭೇರಿಭಾಂಕರಗಳಿಂದ ಯುದ್ಧವು ಪ್ರಾರಂಭವಾಯಿತು. ಎರಡು ಸಾಗರಗಳು ಕಲೆತಂತೆ, ಎರಡು ಪರ್ವತಗಳು ಢೀಕೊಳ್ಳುವಂತೆ ಸೈನ್ಯಗಳೆರಡು ಮಿಲಿತವಾಗಿ ಕಾದಾಡಲು, ರಣರಂಗವು ಭೀಭತ್ಸವಾಯಿತು. ರಥಿಕರ ಬಾಣ ಪರಂಪರೆಗಳಿಂದ ದಂತಿತುರಗಭಟರು ಕೆಳಗುರುಳಿದರು. ಭೀಷ್ಮನು ಅಭಿಮನ್ಯು ಪಾರ್ಥ ಭೀಮಸೇನ ಪಂಚಕೇಕಯ ವಿರಾಟರ ಮೈಗಳಲ್ಲಿ ಬಾಣಗಳನ್ನು ನಾಟಿಸಿ, ಅನೇಕ ತುರಗಗಳನ್ನು ಆಶ್ವಿಕರನ್ನು ಸಂಹರಿಸಿದನು. ಅದನ್ನು ಕಂಡು ಅರ್ಜುನನು ಕುಪಿತನಾಗಿ, 'ಶ್ರೀಕೃಷ್ಣ ! ಹೊಡೆ ರಥವನ್ನು ಭೀಷ್ಮನೆಡೆಗೆ ! ದುರ್ಯೋಧನನ ಹಿತವನ್ನು ಸಾಧಿಸುವ ಈ ಮಹಾವೀರನು ನಮ್ಮ ಸೈನ್ಯವನ್ನು ಧ್ವಂಸ ಮಾಡುತ್ತಿರುವನು. ಈತನಿಂದ ರಕ್ಷಿತರಾಗಿ ದುರ್ಯೋಧನ ಪುರಸ್ಸರರಾದ ಕುರುವೀರರು ನಮ್ಮವರನ್ನು ಕೊಲ್ಲಲಿರುವರು. ಇಂದು ಸೈನ್ಯವನ್ನು ಉಳಿಸಬೇಕಾಗಿದೆ. ಪಿತಾಮಹನನ್ನು ಕೊಲ್ಲದೆ ವಿಧಿ ಇಲ್ಲ 'ಎಂದನು. ಶ್ರೀಕೃಷ್ಣನು 'ಪಾರ್ಥ, ನೋಡು ರಥವನ್ನು ಪಿತಾಮಹನ ಸಮುಖದಲ್ಲಿ ನಿಲ್ಲಿಸಿರುವೆನು. ರಣಸನ್ನದ್ಧನಾಗು !' ಎಂದು ಎಚ್ಚರಿಸಿದನು. ಅರ್ಜುನನ ಶ್ವೇತ ತುರಗಗಳು ಕೆನೆದವು. ಪತಾಕೆಗಳು ಹಾರಾಡಿದವು. ಕಪಿಧ್ವಜದಿಂದ ಭಯಂಕರ ಗರ್ಜನಗಳು ಕೇಳಬಂದವು. ಗಾಂಡೀವ ಧನುಷ್ಟೇಂಕಾರವು ಶತ್ರುಗಳಲ್ಲಿ ಸಿಡಿಲಿನಂತೆ ಬಡಿಯಿತು.

ಭೀಷ್ಮನು ಹಿಂದೆ ಸೈಂಧವನು ರಕ್ಷಿಸುತ್ತಿರಲು ದ್ರೋಣ ಕೃಪಾದಿ ವೀರರಿಂದ ಕೂಡಿ, ಅರ್ಜುನನ್ನು ತಾಕಿದನು. ಪಿತಾಮಹನು ಎಪ್ಪತ್ತೇಳು ಬಾಣಗಳನ್ನು, ದ್ರೋಣನು ಇಪ್ಪತ್ತೈದು ನಾರಾಚಗಳನ್ನು, ಕೃಪನು ಐವತ್ತು ಕಾಂಡಗಳನ್ನು, ದುರ್ಯೋಧನನು ಅರುವತ್ತುನಾಲ್ಕು ಸಾಯಕಗಳನ್ನು, ಶಲ್ಯನು ಒಂಭತ್ತು ವಿಶಿಖಗಳನ್ನು, ಅಶ್ವತ್ಥಾಮನು ಅರವತ್ತು ಶರಗಳನ್ನು, ವಿಕರ್ಣನು ಮೂರು ಭಲ್ಲಗಳನ್ನು ಶಲ್ಯನು ಮೂರನ್ನು ಬಿಟ್ಟು ಪೀಡಿಸಿದರೂ, ಪರ್ವತದಂತೆ

ಚಲಿಸದೆ ಅರ್ಜುನನು ಭೀಷ್ಮ, ಕೃಪ, ದ್ರೋಣ, ವಿಕರ್ಣ, ಶಲ್ಯ, ದುರ್ಯೋಧನರನ್ನು ಇಪ್ಪತ್ತೈದು, ಒಂಭತ್ತು, ಅರವತ್ತುಮೂರು, ಮೂರು, ಐದು ಶರಗಳಿಂದ ಹೊಡೆದು ಆರ್ಭಟಿಸಿದನು. ಆಗ ಸಾತ್ಯಕಿ, ವಿರಾಟ, ದ್ರೌಪದೇಯ, ಧೃಷ್ಟದ್ಯುಮ್ನರೂ ಅರ್ಜುನನ ನೆರವಿಗಾಗಿ ಬಂದರು. ಭೀಷ್ಮನು ಬಿಟ್ಟ ಎಂಬತ್ತು ಬಾಣಗಳು ಅರ್ಜುನನನ್ನು ಮುಚ್ಚಿದಾಗ ನಿನ್ನವರು ಸಂತೋಷದಿಂದ ಗರ್ಜಿಸಿದರು. ಅರ್ಜುನನು ಶತ್ರುರಥಿಕರ ಮಧ್ಯದಲ್ಲಿ ಸಿಂಹದಂತೆ ನುಗ್ಗಿ ಕೌರವ ಸೈನಿಕರನ್ನು ಯಮಸದನಕ್ಕಟ್ಟತೊಡಗಿದನು.

ದುರ್ಯೋಧನನು ಭೀತನಾಗಿ, ತಾತ ! ನೀನಿರಲು, ಆಚಾರ್ಯರಿರಲು ಪಾರ್ಥನು ನಮ್ಮವರನ್ನು ಕೊಲ್ಲುತ್ತಿರುವನು. ಇದನ್ನು ಸಹಿಸಲಹುದೇ ? ಕರ್ಣನೂ ನಿನ್ನ ಮೇಲಿನ ಸಿಟ್ಟಿನಿಂದ ರಣವನ್ನು ಬಿಟ್ಟಿರುವನು. ನೀನೇ ನಮಗೆ ದಿಕ್ಕು. ಪಾರ್ಥನನ್ನು ಬಿಡದೆ ಸಂಹರಿಸಿ, ನಮಗೆ ಜಯವನ್ನು ತಂದುಕೊಡು !' ಎಂದು ಬೇಡಿದನು. ಕ್ಷತ್ರಿಯ ಧರ್ಮದ ನಿಷ್ಠುರತೆನಕ್ಕೆ ಧಿಕ್ಕಾರವನ್ನಿತ್ತು ಪಿತಾಮಹನು ಪಾಂಡವರ ಮೇಲೆರಗಿದನು. ಅಶ್ವತ್ಥಾಮ ದುರ್ಯೋಧನ ವಿಕರ್ಣರು ಆತನ ಹಿಂದೆ ಬಂದು ಪಾಂಡವ ಸೇನೆಯನ್ನು ತಾಕಿದರು. ಅರ್ಜುನನು ಸಾವಿರ ಬಾಣಗಳಿಂದ ಭೀಷ್ಮನನ್ನು ಮುಚ್ಚಿದನು, ಭೀಷ್ಮನು ಆ ಶರಜಾಲವನ್ನು ಖಂಡಿಸಿ, ಪಾಂಚಾಲರನ್ನನೇಕರನ್ನು ಸಂಹರಿಸಿದನು. ಆಗ ಭೀಷ್ಮನು ಅರ್ಜುನ ಪ್ರಯುಕ್ತವಾದ ಇಪ್ಪತ್ತೈದು ಬಾಣಗಳನ್ನು ತನ್ನ ಒಂಬತ್ತು ಬಾಣಗಳಿಂದ ಖಂಡಿಸಿ, ವಾಸುದೇವನನ್ನು ಮೂರು ಶರಗಳಿಂದ ಹೊಡೆದನು. ಆಗ ಮಧುಸೂದನನು ಎದೆಯಲ್ಲಿ ನಾಟಿನಿಂತ ಆ ಬಾಣಗಳಿಂದ, ಪುಷ್ಪಿತವಾದ ಕಿಂಶುಕ ವೃಕ್ಷದಂತೆ ತೋರಿದನು. ಆಹಾ ! ಶ್ರೀಹರಿಯು ವಿದ್ಧನಾದಂತೆ, ಗಾಯಗೊಂಡಂತೆ ತೋರಿದನೆಂದರೆ, ಅದು ಆ ಮಹಾಮಹಿಮನ ಅಸುರಮೋಹಕ ಲೀಲೆಯಲ್ಲವೆ ?

ಅದನ್ನು ಕಂಡು, ಅರ್ಜುನನು ಸಿಟ್ಟಾಗಿ, ಗಾಂಗೇಯಸೂತನನ್ನು ಮೂರು ಬಾಣಗಳಿಂದ ಹೊಡೆದನು. ವಿಚಿತ್ರಮಂಡಲಾಕಾರವಾಗಿ ತಿರುಗುವ ಭೀಷ್ಮಾರ್ಜುನರು ಪರಸ್ಪರ ಬಾಣಪ್ರಯೋಗಗಳಿಂದ, ನೋಡುವ ಜನರಿಗೆ ಆಶ್ಚರ್ಯವನ್ನುಂಟು ಮಾಡಿದರು. ಅವರ ರಥಘಟ್ಟನದಿಂದ ಭೂಮಿಯು ಕಂಪಿಸಿತು. ಶಂಖಗಳರವದಿಂದ ದಿಕ್ಕು ಪ್ರತಿಧ್ವನಿಸಿತು. ಸಮಸಮರಾಗಿ ಕಾದುವ ಭೀಷ್ಮಾರ್ಜುನರನ್ನು ಅವರ ಚಿಹ್ನೆಗಳಾದ ತಾಲಧ್ವಜ, ಕಪಿಧ್ವಜಗಳಿಂದ ಮಾತ್ರ ತಿಳಿಯುವಂತಿತ್ತು.

ಉಭಯರು ಶ್ವೇತವಾಹನರು; ಉಭಯರು ನಿರ್ಭಯಪರಾಕ್ರಮಿಗಳು, ಉಭಯರ ಯುದ್ಧಕೌಶಲವು ದೇವಗಂಧರ್ವಮುನಿನರರ ಮೆಚ್ಚುಗೆಯನ್ನು ಗಳಿಸಿತು. ಪಾರ್ಥನನ್ನು ಗಾಂಗೇಯನು ಗೆಲ್ಲಲಾರನೆಂದು ಕೆಲರಂದರೆ, ಗಾಂಗೇಯನನ್ನು ಪಾರ್ಥನು ಗೆಲ್ಲಲಾರನೆಂದು ಕೆಲವರಂದರು. ಭೀಷ್ಮಾರ್ಜುನರ ಯುದ್ಧವು ಭೀಷ್ಮಾರ್ಜುನರ ಯುದ್ಧದಂತೇ ಇತ್ತು. ಅಂತಹ ಭಯಂಕರ ರಣವನ್ನು ಮತ್ತೆ ನೋಡಲಾಗದೆಂದು ಎಲ್ಲ ಪ್ರೇಕ್ಷಕರು ತಿಳಿದರು. ಆದರೆ ರಾಜನ್ ! ಇಂದ್ರಮುಖರಾದ ದೇವತೆಗಳೇ ದಂಡೆತ್ತಿ

ಬಂದರೂ ಅರ್ಜುನನನ್ನು ಗೆಲ್ಲಲಾರರೆಂದು ತಿಳಿ ! ಶ್ರೀಕೃಷ್ಣನಿಂದ ರಕ್ಷಿತನಾಗಿರುವ ಪಾರ್ಥನನ್ನು ಗೆಲ್ಲುವದೂ, ಆಕಾಶವನ್ನು ಸೀಳುವುದೂ ಒಂದೇ ಎಂದು ನಾನು ನಿಶ್ಚಯಿಸಿರುವೆನು.

ಇನ್ನೊಂದೆಡೆ ದ್ರೋಣನು ಧೃಷ್ಟದ್ಯುಮ್ನನೊಡನೆ ಯುದ್ಧ ಮಾಡಿದನು. ಆಚಾರ್ಯನು ಪಾರ್ಷತನ ಸಾರಥಿಯನ್ನು ಕೊಂದು, ಅವನ ಕುದುರೆಗಳನ್ನು ಗಾಯಗೊಳಿಸಲು, ಧೃಷ್ಟದ್ಯುಮ್ನನು ಒಂಬತ್ತು ಬಾಣಗಳನ್ನು ಆಚಾರ್ಯನ ದೇಹದಿ ನಾಟಿಸಿ 'ನಿಲ್ಲಿ! ನಿಲ್ಲಿ!' ಎಂದು ಆರ್ಭಟಿಸಿದನು. ದ್ರೋಣನು ಕುಪಿತನಾಗಿ ಮೃತ್ಯುದಂಡದಂತಿದ್ದ ಘೋರಶರವನ್ನು ಹೂಡಲು, ಸೈನಿಕರು ಹಾಹಾಕಾರವನ್ನು ಮಾಡಿ, 'ಆಯಿತು ! ಧೃಷ್ಟದ್ಯುಮ್ನನು ಸತ್ತ'ನೆಂದು ಚಿಂತಿಸಿದರು. ಆದರೂ ಪಾರ್ಷತನು ಆಚಾರ್ಯನ ಶರವನ್ನು ತುಂಡರಿಸಿ, ಶರವೃಷ್ಟಿ ಸುರಿಸಿದನು. ಮತ್ತು ದ್ರೋಣನನ್ನು ಕೊಲ್ಲಲೆಣಿಸಿ, ಮಹಾ ಶಕ್ತಿಯನ್ನೆತ್ತಿ ಒಗೆದನು. ಅದನ್ನು ಮೂರಾಗಿ ಕಡಿದು ದ್ರೋಣನು ನಗುನಗುತ್ತಾ ಶತ್ರುಧನ್ವುವನ್ನು ತುಂಡರಿಸಿದನು. ಧೃಷ್ಟದ್ಯುಮ್ನನು ಗದೆಯನ್ನೊಗೆದನು. ದ್ರೋಣನು ವೇಗದಿಂದ ಬರುವ ಹೇಮಗದೆಯನ್ನು ಬಾಣದಿಂದಲೇ ಕಡಿದು, ಸ್ವರ್ಣಪುಂಖಭಲ್ಲಗಳಿಂದ ಪಾರ್ಷತನನ್ನು ಪೀಡಿಸಿದನು. ಧೃಷ್ಟದ್ಯುಮ್ನನ ಕವಚವು ಸೀಳಿ, ಅವನ ದೇಹದಿಂದ ರಕ್ತವು ಹರಿಯಿತು. ವಸಂತ ಋತುವಿನ ಕಿಂತುಕಗಳಂತೆ ರಕ್ತಸಿಕ್ತಗಾತ್ರರಾದ ಗುರುಶಿಷ್ಯರು, ರೋಷಾವೇಷದಿಂದ ಮೈಮರೆತು, ಹೋರಾಡುತ್ತಿದ್ದರು. ದ್ರೋಣನು ದ್ರುಪದಪುತ್ರನ ಬಿಲ್ಲನ್ನು ಮುರಿದು, ಸಾರಥಿಯನ್ನು ಕೆಡಹಿ, ಕುದುರೆಗಳನ್ನೂ ಸಂಹರಿಸಿ, ಅವನನ್ನು ಬಾಣಶತದಿಂದ ಪೀಡಿಸಿ, ಸಿಂಹನಾದ ಮಾಡಿದನು. ಧೃಷ್ಟದ್ಯುಮ್ನನು ರೋಷಾರುಣನೇತ್ರನಾಗಿ, ಗದೆಯನ್ನೆತ್ತಿ ಪಿಡಿದು, ಮೇಲೇರಿ ಬರುವಾಗ ಆಚಾರ್ಯನು ಅವನ ಗದೆಯನ್ನು ತುಂಡರಿಸಿ, ಖಡ್ಗ ಚರ್ಮಗಳನ್ನು ಪಿಡಿದು ಬರಲು ಅವನ್ನೂ ಚೂರುಮಾಡಿ ಕರಲಾಘವಶರಲಾಘವಗಳಿಂದ ಮರೆಯುತ್ತಾ, ಬಾಣವರ್ಷದಿಂದ ಪಾರ್ಷತನನ್ನು ಪೀಡಿಸಿದನು. ಧೃಷ್ಟದ್ಯುಮ್ನನು ಬರಿಯ ಗುರಾಣಿಯಿಂದಲೇ ಆಚಾರ್ಯನ ಬಾಣವರ್ಷವನ್ನು ತಪ್ಪಿಸಿಕೊಂಡು, ಸಾಹಸಿಸುತ್ತಿರಲು, ಭೀಮನು ಅವನ ಸಹಾಯಕ್ಕೆ ಧಾವಿಸಿ ಬಂದನು. ಪಾರ್ಷತನು ಬೇರೆ ರಥವನ್ನಾರೋಹಿಸಿ ಬರಲು ತಿರಸ್ಕರಿಸಿ, ದ್ರೋಣನು ಭೀಮನೊಡನೆ ಕಾದು, ಆತನ ಏಳು ಬಾಣಗಳಿಂದ ವಿದ್ಧನಾಗಿ, ನೊಂದು ಅವನನ್ನೂ ಬಿಟ್ಟು ವಿರಾಟ ದ್ರುಪದರಿಂದ ಕಾದತೊಡಗಿದನು. ಕಳಿಂಗಸೇನೆಯು ದುರ್ಯೋಧನಾಜ್ಞೆಯಂತೆ ದ್ರೋಣಸಹಾಯವಾಗಿ ಬಂತು. ಕಳಿಂಗ ಭೀಮಸೇನರ ಯುದ್ಧವು ಅತಿ ಭಯಂಕರವಾಯಿತು.

ರಥಗಜತುರಗಾರೂಢವು, ಉದ್ಯತ ವಿವಿಧಾಯುಧವು ಆದ ಕಳಿಂಗನ ಸೇನೆಯನ್ನು ಕಂಡು, ಭೀಮಸೇನನು ಹಸಿವೆಗೊಂಡ ಸಿಂಹವು ಆನೆಗಳ ಹಿಂಡಿನ ಮೇಲೆರಗುವಂತೆ ಶ್ರುತಾಯ ಕೇತುಮಂತರ ಸೈನಿಕರನ್ನು ತಾಕಿ, ಸಂಹರಿಸಿದನು. ಕೇತುಮಂತನೆಂಬ ನಿಷಾದ ರಾಜನು ಹತ್ತು ಸಾವಿರ ಆನೆಗಳನ್ನೂ ಕಳಿಂಗರಾಜ ಶ್ರುತಾಯುವು ಸಾವಿರಾರು ರಥಗಳನ್ನೂ ಕೂಡಿ ಮುತ್ತಲು, ತುಮುಲವಾದ ಸಮರವಾರಂಭಿಸಿತು. ರಣರಂಗವು ನೋಡ

ನೋಡುತ್ತಿರಲು ಮಾಂಸ ರಕ್ತಮಯವಾಯಿತು. ಕಳಿಂಗರಾಜ ಪುತ್ರನಾದ ಶಕ್ರದೇವನು ಪರಾಕ್ರಮಿಸಿ, ಭೀಮನ ಕುದುರೆಗಳನ್ನು ಸಂಹರಿಸಿ, ವಿವಿಧ ಬಾಣಗಳಿಂದ ಪೀಡಿಸಲು, ಕುಪಿತನಾಗಿ ವೃಕೋದರನು ಗದೆಯನ್ನೆತ್ತಿ ಒಗೆದನು. ಶಕ್ರದೇವ, ಅವನಸೂತ, ಅವನ ಕುದುರೆಗಳು, ರಥ ಎಲ್ಲವೂ ಪುಡಿಪುಡಿಯಾಗಿ ನಶಿಸಿದುದನ್ನು ನೋಡಿ, ಶ್ರುತಾಯು (ಕಳಿಂಗ)ವು, ಭೀಮಸೇನನ ಮೇಲೇರಿ ಬಂದನು. ಸೇಡಿನಿಂದ ಕಿಡಿಯಾಗಿ ಬಾಣವರ್ಷವನ್ನು ಸುರಿವ ಕಾಳಿಂಗನನ್ನು ಲೆಕ್ಕಿಸದೆ, ಭೀಮಸೇನನು ಖಡ್ಗ ಚರ್ಮಧರನಾಗಿ ರಥದಿಂದಿಳಿದು, ಶ್ರುತಾಯುವಿನ ಬಾಣವನ್ನು ಖಡ್ಗದಿಂದ ತುಂಡರಿಸಿ, ಗರ್ಜಿಸಿದನು. ಭೀಮನ ಸಿಂಹ ಗರ್ಜನವನ್ನು ಕೇಳಿ ಕೌರವಯೂಥವು ಭಯದಿಂದ ಕಂಪಿಸಿತು. ಶ್ರುತಾಯುವು ಬಿಟ್ಟ ಹದಿನಾಲ್ಕು ತೋಮರಗಳನ್ನು ಕತ್ತಿಯಿಂದ ಕತ್ತರಿಸಿ, ಭಾನುಮಂತನನ್ನು ಸಮೀಪಿಸಿ, ಅವನ ಬಾಣಗಳನ್ನೂ ಕಡಿದು ಕೆಡಹಿದನು. ಗಜಾರೂಢನಾಗಿದ್ದ ಭಾನುಮಂತನು ಶರಶತವನ್ನು ಬಿಟ್ಟು ಗರ್ಜಿಸಲು: ಸಹಿಸದೆ ಭೀಮಸೇನನು ಭಯಂಕರ ಸಿಂಹನಾದವನ್ನು ಮಾಡಿದನು. ಆ ಭೀಷಣ ಘೋಷಣವನ್ನು ಕೇಳಿ ಕಳಿಂಗ ಸೈನಿಕರು ಎದೆಗುಂದಿ ಓಡಿದರು. ಸಂಭ್ರಾಂತನಾಗಿ ನೋಡುವ ಭಾನುಮಂತನನ್ನು ಅಸಂಭ್ರಾಂತನಾಗಿ ವೃಕೋದರನು ಸಮೀಪಿಸಿ, ಕುಪ್ಪಳಿಸಿ ಹಾರಿ, ಅವನ ಆನೆಯ ಕುಂಭಸ್ಥಲದಿ ಕೂತು, ಭಾನುಮಂತನ ತಲೆಯನ್ನು ಕತ್ತರಿಸಿ ಕೆಡಹಿದನು. ಅದೇ ಖಡ್ಗದಿಂದ ಆನೆಯ ಕುತ್ತಿಗೆಯನ್ನೂ ಹೊಡೆದು ಖಂಡಿಸಿದನು. ಭೀಮಸೇನನು ಉರುಳುವ ಆನೆಯಿಂದ ಧುಮುಕಿ ಚಿತ್ರ ವಿಚಿತ್ರಗಮನನಾಗಿ, ಸಿಕ್ಕ ಸಿಕ್ಕ ಮದ್ದಾನೆಗಳನ್ನು ಖಂಡಿಸಿ, ರಣರಂಗದಲ್ಲಿ ಎದುರಿಲ್ಲದವನಾಗಿ ವಿಹರಿಸಿದನು. ಭಟರ ತಲೆಗಳುರುಳಿ ಬಿದ್ದವು. ಆನೆ ಸೊಂಡಿಲಗಳು, ಕುದುರೆ ಕುತ್ತಿಗೆಗಳು ರಾಶಿ ಬಿದ್ದವು. ಭೀಮಸೇನನು ಖಡ್ಗಪಾಣಿಯಾಗಿ ಮಹಾರಣ ವಿಹಾರಗೈಯುತ್ತಾ ಕೇವಲ ಪದಾತಿಯಾಗಿದ್ದರೂ ಸಾವಿರಾರು ಗಜತುರಗರಥಿಕರನ್ನು ಕಾಲಯಮನಂತೆ ಸಂಹರಿಸಿದನು. ರಥಚಕ್ರಗಳನ್ನು ಒದ್ದು ನೊಗವನ್ನೂ ಕಿತ್ತೊಗೆದು, ಭೀಮನು ರಥಿಕರು ಓಡಿಹೋಗುತ್ತಿರಲು ಹಿಡಿದು ಅವರನ್ನು ಯಮಸದನಕ್ಕೆ ಕಳಿಸಿದನು. ಭೀಮಸೇನನು ನಡೆದ ಕಡೆಯಲ್ಲ ಮೃತ್ಯುದೇವಿ ಹಿಂಬಾಲಿಸಿ, ಅವನು ಕೊಂದ ವೀರರ ಜೀವಗಳನ್ನು ಸಂಗ್ರಹಿಸಿ, ಕೈ ಸೋತಂತಾದಳು.

ರಕ್ತದ ಕಾಲುವೆ, ಕಾಲುವೆಗೆ ತಾಕುವ ಮಾಂಸದ ರಾಶಿ, ಎಲುವುಗಳ ಬೆಟ್ಟ ಕರುಳುಮಾಲೆಯ ವರುಸೆಗಳು, ಬಿದ್ದು ನರಳುವ ಯೋಧಸಹಸ್ರ, ಅವರ ದೀನಾಲಾಪಗಳು, ಬೆಟ್ಟಗಳಂತೆ ಬಿದ್ದಿರುವ ಆನೆಗಳು, ಆನೆಗಳ ಕೆಳಗೆ ಸಿಕ್ಕು ತಪ್ಪಿಸಿಕೊಳ್ಳಲಾರದೆ ಹೆಣಗುವ ಸೈನಿಕರು, ತೂಣೀರ, ಯಂತ್ರ, ಧನುಃ ಖಡ್ಗ ತೋತ್ರಾಂಕುಶ ಬಾಣಗಳು ಎಲ್ಲವೂ ಸೇರಿ ಭೀಮವೈರವನ್ನು ಕಟ್ಟಿಕೊಂಡು ಕೆಟ್ಟ ದುರ್ಯೋಧನನ ಪಾಪದ ಫಲವನ್ನು ಸಾರಿದಂತಿದ್ದವು. ಭೀಮಸೇನನ ದಿವ್ಯ ಖಡ್ಗ ಪ್ರಹಾರಕ್ಕೆ ಸಿಕ್ಕ ಯಾವ ಪ್ರಾಣಿಯೂ ಉಳಿಯಲಿಲ್ಲ. ವೃಕೋದರನು ನೃಸಿಂಹನೇ ಎತ್ತಿ ಬಂದಂತೆ ವಿಜೃಂಭಿಸಿ ಖಡ್ಗ ಮಾತ್ರ ಹಸ್ತನಾಗಿ ಮಸ್ತಕಗಳನ್ನು ಕತ್ತರಿಸುತ್ತಿರಲು ನೋಡಿ,

ಕೌರವರು ಇನ್ನು ಉಳಿಯರೆಂದು ಕಂಗೆಟ್ಟರು; ಪಾಂಡವಭಟರು ಹರ್ಷದಿಂದ ಮೈಯುಬ್ಬಿ ಕೂಗಾಡಿದರು ; ದೇವತೆಗಳು ಋಷಿಗಳು ಅಂಬರದಿ ನಿಂತು ಪ್ರಶಂಸಿಸಿದರು.

ಭೀಮಸೇನನು ಕಾಲಿಂದ ಕೆಲರನ್ನು ಸವರಿದನು; ಕೆಲ ಗಜಗಳನ್ನು ಕೈಯಿಂದೆತ್ತಿ ವೇಗದಿಂದೆಸೆದು ರಥಗಳನ್ನು ಪುಡಿ ಮಾಡಿದನು. ಕುದುರೆಗಳನ್ನು ಗೊಂಬೆಗಳಂತೆ ಮುರಿದು ಕೆಡಹಿದನು; ಭಟರನ್ನು ಖಡ್ಗದಿಂದ ಕತ್ತರಿಸಿದನು. ಕೆಲರನ್ನು ಹುಂಕರಿಸಿ ಓಡಿಸಿದನು. ಇಂತು ಕಳಿಂಗಸೇನೆಯು ಹಾಳಾಗುವುದನ್ನು ಕಂಡು ಶ್ರುತಾಯುವು ಭೀಷ್ಮಸಹಾಯನಾಗಿ ಬಂದು, ಭೀಮನೊಡನೆ ಕಾದಿದನು.

ಶ್ರುತಾಯುವು ಒಂಬತ್ತು ಬಾಣಗಳನ್ನು ಎದೆಯಲ್ಲಿ ನಟ್ಟಿಸಿದಾಗ, ಭೀಮಸೇನನು ಅಂಕುಶದಿಂದ ತಿವಿಯಲ್ಪಟ್ಟ ಮದ್ದಾನೆಯಂತೆ ವಿಜೃಂಭಿಸಿ ಶ್ರುತಾಯುನನ್ನು ಸಂಹರಿಸಲು ನಿಶ್ಚಯಿಸಿದನು. ಆಗ ಭೀಮ ಸಾರಥಿಯಾದ ವಿಶೋಕನು ದಿವ್ಯಕನಕ ರಥವನ್ನು ತಂದು ವಂದಿಸಿದನು. ಭೀಮಸೇನನು ರಥವನ್ನೇರಿ, 'ನಿಲ್ಲು! ಸ್ಥಿರನಾಗಿ ಹೋರಾಡು !' ಎನ್ನುತ್ತಾ ಕಾಳಿಂಗನನ್ನು ಸಮೀಪಿಸಿದನು. ಶ್ರುತಾಯುವು ನಿಶಿತ ಶರನವಕದಿಂದ ಪೀಡಿಸಲು, ಸಂಕ್ರುದ್ಧನಾದ ಪಾಂಡವೋತ್ತಮನು ಏಳು ಬಾಣಗಳಿಂದ ಹೊಡೆದು ಶ್ರುತಾಯುನನ್ನು ಸಂಹರಿಸಿದನು: ಎರಡು ಬಾಣಗಳಿಂದ ಅವನ ಚಕ್ರರಕ್ಷಕರಾಗಿದ್ದ ಸತ್ಯದೇವ, ಸತ್ಯರೆಂಬ ಕಾಳಿಂಗ ರಥಿಕರನ್ನೂ ಮೂರು ಬಾಣಗಳಿಂದ ನಿಷಾದಾಧಿಪನಾದ ಕೇತುಮಂತನನ್ನೂ ಕೊಂದು ಯಮನ ಮಂದಿರಕ್ಕಟ್ಟಿದನು. ಶಕ್ತಿ ಖಡ್ಗ ಗದಾ ತೋಮರ ಮುಸಲ ಪರಶು ಭಲ್ಲಾದಿ ವಿವಿಧಾಯುಧಗಳನ್ನು ಪಿಡಿದು ಕಳಿಂಗಸೇನೆ ಮೇಲೇರಿ ಬರಲು ನೋಡಿ, ಭೀಮಸೇನನು ಧನುಸ್ಸನ್ನು ರಥದಲ್ಲಿಟ್ಟು ಗದಾಧಾರಿಯಾಗಿ ಕೆಳಗಿಳಿದನು. ಅದನ್ನು ನೋಡಿ ಹುಲಿಯನ್ನು ಕಂಡ ಹುಲ್ಲೆಗಳಂತೆ ಕಾಳಿಂಗರು ಓಡಿಹೋದರು. ಬಿಡದೆ ಮೇಲೇರಿ ಬಂದ ಹದಿನೇಳು ವೀರರನ್ನು ಒಂದು ಬೀಸಿಗೆ ಸವರಿ, ಭೀಮಸೇನನು ಎರಡು ಸಾವಿರ ಯೋಧರನ್ನು ಸಂಹರಿಸಿದನು. ಆನೆಗಳನ್ನೇರಿ ಬಂದ ರಾಜರನ್ನೂ ಅಂಬಷ್ಠರನ್ನೂ ನಾಶಪಡಿಸಿದನು. ಝುಂಝಾಮಾರುತನಿಗೆ ಸಿಕ್ಕ ಮೇಘಗಳಂತೆ ಓಡುವ ಆನೆಗಳನ್ನು ತಡೆದು ಸೊಂಡಿಲಗಳನ್ನು ಕಡಿದನು. ಅವು ಹುಚ್ಚೆದ್ದು ಗೀಳಿಡುತ್ತಾ ಓಡಿ ತಮ್ಮ ಸೈನಿಕರನ್ನು ಸಾವಿರಾರು ಕುದುರೆಗಳನ್ನು ತಿವಿದು, ತುಳಿದು ಕೊಂದು, ತಾವೂ ಕೆಳಗುರುಳಿದವು.

ಚಂಡಭಾನುನಂತೆ ಉರಿಯುತ್ತಾ, ಕಾಲಯಮನಂತೆ ಕೊಲ್ಲುತ್ತಾ, ರುದ್ರನಂತೆ ರಣತಾಂಡವವಾಡುತ್ತಾ, ನೃಹರಿಯಂತೆ ಗರ್ಜಿಸುತ್ತಾ ಬರುವ ಭೀಮಸೇನನ ಮುಂದೆ ನಿಲ್ಲುವ ವೀರರಿಲ್ಲದಾಯಿತು. ಮಹಾಮಕರ ಪೀಡಿತವಾದ ಸರೋವರವಾಯಿತು ಕಾಳಿಂಗನ ಸೇನೆ ಆಗ ಧರ್ಮರಾಜನು ಭೀಮ ಭೀಮವಿಹಾರವನ್ನು ಕಂಡು ಹರ್ಷವಿವಶನಾಗಿ, ತಾನೂ ಶಿಖಂಡಿಪ್ರಮುಖರಿಂದ ಕೂಡಿ ರಥನಾಗಗಣವನ್ನು ಸ್ವೀಕರಿಸಿ, ಬಂದು ಭೀಮಸೇನನ ಸಹಾಯವಾಗಿ ನಿಂತನು. ಧೃಷ್ಟದ್ಯುಮ್ನನು ಭೀಮನನ್ನು ಹರ್ಷಧ್ವಾನದಿಂದ ಪ್ರಶಂಸಿಸಿದನು. ಭೀಮನಿಗೂ ಮಿಗಿಲಾದ ಪ್ರಿಯರಿಲ್ಲ ಪಾಂಚಾಲರಾಜನಿಗೆ ! ಭೀಮನೆಂದರೆ ಪ್ರಾಣ ಧೃಷ್ಟದ್ಯುಮ್ನನಿಗೆ ! ಅವನೂ ಬಂದು ಭೀಮನಿಗೆ ಸಹಾಯವಾದನು.

ಕೋವಿದಾರಧ್ವಜದ ರಥದಲ್ಲಿ ಕೂತು ಬಂದ ಧೃಷ್ಟದ್ಯುಮ್ನನನ್ನು ಕಂಡು, ಭೀಮನು ರಥಾರೂಢನಾಗಿ ಸಿಂಹನಾದವನ್ನು ಮಾಡಿದನು. ಸಾತ್ಯಕಿಯು, ಅವರೀರ್ವರನ್ನು ಸೇರಿ, ಶತ್ರುಸೇನೆಯನ್ನು ಮಾರಿ ಮಸಗಿದಂತೆ ಸಂಹರಿಸಿದನು.

ಕಾಲಯಮನೇ ಭೀಮನಾಗಿ ಬಂದನೆಂದು ಆಕ್ರೋಶಿಸುವ ಕೌರವ ವೀರರನ್ನು ಕಂಡು ಭೀಷ್ಮನು, ಸಹಿಸದೆ ಭೀಮಾದಿ ವೀರತ್ರಯವನ್ನು ಮುತ್ತಿ ಕಾದಿದನು. ಅವರು ಮೂವರು ಬಿಟ್ಟ ಮೂರು ಮೂರು ಶರಗಳನ್ನು ದೇವವ್ರತನು ಖಂಡಿಸಿ, ಅವರನ್ನು ಮೂರು ಮೂರು ಬಾಣಗಳಿಂದ ಪೀಡಿಸಿದನು ; ಸಾವಿರ ಶರಗಳಿಂದ ದಿಕ್ಕುಗಳನ್ನು ಮುಚ್ಚಿ ನಾಲ್ಕರಿಂದ ಭೀಮನ ನಾಲ್ಕು ಕುದುರೆಗಳನ್ನು ಕೊಂದು ಭೀಷ್ಮನು ಸಿಂಹನಾದ ಮಾಡಿದನು. ವೃಕೋದರನು ಶಕ್ತಿಯನ್ನು ಹಾಕಲು, ಅದನ್ನು ಗಾಂಗೇಯನು ಮಧ್ಯೇ ತುಂಡರಿಸಿದನು. ಭೀಮನು ಗದೆಯನ್ನೆತ್ತಿ ರಥದಿಂದಿಳಿದು, ಧೃಷ್ಟದ್ಯುಮ್ನನು ವಾರಿಸಿ ಬಲಾತ್ಕರಿಸಲು, ಅವನ ರಥದಿ ಕೂತನು. ಸಾತ್ಯಕಿಯು ಭೀಮಸೇನನ ಪ್ರೀತಿಗಾಗಿ ಬಿಡದೆ ಕಾದಿ, ಭೀಷ್ಮ ಸಾರಥಿಯನ್ನು ಕೊಂದನು. ಆಗ ದೇವವ್ರತನು, ವಶವಾಗದೆ ಓಡುವ ಕುದುರೆಗಳಿಂದ ದೂರವಾಗಿ ಒಯ್ಯಲ್ಪಟ್ಟನು. ಭೀಮಸೇನನು ಧೃಷ್ಟದ್ಯುಮ್ನನ ರಥವನ್ನು ಬಿಟ್ಟು, ಅಗ್ನಿಯಂತೆ ಉರಿಯುತ್ತಾ, ಗದಾಪಾಣಿಯಾಗಿ ಬಂದು ಕಾಳಿಂಗರನ್ನು ಸಂಹರಿಸಿದನು. ಆಗ ಸಾತ್ಯಕಿಯು, 'ಭೀಮಸೇನ ! ನಿನ್ನಂತಹ ವೀರರಿಲ್ಲ ! ಏಕೈಕ ವೀರನಾಗಿ ಶ್ರುತಾಯು, ಶಕ್ರದೇವ, ಸತ್ಯದೇವ, ಸತ್ಯ, ಕೇತುಮಂತ, ಭಾನುಮಂತರನ್ನು ಕೊಂದೆ; ಸಕಲ ಕಾಳಿಂಗ ಸೈನ್ಯವನ್ನು ಕೇವಲ ಬಾಹುಬಲದಿಂದ ನಾಶಪಡಿಸಿದೆ ! ನಿನ್ನಂತಹ ಸೇನಾಪತಿಯಿಂದ ನಾವು ಧನ್ಯರಾದೆವು' ಎಂದು ಪ್ರಶಂಸಿಸಲು ನಗುತ್ತಾ ಭೀಮನು ವಿಶೋಕನು ಬೇರೆ ಕುದುರೆಗಳನ್ನು ಕಟ್ಟಿ ತಂದ ತನ್ನ ರಥದಲ್ಲಿ ಕೂತು ಭೀಷ್ಮನನ್ನು ಮುಟ್ಟಲು ಹವಣಿಸಿದನು.

ಮಧ್ಯಾನ್ಹವಾದ ಮೇಲೆ ಮತ್ತೆ ಯುದ್ಧಾರಂಭವಾಯಿತು. ಧೃಷ್ಟದ್ಯುಮ್ನನು ದ್ರೋಣಪುತ್ರ ಶಲ್ಯಕೃಪರಿಂದ ಕಾಳಗವಾಡಿದನು. ಅಶ್ವತ್ಥಾಮನ ಲೋಕವಿಖ್ಯಾತ ತುರಗಗಳನ್ನು ಕೊಂದು, ಬಾಣಗಳನ್ನು ನಾಟಿಸುವ ಧೃಷ್ಟದ್ಯುಮ್ನನನ್ನು ನೋಡಿ, ಅಶ್ವತ್ಥಾಮನು ಶಲ್ಯರಥವನ್ನೇರಿ ಬಂದು, ಕಡಿದಾಡಿದನು. ಆಗ ಅಭಿಮನ್ಯುವು ಧಾವಿಸಿ ಬಂದು, ಶಲ್ಯನ ಮೇಲೆ ಇಪ್ಪತ್ತೈದು ಬಾಣಗಳನ್ನು ಕೃಪನ ಮೇಲೆ ಒಂಬತ್ತು ಬಾಣಗಳನ್ನು ಗುರುಪುತ್ರನ ಮೇಲೆ ಎಂಟು ಬಾಣಗಳನ್ನು ಪ್ರಯೋಗಿಸಿದನು. ಶಲ್ಯನು ಹನ್ನೆರಡು ನಾರಸಗಳಿಂದಲು, ಗುರುಪುತ್ರನು ಒಂದರಿಂದಲು, ಕೃಪನು ಮೂರು ವಿಶಿಖಗಳಿಂದಲು, ದುರ್ಯೋಧನ ಸುತ ಲಕ್ಷಣನು ಒಂದರಿಂದಲು ಅರ್ಜುನನನಂದನನ್ನು ಪೀಡಿಸಿದರು.

ಅಭಿಮನ್ಯು - ಲಕ್ಷ್ಮಣರ ಯುದ್ಧವು ವಿಚಿತ್ರವು, ಭಯಾನಕವು, ಆಶ್ಚರ್ಯಕರವು ಆಯಿತು. ಅಭಿಮನ್ಯುವು ಐವತ್ತು ಬಾಣಗಳನ್ನು ಬಿಡಲು ಲಕ್ಷ್ಮಣನು ಅವನ್ನು ಖಂಡಿಸಿ ಅಭಿಮನ್ಯುವಿನ ಧನುವನ್ನು ಮುರಿದನು. ಅದನ್ನು ಕಂಡು ಜನರು ಆಶ್ಚರ್ಯಚಕಿತರಾಗಿ

ಆಕ್ರೋಶಿಸಿದರು. ಅಭಿಮನ್ಯುವು ಬೇರೆ ಬಿಲ್ಲನ್ನು ಹಿಡಿದು, ಬಾಣ ವರ್ಷವನ್ನು ಸುರಿಸಿದನು. ಆಗ ದುರ್ಯೋಧನನು ತನ್ನ ಮಗನ ನೆರವಿಗೆ ಬಂದು, ಬಹುರಾಜರಿಂದ ಕೂಡಿ, ಅಭಿಮನ್ಯುವನ್ನು ಮುತ್ತಿದನು. ಅಭಿಮನ್ಯುವು ಎದೆಗುಂದದೆ ಹೋರಾಡುತ್ತಿರಲು ನೋಡಿ, ಅರ್ಜುನನು ಸಹಾಯಕನಾಗಿ ಬಂದನು. ಅವನು ಬಂದೆಡೆಯಲ್ಲಿ ಭಟ ತುರಗ ಸೂತಶವಗಳು ಉರುಳುತ್ತಿದ್ದವು. ರಣ ಭೂಮಿಯಿಂದ ಮೇಲೆದ್ದ ಧೂಳಿ ಮುಚ್ಚಿ ರವಿ ಮಂಡಲವು ಕಾಣದಾಯಿತು. ಸಾವಿರಾರು ಆನೆಗಳು, ಮಾವಟಿಗರು, ರಾಜರು ಅರ್ಜುನ ಮಾರ್ಗದಲ್ಲಿ ಸಿಕ್ಕು ಕ್ಷಣ ಮಾತ್ರದಲ್ಲಿ ಯಮರಾಜನಿಗೆ ಅವನಿತ್ತ ಕಾಣಿಕೆಯಾಗಿ ಹೋದರು. ಕಿರೀಟಿಯ ಶರಜಾಲವೆಲ್ಲೆಡೆ ವ್ಯಾಪಿಸಿದಾಗ ಕುರುಬಲವು ದಿಗ್ಭ್ರಾಂತವಾಯಿತು. ರಥಿಕರಿಲ್ಲದ ರಥಗಳು, ವೀರರಿಲ್ಲದ ಗಜಾಶ್ವಗಳು ದಿಕ್ಕೆಟ್ಟು ಓಡುತ್ತಿದ್ದವು. ಅರ್ಜುನ ಭಯದಿಂದ ಭಟರನೇಕರು ಪಲಾಯನ ಮಂತ್ರವನ್ನು ಪಠಿಸಿದರು. ಅವರು ಓಡುವಾಗ ಅಡ್ಡವಾಗಿ ಬಿದ್ದ ನರ ತುರಗ ಶರೀರಗಳನ್ನು ಎಡವಿ ಬೀಳುತ್ತಾ, ಮತ್ತೆ ಏಳುತ್ತಾ, ಚೀರುತ್ತಾ ಹೋಗುತ್ತಿದ್ದರು. ಗದಾ ಯುಕ್ತ ಹಸ್ತಗಳು ; ರಕ್ತ ಸಿಕ್ತ ಮಸ್ತಗಳು, ಹಸ್ತಿಪರ್ವತಗಳಿಗಿಟ್ಟ ಬಲಿಗಳಂತೆ ಕಾಣುತ್ತಿದ್ದವು. ಧ್ವಜಾಂಕುಶಛತ್ರಚಾಮರಗಳೆಲ್ಲೆಡೆ ಬಿದ್ದು ರಣ ಭೂಮಿಯ ಅಲಂಕರಣವೆನಿಸಿದವು. ಅರ್ಜುನನನ್ನೆದುರಿಸಿ ನಿಂತವನಿಲ್ಲ; ನಿಂತರ ಸಾಯದವನಿಲ್ಲ. ಅರ್ಜುನ ವಾಸುದೇವರ ಶಂಖರವಗಳನ್ನು ಕೇಳಿ ಕೌರವ ಸೈನಿಕರು ಚೆಲ್ಲಾಪಿಲ್ಲಿಯಾಗಿ ಓಡತೊಡಗಿದರು.

ಅದನ್ನು ಕಂಡು ಭೀಷ್ಮನು ದ್ರೋಣಾಚಾರ್ಯರಿಗಿಂತೆಂದನು: "ಭಾರದ್ವಾಜ ! ನೋಡು ಅರ್ಜುನನ ವಿಕ್ರಮ ವಿಲಾಸವನ್ನು, ಅವನಿಗೆ ಶ್ರೀಕೃಷ್ಣನ ಒಲವಿದೆ; ಬಲವಿದೆ; ಧನಂಜಯನಂತೆ ಧನಂಜಯನು ಕೌರವಸೇನಾವನವನ್ನು ಸುಡುತ್ತಿರುವನು. ಇಂದು ಇವನನ್ನು ಜಯಿಸಲು ದೇವತೆಗಳಿಗೂ ಶಕ್ಯವಿಲ್ಲ. ಕಾಲಾಂತಕ ಯಮನಂತೆ ಕೊಲ್ಲುತ್ತಾ ಬರುವ ಪಾರ್ಥನನ್ನೂ, ಪ್ರಳಯ ರುದ್ರನಂತೆ ಕಡಿಯುತ್ತಾ ಬರುವ ವೃಕೋದರನನ್ನು ನೋಡಿ ಓಡುತ್ತಿರುವ ನಮ್ಮ ಸೇನೆಯನ್ನು ಹಿಂದಿರುಗಿಸುವುದೂ ಸಾಧ್ಯವಿಲ್ಲ. ಸಂಖ್ಯೆಯಲ್ಲಿ ಹೆಚ್ಚಾದರೂ ನಮ್ಮ ಸೇನೆ ಬಲಪರಾಕ್ರಮಗಳಲ್ಲಿ ಹೆಚ್ಚಿಲ್ಲ. ಸೂರ್ಯನು ಅಸ್ತಂಗತನಾಗುತ್ತಿರುವನು. ನಮ್ಮ ಸೇನೆಯನ್ನು ಅವಹಾರಿಸಿ, ಶಿಬಿರವನ್ನು ಸೇರುವುದೇ ಉಚಿತವಾಗಿದೆ. ಆಗ ಎರಡು ಸೇನೆಗಳೂ ಸೇನಾಪತಿಗಳ ಆಜ್ಞೆಯಂತೆ ಯುದ್ಧವನ್ನು ಮುಗಿಸಿ, ಶಿಬಿರಗಳನ್ನು ಸೇರಿದವು.

## ೨೫. ತೃತೀಯ ದಿನ ಯುದ್ಧ - ಶ್ರೀಕೃಷ್ಣ ವಾತ್ಸಲ್ಯ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್ ! ಮರುದಿನ ಅಂದರೆ ಮಾರ್ಗಶಿರ ಪದ್ಯ ಪಾಡ್ಯದ ದಿನ ಪ್ರಾಂತಃ ಕಾಲವಾಗಲು, ಕಾಲ್ಯಗಳನ್ನು ಮುಗಿಸಿಕೊಂಡು, ಎರಡೂ ಸೇನೆಗಳು ರಣರಂಗದಲ್ಲಿ ಕಲೆತವು. ಕೌರವ ಸೇನೆಯನ್ನು ಗಾರುಡ ವ್ಯೂಹವಾಗಿ ನಿಲ್ಲಿಸಿ ಭೀಷ್ಮನು ನಡೆದನು.

ಗಾರುಡವ್ಯೂಹದ ತುಂಡದಲ್ಲಿ ಭೀಷ್ಮನು, ಕಣ್ಣುಗಳಲ್ಲಿ ದ್ರೋಣ ಕೃತವರ್ಮರು, ಶಿರದಿ ಕೃಪಾಶ್ವತ್ಥಾಮರು, ಭೂರಿಶ್ರವ, ಶಲ, ಶಲ್ಯ, ಭಗದತ್ತರಿಂದ ಕೂಡಿದ ಜಯದ್ರಥನು ಕುತ್ತಿಗೆಯಲ್ಲಿ, ಬೆನ್ನಿನಲ್ಲಿ ಸೋದರ ಸಹಿತನಾದ ದುರ್ಯೋಧನನು, ವಿಂದಾನುವಿಂದ ಕಾಂಭೋಜರು ಬಾಲದಲ್ಲಿ, ಮಾಗಧ ಕಾಲಿಂಗ ದಾಶೇರಕರು ಬಲರೆಕ್ಕೆಯಲ್ಲಿ ಕಾರೂಷವಿಕುಂಜರಾದಿ ಯೋಧರಿಂದ ಬೃಹದ್ಬಲನು ಎಡರೆಕ್ಕೆಯಲ್ಲಿ ನಿಂತಿದ್ದರು.

ಆ ವ್ಯೂಹವನ್ನು ನೋಡಿ, ಅರ್ಜುನನು ಧೃಷ್ಟದ್ಯುಮ್ನನಿಂದ ಕೂಡಿ ಆಲೋಚಿಸಿ, ಅರ್ಧಚಂದ್ರ ವ್ಯೂಹವನ್ನು ರಚಿಸಿದನು. ಅದರ ಬಲ ಶೃಂಗದಲ್ಲಿ ಭೀಮಸೇನನು ವಿರಾಟದ್ರುಪದ ನೀಲ ಧೃಷ್ಟಕೇತು ಚೇದಿ ಕಾಶ ಕರೂಷ ಮಾತ್ಸ್ಯ ಸೇನೆಗಳಿಂದ ಕೂಡಿ ವಿರಾಜಿಸಿದನು. ಎಡಶೃಂಗದಲ್ಲಿ ಅಭಿಮನ್ಯು, ಇರಾವತ, ಘಟೋತ್ಕಚರು ನಿಂತಿದ್ದರು. ಮಧ್ಯದಲ್ಲಿ ಧೃಷ್ಟದ್ಯುಮ್ನನು ಶಿಖಂಡಿಯೊಡನೆ ನಡೆದು ಬಂದನು. ಅವನ ಹಿಂದೆ ಅರ್ಜುನನು ಕೃಷ್ಣರಕ್ಷಿತನಾಗಿ ಹೊರಟನು.

ಇಂತು ವ್ಯೂಹಗಳನ್ನು ಹಬ್ಬಿಸಿ, ಪರಸ್ಪರ ವಧಾತುರರಾಗಿ ಕೌರವ ಪಾಂಡವ ಸೈನಿಕರು ಘೋರ ಯುದ್ಧವನ್ನು ಮಾಡಿದರು. ಆನೆಗಳು ಉರುಳುತ್ತಿದ್ದವು. ಕುದುರೆಗಳು ಸತ್ತು ಬಿದ್ದವು. ರಥಗಳು ಪುಡಿಯಾದವು. ಭಟರು ಹತರಾದರು. ಪಾರ್ಥನಿಂದ ಹತರಾದ ಸೈನಿಕರ ಪಾಡು ಹೇಳತೀರದು; ಧಾರ್ತರಾಷ್ಟ್ರರು ಯಶವನ್ನು ಬಯಸಿ ಏಕಾಗ್ರಮನಸ್ಕರಾಗಿ ಪಾಂಡವ ಸೇನೆಯನ್ನು ಮುತ್ತಿ ಗಜಿಬಿಜಿಗೊಳಿಸಿದರು. ಭೂರಜವು ಮೇಲೆದ್ದು ದಿಕ್ಕುಗಳಲ್ಲಿ ವ್ಯಾಪಿಸಿ, ಸೂರ್ಯನನ್ನು ಮುಚ್ಚಿತು. ನಾಮಗೋತ್ರಗಳ ಶ್ರವಣದಿಂದ ತಿಳಿದು ಕಾದಾಡುತ್ತಿದ್ದರಾಗಲಿ, ಸಂಕುಲ ಸಮರದಲ್ಲಿ ಸ್ವಪರಭೇದವನ್ನು ತಿಳಿಯಲಾಗುತ್ತಿದ್ದಿಲ್ಲ. ಭೀಷ್ಮರಕ್ಷಿತವಾದ ಗಾರುಡ ವ್ಯೂಹವು ಕೆಡದಂತೆ ಮುನ್ನಡೆದಂತೆ, ಭೀಮರಕ್ಷಿತವಾದ ಅರ್ಧಚಂದ್ರ ವ್ಯೂಹವು ಕೂಡ ಕೆಡದಂತೆ ನಡೆಯಿತು.

ಪತ್ತಿಗಳು ರಥಿಕಸಾದಿಗಳನ್ನು, ಗಜಾರೂಢರು ಅಶ್ವಿಕ ರಥಿಕ ಪದಾತಿಗಳನ್ನು ರಥಿಕರು ಗಜಾರೂಢ ಪದಾತಿತುರಗಸ್ಥರನ್ನು, ಅಶ್ವಿಕರು ಪದಾತಿ ರಥಿಕರನ್ನು ಸಂಹರಿಸಿ, ಕೆಡಹುತ್ತಿದ್ದರು. ರಣರಂಗವು ಕ್ಷಣದಲ್ಲಿ ಶಕ್ತಿ ಕವಚ ಖಡ್ಗ ಬಾಣ ಪ್ರಾಸ ಗದಾಪರಿಘಗಳಿಂದ ತುಂಬಿ, ರಂಗವಲ್ಲಿಯಿಟ್ಟಂತೆ ಕಾಣಿಸಿತು. ಓಡುವ ಭಟರ ತಲೆಗಳು ಕಡಿಯಲ್ಪಟ್ಟು ಬಿದ್ದರೂ, ದೇಹಗಳು ಮುಂದೆ ಓಡಿ ಬೀಳುತ್ತಿದ್ದವು. ಆನೆಯಿಂದ ಉರುಳಿ ಬಿದ್ದವರು, ಅದರ ಕಾಲಿಗೆ ಸಿಕ್ಕು ನುಚ್ಚಾಗುತ್ತಿದ್ದರು. ಅಶ್ವಿಕರಿಲ್ಲದ ಕುದುರೆಗಳು ದಿಕ್ಕೆಟ್ಟು ಓಡುತ್ತಿದ್ದವು. ಭೀಷ್ಮ ದ್ರೋಣ, ಜಯದ್ರಥ, ಪುರುಮಿತ್ರ, ವಿಕರ್ಣ, ಶಕುನಿ ಮೊದಲಾದ ವೀರರು ಪಾಂಡವ ಸೇನೆಯನ್ನು ಹೊಕ್ಕು ಕಬ್ಬಿನ ಪೈರನ್ನು ಕಡಿದು ಕೆಡಹಿದಂತೆ ಭಟರಥಿಕಸಾದಿಗಳನ್ನು ಸಂಹರಿಸಿದರು. ಅಂತೆಯೇ ಭೀಮಸೇನ, ಸಾತ್ಯಕಿ, ಚೇಕಿತಾನ, ದ್ರೌಪದೇಯರು ಕೌರವ ಸೇನೆಯನ್ನು ಸಂಹರಿಸಿ, ದಾನವರನ್ನು ದೇವತೆಗಳಂತೆ, ಓಡಿಸಿದರು. ಮೈತುಂಬ ಹೂ ಬಿಟ್ಟ ಕಿಂಶುಕದಂತೆ ಶೋಭಿಸುವ ಭೀಮಸಾತ್ಯಕಿಯರು ಎದುರಿಲ್ಲದೆ ವಿಹರಿಸಿ, ಶತ್ರುಗಳನ್ನು ಜಯಿಸಿ, ನಾಶ ಮಾಡುತ್ತಾ ರಣರಂಗದಲ್ಲಿ ಎಲ್ಲೆಡೆ ತಾವಾಗಿ ವಿಹರಿಸಿದರು.

ಆಗ ದುರ್ಯೋಧನನು ಸಾವಿರ ರಥಿಕರಿಂದ ಕೂಡಿ, ಘಟೋತ್ಕಚನನ್ನು ಮುತ್ತಿ, ಕಾದಲಾರಂಭಿಸಿದನು. ಸಾತ್ಯಕಿ ಸೌಭದ್ರರು ಶಕುನಿಯೊಡನೆ ಕಾದಿದರು. ಅರ್ಜುನನು ಶತ್ರು ರಾಜರನ್ನೆದುರಿಸಿದನು. ಭೀಷ್ಮದ್ರೋಣರು ಸೃಂಜಯ ಪಾಂಚಾಲರನ್ನು ತಾಕಿದರು. ಮುಂದೆ ಬರುವ ಅರ್ಜುನನನ್ನು ನೋಡಿ, ಕೌರವ ಸೇನಾಪತಿಗಳು ಕೆರಳಿ ಅವನನ್ನು ಮುತ್ತಿ ಶಕ್ತಿ ಶೂಲ, ಪ್ರಾಸ, ಭಲ್ಲ ಮುಸಲಗಳಿಂದ ಪೀಡಿಸಿದರು. ಅರ್ಜುನನು ಕ್ರುದ್ಧನಾಗಿ, ಅವರ ಆ ಯುದ್ಧಗಳನ್ನೆಲ್ಲ ನಿವಾರಿಸಿ ಕೆಡಹಿ ಶರಲಾಘವವನ್ನು ತೋರುತ್ತಾ, ಅವರನ್ನೆಲ್ಲ ಒಂದೇ ಕ್ಷಣದಲ್ಲಿ ಬಾಣಜರ್ಜರಿತಗಾತ್ರರನ್ನಾಗಿಸಿದನು.

ಸಾತ್ಯಕಿಯ ರಥವನ್ನು ಮುತ್ತಿ ಗಾಂಧಾರರು ಚೂರಾಗಿ ಕಡಿದು ಬೀಳಿಸಲು, ಅವನು ಅಭಿಮನ್ಯುವಿನ ರಥದಲ್ಲಿ ಕೂತು ಅವರನ್ನು ಬಾಣಜಾಲದಿಂದ ಸಂಹರಿಸಿದನು. ಧರ್ಮಜ ನಕುಲಸಹದೇವರು ನಿಶಿತಶರವರ್ಷದಿಂದ ಬಹು ಸೈನ್ಯವನ್ನು ನಾಶ ಮಾಡಿದರು. ದುರ್ಯೋಧನನು ಸಿಟ್ಟಿಗೆದ್ದು ಭೀಮಘಟೋತ್ಕಚರನ್ನು ತಾಕಿ, ಶರಜಾಲವನ್ನು ಮಳೆಯಂತೆ ಸುರಿಸಿದನು. ಭೀಮನು ನಿಶಿತ ಬಾಣದಿಂದ ಅವನ ಎದೆಗೆ ಹೊಡೆದನು. ಕೌರವ ರಾಜನು ಮೂರ್ಛಿತನಾಗಲು, ನೋಡಿ, ಅವನ ಸಾರಥಿಯು ರಣರಂಗದಿಂದ ರಥವನ್ನು ತೊಲಗಿಸಿಕೊಂಡು ಹೋದನು. ಅದನ್ನು ಕಂಡು ಕೌರವಸೇನೆ ಭೀತಿಗೊಂಡು ಓಡತೊಡಗಿತು. ಭೀಮನು ನಿಶಿತಬಾಣಗಳಿಂದ ಎಷ್ಟೋ ಸಾವಿರ ಕುರುವೀರರನ್ನು ಕೊಂದನು. ಅವನನ್ನು ವಾರಿಸಲು ಕೈಲಾಗದೆ, ಭೀಷ್ಮ ದ್ರೋಣರು ತಮ್ಮ ಸೈನಿಕರನ್ನು ಹಿಂದಿರುಗಿಸಲು ಪ್ರಯತ್ನಿಸಿ ವಿಫಲರಾದರು.

ಅಮಾವಾಸ್ಯೆಯಂದು ಕಲೆತಿರುವ ಸೂರ್ಯಚಂದ್ರರಂತೆ, ಒಂದೇ ರಥದಲ್ಲಿ ಕೂತಿದ್ದ ಸಾತ್ಯಕಿ ಸೌಭದ್ರರು, ಶಕುನಿಯ ಸೇನೆಯನ್ನು, ಕಿಚ್ಚಿಟ್ಟು ಹುಲ್ಲುಗಾವಲನ್ನಂತೆ ನಾಶಪಡಿಸಿದರು. ಅರ್ಜುನನೂ ಅವರಿಗೆ ಜೋಡಾಗಿ ಶರವರ್ಷದಲ್ಲಿ ಕುರುಸೇನೆ ಕೊಚ್ಚಿಹೋಗುವಂತೆ ಮಾಡಿದನು. ಇಂತು ಭೀಮಾದಿ ವೀರರ ಆಘಾತವನ್ನು ಸಹಿಸಲಾರದೆ ಓಡುವ ಸೈನಿಕರನ್ನು ಭೀಷ್ಮ ದ್ರೋಣರು ಧೈರ್ಯ ವಚನಗಳಿಂದ ಹುರಿದುಂಬಿಸಿ, ಹಿಂದಿರುಗುವಂತೆ ಮಾಡಿದರು. ದುರ್ಯೋಧನನೂ ರಣರಂಗದಿ ಪ್ರವೇಶಿಸಲು ಎಲ್ಲ ರಾಜರೂ ಮತ್ತೆ ಒಟ್ಟು ಕಲೆತು, ಪಾಂಡವಸೇನೆಯನ್ನು ತಾಕಿದರು. ಆಗ ಸುಯೋಧನನು ತಾತನನ್ನು ಸಮೀಪಿಸಿ, ಸ್ವಲ್ಪ ಸಿಟ್ಟಿನಿಂದ ಇಂತೆಂದನು : 'ಪಿತಾಮಹ ! ಕೇಳು ಕಿವಿಗೊಟ್ಟು! ನೀನು ದ್ರೋಣಕೃಪರು, ಅಶ್ವತ್ಥಾಮ, ಎಲ್ಲರೂ ಬದುಕಿರಲು, ನನ್ನ ಸೈನ್ಯವು ಎದೆಗುಂದಿ, ಭೀಮಾದಿಗಳ ಮುಂದೆ, ಕುರಿಹಿಂಡಿನಂತೆ ಓಡುತ್ತಿದೆ ಎಂದರೆ ಇದಕ್ಕಿಂತ ಅವಮಾನವಿದೆಯೇ ? ನಿಮಗೆ ಮನಸ್ಸು ಮಾಡಿದರೆ ಪಾಂಡವರು ಅಜೇಯರೇ ? ನಿಮಗೆಲ್ಲ ಪಾಂಡವರಲ್ಲಿ ಪಕ್ಷಪಾತ ! ನೀವಿರುವುದೆಮ್ಮಲ್ಲಿ ! ಬೇಡುವುದು ಪಾಂಡವಜಯವನ್ನು! ಕ್ಷಮಿಸು ! ಸೈನ್ಯನಾಶವನ್ನು ನೋಡಲಾರದೆ ನುಡಿಯುತ್ತಿರುವೆನು. ಒಬ್ಬನ ಕೂಳು, ಮತ್ತೊಬ್ಬನಾಳು ಆದಾಗ ಆ ರಾಜನ ಪಾಡು ಹೇಳತೀರದು. ಮೊದಲೇ ಪಾಂಡವ, ಸಾತ್ಯಕಿ, ಧೃಷ್ಟದ್ಯುಮ್ನರನ್ನು ಎದುರಿಸುವುದಿಲ್ಲವೆಂದು ನೀವು ಹೇಳಿದ್ದರೆ, ಆಗ

ನಾನು ನಿಮ್ಮನ್ನು ಬಿಟ್ಟು ಕರ್ಣನೊಡನೆ ನನ್ನ ಕಾರ್ಯಾಲೋಚನೆಗೈದು ನಿಶ್ಚಯಿಸುತ್ತಿದ್ದೆ ! ಆಗ ಪ್ರತಿಜ್ಞೆಗೈದು ಈಗ ಕೈ ಬಿಡಬೇಡಿ ! ನಿಮ್ಮ ನಿಮ್ಮ ವಿಕ್ರಮಯಶಗಳನ್ನು ಉಳಿಸಿಕೊಳ್ಳಿ !' ಆ ಮಾತಿಗೆ ಭೀಷ್ಮನು ಹುಸಿನಗುವನ್ನಿತ್ತು ಸಿಟ್ಟಿನಿಂದ 'ದುರ್ಯೋಧನ ! ಎಷ್ಟೋ ಸಲ ನಾನು ಪಾಂಡವರನ್ನು ಗೆಲ್ಲಲಾರನೆಂದು ನಿನಗೆ ತಿಳಿಸಿರುವೆನು. ಪಾಂಡವರನ್ನು ಜಯಿಸಲು ದೇವತೆಗಳಿಗಳವಲ್ಲ ತಿಳಿ ! ಜಯಿಸುವೆನೆಂದು ಜಂಬ ಕೊಚ್ಚಿದವರಿಂದು ರಣರಂಗವನ್ನು ಬಿಟ್ಟಿರುವರು. ಇಂತಹ ಸ್ಥಿತಿಯಲ್ಲಿ ನನ್ನ ವಯೋಬಲ ಶಕ್ತಿಗಳಿಗೆ ತಕ್ಕಂತೆ ನಿನಗಾಗಿ ನಿನ್ನ ಋಣವನ್ನು ತೀರಿಸಲು ಕಡಿದಾಡುತ್ತಿರುವೆನು. ನೋಡಿಂದು ನನ್ನ ಪರಾಕ್ರಮವನ್ನು ! ಎಲ್ಲ ಪಾಂಡವಸೇನೆಯನ್ನೂ ಎಲ್ಲರೂ ನೋಡುತ್ತಿರುವಂತೆ ಜಯಿಸಿ ವಾರಿಸುವೆನು' ಎಂದನು.

ಭೀಷ್ಮನು ರೋಷದಿಂದ ಶಂಖವನ್ನೂದಿ, ಇತರ ಕುರುವೀರರು ಹಿಂಬಾಲಿಸಲು ಪಾಂಡವಸೇನೆಯನ್ನು ಕುರಿಹಿಂಡಿಗೆ ಹುಲಿ ಹೊಕ್ಕಂತೆ ಪ್ರವೇಶಿಸಿ, ವೀರವಿಹಾರವನ್ನು ಮಾಡಿದನು, ಆಗ ಅಪರಾಹ್ಣವಾಗಿತ್ತು. ಪಾಂಡವರು ಜಯಪ್ರಾಪ್ತಿಯಿಂದ ಸಂತುಷ್ಟರಾಗಿದ್ದರು, ಭೀಷ್ಮವಿಕ್ರಮವನ್ನು ಸ್ವಸೈನ್ಯನಾಶವನ್ನು ಕಂಡು ಬೆರಗಾದರು. 'ನಿಲ್ಲು, ಹೊಡಿ, ಕಡಿ, ಭಾಪು' ಎಂಬ ಶಬ್ದಗಳು ಎಲ್ಲೆಡೆಯಿಂದ ಕೇಳಿ ಬಂದವು. ಕವಚಗಳಲ್ಲಿ, ರಥಗಳಲ್ಲಿ, ಆನೆ-ಕುದುರೆಗಳ ಶರೀರಗಳಲ್ಲಿ ಎಲ್ಲೆಡೆಯು ಬಾಣವಿಲ್ಲದ ಸ್ಥಲವು ಒಂದಂಗುಲದಷ್ಟಾದರೂ ಉಳಿಯಲಿಲ್ಲ, ಶಿರಗಳುರಳಿ ಬೆಟ್ಟಗಳಾದವು. ನೆತ್ತರು ಹರಿದು ನದಿಯಾಯಿತು. ಆನೆಗಳು ನದಿಗಳಿಗಾಣೆಕಟ್ಟುಗಳಾದವು. ಮಂಸ-ಶೋಣಿತಗಳು ಕೆಸರಾದವು. ಗೃಧ್ರಗೋಮಾಯುಗಳಿಗೆ ಆನಂದವಾಯಿತು. ಇಂತಹ ಭೀಮ ಭಯಂಕರ ಯುದ್ಧವೆಂದೂ ನಡೆದುದಿಲ್ಲ. ಸಖೇ ! ಅಣ್ಣ ! ಬಂಧೋ ! ಮಿತ್ರ ! ಮಾವ ! ಬಿಟ್ಟುಹೋಗಬೇಡ ಎಂದು ಅಳುವ ಗಾಯಾಳುಗಳನ್ನು ಕೇಳುವವರಿಲ್ಲ. ಭೀಷ್ಮನ ಬಾಣಸರ್ಪಗಳಿಗೆ ಶತ್ರುಪ್ರಾಣಾನಿಲಗಳು ಆಹಾರವಾಗಿ ಹೋಗುತ್ತಿದ್ದವು. ಆತನ ಬಿಲ್ಲು ಅಲಾತಚಕ್ರದಂತೆ ಎಲ್ಲೆಡೆ ಬಾಣಜ್ವಾಲೆಗಳನ್ನು ಉಗುಳುತ್ತಿತ್ತು. ಒಂದು ಸಲ ಇಲ್ಲಿದ್ದ ಭೀಷ್ಮನು ಮತ್ತೊಂದು ಸಲ ಅಲ್ಲಿರುತ್ತಿದ್ದನು. ಎಲ್ಲರೂ ತಮಗೆ ಎದುರಾಳಾಗಿರುವ ದೇವವ್ರತನನ್ನು ಕಂಡಂತಾಗಿ ಭಯಭ್ರಾಂತರಾದರು. ಸೈನಿಕರು ಶಲಭಗಳಂತೆ ಆತನ ಬಾಣವಹ್ನಿಗೆ ಸಿಕ್ಕು ಬೂದಿಯಾದರು. ಭೀಷ್ಮನ ಒಂದೊಂದು ಬಾಣವೂ ಒಬ್ಬನ ಪ್ರಾಣವನ್ನು ಬಲಿಯಾಗಿಸದೆ ಬಿಡುತ್ತಿರಲಿಲ್ಲ. ಭೀಷ್ಮನನ್ನು ನೋಡಿದವನು ಮರುಕ್ಷಣವೇ ಯಮರಾಜನನ್ನು ನೋಡುತ್ತಿದ್ದನು. ವಾಸುದೇವ ಭೀಮಾರ್ಜುನರು ನೋಡುತ್ತಿರಲು, ಭೀಷ್ಮನು ವಿಜೃಂಭಿಸಿ, ಪಾಂಡವಸೇನೆಯನ್ನು ಚಿತ್ರವಧೆಮಾಡುತ್ತಿರಲು, ಹುಲಿಯನ್ನು ಕಂಡ ಗೋಕುಲದಂತೆ, ಪಾಂಡವ ಸೈನಿಕರು ಆರ್ತಧ್ವಾನವನ್ನು ಮಾಡುತ್ತಾ ಸಿಕ್ಕಾಪಟ್ಟೆ ಓಡಿಹೋದರು.

ಅದನ್ನು ನೋಡಿ ವಾಸುದೇವನು ರಥವನ್ನು ನಿಲ್ಲಿಸಿ, ಅರ್ಜುನನನ್ನು ನೋಡಿ, 'ಅರ್ಜುನ ! ನೀ ಕಾದಿದ್ದ ಸಮಯವೀಗ ಬಂದಿಹುದು ! ರಾಜರ ಸಭೆಯಲ್ಲಿ 'ಎಲ್ಲ

ಧಾರ್ತರಾಷ್ಟ್ರರನ್ನೂ ಅವರ ಸಹಾಯಕರನ್ನೂ ಕೊಲ್ಲುವೆ'ನೆಂದು ನೀನು ಮಾಡಿದ್ದ ಪ್ರತಿಜ್ಞೆಯನ್ನು ಸ್ಮರಿಸು ! ಆ ವಾಕ್ಯವನ್ನು ಸತ್ಯವಾಗಿಸು ! ಹೊಡೆದು ಕೆಡಹು ಭೀಷ್ಮನನ್ನು ಮೊದಲು, ಇಲ್ಲದಿರೆ ಅವನು ಇಂದೇ ಪ್ರಳಯಭೈರವನಾಗಿ ನಿಮ್ಮೆಲ್ಲ ಭಟರನ್ನೂ ನಾಶಮಾಡಿ ಬಿಡುವನು' ಎಂದನು. ಅರ್ಜುನನು ಹಾಗೇ ಮಾಡುವೆನೆಂದು, ತನ್ನ ರಥವನ್ನು ಭೀಷ್ಮನ ಮುಂದೆ ತಂದು ನಿಲ್ಲಿಸುವಂತೆ ಹೇಳಲು, ಶ್ರೀಕೃಷ್ಣನು ಹಾಗೇ ಮಾಡಿದನು. ಅರ್ಜುನನು ದೇವವ್ರತನನ್ನು ತಾಕುವದನ್ನು ಕಂಡು ಪಾಂಡವಸೇನೆಯು ಮತ್ತೆ ಹಿಂತಿರುಗಿ ಬಂತು.

ಭೀಷ್ಮನು ಸಿಂಹನಾದವನ್ನು ಮಾಡಿ, ಧನಂಜಯನ ರಥವನ್ನು ಬಾಣ ಜಾಲದಲ್ಲಿ ಮುಚ್ಚಿದನು. ಅರ್ಜುನನ ರಥ, ಸಾರಥಿ, ಅಶ್ವ ಧ್ವಜಗಳೆಲ್ಲವು ಬಾಣವರ್ಷದಲ್ಲಿ ಮುಳುಗಿ ಕಾಣ ಬರದಂತಾಗಲು, ಧರ್ಮರಾಜಾದಿಗಳು ಹೌಹಾರಿದರು. ಶ್ರೀಕಷ್ಣನು ಭಯವಿಲ್ಲದೆ, ರಥವನ್ನು ಮುಂದು ಮಾಡಿ, ಅರ್ಜುನನಿಗೆ ಭೀಷ್ಮನನ್ನು ತೋರಿದನು. ಅರ್ಜುನನು ಗಾಂಡೀವವನ್ನು ಮೆರೆಯಿಸಿ, ಟಂಕಾರ ಮಾಡಿ, ದಿವ್ಯ ಬಾಣದಿಂದ ಭೀಷ್ಮನ ಧನುಸ್ಸನ್ನು ತುಂಡರಿಸಿದನು. 'ಸಾಧು ! ಪಾರ್ಥ ! ಭಲೆ ! ಈಗ ಧನಂಜಯನಿಗೆ ತಕ್ಕಂತೆ ವರ್ತಿಸಿದೆ ! ಪ್ರೀತನಾಗಿರುವೆನು ವತ್ಸ ! ಮಾಡು ನನ್ನೊಡನೆ ಯುದ್ಧವನ್ನು !' ಎಂದು ಪ್ರಶಂಸಿಸಿ, ಭೀಷ್ಮನು ಮತ್ತೊಂದು ಧನುಸ್ಸನ್ನು ತೆಗೆದು, ಹಿಡಿದು, ಅರ್ಜುನ ವಾಸುದೇವರನ್ನು ನಿಶಿತ ಶರಗಳಿಂದ ಹೊಡೆದನು ; ಮತ್ತೆ ನೂರು ಬಾಣಗಳನ್ನು ಬಿಟ್ಟು ವಾಸುದೇವನನ್ನು ಪೀಡಿಸಿದನು. ನೀಲಾಕಾಶದಿ ಅಂಗಾರಕಸಹಸ್ರವು ಮೂಡಿದಂತೆ, ಶ್ರೀಕೃಷ್ಣಗಾತ್ರದಲ್ಲಿ ರಕ್ತಬಿಂದುಗಳು ಕಾಣಬಂದವು. ಭೀಷ್ಮನ ಪರಾಕ್ರಮವನ್ನೂ ಅರ್ಜುನನ ಮಾರ್ದವವನ್ನೂ ಮನಗಂಡು, ಭೀಷ್ಮಹತರಾಗುತ್ತಿರುವ ಸೈನಿಕರ ಪಾಡನ್ನೂ ನೋಡಿ ಶ್ರೀಕೃಷ್ಣನು ಇಂತು ಚಿಂತಿಸಿದನು.

'ಈ ಭೀಷ್ಮನು ಇಂದು ಪಾಂಡವ ಸೇನೆಯನ್ನೇ ಏಕೆ, ದೇವ ದಾನವರು ದಂಡೆತ್ತಿ ಬಂದರೂ ಬಿಡದೆ ನಾಶಮಾಡುವನು. ಪಾಂಡವ ಸೈನ್ಯವು ಓಡಿ ಹೋಗುತ್ತಿದೆ. ಈಗ ಪಾಂಡವರು ಗೆಲ್ಲಬೇಕೆಂದರೆ ಒಂದೇ ಮಾರ್ಗವಿದೆ. ಮೇಲೇರಿ ಬರುವ ಭೀಷ್ಮನನ್ನು ಕೊಂದು ಪಾಂಡವರ ಕಾರ್ಯವನ್ನು ಹಗುರ ಮಾಡುವೆನು. ಅರ್ಜುನನು ಬಂಧು ಪ್ರೀತಿಯಿಂದ ಕರ್ತವ್ಯ ವಿಮುಖನಾಗಿರುವನು. ತಾತನೆಂಬ ಗೌರವವು ಇವನನ್ನು ಮೃದುವಾಗಿಸಿದೆ ಎಂದು ಚಿಂತಿಸುವ ಕೃಷ್ಣನನ್ನು ಭೀಷ್ಮನು ಮತ್ತೆ ಬಾಣಪೀಡಿತನನ್ನಾಗಿ ಮಾಡಿದನು. ಅವ್ಯಾಹತಷಡ್ಗುಣಭರಿತನು, ನಿತ್ಯ ಚಿದಾನಂದ ದೇಹನು ಆದ ಭಗವಂತನು ಭಕ್ತವತ್ಸಲನಾಗಿ, ಗಾಯಗೊಂಡವನಂತೆ, ಸಿಟ್ಟಾದವನಂತೆ ತೋರುವುದವನ ಮೋಹಕ ಲೀಲೆ ಎಂದು ತಿಳಿ !'

ಆಗ ಭೀಷ್ಮ ವಿಕ್ರಮವನ್ನು ಕಂಡು ಮೈಪೆರ್ಚಿ ಕೌರವ ಯೂಥಪತಿಗಳು ಸಿಂಹನಾದವನ್ನು ಮಾಡುತ್ತಾ ಬಂದು ಅರ್ಜುನನ ರಥವನ್ನು ಮುತ್ತಿದರು. ಅವರಿಗೆ ಎದುರಾಳಿಯಾಗಿ ಸಾತ್ಯಕಿಯು ನಿಂತು ಕಾದಿದನು, ಮತ್ತು ಓಡಿಹೋಗುವ ಪಾಂಡವ ವೀರರನ್ನು ಹುರಿದುಂಬಿಸಿ ಹಿಂದಿರುಗಿಸಿದನು. ಕೆಲವರು ಓಡುತ್ತಿದ್ದರು. ಅದನ್ನು ಕಂಡು

ಶ್ರೀಕೃಷ್ಣನು ಸಾತ್ಯಕಿಯ ಧೈರ್ಯ ಸಾಹಸಗಳಿಗೆ ಮೆಚ್ಚಿದನು. ಅರ್ಜುನನ ಮಾರ್ದವವನ್ನು ಮೆಚ್ಚದೆ ಮಾಧವನು ಸಾತ್ಯಕಿಯನ್ನು ಕಂಡು, ರೋಷಭರಿತನಾದವನಂತೆ ಇಂತೆಂದನು:

'ಯುಯುಧಾನ ! ಓಡಿಹೋಗುವವರು ಹೋಗಲಿ ! ಇಲ್ಲಿರುವವರೂ ಓಡಿ ಹೋಗಲಿ ! ನಾನೊಬ್ಬನೇ ಇಂದು ವಿಕ್ರಮಿಸಿ ಭೀಷ್ಮನನ್ನು ರಥದಿಂದ ಕೆಡಹುವೆನು. ದ್ರೋಣಾದಿಗಳನ್ನೂ ಕೊಲ್ಲುವೆನು. ಕ್ರುದ್ಧನಾದವನನ್ನೆದುರು ನಿಲ್ಲುವವರೀ ಕುರುಬಲದಲ್ಲಿಲ್ಲ, ಮೂರ್ಲೋಕಗಳಲ್ಲಿಯೂ ಇಲ್ಲ. ಚಕ್ರಪಾಣಿಯಾದೆನಗೆ ಯಾರೂ ಸಮರಲ್ಲ. ಇಂದೇ ಭೀಷ್ಮದ್ರೋಣಾದಿ ಸಮಸ್ತ ಕುರುವೀರರನ್ನು ಒಂದೇಟಿಗೆ ಕೊಂದು, ನಮ್ಮ ಧನಂಜಯನಿಗೆ ಪ್ರೀತಿಯನ್ನು ಸಾಧಿಸುವೆನು. ಧರ್ಮರಾಜ ಭೀಮಸೇನರೂ ತುಷ್ಟರಾಗಲಿ ! ಇಂದೇ ಈಗಲೇ ಧರ್ಮರಾಜನಿಗೆ ರಾಜ್ಯವನ್ನೀಯುವೆನು ನೋಡುತ್ತಿರು !'

ಇಂತು ನುಡಿದು ಕೋಪಾರುಣ ನೇತ್ರನಾದ ರಮಾಕಳತ್ರನು, ಕ್ಷುರಧಾರಾ ಸಹಸ್ರವಾದ ಚಕ್ರವನ್ನೆತ್ತಿ ಪಿಡಿದು, ರಥದಿಂದ ಧುಮ್ಮಿಕ್ಕಿ, ಕುದುರೆಗಳನ್ನು ಬಿಚ್ಚಿ ವೇಗದಿಂದ ಭೀಷ್ಮನನ್ನು ಕೊಲ್ಲಲೆಂಬಂತೆ ಮೇಲೇರಿ ಬಂದನು. ಮದವಾರಣ ರಾಜನ ಮೇಲೆರುಗುವ ಮೃಗರಾಜನಂತೆ ಮುಕುಂದನು ಗಂಗಾನಂದನನನ್ನು ಚಪ್ರಪಾಣಿಯಾಗಿ ಸಮೀಪಿಸುತ್ತಿದ್ದನು. ಆಕಾಶದಿ ಹಾರುವ ಮೇಘದಂತೆ ಅವನ ಪೀತಾಂಬರವು ತೂರಾಡುತ್ತಿತ್ತು. ಕೈಯೆತ್ತಿ ಪಿಡಿದಿದ್ದ ಚಕ್ರವು, ನಾಳಾಗ್ರದಿ ಅರಳಿದ್ದ ಕಮಲದಂತೆ ಕಂಗೊಳಿಸಿತು. ನಾರಾಯಣನಾಭಿಯಿಂದ ಬಂದ ಅರವಿಂದ ದಳದಂತಿರುವ ಶ್ರೀಕಷ್ಣ ಚಕ್ರವು ನೋಡ ನೋಡುತ್ತ ಪ್ರಳಯಾರ್ಕ ಸದೃಶವಾಗಿ ಕಿಡಿಗಳನ್ನು ಕಾರುತ್ತ ಗಿರ ಗಿರ ತಿರುಗಿತು. ಶ್ರೀಕೃಷ್ಣ ಕೋಪ ಸೂರ್ಯನು ಚಕ್ರ ಕಮಲವನ್ನು ಅರಳಿಸಿದಂತೆ, ಸುದರ್ಶನವು ವ್ಯಾಮ ವರ್ತುಲವಾಗಿ ಬೆಳೆದು ಪ್ರಕಾಶಿಸಿತು.

ಕಾಲಚಕ್ರವನ್ನು ನಡೆಸುವ ನಾರಾಯಣನೇ ಕೃಷ್ಣನಾಗಿ ಸುದರ್ಶನವನ್ನು ತಿರುವುತ್ತಾ ಹಾರಿ ಬರುವಾಗ, ಕೆಳಗೆ ಭೂಮಿಯು ಕಂಪಿಸಿತು. ನೋಡುವ ಸರ್ವಭೂತಗಳು ವಿಕೃತವಾಗಿ ಕೂಗಿಕೊಂಡವು. ಎಲ್ಲರೂ ಸಕಲ ಕೌರವರು ನಷ್ಟರಾದರೆಂದು ನಿಶ್ಚಯಿಸಿದರು. ಲೋಕವನ್ನು ಸುಡುವ ಧೂಮಕೇತುವಿನಂತೆ, ವಜ್ರಶೂಲಗಳನ್ನು ಹೆತ್ತ ಮೂಲಾಗ್ನಿಯಂತೆ, ಉರಿಯುವ ಚಕ್ರವನ್ನು ಪಿಡಿದು ತನ್ನ ಮೇಲೇರಿ ಬರುವ ಮುರಾರಿಯನ್ನು ಕಂಡು, ಭಯಪಡದೆ, ಭೀಷ್ಮನು, ರಥದಲ್ಲಿ ಎದ್ದು ನಿಂತು, ಕೈ ಜೋಡಿಸಿ ಇಂತು ನುತಿಸಿದನು.

'ದೇವೇಶ ! ಬಾರಯ್ಯಾ ! ಜಗನ್ನಿವಾಸ ! ನಮೋನಮಃ ! ಶಾರ್ಙ್ಗಗದಾಸಿಹಸ್ತ! ನಮಸ್ತೆ ! ಬಲಾತ್ಕಾರದಿಂದ ಬಂದು ನನ್ನನ್ನು ಕೊಂದು ನಿನ್ನವನೆನಿಸು ! ನಿನ್ನಿಂದ ಹತನಾದರೆ ನನಗೆ ಉಭಯಲೋಕದ ಶ್ರೇಯಸ್ಸೂ ಸಿಗುವುದು. ಲೋಕತ್ರಯದಲ್ಲಿ ನನ್ನಂತಹ ಧನ್ಯರಿರುವುದಿಲ್ಲ' ಆ ಮಾತನ್ನಾಲಿಸಿ, ವಾಸುದೇವನು, ಓಡುತ್ತಾ 'ಭೀಷ್ಮ ! ನೀನೇ ಈಗಾಗುತ್ತಿರುವ ಜನಕ್ಷಯಕ್ಕೆ ಕಾರಣನಾಗಿರುವೆ. ದುರ್ಯೋಧನನನ್ನು ವಹಿಸಿ ದುಷ್ಟ ದ್ಯೂತವನ್ನು ನಿವಾರಿಸದೆ, ಧರ್ಮ ಪಥವನ್ನು ಪೋಷಿಸದೆ, ಅಪರಾಧವನ್ನೆಸಗಿರುವೆ !

ಧರ್ಮವನ್ನು ಮೀರಿ ನಡೆವ ರಾಜನನ್ನು ಕುಲಪಾಂಸನನಾದ ಪಾಪಿಯನ್ನು ಬಿಡದೆ ಕೆಟ್ಟಿ!' ಎಂದು ನಿಂದಿಸಿದನು.

ಭೀಷ್ಮನು 'ಶ್ರೀಕೃಷ್ಣ! ಏನೂ ಮಾಡಲಿ! ರಾಜನು ಎರಡನೇ ದೇವನೆಂದು ಶಾಸ್ತ್ರವಿದೆ' ಎಂದನು. 'ಏನೇನು ರಾಜನೆಂದ ಮಾತ್ರಕ್ಕೆ ಗೌರವನೀಯನೆ ? ಪಾಪಿ ಕಂಸನನ್ನು ಮಾವನೆನ್ನದೆ ನಾನು ಕೊಲ್ಲಲಿಲ್ಲವೇ ? ವಿನಾಶಕಾಲದಲ್ಲಿ ದೈವವು ಬುದ್ಧಿಯನ್ನು ಕೆಡಿಸುವುದು; ಹಿತವಾಗಿ ಹಿಡಿಸುವುದಿಲ್ಲ' ಎಂದು ಸಮೀಪಿಸಿದನು.

ಆಗ ಪಾರ್ಥನು ರಥದಿಂದಿಳಿದು ಓಡಿಬಂದು, ಹತ್ತು ಹೆಜ್ಜೆಗಳಲ್ಲಿ ಶ್ರೀಕೃಷ್ಣನನ್ನು ಮುಟ್ಟಿ ಕಾಲಿಗೆರಗಿ, ಕೈಪಿಡಿದು ನಿಲ್ಲಿಸಿದನು. ಶ್ರೀಕೃಷ್ಣನು ರೋಷದಿಂದ ಅವನ ಕೈಕೊಡವಿ, ಮಹಾವಾತವು ಗಿಡವನ್ನಂತೆ, ಭೀಷ್ಮನನ್ನು ಉನ್ಮೂಲಿಸಲು ಮುನ್ನಡೆದನು. ಅರ್ಜುನನು ಮತ್ತೆ ಬಂದು ಶ್ರೀಶನ ಪಾದಗಳನ್ನು ಪಿಡಿದು, ಬಿಡದೆ, 'ಸ್ವಾಮೀ! ಇಷ್ಟೇಕೆ ಕೋಪ! ಪಾಂಡವ ಬಂಧೋ! ನೀನಲ್ಲದಿನ್ನಾರು ನಮಗೆ ದಿಕ್ಕು ? ನಿನ್ನ ಪ್ರತಿಜ್ಞೆ ಬಿಡಬೇಡ! ನನ್ನಾಣೆ, ನನ್ನ ಮಕ್ಕಳಾಣೆ, ಸಾರಿ ಹೇಳುವೆನು ಕೇಳು! ವಂಚನೆ ಮಾಡದೆ ಕಡಿದಾಡುವೆನು. ಕುರುಬಲದ ಕೊನೆ ನೋಡುವೆನು. ನನ್ನ ಪ್ರತಿಜ್ಞೆಯನ್ನು ಸತ್ಯ ಮಾಡುವೆನು. ದಾಕ್ಷಿಣ್ಯಭಯಗಳನ್ನು ದೂರ ಮಾಡುವೆನು. ನಡೆ ರಥಕ್ಕೆ!' ಎಂದು ಬೇಡಿದನು.

ಶ್ರೀಕೃಷ್ಣನು ಪ್ರೀತನಾಗಿ, ಹಿಂದಿರುಗಿ ರಥವನ್ನೇರಿ ಸಾರಥಿಯಾದನು. ಆತನು ಪಾಂಚಜನ್ಯವನ್ನೂದಲು, ಭೀಮಸೇನನು ಪೌಂಡ್ರವನ್ನೂದಿದನು. ಅರ್ಜುನನು ಧೈರ್ಯದಿಂದ ದೇವದತ್ತವನ್ನೂದಿ ರೋಷದಿಂದ ಮುನ್ನಡೆದು, ಬಾಣವರ್ಷದಿಂದ ಕೌರವಸೇನೆಯನ್ನು ಮುಚ್ಚಿ, ವಿಜೃಂಭಿಸಿದನು. ಭೂರಿಶ್ರವನು ಬಿಟ್ಟ ಏಳು ಭಲ್ಲಗಳನ್ನು ತುಂಡರಿಸಿ, ಒಂದರಿಂದ ಕೌರವರಾಜನ ತೋಮರವನ್ನು ಕೆಡಹಿ, ಉರಿಯುತ್ತಾ ಬರುವ ಭೀಷ್ಮನ ಶಕ್ತಿಯನ್ನೂ, ಶಲ್ಯನ ಗದೆಯನ್ನೂ ಎರಡು ಬಾಣಗಳಿಂದ ಕತ್ತರಿಸಿದನು. ಗಾಂಡೀವವನ್ನು ಆಕರ್ಣಾಂತವಾಗಿ ಸೆಳೆದು, ಮಾಹೇಂದ್ರಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಬಾಣಗಳು ಮಳೆಗರೆದಂತಾಗಿ, ರಥ, ಧ್ವಜ, ತುರಗ ಭಟರ ಸರ್ವಾಂಗಗಳಲ್ಲಿ ನಟ್ಟ ನಿಂತವು; ಶತ್ರು ತುರಗಗಜಗಳ ಶರೀರವನ್ನು ಭೇದಿಸಿಕೊಂಡು ಹೊರಬಂದವು; ಗಾಂಡೀವ ಟಂಕಾರವು ಎಡೆಬಿಡದೆ ಕೇಳ ಬರುತ್ತಿತ್ತು. ಅದರ ಮೊರಹಿನಲ್ಲಿ ಶಂಖ ದುಂಧುಭಿ ನಿಸ್ವನವು ಕೇಳ ಬರದಂತಾಯಿತು. ಅದನ್ನು ಹಿಡಿದು, ದ್ರುಪದ ವಿರಾಟಾದಿರಾಜರು ಅರ್ಜುನನನ್ನು ಸಮೀಪಿಸಿ, ಅವನಿಗಾತು ನಿಂತರು. ಅರ್ಜುನನ ಐಂದ್ರಾಸ್ತ್ರ ಪ್ರಭಾವದಿಂದ ರಣರಂಗದಲ್ಲಿ ರಕ್ತನದಿಯೇ ಹರಿದು ಹೋಯಿತು. ಅದಕ್ಕೆ ಸತ್ತ ಕುದುರೆಗಳು ಒಡ್ಡುಗಳಾದವು. ಮೇದೋಮಾಂಸಗಳು ಕೆಸರಾಗಿ, ಎಲುಬುಗಳ ತುಂಡುಗಳು ಮರಳಾಗಿ, ರಕ್ತವೇ ನೀರಾಗಿ, ಕುದುರೆಗಳು ಅಲೆಗಳಾಗಿ, ಮನುಜದೇಹಗಳು ಮಕರಗಳಾಗಿ ಯೋಧರ ಆಯುಧ ಭೂಷಣಗಳು ಮುತ್ತು ಹವಳಗಳಾಗಿ, ಕೇಶಗಳ ರಾಶಿಗಳು ಶೈವಾಲವಾಗಿ ರಣನದಿಯು ಹರಿದು ಹದ್ದುನರಿಗಳಿಗೆ ಹಬ್ಬವಾಗಿ, ಯಮಧಾನಿಯನ್ನು ಸೇರಲು ಹೋಗುವಂತಿತ್ತು.

ಅರ್ಜುನ ವಿಜಯವನ್ನು ಕಂಡು ಚೇದಿಪಾಂಚಾಲ ಮಾತ್ಸ್ಯ ಸೃಂಜಯರು ಹರ್ಷಧ್ವಾನಗಳನ್ನು ಮಾಡಿದರು; ಮತ್ತು ಕೌರವಯೋಧರ ಮೇಲೇರಿ ಹೋಗಿ, ಅವರನ್ನು ಯಮಸದನಕ್ಕೆ ಕಳಿಸತೊಡಗಿದರು. ಆಗ ಪಾಂಡವ ವಿಕ್ರಮವನ್ನೂ, ಸ್ವಜನ ಪರಾಭವವನ್ನೂ, ಅವರ ಉತ್ಸಾಹವನ್ನೂ, ಇವರ ಶ್ರಮೆಯನ್ನೂ ಅರ್ಜುನನ ಐಂದ್ರಾಸ್ತ್ರವನ್ನೂ, ಮುಣುಗುತ್ತಿರುವ ಸೂರ್ಯನನ್ನೂ ನೋಡಿ, ಭೀಷ್ಮನು ತನ್ನ ಸೈನ್ಯಗಳನ್ನು ಹಿಂದಿರುಗಿಸಿದನು. ಯಶೋಜಯವಂತರಾದ ಕುಂತೀನಂದನರು ಆನಂದದಿಂದ ತಮ್ಮ ಸೇನೆಯನ್ನು ಉಪಸಂಹರಿಸಿ, ತಾವೂ ಶಿಬಿರಗಳನ್ನು ಸೇರಿದರು. ಅಂದು ಅರ್ಜುನನು ಭೀಷ್ಮನನ್ನೇ ಅಲ್ಲದೆ, ದ್ರೋಣ, ಕೃಪ, ಜಯದ್ರಥ, ಬಾಹ್ಲಿಕ, ಭೂರಿಶ್ರವ, ಶಲ್ಯ, ಶಲ ಮೊದಲಾದ ಅನೇಕ ರಥಿಕರನ್ನು ಪರಾಭವಿಸಿ, ಶ್ರೀಕೃಷ್ಣ ಸಹಾಯದಿಂದ ವಿಜಯನೆನಿಸಿ, ತನ್ನವರಿಗಾನಂದವನ್ನು ತಂದನು.

## ೨೬. ಚತುರ್ಥದಿನ ಯುದ್ಧ - ಭೀಮಪರಾಕ್ರಮ

ಮರುದಿನ ಬೆಳಗಾಗಲು (ಬಿದಿಗೆ), ಭೀಷ್ಮನು ಅತಿಕೋಪದಿಂದ ಶತ್ರುಗಳನ್ನು ಮುಟ್ಟಿಕಾದಿದನು. ದ್ರೋಣಾದಿವೀರರು ಆತನಿಗೆ ಸಹಾಯಕರಾಗಿ ಬಂದರು. ದೂರದಲ್ಲಿ ಕಪಿರಾಜ ರಾಜಿತ ಧ್ವಜವನ್ನು ಕಂಡು, ಭೀಷ್ಮನು ರೋಷದಿಂದ ಮುನ್ನಡೆದನು. ಗಾಂಡೀವ ಟಂಕಾರ, ಕಪಿರಾಜ ಹುಂಕಾರ, ಭೂತಗಳ ಗರ್ಜೆಗಳನ್ನು ಕೇಳಿ ಕುರುಸೇನೆಯು ಖಿನ್ನವಾಯಿತು. ಅದನ್ನು ಕಂಡು ಭೀಷ್ಮನು ತಾಲಧ್ವಜದ ತನ್ನ ರಥವನ್ನು ಮುಂದುಮಾಡಿ, ಅನೇಕ ರಥಿಕರು ತನಗೆ ರಕ್ಷಕರಾಗಿ ಬರಲು, ಪಾಂಡವ ಸೇನೆಯಲ್ಲಿ ಕಮಲಾಕರವನ್ನು ಮದ್ದಾನೆಯಂತೆ ಹೊಕ್ಕು, ಅನೇಕ ಭಟರನ್ನು ಸಂಹರಿಸಿದನು. ಧನಂಜಯನು ಆತನನ್ನು ತಡೆದು ದಿವ್ಯಾಸ್ತ್ರಗಳಿಂದ ಅನೇಕ ಕುರು ವೀರರನ್ನು ಸಂಹರಿಸಿದನು.

ದ್ರೋಣಪುತ್ರ, ಭೂರಿಶ್ರವ, ಶಲ್ಯ, ಚಿತ್ರಸೇನರು ಅಭಿಮನ್ಯುವಿನಿಂದ ಹೋರಾಡಿದರು. ಅವರನ್ನೆಲ್ಲ ನಿರ್ವಿಣ್ಣರನ್ನಾಗಿ ಮಾಡಿ ವಿಕ್ರಮಿಸುವ ಮಗನನ್ನು ನೋಡಿ, ಅರ್ಜುನನು, ಸಿಂಹನಾದವನ್ನು ಮಾಡಿದನು. ಅಭಿಮನ್ಯುವು ಹೆದರದೆ ಇತರರನ್ನು ಹೆದರಿಸಿ ಓಡಿಸುತ್ತಿದ್ದನು. ಆತನು ಅಶ್ವತ್ಥಾಮನನ್ನು ಒಂದು ಬಾಣದಿಂದ, ಶಲ್ಯನನ್ನು ಐದರಿಂದ, ಸಾಂಯಮನಿಯನ್ನು ಎಂಟು ಶರಗಳಿಂದ ಪೀಡಿಸಿ, ಧ್ವಜಗಳನ್ನು ಕೆಡಹಿದನು. ಶಲ್ಯನ ನೂರಾರು ಬಾಣಗಳನ್ನು ಮುರಿದು ಕೆಡಹಿದನು ಮತ್ತು ಅವನ ನಾಲ್ಕು ಕುದುರೆಗಳನ್ನು ಕೊಂದನು.

ಆಗ ದುರ್ಯೋಧನ ಪ್ರೇರಿತರಾಗಿ ತ್ರಿಗರ್ತರು, ಮದ್ರರು, ಕೈಕಯರು ಒಟ್ಟುಗೂಡಿ ಇಪ್ಪತ್ತೈದು ಸಾವಿರ ಭಟರು ಅರ್ಜುನನನ್ನು ಮುತ್ತಿದರು. ಅದನ್ನು ಕಂಡು ದ್ರುಪದ ಪುತ್ರನು ಬಹುಸೇನೆಯಿಂದ ಕೂಡಿ ಬಂದು ಅವರೊಡನೆ ಕಾದಿದನು. ಅರ್ಜುನನನ್ನು ಪೀಡಿಸುವ ಮದ್ರಕರನ್ನು ಸಂಹರಿಸಿ, ಧೃಷ್ಟದ್ಯುಮ್ನನು ಮೂರು ಬಾಣಗಳಿಂದ ಕೃಪನನ್ನು ನೋಯಿಸಿ ಕೃತವರ್ಮನ ರಕ್ಷಕರನ್ನು ಕೊಂದನು.

ಆಗ ಸಾಂಯಮನಿಯು ಧೃಷ್ಟದ್ಯುಮ್ನನನ್ನು ಹತ್ತು ಬಾಣಗಳಿಂದ ಹೊಡೆಯಲು, ಅವನು ಕೋಪಗೊಂಡ ಹುಲಿಯಂತೆ ತುಟಿ ಕೊನೆ ನೆಕ್ಕುತ್ತಾ ಅವನ ಧನುವನ್ನು ಭಲ್ಲದಿಂದ ಮುರಿದು, ಅವನ ಸಾರಥಿ ತುರಗಗಳನ್ನು ಕೊಂದನು. ಆಗ ಸಾಂಯಮನಿಯು ಉರಿದೆದ್ದು, ಖಡ್ಗಪಾಣಿಯಾಗಿ ಧೃಷ್ಟದ್ಯುಮ್ನನ ಮೇಲೆ ಹಾರಿ ಬಂದನು. ಅವನು ಸಮೀಪಿಸುವುದನ್ನು ಕಂಡು, ಧೃಷ್ಟದ್ಯುಮ್ನನು ಸಂಭ್ರಾಂತನಾಗದೆ, ಗದೆ ಎತ್ತಿ ಹೊಡೆದು ಅವನನ್ನು ಕೊಂದನು. ಭೀಮಾದಿ ಪಾಂಡವವೀರರು ಅವನನ್ನು ಪ್ರಶಂಸಿಸಿದರು. ಕೌರವರು ಹಾಹಾಕಾರ ಮಾಡಿದರು. ತನ್ನ ಸುತನ ಮರಣವನ್ನು ಕಂಡು ಸಾಂಯಮನನು ಧೃಷ್ಟದ್ಯುಮ್ನನನ್ನು ತಾಕಿ, ಮೂರು ಬಾಣಗಳನ್ನು ಅವನ ಎದೆಯಲ್ಲಿ ನಾಟಿಸಿದನು. ಶಲ್ಯನೂ ಹೊಡೆದನು.

ರಾಜನ್ ! ಪಾಂಡವರು ಜಯದ ಕಡೆ ಸಾಗಿದಂತೆಲ್ಲ, ನಿನ್ನ ಸುತರು ಮರಣದ ಕಡೆ ಸಾಗುವಂತಿದ್ದ ರಣವನ್ನು ಕಂಡು, ನಾನು ದೈವಬಲಕ್ಕೆದುರಿಲ್ಲವೆಂದು ತಿಳಿದಿರುವೆನು. ಸ್ಥಿರನಾಗಿ ಕೇಳು ! ಧೃಷ್ಟದ್ಯುಮ್ನನು ಒಂಬತ್ತು ಬಾಣಗಳಿಂದ ಹೊಡೆಯಲು, ಶಲ್ಯನು ಅವನ ಧನುಸ್ಸನ್ನು ನಿಶಿತಶರದಿಂದ ಮುರಿದನು. ಶರವರ್ಷದಿಂದ ಧೃಷ್ಟದ್ಯುಮ್ನನನ್ನು ಪೀಡಿಸುವ ಶಲ್ಯನನ್ನು ಅಭಿಮನ್ಯುವು ಮುಟ್ಟಿ ಶರ ಜಾಲದಿಂದ ಅವನ ರಥವನ್ನು ವಿಕ್ರಮಿಸಿದನು. ಆಗ ಶಲ್ಯನ ಸಹಾಯಕ್ಕೆಂದು ದುರ್ಯೋಧನ, ದುಶ್ಶಾಸನ, ವಿವಿಂಶತಿ, ದುರ್ಮರ್ಷಣ, ದುಸ್ಸಹ, ಚಿತ್ರಸೇನ, ಸುದುರ್ಮುಖ, ಸತ್ಯವ್ರತ, ಪುರುಮಿತ್ರ, ವಿಕರ್ಣರು ಬರಲು ನೋಡಿ, ಜಿಂಕೆಗಳ ಹಿಂಡಿಗೆ ಹಾರುವ ಹುಲಿಯಂತೆ ಭೀಮಸೇನನು, ದ್ರೌಪದೇಯ ನಕುಲ ಸಹದೇವ ಸೌಭದ್ರ ಧೃಷ್ಟದ್ಯುಮ್ನರೊಡನೆ ಕೂಡಿ, ಎದುರಿಸಿದಾಗ ಹೋರಾಟ ಹೆಮ್ಮಾರಿಯ ಕುಣಿದಾಟವಾಯಿತು. ಹತ್ತು ಜತೆಯ ಮಹಾರಥರು ವಿಚಿತ್ರ ಯುದ್ಧದಲ್ಲಿ ತೊಡಗಿರುವಾಗ ಮಿಕ್ಕ ಸೈನಿಕರು ಪ್ರೇಕ್ಷಕರಾಗಿ ತಮ್ಮ ಕಡಿದಾಟವನ್ನು ನಿಲ್ಲಿಸಿ, ನೋಡುತ್ತಾ ನಿಂತರು.

ದುರ್ಯೋಧನನು ಧೃಷ್ಟದ್ಯುಮ್ನನನ್ನು ನಾಲ್ಕು ಬಾಣಗಳಿಂದ ಹೊಡೆದನು. ದುರ್ಮರ್ಷಣನು ಇಪ್ಪತ್ತನ್ನು, ಚಿತ್ರಸೇನನು ಐದನ್ನು, ದುರ್ಮುಖನು ಒಂಬತ್ತನ್ನು, ದುಸ್ಸಹನು ಏಳನ್ನು, ವಿವಿಂಶತಿಯು ಐದನ್ನು, ದುಶ್ಶಾಸನನು ಮೂರು ಬಾಣಗಳನ್ನು ಪ್ರಯೋಗಿಸಲು, ಧೃಷ್ಟದ್ಯುಮ್ನನು ಅವರೆಲ್ಲರ ನಾರಾಚಗಳನ್ನು ತುಂಡರಿಸಿ, ಶರ ಕರಲಾಘವವನ್ನು ಮೆರೆಸಿ, ಅವರನ್ನೆಲ್ಲ ಒಬ್ಬೊಬ್ಬರನ್ನು ಇಪ್ಪತ್ತೈದು ಬಾಣಗಳಿಂದ ತಾಟಿಸಿದನು. ಅಭಿಮನ್ಯುವು ಸತ್ಯವ್ರತನನ್ನು ಹತ್ತು ಬಾಣಗಳಿಂದಲು, ಪುರುಮಿತ್ರನನ್ನು ಹತ್ತರಿಂದ ಬಾಧಿಸಿದನು. ನಕುಲ ಸಹದೇವರು ಸೋದರಮಾವನಾದ ಶಲ್ಯನೊಡನೆ ಕಾದುವುದನ್ನು ಕಂಡು ಸೇನೆಯೇ ಆಶ್ಚರ್ಯಪಟ್ಟಿತು.

ಆಗ ಭೀಮಸೇನನ ಕಣ್ಣಿಗೆ ದುರ್ಯೋಧನನು ಬಿದ್ದನು. ತತ್‌ಕ್ಷಣವೇ ವೃಕೋದರನು ಕುರುಕುಲ ನಾಶಕಾರಣನಾದ ಪಾಪಿಯನ್ನು ಕೊಂದುಬಿಡಬೇಕೆಂದು ಗದೆಯನ್ನು ಹಿಡಿದು,

ಮೇಲೇರಿ ಬಂದನು. ಆಗ ದುರ್ಯೋಧನನ ಆಜ್ಞೆಯಂತೆ ಮಾಗಧನು ಹತ್ತು ಸಾವಿರದ ಗಜ ಸೇನೆಯೊಡನೆ ಭೀಮನನ್ನು ಎದುರಿಸಿದನು. ಗದಾಪಾಣಿಯಾದ ಭೀಮಸೇನನು ಸಿಂಹದಂತೆ ಗುಡುಗಿ, ವಜ್ರಸಾರವಾದ ಗದೆಯನ್ನು ತಿರುಗಿಸಿ, ಆನೆಗಳನ್ನು ಸಂಹರಿಸತೊಡಗಿದನು, ವೃತ್ರಹಣನಾದ ಇಂದ್ರನಂತೆ. ಭಯಂಕರನಾದ ಭೀಮನ ಹಿಂದೆ ಧೃಷ್ಟದ್ಯುಮ್ನಾದಿ ವೀರರು ಪೃಷ್ಠರಕ್ಷಕರಾಗಿ ಬಂದರು. ಮಳೆಗರೆವ ಮೇಘಗಳಂತೆ, ಬಾಣಗಳನ್ನು ಬಿಡುವ ಪಾಂಡವವೀರರ ಮುಂದೆ ಶತ್ರುಭಟ ಶಿರಗಳು ಉರುಳಿ, ರಕ್ತ ನದಿಯಲ್ಲಿ ತೇಲಿ ಹೋದವು.

ಮಾಗಧನು ಗಜವನ್ನೇರಿ ಮುತ್ತಲು ಅಭಿಮನ್ಯುವು ಅವನ ಆನೆಯನ್ನೂ ಅವನನ್ನೂ ಎರಡು ಭಲ್ಲಗಳಿಂದ ಯಮಪುರಿಗೆ ಕಳಿಸಿದನು. ಭೀಮಸೇನನು ಗಜಯೂಥದಲ್ಲಿ ಸಿಂಹದಂತೆ ಚರಿಸುತ್ತಾ, ಗಜಗಳನ್ನೆತ್ತಿ ಗಜಗಳ ಮೇಲೆಸೆದು ಕೊಲ್ಲುತ್ತಾ ಬರಿಗೈಲಿ ಗುದ್ದಿ ಒಂದೇಟಿಗೆ ಹತ್ತಾರು ಆನೆಗಳನ್ನು ಉರುಳಿಸುತ್ತಾ, ಅವುಗಳ ಸೊಂಡಲು, ಕಾಲು, ದಂತಗಳನ್ನು ಮುರಿದು, ಬೆನ್ನು ಹೊಟ್ಟೆಗಳನ್ನು ಸೀಳಿ, ಮೇಲಿದ್ದ ಮಾವಟಿಗರನ್ನೂ ವೀರರನ್ನೂ ಗದೆಯಿಂದ ಕುಟ್ಟಿ ಸಂಹರಿಸಿದನು. ಉರುಳಿ ಬೀಳುವ ಕೋಡುಗಲ್ಲುಗಳಂತೆ, ಆನೆಗಳು ರಕ್ತವನ್ನು ಕಾರಿ, ಗೀಳಿಟ್ಟು ಸತ್ತು ಬಿದ್ದವು. ಎರಡನೇ ಯಮನೋ, ಕಾಲಾಂತಕರುದ್ರನೋ ಬಂದು ಸಂಹಾರ ವಿಹಾರವನ್ನು ಮಾಡುವನೆಂಬಂತೆ ಭೀಕರನಾದ ಭೀಮಸೇನನನ್ನು ನೋಡಿ, ಪೀಡಿತವಾದ ಗಜಗಳು ಹುಚ್ಚೆದ್ದು ತಮ್ಮ ಸೈನಿಕರನ್ನೇ ತುಳಿದು ಕೊಲ್ಲುತ್ತಾ ಓಡಿಹೋದವು. ಇಂದ್ರನ ಹಿಂದೆ ನಿಂತು ಕಾದುವ ಅಮರಗಣದಂತೆ ಸೌಭದ್ರ ಪ್ರಮುಖ ವೀರರು ಭೀಮನ ಹಿಂದೆ ನಿಂತು ಕಾದಾಡುತ್ತಿದ್ದರು. ಆನೆಗಳ ರಕ್ತದಿಂದ ಕೆಂಪಾದ ಗದೆಯನ್ನು ಪಿಡಿದು, ಗರ್ಜಿಸುತ್ತಾ ಬರುವ ಭೀಮಸೇನನು, ಪ್ರಳಯ ತಾಂಡವ ರೀತಿಯನ್ನು ರುದ್ರನಿಗೆ ಕಲಿಸಿಕೊಡುತ್ತಿರುವಂತೆ ಕಂಡನು. ಪಶುವಿಶಸನವನ್ನು ಮಾಡಿದ ಪಶುಪತಿಯ ಪಿನಾಕದಂತೆ, ಭೀಮನ ಗದೆಯು ಕೇಶಮಜ್ಜಾಮಿಶ್ರವು, ರಕ್ತಸಿಕ್ತವು ಆಗಿರಲು, ಅದನ್ನು ಪಿಡಿದು ನಿಂತ ಭೀಮಸೇನನು ಸ್ಮಶಾನದಲ್ಲಿ ರುದ್ರನಂತೆ ಕಂಗೊಳಿಸಿದನು.

ಆಗ ದುರ್ಯೋಧನನು ಭೀಮನನ್ನು ಕೊಲ್ಲಿರೆಂದು ಸರ್ವಸೈನಿಕರಿಗೆ ಆಜ್ಞಾಪಿಸಿದನು. ಅವರು ಪ್ರವಾಹವು ಬೆಟ್ಟವನ್ನಂತೆ ಭೀಮನನ್ನು ಮುಟ್ಟಿ ಟಗರು ಢೀ ಕೊಟ್ಟಂತೆ ತಾವೇ ನೊಂದು ಯಮಪುರಿ ಸೇರಿದರು. ಭೀಮನು ಹೆದರದೆ ನಿಂತು ಉಕ್ಕಿಬರುವ ಸೈನ್ಯಸಾಗರವನ್ನು, ಗದಾಹಸ್ತನಾಗಿ ನಿಲ್ಲಿಸಿ, ದಂಡಪಾಣಿ ಯಮನಂತೆ ರೇಗಿ, ಗಜಾಶ್ವಭಟರನ್ನು ಕಾಲಿಂದ ತುಳಿದು ಕೊಂದನು. ರಥದಿಂದ ರಥಿಕರನ್ನು ಕೆಳಗೆಳೆದು, ಗಜಯೋಧರನ್ನು ಗದೆಯಿಂದ ಹೊಡೆದು, ಸಾದಿಗಳನ್ನು ಕುದುರೆಗಳಿಂದ ಒದ್ದು ಉರುಳಿಸಿ, ಭೀಮನು ಗಲಗನ್ನು ಆನೆಯಂತೆ ಸೀಳಿ ತುಳಿದು ಕೊಂದನು. ಮಾರಿಗೌತಣವಿತ್ತು, ರುದ್ರನ ಕಾಲಿಗೆ ಗೆಜ್ಜೆ ಕಟ್ಟಿ ಯಮನ ನರಕದ್ವಾರಗಳನ್ನು ತೆರೆಯಿಸಿ, ರಣರಂಗದಿ ಮಾರಣಹೋಮ ನಡೆಸುವ ಭೀಮಸೇನನನ್ನು ನೋಡಿ, ಕೌರವಸೈನಿಕರು ಓಡತೊಡಗಿದರು. ಬಾಯ್ತೆರೆದು ನುಂಗುತ್ತಾ ಬರುವ ಮೃತ್ಯುದೇವಿಯನ್ನು ಮರೆಸಿ ಮೆರೆಯುವ ವೃಕೋದರನನ್ನು

ತಡೆಯದಿದ್ದರೆ, ಅಂದೇ ಸಕಲ ಕೌರವಸೇನೆಯು ಹಾಳಾಗುವುದೆಂದು ಭೀಷ್ಮನು ಧಾವಿಸಿ ಬಂದು, ಭೀಮನನ್ನು ಮುತ್ತಿದನು. ಆದರೂ ಅವನನ್ನು ತಡೆದು ಸಾತ್ಯಕಿಯು ಬಾಣವರ್ಷವನ್ನು ಸುರಿಸಿ, ಭೀಮನ ಮಾರ್ಗವನ್ನು ನಿರಾಘೂಟವನ್ನಾಗಿಸಿದನು. ಮಧ್ಯಂದಿನ ಸೂರ್ಯನಂತೆ ಬಾಣಕಿರಣಗಳಿಂದ ಉರಿದು ಶತ್ರುಕಕ್ಷವನ್ನು ಸುಡುವ ಸಾತ್ಯಕಿಯನ್ನು ಭೂರಿಶ್ರವನು ಮುತ್ತಿ ಒಂಬತ್ತು ಬಾಣಗಳನ್ನು ಪ್ರಯೋಗಿಸಿದನು. ಸಾತ್ಯಕಿಯು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ವಿಜೃಂಭಿಸಿ, ಅವನ ಶರೀರದಲ್ಲಿ ಹತ್ತು ಶರಗಳನ್ನು ನಾಟಿಸಿದನು. ಕೌರವ-ಪಾಂಡವ ಭಟರು ಆಗ ಭೂರಿಶ್ರವ ಸಾತ್ಯಕಿಯರಿಗೆ ಬೆಂಗಾವಲಾಗಿ ನಿಂತು ಕಾದಾಡಿದರು.

ಭೀಮಸೇನನು ಗದಾಪಾಣಿಯಾಗಿ ನಿನ್ನ ಪುತ್ರರ ಮೇಲೇರಿ ಬಂದನು. ದುರ್ಯೋಧನನು ನಂದಕನೇ ಮೊದಲಾದ ನಿನ್ನ ಪುತ್ರರೊಡನೆ ಭೀಮನನ್ನು ತಡೆದು ಒಂಬತ್ತು ಬಾಣಗಳಿಂದ ಎದೆಯಲ್ಲಿ ಹೊಡೆದನು. ಭೀಮನು ತನ್ನ ರಥವನ್ನಾರೋಹಿಸಿ, 'ವಿಶೋಕ ! ಈ ಕೌರವಶೂರರನ್ನಿಂದು ಯಮನಿಗೆ ಅತಿಥಿಗಳಾಗಿ ಕಳಿಸಬೇಕಾಗಿದೆ. ಅವರ ಕಡೆ ರಥವನ್ನು ಹೊಡೆ ! ವಂಚಕರವರು. ಎಚ್ಚರದಿಂದಿರು !' ಎಂದು ಸಾರಥಿಯನ್ನು ಪ್ರೇರಿಸಿದನು. ಭೀಮನು ನಂದಕನಲ್ಲಿ ಮೂರು ಬಾಣಗಳನ್ನು ನಾಟಿಸಿ, ದುರ್ಯೋಧನನ ಅರವತ್ತು ಬಾಣಗಳನ್ನು ಖಂಡಿಸಿದನು. ಸುಯೋಧನನು ಮೂರು ನಾರಸಗಳಿಂದ ವಿಶೋಕನನ್ನು ಗಾಯಗೊಳಿಸಿ, ಭೀಮಸೇನನ ಕನಕಧನುವನ್ನು ಮುರಿದನು. ಭೀಮನು ಕ್ರುದ್ಧನಾಗಿ ಬೇರೊಂದು ದಿವ್ಯ ಧನುವನ್ನು ಹಿಡಿದು ಒಂದು ಭಲ್ಲದಿಂದ ದುರ್ಯೋಧನನ ಬಿಲ್ಲನ್ನು ಮುರಿದನು. ಅವನು ಬೇರೊಂದು ಬಿಲ್ಲನ್ನೆತ್ತಿ ಭಲ್ಲದಿಂದ ಭೀಮನ ಎದೆಗೆ ಹೊಡೆದನು. ಭೀಮನು ಮೂರ್ಛೆ ಬಂದಂತೆ ರಥದ ಮೇಲೆ ಸುಮ್ಮನೆ ಕೂತನು. ಅದನ್ನು ಕಂಡು ಭೀತರಾಗಿ ಅಭಿಮನ್ಯು ಮುಂತಾದ ವೀರರು ನಿನ್ನ ಮಗನನ್ನು ತಡೆದು, ಕುರುಸೇನೆಯನ್ನು ಶರವರ್ಷದಲ್ಲಿ ಮುಳುಗಿಸಿದರು. ಭೀಮಸೇನನು ಮತ್ತೆ ಎಚ್ಚತ್ತಂತಾಗಿ, ದುರ್ಯೋಧನನನ್ನು ಮೂರು ಬಾಣಗಳಿಂದ ಮೂಲೆಗೆಡಹಿ, ಶಲ್ಯನನ್ನು ಇಪ್ಪತ್ತೈದರಿಂದ ಹೊಡೆಯಲು, ಅವರೀರ್ವರು ಭೀತರಾಗಿ ಓಡಿಹೋದರು. ಭಗದತ್ತ ದ್ರೌಣಿಕೃಪರೂ ಓಡಿಹೋದರು. ಆಗ ನಿನ್ನ ಸುತರು ಸುಷೇಣ, ಜಲಸಂಧ, ಸುಲೋಚನ, ಉಗ್ರ, ಭೀಮರಥ, ಭೀಮ, ವೀರಬಾಹು, ಅಲೋಲುಪ, ದುರ್ಮುಖ, ದುಷ್ಪ್ರಧರ್ಷ, ವಿವಿತ್ಸು ವಿಕಟ, ಸಮ, ಸೇನಾಪತಿಗಳೆಂಬ ಹದಿನಾಲ್ಕು ವೀರರು ಭೀಮಸೇನನನ್ನು ಒಮ್ಮೆಗೆ ಮುತ್ತಿ ಬಾಣ ಪೀಡಿತನನ್ನಾಗಿಸಿದರು. ಭೀಮಸೇನನು ಪಶುಗಳನ್ನು ಕಂಡ ತೋಳದಂತೆ ತುಟಿ ಸವರುತ್ತಾ, ಗರುಡ ವೇಗದಿಂದ ಬಂದು, ಸೇನಾಪತಿ ಶಿರವನ್ನು ಕ್ಷುರಪ್ರದಿಂದ ಛೇದಿಸಿದನು: ಮೂರು ಬಾಣಗಳಿಂದ ಜಲಸಂಧನನ್ನು ಕೊಂದು, ಒಂದರಿಂದ ಸುಷೇಣನನ್ನು ಸಂಹರಿಸಿದನು. ಉಗ್ರನನ್ನು ಒಂದು ಬಾಣದಿಂದಲು, ವೀರಬಾಹುವನ್ನು ಎಪ್ಪತ್ತರಿಂದಲು ಎರಡರಿಂದ ಭೀಮ ಭೀಮರಥರನ್ನು, ಕ್ಷುರಪ್ರದಿಂದ ಸುಲೋಚನನನ್ನು ಒಟ್ಟು ಇಪ್ಪತ್ತೈದು ವೀರಕೌರವರನ್ನು ಕೊಂದು, ಸಿಂಹನಾದವನ್ನು ಮಾಡಿದನು.

ಮಿಕ್ಕವರು ಭೀತರಾಗಿ ಓಡತೊಡಗಲು, ಭೀಷ್ಮನು ಅವರಿಗೆ ಧೈರ್ಯ ತುಂಬಿ ತಾನೂ ಪಾಂಡವ ಸೇನೆಯೊಡನೆ ಕಾದಿ, ಅನೇಕರನ್ನು ಸಂಹರಿಸಿದನು.

ಭಗದತ್ತನು ಸುಪ್ರತೀಕವೆಂಬ ಆನೆಯನ್ನೇರಿ ಬಂದು ಭೀಮಸೇನನನ್ನು ಬಾಣ ವರ್ಷದಿಂದ, ಮೇಘವು ಸೂರ್ಯನನ್ನಂತೆ, ಮುಚ್ಚಿದನು. ಅಭಿಮನ್ಯು ಮುಂತಾದ ವೀರರು ಧಾವಿಸಿ ಬಂದು, ನಾನಾ ಬಾಣಗಳಿಂದ ಪೀಡಿಸಲು ಸುಪ್ರತೀಕವು ನಾನಾ ಶರೀರ ಭಾಗಗಳಿಂದ ಸೋರುವ ರಕ್ತದಲ್ಲಿ ತೊಯ್ದು ಕೆಂಪಾನೆಯಂತೆ ಕಾಣಿಸಿತು. ಭಗದತ್ತನಿಂದ ಚೋದಿತವಾಗಿ, ಆ ಮದಗಜವು ಘೀಂಕರಿಸಿ ಪಾಂಡವ ಸೈನಿಕರನ್ನು ತುಳಿದುಕೊಂದು ಕೆಡಹಿತು. ಭಗದತ್ತನು ನಿಶಿತಬಾಣದಿಂದ ಸ್ತನಾಂತರದಿ ಹೊಡೆಯಲು, ಭೀಮಸೇನನು ಸ್ವಲ್ಪ ಸುಮ್ಮನಿದ್ದು ಮತ್ತೆ ಚೇತರಿಸಿಕೊಂಡು, ಅವನಲ್ಲಿರುವ ವೈಷ್ಣವಾಸ್ತ್ರವನ್ನರಿತು ಅದರಲ್ಲಿರುವ ಗೌರವದಿಂದಲು ಶ್ರೀಹರಿಯು ಮುಖ್ಯಾನುಗ್ರಹವನ್ನು ಮಾಡಿರುವುದರಿಂದ ತನ್ನನ್ನು ಯಾರೂ ಸಂಹರಿಸಲಾಗಲಿ, ಗಾಯಪಡಿಸಲಾಗಲಿ ಸಮರ್ಥರಲ್ಲವೆಂದು ತಿಳಿದಿರುವುದರಿಂದಲು ಸುಮ್ಮನಿದ್ದನು: ಭೀಮನಿಗೆ ಪರಾಜಯವಿಲ್ಲ, ಮೂರ್ಛಾದಿಗಳೂ ಇಲ್ಲ, ಮುಖ್ಯಪ್ರಾಣಾವತಾರನಿಗೆ ರಣಭಯವಿಲ್ಲ, ಮರಣಭಯವಂತೂ ಇಲ್ಲವೇ ಇಲ್ಲ. ಆದರೂ ಮೂರ್ಛೆಗೊಂಡಂತೆ ಮಾಡುವುದೆಂದರೆ ದುಷ್ಟಜನ ಮೋಹನಾರ್ಥವಾಗಿ ಮತ್ತು ತನ್ನೊಡನೆ ಕಾದುವ ವೀರರ ನಿಜ ಹಿರಿಮೆ ತೋರಿ ಕೊಡಲು ಎಂದು ತಿಳಿ !

ಆಗ ಘಟೋತ್ಕಚನು ಮಾಯಾ ಬಲದಿಂದ ನಾಲ್ಕಾನೆಗಳನ್ನು ಸೃಜಿಸಿದನು. ಐರಾವತವನ್ನೇರಿ ತಾನು ಅಂಜನ, ಸುಪ್ರಭ, ವಾಮನವೆಂಬ ಮಾಯಾ ಗಜಗಳನ್ನೇರಿ ಮಿಕ್ಕ ರಾಕ್ಷಸ ಸೇನಾದಿಗಳು ಮೂವರಿಂದ ಕೂಡಿ, ಭಗದತ್ತನಿಂದ ಹೋರಾಡಿದನು. ನಾಲ್ಕಾನೆಗಳು ದಂತಗಳಿಂದ ಪೀಡಿಸಲು, ಭಗದತ್ತನ ಆನೆ ವೇದನಾತುರವಾಗಿ ಗೀಳಿಟ್ಟಿತು. ಅದರ ಆರ್ತಧ್ವಾನವನ್ನು ಕೇಳಿ, ಭೀಷ್ಮನು ಕಾಲ ಮೃತ್ಯುಗಳಂತೆ ಹೋರಾಡುತ್ತಿರುವ ಭಗದತ್ತ ಘಟೋತ್ಕಚರನ್ನರಿತು, ಭೂರಿಶ್ರವ ದ್ರೋಣಾದಿಗಳಿಂದ ಕೂಡಿ, ಭಗದತ್ತನನ್ನು ರಕ್ಷಿಸಲು ಬಂದನು. ಅವರನ್ನು ಧರ್ಮರಾಜಾದಿಗಳು ತಡೆದು ಕಾದಿದರು. ಭಗದತ್ತನು ಭೀಮಾರ್ಜುನರಿಬ್ಬರಲ್ಲಿ ಬಿಟ್ಟು ಬೇರೆಯವರಲ್ಲಿ ಶ್ರೀ ವರಾಹದೇವನು ಪ್ರಸಾದಿಸಿದ ವೈಷ್ಣವಾಸ್ತ್ರವನ್ನು ಪ್ರಯೋಗಿಸನೆಂದೇ ತಿಳಿದ ಭೀಮನು ಮಗನ ಸಾಹಸವನ್ನು ಮೆಚ್ಚುತ್ತ ಅವಕಾಶವನ್ನೀಯಲು, ಘಟೋತ್ಕಚನು ಕಾಳ್ಗಿಚ್ಚಿನಂತೆ ವಿಜೃಂಭಿಸಿ, ಭಗದತ್ತನನ್ನು ಹಿಂದಿರುಗಿಸಿ ಕೌರವ ಸೇನೆಯನ್ನು ಆನೆಗಳಿಂದ ತುಳಿಸಿ ಕೊಲ್ಲುತ್ತಿದ್ದನು. ಅದನ್ನು ಕಂಡು ಭೀಷ್ಮನು, 'ಆಚಾರ್ಯ ! ಈಗ ಭೀಮ ಸಹಾಯನಾಗಿರುವ ರಾಕ್ಷಸಕುಮಾರನೊಡನೆ ಯುದ್ಧವಾಡುವುದು ನನಗೆ ಹಿತಕರವಾಗಿ ತೋರದು ಪಾಂಡವರು ಜಿತಕಾಶಿಗಳಾಗಿ ಉತ್ಸಾಹದಿಂದಿರುವರು. ನಾವು ಶ್ರಾಂತರಾಗಿರುವೆವು. ನಾಳೆ ನೋಡೋಣ. ಇಂದು ಯುದ್ಧವನ್ನು ನಿಲ್ಲಿಸುವುದುಚಿತ' ವೆಂದು ದ್ರೋಣನಿಂದ ಆಲೋಚಿಸಿ, ಸೇನಾವಹಾರವನ್ನು ಮಾಡಿದನು.

ಪಾಂಡವರು ಜಯಶಾಲಿಗಳಾಗಿ ಸಿಂಹನಾದಗಳನ್ನು ಮಾಡುತ್ತಾ, ಘಟೋತ್ಕಚಾಭಿಮನ್ಯು, ಪಾರ್ಥ ಭೀಮರನ್ನು ಕೊಂಡಾಡುತ್ತಾ ತಮ್ಮ ಶಿಬಿರಗಳನ್ನು ಸೇರಿದರು 'ಎಂದು ಸಂಜಯನು ನುಡಿದನು.

## ೨೭. ಶ್ರೀಕೃಷ್ಣ ಮಹಿಮೆ

ಧೃತರಾಷ್ಟ್ರನು 'ಸಂಜಯ ! ನನಗೆ ಭಯವಾಗುತ್ತಿದೆ. ಆಶ್ಚರ್ಯವೂ ಮೂಡಿ ಬರುತ್ತಿದೆ. ದೇವತೆಗಳಿಗೂ ದುಷ್ಕರವಾದ ವೀರಕರ್ಮಗಳನ್ನು ಪಾಂಡವರು ಮಾಡುತ್ತಿರುವುದನ್ನೂ, ನನ್ನ ಸುತರ ಸೋಲನ್ನೂ ಕೇಳಿ, ಚಿಂತೆಯಾಗಿದೆ, ಎಂದು ಏನಾಗುವುದೋ ಎಂಬ ಭೀತಿ, ವಿದುರಹಿತವನ್ನು ಕೇಳಲಿಲ್ಲವೆಂಬ ಪಶ್ಚಾತ್ತಾಪ - ಎರಡೂ ಕಲೆತು ನನ್ನ ಮನವನ್ನು ಕ್ಷೋಭಗೊಳಿಸಿವೆ. ಭೀಷ್ಮ, ದ್ರೋಣರಂತಹ ಮಹಾವೀರರನ್ನೂ ಲೆಕ್ಕಿಸದೆ ಕಾದುವಷ್ಟು ಶಕ್ತಿ ಪಾಂಡವರಿಗೆ ಯಾವ ತಪಸ್ಸಿನಿಂದ ಬಂತು? ಯಾವ ದೇವರ ವರವಿರಬಹುದು? ನನ್ನ ಸುತರೆಲ್ಲ ವಧ್ಯರು, ಪಾಂಡುಸುತರು ಅವಧ್ಯರು ಆಗಿರುವಂತಿದೆ. ದೈವವು ಕಡುಕ್ರೂರವಾಗಿ ನನ್ನನ್ನೇ ಶಿಕ್ಷಿಸುತ್ತಿದೆ. ದುಃಖದ ಪಾರಗಾಣದೆ, ಕೈಗಳಿಂದ ಕಂಧಿಯನ್ನು ಈಜುವ ಹುಚ್ಚನಂತೆ, ನಿರ್ವಿಣ್ಣನಾಗಿರುವೆನು. ರಣಕಣದಲ್ಲಿ ಭೀಮಸೇನನಿಂದ ನನ್ನ ಸುತರನ್ನು ಕಾಪಾಡುವವರಾರೂ ಇಲ್ಲದಂತಾಯಿತು . ಏನು ಮಾಡಲಿ ? ಮುಂದೇನಾಯಿತು ಹೇಳು ! ' ಎಂದನು.

ಸಂಜಯನು ನಿರೂಪಿಸಿದನು: 'ರಾಜನ್ ! ಪಾಂಡವರು ಮಂತ್ರ ಮಾಟಗಳನ್ನರಿಯರು. ಅವರಲ್ಲಿ ಕಾಪಟ್ಯವಿಲ್ಲ. ಅವರು ಬರಿ ಹೆದರಿಸಿ ಜಯಿಸುವವರಲ್ಲ. ಶಕ್ತಿಯಿಂದ ಧರ್ಮಯುದ್ಧವನ್ನು ಮಾಡಿ ಅವರು ಜಯಸುತ್ತಿರುವರು. ಅವರ ಕಾರ್ಯಗಳೆಲ್ಲವು ಧರ್ಮಾರಂಭಗಳು, ಧರ್ಮ ಫಲಗಳು, ಅವರಿಗೆ ಧರ್ಮ ಕೀರ್ತಿಗಳು ಬೇಕು. ಅವರಲ್ಲಿ ಧರ್ಮವಿದೆ; ಅಲ್ಲಿ ಜಯವಿದೆ. ನಿನ್ನ ಸುತರು ಪಾಪಜೀವನರು; ನಿಷ್ಠುರರು; ಹೀನಕರ್ಮಿಗಳು; ಅವರು ಮಾಡಿದ ಕುಕೃತ್ಯಗಳನ್ನು ಎಣಿಸಲಾಗದು. ಯಾವ ನೀಚರೂ ಅಂತಹದನ್ನು ಮಾಡಲಾರರು. ಅವರು ತಮ್ಮ ಬಲವನ್ನರಿಯರು, ಎದುರು ನಿಂತ ಶತ್ರುಬಲವನ್ನು; ತಿಳಿಯರು ಅವರ ಪಾಪದ ಫಲವನ್ನೀಗ ಉಣ್ಣಬೇಕಾಗಿದೆ. ಜೂಜಿನ ಹೊಗೆಯಾಡಿ, ದ್ರೌಪದೀ ಪರಿಭವಾಗ್ನಿಯು, ವನದಲ್ಲಿ ಬಲಿತು, ಅಜ್ಞಾತವಾಗಿದ್ದು ಈಗ ರೇಗಿ ಉರಿದೆದ್ದು ನಿನ್ನ ವಂಶವನ್ನೆಲ್ಲ ಸುಟ್ಟುಬಿಡುತ್ತಿದೆ. ಭೀಮವಾತವೇ ಅದನ್ನು ಬೀಸಿ ಹಬ್ಬಿಸುತ್ತಿದೆ. ನಿನ್ನ ಸುತರಾರೂ ಉಳಿಯರು.

ಮಹಾರಾಜ ! ವಿದುರನು ಯುದ್ಧ ಬೇಡವೆಂದನು. ನಾನೂ ಹೇಳಿದೆನು. ಭೀಷ್ಮ ದ್ರೋಣಾದಿ ಪೂಜ್ಯರೂ ತಿಳಿ ಹೇಳಿದರು. ನೀನು ಕೇಳಲಿಲ್ಲ, ನಿನ್ನ ಮಗನೂ ಕೇಳಲಿಲ್ಲ. ಮಕ್ಕಳಂತೆ ನಡೆವ ಮಮತಾ ದುಷ್ಟ ಮಾನಸನಿಗೆ ಮಾಧವನ ಮಾತೂ ರುಚಿಸದಾಯಿತು. ಕೇಳು ಪಾಂಡವ ಜಯ ಕಾರಣವನ್ನು !

. ನಾಲ್ಕನೆಯ ದಿನ ರಾತ್ರಿ ನಿನ್ನ ಮಗ ದುರ್ಯೋಧನನು ಭೀಷ್ಮನ ಶಿಬಿರವನ್ನು ಸೇರಿ, ಅವನಿಗೆ ವಂದಿಸಿ ಇಂತೆಂದನು: 'ಪಿತಾಮಹ ! ನೀನು ದ್ರೋಣ ಶಲ್ಯಕೃಪ ಗುರುಪುತ್ರರೆಂದರೆ ದೇವತೆಗಳಿಗೂ ಅಜೇಯರು. ಕೃತವರ್ಮ ಸುದಕ್ಷಿಣ ಭೂರಿಶ್ರವ ವಿಕರ್ಣ ಭಗದತ್ತರೂ ಸಾಮಾನ್ಯರಲ್ಲ. ಮೂರುಲೋಕದ ಸೇನೆ ಎತ್ತಿ ಬಂದರೂ ಹೆದರದೆ ಗೆಲ್ಲುವ ನಿಮಗೆ ಪಾಂಡವರನ್ನು ಗೆಲ್ಲಲಾಗದೆಂದರೆ ನನಗೆ ಆಶ್ಚರ್ಯ, ಸಂಶಯಗಳು ಮನದಿ ಮೂಡಿವೆ. ಪಾಂಡವರು ಪದೇ ಪದೇ ನಮ್ಮನ್ನು ಗೆಲ್ಲಲು ಕಾರಣವೇನು? ಅವರಿಗೆ ಯಾರ ಬಲವಿದೆ?' ಆ ಮಾತನ್ನಾಲಿಸಿ ಭೀಷ್ಮನು ಇಂತೆಂದನು.

'ರಾಜನ್ ! ಕೇಳು ! ಎಷ್ಟೋ ಸಲ ಹೇಳಿದ ನನ್ನ ಹಿತವಚನವನ್ನು ನೀನು ಕೇಳದಿರುವೆ ! ಪಾಂಡವರಿಂದ ಸಂಧಿ ಮಾಡಿಕೊಂಡು, ಉಭಯರೂ ಸುಖವಾಗಿರಿ ಎಂದು ನಾನು ಎಷ್ಟು ಹೇಳಿದರೂ ಕೇಳದೆ ಇಷ್ಟನರ್ಥವನ್ನು ತಂದುಕೊಂಡೆ ! ಪಾಂಡವರನ್ನು ಗೆಲ್ಲುವ ವೀರನೀ ಈರೇಳು ಲೋಕಗಳಲ್ಲಿಯೂ ಇದ್ದಿಲ್ಲ, ಈಗ ಇರುವುದೂ ಇಲ್ಲ. ಅವರು ಅಜೇಯರಾಗಿರಲು ಕಾರಣವಿದೆ. ಆ ದೇವರಹಸ್ಯವನ್ನು ನಾನು ಮುನಿಗಳ ಮುಖದಿಂದ ಕೇಳಿರುವೆನು.

ಪೂರ್ವದಲ್ಲಿ ಗಂಧಮಾದನ ಪರ್ವತದಲ್ಲಿ ಬಂದಿದ್ದ ಬ್ರಹ್ಮದೇವನನ್ನು ರುದ್ರಾದಿ ವೃಂದಾರಕರು ಸೇವಿಸುತ್ತಿದ್ದರು. ಇದ್ದಕ್ಕಿದ್ದಂತೆ ಒಂದು ದಿವ್ಯ ವಿಮಾನವು ಗೋಚರವಾಗಲು, ಚತುರ್ಮುಖನು ತಟ್ಟನೆ ನಿಂತು, ವಂದಿಸಿ, ಆನಂದದಿಂದ (ಶ್ರೀ ಹರಿಯನ್ನು) ಸ್ತುತಿಸತೊಡಗಿದರು. ಅದನ್ನು ಕಂಡು, ದೇವತೆಗಳು ಋಷಿಗಳು ಕೂಡ ಎದ್ದು ಕೈ ಜೋಡಿಸಿ ನಿಂತರು. ಬ್ರಹ್ಮದೇವನಿಂತು ಸ್ತುತಿಸಿದನು:

"ವಿಶ್ವೇಶ ! ವಿಶ್ವನಾಮಕ ! ವಿಶ್ವವೆಲ್ಲ ವ್ಯಾಪಿಸಿ ವಿಷ್ಣುವೆನಿಸುವ ಪ್ರಭೋ ! ನಿನ್ನ ಸೇನೆ ಸುಜನ ರಕ್ಷವಾಗಿ ಎಲ್ಲೆಡೆ ನಿಂತಿದೆ. ನೀನೇ ಸಕಲ ಕರ್ಮಪ್ರೇರಕನು, ನಿನಗೆ ಪ್ರಭುವಿನ್ನೋರ್ವನಿಲ್ಲ. ವಾಸುದೇವ ! ಸಕಲೋಪಾಯವನ್ನರಿತ ಸರ್ವಜ್ಞ ! ಲೋಕಹಿತವೇ ನಿನ್ನ ಹಿತ ! ಜ್ಞಾನ, ಭಕ್ತಿ ವೈರಾಗ್ಯಗಳೆಂಬ ಮೂರು ಮಾರ್ಗಗಳಿಂದ ನಿನ್ನನ್ನು ತಿಳಿಯಬಹುದಾಗಿದೆ. ನಿನ್ನ ನಾಭಿಯಿಂದ ಬಂದ ಜಗತ್ಪದ್ಮದಲ್ಲಿ ನನ್ನನ್ನು ಸೃಜಿಸಿದೆ ! ನಿನ್ನನ್ನು ನೀನೇ ಸೃಜಿಸಿಕೊಂಡು ಅವತರಿಸಿರುವೆ ! ಅನಂತ ಕಲ್ಯಾಣಗುಣ ನಿಧಿಯಾದ ನಿನಗೆ ಎಣೆಯಿಲ್ಲ. ನೀನೇ ಎಲ್ಲರಿಗೂ ಆಧಾರನು, ಪೋಷಕನು, ಜ್ಞಾನಪ್ರದನು, ಸಂಹಾರಕನೂ ಆಗಿರುವೆ ! ನಾರಾಯಣ ! ಶಾರ್ಙ್ಗಧನುರ್ಧರ ! ಲೋಕೇಶ್ವರ ! ವಿಶ್ವವೇ ನಿನ್ನ ಪ್ರತಿಮೆ. ನಿನಗೆ ಜನನ-ಮರಣ ರೋಗ ಚಿಂತಾ ಲೇಪಗಳಿಲ್ಲ. ಆದಿವರಾಹನಾದೆ ! ಆನಂದಮಯವಾದ ಕೇಶಾದಿ ಸರ್ವಸುಂದರಾಂಗನಾಗಿರುವೆ ! ಲಕ್ಷ್ಮೀರಮಣ ! ಅಮಿತಗುಣ ! ಅವ್ಯಯ ! ಚಿನ್ಮಯ ! ಕಾರ್ಯಕಾರಣಾತ್ಮಕವಾದ ಜಗವೆಲ್ಲ ನಿನ್ನಿಂದ ಪಾಲಿತವಾಗಿದೆ ! ಸರ್ವೇಂದ್ರಿಯಗಳು ವಿಷಯಗಳತ್ತ ಧಾವಿಸುವುದು ನಿನ್ನಿಂದ. ಭಕ್ತ ಕಾಮಿತಗಳನ್ನೀವಲ್ಲಿ ನಿನಗೆ ಸಮರಿಲ್ಲ. ಬ್ರಹ್ಮರುದ್ರೇಂದ್ರಾದಿಗಳಿಗೂ ನಿನ್ನ ಅನಂತಮಹಿಮೆಯನ್ನು ಸಾಕಲ್ಯೇನ ತಿಳಿಯಲಾಗದು. ಧರ್ಮವನ್ನರಿತು ನಡೆಸುವೆ !

ನೀತಿಯನ್ನರಿತು ಗೆಲಿಸುವೆ ! ನಿನ್ನನ್ನು ಯಾರೂ ಗೆಲ್ಲಲಾರರು. ಎಂದಿಗೂ ಪೂರ್ಣವಾಗಿ ತಿಳಿಯಲಾರರು. ಲೋಕೇಶ ! ಕಾಲವನ್ನು ನೀನು ನಡೆಸುವೆ ! ಪ್ರಭವ ಪ್ರಳಯಗಳು ನಿನ್ನಿಂದ. ಬ್ರಾಹ್ಮಣರಾದಿ ಭಕ್ತರು ಪ್ರೀತಿಸುವುದು ನಿನ್ನನ್ನು. ಜ್ಞಾನಿಗಳು ಮಾಡುವ ಸುಕರ್ಮಗಳು ನಿನ್ನ ಪ್ರೀತಿಗಾಗಿ. ಮುಕ್ತರಿಗೂ ಆನಂದ ನಿನ್ನಿಂದ. ಪ್ರಜಾಪತಿಗಳ ಒಡೆಯನು ನೀನು. ನಿನ್ನವರು ಅಸೂಯಾ ರಾಗ ದ್ವೇಷ ಕಾಪಟ್ಯಗಳಿಲ್ಲದವರು. ಜಯಗೋವಿಂದ ! ಜಯ ದಾಮೋದರ ! ನಿನ್ನ ಪಾದದಿಂದ ಭೂಮಿ; ನಿನ್ನ ಬಾಹುಗಳಿಂದ ಲೋಕಪಾಲರು; ನಿನ್ನ ಕಿವಿಗಳಿಂದ ದಿಕ್ಕುಗಳು; ನಿನ್ನ ಉದರದಿಂದ ಸಮುದ್ರಗಳು ; ನಿನ್ನ ಶಿರದಿಂದ ದ್ಯುಲೋಕ ; ನಿನ್ನ ಪ್ರಾಣದಿಂದ ಮುಖ್ಯ ಪ್ರಾಣ; ನಿನಗೆ ಮುಖ್ಯಾಧಿಷ್ಠಾನವೆಂದರೆ ನಾನು (ಚತುರ್ಮುಖ ಮುಖ್ಯಪ್ರಾಣರು); ನಿನ್ನ ಕಣ್ಣಿಂದ ಸೂರ್ಯಚಂದ್ರರು; ತಪವೇ ನಿನ್ನ ಬಲ ; ಸತ್ಯವೇ ನಿನ್ನ ಜ್ಞಾನ; ಆರ್ಜವವೇ ನಿನ್ನ ಕರ್ಮ; ನಿನ್ನ ಮೂಗಿನಿಂದ ಅಶ್ವಿನೀ ದೇವದ್ವಯ; ನಿನ್ನ ನಾಲಿಗೆಯಿಂದ ದೇವೀ ಸರಸ್ವತಿ; ನಿನ್ನ ಉಸಿರೇ ವೇದಗಳು; ನಿಂದೀಜಗವೆಲ್ಲವು. ನಿನ್ನ ಮಹಿಮೆಯನ್ನು, ತೇಜವನ್ನು, ಪರಾಕ್ರಮವನ್ನು, ಅವತಾರಸಂಖ್ಯೆಯನ್ನು, ಅನಂತಕಲ್ಯಾಣಗುಣಗಳನ್ನು ಯಾರೂ ಪೂರ್ಣವಾಗಿ ತಿಳಿಯಲಾರರು. ನಿನ್ನ ಪ್ರಸಾದಗುಣದ ಪ್ರತಿಬಿಂಬನಾದ ನಾನು ಸೃಜಿಸುವುದು ನಿನ್ನ ಆಜ್ಞೆಯಿಂದ. ನಿನ್ನ ಕ್ರೋಧಗುಣದ ಪ್ರತಿಬಿಂಬನಾದ ರುದ್ರನು ಸಂಹರಿಸುವುದು ನಿನ್ನಾಜ್ಞೆಯಂತೆ; ಪದ್ಮನಾಭ ! ಕೃಷ್ಣ ! ದುಃಸ್ವಪ್ನಫಲನಾಶನ ! ನಮಗೆ ನೀನೇ ಗತಿ ! ನೀನೇ ಗುರು ! ನೀನೇ ದೈವವು ! ನಿನ್ನ ಪ್ರಸಾದದಿಂದ ನಾವು ಸುಖಿಗಳಾಗಿರುವೆವು.

ಪೃಥಿವಿಗೆ ಭಾರಭೂತರಾಗಿರುವ ದುಷ್ಟರನ್ನು ಸಂಹರಿಸಲು, ಸುಜನರನ್ನು ಸಂರಕ್ಷಿಸಲು, ಯದುವಂಶದಲ್ಲಿ ಅವತರಿಸು ! ಶ್ರೀಕೃಷ್ಣನೆನಿಸು ! ನನ್ನ ವಿಜ್ಞಾಪನೆಯನ್ನು ಮನ್ನಿಸು ! ನಿನ್ನಿಂದ ಪ್ರೇರಿತನಾಗಿ, ನೀ ನುಡಿಸಿದಂತೆ ನಿನ್ನನ್ನು ಸ್ತುತಿಸಿ, ನಮಿಸುವ ನಿನ್ನ ಭಕ್ತನ ಮೊರೆಯನ್ನಾಲಿಸು ! ವಾಸುದೇವನಾದೆ ಮೊದಲು ನಾರಾಯಣಾ ! ಆಮೇಲೆ ಸಂಕರ್ಷಣನಾದೆ ! ಪ್ರದ್ಯುಮ್ನನಾಗಿ, ಆಮೇಲೆ ಅನಿರುದ್ಧನಾದೆ ! ನನ್ನನ್ನು ಸೃಜಿಸಿದೆ ! ಪ್ರಭೋ ! ನನಗೆ ನಿನ್ನ ಸರ್ವೋತ್ತಮತ್ವಜ್ಞಾನವಾವಾಗಲೂ ಜಾಗ್ರತವಾಗಿರಲಿ ! ಅವತರಿಸಿ, ಅಸುರರನ್ನು ಸಂಹರಿಸಿ, ಧರ್ಮವನ್ನು ಸ್ಥಾಪಿಸಿ, ಮತ್ತೆ ಪರಂಧಾಮವನ್ನುಸೇರುವ ನಿನ್ನ ಪವಿತ್ರ ಚರಿತ್ರವನ್ನು ಪಾಡಿ ದೇವ ಋಷಿ ಸುಜನರು ಪಾವನರಾಗಲಿ ! ವರದರಾಜ ! ವಿಪ್ರಪ್ರಿಯ ! ಶ್ರೀನಿವಾಸ ! ನಮೋನಮಃ ! "

ಬ್ರಹ್ಮದೇವನ ಸ್ತುತಿಗೆ ಪ್ರಸನ್ನನಾದ ಶ್ರೀಶನು ಮೇಘ ಗಂಭೀರಸ್ವನದಿಂದಿಂತೆಂದನು: 'ವತ್ಸ ! ನಿನ್ನ ಕಾಮಿತವನ್ನು ಮೊದಲೇ ಅರಿತಿರುವೆನು. ಆಗಲಿ ! ನಾನು ಸುಜನರ ರಕ್ಷಣೆಗೆಂದು ಅವತರಿಸುವೆನು " ಎಂದು ಅಂತರ್ಧಾನವಾದ ಹರಿಗೆ ವಂದಿಸಿದ ಚತುರ್ಮುಖನಿಗೆ ವಂದಿಸಿ, ದೇವರ್ಷಿಗಂಧರ್ವರು 'ಸ್ವಾಮೀ ! ಯಾರೊಡನೆ ತಾವು ಮಾತಾಡಿದಿರಿ ? ವಂದಿಸಿ, ವಿನಯದಿಂದ ನೀವು ಬೇಡಿದ್ದೇನು ? ದಯ ಮಾಡಿ ಹೇಳಿ !' ಎಂದು ಪ್ರಾರ್ಥಿಸಿದರು. ಆಗ ವಿಧಾತನಿಂತೆಂದನು: 'ಹಿಂದಿದ್ದ, ಈಗಿರುವ,

ಮುಂದೆ ಬ್ರಹ್ಮಾಂಡಗಳಿಗೆ ಒಡೆಯನಾದ ಶ್ರೀರಮಣನನ್ನು ಕಂಡೆನು. ನಮ್ಮಪ್ಪನನ್ನು ಕಂಡೆನು. ಜಗದನುಗ್ರಹಕ್ಕಾಗಿ ಅವತರಿಸೆಂದು ಬೇಡಿಕೊಂಡೆನು. ಹಿಂದೆ ರಣನಿಹತರಾದ ರಾಕ್ಷಸರು ಈಗ ರಾಜಾದಿನರರೂಪರಾಗಿ ಹುಟ್ಟಿ, ಕುಕಾರ್ಯಗಳಿಂದ ಭೂಭಾರ ಭೂತರಾಗಿರುವುದರಿಂದ ಅವರನ್ನು ಕೊಂದು ಸುಜನರನ್ನು ಸಲಹೆಂದನು. ನರನಾರಾಯಣರು ಶೇಷವಿಷ್ಣುಗಳಲ್ಲವೇ ? ಅವರಲ್ಲಿ ನಮ್ಮ ಜನಕನಾದ ನಾರಾಯಣರ್ಷಿಯೇ ಶ್ರೀಕೃಷ್ಣನಾಗಿ ಯದುಕುಲದಿ ಅವತರಿಸಿರುವನು. ನರನೇ ಆವೇಶದಿಂದ ಇಂದ್ರಾಂಶನಾದ ಅರ್ಜುನನಲ್ಲಿರುವನು. ಭೂಭಾರಕ್ಷಪಣ ಕಾರ್ಯದಲ್ಲಿ ಪ್ರಧಾನಾಂಗನಾದ ಮುಖ್ಯಪ್ರಾಣನೇ ಭೀಮನಾಗಿರುವವನು. ಆದುದರಿಂದ ದೇವತೆಗಳಿರಾ ! ಮನು ಲೋಕದಲ್ಲಿ ನೀವು ಅವತರಿಸಿರುವಾಗ ಆಗಲಿ, ಎಲ್ಲಾಗಲಿ ಶ್ರೀಕೃಷ್ಣ ಭೀಮಾರ್ಜುನರನ್ನು ಅವಮಾನಿಸಬೇಡಿ ! ಅವರನ್ನು ಸಾಮಾನ್ಯ ಮನುಜರೆಂದು ತಿಳಿಯುವದಕ್ಕಿಂತ ಹೆಚ್ಚಾದ ಅವಮಾನವಿಲ್ಲ. ಅಂತಹ ಅಪರಾಧವನ್ನು ನೀವು ಎಂದಿಗೂ ಮಾಡಬೇಡಿ ! ಶ್ರೀಕೃಷ್ಣನನ್ನು ಮನುಜಮಾತ್ರನೆಂಬುವ ನಷ್ಟನರಾಧಮನಿನ್ನೋರ್ವನಿಲ್ಲ. ಇದ್ದರೆ ಅವನು ಅಸುರನೇ ಸರಿ ! ಅವರಲ್ಲಿ ಅತ್ಯಂತ ನೀಚನಾದ ಕಲಿಯು ಅಂತೇ ತಿಳಿದು, ಶ್ರೀಶನನ್ನವಮಾನಿಸಿ ಮಹಾಂಧಃತಮಸ್ಸನ್ನು ಹೊಂದುವನು. '

ಇಂತು ನುಡಿದು ಬ್ರಹ್ಮದೇವನು ದೇವಾದಿಗಳಿಗೆ ಅಪ್ಪಣೆ ಇತ್ತು ಕಳಿಸಿ, ತಾನೂ ತನ್ನ ಸತ್ಯಲೋಕವನ್ನು ಸೇರಿದನು. ದೇವತೆಗಳೂ ಸಂತೋಷಭರಿತರಾಗಿ ಶ್ರೀಕೃಷ್ಣನನ್ನು ಸ್ತುತಿಸುತ್ತಾ ತಂತಮ್ಮ ಲೋಕಗಳಿಗೆ ಹೋದರು. ಕಿರೀಟಕೌಸ್ತುಭಧರನು, ಭಕ್ತಾಭಯಂಕರನು, ಶ್ರೀರಮಣನು, ಮುಖ್ಯಪ್ರಾಣಶರಣನು ಆದ ಶ್ರೀಹರಿಗೆ ನಮೋ ನಮಃ !

ದುರ್ಯೋಧನ, ಈ ವೃತ್ತಾಂತವನ್ನು ನಾನು ಋಷಿಗಳಿಂದಲೇ ಅಲ್ಲದೆ, ಪರಶುರಾಮರಿಂದಲು, ವೇದವ್ಯಾಸರಿಂದಲು, ನಾರದ ಮಾರ್ಕಂಡೇಯಾದಿಗಳಿಂದಲು ಕೇಳಿ ಶ್ರೀಕೃಷ್ಣನೇ ನಾರಾಯಣನೆಂದು ಮನಗಂಡಿರುವೆನು. ಅವನಿಂದ ಕೂಡಿ ಕಾದಾಡಬೇಡ ! ಅವನವರಾದ ಪಾಂಡವರಿಂದಲು ಕಾದಿ ಕೆಡಬೇಡ ! ಎಷ್ಟು ಹೇಳಿದರೂ, ಅವಗಣಿಸುವ ನಿನ್ನನ್ನು ನೋಡಿ, ನಿನ್ನಂತಹ ಕ್ರೂರ ರಾಕ್ಷಸನಿಲ್ಲವೆಂದು ನಿಶ್ಚಯಿಸಿರುವೆನು. ನೋಡು, ಎಷ್ಟು ಜನ ಕ್ಷಯವಾಗುತ್ತಿದೆ ನಿನ್ನ ಅವಿವೇಕದಿಂದ ! ಯಾವ ಅಂಧಃತಮವು ಕಾದಿದೆಯೋ ನಿನಗಾಗಿ ! ಗೋವಿಂದ ದ್ವೇಷಿಯಾದ ನಿನ್ನಿಂದ ಪಾಂಡವರನ್ನು ಎರವು ಮಾಡಿಕೊಂಡು ನಾವೂ ಕೆಟ್ಟೆವು. ಶ್ರೀಕೃಷ್ಣನು ಸರ್ವಲೋಕ ಪ್ರಭುವು, ಶಾಶ್ವತ ಧರ್ಮರಕ್ಷಕನು, ನಾಶರಹಿತನು, ಸರ್ವೋತ್ತಮನು, ಬ್ರಹ್ಮರುದ್ರಾದಿ ವಂದ್ಯನು. ಅವನು ಇದ್ದಲ್ಲಿ ಧರ್ಮ, ಧರ್ಮವಿದ್ದಲ್ಲಿ ಜಯವೆಂದು ತಿಳಿ ! ಅವನನ್ನು ನಂಬಿ ದೇವಾಂಶ ಸಂಭೂತರಾದ ಪಾಂಡವರು ಜಯಿಸುವರು. ಅಸುರಾಂಶರಾದ ಕೌರವರು ಅವನನ್ನು ನಂಬದೆ ಕೆಡುವರು.

ಕೌರವರಾಜ ! ಶ್ರೀಕೃಷ್ಣನಕಿಂತ ಸರ್ವೋತ್ತಮನೆನಿಸಿದವರಿಲ್ಲ. ಹಿಂದೆ

ಪ್ರಳಯಸಮುದ್ರಶಯನನಾಗಿದ್ದು ಸೃಷ್ಟಿಕಾಲದಲ್ಲಿ ಬ್ರಹ್ಮಾದಿಗಳನ್ನು ಭೂತಗಳನ್ನು ಸೃಜಿಸಿ, ಪಾಲಿಸಿ ಮುಂದೆ ಪ್ರಳಯಕಾಲದಲ್ಲಿ ಸರ್ವವನ್ನೂ ಸಂಹರಿಸುವ ಶ್ರೀನಾರಾಯಣನೇ ಶ್ರೀಕೃಷ್ಣನಾಗಿರುವನು. ಅವನಿಗೆ ಧರ್ಮ ಬೇಕು, ಬಂಧುತ್ವವಲ್ಲ. ಶತ್ರು ಜಾತಿಯಾದರೂ ಭಕ್ತರಾದರೆ ಪೊರೆವ, ಸ್ವಜನವಾದರೂ ವೇದಧರ್ಮವಿಪ್ರದ್ವೇಷಿಗಳಾದರೆ ತರಿವ, ಶ್ರೀಹರಿಗೆ ವೈಷಮ್ಯವಿಲ್ಲ. ಹಿಂದೆ ಕಿವಿಯಿಂದ ಬಂದ ಮಧುವೆಂಬ ದೈತ್ಯನನ್ನು ಕೊಂದು, ಬ್ರಹ್ಮದೇವನನ್ನು ರಕ್ಷಿಸಿದ ಪುರುಷೋತ್ತಮನು ಮಧುಸೂಧನನೆಂದು ಖ್ಯಾತನಾಗಿರುವನು. ವರಾಹನಾಗಿ ಭೂಮಿಯನ್ನುದ್ಧರಿಸಿದನು. ನೃಸಿಂಹನಾಗಿ ದೈತ್ಯನನ್ನು ಸಂಹರಿಸಿದನು. ವಾಮನನಾಗಿ ಬೇಡಿ, ತ್ರಿವಿಕ್ರಮನಾಗಿ ಅಳೆದು, ದಾನವಿತ್ತ ಬಲಿಯ ಬಾಗಿಲ ಕಾದನು. ಅವನೇ ಜಗಜ್ಜನರಿಗೆ ತಂದೆ, ತಾಯಿ, ಗುರು, ಗತಿ. ಅವನನ್ನು ಯಥಾಯೋಗ್ಯವಾಗಿ ತಿಳಿದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ, ಸಮಸ್ತ ಸಜ್ಜನರು, ಅರ್ಚಿಸಿ, ನಮಿಸಿ, ಸ್ತುತಿಸಿ, ಸ್ವಯೋಗ್ಯಗತಿಯನ್ನು ಹೊಂದಿ ಸುಖಿಸುವರು. ಅವನಾರಿಗೆ ಪ್ರಸನ್ನನೋ ಅವರು ಅಕ್ಷಯ ಲೋಕವನ್ನು ಗೆದ್ದರು. ಅವನಿಗೆ ಯಾರು ದ್ವೇಷಿಗಳೋ ಅವರು ಅಂಧಂತಮದಲ್ಲಿ ಬಿದ್ದರು. ಧರ್ಮರಾಜನು ಇದೆಲ್ಲವನ್ನು ತಿಳಿದು ಶ್ರೀಹರಿಯೇ ಗತಿ ಎಂದು ನಂಬಿರುವನು.

ಸಾಧ್ಯರು, ಸಿದ್ಧರು, ದೇವತೆಗಳು ಶ್ರೀಕೃಷ್ಣನನ್ನು ನಾರಾಯಣನೆಂದು ಯಥಾರ್ಥವಾಗಿ ತಿಳಿದಿರುವರು. ನಾರದನು ಅವನು ಸರ್ವಜ್ಞನೆಂತಲು, ಮಾರ್ಕಂಡೇಯನು ಭೂತ ವರ್ತಮಾನ ಭವಿಷ್ಯತ್ತುಗಳ ಪ್ರಭುವೆಂತಲು, ಬ್ರಹ್ಮನು ದೇವ ದೇವನೆಂತಲು, ರುದ್ರನು ಸರ್ವ ಸಂಹಾರಕನೆಂತಲು, ದಕ್ಷಾದಿ ಪ್ರಜಾಪತಿಗಳು ಸೃಷ್ಟಿಕರ್ತನೆಂತಲು ತಿಳಿದು ಉಪಾಸಿಸಿ, ದಿವ್ಯ ಮಹಿಮಾವಂತರಾಗಿರುವರು. ದುರ್ಯೋಧನ ! ಕೃಷ್ಣನ ಮಹಿಮೆಯನ್ನು ನಿನಗೆ ನೀ ಕೇಳಲಾಗಿ ಹೇಳಿರುವೆನು. ಶ್ರೀ ಕೇಶವನನ್ನು ದ್ವೇಷಿಸಬೇಡ ! ನರನಾರಾಯಣರೇ ಪಾರ್ಥವಾಸುದೇವರಾಗಿರುವರು. ಭೀಮನೇ ಮುಖ್ಯಪ್ರಾಣನು. ಬೇಡ ಅವರಿಂದ ಕಾದಾಟ ! ಕೊಡು ಅವರ ರಾಜ್ಯವನ್ನವರಿಗೆ !" ಎಂದು ನುಡಿದನು.

ದುರ್ಯೋಧನನು ಆಗ 'ಪಿತಾಮಹ ! ಕೃಷ್ಣನೆಂದರೆ ನಾರಾಯಣನೋ ? ಸರಿ ! ನಿಮ್ಮ ಕೃಷ್ಣನಿಗೆ ನನ್ನ ನಮಸ್ಕಾರವಿರಲಿ !' ಎಂಬ ದಂಭದಿಂದ ಕೈಮುಗಿದು, ತನ್ನ ಶಿಬಿರಕ್ಕೆ ಹೊರಟು ಹೋದನು. ಭೀಷ್ಮನು ತನ್ನ ಉಪದೇಶವು ಸೌಳಿನ ಭೂಮಿಯಲ್ಲಿ ಬಿತ್ತಿದ ಬೀಜದಂತೆ ವ್ಯರ್ಥವಾಯಿತೆಂದು ತಿಳಿದು ದೈವಲೀಲೆಗೆ ಶಿರಬಾಗಿ ಆ ರಾತ್ರಿಯನ್ನು ಕಳೆದನು.

## ೨೮. ಪಂಚಮ ದಿನ ಯುದ್ಧ (ತದಿಗೆ) ಸಂಕುಲ ಯುದ್ಧ

'ರಾಜನ್ ! ಮರುದಿನ ಸೂರ್ಯೋದಯವಾಗಲು ಉಭಯ ಸೇನೆಗಳು ಕಲೆತು ಹೋರಾಡತೊಡಗಿದವು. ಭೀಮಸೇನನು ತಮ್ಮ ಶ್ಯೇನವ್ಯೂಹವನ್ನು ರಕ್ಷಿಸುತ್ತಾ ನಡೆದನು. ಭೀಷ್ಮನು ತಮ್ಮ ಮಕರವ್ಯೂಹವನ್ನು ರಕ್ಷಿಸುತ್ತಾ ಹೊರಟನು.

ಭೀಮಸೇನನು ಶ್ಯೇನಮುಖಸ್ಥಾನದಲ್ಲಿರಲು, ಶಿಖಂಡಿ ಧೃಷ್ಟದ್ಯುಮ್ನರು ಕಣ್ಣುಗಳಾಗಿದ್ದರು. ಸಾತ್ಯಕಿ ಶಿರವಾಗಿದ್ದನು. ಗಾಂಡೀವಪಾಣಿಯು ಗ್ರೀವಾಭಾಗದಲ್ಲಿಯು, ದ್ರುಪದನು ಎಡರೆಕ್ಕೆಯಲ್ಲಿಯು, ಕೈಕಯರು ಬಲಪಕ್ಷದಲ್ಲಿಯು, ಅಭಿಮನ್ಯುಮುಖ ದ್ರೌಪದೇಯರು ಬೆನ್ನಿನಲ್ಲಿಯು, ಮಧ್ಯದಲ್ಲಿ ಧರ್ಮರಾಜನು ನಕುಲಸಹದೇವರು ನಿಂತು ನಡೆದರು. ಭೀಷ್ಮ ಭೀಮಸೇನರ ಹೋರಾಟವು ಅತಿ ಭಯಂಕರವಾಗಿತ್ತು. ಭೀಷ್ಮನು ಭೀಮನಿಗೆ ಸೋತು, ಅವನನ್ನು ಬಿಟ್ಟು ಪಾಂಡವಸೇನೆಯನ್ನು ಮುತ್ತಿ ಕಕ್ಷವನ್ನಗ್ನಿಯಂತೆ ಸುಡತೊಡಗಿದನು. ಧನಂಜಯನು ಆತನನ್ನು ತಡೆದು ಶರಜಾಲದಿಂದ ಮುಚ್ಚಿದನು.

ದುರ್ಯೋಧನ ಪ್ರಾರ್ಥಿತರಾದ ದ್ರೋಣಾಚಾರ್ಯರು ಪಾಂಡವಸೇನೆಯನ್ನು ತಾಕಿ ಶರವಹ್ನಿಯಿಂದ ಬಹು ಸಹಸ್ರಭಟರನ್ನು ನಾಶಮಾಡಿದರು. ಭೀಮಸೇನನು ಆಚಾರ್ಯರನ್ನು ಮುಟ್ಟಿ, ಅವರ ಧನುವನ್ನು ಮುರಿದು ಅವರ ಕುದುರೆಗಳನ್ನು ಸಂಹರಿಸಿ, ಅವರನ್ನು ಹಿಂದಿರುಗಿಸಿದನು. ಅವರಿಗೆ ಸಹಾಯವಾಗಿ ಬಂದ ಭೀಷ್ಮನನ್ನು ಶಿಖಂಡಿಯು ತಡೆಯಲು, ಪಿತಾಮಹನು ಅವನು ಸ್ತ್ರೀಪೂರ್ವನೆಂದು ಅವನೊಡನೆ ಕಾದದೆ ಸುಮ್ಮನಿದ್ದನು. ದುರ್ಯೋಧನನು ಪಿತಾಮಹನ ನೆರವಿಗೆ ಬಂದು ಶಿಖಂಡಿಯನ್ನು ಬಾಣವರ್ಷದಲ್ಲಿ ಮುಣುಗಿಸಿ ಆರ್ಭಟಿಸಲು, ಭೀಮಸೇನನು ಅವನನ್ನು ನಿಶಿತ ಭಲ್ಲಗಳಿಂದ ಪೀಡಿಸಿ, ಮೂರ್ಛೆಗೊಳಿಸಿದನು. ಕೃಪನು ಅವನನ್ನು ತನ್ನ ರಥದಲ್ಲಿಟ್ಟುಕೊಂಡು ಹೋದನು. ಗೋವೃಷಗಳಂತೆ ಗರ್ಜಿಸುವ ವೀರರು, ಹುಲಿಗಳಂತೆ ಅವರ ಮೇಲೆರಗುವ ಆಶ್ವಿಕರು, ಭಟರಥಾಶ್ವಿಕರನ್ನು ತುಳಿದು ನಾಶಪಡಿಸುವ ಮದಗಜಗಳು, ದಿವ್ಯಾಸ್ತ್ರಧಾರಿಗಳಾದ ರಥಿಕರು ಘೋರ ಯುದ್ಧವನ್ನು ಮಾಡಿದರು. ಶಂಖ ದುಂದುಭಿಧ್ವಾನಗಳೆಡೆ ಬಿಡದೆ ಕೇಳಿಬರುತ್ತಿರಲು, ಅವನ್ನು ಮೀರಿ ಭಟರ ಸಿಂಹನಾದಗಳು ಮುಗಿಲನ್ನು ಮುಟ್ಟಿದವು. ತಲೆಗಳು ನೆಲಕ್ಕುರುಳುತ್ತಿದ್ದರೆ ಕಲ್ಲಿನಮಳೆ ಬೀಳುವಂತಿತ್ತು. ರಣರಂಗವು ಶರಶಕ್ತಿಗದಾಸಿಪ್ರಾಸಶೂಲಾದಿ ವಿವಿಧಾಯುಧ ಖಂಡಗಳಿಂದಲು, ಮುಂಡರುಂಡಗಳಿಂದಲು, ಕೇಯೂರ ಕಿರೀಟ, ಕಂಕಣ, ನೂಪುರಾದಿ ಆಭರಣರಾಶಿಗಳಿಂದಲು ನಿಬಿಡವಾಗಿ, ಮೃತ್ಯುದೇವಿಯ ಮನೆಯ ಅಂಗಳದಂತಿತ್ತು. ರಣರಂಗದಲ್ಲಿ ಎಲ್ಲಿ ನೋಡಿದರೂ ಕಪಿಧ್ವಜ, ಸಿಂಹಧ್ವಜಗಳು ಆತಂಕವಿಲ್ಲದೆ ಹಾರಾಡುತ್ತಾ ಕಂಡುಬಂದವು. ಪಾರ್ಥ ಭೀಮರ ರಣಕೇಳಿಯು ದೇವಋಷಿಗಳ ಪ್ರಶಂಸೆಗೆ ಪಾತ್ರವಾಯಿತು. ಕೌರವಭಟರು ಆರ್ತರಾಗಿ ಭಿನ್ನಗಾತ್ರರಾಗಿ ಭೀಷ್ಮನ ಮೊರೆ ಹೊಕ್ಕರು. ಅದನ್ನು ಕಂಡು ಭೀಷ್ಮ ದುರ್ಯೋಧನರು ತಮ್ಮ ಸೇನಾಪತಿಗಳನ್ನು ಹುರಿದುಂಬಿಸಿದರು.

ವಿಂದನು ಕಾಶಿರಾಜನಿಂದಲು, ಸೈಂಧವನು ಭೀಮನಿಂದಲು, ಶಲ್ಯನು ಧರ್ಮರಾಜನಿಂದಲು, ವಿಕರ್ಣನು ಸಹದೇವನಿಂದಲು, ಚಿತ್ರಸೇನನು ಶಿಖಂಡಿಯಿಂದಲು, ದುರ್ಯೋಧನನು ವಿರಾಟನಿಂದಲು, ಶಕುನಿಯು ದ್ರುಪದನಿಂದಲು, ದ್ರೋಣನು ಸಾತ್ಯಕಿಯಿಂದಲು, ಭೀಷ್ಮನು ಪಾರ್ಥನಿಂದಲು, ಭೂರಿಶ್ರವನು ಚೇಕಿತಾನನಿಂದಲು ದ್ವಂದ್ವ

ಯುದ್ಧವನ್ನು ಮಾಡಿದರು. ಸೇನೆಯ ಧೂಳಿ ಮೇಲೆದ್ದು ಸೂರ್ಯನು ಕಾಣದಾದನು. ಮಹಾವಾತವೆದ್ದು ಸೈನ್ಯವನ್ನು ಧೂಳಿಯಿಂದ ಮುಚ್ಚಿತು. ಧ್ವಜಗಳುದುರಿ ಬಿದ್ದವು. ಬಾಣಗಳು ಹಾರಾಡುವ ಹಾವುಗಳಂತೆ ಆಕಾಶವನ್ನು ತುಂಬಿ, ಭಟರ ಪ್ರಾಣಾನಿಲಗಳನ್ನು ಆಹುತಿಗೊಂಡವು. ರಥಗಳು ಪುಡಿಯಾದವು. ಆನೆಗಳು ಬೆಟ್ಟಗಳಂತೆ ಬಿದ್ದಿದ್ದವು. ಸವಾರರಿಲ್ಲದ ಕುದುರೆಗಳು ದಿಕ್ಕೆಟ್ಟು ಓಡಿದವು. ರಥಿಕ ಸಾರಥಿಯರು ಬೀಳಲು ತುರಗಗಳು ರಥಗಳನ್ನು ಬೇಕಾದಂತೆ ಎಳೆದು ಧಾವಿಸಿದವು. ರಣರಂಗವೆಲ್ಲವು ರಕ್ತ ನದಿಗಳಿಂದ, ಶರೀರ ಖಂಡಗಳಿಂದ, ಆರ್ತನಾದಗಳಿಂದ ಭೀಭತ್ಸವಾಯಿತು. ಮಧ್ಯಂದಿನ ಸೂರ್ಯನು ಪ್ರಚಂಡ ಕಿರಣನಾಗಿದ್ದನು. ಭೀಮಾದಿವೀರರೂ ಪ್ರಚಂಡ ಪ್ರತಾಪರಾಗಿ ಶತ್ರು ಸೇನಾಜಲವನ್ನು ಶೋಷಿಸುತ್ತಿದ್ದರು.

ಭೀಷ್ಮನು ಭೀಮನನ್ನು ಮುತ್ತಿ ನಿಶಿತ ಬಾಣಗಳನ್ನು ಮೂವತ್ತನ್ನು ಪ್ರಯೋಗಿಸಿದನು. ಭೀಮಸೇನನು ಪೆಟ್ಟು ತಿಂದ ಹಾವಿನಂತಾಗಿ ಶಕ್ತಿಯನ್ನು ಒಗೆದನು. ಭೀಷ್ಮನು ಅದನ್ನು ತುಂಡರಿಸಿ ನಿಶಿತ ಭಲ್ಲದಿಂದ ಭೀಮಸೇನನ ಧನುಸ್ಸನ್ನು ಮುರಿದನು. ಆಗ ಸಾತ್ಯಕಿಯು ಬಂದು ಭೀಷ್ಮನನ್ನು ಅನೇಕ ಶರಗಳಿಂದ ಪೀಡಿಸಿದನು. ಭೀಷ್ಮನು ಸಿಟ್ಟಿಗೆದ್ದು ಅವನ ಸಾರಥಿಯನ್ನು ಕೊಂದನು. ಸಾತ್ಯಕಿಯ ಕುದುರೆಗಳು ಸಿಕ್ಕಾಪಟ್ಟೆ ಓಡತೊಡಗಿದವು. ಪಾಂಡವ ಸೇನೆಯು ಅದನ್ನು ಕಂಡು ಹಾಹಾಕಾರ ಮಾಡಿತು. ಆಗ ಭೀಷ್ಮನನ್ನು ಮುತ್ತಿ ಭೀಮಸೇನನು ಮೂರು ಬಾಣಗಳಿಂದ ಧನುವನ್ನು ಮುರಿದು, ಕುದುರೆಗಳನ್ನು ಸಾರಥಿಯನ್ನು ಪೀಡಿಸಲು, ಭೀಷ್ಮನು ಅವನನ್ನು ಬಿಟ್ಟು ಧೃಷ್ಟದ್ಯುಮ್ನನೊಡನೆ ಕಾದಲು ಹೋದನು.

ಅರ್ಜುನನು ತನ್ನನ್ನು ಮುಟ್ಟಿ ಹತ್ತು ಬಾಣಗಳಿಂದ ನೋಯಿಸಿದ ಅಶ್ವತ್ಥಾಮನನ್ನು ಆರು ಬಾಣಗಳಿಂದ ಪೀಡಿಸಿ, ಒಂದು ಭಲ್ಲದಿಂದ ಅವನ ಧನುವನ್ನು ಮುರಿದನು. ಅಶ್ವತ್ಥಾಮನು ಬೇರೊಂದು ಧನುವನ್ನೆತ್ತಿ ತೊಂಬತ್ತು ಬಾಣಗಳಿಂದ ಅರ್ಜುನನನ್ನು. ಎಪ್ಪತ್ತು ಬಾಣಗಳಿಂದ ವಾಸುದೇವನನ್ನು ಹೊಡೆದು, ಸಿಂಹನಾದವನ್ನು ಮಾಡಿದನು. ಅರ್ಜುನನು ಶ್ರೀಕೃಷ್ಣನನ್ನು ಹೊಡೆದ ಗುರುಪುತ್ರನಲ್ಲಿ ಕುಪಿತನಾಗಿ, ತೀವ್ರ ನಾರಾಚಗಳಿಂದ ಅವನ ಕವಚವನ್ನು ಸೀಳಿ, ಅವನನ್ನು ಗಾಯಗೊಳಿಸಿದನು. ಆಚಾರ್ಯನಿಗೆ ಪ್ರಿಯ ಸುತನೆಂದು ಮನ್ನಿಸಿ ಮತ್ತೆ ಪೀಡಿಸದೆ ಅರ್ಜುನನು ಬೇರೆಡೆಗೆ ಹೋದನು.

ಭೀಮಸೇನನು ಅಶ್ವತ್ಥಾಮನ ಸಹಾಯಕ್ಕೆಂದು ಬಂದ ದುರ್ಯೋಧನನನ್ನು ಭಲ್ಲದಿಂದ ಎದೆಗೆ ತಾಟಿಸಿ, ಅನೇಕ ಬಾಣಗಳಿಂದ ಅವನ ಸಾರಥಿ ತುರಗಗಳನ್ನು ಪೀಡಿಸಿದನು. ದುರ್ಯೋಧನನೂ ವಿವಿಧ ಬಾಣಗಳಿಂದ ಹೊಡೆಯಲು, ಭೀಮನು ಕುಪಿತನಾಗಿ, ಶಿಖಿ ಭಯಂಕರ ಬಾಣದಿಂದ ಹೊಡೆದನು. ಅವನು ಮೂರ್ಛಿತನಾಗಲು ಸಾರಥಿಯು ರಥವನ್ನು ಕೊಂಡು ದೂರ ಹೋದನು. ಸೌಭದ್ರಚಿತ್ರಸೇನರು, ಕೃಪಸಾತ್ಯಕಿಯರು ಹೋರಾಡಿದ ರೀತಿಯೂ ಅದ್ಭುತವಾಗಿತ್ತು. ಬಾಣವನ್ನು ಸೆಳೆವುದು,

ಪ್ರಯೋಗಿಸುವುದು ಒಂದೂ ಗೊತ್ತಾಗದಂತೆ ಸಾತ್ಯಕಿಯು ಕುರುಸೇನೆಯನ್ನು ಅಲ್ಲೋಲಕಲ್ಲೋಲಪಡಿಸಿ, ಎದುರಿಲ್ಲದೆ ಹೋರಾಡಿದರು.

ಸಾತ್ಯಕಿಯ ಹತ್ತುಸುತರು ಭೂರಿಶ್ರವನನ್ನು ಕೂಗಿ ಕರೆದು, ಅವನನ್ನು ಶರವರ್ಷದಲ್ಲಿ ಮುಣುಗಿಸಿದರು. ಮೇಘಗಳು ಸುರಿವ ಮಳೆಯ ಧಾರೆಗಳನ್ನು ಬೆಟ್ಟದಂತೆ ಸಹಿಸಿ, ನಿಶ್ಚಲನಾದ ಭೂರಿಶ್ರವನು ತಾನೊಬ್ಬನಾದರೂ ಹತ್ತು ಜನ ರಥಿಕ ಸಾತ್ಯಕೇಯರನ್ನು ಲೆಕ್ಕಿಸದೆ, ಅವರನ್ನೂ ಬಾಣಜಾಲದಿಂದ ಪೀಡಿಸಿದನು. ಮತ್ತೆ ಬಾಣಜಾಲದಿಂದ ತನ್ನನ್ನು ಪೀಡಿಸಿದ ಸಾತ್ಯಕೇಯರ ಧನುಸ್ಸುಗಳು ಹತ್ತನ್ನೂ ಹತ್ತು ಬಾಣಗಳಿಂದ ತುಂಡರಿಸಿ ಭೂರಿಶ್ರವನು ಭಲ್ಲಗಳಿಂದ ಅವರನ್ನು ಸಂಹರಿಸಿದನು. ಪರ್ವತಗಳು ವಜ್ರಾಹತವಾಗಿ ಬಿದ್ದಂತೆ ಬಿದ್ದ ಸುತರನ್ನು ಕಂಡು ಸಾತ್ಯಕಿಯು ಭೂರಿಶ್ರವನ ಮೇಲೆ ಸೇಡಿನಿಂದ ಮುತ್ತಿ ಅವನ ತುರಗಗಳನ್ನು ಸಂಹರಿಸಿದನು. ಅವನೂ ಸಾತ್ಯಕಿಯ ಕುದುರೆಗಳನ್ನು ಕೊಂದನು. ಆಗ ಆ ವೀರರೀರ್ವರು ಮಹಾಖಡ್ಗಹಸ್ತರಾಗಿ ನೆಲಕ್ಕಿಳಿದು ಕಾದಾಡತೊಡಗಿದರು. ಭೀಮಸೇನನದನ್ನು ಕಂಡು ಸರಸರನೆ ಬಂದು ಸಾತ್ಯಕಿಯನ್ನು ತನ್ನ ರಥವನ್ನೇರಿಸಿಕೊಂಡನು. ದುರ್ಯೋಧನನೂ ಭೂರಿಶ್ರವನನ್ನು ರಥದಲ್ಲಿ ಕೂಡಿಸಿಕೊಂಡು ಹೋದನು.

ಭೀಷ್ಮನು ಪಾಂಡವಸೇನೆಯನ್ನು ಮುತ್ತಿ ಸಂಹರಿಸುತ್ತಿರಲು, ಅರ್ಜುನನು ಆತನನ್ನು ತಡೆದು ಸೋಲಿಸಿ, ವಿಕ್ರಮಿಸಿ, ಸ್ವಲ್ಪ ಕಾಲದಲ್ಲಿಯೇ ಇಪ್ಪತ್ತೈದು ಸಾವಿರ ಕುರುವೀರರನ್ನು ಯಮಮಂದಿರಕ್ಕೆ ಕಳಿಸಿದನು. ಮಾತ್ಸ್ಯಕೇಕಯರೂ ಬಂದು ಅವನಿಗೆ ನೆರವಾಗಿ ನಿಂತರು. ಉಭಯ ಸೇನೆಗಳು ಶ್ರಾಂತವಾಗಿರುವುದನ್ನು ಕಂಡು ಪಾಂಡವಮಧ್ಯಮನು ಸೈನ್ಯಾವಹಾರವನ್ನು ಮಾಡಿ, ಶಿಬಿರಕ್ಕೆ ಹಿಂದಿರುಗಿದನು. ಕೌರವರೂ ಶಿಬಿರಗಳನ್ನು ಸೇರಿ ವಿಶ್ರಾಂತಿ, ಔಷಧ, ಭೋಜನಾದಿ ಉಪಚಾರಗಳನ್ನು ಪಡೆದು ಆ ರಾತ್ರಿಯನ್ನು ಕಳೆದರು.

## ೨೯. ಷಷ್ಠದಿನ ಯುದ್ಧ - ಭೀಮಸೇನ ಪರಾಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು :

'ರಾಜನ್! ಮರುದಿನ ಬೆಳಗಾಯಿತು. ಉಭಯಸೇನೆಗಳು ರಣರಂಗದಿ ಬಂದು ನಿಂತವು. ಧರ್ಮರಾಜನ ಆಜ್ಞೆ ಮೇರೆಗೆ ಧೃಷ್ಟದ್ಯುಮ್ನನು ಮಕರವ್ಯೂಹವನ್ನು ಹಬ್ಬಿಸಿದನು. ಅದರ ಶಿರದಿ ದ್ರುಪದನು, ಅರ್ಜುನನು, ಕಣ್ಣುಗಳಲ್ಲಿ ನಕುಲಸಹದೇವರು, ತುಂಡದಲ್ಲಿ ವೃಕೋದರನು, ಅಭಿಮನ್ಯು ಘಟೋತ್ಕಚ ದ್ರೌಪದೇಯರು, ಕುತ್ತಿಗೆಯಲ್ಲಿ ಸಾತ್ಯಕಿ ಧರ್ಮರಾಜರು, ಬೆನ್ನಿಗೆ ವಿರಾಟನು, ಧೃಷ್ಟದ್ಯುಮ್ನನು, ಪಂಚ ಅವಂತೇಯರು ಎಡಪಕ್ಕದಲ್ಲಿ ಬಲಪಕ್ಕದಲ್ಲಿ, ಧೃಷ್ಟಕೇತು ಚೇಕಿತಾನರು, ಪಾದಗಳಲ್ಲಿ ಕುಂತಿಭೋಜಶತಾನೀಕರು, ಇರವಾನ್ ಶಿಖಂಡಿಗಳು ಬಾಲದಲ್ಲಿಯು ನಿಂತಿದ್ದರು. ಇಂತಹ ವ್ಯೂಹವನ್ನು ರಚಿಸಿ ಬರುವ ಪಾಂಡವ ಸೇನೆಯನ್ನು ನೋಡಿ, ಭೀಷ್ಮನು

ಕೌರವಸೇನೆಯನ್ನು ಕ್ರೌಂಚವ್ಯೂಹವಾಗಿ ನಿಲ್ಲಿಸಿದನು. ಅದರ ತುಂಡದಲ್ಲಿ ದ್ರೋಣನಿದ್ದನು. ಅಶ್ವತ್ಥಾಮಕೃಪರು ಕಣ್ಣುಗಳಲ್ಲಿದ್ದರು. ಕಾಂಭೋಜ ಬಾಹ್ಲೀಕಸಹಿತನಾದ ಕೃತವರ್ಮನು ತಲೆಯಲ್ಲಿರಲು, ಕಂಠದಲ್ಲಿ ದುರ್ಯೋಧನನಿದ್ದನು. ಭಗದತ್ತನು ಎದೆಯಲ್ಲಿಯು, ಸುಶರ್ಮನು ಎಡರೆಕ್ಕೆಯಲ್ಲಿಯು, ಯವನ ಶಕರು ಬಲರೆಕ್ಕೆಯಲ್ಲಿಯು, ಶ್ರುತಾಯು, ಭೂರಿಶ್ರವರು ಬೆನ್ನಿನಲ್ಲಿಯು, ನಿಂತು ಯುದ್ಧವನ್ನಾರಂಭಿಸಿದರು. ಸಾದಿಗಳು ಸಾದಿಗಳಿಂದಲು, ಗಜಾರೋಹರು ಗಜಾರೋಹರಿಂದಲು, ರಥಿಕರು ರಥಿಕರಿಂದಲು, ಭಟರು ಭಟರಿಂದಲು, ಹೋರಾಹೋರಿ ಕಡಿದಾಡಿ - ನಿಯಮವನ್ನು ಮೀರಿ ರಥಿಕರು ಭಟರಿಂದಲು, ಅಶ್ವಿಕರು ಗಜಾರೋಹರಿಂದಲು ಯುದ್ಧ ಮಾಡತೊಡಗಿದರು.

ಭೀಮಸೇನನು ದ್ರೋಣರು ಬಿಟ್ಟ ಒಂಬತ್ತು ಬಾಣಗಳಿಂದ ಮರ್ಮಾಹತನಾಗಿ, ಸಿಟ್ಟಿನಿಂದ ಅವರ ಸಾರಥಿಯನ್ನು ಸಂಹರಿಸಿದನು. ದ್ರೋಣರು ಸ್ವಯಂ ಸಾರಥಿಯೂ ಆಗಿ, ಭೀಮನಿಂದ ತಪ್ಪಿಸಿಕೊಂಡು ಮಿಕ್ಕ ಪಾಂಡವಸೇನೆಯನ್ನು ಮುಟ್ಟಿ ಶರಜಾಲದಿಂದ ಪೀಡಿಸಿ, ಸಂಹರಿಸಿದರು.

ಧೃತರಾಷ್ಟ್ರನು 'ಸಂಜಯ ! ನಮ್ಮ ಯೋಧರು ಲೋಕಾತಿವೀರರು. ಸೇನಾಪತಿಗಳು ಅವಾರಣೀಯರು. ಸೈನಿಕರನ್ನು ಸಂಬಳ ಕೊಟ್ಟು ತಂದಿಟ್ಟಿರುವೆವು. ಅವರನ್ನು ಸತ್ಕಾರ ಔಷಧೋಪಚಾರ ಮುಂತಾದುವನ್ನಿತ್ತು ಸಂತೋಷದಿಂದ ಪೋಷಿಸುತ್ತಿರುವೆವು. ನಮ್ಮ ಸೈನ್ಯವು ಮಹಾಸಾಗರದಂತಿದೆ. ದ್ರೋಣ ಭೀಷ್ಮರು ಅದಕ್ಕೆ ರಕ್ಷಕರಾಗಿರುವರು. ಕೃಪ ದುಶ್ಶಾಸನ ಭಗದತ್ತ ಬಾಹ್ಲೀಕ ವಿಕರ್ಣ ಜಯದ್ರಥರಂತಹ ಮಹಾಯೋಧರನ್ನು ಲೋಕವಿಂದಿನವರೆಗೂ ಕಂಡಿಲ್ಲ. ಆದರೂ ನಮಗೆ ಸೋಲಾಗುತ್ತಿದೆ. ನಮ್ಮವರು ಸಾಯುತ್ತಿದ್ದಾರೆ. ಇದನ್ನು ಕಂಡು ನನಗಾಶ್ಚರ್ಯವಾಗಿದೆ ! ಸಂಜಯ ! ದೇವತೆಗಳೇ ಬಂದು ಪಾಂಡವರ ಕಡೆ ನಿಂದು ನಮ್ಮವರನ್ನು ಕೊಂದು ಅವರಿಗೆ ಹಿತವನ್ನು ತಂದು ಕೊಡುತ್ತಿರುವಂತಿದೆ ! ಅಥವಾ ನನ್ನ ದುರದೃಷ್ಟದ ಬಲವೋ ?' ಎಂದು ಚಿಂತಿಸಿದನು.

ಸಂಜಯನಿಂತೆಂದನು : 'ರಾಜನ್ ! ಇದೆಲ್ಲವು ನಿನ್ನ ಅವಿವೇಕದ ಫಲವೆಂದು ತಿಳಿ ! ನೀನಾಗಿ ನಿಲ್ಲಿಸಿದ್ದರೆ ಜೂಜು ಎರಡು ಸಲ ನಡೆಯುತ್ತಿತ್ತೇ ? ನೀನು ಸಂಧಿಗೆ ಮನ ಕೊಟ್ಟಿದ್ದರೆ ಯುದ್ಧ ನಡೆಯುತ್ತಿತ್ತೇ ? ಆಗ ಸಮ್ಮತಿ ಇತ್ತು, ಈಗ ಅಧರ್ಮದ ಫಲವನ್ನು ಒಲ್ಲೆನೆನ್ನಲಾಗುವುದೇ ? ಸ್ಥಿರನಾಗಿ ಯುದ್ಧವೃತ್ತಾಂತವನ್ನು ಕೇಳು !'

'ಭೀಮಸೇನನು ನಿಶಿತ ಬಾಣಗಳಿಂದ ಕೌರವ ಸೈನಿಕರನ್ನು ಹುಲ್ಲುಕಡ್ಡಿಗಳನ್ನಂತೆ ಕಡಿದು ಕೆಡಹುತ್ತಾ ನಿನ್ನ ಮಕ್ಕಳನ್ನು ಸಮೀಪಿಸಿದನು. ದುಶ್ಶಾಸನ, ದುರ್ವಿಷಹ, ದುಸ್ಸಹ, ದುರ್ಮದ, ಜಯ, ಜಯಸೇನ, ವಿಕರ್ಣ, ಚಿತ್ರಸೇನ, ಸುದರ್ಶನ, ಚಾರುಮಿತ್ರ, ಸುವರ್ಮ, ದುಷ್ಕರ್ಣ, ಕುಕರ್ಣರನ್ನು ನೋಡಿ, ಹುಲಿಯಂತೆ ಹಾರಿ, ಭೀಷ್ಮರಕ್ಷಿತರಾಗಿರುವ ನಿನ್ನ ಸುತರ ಸೇನೆಯನ್ನು ಪ್ರವೇಶಿಸಿದನು. ಅದನ್ನು ಕಂಡು ಅವರು ಭೀಮನನ್ನು ಜೀವಗ್ರಾಹವಾಗಿ ಹಿಡಿಯಲು ಹಂಬಲಿಸಿ, ಸುತ್ತು-ಮುತ್ತಿದರು.

ಭೀಮಸೇನನು ಅವರ ದುರ್ಮತಿಯನ್ನು ತಿಳಿದು, ಗದಾಪಾಣಿಯಾಗಿ ರಥದಿಂದಿಳಿದು, ಅವರನ್ನೆಲ್ಲ ಗದಾಘಾತದಿಂದ ದೂರ ಓಡಿಸಿ, ಅನೇಕ ಸಹಸ್ರ ರಥಿಕರನ್ನೂ ಸಾವಿರಾರು ಭಟರನ್ನೂ ಕೊಂದು, ಯಮಸದನಕ್ಕಟ್ಟಿದನು.

ಧೃಷ್ಟದ್ಯುಮ್ನನು ಭೀಮನು ಅಸಹಾಯಶೂರನಾಗಿ ಶತ್ರು ಮಧ್ಯದಲ್ಲಿರುವುದನ್ನು ಕಂಡು, ಅಲ್ಲಿಗೆ ನುಗ್ಗಿ ಬಂದನು. ವಿಶೋಕನನ್ನು ನೋಡಿ, 'ಸಾರಥೀ ! ನನ್ನ ಪ್ರಾಣಾಧಿಕ ಬಂಧುವಾದ ಭೀಮಸೇನನು ಎಲ್ಲಿ ?' ಎಂದು ಕಣ್ಣೀರಿಡುತ್ತಾ ಕೇಳಿದನು. ವಿಶೋಕನು ಕೈ ಜೋಡಿಸಿ 'ರಾಜನ್ ! ಇಲ್ಲಿರು ಎಂದು ನನಗಾಜ್ಞಾಪಿಸಿ, ಅವರನ್ನೆಲ್ಲ ಕೊಂದುಬರುವೆನೆಂದು ತಿಳಿಸಿ ಹೋಗಿರುವವನು ಆಯುಷ್ಮಂತನು' ಎಂದನು. ಆಗ ಧೃಷ್ಟದ್ಯುಮ್ನನಿಗೆ ದೂರದಲ್ಲಿ ಗದಾಹಸ್ತನಾಗಿ ಕೃತಾಂತನಂತೆ ವಿಹರಿಸುವ ಭೀಮಸೇನನು ಕಾಣಿಸಿದನು. ಅವನು ತನ್ನ ಸೂತನಿಗೆ 'ಸೂತ ! ಭೀಮಸೇನನಿಲ್ಲದ ಜೀವಿತದಿಂದ ನನಗೆ ಪ್ರಯೋಜನವಿಲ್ಲ. ಅವನೀಗ ಏಕಾಕಿಯಾಗಿ ಶತ್ರುಗಳ ಮಧ್ಯದಲ್ಲಿರುವನು. ಭೀಮಸೇನನು ನನಗೆ ಸಖನು, ಬಂಧುವು, ಗುರುವು ಆಗಿರುವನು. ಅವನನ್ನು ಬಿಟ್ಟು ನಾನು ಹಿಂದಿರುಗಿದರೆ ದೇವತೆಗಳು ನನ್ನನ್ನು ಮೆಚ್ಚರು; ಹೊಡೆ ರಥವನ್ನಲ್ಲಿಗೆ !' ಎಂದು ಆಜ್ಞಾಪಿಸಿದನು.

ಕ್ಷಣದಲ್ಲಿ ಧೃಷ್ಟದ್ಯುಮ್ನನ ರಥವು ಶತ್ರುಸೇನೆಯನ್ನು ಸೀಳಿಕೊಂಡು, ಭೀಮನಿದ್ದಲ್ಲಿಗೆ ಹೋಯಿತು. ಬಿರುಗಾಳಿಗೆ ಬೀಳುವ ಗಿಡಗಳಂತೆ ಭೀಮನ ಗದಾಘಾತಗಳಿಗೆ ಉರುಳುವ ಭಟಾಶ್ವಗಜರಥಗಳನ್ನು ನೋಡುವ ಧೃಷ್ಟದ್ಯುಮ್ನನ ಮನವು ಉಬ್ಬಿತು. ಅವನ ವೈನವಿರೆದ್ದಿತು, ಕೃತಾಸ್ತ್ರರಾದ ವೀರರನೇಕರು ಭೀಮಸೇನನ ಮುಂದೆ, ಪ್ರಳಯಾಭೀಲವಹ್ನಿಜ್ವಾಲೆಗೆ ಸಿಕ್ಕ ಶಲಭದಂತಾಗುತ್ತಿದ್ದರು. ಧೃಷ್ಟದ್ಯುಮ್ನನು ಓಡಿಹೋಗಿ, ಭೀಮಸೇನನನ್ನು ತಂದು, ತನ್ನ ರಥದಲ್ಲಿ ಕೂಡಿಸಿದನು. ನಗುತ್ತಿದ್ದ ವೃಕೋದರನ ಮೈತಡವಿ, ನಟ್ಟಿದ್ದ ಬಾಣಶಲ್ಯಗಳನ್ನು ಕಿತ್ತೊಗೆದನು. ಅವನನ್ನಪ್ಪಿ, ಅವನ ಸಮಾಧಾನವಚನಗಳಿಂದ ಪ್ರೀತನಾದನು.

ಇಂತು ತಮ್ಮ ಕುತಂತ್ರವನ್ನು ಕೆಡಿಸಿದ ಧೃಷ್ಟದ್ಯುಮ್ನನ ಮೇಲೆ ಸಿಟ್ಟಾಗಿ ದುರ್ಯೋಧನನು ಮತ್ತೆ ಅನೇಕ ರಥಿಕರಿಂದ ಕೂಡಿ ಬಂದು ಸೂರ್ಯ ಚಂದ್ರರನ್ನು ಮುತ್ತುವ ದುಷ್ಟಗ್ರಹಗಳಂತೆ ಮುತ್ತಿ, ಶರವರ್ಷವನ್ನು ಸುರಿಸಿದನು. ಅವರ ಶರಜಾಲವನ್ನೆಲ್ಲ ತುಂಡರಿಸಿ, ಚಂಡಕೋಪನಾದ ಧೃಷ್ಟದ್ಯುಮ್ನನು, ಭೀಮನನ್ನು ಸುಮ್ಮನಿರಲು ಬೇಡಿ ತಾನೇ ಅವರನ್ನೆಲ್ಲ ಸಂಹರಿಸುವ ಮನಮಾಡಿದನು. ಮಹೇಂದ್ರನು ದೈತ್ಯಸೇನೆಯಲ್ಲಂತೆ ಧೃಷ್ಟದ್ಯುಮ್ನನು ಮೋಹನಾಸ್ತ್ರವನ್ನು ಪ್ರಯೋಗಿಸಲು, ಕುರು ಸೈನಿಕರು ಬುದ್ಧಿ ಕೆಟ್ಟು ಓಡತೊಡಗಿದರು. ಗಜವಾಜಿಭಟರು ಎಚ್ಚರದಪ್ಪಿ ನೆಲದ ಮೇಲೆ ಬಿದ್ದರು. ನಿನ್ನ ಸುತರು ಮೈಮರೆತು ರಥಗಳಲ್ಲಿ ಬಿದ್ದಿದ್ದರು. ಇದನ್ನು ಕಂಡು ದ್ರೋಣನು ಅಲ್ಲಿಗೆ ಧಾವಿಸುತ್ತಾ, ಅಡ್ಡ ಬಿದ್ದ ದ್ರುಪದನನ್ನು ಗೆದ್ದು, ಪ್ರಜ್ಞಾಸ್ತ್ರವನ್ನು ಪ್ರಯೋಗಿಸಿ

ಮೋಹನಾಸ್ತ್ರವನ್ನು ವಿಫಲಗೊಳಿಸಿದನು. ಅವನ ಶಂಖಧ್ವಾನವನ್ನು ಕೇಳಿ, ಕುರುಸೇನೆ ಮತ್ತೆ ಎಚ್ಚತ್ತು ಸಂಭ್ರಮದಿಂದ ಸಮರವನ್ನಾರಂಭಿಸಿತು.

ಧರ್ಮರಾಜನ ಆಜ್ಞಾನುಸಾರವಾಗಿ ಮಾತ್ಸ್ಯಕೇಕಯಾದಿ ವೀರರು ಭೀಮ ಧೃಷ್ಟದ್ಯುಮ್ನರಿದ್ದಲ್ಲಿಗೆ ಬಂದರು. ಸೂಚೀಮುಖವ್ಯೂಹವನ್ನು ರಚಿಸಿ ಧೃಷ್ಟಕೇತು ಅಭಿಮನ್ಯು ಮುಂತಾದ ಪಾಂಡವ ವೀರರು ನುಗ್ಗಿ ಬರುವಾಗ ಕೌರವವಾಹಿನಿ, ಅವರ ಧಾಟಿಗೆ ತಡೆಯಲಾರದೆ ಬೆಚ್ಚಿ ಓಡಿತು. ಆಗ ಧೃಷ್ಟದ್ಯುಮ್ನನು ಉತ್ಸಾಹಭರಿತನಾಗಿ ದ್ರೋಣನನ್ನೆದುರಿಸಿ ಪೀಡಿಸಲು, ಆಚಾರ್ಯನು ಅವನ ಧನುಸ್ಸನ್ನು ಮುರಿದು, ದುರ್ಯೋಧನ ಹಿತಕ್ಕಾಗಿ, ಅನೇಕ ಶರಗಳಿಂದ ಅವನ ಸೇನೆಯನ್ನು ಸಂಹರಿಸಿದನು. ಧೃಷ್ಟದ್ಯುಮ್ನನು ಮತ್ತೊಂದು ಬಿಲ್ಲನ್ನೆತ್ತಿ ಬರಲು, ಅದನ್ನೂ ಕತ್ತರಿಸಿ, ಆಚಾರ್ಯನು ಅವನ ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದನು. ವಿರಥನಾದ ಪಾರ್ಷತನು ಅಭಿಮನ್ಯು ರಥದಲ್ಲಿ ಹೋಗಿ ಕೂತನು. ಭೀಮಸೇನನು ತನ್ನ ರಥವನ್ನಾರೋಹಿಸಿ, ಆಚಾರ್ಯನಲ್ಲಿ ಗೌರವದಿಂದ ಸುಮ್ಮನೆ ಇರಲು, ದ್ರೋಣನು ವಿಜೃಂಭಿಸಿ ಶತ್ರುಸೇನೆಯನ್ನು ಸ್ವೇಚ್ಛೆಯಾಗಿ ಸಂಹರಿಸುತ್ತಿದ್ದನು.

ದುರ್ಯೋಧನನು ಮತ್ತೆ ಭೀಮನನ್ನು ಮುತ್ತಿ ಭಲ್ಲದಿಂದ ಹೊಡೆದನು. ಸುಮ್ಮನಿದ್ದ ಭೀಮಸೇನನು ಹೊಡೆದೆಬ್ಬಿಸಿದ ಹುಲಿಯಂತಾಗಿ, ಅನೇಕ ನಾರಾಚಗಳಿಂದ ದುರ್ಯೋಧನನನ್ನು ಮರ್ಮಪೀಡಿತನನ್ನಾಗಿ ಮಾಡಿದನು. ಪರಸ್ಪರ ಬಾಣಪೀಡಿತರಾದರೂ ಚಲಿಸದೆ ಗಿರಿದ್ವಯರಂತೆ ನಿಂತು ಬಾಣ ಯುದ್ಧರತರಾದ ದುರ್ಯೋಧನ ಭೀಮಸೇನರನ್ನು ಅಂಬರದಿ ದೇವತೆಗಳು ಕುತೂಹಲದಿಂದ ನೋಡುತ್ತಿದ್ದರು. ಆಗ ದುರ್ಯೋಧನನ ಸಹೋದರರು ಭೀಮನನ್ನು ಹಿಡಿಯಲೆಣಿಸಿ, ಮೇಲೇರಿ ಬಂದರು. ಅವರನ್ನು ಧರ್ಮರಾಜ ಪ್ರೇಷಿತರಾದ ಅಭಿಮನ್ಯು ಮುಂತಾದ ದ್ವಾದಶ ರಥಿಕರು ತಡೆದು ಹೋರಾಡಿದರು. ಭೀಮಸೇನನು ತನ್ನನ್ನು ಮುತ್ತುವ ನಿನ್ನ ಸುತರು, ಅಭಿಮನ್ಯು ಮುಖವೀರರಿಂದ ಆಕರ್ಷಿತರಾಗಿ ಬದುಕಿ ಹೋದದ್ದು ಸರಿಯಾಗಲಿಲ್ಲವೆಂದು ಚಿಂತಿಸಿದನು. ಅಪರಾಹ್ಣ ಸಮಯವಾಯಿತು.

ಅಭಿಮನ್ಯುವು ವಿಕರ್ಣನ ಕುದುರೆಗಳನ್ನು ಕೊಂದು ಇಪ್ಪತ್ತೈದು ಬಾಣಗಳಿಂದ ಅವನ ಮೈ ಗಾಯಮಾಡಿದನು. ವಿರಥನಾದ ವಿಕರ್ಣನು ಚಿತ್ರಸೇನನ ರಥವನ್ನೇರಿ ಅಭಿಮನ್ಯುವಿನನ್ನು ಐದು ನಾರಾಚಗಳಿಂದ ಪೀಡಿಸಿದನು. ಅಭಿಮನ್ಯುವು ಕಂಪಿಸದೆ, ಅವರೀರ್ವರೊಡನೆ ಕಾದಾಡಿದನು. ದುಶ್ಶಾಸನನು ಕೇಕಯರಿಂದ ಹೋರಾಡಿದನು. ದುರ್ಯೋಧನನು ಭೀಮನನ್ನು ಬಿಟ್ಟು ದ್ರೌಪದೇಯರಿಂದ ಕಾದಿ, ಒಬ್ಬೊಬ್ಬರ ಮೇಲೆ ಮೂರು ಬಾಣಗಳನ್ನು ಬಿಟ್ಟನು. ಅವರೂ ಅವನನ್ನು ಹೊಡೆದಾಗ ಗೈರಿಕ ಧಾತುಗಳಿಂದೊಪ್ಪುವ ಗಿರಿಯಂತೆ ನಿನ್ನ ಮಗನು ಕಂಗೊಳಿಸಿದನು. ಭೀಷ್ಮನು ಹುಲಿಯು ಪಶುಗಳ ಮೇಲೆರಗುವಂತೆ, ವಿಜೃಂಭಿಸಿ ಪಾಂಡವ ಸೈನಿಕರನ್ನು ಅಯುತಸಂಖ್ಯರನ್ನು ಸಂಹರಿಸಿದನು. ಅರ್ಜುನನು ಕೂಡ ಶತ್ರುಸಂಹಾರವನ್ನು ಮಾಡುತ್ತಾ ಬರುವಾಗ ಅವನು ಬಂದೆಡೆ ತಲೆಯಿಲ್ಲದ ಕಬಂಧಗಳು ಕಾಣಬರುತ್ತಿದ್ದವು.

ಸಾಯಂಕಾಲವಾಗುತ್ತಿರಲು ದುರ್ಯೋಧನನು ಸಿಟ್ಟಿನ ರಭಸದಿಂದ ಬಂದು ಭೀಮನನ್ನು ಮುತ್ತಿದನು. ಪೂರ್ವ ವೈರಿಯು ಕೃಷ್ಣದ್ವೇಷಿಯು ಆದ ದುರ್ಯೋಧನನನ್ನು ಕಂಡು ಭೀಮನು ಕೋಪಾರುಣಿತಲೋಚನನಾಗಿ ಇಂತೆಂದನು : ' ದುರ್ಯೋಧನ ! ಬಹು ವರ್ಷಗಳಿಂದ ಕಾದಿದ್ದೆನು ಈ ಅವಕಾಶಕ್ಕಾಗಿ. ಇಂದು ನಿನ್ನನ್ನು ಕೊಂದು ನಿಸ್ತೀರ್ಣಪ್ರತಿಜ್ಞನಾಗುವೆನು. ಇಂದು ತಾಯಿ ಕುಂತಿಯ ಮನಃಶಲ್ಯವನ್ನು ಕಿತ್ತೊಗೆಯುವೆನು. ಇಂದು ಪಾಂಚಾಲಿಯ ಪರಿಭವಾನಲವನ್ನು ನಿನ್ನ ಪ್ರಾಣಾಹುತಿಯಿತ್ತು ತೃಪ್ತಿಪಡಿಸುವೆನು. ಹಿಂದೆ ಮತ್ಸರಬುದ್ಧಿಯಾಗಿ ಪಾಂಡವರನ್ನು ಕ್ಲೇಶಪಡಿಸಿದ ಪಾಪ ಫಲವನ್ನಿಂದು ನಿನ್ನಿಂದ ಉಣಿಸುವೆನು. ಈಗ ಕರ್ಣ ಶಕುನಿ ದುಶ್ಶಾಸನರು ನಿನ್ನನ್ನು ನಿನ್ನ ಕೈಯಿಂದ ಬಿಡಿಸಲಾರರು ತಿಳಿ ! ನಮ್ಮ ಸ್ವಾಮಿ ಶ್ರೀಕೃಷ್ಣನು ಸಂಧಿಗಾಗಿ ಬಂದಾಗ ಅವನನ್ನು ಅವಮಾನಿಸಿದ ಪಾಪ, ಉಲೂಕನಿಂದ ಸಂದೇಶವಿತ್ತು ನುಡಿದ ದುರ್ವಚನದ ಪಾಪ, ನಿಷ್ಕಾರಣವಾಗಿ ಪಾಂಡವರಿಗೆ ಕ್ಲೇಶಗಳನ್ನಿತ್ತ ಪಾಪ, ನೀ ಮಾಡಿದ ದುಷ್ಕೃತ್ಯಗಳ ಪಾಪ, ಎಲ್ಲದರ ಫಲವನ್ನು ಕಟ್ಟಿ ಉಣಿಸಲಿರುವ ವೃಕೋದರನ ಗದಾದಂಡದಿಂದ ನಿನ್ನನ್ನು ಬಿಡಿಸುವರಾರೂ ಇಲ್ಲ. '

ಇಂತು ನುಡಿದು ಭೀಮಸೇನನು ಧನುಷ್ಟಂಕಾರವನ್ನು ಮಾಡಿ, ಇಪ್ಪತ್ತಾರು ಶರಗಳನ್ನು ಬಿಟ್ಟು ಸುಯೋಧನನನ್ನು ನೋಯಿಸಿದನು. ಎರಡು ಭಲ್ಲಗಳಿಂದ ಅವನ ಬಿಲ್ಲನ್ನು ಮುರಿದನು ; ನಾಲ್ಕರಿಂದ ನಾಲ್ಕು ಕುದುರೆಗಳನ್ನು ಕೊಂದನು. ಒಂದರಿಂದ ಸೂತನನ್ನು ಪೀಡಿಸಿ ಓಡಿಸಿದನು. ಎರಡರಿಂದ ಶ್ವೇತಚ್ಛತ್ರವನ್ನು ಕೆಡಹಿದನು. ಮೂರರಿಂದ ಧ್ವಜವನ್ನು ಮುರಿದನು. ಎಲ್ಲರೂ ಹಾಹಾಕಾರವನ್ನು ಮಾಡುತ್ತ ನೋಡುತ್ತಿರಲು, ನಿನ್ನ ಸುತನು ಸಂಭ್ರಾಂತನಾಗಿರಲು ಭೀಮಸೇನನು ಅಂದ ನುಡಿ ನಡೆಸಿಬಿಡುವನಂತೆ, ಆಕಾಶದಿಂದ ಧುಮುಕುವ ಮಿಂಚಿನಂತೆ ದುರ್ಯೋಧನನ ಧ್ವಜವು ಬೀಳುವುದನ್ನು ನೋಡುವ ಕೌರವರಿಗೆ, ಅದರಂತೆ ಅವರೂ ಬೀಳುವರೆಂದು ಸಾರಿ, ಹತ್ತು ಬಾಣಗಳಿಂದ ದುರ್ಯೋಧನನನ್ನು ಹೊಡೆದನು. ದುರ್ಯೋಧನನು ಸತ್ತವನಂತಾಗಿ ರಥಮಧ್ಯದಿ ಉರುಳಿದನು. ಅದನ್ನು ಕಂಡು ಕೃಪ, ಜಯದ್ರಥರು ಧಾವಿಸಿ ಬಂದು, ಭೀಮನನ್ನು ವಾರಿಸಿ, ಕಾದತೊಡಗಿದರು. ಕೃಪನು ರಾಜರಾಜನನ್ನೆತ್ತಿ ತನ್ನ ರಥದಲ್ಲಿಟ್ಟುಕೊಂಡು ಹೋದನು. ಹುಲಿಯ ಬಾಯಲ್ಲಿದ್ದ ಮಾಂಸ ಖಂಡವನ್ನು ಕಿತ್ತುಕೊಂಡಂತೆ ಭೀಮನು ವಿಜೃಂಭಿಸಿ, ಜಯದ್ರಥನನ್ನು ಅನೇಕ ಬಾಣಗಳಿಂದ ಪೀಡಿಸಿದನು.

ಅವನಿಗೆ ಸಹಾಯವಾಗಲು ಬಂದ ಚಿತ್ರಸೇನ, ಸುಚಿತ್ರ, ಚಿತ್ರಾಂಗ, ಚಿತ್ರದರ್ಶನ, ಸುಚಾರು, ಚಾರುಚಿತ್ರ, ನಂದ, ಉಪನಂದಕ ಎಂಬ ಎಂಟು ಜನ ಮಹಾರಥರನ್ನು ಅಭಿಮನ್ಯುವು ತಡೆದು, ಒಬ್ಬೊಬ್ಬರನ್ನು ಐದೈದು ಬಾಣಗಳಿಂದ ತಾಡಿಸಿದನು. ಅವರು ಸುರಿವ ಬಾಣವರ್ಷವನ್ನು ಗಿರಿಯಂತೆ ನಿರ್ಲಕ್ಷಿಸಿ, ಅಭಿಮನ್ಯುವು ವಜ್ರಪಾಣಿಯಂತೆ ಪರಾಕ್ರಮಿಸಿ ವಿಕರ್ಣನನ್ನು ತೀಕ್ಷ್ಣ ಬಾಣಗಳಿಂದ ಹೊಡೆದನು. ಆ ಬಾಣಗಳು ಅವನ ಮೈತೂರಿ ಹೊರಟಾಗ ವಿಕರ್ಣನು ರಕ್ತಸಿಕ್ತಗಾತ್ರವಾಗಿ ಮೂರ್ಛೆ ಬಿದ್ದನು. ದುರ್ಮುಖನು ಆರು ಬಾಣಗಳಿಂದ ತನ್ನ ಕುದುರೆಗಳನ್ನು ಕೊಲ್ಲಲು, ಶ್ರುತಕರ್ಮನು

ದುರ್ಮುಖನನ್ನು ಮೂರ್ಛೆಗೆಡಹಿ ಶ್ರುತಸೋಮನ ರಥವನ್ನು ಸೇರಿದನು. ಶ್ರುತಕೀರ್ತಿಯು ನಿನ್ನ ಮಗನಾದ ಜಯಸೇನನನ್ನು ಮುತ್ತಿ ಬಾಣಪೀಡಿತನನ್ನಾಗಿಸಲು, ಜಯಸೇನನು ಅವನ ಚಾಪವನ್ನು ಮುರಿದನು. ಶತಾನೀಕನು ಶ್ರುತಕೀರ್ತಿಯನ್ನು ರಕ್ಷಿಸಲು ಬಂದು ಹತ್ತು ಬಾಣಗಳಲ್ಲಿ ಜಯಸೇನನಲ್ಲಿ ಪ್ರಯೋಗಿಸಿದನು. ದುಷ್ಕರ್ಣಜಯಸೇನರು ಶತಾನೀಕ ಶ್ರುತಕೀರ್ತಿಗಳಿಂದ ಬಹುಕಾಲ ಹೋರಾಡಿದರು. ಕೇಕಯರು ಐವರು ವೀರರು ಸೋದರ ಕೇಕಯರಿಂದ ಯುದ್ಧವಾಡಿ ವಿಶ್ರಾಂತರಾದರು. ಭೀಷ್ಮನು ಅನೇಕ ಸಹಸ್ರ ಯೋಧರನ್ನು ಸಂಹರಿಸಿ ಅಂದಿಗೆ ಯುದ್ಧವನ್ನು ವಿರಮಿಸಿದನು. ಧರ್ಮರಾಜನು ಸೇನಾವಹಾರವನ್ನು ಮಾಡಿ ಶಿಬಿರವನ್ನು ಸೇರಿದನು. ಅಂದಿನ ಯುದ್ಧದಲ್ಲಿ ವೀರವಿಹಾರಗೈದು ಬಂದ ಭೀಮಸೇನ ಧೃಷ್ಟದ್ಯುಮ್ನರನ್ನು ಬಿಗಿದಪ್ಪಿ, ತಲೆಮೂಸಿ, ಆಶೀರ್ವದಿಸಿದನು.

ದುರ್ಯೋಧನನು ಭೀಮಸೇನನ ವಿಕ್ರಮವನ್ನು ನೆನೆದು ಭಯಾಶ್ಚರ್ಯದ್ವೇಷ ಭರಿತನಾಗಿ, ಮತ್ತೆ ಪಿತಾಮಹನನ್ನು ಕಂಡು 'ಪಿತಾಮಹ ! ಮಹಾಸೈನ್ಯವಿದೆ. ನಿನ್ನಂತಹ ಸೇನಾಪತಿಗಳಿದ್ದಾರೆ. ಆದರೂ ನನಗೆ ಜಯವಾಗದಿರಲು ನಿಮ್ಮ ಉಪೇಕ್ಷೆಯೇ ಕಾರಣವಲ್ಲವೇ ? ನನಗಾಗಿ ಚೆನ್ನಾಗಿ ಹೋರಾಡಿ, ನನಗೆ ಜಯವನ್ನು ನೀಡಿ' ಎಂದನು. ಭೀಷ್ಮನು 'ರಾಜನ್ ! ನನಗೂ ನಿನ್ನ ಜಯಕ್ಕಾಗಿ ಕಾದಾಡುವ ಸಾಹಸ ಬಲವಿಕ್ರಮಗಳಿವೆ. ಶಕ್ತಿಗೆ ಮೀರಿ ನಾನು ಪ್ರಯತ್ನಿಸುತ್ತಿರುವೆನು. ಆದರೂ ಪಾಂಡವರು ನೀ ಮಾಡಿದ ಅಪರಾಧಗಳಿಂದ ಹಗೆ ತಾಳಿರುವರು. ಸಾಹಸಿಸಿ ಅವರನ್ನು ಗೆಲ್ಲಲಾಗದು. ನಾನು ನನ್ನ ಜೀವಿತವನ್ನು ಲೆಕ್ಕಿಸೆನು. ಕೊನೆ ಉಸಿರೆಳವವರೆಗೂ ನಿನಗಾಗಿ ಕಾದುವೆನು. ಸುರಾಸುರರನ್ನು ಗೆಲ್ಲುವ ನನಗೆ ನಿನ್ನ ಶತ್ರುಗಳ ಲೆಕ್ಕವಿಲ್ಲ. ಪಾಂಡವರನ್ನು ಮಾತ್ರ ನಾನು ಜಯಿಸಲು ಶಕ್ತನಲ್ಲ. ಮಿಕ್ಕ ಸೇನಾ ಸೇನಾಪತಿಗಳನ್ನು ಬಿಡದೆ ಕಡಿದು, ರಣಭೂಮಿಗೆ ಈಡು ಮಾಡುವೆನು' ಎಂದು ಸಮಾಶ್ವಸಿಸಿ ಕಳಿಸಿದನು. ಭೀಷ್ಮನಿತ್ತ ವಿಶಲ್ಯಕರಣಿಯಿಂದ ಧೃಢಗಾತ್ರನಾಗಿ ದುರ್ಯೋಧನನು ಮರುದಿನ ಮತ್ತೆ ಯುದ್ಧಕ್ಕೆ ಸಿದ್ಧನಾದನು.

## ೩೦. ಸಪ್ತಮದಿನ ಯುದ್ಧ — ಸಂಕುಲಯುದ್ಧ (ಪಂಚಮಿ)

ಸಂಜಯನು ನಿರೂಪಿಸಿದನು :

'ರಾಜನ್ ! ಬೆಳಗಾಗಲು ಭೀಷ್ಮನು ಮಂಡಲವ್ಯೂಹದಲ್ಲಿ ತನ್ನ ಸೈನ್ಯವನ್ನು ನಿಲ್ಲಿಸಿ ನಡೆದನು. ಒಂದೊಂದಾನೆ ಹಿಂದೆ ಏಳು ರಥಗಳು, ಒಂದೊಂದು ರಥದ ಹಿಂದೆ ಏಳು ಆಶ್ವಿಕರು, ಆಶ್ವಿಕನಿಗೆ ಹತ್ತು ಬಿಲ್ಲುಗಾರರು, ಧಾನುಷ್ಕನಿಗೆ ಏಳು ಭಟರು ಇಂತಾಗಿ ನಡೆಯುವ ಸೇನೆಯನ್ನು ಭೀಷ್ಮನು ನಡೆಸುತ್ತಾ, ದುರ್ಯೋಧನ ಚಿತ್ರಸೇನಾದಿ ವೀರರು ತನಗೆ ಹಿಂಗಾವಲಾಗಿ ಬರಲು ಪಾಂಡವಸೇನೆಯನ್ನು ತಾಕಿ ಯುದ್ಧವನ್ನಾರಂಭಿಸಿದನು. ದುರ್ಯೋಧನನು ಧೃಷ್ಟದ್ಯುಮ್ನನನ್ನು, ನಕುಲ ಸಹದೇವರು ಶಲ್ಯನನ್ನು, ವಿಂದಾನುವಿಂದರು ಸಾತ್ಯಕಿಯನ್ನು, ಅರ್ಜುನನೊಡನೆ ಬಹುರಾಜರು, ಭೀಮಸೇನನಿಂದ

ಕೃತವರ್ಮನು, ಅಭಿಮನ್ಯುವು ವಿಕರ್ಣಚಿತ್ರಸೇನ ದುರ್ಮರ್ಷಣರಿಂದಲು, ಭಗದತ್ತನನ್ನು ಘಟೋತ್ಕಚನು, ಧರ್ಮರಾಜನು ಶ್ರುತಾಯುನನ್ನು ಚೇಕಿತಾನನು ಕೃಪನನ್ನು ಕೂಡಿ ಭೀಕರವಾಗಿ ಹೋರಾಡಿದರು.

ಅರ್ಜುನನು ಶ್ರೀಕೃಷ್ಣನಿಗೆ ಹೇಳಿ ಹೇಳಿ ತ್ರಿಗರ್ತಾದಿ ರಾಜರನ್ನು ಶರವರ್ಷದಲ್ಲಿ ಮುಳುಗಿಸಿ, ರಕ್ತಸಿಕ್ತಗಾತ್ರರನ್ನಾಗಿಸಿದನು. ಅವರೂ ಬಿಡದೆ ಅವನನ್ನು ಶರಜಾಲದಿಂದ ಮುಚ್ಚಿದರು. ಆಗ ಅರ್ಜುನನು ಇಂದ್ರಾಸ್ತ್ರವನ್ನು ಬಿಡಲು, ಅವನನ್ನೆದುರಿಸಿ ನಿಂತ ಎಲ್ಲ ರಾಜನ್ಯರ ಶರೀರಗಳೆಲ್ಲ ಕಡೆ ಜರ್ಜರಿತವಾದವು. ಶಸ್ತ್ರಭಿನ್ನನಾಗದವನು ಅಲ್ಲಿ ಒಬ್ಬನೂ ಉಳಿಯಲಿಲ್ಲ. ಆಗ ಸುಶರ್ಮಾದಿ ರಾಜರು ಭೀತರಾಗಿ ಭೀಷ್ಮನನ್ನು ಸೇರಿದರು.

ದುರ್ಯೋಧನನು ಸಂಭ್ರಾಂತರಾಗಿರುವ ಸೈನಿಕರನ್ನು ನೋಡಿ, 'ವೀರರೇ ! ಪಿತಾಮಹನು ನಮ್ಮ ಸೇನಾಪತಿಯಾಗಿರಲು ಏಕೆ ಭಯ ? ಆತನು ಜೀವದ ಹಂಗು ತೊರೆದು ನಮಗಾಗಿ ಕಾದಲಿರುವನು. ಆತನನ್ನು ಶತ್ರುಹಸ್ತಗತನಾಗದಂತೆ ಸಂರಕ್ಷಿಸಿರಿ ! ಧೈರ್ಯದಿಂದ ಹೋರಾಡಿ, ಯಶೋಜಯಗಳನ್ನು ಗಳಿಸಿರಿ ! ' ಎಂದು ಧೈರ್ಯ ತುಂಬಿದನು. ಆಗ ಭೀಷ್ಮನು ಶ್ವೇತವಾಹನವನ್ನು ಕೂಡಿ ಕಡಿದಾಡುವುದನ್ನು ನೋಡುವ ಸೇನೆಗಳು ಹಾಲಹಲ ಶಬ್ದಗಳನ್ನು ಮಾಡಿದವು.

ವಿರಾಟನು ದ್ರೋಣನೊಡನೆ ಹೋರಾಡಿದನು. ಆಚಾರ್ಯನು ಅವನ ಧನುವನ್ನು ಮುರಿಯಲು, ವಿರಾಟನು ಬೇರೊಂದು ಬಿಲ್ಲನ್ನೆತ್ತಿ ಆಚಾರ್ಯನನ್ನು ಮೂರು ಬಾಣಗಳಿಂದಲು, ಅಶ್ವಗಳನ್ನು ನಾಲ್ಕು ಬಾಣಗಳಿಂದಲು, ಸೂತನನ್ನು ಐದು ಶರಗಳಿಂದಲು ಪೀಡಿಸಿದನು. ಆಚಾರ್ಯನು ಕ್ರುದ್ಧನಾಗಿ ಅವನ ಸೂತ ತುರಗಗಳನ್ನು ಕೊಂದು ಗರ್ಜಿಸಿದನು. ವಿರಾಟನು ಮಗನಾದ ಶಂಖನ ರಥವನ್ನು ಸೇರಿ, ಇಬ್ಬರೂ ಕಲೆತು ಆಚಾರ್ಯನೊಡನೆ ಕಾದಿದರು. ದ್ರೋಣನು ಒಂದು ಬಾಣದಿಂದ ಶಂಖನ ಹೃದಯವನ್ನು ಭೇದಿಸಿ ಅವನನ್ನು ಓಡಿಸಿದನು. ವಿರಾಟನು ಭಯಾರ್ತನಾಗಿ ಓಡಿಹೋದನು. ದ್ರೋಣನು ಬಾಯ್ತೆರೆದು ಬರುವ ಮೃತ್ಯುವಿನಂತೆ ಪಾಂಡವ ವೀರರನ್ನು ಸಂಹರಿಸುತ್ತ ರಣರಂಗದಲ್ಲಿ ವಿಹರಿಸಿದನು.

ಶಿಖಂಡಿಯು ಅಶ್ವತ್ಥಾಮನನ್ನು ತಾಕಿ, ಮೂರು ಬಾಣಗಳಿಂದ ಹೊಡೆಯಲು ಗುರುಸುತನು ತ್ರಿಶಿಖರವಾದ ಮೇರುಗಿರಿಯಂತೆ ಶೋಭಿಸಿದನು. ಆತನು ಸಿಟ್ಟಾಗಿ ನಿಮಿಷಮಾತ್ರದಲ್ಲಿ ಶಿಖಂಡಿಯ ಸೂತ ತುರಗಗಳನ್ನು ಕೊಂದು, ಧ್ವಜವನ್ನು ಕೆಡಹಿ ಧನುವನ್ನು ಮುರಿದನು. ವಿರಥನಾದ ಶಿಖಂಡಿಯು ಖಡ್ಗಹಸ್ತನಾಗಿ ಗಿರಗಿರ ತಿರುವುತ್ತಾ ಮೇಲೇರಿ ಬಂದನು. ದ್ರೌಣಿಯು ಶರವರ್ಷವನ್ನು ಸುರಿಸಿದನು. ಅವನ್ನು ಕತ್ತಿಯಿಂದ ತುಂಡರಿಸಿ ಮುಂದೆ ಬರುವ ಶಿಖಂಡಿಯ ಖಡ್ಗವನ್ನು ಭಲ್ಲದಿಂದ ಎರಡು ಮಾಡಿದನು. ಶಿಖಂಡಿಯು ಅದನ್ನೇ ಎಸೆಯಲು, ಗುರುಪುತ್ರನು ಅದನ್ನು ಕೆಡಹಿ ಬಾಣಗಳಿಂದ ಪೀಡಿಸಿದನು. ಆಗ ಶಿಖಂಡಿಯು ಮಾಧವನ ರಥವನ್ನೇರಿ ಪಾರಾದನು.

ದುರ್ಮುಖನನ್ನು ಮೂರ್ಛೆಗೆಡಹಿ ಶ್ರುತಸೋಮನ ರಥವನ್ನು ಸೇರಿದನು. ಶ್ರುತಕೀರ್ತಿಯು ನಿನ್ನ ಮಗನಾದ ಜಯಸೇನನನ್ನು ಮುತ್ತಿ ಬಾಣಪೀಡಿತನನ್ನಾಗಿಸಲು, ಜಯಸೇನನು ಅವನ ಚಾಪವನ್ನು ಮುರಿದನು. ಶತಾನೀಕನು ಶ್ರುತಕೀರ್ತಿಯನ್ನು ರಕ್ಷಿಸಲು ಬಂದು ಹತ್ತು ಬಾಣಗಳಲ್ಲಿ ಜಯಸೇನನಲ್ಲಿ ಪ್ರಯೋಗಿಸಿದನು. ದುಷ್ಕರ್ಣಜಯಸೇನರು ಶತಾನೀಕ ಶ್ರುತಕೀರ್ತಿಗಳಿಂದ ಬಹುಕಾಲ ಹೋರಾಡಿದರು. ಕೇಕಯರು ಐವರು ವೀರರು ಸೋದರ ಕೇಕಯರಿಂದ ಯುದ್ಧವಾಡಿ ವಿಶ್ರಾಂತರಾದರು. ಭೀಷ್ಮನು ಅನೇಕ ಸಹಸ್ರ ಯೋಧರನ್ನು ಸಂಹರಿಸಿ ಅಂದಿಗೆ ಯುದ್ಧವನ್ನು ವಿರಮಿಸಿದನು. ಧರ್ಮರಾಜನು ಸೇನಾವಹಾರವನ್ನು ಮಾಡಿ ಶಿಬಿರವನ್ನು ಸೇರಿದನು. ಅಂದಿನ ಯುದ್ಧದಲ್ಲಿ ವೀರವಿಹಾರಗೈದು ಬಂದ ಭೀಮಸೇನ ಧೃಷ್ಟದ್ಯುಮ್ನರನ್ನು ಬಿಗಿದಪ್ಪಿ, ತಲೆಮೂಸಿ, ಆಶೀರ್ವದಿಸಿದನು.

ದುರ್ಯೋಧನನು ಭೀಮಸೇನನ ವಿಕ್ರಮವನ್ನು ನೆನೆದು ಭಯಾಶ್ಚರ್ಯದ್ವೇಷ ಭರಿತನಾಗಿ, ಮತ್ತೆ ಪಿತಾಮಹನನ್ನು ಕಂಡು 'ಪಿತಾಮಹ ! ಮಹಾಸೈನ್ಯವಿದೆ. ನಿನ್ನಂತಹ ಸೇನಾಪತಿಗಳಿದ್ದಾರೆ. ಆದರೂ ನನಗೆ ಜಯವಾಗದಿರಲು ನಿಮ್ಮ ಉಪೇಕ್ಷೆಯೇ ಕಾರಣವಲ್ಲವೇ ? ನನಗಾಗಿ ಚನ್ನಾಗಿ ಹೋರಾಡಿ, ನನಗೆ ಜಯವನ್ನು ನೀಡಿ' ಎಂದನು. ಭೀಷ್ಮನು 'ರಾಜನ್ ! ನನಗೂ ನಿನ್ನ ಜಯಕ್ಕಾಗಿ ಕಾದಾಡುವ ಸಾಹಸ ಬಲವಿಕ್ರಮಗಳಿವೆ. ಶಕ್ತಿಗೆ ಮೀರಿ ನಾನು ಪ್ರಯತ್ನಿಸುತ್ತಿರುವೆನು. ಆದರೂ ಪಾಂಡವರು ನೀ ಮಾಡಿದ ಅಪರಾಧಗಳಿಂದ ಹಗೆ ತಾಳಿರುವರು. ಸಾಹಸಿಸಿ ಅವರನ್ನು ಗೆಲ್ಲಲಾಗದು. ನಾನು ನನ್ನ ಜೀವಿತವನ್ನು ಲೆಕ್ಕಿಸೆನು. ಕೊನೆ ಉಸಿರೆಳೆವವರೆಗೂ ನಿನಗಾಗಿ ಕಾದುವೆನು. ಸುರಾಸುರರನ್ನು ಗೆಲ್ಲುವ ನನಗೆ ನಿನ್ನ ಶತ್ರುಗಳ ಲೆಕ್ಕವಿಲ್ಲ. ಪಾಂಡವರನ್ನು ಮಾತ್ರ ನಾನು ಜಯಿಸಲು ಶಕ್ತನಲ್ಲ. ಮಿಕ್ಕ ಸೇನಾ ಸೇನಾಪತಿಗಳನ್ನು ಬಿಡದೆ ಕಡಿದು, ರಣಭೂಮಿಗೆ ಈಡು ಮಾಡುವೆನು' ಎಂದು ಸಮಾಶ್ವಸಿಸಿ ಕಳಿಸಿದನು. ಭೀಷ್ಮನಿತ್ತ ವಿಶಲ್ಯಕರಣಿಯಿಂದ ದೃಢಗಾತ್ರನಾಗಿ ದುರ್ಯೋಧನನು ಮರುದಿನ ಮತ್ತೆ ಯುದ್ಧಕ್ಕೆ ಸಿದ್ಧನಾದನು.

## ೩೦. ಸಪ್ತಮದಿನ ಯುದ್ಧ — ಸಂಕುಲಯುದ್ಧ (ಪಂಚಮಿ)

ಸಂಜಯನು ನಿರೂಪಿಸಿದನು :

'ರಾಜನ್ ! ಬೆಳಗಾಗಲು ಭೀಷ್ಮನು ಮಂಡಲವ್ಯೂಹದಲ್ಲಿ ತನ್ನ ಸೈನ್ಯವನ್ನು ನಿಲ್ಲಿಸಿ ನಡೆದನು. ಒಂದೊಂದಾನೆ ಹಿಂದೆ ಏಳು ರಥಗಳು, ಒಂದೊಂದು ರಥದ ಹಿಂದೆ ಏಳು ಅಶ್ವಿಕರು, ಅಶ್ವಿಕನಿಗೆ ಹತ್ತು ಬಿಲ್ಲುಗಾರರು, ಧಾನುಷ್ಕನಿಗೆ ಏಳು ಭಟರು ಇಂತಾಗಿ ನಡೆಯುವ ಸೇನೆಯನ್ನು ಭೀಷ್ಮನು ನಡೆಸುತ್ತಾ ದುರ್ಯೋಧನ ಚಿತ್ರಸೇನಾದಿ ವೀರರು ತನಗೆ ಹಿಂಗಾವಲಾಗಿ ಬರಲು ಪಾಂಡವಸೇನೆಯನ್ನು ತಾಕಿ ಯುದ್ಧವನ್ನಾರಂಭಿಸಿದನು. ದುರ್ಯೋಧನನು ಧೃಷ್ಟದ್ಯುಮ್ನನನ್ನು, ನಕುಲ ಸಹದೇವರು ಶಲ್ಯನನ್ನು, ವಿಂದಾನುವಿಂದರು ಸಾತ್ಯಕಿಯನ್ನು, ಅರ್ಜುನನೊಡನೆ ಬಹುರಾಜರು, ಭೀಮಸೇನನಿಂದ

ಕೃತವರ್ಮನು, ಅಭಿಮನ್ಯುವು ವಿಕರ್ಣಚಿತ್ರಸೇನ ದುರ್ಮರ್ಷಣರಿಂದಲು, ಭಗದತ್ತನನ್ನು ಘಟೋತ್ಕಚನು, ಧರ್ಮರಾಜನು ಶ್ರುತಾಯುನನ್ನು, ಚೇಕಿತಾನನು ಕೃಪನನ್ನು ಕೂಡಿ ಭೀಕರವಾಗಿ ಹೋರಾಡಿದರು.

ಅರ್ಜುನನು ಶ್ರೀಕೃಷ್ಣನಿಗೆ ಹೇಳಿ ಹೇಳಿ ತ್ರಿಗರ್ತಾದಿ ರಾಜರನ್ನು ಶರವರ್ಷದಲ್ಲಿ ಮುಳುಗಿಸಿ, ರಕ್ತಸಿಕ್ತಗಾತ್ರರನ್ನಾಗಿಸಿದನು. ಅವರೂ ಬಿಡದೆ ಅವನನ್ನು ಶರಜಾಲದಿಂದ ಮುಚ್ಚಿದರು. ಆಗ ಅರ್ಜುನನು ಇಂದ್ರಾಸ್ತ್ರವನ್ನು ಬಿಡಲು, ಅವನನ್ನೆದುರಿಸಿ ನಿಂತ ಎಲ್ಲ ರಾಜನ್ಯರ ಶರೀರಗಳೆಲ್ಲ ಕಡೆ ಜರ್ಜರಿತವಾದವು. ಶಸ್ತ್ರಭಿನ್ನನಾಗದವನು ಅಲ್ಲಿ ಒಬ್ಬನೂ ಉಳಿಯಲಿಲ್ಲ. ಆಗ ಸುಶರ್ಮಾದಿ ರಾಜರು ಭೀತರಾಗಿ ಭೀಷ್ಮನನ್ನು ಸೇರಿದರು.

ದುರ್ಯೋಧನನು ಸಂಭ್ರಾಂತರಾಗಿರುವ ಸೈನಿಕರನ್ನು ನೋಡಿ, 'ವೀರರೇ ! ಪಿತಾಮಹನು ನಮ್ಮ ಸೇನಾಪತಿಯಾಗಿರಲು ಏಕೆ ಭಯ ? ಆತನು ಜೀವದ ಹಂಗು ತೊರೆದು ನಮಗಾಗಿ ಕಾದಲಿರುವನು. ಆತನನ್ನು ಶತ್ರುಹಸ್ತಗತನಾಗದಂತೆ ಸಂರಕ್ಷಿಸಿರಿ ! ಧೈರ್ಯದಿಂದ ಹೋರಾಡಿ, ಯಶೋಜಯಗಳನ್ನು ಗಳಿಸಿರಿ ! ' ಎಂದು ಧೈರ್ಯ ತುಂಬಿದನು. ಆಗ ಭೀಷ್ಮನು ಶ್ವೇತವಾಹನವನ್ನು ಕೂಡಿ ಕಡಿದಾಡುವುದನ್ನು ನೋಡುವ ಸೇನೆಗಳು ಹಾಲಹಲ ಶಬ್ದಗಳನ್ನು ಮಾಡಿದವು.

ವಿರಾಟನು ದ್ರೋಣನೊಡನೆ ಹೋರಾಡಿದನು. ಆಚಾರ್ಯನು ಅವನ ಧನುವನ್ನು ಮುರಿಯಲು, ವಿರಾಟನು ಬೇರೊಂದು ಬಿಲ್ಲನ್ನೆತ್ತಿ ಆಚಾರ್ಯನನ್ನು ಮೂರು ಬಾಣಗಳಿಂದಲು, ಅಶ್ವಗಳನ್ನು ನಾಲ್ಕು ಬಾಣಗಳಿಂದಲು, ಸೂತನನ್ನು ಐದು ಶರಗಳಿಂದಲು ಪೀಡಿಸಿದನು. ಆಚಾರ್ಯನು ಕ್ರುದ್ಧನಾಗಿ ಅವನ ಸೂತ ತುರಗಗಳನ್ನು ಕೊಂದು ಗರ್ಜಿಸಿದನು. ವಿರಾಟನು ಮಗನಾದ ಶಂಖನ ರಥವನ್ನು ಸೇರಿ, ಇಬ್ಬರೂ ಕಲೆತು ಆಚಾರ್ಯನೊಡನೆ ಕಾದಿದರು. ದ್ರೋಣನು ಒಂದು ಬಾಣದಿಂದ ಶಂಖನ ಹೃದಯವನ್ನು ಭೇದಿಸಿ ಅವನನ್ನು ಓಡಿಸಿದನು. ವಿರಾಟನು ಭಯಾರ್ತನಾಗಿ ಓಡಿಹೋದನು. ದ್ರೋಣನು ಬಾಯ್ತೆರೆದು ಬರುವ ಮೃತ್ಯುವಿನಂತೆ ಪಾಂಡವ ವೀರರನ್ನು ಸಂಹರಿಸುತ್ತ ರಣರಂಗದಲ್ಲಿ ವಿಹರಿಸಿದನು.

ಶಿಖಂಡಿಯು ಅಶ್ವತ್ಥಾಮನನ್ನು ತಾಕಿ, ಮೂರು ಬಾಣಗಳಿಂದ ಹೊಡೆಯಲು ಗುರುಸುತನು ತ್ರಿಶಿಖರವಾದ ಮೇರುಗಿರಿಯಂತೆ ಶೋಭಿಸಿದನು. ಆತನು ಸಿಟ್ಟಾಗಿ ನಿಮಿಷಮಾತ್ರದಲ್ಲಿ ಶಿಖಂಡಿಯ ಸೂತ ತುರಗಗಳನ್ನು ಕೊಂದು, ಧ್ವಜವನ್ನು ಕೆಡಹಿ ಧನುವನ್ನು ಮುರಿದನು. ವಿರಥನಾದ ಶಿಖಂಡಿಯು ಖಡ್ಗಹಸ್ತನಾಗಿ ಗಿರಗಿರ ತಿರುವುತ್ತಾ ಮೇಲೇರಿ ಬಂದನು. ದ್ರೌಣಿಯು ಶರವರ್ಷವನ್ನು ಸುರಿಸಿದನು. ಅವನ್ನು ಕತ್ತಿಯಿಂದ ತುಂಡರಿಸಿ ಮುಂದೆ ಬರುವ ಶಿಖಂಡಿಯ ಖಡ್ಗವನ್ನು ಭಲ್ಲದಿಂದ ಎರಡು ಮಾಡಿದನು. ಶಿಖಂಡಿಯು ಅದನ್ನೇ ಎಸೆಯಲು, ಗುರುಪುತ್ರನು ಅದನ್ನು ಕೆಡಹಿ ಬಾಣಗಳಿಂದ ಪೀಡಿಸಿದನು. ಆಗ ಶಿಖಂಡಿಯು ಮಾಧವನ ರಥವನ್ನೇರಿ ಪಾರಾದನು.

ಆಲಂಬುಷನ ಸಂಗಡ ಹೋರಾಡುವ ಸಾತ್ಯಕಿಯು ಇಂದ್ರಾಸ್ತ್ರದಿಂದ ಅವನ ಮಾಯಾಶರಜಾಲವನ್ನು ನಾಶಮಾಡಿ, ಅವನನ್ನು ನಿಶಿತಶರದಿಂದ ಹೊಡೆದೋಡಿಸಿದನು. ಧೃಷ್ಟದ್ಯುಮ್ನನು ದುರ್ಯೋಧನನನ್ನು ತಾಕಿ ಅರವತ್ತು ಬಾಣಗಳನ್ನು ಬಿಡಲು, ಅವನು ಅವನ್ನು ತುಂಡರಿಸಿ ತಾನೂ ಅರವತ್ತು ಬಾಣಗಳಿಂದ ಹೊಡೆದನು. ಪಾಂಡವಸೇನಾಪತಿಯು ಕುರುರಾಜನ ಕೋದಂಡವನ್ನು ಖಂಡಿಸಿ, ಕುದುರೆಗಳನ್ನು ಕೊಂದು, ನಿಶಿತ ಶರಗಳಿಂದ ಪೀಡಿಸಲು, ದುರ್ಯೋಧನನು ಖಡ್ಗಹಸ್ತನಾಗಿ ರಥದಿಂದಿಳಿದು ಪಾರ್ಷತನನ್ನು ಕೊಲ್ಲಲು ನಿಶ್ಚಯಿಸಿ ಬಂದನು. ಅದನ್ನು ನೋಡಿ ಧೃಷ್ಟದ್ಯುಮ್ನನು ಅವನ ಖಡ್ಗವನ್ನು ಬಾಣದಿಂದ ಕೆಡಹಿದನು. ನಿಸ್ಸಹಾಯಕನಾಗಿದ್ದ ರಾಜರಾಜನ ರಕ್ಷಣೆಗೆ ಶಕುನಿಯು ಬಂದು, ಅವನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಹೋದನು. ಪಾರ್ಷತನು ಬಿಡದೆ ಕುರುಸೇನೆಯನ್ನು ಸಂಹರಿಸಿದನು. ಭೀಮಸೇನನು ತನ್ನನ್ನು ಮುತ್ತಿದ ಕೃತವರ್ಮನ ರಥವನ್ನು ಮುರಿದು, ಧ್ವಜವನ್ನು ಕೆಡಹಿ, ಸೂತನನ್ನು ಕೊಂದು ಅವನನ್ನು ಓಡಿಸಿದನು. ಅವನು ನಿನ್ನ ಮೈದುನನಾದ ವೃಷಕನ ರಥವನ್ನೇರಿ ಪಾರಾದನು.

ರಾಜನ್ ! ನಿನ್ನವರು ಬಲವಂತರು, ಪೌರುಷವಂತರು ನಿಜ ! ಆದರೆ ಅವರಿಗೆ ದೈವಬಲವಿಲ್ಲ. ಕೇಳು ! ಗಂಗಾಜಲವು ಮಧುರವಲ್ಲವೇ ? ಆದರೆ ಅದು ಸಮುದ್ರದಲ್ಲಿ ಸೇರಿ ಉಪ್ಪಾಗಿ ತೋರುವಂತೆ , ನಿನ್ನವರ ಪೌರುಷವೆಲ್ಲವು ವ್ಯವಸಾಯವಿಲ್ಲದೆ ವ್ಯರ್ಥವಾಗುತ್ತಿದೆ. ಪಾಂಡವರಿಗೆ ದೈವಸಹಾಯವಿದೆ. ಅಲ್ಲಿ ಶ್ರೀಭಗವಂತನೇ ರಕ್ಷಕನಾಗಿ ನಿಂತಿರುವನು. ಇದೆಲ್ಲವೂ ನಿನ್ನ ಅಪರಾಧವೆಂದು ತಿಳಿ ! ಯಾರನ್ನು ನಿಂದಿಸಿ ಏನೂ ಫಲವಿಲ್ಲ.

ಪೂರ್ವಾಹ್ಣದ ಉಳಿದ ಯುದ್ಧ ವಾರ್ತೆಯನ್ನು ಕೇಳು ! ಅವಂತ್ಯರಿಬ್ಬರು ರಾಜರು ಅರ್ಜುನ ಪುತ್ರನಾದ ಇರಾವಂತನೊಡನೆ ಕಾದಿದರು. ಪರಸ್ಪರ ಬಾಣಪೀಡಿತರಾಗಿ ಅವರು ಹೋರಾಡುವಾಗ, ಇರಾವಂತನು ಅನುವಿಂದನ ಕುದುರೆಗಳನ್ನು ಕೆಡಹಿ ಧನುಸ್ಸನ್ನು ಮುರಿದನು. ಅವನು ವಿಂದನ ರಥವನ್ನೇರಿ, ಶರವರ್ಷದಲ್ಲಿ ಇರಾವಂತನನ್ನು ಇಬ್ಬರೂ ಹೊಡೆದು ಮುಣುಗಿಸಿದರು. ಇರಾವಂತನು ಆ ಸಾರಥಿಯನ್ನು ತುರಗಗಳನ್ನು ಕೊಂದು, ಅವರನ್ನೂ ಹೊಡೆದು ಕ್ಷತಗಾತ್ರರನ್ನಾಗಿಸಿ, ಓಡಿಸಿದನು.

ಘಟೋತ್ಕಚನು ಭಗದತ್ತನನ್ನು ತಾಕಿ, ಅವನನ್ನೂ ಅವನೇರಿ ಬಂದ ಆನೆಯನ್ನೂ ಶರ ಸಹಸ್ರದಿಂದ ಪೀಡಿಸಿದನು. ಭಗದತ್ತನು ಸುಪ್ರತೀಕವೆಂಬ ಆನೆಯಿಂದ ಪಾಂಡವ ಸೈನಿಕರನ್ನು ತುಳಿಸಿ ಕೊಲ್ಲುತ್ತಾ, ಘಟೋತ್ಕಚನ ಶರಗಳನ್ನು ಮುರಿದು, ಅವನು ಅನೇಕ ಬಾಣಗಳಿಂದ ಹೊಡೆದನು. ಅವನು ಚಲಿಸದೇ ಮೇಲೇರಿ ಬರಲು, ಹದಿನಾಲ್ಕು ತೋಮರಗಳಿಂದ ಹೊಡೆದನು. ಅವನ್ನೆಲ್ಲ ಮುರಿದು ರಾಕ್ಷಸನು ಶಕ್ತಿಯನ್ನೊಗೆದನು. ಉರಿಯುತ್ತಾ ಬರುವ ಶಕ್ತಿಯನ್ನು ಖಂಡಿಸಿ ಭಗದತ್ತನು ರಾಕ್ಷಸೇಂದ್ರನನ್ನು ಹೊಡೆದೋಡಿಸಿದನು. ಯಮವರುಣಾದಿಗಳಿಗಜೇಯನೆನಿಸಿದ ಘಟೋತ್ಕಚನನ್ನು ಸೋಲಿಸಿದ ಭಗದತ್ತನ ವಿಕ್ರಮವನ್ನು ಕೌರವರು ಪ್ರಶಂಸಿಸಿದರು.

ನಕುಲ ಸಹದೇವರು ತಮ್ಮ ಮಾವನಾದ ಶಲ್ಯನೊಡನೆ ಕಾದಾಡಿದರು. ನಗುತ್ತಾ ಮೃದು ಯುದ್ಧವನ್ನು ಮಾಡುವ ಮಾವನನ್ನು ನಕುಲನು ನಾಲ್ಕು ಬಾಣಗಳಿಂದ ಪೀಡಿಸಿದನು. ಶಲ್ಯನು ನಕುಲನ ಕುದುರೆಗಳನ್ನು ಸಂಹರಿಸಲು, ನಕುಲನು ಸಹದೇವನ ರಥದಲ್ಲಿ ಕೂತು, ಇಬ್ಬರೂ ಕಲೆತು ಮಾವನೊಡನೆ ಕಾದಿದರು. ಅವರ ಶರವರ್ಷವನ್ನು ಖಂಡಿಸಿದ ಶಲ್ಯನಲ್ಲಿ ಕುಪಿತನಾಗಿ ಸಹದೇವನು ನಿಶಾತಬಾಣಗಳಿಂದ ಎದೆಗೆ ಹೊಡೆಯಲು, ಶಲ್ಯನು ಮೂರ್ಛಿತನಾಗಿ ಬಿದ್ದನು. ಅವನ ಸಾರಥಿಯು ರಣ ಮರ್ಯಾದೆಯಂತೆ ಅವನ ರಥವನ್ನು ದೂರ ಸರಿಸಿ, ನಿಂತನು. ನಕುಲ ಸಹದೇವರು ಕೌರವಸೇನೆಯನ್ನು ಸಂಹರಿಸುತ್ತ ವಿಹರಿಸಲು ಪಾಂಡವವೀರರು ಅವರನ್ನು ಕೊಂಡಾಡಿದರು.

ಮಧ್ಯಾನ್ಹದ ಯುದ್ಧವನ್ನು ವರ್ಣಿಸುವೆನು. ಧರ್ಮರಾಜನು ಶ್ರುತಾಯುವನ್ನೆದುರಿಸಿ, ಅವನ ಬಾಣಗಳನ್ನು ಖಂಡಿಸಿ, ಅವನನ್ನು ಬಾಣವರ್ಷದಲ್ಲಿ ಮುಣುಗಿಸಿದನು. ಶ್ರುತಾಯುವು ಅವನ ಬಾಣಗಳನ್ನು ಖಂಡಿಸಿ, ಒಂದು ಬಾಣವನ್ನು ಪ್ರಯೋಗಿಸಿ, ಧರ್ಮಜನನ್ನು ಗಾಯಗೊಳಿಸಿದನು. ಧರ್ಮಜನು ಕ್ರುದ್ಧನಾಗಿ ಒಂದು ಬಾಣದಿಂದ ಅವನ ಧ್ವಜವನ್ನು ಕೆಡಹಿ, ಅವನ ಏಳು ಶರಗಳನ್ನು ಮುರಿದು, ಮೂರು ಲೋಕಗಳನ್ನು ಸುಡಲು ಯಮನೇ ಬಂದನೆಂಬಂತೆ ಕ್ರೋಧದುರ್ನಿರೀಕ್ಷ್ಯನಾಗಿ, ಶ್ರುತಾಯುವಿನ ಧನುವನ್ನು ಮುರಿದನು; ಸ್ತನಾಂತರದಲ್ಲಿ ಗಾಯಗೊಳಿಸಿ, ಅವನ ಕುದುರೆಗಳನ್ನು ಕೊಂದನು. ಆಗ ಶ್ರುತಾಯುವು ಭೀತನಾಗಿ, ಓಡಿಹೋದನು. ಧರ್ಮರಾಜನು ಕಾಲಯಮನಂತೆ ಕುರುಸೇನೆಯನ್ನು ನಾಶಪಡಿಸಿದನು.

ಕೃಪನು ಚೇಕಿತಾನನನ್ನು ಮೂರು ಬಾಣಗಳಿಂದ ಪೀಡಿಸಲು, ಅವನು ಶರವರ್ಷವನ್ನು ಬಿಟ್ಟನು. ಅದನ್ನು ಖಂಡಿಸಿ ಕೃಪನು ಭಲ್ಲದಿಂದ ಅವನ ಧನುವನ್ನು ಮುರಿದು ಸಾರಥಿಯನ್ನು ಕೊಂದನು. ಚೇಕಿತಾನನು ಕೋಪದಿಂದ ಗದೆಯನ್ನು ಪಿಡಿದು ಮೇಲೇರಿ ಬರಲು, ಅವನ ಗದೆಯನ್ನು ಒಂದೇ ಬಾಣದಿಂದ ಕೆಡಹಿದನು. ಅವನು ಖಡ್ಗವನ್ನೆತ್ತಿ ಬರಲು, ಕೃಪನೂ ಖಡ್ಗವನ್ನು ಪಿಡಿದು, ಅವನಿಂದ ಕಾದಾಡಿದನು. ಖಣಿಲ್ ಖಣಿಲ್ ಎಂದು ಶಬ್ದ ಮಾಡುತ್ತಾ ಘೋರ ಯುದ್ಧವನ್ನು ಮಾಡಿ, ಅವರೀರ್ವರು ಶ್ರಾಂತರಾದರು. ಶಕುನಿಯು ಕೃಪನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಹೋದನು. ಕರಕರ್ಷನೆಂಬ ಸ್ನೇಹಿತನು ಚೇಕಿತಾನನನ್ನು ತನ್ನ ರಥದಿ ಕೂಡಿಸಿಕೊಂಡು ಹೋದನು.

ಭೂರಿಶ್ರವನು ಧೃಷ್ಟಕೇತುವಿನೊಡನೆ ಕಾದಿ, ಅವನನ್ನು ವಿರಥನನ್ನಾಗಿಸಲು ಅವನು ಶತಾನೀಕನ ರಥವನ್ನೇರಿ ಹೋದನು. ಅಭಿಮನ್ಯುವು ಚಿತ್ರಸೇನ ವಿಕರ್ಣ ದುರ್ಮರ್ಷಣ ರಿಂದ ಯುದ್ಧವಾಡಿ, ಅವರ ವಾಹಗಳನ್ನು ಕೊಂದು, ಭೀಮ ವಚನವನ್ನು ನೆನೆದು, ಅವರನ್ನು ಸಂಹರಿಸದೆ, ಗಾಯಗೊಳಿಸಿ ಓಡಿಸಿದನು. ಅಭಿಮನ್ಯುವಿನ ಸಹಾಯಕ್ಕೆಂದು ಬಂದ ಅರ್ಜುನನನ್ನು ನೋಡಿ, ಕುರು ಸೈನಿಕರು ಭೀತರಾಗಿ ಚೆದರಿ ಪೋದರು. ಆಗ ಅರ್ಜುನನು ಸುಶರ್ಮನನ್ನು ನೋಡಿ, 'ಪೂರ್ವ ವೈರದಿಂದ ಸೇಡು ತುಂಬಿ ಉರಿಯುವ

ನಿನಗೆ ಇಂದು ನಿನ್ನ ಪೂರ್ವ ಪಿತಾಮಹರ ದರ್ಶನ ಮಾಡಿಸುವೆನು. ನಿನ್ನ ದುರ್ನೀತಿಯ ಫಲವನ್ನು ಉಣಿಸುವೆನು. ಸ್ಥಿರವಾಗಿ ನಿಲ್ಲು 'ಎಂದು ಅವನನ್ನು ನಿಂದಿಸಿದನು; ಆದರೂ ಸುಶರ್ಮನು ಸುಮ್ಮನೆ ಇದ್ದು ಮೆಲ್ಲಗೆ ದೂರ ಸರಿದನು. ಆಗ ಅವನನ್ನು ರಕ್ಷಿಸಲು ಬಂದ ನಿನ್ನ ಪುತ್ರರಿಗೂ ಪಾರ್ಥನಿಗೂ ತುಮುಲವಾದ ಯುದ್ಧವು ನಡೆಯಿತು. ಪಾರ್ಥನು ಶರ ಸಂಧಾನ ಪ್ರಯೋಗಗಳ ವೈಚಿತ್ರ್ಯವನ್ನು ತೋರಿ, ಸವ್ಯಸಾಚಿಯಾಗಿ, ಅವರ ಧ್ವಜಗಳನ್ನು ಕೆಡಹಿ, ಕುದುರೆಗಳನ್ನು ಕೊಂದು, ಧನುಸ್ಸುಗಳನ್ನು ಮುರಿದು, ಅವರನ್ನೋಡಿಸಿ, ಅನುಚರರಾಜರನ್ನನೇಕರನ್ನು ಸಂಹರಿಸಿದನು. ತ್ರಿಗರ್ತರಾಜನ ಅರವತ್ತು ರಥಿಕರನ್ನು ಸಂಹರಿಸಿ, ದುರ್ಯೋಧನ ಜಯದ್ರಥಾದಿ ವೀರರನ್ನು ಅತಿಕ್ರಮಿಸಿ, ಭೀಷ್ಮನನ್ನು ಮುಟ್ಟಿದನು. ಆಗ ಧರ್ಮರಾಜನು ಕೂಡ ಶಲ್ಯನನ್ನು ಜಯಿಸಿ, ಭೀಮಸೇನ ನಕುಲ ಸಹದೇವರಿಂದ ಕೂಡಿ ಅಲ್ಲಿಗೆ ಬಂದು, ಅರ್ಜುನನಿಗೆ ಸಹಾಯವಾಗಿ ನಿಂತನು.

ಪಾಂಡುಸುತರೈವರು ಮುತ್ತಲು ನಿರ್ಭಯನಾಗಿ, ಅವರ ಬಾಣಜಾಲವನ್ನು ಖಂಡಿಸಿ, ಶರಸಂಧಾನನಿಪುಣನಾಗಿ ಅವರನ್ನು ಪೀಡಿಸುವ ಭೀಷ್ಮನಿಗೆ ಸಹಾಯವಾಗಿ ದುರ್ಯೋಧನ ಜಯದ್ರಥರು ಕೃಪಶಲ್ಯಶಲಚಿತ್ರಸೇನರಿಂದ ಕೂಡಿ ಬಂದರು. ಆಗ ಅವರಿಗೂ ಪಾಂಡವರಿಗೂ ನಡೆದ ಕದನವು ಅತಿಮಾನುಷವಾಯಿತು. ಭೀಷ್ಮನು ವಿಜೃಂಭಿಸಿ ಪಾಂಡವಭಟರನ್ನು ಸಂಹರಿಸುತ್ತಿರಲು, ಕುಪಿತನಾಗಿ, ಧರ್ಮರಾಜನು ಶಿಖಂಡಿಯನ್ನು ಸಮೀಪಿಸಿ ಇಂತೆಂದನು:

' ಯುದ್ಧಾರಂಭದಲ್ಲಿ ನಿನ್ನ ತಂದೆಯು ಕೇಳುತ್ತಿರಲು ಸಭೆಯಲ್ಲಿ ನಿಂತು, ಭೀಷ್ಮನನ್ನು ಕೊಲ್ಲುವೆನೆಂದೆ ! ನಿನ್ನ ಪ್ರತಿಜ್ಞೆ ಏನಾಯಿತು ? ಧರ್ಮವನ್ನು ಯಶವನ್ನು ಉಪಲಕ್ಷಿಸು ! ಹುಟ್ಟಿದ ಕುಲಕ್ಕೆ ಕೀರ್ತಿ ಬರುವಂತೆ ವಿಕ್ರಮಿಸು ! ನೋಡು ಭೀಷ್ಮನ ಧಾಟಿಗೆ ತಡೆಯಲಾರದೆ ನಮ್ಮ ಸೇನೆ ಓಡುತ್ತಿದೆ ' ಆ ಮಾತನ್ನಾಲಿಸಿ, ಶಿಖಂಡಿಯು ಭೀಷ್ಮನನ್ನು ಕೊಲ್ಲುವ ಹಠದಿಂದ, ಬಂದು ಭೀಷ್ಮನ ಮೇಲೆ ಶರವರ್ಷವನ್ನು ಸುರಿಸಿದನು. ಅವನನ್ನು ತಡೆದು ಶಲ್ಯನು ಘೋರಾಸ್ತ್ರವನ್ನು ಪ್ರಯೋಗಿಸಿದನು. ಶಿಖಂಡಿಯು ಹಿಂಜರಿಯದೆ, ಶರಷಟ್ಕದಿಂದ ಅಸ್ತ್ರವನ್ನು ಮುರಿದು ಕೆಡಹಿ, ವಾರುಣಾಸ್ತ್ರವನ್ನು ಬಿಟ್ಟನು. ಶಲ್ಯನು ಅದನ್ನು ಮುರಿದನು. ಭೀಷ್ಮನು ಶಿಖಂಡಿಯನ್ನು ವರ್ಜಿಸಿ, ಧರ್ಮರಾಜನನ್ನು ಮುತ್ತಿ ಧನುಸ್ಸು ಧ್ವಜಗಳನ್ನು ಮುರಿದನು. ಆಗ ತಾತನ ವಿಕ್ರಮವನ್ನು ಕಂಡು ಸಂಭ್ರಾಂತನಾಗಿದ್ದ ಧರ್ಮರಾಜನಿಗೆ ಸಹಾಯ ಮಾಡಲು ಭೀಮಸೇನನು ಗದಾಪಾಣಿಯಾಗಿ ರಥದಿಂದಿಳಿದು, ಭೀಷ್ಮನ ರಥದ ಕಡೆ ನಡೆದನು. ಜಯದ್ರಥನನ್ನು ತಡೆಯಲು ಭೀಮನು ಕುಪಿತನಾಗಿ, ಅವನ ಶರಜಾಲವನ್ನು ಕೈಗಳಿಂದಲೇ ಕೆಡಹಿ, ಗದೆಯಿಂದ ಅವನ ಕುದುರೆಗಳನ್ನು ಸಂಹರಿಸಿದನು. ಅಪ್ರತಿಮಪ್ರಭಾವನಾದ ಭೀಮಸೇನನ ವೇಗವನ್ನು ಸಹಿಸದೆ, ದುರ್ಯೋಧನನು ರಥದಿ ಕೂತು ಬಂದು ಶರಜಾಲದಿಂದ ಪೀಡಿಸಿದನು. ಭೀಮಸೇನನು ಅವನ ಬಾಣವರ್ಷವನ್ನು ಹುಲ್ಲು ಕಡ್ಡಿಗಳಂತೆ ಮುರಿದು, ಗದೆಯನ್ನೆತ್ತಿ ಬರಲು, ನೋಡಿ ದುರ್ಯೋಧನ ಸಹಾಯರಾಗಿದ್ದ ನಿನ್ನ ಸುತರು

ದಿಕ್ಕೆಟ್ಟು ಓಡಿದರು. ಭೀಮನ ಗದಾ ವೇಗವನ್ನು ಕಂಡು, ಚಿತ್ರಸೇನನು ಬೇಗನೆ ರಥದಿಂದಿಳಿದು, ಉಳಿದನು. ಗದೆಯು ರಥವನ್ನು ಚೂರು ಮಾಡಿ, ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿತು. ಅದನ್ನು ನೋಡಿ ಪಾಂಡವರು ಹರ್ಷಧ್ವಾನಗಳನ್ನು ಮಾಡಿದರು. ಚಿತ್ರಸೇನನನ್ನು ವಿಕರ್ಣನು ತನ್ನ ರಥದಿ ಕೂಡಿಸಿಕೊಂಡು ನಡೆದನು.

ಧರ್ಮರಾಜನು ಶರಜಾಲದಿಂದ ಭೀಷ್ಮನನ್ನು ಮುಚ್ಚಿ ಭೀಕರ ಬಾಣದಿಂದ ಭೀಷ್ಮನ ಎದೆಗೆ ಗುರಿಯಿಟ್ಟು ಹೊಡೆಯಲು, ಪಿತಾಮಹನು ಅದನ್ನು ಮುರಿದು ಕೆಡಹಿ, ಧರ್ಮಜನ ಕುದುರೆಗಳನ್ನು ಸಂಹರಿಸಿದನು. ಧರ್ಮಜನು ನಕುಲನ ರಥವನ್ನೇರಿ ಕೂತನು, ಅವರೀರ್ವರನ್ನು ಬಾಣಜಾಲದಿ ಮುಚ್ಚಿದ ದೇವವ್ರತನನ್ನು ಧರ್ಮರಾಜನ ಸೈನಿಕರು ಮುತ್ತಿ ಬಾಣಗಳಿಂದ ಹೊಡೆದರು. ಭೀಷ್ಮನು ಬಿರುಗಾಳಿಗೆ ಉರಿದೇಳುವ ಕಾಳ್ಗಿಚ್ಚಿನಂತೆ ಕೆರಳಿ ಆ ರಥಿಕರನ್ನು ಕೊಂದು, ಅವರ ತಲೆಗಳನ್ನು ಪಕ್ವತಾಳಫಲಗಳನ್ನಂತೆ ನೆಲದಿ ಕೆಡಹಿದನು.

ಸಾಯಂಕಾಲವಾಗುತ್ತಿತ್ತು. ಸಾತ್ಯಕಿ ಧೃಷ್ಟದ್ಯುಮ್ನರು ಪರಾಕ್ರಮಿಸಿ, ಕುರುಸೇನೆಯನ್ನು ನಾಶಪಡಿಸಿದರು; ಅವಂತಿಯ ವಿಂದಾನುವಿಂದರನ್ನು ಸೋಲಿಸಿ ಓಡಿಸಿದರು. ರಣರಂಗದಲ್ಲಿ ರಕ್ತ ನದಿಗಳು ಹರಿದವು. ರಾತ್ರಿಯಾಗುತ್ತಾ ಬಂದಂತೆ ಗೃಧ್ರಗೋಮಾಯುಗಣಗಳು ಭಯಂಕರವಾಗಿ ಕೂಗುತ್ತಾ, ಸತ್ತವರನ್ನು ಕಿತ್ತು ತಿನ್ನುತ್ತಿದ್ದವು. ರಾಕ್ಷಸ ಪಿಶಾಚ ಭೂತಪ್ರೇತ ಪಿಶಾಚ ಗಣಗಳ ಸಂಚಾರವು ನಿಬಿಡವಾಯಿತು. ಅದನ್ನು ಕಂಡು ಪಾಂಡವರು ಸೇನಾವಹಾರವನ್ನು ಮಾಡಿ ತಂತಮ್ಮ ಶಿಬಿರಗಳನ್ನು ಸೇರಿದರು. ಕೌರವರು ಕೂಡ ತಂತಮ್ಮ ಶಿಬಿರಗಳನ್ನು ಸೇರಿದರು. ಉಭಯ ಪಕ್ಷದ ಜನರು ಗಾಯಗಳಿಗೆ ಔಷಧಗಳನ್ನು ಹಚ್ಚಿ, ಸ್ನಾನ ಮಾಡಿ, ಶಿಬಿರಗಳಲ್ಲಿ ಭೋಜನಾದಿಗಳನ್ನು ಮುಗಿಸಿ ಗೀತವಾದತ್ರನೃತ್ಯಗಳನ್ನವಲೋಕಿಸುತ್ತಾ ಪ್ರಥಮ ಯಾಮವನ್ನು ಕಳೆದರು. ಆಗ ಯುದ್ಧದ ಮಾತೇ ಇಲ್ಲ. ಇಂತು ಸಪ್ತಮ ರಾತ್ರಿಯನ್ನು ಕಳೆದು ಉಭಯ ಸೇನೆಗಳು ಮತ್ತೆ ಯುದ್ಧ ಸನ್ನದ್ಧವಾಗಿ ಕುರುಕ್ಷೇತ್ರದ ರಣರಂಗವನ್ನು ಸೇರಿದವು.

## ೩೧. ಅಷ್ಟಮದಿನ ಯುದ್ಧ - ಘಟೋತ್ಕಚವಿಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು: 'ರಾಜನ್! ಎಂಟನೆಯ ದಿನ ಎರಡು ಸೇನೆಗಳೂ ಎರಡು ಸಮುದ್ರಗಳಂತೆ ಕಲೆತು ಹೋರಾಡಿದವು. ಕೌರವರು ಮಹಾವ್ಯೂಹದಿ ನಿಂತು, ಕ್ರಮವಾಗಿ ಭೀಷ್ಮ, ದ್ರೋಣ, ಭಗದತ್ತ, ಬೃಹದ್ಬಲ, ಸುಶರ್ಮ, ಅಶ್ವತ್ಥಾಮ, ಅವರೆಲ್ಲರ ಹಿಂದೆ ಸೋದರಸಮೇತವಾದ ದುರ್ಯೋಧನ, ಇಂತು ನಡೆದು ಪಾಂಡವ ಸೇನೆಯನ್ನು ತಾಕಿದರು. ಧೃಷ್ಟದ್ಯುಮ್ನನು ಶೃಂಗಾಟಕವೆಂಬ ವ್ಯೂಹವನ್ನು ರಚಿಸಿದನು. ಎರಡು ಕೊನೆಗಳಲ್ಲಿ ಭೀಮಸೇನ ಸಾತ್ಯಕಿಯರಿದ್ದರು. ಮಧ್ಯದಲ್ಲಿ ಕೃಷ್ಣ ಸಾರಥಿಯಾಗಿ ಪಾರ್ಥನಿದ್ದನು. ಅವನ ಹಿಂದೆ ಧರ್ಮಜ, ಯಮಳರು, ಅಭಿಮನ್ಯು

ದ್ರೌಪದೇಯರು ನಡೆದರು. ಒಬ್ಬೊಬ್ಬ ವೀರರನ್ನು ಅನೇಕ ಸಹಸ್ರ ಗಜ ತುರಗ ಭಟರು ಅನುಸರಿಸಿ ಬಂದರು. ಭೇರೀದುಂದುಭಿಗಳ ಧ್ವಾನವು ಆಕಾಶವನ್ನು ಮುಟ್ಟಿತು. ಆಕಾಶದಲ್ಲಿ ಬಾಣಗಳು ಹಾರಿಬಂದಂತೆ, ಸೈನಿಕರ ಜೀವಗಳು ವೀರಸ್ವರ್ಗಕ್ಕೆ ಹಾರತೊಡಗಿದವು. ದೇವದಾನವ ಸಮರವನ್ನು ಮರೆಸುವಂತಿತ್ತು ಅಂದಿನ ಕಾಳಗ. ವೀರರ ಸಿಂಹಗರ್ಜನಗಳೊಂದಿಗೆ ಶಸ್ತ್ರಗಳ ಝಣಂಝಣ ಧ್ವಾನಗಳು ಕೇಳ ಬಂದವು. ಭೀಷ್ಮನು ಪಾಂಚಾಲ ಸೇನೆಯನ್ನು ಮುತ್ತಿ ನಾಶಪಡಿಸಿದನು. ಭೀಷ್ಮನು ಗ್ರೀಷ್ಮ ಚಂಡಭಾನುವಿನಂತೆ ಉರಿಯುತ್ತ ಬರುತ್ತಿರಲು, ಭೀಮಸೇನನೊಬ್ಬನನ್ನುಳಿದು, ಅವನನ್ನು ತಡೆದು ನಿಲ್ಲಿಸುವ ವೀರರು ಪಾಂಡವ ಸೇನೆಯಲ್ಲಿದ್ದಿಲ್ಲ.

ಭೀಮಸೇನನು ಭೀಷ್ಮನನ್ನು ತಡೆದು, ಅನೇಕ ಶರಗಳಿಂದ ಆತನನ್ನು ಪೀಡಿಸಿದನು. ಭೀಮನು ಭೀಷ್ಮನ ಸಾರಥಿಯನ್ನು ಕೊಂದು, ಆ ರಥವು ಸಾರಥಿಯಿಲ್ಲದೆ ದಿಕ್ಕೆಟ್ಟು ಕುದುರೆಗಳಿಂದ ಸೆಳೆಯಲ್ಪಡುತ್ತಿರಲು, ಭೀಷ್ಮ ಸಹಾಯಕ್ಕೆಂದು ಬಂದು ತನ್ನನ್ನು ತಾಕಿದ ಸುನಾಭನೆಂಬ ನಿನ್ನ ಪುತ್ರನ ಶಿರವನ್ನು ಬಾಣದಿಂದ ಕೆಡಹಿದನು. ದುರ್ಯೋಧನ ಸಹೋದರರು ಏಳು ವೀರರು ಕುಪಿತರಾಗಿ ಬರಲು ಭೀಮಸೇನನು ಆದಿತ್ಯಕೇತು, ಬಹ್ವಾಶಿ, ಕುಂಡಧಾರ, ಮಹೋದರ, ಅಪರಾಜಿತ, ಪಡಿತಕ, ವಿಶಾಲಾಕ್ಷರೆಂಬುವ ಆ ವೀರರನ್ನು ಯುದ್ಧದಲ್ಲಿ ಸೋಲಿಸಿ, ಸಂಹರಿಸಿದನು. ಇಂತು ಕಾಲಾಂತಕನಂತೆ ವಿಕ್ರಮಿಸಿದ ಭೀಮನನ್ನು ಕಂಡು, ಮಿಕ್ಕ ನಿನ್ನ ಸುತರು ಭೀಮನ ಪ್ರತಿಜ್ಞೆಯನ್ನು ನೆನೆದು ಭಯದಿಂದ ಓಡಿಹೋದರು.

ದುರ್ಯೋಧನನು ಭೀಷ್ಮನನ್ನು ಸೇರಿ ದುಃಖವನ್ನು ತೋಡಿಕೊಂಡು ಹೋ ಎಂದು ಅತ್ತನು. ಭೀಷ್ಮನು, 'ರಾಜನ್ ! ವಿದುರನ ಮಾತುಗಳೆಲ್ಲ ಸತ್ಯವಾಗುತ್ತಿವೆ. ಆಗ ನಮ್ಮ ಹಿತನುಡಿ ಕೇಳದೆ ಈಗ ಅಳುವೆ ನಾನು, ಆಚಾರ್ಯನೂ ಕೂಡ ಈ ರಣದ ಪಾರವನ್ನು ಮುಟ್ಟುವುದಿಲ್ಲ, ಮೈ ಬಚ್ಚಿಡದೆ ನಿನಗಾಗಿ ಕೆಚ್ಚಿನಿಂದ ಕಾದುವೆವು. ಆಗಲೂ ಪಾಂಡವರನ್ನು ನಾವು ಗೆಲ್ಲಲಾರೆವು. ಸ್ಥಿರನಾಗು ! ಆದದ್ದಾಗಲಿ ! ವೀರಸ್ವರ್ಗವನ್ನಾದರೂ ಸೂರೆಗೊಂಬೋಣ !' ಎಂದನು.

'ರಾಜನ್ ! ಭೀಮಸೇನನು ಅಜೇಯನು. ಅಂತಹ ವೀರನಿಲ್ಲ ಉಭಯ ಸೇನೆಗಳಲ್ಲಿ. ನಿರಾಯುಧನಾಗಿ ಸರ್ವ ಸೇನೆಯನ್ನೂ ಕೊಲ್ಲಬಲ್ಲ ಭೀಮನಿಂದ ದ್ವೇಷ ಸಾಧಿಸಿ ನಿನ್ನ ಪುತ್ರರು ಸಾಯುತ್ತಿರುವರು. ಕಿಚ್ಚಿಗೆ ಗಾಳಿಯಂತೆ ಅವನಿಗೆ ಅರ್ಜುನನೂ ಜೋಡಾಗಿರುವನು. ಇನ್ನೆಲ್ಲಿಯ ಜಯಾಶೆ ? ಕೇಳು. ಅಂದು ಮಧ್ಯಾಹ್ನವಾದಾಗ ಭಯಂಕರ ಸಮರವು ಪ್ರಾರಂಭವಾಯಿತು. ಅಭಿಮನ್ಯು ಘಟೋತ್ಕಚರೊಂದೆಡೆ, ಭೀಮಾರ್ಜುನರೊಂದೆಡೆ, ವಿರಾಟದ್ರುಪದರೊಂದೆಡೆಯಾಗಿ ಭೀಷ್ಮದ್ರೋಣರನ್ನು ಜಯದ್ರಥಶಕುನಿಗಳನ್ನು ಕೂಡಿ ಹೋರಾಡಿದರು.

ಅರ್ಜುನನ ಪುತ್ರನಾದ ಇರಾವಂತನು ದಿವ್ಯಾಶ್ವಸೈನಿಕರಿಂದ ಕೂಡಿ ಕುರುಸೇನೆಯನ್ನು ಕಾಡಿ, ಶರವರ್ಷದಲ್ಲಿ ಮುಣುಗಿಸಿದನು. ಐರಾವತವೆಂಬ ನಾಗರಾಜನ

ಮಗಳಾದ ಉಲೂಪಿಯಲ್ಲಿ ಹುಟ್ಟಿ ಪಿತೃವ್ಯ ದ್ವೇಷದಿಂದ ನಾಗಲೋಕವನ್ನು ಬಿಟ್ಟು ದೇವಲೋಕದಲ್ಲಿದ್ದ ಇರಾವಂತನು ಅರ್ಜುನನಿಂದ ಆಜ್ಞಪ್ತನಾಗಿ, ಪಾಂಡವರ ಕಡೆ ಹೊಡೆದಾಡಲು ಅನೇಕ ಸೈನಿಕರೊಡನೆ ಬಂದಿದ್ದನು. ಕಾಮಜವಗಳಾದ ಅವನ ಕುದುರೆಗಳು ಗರುಡನಂತೆ ಹಾರಿ ಬಂದು ಕುರುಸೇನೆಯನ್ನು ಕಕ್ಕಾವಿಕ್ಕಿಯಾಗಿಸಿದವು. ಕೌರವರ ಕುದುರೆಗಳು ಬೆದರಿ ಓಡತೊಡಗಿದವು. ಅದನ್ನು ಕಂಡು ಶಕುನಿಯ ಪುತ್ರರು ಆರು ಜನ ಸನ್ನದ್ಧರಾಗಿ, ತಮ್ಮ ತಂದೆ ಹೇಳಿದರೂ ಕೇಳದೆ, ಬಂದು ಇರಾವಂತನನ್ನು ಮುತ್ತಿದರು. ಇರಾವಂತನ ಆಜ್ಞೆಯಂತೆ ಅವನ ಆಶ್ವಿಕರು ಅವರನ್ನು ಸುತ್ತುಗಟ್ಟಿ ಒಂದೇ ಕ್ಷಣದಲ್ಲಿ ಅವರ ಸೈನ್ಯವನ್ನು ನಾಶಪಡಿಸಿದರು. ಆಗ ಶೌಕುನೇಯರು ಒಂದಾಗಿ ಬಂದು ಪ್ರಾಸಾಯುಧಗಳಿಂದ ಇರಾವಂತನನ್ನು ಎದೆಯಲ್ಲಿಯು, ಬಗಲಲ್ಲಿಯು ಗಾಯಗೊಳಿಸಿ, ಆರ್ಭಟಿಸಿದರು, ಇರಾವಂತನು ಕ್ರುದ್ಧನಾಗಿ, ತನ್ನ ಮೈಲಿ ನಾಟಿಸಿದ್ದ ಪ್ರಾಸಗಳಿಂದಲೇ ಅವರನ್ನು ಹೊಡೆದು, ಹಾರಿ ಬಂದು ಅವರನ್ನೆಲ್ಲ ಖಡ್ಗದಿಂದ ಸಂಹರಿಸಿದನು.

ದುರ್ಯೋಧನನು ದುಃಖರೋಷಸಮನ್ವಿತನಾಗಿ, ಅಲಂಬುಷನೆಂಬ ರಾಕ್ಷಸನನ್ನು ಇರಾವಂತನನ್ನು ಸಂಹರಿಸಲು ಕಳಿಸಿದನು. ಬಕ ವೈರಿಯಲ್ಲಿ ದ್ವೇಷದಿಂದ ಅಲಂಬುಷನು ಇರಾವಂತನನ್ನು ಮುತ್ತಿ ಮಾಯಾ ಯುದ್ಧವನ್ನು ಮಾಡಲಾರಂಭಿಸಿದನು. ಇಬ್ಬರೂ ಮಾಯಾಯುದ್ಧ ವಿಶಾರದರಾದುದರಿಂದ, ಮಾಯಾತುರಗ ಸೈನ್ಯಗಳನ್ನು ಸೃಜಿಸಿ ಹೋರಾಡಿದರು. ಎರಡುಸಾವಿರ ಇರಾವಂತನ ಆಶ್ವಿಕರು ಅಲಂಬುಷನ ಎರಡು ಸಾವಿರ ಆಶ್ವಿಕರನ್ನು ನಾಶಪಡಿಸಿದರು. ಇರಾವಂತನು ಅಲಂಬುಷನ ಧನುಸ್ಸನ್ನು ಖಡ್ಗದಿಂದ ಮುರಿದನು. ಅಲಂಬುಷನು ಆಕಾಶಕ್ಕೆ ಹಾರಿ ಮಾಯಾ ಯುದ್ಧವನ್ನು ಮಾಡಲು, ಇರಾವಂತನೂ ಹಾರಿ, ಅವನ ಶರೀರವನ್ನು ಚೂರು ಚೂರು ಮಾಡಿದನು. ಆದರೂ ರಾಕ್ಷಸನು, ಮಾಯಾಬಲದಿಂದ ಗರ್ಜಿಸುತ್ತಾ ಖಂಡಿಸಲ್ಪಟ್ಟರೂ ಸಾಯದೆ ಮೇಲೇರಿ ಬಂದನು. ನಾಗಮಾತೆಯ ಸುತನಾದ ಇರಾವಂತನು ಮಾಯಾಬಲದಿಂದ ಸರ್ಪರೂಪನಾಗಿ, ಅನೇಕ ಸರ್ಪಗಳಿಂದ ಕೂಡಿ ರಾಕ್ಷಸನನ್ನು ಮುತ್ತಿದನು. ತತ್‌ಕ್ಷಣವೇ ರಾಕ್ಷಸನು ಗರುಡಪಕ್ಷಿರೂಪನಾಗಿ ನಾಗರವನ್ನೂ ಇರಾವಂತನನ್ನೂ ಸಂಹರಿಸಿದನು. ಅದನ್ನು ಕಂಡು ಧಾರ್ತರಾಷ್ಟ್ರರು ಶಾಂತಿಯನ್ನು ಹೊಂದಿದರು. ಪಾಂಡವ ಸೈನಿಕರು ವ್ಯಸನಕ್ರಾಂತರಾದರು.

ರಣರಂಗದ ಇನ್ನೊಂದು ಕಡೆ ಅರ್ಜುನನು ತ್ರಿಗರ್ತಾದಿ ರಾಜರಿಂದಲು, ಭೀಷ್ಮದ್ರೋಣರು ಪಾಂಚಾಲರಿಂದಲು, ಭೀಮಸೇನನು ಧಾರ್ತರಾಷ್ಟ್ರರಿಂದಲು ಹೋರಾಡುತ್ತಿದ್ದರು. ಇರಾವಂತನ ಪತನವನ್ನು ಕೇಳಿ, ಭೀಮಾದಿಗಳು ಚಕಿತರಾಗಿ, ಅಲ್ಲಿಗೆ ಧಾವಿಸಿದರು. ಆಗ ಘಟೋತ್ಕಚನು ಸಿಂಹನಾದ ಮಾಡಿದನು. ಅವನ ಗರ್ಜನದಿಂದ ಭೂಮಿಯು ಕಂಪಿಸಿತು, ದಿಕ್ಕುಗಳು ಪ್ರತಿಧ್ವನಿಗೈದವು. ಕೌರವ ಸೈನಿಕರು, ತುರಗ ಗಜಗಳು ಶಕೃನ್ಮೂತ್ರಗಳನ್ನು ಬಿಟ್ಟವು. ಸಿಂಹವನ್ನು ಕಂಡ ಆನೆಗಳಂತೆ, ಕುರುಯೋಧರು ರಣರಂಗವನ್ನು ಬಿಟ್ಟು ಓಡಿಹೋದರು. ಘಟೋತ್ಕಚನು ಉರಿಯುವ

ಶೂಲವನ್ನು ಹಿಡಿದು, ಭೂಮಿಯು ನಡುಗುತ್ತಿರಲು, ಅನೇಕ ರಾಕ್ಷಸ ವೀರರಿಂದ ಕೂಡಿ, ಕುರುಸೇನೆಯನ್ನು ಮುತ್ತಿ ಪ್ರಳಯತಾಂಡವವನ್ನು ಮಾಡುವ ರುದ್ರನಂತೆ, ಅವರ ವೀರರನ್ನು ಸಂಹರಿಸಿದನು. ಅದನ್ನು ಕಂಡು ದುರ್ಯೋಧನನು ಅಲಂಬುಷನನ್ನು ಪ್ರೇರಿಸಲು, ಅವನು ಬಂದು ಘಟೋತ್ಕಚನಿಗೆ ಸೋತು ಓಡಿಹೋದನು.

ದುರ್ಯೋಧನನು ಕುಪಿತನಾಗಿ, ಹತ್ತುಸಾವಿರ ಆನೆಗಳ ವಂಗರಾಜನ ಸೈನ್ಯದಿಂದ ಕೂಡಿ, ಘಟೋತ್ಕಚನನ್ನು ತಾಕಿದನು. ಘಟೋತ್ಕಚಭಟರು ಸಿಂಹಗಳಂತೆ ಗರ್ಜಿಸುತ್ತಾ, ಕೌರವರಾಜನ ಆನೆ ಸೇನೆಯನ್ನು ಮುತ್ತಿ ನಾಶಪಡಿಸಿದರು. ವೃಕ್ಷ ಶಿಲಾಭಿಂಡಿಪಾಲಗಳಿಂದ ಗಜಯೂಥವನ್ನು ಕೊಲ್ಲುವ ರಾಕ್ಷಸರನ್ನು ದುರ್ಯೋಧನನು ತಡೆದು, ನಿಶಾತ ಬಾಣಗಳಿಂದ ಅವರನ್ನು ಹೊಡೆದು ಕೆಡಹಿದನು. ಆಗ ಘಟೋತ್ಕಚನು ಅವನನ್ನು ಸಮೀಪಿಸಿ, ನಾಲ್ಕು ಬಾಣಗಳನ್ನು ಎದೆಯಲ್ಲಿ ನಾಟಿಸಿ ಇಂತೆಂದನು: 'ಇಂದು ನಿನ್ನನ್ನು ಕೊಂದು, ನನ್ನನ್ನು ಪಡೆದ ತಂದೆ-ತಾಯಂದಿರ ಋಣ ತೀರಿಸುವೆನು. ದೀರ್ಘಕಾಲ ನಮ್ಮ ಹಿರಿಯರನ್ನು ವನದಲ್ಲಿರುವಂತೆ ಮಾಡಿ, ಮಾಯಾದ್ಯೂತದಲ್ಲಿ ಸೋತರೆಂದೆನಿಸಿ, ಪಾಂಚಾಲೀದೇವಿಯನ್ನು ಪರಿಭವಿಸಿ, ಸೈಂಧವನಿಂದ ಪರಿಭವಪಡಿಸಿ, ಇನ್ನೂ ನುಡಿಯಬಾರದ ಹೀನಕೃತ್ಯಗಳನ್ನು ಮಾಡಿದ ಕುಲಾಧಮನು ನೀನು ! ನಿನ್ನನ್ನು ಶಿಕ್ಷಿಸುವುದು ನನ್ನ ಪ್ರಥಮ ಕರ್ತವ್ಯವೆಂದು ತಿಳಿದಿರುವೆನು. ಸಿದ್ಧನಾಗು !' ಎಂದು ಘಟೋತ್ಕಚನು ಹಲ್ಲು ಕಡಿದು, ತುಟಿ ನೆಕ್ಕಿ ಶರಜಾಲದಲ್ಲಿ ಕುರುರಾಜನನ್ನು ಮುಚ್ಚಿದನು.

ಸಲಗವು ಮಳೆಯನ್ನಂತೆ ದುರ್ಯೋಧನನು ಆ ಶರಜಾಲವನ್ನು ಲೆಕ್ಕಿಸದೆ, ಕಣ್ಣುಗಳಿಂದ ಕೋಪದ ಕಿಡಿಗಳುದುರುತ್ತಿರಲು, ಇಪ್ಪತ್ತೈದು ಬಾಣಗಳಿಂದ ಘಟೋತ್ಕಚನನ್ನು ಪೀಡಿಸಿದನು. ಅದನ್ನು ಲೆಕ್ಕಿಸದೆ, ಮೈಲಿ ಕಾರುವ ರಕ್ತವನ್ನು ಒರೆಸಿ, ರಾಕ್ಷಸರಾಜನು ಕುಪಿತನಾಗಿ ಶಕ್ತಿಯನ್ನೆತ್ತಿ ಕೊಲ್ಲಲು ಬಂದನು. ಅದನ್ನು ಕಂಡು ಭೀತನಾಗಿ ವಂಗರಾಜನು ಆನೆಯ ಮೇಲೇರಿ ಬಂದು ಕುರುರಾಜನಿಗೆ ಅಡ್ಡಬಂದನು. ಘಟೋತ್ಕಚನು ಅದೇ ಶಕ್ತಿಯಿಂದ ವಂಗರಾಜನ ಗಜವನ್ನು ಹೊಡೆಯಲು, ಅದು ಕೆಳಗೆ ಬಿದ್ದು ಮೃತವಾಯಿತು. ವಂಗರಾಜನು ಧುಮಿಕಿ ಓಡಿಹೋದನು. ಮಿಕ್ಕ ಸೈನ್ಯವೂ ಓಡಿತು. ದುರ್ಯೋಧನನು ಸ್ಥಿರನಾಗಿ ನಿಂತು, ನಿಶಿತಬಾಣದಿಂದ ಹೊಡೆದ ಪೆಟ್ಟನ್ನು ರಾಕ್ಷಸನು ತಪ್ಪಿಸಿಕೊಂಡನು, ಮತ್ತೆ ಗರ್ಜಿಸಿ ಎಲ್ಲ ಕುರುಸೇನೆಯನ್ನು ಹಿಮ್ಮೆಟ್ಟಿಸಿದನು.

ಘಟೋತ್ಕಚನ ಸಿಂಹನಾದವನ್ನು ಕೇಳಿ, ದುರ್ಯೋಧನನು ಆಪತ್ತಿಗೆ ಸಿಲುಕಿರುವನೆಂದು ತಿಳಿದು, ಭೀಷ್ಮ-ದ್ರೋಣರು ಅಲ್ಲಿಗೆ ಬಂದರು. ಭೂರಿಶ್ರವ ಬಾಹ್ಲೀಕ ಜಯದ್ರಥ ಕೃಪ ಶಲ್ಯ ಬೃಹದ್ಬಲ ಕೃತವರ್ಮರೂ ಧಾವಿಸಿ ಬಂದರು. ಅಶ್ವತ್ಥಾಮ ವಿಕರ್ಣರೂ ಇನ್ನೊಂದೆಡೆ ರಣವನ್ನು ಬಿಟ್ಟು ಬಂದರು. ಘಟೋತ್ಕಚನು ಹೆದರದೆ, ಅವರನ್ನೆಲ್ಲ ಮುತ್ತಿ ಬಾಣಜಾಲದಿ ಮುಚ್ಚಿದನು. ಅವನು ಪ್ರಯೋಗಿಸಿದ ತೋಮರಗಳು ಅಸಂಖ್ಯಾತವಾಗಿ ಆಕಾಶದಲ್ಲಿ ಸರ್ಪಗಳಂತೆ ಹಾರಾಡುತ್ತಾ ಕುರುಸೇನೆಯನ್ನು ಮುಚ್ಚಿ

ನಾಶಮಾಡಿದವು. ಘಟೋತ್ಕಚನು ಭೈರವಾರವವನ್ನು ಮಾಡಿ, ಆಚಾರ್ಯನ ಧನುಸ್ಸನ್ನು ಅರ್ಧಚಂದ್ರಭಲ್ಲದಿಂದ ಮುರಿದನು; ಸೋಮದತ್ತನ ಧ್ವಜವನ್ನು ಕೆಡಹಿದನು; ಬಾಹ್ಲೀಕ ಕೃಪಚಿತ್ರಸೇನರನ್ನು ಮೂರು ಬಾಣಗಳಿಂದ ಹೊಡೆದು, ವಿಕರ್ಣನನ್ನು ಜತ್ರುಪ್ರದೇಶದಲ್ಲಿ ಭಲ್ಲದಿಂದ ಗಾಯಗೊಳಿಸಿದನು; ವಿವಿಂಶತಿ ದ್ರೋಣರ ಸಾರಥಿಗಳನ್ನು ಕೊಂದನು; ಸಿಂಧುರಾಜನ ಧ್ವಜವನ್ನು ಕೆಡಹಿದನು; ಶಲ್ಯಬೃಹದ್ಬಲಾದಿಗಳನ್ನೂ ಬಾಣಪೀಡಿತರನ್ನಾಗಿ ಮಾಡಿ, ದುರ್ಯೋಧನನನ್ನು ಮುತ್ತಿದನು. ಅದನ್ನು ಕಂಡು ಭೀತರಾಗಿ, ಕೌರವಯೋಧರು ರಾಜನ ರಕ್ಷಣೆಗೆಂದು ಬಂದರು. ಅವರ ಬಾಣವರ್ಷವನ್ನು ವಂಚಿಸಿ, ಘಟೋತ್ಕಚನು ಆಕಾಶಕ್ಕೆ ಹಾರಿ, ಸಿಂಹನಾದವನ್ನು ಮಾಡಿ, ಅವರ ಮೇಲೆ ಶಿಲಾವರ್ಷವನ್ನು ಸುರಿದನು.

ಅವನ ನಾದವನ್ನಾಲಿಸಿ ಅಭಿಮನ್ಯು ದ್ರೌಪದೇಯ, ಕಾಶ್ಯ, ಕ್ಷತ್ರಧರ್ಮರು ಅವನಿಗೆ ಸಹಾಯವಾಗಿ ಬಂದರು. ಅಂತೆಯೇ ಭೀಮಸೇನ ಭಯದಿಂದ ಸಂಭ್ರಾಂತವಾಗಿರುವ ಕುರುಸೇನೆಯನ್ನು ನಾಶಪಡಿಸಿದರು. ಭೀಮಸೇನನು ಕುರುಸೇನೆಯನ್ನು ಪ್ರಾಯಃ ವಿಮುಖಗೊಳಿಸಿ, ಎಷ್ಟೋ ಸಾವಿರ ವೀರರನ್ನು ಸಂಹರಿಸಿದನು. ಅದನ್ನು ಸಹಿಸದೆ ದುರ್ಯೋಧನನು ಘಟೋತ್ಕಚನ ಮಂತ್ರಿಗಳಲ್ಲಿ ನಾಲ್ವರನ್ನು ಸಂಹರಿಸಿ, ಭೀಮಸೇನನ ಚಾಪವನ್ನು ಮುರಿದು, ನಿಶಾತಬಾಣದಿಂದ ಭೀಮನ ಎದೆಯನ್ನು ತಾಟಿಸಿದನು. ಭೀಮನು ಭಯಂಕರ ಸಿಂಹನಾದವನ್ನು ಮಾಡಿ, ಘಟೋತ್ಕಚ, ಅಭಿಮನ್ಯು ಮುಖವೀರರಿಂದ ಕೂಡಿ, ಕುರುಸೇನೆಯನ್ನು ಕಾಲಯಮನಂತೆ ನಾಶಮಾಡಿದನು. ಆಗ ದ್ರೋಣನು, ಗುರುಸುತನು, ಕೃಪನು ದುರ್ಯೋಧನನ್ನು ಭೀಮನಿಂದ ರಕ್ಷಿಸಲೆಂದು ಬಂದರು.

ದ್ರೋಣನ ಶರವರ್ಷವನ್ನು ಲೆಕ್ಕಿಸದೆ ಭೀಮನು ಹತ್ತು ಬಾಣಗಳಿಂದ ಹೊಡೆಯಲು ದ್ರೋಣನು ಮೂರ್ಛಿತನಾದನು. ಅಶ್ವತ್ಥಾಮ ದುರ್ಯೋಧನರು ಮುತ್ತಲು ಭೀಮನು ಯಮದಂಡದಿಂದ ಸದೃಶವಾದ ಗದೆಯನ್ನೆತ್ತಿ ರಥದಿಂದಿಳಿದು ಬಂದು ಅವರೀರ್ವರ ರಥಕ್ಕೆ ಹಾರಿ, ಕುದುರೆಗಳನ್ನು ಕೊಂದು, ಅವರು ವಿರಥರಾಗಿ ಓಡಲು, ನಗುತ್ತಾ ಬಿಟ್ಟು ಕೃಪನ ಕಡೆ ತಿರುಗಿದನು. ಕೃಪನು ಭೀಮನೊಡನೆ ಕಾದುತ್ತಿರಲು, ಅನೂಪಾಧಿಪತಿಯಾದ ನೀಲನು ಅಶ್ವತ್ಥಾಮನನ್ನು ಮುತ್ತಿ ಹತ್ತು ಬಾಣಗಳಿಂದ ಅವನನ್ನು ಪೀಡಿಸಿದನು. ಗುರುಸುತನು ಕುಪಿತನಾಗಿ ತೀವ್ರನಾರಾಚದಿಂದ ಎದೆಗೆ ಹೊಡೆಯಲು ನೀಲನು ಮೂರ್ಛಿತನಾದನು.

ಭೀಮಸೇನನು ಕೃಪನನ್ನೂ ವಿರಥನನ್ನಾಗಿಸಿ, ನೀಲನ ಸಹಾಯಕ್ಕೆಂದು ಬರುವಾಗ, ವಾರಿಸಿ, ಘಟೋತ್ಕಚನು ಅಶ್ವತ್ಥಾಮನೊಡನೆ ಕಾದಿದನು. ಅಶ್ವತ್ಥಾಮನ ಶರಜಾಲವನ್ನು ಮುರಿದು ರಾಕ್ಷಸನು ಮಾಯೆ ತೋರಿ, ಅದ್ಭುತವನ್ನು ಮಾಡಿದನು. ಕೌರವ ಯೋಧರು ತಮ್ಮವರೆಲ್ಲ ಸತ್ತು ನೆಲದಿ ಬಿದ್ದಂತೆ , ಮತ್ತು ದುರ್ಯೋಧನಾದಿಗಳೆಲ್ಲರು ಓಡುತ್ತಿರುವಂತೆ ಕಂಡು, ತಾವೂ ಓಡತೊಡಗಿದರು. ಭೀಷ್ಮ-ದ್ರೋಣರು ನಿಂತು 'ಇದು ನಿಜವಲ್ಲ, ರಾಕ್ಷಸೀ ಮಾಯೆ, ಓಡಬೇಡಿ !' ಎಂದು ಎಷ್ಟು ಕೂಗಿಕೊಂಡರೂ, ಭೀತರಾಗಿದ್ದ ಸೈನಿಕರು ಕೇಳದೆ ಓಡಿ ಹೋದರು.

ಸಾಯಂಕಾಲವಾಗುತ್ತ ಬಂತು. ಆಗ ರಾಜಾ ದುರ್ಯೋಧನನು ಭೀಷ್ಮನನ್ನು ಕಂಡು, 'ತಾತ ! ಕಂಡೆಯಾ ರಾಕ್ಷಸನ ವಿಜಯವನ್ನೂ, ನನ್ನ ಅಪಜಯವನ್ನೂ ಅವರು ವಾಸುದೇವನನ್ನಾಶ್ರಯಿಸಿದಂತೆ, ನಾನು ನಿನ್ನನ್ನಾಶ್ರಯಿಸಿ ಗೆಲ್ಲುವೆನೆಂಬ ಆಶೆಯಿಂದಿದ್ದೆನು. ಇಂದು ಆಶೆ ಚೂರಾಯಿತು. ಎಷ್ಟಿದ್ದರೇನು ? ಯಾರಿದ್ದರೇನು ? ಒಬ್ಬ ನೀಚ ರಾಕ್ಷಸನಿಂದ ಪರಾಭೂತನಾಗಿರುವ ನನಗೆ ಮೈ ಉರಿದಂತಿದೆ. ಅವನನ್ನು ಗೆಲ್ಲುವುದೆಂತು ? ಅವನನ್ನು ನೀನು ಕೊಲ್ಲಲಾರೆಯಾ ?' ಎಂದು ಕೇಳಿದನು. ಭೀಷ್ಮನು, 'ರಾಜನ್ ! ಕೇಳು ! ನೀನು ಆ ಮಾಯಾವಿಯೊಡನೆ ಕೂಡಿ ಕಾದಾಡಬಾರದಿತ್ತು. ಧರ್ಮರಾಜನಿಂದ, ಭೀಮನಿಂದ, ಪಾರ್ಥಯಮಳರಿಂದ ಯುದ್ಧವು ನಿನಗೆ ಸರಿ ಎನಿಸುವುದು. ಭೀಮನ ಬಲವಿರುವ ರಾಕ್ಷಸನನ್ನು ಗೆಲ್ಲುವುದು ಕಷ್ಟ. ಆದರೂ ನಾವು ನಿನ್ನ ಸೋದರರು, ಸಾಧ್ಯವಾದಷ್ಟು ಅವನನ್ನು ತಡೆಯುವೆವು. ಭಗದತ್ತನು ಅವನೊಡನೆ ಕಾದಲು ಸಮರ್ಥನಿರುವನು. ಇಂದ್ರ ಸಮವೀರನು, ಗಜರಾಜ ಸಮಾರೂಢನು ಆದ ಭಗದತ್ತನನ್ನು ಕಳಿಸು !' ಎಂದನು.

ದುರ್ಯೋಧನ ಪ್ರಾರ್ಥಿತನಾದ ಭಗದತ್ತನು ಸುಪ್ರತೀಕವನ್ನೇರಿ, ಘಟೋತ್ಕಚನನ್ನೆದುರಿಸಿ, ತಾರಕನನ್ನು ಇಂದ್ರನಂತೆ ವಾರಿಸಿ, ದಿವ್ಯಬಾಣಗಳಿಂದ ಹೊಡೆದು ಪೀಡಿಸಿದನು. ಭೀಮಸೇನ ದ್ರೌಪದೇಯಾದಿ ಪಾಂಡವವೀರರು ಅವನಿಗೆ ನೆರವಾಗಿ ನಿಂತರು. ಭಗದತ್ತ ಘಟೋತ್ಕಚರ ಯುದ್ಧದಲ್ಲಿ ಯಮಭಟರಿಗೆ ಬಿಡುವಿಲ್ಲದಾಯಿತು. ರಥಿಕರು ಉರುಳಿದರು. ಅಶ್ವಗಳು ಸತ್ತು ಬಿದ್ದವು. ಸೊಂಡಿಲ ಕಡಿದ ಮದ್ದಾನೆಗಳು ಹುಚ್ಚೆದ್ದು ಓಡಿದವು. ಭಗದತ್ತನು ಭೀಮಸೇನನನ್ನು ಮುತ್ತಿ ಶರಧಾರೆಯಲ್ಲಿ ಮುಳುಗಿಸಿದನು. ಭೀಮಸೇನನು ಭಗದತ್ತನ ಪಾದರಕ್ಷಕರನ್ನು ನೂರು ಜನರನ್ನು ಸಂಹರಿಸಲು ಕುಪಿತನಾಗಿ ಅವನು ಸುಪ್ರತೀಕವನ್ನು ಭೀಮನ ರಥದ ಮೇಲೇರಿ ತುಳಿವಂತೆ ತಿವಿದನು. ಶರವೇಗದಿಂದ ಬರುವ ಗಜವನ್ನು ಪಾಂಡವ ವೀರರು ಬಾಣಗಳಿಂದ ಜರ್ಜರಿತಗಾತ್ರವನ್ನಾಗಿ ಮಾಡಿದರು. ದಶಾರ್ಣರಾಜನು ತನ್ನ ಆನೆಯ ಮೇಲೇರಿ ಭಗದತ್ತನ ಆನೆಯನ್ನು ತಿವಿಸಲು, ಸುಪ್ರತೀಕವು ಹಿಂಜರಿದು ಗೀಳಿಟ್ಟಿತು. ಭಗದತ್ತನು ಸಿಟ್ಟಾಗಿ ತೋಮರದಿಂದ ಹೊಡೆದನು. ದಶಾರ್ಣ ರಾಜನ ಆನೆಯ ಮೈಯನ್ನು ಸೀಳಿ ತೋಮರವು ಹೊಕ್ಕಾಗ ಅದು ಹುಚ್ಚೆದ್ದು ತಮ್ಮ ಸೇನೆಯನ್ನು ತುಳಿದು ನಾಶಮಾಡುತ್ತಾ ಓಡಿತು. ಭಗದತ್ತನು ಅಂಕುಶದಿಂದ ಪ್ರೇರಿಸಲು ಅವನ ಆನೆ ಸಂವರ್ತಕಾಗ್ನಿಯಂತೆ ಉರಿದೆದ್ದು ಪಾಂಡವರ ರಥತುರಗಭಟರನ್ನು ತುಳಿದು ನಾಶಮಾಡುತ್ತಾ ಬಂತು.

ಘಟೋತ್ಕಚ ಭೀಮರು ಅದನ್ನು ಕಂಡು ಕುಪಿತರಾದರು. ಘಟೋತ್ಕಚನು ಭಯಂಕರ ರೂಪವನ್ನು ತಾಳಿ, ಶೂಲವನ್ನೆತ್ತಿ ಸುಪ್ರತೀಕವನ್ನು ಹೊಡೆದನು. ಅದನ್ನು ಭಗದತ್ತನು ಅರ್ಧಚಂದ್ರ ಬಾಣದಿಂದ ತುಂಡರಿಸಿದನು. ರಾಕ್ಷಸನು ಕಿಂಕಿಣೀಸಮಲಂಕೃತವಾದ ಶಕ್ತಿಯನ್ನು ಪ್ರಯೋಗಿಸಿದನು. ಅದನ್ನು ಕಡಿದು ಭಗದತ್ತನು

ಆಕಾಶಕ್ಕೆ ಹಾರಿದ್ದ ರಾಕ್ಷಸನ ಮೇಲೆ ಶೂಲವನ್ನೆಸೆದನು. ಘಟೋತ್ಕಚನು ಅದನ್ನು ಅನಾಯಾಸವಾಗಿ ಕೈಗಳಿಂದ ಹಿಡಿದು, ಮೊಳಕಾಲಿಗೆ ಊರಿಸಿ, ಎರಡಾಗಿ ಮುರಿದು, ಕೆಳಗೆಸೆದನು. ಮತ್ತು ಹಾರಿಬಿದ್ದು ಭಗದತ್ತನ ಚಕ್ರರಕ್ಷಕರನ್ನು ಸಂಹರಿಸಿದನು. ಭಗದತ್ತನು ಸಿಟ್ಟಾಗಿ, ದ್ರೌಪದೇಯರನ್ನು ಐದೈದು ಬಾಣಗಳಿಂದಲು, ರಾಕ್ಷಸನನ್ನು ಒಂಬತ್ತರಿಂದಲು, ಅಭಿಮನ್ಯುವಿವನ್ನು ಮೂರು ನಾರಾಚಗಳಿಂದಲು ಪೀಡಿಸಿದನು. ಭೀಮಸೇನನ ಸಿಂಹಧ್ವಜವನ್ನು ಒಂದರಿಂದ ಛೇದಿಸಿ, ಅವನ ಸಾರಥಿ ವಿಶೋಕನನ್ನು ಮೂರರಿಂದ ಗಾಯಪಡಿಸಿದನು. ಭೀಮಸೇನನು ಲಕ್ಷ್ಯಮಾಡದೆ, ಗದಾಪಾಣಿಯಾಗಿ ಬರಲು ನೋಡಿ, ಭಗದತ್ತನು ಗಜವನ್ನು ಮುಂದುಮಾಡಿದನು. ಭೀಮನು ಆ ಗಜವನ್ನು ಬಾಣದಿಂದ ಪೀಡಿಸಿ ತಡೆದನು. ಆಗ ಅರ್ಜುನನು ಭೀಮ ಘಟೋತ್ಕಚರಿಗೆ ನೆರವಾಗಿ ಬಂದನು. ಭಗದತ್ತನು ಹಿಂದೆ ಅರ್ಜುನ ಕೃಷ್ಣರು, ಮುಂದೆ ಭೀಮ ಘಟೋತ್ಕಚರು ಮುತ್ತಲು ನೋಡಿ, ಗದಾಪಾಣಿಯಾಗಿ ಮೇಲೇರಿ ಬರುವ ಭೀಮನಿಗೆ ಹೆದರಿ, ವೈಷ್ಣವಾಸ್ತ್ರವನ್ನು ಸೆಳೆದುಕೊಳ್ಳಲು ಬರುವ, ಶ್ರೀಕೃಷ್ಣ ಪಾರ್ಥರಿಗೆ ಅಂಜಿ ಓಡಿ ಹೋದನು; ಭೀಮಸೇನನಿಂದ ಇರಾವಂತನ ಮರಣವನ್ನು ತಿಳಿದು ಅರ್ಜುನನು ಕುಪಿತನಾದನು. ಅವನಿಗೆ ದುಃಖವೂ ಆಯಿತು. 'ಶ್ರೀಕೃಷ್ಣ ! ವಿದುರನಾಡಿದುದೆಲ್ಲ ನಿಜವಾಯಿತು. ಯುದ್ಧವು ಒಳಿತಲ್ಲ; ಕುಲನಾಶಕರವೆಂದ ಆ ಮಹಾಪ್ರಾಜ್ಞನ ಮಾತು ನಾವು ಕೇಳಲಿಲ್ಲ. ಉಭಯಸೇನೆಗಳಲ್ಲಿ ಎಷ್ಟು ಪ್ರಾಣಹಾನಿಯಾಗಿದೆ ಕಂಡೆಯಾ ? ಧಿಕ್ಕಾರವಿರಲಿ ನಮ್ಮ ಸ್ವಾರ್ಥ ಬುದ್ಧಿಗೆ ! ಪಾಪಿ ದುರ್ಯೋಧನನಿಂದ ಇಷ್ಟನರ್ಥವಾಯಿತು ! ಆಗಲಿ. ಕ್ಷತ್ರಿಯ ಧರ್ಮವು ಬಲು ನಿಷ್ಠುರವಾದುದು ! ಹೊಡೆ ರಥವನ್ನು ಭೀಷ್ಮನಿದ್ದೆಡೆಗೆ' ಎಂದನು. ಶ್ರೀಕೃಷ್ಣನು ಅಂತೆಯೇ ರಥವನ್ನು ಹೊಡೆದನು. ಅದರ ನೇಮಿಧ್ವಾನದಿಂದ ಕಪಿಗರ್ಜನ ಭೂತಭರ್ಜನ ಗಾಂಡೀವ ಟಂಕಾರಗಳು ಕಲೆತು ಶತ್ರುಗಳ ಎದೆಗುಂದಿಸಿದವು.

ಭೀಮಸೇನನು ತನ್ನನ್ನು ಮುತ್ತಿದ ನಿನ್ನ ದುರ್ಯೋಧನಾದಿ ಸುತರನ್ನು ಕಂಡು, ಹವಿಸ್ಸಿನಿಂದ ಅಗ್ನಿಯಂತೆ ಉರಿದೆದ್ದನು. ಮಳೆಗಾಲದಿ ಮೇಘಗಳು ಪರ್ವತವನ್ನು ಜಲಧಾರೆಗಳಿಂದ ಮುಚ್ಚುವಂತೆ ಬಾಣಜಾಲದಿಂದ ತನ್ನನ್ನು ಮುಚ್ಚುವ ಕುರು ಕುಮಾರರನ್ನು ಮುಟ್ಟಿ ಭೀಮಸೇನನು ವ್ಯೂಢೋರಸ್ಕ, ಕುಂಡಲಿ, ಅನಾಧೃಷ್ಟ, ಕುಂಡಭೇದ, ವೈರಾಟ, ದೀರ್ಘಲೋಚನ, ದೀರ್ಘಬಾಹು, ಸುಬಾಹು ಕನಕಧ್ವಜರೆಂಬ ನಿನ್ನ ಸುತರನ್ನು ಸಂಹರಿಸಿದನು. ದ್ರೋಣನು ಶಕ್ತಿಮೀರಿ ತಡೆದರೂ ನಿಲ್ಲದೆ ಒಂದು ಸಲ ಆಚಾರ್ಯನನ್ನು ತಡೆಯುತ್ತಾ, ಒಂದು ಸಲ ನಿನ್ನ ಸುತರನ್ನು ಕೊಲ್ಲುತ್ತಾ, ವೀರವಿಹಾರ ಗೈವ ವೃಕೋದರನ ಪರಾಕ್ರಮವು ಅದ್ಭುತ ಭಯಂಕರವಾಗಿತ್ತು.

ಅಂಬಷ್ಠನು ಅಭಿಮನ್ಯುವಿನಿಂದ ಯುದ್ಧವಾಡುತ್ತಾ ವಿರಥನಾಗಿ, ಸಾಹಸದಿಂದ ಖಡ್ಗವನ್ನೆತ್ತಿ ಗುರಿಯಿಟ್ಟು ಎಸೆದು ತಾನು ಕೃತವರ್ಮನ ರಥವನ್ನೇರಿದನು. ಅಭಿಮನ್ಯುವು ವೇಗದಿಂದ ಬರುವ ಖಡ್ಗವನ್ನು ತಪ್ಪಿಸಿಕೊಂಡು, ಶರವರ್ಷದಿಂದ ಕೃತ ವರ್ಮಾಂಬಷ್ಠರನ್ನು ಪೀಡಿಸಿ ಓಡಿಸಿದನು. ಆಗ ಸಂಕುಲ ಯುದ್ಧವು ನಡೆದು, ರಣರಂಗವು ಭೀಭತ್ಸವಾಯಿತು.

ಗ್ರಹ ನಕ್ಷತ್ರಗಳಿಂದ ಮೆರೆವ ಅಂಬರದಂತೆ, ರಣಭೂಮಿಯು ವೀರಶಯನಗೈದ ರಾಜಕಳೇವರಗಳಿಂದ ಪ್ರಕಾಶಿಸಿತು. ಆಗ ರಾತ್ರಿಯಾಗಲು ಉಭಯ ಸೇನೆಗಳೂ ಅವಹಾರವನ್ನು ಮಾಡಿ, ಶಿಬಿರಗಳನ್ನು ಸೇರಿದವು. ಇಂತು ಷಷ್ಠೀ ತಿಥಿಯ ಯುದ್ಧವು ಮುಗಿಯಿತು.

## ೩೨. ನವಮದಿನ ಯುದ್ಧ — ಭೀಷ್ಮ ಪರಾಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು: 'ರಾಜನ್ ! ಎಂಟನೆಯ ದಿನದ ರಾತ್ರಿ ದುರ್ಯೋಧನಾದಿಗಳು ಸಭೆ ಸೇರಿದರು. ಅವರು ಕರ್ಣನನ್ನೂ ಕರೆಯಿಸಿದರು. ಆಗ ಕುರುರಾಜನು ಇಂತೆಂದನು: 'ದ್ರೋಣ ಭೀಷ್ಮ ಕೃಪ ಶಲ್ಯ ಭೂರಿಶ್ರವರು ಪಾರ್ಥರನ್ನು ಸಂಹರಿಸದಿರುವರು. ಶತ್ರುಗಳು ನಮ್ಮ ಸೇನೆಯನ್ನು ಧ್ವಂಸ ಮಾಡುತ್ತಿರುವರು. ನಾನು ರಣದಲ್ಲಿ ಗೆಲ್ಲುವುದೆಂತೋ ತಿಳಿಯದೆ ಚಿಂತೆಗೀಡಾಗಿರುವೆನು. ಏನು ನಮಗೀಗ ಕರ್ತವ್ಯ ?' ಆ ಮಾತಿಗೆ ಕರ್ಣನಿಂತೆಂದನು: 'ರಾಜನ್ ! ಮುಂಗೈ ಹುಣ್ಣಿಗೆ ಕನ್ನಡಿ ಕೇಳುತ್ತಿರುವೆ ! ದ್ರೋಣ ಭೀಷ್ಮಾದಿಗಳು ಪಾಂಡವ ಪಕ್ಷಪಾತಿಗಳು. ಅವರು ಪಾಂಡವರನ್ನು ಕೊಲ್ಲುವಷ್ಟು ವೀರರೂ ಅಲ್ಲ. ಚಿಂತಿಸಬೇಡ ! ಭೀಷ್ಮನೊಬ್ಬನನ್ನು ರಣದಿಂದ ದೂರಮಾಡು! ಅವನಿರಲು ನಾನು ಕಾದಲಾರೆನು. ಆಗ ಅವನು ನೋಡುತ್ತಿರಲು, ಪಾಂಡವರನ್ನೆಲ್ಲ ಖಂಡಿಸಿ ನಿನಗೆ ವಿಜಯ ಹಾರವನ್ನು ಹಾಕುವೆನು. ಭೀಷ್ಮನು ಶಸ್ತ್ರ ಬಿಡಲಿ ! ನಾನೊಬ್ಬನೇ - ಯಾವ ದ್ರೋಣಾದಿಗಳ ಸಹಾಯವಿಲ್ಲದೆ ಎಲ್ಲ ಪಾಂಡವ ಸೇನೆಯನ್ನೂ ಕೊಲ್ಲುವೆನು' ಎಂದು ಅವನನ್ನು ಭೀಷ್ಮನಲ್ಲಿಗೆ ಕಳಿಸಿದನು.

ದುರ್ಯೋಧನನು ಹಯಾರೂಢನಾಗಿ ಭೀಷ್ಮ ಶಿಬಿರವನ್ನು ಸೇರಿದನು. ಅವನ ಸೋದರರು, ಕೆಲ ಮಿತ್ರರು ಅವನೊಡನೆ ಬಂದರು. ಪ್ರದೀಪ ಸಹಸ್ರದಿಂದ ವಿರಾಜಿತವಾದ ಭೀಷ್ಮ ಶಿಬಿರವನ್ನು ಹೊಕ್ಕು ಕುರುರಾಜನು, ತಾತನಿಗೆ ವಂದಿಸಿ, ಆಸನದಿ ಕೂತು, ಇಂತೆಂದನು: 'ತಾತ ! ನಿನ್ನಾಶ್ರಯದಲ್ಲಿ ಗೆಲ್ಲುವೆವೆಂಬ ಆಶೆ ಇಂದು ನುಚ್ಚು ನೂರಾಯಿತು. ದೇವದಾನವರಿಗೆ ಹೆದರದ ನೀನು, ಆಚಾರ್ಯರು ಕೂಡ-ನಮ್ಮ ದೊಡ್ಡ ಸೇನೆಯ ಸಹಾಯವಿದ್ದೂ ಕ್ಷುದ್ರ ಪಾಂಡವರನ್ನು ಗೆಲ್ಲಲಾಗದಿರುವಿರಿ ! 'ನಾನೆಲ್ಲ ಸೋಮಕ ಪಾಂಚಾಲರನ್ನು ಕೊಲ್ಲುವೆ'ನೆಂದ ನಿನ್ನ ಮಾತು ಸುಳ್ಳಾಯಿತು. ಇನ್ನಾದರೂ ಪಾಂಡವರ ಮೇಲಿನ ದಯೆಯನ್ನು ಬಿಡು ! ನಮ್ಮನ್ನು ಕಡೆಗಣ್ಣಿಂದ ನೋಡಬೇಡ ! ಅಥವಾ ಮಂದಭಾಗ್ಯನಾದ ನನ್ನ ದುರ್ವಿಧಿಗೆ ತಕ್ಕಂತೆ ನಿಮಗೆ ಪಾಂಡವರನ್ನು ಕೊಲ್ಲಲಾಗದಿದ್ದರೆ, ರಣರಂಗವನ್ನು ನಮಗೆ ಬಿಟ್ಟುಕೊಡು ! ಕರ್ಣ ಸಹಾಯನಾಗಿ ಪಾಂಡವರನ್ನು ಕ್ಷಣದಲ್ಲಿ ಗೆಲ್ಲುವೆನು ನೋಡು !' ಎಂದನು.

ಕುರುರಾಜನ ವಾಗ್ಬಾಣ ಘಾತದಿಂದ ಪಿತಾಮಹನು ನೊಂದನು. ಆತನು ನಾಗರಾಜನಂತೆ ನಿಟ್ಟುಸಿರಿಟ್ಟನು. ಬಹುಚಿಂತಿಸಿ ಉಕ್ಕಿ ಬರುವ ಸಿಟ್ಟನ್ನು ಹತ್ತಿಕ್ಕಿ,

'ದುರ್ಯೋಧನ ! ಯಥಾಶಕ್ತಿ ಪ್ರಯತ್ನಿಸಿ ಪಾಂಡವ ಸೇನೆಯನ್ನು ಚೆಂಡಾಡುವ ನನ್ನನ್ನು ಹೀನ ಮಾತಾಡಿ ನೋಯಿಸುವುದು ನಿನ್ನ ಸ್ವಭಾವವೆಂದು ತೋರುತ್ತಿದೆ. ಎಷ್ಟು ಸಲ ನೀನು ನನ್ನನ್ನು ನಿಂದಿಸಿಲ್ಲ? ಹೇಳು ಎಷ್ಟು ಸಲ ನಾನು ನಿನಗೆ ಹಿತ ಹೇಳಲಿಲ್ಲ? ನನ್ನ ಪರಾಕ್ರಮದಿಂದ ಆದ ಸೇನಾ ನಾಶವನ್ನು ಪಾಂಡವರಿಂದ ಕೇಳಿ ತಿಳಿ !' ಎಂದನು.

'ಪಾಂಡವರು ಗೆಲ್ಲುವರೆಂದರೆ ಊಹೆ ಮಾತ್ರವಲ್ಲ. ಇಂದ್ರನನ್ನು ಎದುರಿಸಿ ಖಾಂಡವವನ್ನು ಸುಟ್ಟದ್ದು; ನಿನ್ನನ್ನು ಗಂಧರ್ವರ ಸೆರೆಯಿಂದ ಬಿಡಿಸಿದ್ದು; ಕರ್ಣನನ್ನು ವಿರಾಟನಗರದಲ್ಲಿ ಜಯಿಸಿದ್ದು; ನಿಮ್ಮೆಲ್ಲರನ್ನು ಒಬ್ಬನೇ ಗೆದ್ದು ಗೋವ್ರಾತವನ್ನು ಹಿಮ್ಮೆಟ್ಟಿಸಿದ್ದು; ಮೂರ್ಛೆ ಬಿದ್ದ ನಿಮ್ಮೆಲ್ಲರ ತಲೆ ರುಮಾಲುಗಳನ್ನು ಹರಿಸಿದ್ದು; ಮಹಾವೀರನಾದ ಅಶ್ವತ್ಥಾಮನನ್ನು ಸೋಲಿಸಿದ್ದು; ನಿವಾತಕವಚರನ್ನು ಗೆದ್ದದ್ದು; ಇವೆಲ್ಲ ಅರ್ಜುನ ಪರಾಕ್ರಮಕ್ಕೆ ನಿದರ್ಶನಗಳು. ಇನ್ನು ಬಕ ಹಿಡಿಂಬ ಕಿರ್ಮೀರ ಜಟರನ್ನು ಕೊಂದದ್ದು; ಕೀಚಕನನ್ನು ಮುದ್ದೆ ಮಾಡಿ ಉಪಕೀಚಕರನ್ನು ಸವರಿದ್ದು; ಜಯದ್ರಥನನ್ನು ಹಿಡಿದು ಶಿಕ್ಷಿಸಿದ್ದು; ನಿರಾಯುಧನಾಗಿ ನಿನ್ನ ಗಜಾದಿ ಸೇನೆಯನ್ನು ಕಾಲ ಸವರಿ ಕೊಲ್ಲುತ್ತಿರುವುದು; ಇವೆಲ್ಲ ಭೀಮಸೇನನು ಅವಧ್ಯನೆನ್ನಲು ನಿದರ್ಶನಗಳು. ಕಣ್ಣಿದ್ದೂ ನೋಡದ ನಿನಗೆ ಹೇಳಿ ಪ್ರಯೋಜನವಿಲ್ಲ. ಜಗತ್ಪತಿಯು, ಶಂಖ ಚಕ್ರಗದಾಧರನು ಆದ ಶ್ರೀಕೃಷ್ಣನು ರಕ್ಷಿಸುತ್ತಿರುವ ಪಾಂಡವರನ್ನು ಗೆಲ್ಲಲು ದೇವದಾನವರಿಗೆ ಅಳವಲ್ಲ. ಮೋಹಮಗ್ನನಾಗಿ ನುಡಿಯತೆರನರಿಯದೆ ಮಾತಾಡುವೆ ! ಇರಲಿ ! ಕೇಳು ! ನಾಳೆ ಧೀರನಾಗಿ ನಿಂತು ಭೀಮಾರ್ಜುನರಿಂದ ಹೋರಾಡು ! ನಾನೂ ಪಾಂಚಾಲ ಸೋಮಕರಿಂದ ಕಡಿದಾಡುವೆನು. ನೋಡು ನನ್ನ ವಿಕ್ರಮ ವಿಹಾರವನ್ನು !' ಎಂದು ಕೊಟ್ಟು ಕಳಿಸಿದನು.

ಆಗ ದುರ್ಯೋಧನನು ಹಿಂದಿರುಗಿ ಬಂದು ಕರ್ಣನಿಗೆ ನಡೆದುದನ್ನು ತಿಳಿಸಿ, ದುಶ್ಶಾಸನನಿಗೆ ಇಂತಾಜ್ಞಾಪಿಸಿದನು : 'ಸೇನಾಪತಿ ಪಿತಾಮಹನು ನನ್ನ ಮಾತಿನಿಂದ ಕೆರಳಿರುವನು. ಒಳ್ಳೆಯದಾಯಿತು. ನಾಳೆ ಆತನು ತಪ್ಪದೇ ವಿಜೃಂಭಿಸಿ ಪಾಂಡವ ಸೇನೆಯನ್ನು ನಾಶಪಡಿಸುವನು. ಆದರೆ ಅವನನ್ನು ಪಾಂಡವರು ಮುತ್ತಿ ಕೆಡಹದಂತೆ ನಮ್ಮ ಯೋಧರನ್ನು ಪಿತಾಮಹನಿಗೆ ರಕ್ಷಕರನ್ನಾಗಿ ನಿಲ್ಲಿಸು ! ಶಲ್ಯ, ಕೃಪಾಶ್ವತ್ಥಾಮ, ದ್ರೋಣ, ಭೂರಿಶ್ರವ ಭಗದತ್ತ ಜಯದ್ರಥರು ತಾತನಿಗೆ ರಕ್ಷಕರಾಗಿರಲಿ. ಶಿಖಂಡಿಯನ್ನು ಮಾತ್ರ ಭೀಷ್ಮನಲ್ಲಿ ಬರಗೊಡಬೇಡಿ ! ಅವನು ಸ್ತ್ರೀ ಪೂರ್ವನಂತೆ ! ಅಂತಹವನೊಡನೆ ಪಿತಾಮಹನು ಕಾದುವುದಿಲ್ಲವಂತೆ ! ಆ ಶಿಖಂಡಿಯು ಭೀಷ್ಮ ಮರಣ ಕಾರಣವಾಗಿ ಹುಟ್ಟಿರುವನಂತೆ ! ಇದೆಲ್ಲವನ್ನೂ ತಾತನೇ ನನಗೆ ತಿಳಿಸಿರುವನು.' ಆ ಮಾತನ್ನಾಲಿಸಿ, ದುಶ್ಶಾಸನನು ಅಂತೆಯೇ ಏರ್ಪಡಿಸಿದನು.

ಮರುದಿನ (ಸಪ್ತಮಿ) ಬೆಳಗಾಗಲು ಉಭಯ ಸೇನೆಗಳು ರಣರಂಗದಲ್ಲಿ ಕಲೆತವು. ಭೀಷ್ಮನು ಸರ್ವತೋಭದ್ರವ್ಯೂಹವನ್ನು ರಚಿಸಿದನು. ವ್ಯೂಹಮುಖದಿ

ಕೃಪ ಕೃತವರ್ಮ ಶಕುನಿ ಸೈಂಧವರೊಡನೆ ಭೀಷ್ಮನು ನಡೆದನು. ದ್ರೋಣ, ಭೂರಿಶ್ರವ, ಶಲ್ಯ, ಭಗದತ್ತರು ಬಲಪಕ್ಷದಲ್ಲಿಯು ; ಅಶ್ವತ್ಥಾಮ ಸೋಮದತ್ತ ಆವಂತ್ಯರು ಎಡಗಡೆಯು, ದುರ್ಯೋಧನನು ಮಧ್ಯದಲ್ಲಿಯು ನಡೆದರು.

ಪಾಂಡವ ಸೇನಾಪತಿಯು ಮಹಾವ್ಯೂಹವನ್ನು ರಚಿಸಿದನು. ಧರ್ಮಜ ನಕುಲ ಸಹದೇವರಿಂದ ಕೂಡಿ ಭೀಮಸೇನನು ವ್ಯೂಹ ಮುಖದಲ್ಲಿದ್ದನು. ಧೃಷ್ಟದ್ಯುಮ್ನ ವಿರಾಟ ಸಾತ್ಯಕಿಯರು ಬಲಗಡೆ, ಶಿಖಂಡೀ ಘಟೋತ್ಕಚ ಚೇಕಿತಾನ ಕುಂತೀಭೋಜ ವಿಜಯರು ಎಡಗಡೆ, ಅಭಿಮನ್ಯು ದ್ರುಪದ ಪ್ರಮುಖರು ಹಿಂದುಗಡೆ ನಿಂತು ನಡೆದರು. ಭೇರಿಗಳು ಮೊಳಗಿದವು. ಶಂಖಗಳನ್ನೂದಿ, ಧನುಷ್ಟಂಕಾರ ಮಾಡಿ ಎರಡು ಸೇನೆಗಳು ಕಲೆತಾಗ, ಎರಡು ಬೆಟ್ಟಗಳು ಢೀ ಕೊಟ್ಟಂತೆ ಕಂಡಿತು.

ನರಿಗಳು ವಿಕಾರವಾಗಿ ಕೂಗಿದವು. ಭೂಮಿಯು ಕಂಪಿಸಿತು. ದಿಕ್ಕುಗಳು ಉರಿಯುತ್ತಿರುವಂತೆ ಕಂಡವು. ಧೂಳಿ ಆಕಾಶವನ್ನು ಮುಚ್ಚಿತು. ಅಶ್ವಗಜಾದಿ ವಾಹನಗಳು ಕಣ್ಣೀರಿಡುತ್ತಿದ್ದವು. ಆಕಾರವಿಲ್ಲದ ಭಯಂಕರ ಶಬ್ದಗಳು ಕೇಳ ಬಂದವು. ಆಗಸದಿಂದ ಎಲುಬು ರಕ್ತ ಕೊಳ್ಳಿಗಳು ಉರಿದವು. ಆಗುವ ಜನಕ್ಷಯವನ್ನು ಸೂಚಿಸುವ ದುಶ್ಶಕುನಗಳನ್ನು ಲೆಕ್ಕಿಸದೆ ಕುರು ಪಾಂಡವ ಸೇನೆಗಳು ಹೋರಾಡ ತೊಡಗಿದವು.

ಅಭಿಮನ್ಯುವು ವಿಜೃಂಭಿಸಿ ಶರವರ್ಷವನ್ನು ಸುರಿಸಿ ಕುರುವೀರರನ್ನು ಸಂಹರಿಸಿದನು. ಅವನನ್ನು ತಡೆಯುವ ಧೈರ್ಯವಿಲ್ಲದೆ, ಅವನು ಬಿಡುವ ಬಾಣಗಳು ಯಮದಂಡದಂತೆ ಪ್ರಾಣಾಪಹಾರವನ್ನು ಮಾಡುತ್ತಿರಲು ಹೆದರಿ, ಕುರುಸೈನಿಕರು ದಿಕ್ಕೆಟ್ಟು ಓಡಿದರು. ವಜ್ರಪಾಣಿಯಂತೆ ಶತ್ರುಭೀಕರನಾದ ಅಭಿಮನ್ಯುವು ಕೃಪ, ದ್ರೋಣ, ಅಶ್ವತ್ಥಾಮ, ಬೃಹದ್ಬಲ, ಸೈಂಧವರನ್ನು ಬಾಣಪೀಡಿತರನ್ನಾಗಿ ಮಾಡಿ, ಓಡಿಸಿದನು. ಅವನ ಧನುಸ್ಸು ಸದಾ ಮಂಡಲೀಕೃತವಾಗೇ ಇತ್ತು. ಆಗ ದುರ್ಯೋಧನನು ಅಲಂಬುಷನನ್ನು ಹುರಿದುಂಬಿಸಿ ಕಳಿಸಿದನು.

ಅಲಂಬುಷನು ಸಿಂಹನಾದ ಮಾಡಿ, ಅಭಿಮನ್ಯುವಿನನ್ನು ಮುತ್ತಿದನು. ಅವನ ಗರ್ಜನಿನಾದವನ್ನು ಕೇಳಿ ಭಟರು ಎದೆ ಒಡೆದು ಸತ್ತು ಬಿದ್ದರು. ಅಲಂಬುಷನು ಪಾಂಡವ ಸೇನೆಯನ್ನು ಹೊಡೆದೋಡಿಸಿದನು; ಓಡುವವರನ್ನು ಕಾಲಿಂದ ತುಳಿದು ಸಾವಿರಾರು ಜನರನ್ನು ಸಂಹರಿಸಿದನು. ದ್ರೌಪದೇಯರೈವರು ಅಭಿಮನ್ಯುವಿನ ನೆರವಿಗೆ ಬಂದರು. ರಕ್ತಸಿಕ್ತಗಾತ್ರನನ್ನಾಗಿ ಮಾಡಿದನು. ಮಿಕ್ಕವರೂ ಶರವರ್ಷವನ್ನು ಸುರಿಸಿ, ಅವನ ಸಹಾಯಕರನ್ನು ಕೆಡಹಿದರು. ಅಲಂಬುಷನು ಅಭಿಮನ್ಯುವಿನ ಶರದಿಂದ ಮೂರ್ಛಿತನಾಗಿ, ಮತ್ತೆ ಎಚ್ಚತ್ತು ದ್ವಿಗುಣೀಕೃತಕೋಪನಾಗಿ, ಐದು ಪಾಂಡವೇಯರ ಧ್ವಜ ಧನುಸ್ಸುಗಳನ್ನು ಮುರಿದು, ಒಬ್ಬೊಬ್ಬನನ್ನು ಒಂದೊಂದು ಬಾಣದಿಂದ ಪೀಡಿಸಿದನು. ಮಹಾವೇಗದಿಂದ ಅವರ ಕುದುರೆಗಳನ್ನು ಕೊಂದು, ಅಭಿಮನ್ಯುವಿನನ್ನು ತಾಕಿದನು.

ಭೀಷ್ಮ ದ್ರೋಣರು ಒಂದೆಡೆ ಕಾಳ್ಗಿಚ್ಚಿನಂತೆ ವಿಜೃಂಭಿಸಿ ಪಾಂಚಾಲಸೃಂಜಯನ್ನು

ನಾಶಪಡಿಸುತ್ತಿದ್ದರು. ಒಂದೆಡೆ ನಕುಲಸಹದೇವರು ಕುರುಸೇನೆಯನ್ನು ನಾಶ ಮಾಡುತ್ತಿದ್ದರು. ಅಲಂಬುಷನು ಅಭಿಮನ್ಯುವಿನನ್ನು ಮುತ್ತಿ ದಿವ್ಯಾಸ್ತ್ರಗಳಿಂದ ಪೀಡಿಸಿದನು. ಅಭಿಮನ್ಯುವು ಅವನ ಬಾಣಗಳನ್ನು ಮುರಿದು ಕೆಡಹಿ, ಒಂಬತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಅಲಂಬುಷನು ಮಾಯಾಯುದ್ಧವನ್ನಾರಂಭಿಸಿ, ರಣರಂಗವನ್ನು ಅಂಧಕಾರದಲ್ಲಿ ಮುಚ್ಚಿ ಕಾಣದಂತೆ ಮಾಡಿದನು. ಅಭಿಮನ್ಯುವು ಸೌರಾಸ್ತ್ರವನ್ನು ಪ್ರಯೋಗಿಸಿ, ಅಂಧಕಾರವನ್ನು ಕಳೆದು, ಮತ್ತೆ ಅವನ ಮಾಯೆಗಳನ್ನು ನಿರ್ಭಿಸಿ, ರಾಕ್ಷಸನನ್ನು ನಿಶಿತ ಬಾಣಗಳಿಂದ ಪೀಡಿಸಿದನು. ಆಗ ಅಲಂಬುಷನು ಅಭಿಮನ್ಯುವಿನ ಧಾಟಿಗೆ ತಡೆಯಲಾರದೆ ಓಡಿ ಹೋದನು. ಅಭಿಮನ್ಯುವು ಮದಗಜವು ಪದ್ಮಸರೋವರನ್ನಂತೆ, ಕುರುಸೇನೆಯಲ್ಲಿ ಹೊಕ್ಕು ರಥಿಕರನ್ನು ಸಂಹರಿಸಿದನು.

ಭೀಷ್ಮನು ಅಭಿಮನ್ಯುವಿನನ್ನು ತಡೆದು ಶರಜಾಲದಿಂದ ಮುಚ್ಚಿದನು. ಧಾರ್ತರಾಷ್ಟ್ರರು ಅವನಿಗೆ ಸಹಾಯವಾಗಿ ಬಂದರು. ಅರ್ಜುನನು ಮಗನಿಗೆ ಸಹಾಯವಾಗಿ ಬಂದನು. ಭೀಷ್ಮಾರ್ಜುನರ ಕಾಳಗವು ಭೀಕರವಾಯಿತು. ಭೀಷ್ಮನನ್ನು ಅರ್ಜುನನಿಂದ ತಪ್ಪಿಸಬೇಕೆಂದು ಕೃಪಾಚಾರ್ಯನು ಅರ್ಜುನನನ್ನು ಮುತ್ತಿ ಇಪ್ಪತ್ತೈದು ಬಾಣಗಳಿಂದ ಪೀಡಿಸಿದನು. ಸಾತ್ಯಕಿ ಕೃಪನನ್ನು ವಾರಿಸಿ ಬಾಣಪೀಡಿತನನ್ನಾಗಿ ಮಾಡಲು, ಕೃಪನು ಒಂಬತ್ತು ಬಾಣಗಳಿಂದ ಅವನನ್ನು ಹೊಡೆದನು. ಕೃಪನ ಬಾಣಗಳನ್ನು ಖಂಡಿಸಿ, ಸಾತ್ಯಕಿಯು ಭಲ್ಲವನ್ನು ಪ್ರಯೋಗಿಸಿದನು. ಅವನ ಭಲ್ಲವನ್ನು ಹಾದಿಯಲ್ಲಿ ಮುರಿದು ಅಶ್ವತ್ಥಾಮನು ಸಾತ್ಯಕಿಯನ್ನು ನಾರಾಚದಿಂದ ಗಾಯಗೊಳಿಸಿದನು. ಸಾತ್ಯಕಿಯು ಕ್ರುದ್ಧನಾಗಿ ಸಾವಿರಾರು ಬಾಣಗಳಿಂದ ಗುರುಸುತನನ್ನು ಹೊಡೆದು, ಆತನ ಸಹಾಯಕ್ಕೆಂದು ಬಂದ ದ್ರೋಣನನ್ನೂ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿ ಪೀಡಿಸಿದನು. ಆಗ ಅರ್ಜುನನು ಆಚಾರ್ಯವನ್ನು ಮುತ್ತಿ ಕಾದತೊಡಗಿದನು.

ಕ್ಷಾತ್ರಧರ್ಮದಿಂದ ನಿಷ್ಠುರರಾಗಿ ಗುರು ಶಿಷ್ಯರು ಯುದ್ಧಮಾಡುವುದು ನೋಡುವಂತಿತ್ತು. ಪಾರ್ಥನ ಮೂರು ಬಾಣಗಳಿಂದ ವಿದ್ಧರಾದ ಆಚಾರ್ಯರು ಲೆಕ್ಕಿಸದೆ, ಶರವೃಷ್ಟಿಯಲ್ಲಿ ಅವನನ್ನು ಮುಳುಗಿಸಿದರು. ಆಗ ದುರ್ಯೋಧನಪ್ರೇರಿತನಾದ ಸುಶರ್ಮನು, ಅವರ ಮಧ್ಯದಲ್ಲಿ ನುಗ್ಗಿ ಶರವರ್ಷವನ್ನು ಬಿಡಲು, ಫಲಭಾರನತವಾದ ವೃಕ್ಷಕ್ಕೆ ನುಗ್ಗುವ ಪಕ್ಷಿಗಳಂತೆ, ಅವರೀರ್ವರ ಬಾಣಗಳು ಅರ್ಜುನನ ರಥವನ್ನು ಮುತ್ತಿದವು. ಆ ಶರವೃಷ್ಟಿಗಳನ್ನು ಪರ್ವತದಂತೆ ಸಹಿಸಿ, ಮುತ್ತುವ ಬಹು ವೀರರನ್ನು ಕೆಡಹಿ, ಅರ್ಜುನನು ವಾಯವ್ಯಾಸ್ತ್ರವನ್ನು ಬಿಟ್ಟನು. ಅದು ಕುರುಸೈನಿಕರನ್ನು ಕೆಡಹುತ್ತಾ ಬಿರುಗಾಳಿಯಾಗಿ ಬೀಸಿತು. ದ್ರೋಣನು ಶೈಲಾಸ್ತ್ರದಿಂದ ಅದನ್ನು ಸಂಸ್ತಂಭಿಸಿ, ತನ್ನವರಿಗೆ ಧೈರ್ಯತುಂಬಿದನು.

ದುರ್ಯೋಧನನು ಕೃಪ, ಅಶ್ವತ್ಥಾಮ, ಶಲ್ಯ, ಸುದಕ್ಷಿಣ, ವಿಂದಾನುವಿಂದ, ಬಾಹ್ಲೀಕ, ಭಗದತ್ತರಿಂದ ಕೂಡಿ ಪಾರ್ಥನನ್ನು ಮುತ್ತಿ ಹೋರಾಡಿದನು. ಅದನ್ನು

ಕಂಡು ಭೀಮಸೇನನು ಕುಪಿತನಾಗಿ ರಥದಿಂದ ಧುಮುಕಿ, ಗದಾಪಾಣಿಯಾಗಿ ಕುರುರಾಜನ ಗಜಸೇನೆಯನ್ನು ಸಿಂಹದಂತೆ ಹೊಕ್ಕು, ನಾಶಪಡಿಸಿದನು. ಭೀಮ-ಗದಾಪ್ರಹಾರ ಪೀಡಿತವಾದ ಗಜಗಳು ಗೀಳಿಡುತ್ತಾ ಓಡುವಾಗ ತಮ್ಮ ಸೈನಿಕರನ್ನೇ ತುಳಿದು ನಾಶಪಡಿಸಿದವು. ಗಜರಕ್ತಲಿಪ್ತಗಾತ್ರನಾದ ವಾಯುಪುತ್ರನು, ಕೋರೆಗಳನ್ನು ಹಿಡಿದು ತೂಗಿ ಉರುಳಿಸಿ, ಕಾಲುಗಳನ್ನು ಮುರಿದು, ಕುಂಭಸ್ಥಲವನ್ನು ಒಡೆದು ಮೇಘಜಾಲವನ್ನು ಬಿರುಗಾಳಿಯಂತೆ, ಗಜಸೇನೆಯನ್ನು ದಿಕ್ಕೆಟ್ಟು ಓಡುವಂತೆ ಮಾಡಿದನು. ಅದನ್ನು ಕಂಡು ದುರ್ಯೋಧನನ ಸೇನೆಯು ಯುದ್ಧವಿಮುಖವಾಗಿ, ಭೀತಿಯಿಂದ ಓಡಿತು.

ಮಧ್ಯಂದಿನವಾಯಿತು. ಯುದ್ಧವೂ ಪ್ರಚಂಡವಾಯಿತು. ಭೀಷ್ಮನನ್ನು ಮುತ್ತಿ ಕೆಡಹಬೇಕೆಂದು ಭೀಮಾದಿಗಳು ಪ್ರಯತ್ನಿಸಿ ಬರುತ್ತಿರಲು, ಭೀಷ್ಮನನ್ನು ಅವರ ಕೈಗೆ ಸಿಗದಂತೆ ಮಾಡಬೇಕೆಂದು ದುರ್ಯೋಧನಾದಿಗಳು ಹೆಣಗುತ್ತಿದ್ದರು. ಸಂಕುಲಯುದ್ಧದಲ್ಲಿ ರಕ್ತದ ಕಾಲುವೆಗಳು ಹರಿದವು. ಆನೆಗಳು ಕುದುರೆಗಳು ಸತ್ತು ಬೆಟ್ಟಗಳಂತೆ ರಾಶಿ ರಾಶಿಯಾಗಿ ಬಿದ್ದವು. ದುರ್ಯೋಧನಾಪಚಾರದಿಂದ ಜೀವಕ್ಕೆರವಾದವರ ಸಂಖ್ಯೆ ಅಪರಿಗಣನೀಯವಾಗಿತ್ತು. ಅರ್ಜುನನು ಸುಶರ್ಮನ ರಥಿಕರನ್ನು ಯಮಸದನಕ್ಕಟ್ಟುತ್ತಿರಲು, ಭೀಷ್ಮನು ಅವನನ್ನು ತಡೆದು ಕಾದತೊಡಗಿದನು. ರಣರಂಗದಲ್ಲಿ ಕಾದುವ ವೀರರ ದ್ವಂದ್ವಯುದ್ಧವನ್ನು ನೋಡಿ ಆಕಾಶದಿ ದೇವತೆಗಳೂ ಆಶ್ಚರ್ಯಪಟ್ಟರು.

ಅಭಿಮನ್ಯು ಚಿತ್ರಸೇನರು, ದ್ರೋಣ ದ್ರುಪದರು, ಭೀಮಸೇನ ಬಾಹ್ಲೀಕರು ಸಾತ್ಯಕಿ ಕೃತವರ್ಮರು ದ್ವಂದ್ವಯುದ್ಧವನ್ನು ಮಾಡಿದರು. ಕೃತವರ್ಮನನ್ನು ವಾರಿಸಿ, ಸಾತ್ಯಕಿಯು ಭೀಷ್ಮನನ್ನು ಮುತ್ತಿ ಶಕ್ತಿಯನ್ನೆಸೆದನು. ಭೀಷ್ಮನು ಅದನ್ನು ಖಂಡಿಸಿ, ಅವನನ್ನು ಒಂಬತ್ತು ಬಾಣಗಳಿಂದ ಹೊಡೆದೋಡಿಸಿದನು. ಭೀಮಸೇನನು ಬಾಹ್ಲೀಕನ ರಥ ಸಾರಥಿಗಳನ್ನು ಕ್ಷಣದಲ್ಲಿ ನಾಶ ಮಾಡಿದನು. ಬಾಹ್ಲಿಕನು ಸಂಭ್ರಮದಿಂದ ತನ್ನ ರಥದಿಂದ ಲಕ್ಷ್ಮಣನ ರಥಕ್ಕೆ ಹಾರಿ, ಉಳಿದು ಕೊಂಡನು. ದ್ರೋಣನು ದ್ರುಪದನನ್ನು ಹೊಡೆದೋಡಿಸಿ, ಪಾಂಚಾಲಸೇನಾನಿವಹವನ್ನು ಮದ್ದಾನೆ ಕಬ್ಬಿನ ಸಾಲಿನನ್ನಂತೆ ಹೊಡೆದು ಕೆಡಹಿದನು.

ಭೀಷ್ಮನು ದುಶ್ಶಾಸನಾದಿ ಯೋಧವರರಿಂದ ಕೂಡಿ ಪಾಂಡವ ಸೇನೆಯನ್ನು ಸಂಹಾರ ಮಾಡುತ್ತಾ ಬರುತ್ತಿರಲು, ಧರ್ಮರಾಜನು ನಕುಲಸಹದೇವಾದಿ ಯೋಧವರರಿಂದ ಕೂಡಿ, ಅವರನ್ನು ನಿವಾರಿಸಿ ಕಾದಿದನು. ಮಹಾಸರ್ಪಗಳು ಹರಿದಾಡಿದಂತೆ ಬಾಣಗಳು ರಣರಂಗದ ಆಕಾಶವನ್ನು ಮುಚ್ಚಿ, ಶತ್ರುಪ್ರಾಣಾನಿಲಗಳನ್ನು ಅಪಹರಿಸುತ್ತಿದ್ದವು. ಸಾರಥಿಗಳಿಲ್ಲದ ಕುದುರೆಗಳು, ವಾಹಕರಿಲ್ಲದ ಆನೆಗಳು, ರಥಿಕರಿಲ್ಲದ ರಥಗಳು ರಣರಂಗದಲ್ಲಿ ಕಾಣು ಬರುತ್ತಿದ್ದವು. ಭಟರು ದಿಕ್ಕೆಟ್ಟು ಓಡುತ್ತಿದ್ದರು.

ದುರ್ಯೋಧನನಿಂದ ಪ್ರೇರಿತನಾದ ಮದ್ರರಾಜನು ಧರ್ಮಯಮಳರನ್ನು ತಾಕಿ,ಹತ್ತು ಬಾಣಗಳನ್ನು ಅವರ ಮೇಲೆ ಬಿಟ್ಟನು. ಸಹದೇವನು ಹತ್ತು ಬಾಣಗಳಿಂದ

ಪೀಡಿಸಿದನು. ನಕುಲನೂ ಹತ್ತು ಬಾಣಗಳಿಂದಲು, ಧರ್ಮರಾಜನೂ ಹತ್ತು ಬಾಣಗಳಿಂದಲು ಹೊಡೆಯಲು, ಶಲ್ಯನು ಕುಪಿತನಾಗಿ, ಅವರ ಬಾಣಗಳನ್ನು ಮುರಿದು ಕೆಡಹಿ, ಒಬ್ಬೊಬ್ಬರನ್ನು ಮೂರು ಮೂರು ಬಾಣಗಳಿಂದ ಹೊಡೆದನು. ಭೀಷ್ಮನು ಶಲ್ಯನ ಸಹಾಯಕ್ಕೆಂದು ಬಂದು ಹನ್ನೆರಡು ಬಾಣಗಳನ್ನು ಧರ್ಮರಾಜನ ಮೇಲೂ, ಒಂಬತ್ತು ಬಾಣಗಳನ್ನು ಸಾತ್ಯಕಿಯಲ್ಲೂ, ಮೂರನ್ನು ನಕುಲನ ಮೇಲೂ, ಏಳು ವಿಶಿಖಗಳನ್ನು ಸಹದೇವನ ಮೇಲೂ ಬಿಟ್ಟನು. ಚೇದಿ, ಕಾಶ್ಯ, ಕರೂಷ ಸೈನಿಕರನ್ನು ಹದಿನಾಲ್ಕು ಸಾವಿರ ಜನರನ್ನು ಭೀಷ್ಮನು ಅಂದು ಸಂಹರಿಸಿದನು. ಭೀಷ್ಮನನ್ನು ಎದುರಿಸಿ ನಿಂತವರು ಉತ್ತರ ಕ್ಷಣದಲ್ಲಿ ಯಮರಾಜನ ಎದುರಿಗೆ ನಿಲ್ಲುತ್ತಿದ್ದರು. ಚಾಪ ಖಡ್ಗಭಲ್ಲ ಬಾಣಾದಿ ಸಾಧನಗಳ ಜೊತೆಗೆ ಭಟರ ಶಿರೋಬಾಹುಪಾದಾದ್ಯವಯವಗಳು ರಣಭೂಮಿಯಲ್ಲಿ ವಿಪುಲವಾಗಿ ಬಿದ್ದಿದ್ದವು. ಕೂದಲು ಬಿಚ್ಚಿಕೊಂಡು ಓಡುವ ಭಟರ ಹಾಹಾಕಾರ, ಸೊಂಡಿಲವಿಲ್ಲದೆ ಗೀಳಿಟ್ಟೋಡುವ ಆನೆಗಳ ಆರ್ತನಾದ, ಕಾಲು ಕಡಿದು ಉರುಳಾಡುವ ಕುದುರೆಗಳ ಮುಲುಗು ಧ್ವನಿಗಳಿಂದ ಭಯಂಕರವಾಯಿತು ರಣಭೂಮಿ.

ಭೀಮಸೇನನದನ್ನು ಸಹಿಸದೆ ಭೀಷ್ಮನನ್ನು ತಡೆಯಲೆಂದು ಬಂದನು. ಅವನು ಅಭಿಮನ್ಯುವಿನನ್ನು ಭೀಷ್ಮನ ಕಡೆ ಹೋಗಲು ತಡೆಯುತ್ತಿರುವ ದುರ್ಯೋಧನನನ್ನು ಕಂಡನು. ಭೀಮಸೇನನು ಕುಪಿತನಾಗಿ, ದುರ್ಯೋಧನನನ್ನು ಮುತ್ತಿದನು. ಕುರುರಾಜನ ಶರವರ್ಷವನ್ನು ಮುರಿದು ಕೆಡಹಿ ಭೀಮಸೇನನು ಅವನ ಧ್ವಜವನ್ನು ಭಲ್ಲದಿಂದ ಕೆಡಹಿ, ಅರ್ಧಚಂದ್ರಬಾಣದಿಂದ ಬಿಲ್ಲನ್ನು ಮುರಿದು, ತೀವ್ರ ಬಾಣದಿಂದ ಸೂತನನ್ನು ಕೊಂದು, ನಾಲ್ಕು ನಾರಾಚಗಳಿಂದ ಕುದುರೆಗಳನ್ನೂ ಕೆಡಹಿದನು; ಆಗ ವಿರಥನು ನಿರಾಯುಧನು ಆದ ರಾಜನ ಸಹಾಯಕ್ಕೆಂದು ದ್ರೋಣ, ಕೃಪ, ಅಶ್ವತ್ಥಾಮ, ಭಗದತ್ತ ಚಿತ್ರಸೇನರು ಬಂದು, ಭೀಮಸೇನನನ್ನು ಶರವರ್ಷದಲ್ಲಿ ಮುಣುಗಿಸಿದರು. ಭೀಮಸೇನನು ಶರಲಾಘವವನ್ನು ಮೀರಿಸುವ ಕರಲಾಘವವನ್ನು ತೋರಿ, ಅವರನ್ನೆಲ್ಲ ಬಾಣಪೀಡಿತರನ್ನಾಗಿಸಿ, ಧನುಸ್ತರಗಗಳನ್ನು ಸಂಹರಿಸಿದನು. ಭೀಮಸೇನನು ರಥದಿಂದ ಕೆಳಗಿಳಿದು ಗದಾಪಾಣಿಯಾಗಿ ಬರುವುದನ್ನು ಕಂಡು ದ್ರೋಣಾದಿಗಳು ಹೆದರಿ, ಬೇರೆಯವರ ರಥಗಳನ್ನೇರಿ ಹೊರಟುಹೋದರು. ಭೀಮಸೇನನು ಗದೆಯೆತ್ತಿ ಚಿತ್ರಸೇನನನ್ನು ಹೊಡೆಯಲು, ಆ ವೇಗವನ್ನು ಕಂಡು ಅವನು ಪ್ರಾಣಭಯದಿಂದ ರಥವನ್ನು ಬಿಟ್ಟೋಡಿದನು. ಗದಾಘಾತದಿಂದ ಅವನ ರಥವು ಪುಡಿಪುಡಿ ಆಯಿತು.

ದ್ರೋಣಾಚಾರ್ಯನು ವಿರಾಟಶಂಖರಿಂದ ಕೂಡಿ ಭಯಂಕರ ಯುದ್ಧಮಾಡಿದನು. ಮತ್ಸ್ಯಸೇನೆಯನ್ನು ಕಡಿದು ಕೆಡಹಿ, ಸಾವಿರಾರು ರಥಿಕರನ್ನು ನಾಶಮಾಡಿಸಿ ಆಚಾರ್ಯನ ವಿಕ್ರಮವನ್ನು ತಡೆಯಲೆಣಿಸಿ, ಶಂಖನು ಅವನನ್ನು ತಡೆದು, ಹತ್ತು ಬಾಣಗಳಿಂದ ಸ್ತನಾಂತರದಿ ಪೀಡಿಸಿದನು. ಆಗ ದ್ರೋಣನು ಭಯದ ಭಲ್ಲದಿಂದ ಶಂಖನ ತಲೆಯನ್ನುರುಳಿಸಿ, ಆರ್ಭಟಿಸಲು ಮತ್ಸ್ಯಸೈನಿಕರು ಎದೆಗುಂದಿ ಪಲಾಯಿತರಾದರು. ವಿರಾಟನು ದ್ರೋಣನೊಡನೆ ಕಾದು, ವಿಜಿತನಾಗಿ ಓಡಿ ಹೋದನು.

ಕಂಡು ಭೀಮಸೇನನು ಕುಪಿತನಾಗಿ ರಥದಿಂದ ಧುಮುಕಿ, ಗದಾಪಾಣಿಯಾಗಿ ಕುರುರಾಜನ ಗಜಸೇನೆಯನ್ನು ಸಿಂಹದಂತೆ ಹೊಕ್ಕು, ನಾಶಪಡಿಸಿದನು. ಭೀಮ-ಗದಾಪ್ರಹಾರ ಪೀಡಿತವಾದ ಗಜಗಳು ಗೀಳಿಡುತ್ತಾ, ಓಡುವಾಗ ತಮ್ಮ ಸೈನಿಕರನ್ನೇ ತುಳಿದು ನಾಶಪಡಿಸಿದವು. ಗಜರಕ್ತಲಿಪ್ತಗಾತ್ರನಾದ ವಾಯುಪುತ್ರನು, ಕೋರೆಗಳನ್ನು ಪಿಡಿದು ತೂಗಿ ಉರುಳಿಸಿ, ಕಾಲುಗಳನ್ನು ಮುರಿದು, ಕುಂಭಸ್ಥಲವನ್ನು ಒಡೆದು ಮೇಘಜಾಲವನ್ನು ಬಿರುಗಾಳಿಯಂತೆ, ಗಜಸೇನೆಯನ್ನು ದಿಕ್ಕೆಟ್ಟು ಓಡುವಂತೆ ಮಾಡಿದನು. ಅದನ್ನು ಕಂಡು ದುರ್ಯೋಧನನ ಸೇನೆಯು ಯುದ್ಧವಿಮುಖವಾಗಿ, ಭೀತಿಯಿಂದ ಓಡಿತು.

ಮಧ್ಯಂದಿನವಾಯಿತು. ಯುದ್ಧವೂ ಪ್ರಚಂಡವಾಯಿತು. ಭೀಷ್ಮನನ್ನು ಮುತ್ತಿ ಕೆಡಹಬೇಕೆಂದು ಭೀಮಾದಿಗಳು ಪ್ರಯತ್ನಿಸಿ ಬರುತ್ತಿರಲು, ಭೀಷ್ಮನನ್ನು ಅವರ ಕೈಗೆ ಸಿಗದಂತೆ ಮಾಡಬೇಕೆಂದು ದುರ್ಯೋಧನಾದಿಗಳು ಹೆಣಗುತ್ತಿದ್ದರು. ಸಂಕುಲಯುದ್ಧದಲ್ಲಿ ರಕ್ತದ ಕಾಲುವೆಗಳು ಹರಿದವು. ಆನೆಗಳು ಕುದುರೆಗಳು ಸತ್ತು ಬೆಟ್ಟಗಳಂತೆ ರಾಶಿ ರಾಶಿಯಾಗಿ ಬಿದ್ದವು. ದುರ್ಯೋಧನಾಪಚಾರದಿಂದ ಜೀವಕ್ಕೆರವಾದವರ ಸಂಖ್ಯೆ ಅಪರಿಗಣನೀಯವಾಗಿತ್ತು. ಅರ್ಜುನನು ಸುಶರ್ಮನ ರಥಿಕರನ್ನು ಯಮಸದನಕ್ಕಟ್ಟುತ್ತಿರಲು, ಭೀಷ್ಮನು ಅವನನ್ನು ತಡೆದು ಕಾದತೊಡಗಿದನು. ರಣರಂಗದಲ್ಲಿ ಕಾದುವ ವೀರರ ದ್ವಂದ್ವಯುದ್ಧವನ್ನು ನೋಡಿ ಆಕಾಶದಿ ದೇವತೆಗಳೂ ಆಶ್ಚರ್ಯಪಟ್ಟರು.

ಅಭಿಮನ್ಯು ಚಿತ್ರಸೇನರು, ದ್ರೋಣ ದ್ರುಪದರು, ಭೀಮಸೇನ ಬಾಹ್ಲೀಕರು ಸಾತ್ಯಕಿ ಕೃತವರ್ಮರು ದ್ವಂದ್ವಯುದ್ಧವನ್ನು ಮಾಡಿದರು. ಕೃತವರ್ಮನನ್ನು ವಾರಿಸಿ, ಸಾತ್ಯಕಿಯು ಭೀಷ್ಮನನ್ನು ಮುತ್ತಿ ಶಕ್ತಿಯನ್ನೆಸೆದನು. ಭೀಷ್ಮನು ಅದನ್ನು ಖಂಡಿಸಿ, ಅವನನ್ನು ಒಂಬತ್ತು ಬಾಣಗಳಿಂದ ಹೊಡೆದೋಡಿಸಿದನು. ಭೀಮಸೇನನು ಬಾಹ್ಲೀಕನ ರಥ ಸಾರಥಿಗಳನ್ನು ಕ್ಷಣದಲ್ಲಿ ನಾಶ ಮಾಡಿದನು. ಬಾಹ್ಲಿಕನು ಸಂಭ್ರಮದಿಂದ ತನ್ನ ರಥದಿಂದ ಲಕ್ಷ್ಮಣನ ರಥಕ್ಕೆ ಹಾರಿ, ಉಳಿದು ಕೊಂಡನು. ದ್ರೋಣನು ದ್ರುಪದನನ್ನು ಹೊಡೆದೋಡಿಸಿ, ಪಾಂಚಾಲಸೇನಾನಿವಹವನ್ನು ಮದ್ದಾನೆ ಕಬ್ಬಿನ ಸಾಲಿನನ್ನಂತೆ ಹೊಡೆದು ಕೆಡಹಿದನು.

ಭೀಷ್ಮನು ದುಶ್ಶಾಸನಾದಿ ಯೋಧವರರಿಂದ ಕೂಡಿ ಪಾಂಡವ ಸೇನೆಯನ್ನು ಸಂಹಾರ ಮಾಡುತ್ತಾ ಬರುತ್ತಿರಲು, ಧರ್ಮರಾಜನು ನಕುಲಸಹದೇವಾದಿ ಯೋಧವರರಿಂದ ಕೂಡಿ, ಅವರನ್ನು ನಿವಾರಿಸಿ ಕಾದಿದನು. ಮಹಾಸರ್ಪಗಳು ಹರಿದಾಡಿದಂತೆ ಬಾಣಗಳು ರಣರಂಗದ ಆಕಾಶವನ್ನು ಮುಚ್ಚಿ, ಶತ್ರುಪ್ರಾಣಾನಿಲಗಳನ್ನು ಅಪಹರಿಸುತ್ತಿದ್ದವು. ಸಾರಥಿಗಳಿಲ್ಲದ ಕುದುರೆಗಳು, ವಾಹಕರಿಲ್ಲದ ಆನೆಗಳು, ರಥಿಕರಿಲ್ಲದ ರಥಗಳು ರಣರಂಗದಲ್ಲಿ ಕಾಣು ಬರುತ್ತಿದ್ದವು. ಭಟರು ದಿಕ್ಕೆಟ್ಟು ಓಡುತ್ತಿದ್ದರು.

ದುರ್ಯೋಧನನಿಂದ ಪ್ರೇರಿತನಾದ ಮದ್ರರಾಜನು ಧರ್ಮಯಮಳರನ್ನು ತಾಕಿ,ಹತ್ತು ಬಾಣಗಳನ್ನು ಅವರ ಮೇಲೆ ಬಿಟ್ಟನು. ಸಹದೇವನು ಹತ್ತು ಬಾಣಗಳಿಂದ

ಪೀಡಿಸಿದನು. ನಕುಲನೂ ಹತ್ತು ಬಾಣಗಳಿಂದಲು, ಧರ್ಮರಾಜನೂ ಹತ್ತು ಬಾಣಗಳಿಂದಲು ಹೊಡೆಯಲು, ಶಲ್ಯನು ಕುಪಿತನಾಗಿ, ಅವರ ಬಾಣಗಳನ್ನು ಮುರಿದು ಕೆಡಹಿ, ಒಬ್ಬೊಬ್ಬರನ್ನು ಮೂರು ಮೂರು ಬಾಣಗಳಿಂದ ಹೊಡೆದನು. ಭೀಷ್ಮನು ಶಲ್ಯನ ಸಹಾಯಕ್ಕೆಂದು ಬಂದು ಹನ್ನೆರಡು ಬಾಣಗಳನ್ನು ಧರ್ಮರಾಜನ ಮೇಲೂ, ಒಂಬತ್ತು ಬಾಣಗಳನ್ನು ಸಾತ್ಯಕಿಯಲ್ಲೂ, ಮೂರನ್ನು ನಕುಲನ ಮೇಲೂ, ಏಳು ವಿಶಿಖಗಳನ್ನು ಸಹದೇವನ ಮೇಲೂ ಬಿಟ್ಟನು. ಚೇದಿ, ಕಾಶ್ಯ, ಕರೂಷ ಸೈನಿಕರನ್ನು ಹದಿನಾಲ್ಕು ಸಾವಿರ ಜನರನ್ನು ಭೀಷ್ಮನು ಅಂದು ಸಂಹರಿಸಿದನು. ಭೀಷ್ಮನನ್ನು ಎದುರಿಸಿ ನಿಂತವರು ಉತ್ತರ ಕ್ಷಣದಲ್ಲಿ ಯಮರಾಜನ ಎದುರಿಗೆ ನಿಲ್ಲುತ್ತಿದ್ದರು. ಚಾಪ ಖಡ್ಗಭಲ್ಲ ಬಾಣಾದಿ ಸಾಧನಗಳ ಜೊತೆಗೆ ಭಟರ ಶಿರೋಬಾಹುಪಾದಾದ್ಯವಯವಗಳು ರಣಭೂಮಿಯಲ್ಲಿ ವಿಪುಲವಾಗಿ ಬಿದ್ದಿದ್ದವು. ಕೂದಲು ಬಿಚ್ಚಿಕೊಂಡು ಓಡುವ ಭಟರ ಹಾಹಾಕಾರ, ಸೊಂಡಿಲವಿಲ್ಲದೆ ಗೀಳಿಟ್ಟೋಡುವ ಆನೆಗಳ ಆರ್ತನಾದ, ಕಾಲು ಕಡಿದು ಉರುಳಾಡುವ ಕುದುರೆಗಳ ಮುಲುಗು ಧ್ವನಿಗಳಿಂದ ಭಯಂಕರವಾಯಿತು ರಣಭೂಮಿ.

ಭೀಮಸೇನನದನ್ನು ಸಹಿಸದೆ ಭೀಷ್ಮನನ್ನು ತಡೆಯಲೆಂದು ಬಂದನು. ಅವನು ಅಭಿಮನ್ಯುವಿನನ್ನು ಭೀಷ್ಮನ ಕಡೆ ಹೋಗಲು ತಡೆಯುತ್ತಿರುವ ದುರ್ಯೋಧನನನ್ನು ಕಂಡನು. ಭೀಮಸೇನನು ಕುಪಿತನಾಗಿ, ದುರ್ಯೋಧನನನ್ನು ಮುತ್ತಿದನು. ಕುರುರಾಜನ ಶರವರ್ಷವನ್ನು ಮುರಿದು ಕೆಡಹಿ ಭೀಮಸೇನನು ಅವನ ಧ್ವಜವನ್ನು ಭಲ್ಲದಿಂದ ಕೆಡಹಿ, ಅರ್ಧಚಂದ್ರಬಾಣದಿಂದ ಬಿಲ್ಲನ್ನು ಮುರಿದು, ತೀವ್ರ ಬಾಣದಿಂದ ಸೂತನನ್ನು ಕೊಂದು, ನಾಲ್ಕು ನಾರಾಚಗಳಿಂದ ಕುದುರೆಗಳನ್ನೂ ಕೆಡಹಿದನು; ಆಗ ವಿರಥನು ನಿರಾಯುಧನು ಆದ ರಾಜನ ಸಹಾಯಕ್ಕೆಂದು ದ್ರೋಣ, ಕೃಪ, ಅಶ್ವತ್ಥಾಮ, ಭಗದತ್ತ, ಚಿತ್ರಸೇನರು ಬಂದು, ಭೀಮಸೇನನನ್ನು ಶರವರ್ಷದಲ್ಲಿ ಮುಣುಗಿಸಿದರು. ಭೀಮಸೇನನು ಶರಲಾಘವವನ್ನು ಮೀರಿಸುವ ಕರಲಾಘವವನ್ನು ತೋರಿ, ಅವರನ್ನೆಲ್ಲ ಬಾಣಪೀಡಿತರನ್ನಾಗಿಸಿ, ಧನುಸ್ತರಗಗಳನ್ನು ಸಂಹರಿಸಿದನು. ಭೀಮಸೇನನು ರಥದಿಂದ ಕೆಳಗಿಳಿದು ಗದಾಪಾಣಿಯಾಗಿ ಬರುವುದನ್ನು ಕಂಡು ದ್ರೋಣಾದಿಗಳು ಹೆದರಿ, ಬೇರೆಯವರ ರಥಗಳನ್ನೇರಿ ಹೊರಟುಹೋದರು. ಭೀಮಸೇನನು ಗದೆಯೆತ್ತಿ ಚಿತ್ರಸೇನನನ್ನು ಹೊಡೆಯಲು, ಆ ವೇಗವನ್ನು ಕಂಡು ಅವನು ಪ್ರಾಣಭಯದಿಂದ ರಥವನ್ನು ಬಿಟ್ಟೋಡಿದನು. ಗದಾಘಾತದಿಂದ ಅವನ ರಥವು ಪುಡಿಪುಡಿ ಆಯಿತು.

ದ್ರೋಣಾಚಾರ್ಯನು ವಿರಾಟಶಂಖರಿಂದ ಕೂಡಿ ಭಯಂಕರ ಯುದ್ಧವಾಡಿದನು. ಮತ್ಸ್ಯಸೇನೆಯನ್ನು ಕಡಿದು ಕೆಡಹಿ, ಸಾವಿರಾರು ರಥಿಕರನ್ನು ನಾಶಮಾಡಿಸಿ ಆಚಾರ್ಯನ ವಿಕ್ರಮವನ್ನು ತಡೆಯಲೆಣಿಸಿ, ಶಂಖನು ಅವನನ್ನು ತಡೆದು, ಹತ್ತು ಬಾಣಗಳಿಂದ ಸ್ತನಾಂತರದಿ ಪೀಡಿಸಿದನು. ಆಗ ದ್ರೋಣನು ಭಯದ ಭಲ್ಲದಿಂದ ಶಂಖನ ತಲೆಯನ್ನುರುಳಿಸಿ, ಆರ್ಭಟಿಸಲು ಮತ್ಸ್ಯಸೈನಿಕರು ಎದೆಗುಂದಿ ಪಲಾಯಿತರಾದರು. ವಿರಾಟನು ದ್ರೋಣನೊಡನೆ ಕಾದು, ವಿಜಿತನಾಗಿ ಓಡಿ ಹೋದನು.

ದ್ರೋಣಭೀಷ್ಮರ ಧಾಟಿಗೆ ಪಾಂಡವ ಸೈನಿಕರು ಹೆದರಿ ಓಡುವುದನ್ನು ಕಂಡು, ಶ್ರೀಕೃಷ್ಣನು 'ಅರ್ಜುನ ! ನೋಡು ನಿಮ್ಮವರ ಪರಾಜಯವನ್ನು ! ಧೈರ್ಯ ಮಾಡು ! ಭೀಮನಂತೆ ಸಾಹಸಿಸಿ ಕಡಿದಾಡು; ಕ್ಷತ್ರಧರ್ಮವನ್ನು ಬಿಡಬೇಡ ! ಅಂದು ಸಭೆಯಲ್ಲಿ ಅಂದಂತೆ ಭೀಷ್ಮನನ್ನು ಸಂಹರಿಸು ! ' ಎಂದು ಹುರಿದುಂಬಿಸಿದನು. ಅರ್ಜುನನು ವಿಧಿ ಯಿಲ್ಲದೆ ಕಾದುವವನಂತೆ ಭೀಷ್ಮನೊಡನೆ ಕಾದಿದನು. ಭೀಷ್ಮನು ಅವನ ಬಿಳಿಗುದುರೆಗಳನ್ನು ಪೀಡಿಸಲು, ನೋವಿನಿಂದ ಅವು ಕೆನೆದು ಗೋಳಿಟ್ಟವು. ಅರ್ಜುನನು ಸಹಿಸದೆ ಭೀಷ್ಮನ ಬಿಲ್ಲನ್ನು ಮುರಿದನು. ಅವನು ಮತ್ತೊಂದು ಬಿಲ್ಲನ್ನೆತ್ತಲು ಅದನ್ನೂ ಖಂಡಿಸಿದ ಪಾಂಡವ ಮಧ್ಯಮನನ್ನು ಮೆಚ್ಚಿ, ಶರಜಾಲದಲ್ಲಿ ಅವನ ರಥವನ್ನು ಮುಚ್ಚಿ ಹತ್ತು ಬಾಣಗಳಿಂದ ಅರ್ಜುನನನ್ನು, ಮೂರರಿಂದ ಮುರಾರಿಯನ್ನು ಹೊಡೆದನು.

ಆಗ ಶ್ರೀಕೃಷ್ಣನು ಅರ್ಜುನನ ಮೃದುಯುದ್ಧವನ್ನು ಸಹಿಸದೆ, ರಥದಿಂದಿಳಿದು ಚಕ್ರಪಾಣಿಯಾಗಿ, ಸಿಟ್ಟಿನಿಂದ ಭೀಷ್ಮನನ್ನು ಸಂಹರಿಸಿಬಿಡುವವನಂತೆ ಮೇಲೇರಿ ಬಂದನು. ಭೀಷ್ಮನು ಕೈ ಮುಗಿದು ' ಬಾರಯ್ಯ ಮುಕುಂದ ! ನಿನ್ನ ಚಕ್ರದಿಂದ ವಿಹತನಾಗಿ ಸದ್ಗತಿಯನ್ನು ಪೊಂದುವ ಭಾಗ್ಯವನ್ನು ನಿನ್ನ ಭಕ್ತನಿಗೆ ಕೊಡು ! ನಿನ್ನ ದಾಸನನ್ನು ಪಾಪದಿಂದ ಉದ್ಧರಿಸು ! ' ಎಂದು ಬೇಡುತ್ತಿರಲು, ನೋಡಿ ಅರ್ಜುನನು ನಾಚಿ, ಸಡಗರದಿಂದ ಬಂದು ಶ್ರೀಕೃಷ್ಣನ ಕಾಲಿಗೆ ಬಿದ್ದು ಇಂತೆಂದನು : 'ಗೋವಿಂದ ! ಹಿಂದಿರುಗು ! ಆಯುಧವನ್ನು ಪಿಡಿಯುವುದಿಲ್ಲವೆಂಬ ನಿನ್ನ ಮಾತು ಸತ್ಯವಾಗಿರಲಿ ! ಸತ್ಯದಾಣೆಯಾಗಿ, ಶಸ್ತ್ರವನ್ನು ಮುಟ್ಟಿ ಶಪಥ ಮಾಡುತ್ತಿರುವೆನು. ಇಂದು ಭೀಷ್ಮಾದಿ ವೀರರನ್ನು ವಿಕ್ರಮಿಸಿ, ಸಂಹರಿಸುವೆನು ' ಇಂತು ನುಡಿವ ಕಿರೀಟಿಯ ಮಾತನ್ನು ಲೆಕ್ಕಿಸದೆ ಮಾಧವನು ಸುಮ್ಮನೆ ಹಿಂದಿರುಗಿ ಬಂದು, ರಥದಲ್ಲಿ ಕೂತು, ಕುದುರೆಗಳನ್ನು ಪ್ರಚೋದಿಸಿದನು.

ಭೀಷ್ಮನು ಅರ್ಜುನನ ಬಾಣಗಳನ್ನು ತುಂಡರಿಸಿ, ಮತ್ತೆ ರಥಸಾರಥಿಯರನ್ನು ಬಾಣಪೀಡಿತರನ್ನಾಗಿಸಿ, ಪಾಂಡವಸೇನೆಯನ್ನು ನಾಶ ಮಾಡಿದನು. ಸೂರ್ಯನಂತೆ ತಪಿಸಿ, ಮಳೆಗರೆದಂತೆ ಬಾಣಗಳನ್ನು ಬಿಟ್ಟು ಯಮನಂತೆ ಕೊಲ್ಲುವ ಭೀಷ್ಮನ ಮುಂದೆ ನಿಲ್ಲಲಾರದೆ ಪಾಂಡವ ಪಾಂಚಾಲರು ಓಡತೊಡಗಿದರು.

ಸೂರ್ಯನು ಅಸ್ತಂಗತನಾಗುವುದನ್ನು ಕಂಡ ಉಭಯ ಸೇನಾಪತಿಗಳು ಅವಹಾರವನ್ನು ಮಾಡಿ, ತಂತಮ್ಮ ಶಿಬಿರಗಳನ್ನು ಸೇರಿದರು.

## ೩೩. ಭೀಷ್ಮ ಸಂದರ್ಶನ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು :

' ರಾಜನ್ ! ದ್ರೋಣ ಭೀಷ್ಮರಿಂದ ಹತವಾದ ಸೈನ್ಯವನ್ನೂ, ಅಸ್ತಂಗತನಾಗುವ ಆದಿತ್ಯನನ್ನೂ ಕಂಡು, ಧರ್ಮರಾಜನು ಸೇನಾವಹಾರವನ್ನು ಮಾಡಿ, ಶಿಬಿರವನ್ನು ಸೇರಿದನು.

ಆತನು ಸೋದರರಿಂದಲು, ಶ್ರೀಕೃಷ್ಣನಿಂದಲು, ಮಿಕ್ಕ ಬಂಧು-ಮಿತ್ರರಿಂದಲು ಕೂಡಿ ಮಂತ್ರಾಲೋಚನೆ ಮಾಡಿದನು. ಶ್ರೀಕೃಷ್ಣನನ್ನು ನೋಡಿ ಧರ್ಮರಾಜ ನಿಂತೆಂದನು. 'ಕೇಶವ ! ಗಜವು ಗಲಗಿನ ಗುಂಪನ್ನಂತೆ ಭೀಷ್ಮನು ನಮ್ಮ ಸೇನೆಯನ್ನು ಹೊಕ್ಕು ನಾಶಮಾಡಿದುದನ್ನು ನೋಡಿದೆಯಲ್ಲವೆ ? ಅವನನ್ನು ಕಣ್ಣೆತ್ತಿ ನೋಡುವುದಕ್ಕು ನಮ್ಮ ಕೈಲಾಗಲಿಲ್ಲ ದಂಡಪಾಣಿ ಯಮ, ವಜ್ರಪಾಣಿ ದೇವೇಂದ್ರ, ಪಾಶಪಾಣಿ ವರುಣ, ಗದಾಪಾಣಿ ಕುಬೇರ, ಎಲ್ಲರೂ ಒಟ್ಟುಗೂಡಿ ಬಂದರೂ ಗೆಲ್ಲಲಹುದಾಗಲಿ, ಧನುರ್ಬಾಣಪಾಣಿಯಾದ ಭೀಷ್ಮನನ್ನಲ್ಲ. ನನಗೆ ಕೊನೆಗೆ ಬಂಧು ಹತ್ಯಪಾಪವೇ ಅಲ್ಲದೆ ವನವಾಸವೂ ಕಾದಂತಿದೆ. ನನ್ನ ಸೋದರರೂ ಶಕ್ತಿಗೆ ಮೀರಿ ಕಡಿದಾಡಿ ಶ್ರಾಂತರಾಗಿರುವರು. ನಮಗೆ ಬದುಕಿರುವುದೂ ದುರ್ಲಭವೆಂದು ತೋರುತ್ತಿದೆ. ಕೃಷ್ಣ ! ನಮ್ಮನ್ನು ಅನುಗ್ರಹಿಸು ! ಈಗ ನಮಗೆ ಹಿತವಾವುದೋ ನೀನೇ ಉಪದೇಶಿಸು !'

ಇಂತು ಬೇಡಿದ ಧರ್ಮಜನಿಗೆ ಶ್ರೀಕೃಷ್ಣನಿಂತೆಂದನು: 'ಮಹಾರಾಜ ! ಹೆದರುವ ಕೆಲಸವಿಲ್ಲ. ನಿನ್ನ ಸೋದರರು ಶತ್ರುಂಜಯರಾಗಿರುವರು. ಭೀಮಸೇನಾರ್ಜುನರು ವಾಯ್ವಿಂದ್ರಸಮತೇಜರು. ನಕುಲಸಹದೇವರು ಬಲು ಶೂರರು. ಮಿಕ್ಕ ವೀರರೂ ಸಾಮಾನ್ಯರಲ್ಲ. ನಿನ್ನ ಹಿತವನ್ನು ಸಾಧಿಸಲು ನಾನೂ ನಡುವುಕಟ್ಟಿ ನಿಂತಿರುವೆನು. ಈಗ ನನಗಾಜ್ಞಾಪಿಸು ! ಒಂದು ಕ್ಷಣದಲ್ಲಿ ಭೀಷ್ಮನನ್ನು ಅರ್ಜುನನು ಸಂಹರಿಸಲಾರನೆಂದರೆ ನಾನೇ ಕೊಂದು, ಸ್ವರ್ಗವನ್ನು ಸೇರಿಸುವೆನು. ಮಹೇಂದ್ರನಂತೆ ವಿಕ್ರಮಿಸಿ, ನಿನ್ನ ಶತ್ರುಗಳನ್ನೆಲ್ಲ ಒಂದೇ ಕ್ಷಣದಲ್ಲಿ ನಾಶಮಾಡುವೆನು. ಕೇಳು ! ಧರ್ಮ ! ನಿನ್ನ ಶತ್ರುಗಳೆನ್ನ ಶತ್ರುಗಳು. ನಿನ್ನ ಮಿತ್ರರೆನ್ನ ಮಿತ್ರರು. ನಿನ್ನ ಒಬ್ಬ ತಮ್ಮನು ನನ್ನ ಅತ್ಯಂತ ಭಕ್ತನು. ಮತ್ತೋರ್ವನು ನನ್ನ ಮಿತ್ರನು ಬಂಧುವೂ ಆಗಿರುವನು. ನಿಮಗಾಗಿ ನನ್ನ ಶರೀರವನ್ನೂ ನಾನು ಲೆಕ್ಕಿಸೆನು. ಉಪಪ್ಲಾವ್ಯದಲ್ಲಿ ಆಡಿದ ಮಾತಿನಂತೆ ನಡೆಯುತ್ತಿರುವನೆಂದರೆ ಭೀಮನೊಬ್ಬನೇ. ಅರ್ಜುನನೇಕೋ ಮೃದು ಯುದ್ಧವನ್ನು ಮಾಡುತ್ತಿರುವನು. ಬೇಕೆಂದರೆ ಪುರಂದರನನ್ನೂ ಜಯಿಸಬಲ್ಲ ಪಾರ್ಥನಿಗೆ ಭೀಷ್ಮನು ಅಜೇಯನಲ್ಲ.' ಆ ಮಾತನ್ನಾಲಿಸಿ ಧರ್ಮರಾಜನು 'ಶ್ರೀಕೃಷ್ಣ! ನಿಜ ನೀ ನುಡಿಯುವುದು. ನನ್ನ ಹಿತಂಕರನಾಗಿ ನೀನಿರುವಾಗ ಸುರಾಸುರ ಜಯವೆನಗೆ ಅಸದಳವಲ್ಲ. ಆದರೆ ನಿನ್ನ ಕೈಲಿ ಆಯುಧವನ್ನು ಹಿಡಿಸಿ, ನಿನ್ನ ಮಾತನ್ನು ಸುಳ್ಳಾಗಿಸುವಂತಹ ಹೇಡಿಗಳಲ್ಲ ನಾವು. ನಿನ್ನ ದಯವಿರಲಿ ಸಾಕು. ಹಿಂದೆ ನೋಡಿದಾಗ ಪಿತಾಮಹನು 'ಮತ್ತೆ ಬಂದು ಕಾಣು ! ನನ್ನನ್ನು ಜಯಿಸುವ ಉಪಾಯವನ್ನು ಸೂಚಿಸುವೆ'ನೆಂದಿದ್ದನು. ಈಗ ಆ ಕಾಲವು ಬಂದಿದೆ. ದೇವವ್ರತನನ್ನು ಕಾಣಲು ಹೋಗುವೆನು. ಆತನು ನಮಗೆ ಜಯೋಪಾಯವನ್ನು ಹೇಳಿಕೊಡುವನು. ಬಾಲಕರಿದ್ದಾಗ ಬೆಳೆಸಿ, ತಂದೆಯಿಲ್ಲದ ಕಂದರೆಂದು ಸಲಹಿದ ಪಿತಾಮಹನನ್ನು ಆತನ ಅನುಜ್ಞೆ ಪಡೆಯದೆ ರಣದಲ್ಲೇ ಆಗಲಿ ಕೆಡಹಿದೆನೆಂದರೆ, ಅದಕ್ಕಿಂತ ಪಾಪವಿಲ್ಲ' ಎಂದು ಮೇಲಕ್ಕೆದ್ದು ನಿರಾಯುಧನಾಗಿ ಭೀಷ್ಮ ಶಿಬಿರದ ಕಡೆ ನಡೆದನು. ಶ್ರೀಕೃಷ್ಣ ಭೀಮಾದಿಗಳೆಲ್ಲರೂ ಆತನ ಹಿಂದೆ ಬಂದರು.

ಪಾಂಡವರು ತಾತನಿಗೆ ಕಾಲು ಮುಟ್ಟಿ ನಮಸ್ಕರಿಸಿದರು. ಆ ಮಹಾವೀರನು ಅವರನ್ನೂ, ಕರೆತಂದ ಗೋವಿಂದನನ್ನೂ ಕಂಡು, ಆನಂದತುಂದಿಲಹೃದಯಾರವಿಂದನಾದನು. ಭೀಷ್ಮನು 'ಶ್ರೀಕೃಷ್ಣ! ನಿನಗೆ ಸ್ವಾಗತ! ಧರ್ಮರಾಜ ಭೀಮಸೇನ ಪಾರ್ಥ ನಕುಲ ಸಹದೇವರೆ! ನಿಮಗೆ ಸ್ವಾಗತ! ಏಕೆ ಬಂದಿರುವಿರಿ? ಏನಾಗಬೇಕಾಗಿದೆ ನನ್ನಿಂದ ಹೇಳಿ! ಮಾಡಿಕೊಡುವೆನು ಆ ಕಾರ್ಯವನ್ನು!' ಅಂದನು. ಧರ್ಮರಾಜನು ಪ್ರೀತಿಯಿಂದ ಕಂಬನಿಗರೆದು, 'ತಾತ! ನಮ್ಮ ಜಯವನ್ನು ನೀನು ನಿತ್ಯವೂ ಪ್ರಾರ್ಥಿಸುತ್ತಿರುವೆ! ಆದರೆ ನಿನ್ನನ್ನು ಜಯಿಸದೆ ನಮಗೆ ಜಯವಿಲ್ಲ. ನೀನೋ ಸಮರದಲ್ಲಿ ಅಪರಯಮನಂತೆ ಕಾದುತ್ತಿರುವೆ! ನಿನ್ನ ಧನುರ್ಮುಕ್ತ ಬಾಣವು ಒಂದಾದರೂ ವ್ಯರ್ಥವಾಗಿಲ್ಲ. ನಮ್ಮ ಸೇನೆಯ ಅರ್ಧಭಾಗ ನಿನ್ನ ಬಾಣಾಗ್ನಿಗೆ ತುತ್ತಾಗಿದೆ. ಇಂತಿರಲು ಸುರಾಸುರದುರ್ಜಯನಾದ ನಿನ್ನನ್ನು ನಾವು ಗೆಲ್ಲುವ ಉಪಾಯವನ್ನು ನೀನಾಗಿ ನಮಗೆ ತಿಳಿಸಿಕೊಡು! ಕ್ರೂರ ಕ್ಷತ್ರಿಯ ಧರ್ಮದ ನಿಷ್ಠುರ ವಚನಗಳನ್ನು ಕ್ಷಮಿಸು!' ಎಂದು ಬೇಡಿದನು.

ಭೀಷ್ಮನಿಂತೆಂದನು: 'ಅಹುದು ಪಾಂಡವ! ನನ್ನ ಜೀವವಿರುವವರೆಗೂ ನಿನಗೆ ಜಯವಿಲ್ಲ. ನನ್ನ ಕೈಲಿ ಧನುರ್ಬಾಣಗಳಿರುವವರೆಗೂ ನನ್ನನ್ನು ಯಾರೂ ಜಯಿಸಲಾರರು. ಇಂದು ನಿನಗೆ ಅನುಜ್ಞೆ ಕೊಟ್ಟಿರುವೆನು. ನೀವು ನನ್ನನ್ನು ಯಥೇಚ್ಛವಾಗಿ ಹೊಡೆದು ಕೆಡಹಬಹುದು. ನಾನು ನ್ಯಸ್ತಶಸ್ತ್ರನಾಗುವಂತೆ ಮಾಡಲು ಒಂದೇ ಉಪಾಯವಿದೆ. ಶಿಖಂಡಿಯನ್ನು ಮುಂದೂಡಿ, ಸ್ತ್ರೀಪೂರ್ವನಾದ ಅವನನ್ನು ನೋಡಿ ನಾನು ಸುಮ್ಮನಿರುವಾಗ, ಅರ್ಜುನನು ನಿಶಿತ ಬಾಣಗಳಿಂದ ಹೊಡೆದು ನನ್ನನ್ನು ಕೆಡಹಲಿ! ನಾನು ನಿರಾಯುಧನೊಡನೆ, ಪತಿತನೊಡನೆ, ಸ್ತ್ರೀ ಪೂರ್ವ್ವನೊಡನೆ, ಸ್ತ್ರೀಸಮನಾಮನೊಡನೆ, ಶರಣಾಗತನೊಡನೆ ಕಾದೆನು ತಿಳಿ! ಏಕಪುತ್ರನನ್ನು ನಾನು ಕೊಲ್ಲದಿರುವೆನು. ಅಮಂಗಲ ಧ್ವಜನೊಡನೆ ನಾನು ಕಡಿದಾಡೆನು. ಸುಮ್ಮನಿದ್ದಾಗಲೂ ನನ್ನನ್ನು ಶ್ರೀಕೃಷ್ಣ ಭೀಮಾರ್ಜುನರ ಹೊರತಿನ್ನಾವವೀರರೂ ಹೊಡೆದು ಕೆಡಹಲಾರರು. ಹೋಗಿನ್ನು! ನಿನಗೆ ರಣದಲ್ಲಿ ವಿಜಯವಾಗಲಿ!'

ಆ ಮಾತನ್ನಾಲಿಸಿ ಪಾಂಡವರು ಆತನಿಗೆ ನಮಿಸಿ, ತಮ್ಮ ಶಿಬಿರವನ್ನು ಸೇರಿದರು. ಆಗ ಅರ್ಜುನನು ಕೃಷ್ಣನಿಗಿಂತೆಂದನು: 'ಶ್ರೀಕೃಷ್ಣ! ಎಂತಹ ಅಕಾರ್ಯವನ್ನು ಮಾಡಬೇಕಾಯಿತು! ಬಾಲ್ಯದಲ್ಲಿಯೂ ಯಾರ ತೊಡೆಯಲ್ಲಿ ಮಲಗಿದೆವೋ, ಧೂಳಿಧೂಸರ ಗಾತ್ರದಿಂದ ಯಾವ ಪವಿತ್ರನನ್ನು ಮಲಿನ ಮಾಡಿದೆವೋ, ಯಾವ ಪಿತಾಮಹನನ್ನು ಪ್ರೀತಿಯಿಂದ ಅಪ್ಪ! ಅಪ್ಪ! ಎಂದು ಮುದ್ದಾಗಿ ಕೂಗಿ ಆನಂದಿಸಿದೆವೋ, 'ಅಪ್ಪನಲ್ಲವೋ ನಿಮ್ಮಪ್ಪನ ಅಪ್ಪನು ನಾನೆಂದು ನಮ್ಮನ್ನು ಲಾಲಿಸಿದನಾವಮಹಾನುಭಾವನೋ, ಅಂತಹ ತಾತಪಾದನನ್ನು ಇಂದು ಹಾಳು ರಾಜ್ಯಕ್ಕಾಗಿ ಕೊಲ್ಲಬೇಕಾಯಿತಲ್ಲ! ಅದೂ ನನ್ನ ಕೈಯಿಂದ ಆ ಪಾಪ ಕಾರ್ಯ

ನಡೆಯಬೇಕಾಯಿತಲ್ಲ! ಸ್ವಾಮೀ ! ಜಯವಾಗಲಿ-ಅಪಜಯವೇ ಆಗಲಿ ! ನಾನಂತೂ ಆ ಮಹಾತ್ಮನನ್ನು ಹೊಡೆಯಲಾರೆನು' ಎಂದನು. ಶ್ರೀಕೃಷ್ಣನು 'ಅರ್ಜುನ ! ನಿನ್ನ ಮಾತು ಸರಿಯಲ್ಲ. ಭೀಷ್ಮನನ್ನು ವಧಿಸುವ ಪ್ರತಿಜ್ಞೆಯನ್ನು ಮಾಡಿ, ಈಗ ಹಿಂಜರಿಯುವುದು ನಿನ್ನಂತಹ ವೀರನಿಗೆ ಉಚಿತವಲ್ಲ. ಯುದ್ಧ ದುರ್ಮದನಾಗಿರುವ ಭೀಷ್ಮನನ್ನು ಕೊಂದು ಕೀರ್ತಿಯನ್ನು ಗಳಿಸು ! ಅವನನ್ನು ಕೊಲ್ಲದೆ ಜಯವಿಲ್ಲ - ನಿನ್ನ ಹೊರತು ಅವನನ್ನು ಕೊಲ್ಲುವವರಿಲ್ಲ. ಇದು ವಿಧಿವಿಹಿತವೆಂದು ತಿಳಿ ! ಹಿಂದೆ ಬೃಹಸ್ಪತಿಯು ಇಂದ್ರನಿಗೆ ಯುದ್ಧ ಧರ್ಮಗಳನ್ನು ನಿರೂಪಿಸುತ್ತಾ 'ಹಿರಿಯನಾದರೂ, ವೃದ್ಧನಾದರೂ ಗುಣವಂತನಾದರೂ, ಆತತಾಯಿಯನ್ನು ಬಿಡದೆ ಕೊಲ್ಲಬೇಕು. ತನ್ನನ್ನು ಕೊಲ್ಲಬರುವವನನ್ನು ಕೊಂದ ಕ್ಷತ್ರ ಧರ್ಮರತನಿಗೆ ಪಾಪವಿಲ್ಲ. ಕ್ಷತ್ರಿಯನು ಕೊಲ್ಲಬೇಕು ದುಷ್ಟರನ್ನು ; ರಕ್ಷಿಸಬೇಕು ಸುಜನರನ್ನು; ಯಜ್ಞದಿಂದ ತೃಪ್ತಿಪಡಿಸಬೇಕು ದೇವತೆಗಳನ್ನು !' ಎಂದನು.

ಅರ್ಜುನನು 'ಶಿಖಂಡಿಯು ಭೀಷ್ಮನಿಧನ ಕಾರಣನೆಂಬರು. ಅವನು ಹೊಡೆದು ಕೆಡಹಲಿ ತಾತನನ್ನು, ನಾನೂ ಹಿಂದೆ ನಿಂತು, ಕಾದಿ ಹೊಡೆದು ಕೆಡಹುವೆನು.' ಎಂದನು. ಅಂತೆಯೇ ನಿಶ್ಚಯಿಸಿ, ಪಾಂಡವರು ಮರುದಿನದ ಯುದ್ಧಕ್ಕೆ ಸನ್ನಾಹ ನಡೆಸಿದರು.

## ೩೪. ದಶಮದಿನ ಯುದ್ಧ - ಭೀಷ್ಮ ವಿಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು :

'ರಾಜನ್! ದಶಮದಿನ ಬೆಳಗಾಯಿತು. ಅಂದು ಅಷ್ಟಮಿ. ಉಭಯ ಸೇನೆಗಳು ಕಲೆತು ಯುದ್ಧವನ್ನಾರಂಭಿಸಿದವು. ಶಿಖಂಡಿಯನ್ನು ಮುಂದೆ ಮಾಡಿ, ಅರ್ಜುನ ಭೀಮಸೇನರು ಎರಡು ಕಡೆ ಬರುತ್ತಿರಲು, ಹಿಂದೆ ದ್ರೌಪದೇಯರು. ಅಶ್ವತ್ಥಾಮರು ಬಂದರು. ಅವರಿಗೆ ಬೆಂಗಾವಲಾಗಿ ಸಾತ್ಯಕಿ ಚೇಕಿತಾನರು ನಡೆದರು. ವಿರಾಟ ದ್ರುಪದರು, ಕೈಕಯರು, ಧೃಷ್ಟಕೇತು, ಪ್ರಮುಖರು ಮಿಕ್ಕ ಸೇನೆಗಳಿಂದ ಕೂಡಿ ವ್ಯೂಹವನ್ನು ಕಾಪಾಡುತ್ತಾ ನಡೆದರು. ಕುರುವೀರರು ಭೀಷ್ಮನನ್ನು ಮುಂದೆ ಮಾಡಿ, ದುರ್ಯೋಧನಾದಿಗಳು ರಕ್ಷಕರಾಗಿ ನಡೆದರು. ಅವರ ಹಿಂದೆ ದ್ರೋಣ ದ್ರೌಣಿ, ಭಗದತ್ತ ಕೃಪ, ಕೃತವರ್ಮರು, ಇನ್ನು ಹಿಂದೆ ಸುದಕ್ಷಿಣ ಮಾಗಧರು, ಸುಶರ್ಮ ಜಯದ್ರಥರು ನಡೆದರು.

ಭೀಷ್ಮನನ್ನು ಶಿಖಂಡಿಯ ಕೈಗೆ ಸಿಗಗೊಡಬಾರದೆಂದು ಕೌರವ ವೀರರು, ಶಿಖಂಡಿಯನ್ನು ಭೀಷ್ಮನ ಮುಂದೆ ನಿಲ್ಲಿಸಬೇಕೆಂದು ಪಾಂಡವ ವೀರರು, ವಿಶ್ವ ಪ್ರಯತ್ನ ಮಾಡಿ ಕಾದಿದರು. ದುಶ್ಶಾಸನನು ಅರ್ಜುನನನ್ನು ತಡೆದು ಕಾದಾಡಿದನು. ಭೀಮಸೇನನು ಶರಗಳಿಂದ ತಾಟಿಸಿ, ಕುರು ವೀರರನ್ನು ಸಂಹರಿಸಿದನು. ಆತನನ್ನು ವಾರಿಸಲಾರದೆ ಕುರುಸೇನೆ ಪರ್ವತವನ್ನು ಢೀಕೊಡುವ ಪ್ರವಾಹದಂತೆ ಹಿಂದಕ್ಕೆ ಸರಿಯಿತು. ಅದನ್ನು

ಕಂಡು ಪಾಂಡವಸೇನೆ ಬೊಬ್ಬಿಡುತ್ತಾ ಕುರುಸೇನೆಯನ್ನು ಮುತ್ತಿ ಧ್ವಂಸ ಮಾಡಿತು. ಜೀವದಾಶೆ ತೊರೆದು ಪಾಂಡವರು ವಿಜೃಂಭಿಸಿ, ಮಹಾರಥರೊಡನೆ ಕಾದಿ, ಅವರನ್ನು ಯಮಸದನಕ್ಕಟ್ಟುತ್ತಿದ್ದರು. ಭೀಷ್ಮನು ಅದನ್ನು ಸಹಿಸದೆ, ಮುನ್ನುಗ್ಗಿ ಪ್ರವರ ಯೋಧರನ್ನು ಹತ್ತು ಸಾವಿರ ವೀರ ರಥಿಕರನ್ನು ಸಂಹರಿಸಿದನು. ಆತನ ಧನುಸ್ಸು ಸದಾ ಮಂಡಲೀಕೃತವಾಗಿ ಬಾಣಾಗ್ನಿಯನ್ನು ಕಾರುತ್ತಿತ್ತು. ಅದನ್ನು ನೋಡಿ, ನಿನ್ನ ಸುತರು ಆಶ್ಚರ್ಯಪಟ್ಟು ತಾತನನ್ನು ಪೊಗಳಿದರು.

ಶಿಖಂಡಿಯು ಕುಪಿತನಾಗಿ ಮೂರು ಬಾಣಗಳನ್ನು ಪಿತಾಮಹನ ಎದೆಯಲ್ಲಿ ನಾಟಿಸಿ, ಸಿಂಹನಾದ ಮಾಡಿದನು. ಆಗ ಭೀಷ್ಮನು ನಗುತ್ತಾ 'ಬೇಕಾದಷ್ಟು ಬಾಣಗಳನ್ನು ಬಿಡು ! ನಿನ್ನಿಂದ ನಾನು ಯುದ್ಧ ಮಾಡುವುದಿಲ್ಲ. ವಿಧಿ ಮಾಡಿದಂತೆ ಶಿಖಂಡಿನಿಯಾಗಿರುವ ನಿನ್ನಿಂದ ನನಗೆ ರಣರಂಗ ಸಂಗಮವಿಲ್ಲ'ಎಂದನು. ಆ ಮಾತಿಗೆ ಶಿಖಂಡಿಯು ಕ್ರೋಧ ತಾಮ್ರಾಕ್ಷನಾದನು. 'ಗೊತ್ತಿದೆ ನನಗೆ ನಿನ್ನ ಪ್ರಭಾವ ! ಕ್ಷತ್ರಿಯ ಕ್ಷಯಂಕರನಾದ ನಿನ್ನ ಯುದ್ಧ ಕೌಶಲವನ್ನು ಇಷ್ಟು ದಿನಗಳಿಂದ ನೋಡುತ್ತಿರುವೆನು. ಪರಶುರಾಮದೇವನಿಂದ ಯುದ್ಧವಾಡಿದ ನಿನ್ನೊಡನೆ ಕಡಿದಾಡಿ-ನಿನ್ನನ್ನು ಸಂಹರಿಸುವೆನು. ಪಾಂಡವರಿಗೆ ಹಿತವನ್ನು ಮಾಡುವೆನು. ಇದು ಸತ್ಯ, ತಿಳಿ !' ಎಂದು ನುಡಿದು ಶಿಖಂಡಿಯು ನತಪರ್ವಗಳಾದ ಐದು ಬಾಣಗಳಿಂದಲೂ ನೋಯಿಸಿದನು. ಇದೇ ಕಾಲವೆಂದು ತಿಳಿದು ಅರ್ಜುನನು ಶಿಖಂಡಿಯನ್ನು ಹುರಿದುಂಬಿಸಿ-ತಾನು ಹಿಂದೆ ರಕ್ಷಕನಾಗಿ ನಡೆದನು. ದ್ರೋಣ, ಗುರುಸುತ, ಕೃಪ, ಭಗದತ್ತ ಸುಯೋಧನ ಚಿತ್ರಸೇನಾದಿ ವೀರರು ಅರ್ಜುನನನ್ನು ತಡೆಯಲು ಅಡ್ಡ ಬಂದು, ಘೋರ ಸಂಗ್ರಾಮ ನಿರತರಾದರು.

ಪಿತಾಮಹನ ರಕ್ಷೆಗೆಂದು ಸಾವಿರಾರು ಅಶ್ವಿಕರು, ಶತಸಾಹಸ್ರಭಟರು ನೂರಾರು ಆನೆಗಳು, ರಥಿಕರು ಬಂದು ಪಾಂಡವರನ್ನು ಸುತ್ತುಗಟ್ಟಿದರು. ಪ್ರತಿಜ್ಞೆಗೆ ಮೀರಿ ಭೀಷ್ಮನು ಅಂದು ಇಪ್ಪತ್ತೈದು ಸಾವಿರ ಶ್ರೇಷ್ಠವೀರರನ್ನು ಸಂಹರಿಸಿ, ಎದುರಿಲ್ಲದೆ ರಣರಂಗದಲ್ಲಿ ವಿಹರಿಸಿದನು. ದ್ರೋಣಾದಿವೀರರು ಪ್ರಚಂಡಸಮರದಲ್ಲಿ ಬಹು ಸಹಸ್ರ ವೀರರನ್ನು ಯಮಪುರಿಗೆ ಕಳಿಸಿದರು. ಅಂತಕನಂತೆ ಅಜೇಯನಾಗಿ ತಿರುಗುವ ಪಿತಾಮಹನನ್ನು ತಡೆಯುವವರಿದ್ದಿಲ್ಲ.

ಅರ್ಜುನನೂ ಅಂದು ಚಂಡಪರಾಕ್ರಮದಿಂದ ವಿಜೃಂಭಿಸಿ, ಕುರುಸೈನಿಕರನ್ನು ಸಂಹರಿಸಿದನು. ಅವನ ಸಿಂಹನಾದ, ಧನುಷ್ಟಂಕಾರ, ಬಾಣಶಬ್ದಗಳೊಡನೆ ಅನೇಕ ಸಾಹಸ್ರ ಭಟರ ತಲೆಗಳು ನೆಲಕ್ಕೆ ಬೀಳುತ್ತಿದ್ದವು. ಭೀಮಸೇನನೂ ಉರಿದೆದ್ದ ಪ್ರಳಯಾಗ್ನಿಯಂತೆ ಕುರುಸೇನಾಕಕ್ಷವನ್ನು ಸುಟ್ಟು ನಾಶಮಾಡಿದನು. ದುರ್ಯೋಧನನು ದೀನನಾಗಿ ಮತ್ತೆ ರೇಗಿಸಲು ಪಿತಾಮಹನು, ಸ್ವಲ್ಪ ಕಾಲ ಸುಮ್ಮನೆ ಆಲೋಚಿಸಿ, ನಿಟ್ಟುಸಿರಿಟ್ಟು 'ದುರ್ಯೋಧನ ! ಕೇಳಿಲ್ಲಿ ! ನನ್ನ ಪ್ರತಿಜ್ಞೆಯಂತೆ ದಿನಕ್ಕೆ ಹತ್ತು ಸಾವಿರ ಕ್ಷತ್ರಿಯ ವೀರರನ್ನು ಸಂಹರಿಸಿ, ನಿನ್ನ ಋಣ ತೀರಿಸಿರುವೆನು. ಇನ್ನೂ ಹೆಚ್ಚೇ ಮಾಡಿರುವೆನೆಂದರೂ ತಪ್ಪಲ್ಲ. ಜೀವದ ಹಂಗು ತೊರೆದು ಕಾದುತ್ತಿರುವೆನು. ಇಂದು ನಾನಾದರೂ ಸಾಯುವೆನು. ಅಥವಾ ಪಾಂಡವರಾದರೂ ನಿಹತರಾಗಬೇಕಾಗುವುದು ತಿಳಿ !'

ಇಂತು ನುಡಿದು ಭೀಷ್ಮನು ಪ್ರಾಣಾಂತಕರವಾದ ಬಾಣಪರಂಪರೆಯನ್ನು ಪ್ರಯೋಗಿಸಿ, ಪಾಂಡವೀಸೇನೆಯನ್ನು ನಾಶಮಾಡತೊಡಗಿದನು. ತನಗಿರುವ ಶಕ್ತಿಯನ್ನೆಲ್ಲ ತೋರಿ, ಆರಲಿರುವ ದೀಪದಂತೆ, ಉರಿದೆದ್ದ ದೇವವ್ರತನನ್ನು ಪಾಂಡವ ವೀರರು ಮುತ್ತಿ ಕಾದಿದರು. ದುರ್ಯೋಧನಾದಿಗಳು ಅವರನ್ನು ವಾರಿಸಿ ಕಡಿದಾಡುತ್ತಿದ್ದರು.

ಅರ್ಜುನನು ಹುರಿದುಂಬಿಸಲು, ಹೆದರದೆ ಶಿಖಂಡಿಯು ಭೀಷ್ಮನನ್ನು ಮುತ್ತಿದನು. ಚಿತ್ರಸೇನನು ಚೇಕಿತಾನನನ್ನು, ಕೃತವರ್ಮನು ಧೃಷ್ಟದ್ಯುಮ್ನನನ್ನು, ಭೂರಿಶ್ರವನು ಭೀಮಸೇನನನ್ನು, ವಿಕರ್ಣನು ನಕುಲನನ್ನು, ಕೃಪನು ಸಹದೇವನನ್ನು, ದುರ್ಮುಖನು ಘಟೋತ್ಕಚನನ್ನು, ದುರ್ಯೋಧನನು ಸಾತ್ಯಕಿಯನ್ನು, ಸುದಕ್ಷಿಣನು ಅಭಿಮನ್ಯುವಿನನ್ನು, ಅಶ್ವತ್ಥಾಮನು ವಿರಾಟದ್ರುಪದರನ್ನು, ದ್ರೋಣನು ಧರ್ಮರಾಜನನ್ನು, ದುಶ್ಶಾಸನು ಶಿಖಂಡಿಪಾರ್ಥರನ್ನು ತಡೆದು ಭೀಷ್ಮನನ್ನು ಮುತ್ತಗೊಡದೆ, ಹಗೆಯಿಂದ, ಹಠದಿಂದ ಕಾದಾಡಿದರು.

ಸೇನಾಪತಿಯಾದ ಧೃಷ್ಟದ್ಯುಮ್ನನು ತನ್ನ ಸೈನಿಕರನ್ನು ಕೈಬೀಸಿ ಕರೆದು 'ಸೈನಿಕರೇ ! ಹೆದರಬೇಡಿ ! ನಮ್ಮ ಅರ್ಜುನನು ಇಂದು ಭೀಷ್ಮನನ್ನು ಕೊಲ್ಲಲು ನಿಶ್ಚಯಿಸಿ, ಅವನೊಡನೆ ಕಾದುವನು. ನೀವೆಲ್ಲರೂ ಒಟ್ಟುಗೂಡಿ, ಹಿಂಜರಿಯದೆ, ಮುನ್ನುಗ್ಗಿ ಬಂದು ನಮಗೆ ಸಹಾಯವಾಗಿ ! ಇಂದ್ರನಿಗೂ ಭಯಪ್ರದನಾದ ಅರ್ಜುನನಿಗೆ ಭೀಷ್ಮನಂತಹ ವೃದ್ಧವೀರನ ಲೆಕ್ಕವೇನು ! ಬನ್ನಿ !' ಎಂದು ಉತ್ಸಾಹ ತುಂಬಿದನು. ಪಾಂಡವಸೇನೆಯು ಕಟ್ಟೆಯೊಡೆದ ಕೆರೆಯಂತೆ, ಘೇ ಎಂದು ಗರ್ಜಿಸಿ ಮೇಲೆರಗಿತು. ಅದನ್ನು ತಡೆದು ದುಶ್ಶಾಸನಾದೀವೀರರು, ಕಡುಸಾಹಸದಿಂದ ಯುದ್ಧವಾಡಿದರು. ದುಶ್ಶಾಸನನು ಅರ್ಜುನನಿಂದ ಭೀಷ್ಮನನ್ನು ಸಂರಕ್ಷಿಸಲೆಣಿಸಿ, ಅರ್ಜುನನನ್ನು ತಡೆದು ಶರವರ್ಷದಲ್ಲಿ ಅವನನ್ನು ಮುಣುಗಿಸಿದನು. ಆಶ್ಚರ್ಯವೆಂದರೆ ಅರ್ಜುನನಂತಹ ವೀರನು ಕೂಡ ದುಶ್ಶಾಸನನ ಶರವರ್ಷವನ್ನು ವಾರಿಸುತ್ತಾ ಭೀಷ್ಮನನ್ನು ಸೇರಲಾರದೆ ಹೋದನು.

ಕಾಂತಿಯಲ್ಲಿ ಚಂದ್ರಾರ್ಕಸದೃಶರು, ಪರಾಕ್ರಮದಲ್ಲಿ ಯಮಶಕ್ರಸಮರು ಎನ್ನುವಂತೆ ಅವರೀರ್ವರು ಪರಸ್ಪರ ವಧಾಕಾಂಕ್ಷಿಗಳಾಗಿ ಕಡಿದಾಡಿದರು. ದುಶ್ಶಾಸನನು ಮೂರು ಬಾಣಗಳಿಂದ ಅರ್ಜುನನನ್ನು ಪೀಡಿಸಿ, ವಾಸುದೇವನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು. ಅರ್ಜುನನು ವಾಸುದೇವನನ್ನು ತಾಟಿಸಿದ ದುಶ್ಶಾಸನನಲ್ಲಿ ಕುಪಿತನಾಗಿ, ನೂರು ಬಾಣಗಳಿಂದ ಅವನ ಕವಚವನ್ನು ಸೀಳಿದನು. ಆ ಬಾಣಗಳು ದುಶ್ಶಾಸನನ ರಕ್ತವನ್ನು ಕುಡಿದು ಬಿದ್ದವು. ಆಗ ದುಶ್ಶಾಸನನು ಮೂರು ಬಾಣಗಳನ್ನು ಅರ್ಜುನನ ಲಲಾಟದಲ್ಲಿ ನಿಲ್ಲಿಸಿದನು. ಮೂರು ಕೋಡುಗಳಿಂದೊಪ್ಪುವ ಮೇರುವಿನಂತೆ ಕಂಗೊಳಿಸುವ ಅರ್ಜುನನು, ಆ ಬಾಣಗಳನ್ನು ಕಿತ್ತೊಗೆದು, ಭಲ್ಲದಿಂದ ದುಶ್ಶಾಸನನ ಧನುವನ್ನು ಮುರಿದು, ಕುದುರೆಗಳನ್ನು ಗಾಯಗೊಳಿಸಿದನು. ದುಶ್ಶಾಸನನು ಬೇರೆ

ಬಿಲ್ಲನ್ನು ತೆಗೆದು ಇಪ್ಪತ್ತೈದು ಬಾಣಗಳಿಂದ ಅರ್ಜುನನನ್ನು ಬಾಹುವೃಕ್ಷಗಳಲ್ಲಿ ಗಾಯಗೊಳಿಸಿದನು. ಮತ್ತೆ ಪಾರ್ಥನು ಕಳಿಸಿದ ಯಮದಂಡಸದೃಶವಾದ ಬಾಣಗಳನ್ನು ಕಡಿದು, ವಿಕ್ರಮಿಸಿದನು. ಅರ್ಜುನನು ಸಲೆರೇಗಿಬಿಟ್ಟ ಸ್ವರ್ಣಪುಂಖಬಾಣಗಳಿಂದ ವಿದ್ಧನಾದ ದುಶ್ಶಾಸನನು, ಪುಷ್ಪಿತ ಕಿಂಶುಕದಂತೆ ರಕ್ತಗಾತ್ರನಾಗಿ, ರಣವನ್ನು ಬಿಟ್ಟು ಭೀಷ್ಮನ ಹಿಂಬದಿ ಸೇರಿ ನಿಂತನು.

ಭೀಷ್ಮನನ್ನು ಮುತ್ತಲು ಬರುವ ಸಾತ್ಯಕಿಯನ್ನು ಅಲಂಬುಷನು ನಿವಾರಿಸಿದನು. ಅವನ ಒಂಬತ್ತು ಬಾಣಗಳನ್ನು ತುಂಡರಿಸಿ ಸಾತ್ಯಕಿಯು ಅವನನ್ನು ಶರವರ್ಷದಿಂದ ಮುಚ್ಚಿದನು. ಅವನ ರಕ್ಷೆಗೆಂದು ಬಂದ ಭಗದತ್ತನು ಸಾತ್ಯಕಿಯ ಧನುವನ್ನು ಮುರಿದು, ಬಿಟ್ಟ ಬಾಣಗಳನ್ನು ಕಡಿದು ಕೆಡಹಿದನು. ಮತ್ತು ಶಕ್ತಿಯನ್ನೆತ್ತಿ ಒಗೆದನು. ಸಾತ್ಯಕಿಯು ಭಗದತ್ತನ ಶಕ್ತಿಯನ್ನು ಕಡಿದು, ಭಗದತ್ತನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು. ಆಗ ದುರ್ಯೋಧನನು ಅವನನ್ನು ತಡೆದು, ತಮ್ಮ ರಥಗಣದ ಮಧ್ಯದಲ್ಲಿ ಬಂದಿರುವ ಯುಯುಧಾನನನ್ನು ಮುತ್ತಿ ಕೊಲ್ಲುವಂತೆ ತನ್ನ ಸೋದರರಿಗೆ ಆಜ್ಞಾಪಿಸಿದನು. ಅಂತೆಯೇ ಬಂದು ಅವರೆಲ್ಲರು ಸಾತ್ಯಕಿಯನ್ನು ಮುತ್ತಲು, ನೋಡಿ ಅಭಿಮನ್ಯುವು ತಡೆದು ನೆರವಾದನು. ಅವನೊಡನೆ ಕಾಂಬೋಜನು ಹೊಡೆದಾಡಲು ಬಂದನು. ಅಭಿಮನ್ಯುವು ಅರವತ್ತುನಾಲ್ಕು ಬಾಣಗಳಿಂದ ಕುರುರಾಜನನ್ನು ಪೀಡಿಸಿ ಕಾಂಬೋಜಸುದಕ್ಷಣರನ್ನು ಐದು ಬಾಣಗಳಿಂದ ತಾಟಿಸಿದನು. ಅಭಿಮನ್ಯು ಕಾಂಬೋಜರು ಕಡಿದಾಡುತ್ತಿರುವಾಗ, ಶಿಖಂಡಿಯು ಮುನ್ನುಗ್ಗಿ ಭೀಷ್ಮನನ್ನು ಸಮೀಪಿಸಲು ಪ್ರಯತ್ನಿಸುತ್ತಿದ್ದನು.

ವಿರಾಟದ್ರುಪದರೂ ಶಿಖಂಡಿಯನ್ನು ಸಮೀಪಿಸಿ ಅವನೊಡಗೂಡಿ, ಪಿತಾಮಹನ ರಥವನ್ನು ಸೇರ ಪೋಗುತ್ತಿದ್ದರು. ಅಶ್ವತ್ಥಾಮನು ಅವರನ್ನು ತಡೆದು, ವಿರಾಟನ ಹತ್ತು ಬಾಣಗಳನ್ನು ಕಡಿದು, ಅವನನ್ನು ಹತ್ತು ಬಾಣಗಳಿಂದ ಹೊಡೆದು ಹಿಮ್ಮೆಟ್ಟಿಸಿದನು. ದ್ರುಪದನು ಹತ್ತು ಬಾಣಗಳಿಂದ ಹೊಡೆದನು; ಅವನ್ನೂ ಕೆಡಹಿ ಗುರುಪುತ್ರನು ಅವನನ್ನೂ ಹತ್ತು ಶರಗಳಿಂದ ಗಾಯಗೊಳಿಸಿ ಹಿಮ್ಮೆಟ್ಟಿಸಿದನು.

ಸಹದೇವನು ಮುನ್ನುಗ್ಗಿ ಬರುವುದನ್ನು ವಾರಿಸಿ, ಕೃಪನು ಎಪ್ಪತ್ತು ಶರಗಳಿಂದ ಹೊಡೆದನು. ಸಹದೇವನು ಆತನ ಚಾಪವನ್ನು ಖಂಡಿಸಿ, ಹತ್ತು ಬಾಣಗಳಿಂದ ಪೀಡಿಸಲು, ಕೃಪನು ಅವನನ್ನು ಮತ್ತೆ ದಶಶರಪೀಡಿತನನ್ನಾಗಿ ಮಾಡಿದನು. ನಕುಲವಿಕರ್ಣರು, ಘಟೋತ್ಕಚ ದುರ್ಮುಖರು, ಧೃಷ್ಟದ್ಯುಮ್ನ ಕೃತವರ್ಮರು, ಭೀಮಸೇನ ಭೂರಿಶ್ರವರು, ಧರ್ಮರಾಜ ದ್ರೋಣಾಚಾರ್ಯರು, ಚೇಕಿತಾನ ಚಿತ್ರಸೇನರು ಹೊಡೆದಾಡಿದರು. ಪ್ರಥಮರು ಭೀಷ್ಮನನ್ನು ಕೊಲ್ಲ ಪೋಗುವ ಅರ್ಜುನ ಶಿಖಂಡಿಗಳಿಗೆ ಸಹಾಯವಾಗಲು ಮುನ್ನುಗ್ಗುವಾಗ, ಅವರನ್ನು ತಡೆಯಲು ದ್ವಿತೀಯರು ಹೆಣಗಾಡುತ್ತಲಿದ್ದರು. ತುಮುಲ ಯುದ್ಧದಲ್ಲಿ ರಣಾಂಗಣವು ಭೀಭತ್ಸವಾಯಿತು.

ಭೀಷ್ಮನ ವಿಕ್ರಮವಿಹಾರವು ಅಶ್ರಾಂತವಾಗಿತ್ತು. ಮೃತ್ಯುದೇವಿಯ ನರ್ತನ ಶಾಲೆಯಂತಾಯಿತು ರಣಭೂಮಿ. ಆನೆಗಳ ತಲೆಗಳು ಮೃದಂಗಗಳಾದವು.

ಕುದುರೆಗಳ ಗಳಗಳು ವೀಣಾಂಡಗಳಾದವು. ಭಟಾಂಗಗಳು ಪಟಹದಂಡಗಳಾದವು. ರಥವು ಪ್ರೇಕ್ಷಕ ಮಂಚಗಳಾದವು. ಭೀಷ್ಮನು ನರ್ತನಶಾಲಾಧಿಪನಂತಿದ್ದನು. ಆತನ ಧನುರ್ವೀಣೆಯಿಂದ ಹೊರಹೊಮ್ಮಿದ ವಿವಿಧ ಬಾಣಗಳೇ ವರ್ಣಗಳು. ಅವು ಹೊಕ್ಕುವರು ತತ್‌ಕ್ಷಣವೇ ಶರೀರಾದಿಗಳನ್ನು ತ್ಯಜಿಸಿ, ಸ್ವರ್ಗಾನಂದಭಾಜನರಾಗುತ್ತಿದ್ದರು. ಅವನನ್ನು ಮುಟ್ಟಲು ಬರುವ ಪಾರ್ಥನ ವಿಕ್ರಮವೂ ಭೀಕರವಾಗಿತ್ತು. ಅದನ್ನು ಕಂಡು ದ್ರೋಣನು ತನ್ನ ಸುತನಿಗಿಂತೆಂದನು:

"ಇಂದು ಇಂದ್ರನಂದನನ ವಿಜೃಂಭಣವನ್ನು ಕಂಡರೆ ಅವನು ಭೀಷ್ಮನನ್ನು ಕೊಲ್ಲದೆ ಹಿಂದಿರುಗನೆಂದು ತೋರುತ್ತಿದೆ. ಗ್ರೀಷ್ಮ ಸೂರ್ಯನಂತೆ ತಾಪಕರನಾಗಿರುವ ಅರ್ಜುನನನ್ನು ತಡೆಯುವದಂತೂ ದುಸ್ಸಾಧ್ಯವಾಗಿದೆ. ಅವನ ಮುಂದೆ ನಿಲ್ಲಲಾರದೆ ಕುರುವೀರರು ಓಡುತ್ತಿರುವರು. ನಾನು ಅವನನ್ನು ಹಿಮ್ಮೆಟ್ಟಿಸಲು ಯತ್ನಿಸಿ ವಿಫಲ ಪ್ರಯತ್ನನಾಗುತ್ತಿರುವೆನು. ಶಕುನಗಳೂ ಕೌರವರಿಗೆ ಅನಿಷ್ಟಸೂಚಕವಾಗಿವೆ. ಕಂಕಗೃಧ್ರಬಲಾಕಗಳು ಅಪಸವ್ಯವಾಗಿ ಕುರುಸೇನಾನಿಗಳ ತಲೆಗಳ ಮೇಲೆ ಹಾರಾಡುತ್ತಿವೆ. ಚಂದ್ರಭಾಸ್ಕರರ ಪರಿವೇಷ ಮಂಡಲಗಳು ಭಯಂಕರವಾಗಿವೆ. ಕೌರವೇಂದ್ರ ನಗರದಲ್ಲಿ ದೇವಗೃಹದ ಮೂರ್ತಿಗಳು ಕಂಪಿಸಿದಂತೆ, ನಕ್ಕಂತೆ, ಅತ್ತಂತೆ ಕಾಣುತ್ತಿವೆ. ನರೇಂದ್ರರ ಮುಖಶರೀರ ಕಾಂತಿಗಳು ಕಳೆಗುಂದಿವೆ. ಪಾಂಚಜನ್ಯ ನಿರ್ಘೋಷದೊಡನೆ ಗಾಂಡೀವ ಟಂಕಾರವು ಯಮರಾಜನ ಭೇರಿಭಾಂಕಾರದಂತೆ ಮೊರಹುತ್ತಿದೆ. ಅರ್ಜುನನು ರುದ್ರಾದಿದೇವ ಪರಿವೃತರಿಂದ ಹೊಸ ಅಸ್ತ್ರಗಳನ್ನು ಸ್ವೀಕರಿಸಿ ಬಂದಿರುವನು. ಅವನಿಗೆ ಸಹಾಯಕನಾಗಿ ಮುಂದೆ ನಿಂತಿರುವ ಶಿಖಂಡಿಯು ಸ್ತ್ರೀಪೂರ್ವನಾದುದರಿಂದ ಅವನೊಡನೆ ಪ್ರತಿ ಯುದ್ಧವನ್ನು ಭೀಷ್ಮನು ಮಾಡದಿರುವನು. ಭೀಮಸೇನನು ಗದಾಪಾಣಿಯಾಗಿ ಕುರುಕುಲನಾಶಕರನಾಗಿ, ಎದುರಿಲ್ಲದೆ ಹೋರಾಡುತ್ತಿರುವನು. ಭೀಮಾರ್ಜುನರು ಸವಾಸವರಾದ ದೇವತೆಗಳಿಗೂ ಅಜೇಯರು. ಬಲದಿಂದ ಮಾತ್ರವಲ್ಲದೆ ಬುದ್ಧಿಯಿಂದ ನಿರಾಯಾಸವಾಗಿ ಹೋರಾಡುವ ಆ ವೀರರನ್ನು ನೋಡುತ್ತಾ ಸುಮ್ಮನಿರಲಾಗದು. ಪುತ್ರ ! ನಾವು ಪರೋಪಜೀವಿಗಳಾದುದರಿಂದ ಪ್ರಾಣಗಳನ್ನು ಬಚ್ಚಿಟ್ಟು ಹೋರಾಡಬಾರದು. ನೀನೂ ಪಾಂಡವರನ್ನು ಜಯಿಸಲು ಹೋರಾಡು ! ನಾನೂ ಯಥಾಶಕ್ತಿ ಕಡಿದಾಡುವೆನು. ವಿಜಯವನ್ನಲ್ಲದಿದ್ದರೂ ವಿಖ್ಯಾತಿಯನ್ನಾದರೂ ಸಂಪಾದಿಸೋಣ ! ಧರ್ಮರಾಜನ ಬ್ರಹ್ಮಣ್ಯತೆ, ತಪಸ್ಸು, ದಮ, ದಾನಗಳೊಟ್ಟಾಗಿ ಭೀಮಾರ್ಜುನರಿಗೆ ಕವಚವಾಗಿರಲು, ಶ್ರೀಕೃಷ್ಣ ಬಲವು ಜಯವನ್ನು ಗಳಿಸಿಕೊಡುತ್ತಿರಲು, ನಾವು ಪ್ರಾಣಾರ್ಪಣವನ್ನು ಹೊರತು ಮತ್ತಿನ್ನೇನನ್ನೂ ಮಾಡಲಾರೆವು. ಅಕ್ಕೋ ! ಅಲ್ಲಿ ಅರ್ಜುನನು ಕುರುಸೇನೆಯನ್ನು ನಾಶಮಾಡುತ್ತಿರುವನು. ನಡೆ ! ಧೃಷ್ಟದ್ಯುಮ್ನನೊಡನೆ ಕಾದಾಡು ! ನಾನು ಧರ್ಮರಾಜನನ್ನು ತಾಕುವೆನು" ಎಂದನು.

ಆಚಾರ್ಯನ ವಚನವನ್ನಾಲಿಸಿ, ಭಗದತ್ತ, ಕೃಪ, ಶಲ್ಯ, ಕೃತವರ್ಮ, ವಿಂದ,

ಅನುವಿಂದ, ಜಯದ್ರಥ, ಚಿತ್ರಸೇನ, ವಿಕರ್ಣ, ದುರ್ಮರ್ಷಣರೆಂಬ ಹತ್ತು ಮಹಾರಥರು ಭೀಮಸೇನನನ್ನು ಮುತ್ತಿ ಯಶಕ್ಕಾಗಿ ಯುದ್ಧವಾಡಿದರು. ಶಲ್ಯನು ಒಂಭತ್ತು ಬಾಣಗಳನ್ನು, ಕೃತವರ್ಮನು ಮೂರು ನಾರಾಚಗಳನ್ನು, ಕೃಪನು ಒಂಬತ್ತು ವಿಶಿಖೆಗಳನ್ನು, ಚಿತ್ರಸೇನ ವಿಕರ್ಣ ಭಗದತ್ತರು ಹತ್ತು ಹತ್ತು ಬಾಣಗಳನ್ನು, ಸೈಂಧವನು ಮೂರನ್ನು, ವಿಂದಾನುವಿಂದರು ಐದೈದು ಶಿಲೀಮುಖಗಳನ್ನು, ದುರ್ಮರ್ಷಣನು ಇಪ್ಪತ್ತು ಭಲ್ಲಗಳನ್ನು ಪ್ರಯೋಗಿಸಿ ಮುತ್ತಲು, ಭೀಮಸೇನನು ಪರ್ವತವು ಮಳೆಯನ್ನಂತೆ ಅವರ ಶರಗಳನ್ನು ನಿರ್ಲಕ್ಷಿಸಿ, ಏಳು ಬಾಣಗಳಿಂದ ಶಲ್ಯನನ್ನು ತಾಡಿಸಿ, ಎಂಟರಿಂದ ಕೃತವರ್ಮನನ್ನು ಪೀಡಿಸಿ, ಭಲ್ಲದಿಂದ ಕೃಪನ ಚಾಪವನ್ನು ಮುರಿದು, ಏಳುಬಾಣಗಳಿಂದ ಹೊಡೆದು, ಸಿಂಹನಾದ ಮಾಡಿದನು. ಮತ್ತು ವಿಂದಾನುವಿಂದರನ್ನು ಮೂರು ಮೂರು ಶರಗಳಿಂದ ಪೀಡಿಸಿ, ದುರ್ಮರ್ಷಣನನ್ನು ಇಪ್ಪತ್ತರಿಂದ ಹಿಂದಕ್ಕೊತ್ತಿ ಚಿತ್ರಸೇನನ ದರ್ಪವನ್ನು ಐದರಿಂದ ಮುರಿದು, ವಿಕರ್ಣನ ಮೈಯಲ್ಲಿ ಹತ್ತು ಬಾಣಗಳನ್ನು ನಾಟಿಸಿ, ಜಯದ್ರಥನನ್ನು ಐದರಿಂದ ಬಾಧಿಸಿ, ಸಿಂಹದಂತೆ ಗರ್ಜಿಸಿ, ಮತ್ತೆ ಮೂರು ಬಾಣಗಳಿಂದ ಅವನನ್ನೇ ಹೊಡೆದನು. ಬೇರೆ ಧನುಸ್ಸನ್ನು ಧರಿಸಿ ಬಂದ ಕೃಪನ ಹತ್ತು ಬಾಣಗಳನ್ನು ಕತ್ತರಿಸಿ, ಅವನನ್ನು ಬಹುಶರಗಳಿಂದ ಪೀಡಿಸಿದನು. ಜಯದ್ರಥನು ಮುಂದೆ ಬರಲು ಭೀಮಸೇನನು ಅವನ ಧನುವನ್ನು ಮುರಿದು, ಮೂರು ಶರಗಳಿಂದ ಅವನ ಸೂತನನ್ನು ಪ್ರೇತಪತಿಲೋಕಕ್ಕಟ್ಟಿ ಸೈಂಧವನ ಭಲ್ಲಗಳನ್ನು ತುಂಡರಿಸಿದನು. ಸೈಂಧವನು ಭೀತನಾಗಿ ಚಿತ್ರಸೇನನ ರಥವನ್ನು ಏರಿ ಕುಳಿತನು. ಭೀಮಸೇನನ ವೀರವಿಹಾರವು ಅತಿಮಾನುಷವಾಗಿತ್ತು.

ಶಲ್ಯನು ತೀಕ್ಷ್ಣಬಾಣಗಳನ್ನು ಬಿಟ್ಟು ಭೀಮನನ್ನು ತಡೆಗಟ್ಟಲು, ಮತ್ತೆ ಹತ್ತು ರಥಿಕರೂ ಬಂದು ಅವನನ್ನು ಮುತ್ತಿ ಶರವರ್ಷದಲ್ಲಿ ಭೀಮರಥವನ್ನು ಮುಚ್ಚಿದರು. ಅವರೆಲ್ಲರಲ್ಲಿಯೂ ಐದೈದು ಬಾಣಗಳನ್ನು ನಾಟಿಸಿ, ಶಲ್ಯನನ್ನು ಎಪ್ಪತ್ತು ವಿಶಿಖಗಳಿಂದ ಮತ್ತೆ ಹತ್ತು ಬಾಣಗಳಿಂದ ಪೀಡಿಸಿ, ಸಿಂಹನಾದ ಮಾಡಿದನು. ವಿಶೋಕನನ್ನು ಭಲ್ಲದಿಂದ ನೋಯಿಸಿದ ಶಲ್ಯನಲ್ಲಿ ಕುಪಿತನಾಗಿ ಭೀಮಸೇನನು ಮೂರು ಬಾಣಗಳನ್ನು ಶಲ್ಯನ ಎದೆಗೆ ಗುರಿಯಿಟ್ಟು ಹೊಡೆದನು. ಹತ್ತು ರಥಿಕರನ್ನೂ ಶರವರ್ಷದಲ್ಲಿ ಮುಳುಗಿಸಿ, ತಲೆಯೆತ್ತದಂತೆ ಮಾಡುವ ಭೀಮನ ಕೋದಂಡ ಪಾಂಡಿತ್ಯವು ಗಾಂಡೀವಿಯನ್ನು ಮರೆಸುವಂತಿತ್ತು. ಕೃಪಾಚಾರ್ಯನೊಡನೆ ಕಾದಿ ಅವನ ಧನುವನ್ನು ಮುರಿದು, ಭೀಮಸೇನನು ಕೃತವರ್ಮನನ್ನು ಫಾಲದಿ ಏಳು ಬಾಣದಿಂದ ಪೀಡಿಸಿ, ಮತ್ತೆ ಶಲ್ಯಾ ವೀರರನ್ನು ಎರಡೆರಡು ಶರಗಳಿಂದ ಹೊಡೆದನು. ಅವರ ಶರವರ್ಷವನ್ನು ತೃಣವರ್ಷದಂತೆ ಕಡೆಗಣಿಸಿ ವೃಕೋದರನು ಭಗದತ್ತನು ಬಿಟ್ಟ ಶಕ್ತಿಯನ್ನು ಸೈಂಧವನ ತೋಮರವನ್ನು ಕೃಪನ ಶತಘ್ನಿಯನ್ನು ಶಲ್ಯ ಶರಶತವನ್ನು ಖಂಡಿಸಿದನು. ಮತ್ತು ಮೂರು ಮೂರು ಬಾಣಗಳಿಂದ ಅವರನ್ನೆಲ್ಲರನ್ನೂ ತಾಡಿಸಿದನು. ಇಂತು ಅಸಹಾಯಶೂರನಾಗಿ ಹತ್ತಾರು ಮಹಾರಥರನ್ನು ಹಿಮ್ಮೆಟ್ಟಿಸುವ ಅಣ್ಣನಿಗೆ ನೆರವಾಗಿ

ಅರ್ಜುನನು ಬಂದನು. ಕಿಚ್ಚಿಗೆ ಗಾಳಿ ಜೋಡಾದಂತೆ ಭೀಮಾರ್ಜುನರು ಮೇಲೇರಿ ಬರುವುವದನ್ನು ನೋಡಿ ಕೌರವ ವೀರರು ಹತಾಶರಾದರು. ಭೀಮಸೇನನ ಬಲವಿದೆ ಎಂದು ಮನಗಂಡು ಪಾರ್ಥನು ಶಿಖಂಡಿಯನ್ನು ಮುಂದಕ್ಕೆ ಸಾಗೆಂದು ಪ್ರೇರಿಸಿದನು. ಭೀಮಸೇನನ ಪ್ರೀತಿಯನ್ನು ಬಯಸಿ, ಅವನೊಡನೆ ಕಾದುತ್ತಿದ್ದ ಹತ್ತು ಮಹಾರಥಿಕರನ್ನು ಬಾಣವರ್ಷದಿಂದ ಕೀಲಾಲಮಯಗಾತ್ರರನ್ನು ಮಾಡಿದನು.

ದುರ್ಯೋಧನನು ಸುಶರ್ಮನನ್ನು ಪ್ರೇರಿಸಲು, ಅವನು ಸಾವಿರಾರು ರಥಿಕರೊಡನೆ ಬಂದು ಅರ್ಜುನನನ್ನು ತಾಕಿ ಘೋರವಾಗಿ ಹೋರಾಡಿದನು. ಅರ್ಜುನನು ಶಲ್ಯನನ್ನು ಬಾಣವರ್ಷದಿಂದ ತಡೆದು, ಸುಶರ್ಮನನ್ನು ಮೂರು ಬಾಣಗಳಿಂದಲು, ಕೃಪನನ್ನು ಮೂರರಿಂದಲು, ಮಿಕ್ಕವರನ್ನೂ ಮೂರು ಮೂರು ಶರಗಳಿಂದಲು ಪೀಡಿಸಿದನು. ಜಯದ್ರಥನು ಚಿತ್ರಸೇನರಥದಲ್ಲಿ ಕೂತು ಅರ್ಜುನನನ್ನು ಮೂರು ಶರಗಳಿಂದ ತಾಟಿಸಿ, ಭೀಮಸೇನನನ್ನೂ ಮೂರರಿಂದ ಪೀಡಿಸಿದನು. ಭೀಮಾರ್ಜುನರು ಶತ್ರುಮಹಾರಥರ ಚಿತ್ರಬಾಣಗಳನ್ನು ಖಂಡಿಸಿ, ಧನುಸ್ಸುಗಳನ್ನು ಮುರಿದು, ಅವರ ಸೇನೆಯನ್ನು ನಾಶಪಡಿಸಿದರು. ಸಾವಿರಾರು ವೀರರ ತಲೆಗಳುದುರಿ ಬಿದ್ದವು. ರಥಗಳು ಭಗ್ನವಾದವು. ಗಜಗಳೂ ಗಜಾರೋಹರೂ ಸತ್ತು ಬಿದ್ದ ಪರ್ವತಗಳಂತೆ ಕಂಡರು. ಸಾದಿಗಳು ರಥಿಕರು ಹತರಾಗಿ ಯಮರಂಗಮಂಡಪದ ಅಲಂಕಾರಪ್ರತಿಮೆಗಳಾದರು. ಭೀಮಾರ್ಜುನರ ದಾಳಿಗೆ ನಿಲ್ಲಲಾರದೆ ಸೈನಿಕರು ಪಲಾಯನ ಸೂಕ್ತಗಳನ್ನು ಪಠಿಸಿದರು.

ಅರ್ಜುನನು ಶಲ್ಯನ ಚಾಪವನ್ನು ಖಂಡಿಸಿ, ಅಶ್ವಗಳನ್ನು ಕೆಡಹಿ, ಅವನಿಗೆ ನೆರವಾಗಲು ಬಂದ ಆಚಾರ್ಯನೊಡನೆ ಕಾದಿದನು. ಭೀಮಸೇನನು ಜಯತ್ಸೇನನ ಸೂತನನ್ನು ಕೆಡಹಲು, ಅವನ ಕುದುರೆಗಳು ಹೆದರಿ ಓಡತೊಡಗಿದವು. ಆಗ ದ್ರೋಣನು ಭೀಭತ್ಸುವಿನನ್ನು ಬಿಟ್ಟು ಭೀಮನೊಡನೆ ಕಾದಿದನು. ಆಚಾರ್ಯನ ಐವತ್ತಾರು ಬಾಣಗಳನ್ನು ತುಂಡರಿಸಿ ಭೀಮಸೇನನು ಆಚಾರ್ಯನೆಂಬ ಗೌರವದಿಂದ ಐದೇ ಐದು ಬಾಣದಿಂದ ಹೊಡೆದನು. ಆಗ ಆಚಾರ್ಯನು ಭೀಮನನ್ನು ಬಿಟ್ಟು ಧರ್ಮರಾಜನನ್ನೆದುರಿಸಿದನು. ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಅರ್ಜುನನಿದ್ದಲ್ಲಿಗೆ ಹೋಗದಂತೆ ತಡೆದನು. ಬಾಯ್ತೆರೆದು ಬರುವ ಮೃತ್ಯುದೇವಿಯಂತೆ ಪಾಂಡವ ಸೈನಿಕರನ್ನು ಕೊಲ್ಲುತ್ತಿರುವ ಭೀಷ್ಮನನ್ನು ತಡೆದು ನಿಲ್ಲಿಸಿ, ಶಿಖಂಡಿಯು ಭಯವಿಲ್ಲದೆ ಬಾಣವರ್ಷವನ್ನು ಸುರಿಸಿದನು.

ಧೃಷ್ಟದ್ಯುಮ್ನನು ಅಶ್ವತ್ಥಾಮನನ್ನು ಬಿಟ್ಟು ಮತ್ತೆ ಪ್ರತಿಬಂಧಿಸುವ ಸೈಂಧವನನ್ನು ತಾಕಿ, ಬಹುಕಾಲ ಹೋರಾಡಿದನು. ಸಾತ್ಯಕಿಯು ಭಗದತ್ತಶಕುನಿಗಳನ್ನು ವಿರಥರನ್ನಾಗಿಸಿ, ಶರವೇಗದಿಂದ ಅರ್ಜುನನನ್ನು ಸಮೀಪಿಸುತ್ತಿದ್ದನು. ಅಶ್ವತ್ಥಾಮನು ಪಾಂಚಾಲಸೇನೆಯನ್ನು ಮುತ್ತಿ ಧೃಷ್ಟದ್ಯುಮ್ನ ವೀರಸೇನೆಯನ್ನು ನಾಶಪಡಿಸಿದನು. ಆಚಾರ್ಯ ದ್ರೋಣನನ್ನು ತಪ್ಪಿಸಿ ಧರ್ಮರಾಜನೂ ಅರ್ಜುನನನ್ನು ಸಮೀಪಿಸುತ್ತಿದ್ದನು.

ಭೀಮಸೇನನು ಅರ್ಜುನನಿಗೆ ಬೆಂಗಾವಲಾಗಿ ನಿಂತು ಹುರಿದುಂಬಿಸುತ್ತಿದ್ದನು. ಶ್ರೀಕೃಷ್ಣನು ಅರ್ಜುನನಿಗೆ ಇದೇ ಸಮಯವೆಂದು ಸೂಚಿಸಿದನು.

ಇಂತು ಮುತ್ತಿ ಬರುವ ಪಾಂಡವೀರರ ಧಾಟಿಯನ್ನು ನಿಲ್ಲಿಸಿ, ತಾತನನ್ನುಳಿಸಲು ನಿಶ್ಚಯಿಸಿ, ದುರ್ಯೋಧನಾಧಿ ಕುರುವೀರರು ಮುನುಗ್ಗುತ್ತಿರುವ ಪಾಂಡವ ಯೋಧರನ್ನು ತಡೆಯುತ್ತಿದ್ದರು. ಭೀಷ್ಮನು ಅಂದು ಇಪ್ಪತ್ತೈದು ಸಾವಿರ ವೀರರನ್ನು ಕೊಂದಿದ್ದನು. ಮಾಡಿದ ಹಿಂಸೆಯಿಂದ ನಿರ್ವಿಣ್ಣನಾದ ಭೀಷ್ಮನು ಬೇಸರ ಹೊಂದಿ, ಸಾಯಲು ನಿಶ್ಚಯಿಸಿದನು. ಪಾಂಡವ ಮಧ್ಯಮನಿಂದಲೇ ಶರೀರಪಾತವನ್ನು ಬಯಸಿ, ಸ್ವಚ್ಛಂದ ಮರಣನಾದ ದೇವವ್ರತನು, ಹತ್ತಿರದಲ್ಲಿ ಬಂದಿದ್ದ ಧರ್ಮರಾಜನನ್ನು ಕಂಡು, 'ಧರ್ಮ! ಕೇಳೆನ್ನ ಮಾತನ್ನು! ನನಗೆ ಬದುಕಬೇಕೆಂಬ ಆಶೆ ಅಳಿಸಿದೆ. ಪ್ರಾಣಿವಧವನ್ನು ಮಾಡಿ ನಿರ್ವಿಣ್ಣನಾಗಿರುವೆನು. ಪಾರ್ಥನು ನನ್ನ ವಧೆಗೆ ಯತ್ನಿಸಲಿ! ನನಗೆ ಈಗ ಮರಣವು ಬೇಕಾಗಿದೆ! ಉಪಾಯವನ್ನು ಸೂಚಿಸಿರುವೆನಲ್ಲವೇ ? ' ಎಂದು ನುಡಿದನು. ಆತನ ಮತವನ್ನರಿತು ಪಾಂಡವ ವೀರರು ತಮ್ಮ ಸೇನೆಗೆ ಧೈರ್ಯವನ್ನು ತುಂಬಿ, ಮುನ್ನುಗ್ಗಿ ಬಂದರು.

## ೩೫. ಭೀಷ್ಮ ಶರಶಯನ

ಸಂಜಯನು ನಿರೂಪಿಸಿದನು:

'ಶಿಖಂಡಿಯನ್ನು ಮುಂದಿರಿಸಿ, ಭೀಷ್ಮನನ್ನು ಮುತ್ತಿ ಕೆಡಹಲು ಹವಣಿಸುವ ಪಾಂಡವ ಯೋಧವರರನ್ನು ಕೌರವ ವೀರರು ತಡೆದರು. ಸಾತ್ಯಕಿಯನ್ನು ಅಶ್ವತ್ಥಾಮನು, ಧೃಷ್ಟಕೇತುವನ್ನು ದುರ್ಯೋಧನನು, ವಿರಾಟನನ್ನು ಜಯದ್ರಥನು, ಧರ್ಮರಾಜನನ್ನು ಶಲ್ಯನು, ಭೀಮಸೇನನನ್ನು ಗಜಸೈನ್ಯಯುತನಾದ ಭಗದತ್ತನು, ಅಭಿಮನ್ಯುವನ್ನು ಬೃಹದ್ಬಲನು ನಿವಾರಿಸಿ, ಅವಾರಿತ ಬಾಣ ಪರಂಪರೆಯನ್ನು ಪ್ರಯೋಗಿಸಿದರು.

ಸೈನಿಕರ ಧಾವನದಿಂದ ಭೂಮಿ ಕಂಪಿಸಿತು. ಸೈನ್ಯ ಸೈನ್ಯಗಳು ಕಲೆತಾಗ ಸಾಗರಗಳೆರಡು ಕಲೆತಂತಾಯಿತು. ಶಂಖದುಂದುಭಿ ಘೋಷವು ಆಕಾಶವನ್ನು ಮುಟ್ಟಿತು. ಭೀಷ್ಮನ ನಿಮಿತ್ತವಾಗಿ ಅಂದು ಉಭಯ ಸೈನಿಕರು ಪ್ರಾಣವನ್ನಿಟ್ಟು ಕಾದಿದರು.

ಅಭಿಮನ್ಯುವು ಬೃಹದ್ಬಲನನ್ನು ಸೋಲಿಸಿ ನಿನ್ನ ಮಗನನ್ನು ಸಮೀಪಿಸಿದನು. ದುರ್ಯೋಧನನು ಧೃಷ್ಟಕೇತುವನ್ನು ಸೋಲಿಸಿ, ಅಭಿಮನ್ಯುವನ್ನು ಮೂವತ್ತು ಬಾಣಗಳಿಂದ ಎದೆಗೆ ಹೊಡೆದು, ಮತ್ತು ಶಕ್ತಿಯನ್ನು ಒಗೆದನು. ಅಭಿಮನ್ಯುವು ಅವನ ಶಕ್ತಿಯನ್ನು ಖಂಡಿಸಿ, ಹತ್ತು ಬಾಣಗಳನ್ನು ತಾಟಿಸಿದನು. ಸಾತ್ಯಕಿಯು ಅಶ್ವತ್ಥಾಮನ ಒಂಭತ್ತು ಬಾಣಗಳನ್ನು ಖಂಡಿಸಿ, ಬಿಟ್ಟ ಮೂವತ್ತು ಬಾಣಗಳು ಗುರುಪುತ್ರನ ಬಾಹುವೃಕ್ಷಗಳಿಗೆ ತಾಗಿದವು. ಪೌರವ ಧೃಷ್ಟಕೇತುಗಳು ಪರಸ್ಪರ ಧನುಸ್ಸುಗಳನ್ನು ಮುರಿದು, ಕುದುರೆಗಳನ್ನು ಕೆಡಹಿ, ಖಡ್ಗಯುದ್ಧಕ್ಕಿಳಿದರು. ಅವರು

ಶ್ರಾಂತರಾದುದನ್ನು ಕಂಡು, ಜಯತ್ಸೇನನು ಪೌರವನನ್ನೂ ಸಹದೇವನು ಧೃಷ್ಟಕೇತುವಿನನ್ನೂ ತಂತಮ್ಮ ರಥಗಳಲ್ಲಿ ಕೂಡಿಸಿಕೊಂಡು ಹೋದರು. ಅಭಿಮನ್ಯುವು ಬೃಹದ್ಬಲನನ್ನು ಸೇರಿ, ಇಪ್ಪತ್ತು ಶರಗಳಿಂದ ಹೊಡೆದು, ಧನುಸ್ಸನ್ನು ಕಡಿದು, ಅವನನ್ನು ಓಡಿಸಿದನು. ಭೀಮಸೇನನು ಭಗದತ್ತನ ರಥಿಕರನ್ನು ಕೊಂದು, ಅವನ ಗಜಸೈನ್ಯವನ್ನು ಚಿಲ್ಲಾಪಿಲ್ಲಿಯಾಗಿಸಿ ನಾಶಪಡಿಸಿದನು. ಧರ್ಮರಾಜನು ಶಲ್ಯನನ್ನು ಬಾಣವರ್ಷದಿಂದ ವಾರಿಸಿ ಮುಂದೆ ಸಾಗಿದನು. ವಿರಾಟದ್ರುಪದರು ತಮ್ಮನ್ನು ತಡೆದು ಕಾದುವ ಸೈಂಧವನ ಶರವರ್ಷವನ್ನು ಸಹಿಸಿ, ಅವನನ್ನು ಇಪ್ಪತ್ತಿಪ್ಪತ್ತು ಬಾಣಗಳಿಂದ ಪೀಡಿಸಿದರು. ದ್ರೋಣನು ಧೃಷ್ಟದ್ಯುಮ್ನನೊಡನೆ ಕಾದಿ, ಅವನ ಗದೆಯನ್ನು ಚೂರಾಗಿಸಿ, ಶಕ್ತಿಯನ್ನೊಗೆಯಲು ಅದನ್ನೂ ಖಂಡಿಸಿ, ಇಪ್ಪತ್ತು ಬಾಣಗಳನ್ನವನ ಶರೀರದಲ್ಲಿ ತಾಗಿಸಿದನು.

ಶಿಖಂಡಿಯನ್ನು ಭೀಷ್ಮನ ರಥದ ಮುಂದೆ ನಿಲ್ಲಿಸಲು ಸಾಹಸಿಸುವ ಅರ್ಜುನನು ಭಗದತ್ತ ದುರ್ಯೋಧನಾದಿ ವೀರರನ್ನು ವಿರಥರನ್ನಾಗಿಸಿ, ಅಡ್ಡ ಬರುವ ವೀರರನ್ನು ಯಮದರ್ಶನ ಮಾಡಿರೆಂದು ಕಳಿಸುತ್ತಾ ಮುನ್ನುಗ್ಗಿ, ದೇವವ್ರತನ ರಥವನ್ನು ಸಮೀಪಿಸಿದನು. ಶಿಖಂಡಿ ! ತ್ವರೆ ಮಾಡು ! ಹೊಡಿಬಿಡು ನಿಶಿತಬಾಣಗಳನ್ನು ! ಕೊಲ್ಲು ಭೀಷ್ಮನನ್ನು! ವೀರ ! ನೀನದಕ್ಕಾಗಿ ಹುಟ್ಟಿರುವೆ ತಿಳಿ ! ನಿನ್ನನ್ನು ಬಿಟ್ಟರೆ ದೇವವ್ರತನನ್ನು ಕೆಡಹುವ ವೀರರಿನ್ನಾರೂ ಇಲ್ಲ 'ಎಂದು ಹುರಿದುಂಬಿಸುವ ಅರ್ಜುನನ ಮಾತಿನಿಂದ ರೇಗಿ ಶಿಖಂಡಿಯು ಹತ್ತುಬಾಣಗಳನ್ನು ಭೀಷ್ಮನ ಎದೆಗೆ ತಾಗಿಸಿದನು. ಅವನು ಸ್ತ್ರೀಪೂರ್ವನೆಂದು ತಿಳಿದ ದೇವವ್ರತನು ಪ್ರತಿಯುದ್ಧವನ್ನು ಮಾಡದೆ, ಅವನ ಬಾಣಗಳನ್ನು ತುಚ್ಛೀಕರಿಸಿ, ಬೇರೆ ಯೋಧರೊಡನೆ ಕಾದುತ್ತಿದ್ದನು. ಆ ಸಮಯವನ್ನರಿತು ಅರ್ಜುನನು ಭೀಷ್ಮನನ್ನು ಕೆಡಹಲೆಣಿಸಿ, ತೀಕ್ಷ್ಣ ಬಾಣಗಳನ್ನು ಪ್ರಯೋಗಿಸಿದನು. ಅವನ ಬಾಣಗಳು ದುಶ್ಶಾಸನನಿಂದ ಕಡಿಯಲ್ಪಟ್ಟು ಕೆಳಗುರುಳುತ್ತಿದ್ದವು. ಅರ್ಜುನನು ಸಿಟ್ಟಾಗಿ ದುಶ್ಶಾಸನನ ಧನುವನ್ನು ಮುರಿದು, ಅಶ್ವಗಳನ್ನು ಕೆಡಹಿದನು. ಅವನು ಭೀಷ್ಮನ ರಥದ ಹಿಂದೆ ಅಡಗಿದನು. ಆಗ ಅರ್ಜುನನ ಪ್ರೇರಣೆಯಂತೆ ಶಿಖಂಡಿಯು ಮತ್ತೆ ಮತ್ತೆ ವಿಶಿಖವರ್ಷವನ್ನು ಸುರಿಸಿ, ಭೀಷ್ಮನನ್ನು ಮುಚ್ಚಿದನು. ಬಿಸಿಲುಗಾಲದಿ ಮೈತಾಕಿದ ಮಳೆಧಾರೆಗಳನ್ನಂತೆ ಭೀಷ್ಮನು ಶಿಖಂಡಿಯ ಬಾಣವರ್ಷವನ್ನು ಲೆಕ್ಕಿಸದಿದ್ದನು. ಹೇಮತಾಲಧ್ವಜವು ಆಕಾಶದಲ್ಲಿ ಉನ್ನತವಾಗಿ ಹಾರಾಡುತ್ತಿರಲು, ಭೀಷ್ಮನ ಹೇಮಧನುರ್ಮುಕ್ತನಾರಾಚಗಳು ರಣರಂಗದಲ್ಲಿ ಹಾರಾಡುತ್ತಿದ್ದವು. ಅವನನ್ನೆದುರಿಸಿ ನಿಂತವರು ಪಾವಕನನ್ನು ಹೊಕ್ಕ ಪತಂಗಗಳಂತೆ ಪಟಪಟ ಉದುರಿ ಬೀಳುತ್ತಿದ್ದರು. ಆ ಮಹಾವೀರನು ತನ್ನನ್ನು ಮುತ್ತಿದ ಸಾತ್ಯಕಿ ದ್ರುಪದ ಧರ್ಮತನಯರನ್ನು ವಿರಥರನ್ನು ಮಾಡಿ, ಪ್ರಳಯಾಗ್ನಿಯಂತೆ ಮೇಲೆರಗಲು, ಅವರು ದೂರ ಸರಿದರು.

ಅರ್ಜುನನೂ ತನ್ನನ್ನು ತಡೆಗಟ್ಟುವ ದುಶ್ಶಾಸನ, ವಿಕರ್ಣ ವಿವಿಂಶತಿಗಳನ್ನು ನಿರ್ಜಿಸಿ, ಮಧ್ಯಾಹ್ನ ಸೂರ್ಯನಂತೆ ಶರಜಾಲದಿಂದ ಶತ್ರುಸೇನೆಯನ್ನು ಶೋಷಿಸಿ,

ಕುರುಸೇನಾಸಂಹಾರವನ್ನು ಮಾಡುತ್ತಾ ಭೀಷ್ಮನನ್ನು ಶಿಖಂಡಿಯ ಹಿಂದೆ ನಿಂತು ಹೊಡೆಯತೊಡಗಿದನು. ಭೀಷ್ಮನನ್ನು ಉಳಿಸಿಕೊಳ್ಳಲು ಬಂದ ಕೌರವಯೋಧರನ್ನು ಪಾಂಡವಯೋಧರು ತಡೆದು ಕಾದಾಡುತ್ತಿದ್ದರು. ಆ ಯೋಧನವು ಭೀಕರವಾಯಿತು. ಭೀಷ್ಮನು ಅಂದು ಶತಾನೀಕನೆಂಬ ವಿರಾಟಸೋದರನನ್ನು ಸಂಹರಿಸಿ, ಸಾವಿರರಾಜರನ್ನು ಯಮವಾಸಕ್ಕೆ ಕಳಿಸಿ, ಮುನ್ನುಗ್ಗುತ್ತಾ ಶಿಖಂಡಿಯನ್ನು ದಾಟಿ ಅರ್ಜುನನನ್ನು ಎದುರಿಸಿ ನಿಂತನು. ಆಗ ಶ್ರೀಕೃಷ್ಣನು 'ಧನಂಜಯ ! ಕೆಡುತ್ತಿದೆ ಕೆಲಸ ! ಭೀಷ್ಮನನ್ನು ಹೊಡೆದು ಕೆಡಹಲು ಇದೇ ಸಮಯ. ತಡಮಾಡಬೇಡ ! ' ಎಂದು ಪ್ರೇರೇಪಿಸಿದನು.

ಶಿಖಂಡಿಯು ಮತ್ತೆ ಭೀಷ್ಮನಿಗಭಿಮುಖವಾಗಿ ಬರಲು ಅವಕಾಶವನ್ನು ಮಾಡಿಕೊಟ್ಟು ಭೀಮಾಭಿಮನ್ಯು ಪ್ರಭೃತಿವೀರರು ಮಿಕ್ಕ ಕುರುಯೋಧರನ್ನು ಹಿಮ್ಮೆಟ್ಟಿಸುತ್ತಿದ್ದರು. ಶತಘ್ನೀ, ಪರಿಘ, ಪರಶ್ವಧ, ಮುದ್ಗರ, ಮುಸಲ, ಪ್ರಾಸಗಳಿಂದ ಹೊಡೆದು ಕುರುಯೋಧರನ್ನು ಓಡಿಸುವ ಪಾಂಡವಯೋಧರನ್ನು ನೋಡಿ ಭೀಷ್ಮನು ಶಿಖಂಡಿಯನ್ನು ಲೆಕ್ಕಿಸದೆ. ಸಾತ್ಯಕಿ, ಭೀಮಸೇನ, ಧರ್ಮ, ಧನಂಜಯ, ದ್ರುಪದ, ವಿರಾಟ, ಧೃಷ್ಟದ್ಯುಮ್ನ ಅಭಿಮನ್ಯು ಪ್ರಮುಖ ವೀರರನ್ನು ಮರ್ಮಭೇದಿಬಾಣಗಳಿಂದ ಹೊಡೆದನು. ಆ ಎಂಟು ಜನ ವೀರರು ಅವನ ನಿಶಿತ ಬಾಣಗಳನ್ನು ಖಂಡಿಸಿ ಒಬ್ಬೊಬ್ಬರು ಹತ್ತು ಬಾಣಗಳಿಂದ ಭೀಷ್ಮನನ್ನು ಪೀಡಿಸಿದರು.

ದ್ರೋಣ, ಕೃಪ, ಸೈಂಧವ, ಭೂರಿಶ್ರವ, ಶಲ, ಶಲ್ಯ ಭಗದತ್ತರು ಕ್ರುದ್ಧರಾಗಿ ಅರ್ಜುನನನ್ನು ತಡೆಯಲು ಬರುವಾಗ 'ಹಿಡಿ, ಬಡಿ, ಸಂಹರಿಸು, ಬಿಡಬೇಡ ! 'ಎಂಬ ಶಬ್ದಗಳು ಮುಗಿಲು ಮುಟ್ಟಿದವು. ಭೀಮಾಭಿಮನ್ಯು ಪ್ರಮುಖರೆಂಟು ವೀರರು ದ್ರೋಣಾದಿಗಳನ್ನು ತಡೆದು ಕಾದುತ್ತಿರಲು, ಶಿಖಂಡಿಯು ಧೈರ್ಯವಹಿಸಿ ಒಂದು ಬಾಣದಿಂದ ಭೀಷ್ಮನ ಬಿಲ್ಲನ್ನು ಮುರಿದನು; ಎರಡರಿಂದ ಸಾರಥಿಯನ್ನು ಕೊಂದನು ! ಒಂದರಿಂದ ತಾಲಧ್ವಜವನ್ನು ಕೆಡಹಿದನು. ಇನ್ನೊಂದು ಬಿಲ್ಲನ್ನೆತ್ತಿದ ಗಾಂಗೇಯನನ್ನು ನೋಡಿ, ಅರ್ಜುನನು ಅದನ್ನೂ ಖಂಡಿಸಿ, ಮತ್ತೆ ಹಿಡಿದ ಧನುಸ್ಸುಗಳನ್ನೆಲ್ಲ ಮುರಿದನು. ಭೀಷ್ಮನು ಶಕ್ತಿಯನ್ನೆತ್ತಲು, ಅರ್ಜುನನು ಅದನ್ನೂ ತುಂಡರಿಸಿದನು. ಮೇಘ ಮಂಡಲದಿಂದ ಉದುರಿ ಬಿದ್ದ ಮಹೋಲ್ಕೆಯಂತೆ ಬಿದ್ದ ಶಕ್ತಿಯನ್ನು ನೋಡಿ ಭೀಷ್ಮನು ಕ್ರೋಧ ತಾಮ್ರಾಕ್ಷನಾದನು. 'ಒಂದೇ ಧನುವಿನ ಬಲದಿಂದ ಎಲ್ಲ ಪಾಂಡವರನ್ನೂ ಜಯಿಸುತ್ತಿದ್ದೆನು, ಆದರೂ ಮಹಾಬಲನಾದ ಶ್ರೀಕೃಷ್ಣನ ಸಹಾಯವಿರುವುದರಿಂದ ನನ್ನ ಪರಾಕ್ರಮವು ಪಾಂಡವರಲ್ಲಿ ವ್ಯರ್ಥವಾಗುತ್ತಿದೆ. ಪಾಂಡವರೂ ಅವಧ್ಯರಾಗಿರುವರು. ಶಿಖಂಡಿಯು ಸ್ತ್ರೀಪೂರ್ವನಾಗಿರುವನು. ಇಂತು ಬಲವತ್ಕಾರಣಗಳಿಂದ ನಾನು ಜಯಿಸಲಾರದಿರುವೆನು. ನನ್ನ ತಂದೆಯಿತ್ತ ಸ್ವಚ್ಛಂದ ಮರಣ ವರವಿದೆ. ಇದೀಗ ನನಗೆ ಮೃತ್ಯುವರಣಕಾಲ ಒದಗಿ ಬಂದಂತೆ ತೋರುತ್ತಿದೆ. ಆಗಲಿ ! ' ಎಂದು ಚಿಂತಿಸುವ ದೇವವ್ರತನ ಮನದಿಂಗಿತವನ್ನು ಅರಿತು, ಆಕಾಶದಲ್ಲಿದ್ದ ವಸುಗಳು ಮತ್ತು ಋಷಿಗಳು ಅವನಿಗೆ ಮಾತ್ರ ಕೇಳುವಂತೆ ಇಂತೆಂದರು:

'ತಾತ ! ನಿನ್ನ ಮನೋನಿಶ್ಚಯವು ಸರಿಯಾಗಿದೆ. ಸಾಕಿನ್ನು ಯುದ್ಧ.' ಇಂತು ನುಡಿದಾಗ ಅಂಬರದಿಂದ ಪೂಮಳೆಗೆರೆಯಿತು. ದೇವದುಂದುಭಿಗಳು ಮೊಳಗಿದವು. ಮಂದಮಾರುತವು ಸುಗಂಧಶೀತಲವಾಗಿ ಬೀಸಿತು. ಶಿಖಂಡಿಯು ಬಿಡದೆ ಅಂಬಿನ ಮಳೆಗರೆಯುತ್ತಿದ್ದನು. ಅವನ ನಿಶಿತಬಾಣಗಳನ್ನು ತುಚ್ಛೀಕರಿಸುವ ಪಿತಾಮಹನನ್ನು ಶಿಖಂಡಿಯ ಹಿಂದೆ ರಥದಲ್ಲಿದ್ದು ಅರ್ಜುನನು ಗಾಢಬಾಣಗಳಿಂದ ಪೀಡಿಸುತ್ತಿದ್ದನು. ಗಾಂಡೀವದಿಂದ ಹೊರಹೊಮ್ಮಿ ಬಂದ ಇಪ್ಪತ್ತೈದು ಕಿರಿಬಾಣಗಳೊಂದಿಗೆ ಇತರ ಬಹು ನಾರಾಚಗಳು ಭೀಷ್ಮನ ಶರೀರದಲ್ಲಿ ನಟ್ಟ ನಿಂತವು. ಆ ಮಹಾವೀರನು ಅಂಕುಶಾಹತವಾದ ಮದ್ದಾನೆಯಂತೆ ಕೆರಳಿ, ಅವರನ್ನು ಪ್ರತಿಬಾಣಗಳಿಂದ ಹೊಡೆದನು. ಅರ್ಜುನನು ಮುನ್ನುಗ್ಗಿ ಭೀಷ್ಮನ ಬಿಲ್ಲನ್ನು ಮುರಿದನು. ಹತ್ತು ಬಾಣಗಳಿಂದ ತಾತನನ್ನು ತಾಡಿಸಿ, ಒಂದರಿಂದ ಧ್ವಜವನ್ನು ಕೆಡಹಿ, ಹತ್ತರಿಂದ ಸಾರಥಿಯನ್ನು ಹತ್ತಿಕ್ಕಿ, ಅರ್ಜುನನು ಭೀಷ್ಮನ ಎರಡನೇ ಬಿಲ್ಲನ್ನೂ ಖಂಡಿಸಿದನು. ಮೂರು ನಾಲ್ಕು ಬಿಲ್ಲುಗಳು ಕೆಳಗೆ ಬೀಳಲು ಭೀಷ್ಮನು ಸುಮ್ಮನಾದನು. ಆಗ ಅರ್ಜುನನು ಇಪ್ಪತ್ತೈದು ಮರಿಬಾಣಗಳಿಂದ ಭೀಷ್ಮನನ್ನು ಹೊಡೆದನು. ಸಾವಿರಾರು ಬಾಣಗಳನ್ನು ಬಿಡುವ ಸಹಸ್ರಾಕ್ಷಸುತನ ಶರಗಳಿಂದ ಪೀಡಿತನಾಗಿ ಭೀಷ್ಮನು ತನ್ನ ಹಿಂದಿದ್ದ ದುಶ್ಶಾಸನನಿಗಿಂತೆಂದನು :

'ಅರ್ಜುನನೀಗ ಹೊಡೆಯುತ್ತಿರುವನು, ಶಿಖಂಡಿಯಲ್ಲ. ದೇವದಾನವಮಾನವ ರೊಟ್ಟುಗೂಡಿಬಂದರೂ ಸುರೇಂದ್ರನಂದನನಿಗೆ ಸರಿಯಲ್ಲ ನೋಡು ! ದುಶ್ಶಾಸನ ! ವಜ್ರಾಶನಿಸಮ ಕರ್ಕಶವಾಗಿರುವ ಈ ಬಾಣಗಳು ವಜ್ರಹಸ್ತಪುತ್ರನವು, ಶಿಖಂಡಿಯವಲ್ಲ. ಕವಚವನ್ನು ಸೀಳಿ ಒನಿಕೆ ಪೆಟ್ಟಿನಂತೆ ನಿಗಾಢವಾಗಿ ತಾಗುವ ಈ ಬಾಣಗಳು ಶಿಖಂಡಿಯವಲ್ಲ. ಬ್ರಹ್ಮದಂಡದಂತೆ ಅನಿವಾರಣವು, ಗದಾಪರಿಘನಿಷ್ಠುರವು, ಭುಜಗರಾಜಸಮ ನಿಶ್ವಾಸವು, ಸರ್ವಗಾತ್ರತ್ರಾಸವು ಆಗಿರುವ ಈ ಬಾಣಜಾಲವು ಅರ್ಜುನನವು, ಶಿಖಂಡಿಯವಲ್ಲ.'

ಇಂತು ಹೇಳಿ ಭೀಷ್ಮನು ಕೃತಾಂತನಂತೆ ಕೆರಳಿ, ಶಕ್ತಿಯನ್ನು ಪ್ರಯೋಗಿಸಿದನು. ಪಾರ್ಥನು ಅದನ್ನು ಮೂರು ಚೂರಾಗಿಸಿ, ಭೀಷ್ಮನು ಒಗೆದ ಚರ್ಮ ಖಡ್ಗ ಗದೆಗಳನ್ನೂ ತುಂಡರಿಸಿದನು. ಆಗ ಧರ್ಮರಾಜನು ಇತರ ವೀರರಿಂದ ಕೂಡಿ ಅಲ್ಲಿಗೆ ಬಂದು ಶರವ್ರಾತದಿಂದ ತಾತನನ್ನು ಮುಚ್ಚಿದನು. ಸೇನಾಮುಖದಲ್ಲಿದ್ದ ಪಾರ್ಥನು ಸಾಯಾಹ್ನ ಸೂರ್ಯನಂತೆ ಅರುಣವದನನಾಗಿ, ಒಂದು ಕಡೆ ಕುರುಸೇನೆಯನ್ನು ಓಡಿಸುತ್ತಾ ಇನ್ನೊಂದು ಕಡೆ ಭೀಷ್ಮನನ್ನು ಶರವರ್ಷದಲ್ಲಿ ಮುಳುಗಿಸುತ್ತಿದ್ದರು. ಸೌವೀರ ಮಾಲುವ ಕೇಕಯ ವಸಾತಿ, ಶಾಲ್ವ ತ್ರಿಗರ್ತವೀರರು ಎಷ್ಟು ಪ್ರಯತ್ನಿಸಿದರೂ ಧರ್ಮರಾಜ, ಭೀಮ, ಸಾತ್ಯಕಿ, ಸೌಭದ್ರಾದಿಗಳನ್ನು ದಾಟಿ, ಭೀಷ್ಮನನ್ನು ಅರ್ಜುನನಿಂದ ಕಾಪಾಡಲಾರದೆ ಹೋದರು. ಅರ್ಜುನಾದಿಗಳ ಬಾಣಗಳಿಂದ ಭೀಷ್ಮನ ಶರೀರವೆಲ್ಲವೂ ಆಕ್ರಾಂತವಾಯಿತು. ಆಗ ಪಿತಾಮಹನು ಅರ್ಜುನನ ಬಾಣಪೀಡಿತನಾಗಿ ರಥದಿಂದ ಕೆಳಗುರುಳಿದನು.

ಪೂರ್ವದಿಕ್ಶಿರನಾಗಿ ಭೀಷ್ಮನು ಭೂಮಿಯನ್ನು ತಾಕದೆ ಶರಶಯ್ಯೆಯಲ್ಲಿ ಮಲಗಿದಂತಿದ್ದನು. ಸೂರ್ಯನು ಪಶ್ಚಿಮದಿಕ್ಕಾಂತೆಯ ಮಂದಿರಾಂಗಣದಲ್ಲಿ ಕಾಲಿಡುವ ಹೊತ್ತಾಗಿತ್ತು. ಭೀಷ್ಮನು ಬೀಳಲು ಹಾಹಾಕಾರವೆಲ್ಲೆಡೆ ಪಸರಿಸಿತು. ಭೀಷ್ಮನೊಡನೆ ನೋಡುವವರ ಹೃದಯಗಳೂ ಬಿದ್ದವು. ಮುಖಗಳನ್ನು ತಗ್ಗಿಸಿ, ಕಣ್ಣೀರಿಡುತ್ತಾ ಕುರುಪಾಂಡವ ವೀರರು ಯುದ್ಧವಿರಾಮವನ್ನು ಸಾರಿ, ನೆಲಕ್ಕೆ ಬಿದ್ದ ಇಂದ್ರಧ್ವಜದಂತೆ ವಿರಾಜಿಸುವ ಭೀಷ್ಮನನ್ನು ಸಮೀಪಿಸಿದರು.

ಮೆಲ್ಲನೆ ಮಳೆ ತುಂತುರುಗಳುದುರಿದವು. ಮಂದಮಲಯಾನಿಲವು ಸೂಸಿ ಬಂದು, ಭೀಷ್ಮನ ಮೈಮೇಲೆ ಸುಳಿಯಿತು. ಭೀಷ್ಮನು ಸೂರ್ಯನು ದಕ್ಷಿಣದಿಶೆಯಲ್ಲಿ ಅಸ್ತಂಗತನಾಗುತ್ತಿರುವದನ್ನು ಕಂಡನು. ದಕ್ಷಿಣಾಯಣದಲ್ಲಿ ಪ್ರಾಣಗಳನ್ನು ಬಿಡಲಾಗದೆಂದು ಆ ಮಹಾತ್ಮನು ಸ್ವಚ್ಛಂದಮರಣನಾದುದರಿಂದ ಉತ್ತರಾಯಣ ಬರುವವರೆಗೂ ಹಾಗೇ ಶರಶಯ್ಯೆಯಲ್ಲಿರಲು ನಿಶ್ಚಯಿಸಿದನು. ಅಂತರಿಕ್ಷದ ದೇವಋಷಿ ಜನವೂ ಅಂತೇ ಸೂಚಿಸಿತು. ಗಂಗಾದೇವಿಯು ಮಹರ್ಷಿಗಳನ್ನು ಕಳಿಸಿದಳು. ಅವರು ಹಂಸರೂಪರಾಗಿ ಗಾಂಗೇಯನನ್ನು ಸೇರಿ, ಪ್ರದಕ್ಷಿಣೆ ಮಾಡಿ 'ಗಾಂಗೇಯ ! ದಕ್ಷಿಣಾಯಣವಿದು. ಈಗ ಪ್ರಾಣಗಳನ್ನು ಬಿಡಲಾಗದು - ನಿನಗೆ ಸ್ವಚ್ಛಂದಮರಣವಿದೆ. ಉತ್ತರಾಯಣವನ್ನು ನಿರೀಕ್ಷಿಸು !' ಎಂದು ಗಂಗಾದೇವಿಯ ಸಂದೇಶವನ್ನು ತಿಳಿಸಿದರು. ಅಂತೇ ಮಾಡಲು ವಚನವಿತ್ತು, ವಸುರೂಪನಾದ ಭೀಷ್ಮನು ಅವರನ್ನು ಕಳಿಸಿದನು.

ಮಹಾಸತ್ವನಾದ ಭೀಷ್ಮನು ಪಾತಿತನಾಗಲು ಪಾಂಡವ ಸೈನಿಕರು ಹರ್ಷಧ್ವಾನಗಳನ್ನು ಮಾಡಿದರು. ಧೃತರಾಷ್ಟ್ರ ! ನಿನ್ನ ಸುತರು ಖಿನ್ನರಾಗಿ ಏನನ್ನೂ ನುಡಿಯದೆ ಸುಮ್ಮನಿದ್ದರು. ಅವರು ಕಾಲು ಮುರಿದಂತಾಗಿ, ಹುಚ್ಚು ಹಿಡಿದಂತಾಗಿ, ಕರ್ತವ್ಯಮೂಢರಾದರು. ತೂರ್ಯಧ್ವಾನಗಳೊಂದಿಗೆ ಭೀಮಸೇನನ ಸಿಂಹಗರ್ಜನಗಳು ವಿಪುಲವಾದವು. ಕೆಲವರು ಕ್ಷತ್ರಧರ್ಮದ ನಿಷ್ಠುರತೆಯನ್ನು ನಿಂದಿಸಿದರೆ; ಕೆಲವರು ವಿಧಿಗೆ ತಲೆಬಾಗಿ ವಂದಿಸಿದರು. ಆಕಾಶದ ದೇವತೆಗಳು, ಮುನಿಗಳು ಭೀಷ್ಮನ ಚರಿತವನ್ನು ನೆನೆದು ಪ್ರಶಂಸಿಸಿದರು.

## ೩೬. ಭೀಷ್ಮ ಹಿತವಚನ

ಸಂಜಯನಿಂತು ನಿರೂಪಿಸಿದನು :

'ಧೃತರಾಷ್ಟ್ರ ! ಸಾಯಂಕಾಲವಾಯಿತು. ಶರಶಯನದಲ್ಲಿ ಮಲಗಿದ್ದ ಭೀಷ್ಮನು ಶ್ರೀಹರಿಧ್ಯಾನಪರಾಯಣನಾಗಿದ್ದನು. ಧರಣೀತಲವನ್ನು ಮುಟ್ಟದೆ ಶರಶಯನದಲ್ಲಿ ಮಲಗಿದ್ದ ಪಿತಾಮಹನನ್ನು ಪಾಂಡವರು ವಿವರ್ಣವದನರಾಗಿ ಸಮೀಪಿಸಿದರು. ಕೌರವರೂ ಕಣ್ಣೀರಿಡುತ್ತಾ ಸೇರಬಂದರು. ತಂದೆಗಾಗಿ ಮದುವೆಯನ್ನು ಬಿಟ್ಟು, ಸೋದರರಿಗಾಗಿ ರಾಜ್ಯವನ್ನು ತ್ಯಜಿಸಿದ ಮಹಾ ತ್ಯಾಗಿ, ಪರಶುರಾಮದೇವನನ್ನು ಸೇವಿಸಿ, ಅಸಮಾನವೀರನೆನಿಸಿ, ಕೊನೆಗೆ ಗುರುವನ್ನು ಮೆಚ್ಚಿಸಿದ, ಮಹಾ ಧೀರ. ಕುರು-ಪಾಂಡವ

ಯುದ್ಧದಲ್ಲಿ ಮೈ ಬಚ್ಚಿಡದೆ ಕಾದ ಮಹಾವೀರ. ಧರ್ಮಕ್ಕೆ ಜಯವಾಗಲೆಂದು ಪ್ರಾರ್ಥಿಸುವ ಮಹಾಧರ್ಮಿ. ಶ್ರೀಕೃಷ್ಣನ ಒಲುಮೆಗೆ ಪಾತ್ರನಾದ ಮಹಾಭಕ್ತ ಅಂದು ಶರತಲ್ಪದಲ್ಲಿ ಮಲಗಿದನೆಂದು ಎಲ್ಲರೂ ನಿಟ್ಟುಸುರಿಡುತ್ತಾ, ವಿಷಣ್ಣರಾಗಿ, ಆ ಮಹಾನುಭಾವನನ್ನು ಸುತ್ತುಗಟ್ಟಿ ನಿಂತರು. ಕರ್ಣನೂ ರಣರಂಗವನ್ನು ಸೇರಬಂದು ದುರ್ಯೋಧನನ ಸಮೀಪದಲ್ಲಿ ನಿಂತು, ಪಿತಾಮಹನನ್ನು ನೋಡುತ್ತಿದ್ದನು.

ದುಶ್ಶಾಸನನು ದೂರದಲ್ಲಿ ಪಾಂಚಾಲರಿಂದ ಯುದ್ಧ ಮಾಡುವ ದ್ರೋಣಾಚಾರ್ಯನಿಗೆ ಭೀಷ್ಮಪಾತವನ್ನು ತಿಳಿಸಿದನು. ಅದನ್ನು ಕೇಳುತ್ತಿದ್ದಂತೆ ಆಚಾರ್ಯನು ಮೂರ್ಛಿತನಾಗಿ ಬಿದ್ದನು. ಸ್ವಲ್ಪ ಹೊತ್ತಿಗೆ ಎಚ್ಚತ್ತು ಆಚಾರ್ಯನು ಕೃಪ ಗುರುಸುತರೊಡಗೂಡಿ ದೇವವ್ರತನಿದ್ದಲ್ಲಿಗೆ ಧಾವಿಸಿ ಬಂದನು. ಸರ್ವ ಯೋಧರೂ ಯುದ್ಧ ವಿರಾಮವನ್ನು ಮಾಡಿ ಅಲ್ಲಿಗೆ ಬಂದರು. ಬಂದ ಪಾಂಡವ ಕೌರವರನ್ನೂ ಸ್ವಾಗತಿಸಿ 'ಮಹಾಭಾಗ್ಯರೇ! ಬನ್ನಿ! ಬನ್ನಿ! ನಾಚುವ ಕೆಲಸವಿಲ್ಲ. ಯುದ್ಧ ಧರ್ಮವಿದು ಬಲು ನಿಷ್ಠುರವು. ನಿಮ್ಮ ದರ್ಶನದಿಂದ ನನಗೆ ಆನಂದವಾಗಿದೆ' ಎಂದು ನುಡಿದನು.

ಅವರೆಲ್ಲರು ಸುತ್ತುಗಟ್ಟಿ ನಿಂತಿರಲು ಭೀಷ್ಮನು 'ಕೌರವ ಪಾಂಡವ ವೀರರೇ! ನನ್ನ ತಲೆ ಜೋತಾಡಿ ನೋಯುತ್ತಿದೆ. ನನಗೆ ಶರಶಯನವು ವಿಹಿತವಾಗಿರುವಂತೆ, ಅದಕ್ಕೆ ತಕ್ಕ ತಲೆದಿಂಬನ್ನು ನೀವು ಕಲ್ಪಿಸಿ, ನನ್ನ ಕುತ್ತಿಗೆ ನೋವನ್ನು ನಿವಾರಿಸಿ!' ಎಂದು ಆಜ್ಞಾಪಿಸಿದನು. ತತ್‌ಕ್ಷಣವೇ ಕುರುವೀರರು ಓಡಿತಂದ ಮೆತ್ತನೆ ತಲೆದಿಂಬುಗಳನ್ನು ನೋಡಿ ಭೀಷ್ಮನು ನಸುನಕ್ಕು. 'ಮಹಾವೀರರೇ! ಇಂತಹ ದಿಂಬುಗಳೆನಗೆ ಈಗ ಸರಿಯಲ್ಲ' ಎಂದು ಅರ್ಜುನನನ್ನು ಕರೆದು ಇಂತೆಂದನು.

'ಮಹಾಬಾಹೋ! ಧನಂಜಯ! ಶಿರವು ಜೋತಾಡದಂತೆ ನನಗೆ ಸರಿಯಾದ ದಿಂಬನ್ನು ಕಲ್ಪಿಸು!' ಎಂದ ಭೀಷ್ಮನ ಮಾತನ್ನು ಶಿರಸಾವಹಿಸಿ ಅರ್ಜುನನು ಗಾಂಡೀವಕ್ಕೆ ಹದೆ ಏರಿಸಿ, ತಾತನಿಗೆ ಪ್ರದಕ್ಷಿಣವಾಗಿ ಬಂದು, ಮೂರು ಬಾಣಗಳನ್ನು ಶಿರೋಭಾಗದ ಭೂಮಿಯಲ್ಲಿ ನಾಟಿಸಿದನು. ಅವು ಆತನಿಗೆ ಸರಿಯಾದ ಉಪಧಾನಗಳಾದವು. ಅದನ್ನು ಕಂಡು ದೇವವ್ರತನು ಪರಮಪ್ರೀತನಾದನು: ಮತ್ತು ಅಲ್ಲಿ ನೆರೆದಿದ್ದ ವೀರರೆಲ್ಲರನ್ನು ಉದ್ದೇಶಿಸಿ ಇಂತೆಂದನು:

"ಅರ್ಜುನ! ಸರಿಯಾದ ದಿಂಬನ್ನು ಒದಗಿಸಿದೆ! ಪ್ರೀತನಾದೆನು. ಇಂತು ಮಾಡದೆ ಇದ್ದಿದ್ದರೆ ನಿನ್ನನ್ನು ನಿಂದಿಸುತ್ತಿದ್ದೆನು. ಇರಲಿ! ನಿನ್ನ ಧರ್ಮ ನಿಷ್ಠೆ ಬಾಹುವೀರ್ಯ, ಗುರುಭಕ್ತಿಗಳು ನಿನಗೆ ರಕ್ಷಾಕವಚವಾಗಿವೆ. ಕ್ಷತ್ರಿಯ ವೀರನಿಗೆ ಶರಶಯನವೇ ಉಚಿತವಂತೆ! ಅದಕ್ಕೆ ತಕ್ಕ ದಿಂಬನ್ನಿತ್ತೆ! ವಿಜಯಿಯಾಗು!" ಎಂದು, ರಾಜರನ್ನು ಕಂಡು ಇಂತೆಂದನು:

"ನೋಡಿದಿರಾ! ಪಾಂಡವೇಯರ ಮಹಾವೀರ್ಯಶೌರ್ಯಧೈರ್ಯ ಚಾತುರ್ಯಗಳನ್ನು! ಉತ್ತರಾಯಣದವರೆಗೂ ನಾನು ಮಲಗಿರಬೇಕಾಗಿದೆ.

ರಥಸಪ್ತಮಿಯವರೆಗೂ ಉಳಿದಿದ್ದವರು ಆಗ ಬಂದು ನನ್ನನ್ನು ನೋಡಲಹುದು. ನನ್ನ ಸುತ್ತಲು ಪರಿಖಾ ನಿರ್ಮಾಣ ಮಾಡಿ, ನನ್ನನ್ನು ನಿರೀಕ್ಷಿಸುತ್ತಿರಿ ! ನಿಮಗೆ ಶ್ರೇಯಸ್ಕರವಾದ ಮಾತನ್ನೊಂದನ್ನು ಕೇಳಿರಿ ! ಸಾಕು ಸಂಗ್ರಾಮ ! ಸಂಧಿಮಾಡಿಕೊಂಡು ಉಭಯಪಕ್ಷದವರು ಸುಖವಾಗಿರಿ ! ' ಎಂದನು.

ಆಗ ದುರ್ಯೋಧನಾದಿಗಳ ಆಜ್ಞೆಯಂತೆ ಶಸ್ತ್ರವೈದ್ಯರು ಸರ್ವಶಸ್ತ್ರೋಪಕರಣಗಳೊಡನೆ ಬಂದು, ಭೀಷ್ಮನ ಮೈಯಲ್ಲಿ ನೆಟ್ಟಿದ್ದ ಶರಜಾಲವನ್ನು ತೆಗೆದು, ಚಿಕಿತ್ಸೆ ಮಾಡಬೇಕೆಂದು ಬಂದರು. ಅವರನ್ನು ಕಂಡು ಗಂಗಾಸುತನು 'ದುರ್ಯೋಧನ ! ಅವರಿಗೆ ಬೇಕಾದ ಧನವಸ್ತ್ರಾದಿ ಸತ್ಕಾರವನ್ನಿತ್ತು ಕಳಿಸಿಕೊಡು ! ಈಗ ನನಗೆ ವೈದ್ಯರಿಂದಾಗಲಿ ಅವರ ಚಿಕಿತ್ಸೆಯಿಂದಾಗಲಿ ಪ್ರಯೋಜನವಿಲ್ಲ. ಕ್ಷಾತ್ರಧರ್ಮಕ್ಕನುಗುಣವಾದ ಶರಶಯನವೆನಗೆ ದೊರಕಿದೆ. ಶ್ರೀಕೃಷ್ಣನ ಕೃಪೆ ಎನ್ನಲ್ಲಿದೆ. ಉತ್ತಮಲೋಕಗಳೆನಗಾಗಿ ಕಾದಿವೆ. ಶರಶಯನದೊಡನೆ ನನ್ನ ಸಂಸ್ಕಾರವನ್ನು ಮುಂದೆ ಮಾಘದಲ್ಲಿ ಪಡೆಯಲಿಚ್ಛಿಸುವ ನನಗೆ ಯಾವ ಚಿಕಿತ್ಸೆಯೂ ಬೇಡ ! ' ಎಂದನು.

ವೈದ್ಯರು ಸತ್ಕೃತರಾಗಿ ಹೊರಟುಹೋದರು. ಭೀಷ್ಮನ ಧರ್ಮಶ್ರದ್ಧೆಯನ್ನು ಕಂಡು, ಸರ್ವಜನರು ಆಶ್ಚರ್ಯಭರಿತರಾದರು. ಆಗ ಆತನಿಗೆ ತಕ್ಕ ಕಾವಲುಗಾರರನ್ನಿಟ್ಟು ಪಾಂಡವರು ಕೌರವರು ತಂತಮ್ಮ ಶಿಬಿರಗಳನ್ನು ಸೇರಿ ಅಂದಿನ ರಾತ್ರಿಯನ್ನು ಕಳೆದರು.

ಶ್ರೀಕೃಷ್ಣನು ಧರ್ಮರಾಜನನ್ನು ಕಂಡು 'ಯುಧಿಷ್ಠಿರ ! ನಿನ್ನ ಅದೃಷ್ಟ ಚನ್ನಾಗಿದೆ. ಭೀಷ್ಮನು ಪಾತಿತನಾದನು. ಇನ್ನು ವಿಜಯವು ನಿನ್ನ ಕರಗತವಾದಂತೆ ತಿಳಿ ! ' ಎಂದನು. ಧರ್ಮರಾಜನು 'ಶ್ರೀಕೃಷ್ಣ ! ಇದೆಲ್ಲ ನಿನ್ನ ಪರಮಾನುಗ್ರಹವೇ ಸರಿ ! ನಿನ್ನ ಪ್ರಸಾದದಿಂದ ಬಂದ ವಿಜಯ ! ನಿನ್ನ ಕ್ರೋಧದಿಂದ ಪರಾಜಯ ! ಭಕ್ತಾಭಯಂಕರನಾದ ನಿನ್ನ ಚರಣವೇ ಎಮಗೆ ಶರಣವು. ನೀನಾರವನೋ ಅವರಿಗೆ ಜಯವಾಗುವದೆಂದರೆ ಆಶ್ಚರ್ಯವಲ್ಲ, ಶ್ರೀಶ ! ನಿತ್ಯವೂ ರಣರಂಗದಿ ನೀನೇ ರಕ್ಷಿಸುತ್ತಿರುವೆ. ನಿತ್ಯವೂ ನೀನೇ ಹಿತವನ್ನುಪದೇಶಿಸುತ್ತಿರುವೆ. ಪ್ರಭೋ ! ನಿನಗೆ ನಮಃ' ಎಂದು ವಂದಿಸಿದನು.

ಮರುದಿನ ಬೆಳಗಾಯಿತು. ಅಂದು ಮಾರ್ಗಶಿರ ಬಹುಳ ನವಮಿ. ಪಾಂಡವ ಕೌರವರು ಮತ್ತೆ ಬೆಳಗು ಮುಂಜಾವದಲ್ಲೇ ಭೀಷ್ಮನನ್ನು ಸೇರಿ, ವಂದಿಸಿ, ನಿಂತರು. ವೀರಶಯನಾರೂಢನಾಗಿದ್ದ ದೇವವ್ರತನು ಅವರನ್ನು ಕಂಡು ಪ್ರೀತನಾದನು. ಕನ್ಯಾಮಣಿಗಳು ತಂದಿದ್ದ ಪುಷ್ಪಗಳನ್ನು ಲಾಜಾಕ್ಷತೆಗಳನ್ನು ಗಂಗಾಸುತನ ಮೇಲೆ ಚಲ್ಲಿ ಪೂಜಿಸಿದರು. ವೀರವರರು ನಿರಾಯುಧರಾಗಿ ಕೈಜೋಡಿಸಿ ನಿಂತಿದ್ದರು. ಶರವೇದನೆಯನ್ನು ಸಹಿಸುತ್ತಾ ಆಯಾಸಪಡುವ ಭೀಷ್ಮನು 'ಪಾನೀಯ'ವೆಂದು ಸೂಚಿಸಿದನು.

ತತ್‌ಕ್ಷಣವೇ ದುರ್ಯೋಧನಾದಿ ರಾಜರು ಭಕ್ಷ್ಯ ಭೋಜ್ಯಗಳನ್ನೂ ಶೀತಲ ಸುಗಂಧಿತ ಪಾನೀಯಗಳನ್ನೂ ತಂದು ಕೊಡಲು ಹೋದರು. ಅವರನ್ನು ವಾರಿಸಿ,

'ತಾತ ! ಮಾನುಷ ಭೋಗಗಳೆನಗಿನ್ನೇಕೆ ? ಮನುಜಲೋಕದಿಂದ ಒಂದು ಹೆಜ್ಜೆಯನ್ನಾಚೆಗಿಟ್ಟಿರುವ ನನಗೇಕೆ ಶೀತಲಪಾನಕಗಳು !' ಎಂದು ಕಳಿಸಿ, ಅರ್ಜುನನಿಗಿಂತೆಂದನು : 'ತಾತ ! ದಿಂಬನ್ನೊದಗಿಸಿದಂತೆ, ನನಗೆ ತಕ್ಕ ದಿವ್ಯಪಾನೀಯವನ್ನು ಒದಗಿಸಬಲ್ಲೆಯಾ ? ಮುಖವು ಬಾಡುತ್ತಿದೆ. ಶರೀರವು ಸುಟ್ಟಂತಿದೆ. ಮರ್ಮಗಳು ನೋಯುತ್ತಿವೆ. ಈಗ ನನ್ನ ತಾಪವನ್ನಡಗಿಸುವ ಪಾನೀಯವನ್ನು ತಂದು ಕೊಡಲು ನೀನೊಬ್ಬನೇ ಸಮರ್ಥನಿರುವೆ !'

ಆಗ ಅರ್ಜುನನು ಕಣ್ಣಲ್ಲಿ ನೀರು ತುಂಬಿ ತರಲು, ಒರೆಸಿಕೊಂಡು, ರಥವನ್ನೇರಿ, ಮೂರು ಸಲ ಪ್ರದಕ್ಷಿಣೆಯಾಗಿ ಬಂದನು. ಗಾಂಡೀವವನ್ನು ಮೊರಹಿ, ಬಾಣದಲ್ಲಿ ಪರ್ಜನ್ಯಾಸ್ತ್ರವನ್ನು ಅಭಿಮಂತ್ರಿಸಿ, ಭೀಷ್ಮನ ತಲೆಯ ಬಲಬದಿಯ ಭೂಮಿಯಲ್ಲಿ ಅದನ್ನು ನಾಟಿಸಿದನು. ಅಲ್ಲಿಂದ ಬಂದ ಮಂದಾಕಿನೀ ಜಲಧಾರೆಯು ಮೇಲಕ್ಕೆದ್ದು ಸರಿಯಾಗಿ ದೇವವ್ರತನ ವದನದಲ್ಲಿ ಪ್ರವೇಶಿಸಿತು. ಅಮೃತಕಲ್ಪವು, ದಿವ್ಯಗಂಧವು ಆದ ಆ ಜಲವನ್ನು ಕುಡಿದು ಭೀಷ್ಮನು ತೃಪ್ತನಾದನು. ಪಾರ್ಥನ ಅದ್ಭುತ ಕರ್ಮವನ್ನು ಕಂಡು ಎಲ್ಲರೂ ವಿಸ್ಮಿತರಾದರು; ಕುರುವೀರರು ಶಿಶಿರದ ಚಳಿಗೆ ಸಿಕ್ಕ ಗೋವುಗಳಂತೆ ಭಯ ಕಂಪಿತರಾಗುತ್ತಿರಲು, ಪಾಂಡವವೀರರು ಹರ್ಷಧ್ವಾನಗಳಿಂದ, ಉತ್ತರೀಯ ವಿಧೂನನಗಳಿಂದ ಅರ್ಜುನನನ್ನು ಪ್ರಶಂಸಿಸಿದರು.

ಭೀಷ್ಮನು ಗತಾಯಾಸನಾಗಿ, ಎಲ್ಲರೂ ಕೇಳುತ್ತಿರಲು ಅರ್ಜುನನಿಗೆ ಇಂತೆಂದನು: 'ಪಾಂಡುನಂದನ ! ನರಾವತಾರನಾದ ನಿನಗೆ ಇದೇನು ಆಶ್ಚರ್ಯವಲ್ಲ. ನಾರಾಯಣನಾದ ಶ್ರೀಕೃಷ್ಣನು, ವಾಯುಸುತನಾದ ಭೀಮಸೇನನು ನಿನಗೆ ಭುಜದ್ವಯದಂತಿರುವಾಗ ನರಾವೇಶಯುಕ್ತನು, ಇಂದ್ರಪುತ್ರನು ಆದ ನಿನಗೆ ದುರ್ಘಟವಿಲ್ಲ. ನಿನ್ನ ಧಾಟಿಗೆ ದೇವ ಕೋಟಿ ಪರಿವೃಢನಾದ ಮಹೇಂದ್ರನೂ ನಿಲ್ಲಲಾರನಿದು ನಿಜ ! ಸರಸ್ಸುಗಳಲ್ಲಿ ಸಾಗರವು ಶ್ರೇಷ್ಠ: ಚತುಷ್ಪದಗಳಲ್ಲಿ ಗೋವು ಶ್ರೇಷ್ಠ ! ತೇಜೋವಂತರಲ್ಲಿ ಆದಿತ್ಯನು ಶ್ರೇಷ್ಠ ! ಗಿರಿಗಳಲ್ಲಿ ಹಿಮವಂತನು ಶ್ರೇಷ್ಠ ! ನರರಲ್ಲಿ ವಿಪ್ರನು ಶ್ರೇಷ್ಠ ! ಧನುರ್ಧಾರಿಗಳಲ್ಲಿ ನೀನು ಶ್ರೇಷ್ಠನಾಗಿರುವೆ ! ನಿನಗೂ ಶ್ರೇಷ್ಠರೆಂದರೆ ವೃಕೋದರದಾಮೋದರರೇ. ನಿಮಗೆ ವಿಜಯವು ನಿಶ್ಚಿತವಾಗಿದೆ. ಯುದ್ಧವು ಕೂಡದೆಂದು ದುರ್ಯೋಧನನಿಗೆ ನಾನು ಹೇಳಿದೆನು. ವಿದುರಸಂಜಯರೂ ಹೇಳಿದರು. ಶ್ರೀಪರಶುರಾಮ ಶ್ರೀವೇದವ್ಯಾಸ ಶ್ರೀಕೃಷ್ಣರೂ ಹೇಳಿದರು. ಆದರೂ ಮೂರ್ಖನಾಗಿ ಅವನು ನಮ್ಮ ಹಿತವನ್ನಾಲಿಸದೆ, ಇಷ್ಟು ಜನಕ್ಷಯಾದ್ಯನರ್ಥಗಳಿಗೆ ಕಾರಣನಾಗಿರುವನು. ಶಾಸ್ತ್ರಮಾರ್ಗವನ್ನು ಅತಿಕ್ರಮಿಸಿ, ಶಸ್ತ್ರಪಾಣಿಯಾಗಿರುವ ಕುರುರಾಜನು ಭೀಮಸೇನಬಲಾಭಿಭೂತನಾಗಿ ನೆಲಕ್ಕುರುಳಿದಾಗ, ನಮ್ಮ ವಚನಗಳನ್ನು ನೆನೆಯುವನು' ಎಂದನು.

ದುರ್ಯೋಧನನು ತಾತನ ನುಡಿಯನ್ನಾಲಿಸಿ, ಖಿನ್ನನಾದನು. ಅವನನ್ನು ಕರೆದು ಕೂಡಿಸಿಕೊಂಡು ದೇವವ್ರತನಿಂತೆಂದನು : 'ರಾಜನ್ ! ಕಂಡೆಯಲ್ಲ ! ಪಾರ್ಥನ ಧನುರ್ವಿದ್ಯಾವೈಶದ್ಯವನ್ನು ! ಅಮೃತಗಂಧಿಜಲಧಾರೆಯನ್ನು ಭೂಮಿಯಿಂದ

ಬಾಣಸಹಾಯನಾಗಿ ತೆಗೆಯುವುದು ಪಾರ್ಥನಿಗೊಬ್ಬನಿಗೇ ಸಾಧ್ಯ. ಅಂತೆಯೇ ಅವನು ಕುರುಸೇನೆಯನ್ನೆಲ್ಲ ನಾಶಪಡಿಸಲು ಸಮರ್ಥನಾಗಿರುವನು. ಶ್ರೀಕೃಷ್ಣ ರಕ್ಷಿತನು, ಭೀಮಬಲಗುಪ್ತನು ಆಗಿರುವ ಅವನನ್ನು ಯಾರೂ ನಿನ್ನ ಕರ್ಣಾದಿಗಳು ಕೂಡ ಗೆಲ್ಲಲಾರರು. ಅವನಲ್ಲಿ ಆಗ್ನೇಯ, ವಾರುಣ, ವಾಯವ್ಯ, ಸೌಮ್ಯ, ಐಂದ್ರ ಪಾಶುಪತ, ಬ್ರಾಹ್ಮ, ವೈಷ್ಣವಾದಿ ದಿವ್ಯಾಸ್ತ್ರಗಳಿವೆ. ಇಷ್ಟು-ಮತ್ತಿಷ್ಟು ದಿವ್ಯಾಸ್ತ್ರಗಳನ್ನರಿತವನು ಈಗ ಭೂಮಿಯಲ್ಲಿ ಅರ್ಜುನನೊಬ್ಬನೇ ತಿಳಿ ! ಕೃಷ್ಣನಲ್ಲದೆ ಮತ್ತಿನ್ನಾರಿಗೂ ಅವನನ್ನು ಜಯಿಸಲಾಗದು. ದೇವಾಸುರರು ಅವನ ಧಾಟಿಗೆ ನಿಲ್ಲಲಾರರು. ಅಂತಹ ಲೋಕೋತ್ತರ ವೀರರಾದ ಪಾಂಡವರಿಂದ ಸಂಧಿಮಾಡಿಕೊಂಡು ಸುಖವಾಗಿರು ! ಶ್ರೀಕೃಷ್ಣನು ಮಾತನ್ನಾಲಿಸಿ, ಮನ್ನಿಸಿರುವಾಗಲೇ ಬೇಗ ಸಂಧಿಯಾಗಲಿ ! ವೃಕೋದರನು ಗದಾಪಾಣಿಯಾಗಿ ನಿನ್ನ ಸೋದರರನ್ನು ಕೆಡಹದ ಮುನ್ನ ಸಂಧಿ ಮಾಡಿಕೋ ! ಕೋಪಾರುಣನೇತ್ರನಾಗಿ ಧರ್ಮಪುತ್ರನು ಮುನ್ನುಗ್ಗಿ ಬಾರದ ಮುನ್ನ ಸಂಧಿ ಮಾಡಿಕೋ! ನಕುಲಸಹದೇವರು ವಾಯುಪಾವಕರಂತೆ ರೇಗಿ ಎರಗದ ಮುನ್ನ ಸಂಧಿ ಮಾಡಿಕೋ! ಸಾಕಿನ್ನು ಪಾಂಡವರ ವೈರ! ನನ್ನ ಸಾವಿನಿಂದಲಾದರೂ ತಿಳಿದು ನಿಲ್ಲಿಸು ಯುದ್ಧವನ್ನು! ಸಂಧಿಯಾಗುವುದರಿಂದ ಕುಲವು ಉಳಿಯುವುದು, ನಿನಗೂ ಹಿತವಾಗುವುದು. ಬಿಡು ಸಿಟ್ಟನ್ನು ! ಮಿಕ್ಕ ರಾಜರು, ಸೈನಿಕರು ವ್ಯರ್ಥವಾಗಿ ಸಾಯದಿರಲಿ ! ಪಾಪವನ್ನು; ಅಪಕೀರ್ತಿಯನ್ನು ಹೊಂದದಂತೆ ನಡೆ ! ಕೊಡು ಧರ್ಮಜನಿಗೆ ಅವನ ಇಂದ್ರಪ್ರಸ್ಥವನ್ನು ! ಅವಿವೇಕದಿಂದ ನನ್ನ ಮಾತಿನಂತೆ ನಡೆಯದಿದ್ದರೆ ಬಹುಲಾನರ್ಥಭಾಜನನಾಗುವೆ !' ಆ ಮಾತನ್ನು ಕೇಳಿ ದುರ್ಯೋಧನನು ಅನಾದರದಿಂದ ಮುಖ ತಿರುಗಿಸಿದನು. ಸಾಯಲಿರುವವನಿಗೆ ಸಾರೌಷಧಿಯು ಸೇರದಿರುವಂತೆ, ಅವನು ಭೀಷ್ಮನನ್ನು ಬಿಟ್ಟು ಕರ್ಣನ ಕಡೆ ನೋಡುತ್ತಾ ಅಲ್ಲಿಂದ ಹೊರಟುಹೋದನು. ಎಲ್ಲರೂ ಮುಂದಿನ ರಣಕ್ಕೆ ಸಿದ್ಧರಾಗಲು ತೆರಳಿದರು.

ಶರತಲ್ಪಗತನಾದ ಭೀಷ್ಮನನ್ನು ಸಮೀಪಿಸಿ, ಕರ್ಣನು ವಂದಿಸಿ, 'ಭೀಷ್ಮ ! ಮಹಾನುಭಾವ !' ಎಂದು ಮುಂದೆ ಮಾತಾಡಲಾರದೆ ಕಣ್ಣೀರಿಡುತ್ತಾ ನಿಂತನು. ಆಗ ಭೀಷ್ಮನು ಕಣ್ತೆರೆದು ಯಾರಿಲ್ಲದುದನ್ನು ನೋಡಿ, ರಕ್ಷಕಭಟರನ್ನು ದೂರ ಸರಿಯಲು ಅಪ್ಪಣೆ ಮಾಡಿ, ಕರ್ಣನ ಕೈಯನ್ನು ಕೈಯಿಂದ ಪಿಡಿದು, 'ಕರ್ಣ ! ಬಂದೆಯಾ ! ನೀನು ರಾಧೇಯನಲ್ಲ, ಕೌಂತೇಯನಿರುವೆ ! ಸೂರ್ಯನ ವರದಿಂದ ಜನಿಸಿದವ ನೀನೆಂದು ನನಗೆ ನಾರದರು ತಿಳಿಸಿರುವರು. ಈ ರಹಸ್ಯವನ್ನು ಶ್ರೀವೇದವ್ಯಾಸಕೃಷ್ಣರೂ ತಿಳಿದಿರುವರು. ನಿನ್ನಲ್ಲಿ ನನಗೆ ದ್ವೇಷವಿಲ್ಲ. ಸುಮ್ಮನೆ ಪಾಂಡವರನ್ನು ನಿಂದಿಸಿ, ಅವಹೇಳನೆಗೈದು ಮಾತಾಡುವೆ ! ಅದನ್ನು ಕಂಡು ನಿನಗೆ ಬಂದ ಮದವಿಳಿಯಲೆಂದು ನಾನಂದು ನಿನ್ನನ್ನು ಅರ್ಧರಥನೆಂದೆನು. ಲೋಕಬಾಹಿರನಾಗಿ ಜನಿಸಿ, ನೀಚರನ್ನು ಆಶ್ರಯಿಸಿದ ನಿನಗೆ ಸುಜನದ್ವೇಷವು ಅನಿವಾರ್ಯವಾಗಿದೆ. ಆದರೂ ನೀನು ಅಸಮಾನ ಶೂರನೆಂದು ನನಗೆ ಗೊತ್ತಿದೆ. ನಿನ್ನ ಬ್ರಾಹ್ಮಣಭಕ್ತಿ ನಿನ್ನವಧಾನ್ಯತೆ, ನಿನ್ನ ಶೌರ್ಯಗಳು

ಲೋಕವಿಖ್ಯಾತವಾಗಿವೆ. ಅಸ್ತ್ರಸಂಧಾನ ಲಾಘವಗಳಲ್ಲಿ ಅರ್ಜುನನ ಸರಿ ಎನಿಸಿರುವೆ ಆದರೂ ಕೇಳಿಲ್ಲಿ! ಪುರುಷಕಾರವು ಎಂದೆಂದಿಗೂ ದೈವದಕಿಂತ ಬಲವತ್ತರದಲ್ಲ. ಪಾಂಡವರು ಧರ್ಮವಂತರು. ಅವರಿಗೆ ದೈವಬಲವಿದೆ. ಅವರು ನಿನಗೆ ಸೋದರರು, ಅನ್ಯರಲ್ಲ. ಅವರೊಡನೆ ಕೂಡಿ ಬಾಳು! ನೀನು ಸಂಧಿಗಿಚ್ಛಿಸಿದರೆ ಕುರುರಾಜನು ಅಲ್ಲ ಎನ್ನಲಾರನು. ಪೃಥಿವೀಜನರಿಗೂ ಅದರಿಂದ ಕ್ಷೇಮವಾಗುವದು' ಎಂದನು.

ಕರ್ಣನು "ಮಹಾನುಭಾವ! ನಾನು ಯಾರೆಂದು ನನಗೂ ಗೊತ್ತಿದೆ. ಕುಂತಿಯಿಂದ ಜನಿಸಿದೆನಷ್ಟೇ! ಅಧಿರಥ ರಾಧೇಯರೇ ನನಗೆ ಸರ್ವಸ್ವವಾಗಿರುವರು. ದುರ್ಯೋಧನನು ಪ್ರೀತಿಯಿಂದಿತ್ತ ರಾಜ್ಯಾದ್ಯೈಶ್ವರ್ಯವನ್ನು ಉಪಭೋಗಿಸಿ, ಈಗ ನಾನು ಅವನ ಕೈಬಿಟ್ಟು ಕೃತಘ್ನನಾಗಲಾರೆನು. ವಾಸುದೇವನು ಪಾಂಡವರನ್ನು ಪೊರೆಯಲು ಕಂಕಣಕಟ್ಟಿ ನಿಂತಿರುವಂತೆ, ನಾನೂ ಕುರುರಾಜನ ಸೇವೆಯಲ್ಲಿ ದೀಕ್ಷಿತನಾಗಿರುವೆನು. ದುರ್ಯೋಧನಾಶ್ರಯನಾದ ನನ್ನಲ್ಲಿ ಪಾಂಡವರೂ ಕುಪಿತರಾಗಿರುವರು. ನಾನು ಅವರಿಗೆ ಹಿತನಲ್ಲ. ನನ್ನ ಪುತ್ರದಾರಾಧನಪ್ರಾಣಗಳೆಲ್ಲವನ್ನೂ ದುರ್ಯೋಧನನಿಗಾಗಿ ಸಮರ್ಪಿಸಲು ನಾನು ಹಿಂಜರಿಯೆನು. ದೈವವನ್ನು ಪುರುಷಾಕಾರವು ಮೀರಲಾರದೆಂದೆ! ಅದು ನಿಜ! ದೈವೇಚ್ಛೆಗೆ ಬಂದಂತಾಗಲಿ! ಪಾಂಡವರು ಅಜೇಯರು. ಅದೂ ನಿಜ! ನಾನವರನ್ನು ಗೆಲ್ಲಲಾರೆನು, ಕೊಲ್ಲಲಾರೆನು. ಆದರೆ ರಣದಲ್ಲಿ ಪ್ರತಿಭಟಿಸಿ ನಿಲ್ಲಲಾರೆನೆಂದು ತಿಳಿಯಬೇಡ! ಅರ್ಜುನನಿಂದ ಕಾದಿ ಸತ್ತರೂ ನನಗೆ ಕೀರ್ತಿಕಾಂತೆಯ ಕರಗ್ರಹಣವಾಗುವುದು. ನನಗೆ ರಣಾನುಜ್ಞೆಯನ್ನು ನೀಡು! ಮಹಾತ್ಮ! ರಭಸದಿಂದ, ಚಾಪಲ್ಯದಿಂದ ನಾನಾಡಿದ ದುರ್ವಚನಗಳನ್ನು ಮನದಲ್ಲಿಡದೆ ಕ್ಷಮಿಸು!' ಎಂದು ಬೇಡಿದನು.

ಭೀಷ್ಮನು 'ಕರ್ಣ! ಹಾಗೇ ಆಗಲಿ! ಹೋಗು! ಸ್ವರ್ಗಕಾಮನಾಗಿ ಕಡಿದಾಡು! ನಿನ್ನಿಚ್ಛೆಯಂತೆ ಆಗಲಿ! ಕ್ಷಾತ್ರಧರ್ಮದ ಪುಣ್ಯಲೋಕವು ನಿನಗಾಗುವುದು' ಎಂದನು. ಆ ಮಾತನ್ನಾಲಿಸಿ ಕರ್ಣನು ತಾತನಿಗೆ ವಂದಿಸಿ, ರಥವನ್ನೇರಿ ರಣಾಂಗಣಕ್ಕೆಂದು ತೆರಳಿದನು.

ಭೀಷ್ಮನು ಶರತಲ್ಪದಿ ಶ್ರೀಹರಿ ಚರಣಾವಿಂದಧ್ಯಾನತತ್ಪರನಾಗಿ, ಶಯನಿಸಿದ್ದನು. ಪಾಂಡವ ಕೌರವರು ಯಥಾಪ್ರಕಾರವಾಗಿ ರಣರಂಗವನ್ನು ಸೇರಿ, ಯುದ್ಧ ಸನ್ನದ್ಧರಾದರು.

ಭೀಷ್ಮ ಪರ್ವ ಮುಗಿಯಿತು



# ೭. ದ್ರೋಣಪರ್ವ

## ೧. ದ್ರೋಣಾಭಿಷೇಕ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: ಜನಮೇಜಯ ಮಹಾರಾಜ ! ತನ್ನ ತಂದೆಯಾದ ಭೀಷ್ಮನು ಶರ ಶಯನದಲ್ಲಿ ಮಲಗಿದನೆಂದು ತಿಳಿದು ಧೃತರಾಷ್ಟನು ಚಿಂತಾಶೋಕಪರಾಯಣನಾದನು. ಮಾರ್ಗಶಿರ ಬಹುಳ ತ್ರಯೋದಶಿಯ ಸಾಯಂಕಾಲವಾದಾಗ ಸಂಜಯನು ಶಿಬಿರದಿಂದ ನಾಗಪುರಿಗೆ ಬಂದನು. ಅವನನ್ನು ಧೃತರಾಷ್ಟ್ರನಿಂತು ಪ್ರಶ್ನಿಸಿದನು.

'ಸಂಜಯ ! ಭೀಷ್ಮನು ರಣದಿಂದ ನಿಷ್ಕ್ರಾಂತನಾಗಲು ದುರ್ಯೋಧನಾದಿ ಕೌರವರು ನನ್ನಂತೆ ಶೋಕಸಾಗರ ನಿಮಗ್ನರಾಗಿ ಏನು ಮಾಡಿದರು? ಭೀಮಾದಿ ಪಾಂಡವ ವೀರರು ತಮ್ಮ ಸಾಗರಸಮ ಸೈನ್ಯದಿಂದ ಕೂಡಿ ಮತ್ತೆ ಮುತ್ತಿದಾಗ ಯುದ್ಧವೆಂತು ನಡೆಯಿತು ? ಎಲ್ಲ ವಿವರವನ್ನು ಸ್ಥಿರಚಿತ್ತನಾಗಿ ಕೇಳುವೆನು ಹೇಳು ! '

ಸಂಜಯನಿಂತೆಂದನು 'ರಾಜನ್ ! ಏಕಾಗ್ರಮನಸ್ಕನಾಗಿ ಕೇಳು ! ಭೀಷ್ಮಪಾತ ವಾದ ಮೇಲೆ ಕೌರವ-ಪಾಂಡವರು ವಿಷಾದ ಹರ್ಷಭರಿತರಾಗಿ ಕರ್ಣ-ಕೃಷ್ಣರ ಅಧ್ಯಕ್ಷತೆ ಯಲ್ಲಿ ಸಭೆ ಸೇರಿ ಮಂತ್ರಾಲೋಚನೆ ಮಾಡಿದರು. ಕ್ಷತ್ರ ಧರ್ಮವನ್ನು ನೆನೆದು ನಿಂದಿಸಿ ಅವರು ಭೀಷ್ಮನಿಗೆ ವಂದಿಸಿ ಬೀಳ್ಕೊಂಡು, ಮತ್ತೆ ಯುದ್ಧಸನ್ನದ್ಧರಾಗಿದ್ದರು. ದುರ್ಯೋಧನನ ಅವಿವೇಕ, ಭೀಷ್ಮಪಾತ, ಮೃತ್ಯುದೇವಿಯ ಆಹ್ವಾನಗಳಿಂದ ಜ್ಞಾನ ಹೀನರು, ಶೋಕಾಂಧರು, ಪರವಶರು ಆಗಿ ಕೌರವ ಯೋಧರು ಭೀಷ್ಮನ ಹಿತನುಡಿಗೆ ಕಿವಿಗೊಡದೆ - ಸಿಂಹ ವ್ಯಾಘ್ರ ಸಂಕುಲವಾದ ವನವನ್ನು ಹೊಗುವ ಕುರಿಗಳ ಹಿಂಡಿನಂತೆ ಪಾಂಡವ ಸೇನಾಸಾಗರವನ್ನು ಪ್ರವೇಶಿಸಿದರು. ನಕ್ಷತ್ರರಹಿತವಾದ ಆಕಾಶದಂತೆ, ಬೆಳೆ ಹಾಳಾದ ಭೂಮಿಯಂತೆ, ಗಾಳಿಯಿಲ್ಲದ ಅಂತರಿಕ್ಷದಂತೆ, ಅಸಂಸ್ಕೃತವಾದ ವಾಕ್ಕಿನಂತೆ ನೀರಿಲ್ಲದ ನದಿಯಂತೆ, ತೋಳಗಳ ಗುಂಪಿಗೆ ಸಿಕ್ಕ ಚಿಗರಿಯಂತೆ - ಭೀಷ್ಮರಹಿತವಾದ ಕೌರವ ಸೇನೆಯು ಕಳಾರಹಿತವಾಗಿತ್ತು. ಮಹಾರ್ಣವ ಮಧ್ಯದಲ್ಲಿ ಮಹಾವಾತಕ್ಕೆ ಸಿಕ್ಕ ನೌಕೆಯಂತೆ ಕುರುಸೇನೆಯು ಪಾಂಡವ ವೀರರ ಹೊಡೆತದಿಂದ ಹೊಯ್ದಾಡಿ, ಹುರುಪಿಲ್ಲದೆ ಹಲುಬುತ್ತಿತ್ತು. ಅದರ ಅರ್ಧದಷ್ಟು ಬಲ ನಾಶವಾಗಿತ್ತು. ರಾಜರು ವಿಮನಸ್ಕರಾಗಿದ್ದರು. ಪಾತಾಳದಲ್ಲಿ ಬಿದ್ದವರಂತೆ ಸೈನಿಕರು ಭೀತಿಗೊಂಡಿದ್ದರು. ಭೀಷ್ಮನಿಲ್ಲದ ತಮ್ಮನ್ನು ರಣವಿಜಯ ಭೂಮಿಯನ್ನು ಸೇರಿಸುವ ವೀರನಾರೆಂದು ಅವರು ಚಿಂತಿಸಿ, ಚಿಂತಿಸಿ, ಕೊನೆಗೆ ಕರ್ಣನೇ ಕುರುಸೇನಾ ನೌಕೆಯ ಕರ್ಣಧಾರನೆಂದು ಮನಗಂಡು, ಕರ್ಣ ! ಕರ್ಣ ! ಎಂದು ಆಕ್ರೋಶಿಸಿದರು. ದೇವವ್ರತ ಸಮನಾದ ಕರ್ಣನ ನಾಯಕತ್ವಕ್ಕಾಗಿ ಹಾತೊರೆದರು. ಆಪತ್ತಿಗೆ ಸಿಲುಕಿದವನಿಗೆ ಸಮರ್ಥ ಬಂಧುವಿನಂತೆ ತಮ್ಮನ್ನು ಪಾಂಡವರ ಧಾಟಿಯಿಂದ ಕಾಪಾಡಿ, ಆತು ನಿಲ್ಲುವ ಮಹಾವೀರನೆಂದರೆ ಕರ್ಣನೇ ಎಂದು ನಿಶ್ಚಯಿಸಿದರು.

ಹತ್ತು ದಿನಗಳು ಭೀಷ್ಮನ ಮೇಲಿನ ರೋಷದಿಂದಾಗಿ, ರಣರಂಗದಿಂದ ದೂರ ನಾಗಿದ್ದ ಕರ್ಣನು ಭೀಷ್ಮನೇ ಒಂದು ವೇಳೆ ಪಾಂಡವರನ್ನು ಸಂಹರಿಸಿದರೆ, ವಾನಪ್ರಸ್ಥನಾಗಿ ವನವನ್ನು ಸೇರಲು ಅಥವಾ ಪಾಂಡವರಿಂದ ಭೀಷ್ಮನೇ ಹತನಾದರೆ ತಾನು ರಣಭೂಮಿಯನ್ನು ಪ್ರವೇಶಿಸಿ ಅವನಿಂದ ಮಹಾರಥರೆಂದು ಗಣಿತರಾದ ಪಾಂಡವ ವೀರರನ್ನೆಲ್ಲ ಕೊಲ್ಲಲು ಸಂಕಲ್ಪಿಸಿದ್ದನು. ಇದನ್ನರಿತು ದುರ್ಯೋಧನನು ಪಾಂಡವೀಸೇನಾ ಸಾಗರವನ್ನು ದಾಟಿಸುವ ತರಣಿ ಎಂದು ತರಣಿಯ ಸುತನನ್ನು ನೆನೆದನು. ಜಾಮದಗ್ನ್ಯನಿಂದ ದಿವ್ಯಾಸ್ತ್ರಗಳನ್ನು ಕಲಿತು ದುರ್ವಾರ ವಿಕ್ರಮನಾದ ಕರ್ಣನು ಭೀಮಾರ್ಜುನ ಮಹಾಭಯದಿಂದ ತನ್ನನ್ನು ಗೋವಿಂದನು ದೇವತೆಗಳನ್ನಂತೆ ಕಾಪಾಡಬಲ್ಲನೆಂದು ಚಿಂತಿಸಿದನು.

ಇಂತು ನುಡಿದು ಸಂಜಯನು ನಿಟ್ಟುಸಿರನ್ನಿಟ್ಟು ಸುಮ್ಮನಿದ್ದನು. ಧೃತರಾಷ್ಟ್ರನು ಚಿಂತಾಕ್ರಾಂತನಾದನು. 'ಸಂಜಯ ! ನಮ್ಮವರು ಕರ್ಣನನ್ನು ಕಂಡರೇ? ತನುವನ್ನು ಲೆಕ್ಕಿಸದ ಮನವಿಟ್ಟು ಮಾನನಿಧಿಯಾದ ಕುರುರಾಜನಿಗಾಗಿ ಮಡಿಯಲು ಸಿದ್ದನಾಗಿರುವ ಕರ್ಣನು ಅವರ ಆಶೆಯನ್ನು ಪೂರೈಸಿದನೇ? ಸಂಭ್ರಾಂತರಾಗಿ ದಿಕ್ಕುಗಾಣದೆ ನಿಂತ ಕೌರವರ ಸೇನಾಪತಿಯಾಗಿ ಭೀಷ್ಮನಿಲ್ಲದ ಕೊರತೆಯನ್ನು ತುಂಬಿದನೇ? ಬಂಧು ಹಾನಿಯಿಂದ ನೊಂದಿರುವ ನನ್ನವರ ಕಣ್ಣೀರನ್ನೊರೆಸಿ ಸಂತೈಸಿದನೇ ?' ಎಂದು ಕೇಳಿದ ರಾಜನಿಗೆ ಸಂಜಯನಿಂತೆಂದನು.

'ಭೀಷ್ಮನು ಬಿದ್ದನೆಂದು ಕೇಳಿ, ನಡುಕಡಲಿನಲ್ಲಿ ಒಡೆದ ಹಡಗಿನಲ್ಲಿದ್ದ ಹುಡುಗರಂತೆ ಗೋಳಿಡುವ ಕೌರವರನ್ನು ನೋಡಿ ಕರ್ಣನು ಅಣ್ಣನಂತೆ ಅನುತಾಪಪಟ್ಟು, ತಂದೆಯಂತೆ ಸಲಹಲು ಬಂದನು. ಅವನು "ಅಕಟ ! ಭೀಷ್ಮನಂತಹ ಮಹಾವೀರನು ಬಿದ್ದನೇ ? ಅವನಲ್ಲಿ ಧೈರ್ಯವಿತ್ತು, ಬುದ್ಧಿಪರಾಕ್ರಮಗಳಿದ್ದವು, ಓಜಸತ್ವ ಜ್ಞಾನಾದಿ ವೀರಗುಣಗಣನಿಧಿಯಾಗಿದ್ದನಾಮಹಾರಥನು. ಅವನಲ್ಲಿದ್ದ ದಿವ್ಯಾಸ್ತ್ರಗಳಗಣಿತ, ಅವನ ವಚನ ಅಮೃತ ಸೇಚನ. ಅವನ ಬ್ರಹ್ಮಚರ್ಯ ಲೋಕಾಶ್ಚರ್ಯ. ಅವನ ವೀರ್ಯ ಅವಾರ್ಯ. ಅಸೂಯಾದಿ ದೋಷಗಳವನಿಗೆ ಬಲು ದೂರ: ದ್ವಿಜಶತ್ರುಗಳನ್ನೆಂದಿಗೂ ಕ್ಷಮಿಸಲಾರ ಆ ಮಹಾಧೀರ. ಚಂದ್ರಮನಿಗೆ ಕಳಂಕದಂತೆ ಪಾಂಡವ ಪಕ್ಷಪಾತವನ್ನು ಬಿಟ್ಟು ಮತ್ತಾವ ದೋಷವೂ ಆತನಲ್ಲಿದ್ದಿಲ್ಲ. ಅಂತಹ ಮಹಾವೀರನೇ ಪ್ರಶಾಂತನಾದನೆಂದ ಮೇಲೆ ಮುಗಿಯಿತು ಮಿಕ್ಕವರ ಕೆಲಸ. ಈ ಲೋಕದಲ್ಲಿ ಯಾವುದೂ ಧ್ರುವವಲ್ಲ ! ಎಲ್ಲವೂ ಅನಿತ್ಯವೇ ಸರಿ ! ಸ್ವಚ್ಛಂದ ಮರಣನೆನಿಸಿದ್ದು, ಸಪ್ತಶತಾಧಿಕ ವರ್ಷಕಾಲ ದೃಢಗಾತ್ರನಾಗಿದ್ದ ದೇವವ್ರತನೇ ಪಾತಿತನಾದನೆಂದರೆ ನಾಳೆ ಸೂರ್ಯೋದಯದವರೆವಿಗೂ ಬದುಕಿರುವೆನೆಂದು ಯಾರಾದರೂ ತಿಳಿಯಬಹುದೇ? ಅಂತು ತಿಳಿದರೆ ಅಂತಹ ಮೂರ್ಖರಿನ್ನಿರುವರೇ ? ವಸುವೀರ್ಯದಿಂದ ಜನಿಸಿ, ವಸುಭಾಗಗಳನ್ನು ಸ್ವೀಕರಿಸಿ, ವಸುಮತಿಯಲ್ಲಿ ವಸುಸಂಖ್ಯಾ ಕಾಲವಿದ್ದು, ವಸುಗಳನ್ನು

ಸೇರಲಿರುವ ದೇವವ್ರತನಂತಹ ಮಹಾಸೇನಾನಿಯನ್ನು ಕಳೆದುಕೊಂಡ ಕೌರವರಿಗೆ ಇನ್ನೆಲ್ಲಿ ವಸುನಿಚಯ ? ಇನ್ನೆಲ್ಲಿ ವಸುಮತೀವಿಜಯ ? ಇನ್ನೆಲ್ಲಿ ರಣೋತ್ಸಾಹ ? ಇನ್ನೆಲ್ಲಿ ಸಮರಸನ್ನಾಹ ?' ಎಂದು ಚಿಂತಿಸಿ ಕರ್ಣನು ಕಣ್ಣೀರಿಟ್ಟನು.

ಕರ್ಣನ ಕಂಬನಿಯನ್ನು ಕಂಡು ಕಂಗೆಟ್ಟು ಕೌರವರೂ ಕಂಬನಿ ತುಂಬಿದರು. ಆಗ ಕರ್ಣನು ಅವರಿಗೆ ಧೈರ್ಯ ತುಂಬುತ್ತಾ ಇಂತೆಂದನು: "ರಾಜನ್ಯರೇ ! ಜಗತ್ತಿನಲ್ಲಿ ಯಾವ ಪ್ರಾಣಿಯೂ ಶಾಶ್ವತವಲ್ಲ. ನಿಮ್ಮಂತಹ ಮಹಾವೀರರು ರಕ್ಷಕರಾಗಿದ್ದೂ ಗಿರಿ ಸನ್ನಿಭನಾದ ಕುರುಪುಂಗವನು ಬಿದ್ದನಲ್ಲ ! ದಿವಾಕರನೇ ಆಕಾಶದಿಂದ ಕಳಚಿ ಬಿದ್ದಂತಾಯಿತಲ್ಲ ! ಬೆಟ್ಟಗಳನ್ನು ಕೊರೆದು ಹರಿವ ಮಹಾ ಪ್ರವಾಹಕ್ಕೆ ನಿಲ್ಲಲಾರದೆ ಕೊಚ್ಚಿ ಹೋಗುವ ಗಿಡಗಳಂತೆ, ಅರ್ಜುನನ ಪರಾಕ್ರಮವನ್ನೆದುರಿಸಲಾರದೆ ಹರಿದು ಹೋಗುತ್ತಿರುವ ಕುರು ಸೇನೆಗಳು ಶೋಚನೀಯ ಸ್ಥಿತಿಯಲ್ಲಿವೆ. ಇಂತಹ ನಮ್ಮ ಸೇನೆಗೆ ಆಶ್ರಯನಾಗಿ ನಿಂತು, ಭೀಷ್ಮನಂತೆ ನಡೆಸಿ, ಜಯತೀರವನ್ನು ಸೇರಿಸಿ, ವಿಜಯಸೌಧದಲ್ಲಿ ಕುರುರಾಜನನ್ನು ಕೂಡಿಸುವುದೆನ್ನ ಕರ್ತವ್ಯವಾಗಿದೆ. ಇಂತಹ ಕರ್ತವ್ಯ ಭಾರವೆಂದಿಗಾದರೂ ಹೊರಬೇಕಾಗುವುದೆಂದು ನಾನು ಮೊದಲೇ ತಿಳಿದಿದ್ದೆನು. ಭೀಷ್ಮನು ನಿಪಾತಿತನಾದ ಮೇಲೆ ಇನ್ನು ರಣರಂಗವೆನ್ನ ಕ್ರೀಡಾಂಗಣವಾಯಿತು. ನನ್ನ ಬಾಣಗಳಿಗೆ ಪಾಂಡವ ವೀರನಿಚಯವೇ ಲಕ್ಷ್ಯವಾಯಿತು. ಅವರನ್ನೆಲ್ಲ ಯಮಸುದನಕಟ್ಟದೆ ಬಿಡುವನಲ್ಲ ಈ ರಾಧೇಯ ! ನನಗೆ ಕೀರ್ತಿ ಬೇಕು. ರಾಜಾದಿ ತುಚ್ಛ ಸುಖಗಳಲ್ಲ ! ಪಾಂಡವರನ್ನು ನಾಶಪಡಿಸಿ ದುರ್ಯೋಧನನ್ನು ಸರ್ವ ಸರ್ವಂಸಹಾ ಸಾಮ್ರಾಟನೆನಿಸಿ ಆನಂದದಿಂದ ಪ್ರಾಸಾದಾಗ್ರಭಾಗದ ಹಂಸತಲ್ಪದಲ್ಲೋ ಅಥವಾ ವಿಕ್ರಮಿಸಿ ಅರ್ಜುನ ಹತನಾಗಿ ರಣರಂಗದ ವೀರಶಯನದಲ್ಲೋ ಮಲಗುವೆನು. ಅಂದಿನವರೆಗೂ ನನಗೆ ನಿದ್ರಾಹಾರಗಳೂ ಬೇಕಿಲ್ಲ. ಯುಧಿಷ್ಠಿರನು ಸತ್ಯಸಂಧನು; ವೃಕೋದರನು ಶತಸಹಸ್ರ ಗಜ ಸಮಬಲನು ; ಅರ್ಜುನನು ಇಂದ್ರಸಮ ಧನುರ್ಧರನು; ಯಮಳರೂ ಅಸಹಾಯ ಶೂರರು. ಅವರನ್ನು ದೇವತೆಗಳೂ ಜಯಿಸಲಾರರೆಂಬುದೆನಗೆ ಗೊತ್ತಿದೆ. ಅವರಿಗೆ ಸಹಾಯವಾಗಿರುವ ಸಾತ್ಯಕಿ, ಧೃಷ್ಟದ್ಯುಮ್ನಾದಿ ವೀರರೂ ಅಮರಂಜಯರಾಗಿರುವರು. ಅವರನ್ನೆದುರಿಸಿ ಪ್ರಾಣಗಳಿಂದ ಹಿಂದಿರುಗಿದವನಿಲ್ಲ. ತಪೋಬಲವನ್ನು ತಪೋಬಲದಿಂದಲೇ ಗೆಲ್ಲಲಹುದು; ಅಂತೆಯೇ ದೇಹಬಲವನ್ನು ದೇಹಬಲದಿಂದಲೇ ಗೆಲ್ಲಬೇಕು; ದೇಹ ತಪೋಬಲಗಳೆರಡೂ ಒಟ್ಟಾಗಿರುವ ಪಾಂಡವರನ್ನು ಅಂತಹ ಎರಡು ಬಲವಿರುವ ನಾನೇ ಗೆಲ್ಲಬೇಕಾಗಿದೆ" ಎಂದನು.

ಇಂತು ನುಡಿದ ಕರ್ಣನು ತನ್ನ ಸಾರಥಿಯನ್ನು ಕರೆದು 'ಸೂತ ! ಪಾಂಡವರನ್ನು ಗೆಲ್ಲಲು ಹೋಗಬೇಕಾಗಿದೆ. ನಮ್ಮವನಾದ ಪಿತಾಮಹನು ಅವರಿಗೂ ತಾತನು. ಅಂತಹ ಮಹಾನುಭಾವನನ್ನು ಅವರು ಅಂತು ವಂಚಿಸಿ ಕೆಡಹಿರುವುದನ್ನು ಕೇಳಿ ಕೆಂಡವಾಗಿದೆ ನನ್ನ ಮನ. ನನ್ನನ್ನು ಅನುಸರಿಸಿ ಕಾದಲು ಬರುವರೆಲ್ಲರೀಗ ನನ್ನ ಮಿತ್ರರು. ಸುಜನರು ಮಾಡಲು ಯೋಗ್ಯವಾದ ಶ್ಲಾಘ್ಯಕರ್ಮವನ್ನು ಇಂದು ಮಾಡಲಿರುವೆನು. ಸರ್ವ

ಶತ್ರುಗಳನ್ನು ಉನ್ಮೂಲಿಸಿ ಜಯವನ್ನು ಗಳಿಸುವುದೇ, ಶತ್ರು ಹತನಾಗಿ ಭೀಷ್ಮನನ್ನು ಅನುಸರಿಸಿ ಹೋಗುವದೋ ಆಗಲಿ ಮೂರನೆಯ ಮಾರ್ಗ ನನಗಿಲ್ಲ. ಹತಬಂಧು ಜನರ ಆಪ್ತ ಕಳತ್ರಮಿತ್ರರ ರುದಿತದಿಂದ ಮುದಿತರಾಗಿರುವ ಶತ್ರುಗಳನ್ನು ಸದೆಬಡಿಯುವುದೆನ್ನ ಆದ್ಯಕರ್ತವ್ಯ. ಧಾರ್ತರಾಷ್ಟ್ರನನ್ನು ಭೀಮನಿಂದ ಉಳಿಸುವುದು ದ್ವಿತೀಯ ಕರ್ತವ್ಯ. ದುರ್ಯೋಧನನು ಸಿಂಹಾಸನದಿ ಕೂಡಿಸುವುದು ತೃತೀಯ ಕರ್ತವ್ಯ. ಕವಚ ಶಿರಸ್ತ್ರಾಣಗಳನ್ನು ಸಿದ್ಧಪಡಿಸು ! ಧನುಸ್ತೂಣೀರಗಳನ್ನು ನನ್ನ ಕನಕ ರಥದಲ್ಲಿಡು ! ಹದಿನಾರು ಉಪಾಸಂಗಗಳನ್ನು ರಥ ನೀಡದಲ್ಲಿಡು ! ಅಸಿ, ಶಕ್ತಿ ಗದಾದಿ ಸಾಧನಗಳನ್ನು ಅಳವಡಿಸು! ನಾಗಕೇತನವನ್ನೆತ್ತಿ ದಿವ್ಯ ಪತಾಕೆಗಳಿಂದ ಅಲಂಕೃತವಾಗಿರುವ ನನ್ನ ರಥವನ್ನು ದಿವ್ಯ ತುರಗ ಚತುಷ್ಟಯಯುತವನ್ನಾಗಿಸಿ, ತಾ ! ದಧಿಪೂರ್ಣಕಾಂಸ್ಯ ಪಾತ್ರೆ, ಮಾಲೆಗಳು, ಔಷಧಗಳು ಎಲ್ಲವೂ ಸಜ್ಜಾಗಿರಲಿ ! ಸರ್ವಹರನಾದ ಮೃತ್ಯುವು ಅಪ್ರಮತ್ತವಾಗಿ ರಕ್ಷಿಸಿದರೂ, ಬಿಡದೆ ಕಿರೀಟಿಯನ್ನು ಕೆಡಹುವೆನು. ಮಿತ್ರದ್ರೋಹಿಗಳು ಸರಿದುಹೋಗಿ ! ದುರ್ಬಲರು ದೂರವಾಗಿರಿ ! ನಾನೊಬ್ಬನೇ ಪಾಂಡವ ವಾಹಿನಿಯನ್ನು ಶೋಷಿಸಿ, ಜಯಮಾಲೆಯನ್ನು ಕುರುರಾಜನಿಗರ್ಪಿಸುವೆನು ಎಂದನು.

ಕರ್ಣನ ಮಾತನ್ನಾಲಿಸಿ ಕುರುಸೇನೆಯ ಭಟರೆಲ್ಲ ಉತ್ಸಾಹಭರಿತರಾಗಿ ಸಿಂಹನಾದ ಮಾಡಿದರು. ಬಂಗಾರದ ರಥದಿ ಕೂತು, ವಾತಜವದಿಂದೋಡುವ ಕುದುರೆಗಳು ಮುನ್ನುಗ್ಗಲು ಹಾತೊರೆಯುತ್ತಿರಲು ಕರ್ಣನು ದ್ವಿತೀಯ ಸೂರ್ಯನಂತೆ ವಿರಾಜಿಸಿದನು. ಅವನ ಹಿಂದೆ ರಥ ತುರಗ ಪದಾತಿಗಳಿಂದ ಕೂಡಿದ ಕೌರವ ಸೇನೆ ಸಾಗರದಂತೆ ಘೂರ್ಣಿಸುತ್ತಾ ಹೊರಟಿತು.

ಕರ್ಣನು ವೀರಶಯನದಲ್ಲಿದ್ದ ಭೀಷ್ಮನನ್ನು ಸೇರಿ, ರಥದಿಂದಿಳಿದು, ಕಣ್ಣೀರಿಡುತ್ತ ಸಮೀಪಿಸಿದನು. ಕಾಲಿಗೆರಗಿ ನಿಂತು ಕೈ ಜೋಡಿಸಿ, ಕಂಬನಿ ತಡೆದರೂ ಬಿಡದೆ ಹರಿಯುತ್ತಿರಲು ಗದ್ಗದಿತಕಂಠನಾಗಿ 'ಭಾರತ ! ಕರ್ಣನು ನಮಿಸುತ್ತಿರುವನು. ಪ್ರಶಾಂತ ನಿರೀಕ್ಷಣನಾಗಿ ನನ್ನನ್ನು ಕರುಣಿಸು ! ಪುಣ್ಯವಂತರಿಗೆ ಜಯಕಾಲವಲ್ಲವೆಂದು ನಿನ್ನಂತಹ ಧರ್ಮಪರನಿಗಾಗಿರುವ ಶರಪಂಜರ ಶಯನವನ್ನು ಕಂಡು ನನಗನಿಸುತ್ತಿದೆ. ಕೋಶಸಂಗ್ರಹ ವ್ಯೂಹ ರಚನೆ, ಮಂತ್ರಾಲೋಚನೆ, ಪ್ರಹರಣಗಳಲ್ಲಿ ನಿನ್ನಂತಹ ಮಹಾವೀರನನ್ನು ನಾನು ಕಂಡಿಲ್ಲ. ಯಾರಿನ್ನು ಕುರುರಾಜನಿಗಾಸರೆಯಾಗಿ ನಿಲ್ಲುವವರು ? ಹಸಿದ ಹುಲಿಗಳಂತೆ ಮೇಲೆರಗಿ ಕೊಲ್ಲುವ ಪಾಂಡವರನ್ನು ತಡೆದು ಕಾಪಾಡುವರಾರೆಮ್ಮನ್ನು ? ಇನ್ನು ನೀನಿಲ್ಲದೆ ಅರ್ಜುನನು ರಣರಂಗದಿ ಸ್ವೇಚ್ಛಾ ವಿಹಾರಿಯಾದನು. ಉರಿದೆದ್ದ ಅಗ್ನಿ ಜ್ವಾಲೆಗಳಂತೆ ಅವನ ಬಾಣಗಳು ಧಾರ್ತರಾಷ್ಟ್ರರ ಮೇಲೆ ಬಿದ್ದು ಅವರನ್ನು ನಾಶಮಾಡುವವು. ಅಗ್ನಿಯಂತೆ ಉರಿಯುವ ಪಾರ್ಥನಿಗೆ ಕೃಷ್ಣನು ವಾಯುವಿನಂತೆ ಜೋಡಾಗುವನು. ಶಿವನನ್ನು ಮುಕ್ಕಣ್ಣನನ್ನು ಮೆಚ್ಚಿಸಿ ತಂದ ಪಾರ್ಥನ ಪಾಶುಪತಾಸ್ತ್ರದಿಂದ ನಮ್ಮನ್ನು ಉಳಿಸುವರಿಲ್ಲದಂತಾಯಿತು. ನಿನ್ನಂತಹವನಿಗೂ ಅಜೇಯನಾಗಿ ಉಳಿದಿರುವ ಪಾರ್ಥನನ್ನು ಇನ್ನಾರು ಗೆಲ್ಲಲಾಪರು. ತಾತ ! ನಿನ್ನ

ಆಶೀರ್ವಾದವಿರಲಿ! ಇಂದು ನಾನು ಅಂತಹ ಇಂದ್ರನಂದನನೊಡನೆ ಕಾದಿ ಜಯವನ್ನು ತರುವೆನು' ಎಂದು ಪ್ರಾರ್ಥಿಸಿದನು.

ಅವನ ವಚನವನ್ನಾಲಿಸಿ, ಆಲೋಚಿಸಿ ಭೀಷ್ಮನು ದೇಶಕಾಲೋಚಿತವಾಗಿ ಇಂತು ಉತ್ತರವಿತ್ತನು : 'ಕರ್ಣ ! ಹೋಗು ! ನದಿಗಳಿಗೆ ಸಾಗರನಂತೆ, ಜ್ಯೋತಿಗಳಿಗೆ ದಿವಾಕರನಂತೆ, ಸತ್ಯವಚನಗಳಿಗೆ ಸಜ್ಜನರಂತೆ, ಬೀಜಗಳಿಗೆ ವಸುಂಧರೆಯಂತೆ, ಭೂತಗಳಿಗೆ ಪರ್ಜನ್ಯನಂತೆ ನೀನು ನಿನ್ನವರಿಗೆ ಆಶ್ರಯನಾಗು ! ಶತ್ರುಗಳ ಗರ್ವವನ್ನು ಮುರಿ ! ಮಿತ್ರರಿಗಾನಂದವನ್ನು ತಂದುಕೊಡು ! ದೇವತೆಗಳಿಗೆ ವಿಷ್ಣುವಿನಂತೆ, ಕೌರವರಿಗೆ ಗತಿಯಾಗು ! ನೀನೇನು ಸಾಮಾನ್ಯವೇ ? ಹಿಂದೆ ಕಾಂಬೋಜರನ್ನು, ಅಂಬಷ್ಠ ವಿದೇಹ, ಗಾಂಧಾರ, ಮಾಗಧರನ್ನು ಏಕ ವೀರನಾಗಿ ಗೆದ್ದು ವಿಜಯಶ್ರೀ ಮಾಲೆಯನ್ನು ದುರ್ಯೋಧನನಿಗೆ ಹಾಕಿದವನಲ್ಲವೇ ? ದುರ್ಯೋಧನ ಹಿತವನ್ನೆಣಿಸಿ ನೀ ಮಾಡದ ಸಾಹಸವಿದೆಯೇ ? ದುರ್ಯೋಧನನಷ್ಟೇ ಪ್ರಿಯನಾಗಿರುವೆ ನಮ್ಮ ಕೌರವರಿಗೆಲ್ಲರಿಗೂ! ಒಳ್ಳೆಯ ಮನದಿಂದ ನುಡಿಯುವೆನು ಕೇಳು ! ಶತ್ರುಜನರಿಂದ ಕೂಡಿ ಕಡಿದಾಡು ! ದುರ್ಯೋಧನನಿಗೆ ಜಯವನ್ನು ಕೊಡು ! ನೀನು ನನಗೆ ಬೇರೆಯವನಲ್ಲ; ದುರ್ಯೋಧನನಂತೆ ನಿನ್ನನ್ನೂ ನಾನು ಪ್ರೀತಿಸುವೆನು. ಯೋನಿಜ ಬಂಧುಗಳಿಗೂ ಹೆಚ್ಚಾದವರು ಸುಜನರು, ಬಂಧು ಸ್ನೇಹವಳಿಸೀತು ! ಸುಜನ ಸ್ನೇಹವಳಿಯದಿರುವುದು. ಸತ್ಯಸಂಗರನಾಗಿ ಕೀರ್ತಿಯನ್ನು ಗಳಿಸು ! ನಡೆ !' ಎಂದು ಬೀಳ್ಕೊಟ್ಟನು.

ಕರ್ಣನು ಭೀಷ್ಮನಿಗೆ ವಂದಿಸಿ, ರಥವನ್ನೇರಿ, ರಣರಂಗವನ್ನು ಪ್ರವೇಶಿಸಿದನು. ರಣಕುತೂಹಲಿಯಾದ ಕರ್ಣನನ್ನು ನೋಡಿ ಕೌರವ ಯೋಧರು ಸಿಂಹನಾದವನ್ನು ಮಾಡಿ, ಉತ್ಸಾಹಭರಿತರಾದರು. ಆಗ ದುರ್ಯೋಧನನು ಕರ್ಣನಿಗಿಂತೆಂದನು : 'ಕರ್ಣ ! ಈಗ ನೀನು ರಣರಂಗವನ್ನು ಪ್ರವೇಶಿಸಿದುದರಿಂದ ನಮ್ಮ ಬಲವು-ನಾವೂ ಸನಾಥರಾದೆವು. ನನಗೆ ಹಿತವಾದುದಾವುದು ಚಿಂತಿಸು !' ಎಂದು ಕೇಳಿದ ರಾಜ ರಾಜನಿಗೆ ಕರ್ಣನಿಂತೆಂದನು: 'ಪುರುಷವ್ಯಾಘ್ರ ! ನೀ ನುಡಿದಂತೆ ಮಾಡುವ ಕಿಂಕರರು ನಾವು. ನಿನ್ನ ವಾಕ್ಯವನ್ನಾಲಿಸಿ, ಅದರಂತೆ ನಡೆಯಲು ನಾವು ಸಿದ್ಧರಾಗಿರುವೆವು. ಅನ್ಯಾಯವಾದ ವಚನವನ್ನು ನೀನೆಂದಿಗೂ ಆಡುವವನಲ್ಲ' ಆಗ ದುರ್ಯೋಧನನಿಂತೆಂದನು : 'ಕರ್ಣ ! ವಯಸ್ಸಿನಿಂದಲೂ ವಿಕ್ರಮದಿಂದಲೂ ಹಿರಿಯನಾದ ಭೀಷ್ಮನು ಇಷ್ಟು ದಿನ ಸೇನಾಪತಿಯಾಗಿ ಅವಕ್ರ ಪರಾಕ್ರಮಿಯಾಗಿ ಶತ್ರು ನಾಶವನ್ನು ಸಂಪಾದಿಸಿರುವನು. ಇಂಥವನಿಲ್ಲದೆ ಅಂತಹ ಸೇನಾನಿಯನ್ನು ಕಾಣದೆ ಕಾತರರಾಗಿರುವ ನಮ್ಮ ಕುಂದನ್ನು ನಿವಾರಿಸು ! ಕರ್ಣಧಾರನಿಲ್ಲದ ನೌಕೆಯಂತೆ ಸೇನಾಪತಿಯನ್ನು ಪೊಂದಿರದ ನಮ್ಮ ಸೇನೆ ದಿಕ್ಕೆಟ್ಟು ಕಂಪಿಸುತ್ತಿದೆ. ಅನಾಯಕನಾದ ಸೇನೆಯು ಭಯ ವ್ಯತ್ಯಯ ಪರಾಜಯ ಪಲಾಯನ ಪ್ರಮುಖ ದೋಷಗಳಿಗೆಡೆಯಾಗುವುದು, ಆದುದರಿಂದ ಶಾಂತನವನಂತಹ ಸಮರ್ಥ ಸೇನಾನಿಯನ್ನು ಸೂಚಿಸು ! ನಿನಗಿಷ್ಟವಾದವನನ್ನು ನಾವು ಶಿರಸಾವಹಿಸಿ, ಅವನ

ಆಜ್ಞೆಯಂತೆ ಸೇನೆಗಳನ್ನು ನಡೆಸುವೆವು.' ಕರ್ಣನಿಂತೆಂದನು: 'ರಾಜನ್, ಇಲ್ಲಿ ನೆರೆದಿರುವ ರಾಜನ್ಯರೆಲ್ಲರೂ ಸೇನಾಪತಿ ಪದಕ್ಕರ್ಹರೇ ಆಗಿರುವರು. ಕುಲದಿಂದ, ಬಲದಿಂದ, ಛಲದಿಂದ, ಜ್ಞಾನ ವಿಕ್ರಮಗಳಿಂದ ಯುಕ್ತರಾಗಿ ಆಹವ ರಂಗದಿ ಅನಿವರ್ತಿಗಳಾಗಿ ಕಾದುವ ಸಮರ್ಥರಾಗಿರುವರು. ಆದರೆ ವಿಶಿಷ್ಟ ಗುಣಸಂಪನ್ನನಾದ ಒಬ್ಬನನ್ನು ಸೇನಾಪತಿಯಾಗಿ ಆರಿಸಲಹುದಾಗಲಿ, ಎಲ್ಲರನ್ನಲ್ಲ. ಒಬ್ಬನನ್ನಾರಿಸಿದರೆ ಸ್ಪರ್ಧಾಳುಗಳಾದ ರಾಜನ್ಯರಿತರರು ಖಿನ್ನ ಮನಸ್ಕರಾಗುವರು: ಆಗ ಅಂತಹವರು ನಮ್ಮ ಹಿತಕ್ಕಾಗಿ ಹೆಣಗಾಡರು. ಸರ್ವ ಯೋಧರಿಗೆ ಆಚಾರ್ಯರು, ವೃದ್ಧರು, ಪೂಜ್ಯರೂ ಆದ ದ್ರೋಣಾಚಾರ್ಯರು ನಮ್ಮ ಸೇನಾನಿಯಾಗಲು ಅರ್ಹರಾಗಿರುವರು. ಶಸ್ತ್ರಧಾರಿ ಶಿರೋಮಣಿಯಾದ ಆಚಾರ್ಯರನ್ನು ಎದುರಿಸಿ ನಿಲ್ಲುವವರೀಲೋಕದಲ್ಲಿಲ್ಲ. ಸೇನಾ ಪ್ರಣೇತೃಗಳಲ್ಲಿ ಶಸ್ತ್ರಧಾರಿಗಳಲ್ಲಿ ಬುದ್ಧಿವಂತರಲ್ಲಿ ನೀತಿಶಾಸ್ತ್ರದಲ್ಲಿ ವ್ಯೂಹ ರಚನೆಯಲ್ಲಿ ಧೈರ್ಯಸ್ಥೈರ್ಯಗಳಲ್ಲಿ ನಿನ್ನ ಆಚಾರ್ಯರಿಗೆ ಸಮರಿಲ್ಲ. ಕಾರ್ತಿಕೇಯ, ವಿಷ್ಣು ಬೃಹಸ್ಪತಿ, ಶುಕ್ರ, ವಜ್ರಪಾಣಿಗಳಂತೆ ಅಜೇಯಪರಾಕ್ರಮಿಯಾದ ದ್ರೋಣರೇ ನಮ್ಮ ಸೇನಾಪತಿಯಾಗಲಿ.'

ದುರ್ಯೋಧನನು ಕರ್ಣವಚನದ ಸತ್ಯತೆಯನ್ನರಿತು ಸೇನಾ ಮಧ್ಯದಿ ವಿರಾಜಿಸುವ ದ್ರೋಣನಿಗಿಂತೆಂದನು: 'ಆಚಾರ್ಯ! ವರ್ಣ, ಕುಲ, ವಯೋ, ಬಲ, ವೀರ್ಯ, ದಾರ್ಢ್ಯ, ದಾಕ್ಷ್ಯ, ಅಧೃಷ್ಯತ್ವ, ಜ್ಞಾನ, ಜಯ, ತಪೋಯೋಗ ಪ್ರಮುಖ ಸರ್ವ ಸುಗುಣ ಖನಿಯಾಗಿ ನನ್ನ ಸೇನಾಪತಿಯಾಗಲು ಅರ್ಹನಾಗಿರುವೆ! ದೇವತೆಗಳನ್ನು ಇಂದ್ರನಂತೆ, ನಮ್ಮನ್ನು ಶತ್ರುಗಳ ದಾಳಿಯಿಂದ ಕಾಪಾಡು! ರುದ್ರರಲ್ಲಿ ಶಂಕರನು, ವಸುಗಳಲ್ಲಿ ಪಾವಕನು, ಯಕ್ಷರಲ್ಲಿ ಕುಬೇರನು, ಮರುತ್ತುಗಳಲ್ಲಿ ಇಂದ್ರನು, ವಿಪ್ರರಲ್ಲಿ ವಸಿಷ್ಠನು, ತೇಜಸ್ಸುಗಳಲ್ಲಿ ಭಾಸ್ಕರನು, ಪಿತೃಗಳಲ್ಲಿ ಧರ್ಮನು, ಜಲಚರಗಳಲ್ಲಿ ವರುಣನು, ನಕ್ಷತ್ರಗಳಲ್ಲಿ ಚಂದ್ರನು, ದೈತ್ಯರಲ್ಲಿ ಶುಕ್ರನು, ಶ್ರೇಷ್ಠ ನಾಯಕರಾಗಿರುವಂತೆ ನೀನು ನಮ್ಮ ಸೇನಾ ನಾಯಕನಾಗಿ ನಮ್ಮ ಜಯಸಂಪಾದಕನಾಗು! ನನ್ನ ಹನ್ನೊಂದಕ್ಷೌಹಿಣಿಯ ಸೈನ್ಯದಲ್ಲಿ ಉಳಿದಿರುವ ಆರಕ್ಷೌಹಿಣಿಗಳನ್ನು ನಿನ್ನ ವಶಕ್ಕೆ ಅರ್ಪಿಸುತ್ತಿರುವೆನು. ನಮ್ಮನ್ನು ನಡೆಸುತ್ತಾ ಮುಂದಾಳಾಗಿ ನಡೆವ ನಿನ್ನನ್ನುಸರಿಸಿ ನಾವು ವಿಜಯ ಸೀಮೆಯನ್ನು ಮುಟ್ಟುವೆವು. ಸಿಡಿಲಂತೆ ಬಡಿವ ನಿನ್ನ ಬಾಣಾಗ್ನಿಯಿಂದ ಶತ್ರು ಸೇನಾ ಕಕ್ಷವನ್ನು ಸುಟ್ಟು ಸಬಂಧು ಪರಿವಾರನಾದ ಯುಧಿಷ್ಠಿರನನ್ನು ರಣದಲ್ಲಿ ಜಯಿಸುವೆನು' ಆ ಮಾತಿಗೆ ಒಟ್ಟುಗೂಡಿಸಿ ಮಿಕ್ಕ ರಾಜನ್ಯರು ಜಯಜಯಧ್ವಾನಗಳನ್ನು ಮಾಡಿದರು. ಆಗ ದ್ರೋಣನು ದುರ್ಯೋಧನಾದಿಗಳ ವಚನಗಳಿಗೆ ಹಿಗ್ಗಿ 'ರಾಜನ್! ವೇದಗಳನ್ನು, ಷಡಂಗಗಳನ್ನು, ಅರ್ಥವಿದ್ಯೆಯನ್ನು, ನೀತಿ ಧರ್ಮಶಾಸ್ತ್ರಗಳನ್ನು, ಪಾಶುಪತಾದ್ಯಸ್ತ್ರಗಳನ್ನು ಚನ್ನಾಗಿ ಅರಿತಿರುವೆನು. ನೀನಂದ ಗುಣಗಳಿಗೆ ಅರ್ಹನೆನಿಸುವಂತೆ ಪಾಂಡವರೊಡನೆ ಕಡಿದಾಡುವನು. ಪಾರ್ಷತನಾದ ಧೃಷ್ಟದ್ಯುಮ್ನನು ನನ್ನನ್ನು ಕೊಲ್ಲಲು

ರುದ್ರವರ ಜನಿತನಾಗಿರುವನು. ಮಿಕ್ಕ ಪಾಂಡವೀ ಸೇನೆಯನ್ನು ಸೋಮಕ ಪಾಂಚಾಲರನ್ನು ಸಂಹರಿಸುವೆನು. ಪಾಂಡವರು ನನ್ನೊಡನೆ ನಿಂತು ಕಾದುವುದಿಲ್ಲ. ಶಿಷ್ಯರೇ ಅಲ್ಲದೆ ಅವಧ್ಯರೂ ಆದ ಅವರನ್ನು ನಾನು ಕೊಲ್ಲಲಾರೆನು ತಿಳಿ !' ಎಂದನು.

ದುರ್ಯೋಧನನು ಆಚಾರ್ಯನಿಗೆ ಸೇನಾಪತಿ ಪಟ್ಟಗಟ್ಟಿದನು. ಶಕ್ರಮುಖ ಸುರವೃಂದದಿಂದ ಕುಮಾರಸ್ವಾಮಿಯಂತೆ, ಕೌರವರಿಂದ ಪಟ್ಟಾಭಿಷಿಕ್ತನಾದ ಆಚಾರ್ಯನು ಕುರುಬಲದಿಂದ ಕೂಡಿ ಪಾಂಡವೀ ಸೇನೆಯನ್ನು ಮುತ್ತಲು ಹೊರಟನು. ವಾದಿತ್ರಶಂಖ ಘೋಷಗಳು ಮುಗಿಲು ಮುಟ್ಟಿದವು. ಆಚಾರ್ಯನಿಗೆ ಮಾಡಿದ ಜಯಘೋಷದಿಂದ ಪಾಂಡವ ಸೇನೆಯ ಕಿವಿಗಳು ಗಡಚಿಕ್ಕಿದವು. ಪುಣ್ಯಾಹ ಸ್ವಸ್ತಿವಾಚನ ಶಬ್ದಗಳಿಂದ ಉತ್ಸಾಹಭರಿತವಾದ ಕುರುಸೇನೆ ಗುರುವರನನ್ನು ಅನುಸರಿಸಿ ಹೊರಟಿತು. ಅಂದು ನವಮಿ ; ಮಧ್ಯಾಹ್ನ ಸಮಯವಾಗುತ್ತಿತ್ತು.

ಸೈಂಧವ ಕಳಿಂಗ ವಿಕರ್ಣರು ಬಲಗಡೆ ಇರಲು, ಸೈನ್ಯ ವ್ಯೂಹದ ಎಡಗಡೆ ಕೃಪ ಕೃತವರ್ಮ ಚಿತ್ರಸೇನ ವಿವಿಂಶತಿ ದುಶ್ಶಾಸನರಿದ್ದರು. ಶಕುನಿ ಕಾಂಬೋಜ ಮಾಲವ ವಸಾತಿ ಸೌವೀರ ವೀರರು ಕರ್ಣನನ್ನು ಅನುಸರಿಸಿ ಹಿಂದೆ ನಡೆದರು. ದುರ್ಯೋಧನನು ವ್ಯೂಹದ ಮಧ್ಯಭಾಗದಲ್ಲಿದ್ದನು. ಇಂದಿನವರೆಗೂ ರಣರಂಗದಿಂದ ದೂರವಿದ್ದು ಇಂದು ಕವಚ ಶಸ್ತ್ರ ಸನ್ನದ್ಧನಾಗಿ ಬರುವ ಕರ್ಣನನ್ನು ಕಂಡು ದುರ್ಯೋಧನಾದಿಗಳು ಭೀಷ್ಮ ಪಾತವ್ಯಸನವನ್ನು ಮರೆತು, ರಣೋತ್ಸಾಹಭರಿತರಾಗಿ ಮುನ್ನಡೆದರು. ದೇವಾದಿಗಳನ್ನು ಲೀಲಾಜಾಲವಾಗಿ ಗೆಲ್ಲುವ ಕರ್ಣನಿಗೆ ಬಡಪಾಂಡವರ ಲೆಕ್ಕವೇನೆಂದು ತಿಳಿದು, ಗರ್ಜಿಸುತ್ತಾ ಕುರು ಸೇನೆಯು ಶಕಟ ವ್ಯೂಹದಲ್ಲಿ ನಿಂತು ನಡೆದು ಬಂತು.

ಪಾಂಡವರು ಕ್ರೌಂಚವ್ಯೂಹದಲ್ಲಿ ಸೈನ್ಯಗಳನ್ನು ನಿಲ್ಲಿಸಿ ರಣಸನ್ನದ್ಧರಾದರು. ವ್ಯೂಹ ಮುಖದಲ್ಲಿ ಕಪಿಧ್ವಜದ ರಥದಲ್ಲಿ ವಾಸುದೇವ ಧನಂಜಯರು, ಗಾಳಿ ಕಿಚ್ಚುಗಳು ಜೋಡಾದಂತೆ ಬೆಳಗುತ್ತಿದ್ದರು. ಉನ್ನತ ಪ್ರಕಾಶಮಾನವಾದ ಕಪಿಕೇತನ, ಯೋಧಾಗ್ರಣಿಯಾದ ಅರ್ಜುನ, ಅವನಿಗೆ ಸಾರಥಿಯಾಗಿದ್ದ ಜನಾರ್ಧನ, ಅವನ ಕೈಲಿದ್ದ ಸುದರ್ಶನವೆಂಬ ನಾಲ್ಕು ರತಗಳಿಂದ ಶ್ವೇತವಾಹನವಾದ ರಥವು ಮುಂದೆ ನಡೆಯುತ್ತಾ ಭೀಮ ಭಯಂಕರವಾಗಿತ್ತು. ಅಂತಹ ಅರ್ಜುನನನ್ನು ಕರ್ಣನು ನೋಡಿದನು : ಕರ್ಣನನ್ನು ಅರ್ಜುನನೂ ನೋಡಿದನು. ಕ್ರೌಂಚ ಮುಖದಲ್ಲಿದ್ದ ಅರ್ಜುನನ ಹಿಂದೆ ಗ್ರೀವಾ ದೇಶದಲ್ಲಿ ಗದಾಪಾಣಿಯಾಗಿ ಭೀಮಸೇನನು, ಎರಡು ಪಕ್ಷಗಳಲ್ಲಿ ಧೃಷ್ಟದ್ಯುಮ್ನ ಸಾತ್ಯಕಿ ಸೌಭದ್ರರು, ಮಧ್ಯದಲ್ಲಿ ಧರ್ಮರಾಜನು, ಹಿಂದುಗಡೆ ವಿರಾಟ ದ್ರುಪದರು ನಡೆದು ಬಂದರು.

ಆಗ ತೋರಿದ ಉತ್ಪಾತಗಳಿಂದ ಉಭಯ ಸೈನಿಕರು ಭೀತರಾದರು. ಭೂಮಿಯು ಕಂಪಿಸಿತು. ಎದ್ದ ಧೂಳಿಯು ದಿವಾಕರನನ್ನು ಮುಚ್ಚಿತು. ಆಕಾಶದಿಂದ ರಕ್ತ ಮಾಂಸ ವೃಷ್ಟಿ ಸುರಿಯಿತು. ಗೃಧ್ರಶ್ಯೇನ ಬಕ ಕಂಕವಾಯಸಾದಿ ಪಕ್ಷಿಗಳು ಸೇನೆಯ ಮೇಲೆ ಅಪ್ರದಕ್ಷಿಣವಾಗಿ, ಕೂಗುತ್ತಾ ಹಾರಾಡಿದವು. ಸಿಡಿಲು ತುಂಡುಗಳು ಬಿದ್ದವು. ನರಿಗಳು

ವಿಕಾರವಾಗಿ ಕೂಗುತ್ತಾ ಕುರು ಸೇನೆಯನ್ನು ಎಡಗಟ್ಟಿಸುತ್ತಿದವು. ಸೂರ್ಯ ಚಂದ್ರಮಂಡಲಗಳ ಪರಿವೇಕ್ಷಗಳು ದೊಡ್ಡದಾಗಿದ್ದವು.

ಯುದ್ಧವು ಪ್ರಾರಂಭವಾಯಿತು. ಜಯಾಕಾಂಕ್ಷಿಗಳಾದ ವೀರರು ಪ್ರಾಣಕ್ಕಂಜದೆ ಕಡಿದಾಡಿದರು. ಬಾಹಾ ಬಾಹವಿ, ಖಡ್ಗಾ ಖಡ್ಗಿ, ಕಚಾ ಕಚಿ, ಮುಷ್ಟಾ ಮುಷ್ಟಿಕವಾಗಿ ಹೋರಾಡುವ ಪದಾತಿ ಗಣವು ವೀರಾಲಾಪದಿಂದ ಗಗನವನ್ನು ಪ್ರತಿಧ್ವನಿಸುವಂತೆ ಮಾಡಿ, ತಾವು ಆ ಶಬ್ದದಿಂದ ಕರೆಯಲ್ಪಟ್ಟವರಂತೆ ವೀರಸ್ವರ್ಗವನ್ನು ಸೇರಪೋದರು. ದ್ರೋಣನ ಬಾಣಾಹತಿಗೆ ತಾಳಲಾರದೆ ಪಾಂಚಾಲ ಸೇನೆ ಒಡ್ಡು ಹರಿದ ಕೆರೆಯಂತೆ ಹರಿದು ಓಡಿತು. ಧೃಷ್ಟದ್ಯುಮ್ನನು ಅವರಿಗೆ ಧೈರ್ಯ ತುಂಬಿ, ಹಿಂದಿರುಗಿಸಿ, ಭಯಂಕರ ಶಸ್ತ್ರವರ್ಷದಿಂದ ಕುರು ವೀರರನ್ನು ನಾಶಮಾಡಿದನು. ದ್ರೋಣನ ಬಿಲ್ಲು ಅಲಾತಚಕ್ರದಂತೆ ತಿರುಗುತ್ತಾ ಬಾಣ ಜ್ವಾಲೆಗಳನ್ನು ಪಸರಿಸಿ, ಶತ್ರು ಸೇನಾಂತಕಾರಿಯಾಗಿತ್ತು.

ಧರ್ಮರಾಜನ ಆಜ್ಞೆಯಂತೆ ಧೃಷ್ಟದ್ಯುಮ್ನ ಧನಂಜಯರು ಆಚಾರ್ಯರನ್ನು ತಡೆದು ಕಾದಿದರು. ಮಿಕ್ಕ ಪಾಂಡವ ವೀರರು ಭೀಮಸೇನನನ್ನು ಅನುಸರಿಸಿ, ತಮ್ಮ ಯೋಗ್ಯತೆಗೆ ತಕ್ಕಂತೆ ಹೋರಾಡಿದರು. ವೃದ್ಧನಾದರೂ ತರುಣನಂತೆ ದೃಢನಾಗಿ ಕಡಿದಾಡುವ ದ್ರೋಣನನ್ನು ಎದುರಿಸಿ ನಿಂತವರು ಉತ್ತರಕ್ಷಣದಲ್ಲಿ ಶಾಶ್ವತ ವಿಶ್ರಾಂತಿಯನ್ನು ಪಡೆಯುತ್ತಿದ್ದರು. ಆತನ ಬಾಣಗಳಿಂದ ಭೂನಭೋಂತರಾಳಗಳು ಮುಚ್ಚಲ್ಪಟ್ಟವು. ನಾಮವನ್ನುಚ್ಚರಿಸಿ ಬಿಟ್ಟ ಆಚಾರ್ಯನ ಶರಜಾಲದಿಂದ ಯಮ ಮಂದಿರವು ಜೀವಜಾಲ ನಿಬಿಡವಾದಂತೆ ರಣಮಂಡಲವು ಶವಜಾಲ ಪರಿವೃತವಾಯಿತು. ದ್ರೋಣನ ರಥ ಘೋಷ ಧನುಷ್ಟಂಕಾರ, ಬಾಣಪೂತ್ಕಾರಗಳಿಂದ ದಿಗಂತರವು ಆಕ್ರಾಂತವಾಯಿತು. ಮಹೀಮಂಡಲವು ರಕ್ತ ಮಾಂಸಾಕ್ರಾಂತವಾಯಿತು ಪದಾತಿ ರಥ ಗಜ ತುರಗಗಳಲ್ಲಿ ಎರಡಂಗುಳದ ಪ್ರದೇಶವಾದರೂ ದ್ರೋಣ ಬಾಣವಿದ್ಧವಾಗದೆ ಉಳಿದುದಿಲ್ಲ. ದ್ರೋಣನು ಕೈಕಯ ಪಾಂಚಾಲ ರಾಜರನ್ನು ಐದು ಜನರನ್ನು ಸಂಹರಿಸಿ ಧರ್ಮರಾಜನನ್ನು ಮುಟ್ಟಲು ಮುನ್ನಡೆಯುವುದನ್ನು ಕಂಡು, ಭೀಮಸೇನ ಧನಂಜಯರು ಅವನಿಗೆ ಅಡ್ಡವಾಗಿ ಬಂದು ನಿಂತರು. ಸಾತ್ಯಕಿ, ಧೃಷ್ಟದ್ಯುಮ್ನ, ಶೈಬ್ಯ, ಕಾಶಿರಾಜರೂ ಗರ್ಜಿಸುತ್ತಾ ಆಚಾರ್ಯನನ್ನು ಬಾಣಗಳಿಂದ ಪೀಡಿಸಿದರು. ದ್ರೋಣನು ಅವರನ್ನೆಲ್ಲರನ್ನು ಐದೈದು ಬಾಣಗಳಿಂದ ಹೊಡೆದನು. ಇಂತು ಪ್ರತಿ ವೀರರಿಲ್ಲದೆ ಹೋರಾಡಿದ ದ್ರೋಣಾಚಾರ್ಯನು ಇಂದು (ತ್ರಯೋದಶಿ) ಸಂಜೆ ಧೃಷ್ಟದ್ಯುಮ್ನನಿಂದ ಹತನಾದನು. ಕ್ರೂರ ಕರ್ಮನಾದ ಪಾರ್ಷತನ ಕತ್ತಿಯ ಪೆಟ್ಟಿಗೆ ಸಿಕ್ಕು ಆಚಾರ್ಯನು ಶರೀರವನ್ನು ತ್ಯಜಿಸಿದನು. ಆತನ ಮೃತಿಯನ್ನು ಕಂಡು ಪಾಂಡವರಿಗೆ ಧಿಃಕ್ಕಾರವನ್ನಿಟ್ಟು ಕೌರವ ಸೈನಿಕರು ದೀನರಾಗಿ ಹಿಂದಿರುಗಿದರು. ಪಾಂಡವರು ಹರ್ಷಭರಿತರಾಗಿ ಜಯಧ್ವಾನಗಳನ್ನು ಮಾಡುತ್ತಾ ತಮ್ಮ ಶಿಬಿರಕ್ಕೆ ಹೋದರು. ನಿನಗೀ ವಿಷಾದ ವಾರ್ತೆಯನ್ನರುಹಲು ನಾನಿಲ್ಲಿಗೆ ಬಂದೆನು. ಆ ಮಾತನ್ನಾಲಿಸಿ ಧೃತರಾಷ್ಟ್ರನು ಶೋಕ ಮೋಹ ವಿಷಾದಗಳು

ಮುಪ್ಪುರಿಯಾಗಿ ಮನದಿ ಮೂಡಲು ಮೂರ್ಛೆ ಬಿದ್ದನು. ಅಂತಃಪುರದ ನಾರೀಜನರು ಅವನಿಗೆ ಶೈತ್ಯೋಪಚಾರಗಳನ್ನು ಮಾಡಿ, ಎಚ್ಚರಗೊಳಿಸಿದರು; ಎತ್ತಿ ತಂದು ಸಿಂಹಾಸನದಿ ಕೂಡಿಸಿದರು. ಮಹಾರಾಜನಿಗೆ ಜಯಾಶೆ ದೂರವಾಯಿತು. ನಿಟ್ಟುಸಿರನ್ನಿಟ್ಟು ನಡುಗುತ್ತಾ ಮತ್ತೆ ಗಾವಲ್ಗಣಿಯನ್ನು ನೋಡಿ ಅವನಿಂತೆಂದನು:

"ಸಂಜಯ ! ಆಚಾರ್ಯನು ಎಂತು ಹತನಾದನು ? ಪ್ರಮತ್ತನಾಗಿರಲು ನೋಡಿ ಕಡುಖೂಳರು ಕೆಡಹಿದರೇ ? ಪಾಪಿ ಪಾರ್ಷತನು ಅವನನ್ನು ಕೊಂದನೇ ? ಪೌರುಷವೆಷ್ಟಿದ್ದರೇನು ? ಅದು ದೈವಬಲಕ್ಕೆ ಎದುರಲ್ಲವೆಂದು ತಿಳಿದಿರುವೆನು. ದ್ರೋಣನ ಮೃತಿಯನ್ನು ಕಿವಿಯಾರ ಕೇಳಿ ಇನ್ನೂ ಬದುಕಿರುವೆನೆಂದರೆ ಯಾರಿಗೆ ಯಾರಿಲ್ಲ, ಯಾರ ಹಿಂದೆ ಯಾರೂ ಯಾರೂ ಹೋಗುವುದಿಲ್ಲವೆಂಬ ಮಾತು ನಿಶ್ಚಯವೆಂದು ತೋರುತ್ತದೆ. ನನ್ನ ಗುಂಡಿಗೆ ಕಲ್ಲುಗುಂಡಿನಿಂದ ಮಾಡಿರಬೇಕು, ಇಲ್ಲದಿರೆ ದ್ರೋಣನಂತಹ ಪರಮಾಪ್ತನ ಮೃತಿಯನ್ನು ಕೇಳಿಯೂ ಒಡೆಯದಿದೆಯಲ್ಲ !

ವೇದವಿದ್ಯೆ ಧನುರ್ವಿದ್ಯೆಗಳಲ್ಲಿ ಚಾತುರ್ಯವನ್ನು ಗಳಿಸಬೇಕೆಂಬ ರಾಜಕುಮಾರರಿಗೆ ಆಶ್ರಯನಾಗಿದ್ದ ಆಚಾರ್ಯನು ಮೃತನಾದನೇ ? ದುಷ್ಟ ಪ್ರತಿಷೇಧನು, ಧರ್ಮರಕ್ಷಕನು ಆದ ದ್ವಿಜವರನು ಮೃತನಾದನೇ ? ಯಾರಲ್ಲಿ ಜಯಾಶೆಯಿಟ್ಟು ನನ್ನ ಪುತ್ರರು ರಣ ಕಣಕ್ಕಿಳಿದರೋ, ಯಾರ ಶೋಣಾಶ್ವಗಳು ಗಜ ರಥಿಕ ಭಟರಿಗೆ ಹೆದರದೇ ರಣರಂಗದಲ್ಲಿ ಮುನ್ನುಗುತ್ತಿದ್ದವೋ, ಯಾರ ಕನಕರಥವು ಪಾಂಡವಾನಿಕದಲ್ಲಿ ಅಪ್ರತಿಹತವಾಗಿ ಸಂಚರಿಸಿತೋ, ಯಾರ ಚರಣಾರವಿಂದವನ್ನು ಸ್ಮರಿಸಿ ಧಾನುಷ್ಕರು ಬಿಲ್ಲನ್ನೆತ್ತುವರೋ, ಯಾರ ಬಾಣಗಳ ವೇಗವನ್ನು ಸಹಿಸಲಾರದೆ ಯೋಧವರರು ಪಲಾಯನಗೈಯುತ್ತಿದ್ದರೋ ಅಂತಹ ದ್ರೋಣನು ಮೃತನಾದನೇ ? ದಿವ್ಯಾಸ್ತ್ರವೇದಿಯು, ಪರಮರ್ಮ ಭೇದಿಯು, ಶಕ್ರಸಮ ವಿಕ್ರಮನು, ವಿಪ್ರ ಧರ್ಮಾನತಿಕ್ರಮನು ಆದ ಧನುರಾಚಾರ್ಯನು ಮೃತನಾದನೇ ?

ಯಾರು ಕೊಂದರಾ ಮಹಾನುಭಾವನನ್ನು ? ಧರ್ಮಜನೇ ? ಇಲ್ಲ, ಅರ್ಜುನನೇ ? ಇಲ್ಲ, ಭೀಮಸೇನನೇ ? ಎಂದಿಗೂ ಅಲ್ಲ, ಧೃಷ್ಟದ್ಯುಮ್ನನೇ ಇರಬೇಕು ! ಆ ಪಾಂಚಾಲಾಪಸದನು ಕಿರೀಟಿಯ ಸಹಾಯದಿಂದ ಇಂತಹ ಕ್ರೂರ ಕಾರ್ಯವನ್ನು ಸಾಧಿಸಿರಬೇಕು. ಶಿಷ್ಯರೆಂದು ಕರುಣಿಸಿ ಉಪದೇಶಿಸಿದ ದ್ರೋಣನಿಗೆ ಕೃತಘ್ನರಾಗಿ ಪಾಂಡವರು ಎಂತಹ ಅಕೃತ್ಯವನ್ನು ಮಾಡಿ ದ್ರೋಹವೆಸಗಿದರು ! ಪಿಪೀಲಿಕೆಗಳು ಕೂಡಿ ಭುಜಗವನ್ನು ಮುತ್ತಿ ಕೊಂದಂತೆ, ಕ್ಷುದ್ರ ಮತ್ಸ್ಯಗಳು ತಿಮಿಯನ್ನು ಸಂಹರಿಸಿದಂತೆ, ಪಾಂಡವರು ಆಚಾರ್ಯನನ್ನು ಕೊಂದರಲ್ಲ ! ಸಂಜಯ ! ನನಗೆ ದ್ರೋಣನು ಮೃತನಾದನೆಂದರೆ ನಂಬಿಕೆಯೇ ಹುಟ್ಟದಲ್ಲ ! ಉದ್ಯುತ್ಸೂರ್ಯನಂತೆ ಸಹಸ್ರ ಚಂಡಕಾಂಡನಾಗಿ ಮೆರೆವ ದ್ರೋಣನು ಅಸ್ತಂಗತನಾದನೇ ? ಯಾರವನ ಮೇಲೇರಿ ಬಂದರು ? ಯಾರು ರಕ್ಷಿಸಲು ಯತ್ನಿಸಿದರು ? ಮಹಾಕಾಯನು, ಮಹೋತ್ಸಾಹನು, ಮಹಾಬಲನೂ ಆದ ಭೀಮಸೇನನನ್ನು ದ್ರೋಣನ ಸಮೀಪ

ಸೇರದಂತೆ ಯಾರು ತಡೆದರು ? ಏಕೈಕ ವೀರನಾಗಿ ಘೋರಚಕ್ಷುಗಳಿಂದಲೇ ನಮ್ಮ ಬಲವನ್ನೆಲ್ಲ ಸುಡಲು ಸಮರ್ಥನಾದ ಧರ್ಮರಾಜನನ್ನು ಯಾರು ತಡೆದರು ? ಶರವರ್ಷವನ್ನು ಸುರಿಸಿ, ಗಾಂಢೀವ ಟಂಕಾರದ ಸಿಡಿಲನ್ನು ಬಡಿದು, ಕಿರೀಟದ ಮಣಿಕಾಂತಿಯ ಮಿಂಚನ್ನು ಮೆರೆಸುವ ಇಂದ್ರತನುಜನನ್ನು ಯಾರು ತಡೆದರು ? ವಿಷ್ವಕ್ಸೇನನೇ ಸಾರಥಿಯಾಗಿ, ಧನಂಜಯನೇ ಯೋಧನಾಗಿ, ಗಾಂಢೀವವೇ ಬಿಲ್ಲಾಗಿ, ಕಪಿರಾಜನೇ ಕೇತನವಾಗಿ, ಭೀಮಸೇನನೇ ಪುರೋಗಾಮಿಯಾಗಿ ಮೆರೆವ ರಥವನ್ನು ತಡೆಯುವ ಧೀರರು ಮೂರ್ಲೋಕದಲ್ಲಿಲ್ಲ. ಸುಕುಮಾರ ಶೂರನಾದ ನಕುಲನನ್ನು ಯಾರು ತಡೆದರು ? ಅಪರಾಜಿತನೂ ಆರ್ಯ ವ್ರತಪರನೂ ಆದ ಸಹದೇವನನ್ನು ಯಾರು ತಡೆದರು ? ಧನಂಜಯ ಶಿಷ್ಯನು, ಸಖನು, ಶ್ರೀಕೃಷ್ಣಸಮ ಶೂರನು ಆದ ಸಾತ್ಯಕಿಯನ್ನು, ಉತ್ತಮ ಕರ್ಮನಾದ ಉತ್ತಮೌಜನನ್ನು, ಮಹಾರಥವರನಾದ ಧೃಷ್ಟಕೇತುವಿನನ್ನು, ನಮ್ಮವರು ತಡೆದು ಆಚಾರ್ಯನನ್ನು ಕಾಪಾಡಲಾರದಾದರೇ ? ವೀರ್ಯದಲ್ಲಿ ವಾಸುದೇವನೋ, ಬಲದಲ್ಲಿ ಭೀಮನೋ, ವಿಕ್ರಮದಲ್ಲಿ ವಿಜಯನೋ, ಬುದ್ಧಿಯಲ್ಲಿ ಬೃಹಸ್ಪತಿಯೋ ಎನಿಸಿರುವ ಅಭಿಮನ್ಯುವಿನೊಡನೆ ಯಾರು ಕಾದಿದರು ? ಅಯೋನಿಜನು, ಅಗ್ನಿಸಮ ವೀರ್ಯನು, ಅನಿವಾರ್ಯ ಧೈರ್ಯನು ಆದ ಧೃಷ್ಟದ್ಯುಮ್ನನು ದ್ರೋಣಾಭಿಮುಖನಾಗಿ ಬರುವಾಗ ಯಾರಾರು ಮುತ್ತಿ ಅವನನ್ನು ತಡೆದರು ? ಹತ್ತಶ್ವಮೇಧಗಳನ್ನು ಗಂಗಾತೀರದಿ ಮಾಡಿ ಭೂರಿ ದಕ್ಷಿಣೆಗಳನ್ನಿತ್ತ ಉಶೀನರನ ಕುಲಭೂಷಣನಾದ ಶಿಬಿ ಪುತ್ರ ಶೈಬ್ಯನನ್ನು ಯಾರು ತಡೆದರು ? ವಿರಾಟ ದ್ರುಪದರು ವೃದ್ಧರಾದರೂ ತರುಣರಕಿಂತಲು ಉತ್ಸಾಹಶಾಲಿಗಳು. ಆ ಮಹಾರಥರನ್ನು ಯಾರು ತಡೆದರು ? ವೃಕೋದರ ಪುತ್ರನು, ಅವನಂತೆ ಮಹಾಬಲನು, ಮಹಾಯುದ್ಧ ವಿಶಾರದನು ಆದ ಘಟೋತ್ಕಚನನ್ನು ಯಾರು ತಡೆದರು ?

ಶಾರ್ಙಧನುರ್ಧರನು, ಅನನ್ಯಾಶ್ರಯನು, ಲೋಕನಾಥನು, ಜಗದ್ಗುರುವು, ದಿವ್ಯಮಂಗಳ ವಿಗ್ರಹನು ಆದ ಶ್ರೀಕೃಷ್ಣನು ಹಿತಪಾಲಕನಾಗಿರುವಾಗ ಇನ್ನೆಂತು ಪಾಂಡವರಿಗೆ ಸೋಲು ? ಶ್ರೀಶನ ದಿವ್ಯಕರ್ಮಗಳನ್ನು ನಾನು ಮಹಾಮತಿಗಳಿಂದ ಕೇಳಿ ತಿಳಿದಿರುವೆನು. ಸಂಜಯ ! ಲೋಕೋತ್ತರ ದಿವ್ಯಕರ್ಮ ನಿಪುಣನಾದ ಶ್ರೀಕೃಷ್ಣನ ಮಹಿಮೆ ಅಗಾಧವಾಗಿದೆ. ಗೋಕುಲದಿ ಬಾಲನಾಗಿ ಬೆಳೆವಾಗಲೇ ಅದ್ಭುತಾನೇಕ ಪರಾಕ್ರಮಗಳನ್ನು ತೋರಿರುವನಂತೆ ! ಕೇಶಿ ಎಂಬ ಹಯಾಸುರ, ಅರಿಷ್ಟನೆಂಬ ವೃಷಾಸುರ, ಮುರದೈತ್ಯ, ಕೌಂಸ, ಶಿಶುಪಾಲ ಮೊದಲಾದ ಪರಾಕ್ರಮಶಾಲಿಗಳು ಅವನಶೌರ್ಯಾಗ್ನಿಗೆ ಶಲಭಗಳಂತಾದರು. ಮಹಾತೇಜಸ್ವಿಯೂ ಚಂದಕೋಪನನೂ ಆದ ದುರ್ವಾಸನನ್ನು ಮೆಚ್ಚಿಸಿ ವರವನ್ನು ಪಡೆಯಲು ಶ್ರೀಕೃಷ್ಣ ರುಕ್ಮಿಣಿಯರಿಗಲ್ಲದೆ ಮತ್ತಿನ್ನಾರಿಗೆ ಶಕ್ಯವು ? ನನ್ನ ಮಗನೂ ಮೆಚ್ಚಿಸಿ, ವರ ಯಾಚಿಸಿ, ಪ್ರತಿಫಲವಾಗಿ ಶಾಪವನ್ನೇ ಪಡೆದನು. ಶ್ರೀಕೃಷ್ಣನು ಜರಾಸಂಧನಂತಹ ವೀರನನ್ನು ಭೀಮನಿಂದ ಉಪಾಯವಾಗಿ ಕೊಲ್ಲಿಸಿದನು. ಸಮುದ್ರ ಮಧ್ಯದಲ್ಲಿ ಮಹಾನಗರವನ್ನು ನಿರ್ಮಿಸಿದನು.

ರುದ್ರವರ ಮತ್ತನಾದ ಸಾಲ್ವನನ್ನೂ ಸೌಭವಿಮಾನವನ್ನೂ ನಾಶಪಡಿಸಿದನು. ದಂಡೆತ್ತಿ ಬಂದ ಕಾಲಯವನನನ್ನು ಕಾಲಯಮನ ಕಡೆ ಕಳಿಸಿದನು. ಪಂಚಜನನನ್ನು ಪಂಚತ್ವಹೊಂದಿಸಿದನು. ವೈನತೇಯ ವಾಹನನಾಗಿ ನಂದವನದ ಪಾರಿಜಾತವನ್ನು ತರುವಾಗ ದೇವೇಂದ್ರ ಶಂಕರಾದಿ ಲೋಕಪಾಲರನ್ನು ಗೆದ್ದು ಅವರ ಗರ್ವ ನಿರ್ವಾಪಕನಾದನು. ಎಂದಾದರೂ ಶ್ರೀಕೃಷ್ಣನನ್ನು ಇಂತಹವನು ಗೆದ್ದನೆಂಬ ಸುದ್ದಿಯನ್ನಾರಾದರೂ ಕೇಳಿರುವರೇ ? ಸಭೆಯಲ್ಲಿ ಪಾಂಚಾಲಿಗೆ ಅಕ್ಷಯವಸನವಿತ್ತುದೊಂದಾಶ್ಚರ್ಯ ! ನನ್ನಂತಹ ಕುರುಡನಿಗೆ ದಿವ್ಯನೇತ್ರವನ್ನಿತ್ತು ತನ್ನ ದಿವ್ಯರೂಪವನ್ನು ತೋರಿಸುವದೊಂದಾಶ್ಚರ್ಯ ! ಅಸ್ತ್ರವನ್ನು ಹಿಡಿಯದೆ ಹದಿನೈದು ದಿನಗಳಿಂದ ಪಾಂಡವರಿಗೆ ಬೆಂಗಾವಲಾಗಿದ್ದು ಅವರನ್ನು ಗೆಲಿಸುತ್ತಿರುವು-ದೊಂದಾಶ್ಚರ್ಯ ! ಎಷ್ಟು ಹೇಳಲಿ ? ಅನಂತಾಶ್ಚರ್ಯಮಯನಾದ ಶ್ರಮಕರ್ಷಿತರಾದರೆಂದರೆ ನೋಡಿ ಸುಮ್ಮನಿರುವನಲ್ಲ ಯಾದವೇಶ. ನಾಗಾಯತಬಲನಾದ ಬಲರಾಮ, ಉಲ್ಮಕ, ನಿಶಠ, ಗದ ಸಾರಣ, ಸಾಂಬ, ಅನಿರುದ್ಧ ಪ್ರದ್ಯುಮ್ನ, ಪೃಥು, ವಿಪೃಥು ಮೊದಲಾದ ಯಾದವ ವೀರರು ಅಸಮಾನಬಲರು. ಅವರೆಲ್ಲರು ಅವನ ಕಣ್ಣಸನ್ನೆಯಂತೆ ನಡೆವರು ಶ್ರೀಕೃಷ್ಣನೇ ಯುದ್ಧಮಾಡಲು ನಿಂತನೆಂದರೆ ಇನ್ನು ಕೌರವರು ಉಳಿಯರೆಂದು ತಿಳಿ ! ಎಂತಾಲೋಚಿಸಿದರೂ ಕೌರವರು ಜಯಿಸುವ ಬಗೆ ಕಾಣದಾಗಿದೆ. ಅರ್ಜುನ ಭೀಮಸೇನರೂ ಅಪರಾಜಿತರಾಗಿರುವರು. ಅರ್ಜುನನು ಕೃಷ್ಣನ ಜೀವನಾಗಿರುವನು. ಕೃಷ್ಣನು ಅರ್ಜುನನ ಸ್ವಾಮಿಯಾಗಿರುವನು. ಅರ್ಜುನನಲ್ಲಿ ಕೀರ್ತಿ ಇದೆ; ಭೀಮಸೇನನಲ್ಲಿ ಬಲವಿದೆ; ಧರ್ಮನಲ್ಲಿ ಧರ್ಮವಿದೆ; ನಕುಲನಲ್ಲಿ ಶೌರ್ಯವಿದೆ; ಸಹದೇವನಲ್ಲಿ ನೀತಿ ಇದೆ. ವಿಜಯಭೂತಿ ನೀತಿಗಳು ಧ್ರುವವಾಗಿರಲು ಶ್ರೀಕೃಷ್ಣಾನುಗ್ರಹವೇ ಕಾರಣವು. ಅದು ಅವರಲ್ಲಿ ಅಮಿತವಾಗಿದೆ.

ಇಂತಹ ಶ್ರೀಕೃಷ್ಣನು ಕೌರವರನ್ನು ನಾಶಪಡಿಸಲು ಕಟಿಬದ್ಧನಾಗಿದ್ದಾನೆ. ಇನ್ನು ನಮ್ಮವರು ಉಳಿಯರು. ಅಸ್ತ್ರ ಶಸ್ತ್ರಗಳವರನ್ನು ಸಂರಕ್ಷಿಸಲಾರವು. ಸೈನ್ಯವಿಸ್ತಾರವು ಅವರನ್ನು ಕಾಪಾಡಲಾರದು. ಯುಧಿಷ್ಠಿರನ ಸಂಪತ್ತನ್ನು ಕಂಡು ಅಸೂಯೆಯಿಂದ ಹೊತ್ತಿಸಿದ ವೈರಾಗ್ನಿ ಇಂದು ಉರಿದೆದ್ದು ತದಾಶ್ರಯರಾದ ಕೌರವರನ್ನು ಕೋಟರಾಗ್ನಿ ವೃಕ್ಷವನಂತೆ ನಾಶ ಮಾಡುತ್ತಿದೆ. ಭೀಷ್ಮ ದ್ರೋಣರು ಹತರಾದ ಮೇಲೆ ಇನ್ನೇಕೆ ಜಯಾಶೆ ? ಕಾಲಬಲವಿಲ್ಲದವನು ಕೈಲಿ ಹಿಡಿದ ಹುಲ್ಲುಕಡ್ಡಿಯೂ ಹಾವಾಗಿ ಹೊಡೆಯುವುದು. ಸಂಜಯ ! ಇದು ಯಾರ ವೀರ್ಯದ ಫಲವೂ ಅಲ್ಲ ! ಧರ್ಮವೇ ಕೋಪದಿಂದ ಉರಿದೆದ್ದು ಅಧರ್ಮಿಗಳನ್ನು ಸುಡುತ್ತಲಿದೆ. ಮನುಜನೊಂದು ಚಿಂತಿಸಿದರೆ ಮಾಧವನಿನ್ನೊಂದು ಮಾಡುವನು. ಅಪರಿಹಾರ್ಯವಾದ ಅನರ್ಥವಿದು. ನನಗಂತೂ ದಿಕ್ಕು ತೋಚದಂತಾಗಿದೆ. ಏನು ಮಾಡಲಿ ?' ಎಂದು ಗೋಳಿಟ್ಟ ಮಹಾರಾಜನಿಗೆ ಸಂಜಯನು 'ರಾಜನ್ ! ಚಿಂತಿಸಿ ಫಲವಿಲ್ಲ, ಕೇಳು. ಪ್ರತ್ಯಕ್ಷವಾಗಿಯೂ, ವ್ಯಾಸದೇವನ ವರದಿಂದಲೂ ತಿಳಿದುಬಂದ ವೃತ್ತಾಂತವನ್ನು ವಿವರವಾಗಿ ಹೇಳುವೆನು' ಎಂದನು.

## ೨. ಏಕಾದಶ ದಿನ ಯುದ್ಧ- ದ್ರೋಣ ವಿಜೃಂಭಣ (ನವಮಿ)

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು. ಸಂಜಯನು ಐದು ದಿನವು ರಣರಂಗದಲ್ಲಿದ್ದು ದ್ರೋಣನ ಮೃತಿಯಿಂದ ವಿಹ್ವಲನಾಗಿ, ಧೃತರಾಷ್ಟ್ರನಿಗೆ ಅದನ್ನು ತಿಳಿಸಿದನು. ಅವನು ಕೇಳಲಾಗಿ, ವಿವರವಾಗಿ ಇಂತು ನಿರೂಪಿಸಿದನು.

ಭಾರದ್ವಾಜನು ಸೇನಾಪತಿಯಾಗಿ ಸಕಲ ಸೈನ್ಯ ಮಧ್ಯದಲ್ಲಿ ದುರ್ಯೋಧನನಿಗಿಂತೆಂದನು: 'ರಾಜನ್ ! ಭೀಷ್ಮನ ಸಮನಂತರದಲ್ಲಿ ನನ್ನನ್ನು ಸೇನಾಪತ್ಯದಿ ನಿಲ್ಲಿಸಿ ಗೌರವಿಸಿದೆ ! ಪ್ರೀತನಾಗಿರುವೆನು. ನಿನಗೆ ಬೇಕಾದ ವರವನ್ನು ಬೇಡು !' ಎಂದು ಕೇಳಿದ ಆಚಾರ್ಯನ ಉತ್ಸಾಹದಿಂದ ಹಿಗ್ಗಿ ದುರ್ಯೋಧನನು ಕರ್ಣ, ದುಶ್ಶಾಸನರಿಂದ ಕೂಡಿ ಆಲೋಚಿಸಿದನು. ಮತ್ತೆ ಆಚಾರ್ಯನನ್ನು ಸಮೀಪಿಸಿ ಇಂತು ಪ್ರಾರ್ಥಿಸಿದನು: 'ಆಚಾರ್ಯ ! ವರ ಕೊಡುವುದಾದರೆ ನನಗಿನ್ನೇನೂ ಬೇಡ ! ಧರ್ಮರಾಜನನ್ನು ಜೀವದಿಂದ ಹಿಡಿದು ನನ್ನಲ್ಲಿ ಸೇರಿಸು ! ಕೊಲ್ಲುವುದು ನಿನ್ನಿಂದಾಗದೆಂದೆ ! ಸರಿ ! ನನಗೂ ಅದು ಬೇಕಿಲ್ಲ !' ದ್ರೋಣನು 'ಧನ್ಯನಾದನು ಕುಂತೀಸುತನು ! ವಧಾರ್ಥವಾಗಿ ವರ ಬೇಡದೆ ಜೀವಗ್ರಹಣವನ್ನು ಬೇಡಿದ್ದನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ಕೊಲ್ಲಲಿಕ್ಕಲ್ಲದಿರೆ ಏತಕ್ಕಾಗಿ ಧರ್ಮರಾಜನನ್ನು ನೋಡಲಪೇಕ್ಷಿಸುವೆ ? ಹೇಳು ! ಸೌಭ್ರಾತವನ್ನೆಣಿಸಿ ಸಂಧಿಮಾಡಿಕೊಂಡು ಅವರಿಂದ ಕೂಡಿ ಬಾಳಲೆಂದೇ ? ಅಥವಾ ಅಜಾತ ಶತ್ರುವೆಂದು ಸಾರ್ಥಕನಾಮನಾಗಿರುವ ಕುಂತೀಸುತನ ಕೂಡ ವೈರ ಬೇಡವೆಂದೋ ? ' ಎಂದು ಕೇಳಿದನು. ಆಗ ದುರ್ಯೋಧನ ವಲ್ಮೀಕದಿಂದ ಅವನ ಅಭಿಪ್ರಾಯ ಸರ್ಪವು ಹೊರ ಬಂತು: 'ಗುರುವರ ! ಯುಧಿಷ್ಠಿರನನ್ನು ಕೊಲ್ಲಬೇಕೆಂಬ ಅಭಿಪ್ರಾಯವೆನಗಿಲ್ಲ. ಒಂದು ವೇಳೆ ಅವನನ್ನು ಕೊಂದರೆ ಭೀಮಾರ್ಜುನ ಯಮಳರು ರೇಗಿ, ನಮ್ಮನ್ನೆಲ್ಲ ಕೊಲ್ಲಿಸಿಬಿಡುವರು. ಅವರನ್ನೆಲ್ಲರನ್ನೂ ಕೊಲ್ಲಲು ಅಮರರಿಗೂ ಶಕ್ಯವಲ್ಲ. ಅವರಲ್ಲಿ ಯಾವ ಒಬ್ಬನುಳಿದರೂ ಅವನೇ ನಮ್ಮನ್ನೆಲ್ಲ ಕೊಲ್ಲಬಲ್ಲನೆಂಬುದೆನಗೆ ಗೊತ್ತಿದೆ. ಆದುದರಿಂದ ಧರ್ಮರಾಜನನ್ನೊಬ್ಬನನ್ನು ಹಿಡಿದುಕೊಟ್ಟರೆ, ಅವನಿಂದ ಜೂಜಾಡಿಸಿ, ಶಕುನಿಯಿಂದ ಸೋಲಿಸಿ, ಮತ್ತೆ ಅರಣ್ಯಕ್ಕೆ ಅಟ್ಟಬೇಕೆಂಬ ಹಂಬಲದಿಂದ ಇಂತು ಕೇಳುತ್ತಿರುವೆನು. ಆಗ ಸತ್ಯಪ್ರತಿಜ್ಞನಾದ ಧರ್ಮರಾಜನು ಸತಿ ಸುತ ಸೋದರ ಸಹಿತನಾಗಿ ಅರಣ್ಯವನ್ನು ಸೇರುವನು. ನನ್ನ ರಾಜ್ಯವು ನಿಷ್ಕಂಟಕವಾಗುವುದು.' ದುರ್ಯೋಧನನ ಕುತ್ಸಿತ ಮತವನ್ನರಿತು ದ್ರೋಣನು ಬುದ್ಧಿವಂತನಾದುದರಿಂದ ಸಾಪವಾದ ವರವನ್ನಿತ್ತು ಇಂತೆಂದನು:

'ರಾಜನ್ ! ಪಾರ್ಥನೊಬ್ಬನನ್ನು ಧರ್ಮರಾಜನಿಂದ ದೂರ ಮಾಡಿದರೆ, ನೀ ಬೇಡಿದಂತೆ ಧರ್ಮರಾಜನನ್ನು ಹಿಡಿದೊಪ್ಪಿಸುವೆನು. ಪಾರ್ಥನನ್ನು ರಣದಲ್ಲಿ ಗೆಲ್ಲಲು ದೇವಾಸುರರಿಗೆ ಸಾಧ್ಯವಲ್ಲ. ಭೀಮಸೇನನೂ ಅಜೇಯನೇ, ಆದರೆ ಗುರುಬುದ್ಧಿಯಿಂದ ಅವನು ನನ್ನನ್ನು ಪ್ರಾಯಃ ಮುತ್ತದೆ ದೂರವಿರುವನು. ಪಾರ್ಥನು ನನ್ನ ಶಿಷ್ಯನಾದರೂ

ಬಹುಕಾರಣಗಳಿಂದ ನನಗೂ ಉತ್ತಮನಾಗಿರುವನು. ಅವನಿನ್ನೂ ತರುಣನು, ರುದ್ರೇಂದ್ರಾದಿ ದಿವ್ಯಾಸ್ತ್ರಗಳನ್ನು ಸಂಪಾದಿಸಿರುವನು. ಪಾರ್ಥನಿಂದ ಪ್ರತ್ಯೇಕಿಸಲ್ಪಟ್ಟ ಧರ್ಮಜನು ನಿನ್ನ ವಶನಾದನೆಂದೇ ತಿಳಿ!' ಎಂದು ಸನಿಬಂಧನವಾದ ಪ್ರತಿಜ್ಞೆಯನ್ನು ಮಾಡಿದನು. ಅದನ್ನು ಕೇಳಿ 'ಇನ್ನೇನು ಧರ್ಮರಾಜನು ಸಿಕ್ಕ' ನೆಂದು ತಿಳಿದು ಮೂರ್ಖರಾದ ಕೌರವರು ಹರ್ಷಧ್ವಾನಗಳನ್ನು ಮಾಡಿದರು. ಪಾಂಡವ ಪಕ್ಷಪಾತಿಯಾದ ಆಚಾರ್ಯನ ಪ್ರತಿಜ್ಞೆ ಸ್ಥಿರವಾಗಲೆಂದು ದುರ್ಯೋಧನನು ಆ ಮಾತನ್ನು ತನ್ನೆಲ್ಲ ವೀರರಿಗೆ ಪ್ರಕಟಿಸಿದನು. ಅವರು ಸಿಂಹನಾದವನ್ನು ಮಾಡಿ ಕುಣಿದಾಡಿದರು.

ಈ ವೃತ್ತಾಂತವನ್ನು ಆಪ್ತಚಾರರಿಂದ ತಿಳಿದು, ಧರ್ಮರಾಜನು ಸೋದರ ಮಿತ್ರ ರಾಜರನ್ನು ಕರೆದು ಮಂತ್ರಾಲೋಚನೆಗೈದನು. 'ಅರ್ಜುನ! ಕೇಳಿದೆಯಾ ಆಚಾರ್ಯನ ಪ್ರತಿಜ್ಞೆಯನ್ನು! ಅದನ್ನು ನಡೆಯದಂತೆ ಮಾಡುವುದೀಗ ನಿನ್ನ ಕರ್ತವ್ಯವಾಗಿದೆ. ನೀನು ದೂರವಾದರೆ ನನ್ನನ್ನು ಹಿಡಿದುಕೊಡುವನಂತೆ. ಆದುದರಿಂದ ನೀನು ನನ್ನನ್ನು ಬಿಡದೆ ಹಿಂಬಾಲಿಸಿ ರಕ್ಷಿಸುತ್ತಿರು! ದುರ್ಯೋಧನನ ದುಷ್ಟಾಶೆಯು ಸಫಲವಾಗದಿರಲಿ!' ಎಂದು ನುಡಿದ ಧರ್ಮರಾಜನಿಗೆ ಅರ್ಜುನನಿಂತೆಂದನು: 'ರಾಜನ್! ಭಯಪಡುವ ಕಾರಣವಿಲ್ಲ! ಆಚಾರ್ಯನನ್ನು ನಾನು ಕೊಲ್ಲಲಾಗದು ಅಂತೆಯೇ ನಿನ್ನನ್ನು ಬಿಟ್ಟಿರಲು ಬಾರದು. ನನ್ನ ಗುರುವಿಗೆ ದ್ರೋಹವೆಸಗುವುದಕ್ಕಿಂತ ನನಗೆ ಸಾವೇ ಲೇಸು! ಅಂತೆಯೇ ನಿನ್ನನ್ನು ಶತ್ರು ಹಸ್ತಗತನಾಗಿಸುವುದಕ್ಕಿಂತ ಮುನ್ನ ನಾನು ಉಳಿದಿರೆನೆಂದು ತಿಳಿ! ದುರ್ಯೋಧನನ ದುಷ್ಟಾಪೇಕ್ಷೆ ಎಂದಿಗೂ ಪೂರ್ಣವಾಗದು. ಪೃಥಿವೀಮಂಡಲವು ಸಾವಿರ ಹೋಳಾದೀತು! ತಾರೆಗಳಿಂದ ಕೂಡಿದ ಆಕಾಶವು ಕಳಚಿ ಬಿದ್ದೀತು! ಆದರೂ ದ್ರೋಣನು ನಿನ್ನನ್ನು ಹಿಡಿಯಲಾರನೆಂದು ತಿಳಿ! ನನ್ನ ಶರೀರದಿ ಜೀವವಿರುವವರೆಗೂ ಸಾಕ್ಷಾದಿಂದ್ರನೇ ಪ್ರಯತ್ನಿಸಿದರೂ, ನಿನ್ನನ್ನು ಯಾರೂ ಹಿಡಿಯಲಾರರು. ಭಯಪಡಬೇಡ! ರಾಜೇಂದ್ರ! ನನಗೆ ಸುಳ್ಳಾಡಿ ಗೊತ್ತಿಲ್ಲ; ಸೋತು ಗೊತ್ತಿಲ್ಲ; ಕೊಡುವೆನೆಂದು ಮಾತು ತಪ್ಪಿದುದೂ ಗೊತ್ತಿಲ್ಲ.'

ಆ ಮಾತನ್ನಾಲಿಸಿ ಪಾಂಡವ ವೀರರು ಶಂಖಗಳನ್ನೂದಿ, ಸಿಂಹಗರ್ಜನೆ ಮಾಡಿದರು. ಶಕಟವ್ಯೂಹದ ಮೇಲೆ ಕ್ರೌಂಚವ್ಯೂಹವೆರಗಿ ಭಯಂಕರ ರಾವವನ್ನು ಮಾಡಿದಾಗ ಯುದ್ಧವು ತುಮುಲವಾಯಿತು. ಭಾರದ್ವಾಜನು ಮಧ್ಯಂದಿನ ಸೂರ್ಯನಂತೆ ದುರ್ಧರ ಪ್ರತಾಪನಾದನು. ಅವನ ಬಾಣಪೂರದಿಂದ ಪಾಂಚಾಲ ಸೇನೆ ಹಿಮ್ಮೆಟ್ಟಿತು. ಅದನ್ನು ಕಂಡು ಧೃಷ್ಟದ್ಯುಮ್ನನು ಅವರನ್ನು ಹಿಂದಿರುಗಿಸಿ, ತಾನು ದ್ರೋಣನನ್ನು ಮುತ್ತಿ ಶರವರ್ಷದಲ್ಲಿ ಮುಳುಗಿಸಿದನು. ದ್ರೋಣನು ಅವನನ್ನು ಲೆಕ್ಕಿಸದೆ, ಘೋರ ರಣ ನಿರತನಾದನು. ಆತನ ಧನುಷ್ಟಂಕಾರವು ಸಿಡಿಲಾಗಿ, ಬಾಣಗಳು ವರ್ಷಧಾರೆಗಳಾಗಿ, ರಕ್ತ ನದಿಗಳು ಹರಿಯತೊಡಗಿದಾಗ ಉರುಳುವ ತಲೆಗಳು ಆಣೆಕಲ್ಲಾದವು. ರಥ ಚಕ್ರಗಳು ಸುಳಿಗಳಾದವು. ಆನೆ ಕುದುರೆಗಳು ತೀರಗಳಾದವು. ಕವಚಗಳು ಹಡಗುಗಳಂತೆ ತೇಲಿಹೋಗುತ್ತಿದ್ದವು. ಮಾಂಸವು ಕೆಸರಾಯಿತು. ಮೇದೋಮಜ್ಜಾಸ್ಥಿ ಸಂಹತಿಯು

ಮರಳು ದಿಬ್ಬಗಳಾದವು. ರುಮಾಲುಗಳು ನೊರೆ ಆಯಿತು. ಹಸ್ತ ಮುಖಗಳು ಕಮಲಗಳಾದವು. ಢಾಲುಗಳು ಕೂರ್ಮಗಳಾದವು. ಕೇಶವೇ ಶೈವಾಲವಾಯಿತು. ಖಡ್ಗಗಳು ಮೀನುಗಳಾದವು. ರಥನೀಡಗಳು ಹ್ರದಗಳಾದವು. ಆಭರಣಗಳು ಮುತ್ತುಗಳಾದವು. ಭೀರುದುಸ್ತರವು ವೀರನಿಸ್ತರವು ಆದ ರಣನದಿ ವೈತರಣಿಯಂತೆ ಭಯಾನಕವಾಗಿತ್ತು. ಅದರ ಗಮ್ಯವು ಯಮಸ್ಥಾನವಾಗಿತ್ತು.

ಶಕುನಿ ಸಹದೇವರು ಬಾಣ ಯುದ್ಧದಲ್ಲಿ ಪರಸ್ಪರ ಹಯಸೂತರು ನಿಹತರಾಗಲು ಖಡ್ಗ ಯುದ್ಧದಲ್ಲಿ ತೊಡಗಿ ಕ್ರೀಡಿಸಿದರು. ಶಲ್ಯನು ನಕುಲನೊಡನೆ ಕಾದುತ್ತಾ ಮಾತುಲನಾದುದರಿಂದ ಮೃದುಯುದ್ಧವನ್ನು ಮಾಡಿದನು. ವಿವಿಂಶತಿಯು ಭೀಮಸೇನನನ್ನು ಇಪ್ಪತ್ತು ಬಾಣಗಳಿಂದ ಹೊಡೆದಾಗ ಕೌರವ ಸೈನ್ಯಗಳು ಹರ್ಷಗರ್ಜನಗಳನ್ನು ಮಾಡಿದರು. ಭೀಮಸೇನನು ಗದೆಯಿಂದ ಅವನ ಕುದುರೆಗಳನ್ನು ಕೊಂದು, ತನ್ನ ಮೇಲೇರಿ ಬರುವ ವಿವಿಂಶತಿಯ ಗದೆಯನ್ನು ಘಟ್ಟಿಸಿ, ಅವನನ್ನೋಡಿಸಿದನು. ಕೃಪ, ಧೃಷ್ಟಕೇತುಗಳು, ಸಾತ್ಯಕಿ ಕೃತವರ್ಮರು, ವಿರಾಟ ಕರ್ಣರು, ದ್ರುಪದ ಭಗದತ್ತರು, ಭೂರಿಶ್ರವ ಶಿಖಂಡಿಗಳು, ಚೇಕಿತಾನಾನುವಿಂದರು, ಪೌರವಾಭಿಮನ್ಯುಗಳು ದ್ವಂದ್ವ ರಣದಲ್ಲಿ ತೊಡಗಿ ಕಡಿದಾಡುವಾಗ ದೇವಾಸುರ ಯುದ್ಧದ ನೆನಪಾಗುತ್ತಿತ್ತು.

ಅಭಿಮನ್ಯುವು ರಭಸದಿಂದ ರಥದಿಂದಿಳಿದು ಖಡ್ಗಪಾಣಿಯಾಗಿ ಪೌರವನ ರಥದ ನೊಗೆಗೆ ಧುಮುಕಿ ಪೌರವನ ಸೂತನನ್ನು ಕಾಲಿಂದೊದೆದು ಕೊಂದನು. ಧ್ವಜವನ್ನು ಖಡ್ಗದಿಂದ ಕೆಡಹಿ, ಅವನ ತಲೆಯನ್ನು ಹಿಡಿದು ಕೆಳಗೆ ಸೆಳೆದು ಕಡಿಯಲಿರುವಾಗ, ಜಯದ್ರಥನು ಅಡ್ಡಬಂದು ತಡೆದನು. ಅಭಿಮನ್ಯುವು ಪೌರವನನ್ನು ಬಿಟ್ಟು ಜಯದ್ರಥನ ಮೇಲೆ ಸಿಂಹದಂತೆ ಎರಗಿದನು. ಅವನು ಒಗೆದ ಪ್ರಾಸಪಟ್ಟಿಶ ಖಡ್ಗಗಳನ್ನು ತುಂಡರಿಸಿ, ಅವನೂ ಖಡ್ಗಪಾಣಿಯಾಗಿ ಬರಲು ಬಹು ಭೀಕರವಾಗಿ ಹೋರಾಡಿದನು. ಸೈಂಧವನು ಅಭಿಮನ್ಯು ಕುಮಾರನ ಕತ್ತಿಯನ್ನು ಎರಡು ತುಂಡಾಗಿ ಕೆಡಹಲು, ಅರ್ಜುನಿಯು ಕ್ಷಣದಲ್ಲಿ ತನ್ನ ರಥವನ್ನೇರಿ, ಕುರುಸೇನೆಯನ್ನು ಬಾಣಜಾಲದಿಂದ ನಾಶ ಮಾಡಿದನು.

ಶಲ್ಯನು ಸರ್ವಾಯಸವಾದ ಶಕ್ತಿಯನ್ನೆಸೆಯಲು ಅಭಿಮನ್ಯು ಅದನ್ನು ಕೈಲಿ ಹಿಡಿದು ಬಿಸುಟ, ತನ್ನ ಖಡ್ಗವನ್ನೊಗೆದನು. ಅದು ಶಲ್ಯನ ಸಾರಥಿಯನ್ನು ಕೊಂದು, ಅವನನ್ನು ಗಾಯಗೊಳಿಸಿತು. ಅದನ್ನು ಕಂಡು ವಿರಾಟ ದ್ರುಪದರು, ಭೀಮ ಧೃಷ್ಟದ್ಯುಮ್ನರು 'ಭಲಾ!' ಎಂದು ಪ್ರಶಂಸಿಸಿದರು. ಅದನ್ನು ಸಹಿಸದೆ ನಿನ್ನ ಪುತ್ರರು ಸಿಂಹನಾದಗಳಿಂದಲು, ನಿಶಿತಬಾಣಗಳಿಂದಲು ಅಭಿಮನ್ಯುವಿನನ್ನು ಮುತ್ತಿದರು. ಶಲ್ಯನು ಸಾರಥಿಯ ಮೃತಿಯಿಂದ ಕೋಪಗೊಂಡು, ಗದಾಪಾಣಿಯಾಗಿ ರಥದಿಂದಿಳಿದು, ಅಭಿಮನ್ಯುವಿನನ್ನು ಸಂಹರಿಸಬೇಕೆಂದು ಬಂದನು. ಅವನ ವೇಗ ಬಲ ಶಕ್ತಿಗಳನ್ನರಿತ ಭೀಮಸೇನನು, ಗದಾಪಾಣಿಯಾಗಿ ವಿಜೃಂಭಿಸುತ್ತಿರುವ ಅಭಿಮನ್ಯುವಿನನ್ನು ನಿಲ್ಲಿಸಿ, ತಾನು ಶಲ್ಯನನ್ನು ಮುತ್ತಿ ಗದಾಗದಿಯಾಗಿ ಹೋರಾಡಿದನು. ಶಂಖತೂರ್ಯ ನಿಸ್ವನದಿಂದ ಭೀಮ ಶಲ್ಯರ ಸಿಂಹನಾದ ಗದಾ ಧಣಂಧಣಧ್ವಾನಗಳು ಮಿಲಿತವಾದವು. ಶಲ್ಯನನ್ನು ಬಿಟ್ಟರೆ

ಸರ್ವ ಸೈನ್ಯದಲ್ಲಿ ಗದಾಪಾಣಿಯಾಗಿ ಭೀಮನನ್ನು ತಡೆಯಬಲ್ಲವರಾರೂ ಇಲ್ಲ. ಭೀಮನನ್ನು ಬಿಟ್ಟರೆ ಶಲ್ಯನ ಗದಾ ವೇಗವನ್ನು ಸಹಿಸಬಲ್ಲವರೂ ಇಲ್ಲ. ಮಂಡಲಾಕಾರವಾಗಿ ತಿರುಗುತ್ತಾ ಬಡಿದಾಡುವ ಭೀಮ ಶಲ್ಯರ ಗದೆಗಳಿಂದ ಕಿಡಿಗಳು ಹಾರುತ್ತಿದ್ದವು. ಅವರಿಬ್ಬರಲ್ಲಿ ಯಾರೂ ಹಿಂಜರಿಯದೆ ಹೂಂಕರಿಸುತ್ತಾ ಹೊಡೆದಾಡುತ್ತಿರಲು ನೋಡಿ ಸೈನಿಕರು ನಿಬ್ಬೆರಗಾಗಿ ನಿಂತು ಯಾರು ಜಯಿಸುವರೆಂದು ತಿಳಿಯಲಾರದೆ ಆಶ್ಚರ್ಯ ಭಯಸಂಭ್ರಮಾನ್ವಿತರಾದರು. ಗದಾ ಭಗ್ನವಾದ ಶರೀರದಿಂದ ರಕ್ತವು ಹರಿಯುತ್ತಿರಲು, ಅವರೀರ್ವರು ಪುಷ್ಪಿತ ಕಿಂಶುಕದ್ವಯದಂತೆ ಕಂಡರು. ಅವರ ಗದಾಘಾತಗಳು ಛಟಲ್ ಛಟ್ ಎಂದು ದಿಕ್ಕುಗಳಲ್ಲಿ ಪ್ರತಿಧ್ವನಿಸಿದವು. ಭೀಮಸೇನನ ಗದಾಘಾತಗಳು ವಜ್ರದಂತೆ ಬಡಿಯುತ್ತಿರಲು, ಶಲ್ಯನು ಪರ್ವತದಂತೆ ಅದನ್ನು ತಡೆಯುತ್ತಾ ಎಂಟು ಹೆಜ್ಜೆಗಳು ಹಿಂಜರಿದನು. ಒಮ್ಮೆಗೆ ಮುನ್ನುಗ್ಗಿ ಗದೆಯಿಂದ ಭೀಮನು ಹೊಡೆದ ಸಮಯದಲ್ಲೇ ಶಲ್ಯನೂ ಹೊಡೆದನು. ಇಬ್ಬರೂ ಎರಡು ಇಂದ್ರಧ್ವಜಗಳಂತೆ ಕೆಳಗುರುಳಿದರು. ಶಲ್ಯನು ಉರಳಾಡುತ್ತಾ ನಾಗರಹಾವಿನಂತೆ ಬುಸಗುಟ್ಟುತ್ತಾ ಮೂರ್ಛಾಕ್ರಾಂತನಾಗಿರುವುದನ್ನು ಕಂಡು ಕೃಪನು ಅವನನ್ನೆತ್ತಿ ತನ್ನ ರಥದಲ್ಲಿಟ್ಟು ಭೀಮನಿಂದ ರಕ್ಷಿಸಿದನು. ಭೀಮಸೇನನು ಮೊಳಕಾಲಿಂದ ಉರುಳಿದರೂ ತತ್‌ಕ್ಷಣವೇ ಮೇಲಕ್ಕೆದ್ದು ಕೆರಳಿ ಕೆಂಡವಾಗಿ, ಶಲ್ಯನು ದೂರವಾದುದನ್ನು ಕಂಡು, ಗದೆಯಿಂದ ಕುರು ಸೈನಿಕರನ್ನು ಕುರಿಗಳನ್ನು ಸಿಂಹದಂತೆ ಬಡಿದು ಕೆಡಹಿದನು. ಅದನ್ನು ಕಂಡು ಪಾಂಡವ ಯೋಧರು ಹರ್ಷವಿವಶರಾಗಿ, ಶಂಖಗಳನ್ನೂದಿ, ಕುಣಿದಾಡಿದರು. ಶಲ್ಯ ಪರಾಜಯದಿಂದ ಎದೆಗುಂದಿದ ಕೌರವ ಯೋಧರು ಮಾನ ಬಿಟ್ಟೋಡಿದರು.

ವೃಷಸೇನನು ರೋಷಪರೀತನಾಗಿ, ಅವರನ್ನು ಧೈರ್ಯವಚನಗಳಿಂದ ಹುರಿದುಂಬಿಸಿ, ಸಾವಿರಾರು ಬಾಣಗಳಿಂದ ಪಾಂಡವ ಸೇನೆಯನ್ನು ಮುಚ್ಚಿದನು. ಹಯಹಸ್ತಿ ಚಯವು ಅವನ ಧಾಟಿಗೆ ತಡೆಯದೆ ಬಿದ್ದವು. ಶತಾನೀಕನು ಅವನನ್ನು ತಡೆದು ಹತ್ತು ಬಾಣಗಳಿಂದ ಪೀಡಿಸಿದನು. ಕರ್ಣಾತ್ಮಜನು ನಾಕುಲಿಯ ಧ್ವಜವನ್ನು ಮುರಿದು ಕೆಡಹಿದನು. ದ್ರೌಪದೇಯರು ಬಂದು ಬಿಟ್ಟ ಬಾಣಜಾಲವನ್ನು ಮಧ್ಯ ಮಾರ್ಗದಿ ಕಡಿದು ವೃಷಸೇನನು ಅವರನ್ನು ಐದೈದು ಶರಗಳಿಂದ ಪೀಡಿಸಿದನು. ಭೀಮ ಕರ್ಣ ಕೃಪ ದ್ರೋಣ ದ್ರೌಣಿ ಕೃತವರ್ಮ ಧೃಷ್ಟದ್ಯುಮ್ನ ಸಾತ್ಯಕಿ ಪಾರ್ಥ ಧರ್ಮ ಯಮಳರೆಂಬ ದ್ವಾದಶ ವೀರರು ದ್ವಾದಶಾದಿತ್ಯರಂತೆ ಸಲೆರೇಗಿ ಸದೆಬಡಿಯಲು, ಅವರ ಪ್ರತಾಪದಿಂದ ಬೆಂದು ಉಭಯ ಸೇನಾ ಸಾಗರಗಳು ಶುಷ್ಕಪ್ರಾಯವಾದವು.

ದ್ರೋಣನು ಶೋಣಾಶ್ವರಥದಲ್ಲಿ ಕೂತು ಸಾಹಸಿಸಿ, ತಡೆದ ವೀರರನ್ನು ಕೆಡಹಿ, ಧರ್ಮರಾಜನನ್ನು ಸಮೀಪಿಸಿದನು. ಧರ್ಮಜನು ಇಪ್ಪತ್ತು ಬಾಣಗಳಿಂದ ಹೊಡೆಯಲು, ಅವನ್ನು ತುಂಡರಿಸಿ ದ್ರೋಣನು ಅವನ ಧನುವನ್ನು ಮುರಿದನು. ಆಗ ಧರ್ಮಜನ

ಚಕ್ರ ರಕ್ಷಕನಾದ ಕುಮಾರನು ವಿಜೃಂಭಿಸಿ ಆತನನ್ನು ತಡೆದು ಎದೆಯನ್ನು ಭಲ್ಲದಿಂದ ತಾಡಿಸಿದನು. ಅವನನ್ನು ನಿರ್ಲಕ್ಷಿಸಿ ಆಚಾರ್ಯನು ಪಾಂಡವ ಸೇನಾ ಮಧ್ಯಭಾಗವನ್ನು ಹೊಕ್ಕು, ಶಿಖಂಡಿಯನ್ನು ಹನ್ನೆರಡು ಬಾಣದಿಂದಲು, ಉತ್ತಮೌಜನನ್ನು ಇಪ್ಪತ್ತು ನಾರಾಚದಿಂದಲು, ನಕುಲನನ್ನು ಐದರಿಂದಲು, ಸಹದೇವನನ್ನು ಸಪ್ತ ಭಲ್ಲದಿಂದಲು, ಧರ್ಮಜನನ್ನು ದ್ವಾದಶ ವಿಶಿಖದಿಂದಲು, ಸಾತ್ಯಕಿಯನ್ನು ಐದರಿಂದಲು, ವಿರಾಟನನ್ನು ಹತ್ತು ಕಾಂಡಗಳಿಂದಲು, ಇತರರನ್ನು ಐದೈದು ಬಾಣಗಳಿಂದಲು ಹೊಡೆದನು. ಯುಗಧರನ್ನು ಕೆಡಹಿ, ಭಾರದ್ವಾಜನು ಧರ್ಮರಾಜನನ್ನು ಸಮೀಪಿಸುವುದನ್ನು ಕಂಡು, ವಿರಾಟ ದ್ರುಪದ ಸಾತ್ಯಕಿ ಶಿಬಿ ಸಿಂಹಸೇನರೇ ಮೊದಲಾದ ಮಹಾರಥರು ಅವನನ್ನು ತಡೆದು ಕಾದಿದರು. ದ್ರೋಣನು ಧರ್ಮರಾಜನನ್ನು ಹಿಡಿದು ಪ್ರತಿಜ್ಞೆಯನ್ನು ಪೂರೈಸುವನು. ದುರ್ಯೋಧನನು ಕೃತಾರ್ಥನಾಗುವನು ಎಂಬ ಕೌರವ ಯೋಧರ ಹರ್ಷವಚನಗಳನ್ನು ಭೀಮಸೇನನ ಸಿಂಹನಾದವೂ, ಪಾರ್ಥನ ಗಾಂಡೀವ ಧನುಷ್ಟಂಕಾರವೂ ಅಲ್ಲಗಳೆದವು. ಅರ್ಜುನನು ದ್ರೋಣ ಸಹಾಯಕರನ್ನೋಡಿಸಿ, ಹತ್ತು ದಿಕ್ಕುಗಳಲ್ಲಿ ಬಾಣಗಳ ಸುರಿಮಳೆಯನ್ನು ತುಂಬಿದನು. ಭೀಮಾರ್ಜುನರ ವೀರವಿಹಾರದಲ್ಲಿ ಹತರಾದ ವೀರಗಣದಿಂದ ಕೆಂಪಾದ ರಣರಂಗದಂತೆ, ಸೂರ್ಯಾಸ್ತಮಾನದಿಂದ ಪಶ್ಚಿಮ ದಿಗಂತವು ರಕ್ತಭೀಕರವಾಯಿತು. ಅದನ್ನು ನೋಡಿ ದ್ರೋಣ ದುರ್ಯೋಧನಾದಿಗಳು ಸೈನ್ಯಾವಹಾರವನ್ನು ಮಾಡಿ, ಪರಾಜಯ ಖಿನ್ನ ಮಾನಸರಾಗಿ ಶಿಬಿರಗಳನ್ನು ಸೇರಿದರು. ಭೀಮಾರ್ಜುನ ಪಾರ್ಷತರೂ ಜಯನಿನಾದಗಳನ್ನು ಮಾಡುತ್ತಾ ತಂತಮ್ಮ ಶಿಬಿರಗಳನ್ನು ಸೇರಿದರು.

ಅಂದು ರಾತ್ರಿ ದ್ರೋಣನು ದುರ್ಯೋಧನನನ್ನು ನೋಡಿ ಇಂತೆಂದನು: 'ರಾಜನ್ ! ಹೀಗಾಗುವುದೆಂದು ತಿಳಿದೇ ಅರ್ಜುನನನ್ನು ರಣರಂಗದಿಂದ ದೂರಮಾಡಿದರೆ ಮಾತ್ರ, ಧರ್ಮರಾಜನನ್ನು ಹಿಡಿಯಲಾಗುವುದೆಂದು ತಿಳಿಸಿದ್ದೆನು. ಕೃಷ್ಣ ಪಾರ್ಥರು ಅಜೇಯರು. ಏನಾದರೊಂದು ನೆವದಿಂದ ಅವರೀರ್ವರನ್ನು ಧರ್ಮಜನಿಂದ ಬೇರ್ಪಡಿಸು ! ಆಗ ಧರ್ಮರಾಜನನ್ನು ಹಿಡಿಯುವುದು ಸುಕರವಾಗುವುದು. ಮಹಾವೀರರು ಹತ್ತಾರು ಜನ ಅರ್ಜುನನನ್ನು ರಣಕ್ಕೆಂದು ಕರೆಯಲಿ, ಅವನು ಬರಲಾರೆನೆಂಬುವನಲ್ಲ; ಬಂದರೆ ಅವರನ್ನೆಲ್ಲ ಗೆಲ್ಲದೆ ಹಿಂದಿರುಗುವನೂ ಅಲ್ಲ. ಆಗ ನಮಗೆ ಧರ್ಮಜನನ್ನು ಹಿಡಿಯುವ ಅವಕಾಶ ಸಿಗುವುದು. ಅರ್ಜುನನು ದೂರನಾಗಿ, ಧರ್ಮಜನು, ರಣರಂಗವನ್ನು ಬಿಟ್ಟು ಶಿಬಿರದಲ್ಲಿ ನಿಲ್ಲದೆ, ಧೈರ್ಯದಿಂದ ಕಾದಲು ಬಂದನೆಂದರೆ ಸಾಕು, ನಿನ್ನ ಕಾರ್ಯವು ಸಫಲವಾಯಿತೆಂದು ತಿಳಿ !

ಆ ಮಾತನ್ನಾಲಿಸಿ ತ್ರಿಗರ್ತಾಧಿಪನಾದ ಸುಶರ್ಮನು ಐದು ಜನ ತಮ್ಮಂದಿರಿಂದ ಆಲೋಚಿಸಿ, ಜೀವಪಣವಿಟ್ಟು ಹೋರಾಡಲು ನಿರ್ಧರಿಸಿದನು. ಅವನು ದುರ್ಯೋಧನನಿಗೆ 'ರಾಜನ್ ! ಅರ್ಜುನನಿಂದ ಎಷ್ಟೋ ಸಲ ಪರಾಭೂತರಾಗಿರುವೆವು.

ಆ ಸೇಡಿನ ಕಿಡಿ ನಮ್ಮ ಎದೆಯಲ್ಲಿ ಹೊಗೆಯಾಡುತ್ತಿದೆ. ನಿಷ್ಕಾರಣವಾಗಿ ನಮ್ಮನ್ನು ದ್ವೇಷಿಸುವ ಪಾರ್ಥನನ್ನು ಕೊಲ್ಲುವ ಚಿಂತೆಯಿಂದ ನಮಗೆ ನಿದ್ರೆಯೂ ಬಾರದಾಗಿದೆ. ಇಂದು ಆ ಸದವಕಾಶವು ತಾನಾಗಿ ಒದಗಿ ಬಂದಿದೆ. ಇಂದು ಮಹೀಮಂಡಲವು ಅಪಾರ್ಥವಾದರೂ ಇಲ್ಲದಿರೆ ಅತ್ರಿಗರ್ತ ವೀರವಾದರೂ ಆಗಬೇಕು. ಇಂದಿನ ರಾತ್ರಿಯನ್ನು ಅರ್ಜುನನು ನೋಡಲಾರನು. ಪಂಚತ್ರಿಗರ್ತರಿಂದ ಪಂಚತ್ವವನ್ನು ಹೊಂದಿ ರಣರಂಗಮಂಚದಿ ಬಿದ್ದಿದ್ದ ಅರ್ಜುನನ ಮಾಂಸವನ್ನು ಹದ್ದು ನರಿಗಳು ಹಂಚಿ ತಿನ್ನುವವು' ಎಂದು ತಿಳಿಸಿ, ತನ್ನ ಸೋದರರೂ ಬಹು ಬಲಯುತರಾಗಿ ಬರಲು ಸುಶರ್ಮನು ರಣದೀಕ್ಷಿತನಾದನು. ಬೆಳಗಾಗುತ್ತಲೇ ಬೆಂಕಿಯನ್ನು ಹೊತ್ತಿಸಿ, ಆಹುತಿಗಳನ್ನಿತ್ತು ತ್ರಿಗರ್ತರು ರಣಸನ್ನದ್ಧರಾದರು. ಅವರು ಕುಶಚಿರಗಳನ್ನು ಕವಚವನ್ನಿಟ್ಟರು. ವಿಪ್ರರರನ್ನು ಪೂಜಿಸಿ ಗೋ ವಸ್ತ್ರ ಹಿರಣ್ಯಗಳನ್ನು ಕೊಟ್ಟರು. ಶರೀರತ್ಯಾಗ ದೀಕ್ಷೆಯನ್ನು ತೊಟ್ಟರು. ಪರಸ್ಪರಾಲಿಂಗನವನ್ನು ಮಾಡಿ ಜೀವದಾಶೆ ಬಿಟ್ಟರು. ರಣವ್ರತವನ್ನು ಧರಿಸಿ ಇಂತು ಪ್ರತಿಜ್ಞೆ ಮಾಡಿದರು.

'ಇಂದು ಧನಂಜಯನನ್ನು ಕೊಲ್ಲುವೆವು. ಇಲ್ಲವೇ ಅವನಿಂದ ಸಾಯುವೆವು. ಈ ಮಾತಿಗೆ ತಪ್ಪಿದೊಡೆ, ನಮಗೆ ಮದ್ಯಪರು, ಗುರುದಾರರತರು, ಬ್ರಹ್ಮಸ್ವಹಾರಕರು ಶರಣಾಗತಪರಿತ್ಯಾಜರು, ಗೃಹದಾಹಿಗಳು, ವಿಷದಾಯಿಗಳು, ಗೋಹಂತಕರು, ನ್ಯಾಸಾಪಾಹಾರಜಗಳು, ಶ್ರಾದ್ಧದಿನ ಸಂಭೋಗಪರರು, ಕೃತಘ್ನರು, ನಾಸ್ತಿಕರು, ಮಾತಾ ಪಿತೃ ದ್ರೋಹಿಗಳು, ಮೊದಲಾದ ಮಹಾಪಾಪಿಗಳಿಗೆ ಆಗುವ ನರಕಗಳು ನಮ್ಮಗಾಗಲಿ !' ಇಂತು ನುಡಿದು ಸುಶರ್ಮ ಮುಂತಾದ ತ್ರಿಗರ್ತವೀರರು, ಮಾಲವತುಂಡಿಕ ಮಾವೆಲ್ಲ ಮದ್ರಕ ಯೋಧರು ಹಿಂಬಾಲಿಸಲು ಅರ್ಜುನನೊಡನೆ ಕಾದಲು ಬಂದರು.

ಈ ವೃತ್ತಾಂತವನ್ನು ಚಾರುಮುಖದಿಂದ ತಿಳಿದ ಧರ್ಮರಾಜನು ಭೀತನಾಗಿ ಅರ್ಜುನನಿಗೆ ಇಂತೆಂದನು. 'ವೀರ ! ದ್ರೋಣನು ಬಲು ಶೂರನು, ನೀನಿಲ್ಲದಿದ್ದಾಗ ನನ್ನನ್ನು ಹಿಡಿದು ಕುರುರಾಜನಿಗೊಪ್ಪಿಸಲು ಪ್ರತಿಜ್ಞೆ ಮಾಡಿರುವನಂತೆ ! ಆತನ ನುಡಿ ಸತ್ಯವಾಗದಂತೆ ನನ್ನನ್ನು ಬಿಡದೆ ಕಾಪಾಡಿಕೊಂಡಿರು !' ಆಗ ಸುಶರ್ಮಾದಿಗಳು ಬಂದು ಅರ್ಜುನನನ್ನು ರಣಕ್ಕೆಂದು ಆಹ್ವಾನಿಸಿದರು. ಅರ್ಜುನನು ಧರ್ಮಜನಿಗೆ 'ರಾಜನ್ ! ಭಯಪಡುವ ಕೆಲಸವಿಲ್ಲ. ಆಹ್ವಾನಿಸಿದಾಗ ರಣವಾಡದೆ ಬರಲಾರೆನು. ಸುಶರ್ಮನ ಆಹ್ವಾನವನ್ನು ಸ್ವೀಕರಿಸಿರುವೆನು. ದಕ್ಷಿಣದ ರಣಾಂಗಣದಲ್ಲಿ ಸಂಶಪ್ತಕರಿಂದ ಕೂಡಿ ಕಡಿದಾಡಲು ಹೋಗಬೇಕಾಗಿದೆ. ಅವರನ್ನು ದಕ್ಷಿಣದಿಗಧೀಶನ ಮನೆಗೆ ಕಳಿಸಿ ಬರುವೆನು. ಸತ್ಯಜಿತನು ಮಹಾವೀರನು. ದ್ರೋಣಸಮನೆನಿಸಿದ ದ್ರುಪದ ಸುತನು ನಿನ್ನನ್ನು ದ್ರೋಣನ ಕೈಲಿ ಸಿಗಗೊಡದೆ ರಕ್ಷಿಸುವನು. ಒಂದು ವೇಳೆ ಸತ್ಯಜಿತನು ಮೃತನಾದರೆ, ನೀನು ರಣರಂಗವನ್ನು ಬಿಟ್ಟು ಶಿಬಿರವನ್ನು ಸೇರಬೇಕಾಗುವುದು. ನಾನೂ ನಿರ್ಜಿತ ವೈರಿ ವೀರನಾಗಿ ಬೇಗ ಬರುವೆನು' ಎಂದು

ಅಭಯವಿತ್ತನು; ಆತನ ಅಪ್ಪಣೆ ಪಡೆದನು. ತ್ರಿಗರ್ತರಿಂದ ಕೂಡಿ ಯುದ್ಧಕ್ಕೆಂದು ಹೊರಟ ಅರ್ಜುನನನ್ನು ನೋಡಿ, ಕುರುಸೇನೆ ಹರ್ಷದಿಂದ ಧರ್ಮರಾಜನನ್ನು ಹಿಡಿಯುವ ಹಂಬಲದಿಂದ ಉಕ್ಕೇರಿ ಪಾಂಡವ ಸೇನೆಯನ್ನು ತಾಕಿತು.

## ೩. ದ್ವಾದಶ ದಿನದ ಯುದ್ಧ (ದಶಮಿ)

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ಅಂದು ದಶಮಿ. ಸಂಶಪ್ತಕರು ಸಮದೇಶದಲ್ಲಿ ತಮ್ಮ ಇಪ್ಪತ್ತು ಸಾವಿರ ರಥಗಳೊಂದಿಗೆ ಚಂದ್ರಾಕಾರ ವ್ಯೂಹವಾಗಿ ನಿಂತಿದ್ದರು. ಬರುವ ಕಿರೀಟಿಯನ್ನು ಕಂಡು ಅವರ ರಣೋತ್ಸಾಹವು ಇಮ್ಮಡಿಸಿತು. ಗರ್ಜಿಸುತ್ತಾ ಮುತ್ತಬರುವ ತ್ರಿಗರ್ತರನ್ನು ನೋಡಿ ಅರ್ಜುನನು ನಕ್ಕು ಶ್ರೀಕೃಷ್ಣನಿಗಿಂತೆಂದನು: 'ಕೃಷ್ಣ ! ಕಂಡೆಯಾ ಇವರ ದುಂದುಡುಕುತನವನ್ನು ! ಮೃತ್ಯುವದನ ಗಹ್ವರದಿ ಹೊಗಲು ಇವರೆಷ್ಟು ಆತುರರಾಗಿರುವರು ! ಅಳುವ ಕಾಲದಲ್ಲಿ ನಗುತ್ತಿರುವ ಮೂರ್ಖರು ತಮ್ಮ ಸಾವನ್ನರಿತಂತಿಲ್ಲ.' ಇಂತು ನುಡಿದು ಹೇಮಪರಿಷ್ಕೃತವಾದ ಶಂಖವನ್ನೂದಿ ಧನಂಜಯನು ತ್ರಿಗರ್ತರನ್ನು ರಣರಂಗದ ಆಗ್ನೇಯ ದಿಕ್ಕಿನಲ್ಲಿ ಮುತ್ತಿದನು. ದೇವದತ್ತದ ನಾದದಿಂದ ಸೈನಿಕರ ಕಿವಿಗಡಚಿಕ್ಕಿತು. ಅವರು ಕಲ್ಲಗೊಂಬೆಗಳಂತೆ ನಿಶ್ಚೇಷ್ಟರಾಗಿ ನಿಂತರು. ಅವರ ಆನೆ ಕುದುರೆಗಳು ತೇಲುಗಣ್ಣು ಮಾಡಿ, ಶಕೃನ್ಮೂತ್ರ ವಿಸರ್ಜಿಸಿದವು.

ಪಂಚತ್ರಿಗರ್ತರು ಎಚ್ಚತ್ತು ತಮ್ಮ ಸೈನಿಕರಿಗೆ ಧೈರ್ಯವನ್ನು ತುಂಬಿಸಿ, ಅರ್ಜುನನನ್ನು ಒಬ್ಬೊಬ್ಬರು ಐದೈದು ಬಾಣಗಳಿಂದ ಹೊಡೆದು ಸಿಂಹನಾದ ಮಾಡಿದರು. ಅರ್ಜುನನು ಅವರನ್ನು ಎರಡೆರಡು ಬಾಣಗಳಿಂದ ಪೀಡಿಸಲು, ಅವರು ಬಿಟ್ಟ ಸಹಸ್ರಾರು ಬಾಣಗಳು ಅರ್ಜುನನ ರಥವನ್ನು ಪುಲ್ಲಕುಸುಮಿತ ವೃಕ್ಷವನ್ನು ದುಂಬಿಗಳಂತೆ ಮುಚ್ಚಿದವು. ಸುಬಾಹುವು ಬಿಟ್ಟ ಇಪ್ಪತ್ತು ಬಾಣಗಳಿಂದ ಅರ್ಜುನ ಕಿರೀಟವು ಆಕ್ರಾಂತವಾಗಿ ಕಿರಣಜಾಲಯುತ ರತ್ನದೀಪದಂತೆ ಕಂಗೊಳಿಸಿತು. ಸುಶರ್ಮರು ತನ್ನ ಅನುಜರಾದ ಸುಬಾಹು, ಸುರಥ, ಸುಧರ್ಮ, ಸುಧನುರಿಂದ ಕೂಡಿ ನೂರಾರು ಬಾಣಗಳನ್ನು ಬಿಡಲು, ಅರ್ಜುನನು ಅವನ್ನು ಖಂಡಿಸಿ, ಅವರ ಧ್ವಜಗಳನ್ನು ಕೆಡಹಿದನು; ಸುಧನುವಿನ ಧನುವನ್ನು ಮುರಿದು, ಹಯಗಳನ್ನು ಕೊಂದನು: ಮತ್ತು ಭಲ್ಲದಿಂದ ಶಿರಸ್ತ್ರಾಣಯುತವಾದ ಅವನ ಶಿರವನ್ನು ಕೆಡಹಿದನು. ಅವನ ಸೈನ್ಯವು ಭೀತವಾಗಿ ಓಡತೊಡಗಲು, ಅದನ್ನು ಶರಜಾಲದಿಂದ ಚೆಂಡಾಡಿದನು. ಸೂರ್ಯಕಿರಣ ಜಾಲದಿಂದ ತಮಸ್ಸಿನಂತೆ ತ್ರಿಗರ್ತ ಬಲವು ಭಗ್ನವಾಗಲು ನೋಡಿ ಸುಶರ್ಮನು ಕ್ರುದ್ಧನಾಗಿ, 'ಎಲವೋ ವೀರವರರೇ ! ಅಲ್ಲಿ ಪ್ರತಿಜ್ಞೆಗೈದು, ಇಲ್ಲಿ ಹೇಡಿಗಳಂತೆ ಓಡಿಹೋಗುವುದುಚಿತವಲ್ಲ. ದುರ್ಯೋಧನನೇನೆಂದಾನು ? ಅಪಹಾಸಕ್ಕೀಡಾಗಬೇಡಿ!

ಹಿಂದಿರುಗಿ! ' ಎಂದು ಹುರಿದುಂಬಿಸಿದನು. ಆಗ ಗೋಪಾಲಕರಾದ ನಾರಾಯಣನಾಮಕ ಲಕ್ಷಭಟರು ತ್ರಿಗರ್ತರಿಂದ ಕೂಡಿ, ಗರ್ಜಿಸುತ್ತಾ ಅರ್ಜುನನನ್ನು ಮುತ್ತಿದರು.

ಜೀವದ ಹಂಗು ತೊರೆದು ಕಾದಿ ಮಡಿಯಲು ಬಂದ ತ್ರಿಗರ್ತಾದಿ ವೀರರನ್ನು ಕಂಡು ಅರ್ಜುನನು ಅವರನ್ನು ನಾಶಮಾಡಲೆಣಿಸಿದನು. ಶ್ರೀಕೃಷ್ಣನೂ ಅವನು ಹೇಳಿದಂತೆ ರಥವನ್ನು ನಡೆಸಿದನು. ಮಂಡಲಾಕಾರವಾಗಿ ಚಿತ್ರಗತಿಯಿಂದ ನಡೆಯುವ ಅರ್ಜುನ ರಥವು ಅಲಾತಚಕ್ರದಂತೆ ಬಾಣಜ್ವಾಲೆಗಳನ್ನು ಕಾರುತ್ತಾ ಸಂಚರಿಸಿತು. ಶತ್ರು ವೀರರ ಗುರಿಗೆ ಸಿಲುಕದೆ, ದೇವದತ್ತ ಧ್ವಾನದಿಂದಲು, ರಥನೇಮಿ ಶಬ್ದದಿಂದಲು ಭಯಂಕರವಾಗಿ ಬಾಣವರ್ಷವನ್ನು ಸುರಿಸುವ ಅರ್ಜುನ ರಥವು ಪ್ರಳಯಮೇಘದಂತೆ ವಿರಾಜಿಸಿತು.

ಮುಖ್ಯ ರಣರಂಗದಲ್ಲಿ ದ್ರೋಣನು ಧರ್ಮರಾಜನನ್ನು ಹಿಡಿದುಕೊಡುವ ಪಣ ತೊಟ್ಟು ತನ್ನ ಸೈನ್ಯವನ್ನು ಸುಪರ್ಣ ವ್ಯೂಹಾಕಾರವಾಗಿ ನಿಲ್ಲಿಸಿದನು. ಭಾರದ್ವಾಜನು ಮುಖದಲ್ಲಿರಲು, ಅದರ ಶಿರದಲ್ಲಿ ದುರ್ಯೋಧನಾದಿ ವೀರರು; ಕಣ್ಣುಗಳಾಗಿ ಕೃಪ ಕೃತವರ್ಮರು; ಕುತ್ತಿಗೆಯಲ್ಲಿ ಭೂತಶರ್ಮ ಕ್ಷೇಮಶರ್ಮ ಕರವರ್ಷರು, ಕಳಿಂಗ, ಪಿಂಗಲ, ಅಭೀರ, ದಶೇರಕ, ಶಕ, ಯವನ, ಕಾಂಬೋಜ, ದರದ, ಮದ್ರ, ಕೈಕಯಾದಿ ಸೈನಿಕರು; ಭೂರಿಶ್ರವ ಶಲ್ಯ ಬಾಹ್ಲಿಕರು ಬಲ ರೆಕ್ಕೆಯಲ್ಲಿ; ಅವಂತಿಯ ವಿಂದಾನುವಿಂದರು, ಸುದಕ್ಷಿಣನು ಎಡ ರೆಕ್ಕೆಯಲ್ಲಿ; ಬೆನ್ನಿನಲ್ಲಿ ಅಶ್ವತ್ಥಾಮನು, ಕಳಿಂಗ, ಮಾಗಧ ಪೌಂಡ್ರಕ ಗಾಂಧಾರ ಶಾಕುನರು; ಬಾಲದಲ್ಲಿ ಕರ್ಣ ಜಯದ್ರಥ ಭೀಮರಥ ವೃಷಕ್ರಾಥ ನೈಷಧರು ನಿಂತಿದ್ದರು. ವಾತೋದ್ಧೂತವಾಗುವ ಸಮುದ್ರದಂತೆ ತೂಗಾಡುವ ಕುರುಸೇನೆಯ ಮಧ್ಯದಲ್ಲಿ ಗಜಾರೂಢನಾದ ಪ್ರಾಗ್ಜ್ಯೋತಿಷಪುರಾಧೀಶನು ಶತ್ರು ಭೀಕರನಾಗಿ ಬರುತ್ತಿದ್ದನು. ದೇವಗಣವು ಶಕ್ರನನ್ನಂತೆ ಪಾವಟ ಸೈನಿಕರವನನ್ನನುಸರಿಸಿ ಬಂದರು.

ಅದನ್ನು ಕಂಡು ಧರ್ಮರಾಜನು ಧೃಷ್ಟದ್ಯುಮ್ನನನ್ನು ಕರೆದಿಂತೆಂದನು : 'ಪಾರ್ಷತ ! ಅರ್ಜುನನು ತ್ರಿಗರ್ತರೊಡನೆ ಕಾದಲು ದೂರ ಹೋಗಿರುವನು. ಆಚಾರ್ಯನ ಕೈಗೆ ಸಿಗದಂತೆ ನನ್ನನ್ನು ರಕ್ಷಿಸುತ್ತಿರು ! ' ಆ ಮಾತಿಗೆ ಧೃಷ್ಟದ್ಯುಮ್ನನು 'ಮಹಾರಾಜ ! ಭಯ ಬೇಡ ! ಸಹಾನುಗನಾದ ದ್ರೋಣನನ್ನು ನಾನು ತಡೆಯುವೆನು. ಅವನ ವಿಷದ ಉಸಿರೂ ನಿನಗೆ ಸೋಕದಂತೆ ಮಾಡುವೆನು. ನಾನು ಜೀವದಿಂದಿರುವವರೆಗೂ ದ್ರೋಣಾದಿಗಳಾರೂ ನಿನ್ನನ್ನು ಹಿಡಿಯಲಾರರು. ದ್ರೋಣನೆಂದಿಗೂ ನನ್ನನ್ನು ಜಯಿಸಲಾರನು.' ಎಂದು ತನ್ನ ಪಾರಾವತ ವರ್ಣದ ದಿವ್ಯಾಶ್ವಗಳ ರಥದಲ್ಲಿ ಕೂತು ದ್ರೋಣನನ್ನು ಮುತ್ತಿದನು. ಅವನ ದರ್ಶನದಿಂದ ದ್ರೋಣನು ನಿರುತ್ಸಾಹನಾದಂತಾಗಲು, ದುರ್ಮುಖನು ಪಾರ್ಷತನನ್ನು ತಡೆದನು. ಧೃಷ್ಟದ್ಯುಮ್ನನು ಶರಜಾಲದಿಂದ ದುರ್ಮುಖನನ್ನು ವಿಮುಖೀಕರಿಸಿ, ಭಾರದ್ವಾಜನನ್ನು ಹತ್ತಾರು ಬಾಣಗಳಿಂದ ಹೊಡೆದನು. ದುರ್ಯೋಧನನು ಬಂದು ತಡೆದಾಗ, ದ್ರೋಣನು

ಧೃಷ್ಟದ್ಯುಮ್ನನಿಂದ ಪಾರಾಗಿ, ಪಾಂಡವ ಸೇನೆಯನ್ನು ನಾಶಪಡಿಸಿ, ಧರ್ಮಜನನ್ನು ಸಮೀಪಿಸಬೇಕೆಂದು ಸಾಗಿದನು.

ಸಮರವು ಘೋರವಾಯಿತು. ಸ್ವಪರ ಭೇದವನ್ನರಿಯಲಾರದೆ, ಕೇವಲ ಊಹಿಸಿ, ಕೂಗಿ ಹೆಸರಿಸಿ ಆಮೇಲೆ ತಿಳಿದು ಸೈನಿಕರು ಕಾದಾಡಿದರು. ರಥ ಗಜ ತುರಗಗಳ ಸರ್ವಾಂಗಗಳು ತೀಕ್ಷ್ಣ ಬಾಣಾಕ್ರಾಂತವಾದವು. ರಥ ವಾರಣ ವಾಜಿಗಳಿಗೆ ಕಟ್ಟಿದ್ದ ಪತಾಕೆಗಳು ಹಾರಾಡುತ್ತಾ ಅಂಬರದಿ ತುಂಬಿದ ಬಲಾಕಾಪಕ್ಷಿಗಳಂತೆ ಕಂಡವು. ಘೀಳಿಟ್ಟು ನಡೆಯುವ ಗಜಗಣದಿಂದ ರಣಾಂಗವು ಮೇಘ ಸಮಾವೃತವಾದ ಆಕಾಶದಂತೆ ಕಂಡಿತು. ಅಂಕುಶದಿಂದ ತಿವಿಯಲ್ಪಟ್ಟು ಶತ್ರು ಸೇನೆಯನ್ನು ತುಳಿದ ಮದ್ದಾನೆಗಳನ್ನು ಸೊಂಡಿಲು ಕಡಿದು ವೀರರು ವಿಹರಿಸುವಾಗ, ಅವು ಹುಚ್ಚೆದ್ದು ತಮ್ಮವರ ಮೇಲೆರಗಿ ತುಳಿದು, ತಾವೂ ಸತ್ತು ಬೀಳುತ್ತಿದ್ದವು. ಆನೆಗಳಿಂದ ಉರುಳಿದ ಮಹಾಮಾತ್ರರು ಅದೇ ಆನೆಯ ಕಾಲಿಗೆ ಸಿಕ್ಕು ಪುಡಿಯಾದರು. ತೋಮರಾದಿ ಪೀಡಿತವಾದ ಆನೆಗಳ ಧಾವನದಿಂದ ಭೂಮಿ ಕಂಪಿಸಿತು. ಸತ್ತುಬಿದ್ದ ಆನೆಗಳಿಂದ ತುಂಬಿ ಪರ್ವತ ಪ್ರಾಂತದಂತೆ ವಿಷಮ ಗಮನವಾಯಿತು. ಆನೆಗಳಿಂದ ಎತ್ತೆಯಸಲ್ಪಟ್ಟ ಭಟರು ಆಕಾಶದಿ ಹಾರುವ ಕಿನ್ನರರಂತೆ ತೋರಿದರು; ರಥಗಳು ಕೆಳಗಿಳಿಯುತ್ತಿರುವ ವಿಮಾನಗಳಂತೆ ಕಂಡುಬಂದವು. ಅದರಲ್ಲಿದ್ದ ರಥಿಕರು, ಪುಣ್ಯ ಕ್ಷಯವಾದಾಗ ಬೀಳುವ ನರರಂತೆ ಕಾಣಿಸಿದರು. ಸೈನ್ಯಸಾಗರವು ಗಜಗಮನದಿಂದ ಸಾಗಿ, ರಥ ಚಕ್ರಾವರ್ತದಲ್ಲಿ ಸುತ್ತಿ ಹಯತರಂಗಗಳಲ್ಲಿ ತೇಲಾಡುತ್ತಾ ಭಟ ಗರ್ಜನದಿಂದ ಭಯಂಕರವಾಗಿತ್ತು. ರಣವೈತರಣಿಯನ್ನು ವಾಹನ ನಾವೆಯಿಂದ ದಾಟಿ ಕಾದುವ ವೀರರು ಸರ್ವಸುಖವನ್ನು ಸೂರೆಗೊಂಡರು.

ನೋಡ ನೋಡುತ್ತಿರಲು, ತಡೆಯುವ ವೀರರನ್ನು ಕಡಿದು, ಭಾರದ್ವಾಜನು ಯುಧಿಷ್ಠಿರನನ್ನು ಸಮೀಪಿಸಿದನು. ಧರ್ಮಜನು ಹೆದರದೆ ಶರವೃಷ್ಟಿಯಿಂದ ಗುರುವಿನನ್ನು ವಾರಿಸಿದನು. ದ್ರೋಣನನ್ನು ಸತ್ಯಜಿತನು ವಾರಿಸಿ, ವಿವಿಧ ನಾರಾಚಾರಗಳಿಂದ ಪೀಡಿಸಿದನು. ಅವನ ಸೂತ ತುರಗಗಳನ್ನು ಕೊಂದು, ದ್ರೋಣನು ಸತ್ಯಜಿತನನ್ನೋಡಿಸಿದನು. ಸತ್ಯಜಿತನ ಪಲಾಯನವನ್ನು ಕಂಡು, ಧರ್ಮರಾಜನು ದ್ರೋಣನಿಂದ ದೂರ ಸರಿದನು.

ವಿರಾಟನ ತಮ್ಮನಾದ ಶತಾನೀಕನು ಆಚಾರ್ಯನನ್ನು ತಡೆದು, ಆರು ಬಾಣಗಳಿಂದ ಆತನ ಸೂತನನ್ನು, ಶರತದಿಂದ ಗುರುವಿನನ್ನು ಹೊಡೆದನು. ಗೆದ್ದನೆಂದು ಗರ್ಜಿಸುವ ಶತಾನೀಕನ ಶಿರವನ್ನು ದ್ರೋಣನು ಕೆಳಗುರುಳಿಸಿ, ಪಾಂಚಾಲ ಮಾತ್ಸ್ಯ ವೀರರನ್ನು ಮೃತ್ಯುದೇವಿಯಂತೆ ಕೊಲ್ಲುತ್ತಾ ಸಾಗಿದನು. ಅಮಿತ ತೇಜಸ್ಕನಾದ ಆಚಾರ್ಯನು ರಣರಂಗದಿ ಎಲ್ಲಿ ನೋಡಿದರೂ ತಾನೇ ತಾನಾಗಿ, ದೈತ್ಯಗಣವನ್ನು ವಿಷ್ಣುವಂತೆ, ಪಾಂಚಾಲಾದಿ ವೀರರನ್ನು ಸಂಹರಿಸಿದನು. ಕಲ್ಪಾಂತರುದ್ರನ ಪ್ರಳಯ ತಾಂಡವವನ್ನು ಜ್ಞಾಪಿಸಿಕೊಡುವ ಆ ಮಹಾನುಭಾವನ ವೀರ ವಿಹಾರವು ರೋಮಾಂಚ

ಹಿಂದಿರುಗಿ!' ಎಂದು ಹುರಿದುಂಬಿಸಿದನು. ಆಗ ಗೋಪಾಲಕರಾದ ನಾರಾಯಣನಾಮಕ ಲಕ್ಷಭಟರು ತ್ರಿಗರ್ತರಿಂದ ಕೂಡಿ, ಗರ್ಜಿಸುತ್ತಾ ಅರ್ಜುನನನ್ನು ಮುತ್ತಿದರು.

ಜೀವದ ಹಂಗು ತೊರೆದು ಕಾದಿ ಮಡಿಯಲು ಬಂದ ತ್ರಿಗರ್ತಾದಿ ವೀರರನ್ನು ಕಂಡು ಅರ್ಜುನನು ಅವರನ್ನು ನಾಶಮಾಡಲೆಣಿಸಿದನು. ಶ್ರೀಕೃಷ್ಣನೂ ಅವನು ಪೇಳಿದಂತೆ ರಥವನ್ನು ನಡೆಸಿದನು. ಮಂಡಲಾಕಾರವಾಗಿ ಚಿತ್ರಗತಿಯಿಂದ ನಡೆಯುವ ಅರ್ಜುನ ರಥವು ಅಲಾತಚಕ್ರದಂತೆ ಬಾಣಜ್ವಾಲೆಗಳನ್ನು ಕಾರುತ್ತಾ ಸಂಚರಿಸಿತು. ಶತ್ರು ವೀರರ ಗುರಿಗೆ ಸಿಲುಕದೆ, ದೇವದತ್ತ ಧ್ವಾನದಿಂದಲು, ರಥನೇಮಿ ಶಬ್ದದಿಂದಲು ಭಯಂಕರವಾಗಿ ಬಾಣವರ್ಷವನ್ನು ಸುರಿಸುವ ಅರ್ಜುನ ರಥವು ಪ್ರಳಯಮೇಘದಂತೆ ವಿರಾಜಿಸಿತು.

ಮುಖ್ಯ ರಣರಂಗದಲ್ಲಿ ದ್ರೋಣನು ಧರ್ಮರಾಜನನ್ನು ಹಿಡಿದುಕೊಡುವ ಪಣ ತೊಟ್ಟು ತನ್ನ ಸೈನ್ಯವನ್ನು ಸುಪರ್ಣ ವ್ಯೂಹಾಕಾರವಾಗಿ ನಿಲ್ಲಿಸಿದನು. ಭಾರದ್ವಾಜನು ಮುಖದಲ್ಲಿರಲು, ಅದರ ಶಿರದಲ್ಲಿ ದುರ್ಯೋಧನಾದಿ ವೀರರು; ಕಣ್ಣುಗಳಾಗಿ ಕೃಪ ಕೃತವರ್ಮರು; ಕುತ್ತಿಗೆಯಲ್ಲಿ ಭೂತಶರ್ಮ ಕ್ಷೇಮಶರ್ಮ ಕರವರ್ಷರು, ಕಳಿಂಗ, ಪಿಂಗಲ, ಅಭೀರ, ದಶೇರಕ, ಶಕ, ಯವನ, ಕಾಂಬೋಜ, ದರದ, ಮದ್ರ, ಕೈಕಯಾದಿ ಸೈನಿಕರು; ಭೂರಿಶ್ರವ ಶಲ್ಯ ಬಾಹ್ಲಿಕರು ಬಲ ರೆಕ್ಕೆಯಲ್ಲಿ; ಅವಂತಿಯ ವಿಂದಾನುವಿಂದರು, ಸುದಕ್ಷಿಣನು ಎಡ ರೆಕ್ಕೆಯಲ್ಲಿ; ಬೆನ್ನಿನಲ್ಲಿ ಅಶ್ವತ್ಥಾಮನು, ಕಳಿಂಗ, ಮಾಗಧ ಪೌಂಡ್ರಕ ಗಾಂಧಾರ ಶಾಕುನರು; ಬಾಲದಲ್ಲಿ ಕರ್ಣ ಜಯದ್ರಥ ಭೀಮರಥ ವೃಷಕ್ರಾಥ ನೈಷಧರು ನಿಂತಿದ್ದರು. ವಾತೋದ್ಧೂತವಾಗುವ ಸಮುದ್ರದಂತೆ ತೂಗಾಡುವ ಕುರುಸೇನೆಯ ಮಧ್ಯದಲ್ಲಿ ಗಜಾರೂಢನಾದ ಪ್ರಾಗ್ಜ್ಯೋತಿಷಪುರಾಧೀಶನು ಶತ್ರು ಭೀಕರನಾಗಿ ಬರುತ್ತಿದ್ದನು. ದೇವಗಣವು ಶಕ್ರನನ್ನಂತೆ ಪಾವಟ ಸೈನಿಕರವನನ್ನನುಸರಿಸಿ ಬಂದರು.

ಅದನ್ನು ಕಂಡು ಧರ್ಮರಾಜನು ಧೃಷ್ಟದ್ಯುಮ್ನನನ್ನು ಕರೆದಿಂತೆಂದನು : 'ಪಾರ್ಷತ ! ಅರ್ಜುನನು ತ್ರಿಗರ್ತರೊಡನೆ ಕಾದಲು ದೂರ ಹೋಗಿರುವನು. ಆಚಾರ್ಯನ ಕೈಗೆ ಸಿಗದಂತೆ ನನ್ನನ್ನು ರಕ್ಷಿಸುತ್ತಿರು !' ಆ ಮಾತಿಗೆ ಧೃಷ್ಟದ್ಯುಮ್ನನು 'ಮಹಾರಾಜ ! ಭಯ ಬೇಡ ! ಸಹಾನುಗನಾದ ದ್ರೋಣನನ್ನು ನಾನು ತಡೆಯುವೆನು. ಅವನ ವಿಷದ ಉಸಿರೂ ನಿನಗೆ ಸೋಕದಂತೆ ಮಾಡುವೆನು. ನಾನು ಜೀವದಿಂದಿರುವವರೆಗೂ ದ್ರೋಣಾದಿಗಳಾರೂ ನಿನ್ನನ್ನು ಹಿಡಿಯಲಾರರು. ದ್ರೋಣನೆಂದಿಗೂ ನನ್ನನ್ನು ಜಯಿಸಲಾರನು.' ಎಂದು ತನ್ನ ಪಾರಾವತ ವರ್ಣದ ದಿವ್ಯಾಶ್ವಗಳ ರಥದಲ್ಲಿ ಕೂತು ದ್ರೋಣನನ್ನು ಮುತ್ತಿದನು. ಅವನ ದರ್ಶನದಿಂದ ದ್ರೋಣನು ನಿರುತ್ಸಾಹನಾದಂತಾಗಲು, ದುರ್ಮುಖನು ಪಾರ್ಷತನನ್ನು ತಡೆದನು. ಧೃಷ್ಟದ್ಯುಮ್ನನು ಶರಜಾಲದಿಂದ ದುರ್ಮುಖನನ್ನು ವಿಮುಖೀಕರಿಸಿ, ಭಾರದ್ವಾಜನನ್ನು ಹತ್ತಾರು ಬಾಣಗಳಿಂದ ಹೊಡೆದನು. ದುರ್ಯೋಧನನು ಬಂದು ತಡೆದಾಗ, ದ್ರೋಣನು

ಧೃಷ್ಟದ್ಯುಮ್ನನಿಂದ ಪಾರಾಗಿ, ಪಾಂಡವ ಸೇನೆಯನ್ನು ನಾಶಪಡಿಸಿ, ಧರ್ಮಜನನ್ನು ಸಮೀಪಿಸಬೇಕೆಂದು ಸಾಗಿದನು.

ಸಮರವು ಘೋರವಾಯಿತು. ಸ್ವಪರ ಭೇದವನ್ನರಿಯಲಾರದೆ, ಕೇವಲ ಊಹಿಸಿ, ಕೂಗಿ ಹೆಸರಿಸಿ ಆಮೇಲೆ ತಿಳಿದು ಸೈನಿಕರು ಕಾದಾಡಿದರು. ರಥ ಗಜ ತುರಗಗಳ ಸರ್ವಾಂಗಗಳು ತೀಕ್ಷ್ಣ ಬಾಣಾಕ್ರಾಂತವಾದವು. ರಥ ವಾರಣ ವಾಜಿಗಳಿಗೆ ಕಟ್ಟಿದ್ದ ಪತಾಕೆಗಳು ಹಾರಾಡುತ್ತಾ ಅಂಬರದಿ ತುಂಬಿದ ಬಲಾಕಾಪಕ್ಷಿಗಳಂತೆ ಕಂಡವು. ಘೀಳಿಟ್ಟು ನಡೆಯುವ ಗಜಗಣದಿಂದ ರಣಾಂಗವು ಮೇಘ ಸಮಾವೃತವಾದ ಆಕಾಶದಂತೆ ಕಂಡಿತು. ಅಂಕುಶದಿಂದ ತಿವಿಯಲ್ಪಟ್ಟು ಶತ್ರು ಸೇನೆಯನ್ನು ತುಳಿದ ಮದ್ದಾನೆಗಳನ್ನು ಸೊಂಡಿಲು ಕಡಿದು ವೀರರು ವಿಹರಿಸುವಾಗ, ಅವು ಹುಚ್ಚೆದ್ದು ತಮ್ಮವರ ಮೇಲೆರಗಿ ತುಳಿದು, ತಾವೂ ಸತ್ತು ಬೀಳುತ್ತಿದ್ದವು. ಆನೆಗಳಿಂದ ಉರುಳಿದ ಮಹಾಮಾತ್ರರು ಅದೇ ಆನೆಯ ಕಾಲಿಗೆ ಸಿಕ್ಕು ಪುಡಿಯಾದರು. ತೋಮರಾದಿ ಪೀಡಿತವಾದ ಆನೆಗಳ ಧಾವನದಿಂದ ಭೂಮಿ ಕಂಪಿಸಿತು. ಸತ್ತುಬಿದ್ದ ಆನೆಗಳಿಂದ ತುಂಬಿ ಪರ್ವತ ಪ್ರಾಂತದಂತೆ ವಿಷಮ ಗಮನವಾಯಿತು. ಆನೆಗಳಿಂದ ಎತ್ತೆಯಸಲ್ಪಟ್ಟ ಭಟರು ಆಕಾಶದಿ ಹಾರುವ ಕಿನ್ನರರಂತೆ ತೋರಿದರು; ರಥಗಳು ಕೆಳಗಿಳಿಯುತ್ತಿರುವ ವಿಮಾನಗಳಂತೆ ಕಂಡುಬಂದವು. ಅದರಲ್ಲಿದ್ದ ರಥಿಕರು, ಪುಣ್ಯ ಕ್ಷಯವಾದಾಗ ಬೀಳುವ ನರರಂತೆ ಕಾಣಿಸಿದರು. ಸೈನ್ಯಸಾಗರವು ಗಜಗಮನದಿಂದ ಸಾಗಿ, ರಥ ಚಕ್ರಾವರ್ತದಲ್ಲಿ ಸುತ್ತಿ ಹಯತರಂಗಗಳಲ್ಲಿ ತೇಲಾಡುತ್ತಾ ಭಟ ಗರ್ಜನದಿಂದ ಭಯಂಕರವಾಗಿತ್ತು. ರಣವೈತರಣಿಯನ್ನು ವಾಹನ ನಾವೆಯಿಂದ ದಾಟಿ ಕಾದುವ ವೀರರು ಸರ್ವಸುಖವನ್ನು ಸೂರೆಗೊಂಡರು.

ನೋಡ ನೋಡುತ್ತಿರಲು, ತಡೆಯುವ ವೀರರನ್ನು ಕಡಿದು, ಭಾರದ್ವಾಜನು ಯುಧಿಷ್ಠಿರನನ್ನು ಸಮೀಪಿಸಿದನು. ಧರ್ಮಜನು ಹೆದರದೆ ಶರವೃಷ್ಟಿಯಿಂದ ಗುರುವಿನನ್ನು ವಾರಿಸಿದನು. ದ್ರೋಣನನ್ನು ಸತ್ಯಜಿತನು ವಾರಿಸಿ, ವಿವಿಧ ನಾರಾಚಾರಗಳಿಂದ ಪೀಡಿಸಿದನು. ಅವನ ಸೂತ ತುರಗಗಳನ್ನು ಕೊಂದು, ದ್ರೋಣನು ಸತ್ಯಜಿತನನ್ನೋಡಿಸಿದನು. ಸತ್ಯಜಿತನ ಪಲಾಯನವನ್ನು ಕಂಡು, ಧರ್ಮರಾಜನು ದ್ರೋಣನಿಂದ ದೂರ ಸರಿದನು.

ವಿರಾಟನ ತಮ್ಮನಾದ ಶತಾನೀಕನು ಆಚಾರ್ಯನನ್ನು ತಡೆದು, ಆರು ಬಾಣಗಳಿಂದ ಆತನ ಸೂತನನ್ನು ಶರತದಿಂದ ಗುರುವಿನನ್ನು ಹೊಡೆದನು. ಗೆದ್ದನೆಂದು ಗರ್ಜಿಸುವ ಶತಾನೀಕನ ಶಿರವನ್ನು ದ್ರೋಣನು ಕೆಳಗುರುಳಿಸಿ, ಪಾಂಚಾಲ ಮಾತ್ಸ್ಯ ವೀರರನ್ನು ಮೃತ್ಯುದೇವಿಯಂತೆ ಕೊಲ್ಲುತ್ತಾ ಸಾಗಿದನು. ಅಮಿತ ತೇಜಸ್ಕನಾದ ಆಚಾರ್ಯನು ರಣರಂಗದಿ ಎಲ್ಲಿ ನೋಡಿದರೂ ತಾನೇ ತಾನಾಗಿ, ದೈತ್ಯಗಣವನ್ನು ವಿಷ್ಣುವಂತೆ, ಪಾಂಚಾಲಾದಿ ವೀರರನ್ನು ಸಂಹರಿಸಿದನು. ಕಲ್ಪಾಂತರುದ್ರನ ಪ್ರಳಯ ತಾಂಡವವನ್ನು ಜ್ಞಾಪಿಸಿಕೊಡುವ ಆ ಮಹಾನುಭಾವನ ವೀರ ವಿಹಾರವು ರೋಮಾಂಚ

ಕಾರಿಯಾಗಿತ್ತು. ರಣರಂಗದ ರಕ್ತನದಿಗಳಿಗೆ ಯಮಾಂಗಣವೇ ಸಂಗಮ ಸ್ಥಾನವಾದಂತಿತ್ತು.

ಶಿಖಂಡಿಯು ದ್ರೋಣನನ್ನು ಮುತ್ತಿ ಐದು ಬಾಣಗಳಿಂದ ಹೊಡೆದನು. ಕ್ಷತ್ರಧರ್ಮನು ಇಪ್ಪತ್ತನ್ನು, ವಸುದಾನನು ಐದನ್ನು, ಉತ್ತಮೌಜನು ಮೂರನ್ನು, ಸಾತ್ಯಕಿಯು ನೂರನ್ನು, ಯುಧಾಮನ್ಯುವು ಎಂಟು ಬಾಣಗಳನ್ನು, ಧರ್ಮರಾಜನು ಹನ್ನೆರಡು ವಿಶಿಖಗಳನ್ನು, ಧೃಷ್ಟದ್ಯುಮ್ನನು ಹತ್ತನ್ನು, ಚೇಕಿತಾನನು ಮೂರನ್ನು ಬಿಟ್ಟು ದ್ರೋಣನನ್ನು ಮುತ್ತಲು, ಆತನು ಪ್ರಳಯ ರುದ್ರನಾಗಿ ದೃಢಸೇನ ಕ್ಷೇಮಶರ್ಮರನ್ನು ಸಂಹರಿಸಿದನು. ಭಯವಿಲ್ಲದೆ ಪಾಂಡವ ಸೇನಾಮಧ್ಯದಿ ಹೊಕ್ಕು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜನನ್ನು ಇಪ್ಪತ್ತರಿಂದಲು, ನೋಯಿಸಿ ದ್ರೋಣಾಚಾರ್ಯನು ಭಲ್ಲದಿಂದ ವಸುದಾನನ ಶಿರವನ್ನು ಕೆಡಹಿದನು. ಆಶೀವಿಷದಂತೆ ಬುಸುಗುಟ್ಟಿ ಎಂಬತ್ತು ಬಾಣಗಳಿಂದ ಕ್ಷತ್ರಧರ್ಮನನ್ನು ಕೊಂದನು. ಸುದಕ್ಷಿಣನನ್ನು ಇಪ್ಪತ್ತರಿಂದಲು, ಕ್ಷತ್ರದೇವನನ್ನು ಭಲ್ಲದಿಂದ ಹೊಡೆದು ರಥನೀಡದಿಂದ ಕೆಡಹಿದನು. ಅರವತ್ನಾಲ್ಕು ಬಾಣಗಳಿಂದ ಯುಧಾಮನ್ಯುವಿನನ್ನು, ಮೂವತ್ತರಿಂದ ಸಾತ್ಯಕಿಯನ್ನು ಹೊಡೆದು, ಮಧ್ಯೇಮಾರ್ಗದಿ ತೂರಿ, ಧರ್ಮಜನನ್ನು ಹಿಡಿಯಲೆಂದು ಬಂದನು. ಧರ್ಮರಾಜನು ಭೀತನಾಗಿ ದೂರ ಸಾಗಿದನು. ಸಾತ್ಯಕಿ ಮುಂತಾದ ಹತ್ತು ವೀರರು ಮುತ್ತಲು ಅವರನ್ನೆಲ್ಲ ಗೆದ್ದು, ರಣರಂಗದಿಂದ ಓಡಿಸಿದನು. ಆಕಳಿಸಿ ಬರುವ ಹೆಬ್ಬುಲಿಯಂತೆ ವೀರ ಪ್ರಾಣಾಪಹರಣ ದಕ್ಷನಾದ ದ್ರೋಣನನ್ನು ಕಂಡು, ಕೌರವರು ಹರ್ಷಿತರಾಗಿ, ಸಿಂಹನಾದ ಮಾಡಿದರು.

ದುರ್ಯೋಧನನು ಶತ್ರುಮಧ್ಯಗತನಾದ ಚಂಡಭಾನುವಿನಂತೆ ಪಾಂಡು ಸೈನ್ಯ ಸಾಗರವನ್ನು ಶೋಷಿಸುವ ಆಚಾರ್ಯನನ್ನು ಕಂಡು ಕರ್ಣನಿಗಿಂತೆಂದನು: 'ಕರ್ಣ ! ನೋಡಿಂದು, ನಮ್ಮ ಸೇನಾಪತಿಯು ಸರ್ವ ಪಾಂಚಾಲರನ್ನೂ ನಾಶಮಾಡಲು ನಿಶ್ಚಯಿಸಿದಂತಿದೆ. ಸಿಂಹವನ್ನು ಕಂಡ ಮೃಗಗಳಂತೆ ಓಡುತ್ತಿರುವ ಪಾಂಚಾಲ ಸೃಂಜಯರು ಮತ್ತೆ ರಣರಂಗವನ್ನು ಪ್ರವೇಶಿಸುವ ಧೈರ್ಯ ಮಾಡಲಾರರು. ಕಾಳ್ಗಿಚ್ಚಿಗೆ ಸಿಕ್ಕ ಮದ್ದಾನೆಗಳಂತೆ ದಿಗ್ಭ್ರಾಂತರಾಗಿ, ಪಾಂಡವ ವೀರರು, ಭ್ರಮರಪೀಡಿತವಾಗಿ ಹುಚ್ಚೆದ್ದು ಗೀಳಿಡುವ ಗಜಗಳಂತೆ ಆರ್ತಧ್ವಾನಗಳನ್ನು ಮಾಡುತ್ತಿರುವರು. ಅವರ ಸಹಾಯವಿಲ್ಲದೆ ಭೀಮನೂ ನನ್ನ ವೀರರ ಕೈಲಿ ಸಿಕ್ಕು ಒಂಟಿಯಾಗಿ ಕಾದಾಡುವುದನ್ನು ಕಂಡು, ನನಗೆ ಆನಂದವಾಗಿದೆ. ದ್ರೋಣಮಯವಾಗಿರುವ ರಣಭೂಮಿಯನ್ನು ಕಂಡು ಭೀಮನು ಜಯಾಶೆಯನ್ನು ಬಿಟ್ಟು ಹಿಂದಿರುಗಿ ಹೋಗುವನೆಂದು ತೋರುತ್ತಿದೆ, ಧರ್ಮರಾಜನಂತೂ ರಾಜ್ಯದ ಆಶೆಯನ್ನೂ ಬಿಟ್ಟು ಓಡಿಹೋಗಿರುವನು.'

ಆ ಮಾತಿಗೆ ಕರ್ಣನಿಂತೆಂದನು: 'ರಾಜನ್ ! ತಪ್ಪಾಗಿ ತಿಳಿದಿರುವೆ ! ಜೀವದಿಂದ ರಣಭೂಮಿಯನ್ನು ಬಿಟ್ಟು ಓಡುವ ಹೇಡಿಯಲ್ಲ ಧರ್ಮರಾಜನು. ಗುರುಭಕ್ತಿಯಿಂದ ನಿಂತು ಕಾದಿರುವನಷ್ಟೇ ! ಶೂರರು, ಬಲಂತರು, ಯುದ್ಧ

ದುರ್ಮದರೂ ಆದ ಪಾಂಡವರು ವಿಷಾನ್ನ ಗೃಹದಾಹ ದ್ಯೂತಾದಿ ಕ್ಲೇಶಗಳನ್ನು ಸ್ಮರಿಸಿ, ಸೇಡಿನಿಂದ ಕಡಿದಾಡಿ ಕೊಲ್ಲುವರಾಗಲಿ, ಓಡಿಹೋಗುವವರಲ್ಲ; ಅವರನ್ನು ಗೆಲ್ಲಲು ಶಕ್ರನಿಗೂ ಶಕ್ಯವಲ್ಲ. ಭೀಮಸೇನನು ಯಾರ ಸಹಾಯವಿಲ್ಲದೆ ಎಲ್ಲ ರಥೋದಾರರನ್ನು ಕೊಲ್ಲಬಲ್ಲನು. ಆ ಮಹಾಬಲನು ಖಡ್ಗ, ಧನುಶ್ಶಕ್ತಿ ಗದಾಯುದ್ಧಗಳಲ್ಲಿ ಅಪ್ರತಿಮಾನನು. ನಾಗಗಳನ್ನು ನಾಗಗಳಿಂದಲು, ಕುದುರೆಗಳನ್ನು ಕುದುರೆಗಳಿಂದಲು ಬಡಿದು ಕಡಹಿ, ಕಾಲು ತುಳಿದು ಪುಡಿ ಮಾಡುವನು. ಅಲ್ಲಿ ನೋಡು ! ಅವನಿಗೆ ಸಹಾಯವಾಗಲು ಹವಣಿಸಿ ಸಾತ್ಯಕಿ, ಧೃಷ್ಟದ್ಯುಮ್ನರು ಮಹಾರಥ ಸಾಹಸ್ರದೊಡನೆ ನುಗ್ಗಿ ಬರುತ್ತಿರುವರು. ಅವರೆಲ್ಲ ಸೇರಿ, ದ್ರೋಣನನ್ನು ಮುತ್ತಿದರೆ, ಆಗ ಆಚಾರ್ಯನೂ ಅವರನ್ನು ಕೂಡಿ ಕಾದುವುದು ಕಷ್ಟವೆಂದು ನನಗೆ ತೋರುತ್ತಿದೆ.'

ಆ ಮಾತನ್ನಾಲಿಸಿ ದುರ್ಯೋಧನನು ದ್ರೋಣಾಚಾರ್ಯರ ಬಗ್ಗೆ ಕ್ಷಣ ಕಾತರನಾಗಿ, ಕರ್ಣ ದುಶ್ಶಾಸನಾದಿ ವೀರರೊಡಗೂಡಿ, ಅಲ್ಲಿಗೆ ಸಾಗಿದನು.

ಧೃತರಾಷ್ಟ್ರನು ಯೋಧವರ ನಾನಾವಿಧ ರಥ ಚಿಹ್ನೆಗಳನ್ನು ವರ್ಣಿಸಲು ಆಜ್ಞಾಪಿಸಿದಾಗ ಸಂಜಯನಿಂತೆಂದನು : 'ಮೊತ್ತ ಮೊದಲು ಕುದುರೆಗಳನ್ನು ವರ್ಣಿಸುವೆನು, ಕೇಳು ! ವೃಕೋದರನ ಕುದುರೆಗಳು ರುಕ್ಮವರ್ಣದವು. ರಾಜತಾಶ್ವಗಳು ಸಾತ್ಯಕಿಯವು. ಯುಧಾಮನ್ಯು ಸಾರಂಗಾಶ್ವಗಳನ್ನು, ಧೃಷ್ಟದ್ಯುಮ್ನ ಪಾರಾವತಾಶ್ವಗಳನ್ನು, ಅವನ ಮಗ ಧರ್ಮಕ್ಷತ್ರ ಶೋಣಾಶ್ವಗಳನ್ನು, ಶಿಖಂಡಿ ಪುತ್ರ ಕ್ಷತ್ರದೇವ ಪದ್ಮಪತ್ರಾಶ್ವಗಳನ್ನು, ನಕುಲನು ಶುಕಪತ್ರಾಶ್ವಗಳನ್ನು, ಉತ್ತಮೌಜನು ಕೃಷ್ಣ-ಮೇಘಾಶ್ವಗಳನ್ನು, ಸಹದೇವನು ತಿತ್ತಿರಿ ಕಲ್ಮಾಷತುರಗಗಳನ್ನು, ಧರ್ಮರಾಜನು ದಂತವರ್ಣವು ಕೃಷ್ಣಪುಚ್ಛವು ಆದ ಜವನಾಶ್ವಗಳನ್ನು ತಂತಮ್ಮ ರಥಗಳಿಗೆ ಕಟ್ಟಿದ್ದರು.

ಧರ್ಮರಾಜನ ಹಿಂದೆ ದ್ರುಪದನಿದ್ದನು. ಅವನ ಕುದುರೆಗಳಿಗೆ ಲಲಾಟ ತಿಲಕಗಳಿದ್ದವು. ಹಿಂದೆ ವಿರಾಟನು ಪಾಟಲಪುಷ್ಪಾಶ್ವಗಳ ರಥದಲ್ಲಿ ಬರುತ್ತಿದ್ದನು. ಶಿಖಂಡಿ ಆಮಪಾತ್ರವರ್ಣದ ಕುದುರೆಗಳನ್ನು ಕಟ್ಟಿದ್ದನು. ಅವನ ಹಿಂದೆ ಧೃಷ್ಟಕೇತು ಸಾರಂಗ ವರ್ಣದ ಕುದುರೆಗಳ ರಥದಲ್ಲಿ ಬಂದನು. ವಿರಾಟಪುತ್ರನು ಹಾರಿದ್ರಾಶ್ವನಾಗಿದ್ದನು. ಪಂಚಕೇಕಯರ ತುರಗಗಳು ಇಂದ್ರಗೋಪವರ್ಣದವು. ಅತ್ಯಂತ ಶೋಣವಾಜಿಗಳುಳ್ಳ ಆರು ಸಾವಿರ ರಥಿಕರು ಧೃಷ್ಟಕೇತುವಿನನ್ನನುಸರಿಸಿ ನಡೆದರು. ಆರು ಸಾವಿರ ಶ್ವೇತವಾಹ ರಥಿಕರು ಶಿಖಂಡಿಯ ಹಿಂದೆ ಬಂದರು. ಕೈಕಯ ಬ್ರಹತ್‌ಕ್ಷತ್ರನು ಪಲಾಲ ಧುಂದುಸಂಕಾಶವಾಜಿಗಳನ್ನು ಕ್ಷತ್ರದೇವ ಕಾಶೇಯಸದೃಶ ಹಯಗಳನ್ನು ಸೇನಾಬಿಂದು ಕ್ರೌಂಚವರ್ಣದ ವಾಹಗಳನ್ನು ಅತಿಭೂಕಾಶಿ ರಾಜನ ಮಗ ಪ್ರತಿವಿಂಧ್ಯ ಶ್ವೇತಾಶ್ವಗಳನ್ನು ವಹಿಸಿ ನಡೆದರು.

ಸುತಸೋಮ (ಪಾರ್ಥ ಪುತ್ರ) ಮಾಷವರ್ಣ ಹಯಗಳನ್ನು, ನಾಕುಲಿ ಶತಾನೀಕ ಶಾಲಪುಷ್ಪ ನಿಭವಾರುವಗಳನ್ನು, ಸಾಹದೇವಿ ಶ್ರುತಕರ್ಮ ಮಯೂರಗ್ರೀವ ನಿಭತುರಗ

ಗಳನ್ನು ಶ್ರುತಕೀರ್ತಿ ಚಾಕ್ಷಪತ್ರ ವರ್ಣದ ಕುದುರೆಗಳನ್ನು ಅಭಿಮನ್ಯು ವಿಶಂಗಾಶ್ವಗಳನ್ನು ಯುಯುತ್ಸು ಪಲಾಲಕಾಂಡ ನಿಭಭದ್ರಾಶ್ವಗಳನ್ನು ಸೌಚಿತ್ತಿ ಶಿತಿಪಾದಾಶ್ವಗಳನ್ನು ಕಾಶಿರಾಜ ಹೇಮತುರಗಗಳನ್ನು ಸತ್ಯಧೃತಿ ಅರುಣಾಶ್ವಗಳನ್ನು ಧೃಷ್ಟದ್ಯುಮ್ನನು ಆರುಸಾವಿರ ರಥಿಕರು ಶೋಣಾಶ್ವಗಳನ್ನು ಚೇಕಿತಾನ ಬಭ್ರು ಕೌಶೇಯ ವರ್ಣ ತುರಂಗಮಗಳನ್ನು ಪುರುಜಿತ್ ಕುಂತಿಭೋಜನು ಇಂದ್ರಾಯುಧ ಸವರ್ಣವಾಶ್ವಗಳನ್ನು ಜಾರಾಸಂಧಿ ಸಹದೇವ ಕರ್ಬುರ ವರ್ಣ ಶಿತಿಪಾದಾಶ್ವಗಳನ್ನು ಪಾಂಚಲ್ಯ ಸಿಂಹಸೇನ ಶಶರಕ್ತ ನಿಭತುರಗಗಳನ್ನು ಪಾಂಚಾಲ್ಯ ಜನಮೇಜಯ ಸಷಪಪುಷ್ಪ ನಿಭಹಯಗಳನ್ನು ದಂಡಾಧಾರ ಶರಕಾಂಡ ನಿಭವಾಜಿಗಳನ್ನು ವ್ಯಾಘ್ರದತ್ತ ರಾಸಭಾರುಣ ತುರಗಗಳನ್ನು ಸುಧನ್ವನು ಚಿತ್ರಕಾಲಕ ತುರಗಗಳನ್ನು ಕೋಸಲನಾದ ಸುಕ್ಷತ್ರ ಶಬಲವರ್ಣಾಶ್ವಗಳನ್ನು ಚಂದ್ರಸೇನನು ಶುಕ್ಲಾಶ್ವಗಳನ್ನು ಶೈಬ್ಯ ಚಿತ್ರರಥನು ವೈಢೂರ್ಯ ವರ್ಣದ ಕುದುರೆಗಳನ್ನು ನೀಲನು ನೀಲಾಶ್ವಗಳನ್ನು ಪಾಂಡ್ಯನು ಚಂದ್ರರಶ್ಮಿ ನಿಭತುರಂಗಗಳನ್ನು ಘಟೋತ್ಕಚನು ನಾನಾವರ್ಣ ನಾನಾರೂಪ ವಿಚಿತ್ರ ತುರಗಗಳನ್ನು ಕಟ್ಟಿದ ರಥಗಳಲ್ಲಿ ರಣರಂಗವನ್ನು ಪ್ರವೇಶಿಸಿದರು.

ದ್ರೋಣನು ಶೋಣಾಶ್ವ ರಥದಲ್ಲಿ ಕಮಂಡಲು ಧ್ವಜನಾಗಿದ್ದನು. ಭೀಮಸೇನನು ಸಿಂಹ ಧ್ವಜವನ್ನೆತ್ತಿದ್ದನು. ದುರ್ಯೋಧನನು ನಾಗಕೇತನನು. ಧರ್ಮರಾಜನು ಗ್ರಹಮುಕ್ತ ಚಂದ್ರಧ್ವಜನಾಗಿದ್ದನು. ಅವನ ಹಿಂದೆ ನಂದಕ ಸುನಂದಕಗಳೆಂಬ ಮೃದು ಮೃದಂಗಗಳು ಮಧುರ ಶಬ್ದವನ್ನು ಮಾಡುತ್ತಾ ಬರುತ್ತಿದ್ದವು. ಸಹದೇವನ ಧ್ವಜದಿ ಹಂಸವಿತ್ತು. ಶರಧ್ವಜವು ನಕುಲನದು. ಅಭಿಮನ್ಯುವು ಶಾರ್ಙ್ಗಪಕ್ಷಿ ಕೇತನನಾಗಿ ನಡೆದನು. ಘಟೋತ್ಕಚನು ಗೃಧ್ರಧ್ವಜನಾಗಿದ್ದನು.

ಧರ್ಮಜನ ಧನುವು ಮಾಹೇಂದ್ರವಾಗಿತ್ತು. ಭೀಮನ ಬಿಲ್ಲು ವಾಯುವ್ಯವು. ಅರ್ಜುನನ ಬಿಲ್ಲು ಗಾಂಡೀವವು. ನಕುಲನು ವೈಷ್ಣವ ಧನುವನ್ನು ಅಶ್ವಿನಧನುವನ್ನು ಸಹದೇವನೂ ಪಿಡಿದಿದ್ದನು. ಘಟೋತ್ಕಚನ ಧನಸ್ಸು ಪೌಲಸ್ತ್ಯವು. ದ್ರೌಪದೇಯರ ಧನುಗಳು ಕ್ರಮವಾಗಿ ರೌದ್ರ, ಆಗ್ನೇಯ, ಕೌಬೇರ್ಯ, ಯಾಮ್ಯ, ಗಿರಿಶದೇವತಾಕವಾಗಿದ್ದವು. ಅಭಿಮನ್ಯುವು ಬಲರಾಮನಿತ್ತ ರೌದ್ರಧನುವನ್ನು ಪಿಡಿದಿದ್ದನು. ಇನ್ನು ಅನೇಕ ವೀರರು ಚಿತ್ರ ವಿಚಿತ್ರ ಧ್ವಜವಾಹನರಾಗಿ ಚಿತ್ರಲಿಖಿತ ಸೇನೆಯಂತೆ ಕಂಗೊಳಿಸಿದರು.'

ಸಂಜಯನ ವರ್ಣನವನ್ನು ಕೇಳಿ ಧೃತರಾಷ್ಟ್ರನು ಭಯಾಕ್ರಾಂತನಾದನು. 'ಸಂಜಯ! ದೇವತೆಗಳಿಗೂ ಭಯಪ್ರದರಾಗಿರುವ ಪಾಂಡವ ಯೋಧರ ವರ್ಣನವನ್ನು ಕೇಳಿ, ವೃಕೋದರನ ಪ್ರತಿಜ್ಞೆಯನ್ನು ನೆನೆದು ನನಗೆ ದಿಕ್ಕೇ ತೋಚದಂತಾಗಿದೆ. ವೃಕೋದರನು ಸರ್ವಾರ್ಥ ವಿಶಾರದನು. ಬಹುಕಾಲದ ವನವಾಸದಿಂದ ನೊಂದು ಬಂದಿರುವ ಧರ್ಮರಾಜನ ವೈರವನ್ನು ಕಟ್ಟಿಕೊಂಡು ನನ್ನ ಪುತ್ರನು ಹಾಳಾಗುವನು. ದೈವವು ಬಲೀಯವಾಗಿದೆ. ಸಮಸ್ತ ಪೃಥ್ವೀರಾಜ್ಯವು ತನಗೆ ಸಾಲದೆಂಬ ದುರಾಶೆಯು ಪಾಶವಾಗಿ ಅವನನ್ನು ಮೃತ್ಯುವಿನ ಕಡೆ ಸೆಳೆದೊಯ್ಯುತ್ತಿದೆ. ಸರ್ವಾಸ್ತ್ರವಿದ್ಯಾ

ಪಾರಂಗತನಾದ ದ್ರೋಣನು ವಾರ್ಷತಾಧಮನಿಂದ ಮೃತನಾದನೆಂದರೆ ಇದಕ್ಕಿಂತ ದುರದುಷ್ಕರವಿನ್ನೊಂದುಂಟೇ ? ವಿದುರನಾಡಿದ ಮಾತೆಲ್ಲ ಸತ್ಯವಾಗುತ್ತಿದೆ. ನನ್ನ ಸುತರು ಉಳಿಯಲಾರರು. ಮುಂದೇನಾಯಿತು ? ಹೇಳು !' ಎಂದ ಅಂಧರಾಜನಿಗೆ ಸಂಜಯನಿಂತೆಂದನು :

'ಭೀಮಸೇನಾದಿ ಯೋಧರು ಒಮ್ಮೆಗೆ ಮುತ್ತಿದಾಗ ದ್ರೋಣನು ಮೇಘಾಚ್ಛಾದಿತ ಸೂರ್ಯನಂತೆ ಮರೆಯಾಗಲು, ಕೌರವರು ಆಚಾರ್ಯನು ಮೃತನಾದನೆಂದು ಶಂಕಿಸಿ ನಿರ್ವಿಣ್ಣರಾದರು. ದುರ್ಯೋಧನನು ಆಚಾರ್ಯ ರಕ್ಷಣೆಗಾಗಿ ಪಾವಕಸಮ ವಿಕ್ರಮರಾದ ವೀರರಿಂದ ಕೂಡಿ ಧಾವಿಸಿ ಬಂದನು. ದುರ್ಮರ್ಷಣನು ಭೀಮನನ್ನು ಮುತ್ತಿ ವಾರಿಸಲು, ವೃಕೋದರನು ಅವನನ್ನು ಶರವರ್ಷದಿ ಮುಳುಗಿಸಿ ಮುನ್ನುಗ್ಗಿದನು. ಕೃತವರ್ಮನು ಸಾತ್ಯಕಿಯನ್ನು ದ್ರೋಣ ಸಮೀಪವಾಗಿ ಪೋಗದಂತೆ ತಡೆದು ಕಾದಿದನು. ಸೈಂಧವನು ಕ್ಷತ್ರಧರ್ಮನನ್ನು, ಸುಬಾಹುವು ಯುಯುತ್ಸುವಿನನ್ನು, ಶಲ್ಯನು ಧರ್ಮರಾಜನನ್ನು, ಬಾಹ್ಲೀಕನು ದ್ರುಪದನನ್ನು, ವಿಂದಾನುವಿಂದರು ವಿರಾಟನನ್ನು, ಶತಾನೀಕನನ್ನು ಭೂತಕರ್ಮನು, ವಿವಿಂಶತಿಯು ಸುತಸೋಮನನ್ನು, ಅಶ್ವತ್ಥಾಮನು ಪ್ರತಿವಿಂಧ್ಯನನ್ನು, ಶ್ರುತಕೀರ್ತಿಯನ್ನು ದೌಶ್ಶಾಸನಿಯು, ವಿಕರ್ಣನು ಶಿಖಂಡಿಯನ್ನು, ದುರ್ಮುಖನು ಪುರುಜಿತನನ್ನು, ಕರ್ಣನು ಪಂಚಕೇಕಯರನ್ನು, ವಾರ್ಧಕ್ಷೇಮಿಯನ್ನು ಕೃಪನು, ವೃಷಸೇನನು ಪಾಂಡ್ಯ ರಾಜನನ್ನು, ವಾರಿಸಿ ದ್ವಂದ್ವಯುದ್ಧ ನಿರತರಾದರು.

ಗದಾ, ಪರಿಘ, ಖಡ್ಗ, ಪಟ್ಟಿಶ, ಭುಸುಂಡಿ, ಪ್ರಾಸ, ತೋಮರ, ಮುದ್ಗರ, ಮುಸಲ, ಚಕ್ರ, ಪರಶು, ಭಿಂಡಿಪಾಲ, ಮುಂತಾದ ಆಯುಧಗಳಿಂದಲು, ಪಾಂಸು, ದುರ್ವಾತ, ಅಗ್ನಿ, ಉಷ್ಣಜಲ, ಭಸ್ಮ, ಸೀಸ, ಲೋಷ್ಠ, ತೃಣ, ದ್ರುಮಾದಿ ಹಿಂಸನ ಸಾಧನಗಳಿಂದಲು ಯೋಧರು ಕಡಿದಾಡಿದಾಗ, ಯುದ್ಧವು ಭೀಕರವಾಯಿತು. ಸೀಳಿ, ಕಡಿದು, ಬಡಿದು, ಕೆಡಹಿ, ಕೊಲ್ಲುವ ಮಹಾಯೋಧರ ವೀರ ವಿಹಾರವು ಪಿಶಾಚ, ಗೃಧ್ರ, ಗೋಮಾಯು, ಕಂಕ, ಬಕ, ರಾಕ್ಷಸರಿಗೆ ಪರ್ವವಾಯಿತು. ಅಂತಹ ಸಂಗ್ರಾಮವೆಂದೂ ಯಾರೂ ನೋಡಿದ್ದಿಲ್ಲ. ಘಟೋತ್ಕಚಾಲಂಬುಷರ ಯುದ್ಧವಂತೂ ಭೀಭತ್ಸವಾಗಿತ್ತು. ಶಂಬರಾಮರ ರಾಜರಂತೆ ಹೋರಾಡುವ ಹೈಡಿಂಬಾಲಂಬುಷರ ಸಿಂಹನಾದಗಳಿಂದ ಭೂ ನಭೋಂತರವು ಪ್ರತಿಧ್ವನಿಸಿತು.

ದುರ್ಯೋಧನನು ಭೀಮಸೇನನ್ನು ನಾಗನೀಕದೊಡನೆ ಮುತ್ತಿದನು. ಯುದ್ಧ ಕುಶಲನಾದ ವೃಕೋದರನು ಬಾಹು ವೀರ್ಯದಿಂದ ವಿಜೃಂಭಿಸಿ, ನಾರಾಚಶತದಿಂದ ಗಜರಾಜಿಯನ್ನು ಗಜಿಬಿಜಿಯಾಗಿಸಿ ಸಂಹರಿಸಿದನು. ರವಿಯು ಕಿರಣಗಳಿಂದ ಭವನಗಳನ್ನು ತುಂಬುವಂತೆ, ಪಾವನಿಯು ಬಾಣಗಳಿಂದ ಆನೆಯ ಹಿಂಡನ್ನು ತುಂಬಿ, ಕುಂಭಗಳನ್ನು ಸೀಳಿ, ಪಾದತುಂಡಗಳನ್ನು ಖಂಡಿಸಿ, ಕೊಲ್ಲುತ್ತಿರಲು, ದಿಕ್ಕೆಟ್ಟೋಡುವ ಮಿಕ್ಕ ಗಜಗಳು ತಮ್ಮವರನ್ನೇ ತುಳಿದು ಕೊಂದವು. ದುರ್ಯೋಧನನನ್ನು ನೋಡಿ ಕೃದ್ಧನಾಗಿ ಶಿತಶರಗಳಿಂದ ವಾತಸುತನನ್ನು ಪೀಡಿಸಿದನು. ಭೀಮನು ಕ್ಷಣದಲ್ಲಿ ಕ್ಷಿತೀಶನನ್ನು ಕ್ಷಯಪಡಿಸುವಂತೆ ವಿಜೃಂಭಿಸಿ ಸಹಸ್ರ ಶರಗಳಿಂದ ಅವನ ಸರ್ವಾಂಗಗಳನ್ನು

ತಾಡಿಸಿದನು ಮತ್ತು ಎರಡು ಭಲ್ಲಗಳಿಂದ ರಾಜರಾಜನ ನಾಗಕೇತನವನ್ನು ಕೆಡಹಿ, ಧನುವನ್ನು ಮುರಿದನು. ದುರ್ಯೋಧನನನ್ನು ರಕ್ಷಿಸಲು ಬಂದ ಅಂಗರಾಜನ ಆನೆಯ ಕುಂಭಸ್ಥಲವನ್ನು ಭೀಮನು ತೀವ್ರ ಭಲ್ಲದಿಂದ ಸೀಳಿ ಕೆಡಹಿದನು. ಆನೆಯಿಂದ ಧುಮ್ಮಿಕ್ಕುವ ಅಂಗರಾಜನ ಶಿರವನ್ನು ಛೇದಿಸಿದನು. ಮ್ಲೇಂಛ ರಾಜನಾದ ಅಂಗನು ಮೃತನಾಗಲು, ಅವನ ಸೈನಿಕರು ಸಂಭ್ರಾಂತರಾಗಿ ಓಡಿದರು. ಭೀಮಸೇನನು ನಾರಾಚ ಸಹಸ್ರದಿಂದ ಕೊಂದು, ಅವರನ್ನು ಯಮನಗರಕ್ಕೆ ಓಡಿಸಿದನು.

ಭಗದತ್ತನು ಸುಪ್ರತಿಕಾ ರೂಢನಾಗಿ ಬಂದು ಭೀಮನನ್ನು ವಾರಿಸಿ ಅವನ ರಥವನ್ನು ಗಜದಿಂದ ತುಳಿಸಲು ಯತ್ನಿಸಿ, ಅದನ್ನು ಅಂಕುಶದಿಂದ ತಿವಿದು ಪ್ರೇರೇಪಿಸಿದನು. ದೇವಸುಪ್ರತೀಕ ಕುಲಜಾತವಾದ ಭಗದತ್ತನ ಸುಪ್ರತೀಕವು ಘೀಳಿಟ್ಟು ಮುಂಗಾಲಿನಿಂದ ಭೀಮನ ರಥಕ್ಕೆ ಕಟ್ಟಿದ ಕುದುರೆಗಳನ್ನು ತುಳಿಯಬಂದಾಗ, ಅವು ಹೆದರಿ ಓಡಿ ಹೋದವು. ಭೀಮಸೇನನು ರಥದಿಂದಿಳಿದು, ಅಂಜಲಿಕಾವೇಧ ವನ್ನರಿತವನಾದುದರಿಂದ, ಆನೆಯ ಗಾತ್ರ ಮಧ್ಯದಿ ನಿಂತು, ಅದನ್ನು ಮುಷ್ಟಿಗಳಿಂದ ಪೀಡಿಸಿದನು. ಸುಪ್ರತೀಕವು ಹೊರಳಿ ನೋವಿನಿಂದ ಕೂಗಾಡುತ್ತಾ ಭೀಮನನ್ನು ಸೊಂಡಿಲದಿಂದ ಹಿಡಿಯಲು ಯತ್ನಿಸಿತು. ಮೊಳಕಾಲಿನಿಂದ ತುಳಿಯಲು ಹವಣಿಸಿತು. ಭೀಮಸೇನನು ಆದರ ಹಿಡಿತ ತುಳಿತಗಳಿಗೆ ಸಿಗದೆ, ಅದನ್ನೆತ್ತಿ ಒಗೆದನು. ವಿಶೋಕನು ರಥವನ್ನು ತರಲು ಭೀಮಸೇನನು ರಥಾರೂಢನಾಗಿ, ಭಗದತ್ತನನ್ನು ಬಾಣಶತದಿಂದ ಪೀಡಿಸಿದನು. ಭೀಮಸೇನನು ಭಗದತ್ತನ ಆನೆಗೆ ಸಿಕ್ಕನೆಂದು ಭ್ರಮಿಸಿ ಕೌರವ ಸೈನಿಕರು ಹರ್ಷಧ್ವಾನಗಳನ್ನು ಮಾಡಿದರು. ಅದನ್ನು ಕೇಳಿ ಪಾರ್ಷತ ಧರ್ಮಜ ಸಾತ್ಯಕಿ ಪ್ರಮುಖ ವೀರರು ಬಂದು ಭಗದತ್ತನನ್ನು ಮುತ್ತಿದರು.

ಭಗದತ್ತನು ಅಂಕುಶದಿಂದಲೇ ಅವರ ಬಾಣಗಳನ್ನು ಕೆಡಹಿ, ಆನೆಯನ್ನು ತಿವಿದು ಪ್ರಚೋದಿಸಿದನು. ದಶಾರ್ಣರಾಜನು ಆನೆಯನ್ನೇರಿ ಭಗದತ್ತನನ್ನು ಮುತ್ತಿದನು. ಎರಡಾನೆಗಳ ಹೋರಾಟವು ಭಯಂಕರವಾಯಿತು. ಸುಪ್ರತೀಕದ ದಂತಾಘಾತದಿಂದ ದಶಾರ್ಣನ ಗಜವು ಸತ್ತು ಬೀಳುತ್ತಿರುವಾಗ ಭಗದತ್ತನು ಏಳು ಬಾಣಗಳಿಂದ ದಶಾರ್ಣನನ್ನು ಕೊಂದನು. ಧರ್ಮರಾಜನು ಬಹುರಥಿಕರೊಡನೆ ಭಗದತ್ತನನ್ನು ಮುತ್ತಿ ಬಾಣಜಾಲದಲ್ಲಿ ಮುಣುಗಿಸಿದನು. ಭಗದತ್ತನು ಆನೆಯನ್ನು ಪ್ರೇರಿಸಲು, ಅದು ಯುಧಾನನ ರಥವನ್ನು ಹಿಡಿದು ಎತ್ತಿ ಬಿಸುಟಿತು. ಸಾತ್ಯಕಿಯು ರಥವನ್ನು ಬಿಟ್ಟು ಧುಮುಕಿದನು. ಅವನ ಸಾರಥಿಯು ಬಿದ್ದ ರಥದಲ್ಲಿ ಚಲಿಸದೆ ಕೂತು ಕುದುರೆಗಳನ್ನೂ ಮೇಲಕ್ಕೆಬ್ಬಿಸಿ, ಮತ್ತೆ ಸಾತ್ಯಕಿಯನ್ನು ಸೇರಿದನು. ಸಾತ್ಯಕಿಯು ತನ್ನ ರಥವನಾರೋಹಿಸಿದನು. ಅವಕಾಶವನ್ನರಿತು ಸುಪ್ರತೀಕವು ಸಿಕ್ಕ ಸಿಕ್ಕ ವೀರರನ್ನು ಅವರ ರಥಗಳನ್ನು ಎತ್ತಿ ಬಿಸುಟಿ, ಸಂಚರಿಸುವಾಗ ನೂರಾರು ಸುಪ್ರತೀಕಗಳೆಲ್ಲೆಡೆ ನಿಂತಿರುವಂತೆ ಕಂಡಿತು. ಗಜಬ್ರುಂಹಿತಗಳೊಡನೆ, ಹಯ ಹೇಷಾರವಗಳಿಂದ ದಿಕ್ಕುಗಳು ಒಡೆದಂತಾದವು. ಭಗದತ್ತನ ವಿಕ್ರಮವನ್ನು ಸಹಿಸದೆ, ಭೀಮಸೇನನು ಮತ್ತೆ ಬಂದು ಮುತ್ತಿದನು.

ಸುಪ್ರತೀಕವು ಕಿವಿಗಳನ್ನು ನಿಗರಿಸಿ, ಕಣ್ಣುಗಳನ್ನು ಕ್ರೇಂಕರಿಸಿ, ತುಂಡದಿಂದ ಯುಯುತ್ಸುವಿನ ಸೂತನನ್ನು ಸೆಳೆದು ಕಾಲ ತುಳಿದು ಕೊಂದಿತು. ಧರ್ಮಜ, ಧೃಷ್ಟಕೇತು, ಚೇಕಿತಾನರು ಬಿಡುವ ಬಾಣವರ್ಷವನ್ನು ಬೆಟ್ಟದಂತಿರುವ ಸುಪ್ರತೀಕವು ಲೆಕ್ಕಿಸದೆ, ಭೈರವನಾದವನ್ನು ಮಾಡುತ್ತಾ ಪಾಂಡವ ಸೇನೆಯನ್ನು ತುಳಿದು ಕೆಡಹಿತು. ಅಭಿಮನ್ಯುವಿನ ಹನ್ನೆರಡು ಬಾಣಗಳು, ಯುಯುತ್ಸುವಿನ ಹತ್ತು ನಾರಾಚಗಳು, ದ್ರೌಪದೇಯರ ಹದಿನೈದು ಶರಗಳು, ಧೃಷ್ಟಕೇತುವಿನ ಏಳು ಕಾಂಡಗಳು, ಭೀಮಸೇನನ ನೂರು ಬಾಣಗಳು, ಧರ್ಮಜನ ಐದು ಬಾಣಗಳು ಬಂದು ಮೈ ಮುಚ್ಚಿದಾಗ, ಅಭದ್ರ ಗಜವು ಮಳೆಯಲ್ಲಿ ನಿಂತ ಬೆಟ್ಟದಂತೆ, ಕೀಲಾಲ ಧಾರೆಗಳನ್ನು ಸುರಿಸಿತು. ಮೇಘವನ್ನು ಹೊಗುವ ಸೂರ್ಯ ರಶ್ಮಿಗಳಂತೆ ಶರೀರವನ್ನು ಪ್ರವೇಶಿಸುವ ಶತ್ರು ಬಾಣಗಳನ್ನು ಸಹಿಸಿ ಸುಪ್ರತೀಕವು ಪಾಂಡವ ರಥಗಳನ್ನು ಎಡಬಲವಾಗಿ ಗಿರ ಗಿರ ತಿರುಗುವಂತೆ ಸಂಚರಿಸಿತು. ಭಗದತ್ತನು, ಗೋಪಾಲಕನು ಕೈ ಕೋಲಿನಿಂದ ಗೋಗಣವನ್ನಂತೆ ಪಾಂಡವೀ ಸೇನೆಯನ್ನು ಹೊಡೆದೋಡಿಸಿದನು. ಅವರ ಆರ್ತನಾದವು ಕಿವಿಗೆ ಬಡಿಯಲು, ಶ್ರೀಕೃಷ್ಣನು ಅರ್ಜುನನನ್ನು ಕಂಡು, 'ಅರ್ಜುನ ! ತ್ವಾಷ್ಟ್ರನಾಮಕ ಮೋಹನಾಸ್ತ್ರವನ್ನು ಬಿಟ್ಟು ಇವರನ್ನು ಮೋಹಗೊಳಿಸು ! ಅಲ್ಲಿ ಭಗದತ್ತನನ್ನು ಕೂಡಿ ಕಾದುತ್ತಿರುವ ಧರ್ಮರಾಜಾದಿಗಳಿಗೆ ನಾವು ನೇರವಾಗಿ ಹೋಗಬೇಕಾಗಿದೆ. ಅವನಲ್ಲಿ ವೈಷ್ಣವಾಸ್ತ್ರವಿದೆ. ಅದು ದುರ್ಧರವು. ಅದು ಇರುವವರೆಗೂ ಅವನೂ ಅಜೇಯನು. ಅದನ್ನು ಕಸಿದು, ಅವನನ್ನು ನಿನ್ನಿಂದ ಕೊಲ್ಲಿಸಬೇಕಾಗಿದೆ. ತ್ವರೆ ಮಾಡು' ಎಂದನು.

ಅರ್ಜುನನು ತ್ವಾಷ್ಟ್ರಮಂತ್ರವನ್ನು ಜಪಿಸಿ, ದೇವದತ್ತವನ್ನೂದಿ, ದಿವ್ಯಾಸ್ತ್ರವನ್ನು ಬಿಡಲು, ಸಂಸಪ್ತಕ ನಾರಾಯಣ ಯೋಧರೆಲ್ಲರೂ ಮೋಹಿತರಾದರು. ಅಲ್ಲಿರುವ ಯೋಧರಿಗೆ ತಾವೇ ಇನ್ನೊಂದು ರೂಪದಿಂದ ತಮ್ಮೊಡನೆ ಕಾದುತ್ತಿರುವಂತೆ ಕಾಣಿಸಿತು. ಅವರು ದಿಗ್ಭ್ರಾಂತರಾಗಿ ನಿಂತರು. ಮೋಹವಶರಾಗಿ ಅವರು 'ಇವನೇ ಅರ್ಜುನ ! ಇವನು ಕೃಷ್ಣ ! ಇವರು ಪಾಂಡವರು' ಎಂದು ಭ್ರಮಿಸಿ, ಪರಸ್ಪರವಾಗಿ ಕಡಿದಾಡಿ ಹತರಾದರು. ಅರ್ಜುನನು ಬಹುತ್ರಿಗರ್ತ, ಮಾಲವ, ಲಲಿತ್ಥ ಯೋಧರನ್ನು ಸಂಹರಿಸಿ ಅವರ ಶರವೃಷ್ಟಿಯನ್ನು ವಾಯವ್ಯಾಸ್ತ್ರದಿಂದ ನಿವಾರಿಸಿದನು. ಗಾಳಿಗೆ ಹಾರಿದ ತರಗೆಲೆಗಳಂತೆ ವಾಯವ್ಯಾಸ್ತ್ರದಿಂದ ಹಾರಿಬೀಳುತ್ತಿರುವ ತ್ರಿಗರ್ತ ಯೋಧರನ್ನು ಬಿಟ್ಟು ಶ್ರೀಕೃಷ್ಣಾರ್ಜುನರು ಭಗದತ್ತನನ್ನು ಸಮೀಪಿಸಿದರು.

'ಕೃಷ್ಣ ! ಭಗದತ್ತನಂತಹ ಗಜಯೋಧನೀಗ ಜಗತ್ತಿನಲ್ಲಿಲ್ಲ. ಆಯಾಸವಿಲ್ಲದೆ ಶಸ್ತ್ರಗಳನ್ನು ಲೆಕ್ಕಿಸದೆ ಕಾದುವ ಭಗದತ್ತನು ಇಂದ್ರಸಮ ವೀರನಾಗಿರುವನು. ನಮ್ಮವರ ಆರ್ತನಾದವನ್ನು ಕೇಳಿದರೆ, ಅವನು ವಿಕ್ರಮಿಸಿ ನಿಂತಿರುವಂತಿದೆ. ಬೇಗ ಹೊಡೆ ರಥವನ್ನು !' ಎಂದು ಅರ್ಜುನನು ಸಾಗುವಾಗ ಹದಿನಾಲ್ಕು ಸಾವಿರ ಸಂಸಪ್ತಕ ಮಹಾರಥರು ಮತ್ತೆ ಬಂದು ಮುತ್ತಿದರು. ಇಲ್ಲಿ ತ್ರಿಗರ್ತರು, ಅಲ್ಲಿ ಭಗದತ್ತ; ಇಂತಾಗಿ ಹೊಯ್ದಾಡುವ ಅರ್ಜುನನು ಸಂಸಪ್ತಕರ ಸಾವಿರ ಬಾಣಗಳನ್ನು ಮುರಿದನು. ಅವರನ್ನು

ಬ್ರಹ್ಮಾಸ್ತ್ರದಿಂದ ಕೊಂದನು. ಮುಂದೆ ಸಾಗುವ ಪಾರ್ಥನನ್ನು ಸುಶರ್ಮನು ತಡೆದು ಶರಶತದಿಂದ ಹೊಡೆದನು. ಅರ್ಜುನನ ವನಶರಶತವನ್ನೂ ಅವನ ತಮ್ಮಂದಿರ ಸಾವಿರ ಬಾಣಗಳನ್ನು ಮಾರ್ಗದಲ್ಲೇ ಮುರಿದನು. ಸುಶರ್ಮನು ಶಕ್ತಿಯನ್ನೆಸೆಯಲು, ಪಾರ್ಥನು ಸುಶರ್ಮನ ಧನುವನ್ನು ಧ್ವಜವನ್ನು ಮುರಿದು, ಏಳು ಬಾಣಗಳಿಂದ ಹೊಡೆದು, ಒಂದರಿಂದ ಅವನ ತಮ್ಮನನ್ನು ಕೊಂದನು, ಮತ್ತು ಅವನ ಶಕ್ತಿಯನ್ನು ತುಂಡರಿಸಿ, ಕುದುರೆಗಳನ್ನು ಕೆಡಹಿದನು. ಇಂತು ಸುಶರ್ಮನನ್ನೋಡಿಸಿ ಧನಂಜಯನು ಗರುಡವೇಗದಿಂದ ಭಗದತ್ತನನ್ನು ಸೇರಿ ಮುತ್ತಿದನು.

ಅರ್ಜುನ ರಥ ಭಗದತ್ತನಾಗರ ಸಂಗರವು ಭೀಕರವಾಯಿತು. ಪರಸ್ಪರ ಶರವರ್ಷದಿಂದ ಅವರೀರ್ವರು ಆಚ್ಛಾದಿತರಾದರು. ಭಗದತ್ತನು ಅರ್ಜುನ ಶರ ಸಮೂಹವನ್ನು ತುಂಡರಿಸಿ, ಪಾರ್ಥ ಕೃಷ್ಣರನ್ನು ಶರದ್ವಯದಿಂದ ಹೊಡೆದು, ತನ್ನ ಮದ್ದಾನೆಯನ್ನು ಪ್ರೇರಿಸಿದನು. ಮೇಲೇರಿ ಬರುವ ಮದಕರಿಯ ವೇಗವನ್ನರಿತು ಶ್ರೀಕೃಷ್ಣನು ತನ್ನ ರಥವನ್ನು ಎಡಕ್ಕೆ ತಿರುಗಿಸಿ ಅದರ ಹೊಡೆತದಿಂದ ತಪ್ಪಿಸಿದನು. ಅದು ಸಿಟ್ಟಾಗಿ ಸಿಕ್ಕ ಸಿಕ್ಕ ರಥಿಕ ತುರಗಯೋಧರನ್ನು ತುಳಿದು ನಾಶಮಾಡಿತು. ಅರ್ಜುನನು ಭಗದತ್ತನನ್ನು ಗುರಿಗೆ ಸಿಕ್ಕರೂ ಹೊಡೆಯದೆ ಮತ್ತೆ ಸಮುಖಿನಾಗುವವರೆಗೂ ಕಾದಿದ್ದನು.

ಭಗದತ್ತನ ಕೂಡ ಕಾದುವ ಪಾರ್ಥ ಕೃಷ್ಣರು ಮೃತ್ಯುವದನಪ್ರವಿಷ್ಟರಾದರೆಂದೇ ಎಲ್ಲರೂ ತಿಳಿದರು. ಗಜಸ್ಕಂದಗತನಾದ ಭಗದತ್ತನು ರಥದಲ್ಲಿದ್ದ ಅರ್ಜುನ ಕೃಷ್ಣರನ್ನು ತೀವ್ರ ಶರಗಳಿಂದ ಹೊಡೆದನು. ಅರ್ಜುನನು ಕುಪಿತನಾಗಿ ಭಗದತ್ತನ ಧನುವನ್ನು ಮುರಿದು, ಅವನ ಪರಿವಾರ ಯೋಧವರರನ್ನು ಸಂಹರಿಸಿದನು. ಭಗದತ್ತನು ಪ್ರಯೋಗಿಸಿದ ಹದಿನಾಲ್ಕು ತೋಮರಗಳನ್ನು ಎರಡೆರಡಾಗಿ ತುಂಡರಿಸಿ, ತೀಕ್ಷ್ಣ ಶರಜಾಲದಿಂದ ಆನೆಯ ಬಂಗಾರದ ಕವಚವನ್ನು ಸೀಳಿ, ಅರ್ಜುನನು ಅವನ ಶಕ್ತಿಯನ್ನೂ ಕತ್ತರಿಸಿದನು. ಸುಪ್ರತೀಕವು ರಕ್ತಮಯ ಗಾತ್ರವಾಗಿ ಗೀಳಿಟ್ಟಿತು. ಅರ್ಜುನನು ಬಿಡದೆ ಭಗದತ್ತನ ಛತ್ರ, ಧ್ವಜಗಳನ್ನು ಕೆಡಹಿ, ನಗು ನಗುತ್ತಾ ಹತ್ತು ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಭಗದತ್ತನು ಕೃದ್ಧನಾಗಿ ತೋಮರಗಳಿಂದ ಅರ್ಜುನನ ಕಿರೀಟವನ್ನು ಮುಚ್ಚಿದನು. ಅರ್ಜುನನು ಅದೆನ್ನು ನಿರ್ಲಕ್ಷಿಸಿ 'ರಾಜನ್ ! ಬಲು ವೀರನಿರುವೆ ! ವೀರಸ್ವರ್ಗವನ್ನು ನಿನಗೆ ತೋರುವೆನು' ಎಂದು ಶರವರ್ಷದಲ್ಲಿ ಅವನನ್ನು ಮುಣಗಿಸಿದನು. ಭಗದತ್ತನೂ ಶರವರ್ಷವನ್ನು ಸುರಿಸಿದನು. ಅರ್ಜುನನ ಬಾಣಜಾಲವನ್ನು ಮುರಿದು, ಧನುವನ್ನು ತುಂಡರಿಸಿ, ಎಪ್ಪತ್ತೆರಡು ಬಾಣಗಳಿಂದ ಅವನನ್ನು ಪೀಡಿಸಿದನು.

ಭಗದತ್ತನು ಪ್ರಾಣಾಪಾಯ ಶಂಕಿತನಾಗಿ, ತನ್ನಲ್ಲಿದ್ದ ವೈಷ್ಣವಾಸ್ತ್ರವನ್ನು ಅಂಕುಶದಲ್ಲಿ ಅಭಿಮಂತ್ರಿಸಿ ಅರ್ಜುನನ ಮೇಲೆಸೆದನು. ಸರ್ವಘಾತಿಯಾದ ವೈಷ್ಣವಾಸ್ತ್ರವು ಉರಿಯುತ್ತಾ ಬರಲು ನೋಡಿ, ಶ್ರೀಕೃಷ್ಣನು ಪಾರ್ಥನನ್ನು ಮುಚ್ಚಿ ನಿಂತು ಅದನ್ನು

ತನ್ನ ಎದೆಯಲ್ಲಿ ಧರಿಸಿ, ನಗುತ್ತಾ ನಿಂತನು. ಆ ದಿವ್ಯಾಸ್ತ್ರವು ಕೇಶವನ ವಕ್ಷಃಸ್ಥಲವನ್ನು ವೈಜಯಂತೀ ಮಾಲೆಯಾಗಿ ಅಲಂಕರಿಸಿತು. ಪದ್ಮಕೋಶ ಚಿತ್ರವು, ಕುಂದಮಂದಾರ ಪಾರಿಜಾತ ವಿಲಸಿತವು, ಉದಯಾರ್ಕ ಸಮಪ್ರಕಾಶವು, ಪಾವಕ ಜ್ವಾಲಾನಿಭಪಲ್ಲವವು ಆದ ವೈಜಯಂತಿಯಿಂದ ಶ್ರೀಕೃಷ್ಣನು ಮನೋಹರ ಕಾಂತಿಯುತನಾಗಿ ವಿರಾಜಿಸಿದನು. ಅದನ್ನು ಕಂಡು ಅರ್ಜುನನು ಖಿನ್ನನಾಗಿ 'ಕೇಶವ ! ಯುದ್ಧವನ್ನು ಮಾಡುವುದಿಲ್ಲ ಕುದುರೆಗಳನ್ನು ನಡೆಸುವೆನಿಷ್ಟೇ ! ಎಂದು ಪ್ರತಿಜ್ಞೆ ಗೈದು, ಇಂದು ಅದನ್ನು ಬಿಟ್ಟಿದ್ದುಚಿತವೇ ? ನಾನು ಅಶಕ್ತನಾಗಿದ್ದರೆ, ಅಸ್ತ್ರವನ್ನು ನಿವಾರಿಸಲಾರದಾಗಿದ್ದರೆ ಮಾತ್ರ ಇಂತು ಅಸ್ತ್ರಧಾರಣೆ ಮಾಡಬಹುದಿತ್ತು. ಧನುರ್ಬಾಣಧಾರಿಯಾದ ಧನಂಜಯನು ಸುರಾಸುರ ಮಾನವರನ್ನು ಗೆಲ್ಲಬಲ್ಲನೆಂದು ನೀನೂ ಬಲ್ಲೆ !' ಎಂದು ಕೇಳಿದನು.

ಶ್ರೀಕೃಷ್ಣನು ನಸುನಕ್ಕು ಇಂತೆಂದನು : 'ಅರ್ಜುನ ! ನಿನಗೊಂದು ರಹಸ್ಯವನ್ನರುಹುವೆನು ಕೇಳು ! ಸರ್ವಲೋಕ ಧಾರಕನಾದ ನಾನೆಲ್ಲವನ್ನೂ ಧರಿಸುವೆನು. ನನಗೆ ದುಸ್ಸಹವಿಲ್ಲ. ನಾನು ಪಂಚರೂಪನಾಗಿರುವೆನು. ನಾರಾಯಣನಾಗಿ ಪ್ರಳಯ ಪಯೋಧಿಯಲ್ಲಿ ಯೋಗನಿದ್ರಾರತನಾಗಿದ್ದ ನಾನೇ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ರೂಪಗಳನ್ನು ಧರಿಸುವೆನು. ಮೋಕ್ಷವನ್ನು ಪ್ರಳಯವನ್ನು ಸೃಷ್ಟಿಯನ್ನು, ಮಾನವ ಹೃದಯ ಪ್ರೇರಣವನ್ನು ಮಾಡುತ್ತ ನಾನು ಸ್ವಗತಭೇದವರ್ಜಿತನಾಗಿರುವೆನು. ಹಿಂದೆ ಭೂಮ್ಯುದ್ಧಾರ ಕಾಲದಲ್ಲಿ ವರಾಹನಾಗಿ ಬ್ರಹ್ಮಾದಿವರಾರ್ಹ ಭಕ್ತರಿಗೆ ಶ್ರೇಷ್ಠ ವರಗಳನ್ನು ನಾನು ಕೊಟ್ಟು ಕರುಣಿಸಿದೆನು. ಆಗ ನನ್ನ ಪತ್ನಿಯಾಗಿದ್ದ ಭೂದೇವಿಯು, ತನ್ನ ಮಗನಾದ ನರಕಾಸುರನಿಗಾಗಿ, 'ದೇವ ! ನನ್ನ ಮಗನು ದೇವ ದಾನವರಿಂದ ಅವಧ್ಯನಾಗಲಿ ! ಹಾಗಿರಲು ಶಕ್ತಿಯನ್ನೀವ ವೈಷ್ಣವಾಸ್ತ್ರವನ್ನು ಅವನಿಗೆ ದಯಪಾಲಿಸು !' ಎಂದು ಬೇಡಿದಳು. ಅದನ್ನು ನಾನವನಿಗಿತ್ತು 'ಧರೇ ! ವೈಷ್ಣವಾಸ್ತ್ರವು ಅಮೋಘವು. ಇದರಿಂದ ರಕ್ಷಿತನಾದ ನಿನ್ನ ಮಗನು ಸರ್ವಜಯಿಯು ದುರಾಂಧರ್ಷನು ಆಗುವನು' ಎಂದು ಅನುಗ್ರಹಿಸಿದೆನು. ನರಕಾಸುರನು ತನ್ನ ಪಾಪದಿಂದ ತಾನು ಸತ್ತನು. ಆ ವೈಷ್ಣವಾಸ್ತ್ರವು ಭಗದತ್ತನನ್ನು ಸೇರಿತು. ಆದುದರಿಂದ ಅವನು ಅವಧ್ಯನಾಗಿದ್ದನು. ಇಂದು ನಾನು ಪರರಿಗೆ ಧರಿಸಲಶಕ್ಯವಾದ ವೈಷ್ಣವಾಸ್ತ್ರವನ್ನು ಧರಿಸಿದೆನು. ಇಂದು ತದ್ರಹಿತನಾದ ಭಗದತ್ತನು ನಿನಗೆ ವಧ್ಯನಾಗಲೆಂದೇ ಹೀಗೆ ಮಾಡಿದೆನು. ವೈರಿಯನ್ನು ಸಂಹರಿಸು ! ಮಗನೆನಿಸಿದ ನರಕನನ್ನು ನಾನು ಕೊಂದು ಜಗದ್ಧಿತವನ್ನು ಸಾಧಿಸಿದಂತೆ ನೀನೂ ಅವನ ಮಗನಾದ ಭಗದತ್ತನನ್ನು ಸಂಹರಿಸು !'

ಆ ಮಾತನ್ನಾಲಿಸಿ ಅರ್ಜುನನು ಆಲಸ್ಯ ಮಾಡದೆ ದಿವ್ಯ ನಾರಾಚದಿಂದ ಸುಪ್ರತೀಕದ ಕುಂಭಸ್ಥಲವನ್ನೂ ಒಂದು ದಿವ್ಯಾಸ್ತ್ರದಿಂದ ಭಗದತ್ತನ ಹೃದಯವನ್ನೂ ತಾಡಿಸಿದನು. ಆನೆಯ ತಲೆ ಒಡೆದು ಕೆಳಗುರುಳಿತು. ಭಗದತ್ತನೂ ಮೃತನಾದನು. ಹೇಮಮಾಲಿಯಾದ ಭಗದತ್ತನು ಆನೆಯಿಂದ ಕೆಳಗುರುಳಿದಾಗ ಪರ್ವತಾಗ್ರದಿಂದ ಉರುಳಿದ ಪುಷ್ಪಿತಾಶೋಕದಂತೆ ಕಾಣಿಸಿದನು.

ಅದನ್ನು ಕಂಡು ಕುಪಿತರಾಗಿ ಶಕುನಿಯ ಸೋದರರಾದ ವೃಷಕಾಚಲರು, ಅರ್ಜುನನನ್ನು ಮುತ್ತಿ ಶರವ್ರಾತದಿಂದ ಘಾತಿಸಿದರು. ಅರ್ಜುನನು ವೃಷಕನ ಧನುವನ್ನು ಮುರಿದು, ಅಶ್ವಗಳನ್ನು ಕೊಂದನು. ಅವನು ತಮ್ಮನ ರಥವನ್ನೇರಿ ಬಂದು ಶರವರ್ಷದಿಂದ ಪೀಡಿಸಲು ಅರ್ಜುನನು ಒಂದೇ ಬಾಣದಿಂದ ಅವರೀರ್ವರನ್ನು ಸಂಹರಿಸಿದನು. ಮಾತುಲರ ಮೃತಿಯಿಂದ ನೊಂದು ಕೌರವರು ಕಣ್ಣೀರಿಟ್ಟರು. ಮಾಯಾ ವಿಶಾರದನಾದ ಶಕುನಿಯು ಅನುಜರ ಮೃತಿಗೆ ಸಿಟ್ಟಾಗಿ, ಅರ್ಜುನನನ್ನು ಮುತ್ತಿ ಮಾಯಾ ಯುದ್ಧವನ್ನು ಮಾಡಿದನು. ಆಕಾಶದಿಂದ ಲಗುಡ, ಶಿಲಾ, ಶಕ್ತಿ ಗದಾ, ಪರಿಘ, ಶೂಲಗಳುದುರಿದವು. ಅರ್ಜುನನ ರಥವನ್ನು ಕತ್ತೆಗಳು, ನಾಯಿಗಳು, ಸಿಂಹ ವ್ಯಾಘ್ರ, ಭಲ್ಲೂಕಗಳು ಮುತ್ತಿ ವಿಚಿತ್ರ ರವಗಳಿಂದ ಹೆದರಿಸಿದವು. ಶಕುನಿಯು ತಮಸ್ಸನ್ನೂ ಸೃಜಿಸಿದನು. ಅದನ್ನು ಅರ್ಜುನನು ವಿಜ್ಞಾನಾಸ್ತ್ರದಿಂದ ಮುರಿದನು. ಶಕುನಿಯ ಮಾಯಾಜಾಲವೆಲ್ಲವು ನಷ್ಟವಾಯಿತು. ಅವನು ಪ್ರಳಯೋದಕವನ್ನು ಸೃಜಿಸಲು, ಅರ್ಜುನನದನ್ನು ಆದಿತ್ಯಾಸ್ತ್ರದಿಂದ ಹಿಂಗಿಸಿದನು; ಅಗ್ನಿಯನ್ನು ಸೃಜಿಸಲು ವಾರುಣಾಸ್ತ್ರದಿಂದ ಆರಿಸಿದನು. ಆಗ ಶಕುನಿಯು ಪರಾಜಿತನಾಗಿ ಓಡಿಹೋದನು.

ದ್ರೋಣನು ಪಾಂಡವಾನೀಕವನ್ನು ನಾಶಪಡಿಸುತ್ತಿರುವಾಗ ಧೃಷ್ಟದ್ಯುಮ್ನನು ಆತನನ್ನು ತಡೆದು ಹೋರಾಡುತ್ತಿದ್ದನು. ಪಾಂಡವರೆಲ್ಲರೂ ಪ್ರಾಣ ಪಣವಿಟ್ಟು ಶತ್ರು ವೀರರನ್ನು ಸಂಹರಿಸಿ, ಜಯಕಾಶಿಗಳಾದರು. ನೀಲನೆಂಬುವ ಮಾಹಿಷ್ಮತಿಯ ರಾಜನು ಪ್ರಳಯಾಗ್ನಿಯಂತೆ ಉರಿದೆದ್ದು ಕೌರವಸೇನಾ ಕಕ್ಷವನ್ನು ಸುಡುತ್ತಿರಲು ನೋಡಿ, ಸಹಿಸದೆ ಅಶ್ವತ್ಥಾಮನು ಅವನನ್ನು ಮುತ್ತಿ 'ನೀಲ ! ಅಲ್ಪ ವೀರರನ್ನು ಗೆದ್ದು ಕೊಬ್ಬಬೇಡ ! ನನ್ನೊಡನೆ ಕಾದಾಡಿ, ವೀರನೆನಿಸು !' ಎಂದು ಬಾಣಗಳಿಂದ ಹೊಡೆದನು. ನೀಲನು ಭಲ್ಲದಿಂದ ದ್ರೌಣಿಯನ್ನು ಗಾಯಗೊಳಿಸಿದನು. ಗುರು ಪುತ್ರನು ಮೂರು ಬಾಣಗಳಿಂದ ನೀಲನ ಧನುರ್ಧ್ವಜ ಛತ್ರಗಳನ್ನು ಕೆಡಹಿ, ಕುದುರೆಗಳನ್ನು ಕೊಂದನು. ವಿರಥನಾದ ನೀಲನು ರಥದಿಂದಿಳಿದು, ಖಡ್ಗ ಚರ್ಮಧರನಾಗಿ ಬರುತ್ತಿರಲು ನೋಡಿ ಅಶ್ವತ್ಥಾಮನು ಭಲ್ಲದಿಂದ ಅವನ ಶಿರಸ್ಸನ್ನು ಕಡಿದು ಕೆಡಹಿದನು. ಅರ್ಜುನನು ಮತ್ತೆ ಸಂಸಪ್ತಕರಿಂದ ಕೂಡಿ ಕಾದಲು ಆಗ್ನೇಯ ದಿಕ್ಕಿಗೆ ಹೋಗಿರುವುದರಿಂದ, ರಕ್ಷಕರನ್ನು ಹುಡುಕುತ್ತಾ ಪಾಂಡವ ಸೇನೆಯು ಓಡುವದನ್ನು ನೋಡಿ, ಭೀಮಸೇನನು ಕುಪಿತನಾಗಿ ಬಂದು ದ್ರೋಣನನ್ನು ಅರವತ್ತು ಬಾಣಗಳಿಂದಲು, ಕರ್ಣನನ್ನು ಹನ್ನೆರಡು ಶರಗಳಿಂದಲು, ಗುರುಸುತನನ್ನು ಇಪ್ಪತ್ತೊಂದು ಬಾಣಗಳಿಂದಲು, ಕರ್ಣನು ಹನ್ನೆರಡು ಶರಗಳಿಂದಲು, ಅಶ್ವತ್ಥಾಮನು ಏಳು ನಾರಾಚಗಳಿಂದಲು, ದುರ್ಯೋಧನನು ಆರು ಕಾಂಡಗಳಿಂದಲು, ಭೀಮಸೇನನನ್ನು ತಾಡಿಸಿದರು. ಭೀಮಸೇನನು ಅವರನ್ನೆಲ್ಲ ಆರಾರು ಬಾಣಗಳಿಂದ ಪೀಡಿಸಿ, ಧರ್ಮರಾಜಾದಿಗಳನ್ನು ಅವರೊಡನೆ ಕಾದಲು ಬಿಟ್ಟು, ತಾನು ಅಶ್ವತ್ಥಾಮನನ್ನು ಕೂಡಿ ಕಾದಿದನು.

ಆಗ ಅರ್ಜುನನು ಸಂಸಪ್ತಕರನ್ನು ನಾಶಗೊಳಿಸಿ, ಮತ್ತೆ ರಣರಂಗ ಮಧ್ಯದಲ್ಲಿ ಪ್ರವೇಶಿಸಿದನು. ಭೀಮಾರ್ಜುನರ ವಿಜೃಂಭಣದಿಂದ ವಿಕ್ರಮಿಸಿ ಪಾಂಡವ ಸೇನೆಯು ಮುನ್ನುಗ್ಗಿ ಹೋರಾಡಿ, ಕೌರವ ವೀರರನ್ನು ನಾಶಗೊಳಿಸಿತು. ಅರ್ಜುನನನ್ನು ತಡೆದು ಕರ್ಣನು ಆಗ್ನೇಯಾಸ್ತ್ರವನ್ನು ಬಿಡಲು, ಧನಂಜಯನು ಅದನ್ನು ವಾರುಣಾಸ್ತ್ರದಿಂದ ಆರಿಸಿದನು. ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಹೂಡಿ ಕಡಿದಾಡುವ ಕರ್ಣ ಕಿರೀಟಿಗಳ ಕಾಳಗವು ಕಡುಭಯಂಕರವಾಯಿತು. ಅರ್ಜುನನು ಏಳು ಬಾಣಗಳಿಂದ ಕರ್ಣನನ್ನು ತಾಡಿಸಿ, ಅವನೆದುರಿಗೇ ಅವನ ತಮ್ಮನಾದ ಶತ್ರುಂಜಯನನ್ನು ಕೊಂದನು; ಭಲ್ಲದಿಂದ ವಿಪಾಟನನ್ನು ಸೀಳಿ, ಶತ್ರುಂತಪನನ್ನೂ ಸಂಹರಿಸಿದನು. ಮೂವರು ಕರ್ಣ ಸೋದರರು ಮೃತರಾಗಲು ನೋಡಿ ಧಾರ್ತರಾಷ್ಟ್ರರು ಕಳೆಗುಂದಿದರು.

ಭೀಮಸೇನನು ಖಡ್ಗದಿಂದ ಕರ್ಣಪಕ್ಷದ ವೀರರನ್ನು ಕೊಂದು, ಮತ್ತೆ ರಥವನ್ನೇರಿ ಅಶ್ವತ್ಥಾಮನ ಅಶ್ವಗಳನ್ನು ಕೊಂದನು. ಕರ್ಣನನ್ನು ಏಳು ಬಾಣಗಳಿಂದ ಹೊಡೆದನು. ಸಾತ್ಯಕಿಯು ಇಪ್ಪತ್ತು ಬಾಣಗಳಿಂದ ಪೀಡಿಸಲು ನೊಂದಿದ ಕರ್ಣನನ್ನು ದುರ್ಯೋಧನಾದಿಗಳು ರಕ್ಷಿಸಿ, ಸಾತ್ಯಕಿಯನ್ನು ನಿವಾರಿಸಿದರು. ಆಗ ಸೂರ್ಯನು ಅಸ್ತಗತನಾಗುವುದನ್ನು ನೋಡಿ ಉಭಯ ಸೇನಾಪತಿಗಳು ಅವಹಾರವನ್ನು ಮಾಡಿ ಶಿಬಿರಗಳನ್ನು ಸೇರಿದರು. ದುರ್ಯೋಧನನು ಪರಾಜಯ ತರ್ಕಿತನಾಗಿ, ದ್ರೋಣರನ್ನು ನಿಂದಿಸಿದನು. ಆಚಾರ್ಯನು ಮರುದಿನ ಧರ್ಮಜನನ್ನು ಹಿಡಿಯಲು ಅಥವಾ ಅವನಿಗೆ ಸಮನಾದ ವೀರನನ್ನು ಸಂಹರಿಸಲು ಪ್ರತಿಜ್ಞೆ ಮಾಡಿದನು. ಅಲ್ಲಿ ಪಾಂಡವ ಯೋಧರು ಜಯ ಸಂಭ್ರಮದಿಂದ ಶ್ರೀಕೃಷ್ಣನನ್ನು ಕೊಂಡಾಡುತ್ತ ಭೀಮಾರ್ಜುನಾದಿಗಳ ವಿಕ್ರಮವನ್ನು ಪ್ರಶಂಸಿಸುತ್ತಾ ಆ ರಾತ್ರಿಯನ್ನು ಕಳೆದರು.

## ೪. ತ್ರಯೋದಶ ದಿನ ಯುದ್ಧ (ಏಕಾದಶಿ)

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು. ಧೃತರಾಷ್ಟ್ರನಿಗೆ ಸಂಜಯನಿಂತೆಂದನು:

'ರಾಜನ್ ! ಮರುದಿನ ಉಭಯ ಸೇನೆಗಳು ರಣರಂಗದಲ್ಲಿ ಮಹಾಸಂರಂಭದಿಂದ ಕಲೆತವು. ಆಗ ದುರ್ಯೋಧನನು ಹಿಂದಿನ ದಿನದ ಪರಾಭವದಿಂದ ಖಿನ್ನನಾಗಿ ದ್ರೋಣನನ್ನು ಕಂಡು, ಎಲ್ಲ ಯೋಧರು ಕೇಳುತ್ತಿರಲು ಇಂತು ನುಡಿದನು. ಅವನ ಹೃದಯ ಹ್ರದವು ಅಭಿಮಾನ ವೈರ ಪರಾಭವಗಳೆಂಬ ತ್ರೇತಾಗ್ನಿಗಳಿಂದ ಕುದಿಯುತ್ತಿತ್ತು. 'ಆಚಾರ್ಯ ! ನಾವು ವಧ್ಯರಾಗಲು ಅರ್ಹರೆಂದು ನೀನು ತಿಳಿದಂತಿದೆ. ಇಲ್ಲದಿದ್ದರೆ ಕೈಗೆ ಸಿಕ್ಕ ಧರ್ಮರಾಜನನ್ನು ಹಿಡಿಯದೆ ಬಿಡುತ್ತಿದ್ದೆಯಾ ? ದೇವಸೈನ್ಯಸಮೇತರಾದ ಪಾಂಡವರಿಂದ ರಕ್ಷಿತನಾದ ಶತ್ರುವಿನನ್ನು ಹಿಡಿಯಬೇಕೆಂದು ನಿನ್ನ ಮನಸ್ಸಿಗೆ ಬಂದಿದ್ದರೆ ಯಾರೂ ತಡೆಯುವ ಸಮರ್ಥರಿಲ್ಲ.

ಪ್ರೀತನಾಗಿ ವರವಿತ್ತು ನಡೆಸಿಕೊಡದೆ ಆಶಾಭಂಗವನ್ನು ಮಾಡಿರುವೆ ! ಆರ್ಯರೇ ಮಾತಿಗೆ ತಪ್ಪಿದರೆ ಇನ್ನಿತರ ಮನುಜರ ಪಾಡೇನು?' ಎಂದು ನಿಂದಿಸಿದ ರಾಜನನ್ನು ನೋಡಿ ಆಚಾರ್ಯನು ಲಜ್ಜಾಸಂಭ್ರಮಾನ್ವಿತನಾಗಿ ಇಂತೆಂದನು: 'ರಾಜನ್ ! ನಿನ್ನ ಪ್ರೀತಿಗಾಗಿ ಹೆಣಗಿ, ಶಕ್ತಿಗೆ ಮೀರಿ ಹೊಡೆದಾಡುತ್ತಿರುವ ನನ್ನನ್ನಿಂತು ನೋಯಿಸಿ ನುಡಿಯುವುದು ನಿನಗೆ ಸರಿ ಅಲ್ಲ. ಕಿರೀಟಿಯಿಂದ ರಕ್ಷಿತನಾಗಿರುವವನನ್ನು ಹಿಡಿಯಲು ಸುರಾಸುರ ಗಂಧರ್ವರಿಗಳವಲ್ಲ. ಎಲ್ಲಿ ಗೋವಿಂದನು ಜಗಜ್ಜನ್ಮಾದಿ ಕಾರಣನು ಆದ ಶ್ರೀಕೃಷ್ಣನು ರಕ್ಷಕನಾಗಿರುವನೋ, ಎಲ್ಲಿ ಮಹಾಬಲ ವಿಕ್ರಮನಾದ ಭೀಮಸೇನನು ಸೇನಾಪತಿಯಾಗಿರುವನೋ, ಎಲ್ಲಿ ಗಾಂಡೀವ ಧನುರ್ಧರನಾದ ಅರ್ಜುನನು ಪ್ರತಿ ವೀರನೋ ಅಲ್ಲಿ ಯಾರ ಪರಾಕ್ರಮವು ಸಲ್ಲದು. ಅವರು ರಕ್ಷಿಸುತ್ತಿರುವವನನ್ನು ಸಾಕ್ಷಾದ್ರುದ್ರನೂ ಸಂಹರಿಸಲಾರನು. ಅವರು ಕೊಲ್ಲಲೆಣಿಸಿದವನನ್ನೂ ಇಂದ್ರನೂ ಕಾಪಾಡಲಾರನು. ಸತ್ಯವನ್ನು ನುಡಿಯುವೆನು, ಕೇಳು ! ಇಂದು ಧರ್ಮಜನನ್ನು ಹಿಡಿಯುವೆನು. ಅಥವಾ ಅವನಂತಹ ಮಹಾರಥನನ್ನು ಕೊಲ್ಲುವೆನು. ದಿವ್ಯಪುರುಷರಿಗೂ ಅಭೇಧ್ಯವಾದ ವ್ಯೂಹವನ್ನೊಡ್ಡುವೆನು. ಅರ್ಜುನನೊಬ್ಬನನ್ನು ದೂರಮಾಡು ! ಅವನಿಗೆ ತಿಳಿಯದುದಿಲ್ಲ. ಅವನು ಮಾಡಲಾರದ ಸಾಹಸವಿಲ್ಲ.'

ಆಚಾರ್ಯನ ಮಾತನ್ನಾಲಿಸಿ ದುರ್ಯೋಧನನು ಸುಶರ್ಮಾದಿ ಸಂಸಪ್ತಕರನ್ನು ಅರ್ಜುನನೊಡನೆ ಕಾದಲು ಕಳಿಸಿದನು. ಅವರ ಕರೆಗೆ ಓಗೊಟ್ಟು ಅರ್ಜುನನು ರಣರಂಗದ ದಕ್ಕಿನ ಸಮತಲದಲ್ಲಿ ಅವರೊಡನೆ ಯುದ್ಧಮಾಡಲು ಹೋದನು. ಅಲ್ಲಿ ಮಹಾ ಘೋರ ರಣನಿರತರಾಗಿ ಅರ್ಜುನ ಸಂಸಪ್ತಕರಿರುವಾಗ ಇಲ್ಲಿ ದ್ರೋಣನು ಚಕ್ರಾಬ್ಜವ್ಯೂಹವನ್ನು ರಚಿಸಿ, ಪಾಂಡವ ಸೇನೆಯನ್ನೆದುರಿಸಿದನು. ಅದನ್ನು ಪ್ರವೇಶಿಸಿ ಅಭಿಮನ್ಯುಕುಮಾರನು ಷಡ್ರಥರ ಕೈಸಿಕ್ಕು, ಶತ್ರುಭಯಂಕರವಾಗಿ ಹೋರಾಡಿ ಕೊನೆಗೆ ದೌಶಾಸನಿಯಿಂದ ಮರಣವನ್ನು ಹೊಂದಿದನು. '

ಇಂತು ನುಡಿದ ಸಂಜಯನ ಮಾತನ್ನಾಲಿಸಿ ಧೃತರಾಷ್ಟ್ರನು ಶೋಕಾಕ್ರಾಂತನಾದನು. 'ಸಂಜಯ ! ಅಭಿಮನ್ಯುಕುಮಾರನು ನಿಹತನಾದನೇ ? ಪೂರ್ಣ ಯೌವನನಾಗದ ಬಾಲಕನ ಮೃತಿಯನ್ನು ಕೇಳಿ, ನನಗೆ ಬಹು ದುಃಖವಾಗಿದೆ. ಅತ್ಯಂತ ಸುಖಿಯಾಗಿ ಬೆಳೆದು ಪಾಂಡವನ ಮನಾನಂದಕರವಾಗಿದ್ದ ಅಭಿಮನ್ಯುವಿನನ್ನು ಎಂತು ಯಾರು ಕೊಂದರು ? ಆ ಶೂರನೆಂತು ರಣರಂಗದಿ ವಿಹರಿಸಿದನು ?' ಎಂದು ಕೇಳಿದ ರಾಜನಿಗೆ ಸಂಜಯನಿಂತೆಂದನು: 'ರಾಜನ್ ! ಕೇಳು ! ಸಕಲ ಕುರುಸೇನಾ ಭಯಂಕರನಾಗಿ ತೃಣಗುಲ್ಮಲತಾವೃತವಾದ ವನದಲ್ಲಿ ದಾವಾಗ್ನಿಗೆ ಸಿಕ್ಕ ವನ್ಯಮೃಗಗಳನ್ನಂತೆ ಶತ್ರು ವೀರ ರಥಿಕರನ್ನು ಓಡಿಸುವ ಅಭಿಮನ್ಯುವಿನ ಪರಾಕ್ರಮವನ್ನು ವರ್ಣಿಸುವೆನು.

ಕಲಿತ ವಿದ್ಯೆಯನ್ನು ಪ್ರಕಟಪಡಿಸುವ ವೀರಕರ್ಮರು, ದೇವತೆಗಳಿಗೂ ದುರಾಸದರು ಆದ ಪಾಂಡವರನ್ನು ಜಯಿಸುವುದಾರಿಗೂ ಶಕ್ಯವಲ್ಲ. ಸತ್ಯಧರ್ಮರತನು, ದಾಂತನು, ವಿಪ್ರ ಪೂಜಾಭಿರತನು ಆದ ಧರ್ಮರಾಜನು ಭುವಿಗಿಳಿದ

ದೇವನಂತಿರುವನು. ಭೀಮಸೇನನಿಗೆ ಸದೃಶರೆನ್ನಬಹುದೆಂದರೆ ಯುಗಾಂತಕಾಲದ ರುದ್ರ ಪರಶುರಾಮರಾಗಲಿ ಅನ್ಯರಲ್ಲ. ಪ್ರತಿಜ್ಞಾನಿರ್ವಹಣ ದಕ್ಷನು, ಅಧೋಕ್ಷಜ ಸಹಾಯನು, ಗಾಂಡೀವ ಧನುರ್ಧರನು ಆದ ಅರ್ಜುನನಿಗೆ ಸಮರನ್ನೀ ಪೃಥ್ವಿಯಲ್ಲಿ ನಾ ಕಾಣೆನು. ನಕುಲನೆಂದರೆ ಗುರುಭಕ್ತಿ ಭಕ್ತಪ್ರೀತಿ, ವಿನಯ, ದಮ, ಸೌಂದರ್ಯ, ಶೌರ್ಯಗಳೆಂಬ ಆರು ಗುಣಗಳು ವಿಗ್ರಹಧರಿಸಿ ನಿಂತ ಮಾನವಮೂರ್ತಿ, ಶ್ರುತ, ಗಾಂಭೀರ್ಯ, ಮಾಧುರ್ಯ ಸತ್ವ, ರೂಪ, ಪರಾಕ್ರಮಗಳಿಂದ ಅಶ್ವಿನಿದೇವ ಸಮನಾಗಿರುವನು ಸಹದೇವನು, ಕೃಷ್ಣನ ಗುಣಗಳನ್ನು ಯುಧಿಷ್ಠಿರನ ವೀರ್ಯವನ್ನು ಭೀಮಸೇನನ ಧೈರ್ಯವನ್ನು ಧನಂಜಯನ ಸೌಂದರ್ಯವನ್ನು ನಕುಲನ ಸೌಕುಮಾರ್ಯವನ್ನು, ಸಹದೇವನ ಗಾಂಭೀರ್ಯಗಳನ್ನು ಅದು, ಶೋಧಿಸಿ ಮಾಡಿದ ಮಧುರ ಮೂರ್ತಿ ಅಭಿಮನ್ಯುವು.

ಮಹಾರಾಜ ! ಇಂತಹ ಪಾಂಡವರಿಂದ ವಿರೋಧವನ್ನು ಕಟ್ಟಿಕೊಂಡು ನಿನ್ನ ಸುತರು ಕೋಟರಾಗ್ನಿಯಿಂದ ಗಿಡದಂತೆ, ಹಾಳಾಗುತ್ತಿರುವರು. ದ್ರೋಣಾಚಾರ್ಯನು ಚಕ್ರವ್ಯೂಹವನ್ನು ನಿರ್ಮಿಸಿದನು. ನಿರ್ಮಿಸುವಾಗ ಅದು ಅಭೇದ್ಯವಾಗಲೆಂದು ವಿಷ್ಣುಮಂತ್ರವನ್ನು ಜಪಿಸಿ, ಚಕ್ರವ್ಯೂಹದಲ್ಲಿ ಪದ್ಮವ್ಯೂಹವನ್ನು ರಚಿಸಿದನು. ಇಂದ್ರಸಮ ವಿಕ್ರಮರಾದ ರಾಜನ್ಯರು ಚಕ್ರಾಕಾರವಾಗಿರಲು, ಅದರ ದ್ವಾರದೇಶದಲ್ಲಿ ಸೈಂಧವನು ವೀರಭಯಂಕರನಾಗಿ ನಿಂತಿದ್ದನು. ರಕ್ತಾಂಬರರು, ರಕ್ತವಿಭೂಷಣರು, ರಕ್ತಪತಾಕರು ಆಗಿ ಆಮರಣವಾದ ರಣದೀಕ್ಷೆಯನ್ನು ಸ್ವೀಕರಿಸಿ, ಹತ್ತು ಸಾವಿರ ದೃಢಧಾನುಷ್ಕರು ಸೈಂಧವನ ಸಹಾಯಕರಾಗಿದ್ದರು. ಲಕ್ಷ್ಮಣನೂ ಅವರ ಮಧ್ಯದಿ ನಾಯಕನಾಗಿದ್ದನು. ದುರ್ಯೋಧನನು ವ್ಯೂಹ ಮಧ್ಯದಲ್ಲಿ ಕರ್ಣ ದುಶ್ಶಾಸನ ಕೃಪರಿಂದ ಕೂಡಿ, ಧರ್ಮರಾಜ ಪರಾಜಯವನ್ನಾಕಾಂಕ್ಷಿಸುತ್ತಿದ್ದನು. ಮೇರುಸ್ಥಿರನಾದ ಸಿಂಧುರಾಜನ ಬಲಗಡೆ ಮೂವತ್ತು ಧಾರ್ತರಾಷ್ಟ್ರರಿಂದ ಅಶ್ವತ್ಥಾಮನು, ಎಡಗಡೆ ಶಕುನಿ ಶಲ್ಯ ಭೂರಿಶ್ರವರು ವಿರಾಜಿಸಿದರು.

ಅಂತಹ ಕೌರವ ಸೈನ್ಯವನ್ನು ಭೀಮಸೇನ ಪ್ರಮುಖ ಪಾಂಡವ ವೀರರು ಬಂದು ಮುತ್ತಿದರು. ಸಾತ್ಯಕಿ, ಚೇಕಿತಾನ, ಕುಂತಿಭೋಜ, ಧೃಷ್ಟದ್ಯುಮ್ನ, ದ್ರುಪದ, ಧೃಷ್ಟಕೇತು, ನಕುಲ, ಸಹದೇವ, ಘಟೋತ್ಕಚ, ಯುಧಾಮನ್ಯು, ಶಿಖಂಡಿ, ವಿರಾಟ, ಉತ್ತಮೌಜರೇ ಮುಂತಾದ ಮಹಾವೀರರು ವಿಕ್ರಮಿಸಿ ಪದ್ಮವ್ಯೂಹವನ್ನು ಹೊಗಲು ಯತ್ನಿಸಿದರು. ದ್ರೋಣನ ಅಸಹ್ಯ ವಿಕ್ರಮದಿಂದ ವಾರಿತರಾಗಿ ಅವರು ವಿಷ್ಣುಮಂತ್ರ ಗುಪ್ತವಾದ ಪದ್ಮವ್ಯೂಹವನ್ನು ಹೋಗಲಾರದೆ ಚಿಂತಾಕ್ರಾಂತರಾದರು. ಭೀಮಸೇನನು ಅದನ್ನು ಭೇದಿಸಬಲ್ಲವನಾಗಿದ್ದರೂ, ಮಂತ್ರ ಸಹಾಯದಿಂದ ಭೇದಿಸಲು ಇಷ್ಟಪಡದೆ ಮಂತ್ರವನ್ನು ಜಪಿಸದೆ ಅಸಹಾಯ ಶೂರನಾಗಿ ಬಾಹುಬಲದಿಂದ ಭೇದಿಸಬಹುದಾಗಿದ್ದರೂ, ಶ್ರೀಶೇಚ್ಛೆಯನ್ನರಿತು, ಸುಮ್ಮನಿದ್ದನು. ಇದನ್ನರಿತು ಪರಾಜಯವನ್ನು ಸ್ವೀಕರಿಸಬೇಕಾಗುವುದೆಂದು ಹೆದರಿ ಧರ್ಮರಾಜನು, ಪದ್ಮವ್ಯೂಹ ಭೇದನ ಭಾರವನ್ನು ಅಭಿಮನ್ಯುವಿನ ಅಭಿನವ ವೀರಭುಜದ ಮೇಲಿಟ್ಟನು.

'ಅಭಿಮನ್ಯೋ ! ಅರ್ಜುನನು ಬಂದು ಪದ್ಮವ್ಯೂಹವನ್ನು ಒಡೆಯಲಾರದೇ ನಿಂತು ನಮ್ಮನ್ನು ಹೇಡಿಗಳೆಂದು ನಿಂದಿಸದಂತೆ ಮಾಡು ! ಚಕ್ರವ್ಯೂಹವನ್ನು ಭೇದಿಸು ! ಅದು ನಿನಗೆ ಗೊತ್ತು. ಕೃಷ್ಣನಿಗೆ ಗೊತ್ತು; ಅರ್ಜುನನಿಗೂ ಗೊತ್ತು; ಭೀಮನಿಗೆ ಗೊತ್ತಿದ್ದರೂ ಅವನು ಮಂತ್ರ ತಂತ್ರಾದಿಗಳನ್ನು ಜಯಕ್ಕಾಗಿ ಬಳಸುವವನಲ್ಲ. ಇನ್ನಾರಿಗೂ ತದ್ಭೇದನ ಕ್ರಮ ಗೊತ್ತಿಲ್ಲ. ಈಗ ಅದನ್ನು ಭೇದಿಸಿ ನನ್ನ ಮಾನವನ್ನುಳಿಸು ! ಪಿತೃ ಮಾತುಲ ಬಂಧುಜನರ ಗೌರವವನ್ನು ಕಾಪಾಡು ! ' ಎಂದು ಬೇಡಿದ ಧರ್ಮರಾಜನಿಗೆ ಅಭಿಮನ್ಯುವಿಂತೆಂದನು: 'ಮಹಾರಾಜ ! ಆಗಲಿ ! ವಿಪುಲ ವಿಕ್ರಮಚರ್ಯನಾದ ಆಚಾರ್ಯನ ವ್ಯೂಹವನ್ನು ನಾನು ಭೇದಿಸುವೆನು. ಆ ಯೋಗವನ್ನು ತಂದೆಯಿಂದರಿತಿರುವೆನು. ಆದರೆ ಹೊರಬರುವ ವಿಧಾನವೆನಗೆ ಗೊತ್ತಿಲ್ಲ '

ಧರ್ಮರಾಜನು 'ನೀನು ವ್ಯೂಹವನ್ನೊಡೆದು ಪ್ರವೇಶಿಸು ! ನಿನ್ನ ಹಿಂದೆಯೇ ನಾವೆಲ್ಲರೂ ಬಂದು ರಕ್ಷಿಸುವೆವು ! ' ಎಂದನು. ಭೀಮಸೇನ ಸಾತ್ಯಕಿ ಪ್ರಮುಖರೂ ತಾವು ಹಿಂಬಾಲಿಸಿ ಬರುವುದಾಗಿ ಭರವಸವಿತ್ತಾಗ ಅಭಿಮನ್ಯುವು ' ಉರಿಯುವ ಪಾವಕನಿಗೆ ಹೋಗುವ ಪತಂಗದಂತೆ ನಾನು ವೀರವ್ಯೂಹವನ್ನು ಪ್ರವೇಶಿಸುವೆನು. ಉಭಯ ವಂಶಗಳಿಗೆ ಕೀರ್ತಿಯನ್ನು ತರುವಂತೆ ವಿಕ್ರಮಿಸುವೆನು. ನನ್ನ ತಂದೆಗೂ ನನ್ನ ಮಾವನಿಗೂ ಆನಂದವಾಗಲಿ ! ಕುಮಾರನೊಬ್ಬ ಬಹು ವೀರರಿಂದ ಕಡಿದಾಡಿ ವೀರ ವಿಹಾರಗೈಯುವ ವಿಚಿತ್ರವನ್ನು ಸರ್ವಭೂತಗಳು ನೋಡಲಿ ! ನನ್ನೆದುರು ನಿಂತವರನ್ನು ಸಂಹರಿಸದಿದ್ದರೆ ನಾನು ಸುಭದ್ರಾರ್ಜುನರ ಮಗನಲ್ಲ ! ಪ್ರಾಣಕ್ಕಂಜದೆ ಶತ್ರುನಾಶವನ್ನು ಸಾಧಿಸದಿದ್ದರೆ ನಾನು ಅರ್ಜುನನ ಮಗನೇ ? ' ಎಂದನು.

ಧರ್ಮರಾಜನು 'ಕುಮಾರ ! ನಿನ್ನ ಬಲ ವೀರ್ಯಗಳು ವರ್ಧಿಸಲಿ ! ದ್ರೋಣಾನೀಕವನ್ನು ಭೇದಿಸು ! ಸಾಧ್ಯ ರುದ್ರ ವಸುಮರುದಾದಿತ್ಯರು ನಿನಗೆ ಬೆಂಗಾವಲಾಗಿರಲಿ ! ' ಎಂದು ಹರಸಿದನು. ಆಗ ಸೌಭದ್ರನು ತನ್ನ ರಥದಲ್ಲಿ ಕೂತು, ಸಾರಥಿಯನ್ನು ನೋಡಿ 'ಸುಮಿತ್ರ ! ದ್ರೋಣವ್ಯೂಹವನ್ನು ಭೇದಿಸಲು ಹೋಗುತ್ತಿರುವೆನು. ವ್ಯೂಹದ್ವಾರದ ಕಡೆ ರಥವನ್ನು ಹೊಡೆ ! ' ಎಂದನು. ಸುಮಿತ್ರನು ಭೀತನಾಗಿ 'ಕುಮಾರ ! ನಿನಗಸದಳವೀಕಾರ್ಯ ! ನಿರ್ವಹಿಸಲಾಗದ ಭಾರವನ್ನು ನಿನ್ನ ಮೇಲಿಟ್ಟಿರುವವರು ಪಾಂಡವರು. ಆಚಾರ್ಯ ದ್ರೋಣನು ಪರಮಾಸ್ತ್ರ ವಿಶಾರದನು, ನೀನು ಸುಖಸಂವೃದ್ಧನಾದ ಬಾಲಕನು. ಆಲೋಚಿಸಿ ನೋಡು ! ' ಎಂದನು. ಅಭಿಮನ್ಯುವು ನಕ್ಕು 'ಸೂತ ! ಐರಾವತಗತನಾದ ದೇವ ಸೇನಾಪತಿ ಇಂದ್ರನೊಡನೆ, ಸರ್ವಭೂತಗಣಯುತನಾದ ರುದ್ರನೊಡನೆ ಹೆದರದೆ ಹೋರಾಡುವ ನನಗೆ ಈ ದ್ರೋಣನ ಲೆಕ್ಕವೇನು ? ಈ ರಾಜನ್ಯರು ನನ್ನ ಸಮುಖದಲ್ಲಿ ನಿಲ್ಲಲಾರರು. ವಿಶ್ವ ವಿಜಯಿಯಾದ ವಿಷ್ಣುವನ್ನು ಮಾವನಾಗಿ ಪಡೆದು, ಇಂದ್ರಸಮನಾದ ಅರ್ಜುನನ

ಮಗನೆನಿಸಿ ಮೆರೆವ ನನಗಾರ ಭಯ ? ಹೊಡೆ ರಥವನ್ನು ! ಹೆದರಬೇಡ ! ' ಎಂದು ಪ್ರೇರಿಸಿದನು. ಸುಮಿತ್ರನು ಇಷ್ಟವಿಲ್ಲದೆ ರಥವನ್ನೋಡಿಸಿದನು. ತ್ರಿವರ್ಷ ಪ್ರಾಯವಾದ ಅಭಿಮನ್ಯುವಿನ ಪಿಂಶಗಾಶ್ವಗಳು ಕ್ಷಣದಲ್ಲಿ ವ್ಯೂಹದ್ವಾರವನ್ನು ಸೇರಿದವು. ಕೌರವ ಯೋಧರು ಸಜ್ಜಾಗಿ ನಿಂತರು. ಭೀಮಾದಿಗಳೂ ಅಭಿಮನ್ಯುವಿನನ್ನು ಕೂಡಿ ಬಂದರು.

ಸಿಂಹ ಶಿಶುವು ಮೃಗಗಣಗಳನ್ನು ಪ್ರವೇಶಿಸಿದಂತಾಯಿತು ಕೌರವ ಬಲ. ಗಂಗಾ ನದಿಯಲ್ಲಿ ಸಾಗುವ ಸುಳಿಯಂತೆ ಅಭಿಮನ್ಯುವು ಮಂತ್ರಬಲದಿಂದ ಮುಂದೆ ಸಾಗಿ ಹೋದನು. ದ್ರೋಣನ ಕಣ್ಣೆದುರಿಗೆ ಆತನನ್ನು ಲಕ್ಷಿಸದೆ ವ್ಯೂಹವನ್ನು ಭೇದಿಸಿ ಒಳ ಬಂದ ಅರ್ಜುನ ನಂದನನನ್ನು ಕೌರವ ಯೋಧರು ಸುತ್ತು ಮುತ್ತಿ ಬಾಣ ವರ್ಷವನ್ನು ಸುರಿದರು. ಆನೆ ಕುದುರೆಗಳು ಗಜಿಬಿಜಿಯಾದವು. ಶೀಘ್ರಯೋಧಿಯಾದ ಅಭಿಮನ್ಯುವು ಆ ಯೋಧರ ಶರವರ್ಷವನ್ನು ಖಂಡಿಸಿ, ಆನೆ ಕುದುರೆಗಳನ್ನು ಕೆಡಹಿ, ದಶಸಾಹಸ್ರ ಭಟರನ್ನು ಸಂಹರಿಸಿದನು. ಅವನ ನಿಶಿತಶರಗಳಿಂದ ಉರುಳಿದ ಶರೀರಗಳು ರಣರಂಗವನ್ನು ತುಂಬಿದವು. ಗಂಧಲಿಪ್ತವಾದ ಬಾಹುಗಳನ್ನು, ಮಕುಟಾಲಂಕೃತ ಶಿರಗಳನ್ನು ಧಾವಿಸಿ ಬರುವ ಪಾದಗಳನ್ನು ಕೆಡಹಿದ ಅಭಿಮನ್ಯುವು ಸರ್ಪಗಳನ್ನು ತುಂಡರಿಸಿ ಚೆಲ್ಲುವ ಗರುಡನಂತೆ ಶೋಭಿಸಿದನು. ಅಂದು ಅಭಿಮನ್ಯುವು ಗಜ ರಥ ಪದಾತಿಗಳನ್ನು ಮಾರಿ ಮಸಗಿದಂತೆ ಸಂಹರಿಸಿದನು.

ದುರ್ಯೋಧನನು ಅದನ್ನು ಸಹಿಸದೆ ತಾನಾಗಿ ಬಂದು ಸೌಭದ್ರನನ್ನು ಮುತ್ತಿದನು. ಅವನನ್ನು ಅಭಿಮನ್ಯುವಿನಿಂದ ರಕ್ಷಿಸಲೆಂದು ದ್ರೋಣ, ದ್ರೌಣಿ, ಕೃಪ, ಕರ್ಣ, ಕೃತವರ್ಮ, ಶಕುನಿ, ಶಲ್ಯ, ಶಲ, ಭೂರಿ, ಭೂರಿಶ್ರವ, ಬೃಹದ್ಬಲ, ವೃಷಸೇನರು ಬಂದು ಶರವರ್ಷದಿಂದ ಅರ್ಜುನಿಯನ್ನು ಮುಚ್ಚಿದರು. ದುರ್ಯೋಧನನು ಲಕ್ಷ್ಯದೂರನಾಗಲು ನೋಡಿ ಅಭಿಮನ್ಯುವು, ಬಾಯಲ್ಲಿದ್ದ ಮಾಂಸ ಖಂಡವನ್ನು ಕಿತ್ತಿದಾಗ ಕೆರಳುವ ಹೆಬ್ಬುಲಿಯಂತೆ ವಿಜೃಂಭಿಸಿ, ಶರಜಾಲದಿಂದ ಅವರನ್ನು ವಿಮುಖೀಕರಿಸಿ, ಸಿಂಹನಾದವನ್ನು ಮಾಡಿದನು. ಅದನ್ನು ಸಹಿಸದೆ ದ್ರೋಣಾದಿ ವೀರರು ಮತ್ತೆ ಮುತ್ತಿ ಬಾಣಜಾಲದಿಂದ ಪೀಡಿಸಿದರು. ಅವರ ಬಾಣಗಳನ್ನು ಮುರಿದು ಅಭಿಮನ್ಯುವು ಅವರನ್ನೆಲ್ಲ ವಿವಿಧ ಬಾಣಗಳಿಂದ ಗಾಯಗೊಳಿಸಿದನು. ಅವರು ಕ್ರುದ್ಧರಾಗಿ ಸರ್ಪ ಸಮಶರಗಳಿಂದ ಪೀಡಿಸಿದರು. ವೇಲೆಯು ಸಮುದ್ರವನ್ನಂತೆ ಆ ಮಹಾವೀರನು ಕೌರವ ವೀರರನ್ನೆಲ್ಲ ತಡೆದು, ಕಾದಿದನು.

ಆಗ ದುಸ್ಸಹನು ಒಂಬತ್ತು ಬಾಣಗಳಿಂದಲು, ದುಶ್ಶಾಸನನು ಹನ್ನೆರಡು ಶರಗಳಿಂದಲು, ಕೃಪನು ಮೂರು ಕಾಂಡಗಳಿಂದಲು, ದ್ರೋಣನು ಹದಿನೇಳು ವಿಶಿಖಗಳಿಂದಲು, ವಿವಿಂಶತಿಯು ಮೂವತ್ತರಿಂದಲು, ಕೃತವರ್ಮನು ಏಳು ಬಾಣಗಳಿಂದಲು, ಬೃಹದ್ಬಲನು ಎಂಟರಿಂದಲು, ಅಶ್ವತ್ಥಾಮನು ಎಪ್ಪತ್ತರಿಂದಲು,

ಭೂರಿಶ್ರವನು ಮೂರರಿಂದಲು, ಶಲ್ಯನು ಆರರಿಂದಲು, ಶಕುನಿಯು ಎರಡರಿಂದಲು, ದುರ್ಯೋಧನನು ಮೂರರಿಂದಲು ಹೊಡೆಯಲು, ಅಭಿಮನ್ಯುವು ಅವರನ್ನು ಮೂರು ಮೂರು ಬಾಣಗಳಿಂದ ಪೀಡಿಸಿದನು. ಶಸ್ತ್ರಶಿಕ್ಷಾ ವಿಚಕ್ಷಣನಾದ ಅಭಿಮನ್ಯುವು ಮಹಾವೇಗದಿಂದೋಡುವ ರಥದಲ್ಲಿ ಅಶ್ಮಕನನ್ನು ಸಮೀಪಿಸಿ, ಅವನ ಹತ್ತು ಬಾಣಗಳನ್ನು ತುಂಡರಿಸಿದನು. ತಾನು ಹತ್ತು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನು, ಸೂತನನ್ನು, ಧ್ವಜವನ್ನು ಕೆಡಹಿ, ಕೈಗಳನ್ನು ಧನುವನ್ನು ಕಡಿದು, ಶಿರವನ್ನೂ ಕೆಳಗುರುಳಿಸಿದನು. ಅದನ್ನು ಕಂಡು ಅಶ್ಮಕನ ಸೈನ್ಯವು ಓಡಿಹೋಯಿತು. ಕ್ರುದ್ಧರಾಗಿ ಬಂದು ಬಾಣವರ್ಷವನ್ನು ಸುರಿವ ಕರ್ಣ ದುರ್ಯೋಧನಾದಿ ವೀರರನ್ನು ಬಾಣಜಾಲದಿಂದ ವಾರಿಸಿ, ಅಭಿಮನ್ಯುವು ಒಂದು ತೀವ್ರ ನಾರಾಚವನ್ನು ಕರ್ಣನಿಗೆ ಗುರಿಯಿಟ್ಟು ಹೊಡೆದನು. ಅದು ಅವನ ಕವಚವನ್ನು ಭೇದಿಸಿ, ಶರೀರದಲ್ಲಿ ತೂರಿ, ಹೊರಬಂದು ಧರಣೀತಲವನ್ನು ಪ್ರವೇಶಿಸಿತು. ಕರ್ಣನು ಭೂಕಂಪದಿಂದ ಪರ್ವತದಂತೆ, ಕಂಪಿಸಿ, ದಿಗ್ಭ್ರಾಂತನಾದನು. ಅಭಿಮನ್ಯುವು ಮೂರು ಬಾಣಗಳಿಂದ ಕುಂಡಭೇದಿಯನ್ನು ಕೊಂದು, ಕರ್ಣ ಗುರುಸುತ ಕೃತವರ್ಮ ಬಾಣಗಳಿಂದ ವಿದ್ಧನು, ಕ್ರುದ್ಧನೂ ಆಗಿ ಪಾಶಹಸ್ತನಾದ ಯಮನಂತೆ ವಿಜೃಂಭಿಸಿದನು ; ಶಲ್ಯನನ್ನು ಬಾಣವರ್ಷದಿ ಮುಣುಗಿಸಿದನು; ಶಲ್ಯನು ಮೂರ್ಛಿತನಾಗಿ ರಥದಲ್ಲಿ ಬೀಳಲು ಕುರು ಸೈನಿಕರು ಭೀತರಾಗಿ ಓಡಿಹೋದರು. ಶಲ್ಯಾನುಜನು ಸೇಡಿನಿಂದ ಮುತ್ತಲು ಅಭಿಮನ್ಯುವು ಅವನ ಬಾಣಗಳನ್ನು ತುಂಡರಿಸಿ, ಪಾಣಿ, ಪಾದ, ಧನು, ಸ್ತುರಗ, ಛತ್ರ, ಧ್ವಜ, ಪತಾಕಾ, ಸೂತ, ವೇಣು, ಯುಗ, ಚಕ್ರದ್ವಯ, ತೂಣೀರ, ಚಕ್ರರಕ್ಷಕರನ್ನು ನಾಶಪಡಿಸಿ, ಅವನನ್ನೂ ಸಂಹರಿಸಿದನು. ಅದನ್ನು ಕಂಡು ಆಕಾಶಚಾರಿಗಳಾದ ಸಿದ್ಧ ಸಾಧ್ಯರು 'ಭಲಾ ! ಭಳಿರೇ !' ಎಂದು ಪ್ರಶಂಸಿದರು.

ಶಲ್ಯ ಸೈನಿಕರು ಉದ್ಯತಾಯುದ್ಧ ಪಾಣಿಗಳಾಗಿ ಜೀವದಿಂದ ಬಿಡೆವೆಂದು ಗರ್ಜಿಸುತ್ತಾ ಬರಲು, ಅಭಿಮನ್ಯುವು ಕೃಷ್ಣಾರ್ಜುನರಿಂದ ಕಲಿತ ವಿದ್ಯೆಯನ್ನು ಸಾರ್ಥಕಗೊಳಿಸುತ್ತಾ, ವಿವಿಧಾಸ್ತ್ರಗಳಿಂದ ಅವರನ್ನು ಸಂಪೂರ್ಣ ನಾಶಪಡಿಸಿದನು. ಶರತ್ಕಾಲದ ಸವಿತೃಮಂಡಲದಂತೆ ಸದಾ ಪೂರ್ಣಮಂಡಲಾಕಾರವಾಗಿ ಬಾಣಕಿರಣಗಳನ್ನು ಚಿಮ್ಮುವ ಅಭಿಮನ್ಯುವಿನ ಧನುವಿನ ಟಂಕಾರವು ಎಡೆಬಿಡದೆ ಕೇಳಬರುತ್ತಿತ್ತು. ಒಬ್ಬನಿಂದ ಕೂಡಿ ಕಡಿದಾಡುವ ಅನೇಕ ರಥಿಕರ ಆಹವ ಸಮ್ಮರ್ದವು ಅತಿ ಭೀಕರವಾಯಿತು. ದ್ರೋಣ ಕರ್ಣ ಕೃಪ ಶಲ್ಯ ಗುರುಸುತ ಬೃಹದ್ಬಲ ದುರ್ಯೋಧನಾದಿ ಸರ್ವ ಯೋಧರ ಶರೀರಗಳು ಅಭಿಮನ್ಯು ಬಾಣಗಳಿಂದ ಜರ್ಜರಿತವಾದವು. ಕುರು ಸೇನೆಯು ಭಯಕಂಪಿತವಾಯಿತು.

ದ್ರೋಣನು ಅರ್ಜುನಸುತನ ವಿಕ್ರಮವನ್ನು ಮೆಚ್ಚಿ 'ಕೃಪ ! ಪಾರ್ಥರ ಪ್ರತಿನಿಧಿಯಾಗಿ ಪಾರ್ಥಕುಮಾರನು ಬರುತ್ತಿರುವನು. ಇವನ ವಿಕ್ರಮವು ಯುಧಿಷ್ಠಿರಾದಿ ಬಂಧುಜನಾನಂದಕರವಾಗಿದೆ. ನಿಷ್ಪಕ್ಷಪಾತಿಗಳಾದ ಶತ್ರುಗಳೂ ಇವನ

ಪರಾಕ್ರಮವನ್ನು ಮೆಚ್ಚುತ್ತಿರುವರು. ಇವನಿಗೆ ಪ್ರತಿವೀರರಿಲ್ಲದಂತಿದೆ. ಇಚ್ಛಿಸಿದೆಡೆ ಈ ಮಹಾವೀರನು ಇಂದೇ ನಮ್ಮ ಸೇನಾನಿಹವವನ್ನೆಲ್ಲ ಸಂಹರಿಸಬಲ್ಲನು.' ಆ ಪ್ರಶಂಸಾ ವಾಕ್ಯಗಳನ್ನು ಸಹಿಸದೆ ದುರ್ಯೋಧನನು ದುಶ್ಶಾಸನ ಕರ್ಣಾದಿ ಮಹಾವೀರರನ್ನು ಕಂಡು ನಗುತ್ತಾ 'ಕಂಡಿರೇ ನಮ್ಮ ಆಚಾರ್ಯನ ಮೌಢ್ಯವನ್ನು ! ಸರ್ವರಾಜನ್ಯರ ಧನುರ್ವಿದ್ಯಾ ಗುರುವಿಗೆ, ಬ್ರಹ್ಮವಿತ್ತಮನಾದ ಬ್ರಾಹ್ಮಣ ವರನಿಗೆ, ಅಭಿಮನ್ಯುನಂತಹ ನಿರ್ಬಲ ಬಾಲಕನ ಪ್ರಶಂಸೆ ಶೋಭಿಸದು. ಅವರನ್ನೂ ಸಂಹರಿಸಬಲ್ಲ ಆಚಾರ್ಯರಿಗೆ ಅಲ್ಪಮರ್ತ್ಯನು ಅವಧ್ಯನಾದನೇ ? ಅರ್ಜುನನ ಸುತನೆಂದು ಉಪೇಕ್ಷಿಸಿರುವನೆಂದೇ ಈ ದುಷ್ಟ ಬಾಲಕನು ನಮ್ಮನ್ನೆಲ್ಲ ನಿರ್ಲಕ್ಷಿಸಿ, ಕೊಬ್ಬಿ, ಕೊಲ್ಲುತ್ತಿರುವನು. ಇವನ ದುಂದುಡುಕುತನವನ್ನು ಇನ್ನು ಉಪೇಕ್ಷಿಸಬಾರದು. ಕೊಲ್ಲಿರಿವನನ್ನು !' ಎಂದನು.

ಆ ಮಾತನ್ನಾಲಿಸಿ ದುಶ್ಶಾಸನನು 'ರಾಜನ್ ! ನಾನೊಬ್ಬನೇ ಇವನನ್ನು ಸಂಹರಿಸಿ ಬರುವೆನು. ರಾಹುವು ದಿವಾಕರನನ್ನಂತೆ ಇವನನ್ನು ನುಂಗುವ ನನ್ನ ವಿಕ್ರಮವನ್ನು ಆಚಾರ್ಯಾದಿ ನಮ್ಮ ಜನರು, ಪಾಂಡವ ಪಾಂಚಾಲರು ನೋಡುತ್ತಿರಲಿ ! ಅಭಿಮನ್ಯುವಿನನ್ನು ನಾನು ಸಂಹರಿಸಿದಾಗ, ಎದೆ ಒಡೆದು ಕೃಪ ಪಾರ್ಥರು ಸಾಯುವರು. ಅವರ ಹಿಂದೆ ಅವರ ಅನುಚರರಾದ ಕುಂತೀಸುತರೂ ಸಾಯುವರು. ನನಗೆ ಜಯವಾಗುವಂತೆ ಹರಸು ! ಒಂದು ಕ್ಷಣದಲ್ಲಿ ನಿನ್ನ ಶತ್ರುಗಳನ್ನು ನಾಶಮಾಡಿ ಬರುವೆನು' ಎಂದು ನುಡಿದು, ಸೌಭದ್ರನನ್ನು ಶರಜಾಲದಲ್ಲಿ ಮುಚ್ಚಿದನು. ಅಭಿಮನ್ಯುವು ಅವನನ್ನು ಇಪ್ಪತ್ತಾರು ಬಾಣಗಳಿಂದ ತಾಡಿಸಿದನು. ರಕ್ಷಶಿಕ್ಷಾ ವಿಶಾರದರಾದ ದುಶ್ಶಾಸನಾಭಿಮನ್ಯು ಕುಮಾರರ ಯುದ್ಧವು ಭೀಕರವಾಯಿತು.

ಅಭಿಮನ್ಯುವು ಶರವಿಕ್ಷತನಾಗಿ ಮದವನ್ನು ಸುರಿವ ಮದ್ದಾನೆಯಂತಿರುವ ದುಶ್ಶಾಸನನ್ನು ನೋಡಿ, 'ಒಳ್ಳೆಯದಾಯಿತು ! ನಿಷ್ಠುರನು, ಧರ್ಮದೂರನು, ಬರಿಬಾಯಿ ಮಾತಿನ ಶೂರನು ಆದ ನಿನ್ನನ್ನು ಇಂದು ರಣರಂಗದಲ್ಲಿ ಅಭಿಮುಖನಾಗಿ ಕಂಡೆನು. ಅಂದು ಸಭೆಯಲ್ಲಿ ಆಡಬಾರದ ಮಾತುಗಳನ್ನಾಡಿದೆ ! ಧರ್ಮಜನನ್ನು ಮಾಯಾ ದ್ಯೂತದಿ ಗೆದ್ದ ಶಕುನಿಯ ವಿಜಯವನ್ನು ನಿನ್ನದೆಂದೆ ! ಭೀಮಸೇನನನ್ನು ಅಣಕಿಸಿ ಮಹಾಪರಾಧ ಗೈದೆ ! ಆ ಮಹಾತ್ಮರ ಕೋಪವಿಂದು ತಾನಾಗಿ ಬಂದಿದೆ. ಪರವಿತ್ತಾಪಹಾರ, ಸುಜನದ್ರೋಹ, ಲೋಭ, ಮಿಥ್ಯಾಜ್ಞಾನ, ಪತಿವ್ರತಾಪರಾಧಗಳ ಪಾಪಫಲವನ್ನಿಂದು ನಿನಗುಣಿಸುವೆನು. ಇಂದು ರಣದಲ್ಲಿ ನಿನ್ನನ್ನು ಕೊಂದು ಪಿತೃ ಋಣವನ್ನು ತೀರಿಸುವೆನು. ನನ್ನಿಂದ ಕಡಿದಾಡಿ ಬದುಕಲಾರೆ ! ತಿಳಿ !' ಎಂದು ಒಂದು ದಿವ್ಯಶರವನ್ನು ಬಿಟ್ಟನು. ಅದು ದುಶ್ಶಾಸನನ ಜತ್ರುದೇಶವನ್ನು ಮಹಾಸರ್ಪವು ವಲ್ಮೀಕವನ್ನಂತೆ ಹೊಕ್ಕು ಹೊರಬಂತು : ಮತ್ತೆ ಇಪ್ಪತ್ತೈದು ಬಾಣಗಳಿಂದ ಹೊಡೆದಾಗ ದುಶ್ಶಾಸನನು ಮೂರ್ಚ್ಛಿತನಾಗಿ ಬಿದ್ದನು. ಅದನ್ನು ತಿಳಿದು ವಿರಾಟ ಪಾಂಚಾಲ ಕೇಕಯರು ಸಿಂಹನಾದಗಳನ್ನು ಮಾಡಿ, ಅನೇಕ ದುಂದುಭಿ ಪಟಹಾನಕಗಳನ್ನು ಬಾರಿಸಿದರು. ಧರ್ಮರಾಜಾದಿಗಳು ಅವನಿಗೆ ಸಹಾಯಕ

ವಾಗಬೇಕೆಂದು ಧಾವಿಸಿ ಬಂದರು. ಅವರನ್ನು ಸೈಂಧವನು ನಿಲ್ಲಿಸಿ, ತೀವ್ರ ನಾರಾಚಗಳಿಂದ ಪೀಡಿಸಿ, ವ್ಯೂಹವನ್ನು ಹೊಗಗೊಡಿಸದೆ ಕಾದಿದನು. ಭೀಮಸೇನನು ರುದ್ರವರವನ್ನೂ ಕೃಷ್ಣಾಭಿಪ್ರಾಯವನ್ನೂ ತಿಳಿದವನಾದುದರಿಂದ, ಮನ್ನಿಸಿ, ಸುಮ್ಮನೆ ಕೈಲಾಗದವನಂತೆ ಮೃದುಯುದ್ಧವನ್ನು ಮಾಡುತ್ತಿದ್ದನು.

ದುಶ್ಶಾಸನನ ಪರಾಭವದಿಂದ ನೊಂದ ದುರ್ಯೋಧನನ ಪ್ರೇರಣೆಯಿಂದ ಕರ್ಣನು ಸೌಭದ್ರನನ್ನು ಶರಜಾಲದಿಂದ ಪೀಡಿಸಿದನು. ಅಭಿಮನ್ಯುವು ಇಪ್ಪತ್ತೊಂದು ಬಾಣಗಳಿಂದ ಹೊಡೆದು, ಮುಂದೆಸರಿದು, ದ್ರೋಣನನ್ನು ಮುಟ್ಟಿದನು. ಕರ್ಣನು ಶತ ಬಾಣಗಳಿಂದ ಪೀಡಿಸಿ ಮತ್ತೆ ಕಾದಲು, ಸೌಭದ್ರನು ಪ್ರತ್ಯಸ್ತ್ರಗಳಿಂದ ಅವನ ಸೂತನನ್ನು ತುರಗಗಳನ್ನು ಪೀಡಿಸಿದನು. ಅಸಂಭ್ರಾತನಾಗಿ ಅರ್ಜುನ ಪುತ್ರನು ಉತ್ತರ ಕ್ಷಣದಲ್ಲಿ ತೀಕ್ಷ್ಣ ಬಾಣದಿಂದ ಕರ್ಣನ ಧ್ವಜವನ್ನು ಕೆಡಹಿದನು. ಕರ್ಣಾನುಜನು ಕರ್ಣನನ್ನು ಕಾಪಾಡಲು ಬಂದು, ಘೋರ ಯುದ್ಧವನ್ನು ಮಾಡಿದನು. ಅವನ ಬಾಣಗಳಿಂದ ಪೀಡಿತನಾದ ಪಾರ್ಥ ಪುತ್ರನು ಒಂದು ಬಾಣದಿಂದ ಅವನ ಶಿರವನ್ನು ನೆಲಕ್ಕುರುಳಿಸಿದನು, ಇಂತು ಕರ್ಣನನ್ನು ವಿಮುಖೀಕರಿಸಿ, ಕರ್ಣಾನುಜನನ್ನು ಕೊಂದು, ಅಭಿಮನ್ಯುವು ರಣರಂಗದಲ್ಲಿ ತೊಲಗುವುದನ್ನು ಕಂಡು, ಅವನ ಸೈನಿಕರು ಭೀತರಾಗಿ ಓಡಿಹೋದರು, ಭೂಮಿಯು ಕಬಂಧಗಣ ಸಂಕುಲವಾಯಿತು. ಸಗದ ಸಾಂಗದವಾದ ಬಾಹುದಂಡಗಳು ನೆಲದಿ ಚೆಲ್ಲಾಪಿಲ್ಲಿಯಾಗಿ ಬಿದ್ದವು. ಓಡಿಹೋಗುವ ಭಟರ ಆಕ್ರಂದನ ಶಬ್ದವು ದಿಕ್ಕುಗಳಲ್ಲಿ ವ್ಯಾಪಿಸಿ ಭೀರುಗಳ ಎದೆಗಳನ್ನು ಸೀಳಿತು. ತೂಣದಿಂದ ಬಾಣವನ್ನು ತೆಗೆಯುವುದಾಗಲಿ, ಬಾಣವನ್ನು ಧನುಸ್ಸಿನಲ್ಲಿ ಜೋಡಿಸುವದಾಗಲಿ, ಬಿಡುವುದಾಗಲಿ ತೋರಬರದ ನಿರವಕಾಶವಾಗಿತ್ತು ಅಭಿಮನ್ಯುಕುಮಾರನ ಶರವಿನ್ಯಾಸ !

ಧರ್ಮರಾಜಾದಿಗಳು ಒಬ್ಬಂಟಿಗನಾಗಿ ಕಾದುವ ಅಭಿಮನ್ಯುವಿಗೆ ನೆರವಾಗಬೇಕೆಂದು ಧಾವಿಸಿ ಬರುತ್ತಾ ತಮ್ಮನ್ನು ತಡೆದ ಭಟರನ್ನು ಕೊಲ್ಲುತ್ತಾ ಮುಂದೆ ಸಾಗುತ್ತಿದ್ದರು. ಅವರು ಅಭಿಮನ್ಯುವಿನನ್ನು ಸಮೀಪಿಸದಂತೆ ಸೈಂಧವನು ನಿವಾರಿಸಿ, ಭಯಂಕರ ಪ್ರಳಯರುದ್ರನಂತೆ ವಿಜೃಂಭಿಸಿ ಹಿಮ್ಮೆಟ್ಟಿಸಿದನು. ಅವನಲ್ಲಿದ್ದು ರುದ್ರನೇ ಕಾದು, ತಾನವನಿಗಿತ್ತ ವರವನ್ನು ಸತ್ಯವಾಗಿಸಿದನು."

ಆಗ ಸಂಜಯನಿಗೆ ಧೃತರಾಷ್ಟ್ರನಿಂತೆಂದನು: 'ಸಂಜಯ! ಭಾರತ ವೀರರೆಲ್ಲರೊಟ್ಟುಗೂಡಿ ಬಂದು ಮುತ್ತಿದರೂ ಎದೆಗುಂದದೆ, ಅವರನ್ನೆಲ್ಲ ನಿವಾರಿಸಿದನೆಂದರೆ ನನಗೆ ಆಶ್ಚರ್ಯವಾಗಿದೆ. ಕ್ರುದ್ಧ ಸಿಂಹಗಳನ್ನು ಒಂದಾನೆ ಹಿಡಿದು ನಿಲ್ಲಿಸಿದಂತಾಯಿತಲ್ಲ ! ಇಂತಹ ಬಲ ಶೌರ್ಯಗಳನ್ನು ಯಾವ ವರದಿಂದ ಅವನು ಸಂಪಾದಿಸಿರುವನು ? ಹಿಂದೆ ದ್ರೌಪದಿಯನ್ನು ಅಪಹರಿಸಿದಾಗ ಅವನನ್ನು ತಲೆಬೋಳಿಸಿ, ದಾಸನೆಂದು ಬಾಯಿಂದನಿಸಿ, ಕಳಿಸಿದ ಭೀಮಸೇನನು ಈಗ ಸುಮ್ಮನಿದ್ದನೆಂದರೆ ಆಶ್ಚರ್ಯವಾಗಿದೆ !'

ಆ ಮಾತನ್ನಾಲಿಸಿ ಸಂಜಯನಿಂತೆಂದನು: 'ರಾಜನ್ ! ಅಂದು ಭೀಮನಿಂದ ಅವಮಾನಿತನಾಗಿ ಸೈಂಧವನು ಕೇದಾರದಲ್ಲಿ ನಿಂತು ಉಗ್ರತಪವನ್ನು ಮಾಡಿದನು. ಭಕ್ತಾನುಕಂಪಿಯಾದ ಭಗವಾನ್ ರುದ್ರನು ಅವನಿಗೆ ಪ್ರತ್ಯಕ್ಷನಾಗಿ ವರವನ್ನು ಬೇಡೆಂದನು. ಸೈಂಧವನು ಶಿವನಿಗೆ ವಂದಿಸಿ, ಕೈಜೋಡಿಸಿ ನಿಂತು, 'ಭೀಮನೇ ಮೊದಲಾದ ಪಾಂಡವರನ್ನು ರಣರಂಗದಲ್ಲಿ ಒಂದು ದಿನವಾದರೂ ನಿವಾರಿಸುವಂತೆ ಕರುಣಿಸು ! ' ಎಂದು ಬೇಡಿದನು. ದೇವೇಶನು, 'ಜಯದ್ರಥ ! ಧನಂಜಯನನ್ನು ಬಿಟ್ಟು ಮಿಕ್ಕವರನ್ನು ಒಂದು ದಿನ ಮಾತ್ರ ನೀನು ನಿವಾರಿಸಲು ಸಮರ್ಥನಾಗುವೆ !' ಎಂದು ವರವಿತ್ತು ಮರೆಯಾದನು. ಈ ವರದಿಂದಲು, ದಿವ್ಯಾಸ್ತ್ರಬಲದಿಂದಲು, ಸೈಂಧವನಂದು ಭೀಮಾದಿ ವೀರರನ್ನು ನಿವಾರಿಸಿದನು, ಅವನಿಗೆ ಸಹಾಯವಾಗಿ ಅನೇಕ ವೀರರೂ ಬಂದರು, ಸಾಧುವಾಹಿಗಳು, ಮನೋನುಕೂಲ ವೇಗಿಗಳು ಆದ ಸಿಂಧು ದೇಶದ ಕುದುರೆಗಳನ್ನು ಕಟ್ಟಿದ್ದ ಕಾಂಚನ ರಥದಲ್ಲಿ ಕೂತು ಸೈಂಧವನು ವರಾಹ ಧ್ವಜವನ್ನೆತ್ತಿ, ಶ್ವೇತಚ್ಛತ್ರಪತಾಕಾತೋದ್ಯ, ಚಾಮರ, ವ್ಯಜನಾದಿ ರಾಜಚಿಹ್ನೆಗಳಿಂದ ಸಮಲಂಕೃತನಾಗಿದ್ದನು.

ಅಭಿಮನ್ಯುವು ಸೀಳಿದ ವ್ಯೂಹದ್ವಾರಗಳನ್ನು ಬಹು ಶರಜಾಲದಿಂದ, ತುಂಬಿ ದುಷ್ಪ್ರವೇಶವಾಗುವಂತೆ ಮಾಡಿ ಜಯದ್ರಥನು ವಿಕ್ರಮಿಸಿ ಸಾತ್ಯಕಿಯನ್ನು ಮೂರು ಬಾಣಗಳಿಂದಲು, ವೃಕೋದರನನ್ನು ಎಂಟು ಶರಗಳಿಂದಲು, ಧೃಷ್ಟದ್ಯುಮ್ನನನ್ನು ಆರು ಶರಗಳಿಂದಲು, ವಿರಾಟನನ್ನು ಹತ್ತು ವಿಶಿಖಗಳಿಂದಲು, ದ್ರುಪದನನ್ನು ಐದು ಕಾಂಡಗಳಿಂದಲು, ದ್ರೌಪದೇಯರನ್ನು ಮೂರು ಮೂರರಿಂದಲು, ಧರ್ಮರಾಜನನ್ನು ಎಪ್ಪತ್ತು ಶರಗಳಿಂದಲು ಹೊಡೆದನು. ಅಂದಿನ ಅವನ ಯುದ್ಧವು ಅತ್ಯದ್ಭುತವಾಗಿತ್ತು. ಧರ್ಮಜನು ಭಲ್ಲದಿಂದ ಅವನ ಧನುವನ್ನು ಮುರಿದನು. ಕಣ್ಣುಮುಚ್ಚಿ ತೆಗೆಯುವಷ್ಟರಲ್ಲಿ ಸೈಂಧವನು ಮತ್ತೊಂದು ಧನುವನ್ನು ಹೆದೆ ಏರಿಸಿ ಹತ್ತು ಬಾಣಗಳಿಂದ ಪಾರ್ಥರನ್ನು, ಮೂರು ಮೂರು ನಾರಸಗಳಿಂದ ಮಿಕ್ಕವರನ್ನು ತಾಡಿಸಿದನು. ಭೀಮಸೇನನು ಮೂರು ಭಲ್ಲಗಳಿಂದ ಅವನ ಧನುವನ್ನು ಮುರಿದು, ಧ್ವಜ ಛತ್ರಗಳನ್ನು ಕೆಡಹಿದನು. ಮತ್ತೊಂದು ಧನುವನ್ನೆತ್ತಿ ಸೈಂಧವನು ಭೀಮನ ಕುದುರೆಗಳನ್ನು ಕೊಂದನು. ಭೀಮಸೇನನು ಸಾತ್ಯಕಿಯ ರಥವನ್ನೇರಿ, ಬೆಟ್ಟದ ತುದಿಯಲ್ಲಿ ನಿಂತ ಸಿಂಹದಂತೆ ಗರ್ಜಿಸಿದನು. ಸೈಂಧವನ ವಿಕ್ರಮವನ್ನು ಕಂಡು ಕೌರವರು 'ಸಾಧು ! ಸಾಧು !' ಎಂದು ಕೂಗಿ, ಮೆಚ್ಚಿದರು. ಭೀಮಸೇನನು ಮತ್ತೊಂದು ರಥವನ್ನು ತಂದ ವಿಶೋಕನನ್ನು ನೋಡಿ, ಅದರಲ್ಲಿ ಕೂತು, ಬಾಣಜಾಲದಿಂದ ಸೈಂಧವನನ್ನು ಮುಚ್ಚಿದನು. ಎಷ್ಟು ಪ್ರಯತ್ನಿಸಿದರೂ ಪಾಂಡವ ವೀರರು ವ್ಯೂಹದಲ್ಲಿ ಹೋಗಲು ಸಾಧ್ಯವಾಗದೆ, ವರ ಬಲಯುತನಾದ ಸೈಂಧವನಿಂದ ವಾರಿತರಾಗುತ್ತಿದ್ದರು.

ಮಹಾಮೀನವು ಸಾಗರವನ್ನಂತೆ, ಅಭಿಮನ್ಯುವು ಕೌರವ ಸೇನೆಯನ್ನು ಅಲ್ಲ ಕಲ್ಲೋಲವಾಗಿಸುವುದನ್ನು ಸಹಿಸದೆ ಕುರು ವೀರರು ಒಟ್ಟುಗೂಡಿ ಅವನನ್ನು ಮುತ್ತಿ

ಶರಜಾಲದಿಂದ ಪೀಡಿಸಿದರು. ಅಭಿಮನ್ಯುವು ವೃಷಸೇನನ ಸಾರಥಿಯನ್ನು ಕೊಂದು, ಧನುವನ್ನು ಖಂಡಿಸಿ, ಕುದುರೆಗಳನ್ನು ಗಾಯಗೊಳಿಸಿದನು. ಅವು ಹೆದರಿ ಓಡಿದಾಗ ಏರ್ಪಟ್ಟ ಸೇನಾ ರಂಧ್ರದಿಂದ ಸುಮಿತ್ರನು ಹೊರಬಂದು, ರಥವ್ರಜದಿಂದ ದೂರವಾದನು. ವಸಾತಿಯು ಅಭಿಮನ್ಯು ರಥವನ್ನು ತಡೆದು, 'ನಿಲ್ಲು! ಓಡಬೇಡ ! ನಿನ್ನನ್ನು ಕೊಲ್ಲದೆ ಬಿಡೆನು' ಎಂದನು. ಅವನ ಜಂಬದ ಮಾತನ್ನು ಸಹಿಸದೆ ಸೌಭದ್ರನು ನಿಶಿತಶರದಿಂದ ಎದೆಗೆ ಹೊಡೆದು, ಅವನನ್ನು ಕೆಳಗುರುಳಿಸಿದನು. ಆಗ ನೂರು ರಾಜ ಪುತ್ರರು ಅಭಿಮನ್ಯುವಿನನ್ನು ಸಂಹರಿಸುವ ಹಠ ತೊಟ್ಟು ಬಂದು ಘೋರವಾಗಿ ಕಡಿದಾಡಿದರು. ಅರ್ಜುನಿಯು ಶರಜಾಲದಿಂದ ಅವರನ್ನೆಲ್ಲ ಸಂಹರಿಸಿದನು. ಅವರ ಕಬಂಧಗಳಿಂದ ತುಂಬಿ, ರಣಭೂಮಿಯು ದಾರುಣ ದೃಶ್ಯವಾಯಿತು. ವೇಗವಾಗಿ ಸಂಚರಿಸುವ ರಥದಲ್ಲಿ ಅಭಿಮನ್ಯುವಿನನ್ನು ಕವಚಭೂಷಣ ಕಾಂತಿಗಳಿಂದ ತಿಳಿಯಬಹುದಿತ್ತಾಗಲಿ, ನಿರ್ದೇಶಿಸಿ ಅದನ್ನು ಹೊಡೆಯಲು ಯಾರಿಗೂ ಶಕ್ಯವಾಗಲಿಲ್ಲ.

ಅಭಿಮನ್ಯುವು ಸತ್ಯಶ್ರಮನನ್ನು ಮುತ್ತಿದಾಗ ಅನೇಕ ರಾಜಪುತ್ರರು 'ನಾನು ಮೊದಲು, ನಾ ಮೊದಲೆಂ'ದು ಹಮ್ಮಿನಿಂದ ಬಂದು ಅಭಿಮನ್ಯುವಿನನ್ನು ಬಾಣವರ್ಷದಲ್ಲಿ ಮುಣುಗಿಸಿದರು. ತಿಮಿಂಗಿಲವು ಮೀನುಗಳನ್ನಂತೆ ಹಿಡಿದು, ಅಭಿಮನ್ಯುವು ಅವರನ್ನು 'ನೀನೇ ಮೊದಲು, ನೀ ಮೊದಲೆಂ'ದು ಯಮ ಮಂದಿರಕ್ಕೆ ಕಳಿಸಿದನು. ಆಗ ರುಕ್ಮರಥನೆಂಬ ಶಲ್ಯಕುಮಾರನು 'ಜೀವಗ್ರಾಹವಾಗಿ ಇವನನ್ನು ಹಿಡಿಯುವೆನು, ಹೆದರಬೇಡಿ !' ಎಂದು ತನ್ನ ಸೈನಿಕರನ್ನು ಹುರಿದುಂಬಿಸಿ, ಮೂರು ಬಾಣಗಳಿಂದ ಪಾರ್ಥಪುತ್ರನ ಎದೆಗೆ ಹೊಡೆದನು; ಮತ್ತು ಮೂರು ಬಾಣಗಳಿಂದ ಬಲಗೈಯನ್ನು, ಮೂರರಿಂದ ಎಡಗೈಯನ್ನು ತಾಡಿಸಿದನು. ಅಭಿಮನ್ಯುವು ಅವನ ಧನುವನ್ನು ಮುರಿದು ಎರಡು ಭುಜಗಳನ್ನು ಭಲ್ಲಗಳಿಂದ ಕಡಿದು, ತೀವ್ರನಾರಾಚದಿಂದ ಶಿರವನ್ನು ಕೆಡಹಿದನು.

ರುಕ್ಮರಥನ ಮಿತ್ರರಾದ ನೂರಾರು ರಾಜಪುತ್ರರು ಅಭಿಮನ್ಯುವಿನನ್ನು ಜೀವಗ್ರಾಹವಾಗಿ ಹಿಡಿಯಲೆಣಿಸಿ, ತಾಲಮಾತ್ರ ಚಾಪಗಳನ್ನು ಪಿಡಿದು, ಶರವರ್ಷದಲ್ಲಿ ಅವನನ್ನು ಮುಣುಗಿಸಿದರು. ಶರಶಿಕ್ಷಾ ಚತುರರಾದ ರಾಜಕುಮಾರರಿಂದ ಪೀಡಿಸಲ್ಪಡುವ ಅಭಿಮನ್ಯುವಿನನ್ನು ಕಂಡು, ದುರ್ಯೋಧನನು ಪ್ರಹರ್ಷಿತನಾದನು. ಸುವರ್ಣಪುಂಖ ಬಾಣ ಸಹಸ್ರವು ಅರ್ಜುನ ಸುತನನ್ನು ಮುಚ್ಚಿದಾಗ ಅವನು ಸತ್ತನೆಂದೇ ತಿಳಿದನು. ಅಂಕುಶದಿಂದ ತಿವಿದ ಆನೆಯಂತಾಗಿ ಅಭಿಮನ್ಯು ಗಾಂಧರ್ವಾಸ್ತ್ರವನ್ನು ಪ್ರಯೋಗಿಸಿದನು. ತುಂಬುರು ಪ್ರಮುಖ ಗಂಧರ್ವರು ಅರ್ಜುನನಿಗಿತ್ತಿದ್ದ ಅಸ್ತ್ರವದು. ಅಲಾತ ಚಕ್ರದಂತೆ ತಿರುಗುತ್ತಾ ಬರುವ ಬಾಣಗಳು ಒಂದೊಂದು ಸಾವಿರವಾಗಿ ಕಾಣತೊಡಗಲು ಮೋಹಿತರಾಗಿ ರಾಜಕುಮಾರರು ದಿಕ್ಕುತೋಚದೆ ನಿಂತು, ಅಭಿಮನ್ಯುವಿನ ಬಾಣಾಗ್ನಿಗೆ ತುತ್ತಾದರು. ಐದು ವರ್ಷದ ಚೂತಾರಾಮನನ್ನು ಮದ್ದಾನೆ

ಹೊಕ್ಕು ಕೆಡಹಿದಂತೆ, ಅಭಿಮನ್ಯುವು ಆ ರಾಜಪುತ್ರರನ್ನು ಮಥಿಸಿದುದನ್ನು ಕಂಡು, ದುರ್ಯೋಧನನು ಭೀತನಾದನು. ತಾನೇ ತಡೆಯಲೆಣಿಸಿ, ಅವನು ಅಭಿಮನ್ಯುವಿನನ್ನು ಸಮೀಪಿಸಿದನು. ಆದರೆ ಅವನ ಬಾಣಜ್ವಾಲೆಗೆ ತಾಳಲಾರದೆ ರಾಜರಾಜನು ಹಿಂದಿರುಗಿದನು.

ಕೌರವ ವೀರರೆಲ್ಲ ಅಭಿಮನ್ಯುವಿನನ್ನೆದುರಿಸಿ ನಿಲ್ಲಲಾರದೆ ಹಿಂದಿರುಗಿದರು. ಅವರ ಮುಖ ಬಾಡಿತು; ಕಣ್ಣು ಸಂಭ್ರಾಂತವಾಯಿತು. ಮೈ ಬೆವರಿಟ್ಟಿತು: ಪಲಾಯನ ಪರಾಯಣರಾಗಿ, ಹತರಾಗುವ ಭ್ರಾತೃ ಬಂಧು ಸುಹೃಜ್ಜನರನ್ನು ಬಿಟ್ಟು ಹತಾಶರಾದ ವೀರ ಭಟರನ್ನು ಕಂಡು ಕ್ರುದ್ಧರಾಗಿ, ದ್ರೋಣ, ದ್ರೌಣಿ, ಬೃಹದ್ಬಲ, ಕೃಪ, ದುರ್ಯೋಧನ, ಕರ್ಣ, ಶಕುನಿ, ಶಲ್ಯರು ಒಮ್ಮೆಗೇ ಬಂದು ಅಭಿಮನ್ಯುವಿನನ್ನು ಮುತ್ತಿದರು. ದುರ್ಯೋಧನ ಸುತನಾದ ಲಕ್ಷಣನು ಬಾಲ್ಯ ಚಾಪಲ್ಯದಿಂದಲು, ದರ್ಪದಿಂದಲು, ನಿರ್ಭಯನಾಗಿ ಅಭಿಮನ್ಯುವಿನನ್ನು ಬೆಟ್ಟವನ್ನು ಟಗರಿನಂತೆ ತಾಕಿದ್ದನು. ಅವನನ್ನು ರಕ್ಷಿಸಬೇಕೆಂದು ದುರ್ಯೋಧನಾದಿಗಳೂ ಬಂದು ಬಾಣದ ಮಳೆಯನ್ನು ಸುರಿದರು. ಅಭಿಮನ್ಯುವು ಅದನ್ನು ನಿವಾರಿಸಿ, ಲಕ್ಷಣನನ್ನು ಮುತ್ತಿ ಅವನಿಗಿಂತೆಂದನು: 'ನಿನ್ನ ಬಂಧುಗಳೆದುರಿಗೇ ನಿನ್ನನ್ನು ಯಮನ ಮನೆಗೆ ಕಳಿಸುವೆನು. ಕಡೆಯ ಸಾರಿ ಒಂದು ಸಲ ಅವರನ್ನು ನೋಡು!' ಎನ್ನುತ್ತಿರುವಂತೆ, ಅಭಿಮನ್ಯುವಿನ ಭಲ್ಲವು ಲಕ್ಷಣನ ಸಕುಂಡಲ ಶಿರವನ್ನು ಕೆಳಗುರುಳಿಸಿತು. ಅದನ್ನು ಕಂಡು ಕೌರವರು ಹಾಹಾಕಾರ ಮಾಡಿದರು. ಪ್ರಿಯಪುತ್ರನ ಮರಣದಿಂದ ಕ್ರುದ್ಧನಾಗಿ ದುರ್ಯೋಧನನು 'ಕೊಲ್ಲಿರಿವನನ್ನು!' ಎಂದು ಎಲ್ಲ ರಥಿಕರಿಗೂ ಆಜ್ಞಾಪಿಸಿದನು. ಕರ್ಣಾದಿ ವೀರರು ಗರ್ಜಿಸುತ್ತಾ ಮುತ್ತಲು, ಅರ್ಜುನಿಯು, ಅವರ ಬಾಣಜಾಲವನ್ನು ಖಂಡಿಸಿ, ಶರಶತದಿಂದ ಹೊಡೆದು ಓಡಿಸಿದನು.

ಸೈಂಧವನನ್ನು ಸೇರಪೋಗುವ ಅಭಿಮನ್ಯುವಿನನ್ನು ಕಳಿಂಗನಿಷಾದ ಕ್ರಾಥಪುತ್ರರು ತಡೆದರು. ಅಭಿಮನ್ಯುವು ಅವರ ಆನೆಯ ಸೇನೆಯನ್ನೂ ನಾಶಮಾಡಿದನು: ಕ್ರಾಥಪುತ್ರನನ್ನು ಸಂಹರಿಸಿ, ಸರ್ವ ಕೌರವ ಸೇನೆಯನ್ನೂ ಭಯಭ್ರಾಂತವನ್ನಾಗಿಸಿದನು. ಆಗ ದ್ರೋಣ, ಕೃಪ, ದ್ರೌಣಿ, ಕರ್ಣ, ಬೃಹದ್ಬಲ, ಕೃತವರ್ಮರೆಂಬ ಆರು ಮಹಾರಥರು ಅಭಿಮನ್ಯುವಿನನ್ನು ಮುತ್ತಿದರು. ಸರ್ವವಿದ್ಯಾ ವಿಶಾರದರಾದ ಮಹಾವೀರರು ಆರ್ವರನ್ನು ಲೆಕ್ಕಿಸದೆ ನಿರ್ಭಯನಾಗಿ ಅರ್ಜುನ ಪುತ್ರನು ದ್ರೋಣನನ್ನು ಐವತ್ತು ಬಾಣಗಳಿಂದಲು, ಬೃಹದ್ಬಲನನ್ನು ಇಪ್ಪತ್ತರಿಂದಲು, ಕೃತವರ್ಮನನ್ನು ಎಂಬತ್ತರಿಂದಲು, ಕೃಪನನ್ನು ಅರವತ್ತರಿಂದಲು, ಅಶ್ವತ್ಥಾಮನನ್ನು ಹತ್ತರಿಂದಲು, ಕರ್ಣನ ಕಿವಿಯನ್ನು ಒಂದರಿಂದಲು ಹೊಡೆದನು: ಕೃಪನ ಕುದುರೆಗಳನ್ನು ಕೊಂದು, ಸಾರಥಿಯನ್ನು ಕೆಡಹಿ, ಪಾರ್ಶ್ವ ರಕ್ಷಕರನ್ನು ಕೊಂದನು. ದುರ್ಯೋಧನನು ನೋಡುತ್ತಿರಲು ಕುರು ಕೀರ್ತಿವರ್ಧನನಾದ ವೃಂದಾರಕನೆಂಬ ಮಹಾವೀರನನ್ನು ಸಂಹರಿಸಿದನು.

ಅಶ್ವತ್ಥಾಮನು ಇಪ್ಪತ್ತೈದು ಬಾಣಗಳಿಂದ ಪೀಡಿಸಲು, ಅಭಿಮನ್ಯುವು

ಅವನನ್ನು ಅರವತ್ತು ಬಾಣಗಳಿಂದ ಹೊಡೆದನು, ಪುತ್ರರ ರಕ್ಷಣೆಗೆ ಬಂದ ದ್ರೋಣನು ನೂರು ಬಾಣಗಳಿಂದಲು, ತಂದೆಯನ್ನು ಕಾಪಾಡುವ ಅಶ್ವತ್ಥಾಮನು ಎಂಟು ಬಾಣಗಳಿಂದಲು ಹೊಡೆದು ಅಭಿಮನ್ಯುವಿನನ್ನು ಗಾಯಪಡಿಸಿದರು. ಕರ್ಣನು ಇಪ್ಪತ್ತೆರಡರಿಂದಲು, ಕೃತವರ್ಮನು ಇಪ್ಪತ್ತು ಬಾಣಗಳಿಂದಲು, ಬೃಹದ್ಬಲನು ಐವತ್ತರಿಂದಲು, ಕೃಪನು ಹತ್ತರಿಂದಲು ಹೊಡೆದರು. ಅಭಿಮನ್ಯುವು ಅವರನ್ನೆಲ್ಲರನ್ನು ಹತ್ತು ಹತ್ತು ಬಾಣಗಳಿಂದ ತಾಡಿಸಿದನು. ಬೃಹದ್ಬಲನು ಕರ್ಣಿ ಬಾಣದಿಂದ ಹೃದಯವನ್ನು ತಾಟಿಸಲು ಅಭಿಮನ್ಯುವು ಅವನ ಅಶ್ವಸೂತರನ್ನು ಕೊಂದು, ಚಾಪವನ್ನು ಮುರಿದು, ಧ್ವಜವನ್ನು ಕೆಡಹಿದನು. ಕೋಶಲರಾಜನು ಖಡ್ಗ ಚರ್ಮಧರನಾಗಿ ಮೇಲೇರಿ ಬರಲು ನೋಡಿ; ಅರ್ಜುನಿಯು ಬಾಣದಿಂದ ಅವನ ಎದೆಯನ್ನು ಸೀಳಿದನು. ಬೃಹದ್ಬಲನಂತಹ ಮಹಾರಥನನ್ನು ಕೊಂದು ಅಭಿಮನ್ಯುವು ಕೌರವ ಭಟರನ್ನು ಹತ್ತು ಸಾವಿರ ಸಂಖ್ಯಾಕರನ್ನು ಸಂಹರಿಸಿದನು. ಕರ್ಣನ ಕಿವಿಗೆ ಮತ್ತೊಂದು ಬಾಣ ತಗುಲಿಸಿದನು. ಕರ್ಣನ ಬಾಣಗಳು ಅಭಿಮನ್ಯು ದೇಹವನ್ನು ಗಾಯಗೊಳಿಸಿ ರಕ್ತವನ್ನು ಹರಿಯಿಸಿದಂತೆ, ಅಭಿಮನ್ಯು ಬಾಣಗಳು ರಾಧೇಯನ ರಕ್ತವನ್ನು ಹರಿಯಿಸಿದವು. ಅಭಿಮನ್ಯುವು ಕರ್ಣನೆದುರಿಗೇ ಅವನ ಮಂತ್ರಿಗಳನ್ನಾರು ಮಹಾರಥರನ್ನು ಕೊಂದನು. ಆರು ಬಾಣಗಳಿಂದ ಮಾಗಧ ರಾಜಪುತ್ರನನ್ನು ಸಂಹರಿಸಿದನು. ಮಾರ್ತಿಕಾವತಿಯ ಭೋಜನನ್ನು ಕ್ಷುರಪ್ರದದಿಂದ ಕೆಡಹಿದನು.

ಆಗ ದೌಶ್ಶಾಸನಿಯು ಅಭಿಮನ್ಯುವಿನ ಕುದುರೆಗಳನ್ನು ನಾಲ್ಕು ಬಾಣಗಳಿಂದಲು ಸೂತನನ್ನು ಒಂದು ಬಾಣದಿಂದಲು, ಅಭಿಮನ್ಯುವಿನನ್ನು ಹತ್ತು ಬಾಣದಿಂದಲು ಹೊಡೆದನು. ಅರ್ಜುನಿಯು ಏಳು ಬಾಣಗಳಿಂದ ಅವನನ್ನು ಹೊಡೆದು, 'ಎಲವೋ ! ನಿಮ್ಮ ತಂದೆ ಈಗ ಕಾಪುರುಷನಂತೆ, ಓಡಿಹೋಗಿರುವನು. ನೀನು ಅದೃಷ್ಟದಿಂದ ಅವನಂತಲ್ಲವೆಂದು ತೋರುತ್ತದೆ. ಇರಲಿ ! ಸಾಯಲು ಸಿದ್ಧನಾಗು !' ಎಂದನು. ಅಭಿಮನ್ಯುವು ಅವನ ಧ್ವಜವನ್ನು ಕೆಡಹಿ, ಶಲ್ಯನನ್ನು ಮೂರು ಬಾಣಗಳಿಂದ ನೋಯಿಸಿ, ಶಲ್ಯನ ಬಾಣಪರಂಪರೆಯನ್ನು ಖಂಡಿಸಿ, ಅವನ ರಕ್ಷಕ ಸೂತರನ್ನು ಸಂಹರಿಸಿದನು: ಮತ್ತು ಆರು ಬಾಣಗಳಿಂದ ಹೊಡೆಯಲು ಶಲ್ಯನು ರಣವನ್ನು ಬಿಟ್ಟು ಹೋದನು. ಅರ್ಜುನಿಯು ಶತ್ರುಂಜಯ, ಚಂದ್ರಕೇತು, ಮೇಘವೇಗ, ಸುವರ್ಚಸ, ಸೂರ್ಯಭಾಸರೆಂಬುವ ಗಾಂಧಾರ ರಾಜಕುಮಾರರನ್ನು ಕೊಂದು, ಶಕುನಿಯನ್ನು ಮೂರು ಶರಗಳಿಂದ ಪೀಡಿಸಿದನು. ಶಕುನಿಯು ಮೂರರಿಂದ ಅವನನ್ನು ಪೀಡಿಸಿ, ದುರ್ಯೋಧನನಿಗಿಂತೆಂದನು : 'ಒಬ್ಬನೊಬ್ಬನಾಗಿ ತಾಕಿದರೆ, ಇವನು ನಮ್ಮನ್ನೆಲ್ಲ ಕೊಲ್ಲುವನು. ಎಲ್ಲರೂ ಕಲೆತು ಇವನನ್ನು ಸಂಹರಿಸೋಣ !' ಎಂದ ಶಕುನಿಯ ಮಾತಿಗೆ ಸಮ್ಮತಿಸಿ ಕರ್ಣನು ಆಚಾರ್ಯನಿಗಿಂತೆಂದನು:

'ಆಚಾರ್ಯ ! ನಮ್ಮನೆಲ್ಲರನ್ನೂ ಬಿಡದೆ ಕೊಲ್ಲುವಂತಿದೆ ಈ ದುಷ್ಟಕುಮಾರ ! ಬೇಗನೆ ಇವನ ವಧೋಪಾಯವನ್ನು ಸೂಚಿಸು !' ಎಂದ ಕರ್ಣನಿಗೆ ದ್ರೋಣನು

'ಬಹುವೇಗವಾಗಿ ತಿರುಗುವ ಅಭಿಮನ್ಯುವಿನನ್ನು ಗುರಿಯಿಟ್ಟು ಹೊಡೆಯಲಾಗದೇ ಇಂತಾಗಿದೆ. ರಥಮಾರ್ಗದಲ್ಲಿ ಧನುರ್ಮಂಡಲವು ಮಾತ್ರ ಕಾಣುತ್ತಿದೆ. ಸಂಧಾನ ವಿಮೋಚನಗಳಿಗೆ ಅಂತರವಿಲ್ಲದೆ ಬಾಣವನ್ನು ಬಿಡುವ ಅಭಿಮನ್ಯು ಬಾಣಗಳಿಂದ ನಾನೂ ನೊಂದಿರುವೆನು. ಒಂದು ವಿಧದಿಂದ ಅರ್ಜುನ ಪುತ್ರನ ವಿಕ್ರಮಲೀಲೆಯನ್ನು ಕಂಡು ನನಗೆ ಆಶ್ಚರ್ಯಾನಂದಗಳು ಮೂಡಿ ಬರುತ್ತಿವೆ. ಇವನಿಂದು ಅರ್ಜುನನಂತೆ ಅಥವಾ ಕೃಷ್ಣನಂತೆ ವಿಜೃಂಭಿಸಿರುವನು' ಎಂದನು. ಮತ್ತೆ ಬಾಣಪೀಡಿತನಾದ ಕರ್ಣನು 'ಆಚಾರ್ಯ ! ಆಚಾರ್ಯ ! ಓಡಿಹೋಗಬಾರದೆಂದು ನಿಂತಿರುವೆನು. ಅಭಿಮನ್ಯು ಬಾಣಗಳು ಪರಮದಾರುಣವಾಗಿವೆ !' ಎಂದು ಗೋಳಾಡಿದನು. ಆಚಾರ್ಯನು 'ಕರ್ಣ ! ಇವನ ಕವಚವು ಅಭೇದ್ಯವಾಗಿದೆ. ಕವಚಾಧಾರಣವೆಂಬ ವಿದ್ಯೆಯನ್ನು ನಾನು ಅರ್ಜುನನಿಗೆ ಕೊಟ್ಟಿದ್ದೆನು. ಅವನಿಂದ ಇವನು ಕಲಿತಿರುವನು. ಆದುದರಿಂದ ಇವನನ್ನು ಕೊಲ್ಲಲಾಗದು. ಒಂದು ಉಪಾಯವಿದೆ ಇವನನ್ನು ಜಯಿಸಲು, ಧನುಸ್ಸನ್ನು ಮುರಿದು, ಅಥವಾ ಜ್ಯಾಲತೆಯನ್ನು ಕಡಿದು, ಲಗಾಮವನ್ನು ಭಂಜಿಸಿ, ಕುದುರೆ ಸಾರಥಿಯನ್ನು ಕೊಂದು, ಅನಂತರ ವಿರಥನು, ವಿಧನುಷ್ಕನು ಆದ ಇವನನ್ನು ಕೊಲ್ಲಬಹುದೆಂದು ತೋರುತ್ತಿದೆ" ಎಂದನು.

ಮರ್ಮವನ್ನರಿತ ಕರ್ಣನು ಅಭಿಮನ್ಯುವಿನ ಧನುವನ್ನು ಮುರಿದನು. ದ್ರೋಣನು ಹಯಗಳನ್ನು ಕೊಂದನು. ಕೃಪನು ಸಾರಥಿ-ಪಾರ್ಶ್ವರಕ್ಷಕರನ್ನು ಕೊಂದನು. ಮಿಕ್ಕವರು ವಿರಥನು, ವಿಧನುಷ್ಕನು ಆದ ಅಭಿಮನ್ಯುವಿನನ್ನು ಶರವರ್ಷದಲ್ಲಿ ಮುಣಗಿಸಿದರು. ನಿಷ್ಕರುಣರಾಗಿ ಷಡ್ರಥರು ಒಮ್ಮೆಗೆ ಬಾಲಕನೋರ್ವನನ್ನು ಮುತ್ತಿ ಪೀಡಿಸಲು ವೀರ ಅಭಿಮನ್ಯುವು ಕೌಶಿಕಾದಿ ವಿದ್ಯಾ ಬಲದಿಂದ ಆಕಾಶಕ್ಕೆ ಹಾರಿ ಖಡ್ಗ ಚರ್ಮಧರನಾಗಿ, ವೀರರ ಮೇಲೆ ಹಾರಿಬಿದ್ದು ಸಂಹರಿಸಿದನು. ಅವನನ್ನು ಸಂಹರಿಸಿದರೆ ಶ್ರೀಕೃಷ್ಣನು ಕುಪಿತನಾಗಿ ಕೊಲ್ಲದೆ ಬಿಡನೆಂದು ದ್ರೋಣಾದಿಗಳು ಹೆದರಿದರು. ದ್ರೋಣನು ಅವನ ಖಡ್ಗದ ಮಣಿಮಯ ಮುಷ್ಟಿಯನ್ನು ಖಂಡಿಸಿದನು. ಕರ್ಣನು ಗುರಾಣಿಯನ್ನು ಚೂರುಮಾಡಿದನು. ಅಭಿಮನ್ಯುವು ಚಕ್ರವನ್ನೆತ್ತಿ ದ್ರೋಣನ ಮೇಲೇರಿ ಬಂದನು. ವಾಸುದೇವನಂತೆ ತೋರುವ ಪಾರ್ಥಪುತ್ರನು, ಭೀಮಭಯಂಕರನಾಗಿದ್ದನು. ಅವನ ವಸ್ತ್ರಗಳು ರಕ್ತಸಿಕ್ತವಾಗಿದ್ದವು. ಹುಬ್ಬನ್ನು ಗಂಟಿಕ್ಕಿ, ಸಿಂಹನಾದವನ್ನು ಮಾಡಿ ಮೇಲೆರಗುವ ಅಭಿಮನ್ಯುವು ನೃಸಿಂಹದಂತೆ ಕಂಗೊಳಿಸಿದನು.

ಸುಭದ್ರಾನಂದವರ್ಧನನು, ವಿಷ್ಣ್ವಾಯುಧಧರನು, ವಿಷ್ಣುಜಾಮಾತನು, ಜಿಷ್ಣು ಪುತ್ರನು ಆದ ಅಭಿಮನ್ಯುವು ವಿಷ್ಣುವಿನಂತೆ ವಿಕ್ರಮಿಸಿದನು. ಅವನ ಕೇಶಗಳು ಹಾರಾಡುತ್ತಿದ್ದವು. ಅವನ ಕಣ್ಣುಗಳು ಕಿಡಿಗಾರುತ್ತಿದ್ದವು. ಕರ್ಣಾದಿಗಳು ಚಕ್ರವನ್ನೂ ತುಂಡರಿಸಲು, ಅಭಿಮನ್ಯುವು ಮಹಾಗದೆಯನ್ನು ಪಿಡಿದು, ಅಶ್ವತ್ಥಾಮನ ರಥಕ್ಕೆ ಹಾರಿದನು. ಗುರುಪುತ್ರನು ರಥದಿಂದಿಳಿದು ಓಡಿದನು. ಅಭಿಮನ್ಯುವಿನ ಗದಾಘಾತಕ್ಕೆ ಗುರುಸುತನ ಸೂತ ತುರಗ ಪಾರ್ಷ್ಣಿಗ್ರಾಹರು ಪುಡಿ ಪುಡಿಯಾದರು. ಅಭಿಮನ್ಯುವು

ಅಲ್ಲಿಂದ ಹಾರಿ, ಸುಬಲದಾ ಯಾದವನಾದ ಕಾಲಿಕನನ್ನು ಮತ್ತು ಎಪ್ಪತ್ತೇಳು ಗಾಂಧಾರ ವೀರರನ್ನು ಸಂಹರಿಸಿದನು. ಹತ್ತು ವಸಾತೀಯರನ್ನು, ಸಪ್ತ ಕೈಕಯ ರಥಿಕರನ್ನು, ಹತ್ತಾನೆಗಳನ್ನು ಕೊಂದು ದೌಶ್ಶಾಸನಿಯ ರಥಕ್ಕೆ ಹಾರಿ, ಅವನ ಕುದುರೆಗಳನ್ನು ಗದೆಯಿಂದ ಹೊಡೆದು ಕೊಂದನು.

ದೌಶ್ಶಾಸನಿಯು ಕ್ರುದ್ಧನಾಗಿ ತಾನೂ ಗದಾಪಾಣಿಯಾಗಿ 'ನಿಲ್ಲು ನಿಲ್ಲು!' ಎಂದು ಸೌಭದ್ರನನ್ನು ಮುತ್ತಿದನು. ಪರಸ್ಪರ ವಧಾಕಾಂಕ್ಷಿಗಳಾದ ವೀರರ ಗದಾಯುದ್ಧವು ಭೀಕರವಾಯಿತು. ಅವರು ಪರಸ್ಪರ ಗದಾಘಾತದಿಂದ ಕೆಳಗುರುಳಿಬಿದ್ದರು. ದೌಶ್ಶಸನ ಸುತನು ಎದ್ದು ಏಳಲಿರುವ ಅಭಿಮನ್ಯುವಿನನ್ನು ತಲೆಯಲ್ಲಿ ಹೊಡೆದು ಕೊಂದು, ತಾನೂ ಉರುಳಿಬಿದ್ದು ಸತ್ತನು. ಇಂತು ಏಕ ವೀರನಾಗಿ ಹೋರಾಡಿ ಅಭಿಮನ್ಯುವು ಬಹುವೀರರಿಗೆ ಸಿಕ್ಕು ಅಧರ್ಮ ನಿಹತನಾದನು. ವ್ಯಾಧರು ಕಡಿದು ಕೆಡಹಿದ ವನಗಜದಂತೆ, ವನವನ್ನು ಸುಟ್ಟು ಆರಿದ ದಾವಾಗ್ನಿಯಂತೆ, ಅಸ್ತಂಗತನಾಗುವ ಸೂರ್ಯನಂತೆ, ಒಣಗಿದ ಸಮುದ್ರದಂತೆ ಭಯಪ್ರದನು, ನಿಸ್ತೇಜನು, ಶಾಂತನು, ಕಳಾಹೀನನು, ಭೀಭತ್ಸನು ಆಗಿ ಬಿದ್ದಿದ್ದ ಅಭಿಮನ್ಯುವಿನನ್ನು ಸುತ್ತುಗಟ್ಟಿ ನಿಂತು ಕೌರವ ವೀರರು ಮುದದಿಂದ ಹಾರಾಡಿ ಸಿಂಹನಾದ ಮಾಡಿ, ಶಂಖಗಳನ್ನೂದಿದರು. ಪಾಂಡವರು ಪರಮ ದುಃಖಪರೀತರಾಗಿ ಕಣ್ಣೀರಿಟ್ಟರು. ಅಂತರಿಕ್ಷದಲ್ಲಿದ್ದ ಸಿದ್ಧಾದಿ ಭೂತಗಳು ಅಂಬರದಿಂದುದುರಿ ಬಿದ್ದ ಚಂದ್ರಮನಂತಿದ್ದ ಅಭಿಮನ್ಯುವಿನನ್ನು ನೋಡಿ ಆರ್ತನಾದ ಮಾಡಿ, 'ಅಕಟಾ ! ಒಬ್ಬ ಕುಮಾರನನ್ನು ಬಹುವೀರರು ಅನ್ಯಾಯವಾಗಿ ಕೊಂದರಲ್ಲ ! ಎಂತಹ ಅಧರ್ಮವಿದು !' ಎಂದು ಉದ್ಗರಿಸಿದರು.

ಮುರಿದ ಚಾಪಗಳು, ಹರಿದೋಡುವ ಹಯಗಳು, ಗಿರಿಗಳಂತೆ ಉರುಳಿಬಿದ್ದಿರುವ ಗಜಗಳು, ರಕ್ತಸಿಕ್ತವಾದ ಖಡ್ಗಗಳು, ಖಂಡಿತ ಹಸ್ತ ಪಾದಗಳು, ಹತ ಪದಾತಿಕ ಬಂಧುಗಳು, ತುಂಬಿ ರಣಭೂಮಿಯು ಭೀಕರವಾಗಿತ್ತು. ಅಭಿಮನ್ಯುವು ನಿಹತನಾದುದನ್ನರಿತು ಧರ್ಮರಾಜನು ದುಃಖಾಕ್ರಾಂತನಾದನು. ಸೈಂಧವನನ್ನು ಗೆದ್ದು ಮುನ್ನುಗ್ಗಿ ಹೋಗುವ ಭೀಮಸೇನನನ್ನು ಹಿಂದಿರುಗಿಸಿ, ಶಿಬಿರವನ್ನು ಸೇರಿದನು. ಕೌರವರೂ ಸೇನಾವಹಾರವನ್ನು ಮಾಡಿ, ಶಿಬಿರವನ್ನು ಸೇರಿದರು.

## ೫. ಷೋಡಶರಾಜಿಕಂ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ರಾಜನ್ ! ಮಹಾವೀರನಾದ ಸೌಭದ್ರನು ಷಡ್ರಥರಿಂದ ಹತನಾದುದನ್ನರಿತು, ರಣ ಸನ್ನಾಹವನ್ನು ಬಿಟ್ಟು, ಕವಚ ಕಾರ್ಮುಕಗಳನ್ನು ಬಚ್ಚಿಟ್ಟು ಪಾಂಡವ ಯೋಧರು ಧರ್ಮರಾಜನ ಸುತ್ತು ಕುಳಿತು ಚಿಂತಿಸಿದರು. ಅಭಿಮನ್ಯುವಿನನ್ನು ನೆನೆದು ಧರ್ಮರಾಜನು ಶೋಕವಿಹ್ವಲನಾದನು. 'ಎಂತಹ ವೀರ್ಯ ! ಎಂತಹ ಶೌರ್ಯ ! ನನಗೆ

ಪ್ರಿಯವಾಗಲೆಂದು, ವ್ಯೂಹವನ್ನು ಭೇದಿಸಿ ಗೋಗಣದಿ ಹೊಕ್ಕ ಕೇಸರಿಯಂತೆ ವಿಹರಿಸಿದ ಅಭಿಮನ್ಯುಕುಮಾರನಿನ್ನಿಲ್ಲವಲ್ಲ! ಹಾ ಕಷ್ಟಂ! ಎಂತೆಂತಹ ಮಹಾರಥರನ್ನು ಹಿಂದಿರುಗಿಸಿದನು! ದುಶ್ಶಾಸನನನ್ನು ಸೋಲಿಸಿ ಓಡಿಸಿದನು! ದ್ರೋಣ ಸೈನ್ಯ ಸಾಗರವನ್ನು ದಾಟಲು ಯತ್ನಿಸಿ, ಎಷ್ಟೋ ವೀರರನ್ನು ಸಂಹರಿಸಿ, ಕೊನೆಗೆ ದೌಶ್ಶಾಸನಿಯ ಗದೆಗೆ ಪ್ರಾಣಗಳನ್ನರ್ಪಿಸಿದನಲ್ಲ! ಸೌಭದ್ರನನ್ನು ಕಳೆದುಕೊಂಡ ನಾನು ಇನ್ನು ಅರ್ಜುನನಿಗೆ ಮುಖವನ್ನೆಂತು ತೋರಿಸಲಿ? ಪ್ರಿಯ ಪುತ್ರನನ್ನು ತೋರೆಂದ ಸುಭದ್ರೆಗೆ ಏನುತ್ತರ ಕೊಡಲಿ? ಹೃಷಿಕೇಶನಿಗೆ 'ಇಷ್ಟು ಜನರಿದ್ದೂ ಅಭಿಮನ್ಯುವಿನನ್ನು ಕಾಪಾಡಲಾರದೇ ಹೋದಿರೇ?' ಎಂದು ಕೇಳಿದಾಗ ಏನು ಸಮಾಧಾನ ನೀಡಲಿ? ಸುಭದ್ರಾ-ರ್ಜುನ-ಕೇಶವರಿಗೆ ಅಪ್ರಿಯವಾಯಿತೆಂದರೆ ಅದು ನನ್ನ ಲೋಭದಿಂದ; ನನ್ನ ಅವಿವೇಕದಿಂದ ಜಯಾಕಾಂಕ್ಷಿಯು, ರಾಜಲೋಭಿಯು ಆಗಿ ಇಂತಹ ಅಕಾರ್ಯವನ್ನು ಮಾಡಿದೆನು. ಲೋಭದಂತಹ ಕೆಟ್ಟ ಗುಣವಿಲ್ಲ. ಮಧುವಿಗಾಸೆಪಟ್ಟು ಕೆಳಗಿರುವ ಪ್ರಪಾತವನ್ನು ಕಾಣದಿರುವ ವ್ಯಾಧನಂತೆ, ಜಯವನ್ನು ಕೋರಿ, ಬಾಲನಾದ ಅಭಿಮನ್ಯುವಿನನ್ನು ಕುರುವ್ಯೂಹ ಪ್ರಪಾತದಲ್ಲಿ ನೂಕಿ ಕೊಂದೆನು. ಭೋಜನ, ಯಾನ, ಶಯನ, ಭೂಷಣ, ವಸನಗಳಿಂದ ಪೋಷಿಸಲ್ಪಡಲರ್ಹನಾದ ಅಭಿಮನ್ಯುವಿನನ್ನು ದ್ರೋಣ, ಕರ್ಣ, ದುರ್ಯೋಧನರಂತಹ ಮಹಾವೀರರೊಡನೆ ಕಾದಲು ಕಳಿಸಿದ ಕಠಿಣಚಿತ್ತನಾದೆನು. ಅಯ್ಯೋ! ನಾನೇ ವ್ಯೂಹವನ್ನು ಹೊಕ್ಕು ಸಾಯಬಾರದಾಗಿತ್ತೇ? ಭಿಭತ್ಸುವಿನನೆಂತು ಸಮಾಧಾನಪಡಿಸಲಿ? ಮತಿಮಂತನು, ಕ್ಷಮಾ ವಿನಯ ರೂಪ ಬಲಾದಿ ಗುಣವಂತನೂ ಆದ ಸೌಭದ್ರನಂತಹ ಕುಮಾರನಿನ್ನೆಲ್ಲಿ ಸಿಗುವನು? ಕಾಲಕೇಯ, ನಿವಾತಕವಚರನ್ನು ಗೆದ್ದ ಸತ್ಯ ಪರಾಕ್ರಮನು, ಮಹೇಂದ್ರ ಸದೃಶನು, ಶರಣಾಗತ ಜನ ರಕ್ಷಾದಕ್ಷನು ಆದ ಅರ್ಜುನ-ಕುಮಾರನನ್ನು ನಾವು ಉಳಿಸಿಕೊಳ್ಳಲಾರದೆ ಹೋದೆವು. ಅವನ ಮೃತಿಯನ್ನು ಕೇಳಿ, ಕೆರಳಿ ಅರ್ಜುನಸಿಂಹವು ಕೌರವ ಶಶಕಗಳನ್ನು ನಾಶಮಾಡದೆ ಬಿಡದು. ಅಂತು ಮಾಡಿ ಅರ್ಜುನನೇ ರಾಜ್ಯವನ್ನಾಳಲಿ! ನನಗೇಕೆ ರಾಜ್ಯ? ನನಗೇಕೆ ಜಯ? ಅಮರಲೋಕವಾಸವೂ ನನಗೆ ಬೇಕಿಲ್ಲ. ಅಪ್ರತಿ ವೀರನಾದ ಅಭಿಮನ್ಯುಕುಮಾರನು ಮೃತನಾದ ಮೇಲೆ ನಾನು ಜೀವಿಸಿ ಏನು ಪ್ರಯೋಜನ?' ಎಂದು ಗೋಳಾಡುವ ಧರ್ಮಜನನ್ನು ಸಂತೈಸಲೆಣಿಸಿ, ಶ್ರೀ ವೇದವ್ಯಾಸರು ಅಲ್ಲಿಗೆ ಬಂದರು.

ಧರ್ಮರಾಜನು ವ್ಯಾಸರನ್ನು ಪೂಜಿಸಿ, ಆಸನದಿ ಕೂಡಿಸಿ, ಕಣ್ಣೀರಿಡುತ್ತಾ 'ದೇವ! ಸೌಭದ್ರನು ನಿಹತನಾದನು. ಬಹುವೀರರು ಒಟ್ಟುಗೂಡಿ, ಅಧರ್ಮಯುದ್ಧದಲ್ಲಿ ಬಾಲಕನನ್ನು ಕೊಂದರು. ನಾನೇ ಅವನನ್ನು ವ್ಯೂಹ ಭೇದನಕ್ಕೆಂದು ಕಳಿಸಿದ ಪಾಪಿಯು. ಸಮಯುದ್ಧದಲ್ಲಿ ಕಡಿದಾಡಿ ಸಾಯುವುದು ಕ್ಷತ್ರಿಯರಿಗೆ ದುಃಖಕರವಲ್ಲ. ಆದರೆ ಕುಮಾರನನ್ನು ಶತ್ರುಗಳು ಅಸಮಯುದ್ಧದಲ್ಲಿ ಕೊಂದು ಕೆಡಹಿರುವರು. ನನಗೆ ಬಹು ದುಃಖವಾಗಿದೆ. ಜೀವಿತವೇ ಬೇಡವೆನಿಸಿದೆ' ಎಂದನು.

ಶ್ರೀವ್ಯಾಸರಿಂತೆಂದರು: 'ಯುಧಿಷ್ಠಿರ ! ನೀನು ದಡ್ಡನಲ್ಲ. ಎಲ್ಲ ಶಾಸ್ತ್ರಗಳನ್ನರಿತ ನಿನಗೆ ಮತ್ತೊಬ್ಬರು ತಿಳಿಸಿಕೊಡಬೇಕಾಗಿಲ್ಲ. ನಿನ್ನಂತಹ ಪ್ರಾಜ್ಞರು ಅನಿವಾರ್ಯವಾದ ಆಪತ್ತಿಗೆ ಶೋಕಿಸುವುದು ತರವಲ್ಲ. ಅಭಿಮನ್ಯುವು ಬಾಲನಾದರೂ ಅಬಾಲನಂತೆ ಕಡಿದಾಡಿ, ವೀರಶತ್ರುಗಳ ಶಿರಗಳನ್ನು ಚೆಂಡಾಡಿ, ವೀರಸ್ವರ್ಗವನ್ನು ಸೂರೆಗೊಂಡಿರುವನು. ಅವನಿಗೇಕೆ ಶೋಕಿಸುವೆ ? ವಿಧಿ ಸಂಕಲ್ಪವೇ ಹಾಗಿರಲು ಯಾರೇನು ಮಾಡುವರು ? ಮೃತ್ಯುವು ಹರಿಸದ ಭೂತವಿಲ್ಲ.'

ಧರ್ಮರಾಜನು, 'ಅಹುದು ! ಮಹಾರಥರು ಸಾವಿರಾರು ಜನರು ತುಲ್ಯಬಲರಿಂದ ನಿಹತರಾಗಿರುವರು. ರಣದಲ್ಲಿ ದುರ್ಜಯರೆನಿಸಿದ್ದ ಮಹಾವೀರರೂ ಸತ್ತಿರುವರು. ಭೀಮಬಲ ವಿಕ್ರಮರಾದ ಭಟರೂ ಸತ್ತಿರುವರು. ಪ್ರಾಣತ್ಯಾಗದ ವಿಷಯದಲ್ಲಿ ಪುರುಷರು ಸ್ವತಂತ್ರರಲ್ಲ. ಆದರೂ ಸತ್ತರು ಎನ್ನುವಾಗ ಅಂತಹ ಸ್ವಾತಂತ್ರ್ಯವು ಇದೆ ಎಂದು ತೋರುವುದು. ಪುರುಷನು ತಾನೇ ಸಾಯುವನೇ ? ಅಥವಾ ಇನ್ನೊಬ್ಬರವನನ್ನು ಕೊಲ್ಲುವರೇ ? ಮೃತ್ಯುವೆಂದರೇನು ? ಯಾರಿಗೆ ಮೃತ್ಯುವು ಬರುವುದು ? ಎಂತು ?' ಎಂದು ಕೇಳಿದನು.

ಭಗವಾನ್ ವೇದವ್ಯಾಸರಿಂತೆಂದರು : 'ಧರ್ಮರಾಜ ! ನಿನಗೊಂದು ಇತಿಹಾಸವನ್ನರುಹುವೆನು, ಕೇಳು ! ಅದರಿಂದ ನಿನ್ನ ಸ್ನೇಹ ಬಂಧನವು ಕಡಿದು, ನೀನು ಸರ್ವ ಶೋಕಮುಕ್ತನಾಗುವೆ ! ವೇದಾಧ್ಯಯನದಂತೆ ಪವಿತ್ರವು, ಆಯುಃಕೀರ್ತಿ ಯಶೋವರ್ಧನವು, ಪಾಪಶೋಕ ಮರ್ದನವೂ ಆದ ಅಕಂಪನ - ನಾರದ ಸಂವಾದ ರೂಪ ಮೃತ್ಯು ಕಥೆಯನ್ನು ಪೇಳುವೆನು.

ಪೂರ್ವದಲ್ಲಿ ಅಕಂಪನನೆಂಬ ರಾಜನಿದ್ದನು. ಅವನು ಶತ್ರುಗಳೊಡನೆ ಹೋರಾಡಿ ಪರಾಜಿತನಾದನು. ಆ ರಣದಲ್ಲಿ ಹರಿ ಎಂಬ ಅವನ ಮಗನು ಶತ್ರು ನಿಹತನಾದನು. ಶ್ರೀಮಂತನು, ಕೃತಾಸ್ತ್ರನು, ಶಕ್ರಸದೃಶಬಲನು, ನಾರಾಯಣ ಸಮಶೀಲನು ಆದ ನಂದನನ ಮೃತಿಗೆ ನೊಂದು, ಅಕಂಪನನು ಮುಂದಿನ ಕಾರ್ಯಗಳನ್ನು ಮಾಡಿ, ಅಹೋರಾತ್ರವು ಅವನ ಚಿಂತೆಯಲ್ಲೇ ಕಾಲ ಕಳೆದನು. ಅವನ ಶೋಕವನ್ನು ನಿವಾರಿಸಲೆಂಬಂತೆ ನಾರದನು ಅವನ ಮನೆಗೆ ಬಂದನು. ರಾಜನು ಋಷಿವರನನ್ನು ಪೂಜಿಸಿ, ತನ್ನ ದುಃಖವನ್ನು ಅವನ ಮುಂದೆ ತೋಡಿಕೊಂಡು ಅತ್ತನು. 'ಮೃತ್ಯುವೆಂದರಾರು ? ಅದೆಂತು ಬರುವುದು ?' ಎಂದು ಕೇಳಿದ ರಾಜನಿಗೆ ನಾರದನಿಂತೆಂದನು:

'ರಾಜನ್ ! ಯಥಾ ಶ್ರುತವೂ ಯಥಾವೃತ್ತವೂ ಆದ ಮೃತ್ಯು ದೇವತಾಖ್ಯಾನವನ್ನು ಹೇಳುವೆನು. ಆದಿಸರ್ಗದಲ್ಲಿ ಬ್ರಹ್ಮದೇವನು ಪ್ರಜರನ್ನು ಸೃಜಿಸಿದನು. ಆಗ ಮೃತ್ಯುವಿದ್ದಿಲ್ಲ. ಸೃಷ್ಟರಾದ ಪ್ರಜರು ಮೃತರಾಗದೆ ಜಗತ್ತು ಜನಪೂರ್ಣವಾಯಿತು. ಭೂದೇವಿಯು ಭಾರವನ್ನು ಸಹಿಸಲಾರದೆ ಬ್ರಹ್ಮನಿಗೆ ಮೊರೆಯಿಟ್ಟಳು. ಸಂಹಾರವಿಧಿಯನ್ನು ಚಿಂತಿಸುವ ಬ್ರಹ್ಮದೇವನ ಇಂದ್ರಿಯಗಳಿಂದ ಭಯಂಕರ ದಹನನು ಪುಟ್ಟಿ, ಕ್ರೋಧನೆನಿಸಿ

ಜಗವನ್ನೆಲ್ಲ ಸುಡತೊಡಗಿದನು. ಅದನ್ನು ಕಂಡು ಭೂತನಾಥನಾದ ಮಹಾದೇವನು ಕರುಣಾಕಾತರನಾಗಿ ಬ್ರಹ್ಮನಿಗೆ ಶರಣುಬಂದನು. 'ಏನು ಮಾಡಲಿ! ನನ್ನ ಕಾಮದಿಂದ ಪುಟ್ಟಿಬಂದ ನಿನಗೆ ಪ್ರಿಯವೆಂತಾಗುವುದು?' ಎಂದ ಬ್ರಹ್ಮನಿಗೆ ರುದ್ರನು 'ಪ್ರಭೋ! ನಿನ್ನಿಂದ ಸೃಷ್ಟರಾಗಿ ಲೋಕಸಂತಾನ ವಿಸ್ತರಣ ಕಾರ್ಯದಲ್ಲಿ ನಿರತರಾಗಿರುವೆವು. ಈಗ ನೀನೇ ಲೋಕವನ್ನು ಕ್ರೋಧದಿಂದ ನಾಶಪಡಿಸುವುದು ಸರಿಯೇ? ಪ್ರಜರು ಸುಟ್ಟು ನಾಶವಾಗುತ್ತಿರುವರು. ಅದನ್ನು ಕಂಡು ಕರುಣೆ ಪುಟ್ಟಿ ಬಂದಿರುವೆನು' ಎಂದನು. ಬ್ರಹ್ಮನು, 'ಪುತ್ರ! ಸಂಹಾರಕಾರ್ಯದಲ್ಲಿ ನಾನಾಗಿ ತೊಡಗಿಲ್ಲ. ಭೂದೇವಿಯ ಪ್ರಾರ್ಥನೆಯಿಂದ ಸಂಹಾರವನ್ನು ಚಿಂತಿಸುವ ನನ್ನಿಂದ ಈ ಕ್ರೋಧಾಗ್ನಿಯು ಜನಿಸಿ ಬಂದಿದೆ' ಎಂದನು. ರುದ್ರನು, 'ತಂದೇ! ಸಂಹಾರಮಾಡಲೆಂದು ಸಿಟ್ಟಾಗಬೇಡ! ಸ್ಥಾವರ ಜಂಗಮ ಪ್ರಜರೆಲ್ಲರು ನಷ್ಟರಾಗುವ ಕೋಪಜ್ವಾಲೆಯನ್ನು ಉಪಸಂಹರಿಸು! ಜ್ಞಾನದಿಂದ ಸಂಹಾರ ಕಾರ್ಯವಾಗಲಿ! ಹಿಂದಿನ ಜಗತ್ತು ಇಂದಿನ ಜಗತ್ತು ಮುಂದಿನ ಜಗತ್ತು ಎಂಬ ತ್ರಿಕಾಲೀನವಾದ ಜಗವು ಉಳಿಯಲಿ. ನಿರನ್ವಯೋಚ್ಛೇದವನ್ನು ಮಾಡಲು ಒಳಿತಲ್ಲ. ಜಗನ್ನಾಥ! ಜಗವು ಸರ್ವನಾಶವಾಗದಿರಲಿ! ಪ್ರಸನ್ನನಾಗು!' ಎಂದು ಬೇಡಿಕೊಂಡನು.

ಬ್ರಹ್ಮದೇವನು ಪ್ರಜಾಹಿತವನ್ನೆಣಿಸಿ, ಕ್ರೋಧಾಗ್ನಿಯನ್ನು ನುಂಗಿಬಿಟ್ಟನು. ಆಗ ಆತನ ಇಂದ್ರಿಯಗಳಿಂದ ಸುಂದರಿ ಓರ್ವಳು ಜನಿಸಿಬಂದಳು. ಆಕೆಯು ಕಪ್ಪಾಗಿದ್ದಳು. ಕೇಶಗಳು ಕೆಂಪಾಗಿ, ಅಧರವು ರಕ್ತ ತೀಕ್ಷ್ಣವಾಗಿತ್ತು. ಆಕೆ ಅವರೀರ್ವರ ದಕ್ಷಿಣ ಪಾರ್ಶ್ವದಲ್ಲಿ ನಿಂತಳು. ಬ್ರಹ್ಮದೇವನು 'ಮೃತ್ಯೋ!' ಎಂದು ಆಕೆಯನ್ನು ಕರೆದನು, 'ಮೃತ್ಯೋ! ನನ್ನ ಸಂಹಾರೇಚ್ಛೆಯಿಂದ ಬಂದಿರುವೆ! ಕೊಲ್ಲು ಜಡ ಪಂಡಿತರೆನ್ನದೆ ಎಲ್ಲ ಭೂತಗಳನ್ನು! ನನ್ನಾಜ್ಞೆಯನ್ನು ಪಾಲಿಸು! ನಿನಗೆ ಶ್ರೇಯಸ್ಸಾಗುವುದು. ಎಂದಾಜ್ಞಾಪಿಸಿದ ಬ್ರಹ್ಮದೇವನಿಗೆ ಶಿರಬಾಗಿ ನಮಿಸಿ, ಮೃತ್ಯುದೇವಿಯು ಲತೆಯಂತೆ ಬಾಗಿನಿಂತು, 'ದೇವ! ನಿನ್ನಂತಹ ಸೃಷ್ಟಿಕರ್ತನಿಂದ ಜನಿಸಿ ಬಂದೆನು! ಕ್ರೂರ ಸಂಹಾರ ಕಾರ್ಯವೆನ್ನಿಂದಾಗದು. ತಿಳಿದೂ ತಿಳಿದೂ ಅಧರ್ಮವನ್ನೆಂತು ಮಾಡಲಿ! ಪ್ರಿಯರಾದ ಪುತ್ರಕಳತ್ರ ಮಿತ್ರಾದಿಗಳನ್ನಗಲಿಸಿ ಕೊಂದರೆ, ಜನರು ನನ್ನನ್ನು ನಿಂದಿಸುವರು. ಅವರ ರೋದನವನ್ನು ನಾನು ಕೇಳಲಾರೆನು. ನನ್ನನ್ನು ಯಮನ ಮನೆಗೆ ಕಳಿಸಬೇಡ! ಆ ಕೆಲಸವೆನಗೆ ಬೇಡ. ಧೇನುಕಾಶ್ರಮದಲ್ಲಿ ತಪವನ್ನು ಮಾಡುವೆನು. ಅನುಗ್ರಹಿಸು!' ಎಂದು ಬೇಡಿದಳು. ಬ್ರಹ್ಮದೇವನು 'ಸರಿ ಹೋಗು! ತಪವನ್ನು ಮಾಡಿ ಬಾ! ನನ್ನ ಸಂಕಲ್ಪವೆಂದಿಗೂ ಸುಳ್ಳಾಗದು. ಸಂಹಾರವನ್ನು ಮಾಡಿದರೂ ಅನಿಂದಿತಳಾಗುವೆ!' ಎಂದನು. ಮೃತ್ಯುವು ಅಲ್ಲಿಂದ ತೆರಳಿ, ಧೇನುಕಾಶ್ರಮವನ್ನು ಸೇರಿದಳು. ಅಲ್ಲಿ ಏಕಪಾದಳಾಗಿ ನಿಂತು, ಆಕೆ ಹದಿನಾರು ಪದ್ಮ (ಶತಕೋಟಿ) ಗಳ ಕಾಲ ತೀವ್ರ ತಪವನ್ನು ಮಾಡಿದಳು. ಅಲಕನಂದಾ ತೀರದಲ್ಲಿ ಎಂಟು ಸಾವಿರ ವರ್ಷ, ಕೌಶಿಕೀನದಿಯಲ್ಲಿ ವಾಯು ಜಲಾಹಾರಳಾಗಿ, ಒಂದು ಕೋಟಿ ವರ್ಷ,

ಪಂಚಗಂಗೆಯಲ್ಲಿ ಗಂಗಾತೀರದಲ್ಲಿ ಹಿಮಪರ್ವತ ಶಿಖರದಲ್ಲಿ ಪುಷ್ಕರ ಗೋಕರ್ಣ ನೈಮಿಷಾದಿ ಕ್ಷೇತ್ರಗಳಲ್ಲಿ ಬ್ರಹ್ಮದೇವನನ್ನು ಕುರಿತು ಬಹುಕಾಲ ತಪವನ್ನು ಮಾಡಿದಳು; ಬ್ರಹ್ಮನು ಪ್ರಸನ್ನನಾದನು. 'ಮೃತ್ಯೋ ! ಏಕೀ ತೀವ್ರತಪ ? ಸಂಹಾರ ಕಾರ್ಯವು ನಿನಗೆ ತಪ್ಪಿದ್ದಲ್ಲ' ಎಂದನು. ಮೃತ್ಯುವಿಂತೆಂದಳು: 'ದೇವ ! ಸ್ವಸ್ಥರಾಗಿರುವ ಪ್ರಜರನ್ನು ಕೊಂದು ಅಳಿಸಲಾರೆನು, ಅಧರ್ಮಕ್ಕಂಜುವೆನು. ನನಗೆ ಅಭಯವನ್ನು ಕೊಡು !'

ವಿಧಿಯು 'ಮೃತ್ಯೋ ! ನಿನಗೆ ಅಧರ್ಮವು ಸೋಂಕದಂತೆ ವರವನ್ನಿತ್ತಿರುವೆನು. ನನ್ನ ಮಾತು ಸುಳ್ಳಾಗದು. ಕೊಲ್ಲು ಪ್ರಜರನ್ನು ! ಸನಾತನ ಧರ್ಮ, ಧರ್ಮಪ್ರಭು ನಾರಾಯಣನ ಆಜ್ಞೆ ಇದು. ಮರಣವಿಲ್ಲದಿರೆ ಜಗವು ದುರ್ಭರವಾದೀತು ! ಜೀವನವು ದುಸ್ಸಹವಾದೀತು ! ಜನರು ಮಾಡುವ ರಾಗದ್ವೇಷಗಳಿಂದ ಸಾಯುವರು. ಅಲ್ಲಿ ನೀನು ನಿಮಿತ್ತ ಮಾತ್ರ. ನಿನಗೆ ಯಮನು, ಕಾಲನು, ವ್ಯಾಧಿಗಳೂ ಸಹಾಯಕರಾಗುವರು. ಜನರು ವ್ಯಾಧಿಯ ಹೆಸರು ಹೇಳುವವರಾಗಲಿ, ನಿನ್ನ ಹೆಸರನ್ನಲ್ಲ, ನೀನು ಧರ್ಮಪಾಲಕಳಾಗು ! ನಿನಗೆ ಪಾಪವಿಲ್ಲ' ಎಂದು ಹೇಳಿದನು. ಮೃತ್ಯುವು 'ಲೋಭ, ಕ್ರೋಧ, ಅಸೂಯಾ, ಈರ್ಷಾ, ದ್ರೋಹ, ಮೋಹ, ನಿರ್ಲಜ್ಜಾ ಪಾರುಷ್ಯ, ಹಿಂಸಾ, ಹಸಿವೆ, ನೀರಡಿಕೆಗಳೆಂಬ ನಿಮಿತ್ತಗಳಿಂದ ಕೂಡಿ ಬ್ರಹ್ಮದೇವನ ಆಜ್ಞೆಯನ್ನು ನಿರ್ವಹಿಸಿದಳು. ಭೂಭಾರವು ಇಳಿಯಿತು. ಇಂದ್ರಿಯ ದೇವತೆಗಳು ಕೂಡ ಜೀವರಿಂದ ಶರೀರವನ್ನು ಬಿಟ್ಟು ಮತ್ತೊಂದು ಶರೀರ ಬಂದಾಗ ಜೀವರಿಂದ ಕೂಡಿ ಅಲ್ಲಿ ಪ್ರವೇಶಿಸುವರು. ಜೀವರಿಗೆ ಮೃತ್ಯುವಿಲ್ಲ, ಶರೀರಗಳಿಗೆ ವ್ಯಾಧ್ಯಾದಿ ನಿಮಿತ್ತದಿಂದ ನಾಶವೇ ಮೃತ್ಯುವೆನಿಸುವುದು. ಮುಖ್ಯಪ್ರಾಣನೊಬ್ಬನು ಅಮೃತನು. ಅವನು ವಾಸುದೇವಾಶ್ರಯನಾಗಿ ಮೃತ್ಯುರಹಿತನಾಗಿರುವನು. ಅವನಿದ್ದರೆ ಶರೀರ ನಿಲ್ಲುವುದು. ಅವನು ಬಿಟ್ಟರೆ ಯಾರಿದ್ದರೂ ಶರೀರ ನಿಲ್ಲದು, ಅನಂತತೇಜನು, ಜೀವೋತ್ತಮನು ಭೀಮನಾದನು. ಮಹಾಭಾಗವತನು ಪ್ರಾಣಗಳಿಗೆ ಪ್ರಾಣಭೂತನು ಆದ ಮುಖ್ಯಪ್ರಾಣನಿಂದ ಶರೀರ ಪ್ರವೇಶೋತ್ಕ್ರಮಣಗಳನ್ನು ಜೀವರು ಹೊಂದುತ್ತಿರುವರು. ಕೊನೆಗೆ ಪ್ರಳಯಕಾಲದಲ್ಲಿ ಎಲ್ಲರೂ ಶರೀರಗಳನ್ನು ಬಿಟ್ಟು ಮೃತ್ಯುವಿನಿಂದ ಶರೀರ ವಿಯೋಜನವನ್ನು ಹೊಂದುವರು. ಮೃತ್ಯುವು ದೈವೇಚ್ಛಾಪ್ರಾಪ್ತವಾಗಿದೆ. ದಂಡಪಾಣಿಯಾಗಿ ಕೊಲ್ಲದೆ, ಅವರವರ ಕರ್ಮಾನುಸಾರವಾಗಿ ಶರೀರಗಳನ್ನು ಬಿಡಿಸುವ ಮೃತ್ಯುವು ಅನಿವಾರ್ಯವಾಗಿದೆ. ಲೋಕಕ್ಷೇಮಕರವೂ ಆಗಿದೆ. ಇಂತು ತಿಳಿದು ಶೋಕವನ್ನು ಬಿಡು ! ವಿಧಿಗೆ ತಲೆಬಾಗು !'

ಇಂತು ನುಡಿದ ನಾರದನ ಮಾತನ್ನಾಲಿಸಿ, ಅಕಂಪನನು ಶೋಕವನ್ನು ಬಿಟ್ಟು ಕೃತಾರ್ಥನಾದನು. ಧರ್ಮರಾಜ ! ಆಯುಃಪುಣ್ಯಯಶೋಧನ ಕಾರಣವಾದ ಈ ಆಖ್ಯಾನವನ್ನು ನಿನಗರುಹಿದೆನು. ಅಭಿಮನ್ಯುವು ಖಡ್ಗ ಗದಾ, ಶಕ್ತಿ ಧನುರ್ಬಾಣ, ಚಕ್ರಗಳಿಂದ ಪರಾಕ್ರಮಿಸಿ, ಶತ್ರುಗಳನ್ನು ಸಂಹರಿಸಿ, ವೀರಸ್ವರ್ಗದಿ ಸೋಮಸುತನಾಗಿ

ಇರುವನು. ಅವನು ಬುಧಾಂಶವೆಂದು ತಿಳಿ ! ಧೈರ್ಯವನ್ನು ತಾಳು ! ಅಪ್ರಮತ್ತನಾಗು! ರಣ ಸನ್ನದ್ಧನಾಗು ! ಬಿಡು ಶೋಕವನ್ನು ! " ಇಂತು ನುಡಿದ ದ್ವೈಪಾಯನರಿಗೆ ಧರ್ಮಜನಿಂತೆಂದನು:

'ಭಗವನ್ ! ಗುರುಗಳಿಂದ ಜ್ಞಾನ. ಗುರುಗಳಿಂದ ಸರ್ವ ಶ್ರೇಯಸ್ಸು ! ಪೂರ್ವ ರಾಜರ್ಷಿಗಳ ಕಥೆಗಳಿಂದ ನಮ್ಮನ್ನು ಸಾಂತ್ವನಗೊಳಿಸು ! ದುಃಖವಶರಾದವರು ದುಃಖಾಧಿಕ್ಯರನ್ನು ನೋಡಿ ಧೈರ್ಯವನ್ನು ತಾಳಬೇಕಂತೆ.' ಧರ್ಮರಾಜನಿಗೆ ಶ್ರೀವ್ಯಾಸರು ಷೋಡಶರಾಜರ ಕಥೆಗಳನ್ನು ಪೇಳಿದರು.

'ಹಿಂದೆ ಶ್ವೈಬ್ಯನ ಮಗನಾದ ಸೃಂಜಯನೆಂಬ ಮಹಾರಾಜನ ಮನೆಗೆ ಪರ್ವತ-ನಾರದರು ಬಂದರು. ಬಂದ ಋಷಿಗಳಿಗೆ ಸೃಂಜಯನು ವಿಧಿವಿಹಿತವಾದ ಸತ್ಕಾರವನ್ನು ಮಾಡಿದನು. ಅವರು ಅವನ ಮನೆಯಲ್ಲಿ ಕೆಲದಿನವಿದ್ದರು. ಒಂದು ದಿನ ಸೃಂಜಯನು ಮುನಿದ್ವಯರಿಂದ ಕೂಡಿ ಮಾತನಾಡುತ್ತಿರುವಾಗ, ಅವನ ಮಗಳು ಬಂದು, ತಂದೆಗೆ ವಂದಿಸಿ, ಕೂತಳು. ಪರ್ವತನು ಅವಳನ್ನು ನೋಡಿ, 'ಸೃಂಜಯ ! ಯಾರಿವಳು ? ಸರ್ವಲಕ್ಷಣ ಸಂಪನ್ನಳಾಗಿರುವ ಇವಳೇನು ಸೂರ್ಯಪ್ರಭೆಯೋ ? ಚಂದ್ರಕಾಂತಿಯೋ ?' ಎಂದು ರಾಜನನ್ನು ಕೇಳಿದನು. ಸೃಂಜಯನು 'ನನ್ನ ಮಗಳೆ'ಂದನು, ತತ್‌ಕ್ಷಣವೇ ನಾರದನು 'ರಾಜನ್ ! ನಿನಗೆ ಶ್ರೇಯವಾಗಬೇಕಿದ್ದರೆ, ಇವಳನ್ನು ನನಗೆ ಮದುವೆಮಾಡಿ ಕೊಡು !' ಎಂದನು. ಸೃಂಜಯನು 'ಹಾಗೇ ಆಗಲಿ' ಎಂದನು. ಆಗ ಪರ್ವತನು ಸಿಟ್ಟಾಗಿ ನಾರದನನ್ನು ನೋಡಿ, 'ಮನಸ್ಸಿನಿಂದ ವರಿಸಿದ್ದ ನನ್ನನ್ನು ತಿರಸ್ಕರಿಸಿ, ಮತ್ತೆ ಮಾನಿನಿಯನ್ನು ವರಿಸಿದೆ. ಮರ್ತ್ಯವನಿತೆಯನ್ನು ಬೇಡಿದೆ ! ಆದುದರಿಂದ ನೀನು ಸ್ವೇಚ್ಛೆಯಾಗಿ ಸ್ವರ್ಗವನ್ನು ಸೇರಲು ಶಕ್ತನಾಗದಿರು !' ಎಂದು ಶಾಪವನ್ನಿತ್ತನು. ನಾರದನು 'ಮನೋವರಣ, ವಾಗ್ದಾನ, ಬುದ್ಧಿ ಸಮ್ಮತಿ, ಬಂಧು ಸಂಭಾಷಣ, ಉದಕಧಾರಾ, ಪಾಣಿಗ್ರಹಣ, ಸಪ್ತಪದಿಗಳೆಂಬ ಏಳು ವರಣ ಲಕ್ಷಣಗಳು ಪೂರ್ಣವಾದರೆ ಆಗ ಮಂತ್ರಪೂತ ಸಂಸ್ಕಾರವನ್ನು ಹೊಂದಿದ ಕನ್ಯೆಯು ಭಾರ್ಯೆ ಎನಿಸುವಳು. ಇಂತಿರುವಾಗ ಇವಳನ್ನು ನಾನು ವರಿಸಿದ್ದು ತಪ್ಪಲ್ಲ. ಸುಮ್ಮನೆ ಶಾಪವನ್ನಿತ್ತ ನೀನೂ ಸ್ವರ್ಗವನ್ನು ಸೇರಲು ಅನರ್ಹನಾಗು' ಎಂದು ಪ್ರತಿ ಶಾಪವನ್ನಿತ್ತನು.

ಕೆಲಕಾಲ ನಡೆಯಿತು. ಸೃಂಜಯನು ಪುತ್ರಕಾಮನಾಗಿ ನಾರದಾದಿ ವಿಪ್ರರ್ಷಿಗಳಿಂದ ಕೂಡಿ ಅನೇಕ ಯಾಗಾದಿ ಸತ್ಕಾರ್ಯಗಳನ್ನು ಮಾಡಿದನು. ವಿಪ್ರೇಂದ್ರರು ಅವನ ಆದರಾತಿಥ್ಯ ದಕ್ಷಿಣಾದಿಗಳಿಗೆ ಪ್ರೀತರಾಗಿ ಅವನಿಗೆ ಪುತ್ರವರವನ್ನೀಯುವಂತೆ ನಾರದನನ್ನು ಪ್ರಾರ್ಥಿಸಿದರು. ಅದಕ್ಕೊಪ್ಪಿ ನಾರದನು ಸೃಂಜಯನನ್ನು ಕರೆದು 'ನಿನಗೆಂತಹ ಮಗನಾಗಬೇಕು ಬೇಡು !' ಎಂದನು. ಸೃಂಜಯನು 'ಮಹರ್ಷೀ ! ನನ್ನ ಮಗನು ಗುಣವಂತನಿರಬೇಕು. ತೇಜಃಕೀರ್ತಿಶಾಲಿ ಆಗಬೇಕು. ಅವನ ಮೂತ್ರಪುರೀಷ ಗಂಡೂಷ ಸ್ವೇದಾದಿಗಳೆಲ್ಲವು

ಕಾಂಚನಮಯವಾಗಿರಬೇಕು ! ' ಎಂದು ಬೇಡಿದನು. ನಾರದನು ಅವನ ದುರಾಶೆಗೆ ಆಶ್ಚರ್ಯಪಟ್ಟು 'ಆಗಲಿ' ಎಂದು ಆ ವರವನ್ನಿತ್ತನು.

ಸೃಂಜಯನಿಗೆ ಮಗನಾದನು. ಅವನ ಮೂತ್ರ ಪುರೀಷ ಗಂಡೂಷಾದಿಗಳೆಲ್ಲವೂ ಬಂಗಾರವಾದವು. ಅವನಿಗೆ ಸುವರ್ಣಷ್ಠೀವಿ ಎಂದು ಸಾರ್ಥಕವಾದ ಹೆಸರನ್ನಿಟ್ಟು ರಾಜನು ಅವನನ್ನು ಬೆಳೆಸಿದಂತೆ, ಅವನ ಮನೆಯೇ ಬಂಗಾರವಾಗಿ ಬೆಳೆಯಿತು. ಗೃಹ ಪ್ರಾಕಾರ ದುರ್ಗಗಳನ್ನು, ಶಯನಾಸನ ಪಾನಭಾಜನಗಳನ್ನು, ಸರ್ವೋಪಕರಣಗಳನ್ನು ಬಂಗಾರದಿಂದ ಮಾಡಿಸಿ, ಸೃಂಜಯನು ಆನಂದದಿಂದಿದ್ದನು. ಕೆಲಕಳ್ಳರು ಬಾಲಕನ ಗಂಡೂಷವು ಸುವರ್ಣವಾದುದನ್ನು ಕಂಡರು, ಅವನು ಸುವರ್ಣ ನಿಧಿಯಾಗಿರುವನೆಂದು ಭ್ರಮಿಸಿ, ಅವರು ಅವನನ್ನು ಅಪಹರಿಸಿದರು. ಅವನ ಹೊಟ್ಟೆಯನ್ನು ಕೊಯ್ದು ಅಲ್ಲಿ ಬಂಗಾರವನ್ನು ಕಾಣದೆ, ಅವರು ಜಗಳವಾಡಿ ಪರಸ್ಪರ ಕಡಿದಾಡಿ ಸತ್ತರು. ಬಾಲಕನ ಮೃತಿಯಿಂದ ವರವೂ ನಷ್ಟವಾಯಿತು. ಕಳ್ಳರೂ ನರಕದ ಪಾಲಾದರು.

ಸುವರ್ಣಷ್ಠೀವಿಯ ಮೃತಿಯನ್ನು ಕಂಡು, ಸೃಂಜಯನು ದುಃಖಾರ್ತನಾಗಿ ವಿಲಪಿಸಿದನು. ಆಗ ನಾರದನು ಅವನನ್ನು ಸೇರ ಬಂದು ಇಂತೆಂದನು: 'ಸೃಂಜಯ ! ಕಾಮದಾಸನಾಗಿ ತೃಪ್ತಿಯನ್ನು ಕಾಣದೆ, ಕೊನೆಗೆ ನೀನೂ ಒಂದು ದಿನ ಸಾಯುವೆ ! ಯಾರ ಮನೆಯಲ್ಲಿ ನಾವಿರುವೆವೋ, ಅವನು ಆವಿಕ್ಷಿತ ಮರುತ್ತನೆಂದು ಖ್ಯಾತನಾಗಿದ್ದನು. ಅವನ ವಂಶದಲ್ಲಿ ಜನಿಸಿರುವೆ ! ಅವನು ಬಹುಯಜ್ವನೆನಿಸಿದನು. ಅವನ ಯಜ್ಞಸಾಧನಗಳೆಲ್ಲವೂ ಕನಕರಚಿತವಾಗಿದ್ದವು. ಬೃಹಸ್ಪತಿ ಪ್ರಮುಖ ವೃಂದಾರಕರು ಅವನ ಯಜ್ಞದ ಪೂರ್ಣಾಹುತಿ ಕಾಲದಲ್ಲಿ ಸನ್ನಿಹಿತರಾಗಿದ್ದರು. ವಿಪ್ರರು ಮೃಷ್ಟಾನ್ನಗಳನ್ನುಂಡು, ಕೊಟ್ಟ ದಕ್ಷಿಣೆಗಳನ್ನು ಹೊರಲಾರದೇ ಬಿಟ್ಟು ಹೋದರು. ವೇದ ಪಾರಂಗತರಾದ ವಿಪ್ರರಿಗೆ ಅವನು ಪಾಸಾಭರಣ ವಸನ ಭೋಜನಗಳನ್ನಿತ್ತು ಸಂತೋಷಪಡಿಸಿದನು. ವಿಶ್ವೇದೇವತೆಗಳೆಲ್ಲರು ಅವನ ಸಭಾಸದರಾಗಿದ್ದರು; . ದೇವತೆಗಳು ಅನ್ನ ಪರಿವೇಷಣಕರ್ಮ ನಿರತರಾದರು. ಕೊಟ್ಟ ಹವಿಸ್ಸಿನಿಂದ ಪ್ರೀತರಾಗಿ ಇಂದ್ರಾದಿ ದೇವತೆಗಳು ಅವನ ಸ್ನೇಹಿತರಂತಾದರು. ಅಂತಹ ಆವಿಕ್ಷಿತನು ಪುಣ್ಯಲಬ್ಧವಾದ ಅಕ್ಷಯಲೋಕಗಳನ್ನು ಹೊಂದಿರುವನು. ಅಂತಹ ಮಹಾರಾಜನೇ ಮೃತನಾದನು. ದಾನಸಹಿತವಿತ್ತ, ವಿನಯಸಹಿತ ಜ್ಞಾನ, ಕ್ಷಮಾಸಹಿತ ಶೌರ್ಯ, ವೈರಾಗ್ಯಸಹಿತ ಭೋಗವೆಂಬ ಚತುರ್ಭದ್ರಗಳಿಂದ ನಿನಕಿಂತ ಬಹುಶ್ರೇಷ್ಠವಾದ ಮರುತ್ತನೇ ಮೃತನಾದನು. ಯಜ್ಞ ಮಾಡದ, ದಕ್ಷಿಣೆಯನ್ನೀಯದ ನಿನ್ನ ಪುತ್ರನ ಮೃತಿಗಾಗಿ ನೀನೇಕೆ ಶೋಕಿಸುವೆ ?

ಸುಹೋತ್ರನೆಂಬ ರಾಜನಿದ್ದನು; ಈಗಿಲ್ಲ. ಅವನು ಅಮರರಿಗೂ ದುರ್ಜಯನಾಗಿದ್ದನು. ಪ್ರಜಾಪಾಲನ, ಧರ್ಮರಕ್ಷಣ, ದಾನ ದುಷ್ಟ ಶಿಕ್ಷೆಗಳೇ ಕ್ಷತ್ರಿಯ ಧರ್ಮಗಳೆಂದು ವಿಪ್ರವರರಿಂದ ತಿಳಿದು, ಅವನು ಧರ್ಮದಿಂದ ಸಂಪಾದಿಸಿದ ಧನವನ್ನು ದೇವ ಬ್ರಾಹ್ಮಣರನ್ನು ಸಂತೋಷಪಡಿಸಲು ವಿನಿಯೋಗಿಸಿದನು. ವಿಪ್ರರಿಗೆ

ಕನಕ ಖನಿಗಳನ್ನು ಕೊಟ್ಟನು. ಅಶ್ವಮೇಧ ರಾಜಸೂಯಗಳನ್ನು ಮಾಡಿದನು. ಸೃಂಜಯ ! ಅಂತಹ ಸುಹೋತ್ರನು ನಿನ್ನಕಿಂತ ಚತುರ್ಭದ್ರತರನು. ಅವನೇ ಮೃತನಾದನೆಂದ ಮೇಲೆ ನಿನ್ನ ಮಗನಿಗೇಕೆ ಅಳುವೆ ?

ಹಿಂದೆ ಪೌರವನೆಂಬ ರಾಜನಿದ್ದನು. ಅವನು ವಿಪ್ರರಿಗೆ ಹತ್ತು ಲಕ್ಷ ಧವಳ ಧೇನುಗಳನ್ನಿತ್ತನು. ಆ ರಾಜರ್ಷಿಯು ಅಶ್ವಮೇಧ ಯಜ್ಞದಲ್ಲಿ ಬಂದಿದ್ದ ವೇದ ವಿದ್ಯಾ ವ್ರತಸ್ನಾತಕರಿಗೆ ಲಕ್ಷಣವತಿಯರಾದ ಲಕ್ಷ ಕನ್ಯೆಯರನ್ನು ದಾನಮಾಡಿ ಗೋಸಹಸ್ರವನ್ನಿತ್ತು ಕಳಿಸಿದನು. ಶಿಕ್ಷಾಕ್ಷರ ವಿಧಿಜ್ಞರು, ಶಾಸ್ತ್ರಜ್ಞಾನ ಸಂಪನ್ನರು ಆದ ವಿಪ್ರರು ಹತ್ತು ಸಾವಿರ ಸಂಖ್ಯಾತರು ಭೋಜನಾಚ್ಛಾದನಗಳಿಂದ ಸತ್ಕೃತರಾದರು. ಹೇಮಶೃಂಗ, ರೂಪ್ಯಖುರಗಳನ್ನಿಟ್ಟು ಲಕ್ಷ ಧೇನುಗಳನ್ನು ಸವತ್ಸರವಾಗಿ ದಾನಮಾಡಿದ ಅಂಗದೇಶದ ಪೌರವರಾಜನು ನಿನ್ನಕಿಂತ ಚತುರ್ಭದ್ರತರನು. ಅವನೇ ಮೃತನಾದನೆಂದರೆ, ಯಜ್ಞ ಮಾಡದ, ದಕ್ಷಿಣೆ ನೀಡದ ನಿನ್ನ ಸುತನಿಗಾಗಿ ಏಕೆ ರೋದಿಸುವೆ ?

ಔಶೀನರ ಶಿಬಿರಾಜನು ಪೃಥಿವಿಯನ್ನೆಲ್ಲ ಗೆದ್ದನು. ಮೂರ್ಧಾಭಿಷಿಕ್ತರಾದ ರಾಜನ್ಯರಿಗೆ ಅವನು ಸಮ್ಮತನಾಗಿದ್ದನು. ನಿಷ್ಕಕೋಟಿಯನ್ನು ದಕ್ಷಿಣೆಯಾಗಿಟ್ಟು ಅಶ್ವಮೇಧವನ್ನು ಮಾಡಿದನು. ವರ್ಷಧಾರಾ ಬಿಂದುಗಳೆಷ್ಟೋ, ಆಕಾಶದಿ ಮಿನುಗುವ ತಾರೆಗಳೆಷ್ಟೋ, ಗಂಗೆಯಲ್ಲಿ ಮರಳಿನ ಕಣಗಳೆಷ್ಟೋ, ಮೇರುವಿನಲ್ಲಿ ಶಿಲೆಗಳೆಷ್ಟೋ, ಸಮುದ್ರದಿ ರತ್ನಗಳೆಷ್ಟೋ, ಅಷ್ಟು ಗೋವುಗಳನ್ನವನು ದಾನಮಾಡಿದನು. ಅವನ ಪುಣ್ಯಕರ್ಮಗಳಿಂದ ಪ್ರೀತನಾಗಿ ರುದ್ರನು ಅಕ್ಷಯ ಸಂಪತ್ತನ್ನು ಕೀರ್ತಿಯನ್ನು ವರವಾಗಿ ಅನುಗ್ರಹಿಸಿದನು. ಅಂತಹ ಶಿಬಿಯು ನಿನಕಿಂತ ಚತುರ್ಭದ್ರತರನು. ಅಂತಹವನೇ ಮೃತನಾಗಿರಲು, ನಿನ್ನ ಮಗನಿಗೇಕೆ ಶೋಕ ?

ಶ್ರೀರಾಮನು ಸಾಕ್ಷಾದ್ವಿಷ್ಣುವಿನ ಅವತಾರವಲ್ಲವೇ ? ಕೇಳು ! ಪ್ರಜರನ್ನು ಪರಮಪ್ರೀತಿಯಿಂದ ತಂದೆಯಂತೆ ಕಾಪಾಡಿದನು. ಅಸಂಖ್ಯೇಯಗುಣನಾದ ಶ್ರೀರಾಮನು ಪಿತ್ರಾಜ್ಞಾಪಾಲನೆಗಾಗಿ ಹದಿನಾಲ್ಕು ವರ್ಷಕಾಲ ವನವಾಸವನ್ನು ಮಾಡಿದನು. ಜನಸ್ಥಾನದಲ್ಲಿ ತಪಸ್ವಿಗಳನ್ನು ಪೀಡಿಸುವ ರಾಕ್ಷಸರನ್ನು ಹದಿನಾಲ್ಕು ಸಾವಿರ ದುಷ್ಟರನ್ನು ಏಕವೀರನಾಗಿ ಸಂಹರಿಸಿದನು. ಸೀತಾದೇವಿಯನ್ನು ಅಪಹರಿಸಿದ ದುಷ್ಟ ರಾವಣನನ್ನು ಕೊಂದನು. ದೇವತಾಪ್ರಶಂಸೆಯನ್ನು ಲೋಕವಿಖ್ಯಾತ ಕೀರ್ತಿಯನ್ನು ಪಡೆದನು. ರಾಜ್ಯವನ್ನು ಪೊಂದಿ ಸರ್ವ ಭೂತಾನುಕಂಪಾ ಮಧುರನಾಗಿ, ಧರ್ಮದಿಂದ ಪ್ರಜರನ್ನು ಪಾಲಿಸಿದನು. ರಾಜಸೂಯಾಶ್ವಮೇಧಗಳನ್ನು ಮಾಡಿದನು. ಕ್ಷುತ್ಪಿಪಾಸಾಜರರೋಗ ಮರಣಾದಿ ಸರ್ವದೋಷರಹಿತನಾದ ಶ್ರೀರಾಮನು ಸಂತತ ಸುಗುಣ ಸಂಪನ್ನನು, ಸ್ವಪ್ರಕಾಶನಿರಸ್ತ ಸಕಲಜನ ಹೃದಯ ತಮನಸ್ಕನು, ಬ್ರಾಹಣನತ ಶಿರಸ್ಕನು ಆಗಿದ್ದನು. ಅವನ ಕಾಲದಿ ರೋಗರುಜಿನಗಳಿಲ್ಲದೆ, ಬಾಲ ಮರಣಗಳಿಲ್ಲದೆ, ಪ್ರಜರು ಸುಖಸಂಪದಾರೋಗ್ಯ ಭಾಗ್ಯಗಳಿಂದ ಸಮೃದ್ಧರಾಗಿದ್ದರು. ಲೋಕೋತ್ತರ

ಚರಿತನಾದ ಶ್ರೀರಾಮನಿಗೆ ಸಮರಿಲ್ಲ. ಅವನ ರಾಮರಾಜ್ಯದಲ್ಲಿ ಅಧರ್ಮದ ಸೋಂಕಿಲ್ಲ ದಂಶಮಶ ಕವ್ಯಾಲಸರೀಸೃಪಗಳಿದ್ದಿಲ್ಲ. ಜಲದಲ್ಲಿ ಮುಣುಗಿ ಸತ್ತವರಿಲ್ಲ. ಅಧರ್ಮರುಚಿಗಳಾದ ಪ್ರಜರಿಲ್ಲ. ಹಿರಿಯರನ್ನೂ ಮೀರಿ ನಡೆವ ಕಿರಿಯರಿದ್ದಿಲ್ಲ. ಸರ್ವ ವರ್ಣದವರು ಸ್ವವಿಹಿತ ಧರ್ಮನಿರತರಾಗಿದ್ದರು. ಶ್ರೀರಾಮನು ಶಾಮವರ್ಣನು, ಸದಾ ತರುಣನು, ಮತ್ತಮಾತಂಗ ವಿಕ್ರಮನು, ಲೋಹಿತಾಕ್ಷನು, ಅಜಾನುಬಾಹುವು, ದೀರ್ಘವಿಶಾಲಭುಜನು ಸಿಂಹಸ್ಕಂಧನು, ಪರಮ ಸುಂದರನು, ಮನೋನಯನಾನಂದ ವರ್ಧನನು ಆಗಿದ್ದನು. ಹನ್ನೊಂದು ಸಾವಿರ ವರ್ಷ ರಾಜ್ಯವಾಳಿ, ಶ್ರೀರಾಮನು ಪರಂಧಾಮವನ್ನು ಸೇರಿದನು. ಇಂದಿಗೂ ರಾಮ ರಾಮ ಎಂಬ ಮಧುರನಾಮವನ್ನುಚ್ಚರಿಸಿ, ಪಾವನರಾಗದವರಿಲ್ಲ. ಅಂತಹ ರಾಮನೇ ಈಗ ಕಾಣದಿರುವನೆಂದ ಮೇಲೆ, ಅವನು ನಿನಕಿಂತ ಕೋಟಿ ಗುಣಿತವಾಗಿ ಚತುರ್ಭದ್ರತರನೆಂದ ಮೇಲೆ, ಅಯಜ್ವನು, ಅದಕ್ಷಿಣನು ಆದ ನಿನ್ನ ಮಗನ ಸಾವಿಗಾಗಿ ಏಕೆ ವಿಲಪಿಸುವೆ ?

ಭಗೀರಥನನ್ನರಿಯದವರಾರು ಹೇಳು ! ಅವನು ಗಂಗೋತ್ರಿಯಿಂದ ಸಾಗರ ಸಂಗಮದವರಿವಿಗೂ ಇರುವ ಪುಣ್ಯಕ್ಷೇತ್ರಗಳಲ್ಲಿ ಬಂಗಾರದ ಇಟ್ಟಿಗೆಗಳಿಂದ ಕಟ್ಟಿದ್ದ ಯಜ್ಞಕುಂಡಗಳಲ್ಲಿ ಕನಕೇಷ್ಟ ಕಾಯುತವಾದ ಚಯನಗಳನ್ನು ಸಾವಿರಾರು ಮಾಡಿದನು. ಆಗ ಲಕ್ಷ ಕನ್ನೆಯರನ್ನು ಲಕ್ಷ ವಿಪ್ರರಿಗಿತ್ತು ಸಾಲಂಕೃತ ಕನ್ಯಾದಾನ ಮಾಡಿಸಿದನು. ಕನ್ನೆಗೊಂದು ರಥ, ರಥಕ್ಕೆ ನೂರಾನೆಗಳು, ಸಾವಿರ ಕುದುರೆಗಳು, ಕುದುರೆಗೆ ನೂರು ಧೇನುಗಳು ಆಗುವಂತೆ ದಾನವಿತ್ತಾಗ ಹರಿದ ದಾನ ಧಾರೆಯಿಂದ ಕೂಡಿ ಗಂಗೆಯು ಉಕ್ಕೇರಿ, ಭಗೀರಥನನ್ನು ಪಾವನಗೊಳಿಸಿದಳು; ಮತ್ತು ಆತನಿಗೆ ಮಗಳೆನಿಸಿ ಅವನ ಪಿತೃಗಳನ್ನು ನರಕದಿಂದ ಉದ್ಧರಿಸಿದಳು. ಭಗೀರಥನ ಯಜ್ಞದಲ್ಲಿ ಇಂದ್ರಪುರೋಗಮರಾದ ದೇವತೆಗಳು ಜನ ನಯನಗೋಚರರಾಗಿ, ಹವಿಸ್ಸುಗಳನ್ನು ಸ್ವೀಕರಿಸಿದರು. ಅವನಲ್ಲಿ ವಿಪ್ರರಿಗೆ ಕೊಡಬಾರದ ವಸ್ತುವಿದ್ದಿಲ್ಲ. ಅವನನ್ನು ನೋಡಿದವರ ಇಷ್ಟಗಳು ಕೈಗೂಡುತ್ತಿದ್ದುವು. ಅಂತಹ ಭಗೀರಥನು ನಿನಕಿಂತಲು ಚತುರ್ಭದ್ರನು. ಭಗೀರಥನೇ ಮೃತನಾದನೆಂದರೆ, ಇನ್ನು ನಿನ್ನ ಸುತನ ಸಾವಿಗೇಕೆ ಅಳುವೆ ?

ದಿಲೀಪನ ಯಜ್ಞದಲ್ಲಿ ಸದಸ್ಸು ಸುವರ್ಣಮಯವಾಗಿತ್ತು. ಸ್ರುಕ್‌ಸ್ರುವಗಳಾದಿ ಸರ್ವವೂ ಕನಕಮಯವಾಗಿತ್ತು. ಭಕ್ಷ್ಯ ಪರ್ವತಗಳು, ರಸನದಿಗಳು ಅಕ್ಷಯವಾಗಿದ್ದವು. ಸಾವಿರ ಯೂಪಗಳು ಕನಕಮಯವಾಗಿ ಕಂಗೊಳಿಸಿದವು. ವಿಶ್ವಾವಸು ಗಂಧರ್ವನು ತಾನಾಗಿ ಅವನ ಯಜ್ಞ ಸಭೆಯಲ್ಲಿ ವೀಣೆಯನ್ನು ನುಡಿಸಿದನು. ಅಪ್ಸರೆಯರು ಹಾಡಿದರು. ಎಲ್ಲಿ ನೋಡಿದರು ಸ್ವಾಧ್ಯಾಯ ಘೋಷಗಳು ಕೇಳಬರುತ್ತಿದ್ದವು. ಅವನ ಪಾಕಶಾಲೆಯ ಅನ್ನಪಾನಗಳು ಅಕ್ಷಯವಾಗಿದ್ದವು. ಇಂತಹ ನಿನಕಿಂತ ಚತುರ್ಭದ್ರತರನು ಅವನೇ ಮೃತನಾದನೆಂದರೆ ನಿನ್ನ ಮಗನ ಮೃತಿಗೇಕೆ ಶೋಕಿಸುವೆ !

ಮಾಂಧಾತನು ತ್ರಿಲೋಕ ವಿಜಯಿಯಾಗಿದ್ದನು. ಯವನಾಶ್ವನು ಯಜ್ಞದಲ್ಲಿ ಪುಂಸವನ ಮಂತ್ರಪೂತ ಜಲವನ್ನು ತಿಳಿಯದೆ ಕುಡಿದು, ಗರ್ಭವನ್ನು ಧರಿಸಿದನು. ಅಶ್ವಿನೀ ದೇವತೆಗಳವನ ಹೊಟ್ಟೆಯಿಂದ ಆ ಕೂಸನ್ನು ಹೊರತೆಗೆದರು. ಇಂದ್ರನ ಕರುಣೆಯಿಂದ ಮಾಂಧಾತ ! ಎಂದು ತನ್ನ ಕೈಬೆರಳನ್ನು ಕೂಸಿನ ಮುಖದಲ್ಲಿಟ್ಟು ಅಮೃತವನ್ನುಣಿಸಿ ಸಲಹಿದನು. ಆದುದರಿಂದ ಮಾಂಧಾತನೆನಿಸಿದ ಬಾಲಕನು ಹನ್ನೆರಡು ದಿನಗಳಲ್ಲಿ ಹನ್ನೆರಡು ವರ್ಷದವನಂತೆ ಬೆಳೆದನು. ಸಕಲ ಪೃಥ್ವಿಗೆ ಚಕ್ರವರ್ತಿಯಾದನು. ಸೂರ್ಯ ಕಿರಣಗಳ ವ್ಯಾಪ್ತಿ ಇರುವ ದೇಶವೆಲ್ಲ ಮಾಂಧಾತನ ವಶದಲ್ಲಿತ್ತು. ಅವನು ನೂರು ರಾಜಸೂಯಗಳನ್ನು ನೂರಶ್ವಮೇಧಗಳನ್ನು ಮಾಡಿದನು. ಬ್ರಾಹ್ಮಣರುಂಡ ಮೇಲೆ ಮಿಕ್ಕ ಜನರಿಗೆಲ್ಲ ಭಕ್ಷ್ಯ ಭೋಜ್ಯಗಳನ್ನು ಕೊಡುತ್ತಿರಲು, ಉಂಡುಂಡು ಹೋಗುವ ಜನರು ಹೋದರೂ ಭಕ್ಷ್ಯರಾಶಿಗಳು ಸವದಿದ್ದಿಲ್ಲ. ಅನ್ನಪರ್ವತಗಳು, ಘೃತಸರಗಳು ಸೂಪಪಂಕಗಳು, ದಧಿಫೇನಗಳು, ಗುಡೋದಕಗಳು ಬೆಳೆಯುತ್ತಲೇ ಇದ್ದವು. ಸಮುದ್ರಾಂತವಾದ ಭೂಮಂಡಲವನ್ನು ದಾನವಾಗಿತ್ತ ಮಾಂಧಾತನು ನಿನಕಿಂತ ಚತುರ್ಭದ್ರತರನು, ಅಂತಹವನೇ ಮೃತನಾಗಿರಲು, ಇನ್ನು ನಿನ್ನ ಮಗನು ಮೃತನಾದನೆಂದು ಅಳಬಹುದೇ ?

ಯಯಾತಿಯು ರಾಜಸೂಯಾಶ್ವಮೇಧ ಶತಗಳನ್ನು ಮಾಡಿದನು. ಪುಂಡರೀಕ ವಾಜಪೇಯ, ಅತಿರಾತ್ರ, ಜಾತುರ್ಮಾಸ್ಯ, ಅಗ್ನಿಷ್ಟೋಮ, ಮುಂತಾದ ಯಜ್ಞಗಳನ್ನು ಬಹುಸಲ ಮಾಡಿದನು. ದುರ್ಮಾರ್ಗರನ್ನು ಶಿಕ್ಷಿಸಿದನು, ಸುಜನರನ್ನು ವಿಪ್ರರನ್ನು ಪೋಷಿಸಿದನು. ದೇವಯಾನಿಯಲ್ಲಿ ಇಬ್ಬರನ್ನು ಶರ್ಮಿಷ್ಠೆಯಲ್ಲಿ ಮೂವರನ್ನು ಸುತರನ್ನಾಗಿ ಪಡೆದನು. 'ಪೃಥ್ವಿಯಲ್ಲಿದ್ದ ವ್ರೀಹಿಯವಗಳನ್ನು, ಹಿರಣ್ಯವನ್ನು, ಪಶುಗಳನ್ನು ಸ್ತ್ರೀರತ್ನಗಳನ್ನು ಕೊಟ್ಟರೂ ಮನುಜನು ತೃಪ್ತನಾಗನು' ಎಂದು ಚಿಂತಿಸಿ, ವಿರಕ್ತನಾದನು. ಅಂತಹ ಯಯಾತಿಯು ನಿನಕಿಂತಲು ಚತುರ್ಭದ್ರತರನು. ಅವನೇ ಮೃತನಾದನೆಂದರೆ, ಇನ್ನು ನಿನ್ನ ಮಗನಿಗಾಗಿ ಏಕೆ ರೋದಿಸುವೆ ?

ಅಂಬರೀಷನು ಮಹಾವೀರನು, ಮಹಾದಾತನು ಅವನನ್ನು ಗೆಲ್ಲಬೇಕೆಂದು ಬಂದ ಸಾವಿರ ರಥಿಕರನ್ನು ತಾನೊಬ್ಬನೇ ಪ್ರತಿಭಟಿಸಿ ಗೆದ್ದನು ; ಶರಣುಬಂದ ಅವರನ್ನು ಕೊಲ್ಲದೆ, ಕ್ಷಮಿಸಿ ಅವರವರ ರಾಜ್ಯದಲ್ಲಿ ನಿಲ್ಲಿಸಿದನು. ಬಹುಯಜ್ಞಗಳನ್ನು ಮಾಡಿ ಬಹುದಕ್ಷಿಣೆಗಳನ್ನಿತ್ತನು. ಮೋದಕ, ಪೂರಿಕ, ಅಪೂಪ, ಶಷ್ಕುಲೀ, ಕರಂಭ, ಪೃಥುಕ, ಸೂಪ, ಮೈರೇಯ, ರಾಗಖಾಂಡವ, ಪರಮಾನ್ನ, ಘೃತ, ಮಧು, ಪಯ, ಸ್ತೋಯ, ದಧಿ, ಮೂಲ, ತಾಂಬೂಲಗಳನ್ನಿತ್ತು ವಿಪ್ರಾದಿ ಚಂಡಾಲಾಂತವಾಗಿ ಎಲ್ಲರನ್ನೂ ಯಥೋಚಿತವಾಗಿ ಸಂತೋಷಪಡಿಸಿದನು. ತಾನು ಗೆದ್ದ ಧನವನ್ನು ರಾಜಜನರನ್ನೂ ದಕ್ಷಿಣೆಯಾಗಿ ಕೊಟ್ಟ ಅಂಬರೀಷನೇ ಮೃತನಾಗಿರುವನು. ಅವನು ನಿನಕಿಂತಲು ಚತುರ್ಭದ್ರತರನು. ಇನ್ನು ಅಯಜ್ವನು, ಅದಾತನು ಆತ. ನಿನ್ನ ಮಗನಿಗೇಕೆ ರೋದಿಸುವೆ !

ಶಶಿಬಿಂದುವು ವಿವಿಧ ಯಜ್ಞಗಳನ್ನು ಸಾಂಗವಾಗಿ ಮಾಡಿದ ಸತ್ಯಪರಾಕ್ರಮನು. ಅವನ ಸಾವಿರ ಸುತರು ಮಹಾಯೋಧರು ಮತ್ತು ಬಹುಯಜ್ಞ ಕರ್ತೃಗಳು. ಅವರನ್ನೇ ದಕ್ಷಿಣೆಯಾಗಿ ಶಶಿಬಿಂದುವು ವಿಪ್ರರಿಗಿತ್ತನು. ಅವರು ವಿಪ್ರಸೇವಾರತರೂ ಆದರು ಮತ್ತು ವಿಪ್ರಮುಕ್ತರಾಗಿ ರಾಜ್ಯಗಳನ್ನು ಸ್ಥಾಪಿಸಿ, ಪ್ರಜಾರಂಜಕರಾದರು. ಶಶಿಬಿಂದುವು ಅವರ ವಿಪ್ರಭಕ್ತಿಗೆ ಪ್ರೀತನಾಗಿ ಒಬ್ಬೊಬ್ಬರಿಗೆ ಕನ್ಯಾಶತವನ್ನು, ರಥಸಹಸ್ರವನ್ನು ಗಜಲಕ್ಷವನ್ನು ಕೊಟ್ಟನು ಮತ್ತು ವಿಪ್ರರನ್ನು ಸತ್ಕರಿಸಿದನು. ಅಂತಹ ಶಶಿಬಿಂದುವು ನಿನಕಿಂತಲು ಚತುರ್ಭದ್ರತರನು. ಅವನೇ ಮೃತನಾಗಿರಲು ನಿನ್ನ ಮಗನಿಗೇಕಳುವೆ ?

ಅಮೂರ್ತರಯ ಕುಮಾರನಾದ ಗಯನು ಒಂದು ನೂರು ವರ್ಷ ಹುತಶಿಷ್ಟಮಾತ್ರಶಯನನಾಗಿದ್ದನು. ಅಗ್ನಿಯು ಪ್ರೀತನಾಗಿ ವರವನ್ನು ಬೇಡೆನ್ನಲು, ತಪೋ ಬ್ರಹ್ಮಚರ್ಯ ವ್ರತ ನಿಯಮಗಳನ್ನು, ಗುರುಮುಖದಿಂದ ಬ್ರಹ್ಮವಿದ್ಯೆಯನ್ನು, ಪರಪೀಡೆಯಿಲ್ಲದ ಧನರಾಶಿಯನ್ನು, ದಾನ ಶ್ರದ್ಧೆಯನ್ನು ನೀಡೆಂದು ಬೇಡಿ ಪಡೆದನು. ಬಹು ಯಜ್ಞಗಳನ್ನು ಮಾಡಿ, ಗೋ ಹಿರಣ್ಯ ವಸನ ಭೋಜನಗಳನ್ನಿತ್ತು, ಸವರ್ಣೆಯಲ್ಲಿ ಸತ್ಸಂತಾನವನ್ನು ಪಡೆದನು. ಅವನ ಯಜ್ಞದ ಕೊನೆಯಲ್ಲಿ ಇಪ್ಪತ್ತೈದು ಅನ್ನರಾಶಿಗಳು ವಸ್ತ್ರಾಭರಣ ಗಂಧಗಳ ಎಪ್ಪತ್ತು ರಾಶಿಗಳು ಉಳಿದುವಂತೆ. ಅಂತಹ ಗಯನು ತನ್ನ ಹೆಸರಿನ ಗಯಾ ನಗರದಲ್ಲಿ ವಿರಾಜಿಸಿದನು. ಅವನ ಪುಣ್ಯವನ್ನು ಅಕ್ಷಯವಾಗಿಸಿದ ವಟವೃಕ್ಷವೂ, ಪವಿತ್ರಗೊಳಿಸಿದ ಬ್ರಹ್ಮಸರೋವರವೂ ಇಂದಿಗೂ ಅವನ ಕೀರ್ತಿಯನ್ನು ಸಾರುತ್ತಿವೆ. ಗಯನು ನಿನಕಿಂತಲು ಚತುರ್ಭದ್ರತರನು. ಅವನೇ ಮೃತನಾದನು. ನಿನ್ನ ಸುತನಿಗೇಕೆ ಶೋಕ ?

ಸಾಂಕೃತಿರಂತಿದೇವನು ಮಹಾಯಜ್ವನು ಅವನ ಪಾಕಶಾಲೆಯಲ್ಲಿ ಎರಡು ಸಾವಿರ ಪಾಚಕರಿದ್ದರು. ದಿವಾರಾತ್ರವೆನ್ನದೆ ಅನ್ನದಾನ ನಡೆದಿತ್ತು. ಅವನ ವಿತ್ತ ನ್ಯಾಯಾರ್ಜಿತವು; ಅವನಿಗೆ ಪಾತ್ರರು ವೇದಪಾರಂಗತರಾದ ವಿಪ್ರರು, ಅವಿನಯವು ಅವನಿಗೆ ಗೊತ್ತಿಲ್ಲದ ವಸ್ತು. ಅವನಿತ್ತ ದಕ್ಷಿಣೆ ಸಮಸ್ತ ರಾಜ್ಯ. ಪ್ರತಿನಿತ್ಯವು ಅನೇಕ ಗೋವುಗಳನ್ನು ಮೇಕೆಗಳನ್ನು ಕುರಿಗಳನ್ನು ದಾನವಿಡುವಾಗ ಅವನ್ನು ತೊಳೆದ ನೀರು, ಚರ್ಮಣ್ವತಿ ಎಂಬ ನದಿಯಾಯಿತು. ಅವು ವಿಪ್ರರ ಮನೆ ಸೇರಿ ಅವರಿಗೆ ದಧಿ ದುಗ್ಧ ಕುಂಬಳಗಳನ್ನಿತ್ತು, ತಾವೂ ಸ್ವರ್ಗಯೋಗ್ಯವಾದವು. ವಿಪ್ರರಿಗೆ ದಕ್ಷಿಣೆ ಕೊಡುವಾಗ ರಂತಿದೇವನಿಗೆ ಸಾಕೆನಿಸುತ್ತಿದ್ದಿಲ್ಲ. ಋಷಿಗಳಲ್ಲಿ ಯಜ್ಞೋಪಕರಣಗಳನ್ನು ವಿಪ್ರರಲ್ಲಿ ಅಗ್ನಿಹೋತ್ರೋಪಕರಣಗಳನ್ನು ಯಥೇಚ್ಛವಾಗಿತ್ತು ಆ ಮಹಾರಾಜನು ನಿರುಪಮನೆನಿಸಿದನು. ಅವನು ನಿನಕಿಂತ ಚತುರ್ಭದ್ರತರನು; ಅಂತಹನೇ ಮೃತನಾದನು. ಇನ್ನು ನಿನ್ನ ಮಗನಿಗಾಗಿ ಏಕೆ ಅಳುವೆ ?

ದುಷ್ಯಂತಸುತ ಭರತನು ಸಾಮಾನ್ಯನಲ್ಲ. ಬಾಲ್ಯದಲ್ಲಿ ಸಿಂಹಾದಿಗಳಿಂದ ಆಡಿ, ಸರ್ವದಮನನೆನಿಸಿದನು. ವ್ಯಾಘ್ರ, ಖಡ್ಗ, ಮಹಿಷಗಳನ್ನು ಸೆಳೆದಾಡಿ, ಕಟ್ಟಿ ಪಳಗಿಸಿದನು. ಅವನು ರಾಜನಾಗಿ ಅಶ್ವಮೇಧ ಶತವನ್ನು ಮಾಡಿ, ಯಮುನಾನದಿಯಲ್ಲಿ

ಅವಭೃತವನ್ನಾಚರಿಸಿದನು. ವಿಶ್ವಜಿದ್ಯಜ್ಞವನ್ನೂ ಮಾಡಿದನು. ಅವನ ಯೂಪ ಶತವ್ಯಾಮವಾಗಿ ಕನಕರಚಿತವಾಗಿತ್ತು. ಸಾವಿರ ಪದ್ಮನಿಷ್ಕವನ್ನು ಕಣ್ವನಿಗೆ ದಕ್ಷಿಣೆಯಾಗಿತ್ತು ಭರತನು ಇತರ ವಿಪ್ರರಿಗೆ ಎರಡೆರಡು ಸಾವಿರ ಗೋವುಗಳನ್ನು ಕೊಟ್ಟನು. ಜಿತಾರಿಯು, ಅಪರಾಜಿತನು, ಚಕ್ರವರ್ತಿಯು ಆದ ಭರತನೇ ಮೃತನಾದನು. ಅವನು ನಿನಕಿಂತ ಚತುರ್ಭದ್ರತರನು. ಇನ್ನು ನಿನ್ನ ಅಯಜ್ವ ಮಗನಿಗೇಕೆ ರೋದಿಸುವೆ ?

ವೈನನದೇ ಈ ಪೃಥಿವಿ. ಪೃಥುರಾಜನು ತನಗೆ ಪಟ್ಟಗಟ್ಟಿದ ಮಹರ್ಷಿಗಳಿಂದ ಕೂಡಿ ರಾಜಸೂಯವನ್ನು ಮಾಡಿದನು. ಪೃಥಿವಿಗೆ ತನ್ನ ಹೆಸರಿತ್ತು ಸರ್ವಕಾಮಿತಗಳನ್ನು ಹಾಲಿನಂತೆ ಕರೆದನು. ಶತ್ರುಕ್ಷತರಾಗದಂತೆ ಪ್ರಜರನ್ನು ಕಾಪಾಡಿ ಆದಿರಾಜನೆನಿಸಿದನು. ಅವನ ರಾಜ್ಯದಲ್ಲಿ ಪ್ರಜರು ಸ್ವರ್ಣಸುಖಾಸನರೂ, ಮೃಷ್ಟಾನ್ನ ಭುಂಜಕರು, ನಿರೋಗರು, ಪ್ರವಿಭಕ್ತ ನಗರಾದಿ ಸುಖವಸನರು ಆಗಿದ್ದರು. ದೇವಾಸುರನ ರೋಗರು ಅವನನ್ನು ಸೇರಿ ತೃಪ್ತಿಜನಕವಾದ ಅನ್ನವನ್ನು ಬೇಡಿದರು. ಪೃಥುರಾಜನು ವಸುಧೆಯನ್ನು ಮಗಳೆಂದು ಮನ್ನಿಸಿ, ಗೋರೂಪಳಾಗಿ ನಿಂತ ಭೂದೇವಿಯಿಂದ ಬೇಕಾದ ದ್ರವ್ಯಗಳನ್ನು ಸಕಲ ಜೀವರಿಗೆ ಹೊಂದಿಸಿಕೊಟ್ಟನು. ಶಾಲವನ್ನು ವತ್ಸವಾಗಿಸಿ, ಪ್ಲಕ್ಷವು ದೋಗ್ಧನಾಗಿ, ಔದುಂಬರ ಪಾತ್ರೆಯಲ್ಲಿ ಛಿನ್ನಪ್ರರೋಹಣವೆಂಬ ಹಾಲನ್ನು ವನಸ್ಪತಿಗಳು ಪಡೆದವು. ಮೇರುವು ದೋಗ್ಧನಾಗಿ, ಉದಯಗಿರಿಯು ವತ್ಸನಾಗಿ, ಅಶ್ಮಪಾತ್ರದಲ್ಲಿ ರತ್ನಗಳೆಂಬ ಹಾಲನ್ನು ಗಿರಿಗಳು ಪಡೆದವು. ಇಂದ್ರನು ವತ್ಸನಾಗಿ, ಸೂರ್ಯನು ದೋಗ್ಧನಾಗಿ ಹಿರಣ್ಮಯ ಪಾತ್ರೆಯಲ್ಲಿ ದೇವತೆಗಳು ಅಮೃತದ ಹಾಲನ್ನು ಪಡೆದರು. ವಿರೋಚನನು ವತ್ಸನಾಗಿ, ದ್ವಿಮೂರ್ಧನು ದೋಗ್ಧನಾಗಿ, ಆಮಪಾತ್ರೆಯಲ್ಲಿ ಅಸುರರು ಮದ್ಯವನ್ನು ಪಡೆದರು. ತಕ್ಷಕನು ವತ್ಸನಾಗಿ, ಧೃತರಾಷ್ಟ್ರನು ದೋಗ್ಧನಾಗಿ ಅಲಾಬುಪಾತ್ರೆಯಲ್ಲಿ ಸರ್ಪಗಳು ವಿಷವನ್ನು ಪಡೆದರು. ಚಂದ್ರನು ವತ್ಸನಾಗಿ, ಬೃಹಸ್ಪತಿಯು ದೋಗ್ಧನಾಗಿ, ಛಂದಃಪಾತ್ರೆಯಲ್ಲಿ ಸಪ್ತರ್ಷಿಗಳು ವೇದವನ್ನು ಪಡೆದರು. ವೃಷಧ್ವಜನು ವತ್ಸನಾಗಿ, ಕುಬೇರನು ದೋಗ್ಧನಾಗಿ, ಪುಣ್ಯಜನರು ಅಂತರ್ಧಾನವನ್ನು ಆಮಪಾತ್ರೆಯಲ್ಲಿ ಕರೆಸಿಕೊಂಡರು. ಗಂಧರ್ವರು ಚಿತ್ರರಥನನ್ನು ಕರುವಾಗಿಸಿ, ವಿಶ್ವರುಚಿಯನ್ನು ದೋಗ್ಧನಾಗಿಸಿ, ಪದ್ಮಪಾತ್ರದಲ್ಲಿ ಪುಣ್ಯಗಂಧವನ್ನು ಪಡೆದರು. ಪಿತೃಗಳು ರಜತ ಪಾತ್ರೆಯಲ್ಲಿ ಯಮವತ್ಸರಾಗಿ ಕಾಲನೇ ದೋಗ್ಧನಾಗಿರಲು ಸ್ವಧಾಕ್ಷೀರವನ್ನು ಕರೆಸಿಕೊಂಡರು. ಇಂತಹ ಪೃಥುರಾಜನು ಅರವತ್ತು ಸಾವಿರ ಬಂಗಾರದ ಆನೆಗಳನ್ನು ಮಾಡಿಸಿ ವಿಪ್ರರಿಗೆ ದಾನ ಮಾಡಿದನು. ಸರ್ವ ಭೂಮಿಯನ್ನಿತ್ತ ಪೃಥುರಾಜನು ನಿನಕಿಂತ ಚತುರ್ಭದ್ರತರನು. ಅವನೇ ಮೃತನಾದನೆಂದರೆ, ದಕ್ಷಿಣೆ ಕೊಡದ, ಯಜ್ಞ ಮಾಡದ ಮಗನಿಗಾಗಿ ಏಕೆ ವಿಲಪಿಸುವೆ ?

ಶ್ರೀ ಪರಶುರಾಮನು ಶ್ರೀರಾಮನಂತೆ ಭಗವದವತಾರನು. ಅವನಿಗೆ ಸಾವೇ ಇಲ್ಲ. ಭೂಮಿಯನ್ನೆಲ್ಲ ಗೆದ್ದರೂ ಅವನು ಅಹಂಕಾರಪಡಲಿಲ್ಲ. ಎಲ್ಲವನ್ನಿತ್ತು ತಪೋನಿರತನಾದ ಸ್ವಾಮಿಗೆ ಸಮರಿಲ್ಲ. ಆ ಮಹಾನುಭಾವನು ತನ್ನ ಜನಕನನ್ನು ಕೊಂದ ಹೈಹಯಾದಿ ದುಷ್ಟ ರಾಜರನ್ನು ನಾಶಪಡಿಸಿ, ಅಂತೆಯೇ ದುಷ್ಟರಾದ ಕ್ಷತ್ರಿಯರನ್ನೆಲ್ಲ

ಇಪ್ಪತ್ತೊಂದು ಸಲ ಮುತ್ತಿ ಮುತ್ತಿ ಸಂಹರಿಸಿ, ಭೂಭಾರವನ್ನಿಳಿಸಿದನು. ಪರಶುಹಸ್ತನಾಗಿ ಶ್ರೀ ಜಾಮದಗ್ನ್ಯನು ಕೋಟಿಶತ ದುಷ್ಟ ಕ್ಷತ್ರಿಯರನ್ನು ನಾಶಪಡಿಸಿದನು. ಕುರುಕ್ಷೇತ್ರದಲ್ಲಿ ಸಮಂತಪಂಚಕವೆಂಬ ಪುಣ್ಯತೀರ್ಥಗಳನ್ನು ನಿರ್ಮಿಸಿದನು. ಸಕಲ ಭೂಮಿಯನ್ನು ಕಶ್ಯಪನಿಗಿತ್ತು, ತಾನಿರಲು ಸ್ಥಲವನ್ನು ಸಮುದ್ರವನ್ನು ಸರಿಸಿ ಪಡೆದನು. ಮಹೇಂದ್ರಪರ್ವತದಲ್ಲಿ ಮಹಾನುಭಾವನಾದ ಶ್ರೀ ಪರಶುರಾಮನು ತಪ ಗೈಯುತ್ತಿರುವನು. ಅಂತಹ ಪರಶುರಾಮನು ಸಾಯದಿರಲು ಅವನು ಶ್ರೀಶನಾಗಿರುವುದೇ ಕಾರಣ. ಅವನಂತಹ ಚತುರ್ಭದ್ರರಾರೂ ಇಲ್ಲ. ಇದನ್ನರಿತು ನಿನ್ನ ಮಗನಿಗಾಗಿ ಶೋಕಿಸಬೇಡ.

ಸೃಂಜಯ ! ಷೋಡಶ ಮಹಾಪುರುಷ ವಿರಾಜಿತವಾದ ಆಖ್ಯಾನವನ್ನು ನಿನಗರುಹಿದೆನು. ಸುಮ್ಮನೆ ಶೋಕಿಸಬೇಡ ! ನನ್ನ ಉಪದೇಶವು ಶೂದ್ರೀಪತಿಗಿತ್ತ ಶ್ರಾದ್ಧದಂತೆ ವ್ಯರ್ಥವಾಗದಿರಲಿ !" ಎಂದ ನಾರದನ ಮಾತಿಗೆ ಸೃಂಜಯನಿಂತೆಂದನು: 'ಪೂಜ್ಯನೇ ! ಅರ್ಕತೇಜದಿಂದ ತಮದಂತೆ ನನ್ನ ಶೋಕವು ನಿನ್ನ ಅಮೋಘ ವಚನದಿಂದ ನಷ್ಟವಾಯಿತು, ಪಾಪರಹಿತನು, ವ್ಯಥಾವರ್ಜಿತನು ಆಗಿರುವೆನು, ನಿಮಗೆ ನಮಃ' ಆ ಮಾತಿಗೆ ಪ್ರೀತನಾಗಿ ನಾರದನು ಬೇಕಾದ ವರವನ್ನು ಬೇಡೆಂದನು. ಆಗ ಸೃಂಜಯನು 'ಸ್ವಾಮಿ ! ನೀನು ಪ್ರಸನ್ನನಾದರೆ ಸಾಕು. ನನಗಿನ್ನಾವುದು ದುರ್ಲಭವು' ಎಂದನು. ನಾರದನು 'ಪ್ರೋಕ್ಷಿತವಾದ ಪಶುವಿನನ್ನು ಮತ್ತೆ ಬದುಕಿಸಿ ಕಳಿಸುವ ಸದ್ವಿಪ್ರರಂತೆ ನಿನ್ನ ಮಗನನ್ನು ನರಕದಿಂದ ಉದ್ಧರಿಸಿ ತಂದಿಡುವೆನು' ಎಂದು ಅವನ ಮಗನನ್ನು ಬದುಕಿಸಿಕೊಟ್ಟನು. ಆದರೆ ಅವನು ಸುವರ್ಣಷ್ಠೀವಿಯಾಗದೆ, ಸಾಮಾನ್ಯ ರಾಜ ಸುತನಾಗಿದ್ದನು. ಅವನಿಂದ ಕೂಡಿ ಸೃಂಜಯನು ಬಹುಕಾಲ ಬಾಳಿದನು.

ಧರ್ಮರಾಜ ! ಅಭಿಮನ್ಯುವು ವೀರಸ್ವರ್ಗವನ್ನು ಹೊಂದಿರುವನು. ಬ್ರಹ್ಮಚರ್ಯದಿಂದ, ಇಷ್ಟ ಕ್ರತುಗಳಿಂದ, ವೇದಶಾಸ್ತ್ರ ಪಠನದಿಂದ ಬರುವ ಲೋಕಗಳ ವನವಾಗಿದೆ. ಆದುದರಿಂದ ಅವನು ಮೃತನಾದನೆಂದು ಶೋಕಿಸುವುದು ನಿಮ್ಮಂತಹ ವೀರರಿಗೆ, ನಿಮ್ಮಂತಹ ಜ್ಞಾನಿಗಳಿಗೆ ತರವಲ್ಲ. ಇಂದು ಪುತ್ರನು ಮತ್ತೆ ಅಮೃತಲೋಕವನ್ನು ಸೇರಿರುವನು. ಇದನ್ನರಿತು ಶೋಕವನ್ನು ಬಿಡು ! ಮುಂದಿನ ಶ್ರೇಯಸ್ಸಿಗೆ ಯತ್ನ ಮಾಡು ! ಮೃತಗಾಥೆಯನ್ನು ಕೇಳಿರುವೆ. ವಿಭೂತಿಯು ಚಂಚಲವು. ಶರೀರಗಳು ಶಾಶ್ವತವಲ್ಲ" ಇಂತು ಶ್ರೀ ವ್ಯಾಸರು ನಿರೂಪಿಸಿದರು. ನೀಲಮೇಘಶ್ಯಾಮನು, ವಾಙ್ಮನೋನಿಯಾಮಕನು, ಸರ್ವಜ್ಞನು ಆದ ವೇದವ್ಯಾಸರ ವಚನದಿಂದ ನಷ್ಟಮೋಹನಾಗಿ ಯುಧಿಷ್ಠಿರನು ವಿಶೋಕನಾದನು ; ಆದರೆ ಧನಂಜಯನನೆಂತು ಸಮಾಧಾನಪಡಿಸಲಿ ಎಂಬ ಚಿಂತೆಯಿಂದ ನಿರ್ವಿಣ್ಣನಾಗಿದ್ದನು. ಆದಿತ್ಯನು ಅಸ್ತಂಗತನಾದನು. ಅಲ್ಲಿ ಸಂಸಪ್ತಕರೂ ಅಸ್ತಂಗತರಾದರು. ಅರ್ಜುನನು ಅಲ್ಲಿಂದ ತೆರಳಿ ಶಿಬಿರವನ್ನು ಸೇರಬರುತ್ತಿದ್ದನು.

## ೬. ಅರ್ಜುನ ಪ್ರತಿಜ್ಞೆ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ಸ್ವಶಿಬಿರವನ್ನು ಸೇರಬರುವ ಧನಂಜಯನು ದುರ್ನಿಮಿತ್ತಗಳನ್ನು ಕಂಡು, ಖಿನ್ನನಾಗಿ ಶ್ರೀಕೃಷ್ಣನಿಗಿಂತೆಂದನು: 'ಗೋವಿಂದ ! ಎದೆ ಬಡಿಯುತ್ತಿದೆ. ಮಾತು ರುದ್ಧವಾಗಿದೆ. ಶರೀರವು ಶುಷ್ಕವಾಗಿದೆ. ಅನಿಷ್ಟಗಳನ್ನು ಕಾಣುತ್ತಿರುವೆನು, ಕೆಟ್ಟ ಆಲೋಚನೆಗಳು ಮೂಡುತ್ತಿವೆ. ಮಹಾರಾಜನು ಸುಕ್ಷೇಮದಿಂದಿರುವನೋ ಇಲ್ಲವೋ ! ಏನು ಕಾಣುವೆನೋ ?' ಆ ಮಾತಿಗೆ ಗೋವಿಂದನು 'ಪಾರ್ಥ ! ನಿಮ್ಮಣ್ಣನು ಸುಕ್ಷೇಮವಾಗಿರುವನು. ಅವನಿಗೆ ಚಿಂತಿಸಬೇಡ ! ಮತ್ತಾವದೋ ಅನಿಷ್ಟವು ಸಂಭವಿಸಿದಂತಿದೆ' ಎಂದು ರಥವನ್ನು ಶಿಬಿರ ಸೇರಿಸಿದನು.

ಕಳೆಯಿಲ್ಲದ ಶಿಬಿರವನ್ನು ಕಂಡು ಅರ್ಜುನನು 'ಕೃಷ್ಣ ! ಇಂದು ತೂರ್ಯಗಳ ಶಬ್ದವಿಲ್ಲ. ದುಂದುಭಿ ಶಂಖಗಳು ಮೊಳಗುತ್ತಿಲ್ಲ. ಮಾಂಗಲ್ಯ ಗೀತೆಗಳು ಕೇಳಬರುತ್ತಿಲ್ಲ. ವಂದಿಗಳ ಸ್ತುತಿ ಪಾಠವಿಲ್ಲ. ಯೋಧರು ನನ್ನನ್ನು ನೋಡಿ, ಅಭಿನಂದಿಸದೆ, ತಲೆ ತಗ್ಗಿಸಿ, ಸರಿದು ಹೋಗುತ್ತಿರುವರು. ನನ್ನ ಸೋದರರು ಅಕ್ಷತರಾಗಿರುವರೇ ? ಆಕುಲರಾಗಿರುವ ಜನರನ್ನು ಕಂಡು ನನಗೆ ಭಯವಾಗಿದೆ. ದ್ರುಪದ ವಿರಾಟರು ಕ್ಷೇಮದಿಂದಿರುವರೇ ? ಸೌಭದ್ರನೇಕೆ ಎಂದಿನಂತೆ ನನ್ನನ್ನು ಪ್ರತ್ಯುತ್ಥಾನಮಾಡಲು ಬಂದಿಲ್ಲ ? ಏನು ಅಮಂಗಲವನ್ನು ಕೇಳಬೇಕಾಗಿದೆಯೋ ?' ಎಂದು ಶಿಬಿರವನ್ನು ಹೊಕ್ಕನು.

ಪಾಂಡವಾದಿ ಸರ್ವರು ವಿಮನಸ್ಕರಾಗಿ ಕಣ್ಣೀರಿಡುತ್ತಾ ಕುಳಿತಿದ್ದರು. ಸೌಭದ್ರನನ್ನು ಕಾಣದೆ ಪಾರ್ಥನು 'ಏಕೆ ವಿವರ್ಣವದನರಾಗಿರುವಿರಿ ? ಏಕೆ ನನ್ನನ್ನು ಪ್ರತಿವಂದಿಸದಿರುವಿರಿ ? ಏನಾಗಿದೆ ? ದ್ರೋಣಾಚಾರ್ಯನು ಚಕ್ರವ್ಯೂಹವನ್ನೊಡ್ಡಿದ್ದನಂತೆ ! ಅಭಿಮನ್ಯುಕುಮಾರನನ್ನು ಹೊರತು ಅದನ್ನು ಭೇದಿಸುವರಿದ್ದಿಲ್ಲ. ಅವನಿಗೆ ವಿನಿರ್ಗಮವನ್ನು ನಾನಿನ್ನೂ ಉಪದೇಶಿಸಿದ್ದಿಲ್ಲ. ಆ ಬಾಲನನ್ನು ನೀವು ವ್ಯೂಹ ಭೇದನಕ್ಕೆಂದು ಕಳಿಸಿದರೇ ಏನು ? ವ್ಯೂಹವನ್ನು ಪ್ರವೇಶಿಸಿದ ಕುಮಾರನು ಬಹುಶೂರರ ಮಧ್ಯೆ ಸಿಕ್ಕು ನಿಹತನಾದನೇ ? ಲೋಹಿತಾಕ್ಷನು, ಸಿಂಹಕಿಶೋರ ವಿಕ್ರಮನು, ಉಪೇಂದ್ರ ಸದೃಶನು ಆದ ಅಭಿಮನ್ಯು ಎಂತು ನಿಹತನಾದನು ? ನನ್ನ ಪ್ರಿಯಕುಮಾರನೆಂತು ಹತನಾದನು ? ಹೇಳಿ ! ಸುಭದ್ರೆಯ ಪ್ರಿಯಪುತ್ರ, ಕೇಶವನ ಅಳಿಯ, ಕುಂತಿದೇವಿಯ ಮುದ್ದು ಮೊಮ್ಮಗ, ದ್ರೌಪದಿಯ ಅಚ್ಚಿದ ಕೂಸು ಯಾರ ಕೈಗೆ ಸಿಕ್ಕು ಸತ್ತನು ? ಪ್ರಿಯಲಲಿತ ಪುತ್ರನನ್ನು ಕಾಣದಿರೆ ನಾನೂ ಸಾಯುವೆನು. ಮತ್ತದ್ವಿರದ ವಿಕ್ರಮನು, ಮೃದುಕುಂಚಿತ ಕೇಶನು, ಸ್ಮಿತ ಭಾಷಣನು, ಗುರು ವಿನೀತನು, ದೀರ್ಘರಾಜೀವಲೋಚನನು, ನೀಚಜನ ವಿದೂರನು ಆದ ನನ್ನ ಮಗನೇನಾದನು? ಕೃತಜ್ಞನು, ಕೃತಾಸ್ತ್ರನು, ಬಂಧು ಮುದವರ್ಧನನು, ಶತ್ರು ಮುದಮರ್ದನನು ಆದ

ಸುಭದ್ರಾಸುತನೆಲ್ಲಿ ? ಪ್ರದ್ಯುಮ್ನನಿಗೆ ಪ್ರಾಣಮಿತ್ರನು, ಕೇಶವನಿಗೆ ಪ್ರಾಣಸದೃಶನು, ನನಗೆ ಪ್ರಾಣನೇ ಆಗಿದ್ದ ಅಭಿಮನ್ಯುವಿನನ್ನು ಕಳೆದುಕೊಂಡು ನಾನು ಬದುಕಿರಲಾರೆನು. ಸುನಸನು, ಸುಂದರನು, ಸುವದನನು, ಸುವಚನನು ಆದ ಪುತ್ರರತ್ನವಿಲ್ಲದ ನಾನು ಬದುಕಿರಲಾರೆನು. ಪುಂಸ್ಕೋ-ಕಿಲಸ್ವನನಾದ ಸೂನುವಿನನ್ನು ಕಾಣದ ನನ್ನ ಮನಕ್ಕೆ ಶಾಂತಿಯಿಲ್ಲ. ಸುಕುಮಾರನು, ಮಹಾರ್ಹಶಯನನು ಆದ ಕುಮಾರನಿಂದು ಅನಾಥನಂತೆ ಭೂಮಿಯಲ್ಲಿ ಬಿದ್ದಿರುವನೇ ? ಅಕಟಾ ! ಏಕೆ ಮಾತಾಡದಿರುವಿರಿ ? ಸೂತಮಾಗಧವಂದಿಗಳ ಸ್ತುತಿ ಪಾಠಗಳಿಗೆ ಏಳುವ ರಾಜಕುಮಾರನನ್ನು ಕ್ರೂರ ಮೃಗಗಳ ಮಧ್ಯದಲ್ಲಿ ಮಲಗಿಸಿದರೇ ಏನು ? ಹಾ ಪುತ್ರ ! ನಿನ್ನನ್ನು ನೋಡಿ ನೋಡಿ ಸಾಕೆನಿಸದೆ ಮತ್ತೆ ನೋಡುವ ನನಗೂ ಒಂದು ಬಾರಿ ಕಾಣಬಾ ! ಭಾಗ್ಯಹೀನನಾದ ನನ್ನಿಂದ ದೂರನಾಗಿ ಹೋಗಿರುವೆಯಾ ? ಯಮರಾಜನ ಸಭೆಯಲ್ಲಿ ಸುಕೃತಿಗಳಲ್ಲಿ ಪೂಜಿತನಾಗಲು ಹೋದೆಯಾ ? ಅಥವಾ ಶಕ್ರ-ಧನೇಶ ಸೋಮರು ನಿನ್ನನ್ನು ನೋಡಲು ಕರೆಸಿದರೆ ? ಮಗನೇ ! ನಾನೂ ಬರುವೆನು ನಿಲ್ಲು ! ' ಎಂದು ಗೋಳಾಡಿ, ದುಃಖಾವಿಷ್ಟನಾಗಿ ಧರ್ಮಜನಿಗಿಂತೆಂದನು:

'ಮಹಾರಾಜ ! ಬಹುವೀರರಿಂದ ಕಾದಾಡಿ ಮಡಿದನೇ ನನ್ನ ನಂದನ ? ಎಷ್ಟು ಶತ್ರುವೀರರನ್ನು ಕಡಿದನು ? ವ್ಯೂಹದಲ್ಲಿ ಸಿಕ್ಕು ಅಸಹಾಯ ಸ್ಥಿತಿಯಲ್ಲಿ ನನ್ನನ್ನು ನೆನೆದನೇ ? ಕರ್ಣ ದ್ರೋಣ ಕೃಪಾದಿಗಳ ತೀಕ್ಷ್ಣ ಶರಗಳಿಂದ ಪೀಡಿತನಾಗಿ 'ಅರ್ಜುನ ! ತಂದೇ ! ' ಎಂದು ಕೂಗಿಕೊಂಡನೇ ? ಇಲ್ಲ ನನ್ನ ಮಗ, ಮಾಧವನ ಅಳಿಯ, ಸುಭದ್ರಾ ಸಂಭೂತ ಅಂತು ದೀನನಾಗಿ ಬಾಯಿ ಬಿಡುವನಲ್ಲ. ಅಂತಹ ಪುತ್ರನನ್ನು ಕಳೆದುಕೊಂಡೂ ಈ ನನ್ನ ಹೃದಯವು ಎರಡು ಹೋಳಾಗದಿದೆ ಎಂದರೆ ಅದೇನು ಬಂಡೆಗಲ್ಲೋ ? ನೃನೀಚರೆಂತು ಆ ಸುಕುಮಾರನನ್ನು ಶರಗಳಿಂದ ಹೊಡೆದರು ! ಆದಿತ್ಯನೇ ಕಳಚಿ ಬಿದ್ದಂತಾಯಿತಲ್ಲ ! ರಣ ನಿಹತನಾದ ಪುತ್ರನ ವೃತ್ತಾಂತವನ್ನು ಕೇಳಿ, ಸುಭದ್ರೆ ಬದುಕಿರುವಳೇ ? ದ್ರೌಪದಿಯು 'ಎಲ್ಲಿ ಅಭಿಮನ್ಯುವೆಂ'ದು ಕೇಳಿದರೆ ಏನೆಂದು ಹೇಳಲಿ ?

ಸಾವಿರ ತುಂಡಾಗಿಸಿ, ಬಿದ್ದ ಅಭಿಮನ್ಯುವಿನನ್ನು ನೋಡಿ, ಸಿಂಹನಾದವನ್ನು ಮಾಡಿದ ನೀಚ ಧಾರ್ತರಾಷ್ಟ್ರರ ಕೂಗೆನ್ನ ಕಿವಿಗೆ ಬಡಿಯಿತು. 'ಮಹಾರಥರೆನಿಸಿದ್ದೂ ಬಾಲಕನೋರ್ವನನ್ನು ಅಧರ್ಮದಿಂದ ಕೊಂದು ಹರ್ಷದಿಂದ ಕುಣಿದಾಡುವ ನಿಮಗೆ ನಾಚಿಕೆ ಇಲ್ಲವೇ ? ಕೃಷ್ಣಾರ್ಜುನರಿಗೆ ಅಪ್ರಿಯವನ್ನು ಮಾಡಿ, ಶೋಕಕಾಲದಲ್ಲಿ ನಗುತ್ತಿರುವ ನೀವು ನಿಮ್ಮ ಪಾಪದ ಫಲವನ್ನು ಬೇಗನೆ ಉಣ್ಣುವಿರಿ ! ' ಎಂದು ಯುಯುತ್ಸುವು ಧಾರ್ತರಾಷ್ಟ್ರರನ್ನು ನಿಂದಿಸುತ್ತ ಬರುವ ಮಾತನ್ನು ಕೃಷ್ಣನೂ ಕೇಳಿರುವನು. ಅದರ ವಿವರವನ್ನು ಕೇಶವನು ತಿಳಿಸಿದ್ದರೆ, ಆಗಲೇ ಅವರನ್ನೆಲ್ಲ ಸುಟ್ಟು ಬರುತ್ತಿದ್ದೆನು."

ಇಂತು ದುಃಖಿಸುವ ಅರ್ಜುನನಿಗೆ ಶ್ರೀಕೃಷ್ಣನು ಅವನ ಶೋಕವನ್ನು ಕಳೆಯುತ್ತ ಇಂತೆಂದನು : 'ಪಾರ್ಥ ! ಇವರನ್ನು ನಿಂದಿಸಬೇಡ ! ಯಾರೂ ನಿನ್ನ ಪುತ್ರನು ಮೃತನಾಗಲಿ ಎಂದು ಕಳಿಸಿಲ್ಲ. ವಿಧಿ ಬಲೀಯವಾಗಿ, ಆ ಮಹಾಶೂರನು ವೀರಸ್ವರ್ಗವನ್ನು ಸೂರೆಗೊಂಡಿರುವನು. ಯುದ್ಧ ಮರಣವು ಯಾವ ಶೂರನಿಗೆ ವಾಂಛನೀಯವಲ್ಲ ಹೇಳು ! ಮಹಾವೀರರನ್ನು ಯಮನ ಮನೆಗಟ್ಟಿ ತಾನು ಸ್ವರ್ಗವನ್ನು ಸೇರಿದ ನಿನ್ನ ವೀರಪುತ್ರನಿಗೇಕೆ ಶೋಕಿಸುವೆ ? ಭೀಮಸೇನಾದಿ ಭ್ರಾತೃಗಳು ದೀನರಾಗಿರುವಾಗ, ಅವರನ್ನು ನೋಯಿಸಬೇಡ ! ಗೀತೆಯನ್ನು ಉಪದೇಶ ಮಾಡಿರುವೆನು. ಅದನ್ನು ವ್ಯರ್ಥವೆನಿಸಬೇಡ !'

ಅರ್ಜುನನು ಭೀಮ ಧರ್ಮ ಯಮಳರನ್ನು ಸಮೀಪಿಸಿ ಕಣ್ಣೀರಿಡುತ್ತಾ 'ಅಣ್ಣ ! ಅಭಿಮನ್ಯುವು ಎಂತು ಮೃತನಾದನು. ವಿವರವಾಗಿ ತಿಳಿಸು ! ನನ್ನ ಪುತ್ರನನ್ನು ಕೊಂದವರನ್ನು ನಾನು ಖಂಡಿತವಾಗಿ ಸಂಹರಿಸುವೆನು. ಶಸ್ತ್ರವಿದ್ಯಾ ವಿಚಕ್ಷಣರಿಷ್ಟು ಜನ ನೀವಿದ್ದೂ ಕುಮಾರನು ಮೃತನಾದನೆಂದರೆ, ಇದಕ್ಕಿಂತ ಆಶ್ಚರ್ಯವಿದೆಯೇ ? ವ್ಯೂಹ ರಚನೆಯನ್ನೂ ಅದನ್ನು ನೀವಾರೂ ಪ್ರವೇಶಿಸಲಾರದಿರುವುದನ್ನು ಮೊದಲೇ ಅರಿತಿದ್ದರೆ, ನಾನು ಇಲ್ಲೇ ನಿಂತು ಅವನನ್ನುಳಿಸಿಕೊಳ್ಳುತ್ತಿದ್ದೆನು. ನನ್ನ ದುರ್ವಿಧಿಯಿಂದ ಭೀಮಸೇನನೂ ನಿರುಪಾಯನಾದನೆ ? ಅಥವಾ ನಿಮ್ಮ ಪೌರುಷವೆಲ್ಲ ನಷ್ಟವಾಯಿತೇ ? ಯಾರನ್ನಂದು ಏನು ಪ್ರಯೋಜನ ? ನನ್ನ ದುರದೃಷ್ಟವಿಂತಿದೆ' ಎಂದು ಅಂಗಲಾಚಿದನು.

ಭೀಮಸೇನನು ಕಣ್ಣೀರಿಡುತ್ತಾ ಸುಮ್ಮನಿರಲು, ಧರ್ಮರಾಜನು ಅರ್ಜುನನನ್ನು ಸಮಾಧಾನಿಸುತ್ತ ಇಂತೆಂದನು: 'ಪಾರ್ಥ ! ನೀನು ಸಂಸಪ್ತಕರಿಂದ ಹೋರಾಡಲು ಹೊರಟೆ ! ನನ್ನ ಹಿಡಿಯಲು ಆಚಾರ್ಯನು ಪದ್ಮವ್ಯೂಹವನ್ನು ರಚಿಸಿದನು. ದ್ರೋಣಾನಿಕವು ಇಂದು ಅದೇನು ಮಂತ್ರ ಪ್ರಭಾವವೋ ನೋಡಲು ಕೂಡ ಬರುವಂತಿದ್ದಿಲ್ಲ. ಅಭಿಮನ್ಯುವಿನನ್ನು ನಾನೇ ಬೇಡಲು, ಒಪ್ಪಿ ಅವನು ವ್ಯೂಹವನ್ನು ಭೇದಿಸಿ ಪ್ರವೇಶಿಸಿದನು. ಅವನ ಹಿಂದೆಯೇ ನುಗ್ಗಿದ ಭೀಮಾದಿಗಳನ್ನು ಜಯದ್ರಥನು ಎಂದೂ ತೋರದ ಬಲದಿಂದ ತಡೆದು ನಿಲ್ಲಿಸಿಬಿಟ್ಟನು. ಎಷ್ಟು ಪ್ರಯತ್ನಿಸಿದರೂ ರುದ್ರವರ ದರ್ಪಿತನಾದ ಜಯದ್ರಥನನ್ನು ಗೆದ್ದು ವ್ಯೂಹವನ್ನು ಹೊಗಲು ನಮ್ಮ ಕೈಲಾಗಲಿಲ್ಲ. ಪಾಪಿ ಜಯದ್ರಥನಿಂದ ಇಂತಹ ಅನರ್ಥವಾಯಿತು. ಒಳಗೆ ದ್ರೋಣ, ಕೃಪ, ಕರ್ಣ, ದ್ರೌಣಿ, ಬೃಹದ್ಬಲ, ಕೃತವರ್ಮರೆಂಬ ಷಡ್ರಥರು ಅಭಿಮನ್ಯುವಿನನ್ನು ತಡೆದು ವಿರಥನನ್ನು ಮಾಡಿದರು. ದೌಶ್ಶಾಸನಿಯು ಅಭಿಮನ್ಯುವಿನ ವೀರ ವಿಹಾರವನ್ನು ತಡೆದು, ಗದಾಯುದ್ಧದಲ್ಲಿ ತೊಡಗಿದನು. ಅವರೀರ್ವರು ಪರಸ್ಪರ ನಿಹತರಾದರು. ಅಭಿಮನ್ಯುವು ಸಾವಿರಾರು ನರಾಶ್ವ ರಥಿಕದಂತಿಗಳನ್ನು ಸಂಹರಿಸಿದನು. ಬೃಹದ್ಬಲ ಲಕ್ಷಣರನ್ನು ಕೊಂದನು. ತಾನು ವೀರಸ್ವರ್ಗವನ್ನು ಸೇರಿ, ನಮ್ಮನ್ನು ದುಃಖಸಾಗರದಿ ಮುಣುಗಿಸಿದನು.'

ಆ ಮಾತನ್ನಾಲಿಸಿ ಅರ್ಜುನನು 'ಹಾ ! ಪುತ್ರ !' ಎಂದು ಚೀರಿ, ಮೂರ್ಛೆ ಬಿದ್ದನು. ಪಾಂಡವಾದಿಗಳು ದೀನರಾಗಿ ವಿಲಪಿಸಿದರು. ಸ್ವಲ್ಪ ಹೊತ್ತಿಗೆ ಎಚ್ಚತ್ತು ಅರ್ಜುನನು ಕೋಪ ಶೋಕಪರೀತನಾಗಿ, ಮೈ ನಡುಗುತ್ತಿರಲು, ಕೈಕೈ ಹಿಸುಕಿ ಇಂತು ಪ್ರತಿಜ್ಞೆ ಮಾಡಿದನು: 'ಮಹಾರಾಜ ! ಸತ್ಯವನ್ನು ಹಿಡಿದು ಪ್ರತಿಜ್ಞೆ ಮಾಡುತ್ತಿರುವೆನು. ನಾಳೆ ಸೂರ್ಯಾಸ್ತಮಾನದೊಳಗೆ ಜಯದ್ರಥನನ್ನು ಸಂಹರಿಸುವೆನು. ಪುತ್ರ ವಧಾಕಾರಣನಾದ ಪಾಪಿ ಜಯದ್ರಥನನ್ನು ನಾಳೆ ಕೊಲ್ಲುವೆನು. ರಣರಂಗ ಬಿಟ್ಟೋಡಿದರೆ, ಭೀಮ ಕೃಷ್ಣರಿಗೆ ಶರಣಾಗಿ ಬಂದರೆ, ನಿನ್ನ ಕಾಲ ಹಿಡಿದು ಪ್ರಾಣಭಿಕ್ಷೆ ಯಾಚಿಸಿದರೆ ಮಾತ್ರ ಅವನು ಉಳಿಯಲಾದೀತು. ಅವನನ್ನು ರಕ್ಷಿಸುವ ದ್ರೋಣ ಕೃಪರನ್ನೂ ಶರಜಾಲದಿಂದ ಮುಚ್ಚುವೆನು.

ಇಂತು ನಾಳೆ ಜಯದ್ರಥನನ್ನು ಕೊಲ್ಲದಿದ್ದರೆ ನನಗೆ ಶೂರಸಮ್ಮತವಾದ ಪುಣ್ಯ ಲೋಕಗಳಾಗದಿರಲಿ ! ಮಾತೃ ಪಿತೃ ಹಂತಕರು, ಗುರುದಾರತರು, ಸಾಧು ಜನಾಸೂಯಾಪರರು, ಪರನಿಂದಕರು, ವಿಶ್ವಾಸಘಾತುಕರು, ಬ್ರಹ್ಮಘಾತುಕರು, ಗೋಹಂತಕರು, ನಿವೇದಿತವಲ್ಲದ, ಬಾಲವಿಪ್ರರಿಗೀಯದ ಮೃಷ್ಟಾನ್ನವನ್ನು ಉಂಬುವರು, ವೇದವಿದ್ವಿಪ್ರರನ್ನು ನಿಂದಿಸುವರು. ವಿಪ್ರ ವಹ್ನಿ ಗೋವುಗಳನ್ನು ಪಾದದಿಂದ ಮುಟ್ಟುವರು, ಜಲದಲ್ಲಿ ಮೂತ್ರ ಪುರೀಷಗಳನ್ನು ಬಿಡುವವರು, ಮಿಥ್ಯಾ ನಿಂದಕರು, ವೃಷಲೀಪತಿ ಪೂಜಕರು, ವಂಚಕರು, ಮದ್ಯಪಾನರತರು, ವೇದ ಧರ್ಮ ದೂಷಕರು, ಕೃತಘ್ನರು, ನಿಷ್ಠುರಭಾಷಿಗಳು, ಶೀತ ಭೀತರಾದ ವಿಪ್ರರು, ರಣಭೀತರಾದ ಕ್ಷತ್ರಿಯರು, ವೇದಾಧ್ಯಯನವಿಲ್ಲದ ಗ್ರಾಮದಲ್ಲಿ ಆರು ತಿಂಗಳಿಗೆ ಹೆಚ್ಚಿದ್ದವರು, ಶಾಸ್ತ್ರ ನಿಂದಕರು, ದಿವಾ ಮೈಥುನಿಕರು, ಗೃಹದಾಹಿಗಳು, ಗರದಾಯಿಗಳು, ಕನ್ಯಾ ವಿಕ್ರಯಕರು, ಆಸ್ಯಮೈಥುನಿಕರು, ಬಹು ಯಾಜಿಗಳು, ಪ್ರತಿ ಶ್ರುತವನ್ನು ದಾನಮಾಡದವರು ಮೊದಲಾದ ಪಾಪಿಗಳು ಸೇರುವ ಲೋಕಗಳು ಜಯದ್ರಥನನ್ನು ನಾಳೆ ಕೊಲ್ಲದಿದ್ದ ಎನಗಾಗಲಿ !

ಅಸುರಾಸುರ ಮಾನವರೊಟ್ಟುಗೂಡಿ ಜಯದ್ರಥನನ್ನು ರಕ್ಷಿಸ ಬಂದರೂ ಅವನನ್ನು ನಾಳೆ ಸೂರ್ಯಾಸ್ತಮಾನದ ಒಳಗೇ ಕೊಲ್ಲುವೆನು. ಹಾಗಾಗದಿದ್ದರೆ ಅಗ್ನಿಪ್ರವೇಶ ಮಾಡುವೆನು. ರಸಾತಲವನ್ನು ಹೊಕ್ಕರೂ ಬಿಡದೆ, ಸೈಂಧವನನ್ನು ಸಂಹರಿಸುವೆನು."

ಆಗ ಶ್ರೀಕೃಷ್ಣನು ಪಾಂಚಜನ್ಯವನ್ನೂದಿದನು. ಅದರ ಭೀಷಣ ಘೋಷಣವು ಪ್ರಳಯ ಸಮಯ ಪರ್ಜನ್ಯ ಗರ್ಜವನ್ನು ಧಿಕ್ಕರಿಸಿ, ದಿಕ್ಕುಗಳಲ್ಲಿ ತುಂಬಿತು. ಭೀಮಾರ್ಜುನಾದಿಗಳೂ ಶಂಖಗಳನ್ನೂದಿದರು. ಹಿಂದೆಯೇ ವಾದ್ಯ ಪಟಹ ಭೇರೀ ದುಂದುಭಿ ಧ್ವಾನಗಳೂ, ಯೋಧರ ಸಿಂಹನಾದಗಳೂ ಕೌರವರ ಶಿಬಿರದಲ್ಲಿ ವ್ಯಾಪಿಸಿ, ಅವರು ಆಶ್ಚರ್ಯಭಯ ಸಂಭ್ರಮಾನ್ವಿತರಾದರು.

ಅರ್ಜುನ ಪ್ರತಿಜ್ಞೆಯನ್ನು ಚಾರರಿಂದ ತಿಳಿದು ಜಯದ್ರಥನು ಭಯ ಶೋಕ ವಿಹ್ವಲನಾದನು. ಆ ಕ್ಷಣವೇ ಅವನು ರಾಜರ ಸಭೆ ಸೇರಿಸಿ, ಅವರ ಮುಂದೆ ತಲೆ

ತಗ್ಗಿಸಿ ಇಂತು ನುಡಿದನು: "ಶಕ್ರನಿಂದ ಜನಿಸಿದ ಪಾರ್ಥನು ನಾಳೆ ಸಾಯಂಕಾಲದೊಳಗೆ ನನ್ನನ್ನು ಕೊಲ್ಲಲು ಪ್ರತಿಜ್ಞೆ ಮಾಡಿರುವನಂತೆ ! ನಿಮಗೆ ಸ್ವಸ್ತಿಯಾಗಲಿ ! ನಾನಿಲ್ಲಿದ್ದು ಸಾಯಲಾರೆನು. ಮನೆಗೆ ಓಡಿಹೋಗುವದೇ ನನಗೆ ಕ್ಷೇಮಕರವೆಂದು ತೋರುತ್ತಿದೆ. ಅಥವಾ ದ್ರೋಣ ದುರ್ಯೋಧನ ಕೃಪ ಶಲ್ಯ ಕರ್ಣ ಬಾಹ್ಲಿಕರು ನನ್ನನ್ನು ಅರ್ಜುನನಿಂದ ಕಾಪಾಡಲು ಶಕ್ತರಾಗಿರುವರು. ಅವರು ನನಗೆ ಅಭಯವನ್ನಿತ್ತರೆ, ನಿಂತು ಕಾದುವೆನು. ಪಾಂಡವ ಪ್ರತಿಜ್ಞೆಯನ್ನು ಅನ್ಯಥಾಕರಿಸಲಾಗದೆಂದಿದ್ದರೆ ನನಗೆ ಅಪ್ಪಣೆ ಕೊಡಿ ! ಯಾರಿಗೂ ಕಾಣದಂತೆ ಹೊರಟುಹೋಗುವೆನು."

ಆ ಮಾತನ್ನಾಲಿಸಿ ದುರ್ಯೋಧನನು ಹುಸಿನಕ್ಕು 'ಸೈಂಧವ ! ಭಯಪಡಬೇಡ ! ದ್ರೋಣಾದಿ ಮಹಾವೀರರ ಮಧ್ಯದಲ್ಲಿಟ್ಟು ನಿನ್ನನ್ನು ಕಾಪಾಡುವೆವು. ನೀನೂ ಸ್ವಯಂ ಶೂರನಿರುವೆ ! ಪಾಂಡವರಂತಹ ಹೇಡಿಗಳಿಗೇಕೆ ಹೆದರುವೆ ?' ಎಂದು ಆಶ್ವಾಸಿಸಿ, ಅವನನ್ನು ದ್ರೋಣನಲ್ಲಿಗೆ ಕರೆದುಕೊಂಡು ಹೋದನು. ಜಯದ್ರಥನು ಆಚಾರ್ಯನಿಗೆ ನಮಿಸಿ, 'ಪೂಜ್ಯನೇ ! ಲಕ್ಷ್ಯವೇಧ, ಲಘುತ್ವ, ದೂರ ಪಾತಿತ್ವ, ಮೊದಲಾದ ಗುಣಗಳಿಂದ, ವಿದ್ಯಾವಿಶೇಷದಿಂದ ನನಗೂ ಅರ್ಜುನನಿಗೂ ಇರುವ ತಾರತಮ್ಯವನ್ನು ತಿಳಿಸು !' ಎಂದು ಕೇಳಿದನು. ಆಚಾರ್ಯನು 'ತಾತ ! ಆಚಾರ್ಯ ಸೇವೆಯನ್ನು ಮಾಡಿ ವಿದ್ಯಾಸ್ವೀಕಾರವನ್ನು ನೀವಿಬ್ಬರೂ ಮಾಡಿರುವಿರಿ ! ಆದರೆ ವನವಾಸಕ್ಲೇಶದ ರೋಷದಿಂದಲು, ತಪೋಬಲದಿಂದಲು, ಅಸ್ತ್ರಗಳಿಂದಲು ಅರ್ಜುನನು ನಿನಕಿಂತ ಉತ್ತಮನು. ಆದರೂ ಅವನಿಗೆ ನೀನು ಹೆದರುವ ಕೆಲಸವಿಲ್ಲ. ನಾನು ನಿಂತು ನಿನ್ನನ್ನು ಸವ್ಯಸಾಚಿಯಿಂದ ಸಂರಕ್ಷಿಸುವೆನು. ಪಾರ್ಥನು ದಾಟಿ ಬರಲಾಗದ ವ್ಯೂಹವನ್ನು ರಚಿಸಿರುವೆನು. ನನ್ನ ಬಾಹುದ್ವಯದಿ ರಕ್ಷಿತನಾಗಿರುವ ನಿನ್ನನ್ನು ಅಮರರು ಕೊಲ್ಲಲಾರರೆಂದು ತಿಳಿ ! ಯುದ್ಧ ಬಿಟ್ಟೋಡಬೇಡ ! ಸ್ವಧರ್ಮವನ್ನು ಪಾಲಿಸು ! ಮಹಾರಥನಿರುವೆ ! ವೇದಗಳನ್ನೋದಿ, ಯಜ್ಞಗಳನ್ನು ಮಾಡಿ, ಪಿತೃ ಪಿತಾಮಹರು ನಡೆದ ಮಾರ್ಗದಲ್ಲಿ ನಡೆವ ನಿನಗೆ ಮೃತ್ಯುವೆಂದರೆ ಹೆದರಿಕೆ ಏಕೆ ? ವೀರನಾಗಿ ಕಡಿದಾಡು ! ವೀರ ಲೋಕಗಳನ್ನು ಹೊಂದುವೆ ! ಲೋಕದ ಜನರೆಲ್ಲರು ಅಧ್ರುವರು, ಕಾಲವು ಬಲೀಯವು. ಆದರಿಂದ ಎಲ್ಲರೂ ಕೊಲ್ಲಲ್ಪಡುವರು. ನಮ್ಮ ನಮ್ಮ ಕರ್ಮಗಳಿಗೆ ತಕ್ಕ ಪರಲೋಕವು ನಮಗಾಗಿ ಕಾದಿದೆ. ಹಿಂದೆಗೆಯಬೇಡ ! ನಡೆ !' ಎಂದು ಕಳಿಸಿದನು.

ಧೃತರಾಷ್ಟ್ರ ! ಸಿಂಧುರಾಜನನ್ನು ವಧಿಸುವ ಪ್ರತಿಜ್ಞೆಯನ್ನು ಮಾಡಿದ ಅರ್ಜುನನನ್ನು ನೋಡಿ ಶ್ರೀಕೃಷ್ಣನಿಂತೆಂದನು: 'ಪಾರ್ಥ ! ಬಹು ಸಾಹಸ ಮಾಡಿರುವೆ! ನಿನ್ನ ಸೋದರರ ಮತವರಿಯದೆ, ದುಡುಕಿ ಮಾಡಿದ ಪ್ರತಿಜ್ಞೆಯು ಅತಿ ದುಷ್ಕರವೆಂದು ತೋರುತ್ತಿದೆ. ನನ್ನನ್ನು ಕೇಳದೆ, ಹಿಂದುಮುಂದಾಲೋಚಿಸದೆ, ಇಂತಹ ಕಠಿನ ಪ್ರತಿಜ್ಞೆ ಮಾಡಿರುವೆ ! ಒಂದು ವೇಳೆ ಪ್ರತಿಜ್ಞೆಯು ಪೂರ್ಣವಾಗದಿರೆ, ನಾವೆಲ್ಲರೂ ಹಾಸ್ಯಾಸ್ಪದರಾಗುವೆವು. ಧಾರ್ತರಾಷ್ಟ್ರ ಶಿಬಿರದಿಂದ ನಮ್ಮ ಚಾರರು ಸುದ್ದಿ

ತಂದಿರುವರು. ನಿನ್ನ ಪ್ರತಿಜ್ಞೆಯನ್ನು ಪಾಂಡವ ಸೈನಿಕರ ಸಿಂಹನಾದಗಳನ್ನು ಕೇಳಿ, ಕೌರವ ಯೋಧರ ಹರ್ಷವು ವಿಷಾದವಾಯಿತು. ಅವರೆಲ್ಲ ಸಭೆಗೂಡಿ 'ವಾಸುದೇವನ ಸಹಾಯನಾದ ಧನಂಜಯನನ್ನು ದೇವೇಂದ್ರಾದಿಗಳೂ ಗೆಲ್ಲಲಾರರು. ಗದಾಪಾಣಿಯಾದ ಭೀಮಸೇನನನ್ನು ಮಹೇಶ್ವರನೂ ಎದುರಿಸಿ ನಿಲ್ಲಲಾರನು' ಎಂದು ನಿಶ್ಚಯಿಸಿ ಆಚಾರ್ಯನಿಗೆ ಶರಣಾದಂತೆ ! ಆಚಾರ್ಯನು ಶಕಟಾಬ್ಜವ್ಯೂಹವನ್ನೊಡ್ಡಿ ಕರ್ಣಿಕಾ ಮಧ್ಯದಲ್ಲಿ ಸೈಂಧವನನ್ನು ಬಚ್ಚಿಟ್ಟು ಕಾಪಾಡುವನಂತೆ ! ಪಾರ್ಥ ! ದ್ರೋಣಾದಿ ಷಡ್ರಥರನ್ನು ಗೆದ್ದಲ್ಲವೇ, ಸೈಂಧವನನ್ನು ಸೇರಬೇಕು ? ಅವರನ್ನು ಗೆಲ್ಲುವ ವೇಳೆಗೆ ಸಾಯಂಕಾಲವು ಆಗಿಬಿಡುವುದು. ಆಲೋಚಿಸು !'

ಅರ್ಜುನನು ಶ್ರೀಶನಿಗೆ ವಂದಿಸಿ, ಇಂತೆಂದನು: 'ಕೃಷ್ಣ ! ಷಡ್ರಥರು ಕಲೆತು ನನ್ನ ವೀರ್ಯದಿಂದ ಅಧಿಕ ವೀರ್ಯರಾಗಲಾರರು. ದ್ರೋಣಾದಿಗಳು ನೋಡುತ್ತಿರಲು ಸಿಂಧುರಾಜನ ತಲೆ ಉರುಳಿಸುವೆನು. ವಸುರುದ್ರಾದಿತ್ಯ ವಿಶ್ವೇದೇವತೆಗಳು ರಕ್ಷಕರಾಗಿ ನಿಂತರೂ ಜಯದ್ರಥನು ಉಳಿಯನೆಂದು, ಗಾಂಡೀವ ಪಿಡಿದು ಶಪಥ ಮಾಡುತ್ತಿರುವೆನು. ಪಾಪಿ ಸೈಂಧವನನ್ನು ಬೆನ್ನಿಗೆ ಹಾಕಿಕೊಂಡು ಬಂದ ಆಚಾರ್ಯ ದ್ರೋಣನನ್ನೂ ಬಿಡದೆ ಕಾಡಿ ಓಡಿಸುವೆನು. ಸುಯೋಧನನ ಆಶೆಯನ್ನು ಪೂರೈಸುವ ಪಣತೊಟ್ಟ ದ್ರೋಣನ ಸೈನ್ಯವೇ ನನ್ನ ಬಾಣಾಗ್ನಿಗೆ ಮೊದಲು ಆಹುತಿ. ನಾಳೇ ನೀನೇ ನೋಡುವೆ ! ಕೃಷ್ಣ ! ಗಾಂಡೀವ ಮುಕ್ತ ಬಾಣಧಾರೆಗಳಿಂದ ಸೈನಿಕ ರಕ್ತ ನದಿಗಳು ಹರಿಯುವವು. ಯಮ ಕುಬೇರಾಸ್ತ್ರಗಳಿವೆ. ವರುಣ ವಾಯವ್ಯಾಸ್ತ್ರಗಳಿವೆ, ರುದ್ರಾಸ್ತ್ರವಿದೆ, ಬ್ರಹ್ಮಾಸ್ತ್ರದಿಂದ ಕೌರವ ಯೂಥಪತಿಗಳ ಕಂಧರಗಳನ್ನು ಕಡಿದು ರಣಭೂಮಿಯಲ್ಲಿ ಈಡಾಡುವೆನು. ಮಾಂಸ ರಕ್ತಗಳಿಂದ ಕ್ರವ್ಯಾದಗಳನ್ನು, ಶತ್ರುವಧದಿಂದ ಬಂಧು ಜನರನ್ನು ಆನಂದಪಡಿಸುವೆನು. ಪಾಪ ದೇಶ ಸಮುದ್ಭವನು, ಸರ್ವಕ್ಷೀರ ಭೋಕ್ತನು ಆದ ಪಾಪಿ ಸೈಂಧವನನ್ನು ನಾನು ಸಂಹರಿಸಿದ್ದನ್ನು ನಿನಗೆ ತೋರುವೆನು. ಗಾಂಡೀವ ದನುವಿದೆ, ಸಾರಥಿಯಾಗಿ ನೀನಿರುವೆ, ಇನ್ನು ಈ ಧನಂಜಯನಿಗೆ ಅಜೇಯರಾರಿರುವರು ? ಭಗವನ್ ! ನಿನ್ನ ಅನುಗ್ರಹದಿಂದ ರಣವಿಜಯವೆನಗೆ ಸಿಕ್ಕಿದೆ - ಸುಮ್ಮನೆ ಹೆದರಿಸಬೇಡ ! ಸಮುದ್ರದಲ್ಲಿ ಜಲವು ಸ್ಥಿರ; ಚಂದ್ರಮನಲ್ಲಿ ಕಾಂತಿಯು ಸ್ಥಿರ ; ಹಾಗೆಯೇ ನಿನ್ನವನಾದ ನನ್ನಲ್ಲಿ ಜಯವೂ ಸ್ಥಿರವಾಗಿದೆ. ಬ್ರಾಹ್ಮಣನಲ್ಲಿ ಸತ್ಯವು ಧ್ರುವ ; ಸಾಧುಗಳಲ್ಲಿ ವಿನಯವು ಧ್ರುವ ; ಯಜ್ಞದಲ್ಲಿ ಸಂಪತ್ತು ಧ್ರುವ ; ನಾರಾಯಣನಾದ ನಿನ್ನಲ್ಲಿ ಜಯವು ಧ್ರುವ " ಇಂತು ನುಡಿದು ಬೆಳಗಾಗುತ್ತಲೇ ರಥವನ್ನು ಸಜ್ಜುಗೊಳಿಸೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿದನು.

ವಾಸುದೇವ ಧನಂಜಯರು ಅಂದಿನ ರಾತ್ರಿ ನಿದ್ರೆ ಮಾಡದೆ ಚಿಂತಿಸುತ್ತಿದ್ದರು. ಅದನ್ನರಿತ ದೇವತೆಗಳು 'ನರ ನಾರಾಯಣರು ಕ್ರುದ್ಧರಾಗಿರುವರು. ಏನನರ್ಥವಾಗುವದೋ !' ಎಂದು ಆಲೋಚಿಸಿದರು. ಬಿರುಗಾಳಿ ಬೀಸಿತು. ಆಕಾಶದಿಂದ ಮೇಘವರ್ಷಗಳಿಲ್ಲದೆ ಸಿಡಿಲು ಬಡಿಯಿತು. ಭೂಮಿಯು ಕಂಪಿಸಿತು.

ಸಾಗರಗಳು ಉಕ್ಕೇರಿದವು. ನದಿಗಳು ಪ್ರತಿಕೂಲವಾಗಿ ಹರಿದವು. ಅದನ್ನು ತಿಳಿದು ಕೌರವ ಸೈನಿಕರು ಎದೆಗುಂದಿದರು.

ಅರ್ಜುನನ ಪ್ರಾರ್ಥನೆ ಮೇರೆಗೆ, ಶ್ರೀಕೃಷ್ಣನು ಉಪಪ್ಲಾವ್ಯವನ್ನು ಸೇರಿ, ಅಲ್ಲಿದ್ದ ಸುಭದ್ರಾ ಪಾಂಚಾಲೀ ಪ್ರಮುಖ ನಾರೀ ಜನವನ್ನು ಆಶ್ವಾಸಿಸಿದನು: 'ತಂಗಿ ! ಅಳಬೇಡ ! ಕ್ಷತ್ರಿಯ ಕುಲವೀರನಿಗೆ ಸದೃಶವಾದ ರಣ ಮರಣವನ್ನು ಹೊಂದಿರುವ ನಿನ್ನ ಮಗನಿಗಾಗಿ ಶೋಕಿಸುವುದು ಸರಿಯಲ್ಲ. ಸೊಸೆಯ ದುಃಖವನ್ನು ನೋಡು ! ಅವಳನ್ನು ಸಮಾಧಾನಪಡಿಸು ! ಅಭಿಮನ್ಯುವು ಪಿತೃಸಮಾನ ವಿಕ್ರಮನೆನಿಸಿ, ಬಹು ಮಹಾರಥರನ್ನು ಸಂಹರಿಸಿ, ಪುಣ್ಯಲೋಕವನ್ನು ಸೇರಿರುವನು. ಅವನಿಗಾಗಿ ಅಳಬೇಡ! ನಿನ್ನ ಮಗನ ಸಂಹಾರ ಕಾರಣನಾದ ಸೈಂಧವನನ್ನು ಸೇಡಿನಿಂದ ಕೆಡಹುವ ಅರ್ಜುನನ ವಿಕ್ರಮವನ್ನು ನಾಳೆ ಕೇಳುವೆ ! ಕ್ಷತ್ರಿಯಾಣಿಯಾದ ನಿನಗೆ ಶೋಕವು ತರವಲ್ಲ. ವೀರಪತ್ನಿಯಾಗಿದ್ದೆ ! ಈಗ ವೀರಮಾತೆಯಾದೆ !' ಎಂದು ದ್ರೌಪದಿ ಮುಖ್ಯ ನಾರೀ ಜನರನ್ನೂ ಸಮಾಧಾನಗೊಳಿಸಿದಳು.

ಸುಭದ್ರೆಯು ಪುತ್ರಶೋಕವನ್ನು ತಾಳಲಾರದೆ ವಿಲಪಿಸಿದಳು. 'ಹಾ ಪುತ್ರ ! ಮಂದಭಾಗ್ಯಳಾದ ನನಗೆ ನಿನ್ನಂತಹ ಮಗನೆಂತು ದಕ್ಕುವನು ? ಇಂದೀವರಶ್ಯಾಮನು, ಚಾರುಕಮಲ ನೇತ್ರನು ಆದ ನಿನ್ನ ಮುಖವನ್ನು ಮತ್ತೆ ನೋಡುವೆನೇ ? ರಣರಂಗದ ಬರಿನೆಲದಲ್ಲಿ ಶಸ್ತ್ರಖಚಿತ ಸರ್ವಾಂಗನಾಗಿ ಬಿದ್ದಿರುವಂತಾಯಿತೆ, ಹಂಸ ತೂಲಿಕಾತಲ್ಪದಲ್ಲಿ ಮಲಗುವ ಕುಮಾರನಿಗೆ ! ವರಸ್ತ್ರೀ ಮಧ್ಯದಲ್ಲಿ ಸೇವಿತನಾಗಿದ್ದ ಸುಕುಮಾರನಿಂದು ಕಾಡು ಮೃಗಗಳಿಗಾಹಾರವಾದನೇ ? ಪಾಂಡವ ವೃಷ್ಣಿ ವೀರರು ಉಸಿರಿನಿಂದಿರಲು, ಅನಾಥನಂತೆ ಸತ್ತನೇ ? ಅಯ್ಯೋ ! ಕುಮಾರ ! ನಿನ್ನನ್ನು ಬಿಟ್ಟು ನಾನು ಬದುಕಿರಲಾರೆನು. ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ ! ಪಾರ್ಥನ ಧನುಷ್ಪಾಂಡಿತಿಗೆ ಧಿಕ್ಕಾರವಿರಲಿ ! ನಿನ್ನನ್ನು ರಣ ವ್ಯೂಹದಿ ನೂಕಿ, ಕಾಪಾಡಲಾರದಾದ ವೀರರ ಶೌರ್ಯಕ್ಕೆ ಧಿಕ್ಕಾರವಿರಲಿ ! ಅಭಿಮನ್ಯೋ ! ಇಂದೆನಗೆ ಪೃಥ್ವಿಯೇ ಶೂನ್ಯವಾಗಿದೆ. ವತ್ಸ ! ಬಾ ! ಒಂದು ಸಲ ನಿನ್ನ ಮುಖವನ್ನು ತೋರು ! ಕಣ್ಣೀರಿಂದ ಕೈತೊಳೆದ ನಿನ್ನ ಕಾಂತೆಯನ್ನು ಸಂತೈಸು ! ನೀನಿಲ್ಲದೆ ಅವಳಿನ್ನೆಂತು ಜೀವಿಸುವಳು ? ಇಷ್ಟು ಬೇಗನೆ ತುಂಬಿದವನೇ ನಿನಗೆ ನೂರು ವರ್ಷಗಳು ! ಕೇಶವನಿದ್ದೂ ನೀನು ಹತನಾದೆ ಎಂದರೆ ಕೃತಾಂತನಿಗೆ ಎದುರಿಲ್ಲ, ನಮ್ಮ ದೌರ್ಭಾಗ್ಯಕ್ಕೆ ಎಣೆ ಇಲ್ಲವೆಂದು ತೋರುತ್ತಿದೆ.

ಬ್ರಾಹ್ಮಣ ಭಕ್ತರು, ದಾನಶೀಲರು, ಯಜ್ಞ ದೀಕ್ಷಿತರು, ಏಕಪತ್ನೀ ವ್ರತರು, ಮಾತಾ ಪಿತೃ ಶುಶ್ರೂಷುಗಳು, ದೀನಾನುಕಂಪಿಗಳು, ಸಂಶಿತವ್ರತರು, ಮಧು ಮಾಂಸ ವರ್ಜಕರು, ಶಾಸ್ತ್ರಜ್ಞರು ಮುಂತಾದ ಸಾಧು ಜನರಿಗಾಗುವ ಪುಣ್ಯಲೋಕಗಳು ನಿನಗಾಗಲಿ ! ಶ್ರೀಕೃಷ್ಣ ! ಇಷ್ಟಾದರೂ ಅನುಗ್ರಹಿಸು ನಿನ್ನ ಅಳಿಯನಿಗೆ !' ಎಂದು ಅತ್ತತ್ತು ಸುಭದ್ರೆ ಮೂರ್ಛಿತಳಾದಳು. ಶ್ರೀಕೃಷ್ಣನು ಅವಳಿಗೆ ಉಪಚಾರಗಳನ್ನು ಮಾಡಿ,

ಎಚ್ಚರಗೊಳಿಸಿದನು. 'ಸುಭದ್ರೇ ! ನುಂಗು ದುಃಖವನ್ನು ! ದ್ರೌಪದಿ ! ಧೈರ್ಯ ತಾಳು ! ನೀವಿರ್ವರಿಗೂ ಕಷ್ಟತರವಾದ ಸ್ಥಿತಿಯಲ್ಲಿರುವ ಉತ್ತರೆಯನ್ನು ಸಂತೈಸಿ ! ಅಭಿಮನ್ಯುವಿಗಾದ ವೀರ ಮರಣವನ್ನು ಸರ್ವ ಸುಕ್ಷತ್ರಿಯರು ಬಯಸುವರು. ಅವನಿಗಾಗಿ ಶೋಕಿಸಬಾರದು !' ಇಂತು ಸಂತೈಸಿ ರುಕ್ಮಿಣೀಕಾಂತನು, ಅಲ್ಲಿಂದ ತೆರಳಿ, ಮತ್ತೆ ರಣರಂಗವನ್ನು ಸೇರಿದನು.

ಅಲ್ಲಿ ಶ್ರೀಕೃಷ್ಣನು ಪಾರ್ಥನ ಮನೆಸೇರಿ, ಅವನಿಂದ, ಅವನ ಗುರುಪೂಜೆಯನ್ನು ಮಾಡಿಸಿದನು. ಬೇಕಾದ ಪರಮಾನುಗ್ರಹವನ್ನೆಲ್ಲ ತಾನೇ ಕೊಡಲು ಸಮರ್ಥನಾದರೂ, ಶ್ರೀರಮಣನು, ತಾನು ಗುರುದ್ವಾರಾ ಪ್ರಸಾದಕರ್ತನೆಂದು ತೋರಿಸಿದನು. ರಾತ್ರಿಯ ಪ್ರಥಮಯಾಮವಾಗುತ್ತಿತ್ತು. ಅರ್ಜುನನು ದಿವ್ಯಸ್ಥಂಡಿಲದಲ್ಲಿ ವೈದೂರ್ಯವರ್ಣದ ದರ್ಭೆಗಳನ್ನು ಹಾಸಿ, ಅದರಲ್ಲಿ ಆಯುಧಗಳನ್ನಿಟ್ಟನು. ಪರಿಚಾರಿಕೆಯರು ರಂಗವಲ್ಲಿಯನ್ನಿಟ್ಟು ದೀಪಗಳನ್ನು ಹಚ್ಚಿಸಿದರು. ಶುಚಿಯಾದ ಅರ್ಜುನನು ಮೊತ್ತಮೊದಲು ಗಂಧ ಮಾಲ್ಯಗಳಿಂದ ಶ್ರೀಕೃಷ್ಣನನ್ನು ಪೂಜಿಸಿದನು. ಅನಂತರ ತ್ರಿಯಂಬಕನನ್ನು ಆವಾಹಿಸಿ ಪೂಜಿಸಿದನು. ಅರ್ಜುನನನ್ನು ಅಲ್ಲೇ ನೆಲದಲ್ಲಿ ಮಲಗುವಂತೆ ಆಜ್ಞಾಪಿಸಿ, ಶ್ರೀಕೃಷ್ಣನು ತನ್ನ ಶಿಬಿರವನ್ನು ಸೇರಿದನು. ದ್ವಾರದಲ್ಲಿ ರಕ್ಷಕರಿಗೆ ಎಚ್ಚತ್ತಿರುವಂತೆ ಕಟ್ಟಪ್ಪಣೆ ಮಾಡಿ, ಶ್ರೀಕೃಷ್ಣನು ಶುಭ್ರಶಯನವನ್ನಲಂಕರಿಸಿದನು. ಪಾರ್ಥನ ಶೋಕ ಸಂತಾಪವನ್ನು ಕಳೆಯುವುದೆಂತು ? ಸೈಂಧವ ವಧೆಗೆ ಬೇಕಾದ ತೇಜೋಬಲಗಳನ್ನವನು ಪೊಂದುವುದೆಂತು ? ಎಂದು ಚಿಂತಿಸುವ ಯೋಗೇಶ್ವರೇಶ್ವರನು ಸ್ವಸಾಮರ್ಥ್ಯದಿಂದ ಅರ್ಜುನನನ್ನು ಸ್ವಪ್ನದಲ್ಲಿ ಒಂದಂಶದಿಂದ ಕೈಲಾಸಕ್ಕೆ ಕರೆದುಕೊಂಡು ಹೋಗಲು ನಿಶ್ಚಯಿಸಿದನು.

ಅಲ್ಲಿ ಯುಯುತ್ಸುವು ಅರ್ಜುನನಿಗೆ ನಡೆದುದೆಲ್ಲವನ್ನೂ ತಿಳಿಸಿದನು. ಪಾಂಡವ ಯೋಧರು ಯಾರೂ ನಿದ್ದೆಮಾಡದೆ ಅರ್ಜುನನ ಪ್ರತಿಜ್ಞೆ ಸಫಲವಾಗುವದೆಂತೆಂದು ಚಿಂತಿಸುತ್ತಿದ್ದರು. ರಾತ್ರಿಯ ಮಧ್ಯಭಾಗದಲ್ಲಿ ಶ್ರೀಕೃಷ್ಣನು ತನ್ನ ಸಾರಥಿಯನ್ನು ಕರೆದು 'ದಾರುಕ ! ಅರ್ಜುನನು ಜಯದ್ರಥನನ್ನು ಕೊಲ್ಲುವಂತೆ ಪ್ರತಿಜ್ಞೆ ಮಾಡಿರುವನು. ಅದು ನಡೆಯದಂತೆ ದುರ್ಯೋಧನನು ಪ್ರಬಲ ಯತ್ನಗಳನ್ನು ಮಾಡಿ ಪ್ರತಿಜ್ಞಾ ಹಾನಿಯಿಂದ ಪಾರ್ಥನು ಅಗ್ನಿಪ್ರವೇಶ ಮಾಡಲೆಂದು ಹಾರೈಸುತ್ತಿರುವನು. ದ್ರೋಣ ರಕ್ಷಿತನಾಗಿರುವ ಜಯದ್ರಥನನ್ನು ಸಹಸ್ರಾಕ್ಷನೂ ಕಣ್ಣೆತ್ತಿ ನೋಡಲಾರನು. ಆದುದರಿಂದ ನಾನೇ ವಿಕ್ರಮಿಸಿ, ನಾಳೆ ಸೂರ್ಯಾಸ್ತಮಾನದೊಳಗಾಗಿ ಅರ್ಜುನ ಪ್ರತಿಜ್ಞೆ ಸಫಲವಾಗುವಂತೆ ಮಾಡುವೆನು. ಅರ್ಜುನಕಿಂತಲು ನನಗೆ ದಾರಾಪುತ್ರರು, ಮಿತ್ರ ಬಾಂಧವರು ಪ್ರಿಯತರರಲ್ಲ. ಅರ್ಜುನನಿಲ್ಲದ ಈ ಲೋಕವೇ ನನಗೆ ಬೇಕಾಗಿಲ್ಲ. ಅರ್ಜುನನಿಗಾಗಿ ದುಷ್ಟರನ್ನೆಲ್ಲ ಸಂಹರಿಸಿ, ಕರ್ಣ ಸುಯೋಧನರನ್ನೂ ನಾಶಮಾಡಲು ನಾನು ಹಿಂಜರಿಯುವನಲ್ಲ. ಚಕ್ರಪ್ರಮಥಿತರಾದ ಕುರುರಾಜನ ಮಿತ್ರರನ್ನು ಕ್ರುದ್ಧನಾದ ಕೃಷ್ಣನನ್ನು ನಾಳೆ ದೇವಋಷಿ ಗಂಧರ್ವರು ಕಾಣುವರು. ನನ್ನನ್ನು ಅರ್ಜುನ ಮಿತ್ರನೆಂದು

ಎಲ್ಲರೂ ತಿಳಿಯಲಿ ! ಅವನನ್ನು ದ್ವೇಷಿಸುವನು ನನ್ನ ದ್ವೇಷಿಯೇ ಸರಿ ! ಅವನ ಮಿತ್ರನು ನನ್ನ ಮಿತ್ರನೇ ನಿಜ ! ಅರ್ಜುನನೆಂದರೆ ನನಗೆ ಅರ್ಧ ಶರೀರವೆಂದು ತಿಳಿ ! ನನ್ನ ರಥವನ್ನು ಚಕ್ರ ಶಂಖಾದಿ ವಿವಿಧಾಯುಧೋಪೇತವಾಗಿ ಸಜ್ಜುಗೊಳಿಸಿಡು ! ವೈನತೇಯನ ಧ್ವಜವನ್ನೆತ್ತಿ ಕಟ್ಟು ! ಶೈಬ್ಯ ಸುಗ್ರೀವ ಮೇಘಪುಷ್ಪವಲಾಹಕಗಳನ್ನು ಯೋಜಿಸು ! ಒಂದೇ ದಿನದಲ್ಲಿ ನನ್ನ ಪಾಂಡವರ ಎಲ್ಲ ದುಃಖಗಳನ್ನೂ ನಾಶಮಾಡಿ ಬಿಡುವೆನು. ಧಾರ್ತರಾಷ್ಟ್ರರು ನೋಡುತ್ತಿರಲು ಧನಂಜಯನು ಸೈಂಧವನನ್ನು ಕೊಲ್ಲುವಂತೆ ಮಾಡುವೆನು.' ಎಂದನು. ದಾರುಕನು, 'ಶ್ರೀಶ ! ನೀನು ಸಾರಥಿಯಾಗಿರಲ್ಲು ಪಾರ್ಥರಿಗೆ ಅಪಜಯವಾಗುವುದೇ ? ನೀ ನುಡಿದಂತೆ ರಥಾದಿಗಳನ್ನು ಸಿದ್ಧಗೊಳಿಸಿ, ಪ್ರಭಾತದಲ್ಲಿ ಕಾಣುವೆನು.' ಎಂದು ಹೇಳಿ ಹೊರಟುಹೋದನು.

ಶ್ರೀಕೃಷ್ಣನು ಪಾರ್ಥ ಶಿಬಿರವನ್ನು ಸೇರಿ, ನಿದ್ದೆಮಾಡದೆ ಚಿಂತಿಸುವ ಅರ್ಜುನನನ್ನು ಕಂಡು, ಅವನಿಗೆ ಧೈರ್ಯವನ್ನು ತುಂಬುತ್ತಾ ಇಂತೆಂದನು: "ಪಾರ್ಥ ! ಶೋಕದಂತಹ ಶತ್ರುವಿಲ್ಲ, ಕಾಲಬಲದಿಂದ ಕಾಲಿತರಾದವರನ್ನು ಕುರಿತು ಅತ್ತು ಫಲವಿಲ್ಲ. ಶೋಕವು ಸಮಸ್ತ ಕಾರ್ಯ ನಾಶಕವಾಗಿದೆ. ಶತ್ರುಗಳು ನಿನ್ನ ಶೋಕದಿಂದ ಸಂತಸ ಪಡುವಂತಾದೀತು. ಬಂಧುಗಳು ನಿರುತ್ಸಾಹರೂ ಆಗುವರು. ಬಿಡು ಚಿಂತೆ ! ಕಾರ್ಯವಾವುದು ತಿಳಿದು ಆಚರಿಸು !' ಆ ಮಾತನ್ನಾಲಿಸಿ ಅರ್ಜುನನು, "ಕೃಷ್ಣ ! ದೊಡ್ಡ ಪ್ರತಿಜ್ಞೆ ಮಾಡಿರುವೆನು. ಪುತ್ರ ಹಂತಕನನ್ನು ನಾಳೆಯೊಳಗೆ ಎಂತು ಕೊಲ್ಲುವೆನೋ ತಿಳಿಯದಾಗಿದೆ. ಶತ್ರು ಮಹಾರಥರೂ ಅವನನ್ನು ಮಧ್ಯದಲ್ಲಿಟ್ಟು ರಕ್ಷಿಸುವರು. ಸೈನ್ಯವೂ ಆರಕ್ಷೌಹಿಣಿಗಳಷ್ಟಿದೆ. ಇಷ್ಟು ಪ್ರತಿ ವೀರರನ್ನು ದಾಟಿ ನಾನು ಸೈಂಧವನನ್ನು ಮುಟ್ಟುವದೆಂತು ? ಪ್ರತಿಜ್ಞೆ ವಿಫಲವಾದರೆ ನನ್ನಂತಹ ಸತ್ಯಪರಾಕ್ರಮನು ಎಂತು ಜೀವಿಸುವನು ? ನೀನೇ ಗತಿ ಎನಗೆ ಗೋವಿಂದ ! ನನ್ನನ್ನು ಸತ್ಯಪ್ರತಿಜ್ಞನನ್ನಾಗಿ ಮಾಡು" ಎಂದು ಕೈಮುಗಿದನು.

ಶ್ರೀಕೃಷ್ಣನು 'ಪಾರ್ಥ ! ಪಾಶುಪತವೆಂಬ ಅಸ್ತ್ರವಿದೆ. ಅದಕ್ಕೆ ಋಷಿಯು ಮಹೇಶ್ವರನು. ದೇವನು ನಾರಾಯಣನು. ಅದು ನಿನಗೆ ಮಹಾದೇವನು ಇಂದ್ರಕೀಲದಲ್ಲಿ ಕೊಟ್ಟಿರುವನಲ್ಲವೇ ? ಅದು ಮನೋನುಕೂಲಪಾತವಾದ ದಿವ್ಯಾಸ್ತ್ರವು. ಅದರ ಮಂತ್ರವು ವೀರ್ಯವತ್ತಾಗಿದೆಯಲ್ಲವೇ ? ಇಲ್ಲದಿರೆ ಮನಸಾ ವೃಷಭಧ್ವಜನನ್ನು ನೆನೆ ! ಅವನ ಪ್ರಸಾದದಿಂದ ನಿನಗೆ ಅಸ್ತ್ರದ ವಿಶೇಷ ಸಂಪತ್ತಿಯು ಆಗುವುದು. ಚಿಂತಿಸಬೇಡ !' ಎಂದು ಹೇಳಿ ಹೊರಟುಹೋದನು.

ಅರ್ಜುನನು ಶುಚಿಯಾಗಿ ಮಲಗಿದ್ದನು. ಬ್ರಾಹ್ಮಮುಹೂರ್ತದಲ್ಲಿ ಅವನಿಗೊಂದು ಕನಸು ಬಿತ್ತು. ಅರ್ಜುನನು ಕಂಡ ಬಗೆ ಇಂತಿತ್ತು.

'ಅರ್ಜುನನು ಕೇಶವನೀತನಾಗಿ ಆಕಾಶಮಾರ್ಗದಿ ಹಿಮಪರ್ವತದ ಮಣಿಮಚ್ಚಿ ಶಿಖರವನ್ನು ಸೇರಿದನು. ಶ್ರೀಕೃಷ್ಣನು ಅವನ ದಕ್ಷಿಣ ಭುಜವನ್ನು ಪಿಡಿದು

ಕರೆದೊಯ್ಯುತ್ತಿದ್ದನು. ಅವನು ಶ್ವೇತಗಿರಿಯನ್ನು ಕಂಡನು. ಪದ್ಮಷಂಡಮಂಡಿತವಾದ ಸರಸ್ಸುಗಳನ್ನು ಕಂಡನು. ಗಂಗೆಯನ್ನು ಕಂಡನು. ನಾನಾಮೃಗ ಸಮಾಕುಲವಾದ ಕಾನನಗಳನ್ನು ಕಂಡನು. ಪುಣ್ಯಾಶ್ರಮಗಳನ್ನು ಕಂಡನು, ತುಂಗಪರ್ವತವನ್ನು ಅದರಿಂದ ಹರಿಯುವ ನಿರ್ಝರಗಳನ್ನು ದಾಟಿ ಕೈಲಾಸಪರ್ವತವನ್ನು ಕಂಡನು. ಅದರ ತುದಿಯ ವಟವೃಕ್ಷದಡಿಯಲ್ಲಿ ತಪೋನಿರತನಾಗಿದ್ದ ಮಹಾದೇವನನ್ನು ಕಂಡನು. ಶೂಲಿಯು, ಜಟಾಮಂಡಿತನು, ಧವಳಗಾತ್ರನು, ಪರಮಪವಿತ್ರನು, ಗಂಗಾಧರನು, ಪಾರ್ವತೀವರನು, ಭೂತಸಂಘ ಸೇವಿತನು, ಪುಣ್ಯಗಂಧ ಶೋಭಿತನು, ಋಷಿಜನನುತನು, ಸುತ್ತರಮಾನಾಥನು ಆದ ಶಂಕರನನ್ನು ಕಂಡನು.

ಶ್ರೀ ಶಿವನು ಶ್ರೀಕೃಷ್ಣನಿಗೆ ವಂದಿಸಿ, ವೇದ ಮಂತ್ರಗಳಿಂದ ಸ್ತುತಿಸಿ, ಕೂಡಿಸಿ; ಪೂಜಿಸಿದನು. ಅರ್ಜುನನು ಶಿವನಿಗೆ ಪುನಃ ಪುನಃ ಸಾಷ್ಟಾಂಗವೆರಗಿ, ಕೈಜೋಡಿಸಿ ನಿಂತನು. ನರ-ನಾರಾಯಣರೇ ಅವರೆಂದರಿತ ಶಂಕರನು ಕೃಷ್ಣಾರ್ಜುನರಿಗೆ ಸ್ವಾಗತವಿತ್ತು ಅಭೀಪ್ಸಿತವೇನೆಂದು ಅರ್ಜುನನನ್ನು ಪ್ರಶ್ನಿಸಿದನು. ಪ್ರಸನ್ನವದನನಾದ ಶಿವನ ಮಾತನ್ನಾಲಿಸಿ ಅರ್ಜುನನು ಭಕ್ತಿಯಿಂದ ಇಂತು ಸ್ತುತಿಸಿದನು:

'ಭವ ! ಶರ್ವ ! ರುದ್ರ ! ವರದ ! ಪಶುಪತೇ ! ನಿನಗೆ ನಮಃ. ಉಗ್ರ ! ಕಪರ್ದಿ ! ಮಹಾದೇವ ! ಶಂಭೋ ! ತ್ರಿನೇತ್ರ ! ಶಾಂತ ! ಈಶಾನ ! ದಕ್ಷಯಜ್ಞ -ನಾಶಕ ! ಅಂಧಕಾರೇ ! ಕುಮಾರಗುರೋ ! ನೀಲಗ್ರೀವ ! ಪಿನಾಕಿನ್ ! ಅಪರಾಜಿತ ! ನೀಲಶಿಖಂಡ ! ಶೂಲಹಸ್ತ ! ಪ್ರಶಸ್ತ ! ದಿವ್ಯನೇತ್ರ ! ವ್ಯಾಧಮೂರ್ತೆ ! ಅಚಿಂತ್ಯ ! ಅಂಬಿಕಾಪತೇ ! ಲೋಕನಾಥ ! ವಿಶ್ವನಾಥ ! ಬ್ರಾಹ್ಮಣಪ್ರಿಯ ! ನಮೋನಮಃ. ನಿನ್ನಂತಹ ಭಕ್ತಾನುಕಂಪಿ ದೇವನಿನ್ನಿಲ್ಲ' ಎಂದು ನುತಿಸಲು, ಪ್ರಸನ್ನನಾದ ಮಹಾದೇವನಿಂತೆಂದನು: 'ಶ್ರೀಕೃಷ್ಣ ! ಕಮಲೇಕ್ಷಣ ! ಕಮಲಾನಾಥ ! ಪ್ರಪಿತಾಮಹ ! ಸಹಸ್ರನೇತ್ರ ! ಸಹಸ್ರಪಾದ ! ವಿಶ್ವಾತ್ಮನ್ ! ವಿಶ್ವಪತೇ ! ವಿಶ್ವವಿಭಿನ್ನ ! ಪರಮ ಮಂಗಳ ಸ್ವರೂಪ ! ನಮೋನಮಃ ಅರ್ಜುನ ! ಏನಾಗಬೇಕೆನ್ನಿಂದ ಬೇಡು ! ಬೇಕಾದುದನ್ನು ಕೊಡುವೆನು' ಎಂದನು. ಅರ್ಜುನನು 'ದೇವ ! ನಿನ್ನ ದಿವ್ಯಾಸ್ತ್ರವನ್ನು ವೀರ್ಯವತ್ತರವತ್ತರವನ್ನಾಗಿಸಿ ನೀಡು ! ನಿನ್ನ ದಯದಿಂದ ಶತ್ರುಗಳನ್ನು ಜಯಿಸುವಂತೆ ಮಾಡು !' ಎಂದು ಬೇಡಿದನು. ಮಹಾದೇವನು 'ಅರ್ಜುನ ! ಕೃಷ್ಣ! ಸಮೀಪದಲ್ಲಿ ಅಮೃತ ಸರೋವರವಿದೆ. ಅದರಲ್ಲಿ ಧನುವಿದೆ, ಪಾಶುಪತ ಬಾಣವಿದೆ. ಹಿಂದೆ ರಾಕ್ಷಸರನ್ನು ಸದೆಬಡಿದು ನಾನು ಅವೆರಡನ್ನು ಆ ಸರದಲ್ಲಿಟ್ಟಿರುವೆನು. ಹೋಗಿ ಅದನ್ನು ತನ್ನಿ!' ಎಂದನು.

ಕೃಷ್ಣಾರ್ಜುನರು ಪಾರಿಷದರಿಂದ ಕೂಡಿ, ಆ ಸರೋವರವನ್ನು ಸೇರಿದರು. ಅಲ್ಲಿರುವ ಸರ್ಪದ್ವಯವನ್ನು ಕಂಡು, ಕೃಷ್ಣನು 'ಅರ್ಜುನ ! ವೃಷಧ್ವಜವನ್ನು ಧ್ಯಾನಿಸು ! ಶತ ರುದ್ರಿಯನ್ನು ಜಪಿಸು !' ಎಂದನು. ಅಂತೇ ಧ್ಯಾನಿಸಲು ಸಹಸ್ರ ಶಿರವು, ವಿಪುಲ ಜ್ವಾಲಾ ಭೀಕರವು ಆದ ಒಂದು ಸರ್ಪವು ಬಾಣವಾಯಿತು. ಸೂರ್ಯ

ನಿಭಪ್ರಕಾಶವು, ಮಣಿಚಿತ್ರಿತ ಆದ ಮತ್ತೊಂದು ನಾಗವು ಬಿಲ್ಲಾಯಿತು. ಅರ್ಜುನನು ಅವೆರಡನ್ನು ಸ್ವೀಕರಿಸಿ, ತಂದು ಶ್ರೀಶಂಕರನಿಗೆ ಸಮರ್ಪಿಸಿದನು. ಆಗ ಶಂಕರನೇ ಬ್ರಹ್ಮಚಾರಿ ರೂಪದಿಂದ ಆ ಧನುವನ್ನೆತ್ತಿ ಹಿಡಿದು ತೋರಿದಾಗ ಅರ್ಜುನನು ಹಿಂದಿನ ಪಾಶುಪತಾಸ್ತ್ರವನ್ನು ನೆನೆದು, ಶಂಕರನ ದಯದಿಂದ ಅದನ್ನೇ ಮತ್ತೆ ಪೊಂದಿದನು. ಶಿವನನ್ನು ವಂದಿಸಿ ಬೀಳ್ಕೊಂಡ ಅರ್ಜುನನು, ಶಿವ ವಂದಿತನಾದ ಕೃಷ್ಣನೊಡನೆ ಮತ್ತೆ ತನ್ನ ಶಿಬಿರವನ್ನು ಸೇರಿದನು.' ಸ್ವಪ್ನದಿಂದೆಚ್ಚತ್ತ ಅರ್ಜುನನು ರಣೋತ್ಸಾಹಭರಿತನಾಗಿದ್ದನು.

ಬೆಳಗು ಮುಂಜಾವಾದಾಗ ವಂಧಿಮಾಗಧರ ಸ್ತುತಿ ಪಾಠಗಳೊಂದಿಗೆ ಮೃದು ಮೃದಂಗ ಪಣವಾನಕ ಶಬ್ದಗಳು ಕೇಳಬರುತ್ತಿರಲು ಶ್ರೀಕೃಷ್ಣ ಧರ್ಮ ಭೀಮಾರ್ಜುನ ಯಮಳರು ಶಯನಗಳನ್ನು ಬಿಟ್ಟು ಕಾಲ್ಯಕರಣೀಯಗಳನ್ನಾಚರಿಸಿದರು. ಯುಧಿಷ್ಠಿರನು ಎದ್ದು ಸ್ನಾನಗೃಹವನ್ನು ಸೇರಿದನು. ಧವಳಾಂಬರಧರರಾದ ತರುಣರು ನೂರೆಂಟು ಜನರು ಬಂಗಾರದ ಕುಂಭಗಳಿಂದ ಪನ್ನೀರನ್ನೆತ್ತಿ ಕೊಡುತ್ತಿರಲು ಸ್ನಾನ ಮಾಡಿ, ಮಂತ್ರಿತ ಕಷಾಯಗಳಿಂದ ಉನ್ಮರ್ದಿತನಾದನು ! ಮತ್ತೆ ಸುಗಂಧಿ ಜಲದಿಂದ ಮಿಂದು, ಹೊರಬಂದನು. ಮೈ ಒರೆಸಿ, ತಲೆಗೆ ಬಟ್ಟೆಕಟ್ಟಿ ಸೇವಕರು ಮೈಗೆ ಚಂದನ ಕಸ್ತೂರೀ ಗಂಧವನ್ನು ಲೇಪಿಸಿದರು. ಶುಭ್ರವಸನವನ್ನುಟ್ಟು ಧರ್ಮಜನು ಸಂಧ್ಯಾವಂದನ, ದೇವ ಪೂಜಾ, ಯಜ್ಞ ಹೋಮಗಳನ್ನು ವಿಧಿವತ್ತಾಗಿ ನೆರವೇರಿಸಿದನು. ಅಲ್ಲಿಂದ ದ್ವಿತೀಯ ಕಕ್ಷೆಗೆ ಬಂದು ಅಲ್ಲಿ ನೆರೆದಿದ್ದ ವಿಪ್ರರಿಗೆ ವಂದಿಸಿ, ಶುಭಾಶೀರ್ವಾದಗಳನ್ನು ಪಡೆದನು. ಅವರಿಗೆ ಗೋ ಭೂ ಹಿರಣ್ಯ ವಸ್ತ್ರಗಳನ್ನು ದಾನವಾಗಿತ್ತು, ಪುಣ್ಯಾಹಸ್ವಸ್ತಿ ಮಂತ್ರಗಳನ್ನು ಕೇಳುತ್ತಾ, ಮೂರನೇ ಕಕ್ಷೆಗೆ ಬಂದನು. ಮಾಲ್ಯಗಳನ್ನು, ಜಲಕುಂಭಗಳನ್ನು, ಜ್ವಲಿತಾಗ್ನಿಯನ್ನು ಪೂರ್ಣ ಪಾತ್ರೆಗಳನ್ನು, ಮಾತುಲಿಂಗ ಫಲವನ್ನು, ಕನ್ಯಾಮಣಿಗಳನ್ನು ದಧಿ, ಘೃತ, ಮಧು ಪಾತ್ರೆಗಳನ್ನು, ಮಂಗಲ ಪಕ್ಷಿಗಳನ್ನು ನೋಡಿ, ಮುಟ್ಟಿ ಎಲ್ಲ ಪರಿವಾರದವರನ್ನು ಯಥಾ ಯೋಗ್ಯವಾಗಿ ಸತ್ಕರಿಸಿದನು. ಪಾಂಡವರೆಲ್ಲರೂ ಇಂತೇ ಆಚರಿಸಿಬಂದು, ಅಣ್ಣನನ್ನು ಸೇರಿದರು. ಆಗ ರಣರಂಗದ ದಿಶೆಯಿಂದ ವಾದ್ಯ ರಣಭೇರೀ ನಾದಗಳೊಂದಿಗೆ ರಥನೇಮೀಧ್ವಾನಗಳು, ಗಜ ಘಂಟಾಟಕಾರಗಳು, ಹಯ ಖುರ ಘೋಷಗಳು, ಪದಾತಿ ಸಿಂಹನಾದಗಳು ಬೆರೆತು ಕೇಳಬಂದವು.

ಶ್ರೀಕೃಷ್ಣನು ಪಾಂಡವರನ್ನು ಸೇರಬಂದನು. ಧರ್ಮರಾಜನು ಶ್ರೀಶನನ್ನೆದುರ್ಗೊಂಡು ಕರೆತಂದನು. ಆಸನದಲ್ಲಿ ಕೂಡಿಸಿ, ಬಂದು ನಿರೀಕ್ಷಿಸುವ ಮಿತ್ರ ರಾಜರಿಗೆ ಪ್ರವೇಶವಿತ್ತನು. ಸಭೆಯು ಸಮಸ್ತ ರಾಜರಿಂದಲು, ಭೀಮಸೇನಾದಿ ಬಂಧುಗಳಿಂದಲು ಕಿಕ್ಕಿರಿಯುತ್ತಿತ್ತು. ಆಗ ಧರ್ಮರಾಜನು ಶ್ರೀಕೃಷ್ಣನಿಗಿಂತೆಂದನು : 'ಸಹಸ್ರಾಕ್ಷನನ್ನು ಅಮರರಂತೆ ನಾವು ನಿನ್ನನ್ನೇ ನಂಬಿರುವೆವು. ನೀನೇ ನಮಗೆ ಗತಿ ! ಪುಂಡರೀಕಾಕ್ಷ! ನಿನ್ನಿಂದ ನಮಗೆ ಜಯ. ನಿನ್ನಿಂದ ಜೀವಿತ ! ನಿನ್ನಿಂದ ಸುಖ ! ನಮ್ಮ ಕಷ್ಟಗಳೆಲ್ಲವನ್ನೂ ನೀನರಿತಿರುವೆ ! ಸರ್ವೇಶ ! ನಮ್ಮದೆಲ್ಲವೂ ನಿನ್ನಲ್ಲಿ ಅರ್ಪಿತವಾಗಿದೆ.

ಅರ್ಜುನನ ಪ್ರತಿಜ್ಞೆಯನ್ನು ಸತ್ಯವಾಗಿಸು ತಂದೆ ! ಸೈನ್ಯಸಾಗರವನ್ನು ಎಂತು ದಾಟಿಸುವೆಯೋ ಏನೋ ? ಜವನ ರಥದ ಹಿತ ಸಾರಥಿಯಾಗಿ, ನಡೆಸುವ ನಿನಗೆ ಹೇಳಬೇಕೇ ? ವೃಷ್ಣಿಗಳಂತೋ ಪಾಂಡವರೂ ನಿನಗಂತೆಯೇ ಪ್ರೀತಿ ಪಾತ್ರರಲ್ಲವೇ? ಶಂಖ ಚಕ್ರ ಗದಾಧರ ! ಕೃಷ್ಣ ! ವಿಷ್ಣೋ ! ದೇವ ದೇವ ! ಬ್ರಹ್ಮರುದ್ರೇಂದ್ರಾದಿ ವಂದ್ಯ ! ನಿನಗೆ ನಮಃ .'

ಶ್ರೀಕೃಷ್ಣನು 'ಧರ್ಮರಾಜ ! ಅರ್ಜುನನಂತಹ ಧನುರ್ಧರರು ದೇವ ದೈತ್ಯರಲ್ಲಿಲ್ಲ, ಭೀಮಸೇನನಂತಹ ಮಹಾಬಲನು ಸಿಂಹ ಖೇಲಗತಿಯು, ದೀರ್ಘಭುಜನು, ಶತ್ರು ಭಯಂಕರನು ಮೂರ್ಲೋಕಗಳಲ್ಲಿಲ್ಲ, ಇಂದು ಸೌಭದ್ರನ ಸಂಹಾರ ಕಾರಣನಾದ ಜಯದ್ರಥನು ಸತ್ತನೆಂದು ತಿಳಿ ! ದೇವೇಂದ್ರನೇ ರಕ್ಷಿಸಬಂದರೂ ಅವನನ್ನಿಂದು ಯಮಸದನಕ್ಕೆ ಸೇರಿಸುವನು ಅರ್ಜುನನು, ವಿಶೋಕನಾಗು !' ಎಂದು ಧೈರ್ಯ ತುಂಬಿದನು. ಧರ್ಮರಾಜನು ಅರ್ಜುನನನ್ನು ಕರೆದಪ್ಪಿ 'ಅರ್ಜುನ ! ನೀನು ವೀರನಿರುವೆ ! ಶ್ರೀಶನು ನಿನ್ನಲ್ಲಿ ಪ್ರಸನ್ನನಾಗಿರುವನು. ಜಯಿಸುವೆ ! ನಿನ್ನ ಪ್ರತಿಜ್ಞೆ ಸಫಲವಾಗುವದು' ಎಂದು ಹರಸಿದನು. ಆಗ ಅರ್ಜುನನು ತನ್ನ ಸ್ವಪ್ನ ವೃತ್ತಾಂತವನ್ನೆಲ್ಲರಿಗೂ ತಿಳಿಸಿದನು. ಅವರು ವೃಷಾಂಕನಿಗೆ ವಂದಿಸಿ, ಅರ್ಜುನ ವಿಜಯವು ಧ್ರುವವೆಂದು ನಂಬಿದರು !

ಶ್ರೀಕೃಷ್ಣನು ರಥವನ್ನು ಸಿದ್ಧಪಡಿಸಿ ತಂದನು. ಅರ್ಜುನನು ದೇವದತ್ತ ಕಿರೀಟವನ್ನಿಟ್ಟು, ಚಾಪಬಾಣ ಧರನಾಗಿ, ಶ್ರೀಶ, ಭೀಮ ಧರ್ಮಜ ವಿಪ್ರರಿಗೆ ನಮಿಸಿ, ರಥವನ್ನಾರೋಹಿಸಿದನು. ಎಲ್ಲ ಪಾಂಡವ ವೀರರು ತಂತಮ್ಮ ರಥಗಳಲ್ಲಿ ಕೂತು, ಯುದ್ಧ ಸನ್ನದ್ಧರಾಗಿ ಹೊರಟರು.

## ೭. ಚತುರ್ದಶ ದಿನ ಯುದ್ಧ (ದ್ವಾದಶಿ)

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ಬ್ರಾಹ್ಮಣಾಶೀರ್ವಚನಗಳನ್ನು ಹೊಂದಿ, ವಂದಿ ಮಾಗಧರ ಸ್ತುತಿ ಪಾಠಗಳನ್ನು ಕೇಳುತ್ತಾ, ಅರ್ಜುನನು ಸಾತ್ಯಕಿ ವಾಸುದೇವರಿಂದ ಕೂಡಿ ರಣರಂಗಕ್ಕೆಂದು ಹೊರಟನು. ಪುಣ್ಯಗಂಧವನ್ನು ವಹಿಸಿ ವಾಯುವು ಅನುಕೂಲವಾಗಿ ಬೀಸುತ್ತಿತ್ತು. ಪಾಂಡವ ಮಧ್ಯಮನು ಯುಯುಧಾನನನ್ನು ಕಂಡು 'ಸಾತ್ಯಕೀ! ಯುದ್ಧದಲ್ಲಿ ಜಯವನ್ನು ಗಳಿಸಿ ಬರುವೆನು. ಶುಭ ಶಕುನಗಳು ನನ್ನ ಪ್ರತಿಜ್ಞೆ ನೆರವೇರುವದೆಂದು ಸೂಚಿಸುತ್ತಿವೆ. ಸೈಂಧವನನ್ನು ಕೊಲ್ಲುವುದು ನನ್ನ ಮುಖ್ಯ ಕರ್ತವ್ಯವಾಗಿದೆ. ಅದರಂತೆ ಧರ್ಮರಾಜನನ್ನು ಶತ್ರು ಹಸ್ತಗತನಾಗದಂತೆ ಕಾಪಾಡುವುದು ಮುಖ್ಯವಾಗಿದೆ. ನೀನು ಧರ್ಮರಾಜನನ್ನು ಕಾಪಾಡಲು ಹೋಗು ! ವಾಸುದೇವ ಸಮನಾದ ನಿನ್ನನ್ನು ರಣದಲ್ಲಿ ಜಯಿಸುವವರನ್ನು ನಾನು ಕಾಣೆನು. ಪ್ರದ್ಯುಮ್ನನಂತೆ ನೀನೆನ್ನ ವಿಶ್ವಾಸಪಾತ್ರನಿರುವೆ ! ನನ್ನ ಸಹಾಯಕ್ಕೆಂದು ಬರಲೆಣಿಸಬೇಡ ! ಶ್ರೀಕೃಷ್ಣನಿರುವಲ್ಲಿ ಅಪಾಯವಿಲ್ಲ, ಹೋಗು' ಎಂದು ಕಳಿಸಿದನು.

ಧೃತರಾಷ್ಟ್ರನು, 'ಪುತ್ರ ಶೋಕಾಭಿತಪ್ತನಾಗಿ ಅರ್ಜುನನು ಕಾಲಯಮನಂತೆ ಬರುವುದನ್ನು ನೋಡಿ ನನ್ನ ಪುತ್ರರೇನು ಮಾಡಿದರು ? ಸಂಜಯ ! ಹಿಂದೆ ಸೋಮದತ್ತ ವಿಂವಿಶತಿ, ದುರ್ಮುಖ, ಚಿತ್ರಸೇನ, ವಿಕರ್ಣರ ಮನೆಗಳಲ್ಲಿ ಶ್ರುತಿ ಸುಖಾವಹವಾದ ಸಂಗೀತ ತೂರ್ಯ ಧ್ವನಿಗಳನ್ನು ಕೇಳುತ್ತಿದ್ದೆನು. ಇಂದು ಅವರ ಮನೆಗಳಿಂದ ಆರ್ತನಾದಗಳು ಕೇಳಬರುತ್ತಿವೆ. ಅಶ್ವತ್ಥಾಮನ ಮನೆಯಿಂದ ವೇದಘೋಷ ಜ್ಯಾಹುಂ ಕೃತಿಗಳು ಕೇಳಬರುತ್ತಿದ್ದವು. ಇಂದು ಆ ಮಹಾವೀರನು ತಂದೆಯನ್ನು ಕಳೆದುಕೊಂಡು ಖಿನ್ನನಾಗಿರುವನು. ವಿಂದಾನುವಿಂದರ ಮನೆಗಳು ಭಯದ ಮೌನವನ್ನು ತಾಳಿವೆ ! ಮಂದನಾದ ದುರ್ಯೋಧನನು ಸಂಧಿಗಿಚ್ಛಿಸದೆ, ಇಂತಹ ಮಹಾನರ್ಥಕ್ಕೆ ಕಾರಣನಾದನು. ಶ್ರೀಕೃಷ್ಣನ ಹಿತವಚನವವನಿಗೆ ರುಚಿಸಲಿಲ್ಲ. ದುಶ್ಶಾಸನ ಕರ್ಣರ ಮತದಂತೆ ನಡೆದು ಭ್ರಾತೃ ದ್ರೋಹವನ್ನು ಮಾಡಿದನು. ವಿನಾಶಕಾಲದಲ್ಲಿ ಅವನಿಗೆ ಇಂತಹ ದುರ್ಬುದ್ಧಿಯು ಉದಿಸಿಬಂತು. ದ್ಯೂತವಾರಿಗೆ ಬೇಕಿತ್ತು ? ವಿದುರ, ಭೀಷ್ಮ, ಶಲ್ಯ, ಭೂರಿಶ್ರವ, ಪುರುಮಿತ್ರ, ಜಯಾಶ್ವತ್ಥಾಮ, ದ್ರೋಣ, ಕೃಪರು ದ್ಯೂತವನ್ನು ವಿರೋಧಿಸಿದರು. ಕುಲೀನ, ಪ್ರಾಜ್ಞ, ಪ್ರಿಯಂವದರಾದ ಅವರ ಮಾತನ್ನು ಕೇಳಿದ್ದರೆ ದುರ್ಯೋಧನನು ಜ್ಞಾತಿಬಂಧು ಸುಹೃತ್ಸಮೇತನಾಗಿ ಸುಖದಿಂದಿರಬಹುದಾಗಿತ್ತು. ಅವರ ರಾಜ್ಯವನ್ನೂ ಕೊಡುವದಿಲ್ಲವೆಂಬ ಹಠದಿಂದ ನನ್ನ ಮಗನಿಗೆ ಇಲ್ಲಿ ರಾಜ್ಯವಿಲ್ಲದೆ, ಅಲ್ಲಿ ಪರಲೋಕ ಸುಖವಿಲ್ಲದೆ ಹೋಗುವುದು. ಧರ್ಮಾತ್ಮರಾದ ಪಾಂಡವರು ಉಭಯ ಲೋಕ ಸುಖವನ್ನೂ ಹೊಂದುವರು. ವೃಕೋದರಾರ್ಜುನರು ಸಾತ್ಯಕಿ ಚೇಕಿತಾನರು, ಧೃಷ್ಟಕೇತು, ಶಿಖಂಡಿ ಧೃಷ್ಟದ್ಯುಮ್ನ ದ್ರುಪದ ವಿರಾಟರಿಂದ ಕೂಡಿ ಶ್ರೀಕೃಷ್ಣನಿಂದ ನಡೆಸಲ್ಪಡುವ ಪಾಂಡವ ಸೇನೆಯನ್ನು ಎದುರಿಸಿ ಬದುಕಬಹುದೇ ? ಭೀಷ್ಮ, ದ್ರೋಣರೇ ಪಾತೀತರಾದ ಮೇಲೆ ಇನ್ನುಳಿದ ಕೌರವ ವೀರರೆಂತು ಪಾಂಡವರಿಂದ ಯುದ್ಧಮಾಡಿ ಗೆಲ್ಲಬಲ್ಲರು ? ಸಂಜಯ ! ಮುಂದೇನಾಯಿತು ಹೇಳು !' ಎಂದನು.

ಸಂಜಯನು ಹೇಳಿದನು: 'ರಾಜನ್ ! ಸ್ಥಿರನಾಗಿ ಕೇಳು ! ಗತಜಲ ಸೇತು ಬಂಧನದಂತೆ ನಿನ್ನ ವಿಲಾಪವು ನಿಷ್ಫಲವಾಗಿದೆ. ಈಗ ಕೃತಾಂತನ ನಿಶಾಂತ ವಿಕ್ರಮ ದುರಂತವನ್ನು ಯಾರೂ ತಡೆಯಲಿಲ್ಲ. ದ್ಯೂತವನ್ನು ತಡೆಯಲಿಲ್ಲ, ಯುದ್ಧಾರಂಭವನ್ನು ತಡೆಯಲಿಲ್ಲ, ಶ್ರೀಕೃಷ್ಣನನ್ನು ಕಟ್ಟಲು ಹವಣಿಸಿದ ದುರ್ಯೋಧನನನ್ನು ತಡೆಯಲಿಲ್ಲ, ಪಾಂಚಾಲೀಪರಿಭವವನ್ನು ತಡೆಯಲಿಲ್ಲ, ತಂದೆಯನ್ನು ಕಳೆದುಕೊಂಡು ನಿನ್ನನ್ನೇ ತಂದೆ ಎಂದು ನಂಬಿದ ಪಾಂಡವರ ವನವಾಸ ಘೋಷಯಾತ್ರಾ ಪರಿಭವವನ್ನು ತಡೆಯಲಿಲ್ಲ, ಈಗ ನಿನ್ನ ಮಕ್ಕಳ ವಿನಾಶವನ್ನೂ ತಡೆಯಲಾರೆ ! ಶ್ರೀಕೃಷ್ಣನಿಗೆ ನಿನ್ನಲ್ಲಿ ಬಹು ಗೌರವವಿತ್ತು, ರಾಜಧರ್ಮವನ್ನಲ್ಲಗಳೆದು, ಪಾರ್ಥರನ್ನು ಉಪೇಕ್ಷಿಸಿದಂದಿನಿಂದ ದುರ್ಯೋಧನನ ಕುತಂತ್ರಗಳಿಗೆ ಬೆಂಬಲಗೊಟ್ಟು ಏನೂ ಅರಿಯದವನಂತೆ ನಟಿಸಿದಂದಿನಿಂದ ಶ್ರೀಕೃಷ್ಣರು ನಿನ್ನಲ್ಲಿ ಅನುರಕ್ತನಾಗದಿರುವನು. ಮರಣಶೀಲರಾದ ಮನುಜರಾರೂ ವೃಕೋದರನಿಂದ, ಅರ್ಜುನನಿಂದ, ಸಾತ್ಯಕಿಯಿಂದ, ಧೃಷ್ಟದ್ಯುಮ್ನನಿಂದ ಕಡಿದಾಡಿ ಬದುಕಿ ಹೋಗಲಾರರು.

ದ್ವಾದಶಿಯ ಪಾರಣದ ನಂತರ ಉಭಯ ಸೇನೆಗಳು ರಣರಂಗದಲ್ಲಿ ಸೇರಿದವು. ಸಿಂಗರಿಸಿಕೊಂಡು ಬಂಗಾರದ ರಥದಲ್ಲಿ ಕೂತು, ಉದ್ಯತಾಯುಧರಾಗಿ ಬರುವ ವೀರರ ಸಿಂಹ ಗರ್ಜನೆಗಳು, ಭೇರಿ ಝಾಂಕಾರ, ದುಂದುಭಿಧ್ವಾನ, ಶಂಖಾರಾವ, ಧನುಷ್ಟಂಕಾರ, ಗಜಘೀಂಕಾರ, ಹಯ ಹೇಷಾರವಗಳಿಂದ ಬೆರೆತು ಗಗನಕ್ಕೆ ವ್ಯಾಪಿಸಿದವು. ಗದಾಖಡ್ಗಗಳನ್ನೆತ್ತಿ ಕೌರವರು 'ಧನಂಜಯನೆಲ್ಲಿ ? ಕೊಲ್ಲುವೆವು ಅವನನ್ನು!' ಎಂದು ಕೂಗುತ್ತಾ ಬಂದರು. ಪಾಂಡವೇಯರು 'ಎಲ್ಲಿ ಜಯದ್ರಥ ? ಕೊಲ್ಲುವೆವು ಅವನನ್ನು' ಎಂದು ಕೂಗುತ್ತಾ ಬಂದರು.

ದ್ರೋಣಾಚಾರ್ಯನು ಶೋಣಾಶ್ವ ರಥನಾಗಿ, ಬಹು ವೇಗದಿಂದ ರಣಾಂಗಣದಿ ಸಂಚರಿಸಿ ಬಂದು, ಜಯದ್ರಥನನ್ನು ಕರೆದಿಂತೆಂದನು: 'ಸೈಂಧವ ! ಲಕ್ಷ ಕುದುರೆಗಳನ್ನು ಹದಿನಾಲ್ಕು ಸಾವಿರ ಆನೆಗಳನ್ನು ಹತ್ತುಸಾವಿರ ರಥಿಕರನ್ನು ಇಪ್ಪತ್ತೊಂದು ಸಾವಿರ ವೀರ ಭಟರನ್ನು ಕೂಡಿ ನೀನು ನನ್ನಿಂದ ಆರು ಕ್ರೋಶ ದೂರದಲ್ಲಿ ಚಕ್ರಮಧ್ಯದ ಸೂಚಿ ವ್ಯೂಹದಲ್ಲಿರು ! ಅಲ್ಲಿರುವ ನಿನ್ನನ್ನು ಇಂದ್ರಸಹಿತ ವೃಂದಾರಕರೂ ಕಣ್ಣೆತ್ತಿ ನೋಡಲಾರರು" ಎಂದು ಅವನನ್ನು ಅಂತೆಯೇ ನಿಲ್ಲಿಸಿದನು. ಶಕಟ ಚಕ್ರವ್ಯೂಹವನ್ನು ರಚಿಸಿ, ದ್ರೋಣನು ಸಿಂಧುರಾಜನನ್ನು ರಕ್ಷಿಸಲು ಹವಣಿಸಿದನು.

ಹನ್ನೆರಡು ಗವ್ಯೂತಿಗಳುದ್ದವಾಗಿ, ಐದು ಗವ್ಯೂತಿಗಳಷ್ಟು ಅಗಲವಾದ ಓಂಭಾಗವುಳ್ಳ ಶಕಟಚಕ್ರವ್ಯೂಹವು ನಾನಾ ವೀರ ರಕ್ಷಿತವಾಗಿತ್ತು. ಅದರ ಮಧ್ಯದಲ್ಲಿ ಪದ್ಮಸೂಚೀ ಪ್ರದೇಶದಲ್ಲಿ ಮತ್ತೊಂದು ದುರ್ಭೇದ್ಯ ವ್ಯೂಹವನ್ನು ರಚಿಸಿದ ಆಚಾರ್ಯನು ಎಲ್ಲರ ಅಗ್ರ ಭಾಗದಲ್ಲಿ ದುರ್ಮರ್ಷಣನನ್ನು, ಅವನ ಹಿಂದೆ ದುಶ್ಶಾಸನ ವಿಕರ್ಣರನ್ನು ಸೂಚೀಮುಖದಲ್ಲಿ ಕೃತವರ್ಮನನ್ನು, ಕಾಂಬೋಜ ಜಲಸಂಧನನ್ನು ನಿಲ್ಲಿಸಿದನು. ದುರ್ಯೋಧನ ಕರ್ಣರು, ಅವರ ಹಿಂದೆ ಮಹಾಸೇನಾ ಸಮೇತನಾದ ಜಯದ್ರಥನು ಸೂಚೀಪಾರ್ಶ್ವದಲ್ಲಿ ನೆಲಸಿದರು. ಶ್ವೇತವಸ್ತ್ರಧರನು, ಶೋಣ ತುರಗನು, ವೇದೀಕೃಷ್ಣಾಜಿನ ಧ್ವಜನು ಆದ ದ್ರೋಣನ ಸೈನ್ಯವ್ಯೂಹವು ಭೂಮಿಯನ್ನೆಲ್ಲ ನುಂಗಲು ಉಕ್ಕೇರಿ ಬರುವ ಪ್ರಳಯ ಪಯೋಧಿಯಂತೆ ಕಂಗೊಳಿಸಿತು. ಅದನ್ನು ನೋಡಿ ದುರ್ಯೋಧನನು ಸೈಂಧವನಿಗಿನ್ನು ಭಯವಿಲ್ಲವೆಂದು ತಿಳಿದು ಆನಂದಿಸಿದನು.

ಭೇರಿ ತಾಡನದಿಂದ ಯುದ್ಧಾರಂಭವಾಯಿತು. ರೌದ್ರಮುಹೂರ್ತದಲ್ಲಿ ಸವ್ಯಸಾಚಿಯು ಕುರುವ್ಯೂಹವನ್ನು ಸಮೀಪಿಸಿದಾಗ, ಅವರಿಗೆ ದುಷ್ಟ ಶಕುನಗಳು ಕಾಣಿಸಿದವು. ಆಕಾಶದಲ್ಲಿ ಸಾವಿರಾರು ಕಂಕಗೃಧ್ರವಾಯಸಗಳು ಅಪ್ರದಕ್ಷಿಣವಾಗಿ ಹಾರಾಡಿದವು. ಧೃಷ್ಟದ್ಯುಮ್ನ ಶತಾನೀಕರು ತಮ್ಮ ಸೇನೆಯನ್ನು ಮಹಾ ವ್ಯೂಹಾಕಾರವಾಗಿ ನಿಲ್ಲಿಸಿದರು. ಸವ್ಯಸಾಚಿಯು ಸೈನ್ಯಾಗ್ರಭಾಗದಲ್ಲಿದ್ದನು. ಭೀಮಸೇನನು ಸಾತ್ಯಕಿಯೊಡನೆ ಧರ್ಮರಾಜನಿಗೆ ರಕ್ಷಕನಾಗಿ ಮಧ್ಯದಲ್ಲಿದ್ದನು. ಕ್ರುದ್ಧನಾದ ಯಮನೋ ವಜ್ರಪಾಣಿ ವಾಸವನೋ, ಶೂಲಪಾಣಿ ರುದ್ರನೋ, ಪಾಶಹಸ್ತನಾದ ವರುಣನೋ, ಕಾಲ

ಮೃತ್ಯುವೋ ಎಂಬಂತೆ ಭಯಂಕರಾಕಾರನಾದ ಅರ್ಜುನನು ಕಿರೀಟ ಕವಚ ಖಡ್ಗಗಳನ್ನು ಧರಿಸಿ, ಗಾಂಡೀವವನ್ನು ಎರಡು ಕೈಗಳಿಂದ ಹಿಡಿದಾಡಿಸುತ್ತಾ ಬಂದು, ಇಷುಪಾತ ದೂರದಲ್ಲಿ ನಿಂದು ದೇವದತ್ತವನ್ನೂದಿದನು. ಶ್ರೀಕೃಷ್ಣ ವೃಕೋದರರು ಪಾಂಚಜನ್ಯ ಪೌಂಡ್ರ ಶಂಖಗಳನ್ನೂದಿದರು. ಆ ಭೀಕರ ಶಬ್ದವನ್ನು ಕೇಳಿ, ಕೌರವರ ಆನೆ, ಕುದುರೆ ಕಾಲಾಳು ಭಟರು ಮೂರ್ಛೆಬಿದ್ದು ತತ್ತರಿಸಿದರು.

ಮುಂದಿರುವ ಗಜಘಟವನ್ನು ಸೀಳಿ ವ್ಯೂಹವನ್ನು ಹೋಗುವಂತೆ ಸ್ಯಂದನವನ್ನು ಶ್ರೀಕೃಷ್ಣನು ನಡೆಸಿದಾಗ ಅರ್ಜುನನು ದುರ್ಮರ್ಷಣನನ್ನು ಪ್ರತಿಭಟಿಸಿ ಕಾದಬೇಕಾಯಿತು. ಅರ್ಜುನನನ್ನು ವ್ಯೂಹ ಪ್ರವೇಶ ಮಾಡದಂತೆ ನಿರೋಧಿಸಲು ಬದ್ಧ ದೀಕ್ಷನಾದ ದುರ್ಮರ್ಷಣನು ಕೃಷ್ಣ ಪಾರ್ಥರನ್ನು ಬಾಣ ಶತದಿಂದ ಹೊಡೆದನು. ಸವ್ಯಸಾಚಿಯು ಕ್ರುದ್ಧನಾಗಿ, ಕೌರವ ಸೇನೆಯ ರಥಿಕರನ್ನು ಕರಿ ತುರಗ ನರರನ್ನು ಕಸಿಮಸಗಿ ಸಂಹರಿಸಿದನು. ದಿಟ್ಟಿಸುವ ಕಣ್ಣಿನ, ಕಚ್ಚಿದ ತುಟಿಯ ತಲೆಗಳು ಕೆಳಗುರುಳಿದವು. ತಲೆ ರುಮಾಲುಗಳು ಬಿದ್ದವು. ಕವಚಗಳು ಸೀಳಿ ತುಂಡಾದವು. ರಕ್ತದ ಕೋಡಿಗಳು ಹರಿದವು. ತಲೆಗಳುರುಳುವ ಶಬ್ದವು ತಾಳವನದಿ ಫಲಗಳು ಬಿದ್ದಂತಿತ್ತು. ತಲೆಗಳುದುರಿದರೂ ಓಡುವ ಕಬಂಧಗಳು, ಧನುವನ್ನು ಹಿಡಿದಿರುವ ಕೈಗಳು, ಆನೆಯ ಸೊಂಡಿಲಗಳು, ಹಯ ಪಾದಗಳು ರಣರಂಗಕ್ಕೆ ಯಮಭಟರಿಟ್ಟ ರಂಗೋಲಿಯಂತಿದ್ದವು. ಎಲ್ಲಿ ನೋಡಿದರಲ್ಲಿ ಪಾರ್ಥನಿದ್ದಂತಾಗಿ, ಜಗವೇ ಪಾರ್ಥಮಯವಾಯಿತೇ ಎಂದು ಕುರು ಯೋಧರು ದಿಗ್ಭ್ರಾಂತರಾದರು.

ಸೂರ್ಯನು ಉದಿತನಾಗಿ ತಮವನ್ನು ಕಿರಣಗಳಿಂದ ಕಳೆವಂತೆ, ಪಾರ್ಥನು ಗಜಾನೀಕವನ್ನು ಕಂಕಪತ್ರಗಳಿಂದ ಸೀಳಿ ಕೆಡಹಿದಾಗ ಉದಯಾಕಾಶದಂತೆ ರಣಭೂಮಿಯು ರಕ್ತರಂಜಿತವಾಯಿತು. ಮಧ್ಯಂದಿನ ಸೂರ್ಯನಂತೆ ಪಾಂಡು ಪುತ್ರನು ನಿರ್ನಿರೀಕ್ಷ್ಯ ಪ್ರತಾಪನಾದನು. ಕೌರವ ವೀರರು ಹತೋತ್ಸಾಹರಾಗಿ ಓಡತೊಡಗಿದರು. ದುರ್ಮರ್ಷಣನು ಸ್ವಸೈನಿಕರು ಓಡುತ್ತಿರಲು, ಪಾರ್ಥ ಬಾಣ ಪೀಡಿತನಾಗಿ ತಾನೂ ಓಡಿದನು. ದುಶ್ಶಾಸನನು ಅರ್ಜುನನನ್ನು ಮುತ್ತಿ ದಾರುಣ ಯುದ್ಧವನ್ನು ಮಾಡಿದನು. ಅರ್ಜುನನು ನರಸಿಂಹನಾಗಿ ಶತ್ರುರಾಜರ ಗಜಾನೀಕವನ್ನು ಬಾಣಜಾಲದಿಂದ ಹೊಡೆದು ಕೆಡಹಿದನು. ದೇವದತ್ತ ಘೋಷಗಳೊಂದಿಗೆ ಗಾಂಡೀವ ಜ್ಯಾನಿನಾದವು ಸಂತತವಾಗಿತ್ತು. ಅರ್ಜುನ ಬಾಣಗಳು ವಜ್ರಸಾರಗಳಾಗಿ ಗಜಪರ್ವತಗಳನ್ನು ಕೆಡಹಿದವು. ಗಜ ಕುಂಭಗಳಲ್ಲಿ ಅಶ್ವಪೃಷ್ಠಗಳಲ್ಲಿ ರಥನೀಡಗಳಲ್ಲಿ ರಣರಂಗದಲ್ಲಿ ಪಾರ್ಥ ತಾಡಿದ ವೀರಭಟರು ದೀರ್ಘ ನಿದ್ರೆಯನ್ನು ಮಾಡಿದರು. ಕುಂಡಲ ಕಿರೀಟಾಲಂಕೃತ ಶಿರಸ್ತಂಡಗಳಿಂದ ಪಾಂಡವ ಪ್ರಕಾಂಡನು ರಣಮಂಡಲಕ್ಕೆ ಬಲಿಯನ್ನಿಟ್ಟಿದ್ದನು. ಒಂದೇ ಬಾಣದಿ ಪೋಣಿಸಲ್ಪಟ್ಟು ಮೂರು ನಾಲ್ಕು ವೀರರು ಒಟ್ಟಿಗೆ ಯಮಸದನವನ್ನು ಸೇರಿದ್ದರು. ಸಂಧಾನಮೋಚನ, ಉದ್ವಹನ, ಆಕರ್ಷಣಗಳು ಗೊತ್ತಾಗದಂತೆ, ಮಂಡಲಾಕಾರವಾಗಿರುವ ಗಾಂಡೀವದಿಂದ ಬಾಣವರ್ಷವು

ಹರಿದುಬಂತು. ನೊಗ ಮುರಿದು, ಚಕ್ರಗಳು ಸಡಿಲಿ, ಕೂಬರವಿಲ್ಲದ, ಅಕ್ಷಗಳು ತುಂಡಾಗಿ ಬಿದ್ದಿರುವ ರಥಗಳು, ರಥಗಳಿಂದುರುಳಿ ತಲೆ ಕಡಿದು ಭುಜವಿಲ್ಲದ ಹಾರವಸನಾಲಂಕೃತ ದೇಹಗಳು, ದೇಹಗಳಿಂದ ಹರಿಯುವ ರಕ್ತನದಿಗಳು, ನದಿಗಳ ಇಕ್ಕೆಲಗಳಲ್ಲಿ ವಿಕಟ ವಿರಾವಗಳನ್ನು ಮಾಡುವ ಕಂಕಗೃಧ್ರ ಜಂಬುಕ ವೃಕಾದಿ ಮೃಗಗಳು ತುಂಬಿ ಭಯಂಕರವಾಗಿರುವ ರಣರಂಗದಿಂದ ದುಶ್ಶಾಸನನ ಸೈನಿಕರು ಪಲಾಯನ ಪರಾಯಣರಾದರು. ದುಶ್ಶಾಸನನೂ ಸೋತು ದ್ರೋಣನನ್ನು ಸೇರ ಪೋದನು.

ಅರ್ಜುನನು ವ್ಯೂಹ ಮುಖದಲ್ಲಿದ್ದ ದ್ರೋಣನನ್ನು ಸೇರಿ, ಕೈಜೋಡಿಸಿ ನಮಿಸಿ, ಕೃಷ್ಣನು ಶಿರಃಕಂಪದಿಂದ ಸಮ್ಮತಿಸಲು ಆಚಾರ್ಯನಿಗಿಂತೆಂದನು: 'ಬ್ರಹ್ಮನ್ ! ಶುಭದೃಷ್ಟಿಯಿಂದ ನನ್ನನ್ನು ನೋಡು ! ನನಗೆ ಸ್ವಸ್ತಿಯಾಗಲೆಂದು ಬೇಡು ! ನಿನ್ನ ಪ್ರಸಾದದಿಂದ ದುರ್ಭಿದ ವ್ಯೂಹವನ್ನು ಹೋಗುವಂತೆ ಮಾಡು ! ನೀನೆನಗೆ ತಂದೆಗೆ ಸಮನಾಗಿರುವೆ ! ಧರ್ಮರಾಜನಂತೆ ಪೂಜ್ಯನಿರುವೆ ! ಇದು ಸತ್ಯ ! ಅಶ್ವತ್ಥಾಮನಂತೆ ನಾನೂ ನಿನಗೆ ರಕ್ಷಣೀಯನಲ್ಲವೇ ? ಸಿಂಧುರಾಜನನ್ನು ಕೊಲ್ಲ ಪೋಗುವ ಎನ್ನ ಪ್ರತಿಜ್ಞೆಯು ಪೂರ್ಣವಾಗುವಂತೆ ಆಶೀರ್ವದಿಸು ! ' ಆ ಮಾತಿಗೆ ನಕ್ಕು ಆಚಾರ್ಯನು 'ಭಿಭತ್ಸೋ ! ನನ್ನನ್ನು ಗೆಲ್ಲದೆ ಜಯದ್ರಥನನ್ನು ಕೊಲ್ಲಲಾರೆ ! ತಿಳಿಯಿತೇ ?' ಎಂದು ಬಾಣ ಶತದಿಂದ ಅವನನ್ನು ಹೊಡೆದನು. ಅರ್ಜುನನೂ ಶರಶತದಿಂದ ಗುರು ರಥವನ್ನು ಮುಚ್ಚಿದನು. ತನ್ನ ಧನುವನ್ನು ಮುರಿಯಲೆಣಿಸುವ ಪಾರ್ಥನ ಜ್ಯಾಲತೆಯನ್ನು ಕಡಿದು, ದ್ರೋಣನು ಶರಗಳಿಂದ ನರನನ್ನು ನಾರಾಯಣನನ್ನು ಹೊಡೆದನು. ಅರ್ಜುನನು ಮತ್ತೆ ಜ್ಯಾಲತೆಯನ್ನು ಕೂಡಿಸಿ, ಟಂಕಾರಮಾಡಿ ಆಚಾರ್ಯನನ್ನು ಒಂದೇ ಸಲ ಆರುನೂರು ಬಾಣಗಳಿಂದ ತಾಡಿಸಿದನು. ಅವನ್ನು ತುಂಡರಿಸಿ ಆಚಾರ್ಯನು ಆಕರ್ಣಾಂತವಾಗಿ ಸೆಳೆದ ನಾರಾಚದಿಂದ ಅರ್ಜುನನ ಎದೆಗೆ ಹೊಡೆದನು. ಅರ್ಜುನನು ಚಲಿಸದೆ ಮತ್ತೆ ದ್ರೋಣನನ್ನು ಬಾಣಪಂಚಕದಿಂದ ಪೀಡಿಸಿದನು.

ವಾಸುದೇವನು 'ಅರ್ಜುನ ! ಕಾಲವು ವ್ಯರ್ಥವಾಗುತ್ತಿದೆ. ಬಿಡು ದ್ರೋಣನನ್ನು ! ಮುಂದೆ ಮಹತ್ತರ ಕೃತ್ಯವಿದೆ' ಎಂದು, ಅವನ ಸಮ್ಮತಿ ಪಡೆದು, ರಥವನ್ನು ದ್ರೋಣನಿಗೆ ಪ್ರದಕ್ಷಿಣಾಕಾರವಾಗಿ ಹೊಡೆದು, ದೂರವಾದನು. ಅವನ ರಥದ ವೇಗವೆಷ್ಟಿತ್ತೆಂದರೆ, ಅರ್ಜುನನು ಬಿಟ್ಟ ಬಾಣಗಳು ಹಿಂದಾಗಿ, ರಥವು ಮುಂದಾಗಿ, ರಥದ ಹಿಂದೆ ಕಬಂಧಗಳುರುತ್ತಿದ್ದವು. ಅರ್ಜುನನು 'ಆಚಾರ್ಯ ! ನೀನೆನಗೆ ಗುರುವಿರುವೆ ! ಶತ್ರುವಲ್ಲ. ನಾನು ಶಿಷ್ಯನಿರುವೆನು ! ಪುತ್ರಸಮನಿರುವೆನು! ನಿನ್ನನ್ನು ಯುದ್ಧದಲ್ಲಿ ಗೆದ್ದು ಸಾಗುವ ನರನು ಭೂಲೋಕದಲ್ಲೇ ಇಲ್ಲ' ಎಂದು ನಮಿಸಿ ಸಿಂಧುರಾಜ ಸೈನ್ಯವನ್ನು ಸೇರ ಪೋದನು. ಅವನ ಹಿಂದೆ ಚಕ್ರರಕ್ಷಕರಾದ ಯುಧಾಮನ್ಯೂತ್ತಮೌಜರೆಂಬ ಪಾಂಚಾಲವೀರರು ವ್ಯೂಹವನ್ನು ಪ್ರವೇಶಿಸಿದರು.

ಆಗ ಕೃತವರ್ಮ, ಕಾಂಭೋಜ, ಸುದಕ್ಷಿಣ, ಶ್ರುತಾಯುಗಳು ಅರ್ಜುನನನ್ನು ತಡೆದು ಭಯಂಕರ ರಣದಲ್ಲಿ ತೊಡಗಿದರು. ಹತ್ತಾರು ಸಾವಿರ ಮಾವೆಲ್ಲರು, ವಸಾತಿಗಳು, ಲಲಿತ್ಥರು, ಗೋಪಾಲ ನಾರಾಯಣರು, ಕೂಡ ದ್ರೋಣನಿಂದ ಕೂಡಿ ಅರ್ಜುನನನ್ನು ಮುತ್ತಿದರು. ಜಯದ್ರಥ ವಧಾಕಾಂಕ್ಷಿ ಪಾರ್ಥನಿಗೂ, ಜಯದ್ರಥ ರಕ್ಷಾಕಾಂಕ್ಷಿ ದ್ರೋಣಾದಿ ಬಹು ರಥಿಕರಿಗೂ ತುಮುಲಯುದ್ಧವಾಯಿತು. ಪ್ರತಿಜ್ಞೆಯ ಪಾರವನ್ನು ಪೊಂದಲೆಣಿಸಿ ಪಾರ್ಥನು ಪರಾಕ್ರಮಿಸಿ, ದ್ರೋಣನ ಬ್ರಹ್ಮಾಸ್ತ್ರವನ್ನು ಪ್ರತಿ ಬ್ರಹ್ಮಾಸ್ತ್ರದಿಂದ ವಾರಿಸಿ, ಬಿಡದೆ ಕಾಡುವ ಆಚಾರ್ಯನನ್ನು ಬಿಟ್ಟು ಅವನ ರಥದಿಂದ ದೂರ ಸರಿದನು. ಹನುಮಂತನು ಮೈನಾಕಗಿರಿಯನ್ನಂತೆ ದ್ರೋಣನನ್ನು ವರ್ಜಿಸಿ ಮುನ್ನುಗ್ಗುವ ಅರ್ಜುನನನ್ನು ಕೃತವರ್ಮ ಸುದಕ್ಷಿಣರು ಮುತ್ತಿ ಬಾಣ ಜಾಲದಲ್ಲಿ ಮುಚ್ಚಿದರು. ಕೃತವರ್ಮನು ಇಪ್ಪತ್ತೈದು ಬಾಣಗಳಿಂದ ಪಾರ್ಥನನ್ನು, ಇಪ್ಪತ್ತೈದು ಶರಗಳಿಂದ ಶ್ರೀಕೃಷ್ಣನನ್ನು ಹೊಡೆಯಲು, ಪಾರ್ಥನು ಅವನ ಧನಸ್ಸನ್ನು ಮುರಿದು, ಐದು ಬಾಣಗಳನ್ನು ಎದೆಯಲ್ಲಿ ನಾಟಿಸಿದನು. ಕೃಷ್ಣನ ಸೂಚನೆಯಂತೆ ಕೃತವರ್ಮನನ್ನು ಶರವರ್ಷದಲ್ಲಿ ಮುಳುಗಿಸಿ, ಅವನಿಗೆ ಅವಕಾಶವೀಯದೆ ಅರ್ಜುನನು ಮುಂದೆ ಸಾಗಿದನು. ಅವನ ಹಿಂದೆ ಸಾಗಿದ ಪಾಂಚಾಲ್ಯರನ್ನು ಕೃತವರ್ಮನು ತಡೆದು ಅವರ ರಥಗಳನ್ನು ಬಾಣವರ್ಷದಲ್ಲಿ ಮುಚ್ಚಿದನು. ಅವರೀರ್ವರು ಬಿಟ್ಟ ನಾಲ್ಕಾರು ಬಾಣಗಳನ್ನು ಕಡಿದು ಕೃತವರ್ಮನು ಐದು ಬಾಣಗಳಿಂದ ಯುಧಾಮನ್ಯುವಿನನ್ನು ಹತ್ತರಿಂದ ಉತ್ತಮೌಜನನ್ನು ಹೊಡೆದನು. ಅವರು ಕೃತವರ್ಮನಿಂದ ತಡೆಯಲ್ಪಟ್ಟು ವ್ಯೂಹವನ್ನು ಹೋಗಲಾರದಿರಲು, ಪಾರ್ಥನು ಮುಂದೆ ಸಾಗಿದನು. ಬಂಧುವೆಂದು ಕೃತವರ್ಮನನ್ನು ಕೊಲ್ಲದೆ ಸಾಗುವ ಶ್ವೇತವಾಹನನನ್ನು ಶ್ರುತಾಯುಧನು ತಡೆದನು. ಅವನ ಮೂರು ಬಾಣಗಳಿಂದ ಅರ್ಜುನನನ್ನು, ಎಪ್ಪತ್ತು ಶರಗಳಿಂದ ಕೃಷ್ಣನನ್ನು ಹೊಡೆದನು. ತೀವ್ರ ಕ್ಷುರಪ್ರದಿಂದ ಪಾರ್ಥನ ಕೇತನವನ್ನು ತಾಡಿಸಿದನು, ಅರ್ಜುನನು ತೊಂಬತ್ತು ಬಾಣಗಳಿಂದ ಹೊಡೆದನು. ಎಪ್ಪತ್ತೇಳು ಬಾಣಗಳನ್ನು ಬಿಟ್ಟು ಶ್ರುತಾಯುಧನ ಧನುವನ್ನು ಮುರಿದು, ಏಳು ಬಾಣಗಳಿಂದ ಅವನ ಎದೆಗೆ ಹೊಡೆದು ಪಾರ್ಥನು ಸಿಂಹಗರ್ಜನವನ್ನು ಮಾಡಿದನು. ಮತ್ತೊಂದು ಧನುವನ್ನು ಪಿಡಿದು ಶ್ರುತಾಯುಧನು ಒಂಬತ್ತು ಬಾಣಗಳಿಂದ ಪೀಡಿಸಲು, ಅರ್ಜುನನು ಅವನನ್ನು ಸಾವಿರ ಬಾಣಗಳಿಂದ ಮುಚ್ಚಿ ಅಶ್ವಗಳನ್ನೂ ಸಾರಥಿಯನ್ನೂ ಕೊಂದನು.

ಶ್ರುತಾಯುಧನು ಸಿಟ್ಟಾಗಿ ರಥದಿಂದಿಳಿದು ತನಗೆ ವರುಣನಿತ್ತ ಗದೆಯನ್ನು ಪಿಡಿದು ಅರ್ಜುನನ ರಥದ ಮೇಲೇರಿ ಬಂದನು. ಅವನ ಪರ್ಣಾಶೆ ಎಂಬ ನದೀದೇವಿಗೆ ವರುಣನಿಂದ ಜನಿಸಿದ್ದನು. ತನ್ನ ಮಗನು ಅವಧ್ಯನಾಗಬೇಕೆಂದು ಪರ್ಣಾಶೆಯ ಪ್ರಾರ್ಥನೆಯನ್ನು ಮನ್ನಿಸಿ ವರುಣನು ಆ ಗದೆಯನ್ನವನಿಗಿತ್ತು 'ಇದು ದಿವ್ಯವು ಮತ್ತು ಅಮೋಘವು. ಮನುಜರಿಗೆ ಅಮರತ್ವವಿಲ್ಲ. ಎಲ್ಲರೂ ಒಂದು ದಿನ ಸಾಯಲೇಬೇಕು. ನಿನ್ನ ಮಗನೀಗ ರಣದಲ್ಲಿ ದುರ್ಧರ್ಷನಾಗಿರುವನು. ಈ ಗದೆಯು

ಇರುವವರೆಗೂ ಇವನು ಅಜೇಯನಾಗಿರುವನು. ಗದೆಯೂ ತಪ್ಪದೆ ಶತ್ರುವಿನನ್ನು ಕೊಲ್ಲುವುದು. ಆದರೆ ಯುದ್ಧ ಮಾಡದೆ ಸುಮ್ಮನಿರುವವನನ್ನು ಹೊಡೆದರೆ ಆಗ ಈ ಗದೆಯು ನಿನ್ನ ಮಗನನ್ನೇ ಕೊಲ್ಲುವುದು' ಎಂದು ಹೇಳಿದ್ದನು. ವಿಧಿವಿಲಾಸದಿಂದ ಮೈಮರೆತು, ಶ್ರುತಾಯುಧನು ಆ ಗದೆಯಿಂದ ಜನಾರ್ದನನನ್ನು ಹೊಡೆದನು. ಶ್ರೀಕೃಷ್ಣನು ನಗುತ್ತ ಅದನ್ನು ಭುಜದಲ್ಲಿ ಸ್ವೀಕರಿಸಿ, ಗಾಳಿಯಿಂದ ವಿಂಧ್ಯಪರ್ವತದಂತೆ ಚಲಿಸದಿದ್ದನು. ಕುಜನನ ಕೃತ್ಯೆಯಂತೆ ಆ ಗದೆಯು ಅಲ್ಲಿಂದ ಪುಟಿದೆದ್ದು ಶ್ರುತಾಯುಧನನ್ನೇ ಸಂಹರಿಸಿ, ವರುಣಲೋಕವನ್ನು ಸೇರಿತು. ಅಯುದ್ಧಮಾನನಾಗಿರುವ ಕೃಷ್ಣನನ್ನು ಹೊಡೆದು ತಾನೇ ತನ್ನ ಗದೆಯಿಂದ ನಿಹತನಾದ ಶ್ರುತಾಯುಧನನ್ನು ಕಂಡು, ಕುರು ವೀರರು ಹಾಹಾಕಾರ ಮಾಡಿದರು.

ಆಗ ಕಾಂಭೋಜ ರಾಜನಾದ ಸುದಕ್ಷಿಣನು ಪಲಾಯನಪರಾಯಣರಾದ ಸೈನಿಕರನ್ನು ಹಿಂದಿರುಗಿಸಿ, ಅರ್ಜುನನನ್ನು ಮುತ್ತಿದನು. ಏಳು ಬಾಣಗಳಿಂದ ಅವನ ಕವಚವನ್ನು ಸೀಳಿ ಅರ್ಜುನನು, ಅವನು ಹೊಡೆದ ಹತ್ತು ಬಾಣಗಳನ್ನು ಖಂಡಿಸಿದನು. ಅವನು ದಿವ್ಯ ಶಕ್ತಿಯನ್ನೆತ್ತಿ ಒಗೆದನು. ಕಿಂಕಿಣೀ ನಾದದಿಂದ ಕಿಡಿಗಳಿಂದ ಉರಿವ ಶಕ್ತಿಯು ಎದೆಗೆ ಬಡಿದಾಗ ಪಾರ್ಥನು ಮೂರ್ಛೆಗೊಂಡಂತಾದನು. ಮತ್ತೆ ಎಚ್ಚತ್ತು ತುಟಿ ಸವರಿ, ಅರ್ಜುನನು ಅವನ ಅಶ್ವ, ಧನು, ಸೂತರನ್ನು ಬಾಣಗಳಿಂದ ಹೊಡೆದು, ಅವನ ರಥವನ್ನೂ ಮುರಿದನು. ಸುದಕ್ಷಿಣನು ಮುಂದಕ್ಕೆದ್ದು ಬರುವಾಗ ಭಲ್ಲದಿಂದ ಅವನ ಎದೆ ಸೀಳಿದನು; ಮಹಾವಾತಪತಿತವಾದ ಕರ್ಣಿಕಾರದಂತೆ ಕಾಂಭೋಜನು ಭೂಮಿಯ ಮೇಲೆ ಬಿದ್ದನು. ಅದನ್ನು ಕಂಡು ದುರ್ಯೋಧನ ಸೇನೆಗಳು ಓಡತೊಡಗಿದವು.

ಪಾರ್ಥನು ತನ್ನನ್ನು ಮುತ್ತಿದ ಆರುಸಾವಿರ ವಸಾತೀಯ ಶಿಬಿ ಗೋಪಾಲರನ್ನು ಸಂಹರಿಸಿ, ಧೃಡಾಯು ಅಚ್ಯುತಾಯುಗಳು ಮುತ್ತಲು, ಅವರ ಸಾವಿರಾರು ಬಾಣಗಳನ್ನು ಖಂಡಿಸಿ ಕೆಡಹಿದನು. ದೃಢಾಯುವಿನ ತೋಮರವು ಅರ್ಜುನನ ಎದೆಗೆ ತಾಕಿ, ಅವನನ್ನು ಮೋಹಗೊಳಿಸಿತು. ಹುಣ್ಣಿಗೆ ಉಪ್ಪೆರಚಿದಂತೆ, ಅಚ್ಯುತಾಯುವು ಶೂಲದಿಂದ ಅರ್ಜುನನನ್ನು ನೋಯಿಸಿದನು. ಅರ್ಜುನ ಮೂರ್ಛೆಯನ್ನು ಕಂಡು ಕೌರವ ಸೇನೆಯು ಆನಂದದಿಂದ ಸಿಂಹನಾದಗಳನ್ನು ಮಾಡಿತು. ಶ್ರೀಕೃಷ್ಣನು ಕೈಲಿ ಮುಟ್ಟಿ ಅರ್ಜುನನನ್ನು ಎಚ್ಚರಗೊಳಿಸಿ, ಧೈರ್ಯ ತುಂಬಿದನು. ಮತ್ತೆ ರಥಾಶ್ವಗಳನ್ನು ಶರವರ್ಷದಲ್ಲಿ ಮುಚ್ಚಿದ ವೀರದ್ವಯವನ್ನು ಕಂಡು, ಅರ್ಜುನನು ಇಂದ್ರಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರ ಮಹಿಮೆಯಿಂದ ಬಾಣವರ್ಷವೇ ಬಂದಂತಾಗಿ ಅದು ಶ್ರುತಾಯು ಅಚ್ಯುತಾಯುಗಳನ್ನು ಆಕಾಶಕ್ಕೆ ಹಾರಿಸಿಕೊಂಡು, ತಲೆ, ಕೈ ಕಾಲು ಕಡಿದು, ಕೆಳಗೆ ಬೀಳಿಸಿತು. ಅದನ್ನು ಕಂಡು ಕುಪಿತರಾದ ಅವರ ಮಕ್ಕಳು ನಿಯತಾಯು, ದೀರ್ಘಾಯುಗಳು ಕುಂತೀಸುತನನ್ನು ಮುತ್ತಿ ಶರಜಾಲದಿಂದ ರಥಿಕ ಸಾರಥಿಗಳನ್ನು ಪೀಡಿಸಿದರು. ಎರಡು ಭಲ್ಲಗಳಿಂದ ಅವರೀರ್ವರ ತಲೆ ಕಡಿದು, ಅರ್ಜುನನು ಅವರ ಸೈನಿಕರನ್ನೂ ಸಂಹರಿಸಿದನು.

ಪದ್ಮ ಸಹಸ್ರ ಸಮಂಚಿತವಾದ ಶುಷ್ಕ ತಟಾಕದಂತೆ ರಣರಂಗವು ಭೀಕರವಾಗಿತ್ತು. ಗಿಡದಿಂದ ಬೀಳುವ ಪಕ್ಷಿಗಳಂತೆ, ತಲೆಗಳುದುರಿದವು. ರಕ್ತಧಾರೆಗಳಿಂದ ರಥಗಳು ನಿರ್ಝರ ಸಹಿತ ಗಿರಿಗಳಂತೆ ಕಂಡವು. ಕರಿ ಆನೆಗಳು, ಬಿಳಿ ಕುದುರೆಗಳು ಎಲ್ಲವೂ ರಕ್ತದಿ ನೆನೆದು ಕೆಂಪಾದವು. ದ್ರಾವಿಡರು ಮಾಲವರು, ಮ್ಲೇಂಛರು, ದರದರು ಮೊದಲಾದ ವೇತನ ಪಣಿತ ವೀರಭಟರು ತಮ್ಮ ದೇಶವನ್ನು ಮರೆತು, ಅರ್ಜುನ ಬಾಣಗಳಿಂದ ಪ್ರೇಷಿತರಾಗಿ ಯಮನಗರವನ್ನು ಸೇರಿದರು. ಶಲಭಗಳಂತೆ ಹಾರಿ ಬರುವ ಅರ್ಜುನ ಬಾಣಗಳಿಂದ ಒಂದೂ ವ್ಯರ್ಥವಾಗಲಿಲ್ಲ. ಪೃಥಿವಿಯು ಶೋಣಿತ ಪರಿಪ್ಲುತವಾಯಿತು.

ಇಂತು ಬರುವ ಪಾರ್ಥನನ್ನು-ಅಂತಕನನ್ನು ಮನುಜಮಾತ್ರನಂತೆ ತಡೆದು ಅಂಬಷ್ಟನು/ಶರವರ್ಷದಲ್ಲಿ ಮುಣಿಗಿಸಿದನು. ಪಾರ್ಥನು ಅವನ ಸೂತ ತುರಗಗಳನ್ನು ಕೊಂದನು. ಅಂಬಷ್ಟನು ಗದೆಯನ್ನೆತ್ತಿ ಬರಲು, ಅರ್ಜುನನು ಅವನ ಗದೆಯನ್ನು ಪುಡಿ ಮಾಡಿ, ಬಾಣಶತದಿಂದ ಅವನನ್ನೂ ಸಂಹರಿಸಿದನು. ಮೇಘಮಂಡಲವನ್ನು ಸೀಳಿ ಬರುವ ಸೂರ್ಯನಂತೆ ಅರ್ಜುನನು ವಿರಾಜಿಸಿ ಮುಂದೆ ಸಾಗಿದನು.

## ೮. ಗುರು - ಶಿಷ್ಯ ವಿಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ರಾಜನ್ ! ಸ್ವಬಲವು ಪ್ರಭಗ್ನವಾಗಿ ಓಡುವುದನ್ನು ಕಂಡು, ದುರ್ಯೋಧನನು ದ್ರೋಣಾಚಾರ್ಯನನ್ನು ಸೇರಿ 'ಆಚಾರ್ಯ ! ದಾರುಣ ಜನಕ್ಷಯವನ್ನು ಮಾಡಿ ಪಾರ್ಥನು ಮುಂದೆ ಸಾಗುತ್ತಿರುವನು. ಜಯದ್ರಥನನ್ನು ಅವನು ಮುತ್ತಿ ಕೊಲ್ಲದಂತೆ ಮುಂದಿನ ಕರ್ತವ್ಯವನ್ನಾಲೋಚಿಸು ! ನೀನೇ ನಮಗೆ ಶರಣ್ಯನು. ಕೋಪಮಾರುತ ಚೋದಿತವಾಗಿ ಧನಂಜಯಾಗ್ನಿಯು ನನ್ನ ಸೇನಾ ಕಕ್ಷವನ್ನು ಸುಡುತ್ತಿದೆ. ಜಯದ್ರಥನ ರಕ್ಷಕರಾಗಿರುವ ರಾಜರು ಅವನ ಮುನ್ನಡೆಯನ್ನು ಕಂಡು ಹೆದರಿದ್ದಾರೆ. ದ್ರೋಣನನ್ನು ಮೀರಿ ಅರ್ಜುನನು ಬರಲಾರನೆಂದು ಅವರು ತಿಳಿದಿದ್ದರು. ಈಗ ನಿನ್ನೆದುರಿಗೇ ನಿನ್ನನ್ನು ನಿರ್ಲಕ್ಷಿಸಿ, ಪಾರ್ಥನು ಸೈಂಧವನನ್ನು ಸೇರಪೋಗುತ್ತಿರುವನು. ಮಹಾತ್ಮ ! ನಿನ್ನ ಪಾಂಡವ ಪ್ರೀತಿಯನ್ನು ಕಂಡು ನನಗೂ ಕಾರ್ಯಹಾನಿಯಾಗುವುದೆಂದು ಚಿಂತೆಯಾಗಿದೆ. ನಿನಗೆ ಉತ್ತಮ ವೃತ್ತಿಯನ್ನಿತ್ತು ನನ್ನ ಕೈಲಾದಷ್ಟು ಸಂತೋಷಪಡಿಸುತ್ತಿರುವೆನು. ಆದರೂ ನೀನದಕ್ಕೆ ತಕ್ಕಂತೆ ನಡೆಯುತ್ತಿಲ್ಲ. ನಮ್ಮಲ್ಲಿ ನಿನಗೆ ಪ್ರೀತಿಯಿಲ್ಲ. ನಮ್ಮ ಶತ್ರುಗಳಾದ ಪಾಂಡವರಲ್ಲಿ ನಿನಗೆ ಪ್ರೀತಿ. ನಮ್ಮ ಭೃತಿಯಿಂದ ಜೀವಿಸುತ್ತಾ ಅನ್ಯರನ್ನು ಪ್ರೀತಿಸಿ, ನಮಗೆ ಅಹಿತವನ್ನು ಮಾಡುವುದನ್ನು ನೋಡಿ ಆಶ್ಚರ್ಯವಾಗಿದೆ ! ಮಧು ದಿಗ್ಧಕ್ಷುರ ಧಾರೆಯಂತೆ ಸೇವಿಪ ಭಕ್ತರನ್ನು ನಾಶಪಡಿಸುವುದು ನಿನಗುಚಿತವಲ್ಲ. ಪಾಂಡವರನ್ನು ನಿಗ್ರಹಿಸುವ ವರವನ್ನು ಕೊಟ್ಟೆ ಎಂದೇ ಸೈಂಧವನನ್ನು ಅವನ ದೇಶಕ್ಕೆ ಓಡಿಹೋಗದಂತೆ ಮಾಡಿ ನಿಲ್ಲಿಸಿದೆನು. ಬುದ್ಧಿಯಿಲ್ಲದ ನಿನ್ನ ಮಾತಿಗೆ ನಂಬಿ ಸಿಂಧು

ಪತಿಯನೀಗ ಮೃತ್ಯುವಿನ ಮುಖದಲ್ಲಿ ಹೊಗಿಸುತ್ತಿರುವೆನು. ಯಮದಂಷ್ಟ್ರ ಮಧ್ಯದಿಂದ ಮಾನವನು ಹೊರಬಂದರೂ ಬರಬಹುದಾಗಲಿ, ಅರ್ಜುನನ ವಶನಾದ ಮೇಲೆ ಜಯದ್ರಥನು ಬದುಕುವುದಿಲ್ಲ. ಸೈಂಧವನನ್ನು ಕಾಪಾಡು ! ಆಚಾರ್ಯ ! ಆರ್ತನಾಗಿ ಪ್ರಲಪಿಸುವ ನನ್ನ ಮಾತಿಗೆ ಸಿಟ್ಟಾಗಬೇಡ ! ಕಾರ್ಯವನ್ನಾಲೋಚಿಸು !' ಎಂದನು.

ಆಚಾರ್ಯನು 'ರಾಜನ್ ! ಅಶ್ವತ್ಥಾಮನಂತೆ ಪ್ರೀಯನಾದ ನಿನ್ನ ಮಾತಿಗೆ ಸಿಟ್ಟಿಲ್ಲ. ಕೇಳು ಸತ್ಯವನ್ನರಹುವೆನು. ಸಾರಥಿಯು ಶ್ರೀಕೃಷ್ಣನು ; ಕುದುರೆಗಳು ದಿವ್ಯಗಳು, ಬಹುವೇಗಗಳು ; ಅರ್ಜುನನು ಬಿಟ್ಟ ಬಾಣಗಳು ಅವನ ವೇಗದಿಂದ ಕ್ರೋಶ ದೂರ ಹಿಂದೆ ಬೀಳುವುದನ್ನು ಅದರಿಂದ ಅಲ್ಲಿರುವ ಸೈನಿಕರು ಹತರಾದಂತೆ ತೋರುದವನ್ನು ನೀನು ನೋಡಿಲ್ಲವೇ ? ನಾನು ವಯಸಾ ಮುದುಕನಾಗಿ, ಮಹಾವೇಗವಿಲ್ಲದವನಾಗಿರುವೆನು. ಸೇನಾಮುಖದಲ್ಲಿ ನಿಂತಿರುವ ನಿನಗೆ ಧರ್ಮರಾಜನನ್ನು ಹಿಡಿಯುವ ಕೆಲಸವನ್ನು ನೀನೇ ಒಪ್ಪಿಸಿರುವೆ ! ಅಂತೆಯೇ ಪ್ರತಿಜ್ಞೆಯನ್ನು ಮಾಡಿರುವೆನು. ಮುಖದಲ್ಲಿರುವ ನನ್ನನ್ನು ಮೀರಿ ಹೋದ ಅರ್ಜುನನನ್ನು ಮಧ್ಯದಲ್ಲಿರುವ ವೀರರು ಕಾದಿ ತಡೆಯಲಾರದಾದರೆ ಅದು ನನ್ನ ತಪ್ಪಲ್ಲ. ಅರ್ಜುನನಂತೆಯೇ ಮಹಾಕುಲ ಪ್ರಸೂತನಿರುವೆ ! ಅವನೊಬ್ಬನು, ನೀವು ಬಹು ವೀರರು, ಜಗತ್ಪತಿಯಾದ ನಿನಗೆ ಹೆದರಿ, ಪ್ರತಿ ಪರಾಜಯದಲ್ಲಿಯೂ ನನ್ನನ್ನು ನಿಂದಿಸುವುದು ಶೋಭಾಯಕರವಲ್ಲ ಹೋಗು ! ನಿನ್ನ ಪರಾಕ್ರಮವು ಪ್ರಕಟವಾಗಲಿ !' ಎಂದನು.

ದುರ್ಯೋಧನನು 'ಆಚಾರ್ಯ ! ನಿನ್ನಂತಹ ಮಹಾವೀರರನ್ನು ಅತಿಕ್ರಮಿಸಿ ಹೋದ ಪಾರ್ಥನನ್ನು ನಾನೆಂತು ನಿಲ್ಲಿಸಲಿ ? ವಜ್ರಪಾಣಿಯನ್ನು ಗೆಲ್ಲಲಹುದು, ಗಾಂಡೀವ ಹಸ್ತನನ್ನಲ್ಲ. ಕೃತವರ್ಮನನ್ನು, ನಿನ್ನನ್ನು ಅತಿಕ್ರಮಿಸಿ, ಶ್ರುತಾಯುಧ ಸುದಕ್ಷಿಣ, ಶ್ರುತಾಯುಗಳನ್ನು ಕೊಂದ ಶಸ್ತ್ರಕೋವಿದನನ್ನು ನಾನೆಂತು ನಿಲ್ಲಿಸಲಿ ? ಅವನೊಡನೆ ಕಾದಲು ಕಳಿಸುವುದಕ್ಕೆ ನಾನು ನಿನಗೆ ಶತ್ರುವೇ ? ಬೇಡ ! ನನ್ನ ಯಶವನ್ನು ಉಳಿಸು !' ಎಂದನು. ದ್ರೋಣನು 'ನಿಜವನ್ನರುಹಿದೆ! ಅರ್ಜುನನು ನನಗೂ ದುರ್ಧರ್ಷನಿರುವನು. ನಿನ್ನನ್ನು ಅವನೊಡನೆ ಕಾದಲು ಕಳಿಸುವ ನಿಷ್ಕರುಣೆಯಲ್ಲ. ನಾನು ನಿನಗೆ ಅಭೇಧ್ಯವಾದ ಕವಚವನ್ನು ತೊಡಿಸಿ ಕಳಿಸುವೆನು. ಕಾಂಚನಕವಚ ರಕ್ಷಿತನಾದ ನಿನ್ನನ್ನು ಅಸ್ತ್ರ ಶಸ್ತ್ರಗಳು ಹಿಂಸಿಸಲಾರವು. ನಿನಗೆ ಅರ್ಜುನನಿಂದ ಭಯವಿಲ್ಲ. ಹೋಗು ! ವಿಕ್ರಮಿಸಿ, ವಿಮಲಕೀರ್ತಿಯನ್ನು ಪಡೆ !' ಎಂದು, ದ್ರೋಣನು ಆಚಮಿಸಿ ಮಂತ್ರವನ್ನು ಜಪಿಸಿ, ದುರ್ಯೋಧನನಿಗೆ ದಿವ್ಯ ಕವಚವನ್ನು ತೊಡಿಸಿದನು.

ದ್ರೋಣನಿಂತೆಂದನು: "ಪರಬ್ರಹ್ಮನಿಂದ ನಿನಗೆ ಸ್ವಸ್ತಿಯಾಗಲಿ ! ಬ್ರಹ್ಮದೇವ, ಬ್ರಾಹ್ಮಣರು, ಶ್ರೇಷ್ಠ ನಾಗರು, ಯಯಾತಿ ಧುಂಧುಮಾರ ಭಗೀರಥಾದಿ ರಾಜರ್ಷಿಗಳು, ಸ್ವಧಾ ಸ್ವಾಹಾ ಶಚೀ ಭಾರತೀ ಶ್ರೀದೇವಿಯರು, ಅಸಿತದೇವಲ ವಿಶ್ವಾಮಿತ್ರಾಂಗಿರಸ

ವಶಿಷ್ಠ ಕಾಶ್ಯಪ ಪ್ರಮುಖ ಬ್ರಹ್ಮರ್ಷಿಗಳು, ಧಾತೃ ವಿಧಾತೃಗಳು, ದಿಗೀಶರು, ಉಮಾಮಹೇಶರು, ಕಾರ್ತಿಕೇಯ ಗಜಾನನರು, ಗ್ರಹತಾರೆಗಳು, ಶೇಷದೇವ, ಮುಂತಾದವರಿಂದ ನಿನಗೆ ಸ್ವಸ್ತಿಯಾಗಲಿ !

ದುರ್ಯೋಧನ ! ವೃತ್ರಭೀತರಾದ ದೇವತೆಗಳು ಬ್ರಹ್ಮನಿಗೆ ಶರಣಾಗಿಹೋದರು. ಅಲ್ಲಿ ವಿಷ್ಣುವೂ ಇದ್ದನು. ವಿಷ್ಣುವಿನ ಅಪ್ಪಣೆಯಂತೆ ಬ್ರಹ್ಮನು 'ದೇವತೆಗಳಿರಾ ! ನಿಮ್ಮನ್ನು ರಕ್ಷಿಸುವುದೆನ್ನ ಕರ್ತವ್ಯವಾಗಿದೆ. ವೃತ್ರನು ತ್ವಷ್ಟನ ದಕ್ಷಿಣಾಗ್ನಿಯಿಂದ ಹುಟ್ಟಿ ಬಂದಿರುವವನು. ಮಹೇಶನ ವರದಿಂದ ಬಂದ ವೃತ್ರನನ್ನು ಮಹೇಶನ ಪ್ರಸಾದವನ್ನಾರ್ಜಿಸಿ ಸಂಹರಿಸುವಿರಿ ! ಮಹೇಶನನ್ನು ಸೇವಿಸಿ ! ಗುರುದ್ವಾರಾ ಪ್ರಸಾದಕರ್ತನಾಗಿರುವ ಹರಿಯ ಆಜ್ಞೆಯಿದು' ಎಂದು ಅವರನ್ನು ರುದ್ರನಲ್ಲಿಗೆ ಕಳಿಸಿದನು. ಅವರು ಶ್ರೀ ಶಿವನನ್ನು ಸೇರಿ ತಮ್ಮನ್ನು ವೃತ್ರನಿಂದ ರಕ್ಷಿಸೆಂದು ಬೇಡಿದರು. ಶಿವನು ಪ್ರಸನ್ನನಾಗಿ 'ದೇವತೆಗಳಿರಾ ! ವೃತ್ರಕೃತ್ಯೆಯು ದುರ್ನಿವಾರವಾಗಿದೆ. ಆದರೂ ನಿಮ್ಮನ್ನು ಪೊರೆಯುವುದೂ ಕರ್ತವ್ಯವೆಂದು ತಿಳಿದಿರುವೆನು. ಇಂದ್ರ ! ನನ್ನ ಶರೀರದಲ್ಲಿ ಹುಟ್ಟಿ ಬರುವ ಈ ಕವಚವನ್ನು ಧರಿಸು !' ಎಂದು ಶಂಕರನು ಮಂತ್ರಸಹಿತವಾದ ಕವಚವನ್ನು ಇಂದ್ರನಿಗೆ ತೊಡಿಸಿದನು. ಆಗ ಇಂದ್ರನು ಕವಚ ಧಾರಣ ಮಂತ್ರದಿಂದಲು, ನಾರಾಯಣವರ್ಮ ಪ್ರಭಾವದಿಂದಲು ರಕ್ಷಿತನಾಗಿ ವೃತ್ರನನ್ನು ಸಂಹರಿಸಿದನು.

ಮಂತ್ರ ಕವಚಗಳನ್ನು ಬ್ರಹ್ಮನು ಆಂಗಿರಸನಿಗಿತ್ತಿದ್ದನು. ಆತನಿಂದ ಬೃಹಸ್ಪತಿಯು ಕಲಿತನು. ಅಗ್ನಿವೇಶ್ಯನು ಬೃಹಸ್ಪತಿಯ ದೆಶೆಯಿಂದ ಪೊಂದಿ, ನಿನಗುಪದೇಶಿಸಿದನು. ಇಂದು ಆ ಕವಚದಿಂದ ನಿನ್ನನ್ನು ರಕ್ಷಿಸುತ್ತಿರುವೆನು." ಇಂತು ಕವಚವನ್ನಿತ್ತು ಆಚಾರ್ಯನು ದುರ್ಯೋಧನನನ್ನು ಅರ್ಜುನನೊಡನೆ ಹೋರಾಡಲು ಕಳಿಸಿದನು. ದುರ್ಯೋಧನನು ಮಹೋತ್ಸಾಹ ತೇಜೋಬಲ ಸಮನ್ವಿತನಾಗಿ, ಅರ್ಜುನನನ್ನು ಸೇರ ಪೋದನು. ಅವನನ್ನನುಸರಿಸಿ ತ್ರಿಗರ್ತರ ಸಾವಿರ ರಥಿಕರು, ಸಾವಿರ ಆನೆಗಳು, ಲಕ್ಷ ಕುದುರೆ ಸವಾರರು, ಲಕ್ಷ ಭಟರು ಗರ್ಜಿಸುತ್ತಾ ನಡೆದರು.

ದ್ರೋಣನು ಪಾಂಡವ ಸೃಂಜಯರನ್ನು ಕೂಡಿ ತುಮುಲಯುದ್ಧ ವನ್ನಾರಂಭಿಸಿದನು. ಎರಡು ಸೇನೆಗಳು ಜಾನ್ಹವೀ-ಯಮುನಾ ನದಿಗಳು ಉಕ್ಕೇರಿ ಕಲೆತಂತೆ ಬೆರೆತು ಕಡಿದಾಡಿದವು. ಭಾರದ್ವಾಜ ಮೇಘವು ಧನುರ್ವಿದ್ಯುಲ್ಲತೆಯಿಂದಲು ಟಂಕಾರಸ್ತನಿತದಿಂದಲು ಭಯಂಕರವಾಗಿ, ಪಾಂಡವ ಸೇನೆಯನ್ನು ಶರವರ್ಷದಲ್ಲಿ ಮುಳುಗಿಸಿ, ರಕ್ತ ನದಿಗಳನ್ನು ಹರಿಸಿತು. ಧೃಷ್ಟದ್ಯುಮ್ನ ಪೀಡಿತವಾದ ಕುರು ಸೇನೆಯು ಮೂರು ಹೋಳಾಗಿ, ದ್ರೋಣ, ಜಲಸಂಧ, ಕೃತವರ್ಮರನ್ನು ಆಶ್ರಯಿಸಿತು. ತನ್ನ ವ್ಯೂಹವು ಕೆಟ್ಟು ಚೂರಾದುದನ್ನು ಕಂಡು ಆಚಾರ್ಯನು ಕಾಲಾಗ್ನಿಯಂತೆ ಉರಿದೆದ್ದು ಪಾಂಚಾಲ ಸೇನೆಯನ್ನು ಹುಲ್ಲುಗಾವಲನ್ನು ಅಗ್ನಿಯು ಸುಡುವಂತೆ ಸುಡತೊಡಗಿದನು.

ಭೀಮಸೇನನನ್ನು ವಿವಿಂಶತಿ ಚಿತ್ರಸೇನ ವಿಕರ್ಣರು ವಿಂದಾನುವಿಂದ ಕ್ಷೇಮ

ಧೂರ್ತಿಗಳಿಂದ ಕೂಡಿ ಎದುರಿಸಿ ಕಾದಿದರು. ಬಾಹ್ಲೀಕನು ದ್ರೌಪದೇಯರಿಂದ ಹೋರಾಡಿದನು. ಶೈಬ್ಯಗೋವಾಸನನು ಕಾಶ್ಯಪುತ್ರನೊಡನೆ ಕಾದಿದನು. ಶಲ್ಯನು ಧರ್ಮರಾಜನನ್ನು ಮುತ್ತಿದನು. ದುಶ್ಶಾಸನನು ಸಾತ್ಯಕಿಯಿಂದ ಕಡಿದಾಡಿದನು. ಶಕುನಿಯಿಂದ ನಕುಲ ಸಹದೇವರು ಹೋರಾಡಿದರು. ಘಟೋತ್ಕಚನನ್ನು ಅಲಾಯುಧನು, ಅಲಂಬುಷನನ್ನು ಕುಂತಿಭೋಜನು ಮುತ್ತಿ ಹೋರಾಡಿದರು. ಎಲ್ಲರ ಹಿಂದೆ ಸೈಂಧವನು ಕೃಪಾಶ್ವತ್ಥಾಮಾದಿ ವೀರರಿಂದ ರಕ್ಷಿತನಾಗಿದ್ದನು. ಕರ್ಣನು ವಾಮಪಾರ್ಶ್ವದಲ್ಲಿಯೂ, ದ್ರೌಣಿಯು ದಕ್ಷಿಣಪಾರ್ಶ್ವದಲ್ಲಿಯೂ, ಭೂರಿಶ್ರವ ವೃಷಸೇನ ಶಲರು ಪೃಷ್ಠ ರಕ್ಷಕರಾಗಿಯೂ ನಿಂತಿದ್ದರು.

ಸಂಗ್ರಾಮವು ಆಶ್ಚರ್ಯ ಭಯಂಕರವಾಯಿತು. ಸೈನಿಕರು ಸಾಯಲು ನಿಶ್ಚಯಿಸಿ ಬಂದಿದ್ದರು. ದ್ವಂದ್ವಯುದ್ಧನಿರತರಾದ ಯೋಧರ ಸಿಂಹಗರ್ಜನೆಗಳೊಂದಿಗೆ ಬಾಣ ಸಹಸ್ರವು ಹಾರಿ, ಶತ್ರು ಪ್ರಾಣಗಳನ್ನು ಹರಿಸುತ್ತಿತ್ತು. ನಕುಲನು ಶಕುನಿಯನ್ನು ಹೊಡೆದೋಡಿಸಿದನು. ಘಟೋತ್ಕಚನು ಅಲಾಯುಧನನ್ನು ಸೋಲಿಸಿದನು. ಭೀಮಸೇನನ ಮುಂದೆ ನಿಲ್ಲಲಾರದೆ ವಿಂದಾನುವಿಂದರು ಓಡಿಹೋದರು. ಧೃಷ್ಟದ್ಯುಮ್ನನು ದ್ರೋಣನ ಅಶ್ವಗಳನ್ನು ಗಾಯಗೊಳಿಸಿ, ಖಡ್ಗ ಚರ್ಮಧರನಾಗಿ ಆತನ ರಥಕ್ಕೆ ಹಾರಿದನು. ನೊಗದ ಮೇಲೆ ನಿಂತು ಕುದುರೆಗಳನ್ನು ಕೊಂದು, ಮೃತ್ಯುವಿನಂತೆ ನಿಂತಿರುವ ಧೃಷ್ಟದ್ಯುಮ್ನನ ಢಾಲನ್ನೂ ಖಡ್ಗವನ್ನೂ ಚೂರಾಗಿಸಿ, ದ್ರೋಣನು ನಿಶಾತ ಬಾಣದಿಂದ ಅವನನ್ನೂ ಕೊಲ್ಲಲೆಣಿಸಿ ಗುರಿಯಿಟ್ಟನು. ಅದನ್ನು ಕಂಡು ಸಾತ್ಯಕಿಯು ಆ ಬಾಣವನ್ನು ಖಂಡಿಸಿ, ಪಾರ್ಷತನನ್ನು ಕಾಪಾಡಿ, ತನ್ನ ರಥದಲ್ಲಿ ಕೂಡಿಸಿಕೊಂಡು ಹೋದನು. ತನ್ನ ಕೈಗೆ ಸಿಕ್ಕ ಪಾಂಚಾಲ್ಯನನ್ನು ಬಿಡಿಸಿದ ಸಾತ್ಯಕಿಯನ್ನು ದ್ರೋಣನು ಕ್ರೋಧದಿಂದ ಇಪ್ಪತ್ತೈದು ಬಾಣಗಳಿಂದ ಪೀಡಿಸಿದನು. ಮತ್ತೊಂದು ರಥದಲ್ಲಿ ಕೂತು ಶೋಣಾಶ್ವನು ಮತ್ತೆ ಸಾತ್ಯಕಿಯನ್ನು ಮುತ್ತಿ ಮಳೆಗಾಲದ ಮೇಘದಂತೆ ಬಾಣವರ್ಷವನ್ನು ಸುರಿದನು. ಸಾತ್ಯಕಿಯು ಪರ್ವತದಂತೆ ಅದನ್ನು ಸಹಿಸಿ, ಬಾಣಗಳ ಸುರಿಮಳೆಗರೆದನು. ಉಭಯರ ಧ್ವಜ ಛತ್ರಗಳುರುಳಿದವು. ಉಭಯರ ಶರೀರಗಳು ರಕ್ತಸಿಕ್ತವಾದವು. ಅವರ ರಣ ಕೋಲಾಹಲವನ್ನು ನೋಡುತ್ತಾ ಇತರ ಸೈನಿಕರು ಸುಮ್ಮನೆ ನಿಂತರು. ಆ ಪುರುಷಸಿಂಹರ ಹೋರಾಟವು ನೀರಾಟ ರಣಭಯಂಕರವಾಗಿ, ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡಿತು. ಸಾತ್ಯಕಿಯು ಆಚಾರ್ಯನ ಧನುವನ್ನು ಮುರಿದನು. ಮತ್ತೊಂದನ್ನೆತ್ತಲು ಅದನ್ನೂ ಮುರಿದನು. ದ್ರೋಣನು ಸಾತ್ಯಕಿಯ ಶರಲಾಘವವನ್ನು ಮನದಿ ಮೆಚ್ಚಿ ಬೇಗನೆ ಧನುವನ್ನು ಹೆದೆಗೂಡಿಸಿ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದನು. ಸಾತ್ಯಕಿಯು ಪ್ರತ್ಯಸ್ತ್ರಗಳಿಂದ ಅವನ್ನು ವ್ಯರ್ಥಗೊಳಿಸಿದನು. ಆಗ ಧರ್ಮಜ ಭೀಮ ವಿರಾಟ ಧೃಷ್ಟದ್ಯುಮ್ನರು ಸಾತ್ಯಕಿಗೆ ಸಹಾಯವಾಗಿ ಬಂದರು. ದುಶ್ಶಾಸನ ಪ್ರಮುಖ ಕುರು ವೀರರು ದ್ರೋಣ ಸಹಾಯಕ್ಕೆಂದು ಬಂದರು. ಮತ್ತೆ ತುಮುಲವಾದ ದ್ವಂದ್ವಯುದ್ಧವು ಎಲ್ಲೆಡೆ ನಡೆದು

ರಣರಂಗವು ಭೀಕರವಾಯಿತು. ಸೂರ್ಯನು ಮಧ್ಯಾಕಾಶದಿಂದ ಬಾಗಿ ಪಶ್ಚಿಮ ಯಾನವನ್ನಾರಂಭಿಸಿದನು.

ಅಲ್ಲಿ ಶ್ರೀಕೃಷ್ಣಾರ್ಜುನರು ಸೈಂಧವನನ್ನು ಸೇರಲು ತ್ವರೆಯಿಂದ ಹೊರಟರು. ಅರ್ಜುನನ ರಥವು ಹೋದಂತೆ ಅರ್ಜುನನ ಬಾಣಗಳು ಮಾರ್ಗವನ್ನು ಮಾಡುತ್ತಿದ್ದವು. ವಾಸುದೇವನ ಸಾರಥ್ಯವೂ ಅಪ್ರತಿಮಾನವಾಗಿತ್ತು. ಮಂಡಲಾಕಾರವಾಗಿ ನಡೆವ ರಥದಿಂದ ಹೊರಹೊಮ್ಮುವ ಬಾಣಜ್ವಾಲೆಗೆ ಹೆದರಿ ಕುರು ಸೈನಿಕರು ಮಾರ್ಗಬಿಟ್ಟು ತೊಲಗುತ್ತಿದ್ದರು; ತೊಲಗದವರು ಯಮ ಮಾರ್ಗವನ್ನು ಸೇರುತ್ತಿದ್ದರು. ರಥ ನೇಮೀಧ್ವಾನದೊಡನೆ, ಬಾಣ ಪೂತ್ಕಾರಗಳು, ಬೀಳುವ ಭಟರ ಚೀತ್ಕಾರಗಳು ನಿಬಿಡವಾದವು. ಬಹುದೂರವಾಗಿ, ಆಕಾಶವನ್ನಳೆವಂತೆ ಹಾರಿಬಂದ ಕುದುರೆಗಳಿಗೆ ನೀರಡಿಸಿದೆ ಎಂದು ತಿಳಿದ ಅರ್ಜುನನು ಶ್ರೀಕೃಷ್ಣನನ್ನು 'ಏನು ಮಾಡಲಿ ? ಇಂದ್ರ ರುದ್ರರ ರಥಗಳಂತೆ ನನ್ನ ರಥವು ಬಹು ವೇಗವಾಗಿ ಸೇನಾಮಧ್ಯಭಾಗವನ್ನು ಸೇರಿದೆ. ಕುದುರೆಗಳು ನೀರಡಿಸಿದಂತಿವೆ. ರಥವನ್ನು ಕಷ್ಟದಿಂದ ಎಳೆಯುತ್ತಿವೆ. ಅವುಗಳ ಶರೀರವು ಬಾಣಜರ್ಜಿತವಾಗಿದೆ' ಎಂದು ಕೇಳಿದನು. ಶ್ರೀಕೃಷ್ಣನೂ ಅಹುದೆಂದು ಒಪ್ಪಿ, 'ಅಶ್ವಗಳಿಗೆ ನೀರು ಕುಡಿಸಬೇಕಾಗಿದೆ' ಎಂದನು.

ಅರ್ಜುನಾಶ್ವಗಳು ಬಳಲಿ ತಡಬಡುವುದನ್ನು ಕಂಡು ವಿಂದಾನುವಿಂದರು ಅರ್ಜುನನನ್ನೂ ಮುತ್ತಿ ಕೊಲ್ಲಬೇಕೆಂದು ತಮ್ಮ ಸೇನಾಸಮೇತರಾಗಿ ಬಂದರು. ಆವಂತ್ಯರ ದಾಳಿಯನ್ನು ಅರ್ಜುನನು ಶರವರ್ಷದಿಂದ ತಡೆದನು, ಮತ್ತು ಅವರ ಧನಸ್ಸುಗಳನ್ನು ಮುರಿದನು. ವಿಂದನು ಕ್ರುದ್ಧನಾಗಿ ಇಪ್ಪತ್ತು ಬಾಣಗಳಿಂದ ಅರ್ಜುನನನ್ನು, ಐದು ಬಾಣಗಳಿಂದ ಕೇಶವನನ್ನು ತಾಡಿಸಿದನು. ಪಾರ್ಥನು ಅವನ ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದು, ಸಾರಥಿಯನ್ನೊಂದರಿಂದ ಕೆಡಹಿ, ಅವಕಾಶವನ್ನು ಕೊಡದೆ, ನಿಶಾತಭಲ್ಲದಿಂದ ವಿಂದನ ತಲೆಯನ್ನುರುಳಿಸಿದನು. ಅನುವಿಂದನು ಕುಪಿತನಾಗಿ ಮೇಲೇರಿ ಬರಲು, ಅವನ ಕುದುರೆಗಳನ್ನು ಕೊಂದನು. ಅನುವಿಂದನು ಗದೆಯನ್ನೆತ್ತಿ ಹೊಡೆಯಲು ಅದು ಮಧುಸೂದನನ ಲಲಾಟಕ್ಕೆ ಬಡಿದು, ಕೆಳಗೆ ಬಿದ್ದು ಪುಡಿಯಾಯಿತು. ಅರ್ಜುನನು ಕ್ರುದ್ಧನಾಗಿ ಆರು ಬಾಣಗಳಿಂದ ಅನುವಿಂದನ ಎರಡು ಕೈಗಳನ್ನು, ಎರಡು ಕಾಲುಗಳನ್ನು, ನಡುವನ್ನು, ಶಿರವನ್ನು ಖಂಡಿಸಿದನು. ಅದನ್ನು ಕಂಡು ವಿಂದಾನುಯಾಯಿಗಳು ಮುತ್ತಲು, ಅರ್ಜುನನು ಅವರನ್ನೆಲ್ಲ ಚೆಂಡಾಡಿ, ಮುಂದೆ ಸಾಗಿದನು. ಆಗ ಅವರಿಗೆ ದೂರದಲ್ಲಿರುವ ಸೈಂಧವನು ನೇತ್ರಗೋಚರನಾದನು.

ಕುದುರೆಗಳಿಗೆ ನೀರು ಕುಡಿಸಿ, ಶ್ರಮವನ್ನು ಕಳೆದೇ ಮುಂದೆ ಸಾಗಬೇಕೆಂಬ ಶ್ರೀಶನ ಆದೇಶವನ್ನು ಶಿರಸಾವಹಿಸಿ ಅರ್ಜುನನು ರಥದಿಂದಿಳಿದು, 'ಕೇಶವ ! ನಿನ್ನ ಅನುಗ್ರಹದಿಂದ ನಾನೊಬ್ಬನೇ ಧರಣೀತಲದಲ್ಲಿ ನಿಂತು, ನಿನ್ನನ್ನು, ನೀರು ಕುಡಿವ ಕುದುರೆಗಳನ್ನು, ರಥವನ್ನು ಕಾಪಾಡುವೆನು. ಭಯವಿಲ್ಲ'ವೆಂದು, ಗಾಂಡೀವವನ್ನು

ಟಂಕಾರಗೊಳಿಸುತ್ತಾ ನಿಂತನು. ಅದನ್ನು ಕಂಡು, ಶತ್ರುವೀರರು ಅನೇಕ ಸಾಹಸ್ರ ಸಂಖ್ಯಾಕರು ಬಂದು ಸುಲಭವಾಗಿ ಅರ್ಜುನನನ್ನು ಕೊಲ್ಲಬಹುದೆಂದೆಣಿಸಿ, ಅವನನ್ನು ಮುತ್ತಿದರು. ಪಾರ್ಥನು ಅವರ ಶರಜಾಲವನ್ನು ಖಂಡಿಸುತ್ತಾ ಅಖಂಡ ಧೈರ್ಯದಿಂದ ಅಚಲವಾಗಿ ನಿಂತಿದ್ದನು. ಒಬ್ಬನಿಂದ ಕಡಿದಾಡುವ ರಥಿಕಾಶ್ವಿಕ ಪದಾತಿಭಟ ಸಾಹಸ್ರವು ಪಾರ್ಥನನ್ನು ಗೆಲ್ಲುವುದಿರಲಿ, ತಾವೇ ಅವನ ಬಾಣಾಗ್ನಿಗಾಹುತಿಯಾಗುತ್ತಿದ್ದರು. ಶರಗಳೇ ಅಲೆಗಳಾಗಿ, ಧ್ವಜ ಚಕ್ರಗಳು ಸುಳಿಗಳಾಗಿ, ಆನೆಗಳು ತಿಮಿಗಳಾಗಿ, ಪದಾತಿಗಳು ಮೀನುಗಳಾಗಿ, ಛತ್ರ ಪತಾಕೋಷ್ಣೀಷಗಳು ನೊರೆಯಾಗಿ, ಶಂಖದುಂದು ಭಿದ್ವಾನವೇ ಘೋಷವಾಗಿ, ಅಪಾರವಾಗಿ, ಅಸಂಖ್ಯೇಯವಾಗಿ, ದುರತ್ಯಯವಾಗಿ ನಡದುಬರುವ ಸೈನ್ಯ ಸಾಗರಕ್ಕೆ ವೇಲೆಯಂತೆ ನಿಂತು ಪಾರ್ಥನು ಅದನ್ನು ತಡೆಗಟ್ಟಿದನು.

ಶ್ರೀಕೃಷ್ಣನ ಆಜ್ಞೆಯಂತೆ ಅರ್ಜುನನು ವಾರುಣಾಸ್ತ್ರವನ್ನು ಬಿಟ್ಟು, ಧರಣಿಯಲ್ಲಿ ಒಂದು ಸ್ವಚ್ಛ ಸರವನ್ನೇ ನಿರ್ಮಿಸಿದನು. ಅಮೃತ ಸ್ವಚ್ಛಜಲವು, ಅರವಿಂದ ಸುಂದರವು ಆದ ಸರದಲ್ಲಿಳಿದು ಶ್ರೀಕೃಷ್ಣನು ಕುದುರೆಗಳಿಗೆ ನೀರು ಕುಡಿಸಿದನು. ಆ ಸರೋವರದ ಸುತ್ತು ಶರಪಂಜರವನ್ನು ಅಭೇಧ್ಯವಾಗಿ ನಿರ್ಮಿಸಿ, ಅರ್ಜುನನು ಶತ್ರುಗಳನ್ನು ನಿವಾರಿಸುತ್ತಿದ್ದನು. ವಾಸುದೇವನು ನಗುತ್ತಾ ಸ್ತ್ರೀಯರ ಮಧ್ಯದಲ್ಲಿದ್ದಂತೆ ನಿರ್ಭಯನಾದ ಅರ್ಜುನನನ್ನು ಮೆಚ್ಚಿ ಕುದುರೆಗಳ ಮೈಗೆ ನಟ್ಟಿದ್ದ ಶರಜಾಲವನ್ನು ಕಿತ್ತೊಗೆದನು. ತನ್ನ ಅಮೃತಹಸ್ತ ಸ್ಪರ್ಶದಿಂದ ಅವುಗಳ ಆಲಸಿಕೆಯನ್ನು ನೋವನ್ನು ಕಳೆದನು. ಅವು ಹುಲ್ಲುಮೆದ್ದು ಹರ್ಷದಿಂದ ಕೆನೆದವು. ಶ್ರೀಶನು ಕುದುರೆಗಳನ್ನು ತಂದು ಮತ್ತೆ ರಥಕ್ಕೆ ಕಟ್ಟಿ, ತಾನು ಅಲ್ಲಿಟ್ಟಿದ್ದ ಚಕ್ರವನ್ನು ಮುಟ್ಟಿ ಶಂಖವನ್ನೆತ್ತಿ ಊದಿದನು. ಅರ್ಜುನನು ವೇಗದಿಂದ ರಥವನ್ನೇರಿ, ದೇವದತ್ತವನ್ನೂದಿದನು. ಶಂಖದ್ವಯಭೀಷಣ ಘೋಷಣದಿಂದ ಶತ್ರುವೀರರು ಮೂರ್ಛಿತರಾದರು.

ಶ್ರೀಕೃಷ್ಣಾರ್ಜುನರ ಅದ್ಭುತ ಸಾಹಸವನ್ನು ಕಂಡು ಆಕಾಶದಿ ದೇವತೆಗಳು, ಋಷಿ ಗಂಧರ್ವ ಸಿದ್ಧರು, ಭೂಮಿಯಲ್ಲಿ ಮಹಾರಥಿಕರು ಮೆಚ್ಚಿ ನಿಬ್ಬೆರಗಾದರು. ನಾರದನು ಶ್ರೀಕೃಷ್ಣನನ್ನು ಕೊಂಡಾಡುತ್ತಾ ಪಾಡಿದನು. ನೋಡ ನೋಡುತ್ತಿರಲು ಅರ್ಜುನನು ತನ್ನ ವಾರುಣಾಸ್ತ್ರವನ್ನು ಉಪಸಂಹರಿಸಿ, ಶರಜಾಲವನ್ನು ಮತ್ತೆ ಅಕ್ಷಯ ತೂಣಗಳಲ್ಲಿ ಪ್ರವೇಶಿಸುವಂತೆ ಮಾಡಿ ಮುಂದೆ ಸಾಗುವುದನ್ನು ನೋಡುತ್ತಾ ಕೌರವ ವೀರರು ಮಂತ್ರಮುಗ್ಧರಾದವರಂತೆ, ಬರೆದ ಚಿತ್ರದ ಗೊಂಬೆಗಳಂತೆ ನಿಂತಿದ್ದರು. ಸೈಂಧವನನ್ನು ಸೇರಪೋಗುವ ಪಾರ್ಥನನ್ನು ತಡೆಯಲೆಣಿಸಿ ಅವರು ಬೇಗ ಬೇಗ ರಥಗಳಿಂದ ಅವನನ್ನು ಮುತ್ತಬಂದರು. 'ಆಹಾ ! ಏನು ಅರ್ಜುನನ ಸಾಹಸ ! ಎಂತಹ ಧೈರ್ಯ ! ಎಲ್ಲ ಶತ್ರು ವೀರರನ್ನೂ ಒಬ್ಬನೇ ನಿವಾರಿಸುವುದನ್ನು ಅರ್ಜುನನಲ್ಲದ ಮತ್ತಾವ ವೀರನಾದರೂ ಸಾಧಿಸಬಲ್ಲನೇ ? ನಮ್ಮ ಶಸ್ತ್ರಾಸ್ತ್ರಗಳನ್ನೆಲ್ಲ ವ್ಯರ್ಥಗೊಳಿಸಿ, ನಮ್ಮನ್ನು ಕಡೆಗಣಿಸಿ ಹೋಗುವ ಪಾರ್ಥನನ್ನು ತಡೆಯುವುದಾರಿಂದಲೂ ಆಗದು. ಪಾಂಡವರೆಲ್ಲರೂ ದುರ್ಜೇಯರಾಗಿರುವರು. ಇಂತಹ ವೀರರಿಂದ ದ್ವೇಷವನ್ನು ಬೆಳೆಸಿ

ಅದರ ವಿಷಫಲವನ್ನೀಗ ದುರ್ಯೋಧನನು ಉಣ್ಣುತ್ತಿರುವನು. ಅವನಿಂದ ನಾವೂ ಸಾಯಬೇಕಾಗಿದೆ' ಎಂದು ಪರಸ್ಪರವಾಗಿ ಮಾತಾಡುತ್ತಿದ್ದರು.

ವಾಯುವೇಗದಿಂದೋಡುವ ಪಾರ್ಥನ ರಥವನ್ನು ಹಿಂಬಾಲಿಸಿ ದುರ್ಯೋಧನನು ಹೊರಟನು. ನೋಡುತ್ತಿರಲು ಅವನ ರಥವು ಅರ್ಜುನನ ರಥವನ್ನತಿಕ್ರಮಿಸಿ ಹಿಂದಿರುಗಿತು. ತಿಮಿಂಗಿಲ ಧ್ವಯವು ಸಾಗರದಲ್ಲಿ ಹೊಗುವಂತೆ, ಕುರುಸೈನ್ಯಸಾಗರದಲ್ಲಿ ನಿರ್ಭಯರಾಗಿ ಹೋಗುವ ಕೃಷ್ಣ ಪಾರ್ಥರು ಕುರುಪತಿಯ ಸಮುಖದಲ್ಲಿ ಕವಚ ಖಡ್ಗ ಧನುರ್ಬಾಣಧರನಾಗಿ ಮುತ್ತಲು ಬರುವುದನ್ನು ಕಂಡರು.

ದ್ರೋಣ ಕೃತವರ್ಮರನ್ನು ದಾಟಿ ಬರಲಾರರೆಂದು ತಿಳಿದಿದ್ದ ಕೃಷ್ಣ ಪಾರ್ಥರು ಪಾವಕ ಧ್ವಯದಂತೆ ಉರಿಯುತ್ತಾ ಸೂರ್ಯಧ್ವಯದಂತೆ ಬೆಳಗುತ್ತಾ ವಿಕ್ರಮಿಸಿ ಸೇನಾಸೂಚಿಯನ್ನು ಸಮೀಪಿಸುವುದನ್ನು ಕಂಡು ಕುರು ಸೈನಿಕರು ಇನ್ನು ಜಯದ್ರಥನ ಸಾವು ಸಮೀಪಿಸಿತೆಂದು ಆಕ್ರೋಶಿಸಿದರು. 'ಕೃಷ್ಣ ! ಆರು ವೀರ ಧಾರ್ತರಾಷ್ಟ್ರರಿಂದ ರಕ್ಷಿತನಾಗಿರುವ ಸೈಂಧವನು ಕಣ್ಣಿಗೆ ಬಿದ್ದನು. ದೇವಗಣದಿಂದ ಕೂಡಿ ಬಂದ ಸಂಕ್ರಂದನನನ್ನೂ ನನ್ನಿಂದ ಇವನನ್ನು ಕಾಪಾಡಲಾರನು. ನಿನ್ನ ದಯದಿಂದ ನಿಸ್ತೀರ್ಣಪ್ರತಿಜ್ಞನಾಗುವೆನು. ಎಂದು ಅರ್ಜುನನು ಉತ್ಸಾಹಭರಿತನಾಗಿ ದೇವದತ್ತವನ್ನೂದಿದನು, ಕೃಷ್ಣನೂ ಪಾಂಚಜನ್ಯವನ್ನೂದಿದನು. ಮರುಪ್ರದೇಶದಲ್ಲಿ ತಿರುಗಿಬಡಲಿ, ಸರವನ್ನು ಕಂಡು ನೀರು ಕುಡಿದು, ಮದವೇರಿ ಬರುವ ಕರಿರಾಜರಂತೆ, ವ್ಯಾಘ್ರ ಸಿಂಹಾಕೀರ್ಣವಾದ ವನವನ್ನು ದಾಟಿ ಬಯಲನ್ನು ಮುಟ್ಟಿದ ವೀರರಾಜರಂತೆ ಕಂಗೊಳಿಸುವ ಕೃಷ್ಣ-ಪಾರ್ಥರು ಶತ್ರು ಹೃದಯ ವಿದ್ರಾವಕವಾದ ಶಂಖಧ್ವಾನವನ್ನು ಮಾಡಿ ಮುಂದೆ ಸಾಗಿದರು. ಅಂತಹ ವೀರವರರನ್ನು ದುರ್ಯೋಧನನು ತಡೆದು ಕಾದತೊಡಗಿದನು.

ಆಗ ವಾಸುದೇವನು ಧನಂಜಯನಿಗಿಂತೆಂದನು: 'ಪಾರ್ಥ ! ನೋಡಿದೆಯಾ ದುರ್ಯೋಧನನನ್ನು ! ದೂರಪಾತಿಯು, ಮಹಾಧಾನುಷ್ಕನು, ಯುದ್ಧದುರ್ಮದನು ಆದ ಸುಯೋಧನನು ನಿನ್ನ ಮುಂದೆ ನಿಂತಿರುವನು. ಚಿರಕಾಲದಿಂದ ಮನದಲ್ಲಡಗಿಸಿಟ್ಟಿದ್ದ ವೈರ ವಿಷವನ್ನು ಬಾಣದಂಷ್ಟ್ರಗಳಿಂದ ಹೊರಚಲ್ಲುವ ಸಮಯವು ಒದಗಿದೆ. ವಿಜಯ ಪಣವನ್ನಿಟ್ಟು ಕಡಿದಾಡು ! ಇದು ಪಗಡೆಯಾಟವಲ್ಲವೆಂದು ಈ ದುರಾತ್ಮನಿಗೆ ತೋರು! ಸರ್ವಾನರ್ಥಗಳಿಗೆ ಮೂಲವಾದ ಈ ಪಾಪಿಯನ್ನು ಪ್ರಾಣದಿಂದ ಬಿಡಬೇಡ ! ರಾಜ್ಯದಾಶೆಯನ್ನು ಬಿಡಲೊಲ್ಲದ ಲೋಭಿಯು ನಿನ್ನನ್ನೆದುರಿಸಿ ಪ್ರಾಣದಾಶೆಯನ್ನು ಬಿಡಲು ಬಂದಿರುವನು. ಐಶ್ವರ್ಯದ ಸಂಪತ್ತಿಗೆಯಲ್ಲಿ ಬೆಳೆದು ಕಷ್ಟಪಟ್ಟರಿಯದ ವೀರಂಮನ್ಯನಿಂದು ಸುರಾಸುರ ಗಂಧರ್ವರಿಗಜೇಯನಾದ ನಿನ್ನನ್ನು ಕಾಡಿ, ಸಾಯಲು ಬಂದಿರುವನು. ಅದೃಷ್ಟವಿವನನ್ನು ನಮ್ಮ ದೃಷ್ಟಿ ವಿಷಯವನ್ನಾಗಿಸಿದೆ. ದ್ಯೂತದಲ್ಲಿ ಧರ್ಮನನ್ನು ವಂಚಿಸಿದ ಅನಾರ್ಯನು, ರಾಷ್ಟ್ರವನ್ನೀಯೆನೆಂಬ ಜಗಳಗಂಟನು, ಪರುಷ ವಚನನು ಆದ ಇವನನ್ನು ಹೊಡೆದು ಕೆಡಹು ! ಕೃಷ್ಣೆಯ ಪರಿಕ್ಲೇಶವನ್ನು ನೆನೆದು ವಿಕ್ರಮಿಸು ! ಇವನನ್ನು ಪರಿಭವಿಸಿ, ಬುದ್ಧಿ ಕಲಿಸು !' ಎಂದನು.

ಅರ್ಜುನನೂ ಅಧರ್ಮದಿಂದ ರಾಜ್ಯವನ್ನು ಪರಿಹರಿಸಿದ ಕೈಗಳನ್ನು ಕೆಡಹಲೆಣಿಸಿ ದುರ್ಯೋಧನನನ್ನು ಸಮೀಪಿಸಿದನು. ದುರ್ಯೋಧನನು ಕವಚಬಲದಿಂದ ಧೀರನಾಗಿ, ನಗುತ್ತಾ, ಅರ್ಜುನನನ್ನು ಮುತ್ತಿದನು. ವೈಶ್ವಾನರಮುಖವನ್ನು ಹೊಗುವ ಪತಂಗದಂತೆ ಅರ್ಜುನ ಕೃಷ್ಣರನ್ನು ಮುತ್ತಿದ ಕೌರವ ರಾಜನನ್ನು ಕಂಡು, ಕುರು ವೀರರು ದುರ್ಯೋಧನನ ಜೀವಿತದಲ್ಲಿ ಹತಾಶರಾಗಿ, ಹಾಹಾಕಾರಗಳನ್ನು ಮಾಡಿದರು. ದುರ್ಯೋಧನನು ಅವರ ಭಯವನ್ನು ನಿವಾರಿಸಿ, ಅರ್ಜುನನನ್ನು ನೋಡಿ, 'ಪಾರ್ಥ ! ದಿವ್ಯಾಸ್ತ್ರಗಳನ್ನು ತಂದಿರುವೆಯಂತೆ ! ಪಾರ್ಥಿವಾಸ್ತ್ರಗಳನ್ನೂ ಪಡೆದಿರುವೆಯಂತೆ ! ಪಾಂಡುರಾಜನಿಗೆ ಜನಿಸಿದವನಾದರೆ ತೋರು ನಿನ್ನ ಶಸ್ತ್ರಾಸ್ತ್ರ ಬಲವನ್ನು ! ನನ್ನ ಮರೆಯಲ್ಲಿ ನೀ ಮಾಡಿದ ಆಶ್ಚರ್ಯ ವೀರ್ಯಗಳಿರಬಹುದು. ನನ್ನ ಮುಂದೆ ನಿನ್ನ ಕುಚೇಷ್ಟೆ ಸಲ್ಲದು. ಮಾಧವನ ಮಾಯೆಯೂ ಸಲ್ಲದು !' ಎಂದು ಮೂರು ಬಾಣಗಳಿಂದ ಅರ್ಜುನನನ್ನು ಹೊಡೆದನು.

ಅರ್ಜುನನು ಹದಿನಾಲ್ಕು ಬಾಣಗಳಿಂದ ದುರ್ಯೋಧನನನ್ನು ಹೊಡೆಯಲು, ಅವು ವ್ಯರ್ಥವಾಗಿ ಕೆಳಬಿದ್ದವು: ಮತ್ತೆ ಇಪ್ಪತ್ತೆಂಟು ಬಾಣಗಳಿಂದ ಮುಚ್ಚಲು ಅವೂ ನಿಷ್ಫಲವಾದವು. ಅದನ್ನು ಕಂಡು ಶ್ರೀಕೃಷ್ಣನು 'ಪಾರ್ಥ ! ನಿನ್ನ ಬಾಣವು ವ್ಯರ್ಥವಾದುದನ್ನು ಎಂದೂ ನೋಡಿಲ್ಲ. ಗಾಂಡೀವದ ಬಿಗಿತ ಸಡಲಿತೇ ? ಭುಜದ ಬಲ ಕುಂಠಿಸಿತೇ ? ನಿನ್ನ ವೀರ್ಯ ಸೂರ್ಯನು ಪಶ್ಚಿಮ ದಿಶೆಗೆ ತಿರುಗಿದನೇ ? ನಿನ್ನ ಬಾಣಗಳು ದುರ್ಯೋಧನನಲ್ಲಿ ವ್ಯರ್ಥವಾಗುತ್ತಿರಲು ಕಾರಣವೇನು ?' ಎಂದು ಕೇಳಿದನು. ಅರ್ಜುನನು ನಸುನಕ್ಕು 'ಸರ್ವಜ್ಞ ! ನಿನಗೆ ತಿಳಿಯದೇ ? ದ್ರೋಣಾಚಾರ್ಯನಿತ್ತ ಕವಚಧಾರಣ ವಿದ್ಯೆಯಿಂದ ಕುರುರಾಜನು ಅಭೇದ್ಯನೆನಿಸಿ, ಕೊಬ್ಬಿ, ನನ್ನನ್ನೆದುರಿಸಿರುವನು. ಇದು ಇವನ ಸ್ವಾಭಾವಿಕ ವಿಕ್ರಮವಲ್ಲ. ಆಚಾರ್ಯನಿತ್ತ ಕವಚವು ಇಂದ್ರ ಮುಕ್ತ ವಜ್ರದಿಂದಲೂ ಅಭೇದ್ಯವಾಗಿದೆ. ಇವೆಲ್ಲ ನಿನಗೆ ಗೊತ್ತಿದ್ದೂ ನನ್ನನ್ನೇಕೆ ಮೋಹಪಡಿಸುವೆ ! ಭೂತ ಭವ್ಯಭವತ್ಸರ್ವ ಜಗತ್ತಿಗೂ ಪ್ರಭುವಾದ ನಿನಗೆ ತಿಳಿಯದುದುಂಟೇ ? ದೇವೇಶನಾದ ನಿನ್ನಿಂದ ಕಲಿತು ಕಂಜಸಂಭವನು ಇದನ್ನು ಅಂಗೀರಸನಿಗಿತ್ತನು. ಅಂಗೀರಸನು ಬೃಹಸ್ಪತಿ ಪುರಂದರರಿಗಿತ್ತನು. ಬೃಹಸ್ಪತಿಯು ಅಗ್ನಿವೇಶನಿಗಿತ್ತನು. ಆತನು ದ್ರೋಣನಿಗಿತ್ತನು. ನಾನು ಆ ಕವಚಧಾರಣ ವಿದ್ಯೆಯನ್ನು ದ್ರೋಣನಿಂದಲು, ಪುರಂದರನಿಂದಲು ಕಲಿತು, ಜಪಿಸಿ, ಸಾಧಿಸಿರುವೆನು. ಇದೆಲ್ಲ ನಿನ್ನ ಕೃಪಾ ಭಿಕ್ಷೆ ! ಶ್ರೀಶ ! ಬರಿ ಕವಚ ತೊಟ್ಟು ವಿದ್ಯೆಯನ್ನು ಸಾಧಿಸದ ದುರ್ಯೋಧನನು, ಅದರ ಮರ್ಮವನ್ನರಿಯದಿರುವನು. ಈ ದುರ್ಬುದ್ಧಿಯನ್ನು ಬ್ರಹ್ಮದತ್ತವಾದ ಕವಚವು ರಕ್ಷಿಸದು. ನೋಡು ನನ್ನ ವಿಕ್ರಮವನ್ನು !' ಎಂದನು.

ಇಂತು ನುಡಿದು ಅರ್ಜುನನು ಕರಗಳಲ್ಲಿ ಮಾನವಸ್ತ್ರವನ್ನು ಅಭಿಮಂತ್ರಿಸಿ, ಕವಚವನ್ನು ಸೀಳಲು ಬಿಡಲೆಣಿಸಿ, ಸೆಳೆವಾಗ, ಅಶ್ವತ್ಥಾಮನು ಅದನ್ನು ತನ್ನ ದಿವ್ಯಾಸ್ತ್ರದಿಂದ ತುಂಡರಿಸಿದನು. ದೂರದಲ್ಲಿದ್ದ ಗುರುಸುತನ ಕುರುಸುತ ಭಕ್ತಿಯನ್ನು ಮೆಚ್ಚಿ ಅರ್ಜುನನು

ಮತ್ತೆ ಮಾನವಸ್ತ್ರವನ್ನು ತೊಡಬಾರದೆಂದು ತಿಳಿದು, ಕೃಷ್ಣನಿಗೆ ನಿವೇದಿಸಿದನು. ಮಾನವಾಸ್ತ್ರವು ಪುನಃ ಪ್ರಯುಕ್ತವಾದರೆ ಅದು ಪ್ರಯೋಗಿಸಿದವನನ್ನೇ ಕೊಲ್ಲುವದೆಂದು ಚಿಂತಿಸುವ ಅರ್ಜುನನನ್ನು ಅರ್ಜುನ ಸಾರಥಿಯನ್ನು ದುರ್ಯೋಧನನು ಬಾಣ ಪಂಚಕದಿಂದ ಹೊಡೆದನು. ಅರ್ಜುನನು ಕೃಷ್ಣನನ್ನು ಹೊಡೆದುದಕ್ಕೆ ಕ್ರುದ್ಧನಾಗಿ, ತುಟಿಯನ್ನು ಸವರುತ್ತಾ, ನಿಶಿತಬಾಣಗಳಿಂದ ಸುಯೋಧನನ ಕುದುರೆಗಳನ್ನು ಸಾರಥಿ ಪಾರ್ಶ್ವ ರಕ್ಷಕರನ್ನು ಸಂಹರಿಸಿದನು. ಮತ್ತೊಂದರಿಂದ ಅವನ ಧನುವನ್ನು ಮುರಿದನು. ರಥವನ್ನು ಚೂರಾಗಿಸಿದನು. ದುರ್ಯೋಧನನ ಅಂಗ್ಲಿಗಳಿಗೆ ತಾಗುವಂತೆ ನಿಶಿತಕಂಟಕ ಬಾಣಗಳನ್ನು ಬಿಟ್ಟನು. ಸಣ್ಣಬಾಣಗಳಿಂದ ಉಗುರಿನ ಸಂದಿಗಳನ್ನು ಭೇದಿಸಿದನು. ವೇದನೆಯನ್ನು ತಾಳಲಾರದೆ ಓಡುವ ದುರ್ಯೋಧನನ ಬೆನ್ನಿಗೆ ಎರಡು ಬಾಣಗಳನ್ನು ನಾಟಿಸಿದನು. ಗಾಂಡೀವವನ್ನು ಟಂಕರಿಸಿ, ಶಂಖವನ್ನೂದಿ, ಶರವರ್ಷದಿಂದ ಕುರುಸೇನೆಯನ್ನು ನಾಶಗೊಳಿಸಿದನು. ಶ್ರೀಕೃಷ್ಣನೂ ಪಾಂಚಜನ್ಯವನ್ನೂದಿ, ರಥವನ್ನು ಜಯದ್ರಥನ ಕಡೆಗೆ ಹೊಡೆದನು. ಶಂಖ ಶಬ್ದ ರಥನೇಮೀಧ್ವಾನ, ಗಾಂಡೀವ ಟಂಕಾರಗಳಿಂದ ಎದೆ ಒಡೆದು, ಜಯದ್ರಥನ ರಕ್ಷಕರು ಹತಾಶರಾದರು. ಮಹಾರಥರಾದ ಭೂರಿಶ್ರವ, ಶಲ, ಶಲ್ಯ, ಕರ್ಣ, ಕೃಪ, ವೃಷಸೇನ ಅಶ್ವತ್ಥಾಮರು ಆಕಾಶದಿ ಹಾರುವಂತೆ ತೋರುವ ಅಶ್ವಗಳನ್ನು ಕಟ್ಟಿದ ರಥದಲ್ಲಿ ಧನುರ್ಬಾಣಧರರಾಗಿ, ಒಂದೇ ಸಲ, ಅರ್ಜುನನನ್ನು ಮುತ್ತಿದರು.

ಕುರು ಸೈನ್ಯದ ಚದುರಂಗವೂ ರಣರಂಗದಿಂದೆದ್ದು ಬಂದಂತೆ ಉಕ್ಕೇರಿ ಬಂದು, ಗರ್ಜಿಸುತ್ತಾ ಅರ್ಜುನನನ್ನು ಮುತ್ತಿತ್ತು. ಅವರ ಶಂಖನಾದವು ದಿಕ್ಕು ದಿಕ್ಕುಗಳಲ್ಲಿ ಪ್ರತಿಧ್ವನಿಸಿತು. ಅರ್ಜುನ ಕೌರವರಿಟ್ಟ ಪಣವಾಗಿ ಯುದ್ಧ ದ್ಯೂತವು ರಭಸದಿಂದ ಸಾಗಿದಾಗ ಸಭಾದ್ಯೂತದ ಬೀಜವು ಫಲಿತವಾಗಿ ಅಮಿತ ವಿಷಫಲಗಳುದುರಿದಂತೆ, ಕುರು ಯೋಧರ ತಲೆಗಳು ನೆಲಕ್ಕುರುಳಿದವು. ವೈತರಣಿಯನ್ನು ಸೇರ ಪೋಗುವ ಉಪನದಿಯಂತೆ ರಕ್ತನದಿಯು ಹರಿಯಿತು. ಯಮರಾಜನು ಬೀಸಿದ ಪಾಶದಿಂದ ಸೆಳೆಯಲ್ಪಟ್ಟವರಂತೆ ವೀರವರರು ಸವ್ಯಸಾಚಿಯನ್ನು ಸೇರುತ್ತಿದ್ದು ಉತ್ತರಕ್ಷಣದಲ್ಲೇ ಸಂಯಮನಿಯನ್ನು ಮುಟ್ಟುತ್ತಿದ್ದರು.

ಅಶ್ವತ್ಥಾಮನು ಎಪ್ಪತ್ತುಮೂರು ಬಾಣಗಳಿಂದ ವಾಸುದೇವನನ್ನು ಹೊಡೆದನು. ಆಗ ಕ್ರುದ್ಧನಾಗಿ ಪಾರ್ಥನು ಆರು ಬಾಣಗಳಿಂದ ಗುರುಸುತನನ್ನು ಪೀಡಿಸಿ, ಕರ್ಣನನ್ನು ಹತ್ತರಿಂದಲು, ವೃಷಸೇನನನ್ನು ಮೂರು ಶರಗಳಿಂದಲು ಪೀಡಿಸಿದನು. ಮತ್ತು ಶಲ್ಯನ ಚಾಪಮುಷ್ಟಿಯನ್ನು ಮುರಿದನು. ಶಲ್ಯನು ಕುಪಿತನಾಗಿ, ಮತ್ತೊಂದು ಧನುವನ್ನು ಪಿಡಿದು, ಹತ್ತು ಬಾಣಗಳಿಂದ ಅರ್ಜುನನನ್ನು ಪೀಡಿಸಿದನು. ಭೂರಿಶ್ರವನು ಮೂರರಿಂದಲು, ಕರ್ಣನು ಮೂವತ್ತೆರಡು ಬಾಣಗಳಿಂದಲು, ವೃಷಸೇನನು ಏಳರಿಂದಲು, ಕೃಪನು ಹತ್ತರಿಂದಲು, ಶಲ್ಯನು ಹತ್ತು ಬಾಣಗಳಿಂದಲು ಪೀಡಿಸಲು, ಅರ್ಜುನನು ಅರವತ್ತು ಬಾಣಗಳಿಂದ ಅಶ್ವತ್ಥಾಮನನ್ನು ಹನ್ನೆರಡು ಬಾಣಗಳಿಂದ

ಕರ್ಣನನ್ನು ಮೂರರಿಂದ ವೃಷಸೇನನನ್ನು ಒಂದರಿಂದ ಶಲ್ಯನ ಧನುವನ್ನು ಭೂರಿಶ್ರವನನ್ನು ಮೂರರಿಂದಲು, ಕೃಪನನ್ನು ಇಪ್ಪತ್ತೈದರಿಂದಲು ಹೊಡೆದೋಡಿಸಿದನು.

ಅರ್ಜುನನ ವಾನರಧ್ವಜವು, ಅಶ್ವತ್ಥಾಮನ ಸಿಂಹಲಾಂಗೂಲಧ್ವಜದೊಡನೆ, ಕರ್ಣನ ಹಸ್ತಿಕಕ್ಷಾಧ್ವಜದೊಡನೆ, ಕೃಪನ ವೃಷಭಧ್ವಜದೊಡನೆ, ವೃಷಸೇನನ ಮಯೂರಧ್ವಜದೊಡನೆ, ಶಲ್ಯನ ಲಾಂಗಲಧ್ವಜದೊಡನೆ, ಭೂರಿಶ್ರವನ ಯೂಪ ಧ್ವಜದೊಡನೆ, ಶಲನ ದ್ವಿರದಧ್ವಜದೊಡನೆ, ದುರ್ಯೋಧನನ ನಾಗಧ್ವಜದೊಡನೆ ಚೆಲ್ಲಾಟವಾಡುತ್ತಾಡುತ್ತಾ ಜಯದ್ರಥನ ವಾರಾಹಧ್ವಜವನ್ನು ಸೇರಲು ಹವಣಿಸುತ್ತಿತ್ತು.

ಅಪರಾಹ್ಣ ಸಮಯವಾಯಿತು. ಸಂಗ್ರಾಮವೂ ಲೋಮಹರ್ಷಣವಾಯಿತು. ರಣರಂಗದ ಮುಖದಲ್ಲಿ ದ್ರೋಣನು ಪಾಂಚಾಲ ಸೃಂಜಯರೊಡನೆ ಕಾದುತ್ತಿದ್ದನು. ಆತನ ವೇಗವನ್ನು ಕೈಕೆಯನಾದ ಬೃಹತ್ ಕ್ಷತ್ರನು ನಿವಾರಿಸಿದನು. ಸಹದೇವ ದುರ್ಮುಖರಿಗೂ, ಸಾತ್ಯಕಿ ವ್ಯಾಘ್ರದತ್ತರಿಗೂ, ದ್ರೌಪದೇಯ ಭೂರಿಶ್ರವರಿಗೂ, ಭೀಮಸೇನ, ಆಲಂಬುಷರಿಗೂ, ಧರ್ಮಜ ದ್ರೋಣರಿಗೂ, ನಕುಲ ವಿಕರ್ಣರಿಗೂ, ಧೃಷ್ಟಕೇತು ವೀರಧನ್ವರಿಗೂ, ಬ್ರಹತ್ ಕ್ಷತ್ರ ಕ್ಷೇಮಧೂರ್ತಿಗಳಿಗೂ, ಭಯಂಕರವಾದ ತುಮುಲ ಯುದ್ಧವಾಯಿತು.

ದ್ರೋಣನ ಇಪ್ಪತ್ತೈದು ಬಾಣಗಳನ್ನು ಮುರಿದು, ಧರ್ಮರಾಜನು ತೊಂಬತ್ತು ಬಾಣಗಳಿಂದ ಆಚಾರ್ಯನನ್ನು ಪೀಡಿಸಿದನು. ರೋಷದಿಂದ ದ್ರೋಣನು ಇಪ್ಪತ್ತು ಬಾಣಗಳಿಂದ ಅಶ್ವಸೂತಧ್ವಜಗಳಿಗೆ ಹೊಡೆಯಲು, ಧರ್ಮಜನು ಅವರನ್ನೆಲ್ಲ ಕೆಡಹಿ, ಮತ್ತೆ ಹತ್ತರಿಂದ ಆಚಾರ್ಯನನ್ನು ಹೊಡೆದನು. ದ್ರೋಣನು ಕುಪಿತನಾಗಿ, ಧರ್ಮಜನ ಧನುವನ್ನು ಭಲ್ಲದಿಂದ ಮುರಿದು, ಅವಕಾಶವನ್ನೀಯದೆ ಸಾವಿರ ಬಾಣಗಳಿಂದ ಧರ್ಮಜನ ರಥವನ್ನೆಲ್ಲ ಮುಚ್ಚಿದನು. ಅದನ್ನು ಕಂಡು ಪಾಂಡವ ಸೈನಿಕರು ಹಾಹಾಕಾರಮಾಡಿ, ಯುಧಿಷ್ಠಿರನು ಹತನಾದನೆಂದು ತಿಳಿದರು. ಧರ್ಮರಾಜನು ಮತ್ತೊಂದು ಧನುವನ್ನೆತ್ತಿ ಆಚಾರ್ಯನ ಬಾಣಗಳನ್ನೆಲ್ಲ ಕೆಡಹಿ, ರಾಹುಮುಕ್ತನಾದ ಚಂದ್ರನಂತೆ ಪ್ರಕಾಶಿಸಿದನು, ಕೆಂಗಣ್ಣನಾಗಿ ಕಾಲಯಮನಂತೆ ತೋರುವ ಅಷ್ಟ ಘಂಟಾಶಕ್ತಿಯನ್ನೆತ್ತಿ ಒಗೆಯಲು, ಕೌರವ ವೀರರು 'ದ್ರೋಣನು ಸತ್ತನು' ಎಂದು ಹೆದರಿ ಕೂಗಾಡಿದರು. 'ಸ್ವಸ್ತಿಯಾಗಲಿ ದ್ರೋಣನಿಗೆ' ಎಂದು ಅಂಬರದ ಸಿದ್ಧರು ಹಾರೈಸಿದರು. ಬಾಯ್ತೆರೆದು ಬರುವ, ಪನ್ನಗಿಯಂತೆ ಭಯಂಕರವಾದ ಶಕ್ತಿಯನ್ನು ನೋಡಿ, ದ್ರೋಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದು ಶಕ್ತಿಯನ್ನು ಸುಟ್ಟು ಧರ್ಮಜನ ರಥದ ಕಡೆ ವೇಗದಿಂದ ಸಾಗಿತು. ಪ್ರಾಜ್ಞಶ್ರೇಷ್ಠನಾದ ಧರ್ಮರಾಜನು ಅದನ್ನು ತಿಳಿದು, ತಾನೂ ಬ್ರಹ್ಮಾಸ್ತ್ರವನ್ನು ಬಿಟ್ಟು ಅದನ್ನು ಶಾಂತಮಾಡಿದನು; ಮತ್ತು ಐದು ಬಾಣಗಳಿಂದ ದ್ರೋಣನನ್ನು ಹೊಡೆದು ಒಂದರಿಂದ ಆತನ ಧನುವನ್ನು ಮುರಿದನು. ಆಚಾರ್ಯನು ಗದೆಯನ್ನೊಗೆಯಲು ಧರ್ಮಜನು ಗದೆಯಿಂದ

ಅದನ್ನು ಕೆಡಹಿದನು. ಕ್ರುದ್ಧನಾಗಿ ದ್ರೋಣನು ನಾಲ್ಕು ಬಾಣಗಳಿಂದ ಧರ್ಮಜನ ಕುದುರೆಗಳನ್ನು ಕೊಂದನು; ಒಂದರಿಂದ ಧನುವನ್ನು ಮುರಿದನು; ಕೇತುವನ್ನು ಕೆಡಹಿದನು; ಮೂರರಿಂದ ಅವನನ್ನೂ ಪೀಡಿಸಿದನು. ಆಗ ಧರ್ಮಜನು ರಥದಿಂದಿಳಿದು, ನಿರಾಯುಧನು, ವಿರಥನು ಆಗಿದ್ದನು. ಧರ್ಮರಾಜನು ಎರಡು ಕೈಗಳನ್ನು ಮೇಲೆತ್ತಿ ನಿಸ್ಸಹಾಯನಾಗಿರಲು ನೋಡಿ, ದ್ರೋಣನು ತಾನೂ, ಸಿಂಹವು ಮೃಗವನ್ನಂತೆ, ಅವನನ್ನು ಹಿಡಿಯಲೆಣಿಸಿ ಓಡಿ ಬಂದನು. ಪಾಂಡವ ಸೇನೆಯಲ್ಲಿ ಹಾಹಾಕಾರವು ಎಲ್ಲೆಡೆ ಕೇಳಬಂತು. ಧರ್ಮರಾಜನು ಬರುವ ಗುರುವಿನಿಂದ ತಪ್ಪಿಸಿಕೊಂಡು, ಸಹದೇವನ ರಥವನ್ನೇರಿ ದೂರ ಸರಿದನು.

ಬೃಹತ್‌ಕ್ಷತ್ರ ಕ್ಷೇಮಧೂರ್ತಿಗಳು ಕಾಡು ಕರಿಗಳಂತೆ ಕಡಿದಾಡಿದರು. ಕ್ಷೇಮ ಧೂರ್ತಿಯನ್ನು ತೊಂಬತ್ತು ಬಾಣಗಳಿಂದ ಪೀಡಿಸಿದ ಬೃಹತ್‌ಕ್ಷತ್ರನನ್ನು ಅವನು ಹತ್ತರಿಂದ ಹೊಡೆದು, ಧನುವನ್ನು ಮುರಿದನು. ಬೃಹತ್‌ಕ್ಷತ್ರನು ಮತ್ತೊಂದು ಧನುವನ್ನು ಪಿಡಿದು, ಬಾಣ ದಶಕದಿಂದ ಕ್ಷೇಮಧೂರ್ತಿಯ ತುರಗಗಳನ್ನು ಸಾರಥಿಯನ್ನು ಕೊಂದನು; ಮತ್ತು ತಡಮಾಡದೆ ಕಿಡಿಗಾರುವ ಭಲ್ಲದಿಂದ ಅವನ ತಲೆಯನ್ನು ಕಡಿದನು. ಆಗ ವೀರಧನ್ವನು ಧೃಷ್ಟಕೇತುವಿನನ್ನೆದುರಿಸಿದನು. ಶಾರ್ದೂಲಗಳಂತೆ, ಮದಗಜಗಳಂತೆ ಪರಸ್ಪರ ವಧಾಕಾಂಕ್ಷಿಗಳಾಗಿ ಅವರೀರ್ವರು ಹೋರಾಡಿದರು. ವೀರಧನ್ವನು ಚೇದಿರಾಜನ ಧನುವನ್ನು ಮುರಿದನು. ಧೃಷ್ಟಕೇತುವು ಕುಪಿತನಾಗಿ ಶಕ್ತಿಯಿಂದ ಹೊಡೆದು ಅವನನ್ನು ಸಂಹರಿಸಿದನು. ತ್ರಿಗರ್ತ ವೀರನಾದ ವೀರಧನ್ವನ ಮೃತಿಯನ್ನು ಕಂಡು ಅವನ ಸೈನಿಕರು ಓಡಿಹೋದರು. ಸಹದೇವನು ದುರ್ಮುಖನಿಂದ ಹೋರಾಡಿ ಅವನ ಬಾಣಗಳನ್ನು ಖಂಡಿಸಿ ಧನುವನ್ನು ಮುರಿದು, ಕುದುರೆಗಳನ್ನು ಕೊಂದನು. ದುರ್ಮುಖನು ನಿರಮಿತ್ರನ ರಥವನ್ನೇರಿ ಕೂತನು. ಸಹದೇವನು ಭಲ್ಲದಿಂದ ನಿರಮಿತ್ರನನ್ನು ಸಂಹರಿಸಿದನು. ತ್ರಿಗರ್ತರಾಜರೀರ್ವರು ಮೃತರಾಗಲು, ತ್ರಿಗರ್ತ ಸೈನಿಕರು ಓಡಿಹೋದರು. ನಕುಲನು ವಿಕರ್ಣನೊಡನೆ ಹೋರಾಡಿ, ಒಂದೇ ಮುಹೂರ್ತದಲ್ಲಿ ಸೋಲಿಸಿದನು. ಸಾತ್ಯಕಿಯು ಮಗಧ ರಾಜಸುತನಾದ ವ್ಯಾಘ್ರದತ್ತನನ್ನು ಸಂಹರಿಸಿದನು. ಭಿಂದಿಪಾಲಾದ್ಯಾಯುಧಗಳನ್ನು ಪಿಡಿದು ಮೇಲೇರಿ ಬರುವ ಮಾಗಧ ಸೈನಿಕರನ್ನು ಯಮನ ಮನೆಗೆ ಕಳಿಸಿ, ಸಾತ್ಯಕಿಯು ಧನುವನ್ನು ಲೀಲೆಯಾಗಿ ಆಡಿಸುತ್ತಾ ಮಾಗಧರನ್ನೋಡಿಸುವುದನ್ನು ಕಂಡ ದ್ರೋಣನು ತಾನೇ ಅವನನ್ನು ಮುತ್ತಿದನು.

ಸೌಮದತ್ತಿಯು ದ್ರೌಪದೇಯರನ್ನು ಐದೈದು ಬಾಣಗಳಿಂದ ಪೀಡಿಸಿದನು. ನಾಕುಲಿ ಶತಾನೀಕನು ಅವನನ್ನು ಎರಡು ಬಾಣಗಳಿಂದ ಹೊಡೆದನು. ಅರ್ಜುನಿಯು ಅವನ ಕುದುರೆಗಳನ್ನು ಕೊಂದನು. ಭೈಮಸೇನಿಯು ಧನುವನ್ನು ಮುರಿದನು. ಪ್ರತಿವಿಂಧ್ಯನು ಧ್ವಜವನ್ನು ಕೆಡಹಿದನು. ಸಾಹದೇವಿಯು ಅವನ ಶಿರವನ್ನು ಕ್ಷುರಪ್ರದಿಂದ ಕಡಿದು ಕೆಡಹಿದನು. ಅಲಂಬುಷನು ಭೀಮಸೇನನನ್ನು ಮುತ್ತಿ ಅದ್ಭುತ ಯುದ್ಧ ಕೌಶಲವನ್ನು ತೋರಿದನು. ಭೀಮನು ಒಂಬತ್ತು ಬಾಣಗಳಿಂದ ಅವನನ್ನು ಹೊಡೆದನು.

ಏಟು ತಿಂದ ನಾಗನಂತೆ ಕೆರಳಿ ಅಲಂಬುಷನು ಭೀಮಸೇನನನ ಪರಿರಕ್ಷಕರನ್ನು ನಾನ್ನೂರು ರಥಿಕರನ್ನು ಸಂಹರಿಸಿದನು: ಮತ್ತು ಭೀಮನನ್ನೂ ತೀಕ್ಷ್ಣ ಬಾಣದಿಂದ ಹೊಡೆದನು. ಭೀಮಸೇನನು ಕ್ರುದ್ಧನಾಗಿ ಬಾಣಶತದಿಂದ ರಾಕ್ಷಸನ ಮೈಯಿಂದ ರಕ್ತಧಾರೆಗಳು ಹರಿವಂತೆ ಹೊಡೆದನು. ಬಕಾಸುರನ ತಮ್ಮನಾದ ಅಲಂಬುಷನು ಬಕವೈರಿಯ ಮೇಲಿನ ಸೇಡಿನಿಂದ ಕೆಂಡವಾಗಿ, ಘೋರ ರೂಪವನ್ನು ತೋರಿ 'ನಿಲ್ಲು! ನಿಲ್ಲು! ನನ್ನ ಅಣ್ಣನಾದ ಬಕನನ್ನು ನಾನಿಲ್ಲದಿರುವಾಗ ಕೊಂದೆಯಂತೆ! ಇಂದು ನಿನ್ನನ್ನು ಕೊಂದು, ಅಣ್ಣನ ಋಣವನ್ನು ತೀರಿಸುವೆನು' ಎಂದು ಮಾಯಾ ಯುದ್ಧವನ್ನು ಮಾಡತೊಡಗಿದನು. ಭೀಮಸೇನನು ಆಕಾಶವನ್ನೆಲ್ಲ ಬಾಣ ಸಹಸ್ರದಿಂದ ತುಂಬಲು, ಆ ಬಾಣಗಳಿಂದ ವಿದ್ದನಾದ ಅಲಂಬುಷನು ಮತ್ತೆ ರಥದಲ್ಲಿ ಕೂತು ಮುತ್ತಿದನು. ಮತ್ತೆ ವಿದ್ಧನಾಗಿ ಆಕಾಶಕ್ಕೆ ಹಾರಿ, ಅನೇಕ ವಿಕಾರ ರೂಪಗಳನ್ನು ತೋರಿದನು. ಆಕಾಶದಿಂದ ವಿವಿಧಾಯುಧಗಳು, ಬಂಡೆಗಳು, ಮಾಂಸ ರಕ್ತಗಳು ಬೀಳತೊಡಗಿದವು. ಆಗ ಪಾಂಡವ ಸೇನೆಯು ಗಗ್ಗೋಲಾಗಿ ಓಡತೊಡಗಿತು. ಅದನ್ನು ಕಂಡು ಭೀಮಸೇನನು ಕುಪಿತನಾದನು.

ಭೀಮಸೇನನು ಅಲಂಬುಷನ ವಿಕ್ರಮದಿಂದ ಉಬ್ಬಿ ಕುಣಿದು ಕೇಕೇ ಹಾಕುವ ಕುರುಸೇನೆಯನ್ನು ಕಂಡು ಸಹಿಸದೆ, ಕ್ರೋಧತಾಮ್ರಾಕ್ಷನಾಗಿ, ತ್ವಾಷ್ಟ್ರಾಸ್ತ್ರವನ್ನು ಪ್ರಯೋಗಿಸಿದನು. ಸರ್ವ ಶಸ್ತ್ರಾಸ್ತ್ರ ವಿಶಾರದನಾದರೂ ಭೀಮಸೇನನು ಎಂದಿಗೂ ಇತರ ದೇವತಾಕವು ಅಥವಾ ಪ್ರಯೋಜನೋದ್ದೇಶಕವು ಆದ ಅಸ್ತ್ರಗಳನ್ನು ಬಳಸುವನಲ್ಲ. ಆದರೂ ನಿಷ್ಕಾರಣವಾದ ಸ್ವಸೇನಾ ನಾಶವನ್ನು ನೋಡಲಾರದೆ, ಭೀಮನು ಅಸ್ತ್ರದಿಂದ ಅನೇಕ ಶರಗಳನ್ನು ಸೃಜಿಸಿದನು, ರಾಕ್ಷಸನ ಮಾಯೆಯು ನಷ್ಟವಾಗಲು, ಅಲಂಬುಷನು ಭೀಮಸೇನನಿಗೆ ಹೆದರಿ ಓಡಿ ದ್ರೋಣನನ್ನು ಸೇರಿದನು. ವಿರೋಚನನನ್ನು ಗೆದ್ದ ದೇವೇಂದ್ರನಂತೆ ಭೀಮಸೇನನು ವಿರಾಜಿಸಿದನು. ಪಾಂಡವ ಸೈನಿಕರು ಹರ್ಷಧ್ವಾನಗಳನ್ನು ಮಾಡಿದರು.

ದ್ರೋಣನು ಸಾತ್ಯಕಿಯನ್ನು ಮುತ್ತಿ ಧರ್ಮರಾಜನನ್ನು ಸೇರ ಪ್ರಯತ್ನಿಸಿದನು. ಸತ್ಯಜಿತನು ಆತನನ್ನು ವಾರಿಸಿ ಬಾಣ ವರ್ಷದಲ್ಲಿ ಮುಣುಗಿಸಿದನು. ಆಚಾರ್ಯನು ಕುಪಿತನಾಗಿ ಅವನ ಶಿರವನ್ನು ಭಲ್ಲದಿಂದ ಕೆಡಹಿ ಮುಂದೆ ಸಾಗಿದನು. ಆಗ ಘಟೋತ್ಕಚನು ಅಲಂಬುಷನನ್ನು ಮುಟ್ಟಿ ಹೋರಾಡಿದನು. ರಾಕ್ಷಸರಿಬ್ಬರಿಗೂ ತೀಕ್ಷ್ಣ ಯುದ್ಧವಾಯಿತು. ಅಲಂಬುಷನು ಇಪ್ಪತ್ತು ಬಾಣಗಳಿಂದ ಹೈಡಿಂಬನನ್ನು ಹೊಡೆದು, ಮತ್ತೆ ಇಪ್ಪತ್ತರಿಂದ ನಾಟಿಸಿ ಪೀಡಿಸಿದನು. ಅವನನ್ನು ಮುತ್ತಲೆಣಿಸಿ ಭೀಮಸೇನಾದಿಗಳು ಧಾವಿಸಿ ಬಂದರು. ಅವರ ಶರವರ್ಷವನ್ನು ಖಂಡಿಸಿ, ಅಲಂಬುಷನು ಅವರನ್ನೆಲ್ಲ ಐದೈದು ಬಾಣಗಳಿಂದ ಪೀಡಿಸಿದನು. ಆಗ ಘಟೋತ್ಕಚನು ಬಿಟ್ಟ ನಿಶಿತಬಾಣಗಳು ಹುತ್ತನ್ನು ಹೋಗುವ ಹಾವುಗಳಂತೆ ಅವನ ದೇಹವನ್ನು ಹೊಕ್ಕವು. ಅವನು ನಿರ್ವಿಣ್ಣನಾಗಿರುವುದನ್ನು ಕಂಡು ಹೈಡಿಂಬನು ರಥದಿಂದ ರಥಕ್ಕೆ ಹಾರುತ್ತಾ ಅವನ

ರಥವನ್ನು ಸೇರಿ, ಅವನನ್ನು ರಥದಿಂದ ಕೆಡಹಿದನು; ಅವನನ್ನು ಮೇಲಕ್ಕೆತ್ತಿ ನೆಲಕ್ಕಪ್ಪಳಿಸಿದನು. ಸಿಂಹನಾದವನ್ನು ಮಾಡಿ, ಬಲಲಾಘವಸಂಪನ್ನನಾದ ಘಟೋತ್ಕಚನು ಅಲಂಬುಷನ ತಲೆಯನ್ನು ತುಳಿದು ಪುಡಿಮಾಡಿದನು. ಘಟೋತ್ಕಚನ ವೀರ್ಯವಿಕ್ರಮಗಳಿಂದ ಪ್ರಹರ್ಷಿತರಾದ ಭೀಮ ಧರ್ಮಜ ಯಮಳರು, ಅವನನ್ನು ಮೆಚ್ಚಿ ಹರಸಿದರು. ಪಾಂಡವ ಸೈನಿಕರು ಹರ್ಷದಿಂದ ಮಾಡಿದ ಸಿಂಹಗರ್ಜ ಶಂಖಧ್ವಾನಗಳೆ ರಣಾಂಗಣದಲ್ಲಿ ಪ್ರತಿಧ್ವನಿಸಿದವು.

## ೯. ಸಾತ್ಯಕಿ ಪರಾಕ್ರಮ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ರಾಜನ್ ! ಮುನ್ನುಗ್ಗಿ ಬರುವ ಸಾತ್ಯಕಿಯನ್ನು ತಡೆದು ದ್ರೋಣಾಚಾರ್ಯನು, ಅವನು ಬಿಟ್ಟ ಇಪ್ಪತ್ತೈದು ಬಾಣಗಳನ್ನು ಖಂಡಿಸಿ ಐದು ಬಾಣಗಳಿಂದ ಹೊಡೆದನು. ಆ ಬಾಣಗಳ ವನಕವಚವನ್ನು ಸೀಳಿ, ರಕ್ತವನ್ನು ಕುಡಿದು ಹೊರಬಂದವು. ಸಾತ್ಯಕಿಯು ಕೆರಳಿ ಇಪ್ಪತ್ತು ಬಾಣಗಳನ್ನು ಬಿಟ್ಟು ಸಿಂಹನಾದವನ್ನು ಮಾಡಿದನು. ಸಾತ್ಯಕಿಯನ್ನು ಆಚಾರ್ಯನಿಂದ ರಕ್ಷಿಸಬೇಕೆಂದು ಧರ್ಮರಾಜನಿಂದ ಆಜ್ಞಪ್ತರಾದ ಧೃಷ್ಟದ್ಯುಮ್ನಾದಿ ವೀರರು ಬಂದು ಆಚಾರ್ಯನನ್ನು ಮುತ್ತಿ, ಗರ್ಜಿಸುತ್ತಾ, ಶರವೃಷ್ಟಿಯನ್ನು ಗರೆದರು. ದ್ರೋಣನು ನಗುತ್ತಾ ಅವರ ಶರವರ್ಷವನ್ನು ತಡೆದು, ಬಂದ ಅತಿಥಿಗಳಿಗೆ ಆಸನಸಲಿಲಾದಿಗಳಿತ್ತು ಸತ್ಕರಿಸುವಂತೆ - ಶರವರ್ಷದಿಂದ ಪೂಜಿಸಿದನು. ಮಧ್ಯಂದಿನಗತ ಮಾರ್ತಾಂಡ ಮಂಡಲದಂತೆ ದುರ್ನಿರೀಕ್ಷ್ಯನಾದ ಆಚಾರ್ಯನ ಬಾಣಕಿರಣಗಳಿಂದ ತಾಪಿತರಾಗಿ ಭಟಪಾಂಥರು ಪಂಕಮಗ್ನ ಗಜಗಳಂತೆ ದಿಕ್ಕೆಟ್ಟು ನಿಂತರು. ದ್ರೋಣನು ಇಪ್ಪತ್ತೈದು ಮಹಾರಥಿಕರನ್ನು ಅನೇಕ ಶತಭಟರನ್ನು ಸಂಹರಿಸಿದನು. ಅವನನ್ನೆದುರಿಸಿ ಕಾದುವ ಧೈರ್ಯವಿಲ್ಲದೆ ವೀರಭಟರು ಓಡತೊಡಗಿದರು. ಓಡುವ ಸ್ವಭಟರ ಕೋಲಾಹಲವನ್ನಾಲಿಸಿ, ಧರ್ಮರಾಜನು ವಿಹ್ವಲನಾಗಿ ಸಾತ್ಯಕಿಯನ್ನು ಕರೆದಿಂತೆಂದನು:

'ಶೈನೇಯ ! ಸನಾತನಧರ್ಮದ ಕಟ್ಟಳೆಯಂತೆ ಮಿತ್ರರಿಗೆ ಮಿತ್ರನು ಮಾಡತಕ್ಕ ಸುಹೃತ್ಕಾರ್ಯವೀಗ ನಿನ್ನಿಂದಾಗಬೇಕಾಗಿದೆ. ನಿನ್ನಂತಹ ಸುಹೃದ್ವರನನ್ನು ಎಲ್ಲ ಯೋಧಗಣದಲ್ಲಿಯು ಹುಡುಕಿದರೂ ನಾನು ಕಂಡಿಲ್ಲ. ಅನುವ್ರತರನ್ನು ಮತ್ತು ಸಂಪ್ರೀತ ಮನಸ್ಕರನ್ನು ಮಾತ್ರ ಶ್ರೇಯಃಕಾರ್ಯಗಳಲ್ಲಿ ನಿಯೋಗಿಸಬೇಕೆಂದು ನಾನು ಶಾಸ್ತ್ರ ದೃಷ್ಟಿಯಿಂದ ಅರಿತು ಪೇಳುತ್ತಿರುವೆನು. ಶ್ರೀಕೃಷ್ಣನು ಪಾಂಡವ ಪರಾಯಣನು. ಅಂತೆಯೇ ಕೃಷ್ಣನು ತುಲ್ಯಪರಾಕ್ರಮನಾದ ನೀನು ಕೂಡ ನಮಗೆ ಅತ್ಯಂತ ಹಿತಂಕರ ನಾಗಿರುವೆ ! ನಾನಿಡುವ ಮಹತ್ಕಾರ್ಯಭಾರವನ್ನು ನಿರ್ವಹಿಸು ! ಅರ್ಜುನನಿಗೆ ನೀನು ಸಹಾಯಕನಾಗಿ ಹೋಗು ! ಅವನೀಗ ಶತ್ರುಮಧ್ಯದಲ್ಲಿ ಸಿಕ್ಕಿರುವಂತಿದೆ ! ಪಾಂಚಜನ್ಯವು ಭಯದವಾಗಿ ಮೊಳಗುತ್ತಿದೆ. ಆದರೆ ದೇವದತ್ತವು ಕೇಳಬರುತ್ತಿಲ್ಲ.

ಸೈಂಧವಾಭಿ ರಕ್ಷಕರಿಂದ ಅರ್ಜುನನು ಕ್ಷತನಾಗದೆ ಇರುವನೇ ಎಂಬ ಸಂಶಯವೆನ್ನ ಮನಸ್ಸನ್ನು ಕಾಡು ಕಾಡುತ್ತಿದೆ. ಅರ್ಜುನನು ನಿನಗೆ ಸ್ನೇಹಿತನೂ ಅಹುದು; ಗುರುವೂ ಅಹುದು. ಅವನಿಗೆ ಕಷ್ಟಸಮಯದಲ್ಲಿ ಸಹಾಯನಾಗಿ ನಿಲ್ಲು ! ನೀನು ಶೂರಸತ್ತಮನಿರುವೆ ! ಮಿತ್ರರಿಗೆ ಅಭಯದಾತನಿರುವೆ ! ಸತ್ಯಸಂಧನಿರುವೆ ! ವೀರಕರ್ಮಗಳಿಂದ ವಿಖ್ಯಾತನಿರುವೆ ! ದ್ವಿಜರಿಗೆ ಭೂದಾನವನ್ನು ಕೊಡುವನು, ಮತ್ತು ಪುತ್ರರಿಗಾಗಿ ಕಾದಿ ರಣದಲ್ಲಿ ಮಡಿಯುವವರು ಸಮರೆಂಬರು. ಪೃಥಿವೀದಾನವಿತ್ತವರುಂಟು ; ಆದರೆ ಮಿತ್ರಾಪತ್ತಿಗೆ ಒದಗಿ ಕಾಪಾಡಿದವರು ವಿರಳರಾಗಿರುವರು. ನಮಗೆ ಮೊದಲನೇ ಮಿತ್ರನು ಕೃಷ್ಣನು; ನೀನು ದ್ವಿತೀಯನು. ಈಗ ಅರ್ಜುನನನ್ನು ಆದಿಕೊಂಡು ನಿಲ್ಲಲು ನಿನ್ನ ಹೊರತನ್ಯರು ಸಮರ್ಥರಲ್ಲ. ನಿನ್ನ ವೀರ ಕೃತ್ಯಗಳನ್ನು ಅರ್ಜುನನು ಎಷ್ಟೋ ಸಲ ಶ್ಲಾಘಿಸಿರುವನು. 'ಅಘುಹಸ್ತ ಚಿತ್ರಯೋಧಿ, ಪ್ರಾಜ್ಞ, ಸರ್ವಾಸ್ತ್ರವೇದಿ, ಶೂರ, ರಣಧೀರ, ಮಹಾತ್ಮ; ಸಾತ್ಯಕಿ ನನಗೆ ಸಖನು; ಸುಶಿಷ್ಯನು; ಪ್ರಿಯಮಿತ್ರನಾದ ಯುಯುಧಾನನು ನಮಗಾಗಿ ಕೌರವರೊಡನೆ ಕಾದುವನು. ಪ್ರದ್ಯುಮ್ನ, ಸಾಂಬ, ಗದ, ಸಾರಣರಕಿಂತಲು ನನಗೆ ಸಾತ್ಯಕಿಯ ಸಹಾಯವೇ ಹಿತಂಕರವಾಗಿದೆ' ಎಂದು ನನ್ನನ್ನು ಪ್ರಶಂಸಿಸುವ ಪಾರ್ಥನ ವಚನಗಳನ್ನು ಸಾರ್ಥಕಗೊಳಿಸು !

ಹಿಂದೆ ತೀರ್ಥಯಾತ್ರೆಗೆಂದು ದ್ವಾರಕೆಗೆ ಬಂದಾಗ ಅರ್ಜುನನ ಪ್ರಶಂಸೆಯು ಅಕ್ಷರಶಃ ಸತ್ಯವೆಂದು ನಾನು ಕಣ್ಣಾರ ನೋಡಿ ತಿಳಿದಿರುವೆನು. ಅಭಿಜಾತ್ಯ, ಗುರುಭಕ್ತಿ ಸಖ್ಯ, ವೀರ್ಯ, ಸತ್ಯಸಂಧತೆ, ದಯೆ ಇಂತಹ ಗುಣಗಳಿಗೆ ಗಣಿಯಾದ ನಿನ್ನನ್ನು ಅರ್ಜುನನಿಗೆ ಸಹಾಯಕನಾಗಿ ಹೋಗೆಂದು ಕೈಯೊಡ್ಡಿ ಯಾಚಿಸುತ್ತಿರುವೆನು. ನನ್ನನ್ನು ಕೂಡಿ, ಭೀಮಸೇನನು ದ್ರೋಣನೊಡನೆ ಕಾದಬೇಕಾಗಿದೆ. ಅವನನ್ನು ಕಳಿಸಿ, ನಾನು ದ್ರೋಣಾಚಾರ್ಯನ ಕೈಗೆ ಸಿಗಬೇಕಾದೀತು ! ಧಾರ್ತರಾಷ್ಟ್ರನ ಸೈನ್ಯದ ದೆಶೆಯಿಂದ ಶಂಖನಾದಗಳು, ಭೇರೀಭಾಂಕಾರಗಳು, ಭಟರ ಸಿಂಹನಾದಗಳು, ಕೇಳಬರುವ ರೀತಿಯನ್ನು ಕಂಡು ನನಗೆ ಭೀತಿಯುಂಟಾಗಿದೆ. ಹಿಂದೆ ದ್ರೋಣಾನೀಕವಾಗಿ ಮುಂದೆ ಸೈಂಧವ ಸೈನ್ಯವಾಗಿ, ಮಧ್ಯಸಿಕ್ಕಿರುವ ಕೃಷ್ಣ ಪಾರ್ಥರಿಗೆ ಸಹಾಯದ ಅವಶ್ಯಕತೆ ಇದೆ. ಬಹು ಸೈನಿಕರನ್ನು ಕೂಡಿ ಒಬ್ಬನೆಷ್ಟು ಕಡಿದಾಡಲಾಗುವುದು ? ಅಲಸಿದ ಅರ್ಜುನನು ಅರಿಗಳ ಅಸ್ತ್ರಗಳಿಗೆ ಅಗ್ಗವಾಗದೆ ಮುನ್ನ ಅವನಿಗೆ ಅವಸರದಲ್ಲಿ ಆಸರೆಯಾಗಿ ನಿಲ್ಲು ! ಸೂರ್ಯೋದಯದಲ್ಲಿ ತೆರಳಿದವನು ತೆರವಿಲ್ಲದೆ ಒಂದೇ ತೆರದಿ ಕಾದಿ ಬಡಲಿ, ಸುರರಿಗೂ ಸುದುರ್ಗಮವಾದ ಸುಯೋಧನ ಸೈನ್ಯ ಮರುಭೂಮಿಯಲ್ಲಿ ಸುರಿಗಿ, ಅಸುಗಳ ನೀಗಿದರೆ ನಾನಿನ್ನು ಬದುಕಬಲ್ಲೆನೇ ? ಮೂರು ಲೋಕಗಳನ್ನು ಮುತ್ತಿ ಮುಗಿಸಬಲ್ಲ ಮುರಾರಿಯ ಚಿಂತೆ ಎನಗಿಲ್ಲ. ಜಗತ್ಪತಿಯಾದ ಜನಾರ್ಧನನಿಗೆ ಭಯವಿಲ್ಲ. ಆದರೆ ಅರ್ಜುನನಿಗಾಗಿ ಶೋಕಿಸುವ ನನ್ನ ಹಾರೈಕೆಯನ್ನು ಪೂರೈಸು ! ವೃಷ್ಣಿ ವಂಶದಲ್ಲಿ ಅತಿರಥರಿಬ್ಬರು ಒಬ್ಬನು ಪ್ರದ್ಯುಮ್ನನು, ನೀನು ದ್ವಿತೀಯನು.

ಅಸ್ತ್ರಪಾಂಡಿತ್ಯದಲ್ಲಿ ಪುಂಡರೀಕಾಕ್ಷನೋ, ಬಲದಲ್ಲಿ ಬಲರಾಮನೋ, ವೀರ್ಯದಲ್ಲಿ ಧನಂಜಯನೋ ಎಂದೆನಿಸಿ, ಕೌರವ ಸೇನೆಯನ್ನು ಪ್ರವೇಶಿಸಿ, ಇತರಾಸಾಧ್ಯವಾದ ಶತ್ರು ಜಯವನ್ನು ಗಳಿಸಿ ವಿಕ್ರಮದಿಂದ ವಿಹರಿಸು! ನಿನ್ನ ಗುರುನಾದ ಅರ್ಜುನನ ಗುರುನಾದ ಶ್ರೀಕೃಷ್ಣನನ್ನು ಮೆಚ್ಚಿಸು!" ಎಂಥ ಧರ್ಮಜನ ಪ್ರೀತಿಯುಕ್ತವು, ಕಾಲಯುಕ್ತವು, ಮಧುರಾಕ್ಷರವು, ಮನೋಹರವು ಆದ ವಚನವನ್ನಾಲಿಸಿ ಸಾತ್ಯಕಿ ಇಂತೆಂದನು:

'ರಾಜನ್! ನಿನಗೆ ಪಾರ್ಥನೆಂತೋ, ಅಂತೆಯೇ ನಾನೂ ಶಾಸ್ಯನೆಂದು ತಿಳಿ! ಧನಂಜಯನಿಗಿಂತಲು, ನನಗೆ ನನ್ನ ಪ್ರಾಣಗಳು ಹೆಚ್ಚಲ್ಲ. ನಾನಾಗಿ ಮಾಡಬೇಕಾದ ಕಾರ್ಯವನ್ನು ನೀನು ಪ್ರೇರಿಸುತ್ತಿರಲು ತಪ್ಪದೆ ಮಾಡುವೆನು. ಸುರಾಸುರರೊಡನೆ ಕಾದಿ ನಿನ್ನ ಕಾರ್ಯವನ್ನು ಸಾಧಿಸಲು ಸಿದ್ಧನಿರುವ ನನಗೆ ಈ ದುರ್ಬಲ ಕುರುಸೇನೆಯ ಲಕ್ಷ್ಯವಿಲ್ಲ. ಹೋಗಿ ಧನಂಜಯ ಕೃಷ್ಣರನ್ನು ಕಂಡು, ಜಯದ್ರಥ ವಧವನ್ನು ಸಾಧಿಸಿದ ಅವರ ಕುಶಲವಾರ್ತೆಯನ್ನು ನಿನಗೆ ತಂದರುಹುವೆನು. ಆದರೆ ಧನಂಜಯನು ನನ್ನನ್ನು ನಿನಗೆ ರಕ್ಷಕನಾಗಿರಲು ಕಟ್ಟಪ್ಪಣೆಯನ್ನು ಕೊಟ್ಟಿರುವನು. ನಿಕ್ಷೇಪದಂತೆ ರಕ್ಷಿಸಲು ನನ್ನನ್ನಿಲ್ಲಿಟ್ಟ ಅರ್ಜುನನ ವಾಕ್ಯವನ್ನಾದರೂ ವಿಚಾರಿಸಿ ನಡೆಯಬೇಕಾಗಿದೆ. ನಿನ್ನನ್ನು ದ್ರೋಣನಿಗೊಪ್ಪಿಸಿ ನಾನು ಹೋಗಿ ಜಯಿಸಿ ಬಂದರೂ ಅದು ಅಪಜಯ ಸಮವೇ ಆದೀತು! ಆದುದರಿಂದ ಚನ್ನಾಗಿ ಆಲೋಚಿಸು, ಆಜ್ಞಾಪಿಸು! ಅರ್ಜುನನಿಗೆ ಭಯವಿಲ್ಲ. ಅವನಿಗೆ ರಕ್ಷಕನಾಗಿ ಶ್ರೀಕೃಷ್ಣನಿರುವನು. ಸರ್ವ ಪೃಥಿವೀಪಾಲರು ಸುರಾಸುರ ಸಮೇತರಾಗಿ ಬಂದು ಮುತ್ತಿದರೂ, ಪಾರ್ಥನು ಅಂಜುವನಲ್ಲ. ಸತ್ಯಪರಾಕ್ರಮರಾದ ಪಾರ್ಥ ಕೃಷ್ಣರು ತಮ್ಮನ್ನು ತಾವು ರಕ್ಷಿಸಿಕೊಂಡು, ಶತ್ರುಗಳನ್ನೆಲ್ಲ ಸದೆಬಡಿಯಬಲ್ಲರು. ನಾನು ಹೋದರೆ ಇಲ್ಲಿ ನಿನ್ನನ್ನು ಹಿಡಿದುಕೊಡಲು ಪ್ರತಿಜ್ಞೆಯನ್ನು ಮಾಡಿರುವ ಆಚಾರ್ಯನಿಂದ ನಿನ್ನನ್ನು ರಕ್ಷಿಸುವರಾರು? ವಿಚಾರಿಸಿ ಹೇಳು! ನಿನ್ನ ಆಜ್ಞೆಯು ನನಗೆ ಶಿರೋಧಾರ್ಯವಾಗಿದೆ!'

ಧರ್ಮರಾಜನು 'ನಿಜ ಸಾತ್ಯಕೀ! ಆತ್ಮ ಸಂರಕ್ಷಣ, ಪಾರ್ಥ ಸಹಾಯ ಗಮನಗಳಲ್ಲಿ ನನಗೆ ದ್ವಿತೀಯವೇ ಪ್ರಥಮ ಕರ್ತವ್ಯವೆಂದು ತೋರುತ್ತಿದೆ. ನನ್ನನ್ನು ನಾನು ಕಾಪಾಡಿಕೊಳ್ಳಬಲ್ಲೆನು. ಮತ್ತು ಮಹಾಬಲನಾದ ಭೀಮಸೇನನು ನನಗೆ ರಕ್ಷಕನಾಗಿರುವನು. ಧೃಷ್ಟದ್ಯುಮ್ನ ದ್ರೌಪದೇಯರು, ವಿರಾಟ ದ್ರುಪದರು, ಪಂಚ ಕೇಕಯರು, ಧೃಷ್ಟಕೇತು ಶಿಖಂಡಿ ನಕುಲ ಸಹದೇವರು, ಮೊದಲಾದ ವೀರರೆನಗೆ ರಕ್ಷಕರಾಗಿರುವರು. ಮಕರಾಲಯವನ್ನು ವೇಲೆಯಂತೆ ಧೃಷ್ಟದ್ಯುಮ್ನನು ಕುರುಸೇನೆಯನ್ನು ತಡೆದು, ನನ್ನನ್ನು ದ್ರೋಣನಿಂದ ಕಾಪಾಡುವನು. ನಿಶ್ಶಂಕನಾಗಿ ಹೋಗು!' ಎಂದನು.

ಧರ್ಮರಾಜನ ವಚನವನ್ನಾಲಿಸಿ ಸಾತ್ಯಕಿಯು ತನ್ನ ಮನದಿ ಇಂತು ಚಿಂತಿಸಿದನು: 'ಪಾರ್ಥನು ಇಲ್ಲಿರಲು ಹೇಳಿರುವನು. ಧರ್ಮಜನು ಅಲ್ಲಿ ಹೋಗೆನ್ನುತ್ತಿರುವನು. ಈಗ ನಾನು ಕುರುಸೇನೆಯನ್ನು ಸೇರ ಪೋಗದಿದ್ದರೆ, ಇವರೆಲ್ಲರು ನನ್ನನ್ನು ಹೇಡಿ ಎಂದು

ತಿಳಿದಾರು. ಆದುದರಿಂದ ಹೋಗಿ ಅರ್ಜುನನಿಗೆ ಸಹಾಯವಾಗುವೆನು.' ಇಂತು ನಿಶ್ಚಯಿಸಿ, ಸಾತ್ಯಕಿಯು, 'ಮಹಾರಾಜ! ನಿನ್ನಾಜ್ಞೆ ಎನಗೆ ಶಿರಸಾಧಾರ್ಯವಾಗಿದೆ. ಅರ್ಜುನನಕಿಂತಲು ನನಗೆ ಪ್ರಿಯತರನಿಲ್ಲ, ನಿನ್ನ ಆದೇಶಕಿಂತಲು ಕರ್ತವ್ಯವಿಲ್ಲ. ದುರ್ಭಿದವಾದ ಕೌರವ ವ್ಯೂಹವನ್ನು ಮುರಿದು, ಒಳಹೊಕ್ಕು ಅರ್ಜುನನನ್ನು ಸಮೀಪಿಸಿ ಆಗುವುದಿದ್ದರೆ ನನ್ನಿಂದಾದಷ್ಟು ಸಹಾಯ ಮಾಡುವೆನು.' ಎಂದನು. ಧರ್ಮರಾಜನು ತನಗೆ ನಮಸ್ಕರಿಸಿದ ಸಾತ್ಯಕಿಯನ್ನು ಹರಸಿ ಕಳಿಸಿದನು. ಅಲ್ಲಿಂದ ಮೂರು ಯೋಜನಗಳ ದೂರದಲ್ಲಿದ್ದ ಅರ್ಜುನನನ್ನು ಯುಯುಧಾನನು ಸೇರಹೊರಟನು.

ಮೊತ್ತಮೊದಲು ಅವನ ಮಾರ್ಗದಲ್ಲಿ ಮ್ಲೇಂಛರು ಶೂಲಶಕ್ತಿ ಗದಾ ಪ್ರಾಸ ಖಡ್ಗ ತೋಮರಗಳನ್ನು ಧರಿಸಿ ನಿಂತಿದ್ದರು. ಒಂದು ಸಾವಿರ ಮದ್ದಾನೆಗಳು ಅಂಜನ ಕುಲ ಸಂಭೂತಗಳು ಅವರೊಡನೆ ನಿಂತಿದ್ದವು. ಗಜ ಸೈನ್ಯದ ಹಿಂದೆ ಸಾವಿರ ರುಕ್ಮರಥರು ದಿವ್ಯರಥಗಳಲ್ಲಿ ಯುದ್ಧೋನ್ಮುಖರಾಗಿದ್ದರು. ಅವರು ಕರ್ಣ ದುಶ್ಶಾಸನರಿಂದ ಶಿಕ್ಷಿತರಾಗಿದ್ದರು. ಅರ್ಜುನ ಬಾಣ ಪೀಡಿತರಾಗಿದ್ದೂ ಅವರು ಉತ್ಸಾಹಭರಿತರಾಗೇ ರಣ ಮರಣವನ್ನು ವಾಂಛಿಸಿ ಕಡಿದಾಡಲು ಸಿದ್ಧರಿದ್ದರು. ಅವರ ಹಿಂದೆ ಕಿರಾತ ರಥಿಕರು ಏಳುನೂರಾನೆಗಳಿಂದ ಕೂಡಿ ಕದನಕುತೂಹಲಿಗಳಾಗಿದ್ದರು. ಇನ್ನೂ ದೂರದಲ್ಲಿ ಐರಾವತ ಕುಲೋದ್ಭವಗಳಾದ ಸಾವಿರ ಗಜಗಳೊಡನೆ ಹಿಮದುರ್ಗ ನಿವಾಸಿಗಳಾದ ಪಾರ್ವತೇಯರು ನಿಂತಿದ್ದರು. ಗಜಸೇನೆಯ ಹಿಂದೆ ಕಾಂಬೋಜ ರಥಿಕರು ದುರ್ವಾರಣರೆಂದು ಖ್ಯಾತರಾದರು. ಸಾವಿರ ವೀರರು ಧನುಷ್ಟಂಕಾರ ಮಾಡುತ್ತಿದ್ದರು. ಅನಂತರದಲ್ಲಿ ದ್ರೌಣಿಕ ಕರ್ಣಾದಿ ವೀರರಿಂದ ಗುಪ್ತನಾದ ಜಯದ್ರಥನು, ತನ್ನ ಸೇನೆಯೊಡನೆ ನಿಂತಿದ್ದನು.

ಮದಸಮೀರಣವಾದ ರಸಾಯನವನ್ನು ಕುಡಿದು ನೆಗೆಯುವ ಕುದುರೆಗಳ ರಥದಲ್ಲಿ ಸರ್ವಾಸ್ತ್ರ ಸಮೇತನಾಗಿ ಸಾತ್ಯಕಿಯು ಸವ್ಯಸಾಚಿಯನ್ನು ಸೇರಪೋದನು. ಕೈಲಾತಕ ಮಧುವನ್ನು ಸೇವಿಸಿ ಮದ ವಿಹ್ವಲಲೋಚನನಾದ ಸಾತ್ಯಕಿಯು, ವಿಪ್ರಾಶೀರ್ವಾದಗಳನ್ನು ಪಡೆದು ಹೊರಡುತ್ತಿರಲು, ಧರ್ಮರಾಜನ ಅನುನಯದಿಂದ ಭೀಮಸೇನನೂ ಅವನನ್ನನುಸರಿಸಿದನು. ವ್ಯೂಹ ಪ್ರವೇಶವನ್ನು ಸುಕರವಾಗಿಸಿ, ಹಿಂದಿರುಗಬಯಸಿದ ಭೀಮಸೇನನು, ಧರ್ಮರಾಜನ ರಕ್ಷಣೆಗೆಂದು ಧೃಷ್ಟದ್ಯುಮ್ನನನ್ನು ನಿಲ್ಲಿಸಿ ಪೋದನು.

ಭೀಮನು ಸಾತ್ಯಕಿಯೊಡನೆ ಬರುವುದನ್ನು ಕಂಡು ಕುರುಸೇನೆಯು ಪ್ರಕ್ಷುಬ್ಧವಾಯಿತು. ದ್ರೋಣನು ಉಭಯ ವೀರ ಸಿಂಹಗಳನ್ನೆದುರಿಸಲು ಸನ್ನದ್ಧನಾಗಿ ನಿಂತನು. ಧರ್ಮರಾಜನು ಕೂಡ ಸಾತ್ಯಕಿ ಭೀಮರಿಗೆ ನೆರವಾಗಲೆಣಿಸಿ, ತನ್ನ ಸೇನೆಯೊಡನೆ ವ್ಯೂಹಮುಖವನ್ನು ಸೇರಿದನು. ವಸುದಾನ ಧೃಷ್ಟದ್ಯುಮ್ನರು 'ಹೊಡಿ, ಕಡಿ, ಬಡಿ, ಕೊಲ್ಲು!' ಎಂದು ಗರ್ಜಿಸುವ ಸೇನಾನಿಗಳನ್ನು ನಡೆಸುತ್ತಾ ಮಹತ್ಸೇನೆಯಿಂದ ಬಂದರು. ಕೌರವ ಸೇನೆಯು ಮೊದಲು ಬಂದ ಯುಯುಧಾನನನ್ನು

ತಿಳಿದಾರು. ಆದುದರಿಂದ ಹೋಗಿ ಅರ್ಜುನನಿಗೆ ಸಹಾಯವಾಗುವೆನು.' ಇಂತು ನಿಶ್ಚಯಿಸಿ, ಸಾತ್ಯಕಿಯು, 'ಮಹಾರಾಜ! ನಿನ್ನಾಜ್ಞೆ ಎನಗೆ ಶಿರಸಾಧಾರ್ಯವಾಗಿದೆ. ಅರ್ಜುನನಕಿಂತಲು ನನಗೆ ಪ್ರಿಯತರನಿಲ್ಲ. ನಿನ್ನ ಆದೇಶಕಿಂತಲು ಕರ್ತವ್ಯವಿಲ್ಲ. ದುರ್ಭಿದವಾದ ಕೌರವ ವ್ಯೂಹವನ್ನು ಮುರಿದು, ಒಳಹೊಕ್ಕು ಅರ್ಜುನನನ್ನು ಸಮೀಪಿಸಿ ಆಗುವುದಿದ್ದರೆ ನನ್ನಿಂದಾದಷ್ಟು ಸಹಾಯ ಮಾಡುವೆನು.' ಎಂದನು. ಧರ್ಮರಾಜನು ತನಗೆ ನಮಸ್ಕರಿಸಿದ ಸಾತ್ಯಕಿಯನ್ನು ಹರಸಿ ಕಳಿಸಿದನು. ಅಲ್ಲಿಂದ ಮೂರು ಯೋಜನಗಳ ದೂರದಲ್ಲಿದ್ದ ಅರ್ಜುನನನ್ನು ಯುಯುಧಾನನು ಸೇರಹೊರಟನು.

ಮೊತ್ತಮೊದಲು ಅವನ ಮಾರ್ಗದಲ್ಲಿ ಮ್ಲೇಂಛರು ಶೂಲಶಕ್ತಿ ಗದಾ ಪ್ರಾಸ ಖಡ್ಗ ತೋಮರಗಳನ್ನು ಧರಿಸಿ ನಿಂತಿದ್ದರು. ಒಂದು ಸಾವಿರ ಮದ್ದಾನೆಗಳು ಅಂಜನ ಕುಲ ಸಂಭೂತಗಳು ಅವರೊಡನೆ ನಿಂತಿದ್ದವು. ಗಜ ಸೈನ್ಯದ ಹಿಂದೆ ಸಾವಿರ ರುಕ್ಮರಥರು ದಿವ್ಯರಥಗಳಲ್ಲಿ ಯುದ್ಧೋನ್ಮುಖರಾಗಿದ್ದರು. ಅವರು ಕರ್ಣ ದುಶ್ಶಾಸನರಿಂದ ಶಿಕ್ಷಿತರಾಗಿದ್ದರು. ಅರ್ಜುನ ಬಾಣ ಪೀಡಿತರಾಗಿದ್ದೂ ಅವರು ಉತ್ಸಾಹಭರಿತರಾಗೇ ರಣ ಮರಣವನ್ನು ವಾಂಛಿಸಿ ಕಡಿದಾಡಲು ಸಿದ್ಧರಿದ್ದರು. ಅವರ ಹಿಂದೆ ಕಿರಾತ ರಥಿಕರು ಏಳುನೂರಾನೆಗಳಿಂದ ಕೂಡಿ ಕದನಕುತೂಹಲಿಗಳಾಗಿದ್ದರು. ಇನ್ನೂ ದೂರದಲ್ಲಿ ಐರಾವತ ಕುಲೋದ್ಭವಗಳಾದ ಸಾವಿರ ಗಜಗಳೊಡನೆ ಹಿಮದುರ್ಗ ನಿವಾಸಿಗಳಾದ ಪಾರ್ವತೇಯರು ನಿಂತಿದ್ದರು. ಗಜಸೇನೆಯ ಹಿಂದೆ ಕಾಂಬೋಜ ರಥಿಕರು ದುರ್ವಾರಣರೆಂದು ಖ್ಯಾತರಾದರು. ಸಾವಿರ ವೀರರು ಧನುಷ್ಟಂಕಾರ ಮಾಡುತ್ತಿದ್ದರು. ಅನಂತರದಲ್ಲಿ ದ್ರೌಣಿಕ ಕರ್ಣಾದಿ ವೀರರಿಂದ ಗುಪ್ತನಾದ ಜಯದ್ರಥನು, ತನ್ನ ಸೇನೆಯೊಡನೆ ನಿಂತಿದ್ದನು.

ಮದಸಮೀರಣವಾದ ರಸಾಯನವನ್ನು ಕುಡಿದು ನೆಗೆಯುವ ಕುದುರೆಗಳ ರಥದಲ್ಲಿ ಸರ್ವಾಸ್ತ್ರ ಸಮೇತನಾಗಿ ಸಾತ್ಯಕಿಯು ಸವ್ಯಸಾಚಿಯನ್ನು ಸೇರಪೋದನು. ಕೈಲಾತಕ ಮಧುವನ್ನು ಸೇವಿಸಿ ಮದ ವಿಹ್ವಲಲೋಚನನಾದ ಸಾತ್ಯಕಿಯು, ವಿಪ್ರಾಶೀರ್ವಾದಗಳನ್ನು ಪಡೆದು ಹೊರಡುತ್ತಿರಲು, ಧರ್ಮರಾಜನ ಅನುನಯದಿಂದ ಭೀಮಸೇನನೂ ಅವನನ್ನನುಸರಿಸಿದನು. ವ್ಯೂಹ ಪ್ರವೇಶವನ್ನು ಸುಕರವಾಗಿಸಿ, ಹಿಂದಿರುಗಬಯಸಿದ ಭೀಮಸೇನನು, ಧರ್ಮರಾಜನ ರಕ್ಷಣೆಗೆಂದು ಧೃಷ್ಟದ್ಯುಮ್ನನನ್ನು ನಿಲ್ಲಿಸಿ ಪೋದನು.

ಭೀಮನು ಸಾತ್ಯಕಿಯೊಡನೆ ಬರುವುದನ್ನು ಕಂಡು ಕುರುಸೇನೆಯು ಪ್ರಕ್ಷುಬ್ಧವಾಯಿತು. ದ್ರೋಣನು ಉಭಯ ವೀರ ಸಿಂಹಗಳನ್ನೆದುರಿಸಲು ಸನ್ನದ್ಧನಾಗಿ ನಿಂತನು. ಧರ್ಮರಾಜನು ಕೂಡ ಸಾತ್ಯಕಿ ಭೀಮರಿಗೆ ನೆರವಾಗಲೆಣಿಸಿ, ತನ್ನ ಸೇನೆಯೊಡನೆ ವ್ಯೂಹಮುಖವನ್ನು ಸೇರಿದನು. ವಸುದಾನ ಧೃಷ್ಟದ್ಯುಮ್ನರು 'ಹೊಡಿ, ಕಡಿ, ಬಡಿ, ಕೊಲ್ಲು!' ಎಂದು ಗರ್ಜಿಸುವ ಸೇನಾನಿಗಳನ್ನು ನಡೆಸುತ್ತಾ, ಮಹತ್ಸೇನೆಯಿಂದ ಬಂದರು. ಕೌರವ ಸೇನೆಯು ಮೊದಲು ಬಂದ ಯುಯುಧಾನನನ್ನು

ಮುತ್ತಿತು. ತುಮುಲಯುದ್ಧವು ಆರಂಭವಾಯಿತು. ಸಾತ್ಯಕಿಯು ಆ ಸೈನ್ಯವನ್ನು ಸಾವಿರ ಭಾಗವಾಗುವಂತೆ ಬಾಣಜಾಲದಿಂದ ವೇಧಿಸಿದನು, ಅನಲಪ್ರಖರವಾದ ಸಾತ್ಯಕಿಯ ಬಾಣ ತತಿಯಿಂದ ಕುರುಸೇನಾ ಮುಖವು ಬಾಯ್ತೆರೆದು ಆರ್ತನಾದವನ್ನು ಮಾಡಿತು. ಅಂದಿನ ಅವನ ತೇಜವು ಗೋವಿಂದನ ವರಪ್ರಸಾದ ಜನಿತವಾಗಿತ್ತು. ದುರ್ನಿರೀಕ್ಷನಾಗಿ ಶರಕಿರಣವನ್ನು ಕಾರುವ ಸಾತ್ಯಕಿ ಸೂರ್ಯನನ್ನು ಕಣ್ಣೆತ್ತಿ ನೋಡಲಾರದೇ ಕಾಲಿಗೆ ಬುದ್ಧಿ ಹೇಳಿದರು ಕೌರವ ಭಟರು. ಅರ್ಜುನನು ಪ್ರವೇಶಿಸಿದ ಮಾರ್ಗದಿಂದ ವ್ಯೂಹವನ್ನು ಹೊಕ್ಕು ಸಾತ್ಯಕಿಯನ್ನು ಬೆಂಗಾವಲಾಗಿ ರಕ್ಷಿಸಿ ಭೀಮನು ತಡೆಯುವ ಕುರು ವೀರರನ್ನೆಲ್ಲ ಸದೆಬಡಿದು, ಮುಂದೆ ಧೈರ್ಯದಿಂದ ಸಾಗೆಂದು ಸಾತ್ಯಕಿಯನ್ನು ಹುರಿದುಂಬಿಸಿದನು.

ಸಾತ್ಯಕಿಯು, 'ಇನ್ನೇನು ವ್ಯೂಹಮುಖವನ್ನು ಸುಪ್ರವೇಶವಾಗಿಸಿದೆ ! ನಾನು ಅರ್ಜುನನಿಗೆ ಸಹಾಯನಾಗಿ, ಶತ್ರು ವೀರರನ್ನು ಸಂಹರಿಸುವೆನು. ಜಯದ್ರಥನು ಹತನಾದ ಕೂಡಲೇ, ಅರ್ಜುನ ಕೃಷ್ಣರೊಡನೆ ಹಿಂದಿರುಗಿ ಬಂದು, ಧರ್ಮಜನ ಅಪ್ಪಣೆಗೆ ಅರ್ಹನಾಗುವೆನು. ನಿನ್ನ ಮಹಾಬಲ ಸಾಹಸವೀರ್ಯ ಧೈರ್ಯ ಶೌರ್ಯಾದಿ ಗುಣಗಳನ್ನು ನಾನು ಚನ್ನಾಗಿ ಅರಿತಿರುವೆನು. ಆದುದರಿಂದಲೇ ನೀನು ರಾಜ ರಕ್ಷಣ ದಕ್ಷನೆಂದೂ ತಿಳಿದಿರುವೆನು. ಹಿಂದಿರುಗಿ ಹೋಗಿ, ರಾಜರನ್ನು ದ್ರೋಣನಿಂದ ರಕ್ಷಿಸುತ್ತಿರು ! ನನ್ನ ಗುಣಗಳನ್ನರಿತು, ನನಗೆ ಕೀರ್ತಿಯನೀಯಲೆಣಿಸಿಯಾದರೂ, ನನ್ನನ್ನು ಕಾಣುತ್ತಾ ಹೊರಟ ಸಾತ್ಯಕಿಯನ್ನು ಬಿಟ್ಟು ಭೀಮಸೇನನು ಧರ್ಮರಾಜನ ಬಳಿ ಸಾರಿದನು.

ಸಾತ್ಯಕಿಯು ಸೇನಾ ಮುಖವನ್ನು ಸೀಳಿ ಬಂದುದನ್ನು ನೋಡಿ ಆಚಾರ್ಯನು ಕ್ರುದ್ಧನಾಗಿ ಅವನನ್ನು ಮುತ್ತಿ ಐದು ಬಾಣಗಳಿಂದ ಹೊಡೆದನು. ಸಾತ್ಯಕಿಯು ದ್ರೋಣ ಶರೀರದಲ್ಲಿ ಏಳು ಬಾಣಗಳನ್ನು ನಾಟಿಸಿದನು; ಬಾಣಯುದ್ಧವನ್ನು ಮಾಡ ಮಾಡುತ್ತಾ ಸಾತ್ಯಕಿಯು ಆಚಾರ್ಯನ ರಥ ಸಾರಥಿಗಳನ್ನು ಎಂಟು ಬಾಣಗಳಿಂದ ಪೀಡಿಸಿದನು. ದ್ರೋಣನು 'ಸಾತ್ಯಕೀ ! ನಿನ್ನ ಆಚಾರ್ಯನು ಕಾಪುರುಷನಂತೆ, ಕಾದದೆ ಪ್ರದಕ್ಷಿಣೆಸಿ ತಪ್ಪಿಸಿಕೊಂಡು ಹೋದನು. ನೀನೂ ಓಡಿಹೋಗಿ ನನ್ನಿಂದುಳಿಯಬೇಕಾಗಲಿ, ನಿಂತು ಕಾಡಿದರೆ ಕೃತಾಂತ ಮಂದಿರವನ್ನು ಸೇರುವೆ ತಿಳಿ ! ' ಎಂದನು. ಸಾತ್ಯಕಿಯು 'ಬ್ರಹ್ಮನ್ ! ನನಗೆ ನಿನ್ನಿಂದ ಸ್ವಸ್ತಿಯಾಗಲಿ ! ಧನಂಜಯನನ್ನು ಸೇರಪೋಗೆಂದ ಧರ್ಮಜನ ಶಾಸನದಿಂದ ಬಂದಿರುವೆನು. ವೃಥಾ ಕಾಲಹರಣವನ್ನೀಗ ಮಾಡಲಾಗದು. ಆಚಾರ್ಯನಿಗಾಚಾರ್ಯನಾದ ನಿನ್ನನ್ನು ಗೆದ್ದು ಪೋಗಲು ಸುರಾ-ಸುರರಿಗೆ ಅಸದಳವೆಂಬುದನ್ನು ಅರಿತಿರುವೆನು. ನನ್ನ ಗುರುವು ಹೋದ ಮಾರ್ಗವನ್ನು ಹಿಡಿದು ಹೋಗುವಂತೆ ಅವನ ಗುರುವು ಕೃಪೆದೋರಿಬಿಡಲಿ ! ' ಎಂದು, ತಲೆಬಾಗಿ ನಮಿಸಿ ಮುಂದೆ ಸಾಗಿದನು. ಆಚಾರ್ಯನು ಬಿಡದೆ ತಡೆದು, ಸಾತ್ಯಕಿಯನ್ನು ಶರ ಶತದಿಂದ ಪೀಡಿಸಿದನು. ಸಾತ್ಯಕಿಯು ಒಂದು ಬಾಣದಿಂದ ದ್ರೋಣನ ಸೂತನನ್ನು ಕೊಂದನು.

ಆಗ ಆಚಾರ್ಯನ ಕುದುರೆಗಳು ದಿಕ್ಕೆಟ್ಟೋಡಿದವು. ಸಮಯವನ್ನರಿತು ಸಾತ್ಯಕಿಯು ಆಚಾರ್ಯನನ್ನು ಅತಿಕ್ರಮಿಸಿ ವ್ಯೂಹ ಮಧ್ಯವನ್ನು ಸೇರಿದನು.

ಬಾಹ್ಲಿಕ ದೇಶದ ಭಟರನ್ನು, ಅಂಗದೇಶದ ಆನೆಗಳನ್ನು, ಯವನದೇಶದ ಜವನಾಶ್ವಗಳನ್ನು ದಾಟಿ, ಸಾತ್ಯಕಿಯು, ಕರ್ಣನ ಬಹುಸೇನಾ ಮಧ್ಯವನ್ನು ಕಲ್ಲೋಲಗೊಳಿಸಿ ಮುಂದೆ ಸಾಗುತ್ತಿರಲು, ಕೃತವರ್ಮನು ಸಿಟ್ಟಿನಿಂದ ಅವನನ್ನು ತಡೆದು, ಕಾದಿದನು. ಶ್ರೀಶನ ವರಬಲದಿಂದ ಅವನು ಒಂದು ಮುಹೂರ್ತದವರಿಗೂ ಸರ್ವ ಜಯವನ್ನು ಪಡೆದಿದ್ದನು. ಅದನ್ನರಿತೇ ಭೀಮಸೇನನು ಅವನನ್ನು ಮುತ್ತದೆ ಹಿಂದಿರುಗಿ ಹೋದನು. ಸರ್ವಜಯ ವರವು ಸಾತ್ವತರನ್ನು ಹೊರತು ಬೇರೆ ವೀರರ ವಿಷಯವಾಗಿದ್ದುದರಿಂದ ಸಾತ್ಯಕಿಯು ಕೃತವರ್ಮನನ್ನು ಅಂದು ತನಗೆ ಶ್ರೀಶನಿತ್ತ ವರಬಲದಿಂದಲು, ವಿಪ್ರಾಶೀರ್ವಾದ ಬಲದಿಂದಲು ಗೆಲ್ಲಬಲ್ಲವನಾಗಿದ್ದನು.

ಕೃತವರ್ಮನನ್ನು ಆರು ಬಾಣಗಳಿಂದಲು, ಅವನ ಅಶ್ವಗಳನ್ನು ನಾಲ್ಕರಿಂದಲು, ಹೊಡೆದ ಸಾತ್ಯಕಿಯನ್ನು ಅವನು ಹದಿನಾರು ಬಾಣಗಳಿಂದ ಪೀಡಿಸಿದನು; ವತ್ಸದಂತ ಬಾಣದಿಂದ ಸಾತ್ಯಕಿಯ ಎದೆಗೆ ಹೊಡೆಯಲು, ಅದು ಕವಚವನ್ನು ಸೀಳಿ, ರುಧಿ ರಾಕ್ತವಾಗಿ ಬಿತ್ತು. ಸಾತ್ಯಕಿಯು ಕ್ರುದ್ಧನಾಗಿ ಒಂದು ಬಾಣದಿಂದ ಕೃತವರ್ಮನ ಭುಜವನ್ನು ತಾಡಿಸಿ, ನಾಲ್ಕರಿಂದ ಅವನ ಕುದುರೆಗಳನ್ನು ಹೊಡೆದು, ಒಂದು ಭಲ್ಲದಿಂದ ಅವನ ಸಾರಥಿಯನ್ನು ಸಂಹರಿಸಿದನು. ಕುದುರೆಗಳು ಓಡತೊಡಗಲು, ಕೃತವರ್ಮನು ಸಂಭ್ರಾಂತನಾಗಿ ತಾನೆ ಅಶ್ವಗಳನ್ನು ನಿಯಂತ್ರಿಸಿ ನಿಲ್ಲಿಸಿದನು. ರಥಿಕನೇ ಸಾರಥಿಯೂ ಆಗಿ ಭೀಕರವಾದ ಕದನವನ್ನು ಮಾಡುತ್ತಾ, ಕೃತವರ್ಮನು, ಮುಂದೆ ಸಾಗಿದ್ದ ಸಾತ್ಯಕಿಯನ್ನು ಬಿಟ್ಟು ಅವನಿಗೆ ನೇರವಾಗಿ ಬಂದಿದ್ದ ಪಾಂಡುಸೇನೆಯನ್ನು ಶರವ್ರಾತದಿಂದ ಪೀಡಿಸಿ, ಅನೇಕರನ್ನು ಸಂಹರಿಸಿದನು. ಅವನಿಗೆ ನೆರವಾಗಿ ಆಚಾರ್ಯನೂ ಪಾಂಚಾಲ ಪಾಂಡವ ಸೈನಿಕರನ್ನು ಚೆಂಡಾಡಿದನು.

ಅಂತು ಪಾಂಡವ ವೀರರು ಕೃತವರ್ಮನನ್ನು ಕೂಡಿ ಘೋರವಾಗಿ ಕಡಿದಾಡುವಾಗ, ವರಬಲದಿಂದ ಉದ್ಧತನಾದ ಕೃತವರ್ಮನು ಭೀಮಸೇನನು ವಿಮುಖನಾಗಿ ಹೋದುದನ್ನು ಕಂಡು ವಿಜೃಂಭಿಸಿ, ಶಿಖಂಡಿಯನ್ನು ಹತ್ತು ಬಾಣಗಳಿಂದ ಪೀಡಿಸಿದನು. ಶಾರ್ದೂಲ ಕುಂಜರಗಳಂತೆ ಭಯಂಕರವಾಗಿ ಹೋರಾಡುವ ಶಿಖಂಡಿ ಕೃತವರ್ಮರು ಪ್ರಳಯಾಗ್ನಿ ದ್ವಯದಂತೆ ಕಂಡರು. ಕೃತವರ್ಮನು ಏಳು ಬಾಣಗಳಿಂದ ಎದೆಗೆ ಹೊಡೆಯಲು ಶಿಖಂಡಿಯು ಮೂರ್ಛಿತನಾದನು. ಕೃತವರ್ಮನು ಅಂದು ಅತ್ಯದ್ಭುತ ಪರಾಕ್ರಮವನ್ನು ತೋರಿ, ಬಂದು ಮುತ್ತಿದ ವೀರಭಟರನ್ನು ಸಂಹರಿಸಿದನು. ಹಾರ್ದಿಕ್ಯನಿಂದ ಮರ್ದಿತರಾಗಿ ಪಾಂಡವ ಭಟರು ಚೆಲ್ಲಾಚೆದರಾಗಿ ಓಡಿಹೋದರು.

ಸಾತ್ಯಕಿಯು ದ್ರೋಣ ಕೃತವರ್ಮರನ್ನು ಅತಿಕ್ರಮಿಸಿ, ಅರ್ಜುನನನ್ನು ಸೇರಲು ಹವಣಿಸಿ, ತಡೆದು ನಿಲ್ಲುವ ವೀರ ವರರನ್ನು ರಣರಂಗದಲ್ಲಿ ವೀರ ಶಯನದಲ್ಲಿ ಮಲಗಿಸಿ, ಮುನ್ನಡೆದನು. ರುಕ್ಮರಥನೆಂಬ ತ್ರಿಗರ್ತ ರಾಜಕುಮಾರನ ನಾಯಕತ್ವದಲ್ಲಿ

ನಿಂತಿದ್ದ ಸಾವಿರ ಪದಾತಿಗಳು, ನೂರು ಹಸ್ತಿಯೋಧರು, ಐನೂರು ಕುದುರೆ ಸವಾರರು ಸಾತ್ಯಕಿಯನ್ನು ಮುತ್ತಿ ಶರವರ್ಷದಿಂದ ಅವನ ರಥವನ್ನು ಮುಚ್ಚಿದರು. ಅವರನ್ನು ಶರ ಸಹಸ್ರದಿಂದ ಸಂಹರಿಸಿ ಮುಂದೆ ಸಾಗುವ ಸಾತ್ಯಕಿಯನ್ನು ಕಂಡು ಜಲಸಂಧನೆಂಬ ಮಾಗಧ ರಾಜಕುಮಾರನು ಕ್ರುದ್ಧನಾಗಿ ಸಾತ್ಯಕಿಯನ್ನು ಗಜಸೇನಾ ಸಮೇತನಾಗಿ, ತಾನೂ ಗಜಾರೂಢನಾಗಿ ಬಂದು ಮುತ್ತಿದನು. ಸಾತ್ಯಕಿಯು ಕಂಕಪತ್ರಗಳಿಂದ ಗಜಗಳ ಕುಂಭಗಳನ್ನು ಸೀಳಿ, ಕಿವಿಗಳನ್ನು ಕೆಡಹಿ, ಕಾಲುಗಳನ್ನು ಕಡಿದು, ಸೊಂಡಿಲುಗಳನ್ನು ಖಂಡಿಸಿ, ರಣ ತಾಂಡವ ಪಾಂಡಿತ್ಯವನ್ನು ತೋರಿ ಮೆರೆದನು.

ಜಲಸಂಧನು ಕುಪಿತನಾಗಿ ತನ್ನ ಆನೆಯನ್ನು ಸಾತ್ಯಕಿಯ ರಥದ ಮೇಲೇರಿ ತುಳಿವಂತೆ ಪ್ರೇರಿಸಿದನು. ಬಂಗಾರದ ಕವಚವನ್ನು ತೊಟ್ಟು ಕನಕ ಕುಂಡಲ ಮುಕುಟ ಮಾಲಾಂಗದಾಲಂಕೃತನಾಗಿ, ರಕ್ತಚಂದನವನ್ನು ಹಚ್ಚಿ ಮಿಂಚುಳ್ಳ ಮೇಘದಂತೆ ಮೆರೆಯುವ ಮಗಧರಾಜನು ಆನೆಯನ್ನು ಮುನ್ನಡೆಸಲು ನೋಡಿ, ಸಾತ್ಯಕಿಯು ಹತ್ತು ಬಾಣಗಳಿಂದ ಹಸ್ತಿ ಮಸ್ತಕವನ್ನು ಗಾಯಗೊಳಿಸಿದನು. ಅದು ಗೀಳಿಟ್ಟು ಹಿಂದಿರುಗಿತು. ಜಲಸಂಧನು ಕುಪಿತನಾಗಿ ಭಲ್ಲದಿಂದ ಸಾತ್ಯಕಿಯ ಧನುವನ್ನು ಮುರಿದು, ಐದು ನಾರಾಚಗಳಿಂದ ಎದೆಗೆ ಹೊಡೆದನು. ಮತ್ತೊಂದು ಧನುವನ್ನೆತ್ತಿ ಯುಯುಧಾನನು 'ನಿಲ್ಲು ! ನಿಲ್ಲು !' ಎನ್ನುತ್ತಾ ಜಲಸಂಧನನ್ನು ಅರವತ್ತು ಬಾಣಗಳಿಂದ ಪೀಡಿಸಿ, ಒಂದರಿಂದ ಅವನ ಧನುಸ್ಸನ್ನು ಮುರಿದನು. ಜಲಸಂಧನು ತೋಮರವನ್ನೊಗೆಯಲು ಅದು ಸಾತ್ಯಕಿಯ ಭುಜವನ್ನು ಗಾಯಗೊಳಿಸಿ ನೆಲಕ್ಕೆ ಬಿತ್ತು. ಸಾತ್ಯಕಿಯು ಮೂವತ್ತು ಬಾಣಗಳಿಂದ ಪೀಡಿಸಲು, ಜಲಸಂಧನು ಖಡ್ಗವನ್ನು ಎಸೆದನು. ಅದು ಸಾತ್ಯಕಿಯ ಧನುಸ್ಸನ್ನು ಮುರಿದು ಕೆಡಹಿತು. ಸಾತ್ಯಕಿಯು ಮತ್ತೊಂದು ಧನುವನ್ನು ಪಿಡಿದು, ನಿಶಾತವಜ್ರಸಮಬಾಣಗಳಿಂದ ಜಲಸಂಧನ ಬಾಹುದ್ವಯವನ್ನು ಕತ್ತರಿಸಿ ನೆಲಕ್ಕುರುಳಿಸಿದನು ; ತಡಮಾಡದೆ ಮತ್ತೊಂದು ಬಾಣದಿಂದ ಕುಂಡಲಮಂಡಿತವಾದ ಅವನ ಶಿರವನ್ನೂ ಖಂಡಿಸಿದನು ; ಬಾಣಜಾಲದಿಂದ ಅಂಬಾರಿಯನ್ನು ಕೆಡಹಿ, ಅಂಬಷ್ಟನನ್ನು ಕೊಂದು, ಆನೆಯನ್ನು ಗಾಯಗೊಳಿಸಿದನು. ಆನೆಯು ಹುಚ್ಚೆದ್ದು ತನ್ನ ಕಡೆ ಸೈನಿಕರನ್ನು ತುಳಿದು ಕೊಲ್ಲುತ್ತ ಓಡಿತು. ಜಲಸಂಧ ಸೈನಿಕರು ಹತ ಗಜಾನೀಕವನ್ನು ಬಿಟ್ಟು ದಿಕ್ಪಾಪಾಲಾಗಿ ಓಡತೊಡಗಿದರು.

ಅವರನ್ನು ವಿಮುಖರಾಗದಂತೆ ಹಿಂದಿರಿಗಿಸಿ, ದ್ರೋಣನು ತಾನಾಗಿ ಸಾತ್ಯಕಿಯನ್ನು ಮುತ್ತಿ ತಡೆದನು. ಆತನಿಗೆ ಸಹಾಯಕರಾಗಿ ದುರ್ಮರ್ಷಣ, ದುಸ್ಸಹ, ವಿಕರ್ಣ, ದುರ್ಮುಖ, ದುಶ್ಶಾಸನ, ಚಿತ್ರಸೇನ, ದುರ್ಯೋಧನರು ಬಂದು, ಶರವರ್ಷವನ್ನು ಗರೆದು ಸಾತ್ಯಕಿಯನ್ನು ಪೀಡಿಸಿದರು. ಅವರನ್ನೆಲ್ಲರನ್ನೂ ಹತ್ತು ಹತ್ತು ಬಾಣಗಳಿಂದ ಹೊಡೆದು, ದುರ್ಯೋಧನನೊಡನೆ ಭೀಕರ ಯುದ್ಧದಲ್ಲಿ ತೊಡಗಿದನು. ಪರಸ್ಪರ ಬಾಣಘಾತದಿಂದ ರಕ್ತಸಿಕ್ತಗಾತ್ರರಾದ ಕೌರವಸಾತ್ವತರು ವಾಸಿತಕರೇಣುವಿಗಾಗಿ ತಿವಿದಾಡುವ ಭದ್ರ ಗಜಗಳಂತೆ ವಿರಾಜಿಸಿದರು. ಸಾತ್ಯಕಿಯು ಕುರುರಾಜನ ಧನುವನ್ನು ಮುರಿದು, ದಶಕಗಳಿಂದ ಗಾಯಗೊಳಿಸಿದನು. ದುರ್ಯೋಧನನು ಬೇರೆ ಧನುವನ್ನು

ಪಿಡಿದು ನೂರು ಬಾಣಗಳಿಂದ ಹೊಡೆದನು. ಮತ್ತು ಮಿಕ್ಕ ಪಾಂಡವ ಯೋಧರನ್ನು ಐದ್ಯೆದು ಬಾಣಗಳಿಂದ ಪೀಡಿಸಿದನು. ಸಾತ್ಯಕಿಯು ಅವರೆಲ್ಲ ಶತ್ರು ವೀರರನ್ನು ಹತ್ತು ಹತ್ತು ಭಲ್ಲಗಳಿಂದ ಪೀಡಿಸಿ, ದುರ್ಯೋಧನನ ಧನುಸ್ಸನ್ನು ಮುರಿದು, ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಕೆಡಹಿ, ಧ್ವಜವನ್ನೊಂದರಿಂದ ಮುರಿದು, ಕ್ಷುರಪ್ರದಿಂದ ಸಾರಥಿಯನ್ನು ಕೊಂದನು. ದುರ್ಯೋಧನನು ಶ್ರೀಕೃಷ್ಣವರ ಬಲೋದ್ಧತನಾಗಿದ್ದ ಸಾತ್ಯಕಿಯ ಮುಂದೆ ನಿಲ್ಲಲಾರದೆ, ಚಿತ್ರಸೇನನ ರಥದಲ್ಲಿ ಕೂತು ಹಿಂದಿರುಗಿ ಹೋದನು. ಅದನ್ನು ಕಂಡು ಕುರು ಸೈನಿಕರು ದಿಕ್ಕೆಟ್ಟು ಓಡಿದರು.

ಕೃತವರ್ಮನು ತನ್ನ ಸಾರಥಿಯನ್ನು ತ್ವರೆಪಡಿಸುತ್ತ, ಬಾಯ್ತೆಗೆದು ಬರುವ ಮೃತ್ಯುವಿನಂತೆ, ಸಾತ್ಯಕಿಯನ್ನೆದುರೊಡ್ಡಿ ನಿಂತನು, ವ್ಯಾಘ್ರ-ಸಿಂಹಗಳಂತೆ ಯಾದವ ವೀರರು ಕಡಿದಾಡಿದರು. ಸಾತ್ಯಕಿಯನ್ನು ಇಪ್ಪತ್ತಾರು ಬಾಣಗಳಿಂದಲೂ, ಸಾರಥಿಯನ್ನು ಐದರಿಂದಲೂ, ವಾಹನಗಳನ್ನು ನಾಲ್ಕರಿಂದಲೂ ಪೀಡಿಸಿ, ಕೃತವರ್ಮನು ಸಿಂಹನಾದ ಮಾಡಿದನು. ಸಾತ್ಯಕಿಯು ಕ್ರುದ್ಧನಾಗಿ, ಎಂಬತ್ತು ಬಾಣಗಳಿಂದ ಕೃತವರ್ಮನನ್ನು ಪೀಡಿಸಿ, ಧನಂಜಯನನ್ನು ಸೇರಪೋಗುವ ತ್ವರೆಯಿಂದ, ಅರವತ್ಮೂರು ಶರಗಳಿಂದ ಕುದುರೆಗಳನ್ನು, ಏಳರಿಂದ ಸಾರಥಿಯನ್ನು ಹೊಡೆದು, ಮತ್ತೆ ಯಮದಂಡ ಸದೃಶ ಕಾಂಡದಿಂದ ಕೃತವರ್ಮನ ಕವಚವನ್ನು ಸೀಳಿದನು. ಆ ಬಾಣವು ಕೃತವರ್ಮನ ರಕ್ತದ ಸವಿ ನೋಡಿ, ಮದವೇರಿ ಬಿದ್ದವನಂತೆ, ನೆಲಕ್ಕೆ ಬಿತ್ತು. ಕೃತವರ್ಮನು ಮೊಳಕಾಲಿನಿಂದ ಕೆಳಗೆ ಉರುಳಿ, ಮತ್ತೆ ಚೇತರಿಸಿಕೊಂಡು, ಸಿದ್ಧನಾಗುವುದರೊಳಗೆ, ಸಾತ್ಯಕಿಯು ಮುಂದೆ ಸಾಗಿದ್ದನು.

ಸಾವಿರಾರು ರಥಿಕರು ಬೆರಗಾಗಿ ನೋಡುತ್ತಿರಲು ಸಾತ್ಯಕಿಯು ವ್ಯೂಹಮಧ್ಯದಲ್ಲಿರುವ ಅರ್ಜುನನ ಕಡೆಗೆ ಸಾಗಿದನು. ದ್ರೋಣನು ಅವನನ್ನು ತಡೆದು ಬಾಣಶತದಿಂದ ಹೊಡೆದನು. ಯುಯುಧಾನನು ಆತನ ಬಾಣಗಳನ್ನು ಖಂಡಿಸಿ, ಐವತ್ತು ಬಾಣಗಳಿಂದ ದ್ರೋಣನನ್ನು ಪೀಡಿಸಿದನು. ದ್ರೋಣನು ಅವನ ಕರಲಾಘವವನ್ನು ಮನದಿ ಮೆಚ್ಚಿ ಮತ್ತೆ ಹತ್ತರಿಂದ ಪೀಡಿಸಿದನು. ಸಾತ್ಯಕಿಯು ಆತನ ಧ್ವಜವನ್ನು ಒಂದರಿಂದ ಹೊಡೆದು, ನೂರು ಶರಗಳಿಂದ ಸಾರಥಿಯನ್ನು ಪೀಡಿಸಿ, ಮೂರುನೂರು ಬಾಣಗಳಿಂದ ತುರಗಗಳನ್ನು ಹೊಡೆದನು. ಆಚಾರ್ಯನು ಒಂದು ಭಲ್ಲದಿಂದ ಸಾತ್ಯಕಿಯ ಧ್ವಜವನ್ನು ಮುರಿದು, ಎಪ್ಪತ್ತರಿಂದ ಕುದುರೆಗಳನ್ನು ಪೀಡಿಸಿ, ಒಂದು ಹೇಮಪುಂಖ ಭಲ್ಲದಿಂದ ಅವನ ಧನುಸ್ಸನ್ನು ಮುರಿದನು. ಸಾತ್ಯಕಿಯು ಗದೆಯನ್ನೊಗೆಯಲು, ಶರಶತದಿಂದ ಅದನ್ನು ತುಂಡರಿಸಿದನು; ದ್ರೋಣನು ಶಕ್ತಿಯನ್ನೆತ್ತಿ ಪ್ರಯೋಗಿಸಲು, ಸಾತ್ಯಕಿಯ ಸಾರಥಿಯ ಚಾತುರ್ಯದಿಂದ ಅದು ರಥಕ್ಕೆ ಬಡಿದು ಕೆಳಗೆ ಬಿತ್ತು. ಮತ್ತೊಂದು ರಥಶಕ್ತಿಯಿಂದ ಆಚಾರ್ಯನು ಸಾತ್ಯಕಿಯ ಸಾರಥಿಯನ್ನೂ ಮೂರ್ಛೆಗೊಳಿಸಿದನು. ಸಾತ್ಯಕಿಯು ತಾನೇ ತುರಗಗಳನ್ನು ನಿಯಮಿಸಿ, ಶರಶತಗಳಿಂದ ಶತಮುಖ ಗುರುಸಮನಾದ ದ್ರೋಣನನ್ನು ಹೊಡೆದನು. ಅವನು ಸೂತನನ್ನೆಚ್ಚರಗೊಳಿಸಿ, ಆಚಾರ್ಯನ ಐವತ್ತು ಬಾಣಗಳನ್ನು ಖಂಡಿಸಿ, ಒಂದರಿಂದ

ಆತನ ಸೂತನನ್ನು ಕೊಂದು, ಬಾಣಜಾಲದಿಂದ ಕುದುರೆಗಳನ್ನು ಪೀಡಿಸಿದನು. ಅವು ಸಾರಥಿ ಇಲ್ಲದೆ, ದಿಕ್ಕೆಟ್ಟು ಓಡಿದಾಗ, ರಣರಂಗದಲ್ಲಿ ದ್ರೋಣಯುಕ್ತ ರಥವು, ಆಕಾಶದಿ ಸೂರ್ಯ ರಥದಂತೆ, ಮಂಡಲಾಕಾರವಾಗಿ ಭ್ರಮಿಸುತ್ತಾ ತಿರುಗಿತು. ಕುರುಯೋಧರು ಓಡಿಬಂದು, ದ್ರೋಣ ರಥವನ್ನು ಹಿಡಿದು, ನಿಲ್ಲಿಸಿದರು. ಆಚಾರ್ಯನು ಮತ್ತೊಬ್ಬ ಸೂತನಿಂದ ಕೂಡಿ, ಮತ್ತೆ ರಣರಂಗದಲ್ಲಿ, ವ್ಯೂಹ ಮುಖದಲ್ಲಿ ಬಂದು ನಿಂತನು.

ಸಾತ್ಯಕಿಯು ದ್ರೋಣ ಕೃತವರ್ಮರನ್ನು ಗೆದ್ದು ಸಾರಥಿಯನ್ನು ನೋಡಿ, 'ಸೂತ ! ಈ ವಿಜಯವು ನನ್ನದಲ್ಲ. ಶ್ರೀಕೃಷ್ಣಾರ್ಜುನರಿಂದ ಹತಪ್ರಾಯರಾಗಿದ್ದವರನ್ನು ನಾನು ಸಂಹರಿಸಿ, ಜಿತಪ್ರಾಯರಾದವರನ್ನು ನಾನು ಗೆದ್ದಿರುವೆನು. ನಾನು ನಿಮಿತ್ತಮಾತ್ರನೆಂದು ತಿಳಿ ! ಹೊಡೆ ಮುಂದಕ್ಕೆ ರಥ !' ಎಂದು ಬಾಣ ಜಾಲದಿಂದ, ಬಂದು ಮುತ್ತುವ ವೀರರನ್ನು ಕೊಂದು, ಮುನ್ನಡೆದನು. ಜಲದಾಗಮವು ಕಳೆಯಲು ಉರಿಯುತ್ತ ಮೆರೆದು ಬರುವ ಸೂರನಂತೆ ಯಾದವ ಶೂರನು, ಅಸಹ್ಯಪ್ರತಾಪನಾಗಿ ಕುರು ವ್ಯೂಹವನ್ನು ಹೊಕ್ಕನು. ಆಗ ನಿನ್ನ ಮೊಮ್ಮಗನಾದ ಸುದರ್ಶನನು ಅವನನ್ನು ತಡೆದು ಕಡುಕೋಪದಿಂದ ಹೋರಾಡಿದನು. ಸಾತ್ಯಕಿಯು ಅವನ ಪ್ರತಿಬಂಧನವನ್ನು ಸಹಿಸದೆ ಶರಶತದಿಂದ ಅವನ ರಥವನ್ನು ನುಚ್ಚುನೂರಾಗಿಸಿ, ರಥ್ಯ ಸಾರಥಿಯರನ್ನು ಸಂಹರಿಸಿ, ನಿಶಾತಬಾಣದಿಂದ ಅವನ ಶಿರವನ್ನು ಕತ್ತರಿಸಿ ಕೆಳಗುರುಳಿಸಿದನು.

ಹವ್ಯ ವಾಹನನಂತೆ ಉರಿದೆದ್ದು ಬಾಣಜ್ವಾಲೆಗಳಿಂದ ಕುರುಸೇನಾ ಕಕ್ಷವನ್ನು ಸುಡುವ ಸಾತ್ಯಕಿಯನ್ನು ತಡೆದು ಹೋರಾಡುವ ಧೈರ್ಯವಿಲ್ಲದೆ ಕುರು ಸೈನಿಕರು ಹಿಂಜರಿಯುತ್ತಿದ್ದರು. ರಥಾಶ್ವನಾಗಕಲಿಲವು, ಶರಶಕ್ತಿ ತರಂಗ ಸಂಕುಲವು, ಖಡ್ಗಗದಾಮಕರ ಭೀಷಣವು, ಉದ್ಯತಾಯುಧ ಘೋಷಣವು, ಜಂಬೂಕ ವೃಕನಾದ ಪ್ರಚಂಡವು, ಯೋಧ ಶರೀರ ಖಂಡವು, ಭೀರುಜನ ದುರ್ಧರ್ಷವು, ವೀರಸೈನಿಕ ಹರ್ಷವು ಆದ ದ್ರೋಣಾನೀಕ ಮಹಾರ್ಣವವನ್ನು ಅತಿಕ್ರಮಿಸಿ, ಅತಿರಥ ವರನಾದ ಸಾತ್ಯಕಿಯು, ಗಾಂಡೀವ ಟಂಕಾರವನ್ನು ಕೇಳಿ, ತಾನು ಅರ್ಜುನ ವಾಸುದೇವರನ್ನು ಸಮೀಪಿಸುತ್ತಿರುವೆನೆಂದರಿತನು. 'ವಾರ್ಷ್ಣೇಯ ! ಯಾರಲ್ಲಿ ಸಿಟ್ಟಾಗಿರುವೆ ? ಯಾರನ್ನು ಯಮಸದನಕ್ಕಟ್ಟಲು ತವಕಿಸುವೆ ! ಯಾರ ಮುಂದೆ ನಮ್ಮ ರಥವನ್ನು ನಿಲ್ಲಿಸಲಿ ! ಹೇಳು ! ಕಾಲಾಂತಕ ಯಮೋಪಮನಾಗಿ ವಿಕ್ರಮಿಸುವ ನಿನ್ನ ದೃಷ್ಟಿ ಯಾರ ಮೇಲಿದೆ ? ' ಎಂದು ಕೇಳುವ ಸಾರಥಿಯನ್ನು ಮೆಚ್ಚಿ ಸಾತ್ಯಕಿಯು ದರದ, ಮ್ಲೇಂಛ, ಮುಂಡ, ಕಾಂಭೋಜ ಕುರು ವೀರರನ್ನು ಸೇರುವಂತೆ ಆಜ್ಞಾಪಿಸಿದನು. ಅಂದಿನ ಸಾತ್ಯಕಿಯ ಯುದ್ಧ ವಿಕ್ರಮವು ಅವನ ಆಚಾರ್ಯನಾದ ಅರ್ಜುನನಿಗೆ ಹರ್ಷ ಕಾರಣವು, ಶತ್ರುವಾದ ದುರ್ಯೋಧನನಿಗೆ ಭಯ ಕಾರಣವು ಆಗಿತ್ತು. ಅವನ ಕುದುರೆಗಳಿಂದು ಧವಳವಾಗಿದ್ದವು. ಅವು ಆಕಾಶವನ್ನು ಅಳೆಯುವಂತೆ ನಾಗಾಲೋಟದಿಂದ ಹಾರಿ ಓಡುತ್ತಿದ್ದವು. ಅವನ ಸಾರಥಿಯ ಶರವಿದ್ಧ ಶರೀರನಾಗಿದ್ದರೂ, ಉತ್ಸಾಹಭರಿತ ಧೀರನಾಗಿದ್ದನು. ಅವನ ಬಾಣಗಳು ಭಟರ

ಗಳಗಳನ್ನುರುಳಿಸಿ, ಕುದುರೆಗಳ ಅಂಗಗಳನ್ನು ರಣರಂಗದಿ ಚೆದುರಿಸಿ, ಗಜರಾಜಿಯನ್ನು ಗಜಬಿಜಿಯಾಗಿಸಿ, ರಥಿಕರನ್ನು ಯಮಮಾರ್ಗ ಪಥಿಕರನ್ನಾಗಿ ಮಾಡಿದವು. ಶಬರರನ್ನು ಸಂಹರಿಸಿ, ಮುಂಡರನ್ನು ಖಂಡಿಸಿ, ಕಾಂಭೋಜರನ್ನು ಕಡೆಗಾಣಿಸಿ, ಮ್ಲೇಂಛರನ್ನು ತುಚ್ಛೀಕರಿಸಿ, ಯವನರನ್ನು ಯಮನ ದವಡೆ ಹೊಗಿಸಿ, ಸಾತ್ಯಕಿಯು ನಿರ್ಭಯನಾಗಿ ಮುನ್ನುಗ್ಗಿದನು.

ಜಲಸಂಧಾರ್ಣವವನ್ನು ದಾಟಿ, ಕೃತವರ್ಮ ಮಕರಮುಕ್ತನಾಗಿ, ಸೈನ್ಯಸಾಗರವನ್ನು ದ್ರೋಣನೆದುರಿಗೆ ದ್ರೋಣಕಲ್ಪವನ್ನಾಗಿಸಿ ಮುನ್ನಡೆದು ಹೋಗುವ ಯುಯುಧಾನನನ್ನು ದುರ್ಯೋಧನಾದಿ ವೀರರು ಬಂದು ತಡೆದು, ವಿವಿಧ ಶರಜಾಲದಿಂದ ವೇಧಿಸಿದರು. ಕುರುಸೈನ್ಯವು ಅವನನ್ನು ಮುತ್ತಿ ವೇಲೆಯಿಂದ ಸಾಗರದಂತೆ, ಹಿಂಜರಿದು ನಿಂತಿತು. ಅಂದು ಸಾತ್ಯಕಿಯ ಒಂದು ಬಾಣವಾದರೂ ಯಮರಾಜನ ಜೀವನ ಗಣನಾಗ್ರಂಥದಲ್ಲಿ ರಕ್ತರೇಖೆಯನ್ನಿಡದೆ ಬಿಡಲಿಲ್ಲ. ಅವನು ಅರ್ಜುನನ ಶಿಷ್ಯನಹುದು ಎನಿಸಿದನು; ಭೀಮಸೇನನ ಅಶೀಃ ಪ್ರಭಾವ ಎಂತಹುದೆಂದು ತೋರಿಸಿದನು. ಸಾತ್ಯಕಿಯು ಅತ್ಯಧಿಕೋತ್ಸಾಹದಿಂದ ಲಘು ವಿಕ್ರಮನಾಗಿ, ತನ್ನನ್ನು ಮುತ್ತಿದ ಕೌರವ ವೀರರು ಪಶ್ಚಾತ್ತಾಪ ಪಡುವಂತೆ ಮಾಡಿದನು. ಅವನು ಮೂರು ಬಾಣದಿಂದ ದುರ್ಯೋಧನನ ಎದೆಗೆ ಹೊಡೆದು, ಶಕುನಿಯ ಧನುವನ್ನು ಮುರಿದನು : 'ನಿನಗೇಕೆ ಧನುಸ್ಸು ? ಪಗಡೆಕಾಯಿಗಳನ್ನು ಹಿಡಿ ಹೋಗು ! ಹೇಡಿ !' ಎಂದು ಮತ್ತೆ ಅವನ ಮುಂಗೈಗಳಿಗೆ ಎರಡು ಬಾಣಗಳಿಂದ ಹೊಡೆದನು. ಅವರು ಒಟ್ಟುಗೂಡಿ, ಶರಜಾಲವನ್ನು ಬಿಡಲು ಅವನ್ನೆಲ್ಲ ತುಂಡರಿಸಿ, ಯುಯುಧಾನನು, ದುರ್ಯೋಧನನ ಸಾರಥಿಯನ್ನು ಸಂಹರಿಸಿದನು. ಸೂತನಿಲ್ಲದ ಕುದುರೆಗಳು ಓಡಿ ಹೋಗಲು, ಕುರುರಾಜನು ಗಾಳಿಗೆ ಚೆದರುವ ಮೇಘದಲ್ಲಿದ್ದ ಅಂಗಾರಕನಂತೆ ಕಂಗೊಳಿಸಿದನು.

ಸಾತ್ಯಕಿಯು ಶತ್ರುಕರದಿಂದ ವಿದ್ಧನಾಗದಂತೆ ತನ್ನ ಸಾರಥಿಯನ್ನು ರಕ್ಷಿಸುತ್ತಾ ಅರ್ಜುನನನ್ನು ಸೇರ ಹೊರಟನು. ಅವನನ್ನು ಮುತ್ತಿ, ಶಕ, ಕಾಂಬೋಜ, ಬಾಹ್ಲಿಕ ಸಂಸಪ್ತಕರು ಮೂರುಸಾವಿರ ಸವಾರರು ಅಗ್ನಿಜಾಲೆಗೆ ಬಿದ್ದ ಶಲಭಗಳಂತೆ ನಷ್ಟರಾದರು. ಒಬ್ಬನೇ ಆಗಿದ್ದೂ ಅಷ್ಟು ವೀರಸಹಸ್ರರನ್ನು ಸದೆಬಡಿದನೆಂದರೆ, ಸಾತ್ಯಕಿಯನ್ನೂ, ಅವನ ವಿಕ್ರಮಲೀಲೆಯನ್ನು ವರ್ಣಿಸಲು ನನಗೆ ಅಸದಳವಾಗಿದೆ. ಧೃತರಾಷ್ಟ್ರ ಮಹಾರಾಜ ! ಕೇಳು ! ಅಂಜನ, ವಾಮನ, ಸುಪ್ರತೀಕ, ಮಹಾಪದ್ಮ, ಐರಾವತ, ಕುಮುದ, ಪುಷ್ಪಭದ್ರ, ಸಾರ್ವಭೌಮರೆಂಬ ದಿಗ್ಗಜರಾಜರ ಕುಲದಲ್ಲಿ ಜನಿಸಿ ಬಂದ ಗಜಾನೀಕಗಳಿಂದು ತಮ್ಮ ಮೂಲ ಗಜದರ್ಶನವನ್ನು ಪಡೆಯಲು ಹೋದವು.

ದುರ್ಯೋಧನ ಪ್ರೇರಿತರಾದ ಪಾರ್ವತೀಯರು ಸಾತ್ಯಕಿಯನ್ನು ಶಿಲಾಜಾಲದಿಂದ ಹೊಡೆದು ಕೆಡುಹಲು ಯತ್ನಿಸಿ, ಅವನು ಅವನ್ನು ಕತ್ತರಿಸಿದಾಗ, ಬಂಡೆಗಳ ಕೆಳಗೆ ಸಿಕ್ಕು, ತತ್ತರಿಸಿ ಸತ್ತರು. ಐನೂರು ಶಿಲಾಯುದ್ಧ ವಿಶಾರದರು ಯಮನೂರು ಸೇರಿದರು. ಸಾತ್ಯಕಿಯ ಮುಂದೆ ನಿಲ್ಲಲಾಗದೆ ದುಶ್ಯಾಸನ ಪ್ರಮುಖ ವೀರರು ಹಿಂದಿರುಗಿ ಹೋದರು.

ಸೇನಾ ಮುಖದಲ್ಲಿದ್ದ ಆಚಾರ್ಯನು ಓಡುವ ಸೈನಿಕರನ್ನು ಕಂಡು, ಆಶ್ಚರ್ಯ ಸಂಭ್ರಮನಾಗಿ, ಸಂಭ್ರಮ ಭಯಯುಕ್ತನಾಗಿ ತನ್ನನ್ನು ಸೇರಲು ಬಂದ ದುಶ್ಯಾಸನನಿಗಿಂತೆಂದನು: 'ಯುವರಾಜ! ನಿಲ್ಲು! ಏನಾಯಿತು ಹೇಳು! ಕುರುರಾಜನು ಕುಶಲಿಯೇ ? ಸೈಂಧವನು ಜೀವದಿಂದಿರುವನೇ ? ನೀನೇಕೆ ಸಾತ್ಯಕಿಯನ್ನು ತಡೆಯಲಾರದೆ ಬಂದೆ? ಸಾತ್ಯಕಿಯ ಆಚಾರ್ಯನನ್ನೂ ಅವನ ಆಚಾರ್ಯ ಭೀಮಸೇನನ್ನೂ ಇನ್ನೆಂತು ತಡೆಯುವೆ ? ಷಂಡತಿಲರೆಂದು ಬೈದೆ ! ಅಣಕಿಸಿದೆ ! ದಾಸಿಯಾದೆ, ಕಾಮಚಾರಿಣಿಯಾಗೆಂದು ತಾಯಿಗೆ ಸರಿಯಾದ ಅತ್ತಿಗೆಯನ್ನು ನಿಂದಿಸಿ, ಪರಾಭವಿಸಿದೆ! ಸೀರೆ ಸೆಳೆದ ಪಾಪದ ಫಲವಿನ್ನೂ ಉಣ್ಣಬೇಕಾಗಿದೆ. ಇದು ಅಕ್ಷರಂಗವಲ್ಲ ರಣರಂಗವು. ಎದುರಿಸಬೇಕಾದವನು ಭೀಮಸೇನ, ಧರ್ಮರಾಜನಲ್ಲ. ಆಶೀವಿಷಸಮರಾದ ಪಾಂಡವರನ್ನು ಹೊಡೆದೆಬ್ಬಿಸಿ, ಓಡಿದರೆ ಪರಿಭವದಾವಾನಲವು ಸುಡದೆ ಬಿಡುವುದೇ ? ನಿನ್ನಂತಹ ಸೇನಾನಾಥ, ನಿನ್ನಂತಹ ರಾಜಭ್ರಾತ, ರಣವಿಮುಖನಾಗಿ ಓಡುವಾಗ, ನಮ್ಮಂತಹ ಬಡಬ್ರಾಹ್ಮಣರ ಪಾಡೇನು ? ಪಲ್ಗುಣನ ನಾರಾಚಗಳು ಶರೀರದಿ ಹೋಗದ ಮುನ್ನ, ಭೀಮಸೇನನ ಗದೆಯು ಎದೆಯ ಒಡೆಯದ ಮುನ್ನ, ನಕುಲನ ಖಡ್ಗವು ರುಂಡಹಾರಿಸದ ಮುನ್ನ, ಸಹದೇವನ ಕುಂತ ಪ್ರಹಾರಗಳಿಂದ ನಿನ್ನವರ ಜೀವನ ದುರಂತವಾಗದ ಮುನ್ನ ಧರ್ಮರಾಜನಿಗೆ ರಾಜ್ಯ ಭಾಗ್ಯವನ್ನು ಕೊಟ್ಟು ಸಂಧಿ ಮಾಡಿಕೋ ! ನಿನ್ನ ರಕ್ತವನ್ನು ಕುಡಿವೆನೆಂದು ಪ್ರತಿಜ್ಞೆಗೈದಿರುವನಂತೆ ಭೀಮಸೇನ! ನಿಜವೇ ? ಅವನ ವಿಕ್ರಮವನ್ನಾರಯಿಯರು ? ಅವನ ಪ್ರತಿಜ್ಞೆಯನ್ನು ಭಂಗಪಡಿಸಲಾದರೂ, ಹೋಗಿ ಸಾತ್ಯಕಿಯಿಂದ ಹೋರಾಡು!'.

ಆ ಮಾತಿಗೆ ಮಾರುತ್ತರವೀಯದೆ, ದುಶ್ಯಾಸನನು ಮತ್ತೆ ಸಾತ್ಯಕಿಯನ್ನು ಸೇರಹೋದನು. ಆಚಾರ್ಯನು ಪಾಂಡವ ವಾಹಿನಿಯನ್ನು ಪ್ರವೇಶಿಸಿ ಪ್ರಚಂಡ ಭಂಡನದಿ ದಂಡಪಾಣಿಯನ್ನು ಮೀರಿಸಿದನು. ಅಲ್ಲಿ ವೀರಕೇತುವಿನನ್ನು ಚಿತ್ರಕೇತು, ಸುಧನ್ವ, ಚಿತ್ರವರ್ಮ, ಚಿತ್ರರಥರೆಂಬ ವೀರಕೇತು ಸೋದರರನ್ನು ಸಂಹರಿಸಿದನು. ಧೃಷ್ಟದ್ಯುಮ್ನನು ಕ್ರೋಧವಶನಾಗಿ ಆಚಾರ್ಯನ ಎದೆಗೆ ಭಲ್ಲವನ್ನು ನಾಟಿಸಿದನು.

ದ್ರೋಣನು ಮೂರ್ಛೆ ಬಂದಂತಾಗಿ ಸುಮ್ಮನೆ ಕೂತಿರಲು, ಪಾಂಚಾಲನು ಅವನ ರಥಕ್ಕೆ ಹಾರಿ, ಖಡ್ಗದಿಂದ ಆತನ ತಲೆಯನ್ನು ಹೊಡೆಯಬೇಕೆಂದಿದ್ದನು. ದ್ರೋಣ ಎಚ್ಚತ್ತು ವಿತಸ್ತಿಕೆಗಳೆಂಬ ಸಣ್ಣ ಬಾಣಗಳಿಂದ ಅವನನ್ನು ಗಾಯಗೊಳಿಸಿದನು. ಧೃಷ್ಟದ್ಯುಮ್ನನು ಹಿಂದಿರುಗಿ ಹೋಗಿ, ತನ್ನ ರಥವನ್ನೇರಿ, ದ್ರೋಣನನ್ನು ಬಾಣಶತದಿಂದ ಹೊಡೆದನು. ಶಕ್ರಪ್ರಹ್ಲಾದರ ಕಾಳಗದಂತೆ ಗುರುಶಿಷ್ಯರ ಯುದ್ಧವು ಕಡು ಘೋರವಾಯಿತು. ದ್ರೋಣನು ಸೂತನನ್ನು ಕೆಡುಹಲು, ಪಾಂಚಾಲ ರಾಜಪುತ್ರನು ಆತನನ್ನೆದುರಿಸಿ ನಿಲ್ಲಲಾರದೆ ರಣರಂಗದಿಂದ ತೊಲಗಿದನು.

ಅನೇಕ ರಥಿಕರೊಡನೆ, ದುಶ್ಯಾಸನನು ಶೈನೇಯನನ್ನು ಮುತ್ತಿ ಆರು ನಿಶಿತ ಬಾಣಗಳಿಂದ ಹೊಡೆದನು, ಮತ್ತು ಶರಶತದಿಂದ ಅವನ ಶರೀರವನ್ನು ಮುಚ್ಚಿದನು. ಸಾತ್ಯಕಿಯು ಸಿಟ್ಟಾಗಿ, ಬಾಣಜಾಲದಿಂದ ತುರಗ, ಸೂತ, ರಥಿಕರನ್ನು ಮುಚ್ಚಲು

ಅವರೆಲ್ಲರೂ ಮತ್ತೆ ಪಲಾಯನಗೈದರು. ದುಶ್ಶಾಸನನು ಶಕ್ತಿಯನ್ನೊಗೆಯಲು ಅವನದನ್ನು ಮುರಿದನು. ಅಗ್ನಿಶಿಖಾಕಾರ ನಾರಾಚಗಳಿಂದ ಅವನನ್ನು ಪೀಡಿಸಿದನು. ನಾಲ್ಕರಿಂದ ಕುದರೆಗಳನ್ನು ಕೊಂದನು, ಒಂದು ಬಾಣದಿಂದ ಧ್ವಜವನ್ನು ಕೆಡಹಿದನು. ಮತ್ತೊಂದರಿಂದ ಸಾರಥಿಯನ್ನು ಕೊಂದು, ಅವನನ್ನೂ ಕೆಡಹಲೆಣಿಸಿ, ಮತ್ತೆ ಭೀಮಸೇನನ ಪ್ರತಿಜ್ಞೆಯನ್ನು ನೆನೆದು, ಅವನನ್ನು ಕೊಲ್ಲದೆ, ತ್ರಿಗರ್ತರಾಜನು ರಥವನ್ನೇರಿ ಹೋಗಲು ಬಿಟ್ಟನು.

ರಾಜನ್ ! ನಿನ್ನ ವ್ಯೂಹದಂತಹ ಸೇನಾವ್ಯೂಹವಿಲ್ಲ ! ದ್ರೋಣನಂತಹ ಸೇನಾನಾಯಕನಿಲ್ಲ. ನಿನಗೆ ಸಹಾಯಕರಾಗಿ ಬಂದಿದ್ದ ರಾಜರಂತಹ ವೀರರಿಲ್ಲ. ಆದರೂ ಏಕವೀರನಾಗಿ ಸಾತ್ಯಕಿಯು, ವ್ಯೂಹವನ್ನೊಡೆದು, ರಾಜರನ್ನು ಕೆಡಹಿ, ದ್ರೋಣನನ್ನು ಗೆದ್ದು ಹೋದನೆಂದರೆ ದೈವನಿಗ್ರಹವಿಲ್ಲಿ, ದೈವಾನುಗ್ರಹವಲ್ಲಿ ಎಂದು ತಿಳಿ ! ಧರ್ಮರಾಜನನ್ನು ಹಿಡಿದು ಕುರುರಾಜನಿಗೆ ಒಪ್ಪಿಸಲು ಹವಣಿಸುವ ದ್ರೋಣನು ಮುನ್ನುಗ್ಗಿ ಬರದಂತೆ ಭೀಮಾದಿ ವೀರರು ಆತನನ್ನು ತಡೆದು ಕಾದುತ್ತಿದ್ದರು.

ದುರ್ಯೋಧನನು ಭೀಮನನ್ನು ಹತ್ತು ಬಾಣಗಳಿಂದಲು, ಮೂರ್ರೈದು ಶರಗಳಿಂದ ನಕುಲ ಸಹದೇವರನ್ನು, ಆರಾರು ನಾರಾಚಗಳಿಂದ ವಿರಾಟ ದ್ರುಪದರನ್ನು, ನೂರರಿಂದ ಶಿಖಂಡಿಯನ್ನು, ಇಪ್ಪತ್ತರಿಂದ ಧೃಷ್ಟದ್ಯುಮ್ನನನ್ನು, ಮಿಕ್ಕವರನ್ನು ನೂರಾರು ಬಾಣಗಳಿಂದ ಹೊಡೆದು ಸಿಂಹನಾದ ಮಾಡಿದನು. ಅದನ್ನು ಕಂಡು, ಅವನ ಧನಸ್ಸು ಸದಾಮಂಡಲೀ ಭೂತವಾಗಿರುವುದನ್ನು ಕಂಡು, ಸುಖವರ್ಧಿತ ಸುಯೋಧನನ ನಾಮವನ್ನು ಅಸಾರ್ಥಕವೆಂದವರು, ತಮ್ಮ ಮಾತನ್ನು ತಾವೇ ನುಂಗಿ ಬೆರಗಾಗಿ ನೋಡುತ್ತಿದ್ದರು. ಧರ್ಮರಾಜನು ಅವನ ಧನುವನ್ನು ಮುರಿದನು. ರಾಜನ ಮೇಲೇರಿ ಬರುವ ಪಾಂಚಾಲರನ್ನು ದ್ರೋಣನು ತಡೆದು, ಕುಡಿ ಬಾಣಗಳಿಂದ ಅವರನ್ನು ಕಡೆಗಾಣಿಸಿದನು. ಇಂತು ದ್ವಾದಶಿಯ ಮಧ್ಯಾಹ್ನವು ಕಳೆದು, ಅಪರಾಹ್ಣವಾಯಿತು.

ವರಯೋಧರನ್ನು ಹುಡುಕುತ್ತಾ ಬರುವ ದ್ರೋಣನನ್ನು ಬೃಹತ್‌ಕ್ಷತ್ರನೆಂಬ ಕೇಕಯರಾಜ ಶ್ರೇಷ್ಠನು ತಡೆದು, ಮೇಘವು ಮಳೆಯನ್ನಂತೆ, ಬಾಣವರ್ಷವನ್ನು ಸುರಿಸುತ್ತಾ ಮುತ್ತಿದನು. ದ್ರೋಣನು ಹದಿನೈದು ವಿಷದಿಗ್ಧ ಬಾಣಗಳಿಂದ ಹೊಡೆಯಲು, ಬೃಹತ್‌ಕ್ಷತ್ರನು ಅವನ್ನೆಲ್ಲ ಖಂಡಿಸಿ, ಐದು ಬಾಣಗಳಿಂದ ಆಚಾರ್ಯನನ್ನು ಪೀಡಿಸಿದನು. ದ್ರೋಣ ಬಾಣಗಳನ್ನು ಹಾದಿಯಲ್ಲೇ ಖಂಡಿಸುವ ಕೇಕಯನ ರಣಪಾಂಡಿತ್ಯವನ್ನು ಮೆಚ್ಚಿ ವೀರರು ನಿಬ್ಬೆರಗಾಗಿ ನೋಡುತ್ತಿದ್ದರು. ದ್ರೋಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು, ಕೇಕಯನು ಪ್ರತಿಬ್ರಹ್ಮಶರದಿಂದ ಅದನ್ನು ಶಾಂತಪಡಿಸಿದನು. ದ್ರೋಣನು ನಿಶಿತ ಶರದಿಂದ ಅವನ ಕವಚವನ್ನು ಸೀಳಿದನು. ಬೃಹತ್‌ಕ್ಷತ್ರನು ಕುಪಿತನಾಗಿ ಎಪ್ಪತ್ತು ಬಾಣಗಳಿಂದ ಆತನನ್ನು ಪೀಡಿಸಿದನು. ಆಚಾರ್ಯನು ಕಾಲಯಮನಂತಾಗಿ, ಅಶ್ವಗಳನ್ನು ಕೊಂದು, ಧ್ವಜವನ್ನು ಕೆಡಹಿ, ಸೂತನನ್ನು ಸಂಹರಿಸಿ, ನಿಶಾತಭಲ್ಲದಿಂದ ಕೇಕಯನ ಶಿರವನ್ನು ಖಂಡಿಸಿ ಕೆಡಹಿದನು.

ಅದನ್ನು ಕಂಡು ಧೃಷ್ಟಕೇತುವು ಕುಪಿತನಾಗಿ, ದ್ರೋಣನನ್ನು ಅರವತ್ತು ಶರಗಳಿಂದ ಹೊಡೆದನು ! ಮತ್ತೇಳರಿಂದ ಮಲಗಿದ್ದ ವ್ಯಾಘ್ರವನ್ನು ತಿವಿದಂತೆ, ಪೀಡಿಸಿದನು. ದ್ರೋಣನು ಕಿಡಿಗಾರಿ, ಅವನ ಧನುವನ್ನು ಮುರಿದು, ಕುದರೆಗಳನ್ನು ಕೊಂದನು ! ಒಂದರಿಂದ ಸಾರಥಿಯನ್ನು ಕೊಂದು, ಇಪ್ಪತ್ತೈದು ಶರಗಳಿಂದ ಚೇದಿರಾಜನನ್ನು ಹೊಡೆದನು. ಅವನ ರಥದಿಂದಿಳಿದು, ಗದೆಯನ್ನು ಬೀಸಿ ಎಸೆಯಲು, ಆಚಾರ್ಯನು ಅದನ್ನು ತುಂಡರಿಸಿದನು ! ಶಕ್ತಿಯನ್ನೊಗೆಯಲು ಅದನ್ನೂ ವ್ಯರ್ಥಗೊಳಿಸಿದನು. ತೋಮರವನ್ನೊಗೆಯಲು ಅದನ್ನು ಪುಡಿ ಮಾಡಿದನು. ಒಂದು ತೀಕ್ಷ್ಣ ವಿಶಿಖದಿಂದ ಹೊಡೆದಾಗ ಅದು ಧೃಷ್ಟಕೇತುವಿನ ಎದೆಯನ್ನು ಪದ್ಮವನವನ್ನು ಹೊಗುವ ಹಂಸಿಯಂತೆ, ಹೊಕ್ಕು ಅವನನ್ನು ಸಂಹರಿಸಿತು. ಸಿಟ್ಟಿನಿಂದ ಏರಿಬಂದ ಅವನ ಮಗನನ್ನೂ ಕೊಂದು, ಕೃತಾಂತನಂತೆ ಸಿಡಿದು ಬಡಿಯುವ ದ್ರೋಣನ ಬಾಣಗಳು ತನ್ನಾಮವನ್ನು ಸಾರುತ್ತಾ ಶತ್ರುಶರೀರಗಳಲ್ಲಿ ಅಂಕಿತವಾದವು. ದ್ರೋಣ ವಿಕ್ರಮವನ್ನು ತಡೆಯಲಾರದೆ, ಪಾಂಡವಸೇನೆಯು ಓಡತೊಡಗಲು, ಅದರ ಕೊಲಾಹಲವು ಧರ್ಮ ಭೀಮರ ಕರ್ಣತಾಡಿತವಾಯಿತು.

## ೧೦. ಭೀಮವಿಕ್ರಮ - ಸಂಯಮ

ಸಂಜಯನು ಹದಿನಾಲ್ಕನೆಯ ದಿನದ ಯುದ್ಧವಿವರವನ್ನು ಧೃತರಾಷ್ಟ್ರನಿಗೆ ನಿರೂಪಿಸಿದನು:

ಚೇದಿ, ಸೃಂಜಯ, ಪಾಂಚಾಲರು ರಣರಂಗದಿಂದ 'ಭೀಮಸೇನ ! ಮಹಾಬಾಹೋ ! ದ್ರೋಣನಿಂದ ನಮ್ಮನ್ನು ಕಾಪಾಡು !' ಎಂದು ಚೀರುತ್ತಾ ಓಡಿದರು. ನನ್ನೂರು ವರ್ಷಗಳ, ಬಿಳಿಕೂದಲಿನ, ಧವಳವಸನದ, ಆಚಾರ್ಯನ ಮೂರ್ತಿಯು ಬಾಣಾಗ್ನಿಯನ್ನು ಕಾರುತ್ತಾ ಬರುವಾಗ, ಅದನ್ನೆದುರಿಸಿದ ಕ್ಷತ್ರಧರ್ಮನೇ ಮುಂತಾದ ಪಾಂಚಾಲ ರಾಜಕುಮಾರರು ಭಸ್ಮೀಭೂತರಾದರು. ದ್ರೋಣನು ಚೇಕಿತಾನನನ್ನು ಹತ್ತಾರು ಬಾಣಗಳಿಂದ ಪೀಡಿಸಿ, ಅವನ ಸೂತನನ್ನು ಕೊಂದನು. ಆಗ ಕುದುರೆಗಳು ನಿಯಂತನಿಲ್ಲದೆ ಓಡಿಹೊದವು, ದ್ರುಪದನು ಅಭೀತನಾಗಿ ಚರಿಸುವ ದ್ರೋಣನ ವಿಕ್ರಮವನ್ನು ಸಹಿಸದೆ, 'ವೇತನ ಗೌರವಾದಿ ಲೋಭದಿಂದ ವಿಧರ್ಮರತನಾಗಿ ಈ ವಿಪ್ರನು ವ್ಯಾಘ್ರವು ಕ್ಷುದ್ರ ಮೃಗಗಳನ್ನಂತೆ, ಪಾಂಚಾಲ ಸೈನಿಕರನ್ನು ಸಂಹರಿಸುತ್ತಿರುವನು. ಯಾವನ ಪ್ರೀತಿಗಾಗಿ ಇವನೀ ಹಿಂಸಾವ್ಯಾಪಾರವನ್ನು ನಡೆಸಿರುವನೋ, ಆ ದುರ್ಯೋಧನನಿಗೆ ಸ್ಥಿರನರಕಗಳು ಕಾದಿವೆ' ಎಂದು ಚಿಂತಿಸಿ, ರೋಷದಿಂದ ಆಚಾರ್ಯನನ್ನು ಮುತ್ತಿ ಭಯಂಕರ ರಣನಿರತನಾದನು.

ಪ್ರಳಯ ಕಾಲದಲ್ಲಂತೆ ಜನಕ್ಷಯವಾಗುತ್ತಿರಲು, ತನ್ನವರು ದ್ರೋಣವಿಕ್ರಮಾಗ್ನಿಗೆ ಹೆದರಿ ಓಡುತ್ತಿರಲು ನೋಡಿ, ಪಾಂಚಜನ್ಯದ ಭೀಷಣ ಘೋಷಣವನ್ನು ಮತ್ತೆ ಮತ್ತೆ ಕೇಳಿ, ಧರ್ಮರಾಜನು ಚಿಂತಾಕ್ರಾಂತನಾದನು. ಅರ್ಜುನ ಕೃಷ್ಣರ ವೃತ್ತಾಂತವನ್ನು ತಿಳಿದು

ಬರಲು ಕಳಿಸಿದ ಸಾತ್ಯಕಿಯೂ ಹಿಂದಿರುಗದಿರಲು ಮತ್ತಿಷ್ಟು ಹೆದರಿ, 'ಇನ್ನು ಸಾತ್ಯಕಿಯನ್ನು ಹುಡುಕಿ ಬರಲು ಯಾರನ್ನು ಕಳುಹಿಸಲಿ ? ಏನು ಮಾಡಲಿ ? ಸಾತ್ಯಕಿಯನ್ನು ತಿಳಿಯಲು ಯತ್ನಿಸದೆ, ಅರ್ಜುನನನ್ನು ಹುಡುಕಲು ಕಳಿಸುವುದು ತಪ್ಪಾಗುವುದು. ತಮ್ಮನನ್ನು ಅನ್ವೇಷಿಸಿ, ಸಾತ್ಯಕಿಯ ಯೋಗ ಕ್ಷೇಮವನ್ನು ವಿಚಾರಿಸಲಿಲ್ಲವೆಂಬ ಲೋಕಾಪವಾದವೂ ಬರುವುದು. ದೂರ ದೂರದಲ್ಲಿರುವ ಪಾರ್ಥಶೈನೇಯರನ್ನು ಹುಡುಕಿ, ಸಹಾಯವು ಬೇಕಾಗಿದ್ದರೆ ಅದು ನಿಂತು, ಅವರ ಕ್ಷೇಮ ವಿಕ್ರಮಗಳನ್ನು ನನಗೆ ತಿಳಿಸುವ ಬಲಧೈರ್ಯ ವಿಕ್ರಮವೀರ್ಯ ಗುಣಭರಿತನೆಂದರೆ ನಮ್ಮ ಭೀಮಸೇನನೇ ಸರಿ ! ನನ್ನಲ್ಲಿ ಗೌರವದಿಂದಲು, ಗುರುಪ್ರೀತಿಯಿಂದಲು -ನನ್ನ ಮಾತಿಗೆ ಬದುಲಾಡಲಾರದೆ ಹೋಗಿರುವ ಸಾತ್ಯಕಿಯನ್ನು ಹುಡುಕಿ ಬರಲು ಭೀಮನನ್ನೇ ಕಳಿಸುವೆನು. ಭೀಮಸೇನನಿಗೆ ಸಾಧಿಸಲಾಗದ ಸಾಹಸವಿಲ್ಲ; ಗೆಲ್ಲಲಾಗದ ವೀರರಿಲ್ಲ; ಹೋಗಲಾಗದ ವ್ಯೂಹವಿಲ್ಲ; ಪೃಥಿವಿಯ ಸರ್ವಧನುರ್ಧಾರಿ ವೀರರನ್ನು ತಾನೊಬ್ಬನೇ ಎದುರಿಸಿ, ಕೇವಲ ಬಾಹುಬಲದಿಂದ ಜಯಿಸಬಲ್ಲ ಆಹವ ಮಲ್ಲನು ನನ್ನವೃಕೋದರನು. ಅವನ ಬಲವನ್ನಾಶ್ರಯಿಸಿ ಅನೇಕ ಕಷ್ಟಗಳಿಂದ ಪಾರಾಗಿರುವೆವು. ಭೀಮಸೇನನಿಂದ ಸನಾಥರಾಗುವರು ಪಾರ್ಥಶೈನೇಯರು. ಅರ್ಜುನನನ್ನು ಶ್ರೀಕೃಷ್ಣನು ರಕ್ಷಿಸುತ್ತಿರುವನಾದುದರಿಂದ ಅವನ ಚಿಂತೆ ಅಷ್ಟಿಲ್ಲ. ಆದರೂ ಸಾತ್ವತನ ರಕ್ಷೆಗೂ ನನ್ನ ಮನಸ್ಸಮಾಧಾನಕ್ಕಾಗಿಯೂ ಭೀಮನನ್ನೇ ಕಳಿಸಿಕೊಡುವೆನು?

ಇಂತು ಚಿಂತಿಸಿ ಧರ್ಮಜನು ಭೀಮಸೇನನನ್ನು ಸಮೀಪಿಸಿ, ಅವನಿಗಿಂತೆಂದನು: 'ಭೀಮಸೇನ ! ಅರ್ಜುನನ ಶಂಖಧ್ವಾನವು ಕೇಳಬರದಾಗಿದೆ. ದೇವಾಸುರ ಗಂಧರ್ವರನ್ನು ಏಕವೀರನಾಗಿ ಗೆದ್ದವನ ಸದ್ದು ಅಡಗಿದುದು ಕಂಡು ಆಶ್ಚರ್ಯವಾಗಿದೆ. ಪಾಂಚಜನ್ಯರವದಂತೆ ದೇವದತ್ತರವವೂ ಕೇಳಬರದೆ ಎದೆಗುಂದಿರುವೆನು. ಧನಂಜಯನು ಹತನಾಗಿರಲು, ಜನಾರ್ದನನೇ ತಾನಾಗಿ ಯುದ್ಧಕ್ಕೆ ಸನ್ನದ್ಧನಾದನೇ ? ಯಾವನ ವೀರ್ಯವನ್ನವಲಂಬಿಸಿ ಪಾಂಡವರು ನಿಂತಿರುವರೋ, ಯಾವನು ಅಮರರಿಗೆ ಸಹಸ್ರಾಕ್ಷನಂತೆ ನಮಗೆ ರಕ್ಷಕನೋ, ಅಂತಹ ಅರ್ಜುನನ ಗಾಂಡೀವವೇಕೆ ಸುಮ್ಮನಿದೆ ? ದೇವದತ್ತವೇಕೆ ಮೌನಧರಿಸಿದೆ ? ಶ್ಯಾಮವರ್ಣನು, ತರುಣನು, ವಿಶಾಲವಕ್ಷನು, ಕಮಲಾಕ್ಷನು, ಮಹಾರಥವರನು, ಗಾಂಡೀವಧರನು, ಗುಡಾಕೇಶನು, ಪ್ರಿಯಹೃಷೀಕೇಶನು, ಮತ್ತದ್ವಿರದವಿಕ್ರಮನು, ಸುತ್ಯಗುಣಸುಕ್ರಮನು, ಬಂಧುಪ್ರೀತಿವರ್ಧನನು, ಶತ್ರುಮರ್ದನನು ಆದ ಪಾರ್ಥನ ಸುಳಿವು ಕಾಣದೆ- ಮತ್ತು ನಾನಾಗಿ ಕಳಿಸಲು ಮಕರವು ಸಾಗರವನ್ನಂತೆ ಕುರುಸೇನೆಯಲ್ಲಿ ಪ್ರವೇಶಿಸಿದ ಯದುವೀರ ಸಾತ್ಯಕಿಯ ಕ್ಷೇಮವನ್ನು ತಿಳಿಯದೆ ಚಿಂತೆ ಪಡುತ್ತಿರುವೆನು. ಪುರುಷವ್ಯಾಘ್ರ ! ಮೊದಲು ಸಾತ್ವತನಿಗೆ ಸಹಾಯವಾಗು ! ಆಮೇಲೆ ಅರ್ಜುನನನ್ನು ಅನ್ವೇಷಿಸು ! ಅಣ್ಣನೆಂದು ನನ್ನ ಮಾತನ್ನು ನಡೆಸಿಕೊಡು ! ನನ್ನ ಮನಶ್ಶಲ್ಯವನ್ನು ದೂರಮಾಡು ! ಅವರೀರ್ವರನ್ನು ಶ್ರೀಕೃಷ್ಣನನ್ನು ಕಂಡೊಡನೆ, ಅವರ ಕ್ಷೇಮವೆನಗೆ ತಿಳಿಯುವಂತೆ ಸಿಂಹ-ನಾದ ಮಾಡು!'

ಭೀಮಸೇನನು 'ಅಣ್ಣ! ಅರ್ಜುನನಿಗೇಕೆ ಹೆದರುವೆ ? ಬ್ರಹ್ಮೇಶಾನೇಂದ್ರವರುಣ ರೇರಿದ ರಥದಲ್ಲಿ ಕೂತು, ಬ್ರಹ್ಮೇಶಾನಾದಿ ವಂದ್ಯನಾದ ಗೋವಿಂದನ ಬೆನ್ನಿಗೆ ಆತು, ಗಾಂಡೀವವನ್ನು ಪಿಡಿದು, ಚಿತ್ರರಥನಿತ್ತ ಶ್ವೇತವಾಹನಗಳಿಂದ ಮುಂದೆ ಸಾಗುವ ಸಂಕ್ರಂದನನಂದನನಿಗೆ ಭಯವಿಲ್ಲ, ಆದರೂ ನಿನ್ನ ಆದೇಶವನ್ನು ಶಿರದಿ ವಹಿಸಿ, ಆ ದಿಶೆಗೆ ಹೊರಡುತ್ತಿರುವೆನು. ಅವರನ್ನು ಕಂಡೊಡನೆ ಸಿಂಹನಾದವನ್ನು ಬಿಡದೆ ಮೂರು ಸಲ ಮಾಡಿ ನಿನಗೆ ತಿಳಿಸುವೆನು' ಎಂದು ದಿವ್ಯಸ್ಯಂದನವನ್ನು ತರಿಸಿ, ಧೃಷ್ಟದ್ಯುಮ್ನನಿಗಿಂತೆಂದನು: 'ಪಾರ್ಷತ! ದ್ರೋಣಾಚಾರ್ಯನ ವೀರ್ಯವು ನಿನಗೆ ಅಪರಿಚಿತವಲ್ಲ. ಅವನ ಪ್ರತಿಜ್ಞೆಯಂತೆ ಧರ್ಮಜನನ್ನು ಹಿಡಿಯಲು ಬರುವನು, ಬಿಡನು. ಮುಖ್ಯಕರ್ತವ್ಯವೆಮಗೆ ರಾಜರಕ್ಷಣೆ ! ಅದನ್ನೀಗ ನಿನ್ನಲ್ಲಿ ವಹಿಸಿಕೊಟ್ಟು ರಾಜಾಜ್ಞೆಯನ್ನು ಶಿರದಲ್ಲಿಟ್ಟು ಅರ್ಜುನ ಸಾತ್ವತರನ್ನು ಕಂಡು ತಿಳಿಸಲು ಭಂಡನ ಭೂಮಿಯನ್ನು ಪ್ರವೇಶಿಸುತ್ತಿರುವೆನು. ನೀನಿಲ್ಲಿ ಅಪ್ರಮತ್ತನಾಗಿ ಅಣ್ಣನನ್ನು ಆಚಾರ್ಯಕರಗತನಾಗದಂತೆ ಕಾಪಾಡುತ್ತಿರು !' ಎಂದನು. ಪಾರ್ಷತನು 'ಭಾವ ! ಭಯವಿಲ್ಲ ಹೋಗು ! ಧೃಷ್ಟದ್ಯುಮ್ನನು ಜೀವದಿಂದಿರುವವರೆಗೂ ಆಚಾರ್ಯನಲ್ಲ- ಸುರಾಸುರರೂ ಧರ್ಮರಾಜನ ಚೇಲಾಂಚಲದ ನೆರಳನ್ನೂ ಮುಟ್ಟಲಾರರೆಂದು ತಿಳಿ' ಎಂದು ಭರವಸೆ ಇತ್ತನು.

ಭೀಮಸೇನನು ಅಣ್ಣನಿಗೆ ವಂದಿಸಿ, ಅವನು ಪ್ರೀತಿಯಿಂದ ಕರೆದಪ್ಪಿ ತಲೆಮೂಸಿ, ಹರಸಿ ಕಳಿಸಲು, ವಿಪ್ರರಿಗೆ ನಮಿಸಿದನು. ಅವರ ಆಶೀರ್ವಚನಗಳನ್ನಾಲಿಸುತ್ತಾ ಉರಿವ ಜ್ವಾಲೆ, ಗೋವು, ಹಿರಣ್ಯ, ದೂರ್ವಾ, ಗೊರೋಚನ, ಅಮೃತ ಜಲಕುಂಭ, ಅಕ್ಷತಗಳೆಂಬ ಅಷ್ಟಮಂಗಳ ಸೂಚಕಗಳನ್ನು ಅನಾಯಾಸವಾಗಿ ಪೊಂದಿ, ಸ್ಯಂದನವನ್ನೇರಿ, ಗೋವಿಂದನನ್ನು ನೆನೆದು ವಂದಿಸಿದನು. ಕೈರಾತಕ ಮಧುವನ್ನು ಸೇವಿಸಿ, ಮಧುಕ್ಷೀಬವಾದ ಮದ್ದಾನೆಯಂತೆ ಮೈಪೆರ್ಚಿಸಿ, ರಕ್ತಾಂತ ಲೋಚನನು, ಗತಸಮಸ್ತಯೋಚನನು ಆದ ಭೀಮಸೇನನು, ಅಂಗದ ತಲತ್ರಾಣ ಕವಚಭೂಷಣಗಳಿಂದ, ಮಿಂಚಿನ ಸಾಲಿನಿಂದ ಮೇಘಮಾಲೆಯಂತೆ ಪ್ರಕಾಶಿಸಿದನು. ಪೀತರಕ್ತವಸನಗಳನ್ನುಟ್ಟು ಮದುಮಗನಂತೆ ನಗುತ್ತಾ ಹಗೆಯನ್ನು ಸಿಗಿಯಲು ಹೋಗುವ ಭೀಮನನ್ನು ಕಂಡು ಪಾಂಡವ ವೀರರು ಜೀಜೀಕಾರಮಾಡಿ, ಅನುಸರಿಸಿದರು. ಪಾಂಚಜನ್ಯ ವಿರಾವವು ಮತ್ತೆ ಕೇಳಬಂದಾಗ, ಭೀತನಾಗಿ 'ತ್ವರೆಮಾಡು' ಎಂದು ಬೇಡುವ ಧರ್ಮಜನನ್ನು ಆಶ್ವಾಸಿಸಿ, ವೃಕೋದರನು ಪೌಂಡ್ರ ಶಂಖವನ್ನೂದಿದನು ! ಸಿಂಹನಾದವನ್ನೂ ಮಾಡಿದನು.

ವಿಶೋಕನು ಸಾರಥಿಯಾಗಿ ನಡೆಸಲು ಕುದುರೆಗಳು ದಿವ್ಯಜಾತಿಗೆ ತಕ್ಕಂತೆ ಆಕಾಶದಿ ಹಾರುವಂತೆ ಓಡಿದವು. ಟಂಕಾರ ಸಿಂಹನಾದಗಳಿಂದ ಪರ ವೀರರ ಎದೆ ಝುಲ್ಲೆಂದಿತು. ವಾಹನಗಳು ಮೂರ್ಛೆ ಬಿದ್ದವು; ಶಕೃನ್ಮೂತ್ರಗಳನ್ನು ಬಿಟ್ಟು ಕೆಳಗುರುಳಿದವು. ಸೈನಿಕರು ದಿಕ್ಕುಪಾಲಾಗಿ ಓಡಿಹೋದರು. ಇಂದ್ರನಂತೆ ಬರುವ ಭೀಮನ ಹಿಂದೆ, ಅಮರರಂತೆ ಅನೇಕ ಪಾಂಡವ ವೀರರಥಿಕರು ತೆರಳಿದರು.

ಭೀಮಸೇನನ ಭೀಮ ವೇಗವನ್ನು ಸಹಿಸದೆ ಚಿತ್ರಸೇನ, ದುಶ್ಶಲ, ಕುಂಡಭೇದಕ, ವಿವಿಂಶತಿ, ದುರ್ಮುಖ, ದುಸ್ಸಹ, ವಿಕರ್ಣ ಶಲ, ವಿಂದಾನುವಿಂದ (ಕೌರವ), ಸುಮುಖ, ದೀರ್ಘಬಾಹು, ಸುದರ್ಶನ, ವೃಂದಾಕರ, ಸುಹಸ್ತ ಸುಷೇಣ, ದೀರ್ಘಲೋಚನ, ಅಭಯ, ರೌದ್ರಕರ್ಮ ಸುವರ್ಮ ದುರ್ವಿಮೋಚನ ಎಂಬುವ ಕೌರವ ರಥಿವರರು ಬಂದು ಮುತ್ತಿ ಶರವರ್ಷದಿಂದ ಮುಚ್ಚಿದರು. ಭೀಮಸೇನನು ಆನೆಯು ಶಲಭಗಳನ್ನಂತೆ ಅವರನ್ನು ಅವರ ಬಾಣಜಾಲವನ್ನು ಲೆಕ್ಕಿಸದೆ, ಅತಿವೇಗದಿಂದ ದಾಟಿ ಹೋದನು. ಬಿಡದೆ ತಡೆದ ಗಜಾನೀಕವನ್ನು ಪುಡಿಮಾಡಿದನು.

ಉಕ್ಕೇರುವ ಉದಧಿಯನ್ನು ವೇಲೆಯಂತೆ, ಆಚಾರ್ಯನು ಭೀಮನನ್ನು ತಡೆದು ಒಂದು ನಿಶಿತ ಬಾಣವನ್ನು ಲಲಾಟದಲ್ಲಿ ನಾಟಿಸಿದನು. ಉರ್ಧ್ವರಶ್ಮಿಯಾದ ದಿವಾಕರನಂತೆ ಕಂಗೊಳಿಸಿದ ಭೀಮನು ಆ ನಾರಾಚವನ್ನು ಕಿತ್ತೊಗೆದು, ಕಾರುವ ರಕ್ತವನ್ನು ಬೆವರನ್ನಂತೆ ಒರಿಸಿ, ನಗುತ್ತಾ, ದ್ರೋಣನನ್ನು ನಮಿಸಿ, ಮುಂದೆ ಸಾಗಲು ಹವಣಿಸಿದನು. ದ್ರೋಣನು, 'ಭೀಮಸೇನ ! ನನ್ನನ್ನು ಗೆಲ್ಲದೆ ಶತ್ರುಸೇನೆಯನ್ನು ಹೋಗಲಾಗದು ತಿಳಿ ! ಶಿಷ್ಯನೆಂಬ ವಾತ್ಸಲ್ಯದಿಂದ ಅರ್ಜುನನನ್ನು ಬಿಟ್ಟೆನು. ಅವನ ಶಿಷ್ಯನು ನನ್ನ ಪ್ರಶಿಷ್ಯನೆಂಬ ಕರುಣೆಯಿಂದ ಸಾತ್ಯಕಿಯನ್ನೂ ಬಿಟ್ಟೆನು. ಅವರಂತೆ ತಲೆಬಾಗದೆ ಸೇನಾಪ್ರವೇಶಕ್ಕೆ ಅನುಮತಿ ಇಲ್ಲ. ನಿಂತು ಕಡಿದಾಡು ! ಗೆದ್ದು ಮುಂದೆ ಹೋರಾಡು !' ಎಂದನು.

ಭೀಮನು ಭಯವಿಲ್ಲದೆ, ಕಣ್ಣು ಕೆಂಪಾಗಿಸಿ 'ಏನಂದೆ? ಆಚಾರ್ಯ ! ನಿನ್ನ ಅನುಮತಿಯಿಂದಲ್ಲ, ಅರ್ಜುನನು ಸ್ವವೀರ್ಯದಿಂದ ನಿನ್ನನ್ನು ಗೆದ್ದು ಹೋಗಿರುವನು, ಅವನು ಸುರಾಸುರರಿಗಜೇಯ, ದುರ್ಧರ್ಷನೆಂದು ನಿನಗೆ ಗೊತ್ತಿಲ್ಲದಿಲ್ಲ. ಅವನ ಅಣ್ಣನು ನಾನು ! ಅವನಂತೆ ಮಾನಮಾಡಲು ಇದು ಮನೆಯಲ್ಲ. ಶುದ್ಧಕ್ಷತ್ರಧರ್ಮನಿರತನಾದ ವೃಕೋದರನಿಗೆ ಶತ್ರುವಾಗಲಿ, ಶತ್ರುಪಕ್ಷದ ಬ್ರಹ್ಮಬಂಧುವಾಗಲಿ, ಶ್ರೀಕೃಷ್ಣ ಪ್ರೀತಿಗಾಗಿ, ಸಂಹಾರ್ಯನೇ ಆಗಿರುವನು. ನಮಗೆ ಆಚಾರ್ಯನಾಗಿದ್ದ ನೀನು ಪಿತೃಸಮನೂ ಪೂಜ್ಯನೂ ಅಹುದು. ಅಂತೇ ಅರ್ಜುನನು ಪೂಜಿಸಿರುವನು, ಭಯದಿಂದಲ್ಲ. ಇಂದು ಎಲ್ಲವೂ ವಿಪರೀತವಾಗಿದೆ ಎಂದರೆ ಅದು ಕುರುರಾಜನ ತಪ್ಪು; ಅವನಂತೆ ಕುಣಿವ ನಿಮ್ಮ ತಪ್ಪು. ತಪ್ಪಿಗೆ ತಕ್ಕ ದಂಡವನ್ನೀವ ದೇವನಿಗೆ ದಯೆಯಿಲ್ಲ. ನನಗೂ ಕರುಣೆ - ದುರ್ಜನರಲ್ಲಿ - ಇಲ್ಲ. ನೀನೆನಗೆ ಶತ್ರುವೆಂದು ತಿಳಿದು ಬಂದು, ರಣರಂಗದಲ್ಲಿ ನಿಂದು, ಧನುರಾಚಾರ್ಯತ್ವವನ್ನು ತೋರಬರುವೆ ! ನಾನೂ ನಿನಗೆ ಶತ್ರುವಿನಂತೆ ವರ್ತಿಸಬೇಕಾಗಿದೆ, ಅನುಭವಿಸು !' ಎಂದು ಕಾಲದಂಡದಂತೆ ಪ್ರಚಂಡವಾದ ಗದೆಯನ್ನೆತ್ತಿ ಒಗೆದನು. ಅದರ ವೇಗವನ್ನರಿತ ದ್ರೋಣನು ರಥದಿಂದ ನೆಲಕ್ಕೆ ಧುಮುಕಿ ಉಳಿದನು. ಆ ಗದೆಯು ರಥವನ್ನು ಸೂತತುರಗಗಳನ್ನು ಧ್ವಜವನ್ನು ಚೂರಾಗಿಸಿ, ಭೀಮನ ಕೈ ಸೇರಿತು. ಮಹಾವಾತವು ವೃಕ್ಷಗಳನ್ನಂತೆ, ಭೀಮಗದೆಯು ಬಹು ಭಟರನ್ನು ನಿರ್ಮೂಲಗೊಳಿಸಿತು.

ಆಗ ನಿನ್ನ ಸುತರು ಅಗ್ನಿಜ್ವಾಲೆಯನ್ನು ಪತಂಗಗಳಂತೆ ಭೀಮನನ್ನು ಮುತ್ತಿದರು.

ದುಶ್ಶಾಸನನ ರಥ ಶಕ್ತಿಯನ್ನು ಮುರಿದು ಕೆಡಹಿ, ಭೀಮನು ಕುಂಡಭೇದಿ, ಸುಷೇಣ, ದೀರ್ಘನೇತ್ರರನ್ನು ಮೂರು ಶರಗಳಿಂದ ಕೊಂದನು. ವೃಂದಾರಕನೆಂಬ ನಿನ್ನ ವೀರನಂದನನನ್ನು ಕೊಂದು, ಅಭಯನಿಗೆ ಭಯವಿತ್ತನು. ರೌದ್ರಕರ್ಮನನ್ನು ಯಮಧರ್ಮನಿಗೊಪ್ಪಿಸಿ, ದುರ್ವಿಮೋಚನನ ಜೀವನ ಯೋಚನೆ ಬಿಡಿಸಿದನು. ವಿಂದಾನುವಿಂದರೆಂಬ ನಿನ್ನ ಸುತರನ್ನೊಂದೇ ಸಲ ಕೊಂದು, ಸುವರ್ಮನನ್ನು ಅಸುರ-ಹಿತನನ್ನಾಗಿಸಿದನು. ಸುದರ್ಶನನಿಗೆ ಯಮದರ್ಶನ ಮಾಡಿಸಿ, ಓಡಿ ಹೋಗುವ ನಿನ್ನ ಸುತರನ್ನು ಬಾಣ ಭಲ್ಲಗಳಿಂದ ಕಡಿದು ಕೆಡಹಿದನು. ಬಾಹುಶಬ್ದ ತಲಶಬ್ದಗಳಿಂದ ಅನೇಕ ಯೋಧರು ಎದೆಒಡೆದು ಸತ್ತರು.

ಆಚಾರ್ಯನು ಮತ್ತೆ ಮುತ್ತಲು, ಭೀಮಸೇನನು ಆತನು ನೋಡುತ್ತಿರುವಂತೆ, ನಗುನಗುತ್ತಾ ಸಾವಿರ ಯೋಧರನ್ನು ಗದೆಯಿಂದ ವಧಿಸಿದನು. ಮಳೆಹನಿಗಳನ್ನು ಲೆಕ್ಕಿಸದೆ ನಡೆವ ಭದ್ರಗಜದಂತೆ, ಭೀಮಸೇನನು ಶತ್ರು ಶರವರ್ಷವನ್ನು ನಿರ್ಲಕ್ಷಿಸಿ, ನಿಂತು, ಒಂದೇಟಿಗೆ ನೂರಾರು ಗಜಾಶ್ವಗಳನ್ನು ಸಯೋಧವಾಗಿ ಸಂಹರಿಸಿದನು. ನಿಂತ ಗದೆ ಕೆಳಗಿಳಿದಾಗ, ನೂರಾರು ಜೀವರ ಹೆಸರನ್ನು ಚಿತ್ರಗುಪ್ತನ ಲೇಖನಿ ಬರೆಯುತ್ತಿತ್ತು. ಯಮನ ಹಾಳೆಗಳು ರಕ್ತರಂಜಿತವಾದವು. ವ್ಯಾಘ್ರಗಂಧವನ್ನು ಆಘ್ರಾಣಿಸಿದ ಜಿಂಕೆಗಳಂತೆ, ಕೌರವ ಯೋಧರು ಓಡತೊಡಗಿದರು. ಆಚಾರ್ಯನದನ್ನು ಸಹಿಸದೆ, ಸಿಂಹನಾದವನ್ನು ಮಾಡಿ, ಭೀಮನನ್ನು ಮುತ್ತಿ ಅವನೆದುರಿಗೇ ಪಾಂಡವ ಸೈನಿಕರನ್ನು ಚೆಕ್ಕೆ ಚೂರಾಗಿಸಿದನು. ಭೀಮನು ಕ್ರುದ್ಧನಾಗಿ, ರಥದಿಂದಿಳಿದು, ಕಣ್ಣರೆಮುಚ್ಚಿ ದ್ರೋಣನ ಮೇಲೇರಿ ಬಂದನು. ಭುಜದಿ ತಲೆಬಾಗಿಸಿ, ಎದೆಗೆ ಕೈಗಳಿಟ್ಟು ಮನೋವೇಗದಿಂದ ಭೀಮಸೇನನು-ಮಳೆಯಲ್ಲಿ ಬರುವ ಗೋವೃಷದಂತೆ, ಭಯರಹಿತನಾಗಿ ಶರವರ್ಷವನ್ನು ಪೂಮಳೆಯನ್ನಂತೆ ಲೆಕ್ಕಿಸದೆ, ಬಂದು, ದ್ರೋಣನ ರಥದ ಈಷಾದಂಡವನ್ನು ಪಿಡಿದು ಎತ್ತಿ ಆಕಾಶಕ್ಕೆ ತೂರಿದನು. ಆಚಾರ್ಯನು_ಹಾರಿ 'ಬದಕಿದೆನು ಬಡಜೀವಾ!' ಎನ್ನುತ್ತಾ ವ್ಯೂಹದ್ವಾರವನ್ನು, ದುರ್ಯೋಧನನು ಕಳಿಸಿದ ಮತ್ತೊಂದು ರಥದಿಂದ-ಸೇರಿದನು. ಅಲ್ಲಿ ಧೃಷ್ಟದ್ಯುಮ್ನನು ಆಚಾರ್ಯನನ್ನು ಧರ್ಮರಾಜನನ್ನು ಸೇರಗೊಡದೆ, ಕಡುರಭಸದಿಂದ ತಡೆದು ಹೋರಾಡುತ್ತಿದ್ದನು.

ಭೀಮಸೇನನು ಬರಿಗೈಲಿಯೇ ಸತ್ಯವ್ರತ, ಪುರುಮಿತ್ರ, ಜಯ, ವೃಂದಾರ, ಪೌರವರೆಂಬ ದುರ್ಯೋಧನನ ಐದು ಮಂತ್ರಿವೀರರನ್ನು ಕೊಂದನು. ಆಗ ಮತ್ತೆ ದ್ರೋಣನು ಬಂದು ಮುತ್ತಲು, ಸಿಟ್ಟಾಗಿ ಆ ರಥವನ್ನೂ ಎತ್ತೊಗೆದನು. ಇಂತು ಎಂಟು ರಥಗಳನ್ನೆತ್ತಿ ಆಚಾರ್ಯನನ್ನು ಮಾತ್ರ ಕೊಲ್ಲದೆ, ವಿಹರಿಸಿದ ಭೀಮನು, ಕ್ಷಣದಲ್ಲಿ ತನ್ನ ರಥವನ್ನಾರೋಹಿಸಿ, 'ವಿಶೋಕಾ ! ನಡೆ !' ಎಂದು, ಮುಂದೆ ಸಾಗಿದಾಗ ಸಕಲ ಯೋಧರು ನಿಬ್ಬೆರಗಾಗಿ ನಿಶ್ಚೇಷ್ಟರಾಗಿ ನಿಂತರು. ಸಿಂಧುನದಿಯು ಗಿಡಗಳನ್ನಂತೆ, ಮಹಾವಾತವು ತೃಣಗಳನ್ನಂತೆ, ವಜ್ರವು ಪರ್ವತಗಳನ್ನಂತೆ, ನಿರ್ಮೂಲಿಸಿ, ಹಾರಿಸಿ, ಖಂಡಿಸಿ, ಭೀಮಸೇನನು ಅಶ್ವಗಳನ್ನು ಭಟರನ್ನು ಗಜಗಳನ್ನು ನಾಶಪಡಿಸಿ ಮುಂದೆ

ಸಾಗಿ, ವೀರನಾಗಿ ಹೋರಾಡುವ ಸಾತ್ಯಕಿಯನ್ನು ಕಂಡನು. ಮುಂದೆ ವೇಗದಿಂದ ಸಾಗಿ ರಥದ ವಾನರಕೇತುವನ್ನು ವಿಮಾನವನ್ನು ಪತಾಕೆಗಳನ್ನು ರಥವನ್ನು ಶ್ವೇತಾಶ್ವಗಳನ್ನು ಶ್ರೀಕೃಷ್ಣರಕ್ಷಿತನಾದ ವೀರಧನಂಜಯನನ್ನು ಕಂಡು, ಹರ್ಷಗೊಂಡನು. ಪ್ರಾವೃಷೇಣ್ಯ ಮೇಘದಂತೆ, ಹರ್ಷವಶನಾದ ಭೀಮಸೇನನು ಸಿಂಹನಾದವನ್ನು ಮತ್ತೆ ಮತ್ತೆ ಮಾಡಿದನು. ಅವನ ಸಿಂಹಗರ್ಜನವನ್ನು ಕೇಳಿ ಅರ್ಜುನನು ಗರ್ಜಿಸಿದನು; ದೇವದತ್ತವನ್ನೊತ್ತಿದ ಪಾರ್ಥನ ಜೊತೆಗೆ ಶ್ರೀಕೃಷ್ಣ ಭೀಮರು ಪಾಂಚಜನ್ಯ ಪೌಂಡ್ರಗಳನ್ನೂದಿದಭಯದ ನಿನದವು - ಧರ್ಮರಾಜನಿಗೆ ತ್ರಿವೇದರವದಂತೆ ಆನಂದವನ್ನೂ ಕೌರವರಿಗೆ ಕಾಲ ಮೃತ್ಯು, ಯಮರಾಜರ ಕರೆಯಂತೆ ಭಯವನ್ನೂ ತಂದೊಡ್ಡಿತು.

ಧರ್ಮರಾಜನು ಆನಂದವಿವಶನಾಗಿ 'ಭೀಮಸೇನ ! ಅಂದಂತೆ ಮಾಡಿ ಆನಂದವಿತ್ತ ಮಹಾನುಭಾವನು ನೀನು ! ನಿನ್ನ ಸಿಂಹನಾದವನ್ನು ಕೇಳಿ, ನಿಮ್ಮ ನಾಲ್ವರ ಕ್ಷೇಮವನ್ನು ತಿಳಿದೆನು. ಪರೋಕ್ಷ ಜ್ಞಾನವೂ ಆನಂದ ಸಂದಾಯಕವೆಂಬ ವಿದ್ವದ್ವಚನವು ಅಮೋಘವಾಗಿದೆ. ನೀನಾರನ್ನು ಕೆಡಿಸುವೆಯೋ ಅವರು ಉಳಿಯಲಾರರು. ನೀನುಳಿಸಿದವರನ್ನು ಅಳಿಸಲು ಆಗದು. ಸಾತ್ಯಕಿಯೂ ಸುಖಿಯಾಗಿರುವನೆಂದು ಅವನ ಸಿಂಹನಾದವು ತಿಳಿಸುತ್ತಿದೆ. ಯಾವ ವೀರರನ್ನು ನಂಬಿ ರಣಕಣಕ್ಕಿಳಿದೆವೋ, ಯಾವ ಸಾಹಸಿಯು ಶಕ್ರನನ್ನು ಲೆಕ್ಕಿಸದೆ ಖಾಂಡವವನವನ್ನು ಅಗ್ನಿದೇವನಿಗಾಹುತಿಯಾಗಿತ್ತನೋ, ಯಾವ ಧೀರನು ನಿವಾತಕವಚ ದುರ್ಜಯಾದಿ ದಾನವರನ್ನು ನಾಶಮಾಡಿದನೋ, ಯಾವ ಮಹೋದಾರನು, ಕುರುರಾಜನನ್ನು ಚಿತ್ರಸೇನ ಗಂಧರ್ವಬ ಸೆರೆಯಿಂದ ಬಿಡಿಸಿದನೋ, ಯಾವ ಕ್ಷತ್ರ ಕುಲಾವತಂಸನು ಪುತ್ರವಧ ಪಾತಕಿಯಾದ ಪಾಪಿ ಸೈಂಧವನನ್ನು ಕೊಂದು ಕೆಡಹಲು ಹವಣಿಸುವನೋ, ಅಂತಹ ಅರ್ಜುನನು-ನನ್ನ ಪ್ರಿಯಾನುಜನು - ಕ್ಷೇಮದಿಂದಿರುವನು !" ಎಂದು ಚಿಂತಿಸಿ, ದುರ್ಯೋಧನ ಪ್ರಮುಖ ವೀರರು ಸೈಂಧವ ರಕ್ಷಣೆಗೇನು ಮಾಡುವರೋ ಎಂದು ಆಲೋಚಿಸುತ್ತಿದ್ದನು."

ಆಗ ಧೃತರಾಷ್ಟ್ರನು ಸಂಜಯನಿಗಿಂತೆಂದನು - 'ಸಂಜಯ ! ನನಗೆ ಅರ್ಜುನ ಸಾತ್ಯಕಿಯರಿಂದ ಅಷ್ಟು ಭಯವಿಲ್ಲ, ಕೇಳು ! ಹಾಳು ಪ್ರತಿಜ್ಞೆಗಳಗೈದ ಭೀಮನಿಗಂಜುತ್ತಿರುವೆನು. ಅವನು ಕ್ರುದ್ಧನಾದರೆ, ಅವನ ಮುಂದೆ ನಿಲ್ಲುವ ವೀರರಿಲ್ಲ, ಅವನೆತ್ತಿ ಒಗೆದರೆ ಪುಡಿಯಾಗದ ರಥವಿಲ್ಲ, ಗದಾಪಾಣಿಯಾಗಿ ನನ್ನ ಸುತರ ಪ್ರಾಣಗಳನ್ನಪಹರಿಸುತ್ತಾ ಬರುವ ವೃಕೋದರನನ್ನು ನೆನೆದು, ಕೊರಗಿ ಸೊರಗಿರುವೆನು. ದುಷ್ಟ ಪುತ್ರರನ್ನು ತೃಣದಂತೆ ಸುಡುವ ಭೀಮ ಸೇನಾಗ್ನಿಯನ್ನು ಆರಿಸುವರಿಲ್ಲವೆಂದು ತಿಳಿದು, ಎಂದೇನು ದುರ್ವಾರ್ತೆ ಕೇಳಬೇಕಾಗುವದೋ ಎಂದು ಅಳುಕುವೆನು.'

ಸಂಜಯನು ಯುದ್ಧ ವಾರ್ತೆಯನ್ನು ವರ್ಣಿಸತೊಡಗಿದನು: "ಇಂತು ಗರ್ಜಿಸುವ ಭೀಮಸೇನನ ವಿಕ್ರಮವನ್ನು ಸಹಿಸದೆ, ಕರ್ಣನು ಮಹಚ್ಚಾಪವನ್ನು ಪಿಡಿದು, ಭೀಮನನ್ನು ಪ್ರಭಂಜನನ್ನು ಗಿಡದಂತೆ - ತಡೆದು, ಶರವರ್ಷದಲ್ಲಿ ಮುಳುಗಿಸಿದನು. ಭೀಮನು ಶರಜಾಲದಿಂದ ಕರ್ಣನನ್ನು ಮುಚ್ಚಿದನು. ಅವರೀರ್ವರ ರಣವು ಆಶ್ಚರ್ಯ ಭಯ

ಕಾರಣವಾಗಿ ಸೈನಿಕರು ದಿಙ್ಮೂಢರಾದರು. ಭೀಮಸೇನನು ಸಿಂಹನಾದವನ್ನು ಮಾಡಿ ಕರ್ಣನನ್ನು ಮುತ್ತಿದನು. ಆತನ ಸಿಂಹನಾದವನ್ನಾಲಿಸಿ ಕ್ಷತ್ರಿಯರ್ಷಭರು ಆಕಾಶ ಭೂಮಿಗಳೆರಡೂ ಕಲಿತು ಹೋಳಾದುವೆಂದು ತಿಳಿದು, ಗದಗದ ನಡುಗಿದರು. ಅವರ ಕೈಗಳಿಂದ ಆಯುಧಗಳು ಜಾರಿ ಬಿದ್ದವು. ಕೆಲವರು ಮೂರ್ಛಿತರಾದರು. ಕೆಲವರು ಇಹವನ್ನೇ ಬಿಟ್ಟೋಡಿದರು. ವಾಹನಗಳು ನಡುಗಿ ಶಕೃನ್ಮೂತ್ರಗಳನ್ನು ಬಿಟ್ಟವು, ಘೋರನಿಮಿತ್ತಗಳು ಕಾಣಿಸಿಕೊಂಡವು.

ಕರ್ಣನ ನಾಲ್ಕು ಬಾಣಗಳನ್ನು ಮುರಿದು ಕೆಡಹಿ, ಭೀಮಸೇನನು ಅವನ ಚಾಪವನ್ನು ಮುಷ್ಟಿ ದೇಶದಲ್ಲಿ ಮುರಿದನು. ಮತ್ತು ಅವನ ಬಾಣಜಾಲವನ್ನೆಲ್ಲ ಕೆಡಹಿ, ಎದೆಗೆ ಮೂರು ರಾಜತಬಾಣಗಳನ್ನು ನಾಟಿಸಿದನು. ತ್ರಿಶೃಂಗಪರ್ವತದಿಂದ ಜಲಧಾರೆಯಂತೆ ಕರ್ಣನ ಪಕ್ಷದಿಂದ ರಕ್ತಧಾರೆ ಇಳಿಯಿತು. ಕರ್ಣನು ಕುಪಿತನಾಗಿ ಸಾವಿರ ಬಾಣಗಳಿಂದ ಭೀಮನನ್ನು ಹೊಡೆದು ಆರ್ಭಟಿಸಿದನು. ಭೀಮನು ಶರಯುದ್ಧ ನೈಪುಣ್ಯದಲ್ಲಿ ಅರ್ಜುನನ ಅಣ್ಣನಾದುದರಿಂದ, ಕರ್ಣನ ಬಾಣಗಳನ್ನು ಖಂಡಿಸಿ-ಒಂದು ಶರದಿಂದ ಧನುವನ್ನು ಮುರಿದು, ಮತ್ತೊಂದರಿಂದ ಅವನ ಸಾರಥಿಯನ್ನು ಸಂಹರಿಸಿದನು; ನಾಲ್ಕು ಶರಗಳಿಂದ ತುರಗಗಳನ್ನು ಯಮನ ಮನೆಗೆ ಓಡಿಸಿದನು. ಕರ್ಣನು ಭೀತನಾಗಿ, ರಥದಿಂದ ಧುಮುಕಿ, ಮಗನಾದ ವೃಷಸೇನನ ರಥವನ್ನೇರಿದನು. ಕರ್ಣನನ್ನು ಗೆದ್ದು ಭೀಮಸೇನನು ಮಾಡಿದ ಸಿಂಹನಾದವು ಕರ್ಣ ಕಠೋರವಾಗಲು, ಕರ್ಣವಿಕರ್ಣಾದಿಗಳು ಓಡಿಹೋದರು. ಧರ್ಮಜನು ಪ್ರತಿಧ್ವಾನವನ್ನು ಮಾಡಿದನು. ಕೃಷ್ಣ ಪಾರ್ಥರು ಆನಂದದಿಂದ ಶಂಖಗಳನ್ನೂದಿದರು. ಎಲ್ಲ ಧ್ವನಿಗಳನ್ನು ಮೀರಿ ಕೇಳಬರುವ ಭೀಮನ ಭೀಮನಾದವನ್ನು ಕೇಳಿ, ಕುರುರಾಜನು ತತ್ತರಿಸಿ, ಜಯದ್ರಥನ ಸಾವು ನಿಶ್ಚಯವೆಂದು ತಿಳಿದನು.

ದುರ್ಯೋಧನನು ತ್ವರಿತವಾಗಿ ಆಚಾರ್ಯನನ್ನು ಸೇರಿ, 'ಆಚಾರ್ಯ ! ಆಚಾರ್ಯ ! ಅರ್ಜುನ ಸಾತ್ಯಕಿ ಭೀಮಸೇನರು ಮೂವರೂ ನೀನು ನೋಡುತ್ತಿರಲು, ವ್ಯೂಹವನ್ನು ಭೇದಿಸಿ, ಜಯದ್ರಥನನ್ನು ಸಮೀಪಿಸುತ್ತಿರುವರು. ಅವರನ್ನು ಕರ್ಣಾದಿಗಳೂ ತಡೆಯಲಾರದಿರುವರು. ಆದರೆ ಮೇರುಧೀರನಾದ ಭಾರದ್ವಾಜನೂ ತಡೆಯಲಾರದೆ, ಬಿಟ್ಟನೆಂದರೆ ಆಶ್ಚರ್ಯವಾಗಿದೆ. ಸಮುದ್ರವೇ ಒಣಗಿ ನಿಂತಂತೆ ಆಯಿತಲ್ಲ! ಇನ್ನು ಮಂದಭಾಗ್ಯನಾದ ನನಗೆ ಸರ್ವನಾಶವು ಕಾದಿರುವಂತಿದೆ. ಏನಿದೆ ನಿನ್ನ ಮನದಲ್ಲಿ? ಏಕೆ ಬಿಟ್ಟೆ ವೀರತ್ರಯವನ್ನು ? ಆದದ್ದಾಯಿತು. ಮಹಾನುಭಾವ ! ಸಿಂಧುರಾಜನನ್ನು ಉಳಿಸು ! ಮುಂದಿನ ಕಾರ್ಯದ ಚಿಂತೆ ಆಮೇಲೆ" ಎಂದು ಕೈ ಕೈ ಹಿಸುಕಿ ನಿಂತನು.

ಆಚಾರ್ಯನು, 'ಮಹಾರಾಜ ! ವೀರತ್ರಯರ ಭಯವು ನಿನಗೇ ಅಲ್ಲ, ನನಗೂ ಇದೆ. ಮುಂದೆಯೂ ಅವರನ್ನು ಗೆಲ್ಲಲಾಗುವದಿಲ್ಲ. ಈ ಮಾತನ್ನು ನಾನು ಮೊದಲೇ ತಿಳಿಸಿರುವೆನು. ಇವತ್ತು ಭೀಮನಿಂದ ಉಳಿದೆನೆಂದರೆ, ನಾಳೆ ಸಾಯಲೆಂದೇ ತಿಳಿ !

ಸತ್ಯಪ್ರತಿಜ್ಞನಾದ ಭೀಮನು ಪರರ ಪ್ರತಿಜ್ಞೆಯನ್ನೂ ಮನ್ನಿಸುವವನಾದುದರಿಂದಲೇ ಉಳಿದಿರುವೆವು. ಇಲ್ಲದಿದ್ದರೆ ನಾನೂ, ನಿನ್ನ ಕರ್ಣನೂ ಕೂಡ ಈ ಹೊತ್ತಿಗೆ ಯಮರಾಜನ ಅತಿಥಿಗಳಾಗಿ ಹೋಗಿರುತ್ತಿದ್ದೆವು. ಇರಲಿ ! ಕೇಳು ! ನಮ್ಮ ಸೇನೆಯು ಉಭಯಪಾಂಡವೀ ಸೇನೆಗಳ ಮಧ್ಯ ಸಿಕ್ಕಿದೆ. ಈಗ ಸೈಂಧವನನ್ನು ಕಾಪಾಡುವುದೇ ಆದ್ಯ ಕರ್ತವ್ಯವಾಗಿದೆ. ಶಕುನಿಯು ಬುದ್ಧಿಪೂರ್ವಕವಾಗಿ ನಿನ್ನನ್ನು ಹಾಳುಮಾಡಲು ಒಡ್ಡಿದ ದ್ಯೂತ ಪಣವಾಗಿರುವನು ಈಗ ಜಯದ್ರಥನು. ರಾಜನ್ ! ಎಲ್ಲರೂ ಸಾಯಲೇಬೇಕಾಗಿದೆ. ಈ ರಣರಂಗದಿಂದ ಉಳಿದು ಹೋಗುವವರಾರೂ ಇಲ್ಲ. ಸೈಂಧವನನ್ನು ನೀನು ರಕ್ಷಿಸಲು ಹೋಗು ! ಇಲ್ಲಿ ಸೇನಾಮುಖದಲ್ಲಿ ಮತ್ತೆ ಶತ್ರುಗಳು ಹೋಗದಂತೆ, ಪ್ರಾಣ ಪಣವನ್ನಿಟ್ಟು ನಾನು ಕಾದಾಡುವೆನು' ಎಂದನು. ಆ ಮಾತಿಗೆ ಸಮ್ಮತಿಸಿ ಕುರುರಾಜನು ಮತ್ತೆ ಜಯದ್ರಥನ ರಕ್ಷಣೆಗೆಂದು ತೆರಳಿದನು.

ಆ ಹೊತ್ತಿಗೆ ಯುಧಾಮನ್ಯೂತ್ತಮೌಜರು ಪಾರ್ಶ್ವಗಳಿಂದ ಕುರುಸೇನೆಯನ್ನು ಭೇದಿಸಿ, ಅರ್ಜುನನನ್ನು ಸೇರುತ್ತಿದ್ದರು. ಅವರನ್ನು ತಡೆದು ದುರ್ಯೋಧನನು ಮೂವತ್ತು ಬಾಣಗಳಿಂದ ಯುಧಾಮನ್ಯುವನ್ನು ಇಪ್ಪತ್ತರಿಂದ ಉತ್ತಮೌಜನನ್ನೂ ಪೀಡಿಸಿದನು. ಪಾಂಚಾಲ ವೀರರು ಕೂಡಿಬಿಟ್ಟ ಬಾಣವರ್ಗವನ್ನು ಖಂಡಿಸಿ, ಕುರುರಾಜನು ಉತ್ತಮೌಜನ ಕುದುರೆಗಳನ್ನು ಸಾರಥಿ ಪಾರ್ಶ್ವರಕ್ಷರನ್ನು ಸಂಹರಿಸಿದನು. ಅವನು ಯುಧಾಮನ್ಯು ರಥವನ್ನು ಸೇರಿ, ದುರ್ಯೋಧನನ ಅಶ್ವಗಳನ್ನು ಕೆಡಹಿದನು. ಯುಧಾಮನ್ಯುವು ಕುರುರಾಜನ ಶರಾಸನವನ್ನು ಮುರಿದನು. ದುರ್ಯೋಧನನು ಕುಪಿತನಾಗಿ, ಕೆಳಗಿಳಿದು ಗದೆಯನ್ನೆತ್ತಿ ಬರಲು, ಭೀತರಾಗಿ ಪಾಂಚಾಲ್ಯರೀರ್ವರು ರಥದಿಂದ ಧುಮುಕಿ ಉಳಿದರು. ದುರ್ಯೋಧನನ ಗದೆಯು ಅವನ ರಥವನ್ನು ಪುಡಿ ಮಾಡಿತು. ಅವನು ಶಲ್ಯನ ರಥವನ್ನೇರಿ ಹೋಗಲು, ಪಾಂಚಾಲ್ಯರು ತಮ್ಮವರು ತಂದ ಬೇರೆ ರಥಗಳಲ್ಲಿ ಕೂತು ಅರ್ಜುನನ ಪಾರ್ಶ್ವರಕ್ಷಕರಾಗಿರಲು ಹೊರಟರು.

ಭೀಮಸೇನನ್ನು ತಡೆಯಲು ಆಜ್ಞಾಪಿಸಿ ಕರ್ಣನನ್ನು ಕಳಿಸಿ, ಕುರುರಾಜನು ಸೇನಾಮಧ್ಯದಲ್ಲಿ ನಿಂತಿದ್ದನು. ಮದಗಜದ್ವಯದಂತೆ ಮತ್ತೆ ಕಾದತೊಡಗಿದರು. ಪೂರ್ವದಲ್ಲಿ ಸೋತುಹೋದ ಕರ್ಣನು ತಾನು ಭೀಮನನ್ನು ಗೆಲ್ಲಲಾರೆನೆಂದು - ಚನ್ನಾಗಿ ಅರಿತಿದ್ದೂ ಭೀಮಸೇನನನ್ನು ತಮ್ಮನೆಂದು ಕುಂತೀ ಕೃಷ್ಣರ ವಾಕ್ಯದಿಂದ ಅರಿತಿದ್ದೂ ವಿಧಿಗೆ ತಲೆಬಾಗಿ, ದುರ್ಯೋಧನನನ್ನು ನಿರುತ್ಸಾಹಗೊಳಿಸಲಾರದೆ ಭೀಮನನ್ನೆದುರಿಸಿ, ಅರ್ಜುನನಲ್ಲಿಗೆ ಸೇರಗೊಡದೆ ಕಂಕಪತ್ರಗಳಿಂದ ಪೀಡಿಸಿದನು. ಅವನ ಆಟಂಕವನ್ನು ಸಹಿಸದೆ ಕುಂತೀ ಪುತ್ರನು, ಕರ್ಣನನ್ನು ಶರವರ್ಷದಲ್ಲಿ ಮುಣುಗಿಸಿದನು. ಕರ್ಣನು ಅವನ್ನು ಖಂಡಿಸಿ, ಆಚಾರ್ಯನಲ್ಲಿ ಶಿಷ್ಯನು ನಡೆದುಕೊಳ್ಳುವಂತೆ, ವಿದ್ಯಾಪರೀಕ್ಷೆ ಕೊಡುವವನಂತೆ, ಮೃದು ಯುದ್ಧವನ್ನು ಮಾಡಿದನು. ಅವನನ್ನು ರೇಗಿಸಲೆಣಿಸಿ, ಭೀಮನು ವತ್ಸದಂತ ಬಾಣಗಳನ್ನು ಕರ್ಣನ ವಕ್ಷದಿ ನಾಟಿಸಿದನು; ಕಾಸಿ, ನೀರಲ್ಲದ್ದಿ ಎಣ್ಣೆ ಕುಡಿಸಿದ ಬಾಣಶತದಿಂದ ಮತ್ತೆ ಪೀಡಿಸಿದನು. ಕುಂತಿಗಿತ್ತ

ಅಭಯ ದಾನತ್ಯಾಗವು ತನ್ನನ್ನು ಏನೂ ಮಾಡಲಾರದು ಹಾಗೂ ಅದರಿಂದ ತನಗೆ ಪ್ರಯೋಜನವಿಲ್ಲವೆಂದು ತಿಳಿಯಲೋಸುಗ, ರೇಗಿಸುವ ಭೀಮನನ್ನು ಕಂಡು ಕರ್ಣನು ಕ್ರುದ್ಧನಾದನು. ಅರವತ್ತುನಾಲ್ಕು ಬಾಣಗಳಿಂದ ಹೊಡೆದು ಪೀಡಿಸಲು ಹೆದರದೆ ಭೀಮನು ಮೂವತ್ತೆರಡು ಶರಗಳಿಂದ ಅವನನ್ನು ಪೀಡಿಸಿದನು. ಕೂಜಿಸುವ ಪಕ್ಷಿ ರಾಜಿಯಂತೆ, ಆ ಬಾಣಗಳು ಕರ್ಣನನ್ನು ಮುತ್ತಿದವು. ಕರ್ಣನು ಸಿಡಿಲಿನಂತಹ ಬಾಣಗಳಿಂದ ನೋಯಿಸಿದಾಗ, ಅವು ಭೋರ್ಗಲ್ಲ ಮೇಲೆ ಮಳೆಗರೆದಂತೆ, ಭೀಮ ಶರೀರವನ್ನು ನೋಯಿಸಲಾರದೆ, ವ್ಯರ್ಥವಾದವು. ಭೀಮನು ಕಾಂಡಮಂಡಿತ ಮಾರ್ತಾಂಡನಂತೆ ಕಿಡಿಕೆಂಡವಾಗಿ, ಕರ್ಣನ ಧನುವನ್ನು ಮುರಿದು, ನಗನಗುತ್ತಾ, ಅವನ ಅಶ್ವಗಳನ್ನು ಕೆಡಹಿ, ನಾರಾಚ ಶತದಿಂದ ಕರ್ಣನನ್ನು ಪೀಡಿಸಿದನು. ಅವು ಅವನ ಕವಚವನ್ನು ಸೀಳಿ, ರಕ್ತವನ್ನು ಕುಡಿದು ಕೆಳಗೆ ಬಿದ್ದವು. ಕರ್ಣನು ವೇದನಾ ವಿಹ್ವಲನಾಗಿ, ರಥಾಂತರವನ್ನಾರೋಹಿಸಿ, ಓಡಿಹೋದನು. ಇಂತು ಪರಶುರಾಮ ಶಿಷ್ಯನು ಕುಂತೀ ಪುತ್ರನಿಂದ ಸೋತನೆಂದರೆ ಆಶ್ಚರ್ಯಪಡಬೇಡ ! ಭೀಮಸೇನನಿಗೆ ಎದುರಾಳಿಯಾಗಿ ನಿಲ್ಲುವರೀಲೋಕದಲ್ಲಿಲ್ಲ ತಿಳಿ ! ಪರಾಜಿತನಾದರೂ, ಕುರುರಾಜ ಪ್ರೀತಿಗಾಗಿ, ಕರ್ಣನು ಮತ್ತೆ ಕ್ರುದ್ಧನಾಗಿ ಬರಲು ನೋಡಿ, ಭೀಮನು-ಅಕ್ಷದ್ಯೂತದ ಕ್ಲೇಶಗಳನ್ನು, ಆಗ ಕರ್ಣನಾಡಿದ ಕಿಡಿನುಡಿಗಳನ್ನು, ವಿರಾಟ ನಗರದ ವಿಪತ್ತುಗಳನ್ನು ಕಪಟ ದ್ಯೂತದಿ ರಾಜ್ಯಹರಣವನ್ನು, ಪಾಂಚಾಲೀ ಪರಿಭವವನ್ನು ನೆನೆದು ಪ್ರಳಯಾಂತಕನಾದನು. ಅವನು ಮೈಮರೆತನು; ಆತನ ಕಣ್ಣುಗಳು ಕೆಂಪಾದವು. ಕ್ರುದ್ಧಶಾರ್ದೂಲದಂತಾದ ಭೀಮನನ್ನು ಕಂಡು, ಕುರು ಸೈನಿಕರು ಹೆದರಿ ಓಡತೊಡಗಿದರು. ಕರ್ಣನು ಸಂಭ್ರಾಂತನಾದರೂ ಸಂಬಾಳಿಸಿಕೊಂಡು, ಭೀಮಸೇನನ ಶರವರ್ಷವನ್ನು ತನ್ನ ಬಾಣಾಗ್ನಿಯಿಂದಾರಿಸಿ, ಭೀಮನನ್ನು ಬಾಣ ಶತದಿಂದ ಹೊಡೆದನು. ಮೇಘದ್ವಯವು ಮಳೆಯನ್ನಂತೆ, ಬಾಣ ವರ್ಷವನ್ನು ಸುರಿಸುವ ಕರ್ಣ ವೃಕೋದರರ ಯುದ್ಧವು ಪ್ರೇಕ್ಷಣೀಯವೂ, ಭಯಂಕರವೂ ಆಗಿತ್ತು. ಅವರ ಸುವರ್ಣ ಪುಂಖ ಬಾಣಗಳಿಂದ ಆಕಾಶವು ಬೆಳಗಿತು. ಗಾರ್ಧಪತ್ರಗಳು ಹದ್ದುಗಳಂತೆ ಹಾರಿ ದಿಕ್ಕುಗಳಲ್ಲಿ ವ್ಯಾಪಿಸಿದವು.

ತ್ರಿದಶರನ್ನು, ಯಕ್ಷರಾಕ್ಷಸರನ್ನು ವಾರಿಸಿ ಹೋರಾಡ ಬಲ್ಲ ರಾಧೇಯನು ಭೀಮನಿಂದ ಹೊಡೆದಾಡಲಾರದೆ ತತ್ತರಿಸಿದನು. ಇಂತಹ ರಾಧೇಯನನ್ನು ನಂಬಿ ನಿನ್ನ ಮಗನು ಶಮಕಾಮನಾದ ಧರ್ಮರಾಜನನ್ನು ಅಶಕ್ತನೆಂದು ಭ್ರಮಿಸಿ, ರಣಕ್ಕಿಳಿದು ಕೆಟ್ಟನು. ಭೀಮಸೇನನು ಕರ್ಣನ ಬಾಣಗಳನ್ನು ಖಂಡಿಸಿ, ಅವನ ಸೂತನನ್ನು ತುರಗಗಳನ್ನು ಸಂಹರಿಸಿದನು; ಇನ್ನೊಂದು ಬಾಣದಿಂದ ಅವನ ಧನುಸ್ಸನ್ನು ಮುರಿದನು. ಕರ್ಣನು ಕುಪಿತನಾಗಿ ಶಕ್ತಿಯನ್ನೊಗೆದು, ಗರ್ಜಿಸಲು, ನಿನ್ನವರು ಹರ್ಷಿತರಾದರು. ಭೀಮನು ಶಕ್ತಿಯನ್ನು ತುಂಡರಿಸಿ, ಯಮದಂಡೋಪಮವಾದ ಬಾಣದಿಂದ ಕರ್ಣನ ಎದೆಗೆ ಹೊಡೆದನು. ಕರ್ಣನು ಮತ್ತೊಂದು ಧನುವನ್ನು ಹಿಡಿದು, ಬಾಣ ಶತವನ್ನು ಬಿಟ್ಟನು. ಅವನ್ನು ಭೀಮನು ಖಂಡಿಸಿ, ಅವನ ಧನುವು ಮುರಿದು - ಮತ್ತೆ ಅಶ್ವಗಳನ್ನು

ದ್ವಿತೀಯ ಸಾರಥಿಯನ್ನೂ ಸಂಹರಿಸಿದನು. ಕರ್ಣನು ದಿಕ್ಕುತೋಚದೆ ಸುಮ್ಮನಿರಲು ನೋಡಿ, ದುರ್ಯೋಧನನು ತನ್ನ ಸೋದರರಾದ ದುರ್ಜಯಾದಿಗಳನ್ನು 'ಕರ್ಣನನ್ನು ತೂಬರ(ಭೀಮ) ನಿಂದ ಕಾಪಾಡಿ' ಎಂದಾಜ್ಞಾಪಿಸಿ ಕಳಿಸಿದನು.

ತೂಬರನೆಂದರೆ ಹೋತದಂತೆ ಗಡ್ಡ ಉಳ್ಳವನೆಂದರ್ಥ. ನಿರ್ದೋಷ ಶುಭಲಕ್ಷಿತನಾದ ಭೀಮನು ಶ್ಮಶ್ರುಲನಾಗಿದ್ದರೂ, ದುರ್ಯೋಧನನು ತೂಬರನನ್ನು ಕೊಲ್ಲಿರೆಂದು ತನ್ನ ತಮ್ಮಂದಿರನ್ನು ಆಜ್ಞಾಪಿಸಿದುದನ್ನು ಅವನು ಕೇಳಿ ಕುಪಿತನಾಗಿ-ಅಂತು ನಿಷ್ಕಾರಣವಾಗಿ ನಿಂದಿಸಿದವರನ್ನು ಕೊಲ್ಲುವ ರಹಸ್ಯ ಪ್ರತಿಜ್ಞೆಯನ್ನು ಮಾಡಿ, ಅದನ್ನು ಅರ್ಜುನನಿಗೆ ಮಾತ್ರ ತಿಳಿಸಿದ್ದನು. ಅರ್ಜುನನೂ 'ಗಾಂಡೀವವನ್ನು ಕೊಡು' ಎಂದವರನ್ನು ಕೊಲ್ಲುವೆನೆಂದು ರಹಸ್ಯ ಪ್ರತಿಜ್ಞೆ ಮಾಡಿ, ಭೀಮನಿಗೆ ತಿಳಿಸಿದ್ದನು. ಅವರೀರ್ವರ ರಹಸ್ಯವನ್ನು ಹೊಂಚು ಕೇಳಿದ ಸುಯೋಧನನು ಅದನ್ನು ಕರ್ಣನಿಗೆ ತಿಳಿಸಿದನು.

ಭೀಮಸೇನನು ದುರ್ಜಯನೊಡನೆ ಕಾದಾಡಿ, ಅವನನ್ನು ಸಂಹರಿಸಿದನು. ಕರ್ಣನು ಮತ್ತೊಂದು ರಥದಲ್ಲಿ ಕೂತು ಬರಲು, ಅವನ ಶರಶಕ್ತಿಗಳನ್ನೆಲ್ಲ ವ್ಯರ್ಥಗೊಳಿಸಿ, ಗದೆಯಿಂದ ಕರ್ಣನ ಕುದರೆಗಳನ್ನು ಕೊಂದು, ಕರ್ಣನನ್ನು ತೀಕ್ಷ್ಣ ಶರದಿಂದ ಹೊಡೆಯಲು, ಅವನು ಹೆದರಿ ಓಡಿ ಹೋದನು. ಭೀಮನು ಮುಂದೆ ನಿಂತು ಕಾದಲು ಬರುವ ದುರ್ಮುಖನನ್ನು ನೋಡಿ, ಹುಲಿಯಂತೆ ಗರ್ಜಿಸಿ, ತುಟನೆಕ್ಕಿ, ಶರನಿರ್ಭಿನ್ನ ಹೃದಯನನ್ನಾಗಿಸಿ, ದುರ್ಮುಖನನ್ನು ಯಮ ಸಮ್ಮುಖದಲ್ಲಿ ನಿಲ್ಲಿಸಿದನು. ಕರ್ಣನು ಮತ್ತೆ ಬರಲು ನೋಡಿ, ಭೀಮನು ಸುಪರ್ಣವೇಗಿ ನಾರಾಚಗಳಿಂದ ಕರ್ಣನನ್ನು ಹೊಡೆದೋಡಿಸಿದನು. 'ಕರ್ಣನೇ ಓಡುತ್ತಿರುನಿನ್ನು, ನನ್ನ ಗತಿ ಏನೆಂದು' ನಿನ್ನ ಸುತನು ಗೋಳಾಡಿದನು. ದುರ್ಮರ್ಷಣ, ದುಸ್ಸಹ, ದುರ್ಮದ, ದುರ್ಧರ, ಜಯರು, ಭೀಮನನ್ನು ಮುತ್ತಲು, ವೃಕೋದರನು ಅವರನ್ನೆಲ್ಲ ತುಂಡಾಗಿಸಿ ಕೆಡಹಿ, ಮತ್ತೆ ಮೇಲೇರಿ ಬಂದ ಕರ್ಣನನ್ನು ಪಂಚ ಶರಗಳಿಂದ ಪೀಡಿಸಿದನು. ಅವನೂ ನೂರು ಬಾಣಗಳಿಂದ ಹೊಡೆದಾಗ ಭೀಮನು ಶತನಾರಾಚಗಳಿಂದ ಅವನನ್ನು ಪೀಡಿಸಿ, ಮತ್ತೆ ತುರಗ ಸೂತರನ್ನೂ ಸಂಹರಿಸಿದನು. ಕರ್ಣನು ಸಿಟ್ಟಾಗಿ ಗದೆಯನ್ನೆಸೆದನು. ಭೀಮನು ಗದೆಯನ್ನು ತುಂಡರಿಸಿ ಕೆಡಹಿ, ತೀಕ್ಷ್ಣ ಪ್ರದರದಿಂದ ಕರ್ಣನ ಕವಚವನ್ನು ಸೀಳಿ ಕೆಡಹಿದನು. ಸಹಜ ಕವಚವನ್ನೂ ಕೆಡಹಬಲ್ಲೆನೆಂದು ತೋರಿಸುತ್ತಾ, ಭೀಮನು ಮತ್ತೊಂದು ಕವಚವನ್ನೂ ಸೀಳಿ ಹಾಕಿದನು. ಅರ್ಜುನನನ್ನು ಸೇರ ಪೋಗುವ ವೃಕೋದರನನ್ನು ತಡೆದು ಬದುಕಿ ಹೋದವರಿಲ್ಲ. ಕರ್ಣನು ಮತ್ತೆ ಮತ್ತೆ ಮುತ್ತಿ ಭೀಮನಿಗೆ ಇಪ್ಪತ್ತೊಂದು ಸಲ ಸೋತು, ಸೂತ ತುರಗಗಳನ್ನು ಕಳೆದುಕೊಂಡು ಪಲಾಯನಗೈದನು. ಅವನಿಗೆ ಜೀವಿತ ಸಂಶಯವು ಒದಗಿ ನಿರ್ಲಜ್ಜನಾಗಿ ಓಡಿದನು.

ಪದಾತಿಯಾಗಿ ಪಲಾಯನಗೈವ ಸೂತ ಸುತನನ್ನು ಭೀಮನಿಂದ ಕಾಪಾಡಲೆಣಿಸಿ, ದುರ್ಯೋಧನನು, ತನ್ನ ಸೋದರರನ್ನು ಪ್ರೇರಿಸಿದನು. ಚಿತ್ರ, ಉಪಚಿತ್ರ, ಚಿತ್ರಾಕ್ಷ

ಚಾರುಚಿತ್ರ, ಚಿತ್ರಶರಾಸನ, ಚಿತ್ರವರ್ಮ, ಚಿತ್ರಾಯುಧ, ಚಿತ್ರಯೋಧಿಗಳನ್ನು ಭೀಮಸೇನನು ಒಂದೊಂದು ಬಾಣದಿಂದ ಕೊಂದು, ಕರ್ಣನಿಗೆ ವಿದುರ ವಚನದ ಸ್ಮರಣೆ ಬರುವಂತೆ ಮಾಡಿದನು. ಆದರೂ ಬಿಡದೆ ಕರ್ಣನು ಪರಶುರಾಮದತ್ತ ದಿವ್ಯ ರಥವನ್ನೇರಿ, ಅಕ್ಷಯ ತೂಣಗಳನ್ನು ತಂದು, ಧೈರ್ಯದಿಂದ ಭೀಮನೊಡನೆ, ಹೋರಾಡಿದನು. ರಥನೇಮಿಧ್ವನಿಯು ಗರ್ಜಿತವಾಗಿ ಚಾಪವೇ ವಿದ್ಯುಲ್ಲತೆಯಾಗಿ ಭೀಮಸೇನನು ಮಹಾ ಮೇಘವು ಕರ್ಣಪರ್ವತವನ್ನು ಬಾಣವರ್ಷದಲ್ಲಿ ಮುಳುಗಿಸಿತು. ಭೀಮ ವಿಕ್ರಮವನ್ನು ಕಂಡು ಕೇಶವಾರ್ಜುನರು ಹರ್ಷಗರ್ಜನೆ ಮಾಡಿದರು. ಭೀಮನ ವಿಕ್ರಮ, ವೀರ್ಯ, ಬಲ, ಧೈರ್ಯ, ಸಾಹಸಗಳನ್ನು ಕಂಡು ನಿನ್ನ ಸುತರು ಖಿನ್ನರಾದರು.

ಕರ್ಣನು ಕುರುಕುಮಾರರನ್ನು ಸವರುವ ಸಮೀರ ಕುಮಾರರನ್ನು ಶರಶತದಿಂದ ತಡೆದನು. ಭೀಮನ ವಿಕ್ರಮವನ್ನು ನಿನ್ನವರಾದ ಭೂರಿಶ್ರವ, ಕೃಪ, ದ್ರೌಣಿ, ಶಲ್ಯ, ದ್ರೋಣರೇ ಅಲ್ಲದೆ ನಿನ್ನ ಶತ್ರುಗಳಾದ ಕೃಷ್ಣಾರ್ಜುನ ಸಾತ್ಯಕಿ ಪಾಂಚಾಲರೂ ಮೆಚ್ಚಿ ನಿಬ್ಬೆರಗಾಗಿ ನೋಡುತ್ತಿದ್ದರು. ದುರ್ಯೋಧನ ಸಮಾಧಿಷ್ಟರಾದ ಸಪ್ತ ಸೋದರರು ಮುತ್ತಿದಾಗ, ಭೀಮನು ಕುಪಿತನಾಗಿ ಏಳು ಬಾಣಗಳನ್ನು ಹೂಡಿದ ಮರೆಕ್ಷಣದಲ್ಲೇ ಅವರು ನೆಲಕ್ಕುರುಳಿ ಬಿದ್ದರು. ಇಂತು ಶತ್ರುಂಜಯ, ಶತ್ರುಸಹ, ಚಿತ್ರಕ, ಚಿತ್ರಾಯುಧವರ, ಚಿತ್ರಸೇನ, ದೃಢ, ವಿಕರ್ಣರೆಂಬ ಏಳು ಧಾರ್ತರಾಷ್ಟ್ರರನ್ನು ಸಂಹರಿಸಿದ ಭೀಮನು ಒಟ್ಟು ಇಪ್ಪತ್ತುಮೂರು ಕೌರವ ವೀರರನ್ನು ಅಂದು ಕೊಂದಿದ್ದನು. ಅವನ ಸಿಂಹನಾದವನ್ನು ಕೇಳಿ ಧರ್ಮರಾಜನು ಹರ್ಷಭರಿತನಾದನು.

ದುರ್ಯೋಧನನು 'ದ್ಯೂತವು ಒಳಿತಲ್ಲ, ಇದು ಕುಲಕ್ಷಯ ಕಾರಣವಾಗುವದು' ಎಂದು ವಿದುರನಾಡಿದ ಮಾತನ್ನು ನೆನೆದು ದುಃಖಿತನಾದನು. ಅಲ್ಪಮತಿಯಾಗಿ ಕರ್ಣನಾಡಿದ ಪರುಷ ವಚನಗಳನ್ನು, ತನ್ನ ಆದೇಶದಂತೆ ದುಶ್ಶಾಸನನು ಮಾಡಿದ ಕುಕೃತ್ಯವನ್ನು, ಅದನ್ನು ತಡೆಯದೆ ತೊಡೆ ತಟ್ಟಿದ ತನ್ನ ಅವಿನೀತಿಯನ್ನು ಅವನು ನೆನೆಯದಿರಲಿಲ್ಲ. ತನ್ನ ಕಣ್ಣೆದುರಿನಲ್ಲಿ ಎದುರಿಲ್ಲದೆ ಸೋದರರ ಸಂಹಾರವನ್ನು ಗೈವ ವೃಕೋದರನನ್ನು ತಡೆಯಲಾಗದೆ ಅವನು ದುಃಖ ಚಿಂತಾವಿವಶನಾದನು. ತಾನು ನಂಬಿದ್ದ ಕರ್ಣನೂ ತಮ್ಮಂದಿರನ್ನು ಕಾಪಾಡಲಾರದೆ ಓಡುವುದನ್ನು ಪುನಃ ಪುನಃ ಕಂಡು ಕುರುರಾಜನು ಹತಾಶನಾದನು. ಭೀಮನಾಮಾಂಕಿತವಾದ ಸುವರ್ಣ ಪುಂಖ ಶರಗಳ ಸುರಿಮಳೆಯನ್ನು ಎಲ್ಲೆಡೆ ನೋಡಿ, ಕಡುಭೀತನಾಗಿ ದರ್ಯೋಧನನು 'ಓಡಿ, ಅಡವಿ ಸೇರಲಾ ?' ಎಂಬ ಸ್ಥಿತಿಗೆ ಬಂದನು.

ಕರ್ಣನು ಕುರುರಾಜನ ಸ್ಥಿತಿಯನ್ನರಿತು ಮತ್ತೆ ದಿವ್ಯ ರಥವನ್ನೇರಿ ಬಂದು ಭೀಮನನ್ನು ಮುತ್ತಿದನು. ಭೀಮನು ಅವನ ಧನುವನ್ನು ಮುರಿದನು ; ಮತ್ತೊಂದನ್ನೆತ್ತಲು ಅದನ್ನೂ ಮುರಿದನು ; ಮತ್ತೊಂದನ್ನು, ಬೇರೊಂದನ್ನು, ಮಗದೊಂದನ್ನು ಇಂತು ಕರ್ಣನ ಹನ್ನೊಂದು ಬಿಲ್ಲುಗಳನ್ನು ಖಂಡಿಸಿ, ಭೀಮನು ಶರಜಾಲದಿಂದ ಕರ್ಣನನ್ನು ಮುಚ್ಚಿದನು. ವೈಕರ್ತನನು ಕುಪಿತನಾಗಿ ಪ್ರಯೋಗ

ಆಕರ್ಷಣಗಳು ತಿಳಿಯಬರದಂತೆ ಬಾಣಾಗ್ನಿಯನ್ನು ವಿಸರ್ಜಿಸಿ, ಭೀಮನನ್ನು ಪೀಡಿಸಿದನು. ಭೀಮ ಬಾಣಗಳು ರೋದಸೀಕುಹರವನ್ನು ತುಂಬಿ, ಕರ್ಣಶರಗಳನ್ನು ಖಂಡಿಸಿ, ಶತ್ರುವೀರ ಶಿರಗಳನ್ನು ಚೆಂಡಾಡಿದವು.

ತಲಶಬ್ದ ಗೋಧಾಘಾತಗಳಿಂದಲು, ರಥನೇಮೀ, ಬಾಣವೇಗಗಳಿಂದಲು ಹೊರಟ ದಾರುಣ ಶಬ್ದದಿಂದ ಸೈನಿಕರ ಕಿವಿಗಳು ಗಡಚಿಕ್ಕಿದವು. ಕರ್ಣ ಪಾಂಡವರ ಯುದ್ಧವನ್ನು ನೋಡುತ್ತಾ ಉಭಯ ವೀರರು ರಣ ವಿಹಾರವನ್ನು ಬಿಟ್ಟು ನಿಂತರು. ಆಕಾಶದಿಂದ ದೇವವನಿತೆಯರು ಚೆಲ್ಲಿದ ಮಂದಾರಾದಿ ಸುಮವೃಷ್ಟಿಯಿಂದ ಅಲಂಕೃತರಾದ ಭೀಮ ಕರ್ಣರು ಪರಸ್ಪರ ಶರಪೀಡಿತರಾಗಿ ಕಾದಾಡಿದರು.

ಆಗ ಕರ್ಣನು ವಿಜಯವೆಂಬ ಧನುವನ್ನು ಪಿಡಿದು ಪರಶುರಾಮದತ್ತ ದಿವ್ಯ ರಥದಿ ಕೂತು ಬಂದಿದ್ದನು. ಭೀಮನು ಅವನ ಕುಂಡಲ ಕವಚಗಳನ್ನು ಶರ ದ್ವಯದಿಂದ ಕೆಡಹಿ - ಸಹಜ ಕವಚ ಕುಂಡಲಗಳನ್ನೂ ಇಂತೆಯೇ ಅನಾಯಾಸವಾಗಿ ಬೀಳಿಸುವವನೆಂದು ತಿಳಿಸಿದನು. ಆದರೆ ಕರ್ಣನು ತನ್ನ ಮೇಲೆ ಸ್ಪರ್ಧಿಸದೆ ಕಾದುವುದರಿಂದ ಅವನಿಗೆ ಗೆಲುವಾಗಲಿ - ಇದು ಶ್ರೀ ಪರಶುರಾಮ ವರವೆಂದು ತಿಳಿದು ಭೀಮನು - ಸಮರ್ಥನಾದರೂ - ಶ್ರೀಶಾನುಗ್ರಹದಿಂದ ತನಗೆ ಜಯವು ನಿಶ್ಚಿತವೆಂದು ತಿಳಿದೂ - ಇಪ್ಪತ್ತೊಂದು ಸಲ ಸೋತುಹೋದ ಕರ್ಣನಿಗೆ ಸೋಲಬೇಕೆಂದು ನಿಶ್ಚಯಿಸಿ ಅವಕಾಶವಿತ್ತನು.

ಕರ್ಣನು ಅಸ್ತ್ರ ಬಲದಿಂದ ಭೀಮನ ಜ್ಯಾಲತೆಯನ್ನು ಕಡಿದನು. ಮತ್ತು ಕುದುರೆಗಳ ಲಗಾಮನ್ನು ಭೇದಿಸಿ, ಗರ್ಜಿಸಿದನು. ವಿಶೋಕನು ಭೀತನಾಗಿ ಯುಧಾಮನ್ಯುವಿನ ರಥವನ್ನೇರಿ ಕೂಡಲು ನೋಡಿ, ಭೀಮನು ನಸುನಕ್ಕು, ರಥ ಶಕ್ತಿಯನ್ನು ಕರ್ಣನ ಮೇಲೆ ಬಿಸುಟಿದನು. ಅದನ್ನವನು ಖಂಡಿಸಲು ಭೀಮಸೇನನು ಖಡ್ಗ ಚರ್ಮಗಳನ್ನು ಧರಿಸಿ, ಕರ್ಣನ ಮೇಲೇರಿ ಬಂದನು. ಕರ್ಣನು ಹೆದರದೆ ಅವೆರಡನ್ನೂ ಖಂಡಿಸಿದನು ಮತ್ತು ನಿರಾಯುಧನಾಗಿದ್ದ ಭೀಮನನ್ನು ಶರವರ್ಷದಲ್ಲಿ ಮುಳುಗಿಸಿದನು. ಭೀಮಸೇನನು ಮುರಿದ ಖಡ್ಗವನ್ನೇ ಎತ್ತಿ ಒಗೆಯಲು, ಕರ್ಣನ ಧನಸ್ಸು ಮುರಿದು ಬಿತ್ತು. ಕರ್ಣನು ಮತ್ತೊಂದು ಧನುವನ್ನೆತ್ತಿ ಶರಶತದಿಂದ ತಾಡಿಸಲು, ಭೀಮನು ಆಕಾಶದಿ ಹಾರುತ್ತಾ ಶರಜಾಲದಿಂದ ತಪ್ಪಿಸಿಕೊಂಡು, ಕರ್ಣನ ರಥದ ಮೇಲೆ ಧುಮುಕಿದನು. ನೈಜಬಲ ವೀರ್ಯ ಸಂಪನ್ನನಾದ ಭೀಮನು ನಿರಾಯುಧನಾಗಿದ್ದೂ ಕರ್ಣನಿಗೆ ಭಯಪ್ರದನಾದನು. ಆದರೆ ಅರ್ಜುನನ ಪ್ರತಿಜ್ಞೆಯನ್ನು ರಕ್ಷಿಸುವದಕ್ಕಾಗಿ ಕರ್ಣನನ್ನು ಸಂಹರಿಸದೆ, ಸಮರ್ಥನಾದರೂ ಅಸಮರ್ಥನಂತೆ ಭೀಮಸೇನನು ಎತ್ತಿದ ಮುಷ್ಟಿಯನ್ನಿಳಿಸಿ, ದೂರ ಸರಿದು ನಿಂತನು. ಪರಶುರಾಮನ ದಿವ್ಯರಥವೆಂದು ಮುರಿಯದೆ, ಅರ್ಜುನನಿಗೆ ಮೀಸಲೆಂದು ಕೊಲ್ಲದೆ - ರಥವನ್ನು ತನ್ನನ್ನು ಬಿಟ್ಟುಹೋದ ಭೀಮನನ್ನು ನೋಡಿ, ರಥ ಕೂಬರದಲ್ಲಿ ಭಯದಿಂದ ಬಚ್ಚಿಟ್ಟುಕೊಂಡಿದ್ದ ಕರ್ಣನು ಮತ್ತೆ ರಥದಲ್ಲಿ ಕೂತು ಶರಶತದಿಂದ ಅವನನ್ನು ಪೀಡಿಸಿದನು.

ಭೀಮಸೇನನು ಅವನ ಬಾಣಗಳಿಗೆ ಎಟುಕುವಷ್ಟು ದೂರದಲ್ಲಿ ನಗುತ್ತಾ ನಿಂತು, ಸತ್ತ ಆನೆಗಳನ್ನು ಅವನ ಬಾಣಗಳಿಗೆ ಹಿಡಿಯುತ್ತಾ, ಸಂಜೀವನ ಪರ್ವತವನ್ನು ತರುವ ಮಾರುತಿಯಂತೆ ಕಂಗೊಳಿಸುತ್ತಿದ್ದನು. ವೈಷ್ಣವನೆಂಬ ಕಾರಣದಿಂದ ಕರ್ಣನನ್ನು ಕೊಲ್ಲದೆ ಬಿಟ್ಟ ದಯಾಳುವಾದ ವೃಕೋದರನನ್ನೂ ಅವನ ಪರಾಕ್ರಮ ಕರುಣಾ ಸತ್ಯ ಸಂಧತೆಗಳನ್ನೂ ಅರಿತರಿತೂ, ಕರ್ಣನು, ದುರ್ಯೋಧನನ ಪ್ರೀತಿಗಾಗಿ ರಥದಿಂದಿಳಿದು ಬಂದು, ಧನುವನ್ನು ಭೀಮಸೇನನ ಕುತ್ತಿಗೆಗೆ ಬಿಸಾಡಿ ಸೆಳೆದನು. ಭೀಮಸೇನನು ದಂಡತಾಡಿತ ಭುಜಂಗಮನಾಗಿ, ಕರ್ಣನ ಧನುವನ್ನು ಅವನ ತಲೆಯ ಮೇಲೆಸೆದನು. ಕರ್ಣನು ಕುಂತೀದೇವಿಗೆ ಕೊಟ್ಟ ಮಾತಿನಂತೆ, ನಿರಾಯುಧನಾಗಿದ್ದ ಭೀಮನನ್ನು ಕೊಲ್ಲಲಿಚ್ಛಿಸದೆ ಕ್ರೂರ ವಚನಗಳಿಂದ ಇಂತೆಂದನು. ಒಂದು ವೇಳೆ ಕೊಲ್ಲಲಿಚ್ಛಿಸಿದರೂ ವೃಕೋದರನನ್ನು ಕೊಲ್ಲುವುದು ಅಸಾಧ್ಯವೆಂದು ಅವನಿಗೂ ಗೊತ್ತಿತ್ತು.

ದುರ್ಯೋಧನನ ಪ್ರೀತಿಗಾಗಿ ಕರ್ಣನು, ಅವನಿಗೂ ಕೇಳಿಸುವಂತೆ, ಭೀಮನನ್ನು ನೋಡಿ ಇಂತೆಂದನು: 'ತೂವರ! ಮೂಢ! ಹೊಟ್ಟೆಬಾಕ! ಭಕ್ಷ್ಯ ಭೋಜ್ಯಗಳುಳ್ಳಲ್ಲಿ ನಿನ್ನ ಕೆಲಸ. ರಣರಂಗಕ್ಕೆ ನೀನರ್ಹನಲ್ಲ. ಫಲ ಮೂಲಾಹಾರಿಯಾಗಿ ವನದಲ್ಲಿರು! ಹೋಗು! ನನ್ನಂತಹ ವೀರರನ್ನು ತಡವಿ ಕೆಡಬೇಡ!' ಆ ಮಾತನ್ನಾಲಿಸಿ, ನಗುತ್ತಾ ಭೀಮಸೇನನು 'ಅಹುದಹುದು! ಜಯಾಪಜಯಗಳು ದೈವಾಧೀನವಾಗಿವೆ. ಮಹೇಂದ್ರನೂ ದುಷ್ಟ ದಾನವರಿಗೆ ಸೋತದ್ದುಂಟು. ಅದರಿಂದ ಅವನಿಗೆ ಬಂದ ಕುಂದಿಲ್ಲ. ನಿಂತು ನಿರಾಯುಧನಾಗಿ, ನನ್ನೊಡನೆ ಮಲ್ಲಯುದ್ಧವನ್ನು ಮಾಡುವೆಯಾ? ಹೇಳು! ದುಷ್ಟ ಸೂತಪುತ್ರಾಧಮ! ಎಷ್ಟು ಸಲ ನನಗೆ ಸೋತಿರುವೆಯೋ ಎಣಿಸಿ, ಮತ್ತೆ ಬಾ! ಕೀಚಕನಿದ್ದಲ್ಲಿಗೆ ನಿನ್ನನ್ನೂ ಕಳಿಸುವೆನು. ನನ್ನನ್ನು ನಿಂದಿಸಿದ ಪಾಪಕ್ಕೆ ತಕ್ಕ ಶಿಕ್ಷೆಯನ್ನು ನಾನೇಕೆ, ನನ್ನ ತಮ್ಮನೇ ಕೊಡುವನು' ಎಂದು ಮುಂದೆ ಸರಿದನು. ಅದನ್ನು ಕಂಡು ಕರ್ಣನು ಭೀತನಾಗಿ ಹಿಂದಿರುಗಿದನು. ಭೀಮನನ್ನು ನಿಂದಿಸಿದ ಕರ್ಣನನ್ನು ಅರ್ಜುನನು ಬಾಣ ಸಮೂಹದಿಂದ ಪೀಡಿಸಿದನು. ಭೀಮನಿಂದ ಕವಚ ಹೀನನಾದ ಕರ್ಣನು ಪಾರ್ಥ ಬಾಣಗಳಿಂದ ನೊಂದು ಓಡಿಹೋದನು.

ಕರ್ಣನ ರಥದಲ್ಲಿದ್ದ ಶಕ್ತಿಯನ್ನು ಭೀಮನು ಸ್ವೀಕರಿಸಲಿಲ್ಲ. ಶ್ರೀಕೃಷ್ಣನ ಇಚ್ಛೆಯಂತೆ ಅದು ಘಟೋತ್ಕಚನಲ್ಲಿ ಪ್ರಯುಕ್ತವಾಗಲೆಂದು ಆ ಮಹಾನುಭಾವನು ಅದನ್ನು ನೋಡಿ ತೆಗೆಯದೆ ಬಿಟ್ಟು ಹೋದನು. ಕರ್ಣನು ಅದನ್ನು ಅರ್ಜುನನನ್ನು ಸಂಹರಿಸಲು ಪ್ರಯೋಗಿಸಲಿಚ್ಛಿಸಿದವನಾದುದರಿಂದ ಭೀಮನ ಮೇಲೆ ವಾಸವೀ ಶಕ್ತಿಯನ್ನು ಬಿಡಲಿಲ್ಲ. ಒಂದು ವೇಳೆ ಬಿಟ್ಟಿದ್ದರೂ ದೇವೇಂದ್ರ ಶಕ್ತಿಯು ಮುಖ್ಯ ಪ್ರಾಣ ಭೀಮನ ರೋಮವನ್ನು ಕೂಡ ಕೆಡಹದೆ ವ್ಯರ್ಥವಾಗುತ್ತಿತ್ತು. ನಾರಾಯಣಾಸ್ತ್ರದಿಂದಲೇ ಬಾಧಿಸಲ್ಪಡದ ವೃಕೋದರನಿಗೆ ದೇವೇಂದ್ರ ಶಕ್ತಿಯು ಅಕಿಂಚಿತ್ಕರವೇ ಸರಿ!

## ೧೧. ಅರ್ಜುನ ವಿಕ್ರಮ - ಜಯದ್ರಥ ವಧೆ

ಆಗ ಕರ್ಣನು ಪರಶುರಾಮನಿತ್ತ ದಿವ್ಯ ರಥವನ್ನು ಬಿಟ್ಟು ಬೇರೊಂದು ರಥದಲ್ಲಿ ಕೂತು ಅರ್ಜುನನನ್ನು ಮುತ್ತಿದನು. ಅವನು ಶ್ರೀಕೃಷ್ಣ ಭಯದಿಂದ ರಥ ಚಾಪ ಶಕ್ತಿಗಳನ್ನು ಮೂರನ್ನು ಒಂದು ಸಲ ತರದೆ ಬರುತ್ತಿದ್ದನು. ಶ್ರೀಕೃಷ್ಣ ಪ್ರೇರಿತನಾಗಿ ಅರ್ಜುನನ ರಥವನ್ನೋ ಚಾಪವನ್ನೋ ಅಪಹರಿಸಿಬಿಡುವನೇನೋ ಎಂಬ ಭಯದಿಂದ ಅವನು ಇಂದ್ರ ಶಕ್ತಿಯನ್ನು ಮಾತ್ರ ರಥದಲ್ಲಿಟ್ಟುಕೊಂಡು ಬಂದನು. ಮುಂದೆ ಹದಿನೇಳನೆಯ ದಿನದ ಯುದ್ಧದಲ್ಲಿ ತನ್ನ ಮರಣವನ್ನರಿತ ಕರ್ಣನು ಆ ದಿವ್ಯ ರಥವನ್ನೇರಿ, ವಿಜಯ ಧನುವನ್ನು ಹಿಡಿದು ಹೊರಟನು. ಶಕ್ತಿಯು ಘಟೋತ್ಕಚನಲ್ಲಿ ವಿನಿಯುಕ್ತವಾಗಿ, ಅವನನ್ನು ಕೊಂದು, ಇಂದ್ರನನ್ನು ಸೇರಿತ್ತು. ಕರ್ಣನನ್ನು ಪೀಡಿಸುವ ಅರ್ಜುನನನ್ನು ತಡೆದು ಅಶ್ವತ್ಥಾಮನು ಪಾರ್ಥನಿಂದ ಅವನನ್ನು ರಕ್ಷಿಸಿದನು. ಭೀಮಸೇನನು ಮತ್ತೊಂದು ರಥವನ್ನು ತಂದ ವಿಶೋಕನನ್ನು ನೋಡಿ ಅದರಲ್ಲಿ ಕೂತು, ಅರ್ಜುನನನ್ನು ಸೇರ ಪೋದನು.

ಇತ್ತ ಸಾತ್ಯಕಿಯು ಪಾರ್ವತೇಯರನ್ನು ಗೆದ್ದು ಶ್ರೀಕೃಷ್ಣಾರ್ಜುನರನ್ನು ಸಮೀಪಿಸುತ್ತಿರಲು ಯೂಪಕೇತುವಾದ ಭೂರಿಶ್ರವನು ಅವನನ್ನು ತಡೆದನು. ಅವರೀರ್ವರಿಗೆ ಅತಿ ಘೋರ ಯುದ್ಧವಾಯಿತು. ಅದನ್ನು ಕಂಡು ಉಭಯ ಸೈನಿಕರು ದಿಗಿಲುಗೊಂಡರು. ಅವರು ಪರಸ್ಪರ ತುರಗಗಳನ್ನು ಸಂಹರಿಸಿ, ಸೂತರನ್ನೂ ಕೆಡಹಿ, ಧನಸ್ಸುಗಳು ಮುರಿದುಕೊಂಡು, ಖಡ್ಗ ಯುದ್ಧಕ್ಕಿಳಿದರು. ಭೂರಿಶ್ರವನು ಸಾತ್ಯಕಿಯನ್ನು ನೆಲದಲ್ಲಿ ಕೆಡಹಿ, ಕೇಶಪಾಶವನ್ನು ಹಿಡಿದು, ವಕ್ಷಸ್ಥಲದಿ ಪಾದದಿಂದ ತುಳಿದು, ಶಿರವನ್ನು ಕಡಿಯಲು ಹವಣಿಸಿ ಕೈ ಮೇಲೆತ್ತಿದನು. ವಿಶ್ವತಶ್ಚಕ್ಷುವಾದ ಶ್ರೀಕೃಷ್ಣನು ಅದನ್ನು ನೋಡಿ, ಅರ್ಜುನನಿಗೂ ತೋರಿಸಿ, 'ಸಾತ್ಯಕಿಯನ್ನು ಕಾಪಾಡು' ಎಂದಾಜ್ಞಾಪಿಸಿದನು. ಆಗ ಅರ್ಜುನನು ನಿಶಾತ ಭಲ್ಲದಿಂದ ಭೂರಿಶ್ರವನ ಎತ್ತಿದ ಖಡ್ಗ ಹಸ್ತವನ್ನು ಕತ್ತರಿಸಿ, ನೆಲದಿ ಕೆಡಹಿದನು. ಭೂರಿಶ್ರವನು ಅರ್ಜುನನನ್ನು ನಿಂದಿಸಿ, ಭೂಮಿಯಲ್ಲಿ ಕೂತು ಅಸುರಾವೇಶದಿಂದ ಶ್ರೀಕೃಷ್ಣನನ್ನೂ ನಿಂದಿಸಿದನು. ಬಾಣಗಳೇ ಹಾಸಿಗೆಯಾಗಿ ಅವನು ಪ್ರಾಯೋಪವಿಷ್ಟನಾಗಿರಲು ಧ್ಯಾನಾಸಕ್ತವಾದ ಅವನ ಮನದಿಂದ ಅಸುರಾವೇಶವು ದೂರವಾಯಿತು. ಆ ಪರಮ ಭಕ್ತನು ಗರುಡ ಧ್ವಜನಾದ ಶ್ರೀಶನನ್ನು ಧ್ಯಾನ ಮಾಡುತ್ತಿದ್ದನು. ಆಗ ಸಾತ್ಯಕಿಯು ನೆಲದಿಂದೆದ್ದು, ಶ್ರೀಕೃಷ್ಣನೂ ಅರ್ಜುನನು ನಿವಾರಿಸುತ್ತಿದ್ದರೂ, ಕೇಳದೆ, ಕತ್ತಿಯಿಂದ ಭೂರಿಶ್ರವನ ಕುತ್ತಿಗೆಯನ್ನು ಕತ್ತರಿಸಿದನು. ಶ್ರೀಕೃಷ್ಣನು ಸಾತ್ಯಕಿಯ ವಿಕ್ರಮ ಸಾಹಸಗಳಿಗೆ ಪ್ರೀತನಾಗಿ, ತನ್ನ ರಥವನ್ನು ಮತ್ತೊಬ್ಬ ಸೂತನನ್ನು ಅವನಿಗೆ ಕೊಟ್ಟು ಅವನನ್ನು ಕರ್ಣನನ್ನು ಮುತ್ತಲು ಕಳಿಸಿದನು.

ಶಕ್ತಿಯನ್ನು ಅರ್ಜುನೇತರರಲ್ಲಿ ಬಿಡನೆಂದರಿತೇ ಶ್ರೀಶನು ಸಾತ್ಯಕಿಯನ್ನು ಕರ್ಣನನ್ನು ತಾಕಿ ಕಾದಲು ಕಳಿಸಿದನು. ವಿಷ್ಣು ರಥದಲ್ಲಿ ಕೂತು ಬಂದ ಸಾತ್ಯಕಿಯನ್ನು

ಕರ್ಣನೂ ಜಯಿಸಲಾರದೆ ಹೋದನು. ಅರ್ಜುನನ ಶಿಷ್ಯನೆಂದು ತಿಳಿದು ಕರ್ಣನು ಅವನ ಮೇಲಿನ ಸ್ಪರ್ಧೆಯಿಂದ ಕಡಿದಾಡಿದುದರಿಂದ ಅವನಿಗೆ ಸೋತನು" ಎಂದು ಸಂಜಯನು ವರ್ಣಿಸಿದನು.

ಧೃತರಾಷ್ಟ್ರನು "ಸಂಜಯ ! ಯಾರಿಗೂ ಸೋಲದ ಸಾತ್ಯಕಿಯು ಭೂರಿಶ್ರವನಿಗೇಕೆ ಸೋತನು, ಸಾತ್ಯಕಿಯು ಅರ್ಜುನ ಭೀಮರಂತೆ ಅರಿವೀರ ಭಯಂಕರನಾದನಲ್ಲ! ಇಂತಹ ಪರಾಕ್ರಮವು ಅವನಿಗೆ ಎಂತು ಬಂತು ?" ಎಂದು ಕೇಳಿದನು.

ಸಂಜಯನು ನುಡಿದನು. 'ರಾಜನ್ ! ಸಾತ್ಯಕಿಯು ಅರ್ಜುನನ ಶಿಷ್ಯನು. ಕೃಷ್ಣನ ಸೋದರನು. ಕೃಷ್ಣಭಕ್ತನಾದ ವೃಷ್ಣಿವೀರ ಮಾತ್ರನಿಗೆ ಅಪಜಯವಿಲ್ಲ ತಿಳಿ! ಆದರೂ ಸಾತ್ಯಕಿಯು ಭೂರಿಶ್ರವನಿಗೆ ಸೋತನೆಂದರೆ ವಿಶೇಷ ಕಾರಣವಿದೆ ಕೇಳು !

ದೇವಕರಾಜನು ದೇವಕಿಯ ಸ್ವಯಂವರವನ್ನು ಸಾರಿದ್ದನು. ಅನೇಕ ರಾಜರು ನೆರೆದಿದ್ದರು. ಯದುವಂಶ ತಿಲಕನಾದ ವಸುದೇವನಕೋಸ್ಕರ ಅವನ ಚಿಕ್ಕಪ್ಪನಾದ ಶಿನಿಯು ದೇವಕಿಯನ್ನು ರಥದಲ್ಲಿ ಕೂಡಿಸಿಕೊಂಡು ಹೊರಟನು. ಅವನ ದುರ್ವೃತ್ತವನ್ನು ಸಹಿಸದೆ, ಸೋಮದತ್ತನು ಶಿನಿಯನ್ನು ತದೆದು, ಅವನಿಂದ ಬಾಹುಯುದ್ಧಕ್ಕಿಳಿದನು. ಶಿನಿಯು ಸೋಮದತ್ತನನ್ನು ಕೆಳಗೆ ಕೆಡಹಿ, ಕೇಶವನ್ನು ಪಿಡಿದು, ಎದೆಯಲ್ಲಿ ಕಾಲೂರಿ-ಎಲ್ಲ ರಾಜರೂ ನೋಡುತ್ತಿರುವಂತೆ ಅವನನ್ನು ನಿಂದಿಸಿ 'ಹೋಗು ! ಬದುಕಿಕೋ !' ಎಂದು ಕಳಿಸಿದನು. ಸೋಮದತ್ತನು ಆದ ಅವಮಾನದಿಂದ ನೊಂದು ಮಹಾದೇವನನ್ನು ಮೆಚ್ಚಿಸಿ ತಪಗೈದನು. 'ಭಗವನ್ ! ಶಿನಿವಂಶಜನನ್ನು ಕಾಲಿಂದೊದೆದು, ಕೇಶ ಪಿಡಿದು ಅವಮಾನಿಸುವ ಪುತ್ರನನ್ನು ನನಗೆ ಕೊಡು !' ಎಂದು ಬೇಡಿದ ಸೋಮದತ್ತನಿಗೆ ಆ ವರವಿತ್ತು ಶಿವನು ಅಂತರ್ಧಿತನಾದನು. ಆ ವರ ಪ್ರಭಾವದಿಂದ ಸೋಮದತ್ತ ಪುತ್ರನಾದ ಭೂರಿಶ್ರವನು ಶಿನಿಪೌತ್ರನಾದ ಸಾತ್ಯಕಿಯನ್ನು ಅಂತು ಅವಮಾನಿಸಿದನು. ಸಾತ್ವತ ವೀರರೆಲ್ಲರು ಮನುಜರ್ಷಭರಿಗೆ ಅಜೇಯರು; ಚಿತ್ರ ಯೋಧಿಗಳು ; ದೇವದಾನವಗಂಧರ್ವರಿಗೂ ದುರ್ಜಯರು; ಪರಪರಿಗ್ರಹರಹಿತರು; ಸತ್ಯವಾದಿಗಳು; ದಾಂತರು; ದಾನಶೀಲರು; ಆದುದರಿಂದ ವೃಷ್ಣಿವೀರರಿಗೆ ಅಪಜಯವಿಲ್ಲ.

ಭೂರಿಶ್ರವನು 'ಯುದ್ಧದಲ್ಲಿ ಅನ್ಯರಿಂದ ಕಡಿದಾಡುವ ನನ್ನನ್ನೇಕೆ ತಡದೆ ? ನನ್ನ ಕೈ ಕಡಿದು ನಿಂದ್ಯಕರ್ಮವನ್ನು ಮಾಡಿದೆ ಇದು ಕೌಂತೇಯನಿಗುಚಿತವಲ್ಲ. ಪ್ರಮತ್ತನನ್ನು ಭೀತನನ್ನು ವಿರಥನನ್ನು ಯಾಚಿಸುವವನನ್ನು ವ್ಯಸನಾಕ್ರಾಂತನನ್ನು ಸಂಹರಿಸುವುದು ಯುದ್ಧ ಧರ್ಮವಲ್ಲ. ಇಂತಹ ಅಧರ್ಮವನ್ನು ಮಾಡಿ, ಧರ್ಮರಾಜನಿಗೆಂತು ಮುಖ ತೋರಿಸುವೆ ? ವೃಷ್ಣಿವಂಶಜರು ವ್ರಾತ್ಯರು, ಪ್ರಕೃತಿಗರ್ಹಿತರು; ಅವರ ಸ್ನೇಹವನ್ನು ಬಂಧುತ್ವವನ್ನು ಪಡೆದಿರುವ ನಿನ್ನ ಬುದ್ಧಿಯು ಕೆಟ್ಟಿತೇ ? ಕೃಷ್ಣನಿಗೆ ಇದು ಉಚಿತವೆಂದು ತೋರಿತೇ ?' ಎಂದು ನಿಂದಿಸಿದಾಗ ಅರ್ಜುನನ ಪ್ರತ್ಯುತ್ತರವನ್ನು ಕೇಳು !

'ಭೂರಿಶ್ರವ ! ಮುದುಕನಾದಂತೆ ನರನ ಬುದ್ಧಿಯು ಮುದಿಯಾಗುವುದಂತೆ ! ನಿನ್ನ ಮಾತುಗಳಿಗೆ ಅರ್ಥವಿಲ್ಲ. ಸಂಗ್ರಾಮ ಧರ್ಮವನ್ನು ತಿಳಿದಿರುವ ಹಿರಿಯನಿಗೆ ಪ್ರತಿವೀರರನ್ನು ಸಂಹರಿಸುವುದು ತಪ್ಪಲ್ಲ. ಆದರೆ ನೆಲದಿ ಕೆಡಹಿ, ನಿರಾಯುಧನಾಗಿದ್ದ ಯೋಧವರೆನನ್ನು ಪಶುವಿನನ್ನಂತೆ ಕೊಲ್ಲಲೆಣಿಸುವುದು ಸರ್ವಥಾ ಕ್ಷಮ್ಯವೆನಿಸದು. ಶ್ರೀಕೃಷ್ಣನನ್ನು ನಿಂದಿಸಿದೆ ! ಶ್ರೀಹರಿಯು ಧರ್ಮವನ್ನು ಬಿಡುವನಲ್ಲ. ಅವನನ್ನು ನಿಂದಿಸಿ ಪಾಪವನ್ನು ಸಂಪಾದಿಸಿದೆ ! ಶಿನಿಪೌತ್ರನು ಕೇವಲ ಬಂಧು ಪ್ರೀತಿಯಿಂದ, ಗುರುಭಕ್ತಿಯಿಂದ ನಮ್ಮ ಕಡೆ ನಿಂತು ಕಡಿದಾಡುವಾಗ, ಅಂತಹ ವೀರನನ್ನು ಸಂಹರಿಸುವ ಕೈಯನ್ನು ಖಂಡಿಸದಿರೆ, ಅವನು ಉಳಿಯುವಂತಿದ್ದಿಲ್ಲ. ಅಭಿಮನ್ಯುವಿನನ್ನು ನೀವೆಲ್ಲರೊಟ್ಟುಗೂಡಿ, ಸಂಹರಿಸಿದಾಗ ಈ ಧರ್ಮವಚನಗಳು ನಿನ್ನ ಬಾಯಿಂದ ಬರಲಿಲ್ಲ. ನಿನ್ನಂತಹ ವೃದ್ಧನು ಧರ್ಮರಾಜನನ್ನು ಬಿಟ್ಟು ಅಧರ್ಮರಾಜನನ್ನು ವಹಿಸಿ, ಹಿಡಿಕೂಳಿಗಾಗಿ, ಜೀವನ ಪಣವಿಟ್ಟು ಬಂಧುಗಳೊಡನೆ ಕಾದಲು ಬಂದುದು ತಪ್ಪಲ್ಲ! ನಾನು ನನ್ನ ಪ್ರಿಯ ಶಿಷ್ಯನನ್ನು ನಿನ್ನಿಂದ ಕಾಪಾಡಿಕೊಳ್ಳುವುದು ತಪ್ಪಾಯಿತೇ ? ನಿನ್ನ ಕುತ್ತಿಗೆಯನ್ನು ನಾನು ಕಡಿಯಲಿಲ್ಲ. ಎತ್ತಿದ ಕೈಯನ್ನು ಕತ್ತರಿಸಿದೆನು. ನಿನ್ನನ್ನು ನಂಬಿದವರಿಗಾಗಿ, ನೀನೂ ಇಂತೇ ನಡೆಯಬೇಕಾಗಿತ್ತು" ಎಂದನು. ಆ ಮಾತನ್ನು ಕೇಳಿ, ಭೂರಿಶ್ರವನು ಪಶ್ಚಾತ್ತಾಪದಿಂದ ನೊಂದು, ಶ್ರೀಕೃಷ್ಣನನ್ನು ಧ್ಯಾನಿಸುತ್ತ ಶರಶಯ್ಯಾಗತನಾದನು. ಸಾತ್ಯಕಿಯು ಅವನನ್ನು ಸಂಹರಿಸಿದನು. ಶ್ರೀಕೃಷ್ಣನು ಬಹು ಯಜ್ಞ ಸಂಪನ್ನನಾದ ಯೂಪಕೇತುವಿಗೆ, ತನ್ನ ಪುಣ್ಯ ಲೋಕವನ್ನಿತ್ತನು.

ಅರ್ಜುನ ಹತನಾಗಿದ್ದ ಭೂರಿಶ್ರವನನ್ನು ಪ್ರಾಯೋಪವೇಶದಲ್ಲಿದ್ದಾಗ ಸಂಹರಿಸಿದ ಯುಯುಧಾನನ್ನು ಭೀಮ ಪಾರ್ಥರೇ ಅಲ್ಲದೆ ಸರ್ವ ಯೋಧರು ನಿಂದಿಸಿದರು. ವೀರ ಮರಣವನ್ನಿತ್ತ ಸಾತ್ಯಕಿಯನ್ನು ಶ್ಲಾಘಿಸಿದವರು ಕೆಲವರಾದರೆ, ಅಭಿಮನ್ಯು ವಧವನ್ನು ನೆನೆದು ಕೆಲವರು ಉದಾಸೀನರಾದರು.

ಬಾಣ ಗೋಚರನಾಗಿರುವಾಗ ಶತ್ರುವನ್ನು ಕೆಡಹಿ ಅವನಿಂದ ಮಿತ್ರನನ್ನು ಕಾಪಾಡುವೆನೆಂದ ಪಾರ್ಥ ಪ್ರತಿಜ್ಞೆಯು, ಎದೆಗೆ ಒದೆಯುವ ದುಷ್ಟನನ್ನು ಕೊಲ್ಲುವೆನೆಂಬ ಸಾತ್ಯಕಿ ಪ್ರತಿಜ್ಞೆಯು ಜೋಡಾಗಿ ಭೂರಿಶ್ರವನ ಮರಣವನ್ನು ಸಾಧಿಸಿದವು. ಇಂತು ಶ್ರೀಕೃಷ್ಣ ಪಾರ್ಥರಿಂದ ರಕ್ಷಿತ ಸಾತ್ಯಕಿಯು ಅಜೇಯನಾಗಿರುವನು.

ಭೂರಿಶ್ರವನನ್ನು ಕೊಂದು, ಸಾತ್ಯಕಿಯು ಕರ್ಣನನ್ನು ಗೆದ್ದು ಅರ್ಜುನನನ್ನು ಸಮೀಪಿಸಿದನು. ಭೀಮಸೇನನೂ ಬಂದು, ಅರ್ಜುನನನ್ನು ಜಯದ್ರಥನಿಂದ ತಡೆಯುವ ರಥಿಕರನ್ನು ಮುತ್ತಿ ಕಾಡುತ್ತಿದ್ದನು. ಶ್ರೀಕೃಷ್ಣನು ಅರ್ಜುನನ ಪ್ರಾರ್ಥನೆಯಂತೆ ರಥವನ್ನು ಜಯದ್ರಥನ ಕಡೆಗೆ ಹೊಡೆದನು. ಅದನ್ನು ಕಂಡು ಭೀತಿಗೊಂಡ ಜಯದ್ರಥನು - ತನ್ನವರಾದ ದುರ್ಯೋಧನ, ಕರ್ಣ, ವೃಷಸೇನ, ಶಲ್ಯ, ದ್ರೌಣಿ ಕೃಪರೆಂಬ ಷಡ್ರಥರ ಹಿಂದಡಗಿದನು. ಆಗ ದುರ್ಯೋಧನನು ತ್ವರೆಯಿಂದ ರಾಧೇಯನನ್ನು ಸಮೀಪಿಸಿ, 'ಕರ್ಣ ! ನಿನ್ನ ಪರಾಕ್ರಮವನ್ನು ತೋರುವ ಕಾಲವು ಬಂದಿದೆ ! ಜಯದ್ರಥನನ್ನು

ಕಾಪಾಡು ! ದಿವಸವು ಅಲ್ಪಾವಶೇಷವಾಗಿದೆ. ಸೂರ್ಯಾಸ್ತಮಾನವಾಗುವವರೆಗು ಜಯದ್ರಥನು ರಕ್ಷಿತನಾದರೆ ಸಾಕು. ಆಗ ಅರ್ಜುನನು ಮಿಥ್ಯಾಪ್ರತಿಜ್ಞನಾಗಿ ಅಗ್ನಿಪ್ರವೇಶವನ್ನು ಮಾಡಿ ಸಾಯುವನು. ಅವನನ್ನನುಸರಿಸಿ, ಪಾಂಡವರೆಲ್ಲರೂ ಸಾಯುವರು. ನಿಹತಶತ್ರುವು, ಸಮೃದ್ಧವು, ಆದ ಮಹೀಖಂಡವೆಲ್ಲವೂ ನನ್ನ ವಶವಾಗುವದು. ರಾಧೇಯ! ನೀನಿಲ್ಲಿ ಧನುರ್ಬಾಣ ಪಾಣಿಯಾಗಿರುವಾಗ' ಅರ್ಜುನನು ಜಯದ್ರಥನನ್ನು ಸಂಹರಿಸಲಾಪನೇ ?' ಎಂದು ಹುರಿದುಂಬಿಸಿದನು.

ಕರ್ಣನಾಮಾತಿಗೆ ಹುಸಿನಗುತ್ತಾ ಇಂತುತ್ತರಿಸಿದನು: 'ರಾಜನ್ ಭೀಮಸೇನನ ನಿಶಾತ ಬಾಣಗಳಿಂದ ಜರ್ಜರಿತಗಾತ್ರನಾಗಿರುವೆನು. ಭೀಮನಿಂದ ಅಷ್ಟು ಸಲ ಸೋತು, ಮತ್ತೆ ಅರ್ಜುನನನ್ನು ತಡವಿ ನಿಲ್ಲುವ ಧೈರ್ಯವಿಲ್ಲ. ಭೀಮಸೇನನನ್ನಂತೂ ನಾನು ತಡೆಯಲಾರೆನು. ಸೈಂಧವನನ್ನು ಸವ್ಯಸಾಚಿಯು ಸೇರದೆ ಬಿಡನು. ಆದರೂ ನನ್ನ ಕೈಲಾದ ಮಟ್ಟಿಗೆ ಜೀವವಿರುವವರೆಗೂ ಬಡಿದಾಡುವೆನು. ಸೈಂಧವನನ್ನು ರಕ್ಷಿಸಲು ಹೆಣಗುವೆನು. ಜಯಾಪಜಯಗಳು ದೈವ ಸಮಾಹಿತವಾಗಿವೆ' ಎಂದು ಅರ್ಜುನನನ್ನು ಮುತ್ತಿ ಕಾದಿದನು.

ಅರ್ಜುನನು ಪ್ರಳಯ ಕಾಲನಾಗಿ ಕುರು ಸೈನಿಕರನ್ನು ಸಂಹರಿಸುತ್ತಾ ಮುಂದೆ ಸಾಗಿದನು. ಖಡ್ಗ ಹಸ್ತಗಳು, ಕರಿತುಂಡಗಳು, ಹಯಕಂಠಗಳು, ರಥಕೂಬರಗಳು, ಭಿನ್ನಧ್ವಜಗಳು, ಭಿನ್ನಶಸ್ತ್ರಗಳು - ಎಲ್ಲಿ ನೋಡಿದರಲ್ಲಿ ಈಡಾಡಿದಂತಿದ್ದವು. ಆಗ ಷಡ್ರಥರು ಮತ್ತೆ ಮುತ್ತಿ ಅರ್ಜುನನನ್ನು ಶರ ವರ್ಷದಲ್ಲಿ ಮುಣುಗಿಸಿದರು. ಅವರ ಹಿಂದು ನಿಂತು ಸೈಂಧವನೂ ನಿಶಿತ ಬಾಣಗಳಿಂದ ಪಾರ್ಥನನ್ನು ಪೀಡಿಸಿದನು. ಕೌರವರು ಸೂರಾಸ್ತಮಾನವನ್ನು ನಿರೀಕ್ಷಿಸಿ, ರಥ ವಂಶದಿಂದ ಪಾಂಡವ ಮಧ್ಯಮನನ್ನು ಸುತ್ತುವರಿಸಿದರು. ಕರ್ಣನು ಹತ್ತು ಶರಗಳಿಂದ ಅರ್ಜುನನನ್ನು ಪೀಡಿಸಿ, ಭೀಮನ ಎಪ್ಪತ್ತು ಶರಗಳನ್ನು ಖಂಡಿಸಿ, ಸಾತ್ಯಕಿಯನ್ನು ಏಳರಿಂದ ಹೊಡೆದನು. ಅರ್ಜುನನು ಕರ್ಣನ ಧನುವನ್ನು ಮುರಿದನು. ಕರ್ಣನು ಒಂದೇ ಸಲ ಸಾವಿರ ಬಾಣಗಳಿಂದ ಅರ್ಜುನನನ್ನು ಹೊಡೆದನು. ಅವನ ಶರೀರವು ರಕ್ತಸಿಕ್ತವಾಗಿತ್ತು. ಅವನು ನಿರ್ವಿಣ್ಣನಾಗಿ ಮುಂದೆ ಕಡಿದಾಡಲಾರದೆ ಹೋದನು. ಆಗ ಅಶ್ವತ್ಥಾಮನು ಅವನನ್ನು ಅರ್ಜುನ ಶರಗಳಿಂದ ಕಾಪಾಡಿ, ತಾನು ಅರ್ಜುನನೊಡನೆ ಕಾದಿದನು. ಶಲ್ಯ ಕೃಪರು ಹತ್ತು ಹತ್ತು ಬಾಣಗಳಿಂದ ಅರ್ಜುನನನ್ನು ಹೊಡೆದರು. ಸಿಂಧುರಾಜನು ತನ್ನನ್ನು ತಾನೇ ರಕ್ಷಿಸಿಕೊಳ್ಳಬೇಕಾಗಿ ಬಂದುದನ್ನರಿತು, ಅರ್ಜುನನನ್ನು ಇಪ್ಪತ್ತೈದು ಬಾಣಗಳಿಂದ ಪೀಡಿಸಿದನು.

ಪಾರ್ಥನು ಅವರೆಲ್ಲರನ್ನೂ ಪ್ರತಿ ಬಾಣಗಳಿಂದ ಹೊಡೆದು, ವಾರುಣಾಸ್ತ್ರವನ್ನು ಬಿಟ್ಟನು. ರಣರಂಗವೆಲ್ಲ ಬಾಣಗಳ ಮಳೆ ಸುರಿದಾಗ ಕುರು ವೀರರು ದಿಕ್ಕೆಟ್ಟು ಓಡಿದರು. ವಜ್ರಾಯುಧದಂತೆ ಬಡಿವ ಬಾಣಗಳನ್ನು ಮಳೆಗರೆವ ಅರ್ಜುನನು, ಗಾಂಡೀವ ಚಾಪದಿಂದಲು, ಕೃಷ್ಣ ಮೇಘದಿಂದಲು ಮೆರೆಯುತ್ತಾ ಮೇಘ ವಾಹನನಂತೆ

ಕಾಣಿಸಿದನು. ಅವನನ್ನು ಮುತ್ತಿದವರು ಅಗ್ನಿ ಕುಂಡದಿ ಬಿದ್ದ ಶಲಭಗಳಂತೆ ನಷ್ಟರಾದರು. ರಥ ಮಾರ್ಗಗಳಲ್ಲಿ ನರ್ತಿಸುವಂತೆ ನಡೆದು, ಮಹಾಸ್ತ್ರ ಜ್ವಾಲೆಗಳನ್ನು ಕಾರುವ ಗಾಂಡೀವಧಾರಿಯನ್ನು ಕಣ್ಣೆತ್ತಿ ನೋಡಲಾರದೆ ಕುರು ವೀರರು ಕಂಗೆಟ್ಟು ಓಡಿದರು.

ಕ್ಷಣದಲ್ಲಿ ರಣರಂಗವು ರುದ್ರಕ್ರೀಡಾ ಭೂಮಿಯಾಯಿತು. ಪಾರ್ಥನ ಟಂಕಾರವು ತಾಳವಾಗಿ, ಬಾಣಜಾಲವು ಸ್ವರ ಸೋಪಾನಗಳಾಗಿ, ರಕ್ತಮಾಂಸಗಳ ಗಂಧವನ್ನು ಹಚ್ಚಿ ಮೃತ್ಯುದೇವಿಯು ನರ್ತನ ಮಾಡಿದಳು. ರಕ್ತ ನದಿಗಳಲ್ಲಿ ತೇಲಿ ಹೋಗುವ ಅಸಂಖ್ಯಾತ ವೀರ ಸೈನಿಕ ಕಳೇವರಗಳನ್ನು ಉಪಹಾರವಾಗಿತ್ತು. ಪಾರ್ಥನು ಯಮಭಟರಿಗೆ ಅತಿಥಿ ಸತ್ಕಾರ ಮಾಡಿದನು. ಮುಂದೆ ಸಾಗುವ ಅರ್ಜುನನನ್ನು ತಡೆದು, ನಿಲ್ಲಿಸುವ ವೀರರ ಶರೀರವು ಕ್ಷಣದಲ್ಲಿ ರಕ್ತಸಿಕ್ತವಾಗುತ್ತಿತ್ತು. ಅರ್ಜುನನು ಸೈಂಧವನನ್ನು ಸೇರಿ ಅರವತ್ತುನಾಲ್ಕು ಬಾಣಗಳಿಂದ ಅವನನ್ನು ಪೀಡಿಸಿದನು. ಅವನು ಕ್ರುದ್ಧನಾಗಿ ಗಾರ್ಧಪತ್ರಗಳಿಂದ ಅರ್ಜುನನನ್ನು ತಾಡಿಸಿ, ಮೂರು ಶರಗಳಿಂದ ಮುರಾರಿಯನ್ನು ಹೊಡೆದನು. ಅರ್ಜುನನು ಒಂದು ಭಲ್ಲದಿಂದ ಅವನ ವರಾಹ ಧ್ವಜವನ್ನು ಕೆಡಹಿ, ಸೂತನನ್ನೂ ಒಂದರಿಂದ ಕೊಂದನು. ಅಶ್ವತ್ಥಾಮನು ತಡೆದು ಮುತ್ತಿದಾಗ ಅರವತ್ತು ಬಾಣಗಳಿಂದ ಆತನನ್ನು ಪೀಡಿಸಿದನು. ಬಹುಕಾಲ ಬಾಣಯುದ್ಧವನ್ನು ಮಾಡುತ್ತಿರುವ ಗುರು ಪುತ್ರನು ಸೂರ್ಯಾಸ್ತಮಾನವಾಗಲೆಂದು ನಿರೀಕ್ಷಿಸುವದನ್ನರಿತು ಕೃಷ್ಣನು ಅರ್ಜುನನನ್ನು ತ್ವರೆಪಡಿಸಿದನು.

ಆಗ ಸೂರ್ಯನು ಪಶ್ಚಿಮಗಿರಿ ಪ್ರಾಂತವನ್ನು ಸೇರುತ್ತಿದ್ದನು. ಅದನ್ನು ಕಂಡು ಅರ್ಜುನನು ಬಂದು ಮುತ್ತುವ ಅಶ್ವತ್ಥಾಮ, ಕೃಪ, ಕರ್ಣ ಶಲ್ಯ, ವೃಷಸೇನ, ದುರ್ಯೋಧನರನ್ನು ಬಾಣಜಾಲದಿಂದವಾರಿಸಿ, ಸೈಂಧವನನ್ನು ಸೇರಪೋದನು. ಅಂದು ಧನಂಜಯನ ಧನುರ್ವಿದ್ಯಾ ನೈಪುಣ್ಯವು ಅಗಣ್ಯವಾಗಿ, ಅದ್ಭುತವಾಗಿ ನಭೂತೋ ನ ಭವಿಷ್ಯತಿ ಎಂದೆನಿಸಿತು. ಅವನನ್ನು ಕಂಡ ಸೈನಿಕರು ಯಮನನ್ನು ಕಂಡಂತೆ ಹೆದರಿ ಓಡಿದರು. ಸಿಂಧುರಾಜ ರಕ್ಷಕರು ಸಂಶಯಗ್ರಸ್ತರಾದರು. ಅರ್ಜುನನು ವಿಕ್ರಮಿಸಿ ಕರ್ಣನ ಧನುವನ್ನು ಮುರಿದನು; ಕೃಪನ ಕುದುರೆಗಳನ್ನು ಕೆಡಹಿದನು; ಶಲ್ಯನ ಸೂತನನ್ನು ಕೊಂದನು. ದುರ್ಯೋಧನನ ಎದೆಗೆ ಭಲ್ಲವನ್ನು ನಾಟಿಸಿದನು. ವೃಷಸೇನನ ಧ್ವಜವನ್ನು ಕೆಡಹಿದನು. ಕರ್ಣನನ್ನು ನೋಡಿ 'ಏನು ಕರ್ಣ ! ನಿರ್ವಿಣ್ಣನಾದೆ ! ನಿನ್ನನ್ನು ಕೊಲ್ಲುವುದೆನಗೆ ಲೀಲೆ ಎಂದು ತಿಳಿ ! ಆದರೆ ನಿನಗೆ ಪುತ್ರಶೋಕದ ರುಚಿ ನೋಡಿಸಿ, ಅನಂತರ ಕೊಲ್ಲುವೆನು. ಶ್ರೀಕೃಷ್ಣನನ್ನೂ ಲೆಕ್ಕಿಸದೆ, ಆ ದೇವ ದೇವನು ಕೇಳುತ್ತಿರುವಂತೆ, ನಮ್ಮಣ್ಣನಾದ ಭೀಮಸೇನನನ್ನು ನಿಂದಿಸಿದ ಪಾಪಕ್ಕೆ ಮರಣವೇ ಸರಿಯಾದ ಶಿಕ್ಷೆ. ಎಲ್ಲರೂ ಕಲೆತು ಅಭಿಮನ್ಯುವಿನನ್ನು ಅನ್ಯಾಯದಿಂದ ಕೊಂದಿರಲ್ಲವೇ ? ನಿನ್ನ ಮಗನನ್ನು ನಿನ್ನೆದುರಿನಲ್ಲೇ ಸಂಹರಿಸಿ, ಅನಂತರ ನಮ್ಮ ಭೀಮಸೇನನ್ನು ತೂಬರನೆಂದ ನಿನ್ನನ್ನೂ ಸಂಹರಿಸುವೆನು ' ಎಂದು ಅರ್ಜುನನು ಅವನ ಮೈಯಲ್ಲಿ ಮೂವತ್ತು ಶರಗಳನ್ನು ನಾಟಿಸಿ, ಅವನನ್ನು ಓಡಿಸಿದನು.

ಅಶ್ವತ್ಥಾಮನು ಬಿಡದೆ ಮುತ್ತಿ ತಡೆಯುವುದನ್ನೂ, ಸೂರ್ಯಾಸ್ತಮಾನ ಸಮಯವನ್ನು ನಿರೀಕ್ಷಿಸಿ ಶ್ರೀಕೃಷ್ಣನು 'ಅರ್ಜುನ ! ಸೂರ್ಯನು ಮುಣುಗಲಿರುವನು. ಇನ್ನೊಂದು ಗಳಿಗೆಯಲ್ಲಿ ಕೊಲ್ಲಬೇಕು ಸೈಂಧವನನ್ನು. ಷಡ್ರಥರು ಬಿಡದೆ ತಡೆಯುತ್ತಿರುವರು. ನಿನ್ನ ಪ್ರತಿಜ್ಞೆಯನ್ನು ಪೂರೈಸಲು ನಾನೊಂದು ಉಪಾಯ ಹೂಡುವೆನು. ಸೂರ್ಯನು ಕಾಣಬರದಂತೆ ತಮಸ್ಸನ್ನು ಸೃಷ್ಟಿಸುವೆನು. ನೀನೂ ಹಾಗೇ ತಿಳಿದು ಸುಮ್ಮನಿರಬೇಡ ! ತತ್‌ಕ್ಷಣವೇ ಅವನ ಶಿರವನ್ನು ಹಾರಿಸು !' ಎಂದು ತಮವನ್ನು ಸೃಜಿಸಿದನು. ಅರ್ಜುನನು ಅಗ್ನಿಪ್ರವೇಶ ಮಾಡುವವನಂತೆ ತೋರಿಸಿದನು. ದ್ರೋಣಾದಿಗಳೂ ವಿಶ್ರಾಂತಿಯನ್ನು ಹೊಂದಿ ವಿಷಾದ ಭಯಭರಿತರಾಗಿ ನಿರೀಕ್ಷಿಸುತ್ತಿದ್ದರು. ಸೂರ್ಯಾಸ್ತಮಾನವಾಯಿತೆಂದು ಕೌರವ ವೀರರು ಕೇಕೆಗಳನ್ನು ಹಾಕುತ್ತಾ ಹಾರಾಡಿದರು. ಇನ್ನೇನು ಪಾರ್ಥನು ಅಗ್ನಿಪ್ರವೇಶ ಮಾಡುವನೆಂದು ಹಾರೈಸಿ, ಗುಂಪಾಗಿ ನೋಡುತ್ತಾ ನಿಂತರು. ಸಿಂಧುರಾಜನು ಎಲ್ಲರಂತೆ, ತಲೆ ಎತ್ತಿ ಮುಳುಗುವ ಸೂರ್ಯನ ಕಡೆ ನೋಡುತ್ತಿದ್ದನು. ಇದೇ ಸಮಯವೆಂದು ಸೂಚಿಸಿದ ಶ್ರೀಕೃಷ್ಣನ ವಚನದಂತೆ ಪಾರ್ಥನು, ರಥವೇರಿ ಮಿಕ್ಕ ಕೌರವ ಯೋಧರನ್ನು ಬಾಣಜಾಲದಿಂದ ದೂರ ಸರಿಸಿದನು. ಅವನ ರಥವನ್ನು ಕೇಶವನು ಸಿಂಧುರಾಜನ ಸಮೀಪ ಸೇರಿಸಿದನು. ಮತ್ತು ಅವನನ್ನು ಕೊಂದು, ಅವನ ತಲೆಯನ್ನು ಪಾಶುಪತಾಸ್ತ್ರ ಪ್ರಭಾವದಿಂದ, ಅವನ ತಂದೆಯಾದ ವೃದ್ಧಕ್ಷತ್ರನ ತೊಡೆಯಲ್ಲಿ ಬೀಳುವಂತೆ ಮಾಡೆಂದಾಜ್ಞಾಪಿಸಿದನು.

ಸೈಂಧವನ ತಂದೆಯಾದ ಬೃಹತ್‌ಕ್ಷತ್ರನು ಅವನ ಜನ್ಮ ಕಾಲದಲ್ಲಿ ಅಶರೀರವಾಣಿಯನ್ನು ಕೇಳಿದ್ದನು. 'ಈ ನಿನ್ನ ಮಗನು ವೀರನಾಗುವನು - ಕ್ಷತ್ರಿಯಪ್ರವರನೆನಿಸಿ ಶೂರಸತ್ಕೃತನಾಗುವನು. ಆದರೆ ಯುದ್ಧರಂಗದಲ್ಲಿ ಶತ್ರು ಶರದಿಂದ ಶಿರವು ಕಡಿಯಲ್ಪಟ್ಟು ಸಾಯುವನು' ಎಂದ ಅಶರೀರ ವಾಣಿಯ ಮಾತಿನಿಂದ ಭೀತನಾಗಿ, ವೃದ್ಧಕ್ಷತ್ರನು ಪುತ್ರಸ್ನೇಹ ಪ್ರಚೋದಿತನಾಗಿ, ಜ್ಞಾತಿಮಧ್ಯದಿ ಇಂತೆಂದನು : 'ಸಂಗ್ರಾಮ ರಂಗದಲಿ ವಿಕ್ರಮಿಸುತ್ತಿರುವ ನನ್ನ ಸುತನ ಶಿರವನ್ನು ನೆಲದಿ ಕೆಡಹುವವನ ತಲೆಯು ನೂರು ಹೋಳಾಗಲಿ!' ಎಂದು ಶಾಪವಿತ್ತು ಜಯದ್ರಥನನ್ನು ಸಿಂಧು ದೇಶಕ್ಕೆ ಪಟ್ಟಗಟ್ಟಿ, ವೃದ್ಧಕ್ಷತ್ರನು ಉಗ್ರತಪವನ್ನು ಮಾಡುತ್ತಿದ್ದನು. ಅವನು ಸ್ಯಮಂತ ಪಂಚಕದ ಪರಿಸರದ ತಪೋವನದಲ್ಲಿದ್ದುದನ್ನರಿತು ಶ್ರೀಶನು ಅರ್ಜುನನಿಗೆ ತಿಳಿಸಿದನು: 'ಸೈಂಧವನ ತಲೆ ಕೆಳಗೆ ಬಿತ್ತೆಂದರೆ ನೀನೇ ಸಾಯಬೇಕಾದೀತು!' ಎಂದು ಎಚ್ಚರಿಸಿದ ಸರ್ವಜ್ಞನ ಮಾತಿನಂತೆ ಅರ್ಜುನನು ಗಂಧಮಾಲ್ಯ ಸಮರ್ಚಿತವಾದ ದಿವ್ಯಶರದಿಂದ ಸೈಂಧವನ ತಲೆ ಕಡಿದು, ಶರ ಪರಂಪರೆಯಿಂದಲು, ಪಾಶುಪತ ಪ್ರಭಾವದಿಂದಲು ಅವನ ತಲೆಯನ್ನು ವೃದ್ಧಕ್ಷತ್ರನ ತೊಡೆಯಲ್ಲಿ ಕೆಡಹಿದನು. ಅವನು ಜಪವನ್ನು ಬಿಟ್ಟು ಮೇಲೆದ್ದನು. ತತ್‌ಕ್ಷಣವೇ ಜಯದ್ರಥನ ತಲೆ ಕೆಳಗೆ ಬಿತ್ತು; ಅದರೊಡನೆ ಅವನ ತಂದೆಯ ತಲೆಯೂ ಚೂರಾಗಿ ಬಿತ್ತು.

ಜಯದ್ರಥನನ್ನು ಸಂಹರಿಸಿ ಪೂರ್ಣ ಪ್ರತಿಜ್ಞನಾದ ಅರ್ಜುನನನ್ನು ನೋಡಲೆಂಬಂತೆ

ಕಾಣಿಸಿದನು. ಅವನನ್ನು ಮುತ್ತಿದವರು ಅಗ್ನಿ ಕುಂಡದಿ ಬಿದ್ದ ಶಲಭಗಳಂತೆ ನಷ್ಟರಾದರು. ರಥ ಮಾರ್ಗಗಳಲ್ಲಿ ನರ್ತಿಸುವಂತೆ ನಡೆದು, ಮಹಾಸ್ತ್ರ ಜ್ವಾಲೆಗಳನ್ನು ಕಾರುವ ಗಾಂಡೀವಧಾರಿಯನ್ನು ಕಣ್ಣೆತ್ತಿ ನೋಡಲಾರದೆ ಕುರು ವೀರರು ಕಂಗೆಟ್ಟು ಓಡಿದರು.

ಕ್ಷಣದಲ್ಲಿ ರಣರಂಗವು ರುದ್ರಕ್ರೀಡಾ ಭೂಮಿಯಾಯಿತು. ಪಾರ್ಥನ ಟಂಕಾರವು ತಾಳವಾಗಿ, ಬಾಣಜಾಲವು ಸ್ವರ ಸೋಪಾನಗಳಾಗಿ, ರಕ್ತಮಾಂಸಗಳ ಗಂಧವನ್ನು ಹಚ್ಚಿ ಮೃತ್ಯುದೇವಿಯು ನರ್ತನ ಮಾಡಿದಳು. ರಕ್ತ ನದಿಗಳಲ್ಲಿ ತೇಲಿ ಹೋಗುವ ಅಸಂಖ್ಯಾತ ವೀರ ಸೈನಿಕ ಕಳೇವರಗಳನ್ನು ಉಪಹಾರವಾಗಿತ್ತು. ಪಾರ್ಥನು ಯಮಭಟರಿಗೆ ಅತಿಥಿ ಸತ್ಕಾರ ಮಾಡಿದನು. ಮುಂದೆ ಸಾಗುವ ಅರ್ಜುನನನ್ನು ತಡೆದು, ನಿಲ್ಲಿಸುವ ವೀರರ ಶರೀರವು ಕ್ಷಣದಲ್ಲಿ ರಕ್ತಸಿಕ್ತವಾಗುತ್ತಿತ್ತು. ಅರ್ಜುನನು ಸೈಂಧವನನ್ನು ಸೇರಿ ಅರವತ್ತುನಾಲ್ಕು ಬಾಣಗಳಿಂದ ಅವನನ್ನು ಪೀಡಿಸಿದನು. ಅವನು ಕ್ರುದ್ಧನಾಗಿ ಗಾರ್ಧಪತ್ರಗಳಿಂದ ಅರ್ಜುನನನ್ನು ತಾಡಿಸಿ, ಮೂರು ಶರಗಳಿಂದ ಮುರಾರಿಯನ್ನು ಹೊಡೆದನು. ಅರ್ಜುನನು ಒಂದು ಭಲ್ಲದಿಂದ ಅವನ ವರಾಹ ಧ್ವಜವನ್ನು ಕೆಡಹಿ, ಸೂತನನ್ನೂ ಒಂದರಿಂದ ಕೊಂದನು. ಅಶ್ವತ್ಥಾಮನು ತಡೆದು ಮುತ್ತಿದಾಗ ಅರವತ್ತು ಬಾಣಗಳಿಂದ ಆತನನ್ನು ಪೀಡಿಸಿದನು. ಬಹುಕಾಲ ಬಾಣಯುದ್ಧವನ್ನು ಮಾಡುತ್ತಿರುವ ಗುರು ಪುತ್ರನು ಸೂರ್ಯಾಸ್ತಮಾನವಾಗಲೆಂದು ನಿರೀಕ್ಷಿಸುವದನ್ನರಿತು ಕೃಷ್ಣನು ಅರ್ಜುನನನ್ನು ತ್ವರೆಪಡಿಸಿದನು.

ಆಗ ಸೂರ್ಯನು ಪಶ್ಚಿಮಗಿರಿ ಪ್ರಾಂತವನ್ನು ಸೇರುತ್ತಿದ್ದನು. ಅದನ್ನು ಕಂಡು ಅರ್ಜುನನು ಬಂದು ಮುತ್ತುವ ಅಶ್ವತ್ಥಾಮ, ಕೃಪ, ಕರ್ಣ ಶಲ್ಯ, ವೃಷಸೇನ, ದುರ್ಯೋಧನರನ್ನು ಬಾಣಜಾಲದಿಂದವಾರಿಸಿ, ಸೈಂಧವನನ್ನು ಸೇರಪೋದನು. ಅಂದು ಧನಂಜಯನ ಧನುರ್ವಿದ್ಯಾ ನೈಪುಣ್ಯವು ಅಗಣ್ಯವಾಗಿ, ಅದ್ಭುತವಾಗಿ ನಭೂತೋ ನ ಭವಿಷ್ಯತಿ ಎಂದೆನಿಸಿತು. ಅವನನ್ನು ಕಂಡ ಸೈನಿಕರು ಯಮನನ್ನು ಕಂಡಂತೆ ಹೆದರಿ ಓಡಿದರು. ಸಿಂಧುರಾಜ ರಕ್ಷಕರು ಸಂಶಯಗ್ರಸ್ತರಾದರು. ಅರ್ಜುನನು ವಿಕ್ರಮಿಸಿ ಕರ್ಣನ ಧನುವನ್ನು ಮುರಿದನು; ಕೃಪನ ಕುದುರೆಗಳನ್ನು ಕೆಡಹಿದನು; ಶಲ್ಯನ ಸೂತನನ್ನು ಕೊಂದನು. ದುರ್ಯೋಧನನ ಎದೆಗೆ ಭಲ್ಲವನ್ನು ನಾಟಿಸಿದನು. ವೃಷಸೇನನ ಧ್ವಜವನ್ನು ಕೆಡಹಿದನು. ಕರ್ಣನನ್ನು ನೋಡಿ 'ಏನು ಕರ್ಣ ! ನಿರ್ವಿಣ್ಣನಾದೆ ! ನಿನ್ನನ್ನು ಕೊಲ್ಲುವುದೆನಗೆ ಲೀಲೆ ಎಂದು ತಿಳಿ ! ಆದರೆ ನಿನಗೆ ಪುತ್ರಶೋಕದ ರುಚಿ ನೋಡಿಸಿ, ಅನಂತರ ಕೊಲ್ಲುವೆನು. ಶ್ರೀಕೃಷ್ಣನನ್ನೂ ಲೆಕ್ಕಿಸದೆ, ಆ ದೇವ ದೇವನು ಕೇಳುತ್ತಿರುವಂತೆ, ನಮ್ಮಣ್ಣನಾದ ಭೀಮಸೇನನನ್ನು ನಿಂದಿಸಿದ ಪಾಪಕ್ಕೆ ಮರಣವೇ ಸರಿಯಾದ ಶಿಕ್ಷೆ, ಎಲ್ಲರೂ ಕಲೆತು ಅಭಿಮನ್ಯುವಿನನ್ನು ಅನ್ಯಾಯದಿಂದ ಕೊಂದಿರಲ್ಲವೇ ? ನಿನ್ನ ಮಗನನ್ನು ನಿನ್ನೆದುರಿನಲ್ಲೇ ಸಂಹರಿಸಿ, ಅನಂತರ ನಮ್ಮ ಭೀಮಸೇನನನ್ನು ತೂಬರನೆಂದ ನಿನ್ನನ್ನೂ ಸಂಹರಿಸುವೆನು' ಎಂದು ಅರ್ಜುನನು ಅವನ ಮೈಯಲ್ಲಿ ಮೂವತ್ತು ಶರಗಳನ್ನು ನಾಟಿಸಿ, ಅವನನ್ನು ಓಡಿಸಿದನು.

ಅಶ್ವತ್ಥಾಮನು ಬಿಡದೆ ಮುತ್ತಿ ತಡೆಯುವುದನ್ನೂ, ಸೂರ್ಯಾಸ್ತಮಾನ ಸಮಯವನ್ನು ನಿರೀಕ್ಷಿಸಿ ಶ್ರೀಕೃಷ್ಣನು 'ಅರ್ಜುನ ! ಸೂರ್ಯನು ಮುಣುಗಲಿರುವನು. ಇನ್ನೊಂದು ಗಳಿಗೆಯಲ್ಲಿ ಕೊಲ್ಲಬೇಕು ಸೈಂಧವನನ್ನು. ಷಡ್ರಥರು ಬಿಡದೆ ತಡೆಯುತ್ತಿರುವರು. ನಿನ್ನ ಪ್ರತಿಜ್ಞೆಯನ್ನು ಪೂರೈಸಲು ನಾನೊಂದು ಉಪಾಯ ಹೂಡುವೆನು. ಸೂರ್ಯನು ಕಾಣಬರದಂತೆ ತಮಸ್ಸನ್ನು ಸೃಷ್ಟಿಸುವೆನು. ನೀನೂ ಹಾಗೇ ತಿಳಿದು ಸುಮ್ಮನಿರಬೇಡ ! ತತ್‌ಕ್ಷಣವೇ ಅವನ ಶಿರವನ್ನು ಹಾರಿಸು !' ಎಂದು ತಮವನ್ನು ಸೃಜಿಸಿದನು. ಅರ್ಜುನನು ಅಗ್ನಿಪ್ರವೇಶ ಮಾಡುವವನಂತೆ ತೋರಿಸಿದನು. ದ್ರೋಣಾದಿಗಳೂ ವಿಶ್ರಾಂತಿಯನ್ನು ಹೊಂದಿ ವಿಷಾದ ಭಯಭರಿತರಾಗಿ ನಿರೀಕ್ಷಿಸುತ್ತಿದ್ದರು. ಸೂರ್ಯಾಸ್ತಮಾನವಾಯಿತೆಂದು ಕೌರವ ವೀರರು ಕೇಕೆಗಳನ್ನು ಹಾಕುತ್ತಾ ಹಾರಾಡಿದರು. ಇನ್ನೇನು ಪಾರ್ಥನು ಅಗ್ನಿಪ್ರವೇಶ ಮಾಡುವನೆಂದು ಹಾರೈಸಿ, ಗುಂಪಾಗಿ ನೋಡುತ್ತಾ ನಿಂತರು. ಸಿಂಧುರಾಜನು ಎಲ್ಲರಂತೆ, ತಲೆ ಎತ್ತಿ ಮುಳುಗುವ ಸೂರ್ಯನ ಕಡೆ ನೋಡುತ್ತಿದ್ದನು. ಇದೇ ಸಮಯವೆಂದು ಸೂಚಿಸಿದ ಶ್ರೀಕೃಷ್ಣನ ವಚನದಂತೆ ಪಾರ್ಥನು, ರಥವೇರಿ ಮಿಕ್ಕ ಕೌರವ ಯೋಧರನ್ನು ಬಾಣಜಾಲದಿಂದ ದೂರ ಸರಿಸಿದನು. ಅವನ ರಥವನ್ನು ಕೇಶವನು ಸಿಂಧುರಾಜನ ಸಮೀಪ ಸೇರಿಸಿದನು. ಮತ್ತು ಅವನನ್ನು ಕೊಂದು, ಅವನ ತಲೆಯನ್ನು ಪಾಶುಪತಾಸ್ತ್ರ ಪ್ರಭಾವದಿಂದ, ಅವನ ತಂದೆಯಾದ ವೃದ್ಧಕ್ಷತ್ರನ ತೊಡೆಯಲ್ಲಿ ಬೀಳುವಂತೆ ಮಾಡೆಂದಾಜ್ಞಾಪಿಸಿದನು.

ಸೈಂಧವನ ತಂದೆಯಾದ ಬೃಹತ್‌ಕ್ಷತ್ರನು ಅವನ ಜನ್ಮ ಕಾಲದಲ್ಲಿ ಅಶರೀರವಾಣಿಯನ್ನು ಕೇಳಿದ್ದನು. 'ಈ ನಿನ್ನ ಮಗನು ವೀರನಾಗುವನು - ಕ್ಷತ್ರಿಯಪ್ರವರನೆನಿಸಿ ಶೂರಸತ್ಯತನಾಗುವನು. ಆದರೆ ಯುದ್ಧರಂಗದಲ್ಲಿ ಶತ್ರು ಶರದಿಂದ ಶಿರವು ಕಡಿಯಲ್ಪಟ್ಟು ಸಾಯುವನು' ಎಂದ ಅಶರೀರ ವಾಣಿಯ ಮಾತಿನಿಂದ ಭೀತನಾಗಿ, ವೃದ್ಧಕ್ಷತ್ರನು ಪುತ್ರಸ್ನೇಹ ಪ್ರಚೋದಿತನಾಗಿ, ಜ್ಞಾತಿಮಧ್ಯದಿ ಇಂತೆಂದನು: 'ಸಂಗ್ರಾಮ ರಂಗದಲಿ ವಿಕ್ರಮಿಸುತ್ತಿರುವ ನನ್ನ ಸುತನ ಶಿರವನ್ನು ನೆಲದಿ ಕೆಡಹುವವನ ತಲೆಯು ನೂರು ಹೋಳಾಗಲಿ!' ಎಂದು ಶಾಪವಿತ್ತು ಜಯದ್ರಥನನ್ನು ಸಿಂಧು ದೇಶಕ್ಕೆ ಪಟ್ಟಗಟ್ಟಿ, ವೃದ್ಧಕ್ಷತ್ರನು ಉಗ್ರತಪವನ್ನು ಮಾಡುತ್ತಿದ್ದನು. ಅವನು ಸ್ಯಮಂತ ಪಂಚಕದ ಪರಿಸರದ ತಪೋವನದಲ್ಲಿದ್ದುದನ್ನರಿತು ಶ್ರೀಶನು ಅರ್ಜುನನಿಗೆ ತಿಳಿಸಿದನು: 'ಸೈಂಧವನ ತಲೆ ಕೆಳಗೆ ಬಿತ್ತೆಂದರೆ ನೀನೇ ಸಾಯಬೇಕಾದೀತು!' ಎಂದು ಎಚ್ಚರಿಸಿದ ಸರ್ವಜ್ಞನ ಮಾತಿನಂತೆ ಅರ್ಜುನನು ಗಂಧಮಾಲ್ಯ ಸಮರ್ಚಿತವಾದ ದಿವ್ಯಶರದಿಂದ ಸೈಂಧವನ ತಲೆ ಕಡಿದು, ಶರ ಪರಂಪರೆಯಿಂದಲು, ಪಾಶುಪತ ಪ್ರಭಾವದಿಂದಲು ಅವನ ತಲೆಯನ್ನು ವೃದ್ಧಕ್ಷತ್ರನ ತೊಡೆಯಲ್ಲಿ ಕೆಡಹಿದನು. ಅವನು ಜಪವನ್ನು ಬಿಟ್ಟು ಮೇಲೆದ್ದನು. ತತ್‌ಕ್ಷಣವೇ ಜಯದ್ರಥನ ತಲೆ ಕೆಳಗೆ ಬಿತ್ತು; ಅದರೊಡನೆ ಅವನ ತಂದೆಯ ತಲೆಯೂ ಚೂರಾಗಿ ಬಿತ್ತು.

ಜಯದ್ರಥನನ್ನು ಸಂಹರಿಸಿ ಪೂರ್ಣ ಪ್ರತಿಜ್ಞನಾದ ಅರ್ಜುನನನ್ನು ನೋಡಲೆಂಬಂತೆ

ಸೂರ್ಯನು ಪಶ್ಚಿಮ ದಿಗಂತದಲ್ಲಿ ಕಾಣಿಸಿದನು. ತಮವನ್ನು ಸೃಜಿಸಿ ಮತ್ತೆ ಉಪ ಸಂಹರಿಸಿದ ಶ್ರೀಶನ ಮಹಿಮೆಯನ್ನು, ಭಕ್ತವತ್ಸಲತೆಯನ್ನು ಸುಜನರು ಕೊಂಡಾಡಿ, ಪಾಂಡವರನ್ನು ಪ್ರಶಂಸಿಸಿದರು - ಮತ್ತೆ ಸೂರ್ಯಮಂಡಲವನ್ನು ಕಂಡು ಕುರುವೀರರು ನಿರಾಶರಾಗಿ ಕಣ್ಣೀರಿಟ್ಟರು. ಅರ್ಜುನ ಭೀಮ ಕೃಷ್ಣರು ಶಂಖಗಳನ್ನೂದಿ, ಹರ್ಷಧ್ವಾನಗಳನ್ನು ಮಾಡಿದರು. ಜಯೋನ್ಮತ್ತರಾದ ಪಾಂಚಾಲ ವೀರರು ದ್ರೋಣ ಸೇನೆಯನ್ನು ಹಿಮ್ಮೆಟ್ಟಿಸಿ, ಸಿಂಹನಾದ ಮಾಡಿದರು.

ಅರ್ಜುನನು ಭೀಮಸೇನನನ್ನಪ್ಪಿ 'ಅಣ್ಣ! ಶ್ರೀಕೃಷ್ಣ ಕೃಪೆಯಿಂದಲು, ನಿನ್ನ ಸಹಾಯದಿಂದಲು ತೀರ್ಣ ಪ್ರತಿಜ್ಞನಾದೆನು. ನಿನ್ನನ್ನು ನಿಂದಿಸಿದ ಕರ್ಣನು ನಿನ್ನ ಶಿಷ್ಯನಾದ ನನ್ನಿಂದಲೇ ಸಂಹರಿಸಿ ಕೊಲ್ಲಲ್ಪಡುವನು. ಆಗ ನನ್ನ ಪ್ರತಿಜ್ಞೆಯೂ ಪೂರ್ಣವಾಗುವುದು. ನಿನ್ನಿಂದ ಕೊಲ್ಲಲ್ಪಟ್ಟರೆ ನನ್ನ ಪ್ರತಿಜ್ಞೆ ಕೆಡುವುದು. ನಾನವನನ್ನು ಸಂಹರಿಸಿ, ಉಭಯರ ಪ್ರತಿಜ್ಞೆ ಪೂರೈಸುವೆನು. ಸದಾ ನನ್ನಲ್ಲಿ ನಿನ್ನ ಅನುಗ್ರಹವಿರಲಿ!' ಎಂದು ವಂದಿಸಿದನು.

ಧರ್ಮರಾಜನು ಪಾಂಚಜನ್ಯ ದೇವದತ್ತ ಗಂಭೀರಾರವವನ್ನು ಕೇಳಿದನು. ಹಿಂದೆಯೇ ಭೀಮಸೇನನ ಸಿಂಹನಾದವೂ ಕೇಳ ಬಂದಾಗ ಅವನು ಸೈಂಧವನು ಹತನಾದನೆಂದು ತಿಳಿದು ಆನಂದಿಸಿದನು. ಧೃಷ್ಟದ್ಯುಮ್ನಾದಿ ವೀರರು ದ್ರೋಣ ಸೇನೆಯನ್ನು ಸೋಲಿಸಿ, ಅಶ್ವತ್ಥಾಮ ಕರ್ಣರನ್ನು ಜಯಿಸಿ ಬರುವ ಭೀಮಾರ್ಜುನ ಸಾತ್ಯಕಿಯರನ್ನು ಕಲೆತು ನಿಸ್ತೀರ್ಣ 'ಪ್ರತಿಜ್ಞನಾದ ಅರ್ಜುನನನ್ನೂ, ಸರ್ವಾಪನ್ನಿವಾಕರನು, ಸರ್ವಜ್ಞನು, ಸರ್ವೇಶನು, ಸರ್ವ ಜಗದೇಶವಲ್ಲಭನು, ಸರ್ವ ಸುಜನ ಪರಿಪಾಲನು ಆದ ಶ್ರೀಕೃಷ್ಣನನ್ನೂ ಪ್ರಶಂಸಿಸಿದರು.

## ೧೨. ಚತುರ್ದಶ ದಿನದ ರಾತ್ರಿ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ದ್ವಾದಶಿಯ ದಿನದ ಸಾಯಂತನದಲ್ಲಿ ಜರುಗಿದ ಯುದ್ಧ ಮಹಾ ಕೋಲಾಹಲವನ್ನು ವರ್ಣಿಸಿದನು.

ಅರ್ಜುನನು ಸೈಂಧವನನ್ನು ಸಂಹರಿಸಿ ಬರುವಾಗ, ಕೃಪಾಚಾರ್ಯನು ಮುತ್ತಲು ಆತನನ್ನು ಮೂರ್ಛೆಗೊಳಿಸಿ ಹಿಂದಿರುಗುವಾಗ ಕರ್ಣನು ಕ್ರುದ್ಧನಾಗಿ ಅವನನ್ನೆದುರಿಸ ಬಂದನು. ಆಗ ಸಾತ್ಯಕಿಯು ಶ್ರೀಕೃಷ್ಣನಿತ್ತ ದಿವ್ಯ ರಥದಲ್ಲಿ ಕೂತು ಅವನನ್ನು ಮುತ್ತಿದನು. ಸಾತ್ಯಕಿಯು ಅವನ ಧನುವನ್ನು ಮುರಿದು, ಅಶ್ವಗಳನ್ನು ಸಂಹರಿಸಿ, ಸೂತನನ್ನೂ ಕೆಡಹಿದನು. ವಿರಥನಾದ ಕರ್ಣನನ್ನು ವೃಷಸೇನನು ತನ್ನ ರಥದಲ್ಲಿರಿಸಿಕೊಂಡು, ಸಾತ್ಯಕಿಯಿಂದೆ ಹೋರಾಡಿದನು. ಅವನಿಗೆ ಸಹಾಯರಾಗಿ ದುಶ್ಶಾಸನ, ಶಲ್ಯ, ದ್ರೌಣಿ, ದುರ್ಯೋಧನರು ಅತಿ ತ್ವರೆಯಿಂದ ಬಂದು ಸಾತ್ಯಕಿಯನ್ನು ಶರಜಾಲದಿಂದ ಪೀಡಿಸಿದರು. ಸಾತ್ಯಕಿ ಅವರನ್ನು ವಿರಥರನ್ನಾಗಿ ಮಾಡಿದನು. ಭೀಮನ ಪ್ರತಿಜ್ಞೆಗಾಗಿ ದುರ್ಯೋಧನ ದುಶ್ಶಾಸನರನ್ನೂ, ಅರ್ಜುನನ ಪ್ರತಿಜ್ಞೆಗಾಗಿ ಕರ್ಣನನ್ನೂ, ಕೊಲ್ಲದೆ ಬಿಟ್ಟನು. ಏಕವೀರನಾಗಿ ಕೃಪ ದ್ರೌಣಿಗಳನ್ನೂ ಗೆದ್ದು, ಓಡಿಸಿದನು. ಕೃಷ್ಣ ಪಾರ್ಥರಿಗೆ ಸಮನಾದ

ಧನುರ್ಧರನೆಂದು ಶತ್ರು ಶಿಬಿರದಲ್ಲಿ ವಿಖ್ಯಾತನಾಗಿ, ಭಯವನ್ನು ಹುಟ್ಟಿಸಿದನು. ಅನಂತರ ಕರ್ಣನು ದೂರನಾದುದು ಕಂಡು, ದಾರುಕನು ಕೃಷ್ಣರಥವನ್ನು ಮತ್ತೆ ಕೊಂಡು ಹೋಗಲು, ಸಾತ್ಯಕಿಯು ದಾರುಕಾನುಜನು ತಂದ ತನ್ನ ರಥವನ್ನಾರೋಹಿಸಿ, ಕುರುಸೇನೆಯನ್ನು ಹಿಮ್ಮೆಟ್ಟಿಸಿದನು. ಭೀಮಸೇನನು ಅಂದು ಮೂವತ್ತೊಂದು ಜನ ಧಾರ್ತರಾಷ್ಟ್ರರನ್ನು ಸಂಹರಿಸಿದನು.

ಭೀಮನನ್ನು ನಿಂದಿಸಿದ ಕರ್ಣನನ್ನು ರಣರಂಗದಲ್ಲಿ ಕಂಡು ಅರ್ಜುನನು ಸಮೀಪಿಸಿ 'ಕರ್ಣ ! ಕೇಳಿಲ್ಲಿ ! ಜಯಾಪಜಯಗಳು ಯುದ್ಧರಂಗದಲ್ಲಿ ನಿಯತವಲ್ಲ. ಆದರೂ ನನ್ನ ಗುರುವರನು ಮತ್ತು ಶ್ರೀಕೃಷ್ಣ ಭಕ್ತನು ಆದ ಭೀಮಸೇನನಲ್ಲಿ ವಿಜಯವು ನಿಯತವಾಗಿದೆ. ಸಾತ್ಯಕಿಯ ಮುಂದೆ ನಿಲ್ಲಲಾರದೆ ಓಡಿದ ರಣಹೇಡಿಗೆ, ಭೀಮಸೇನನಿಗೇ ಇಪ್ಪತ್ತೊಂದು ಸಲ ಸೋತು, 'ಬದುಕಿದ್ದರೆ ಸಾಕೆಂದು' ಓಡಿದ ವೀರಂಮನ್ಯನಿಗೆ, ಆ ಮಹಾನುಭಾವನನ್ನು ಕೂಳಿತ್ತ ಕೂಳನು ಮೆಚ್ಚಲೆಂದು, ಹುಚ್ಚು ಮಾತಾಡುವುದು ಉಚಿತವಲ್ಲ. ನಿಜವಾಗಿ ತೂಬರನಲ್ಲದ ಭೀಮನನ್ನು 'ತೂಬರ'ನೆಂದೆ. ಹಂತವ್ಯನಾಗಿರಲು ನಿನ್ನನ್ನು ಬಿಟ್ಟ ಭೀಮಸೇನನ ಕರುಣೆಯನ್ನು ಕಣ್ಣದ್ದು ಕಾಣದೆ ಯಮನರಕ ಗರ್ತದಲ್ಲಿ ಬೀಳಲಿರುವೆ! ಅನಾರ್ಯನಂತೆ ವರ್ತಿಸಿದೆ! ಆರ್ಯವ್ರತನಿರತನಾದ ವೃಕೋದರನು ನಿನಗೆ ನಿಂದ್ಯನಾದನೆ? ನಾನು, ಶ್ರೀಕೃಷ್ಣನು ನೋಡುತ್ತಿರಲು, ನಿನ್ನನ್ನು ವಿರಥನನ್ನಾಗಿಸಿದ ಕೀಚಕ ವೈರಿಗೆ ರಣಪಾಂಡಿತ್ಯವಿಲ್ಲವೇ ? ಬಕವೈರಿ ನಿನಗೆ ಕೂಳಬಾಕನಾದನೇ ? ಆ ಮಹಾತ್ಮನು ಅಷ್ಟು ಸಲ ಗೆದ್ದರೂ, ನಿನ್ನನ್ನು ಹೀನಮಾಡಾಡಿದನೇ ನನ್ನ ಗುರುವನ್ನು ನಿಂದಿಸಿದ ಒಂದೊಂದು ಮಾತಿಗೆ ನಿನ್ನನ್ನು ಒಂದೊಂದು ಸಲ ಕೊಂದರೆ, ಆಗ ನಿನ್ನ ಪಾಪ ಕ್ಷಾಲನವಾದೀತು, ನಿನ್ನ ಪುತ್ರನನ್ನು ಮೊದಲು ಕೊಂದು, ಆಮೇಲೆ ನಿನ್ನನ್ನೂ ಸಂಹರಿಸುವೆನು. ಮಹಾಭಯವು ನೆತ್ತಿಯಲ್ಲಿ ನೃತ್ಯವಾಡುತ್ತಿದೆ ನಿನಗೆ! ಬೇಗ ಬೇಗ ಕೃತ್ಯಗಳನ್ನು ಮುಗಿಸು ! ರಣರಂಗದಲ್ಲಿ ಬಿದ್ದು ಹೊರಳುವ ನಿನ್ನ ಗೋಳನ್ನು ಕೇಳಿ, ಕೌರವ ಹತಕನು ಕಣ್ಣೀರಿಂದ ಕೈ ತೊಳೆಯಲಿ! ಅಲ್ಲಿಯವರೆಗೂ ನಿನ್ನ ಜಂಬದ ಮಾತುಗಳಿಂದ ಅವನನ್ನು ಸಂತೈಸುತ್ತಿರು !' ಎಂದನು. ಆ ಮಾತಿಗೆ ಬದಲು ಕೊಡಲಾರದೆ ಕರ್ಣನು ದೀನವದನನಾಗಿ, ದೂರ ಸರಿದನು. ಸೂರ್ಯನೂ ಮುಣುಗಿದನು.

ಶ್ರೀಕೃಷ್ಣನು 'ಅರ್ಜುನ! ಪಾಪಿ ಜಯದ್ರಥನು ಹತನಾದನು. ಪಾಪತರ ವೃದ್ಧಕ್ಷತ್ರನು ತನ್ನ ಶಾಪಕ್ಕೆ ತಾನೇ ಗುರಿಯಾಗಿ ಸತ್ತನು. ತೀರ್ಣಪ್ರತಿಜ್ಞನಾದೆ! ಕರ್ಣನನ್ನೂ ಸಂಹರಿಸಿ ಉತ್ತೀರ್ಣ ಪ್ರತಿಜ್ಞನಾಗುವಂತೆ ಮಾಡುವೆನು. ರುದ್ರಾಂತಕ ಸಮ ವಿಕ್ರಮನಾದ ನಿನಗೆ ದುಸ್ಸಾಧ್ಯವಿಲ್ಲ' ಎಂದನು. ಆ ಮಾತಿಗೆ ವಿನಮ್ರಶಿರಸ್ಕನಾಗಿ ಪಾರ್ಥನು 'ಶ್ರೀಶ ! ದೇವತೆಗಳಿಗೂ ದುಷ್ಕರವಾದ ಪ್ರತಿಜ್ಞೆಯನ್ನು ಪೂರೈಸಿದೆನು ನಿಜ! ಅದು ನಿನ್ನ ದಯದಿಂದಲೆಂಬುದೂ ನಿಜ! ದೇವ ! ನಾರಾಯಣನು ಯಾರಿಗೆ ನಾಥನೋ, ಅವರಿಗೆ ಜಯವೆಂಬುದೇನಾಶ್ಚರ್ಯವು ? ನಿನ್ನ ಪ್ರಸಾದದಿಂದ ಧರ್ಮಜನು ನಿಷ್ಕಂಟಕ ಮಹೀಮಂಡಲದ ಏಕಚ್ಛತ್ರಾಧಿಪನಾಗುವನು. ಸಂಶಯವಿಲ್ಲ, ನಾವೇನು ಮಾಡಿದರೂ

ಸೂರ್ಯನು ಪಶ್ಚಿಮ ದಿಗಂತದಲ್ಲಿ ಕಾಣಿಸಿದನು. ತಮವನ್ನು ಸೃಜಿಸಿ ಮತ್ತೆ ಉಪಸಂಹರಿಸಿದ ಶ್ರೀಶನ ಮಹಿಮೆಯನ್ನು, ಭಕ್ತವತ್ಸಲತೆಯನ್ನು ಸುಜನರು ಕೊಂಡಾಡಿ, ಪಾಂಡವರನ್ನು ಪ್ರಶಂಸಿಸಿದರು - ಮತ್ತೆ ಸೂರ್ಯಮಂಡಲವನ್ನು ಕಂಡು ಕುರುವೀರರು ನಿರಾಶರಾಗಿ ಕಣ್ಣೀರಿಟ್ಟರು. ಅರ್ಜುನ ಭೀಮ ಕೃಷ್ಣರು ಶಂಖಗಳನ್ನೂದಿ, ಹರ್ಷಧ್ವಾನಗಳನ್ನು ಮಾಡಿದರು. ಜಯೋನ್ಮತ್ತರಾದ ಪಾಂಚಾಲ ವೀರರು ದ್ರೋಣ ಸೇನೆಯನ್ನು ಹಿಮ್ಮೆಟ್ಟಿಸಿ, ಸಿಂಹನಾದ ಮಾಡಿದರು.

ಅರ್ಜುನನು ಭೀಮಸೇನನನ್ನಪ್ಪಿ 'ಅಣ್ಣ! ಶ್ರೀಕೃಷ್ಣ ಕೃಪೆಯಿಂದಲು, ನಿನ್ನ ಸಹಾಯದಿಂದಲು ತೀರ್ಣ ಪ್ರತಿಜ್ಞನಾದೆನು. ನಿನ್ನನ್ನು ನಿಂದಿಸಿದ ಕರ್ಣನು ನಿನ್ನ ಶಿಷ್ಯನಾದ ನನ್ನಿಂದಲೇ ಸಂಹರಿಸಿ ಕೊಲ್ಲಲ್ಪಡುವನು. ಆಗ ನನ್ನ ಪ್ರತಿಜ್ಞೆಯೂ ಪೂರ್ಣವಾಗುವುದು. ನಿನ್ನಿಂದ ಕೊಲ್ಲಲ್ಪಟ್ಟರೆ ನನ್ನ ಪ್ರತಿಜ್ಞೆ ಕೆಡುವುದು. ನಾನವನನ್ನು ಸಂಹರಿಸಿ, ಉಭಯರ ಪ್ರತಿಜ್ಞೆ ಪೂರೈಸುವೆನು. ಸದಾ ನನ್ನಲ್ಲಿ ನಿನ್ನ ಅನುಗ್ರಹವಿರಲಿ!' ಎಂದು ವಂದಿಸಿದನು.

ಧರ್ಮರಾಜನು ಪಾಂಚಜನ್ಯ ದೇವದತ್ತ ಗಂಭೀರಾರವವನ್ನು ಕೇಳಿದನು. ಹಿಂದೆಯೇ ಭೀಮಸೇನನ ಸಿಂಹನಾದವೂ ಕೇಳ ಬಂದಾಗ ಅವನು ಸೈಂಧವನು ಹತನಾದನೆಂದು ತಿಳಿದು ಆನಂದಿಸಿದನು. ಧೃಷ್ಟದ್ಯುಮ್ನಾದಿ ವೀರರು ದ್ರೋಣ ಸೇನೆಯನ್ನು ಸೋಲಿಸಿ, ಅಶ್ವತ್ಥಾಮ ಕರ್ಣರನ್ನು ಜಯಿಸಿ ಬರುವ ಭೀಮಾರ್ಜುನ ಸಾತ್ಯಕಿಯರನ್ನು ಕಲೆತು ನಿಸ್ತೀರ್ಣ 'ಪ್ರತಿಜ್ಞನಾದ ಅರ್ಜುನನನ್ನೂ, ಸರ್ವಾಪನ್ನಿವಾಕರನು, ಸರ್ವಜ್ಞನು, ಸರ್ವೇಶನು, ಸರ್ವ ಜಗದೇಶವಲ್ಲಭನು, ಸರ್ವ ಸುಜನ ಪರಿಪಾಲನು ಆದ ಶ್ರೀಕೃಷ್ಣನನ್ನೂ ಪ್ರಶಂಸಿಸಿದರು.

## ೧೨. ಚತುರ್ದಶ ದಿನದ ರಾತ್ರಿ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ದ್ವಾದಶಿಯ ದಿನದ ಸಾಯಂತನದಲ್ಲಿ ಜರುಗಿದ ಯುದ್ಧ ಮಹಾ ಕೋಲಾಹಲವನ್ನು ವರ್ಣಿಸಿದನು.

ಅರ್ಜುನನು ಸೈಂಧವನನ್ನು ಸಂಹರಿಸಿ ಬರುವಾಗ, ಕೃಪಾಚಾರ್ಯನು ಮುತ್ತಲು ಆತನನ್ನು ಮೂರ್ಛೆಗೊಳಿಸಿ ಹಿಂದಿರುಗುವಾಗ ಕರ್ಣನು ಕ್ರುದ್ಧನಾಗಿ ಅವನನ್ನೆದುರಿಸ ಬಂದನು. ಆಗ ಸಾತ್ಯಕಿಯು ಶ್ರೀಕೃಷ್ಣನಿತ್ತ ದಿವ್ಯ ರಥದಲ್ಲಿ ಕೂತು ಅವನನ್ನು ಮುತ್ತಿದನು. ಸಾತ್ಯಕಿಯು ಅವನ ಧನುವನ್ನು ಮುರಿದು, ಅಶ್ವಗಳನ್ನು ಸಂಹರಿಸಿ, ಸೂತನನ್ನೂ ಕೆಡಹಿದನು. ವಿರಥನಾದ ಕರ್ಣನನ್ನು ವೃಷಸೇನನು ತನ್ನ ರಥದಲ್ಲಿರಿಸಿಕೊಂಡು, ಸಾತ್ಯಕಿಯಿಂದೆ ಹೋರಾಡಿದನು. ಅವನಿಗೆ ಸಹಾಯರಾಗಿ ದುಶ್ಶಾಸನ, ಶಲ್ಯ, ದ್ರೌಣಿ, ದುರ್ಯೋಧನರು ಅತಿ ತ್ವರೆಯಿಂದ ಬಂದು ಸಾತ್ಯಕಿಯನ್ನು ಶರಜಾಲದಿಂದ ಪೀಡಿಸಿದರು. ಸಾತ್ಯಕಿ ಅವರನ್ನು ವಿರಥರನ್ನಾಗಿ ಮಾಡಿದನು. ಭೀಮನ ಪ್ರತಿಜ್ಞೆಗಾಗಿ ದುರ್ಯೋಧನ ದುಶ್ಶಾಸನರನ್ನೂ, ಅರ್ಜುನನ ಪ್ರತಿಜ್ಞೆಗಾಗಿ ಕರ್ಣನನ್ನೂ, ಕೊಲ್ಲದೆ ಬಿಟ್ಟನು. ಏಕವೀರನಾಗಿ ಕೃಪ ದ್ರೌಣಿಗಳನ್ನೂ ಗೆದ್ದು, ಓಡಿಸಿದನು. ಕೃಷ್ಣ ಪಾರ್ಥರಿಗೆ ಸಮನಾದ

ಧನುರ್ಧರನೆಂದು ಶತ್ರು ಶಿಬಿರದಲ್ಲಿ ವಿಖ್ಯಾತನಾಗಿ, ಭಯವನ್ನು ಹುಟ್ಟಿಸಿದನು. ಅನಂತರ ಕರ್ಣನು ದೂರನಾದುದು ಕಂಡು, ದಾರುಕನು ಕೃಷ್ಣರಥವನ್ನು ಮತ್ತೆ ಕೊಂಡು ಹೋಗಲು, ಸಾತ್ಯಕಿಯು ದಾರುಕಾನುಜನು ತಂದ ತನ್ನ ರಥವನ್ನಾರೋಹಿಸಿ, ಕುರುಸೇನೆಯನ್ನು ಹಿಮ್ಮೆಟ್ಟಿಸಿದನು. ಭೀಮಸೇನನು ಅಂದು ಮೂವತ್ತೊಂದು ಜನ ಧಾರ್ತರಾಷ್ಟ್ರರನ್ನು ಸಂಹರಿಸಿದನು.

ಭೀಮನನ್ನು ನಿಂದಿಸಿದ ಕರ್ಣನನ್ನು ರಣರಂಗದಲ್ಲಿ ಕಂಡು ಅರ್ಜುನನು ಸಮೀಪಿಸಿ 'ಕರ್ಣ ! ಕೇಳಿಲ್ಲಿ ! ಜಯಾಪಜಯಗಳು ಯುದ್ಧರಂಗದಲ್ಲಿ ನಿಯತವಲ್ಲ. ಆದರೂ ನನ್ನ ಗುರುವರನು ಮತ್ತು ಶ್ರೀಕೃಷ್ಣ ಭಕ್ತನು ಆದ ಭೀಮಸೇನನಲ್ಲಿ ವಿಜಯವು ನಿಯತವಾಗಿದೆ. ಸಾತ್ಯಕಿಯ ಮುಂದೆ ನಿಲ್ಲಲಾರದೆ ಓಡಿದ ರಣಹೇಡಿಗೆ, ಭೀಮಸೇನನಿಗೇ ಇಪ್ಪತ್ತೊಂದು ಸಲ ಸೋತು, 'ಬದುಕಿದ್ದರೆ ಸಾಕೆಂದು' ಓಡಿದ ವೀರಂಮನ್ಯನಿಗೆ, ಆ ಮಹಾನುಭಾವನನ್ನು ಕೂಳಿತ್ತ ಕೂಳನು ಮೆಚ್ಚಲೆಂದು, ಹುಚ್ಚು ಮಾತಾಡುವುದು ಉಚಿತವಲ್ಲ. ನಿಜವಾಗಿ ತೂಬರನಲ್ಲದ ಭೀಮನನ್ನು 'ತೂಬರ'ನೆಂದೆ. ಹಂತವ್ಯನಾಗಿರಲು ನಿನ್ನನ್ನು ಬಿಟ್ಟ ಭೀಮಸೇನನ ಕರುಣೆಯನ್ನು ಕಣ್ಣದ್ದು ಕಾಣದೆ ಯಮನರಕ ಗರ್ತದಲ್ಲಿ ಬೀಳಲಿರುವೆ! ಅನಾರ್ಯನಂತೆ ವರ್ತಿಸಿದೆ! ಆರ್ಯವ್ರತನಿರತನಾದ ವೃಕೋದರನು ನಿನಗೆ ನಿಂದ್ಯನಾದನೆ? ನಾನು, ಶ್ರೀಕೃಷ್ಣನು ನೋಡುತ್ತಿರಲು, ನಿನ್ನನ್ನು ವಿರಥನನ್ನಾಗಿಸಿದ ಕೀಚಕ ವೈರಿಗೆ ರಣಪಾಂಡಿತ್ಯವಿಲ್ಲವೇ ? ಬಕವೈರಿ ನಿನಗೆ ಕೂಳಬಾಕನಾದನೇ ? ಆ ಮಹಾತ್ಮನು ಅಷ್ಟು ಸಲ ಗೆದ್ದರೂ, ನಿನ್ನನ್ನು ಹೀನಮಾಡಾಡಿದನೇ ನನ್ನ ಗುರುವನ್ನು ನಿಂದಿಸಿದ ಒಂದೊಂದು ಮಾತಿಗೆ ನಿನ್ನನ್ನು ಒಂದೊಂದು ಸಲ ಕೊಂದರೆ, ಆಗ ನಿನ್ನ ಪಾಪ ಕ್ಷಾಲನವಾದೀತು, ನಿನ್ನ ಪುತ್ರನನ್ನು ಮೊದಲು ಕೊಂದು, ಆಮೇಲೆ ನಿನ್ನನ್ನೂ ಸಂಹರಿಸುವೆನು. ಮಹಾಭಯವು ನೆತ್ತಿಯಲ್ಲಿ ನೃತ್ಯವಾಡುತ್ತಿದೆ ನಿನಗೆ! ಬೇಗ ಬೇಗ ಕೃತ್ಯಗಳನ್ನು ಮುಗಿಸು ! ರಣರಂಗದಲ್ಲಿ ಬಿದ್ದು ಹೊರಳುವ ನಿನ್ನ ಗೋಳನ್ನು ಕೇಳಿ, ಕೌರವ ಹತಕನು ಕಣ್ಣೀರಿಂದ ಕೈ ತೊಳೆಯಲಿ! ಅಲ್ಲಿಯವರೆಗೂ ನಿನ್ನ ಜಂಬದ ಮಾತುಗಳಿಂದ ಅವನನ್ನು ಸಂತೈಸುತ್ತಿರು !' ಎಂದನು. ಆ ಮಾತಿಗೆ ಬದಲು ಕೊಡಲಾರದೆ ಕರ್ಣನು ದೀನವದನನಾಗಿ, ದೂರ ಸರಿದನು. ಸೂರ್ಯನೂ ಮುಣುಗಿದನು.

ಶ್ರೀಕೃಷ್ಣನು 'ಅರ್ಜುನ! ಪಾಪಿ ಜಯದ್ರಥನು ಹತನಾದನು. ಪಾಪತರ ವೃದ್ಧಕ್ಷತ್ರನು ತನ್ನ ಶಾಪಕ್ಕೆ ತಾನೇ ಗುರಿಯಾಗಿ ಸತ್ತನು. ತೀರ್ಣಪ್ರತಿಜ್ಞನಾದೆ! ಕರ್ಣನನ್ನೂ ಸಂಹರಿಸಿ ಉತ್ತೀರ್ಣ ಪ್ರತಿಜ್ಞನಾಗುವಂತೆ ಮಾಡುವೆನು. ರುದ್ರಾಂತಕ ಸಮ ವಿಕ್ರಮನಾದ ನಿನಗೆ ದುಸ್ಸಾಧ್ಯವಿಲ್ಲ' ಎಂದನು. ಆ ಮಾತಿಗೆ ವಿನಮ್ರಶಿರಸ್ಕನಾಗಿ ಪಾರ್ಥನು 'ಶ್ರೀಶ ! ದೇವತೆಗಳಿಗೂ ದುಷ್ಕರವಾದ ಪ್ರತಿಜ್ಞೆಯನ್ನು ಪೂರೈಸಿದೆನು ನಿಜ! ಅದು ನಿನ್ನ ದಯದಿಂದಲೆಂಬುದೂ ನಿಜ! ದೇವ ! ನಾರಾಯಣನು ಯಾರಿಗೆ ನಾಥನೋ, ಅವರಿಗೆ ಜಯವೆಂಬುದೇನಾಶ್ಚರ್ಯವು ? ನಿನ್ನ ಪ್ರಸಾದದಿಂದ ಧರ್ಮಜನು ನಿಷ್ಕಂಟಕ ಮಹೀಮಂಡಲದ ಏಕಚ್ಛತ್ರಾಧಿಪನಾಗುವನು. ಸಂಶಯವಿಲ್ಲ, ನಾವೇನು ಮಾಡಿದರೂ

ನಿನ್ನ ಪ್ರಭಾವದಿಂದ. ನಿನ್ನದೇ ವಿಜಯ, ನಾವು ನಿಮಿತ್ತಮಾತ್ರರು. ಪ್ರಭೋ! ಸದಾ ನಿನ್ನ ದಾಸರಾದ ನಮ್ಮಲ್ಲಿ ಇಂತೇ ದಯತೋರು ! 'ಎಂದನು.

ಶ್ರೀಕೃಷ್ಣನು ಭಯದ ರಣರಂಗವನ್ನು ಅರ್ಜುನನಿಗೆ ತೋರುತ್ತಾ ಧರ್ಮಜನ ಶಿಬಿರದ ಕಡೆಗೆ ನಡೆದನು. ಭೀಮ ಸಾತ್ಯಕಿ ಧೃಷ್ಟದ್ಯುಮ್ನರು ಕುರು ಸೇನೆಯನ್ನು ಹೊಡೆದೋಡಿಸುತ್ತಿದ್ದರು. ದುರ್ಯೋಧನನು ಸಿಟ್ಟಿನಿಂದ ಭೀಮನನ್ನು ಮುತ್ತಿ ಏಕ ವೀರನಾಗಿ ಭೀಮ, ಧೃಷ್ಟದ್ಯುಮ್ನ, ನಕುಲ ಸಹದೇವರನ್ನೂ ಮತ್ತೆ ಬಂದ ಸಾತ್ಯಕಿ ದ್ರೌಪದೇಯರನ್ನು ಶರಜಾಲದಿಂದ ಪೀಡಿಸಿದನು. ಅವರೂ ಅವನನ್ನು ಬಹು ನಿಶಿತ ಬಾಣಗಳಿಂದ ಪೀಡಿಸಿದರು. ಕುರುರಾಜನು ಕುಪಿತನಾಗಿ ಅವರ ಬಾಣಗಳನ್ನೆಲ್ಲ ಖಂಡಿಸಿ, ಧೃಷ್ಟದ್ಯುಮ್ನಾದಿಗಳನ್ನು ವಿಧನುಷ್ಕರನ್ನಾಗಿಸಿ, ನಕುಲ ಸಹದೇವರ ಕುದುರೆಗಳನ್ನು ಸಂಹರಿಸಿದನು. ಆಗ ಅವನಿಗೆ ಸಹಾಯರಾಗಿ ದ್ರೋಣ, ದ್ರೌಣಿ, ಕೃಪ, ಕರ್ಣರು ಬಂದರು. ಭೀಮಸೇನನು ಅವರನ್ನು ಶರಜಾಲದಿಂದ ಪೀಡಿಸಿದನು. ಆಗ ಸುಯೋಧನನು 'ಕರ್ಣ ! ಭೀಮನನ್ನು ಕೊಲ್ಲು!' ಎಂದು ಬೇಡಿದನು. ಕರ್ಣನು 'ರಾಜನ್ ! ಭೀಮನಿಂದ ಬಹು ವ್ಯಥಿತನಾಗಿರುವೆನು. ಅದೃಷ್ಟದಿಂದ ಸಾಯದೆ ಉಳಿದಿರುವೆನು. ಶಕ್ತ್ಯನುಸಾರವಾಗಿ ನಾನೂ ನಿನ್ನ ಋಣವನ್ನು ತೀರಿಸಲು ಹೆಣಗುತ್ತಿರುವೆನು. ಜಯವು ದೈವಾಧೀನವಾಗಿದೆ' ಎಂದು ನುಡಿದನು. ಭೀಮಸೇನಾದಿಗಳೂ ಜಯದ್ರಥನ ಮೃತಿಗಾಗಿ ಅಳುತ್ತಾ ಹೋಗುವ ಕುರು ವೀರರನ್ನು ಬಿಟ್ಟು ಧರ್ಮಜನ ಶಿಬಿರದ ಕಡೆಗೆ ನಡೆದರು.

ಶ್ರೀಕೃಷ್ಣನು ಧರ್ಮಜನನ್ನು ಸಮೀಪಿಸಿ,'ಅದೃಷ್ಟದಿಂದ ವರ್ಧಿತಜಯನಾಗಿರುವೆ ! ಸೈಂಧವನು ಹತನಾದನು. ರಾಜೇಂದ್ರ ! ಅರ್ಜುನನ ಪ್ರತಿಜ್ಞೆಯು ಪೂರ್ಣವಾಯಿತು. ಜಯಶಾಲಿಯಾಗು !' ಎಂದನು. ಧರ್ಮರಾಜನ ಕಣ್ಣುಗಳು ಆನಂದದಿಂದ ತುಂಬಿ ಬಂದವು. ಅವನ ಹೃದಯವು ದ್ರವಿಸಿತು. ಶ್ರೀಕೃಷ್ಣನನ್ನು ಕರೆದಪ್ಪಿ ಆನಂದಬಾಷ್ಪಗಳಿಂದ, ಆ ನಂದನಂದನನ ಚರಣಾರವಿಂದಗಳನ್ನು ತೋಯಿಸಿ, ನಮಿಸಿ ಕೈ ಜೋಡಿಸಿ ಇಂತೆಂದನು: 'ಪುಷ್ಕರನಾಭ ! ನಿನ್ನಿಂದ ಪ್ರಿಯ ವಾರ್ತೆಯನ್ನು ಕೇಳಿ ಆನಂದವಾರಿಧಿಯ ಪಾರಗಾಣದಂತಾಗಿದೆ. ನನ್ನ ಸೋದರರು, ಸಾತ್ಯಕಿಸಹಿತರಾಗಿ ಉಳಿದು, ಇಂದಿನ ರಣರಂಗದಿಂದ ಪಾರಾಗಿ ಬಂದರೆಂದರೆ, ಅದು ನಿನ್ನ ಅನುಗ್ರಹದಿಂದ. ಪಾಪಿ ಸೈಂಧವನನ್ನು ಕೊಲ್ಲಿಸಿ, ಅರ್ಜುನನನ್ನು ಕಾಪಾಡಿದೆ ! ಬಹುಪ್ರೀತನಾಗಿರುವೆನು. ಗೋವಿಂದ ! ನಿನ್ನನ್ನು ನಂಬಿದ ನಮಗೆ ಸೈಂಧವ ಜಯವೇ ಅಲ್ಲದೇ ಸರ್ವಶತ್ರುಜಯವೂ ನಿಶ್ಚಿತವಾಗಿದೆ. ನಿನ್ನ ಕರುಣಾಕಟಾಕ್ಷವನ್ನು ನಂಬಿ ರಣಕಣಕ್ಕಿಳಿದಿರುವೆವು. ಅಸುರ ವಧೆಗಾಗಿ ದೇವೇಂದ್ರನು ಉಪೇಂದ್ರನನ್ನಾಶ್ರಯಿಸುವಂತೆ ನಾವು ನಿನ್ನನ್ನಾಶ್ರಯಿಸಿರುವೆವು. ನೀನು ನಮಗೆ ಪ್ರಿಯನೂ ಹಿತನೂ ಆಗಿರುವೆ! ಶ್ರೀಶ ! ನಿನ್ನ ಸಹಾಯದಿಂದಲ್ಲವೇ ಅರ್ಜುನನೀ ಘನ ಕಾರ್ಯವನ್ನು ಸಾಧಿಸಿರುವನು. ಬಾಲ್ಯದಿಂದಲು ನೀ ಮಾಡಿದ ಲೋಕೋತ್ತರ ಮಹತ್ಕರ್ಮಗಳನ್ನು ಕೇಳಿ, ತಿಳಿದಿರುವೆನು.

ಕಂಸನಂತೆ ಕೌರವಾಧಮರೂ ಸಾಯುವರೆಂದು ಸಾರುವ ನಿನ್ನ ಶಂಖವೇ ನನ್ನ ವಿಜಯವನ್ನು ಸಾಧಿಸಿಕೊಡುತ್ತಿದೆ. ನಿನ್ನಿಂದ ಶತಮುಖನು ಇಂದ್ರನಾದನು. ನಿನ್ನಿಂದ ಚರಾಚರ ಜಗವು ಪುಟ್ಟಿ ಬೆಳೆದು, ಪ್ರವರ್ತಿಸಿ, ಲಯವಾಗುತ್ತಲಿದೆ. ಬ್ರಹ್ಮ ಜನಕನಾದ ನಿನಗೆ ಮತ್ತೊಬ್ಬ ಸೃಷ್ಟಿ ಸಂಹಾರ ಕಾರಣನಿಲ್ಲ. ನಾಶರಹಿತನು, ಸರ್ವೋತ್ತಮನು, ಸ್ವತಂತ್ರನು, ರಮಾಪತಿಯು, ಆದ ನಿನ್ನನ್ನರಿತು ಭಜಿಸಿದವರು ಅಜ್ಞಾನದ ಬಲೆಗೆ ಬೀಳರು. ಬ್ರಹ್ಮ ರುದ್ರಾದಿ ವಂದಿತನಾದ ನಿನ್ನನ್ನು ವಂದಿಸಿದವರು ಪರಮೈಶ್ವರ್ಯಭಾಜನರಾಗುವರು. ವೇದವೇದ್ಯನಾದ ನಿನ್ನನ್ನು ಪೂಜಿಸಿದವರು ಮುಕ್ತರಾಗುವರು. ನಿನ್ನ ಮಹಿಮೆಯನ್ನು ಮಾರ್ಕಂಡೇಯನು, ದೇವಲಾಸಿತನು, ನಾರದನು ಭೀಷ್ಮನು ಅರಿತು, ನನಗೆ ತಿಳಿಸಿರುವರು. ಅನಾದಿನಿಧನ ! ಜಗತ್ಪತೇ ! ರಮಾವಲ್ಲಭ! ಅಪ್ರಮೇಯ ಮಹಿಮನಾದ ನಿನ್ನನ್ನು ಬ್ರಹ್ಮ ರುದ್ರರೇ ತಿಳಿದಿಲ್ಲವೆಂದ ಮೇಲೆ ನನ್ನಂತಹ ಪಾಮರನ ಪಾಡೇನು ? ನಿನ್ನ ಕಲ್ಯಾಣ ಗುಣಗಳಿಗೆಣೆ ಇಲ್ಲ. ಇಂತಹ ಗುಣಭರಿತನಾದ ನೀನೆಮ್ಮ ಪರಮಾಪ್ತ ಬಂಧುವಾಗಿರುವೆ ! ನನಗಿನ್ನೇನು ಕೊರತೆ? ಏನು ಚಿಂತೆ ?'

ಇಂತು ನುಡಿದ ಧರ್ಮರಾಜನನ್ನು ಶ್ರೀಕೃಷ್ಣನು ಮಧುರ ಗಂಭೀರ ವಚನಗಳಿಂದ ಸಂತೈಸುತ್ತ ತೆಂದನು: 'ಮಹಾರಾಜ ! ನಿನ್ನ ಮಹೋಗ್ರ ತಪಶ್ಶಕ್ತಿಯಿಂದ ಅರ್ಜುನನೀ ಕಾರ್ಯವನ್ನು ಮಾಡಿರುವನು. ನಿನ್ನ ಅನುಧ್ಯಾನವೆಂಬ ಕವಚವು ನಿನ್ನವರಿಗೆ ರಕ್ಷೆಯಾಗಿದೆ. ತಪೋಜ್ಞಾನ ವೀರ್ಯ ಸಾಧುತ್ವಾರ್ಜವಗಳಿಂದ ನೀವೈವರು ಜಯಶೀಲರಾಗಿರುವಿರಿ ! ಕೃತಿಯಲ್ಲಿ ಬಾಹುವೀರ್ಯದಲ್ಲಿ ಅಸಂಭ್ರಮದಲ್ಲಿ ಭೀಮಸೇನನಿಗೆ ಸಮರಿಲ್ಲ. ಶೀಘ್ರತೆ, ಅಮೋಘಬುದ್ಧಿ ವಿಕ್ರಮಗಳಲ್ಲಿ ಅರ್ಜುನನಿಗೆ ಸಮರಿಲ್ಲ. ಇಂದಿಗೆ ನಿನ್ನ ಸೇನೆಯ ಎರಡಕ್ಷೌಹಿಣಿಗಳೂ, ಕೌರವರ ಐದಕ್ಷೌಹಿಣಿಗಳೂ ಸಂಹೃತವಾಗಿವೇ. ಅದರಲ್ಲಿ ಭೀಮನೇ ಮೂರಕ್ಷೌಹಿಣಿಗಳನ್ನು ಸಂಹರಿಸಿರುವನು. ಅರ್ಜುನನು ಎರಡನ್ನು ಕಡೆಗಾಣಿಸಿರುವನು. ಇಂತಹ ವೀರ ಸೋದರರಿಲು ನೀನು ಜಯಿಸುವಲ್ಲಿ ಸಂದೇಹವಿಲ್ಲ.'

ಆಗ ಧರ್ಮರಾಜನು ಭೀಮಾರ್ಜುನರನ್ನೂ ಸಾತ್ಯಕಿ ಧೃಷ್ಟದ್ಯುಮ್ನರನ್ನೂ ಕರೆದಪ್ಪಿ ಅವರನ್ನು ಪ್ರಶಂಸಿಸಿದನು. 'ಅದೃಷ್ಟದಿಂದ ಕಷ್ಟತರವಾದ ಪ್ರತಿಜ್ಞೆಯನ್ನು ಪೂರೈಸಿದೆ! ಶ್ರೀಕೃಷ್ಣನ ದಯದಿಂದ ನಾವೂ ಉಳಿದೆವು' ಎಂದು ಅರ್ಜುನನ ಬೆನ್ನು ತಟ್ಟಿ ಪ್ರಶಂಸಿಸಿದನು. ಭೀಮಾರ್ಜುನರು, 'ಮಹಾರಾಜ ! ನಿನ್ನ ಕ್ರೋಧಾಗ್ನಿಯಿಂದ ದಗ್ಧನಾಗಿ ಜಯದ್ರಥನು ಸತ್ತನು. ನಿನ್ನ ಆಶ್ವಾಸನವೇ ಬಲವಾಗಿ ನಾವು ಶತ್ರು ವೀರರನ್ನು ಕೊಂದೆವು, ಕೊಲ್ಲುತ್ತಿರುವೆವು - ಮುಂದೂ ಕೊಲ್ಲುವೆವು. ಪೂರ್ವದಲ್ಲಿ ದೇವ ದುರ್ಜಯನಾದ ಭೀಷ್ಮನು ಕೂಡ, ನಿನ್ನ ದ್ರೋಹದಿಂದ ಹತನಾಗಿ, ಶರಪಂಜರದಲ್ಲಿರುವನು. ನಿನ್ನ ಕ್ರೋಧವನ್ನು ಗಳಿಸಿದವರು ಮೃತ್ಯುವಿಷವನ್ನು ಕಬಳಿಸಿರುವರು. ಚಕ್ಷುರ್ದಹನನಾದ ನಿನ್ನ ಕ್ರೋಧಾಗ್ನಿಗೆ ತುತ್ತಾಗಿ, ಸಪುತ್ರಮಿತ್ರ

ನಿನ್ನ ಪ್ರಭಾವದಿಂದ. ನಿನ್ನದೇ ವಿಜಯ, ನಾವು ನಿಮಿತ್ತಮಾತ್ರರು. ಪ್ರಭೋ! ಸದಾ ನಿನ್ನ ದಾಸರಾದ ನಮ್ಮಲ್ಲಿ ಇಂತೇ ದಯತೋರು !' ಎಂದನು.

ಶ್ರೀಕೃಷ್ಣನು ಭಯದ ರಣರಂಗವನ್ನು ಅರ್ಜುನನಿಗೆ ತೋರುತ್ತಾ ಧರ್ಮಜನ ಶಿಬಿರದ ಕಡೆಗೆ ನಡೆದನು. ಭೀಮ ಸಾತ್ಯಕಿ ಧೃಷ್ಟದ್ಯುಮ್ನರು ಕುರು ಸೇನೆಯನ್ನು ಹೊಡೆದೋಡಿಸುತ್ತಿದ್ದರು. ದುರ್ಯೋಧನನು ಸಿಟ್ಟಿನಿಂದ ಭೀಮನನ್ನು ಮುತ್ತಿ ಏಕ ವೀರನಾಗಿ ಭೀಮ, ಧೃಷ್ಟದ್ಯುಮ್ನ, ನಕುಲ ಸಹದೇವರನ್ನೂ ಮತ್ತೆ ಬಂದ ಸಾತ್ಯಕಿ ದ್ರೌಪದೇಯರನ್ನು ಶರಜಾಲದಿಂದ ಪೀಡಿಸಿದನು. ಅವರೂ ಅವನನ್ನು ಬಹು ನಿಶಿತ ಬಾಣಗಳಿಂದ ಪೀಡಿಸಿದರು. ಕುರುರಾಜನು ಕುಪಿತನಾಗಿ ಅವರ ಬಾಣಗಳನ್ನೆಲ್ಲ ಖಂಡಿಸಿ, ಧೃಷ್ಟದ್ಯುಮ್ನಾದಿಗಳನ್ನು ವಿಧನುಷ್ಕರನ್ನಾಗಿಸಿ, ನಕುಲ ಸಹದೇವರ ಕುದುರೆಗಳನ್ನು ಸಂಹರಿಸಿದನು. ಆಗ ಅವನಿಗೆ ಸಹಾಯರಾಗಿ ದ್ರೋಣ, ದ್ರೌಣಿ, ಕೃಪ, ಕರ್ಣರು ಬಂದರು. ಭೀಮಸೇನನು ಅವರನ್ನು ಶರಜಾಲದಿಂದ ಪೀಡಿಸಿದನು. ಆಗ ಸುಯೋಧನನು 'ಕರ್ಣ ! ಭೀಮನನ್ನು ಕೊಲ್ಲು !' ಎಂದು ಬೇಡಿದನು. ಕರ್ಣನು 'ರಾಜನ್ ! ಭೀಮನಿಂದ ಬಹು ವ್ಯಥಿತನಾಗಿರುವೆನು. ಅದೃಷ್ಟದಿಂದ ಸಾಯದೆ ಉಳಿದಿರುವೆನು. ಶಕ್ತ್ಯನುಸಾರವಾಗಿ ನಾನೂ ನಿನ್ನ ಋಣವನ್ನು ತೀರಿಸಲು ಹೆಣಗುತ್ತಿರುವೆನು. ಜಯವು ದೈವಾಧೀನವಾಗಿದೆ' ಎಂದು ನುಡಿದನು. ಭೀಮಸೇನಾದಿಗಳೂ ಜಯದ್ರಥನ ಮೃತಿಗಾಗಿ ಅಳುತ್ತಾ ಹೋಗುವ ಕುರು ವೀರರನ್ನು ಬಿಟ್ಟು ಧರ್ಮಜನ ಶಿಬಿರದ ಕಡೆಗೆ ನಡೆದರು.

ಶ್ರೀಕೃಷ್ಣನು ಧರ್ಮಜನನ್ನು ಸಮೀಪಿಸಿ,'ಅದೃಷ್ಟದಿಂದ ವರ್ಧಿತಜಯನಾಗಿರುವೆ ! ಸೈಂಧವನು ಹತನಾದನು. ರಾಜೇಂದ್ರ ! ಅರ್ಜುನನ ಪ್ರತಿಜ್ಞೆಯು ಪೂರ್ಣವಾಯಿತು. ಜಯಶಾಲಿಯಾಗು !' ಎಂದನು. ಧರ್ಮರಾಜನ ಕಣ್ಣುಗಳು ಆನಂದದಿಂದ ತುಂಬಿ ಬಂದವು. ಅವನ ಹೃದಯವು ದ್ರವಿಸಿತು. ಶ್ರೀಕೃಷ್ಣನನ್ನು ಕರೆದಪ್ಪಿ ಆನಂದಬಾಷ್ಪಗಳಿಂದ, ಆ ನಂದನಂದನನ ಚರಣಾರವಿಂದಗಳನ್ನು ತೋಯಿಸಿ, ನಮಿಸಿ ಕೈ ಜೋಡಿಸಿ ಇಂತೆಂದನು: 'ಪುಷ್ಕರನಾಭ ! ನಿನ್ನಿಂದ ಪ್ರಿಯ ವಾರ್ತೆಯನ್ನು ಕೇಳಿ ಆನಂದವಾರಿಧಿಯ ಪಾರಗಾಣದಂತಾಗಿದೆ. ನನ್ನ ಸೋದರರು, ಸಾತ್ಯಕಿಸಹಿತರಾಗಿ ಉಳಿದು, ಇಂದಿನ ರಣರಂಗದಿಂದ ಪಾರಾಗಿ ಬಂದರೆಂದರೆ, ಅದು ನಿನ್ನ ಅನುಗ್ರಹದಿಂದ. ಪಾಪಿ ಸೈಂಧವನನ್ನು ಕೊಲ್ಲಿಸಿ, ಅರ್ಜುನನನ್ನು ಕಾಪಾಡಿದೆ ! ಬಹುಪ್ರೀತನಾಗಿರುವೆನು. ಗೋವಿಂದ ! ನಿನ್ನನ್ನು ನಂಬಿದ ನಮಗೆ ಸೈಂಧವ ಜಯವೇ ಅಲ್ಲದೇ ಸರ್ವಶತ್ರುಜಯವೂ ನಿಶ್ಚಿತವಾಗಿದೆ. ನಿನ್ನ ಕರುಣಾಕಟಾಕ್ಷವನ್ನು ನಂಬಿ ರಣಕಣಕ್ಕಿಳಿದಿರುವೆವು. ಅಸುರ ವಧೆಗಾಗಿ ದೇವೇಂದ್ರನು ಉಪೇಂದ್ರನನ್ನಾಶ್ರಯಿಸುವಂತೆ ನಾವು ನಿನ್ನನ್ನಾಶ್ರಯಿಸಿರುವೆವು. ನೀನು ನಮಗೆ ಪ್ರಿಯನೂ ಹಿತನೂ ಆಗಿರುವೆ! ಶ್ರೀಶ ! ನಿನ್ನ ಸಹಾಯದಿಂದಲ್ಲವೇ ಅರ್ಜುನನೀ ಘನ ಕಾರ್ಯವನ್ನು ಸಾಧಿಸಿರುವನು. ಬಾಲ್ಯದಿಂದಲು ನೀ ಮಾಡಿದ ಲೋಕೋತ್ತರ ಮಹತ್ಕರ್ಮಗಳನ್ನು ಕೇಳಿ, ತಿಳಿದಿರುವೆನು.

ಕಂಸನಂತೆ ಕೌರವಾಧಮರೂ ಸಾಯುವರೆಂದು ಸಾರುವ ನಿನ್ನ ಶಂಖವೇ ನನ್ನ ವಿಜಯವನ್ನು ಸಾಧಿಸಿಕೊಡುತ್ತಿದೆ. ನಿನ್ನಿಂದ ಶತಮುಖನು ಇಂದ್ರನಾದನು. ನಿನ್ನಿಂದ ಚರಾಚರ ಜಗವು ಪುಟ್ಟಿ ಬೆಳೆದು, ಪ್ರವರ್ತಿಸಿ, ಲಯವಾಗುತ್ತಲಿದೆ. ಬ್ರಹ್ಮ ಜನಕನಾದ ನಿನಗೆ ಮತ್ತೊಬ್ಬ ಸೃಷ್ಟಿ ಸಂಹಾರ ಕಾರಣನಿಲ್ಲ. ನಾಶರಹಿತನು, ಸರ್ವೋತ್ತಮನು, ಸ್ವತಂತ್ರನು, ರಮಾಪತಿಯು, ಆದ ನಿನ್ನನ್ನರಿತು ಭಜಿಸಿದವರು ಅಜ್ಞಾನದ ಬಲೆಗೆ ಬೀಳರು. ಬ್ರಹ್ಮ ರುದ್ರಾದಿ ವಂದಿತನಾದ ನಿನ್ನನ್ನು ವಂದಿಸಿದವರು ಪರಮೈಶ್ವರ್ಯಭಾಜನರಾಗುವರು. ವೇದವೇದ್ಯನಾದ ನಿನ್ನನ್ನು ಪೂಜಿಸಿದವರು ಮುಕ್ತರಾಗುವರು. ನಿನ್ನ ಮಹಿಮೆಯನ್ನು ಮಾರ್ಕಂಡೇಯನು, ದೇವಲಾಸಿತನು, ನಾರದನು ಭೀಷ್ಮನು ಅರಿತು, ನನಗೆ ತಿಳಿಸಿರುವರು. ಅನಾದಿನಿಧನ ! ಜಗತ್ಪತೇ ! ರಮಾವಲ್ಲಭ ! ಅಪ್ರಮೇಯ ಮಹಿಮನಾದ ನಿನ್ನನ್ನು ಬ್ರಹ್ಮ ರುದ್ರರೇ ತಿಳಿದಿಲ್ಲವೆಂದ ಮೇಲೆ ನನ್ನಂತಹ ಪಾಮರನ ಪಾಡೇನು ? ನಿನ್ನ ಕಲ್ಯಾಣ ಗುಣಗಳಿಗೆಣೆ ಇಲ್ಲ. ಇಂತಹ ಗುಣಭರಿತನಾದ ನೀನೆಮ್ಮ ಪರಮಾಪ್ತ ಬಂಧುವಾಗಿರುವೆ ! ನನಗಿನ್ನೇನು ಕೊರತೆ? ಏನು ಚಿಂತೆ ? '

ಇಂತು ನುಡಿದ ಧರ್ಮರಾಜನನ್ನು ಶ್ರೀಕೃಷ್ಣನು ಮಧುರ ಗಂಭೀರ ವಚನಗಳಿಂದ ಸಂತೈಸುತ್ತಾ ತೆಂದನು: 'ಮಹಾರಾಜ ! ನಿನ್ನ ಮಹೋಗ್ರ ತಪಶ್ಶಕ್ತಿಯಿಂದ ಅರ್ಜುನನೀ ಕಾರ್ಯವನ್ನು ಮಾಡಿರುವನು. ನಿನ್ನ ಅನುಧ್ಯಾನವೆಂಬ ಕವಚವು ನಿನ್ನವರಿಗೆ ರಕ್ಷೆಯಾಗಿದೆ. ತಪೋಜ್ಞಾನ ವೀರ್ಯ ಸಾಧುತ್ವಾರ್ಜವಗಳಿಂದ ನೀವೈವರು ಜಯಶೀಲರಾಗಿರುವಿರಿ ! ಕೃತಿಯಲ್ಲಿ, ಬಾಹುವೀರ್ಯದಲ್ಲಿ, ಅಸಂಭ್ರಮದಲ್ಲಿ ಭೀಮಸೇನನಿಗೆ ಸಮರಿಲ್ಲ. ಶೀಘ್ರತೆ, ಅಮೋಘಬುದ್ಧಿ ವಿಕ್ರಮಗಳಲ್ಲಿ ಅರ್ಜುನನಿಗೆ ಸಮರಿಲ್ಲ. ಇಂದಿಗೆ ನಿನ್ನ ಸೇನೆಯ ಎರಡಕ್ಷೌಹಿಣಿಗಳೂ, ಕೌರವರ ಐದಕ್ಷೌಹಿಣಿಗಳೂ ಸಂಹೃತವಾಗಿವೇ. ಅದರಲ್ಲಿ ಭೀಮನೇ ಮೂರಕ್ಷೌಹಿಣಿಗಳನ್ನು ಸಂಹರಿಸಿರುವನು. ಅರ್ಜುನನು ಎರಡನ್ನು ಕಡೆಗಾಣಿಸಿರುವನು. ಇಂತಹ ವೀರ ಸೋದರರಿಂದ ನೀನು ಜಯಿಸುವಲ್ಲಿ ಸಂದೇಹವಿಲ್ಲ.'

ಆಗ ಧರ್ಮರಾಜನು ಭೀಮಾರ್ಜುನರನ್ನೂ ಸಾತ್ಯಕಿ ಧೃಷ್ಟದ್ಯುಮ್ನರನ್ನೂ ಕರೆದಪ್ಪಿ ಅವರನ್ನು ಪ್ರಶಂಸಿಸಿದನು. ' ಅದೃಷ್ಟದಿಂದ ಕಷ್ಟತರವಾದ ಪ್ರತಿಜ್ಞೆಯನ್ನು ಪೂರೈಸಿದೆ ! ಶ್ರೀಕೃಷ್ಣನ ದಯದಿಂದ ನಾವೂ ಉಳಿದೆವು ' ಎಂದು ಅರ್ಜುನನ ಬೆನ್ನು ತಟ್ಟಿ ಪ್ರಶಂಸಿಸಿದನು. ಭೀಮಾರ್ಜುನರು, 'ಮಹಾರಾಜ ! ನಿನ್ನ ಕ್ರೋಧಾಗ್ನಿಯಿಂದ ದಗ್ಧನಾಗಿ ಜಯದ್ರಥನು ಸತ್ತನು. ನಿನ್ನ ಆಶ್ವಾಸನವೇ ಬಲವಾಗಿ ನಾವು ಶತ್ರು ವೀರರನ್ನು ಕೊಂದೆವು, ಕೊಲ್ಲುತ್ತಿರುವೆವು - ಮುಂದೂ ಕೊಲ್ಲುವೆವು. ಪೂರ್ವದಲ್ಲಿ ದೇವ ದುರ್ಜಯನಾದ ಭೀಷ್ಮನು ಕೂಡ, ನಿನ್ನ ದ್ರೋಹದಿಂದ ಹತನಾಗಿ, ಶರಪಂಜರದಲ್ಲಿರುವನು. ನಿನ್ನ ಕ್ರೋಧವನ್ನು ಗಳಿಸಿದವರು ಮೃತ್ಯುವಿಷವನ್ನು ಕಬಳಿಸಿರುವರು. ಚಕ್ಷುರ್ದಹನನಾದ ನಿನ್ನ ಕ್ರೋಧಾಗ್ನಿಗೆ ತುತ್ತಾಗಿ, ಸಪುತ್ರಮಿತ್ರ

ಬಾಂಧವನಾದ ಸುಯೋಧನನು ನಾಶವಾಗುವನು ' ಎಂದು ಧರ್ಮಜನನ್ನು ಪ್ರಶಂಸಿಸಿದರು. ತನ್ನ ಮಾತಿನಂತೆ ಸಾತ್ಯಕಿಯು ದುಸ್ತರವಾದ ಕುರು ಸೇನಾವಾಹಿನಿಯನ್ನು ನಿಸ್ತರಿಸಿ ಪ್ರಶಸ್ತ ಕೀರ್ತಿಯುತನಾಗಿ ಬಂದುದನ್ನು ಕಂಡು ಧರ್ಮಜನು ಅವನನ್ನೂ ತನ್ನನ್ನು ನಿಂತು ಕಾದ ಧೃಷ್ಟದ್ಯುಮ್ನನನ್ನೂ ಮೆಚ್ಚಿ ಸಂಭಾವಿಸಿದನು.

ಅಲ್ಲಿ ಸರ್ವಲೋಕಾಪಕಾರಿಯೆನಿಸಿ ನಿಂದಿಸಲ್ಪಡುವ ಸುಯೋಧನನು ಸೈಂಧವ ಮೃತಿಗೆ ನೊಂದು ಕಣ್ಣೀರಿಟ್ಟನು. ಭೀಮಾದಿಗಳ ವೀರ ವಿಹಾರವನ್ನು ತನ್ನವರ ನಾಶವನ್ನೂ ನೆನೆದು ಅವನು ಜಯಾಶೆಯನ್ನು ತೊರೆದನು. ಭೀಮಾರ್ಜುನರನ್ನು ತಡೆಯುವ ವೀರನು ತನ್ನ ಬಲದಲ್ಲಿಲ್ಲವೆಂದು ಅವನು ಮನಗಂಡನು. ಯಾವ ವೀರ್ಯ ವಚನಗಳನ್ನು ನಂಬಿ, ಅಂಬುಜಾಕ್ಷನ ಸಂಧಿವಚನಗಳನಲ್ಲಗಳೆದನೋ, ಅಂತಹ ಕರ್ಣನು ಭೀಮನಿಗೂ ಪಾರ್ಥನಿಗೂ ಸೋತು ದೀನನಾಗಿರುವದನ್ನು ಕಂಡು, ಅವನು ದಿಗಿಲುಗೊಂಡನು. ಅವನು ದ್ರೋಣರ ಮುಂದೆ ತನ್ನ ದುಃಖವನ್ನು ತೋಡಿಕೊಂಡನು.

'ಆಚಾರ್ಯ ! ಮೂರ್ಧಾಭಿಷಿಕ್ತ ರಾಜನ್ಯರನ್ನು ಕದನದಲ್ಲಿ ಗೆದ್ದ ಭೀಷ್ಮನನ್ನು ನೀಚ ಶಿಖಂಡಿಯು ಕೆಡಹಿದನು. ಅರಕ್ಷೌಹಿಣಿಗಳು ನಷ್ಟವಾಗುತ್ತಾ ಇರಲು ನೋಡಿ ಕೈಲಾಗದವನಂತೆ ಸುಮ್ಮನಿರುವ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ! ನನಗಾಗಿ ಸತ್ತವರ ಋಣವನ್ನು ನಾನೆಂತು ತೀರಿಸಲಿ ? ವಸುಧೆಗಾಗಿ ಕಾದಾಡಿ ವಸುಧಾಧಿಪರು ವಸುಧೆಯನ್ನು ಬಿಟ್ಟು ರಣವಸುಧೆಯಲ್ಲಿ ಮಲಗಿದರು. ಮಿತ್ರನಾಶದಿಂದ ಬಂದ ಪಾಪವನ್ನು ಅಶ್ವಮೇಧ ಸಹಸ್ರದ ಅವಭೃಥದಿಂದ ತೊಳೆಯಲಾಗುವುದೇ ? ಪಾಪಿಯು, ಲೋಭಿಯು, ಧರ್ಮದ್ರೋಹಿಯೂ ಆದ ನನಗೆ ನಿಷ್ಕೃತಿ ಇಲ್ಲ. ಸುಹೃದ್ದ್ರೋಹಿಯಾಗಿರುವ ನನ್ನಂತಹ ಪಾಪಿಯನ್ನು ಧರಣಿಯು ಯಾಕೆ ಬಾಯ್ತೆರೆದು ನುಂಗಲೊಲ್ಲದು ? ನನಗೆ ಪರಲೋಕ ಸುಖವೂ ಇಲ್ಲ. ಈ ಲೋಕವಂತೂ ಇಲ್ಲೇ ಇಲ್ಲ. ನನಗಾಗಿ ಜರಾಸಂಧ ಹತನಾದನು. ನನಗಾಗಿ ಭೂರಿಶ್ರವನು ಸತ್ತನು. ನನಗಾಗಿ ಪ್ರಾಣವನ್ನರ್ಪಿಸಿದ ವೀರರು ಅಸಂಖ್ಯಾತರಿರುವರು ! ಅವರ ರಕ್ತದಿಂದ ತೊಯ್ದ ರಣಭೂಮಿಯಲ್ಲಿ ನನ್ನ ರಕ್ತಕಣಗಳೂ ಬೀಳಲಿ ! ಸಿಂಧುರಾಜನನ್ನು ನೋಡ ಹೋಗುವುದೊಂದೇ ಎನಗೆ ಕರ್ತವ್ಯವಾಗಿದೆ. ಸಂಯುಗದಲ್ಲಿ ಸತ್ಯಸಂಧನು ಸಾಯುವುದು ವಿಹಿತವೂ ಆಗಿದೆ. ಆದರೆ ಅಸತ್ಯಪರರಿಂದ ನನಗೆ ಅಪಜಯವಾಗುತ್ತಿದೆ, ಎಂಬುದು ಶೋಚನೀಯವಾಗಿದೆ. ನಿನ್ನ ಉಪೇಕ್ಷೆಯಿಂದ ನನ್ನವರು ಸತ್ತಿರುವರು. ಪಾಂಡವಾಚಾರ್ಯನಿಗೆ ಪಾಂಡವ ಜಯವಲ್ಲದೆ, ಕೌರವ ಜಯವು ವಾಂಛಿತವಾಗದು. ಮಿತ್ರಾಮಿತ್ರರನ್ನು ನಿಲ್ಲಿಸಿದ ನನ್ನ ಮಂದ ಬುದ್ಧಿಯನ್ನು ನಿಂದಿಸುವೆನು - ನಿಮ್ಮನ್ನಲ್ಲ. ಜಯದ್ರಥ ಭೂರಿಶ್ರವರನ್ನು ಕೂಡಿರಲು ಹೊರಡುವ ನನಗೆ ಅಪ್ಪಣೆ ಕೊಡಿ! ' ಎಂದು ಆಕ್ಷೇಪಿಸಿದನು.

ದ್ರೋಣಾಚಾರ್ಯರು ಆ ಮಾತಿನ ವಜ್ರಾಘಾತವು ಅರ್ಜುನ ಬಾಣಾಘಾತಕ್ಕಿಂತಲು ಕಷ್ಟತರವಾಗಲು, ಮನದಿ ನೊಂದು, ಪರಸೇವೆಗಿಳಿದು ಹಾಳಾದ ತನ್ನನ್ನು ತಾನು ನಿಂದಿಸಿಕೊಂಡನು. 'ರಾಜನ್ ! ದುರ್ಯೋಧನ ! ದುರ್ವಚನ ಬಾಣಗಳಿಂದ ಏಕೆ

ನನ್ನನ್ನು ನೋಯಿಸುವೆ ? ಸವ್ಯಸಾಚಿಯು ಅಜಯ್ಯನೆಂದು ಹೇಳಿದ ಮಾತ್ರಕ್ಕೆ ನಾನು ಮಿತ್ರದ್ರೋಹಿಯಾದೆನೆ? ಶತ್ರುವಾದರೂ ವೀರವರನು ಪ್ರಶಂಸಾರ್ಹನೆಂಬ ರಣಗೌರವ ನಿನಗೆ ತಿಳಿದಂತಿಲ್ಲ. ಶಿಖಂಡಿಯಲ್ಲ ಭೀಷ್ಮನನ್ನು ಕೆಡಹಿದವನು; ಅರ್ಜುನ. ಅಂದೇ ನಾನು ಹೇಳಿದೆನು ನಾವೆಲ್ಲರೂ ಸಾಯಬೇಕಾಗುವುದೆಂದು! ಭೀಷ್ಮನನ್ನು ಕೆಡಹಿದವನು ಎಲ್ಲರನ್ನೂ ಕೆಡಹಬಲ್ಲನು. ಬಕ ಕೀಚಕರನ್ನು ಕೊಂದವನು ಮಿಕ್ಕೆಲ್ಲರನ್ನೂ ಕೊಲ್ಲಬಲ್ಲನು. ಇದು ಸತ್ಯ ಎಂದು ಹೇಳಿದ ನನ್ನ ಮಾತು ಹಿತಕರವಾಗಲಿಲ್ಲ ಮಹಾರಾಜನಿಗೆ. ಸೂತಸುತ ಮಾತು ಹಿತವಾದುದಕ್ಕೆ, ಅಂದು ಅಕ್ಷಗಳಿಂದ ಬಂದ ಐಶ್ವರ್ಯವನ್ನು ಇಂದು ಬಾಣಗಳಿಂದ ಕಳೆದುಕೊಳ್ಳುತ್ತಿರುವೆ! ಮಹಾತ್ಮನಾದ ವಿದುರನನ್ನು ಮನ್ನಿಸದ ಅಪರಾಧಕ್ಕಾಗಿ ಇಂದು ಶೋಚನೀಯ ದಶೆಯಲ್ಲಿರುವೆ! ಕುಲಶೀಲವತಿಯಾದ ಪಾಂಡವ ಧರ್ಮಚಾರಿಣಿಯನ್ನವಮಾನಿಸಿದುದನ್ನು ತಡೆಯಲಾರದೆ ಅಳಬೇಕಾಗಿದೆ. ಅಂದೇ ಅಜಿನಧಾರಿಗಳಾಗಿ ಹೋಗುವ ಪಾಂಡು ಸುತರನ್ನನುಸರಿಸಿ ಅಡವಿಯಲ್ಲಿರದೆ, ನಿನ್ನ ಪಿಂಡಕ್ಕಾಗಿ ಬಿದ್ದಿದ್ದ ಬ್ರಾಹ್ಮಣಾಧಮನಿಗೆ ಇಂದು ನಿನ್ನ ನಿಂದಾಶೂಲಗಳಿಗೆ ಕಿವಿಗೊಡಬೇಕಾಗಿದೆ; ನಾಳೆ ಪ್ರಾಣಗಳನ್ನೂ ಬಿಡಬೇಕಾಗಿದೆ. ಪಾಂಡವ ಕೋಪವೃಕ್ಷವಿಂದು ಪುಟ್ಟಿ ಬೆಳೆದು ನಿಂತಿಲ್ಲ. ಧೃತರಾಷ್ಟ್ರನ ಸಭೆಯಲ್ಲಿ ಅದರ ಬೀಜವನ್ನು ನಿನ್ನ ಮಾವ ನೆಟ್ಟಿದನು; ದುಶ್ಶಾಸನು ಬೆಳೆಸಿದನು; ಕರ್ಣನಿಂದ ಅದು ಮರವಾಯಿತು; ನೀನೀಗ ಅದರ ವಿಷಫಲವನ್ನು ಉಣ್ಣಲಿರುವೆ! ನಿನ್ನ ಅನ್ನವೂ ವಿಷಮಯವಾಗಿ ಅದನ್ನು ತಿಂದ ನಾವೆಲ್ಲರೂ ಸಾಯಲಿರುವೆವು, ಇರಲಿ! ಸಿಂಧುರಾಜನ ಮರಣಕ್ಕೆ ನಾನು ಕಾರಣನೆಂದೆ! ದೂರದಲ್ಲಿದ್ದ ನನ್ನ ಉಪೇಕ್ಷಾಪೇಕ್ಷೆಗಳಿಂದ ಹಾನಿಲಾಭಗಳಿದ್ದಿಲ್ಲ. ಭೀಮಾರ್ಜುನರನ್ನು ವ್ಯೂಹದಿ ಬಿಡದೆ ಕಾದುವ ಕಾಯಬಲ ವೆನಗಿಲ್ಲ; ಅಸ್ತ್ರಬಲವೂ ಇಲ್ಲ. ಅಲ್ಲೇ ಸಿಂಧುರಾಜನಿಗೆ ರಕ್ಷಕರಾಗಿದ್ದ ನೀವೆಲ್ಲರು-ಕರ್ಣದುಶ್ಶಾಸನರು ಕೂಡ ಅವನನ್ನೇಕೆ ಕಾಪಾಡಲಿಲ್ಲ? ನನ್ನ ಮಗ ಅಶ್ವತ್ಥಾಮನೇಕೆ ಅವನನ್ನು ರಕ್ಷಿಸಲಾರದೆ ಹೋದನು ? ಕೃಪನೇಕೆ ಓಡಿ ಹೋದನು? ನೀನೇನು ಮಾಡುತ್ತಿದ್ದೆ ? ರಾಜನ್ ! ನನ್ನಂತೆ ನೀವೂ ಅರ್ಜುನನ ಮುಂದೆ ನಿರ್ವೀರ್ಯರಾಗಿ ವ್ಯರ್ಥ ಪ್ರಯತ್ನರಾದಿರಿ ! ಸುಮ್ಮನೆ ನನ್ನನ್ನು ನಿಂದಿಸಿ ಫಲವಿಲ್ಲ. ರಣಮುಖದಲ್ಲಿ ನುಡಿದಂತೆ ಈ ಶರೀರವನ್ನು ನಿನಗಾಗಿ ರಣಭೂಮಿಗೆ ಬಲಿಕೊಡುವೆನು. ಧೃಷ್ಟದ್ಯುಮ್ನನೂ ನನ್ನನ್ನು ಕೊಲ್ಲಲು ಹಾತೊರೆಯುತ್ತಿರುವನು. ಭೀಮಸೇನನ ಸುವರ್ಣ ಸಿಂಹ ಧ್ವಜವನ್ನು, ನಿರಾಘಾಟವಾಗಿ ರಣಭೂಮಿಯಲ್ಲಿ ಸಂಚರಿಸುವ ಗದೆಯನ್ನು, ನೋಡಿ ಜಯಾಶೆಯನ್ನು ಬಿಡು ! ಆದರೂ ನಾನು ಹೇಡಿಯಲ್ಲ, ರಣ ವಿಮುಖನಲ್ಲ, ಪರವೀರ್ಯೋಪಜೀವಿ ಅಲ್ಲ ಕೇಳು! ಸರ್ವ ಪಾಂಚಾಲರನ್ನು ಸಂಹರಿಸುವವರೆಗೂ ಈ ನನ್ನ ಕವಚವನ್ನು ಬಿಡೆನು; ಧನುವನ್ನಿಳಿಸೆನು, ನೀನುಂಟು; ಪಾಂಡವರುಂಟು; ಅವರನ್ನು ನಾನು ಜಯಸಲಾರೆನು, ನಡೆ! ನನ್ನ ಮಗನಿಗೂ ಈ ಮಾತನ್ನು ತಿಳಿಸು ! ಧರ್ಮಪ್ರಧಾನನಾಗು! ಆರ್ಜವದಿಂದ ಕಡಿದಾಡು !

ಜೀವಿತಾಶೆ ಬಿಡು ! ಕುರುರಾಜನ ಋಣವನ್ನು ತೀರಿಸಿಬಿಡು ! ದುರ್ಯೋಧನ ! ವಿಪ್ರರನ್ನು ಅಗ್ನಿಶಿಖೆಯಂತೆ ತಿಳಿ ! ಅವರನ್ನು ಅವಮಾನಗೊಳಿಸಬೇಡ ! ನೀನೂ ರಾತ್ರಿ ಯುದ್ಧವನ್ನು ನಡೆಸುವ ನನ್ನ ಕೂಡ ನಿಂತು ಕಡಿದಾಡು !"

ಇಂತು ನುಡಿದು ಆಚಾರ್ಯನು ಶಂಖ ಧ್ವಾನವನ್ನು ಮಾಡಿ, ಪಾಂಚಾಲಸೇನೆಯನ್ನು ನಾಶಪಡಿಸತೊಡಗಿದನು. ದುರ್ಯೋಧನನು ಕರ್ಣನನ್ನು ಸೇರಿ 'ಮಿತ್ರ ! ನಾವೆಲ್ಲರು ಸಹಸ್ರ ನೇತ್ರಗಳಿಂದ ನೋಡಿ, ಸಹಸ್ರಭುಜರಾಗಿ ಕಾಪಾಡುತ್ತಿದ್ದರೂ, ಸಹಸ್ರಾಕ್ಷಸುತನು ಸೈಂಧವನನ್ನು ಸಂಹರಿಸಿ ಬಿಟ್ಟನು. ದ್ರೋಣನು ಪಕ್ಷಪಾತಿಯಾಗಿ ಅವಕಾಶವನ್ನು ಕೊಟ್ಟುದರಿಂದ ಹೀಗಾಯಿತು. ಸಿಂಧುರಾಜನಿಗೆ ಅಭಯವನ್ನಿತ್ತು, ಅವನನ್ನು ಅವನ ದೇಶಕ್ಕೆ ಮರಳಿ ಹೋಗದಂತೆ ನಿಲ್ಲಿಸಿದ ಆಚಾರ್ಯನೇ ಅರ್ಜುನನಿಗೆ ದ್ವಾರವಿತ್ತು ಅವನ ಪ್ರತಿಜ್ಞೆ ನೆರವೇರಲು ನೆರವಾದನು. ಚಿತ್ರಸೇನಾದಿ ಸೋದರರೂ ಭೀಮನಿಗೆ ಹತರಾದರು' ಎಂದು, ಆಚಾರ್ಯನ ವಚನವನ್ನು ಅವನಿಗೆ ಅನುವದಿಸಿದನು. ಕರ್ಣನು ಆಚಾರ್ಯನ ಮಾತು ಸತ್ಯವೆಂದರಿತು, ಕುರುರಾಜನಿಗಿಂತೆಂದನು:

'ರಾಜನ್ ! ಆಚಾರ್ಯನನ್ನು ನಿಂದಿಸಬೇಡ ! ಬ್ರಾಹ್ಮಣನು ಭಕ್ತಿ ವಿಶ್ವಾಸಗಳಿಂದ ಯಥಾಶಕ್ತಿ ಹೋರಾಡುತ್ತಿರುವನು. ಜೀವದಾಶೆ ತೊರೆದು ಕಾದುವ ಆಚಾರ್ಯನಿಂದ ನಾವೆಲ್ಲರು ಕಲೆತು ಮಾಡಿದುದಕ್ಕಿಂತ ಹೆಚ್ಚು ಶತ್ರುನಾಶವಾಗಿದೆ. ಅವನ ಮಾತು ಅಕ್ಷರಶಃ ಸತ್ಯವಾಗಿದೆ. ಪಾಂಡವರನ್ನು ಸಾಕ್ಷಾದ್ದೇವತೆಗಳೂ ಗೆಲ್ಲಲಾರರು. ಧನಸ್ಸು ಗಾಂಡೀವ; ರಥತೂಣಗಳು ಅಗ್ನಿದತ್ತವು; ಕುದುರೆಗಳು ದಿವ್ಯ ಗಾಂಧರ್ವಗಳು; ಧ್ವಜವು ಮಾರುತಿ ಭಯಂಕರವು; ಸಾರಥಿ ಶ್ರೀಕೃಷ್ಣ; ಇಂತಹ ರಥಿಕರನ್ನು ಯಾರೂ ಜಯಿಸಲಾರರು. ಇನ್ನು ಗದಾಪಾಣಿಯಾದ ವೃಕೋದರನನ್ನು ನೆನೆಸಿ, ನನ್ನ ಎದೆ ಝಲ್ಲೆನ್ನುತ್ತಿದೆ. ಅವರೀರ್ವರನ್ನು ಬಿಟ್ಟು ಬೇರೆಯವರನ್ನು ನಾನು ಲೆಕ್ಕಿಸೆನು. ಆಚಾರ್ಯನು ಸ್ಥವಿರನು; ಶೀಘ್ರಗಾಮಿ ಅಲ್ಲ; ಆದುದರಿಂದ ಭೀಮಾರ್ಜುನರು ಆಚಾರ್ಯನನ್ನು ಮೀರಿ ಹೋದರೆಂದು ತಿಳಿ ! ಇದರಲ್ಲಿ ಆಚಾರ್ಯನ ದೋಷವಿಲ್ಲ. ದೈವ ಸಂಕಲ್ಪಕ್ಕೆ ಎದುರೂ ಇಲ್ಲ ! ನಮ್ಮ ಪುರುಷ ಪ್ರಯತ್ನವೆಲ್ಲವೂ ದೈವದ ಮುಂದೆ ವ್ಯರ್ಥವಾಗುತ್ತಿದೆ. ಭಾರತ ! ವಿಷಾನ್ನ, ಗೃಹದಾಹ, ದ್ಯೂತ, ಪತ್ನೀಪರಾಮರ್ಶ್ಯಾದಿ ವಂಚನೆಗೆ ಸಿಕ್ಕು, ಸಿಟ್ಟಾಗಿ ಬಂದಿರುವ ಪಾಂಡವರನ್ನು ಗೆಲ್ಲುವುದು ಕಷ್ಟ ! ತಿಳಿದೂ ತಿಳಿದೂ ಪಾಪಕಾರ್ಯವನ್ನು ಬಿಡದೆ ಮಾಡಿರುವೆ ! ಅನಾಸಕ್ತರಾಗಿ ಅವರು ಪುಣ್ಯ ಕಾರ್ಯಗಳನ್ನು ಮಾಡಿರುವರು. ಎರಡರ ಫಲವನ್ನೂ ದೈವವು ಕೊಡುತ್ತಿದೆ. ನಾವೆಲ್ಲರೂ ಮಲಗಿದ್ದರೂ, ದೈವವು ಜಾಗ್ರತವಾಗಿದೆ. ಬಹು ಸೇನೆಯಿದ್ದೂ ಬಹು ವೀರ ಯೋಧರಿದ್ದೂ ನಿನಗೆ ಜಯವಾಗದೆ, ಸ್ವಲ್ಪ ಸೇನೆಯುಳ್ಳ, ಕೆಲ ವೀರ ಯೋಧರುಳ್ಳ ಪಾಂಡವರು ಗೆಲ್ಲುತ್ತಿರುವದನ್ನು ಕಂಡು, ದೈವವು ತಾನಾಗಿ ನಿಂತು ಪುರುಷಕಾರವನ್ನು ವ್ಯರ್ಥವಾಗಿಸಿದೆ ಎಂದು ನಿಶ್ಚಯಿಸಿರುವೆನು.

ರಾಜನ್ ! ಆಗ ರಾತ್ರಿಯಲ್ಲಿ ಪ್ರದೀಪಾವಲಿಗಳ ಬೆಳಕಿನಲ್ಲಿ ಭಯಂಕರ ಯುದ್ಧವು

ಪ್ರಾರಂಭವಾಯಿತು. ಆ ಹೊತ್ತಿಗೆ ಪಾಂಡವರ ಎರಡಕ್ಷೌಹಿಣಿಗಳು ನಷ್ಟವಾಗಿದ್ದವು. ಭೀಷ್ಮ, ದ್ರೋಣ, ದ್ರೌಣಿಗಳಿಂದ ನಷ್ಟ ಸೈನ್ಯದ ಪಾದ ಪಾದಾಂಶಗಳು ಮತ್ತು ಸೋಮದತ್ತಾದಿ ಇತರ ವೀರರಿಂದ ಮಿಕ್ಕ ಪಾದವು ನಷ್ಟ ಮಾಡಲ್ಪಟ್ಟಿತು. ಭೀಮಸೇನನು ಕೌರವರ ಮೂರಕ್ಷೌಹಿಣಿಗಳನ್ನು ಸಂಹರಿಸಿದ್ದನು. ಅದರಲ್ಲಿ ಒಂದು ದಶಾಂಶವನ್ನು ಘಟೋತ್ಕಚ ಧೃಷ್ಟದ್ಯುಮ್ನಾದಿಗಳು ನಾಶ ಮಾಡಿದ್ದರು. ಅರ್ಜುನನು ಎರಡಕ್ಷೌಹಿಣಿಯನ್ನು ಸಂಹರಿಸಿದನು. ಅದರಲ್ಲಿ ಒಂದು ಷೋಡಶಾಂಶವನ್ನು ಅಭಿಮನ್ಯು ಸಾತ್ಯಕಿ ಪ್ರಮುಖರು ನಾಶ ಮಾಡಿದ್ದರು. ಇಂತು ಕೌರವರ ಆರು ಅಕ್ಷೌಹಿಣೀ ಸೇನೆಗೂ, ಪಾಂಡವರ ಐದು ಅಕ್ಷೌಹಿಣೀ ಸೇನೆಗೂ, ದ್ವಾದಶಿಯ ರಾತ್ರಿ ಭಯಂಕರ ಕದನ ನಡೆಯಿತು.

## ೧೩. ಚತುರ್ದಶ ದಿನ - ರಾತ್ರಿ ಯುದ್ಧ (೧)

ಸಂಜಯನು ನಿರೂಪಿಸಿದನು:

ರಾಜನ್ ! ಯಮರಾಜ ನಗರವನ್ನು ಪ್ರವೇಶಿಸಲು ಕಾತುರರಾಗಿ ಕೌರವ ಸೈನಿಕರು ಕಸಿಯಿಂದ ಕೈಕೆಯ ಪಾಂಚಾಲರೊಡನೆ ಕಾದಲಾರಂಭಿಸಿದರು. ಅವರ ಬಾಣ ಭಲ್ಲ ಶೂಲಗಳು ಯಮರಾಜನ ಕರೆಯಂತೆ, ಬುಸುಗುಟ್ಟುವ ಸರ್ಪಗಳಂತೆ ಬಂದು ಸೈನಿಕರನ್ನು ವೀರ ಸ್ವರ್ಗಕ್ಕೆ ಸೇರಿಸುತ್ತಿದ್ದವು. ಬಾಣ ಜಾಲದಿಂದ ರಥಿಕರು, ಕೋರೆಗಳಿಂದ ಕರಿಗಳು, ಪರಶುಗಳಿಂದ ತುರಗವಾಹರು, ಖಡ್ಗಗಳಿಂದ ಕಾಲ್ಭಟರು ಕಡಿದಾಡಿ, ರಣರಂಗವೆಲ್ಲವು ಕಂಕಾಳಾಕ್ರಾಂತವಾಯಿತು. ಕತ್ತಲು ಕವಿದಿರುವುದರಿಂದ ಹಾರುವ ಬಾಣಗಳು ಕಾಣದಿದ್ದರೂ, ಬೀಳುವ ದೇಹಗಳ ಶಬ್ದ ಕೇಳಬರುತ್ತಿತ್ತು.

ಸೈಂಧವ ಸಂಹಾರದ ಸೇಡನ್ನು ತೀರಿಸಲು ಸುಯೋಧನನು ಶರೀರದಾಶೆ ತೊರೆದು ಅರಿವಾಹಿನಿಯನ್ನು ಹೊಕ್ಕು, ಪ್ರಳಯ ಯಮನಂತೆ ಪಾಂಡವ ಸೈನಿಕರನ್ನು ಖಂಡಿಸಿ ಕೆಡಹಿದನು. ಮಧ್ಯಂದಿನ ಮಾರ್ತಾಂಡನಂತೆ ಉರಿಯುವ ಮಹಾರಾಜನನ್ನು ಪಾಂಡವ ಭಟರು ಕಣ್ಣೆತ್ತಿ ನೋಡಲಾರದೆ, ಹೆದರಿ, ದಿಕ್ಕಾಪಾಲಾಗಿ ಓಡಿ ಹೋದರು. ದುರ್ಯೋಧನನ ಭದ್ರ ಗಜವು ಪಾಂಡವ ಸೇನಾ ಕಮಲಿನಿಯನ್ನು ಹೊಕ್ಕು ತುಳಿದಾಡಲು, ಸೈನಿಕ ಮುಖ ಕಮಲಗಳು ಛಿನ್ನಾಭಿನ್ನವಾದವು. ಅದನ್ನು ತಡೆಯಲು ಭೀಮಸೇನನು ಅನೇಕ ವೀರರೊಡನೆ ಬಂದು ಮುತ್ತಿದನು. ಕುರುರಾಜನು ಭೀಮನನ್ನು ಹತ್ತು ಬಾಣಗಳಿಂದಲು, ಮಾದ್ರೇಯರನ್ನು ಮೂರು ಮೂರು ಬಾಣಗಳಿಂದಲು, ವಿರಾಟದ್ರುಪದರನ್ನೇ ಆರು ಆರು ಬಾಣಗಳಿಂದಲು, ಶಿಖಂಡಿಯನ್ನು ನೂರು ನಾರಾಚಗಳಿಂದಲೂ, ಧೃಷ್ಟದ್ಯುಮ್ನನನ್ನು ಎಪ್ಪತ್ತು ವಿಶಿಖಗಳಿಂದಲು, ಧರ್ಮರಾಜನನ್ನು ಏಳು ಪ್ರದರಗಳಿಂದಲು, ಸಾತ್ಯಕಿಯನ್ನು ಐದು ಕಾಂಡಗಳಿಂದಲು, ದ್ರೌಪದೇಯರೈವರನ್ನು ಮೂರು ಮೂರು ಶರಗಳಿಂದಲು ಪೀಡಿಸಿ, ಘಟೋತ್ಕಚನ ಎದೆಗೆ ಏಳು ಬಾಣಗಳನ್ನು ಹೊಡೆದನು. ಧರ್ಮಜನು ಸಿಟ್ಟಾಗಿ ಅವನ ಧನುವನ್ನು ಮುರಿದು, ಹತ್ತು ಬಾಣಗಳಿಂದ ಪೀಡಿಸಿದನು. ಮತ್ತೊಂದು ವಿಶಿಖದ ಪೆಟ್ಟಿಗೆ

ದುರ್ಯೋಧನನು ಮೂರ್ಛಿತನಾಗಿ, ರಥನೀಡದಲ್ಲಿ ಸುಮ್ಮನೆ ಕೂತನು. 'ಕುರುಪತಿ ಸುಯೋಧನನು ಸತ್ತನು' ಎಂಬ ಕೂಗುಗಳು ಕತ್ತಲನ್ನು ಸೀಳಿಕೊಂಡು ವ್ಯಾಪಿಸಿದವು. ದ್ರೋಣನು ರಾಜರಕ್ಷಣೆಗೆಂದು ಅತ್ತ ಧಾವಿಸಿದನು. ಆಗ ದುರ್ಯೋಧನನು ಎಚ್ಚತ್ತು 'ನಿಲ್ಲು! ನಿಲ್ಲು!' ಎನ್ನುತ್ತಾ ಧರ್ಮರಾಜನನ್ನು ಮುತ್ತಿದನು. ದ್ರೋಣನೂ ಅವನಿಗೆ ರಕ್ಷಕನಾಗಿ ಧರ್ಮರಾಜನೊಡನೆ ಕಾದಿದನು.

ದ್ರೋಣ ವಿಕ್ರಮವನ್ನು ಕಂಡು ಪಾಂಡವ ಸೈನಿಕರು, ಶಿಶಿರದ ಚಳಿಗೆ ತುರುಗಳಂತೆ, ಗಡ ಗಡ ನಡುಗಿದರು.

ಭೀಮಾರ್ಜುನ ಸಾತ್ಯಕಿಯರು ಆಚಾರ್ಯನನ್ನು ಧರ್ಮರಾಜನಿಂದ ದೂರಮಾಡಿ ತಾವೇ ನಿಂತು ಬಾಣಯುದ್ಧನಿರತರಾದರು. ನಕುಲ ಸಹದೇವರು, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ಘಟೋತ್ಕಚ, ಶಿಖಂಡಿ, ಪ್ರಮುಖ ಮಹಾರಥರು ದ್ರೋಣನನ್ನು ಶರವರ್ಷದಲ್ಲಿ ಮುಳುಗಿಸಿದಾಗ, ರಾತ್ರಿಯ ಕತ್ತಲು ಮತ್ತಿಷ್ಟು ಕತ್ತಲಾಯಿತು. ಆ ಮಹಾಯುದ್ಧದಲ್ಲಿ ಸಾವಿಗೀಡಾದ ಸಾಮಜ, ಸಾದಿ, ಸೈನಿಕರ ಸಂಖ್ಯೆ ಅಗಣನೀಯವಾಯಿತು. ಅಂತರಿಕ್ಷವು ಗಜಾಶ್ವರಥಗಳ ಧೂಳಿಯಿಂದ ತುಂಬಿತು. ತುರಗ ಗಜ ರಕ್ತವು ಮನುಜ ರಕ್ತ ನದಿಯೊಡನೆ ಕೂಡಿ ಹರಿಯಿತು. ಬೆಟ್ಟದ ಬಿದುರಿನ ಪೊಳೆ ಉರಿದೆದ್ದಂತೆ ಇರುವ ಪ್ರದೀಪಾವಳಿಗಳ ಕಾಂತಿಯಲ್ಲಿ ನಡೆದ ಹತ್ಯಾಕಾಂಡದ ಪ್ರಚಂಡದಂತೆ ಕಾಣುತ್ತಿತ್ತು. ಮಿಕ್ಕೆಡೆ ಶತ್ರು ಮಿತ್ರ ಭೇದವೂ ತೋರುತ್ತಿದ್ದಿಲ್ಲ. ಹುಚ್ಚೆದ್ದು ಹೊಡೆದಾಡುವ ಭಟರ ಕತ್ತಿಯ ಪೆಟ್ಟಿಗೆ ಮಿತ್ರರ ಕುತ್ತಿಗೆಗಳೂ ಉರುಳಿ ಬೀಳುತ್ತಿದ್ದವು. ಕಾಳರಾತ್ರಿಯ ಕರಿಮೋಡದಿ ಮಿನುಗುವ ತಾರೆಗಳಂತೆ, ಆಯುಧ ಭೂಷಣಗಳ ಹೊಳಪುಗಳು ಅಲ್ಲಲ್ಲಿ ತೋರುತ್ತಿದ್ದವು. ಹಯಹೇಷಾಗಜಘೀಂಕಾರಗಳೊಡನೆ, ಹತ್ತಿರದಲ್ಲೇ ನೆತ್ತರ ಕುಡಿವ ಕ್ರೂರ ಜಂಬೂಕ ವೃಕಗಳ ಕರಾಳರವವು ಕೇಳಬರುತ್ತಿತ್ತು.

ದುರ್ಯೋಧನನೆಂಬ ಕಲಿಯು ಎಬ್ಬಿಸಿದ ರಣವೆಂಬ ಝಂಝಾಮಾರುತಕ್ಕೆ ರಥಗಜಗಳು ಮೇಘಗಳಂತೆ ಹಾರಿ ಹೋದವು. ರಣ ದುಂದುಭಿಗಳು ಗುಡುಗಾಗಿ, ಧ್ವಜ ಧನುಃಖಡ್ಗಗಳು ಮಿಂಚಿನ ಬಳ್ಳಿಗಳಾಗಿ, ದ್ರೋಣ ಭೀಮಾರ್ಜುನರು ಮಳೆ ಮೇಘಗಳಾಗಿ, ದಿಕ್ಕು ವಿದಿಕ್ಕುಗಳಲ್ಲಿ ಹರಡಿದ ಬಾಣಗಳೇ ಭೀಕರ ವರ್ಷವಾಗಿ, ರಕ್ತದ ಕಾಲುವೆಗಳಲ್ಲಿ ಜೀವ ದೇಹಗಳು ಹುಳು ಕಡ್ಡಿಗಳಂತೆ ತೇಲಿ ಹೋದವು. ಮಾರ್ಗಶಿರದ ರಾತ್ರಿಯ ಹಿಮಶೀತಲ ಮಾರುತದೊಂದಿಗೆ ರಣಭೀಕರ ದೃಶ್ಯವು ಸೈನಿಕರ ಮೈನೆತ್ತರನ್ನು ಹೆಪ್ಪುಗಟ್ಟಿಸಿತು. ಪಾಂಡವ ಸೈನಿಕರ ಕಣ್ಣಿಗೆ ದ್ರೋಣನು ಧರೆಗಿಳಿದು ಬಂದ ಯಮನಂತೆಕಂಡು ಬಂದನು. ಆ ವೀರ್ಯ ವ್ಯಾಘ್ರನು ಧನುರ್ಮುಖದಿಂದ ಪ್ರಸಾರಿಸಿದ ಬಾಣ ಜಿಹ್ವೆಗಳಿಗೆ ಸಿಕ್ಕು ಉಳಿದವರಿದ್ದಿಲ್ಲ. ಆತನು ಕೇಕಯರನ್ನೂ ಪಾರ್ಷತ ಪುತ್ರರನ್ನೂ ಸಂಹರಿಸಿದನು.

ಶಿಬಿಯು ದ್ರೋಣನನ್ನು ತಡೆದು, ಆತನ ಹತ್ತು ಬಾಣಗಳನ್ನು ಖಂಡಿಸಿ,

ಮೂವತ್ತು ಶರಗಳಿಂದ ಆಚಾರ್ಯನನ್ನು ಪೀಡಿಸಿದನು. ಆ ಮಹಾವೀರನು ನಗುತ್ತಾ ದ್ರೋಣನ ಸೂತನನ್ನು ಕೊಂದನು. ಆಗ ದ್ರೋಣನು ಅವನ ಸೂತನನ್ನು ಕುದರೆಗಳನ್ನು ಕೆಡಹಿ, ಮತ್ತೊಂದು ಭಲ್ಲದಿಂದ ಅವನ ತಲೆಯನ್ನು ನೆಲದಿ ಕೆಡಹಿದನು. ದುರ್ಯೋಧನನು ಮತ್ತೊಬ್ಬ ಸಾರಥಿಯನ್ನು ಕಳಿಸಲು, ದ್ರೋಣನು ಮತ್ತೆ ಪಾಂಡವ ಸೇನೆಯನ್ನು ಮುತ್ತಿದನು.

ಕಳಿಂಗ ರಾಜಪುತ್ರನು ತನ್ನ ತಂದೆಯನ್ನು ಕೊಂದ ಭೀಮಸೇನನನ್ನು ಕೊಲ್ಲಲಿಚ್ಛಿಸಿ, ಆತನನ್ನು ಏಳು ಬಾಣಗಳಿಂದ ಹೊಡೆದು, ಸಾರಥಿಯಾದ ವಿಶೋಕನನ್ನು ಒಂದರಿಂದ ಪೀಡಿಸಿ, ಧ್ವಜವನ್ನು ಮತ್ತೊಂದರಿಂದ ಕೆಡಹಿದನು. ಭೀಮಸೇನನು ಕ್ರುದ್ಧನಾಗಿ, ರಥದಿಂದಿಳಿದು, ಕಾಳಿಂಗನನ್ನು ಕೇವಲ ಮುಷ್ಟಿಯಿಂದಲೇ ಹೊಡೆದು ಕೆಡಹಿದನು. ಕಾಳಿಂಗನ ಎಲುಬುಗಳು ಪುಡಿಯಾಗಿ ನೆಲದಿ ಹರಡಿ ಬಿದ್ದವು. ಆಗ ಕರ್ಣನು ಸಿಟ್ಟಾಗಿ ಬಾಣ ವರ್ಷದಿಂದ ಭೀಮಸೇನನನ್ನು ಮುಣುಗಿಸಿದನು. ಭೀಮನು ಕಾಳಿಂಗನ ರಥದಿಂದ ಕಾಳಿಂಗನ ತಮ್ಮನಾದ ಧ್ರುವನ ರಥಕ್ಕೆ ಹಾರಿ, ಅವನನ್ನೂ ಕುಟ್ಟಿ ಕೊಂದನು. ಅಲ್ಲಿಂದ ಜಯರಾತನ ರಥಕ್ಕೆ ಹಾರಿ, ಸಿಂಹದಂತೆ ಗರ್ಜಿಸುತ್ತಾ ಭೀಮಸೇನನು ಎಡಗೈಯಿಂದ ಅವನನ್ನೆಳೆದು, ಕರ್ಣನೆದುರಿಗೇ ಕಪಾಳಕ್ಕೆ ಹೊಡೆದು, ಯಮನನ್ನು ನೋಡ ಕಳಿಸಿದನು. ಭೀಮನು ದುಷ್ಕರ್ಣ ಕರ್ಣರೆಂಬ ಕೌರವ ಕುಮಾರರನ್ನೂ ತುಳಿದು ಕೊಂದು, ಅವನ ರಥ ತುರಗ ಸೂತರನ್ನು ಪಾದದಿಂದಲೇ ತುಳಿದು ಪುಡಿಮಾಡಿದನು. ನಿರಾಯುಧನಾಗಿದ್ದರೂ ಕರ್ಣನನ್ನೂ ಅವರನ್ನಂತೆ ಕೊಲ್ಲಬಲ್ಲವನೆಂದು ತೋರಿ, ತಾನಾಗಿ ಅರ್ಜುನ ಪ್ರತಿಜ್ಞಾಪಾಲನೆಗಾಗಿ ಕರ್ಣನನ್ನು ಕೊಲ್ಲದೆ ಬಿಟ್ಟನೆಂದೂ ತಿಳಿಸಿ ಕೊಟ್ಟನು. ದ್ರೋಣಾಚಾರ್ಯರ ಸೇನಾಪತ್ಯದ ಎರಡನೇ ದಿನವೇ ಕೇತುಮಾನ್, ಶಕ್ರದೇವ, ಶ್ರುತಾಯುಧರನ್ನು ಖಡ್ಗ ಯುದ್ಧದಿಂದ ಸಂಹರಿಸಿ, ಒಂದು ಅಕ್ಷೌಹಿಣಿ ಅಕೌರವ ಸೇನೆಯನ್ನು ಯಮರಾಜನ ಅಂಗಳದಲ್ಲಿ ನಿಲ್ಲಿಸಿದ್ದ ಭೀಮನು ನಾಲ್ಕನೆಯ ದಿನ ರಾತ್ರಿ ಧ್ರುವ ಕಾಳಿಂಗರನ್ನೂ, ಕರ್ಣಾನುಜರನ್ನೂ ಪಾದ ಪ್ರಹಾರ ಮುಷ್ಟಿಘಾತಗಳಿಂದ ನಿರ್ಮೂಲಿಸಿದನು.

ಕರ್ಣನು ಕ್ರುದ್ಧನಾಗಿ ದಿವ್ಯಶಕ್ತಿಯನ್ನೆಸೆದನು. ಅದು ಘಂಟಾಗಣಗಣ ಧ್ವಾನದಿಂದ ಬರಲು ಭೀಮಸೇನನು ಅದನ್ನು ಅನಾಯಾಸವಾಗಿ ಕೈಲಿ ಹಿಡಿದು ಮತ್ತೆ ಕರ್ಣನ ಮೇಲೆ ಎಸೆದನು. ಅದನ್ನು ಮಧ್ಯೆ ಮಾರ್ಗದಿ ಖಂಡಿಸಿ, ಶಕುನಿಯು ಕರ್ಣನನ್ನು ಕಾಪಾಡಿದನು. ಇಂದ್ರಶಕ್ತಿಯನ್ನು ಪ್ರಯೋಗಿಸಿದ್ದರೂ, ಬಿಡದೆ ಅದನ್ನೂ ನಿನ್ನ ಮೇಲೆ ಬಿಡುತ್ತಿದ್ದೆನೆಂದು ಕರ್ಣನಿಗೆ ತೋರಿಸಿದನು. ಖಂಡಿತವಾದರೂ ಶಕ್ತಿಯು ಕರ್ಣನ ಭುಜವನ್ನು ಸೀಳಿ ಗಾಯಗೊಳಿಸಿ, ಧರಾತಲವನ್ನು ಹೊಕ್ಕಿತು. ಕರ್ಣನು ಭೀಮನ ಮಹಾ ಪರಾಕ್ರಮ ಸಾಹಸಗಳನ್ನು ಕಂಡು ದಿಗ್ಭ್ರಾಂತನಾದನು.

ಭೀಮಸೇನನು ತನ್ನ ರಥವನ್ನೇರಿ, ಕುರುಸೇನೆಯನ್ನು ನಾಶಗೊಳಿಸಿದನು. ದುರ್ಮದನೆಂಬ ಕುರು ಕುಮಾರನು ಆತನ ಬಾಣಕ್ಕೆ ತುತ್ತಾಗಿ ಸತ್ತನು. ಭೀಮಸೇನನು

ದುರ್ಮದನನ್ನು ಕಾಲಿನಿಂದ ಸವರಿ ದುಷ್ಕರ್ಣನಂತೆ ದುರ್ಯೋಧನ, ಕರ್ಣ ದ್ರೌಣಿಗಳ ಸಮ್ಮುಖದಲ್ಲೇ ಸಂಹರಿಸಿದುದಲ್ಲದೆ ಅವನ ರಥತುರಗಸೂತರನ್ನು ಕಾಲಿನಿಂದ ತುಳಿದು ಪುಡಿ ಮಾಡಿದನು. ದುರ್ಮದ, ದುಷ್ಕರ್ಣರ ರಥಗಳು ಭೀಮಬಲನ ಕಾಲ ತುಳಿತದಿಂದ ಭೂಮಿಯಲ್ಲಿ ಹೂತುಹೋದವು. ಭೀಮಸೇನನ ವಿಕ್ರಮವನ್ನು ಕಂಡು ಸಿಂಹನಾದವನ್ನು ಕೇಳಿ, ಕುರು ಬಲವು 'ಪ್ರಳಯ ರುದ್ರನೇ ಭೀಮನಾಗಿ ಬಂದು ಧಾರ್ತರಾಷ್ಟ್ರರನ್ನು ನಾಶಪಡಿಸುತ್ತಿರುವನೆಂದು ಆಕ್ರಂದಿಸಿ, ಥರ ಥರ ನಡುಗಿತು. ಕೆಲರಾಜರು ಭೀತರಾಗಿ ಅಶ್ವಗಳನ್ನು ವೇಗಪಡಿಸುತ್ತಾ ರಣರಂಗದಿಂದ ಓಡಿ ಹೋದರು. ವೃಕೋದರನು ವಿಶಾಲ ನಯನಾರವಿಂದನಾಗಿ ಧರ್ಮನನ್ನು ಸೇರಿ, ವಂದಿಸಿದನು. ಆ ಜಯಶಾಲಿ ತಮ್ಮನನ್ನು- ಅಂಧಕನನ್ನು ಕೊಂದು ಬಂದ ಮಹಾದೇವನನ್ನು ದೇವತೆಗಳಂತೆ-ಪ್ರಶಂಸಿಸಿ, ಧರ್ಮರಾಜಾದಿಗಳು ಆನಂದಭರಿತರಾದರು.

ನಿಶಾಮುಖದಲ್ಲಿ ನಿಶಾತ ಬಾಣ ಕಿರಣಗಳಿಂದ ನಿಶಾಂಧಕಾರವನ್ನು ದೂರೀಕರಿಸುವ ಸಾತ್ಯಕಿಯನ್ನು ನೋಡಿ, ಸೋಮದತ್ತನು ಅವನನ್ನು ಮುತ್ತಿ ಇಂತೆಂದನು: 'ಸನಾತನ ಕ್ಷತ್ರಧರ್ಮವನ್ನು ಬಿಟ್ಟು ದಸ್ಯುಧರ್ಮವನ್ನಾಶ್ರಯಿಸಿದುದು ಸಾತ್ವತ ಮಹಾರಥನಾಗಿರುವ ನಿನಗೆ ಉಚಿತವಲ್ಲ. ವೃಷ್ಣಿವೀರರಲ್ಲಿ ಪ್ರಥಿತರಾದವರಿಬ್ಬರು ಪ್ರದ್ಯುಮ್ನನೊಬ್ಬ-ನೀನೊಬ್ಬ ! ಅಂತಹ ಖ್ಯಾತಿಯನ್ನು ಪಡೆದಿದ್ದು ಪ್ರಾಯೋಪವಿಷ್ಟನು, ಪಾರ್ಥಛಿನ್ನಹಸ್ತನು ಆಗಿದ್ದ ನನ್ನ ಮಗ ಭೂರಿಶ್ರವನನ್ನು ಕಟುಕನಂತೆ ಕುತ್ತಿಗೆ ಕೊಯ್ಯುವ ಅಪಖ್ಯಾತಿಗೆ ಕೈಯೊಡ್ಡಿದ ನಿನ್ನನ್ನು ಇಂದು ಕೊಂದು, ನನ್ನ ಮಗನ ಸೇಡು ತೀರಿಸುವೆನು' ಎಂದು ಶಂಖನಾದವನ್ನು ಮಾಡಿದನು. ಸಾತ್ಯಕಿಯು ಹೆದರದೆ, 'ಕೌರವಲಲಾಮ ! ಭೂರಿಶ್ರವ ಶಲರನ್ನು ನೋಡಲು ನಿನ್ನನ್ನೂ ಕಳಿಸುವೆನು. ನಿಂತು ಕಡಿದಾಡು ! ದಾನ ದಮ ಶೌಚ ಧೃತಿ ಕ್ಷಮೆಗಳಿಗೆ ನಿಧಿಯಾಗಿರುವ, ಮೃದಂಗಕೇತನನಾದ, ಧರ್ಮರಾಜನ ತೇಜೋಬಲದಿಂದ ಹತಪ್ರಾಯನಾಗಿರುವೆ! ಕೃಷ್ಣ ಚರಣದಾಣೆ ಕೇಳು ! ರಣವನ್ನು ಬಿಟ್ಟೋಡಿದರೆ ಬದುಕಬಲ್ಲೆಯಾಗಲಿ, ನಿಂತು ಕಾದಿದರೆ, ನನ್ನ ನಿಶಿತ ಬಾಣಾಗ್ನಿಗೆ ಆಹುತಿಯಾಗದಿರಲಾರೆ !' ಎಂದು ಬಾಣ ಪರಂಪರೆಯಿಂದ ಸೋಮದತ್ತನನ್ನು ಪೀಡಿಸಿದನು.

ಸೋಮದತ್ತನಿಗೆ ಸಹಾಯವಾಗಿ ದುರ್ಯೋಧನನು ರಥ ಸಹಸ್ರದಿಂದಲು, ಹತ್ತು ಸಾವಿರ ಆನೆಗಳಿಂದಲು ಕೂಡಿ ಬಂದನು. ಪುತ್ರ ಪೌತ್ರಪರಿವೃತನಾದ ಶಕುನಿಯು ಲಕ್ಷಸವಾರರಿಂದ ಕೂಡಿ ಸೋಮದತ್ತನಿಗೆ ನೆರವಾಗಿ ಬಂದನು. ಅದನ್ನು ಕಂಡು ಸಾತ್ಯಕಿಯ ಸಹಾಯಕ್ಕೆಂದು ಧೃಷ್ಟದ್ಯುಮ್ನನು ಮಹಾ ಸೈನ್ಯ ಸಮೇತನಾಗಿ ಬಂದನು. ಸಾತ್ಯಕಿಯು ಒಂಬತ್ತು ಬಾಣಗಳಿಂದ ಪೀಡಿಸಲು, ಸೋಮದತ್ತನು ರಥನೀಡದಲ್ಲಿ ಮೂರ್ಛಿತನಾಗಿ ಬಿದ್ದನು. ಅದನ್ನು ಕಂಡು, ಅವನ ಸಾರಥಿಯು ಅವನ ರಥವನ್ನು ದೂರಕ್ಕೆ ಕೊಂಡು ಹೋದನು. ಆಗ ದ್ರೋಣನು ಪಾಂಡವಾನೀಕವನ್ನು ಮುತ್ತಿ ಮಾರಣ ನರ್ತನವನ್ನು ಮಾಡಲಾರಂಭಿಸಿದನು. ಆತನು ಭೀಮ, ಪಾರ್ಷತ, ಧರ್ಮ,

ಸಾತ್ಯಕಿ, ಸಹದೇವ, ನಕುಲ, ಯುಧಾಮನ್ಯು, ಉತ್ತಮೌಜ, ದ್ರೌಪದೇಯರನ್ನು ಕ್ರಮವಾಗಿ ಒಂಬತ್ತು ಇಪ್ಪತ್ತು ಹತ್ತು ಎಂಟು, ಐದು, ಮೂರು, ಆರು, ಐದು ಬಾಣಗಳಿಂದ ಪೀಡಿಸಿ, ಇತರ ಭಟರನ್ನು ಬಾಣಕ್ಕೊಬ್ಬನನ್ನಂತೆ, ಅನೇಕರನ್ನು ಸಂಹರಿಸಿದನು. ದ್ರೋಣನ ಶರವಹ್ನಿಗೆ ತಾಳಿ ನಿಲ್ಲಲಾರದೆ, ಭೀಮಾರ್ಜುನರು ನೋಡುತ್ತಿರಲು, ಪಾಂಡವ ಸೇನೆಯು ಭೀತವಾಗಿ ಓಡಿತು.

ಭೀಮಾರ್ಜುನರು ದ್ರೋಣನನ್ನು ಬಲ ಎಡಗಡೆ ಮುತ್ತಿ ಭಯಂಕರ ರಣನಿರತರಾದರು. ಭೂರಿಶ್ರವನನ್ನು ಕೊಂದ ಸಾತ್ಯಕಿಯನ್ನು ಸಂಹರಿಸಲೆಣಿಸಿ ಗುರುಸುತನು ಅವನನ್ನು ಶತಬಾಣಗಳಿಂದ ಹೊಡೆದನು. ಅದನ್ನು ಖಂಡಿಸಿ ಘಟೋತ್ಕಚನು ಅಶ್ವತ್ಥಾಮನನ್ನು ಮುತ್ತಿದನು. ಕರಡಿಯ ಚರ್ಮದಿಂದ ಮುಚ್ಚಿದ ಕಬ್ಬಿಣದ ರಥದಲ್ಲಿ ಕೂತು, ಕುದುರೆಗಳಿಂದಲ್ಲದೆ ಆನೆಗಳಂತಿರುವ ವಿಚಿತ್ರ ಭಯಂಕರ ಮೃಗಗಳನ್ನದಕ್ಕೆ ಕಟ್ಟಿ ಭಯಂಕರ ರೂಪನಾಗಿ ಬರುವ ಘಟೋತ್ಕಚನನ್ನು ನೋಡಿ, ಕುರು ಸೈನಿಕರು ಪಲಾಯನ ಮಾಡಿದರು. ಅವನ ರಥವು ಮೂವತ್ತು ನಲ್ವಗಳ (ನಾನ್ನೂರು ಗೇಣು) ಚತುರಶ್ರವಾಗಿತ್ತು. ಅದರ ಮೇಲೆ ಹದ್ದಿನ ಧ್ವಜವೇರಿಸಿ, ಕರುಳಮಾಲೆಗಳಿಂದ ಸುತ್ತಿದ್ದರು. ಅದಕ್ಕೆ ಎಂಟು ಚಕ್ರಗಳು; ಅದರ ಹಿಂದೆ ಶೂಲ ಮುದ್ಗರ ಪಾಣಿಗಳಾಗಿ ಘೋರ ರಾಕ್ಷಸರು ಒಂದಕ್ಷೌಹಿಣೀ ಸಂಖ್ಯಾಕರು ನಡೆದು ಬರುತ್ತಿದ್ದರು. ಶಂಕುಕರ್ಣನು, ದಂಷ್ಟ್ರಾಕರಾಳಮುಖನು, ವಿರೂಪಾಕ್ಷನು, ಊರ್ಧ್ವಕೇಶನು, ಶೂಲಹಸ್ತನು ಆದ ಘಟೋತ್ಕಚನು ಪ್ರಳಯ ಮೇಘದಂತೆ ಗುಡುಗುತ್ತಾ ಶರವೃಷ್ಟಿಯನ್ನು ಬೀರುತ್ತಾ ಬಂದನು. ಅವನ ಬಾಣಗಳು-ವಲ್ಮೀಕವನ್ನು ಹೋಗುವ ಹಾವುಗಳಂತೆ ಗುರುಸುತನ ರಥವನ್ನು ಹೊಕ್ಕು, ಆತನನ್ನು ಪೀಡಿಸಿದವು. ಅಶ್ವತ್ಥಾಮನು ಕ್ರುದ್ಧನಾಗಿ ಹತ್ತು ಬಾಣಗಳಿಂದ ಘಟೋತ್ಕಚನ ಮರ್ಮ ಸ್ಥಾನಗಳಲ್ಲಿ ಹೊಡೆದು ಪೀಡಿಸಿದನು. ರಾಕ್ಷಸನು ಚಕ್ರವನ್ನೊಗೆಯಲು ಅದನ್ನು ಗುರುಸುತನು ಖಂಡಿಸಿದನು. ಆಗ ಅಂಜನ ಪರ್ವನೆಂಬುವ ಘಟೋತ್ಕಚ ಪುತ್ರನು ಗುರು ಪುತ್ರನನ್ನು ತಡೆದು, ಶರಜಾಲದಿಂದ ಪೀಡಿಸಿದನು. ಅಶ್ವತ್ಥಾಮನು ಹೆದರದೆ, ಅವನ ಧ್ವಜವನ್ನು ಒಂದು ಶರದಿಂದ ಕೆಡಹಿ, ನಾಲ್ಕರಿಂದ ತುರಗಗಳನ್ನು ಕೊಂದನು. ಮತ್ತೊಂದು ಭಲ್ಲದಿಂದ ಬಿಲ್ಲನ್ನು ಮುರಿದು, ಒಂದರಿಂದ ಸೂತನನ್ನು ಸಂಹರಿಸಿದನು. ಅಂಜನಪರ್ವನು ಆಕಾಶಕ್ಕೆ ಹಾರಿ, ಕಲ್ಲಿನ ಸುರಿಮಳೆಗರೆದನು. ಅಶ್ವತ್ಥಾಮನು ಅವನ ಶಿಲಾವರ್ಷವನ್ನು ತಡೆದು, ಅವನನ್ನೂ ಸಂಹರಿಸಿ ಕೆಡಹಿದನು. ಅಂಧಕನನ್ನು ಕೊಂದ ಮಹೇಶನಂತೆ ಮೆರೆವ ಗುರುಸುತನಲ್ಲಿ ಕ್ರುದ್ಧನಾಗಿ ಘಟೋತ್ಕಚನು 'ನಿಲ್ಲು! ದ್ರೋಣಪುತ್ರ! ನಿನ್ನನ್ನು ಕುಮಾರನು ಕ್ರೌಂಚ ಪರ್ವತವನ್ನಂತೆ ಕೆಡಹದೆ ಬಿಡೆನು. ಬಾ ನನ್ನೊಡನೆ ಕಾದಾಡು!' ಎಂದನು.

ಅಶ್ವತ್ಥಾಮನು ನಗುತ್ತಾ 'ವತ್ಸ! ಬೇರೆಡೆ ಕಾದಲು ಹೋಗು! ತಂದೆಯನ್ನು ಪೀಡಿಸುವುದು ಸುತನಿಗೆ ಹಿತವಲ್ಲ' ಎಂದನು. ಘಟೋತ್ಕಚನು 'ಏನಂದೆ? ನೀನೆನಗೆ ತಂದೆಯಾ? ನನ್ನ ಸುತನನ್ನು ಕೊಂದ ವೈರಿಗೆ ನಾನು ವತ್ಸನಾದೇನೇ? ಭೀಮಪುತ್ರನು

ನಿನಗಂಜಿ ಓಡುವ ಹೇಡಿಯಲ್ಲ. ನನ್ನ ತಂದೆಗೆ ಸ್ನೇಹಿತನಾದರೂ ವೈರಿಯಂತೆ ವರ್ತಿಸುವ ನೀನೆನಗೂ ವೈರಿಯಾಗಿರುವೆ! ನಿಲ್ಲು ಸಮರದಲ್ಲಿ!' ಎಂದನು. ಗುರುಸುತನು ಅವನನ್ನು ನಿರ್ಲಕ್ಷಿಸಿ, ಅವನ ಅಕ್ಷಸ್ಥೂಲ ಬಾಣಗಳನ್ನು ಖಂಡಿಸಿ, ಅವನನ್ನೂ ಶರವೃಷ್ಟಿಯಲ್ಲಿ ಮುಣುಗಿಸಿದನು. ಘಟೋತ್ಕಚನು ಅಂತರ್ಧಿತನಾಗಿ ಮಾಯಾ ಯುದ್ಧವನ್ನು ಮಾಡಿದನು. ಅವನು ಬಿಸುಟಿದ ಬಂಡೆಯನ್ನು ಖಂಡಿಸಿ, ಅಶ್ವತ್ಥಾಮನು ವಾಯವ್ಯಾಸ್ತ್ರದಿಂದ ಅವನು ಹಬ್ಬಿಸಿದ ಕರಿಮೋಡಗಳನ್ನು ಹಾರಿಸಿದನು. ಸಾವಿರಾರು ರಥ ಗಜವಾಜಿಗಳಿಂದ ರಾಕ್ಷಸನನ್ನು ಉಪೇಕ್ಷಿಸಿ, ರಾಕ್ಷಸ ಸೈನಿಕರನ್ನು ಲಕ್ಷ ವೀರ ರಥಿಕರನ್ನು ಕೃತಾಂತನ ನಿಶಾಂತವನ್ನು ಸೇರಿಸಿದನು. ವಿಷಣ್ಣನಾಗಿ ನೋಡುವ ಕುರು ರಾಜನಿಗೆ 'ಹೆದರಬೇಡ! ಮಹಾರಾಜ! ನಾಳೆ ಬೆಳಗಾಗುವುದರೊಳಗೆ ನಿನ್ನ ಶತ್ರುಗಳನ್ನು ಸಂಹರಿಸುವೆನು; ನಿನಗೆ ಪರಾಜಯವಾಗಗೊಡೆನು' ಎಂದು ಧೈರ್ಯ ತುಂಬಿದನು. ದುರ್ಯೋಧನನು 'ಗುರುಪುತ್ರ! ಇದು ನಿನಗೆ ಚಿತ್ರವಲ್ಲ. ನಿನ್ನ ಸಹಾಯವಿರುವ ನನಗೆ ಅಪಜಯವೂ ಇಲ್ಲ' ಎಂದನು. ಅವನಿಂದ ಪ್ರೇರಿತರಾಗಿ ಶಕುನಿ, ಕರ್ಣ, ವೃಷಸೇನ, ಶಲ್ಯ, ಕೃಪ, ನೀಲ, ಕೃತವರ್ಮರು ಅರ್ಜುನನೊಡನೆ ಕಾದಲು ಹೋದರು. ದುಶ್ಶಾಸನ, ನಿಕುಂಭ, ಕುಂಡವೇಧಿ, ಪರಾಕ್ರಮ, ಪುರಂಜಯ, ದೃಢರಥ, ಪತಾಕೀ, ಹೇಮಕಂಪನ, ವಿಜಯ, ಜಯ, ಪರಾಕ್ರಾಥಿ, ಕಮಲಾಕ್ಷ, ಜಯವರ್ಮ ಮೊದಲಾದ ಮಹಾರಥರು ಕೌಂತೇಯರನ್ನು ಮುತ್ತಿ ಕಾದಿದರು.

ಘಟೋತ್ಕಚನು ಹತ್ತು ಬಾಣಗಳಿಂದ ಗೌತಮೀಸುತನನ್ನು ಎದೆಯಲ್ಲಿ ಹೊಡೆದನು. ಗುರುಸುತನು ಮಹಾವಾತಕ್ಕೆ ಕಂಪಿಸುವ ಮರದಂತೆ ಭ್ರಮಿಸಿ, ಮತ್ತೆ ಎಚ್ಚತ್ತು ತ್ರಿಪುರದಹನ ಭೀಕರನಾದ ಭವನಂತೆ ಉರಿದೆದ್ದು ತನ್ನ ಮೇಲೇರಿ ಬರುವ ಲಕ್ಷಾರು ರಾಕ್ಷಸರನ್ನು ಸಂಹರಿಸಿದನು. ರಾಕ್ಷಸರು ಒಗೆದ ಭಿಂಡಿವಾಲ, ಪರಶು, ಶೂಲ, ಖಡ್ಗ ಪ್ರಾಸ, ವೃಕ್ಷ ಶಿಲೆಗಳನ್ನು ಚೂರಾಗಿಸಿ ಕೆಡಹಿ, ಧನಸ್ಸುಗಳನ್ನು ಮುರಿದು, ಶರ ವರ್ಷವನ್ನು ಖಂಡಿಸಿ, ಬೆಳೆದು ನಿಂತ ಪೈರನ್ನು ಕರ್ಷಕರಂತೆ, ರಾಕ್ಷಸರನ್ನು ಕಡಿದು ಕೆಡಹಿದನು. ಅಶ್ವತ್ಥಾಮನ ಅಪೂರ್ವ ವಿಕ್ರಮವನ್ನು ಉಭಯ ಸೈನಿಕರು ನೋಡುತ್ತಾ ಬೆರಗಾಗಿ ನಿಂತರು. ಹೈಡಿಂಬಿಯು ಮಾತ್ರ ಹೆದರದೆ ಅಶ್ವತ್ಥಾಮನಿಗೆ ಗುರಿಯಿಟ್ಟು ಅಷ್ಟಘಂಟಾಶಕ್ತಿಯನ್ನು ಪ್ರಯೋಗಿಸಿದನು. ಗುರುಪುತ್ರನು ಅದನ್ನು ಎಡಗೈಲಿ ಪಿಡಿದು ಮತ್ತೆ ರಾಕ್ಷಸನ ಮೇಲೆ ಎಸೆದನು. ಮಹಾಪ್ರಭವಾದ ಆ ದಿವ್ಯ ಶಕ್ತಿಯು ರಾಕ್ಷಸ ರಾಜನ ರಥವನ್ನು ರಥ್ಯಗಳನ್ನು ಸೂತನನ್ನು ಭಸ್ಮವನ್ನಾಗಿಸಿ, ಧರಣೀ ತಲವನ್ನು ಪ್ರವೇಶಿಸಿತು. ಶಂಕರ ನಿರ್ಮಿತ ಶಕ್ತಿಯು ವ್ಯರ್ಥವಾಗಲು, ಘಟೋತ್ಕಚನು ಮತ್ತೊಂದು ರಥವೇರಿ ಬಂದು ಅಶ್ವತ್ಥಾಮನನ್ನು ಶರವರ್ಷದಿ ಮುಣುಗಿಸಿದನು. ಗುರುಸುತನು ಕುಪಿತನಾಗಿ ಪಾಂಚಾಲ ವೀರರಾದ ಸುರಥ, ಶತ್ರುಂಜಯ, ಬಲಾನೀಕ, ಜಯಾನೀಕ, ಜಯಾಶ್ವ, ಶ್ರುತಾಹ್ವಯರೆಂಬವರನ್ನು ಸಂಹರಿಸಿದನು. ಮತ್ತೆ ಮುತ್ತಿದ ಪೃಷದ್ರ, ಚಂದ್ರಸೇನರನ್ನು ಕುಂತಿಭೋಜನ ದಶ ಸುತರನ್ನು ಕೊಂದನು. ಆಕರ್ಣಪೂರ್ಣವಾಗಿ

ಸೆಳೆದುಬಿಡಲ್ಪಟ್ಟ ಗುರುಸುತನ ಬಾಣವು ಘಟೋತ್ಕಚನ ಎದೆಗೆ ತಾಕಿ, ಅವನನ್ನು ಮೂರ್ಛೆಗೊಳಿಸಿತು. ಆಗ ಸೂತನು ರಥವನ್ನು ದೂರದಿ ಸೇರಿಸಿ, ರಾಕ್ಷಸ ರಾಜನನ್ನು ರಕ್ಷಿಸಿದನು. ಅಶ್ವತ್ಥಾಮನು ವಿಜಯ ಹರ್ಷಿತನಾಗಿ ಸಿಂಹನಾದವನ್ನು ಮಾಡಲು, ಪಾಂಡವ ಯೋಧರು ಚಿಂತೆಗೀಡಾದರು. ಗುರುಸುತನ ವಿಕ್ರಮ ವಿಹಾರವನ್ನು ಅಂಬರದಿ ನಿಂತ ಸುರಸಿದ್ಧಸಾಧ್ಯರು ಮೆಚ್ಚಿ ಪ್ರಶಂಸಿಸಿದರು.

ಭೀಮಸೇನನು ಅಶ್ವತ್ಥಾಮನ ಸಹಾಯಕ್ಕೆಂದು• ಬಂದು, ತನ್ನನ್ನು ಘಟೋತ್ಕಚನಿಂದ ದೂರವಿರಿಸಲು ತಡೆದು ಕಾದಾಡುವ ಕರ್ಣಾದಿ ವೀರರೊಡನೆ ಕದನ ನಿಮಗ್ನನಾದನು. ಭೀಮಸೇನನು ಕರ್ಣನ ಶಕ್ತಿಯನ್ನು ವ್ಯರ್ಥೀಕರಿಸಿ, ಪುನಃ ಶತ್ರು ರಥಗಳನ್ನು ಪುಡಿ ಮಾಡಿ, ತನ್ನ ರಥವನ್ನಾರೋಹಿಸಿದನು. ಆಗ ಕರ್ಣನು ಭೀಮಸೇನನ ಬಾಣಗಳನ್ನು ಖಂಡಿಸಿ, ಆತನನ್ನು ಆರು ಬಾಣಗಳಿಂದ ಹೊಡೆದನು. ಭೀಮನು ಗದೆಯನ್ನೊಗೆಯಲು, ಕರ್ಣನು ಸ್ಥೂರ್ಣಾಕರ್ಣವೆಂಬ ಅಸ್ತ್ರದಿಂದ ಹಿಂದಿರುಗಿಸಿದನು. ಭೀಮಸೇನನು ಗದೆಯನ್ನು ರಥದಲ್ಲಿಟ್ಟು ನಿರಾಯುಧನಾಗಿ ಕರ್ಣನ ರಥವನ್ನು ಮುಟ್ಟಿ ಕಾಲಿನಿಂದೊದೆದು ರಥ ಕೂಬರವನ್ನು ಧ್ವಂಸ ಮಾಡಿದನು. ಕರ್ಣನು ರಥದಿಂದಿಳಿದಿದ್ದು ಉಳಿದನು. ಬೇರೆ ರಥವನ್ನೇರಿ ಅವನು ಭೀಮನನ್ನು ಬಿಟ್ಟು ಸಹದೇವನೊಡನೆ ಕಾದಿದನು. ಯುದ್ಧದಲ್ಲಿ ಸಹದೇವನನ್ನು ವಿರಥನನ್ನಾಗಿಸಿ, 'ಹುಡುಗನಂತಿರುವೆ ! ಬಾಲರಿಂದ ಕಡಿದಾಡು ! ನನ್ನಂತಹ ವೀರರಿಂದಲ್ಲ ! ಹೋಗು ! ' ಎಂದು ನಿಂದಿಸಿ ಕುಂತೀದೇವಿಗೆ ಕೊಟ್ಟ ಮಾತಿನಂತೆ ಕೊಲ್ಲದೆ ಕಳಿಸಿದನು. ಸಹದೇವನು ಪರಾಜಯವ್ಯಥಿತನಾಗಿ, ಭೀಮಸೇನನನ್ನು ಸೇರ ಪೋದನು. 'ಸಹದೇವ! ಚಿಂತಿಸಬೇಡ! ಸವ್ಯಸಾಚಿಯು ಇದಕ್ಕೆ ಪ್ರತೀಕಾರವನ್ನು ಮಾಡುವನು' ಎಂದು ಭೀಮನು 'ಕರ್ಣ ! ನಿರಾಯುಧನಾಗಿದ್ದೂ ನಿನ್ನನ್ನು ಕೊಲ್ಲಬಲ್ಲೆನೆಂಬ ಕಠಿಣ ಸತ್ಯವನ್ನರಿತೂ, ಕೇಡು ವಚನಗಳನ್ನಾಡುವೆ! ಅರ್ಜುನನ ಪ್ರತಿಜ್ಞೆಯನ್ನು ಉಳಿಸಲು, ನಿನ್ನನ್ನು ಕಾಲಿನಿಂದ ಸವರಿ ಕೊಲ್ಲದೆ ಬಿಟ್ಟಿರುವೆನು. ತಿಳಿ ! ' ಎಂದು ಅವನನ್ನು ಶರ ಜಾಲದಿಂದ ಪೀಡಿಸಿದನು.

ಭೀಮಸೇನನು ಕರ್ಣನೆದುರಿಗೇ ನಾಗದತ್ತ, ದೃಢರಥ, ವೀರಬಾಹು, ವೀರಭುಜ, ದೃಢ, ಸುಹಸ್ತ, ವಿರಜ, ಪ್ರಮಥ, ಉಗ್ರಮಾಯಿ ವೀರರಥರೆಂಬ ಕುರು ಕುಮಾರರನ್ನು ಸಂಹರಿಸಿ, ಮಹೀಧರಾಗ್ರದಿಂದ ಮಹಾವಾತದ ಪೆಟ್ಟಿಗೆ ಉರುಳುವ ಮಹೀರುಹಗಳಂತೆ, ಕೆಡಹಿದನು. ಆಗ ವೃಕರಥನೆಂಬ ಕರ್ಣಭ್ರಾತನು ಬಾಣ ದಶಕದಿಂದ ಪೀಡಿಸಲು, ಭೀಮಸೇನನು ಅವನನ್ನೂ ಅವನಿಗೆ ಸಹಾಯವಾಗಿ ಬಂದ ಶತಚಂದ್ರ ಮುಂತಾದ ಸಪ್ತ ವೀರರನ್ನು ಸಪ್ತನಾರಾಚಗಳಿಂದ ಸಪ್ತಾಶ್ವಪುತ್ರನ ಮನೆ ಸೇರಿಸಿದನು. ಶಕುನಿಯ ಅನುಜರಾದ ಗವಾಕ್ಷ, ಶರಭ, ವಿಭು, ಮೊದಲಾದ ಐವರು ರಥಿಕರನ್ನು ಮಥಿಸಿದನು.

ಧರ್ಮರಾಜನು ದ್ರೋಣ ಸೇನೆಯನ್ನು ಮುತ್ತಿ ಆತನು ನೋಡುತ್ತಿರಲು,

ಅಂಬಷ್ಠ ಮಾಲವ, ತ್ರಿಗರ್ತ ಬಾಹ್ಲಿಕ ಸೈನಿಕರನ್ನು ಸಂಹರಿಸಿದನು. ಕ್ರುದ್ಧನಾಗಿ ಯುದ್ಧದಲ್ಲಿ ಸೇನೆಯನ್ನು ನಿರ್ಮೂಲಿಸುವ ಧರ್ಮಜನನ್ನು ತಡೆದು ದ್ರೋಣನು ದಿವ್ಯಾಸ್ತ್ರಗಳಿಂದ ಧರ್ಮಜನನ್ನು ಪೀಡಿಸಿದನು. ಅವನ ಅಸ್ತ್ರಗಳನ್ನೆಲ್ಲ ಧರ್ಮರಾಜನು ಪ್ರತ್ಯಸ್ತ್ರಗಳಿಂದ ವಿಫಲಗೊಳಿಸಿದನು. ಆಚಾರ್ಯನ ವಾರುಣ, ಯಾಮ್ಯ, ಆಗ್ನೇಯ, ತ್ವಾಷ್ಟ್ರ, ಸಾವಿತ್ರಗಳೆಂಬ ಅಸ್ತ್ರಗಳು ಧರ್ಮಜನ ಪ್ರತ್ಯಸ್ತ್ರಗಳಿಂದ ವ್ಯರ್ಥವಾದವು. ಆಚಾರ್ಯನು ಕ್ರುದ್ಧನಾಗಿ ಐಂದ್ರ, ಪ್ರಾಜಾಪತ್ಯವೆಂಬ ಅಸ್ತ್ರಗಳನ್ನು ಬಿಟ್ಟನು. ಧರ್ಮಜನು ಅವೇ ಅಸ್ತ್ರಗಳಿಂದ ಅವನನ್ನು ಕೆಡಹಿದನು. ಆಗ ದ್ರೋಣನು ಬ್ರಹ್ಮಾಸ್ತ್ರವನ್ನು ಬಿಟ್ಟು ಸಿಂಹನಾದ ಮಾಡಿದನು. ಧರ್ಮಜನು ಮತ್ತೊಂದು ಬ್ರಹ್ಮಾಸ್ತ್ರದಿಂದ ಅದನ್ನು ಶಾಂತಗೊಳಿಸಿ ಆಚಾರ್ಯನಿಗೆ ನಮಿಸಿದನು. ದ್ರೋಣನು ವಿಫಲ ಪ್ರಯತ್ನನಾಗಿ ಧೃಷ್ಟದ್ಯುಮ್ನನ ಸೇನೆಯನ್ನು ಮುತ್ತ ಹೋದನು.

ಆಚಾರ್ಯನನ್ನು ಮುಂದೆ ಬಿಡದೆ ಭೀಮಾರ್ಜುನರು ಇಕ್ಕೆಲಗಳಿಂದ ಬಂದು ಶರವರ್ಷದಿಂದ ಪೀಡಿಸಿದರು. ಅದನ್ನು ನೋಡಿ ವಿಹ್ವಲನಾದ ಸುಯೋಧನನು ಕರ್ಣನ ಬಳಿ ಸಾರಿ, 'ಕರ್ಣ ! ಪಾಂಚಾಲ ಮಾತ್ಸ್ಯರಿಂದ ಪೀಡಿಸಲ್ಪಡುವ ನಮ್ಮ ಸೈನಿಕರನ್ನು ಉಳಿಸು, ಮಿತ್ರನಾದ ನಿನ್ನಿಂದ ಮಿತ್ರಕಾರ್ಯವು ನಿರ್ವಹಿಸಲ್ಪಡುವ ಸಮಯ ಒದಗಿದೆ. ದಂಡತಾಡಿತ ಭುಜಗಗಳಂತೆ ಬುಸುಗುಟ್ಟುತ್ತಾ ಪಾಂಡವರೀರ್ವರು ಆಚಾರ್ಯನನ್ನು ಶರ ಜಾಲದಿಂದ ಪೀಡಿಸುತ್ತಿರುವರು. ನಮ್ಮವರನ್ನು ಕಾಪಾಡು !' ಎಂದು ಬೇಡಿದನು.

ಕರ್ಣನು 'ರಾಜನ್ ! ಪುರಂದರನೇ ದೇವವೃಂದದಿಂದ ಬಂದರೂ ತಡೆದು ಇಂದು ಕುಂತೀ ನಂದನರನ್ನು ಕೊಂದು, ನಿನಗೆ ವಿಜಯ ಹಾರವನ್ನು ಹಾಕುವೆನು ಚಿಂತಿಸಬೇಡ ! ಇದು ಸತ್ಯ ! ನಿನಗೆ ಪ್ರಿಯವನ್ನು ಮಾಡಲೆಂದೇ ಬದುಕಿರುವೆನು. ಎಲ್ಲ ಪಾಂಡವರಿಗೆ ಮುಖ್ಯನಾದ ಧನಂಜಯನನ್ನು ಶಕ್ರನಿತ್ತ ಶಕ್ತಿಯಿಂದ ಸವರಿಬಿಡುವೆನು. ಅವನು ಸತ್ತನೆಂದರೆ, ಮಿಕ್ಕ ಪಾರ್ಥರೂ ಸತ್ತಂತೆ ಸರಿ ! ನಾನು ಜೀವಂತನಿರಲು ನೀನೇಕೆ ಶೋಕಿಸುವೆ ? ಪಾಂಚಾಲ ಪಾಂಡವ ವೃಷ್ಣಿ ವೀರರನ್ನು ಖಂಡಿಸಿ, ಭೂಮಂಡಲವನ್ನು ನಿನಗೆ ಸಮರ್ಪಿಸುವೆನು' ಎಂದನು.

ಕರ್ಣನು ವಾಕ್ಪಾರುಷ್ಯವನ್ನು ಸಹಿಸದೆ, ಕೃಪನು ನಗುತ್ತಾ ಇಂತೆಂದನು: 'ಸೂತನಂದನ! ಆನಂದವಾಯಿತು. ನಿನ್ನಿಂದ ಕುರುನಾಥನು ಈಗ ಸನಾಥನಾದನು. ನಿನ್ನ ಮಾತುಗಳು ಮಾತು ಮಾತ್ರವಾಗದೆ, ಕ್ರಿಯಾರೂಪವಾದರೆ ಸಾಕು ! ಆದರೆ ಬರಿ ಮಾತನ್ನು ತೋರಿ, ವಿಕ್ರಮವನ್ನು ತೋರದ ನಿನ್ನ ಜಂಬವನ್ನು ಕಂಡು, ನಮಗೇ ಅಲ್ಲ ಕೌರವೇಶನಿಗೂ ಬೇಸರವಾಗಿರಬೇಕು. ಮಳೆಗರೆಯದ ಮೇಘದಂತೆ, ಸುಮ್ಮನೆ ಗರ್ಜಿಸಬೇಡ ! ಪಾಂಡುಸುತರಿಂದ ರಣಸಮಾಗಮವೆಷ್ಟು ಸಲ ನಿನಗಾಗಿಲ್ಲ, ಒಂದು ಸಲವಾದರೂ ಭೀಮಾರ್ಜುನರನ್ನು ನೀನು ಗೆದ್ದೆಯಾ ? ಗಂಧರ್ವರು ನಿನ್ನ ರಾಜನನ್ನು ಸೆರೆ ಹಿಡಿದುಕೊಂಡು ಹೋಗುವಾಗ, ಮೊದಲು ಪಲಾಯನ ಮಾಡಿದವನು

ನೀನು ! ವಿರಾಟ ನಗರದಲ್ಲಿ ನೀನು-ನಾವೆಲ್ಲರೂ ಪಾರ್ಥನಿಗೆ ಸೋತೆವು. ಇಂದು ಕೃಷ್ಣನೂ ಸಹಾಯನಾಗಿರುವನು. ಪಾಂಡವರನ್ನು ಗೆಲ್ಲಲಾರೆನೆಂದು ನಿನಗೆ ನೀನೇ ಅರಿತಿರುವೆ ! ಆದರೂ ಗೆಲ್ಲುವೆನು ಕೊಲ್ಲುವೆನು ಎಂದು ಗರ್ಜಿಸುತ್ತಿರುವೆ ! ಗರ್ಜಿಸು ಗರ್ಜಿಸು, ಅರ್ಜುನನನ್ನು ಕಾಣುವವರೆಗೂ ! ಪಾರ್ಥಸಾಯಕವಿದ್ಧನಾದ ಮೇಲೆ ಇನ್ನೆಲ್ಲಿ ಗರ್ಜನೆ ? ವಿಪ್ರರು ಸತ್ಯವಚನ ಶೂರರು ! ಕ್ಷತ್ರಿಯರು ಬಾಹುಶೂರರು; ವೈಶ್ಯರು ದಾನಶೂರರು; ಶೂದ್ರರು ಭೂಸೇವಾ ಶೂರರು; ಕರ್ಣನು ಬರಿ ಮಾತಿನ ಶೂರನು."

ಕರ್ಣನು ಕೃಪವಚನದಿಂದ ಕುಪಿತನಾದನು. 'ಕೃಪಾಚಾರ್ಯ ! ಪ್ರಾವೃಡ್ಬಲಾಹಕದಂತೆ ಗರ್ಜಿಸುವರು ಶೂರರು ! ರಣ ಮೂರ್ಧದಲ್ಲಿ ವೀರವರ್ಧನರಾದ ಶೂರರು ಗರ್ಜಿಸಿದರೆ ತಪ್ಪಲ್ಲ. ನನ್ನ ಕರ್ತವ್ಯ ಭಾರವನ್ನು ಮನಸಾ ತೂಗಿ ನೋಡಿ, ನಿಶ್ಚಯಿಸಿ ವಚನಾ ನುಡಿಯುವ ನನ್ನ ಸಾಮರ್ಥ್ಯ ನನಗೆ ಗೊತ್ತು. ಆದರೆ ದೈವ ಸಹಾಯವಿಲ್ಲದೆ ನನ್ನ ಪೌರುಷವು ವ್ಯರ್ಥವಾಗುತ್ತಿದೆ. ಹಾಗೆಂದು ಶೂರನಾದ ನಾನು ಗರ್ಜಿಸಿದರೆ ತಪ್ಪಲ್ಲ. ಆದುದರಿಂದ ನಿನಗೇನು ನಷ್ಟ ? ನಿನ್ನಂತಹ ವೃಥಾಶೂರರು ಗರ್ಜಿಸುವುದೂ ಇಲ್ಲ; ಶತ್ರುಗಳನ್ನು ಭರ್ಜಿಸುವುದೂ ಇಲ್ಲ. ಇಂದು ಕೃಷ್ಣಾರ್ಜುನರನ್ನು ಸಂಹರಿಸಿ ಬಂದಾಗ, ನನ್ನ ಗರ್ಜನೆಯು ಸಫಲವೆಂಬುದನ್ನು ನೀನೇ ಕಾಣುವೆ !' ಇಂತು ನುಡಿದ ಕರ್ಣನಿಗೆ ಕೃಪನು 'ಕರ್ಣ ! ಮನೋರಥಗಳಿಂದ ಮಹಾಸೇನೆಯಾಗದು. ದೇವ ಗಂಧರ್ವ ರಾಕ್ಷಸರಿಗೆ ಅಜೇಯರಾಗಿರುವ ಕೃಷ್ಣ ಪಾಂಡವರು ನಿನಗೆ ವಧ್ಯರಾಗುವರೇ ! ಧರ್ಮಜನು ಸಾಮಾನ್ಯನಲ್ಲ. ಬ್ರಹ್ಮಣ್ಯನು, ಸತ್ಯವಾದಿಯು, ದಾಂತನು, ಗುರು ವಿಪ್ರದೇವ ವಿನೀತನು, ಧರ್ಮರತನೂ, ಆದ ಧರ್ಮರಾಜನು ಕೃತಾಸ್ತ್ರನೂ ಆಗಿರುವನು. ಅವನನ್ನು ಗೆಲ್ಲಲಾರದೆ ಧನುರಾಚಾರ್ಯನೇ ವ್ಯರ್ಥ ಪ್ರಯತ್ನನಾದನೆಂದ ಮೇಲೆ, ನಿನ್ನಂತಹ ಅರ್ಧರಥನ ಪಾಡೇನು ? ಧೃಷ್ಟದ್ಯುಮ್ನ, ಶಿಖಂಡಿ, ಚಂದ್ರಸೇನ, ರುದ್ರಸೇನ, ವಸುಚಂದ್ರ, ಸಿಂಹಚಂದ್ರ ಮೊದಲಾದ ಪಾಂಚಾಲರು ಮಹಾರಥರು. ವಿರಾಟ ದ್ರುಪದರು ಭೀಷ್ಮ ಸಮವೀರರು. ಭೀಮ ಫಾಲ್ಗುಣರು ಸಂಕಲ್ಪಿಸಿದರೆ, ದೇವದಾನವ ಮಾನವ ಜಗವನ್ನೆಲ್ಲ ಒಂದೇ ಕ್ಷಣದಿ, ನಿಶ್ಶೇಷವಾಗಿ ನಾಶಮಾಡಬಲ್ಲರು. ಬರಿ ನೋಟದಿಂದಲೇ ಧರ್ಮಜನು ಶತ್ರುನಾಶವನ್ನು ಸಾಧಿಸಬಲ್ಲನು. ಅಪ್ರಮೇಯ ಬಲ ವೀರ್ಯನಿಧಿಯು, ಮಹಾನುಭಾವನು ಆದ ಶೌರಿಯು ಅವರಿಗೆ ನೆರವಾಗಿ ನಿಂತಿರುವನು. ಇಂತಹ ಪಾಂಡವರನ್ನು ನೀನೆಂತು ಕೊಲ್ಲುವೆ ? ಸಮರದಲ್ಲಿ ಶೌರಿಯನ್ನೆದುರಿಸುವೆನೆನ್ನುವ ನಿನ್ನ ಮಹಾಮೋಹವನ್ನು ಕಂಡು ಆಶ್ಚರ್ಯವಾಗುತ್ತಿದೆ!'

ಕರ್ಣನು ನಗುತ್ತಾ 'ಬ್ರಹ್ಮನ್ ! ನೀನಾಡಿದ ಮಾತು ನಿಜ ! ಆದರೂ ಶಕ್ರ ನಿತ್ತ ಶಕ್ತಿಯ ಸಹಾಯದಿಂದ ಅರ್ಜುನನನ್ನು ಸಂಹರಿಸಿಬಿಡುವೆನು. ಆಗ ಅನರ್ಜುನರಾದ ಪಾಂಡವರು ಅರಣ್ಯವನ್ನು ಸೇರಿ ಅಲ್ಲೇ ಪ್ರಾಯೋಪವೇಶಾದಿಗಳಿಂದ ಅಸುಗಳನ್ನು ನೀಗುವರು. ಅಥವಾ ದುರ್ಯೋಧನನ ದಾಸರಾಗಿ ಬಿದ್ದಿರುವರು. ಶಕ್ತಿಯ

ಬಲವಿದೆ ಎಂದರಿತು ಗರ್ಜಿಸುವ ನನ್ನನ್ನು ಹೀಯಾಳಿಸಿ ನುಡಿವ ಹೇಡಿಗೆ ಹೆದರಿ, ಸುಮ್ಮನಿರುವನಲ್ಲ ಈ ರಾಧೇಯ! ಪಾರ್ಥರಲ್ಲಿಯ ಸ್ನೇಹವಿಂತಾಡಿಸುತ್ತಿದೆ. ನಿನ್ನಿಂದ ಮತ್ತೆ ಇಂತಹ ಮಾತೆತ್ತಿದರೆ, ನನ್ನ ಕತ್ತಿಯು ನಿನ್ನ ನಾಲಿಗೆಯನ್ನು ಕತ್ತರಿಸದೆ ಬಿಡದು ತಿಳಿ! ನಿನ್ನ ಪಾಂಡವ ಪ್ರಶಂಸೆಯನ್ನು ಕೇಳಿ, ಹೆದರುವ ಹೆಡ್ಡರಿಲ್ಲಿ ಯಾರೂ ಇಲ್ಲ. ದುರ್ಯೋಧನ, ಸೋಮದತ್ತ, ಅಶ್ವತ್ಥಾಮ, ದುಶ್ಶಾಸನಾದಿ ವೀರರು ಜೀವ ಪಣವಿಟ್ಟು ಕಾದುತ್ತಿರುವವರು. ಭೀಷ್ಮಾದಿಗಳು ನಿಹತರಾದರೆಂದರೆ, ಅದು ದೈವಾಯತ್ತವೆಂದು ತಿಳಿದಿರುವೆವು. ಬಲವತ್ತರರಾದ ಕೌರವ ವೀರರು, ಬಲಹೀನರಾದ ಪಾಂಡವ ವೀರರಿಗೆ ಸೋಲುವುದೆಂದರೆ, ದೈವವೇ ಕಾರಣವಾಗಿದೆಯಲ್ಲವೇ? ಆದರೂ ಬಿಡದೆ ದುರ್ಯೋಧನನ ಹಿತಕ್ಕಾಗಿ ಯತ್ನ ಮಾಡುವುದು ನಮ್ಮ ಕರ್ತವ್ಯವಾಗಿದೆ. ಕೈಲಾದರೆ ಕಡಿದಾಡು! ಇಲ್ಲದಿರೆ ಮನೆ ಸೇರಿ ಭೋಜನ ಪ್ರವಚನಗಳನ್ನು ಮಾಡು!' ಎಂದನು.

ಕರ್ಣನ ಕಟುವಚನವನ್ನು ಸಹಿಸದೆ, ಅಶ್ವತ್ಥಾಮನು, ಕತ್ತಿಯನ್ನೆತ್ತಿ ಕರ್ಣನನ್ನು ಸಮೀಪಿಸಿ ಇಂತೆಂದನು: 'ಕರ್ಣ! ವೀರ ಪ್ರಶಂಸೆಯನ್ನು ಮೆಚ್ಚಿ ತಲೆದೂಗಲು ವೀರರೇ ಬೇಕು! ನಿನ್ನಂತಹ ಭೀರುಗಳಲ್ಲ. ವಿದ್ಯಮಾನ ಗುಣಗಳನ್ನು ತಿಳಿಸಿ, ಅರ್ಜುನನನ್ನು ಪೆಸರಿಸಿದ ಮಾತುಲನ ಮಾತು, ನಿನ್ನ ದ್ವೇಷದ ಕರ್ಣಗಳಿಗೆ ಶೂಲಗಳಾಯಿತೆಂದರೆ, ಅದು ನಿನ್ನ ದೋಷ. ದರ್ಪದಿಂದ ಸುಜನ ಗುಣವನ್ನು ಗಣಿಸದಿರುವೆ! ವಿಜಯನು ಜಯದ್ರಥನನ್ನು ಕೊಂದಾಗ, ಅಲ್ಲಿ ನೀನಿರಲಿಲ್ಲವೇ ನೀ ಇದ್ದೇನು ಮಾಡಿದೆ? ಮಹಾದೇವನನ್ನು ತಪದಿಂದಲು, ದೇವೇಂದ್ರನನ್ನು ನಿವಾತ ಕವಚಾದಿ ದುಷ್ಟದಾನವ ವಧೆಯಿಂದಲು, ಶ್ರೀಕೃಷ್ಣನನ್ನು ಭಕ್ತಿಯಿಂದಲು, ಸಂತೋಷಪಡಿಸಿ, ದಿವ್ಯಾಸ್ತ್ರಸಂಪನ್ನನಾಗಿರುವ ಪಾರ್ಥನನ್ನು ದೇವಾಸುರರು ಗೆಲ್ಲಲಾರರು. ನಿಜವಾಡಿದರೆ, ತಿಳಿಯದೆ ನಿಂದಿಸುವ ನೀಚನ ತಲೆಯನ್ನು ನೆಲದಿ ಉರುಳಿಸಿ, ಮಹನ್ನಿಂದೆಯ ಮಹದನರ್ಥ ಫಲವನ್ನುಣಿಸುವೆನು' ಇಂತು ಮೇಲೇರಿ ಬರುವ ಗುರುಸುತನನ್ನು ಕೈಪಿಡಿದು ತಡೆದು, ಮಿತ್ರನಾದ ಕರ್ಣನನ್ನೂ ದೂರಮಾಡಿ, ದುರ್ಯೋಧನನಿಂತೆಂದನು: 'ಅಶ್ವತ್ಥಾಮನ್! ಕರ್ಣ! ಪ್ರಸನ್ನರಾಗಿರಿ! ಕೋಪವನ್ನು ಬಿಡಿ! ರಾಧೇಯನ ವಧೆಗೆಂದು, ಉದ್ಯತಾಯುಧರಾಗಿ ಬರುವ ಪಾಂಡವ ವೀರರಲ್ಲಿ ನಿಮ್ಮ ಕ್ರೋಧವು ನಿರ್ಮುಕ್ತವಾಗಲಿ! ಸ್ವಯೂಥ ಕಲಹ ಒಳಿತಲ್ಲ.' ಆ ಮಾತಿಗೆ ಕೃಪಾಶ್ವತ್ಥಾಮರು ಪ್ರಸನ್ನರಾಗಿ, ರಣರಂಗದ ತಂತಮ್ಮ ಸ್ಥಾನಗಳನ್ನು ಸೇರಿದರು.

ಕರ್ಣನೂ ಪಾಂಡವೀ ಸೇನೆಯನ್ನು ತಡೆದು, ಕಡು ಘೋರವಾಗಿ, ಕಡಿದಾಡಿದನು. 'ಇವನೇ ಸರ್ವಾನರ್ಥ ಮೂಲನು. ಕೊಲ್ಲಿರಿವನನ್ನು!' ಎಂದು ಆರ್ಭಟಿಸುತ್ತಾ ಬರುವ ಪಾಂಡವ ಭಟರನ್ನು ತಡೆದು ಕರ್ಣನು, ತನ್ನ ನಾಮದಿಂದ ಅಂಕಿತವಾಗಿದ್ದ ಬಾಣ ಸಹಸ್ರದಿಂದ, ಅವರನ್ನು ಯಮನ ಪುರಕ್ಕೆ ಕಳಿಸಿದನು. ಅವನನ್ನು ಮುತ್ತಲು ಬರುವ ಪಾರ್ಥನನ್ನು, ದುರ್ಯೋಧನನ ಆಜ್ಞೆಯಂತೆ, ಕೃಪಾಶ್ವತ್ಥಾಮ

ಕೃತವರ್ಮ ಶಲ್ಯಾದಿ ವೀರರು ತಡೆದರು. ಅವರನ್ನು ಬಾಣ ವರ್ಷದಿಂದ ಹಿಮ್ಮೆಟ್ಟಿಸಿ, ದಾಟಿ, ಕಿರೀಟಿಯು ಕರ್ಣನನ್ನು ನಿಶಿತ ವಿಶಿಖದಿಂದ ತಾಟಿಸಿದನು. ಕರ್ಣನು ಶರವರ್ಷದಲ್ಲಿ ಪಾರ್ಥಕೃಷ್ಣರನ್ನು ಮುಣುಗಿಸಿದನು. ಮತ್ತು ಮೂವತ್ತು ಬಾಣಗಳಿಂದ ಪೀಡಿಸಿದನು. ಅವನ ಬಾಣಗಳನ್ನು ಖಂಡಿಸಿ ಪಾಂಡವ ವೀರನು ಚಂಡ ಬಾಣಗಳಿಂದ ಅವನ ರಥವನ್ನು ಮುಚ್ಚಿ ಒಂದರಿಂದ ಧನುವನ್ನು ಮುರಿದನು; ನಾಲ್ಕು ನಾರಾಚಗಳಿಂದ ನಾಲ್ಕು ಕುದುರೆಗಳನ್ನು ಕೊಂದನು; ಒಂದು ಭಲ್ಲದಿಂದ ಸೂತನನ್ನು ಕೆಡಹಿದನು. ಹತಾಶ್ವನು, ಹತಸೂತನು ಆದ ಸೂತಸುತನು ರಥದಿಂದಿಳಿದು ಕೃಪನ ರಥವನ್ನೇರಿ, ದೂರ ಸಾರಿದನು.

ಅದನ್ನು ಕಂಡು ದುರ್ಯೋಧನನು ತಾನಾಗಿ, 'ನಾನೇ ಎಲ್ಲ ಪಾರ್ಥರನ್ನೂ ಕೊಂದುಬಿಡುವೆನು. ಪ್ರಳಯ ರುದ್ರನಂತೆ ವಿಜೃಂಭಿಸಿ, ಪೃಥಿವಿಯನ್ನು ನಿಷ್ಪಾಂಡವವೆನಿಸುವೆನು' ಎಂದು ಅರ್ಜುನನನ್ನು ಮುತ್ತಿ ಕಾದಲು ಹೊರಟನು. ಕ್ರೋಧ ಮೂರ್ಛಿತನಾಗಿ ಫಾಲ್ಗುನ ಬಾಣಗಳ ತೀಕ್ಷ್ಣತೆಯನ್ನು ತಿಳಿಯದೆ ಹೋಗುವ ರಾಜನನ್ನು ತಡೆದು ದ್ರೌಣಿಯು 'ರಾಜನ್! ನಾನು ಜೀವದಿಂದಿರಲು ನೀನೇಕೆ ಪಾರ್ಥನನ್ನೆದುರಿಸಲು ಹೋಗುವೆ! ನಾನು ಪಾರ್ಥನನ್ನು ತಡೆಯುವೆನು ನಿಲ್ಲು!' ಎಂದು ಹಿಂದಿರುಗಿಸಿದನು. ದುರ್ಯೋಧನನು, 'ಆಚಾರ್ಯಪುತ್ರ! ಆಚಾರ್ಯನು ಪಾಂಡುಪುತ್ರರನ್ನು ತನ್ನ ಪುತ್ರರನ್ನಂತೆ ರಕ್ಷಿಸುತ್ತಿರುವನು. ನೀನೂ ನನ್ನನ್ನು ಉಪೇಕ್ಷಿಸಿ, ಪಾಂಡವರನ್ನು ರಕ್ಷಿಸುವನಾದರೆ, ಇನ್ನೆನಗಾರು ದಿಕ್ಕು ? ರಾಜದ್ರೋಹಿಗಳನ್ನು ಮಿತ್ರದ್ರೋಹಿಗಳನ್ನು ನಂಬಿ ನಿಂತಿರುವ ನನ್ನಂತಹ ಮಂದಭಾಗ್ಯನಿಲ್ಲ. ರಾಜ್ಯಲೋಭದಿಂದ ಮಂದಮತಿಯಾಗಿ ಪಾಲುಗೊಡದೆ ಕಾಲುಕೆದರಿ ನಿಂತೆನು. ನನಗಾಗಿ ಸರ್ವಬಾಂಧವರು ಹತರಾದರು. ಮಹೇಶ್ವರಸಮನಾದ ನೀನೆಣಿಸಿದರೆ ಕ್ಷಣದಲ್ಲಿ ನನಗೆ ವಿಜಯವನ್ನೀಯಬಲ್ಲೆ! ಪ್ರಸನ್ನನಾಗು! ಸನ್ನಿಹಿತವಾಗಿರುವ ಪಾಂಡವ ವೀರರನ್ನು ನಾಶಪಡಿಸು! ಮಿಕ್ಕವರನ್ನು ನಾವು ಕೊಲ್ಲುವೆವು. ದೇವದಾನವರು ರಣದಲ್ಲಿ ನಿನ್ನ ಬಾಣಾಗ್ನಿಗೆ ತುತ್ತಾಗದೆ ನಿಲ್ಲಲಾರರು. ಇನ್ನು ಪಾಂಡವರ ಪಾಡೇನು ?' ಎಂದು ಹುರಿದುಂಬಿಸಿದನು.

ಅಶ್ವತ್ಥಾಮನು 'ಮಹಾಬಾಹೋ! ನೀನು ನುಡಿದುದು ನಿಜ. ನಮ್ಮ ತಂದೆಗೆ ಪಾಂಡವರೆಂದರೆ ಪ್ರಾಣ. ನನಗೂ ಅವರು ಪ್ರಿಯರಾಗಿರುವರು. ಪ್ರೀತಿ ಮನೆಯಲ್ಲಿ; ರಣರಂಗದಲ್ಲಲ್ಲ ಎಂದರಿತೇ ನಾವು ಯಥಾಶಕ್ತಿ ನಿನ್ನ ಜಯಕ್ಕಾಗಿ ಪ್ರಯತ್ನಿಸುತ್ತಿರುವೆವು. ಪಾಂಡುಪುತ್ರರನ್ನು ಗೆಲ್ಲುವುದು ಅಶಕ್ಯ; ಅವರು ರಕ್ಷಕರಾಗಿರುವ ಪಾಂಡವೀ ಸೇನೆಯನ್ನು ನಿರ್ಮೂಲಿಸುವುದೂ ಅಶಕ್ಯವೆಂದು ತಿಳಿ ! ಪಾಂಡವ ವೀರರು ಆತ್ಮಾರ್ಥವಾಗಿ, ಧರ್ಮಾರ್ಥವಾಗಿ, ಕೀರ್ತಿಗಾಗಿ ಕಾದುತ್ತಿರುವರು. ಆದುದರಿಂದ ಅವರು ಗೆಲ್ಲುತ್ತಿರುವರು. ನೀನು ಲೋಭದಿಂದ, ಅಧರ್ಮದಿಂದ, ಸ್ವಜನಶಂಕಾಕಲಂಕಿತ ಚಿತ್ತದಿಂದ ಕಾದುತ್ತಿರುವೆ! ಮಿತ್ರದ್ರೋಹಿಗಳು ನಾವಲ್ಲ. ಅಧರ್ಮಪುರುಷನಾದ ನಿನಗೆ ಎಲ್ಲರೂ ಪಾಪಿಗಳಾಗಿ ಕಾಣುತ್ತಿರುವರು. ನೀನೇನು ತಿಳಿದರೇನು? ನನ್ನ ಶಕ್ತಿಗೆ

!' ಎಂದು, ಪ್ರಳಯಕಾಲ ರುದ್ರನಾಗಿ ಪಾಂಚಾಲ ಸೋಮಕರನ್ನು ಮುತ್ತಿ ನಾಶಪಡಿಸಿದನು.

ಅವನ್ನು ಕಂಡು ಧೃಷ್ಟದ್ಯುಮ್ನನು ರುಷ್ಟನಾಗಿ, ಗುರುಸುತನನ್ನು ಬಾಣಜಾಲದಿಂದ ತಡೆದು ಇಂತೆಂದನು: 'ವಿಪ್ರವರ ! ನನ್ನ ಹುಟ್ಟು ವೀರ್ಯ ಗುಣಗಳನ್ನರಿಯೆ ! ದ್ರೋಣಾಚಾರ್ಯನನ್ನು ಕೊಲ್ಲಲು ಹುಟ್ಟಿರುವೆನು. ಆಮೇಲೆ ನಿನ್ನನ್ನೂ ಸಂಹರಿಸುವೆನು. ಕೌರವರಾಜನಲ್ಲಿ ನಿನಗಿರುವ ಭಕ್ತಿಯನ್ನು ತೋರು ! ಬ್ರಾಹ್ಮಣ್ಯವನ್ನು ತೊರೆದು ಕ್ಷತ್ರಧರ್ಮವನ್ನು ಹಿಡಿದ ಪುರುಷಾಧಮನು ವಧ್ಯನೇ ಸರಿ !' ಇಂತು ನುಡಿದು ಪಾರ್ಷತನು ದ್ರೌಣಿಯನ್ನು ಬಾಣಗಣದಿಂದ ಪೀಡಿಸಿದನು. ಅವರೀರ್ವರು ಕೋದಂಡ ನರ್ತನವನ್ನು ಮಾಡಿ, ರಣರಂಗದ ಜನರಿಗೆ ವಿಸ್ಮಯಕಾರಕರಾದರು. ಗುರುಸುತನು ಪಾಂಚಾಲ ರಾಜಪುತ್ರನ ಧ್ವಜವನ್ನು ಕೆಡಹಿ ತುರಗಗಳನ್ನು ಕೊಂದು, ಸೂತನನ್ನು ಸಂಹರಿಸಿದನು. ಧೃಷ್ಟದ್ಯುಮ್ನನು ರಣವಿಮುಖನಾಗಿ ಹೋದುದನ್ನು ಕಂಡು ಪಾಂಚಾಲ ಸೇನೆಯು ಭೀತವಾಗಿ ಓಡತೊಡಗಿತು. ಅರ್ಜುನಪಾರ್ಥರೆದುರಿನಲ್ಲೇ ಎದುರಿಲ್ಲದೆ ಪಾಂಚಾಲರನ್ನು ಸವರಿ, ಅಶ್ವತ್ಥಾಮನು, ಅಸುರರನ್ನು ಕೊಂದ ದೇವೇಂದ್ರನಂತೆ ಶೋಭಿಸಿದನು.

ಭೀಮಸೇನನು ಅಂಬಷ್ಠರನ್ನು, ಮಾಲವರನ್ನು, ಕಾಲಿಂಗರನ್ನು ಸಾವಿರಗಟ್ಟಲೆ ಸಂಹರಿಸಿ, ಸಮರ ಭೂಮಿಯನ್ನು ಕಂಕಾಳಾಕ್ರಾಂತವಾಗಿಸಿದನು. ಅರ್ಜುನ ದ್ರೋಣರು ಭಯಂಕರವಾಗಿ ಹೋರಾಡಿದರು. ಗುರುವಿನ ಅಸ್ತ್ರಗಳಿಗೆ ಪ್ರತ್ಯಸ್ತ್ರವಿತ್ತು ಕಡಿದಾಡುವ ಪಾರ್ಥನನ್ನು ವಾರಿಸಿ ವಾಸುದೇವನು, 'ಅರ್ಜುನ ! ಆಚಾರ್ಯನ ಸಂಹಾರವಾಗುವುದು ಬೇರೆಯವನಿಂದ ನಿನ್ನಿಂದಲ್ಲ, ಭೀಮಸೇನನನ್ನು ನೋಡು! ರಥವರರನು ಆರಿಸಿ ಆರಿಸಿ, ಅವರ ಜೀವನದೀಪವನ್ನೂ ಆರಿಸುತ್ತಿರುವನು. ನಡೆ ಅಲ್ಲಿಗೆ !' ಎಂದನು. ಅಂತೆಯೇ ಅರ್ಜುನನು ಅಣ್ಣನಿಗೆ ಅನುವಾಗಲು ಹೋದನು. ಆಗ ರಾತ್ರಿಯ ಕತ್ತಲು ಘನೀಭೂತವಾದಂತಾಗಲು, ಸೈನಿಕರು ದಿಕ್ಕುಗಾಣದೆ, ಸ್ವಪರಜ್ಞಾನವಿಲ್ಲದೆ ಕುರುಡರಂತೆ ಕಡಿದಾಡತೊಡಗಿದರು.

## ೧೪. ಚತುರ್ದಶ ದಿನ ಯುದ್ಧ - ರಾತ್ರಿ ಸಮರ (೨)

ಆಗ ಉಭಯ ಸೇನಾಪತಿಗಳ ಶಾಸನದಿಂದ ರಣವನ್ನು ನಿಲ್ಲಿಸಿ, ಎಲ್ಲ ಸೈನಿಕರು ಕೈಗಳಲ್ಲಿ ನವಪ್ರದೀಪಗಳನ್ನು ಧರಿಸಿದರು. ಕತ್ತಲಲ್ಲಿ ಮಿನುಗುವ ದೀಪಗಳಿಂದ ರಣರಂಗವು ತಾರಾಗಣದಿಂದ ಮೆರೆವ ಮೇಘಮಂಡಲದಂತೆ ಕರಾಳಭಯಂಕರವಾಗಿತ್ತು. ದಾರುಮಯ ಮಹಾವನವೇ ಉರಿದೆದ್ದು ಬರುವಂತೆ ಎರಡು ಸೇನೆಗಳು ಮತ್ತೆ ಮುತ್ತಿ ಭಯಂಕರವಾಗಿ ಕಾದಿದವು. ಆನೆಗೆ ಏಳುದೀಪ, ರಥಕ್ಕೆ ಹತ್ತು ದೀಪ, ಕುದುರೆಗೆ ಎರಡು ದೀಪ, ಭಟನಿಗೊಂದು ದೀಪವಾಗಿ ಕೌರವ ಪಾಂಡವ ಸೇನೆಗಳು ಢೀ ಕೊಟ್ಟು ಕಡಿದಾಡಿದಾಗ, ಮಹಾಜನ ಕ್ಷಯವಾಯಿತು.

ದುರ್ಯೋಧನನು ತನ್ನ ಮಹಾರಥರಿಗಿಂತೆಂದನು: ' ಆಚಾರ್ಯನು ಧೃಷ್ಟದ್ಯುಮ್ನನನ್ನು ಸಂಹರಿಸುವನು. ಆತನಿಗೆ ನೆರವಾಗಿ ಆತನನ್ನು ಅವನಿಂದ ಕಾಪಾಡಿ! ಕರ್ಣನು ಪಾರ್ಥನನ್ನು ಕೊಲ್ಲುವನು. ನಾನು ಭೀಮನನ್ನು ಸದೆಬಡಿಯುವೆನು. ಮಿಕ್ಕವರ ಸೊಕ್ಕನ್ನು ಮಿಕ್ಕವರು ಮುರಿವರು. ನೀವೆಲ್ಲರೂ ಜೀವ ಪಣವಿಟ್ಟು ಕಾದಿ, ನನಗೆ ವಿಜಯವನ್ನು ಸಂಪಾದಿಸಿ ಕೊಡಿ ! ' ಎಂದು ಆದೇಶವಿತ್ತನು. ಭಯಂಕರ ಸಿಂಹನಾದಗಳಿಂದ ಮುಂದೆ ಸಾರಿ, ಅರಿವೀರರ ಕೂಡ ಕಡಿದಾಡುವ ಭಟರ ಖಡ್ಗಧ್ವಾನಗಳು ಕೇಳ ಬರುತ್ತಿರಲು, ಆಯುಧಗಳ ಹೊಳಪು ಕಾಣಬರುತ್ತಿರಲು ಪ್ರದೀಪಾವಲಿಯ ಬೆಳಕಿನಲ್ಲಿ ನಡೆವ ಮಹಾ ಸಂಗ್ರಾಮವು ಬಹು ಭೀಕರವಾಗಿತ್ತು. ದ್ವಂದ್ವಯುದ್ಧದಲ್ಲಿ ಕೃತವರ್ಮ ಧರ್ಮಜರು, ಸಹದೇವ ಕರ್ಣರು, ದುರ್ಯೋಧನ ಭೀಮಸೇನರು, ಶಕುನಿ ನಕುಲರು, ಶಿಖಂಡಿ ಕೃಪಾಚಾರ್ಯರು, ಪ್ರತಿವಿಂಧ್ಯ ದುಶ್ಶಾಸನರು, ಅಶ್ವತ್ಥಾಮ ಘಟೋತ್ಕಚರು, ದ್ರುಪದ ವೃಷಸೇನರು, ವಿರಾಟ ಶಲ್ಯರು, ಶತಾನಿಕ ಚಿತ್ರಸೇನರು, ಅಲಂಬುಷಾರರ್ಜುನರು, ದ್ರೋಣ ಪಾರ್ಷತರು, ಕಲೆತು ಕಡುಕೋಪದಿಂದ ಕಡಿದಾಡಿದರು.

ಕೃತವರ್ಮನು ಧರ್ಮರಾಜನನ್ನು ವಿಚಾಪಸಿನನ್ನಾಗಿಸಿ, ಆತನ ಖಡ್ಗತೋಮರಗಳನ್ನು ಖಂಡಿಸಿ, ಸೂತತುರಗಗಳನ್ನೂ ಸಂಹರಿಸಿದನು. ಧರ್ಮರಾಜನು ರಣರಂಗದಿಂದ ಹಿಂದಿರುಗಿ ಸಹದೇವನ ರಥವನ್ನೇರಿ ಹೋದನು. ಸಾತ್ಯಕಿಯು ಭೂರಿಯಿಂದ ಬಾಣಯುದ್ಧವನ್ನು ಮಾಡಿ, ಕೊನೆಗೆ ಶಕ್ತಿಯನ್ನೆತ್ತಿ ಒಗೆಯಲು, ಭೂರಿಯು ಭೂಮಿಗೆ ಬಿದ್ದು ಮೃತನಾದನು. ಅದನ್ನು ಕಂಡು ಅಶ್ವತ್ಥಾಮನು ಶರವರ್ಷದಿಂದ ಶೈನೇಯನನ್ನು ಪೀಡಿಸಿದನು. ಆತನನ್ನು ತಡೆದು ಘಟೋತ್ಕಚನು ರಥಾಕ್ಷಮಾತ್ರವಾದ ಬಾಣಗಳಿಂದ ಪೀಡಿಸಿದನು. ಅವನ ಬಾಣಗಳನ್ನು ಖಂಡಿಸಿ, ಅಶ್ವತ್ಥಾಮನು ದಿವ್ಯಶರಗಳಿಂದ ರಾಕ್ಷಸನನ್ನು ಪೀಡಿಸಿದನು. ಘಟೋತ್ಕಚನು ಹತ್ತು ಬಾಣಗಳಿಂದ ಎದೆಗೆ ಹೊಡೆದಾಗ, ಮೂರ್ಛೆ ಬಂದಂತಾಗಿ, ದ್ರೌಣಿಯು ಎಚ್ಚತ್ತು, ಯಮದಂಡೋಪಮವಾದ ಶರದಿಂದ ಅವನ ಎದೆಗೆ ಹೊಡೆದನು. ಘಟೋತ್ಕಚನು ಮೂರ್ಛೆ ಬಿದ್ದನು. ಆಗ ಅವನ ಸಾರಥಿಯು ರಣರಂಗದಿಂದ ರಥವನ್ನು ದೂರಕ್ಕೆ ಕೊಂಡು ಹೋದನು.

ದುರ್ಯೋಧನನು ಆಚಾರ್ಯನೊಡನೆ ಕಾದುತ್ತಿರುವ ಭೀಮಸೇನನನ್ನು ಮುತ್ತಿ ಶರವರ್ಷದಲ್ಲಿ ಮುಣುಗಿಸಿದನು. ಭೀಮಸೇನನು ಅವನ ಧನುವನ್ನು ಮುರಿದು, ಇಪ್ಪತ್ತೈದು ಬಾಣಗಳಿಂದ ಅವನನ್ನು ನೋಯಿಸಿದನು. ಕುರುರಾಜನು ಮತ್ತೊಂದು ಧನುವನ್ನೆತ್ತಿ ನಿಶಿತ ಬಾಣದಿಂದ ಭೀಮನ ಧನುವನ್ನು ಮುರಿದನು. ಇಂತು ಐದಾರು ಧನಸ್ಸುಗಳನ್ನು ಮುರಿವ ಕುರುರಾಜನ ಮೇಲೆ ಭೀಮನು ಶಕ್ತಿಯನ್ನೊಗೆದನು. ಕುರುರಾಜನು ಅದನ್ನು ಮೂರಾಗಿ ತುಂಡರಿಸಿದನು. ಭೀಮನು ಗದೆಯನ್ನೊಗೆದು, ದುರ್ಯೋಧನನ ರಥಾಶ್ವಸೂತರನ್ನು ನಾಶಗೊಳಿಸಿದನು. ಮೊದಲೇ ರಥದಿಂದ

ಹಾರಿದ್ದು ಸುಯೋಧನನು ನಂದಕನ ರಥವನ್ನೇರಿ ಹೋದನು. ಸುಯೋಧನನು ಮೃತನಾದನೆಂದು ಪಾಂಡವ ಸೈನಿಕರು ಸಿಂಹನಾದಗಳನ್ನು ಮಾಡಿದರು. ಕರ್ಣನು ಭೀತನಾಗಿ ಸಹದೇವನೊಡನೆ ಕಾದುವುದನ್ನು ಬಿಟ್ಟು ಅಲ್ಲಿಗೆ ಧಾವಿಸಿದನು. ಧರ್ಮರಾಜನು ಸಂಭ್ರಮಾನ್ವಿತನಾಗಿ ಭೀಮನಿದ್ದಲ್ಲಿಗೆ ಬಂದನು. ಶಲ್ಯನು ವಿರಾಟನನ್ನು ಸೋಲಿಸಿ, ಮತ್ಸ್ಯದೇಶೀಯ ಭಟರನ್ನು ಯಮನಂತೆ ಸಂಹರಿಸಿದನು. ಅದನ್ನು ಕಂಡು ಕುಪಿತನಾಗಿ ಘಟೋತ್ಕಚನು, ಅಷ್ಟಚಕ್ರವು, ಅಯೋಮಯವು ಗೃಧ್ರಧ್ವಜವು ಆದ ತನ್ನ ರಥದಲ್ಲಿ ಕೂತು ಮದ್ರರಾಜನನ್ನು ಮುತ್ತಿ ಶರಶತದಿಂದ ಪೀಡಿಸಿದನು. ವಾಸುದೇವ ಧನಂಜಯರು ಅವನಿಗೆ ಸಹಾಯರಾಗಿ ಬರುವಾಗ ತಡೆದು ಅಷ್ಟಚಕ್ರವು ಪ್ರಳಯಪಯೋದಗರ್ಜಾ ಸದೃಶನೇಮೀ ನಿಸ್ವನವು, ಅಯೋಮಯವು ಆದ ರಥದಲ್ಲಿ ಕೂತು ಅಲಂಬುಷನು ಬಾಣಗಣದಿಂದ ಪಾರ್ಥನನ್ನು ಪೀಡಿಸಿದನು. ಪಾರ್ಥನು ಕ್ರುದ್ಧನಾಗಿ ಅವನ ಧನುವನ್ನು ಮುರಿದು, ಖಡ್ಗವನ್ನೆತ್ತಲು ಖಂಡಿಸಿ, ನಾಲ್ಕು ಬಾಣಗಳಿಂದ ಅವನ ಎದೆಗೆ ಹೊಡೆದನು. ಅಲಂಬುಷನು ಭೀತನಾಗಿ ಓಡಿ ಹೋದನು.

ನಕುಲಪುತ್ರ ಶತಾನೀಕನು ಕೌರವ ಚಿತ್ರಸೇನನನ್ನು ಸೂತತುರಗ ಸಂಹಾರದಿಂದ ವಿರಥನನ್ನಾಗಿಸಿ ಓಡಿಸಿದನು. ಅವನು ಕೃತವರ್ಮನ ರಥವನ್ನೇರಿದನು. ಕರ್ಣಪುತ್ರ ವೃಷಸೇನನು ದ್ರುಪದನನ್ನು ಸೋಲಿಸಿದನು. ದುಶ್ಶಾಸನನು ಪ್ರತಿವಿಂಧ್ಯನ ರಥ ತುರಗ ಧ್ವಜ ಸೂತರನ್ನು ತಿಲಶ ಖಂಡಿಸಲು, ಧರ್ಮಜಪುತ್ರನು ಸುತಸೋಮನ ರಥವನ್ನೇರಿ ಹೋದನು. ನಕುಲನ ಬಾಣಗಳಿಂದ ವಿದ್ಧನಾಗಿ ವಿಶಕುನಿಯು ಮೂರ್ಛಿತನಾಗಲು ಅವನ ಸಾರಥಿಯು ರಥವನ್ನು ಕೊಂಡು ದೂರ ಸಾರಿದನು. ಶಿಖಂಡಿಯನ್ನು ಕೃಪನು ಸೋಲಿಸಿ ಓಡಿಸಿದನು. ಧೃಷ್ಟದ್ಯುಮ್ನನು ದ್ರೋಣನನ್ನು ಮುತ್ತಿ ಇಪ್ಪತ್ತು ಬಾಣಗಳಿಂದ ಪೀಡಿಸಿದನು. ಆಚಾರ್ಯನು ಅವನ ಶರಗಳನ್ನು ಮುರಿದನು. ಅವನು ಮತ್ತೊಂದು ಧನುವನ್ನೆತ್ತಿ ನಿಶಿತಬಾಣವನ್ನು ಪ್ರಯೋಗಿಸಿದನು. ಮಹಾವೇಗದಿಂದ ಬರುವ ಪಾರ್ಷತನ ಶರವನ್ನು ಕರ್ಣನು ಮಧ್ಯೆ ಮಾರ್ಗದಿ ಖಂಡಿಸಿ, ಹತ್ತು ಬಾಣಗಳಿಂದ ಅವನನ್ನು ಪೀಡಿಸಿದನು. ಧೃಷ್ಟದ್ಯುಮ್ನನು ವಿಕ್ರಮಿಸಿ ಸುತ್ತು ಕವಿಯುವ ಕರ್ಣಾದಿ ವೀರರನ್ನು ಮೂರು ಮೂರು ಬಾಣಗಳಿಂದ ಹೊಡೆದು ದ್ರುಮಸೇನನೆಂಬ ಕರ್ಣಬಂಧುವನ್ನು ಸಂಹರಿಸಿದನು. ಮತ್ತೊಂದು ಬಾಣದಿಂದ ಕರ್ಣನ ಧನುಸ್ಸನ್ನು ತುಂಡಾಗಿಸಿದನು. ಕರ್ಣನು ಕುಪಿತನಾಗಿ, ಶರವರ್ಷದಿಂದ ಅವನನ್ನು ಮುಚ್ಚಿದನು. ಆಗ ಸಾತ್ಯಕಿಯು ಸೇನಾಪತಿಯ ನೆರವಿಗೆ ಬಂದು ನೂರು ಬಾಣಗಳಿಂದ ಸೂತಸುತನನ್ನು ಪೀಡಿಸಿದನು. ವೃಷಸೇನನು ತಂದೆಯ ಸಹಾಯಕ್ಕೆ ಬಂದು, ಸಾತ್ಯಕಿಯನ್ನು ಅಸ್ತ್ರಜಾಲದಿಂದ ಪೀಡಿಸಿದನು. ಸಾತ್ಯಕಿಯು ಅವನ ಅಸ್ತ್ರಗಳನ್ನೆಲ್ಲ ಪ್ರತ್ಯಸ್ತ್ರಗಳಿಂದ ನಿವಾರಿಸಿ, ಗಾಢಭಲ್ಲದಿಂದ ಎದೆಗೆ ಹೊಡೆದು ಅವನನ್ನು ಮೂರ್ಛೆಗೊಳಿಸಿದನು. ಕರ್ಣನು ಮಗನ ಪರಾಜಯದಿಂದ ಕ್ರುದ್ಧನಾಗಿ, ಹತ್ತು ಶರಗಳಿಂದ ಸಾತ್ಯಕಿಯನ್ನು ಹೊಡೆದು ಸಿಂಹನಾದ ಮಾಡಿದನು. ಆಗ ವೃಷಸೇನನು

ಮತ್ತೆ ಬಂದು ಸಾತ್ಯಕಿಯನ್ನು ಸಪ್ತ ಶರಗಳಿಂದ ಹೊಡೆದನು. ಸಾತ್ಯಕಿಯು ಕರ್ಣ ವೃಷಸೇನರ ಧನಸ್ಸುಗಳನ್ನು ಮುರಿದು, ಆರ್ಭಟಿಸಿದನು.

ಕರ್ಣನು ವೃಷಸೇನ ಸಾತ್ವತರು ಕಾದುತ್ತಿರಲು, ಕೌರವೇಶನನ್ನು ನೋಡಿ ಇಂತೆಂದನು: 'ರಾಜನ್! ಅರ್ಜುನನ ಗಾಂಡೀವವು ಬಹುವಾಗಿ ಮೊರಹುತ್ತಿದೆ. ಅವನ ಬಾಣಗಳಿಂದ ವಿದ್ಧರಾಗಿ ಬಿದ್ದ ವೀರರ ಆರ್ತನಾದಗಳು ಸಂತತವಾಗಿವೆ. ಅವನು ಅಲ್ಲಿ ರಣಮಗ್ನನಾಗಿರಲಿ! ಇಲ್ಲಿ ಅವನ ಪ್ರಿಯ ಶಿಷ್ಯನಾದ ಸಾತ್ಯಕಿಯು ನಮ್ಮ ಮಧ್ಯದಿ ಸಿಕ್ಕಿಬಿದ್ದಿರುವನು. ನಿಶೀಥದ ಕರಾಳತಮೋಗುಹೆಯಲ್ಲಿ ಇವನನ್ನು, ಇವನಿಗೆ ನೆರವಾಗಿ ಬರುವ ಧೃಷ್ಟದ್ಯುಮ್ನನನ್ನು ಸಂಹರಿಸುವುದು ನಮ್ಮ ಷಡ್ರಥಿಕರ ಆದ್ಯಕರ್ತವ್ಯವಾಗಿದೆ. ಇವರೀರ್ವರಿಗೆ ಸಹಾಯವಾಗಿ ಬರದಂತೆ ಸವ್ಯಸಾಚಿಯನ್ನು ಕುರುಪುಂಗವರು ತಡೆಯಲಿ! ಅಭಿಮನ್ಯುವಿನಂತೆ ಇವನನ್ನೂ ಸಂಹರಿಸಿದರೆ, ನಮಗೆ ವಿಜಯವು ಕರಗತವಾಗುವುದು.' ಆ ಮಾತಿನಂತೆ ಅನೇಕ ವೀರರು ಅರ್ಜುನನನ್ನು ಮುತ್ತಿ ತಡೆಯಲು ಹೋದರು. ದುರ್ಯೋಧನನ ಆಜ್ಞೆಯಂತೆ ಶಕುನಿಯು, ದುಶ್ಶಾಸನ, ದುರ್ವಿಷಹ, ದುಷ್ಪ್ರಧರ್ಷಣ, ಮೊದಲಾದ ಸಾವಿರಾರು ರಥಿಕರಿಂದ ಕೂಡಿ ಅರ್ಜುನ, ಭೀಮ, ಧರ್ಮಜ, ನಕುಲ ಸಹದೇವರನ್ನು ಸಂಹರಿಸುವ ಪಣವನ್ನು ತೊಟ್ಟು ಅರ್ಜುನನಿದ್ದಲ್ಲಿಗೆ ಹೋದನು.

ಕರ್ಣ ದುರ್ಯೋಧನ ದ್ರೋಣಾದಿಗಳು ಮಹಾ ಸಮಾರಂಭದಿಂದ ಸಾತ್ಯಕಿಯನ್ನು ಮುತ್ತಿ ಶರಜಾಲದಲ್ಲಿ ಮುಳುಗಿಸಿದರು. ತನ್ನನ್ನು ಕೊಲ್ಲಬೇಕೆಂದು ಹವಣಿಸುವ ಕೌರವ ಷಡ್ರಥಿಕರ ದಾಳಿಯನ್ನು ವೇಲೆಯು ಸಮುದ್ರವನ್ನಂತೆ ತಡೆದು ಸಾತ್ಯಕಿಯು ಅವರ ಬಾಣಗಳನ್ನು ಖಂಡಿಸಿ, ಅವರ ಸೈನಿಕರನ್ನು ಆನೆಯು ಕಬ್ಬಿನ ಸಾಲಿನನ್ನಂತೆ ಕಡಿದು ಕೆಡಹಿದನು. ಶೀಘ್ರಹಸ್ತನು, ಪ್ರಶಸ್ತಬಲನು, ಚಿತ್ರಯೋಧಿಯು, ಕುರುವಿರೋಧಿಯು, ಆದ ಯುಯುಧಾನನು, ಆರುಜನ ಮಹಾವೀರರನ್ನೊಬ್ಬನಾಗಿ ತಡೆದು, ಅವರನ್ನು ವಿರಥರನ್ನು, ವಿತುರಗಗಳನ್ನು ಮಾಡಿ ಅವರ ಯುದ್ಧಶ್ರದ್ಧೆಯನ್ನು ಬಿಡಿಸಿದನು. ಕುರುರಾಜನೆ ಅವನ ಬಾಣ ಧಾಟಿಗೆ ನಿಲ್ಲಲಾರದೆ, ವಿರಥನಾಗಿ ಕೃತವರ್ಮನ ರಥವನ್ನು ಸೇರಿದನು.

ಅರ್ಜುನನು ತನ್ನನ್ನು ಮುತ್ತಿದ ಶಕುನಿ ಪ್ರಮುಖ ಪರವೀರರನ್ನು ಬಾಣವರ್ಷದಲ್ಲಿ ಮುಳುಗಿಸಿ, ಅವರ ಸೇನೆಯನ್ನು ನಾಶಪಡಿಸಿದನು. ಶಕುನಿಪುತ್ರನು ತಂದೆಗೆ ನೆರವಾಗಿ, ನರನನ್ನು ಶರತಾಡನ ಭಿನ್ನನನ್ನು ಮಾಡಿದನು. ಕುರುಸೇನೆಯು ಧನಂಜಯನ ಮುಂದೆ ನಿಲ್ಲಲಾರದೆ ಓಡಿದವು.

ಧೃಷ್ಟದ್ಯುಮ್ನನು ದ್ರೋಣನೆದುರಿಗೇ ತನ್ನ ಸೈನಿಕರನ್ನು ಸಂಹರಿಸುತ್ತಿರಲು ನೋಡಿ ರೋಷಶೋಕವಶನಾಗಿ ದುರ್ಯೋಧನನು ದ್ರೋಣಕರ್ಣರನ್ನು ಸಮೀಪಿಸಿ ಅವರಿಗಿಂತೆಂದನು: 'ಆಚಾರ್ಯ! ಮಿತ್ರ! ಕೇಳಿರೆನ್ನ ಮಾತನ್ನು! ನೀವೀರ್ವರೂ ನನ್ನ ವಿಜಯಕ್ಕಾಗಿ, ಪ್ರಾಣ ಪಣವಿಟ್ಟು ರಣನಿರತರಾಗಿರುವಿರಿ! ನಿಜ! ಆದರೆ ನನ್ನ

ದುರದೃಷ್ಟದಿಂದ ನಿಮ್ಮೆದುರಿಗೇ ಜಯದ್ರಥನು ಸಂಹೃತನಾದನು. ಎಷ್ಟೋ ಕುರು ಕುಮಾರರು ಮೃತರಾದರು. ಪಾಂಡವರನ್ನು ಸಂಹರಿಸುವ ಶಕ್ತಿಯಿದ್ದರೂ, ಅಶಕ್ತರಂತೆ ಮೃದುಯುದ್ಧವನ್ನು ಮಾಡುವ ನಿಮ್ಮಿಂದ ನಾನು ಕೆಟ್ಟೆನು. ಮೊದಲೇ ತಿಳಿಸಿದ್ದರೆ, ಪಾರ್ಥರಿಂದ ವೈರವನ್ನೇ ಬಿಟ್ಟು ಬೇರೊಂದು ಉಪಾಯವನ್ನು ಹೂಡುತ್ತಿದ್ದೆನು. 'ಪಾಂಡವರನ್ನು ನಾವು ಗೆಲ್ಲುವೆವು' ಎಂದು ಸಭೆಯಲ್ಲಿ ನುಡಿದ ಮಾತಿನಂತೆ ಈಗಲಾದರೂ ನಡೆಯಿರಿ! ನಿಮ್ಮ ವಿಕ್ರಮಕ್ಕೆ ಅನುರೂಪವಾಗಿ ಹೊಡೆದಾಡಿ!' ಮಹಾರಾಜನ ಮಾತಿನಿಂದ ದ್ರೋಣಕರ್ಣರು ಪ್ರತೋದದಿಂದ ತಿವಿದ ಆನೆಗಳಂತೆ ಕ್ರುದ್ಧರಾಗಿ, ಶತ್ರುಸೇನಾನಿವಹವನ್ನು ಶರ ಸಹಸ್ರದಿಂದ ಪೀಡಿಸಿ, ಯಮನ ಸೇವೆಗೆಂದು ಕಳಿಸಿದರು. ಅವರ ಪರಾಕ್ರಮವಹ್ನಿಗೆ ಹೆದರಿ ಓಡುವ ಪಾಂಡವ ಸೈನಿಕರನ್ನು ನಿಲ್ಲಿಸಿ ಸಾತ್ಯಕಿ ಧೃಷ್ಟದ್ಯುಮ್ನರು ವಿಜೃಂಭಿಸಿ, ಕೌರವೀಸೇನೆಯನ್ನು ನಾಶಪಡಿಸಿದರು. ಭೀಮಸೇನನೂ ಅವರಿಗೆ ಜೋಡಾಗಿ, ಕಿಚ್ಚಿಗೆ ಗಾಳಿಯಂತೆ ಪ್ರತಾಪಿಸಲು, ಕೌರವಸೇನಾಕಕ್ಷವು ಸುಟ್ಟು ನಾಶವಾಯಿತು. ಅರ್ಜುನನು ಶ್ರೀಕೃಷ್ಣಪ್ರೇರಿತನಾಗಿ ದ್ರೋಣನನ್ನು ಮುತ್ತಿ ಕಾದಿದನು.

ಧೃಷ್ಟದ್ಯುಮ್ನನನ್ನು ತಡೆದು ಕರ್ಣನು, ಅವನ ಸಾರಥಿತುರಗಗಳನ್ನು ಸಂಹರಿಸಿದನು. ಪಾರ್ಷತನು ಪರಿಘವನ್ನೊಗೆದು ಕರ್ಣನ ಕುದುರೆಗಳನ್ನು ಕೆಡಹಿದನು. ಮತ್ತು ಸಹದೇವನ ರಥದಿ ಕೂತು, ಕರ್ಣನನ್ನು ಮುತ್ತಲು ಹವಣಿಸಿದನು. ಆಗ ಧರ್ಮರಾಜನು ಪದಾತಿಯಾದ ಕರ್ಣನಿಂದ ರಥಿಕನಾಗಿ ಧೃಷ್ಟದ್ಯುಮ್ನನು ಕಾದಬಾರದೆಂದು ವಾರಿಸಿದನು. ಕರ್ಣನು ಮತ್ತೊಂದು ರಥವನ್ನೇರಿ ಪಾಂಡವ ಸೈನಿಕರನ್ನು ಚೆಂಡಾಡಿದನು. ಕರ್ಣನ ಧನುಸ್ಸು ಸದಾ ಮಂಡಲೀಕೃತವಾಗಿತ್ತು. ಅದರಿಂದ ಬಾಣಗಳು ಸೂರ್ಯಮಂಡಲದಿಂದ ಕಿರಣಗಳು ಬಂದಂತೆ ಸಂತತವಾಗಿ ಬರುತ್ತಿದ್ದವು. ಅವನಿಂದ ಬಾಣಹತರಾಗಿ ಉರುಳಿದವರನ್ನು ಬಿಟ್ಟು ಉಳಿದವರು ಕಾಲಿನ ಬಲವನ್ನು ತೋರಿದರು.

ಅದನ್ನು ಕಂಡು ಪಾರ್ಥನು ಕೃಷ್ಣನಿಗಿಂತೆಂದನು: 'ಕೃಷ್ಣ! ಕುಂತೀಸುತ ಜ್ಯೇಷ್ಠನು ಕರ್ಣನ ವಿಕ್ರಮವನ್ನು ಕಂಡು ಭೀತನಾದಂತಿದೆ. ನಮ್ಮ ಸೈನಿಕರೂ ಓಡಿಹೋಗುತ್ತಿರುವರು. ಇಂದಿನ ಸೂತನಂದನನ ವಿಕ್ರಮವು ಅನಿವಾರ್ಯವೆಂದು ತೋರುತ್ತಿದೆ. ದ್ರೋಣಬಾಣಗಣದಿಂದ ನೊಂದ ನಮ್ಮ ಭಟರೀಗ ಕರ್ಣನ ನಾರಾಚಗಳಿಗೆ ಗುರಿಯಾಗಿ, ಸಾಯುತ್ತಿರುವರು. ಇಂತು ವಿಕ್ರಮಿಸುವ ರಾಧೇಯನನ್ನು ಕಂಡು, ಪಾದತಾಡಿತ ಭುಜಂಗದಂತಾಗಿರುವೆನು. ಅವನನ್ನಿಂದು ವಧಿಸುವೆನು ಅಥವಾ ಅವನಿಂದ ಸಾಯುವೆನು.' ಆ ಮಾತಿಗೆ ನಕ್ಕು ಶ್ರೀಕೃಷ್ಣನು, 'ಅರ್ಜುನ! ನಿನ್ನ ವಿಕ್ರಮವೀಗ ಕರ್ಣನ ಮೇಲೆ ಸಲ್ಲದು. ಅತಿಮಾನುಷ ಪರಾಕ್ರಮವನ್ನು ತೋರಿ ವಿಹರಿಸುವ, ಕರ್ಣನನ್ನು ತಡೆಯುವರಿಬ್ಬರು ಮಾತ್ರ ನನಗೆ ಕಾಣುತ್ತಿರುವರು. ಪ್ರಥಮನು ನೀನು; ದ್ವಿತೀಯನು ಘಟೋತ್ಕಚನು. ಈಗ ರಾತ್ರಿಯಾಗಿದೆಯಾದುದರಿಂದ ನಿಶಾಚರನು

ರಾಧೇಯನೊಡನೆ ಕಾದಿ ತಡೆಯಲಿ ! ನಿನಗೀಗ ಕರ್ಣನೊಡನೆ ಕದನವು ಕಾರ್ಯವಲ್ಲ! ಅವನಲ್ಲಿ ಮಹೋಲ್ಕೆಯಂತೆ ಉರಿವ ಇಂದ್ರಶಕ್ತಿ ರಥಸ್ಥಿತವಾಗಿ ಇದೆ. ಅದನ್ನು ನಿನಗಾಗಿ ಕಾದಿಟ್ಟಿರುವನು. ಘಟೋತ್ಕಚನು ಕರ್ಣನನ್ನು ಎದುರಿಸಿ ಹೋರಾಡಲಿ ! ಭೀಮಪುತ್ರನು, ಭೀಮರೂಪನು, ಭೀಮಬಲನು, ಮಹಾಸ್ತ್ರಚತುರನು, ಪಾಂಡವಾನುರಕ್ತನೂ ಆದ ರಾಕ್ಷಸರಾಜನ ಕದನಕಾಲವೀಗ ಒದಗಿದೆ ! ಅವನೇ ಹೋಗಲಿ !' ಎಂದು ಘಟೋತ್ಕಚನನ್ನು ಕರೆಸಿದನು.

ಬಂದು ವಂದಿಸಿ ನಿಂತ ರಾಕ್ಷಸರಾಜನಿಗೆ ಯದುವಲ್ಲಭನಿಂತೆಂದನು. 'ಘಟೋತ್ಕಚ ! ಚನ್ನಾಗಿ ಮನವಿತ್ತು ಕೇಳು! ಈಗ ವಿಕ್ರಮಿಸಿ ಪಾಂಡವರನ್ನು ಕರ್ಣನಿಂದ ಉಳಿಸುವ ಕಾಲ ಬಂದಿದೆ. ಕರ್ಣವಿಕ್ರಮವಮಹಾರ್ಣವದಲ್ಲಿ ಮಗ್ನರಾಗುತ್ತಿರುವ ಪಾಂಡವರಿಗೆ ಹಡಗಂತೆ ನಿಂತು, ಪಾರುಗಾಣಿಸು ! ನೋಡಲ್ಲಿ ಕರ್ಣನ ಚಾಪನಿರ್ಮುಕ್ತ ಶರಜಾಲದಲ್ಲಿ ಸಿಕ್ಕು ಸಾಯುವ ನಮ್ಮ ಸೈನಿಕರನ್ನು ! ಭೀಮವಿಕ್ರಮನಾದ ನಿನ್ನಿಂದ ಹೊರತನ್ಯರು ಕರ್ಣನ ಕೂಡ ಬಡಿದಾಡಲಾರರು. ಮಹಾಬಾಹೋ ! ಮಾತೃಜನ ಮತ್ತು ಪಿತೃಜನರಿಗೆ ಮಗನಿಂದಾಗುವ ಮಹಾ ಕಾರ್ಯಭಾರವನ್ನು ನಿನ್ನ ಶಿರದಲ್ಲಿಟ್ಟಿರುವೆನು. ಚನ್ನಾಗಿ ನಿರ್ವಹಿಸಿ, ಸಾರ್ಥಕಜೀವನನಾಗು ! ಸತ್ಪುತ್ರರು ಪಿತೃಜನರನ್ನು ಪರಲೋಕದಲ್ಲಿ ಸುಖಪಡಿಸುವುದಲ್ಲದೆ ಇಹದಲ್ಲಿಯೂ ಸುಖಪಡಿಸುವರು. ರಾತ್ರಿ ಕಾಲವಾಗಿದ್ದುದರಿಂದ ನಿನ್ನ ರಾತ್ರಿಂಚರರಿಗೆ ಅನುಕೂಲ ವೇಳೆಯಾಗಿದೆ! ವಿಜೃಂಭಿಸು ! ಕೌರವಸೈನ್ಯವನ್ನು ಸಂಹರಿಸು !'

ಮುರಾರಿಯ ಮಾತಿಗೆ ಬಲವಿತ್ತು ಬಲಾರಿನಂದನನಿಂತೆಂದನು: 'ಘಟೋತ್ಕಚ ! ನಮ್ಮ ಸೇನೆಯಲ್ಲಿ ಭೀಮಸೇನ, ಸಾತ್ಯಕಿ, ನೀನು ಅಪ್ರತಿಮಾನ ವೀರರೆನಿಸಿರುವರು. ಕರ್ಣನಿಂದ ಕಡಿದಾಡಲು ನಿನ್ನನ್ನು ಅಭ್ಯರ್ಥಿಸುವ ನಮ್ಮ ಕೋರಿಕೆ ಮನ್ನಿಸು ! ಸಾತ್ಯಕಿಯು ನಿನಗೆ ಪೃಷ್ಠರಕ್ಷಕನಾಗಿ ಬರುವನು. ಕರ್ಣನನ್ನು ಸಂಹರಿಸು !' ಆ ಮಾತನ್ನಾಲಿಸಿ, ಮೈಯುಬ್ಬಿಸಿ, ರಾಕ್ಷಸರಾಜನು, 'ಆಗಲಿ ! ಕರ್ಣನನ್ನೇ ಏಕೆ ? ದ್ರೋಣನನ್ನೂ ಕೊಂದುಬಿಡುವೆನು. ಅನ್ಯರಾಜರನ್ನೂ ಉಳಿಸೆನು. ನೋಡುತ್ತಿರಿ ! ನನ್ನ ಪರಾಕ್ರಮವನ್ನು ! ಇಂದು ಸೂತಸುತನಿಂದ ಕಾದಿ ಕಡಿದಾಡಿದ ಘಟೋತ್ಕಚನ, ವಿಕ್ರಮಗಾಥೆಯನ್ನು ಭೂಮಂಡಲದ ಜನರು ಕೊಂಡಾಡುವರು.' ಎಂದು ನುಡಿದು, ಕರ್ಣನೊಡನೆ ಕಾದಲು ಪೋದನು.

ಗುಹೆಯಂತಿರುವ ಬಾಯನ್ನು ತೆರೆದು, ಕೊರೆಗಳನ್ನು ಮಸೆಯುತ್ತಾ, ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಾ, ಬರುವ ಹೈಡಿಂಬಿಯನ್ನು ನೋಡಿದ ಕೌರವಭಟರು ಎದೆಯೊಡೆದು ನೆಲಕ್ಕುರುಳಿದರು. ಕರ್ಣನು ಕುಪಿತನಾಗಿ, ಅವನನ್ನು ಮುತ್ತಿ ಕಾದಿದನು. ಘೋರರಾಕ್ಷಸರಿಂದ ಸುತ್ತಲ್ಪಟ್ಟ ಸೂತಸುತನು ಪ್ರಮಾದವಶನಾಗಬಾರದೆಂದು ಅಶ್ವತ್ಥಾಮ ಶಕುನಿಯರನ್ನು ರಾಜನು ಕರ್ಣ ಸಹಾಯಕ್ಕಾಗಿ ಕಳಿಸಿದನು. ಆಗ ಜಟಾಸುರಸುತನಾದ ಅಲಂಬಲನೆಂಬ ರಾಕ್ಷಸನು ದುರ್ಯೋಧನನನ್ನು ಸೇರಿ ಅವನಿಗಿಂತೆಂದನು: 'ಮಹಾರಾಜ!

ಪಾಂಡವರನ್ನು ಕೊಂದು ಬರುವೆನು. ನನಗೆ ಅಪ್ಪಣೆ ಕೊಡು ! ನಮ್ಮ ತಂದೆಯನ್ನು ಕೊಂದ ಹಗೆಯನ್ನು ತೀರಿಸುವೆನು. ಪಾರ್ಥನ ರಕ್ತಮಾಂಸಗಳಿಂದ ಶ್ರಾದ್ಧವನ್ನು ಮಾಡಿ ನಮ್ಮಪ್ಪನ ಪ್ರೀತಿ ಗಳಿಸುವೆನು.' ಆ ಮಾತಿಗೆ ಪ್ರೀತನಾಗಿ ಕೌರವರಾಜನು 'ದ್ರೋಣಕರ್ಣಾದಿ ವೀರರಿಂದ ಸಹಿತನಾದ ನಾನೇ ಅಹಿತವಧವನ್ನು ಸಾಧಿಸಬಲ್ಲೆನು. ಆದರೂ ನನ್ನಿಂದ ಆಜ್ಞಪ್ತನಾಗಿ ಹೋಗಿ ರಕ್ಷೋಮನುಜ ಸಂಭವನಾದ ಘಟೋತ್ಕಚನನ್ನು ಸಂಹರಿಸು ! ಹೋಗು !' ಎಂದಪ್ಪಣೆ ಕೊಟ್ಟನು.

ಮಹಾಕಾಯನಾದ ಅಲಂಬಲನು ಗರ್ಜಿಸುತ್ತಾ ಹೋಗಿ, ಘಟೋತ್ಕಚನನ್ನು ಮುತ್ತಿದನು. ಮಾಯಾ ಯುದ್ಧವಿಶಾರದರಾದ ರಾಕ್ಷಸರಿಬ್ಬರು ತೀಕ್ಷ್ಣ ಶರಗಳಿಂದ ವಿಕ್ಷತಗಾತ್ರರಾಗಿ, ಧನುಸ್ಸುಗಳನ್ನು ಖಂಡಿಸಿ, ಮುಷ್ಟಿಯುದ್ಧಕ್ಕಿಳಿದರು. ನಿಶಾಚರರ ನಿಶಿಯುದ್ಧವು ಭಯಂಕರವಾಯಿತು. ಅಲಂಬುಲನು ಕುಟ್ಟಿಪೀಡಿಸಿದ ಘಟೋತ್ಕಚನನ್ನು ಕರ್ಣಾದಿಗಳು ಶರವ್ರಾತದಿಂದ ಘಾತಿಸಿದರು. ಆಗ ಘಟೋತ್ಕಚನು ತನ್ನ ರಥವನ್ನೇರಿ, ಧನುವನ್ನು ಹಿಡಿದು ಶರ ಸಹಸ್ರದಿಂದ, ಕರ್ಣ, ಕೃಪ, ಶಕುನಿ, ಅಲಂಬಲರನ್ನು ಪೀಡಿಸಿ, ಜಟಾಸುರಪುತ್ರನ ತುರಗಗಳನ್ನು ನಾಲ್ಕು ಬಾಣಗಳಿಂದ ಕೊಂದನು; ಮತ್ತೊಂದರಿಂದ ಅವನ ಸೂತನನ್ನು ಕೆಡಹಿ, ಧ್ವಜವನ್ನುರುಳಿಸಿದನು. ಅಲಂಬಲನು ರುಷ್ಟನಾಗಿ, ಮೇಲೇರಿ ಬಂದು ಮುಷ್ಟಿಘಾತದಿಂದ ನೋಯಿಸಲು ಭೈಮಸೇನಿಯು ಸಿಟ್ಟಾಗಿ, ಅವನನ್ನೆತ್ತಿ ನೆಲಕ್ಕೆ ಕೆಡಹಿ ಗುದ್ದಿದನು. ಅಲಂಬಲನು ರಕ್ತಸಿಕ್ತಗಾತ್ರನು, ಕ್ರೋಧಾರುಣಿತನೇತ್ರನು ಆಗಿ ಮೇಲಕ್ಕೆದ್ದು ಘಟೋತ್ಕಚನನ್ನು ಎತ್ತಿ ನೆಲದಿ ಕೆಡಹಿ, ಗುದ್ದಿದನು. ಅವರ ಮುಷ್ಟಿಯುದ್ಧದಲ್ಲಿ ಭೂಮಿ ಪಾದಾಘಾತಗಳಿಂದ ಕಂಪಿಸಿತು, ಅಂತರಿಕ್ಷ ಫೆಳಫೆಳಾರವದಿಂದ ಪ್ರತಿಧ್ವನಿಸಿತು. ಮಾಯಾವಿಶಾರದರಾದ ರಾಕ್ಷಸರು ಆಕಾಶಕ್ಕೆ ಹಾರಿ, ಚಿತ್ರಯುದ್ಧವನ್ನು ಮಾಡಿದರು. ಪರಿಘಗದಾಪ್ರಾಸಮುದ್ಗರಶೂಲಗಳು ತುಂಡಾಗಿ ಬಿದ್ದವು. ಘಟೋತ್ಕಚನು ಗಿಡಗದಂತೆ ಅಲಂಬಲನ ಮೇಲೆ ಬಿದ್ದು ಅವನನ್ನು ಪಿಡಿದೆತ್ತಿ ನೆಲಕ್ಕಪ್ಪಳಿಸಿ ಕೊಂದನು. ಅಲಂಬಲನು ಗಟ್ಟಿಯಾಗಿ ಚೀರಿ, ರಕ್ತಕಾರಿ ಸತ್ತನು. ಅಲ್ಲಿಗೆ ಬಿಡದೆ ಘಟೋತ್ಕಚನು ಖಡ್ಗದಿಂದ ಅವನ ತಲೆಯನ್ನು ಖಂಡಿಸಿ, ಕೂದಲ ತುದಿಗಳಿಂದ ಪಿಡಿದು, ತಿರುಗಿಸಿ, ದುರ್ಯೋಧನನ ರಥದಲ್ಲಿ ಬೀಳುವಂತೆ ಒಗೆದನು; ಅವನ ಸಿಂಹನಾದವನ್ನು ಕೇಳಿ, ಕುರುರಾಜನೂ ಭೀತನಾದನು. 'ದುರ್ಯೋಧನ ! ನಿನ್ನ ಮಿತ್ರನಾದ ಜಟಾಸುರ ಪುತ್ರನ ವಿಕ್ರಮವನ್ನು ಕಂಡೆಯಲ್ಲವೆ ? ಈಗ ಕರ್ಣನ ರಾಜಭಕ್ತಿಯ ನಿಷ್ಠೆಯನ್ನೂ ನಿನಗೆ ತೋರುವೆನು. ನೋಡುತ್ತಿರು ! ಅವನ ತಲೆಯೂ ನಿನ್ನ ಕಾಲ ಬಳಿ ಬೀಳುವಂತೆ ಮಾಡುವೆನು' ಎಂದು ಘಟೋತ್ಕಚನು ಕರ್ಣನನ್ನು ಬಾಣವರ್ಷದಲ್ಲಿ ಮುಣುಗಿಸಿದನು.

ಲೋಹಿತಾಕ್ಷನು, ಮಹಾಕಾಯನು, ತಾಮ್ರಮುಖನು, ತೀಕ್ಷ್ಣನಖನು, ಶಂಕುಕರ್ಣನು, ಅಂಜನಗಿರಿವರ್ಣನು. ಮಹಾಬಾಹುವು, ಸ್ಥೂಲನಾಸಿಕನು, ಅಂಗದ ಕಟಕಭೂಷಣನು, ಶತ್ರುಭೀಷಣನು, ಕಾಂಸ್ಯಕವಚನು, ಪ್ರಳಯಾಗ್ನಿರುಚನೂ ಆದ

ಘಟೋತ್ಕಚನು, ಋಕ್ಷಚರ್ಮಾವೃತವಾದ ನಲ್ವಪರಿಮಿತ ರಥದಲ್ಲಿ ಕೂತು, ಗೃಧ್ರಧ್ವಜವು ಹಾರಾಡುತ್ತಿರಲು, ಸುತ್ತುಗಟ್ಟಿ ರಾಕ್ಷಸ ಸೈನಿಕರು ಚೀರಾಡುತ್ತಿರಲು, ಕುರುಸೇನೆಯ ಮೇಲೆರಗಿದನು. ಅವನ ಬಾಣಗಳು ರಥಾಕ್ಷಪರಿಮಿತವಾಗಿ ಅಪರಿಮಿತ ಸೇನಾನಾಶವನ್ನು ಸಾಧಿಸಿದವು. ಅವನ ಧನುಷ್ಟಂಕಾರ ಪರ್ಜನ್ಯ ಗರ್ಜನೆಯಂತೆ ಶತ್ರುವೀರರ ಹೃದಯ ಗುಹೆಗಳನ್ನು ಮಾರ್ಮೊಳಗಿಸಿತು.

ಕರ್ಣನು ಬಾಣಯುದ್ಧದಲ್ಲಿ ವಿಫಲನಾಗಿ, ವಿವಿಧಾಸ್ತ್ರಗಳನ್ನು ಸಂಧಿಸಲು ನೋಡಿ, ಘಟೋತ್ಕಚನು ರಾಕ್ಷಸೀಮಾಯೆಯನ್ನು ಅವಲಂಬಿಸಿ ಆಕಾಶಕ್ಕೆ ಹಾರಿದನು. ಆಕಾಶದಿಂದ ಶೂಲಮುದ್ಗರಾದಿ ವಿವಿಧಾಯುಧಗಳು, ಕಂಟಕಶಿಲುಗಳು, ರಕ್ತಮಾಂಸಗಳು, ಬೀಳತೊಡಗಿದವು. ಸೂತಪುತ್ರನು ಕಂಕಪತ್ರಗಳಿಂದ ಘಟೋತ್ಕಚನನ್ನು ಪೀಡಿಸಿ, ದಿವ್ಯಾಸ್ತ್ರದಿಂದ ರಾಕ್ಷಸೀಮಾಯೆಯನ್ನು ನಾಶಪಡಿಸಿದನು; ಮತ್ತು ಅವನ ಕುದುರೆಗಳನ್ನು, ಸೂತನನ್ನು ಸಂಹರಿಸಿದನು. ಘಟೋತ್ಕಚನು ಒಂದು ಸಲ ಅಂಗುಷ್ಠಮಾತ್ರನು, ಮರುಕ್ಷಣವೇ ಮಹಾತಾಲನಿಭನು ಆಗುತ್ತಾ, ಕರ್ಣನ ನಿಶಿತಶರಗಳಿಗೆ ಸಿಗದೆ ಸಂಚರಿಸಿದನು. ನೋಡುತ್ತಿರಲು, ಕರ್ಣನ ರಥದ ಮೇಲೇರಿ 'ಕರ್ಣ! ನಿಲ್ಲು! ನಿನ್ನ ಯುದ್ಧಶ್ರದ್ಧೆಯನ್ನು ನಾಶಪಡಿಸುವೆನು. ಜೀವದಿಂದ ನಿನ್ನನ್ನಿಂದು ಬಿಡೆನು' ಎಂದು, ಗದೆಯನ್ನೆತ್ತಿ ನಿಂತಂತಾಗಲು, ಕರ್ಣನು ಅವನನ್ನು ನಿಶಿತಶರವರ್ಷದಿಂದ ಪೀಡಿಸಿದನು. ಆಕಾಶದಿಂದ ಬರುವ ಕಲ್ಲುಮಳೆಯನ್ನು ದಿವ್ಯಾಸ್ತ್ರದಿಂದ ನಿಲ್ಲಿಸಿ, ಕರ್ಣನು, ಅವನಿಂದ ಪ್ರೇರಿತನಾಗಿ ಮುತ್ತುವ ಕ್ರೂರರಾಕ್ಷಸರನ್ನು, ಸಾವಿರಾರು ವೀರರನ್ನು ಸಂಹರಿಸಿದನು. ತ್ರಿಪುರರನ್ನು ಸುಟ್ಟ ಮಹೇಶ್ವರನಂತೆ ವಿರಾಜಿಸುವ ರಾಧೇಯನನ್ನು ನೋಡಿ ಸಹಿಸದೆ, ಘಟೋತ್ಕಚನು ಕೈಕೈ ಹಿಸುಕಿಕೊಂಡು, ಹಲ್ಲು ಕಡಿದು ರುದ್ರನಿರ್ಮಿತವಾದ ಅಶನಿ ಎಂಬ ಮಹಾಶಕ್ತಿಯನ್ನು ಕರ್ಣನ ಮೇಲೊಗೆದನು. ಕರ್ಣನು ಭಯಪಡದೆ ಆ ಶಕ್ತಿಯನ್ನು ಹಿಡಿದು ಹಿಂದಿರುಗಿಸಲು ಅದು ರಾಕ್ಷಸನ ರಥಗಜತುರಗಗಳನ್ನೂ ಸೂತನನ್ನೂ ಕೊಂದು ಕೆಡಹಿತು. ಅದನ್ನು ಕಂಡು, ಸುರಾಸುರಗಂಧರ್ವರು ಕರ್ಣವಿಕ್ರಮವನ್ನು ಪ್ರಶಂಸಿಸಿ, ನಿಬ್ಬೆರಗಾಗಿ ನೋಡುತ್ತಾ ನಿಂತರು.

ಕರ್ಣನು ನಾರಾಚಗಳಿಂದ ಪೀಡಿಸುತ್ತಿರಲು, ತಡೆಯಲಾರದೆ, ಘಟೋತ್ಕಚನು ಕಣ್ಣಿಗೆ ಕಾಣದಂತಾಗಿ, ಅಂಬರದಿಂದ ಅಂಬಿನ ಮಳೆಗರೆದನು. ಕರ್ಣನು ಅವನ ಮಾಯೆಯನ್ನು ಖಂಡಿಸಿ, ಮತ್ತೆ ಭೂಮಿಯಲ್ಲಿ ರಥಾರೂಢನಾಗಿ ನಿಂತು ಮುತ್ತಿದ ರಾಕ್ಷಸನೊಡನೆ ರೂಕ್ಷರಣನಿರತನಾದನು. ಆಗ ಅಲಾಯುಧನೆಂಬ ರಾಕ್ಷಸೇಂದ್ರನು ವಿರೂಪ ರಾಕ್ಷಸಕೋಟಿಯಿಂದ ಯುಕ್ತನಾಗಿ, ದುರ್ಯೋಧನನನ್ನು ಸಮೀಪಿಸಿ, ನಮಿಸಿ, ಇಂತೆಂದನು: 'ರಾಜನ್! ನನ್ನ ಬಂಧುವಾದ ಬಕಾಸುರನನ್ನು ಮಿತ್ರರಾದ ಕಿರ್ಮೀರ, ಹಿಡಿಂಬರನ್ನು ಕೊಂದು, ನಮ್ಮ ರಾಕ್ಷಸ ಕನ್ಯೆಯನ್ನು ಕೆಡಸಿದ ಭೀಮನನ್ನು ಕೊಂದು ಸೇಡು ತೀರಿಸಬೇಕೆಂದು ಬಂದಿರುವೆನು. ಭೀಮನನ್ನೇ ಅಲ್ಲದೆ ಭೀಮಪುತ್ರನನ್ನೂ

ಸಂಹರಿಸಿ, ನಿನಗೆ ವಿಜಯವನ್ನೀಯುವೆನು. ನೀವೆಲ್ಲರೂ ಸುಮ್ಮನೆ ನಿಂತು ನೋಡುತ್ತಿರಲು, ನನ್ನ ಸೈನ್ಯದಿಂದ ಕೂಡಿ, ಪಾಂಡವರನ್ನು ನಿಶ್ಶೇಷವಾಗಿ ನಾಶಗೊಳಿಸಿ ಬರುವೆನು' ಇಂತು ನುಡಿದ ಬ್ರಾಹ್ಮಣ ಭಕ್ಷಕನ ಮಾತನ್ನಾಲಿಸಿ, ನಸುನಕ್ಕು, ದುರ್ಯೋಧನನು, 'ಆಗಲಿ ! ನಿನ್ನೊಡನೆ ಕೂಡಿ ನಾವೂ ಕಾದಾಡುವೆವು. ವೈರದೀಪಿತಮನಸ್ಕರಾದ ನನ್ನ ಸೈನಿಕರು ಪರಾವಲಂಬನರಾಗಿ ಸುಮ್ಮನೆ ಕೂಡಲಾರರು' ಎಂದನು. ಆ ಮಾತಿಗೆ ಸಮ್ಮತಿಸಿ, ಅಲಾಯುಧನು ತನ್ನವರಿಂದ ಕೂಡಿ, ಘಟೋತ್ಕಚನನ್ನು ಮುತ್ತಿದನು.

ಅವನ ರಥವೂ ಕರಡಿಯ ಚರ್ಮಗಳಿಂದ ಆವೃತವಾಗಿ, ಪಿಶಾಚಗಳಂತಿರುವ ಕುದುರೆಗಳಿಂದ ಕೂಡಿತ್ತು. ಅವನ ಬಾಣಗಳು ಅಕ್ಷಸ್ಥೂಣವಾಗಿದ್ದವು. ಅವನ ಚಾಪವು ಕನಕೋಜ್ವಲವಾಗಿತ್ತು. ಸಮಘೋರ ರೂಪರಾದ ಅಲಾಯುಧ- ಘಟೋತ್ಕಚರ ಯುದ್ಧವು ಅತಿ ಭಯಾನಕವಾಯಿತು. ಘಟೋತ್ಕಚ ಪೀಡಿತರಾಗಿದ್ದ ಕುರುಭಟರು, ಸಮುದ್ರದಲ್ಲಿ ಬಿದ್ದವರಿಗೆ ಹಡಗು ಕಾಣಸಿದಂತೆ ಅಲಾಯುಧನು ತೋರಲು ಅವನನ್ನು ಸಿಂಹನಾದಗಳಿಂದ ಸ್ವಾಗತಿಸಿದರು. ಘಟೋತ್ಕಚನು ಕರ್ಣನನ್ನು ಬಿಟ್ಟು, ಅಲಾಯುಧನೊಡನೆ ಕಾದತೊಡಗಿದನು. ರಣಪರಿಶ್ರಾಂತನಾಗಿರುವ ಘಟೋತ್ಕಚನಿಗೆ ನೆರವಾಗಿ ಬರುವ ಭೀಮಸೇನನನ್ನು ನೋಡಿ, ಅಲಾಯುಧನು ರೋಷಾನ್ವಿತನಾಗಿ, ಶರಜಾಲದಿಂದ ಆತನನ್ನು ಮುಚ್ಚಿದನು. ಭೀಮಸೇನನು ಅವನ ಶರಗಳನ್ನು ಖಂಡಿಸಿ, ಅವನ ರಾಕ್ಷಸ ಸೈನಿಕರನ್ನು ನರಕಕ್ಕೆ ಕಳಿಸಿದನು ; ಗದೆಯನ್ನೆತ್ತಿ ಒಗೆಯಲು ಅಲಾಯುಧನನ್ನು ತನ್ನ ಗದೆಯಿಂದ ಹೊಡೆದು, ಅದನ್ನು ಹಿಂದಿರುಗಿಸಿದನು. ಅವನ ಶಾಸನದಿಂದ ನಿಶಾಚರರು ಭೀಮನನ್ನು ಮುತ್ತಿ ವಿವಿಧಾಯುಧಗಳಿಂದ ಹೊಡೆದರು. ಕರ್ಣನು ರಾಕ್ಷಸನಿಗೆ ಸಹಾಯವಾಗದಂತೆ ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೇಯರು ಅವನೊಡನೆ ಕಾದತೊಡಗಿದರು. ನಕುಲ ಸಹದೇವ ಸಾತ್ಯಕಿಯರು ರಾಕ್ಷಸರನ್ನು ನಾಶಪಡಿಸುತ್ತಿದ್ದರು. ಶ್ರೀಕೃಷ್ಣನ ಆದೇಶದಂತೆ ಅರ್ಜುನನು ದ್ರೋಣನ ಭಟರನ್ನು ಸಂಹರಿಸುತ್ತಿದ್ದನು. ಇತ್ತ ಅಲಾಯುಧನು ಭೀಮಸೇನನ ಧನುವನ್ನು ಭಲ್ಲದಿಂದ ಮುರಿದು, ಆತನ ಗದೆಯನ್ನು ಗದೆಯಿಂದ ವಾರಿಸಿ, ಗರ್ಜಿಸಿದನು. ಭೀಮಸೇನನು ಮುಷ್ಟಿಘಾತದಿಂದಲೇ ಅಲಾಯುಧನನ್ನು ಸಂಹರಿಸಬಲ್ಲವನಾಗಿದ್ದೂ ಆ ಕಾರ್ಯವನ್ನು ಘಟೋತ್ಕಚನಿಂದ ಮಾಡಲೆಣಿಸಿ, ಅವನನ್ನು ಮುಂದೆ ಮಾಡಿ, ತಾನು ಹಿಂದೆ ಸರಿದನು.

ಅಲಾಯುಧ ಹೈಡಿಂಬಿ ಯುದ್ಧವು ಭಯಂಕರವಾಗಿತ್ತು. ಬಕನ ತಮ್ಮನು ಪರಿಘದಿಂದ ಘಟೋತ್ಕಚನನ್ನು ಹೊಡೆದು ತಲೆಯಿಂದ ರಕ್ತ ಸುರಿವಂತೆ ಮಾಡಿದನು. ಘಟೋತ್ಕಚನು ಕ್ರೋಧಾರುಣಿತ ನೇತ್ರನಾಗಿ, ಶತಘಂಟಾಸಮಲಂಕೃತವಾದ ಗದಾ ದಂಡದಿಂದ ಹೊಡೆದು, ಅಲಾಯುಧನ ರಥವನ್ನು ಪುಡಿಮಾಡಿ, ಸೂತತುರಗಗಳನ್ನು ಸಂಹರಿಸಿದನು. ಅಲಾಯುಧನು ರಥದಿಂದ ಆಕಾಶಕ್ಕೆ ಹಾರಿ, ರಕ್ತ

ಮಾಂಸ ವರ್ಷವನ್ನು ಗರೆದನು. ಮಾಯಾರಣಕೋವಿದನಾದ ಘಟೋತ್ಕಚನು ಅವನಂತೆ ಆಕಾಶಕ್ಕೆ ಹಾರಿ, ಅವನ ಸೇನೆಯನ್ನು ಅಶ್ಮವರ್ಷದಿಂದ ನಾಶಪಡಿಸಿದನು. ಅವರೀರ್ವರು ತೋಮರ, ಪ್ರಾಸ, ಕರವಾಲ, ಚಕ್ರಗದೆಗಳಿಂದ ಬಡಿದಾಡಿ, ವೃಕ್ಷಗಳಿಂದ ಹೊಡೆದಾಡಿ, ಕೊನೆಗೆ ಮುಷ್ಟಿ ಯುದ್ಧಕ್ಕಿಳಿದರು. ಕಚಾಕಚಿ, ಬಾಹಾಬಾಹವಿ, ಮುಷ್ಟಾಮುಷ್ಟಿಯಾಗಿ ಹೋರಾಡುವ ರಾಕ್ಷಸರೀರ್ವರು, ವಾಸಿತೆಗಾಗಿ ಬಡಿದಾಡುವ ಭದ್ರಗಜಗಳಂತೆ, ಕಂಡರು. ಘಟೋತ್ಕಚನು ವಿಜೃಂಭಿಸಿ, ಅಲಾಯುಧನನ್ನು ಪಿಡಿದು, ಮೇಲೆತ್ತಿ ನೆಲಕ್ಕಪ್ಪಳಿಸಿ ಕೊಂದನು; ಮತ್ತು ಅವನ ತಲೆಯನ್ನು ಖಂಡಿಸಿ ಗಿರಗಿರ ತಿರುಗಿಸಿ, ಕುರುರಾಜನ ಎದೆಗೆ ಗುರಿಯಿಟ್ಟು ಹೊಡೆದನು. ರಕ್ತಸಿಕ್ತವು, ಕೇಶಕ್ಲಿನ್ನವು ಆದ ಅಲಾಯುಧಶಿರವು ಎದೆಗೆ ತಗುಲಿದಾಗ, ದುರ್ಯೋಧನನು ಎದೆ ಒಡೆದು, ಕರ್ಣನಲ್ಲಿಗೆ ಓಡಿಬಂದನು. ಘಟೋತ್ಕಚನ ವೀರವಿಹಾರವನ್ನು ಕಂಡು, ಆನಂದಗೊಂಡು, ಪಾಂಡವಪಾಂಚಾಲ ಸೈನಿಕರು ಭೇರೀದುಂದುಭಿಗಳನ್ನು ಬಾರಿಸಿ, ಹರ್ಷಧ್ವಾನಗಳನ್ನು ಮಾಡಿದರು.

## ೧೫. ಚತುರ್ದಶ ದಿನ - ರಾತ್ರಿ ಯುದ್ಧ (೩)

ಘಟೋತ್ಕಚನು ಅಲಾಯುಧನನ್ನು ಸಂಹರಿಸಿ, ಸಿಂಹನಾದವನ್ನು ಮಾಡಿದನು. ದುರ್ಯೋಧನನು ಅವನ ವಿಷಮವಿಕ್ರಮ ವಿಜೃಂಭಣವನ್ನು ಕಂಡು, ಭೀತನಾಗಿ, ಕರ್ಣನನ್ನು ನೋಡಿ ಕುರುಸೇನೆಯನ್ನು ರಾಕ್ಷಸನಿಂದ ರಕ್ಷಿಸೆಂದು ಬೇಡಿದನು. ಕರ್ಣನು ತನ್ನನ್ನು ಮುತ್ತಿದ ಸಾತ್ಯಕಿಯನ್ನು ಯುಧಾಮನ್ಯೂತ್ತಮೌಜರನ್ನು ಬಾಣಗಣದಿಂದ ವಾರಿಸಿ, ರಾಕ್ಷಸನ ಮೇಲೆ ಬಾಣವೃಷ್ಟಿಯನ್ನು ಗರೆದನು. ಅವನ ಜ್ಯಾಘೋಷವು ಸಿಡಿಲಂತಿತ್ತು; ಧನುಸ್ಸು ಮಿಂಚಿನಂತೆ ಮೆರೆಯಿತು; ಬಹು ವೇಗದಿಂದ ಬರುವ ಬಾಣಗಳು ವರ್ಷಧಾರೆಗಳಂತಾಗಿ ಕರ್ಣಮೇಘವು ಶತ್ರುಭಯಂಕರವಾಯಿತು. ಅವನ ಧಾಟಿಗೆ ನಿಲ್ಲಲಾರದೆ ಯೌಧಿಷ್ಠಿರಭಟರು ದಿಕ್ಕಾಪಾಲಾಗಿ ಓಡಿಹೋದರು. ಆಗ ಘಟೋತ್ಕಚನು ಸಿಂಹನಾದ ಮಾಡುತ್ತಾ ಕಾಂಚನರತ್ನ ಚಿತ್ರಿತವಾದ ಮಹಾರಥದಲ್ಲಿ ಕೂತು, ವಜ್ರಸನ್ನಿಭನಿಶಾತ ಬಾಣಗಳಿಂದ ಕರ್ಣನನ್ನು ಪೀಡಿಸಿದನು. ಉತ್ತಮಾಸ್ತ್ರಗಳಿಂದ ಹೋರಾಡುವ ಕರ್ಣ ಘಟೋತ್ಕಚರು ಮದ್ದಾನೆಗಳಂತೆ ಕಂಗೊಳಿಸಿದರು. ರಾಕ್ಷಸನು ಕರ್ಣನ ದಿವ್ಯಾಸ್ತ್ರಗಳಿಗೆ ಸಿಗದೆ ಅಂತರ್ಧಿತನಾದನು. ಅವನು ಆಕಾಶದಿಂದ ಸುರಿಸುವ ಶಿಲಾಬಾಣ ವೃಕ್ಷಗಳ ಮಳೆಯನ್ನು ನೋಡಿ, ಕುರುಸೈನಿಕರು ವ್ಯಥಿತರಾದರು. ಎಲ್ಲ ದಿಕ್ಕುಗಳಿಂದ ಭಯಂಕರ ನಾದಗಳನ್ನು ಕೇಳಿ ಅವರು ಎದೆಯೊಡೆದರು. ಪರಿಘತೋಮರಶೂಲಖಡ್ಗಪ್ರಾಸಾದಿ ಆಯುಧಗಳಿಂದ ಹೊಡೆಯಲ್ಪಡುವ ಕುರುಭಟರು, ಹೊಡೆಯುವ ಹಗೆಯನ್ನು ಕಾಣಲಾರದೆ, ಆರ್ತನಾದ ಮಾಡಿ, ಓಡತೊಡಗಿದರು. ಸಾವಿರಾರು ಸೈನಿಕರು ಸಂಹೃತರಾಗಿ ನೆಲಕ್ಕುರುಳಿದರು. ಹಾಹಾಕಾರದಿಂದ ರಣರಂಗವು ಆಕ್ರಾಂತವಾಯಿತು. ದುರ್ಯೋಧನಾದಿಗಳು ಮರುದಿನದ ಬೆಳಕನ್ನು ತಾವು ನೋಡುವುದಿಲ್ಲವೆಂದು

ಎದೆಗುಂದಿದರು. ಪಾಂಡವರ್ರೈವರ ಚಂಡಕೋಪವೇ ಹಿಂಡುಗಟ್ಟಿ ಮೂರ್ತೀಭವಿಸಿ ಬಂದಂತಿರುವ ರಾಕ್ಷಸರಾಜನ ರಣಮಾರಣ ವಿಹಾರವನ್ನು ನೋಡಿ ಕುರುಭಟರು ಓಡಿರಿ ! ಇಂದ್ರಾದಿದೇವತೆಗಳೇ ಅಂಬರದಿ ನಿಂತು ದಿವ್ಯಾಸ್ತ್ರಗಳಿಂದ ನಮ್ಮನ್ನು ಕೊಂದು, ಪಾಂಡವರಿಗೆ ಜಯವೀಯಲು ಬಂದಿರುವರು. ಇನ್ನು ಉಳಿಯಲಾರೆವು ಓಡಿರಿ !' ಎಂದು ಕೂಗುತ್ತಾ, ರಾತ್ರಿಯ ಕತ್ತಲಿನಲ್ಲಿ ಎಡವಿಬೀಳುತ್ತಾ, ಮತ್ತೆ ಎದ್ದು ಓಡುತ್ತಾ ಹೋದರು. ಅಂತು ನಿರ್ಗತಿಕರಾದ ಕುರುವೀರರಿಗೆ ಗತಿಯಾಗಿ ನಿಂತು ಸೂತಸುತನು, ರಾಕ್ಷಸನನ್ನು ಬಾಣಶತದಿಂದ ಪೀಡಿಸಿದನು. ಘಟೋತ್ಕಚನು ಘೋರ ಚಕ್ರದಿಂದ ಕರ್ಣನ ನಾಲ್ಕು ಕುದುರೆಗಳನ್ನು ಕೊಂದು, ಮುಂದೆ ನಿಲ್ಲಲು ನೋಡಿ, ಕರ್ಣನು ರಥದಿಂದಿಳಿದು ದಿವ್ಯಾಸ್ತ್ರಗಳಿಂದ ಅವನನ್ನು ಪೀಡಿಸಿದನು. ಅವು ಅವನಲ್ಲಿ ವ್ಯರ್ಥವಾದವು. ಮುಂದೆ ನಿಂತಿದ್ದ ರಾಕ್ಷಸನು ಅಸ್ತ್ರವನ್ನು ವ್ಯರ್ಥಗೊಳಿಸಿ ಎಲ್ಲ ಕಡೆಯೂ ನಿಂತು ಕಾದುವವನಂತೆ ಕಂಡನು. ಆಗ ದುರ್ಯೋಧನನು ತಮ್ಮಂದಿರಿಂದ ಕೂಡಿ ಕರ್ಣನಲ್ಲಿಗೆ ಬಂದನು. ಅವರೆಲ್ಲರೂ ಘಟೋತ್ಕಚನ ಶಿಲಾಬಾಣಾದಿ ಘಾತದಿಂದ ಜರ್ಜರಿತಗಾತ್ರರು, ಬಾಷ್ಪಾಕುಲಿತ ನೇತ್ರರೂ ಆಗಿದ್ದರು.

ದುರ್ಯೋಧನನು 'ಕರ್ಣ ! ಕರ್ಣ ! ಮೊದಲು ನಿನ್ನ ದಿವ್ಯಶಕ್ತಿಯನ್ನು ಬಿಟ್ಟು ಘಟೋತ್ಕಚನನ್ನು ಕೊಲ್ಲು ! ಆಲಸ್ಯ ಮಾಡಬೇಡ ! ಭೀಮಾರ್ಜುನರಿಗೆ ನಾವು ಹೆದರುವದಿಲ್ಲ. ಈ ಪಾಪಿ ರಾಕ್ಷಸನು ನಿಶಾಂತವಾಗುವ ಮುನ್ನ ನಮ್ಮೆಲ್ಲರನ್ನೂ ಕೃತಾಂತನ ಮುಂದೆ ನಿಲ್ಲಿಸಿಬಿಡುವಂತಿದೆ. ಇಂದಿವನನ್ನು ಕೊಂದು, ನಮ್ಮನ್ನು ಉಳಿಸು ! ನಾಳೆ ಭೀಮಾರ್ಜುನರ ಧಾಟಿಯನ್ನು ನಾವು ತಡೆಯುವೆವು. ಕೌರವ ಬಲವನ್ನು ಕೌರವರನ್ನು ನಿನ್ನ ಶಕ್ತಿಯಿಂದ ಉಳಿಸು !' ಎಂದು ಬೇಡಿ, ಬಲಾತ್ಕರಿಸಿದನು. ಅವನ ದೀನಾಲಾಪವನ್ನೂ ಓಡುವ ಕುರುಸೇನೆಯ ಆಕ್ರಂದವನ್ನೂ ಕೇಳಿ, ಕರ್ಣನು ಕಾಲಬಲವನ್ನರಿತು, ವಿಧಿಗೆ ಶಿರಬಾಗಿ, ವೈಜಯಂತಿಯಂತೆ ಮೆರೆವ ಇಂದ್ರಶಕ್ತಿಯನ್ನೆತ್ತಿ ಘಟೋತ್ಕಚನ ಮೇಲೆಸೆದನು. ಅಂತಕನ ತಂಗಿಯೋ ಕರಾಳಮೃತ್ಯುವಿನ ಗೆಳತಿಯೋ, ರುದ್ರನ ಮೂರನೇ ಕಣ್ಣೋ ಎಂಬಂತೆ ವೇಗವಾಗಿ ಉರಿಯುತ್ತಾ ಬರುವ ಇಂದ್ರಶಕ್ತಿಯನ್ನು ನೋಡಿ, ಘಟೋತ್ಕಚನು ವಿಂಧ್ಯಾದ್ರಿ ತುಲ್ಯಶರೀರನಾಗಿ ಭಯದಿಂದ ಓಡತೊಡಗಿದನು. ಆದರೂ ಇಂದ್ರಶಕ್ತಿಯು ಬಿಡದೆ ಬೆನ್ನಟ್ಟಿ ಅವನನ್ನು ಕೊಂದು, ವಜ್ರಾಹತವಾದ ಗಿರಿಯನ್ನಂತೆ ಕೆಡಹಿತು. ಅವನು ಮೃತನಾದರೂ ಪಾಂಡವಹಿತವನ್ನು ಸಾಧಿಸಿದನೆಂಬಂತೆ ಅವನ ಘೋರ ಶರೀರದ ಕೆಳಗೆ ಸಿಕ್ಕು ಕೌರವರ ಒಂದಕ್ಷೌಹಿಣೀ ಸೇನೆಯು ನುಚ್ಚುನೂರಾಗಿ ನಶಿಸಿತು.

ಘಟೋತ್ಕಚನ ಮೃತಿಯನ್ನು ಕಂಡು ಕುರುರಾಜಾದಿಗಳು ಮಹಾನಂದಭರಿತರಾದರು. ಯುಧಿಷ್ಠಿರಾದಿಗಳು ಶೋಕಾರ್ಣವ ಮಗ್ನರಾದರು. ಇಂದ್ರಶಕ್ತಿಯು ಮತ್ತೆ ಮೇಘಮಂಡಲವನ್ನು ಮಿಂಚಿನಂತೆ ಹೊಕ್ಕು, ದೇವೇಂದ್ರನ ಹಸ್ತವನ್ನು ಸೇರಿತು. ವೃತ್ರವಧವನ್ನು ಸಾಧಿಸಿ ಬಂದ ಮಹೇಂದ್ರನನ್ನು ದೇವತೆಗಳಂತೆ,

ಕರ್ಣನನ್ನು ಕೌರವರು ಹರ್ಷವಿವಶರಾಗಿ ಪೂಜಿಸಿ, ಪ್ರಶಂಸಿಸಿದರು. ದುರ್ಯೋಧನನು ಮಿತ್ರನನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ರಣರಂಗದಲ್ಲಿ ಮೆರೆಸಿದನು.

ಪಾಂಡವರು ಶೋಕಾಕ್ರಾಂತರಾಗಿರಲು ವಾಸುದೇವನು ಮಾತ್ರ ಹರ್ಷಪರಿಪ್ಲುತನಾಗಿ, ಸಿಂಹನಾದವನ್ನು ಮಾಡಿದನು. ಮತ್ತು ಕುಣಿಯುತ್ತಾ ಬಂದು ಅರ್ಜುನನನ್ನು ಬಿಗಿದಪ್ಪಿ ಮತ್ತೆ ಕುಣಿದಾಡಿದನು. ಅತಿ ಹರ್ಷದಿಂದ ಹುಚ್ಚನಂತೆ ಕುಣಿಯುವ ಅಚ್ಯುತನನ್ನು ನೋಡಿ, ಅರ್ಜುನನು ಪ್ರೀತನಾಗದೆ, ಇಂತೆಂದನು: 'ಮಧುಸೂಧನ ! ಏನಿದು ? ವಿಷಾದಸಮಯದಲ್ಲಿ ಹರ್ಷದಿಂದ ಕುಣಿದಾಡುವೆ. ಹೈಡಿಂಬಿಯ ವ್ಯತಿಗಾಗಿ ದುಃಖಿಸುವ ನಿನ್ನವರ ವ್ಯಸನವು ನಿನಗೆ ಹರ್ಷಕಾರಣವಾಗಬಾರದು. ಇಂತು ನರ್ತಿಸುವ ನಿನ್ನ ನರ್ತನವನ್ನು ತಿಳಿಯಲಾರದೆ ತತ್ತರಿಸುವ ನಮಗೆ ನಿನ್ನ ಹರ್ಷಕಾರಣವನ್ನು ಹೇಳು!'

ವಾಸುದೇವನಿಂತೆಂದನು: 'ಧನಂಜಯ ! ನನಗೆ ಆದ ಆನಂದಕ್ಕೆ ಮಿತಿ ಇಲ್ಲ. ಕೇಳು ! ಇಂದ್ರಶಕ್ತಿಯಿಂದ ಘಟೋತ್ಕಚನು ಮೃತನಾದುದರಿಂದಲೇ ನೀನೆನಗೆ ಉಳಿದೆ ! ಅದರ ತ್ಯಾಗದಿಂದಲೇ ಕರ್ಣನು ನಿನ್ನಿಂದ ಸಾಯುವಂತಾಯಿತು. ಶಕ್ತಿ ಹಸ್ತನಾದ ಕರ್ಣನನ್ನು ಕೊಲ್ಲಲು ಯಾವ ವೀರನು ಸಮರ್ಥನಾಗುತ್ತಿದ್ದನು. ಆಲೋಚಿಸು ! ನಿನ್ನ ಅದೃಷ್ಟದಿಂದ ಕರ್ಣನು ಸಹಜ ಕವಚಕುಂಡಲರಹಿತನಾದನು. ನಿನ್ನ ಅದೃಷ್ಟದಿಂದ ಕರ್ಣನು ಗುರುವಿಪ್ರಶಾಪಗ್ರಸ್ತನಾದನು. ನಿನ್ನ ಅದೃಷ್ಟದಿಂದ ಎಷ್ಟೋ ಸಲ ಆ ಶಕ್ತಿಯನ್ನು ಮರೆತು ಮನೆಯಲ್ಲಿಟ್ಟು ರಣರಂಗಕ್ಕೆ ಬರುತ್ತಿದ್ದನು. ಎಷ್ಟೋ ಸಲ ರಥದಲ್ಲೇ ಇದ್ದ ಶಕ್ತಿಯನ್ನು ನಿನ್ನ ಮೇಲೆ ಪ್ರಯೋಗಿಸಲು ಮರೆತುಬಿಡುತ್ತಿದ್ದನು. ನಿನ್ನ ಅದೃಷ್ಟದಿಂದ ನಿನ್ನನ್ನು ಕೊಲ್ಲಬೇಕೆಂದು ಕಾದಿಟ್ಟದ್ದ ಭಯಂಕರ ಶಕ್ತಿಯು ಘಟೋತ್ಕಚನ ಮೇಲೆಸೆಯಲ್ಪಟ್ಟಿತು. ಇಂದ್ರ ಕುಬೇರ ಯಮ ವರುಣಾದಿ ದೇವತೆಗಳಿಗೂ ಶಕ್ತಿಹಸ್ತನಾದ ಕರ್ಣನು ಅಜೇಯನೆಂದು ತಿಳಿ ! ನಿನ್ನ ಗಾಂಡೀವ, ನನ್ನ ಚಕ್ರವು ಕೂಡ ಶಕ್ತಿಯುಕ್ತನಾಗಿದ್ದ ಕರ್ಣನಲ್ಲಿ ವ್ಯರ್ಥವಾಗುತ್ತಿದ್ದವು ! ಇಂದು ಶಕ್ತಿರಹಿತನಾದ ಕರ್ಣನು ನಿನಗೆ ವಧ್ಯನಾಗಿರುವನು. ಇಂದ್ರನು ಕವಚಕುಂಡಲ ದಾನದಿಂದ ಪ್ರೀತನಾಗಿ ಕೊಟ್ಟ ಶಕ್ತಿಯಿಂದ ಕರ್ಣನು ನಿನ್ನನ್ನು 'ಕೊಲ್ಲುವೆ'ನೆಂದು ತಿಳಿದಿದ್ದನು. ನಾನೂ ಇಂದ್ರವರವನ್ನು ಸತ್ಯವಾಗಿಸಿ, ಶಕ್ತಿಯನ್ನು ವ್ಯರ್ಥಗೊಳಿಸಿ, ನಿನ್ನನ್ನುಳಿಸುವುದೆಂತೆಂದು ಆಲೋಚಿಸುತ್ತಿದ್ದೆನು. ಬ್ರಹ್ಮಣ್ಯನು, ಸತ್ಯವಾದಿಯು, ದಯಾವಂತನು, ದಾನನಿತ್ಯನು, ಮಾರ್ತಾಂಡಚಂಡಪ್ರತಾಪನು ಆದ ಕರ್ಣನು ಪರಶುರಾಮದತ್ತ ದಿವ್ಯಾಸ್ತ್ರ ಬಲದಿಂದಲು, ಸಹಜ ಕವಚ ಕುಂಡಲಗಳಿಂದಲು, ಇಂದ್ರಶಕ್ತಿಯಿಂದಲು ದೇವಸದೃಶನಾಗಿ ಅವಧ್ಯನೆನಿಸಿದ್ದನು. ಇಂದು ಗುರುಶಾಪದಿಂದಲು, ಕುಂಡಲಕವಚಾಹರಣದಿಂದಲು, ಶಕ್ತಿನಾಶದಿಂದಲು ಅವನು ಮರ್ತ್ಯನಾಗಿ ನಿನಗೆ ವಧ್ಯನಾಗಿರುವನು. ಕೇಸರಿಯು, ಇಂದು ಕಾಸರವಾಗಿದೆ. ಮುಂದೆ ಶಾಪದಂತೆ ಇವನ ಸ್ಯಂದನವು ಭೂಮಿಯಲ್ಲಿ ಸಿಕ್ಕಿಕೊಂಡಾಗ, ಇವನನ್ನು ನೀನು ಸಂಹರಿಸುವೆ !

ಅರ್ಜುನ ! ಪಾಂಡವರೆನ್ನ ಪ್ರಾಣಸಮರೆಂದು ತಿಳಿದಿರುವೆನು. ನಿಮ್ಮ ಹಿತಕ್ಕಾಗಿ ನಾನು ಜರಾಸಂಧ, ಚೈದ್ಯ, ಏಕಲವ್ಯರನ್ನು ಮೊದಲೇ ನಾಶಪಡಿಸಿದೆನು. ಈಗ ಅವರೆಲ್ಲರು ಕುರುರಾಜನ ಕಡೆ ಸೇರಿಬಂದಿದ್ದರೆ ನಿಮಗೆ ರಣಜಯವು ಕಷ್ಟತರವಾಗುತ್ತಿತ್ತು. ಅಂತೆಯೇ ಬಕ, ಹಿಡಿಂಬ, ಜಟ, ಕೀಚಕ, ಕಿರ್ಮೀರರನ್ನು ಮೊದಲೇ ಭೀಮಸೇನನಿಂದ ನಾಶಪಡಿಸಿದೆನು. ಅಲಾಯುಧ, ಅಲಂಬುಷ, ಅಲಂಬಲರಾದಿ ರಾಕ್ಷಸರೂ ರಣನಿಹತರಾದರು. ಅವರಂತೆ ಉಗ್ರವೀರನಾದ ಘಟೋತ್ಕಚನೂ ಇಂದು ಹತನಾದನು. ರಾಕ್ಷಸನು ಮೃತನಾಗಿ ಧನಂಜಯನು ಉಳಿದನೆಂದು ಆನಂದ ಪಡುತ್ತಿರುವೆನು.

ಜರಾಸುತನ ಕೇಡಿಗತನವನ್ನು ಕೇಳು ! ನಮ್ಮ ಬಲರಾಮದೇವನಿಂದ ಪೀಡಿತನಾದ ಜರಾಸಂಧನು ಮಥುರಾನಗರವನ್ನೆಲ್ಲ ಹಾಳು ಮಾಡಬೇಕೆಂದು ರುದ್ರನಿತ್ತ ಗದೆಯನ್ನೆಸೆದನು. ನಾರದನ ಯುಕ್ತಿಯಿಂದಲು, ಬಲರಾಮನ ಸ್ಥೂಣಾಕರ್ಣಾಸ್ತ್ರ ಪ್ರತಿಘಾತದಿಂದಲು ಆಗದೆ ಮಥುರೆಯನ್ನು ಮುಟ್ಟಲಾರದೆ, ಮಾರ್ಗಮಧ್ಯದಲ್ಲಿದ್ದ ಜರೆ ಎಂಬ ರಾಕ್ಷಸಿಯನ್ನು ಸಪರಿವಾರವಾಗಿ ನಾಶಮಾಡಿ, ಮಹಾದೇವನ ಕೈ ಸೇರಿತು. ಜರೆಯಿಂದಾಗಿ ಸಂಧಿತನಾಗಿ ಬದುಕಿದ ಜರಾಸುತನ ಗದೆ ಅವನ ತಾಯಿಯನ್ನೇ ಸಂಹರಿಸಿತು. ಗದಾರಹಿತನಾದ ಜರಾಸುತನನ್ನು ನಿನ್ನ ಕಣ್ಣೆದುರಿಗೆ ಭೀಮಸೇನನು ಕೊಂದನು.

ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೊಡಿಸುವುದಲ್ಲದೆ, ಅಂಗುಲಿ ತ್ರಾಣವಿಟ್ಟು ಅಭ್ಯಾಸಬಲದಿಂದ ಅಸಮಾನ ಶೂರನೆನಿಸಿದ ನಿಷಾದಪತಿಯನ್ನು ನಿಮಗೆ ವಿಷಾದಕರನಾಗಬಾರದೆಂದು, ಮೊದಲೇ ಸಂಹರಿಸಿದೆನು. ಸುರಾಸುರರಿಗಜೇಯನೆನಿಸಿದ ಶಿಶುಪಾಲನನ್ನು ನಿಮ್ಮ ಹಿತಕ್ಕಾಗಿ, ಮೊದಲೇ ಸಂಹರಿಸಿದೆನು. ಅಲಂಬಲ ಅಲಾಯುಧ ಅಲಂಬುಷರಂತೆ, ವಿಪ್ರಹಿಂಸಕನಾದುದರಿಂದ ಘಟೋತ್ಕಚನನ್ನೂ ಇಂದು ಶಕ್ತಿಗೆ ಗುರಿಮಾಡಿ, ನಿನ್ನನ್ನು ಮೃತ್ಯುಮುಖದಿಂದ ರಕ್ಷಿಸಿದೆನು. ಧರ್ಮಸ್ಥಾಪನೆಗೆಂದು ಬಂದಿರುವ ನನಗೆ ಧರ್ಮಲೋಪ ಕಾರಣರೆಲ್ಲರು ವಧ್ಯರಾಗುವರು ತಿಳಿ ! ವೇದ, ಸತ್ಯ, ದಮ, ಶೌಚ, ಧರ್ಮ, ಹ್ರೀ, ಶ್ರೀ, ಧೃತಿ, ಕ್ಷಮಾ ಈ ಗುಣಗಳಿಗೆ ಪೋಷಕನಾಗಿ ನಾನು ಆ ಗುಣವಂತರಲ್ಲಿ ನೆಲಿಸಿ, ಅವರಿಗೆ ಹಿತವನ್ನು ಮಾಡುವೆನು. ಸುಯೋಧನನಂತೆ ವರ್ತಿಸಿ, ಅಧರ್ಮಪರನಾಗಿರುವ ಕರ್ಣನನ್ನೂ ನಿಜವಾಗಿ ಸಾತ್ವಿಕನಾದರೂ, ಬಿಡದೆ ನಿನ್ನಿಂದ ಕೊಲ್ಲಿಸುವೆನು. ಸುಯೋಧನನೂ ವೃಕೋದರನಿಂದ ಸಾಯುವನು. ಚಿಂತಿಸಬೇಡ ! ಮುಂದಿನ ಕಾರ್ಯಭಾರವನ್ನು ನಿರ್ವಹಿಸು !'

ಆ ಮಾತನ್ನಾಲಿಸಿ, ತಲೆಗೆ ಕೈಯಿಟ್ಟು ನಿಟ್ಟುಸಿರಿಟ್ಟು ಧೃತರಾಷ್ಟ್ರನಿಂತೆಂದನು: 'ಸೃಂಜಯ ! ಏಕವೀರ ವಧಸಮರ್ಥವಾದ ಶಕ್ತಿಯು ಕೈಲಿದ್ದೂ ಕರ್ಣನು ಅದನ್ನೇಕೆ ಮೊದಲೇ ಪಾರ್ಥನ ಮೇಲೆ ಎಸೆಯಲಿಲ್ಲ? ಪಾರ್ಥನು ಮೃತನಾಗಿದ್ದಿದ್ದರೆ ಎಲ್ಲ

ಪಾಂಡವರೂ ಹತರಾದಂತೆ ಆಗುತ್ತಿದ್ದರು. ಆಹೂತನಾದರೆ ಸಾಕು. ಆಹವದಲ್ಲಿ ನಿಲ್ಲುವ ಅರ್ಜುನನನ್ನು ಆಹ್ವಾನಿಸಿ, ಕರ್ಣನು ಶಕ್ತಿಯಿಂದ ಅವನನ್ನು ಸಂಹರಿಸಬಹುದಿತ್ತು. ಅಥವಾ ತಾನಾಗಿ ಪಾರ್ಥನನ್ನು ಮುತ್ತಿ ಶಕ್ತಿಯಿಂದ ಕೊಲ್ಲಬಹುದಿತ್ತು. ಅಥವಾ ವಾಸುದೇವನಲ್ಲಿ ಆ ಶಕ್ತಿಯನ್ನು ಪ್ರಯೋಗಿಸಬಹುದಿತ್ತು. ಆದರೂ ಹಾಗೆ ಮಾಡದೆ, ಕ್ಷುದ್ರರಾಕ್ಷಸನಲ್ಲಿ ಪ್ರಯೋಗಿಸಿ ಶಕ್ತಿಯನ್ನು ವ್ಯರ್ಥಮಾಡಿಕೊಂಡ ಕರ್ಣನಷ್ಟು ದಡ್ಡರಿನ್ನಿಲ್ಲ. ಚೊಂಚಗೈಯವನಲ್ಲಿದ್ದ ಫಲವನ್ನಂತೆ ಕರ್ಣನಿಂದ ಶಕ್ತಿಯನ್ನು ಕಸಿದು ವ್ಯರ್ಥಗೊಳಿಸಿದ ಕೃಷ್ಣನಷ್ಟು ಜಾಣರೂ ಇಲ್ಲ. ಘಟೋತ್ಕಚಕರ್ಣರಲ್ಲಿ ಯಾರು ಸತ್ತರೂ ಕೃಷ್ಣನ ಕಾರ್ಯವಾಯಿತೆಂದು ಮನಗಂಡಿರುವೆನು. ಶ್ವಪಚನಿಗೆ ಶ್ವಾನವರಾಹಯುದ್ಧದಲ್ಲಿ ಯಾವುದು ಸತ್ತರೂ ಹೊಟ್ಟೆ ತುಂಬತ್ತೆ. ಪಾಂಡವ ಪ್ರಿಯನಾದ ಶ್ರೀಕೃಷ್ಣನ ಅಚಿಂತ್ಯಮಹಿಮೆಯನ್ನು ಅರಿತವರಿಲ್ಲ? ಎಂದ ರಾಜನಿಗೆ ಸಂಜಯನಿಂತೆಂದನು:

"ರಾಜನ್! ಜನಾರ್ದನನಿಂದ ಪಾಂಡವರುಳಿದಿರುವರು. ಅವನಿಗಲ್ಲದ ಕೌರವರು ಸಾಯುತ್ತಿರುವರು. ಪ್ರತಿನಿತ್ಯವೂ ಶಿಬಿರಗಳಲ್ಲಿ ದುರ್ಯೋಧನ, ಶಕುನಿ, ದುಶ್ಶಾಸನರು ಕಲೆತು, ಕರ್ಣನಿಗೆ 'ಶಕ್ತಿಯನ್ನೊಗೆದು ಸವ್ಯಸಾಚಿಯನ್ನು ಸಂಹರಿಸು' ಎಂದು ನಿತ್ಯವೂ ಉಪದೇಶಿಸುತ್ತಿದ್ದರು. ಅವನೂ ಹಾಗೆ ಮಾಡುವೆನೆಂದು ಹೇಳುತ್ತಿದ್ದನು. ಅದೇನು ದೈವಮಾಯೆಯೋ, ರಣಸಂಭ್ರಮದಲ್ಲಿ ಅವನು ಶಕ್ತಿಯನ್ನು ಮರೆತು ಮನೆಯಲ್ಲೇ ಬಿಟ್ಟು ಹೋಗುತ್ತಿದ್ದನು. ಕೊಂಡುಹೋದಂದು ಅವನ ಮುಂದೆ ಭೀಮಾದಿಗಳಿರುತ್ತಿದ್ದರಾಗಲಿ ಅರ್ಜುನನು ಎದುರಿಸದಂತೆ ವಾಸುದೇವನು ದೂರವಿರಿಸುತ್ತಿದ್ದನು. ಕೃಷ್ಣನೇ ಪಾಂಡವರಿಗೆ ಮೂಲಾಶ್ರಯನಾಗಿರುವನು. ಭೀಮನು ಬುಡ; ಅರ್ಜುನ ಧರ್ಮಜರು ಶಾಖೆಗಳು; ನಕುಲ ಸಹದೇವರು ರೆಂಬೆಗಳು. ಕೃಷ್ಣನಿಂದ ಬೆಳೆದು ನಿಂತ ಪಾಂಡವ ವೃಕ್ಷವನ್ನು ಕೃಷ್ಣನೆದುರಿಗೆ ಯಾರೂ ಕಡಿಯಲಾರರು. ದಿವಿಜೇಶನು, ಅಪ್ರಮೇಯನು, ಹೃಷಿಕೇಶನು ಆದ ಶ್ರೀಕೃಷ್ಣನು ಪಾಂಡವರಕ್ಷಣೆಯಲ್ಲಿ ಜಾಗ್ರತನಾಗಿರುವಾಗ, ಯುದ್ಧಕಾಲದಲ್ಲಿ ನಾವೆಲ್ಲರೂ ಶಕ್ತಿಯ ಮಾತೇ ಮರೆತುಬಿಡುವಂತಾಗುತ್ತಿತ್ತು. ಇಂತು ತನ್ನವರನ್ನು ಸರ್ವಾಪತ್ತಿಯಿಂದ ರಕ್ಷಿಸುವ ಅಧೋಕ್ಷಜನು ತನ್ನನ್ನು ತಾನು ರಕ್ಷಿಸಿಕೊಳ್ಳಲಾರನೇ? ಅಮೋಘವಾದರೂ ಶಕ್ತಿಯು ವಾಸುದೇವ ಭೀಮಸೇನರಿಬ್ಬರ ವಿಷಯದಲ್ಲಿ ಅಶಕ್ತವೆಂದೇ ನಾನು ತಿಳಿದಿರುವೆನು. ಆದುದರಿಂದ ಕೃಷ್ಣನನ್ನೇ ಏಕೆ ಸಂಹರಿಸಲಿಲ್ಲ? ಎಂಬ ನಿನ್ನ ಪ್ರಶ್ನೆ ಅಸಂಬದ್ಧವೆಂದು ತಿಳಿ! ಶ್ರೀಕೃಷ್ಣನನ್ನು ಜಯಿಸುವ ವೀರರು ಮೂರು ಲೋಕಗಳಲ್ಲಿಲ್ಲ.

ಕೇಳು! ಸಾತ್ಯಕಿಯು 'ಶಕ್ತಿಯನ್ನೇಕೆ ಕರ್ಣನು ಪಾರ್ಥನ ಮೇಲೆಸೆಯಲಾಗಲಿಲ್ಲ?' ಎಂದು ಕೇಳಿದಾಗ, ಕೇಶವನಾಡಿದ ವಚನವನ್ನು! ಶ್ರೀವಾಸುದೇವನು 'ದುರ್ಯೋಧನಾದಿಗಳು ನಿತ್ಯವೂ ಶಕ್ತಿ ಪ್ರಯೋಗದಿಂದ ಪಾರ್ಥಸಂಹಾರವಾಗಬೇಕೆಂದು' ಕರ್ಣನನ್ನು ಹುರಿದುಂಬಿಸುತ್ತಿದ್ದರು. ಕರ್ಣನೂ

ಪ್ರತಿರಾತ್ರಿಯು 'ಅಂತೇ ಮಾಡುವೆ'ನೆಂದು ವಚನವಿತ್ತು, ಪ್ರಾತಃಕಾಲವಾಗಲು ಅದನ್ನು ಮರೆತು ಬರುತ್ತಿದ್ದನು. ಅವನು ಅಂತೆ ಮರೆಯುವಂತೆ ನಾನೇ ಅವನ ಅಂತರ್ಯಾಮಿಯಾಗಿ ನಡೆಸುತ್ತಿದ್ದೆನು. ಘಟೋತ್ಕಚನಲ್ಲಿ ಶಕ್ತಿಯು ವ್ಯರ್ಥವಾಗುವವರೆಗೂ ನನಗೆ ಸರಿಯಾಗಿ ನಿದ್ರೆಬಾರದಿತ್ತು. ನನ್ನ ಮನಕ್ಕೆ ಹರ್ಷವಿದ್ದಿಲ್ಲ. ಇಂದು ಶಕ್ತಿಯು ವ್ಯರ್ಥವಾದುದರಿಂದ ನನಗೆ ಆನಂದವಾಗಿದೆ. ಇಂದು ನನ್ನ ಧನಂಜಯನು ಮೃತ್ಯು ವದನದಿಂದ ತಪ್ಪಿಸಿಕೊಂಡು ಬಂದಿರುವನು. ನನಗೆ ತಂದೆ ತಾಯಿ ಪತ್ನೀ ಪುತ್ರಾದಿಗಳು ಅಷ್ಟು ಪ್ರೀತಿಪಾತ್ರರಲ್ಲ ; ಧನಂಜಯನೆಂದರೆ ನನಗೆ ಪ್ರಾಣ ! ಪಾರ್ಥನಿಲ್ಲದ ತ್ರೈಲೋಕ್ಯ ರಾಜ್ಯವೂ ನನಗೆ ಬೇಕಿಲ್ಲ. ಅಂತಹ ಅರ್ಜುನನು ಶಕ್ತಿಯಿಂದ ಪಾರಾದನೆಂದು ನನಗೆ ಆನಂದವಾಗಿದೆ' ಎಂದನು.

ಘಟೋತ್ಕಚನು ಮೃತನಾಗಲು, ಧರ್ಮರಾಜನು ಕಡು ದುಃಖಿತನಾದನು. ಕುರುಸೈನಿಕರು ಹರ್ಷೋದ್ರೇಕದಿಂದ ತನ್ನ ಭಟರ ಮೇಲೇರಿ ಬರುವುದನ್ನು ಕಂಡು ಆತನು ಕುಪಿತನೂ ಆದನು. ಶ್ರೀಕೃಷ್ಣಸಂಕಲ್ಪವನ್ನರಿತು, ತಲೆಬಾಗಿ, ನಿರ್ವಿಕಾರನಾಗಿ ನಿಂತಿದ್ದ ಭೀಮಸೇನನನ್ನು ಧಾರ್ತರಾಷ್ಟ್ರ ಸೈನಿಕರನ್ನು ತಡೆಯಲು ಕಳಿಸಿ, ಧರ್ಮರಾಜನು ಚಿಂತಾಕ್ರಾಂತನಾಗಿ, ಕಣ್ಣೀರಿಡುತ್ತಾ, ತನ್ನ ರಥದಲ್ಲಿ ಕೂತನು. 'ಚಿಂತೆಗೆ ಕಾಲವಲ್ಲ, ಪಾರ್ಥನು ಬದುಕಿದನು. ಮುಂದಿನ ವಿಕ್ರಮ ಕಾರ್ಯವನ್ನು ನಿರ್ವಹಿಸು!' ಎಂದು ಸಮಾಧಾನಪಡಿಸುವ ಭಾಮಾಧವನಿಗೆ ಧರ್ಮಜನಿಂತೆಂದನು:

'ಕೃಷ್ಣ ! ಘಟೋತ್ಕಚನನ್ನೆಂತು ಮರೆಯಲಿ ? ಕಾಮ್ಯಕವನದಲ್ಲಿ ಕಷ್ಟದಿಂದ ಕಾಲೆತ್ತಿಡುತ್ತಿರಲು, ನಮ್ಮನ್ನು ಕೃಷ್ಣೆಯನ್ನು ಹೊತ್ತು ತಿರುಗಿಸಿದನು. ಈ ರಣರಂಗದಲ್ಲಿ ಅದ್ಭುತ ಪರಾಕ್ರಮವನ್ನು ತೋರಿ ನನಗೆ ಅತ್ಯಂತ ಹಿತವನ್ನು ಸಾಧಿಸಿದನು. ಸಹದೇವನಂತೆ, ಅಭಿಮನ್ಯುವಿನಂತೆ ಪ್ರೀತಿಪಾತ್ರನಾದ ಘಟೋತ್ಕಚನಿಗೆ ಎಂತು ಶೋಕಿಸದಿರಲಿ? ನಾನು, ಭೀಮಸೇನ, ಅರ್ಜುನ, ನೀನು ಬದುಕಿ ನೋಡುತ್ತಿರಲು, ಭೀಮಪುತ್ರನು ಕರ್ಣಶಕ್ತಿಗೆ ತುತ್ತಾದನಲ್ಲ! ಅಭಿಮನ್ಯುವಿನನ್ನು ಕೊಂದವರು ಬೇರೆ. ವ್ಯೂಹವನ್ನು ಮುಚ್ಚಿನಿಂತವನು ಬೇರೆ. ವೃಥಾ ಜಯದ್ರಥನನ್ನು ಸಂಹರಿಸಿದ ಅರ್ಜುನನಿಗೆ ಕುದುರೆಗಳನ್ನು ಕೊಂದ ಕೃತವರ್ಮ, ಧನುಸ್ಸನ್ನು ಮುರಿದ ಕರ್ಣ, ಖಡ್ಗವನ್ನು ತುಂಡರಿಸಿದ ದ್ರೋಣ, ಮುತ್ತಿ ಪೀಡಿಸಿದ ದುಶ್ಶಾಸನ ದುರ್ಯೋಧನರು ಅಭಿಮನ್ಯುಮೃತಿಕಾರಣರೆಂದು ತಿಳಿಯದೇ ? ಅವರಿನ್ನೂ ಉಸಿರಾಡುತ್ತಿರುವರು. ದ್ರೋಣಕರ್ಣರಷ್ಟು ನಿಕೃಷ್ಟಕರ್ಮನಲ್ಲದ ಸೈಂಧವನನ್ನು ಕೊಂದು, ಮೂಲಕಾರಣರನ್ನು ಬಿಡಬಹುದೆ ? ಇಂದು ನಾನು ಕರ್ಣನನ್ನು ಸಂಹರಿಸುವೆನು. ದ್ರೋಣನನ್ನು ಕೊಲ್ಲುವೆನು. ಅಭಿಮನ್ಯು ಘಟೋತ್ಕಚರ ಸಾವಿನ ಸೇಡನ್ನು ತೀರಿಸುವೆನು' ಇಂತೆಂದು ರಥಾರೂಢನಾಗಿ, ಕರ್ಣನ ಕಡೆಗೆ ಧನುಷ್ಟಂಕಾರವನ್ನು ಮಾಡುತ್ತಾ ಹೊರಟ ಧರ್ಮಜನಿಗೆ ಪ್ರತ್ಯಕ್ಷರಾಗಿ ವೇದವ್ಯಾಸರಿಂತೆಂದರು:

'ಧರ್ಮರಾಜ ! ಕರ್ಣನಿಂದ ಉಳಿದಿರುವ ನಿನ್ನ ತಮ್ಮನಿಗಾಗಿ ಸಂತೋಷಿಸು!

ಸವ್ಯಸಾಚಿಯನ್ನು ಸಂಹರಿಸಲು ಕಾದಿಟ್ಟ ಶಕ್ತಿಯು ರಾಕ್ಷಸನನ್ನು ಕೊಂದುಹೋದುದಕ್ಕೆ ಆನಂದಿಸು ! ಅರ್ಜುನ ನಾಶದಷ್ಟು ವ್ಯಸನಕರವಲ್ಲ ಅಸುರ ನಾಶ ! ಕೋಪವನ್ನು ಬಿಡು ! ಕರ್ಣಸಂಹಾರ ಕಾರ್ಯವನ್ನು ಅರ್ಜುನನಿಗೆ ಒಪ್ಪಿಸಿಬಿಡು ! ಇಂದಿನಿಂದ ಐದನೆಯ ದಿನ (ಪುಷ್ಯ ಶುದ್ಧ ಬಿದಿಗೆ) ಪೃಥ್ವೀಮಂಡಲವು ನಿನ್ನದಾಗುವದು. ನಿನ್ನ ಶತ್ರುಗಳೆಲ್ಲರೂ ನಷ್ಟವಾಗುವರು. ತಮ್ಮಂದಿರಿಂದ ಕೂಡಿ ಆನಂದದಿಂದಿರು ! ಧರ್ಮ, ಸತ್ಯ, ದಯಾ, ದಾನಗುಣಾನ್ವಿತನಾಗಿ ಚಿರಕಾಲ ಬಾಳು ! ಧರ್ಮವಿದ್ದಲ್ಲಿ ಜಯ ! ತಿಳಿ ! ' ಎಂದು ಸಮಾಧಾನಪಡಿಸಿ ವ್ಯಾಸದೇವರು ಅಂತರ್ಧಿತರಾದರು. ಧರ್ಮರಾಜನು ಕರ್ಣವಧನಿವೃತ್ತನಾದನು.

ಆಗ ಘಟೋತ್ಕಚವಧಾಮರ್ಷಿತರಾದ ಪಾಂಡವ ಸೈನಿಕರಿಗೂ, ಹರ್ಷಿತರಾದ ಕೌರವ ಸೈನಿಕರಿಗೂ ಮತ್ತೆ ಕದನವಾರಂಭಿಸಿತು. ಅಂದಿನ ತ್ರಿಯಾಮೆಯು ಸಹಸ್ರಯಾಮ ಪರಿಮಿತವೆಂಬತ್ತಿತ್ತು. ಅರ್ಧರಾತ್ರಿಯಾದಾಗ ನಿದ್ರಾಬಲದಿಂದ ಮುದ್ರಿತನಯರಾಗುವ ಉಭಯ ಭಟರನ್ನು ನೋಡಿ, ಅರ್ಜುನನು ಧರ್ಮವನ್ನು ಅನುಸರಿಸಿ ರಣವನ್ನು ನಿಲ್ಲಿಸುವಂತೆ ಆಜ್ಞಾಪಿಸಿದನು. ದುರ್ಯೋಧನನೂ ತನ್ನ ಭಟರನ್ನಿದ್ದಲ್ಲಿಯೇ ನಿದ್ದೆಮಾಡಿರೆಂದು ಆಜ್ಞಾಪಿಸಿದನು. ನಿದ್ರಾಭರವನ್ನು ತಾಳಲಾರದೆ, ಯುದ್ಧಶ್ರಾಂತರಾಗಿದ್ದ ಮಹಾರಥಿಕರು ಮೊದಲ್ಗೊಂಡು, ಸಾಮಾನ್ಯಭಟರು ಎಲ್ಲಿದ್ದರಲ್ಲಿ ನಿದ್ರಿಸಿದರು. ವೈರವನ್ನು ಮರೆತು ಮನುಜರು ಮಹಾಗಜಭುಜಗಳಲ್ಲಿ ರಥಗಳಲ್ಲಿ ನೆಲದಲ್ಲಿ ಮೈಮರೆತು ಮಲಗಿದರು. ಮಾತಂಗತುರಂಗಗಳೂ ತೂಕಡಿಸಿದವು. ಬೆಳಗುಮುಂಜಾವದಲ್ಲಿ ಚಂದ್ರೋದಯವಾಗುವವರೆಗೂ ಸಾರ್ಧಯಾಮದ ನಿದ್ದೆ ಮಾಡಿ, ಎದ್ದ ಸರ್ವಸೈನಿಕರು, ಸವ್ಯಸಾಚಿಯನ್ನು ಅವನ ಧರ್ಮನಿಷ್ಠೆಗಾಗಿಯೂ, ತಮಗಿತ್ತ ವಿಶ್ರಾಂತಿಗಾಗಿಯೂ, ಪೊಗಳಿ, ಹರಸಿದರು.

ಕುಶಲರಾದ ಶಿಲ್ಪಿಗಳು ಕೆತ್ತಿದ ಪ್ರತಿಮೆಗಳೆಂಬಂತೆ, ನಿಪುಣವಾಯಕರು ಬರೆದ ಪಟಚಿತ್ರದಂತೆ ಕಂಗೊಳಿಸುತ್ತಿದ್ದ ಕೌರವ - ಪಾಂಡವ ಸೇನೆಗಳು ಚಂದ್ರನು ಉದಿತನಾದುದನ್ನು ಕಂಡು ಶಂಖಭೇರಿಕಾಹಳ ಧ್ವಾನಗಳಿಂದ ತಮ್ಮನ್ನು ಎಚ್ಚರಿಸಿದ ನಾಯಕರ ಆದೇಶದಂತೆ ಆಯೋಧನಭೂಮಿಯನ್ನು ಸೇರಿದರು. ಪೂರ್ವಪರ್ವ ತದರೀನಿಸೃತನು, ಕಿರಣಕೇಸರಭಾಸುರಪಿಂಜರನು, ತಿಮಿರವಾರಣಯೂಥವಿದಾರಣನು, ಆದ ಚಂದ್ರಮೃಗರಾಜನು ತನ್ನ ಧವಳ ಕಿರಣಗಳಿಂದ ರಣಮಂಡಲದ ಚಂಡಹಿಂಸೆಯನ್ನು ನೋಡಬಂದವನಂತೆ ಸ್ಪೃಶಿಸುತ್ತಾ ಸಂಚರಿಸಿದನು. ಹರವೃಷಗಾತ್ರಧವಲನು, ಸ್ಮರಶರಾಸನ ವಕ್ರಕೋಟಿ ಸುಂದರನು, ನವವಧೂಮಂದಹಾಸ ಮನೋಹರನು, ಆಗಿ ಕುಮುದ ಬಾಂಧವನು ಮುಗಿಲಿನಂದಣವನ್ನೇರಿ, ಕದನಾಂಗಣವನ್ನು ನೋಡಬಂದನು. ; ತನ್ನ ವಂಶದವರು ಪರಸ್ಪರ ಕಡಿದಾಡಿ ಹರಿಸಿದ ರಕ್ತ ಪ್ರವಾಹವು ಆಕಾಶದರ್ಪಣದಲ್ಲಿ ಪ್ರತಿಬಿಂಬಿಸಿದಂತಾಯಿತೆಂಬಂತೆ, ಮೇಘಮಂಡಲವು ಅರುಣವರ್ಣವಾಗಲು, ಚಂದ್ರನೂ ಅರುಣಕಿರಣನಾದನು. ಸ್ವಲ್ಪ

ಹೊತ್ತಿಗೆ ಶಂಶಾಕನು ಭೂಭಾರಹರಣ ವಿಹರಣನಾಗಿ ಮೆರೆವ ಯದುಕುಲಲಲಾಮನ ಚಿತ್ತವರಿತು ಶಾಂತನಾದನೆಂಬಂತೆ, ಮತ್ತೆ ಕನಕಸಮಪ್ರಭನಾದನು.

ಉಭಯ ಸೈನ್ಯಗಳು ಮತ್ತೆ ರಣನಿರತವಾದವು. ಸೋಮದತ್ತನು ಸಾತ್ಯಕಿಯನ್ನು ಮುತ್ತಿ ಭೂರಿ ಎಂಬ ತನ್ನ ಮಗನನ್ನು, ಭೂರಿಶ್ರವನೆಂಬ ದ್ವಿತೀಯ ಪುತ್ರನನ್ನೂ ಸಂಹರಿಸಿದ ಸಾತ್ಯಕಿಯನ್ನು ಕೊಲ್ಲಲೆಣಿಸಿ, ರುಕ್ಮಪುಂಖಶರದಿಂದ ತಾಟಿಸಿದನು. ಸಾತ್ಯಕಿಯನ್ನು ರಕ್ಷಿಸಲು ಬಂದ ಭೀಮಸೇನನು ಸೋಮದತ್ತನ ಬಾಣವನ್ನು ಪರಿಘದಿಂದ ಖಂಡಿಸಿ, ಅವನನ್ನು ಶತಘ್ನಿಯಿಂದ ಹೊಡೆದನು. ಅವನು ಮೂರ್ಛಿನಾಗಲು, ಅವನ ಪಿತನಾದ ಬಾಹ್ಲಿಕನು ಭೀಮಸೇನನನ್ನು ಮುತ್ತಿ ಶಕ್ತಿಯಿಂದ ಬಲವಾಗಿ ಹೊಡೆದನು. ಪುರಂದರನ ಅಶನಿಯಂತೆ ಎದೆಗೆ ಬಡಿದ ಶಕ್ತಿಯಿಂದ ವ್ಯಥಿತನಾದ ಭೀಮಸೇನನು ಗದೆಯನ್ನೆತ್ತಿ ಬಾಹ್ಲಿಕನನ್ನು ಸಂಹರಿಸಿದನು. ಪ್ರಹ್ಲಾದನ ಅಂಶದಿಂದುದಿಸಿದ ಬಾಹ್ಲೀಕನು ವಿಷ್ಣುಭಕ್ತನೇ ಆದುದರಿಂದ ಭೀಮನಿಗೆ ವಧ್ಯನಾಗಿದ್ದಿಲ್ಲ. ಆದರೂ ಭೀಮಸೇನನಿಂದಲೇ ಸಾಯಬೇಕೆಂದು ಆ ವೃದ್ಧನು ಕೇಳಿಕೊಂಡಿದ್ದನು. ಅತಿವ್ಯಥೆಪಡಿಸಿದರೆ ಮಾತ್ರ ಸಂಹರಿಸುವೆನೆಂದು ಭೀಮಸೇನನೂ ವಚನವನ್ನಿತ್ತಿದ್ದನು. ಅದರಂತೆ ಭೀಮಸೇನನು ಬಾಹ್ಲಿಕನಿಗೆ ಸದ್ಗತಿಯಾಗಲೆಂದು ಸಂಹರಿಸಿ, ಅನುಗ್ರಹಿಸಿದನು.

ಸಾತ್ಯಕಿಯು ಮತ್ತೆ ಸೋಮದತ್ತನನ್ನು ಮುತ್ತಿ ಐದು ಶರಗಳಿಂದ ಪೀಡಿಸಿದನು; ಮತ್ತೊಂದರಿಂದ ಧ್ವಜವನ್ನು ಕೆಡಹಿದನು. ಒಂದು ಭಲ್ಲದಿಂದ ಧನುವನ್ನು ಮುರಿದನು. ಸೋಮದತ್ತನು ಮತ್ತೊಂದು ಧನುವನ್ನೆತ್ತಿ ಹತ್ತು ಬಾಣಗಳಿಂದ ಸಾತ್ಯಕಿಯನ್ನು ಪೀಡಿಸಿದನು. ಭೀಮನು ಪರಿಘವನ್ನೊಗೆಯಲು, ಸೋಮದತ್ತನು ಅದನ್ನು ಕಡಿದು ಕೆಡಹಿ, ಐದ್ಯೆದು ಬಾಣಗಳಿಂದ ಪಾಂಡವಪಾರ್ಷತರನು ಪೀಡಿಸಿದನು. ಸಾತ್ಯಕಿಯು ಅವನ ಧನುವನ್ನು ಮುರಿದು, ಕುದುರೆಗಳನ್ನು ಕೊಂದು, ಭಲ್ಲದಿಂದ ಸೋಮದತ್ತನ ಶಿರವನ್ನು ಕಡಿದನು. ವಜ್ರಾಹತವಾದ ಪರ್ವತ ಶೃಂಗದಂತೆ ಕೆಳಗುರುಳಿದ ಸೋಮದತ್ತನನ್ನು ಕಂಡು, ಕುರುವೀರರು ಕೆಂಡವಾಗಿ, ಭೀಮಸಾತ್ಯಕಿಯರನ್ನು ಶರಜಾಲದಿಂದ ಪೀಡಿಸಿದರು.

ದುರ್ಯೋಧನನು ಅವರ ಮರಣದಿಂದ ನೊಂದು ದ್ರೋಣನನ್ನು ರೇಗಿಸಿದನು. ಶಿಷ್ಯವಾತ್ಸಲ್ಯದಿಂದ ಪಾಂಡವರನ್ನು ಕೊಲ್ಲದೆ ಬಿಟ್ಟಿರುವನೆಂದು ನಿಂದಿಸಿದ ಕುರುರಾಜನ ವಚನದಿಂದ ಶೋಕರೋಷಪರೀತನಾದ ಆಚಾರ್ಯನು, ಅನ್ಯಾಯ ಯುದ್ಧವನ್ನು ಮಾಡಲು ಸಂಕಲ್ಪಿಸಿ 'ರಾಜನ್ ! ಸರ್ವ ಪಾಂಚಾಲರನ್ನು ಸಂಹರಿಸದೆ, ಕವಚವನ್ನು ಇಳಿಸೆನು. ಭೀಮಾರ್ಜುನರು ಶ್ರಾಂತರಾಗಿರುವರೆಂದು ತಿಳಿಯಬೇಡ ! ಅವರಿಗೆ ಶ್ರಾಂತಿಭೀತಿಗಳಿಲ್ಲ. ಅವರ ಪರಾಕ್ರಮವು ನಿನ್ನ ಅನುಭವಕ್ಕೆ ಬಂದಿದೆ. ನೀನೇ ಹೋಗಿ ದೇವಾಸುರಾವಧ್ಯರಾಗಿರುವ ಪಾಂಡವವೀರರಿಂದ ಕಡಿದಾಡು ! ಮತ್ತೆ ಅನುಭವಕ್ಕೆ ಬರುತ್ತೆ!' ಎಂದು ನುಡಿದನು. ದುರ್ಯೋಧನನು 'ಹಾಗೇ ಆಗಲಿ ! ನಾನು, ದುಶ್ಶಾಸನ

ಶಕುನಿ, ಮತ್ತು ನಾಲ್ಕುಜನ ಕಲೆತು ಅರ್ಜುನನನ್ನು ಒಂದು ಕ್ಷಣದಲ್ಲಿ ಸಂಹರಿಸುವೆವು ನೋಡುತ್ತಿರಿ !' ಎಂದು, ತನ್ನ ಸೈನ್ಯದ ಒಂದು ಭಾಗದಿಂದ ಅರ್ಜುನನನ್ನು ಮುತ್ತಿದನು. ಎರಡು ಭಾಗವಾಗಿ, ಕುರುಸೇನೆಯು ಸುತ್ತಮುತ್ತ ಬರುವುದನ್ನು ನೋಡಿ, ಭೀಮಸೇನನು, ಅರ್ಜುನನನ್ನು ಎಚ್ಚರಿಸಿದನು. ಅರ್ಜುನನು ಕರ್ಣ ದ್ರೋಣರನ್ನತಿಕ್ರಮಿಸಿ, ಎಲ್ಲ ಕುರುಸೇನೆಯನ್ನು ಮುಂದೆ ಮಾಡಿ ನಿಂತನು. ಸಂಸಪ್ತಕರು ತನ್ನನ್ನು ಮುತ್ತಲು, ಪಾರ್ಥನು ಹಿಂಜರಿಯದೆ, ಅವರನ್ನು ಬಾಣಗಣದಿಂದ ಸಂಹರಿಸಿದನು. ಆಗ ಅರುಣೋದಯವಾಯಿತು.

ಪಾಂಡವವೀರರು ದ್ರೋಣನೊಡನೆ ಕಾದಿ, ಆತನನ್ನು ಶರಜಾಲದಿಂದ ಮುಚ್ಚಿದರು. ವಿರಾಟ ದ್ರುಪದರು ಒಮ್ಮೆಗೆ ಆ ಮಹಾರಥವನ್ನು ಮುತ್ತಿ ಕ್ರೋಧಸಮನ್ವಿತರಾಗಿ, ಭಲ್ಲದ್ವಯವನ್ನು ಆತನ ಎದೆಯಲ್ಲಿ ತಾಡಿಸಿದರು. ಆಚಾರ್ಯನು ಕುಪಿತನಾಗಿ, ಅವರನ್ನಿಬ್ಬರನ್ನು ಎರಡು ಭಲ್ಲದಿಂದ ಸಂಹರಿಸಿ, ಸಿಂಹನಾದವನ್ನು ಮಾಡಿದನು. ಅದನ್ನು ಕಂಡು, ಧೃಷ್ಟದ್ಯುಮ್ನನು ರಥಿಕರ ಮಧ್ಯದಲ್ಲಿ 'ಇಂದು ನಾನು ಪಿತೃಹಂತಕನನ್ನು ಸಂಹರಿಸುವೆನು; ದ್ರೋಣನನ್ನು ವಧಿಸದಿದ್ದರೆ, ನನ್ನ ಇಷ್ಟಾಪೂರ್ತಗಳು, ಕ್ಷಾತ್ರಧರ್ಮಗಳು, ದಾನವಿಧಿಗಳು ಸರ್ವವೂ ಹಾಳಾಗಲಿ!' ಎಂದು ಪ್ರತಿಜ್ಞೆ ಮಾಡಿದನು. ಭೀಮಸೇನನೂ 'ಕ್ಷತ್ರಿಯನಾಗಿ ಜನಿಸಿರುವೆ ! ಪಿತೃವಧವನ್ನು ಸಾಧಿಸಿದ ಆಚಾರ್ಯನನ್ನು ಕೊಲ್ಲದೆ ಬಿಡಬೇಡ ! ವೈಶ್ವಾನರನಂತೆ ಉರಿವ ಚಂಡಪ್ರತಾಪಿ ದ್ರೋಣನಿಂದ, ನಮ್ಮ ಸೇನಾಕಕ್ಷವು ನಿಶ್ಶೇಷವಾಗದ ಮುನ್ನ, ಆತನನ್ನು ಸಂಹರಿಸು !' ಎಂದು ಅವನನ್ನು ಹುರಿದುಂಬಿಸಿದನು. ಇನ್ನೊಂದಕ್ಷೌಹಿಣೀ ಕುರುಸೇನೆಯು ಅಂದು ರಾತ್ರಿ ನಷ್ಟವಾಯಿತು. ಆಗ ಸೂರ್ಯೋದಯವಾಯಿತು. ಅಂದು ತ್ರಯೋದಶಿ ಸಕಲ ವೀರರು ಪ್ರಾತಃಕಾಲ ಕೃತ್ಯಗಳನ್ನು ಬೇಗನೆ ಮುಗಿಸಿ, ಸಂಧ್ಯಾವಂದನವನ್ನಾಚರಿಸಿ ಮಹೋತ್ಸಾಹದಿಂದ ರಣರಂಗವನ್ನು ಸೇರಿದರು.

## ೧೬. ಪಂಚದಶ ದಿನದ ಸಮರ, ದ್ರೋಣ ನಿರ್ಯಾಣ

ರಾಜನ್ ! ಹದಿನೈದನೆಯ ದಿನದ ಬೆಳಗುಜಾವದಲ್ಲಿ ಭೀಮಸೇನನು ಬಾಹ್ಲೀಕನನ್ನು ಆತನು ಬೇಡಿದಂತೆ, ವ್ಯಥೆಪಡಿಸಿದಾಗ ಸಂಹರಿಸಿದನು. ಅದರಿಂದ ಬಾಹ್ಲೀಕನು ಧರ್ಮವನ್ನು, ಯಶವನ್ನು, ಪುಣ್ಯಲೋಕವನ್ನು ಪೊಂದಿದನು. ಸೂರ್ಯೋದಯ ಸಮಯದಲ್ಲಿ ವಿರಾಟದ್ರುಪದರು, ದ್ರೋಣಾಚಾರ್ಯನಿಂದ ಸಂಹೃತರಾದರು. ಅಂದು ಬಹುಳ ತ್ರಯೋದಶಿ.

ಸೂರ್ಯೋದಯಾನಂತರ ನಡೆದ ಯುದ್ಧ ವೃತ್ತಾಂತವನ್ನು ಕೇಳು ! ಮೇಘದಂತಿರುವ ರಥಗಳು, ಬೆಟ್ಟಗಳಂತಿರುವ ಆನೆಗಳು, ಅಲೆಗಳಂತೆ ಬರುವ ಕುದುರೆಗಳು, ನೆಲದಿಂದೆದ್ದು ಬರುವಂತಿದ್ದ ಭಟರು ಮತ್ತೆ ರಣರಂಗದಲ್ಲಿ ಕಲೆತು, ಕದನವಾಡತೊಡಗಿದರು. ಅವರೆಲ್ಲರೂ ಒಂದೇ ಸಲ ಸತ್ತು ಬೀಳಲಿಲ್ಲವೆಂದರೆ,

ಅವರವರ ಮೃತಿಕಾಲವು ವಿಭಿನ್ನವಾಗಿದೆ ಎಂದು ತಿಳಿಯುವೆನು. ದುರ್ಯೋಧನನು ನಕುಲನನ್ನು ಕಂಡು ಅಮರ್ಷಿತನಾಗಿ, ಶರಶತದಿಂದ ಪೀಡಿಸಿದನು. ನಕುಲನು ಅವನ ಶರವ್ರಾತವನ್ನು ಖಂಡಿಸಿ, ಕುರುರಾಜನನ್ನು ರಣರಂಗ ವಿಮುಖನನ್ನು ಮಾಡಿದನು. ದುಶ್ಶಾಸನನು ಅಣ್ಣನ ಸಹಾಯಕ್ಕೆಂದು ಬರಲು, ಸಹದೇವನನ್ನು ತಡೆದು, ಬಾಣಜಾಲದಿಂದ ಪೀಡಿಸಿದನು. ಸಹದೇವನು ಅವನ ಸಾರಥಿಯನ್ನು ಭಲ್ಲದಿಂದ ಸಂಹರಿಸಿದನು. ದುಶ್ಶಾಸನನು ಒಮ್ಮೆ ತೋತ್ರಗಳನ್ನು, ಮತ್ತೊಮ್ಮೆ ಧನುವನ್ನು ಪಿಡಿದು, ಚಿತ್ರಯುದ್ಧವನ್ನು ಮಾಡಿದನು. ಆಗ ಅವನಿಗೆ ನೆರವಾಗಲೆಂದು ಕರ್ಣನು ಬಂದನು. ಭೀಮಸೇನನು ಅವನನ್ನು ತಡೆದು ಮೂರು ಭಲ್ಲಗಳಿಂದ ಹೊಡೆದನು. ರಾಧೇಯನು ಕ್ರುದ್ಧನಾಗಿ, ಶರಶತದಿಂದ ಹೊಡೆದನು. ಬಹುಕಾಲ ಬಾಣಯುದ್ಧವಾಡಿ, ಭೀಮಕರ್ಣರು ಗದಾಯುದ್ಧಕ್ಕಿಳಿದರು. ಭೀಮನ ಗದೆಯು ನಿಸ್ಸೃಷ್ಟವಾಗಿ ಕರ್ಣನ ಗದೆಯಿಂದ ಪರಾವೃತ್ತವಾಗಿ ಹಿಂದಿರುಗಿ, ಭೀಮನ ಕೈ ಸೇರಿತು. ಕರ್ಣನು ಅನ್ಯರಥವನ್ನೇರಿ ಬಂದು ಭೀಮನ ಅಶ್ವಗಳನ್ನು ಸಂಹರಿಸಿದನು. ಭೀಮಸೇನನು ನಕುಲನ ರಥವನ್ನೇರಿ ಮತ್ತೆ ಕುದುರೆಗಳನ್ನು ಕಟ್ಟಿ ತಂದ ವಿಶೋಕನ ವಿಜ್ಞಾಪನವನ್ನಾಲಿಸಿ ತನ್ನ ರಥಕ್ಕೆ ಬಂದು, ಕರ್ಣನ ಅಶ್ವಗಳನ್ನು ಸೂತನನ್ನು ಕೊಂದು, ಧ್ವಜವನ್ನು ಕೆಡಹಿ, ಸಿಂಹನಾದ ಮಾಡಿದನು. ಕರ್ಣನು ಕೃಪನ ರಥವನ್ನು ಸೇರಪೋದನು.

ದ್ರೋಣನು ಅರ್ಜುನನನ್ನು ಮುತ್ತಿ ವಿವಿಧಾಸ್ತ್ರ ವರ್ಗವನ್ನು ಸೃಜಿಸಿ, ಪಾಂಡವೀಸೇನೆಯನ್ನು ನಾಶಪಡಿಸಿದನು. ಅರ್ಜುನನು ಆತನ ಐಂದ್ರ, ತ್ವಾಷ್ಟ್ರ, ವಾಯವ್ಯ, ವಾರುಣ, ಪಾಶುಪತಾದಿಗಳನ್ನು ಪ್ರತ್ಯಸ್ತ್ರಗಳಿಂದ ನಿವಾರಿಸಿ ಅನಸ್ತ್ರಜ್ಞರಾದ ಸಾಮಾನ್ಯ ಸೈನಿಕರನ್ನು ಅಸ್ತ್ರಜಾಲದಿಂದ ಅನ್ಯಾಯವಾಗಿ ಸಂಹರಿಸುವ ಆಚಾರ್ಯನ ಅಂದಿನ ಅಧರ್ಮ ನಿಶ್ಚಯವನ್ನು ಕಂಡು, ಆಶ್ಚರ್ಯವಿಷಾದ ಮಗ್ನನಾದನು. ಪುರುಜಿತ್ ಕುಂತೀ ಭೋಜವಸುದಾನರನ್ನು ಸಂಹರಿಸಿ, ಆಚಾರ್ಯನು ಪಾರ್ಥನೊಡನೆ ಕಾದಿದನು. ರುದ್ರನೇ ರೂಪದ್ವಯದಿಂದ ತನ್ನೊಡನೆ ತಾನು ಹೋರಾಡುತ್ತಿರುವನೋ, ಅಥವಾ ದ್ರೋಣಾರ್ಜುನರು ಅಸ್ತ್ರವಿದ್ಯಾ ವೈದಗ್ಧ್ಯವನ್ನು ಮೆರೆಸುತ್ತಿರುವರೋ, ಎಂಬಂತೆ ಗುರುಶಿಷ್ಯರು ಕಾದಾಡಿದರು. ಆಚಾರ್ಯನಲ್ಲಿ ಜ್ಞಾನವೂ, ಶಿಷ್ಯನಲ್ಲಿ ಜ್ಞಾನಯೋಗಗಳು; ಆಚಾರ್ಯನಲ್ಲಿ ಶೌರ್ಯವೂ, ಶಿಷ್ಯನಲ್ಲಿ ಬಲಶೌರ್ಯಗಳು ಎದ್ದು ತೋರುತ್ತಿದ್ದವು. ದ್ರೋಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆಗ ಭೂಮಿಯು ಕಂಪಿಸಿತು. ಗಾಳಿ ಬಿರುಸಾಗಿ ಬೀಸಿತು. ಭೂತಗಳು ಸಂತಾಪಿತವಾದವು. ಪಾರ್ಥನು ಭಯಪಡದೆ ಪ್ರತಿ ಬ್ರಹ್ಮಾಸ್ತ್ರದಿಂದ, ಆಚಾರ್ಯನ ಅಸ್ತ್ರರಾಜವನ್ನು ಶಾಂತಗೊಳಿಸಿದನು.

ದುಶ್ಶಾಸನನು ದ್ರೋಣನನ್ನು ಮುತ್ತಬರುವ ಧೃಷ್ಟದ್ಯುಮ್ನನನ್ನು ತಡೆದು, ಬಾಣ ದಶಕದಿಂದ ಪೀಡಿಸಲು, ಅವನು ಸಿಟ್ಟಾಗಿ, ದುಶ್ಶಾಸನನ ಅಶ್ವಸಾರಥಿಯರನ್ನು ಸಂಹರಿಸಿ, ಅವನನ್ನು ಅತಿಕ್ರಮಿಸಿ ಮುಂದೆ ಸಾಗಿದನು. ಕೃತವರ್ಮನು ಅವನೊಡನೆ

ಹೋರಾಡಿ ತಡೆದನು. ನಕುಲ ಸಹದೇವರು ಕೃತವರ್ಮನ ಕೂಡಿ ಹೋರಾಡಿದರು. ಸಾತ್ಯಕಿಯು ದುರ್ಯೋಧನನನ್ನು ಮುತ್ತಿ ಧೃಷ್ಟದ್ಯುಮ್ನನ ಮಾರ್ಗವನ್ನು ಸುಗಮವಾಗಿಸಿದನು. ಬಾಲ್ಯಮಿತ್ರನಾದ ಸಾತ್ಯಕಿಯನ್ನು ರಣರಂಗದಿ ಕಂಡು, ಹಿಂದಿನ ದಿನಗಳನ್ನು ನೆನೆದು ದುರ್ಯೋಧನನು 'ಮಿತ್ರ ! ಧಿಕ್ಕಾರವಿರಲಿ ನಮ್ಮ ಕ್ರೋಧ ಲೋಭಗಳಿಗೆ ! ಅವು ಕೋತಿಯನ್ನಂತೆ ನಮ್ಮನ್ನಾಡಿಸುತ್ತಿರಲು, ಮಿತ್ರಬಾಂಧವರನ್ನು ಕೂಡ ದಯಾರಹಿತರಾಗಿ, ಸಂಹರಿಸುತ್ತಿರುವೆವು ! ಕ್ಷತ್ರಿಯ ಧರ್ಮವು ಬಲು ನಿಷ್ಠುರವಾಗಿದೆ!' ಎಂದನು. ಆ ಮಾತಿಗೆ ಸಾತ್ಯಕಿ ನಗುತ್ತಾ 'ರಾಜನ್ ! ನಿನಗೆ ಮಿತ್ರಬಾಂಧವರೆಂಬ ನೆನಪು ಹದಿನೈದು ದಿನಗಳ ಹಿಂದೆ ಹುಟ್ಟಿದ್ದರೆ, ಭಾರತ ಕಥೆಯೇ ಬೇರಾಗುತ್ತಿತ್ತು. ಬಾಲ್ಯದ ನೆನಕೆಗಳನ್ನು ಬಿಡು! ಅವು ವಿಷಮಯವಾಗಿವೆ, ಜ್ವಾಲಾಮಯವಾಗಿವೆ, ಪರಿಭವಮಯವಾಗಿವೆ ! ಈಗಿನ ವೃತ್ತವನ್ನು ಅವಲಂಬಿಸು ! ನಿನ್ನ ಶಕ್ತಿಯಂತೆ ಹೊಡೆದಾಡಿ ಈ ನಿನ್ನ ಮಿತ್ರನನ್ನು ವೀರಸ್ವರ್ಗವನ್ನು ಸೇರಿಸು ! ಬಿಡು ಬಾಣವನ್ನು !' ಎಂದನು.

ದುರ್ಯೋಧನನು ಐವತ್ತು ಬಾಣಗಳಿಂದ ಹೊಡೆಯಲು, ಸಾತ್ಯಕಿಯು ಹತ್ತು ಬಾಣಗಳಿಂದ ಅವನ್ನು ಖಂಡಿಸಿ, ಮತ್ತೆ ಮೂವತ್ತು ಶರಗಳಿಂದ ರಾಜರಾಜನನ್ನು ಪೀಡಿಸಿದನು. ಅವನ ಬಾಣಗಳಿಂದ ವ್ಯಥಿತನಾದ ದುರ್ಯೋಧನನು ಮತ್ತೆ ಚೇತರಿಸಿಕೊಂಡು ಶರಸಹಸ್ರದಿಂದ ಸಾತ್ಯಕಿಯನ್ನು ಮುಚ್ಚಿದನು. ಆಗ ಕರ್ಣನು ಅವನಿಗೆ ನೆರವಾಗಿ ಬಂದನು. ಭೀಮಸೇನನು ಕರ್ಣನನ್ನು ತಡೆದು, ಗದೆಯಿಂದ ಅವನ ರಥದ ಚಕ್ರವನ್ನು ಮುರಿದನು. ಏಕಚಕ್ರವಾದ ರಥದಲ್ಲಿದ್ದ ಕರ್ಣನು ಸುಪುತ್ರ ಹರಿಕೇಶ, ವಿಶ್ವಕರ್ಮ, ವಿಶ್ವಶ್ರವ, ಸಂಪದ್ವತ್, ಸುವತಃಪರ, ಅಶ್ವಾಶ್ವಸೂಃ ಎಂಬ ಏಳು ಕುದುರೆಗಳ ಏಕಚಕ್ರ ರಥದಲ್ಲಿ ಮೆರೆವ ಸೂರ್ಯನಂತೆ ವಿರಾಜಿಸಿದನು. ಕರ್ಣನು ಕ್ರುದ್ಧನಾಗಿ ಭೀಮನನ್ನು ಶರಜಾಲದಿಂದ ಮುಚ್ಚಿದನು. ಭೀಮಸೇನನು ಅವನ್ನು ಖಂಡಿಸಿ, ಕರ್ಣನ ಅಶ್ವಗಳಿಗೆ ಪ್ರಹಾರಿಸಲು, ಅವು ದೂರ ಓಡಿದವು.

ದ್ರೋಣನು ಪಾಂಚಾಲ ಸೃಂಜಯರನ್ನು ನಾಶಪಡಿಸುತ್ತಿದ್ದನು. ಅತಿವೃದ್ಧನಾದರೂ ಆಚಾರ್ಯನು ತರುಣನಂತೆ ರಣವಿಹರಣಚಣವಾಗಿ ಅಂದು ಮಧ್ಯಾಹ್ನದ ವೇಳೆಗೆ ಅರ್ಬುದ ರಥಿಕರನ್ನು (20,000), ಅರ್ಬುದ ಗಜಯೋಧರನ್ನು, ಶತಾರ್ಬುದ ಕುದುರೆಗಳನ್ನು, ಸಹಸ್ರಾರ್ಬುದ ಸೈನಿಕರನ್ನು ದಿವ್ಯಾಸ್ತ್ರಗಳಿಂದ ಸಂಹರಿಸಿದನು. ಅದನ್ನು ಕಂಡು ಕೃಷ್ಣನು ಅರ್ಜುನನಿಗಿಂತೆಂದನು: 'ದ್ರೋಣನಿಂದು ಸಾಯಂಕಾಲದೊಳಗೆ ಪಾಂಡವ ಸೇನೆಯನ್ನೆಲ್ಲ ಸಂಹರಿಸಿಬಿಡುವಂತಿದೆ. ಧನುರ್ಧರನಾಗಿರುವ ದ್ರೋಣನನ್ನು ಸುರಾಸುರರು ಕೊಲ್ಲಲಾರರು. ನ್ಯಸ್ತಶಸ್ತ್ರನಾಗದೆ ಆಚಾರ್ಯನು ವಧ್ಯನಾಗನು. ಅಪ್ರಿಯತಮ ವಾರ್ತೆಯನ್ನು ಕೇಳದೆ ನ್ಯಸ್ತಶಸ್ತ್ರನಾಗನು, ಅಶ್ವತ್ಥಾಮನಿಗೂ ಪ್ರಿಯತರವಾದುದು ಆತನಿಗಿಲ್ಲ. ಆದುದರಿಂದ ಅಶ್ವತ್ಥಾಮನು ಹತನಾದನೆಂಬ ವಾರ್ತೆಯನ್ನು ಆತನಿಗಾರಾದರೂ ಹೇಳಲಿ!' ಆ ಮಾತಿನಂತೆ ನಡೆಯಲು ಎಲ್ಲರೂ ನಿಶ್ಚಯಿಸಿದರು.

ಧರ್ಮರಾಜನು ಮಾತ್ರ ಸಮ್ಮತಿಸದಿರುವದನ್ನು ಕಂಡು, ಭೀಮಸೇನನು ಮಾಲವರಾಜನಾದ ಇಂದ್ರವರ್ಮನ ಅಶ್ವತ್ಥಾಮ ಎಂದು ಹೆಸರುಳ್ಳ ಮದ್ದಾನೆಯನ್ನು ಸಂಹರಿಸಿ ದ್ರೋಣನಿಗೆ ಕೇಳಿಸುವಂತೆ, 'ಅಶ್ವತ್ಥಾಮಾ ಹತಃ' ಎಂದು ಸಾರಿದನು. ಗಜವೊಂದು ಅಶ್ವತ್ಥಾಮ ಎಂಬುದು ಸ್ಮೃತಿತೆಂದು ಮನದಿ ಚಿಂತಿಸಿ, ನುಡಿದ ಭೀಮಸೇನನ ಮಾತನ್ನು ಕೇಳಿ, ಆಚಾರ್ಯನು ಅತಿವ್ಯಥಿತನಾದನು. ಆತನ ಮೈಬೆವರಿಟ್ಟಿತು; ಕಣ್ಣಿಗೆ ಕತ್ತಲು ಕವಿಯಿತು. ಆದರೆ ತನ್ನ ಮಗನು ಅವಧ್ಯನೆಂಬುದನ್ನು ನೆನೆದು ದ್ರೋಣನು ಧೈರ್ಯವನ್ನು ತಂದುಕೊಂಡು, ಮತ್ತೆ ಕ್ರುದ್ಧನಾಗಿ, ಸಾವಿರಾರು ಭಟರನ್ನು ಸಮವರ್ತಿಯ ಸಮೀಪ ಸೇರಿಸಿದನು.

ಮುಂದೆ ನಿಂತ ಧೃಷ್ಟದ್ಯುಮ್ನನನ್ನು ಕಂಡು ಆಚಾರ್ಯನು ಮೃತ್ಯುವನ್ನು ಕಂಡಂತೆ ಎದೆಯೊಡೆದಂತಾದನು. ಮತ್ತೆ ಸಮಾಧಾನಪಟ್ಟು, ಆಂಗಿರಸಮಹರ್ಷಿ ತನಗಿತ್ತ ದಿವ್ಯ ಧನುವನ್ನು ಹಿಡಿದು, ಶರವರ್ಷದಿಂದ ಪಾರ್ಷತನನ್ನು ಪೀಡಿಸಿದನು. ಧೃಷ್ಟದ್ಯುಮ್ನನು ನಗುತ್ತಾ ಆತನ ಶರಜಾಲವನ್ನು ಖಂಡಿಸಿದನು. ದ್ರೋಣನು ಅವನ ಸೂತನನ್ನು ಪಾರಾವತವರ್ಣದ ತುರಗಗಳನ್ನು ಸಂಹರಿಸಿ, ಧ್ವಜವನ್ನು ಕೆಡಹಿದನು. ಪಾರ್ಷತನು ಮತ್ತೆ ರಥವೇರಿ, ಬೇರೊಂದು ಶರಾಸನವನ್ನು ಹಿಡಿದು ನಿಶಿತಬಾಣದಿಂದ ಆಚಾರ್ಯನ ವಕ್ಷಕ್ಕೆ ತಾಡಿಸಿದನು. ಆಚಾರ್ಯನು ಕ್ರುದ್ಧನಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಸರ್ವ ಸೇನೆಯನ್ನು ಸುಡುತ್ತಿರಲು, ಪಾರ್ಷತನು ಬ್ರಹ್ಮಾಸ್ತ್ರದಿಂದ ಅದನ್ನು ಶಾಂತಪಡಿಸಿ, ಖಡ್ಗವನ್ನೆತ್ತಿ ಆಚಾರ್ಯನ ರಥವನ್ನೇರಿ ನಿಂತನು. ಹಿರಣ್ಯಕಶಿಪುವನ್ನು ಕೊಂದ ನೃಸಿಂಹನಂತೆ, ಭಯಂಕರ ರೂಪವನ್ನು ತಾಳಿ, ಧೃಷ್ಟದ್ಯುಮ್ನನು ಆಚಾರ್ಯನ ರಥದ ನೊಗೆಯಲ್ಲಿ ನಿಂತು, ಖಡ್ಗವನ್ನು ಇಪ್ಪತ್ತೊಂದು ರೀತಿಯಾಗಿ ಆಡಿಸುತ್ತಾ ಶತ್ರುಭಯಂಕರನಾದನು.

ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ಪ್ರಸೃತ, ಸೃತ, ಪರಿವೃತ, ನಿವೃತ್ತ ಸಂಪಾತ, ಸಮುದೀರ್ಣ, ಮುಂತಾದ ಭಂಗಿಗಳಲ್ಲಿ ಖಡ್ಗವನ್ನು ಝಳಪಿಸುವ ಧೃಷ್ಟದ್ಯುಮ್ನನನ್ನು ಕಂಡು ಆಚಾರ್ಯನು ಅವನ ಗುರಾಣಿಯನ್ನು ಶರಶತದಿಂದ ತುಂಡರಿಸಿ, ಖಡ್ಗವನ್ನು ಶರಸಹಸ್ರದಿಂದ ಕಡಿದು ಕೆಡಹಿದನು. ವೈತಸ್ತಿಕೆಗಳೆಂಬ ಚೋಟುದ್ದದ ನಿಶಿತಬಾಣಗಳಿಂದ ನೋಯಿಸಿ, ಧೃಷ್ಟದ್ಯುಮ್ನನನ್ನು ದೂರೀಕರಿಸಿ, ಆಚಾರ್ಯನು ಪ್ರಾಣಾಂತರಕವಾದ ನಿಶಾತಬಾಣದಿಂದ ಅವನನ್ನು ಸಂಹರಿಸಲೆಣಿಸಿ, ಧನುವಿನಲ್ಲಿಟ್ಟನು. ಪ್ರಮತ್ತನಾಗಿ ರಥವನ್ನು ಸೇರಪೋಗುವ ಪಾರ್ಷತನ ಪ್ರಾಣಾಪಾಯವನ್ನರಿತು, ಸಾತ್ಯಕಿಯು ದ್ರೋಣನ ಬಾಣವನ್ನು ಹತ್ತು ತುಂಡಾಗಿ ಖಂಡಿಸಿದನು. ಸಾತ್ಯಕಿಯ ಅದ್ಭುತ ವಿಕ್ರಮವನ್ನು ಮೆಚ್ಚಿ ಅರ್ಜುನನು ಪ್ರಶಂಸಿಸಿದನು.

ದುರ್ಯೋಧನಾದಿ ವೀರರು ಸಾತ್ಯಕಿಯನ್ನು ಮುತ್ತಿ ಸಿಟ್ಟಿನಿಂದ ಹೋರಾಡಿದರು. ಧೃಷ್ಟದ್ಯುಮ್ನನೂ ಆಚಾರ್ಯನನ್ನು ಸಂಹರಿಸಿ, ಸತ್ಯಪ್ರತಿಜ್ಞನಾಗಲು ಹವಣಿಸಿದನು.

ಭೀಮಾರ್ಜುನ ಸಾತ್ಯಕಿ ಮಾದ್ರೇಯರು ದುರ್ಯೋಧನ, ಕರ್ಣ, ಕೃತವರ್ಮ, ಕೃಪ, ಶಲ್ಯರನ್ನು ತಡೆದು, ಅವನಿಗೆ ಆಚಾರ್ಯನನ್ನು ಮುತ್ತುವಂತೆ ಅನುವಾದರು.

ಯುಧಿಷ್ಠಿರ ಸಮಾಜ್ಞಪ್ತರಾಗಿ, ಮುತ್ತುವ ಪಾಂಡವ ಯೋಧರನ್ನು ತನ್ನ ರಕ್ಷಕರಾಗಲು ಬರುವ ಸುಯೋಧನಾದಿಗಳನ್ನು ವಾರಿಸುವ ವೃಕೋದರಾದಿ ಮಹಾರಥರನ್ನು ಮೃತ್ಯುವಂತೆ ಕಾಣುತ್ತಾ ಮುತ್ತುವ ಧೃಷ್ಟದ್ಯುಮ್ನನನ್ನು ಕಂಡು ಆಚಾರ್ಯನು ನಿರ್ವಿಣ್ಣನಾದನು. ಆತನೂ ಸಾಯಬೇಕೆಂದು ನಿಶ್ಚಯಿಸಿ, ಸಾಯುವವರೆಗೂ ಸಂಹರಿಸಬೇಕೆಂದು ವಿಕ್ರಮಿಸಿದನು. ಆತನಿಗೆ ಎಡಗಣ್ಣು ಎಡಭುಜ ಅದರಿತು. ಉಲ್ಕೆಗಳು ಆಕಾಶದಿಂದ ಉದುರಿದವು. ಆತನ ಶೋಣಾಶ್ವಗಳು ಕಣ್ಣೀರಿಟ್ಟವು. ಆತನ ಅಸ್ತ್ರಗಳು ಉರಿಯುವಂತಿದ್ದವು. ಆತನ ಮಾನಸೋತ್ಸಾಹವು ನಷ್ಟವಾಯಿತು. ಧೃಷ್ಟದ್ಯುಮ್ನನು ರಥಾರೂಢನಾಗಿ ಮತ್ತೆ ಮುತ್ತಿದನು. ಭೀಮಸೇನನು 'ಪಾರ್ಷತ ! ನಿನ್ನ ಹೊರತು ಆಚಾರ್ಯನೊಡನೆ ಕಾದಬಲ್ಲ ಯೋಧರಿಲ್ಲಿಲ್ಲ. ವಿಕ್ರಮಿಸು ! ನಿನ್ನಲ್ಲಿ ಭಾರವಿಟ್ಟು ನಿನ್ನನ್ನು ನಂಬಿರುವೆವು. ಹುಟ್ಟಿರುವೆ ದ್ರೋಣವಧೆಗಾಗಿ! ಮಾಡಿರುವೆ ಪ್ರತಿಜ್ಞೆಯನ್ನು ! ಎಂದು ರೇಗಿಸಲು, ಪಾರ್ಷತನು ಶರವರ್ಷದಿಂದ ಆಚಾರ್ಯನನ್ನು ಮುಚ್ಚಿದನು. ಅಡ್ಡಬಂದ ವಸಾತಿ, ಬಾಹ್ಲೀಕ, ಕೌರವ ವೀರರನ್ನು ಸಂಹರಿಸಿ, ಧೃಷ್ಟದ್ಯುಮ್ನನು, ಸಹಸ್ರಕಿರಣನಾದ ಮಾರ್ತಾಂಡನಂತೆ ಉರಿಯುತ್ತಾ, ಸಪ್ತಾರ್ಚಿಯಾದ ಅಗ್ನಿಯಂತೆ ಕಿಡಿಗಾರುತ್ತಾ ದ್ರೋಣನೊಡನೆ ಶರಯುದ್ಧನಿರತನಾದನು.

ಆಗ ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ವಸಿಷ್ಠ, ಕಶ್ಯಪ, ಅತ್ರಿ, ಭೃಗು, ವಾಲಖಿಲ್ಯ, ಮುಂತಾದ ಮಹರ್ಷಿಗಳು ದ್ರೋಣನಿಗೆ ಮಾತ್ರ ಕಾಣಿಸಿಕೊಂಡು ಇಂತೆಂದರು: "ದ್ರೋಣಾಚಾರ್ಯ ! ಅಧರ್ಮ ಯುದ್ಧವನ್ನು ಆರಂಭಿಸಿದೆ! ಇದು ನಿನಗೆ ಶೋಭಾರಕವಲ್ಲ. ಸಾಕಿನ್ನು ಯುದ್ಧ! ಆಯುಧವನ್ನು ಬಿಡು ! ನೋಡೆಮ್ಮನ್ನು ! ವೇದವೇದಾಂಗ ವಿದ್ವಾಂಸನು, ಸತ್ಯಧರ್ಮರತನು, ಬ್ರಾಹ್ಮಣವರನು, ಅಮೋಘಶರನು ಆಗಿದ್ದೂ ಬ್ರಹ್ಮಾಸ್ತ್ರದಿಂದ ಅನಸ್ತ್ರಜ್ಞರನ್ನು ಸಾವಿರಗಟ್ಟಲೆ ಸಂಹರಿಸಿದೆ ! ರೋಷದಿಂದ ಅಸಾಧುಕರ್ಮವನ್ನೆಸಗಿ, ಅಧರ್ಮಮೂರ್ತಿಯಾದ ಕಲಿಯ ಕಡೆ ನಿಂತು, ಸುಜನರಿಗೆ ಕೇಡು ಮಾಡಿದೆ ! ನಿನ್ನ ಕಾಲವೂ ಪರಿಪೂರ್ಣವಾಗಿದೆ. ನಿಧನವು ಸಮೀಪಿಸಿದೆ ! ಧ್ಯಾನಿಸು ದೇವನನ್ನು ! "

ಆ ಮಾತನ್ನಾಲಿಸಿ ದ್ರೋಣನು ವ್ಯಥಿತನಾಗಲು ಆತನ ಕಣ್ಣಿಗೆ ಧರ್ಮರಾಜನು ಗೋಚರಿಸಿದನು. ಆತನು ಅಶ್ವತ್ಥಾಮನ ಮೃತಿಯ ವಿಷಯದಲ್ಲಿ ಸಂದಿಗ್ಧನಾಗಿ ಧರ್ಮರಾಜನನ್ನು ಕೇಳಿದನು 'ಅಪ್ರಿಯವಾರ್ತೆಯನ್ನು ತಿಳಿಸು ! ಆಗ ನಾನು ನ್ಯಸ್ತಶಸ್ತ್ರನಾಗಿ ಪ್ರಾಣ ಬಿಡುವೆನು' ಎಂದು, ಯುದ್ಧಾರಂಭದಲ್ಲಿ ಆತನೇ ತನ್ನ ವಧೋಪಾಯವನ್ನು ತಿಳಿಸಿದ್ದುದನ್ನು ನೆನೆದು ಧರ್ಮರಾಜನು ಆಲೋಚಿಸಿ, ಮಿಥ್ಯಾವಚನವನ್ನು ಹೇಳಲು ಹಿಂಜರಿಯುತ್ತಿದ್ದನು. ಅದನ್ನರಿತು ಶ್ರೀಕೃಷ್ಣನು 'ಅರ್ಧ ದಿವಸದಲ್ಲಿ ಸಾವಿರಾರು ಅರ್ಬುದಸೇನೆಯನ್ನು ಹಾಳುಮಾಡಿದ ದ್ರೋಣನು

ಸಾಯಂಕಾಲದೊಳಗೆ ನಿನ್ನೆಲ್ಲ ಬಲವನ್ನು ಮುಗಿಸಿಬಿಡುವನು. ದ್ರೋಣನಿಂದ ಸಾಯದಂತೆ, ನಿನ್ನವರನ್ನು ಉಳಿಸಬೇಕಾದರೆ, ಅಪ್ರಿಯವನ್ನಾಡದೆ ಇರಲಾಗದು. ಜೀವಿತಕ್ಕಾಗಿ ಅನೃತವನ್ನಾಡುವುದು ಪಾಪವಲ್ಲ. ಕಾಮಿನಿಯರಿಗೆ, ಗೋಬ್ರಾಹ್ಮಣ ರಕ್ಷಣೆಗಾಗಿ, ವಿವಾಹಕ್ಕಾಗಿ ಸುಳ್ಳಾಡಬಹುದು !' ಎಂದು ಪ್ರೇರಿಸಿದನು.

ಭೀಮಸೇನನು, 'ಆಚಾರ್ಯನ ವಧೋಪಾಯವನ್ನರಿತು, ನಾನು ಮಾಲವೇಶನ ಮದ್ದಾನೆ ಅಶ್ವತ್ಥಾಮ ಎಂದು ಹೆಸರುಳ್ಳದ್ದನ್ನು ಸಂಹರಿಸಿ 'ಅಶ್ವತ್ಥಾಮಾ ಹತಃ' ಎಂದು ಆಚಾರ್ಯನಿಗೆ ಹೇಳಿದೆನು. ನನ್ನ ಮಾತನ್ನು ಆತನು ನಂಬುತ್ತಿಲ್ಲ. ಗೋವಿಂದನಾಡಿದಂತೆ, ನೀನು ಒಂದು ಅನೃತವನ್ನಾಡದಿದ್ದರೆ ನಿನ್ನ ಸೇನಾನಿವಹವು ಸಂಪೂರ್ಣವಾಗಿ ಆಚಾರ್ಯನ ಅಸ್ತ್ರಗಳಿಂದ ನಾಶವಾಗುವುದು ತಿಳಿ !' ಎಂದನು. ಧರ್ಮರಾಜನು ಕೃಷ್ಣನಿಂದಲು ಪ್ರೇರಿತನಾಗಿ, ಜಯಾಸಕ್ತನಾಗಿ 'ಅಶ್ವತ್ಥಾಮಾ ಹತಃ' ಎಂದು ದ್ರೋಣನಿಗೆ ಕೇಳಿಸುವಂತೆ ಸಾರಿ ಮೆಲ್ಲಗೆ 'ಕುಂಜರಃ' ಎಂದು ಉಸುರಿದನು. ತತ್‌ಕ್ಷಣವೇ ಭೂಸ್ಪರ್ಶವಿಲ್ಲದೆ ಓಡಾಡುತ್ತಿದ್ದ ಧರ್ಮರಾಜನ ರಥವು ಭೂಮಿಗೆ ಆತು ನಿಂತಿತು.

ಆಚಾರ್ಯನು, ಧರ್ಮರಾಜನಿಂದ ವಜ್ರಕಠೋರವಾದ ವಚವನ್ನಾಲಿಸಿ, ಜೀವಿತದಲ್ಲಿ ನಿರಾಶನಾದನು. ಮಹಾತ್ಮರಾದ ಪಾಂಡವರಿಗೆ ತಾನು ಅಪರಾಧವನ್ನೆಸಗಿರುವುದನ್ನು ನೆನೆದು ಪಶ್ಚಾತ್ತಾಪತಪ್ತನಾಗಿ, ಪ್ರಾಯೋಪವೇಶವನ್ನು ಕೈಕೊಳ್ಳಲು ನಿಶ್ಚಯಿಸಿದನು. ಋಷಿವಾಕ್ಯದಿಂದಲು ಆತನು ಉದ್ವಿಗ್ನನಾಗಿದ್ದನು. ಮೇಲೇರಿ ಕೊಲ್ಲಲು ಬರುವ ಧೃಷ್ಟದ್ಯುಮ್ನನನ್ನು ನೋಡಿ ಆ ಮಹಾರಥನ ಜಂಘಾಬಲವೇ ಉಡುಗಿತು. ಅಗ್ನಿಕುಂಡದಿಂದ ಆಚಾರ್ಯನ ವಧೆಗಾಗಿ ಆವಿರ್ಭವಿಸಿದ ಧೃಷ್ಟದ್ಯುಮ್ನನು ಮಹಾಜ್ವಾಲೆಯಂತಿರುವ ಖಡ್ಗವನ್ನು ಕೈಲಿ ಪಿಡಿದು ಆಚಾರ್ಯನನ್ನು ಸಮೀಪಿಸಿದನು. ಆಚಾರ್ಯನು ಅವನನ್ನು ವಾರಿಸಿ, ಜೀವವನ್ನುಳಿಸಿಕೊಳ್ಳಲು ಪ್ರಯತ್ನಿಸಿ, ಅಸ್ತ್ರಗಳನ್ನು ಪ್ರಯೋಗಿಸಲು ಹವಣಿಸಿದನು. ಆದರೆ ಅಸ್ತ್ರಗಳು ಆತನ ಮುಂದೆ ಪ್ರಾದುರ್ಭವಿಸಲಿಲ್ಲ. ನಾಲ್ಕು ದಿನ ಮತ್ತೊಂದು ರಾತ್ರಿ, ಮತ್ತೆ ಮಧ್ಯಾಹ್ನದವರೆಗೂ ಹೋರಾಡಿದ ಆಚಾರ್ಯನ ಬತ್ತಳಿಕೆಗಳು ಬರಿದಾದವು. ಪುತ್ರಶೋಕದಿಂದ ಮತಿಗೆಟ್ಟಂತಾಗಿ, ಅಸ್ತ್ರಗಳ ನೆನಪು ಬರದೆ, ಋಷಿವಾಕ್ಯಗಳನ್ನು ಮನ್ನಿಸಬೇಕೆಂದು ಚಿಂತಿಸುವ ದ್ರೋಣನನ್ನು ಕಂಡು, ಭೀಮಸೇನನು ದ್ರೋಣ ರಥದ ನೊಗೆಯನ್ನು ಹಿಡಿದು ನಿಂತು, ಇಂತು ಮೂದಲಿಸಿದನು:

'ಸ್ವಧರ್ಮವನ್ನು ತೊರೆದು ವಿಪ್ರಬಂಧುಗಳು ಕಡಿದಾಡದಿದ್ದರೆ, ಕ್ಷತ್ರಿಯರು ಉಳಿಯುತ್ತಿದ್ದರು. ಸ್ವಧರ್ಮವಾದ ಅಹಿಂಸೆಯನ್ನು ಬಿಡುವುದು ವಿಪ್ರರಿಗೆ ನ್ಯಾಯವಲ್ಲ. ಧರ್ಮಮೂಲವು ವಿಪ್ರನು. ಅವನಿಂದ ಧರ್ಮಜ್ಞಾನಗಳು. ಅಂತಹ ವಿಪ್ರರಲ್ಲಿ ಶ್ರೇಷ್ಠನಾದ ನಿನಗೆ ಪರಧರ್ಮೋಪಜೀವನವು ತರವಲ್ಲ. ಪುತ್ರದಾರರಿಗಾಗಿ ಧನವನ್ನು ಗಳಿಸುವಾಗ ಧರ್ಮವನ್ನು ಕಳೆದುಕೊಂಡು, ಇಹಪರಗಳಿಗೆ ದೂರವಾಗಬೇಡ!'

ಆ ಮಾತು ನಿಜವೆಂದರಿತು ದ್ರೋಣನು ಶಸ್ತ್ರಸನ್ಯಾಸವನ್ನು ಮಾಡಿದನು, 'ಕರ್ಣ ! ದುರ್ಯೋಧನ ! ಪ್ರಾಯೋಪವೇಶವನ್ನು ಗೈಯುತ್ತಿರುವೆನು' ಎಂದು ಕೂಗಿ, ದ್ರೋಣನು ಶಸ್ತ್ರವನ್ನು ಕೆಳಗಿಟ್ಟನು. ಸರ್ವಭೂತಗಳಿಗೆ ಅಭಯವನ್ನಿತ್ತು, ಯೋಗಬಲದಿಂದ, ಶ್ರೀರಮಣನನ್ನು ಧ್ಯಾನಿಸಿದನು. ಧೃಷ್ಟದ್ಯುಮ್ನನು ಖಡ್ಗಪಾಣಿಯಾಗಿ, ನಿಶ್ಚಲನಾಗಿ ಕೂತಿದ್ದ ದ್ರೋಣನ ರಥವನ್ನೇರಿ ನಿಂತನು. ಅದನ್ನು ಕಂಡು ಭೂಮಿಯ ಜನರು, ಅಂತರಿಕ್ಷದ ಸುರರು ಹಾಹಾಕಾರವನ್ನು ಮಾಡಿದರು.

ದ್ರೋಣಾಚಾರ್ಯನು ಯೋಗನಿರತನಾಗಿ, ಪುರಾಣಪುರುಷನಾದ ಶ್ರೀಹರಿಯನ್ನು 'ದೇವದೇವ ! ಓಂಕಾರವಾಚ್ಯ ! ನಾಶರಹಿತ ! ಗುಣಭರಿತ ! ಮಹಾಪ್ರಭೋ ! ನಿರ್ದೋಷ !' ಎಂದು ಧ್ಯಾನಿಸಿ, ನಿಮೀಲಿತಾಕ್ಷನಾಗಿದ್ದವನು ಹಾಗೆಯೇ ದೇಹವನ್ನು ತ್ಯಜಿಸಿ, ದ್ಯುಲೋಕವನ್ನು ಸೇರಿದನು. ಆ ಮಹಾನುಭಾವನ ಜೀವಜ್ಯೋತಿಯು, ರವಿಮಂಡಲವನ್ನು ಹೊಕ್ಕಾಗ, ಸೂರ್ಯದ್ವಯದಿಂದೆಂಬಂತೆ ಜಗವು ಬೆಳಗಿತು. ಕ್ಷಣದಲ್ಲಿ ದ್ರೋಣನು ತನ್ನ ಮೂಲರೂಪವನ್ನು (ಗುರು) ಸೇರಿದನು. ಅದನ್ನು ಕಂಡು ದೇವಗಂಧರ್ವರು ಆಶ್ಚರ್ಯಾನಂದಗಳಿಂದ ಭರಿತರಾಗಿ, ಆ ಮಹಾತ್ಮನ ಗುಣಗಾನ ಮಾಡಿದರು. ಆತನ ಜೀವ ಪರಮ ಗತಿಯನ್ನು ಶ್ರೀಕೃಷ್ಣನೂ, ಪಾಂಡವರೈವರೂ, ಅಶ್ವತ್ಥಾಮನೂ, ನಾನೂ ಮಾತ್ರ ಕಂಡೆವು. ಋಷಿಪುಂಗವರಿಂದ ಕೂಡಿ ಸ್ವರ್ಗಾಧಿರೋಹಣವನ್ನು ಮಾಡಿದ ಮಹೋದಾರನ ಮಹಿಮೆಯನ್ನು ಮನುಜಮಾತ್ರರೆಂತು ತಿಳಿಯುವರು ?

ಯೋಗಾರೂಢನಾಗಿ ಬ್ರಹ್ಮಲೋಕವನ್ನು ಸೇರಪೋಗುತ್ತಾ, ನ್ಯಸ್ತಾಯುಧನಾಗಿದ್ದ ಆಚಾರ್ಯನ ಶರೀರವನ್ನು ಹಿಡಿದು, ಧೃಷ್ಟದ್ಯುಮ್ನನು ರೋಷಭರದಿಂದ ಕಣ್ಣು ಕಾಣದೆ, ಖಡ್ಗದಿಂದ ಶಿರವನ್ನು ಖಂಡಿಸಿ, ಹರ್ಷವಿವಶನಾಗಿ ಸಿಂಹನಾದವನ್ನು ಮಾಡಿದನು. ಅರ್ಜುನನು ಬೇಡ ! ಬೇಡ ! ಎಂದು ವಾರಿಸಿದರೂ, ಇತರ ಪಾರ್ಥಿವರು ನಿವಾರಿಸಿದರೂ, ಬಿಡದೆ, ಧೃಷ್ಟದ್ಯುಮ್ನನು ದ್ರೋಣನ ಶಿರವನ್ನು ಕಡಿದು, ಕೌರವವೀರರ ಮುಂದುಗಡೆ ಬೀಳುವಂತೆ ಎಸೆದನು. ದ್ರೋಣ ಮೃತಿಯನ್ನು ಕಂಡು ಕುರುವೀರರಲ್ಲದೆ ಪಾಂಡವವೀರರೂ ನಿರುತ್ಸಾಹರಾದರು. ಭೀಮಸೇನನು ತನ್ನವರ ನೀರವತೆಯನ್ನು ಹೋಗಲಾಡಿಸಲು, ಸಿಂಹಗರ್ಜನವನ್ನು ಮಾಡಿ, ಧೃಷ್ಟದ್ಯುಮ್ನನನ್ನು ಕರೆದಪ್ಪಿದನು. 'ಪಾರ್ಷತ ! ದ್ರೋಣನನ್ನು ಸಂಹರಿಸಿ ಸಾರ್ಥಕಪ್ರತಿಜ್ಞನಾದೆ ! ನಮಗೆ ಜಯವು ನಿಶ್ಚಿತವಾಯಿತು. ಮುಂದೆ ಸೂತನಂದನನನ್ನು ಅರ್ಜುನನು ಸಂಹರಿಸುವನು. ನಾನು ದುರ್ಯೋಧನಾದಿಗಳನ್ನು ಕೊಲ್ಲುವೆನು. ಆಗ ನಮ್ಮ ವಿಜಯವು ಪೂರ್ಣವಾಗುವುದು' ಎಂದು ಭೀಮಸೇನನು ಬಾಹುಶಬ್ದವನ್ನು ಮಾಡಿದನು. ಆ ಶಬ್ದದಿಂದ ಭೂಮಿಯು ನಡುಗಿತು. ಕೌರವ ಯೋಧರು ಭೀತರಾಗಿ, ಕ್ಷಾತ್ರಧರ್ಮಕ್ಕೆ ತಿಲಾಂಜಲಿಯನ್ನಿತ್ತು, ಪಲಾಯನ ಪರಾಯಣರಾದರು.

ಪರಸೈನಿಕರ ಸಮಾರಂಭವನ್ನು ನೋಡಿ, ಎದೆಗುಂದಿ, ಕಣ್ಣೀರಿಡುತ್ತಾ,

ಕೌರವಭಟರು ಓಡಿಹೋದರು. ಹಸಿವೆ, ನೀರಡಿಕೆ, ಆಯಾಸ, ದೈನ್ಯ, ಪರಾಜಯಗಳಿಂದ ಖಿನ್ನರಾದ ಕೌರವರು ಹಿಂದೆ ಹಿರಣ್ಯಾಕ್ಷನನ್ನು ಕೊಂದ ವರಾಹವನ್ನು ನೋಡಿದ ದೈತ್ಯರಂತೆ ಓಡಿಹೋದರು. ಸೂರ್ಯನು ಉದುರಿಬಿದ್ದಂತೆ, ಸಮುದ್ರವೇ ಒಣಗಿ ನಿಂತಂತೆ. ಮೇರುವು ನೂರಾರು ಚೂರಾದಂತೆ, ಅವರಿಗೆ ಭಾರದ್ವಾಜನ ಮರಣ ನಂಬಲಾರದಾಗಿತ್ತು. ಅವರು ರಥ, ಗಜ, ತುರಗಾದಿಗಳನ್ನೇರಿ ದಿಕ್ಕಾಪಾಲಾಗಿ ಚೀರುತ್ತಾ ಹೋದರು. ಅವರ ಹಾಹಾಕಾರವು ದಶದಿಕ್ಕುಗಳಲ್ಲಿ ಪ್ರತಿಧ್ವನಿಸಿತು. ಕೃಪನು 'ಕಷ್ಟಂ ! ಕಷ್ಟಂ !' ಎಂದು ನಿಟ್ಟುಸಿರಿಟ್ಟು ಒಂದು ಕುದುರೆಯನ್ನೇರಿ ಓಡಿಹೋದನು. ಶಕುನಿ, ಶಲ್ಯ, ಕೃತವರ್ಮ, ದುಶ್ಶಾಸನ, ವೃಷಸೇನ, ದುರ್ಯೋಧನ, ಸುಶರ್ಮರು ದ್ರೋಣನ ಮರಣದಿಂದ ಉದ್ವಿಗ್ನರಾಗಿ ಓಡಿಹೋದರು. ಮುಖ್ಯವೀರರೇ ಓಡಿಹೋಗುತ್ತಿರಲು ಮಿಕ್ಕವರು ಪ್ರಾಕ್ರೋಶ ಪರಾಯಣರಾಗಿ, ಹತಸೂತರಥಗಳನ್ನು ಸೆಳೆದಾಡುತ್ತಿದ್ದ ಕುದುರೆಗಳನ್ನು ಬಿಚ್ಚಿ ಮೇಲೇರಿ ಕಾಲಿಂದ ತಿವಿದು ಓಡಿಸಿದರು.

ಶಿಖಂಡಿ ಪ್ರಮುಖ ವೀರರಿಂದ ಹೊಡೆದಾಡುತ್ತಿದ್ದ ಅಶ್ವತ್ಥಾಮನು ದೂರದಲ್ಲಿದ್ದುದರಿಂದ ಒಂದನ್ನೂ ಅರಿಯದೆ, ಓಡಿಹೋಗುತ್ತಿರುವ ವೀರರನ್ನು ನೋಡಿ ಆಶ್ಚರ್ಯಸಂಭ್ರಮಾನ್ವಿತನಾದನು. ದುರ್ಯೋಧನನನ್ನು ನಿಲ್ಲಿಸಿ, ಗುರುಸುತನು 'ರಾಜನ್ ! ಏನಿದು ? ಏಕಿಷ್ಟು ಹೆದರಿ ಓಡುತ್ತಿರುವೆ ? ಎಲ್ಲ ವೀರರೂ ಏಕೆ ಓಡಿಹೋಗುತ್ತಿರುವರು ?' ಎಂದು ಕೇಳಿದನು. ದುರ್ಯೋಧನನು ಅಶ್ವತ್ಥಾಮನನ್ನು ನೋಡಿ ಕಣ್ಣೀರಿಡುತ್ತಾ, ಮಾತು ಹೊರಡದೆ ನಿಂತನು. ಘೋರವಾದ ಪಿತೃಮರಣವಾರ್ತೆಯನ್ನು ಮಗನಿಗೆ ತಿಳಿಸಲು ಧೈರ್ಯವಿಲ್ಲದೆ, ಅವನು ಕೃಪನನ್ನು ಕರೆದು 'ಆಚಾರ್ಯ ! ಸೇನಾಪಲಾಯನಕಾರಣವನ್ನಿವನಿಗೆ ತಿಳಿಸು !' ಎಂದು ಬೇಡಿದನು. ಕೃಪನು ಅಶ್ವತ್ಥಾಮನನ್ನು ಕಂಡು, ದುಃಖದ ಕೆರೆಯ ಕಟ್ಟೆ ಒಡೆದಂತಾಗಿ, ಕಣ್ಣೀರಿಟ್ಟು, ಕರೆದಪ್ಪಿ, ನಡೆದ ವೃತ್ತಾಂತವನ್ನೆಲ್ಲ ತಿಳಿಸಿದನು. ಕೇಶವನ ಪ್ರೇರಣೆಯಿಂದ, ಭೀಮಸೇನನು ಗಜರಾಜನನ್ನು ಕೊಂದುದು, 'ಅಶ್ವತ್ಥಾಮಾ ಹತಃ' ಎಂದು ಸಾರಿದುದು, ಧರ್ಮರಾಜನನ್ನು ದ್ರೋಣನು ಪ್ರಶ್ನಿಸಲು ಆತನು ಅದನ್ನೇ ನುಡಿದು ಕುಂಜರಃ ಎಂದು ಮೆಲ್ಲನೆ ಉಸುರಿದುದು, ಆಚಾರ್ಯನ ಶಸ್ತ್ರತ್ಯಾಗ, ಪ್ರಾಯೋಪವೇಶ, ಧೃಷ್ಟದ್ಯುಮ್ನನಿಂದ ಗುರುಶಿರಃಖಂಡನ ಮೊದಲಾದ ವಿವರವನ್ನು ಕಣ್ಣೀರಿಡುತ್ತಾ ಕೇಳಿದ ಅಶ್ವತ್ಥಾಮನು, ಸ್ವಲ್ಪ ಕಾಲ ದಿಙ್ಮೂಢನಾಗಿದ್ದು ಮತ್ತೆ ಪ್ರಳಯಭೈರವನಾದನು. ದಂಡತಾಡಿತ ಭುಜಗದಂತೆ ಬುಸುಗುಟ್ಟುತ್ತಾ ಅಶ್ವತ್ಥಾಮನು ಕೈಕೈಹಿಸುಕಿ, ಹಲ್ಲುಕಡಿದು, ಕಣ್ಣು ಕೆಂಪಗೆ ಮಾಡಿ, ಖಡ್ಗವನ್ನು ಸ್ಪರ್ಶಿಸಿದನು. 'ದುರ್ಯೋಧನ ! ನಮ್ಮ ತಂದೆ ಕ್ಷುದ್ರರಿಂದ ಹತನಾದುದನ್ನು ಕೇಳಿದೆನು ! ಧರ್ಮರಾಜನೂ ಸುಳ್ಳಾಡಿ, ಆಚಾರ್ಯಹತ್ಯೆಗೆ ಕಾರಣನಾದನೇ ? ಯುದ್ಧದಲ್ಲಿ ಜಯ ಪರಾಜಯಗಳು ನಿಶ್ಚಿತವಲ್ಲ; ಅವು ದೈವಾಧೀನವಾಗಿವೆ. ಪರಾಜಯದಕ್ಕಿಂತಲು

ಯುದ್ಧವಧೆಯೇ ಲೇಸು ! ಅಂತು ನ್ಯಾಯದಿಂದ ಯುದ್ಧಹತನಾದವನಿಗಾಗಿ ಶೋಕಿಸಬಾರದು. ಆದರೆ ಅಕಟಾ ! ನನ್ನ ಪೂಜ್ಯ ತಂದೆಯನ್ನು ಪಶುವಿನನ್ನಂತೆ ಕೊಂದ ಕಟುಕರ ಕಾಪಟ್ಯವನ್ನು ಕಂಡು ದುಃಖಿಸುತ್ತಿರುವೆನು. ಆಚಾರ್ಯದ್ರೋಣನು ವೀರಸ್ವರ್ಗವನ್ನು ಸೇರಿರುವನಿದಕೆ ಸಂಶಯವಿಲ್ಲ. ಕೇಶಗ್ರಹಣವನ್ನು ಕೇಳಿ ನನಗೆ ಮರ್ಮಾಘಾತವಾಗಿದೆ. ನಾನಿನ್ನೂ ಬದುಕಿರುವಾಗ, ಒಬ್ಬ ನೀಚನು ತಾತಪಾದನ ಕೇಶರಾಶಿಯನ್ನು ಪಿಡಿದು ತಲೆ ಕಡಿದನೆಂದರೆ, ಇನ್ನಿದಕ್ಕು ಶೋಚನೀಯವಿದೆಯೇ ? ಇಂತಹ ನೀಚನಿನ್ನೂ ಜೀವಿಸಿರುವನೆಂದರೆ ಪುತ್ರವಂತರು ಪುತ್ರರಿಂದ ಬೇಡುವುದಾದರೂ ಏನು ? ನನ್ನನ್ನು ಲೆಕ್ಕಿಸದೆ ದುಷ್ಟ ಧೃಷ್ಟದ್ಯುಮ್ನನು ನಡೆಸಿದ ಸುದಾರುಣ ಕರ್ಮದ ಫಲವನ್ನವನಿಗೆ ಉಣಿಸದೆ ಬಿಡೆನು. ಅನೃತವಚನವನ್ನಾಡಿ ಆಚಾರ್ಯನ ಅಸ್ತ್ರನ್ಯಾಸವನ್ನು ಸಾಧಿಸಿದ ಧರ್ಮಜನ ರಕ್ತವನ್ನು ರಣಭೂಮಿಯು ಕುಡಿಯುವಂತೆ ಮಾಡುವೆನು. ಸರ್ವಪಾಂಚಾಲರನ್ನು ಸಂಹರಿಸಿಬಿಡುವೆನು. ಬೆಟ್ಟದಂತಹವನಾಗಿದ್ದೂ ತಂದೆಯನ್ನು ದಿಕ್ಕೆಟ್ಟವನಂತೆ ಕೆಟ್ಟ ಜನರ ಕೈಲಿ ಸಿಕ್ಕು ಸಾಯುವಂತೆ ಬಿಟ್ಟ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ ! ಧಿಕ್ಕಾರವಿರಲಿ ನನ್ನ ಅಸ್ತ್ರಬಾಹುಬಲಗಳಿಗೆ ! ಪರಲೋಕಗತನಾದ ಪಿತನ ಋಣವನ್ನು ಸರ್ವಪಾಂಚಾಲ ಹತಿಯಿಂದ ತೀರಿಸದಿದ್ದರೆ ನಾನು ಅಶ್ವತ್ಥಾಮನಲ್ಲ. ಯುಗಾಂತಕೃತಾಂತನಂತೆ ಪಾಂಡವ ಸೇನೆಯನ್ನು ಕಸಿಮಸಗಿ ಸವರುವ ಗುರುಸುತನ ವಿಕ್ರಮವನ್ನು ಪಾಂಡವರಿಂದ ಕೂಡಿ ಜನಾರ್ದನನು ನೋಡಲಿ ! ದ್ರುಮರಾಜಿಯನ್ನು ಉರುಳಿಸುವ ಮಹಾವಾತದಂತೆ ವಿಜೃಂಭಿಸಿ ಶರಜಾಲದಿಂದ ಪರಸೈನಿಕರ ಶರೀರಗಳನ್ನು ಕೆಡಹುವೆನು.

ಯಾರಿಗೂ ಗೊತ್ತಿಲ್ಲದ ಅಪೂರ್ವ ದಿವ್ಯಾಸ್ತ್ರವೆನ್ನಲ್ಲಿದೆ. ಹಿಂದೆ ನಮ್ಮ ತಂದೆ ವಿಪ್ರರೂಪನಾಗಿ ಬಂದಿದ್ದ ನಾರಾಯಣನನ್ನು ಪೂಜೋಪಹಾರಗಳಿಂದ ಪೂಜಿಸಿದನು. ಭಗವಂತನು ಪ್ರೀತನಾಗಿ, ದ್ರೋಣಾಚಾರ್ಯನ ಪ್ರಾರ್ಥನೆಯಂತೆ ಆತನಿಗೆ ನಾರಾಯಣಾಸ್ತ್ರವನ್ನಿತ್ತು ಇಂತೆಂದನು : 'ದ್ರೋಣ, ನಿನ್ನ ಸಮವೀರರಿಲ್ಲದಂತಾಗಲಿ ! ಆದರೆ ಈ ದಿವ್ಯಾಸ್ತ್ರವನ್ನು ಸಹಸಾ ಪ್ರಯೋಗಿಸಬೇಡ ! ಯಾರು ವಧ್ಯರು, ಯಾರು ಅವಧ್ಯರು ತಿಳಿಯುವುದು ಕಷ್ಟ ! ಅಮೋಘವಾದ ನಾರಾಯಣಾಸ್ತ್ರಕ್ಕೆ ಎದುರಿಲ್ಲ. ವಧ್ಯರನ್ನರಿತು ಪ್ರಯೋಗಿಸು ! ರಥವಿಸರ್ಜನ, ಯಾಚನ, ಶಸ್ತ್ರಸನ್ಯಾಸ, ಶರಣಾಗತಿ, ನಮಸ್ಕಾರಗಳಿಂದ ಅಸ್ತ್ರವು ಶಾಂತವಾಗುವುದು !' ಎಂದು ಎಚ್ಚರಿಸಿ, ಅಸ್ತ್ರವನ್ನಿತ್ತನು. ಅಂತಹ ಮಹಾಸ್ತ್ರವು ನನ್ನ ತಂದೆಯಿಂದ ನನಗೆ ಬಂದಿದೆ. ಅದರಿಂದ ಇಂದು ನಿನ್ನ ಶತ್ರುಗಳು ನಾಶವಾದರೆಂದು ತಿಳಿ ! ಪಾಂಡವರನ್ನು ಕಡೆಗಣಿಸಿ, ಗುರುದ್ರೋಹಿಯಾದ ಧೃಷ್ಟದ್ಯುಮ್ನನನ್ನು ಕೊಲ್ಲುವೆನು' ಎಂದು ಮುಂದೆ ನಡೆದ ಗುರುಪುತ್ರನ ಹಿಂದೆ ಕುರುವೀರರು ನಡೆದು ರಣರಂಗವನ್ನು ಪ್ರವೇಶಿಸಿದರು.

## ೧೭. ಪಂಚದಶಮ ದಿನ ಸಮರ, ಸಾತ್ಯಕಿ, ಪಾರ್ಷತ ವಿವಾದ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ರಾಜನ್ ! ಭೀತರಾಗಿ ಓಡಿಹೋದ ಕುರುಸೈನಿಕರು ಗರ್ಜಿಸುತ್ತಾ ಬರುವುದನ್ನು ಕಂಡು ಪಾಂಡುಪುತ್ರರು ಮಿತ್ರರೊಡಗೂಡಿ ತಾವೂ ರಣರಂಗವನ್ನು ಪ್ರವೇಶಿಸಿದರು. ದ್ರೋಣಪುತ್ರನು ಅಂದು ನಾರಾಯಣಾಸ್ತ್ರವನ್ನು ಪಾಂಡವಸೇನೆಯ ಮೇಲೆ ಪ್ರಯೋಗಿಸಲು ನಿಶ್ಚಯಿಸಿ ರಣವು ಪ್ರಾರಂಭವಾಯಿತು. ಆಗ ಬಿರುಗಾಳಿ ಬೀಸಿತು. ಭೂಮಿಯು ಕಂಪಿಸಿತು. ಸಾಗರವು ಉಕ್ಕೇರಿತು. ನದಿಗಳು ಪ್ರತಿಕೂಲವಾಗಿ ಹರಿದವು. ಗಿರಿಶಿಖರಗಳು ಒಡೆದು ಬಿದ್ದವು. ದೇವದಾನವ ಗಂಧರ್ವರು ತ್ರಸ್ತರಾದರು. ಲೋಕವೆಲ್ಲವು ವ್ಯಾಕುಲವಾಯಿತು.

ಧರ್ಮರಾಜನು ಅರ್ಜುನನನ್ನು ನೋಡಿ, 'ಅರ್ಜುನ ! ಆಚಾರ್ಯನು ಧೃಷ್ಟದ್ಯುಮ್ನನಿಂದ ಹತನಾಗಲು, ಓಡಿಹೋದ ಕುರುವೀರರು ಮತ್ತೆ ಗರ್ಜಿಸುತ್ತಾ ಬಲು ಉತ್ಸಾಹದಿಂದ ಬರುತ್ತಿರುವರು. ಈ ಶಬ್ದವು ವಜ್ರಧರನ ಭೈರವಸ್ವನದಂತೆ ಹೃದಯ ವಿದ್ರಾವಕವಾಗಿದೆ ! ಇದಾರಗರ್ಜೆ ? ' ಎಂದು ಕೇಳಿದನು. ಅರ್ಜುನನು 'ಧರ್ಮರಾಜ ! ಧಾರ್ತರಾಷ್ಟ್ರರನ್ನು ಹಿಂದಿರುಗಿಸಿಕೊಂಡು ಬರುವ ವೀರನಾರೆಂದು ಸಂಶಯಪಡುತ್ತಿರುವೆ; ಕೇಳು ! ಯಾವ ಮಹಾತ್ಮನು ಹುಟ್ಟಿದಾಗ ದ್ರೋಣಾಚಾರ್ಯನು ಸಾವಿರ ಆಕಳುಗಳನ್ನು ದಾನವಿತ್ತನೋ, ಹುಟ್ಟಿದ ತತ್‌ಕ್ಷಣವೇ ಉಚ್ಚೈಃಶ್ರವದಂತೆ ಯಾವ ಆಶ್ಚರ್ಯಚರ್ಯನು (ಕೆನೆದಂತೆ) ಸ್ವರಗೈದನೋ, ಯಾವ ವೀರವರನು ಗುರುದ್ರೋಹಿಯಾದ ಧೃಷ್ಟದ್ಯುಮ್ನನನ್ನು ಕೊಲ್ಲಬೇಕೆಂದು ಸೇಡಿನಿಂದ ಉರಿಯುತ್ತಿರುವನೋ, ಅಂತಹ ಅಶ್ವತ್ಥಾಮನು ಬರುತ್ತಿರುವನು. ನೀನು ಅನೃತವಾದಿಯಲ್ಲವೆಂದು ನಂಬಿದ್ದ ಗುರುವಿಗೆ ಆದ ಮಿಥ್ಯಾವಚನ ದ್ರೋಹದ ಫಲವನ್ನು ನಮಗೆ ಉಣಿಸಲು ಗುರುಸುತನೇ ಬರುತ್ತಿರುವನು. ತಂದೆಯ ಕೇಶಗ್ರಹಣವನ್ನು ಕೇಳಿ ನಂದನನು ಕುಪಿತನಾಗದಿರುವನೇ ? ಧರ್ಮವನ್ನು ಗಾಳಿಗೆ ತೂರಿ ಶಿಷ್ಯನು ಗುರುವಿನ ಕುತ್ತುಗೆಯನ್ನು ಕೊಯ್ದು ಅನಾರ್ಯ ಕಾರ್ಯದ ಫಲವನ್ನಿಂದು ಎಲ್ಲರೂ ಅನುಭವಿಸಬೇಕಾಗಿದೆ. ಶಸ್ತ್ರಸನ್ಯಾಸವನ್ನು ಮಾಡಿಸಿದುದು ಮೊದಲ ತಪ್ಪು, ನಿಶ್ಶಸ್ತ್ರನನ್ನು ಕುರಿಯಂತೆ ಕೊಂದುದೆರಡನೆಯ ತಪ್ಪು, ನಿನ್ನನ್ನು ನನ್ನನ್ನು ಉಪಲಕ್ಷಿಸಿ, ನಮಗೆ ಜಯವಾಗಲೆಂದು ಬೇಡಿ, ನಿರಸ್ತ್ರನಾದ ಆಚಾರ್ಯನನ್ನು ನೀಚರಾಗಿ ಕೊಂದೆವು. ಆಚಾರ್ಯನು, ಗುರುವು, ವಿಪ್ರವರನು, ಮಹಾದ್ಯುತಿಯು ಆದ ದ್ರೋಣನ ಹತ್ಯಮಾಡಿ ಬದುಕಿರುವುದಕ್ಕಿಂತ, ನನಗೆ ಮರಣವೇ ಶ್ರೇಯಸ್ಕರವೆನಿಸಿದೆ' ಎಂದನು.

ಆ ಮಾತನ್ನಾಲಿಸಿ ಮಾತಾಡದೆ, ತಲೆತಗ್ಗಿಸಿ ಕೂತಿರುವ ತನ್ನವರನ್ನು ನೋಡಿ ಭೀಮಸೇನನು ಕ್ರುದ್ಧನಾಗಿ, ಅರ್ಜುನನಿಗೆ ಧರ್ಮಸ್ವರೂಪವನ್ನು ತಿಳಿಸುತ್ತಿಂತೆಂದನು:

'ಪಾರ್ಥ ! ಅರಣ್ಯವಾಸಿಯಾದ ಋಷಿಯಂತೆ ಧರ್ಮಸಂಹಿತೆಯನ್ನು ಒಪ್ಪಿಸುತ್ತಿರುವೆ! ಕ್ಷತ್ರಿಯನೆಂದರೆ ಕ್ಷತದಿಂದ ನೋಯದಂತೆ ರಕ್ಷಕನು ; ಕ್ಷತವನ್ನು ಅಂದರೆ ಶತ್ರುವಧೆಯನ್ನು ಸಹಿಸುವನು; ಸ್ತ್ರೀಸಾಧು ಜನರನ್ನು ಕ್ಷಮಿಸುವನು; ಕ್ಷಿತಿಯನ್ನು ದುಷ್ಟರಿಂದ ಕಾಪಾಡುವನು ; ಕ್ಷತ್ರಿಯ ಕುಲದಿ ಹುಟ್ಟಿ ಕ್ಷತ್ರಿಯ ಗುಣಗಳಿಂದ ಶೋಭಿಸಿ, ಅಜ್ಞಾನಿಯಂತೆ ಆಪಾತ ಮಧುರ ಧರ್ಮವಚನವನ್ನಾಡುವುದು ನಿನಗೆ ಶೋಭಿಸದು. ಪರಾಕ್ರಮದಲ್ಲಿ ಶಚೀಪತಿಯಂತೆ ಮೆರೆವೆ ! ಹದಿಮೂರು ವರ್ಷಗಳ ಕಾಲ ಅತ್ಯಂತ ಧರ್ಮದಿಂದ ರೋಷವನ್ನು ಮರೆತು ಶಾಂತನಾಗಿದ್ದ ನಿನ್ನನ್ನು ಯಾರು ತಿಳಿಯರು ? ಧರ್ಮಪ್ರವೃತ್ತರೆಂದೇ ನಮ್ಮ ರಾಜ್ಯವು ಶತ್ರುಹಸ್ತಗತವಾಯಿತು. ಧರ್ಮದಿಂದ ಕೈಕಟ್ಟಿ ಕೂತಿದ್ದ ನಮ್ಮ ಕಾಂತೆಯನ್ನು ಸಭೆಯಲ್ಲಿ ತಂದು ಸೀರೆ ಸೆಳೆದರು. ಧರ್ಮದಿಂದ ಬದ್ಧರಾಗಿ ಜೂಜಿನಲ್ಲಿ ಸೋಲನ್ನೊಪ್ಪಿ ಕಾಡು ಸೇರಿದೆವು. ದುರ್ಜನರಲ್ಲಿ ಕೂಡ ರೋಷವನ್ನು ಪರಿತ್ಯಜಿಸಿ, ಧರ್ಮವನ್ನು ಮಾತ್ರ ವೀಕ್ಷಿಸುವುದು ಕ್ಷತ್ರಿಯನಿಗುಚಿತವಲ್ಲ. ಸಮರ್ಥಶಾಸಕನು ಶಿಕ್ಷಿಸದೆ ಉಪೇಕ್ಷಿಸಿದರೆ, ದುರ್ಜನರು ವಿಜೃಂಭಿಸಿ ಸುಜನರನ್ನು ಪೀಡಿಸುವರು. ಅದರಿಂದ ಲೋಕವು ಹಾಳಾಗುವುದು. ನಾರಾಯಣದ್ವಿಟ್‌ತದನುಬಂಧಿ ನಿಗ್ರಹವು ಕ್ಷತ್ರಿಯನಿಗೆ ಧರ್ಮವಾಗಿರಲು, ನಾರಾಯಣ ದ್ವಿಡಗ್ರಣಿಯಾದ ದುರ್ಯೋಧನನನ್ನು ಕೊಲ್ಲಬಾರದೇ ? ಅವನಿಗೆ ಸಹಾಯರಾಗಿ ಅಧರ್ಮಾನುಬಂಧಿಗಳಾದ ದ್ರೋಣಾದಿಗಳನ್ನು ಕೊಲ್ಲದೆ ವಿಧಿಯಿಲ್ಲ. ನ್ಯಸ್ತಶಸ್ತ್ರನಾಗದ ದ್ರೋಣನನ್ನು ಸಂಹರಿಸಲು ಶಕ್ಯವಲ್ಲ. ನಮಗೆ ನಡೆದ ಅಧರ್ಮವನ್ನು ಶಿಕ್ಷಿಸದೆ ನಾನು ಬಿಡುವವನಲ್ಲ. ಶುದ್ಧ ಕ್ಷತ್ರಧರ್ಮರತನಾದ ನನ್ನನ್ನು ಅಶ್ವತ್ಥಾಮಾ ಹತಃ ಎಂದು ಹೇಳಿದ ಧರ್ಮಜನನ್ನು, ಹಾಗೆ ಪ್ರೇರಿಸಿದ ವಾಸುದೇವನನ್ನು ಅಗ್ನಿಕುಂಡದಿಂದ ದ್ರೋಣ ಹಂತನಾಗಲು ಹುಟ್ಟಿಬಂದ ದೃಷ್ಟದ್ಯುಮ್ನನನ್ನು ನಿಂದಿಸಿ ಗಾಯವಾದ ಗುಂಡಿಗೆಗೆ ಉಪ್ಪೆರೆಚುತ್ತಿರುವೆ ! ನೀನಾಗಿ ಯುದ್ಧ ಸನ್ನದ್ಧನಾದೆ ! ಬೇಕಾದ ಅಸ್ತ್ರಗಳನ್ನು ದೇವಲೋಕದಿಂದ ತಂದೆ ! ನಿನ್ನಂತೆ ರಣನಿರತನಾಗಿ ನಿಕೃತಿಯನ್ನು ನಿಕೃತಿಯಿಂದ ಸಂಹರಿಸಿದ ನಮ್ಮನ್ನು ನಿಂದಿಸುವೆ ! ಪ್ರಶಂಸಾಪಾತ್ರನಾದ ಪಾರ್ಷತನು ನಿನಗೆ ನಿಂದಾಪಾತ್ರನಾದನೆ ? ಶ್ರೀವಾಸುದೇವನೆದುರಿಗೆ ದ್ರೋಣಪುತ್ರನನ್ನು ಪ್ರಶಂಸಿಸುವ ನಿನ್ನನ್ನು, ಇಲ್ಲದ ಆತ್ಮಪಕ್ಷೀಯರ ದೋಷಗಳನ್ನೆತ್ತಿ ನುಡಿವ ನಿನ್ನನ್ನು ನೋಡಿ, ನನಗೆ ಲಜ್ಜೆಯಾಗುತ್ತಿದೆ.

ಭೀಮಸೇನನೆಂದರೆ ಏನೆಂದು ತಿಳಿದೆ ! ಶ್ರೀಶನಿಗೆ ಗೊತ್ತು ನನ್ನ ಬಲವಿಕ್ರಮಗಳು ! ಗದೆಯಿಂದ ಗಿರಿಗಳನ್ನು ಪುಡಿಮಾಡಬಲ್ಲೆನು. ಮರಗಳನ್ನುರುಳಿಸಬಲ್ಲೆನು. ಭೂತಲವನ್ನು ಸೀಳಬಲ್ಲೆನು. ದೇವಾಸುರೋರಗರು ನಿಂತರೂ ಸೋಲಿಸಬಲ್ಲೆನು. ಇಂತಹ ಅಣ್ಣನಿದ್ದೂ ಅಶ್ವತ್ಥಾಮನಿಗೇಕೆ ಹೆದರುವೆ ? ಗುರುಭಕ್ತನಾದ ನಿನ್ನಂತೆ ನಾವೂ ಗುರುಭಕ್ತರೇ ! ಆದರೆ ರಣರಂಗದಲ್ಲಲ್ಲ. ಗುರುಗೃಹದಲ್ಲಿ. ನಿಲ್ಲು ರಣರಂಗವನ್ನು ಬಿಟ್ಟು ! ಗದಾಸಹಾಯನಾಗಿ ರಣವಿಜಯವನ್ನು ತರುವೆನು.

ಪಾರ್ಷತನು ವಿಷಾದ ರೋಷಪೂರಿತನಾಗಿ ಇಂತೆಂದನು: 'ಭೀಭತ್ಸೋ ! ಯಜನ, ಯಾಜನ, ಅಧ್ಯಯನ, ದಾನ, ಪ್ರತಿಗ್ರಹಗಳೆಂಬ ವಿಪ್ರಧರ್ಮವನ್ನು ಪರಿತ್ಯಜಿಸಿ, ಕ್ಷತ್ರಧರ್ಮರತನಾದ ದ್ರೋಣನನ್ನು ಕ್ಷತ್ರಿಯನಾದ ನಾನು ಸಂಹರಿಸಲು ಅದು ನಿನಗೆ ಗುರುದ್ರೋಹವೆನಿಸಿತೇ ? ದ್ರೋಣವಧೆಗಾಗಿಯೇ ಜನಿಸಿದ ನನ್ನಿಂದ ದ್ರೋಣವಧೆಯಾಗದಿದ್ದರೆ ನಾನು ನಮ್ಮ ತಂದೆ ವರವಿತ್ತ ಮಹದೇವ ಮೂವರೂ ಮಿಥ್ಯಾಪ್ರತಿಜ್ಞರಾಗುತ್ತಿದ್ದೆವಲ್ಲವೇ ? ಎಲ್ಲರೂ ತಮ್ಮ ತಮ್ಮ ಪ್ರತಿಜ್ಞೆಯನ್ನು ನಿರ್ವಹಿಸಲು, ಸರ್ವೋಪಾಯಗಳನ್ನು ಪ್ರಯೋಗಿಸುವರು. ಕಾರ್ಯಾಕಾರ್ಯಗಳನ್ನು ಕೈಬಿಟ್ಟು ಅನಸ್ತ್ರಜ್ಞರಾದ ಸೈನಿಕರನ್ನು ಪಾಪ ! ಕ್ರೋಧಾವಿಷ್ಟನಾಗಿ, ಬ್ರಹ್ಮಾಸ್ತ್ರದಿಂದ ಕೊಂದ ಬ್ರಾಹ್ಮಣಬ್ರುವಿಗೆ ವಧೆಯೇ ತಕ್ಕ ಶಾಸನ ! ಧರ್ಮಸೂಕ್ಷ್ಮವನ್ನು ವಿಚಾರಿಸದೆ, ಅನಿಂದ್ಯನಾದ ನನ್ನನ್ನು ನಿಂದಿಸಬೇಡ ! ಕಾಲಾನಲದಂತೆ ಉರಿವ, ಕಾಲಕೂಟದಂತೆ ಕೊಲ್ಲುವ ದ್ರೋಣನನ್ನು ಸಂಹರಿಸಿ, ನಿಮ್ಮ ವಿಜಯಕ್ಕಾಗಿ ಹೆಣಗುವ ವೀರನಿಗೆ ಸರಿಯಾದ ಉಡುಗೊರೆಯನ್ನಿತ್ತೆ ! ದ್ರುಪದವಿರಾಟರನ್ನು ಮತ್ತು ಸತ್ಯಜಿದಾದಿ ಬಂಧು ಜನರನ್ನೂ ಕೊಂದು ಕೆಡಹಿದ ದ್ರೋಣನಿಗೆ ಶಿಷ್ಯಪ್ರೀತಿ ಇರಲಿಲ್ಲ. ನಮಗೂ ಗುರುಪ್ರೀತಿ ಅಳಿಸಿಹೋಯಿತು. ಶತ್ರುವನ್ನು ಕೊಲ್ಲುವುದೋ, ಶತ್ರುನಿಂದ ಸಾಯುವುದೋ ಇವೆರಡೇ ಕ್ಷತ್ರಧರ್ಮಗಳಲ್ಲಿ ಪ್ರಥಮ ದ್ವಿತೀಯಗಳು. ಗುರುಪುತ್ರನ ಹೆದರಿಕೆ ನನಗಿಲ್ಲ. ಶೂರನಾದ ಭಗದತ್ತನನ್ನು ಭೂರಿಶ್ರವನನ್ನು ಕೊಂದಂತೆ ನಾನೂ ದ್ರೋಣನನ್ನು ಕೊಂದೆನು. ಪಿತಾಮಹನನ್ನು ಕೆಡಹಿದ ನಿನ್ನನ್ನು ನಾವು ನಿಂದಿಸಲಿಲ್ಲ. ಅದು ಯುದ್ಧಧರ್ಮದ ಮರ್ಮ, ನಮ್ಮನ್ನು ಮಾತ್ರ ನಿಂದಿಸುವಾಗ ನಿನಗೆ ಆತಂಕವಿಲ್ಲ. ದ್ರೌಪದೀದ್ರೌಪದೇಯರಿಗಾಗಿ ನಿನ್ನ ವಚನ ವ್ಯತಿಕ್ರಮಾಪರಾಧವನ್ನು ನುಂಗಿ ಸುಮ್ಮನಿರಬೇಕಾಗಿದೆ ಕೇಳು ! ಧರ್ಮಜನು ಮಿಥ್ಯಾವಾದಿಯೂ ಅಲ್ಲ; ನಾನು ಅಧಾರ್ಮಿಕನೂ ಅಲ್ಲ !'

ಆ ಮಾತನ್ನಾಲಿಸಿ ಎಲ್ಲರೂ ಸುಮ್ಮನಿದ್ದರು. ಅರ್ಜುನನು ಬಾಷ್ಪರುದ್ಧ ಕಂಠನಾಗಿ 'ಧಿಕ್ ಧಿಕ್' ಎಂದುಚ್ಚರಿಸಿದನು. ಧರ್ಮ ಭೀಮ ನಕುಲ ಸಹದೇವರೂ ತಲೆತಗ್ಗಿಸಿ ಕೂತಿದ್ದರು. ಆಗ ಸಾತ್ಯಕಿಯು ಪಾರ್ಷತನನ್ನು ನೋಡಿ, ಅವನ ಅತಿವಚನವನ್ನು ಸಹಿಸದೆ, ಇಂತೆಂದನು : 'ಇಂತಹ ಪಾಪಿ ಮಾತನ್ನಾಡುವ ಈ ದುರಾತ್ಮನನ್ನು ಸಂಹರಿಸುವರಿಲ್ಲದಂತಾಯಿತಲ್ಲ ! ಧೃಷ್ಟದ್ಯುಮ್ನ ! ನಿಂದ್ಯಕರ್ಮವನ್ನು ಮಾಡಿ, ಸಭೆಯಲ್ಲಿ ಧರ್ಮವೆಂದು ಸಾಧಿಸಲು ನಿನಗೆ ನಾಚಿಕೆಯಾಗುವುದಿಲ್ಲವೇ ? ನಿನ್ನ ನಾಲಿಗೆ ಸಾವಿರ ಹೋಳಾಗಿ ಹೋಗದಿದೆ ಎಂದರೆ ಗುರುದೇವ ದ್ರೋಹಿಗಳಿಗೆ ಶಿಕ್ಷೆಯೇ ಇಲ್ಲವೆಂಬಂತಾಗಿದೆ. ಕೇಶಪಾಶವನ್ನು ಪಿಡಿದು ಬ್ರಾಹ್ಮಣ ವಧೆಯನ್ನು ಮಾಡಿದ ನೀನು ಸದ್ಯೋವಧ್ಯನಾಗಿರುವೆ ! ಆತ್ಮಗುರುವಿನನ್ನು ಅನ್ಯಾಯದಿಂದ ಅತಿನಿಕೃಷ್ಟನಾಗಿ ಕೊಂದ ಶಿಷ್ಯನು ನೀನೊಬ್ಬನೇ ಸರಿ ! ಕುಲಪಾಂಸನನಾದ ನಿನ್ನಿಂದ ನಿನ್ನೇಳು ಪಿತೃಗಳು ನರಕದ ಪಾಲಾದರು. ಭೀಷ್ಮನನ್ನು ಕೊಂದವನು ಅರ್ಜುನನಲ್ಲ ನಿನ್ನ ಅಣ್ಣನು. ಪಾಂಚಾಲ

ರಾಜರಷ್ಟು ಪಾಪಿಗಳಿನ್ನಿಲ್ಲ. ಗುರು ಹಿರಿಯರನ್ನು ಕೊಲ್ಲುವ ಮಕ್ಕಳನ್ನು ತಪಮಾಡಿ ಪಡೆದ ಪಾಪಿಯ ಮಗನಾದ ನೀನು ಪಾಪತರನಾಗಿರುವೆ ! ಮತ್ತೊಂದು ಸಲ, ಇಂತಹ ಮಾತನ್ನಾಡಿದರೆ ಈ ಗದೆಯಿಂದ ನಿನ್ನ ತಲೆ ಒಡೆಯುವೆನು ತಿಳಿ ! ಬ್ರಹ್ಮಹಂತಕನಾದ ನಿನ್ನ ಮುಖವನ್ನು ನೋಡಿ, ಸೂರ್ಯನನ್ನು ನೋಡಬೇಕು ! ನನ್ನೆದುರಿಗೆ ನನ್ನ ಗುರುವನ್ನು (ಅರ್ಜುನನನ್ನು) ಮತ್ತು ಗುರುವಿನ ಗುರುವನ್ನು (ದ್ರೋಣನನ್ನು) ನಿಂದಿಸಿದ ನಿನ್ನನ್ನು ಇಂದೇ ಯಮಸದನಕ್ಕಟ್ಟಿ ಬಿಡುವೆನು."

ಸಾತ್ಯಕಿಯ ಮಾತಿನಿಂದ ಕ್ರುದ್ಧನಾಗಿ ಧೃಷ್ಟದ್ಯುಮ್ನನು, 'ಯಾದವಾಧಮ ! ಅನಾರ್ಯರು ಸಾಧುಪುರುಷರನ್ನು ಬೈಯುವುದು ಸಹಜವಾಗಿದೆ. ಅಡಿಯಿಂದ ಮುಡಿಯವರೆಗೆ ಅಧರ್ಮ ವಿಷದಿಂದ ತುಂಬಿದ ನಿನ್ನಂತಹ ಪಾಪಿಗೆ ಇತರರ ಅಧರ್ಮ ಲೇಶವೂ ಬೆಟ್ಟವಾಗಿ ತೋರುವುದು. ಛಿನ್ನಭುಜನಾದ ಭೂರಿಶ್ರವನನ್ನು ಪ್ರಾಯಗತನಾಗಿರುವಾಗ ಕೊಂದುದು ಪಾಪವಲ್ಲ! ನಾನು ದ್ರೋಣನನ್ನು ರಣದಲ್ಲಿ ರಥಗತನಾಗಿರುವಾಗ ಕೊಂದುದು ಪಾಪವಾಯಿತು ! ಸುಮ್ಮನಿರು ! ನಾನೂ ನಿನ್ನನ್ನು ಕೊಲ್ಲಬಲ್ಲೆನು. ಶತ್ರುಗಳನ್ನು ವಹಿಸಿ ಮಾತಾಡುವ ಮನುಜಾಧಮನ ಮಾತೇನು ? ಕೇಳು ! ಧರ್ಮಜನು ದ್ಯೂತದಲ್ಲಿ ವಂಚಿತನಾದನು. ಪಾಂಚಾಲಿಯು ಪರಿಷತ್ತಿನಲ್ಲಿ ಪರಾಭೂತಳಾದಳು. ಪಾಂಡವರು ಅನ್ಯಾಯ ದ್ಯೂತದಲ್ಲಿ ವನಕ್ಕಟ್ಟಲ್ಪಟ್ಟರು. ಶಲ್ಯರಾಜನನ್ನು ಮೋಸದಿಂದ ಅಪಹರಿಸಿದರು. ಅಭಿಮನ್ಯುವಿನನ್ನು ಅನ್ಯಾಯವಾಗಿ ದ್ರೋಣಾದಿಗಳು ಕೊಂದರು. ಭೀಷ್ಮ ಭೂರಿಶ್ರವದ್ರೋಣರೂ ಅಧರ್ಮದಿಂದ ನಿಹತರಾದರು. ಉಭಯವನ್ನೂ ಅಧರ್ಮವೆಂಬುವ ನಿನ್ನಂತಹವನಿಗೆ ಧರ್ಮಸೂಕ್ಷ್ಮವು ತಿಳಿಯದಾಗಿದೆ" ಎಂದನು.

ಕ್ರೋಧತಾಮ್ರಾಕ್ಷನಾದ ಸಾತ್ಯಕಿಯು ಆ ಮಾತಿಗೆ ಸಹಿಸದೆ, ಗದೆಯನ್ನೆತ್ತಿ ಪಾರ್ಷತನನ್ನು ಹೊಡೆಯಲು ಬಂದನು. ಧೃಷ್ಟದ್ಯುಮ್ನನೂ ಸಿಟ್ಟಾಗಿ ಗದೆಯನ್ನು ಹಿಡಿದನು. ಆಗ ವಾಸುದೇವನ ಪ್ರೇರಣೆಯಂತೆ ಭೀಮಸೇನನು ರಥದಿಂದ ಕೆಳಗಿಳಿದು, ಅವರಿಬ್ಬರನ್ನು ತಡೆದು ನಿಲ್ಲಿಸಿದನು. ಸಹದೇವನು ಸಾತ್ಯಕಿಯನ್ನು ನೋಡಿ 'ಯದುಪುಂಗವ ! ನಮಗೆ ನಿನ್ನಂತಹ ಮಿತ್ರನಿನ್ನೊಬ್ಬನಿಲ್ಲ. ಪಾಂಚಾಲ್ಯರೂ ನಮಗೆ ಬಂಧುಗಳು. ಮಿತ್ರಧರ್ಮವನ್ನು ನೆನೆದು ಸಿಟ್ಟನ್ನು ಬಿಡು ! ಪಾರ್ಷತನನ್ನು ಕ್ಷಮಿಸು ! ಪಾರ್ಷತನೂ ನಿನ್ನ ಕಟುವಚನಗಳನ್ನು ಕ್ಷಮಿಸಲಿ ! ಅಂತಃಕಲಹವನ್ನು ನೋಡಿ ಶತ್ರುಜನರು ಆನಂದಪಡುವಂತೆ ನಡೆಯಬೇಡಿ !' ಎಂದು ಸಮಾಧಾನಪಡಿಸಿದನು. ಧೃಷ್ಟದ್ಯುಮ್ನನು 'ಭೀಮಸೇನ ! ಬಿಡು ಆ ನೀಚನನ್ನು! ಅವನ ಯುದ್ಧ ಶ್ರದ್ಧೆಯನ್ನು ನೀಗಿಸುವೆನು. ನಾನು ಭೂರಿಶ್ರವನಲ್ಲ ಧೃಷ್ಟದ್ಯುಮ್ನನು ಎಂದವನಿಗೆ ತೋರುವೆನು' ಎಂದನು. ಆಮಾತನ್ನಾಲಿಸಿ ಮತ್ತೆ ಸಿಟ್ಟಾಗಿ ಮೇಲೆರಗುವ ಸಾತ್ಯಕಿಯನ್ನು ಭೀಮ ಧರ್ಮಜ ವಾಸುದೇವರು ಹಿಡಿದು, ಇಬ್ಬರನ್ನು ಸಮಾಧಾನಪಡಿಸಿದರು. ಆಗ ಮತ್ತೆ ಯುದ್ಧಸಿದ್ಧರಾಗಿ ಪಾಂಡವವೀರರು ಶತ್ರುಗಳನ್ನೆದುರಿಸಿದರು.

## ೧೮. ಪಂಚದಶಮ ದಿನ ಯುದ್ಧ ನಾರಾಯಣಾಸ್ತ್ರ ಮೋಚನ

ಸಂಜಯನು ನಿರೂಪಿಸಿದನು:

ಅಶ್ವತ್ಥಾಮನು ಕುರುಸೇನಾಗ್ರದಿ ನಿಂತು ಶರಜಾಲದಿಂದ ಪಾಂಡವ ವಾಹಿನಿಯನ್ನು ಸಂಹರಿಸುತ್ತಾ, ರಣರಂಗವೆಲ್ಲವನ್ನೂ ವೀರದೇಹಾಕ್ರಾಂತವನ್ನಾಗಿಸಿದನು. ಪಾಂಚಾಲ್ಯಾದಿ ಸರ್ವ ಪಾಂಡವವೀರರನ್ನೂ ಸಂಹರಿಸಲು ಪಣತೊಟ್ಟು ಗುರುಪುತ್ರನು ವಿಜೃಂಭಿಸಿದನು. ದ್ರೋಣವಧೆಯಿಂದ ಕೌರವರು ರುಷಿತರಾಗಲು, ಪಾಂಡವರು ತುಷಿತರಾಗಿದ್ದರು. ಮಹಾಸೇನೆಗಳೆರಡೂ ಕಲಿತಾಗ ಗಿರಿಗಳು ಢೀ ಕೊಟ್ಟಂತೆ, ಸಾಗರಗಳು ಉಕ್ಕೇರಿ ಬಂದಂತೆ ತೋರಿತು. ಶಂಖಸಹಸ್ರಗಳೊಂದಿಗೆ ಭೇರಿಶತಗಳು ಮೊಳಗಿದವು. ಆಗ ಗುರುಸುತನು ನಾರಾಯಣಾಸ್ತ್ರವನ್ನು ಪ್ರಯೋಗಿಸಿದನು. ಪಾಂಡುಪಾಂಚಾಲವಾಹಿನೀ ನಾಶವನ್ನು ಅನುಸಂಧಿಸಿ ಬಿಟ್ಟ ದಿವ್ಯಾಸ್ತ್ರಪ್ರಭಾವದಿಂದ ದಿಕ್ಕುಗಳೆಲ್ಲವು ದಿವ್ಯಬಾಣ ಸಹಸ್ರದಿಂದ ತುಂಬಿ, ಉರಿಯತೊಡಗಿದವು. ಸೂರ್ಯಕಿರಣಗಳಂತೆ ನಾರಾಚಗಳು ವ್ಯಾಪಿಸಿ ಎದುರಿಸಿದವರನ್ನು, ವಾಹನಸ್ಥರನ್ನು, ಆಯುಧಪಾಣಿಗಳನ್ನು ಬಿಡದೆ ಸಂಹರಿಸಿದವು. ಚತುಶ್ಚಕ್ರಗಳು; ದ್ವಿಚಕ್ರಗಳು ಗಿರಗಿರ ತಿರುಗುತ್ತಾ ಬಂದಂತೆಲ್ಲ ಸೈನಿಕರ ತಲೆಗಳು ಉರುಳಿದವು. ವೀರರು ಸೆಣಸಿದಂತೆಲ್ಲ ಅಸ್ತ್ರವು ವಿವೃದ್ಧತೇಜವಾಗಿ, ಪಾಂಡವಪಾಂಚಲ ಸೈನಿಕರನ್ನೂ, ವೀರರನ್ನೂ ಸುಡುತ್ತಾ ಬಂತು. ಶಿಶಿರಾಪಾಯದಲ್ಲಿ ದಾವಾಗ್ನಿಯು ಕಕ್ಷನನ್ನಂತೆ, ನಾರಾಯಣಾಸ್ತ್ರದಿಂದ ಸೈನ್ಯವೆಲ್ಲ ನಿರ್ದಗ್ಧವಾಗುತ್ತಿರಲು ವ್ಯಥೆಗೊಂಡ ಧರ್ಮರಾಜನು 'ಧೃಷ್ಟದ್ಯುಮ್ನ ! ಸಾತ್ಯಕೀ ! ಓಡಿಹೋಗಿ ಉಳಿಯಿರಿ. ಇತರ ಶ್ರೇಯವನ್ನು ಸಾಧಿಸಬಲ್ಲ ವಾಸುದೇವನಿಗೆ ಈ ನಾರಾಯಣಾಸ್ತ್ರದಿಂದ ಭಯವಿಲ್ಲ. ಯುದ್ಧವನ್ನು ಬಿಡಿರಿ! ನಾನು ಸೋದರರೊಡನೆ ಅಸ್ತ್ರವಹ್ನಿಗೆ ಆಹುತಿಯಾಗುವೆನು. ಭೀಷ್ಮ ದ್ರೋಣ ಸಮುದ್ರಗಳನ್ನು ದಾಟಬಂದ ನಾವೀಗ ಅಶ್ವತ್ಥಾಮನ ಗೋಷ್ಪದದಲ್ಲಿ ಮುಳುಗಬೇಕಾಗಿದೆ! ಆಗಲಿ! ಭೀಬತ್ಸುವಿನ ಕಾಮಿತವೀಡೇರಲಿ ! ಆಚಾರ್ಯನನ್ನು ಮಿಥ್ಯಾವಚನದಿಂದ ಕೊಂದ ನನಗೆ ತಕ್ಕ ಶಿಕ್ಷೆಯಾಗಲಿ ! ಯಾವ ಆಚಾರ್ಯನು ಅಭಿಮನ್ಯು ವಧೋಪಾಯವನ್ನು ಸೂಚಿಸಿ, ಧನುಸ್ಸನ್ನು ಖಡ್ಗವನ್ನು ಖಂಡಿಸಿ ಬಾಲಕನನ್ನು ಕೊಲ್ಲಿಸಿದನೋ, ಯಾವ ಗುರುವರನು ಶ್ರಾಂತನಾಗಿ ಸಾಯಲಿದ್ದ ದುರ್ಯೋಧನ ಹತಕನಿಗೆ ಕವಚಧಾರವಿತ್ತು ಕರುಣಿಸಿದನೋ, ಯಾವ ವಿಪ್ರಶ್ರೇಷ್ಠನು ರಾಜ್ಯವನ್ನು ಮೋಸಗಾರರಿಗೊಪ್ಪಿಸಿ ವನಕ್ಕೆ ಹೊರಟ ನಮ್ಮನ್ನು ನಿವಾರಿಸದೆ, ಹಿಂಬಾಲಿಸದೆ, ದುರ್ಯೋಧನದತ್ತ ಸುಖಕ್ಕಾಗಿ ಹಾತೊರೆದನೋ, ಯಾವ ಧರ್ಮಾತ್ಮನು ನಮಗೆ ಜಯವಾಗಲೆಂದು ಬಾಯಿಂದ ಹರಸುತ್ತಾ, ಕೈಯಿಂದ ನಮ್ಮವರಾದ ಸತ್ಯಜಿತ್, ದ್ರುಪದ, ವಿರಾಟರನ್ನೂ ಅನೇಕ ಸಾಹಸ್ರ ಸೈನಿಕರನ್ನು ಕೊಂದನೋ ಅಂತಹ ದ್ರೋಣನನ್ನು ಕೊಲ್ಲಿಸಿದ ಪಾಪಕ್ಕಾಗಿ ನಾನು ಮರಣವನ್ನಪ್ಪುವೆನು ' ಎಂದು ಮುಂದೆ ಸಾರುವ ಧರ್ಮಜನನ್ನು ನಿಲ್ಲಿಸಿ, ವಾಸುದೇವನು 'ಪಾಂಡವಪಾಂಚಾಲ ವೀರವರರೇ !

ತತ್‌ಕ್ಷಣ ನೀವೆಲ್ಲರೂ ಅಸ್ತ್ರಶಸ್ತ್ರಗಳನ್ನು ಕೆಳಗೆ ಬಿಸುಟು, ವಾಹನಗಳಿಂದಿಳಿಯಿರಿ ! ನಾರಾಯಣಾಸ್ತ್ರಕ್ಕೆ ನಮಸ್ಕಾರವೇ ಶಮನೋಪಾಯವಾಗಿದೆ ! ಬೇಗ ಕೈಮುಗಿದು ನಮಿಸಿರಿ ! ನೀವು ಪ್ರತಿಭಟಿಸಿದಂತೆ ಅದು ವಿಜೃಂಭಿಸುವುದು !' ಎಂದು ಸಾರಿದನು.

ಆ ಮಾತನ್ನಾಲಿಸಿ ಎಲ್ಲ ಯೋಧರೂ ರಥ ಗಜತುರಗಗಳಿಂದಿಳಿದರು. ಅಸ್ತ್ರ ಶಸ್ತ್ರಗಳನ್ನು ನೆಲದಿ ಬಿಸುಟಿದರು; ನೆಲದಿ ದಂಡಾಕಾರವಾಗಿ ನಮಿಸಿದರು. ಅವರ ಅಸ್ತ್ರ ಸನ್ಯಾಸವನ್ನು ನೋಡಿ ಸಹಿಸದೆ ಕುಪಿತನಾದ ಭೀಮಸೇನನು 'ಯಾರೂ ಶಸ್ತ್ರಗಳನ್ನು ಬಿಡಬೇಡಿರಿ ! ದ್ರೋಣಪುತ್ರನ ಅಸ್ತ್ರವನ್ನು ಅದೆಂತಹದೇ ಆಗಲಿ ನಾನು ವಾರಿಸುವೆನು; ಗದೆಯಿಂದ ಅದನ್ನು ಪ್ರತಿಭಟಿಸುವೆನು. ಸೂರ್ಯನಿಗೆ ಸಮವಾದ ಜ್ಯೋತಿ ಇಲ್ಲ; ನನಗೆ ಸಮರಾದ ವೀರರಿಲ್ಲ. ಇದು ಜಂಬವಲ್ಲ; ಕ್ಷತ್ರಧರ್ಮದ ರೀತಿ; ನಾಗಾಯುತ ಸಮಪ್ರಾಣನಾದ ವೃಕೋದರನು ಹಿಮಗಿರಿಯನ್ನು ಗುದ್ದಿ ಕೆಡಹಬಲ್ಲನು. ನಾರಾಯಣಾಸ್ತ್ರಕ್ಕೆ ಪ್ರತಿಯೋಧನೆಂದರೆ ಭೀಮಸೇನನೊಬ್ಬನೇ ಎಂದು ಜಗವು ತಿಳಿಯಲಿ !' ಎಂದು ರಥದಿಂದಿಳಿಯದೆ, ಶಸ್ತ್ರವನ್ನು ಪಿಡಿದೇ ಇದ್ದನು. ಗಾಂಡೀವವನ್ನು ಕೆಳಗಿಡುತ್ತಿರುವ ಪಾರ್ಥನನ್ನು ನೋಡಿ 'ಪಾರ್ಥ ! ಹೆದರಬೇಡ ! ಕೃಷ್ಣನಿರುವ ರಥದಲ್ಲಿರುವೆ ! ನಿನ್ನ ಯಶಶ್ಚಂದ್ರಮನಿಗೆ ಭೀತಿ ಕಲಂಕವನ್ನು ಹಚ್ಚಬೇಡ! ಶಸ್ತ್ರವನ್ನು ಪಿಡಿ !' ಎಂದು ಭೀಮನು ಕೂಗಿ ನುಡಿದರೂ ಅರ್ಜುನನು ಅಸ್ತ್ರವನ್ನು ಕೆಳಗಿಟ್ಟು, ಕೈಮುಗಿದು ಕೂತನು.

ಭೀಮಸೇನನು ಆ ದಿವ್ಯ ಸಮತೇಜವಾದ ರಥದಲ್ಲಿ ಮುಂದೆ ಸಾಗಿ, ಕ್ಷಣಮಾತ್ರದಲ್ಲಿ ಅಶ್ವತ್ಥಾಮನನ್ನು ಶರಜಾಲದಿಂದ ಮುಚ್ಚಿದನು. ದ್ರೋಣಪುತ್ರನು ನಗುತ್ತಾ, ಅಗ್ನಿಜ್ವಾಲಾಕರಾಳಶರಜಾಲದಿಂದ ಭೀಮನನ್ನು ಮುಚ್ಚಿದನು. ಭೀಮಸೇನನ ಮೈತುಂಬ ಬಾಣಜ್ವಾಲೆಗಳು ಕಿಡಿಗಾರುತ್ತಾ ಆವರಿಸಿದವು. ನಾರಾಯಣಾಸ್ತ್ರ ಸಂವೃತನಾದ ಭೀಮಸೇನನು ಶಿರದಲ್ಲಿ ಬಿದ್ದ ಮಹಾಸ್ತ್ರಕ್ಕೆ ಹೆದರದೆ, ಓಡದೆ, ಶಸ್ತ್ರಬಿಡದೆ ನಿಂತು ಹೊನ್ನೆಹುಳುಗಳಿಂದ ಆವರಿಸಲ್ಪಟ್ಟ ಬೆಟ್ಟದಂತೆ ಕಂಗೊಳಿಸಿದನು. ಅಸ್ತ್ರವು ಅನಿಲಧೂತ ವಹ್ನಿಯಂತೆ ವಿಜೃಂಭಿಸುವುದನ್ನು ಕಂಡು ಎಲ್ಲರೂ ಭೀತರಾಗಿ ಕೈಮುಗಿದು ನಿಂತರು. ಅವರನ್ನು ಬಿಟ್ಟು ದಿವ್ಯಾಸ್ತ್ರವು ಭೀಮನನ್ನು ಸುತ್ತುಗಟ್ಟಿತು. ವಾಯುಸುತನು ಸಾಶ್ವಸೂತರಥನಾಗಿ ಅಶ್ವತ್ಥಾಮಾಸ್ತ್ರಾಗ್ನಿಯಲ್ಲಿ ನಿಂತಿರಲು ಅಗ್ನಿಯು ಅಗ್ನಿಯಲ್ಲಿ ನಿಂತಂತೆ ತೋರಿತು. ಸಕಲ ಸೈನಿಕರು ಹಾಹಾಕಾರ ಮಾಡಿದರು. ಅರ್ಜುನನು ತನ್ನ ಕರ್ತವ್ಯವನ್ನರಿತು, ಅಣ್ಣನ ಸೇವೆ ಎಂದು ತಾನೂ ವಾರುಣಾಸ್ತ್ರದಿಂದ, ಹೊರಮೈ ಮುಚ್ಚಿ ರಥತುರಗಸೂತರನ್ನು ಅಸ್ತ್ರಜ್ವಾಲೆಯಿಂದ ಪಾರುಮಾಡಿದನು. ಶರೀರದಲ್ಲಿ ಬಿದ್ದ ಅಸ್ತ್ರಕ್ಕೆ ವರುಣಾಸ್ತ್ರದ ಬಹಿರ್ವೇಷ್ಟನವು ನಿವಾರಕವಾಗಲಿಲ್ಲ. ಆದರೂ ಅರ್ಜುನನ ಸೋದರಗುರುಪ್ರೇಮವು ಪ್ರಕಟವಾಯಿತು.

ಜಗವನ್ನೆಲ್ಲ ಸುಟ್ಟು ಪ್ರಳಯವಹ್ನಿಯು ಜಗತ್ಪ್ರಭುವಿನ ಮುಖವನ್ನು ಸೇರುವಂತೆ, ಅಸ್ತ್ರವಹ್ನಿಯು ಭೀಮನನ್ನು ಆವರಿಸಿ ನಿಂತಾಗ, ಸೂರ್ಯನನ್ನು ಅಗ್ನಿಯು

ಪ್ರವೇಶಿಸಿದನೋ, ಅಥವಾ ಅಗ್ನಿಯನ್ನೇ ಸೂರ್ಯನು ಪ್ರವೇಶಿಸಿದನೋ ಎಂಬಂತೆ ತೋರಿ, ಸಕಲರು ನಿಬ್ಬೆರಗಾಗಿ ನಿಂತರು. ಆಗ ಶ್ರೀಕೃಷ್ಣನು ತನ್ನ ಅಸ್ತ್ರವು ಅಮೋಘವೆಂದೂ, ಭೀಮನು ಅವಧ್ಯನೆಂದೂ ಜಗದ ಸುಜನರಿಗೆ ತೋರಿ, ಅರ್ಜುನನೊಡಗೂಡಿ ಭೀಮನ ರಥವನ್ನು ಪ್ರವೇಶಿಸಿದನು. ನರನಾರಾಯಣರಾದುದರಿಂದ ಪಾರ್ಥಕೃಷ್ಣರು ನಾರಾಯಣಾಸ್ತ್ರ ಪೀಡಿತರಾಗದೆ, ಅಸ್ತ್ರಪೀಡಿತನಾಗಿದ್ದರೂ ಅಸ್ತ್ರಜ್ವಾಲಾ ಮಧ್ಯದಿ ಧೈರ್ಯದಿಂದಿರುವ ಭೀಮನನ್ನು ಬಲಾತ್ಕಾರವಾಗಿ, ಹಿಡಿದು ರಥದಿಂದಿಳಿಸಿ, ಆಯುಧಗಳನ್ನು ಕಸಿದು ಕೆಳಗಿಟ್ಟು ನಮಿಸೆಂದು ಪ್ರಾರ್ಥಿಸಿದರು. ಭೀಮಸೇನನು ಗರ್ಜಿಸುತ್ತಿರಲು ಅಸ್ತ್ರವು ಉರಿಯುತ್ತಿತ್ತು. ಆಗ ಶ್ರೀಕೃಷ್ಣನು 'ಭೀಮಸೇನ ! ಏನಿದು ಇಂತು ಮೈಮರೆತು ವಿಜೃಂಭಿಸುವೆ ! ಯುದ್ಧ ಜಯವೇ ಬೇಕಿದ್ದರೆ ಅದು ಇಂದೇ ನಿನ್ನೊಬ್ಬನಿಂದಲೇ ಸಾಧಿಸಪಡಬೇಕೇ ? ಕೇಳು ! ಎಲ್ಲರೂ ನ್ಯಸ್ತಶಸ್ತ್ರರಾಗಿರುವರು. ರಥಗಳಿಂದಿಳಿದಿರುವರು ! ನೀನೂ ಅವರಂತೆ ವರ್ತಿಸು !' ಎಂದು ಶಾಂತಪಡಿಸಿದನು. ಭೀಮಸೇನನು ಶುದ್ಧಕ್ಷತ್ರಿಯ ಧರ್ಮನಿರತನಾದುದರಿಂದ, ಅಸ್ತ್ರಗಳಿಗೆ ಹೆದರದೆ ಹೋರಾಡುವ ವೀರನಾಗಿ ರಣಮರಣವೇ ಕ್ಷತ್ರಿಯರಿಗೆ ಉಚಿತವಾಗಲಿ, ಶತ್ರುವಿಸರ್ಜಿತ ದಿವ್ಯಾಸ್ತ್ರಗಳಿಗೆ ಹೆದರಿ ನಮಿಸುವುದಾಗಲಿ, ಓಡಿಹೋಗುವುದಾಗಲಿ, ಶಸ್ತ್ರಬಿಡುವುದಾಗಲಿ ಧರ್ಮವಲ್ಲವೆಂದು ತೋರಿಸಲು ತಾನು ಓಡದೆ, ಹೆದರದೆ, ರಥದಿಂದಿಳಿಯದೆ, ಶತ್ರುವನ್ನು ಬಿಡದೆ ರಥದಲ್ಲಿದ್ದು ಹೋರಾಡಿದನು. ಅಂತೆಯೇ ತನ್ನಂತೆ ನಿಲ್ಲಿರೆಂದೂ ಉಪದೇಶಿಸಿದನು. ನಾರಾಯಣಾಸ್ತ್ರವು ಸರ್ವಥಾ ನಮಸ್ಕಾರ್ಯವೇ ಆದರೂ ಅದು ಶತ್ರುಕರಮುಕ್ತವಾದಾಗ ನಮಿಸಿ ಭಯಪಟ್ಟು ನಿಲ್ಲುವುದು ವೀರಕ್ಷತ್ರಿಯ ಧರ್ಮವಲ್ಲವೆಂದು ಪ್ರಕಟಿಸಿ, ಭೀಮನು ನಾರಾಯಣಾಸ್ತ್ರ ಮಾತ್ರಕ್ಕೆ ಮನಸಾ ನಮಿಸಿ, ಶ್ರೀಕೃಷ್ಣಭಕ್ತಿಯಿಂದ ಆತನ ಆಜ್ಞೆಯಂತೆ ರಥದಿಂದಿಳಿದು, ಶಸ್ತ್ರವನ್ನು ಬಿಟ್ಟು ನಿಂತನು. ನಾರಾಯಣಾಸ್ತ್ರಾಭಿಮಾನಿ ಋಷಿಯು ವಾಯುದೇವನು (ದ್ರಷ್ಟ) ಅದಕ್ಕೆ ದೇವತೆ ಶ್ರೀಹರಿಯು. ಎಂದೇ ನಾರಾಯಣಾಸ್ತ್ರವು ಅಗ್ನಿಯನ್ನು ಅಗ್ನಿಯಂತೆ, ಭೀಮಸೇನನನ್ನು ಬಾಧಿಸಲಿಲ್ಲ.

ಆಗ ನಾರಾಯಣಾಸ್ತ್ರವು ಶಾಂತವಾಯಿತು. ದಿಕ್ಕುಗಳು ಪ್ರಶಾಂತವಾದವು. ವಾತಗಳು ಶೀತಲವಾಗಿ ಬೀಸಿದವು. ವಾಹನಗಳು ಹೃಷ್ಟಗಳಾದವು. ಭಟರು ಚೇತರಿಸಿಕೊಂಡರು. ನಿಶಾಂತದಲ್ಲಿ ದಿನಕಾಂತನಂತೆ ಶೋಭಿಸುವ ಭೀಮನನ್ನು ಬಿಗಿದಪ್ಪಿ ಕೃಷ್ಣಧರ್ಮಜರು ಅವನ ಧರ್ಮನಿರತಿಯನ್ನು ಕೊಂಡಾಡಿದರು. ಅಂತು ಧರ್ಮ ನಿರತಿಯು ಇತರಾಶಕ್ಯವೆಂದರಿತು ಅರ್ಜುನನು ಅಣ್ಣನಿಗೆ ಶಿರಬಾಗಿ ನಮಿಸಿದನು. ಮತ್ತೆ ಪಾಂಡವವೀರರು ಶತ್ರುವಧೋದ್ಯುಕ್ತರಾಗಿ ಸಿಂಹನಾದಗಳನ್ನು ಮಾಡುತ್ತಾ ಕೌರವ ಸೇನೆಯನ್ನು ಮುತ್ತಿದರು. ಅಸ್ತ್ರವು ಶತ್ರುಸಂಹಾರವನ್ನು ಮಾಡದೆ, ಶಾಂತವಾಗಲು, ದುರ್ಯೋಧನನು ನಿರುತ್ಸಾಹನಾಗಿ, ಆಚಾರ್ಯಪುತ್ರನಿಗಿಂತೆಂದನು: 'ಗುರುಪುತ್ರ !

ಮತ್ತೆ ಅದೇ ಅಸ್ತ್ರವನ್ನು ಬಿಡು ! ನೋಡು ಮೇಲೇರಿ ಬರುವ ಶತ್ರು ವೀರರನ್ನು ! ' ಆ ಮಾತಿಗೆ ದೀನನಾಗಿ ನಿಟ್ಟುಸಿರಿಟ್ಟು ಅಶ್ವತ್ಥಾಮನು, 'ರಾಜನ್ ! ಈ ದಿವ್ಯಾಸ್ತ್ರವನ್ನು ಮತ್ತೆ ಬಿಡಲಾರೆನು. ಬಿಟ್ಟರೆ ಅದು ನಮ್ಮನ್ನೇ ಸುಟ್ಟುಬಿಡುವುದು ತಿಳಿ ! ಅಸ್ತ್ರದ ಪ್ರತಿಘಾತವನ್ನರಿತು ವಾಸುದೇವನು ಕಾಪಾಡಿದುದರಿಂದ ಪಾಂಡವರು ಅವರ ಸೇನಾಭಟರು ಉಳಿದಿರುವರು. ವಿಕ್ರಮಿಸಿ ಶತ್ರು ಜಯವನ್ನು ಸಾಧಿಸು ! ಪರಾಜಯ ಮೃತ್ಯುಗಳಲ್ಲಿ ಪರಾಜಯಕ್ಕಿಂತ ಮೃತ್ಯುವೇ ಲೇಸು ! ' ಎಂದನು.

ಸಿಂಹಲಾಂಗೂಲಕೇತನನಾದ ಗುರುಸುತನು ಕ್ರೋಧಪರೀತಚಿತ್ತನಾಗಿ ಉನ್ಮತ್ತನಂತೆ ಮತ್ತೆ ದಿವ್ಯ ಬಾಣಗಳಿಂದ ಪಾಂಡವ ಸೈನಿಕರನ್ನು ಸಂಹರಿಸುತ್ತಿದ್ದನು. ತಂದೆಯ ವಧೆಯಿಂದ ಕ್ರುದ್ಧನಾಗಿ ಹೊಡೆದಾಡುವ ಅಶ್ವತ್ಥಾಮನು ಧೃಷ್ಟದ್ಯುಮ್ನನನ್ನು ಮುತ್ತಿ ಶರಜಾಲದಿಂದ ಪೀಡಿಸಿದನು. ಪಾರ್ಷತನು ಭಯರಹಿತನಾಗಿ ಗುರುಸುತನನ್ನು ಅರವತ್ತು ಶರಗಳಿಂದಲು, ಸಾರಥಿಯನ್ನು ಇಪ್ಪತ್ತು ನಾರಾಚಗಳಿಂದಲು, ನಾಲ್ಕು ನಿಶಿತಬಾಣಗಳಿಂದ ತುರಗಗಳನ್ನು ಹೊಡೆದು ಸಿಂಹನಾದ ಮಾಡಿದನು. ಮೃತ್ಯುವಿಗೆ ಹೆದರದೆ ಕಾದುವ ಪಾರ್ಷತನನ್ನು ಬಾಣವರ್ಷದಲ್ಲಿ ಮುಳುಗಿಸಿದ ಅಶ್ವತ್ಥಾಮನನ್ನು ಸಾತ್ಯಕಿಯು ತಡೆದು ಪಾರ್ಷತನಿಗೆ ನೆರವಾದನು. ಸಾತ್ವತ ಪಾರ್ಷತರನ್ನು ನಿರ್ಲಕ್ಷಿಸಿ, ತೀಕ್ಷ್ಣ ಬಾಣಗಳಿಂದ ಅಶ್ವತ್ಥಾಮನು ಅವರನ್ನು ಕ್ಷತಗಾತ್ರರನ್ನಾಗಿ ಮಾಡಿದನು. ಆತನ ಬಾಣಗಳಿಂದ ಕವಚವು ಛಿನ್ನವಾಗಿ ಮೂರ್ಛಿತನಾದ ಸಾತ್ಯಕಿಯನ್ನು ಸಾರಥಿಯು ದೂರ ಸೇರಿಸಿ ಕಾಪಾಡಿದನು. ಆಗ ಅರ್ಜುನ, ಭೀಮಸೇನ, ವೃದ್ಧಕ್ಷತ್ರ (ಪೌರವ), ಸುದರ್ಶನ (ಮಾಲವ), ಚೇದಿ ಯುವರಾಜರೈದು ಮಹಾರಥರು ಪಾರ್ಷತನ ಸಹಾಯಕ್ಕಾಗಿ ಬಂದು, ಶರಸಮೂಹದಿಂದ ಗುರುಪುತ್ರನನ್ನು ಹಿಂಸಿಸಿದರು.

ಅಶ್ವತ್ಥಾಮನು ಭೀಮಾರ್ಜುನರು ನೋಡುತ್ತಿರಲು, ಯುವರಾಜ, ಸುದರ್ಶನ ಪೌರವರನ್ನು ಸಂಹರಿಸಿದನು. ಭೀಮಸೇನನು ರುಷ್ಟನಾಗಿ ಕ್ಷುರಪ್ರದಿಂದ ಗುರುಪುತ್ರನ ಧನುವನ್ನು ಮುರಿದು, ಆತನನ್ನೂ ಹತ್ತು ಶರಗಳಿಂದ ಪೀಡಿಸಿದನು. ದ್ರೋಣಸುತನು ಮತ್ತೊಂದು ಕಾರ್ಮುಕವನ್ನು ಸಜ್ಜೀಕರಿಸಿ, ನೂರು ಬಾಣಗಳಿಂದ ಭೀಮನನ್ನು ಹೊಡೆದನು. ಭೀಮಸೇನನು ಆ ಬಾಣಗಳನ್ನು ಖಂಡಿಸಿ, ಭೀಮನಾಮಾಂಕಿತವಾದ ಚಂಡಕಾಂಡಗಳಿಂದ ಅಶ್ವತ್ಥಾಮನ ಜತ್ರುದೇಶದಲ್ಲಿ ಹೊಡೆದನು. ಆಗ ಅಶ್ವತ್ಥಾಮನು ಮೂರ್ಛಿತನಾದನು. ಮತ್ತೆ ಎಚ್ಚತ್ತು ರುಷ್ಟನಾಗಿ ಗುರುಸುತನು ಭೀಮನನ್ನು ಶರವರ್ಷದಲ್ಲಿ ಮುಳುಗಿಸಿದನು. ಭೀಮಸೇನನು ಕಾಲಾಂತಕನಂತಾಗಿ ಶರಜಾಲದಿಂದ ಅಶ್ವತ್ಥಾಮನನ್ನು ಮುಚ್ಚಿದನು. ಭೀಮಸೇನನ ಶರಜಾಲವು ಸಂತತವಾಗಿ ಅವುಗಳ ಮಧ್ಯದಲ್ಲಿ ವಾಯುವು ಕೂಡ ತೂರಿ ಹೋಗುವ ಅವಕಾಶವಿರಲಿಲ್ಲ. ಆತನ ಬಾಣಗಳನ್ನು ಖಂಡಿಸಿ ಅಶ್ವತ್ಥಾಮನು ಬಾಣದ ಶತಶತದಿಂದ ಹೊಡೆಯಲು, ಅವನ್ನು ಖಂಡಿಸಿ, ಭೀಮನು ಶಕ್ತಿಯನ್ನು ಪ್ರಯೋಗಿಸಿದನು. ಶಕ್ತಿಯನ್ನು ಮುರಿದು ಕೆಡಹಿ, ಗುರುಪುತ್ರನು ಭೀಮಸೇನನ ಸಾರಥಿಯನ್ನು ಲಲಾಟದಲ್ಲಿ

ಭಲ್ಲದಿಂದ ಗಾಯಗೊಳಿಸಿದನು. ವಿಶೋಕನು ಮೂರ್ಛಿತನಾಗಿ, ನೊಗೆಯ ಮೇಲೆ ಬೀಳಲು, ಕುದುರೆಗಳು ಓಡತೊಡಗಿದವು. ಭೀಮಸೇನನು ತಾನೇ ಕುದುರೆಗಳ ಕಡಿವಾಣವನ್ನು ಹಿಡಿದು, ನಡೆಸುತ್ತಾ, ಬಾಣವರ್ಷದಿಂದ ಅಶ್ವತ್ಥಾಮನನ್ನು ಪೀಡಿಸಿದನು. ಆಗ ವಿಶೋಕನು ತಿಳಿದು, ತನ್ನ ಸೂತಕೃತ್ಯವನ್ನು ಕೈಕೊಂಡನು. ಅಂತರದಲ್ಲಿ ಅರ್ಜುನನು ಅಶ್ವತ್ಥಾಮನನ್ನು ಮುತ್ತಿ ಶರಶತದಿಂದ ಗುರುಸುತನನ್ನು ಹೊಡೆದನು, ಮತ್ತು ಸಿಟ್ಟಿನಿಂದ ಇಂತೆಂದನು:

'ಅಶ್ವತ್ಥಾಮ ! ಸ್ಥಿರನಾಗು ! ಅಸ್ತ್ರಗಳಲ್ಲಿರುವ ಜ್ಞಾನ, ದೇಹದಲ್ಲಿರುವ ಬಲ, ಮನದಲ್ಲಿರುವ ಪೌರುಷ, ಧಾರ್ತರಾಷ್ಟ್ರರಲ್ಲಿಟ್ಟಿರುವ ಪ್ರೀತಿ, ನಮ್ಮಲ್ಲಿ ಮಾಡುವ ದ್ವೇಷ ಇನ್ನೇನಿದೆಯೋ ಅದೆಲ್ಲವನ್ನು ನನ್ನಲ್ಲಿ ತೋರಿಸು ! ದ್ರೋಣನನ್ನು ಕೊಂದ ನಮ್ಮ ಧೃಷ್ಟದ್ಯುಮ್ನನು ನಿನ್ನನ್ನೂ ಸಂಹರಿಸುವನು ! ಕಾಲಾನಲಸಮಕೋಪನು, ದ್ವಿಷದ್ದಹನ ಪ್ರತಾಪನು ಆದ ಪಾರ್ಷತನನ್ನೂ, ಕೇಶವಸಹಿತನಾದ ನನ್ನನ್ನೂ ಎದುರಿಸಿ ನಿಂತು ಕಾದಾಡು !' ಆ ಮಾತಿಗೆ ಅಶ್ವತ್ಥಾಮನು ಕಿಡಿಕೆಂಡವಾದನು. ಕೃಷ್ಣಾರ್ಜುನರನ್ನು ಸಂಹರಿಸಬಿಡಬೇಕೆಂದು ಸಂಕಲ್ಪಿಸಿ, ಆತನು ಆಚಮಿಸಿ ಸುದುರ್ಧರ್ಷವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದು ಪ್ರಳಯಾಭೀಲ ಜ್ವಾಲಾಕೀಲಗಳಿಂದ ಉರಿದೆದ್ದು ಎಲ್ಲ ಕಡೆಯೂ ವ್ಯಾಪಿಸಿತು. ಸಾವಿರಾರು ಬಾಣಗಳು ಉರಿಯುತ್ತಾ ಬಂದು ಪಾಂಡವ ಸೈನಿಕರನ್ನು ಸುಟ್ಟು ನಾಶಪಡಿಸಿದವು. ಅಸ್ತ್ರತೇಜಸಪ್ತವಾಗಿ ಆನೆಕುದುರೆಗಳು ನೆಲಕ್ಕುರುಳಿ ಬಿದ್ದವು. ಪಾಂಡವ ಸೇನಾವಿನಾಶವನ್ನು ಕಂಡು ದುರ್ಯೋಧನಾದಿ ಕುರುಯೋಧರು ಹರ್ಷವಿವಶರಾಗಿ ಸಿಂಹನಾದಗಳನ್ನು, ಶಂಖಧ್ವಾನಗಳನ್ನು ಗೈದರು. ಪಾಂಡವವೀರರು ಭೀತರಾಗಿ, ಹಾಹಾಕಾರ ಮಾಡುತ್ತ ಪಲಾಯನಗೈದರು. ಅಂದು ಒಂದಕ್ಷೌಹಿಣೀ ಸೇನೆ ನಷ್ಟವಾಯಿತು. ಶ್ರೀಕೃಷ್ಣನು ತನ್ನ ರಥದ ಮೇಲೇರಿ ಬರುವ ಆಗ್ನೇಯಾಸ್ತ್ರವನ್ನು ಉಪಲಕ್ಷಿಸಿ, ರಥವನ್ನೇ ಮೇಲಕ್ಕೆಬ್ಬಿಸಿ, ಅಂತರಿಕ್ಷದಲ್ಲಿ ನಿಲ್ಲಿಸಿ, ಅಸ್ತ್ರಘಾತದಿಂದ ಅರ್ಜುನನನ್ನು ಕಾಪಾಡಿದನು. ಆತನ ಪ್ರೇರಣೆಯಿಂದ ಅರ್ಜುನನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಅಶ್ವತ್ಥಾಮನ ಅಸ್ತ್ರವನ್ನು ಶಾಂತಗೊಳಿಸಿದನು. ಆಗ ರಣರಂಗವು ಮತ್ತೆ ಶಾಂತವಾಯಿತು. ಎಲ್ಲ ದಿಕ್ಕುಗಳಲ್ಲಿ ಹರಡಿದ್ದ ಹೊಗೆ, ಉರಿ, ಉಲ್ಕೆಗಳು ನಷ್ಟವಾದವು. ಶೀತವಾತಗಳು ಬೀಸತೊಡಗಿದವು.

ಕೇಶವಾರ್ಜುನರ ರಥವು ಮತ್ತೆ ಭೂತಲವನ್ನಾಶ್ರಯಿಸಿತು. ಅವರೀರ್ವರು ಅಕ್ಷತರಾಗಿರುವುದನ್ನು ಕಂಡು, ಪಾಂಡವ ಯೋಧರು ಹರ್ಷಧ್ವಾನಗಳನ್ನು ಮಾಡಿದರು. ಅಶ್ವತ್ಥಾಮನು ತನ್ನ ಅಸ್ತ್ರವು ವ್ಯರ್ಥವಾದುದನ್ನೂ, ಕೃಷ್ಣಾರ್ಜುನರು ಅಕ್ಷತಗಾತ್ರರಾಗಿರುವುದನ್ನೂ ಕಂಡು ಸುದುಃಖಿತನಾದನು; ನಿಟ್ಟುಸಿರಿಟ್ಟು ಕೈಕೈ ಹಿಸುಕಿಕೊಂಡು, ಅಶ್ವತ್ಥಾಮನು ಧನುವನ್ನು ಬಿಸುಟಿದನು; ರಥದಿಂದಿಳಿದನು; 'ಧಿಕ್ ! ಧಿಕ್ ! ಎಲ್ಲವೂ ವ್ಯರ್ಥ' ಎಂದು ರಣರಂಗವನ್ನು ಬಿಟ್ಟು ಹೋದನು.

ಆಗ ಸ್ನಿಗ್ಧನೀಲಾಂಬುದಾಭಾಸನು, ವೇದವ್ಯಾಸನು, ಸಾಕ್ಷಾದ್ಧರ್ಮಸ್ವರೂಪನು,

ಅಧರ್ಮಪ್ರತೀಪನು ಆದ ವೇದವ್ಯಾಸದೇವನು ಅಶ್ವತ್ಥಾಮನಿಗೆ ಕಂಡು, ತಡೆದು, 'ಏಕೆ ಓಡುವೆ ! ನಿನ್ನಿಂದ ಆಗಬೇಕಾದ ಕಾರ್ಯವಿನ್ನೂ ಉಳಿದಿದೆ !' ಎಂದನು. ಅಶ್ವತ್ಥಾಮನು ದೀನವದನನಾಗಿ ಗದ್ಗದ ಕಂಠದಿಂದ ಮಾತಾಡಲಾಗದೇ ನಿಂತು ನೋಡಿದನು. ಕಾಲಿಗೆರಗಿ, ಕೈಜೋಡಿಸಿ 'ಪೂಜ್ಯನೇ ! ಏನಿದು ಮಾಯೇ ? ಅಸ್ತ್ರವು ಅಮೋಘವೆಂದು ತಿಳಿದಿದ್ದೆನು. ನನ್ನ ಆಗ್ನೇಯಾಸ್ತ್ರವು ಕೃಷ್ಣಾರ್ಜುನರನ್ನೇಕೆ ಸುಡಲಿಲ್ಲ ? ನನ್ನ ಅಪರಾಧದಿಂದ ಹೀಗಾಯಿತೋ ? ಅಥವಾ ಅವರೀರ್ವರ ಮಹಿಮೆಯಿಂದಲೋ ? ಭಗವನ್ ! ಎಂತಹ ವಿಪರೀತ ಕಾಲ ಬಂತು ! ಸರ್ವನಾಶವಾಗಲೆಂದು ಪ್ರಯೋಗಿಸಿದ ಆಗ್ನೇಯಾಸ್ತ್ರವು ಬಡಸೈನಿಕರನ್ನು ಒಂದಕ್ಷೌಹಿಣೀ ಮಾತ್ರ ನಾಶಪಡಿಸಿ, ಕೃಷ್ಣಾರ್ಜುನರನ್ನು ಏನೂ ಮಾಡಲಾರದೆ, ಶಾಂತವಾಯಿತಲ್ಲ! ಏನೀ ಆಶ್ಚರ್ಯ ?' ಎಂದು ಕೇಳಿದನು.

ಶ್ರೀವ್ಯಾಸನಿಂತೆಂದನು : 'ಅಶ್ವತ್ಥಾಮ ! ಕೇಳು ! ನೀನಾರೆಂಬುದನ್ನು ! ಕೃಷ್ಣಾರ್ಜುನರಾರೆಂಬುದನ್ನು ! ಆಗ ನಿನ್ನ ಅಸ್ತ್ರವು ಅವರಲ್ಲಿ ವ್ಯರ್ಥವಾದುದೇಕೆ ಎಂಬ ಶಂಕೆ ತೀರುವುದು. ನೀನು ರುದ್ರನು ! ಅವರು ನಾರಾಯಣರು ! ಭೀಮನಾರೆಂದು ನಿನಗೆ ಹೇಳಬೇಕಿಲ್ಲ, ಆತನು ಮುಖ್ಯ ಪ್ರಾಣನು. ಅಂತೆಯೇ ಭೀಮಾರ್ಜುನ ಕೇಶವರಿಗೆ ಎಂದೂ, ಎಲ್ಲಿಯೂ ಯಾರಿಂದಲೂ ಸೋಲಿಲ್ಲ. ಅವರು ಸದಾ ಜಯಶೀಲರು. ತಿಳಿ ! ಮಹಾ ರಹಸ್ಯವನ್ನರುಹುವೆನು ಕೇಳು ! ಶ್ರೀನಾರಾಯಣರ್ಷಿಯು ಲೋಕ ಕ್ಷೇಮಾರ್ಥಿಯಾಗಿ ಹಿಮಾಲಯದ ಬದರಿಕಾಶ್ರಮದಲ್ಲಿ ತೀವ್ರ ತಪವನ್ನು ಮಾಡಿದನು. ಆತನಂತೆ ನರನೂ ಕಠಿನ ತಪವನ್ನು ಮಾಡಿದನು. ಆ ಕಾಲದಲ್ಲಿ ಶಂಕರನು ಅವನನ್ನು ದರ್ಶಿಸಿ ಧನ್ಯನಾಗಬೇಕೆಂದು ಬಂದನು. ಪಿನಾಕಪಾಣಿಯು ಜಟಿಲಕೇಶನು, ಗಂಗಾಧರನು, ಧವಳಾಂಗನು, ವ್ಯಾಘ್ರಚರ್ಮಾಂಬರನು, ನಾಗಯಜ್ಞೋಪವೀತನು, ಪ್ರಮಥಗಣಸೇವಿತನು, ಬ್ರಹ್ಮದ್ವೇಷಿಹಂತನು, ವೈರಾಗ್ಯಾದಿ ಗುಣವಂತನು, ಆದ ಮಹಾದೇವನನ್ನು ಕಂಡು ಶ್ರೀನಾರಾಯಣರ್ಷಿಯು ಮುದಿತನಾದನು. ಶಿಷ್ಟರಿತ್ತ ಆತಿಥೇಯವನ್ನು ಸ್ವೀಕರಿಸಿ, ಮಂದಾಕಿನೀಧರನಾದ ಹರನು ನರನಾರಾಯಣ ಋಷಿವರರ ಚರಣಕಮಲಗಳಿಗೆ ಶಿರಸಾ ಅಭಿನಮಿಸಿ, ಬೃಸ್ಯಾಸನದಲ್ಲಿ ಅವರು ಕೂತಮೇಲೆ ಕೂತನು.

ಆಗ ನಾರಾಯಣರ್ಷಿಯು ಮಹಾದೇವನು ಬಂದ ಮಹತ್ಕಾರಣವನ್ನು ಅರಿತೂ ಏಕೆ ಬಂದೆ ? ಎಂದು ಕೇಳಿದನು. ಮಹಾದೇವನು ತನ್ನಲ್ಲಿರುವ ಶಿವನಾಮಕ ಹರಿಗೂ, ಬ್ರಹ್ಮನಲ್ಲಿರುವ ಬ್ರಹ್ಮನಾಮಕ ಹರಿಗೂ, ಸಾಕ್ಷಾನ್ನಾರಯಣರ್ಷಿಗೂ ಅಭೇದವನ್ನು ತಿಳಿದು ಇಂತೆಂದನು :

'ಆದಿದೇವ ! ಮೊತ್ತಮೊದಲು ಬ್ರಹ್ಮವಿಷ್ಣುಮಹೇಶ್ವರ ರೂಪದಿಂದ ರಜಸ್ಸತ್ವತಮೋ ಗುಣಪ್ರವರ್ತಕನಾದೆ ! ಜಗವನ್ನು ಆಗುಣತ್ರಯಾತ್ಮಕ ಪ್ರಕೃತಿಯಿಂದ ಸೃಜಿಸಿದೆ ! ಸುರಾಸುರದಾನವನಾಗಯಕ್ಷರಃಪಿಶಾಚಪಕ್ಷಿ ಪಶುಜಲಚರಾದಿ

ವಿವಿಧ ಯೋನಿಗಳಲ್ಲಿ ವಿವಿಧ ಜೀವರನ್ನು ತಂದೆ ! ಪೃಥ್ವಿಯಲ್ಲಿದ್ದು ಪೃಥ್ವಿಯನ್ನು ನಡೆಸುವೆ ! ಪೃಥ್ವಿಯು ನಿನ್ನನ್ನು ಸಾಕಲ್ಯೇನ ತಿಳಿದಿಲ್ಲ ! ಆಕಾಶ, ವಾಯು, ವಹ್ನಿ ಜಲಾದಿ ದೇವತೆಗಳಿಗೆ ನೀನು ನಿಯಾಮಕನಾಗಿರುವೆ ! ಇಂದ್ರಿಯಗಳಿರುವ ಶಬ್ದಾದಿ ಗ್ರಹಣಶಕ್ತಿ ನೀನಿತ್ತುದು. ಅಂತೆಯೇ ನಿನ್ನನ್ನು ಹೃಷಿಕೇಶನೆಂಬರು. ಸಮುದ್ರದ ನೀರು ಸೂರ್ಯತಾಪದಿಂದ ಮೇಲೇರಿ ಮೇಘವಾಗಿ, ಮಳೆಗರೆದಾಗ ಮತ್ತೆ ನೀರಾಗಿ ಸಮುದ್ರವನ್ನು ಸೇರುವಂತೆ, ಜೀವರು ಅನಾದ್ಯವಿದ್ಯಾಕಾಮಕರ್ಮಗಳಿಂದ, ವಿವಿಧ ಯೋನಿಗಳಲ್ಲಿ ಸಂಚರಿಸಿ, ಕೊನೆಗೆ ಜೀವರೇ ಆಗಿ, ಪ್ರಳಯದಲ್ಲಿ ನಿನ್ನ ಉದರವನ್ನು ಪ್ರವೇಶಿಸಿ, ನಿನ್ನಧೀನರಾಗುವರು. ಅಪ್ರಮೇಯ ಮಹಿಮನಾದ ನಿನಗೆ ಸಮರಿಲ್ಲ; ಅಧಿಕರಿನ್ನೆಲ್ಲಿ ? ಸದಾಜಯಶೀಲನಾದ ನಿನ್ನನ್ನು ಜಿಷ್ಣುನೆಂಬರು. ಸಮರರಂಗದಲ್ಲಿ ನಿನ್ನನ್ನು ಎದುರಿಸಿ ನಿಂತರೆ ಬ್ರಹ್ಮನಿಗೂ, ನನಗೂ, ಇಂದ್ರಾದಿ ದೇವತೆಗಳಿಗೂ ಕ್ಷೇಮವಿಲ್ಲವೆಂದಮೇಲೆ, ಇತರರ ಪಾಡೇನು ? ನೀನು ಶ್ರೀಕೃಷ್ಣನಾಗಿ ಅವತರಿಸಿದಾಗ ನನ್ನಿಂದ ಯಾವ ವಿಧವಾದ ಸೇವೆ ಆದೀತು ? ದಯಮಾಡಿ ನನಗೂ ನಿನ್ನ ಸೇವೆಯ ಭಾಗ್ಯ ನೀಡು !" ಎಂದು ಪ್ರಾರ್ಥಿಸಿದನು.

ಶ್ರೀನಾರಾಯಣರ್ಷಿಯು ರುದ್ರನಲ್ಲಿ ಅನುಗ್ರಹಿಸಿ ಇಂತೆಂದನು: 'ಮಹಾದೇವ ! ನೀನು ಅಶ್ವತ್ಥಾಮನೆಂಬ ಆಚಾರ್ಯ ಪುತ್ರನಾಗಿ ಅವತರಿಸು ! ಇಂದ್ರನು ನಿನ್ನ ಸುತನಲ್ಲವೆ ! ಅವನು ಅರ್ಜುನನಾಗಿ ಪುಟ್ಟುವನು. ಅವನಲ್ಲಿ ನರಾವೇಶವಿರುವುದರಿಂದಲು, ನನ್ನ ಸಾನ್ನಿಧ್ಯವಿರುವುದರಿಂದಲು, ನಿನಗೆ ಆಗ ಅಜೇಯನಾಗಿರುವನು. ನಾನು ಶ್ರೀಕೃಷ್ಣನೆಂದು ಅವತರಿಸುವೆನು. ನನ್ನ ಭೂಭಾರಹರಣ, ದುರ್ಜನಶಿಕ್ಷೆ, ಸುಜನರಕ್ಷೆ ಮುಂತಾದ ಮಹತ್ಕಾರ್ಯದಲ್ಲಿ ಭೀಮಬಲರಾಮರ ಅನಂತರ ನೀನು ಸಹಾಯಾಂಗನಾಗುವೆ !' ಎಂದಪ್ಪಣೆಯಿತ್ತು ಕಳಿಸಲು ಮಹಾದೇವನು ತನ್ನ ಹಿಮಗಿರಿಯ ಕೈಲಾಸವನ್ನು ಸೇರಿದನು.

ಅಶ್ವತ್ಥಾಮ ! ತಿಳಿಯಿತೇ ನೀನಾರೆಂದು ? ನಾಡಿದ್ದು ನಿನ್ನಿಂದ ಪಾಂಡವಸುತ ಧೃಷ್ಟದ್ಯುಮ್ನ ಶಿಖಂಡಿ ಪ್ರಮುಖ ವೀರರ ಸಂಹಾರವಾಗಬೇಕಾಗಿದೆ !" ಎಂದ ಭಗವಂತನಿಗೆ ನಮಿಸಿ, ಅಶ್ವತ್ಥಾಮನು 'ಆಗಲಿ ! ಅಂತೇ ಮಾಡುವೆನು' ಎಂದು ಹೊರಟುಹೋದನು. ಸರ್ವಭೂತಪ್ರಭುವು, ಸರ್ವೋತ್ತಮನು, ಯಜ್ಞಫಲಭೋಕ್ತನು, ವೇದಮುಖ್ಯಪ್ರತಿಪಾದ್ಯನು ಆದ ನಾರಾಯಣನೇ ಶ್ರೀಕೃಷ್ಣನೆಂದು, ತಿಳಿದು ಅಶ್ವತ್ಥಾಮನು, ರುದ್ರಾಂತರ್ಯಾಮಿಯಾದ ಶ್ರೀಕೃಷ್ಣನಿಗೆ ಮನಸಾ ನಮಿಸಿ, ವಾಸಿಷ್ಠ ಕೃಷ್ಣನ ಮಾತನ್ನು ನೆನೆಯುತ್ತಾ ಹೋದನು. ಅಶ್ವತ್ಥಾಮನ ನಿರ್ಗಮನುವನ್ನು ಕಂಡು ದುರ್ಯೋಧನನು ದೀನನಾಗಿ, ಸೈನ್ಯಗಳ ಅವಹಾರವನ್ನು ಮಾಡಿ, ಶಿಬಿರವನ್ನು ಸೇರಿದನು. ಪಾಂಡವರೂ ಸೇನಾವಹಾರವನ್ನು ಮಾಡಿ, ವಿಜಯ ಹರ್ಷಧ್ವಾನಗಳನ್ನು ಮಾಡುತ್ತಾ ಬರುವ ವೀರರಿಂದ ಕೂಡಿ, ತಂತಮ್ಮ ಶಿಬಿರವನ್ನು ಸೇರಿದರು.

ಆಗ ಅರ್ಜುನನು ಶ್ರೀವೇದವ್ಯಾಸರನ್ನು ಕಂಡನು. ವಂದಿಸಿ, ಆಸನದಿ ಕೂಡಿಸಿ, ಆತನು 'ಭಗವನ್ ! ಪ್ರತಿನಿತ್ಯವು ನಾನು ರಣರಂಗದಲ್ಲಿ ಶತ್ರುಸಂಹರಣ ಕಾರ್ಯವನ್ನು ಮಾಡುತ್ತಾ ಹೋಗುವಾಗ, ನನ್ನ ಅಗ್ರ ಭಾಗದಲ್ಲಿ ಒಬ್ಬ ಮಹಾವೀರರನ್ನು ನೋಡುತ್ತಿರುವೆನು. ಆತನು ತ್ರಿಶೂಲದಿಂದ ತಿವಿದು ನನ್ನ ಶತ್ರುಗಳನ್ನು ಸಂಹರಿಸುವನು; ಆತನಿಂದ ಸಂಹೃತರಾದವರನ್ನೇ ನಾನು ಸಂಹರಿಸುವೆನು. ಜನರು ಆತನನ್ನು ಕಾಣಲಾರದೆ ನಾನೇ ಶತ್ರುಸಂಹಾರಕನೆಂದು ತಿಳಿಯುತ್ತಿರುವರು ? ಆತನಾರು ? ಶ್ರೀಕೃಷ್ಣನೇ ಇರಬಹುದೇ ? ಏಕೆಂದರೆ ಆತನೇ ಗೀತೋಪದೇಶವನ್ನು ಮಾಡುತ್ತಾ 'ಪಾರ್ಥ ! ನಾನೇ ನಿಂತು ನಿನ್ನೆಲ್ಲ ಶತ್ರುಗಳನ್ನು ಮೃತಪ್ರಾಯರನ್ನು ಮಾಡಿರುವೆನು. ನೀನು ಅವರನ್ನು ನಿಮಿತ್ತಮಾತ್ರನಾಗಿ ಕೊಂದು, ಕೀರ್ತಿವಿಜಯಗಳನ್ನು ಪೊಂದು !' ಎಂದಾಜ್ಞಾಪಿಸಿದನು. ಅಥವಾ ರುದ್ರನಿರಬಹುದೆ ? ಏಕೆಂದರೆ ತ್ರಿಶೂಲಧಾರಿಯಾಗಿ ಗುಡುಗುತ್ತಿರುವನು' ಎಂದು ಕೇಳಿದನು.

ಶ್ರೀವ್ಯಾಸನು ಅರ್ಜುನನಿಗೆ ವಿಜಯವನ್ನೀಯಲು ಸಹಕರಿಸುವ ವೈಷ್ಣವಾಗ್ರಣಿ ಶಿವನ ಮಹಿಮೆಯನ್ನು ತಿಳಿಸುತ್ತಿಂತೆಂದನು : 'ಅರ್ಜುನ ! ಆತನು ಶಿವನು ; ಮರೀಚ್ಯಾದಿ ಪ್ರಜಾಪತಿಗಳಲ್ಲಿ ಶ್ರೇಷ್ಠನು, ವರವೀವರಲ್ಲಿ ಆಶುತೋಷನು, ಬ್ರಹ್ಮಪುತ್ರರಲ್ಲಿ ಜ್ಯೇಷ್ಠನು, ಕೊಲ್ಲುವವರಲ್ಲಿ ಕಾಲನು, ಆದ ಶಂಕರನು ನಿನ್ನ ಶತ್ರು ಸಂಹಾರಕನಾಗಿ, ಮುಂದೆ ಹೋಗುತ್ತಿರುವನು. ನಿನ್ನಲ್ಲಿ ಪ್ರಸನ್ನನಾಗಿ ಶಿವನು ಮುಂದೆ ಹೋಗುವಾಗ ನಿನಗೆ ಅಪಜಯವೆಲ್ಲಿಯದು ? ದೇವವಂದ್ಯನು, ಭಕ್ತಶುಭಂಕರನು ಆದ ಶಂಕರನಿಗೆ ವಂದಿಸು ! ಇಂತು ಸ್ತುತಿಸು !'

'ರುದ್ರ ! ನಿನಗೆ ನಮಃ ! ಶಿತಿಕಂಠ! ಕನಿಷ್ಠ! ಸುವರ್ಚಸ್ವಿ ! ಕಪರ್ದಿ! ಕರಾಲ! ಹರ್ಯಕ್ಷ ! ವರದ ! ಯಾಮ್ಯ ! ರಕ್ತಕೇಶ ! ಶಂಕರ ! ಕಾಮ್ಯ ! ಹರಿನೇತ್ರ ! ಸ್ಥಾಣು ! ಪುರುಷ ! ಹರಿಕೇಶ ! ಮುಂಡ ! ಕೃಶ ! ಉತ್ತಾರಣ ! ಭಾಸ್ಕರ! ವ್ಯನ್ತ ! ದೇವದೇವ! ರಂಹ! ಬಹುರೂಪ! ಶರ್ವ! ಪ್ರಿಯ! ಪ್ರಿಯವಾಸ! ಉಷ್ಣೀಷಿ! ಸುವಕ್ತ್ರ ! ಸಹಸ್ರಾಕ್ಷ! ಮೀಢುಷ! ಗಿರಿಶ! ಪ್ರಶಾಂತ! ಪತಿ! ಚೀರವಾಸ! ಹಿರಣ್ಯಬಾಹು! ರಾಜ! ಉಗ್ರ! ದಿಶಾಂಪತಿ! ಪರ್ಜನ್ಯಪತಿ! ಭೂತಪತಿ! ವೃಕ್ಷಪತಿ! ಗವಾಂಪತಿ! ವೃಕ್ಷೈರಾವೃತಕ! ಸೇನಾನಿ! ಮಧ್ಯಮ! ಸ್ರುವಹಸ್ತ! ದೇವ! ಧನ್ವಿ ! ಭಾರ್ಗವ ! ಬಹುರೂಪ ! ವಿಶ್ವಪತಿ ! ಮುಂಜವಾಸ ! ಸಹಸ್ರಶಿರ ! ಸಹಸ್ರನಯನ ! ಸಹಸ್ರಬಾಹು ! ಸಹಸ್ರಚರಣ ! ಭುವನೇಶ್ವರ ! ಉಮಾಪತಿ ! ವಿರೂಪಾಕ್ಷ! ದಕ್ಷಯಜ್ಞನಿಬರ್ಹಣ! ಪ್ರಜಾಪತಿ! ಅತ್ಯುಗ್ರ! ಕಪರ್ದಿ! ವೃಷಾವರ್ತ! ವೃಷನಾಭ ! ವೃಷಧ್ವಜ ! ವೃಷದರ್ಪ ! ವೃಷಪತಿ ! ವೃಷಶೃಂಗ ! ವೃಷಾಂಕ ! ವೃಷಭೋದಾರ ! ವೃಷಭೇಕ್ಷಣ ! ವೃಷಾಯುಧ ! ವೃಷಶರ ! ಮಹೋದರ ! ಮಹಾಕಾಯ! ಲೋಕೇಶ! ಬ್ರಹ್ಮಣ್ಯ! ಬ್ರಾಹ್ಮಣಪ್ರಿಯ! ತ್ರಿಶೂಲ! ಪಾಣಿ! ಪ್ರಭು! ಪಿನಾಕಿ ! ಸುರೇಶ! ವೈಶ್ರವಣಸಖ! ಸುವ್ರತ! ತಪಸ್ವಿ! ಉಗ್ರಾಯುಧ! ಸುರವರ!

ಸುಧನ್ವಿ! ತ್ರಿಪುರಘ್ನ! ದಕ್ಷಯಜ್ಞನಾಶಕ! ಭಗನೇತ್ರಹರ! ಪಾಪಹರ! ಪೂಷ್ಣದಂತಹರ! ಪುರಹರ! ಕಮಲಾಕ್ಷನಾಮಕ ದೈತ್ಯನೇತ್ರ ಕಮಲಪೂಜಿತ! ಕಮಲಾಕ್ಷತಾರಕಾಕ್ಷ ವಿದ್ಯುನ್ಮಾಲಿನಾಮಕ ತ್ರಿಪುರಾಸುರ ಸಂಹಾರಕ! ನಮೋನಮಃ!'

'ಗಂಧಮಾದನ ವಿಂಧ್ಯಗಳು ಅಲ್ಪಧ್ವಜಗಳಾಗಿ, ಮೇರುವು ಮಹಾಧ್ವಜವಾಗಿ, ಪೃಥ್ವಿಯು ರಥವಾಗಿ, ನಾಗೇಂದ್ರನು ಅಕ್ಷವಾಗಿ, ಚಂದ್ರಸೂರ್ಯರು ಚಕ್ರಗಳಾಗಿ, ಏಲಪುತ್ರಪುಷ್ಪದಂತರೆಂಬ ನಾಗರು ಕಣ್ಣಗಳಾಗಿ, ಮಲಯವು ನೊಗೆಯಾಗಿ, ತಕ್ಷಕನು ಬಂಧನರಜ್ಜುವಾಗಿ, ವೇದಗಳು ನಾಲ್ಕು ಕುದುರೆಗಳಾಗಿ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಪಶ್ಚಿಮವೇದಗಳು ಜೀನಾಗಿ, ಗಾಯತ್ರಿಯು ಕಡಿವಾಣವಾಗಿ, ಓಂಕಾರವು ತೋತ್ರವಾಗಿ, ಬ್ರಹ್ಮನು ಸಾರಥಿಯಾಗಿ, ವಾಸುಕಿಯು ಬಿಲ್ಲಿನ ನಾರಾಗಿ, ಮಂದರವು ಬಿಲ್ಲಾಗಿ, ಶ್ರೀಹರಿಯೇ ಶರವಾಗಿ, ವಾಯುವು ಪಾರ್ಶ್ವರಕ್ಷಕನಾಗಿ, ಯಮನು ಪುಂಖನಾಗಿ, ನಿಂತ ದಿವ್ಯರಥವನ್ನೇರಿ, ಮಾಹೇಶ್ವರ ಸ್ಥಾನದಲ್ಲಿ ನಿಂತು ಮಹಾದೇವನು ತ್ರಿಪುರಾಸುರರನ್ನು ಸುಟ್ಟು ಪುರಸಹಿತವಾಗಿ ನಾಶಮಾಡಿದನು.

ಸಾವಿರ ವರ್ಷಕಾಲ ಹರಿಯನ್ನು ನೆನೆಯುತ್ತಾ ಸ್ಥಾಣುವಂತೆ ನಿಂತು ತಪಗೈದವನು ಸ್ಥಾಣುವು ಘೋರನೆನಿಸಿ ಸಂಹರಿಸುವನು. ರುದ್ರನು ಶಿವನೆನಿಸಿ ಕಾಪಾಡುವನು ಶಂಕರನು. ಅವನ ಅಂತರ್ಯಾಮಿ ಶ್ರೀನೃಸಿಂಹನು. ಶಿವಪ್ರಭುನೆನಿಸಿ ಬಡಬಾಗ್ನಿರೂಪದಿಂದ ಸಮುದ್ರದಲ್ಲಿ ನಿಂತಿರುವನು. ಪಶುಗಳೆಂದರೆ ಜೀವರು; ಅವರನ್ನು ಪಾಲಿಸುವುದರಿಂದ ಆತನನ್ನು ಪಶುಪತಿ ಎಂಬರು. ಪಶುಪತಿಯ ಕೇಶರಾಶಿಯೇ ಮೇಘಗಳು; ಆದುದರಿಂದ ಆತನು ಧೂರ್ಜಟಿ ಎಂದು ಕರೆಯಲ್ಪಡುವನು. ಇಂದ್ರಾದಿದೇವತೆಗಳಿಗೆ ಒಡೆಯನಾದುದರಿಂದ ಅವನು ಮಹಾದೇವನೆನಿಸಿರುವನು. ಪ್ರಳಯದಲ್ಲಿ ಅವರನ್ನು ಹರಿಸಿ ಹರನೆನಿಸಿರುವನು. ಲಲಾಟನೇತ್ರನಾಗಿ ತ್ರ್ಯಕ್ಷನೆನಿಸಿರುವನು.' ಇಂತಹ ಶಿವನು ನಿನ್ನ ರಕ್ಷಕನಾಗಿ, ಸಂಗ್ರಾಮ ರಂಗದಲ್ಲಿ ಹೋಗುತ್ತಿರಲು ವಾಸುದೇವಾನುಗ್ರಹವೇ ಕಾರಣವೆಂದು ತಿಳಿ! ಜಯದ್ರಥನ ವಧೆಗಾಗಿ ಪಾಶುಪತವನ್ನು ವೀರ್ಯವತ್ತರವನ್ನಾಗಿ ಸಾಧಿಸುವ ಸಲುವಾಗಿ ನಿನ್ನನ್ನು ನಿನ್ನ ನಿಯತ ಗುರುವಾದ ಉಮಾಪತಿಯಲ್ಲಿ ಸೇರಿಸಿ, ಕಾಪಾಡಿದ ಕೃಷ್ಣನೇ ರುದ್ರಾದಿ ಸರ್ವಜಗತ್ಪ್ರೇರಕನು. ಶ್ರೀಕೃಷ್ಣಾಜ್ಞೆಯಂತೆ ಬ್ರಹ್ಮರುದ್ರೇಂದ್ರಾದಿ ದೇವತೆಗಳು, ಋಷಿಗಂಧರ್ವರೂ, ಧರ್ಮವಂತರಾದ ನಿಮಗೆ ಅನುಕೂಲವಾಗಿರುವರು. ಅರ್ಜುನ! ನಿನಗೆ ನಾನು ಪೇಳಿದ ಶತರುದ್ರೀಯವನ್ನು ಜಪಿಸುವವರು, ಪಠಿಸುವವರು, ಆಲಿಸುವವರು ಕೂಡ ಆಯುರಾರೋಗ್ಯ ಭಾಗ್ಯಗಳನ್ನು ಪೊಂದಿ ಸುಖಿಸುವರು. ಕೌಂತೇಯ! ಹೆದರದೆ ಹೊಡೆದಾಡಿ ಶತ್ರುಜಯವನ್ನು ಗಳಿಸು! ನಿನಗೆ ರಕ್ಷಕನು, ಮಂತ್ರಿಯು, ಸಾರಥಿಯು ಆಗಿ ಜನಾರ್ಧನನಿರುವನು. ಅನಿಮಿತ್ತ ಬಂಧುವು, ಪರಮಸಖನು ಆದ ಗೋವಿಂದನು ರಕ್ಷಿಸುತ್ತಿರೆ, ನಿಮಗೆ ಅಪಜಯವಾಗುವದಿಲ್ಲ. ಜಯವಾಗುವುದು!'

ಇಂತು ನುಡಿದು ಶ್ರೀವ್ಯಾಸ ಭಗವಂತನು ಅಂತರ್ಧಿತನಾದನು. ಅರ್ಜುನನು ಆನಂದತುಂದಿಲನಾಗಿ ಶ್ರೀಕೃಷ್ಣನನ್ನು ವಂದಿಸಿ ಶಿಬಿರದಲ್ಲಿ ವಾಸಮಾಡಿದನು. ಪಾಂಡವರು ಭಕ್ತವತ್ಸಲನಾದ ಕೇಶವನನ್ನು ಸ್ತುತಿಸುತ್ತಾ ಅಹಶ್ಶೇಷವನ್ನು ಕಳೆದರು. ಅಂದು ಬಹುಳ ತ್ರಯೋದಶಿ. ಇಂತು ಐದು ದಿನಗಳು ಹೋರಾಡಿ ಮಹಾಬಲನಾದ ದ್ರೋಣನು ನಿಹತನಾದನು. ಆತನು ಸ್ವರ್ಗವನ್ನು ಸೇರಿ ಬೃಹಸ್ಪತಿಯಲ್ಲಿ ಲೀನನಾದನು. ಇಲ್ಲಿಗೆ ದ್ರೋಣಪರ್ವ ಮುಗಿಯಿತು. ರಾಜನ್ ! ವೇದವನ್ನೋದಿದ ಫಲವೇ ಪರ್ವವನ್ನೋದಿದವರಿಗೆ ಸಿಗುವುದು. ಪರ್ವಸಪ್ತಮವನ್ನು ಶ್ರದ್ಧೆಯಿಂದ ಕೇಳಿದವರು, ಹೇಳಿದವರು ಸಕಲ ಪಾಪಗಳಿಂದ ಮುಕ್ತರಾಗುವರು. ವಿಪ್ರನು ಸಾಂಗಯಜ್ಞದ ಫಲವನ್ನೂ ಕ್ಷತ್ರಿಯನು ಅಭೀರು ರಣಮರಣ ಫಲವನ್ನು ವಿಜಯವನ್ನು ವೈಶ್ಯನು, ಸರ್ವಸ್ವದಾನ ಫಲವನ್ನು ಶೂದ್ರನು ಸರ್ವಶುಭಕರ್ಮಫಲವನ್ನು ಹೊಂದಿ, ಸುಖಿಸುವರು. ಅವರೆಲ್ಲರಿಗೂ ಸರ್ವಾಭೀಷ್ಟ ಸಿದ್ಧಿಯಾಗುವುದು. ಪುತ್ರಪೌತ್ರಪರಿವೃತರಾಗಿ ಅವರು ಆನಂದದಿಂದಿರುವರು.

**ದ್ರೋಣಪರ್ವ ಮುಗಿಯಿತು**



# ೮. ಕರ್ಣಪರ್ವ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು :

'ರಾಜನ್ ! ದ್ರೋಣನ ನಿರ್ಯಾಣದಿಂದ ದುಃಖಿತರಾದ ದುರ್ಯೋಧನಾದಿಗಳು ಅಶ್ವತ್ಥಾಮನಿಂದ ಕೂಡಿ ಆಚಾರ್ಯನಿಗಾಗಿ ಶೋಕಿಸಿದರು. ಸೂತಪುತ್ರ ದುಃಶಾಸನ ಶಕುನಿಸಮೇತನಾದ ದುರ್ಯೋಧನನಿಗೆ ಅಂದಿನ (ತ್ರಯೋದಶಿ) ರಾತ್ರಿ ನೂರು ವರ್ಷದಂತೆ ದೀರ್ಘವಾಗಿ ಕಂಡಿತು. ನಿದ್ದೆಬಾರದೆ ಅವರು ಪಾಂಡವರು ಪಟ್ಟ ಕ್ಲೇಶಗಳಿಂದ ದ್ಯೂತಪರಾಜಯ, ಸತೀಪರಾಭವ, ವನವಾಸ ನೆನೆದು, ಉದ್ವಿಗ್ನ ಮನಸ್ಕರಾಗಿದ್ದು, ಮರುದಿನ ಪ್ರಭಾತವಾಗಲು ವಿಧಿಗೆ ತಲೆಬಾಗಿ ಮತ್ತೆ ಯುದ್ಧ ಸನ್ನದ್ಧರಾದರು. ಪ್ರಾತಃಕಾಲಾವಶ್ಯಕಗಳನ್ನು ಮುಗಿಸಿ, ಶಿಬಿರಗಳಿಂದ ತೆರಳಿದ ಕುರುಸೇನೆಯು, ಸಿದ್ಧವಾಗಿ ಬಂದು ನಿಂತಿದ್ದ ಪಾಂಡವಸೇನೆಯೊಡನೆ ಕಾದಲಾರಂಭಿಸಿತು. ಪರಸ್ಪರ ಜಯೈಷಿಗಳಾಗಿ ಹೋರಾಡುವ ಸೇನೆಗಳು ದೇವಾಸುರ ಸೇನೆಗಳಂತೆ ಕಂಡವು. ಚತುರ್ದಶಿ ಮತ್ತು ಚತುರ್ದಶಿ ಬಂದುದರಿಂದ, ಆ ಎರಡು ದಿನಗಳು ಹದಿನಾರು, ಹದಿನೇಳನೆಯ ದಿನಗಳು ಭಯಂಕರವಾಗಿ ಹೋರಾಡಿ, ಕುರುಸೇನಾಪತಿಯಾಗಿದ್ದ ಕರ್ಣನು ಅರ್ಜುನ ಶರಕ್ಕೆ ತುತ್ತಾಗಿ ರಣರಂಗದಿ ಬಿದ್ದು ಮೃತನಾದನು. ಆಗ ಹದಿನೇಳನೆಯ ದಿನದ ರಾತ್ರಿಯಾಗಲು ಸಂಜಯನು ರಣರಂಗದಿಂದ ಹಿಂದಿರುಗಿ ಬಂದು, ಧೃತರಾಷ್ಟ್ರನಿಗೆ ಆ ವೃತ್ತಾಂತವನ್ನು ನಿರೂಪಿಸಿದನು.

'ಹಾ ! ಕಷ್ಟಂ ! ರಾಜನ್ ! ಕರ್ಣನು ಹತನಾದನು. ನಿನ್ನ ಅಪರಾಧದಿಂದ ಇಷ್ಟನರ್ಥವಾಯಿತು. ವಿದುರ ದ್ರೋಣ ಗಾಂಗೇಯರು ಯುದ್ಧ ಬೇಡವೆಂದರು. ಕೇಶವನು ಸಂಧಿಗಾಗಿ ಶ್ರಮಿಸಿ ಹಿತನುಡಿದನು. ಪರಶುರಾಮ, ಕಣ್ವ, ನಾರದಾದಿ ಮಹಾತ್ಮರು ಬಲವದ್ವಿರೋಧವು ವಿನಾಶಹೇತುವೆಂದು ಒತ್ತಿ ಹೇಳಿದರು. ನೀನವರ ಮಾತನ್ನು ಕೇಳದೆ ಮಂಗನಂತೆ ನಡೆದೆ ! ನಿನಗಾಗಿ ಭೀಷ್ಮ, ದ್ರೋಣ, ಕರ್ಣರು ಮೃತರಾದರು. ಬಹುಸೇನೆ ನಷ್ಟವಾಯಿತು' ಎಂದ ಸಂಜಯನ ವಚನವನ್ನಾಲಿಸಿ ಧೃತರಾಷ್ಟ್ರನು ದುಃಖಿತನಾದನು.

'ಸಂಜಯ ! ದಿವ್ಯಾಸ್ತ್ರಸಂಪನ್ನನು, ವಸುಸಂಭವನು; ಪರಶುರಾಮಶಿಷ್ಯನು ಆದ ಭೀಷ್ಮನು ಶಿಖಂಡಿಯಿಂದ ಪಾತಿತನಾದನು. ರಾಜಪುತ್ರರಿಗೆ ಅಸ್ತ್ರಶಸ್ತ್ರಗಳನ್ನು ಉಪದೇಶಿಸಿ ಧನುರಾಚಾರ್ಯನೆನಿಸಿದ ದ್ರೋಣನು ಪಾಪಿ ಧೃಷ್ಟದ್ಯುಮ್ನನಿಂದ ಹತನಾದನು. ದ್ರೋಣಪುತ್ರನ ನಾರಾಯಣಾಸ್ತ್ರವು ಕೃಷ್ಣನಿಂದ ವಿಫಲವಾಗಿಸಲ್ಪಟ್ಟಿತು. ಆಗ್ನೇಯಾಸ್ತ್ರವೂ ವ್ಯರ್ಥವಾಯಿತು. ದೈವವು ಪ್ರತಿಕೂಲವಾಗಿರಲು ನಮ್ಮವರೆಂತು ಗೆಲ್ಲುವರು ? ಈಗ ದ್ರೋಣನ ಮೃತಿಯಿಂದ ನೊಂದಿರುವ ದುರ್ಯೋಧ ನಾದಿಗಳೇನು ನಿಶ್ಚಯಿಸಿದರು. ಕರ್ಣನು ಎಂತು ಮೃತನಾದನು ? ಎಲ್ಲವನ್ನು ವಿವರವಾಗಿ ಹೇಳು ! ಪಾಷಾಣಚಿತ್ತನಾಗಿ

ಕೇಳುವೆನು ' ಎಂದ ರಾಜನಿಗೆ ಸಂಜಯನು ಕರ್ಣಸೇನಾಪತ್ಯದ ವೃತ್ತಾಂತವನ್ನು ತಿಳಿಸತೊಡಗಿದನು.

'ರಾಜನ್ ! ಯುದ್ಧವಾಯಿತೆಂದರೆ, ಅದು ನಿನ್ನ ದೋಷದಿಂದ ! ವೀರರು ಮೃತರಾದರೆಂದರೆ, ಅದು ನಿನ್ನ ಮಗನ ದುರಭಿಮಾನದಿಂದ! ಸ್ಥಿರನಾಗಿ ಕೇಳು! ಆಗ ನಗುತ್ತಾ ಕೇಳಿದ್ದಾಯಿತು. ಈಗ ಅಳುತ್ತಾ ಕೇಳಬೇಕಾಗಿದೆ! ದ್ರೋಣನ ಮೃತಿಯಿಂದ ದುಃಖಿತರಾಗಿ ಗೌರವ ವೀರರು ಶಿಬಿರಗಳನ್ನು ಸೇರಿದರು. ಅವರ ಮುಖ ಬಿಳುಪೇರಿತ್ತು. ಕೈಗಳಲ್ಲಿದ್ದ ಕೈದುಗಳು ಜಾರಿ ಬಿದ್ದವು, ಕಣ್ಣಲ್ಲಿ ನೀರು ಹರಿಯಿತು. ಮೇಲಕ್ಕೆತ್ತಿದ ಮುಖಗಳಲ್ಲಿ ನಿರಾಶೆ ಮೂಡಿತ್ತು. ನೀರವರಾಗಿದ್ದ ಸೈನಿಕರನ್ನು ಕಂಡು ದುರ್ಯೋಧನನು ಅವರಿಗೆ ಧೈರ್ಯವನ್ನು ತುಂಬುತ್ತಾ ಇಂತೆಂದನು:

'ನಿಮ್ಮೆಲ್ಲರ ಬಾಹುಬಲವನ್ನು ನಂಬಿ, ಪಾಂಡವರಿಂದ ಕೂಡಿ ಸೆಣಸಾಡಲು ಹವಣಿಸಿದೆನು. ಈಗ ದ್ರೋಣಾಚಾರ್ಯನು ಮೃತನಾದನೆಂದು ಇಷ್ಟು ನಿರುತ್ಸಾಹರಾದರೆ ಗತಿ ಏನು? ಯುದ್ಧದಲ್ಲಿ ಯೋಧರು ಹತರಾಗುವರು; ಜಿತರಾಗುವರು. ಇದರಲ್ಲೇನಾಶ್ಚರ್ಯವಿದೆ? ವಿಗತಭಯರಾಗಿ ಕಾದಾಡಿ! ಮಹಾತ್ಮರಾದ ಕರ್ಣಗುರುಪುತ್ರರು ನಮಗೆ ನಾಯಕರಾಗಿ ಜಯವನ್ನು ಗಳಿಸಿಕೊಡುವರು. ದಿವ್ಯಾಸ್ತ್ರ ಬಲಸಂಪನ್ನನಾದ ಕರ್ಣನನ್ನೆದುರಿಸಿ ನಿಲ್ಲಲಾರದೆ, ಅರ್ಜುನನು ಅವನಿಂದ ದೂರ ಸರಿಯುತ್ತಿರುವನು. ಕರ್ಣನ ಕೈಗೆ ಸಿಕ್ಕು, ಅವನ ಕರುಣೆಯಿಂದ ಬದುಕಿಹೋದ ಸಹದೇವನ ಕಥೆಯನ್ನು ಯಾರರಿಯರು? ನಾಗಾಯುತ ಬಲನಾದ ಭೀಮನೂ ಅಂತಹ ಅವಸ್ಥೆಗೆ ಈಡಾದನೆಂದರೆ ನಮ್ಮ ಕರ್ಣನು ಅಸಮಾನ ವೀರನೆಂದು ಹೇಳಬೇಕೇ? ಅವನ ದುರ್ವಾರ ವೀರ್ಯವನ್ನು ಶತ್ರು ಜೀವನಿರ್ವಾಪಣಪ್ರತಾಪವನ್ನು ಇಂದು ಕಾಣುವಿರಿ. ಘಟೋತ್ಕಚನಂತಹ ಮಾಯಾ ಯುದ್ಧಪಂಡಿತನನ್ನು ಶಕ್ತಿಯಿಂದ ಚೆಂಡಾಡಿದ ಮಹಾವೀರನಿಗೆ ಪಾಂಡವರು ಸಾಟಿಯೇ? ದ್ರೋಣಪುತ್ರನೂ ಅವನಿಗೆ ನೆರವಾಗಿ ನಿಲ್ಲುವನು. ಕಿಚ್ಚಿಗೆ ಗಾಳಿ ಜೋಡಾದಂತೆ ಉರಿಯುವ ಕರ್ಣಾಶ್ವತ್ಥಾಮರ ಪ್ರತಾಪಾಗ್ನಿಗೆ ಸಿಕ್ಕು ಪಾಂಡವಸೇನಾಕಕ್ಷವು ಕ್ಷಣದಲ್ಲಿ ಭಸ್ಮೀಭೂತವಾಗುವುದು.'

ಇಂತು ನುಡಿದು ದುರ್ಯೋಧನನು ಗುರುಪುತ್ರನ ಅನುಮತಿಯನ್ನು ಪಡೆದು, ಕರ್ಣನನ್ನು ಸರ್ವಸೇನಾಪತಿಯಾಗಿಸಿ ಪಟ್ಟಗಟ್ಟಿದನು. ಅವಕ್ರವಿಕ್ರಮನಾದ ಸೂತಸುತನು ಸೇನಾಪತಿತ್ವವನ್ನು ವಹಿಸಿ ಸಿಂಹನಾದವನ್ನು ಮಾಡುತ್ತಾ, ರಣಾಂಗಣವನ್ನು ಪ್ರವೇಶಿಸಿದನು. ಆತನು ಎರಡು ದಿನಗಳು ಹೋರಾಡಿ, ಸಾವಿರಾರು ಯೋಧರನ್ನು ಸಂಹರಿಸಿ, ಕೊನೆಗೆ ಸವ್ಯಸಾಚಿಯ ಸಾಯಕಕ್ಕೆ ಸಿಕ್ಕು ಮೃತನಾದನು.

ಆ ವೃತ್ತಾಂತವನ್ನು ಕೇಳಿ ಧೃತರಾಷ್ಟ್ರನು 'ಹಾ!' ಎಂದುಸುರಿ, ಮೂರ್ಛಿತನಾದನು. ರಾಜನು ನೆಲದಿ ಮೂರ್ಛಿತನಾಗಿ ಬೀಳಲು ನೋಡಿ, ಅಂತಃಪುರಾಂಗನೆಯರು ಆರ್ತನಾದಮಾಡಿದರು. ಶೋಕಾರ್ಣವನಿಮಗ್ನರಾದ ಭಾರತ ತರುಣಿಯರು ರೋದಿಸುವ ಧ್ವನಿಯಿಂದ ರಾಜಪ್ರಾಸಾದದ ಕಲ್ಲು ಕರಗುವಂತಿತ್ತು. ಗಾಂಧಾರಿಯೂ ಎಚ್ಚರದಪ್ಪಿ ಬಿದ್ದಳು.

ಸಂಜಯನು ಶೀತಲೋಪಚಾರಗಳಿಂದ ಅವರಿಗೆ ಎಚ್ಚರಬರಿಸಿ, ಸಮಾಧಾನಪಡಿಸಿದನು. ಧೃತರಾಷ್ಟ್ರನು ಬಲುಹೊತ್ತು ಹುಚ್ಚನಂತಿದ್ದನು. ನಿಟ್ಟುಸಿರಿಟ್ಟು, ಕಣ್ಣೀರನ್ನೊರೆಸಿಕೊಂಡು ಅಂಧರಾಜನು, ತನ್ನ ಸುತರ ದುಷ್ಟ ಸ್ವಭಾವವನ್ನು ನೆನೆದು ಚಿಂತಿಸಿದನು. 'ಸಂಜಯ! ಜಯಾಶೆಗೆ ದೂರನಾಗಿ ನನ್ನ ಪುತ್ರನೇನು ಮಾಡಿದನು? ಕರ್ಣನೆಂತು ಹತನಾದನು? ಎಲ್ಲ ವಿವರವನ್ನೂ ತಿಳಿಸು!' ಎಂದು ಕೇಳಿದ ರಾಜನಿಗೆ ಸಂಜಯನಿಂತೆಂದನು:

'ರಾಜನ್! ಹತ್ತು ದಿನಗಳ ಯುದ್ಧದಲ್ಲಿ ಹತ್ತಾರು ಸಾವಿರ ಯೋಧರನ್ನು ವಧಿಸಿ, ವೀರವರನಾದ ಪಿತಾಮಹನು ಶರಪಂಜರದಲ್ಲಿ ಮಲಗಿದನು. ಮತ್ತೈದು ದಿನಗಳವರೆಗೂ ಕಡಿದಾಡಿ ಆಚಾರ್ಯನು ಹತನಾದನು. ಹತಶೇಷವಾದ ಪಾಂಡವೀಸೇನೆಯಲ್ಲಿ ಅರ್ಧವನ್ನು ಸಂಹರಿಸಿ, ಇಂದು ಕರ್ಣನು ಅರ್ಜುನನಿಂದ ಹತನಾದನು. ವಿವಿಂಶತಿ, ವಿಕರ್ಣರು ಭೀಮನಿಂದ ಹತರಾದರು. ಮಹಾವೀರನಾದ ಜಯದ್ರಥನು ಅರ್ಜುನನಿಂದ ಹತನಾದನು. ದುರ್ಯೋಧನ ಸುತನಾದ ಲಕ್ಷಣನು ಅಭಿಮನ್ಯುವಿನಿಂದ ಹತನಾದನು. ದುಶ್ಶಾಸನ ಸುತನು ದ್ರೌಪದೇಯನಿಂದ ಹತನಾದನು. ಭಗದತ್ತನು ಅರ್ಜುನನಿಂದ ಹತನಾದನು. ಭೂರಿಶ್ರವನನ್ನು ಸಾತ್ಯಕಿಯು ಕೊಂದನು. ಅಂಬಷ್ಠನಾದ ಶ್ರುತಾಯುವು ಅರ್ಜುನನಿಂದ ಹತನಾದನು. ನಿನ್ನ ಮಗನಾದ ದುಶ್ಶಾಸನನ್ನು ಕೊಂದು, ಭೀಮಸೇನನು ಅವನ ರಕ್ತವನ್ನು ಪಾನಮಾಡಿ ಪ್ರತಿಜ್ಞೆಯನ್ನು ಪೂರೈಸಿದನು. ಸುದಕ್ಷಿಣನು ಅರ್ಜುನಹತನಾದನು. ಕೋಸಲರಾಜನು ಅಭಿಮನ್ಯು ಹತನಾದನು. ಚಿತ್ರಸೇನನು ಭೀಮನಿಹತನಾದನು. ಶಲ್ಯಸುತನನ್ನು ಅಭಿಮನ್ಯುವು ಕೊಂದನು. ವೃಷಸೇನನು ಕರ್ಣನೆದುರೆಗೆ ಅರ್ಜುನನಿಂದ ಕೊಲ್ಲಲ್ಪಟ್ಟನು. ರುಕ್ಮರಥ (ಶಲ್ಯಪುತ್ರ) ನು ಸಹದೇವನಿಂದ ಹತನಾದನು. ಶ್ರುತಾಯುಧನು ಅರ್ಜುನನಿಂದ ಸಂಹರಿಸಲ್ಪಟ್ಟನು. ಕೈಕಯ ಬೃಹತ್‌ಕ್ಷತ್ರನು ಅರ್ಜುನಹತನಾದನು. ಭಗದತ್ತಸುತನು ನಕುಲನಿಹತನಾದನು. ಬಾಹ್ಲೀಕನನ್ನು ಭೀಮನು ಸಂಹರಿಸಿದನು. ಜರಾಸಂಧಸುತ ಜಯತ್ಸೇನನು ಅಭಿಮನ್ಯು ನಿಹತನಾದನು. ನಿನ್ನ ಪುತ್ರರಾದ ದರ್ಮುಖಿ, ದುಸ್ಸಹ, ದುರ್ಮರ್ಷಣ, ದುರ್ವಿಷಹ, ದುರ್ಜಯ ಮೊದಲಾದ ಬಹು ವೀರರು ಭೀಮಸೇನನಿಂದ ಕೊಲ್ಲಲ್ಪಟ್ಟರು. ನಿನ್ನ ಸಚಿವರಾದ ವೃಷವರ್ಮಾದಿಗಳನ್ನೂ ಆತನೇ ಕೊಂದನು. ವಶಾತಿ, ತ್ರಿಗರ್ತರಾದಿ ಸಾವಿರಾರು ಮಹಾವೀರರು, ಪೌರವ, ಕಳಿಂಗ, ಗೋಪಾಲವೀರರು ಎಲ್ಲರೂ ಅರ್ಜುನ ನಿಹತರಾದರು. ಸಂಸಪ್ತಕರೂ ಪಾರ್ಥನಿಂದ ಸಂಹೃತರಾದರು. ನಿನ್ನ ಮೈದುನರಾದ ವೃಷಕ ಅಚಲರೂ ಪಾರ್ಥನಿಂದ ನಿಹತರಾದರು. ಕ್ಷೇಮಧೂರ್ತಿಯನ್ನು ಭೀಮಸೇನನು ಕೊಂದನು. ಜಲಸಂಧನು ಸಾತ್ಯಕಿನಿಹತನಾದನು. ಅಲಂಬುಷ, ಅಲಾಯುಧರನ್ನು ಘಟೋತ್ಕಚನು ಕೊಂದನು. ಪಾರ್ಥನು ಸಂಹರಿಸಿದ ವೀರರನ್ನೂ, ಭೀಮಸೇನನು ಕೊಂದ ಗಜಾದಿ ಗತಯೋಧರನ್ನೂ ಎಣಿಸಿ ಪೆಸರಿಸಲು ಸಾಧ್ಯವಲ್ಲ. ತ್ರೈಲೋಕ್ಯ ಮೋಹನವಾದ ಮಹಾಯುದ್ಧವನ್ನು ಮಾಡಿ ರಾಧೇಯನು ಇಂದು ಅರ್ಜುನನಿಂದ ಸಂಹರಿಸಲ್ಪಟ್ಟನು. ಅವನ ಹಿಂದೇ ಧಾರ್ತರಾಷ್ಟ್ರನು ವಿಜಯಾಶೆಯೂ

ಹೋಯಿತು. ರಾಜ್ಯಕಾಮುಕನಾದ ನಿನ್ನ ಪುತ್ರನಿಂದ ಇಂತಹ ಜನ ಕ್ಷಯಂಕರವಾದ ಘೋರ ಯುದ್ಧವು ನಡೆಯಿತು.

ಇನ್ನು ಪಾಂಡವ ಸೇನೆಯಲ್ಲಿ ಮೃತರಾದವರನ್ನು ತಿಳಿಸುವೆನು ಕೇಳು! ಭೀಷ್ಮನಿಂದ ಕುಂತಿರಾಜವೀರರು ಮೊದಲಾದ ಸಾವಿರಾರು ಮಹಾಯೋಧರು ಹತರಾದರು. ಸತ್ಯಜಿತ ಮೊದಲಾದ ಪಾಂಚಾಲ ಮಹಾರಥರು ದ್ರೋಣನಿಹತರಾದರು. ಸಸುತಸೋದರರಾದ ವಿರಾಟ ದ್ರುಪದರೂ ದ್ರೋಣನಿಹತರಾದರು. ಅಭಿಮನ್ಯುವು ಬಾಲನಾದರೂ ಸಮರ ರಂಗದಲ್ಲಿ ಬಲರಾಮ ಪಾರ್ಥರಂತೆ ವಿಕ್ರಮಿಸಿ, ದ್ರೋಣ, ದ್ರೌಣಿ, ಶಲ್ಯ, ಕರ್ಣ, ಕೃಪ, ಕೃತವರ್ಮರೆಂಬ ಷಡ್ರಥರಿಂದ ನಿಹತನಾದನು. ನೀಲ ವ್ಯಾಘ್ರದತ್ತರು ಅಶ್ವತ್ಥಾಮನಿಂದ ಹತರಾದರು. ಚಿತ್ರಾಯುಧನು ವಿಕರ್ಣನಿಂದ ನಿಹತನಾದನು. ಪುರುಜಿತ್‌ಕುಂತಿಭೋಜರು ದ್ರೋಣನ ಬಾಣಕ್ಕೆ ಬಲಿಯಾದರು. ಯುಧಾಮನ್ಯೂತ್ತಮೌಜರೂ ನಿಹತರಾದರು. ಮಿತ್ರವರ್ಮ ಕ್ಷತ್ರಧರ್ಮರು ದ್ರೋಣನಿಂದ ಹತರಾದರು. ಶಿಖಂಡಿತನಯನಾದ ಕ್ಷತ್ರದೇವನನ್ನು ಲಕ್ಷ್ಮಣನು ಕೊಂದನು. ಸುಚಿತ್ರ ಚಿತ್ರವರ್ಮರು ದ್ರೋಣ ಹತರಾದರು. ವಾರ್ಧಕ್ಷೇಮಿಯು ಬಾಹ್ಲೀಕನಿಹತನಾದನು. ಧೃಷ್ಟಕೇತುವು, ಸತ್ಯಧೃತಿ, ಸೇನಾಬಿಂದು, ಸುಕೇತು (ಶಿಶುಪಾಲಜ), ದ್ರೋಣ ನಿಹತರಾದರು. ಮದಿರಾಶ್ವ ಸೂರ್ಯದತ್ತರೂ ದ್ರೋಣ ಹತರಾದರು. ವಿರಾಟಪುತ್ರರಾದ ಉತ್ತರಶಂಖರೂ ಆತನಿಂದಲೇ ನಿಹತರಾದರು. ಇನ್ನೂ ಅನೇಕ ವೀರರು ಭೀಷ್ಮ ದ್ರೋಣ ದ್ರೌಣಿ ಕರ್ಣರಿಂದ ನಿಹತರಾದರು.

'ರಾಜನ್! ಹತಶೇಷರನ್ನರುಹುವೆನು ಕೇಳು! ಪಾಂಡವರ ಪರಾಕ್ರಮ, ಶ್ರೀಕೃಷ್ಣನ ಸಹಾಯಗಳನ್ನು ಕಂಡು, ಅಹತರಾಗಿರುವವರೂ ಹತಪ್ರಾಯರೆಂದೇ ನಾನು ತಿಳಿದಿರುವೆನು. ಕೆಲರನ್ನು ಹೆಸರಿಸುವೆನು - ದೃಢದೂರ ಸೂಕ್ಷ್ಮ ಶಬ್ದವೇಧಿಗಳನ್ನರಿತ ಮಹಾರಥನು, ಮಹಾತ್ಮನು ಆದ ದ್ರೋಣಪುತ್ರನಿರುವನು. ಸಾತ್ವತ ವರಿಷ್ಠನಾದ ಕೃತವರ್ಮ, ಶಕ್ರಸಮಬಲನಾದ ಶಲ್ಯ, ಗಾಂಧಾರರಾಜ, ಶಕುನಿ, ಬಹುಚಿತ್ರಯೋಧಿಯಾದ ಕೃಪ, ಕೈಕಯರಾಜಪುತ್ರ, ನಿನ್ನ ಸುತರಾದ ಸುಷೇಣ, ಸತ್ಯಸೇನ, ಚಿತ್ರಸೇನರು, ಉಗ್ರಾಯುಧ, ಸುದರ್ಶ, ಚಿತ್ರಾಯುಧ, ಶ್ರುತವರ್ಮ, ಜಯ, ಸತ್ಯವ್ರತ, ದುಶ್ಶಲ, ಧೃತಾಯುಧ, ಚಿತ್ರಾಂಗದ, ಕರ್ಣಸುತರು ಮೊದಲಾದ ಅಮಿತಪ್ರತಾಪರಾದ ವೀರರು ನಿನ್ನ ಸುತನಿಗಾಗಿ ಕಾದಲು ನಿಂತಿರುವರು.'

ಸಂಜಯನ ನುಡಿಯು ಸಿಡಿಲಂತೆ ಬಡಿಯಲು ಧೃತರಾಷ್ಟ್ರನು ಮತ್ತೆ ಮೂರ್ಛಿತನಾದನು. ಮತ್ತೆ ಎಚ್ಚೆತ್ತ ಕುರುರಾಜನು 'ಸ್ವಲ್ಪ ನಿಲ್ಲು ಸಂಜಯ! ಅಪ್ರಿಯ ವಾರ್ತೆಯನ್ನು ಕೇಳಿ ಆರ್ತನಾಗಿರುವೆನು. ಚಿತ್ತವು ಭ್ರಾಂತವಾಗಿರುವುದು.' ಎಂದು ಸುಮ್ಮನೆ ತಲೆಗೆ ಕೈಯಿಟ್ಟು ಕೂತನು. ಪುತ್ರಮರಣವ್ಯಸನದೊಂದಿಗೆ ಕರ್ಣವಧೆಯ ವ್ಯಥೆಯು ಆತನನ್ನು ಹುಚ್ಚನಂತೆ ಮಾಡಿತು. ಮೇರುವು ಚೂರಾಯಿತೋ, ಸಮುದ್ರವು ಒಣಗಿ ನಿಂತಿತೋ, ಭೂ ಮಂಡಲವು ಪ್ರಳಯೋದಧಿಯಲ್ಲಿ ಮುಳುಗಿತೋ ಎಂಬುವಂತಾಗಿ ಧೃತರಾಷ್ಟ್ರನು ಕರ್ಣಮರಣವನ್ನು ಕೇಳಿ, ನಂಬಲಾರದೆ, ಅಳುತ್ತಾ, ಸಂಜಯನಿಗಿಂತೆಂದನು:

'ಸೂತ ! ಸಿಂಹ ದ್ವಿರದ ವಿಕ್ರಮನಾದ ಕರ್ಣನೆಂತು ಹತನಾದನು? ಅವನ ಜ್ಯಾಘೋಷ ಶ್ರವಣದಿಂದಲೇ ಯೋಧರು ರಣರಂಗದಲ್ಲಿ ನಿಲ್ಲದೆ ಓಡುತ್ತಿದ್ದರು. ಅವನನ್ನು ನಂಬಿ, ಅವನಲ್ಲಿದ್ದ ಶಕ್ತಿಯನ್ನು ನಂಬಿ, ದುರ್ಯೋಧನನು ಪಾಂಡವರಿಂದ ದ್ವೇಷವನ್ನು ಬೆಳೆಸಿದನು. ಸ್ವಬಾಹು ಬಲದರ್ಪಿತನಾದ ಕರ್ಣನು ವಾಸುದೇವ ಧನಂಜಯರನ್ನು ಕೂಡ ತೃಣೀಕರಿಸುತ್ತಿದ್ದನು. ಶಾರ್ಙ್ಗಗಾಂಡೀವ ಧನ್ವರನ್ನು ಕೆಡಹಿ ಕೊಲ್ಲುವುದಾಗಿ ಹೇಳುತ್ತಾ ನನ್ನ ಮಂದಬುದ್ಧಿ ಮಗನ ಮನದಲ್ಲಿ ಲೋಭ ವೈರಗಳನ್ನು ತುಂಬಿದನು. ರಥಿವರನಾದ ರಾಧೇಯನು ಹಿಂದೆ ದುರ್ಯೋಧನನ ವೃದ್ಧಿಗಾಗಿ ದಂಡೆತ್ತಿ ಹೋಗಿ, ಎಲ್ಲ ರಾಜರನ್ನೂ ಗೆದ್ದು ಬಂದನು. ಅಂತಹ ದಿವ್ಯಾಸ್ತ್ರವೇದಿಯು ಇಂದು ಅರ್ಜುನನಿಂದ ಹತನಾದನೆಂದರೆ ಆಶ್ಚರ್ಯವಾಗಿದೆ ! ದೇವತೆಗಳಲ್ಲಿ ವೃಷನೆಂದರೆ ಮಹೇಂದ್ರನು ಮನುಜರಲ್ಲಿ ವೃಷನೆಂದರೆ ಕರ್ಣನು. ಮತ್ತೊಬ್ಬ ವೃಷನನ್ನೆಲ್ಲಿಯೂ ಕಾಣೆವು. ಜರಾಸಂಧನಿಗೂ ದುರ್ಜಯನಾಗಿ, ಅವನಿಂದ ಕಪ್ಪವನ್ನು ತಂದ ಕರ್ಣನು ಅರ್ಜುನಹತನಾದನೆಂದು ಕೇಳಿ, ಶೋಕಾರ್ಣವಮಗ್ನನಾಗಿರುವೆನು. ನಡುಕಡಲಿನಲ್ಲಿ ಸಿಕ್ಕಿಬಿದ್ದ ಹಡಗಿನಂತಾಗಿದೆ ನನ್ನ ಬದುಕು. ಜ್ಞಾತಿ ಪುತ್ರಮಿತ್ರರ ಯುದ್ಧಮರಣವನ್ನಾಲಿಸಿ ಕೂಡ ಒಡೆದು ಬೀಳದಿರುವ ನನ್ನ ಹಾಳು ಮನಸ್ಸು ಪಾಷಾಣಮಯ ವಾಗಿರಬೇಕೆನಿಸುತ್ತಿದೆ. ನನಗೆ ಜೀವಿತದಲ್ಲಿ ಆಶೆ ಉಳಿದಿಲ್ಲ. ವಿಷವನ್ನು ನುಂಗಲೇ ? ಅಗ್ನಿಯಲ್ಲಿ ಬೀಳಲೆ ? ಪರ್ವತಾಗ್ರದಿಂದ ಪ್ರಪಾತಕ್ಕೆ ಧುಮುಕಲೇ ? ಏನು ಮಾಡಲಿ ? ನನಗೆ ಸಾವೇಕೆ ಬರಲೊಲ್ಲದು ?'

ಇಂತು ನುಡಿದು ಕಣ್ಣೀರಿಡುವ ಧೃತರಾಷ್ಟ್ರನನ್ನು ಸಂಜಯನು ರಾಜರ್ಷಿಯಾದ ನಿನಗೆ ಹೇಳಬೇಕಾದುದಿಲ್ಲ! ಮಹಾರಾಜ! ದೈವದುರ್ವಿಪಾಕರಿಂದ ಬಂದ ವಿಪತ್ತಿಗೆ ಶೋಕಿಸಿ ಮಾಡುವುದೇನಿಲ್ಲ' ಎಂದು ಸಂತೈಸಿದನು. ಧೃತರಾಷ್ಟ್ರನು, 'ಅಹುದು ಸಂಜಯ! ವಿಧಿ ಗೆದುರಿಲ್ಲ. ಪಾಂಡವಸೇನಾವಾಹಿನಿಯನ್ನು ಪ್ರಳಯಾರ್ಕನಂತೆ ಶೋಷಿಸಿದ ವೃಷನು ಹತನಾದನೆಂದು ಕೇಳಿ, ದುಃಖಸಾಗರದ ಪಾರವನ್ನು ಕಾಣದೆ ವ್ಯಥೆಪಡುತ್ತಿರುವೆನು. ನಮಗೆ ಬೇಕಾದಾಗ ಮೃತಿಯು ಬರುವುದಿಲ್ಲ. ಬೇಡದವರಿಗೆ ಸಿಡಿಲಂತೆ ಬಡಿಯುತ್ತಿದೆ. ನನ್ನ ಆಯುಸ್ಸಿನ್ನೆಷ್ಟು ದೀರ್ಘವೋ ಕಾಣೆನು. ಧಿಕ್ಕಾರವಿರಲಿ ನನ್ನ ಬದುಕಿಗೆ! ಹಿಂದೆ ಚೆನ್ನಾಗಿ ಬಾಳಿಂದ ನನಗೆ ಪರರ ಮುಂಗಳದಲ್ಲಿ ಬಿದ್ದಿರಬೇಕಾಗುವುದೋ ಏನೋ ? ಸೂತ ಸೂತನು ಬಿದ್ದಮೇಲೆ ಇನ್ನಿದ್ದವರು ಇಲ್ಲವೆಂದೇ ತಿಳಿದಿರುವೆನು. ದರಿದ್ರನ ಕಾಮಿತದಂತೆ, ಕುಂಟನ ಧಾವನಂದತೆ ದುರ್ಯೋಧನನ ಜಯಾಶೆ ಭಗ್ನವಾಯಿತು. ನಾವೊಂದು ಬಗೆದರೆ, ದೈವವಿನ್ನೊಂದ ಬಗೆಯಿತು!

ಭೀಮಸೇನನ ಕೈಗೆ ಸಿಕ್ಕು ದುಶ್ಯಾಸನನು ಸಿಂಹದ ಕೈಲಿ ಸಿಕ್ಕ ಕೋಣದಂತೆ ವಿಲಿವಿಲಿ ಒದ್ದಾಡಿದನೇ? ಅನ್ಯ ಕ್ಷತ್ರಿಯ ವೀರರಂತೆ ರಣಮರಣವನ್ನಪ್ಪದೆ, ಅವನು ಪಶುವಿನಂತೆ ಹಿಂಸಿಸಲ್ಪಟ್ಟನೆಂದು ತಿಳಿದು ನನ್ನ ಎದೆ ಒಡೆದಂತಾಗುತ್ತಿದೆ. ಧರ್ಮರಾಜನ ಸಂಧಿಯ ನುಡಿಯನ್ನು ಮನ್ನಿಸದೆ, ದುರ್ಯೋಧನನು ಪಥ್ಯವನ್ನು ಮಾಡದ ರೋಗಿಯಂತೆ ಅನರ್ಥಕ್ಕೀಡಾಗಿರುವನು. ಭೂತಲದಿಂದ ಜಲವನ್ನೆಬ್ಬಿಸಿ ಕೊಟ್ಟ ಪಾರ್ಥನೊಡನೆ ವೈರವು

ಒಳಿತಲ್ಲವೆಂದ ಭೀಷ್ಮನ ಹಿತನ ಮಾತಿಗೆ ಕಿವಿಗೊಡದೆ, ದುರ್ಯೋಧನನು ಹಾಳಾದನು. ಎಲ್ಲ ಅನರ್ಥಗಳಿಗೂ ಬೀಜಭೂತವಾದ ದ್ಯೂತವನ್ನಾಡಿಸಿ ನಾನು ಹಾಳಾದೆನು. ಮಕ್ಕಳನ್ನೂ ಹಾಳು ಮಾಡಿದೆನು. ರೆಕ್ಕೆಗಳು ಕಡಿದ ಪಕ್ಷಿಯಂತೆ ಹಾರಲಾರದೆ, ಕುರುವಂಶವು ದಗ್ಧವಾಗುತ್ತಿರುವುದನ್ನು ನೋಡುತ್ತಾ ಕೂತಿರುವೆನು. ಶತ್ರುವಶಂಗತನಾದ ನನಗೆ ಇನ್ನಾರು ಗತಿ?

ಸಂಜಯ! ಕರ್ಣನಂತಹ ಮಹಾ ವೀರರಿಲ್ಲ. ಅವನು ಭಾರ್ಗವ ಶಿಷ್ಯನು; ಬ್ರಾಹ್ಮಣ ವತ್ಸಲನು; ದಾನಶೂರನು; ಅವನಿಂದ ದ್ವಂದ್ವಯುದ್ಧವನ್ನು ಮಾಡಲು ಅರ್ಜುನನೂ ಹಿಂಜರಿಯುತ್ತಿದ್ದನು. ಅಂತಹ ವೀರನೆಂತು ಹತನಾದನು? ಅವನಿಗೆ ಅಸ್ತ್ರಗಳ ನೆನಪು ಬರದಾಯಿತೇ? ಅವನ ರಥವು ಧರೆಗಿಳಿಯಿತೇ? ಅವನ ಧನುರ್ವರವು ಮುರಿದು ಬಿತ್ತೇ? ಅರ್ಜುನನನ್ನು ಸಂಹರಿಸಿ, ಆಮೇಲೆ ಪಾದಪ್ರಕ್ಷಾಲನವನ್ನು ಮಾಡಿಕೊಂಬುವೆನೆಂದು ಪ್ರತಿಜ್ಞೆಗೈದ ಕರ್ಣನಿಗೆ ಧರ್ಮರಾಜಾದಿಗಳು ಹೆದರುತಿದ್ದರು. "ಕೃಷ್ಣೇ! ಅಪತಿಕಳಾದೆ! ಷಂಢತಿಲರಾದ ಪಾಂಡವರನ್ನು ಬಿಟ್ಟು ಕುರುರಾಜನನ್ನು ಸೇರು!" ಎಂದು ನಿರ್ಭಯನಾಗಿ ನುಡಿದ ಕರ್ಣನನ್ನು ಪಾರ್ಥನೆಂತು ಸಂಹರಿಸಿದನು? ಕರ್ಣವೀರ್ಯವನ್ನು ನಂಬಿ, ಕೃಷ್ಣನ ಮಾತಿಗೆ ಕಿವಿಗೊಡದ ದುರ್ಯೋಧನನು ಕರ್ಣದುಶ್ಶಾಸನರ ವಧೆಯನ್ನು ಕಣ್ಣಾರ ಕಂಡು ಎಷ್ಟು ಶೋಕಿಸುತ್ತಿರುವನೋ! ದುರ್ಮರ್ಷಣ, ವೃಷಸೇನರು ಹತರಾಗಲು ವಿಹತಾಶನಾಗಿ ಎಂತು ನಿಶ್ವಸಿದನು? ಪ್ರೀತಿಯ ತಮ್ಮನಾದ ದುಃಶಾಸನನನ್ನು ಕೆಡಹಿ, ಅವನ ಬಿಸಿನೆತ್ತರವನ್ನು ಕುಡಿವ ಭೀಮಸೇನನ ಕ್ರೂರಕೃತ್ಯಕ್ಕೆ ಏನು ಪ್ರತೀಕಾರ ಮಾಡಿದನು? ಜೂಜನ್ನಾಡಿಸಿ, ಪಾಂಡವರನ್ನು ವಂಚಿಸಿ, ಕಸಿದಿತ್ತ ರಾಜ್ಯವು ಕೈಬಿಟ್ಟು ಹೋಗುತ್ತಿರುವದನ್ನು ಕಂಡು ಗಾಂಧಾರರಾಜನು ಏನು ಮಾಡಿದನು? ಅಶ್ವತ್ಥಾಮ ಕೃಪರೆಂತು ಪ್ರತಿಭಟಿಸಿದರು? ಶಲ್ಯನೇನುಮಾಡಿದನು? ಕರ್ಣನ ಮೃತಿಯನ್ನು ಕಂಡು ಮಿಕ್ಕ ರಾಜನ್ಯರೇನೆಂದರು? ದ್ರೋಣನ ಮೃತಿಯಾದ ನಂತರ ವೃತ್ತಾಂತವನ್ನು ಹೇಳು!' ಎಂದನು.

ಸಂಜಯನು ಚತುರ್ದಶಿಯ ವೃತ್ತಾಂತವನ್ನು ನಿರೂಪಿಸತೊಡಗಿದನು: 'ರಾಜ್ಯ ಕಾಮುಕರಾಗಿ ಬಡಿದಾಡಿದ ಮಹಾವೀರರೆಷ್ಟೋ ಜನ ಮೃತರಾದರು. ಅವರಿಗೆ ನಾಯಕನಾಗಿ ಐದು ದಿನಗಳಲ್ಲಿ ಅಸಂಖ್ಯಾತ ಸೇನೆಯನ್ನು ಸಂಹರಿಸಿ ಆಚಾರ್ಯನೂ ಮೃತನಾದನು. ತ್ರಯೋದಶಿಯಂದು ಗುರುಪುತ್ರನು ಪಿತೃವಧದಿಂದ ಕ್ರುದ್ಧನಾಗಿ ಪ್ರಯೋಗಿಸಿದ ದಿವ್ಯಾಸ್ತ್ರದ್ವಯವೂ ವಿಫಲವಾಯಿತು. ಉಭಯ ಸೇನೆಗಳೂ ಸಾಯಂಕಾಲದಲ್ಲಿ ಪ್ರತ್ಯಾಹಾರವನ್ನು ಮಾಡಿ ಶಿಬಿರಗಳನ್ನು ಸೇರಿದವು.

ಚಿಂತಾಕ್ರಾಂತನಾದ ದುರ್ಯೋಧನನು ಮಹಾರಥಿಕರನ್ನು ಸಭೆಗೂಡಿಸಿ ಕರ್ತವ್ಯವನ್ನು ತಿಳಿಸಿರೆಂದು ಕೇಳಿದನು. ಅನೇಕ ವೀರರು ಅನೇಕ ವಿಧ ಸೂಚನೆಗಳನ್ನಿತ್ತರು. ಆಗ ಅಶ್ವತ್ಥಾಮನು 'ರಾಜನ್! ರಾಗ(ಸ್ವಾಮಿಭಕ್ತಿ) ಯೋಗ (ದೇಶಕಾಲಸಂಪತ್ತಿ), ಬಲ(ಸೇನೆ), ನೀತಿ ನಾಲ್ಕು ಉಪಾಯಗಳು ಸಂಪಾದ್ಯವೆಂದು ಪಂಡಿತರು ನುಡಿವರು.

ಅವೆಲ್ಲವೂ ದೈವಾನುಕೂಲ್ಯವಿದ್ದವರಿಗೆ ಒದಗಿ ಬರುವವು. ಸ್ವಾಮಿಭಕ್ತರು, ನೀತಿವಂತರು, ಬಲವಂತರು ಆಗಿದ್ದೂ ನಿನ್ನ ವೀರರು ಹತರಾದರೆಂದರೆ ಅದು ಬಲೀಯವಾದ ವಿಧಿಯಿಂದ! ನಿರಾಶನಾಗಬೇಡ! ಉಭಯ ಸೇನೆಗಳಲ್ಲಿಯೂ ಅಪಾರ ನಷ್ಟವಾಗಿದೆ. ನೀತಿಯ ರೀತಿಗೆ ದೈವವೂ ಅನುಕೂಲವಾಗಿ ನಡೆಯಬಹುದು! ಆದುದರಿಂದ ಒಳ್ಳೆಯ ಮಹಾವೀರರನ್ನು ಸೇನಾಪತಿಯನ್ನಾಗಿಸಿ, ನಾವು ಜಯಕ್ಕಾಗಿ ಕಾದೋಣ! ಅಂತಹವನೆಂದರೆ ಕರ್ಣನೇ! ಅತಿಬಲನು, ಶೂರನೂ, ಅಸ್ತ್ರವೇತ್ತನು, ಸ್ವಾಮಿಭಕ್ತನು ಆದ ಕರ್ಣನಿಂದ ನಮಗೆ ಜಯವಾಗುವುದು' ಎಂದನು.

ಆಚಾರ್ಯಸುತನ ಮಾತಿನ ಸತ್ಯವನ್ನರಿತು ನಿನ್ನ ಮಗನು ಜಯಾಶಾಸೂತ್ರವನ್ನು ಕಡಿಯದಂತೆ ಹಿಡಿಯಬಲ್ಲ ಕರ್ಣನನ್ನು ಸೇನಾನಿಯನ್ನಾಗಿ ಮಾಡಲು ನಿಶ್ಚಯಿಸಿ, ಅವನಿಗಿಂತೆಂದನು:

'ರಾಧೇಯ! ನಿನ್ನ ವೀರ್ಯವನ್ನರಿತು, ಮಿತ್ರಭಾವವನ್ನು ಪುರಸ್ಕರಿಸಿ, ಸ್ವಾಮಿಭಕ್ತನಾದ ನಿನ್ನನ್ನು ಸೇನಾಪತಿಯಾಗಿ ನಮ್ಮನ್ನು ಕಾಪಾಡೆಂದು ಬೇಡುತ್ತಿರುವೆನು. ಪ್ರಾಜ್ಞತಮನು, ಭೀಷ್ಮದ್ರೋಣಸಮವೀರನು ಆದ ನಿನ್ನಕಿಂತಲು ನನಗೆ ಹಿತರಿಲ್ಲ. ಭೀಷ್ಮನನ್ನು ಪಿತಾಮಹನೆಂತಲು, ವೀರನೆಂತಲು ಮನಗಂಡು, ನಿನ್ನ ಮಾತಿಗೂ ಬೆಲೆಯಿತ್ತು, ನಾನು ಸೇನಾಪತಿಯನ್ನಾಗಿಸಿದೆನು. ಹತ್ತು ದಿನಗಳ ಯುದ್ಧ ಮಾಡಿ ಆತನು ಶರಪಂಜರದಲ್ಲಿ ಮಲಗಿದನು. ಮುಂದೈದು ದಿನಗಳು ದ್ರೋಣನ ಸೇನಾಪತ್ಯದಲ್ಲಿ ಕಾದಾಡಿದೆವು. ಆವರೀರ್ವರು ಪಾಂಡವರಲ್ಲಿ ಪಕ್ಷಪಾತದಿಂದ ಅವರನ್ನು ಕೊಲ್ಲದೆ ತಾವು ಪರಾಜಯವನ್ನು ವರಿಸಿದರು. ಇಂತಹ ಸೇನಾಪತಿಗಳಿಂದ ನಮಗೆ ಅಪಾರ ನಷ್ಟವಾಯಿತು. ಪರ ಸೈನಿಕರನ್ನು ಅರ್ಬುದ ಸಂಖ್ಯೆಯಲ್ಲಿ ಕೊಂದ ಅವರಿಂದ ಉಪಕಾರವೂ ಆಗಿದೆ. ಇರಲಿ! ಈಗ ನಿನ್ನಂತಹವನು ಸೇನಾನಿಯಾಗಿ ನಡೆಸಿದರೇನೇ ನಮಗೆ ಜಯವಾಗುವಂತಿದೆ. ಸೇನಾಭರವನ್ನು ಚನ್ನಾಗಿ ಹೊರವಲ್ಲ ವೀರ ಇನ್ನಾರೆನಗಿಲ್ಲ. ದೇವತೆಗಳಿಗೆ ಕಾರ್ತಿಕೇಯನಂತೆ ನಮಗೆ ನೀನು ಸೇನಾಪತಿಯಾಗು! ಮಹೇಂದ್ರನು ದಾನವರನ್ನಂತೆ, ಪಾಂಡವರನ್ನು ಸಂಹರಿಸು! ವಿಷ್ಣುವಿನನ್ನು ಕಂಡ ದಾನವರಂತೆ, ನಿನ್ನನ್ನು ರಣಮುಖದಲ್ಲಿ ಕಂಡು ಪಾಂಡವರು ಓಡಿ ಹೋಗಲಿ! ಹುಟ್ಟಿದ ಸೂರ್ಯನು ತಮವನ್ನಂತೆ ಪಾಂಡವ ಬಲವನ್ನು ನಾಶಗೊಳಿಸು!'

ರಾಜನ್! ಆಶೆಗೆ ಮೀರಿದುದಲ್ಲ. ಆಶೆಯಿಂದ ಮನುಜನು ಜೀವಿಸಿರುವನು. ಆಶೆಯಿಂದ ಸಾಧಿಸಲು ಹೆಣಗುವನು. ಭೀಷ್ಮದ್ರೋಣರಂತಹ ಮಹಾಯೋಧರು ಬಿದ್ದರೂ, ನಿನ್ನ ಮಹನು ಕರ್ಣನಿಂದ ಪಾಂಡವಜಯವು ಸಾಧಿತವಾಗುವುದೆಂಬ ಆಶೆಯಿಂದ ಯುದ್ಧನಿದ್ಧನಾದನು. 'ರಾಜನ್! ನಿನ್ನ ಮುಂದೆ ಹೇಳದಂತೆ, ನಾನು ನಿನ್ನ ಸೇನಾನಿಯಾಗಿ, ಪಾಂಡವರನ್ನು ಶ್ರೀಕೃಷ್ಣನನ್ನೂ ಗೆಲ್ಲುವೆನು. ಆಯಿತವರ ವಿನಾಶವೆಂದು ತಿಳಿ!' ಎಂದ ಕರ್ಣನ ಮಾತಿಗೆ ಮೈಯುಬ್ಬಿ, ಮಹಾರಾಜನು ಮಹಾಸಭೆಯಲ್ಲಿ ಸೂತಸುತನಿಗೆ ಸೇನಾಪತಿ ಪಟ್ಟಗಟ್ಟಿದನು. ಅಭಿಮಂತ್ರಿತವಾದ ಹೇಮ ಕುಂಭ ಜಲಗಳಿಂದ, ಮಣಿಗಳಿಂದ,

ಮುತ್ತುಗಳಿಂದ ಅಭಿಷೇಕಿಸಿ, ಒರೆಸಿ, ಔದುಂಬರಾಸನದಲ್ಲಿ ಕೂಡಿಸಿ, ಗಂಧ ಹಚ್ಚಿ, ತಿಲಕವಿಟ್ಟು, ಪೂಮಾಲೆ ಹಾಕಿ, ಉಡುಗೊರೆಯಿತ್ತು, ಕೈಗೆ ಖಡ್ಗವನ್ನಿತ್ತು, ದರ್ಯೋಧನನು ನೀರಾಜಿಸದಾಗ, ಸಭೆಗೆ ಸಭೆಯೇ ಘೇ! ಎಂದು ಜಯಧ್ವಾನಗಳನ್ನು ಮಾಡಿತು. ಬ್ರಾಹ್ಮಣ ಕ್ಷತ್ರಿಯ ವೈಶ್ಯಶೂದ್ರರು ಅಭಿಷಿಕ್ತನಾದ ಕರ್ಣನ ವೀರ್ಯ ವಿಕ್ರಮಗಳನ್ನು ಕೊಂಡಾಡಿದರು. ಕರ್ಣನು ಅವರೆಲ್ಲ ದುರ್ಯೋಧನನ ಸಮೀಪದಲ್ಲಿ ಕೂತನು. 'ಕರ್ಣ! ವಿಜಯಿಯಾಗು! ರಾಧೇಯ! ವಧಿಸು ಪಾಂಡವರನ್ನು! ವೃಷ! ಕೊಲ್ಲು ಕೃಷ್ಣನನ್ನು! ಸೂರ್ಯರಶ್ಮಿಗೆ ಓಡುವ ಗೂಬೆಗಳಂತೆ, ನಿನ್ನ ಶರಜಾಲಕ್ಕೆ ಹೆದರಿ ಪಾಂಡವಯೋಧರು ಚದುರಿ ಹೋಗಲಿ!' ಎಂದು ಸ್ತುತಿಸುವ ಮಿತ್ರರ ಮಾತಿಗೆ ವೈಯುಬ್ಬಿ, ಕರ್ಣನು ದಿವಾಕರನಂತೆ ವಿರಾಜಿಸಿದನು. ದುರ್ಯೋಧನನು ಕೃತಾರ್ಥನಾದೆನೆಂದು ತಿಳಿದು, ನಿಶ್ಚಿಂತನಾದನು.

## ೨. ಷೋಡಶದಿನದ ಯುದ್ಧ (೧)

ಮರುದಿನ ಬೆಳಗಾಯಿತು. ಅಂದು ಚತುರ್ದಶಿ. ಕರ್ಣನ ಆಜ್ಞೆಯಂತೆ, ಕುರುಸೇನೆಯು ಸಜ್ಜಾಗಿ ರಣರಂಗದಲ್ಲಿ ನಿಂತು, ಪಾಂಡವೀಸೇನೆಯೊಡನೆ ಕಾದಲು ಆರಂಭಿಸಿತು. ರಥಿಕ, ಗಜತುರಗಯೋಧ, ಪದಾತಿಗಳು ಪರಸ್ಪರವಾಗಿ ಕಡಿದಾಡುವ ಭಯಂಕರ ಶಬ್ದಗಳು, ಸಿಂಹನಾದಗಳು, ಅಂತರಿಕ್ಷದಲ್ಲಿ ವ್ಯಾಪಿಸಿದವು. ಶತಘ್ನಿ, ಕಿಂಕಿಣಿ, ಶಕ್ತಿ, ಶೂಲ, ತೋಮರ, ಮುದ್ಗರಾದಿ ವಿವಿಧಾಯುಧಪಾಣಿಗಳಾದ ವೀರಭಟರು. ಹಿಂದಿನ ದಿನಗಳಲ್ಲಿ ಮಡಿದ ಯೋಧರಿಗಾಗಿ ಮರುಗದೆ ಮುಂದೆ ಕಡಿದಾಡಿ ಗೆಲ್ಲುವೆವೆಂಬ ಭರವಸೆಯಿಂದ ಮುನ್ನಡೆದರು. ಮಿಕ್ಕೆಲ್ಲರು ಸತ್ತರೂ ನಾವು ಉಳಿಯುವೆವೆಂಬ ಆಶೆ ಬಲವತ್ತಾಗಿ ಅವರು ಸಮರಕಣಕ್ಕಿಳಿದರು.

ಕರ್ಣ ಕುರುಸೇನೆಯನ್ನು ಮಕರವ್ಯೂಹಾಕಾರವಾಗಿ ನಿಲ್ಲಿಸಿದನು. ಅದರ ಕಣ್ಣಿನ ಸ್ಥಾನದಲ್ಲಿ ಉಲೂಕ ಶಕುನಿಯರು, ಶಿರಸ್ಸಿನಲ್ಲಿ ದ್ರೋಣ ಪುತ್ರನು, ಕುತ್ತಿಗೆಯಲ್ಲಿ ಕುರುರಾಜಸೋದರರು, ಮಧ್ಯದಲ್ಲಿ ದುರ್ಯೋಧನನು, ಎಡಮುಂಪಾದದಲ್ಲಿ ಗೋಪಾಲ ಬಲ ಸಹಿತ ಕೃತವರ್ಮನು, ಬಲಮುಂಪಾದದಲ್ಲಿ ತ್ರಿಗರ್ತಸಹಿತ ಕೃಪನು, ಎಡ ಹಿಂಪಾದದಲ್ಲಿ ಶಲ್ಯನು, ಬಲಹಿಂಪಾದದಲ್ಲಿ ಸುಷೇಣನು, ಬಾಲದಲ್ಲಿ ಚಿತ್ರ, ಚಿತ್ರಸೇನರೆಂಬ ಅಭಿಸಾರರಾಜರು ನಿಂತು ನಡೆದರು.

ಆದನ್ನು ಕಂಡು ಧರ್ಮರಾಜನು 'ಅರ್ಜುನ! ನೋಡಿದೆಯಾ ಕೌರವವ್ಯೂಹವನ್ನು! ವೀರತಮರು ಸತ್ತಿರುವುದರಿಂದ ದುರ್ಬಲವಾಗಿದ್ದರೂ, ಕರ್ಣನ ಸೇನಾಪತ್ಯದಲ್ಲಿ ಉತ್ಸಾಹ ಪೂರಿತವಾಗೇ ಬರುತ್ತಿದೆ. ಕರ್ಣನನ್ನು ಸಂಹರಿಸಿ ನಿನ್ನ ಪ್ರತಿಜ್ಞೆಯನ್ನು ಪೂರೈಸು! ಹನ್ನೆರಡು ವರ್ಷದ ವನವಾಸದ ದುಃಖಾಗ್ನಿಯನ್ನಾರಿಸು!' ಎಂದನು. ಅರ್ಜುನನು ತನ್ನವರೊಡನೆ ಆಲೋಚಿಸಿ. ತನ್ನ ಸೇನೆಯನ್ನು ಅರ್ಧಚಂದ್ರಾಕಾರವಾಗಿ ನಿಲ್ಲಿಸಿದನು. ಅದರ ವಾಮಶೃಂಗದಲ್ಲಿ ಭೀಮಸೇನನು, ದಕ್ಷಿಣ ಶೃಂಗದಲ್ಲಿ ಧೃಷ್ಟದ್ಯುಮ್ನನು, ಮಧ್ಯದಲ್ಲಿ ಧರ್ಮಧನಂಜಯರು, ಅವರ ಹಿಂದೆ ಯಮಳರು ನಿಂತು ನಡೆದರು.

ಯುಧಾಮನ್ಯೂತ್ತಮೌಜರು (ಪಾಂಚಾಲ ರಾಜರು), ಅರ್ಜುನನ ಚಕ್ರರಕ್ಷಕರಾಗಿ ನಡೆದರು. ಇಂತು ಎದಿರುಬದಿರಾಗಿ ನಿಂತು ಹೋರಾಡುವ ಸೇನೆಗಳು ಸಿಂಹನಾದ ಮಾಡಿ ಮೈಮರೆತು ಕಾದತೊಡಗಿದರು. ಭೇರೀ ದುಂದುಭಿಧ್ವಾನಗಳು, ಆಯುಧ ನಿಸ್ವನಗಳೊಂದಿಗೆ ಎಲ್ಲ ಕಡೆ ಹರಡಿದವು. ಪರಸ್ಪರ ವಧಾಕಾಂಕ್ಷಿಗಳಾದ ವೀರರ ಸಂಗ್ರಾಮವು ತುಮುಲ ಭಯಂಕರವಾಯಿತು.

ಆ ಯುದ್ಧದಲ್ಲಿ ಆಯುಧಗಳಿಂದ ದೇಹನಾಶವು, ರಣಮರಣದಿಂದ ಪಾಪನಾಶವು, ಒಮ್ಮೆಗೆ ಸಾಧಿಸಲ್ಪಟ್ಟಿತು. ರಣರಂಗವು ಪೂರ್ಣವಿಕಸಿತ ಪದ್ಮಗಳಂತಿರುವ ಮುಖಗಳಿಂದ ತುಂಬಿತು. ವಿವಿಧಾಯುಧಗಳಿಂದ ಕಡಿಯಲ್ಪಟ್ಟು ಬಿದ್ದ ರತ್ನಮುದ್ರಿಕಾಯುಕ್ತ ಹಸ್ತಗಳು ರಕ್ತದ ಪ್ರವಾಹದಲ್ಲಿ ತೇಲಿಹೋಗುತ್ತಾ ಗರುಡನು ಕೊಂದು ಈಡಾಡಿದ ಪಂಚಾಸ್ಯಪನ್ನಗಗಳಂತೆ ಕಾಣಿಸಿದವು. ಬಾಣಹತರಾದ ವೀರರು ಆರ್ತನಾದಗಳನ್ನು ಮಾಡುತ್ತಾ ಗಜತುರಗಗಳಿಂದ ನೆಲಕ್ಕುರುಳಿ ಬಿದ್ದಾಗ, ಕ್ಷೀಣಪುಣ್ಯರಾದ ಸ್ವರ್ಗದ ಜನರು ವಿಮಾನಗಳಿಂದ ಬಿದ್ದಂತಿತ್ತು. ರಥಗಜತುರಗಪದಾತಿಗಳು ರಥಗಜತುರಗ ಪದಾತಿಗಳಿಂದಲು, ಮತ್ತೊಮ್ಮೆ ತುರಗರಥಭಟಾಶ್ವರಿಂದಲು ಹೋರಾಡಿ, ಪರಸ್ಪರ ಸಂಹಾರದಿಂದ ನೆಲಕ್ಕುರುಳಿದರು.

ಆಗ ಭೀಮಸೇನಾದಿ ಪಾಂಡವ ಮಹಾರಥರು ಕೌರವಸೇನೆಯನ್ನು ಹೊಕ್ಕು ವಿಕ್ರಮಿಸಿದರು. ವೃಕೋದರನು ನಿರ್ಮಲವಸನಧರನಾಗಿ, ಶರೀರಕ್ಷತ ರಕ್ತಲೇಪಾದಿಗಳಿಂದ ಲಿಪ್ತನಾಗದೆ ಭದ್ರಗಜವನ್ನೇರಿ ಬಂದನು. ಶುದ್ಧಕ್ಷತ್ರಧರ್ಮನಿರತನಾದುದರಿಂದ ಆ ಮಹಾನುಭಾವನಿಗೆ ಕುಲಕ್ಷಯಾದಿ ದೋಷಗಳ ಲೇಪವೂ ಇದ್ದಿಲ್ಲ. ಉದಯಾದ್ರಿಯಿಂದ ಎದ್ದು ಬರುವ ಪ್ರಭಾಕರನಂತೆ ಭೀಮಸೇನನು ಭದ್ರಗಜದಲ್ಲಿ ಕಂಗೊಳಿಸಿದನು. ರತ್ನಖಚಿತವಾದ ಆಯಸಕವಚವನ್ನಿಟ್ಟು, ತಾರಾಚಿತ್ರಮೇಘದಂತೊಪ್ಪುವ ವೃಕೋದರನು , ತೋಮರವನ್ನು ಕೈಲಿ ಪಿಡಿದು, ಪ್ರಸನ್ನ ಮನಸ್ಕನಾಗಿ ರಣರಂಗದಲ್ಲಿ ಶತ್ರುಸಂಹಾರವನ್ನು ಮಾಡುತ್ತಾ ನುಗ್ಗಿದನು. ಅದನ್ನು ಸಹಿಸದೆ, ಕ್ಷೇಮಧೂರ್ತಿಯು ಗಜವನ್ನೇರಿ ಬಂದು ಭೀಮನನ್ನು ತಡೆದನು. ಮೊದಲು ಎರಡಾನೆಗಳ ತಿವಿದಾಟ ಘೋರವಾಯಿತು. ಆಮೇಲೆ ಗಾಗತರಾದ ವೀರರಿಬ್ಬರ ಬಾಣಯುದ್ಧವು ಘೋರತರವಾಯಿತು. ಸೊಂಡಿಲನ್ನು ಸೆಳೆದು, ಕೋರೆಯಿಂದ ತಿವಿದು ನೂಕಾಡುವ ಗಜದ್ವಯವು ಘೀಂಕಾರಮಾಡಿತು. ಕ್ಷೇಮಧೂರ್ತಿಯು ಭೀಮನ ಧನುವನ್ನು ಮುರಿದನು. ಭೀಮಸೇನನು ಅವನ ಧನುವನ್ನು ಮುರಿದನು. ಕ್ಷೇಮಧೂರ್ತಿಯು ಏಳು ತೋಮರಗಳಿಂದ ಹೊಡೆಯಲು, ಭೀಮಸೇನನು ಮೇಘಾವೃತನಾದ ಸೂರ್ಯನಂತೆ ಪ್ರಕಾಶಿಸಿದನು. ಭೀಮನು ಅಯಸ್ಮಯತೋಮರದಿಂದ ಅವನನ್ನು ಹೊಡೆದನು. ಕುಲೂತಾಧಿಪನು ಆ ತೋಮರವನ್ನು ಹತ್ತು ಭಲ್ಲಗಳಿಂದ ಕಡಿದು, ಧನುವೆತ್ತಿ ಅರವತ್ತು ಶರಗಳಿಂದ ವೃಕೋದರನನ್ನು ಪೀಡಿಸಿದನು. ಭೀಮನು ಕಾರ್ಮುಕವನ್ನು ಪಿಡಿದು ಮರ್ಮಭೇದಿಗಳಾದ ನೂರು ಬಾಣಗಳನ್ನು ಬಿಟ್ಟನು. ಮತ್ತು ಹತ್ತು ಬಾಣಗಳಿಂದ ಅವನ ಆನೆಯನ್ನು ಗಾಯಗೊಳಿಸಿದನು. ಅದು ಹೆದರಿ ಗೀಳಿಡುತ್ತಾ ಓಡಲು, ಭೀಮನ ಗಜವು ಅದನ್ನು ಹಿಂಬಾಲಿಸಿ ತಿವಿಯಿತು. ಕ್ಷೇಮಧೂರ್ತಿಯು ತನ್ನ

ಗಜವನ್ನು ನಿಲ್ಲಿಸಿ, ಹಿಂದಿರುಗಿ, ಭೀಮಗಜವನ್ನು ಹತ್ತು ಶರಗಳಿಂದ ಪೀಡಿಸಿದನು. ಭೀಮನು ಅವನ ಶರಾಸನವನ್ನು ಕಡಿದು, ಆನೆಯನ್ನೂ ಪೀಡಿಸಿದನು. ಕ್ಷೇಮಧೂರ್ತಿಯು ಕುಪಿತನಾಗಿ ಭೀಮಗಜವನ್ನು ಮರ್ಮಸ್ಥಾನದಿ ಹೊಡೆದು ಕೆಡಹಿದನು. ಆಗ ಭೀಮಸೇನನು ಮೊದಲೇ ಕೆಳಗೆ ಧುಮುಕಿ, ಆನೆಯ ಸಾವಿನಿಂದ ಕ್ರುದ್ಧನಾಗಿ, ಅವನ ಆನೆಯನ್ನೂ ಗದೆಯಿಂದ ಕೊಂದನು. ಅದರಿಂದ ಕೆಳಗಿಳಿದು, ಖಡ್ಗವೆತ್ತಿಬರುವ ಕ್ಷೇಮಧೂರ್ತಿಯನ್ನೂ ಗದೆಯಿಂದ ಹೊಡೆದು ವೃಕೋದರನು ಸಂಹರಿಸಿದನು. ಅದನ್ನು ಕಂಡು ಕುಲೂತಸೇನೆಯು ಭಯದಿಂದ ಓಡಿಹೋಯಿತು.

ಕರ್ಣನು ವಿಜೃಂಭಿಸಿ ಪಾಂಡವ ಸೇನೆಯನ್ನು ನಾಶಮಾಡಿದನು. ಕರ್ಣ ಬಾಣತಾಡಿತವಾಗಿ ಪಾಂಚಾಲಗಜಗಳು ಗೀಳಿಟ್ಟು ಕೆಳಗುರುಳಿದವು. ಆಗ ನಕುಲನು ಅವನನ್ನು ಮುತ್ತಿದನು. ಭೀಮಸೇನನು ಅಶ್ವತ್ಥಾಮನಿಂದಲು, ವಿಂದಾನುವಿಂದರು (ಕೈಕಯರು) ಸಾತ್ಯಕಿಯಿಂದಲು, ಚಿತ್ರಸೇನನು ಶ್ರುತಕರ್ಮನನ್ನು, ಚಿತ್ರನು ಪ್ರತಿವಿಂಧ್ಯನನ್ನು ಮುತ್ತಿ ಕಾದಿದರು. ದುರ್ಯೋಧನ ಧರ್ಮರಾಜರು ಧನಂಜಯ ಸಂಸಪ್ತಕರು, ಕೃಪ ಧೃಷ್ಟದ್ಯುಮ್ನರು, ಶಿಖಂಡಿಕೃತವರ್ಮರು, ಶ್ರುತಕೀರ್ತಿಶಲ್ಯರು, ಸಹದೇವ ದುಶ್ಶಾಸನರು ದ್ವಂದ್ವಯುದ್ಧವನ್ನು ಮಾಡಿದರು.

ವಿಂದಾನುವಿಂದರು ಸಾತ್ಯಕಿಯನ್ನು ಶರವರ್ಷದಲ್ಲಿ ಮುಳುಗಿಸಿದರು. ಯುಯುಧಾನನು ಅವರ ಶರಗಳನ್ನು ತುಂಡರಿಸಿ, ಎರಡು ಭಲ್ಲಗಳಿಂದ ಅವರೀರ್ವರ ಧನುಸ್ಸುಗಳನ್ನು ಮುರಿದನು. ಅವರು ಬೇರೆ ಧನುಸ್ಸುಗಳನ್ನು ಧರಿಸಿ, ಶರವರ್ಷವನ್ನು ಸುರಿಸಿ, ಸಾತ್ಯಕಿಯ ರಥತುರಗಸೂತರನ್ನು ಮುಚ್ಚಿದರು. ಒಂದು ಭಲ್ಲದಿಂದ ತನ್ನ ಧನುವನ್ನು ಮುರಿದ ಅನುವಿಂದನನ್ನು ನೋಡಿ ಸಾತ್ಯಕಿಯು ಕುಪಿತನಾಗಿ, ಮತ್ತೊಂದು ಧನುವೆತ್ತಿ ಕ್ಷುರಪ್ರದಿಂದ ಅವನ ಶಿರವನ್ನು ಕೆಳಗುರುಳಿಸಿದನು. ಅದನ್ನು ನೋಡಿ ವಿಂದನು ಶೋಕರೋಷಪರೀತನಾದನು. ಅವನು ಸಾತ್ಯಕಿಯನ್ನು ಶರಜಾಲದಿಂದ ಮುಚ್ಚಲು, ಸಾತ್ವತನು ಪುಷ್ಪಿತ ಕಿಂಶುಕದಂತೆ ಶೋಭಿಸಿದನು. ಸಾತ್ಯಕಿ ವಿಂದರು ಬಾಣಯುದ್ಧದಲ್ಲಿ ಧನುಸ್ಸುಗಳನ್ನು ಖಂಡಿಸಿ, ಅನ್ಯೋನ್ಯ ಸೂತ ತುರಗರಾಜಿಯನ್ನು ಸಂಹರಿಸಿ, ವಿರಥರಾಗಿ, ಖಡ್ಗಯುದ್ಧಕ್ಕಿಳಿದರು. ಜಂಭಶಕ್ರರಂತೆ ಅಸಿಚರ್ಮಧರರಾಗಿ ಹೊಡೆದಾಡುವ ವಿಂದಸಾತ್ವತರು ಚಿತ್ರಮಂಡಲಾಕಾರವಾಗಿ ತಿರುಗುತ್ತಾ ಉಭಯಸೈನ್ಯದ ವೀರರು ತಮ್ಮ ಬಡಿದಾಟವನ್ನು ನಿಲ್ಲಿಸಿ ನೋಡುವಂತೆ ವಿಕ್ರಮಿಸಿದರು. ಸಾತ್ಯಕಿಯು ವಿಂದನ ಗರಾಣೆಯನ್ನು ಎರಡಾಗಿಸಲು, ಅವನೂ ಅವನ ಢಾಲನ್ನು ತುಂಡರಿಸಿದನು. ಬರಿ ಖಡ್ಗಗಳಿಂದ ಬಡಿದಾಡುವ ಕೈಕಯ ಸಾತ್ವತರು ಕೋರೆಗ್ಗಳಿಂದ ಕಡಿದಾಡುವ ಕರಿದ್ವಯದಂತೆ ಪರಸ್ಪರ ವಧೆಗಾಗಿ ಸೆಣಸಿದರು. ಸಾತ್ಯಕಿಯು ತಿರ್ಯಕ್ ಹಸ್ತದಿಂದ ಕತ್ತಿಯನ್ನು ಬೀಸಿ, ವಿಂದನನ್ನು ಎರಡು ಹೋಳಾಗಿಸಿ ಕೆಡಹಿದನು. ಯುಧಾಮನ್ಯುವು ಸಾತ್ಯಕಿಯನ್ನು ತನ್ನ ರಥದಲ್ಲಿ ಕೂಡಿಸಿಕೊಂಡನು. ತತ್‌ಕ್ಷಣವೇ ತರಲ್ಪಟ್ಟ ಮತ್ತೊಂದು ರಥವನ್ನೇರಿ ಸಾತ್ಯಕಿಯು ರಣನಿರತನಾದನು.

ಅಭಿಸಾರ ರಾಜಸುತನಾದ ಚಿತಸೇನನು ಶ್ರುತಕರ್ಮನನ್ನು ಐದು ಬಾಣಗಳಿಂದ

ಪೀಡಿಸಿದನು. ಶ್ರುತಕರ್ಮನು ನಿಶಿತನಾರಾಚದಿಂದ ಹೊಡೆದು ಅವನನ್ನು ಮೂರ್ಛೆಗೊಳಿಸಿದನು. ಮತ್ತೆ ಎಚ್ಚತ್ತು ಚಿತ್ರಸೇನನು ಶ್ರುತಕರ್ಮನ ಎದೆಗೆ ನಾರಾಚವನ್ನು ನಾಟಿಸಿ, ಸಿಂಹನಾದವಮಾಡಿದನು. ರುಧಿರಾಕ್ತಗಾತ್ರನಾದ ಶ್ರುತಕರ್ಮನು ಗೈರಿಕಸಮಲಂಕೃತವಾದ ಗಿರಿಯಂತೆ ಕಂಡನು. ಅವನು ಚಿತ್ರಸೇನನ ಕಾರ್ಮುಕವನ್ನು ಮುರಿದು, ತೀಕ್ಷ್ಣಭಲ್ಲದಿಂದ ಅವನ ಶಿರಸ್ಸನ್ನು ಖಂಡಿಸಿದನು. ಅದನ್ನು ಕಂಡು ಕುಪಿತನಾಗಿ ಚಿತ್ರನು ಶ್ರುತಕರ್ಮನನ್ನು ಮುತ್ತಲು ಪ್ರತಿವಿಂಧ್ಯನು ಅವನನ್ನು ತಡೆದು ಐದು ಬಾಣಗಳಿಂದ ಹೊಡೆದನು. ಮತ್ತು ಅವನ ಸಾರಥಿಯನ್ನು ಮೂರು ಶರಗಳಿಂದ ಪೀಡಿಸಿ, ಒಂದರಿಂದ ಧ್ವಜವನ್ನು ಕೆಡಹಿದನು. ಚಿತ್ರನು ಒಂಭತ್ತು ಭಲ್ಲಗಳಿಂದ ಪ್ರತಿವಿಂಧ್ಯನ ಎದೆಗೆ ಹೊಡೆದನು. ಧರ್ಮರಾಜಸುತನು ಒಂದು ಭಲ್ಲದಿಂದ ಚಿತ್ರನ ಧನುವನ್ನು ಮುರಿದು, ಐದು ಬಾಣಗಳಿಂದ ಅವನನ್ನು ಪೀಡಿಸಿದನು. ಚಿತ್ರನು ಶಕ್ತಿಯನ್ನೆತ್ತಿ ಒಗೆಯಲು ಪ್ರತಿವಿಂಧ್ಯನು ಅದನ್ನು ಎರಡು ತುಂಡಾಗುವಂತೆ ಖಂಡಿಸಿದನು. ಯುಗಾಂತಾಶನಿಯಂತೆ ಬಿದ್ದ ಶಕ್ತಿಯನ್ನು ಕಂಡು, ಚಿತ್ರನು ರುಕ್ಮವಿಭೂಷಿತವಾದ ಗದೆಯನ್ನೆತ್ತಿ ಪ್ರತಿವಿಂಧ್ಯನ ಮೇಲೊಗೆದನು. ಅದರ ವೇಗವನ್ನು ಗುರ್ತಿಸಿ, ಪ್ರತಿವಿಂಧ್ಯನು ರಥದಿಂದ ಕೆಳಗೆ ಧುಮುಕಿದನು. ಗದೆಯು ಅವನ ಕುದುರೆಗಳನ್ನು ಸಾರಥಿಯನ್ನು ಸಂಹರಿಸಿ, ರಥವನ್ನೂ ಮುರಿದು, ನೆಲಕ್ಕೆ ಬಿತ್ತು. ಪ್ರತಿವಿಂಧ್ಯನು ಶಕ್ತಿಯನ್ನೆಸೆಯಲು ಚಿತ್ರನು ಅದನ್ನು ಹಿಡಿದು ಹಿಂದಕ್ಕೆಸೆದನು. ಅದು ಪ್ರತಿವಿಂಧ್ಯನ ದಕ್ಷಿಣಬಾಹುವನ್ನು ಸೋಕಿ, ಗಾಯಗೊಳಿಸಿ ನೆಲದಿ ಬಿತ್ತು. ಪ್ರತಿವಿಂಧ್ಯನು ತೋಮರವನ್ನೊಗೆಯಲು ಅದು ಚಿತ್ರನ ಕವಚವನ್ನು ಸೀಳಿ, ಹೃದಯವನ್ನು ಎರಡಾಗಿಸಲು ಚಿತ್ರನು ನೆಲಕ್ಕುರುಳಿ ಸತ್ತನು. ಅದನ್ನು ಕಂಡು ಕುರುಭಟರು ಸಿಟ್ಟಿನಿಂದ ಪ್ರತಿವಿಂಧ್ಯನನ್ನು ಮುತ್ತಿ ಶರಜಾಲದಿಂದ ಮುಚ್ಚಿದರು. ವಜ್ರಹಸ್ತನು ಅಸುರೀಸೇನೆಯನ್ನಂತೆ ಪ್ರತಿವಿಂಧ್ಯನು ಕುರುಭಟರ ಬಾಣಜಾಲವನ್ನು ಖಂಡಿಸಿ, ತನ್ನ ನಿಶಿತ ಶರವರ್ಷದಿಂದ ಅವರನ್ನೋಡಿಸಿದನು.

ಅಶ್ವತ್ಥಾಮನು ಭೀಮಸೇನನನ್ನು ಮುತ್ತಿ ತ್ವರಾವಿಮುಕ್ತಶರಾವಲಿಯಿಂದ ಪೀಡಿಸಿದನು. ರಶ್ಮಿವಂತನಾದ ದಿನಕಾಂತನಂತೆ ಕಂಡ ಕೌಂತೇಯನು ಶರಸಹಸ್ರದಿಂದ ಗುರುಸುತನನ್ನು ಪೀಡಿಸಿ, ಸಿಂಹನಾದಮಾಡಿದನು. ಆತನು ವಾತಸುತನ ಶರಶತವನ್ನು ಖಂಡಿಸಿ, ಒಂದು ಬಾಣವನ್ನಾತನ ಲಲಾಟದಿ ನಾಟಿಸಿದನು. ಭೀಮಸೇನನಾಗ ವನದಿ ವಿಹರಿಪ ಖಡ್ಗಮೃಗದಂತೆ ಕಂಗೊಳಿಸಿದನು. ಮೂರು ಬಾಣಗಳಿಂದ ಲಲಾಟದಿ ಹೊಡೆಯಲು, ಗುರುಸುತನೂ ತ್ರಿಶೃಂಗಗಿರಿಯಂತೆ ಕಂಗೊಳಿಸಿದನು. ಚಾಪ ಮುಖವು, ಶರದಂಷ್ಟ್ರವು ಆದ ವ್ಯಾಘ್ರ ಭಯಂಕರ ವೀರದ್ವಯವು ಪರಸ್ಪರ ಬಾಣ ಪೀಡಿತವಾಯಿತು. ಸವ್ಯಾಪ ಸವ್ಯಮಾರ್ಗಗಳಿಂದ ತಿರುಗುವ ರಥದ್ವಂದ್ವವು ಪರಸ್ಪರವಾಗಿ ಮಳೆಗರೆವ ಮೇಘದ್ವಂದ್ವದಂತೆ ಕಾಣಿಸಿತು.

ಅಶ್ವತ್ಥಾಮನು ದಿವ್ಯಾಸ್ತ್ರಗಳನ್ನು ಬಿಡಲು ಭೀಮಸೇನನು ಪ್ರತ್ಯಸ್ತ್ರಗಳಿಂದ ಅನಾಯಾಸವಾಗಿ ಅವನ್ನು ನಿವಾರಿಸಿದನು. ಪ್ರಜಾಸಂಹರಣಕಾಲದ ಗ್ರಹಯುದ್ಧದಂತೆ, ಆ

ವೀರರಯುದ್ಧವು ಸುಘೋರವಾಯಿತು. ಆಕಾಶವೆಲ್ಲವು ಬಾಣಸಂಘದಿಂದಾವೃತವಾಯಿತು. ಬಾಣಾವಘಾತದಿಂದ ಪುಟ್ಟಿದ ಪಾವಕನ ಜ್ವಾಲೆಗಳು ಅನೇಕ ಸೈನಿಕರನ್ನು ಸುಟ್ಟುಬಿಟ್ಟವು. ಎಂದೂ ಇಂತಹ ಭಯಂಕರ ಪ್ರಹಾರವನ್ನು ಕಂಡಿದ್ದಿಲ್ಲವೆಂದೂ ಜ್ಞಾನಬಲಸಂಪನ್ನನಾದ ಅಶ್ವತ್ಥಾಮನು ಜ್ಞಾನಬಲಸಂಪನ್ನತರನಾದ ಭೀಮಸೇನನೊಡನೆ ಕಾದಾಡುವದತಿ ಸಾಹಸವೆಂತಲು ಸಿದ್ಧರು ಅಂಬರದಿ ನಿಂತು ನುಡಿದರು. ಬಲ, ಕೃತಾಸ್ತ್ರತೆ, ವೀರ್ಯ, ಕರಲಾಘವ, ಶರಲಾಘವಗಳನ್ನು ಕಂಡು ವೀರವರರು, ಇಬ್ಬರು ರುದ್ರರು ಕಡಿದಾಡುತ್ತಿರುವರೋ, ಇಬ್ಬರು ಯಮರು ಬಡಿದಾಡುತ್ತಿರುವರೋ ಎಂದು ಸಂಭ್ರಾಂತರಾದರು. ಅವರ ಅದ್ಭುತಾಚಿಂತ್ಯವಿಕ್ರಮವನ್ನು ಕಂಡು ಸಿದ್ಧಚಾರಣಸಂಘವು ವಿಸ್ಮಯಾನಂದ ಚಕಿತವಾಯಿತು. ಸಾಧು ದ್ರೌಣೀ! ಸಾಧು ಭೀಮ! ಎಂಬ ಜಯಜಯಾರಾವಗಳು ನಾಲ್ದಿಕ್ಕಿನಲ್ಲಿ ತುಂಬಿದವು.

ಕ್ರೋಧ ರಕ್ತೇಕ್ಷಣರು, ಪ್ರಸ್ಫುರಿತಾಧರರು, ಸಂದಷ್ಟದಶನರು ಆಗಿ ಭೀಮಾಶ್ವತ್ಥಾಮರು ಧ್ವಜಗಳನ್ನು ಕೆಡಹಿ, ಸಾರಥಿಯರನ್ನು ಗಾಯಗೊಳಿಸಿ, ಹಯಗಳಿಗೆ ಬಡಿದು ಬಹು ತೀವ್ರ ಯುದ್ಧನಿರತರಾದರು. ಭೀಮಸೇನನೊಂದು ನಿಶಾತಭಲ್ಲದಿಂದ ಹೊಡೆಯಲು, ಅಶ್ವತ್ಥಾಮನು ಮೂರ್ಛಿತನಾದನು. ಅದನ್ನು ಕಂಡು ಸಾರಥಿಯು ಅತನನ್ನು ದೂರ ಕೊಂಡು ಹೋದನು. ಭೀಮಸೇನನೂ ಅಶ್ವತ್ಥಾಮ ಬಾಣಪೀಡಿತನಾಗಿ, ಸ್ವಲ್ಪ ಮೈಮರೆತು, ಮತ್ತೆ ಎಚ್ಚತ್ತು 'ಗಜಾನೀಕದ ಕಡೆ ರಥವನ್ನು ಹೊಡೆ!' ಎಂದು ವಿಶೋಕನಿಗಾಜ್ಞಾಪಿಸಿದನು.

ಪಾರ್ಥನು ಸಂಸಪ್ತಕ ಸೈನ್ಯಸಾಗರವನ್ನು ಬಾಣಾಘಾತದಿಂದ ಕ್ಷೋಭೆಗೊಳಿಸಿ ಶತ್ರುಸೇನಾನಿವಹವನ್ನು ನಾಶಪಡಿಸಿದನು. ಹಾರಿದ ಹುಬ್ಬಿನ, ಕಡಿದ ಹಲ್ಲಿನ, ಕಚ್ಚಿದ ತುಟ್ಟಿಯ, ತೆರೆದ ಕಣ್ಣಿನ, ತಲೆಗಳು ಹುಚ್ಚಾನೆಯು ಕಿತ್ತೊಗೆದ ಕಮಲಗಳಂತೆ ರಣರಂಗದಲ್ಲಿ ಹರಡಿಬಿದ್ದವು; ಚಂದನಾಗರುರೂಷಿತವು, ಕಂಕಣಮುದ್ರಿಕಾ ಭೂಷಿತವು ಆದ ಬಾಹುದಂಡಗಳು ಕಮಲನಾಲಗಳಂತೆ ಚಲ್ಲಾಪಿಲ್ಲಿಯಾಗಿದ್ದವು. ಪಾಂಡವ ಮಧ್ಯಮನ ಪ್ರತಿಕಾಂಡವು ಶುಂಡಾಲವನ್ನೋ, ಚಂಡಾಶ್ವವನ್ನೋ, ದಂಡಿಭಟನನ್ನೋ ಕೆಡಹದೆ ವ್ಯರ್ಥವಾದುದಿಲ್ಲ. ಆಗ ಪ್ರವೀರರೆಂಬ ವೀರವರರು, ತ್ರಿಲೋಕವಿಜಯಕ್ಕಾಗಿ ದೇವೇಂದ್ರನೊಡನೆ ಕಾದುವ ದಾನವರಂತೆ, ಅರ್ಜುನನನ್ನು ಮುತ್ತಿ ಶರಜಾಲದಿಂದ ಮುಚ್ಚಿದರು. ಬೀಭತ್ಸುವು ಅವರ ಬಾಣಗಳನ್ನು ತುಚ್ಛೀಕರಿಸಿ, ಅಸಂಖ್ಯಾತ ವೀರರನ್ನು ವೀರಸ್ವರ್ಗದಿ ಕೂಡಿಸಿದನು. ಸಿದ್ಧಗಂಧರ್ವರಂಬರದಿ ನಿಂತು 'ಚಂದ್ರ, ವಹ್ನಿ, ವಾಯು, ಸೂರ್ಯರ ಕಾಂತಿ, ದೀಪ್ತಿ, ಬಲ, ದ್ಯುತಿಗಳಿಗೆ ಸದಾ ಸನ್ನಿಧಾನರಾದ ಕೇಶವಾರ್ಜುನರಿಗೆ ಎದುರಿಲ್ಲ. ಇವರು ಬ್ರಹ್ಮೇಶಾನಾದಿಗಳಿಗೂ ಅಜಯರು' ಎಂದು ಪ್ರಶಂಸಿಸಿದರು.

ಆಗ ಅಶ್ವತ್ಥಾಮನು ರಣಕುತೂಹಲಿಯಾಗಿ, ಕೃಷ್ಣಪಾರ್ಥರನ್ನು ಸಮೀಪಿಸಿ, ಬಾಣವನ್ನು ಪಿಡಿದ ಪಾಣಿಯಿಂದ ಬೀಸಿ ಕರೆದು, 'ವೀರ! ಅರ್ಹನಾದ ಅತಿಥಿಯಂತೆ ಬಂದಿರುವೆನು, ನೀಡು ರಣಭಿಕ್ಷೆಯನ್ನು!' ಎಂದನು. ಆ ಮಾತಿಗೆ ಮೈಯುಬ್ಬಿ, ಮನದಿ

ಮೆಚ್ಚಿ, ಅರ್ಜುನನು 'ಆಚಾರ್ಯಪುತ್ರನು ರಣಾಹ್ವಾನವನ್ನಿತ್ತಿರುವನು. ಅಲ್ಲಿ ಸಂಸಪ್ತಕರಿನಗೆ ವಧ್ಯರಾಗಿರುವರು. ಅತಿಥಿಯಂತೆ ಬೇಡುವ ಗುರುಸುತನಿಗೆ ಬಾಣಭಿಕ್ಷೆಯನ್ನು ನೀಡುವುದು ಪ್ರಥಮ ಕರ್ತವ್ಯವಲ್ಲವೇ?' ಎಂದು ಶ್ರೀಕೃಷ್ಣನನ್ನು ಕೇಳಿದನು. ಆ ಮಾತಿಗೆ ಸಮ್ಮತಿಸಿ, ಮಾಧವನು ರಥವನ್ನು ದ್ರೋಣಪುತ್ರನ ಸಮೀಪ ಸೇರಿಸಿ ಅವನಿಗಿಂತೆಂದನು: 'ಅಶ್ವತ್ಥಾಮನ್! ಸ್ಥಿರನಾಗಿ ನಿಲ್ಲು! ನಮ್ಮ ಅರ್ಜುನನೊಡನೆ ಕಾದುವ ಕುತೂಹಲದಿಂದ ಬಂದಿರುವೆ! ಹೊಡೆ! ಅವನ ಬಾಣಗಳನ್ನೂ ಸ್ವೀಕರಿಸಿ ಸಹಿಸು! ತೀರಿಸು ರಾಜ ಋಣವನ್ನು; ವಿಪ್ರ ಪೂಜಾವಿಧಾನವೇ ಬೇರಿತ್ತು! ಅದನ್ನೊಲ್ಲದೆ ಕ್ಷಾತ್ರರ ಜಯಾಪಜಯಗಳನ್ನು ಅರಿಸಿ ಬಂದೆ! ನೀ ಬೇಡಿದ ಯುದ್ಧ ಭಿಕ್ಷೆಯನ್ನು ಅರ್ಜುನನು ಕೊಡುವನು!'

ಅಶ್ವತ್ಥಾಮನು 'ಸರಿ! ಹಾಗೆಯೇ ಆಗಲಿ!' ಎಂದು ಕೇಶವನನ್ನು ಅರವತ್ತು ಬಾಣಗಳಿಂದಲು, ಕಿರೀಟಿಯನ್ನು ಮೂರು ಬಾಣಗಳಿಂದಲು ಹೊಡೆದನು. ಅರ್ಜುನನು ಮೂರು ಬಾಣಗಳಿಂದ ಆತನ ಧನುವನ್ನು ಮುರಿದನು. ಅಶ್ವತ್ಥಾಮನು ನಿಮಿಷಾರ್ಧದಲ್ಲಿ ಮತ್ತೊಂದು ಧನುವನ್ನು ಪಿಡಿದು ಅರ್ಜುನಕೃಷ್ಣರನ್ನು ಸಾವಿರ ಶರ, ಮುನ್ನೂರು ಬಾಣಗಳಿಂದ ಪೀಡಿಸಿದನು. ಮತ್ತು ಯೋಗಬಲದಿಂದ, ಧನುವಿನಿಂದ, ಜ್ಯಾತಲದಿಂದ, ನಿಷಂಗದಿಂದ, ಕೈಗಳಿಂದ, ಎದೆಯಿಂದ, ವದನದಿಂದ ಘ್ರಾಣನೇತ್ರಗಳಿಂದ, ಲೋಮಕೇಶಗಳಿಂದ ಬಾಣವರ್ಷವನ್ನು ಸೃಜಿಸಿದ ಅಶ್ವತ್ಥಾಮನು ಮಳೆಗರೆವ ಮೇಘದಂತೆ ಕಂಗೊಳಿಸಿದನು. ಅರ್ಜುನ ಕೃಷ್ಣರನ್ನು ಶರಜಾಲದಿಂದ ಮುಚ್ಚಿ ಸಿಂಹನಾದವನ್ನು ಮಾಡುವ ಗುರುಸುತನನ್ನು ನೋಡಿ, ಕುಂತೀಸುತನು 'ಮಾಧವ! ನೋಡಿದೆಯಾ ದ್ರೌಣಿಯ ದುಡುಕುತನವನ್ನು! ಶರವೃಷ್ಟಿಯಲ್ಲಿ ಅಡಗಿರುವ ನಮ್ಮನ್ನು ಕಂಡು 'ಕೃಷ್ಣ ಪಾರ್ಥರನ್ನು ಗೆದ್ದೆ 'ನೆಂಬಂತೆ ಗರ್ಜಿಸುತ್ತಿರುವನು. ಇವನ ಗರ್ವವನ್ನು ಈಗ ಮುರಿಯುವೆನು' ಎಂದು ಕೃಷ್ಣನಿಗೆ ಹೇಳಿದನು. ಅರ್ಜುನನು ಅಶ್ವತ್ಥಾಮನ ಅಸ್ತ್ರವನ್ನು ಪ್ರತ್ಯಸ್ತ್ರದಿಂದ ವಿಫಲವಾಗಿಸಿ, ಮತ್ತೆ ಸಂಸಪ್ತಕರಿಂದ ಕೂಡಿ ಕಾದಲು ಹೋದನು.

ಅರ್ಜುನ ಶರಗಳು ಕಿರಣಗಳಂತೆ ಮುಚ್ಚಲು ಸಂಸಪ್ತಕ ಸೈನ್ಯನೀಹಾರವು ಕರಗಿ ಹೋಯಿತು. ಅವನನ್ನು ಕಣ್ಣೆತ್ತಿ ನೋಡಿದವರಿಗೆ ಉತ್ತರಕ್ಷಣದಲ್ಲಿ ಯಮರಾಜನನ್ನು ನೋಡುವಂತಾಯಿತು. ನಾನಾರೂಪಬಾಣಗಳು, ಗಾಂಡೀವದಿಂದ ಹೊರಹೊಮ್ಮಿ ಕ್ರೋಶದೂರದಲ್ಲಿರುವ ಭಟರನ್ನು ಸಂಹರಿಸುತ್ತಿದ್ದವು. ಕರಿಗಳ ಕರಗಳು ಛಲ್ಲಚ್ಛಿನ್ನವಾಗಿ ಮಹಾವನದಲ್ಲಿ ಕಡಿದು ಕೆಡಹಿದ ವೃಕ್ಷಗಳಂತೆ ಕಂಡವು. ಗಿರಿಗಳೇ ಕೆಳಗುರುಳಿದಂತೆ ಆನೆಗಳು ಛಿನ್ನತುಂಡಾದಂಡಗಳಾಗಿ ಉರುಳಿದವು. ಚಕ್ರಗಳು ಮುರಿದ ರಥಗಳು, ಕುದುರೆಗಳಿಲ್ಲದ (ಸತ್ತುಬಿದ್ದ) ಸ್ಯಂದನಗಳು, ನೊಗೆಗಳು, ಮುರಿದ ರಥಗಳು ಸಾಲಾಗಿ ನಿಂತಾಗ, ಗಂಧರ್ವ ನಗರದಂತೆ ಕಂಡವು. ಸಾದಿಗಳಿಲ್ಲದ ಕುದುರೆಗಳು ದಿಕ್ಕಾಪಾಲಾಗಿ ಓಡಿದವು. ಧನಂಜಯ ಪ್ರಳಯಸೂರ್ಯನು ಪ್ರಚಂಡಕಾಂಡಗಳಿಂದ ಸಂಸಪ್ತಸಾಗರವನ್ನು ಶೋಷಿಸಿದನು.

ಆಗ ಅಶ್ವತ್ಥಾಮನು ಮತ್ತೆ ಬಂದು ಮುತ್ತಲು ಧನಂಜಯನು ಅವನ ಬಾಣಗಳನ್ನು ಖಂಡಿಸಿ, ಇಪ್ಪತ್ತು ಬಾಣಗಳಿಂದ ಅವನ ಎದೆಯನ್ನು ತಾಡಿಸಿದನು. ಅವನ್ನು ಕೆಡಹಿ ಗುರುಸುತನು ಶರಶತದಿಂದ ಅವರಿಬ್ಬರನ್ನೂ ಹೊಡೆದನು. ಅರ್ಜುನನು ತೀವ್ರನಾರಾಚಗಳಿಂದ ಆತನನ್ನು ಪೀಡಿಸಿ, ಸಂಸಪ್ತಕರ ಕಡೆ ತಿರುಗಿದನು.

ಅರ್ಜುನನ ಬಾಣ ಸಹಸ್ರವು ಸಂಸಪ್ತಕರ ಧನುಸ್ಸು, ಬಾಣ, ಕವಚ, ರಥ, ಛತ್ರ, ಗಜ, ತುರಗ, ವಸ್ತ್ರ ಮಾಲ್ಯಗಳಲ್ಲಿ ವ್ಯಾಪಿಸಿ ಮರ್ಮಸ್ಥಾನಗಳನ್ನು ಭೇದಿಸಿ ಅವರನ್ನು ಸಂಹರಿಸಿತು. ದ್ವಿಪಗಳ ಪಾದಗಳನ್ನು ಹಯಗಳ ಗಳಗಳನ್ನು ರಥಗಳ ನೊಗೆಗಳನ್ನು ಭಟರ ಶಿರಗಳನ್ನು ಖಂಡಿಸಿ ಕೆಡಹುವ ಪಾರ್ಥನ ಬಾಣಗಳ ಧಾಟಿಗೆ ನಿಲ್ಲಲಾರದೆ ಸಂಸಪ್ತಕರು ಮತ್ತೆ ರಣರಂಗದಿಂದ ಓಡಿಹೋದರು. ಅವರ ಸೈನಿಕ ಸಹಸ್ರಗಳು ಸಂಹೃತವಾದವು. ಕಿರೀಟ ಮಾಲ್ಯಾಭರಣ ಸಮಲಂಕೃತವು, ಪದ್ಮಾರ್ಕ ಚಂದ್ರಸದೃಶವು ಆದ ಶಿರಸ್ಸಮೂಹವು ಭಲ್ಲಶರ ಕ್ಷುರಪ್ರ ಖಂಡಿತವಾಗಿ ರಣರಂಗದಲ್ಲಿ ಹರಡಿ ಬಿದ್ದವು. ವಜ್ರಾಹತ ಪರ್ವತ ಶಿಖರಗಳಂತೆ ಕರಿಘಟೆಗಳು, ಅಲ್ಲಿಂದ ಹರಿದು ಬರುವ ನದಿಗಳಂತೆ ರಕ್ತಪ್ರವಾಹಗಳು, ಕಡು ಭಯಂಕರವಾಗಿದ್ದವು.

ಇಂತು ಸಂಸಪ್ತಕರನ್ನೋಡಿಸಿ, ಅರ್ಜುನನು ಮತ್ತೆ ಗುರುಪುತ್ರನನ್ನು ಸಮೀಪಿಸಿ ಬಾಣ ಜಾಲದಿಂದ ಆತನನ್ನು ಮುಚ್ಚಿದನು. ಅಶ್ವತ್ಥಾಮನು ಕ್ರುದ್ಧನಾಗಿ ಮೇಘದಂತೆ ಗರ್ಜಿಸಿ, ಬಾಣವರ್ಷದಲ್ಲಿ ಕೃಷ್ಣನನ್ನು ಮುಣುಗಿಸಿದನು. ಆದಾನ, ಸಂಧಾನ, ಆಕರ್ಷಣ, ಮೋಚನಗಳು ತಿಳಿಯಬರದಂತೆ ಸಂತತವಾದ ಬಾಣ ವೃಷ್ಟಿಯಿಂದ ಅರ್ಜುನನು ಅವನ ಶರಜಾಲವನ್ನು ನಿವಾರಿಸಿದನು. ಆಗ ಶ್ರೀಕೃಷ್ಣನು 'ಅರ್ಜುನ! ಪ್ರಮಾದವಶನಾಗಬೇಡ! ಅಶ್ವತ್ಥಾಮನು ಸಾಮಾನ್ಯನಲ್ಲ. ಉಪೇಕ್ಷಿಸಿ ಮೃದುಯುದ್ಧವನ್ನು ಮಾಡಿದರೆ ಸುಗ್ಗುವನಲ್ಲ.' ಎಂದು ಅರ್ಜುನನನ್ನು ಎಚ್ಚರಿಸಿದನು. ಪಾರ್ಥನು ಆ ಮಾತನ್ನನುಮೋದಿಸಿ ನಿಶಿತಬಾಣಪರಂಪರೆಯಿಂದ ಗುರುಸುತನ ಭುಜ, ವಕ್ಷೋಬಾಹುಗಳನ್ನು ನಾಟಿಸಿ, ಮತ್ತೊಂದರಿಂದ ತುರಗರಶ್ಮಿಗಳನ್ನು ಛೇದಿಸಿದನು. ವಾತಜವವಾದ ಆ ಜವನಾಶ್ವಗಳು ಸಾರಥಿಗೆ ವಶವಾಗದೆ, ಓಡಿಹೋದವು. ಆಗ ಅಶ್ವತ್ಥಾಮನು ಪಾರ್ಥಶರಪೀಡಿತನಾಗಿ ಮತ್ತೆ ಅವನೊಡನೆ ಕಾದಲಿಚ್ಛಿಸದೆ ಕರ್ಣನನ್ನು ಸೇರಪೋದನು. ಧನಂಜಯನಲ್ಲಿ ಜಯವು ನಿತ್ಯವಾಗಿದೆ ಎಂದರಿತು ಆಂಗಿರಸವಂಶವರನು ಕ್ಷೀಣೋತ್ಸಾಹನಾದನು. ಆತನ ಬತ್ತಳಿಕೆಗಳು ಬರಿದಾದವು.

ಮಂತ್ರೌಷಧಾತಿಬಲದಿಂದ ವ್ಯಾಧಿಯನ್ನು ದೇಹದಿಂದ ಕಿತ್ತೊಗೆದಂತೆ, ಅರ್ಜುನನು ದಿವ್ಯಾಸ್ತ್ರಭರದಿಂದ ಅಶ್ವತ್ಥಾಮನನ್ನು ರಣಾಂಗಣದಿಂದ ದೂರೀಕರಿಸಿ ವಾನರಧ್ವಜವು ಅನುಕೂಲ ವಾತಗಳಿಂದ ಹಿಂದೆ ಸಾಗಿ ಹಾರುತ್ತಿರಲು, ಗಾಂಡೀವ ಟಂಕಾರವನ್ನು ಮಾಡುತ್ತಾ ಸಂಸಪ್ತಕವಾಹಿನಿಯನ್ನು ಮುತ್ತಪೋದನು.

ಆಗ ಪಾಂಡವಸೇನಾ ಮಧ್ಯದಿಂದ ಕೋಲಾಹಲವು ಕೇಳಬಂತು. ಅದನ್ನು ಕೇಳಿ ಶ್ರೀಕೃಷ್ಣನು 'ಪಾರ್ಥ ! ದಂಡಧಾರನೆಂಬ ಮಗಧರಾಜನು ತನ್ನ ಆನೆಯನ್ನೇರಿ

ಬಾಣಶತದಿಂದ ಭಟಶತವನ್ನು ಸಂಹರಿಸುತ್ತಿರುವನು. ಅವನ ಆನೆಯೂ ಕೈಲಿದ್ದ ಮುದ್ಗರದಿಂದ ಹೊಡೆದು, ಕಾಲಿಂದ ತುಳಿದು ಪಾಂಡವಸೈನಿಕರನ್ನು ಕೊಲ್ಲುತ್ತಿರುವುದು. ಅವನು ಭಗದತ್ತನಂತಹ ವೀರನಿರುವನು. ಅವನನ್ನು ಕೊಂದು ಮುಂದೆ ಸಂಸಪ್ತಕರನ್ನು ಕೂಡಿ ಕಾದುವೆಯಂತೆ!' ಎಂದು ಹೇಳುತ್ತಾ, ಮಾತು ಮುಗಿಯುವಲ್ಲಿ ರಥವನ್ನು ದಂಡಧಾರನ ಆನೆಯ ಮುಂದೆ ನಿಲ್ಲಿಸಿದನು.

ಮಾಗಧರಾಜನು ಕೇತುಗ್ರಹದಂತೆ ಭಯಂಕರನಾಗಿ, ಅಂಕುಶದಿಂದ ತಿವಿದು ಆನೆಯನ್ನು ರೇಗಿಸಿದನು. ಅದು ರಾಕ್ಷಸನೇ ಆನೆಯಾಗಿ ಬಂದನೆಂಬಂತೆ, ಗರ್ಜಿಸುವ ಮೇಘದಂತೆ, ನಡೆಯುವ ಬೆಟ್ಟದಂತೆ ಗೀಳಿಡುತ್ತಾ ಮೇಲೇರಿ ಬಂದು, ಸಿಕ್ಕ ಸಿಕ್ಕ ಭಟರನ್ನು ತುಳಿದು ನಾಶಪಡಿಸಿತು; ರಥಗಳನ್ನು ಮುರಿಯಿತು; ಕುದುರೆಗಳನ್ನು ಸವಾರರನ್ನೂ ಸೊಂಡಿಲದ ಮುದ್ಗರದಿಂದ ಬಡಿದು ಕೊಂದುಹಾಕಿತು. ಗಾಂಡೀವಟಂಕಾರವನ್ನೂ, ಮೃದಂಗ ಶಂಖಭೇರೀಧ್ವಾನಗಳನ್ನೂ ಕೇಳಿ ಕೆರಳಿದ ಗಜರಾಜನು ಅರ್ಜುನನಿಶಿತಬಾಣವು ಲಲಾಟದಲ್ಲಿ ಬಡಿದಾಗ ಹುಚ್ಚಿಳಿದಂತೆ ನಿಂತಿತು. ದಂಡಧಾರನು ಹನ್ನೆರಡು ಬಾಣಗಳಿಂದ ಪಾರ್ಥನನ್ನು, ಹದಿನಾರು ನಾರಾಚಗಳಿಂದ ನಾರಾಯಣನನ್ನು ಪೀಡಿಸಿ, ಮೂರು ಮೂರು ಬಾಣಗಳಿಂದ ಅರ್ಜುನನ ಅಶ್ವಗಳನ್ನು ಹೊಡೆದು ಸಿಂಹನಾದ ಮಾಡಿದನು. ಪಾರ್ಥನು ಕ್ರುದ್ಧನಾಗಿ ಭಲ್ಲದಿಂದ ಅವನ ಧನುಸ್ಸನ್ನು ಮುರಿದು, ಒಂದು ಬಾಣದಿಂದ ಅವನ ಧ್ವಜವನ್ನು ಕೆಡಹಿ ಮೂರರಿಂದ ಗಜರಕ್ಷರನ್ನು ಪೀಡಿಸಿದನು. ದಂಡಧಾರನು ಕ್ರುದ್ಧನಾಗಿ ತೋಮರದಿಂದ ತಿವಿದು ತನ್ನ ಆನೆಯನ್ನು ಅರ್ಜುನನ ರಥವನ್ನು ತುಳಿಯುವಂತೆ ಪ್ರೇರಿಸಿದನು. ಅರ್ಜುನನು ಎರಡು ಭಲ್ಲಗಳಿಂದ ಮಾಗಧನ ಎರಡು ಕೈಗಳನ್ನು ಒಂದೇ ಸಲ ಕಡಿದು, ತಡಮಾಡದೆ ನಿಶಿತಶರದಿಂದ ಅವನ ಶಿರವನ್ನೂ ಕಡಿದನು. ಮತ್ತು ಅರವತ್ತು ಬಾಣಗಳಿಂದ ಆನೆಯನ್ನು ಪೀಡಿಸಿದನು. ಕಾಂಚನಕವಚಸಮಲಂಕೃತವಾಗಿದ್ದ ಮದ್ದಾನೆಯು ಪಾರ್ಥನ ಬಾಣಶತದಿಂದ ಗಾಯಪಟ್ಟು ರಕ್ತದ ಕಾಲುವೆ ಮೈಯಿಂದ ಹರಿದಾಗ, ದಾವಾಗ್ನಿಗೆ ಸಿಕ್ಕ ವೃಕ್ಷಬಹುಳಗಿರಿಯಂತೆ ಕಂಡಿತು. ಬಾಣವಿದ್ಧವಾದ ಮಾಗಧ ಗಜವು ವೇದನೆಯಿಂದ ಗೀಳಿಡುತ್ತಾ ಓಡಿ ಸ್ವಲ್ಪ ದೂರದಲ್ಲಿ ಕೆಳಗೆ ಬಿದ್ದು ಮೃತವಾಯಿತು.

ದಂಡಧಾರನ ತಮ್ಮನಾದ ದಂಡನು ಕ್ರುದ್ಧನಾಗಿ, ಧನಂಜಯನನ್ನು ಸಂಹರಿಸುವ ಪಣತೊಟ್ಟು ಅವನನ್ನು ಮೂರು ತೋಮರಗಳಿಂದ ಹೊಡೆದನು. ಅರ್ಜುನನು ತೋಮರಗಳನ್ನೆತ್ತಿ ಇಳಿಯುವ ಕೈಯನ್ನು ಬಾಣದಿಂದ ಕತ್ತರಿಸಿ ನೆಲದಿ ಕೆಡಹಿದನು. ಮತ್ತೊಂದು ಕೈಯನ್ನೂ ಕಡಿದಾಗ ಅವನ ಕೈಗಳು ಅದ್ರಿಶೃಂಗದಿಂದ ಕೆಳಗಿಳಿವ ಮಣಿಶಿರಸ್ಸರ್ಪಗಳಂತೆ ಕಂಡವು. ಅರ್ಜುನನು ಅವನೇರಿದ್ದ ಆನೆಯನ್ನು ಅರವತ್ತು ಬಾಣಗಳಿಂದ ಪೀಡಿಸಿ, ಮತ್ತೊಂದರಿಂದ ದಂಡನ ರುಂಡವನ್ನು ಕಡಿದು ಕೆಡಹಿದನು. ಹಿಮಾದ್ರಿಕೂಟವು ಕಡಿದು ಬಿದ್ದಂತೆ ಅವನ ಆನೆಯು ಕೆಳಗುರುಳಿ ಸತ್ತಿತು. ದಂಡಧಾರದಂಡರ ಮೃತಿಯನ್ನು ಕಂಡು ಮಾಗಧಭಟರು ಪಲಾಯನ ಮಂತ್ರಗಳನ್ನು ಪಠಿಸಿದರು. ಮೃತ್ಯುವಿನಂತೆ ಸಂಹರಿಸುವ ದಂಡಧಾರನ ಮೃತಿಯನ್ನು ಸಾಧಿಸಿ, ತಮ್ಮನ್ನು ಕಾಪಾಡಿದ ಅರ್ಜುನನನ್ನು ಪಾಂಡವಸೈನಿಕರು ಪ್ರಶಂಸಿಸಿ, ಜಯಧ್ವಾನಗಳನ್ನು ಮಾಡಿದರು.

ಮಾಗಧರಾಜಸೋದರರನ್ನು ಸಂಹರಿಸಿ, ಪಾರ್ಥನು ಮತ್ತೆ ಸಂಸಪ್ತಕವಾಹಿನಿಯನ್ನು ಮುತ್ತಿ ನಾಶಪಡಿಸಿದನು. ಪಾರ್ಥಬಾಣಹತರಾದ ರಥಿಕಸಾದಿ ಪದಾತಿಗಳು ಕೆಳಗುರುಳಿದರು. ರಥಸೂತರನ್ನು, ಅಶ್ವಸಾದಿಗಳನ್ನು, ಗಜಯೋಧರನ್ನು ಪಾಂಡವನು ಭಲ್ಲ, ವತ್ಸದಂತ, ಕ್ಷುರಪ್ರ, ಅರ್ಧಚಂದ್ರ ಮುಂತಾದ ಬಾಣವಿಶೇಷಗಳಿಂದ ಸಂಹರಿಸಿದನು. ತ್ರೈಲೋಕ್ಯವಿಜಯಕ್ಕಾಗಿ ಇಂದ್ರನೊಡನೆ ಹೋರಾಡುವ ದೈತ್ಯರಂತೆ, ಸಂಸಪ್ತಕರು ಇಂದ್ರನಂದನನೊಡನೆ ಕಡಿದಾಡಿ ಮೃತರಾದರು. ಅವರ ರಾಜನಾದ ಉಗ್ರಾಯುಧನು ಮೂರು ಬಾಣಗಳಿಂದ ಅರ್ಜುನನನ್ನು ಪೀಡಿಸಿದನು. ಪಾರ್ಥನು ಕ್ಷುರುಪ್ರದಿಂದ ಉಗ್ರಾಯುಧನ ಶಿರವನ್ನು ಖಂಡಿಸಿ, ಸಿಟ್ಟಾಗಿ ಮೇಲೇರಿ ಬರುವ ಅವನ ಸೈನಿಕರನ್ನೂ ಯಮಸದನಕ್ಕಟ್ಟಿದನು. ಅರ್ಜುನಬಾಣಹತವಾಗಿ ತ್ರಿವೇಣುಗಳು ಮುರಿದವು; ಕುದುರೆಗಳು ಸತ್ತು ಬಿದ್ದವು; ಸಾರಥಿ ಪಾರ್ಷ್ಣಿಗ್ರಾಹರು ಮೃತರಾದರು; ಕೈಗಳಿಲ್ಲದ ಭಟ್ಟರ ಕಂಕಾಳಗಳು ರಣಧರಣಿಯಲ್ಲಿ ಹರಡಿ ಬಿದ್ದವು. ಅಗ್ನಿದಗ್ಧವಾಗಿ, ಮಳೆಗೆ ಸಿಕ್ಕ ಧನಿಕರ ಮನೆಗಳಂತೆ, ಕನಕರಥಗಳು ಚಕ್ರರಹಿತವಾಗಿ ಬಿದ್ದಿದ್ದವು. ಕರುಳುಗಳು ಜೋತಾಡುತ್ತಿರಲು ರಕ್ತಸಿಕ್ತರಾಗಿ ವೇದನಾಭರದಿಂದ 'ಜಲ ಜಲ'! ಎಂದು ಬೇಡುತ್ತಾ, ಚೀರಾಡುವ ಭಟರು ಕೇಳುವವರಿಲ್ಲದೆ, ದುರ್ಯೋಧನನನ್ನು ನಿಂದಿಸುತ್ತಾ, ಮೃತರಾಗಿ ಬಿದ್ದರು. ಪುಣ್ಯಕರ್ಮರಾದ ವೀರರು ರಣರಂಗದಿ ವೀರಶಯನದಿ ದೇಹಗಳನ್ನಿಟ್ಟು ತಾವು ವೀರಸ್ವರ್ಗವನ್ನು ಸೇರಿದರು.

ವಾಸುದೇವನು 'ಪಾರ್ಥ! ಈ ಕ್ಷುದ್ರರೊಡನೇನು ಬಡಿದಾಡುವೆ? ಮುಗಿಸು ಸಂಸಪ್ತಕರನ್ನು ! ನಡೆ ಕರ್ಣನ ಕಡೆ!' ಎಂದನು. ಅರ್ಜುನನು ಮಿಕ್ಕ ಸಂಸಪ್ತಕ ಬಲವನ್ನು ಇಂದ್ರನು ದಾನವರನ್ನಂತೆ ಸಂಹರಿಸಿದನು. 'ಮಹಾಜನಕ್ಷಯವಾಗುತ್ತಿದೆ. ಇಷ್ಟು ಅನರ್ಥಕ್ಕೆ ಮೂಲಕಾರಣನಾದ ದುರ್ಯೋಧನನಿನ್ನೂ ಬದುಕಿರುವನು. ಅವನ ಬಲಗೈಯಂತಿರುವ ಕರ್ಣನೂ ಬದುಕಿರುವನು. ಸಂಸಪ್ತಕಸೈನ್ಯವು ನಷ್ಟವಾಯಿತು. ರಣರಂಗವೆಷ್ಟು ಭೀಕರವಾಗಿದೆ ನೋಡು ! ಕನಕಪುಂಖಬಾಣಗಳು, ತೈಲಧೌತ ನಾರಾಚಗಳು, ನಿಶಿತತೋಮರಗಳು, ಹೇಮಭೂಷಿತ ಚರ್ಮಗಳು (ಗುರಾಣಿಗಳು), ಪಟ್ಟಿಶ, ದಂಡ, ಪರಶು, ಪರಿಘ, ಭಿಂದಿಪಾಲ, ಭುಶುಂಡಿ, ಕುಂತ, ಭಲ್ಲ, ಗದಾಗಳು ರಣರಂಗದಲ್ಲಿ ಹರಡಿ ಬಿದ್ದಿವೆ! ಚಂದನದಿಗ್ಧವು, ಅಂಗದ ಮುದ್ರಿಕಾ ಶೋಭಿತವು ಆದ ಭಟಹಸ್ತಗಳು, ಭಗ್ನರಥಗಳು, ಕರಿತುಂಡಗಳು, ಹಯಕಂಠಗಳು ಖಂಡಿತವಾಗಿ ರಣಭೂಮಿಗೆ ಬಲಿಯಿಟ್ಟಂತೆ ಕಾಣುತ್ತಿವೆ. ಶಂಖಗಳು, ರಥಧ್ವಜಗಳು, ನೊಗೆಗಳು, ಧನುರ್ಬಾಣಗಳು ರಕ್ತನದಿಯಲ್ಲಿ ತೇಲಿಹೋಗುತ್ತಿವೆ. ಶ್ಮಶ್ರುಸಮಲಂಕೃತವದನರಾಜಿಯು, ರಕ್ತನದಿಯಲ್ಲಿ ಪ್ರತಿಬಿಂಬಿಸಿದ ಚಂದ್ರಸಹಸ್ರದಂತೆ ಕಾಣುತ್ತಿದೆ' ಎಂದು ರಣರಂಗವನ್ನು ತೋರುತ್ತಾ ಶ್ರೀಕೃಷ್ಣನು ರಥವನ್ನು ರಣಭೂಮಿಗೆ ಸೇರಿಸಿದನು.

ಅಲ್ಲಿ ಕೌರವಸೈನ್ಯವನ್ನು ಜಿಂಕೆಗಳ ಹಿಂಡನ್ನು ಕೇಸರಿಯಂತೆ ನಾಶಮಾಡುತ್ತಿದ್ದ ಪಾಂಡ್ಯರಾಜನನ್ನು ಕಂಡು, ಅವನ ಧಾಟಿಗೆ ನಿಲ್ಲಲಾರದೆ ಓಡುವ ಕುರುಸೈನಿಕರ ಕೋಲಾಹಲವನ್ನು ಕೇಳಿ, ಶ್ರೀಕೃಷ್ಣಾರ್ಜುನರು ವಿಸ್ಮಿತರಾದರು. ಪಾಂಡ್ಯ ರಾಜನಾದ

ಪ್ರವೀರನು ನಾನಾವಿಧ ಶಸ್ತ್ರಗಳಿಂದ ರಥಿಕ ಆಶ್ವಿಕ ಪದಾತಿ ಸೈನಿಕರನ್ನು ಸಂಹರಿಸಿದನು. ಅವನು ಬಲವೀರ್ಯದರ್ಪಿತನಾಗಿದ್ದನು. ಸಮಾಪ್ತವಿದ್ಯರಾದ ಕೃಪಕರ್ಣ, ದ್ರೌಣಿ, ಶಲ್ಯರನ್ನು ತನಗೆ ಸಮರಲ್ಲವೆಂದವನು ತಿಳಿದಿದ್ದನು. ಭೀಷ್ಮದ್ರೋಣರಕಿಂತಲು ಹೆಚ್ಚು ಪರಾಕ್ರಮದಿಂದ ಶೋಭಿಪ ತನಗೆ ಕೃಷ್ಣಾರ್ಜುನರು ಸಮರಾಗಬಹುದೆಂದೂ ಅವನು ಭಾವಿಸಿದ್ದನು. ಸರ್ವಶಸ್ತ್ರಧರವರನಾದ ಪ್ರವೀರನು ರಥಿಕ ಸೂತರನ್ನು, ಸಾದಿಭಟರನ್ನು, ಗಜವೀರರನ್ನು ಸಂಹರಿಸಿ, ವಾಯುವು ಮೇಘಗಳನ್ನಂತೆ ಕುರುಸೇನೆಯನ್ನು ಚದುರಿಸಿದನು. ಪುಲಿಂದ, ಬಾಹ್ಲೀಕ, ನಿಷಾದಾಂಧ್ರ, ಕುಂತಲ, ದಾಕ್ಷಿಣಾತ್ಯ, ಭೋಜದೇಶಗಳ ಸಮರಕರ್ಕಶಯೋಧರನ್ನು ಮೊದಲು ವಿಶಸ್ತ್ರರನ್ನೂ, ಅನಂತರ ವಿಶಿರಸ್ಕರನ್ನೂ ಮಾಡಿದನು.

ಅವನನ್ನು ತಡೆದು ಅಶ್ವತ್ಥಾಮನು 'ರಾಜನ್! ವಿಶಿಷ್ಟಾಭಿಜನಶ್ರುತವಾದ ನಿನ್ನ ಪರಾಕ್ರಮವೂ ಪ್ರಖ್ಯಾತವಾಗಿದೆ. ಮಹಾಮೇಘದಂತೆ ಕಾಂಡವರ್ಷವನ್ನು ಬಹು ವೇಗವಾಗಿ ಸುರಿಸುವ ನಿನ್ನನ್ನು ಎದುರಿಸಿ ನಿಲ್ಲುವ ವೀರನೆಂದರೆ ನಾನೋರ್ವನೇ! ಮತ್ತಾರಿಲ್ಲ. ಭಯರಹಿತನಾದ ಮೃಗರಾಜನಿಗೆ ಮತ್ತೊಬ್ಬ ಕೇಸರಿಯಿಂದ ಕದನಕೇಲಿಯಲ್ಲಿ ತೊಡಗುವುದು ಯುಕ್ತವಾಗಲಿ ಕ್ಷುದ್ರಶಶಗಳ ಬೇಟೆಯಲ್ಲ. ತೂಣದಿಂದ ತೆಗೆದ ಬಾಣಗಳನ್ನು ನನ್ನಲ್ಲಿ ಬಿಡು! ತ್ರ್ಯಂಬಕನು ಅಂಧಕನನ್ನಂತೆ ನಾನು ನಿನ್ನನ್ನು ಸಂಹರಿಸಲು ಬಂದಿರುವೆನು' ಎಂದು ಅಗ್ನಿಶಿಖೆಯಂತೆ ಉರಿವ ಬಾಣಗಳಿಂದ ಪ್ರವೀರಮಲಯಧ್ವಜನನ್ನು ಪೀಡಿಸಿದನು. ಮರ್ಮಭೇದಿಗಳಾದ ದ್ರೌಣಿಯ ಬಾಣಗಳಿಂದ ಪೀಡಿತನಾದ ಪಾಂಡ್ಯನು ಕ್ರುದ್ಧನಾಗಿ ಬಾಣಪ್ರಯೋಗದ ದಶವಿಧ ಚಾತುರ್ಯವನ್ನು ತೋರಿ, ನಿಶಿತಶರಗಳಿಂದ ಗುರುಸುತನನ್ನು ಪೀಡಿಸಿದನು.

ಉನ್ಮುಖಿ (ಶಿರಕ್ಕೆ ತಾಕುವುದು), ಅಭಿಮುಖಿ (ಹೃದಯವನ್ನು ಮುಟ್ಟಿ ಬೀಳುವುದು), ತಿರ್ಯಕ್ (ಪಕ್ಕೆಗಳಿಗೆ ತಾಕುವುದು), ಮಂದಾ (ಚರ್ಮಮಾತ್ರ ಭೇದಿನಿ), ಗೋಮೂತ್ರಿಕಾ (ಸವ್ಯಾಪಸವ್ಯವಾಗಿ ಸಾಗಿ ಕವಚವನ್ನು ಸೀಳುವುದು), ಧ್ರುವಾ (ತಪ್ಪದೆ ಲಕ್ಷ್ಯವನ್ನು ಹೊಡೆವುದು), ಸ್ಖಲಿತಾ (ಲಕ್ಷ್ಯಬಿಟ್ಟು ಜಾರುವುದು), ಯಮಕಾಕ್ರಾಂತಾ (ಎರಡು ಮೂರು ಗುರಿಗಳನ್ನು ಭೇದಿಸುವುದು), ಕ್ರುಷ್ಟಾ (ಲಕ್ಷ್ಯದ ಒಂದು ಭಾಗವನ್ನು ಹೊಡೆವುದು), ಇವು ಒಂಬತ್ತು ಬಾಣಗತಿಗಳು. ಅತಿಕ್ರುಷ್ಟಾ ಎಂಬ ಹತ್ತನೆಯ ವಿಧವೆಂದರೆ ಶಿರಸ್ಸನ್ನು ಕಡಿದು ದೂರ ಕೆಡಹುವುದು. ಇಂತು ದಶವಿಧ ಬಾಣವಿಕ್ರಮದಿಂದ ಬಡಿದಾಡುವ ಪಾಂಡ್ಯ ದ್ರೌಣಿಗಳ ಯುದ್ಧವು ಅತಿ ಭೀಕರವಾಯಿತು.

ಪಾಂಡ್ಯನು ನಿಶಾತಭಲ್ಲದಿಂದ ಗುರುಸುತಧನುವಿನ ಜ್ಯಾಲತೆಯನ್ನು ಖಂಡಿಸಿ, ನಾಲ್ಕು ಕುದುರೆಗಳನ್ನು ಸಂಹರಿಸಿದನು. ಅಶ್ವತ್ಥಾಮನು ಮತ್ತೊಂದು ನಾರನ್ನು ತನ್ನ ದಿವ್ಯ ಧನುವಿಗೆ ಜೋಡಿಸಿ, ಟಂಕಾರಗೈದು ಸಾರಥಿಯು ಬೇರೇ ಕುದುರೆಗಳನ್ನು ಕಟ್ಟಲು ರಥದಿ ಕೂತು, ಪ್ರವೀರನನ್ನು ಶರಸಹಸ್ರದಿಂದ ಪೀಡಿಸಿದನು. ಪಾಂಡ್ಯನು ಆ ಬಾಣಗಳನ್ನು ಖಂಡಿಸಿ, ಚಕ್ರರಕ್ಷಕರನ್ನು ಸಂಹರಿಸಿ, ಬಾಣವೃಷ್ಟಿಯಲ್ಲಿ ದ್ರೋಣಸುತನನ್ನು ಮುಣುಗಿಸಿದನು. ಅಶ್ವತ್ಥಾಮನೂ ಆ ಬಾಣವೃಷ್ಟಿಯನ್ನು ವಾರಿಸಿ

ತನ್ನ ಶರವೃಷ್ಟಿಯನ್ನು ಕರೆದು, ಪ್ರವೀರನ ಸೈನಿಕರನ್ನು ನಾಶಪಡಿಸಿದನು. ಗ್ರೀಷ್ಮಾಂತದಲ್ಲಿ ಪರ್ಜನ್ಯನಂತೆ ಬಾಣವೃಷ್ಟಿಯನ್ನು ಗರೆವ ಅಶ್ವತ್ಥಾಮನು ಆ ದಿನದ ಅರ್ಧ ಜಾವದೊಳಗೆ ಎಂಟು ಶಕಟಗಳ ಶಸ್ತ್ರಾಸ್ತ್ರಗಳನ್ನು ಬಳಸಿ ಮುಗಿಸಿದ್ದನು. ದ್ರೌಣಿಪರ್ಜನ್ಯಮುಕ್ತವಾದ ಸುದುಸ್ಸಹ ಬಾಣವೃಷ್ಟಿಯನ್ನು ಪಾಂಡ್ಯಾನಿಲನು ವಾಯವ್ಯಾಸ್ತ್ರದಿಂದ ನಿವಾರಿಸಿದನು. ಅಶ್ವತ್ಥಾಮನು ಅವನ ಚಂದನಾಗರುಭೂಷಿತವಾದ ಕೇತುವನ್ನು ಕಡಿದು; ಕುದುರೆಗಳನ್ನು ಕೆಡಹಿ, ಸೂತನನ್ನು ಸಂಹರಿಸಿ, ಅರ್ಧ ಚಂದ್ರ ಬಾಣದಿಂದ ಅವನ ಧನುವನ್ನೂ ಮುರಿದನು. ಮತ್ತೂ ಅವನ ರಥವನ್ನೂ ನೂರಾರು ಚೂರಾಗಿ ಭೇದಿಸಿದನು. ವಿರಥನು, ವಿಚಾಪನು ಆಗಿದ್ದ ಪಾಂಡ್ಯನೊಡನೆ ಮತ್ತೆ ಕಾದುವ ಕೂತೂಹಲದಿಂದ ಅಶ್ವತ್ಥಾಮನು ಅವನನ್ನು ಕೊಲ್ಲದೆ ಬಿಟ್ಟನು. ಅವನು ಅಲ್ಲಿಗೆ ಬಂದ ಒಂದು ಭದ್ರಗಜವನ್ನು ನೋಡಿ, ಅದು ವಿಯೋಧವಾಗಿರುವುದನ್ನು ಕಂಡು, ಅದರ ಮೇಲೇರಿ, ಮತ್ತೆ ಅಶ್ವತ್ಥಾಮನನ್ನು ಮುತ್ತಿದನು. ಗಿರಿಶೃಂಗದಲ್ಲಿ ಸಿಂಹದಂತೆ ಶೋಭಿಸುವ ಪಾಂಡ್ಯನು 'ಆಯಿತು ! ನಿನ್ನ ಕೆಲಸ ಮುಗಿಯಿತು !' ಎಂದು ಸಿಂಹನಾದವನ್ನು ಮಾಡಿ, ವಜ್ರಸದೃಶವಾದ ತೋಮರದಿಂದ ಅಶ್ವತ್ಥಾಮನಿಗೆ ಗುರಿಯಿಟ್ಟು ಹೊಡೆದನು. ಅಶ್ವತ್ಥಾಮನು ಕ್ರುದ್ಧನಾಗಿ ಐದು ಬಾಣಗಳಿಂದ ಅವನ ಪಾರ್ಶ್ವರಕ್ಷರನ್ನು ಪಾಂಡ್ಯನನ್ನು ಕೂಡ ಸಂಹರಿಸಿದನು. ಆ ಆನೆಯನ್ನೂ ಐದು ಬಾಣಗಳಿಂದ ಪೀಡಿಸಲು ಅದು ತುಂಡುತುಂಡಾಗಿ ದಿಗ್ದೇವತೆಗಳಿಗಿಟ್ಟ ಬಲಿಯಂತೆ ಕಂಡಿತು. ಇಂತು ಪಾಂಡ್ಯಪ್ರವೀರರನ್ನು ಸಂಹರಿಸಿ, ಕೃತ ಕೃತ್ಯನಾಗಿ ಮೆರೆವ ಗುರುಸುತನನ್ನು ಸೇರಿ, ಸುಹೃದ್ವೃತನಾದ ನಿನ್ನ ಸುತನು ಸಮ ಯೋಚಿತ ವಚನಗಳಿಂದ ಸಂಭಾವಿಸಿದನು.

## ೩. ಷೋಡಶ ದಿನದ ಯುದ್ಧ (೨) ಕರ್ಣ ವಿಕ್ರಮ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ರಾಜನ್ ! ಪ್ರಥಮ ಚತುರ್ದಶಿಯ ದಿನದ ಯುದ್ಧವನ್ನು ಸಂಜಯನು ಧೃತರಾಷ್ಟ್ರನಿಗೆ ವರ್ಣಿಸಿದನು. ಇಂತು ಪಾಂಡ್ಯನು ನಿಹತನಾದುದನ್ನು ಕಂಡು ಅರ್ಜುನನು ರೋಷಶೋಕಪರೀತನಾದನು. ಶ್ರೀಕೃಷ್ಣನು ಅವನನ್ನು ಕೂಡಿ ರಣರಂಗದಲ್ಲಿ ಸಂಚರಿಸಿ, ನಡೆದ ಭೀಕರ ದೃಶ್ಯವನ್ನು ಅವನಿಗೆ ತೋರಿಸಿ, 'ಅರ್ಜುನ ! ಧರ್ಮರಾಜಾದಿಗಳು ನನ್ನ ಕಣ್ಣಿಗೆ ಗೋಚರವಾಗುತ್ತಿಲ್ಲ. ಕರ್ಣಾಶ್ವತ್ಥಾಮರ ವೀರ ವಿಹಾರಕ್ಕೆ ತಾಳಲಾರದೆ ಪಾಂಡವ ಸೃಂಜಯ ಪಾಂಚಾಲ ಸೈನಿಕರು ದಿಕ್ಕಾಪಾಲಾಗಿ ಓಡುತ್ತಿರುವರು. ರಥಗಳು ಮುರಿದು ಬಿದ್ದಿವೆ. ಕೆಲ ರಥಗಳು ಹತಾಶ್ವಸೂತರಥಿಗಳಾಗಿ, ಜೀವನು ಬಿಟ್ಟ ಶರೀರದಂತೆ ನಿಶ್ಚಲವಾಗಿ ನಿಂತಿವೆ. ಆನೆಗಳು ಬೆಟ್ಟಗಳಂತೆ ನೆಲದಿ ಉರುಳಿ ಬಿದ್ದಿವೆ. ಭಟರೆಷ್ಟೋ ಜನರು ಅವುಗಳ ಮಹಾಕಾಯಕಗಳಿಗೆ ಸಿಕ್ಕು ನುಚ್ಚುನೂರಾಗಿರುವರು. ನಮ್ಮ ಸೈನಿಕರ ಸುಳಿವಿಲ್ಲ. ಆದರೂ ಅಲ್ಲಿ ನೋಡು ! ಭೀಮ

ಸೇನನೊಬ್ಬನು ತನ್ನ ಸೇನೆಯೊಡಗೂಡಿ, ಬಿಡದೆ ಕಾದುತ್ತಿರುವನು. ಧೃಷ್ಟದ್ಯುಮ್ನನೂ ಅವನಿಗೆ ಸಹಾಯಕನಾಗಿ ಕುರುಸೇನೆಯನ್ನು ಚೆಂಡಾಡುತ್ತಿರುವನು 'ಎಂದನು. ಅರ್ಜುನನು 'ವಾಸುದೇವ ! ರಥವನ್ನು ಅಲ್ಲಿಗೆ ಸೇರಿಸು !' ಎಂದನು. ಅಂತೆಯೇ ವಾಸುದೇವನು ಸ್ಯಂದನವನ್ನು ವೃಕೋದರನ ಸಮಿಪವನ್ನು ಸೇರುವಂತೆ ನಡೆಸುವಾಗ, ತಡೆದು ಸಂಸಪ್ತಕವೀರರು ಘೋರವಾಗಿ ಕಡಿದಾಡಿದರು.

ಭೀಮಸೇನಮುಖರಾದ ಪಾಂಡವರಿಗೂ, ಕರ್ಣಮುಖರಾದ ಕೌರವರಿಗೂ ಕದನವು ಕಡು ತೀವ್ರವಾಯಿತು. ಕದನರಂಗದಿ ಬಿದ್ದ ಭಟಕೋಟಿಯಿಂದ ಯಮರಾಜನ ಪುರವು ತುಂಬಿತುಳುಕಿತು. ಧನುರ್ಬಾಣ, ಪರಿಘ, ಪಟ್ಟಿಸ, ತೋಮರ, ಭುಸುಂಡಿ, ಖಡ್ಗ, ಮುಸಲ, ಪರಶು, ಗದಾ, ಪ್ರಾಸ, ಕುಂತ, ಭಿಂಡಿಪಾಲಾದ್ಯಾ - ಯುಧಧಾರಿಗಳಾದ ವೀರರ ಸಿಂಹನಾದಗಳು ಆಯುಧಧ್ವಾನಗಳೊಡನೆ ಮೇಳವಿಸಿ, ದಿಕ್ಕುಗಳಲ್ಲಿ ಪ್ರತಿಧ್ವನಿಸಿದವು. ಕುಂಜರ ಬೃಂಹಿತಿಗಳು, ಹಯ ಹೇಷಗಳು, ರಥ ನೇಮಿಧ್ವಾನಗಳು, ಭಟಗರ್ಜಾರವಗಳು, ಧನುರ್ಜ್ಯಾಟಂಕಾರಗಳು, ಬೆರೆತು ವ್ಯಾಪಿಸಿದಾಗ ದಿಗಂತಕುಡ್ಯಗಳು ಒಡೆಯುವಂತಾಯಿತು. ಮೇಲಕ್ಕೆದ್ದ ಧೂಳಿಯು ಆಕಾಶದಿ ವ್ಯಾಪಿಸಿಧಾಗ ಅದರ ಕಣಗಳಿಗೆ ಸಮಸಂಖ್ಯರಾದ ವೀರಭಟ್ಟರು ವೀರಸ್ವರ್ಗವನ್ನು ಸೇರಿದರು.

ಕರ್ಣನು ಶತ್ರುವೀರ ಶರವರ್ಷವನ್ನು ತಡೆದು ಪಾಂಚಾಲರಲ್ಲಿ ಹದಿನೈದು ರಥಿಕರನ್ನು ಅವರ ಸೂತರೊಡಗೂಡಿಸಿ ಯಮನಗರಕ್ಕೆ ಕಳಿಸಿದನು. ಪಾಂಡವ ಯೋಧರು ಅನೇಕರು ಅವನನ್ನು ಮುತ್ತಿ ಬಾಣಗಣದಿಂದ ಪೀಡಿಸಿದರು. ಕರ್ಣನು ಸಲೆರೇಗಿ ವೇಗವತ್ತರ ಶರಸಹಸ್ರದಿಂದ ಪಾಂಡವಸೇನೆಯನ್ನು ಪೀಡಿಸುತ್ತಾ ಹೊಕ್ಕಾಗ ಮದಗಜವು ಹೊಕ್ಕ ಪಾದ್ಮಾಕರದಿಂದ ಜಲಪಕ್ಷಿಗಳು ಹಾರಿಹೋದಂತೆ, ಪಾಂಡವಭಟರು ಚೆಲ್ಲಾ ಚೆದರಾಗಿ ಓಡಿಹೋದರು. ಶತ್ರುಶಿರಗಳನ್ನು ಶರಗಳಿಂದ ಕೆಡಹುತ್ತಾ, ಎದುರಿಲ್ಲದೆ ತಿರುಗುವ ರಾಧೇಯನ ಮುಂದೆ ನರಕಂಕಾಳಗಳು ಹರಡಿ ಬಿದ್ದವು. ಖಡ್ಗಚರ್ಮಾದ್ಯಾಯುಧಗಳು ರಣಭುವಿಯಲ್ಲಿಟ್ಟ ರಂಗವಲ್ಲಿಗಳಂತೆ ಹೊಳೆಯುತ್ತಿದ್ದವು. ಸಿಂಹವು ಮೃಗಗಣವನ್ನಂತೆ ಮರ್ದಿಸುವ ಕರ್ಣನ ಧಾಟಿಗೆ ನಿಲ್ಲಲಾರದೆ, ಪಾಂಡವಭಟರು ಕಶಾತಾಡಿತ ಜವನಾಶ್ವಗಳಂತೆ ಓಡಿಹೋದರು. ಕರ್ಣನ ನೇತ್ರಗೋಚರರಾದವರು ಅವನ ಶರಗೋಚರರಾಗದೆ ಇದ್ದಿಲ್ಲ; ಶರಗೋಚರರಾದವರು ತತ್‌ಕ್ಷಣವೇ ಯಮಗೋಚರರಾಗದೆ ಇರುತ್ತಿದ್ದಿಲ್ಲ.

ಕರ್ಣನ ವಿಕ್ರಮವನ್ನು ಸಹಿಸದೆ, ದ್ರುಪದ ಪುತ್ರನು ದ್ರೌಪದೇಯರೈವರು, ನಕುಲ ಸಹದೇವರು ಯುಯುಧಾನ ಮೊದಲಾದ ಪಾಂಡವ ವೀರರು ಅವನನ್ನು ಮುತ್ತಿ, ಶರವರ್ಷದಲ್ಲಿ ಮುಣುಗಿಸಿದರು. ಆಗ ತುಮುಲಸಮರವು ಪ್ರಾರಂಭವಾಯಿತು. ನಿನ್ನ ಪುತ್ರನಿಂದ ಪ್ರೇರಿತರಾದ ಹಸ್ತಿಯೋಧರು ಧೃಷ್ಟದ್ಯುಮ್ನನನ್ನು ಸಂಹರಿಸಬೇಕೆಂದು ಅವನನ್ನು ಮುತ್ತಿದರು. ಅಂಗ, ವಂಗ, ಪುಂಡ್ರ, ಮಾಗಧ, ತಾಮ್ರಲಿಪ್ತಕ, ಮೇಕಲ, ಕೋಶಲ,

ಮದ್ರ, ದಾಶಾರ್ಣ, ನಿಷಧ, ಕಲಿಂಗ, ವೀರರು ಹಸ್ತಿನಿಯುದ್ಧ ನಿಪುಣರಾದವರು, ಪಾಂಚಾಲಬಲವನ್ನು ಶರತೋಮರನಾರಾಚಾದಿಗಳಿಂದ ಪೀಡಿಸಿದರು. ಅಂಕುಶಗಳಿಂದ ತಿವಿಯಲ್ಪಟ್ಟು, ಗೀಳಿಡುತ್ತಾ, ಮೇಲೇರಿ ಬರುವ ಮದಕರಿಘಟವನ್ನು ಪಾರ್ಷತಸಿಂಹನು ಬಾಣಸಟಾಜಾಲದಿಂದ ತಡೆದು ಗರ್ಜಿಸಿದನು. ಪಾಂಡುಪಾಂಚಾಲಯೋಧರು ಮೇಘನಿಕರದಿಂದ ಮುಚ್ಚಲ್ಪಟ್ಟ ದಿವಾಕರನಂತೆ, ಕಾಳಿಂಗಾದಿ ದಂತಿಭಟರಿಂದ ಮುತ್ತಲ್ಪಟ್ಟ ತಮ್ಮ ಸೇನಾಪತಿಯ ಸಹಾಯಕ್ಕೆ ಧಾವಿಸಿ ಬಂದರು.

ನಕುಲ ಸಹದೇವ, ಸಾತ್ಯಕಿ, ಶಿಖಂಡಿ, ಚೇಕಿತಾನ, ದ್ರೌಪದೇಯರು ಧಾರಾಧರಗಳು ವರ್ಷಧಾರೆಗಳಿಂದ ಧರಾಧರಗಳನ್ನಂತೆ ಶತ್ರುಸೇನೆಯನ್ನು ಶರವರ್ಷದಲ್ಲಿ ಮುಣುಗಿಸಿದರು. ಅವರು ಕೈಯೆತ್ತಿ ಹೊಡೆದು, ಕಾಲಿಂದ ತುಳಿದು, ಮ್ಲೇಂಛಾದಿ ವೀರರನ್ನೂ, ಅವರ ಗಜತುರಗ ಸೈನಿಕರನ್ನು ಸಂಹರಿಸಿದರು. ಕಾಳಿಂಗರ ಆನೆಗಳು ಪಾಂಚಾಲಭಟರನ್ನು ಸೊಂಡಿಲಿನಿಂದ ಎತ್ತಿ ಬಿಸುಟಿ, ಕಾಲಿಂದ ತುಳಿದು ನಾಶಪಡಿಸಿದವು. ಸಾತ್ಯಕಿಯು ಮುಂದೆ ಬಂದು ಮುತ್ತಿದ ಅಂಗರಾಜನ ಮಾತಂಗವನ್ನು ಮರ್ಮಭೇದನ ಬಾಣಗಳಿಂದ ಕೆಡಹಿದನು. ವೇದನಾಭರದಿಂದ ಶುಂಡವನ್ನೆತ್ತಿ ಗೀಳಿಟ್ಟು ಬೀಳುವ ಮದಗಜದಿಂದ ಕೆಳಗೆ ಧುಮುಕಿ, ಬರುವ ಅಂಗರಾಜನ ವಕ್ಷಸ್ಥಲವನ್ನು ತೀಕ್ಷ್ಣಶರದಿಂದ ಪೀಡಿಸಿ, ಸಾತ್ಯಕಿ ಅವನನ್ನು ಸಂಹರಿಸಿದನು.

ಮೇಲೇರಿ ಬರುವ ಪೌಂಡ್ರನ ದ್ವಿರದವನ್ನು ಎರಡು ಬಾಣಗಳಿಂದ ಪೀಡಿಸಿ, ಸಹದೇವನು ಅವನ ಪತಾಕೆಯನ್ನು ಮುರಿದು, ಮಾವಟಿಗನನ್ನು ಮಾರ್ಗಣದ್ವಯದಿಂದ ಕೊಂದು, ಹುಚ್ಚೆದ್ದು ಓಡುವ ಆನೆಯನ್ನೂ ನಿಶಿತಭಲ್ಲದಿಂದ ಸಂಹರಿಸಿದನು. ಆಗ ನಕುಲನು ಸಹದೇವನಿಗೆ ಸಹಾಯವಾಗಿ, ಆನೆಯಿಂದ ಕೆಳಗಿಳಿವ ಪೌಂಡ್ರನ ಶಿರವನ್ನು ಅರ್ಧಚಂದ್ರಬಾಣದಿಂದ ಖಂಡಿಸಿ, ಕ್ರುದ್ಧರಾಗಿ ಮೇಲೇರಿ ಬರುವ ಅಂಗ ವೀರರನ್ನು ಅವರ ರಾಜನನ್ನು ಸೇರಲೆಂದು ಯಮನಗರಕ್ಕೆ ಕಳಿಸಿದನು. ಶರತೋಮರವರ್ಷವನ್ನು ಸುರಿಸುತ್ತಾ ಬರುವ ಮೇಕಲೋತ್ಕಲಕಾಲಿಂಗ ನಿಷಧಾದಿ ಯೋಧರನ್ನು ಮುತ್ತಿ, ಬಾಣಸಹಸ್ರದಿಂದ, ನಕುಲನು ಸಹಸ್ರ ಕಿರಣನು ಮುತ್ತುವ ಕತ್ತಲನ್ನಂತೆ ಅವರ ಆನೆಗಳನ್ನೂ, ಅವರನ್ನೂ ನಾಶಮಾಡಿದನು. ಗೈರಿಕಧಾತು ವಿಭಿನ್ನಗಿರಿನಿಕರದಂತೆ, ಕರಿನಿಕರವು ಕುಂಭಸ್ತಲಗಳೊಡೆದು ರಕ್ತಸಿಕ್ತವಾಗಿ ಕೆಳಗುರುಳಿತು. ಸಹದೇವನು ಅರವತ್ತುನಾಲ್ಕು ಬಾಣಗಳಿಂದ ಅವರ ಎಂಟು ಮಹಾನಾಗಗಳನ್ನು ಸಂಹರಿಸಿ, ಮತ್ತೆಂಟು ಮರ್ಮಭೇದಿ ಶರಗಳಿಂದ ಹಸ್ತಿಯೋಧರನ್ನೂ ವಧಿಸಿದನು.

ನಕುಲನು ದಿವ್ಯ ಧನುರ್ಮುಕ್ತವಾದ ನಿಶಿತ ಶರಶತದಿಂದ ಅನೇಕ ಕುಂಜರಗಳನ್ನು ಸಂಹರಿಸಿದನು. ಶಿಖಂಡಿ, ಸಾತ್ಯಕಿ, ದ್ರೌಪದೇಯರು ಕೆಡಹಿದ ಮತ್ತ ಮಾತಂಗಸಮೂಹವು ವಜ್ರವಜ್ರಾಹತವಾಗಿ ಬಿದ್ದ ಗಿರಿಕೂಟದಂತೆ ಕಂಡಿತು. ಇಂತು ವಿಜೃಂಭಿಸುವ ಪಾಂಡವ ವೀರ ಸಿಂಹರ ಧಾಟಿಗೆ ನಿಲ್ಲಲಾರದೆ ಕುರುರಾಜನ ಕರಿ ಸೇನೆಯು ಭಿನ್ನಕೂಲವಾದ ಹೊಳೆಯಂತೆ ದಿಕ್ಕಾಪಾಲಾಗಿ ಓಡಿಹೋಯಿತು. ಆಗ ಪಾಂಡವ ವೀರರು ಅಲ್ಲಿಂದ

ಸೇನನೊಬ್ಬನು ತನ್ನ ಸೇನೆಯೊಡಗೂಡಿ, ಬಿಡದೆ ಕಾದುತ್ತಿರುವನು. ಧೃಷ್ಟದ್ಯುಮ್ನನೂ ಅವನಿಗೆ ಸಹಾಯಕನಾಗಿ ಕುರುಸೇನೆಯನ್ನು ಚೆಂಡಾಡುತ್ತಿರುವನು 'ಎಂದನು. ಅರ್ಜುನನು 'ವಾಸುದೇವ ! ರಥವನ್ನು ಅಲ್ಲಿಗೆ ಸೇರಿಸು !' ಎಂದನು. ಅಂತೆಯೇ ವಾಸುದೇವನು ಸ್ಯಂದನವನ್ನು ವೃಕೋದರನ ಸಮೀಪವನ್ನು ಸೇರುವಂತೆ ನಡೆಸುವಾಗ, ತಡೆದು ಸಂಸಪ್ತಕವೀರರು ಘೋರವಾಗಿ ಕಡಿದಾಡಿದರು.

ಭೀಮಸೇನಮುಖರಾದ ಪಾಂಡವರಿಗೂ, ಕರ್ಣಮುಖರಾದ ಕೌರವರಿಗೂ ಕದನವು ಕಡು ತೀವ್ರವಾಯಿತು. ಕದನರಂಗದಿ ಬಿದ್ದ ಭಟಕೋಟಿಯಿಂದ ಯಮರಾಜನ ಪುರವು ತುಂಬಿತುಳುಕಿತು. ಧನುರ್ಬಾಣ, ಪರಿಘ, ಪಟ್ಟಿಸ, ತೋಮರ, ಭುಸುಂಡಿ, ಖಡ್ಗ, ಮುಸಲ, ಪರಶು, ಗದಾ, ಪ್ರಾಸ, ಕುಂತ, ಭಿಂಡಿಪಾಲಾದ್ಯಾ - ಯುಧಧಾರಿಗಳಾದ ವೀರರ ಸಿಂಹನಾದಗಳು ಆಯುಧಧ್ವಾನಗಳೊಡನೆ ಮೇಳವಿಸಿ, ದಿಕ್ಕುಗಳಲ್ಲಿ ಪ್ರತಿಧ್ವನಿಸಿದವು. ಕುಂಜರ ಬೃಂಹಿತಿಗಳು, ಹಯ ಹೇಷಗಳು, ರಥ ನೇಮಿಧ್ವಾನಗಳು, ಭಟಗರ್ಜಾರವಗಳು, ಧನುರ್ಜ್ಯಾಟಂಕಾರಗಳು, ಬೆರೆತು ವ್ಯಾಪಿಸಿದಾಗ ದಿಗಂತಕುಡ್ಯಗಳು ಒಡೆಯುವಂತಾಯಿತು. ಮೇಲಕ್ಕೆದ್ದ ಧೂಳಿಯು ಆಕಾಶದಿ ವ್ಯಾಪಿಸಿಧಾಗ ಅದರ ಕಣಗಳಿಗೆ ಸಮಸಂಖ್ಯರಾದ ವೀರಭಟ್ಟರು ವೀರಸ್ವರ್ಗವನ್ನು ಸೇರಿದರು.

ಕರ್ಣನು ಶತ್ರುವೀರ ಶರವರ್ಷವನ್ನು ತಡೆದು ಪಾಂಚಾಲರಲ್ಲಿ ಹದಿನೈದು ರಥಿಕರನ್ನು ಅವರ ಸೂತರೊಡಗೂಡಿಸಿ ಯಮನಗರಕ್ಕೆ ಕಳಿಸಿದನು. ಪಾಂಡವ ಯೋಧರು ಅನೇಕರು ಅವನನ್ನು ಮುತ್ತಿ ಬಾಣಗಣದಿಂದ ಪೀಡಿಸಿದರು. ಕರ್ಣನು ಸಲೆರೇಗಿ ವೇಗವತ್ತರ ಶರಸಹಸ್ರದಿಂದ ಪಾಂಡವಸೇನೆಯನ್ನು ಪೀಡಿಸುತ್ತಾ ಹೊಕ್ಕಾಗ ಮದಗಜವು ಹೊಕ್ಕ ಪಾದ್ಮಾಕರದಿಂದ ಜಲಪಕ್ಷಿಗಳು ಹಾರಿಹೋದಂತೆ, ಪಾಂಡವಭಟರು ಚೆಲ್ಲಾ ಚೆದರಾಗಿ ಓಡಿಹೋದರು. ಶತ್ರುಶಿರಗಳನ್ನು ಶರಗಳಿಂದ ಕೆಡಹುತ್ತಾ, ಎದುರಿಲ್ಲದೆ ತಿರುಗುವ ರಾಧೇಯನ ಮುಂದೆ ನರಕಂಕಾಳಗಳು ಹರಡಿ ಬಿದ್ದವು. ಖಡ್ಗಚರ್ಮಾದ್ಯಾಯುಧಗಳು ರಣಭುವಿಯಲ್ಲಿಟ್ಟ ರಂಗವಲ್ಲಿಗಳಂತೆ ಹೊಳೆಯುತ್ತಿದ್ದವು. ಸಿಂಹವು ಮೃಗಗಣವನ್ನಂತೆ ಮರ್ದಿಸುವ ಕರ್ಣನ ಧಾಟಿಗೆ ನಿಲ್ಲಲಾರದೆ, ಪಾಂಡವಭಟರು ಕಶಾತಾಡಿತ ಜವನಾಶ್ವಗಳಂತೆ ಓಡಿಹೋದರು. ಕರ್ಣನ ನೇತ್ರಗೋಚರರಾದವರು ಅವನ ಶರಗೋಚರರಾಗದೆ ಇದ್ದಿಲ್ಲ; ಶರಗೋಚರರಾದವರು ತತ್ಕ್ಷಣವೇ ಯಮಗೋಚರರಾಗದೆ ಇರುತ್ತಿದ್ದಿಲ್ಲ.

ಕರ್ಣನ ವಿಕ್ರಮವನ್ನು ಸಹಿಸದೆ, ದ್ರುಪದ ಪುತ್ರನು ದ್ರೌಪದೇಯರೈವರು, ನಕುಲ ಸಹದೇವರು ಯುಯುಧಾನ ಮೊದಲಾದ ಪಾಂಡವ ವೀರರು ಅವನನ್ನು ಮುತ್ತಿ, ಶರವರ್ಷದಲ್ಲಿ ಮುಣುಗಿಸಿದರು. ಆಗ ತುಮುಲಸಮರವು ಪ್ರಾರಂಭವಾಯಿತು. ನಿನ್ನ ಪುತ್ರನಿಂದ ಪ್ರೇರಿತರಾದ ಹಸ್ತಿಯೋಧರು ಧೃಷ್ಟದ್ಯುಮ್ನನನ್ನು ಸಂಹರಿಸಬೇಕೆಂದು ಅವನನ್ನು ಮುತ್ತಿದರು. ಅಂಗ, ವಂಗ, ಪುಂಡ್ರ, ಮಾಗಧ, ತಾಮ್ರಲಿಪ್ತಕ, ಮೇಕಲ, ಕೋಶಲ,

ಮದ್ರ, ದಾಶಾರ್ಣ, ನಿಷಧ, ಕಲಿಂಗ, ವೀರರು ಹಸ್ತಿನಿಯುದ್ಧ ನಿಪುಣರಾದವರು, ಪಾಂಚಾಲಬಲವನ್ನು ಶರತೋಮರನಾರಾಚಾದಿಗಳಿಂದ ಪೀಡಿಸಿದರು. ಅಂಕುಶಗಳಿಂದ ತಿವಿಯಲ್ಪಟ್ಟು, ಗೀಳಿಡುತ್ತಾ, ಮೇಲೇರಿ ಬರುವ ಮದಕರಿಘಟವನ್ನು ಪಾರ್ಷತಸಿಂಹನು ಬಾಣಸಟಾಜಾಲದಿಂದ ತಡೆದು ಗರ್ಜಿಸಿದನು. ಪಾಂಡುಪಾಂಚಾಲಯೋಧರು ಮೇಘನಿಕರದಿಂದ ಮುಚ್ಚಲ್ಪಟ್ಟ ದಿವಾಕರನಂತೆ, ಕಾಳಿಂಗಾದಿ ದಂತಿಭಟರಿಂದ ಮುತ್ತಲ್ಪಟ್ಟ ತಮ್ಮ ಸೇನಾಪತಿಯ ಸಹಾಯಕ್ಕೆ ಧಾವಿಸಿ ಬಂದರು.

ನಕುಲ ಸಹದೇವ, ಸಾತ್ಯಕಿ, ಶಿಖಂಡಿ, ಚೇಕಿತಾನ, ದ್ರೌಪದೇಯರು ಧಾರಾಧರಗಳು ವರ್ಷಧಾರೆಗಳಿಂದ ಧರಾಧರಗಳನ್ನಂತೆ ಶತ್ರುಸೇನೆಯನ್ನು ಶರವರ್ಷದಲ್ಲಿ ಮುಣುಗಿಸಿದರು. ಅವರು ಕೈಯೆತ್ತಿ ಹೊಡೆದು, ಕಾಲಿಂದ ತುಳಿದು, ಮ್ಲೇಂಛಾದಿ ವೀರರನ್ನೂ, ಅವರ ಗಜತುರಗ ಸೈನಿಕರನ್ನು ಸಂಹರಿಸಿದರು. ಕಾಳಿಂಗರ ಆನೆಗಳು ಪಾಂಚಾಲಭಟರನ್ನು ಸೊಂಡಿಲಿನಿಂದ ಎತ್ತಿ ಬಿಸುಟಿ, ಕಾಲಿಂದ ತುಳಿದು ನಾಶಪಡಿಸಿದವು. ಸಾತ್ಯಕಿಯು ಮುಂದೆ ಬಂದು ಮುತ್ತಿದ ಅಂಗರಾಜನ ಮಾತಂಗವನ್ನು ಮರ್ಮಭೇದನ ಬಾಣಗಳಿಂದ ಕೆಡಹಿದನು. ವೇದನಾಭರದಿಂದ ಶುಂಡವನ್ನೆತ್ತಿ ಗೀಳಿಟ್ಟು ಬೀಳುವ ಮದಗಜದಿಂದ ಕೆಳಗೆ ಧುಮುಕಿ, ಬರುವ ಅಂಗರಾಜನ ವಕ್ಷಸ್ಥಲವನ್ನು ತೀಕ್ಷ್ಣಶರದಿಂದ ಪೀಡಿಸಿ, ಸಾತ್ಯಕಿ ಅವನನ್ನು ಸಂಹರಿಸಿದನು.

ಮೇಲೇರಿ ಬರುವ ಪೌಂಡ್ರನ ದ್ವಿರದವನ್ನು ಎರಡು ಬಾಣಗಳಿಂದ ಪೀಡಿಸಿ, ಸಹದೇವನು ಅವನ ಪತಾಕೆಯನ್ನು ಮುರಿದು, ಮಾವಟಿಗನನ್ನು ಮಾರ್ಗಣದ್ವಯದಿಂದ ಕೊಂದು, ಹುಚ್ಚೆದ್ದು ಓಡುವ ಆನೆಯನ್ನೂ ನಿಶಿತಭಲ್ಲದಿಂದ ಸಂಹರಿಸಿದನು. ಆಗ ನಕುಲನು ಸಹದೇವನಿಗೆ ಸಹಾಯವಾಗಿ, ಆನೆಯಿಂದ ಕೆಳಗಿಳಿವ ಪೌಂಡ್ರನ ಶಿರವನ್ನು ಅರ್ಧಚಂದ್ರಬಾಣದಿಂದ ಖಂಡಿಸಿ, ಕ್ರುದ್ಧರಾಗಿ ಮೇಲೇರಿ ಬರುವ ಅಂಗ ವೀರರನ್ನು ಅವರ ರಾಜನನ್ನು ಸೇರಲೆಂದು ಯಮನಗರಕ್ಕೆ ಕಳಿಸಿದನು. ಶರತೋಮರವರ್ಷವನ್ನು ಸುರಿಸುತ್ತಾ ಬರುವ ಮೇಕಲೋತ್ಕಲಕಾಲಿಂಗ ನಿಷಧಾದಿ ಯೋಧರನ್ನು ಮುತ್ತಿ, ಬಾಣಸಹಸ್ರದಿಂದ, ನಕುಲನು ಸಹಸ್ರ ಕಿರಣನು ಮುತ್ತುವ ಕತ್ತಲನ್ನಂತೆ ಅವರ ಆನೆಗಳನ್ನೂ, ಅವರನ್ನೂ ನಾಶಮಾಡಿದನು. ಗೈರಿಕಧಾತು ವಿಭಿನ್ನಗಿರಿನಿಕರದಂತೆ, ಕರಿನಿಕರವು ಕುಂಭಸ್ತಲಗಳೊಡೆದು ರಕ್ತಸಿಕ್ತವಾಗಿ ಕೆಳಗುರುಳಿತು. ಸಹದೇವನು ಅರವತ್ತುನಾಲ್ಕು ಬಾಣಗಳಿಂದ ಅವರ ಎಂಟು ಮಹಾನಾಗಗಳನ್ನು ಸಂಹರಿಸಿ, ಮತ್ತೆಂಟು ಮರ್ಮಭೇದಿ ಶರಗಳಿಂದ ಹಸ್ತಿಯೋಧರನ್ನೂ ವಧಿಸಿದನು.

ನಕುಲನು ದಿವ್ಯ ಧನುರ್ಮುಕ್ತವಾದ ನಿಶಿತ ಶರಶತದಿಂದ ಅನೇಕ ಕುಂಜರಗಳನ್ನು ಸಂಹರಿಸಿದನು. ಶಿಖಂಡಿ, ಸಾತ್ಯಕಿ, ದ್ರೌಪದೇಯರು ಕೆಡಹಿದ ಮತ್ತ ಮಾತಂಗಸಮೂಹವು ವಜ್ರಿವಜ್ರಾಹತವಾಗಿ ಬಿದ್ದ ಗಿರಿಕೂಟದಂತೆ ಕಂಡಿತು. ಇಂತು ವಿಜೃಂಭಿಸುವ ಪಾಂಡವ ವೀರ ಸಿಂಹರ ಧಾಟಿಗೆ ನಿಲ್ಲಲಾರದೆ ಕುರುರಾಜನ ಕರಿ ಸೇನೆಯು ಭಿನ್ನಕೂಲವಾದ ಹೊಳೆಯಂತೆ ದಿಕ್ಕಾಪಾಲಾಗಿ ಓಡಿಹೋಯಿತು. ಆಗ ಪಾಂಡವ ವೀರರು ಅಲ್ಲಿಂದ

ಹಿಂದಿರುಗಿ, ಕರ್ಣನನ್ನು ಮುತ್ತಿ ಬಂದರು. ದುಶ್ಶಾಸನನು ಸಹದೇವನನ್ನು ತಡೆದು, ಬಾಣಗಣದಿಂದ ಪೀಡಿಸಿದನು. ಸೋದರರೀರ್ವರು ಬಂಧು ಭಾವವನ್ನು ಬಿಟ್ಟು, ಸಿಂಹನಾದಗಳನ್ನು ಮಾಡಿ, ಬಾಣ ಯುದ್ಧರತರಾಗಿರುವುದನ್ನು ನೋಡುತ್ತಾ, ಮಹಾರಥರು ವಸ್ತ್ರಗಳನ್ನಾಡಿಸಿ ಕೇಕೆಗಳಿಂದ ಅವರನ್ನು ಹುರಿದುಂಬಿಸಿದರು.

ದುಶ್ಶಾಸನನು ಮೂರು ನಾರಾಚಗಳಿಂದ ಸಹದೇವನ ಎದೆಗೆ ಹೊಡೆಯಲು ಅವನು ಎಪ್ಪತ್ತು ಬಾಣಗಳಿಂದ ನಿನ್ನ ಮಗನನ್ನು, ಮೂರು ಶರಗಳಿಂದ ಅವನ ಸಾರಥಿಯನ್ನೂ ಪೀಡಿಸಿದನು. ದುಶ್ಶಾಸನನು ಎಪ್ಪತ್ತುಮೂರು ಬಾಣಗಳಿಂದ ಪೀಡಿಸಿ, ಒಂದರಿಂದ ಸಹದೇವನ ಚಾಪವನ್ನು ಮುರಿದನು. ಸಹದೇವನು ಸಿಟ್ಟಾಗಿ ಒಗೆದ ಖಡ್ಗವು ಮಹಾ ವೇಗದಿಂದ ಬಂದು ದುಶ್ಶಾಸನನ ಬಿಲ್ಲನ್ನು ತುಂಡರಿಸಿ, ಅಂಬರದಿಂದುದುರಿದ ಸರ್ಪದಂತೆ, ಧರಣೀ ತಲದಲ್ಲಿ ಬಿತ್ತು. ಸಹದೇವನು ಬೇರೊಂದು ಬಿಲ್ಲನ್ನೆತ್ತಿ ಯಮದಂಡ ಸದೃಶವಾದ ಬಾಣವನ್ನು ಬಿಡಲು ನೋಡಿ, ಕಡುಗಂಡುಗಲಿಯಾದ ದುಶ್ಶಾಸನನು ಖಡ್ಗದಿಂದ ಅದನ್ನು ತುಂಡರಿಸಿ, ಅದೇ ಖಡ್ಗವನ್ನು ಸಹದೇವನ ಮೇಲೆಸೆದನು. ಮಿಂಚಿನಂತೆ ಬರುವ ನಿಸ್ತ್ರಿಂಶವನ್ನು ನಿಶಿತಭಲ್ಲದಿಂದ ಕಡಿದು ಕೆಡಹಿ, ಸಹದೇವನು, ದುಶ್ಶಾಸನನ ಅರವತ್ತುನಾಲ್ಕು ಬಾಣಗಳನ್ನೂ ಖಂಡಿಸಿ, ಸಾವಿರ ಬಾಣಗಳಿಂದ ಅವನನ್ನು ಪೀಡಿಸಿ ಮತ್ತೊಂದು ಮೃತ್ಯುಕಾಲಾಂತಕ ಸಮವಾದ ದಿವ್ಯ ಬಾಣವನ್ನು ಬಿಡಲು, ಅದು ಅವನ ಕವಚವನ್ನು ಭೇದಿಸಿ, ಕೆಳಗೆ ಬಿತ್ತು. ದುಶ್ಶಾಸನನು ಬಾಣಘಾತದಿಂದ ಮೂರ್ಛಿತನಾದನು. ಅದನ್ನು ಕಂಡು ಅವನ ಸಾರಥಿಯು ರಥವನ್ನು ದೂರಕ್ಕೆ ಕೊಂಡು ಹೋದನು. ಸಹದೇವನು ಕುರುಸೈನಿಕರನ್ನು ನಾಶಪಡಿಸತೊಡಗಿದನು. ನಕುಲನೂ ರಭಸದಿಂದ ತನ್ನ ಸೈನಿಕರನ್ನು ನಾಶಪಡಿಸುವುದನ್ನು ಕಂಡು, ಕರ್ಣನು ಅವನನ್ನು ತಡೆದು ಬಾಣಗಣದಿಂದ ಪೀಡಿಸಿದನು.

ನಕುಲನು ನಗುತ್ತಾ ಕರ್ಣನಿಗಿಂತೆಂದನು: 'ರಾಧೇಯ! ದೇವತೆಗಳ ದಯದಿಂದ ಬಹುಕಾಲವಾಂಛಿತವಾದ ನಿನ್ನೊಡನೆ ಕಡಿದಾಟವಿಂದು ಕೈಗೂಡಿತು. ನಮ್ಮ ಬಂಧು ಕಲಹಕ್ಕೂ, ಸರ್ವಾನರ್ಥಕ್ಕೂ ಕಾರಣನಾದ ನಿನ್ನನ್ನಿಂದು ಸಮರದಲ್ಲಿ ಸಮವರ್ತಿಯ ಸಮೀಪಕ್ಕೆ ಸೇರಿಸಿ, ಸಾರ್ಥಕಜೀವನನಾಗುವೆನು.' ಆ ಮಾತಿಗೆ ನಕ್ಕು, ರಾಧೇಯನು 'ನಕುಲ! ರಾಜಪುತ್ರನಿಗೆ ಸದೃಶವಾಗಿ ಮಾತಾಡಿದೆ! ಧನುರ್ಧಾರಿಗೆ ಸದೃಶ್ಯವಾಗುವಂತೆ ಬಾಣಕರ್ಮವನ್ನು ಮಾಡಿ, ಆಮೇಲೆ ಬಾಯಿಗೆ ಕಡಿವಾಣವಿಲ್ಲದೆ ಮಾತಾಡೆ! ಸಮರ ಶೂರರು ವೀರಕರ್ಮಗಳನ್ನು ಮಾಡಿ ಮಾತಾಡುವರು. ಬಿಡು ಬಾಣವನ್ನು! ನಿನ್ನ ದರ್ಪವನ್ನೂ ಬಿಡಿಸುವೆನು' ಎಂದು, ಎಪ್ಪತ್ತುಮೂರು ಶಿಲೀಮುಖಗಳಿಂದ ನಕುಲನನ್ನು ತಾಡಿಸಿದನು. ನಕುಲನು ಬಾಣಪೀಡಿತನಾಗಿ, ಆಶೀವಿಷದಂತೆ ಕ್ರುದ್ಧನಾದನು. ಎಂಬತ್ತು ಶರಗಳಿಂದ ಸೂತಪುತ್ರನನ್ನು ಪೀಡಿಸಿದ ನಕುಲ ಧನುವನ್ನು ಕರ್ಣನು ಮುರಿದು, ಮೂವತ್ತು ಬಾಣಗಳನ್ನು ಪ್ರಯೋಗಿಸಿದನು; ಅವು ಅವನ ಕವಚವನ್ನು ಸೀಳಿ, ರಕ್ತವನ್ನು ಹೀರಿ, ನೇಲಕ್ಕುರುಳಿ ಬಿದ್ದವು.

ನಕುಲನು ಮತ್ತೊಂದು ಧನುವನ್ನೆತ್ತಿ, ಎಪ್ಪತ್ತು ಬಾಣಗಳಿಂದ ಸೂರ್ಯಸುತನನ್ನೂ, ಮೂರು ನಾರಸಗಳಿಂದ ಅವನ ಸಾರಥಿಯನ್ನೂ, ಹೊಡೆದನು; ಮತ್ತು ಕ್ಷುರಪ್ರದಿಂದ ಕರ್ಣನ ಧನುಸ್ಸನ್ನು ಮುಷ್ಟಿದೇಶದಲ್ಲಿ ತುಂಡರಿಸಿದನು. ಕರ್ಣನು ಧನುವನ್ನೆತ್ತುವುದರಲ್ಲೇ, ನಕುಲನು ಮತ್ತೆ ಮೂರು ಬಾಣಗಳಿಂದ ಅವನನ್ನು ಪೀಡಿಸಿ, ಸಿಂಹನಾದ ಮಾಡಿದನು. ಸರ್ವಲೋಕ ಮಹಾರಥನೆಂದು ಖ್ಯಾತನಾದ ಸೂತಸುತನು ನಕುಲನಿಗೆ ಸೋತಂತಾದುದನ್ನು ಕಂಡು, ಭುವಿಯ ಮಾನವರೂ, ದಿವಿ ದೇವತೆಗಳೂ ಆಶ್ಚರ್ಯಭರಿತರಾದರು. ಕರ್ಣನು ಕುಪಿತನಾಗಿ, ಮತ್ತೊಂದು ಧನುವನ್ನೆತ್ತಿ, ಐದು ಬಾಣಗಳಿಂದ ನಕುಲನು ಜತ್ರು ಭಾಗವನ್ನು ಪೀಡಿಸಿದನು. ಆಗ ನಕುಲನು ಪ್ರಭಾಜಾಲವನ್ನು ಭುವನದಿ ಬೀರುವ ಚಂಡಕಿರಣನಂತೆ ಕಂಡನು. ಆ ಮಹಾವೀರನು ಕರ್ಣನನ್ನು ಏಳು ಬಾಣಗಳಿಂದ ಪೀಡಿಸಿ, ಅವನ ಧನುಃಕೋಟಿಯನ್ನು ಮುರಿದನು. ಕರ್ಣನು ಮತ್ತೊಂದು ಧನುವನ್ನೆತ್ತಿ, ನಕುಲನನ್ನು ಬಾಣಜಾಲದಿಂದ ಮುಚ್ಚಿ, ಕಣ್ಣಿಗೆ ಕಾಣ ಬರದಂತೆ ಮಾಡಿದನು. ನಕುಲನ ಆ ಬಾಣ ಜಾಲವನ್ನು ತನ್ನ ಶರಶತದಿಂದ ಖಂಡಿಸಿ, ಬಾಣವರ್ಷವನ್ನು ಸುರಿಸಲು, ಆಕಾಶವೆಲ್ಲವೂ ಹೊನ್ನೇಹುಳಗಳ ಸಾಲಿನಿಂದೆಂಬಂತೆ, ಬಾಣಸಹಸ್ರದಿಂದ ವ್ಯಾಪ್ತವಾಯಿತು. ಮತ್ತೆ ಮತ್ತೆ ಮುತ್ತುವ ಬಾಣಜಾಲವು ಕರ್ಣಶರಾಸನದಿಂದಲೂ ಹೊರ ಬರುವಾಗ, ರಣಾಂಗಣವು ಶಲಭಾಕ್ರಾಂತವಾದ ಗಗನಾಂಗಣದಂತೆ ಕಾಣಬಂತು; ಸೂರ್ಯನು ಬಾಣಾಚ್ಛಾದಿತನಾಗಿ, ಕತ್ತಲು ಕವಿಯಿತು. ನಕುಲ ಕರ್ಣರು ಸೂರ್ಯದ್ವಯವಾಗಿ, ಅವರ ನಿಶಿತ ಶರಗಳು ಕಿರಣಗಳಾಗಿ, ಆಕಾಶವೆಲ್ಲವೂ ರಣದಲ್ಲಿಟ್ಟ ಪಣವಾಗಿ, ಬಾಣಸಂಕುಲವಾದಾಗ, ಅಂತರಿಕ್ಷದ ಪಕ್ಷ್ಯಾದಿಗಳೇಕೆ, ಧೂಳಿ ಕೂಡ, ನೆಲಕ್ಕಿಳಿಯುವದು ದುಷ್ಕರವಾಯಿತು. ಕರ್ಣ ಬಾಣಗಣನಿಹತರಾದ ಪಾಂಡವಸೈನಿಕರು, ವೇದನಾರ್ಥನಾಗಿ ಮಾಡಿದ ಆರ್ತನಾದಗಳು ಎಲ್ಲೆಡೆ ಕೇಳಿಬಂದವು. ನಕುಲನ ಬಾಣಗಣ ಪೀಡಿತರಾದ ಕುರುಸೈನಿಕರ ಆರ್ತನಾದಗಳು, ಅವರು ಓಡಿಹೋದ ದಿಕ್ಕುಗಳಲ್ಲಿ ವ್ಯಾಪಿಸಿ, ಕುರುರಾಜನ ಉತ್ಸಾಹವನ್ನು ಕುಗ್ಗಿಸಿದವು.

ಉಭಯ ಸೇನೆಗಳು ಭೀತಿಯಿಂದ ದೂರ ಸರಿದು, ನಿಂತು ನೋಡುತ್ತಿರಲು ಕರ್ಣ ನಕುಲರ ಕಾಳಗವು ಮತ್ತೆ ಕಡುಭೀಕರವಾಯಿತು. ಅನ್ಯೋನ್ಯ ಶರವರ್ಷದಿಂದ ಪೀಡಿತರಾದ ರಾಧೇಯನಕುಲರು ದಿವ್ಯಾಸ್ತ್ರಗಳಿಂದ ತಮ್ಮ ಕದನಕೌಶಲವನ್ನು ತೋರಿ, ಕಡಿದಾಡುವಾಗ ಕರ್ಣಬಾಣಗಳನ್ನು ನಕುಲಬಾಣಗಳೂ, ನಕುಲ ಶರಗಳನ್ನು ಕರ್ಣಶರಗಳೂ ಸಂಧಿಸಿ, ಭಗ್ನಗೊಳಿಸಿ, ಅಂಬರದಿ ವ್ಯಾಪಿಸಿ, ಧರೆಗುರುಳಿದವು. ಕರ್ಣನು ಕ್ರುದ್ಧನಾಗಿ ಪ್ರಳಯಾರ್ಕನಂತೆ, ತೀವ್ರ ಕಾಂಡಗಳಿಂದ ನಕುಲನನ್ನು ಪೀಡಿಸಿದನು. ಜಲದಜಾಲದಿಂದ ಜರಿಯಲ್ಪಡದಿರುವ ಜಲಜಾಪ್ತನಂತೆ, ಕರ್ಣನ ಬಾಣಗಣವನ್ನು ತೃಣೀಕರಿಸಿ, ಮಾದ್ರೀಸುತನು ಅಂಬರವನ್ನು ಏಕಚ್ಛಾಯವನ್ನಾಗಿಸಿ ಮುತ್ತಬರುವ ಕರ್ಣನ ಸಾವಿರಾರು ನಾರಾಚಗಳನ್ನು ತುಂಡರಿಸಿ, ತನ್ನ ಬಾಣಗಳಿಂದ ಅವನನ್ನು ಪೀಡಿಸಿದನು. ಕರ್ಣನು ಕಣ್ಣಲ್ಲಿ ಕಿಡಿಕಾರಿ ಸಾವಿರ ಬಾಣಗಳಿಂದ ನಕುಲನನ್ನು ಪೀಡಿಸಿ, ಅವನ ಧನುವನ್ನೊಂದು ಬಾಣದಿಂದ ಮುರಿದನು; ಸಾರಥಿಯನ್ನೊಂದು ಶರದಿಂದ ಧರೆಗೆ ಕೆಡಹಿದನು, ನಗುನಗುತ್ತಾ, ನಾಲ್ಕು ಬಾಣಗಳಿಂದ ನಕುಲನ ತುರಗಗಳನ್ನು ಸಂಹರಿಸಿದನು;

ಮತ್ತು ನೂರಾರು ಬಾಣಗಳಿಂದ ಅವನ ರಥವನ್ನು ಚೂರಾಗಿಸಿದನು. ನಕುಲನು ನೆಲಕ್ಕೆ ಧುಮುಕಿ ಖಡ್ಗವನ್ನೆಸೆಯಲು, ಕರ್ಣನು ಅದನ್ನು ಖಂಡಿಸಿದನು. ಗದೆಯನ್ನು, ಶೂಲವನ್ನು ಶಕ್ತಿಯನ್ನು, ಪರಿಘವನ್ನು ಪ್ರಯೋಗಿಸಲು, ಇರ್ಣನು ಅವನ್ನೆಲ್ಲ ಖಂಡಿಸಿ, ಕುಂತಿಗೆ ಕೊಟ್ಟಮಾತನ್ನು ನೆನೆದು ವಿರಥನು, ವ್ಯಾಯುಧನು ಆಗಿದ್ದ ನಕುಲನನ್ನು ಸಂಹರಿಸದೆ ಬಿಟ್ಟನು. ನಕುಲನು ಆಗ ವ್ಯಾಕುಲೇಂದ್ರಿಯನಾಗಿ, ಓಡತೊಡಗಿದನು. ಕರ್ಣನು ತ್ವರೆಯಿಂದ ಅವನನ್ನು ಮುಟ್ಟಿ, ತನ್ನ ಧನುಃಕೋಟಿಯನ್ನು ಅವನ ಕಂಠದಲ್ಲಿ ತಗುಲಿಸಿ, ಸೆಳೆದಾಡಿದನು. ಅಗ್ನಿಶಿಖೆಯಿಂದ ಸುತ್ತಲ್ಪಟ್ಟ ಚಂದ್ರಮನೋ, ಶಕ್ರಚಾಪದಿಂದೊಪ್ಪುವ ಕಪ್ಪುಮೇಘವೋ, ಎಂಬಂತಿರುವ ನಕುಲನು ತಲೆ ತಗ್ಗಿಸಿ ಸುಮ್ಮನೆ ನಿಂತನು.

'ಪಾಂಡವ! ಆಗ ನುಡಿದ ಮಾತೇನಾಯಿತು? ಬರಿಮಾತಿನ ಶೂರನಾದೆ! ಬಲವತ್ತರರಾದ ಕೌರವರೊಡನೆ ಅದರಲ್ಲಿ ಕರ್ಣನೊಡನೆ ಕಾದಲು ತವಕಿಸಬೇಡ! ನಿನ್ನ ಸದೃಶರೊಡನೆ ಕಡಿದಾಡು! ಹೋಗು! ಕರ್ಣನಿಗೆ ಸೋತೆನೆಂದು ಲಜ್ಜೆಪಡಬೇಡ! ಮನೆಗೋ ಮಾಧವ ಪಾರ್ಥರಲ್ಲಿಗೋ ತೆರಳು!' ಎಂದು ನುಡಿದ ಕರ್ಣನಿಂದ ಬಿಡಲ್ಪಟ್ಟು ನಕುಲನು ಲಜ್ಜಾವತನವದನನಾಗಿ ಧರ್ಮರಾಜನ ರಥವನ್ನು ಸೇರಪೋದನು. ಧರ್ಮವನ್ನರಿತು, ಕುಂತೀದೇವಿಗೆ ತಾನಿತ್ತ ಮಾತನ್ನು ನೆನೆದು, ವಧಪ್ರಾಪ್ತವಾದ ಮಾದ್ರೇಯನನ್ನು ವಧಿಸದೆ ಕರ್ಣನು ಕೌರವ ಸೈನಿಕರಿಗೆ ಆಶ್ಚರ್ಯವಿಷಾದಗಳನ್ನೂ ಪಾಂಡವ ಸೈನಿಕರಿಗೆ ಲಜ್ಜಾಭಯಗಳನ್ನು ಪುಟ್ಟಿಸಿದನು. ನಕುಲನು ಸೂತಪುತ್ರಪ್ರತಾಪಿತನಾಗಿ, ಕುಂಭದಲ್ಲಿಟ್ಟ ಕುಂಭೀನಸದಂತೆ ಬುಸುಗುಟ್ಟುತ್ತಾ, ಧರ್ಮರಾಜನ ರಥದಲ್ಲಿ ನಿಟ್ಟುಸಿರಿಡುತ್ತಾ ಕೂತನು.

ತನ್ನ ವಿಕ್ರಮದಂತೆಯೇ ರಥಪತಾಕವು ದಿಕ್ಕುಗಳಲ್ಲಿ ಹಾರಾಡುತ್ತಿರಲು ರಾಧೇಯನು ಪಾಂಚಾಲಸೇನೆಯನ್ನು ಮುತ್ತಿ, ಬಾಣವರ್ಷಗರೆದು, ಅವರನ್ನು ನಾಶಪಡಿಸಿದನು. ಅವನ ಚಂದ್ರವರ್ಣ ತುರಂಗಗಳು, ಆತಂಕವಿಲ್ಲದೆ ಪಾಂಚಾಲ ಸೇನೆಯನ್ನು ಹೊಕ್ಕಂತೆ, ಕರ್ಣಶರಗಳು ಶತ್ರುಶರೀರಗಳನ್ನು ಹೊಕ್ಕಾಗ, ಆಕ್ರಂದ ಧ್ವಾನಗಳು ದಿಗಂತರದಲ್ಲಿ ವ್ಯಾಪಿಸಿದವು. ಮಧ್ಯಂದಿನಗತನಾದ ಮಾರ್ತಾಂಡನು ಚಂಡ ಕಿರಣಗಳಿಂದ ಭೂಮಂಡಲವನ್ನು ಸುಡುತ್ತಿದ್ದನು; ಸೂರ್ಯಸುತನೂ ಅವಾರ್ಯಬಾಣಗಳಿಂದ ಶತ್ರುಸೇನಾಖಂಡವನ್ನು ಸುಡುತ್ತಿದ್ದನು. ಚಕ್ರಾಕಾರವಾಗಿ ತಿರುಗುವ ರಥದಲ್ಲಿದ್ದ ಕರ್ಣನ ಅವಕ್ರವಿಕ್ರಮದಿಂದ ಶತ್ರುಚಕ್ರವು ಚೆದರಿ ದಿಕ್ಕಾಪಾಲಾಗಿ ಹೋಯಿತು. ರಥಗಳು ಮುರಿದುಬಿದ್ದವು. ಧ್ವಜಗಳು ತುಂಡಾದವು. ಪತಾಕೆಗಳು ಉದುರಿಬಿದ್ದವು; ಅಸಗಳ ನೀಗಿದವು. ಸೂತರು ಪ್ರೇತರಾದರು. ಅಕ್ಷಗಳು ಮುರಿದ ಸ್ಯಂದನಗಳು ಮುಂದೆ ಸಾಗದೆ ನಿಂತವು. ಪಾರ್ಶ್ವರಕ್ಷರು ಯಮಪಾರ್ಶ್ವವನ್ನು ಮುಟ್ಟಿದರು. ಪಾಂಚಾಲ ರಥಿಕರು ಪಂಚತ್ವವನ್ನೈದಿದರು. ರಥಿಕರಿಲ್ಲದ ರಥಗಳು ರಣರಂಗದಿಂದ ತೊಲಗಿಸಲ್ಪಡುತ್ತಿರಲು, ಸೂತಸುತನ ನಿಶಾತ ಬಾಣಗಳ ಬಾಯಿಗೆ ತುತ್ತಾಗಿ ಸೂತರು ಬಿದ್ದಾಗ, ತುರಗರಾಜಿಯು ದಿಕ್ಕಟ್ಟು ಓಡತೊಡಗಿತು. ರಥವ್ರಜವು ಸೂತರಥಿಕಹಯಹೀನವಾಗಿ ಪಾಳುಬಿದ್ದ ಪತ್ತನದಂತೆ ನಿಂತಿತ್ತು. ಅಂಬಾರಿಗಳುರುಳಿ, ಅಂಬಷ್ಟರು ಅಂತಕನಪುರಿ ಸೇರಿ, ಯೋಧರು

ವಧವನ್ನು ಪೊಂದಿದಾಗ, ಮದಗಜಗಳು ಕಾಡಾನೆಗಳಂತೆ ಹುಚ್ಚೆದ್ದು ತಿರುಗಿದವು. ಶುಂಡಾಲವು ಖಂಡಿತವಾಗಿ, ಪಾದಗಳು ಭೇದಿತವಾಗಿ, ರಕ್ತಸಿಕ್ತವಾಗಿದ್ದ ಕರಿನಿಕರವು ಕಾಳ್ಗಿಚ್ಚಿಗೆ ಸಿಕ್ಕಂತೆ ದಿಕ್ಕೆಟ್ಟು ಗೀಳಿಡುತ್ತಾ ಓಡಿ, ಕರ್ಣಬಾಣಗಳಿಗೆ ಪ್ರಾಣಗಳನ್ನರ್ಪಿಸಿ ಧರಣಿಗುರುಳಿದವು. ವಾಯುವೇಗವಿಚ್ಛಿನ್ನಮೇಘಕೂಟದಂತೆ ಕರಿಘಟವು ಛಿನ್ನಾಭಿನ್ನವಾಯಿತು. ನಾರಾಚತೋಮರಭಲ್ಲಾದಿಪೀಡಿತವಾದ ಮಾತಂಗಕುಲವು ಆಕುಲವಾಗಿ, ದಿಕ್ಕುಗಾಣದೆ, ಶಲಭಗಳ ಸಾಲು ಪಾವಕನನ್ನಂತೆ ಕರ್ಣನಿದ್ದಲ್ಲಿಗೆ ಸಾಗಿ, ಅವನ ಬಾಣಾಗ್ನಿಗೆ ಆಹುತಿಯಾಯಿತು. ಗೈರಿಕಜಲವನ್ನು ಸ್ರವಿಸುವ ಗಿರಿಸಮೂಹದಂತೆ, ರಕ್ತವನ್ನು ಸುರಿಸುವ ಕರಿಸಮೂಹವು ರಣಾಂಗಣದಲ್ಲಿ ಚೆಲ್ಲಾಚೆದರಾಗಿ ಬಿದ್ದಿತ್ತು. ರಜತಸೌವರ್ಣಕಾಂಸ್ಯಭೂಷಣಗಳು ಸಡಲಿ, ಉರಃಪಾರ್ಶ್ವಕವಚಫಲಕಗಳು ಸೀಳಿ, ಜೀನುಗಳಿಲ್ಲದೆ, ಕಡಿವಾಣ ಕಡಿದು, ಸಾದಿಗಳು ಸತ್ತು ಓಡುವ ಕುದುರೆಗಳನ್ನು ಏರಿ, ಕಾಂದಿಶೀಕರು ಕರ್ಣನ ಶರಾಗ್ನಿವರ್ಷದಿಂದ ಪಾರಾಗಿ ಹೋದರು. ಪ್ರಾಸಖಡ್ಗಾದಿ ಸಾಧನಗಳು ಸವೆಯಲು, ಚರ್ಮಪಾಣಿಗಳಾಗಿ ಆತ್ಮರಕ್ಷಣೆ ಮಾಡಿಕೊಳ್ಳುತ್ತಾ, ಕೊನೆಗೆ ಪ್ರತಿವೀರಕ್ರೂರನಾರಾಚಗಳಿಗೆ ತುತ್ತಾಗಿ, ಕೆಳಗುರುಳಿದ ವೀರಭಟರು ಸ್ವರ್ಗವನ್ನು ಸೂರೆಗೊಂಡರು. ನಿಹತರೊಂದಿಗೆ ವಧ್ಯಮಾನರು, ಪರಾಜಿತರೊಂದಿಗೆ ಧಾವಮಾನರು, ಖಂಡಿತರೊಂದಿಗೆ ವೇಪಮಾನರು ಬೆರೆತು ಗಗ್ಗೋಲಾದಾಗ, ರಣರಂಗವು ಭೀಭತ್ಸದರ್ಶನವಾಯಿತು. ಕರ್ಣನ ಕರ್ಣಕೆಗಳಿಗೆ ತಡೆಯಲಾರದೆ ರಥಿಕರು ಪಲಾಯನಮಾರ್ಗಪಥಿಕರಾದರು; ನಾಗಕುಲವು ವಿಗತಸ್ವರಗಳಾಗಿ ನಗಕುಲವಾಗಿ ಬಿತ್ತು. ತುರಗರಾಜಿಯು ಕುರಂಗರಾಜಿಯಂತೆ ಭೀತವಾಗಿ ರಣರಂಗವನ್ನು ಬಿಟ್ಟೋಡಿತು. ಪದಾತಿಸೈನ್ಯವು ದೈನ್ಯದಿಂದ ಪದಬಲವನ್ನು ತೋರಿತು. ಕರ್ಣಶರಾಸನದಿಂದ ಹೊರಬಂದ ಶರಸಂಘಾತಪಾತದಿಂದ ತಲೆಗಳುರುಳಿ, ಕೈಗಳು ಕತ್ತರಿಸಲ್ಪಟ್ಟು, ಸತ್ತು ಸಾಯುತ್ತಿರುವ ಸೈನಿಕರ ವೇದನಾಪೂರ್ಣ ದೀನಾಲಾಪಗಳು ಹೃದಯವಿದಾರಕವಾದವು. ಶಿತಶರ ವರ್ಷದಿಂದ ಕರ್ಣ ಮಹೀಧರವನ್ನು ಕೊಚ್ಚಿಹಾಕಲೆಣಿಸುವ ಪಾಂಚಾಲವೀರಜಲಧರ ಪ್ರಯತ್ನಗಳೆಲ್ಲ ವ್ಯರ್ಥವಾದವು. ಸೂತಪುತ್ರನಿಂದ ಪೀಡಿತರಾದ ಸೃಂಜಯಯೋಧರು ಶಲಭಗಳು ಅಗ್ನಿಯನ್ನಂತೆ ಬಿಡದೆ ಅವನನ್ನೇ ಮುತ್ತಿ ಬಾಣವಹ್ನಿಯಲ್ಲಿ ಪ್ರಾಣಗಳನ್ನರ್ಪಿಸಿದರು. ಸೇನಾಕಕ್ಷವನ್ನು ಸುಡುವ ಕರ್ಣವಹ್ನಿಯನ್ನು ಕಂಡು ವಿವರ್ಣವದನರಾದ ಪಾಂಡವಯೋಧರು ಆಯೋಧನವನ್ನು ಬಿಟ್ಟೋಡಿದರು. ಪಾಂಚಾಲಮಹಾರಥರಲ್ಲಿ ಬಹುವೀರರು ಮೃತರಾಗಲು ಹತಶೇಷರು ಭೀತರಾಗಿ ಓಡುತ್ತಿರಲು, ಕರ್ಣನು ಬೆನ್ನು ಬಿಡದೆ ಮುತ್ತಿ ಮಧ್ಯಂದಿನ ಸೂರ್ಯನು ತಮವನ್ನಂತೆ ಅವರನ್ನು ನಾಶಪಡಿಸಿದನು.

ಮಹಾರಾಜ ! ನಿನ್ನ ಪುತ್ರನಾದ ಯುಯುತ್ಸುವು ಕೌರವೀಸೇನೆಯನ್ನು ಸದೆ ಬಡಿಯುವುದನ್ನು ಕಂಡು ಸಹಿಸದೆ, ಶಕುನಿಸುತನಾದ ಉಲೂಕನು ಅವನನ್ನು 'ನಿಲ್ಲು! ನಿಲು!' ಎಂದು ಗರ್ಜಿಸಿ, ಬಾಣವರ್ಷವನ್ನು ಸುರಿಸಿದನು. ಯುಯುತ್ಸುವು ಶಿತಧಾರವಾದ ಶರದಿಂದ ಹೊಡೆದನು. ವಜ್ರದಂತೆ ಮೇಲೆರಗಿದ ಬಾಣಘಾತವನ್ನು ಸಹಿಸಿ, ಉಲೂಕನು

ನಿನ್ನ ಮಗನ ಧನುವನ್ನು ಮುರಿದು, ತೀಕ್ಷ್ಣಶರದಿಂದ ತಾಡಿಸಿದನು. ಯುಯುತ್ಸುವು ಬೇರೊಂದು ಬಿಲ್ಲನ್ನೆತ್ತಿ, ಕೆಂಗಣ್ಣಿನಿಂದ ನೋಡಿ, ಅರವತ್ತು ಬಾಣಗಳಿಂದ ಶಾಕುನೇಯನನ್ನು ಪೀಡಿಸಿದನು. ಅವನ ಸಾರಥಿಯನ್ನು ಮೂರು ಶರಗಳಿಂದ ಹೊಡೆದು, ಮತ್ತೆ ಹತ್ತರಿಂದ ಅವನನ್ನೂ ಪೀಡಿಸಿದನು. ಉಲೂಕನು ಸಿಟ್ಟಿನಿಂದ ಸ್ವರ್ಣಪುಂಖಗಳಾದ ನಿಶಿತಕರ್ಣಿಗಳಿಂದ ಪೀಡಿಸಿ, ಅವನ ಧ್ವಜವನ್ನು ಮುರಿದು ಕೆಡಹಿದನು. ಕಾಂಚನಧ್ವಜವು ಕಣ್ಣೆದುರಿಗೇ ಕಡಿದು ಬಿದ್ದುದನ್ನು ನೋಡಿ ಯುಯುತ್ಸುವು ಕೋಪಾರುಣಿತಲೋಚನನಾಗಿ, ಐದು ಬಾಣಗಳಿಂದ ಉಲೂಕನ ಎದೆಗೆ ತಾಟಿಸಿದನು. ಉಲೂಕನು ಭಲ್ಲದಿಂದ ಅವನ ಸೂತನನ್ನು ಕೊಂದು, ನಾಲ್ಕು ಬಾಣಗಳಿಂದ ಕುದುರೆಗಳನ್ನು ಕೊಂದು, ಐದರಿಂದ ಅವನನ್ನು ಪೀಡಿಸಿದನು. ಆಗ ಯುಯುತ್ಸುವು ರಣವನ್ನು ಬಿಟ್ಟು, ಬೇರೋದು ರಥದಲ್ಲಿ ಕೂತು ದೂರ ಸರಿದನು. ಉಲೂಕನು ಜಿತಕಾಶಿಯಾಗಿ ಪಾಂಚಾಲಸೃಂಜಯ ಭಟರನ್ನು ನಿಶಿತಶರಗಳಿಂದ ಕೊಲ್ಲುತ್ತಾ ವಿಹರಿಸಿದನು.

ಶತಾನೀಕನೊಡನೆ ಕಾದುವ ನಿನ್ನ ಮಗನಾದ ಶ್ರುತಕರ್ಮನು ನಿಮಿಷಾರ್ಧದಲ್ಲಿ ಅವನ ಸೂತತುರಗಗಳನ್ನು ಕೊಂದು, ಗರ್ಜಿಸಿದನು. ನಕುಲಸುತನು ಕದಲದೆ ರಥದಲ್ಲಿ ನಿಂತು, ಗದೆಯನ್ನೆತ್ತಿ ಒಗೆದನು. ಗದಾಘಾತದಿಂದ ನಿನ್ನ ಸುತನ ರಥವು ಚೂರಾಗಿ, ಸಾದಿತುರಗಗಳು ಹತರಾದರು. ವಿರಥರಾದ ಸೋದರರೀರ್ವರು ನಿರುಪಾಯರಾಗಿ ರಣರಂಗದಿಂದ ತೊಲಗಿದರು. ಶ್ರುಕಕರ್ಮನು ವಿವಶುರಥವನ್ನೇರಿ ಹೋದನು. ಶತಾನೀಕನೂ ಅಣ್ಣನಾದ ಪ್ರತಿವಿಂಧ್ಯನ ರಥವೇರಿ ಹೋದನು.

## ೪. ಷೋಡಶ ದಿನದ ಯುದ್ಧ — ಧರ್ಮಜ ವಿಕ್ರಮ

ಶಕುನಿಯು ಸುತಸೋಮನನ್ನು ಮುತ್ತಿ, ಬಿಟ್ಟ ಬಾಣ ಪರಂಪರೆಯು ಧರಾಧರದ ಮೇಲೆ ಬಿದ್ದ ವರ್ಷಧಾರೆಯಂತೆ ವ್ಯರ್ಥವಾಯಿತು. ಪಿತೃಜನ ವೈರಿಯಾದ ಗಾಂಧಾರ ರಾಜನನ್ನು ಕಂಡು, ಕೆಂಡವಾಗಿ ಸುತಸೋಮನು ಬಾಣವರ್ಷದಲ್ಲಿ ಅವನನ್ನು ಮುಚ್ಚಿದನು. ಶಕುನಿಯು ಅವನ ಶರಜಾಲವನ್ನು ಖಂಡಿಸಿ, ಮೂರು ಶರಗಳಿಂದ ಸುತಸೋಮನನ್ನು ಪೀಡಿಸಿದನು; ಮತ್ತು ಅವಕಾಶವನ್ನು ಕೊಡದೆ ನಿನ್ನ ಮೈದುನನು ಸುತ ಸೋಮನ ಕುದುರೆಗಳನ್ನು ಕೇತನವನ್ನು, ಸೂತನನ್ನು ನಿಶಿತ ಬಾಣಗಳಿಂದ ನೂರಾರು ಚೂರಾಗಿಸಿದನು. ಅದನ್ನು ಕಂಡು ಸೈನಿಕರು ಭಯಸಂಭ್ರಾಂತರಾಗಿ ಆಕ್ರೋಶಿಸಿದರು. ಆಗ ಸುತಸೋಮನು ಹತತುರಗನು, ವಿರಥನು, ಭಿನ್ನಧ್ವಜನು ಆದರೂ ಎದೆಗುಂದದೆ, ಧರೆಗಿಳಿದು, ಧನುವಿನಲ್ಲಿ ಸ್ವರ್ಣಪುಂಖಗಳಾದ ಬಾಣಗಣವನ್ನಿಟ್ಟು ಬಿಟ್ಟನು. ಆ ಬಾಣಜಾಲವು ಹೊನ್ನೆ ಹುಳಗಳ ಗುಂಪು ಹೊದರಿನನ್ನಂತೆ, ಶಕುನಿರಥವನ್ನು ಮುಚ್ಚಿ ನಿಂತವು. ಶಕುನಿಯು ಹೆದರದೆ, ಪ್ರತಿಶರಗಳಿಂದ ಅವನ್ನು ಕಡಿದು ಕೆಡಹಿ, ಸುತಸೋಮನನ್ನು ಶರಶತದಿಂದ ಪೀಡಿಸಿದನು. ಶರವಿಕ್ಷತಗಾತ್ರನಾದರೂ ಬಿಡದೆ ಕಡಿದಾಡುವ ಶರಶತದಿಂದ ಪೀಡಿಸಿದನು.

ಶರವಿಕ್ಷತಗಾತ್ರನಾದರೂ ಬಿಡದೆ ಕಡಿದಾಡುವ ಹಾಗು ಭೂಮಿಯಲ್ಲಿ ನಿಂತು ರಥಸ್ಥನಾದ ಮಹಾವೀರನನ್ನೆದುರಿಸುವ ಸುತಸೋಮನ ಸಾಹಸವನ್ನು ಕಂಡು ಅಂಬರದಿ ನಿಂತಿದ್ದ ಸಿದ್ಧಚಾರಣರೇ ಅಲ್ಲದೆ ರಣರಂಗದಲ್ಲಿದ್ದ ಸೈನಿಕ ವೀರರು ಪ್ರಶಂಸಿಸಿದರು. ಶಕುನಿಯು ಶರಲಾಘವವನ್ನು ತೋರಿ ಸುತಸೋಮನ ಬಿಲ್ಲನ್ನು ಮುರಿದು, ತೂಣೀರಗಳನ್ನೂ ತುಂಡರಿಸಿದನು. ಸುತಸೋಮನು ಸಂಕ್ರುದ್ಧನಾಗಿ ನಿಶಾತ ಖಡ್ಗವನ್ನೂ ಚರ್ಮವನ್ನೂ ಧರಿಸಿ, ಅದನ್ನು ತಿರುಗಿಸುತ್ತಾ ಮೇಲೇರಿ ಬಂದನು. ವೈಡೂರ್ಯೋತ್ಪಲ ವರ್ಣ ಪ್ರಕಾಶವು, ದಂತಮಯಕೋಶವು, ಆದ ಖಡ್ಗವನ್ನು ಝಳಪಿಸಿ ಬಂದ ಸುತಸೋಮನನ್ನೂ, ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ವಿಪ್ಲುತ, ಸೃತ, ಸಂಪಾತ, ಸಮುದೀರ್ಣ, ಮುಂತಾದ ಗತಿಗಳಲ್ಲಿ ತಿರುಗುವ ಅವನ ಖಡ್ಗವನ್ನೂ ಕಂಡು, ಕಾಲದಂಡವನ್ನು ಪಿಡಿದು ಯಮರಾಜನೇ ಬಂದನೆಂಬಂತೆ ಮಂಡಲಾಕಾರವಾಗಿ ತಿರುಗುವ ಸುತಸೋಮನ ಸಿಂಹನಾದಗಳನ್ನು ಕೇಳಿ, ಕೌರವ ಸೈನಿಕರು ದಿಕ್ಕೆಟ್ಟೋಡಿದರು. ಶಕುನಿಯು ಬಾಣಶತವನ್ನು ಬಿಡಲು, ಸುತಸೋಮನು ಖಡ್ಗ ಪ್ರಹಾರಗಳಿಂದಲೇ ಅವನ್ನು ತುಂಡರಿಸಿದನು. ಗಾಂಧಾರನ ಬಾಣ ಪರಂಪರೆಯನ್ನು ಕಡಿದು ಕೆಡಹುವ ಅವನ ಖಡ್ಗವು ನಾಗ ನಿವಹವನ್ನು ಕುಕ್ಕಿ ಕೆಡಹುವ ಗರುಡ ತುಂಡದಂತೆ ಕಂಗೊಳಿಸಿತು.

ಶಕುನಿಯು ಕ್ರೂರಭಲ್ಲದಿಂದ ಅವನ ಖಡ್ಗವನ್ನು ಎರಡು ಹೋಳಾಗಿಸಲು, ಒಂದು ತುಂಡು ಧರೆಗೆ ಬಿದ್ದು ಮತ್ತೊಂದು ಕೈಯಲ್ಲೇ ನಿಂತಿತು. ಸುತಸೋಮನು ಆರು ಹೆಜ್ಜೆ ಹಿಂದಕ್ಕೆ ಸರಿದು, ಗುರಿಯಿಟ್ಟು, ದಂತದ ಪಿಡಿಯ ಅರ್ಧಖಡ್ಗವನ್ನು ಶಕುನಿಯ ಮೇಲೆ ರಭಸದಿಂದೆಸೆದನು. ಅದು ಶಕುನಿಯ ಚಾಪವನ್ನು ಖಂಡಿಸಿ ಧರೆಗೆ ಬಿತ್ತು. ಸುತಸೋಮನು ನಿರಾಯುಧನಾಗಿ ನಿಲ್ಲಲಾರದೆ, ಶ್ರುತಕೀರ್ತಿಯ ರಥವನ್ನೇರಪೋದನು. ಶಕುನಿಯು ಅನ್ಯ ಧನುವನ್ನು ಪಿಡಿದು, ಬಾಣಗಣದಿಂದ ಪಾಂಡವ ಸೈನಿಕರ ಪ್ರಾಣಗಳನ್ನು ತೆಗೆಯುತ್ತಾ, ಮುಂದೆ ಸಾಗಿದನು. ಅವನ ವಿಕ್ರಮವನ್ನು ಕಂಡು ಪಾಂಡವ ಯೋಧರು ಅಧೀರರಾದರು. ಅಭೀತನಾಗಿ ಸೌಬಲನು ಪಾಂಡವ ಬಲವನ್ನು-ದೇವರಾಜನು ದಿತಿಜ ಸೇನೆಯನ್ನಂತೆ, ಮರ್ದಿಸುತ್ತಾ ವಿಕ್ರಮಿಸಿದನು.

ಕೃಪನು ಧೃಷ್ಟದ್ಯುಮ್ನನನ್ನು ವಾರಿಸಿ, ಶರಭವು ಸಿಂಹದೊಡನೆಯಂತೆ ಕಾದಿದನು. ಗೌತಮನ ಬಾಣಗಳಿಂದ ಪೀಡಿತನಾದ ಪಾರ್ಷತನು ನಿರ್ವಿಣ್ಣನಾದನು. ಗೌತಮನ ರಥದ ಮುಂದೆ ನಿಂತ ಧೃಷ್ಟದ್ಯುಮ್ನನ ರಥದಿಂದ ಬಾಣಜಾಲವು ಹೊರಬರದಾದುದನ್ನು ಕಂಡು, ಸರ್ವಭೂತಗಳು ಅವನು ಮೃತನಾದನೆಂದೇ ತಿಳಿದರು. ರಥಿಸಾದಿಗಳು 'ದ್ರೋಣನನ್ನು ಕೊಂದ ಪಾರ್ಷತನಲ್ಲಿ ಕ್ರುದ್ಧನಾಗಿ ಕೃಪನು ಸೇಡಿನಿಂದ ಉರಿಯುತ್ತಿರುವನು. ಮಹಾತೇಜನು, ದಿವ್ಯಾಸ್ತ್ರವಿದ್ವದ್ವರನು, ಆದ ಕೃಪಾಚಾರ್ಯನಿಂದ ಧೃಷ್ಟದ್ಯುಮ್ನನೆಂತು ಉಳಿಯುವನೋ? ನಮ್ಮ ಸೇನೆಗೆ ಬಂದಿರುವ ವಿಪತ್ತೆಂತು ತೊಲಗುವದೋ? ಈ ಬ್ರಾಹ್ಮಣನಿಂದು ನಮ್ಮೆಲ್ಲರನ್ನೂ ಕೊಂದುಬಿಡುವಂತಿದೆ! ಅಂತಿಕದಲ್ಲಿ ನಿಂತ ಅಂತಕನಂತಿರುವ ಕೃಪನಿಗೆ ಕೃಪೆಯಿಲ್ಲ. ಇವನಿಂದ ನಾವು ಉಳಿಯುವುದೆಂತು?

ನಿನ್ನ ಮಗನ ಧನುವನ್ನು ಮುರಿದು, ತೀಕ್ಷ್ಣಶರದಿಂದ ತಾಡಿಸಿದನು. ಯುಯುತ್ಸುವು ಬೇರೊಂದು ಬಿಲ್ಲನ್ನೆತ್ತಿ ಕೆಂಗಣ್ಣಿನಿಂದ ನೋಡಿ, ಅರವತ್ತು ಬಾಣಗಳಿಂದ ಶಾಕುನೇಯನನ್ನು ಪೀಡಿಸಿದನು. ಅವನ ಸಾರಥಿಯನ್ನು ಮೂರು ಶರಗಳಿಂದ ಹೊಡೆದು, ಮತ್ತೆ ಹತ್ತರಿಂದ ಅವನನ್ನೂ ಪೀಡಿಸಿದನು. ಉಲೂಕನು ಸಿಟ್ಟಿನಿಂದ ಸ್ವರ್ಣಪುಂಖಗಳಾದ ನಿಶಿತಕರ್ಣಿಗಳಿಂದ ಪೀಡಿಸಿ, ಅವನ ಧ್ವಜವನ್ನು ಮುರಿದು ಕೆಡಹಿದನು. ಕಾಂಚನಧ್ವಜವು ಕಣ್ಣೆದುರಿಗೇ ಕಡಿದು ಬಿದ್ದುದನ್ನು ನೋಡಿ ಯುಯುತ್ಸುವು ಕೋಪಾರುಣಿತಲೋಚನನಾಗಿ, ಐದು ಬಾಣಗಳಿಂದ ಉಲೂಕನ ಎದೆಗೆ ತಾಟಿಸಿದನು. ಉಲೂಕನು ಭಲ್ಲದಿಂದ ಅವನ ಸೂತನನ್ನು ಕೊಂದು, ನಾಲ್ಕು ಬಾಣಗಳಿಂದ ಕುದುರೆಗಳನ್ನು ಕೊಂದು, ಐದರಿಂದ ಅವನನ್ನು ಪೀಡಿಸಿದನು. ಆಗ ಯುಯುತ್ಸುವು ರಣವನ್ನು ಬಿಟ್ಟು, ಬೇರೋದು ರಥದಲ್ಲಿ ಕೂತು ದೂರ ಸರಿದನು. ಉಲೂಕನು ಜಿತಕಾಶಿಯಾಗಿ ಪಾಂಚಾಲಸೃಂಜಯ ಭಟರನ್ನು ನಿಶಿತಶರಗಳಿಂದ ಕೊಲ್ಲುತ್ತಾ ವಿಹರಿಸಿದನು.

ಶತಾನೀಕನೊಡನೆ ಕಾದುವ ನಿನ್ನ ಮಗನಾದ ಶ್ರುತಕರ್ಮನು ನಿಮಿಷಾರ್ಧದಲ್ಲಿ ಅವನ ಸೂತತುರಗಗಳನ್ನು ಕೊಂದು, ಗರ್ಜಿಸಿದನು. ನಕುಲಸುತನು ಕದಲದೆ ರಥದಲ್ಲಿ ನಿಂತು, ಗದೆಯನ್ನೆತ್ತಿ ಒಗೆದನು. ಗದಾಘಾತದಿಂದ ನಿನ್ನ ಸುತನ ರಥವು ಚೂರಾಗಿ, ಸಾದಿತುರಗಗಳು ಹತರಾದರು. ವಿರಥರಾದ ಸೋದರರೀರ್ವರು ನಿರುಪಾಯರಾಗಿ ರಣರಂಗದಿಂದ ತೊಲಗಿದರು. ಶ್ರುಕಕರ್ಮನು ವಿವಶುರಥವನ್ನೇರಿ ಹೋದನು. ಶತಾನೀಕನೂ ಅಣ್ಣನಾದ ಪ್ರತಿವಿಂಧ್ಯನ ರಥವೇರಿ ಹೋದನು.

## ೪. ಷೋಡಶ ದಿನದ ಯುದ್ಧ — ಧರ್ಮಜ ವಿಕ್ರಮ

ಶಕುನಿಯು ಸುತಸೋಮನನ್ನು ಮುತ್ತಿ, ಬಿಟ್ಟ ಬಾಣ ಪರಂಪರೆಯು ಧರಾಧರದ ಮೇಲೆ ಬಿದ್ದ ವರ್ಷಧಾರೆಯಂತೆ ವ್ಯರ್ಥವಾಯಿತು. ಪಿತೃಜನ ವೈರಿಯಾದ ಗಾಂಧಾರ ರಾಜನನ್ನು ಕಂಡು, ಕೆಂಡವಾಗಿ ಸುತಸೋಮನು ಬಾಣವರ್ಷದಲ್ಲಿ ಅವನನ್ನು ಮುಚ್ಚಿದನು. ಶಕುನಿಯು ಅವನ ಶರಜಾಲವನ್ನು ಖಂಡಿಸಿ, ಮೂರು ಶರಗಳಿಂದ ಸುತಸೋಮನನ್ನು ಪೀಡಿಸಿದನು; ಮತ್ತು ಅವಕಾಶವನ್ನು ಕೊಡದೆ ನಿನ್ನ ಮೈದುನನು ಸುತ ಸೋಮನ ಕುದುರೆಗಳನ್ನು ಕೇತನವನ್ನು, ಸೂತನನ್ನು ನಿಶಿತ ಬಾಣಗಳಿಂದ ನೂರಾರು ಚೂರಾಗಿಸಿದನು. ಅದನ್ನು ಕಂಡು ಸೈನಿಕರು ಭಯಸಂಭ್ರಾಂತರಾಗಿ ಆಕ್ರೋಶಿಸಿದರು. ಆಗ ಸುತಸೋಮನು ಹತತುರಗನು, ವಿರಥನು, ಭಿನ್ನಧ್ವಜನು ಆದರೂ ಎದೆಗುಂದದೆ, ಧರೆಗಿಳಿದು, ಧನುವಿನಲ್ಲಿ ಸ್ವರ್ಣಪುಂಖಗಳಾದ ಬಾಣಗಣವನ್ನಿಟ್ಟು ಬಿಟ್ಟನು. ಆ ಬಾಣಜಾಲವು ಹೊನ್ನೆ ಹುಳಗಳ ಗುಂಪು ಹೊದರಿನನ್ನಂತೆ, ಶಕುನಿರಥವನ್ನು ಮುಚ್ಚಿ ನಿಂತವು. ಶಕುನಿಯು ಹೆದರದೆ, ಪ್ರತಿಶರಗಳಿಂದ ಅವನ್ನು ಕಡಿದು ಕೆಡಹಿ, ಸುತಸೋಮನನ್ನು ಶರಶತದಿಂದ ಪೀಡಿಸಿದನು. ಶರವಿಕ್ಷತಗಾತ್ರನಾದರೂ ಬಿಡದೆ ಕಡಿದಾಡುವ ಶರಶತದಿಂದ ಪೀಡಿಸಿದನು.

ಶರವಿಕ್ಷತಗಾತ್ರನಾದರೂ ಬಿಡದೆ ಕಡಿದಾಡುವ ಹಾಗು ಭೂಮಿಯಲ್ಲಿ ನಿಂತು ರಥಸ್ಥನಾದ ಮಹಾವೀರನನ್ನೆದುರಿಸುವ ಸುತಸೋಮನ ಸಾಹಸವನ್ನು ಕಂಡು ಅಂಬರದಿ ನಿಂತಿದ್ದ ಸಿದ್ಧಚಾರಣರೇ ಅಲ್ಲದೆ ರಣರಂಗದಲ್ಲಿದ್ದ ಸೈನಿಕ ವೀರರು ಪ್ರಶಂಸಿಸಿದರು. ಶಕುನಿಯು ಶರಲಾಘವವನ್ನು ತೋರಿ ಸುತಸೋಮನ ಬಿಲ್ಲನ್ನು ಮುರಿದು, ತೂಣೀರಗಳನ್ನೂ ತುಂಡರಿಸಿದನು. ಸುತಸೋಮನು ಸಂಕ್ರುದ್ಧನಾಗಿ ನಿಶಾತ ಖಡ್ಗವನ್ನೂ ಚರ್ಮವನ್ನೂ ಧರಿಸಿ, ಅದನ್ನು ತಿರುಗಿಸುತ್ತಾ ಮೇಲೇರಿ ಬಂದನು. ವೈಡೂರ್‍ಯೋತ್ಪಲ ವರ್ಣ ಪ್ರಕಾಶವು, ದಂತಮಯಕೋಶವು, ಆದ ಖಡ್ಗವನ್ನು ಝಳಪಿಸಿ ಬಂದ ಸುತಸೋಮನನ್ನೂ, ಭ್ರಾಂತ, ಉದ್ಭ್ರಾಂತ, ಆವಿದ್ಧ, ಆಪ್ಲುತ, ವಿಪ್ಲುತ, ಸೃತ, ಸಂಪಾತ, ಸಮುದೀರ್ಣ, ಮುಂತಾದ ಗತಿಗಳಲ್ಲಿ ತಿರುಗುವ ಅವನ ಖಡ್ಗವನ್ನೂ ಕಂಡು, ಕಾಲದಂಡವನ್ನು ಪಿಡಿದು ಯಮರಾಜನೇ ಬಂದನೆಂಬಂತೆ ಮಂಡಲಾಕಾರವಾಗಿ ತಿರುಗುವ ಸುತಸೋಮನ ಸಿಂಹನಾದಗಳನ್ನು ಕೇಳಿ, ಕೌರವ ಸೈನಿಕರು ದಿಕ್ಕೆಟ್ಟೋಡಿದರು. ಶಕುನಿಯು ಬಾಣಶತವನ್ನು ಬಿಡಲು, ಸುತಸೋಮನು ಖಡ್ಗ ಪ್ರಹಾರಗಳಿಂದಲೇ ಅವನ್ನು ತುಂಡರಿಸಿದನು. ಗಾಂಧಾರನ ಬಾಣ ಪರಂಪರೆಯನ್ನು ಕಡಿದು ಕೆಡಹುವ ಅವನ ಖಡ್ಗವು ನಾಗ ನಿವಹವನ್ನು ಕುಕ್ಕಿ ಕೆಡಹುವ ಗರುಡ ತುಂಡದಂತೆ ಕಂಗೊಳಿಸಿತು.

ಶಕುನಿಯು ಕ್ರೂರಭಲ್ಲದಿಂದ ಅವನ ಖಡ್ಗವನ್ನು ಎರಡು ಹೋಳಾಗಿಸಲು, ಒಂದು ತುಂಡು ಧರೆಗೆ ಬಿದ್ದು ಮತ್ತೊಂದು ಕೈಯಲ್ಲೇ ನಿಂತಿತು. ಸುತಸೋಮನು ಆರು ಹೆಜ್ಜೆ ಹಿಂದಕ್ಕೆ ಸರಿದು, ಗುರಿಯಿಟ್ಟು, ದಂತದ ಪಿಡಿಯ ಅರ್ಧಖಡ್ಗವನ್ನು ಶಕುನಿಯ ಮೇಲೆ ರಭಸದಿಂದೆಸೆದನು. ಅದು ಶಕುನಿಯ ಚಾಪವನ್ನು ಖಂಡಿಸಿ ಧರೆಗೆ ಬಿತ್ತು. ಸುತಸೋಮನು ನಿರಾಯುಧನಾಗಿ ನಿಲ್ಲಲಾರದೆ, ಶ್ರುತಕೀರ್ತಿಯ ರಥವನ್ನೇರಪೋದನು. ಶಕುನಿಯು ಅನ್ಯ ಧನುವನ್ನು ಪಿಡಿದು, ಬಾಣಗಣದಿಂದ ಪಾಂಡವ ಸೈನಿಕರ ಪ್ರಾಣಗಳನ್ನು ತೆಗೆಯುತ್ತಾ, ಮುಂದೆ ಸಾಗಿದನು. ಅವನ ವಿಕ್ರಮವನ್ನು ಕಂಡು ಪಾಂಡವ ಯೋಧರು ಅಧೀರರಾದರು. ಅಭೀತನಾಗಿ ಸೌಬಲನು ಪಾಂಡವ ಬಲವನ್ನು-ದೇವರಾಜನು ದಿತಿಜ ಸೇನೆಯನ್ನಂತೆ, ಮರ್ದಿಸುತ್ತಾ ವಿಕ್ರಮಿಸಿದನು.

ಕೃಪನು ಧೃಷ್ಟದ್ಯುಮ್ನನನ್ನು ವಾರಿಸಿ, ಶರಭವು ಸಿಂಹದೊಡನೆಯಂತೆ ಕಾದಿದನು. ಗೌತಮನ ಬಾಣಗಳಿಂದ ಪೀಡಿತನಾದ ಪಾರ್ಷತನು ನಿರ್ವಿಣ್ಣನಾದನು. ಗೌತಮನ ರಥದ ಮುಂದೆ ನಿಂತ ಧೃಷ್ಟದ್ಯುಮ್ನನ ರಥದಿಂದ ಬಾಣಜಾಲವು ಹೊರಬರದಾದುದನ್ನು ಕಂಡು, ಸರ್ವಭೂತಗಳು ಅವನು ಮೃತನಾದನೆಂದೇ ತಿಳಿದರು. ರಥಿಸಾದಿಗಳು 'ದ್ರೋಣನನ್ನು ಕೊಂದ ಪಾರ್ಷತನಲ್ಲಿ ಕ್ರುದ್ಧನಾಗಿ ಕೃಪನು ಸೇಡಿನಿಂದ ಉರಿಯುತ್ತಿರುವನು. ಮಹಾತೇಜನು, ದಿವ್ಯಾಸ್ತ್ರವಿದ್ವದ್ವರನು, ಆದ ಕೃಪಾಚಾರ್‍ಯನಿಂದ ಧೃಷ್ಟದ್ಯುಮ್ನನೆಂತು ಉಳಿಯುವನೋ? ನಮ್ಮ ಸೇನೆಗೆ ಬಂದಿರುವ ವಿಪತ್ತೆಂತು ತೊಲಗುವದೋ? ಈ ಬ್ರಾಹ್ಮಣನಿಂದು ನಮ್ಮೆಲ್ಲರನ್ನೂ ಕೊಂದುಬಿಡುವಂತಿದೆ! ಅಂತಿಕದಲ್ಲಿ ನಿಂತ ಅಂತಕನಂತಿರುವ ಕೃಪನಿಗೆ ಕೃಪೆಯಿಲ್ಲ. ಇವನಿಂದ ನಾವು ಉಳಿಯುವುದೆಂತು?

ಭಾರದ್ವಾಜನನ್ನು ನೋಡುಪೋಗಲೆಣಿಸಿದವನಂತೆ, ಪ್ರಾಣಗಳಿಗೆ ಆಶೆಪಡದೆ ಕಡಿದಾಡುತ್ತಿರುವನಲ್ಲ! ಆಚಾರ್ಯನಿಗೆ ಸದಾಸಿದ್ಧವಿದೆ ರಣವಿಜಯ! ಕ್ಷಿಪ್ರಹಸ್ತನಿಗೆ ಅಸ್ತ್ರಲಾಭವು, ವೀರ್ಯವಂತನಿಗೆ ಕ್ರೋಧಪಾರವಶ್ಯವು ಒದಗಿ ಬಂದಾಗ ಅವನನ್ನಾರು ತಡೆಯಲಾಗುವುದು? ನಮ್ಮ ಸೇನಾನಿಯೂ ಸಾಮನ್ಯನಲ್ಲ. ಅಗ್ನಿದ್ವಯವು ಕಲೆಬಿದ್ದಂತಿದೆ ಇವರ ದ್ವಂದ್ವಯುದ್ಧ! ಪಾರ್ಷತನು ಇಂದೇಕೋ ಯುದ್ಧ ವಿಮುಖನಾದಂತಿದೆ! ಏನಾಗುವುದೋ?' ಎಂದು ಮಾತಾಡಿಕೊಂಡರು.

ಕ್ರುದ್ಧನಾದ ಕೃಪನು ಬಾಣಪೀಡಿತನಾಗಿ ನಿಶ್ಚೇಷ್ಟನಾಗಿದ್ದ ಪಾರ್ಷತನನ್ನು ಬಿಡದೆ ಅನೇಕ ಮರ್ಮಾಘಾತಕರ ಬಾಣಗಳಿಂದ ಹೊಡೆದನು. ಪಾರ್ಷತನ ಕವಚವು ಸೀಳಿತು: ಅವನ ಶರೀರವು ರಕ್ತಸಿಕ್ತವಾಯಿತು. ಅವನು ಕರ್ತವ್ಯಮೂಢನಾಗಿ ರಥನೀಡವನ್ನಾಶ್ರಯಿಸಿ ಸುಮ್ಮನೆ ಕೂತನು. ಅದನ್ನು ಕಂಡು ಅವನ ಸಾರಥಿಯು, ' ಆಯುಷ್ಮನ್ ! ಕ್ಷೇಮವಾಗಿರುವೆಯಾ ? ಮೂರ್ಛಾವಶನಾಗಿಲ್ಲವಲ್ಲ ? ಏಕೆ ಹೀಗಾದೆ ? ನೀನಿಂತು ವ್ಯಸನವಶನಾದುದನ್ನು ನಾನೆಂದೂ ಕಂಡಿಲ್ಲ. ಮರ್ಮಭೇದಿಗಳಾದ ನಿನ್ನ ಬಾಣಗಳು ಆಚ್ಯಾರನನ್ನು ನೋಯಿಸುತ್ತಿಲ್ಲವೆಂದರೆ, ವಿಧಿ ಬಲೀಯವೆಂದು ತಿಳಿದಿರುವೆನು. ಆತನ ಬಾಣಗಳು ನಿನ್ನನ್ನು ವೇದನಾಭರಖಿನ್ನನನ್ನಾಗಿಸಿವೆ. ಮಹಾವಿಕ್ರಮನಾದ ನಿನ್ನನ್ನಿಂತು ಮೋಹಗೊಳಿಸಿದ ಬ್ರಾಹ್ಮಣನು ಅವಧ್ಯನೆಂದು ನಿಶ್ಚಯಿಸಿರುವೆನು. ಸಮುದ್ರದಿಂದ ಹಿಂದಿರುಗಿದ ನದಿಯಂತೆ ನನ್ನ ರಥವೂ ಕೃಪನಿಂದ ದೂರವಾಗಲಿ! ' ಎಂದನು. ಧೃಷ್ಟದ್ಯುಮ್ನನು 'ಸೂತ! ನೀನಂದುದೆಲ್ಲ ನಿಜ. ನನ್ನ ಮನಸ್ಸಿಗೆ ಮುಸುಕು ಕವಿದಂತಾಗಿದೆ. ದಿಕ್ಕು ತೋಚದಂತಿರುವೆನು. ಕೃಪಬಾಣ ಪೀಡಿತವಾದ ನನ್ನ ಶರೀರವು ಕಂಪಿಸುತ್ತಿದೆ; ಮೈ ಬೆವರಿಟ್ಟಿದೆ; ನವಿರೆದ್ದು ನಿಂತಿದೆ; ಈ ಬ್ರಾಹ್ಮಣ ವೀರನ ಗೊಡವೆ ಬೇಡ! ಹೊಡೆ ರಥವನ್ನು ಅರ್ಜುನನಿದ್ದೆಡೆಗೆ! ಅಥವಾ ಭೀಮಸೇನನಲ್ಲಿಗೆ ನನ್ನನ್ನು ಸೇರಿಸು! ಆಗ ಮಾತ್ರ ನನಗೆ ಕ್ಷೇಮವಾದೀತು!' ಎಂದು ಮೆಲ್ಲಗೆ ನುಡಿದನು. ಸಾರಥಿಯು ತತ್ಕ್ಷಣವೇ ಸ್ಯಂದನವನ್ನಲ್ಲಿಂದ ದೂರಸರಿಸಿ, ಭೀಮಸೇನನನ್ನು ಸಮೀಪಿಸಿದನು. ಓಡಿ ಹೋಗುವ ಪಾರ್ಷತನನ್ನು ಬೆನ್ನಟ್ಟಿ ಬಂದ ಕೃಪನು ಶಂಖ ಧ್ವಾನವನ್ನು ಮಾಡಿ, ಅವನ ರಥವನ್ನು ಬಾಣಜಾಲದಿಂದ ಮುಚ್ಚಿದನು.

ಕೃತವರ್ಮನು ಶಿಖಂಡಿಯನ್ನು ಮುತ್ತಿ, ಮಹೇಂದ್ರನು ನಮುಚಿಯೊಡನೆಯಂತೆ ಕಾದಿದನು. ಭೀಷ್ಮ ಹಂತಕನನ್ನು ಅಂತಕಪುರಿಗೆ ಸೇರಿಸಲು ಸೆಣಸುವ ಕೃತವರ್ಮನು ತನ್ನ ಜತ್ರುದೇಶದಲ್ಲಿ ಐದು ಬಾಣಗಳನ್ನು ನಾಟಿಸಿದ ಶಿಖಂಡಿಯನ್ನು ಅರವತ್ತು ಶರಗಳಿಂದ ಪೀಡಿಸಿ, ಒಂದರಿಂದ ಅವನ ಧನುಸ್ಸನ್ನು ಮುರಿದನು. ದ್ರುಪದಸುತನು ಮತ್ತೊಂದು ಬಿಲ್ಲನ್ನೆತ್ತಿ, 'ನಿಲ್ಲು! ನಿಲ್ಲು!' ಎನ್ನುತ್ತಾ ಅರವತ್ತು ಬಾಣಗಳಿಂದ ಅವನನ್ನು ಹೊಡೆದನು. ಆ ಬಾಣಗಳು ಭೋಜನ ಕವಚವನ್ನು ಸೀಳಲಾರದೆ ಕೆಳಗೆ ಬಿದ್ದವು. ವ್ಯರ್ಥಪ್ರಯತ್ನನಾದ ಶಿಖಂಡಿಯು ಮತ್ತೊಂದು ಭಲ್ಲದಿಂದ ಕೃತವರ್ಮನ ಬಿಲ್ಲನ್ನು ಮುರಿದು, ಕೊಂಬು ಕಡಿದ ಎತ್ತಿನಂತಾದ ಯಾದವ ವೀರನ ಎದೆಗೆ, ಭುಜಗಳಿಗೆ ಎಂಬತ್ತು ಬಾಣಗಳನ್ನು ನಾಟಿಸಿದನು.

ಕ್ಷತಗಾತ್ರನಾದ ಕೃತವರ್ಮನು ಕ್ರುದ್ಧನಾಗಿ, ಮೈಯಿಂದ ಗಡಿಗೆಗಳಿಂದ ಬೀಳುವ ನೀರಿನಂತೆ ಸುರಿವ ರಕ್ತವನ್ನು ಲೆಕ್ಕಿಸದೆ, ಮತ್ತೊಂದು ಧನುಸ್ಸನ್ನು ಪಿಡಿದು ಬಾಣಗಣವನ್ನು ಶಿಖಂಡಿಯ ಸ್ಕಂದಭಾಗದಲ್ಲಿ ನಾಟಿಸಿದನು. ಶಾಖಾಪ್ರಶಾಖಾವಿಪುಲನಾದ ಮಹಾ ವೃಕ್ಷದಂತೆ, ಬಾಣಗಣದಿಂದೊಪ್ಪುವ ಶಿಖಂಡಿಯು ಮತ್ತೆ ಹತ್ತು ಬಾಣಗಳಿಂದ ಕೃತವರ್ಮನನ್ನು ಪೀಡಿಸಿದನು. ಕೊಂಬುಗಳಿಂದ ತಿವಿದು ಕಾದುವ ವೃಷಭಗಳಂತೆ ಮಹಾರಥರೀರ್ವರು ಪರಸ್ಪರ ವಧಾಕಾಂಕ್ಷಿಗಳಾಗಿ, ಮಂಡಲಾಕಾರವಾಗಿ ತಿರುಗುವ ರಥಗಳಲ್ಲಿ ಸೂರ್ಯದ್ವಯರಂತೆ ನಿಂತು, ಬಾಣಕಿರಣಗಳಿಂದ ಪ್ರತಾಪದುಸ್ಸಹರಾದರು. ಕೃತವರ್ಮನು ಸ್ವರ್ಣಪುಂಖಗಳಾದ ಎಪ್ಪತ್ತು ಬಾಣಗಳಿಂದ ಶಿಖಂಡಿಯನ್ನು ಪೀಡಿಸಿ, ಮತ್ತೊಂದು ಪ್ರಾಣಾಂತಕರ ಶರವನ್ನು ಪ್ರಯೋಗಿಸಿದನು. ಶಿಖಂಡಿಯು ಆ ಬಾಣದ ದೆಬ್ಬೆಗೆ ಮೂರ್ಛಿತನಾಗಿ ಧ್ವಜಯಷ್ಟಿಯನ್ನವಲಂಬಿಸಿ, ಸುಮ್ಮನೆ ನಿಂತನು. ಆಗ ಅವನ ಸಾರಥಿಯು ರಥವನ್ನು ದೂರ ಸರಿಸಿ ಅವನನ್ನು ಕಪಾಡಿದನು. ಕೃತವರ್ಮನು ಶಿಖಂಡಿಯನ್ನು ಸೋಲಿಸಿ, ಸಿಂಹನಾದ ಮಾಡುತ್ತಾ ಮುತ್ತಲು, ಪಾಂಡವೀಸೇನೆಯು ಭಯಸಂಭ್ರಾಂತವಾಗಿ ಓಡತೊಡಗಿತು.

ಅರ್ಜುನನು ತೂಲರಾಶಿಯನ್ನೆತ್ತೊಗೆವ ಮಹಾವಾತದಂತೆ, ವಿಜೃಂಭಿಸಿ ಕುರುಸೇನಾನಿಹವವನ್ನು ನಾಶಪಡಿಸಿದನು. ತ್ರಿಗರ್ತರದನ್ನು ಸಹಿಸದೆ, ಶಿವಯ, ಶಾಲ್ವಸಂಸಪ್ತರಿಂದ ಕೂಡಿ ಮುತ್ತಿ ಅವನನ್ನು ತಡೆದರು. ತ್ರಿಗರ್ತರಾಜನಾದ ಸುಶರ್ಮನು, ಸತ್ಯಸೇನ, ಚಂದ್ರದೇವ, ಮಿತ್ರದೇವ, ಶತ್ರುಂಜಯ (ಸೌಶ್ರುತಿ), ಚಿತ್ರಸೇನ, ಚಿತ್ರವರ್ಮರೆಂಬ ತನ್ನ ಭ್ರಾತೃವರ್ಗದಿಂದ ಕೂಡಿ, ಅರ್ಜುನನನ್ನು ತಾಕಿ ಶರವರ್ಷವನ್ನು ಪ್ರಯೋಗಿಸಿದನು. ಸಾಗರದಲ್ಲಿ ಮಳೆಗರೆವ ಜಲದಗಳಂತೆ ಅವರು ವ್ಯರ್ಥಪ್ರಯತ್ನರಾದರು. ಗರುಡನನ್ನು ಕಂಡ ಪನ್ನಗಗಳಂತೆ, ಅರ್ಜುನಬಾಣಗಳಿಗೆ ಗುರಿಯಾದ ಸಾವಿರಾರು ಯೋಧರು ನಷ್ಟರಾದರು. ಆದರೂ ಬಿಡದೆ ಬಂದು ಮುತ್ತುವ ಶತಸಹಸ್ರ ಸಂಸಪ್ತಕ ವೀರರನ್ನು ನೋಡಿ ಅರ್ಜುನನು ನಗುನಗುತ್ತಾ, ಅವರನ್ನೆಲ್ಲ ಸಂಹರಿಸಿದನು. ಅಗ್ನಿಯನ್ನು ಹೊಕ್ಕ ಶಲಭಗಳಂತೆ, ಕ್ಷಣದಲ್ಲಿ ನಷ್ಟರಾದ ವೀರರನ್ನು ಕಂಡು ಕುಪಿತರಾಗಿ, ಸತ್ಯಸೇನಾದಿ ಮಹಾರಥರು ಪಾರ್ಥನನ್ನು ಮುತ್ತಿ, ಬಾಣವರ್ಷದಲ್ಲಿ ಅವನ ರಥವನ್ನು ಮುಣುಗಿಸಿದರು.

ಸತ್ಯಸೇನನು ಮೂರು ಶರಗಳನ್ನು, ಮಿತ್ರದೇವನು ಅರವತ್ತುಮೂರು ಬಾಣಗಳನ್ನು, ಚಂದ್ರದೇವನು ಎಪ್ಪತ್ತು ನಾರಾಚಗಳನ್ನು, ಶತ್ರುಂಜಯನು ಇಪ್ಪತ್ತು ಕಾಂಡಗಳನ್ನು, ಚಿತ್ರವರ್ಮನು ಎಪ್ಪತ್ತುಮೂರು ಪೃಷತ್ಕಗಳನ್ನು, ಸೌಶ್ರುತಿ ಸುಶ್ರುತನ ಮಗನಾದ ಚಿತ್ರಸೇನನು ಎಪ್ಪತ್ತು ನಿಶಿತ ಭಲ್ಲಗಳನ್ನು ಪ್ರಯೋಗಿಸಿದರು. ಅರ್ಜುನನು ಅವರ ಬಾಣಗಳನ್ನು ಖಂಡಿಸಿ, ಸತ್ಯಸೇನನನ್ನು ಮೂರರಿಂದಲು, ಚಂದ್ರದೇವನನ್ನು ಎಂಟು ಬಾಣಗಳಿಂದಲು, ಮಿತ್ರದೇವನನ್ನು ಮೂರು ಶರಗಳಿಂದಲು, ಚಿತ್ರಸೇನನನ್ನು ಏಳು ಬಾಣಗಳಿಂದಲು, ಶತ್ರುಂಜಯನನ್ನು ಇಪ್ಪತ್ತರಿಂದಲು, ಚಿತ್ರವರ್ಮನನ್ನು ಒಂಭತ್ತರಿಂದಲು

ಭಾರದ್ವಾಜನನ್ನು ನೋಡುಪೋಗಲೆಣಿಸಿದವನಂತೆ, ಪ್ರಾಣಗಳಿಗೆ ಆಶೆಪಡದೆ ಕಡಿದಾಡುತ್ತಿರುವನಲ್ಲ! ಆಚಾರ್ಯನಿಗೆ ಸದಾಸಿದ್ಧವಿದೆ ರಣವಿಜಯ! ಕ್ಷಿಪ್ರಹಸ್ತನಿಗೆ ಅಸ್ತ್ರಲಾಭವು, ವೀರ್ಯವಂತನಿಗೆ ಕ್ರೋಧಪಾರವಶ್ಯವು ಒದಗಿ ಬಂದಾಗ ಅವನನ್ನಾರು ತಡೆಯಲಾಗುವುದು? ನಮ್ಮ ಸೇನಾನಿಯೂ ಸಾಮನ್ಯನಲ್ಲ. ಅಗ್ನಿದ್ವಯವು ಕಲೆಬಿದ್ದಂತಿದೆ ಇವರ ದ್ವಂದ್ವಯುದ್ಧ! ಪಾರ್ಷತನು ಇಂದೇಕೋ ಯುದ್ಧ ವಿಮುಖನಾದಂತಿದೆ! ಏನಾಗುವುದೋ?' ಎಂದು ಮಾತಾಡಿಕೊಂಡರು.

ಕ್ರುದ್ಧನಾದ ಕೃಪನು ಬಾಣಪೀಡಿತನಾಗಿ ನಿಶ್ಚೇಷ್ಟನಾಗಿದ್ದ ಪಾರ್ಷತನನ್ನು ಬಿಡದೆ ಅನೇಕ ಮರ್ಮಾಘಾತಕರ ಬಾಣಗಳಿಂದ ಹೊಡೆದನು. ಪಾರ್ಷತನ ಕವಚವು ಸೀಳಿತು: ಅವನ ಶರೀರವು ರಕ್ತಸಿಕ್ತವಾಯಿತು. ಅವನು ಕರ್ತವ್ಯಮೂಢನಾಗಿ ರಥನೀಡವನ್ನಾಶ್ರಯಿಸಿ ಸುಮ್ಮನೆ ಕೂತನು. ಅದನ್ನು ಕಂಡು ಅವನ ಸಾರಥಿಯು, 'ಆಯುಷ್ಮನ್! ಕ್ಷೇಮವಾಗಿರುವೆಯಾ? ಮೂರ್ಛಾವಶನಾಗಿಲ್ಲವಲ್ಲ? ಏಕೆ ಹೀಗಾದೆ? ನೀನಿಂತು ವ್ಯಸನವಶನಾದುದನ್ನು ನಾನೆಂದೂ ಕಂಡಿಲ್ಲ. ಮರ್ಮಭೇದಿಗಳಾದ ನಿನ್ನ ಬಾಣಗಳು ಆಚ್ಯಾರನನ್ನು ನೋಯಿಸುತ್ತಿಲ್ಲವೆಂದರೆ, ವಿಧಿ ಬಲೀಯವೆಂದು ತಿಳಿದಿರುವೆನು. ಆತನ ಬಾಣಗಳು ನಿನ್ನನ್ನು ವೇದನಾಭರಖಿನ್ನನನ್ನಾಗಿಸಿವೆ. ಮಹಾವಿಕ್ರಮನಾದ ನಿನ್ನನ್ನಿಂತು ಮೋಹಗೊಳಿಸಿದ ಬ್ರಾಹ್ಮಣನು ಅವಧ್ಯನೆಂದು ನಿಶ್ಚಯಿಸಿರುವೆನು. ಸಮುದ್ರದಿಂದ ಹಿಂದಿರುಗಿದ ನದಿಯಂತೆ ನನ್ನ ರಥವೂ ಕೃಪನಿಂದ ದೂರವಾಗಲಿ!' ಎಂದನು. ಧೃಷ್ಟದ್ಯುಮ್ನನು 'ಸೂತ! ನೀನಂದುದೆಲ್ಲ ನಿಜ. ನನ್ನ ಮನಸ್ಸಿಗೆ ಮುಸುಕು ಕವಿದಂತಾಗಿದೆ. ದಿಕ್ಕು ತೋಚದಂತಿರುವೆನು. ಕೃಪಬಾಣ ಪೀಡಿತವಾದ ನನ್ನ ಶರೀರವು ಕಂಪಿಸುತ್ತಿದೆ; ಮೈ ಬೆವರಿಟ್ಟಿದೆ; ನವಿರೆದ್ದು ನಿಂತಿದೆ; ಈ ಬ್ರಾಹ್ಮಣ ವೀರನ ಗೊಡವೆ ಬೇಡ! ಹೊಡೆ ರಥವನ್ನು ಅರ್ಜುನನಿದ್ದೆಡೆಗೆ! ಅಥವಾ ಭೀಮಸೇನನಲ್ಲಿಗೆ ನನ್ನನ್ನು ಸೇರಿಸು! ಆಗ ಮಾತ್ರ ನನಗೆ ಕ್ಷೇಮವಾದೀತು!' ಎಂದು ಮೆಲ್ಲಗೆ ನುಡಿದನು. ಸಾರಥಿಯು ತತ್‌ಕ್ಷಣವೇ ಸ್ಯಂದನವನ್ನಲ್ಲಿಂದ ದೂರಸರಿಸಿ, ಭೀಮಸೇನನನ್ನು ಸಮೀಪಿಸಿದನು. ಓಡಿ ಹೋಗುವ ಪಾರ್ಷತನನ್ನು ಬೆನ್ನಟ್ಟಿ ಬಂದ ಕೃಪನು ಶಂಖ ಧ್ವಾನವನ್ನು ಮಾಡಿ, ಅವನ ರಥವನ್ನು ಬಾಣಜಾಲದಿಂದ ಮುಚ್ಚಿದನು.

ಕೃತವರ್ಮನು ಶಿಖಂಡಿಯನ್ನು ಮುತ್ತಿ, ಮಹೇಂದ್ರನು ನಮುಚಿಯೊಡನೆಯಂತೆ ಕಾದಿದನು. ಭೀಷ್ಮ ಹಂತಕನನ್ನು ಅಂತಕಪುರಿಗೆ ಸೇರಿಸಲು ಸೆಣಸುವ ಕೃತವರ್ಮನು ತನ್ನ ಜತ್ರುದೇಶದಲ್ಲಿ ಐದು ಬಾಣಗಳನ್ನು ನಾಟಿಸಿದ ಶಿಖಂಡಿಯನ್ನು ಅರವತ್ತು ಶರಗಳಿಂದ ಪೀಡಿಸಿ, ಒಂದರಿಂದ ಅವನ ಧನುಸ್ಸನ್ನು ಮುರಿದನು. ದ್ರುಪದಸುತನು ಮತ್ತೊಂದು ಬಿಲ್ಲನ್ನೆತ್ತಿ, 'ನಿಲ್ಲು! ನಿಲ್ಲು!' ಎನ್ನುತ್ತಾ ಅರವತ್ತು ಬಾಣಗಳಿಂದ ಅವನನ್ನು ಹೊಡೆದನು. ಆ ಬಾಣಗಳು ಭೋಜನ ಕವಚವನ್ನು ಸೀಳಲಾರದೆ ಕೆಳಗೆ ಬಿದ್ದವು. ವ್ಯರ್ಥಪ್ರಯತ್ನನಾದ ಶಿಖಂಡಿಯು ಮತ್ತೊಂದು ಭಲ್ಲದಿಂದ ಕೃತವರ್ಮನ ಬಿಲ್ಲನ್ನು ಮುರಿದು, ಕೊಂಬು ಕಡಿದ ಎತ್ತಿನಂತಾದ ಯಾದವ ವೀರನ ಎದೆಗೆ, ಭುಜಗಳಿಗೆ ಎಂಬತ್ತು ಬಾಣಗಳನ್ನು ನಾಟಿಸಿದನು.

ಕ್ಷತಗಾತ್ರನಾದ ಕೃತವರ್ಮನು ಕ್ರುದ್ಧನಾಗಿ, ಮೈಯಿಂದ ಗಡಿಗೆಗಳಿಂದ ಬೀಳುವ ನೀರಿನಂತೆ ಸುರಿವ ರಕ್ತವನ್ನು ಲೆಕ್ಕಿಸದೆ, ಮತ್ತೊಂದು ಧನುಸ್ಸನ್ನು ಹಿಡಿದು ಬಾಣಗಣವನ್ನು ಶಿಖಂಡಿಯ ಸ್ಕಂದಭಾಗದಲ್ಲಿ ನಾಟಿಸಿದನು. ಶಾಖಾಪ್ರಶಾಖಾವಿಪುಲನಾದ ಮಹಾ ವೃಕ್ಷದಂತೆ, ಬಾಣಗಣದಿಂದೊಪ್ಪುವ ಶಿಖಂಡಿಯು ಮತ್ತೆ ಹತ್ತು ಬಾಣಗಳಿಂದ ಕೃತವರ್ಮನನ್ನು ಪೀಡಿಸಿದನು. ಕೊಂಬುಗಳಿಂದ ತಿವಿದು ಕಾದುವ ವೃಷಭಗಳಂತೆ ಮಹಾರಥರೀರ್ವರು ಪರಸ್ಪರ ವಧಾಕಾಂಕ್ಷಿಗಳಾಗಿ, ಮಂಡಲಾಕಾರವಾಗಿ ತಿರುಗುವ ರಥಗಳಲ್ಲಿ ಸೂರ್ಯದ್ವಯರಂತೆ ನಿಂತು, ಬಾಣಕಿರಣಗಳಿಂದ ಪ್ರತಾಪದುಸ್ಸಹರಾದರು. ಕೃತವರ್ಮನು ಸ್ವರ್ಣಪುಂಖಗಳಾದ ಎಪ್ಪತ್ತು ಬಾಣಗಳಿಂದ ಶಿಖಂಡಿಯನ್ನು ಪೀಡಿಸಿ, ಮತ್ತೊಂದು ಪ್ರಾಣಾಂತಕರ ಶರವನ್ನು ಪ್ರಯೋಗಿಸಿದನು. ಶಿಖಂಡಿಯು ಆ ಬಾಣದ ದೆಬ್ಬೆಗೆ ಮೂರ್ಛಿತನಾಗಿ ಧ್ವಜಯಷ್ಟಿಯನ್ನವಲಂಬಿಸಿ, ಸುಮ್ಮನೆ ನಿಂತನು. ಆಗ ಅವನ ಸಾರಥಿಯು ರಥವನ್ನು ದೂರ ಸರಿಸಿ ಅವನನ್ನು ಕಪಾಡಿದನು. ಕೃತವರ್ಮನು ಶಿಖಂಡಿಯನ್ನು ಸೋಲಿಸಿ, ಸಿಂಹನಾದ ಮಾಡುತ್ತಾ ಮುತ್ತಲು, ಪಾಂಡವೀಸೇನೆಯು ಭಯಸಂಭ್ರಾಂತವಾಗಿ ಓಡತೊಡಗಿತು.

ಅರ್ಜುನನು ತೂಲರಾಶಿಯನ್ನೆತ್ತೊಗೆವ ಮಹಾವಾತದಂತೆ, ವಿಜೃಂಭಿಸಿ ಕುರುಸೇನಾನಿಹವವನ್ನು ನಾಶಪಡಿಸಿದನು. ತ್ರಿಗರ್ತರದನ್ನು ಸಹಿಸದೆ, ಶಿವಯ, ಶಾಲ್ವಸಂಸಪ್ತರಿಂದ ಕೂಡಿ ಮುತ್ತಿ ಅವನನ್ನು ತಡೆದರು. ತ್ರಿಗರ್ತರಾಜನಾದ ಸುಶರ್ಮನು, ಸತ್ಯಸೇನ, ಚಂದ್ರದೇವ, ಮಿತ್ರದೇವ, ಶತ್ರುಂಜಯ (ಸೌಶ್ರುತಿ), ಚಿತ್ರಸೇನ, ಚಿತ್ರವರ್ಮರೆಂಬ ತನ್ನ ಭ್ರಾತೃವರ್ಗದಿಂದ ಕೂಡಿ, ಅರ್ಜುನನನ್ನು ತಾಕಿ ಶರವರ್ಷವನ್ನು ಪ್ರಯೋಗಿಸಿದನು. ಸಾಗರದಲ್ಲಿ ಮಳೆಗರೆವ ಜಲದಗಳಂತೆ ಅವರು ವ್ಯರ್ಥಪ್ರಯತ್ನರಾದರು. ಗರುಡನನ್ನು ಕಂಡ ಪನ್ನಗಗಳಂತೆ, ಅರ್ಜುನಬಾಣಗಳಿಗೆ ಗುರಿಯಾದ ಸಾವಿರಾರು ಯೋಧರು ನಷ್ಟರಾದರು. ಆದರೂ ಬಿಡದೆ ಬಂದು ಮುತ್ತುವ ಶತಸಹಸ್ರ ಸಂಸಪ್ತಕ ವೀರರನ್ನು ನೋಡಿ ಅರ್ಜುನನು ನಗುನಗುತ್ತಾ, ಅವರನ್ನೆಲ್ಲ ಸಂಹರಿಸಿದನು. ಅಗ್ನಿಯನ್ನು ಹೊಕ್ಕ ಶಲಭಗಳಂತೆ, ಕ್ಷಣದಲ್ಲಿ ನಷ್ಟರಾದ ವೀರರನ್ನು ಕಂಡು ಕುಪಿತರಾಗಿ, ಸತ್ಯಸೇನಾದಿ ಮಹಾರಥರು ಪಾರ್ಥನನ್ನು ಮುತ್ತಿ, ಬಾಣವರ್ಷದಲ್ಲಿ ಅವನ ರಥವನ್ನು ಮುಣುಗಿಸಿದರು.

ಸತ್ಯಸೇನನು ಮೂರು ಶರಗಳನ್ನು, ಮಿತ್ರದೇವನು ಅರವತ್ತುಮೂರು ಬಾಣಗಳನ್ನು, ಚಂದ್ರದೇವನು ಎಪ್ಪತ್ತು ನಾರಾಚಗಳನ್ನು, ಶತ್ರುಂಜಯನು ಇಪ್ಪತ್ತು ಕಾಂಡಗಳನ್ನು, ಚಿತ್ರವರ್ಮನು ಎಪ್ಪತ್ತುಮೂರು ಪೃಷತ್ಕಗಳನ್ನು, ಸೌಶ್ರುತಿ ಸುಶ್ರುತನ ಮಗನಾದ ಚಿತ್ರಸೇನನು ಎಪ್ಪತ್ತು ನಿಶಿತ ಭಲ್ಲಗಳನ್ನು ಪ್ರಯೋಗಿಸಿದರು. ಅರ್ಜುನನು ಅವರ ಬಾಣಗಳನ್ನು ಖಂಡಿಸಿ, ಸತ್ಯಸೇನನನ್ನು ಮೂರರಿಂದಲು, ಚಂದ್ರದೇವನನ್ನು ಎಂಟು ಬಾಣಗಳಿಂದಲು, ಮಿತ್ರದೇವನನ್ನು ಮೂರು ಶರಗಳಿಂದಲು, ಚಿತ್ರಸೇನನನ್ನು ಏಳು ಬಾಣಗಳಿಂದಲು, ಶತ್ರುಂಜಯನನ್ನು ಇಪ್ಪತ್ತರಿಂದಲು, ಚಿತ್ರವರ್ಮನನ್ನು ಒಂಭತ್ತರಿಂದಲು

ಪೀಡಿಸಿ, ಅವರ ನಾಯಕನಾದ ಸುಶರ್ಮನ ವುರ್ಮದಲ್ಲಿ ಎಂಟು ಬಾಣಗಳನ್ನು ನಾಟಿಸಿದನು. ಸೌಶ್ರುತಿಯ ಶಿರಸ್ತ್ರಾಣಸಹಿತವಾದ ಶಿರವನ್ನು ಕೆಡಹಿ, ಉತ್ತರಕ್ಷಣದಲ್ಲಿ ಪಾರ್ಥನು ಚಂದ್ರದೇವನನ್ನೂ ಅವನ ಜತೆಗೆ ಯಮಸದನಕ್ಕಟ್ಟಿದನು.

ಸತ್ಯಸೇನನು ಕ್ರುದ್ಧನಾಗಿ ತೋಮರವನ್ನೆತ್ತಿ, ಶ್ರೀಕೃಷ್ಣನಿಗೆ ಗುರುಯಿಟ್ಟು ಹೊಡೆದು ಸಿಂಹನಾದಮಾಡಿದನು. ಅಯಸ್ಮಯವು ಹೇಮದಂಡವು ಆದ ದಿವ್ಯತೋಮರವು ಮಾಧವನ ಭುಜಕ್ಕೆ ಸೋಕಿ, ಕೆಳಗೆ ಬಿತ್ತು. ಅವನ ಪರಾಕ್ರಮವನ್ನು ತೋರಲೆಂಬಂತೆ ನಟಿಸುವ ಶ್ರೀಕೃಷ್ಣನು ಕೈಯಿಂದ ತೋತ್ರಹಯಸೂತ್ರಗಳು ಜಾರಿ ಬೀಳಿಸಿ, ಮತ್ತೆ ಅವನೆತ್ತಿ ಅರ್ಜುನನನ್ನು ನೋಡಿದನು. ಶ್ರೀಕೃಷ್ಣನನ್ನು ಹೊಡೆದ ಸತ್ಯಸೇನನನ್ನು ಉಳಿಸಬಾರದೆಂದು ನಿಶ್ಚಯಿಸಿ, ಅರ್ಜುನನು 'ಶ್ರೀಕೃಷ್ಣ! ಈ ಪಾಪಿಯನ್ನು ಕೊಲ್ಲದೆ ಬಿಡೆನು. ಹೊಡೆ ರಥವನ್ನವನೆಡೆಗೆ!' ಎಂದನು. ಅಂತೆಯೇ ಶ್ರೀಕೃಷ್ಣನು ರಥವನ್ನು ಸತ್ಯಸೇನನ ಮುಂದೆ ತಂದು ನಿಲ್ಲಿಸಿದನು. ಕುಪಿತನಾದ ಅರ್ಜುನನು ನಿಶಿತಶರಗಳಿಂದ ಸತ್ಯಸೇನನ ಗಾತ್ರವನ್ನು ಜರ್ಜರೀಕೃತವನ್ನಾಗಿಸಿ, ಭಲ್ಲರಿಂದ ಅವನ ಶಿರವನ್ನು ಕಡಿದು ಕೆಡಹಿದನು. ಆಗ ಚಿತ್ರವರ್ಮನು ಬಂದು ಮುತ್ತಲು, ಅರ್ಜುನನು ವತ್ಸದಂತಬಾಣದಿಂದ ಅವನ ಸಾರಥಿಯನ್ನು ಪೀಡಿಸಿ, ಶರಶತದಿಂದ ಸುತ್ತುಗಟ್ಟಿ ಬರುವ ಸಂಸಪ್ತಕ ವೀರರನ್ನು ಸಂಹರಿಸಿ, ರಜತಪುಂಖವಾದ ಕ್ಷುರಪ್ರದಿಂದ ಚಿತ್ರವರ್ಮನ ಕುಂಡಲಾಲಂಕೃತ ಶಿರವನ್ನು ಖಂಡಿಸಿದನು.

ಸುಶರ್ಮನೆದುರಿಸಿ ನಿಲ್ಲಲು, ಅರ್ಜುನನು ಅರವತ್ತು ಬಾಣಗಳಿಂದ ಅವನನ್ನು ಜತ್ರುದೇಶದಲ್ಲಿ ಪೀಡಿಸಿದನು. ಅದನ್ನು ಕಂಡು ಕ್ರುದ್ಧರಾದ ಸಂಸಪ್ತಕ ವೀರರು ಶಸ್ತ್ರಾಳಿಯನ್ನು ಸುರಿಸಿ, ಅರ್ಜುನನನ್ನು ಮುತ್ತಿದರು. ಅವರ ಸಿಂಹನಾದದಿಂದ ದಶದಿಕ್ಕುಗಳೂ ಮಾರ್ದನಿಗೈದವು. ಇಂದ್ರನಂದನನು ಐಂದ್ರಾಸ್ತ್ರವನ್ನು ಪ್ರಯೋಗಿಸಲು, ದಿಕ್ಕುಗಳೆಲ್ಲ ಅವನ ಶರಸಹಸ್ರಗಳಿಂದ ತುಂಬಿದವು. ಆಗ ಧ್ವಜಗಳು ಕಡಿದುಬಿದ್ದವು; ಧನುಸ್ಸುಗಳು ತುಂಡಾದವು; ಜ್ಯಾಲತೆಗಳು ಕಡಿದವು; ರಥಗಳು ಚೂರಾದವು; ತೂಣೀರಗಳು ತುಂಡಾದವು; ನೊಗೆಗಳು ಮುರಿದುಬಿದ್ದವು; ಚಕ್ರಗಳು ಚಿಕ್ಕೆ ಚೂರಾದವು; ಕಾಂಡಗಳು ಎರಡು ತುಂಡಾದವು; ಕೂಬರಗಳು ಕುಸಿದವು; ವರೂಥಗಳು ಧ್ವಸ್ತವಾದವು; ಪ್ರಾಸ, ಮುಷ್ಟಿಕ, ಮೃಷ್ಟಿ, ಗದಾ, ಪರಿಘ, ಶಕ್ತಿ, ತೋಮರ, ಪಟ್ಟಿಶ, ಪರಿಘ, ಖಡ್ಗಾದಿ ವಿವಿಧಾಯುಧಗಳನ್ನುಪಿಡಿದಿದ್ದ ಹಸ್ತಗಳು ಕಡಿದು ನೆಲದಿ ಬಿದ್ದವು. ಹಾರಕೇಯೂರಾಂಗದ ವಲಯ ಕವಚ, ಛತ್ರ, ಪತಾಕೆಗಳು ರಣಾಂಗಣದಲ್ಲಿ ಚೆಲ್ಲಾಪಿಲ್ಲಿಯಾಗಿ ಹರಡಿದವು. ಹಸ್ತಿ ತುರಗ, ಭಟರು ನೆಲಕ್ಕೆ ಬೀಳುವ ಮಹಾಶಬ್ದಗಳು ಕಡುಭೀಕರವಾಗಿದ್ದವು. ಅಂಬರದಿ ತಾರಾ ಜಾಲದಂತೆ ರಣರಂಗದಿ ಕುಂಡಲಾಲಂಕೃತ ಶಿರೋನಿವಹವು ಮಿನುಗುತ್ತಿತ್ತು. ಆನೆಗಳು ಬೆಟ್ಟಗಳಂತೆ ಬಿದ್ದಿದ್ದವು; ಅಲ್ಲಿಂದ ಹರಿದು ಬರುವ ರಕ್ತ ನದಿಗೆ ಸತ್ತ ಕುದುರೆಗಳು ತೀರಗಳಂತಿರಲು, ತೇಲಿಹೋಗುವ ನರಶರೀರಗಳು ವೈತರಣಿಯನ್ನು ದಾಟಲಾಗದ ಪಾಪಿಗಳಂತೆ ಕಾಣಬಂದವು. ರಕ್ತಪಂಕದಲ್ಲಿ ನಡೆವ ಅರ್ಜುನರಥವನ್ನು ಶ್ವೇತವಾಹಗಳು ಕಷ್ಟದಿಂದ ಸೆಳೆದುಕೊಂಡು ಹೋಗುತ್ತಿದ್ದವು. ಇಂತು ಸಂಸಪ್ತ ಕಗಣವನ್ನು

ಗೆದ್ದು ಅರ್ಜುನನು, ವಿಧೂಮನಾದ ಪಾವಕನಂತೆ, ವಿರಾಜಿಸಿದನು. ಮಧ್ಯಂದಿನ ಸೂರ್ಯನಂತೆ ಬೆಳಗುವ ಪಾರ್ಥನನ್ನು ಶತ್ರುವೀರರು ಕಣ್ಣೆತ್ತಿ ನೋಡಲಾರದೆ ಹೋದರು.

ಮಹಾರಾಜ ! ಬಹುಶರವರ್ಷದಿಂದ ಕುರುಸೇನೆಯನ್ನು ನಾಶಪಡಿಸುವ ಧರ್ಮರಾಜನನ್ನು ದುರ್ಯೋಧನನು ಮುತ್ತಿ, ಅಭೀತನಾಗಿ ಕಾದಾಡಿದನು. ಮೇಲೆರಗುವ ದುರ್ಯೋಧನನ ಆರ್ಭಟವನ್ನು ತಡೆದು ಧರ್ಮರಾಜನು 'ನಿಲ್ಲು! ನಿಲ್ಲು!' ಎಂದು ಅವನನ್ನು ಒಂಬತ್ತು ಬಾಣಗಳಿಂದ ಪೀಡಿಸಿ, ಅವನ ಸಾರಥಿಯನ್ನು ಭಲ್ಲದಿಂದ ಗಾಯಪಡಿಸಿದನು. ದುರ್ಯೋಧನನು ಒಂಭತು ಶರಗಳಿಂದ ಹೊಡೆಯಲು, ಧರ್ಮರಾಜನು ಹದಿಮೂರು ಶಿಲೀಮುಖಗಳನ್ನು ಕುರುರಾಜನ ಗಾತ್ರದಲ್ಲಿ ನಾಟಿಸಿ, ನಾಲ್ಕು ಬಾಣಗಳಿಂದ ಅವನ ಕುದುರೆಗಳನ್ನು ಕೆಡಹಿ, ಒಂದರಿಂದ ಅವನ ಸೂತನನ್ನು ಸಂಹರಿಸಿದನು. ಅಲ್ಲಿಗೆ ನಿಲ್ಲದೆ ಧರ್ಮರಾಜನು ದುರ್ಯೋಧನನ ಧ್ವಜವನ್ನು ಒಂದು ಶರದಿಂದ ಕೆಡಹಿ, ಒಂದರಿಂದ ಅವನ ಧನುವನ್ನು ಮುರಿದನು. ಖಡ್ಗವನ್ನೆತ್ತಲು ಅದನ್ನೂ ಖಂಡಿಸಿದನು; ಐದು ಬಾಣಗಳಿಂದ ಅವನನ್ನು ಪೀಡಿಸಿದನು. ಆಗ ಕೌರವೇಶನು ವಿರಥನು, ವ್ಯಾಯುಧನು ಆಗಿ ರಥದಿಂದಿಳಿದು ಭೂತಲದಲ್ಲಿ ನಿಂತನು. ವ್ಯಸನವಶನಾದ ಮಹಾರಾಜನನ್ನು ಕರ್ಣದ್ರೌಣಿಕೃಪಾದಿ ವೀರರು ಸುತ್ತುವರಿಸಿ, ಧರ್ಮಜನಿಂದ ಕಾಪಾಡಿದರು. ಪಾಂಡವವೀರರೂ ಧರ್ಮರಾಜನ ನೆರವಿಗೆ ಬಂದರು. ಮಹಾಯುದ್ಧವು ಆರಂಭಿಸಿತು.

ಸಾವಿರಾರು ತೂರ್ಯಗಳು, ನೂರಾರು ದುಂದುಭಿಗಳು ಮೊಳಗಿದವು. ಉಭಯ ಸೇನೆಗಳ ಕೋಲಾಹಲವು ಮುಗಿಲನ್ನು ಮುಟ್ಟಿತು. ನರರು ನರರನ್ನು ವಾರಣ ಯೋಧರು ವಾರಣ ಯೋಧರನ್ನು, ರಥಿಕರು ರಥಿಕರನ್ನು, ಸಾದಿಗಳು ಹಯಸಾದಿಗಳನ್ನು ತಾಕಿ ದ್ವಂದ್ವ ಯುದ್ಧನಿರತರಾದರು. ಶಸ್ತ್ರಾಸ್ತ್ರವಿದ್ಯಾಚತುರರಾದ ವೀರದ್ವಯಗಳ ರಣವಿಹಾರವು ಪ್ರೇಕ್ಷಣೀಯವಾಗಿತ್ತು. ಚಿತ್ರಯುದ್ಧ ನಿಪುಣರ ಬಾಣಪ್ರಯೋಗವು ಆಶ್ಚರ್ಯಕರವಾಗಿತ್ತು. ಪರಸ್ಪರ ವಧೈಷಿಗಳಾಗಿ ಅವರು ಬಿಡುವ ಶರ ಸಮೂಹದಿಂದ ಅಂಬರವು ತುಂಬಿತು. ಕಠೋರ ನಿಯಮದಿಂದ ಗಂಡುಗಲಿಗಳು ನ್ಯಾಯಯುದ್ಧವನ್ನು ಮಾಡಿ ಪ್ರತಿವೀರರನ್ನು ಸಂಹರಿಸಿ, ತಾವೂ ಪ್ರತಿವೀರರಿಂದ ಸತ್ತು ವೀರಸ್ವರ್ಗವನ್ನೈದಿದರು.

ಒಂದೆರಡು ಕ್ಷಣಕಾಲ ಮಧುರದರ್ಶನವಾಗಿದ್ದ ಯುದ್ಧವು ಬರುಬರುತ್ತಾ ಕೆಚ್ಚಿನ ಭರದಲ್ಲಿ ಹುಚ್ಚೆದ್ದ ವೀರರಿಂದ ನಿರ್ಮರ್ಯಾದವಾಯಿತು. ರಥಿಕನು ಆನೆ ಸವಾರನನ್ನು ಮುತ್ತಿ, ಸೊಂಡಿಲಪಾದಾದಿಗಳನ್ನು ಕಡಿದು, ಆನೆಯನ್ನು ಕೆಡಹಿ, ಕೆಳಗಿಳಿವ ಶತ್ರುವೀರನ ಶಿರವನ್ನು ಶರನಿವಹದಿಂದ ಖಂಡಿಸಿದನು. ಆನೆಗಳು ಕುದುರೆಗಳನ್ನು ತುಳಿದು, ಭಟರನ್ನು ಎತ್ತೊಗೆದು ಸಂಹರಿಸಿದವು. ಹಾ! ಹಾ! ಕಾರಗಳಿಂದ ರಣರಂಗವು ತುಂಬಿಹೋಯಿತು. ಹಯಾರೋಹರು ಆನೆಗಳ ಕುಂಭಸ್ಥಲದಿ ಕುದುರೆಯನ್ನೇರಿಸಿ, ಮೇಲಿದ್ದ ಮಾವಟಗನನ್ನು ಕೆಡಹಿ, ಯೋಧರಿಂದ ಕಾದಾಡುತ್ತಿದ್ದರು. ಯೋಧರಿಲ್ಲದೆ ಓಡುವ ಗಜತುರಗಗಳನ್ನು ಬಗಲಿಂದ ತಿವಿದು ಭಟರು ನಾಶಪಡಿಸಿದರು. ಗಜಗಳು ದಂತಗಳಿಂದ ತಿವಿದು, ಕಾಲಿಂದ ತುಳಿದು ಆಶ್ವಿಕರನ್ನೂ, ಕಾಲ್ಬಟರನ್ನೂ ಕೊಂದವು. ಮದದಿಂದ ಕಾಣದೆ, ರೋಷದಿಂದ

ಸಲೆರೇಗಿ ಭದ್ರಗಜಗಳು ಅಶ್ವಗಳನ್ನು ಸಾದಿಗಳಿಂದ ಸಹಿತವಾಗಿ ಹಿಡಿದು, ಮೇಲಕ್ಕೆತ್ತಿ ಕೆಡಹಿದವು. ಪದಾತಿಗಳು ಮರ್ಮಗಳಲ್ಲಿ ಶೂಲಪ್ರಾಸಗಳಿಂದ ತಿವಿದಾಗ, ವೇದನಾವಿವಶವಾದ ವೇದಂಡತಂಡವು ಆರ್ತವಾಗಿ ಗೀಳಿಡುತ್ತಾ, ಮಾವಟಿಗನ ಅಂಕುಶವನ್ನು ಲಕ್ಷಿಸದೆ ದಿಕ್ಕಾಪಾಲಾಗಿ ಓಡಿತು.

ಹಸ್ತಿಯೋಧರು ತಾವು ಜಯಿಸಿದ ರಥಿಕಭಟಸಾದಿಗಳು ಗಾಯಪಟ್ಟು ನೆಲದಲ್ಲಿ ಬಿದ್ದು ನರಳುತ್ತಿರಲು, ತಮ್ಮ ಆನೆಗಳಿಂದ ಅವರನ್ನು ತುಳಿಸಿ ಕೊಂದು, ಆನೆಗಳನ್ನು ಬಾಗಿಸಿ ಮೃತಭಟರ ಆಭರಣಾದಿಗಳನ್ನು ಅವು ಎತ್ತಿಕೊಡುವಂತೆ ಪ್ರೇರಿಸಿದರು. ಅಂತು ಆಭರಣಸಂಗ್ರಹವನ್ನು ಮಾಡುವ ಹಸ್ತ್ಯಾರೋಹರನ್ನು ಮಹಾವೇಗದಿಂದ ಮುತ್ತಿ, ಬಲೋತ್ಕಟರಾದ ಭಟರು, ಅವರನ್ನು ಯಮಪುರಿಗೆ ಕಳಿಸಿ, ತದಾಭರಣಗಳನ್ನು ಸ್ವೀಕರಿಸಿದರು. ಹಸ್ತಿಹಸ್ತವಿಕ್ಷಿಪ್ತರಾಗಿ ಆಕಾಶದಿಂದ ಕೆಳಗೆ ಬೀಳುವ ಸೈನಿಕರನ್ನು ಸುಶಿಕ್ಷಿತ ಮದಗಜಗಳು ವಿಷಾಣದಿಂದ ತಿವಿದು ಕೊಂದವು. ಮಹಾ ಗಜಗಳು ಭಟರನ್ನು ಪಿಡಿದು, ಬಿಡದೆ, ವ್ಯಜನವನ್ನಂತೆ ಗಿರಗಿರ ತಿರುಗಿಸಿ ಕೆಡಹಿದವು. ಭಟರು ಪ್ರಾಸತೋಮರಕುಂತಖಡ್ಗಗಳಿಂದ ತಿವಿದು ಆನೆಗಳನ್ನು ಬೆಟ್ಟಗಳ ಸಾಲೆಂಬಂತೆ ರಣರಂಗದಲ್ಲಿ ಕೊಂದು ಮಲಗಿಸಿದರು. ಆನೆ ಕುದುರೆಗಳು ಸಂಹೃತವಾಗಿ ಬಿದ್ದಾಗ ಪದಾತಿಗಳು ಅವುಗಳ ಕೆಳಗೆ ಸಿಕ್ಕು ಸತ್ತರು. ಕೆಲವರು ಭಟರು ಮೃತರಾಗಿದ್ದ ಅಶ್ವಗಜಯೋಧರನ್ನೂ ಸೇರಿ, ಅವರ ಕರಕರ್ಣಪಾದಾದಿಗಳನ್ನು ಕಡಿದು, ವಿವಿಧ ವಿಚಿತ್ರರತ್ನಾಭರಣಗಳನ್ನು ಶೇಖರಿಸಿದರು.

ವಜ್ರಾಹತಪರ್ವತಗಳಂತೆ ಮಾತಂಗಸಹಸ್ರವು ರಣರಂಗದಲ್ಲಿ ಹರಡಿ ಬಿತ್ತು. ಭಟರು ಪ್ರತಿಭಟರೊಡನೆ ಬಾಹಾಬಾಹವಿಯಾಗಿ ಕಡಿದಾಡಿ, ಅವರನ್ನು ನೆಲದಿ ಕೆಡಹಿ, ಎದೆ ತುಳಿದು, ಶಿರವನ್ನು ಕತ್ತರಿಸಿದರು. ಓಡುವ ಹೇಡಿಗಳ ಕಾಲನ್ನು ಕಡಿದರು; ಜೀವಭಯದಿಂದ ಯಾಚಿಸುವ ಸೈನಿಕರನ್ನು ಬಿಡದೆ, ಖಡ್ಗದಿಂದ ತಿವಿದು, ಯಮಪುರಿಗೆ ಕಳಿಸಿದರು. ಮುಷ್ಟಿಯುದ್ಧವೂ ಕಡುಘೋರವಾಯಿತು: ತಲಶಬ್ದ ಮುಷ್ಟಿಘಾತ ಶಬ್ದಗಳಿಂದ ಪ್ರಾರಂಭವಾದ ಕದನವು ಶರೀರಪಾತಶಬ್ದದಿಂದಲೇ ಮುಗಿಯುತ್ತಿತ್ತು. ಕೇಶಾಕೇಶಿ, ಬಾಹಾಬಾಹವಿ, ಮುಷ್ಟಾಮುಷ್ಟಿಯಾಗಿ ಬಾಹುಯುದ್ಧವು ಭೈರವಸಿಂಹನಾದಗಳಿಂದ ತೀವ್ರವಾದಾಗ ಕಾರಭೈರವನೂ ಭಲೇ! ಎಂಬಂತಿತ್ತು. ಒಬ್ಬನೊಡನೆ ಕಾದುವ ಭಟನನ್ನು ಮತ್ತೊಬ್ಬನು ಹಠಾತ್ತಾಗಿ ತಿವಿದು ಕೊಂದನು. ತಲೆಗಳಿಲ್ಲದ ಕಬಂಧಗಳು ಪೂರ್ವ ರಭಸದಿಂದ ಮುಂದೆ ಸಾಗಿ ತಲೆಗಳಿಗೆ ದೂರವಾಗಿ ಬೀಳುತ್ತಿದ್ದವು. ಶಸ್ತ್ರಕವಚಾದಿಗಳು ರಕ್ತದಿಂದ ತೊಯ್ದು, ಎಲ್ಲ ಬಣ್ಣಗಳೂ ಕೆಟ್ಟು, ಕೆಂಪಾದವು; ಸೈನಿಕರ ಬಟ್ಟೆಗಳು ರಕ್ತದಲ್ಲಿ ನೆಂದು, ಜೊತ್ತಿಡುತ್ತಿದ್ದವು. ಶಸ್ತ್ರಸಂಘಾತದ ಚಟಚಟಾತ್ಕಾರವು ಉಕ್ಕೇರಿ ಬಂದ ಗಂಗೆಯ ಮೊರಹಿನಂತೆ, ಜಗದಲ್ಲಿ ವ್ಯಾಪಿಸಿತು.

ಸ್ವಪರಕೀಯ ವಿವೇಕವಿಲ್ಲದೆ ಸೈನಿಕರು ಸಂಹಾರಕಾರ್ಯಕಠೋರರಾದರು. ಜಯಾಕಾಂಕ್ಷಿಗಳಾಗಿ ರಾಜರು ಜೀವನ ಮರಣಗಳನ್ನು ಸಮವೆಂದು ತಿಳಿದು, ಸಾಹಸದಿಂದ ವಿಕ್ರಮಿಸಿ ಚೆಂಡಾಡುವಾಗ ಸೈನಿಕಕುಲವು ವ್ಯಾಕುಲವಾಯಿತು. ಕ್ಷಣದಲ್ಲಿ ರಣಭೂಮಿಯು

ಭಗ್ನರಥಗಳಿಂದಲು, ಪ್ರಭಿನ್ನಕರಿನಿವಹದಿಂದಲು, ಛಿನ್ನಾಶ್ವನಿಕರದಿಂದಲು, ಮೃತಭಟಕೋಟಿಯಿಂದಲು ಆಕ್ರಾಂತವಾಯಿತು. ಪಾಂಚಾಲಸೇನೆಯನ್ನು ಸಂಹರಿಸುವ ಕರ್ಣನೂ, ತ್ರಿಗರ್ತಸೇನೆಯನ್ನು ಮಟ್ಟಿಕ್ಕುವ ಪಾರ್ಥನೂ, ಪ್ರಾವೃಟ್ಪಯೋದದ್ವಯದಂತೆ ಬಾಣವರ್ಷವನ್ನು ಸುರಿಸಲು, ರಣರಂಗವು ರಕ್ತನದೀ ಮಯವಾಯಿತು. ಭೀಮಸೇನನೂ ಭೀಕರ ರಣನಿರತನಾಗಿ ಕುರುವೀರರನ್ನೂ, ಅವರ ಗಜಘಟೆಯನ್ನೂ ನಾಶಪಡಿಸಿದನು. ಯಶೋಽರ್ಥಿಗಳಾಗಿ ಕಾದಾಡುವ ಕುರು ಪಾಂಡವ ವೀರರಿಂದ ಆದ ಜನಕ್ಷಯವು ವಿಪುಲವೂ ವಿಷಾದಕರವೂ ಆಗಿತ್ತು. ಆಗ ಅಪರಾಹ್ಣವಾಯಿತು."

ಸಂಜಯನ ವರ್ಣನವನ್ನು ಕೇಳಿ, ದುಃಖಿತನಾದ ಧೃತರಾಷ್ಟ್ರನು ಇಂತೆಂದನು: 'ಸಂಜಯ ! ನಿನ್ನ ವದನದಿಂದ ಬಂದ ಕುರುವೀರರ ವಿನಾಶವನ್ನೂ, ಪುತ್ರರ ಪರಾಜಯವನ್ನೂ ಕೇಳಿ ತೀವ್ರ ದುಃಖವಶನಾಗಿರುವೆನು. ಯುದ್ಧಗತಿಯನ್ನು ಆಲೋಚಿಸಿದಂತೆ, ನನ್ನವರ ಕೆಲಸ ಮುಗಿಯಿತು. ಪಾಂಡವರ ಗೆಲುವು ನಿಶ್ಚಿತವಾದಂತೆ ಸರಿ! ಎಂದು ತೋರುತ್ತಿದೆ. ಧರ್ಮಪುತ್ರನು ಕೂಡ ದುರ್ಯೋಧನನನ್ನು ವಿರಥನನ್ನಾಗಿಸಿ ಸೋಲಿಸಿದನೆಂದರೆ ಆಶ್ಚರ್ಯವಾಗಿದೆ. ಪಾಂಡವರೈವರಲ್ಲಿ ಪ್ರತಿಯೊಬ್ಬನೂ ದುರ್ಯೋಧನನನ್ನು ಕೊಲ್ಲಬಲ್ಲನೆಂದು ತಿಳಿದು ಭಯವಾಗಿದೆ. ಅಪರಾಹ್ಣದಲ್ಲಿ ನಡೆದ ರಣರಂಗ ವಾರ್ತೆಯನ್ನು ಹೇಳು, ಸ್ಥಿರನಾಗಿ ಕೇಳುವೆನು.'

ಸಂಜಯನು ವರ್ಣಿಸಿದನು: 'ರಾಜನ್ ! ಉಭಯಸೇನೆಗಳೂ ಭಯದ ಸಂಗ್ರಾಮನಿರತರಾದರು. ನಿನ್ನ ಮಗನು ಧರ್ಮನಿಗೆ ಸೋತು, ದಂಡತಾಡಿತ ಭುಜಂಗದಂತಾದನು. ಬೇರೊಂದು ರಥವನ್ನೇರಿ, ದುರ್ಯೋಧನನು ರೋಷವಿಷದಿಂದ ತಂಬಿ, ಧರ್ಮರಾಜನ ರಥವನ್ನು ಉಪಲಕ್ಷಿಸಿ, 'ಸೂತ ! ನಡೆ ಧರ್ಮರಾಜನಲ್ಲಿಗೆ !' ಎಂದನು. ಧರ್ಮರಾಜನು ಕನಕಕವಚಾವೃತನಾಗಿ ಕನಕರಥದಲ್ಲಿ ಕಾಲ ಭಾನುವಿನಂತೆ ಕಂಗೊಳಿಸುತ್ತಿದ್ದನು. ಆತನ ರಥದ ಮೇಲೆ ದಿವ್ಯಶ್ವೇತಚ್ಛತ್ರವು ಚಂದ್ರಮನಂತೆ ವಿರಾಜಿಸಿತ್ತು. ದುರ್ಯೋಧನನ ರಥವೂ ಶ್ವೇತಚ್ಛತ್ರಸಮಲಂಕೃತವು, ದಿವ್ಯಾಶ್ವಯುಕ್ತವು ಆಗಿತ್ತು. ಸೂತನು ಮಹಾರಾಜನ ಅಪ್ಪಣೆಯಂತೆ, ಅವನ ರಥವನ್ನು ಧರ್ಮರಾಜನ ರಥದ ಸಮ್ಮುಖದಲ್ಲಿ ನಿಲ್ಲಿಸಿದನು. ಧರ್ಮರಾಜನು ಅದನ್ನು ಕಂಡು, ಕುಪಿತನಾಗಿ ತನ್ನ ಸೂತನನ್ನು 'ಸುಯೋಧನನಿಗೆ ಸುಮ್ಮುಖವಾಗಿ ರಥವನ್ನು ನಿಲ್ಲಿಸೆಂ'ದನು. ಮಹಾರಾಜರಿಬ್ಬರು ಯುದ್ಧಸಂರಂಭದಿಂದ, ಕಲೆತಾಗ, ಸೋದರರೀರ್ವರ ಕದನವನ್ನೀಕ್ಷಿಸುವ ಕುತೂಹಲದಿಂದ ಸೈನಿಕರು ನಿಶ್ಚೇಷ್ಟರಾಗಿ ನಿಂತರು.

ಶರವರ್ಷವನ್ನು ಸುರಿವ ಮೇಘಗಳಂತೆ ಪರಸ್ಪರ ರಥಗಿರಿಗಳನ್ನು ಮುಚ್ಚುವ ಮಹಾರಥರ ರಣವು ದಾರುಣವಾಯಿತು. ದುರ್ಯೋಧನನು ಧರ್ಮಶೀಲನಾದ ಯುಧಿಷ್ಠಿರನ ಧನುವನ್ನು ಭಲ್ಲದಿಂದ ಮುರಿದನು. ಆದ ಅಪಮಾನವನ್ನು ಸಹಿಸದೆ ಧರ್ಮರಾಜನು ಆ ಧನುವನ್ನು ಬಿಸಾಟಿ, ಕೆಂಗಣ್ಣನಾಗಿ ಮತ್ತೊಂದು ಧನುವನ್ನೆತ್ತಿ ದುರ್ಯೋಧನನ ಧ್ವಜವನ್ನು ಕೆಡಹಿ, ಧನುವನ್ನು ಖಂಡಿಸಿದನು. ಅವನು ಮತ್ತೊಂದು ಧನುವನ್ನು ಪಿಡಿದು ಧರ್ಮಜನನ್ನು ಶರಶತದಿಂದ ಪೀಡಿಸಿದನು. ಪರಸ್ಪರ

ಜಯಾಕಾಂಕ್ಷಿಗಳಾಗಿ ಧರ್ಮದುರ್ಯೋಧನರು ಸಂಕ್ರುದ್ಧಸಿಂಹದ್ವಯದಂತೆ ಕಡಿದಾಡಿದರು. ವೃಷಭಗಳಂತೆ ಘೂರ್ಣಿಸುತ್ತಾ, ಅವರೀರ್ವರು ಆಕರ್ಣಾಂತವಾಗಿ ಸೆಳೆದು ಬಿಡುವ ಬಾಣಗಳಿಂದ ಪೀಡಿತವಾಗಿ ಮೈಗಳಿಂದ ಕಾರುವ ರಕ್ತಸ್ರೋತಗಳಿಂದ ಪುಷ್ಪಿತಕಿಂಶುಕಗಳಂತೆ ವಿರಾಜಿಸಿದರು. ಸಿಂಹನಾದಮಾಡಿ ಶಂಖವನ್ನೂದಿ, ಧನುಷ್ಟಂಕಾರವು ನಿರಂತರವಾಗಿರಲು ನರೇಶರೀರ್ವರು ಶರಪೀಡಿತರಾಗಿದ್ದರೂ ಬಿಡದೆ ಕಡಿದಾಡಿದರು.

ಧರ್ಮರಾಜನು ವಜ್ರಸಮವೇಗವಾಗ ಮೂರು ಶರಗಳಿಂದ ನಿನ್ನ ಸುತನ ಎದೆಗೆ ಗುರಿಯಿಟ್ಟು ಹೊಡೆದನು. ನಿನ್ನ ಪುತ್ರನೂ ಪ್ರತಿಶರಗಳೈದರಿಂದ ಅವನನ್ನು ಪೀಡಿಸಿದನು; ಮತ್ತು ಶಕ್ತಿಯನ್ನೆತ್ತಿ ಅವನ ಮೇಲೆಸೆದನು. ಮಹೋಲ್ಕೆಯಂತೆ ಬರುವ ಪಾರಸವೀ ಶಕ್ತಿಯನ್ನೆತ್ತಿ ಧರ್ಮಜನು ಮೂರು ಶರಗಳಿಂದ ಮೂರಾಗಿ ತುಂಡರಿಸಿ, ಮತ್ತೈದು ಬಾಣಗಳಿಂದ ಕುರುರಾಜನನ್ನು ಪೀಡಿಸಿದನು. ಸ್ವರ್ಣದಂಡವಾದ ಮಹಾಶಕ್ತಿಯು ವ್ಯರ್ಥವಾದುದನ್ನು ಕಂಡು ಕೆಂಡವಾಗಿ ನಿನ್ನ ಸುತನು ನವಬಾಣಗಳಿಂದ ಯಮಸುತನನ್ನು ಪೀಡಿಸಿ, ಗರ್ಜಿಸಿದನು. ಧರ್ಮರಾಜನು ಪ್ರಾಣಾಂತಕರವಾದ ನಿಶಿತ ಶರವನ್ನೆತ್ತಿ, ಗುರಿಯಿಟ್ಟು, ಹೊಡೆಯಲು, ದುರ್ಯೋಧನನು ಮೂರ್ಛೆಗೊಳಗಾಗಿ ಮತ್ತೆ ಎಚ್ಚತ್ತು ಸಿಟ್ಟಿನಿಂದ ಗದೆಯನ್ನೆತ್ತಿ ಯುದ್ಧದ ಕೊನೆಯನ್ನು ಕಾಣಿಸುವೆನೆಂದು, ಧರ್ಮರಾಜನ ಮೇಲೇರಿ ಬಂದನು. ದಂಡಹಸ್ತನಾಗಿ ಬರುವ ಕಾಲಾಂತಕನಂತೆ ಬರುವ ದುರ್ಯೋಧನನನ್ನು ಕಂಡು ಯುಧಿಷ್ಠಿರನು ಮಹೋಲ್ಕೆಯಂತೆ ಉರಿವ ಶಕ್ತಿಯನ್ನೆತ್ತಿ ಹೊಡೆದನು. ಸ್ತನಾಂತರದಲ್ಲಿ ಬಿದ್ದ ಶಕ್ತಿಯಿಂದ ದುರ್ಯೋಧನನು ನಿಸ್ಸತ್ವನಾಗಿ ಕೆಳಗೆ ಬಿದ್ದನು. ಆಗ ಗದಾಪಾಣಿಯಾಗಿ ಅಣ್ಣನಿಗೆ ನೆರವಾಗಲು ಬಂದ ಭೀಮಸೇನನು 'ಅಣ್ಣ! ಅವನನ್ನು ವಧಿಸಬೇಡ! ನನ್ನ ಪ್ರತಿಜ್ಞೆಯನ್ನು ನೆನೆದು ಹಿಂದಿರುಗು! ಈ ಕೌರವ ಪಶುವು ನನ್ನ ಗದೆಗೆ ಬಲಿಯಾಗಬೇಕಾಗಿದೆ' ಎಂದು ವಾರಿಸಿದನು. ಆಗ ಕೃತವರ್ಮನು ಸರಸರನೆ ಬಂದು ಸುಯೋಧನನನ್ನೆತ್ತಿ ತನ್ನ ರಥದಲ್ಲಿಟ್ಟು ಹೊರಟನು. ಭೀಮಸೇನನು ಗದಾ ಪಾಣಿಯಾಗಿ, ಕೃತವರ್ಮನ ಬೆನ್ನಟ್ಟಿ ನಡೆದನು; ಕೃತವರ್ಮನು ಭೀತನಾಗಿ ಓಡಿದನು.

ಕರ್ಣನು ತನ್ನ ಸಹಾಯಕ್ಕೆಂದು ಬಂದ ಕೌರವ ರಥಿಕರೊಡನೆ ಮತ್ತೆ ಪಾಂಡವಸೇನೆಯನ್ನು ಮುತ್ತಿದನು. ದೇವಾಸುರ ಸಂಗ್ರಾಮದಂತೆ ಭಯಂಕರವಾಯಿತು ಕುರುಪಾಂಡವ ಕದನ. ದ್ವಿರದ, ನರ, ರಥಿಕ, ಸಾದಿಯೋಧರು ಪರಿಕುಪಿತರಾಗಿ ದ್ವಿರದ, ನರ, ರಥಿಕ, ಸಾದಿ ವೀರರೊಡನೆ ಕಾದತೊಡಗಿದರು. ತೈಲಧೌತವು, ಕ್ಷುರನಿಶಾತವು ಆದ ಆಯುಧಚಯದಿಂದ ಮೆರೆವ ವೀರಸಮೂಹವು ಆವಹರಂಗದಲ್ಲಿ ವೀರವಿಹಾರಗೈದಾಗ, ರುಚಿರಮುಕುಟಕುಂಡಲಾಲಂಕೃತವಾದ ಪುರುಷಶಿರಗಳು ಹಾಸಿದಂತಾಗಿ ರಣರಂಗವು ಬೀಭತ್ಸವಾಯಿತು. ಅವರ ಕೈಗಳಿಂದ ಬಿದ್ದ ಪರಶು, ಖಡ್ಗ ಪಟ್ಟಿಸ, ಪ್ರಾಸ, ತೋಮರ, ಗದಾದಿ ವಿವಿಧ ಶಸ್ತ್ರಗಳಿಂದ ತುಂಬಿ ಕದನ ಭೂಮಿಯು ಯಮರಾಜನ ಆಯುಧಾಗಾರವೆಂಬಂತಿತ್ತು. ದ್ವಿರದನರತುರಗಸಹಸ್ರಗಳು ಶತ್ರುವೀರಹತವಾಗಿ ಬಿದ್ದವು; ಅನೇಕ ರಕ್ತ ನದಿಗಳು ಭರದಿಂದ ಹರಿದು ಕುರುಕ್ಷೇತ್ರದ

ಸಮಂತ ಪಂಚಕದಲ್ಲಿ ಸೇರಿದವು. ಪ್ರ1ಜಾಪ್ರಳಯಕಾಲವಾಗಿ, ಪ್ರೇತ ರಾಜನ ರಾಷ್ಟ್ರವು ಧರೆಗೇರಿಬಂದಂತೆ, ರಣರಂಗವು ಕಂಕಾಳಶತಸಂಕ್ರಾಂತವಾಗಿತ್ತು. ಲವಣಾರ್ಣವದ ಗಭೀರನಿಸ್ವನವೋ, ದೇವಾಸುರಸಂಗ್ರಾಮದ ಗರ್ಜಾನಿವಹವೋ, ಪ್ರೇತಪತಿಯ ರೌರವಾದಿ ನರಕ ಗಣದಿ ನರಳುವ ನರರ ವೇದನಾಲಾಪವೋ ಎಂಬಂತೆ ಕುರುಪಾಂಡವಭಟರು ಆಯುಧಧ್ವಾನಗಳು, ಸಿಂಹಗರ್ಜನಗಳು, ಆರ್ತನಾದಗಳು ಗಗನವನ್ನು ಮುಟ್ಟಿದವು.

ಆಗ ದೇವಕುಮಾರನಿಭರಾದ ನಿನ್ನ ಸುತರು ಅಮಿತಬಲರಥಿಕಸೈನಿಕಯುತರಾಗಿ ರಣರಂಗದಲ್ಲಿ ಮಾರಣಕರ್ಮರತನಾಗಿ ಮೆರೆವ ಸಾತ್ಯಕಿಯನ್ನು ತಡೆದು ಕಾದತೊಡಗಿದರು. ಅವರಿಗೆ ನೆರವಾಗಿ ಬಂದ ರವಿನಂದನನು ಶಿನಿನಂದನನನ್ನು ಸುರಿವ ರಾಧೇಯನನ್ನು ಸಾತ್ಯಕಿಯು ಭುಜಗವಿಷಸಮವಾದ ಪ್ರಾಣಾಂತಕರ ಬಾಣಗಳಿಂದ ಹೊಡೆದು ಪೀಡಿಸಿದನು. ಅದನ್ನು ಕಂಡು ವಸುಷೇಣ(ಕರ್ಣ)ನಿಗೆ ಸಹಾಯಕರಾಗಿ ಕುರುವೀರರು ಧಾವಿಸಿಬಂದರು. ಉದಧಿಯಂತೆ ಉಕ್ಕೇರಿಬರುವ ಕುರುಸೇನೆಯ ರಭಸವನ್ನು ಧೃಷ್ಟದ್ಯುಮ್ನಾದಿ ಪಾಂಡವ ವೀರರು ತಡೆದು ಕಡಿದಾಡಲು, ಭಟರು ಯಮಭಟವಶರಾದರು; ತುರಗಗಳು ಯಮಮಂದುರೆ ಸೇರಿದವು ; ಗಜಗಳು ದಿಗ್ಗಜಗಳನ್ನು ನೋಡಪೋದವು ರಥಿಕರು ಕಥಾಮಾತ್ರಾವಶಿಷ್ಟರಾದರು.

ಕೇಶವಾರ್ಜುನರು ಮಾಧ್ಯಾಹ್ನಿಕವನ್ನು ಮುಗಿಸಿ, ಸ್ವಲಂಕೃತರಾಗಿ, ಶಿಬಿರದಿಂದ ಹೊರಹೊರಟು, ರಥವನ್ನೇರಿ, ರಣರಂಗವನ್ನು ಪ್ರವೇಶಿಸಿದರು. ಅರಿವಧವನ್ನು ಸಾಧಿಸಲು ನಿಶ್ಚಯಿಸಿ ಬರುವ ಅವರ ರಥಘೋಷವು ಮೇಘಗರ್ಜಾನಿಭವಾಗಿತ್ತು. ಗಾಂಡೀವಟಂಕಾರವು ಹಿಂದಕ್ಕೆ ಹಾರುತ್ತಿತ್ತು. ಶ್ವೇತತುರಗಗಳು ಉತ್ಸಾಹದಿಂದ ಕೆನೆಯುತ್ತಿದ್ದವು. ಶ್ರೀಕೃಷ್ಣಸಹಾಯಕನಾಗಿ ಬರುವ ಪಾಂಡವಮಧ್ಯಮನ ಗಾಂಡೀವ ಮುಕ್ತಕಾಂಡಗಳು ಯಮದಂಡಸದೃಶಗಳಾಗಿ, ಸಿಡಿಲಂತೆ ಬಡಿದವು. ಅರ್ಜುನಬಾಣಕೋಟಿಯಿಂದ ದಿಗಂತಗಳು ವ್ಯಾಪ್ತವಾಗಿ, ಆಕಾಶವು ನಿರವಕಾಶವಾಯಿತು.

ಅರ್ಜುನ ಶರಗಳಿಂದ ರಥಗಳು ಶ್ಲಥಗಳಾದವು; ಕೇತನಗಳ ಪಾತನವಾಯಿತು; ಮತಂಗಜಾಲವು ಮರಣವನ್ನಪ್ಪಿತು; ವಾಜಿಗಳು ನಿರ್ಜೀವಗಳಾದವು. ಸೂತರು ವೀತಪ್ರಾಣರಾದರು. ಶೂರರು ಪಲಾಯನಶೂರರಾದರು; ಗಜಗಳನ್ನೂ ಗಜಯೋಧರನ್ನೂ, ಅಶ್ವಗಳನ್ನೂ, ಸಾದಿಗಳನ್ನೂ ಕೂಡಿಸಿ ಯಮಸದನಕ್ಕಟ್ಟುವ ಅರ್ಜುನನ ರಣತಾಂಡವವು ಚಂಡಮನೋಹರವಾಯಿತು. ಅಂತಕನಂತೆ ಕ್ರುದ್ಧನಾಗಿ, ಅನಿವಾರ್ಯಶೌರ್ಯದಿ ಮೆರೆವ ನರನನ್ನು ನೋಡಿ, ದುರ್ಯೋಧನನು ಸಹಿಸದೆ ಬಂದು ಮುತ್ತಿ, ತೀವ್ರ ಬಾಣಗಣದಿಂದ ಪೀಡಿಸಿದನು. ಅರ್ಜುನನು ಏಳು ಬಾಣಗಳಿಂದ ಅವನ ಧನುಸ್ಸೂತತುರಗಗಳನ್ನೂ ಧ್ವಜವನ್ನೂ ಕೆಡಹಿ, ಎಂಟನೆಯ ಶರದಿಂದ ಛತ್ರವನ್ನು ಕಡಿದು, ಒಂಬತ್ತನೆಯ ಭಲ್ಲದಿಂದ, ದುರ್ಯೋಧನನ ಪ್ರಾಣವನ್ನೇ ಅಪಹರಿಸುವನೆಂಬಂತೆ ಗುರಿಯಿಟ್ಟು ಕುರುರಾಜನನ್ನು ಹೊಡೆದನು. ಆ ಬಾಣವು ಕುರುರಾಜನನ್ನು ಸೇರದ ಮುನ್ನ, ಅಶ್ವತ್ಥಾಮನು ಅದನ್ನು ಏಳು ತುಂಡಾಗಿಸಿದನು.

ಅರ್ಜುನನು ದ್ರೌಣಿಯ ಧನುವನ್ನು ಮುರಿದು, ಶರಚತುಷ್ಕದಿಂದ ಅವನ ಅಶ್ವಗಳನ್ನು ಕೊಂದನು. ಕೃಪನು ಮುತ್ತಲು ಕೃಪೆಬಿಟ್ಟು ಅರ್ಜುನನ್ನು ಆತನ ಧನುವನ್ನೂ ಖಂಡಿಸಿ, ಕೃತವರ್ಮನನ್ನೂ ವಿಧನುಷ್ಕನನ್ನಾಗಿಸಿದನು. ಅರ್ಜುನನು ಕೃತವರ್ಮನ ಧ್ವಜವನ್ನು ಕೆಡಹಿ, ಕುದುರೆಗಳನ್ನು ಕೊಲ್ಲಲು, ಅವನು ಭೀತನಾಗಿ, ದುಶ್ಶಾಸನನ ರಥವನ್ನೇರಿದನು. ಪಾರ್ಥನು ದುಶ್ಶಾಸನನ ಅಶ್ವಾಸನವನ್ನು ಕಡಿದು, ಓಡಿಸಿ, ಕರ್ಣನನ್ನು ಮುತ್ತಿದನು.

ಸಾತ್ಯಕಿಯೊಡನೆ ಕಾದುತ್ತಿದ್ದ ಕರ್ಣನು ಅವನನ್ನು ಬಿಟ್ಟು, ಅರ್ಜುನನ್ನೆದುರಿಸಿ, ಮೂರು ಬಾಣಗಳಿಂದ ಮುರಾರಿಯನ್ನೂ, ಇಪ್ಪತ್ತರಿಂದ ಇಂದ್ರಸುತನನ್ನೂ ಹೊಡೆದನು. ಕ್ರುದ್ಧನಾದ ಶತಕ್ರತುವಿನಂತೆ, ನಿರಾಯಾಸನಾಗಿ ಶರವರ್ಷವನ್ನು ಸುರಿವ ರಾಧೇಯನನ್ನು ಮನದಿ ಮೆಚ್ಚಿ, ಅರ್ಜುನನು ಅವನ ಶರವರ್ಷವನ್ನು ತನ್ನ ಬಾಣಜಾಲದಿಂದ ತಡೆದು, ಅವನನ್ನು ಐದು ಬಾಣಗಳಿಂದ ಪೀಡಿಸಿದನು. ಸಾತ್ಯಕಿಯೂ ತೊಂಬತ್ತೊಂಬತ್ತು ಶರಗಳಿಂದ ಕರ್ಣನನ್ನು ಪೀಡಿಸಿ, ಮತ್ತೆ ನೂರು ಶರಗಳನ್ನು ಬಿಟ್ಟನು. ಯುಧಾಮನ್ಯು, ಶಿಖಂಡಿ, ಉತ್ತಮೌಜ, ಯುಯುತ್ಸು ಧೃಷ್ಟದ್ಯುಮ್ನ, ದ್ರೌಪದೇಯರು, ಚೇಕಿತಾನ, ಮೊದಲಾದವರು ರಣದಲ್ಲಿ ಕರ್ಣನನ್ನು ಮುತ್ತಿ, ಉಗ್ರ ವಚನಗಳಿಂದಲೂ, ತೀವ್ರ ನಾರಾಚಗಳಿಂದಲೂ ಅವನನ್ನು ಪೀಡಿಸಿದರು. ಗಿಡಗಳನ್ನು ಕೆಡಹುವ ಚಂಡಮಾರುತನಂತೆ ಕರ್ಣನು ಅವರ ಬಾಣಗಳನ್ನು ಖಂಡಿಸಿ, ಅವರ ರಥಿಕಪದಾತಿ ಸಾದಿಗಣವನ್ನು ಸಂಹರಿಸಿದನು.

ಕರ್ಣಾಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ವಾರಿಸಿ, ಪಾರ್ಥನು ಮುಸಲಸ್ಥೂಲವಾದ ಬಾಣವೃಷ್ಟಿಯಿಂದ ದಿಗಂತರಾಳವನ್ನು ತುಂಬಿದನು. ಬಾಣಪೀಡಿತರಾದ ಕುರುವೀರರು ಕಣ್ಣುಗಳನ್ನು ಮುಚ್ಚಿ, ಬಾಣಘಾತದಿಂದ ನೊಂದು ದಿಕ್ಕೆಟ್ಟೋಡಿದರು. ರಣರಂಗದಲ್ಲಿ ನಡೆದ ಭೀಭತ್ಸವನ್ನು ನೋಡಲಾರನೆಂಬಂತೆ ಭಾನುಸಹಸ್ರನು ಅಸ್ತಗಿರಿಮಸ್ತಕವನ್ನು ಸೇರಿ ಮರೆಯಾದನು. ರಜದಿಂದಲೂ, ಕವಿಯುತ್ತಿರುವ ತಮದಿಂದಲೂ ಆಕ್ರಾಂತವಾದ ಆಯೋಧನದಲ್ಲಿ ಏನೂ ಕಾಣದಂತಾಯಿತು. ರಾತ್ರಿ ಯುದ್ಧದ ವಿಷಫಲವನ್ನು ಉಂಡು ಹೆದರಿದ್ದ ಕುರುವೀರರು ತಂತಮ್ಮ ಸೇನೆಯ ಅವಹಾರವನ್ನು ಮಾಡಿ, ಶಿಬಿರಗಳನ್ನು ಸೇರಪೋದರು. ಜಯಶಾಲಿಗಳಾದ ಪಾಂಡವ ಯೋಧರೂ ಸೇನಾವಹಾರಗೈದು, ವಿವಿಧವಾದಿತ್ರಶಬ್ದಗಳು ಮೊಳಗುತ್ತಿರಲು, ಸಿಂಹನಾದಮಾಡುತ್ತಾ, ಶತ್ರುಗಳನ್ನು ಅಪಹಸಿಸಿ ನಗುತ್ತಾ, ಶಿಬಿರಗಳನ್ನು ಸೇರಿದರು. ಪಾಂಡವರು ಅಚ್ಯುತಭೀಮಾರ್ಜುನರನ್ನು ಪ್ರಶಂಸಿಸುವ ಮಹಾರಥರಿಂದ ಕೂಡಿ ಶಿಬಿರವನ್ನು ಹೊಕ್ಕರು; ಪಾಂಡವರು ಶ್ರೀಕೃಷ್ಣಕೃಪಾಪಾತ್ರರಾಗಿ, ಶತ್ರುನಾಶವನ್ನು ಸಂಪಾದಿಸಿ, ಆನಂದದಿಂದ, ನಂದನಂದನನನ್ನು ಪೊಗಳುತ್ತಾ, ಅವನೊಡಗೂಡಿ ಮುಂದಿನ ದಿನದ ಕಾರ್ಯವನ್ನಾಲೋಚಿಸುತ್ತಾ ರಾತ್ರಿಯನ್ನು ಕಳೆದರು.

## ೫. ಸಪ್ತದಶಮ ದಿನ ಯುದ್ಧ — ಶಲ್ಯಸಾರಥ್ಯ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಮರುದಿನ ಪ್ರಾತಃಕಾಲವಾಯಿತು. ಧರ್ಮರಾಜನು ದುರ್ಜಯವ್ಯೂಹವನ್ನು ರಚಿಸಿ ಸೇನಾನಿವಹವು ಸಿಂಹನಾದಮಾಡುತ್ತಾ ಹಿಂಬಾಲಿಸಲು, ರಣರಂಗವನ್ನು ಪ್ರವೇಶಿಸಿದನು. ಅದನ್ನು ಕಂಡು ದುರ್ಯೋಧನನು ಕರ್ಣನನ್ನು ಸ್ಮರಿಸಿದನು. ಯುದ್ಧಚಾತುರ್ಯದಲ್ಲಿ ಪುರಂದರಸಮನು, ಬಲದಲ್ಲಿ ಮರುದ್ಗಣಸಮನು, ವೀರ್ಯದಲ್ಲಿ ಕಾರ್ತವೀರನಸಮನು, ಆದ ಕರ್ಣನ ಆಶ್ರಯವನ್ನು ಕೋರಿ ಕುರುವೀರರು ' ಕರ್ಣ! ಕರ್ಣ! ' ಎಂದು ಜಯಧ್ವಾನಗಳನ್ನು ಮಾಡಿದರು.'

ಧೃತರಾಷ್ಟ್ರನಿಂತೆದನು: 'ಸಂಜಯ! ಮುಂದೆ ದುರ್ಯೋಧನನೇನು ಮಾಡಿದನು? ಶೀತಾರ್ತನು ಭಾಸ್ಕರನನ್ನಂತೆ ನನ್ನ ಮಗನು ಕರ್ಣನನ್ನಾಶ್ರಯಿಸಿದನೇ ? ಕರ್ಣನೆಂತು ಕಡಿದಾಡಿದನು ? ಕರ್ಣನು ಶಕ್ರವಿಷ್ಣುಸಮವಿಕ್ರಮನೆಂಬರು. ಅವನ ಶಸ್ತ್ರಗಳು ಘೋರಗಳು. ಅವನ ಅಸ್ತ್ರಗಳು ಅಪ್ರತಿಹಾರ್ಯಗಳು. ಅವನ ವಿಕ್ರಮವು ಅವಕ್ರವು ಎಂದು ಕರ್ಣನನ್ನು ನಂಬಿ ದುರ್ಯೋಧನನು ಧರ್ಮರಾಜನೊಡನೆ ಸಂಗ್ರಾಮಕ್ಕಿಳಿದನಲ್ಲವೇ ? ಅದೇ ಧರ್ಮರಾಜನು ಕುರುರಾಜನನ್ನು ಮೂರ್ಛೆಗೊಳಿಸಿದಾಗ ಕರ್ಣನೇನು ಮಾಡಿದನು? ನನ್ನ ಮಗನು ಮದಮತ್ತನಾಗಿ ಕೇಶವಸಹಾಯರಾದ ಪಾಂಡವರನ್ನು ಕರ್ಣನ ಸಹಾಯದಿಂದ ಗೆಲ್ಲಬೇಕೆಂದು ವೃಥಾ ಹವಣಿಸುತ್ತಿರುವನು. ಕರ್ಣನೆಷ್ಟು ಪ್ರಯತ್ನಿಸಿದರೂ ಪಾಂಡವರನ್ನು ಗೆಲ್ಲಲಾರದಿರುವನು. ಇನ್ನು ಕೊಲ್ಲುವದಂತೂ ಬಲುದೂರ! ದೈವವೇ ಬಲೀಯವಾಗಿದೆ, ಇಲ್ಲದಿರೆ ಕೈಗೆಸಿಕ್ಕ ನಕುಲಸಹದೇವರನ್ನು ಕರ್ಣನು ಕೊಲ್ಲದೆ ಬಿಡುತ್ತಿದ್ದನೇ? ಅಕಟಾ ! ಎಂತಹ ಸಂಕಟವು ಪ್ರಾಪ್ತವಾಯಿತು ? ಅಂದಿನ ಹಾಳು ಜೂಜಿನ ಅನರ್ಥಫಲವನ್ನಿಂದು ಉಣ್ಣುತ್ತಿರುವೆವು. ದುರ್ಯೋಧನನೆಸಗಿದ ಕುಕೃತ್ಯಗಳನ್ನು ವಾರಿಸಿದ ನನ್ನ, ಅವಿವೇಕಕ್ಕೆ ಧಿಕ್ಕಾರವಿರಲಿ! ಜತುಗೃಹದಾಹ, ವಿಷಾನ್ನದಾನ , ದ್ಯೂತವಂಚನ, ವಸ್ತ್ರಾಪಹರಣ, ರಾಜ್ಯನಿಷ್ಕಾಸನಗಳೊಂದೊಂದೂ ಹೃದಯಶಲ್ಯವಾಗಿ ನನ್ನ ದುಃಖಕ್ಕೆ ಕೊನೆಗಾಣದಿರುವೆನು. ಇಷ್ಟಾದರೂ ನನ್ನ ಜ್ಯೇಷ್ಠ ಪುತ್ರನು ಕರ್ಣನು ಪಾಂಡವರನ್ನು ಕೊಲ್ಲುವನು; ಶಕುನಿಯು ನೀತಿವಂತನು, ದುಶ್ಶಾಸನನು ಮಹಾವೀರನು ಎಂದು ನಂಬಿ ಪಾಂಡವರೊಡನೆ ಕಾದುತ್ತಿರುವನಲ್ಲ! ಪ್ರತಿ ನಿತ್ಯವು ನನ್ನ ಪಾಪಿ ಕಿವಿಗಳಿಗೆ ಪುತ್ರನಿರ್ಜಯ ಪಲಾಯನ ಮರಣಗಳೇ ಕೇಳಿಸುತ್ತಿರುವವು; ಪಾಂಡವರ ಅಪಜಯ ಮರಣಗಳು ಕೇಳಬಾರದಿರುವವು. ಸ್ತ್ರೀಜನ ಮಧ್ಯದಲ್ಲಿ ಹೊಕ್ಕಂತೆ ನಮ್ಮವರ ಸೇನೆಯನ್ನು ಪ್ರವೇಶಿಸಿ, ನಿರ್ಭಯರಾಗಿ ನಿರ್ನಾಮಗೊಳಿಸುವ ಪಾಂಡವವೀರರು ತಪ್ಪದೆ ಜಯಿಸುವರೆಂದು ತೋರುತ್ತಿದೆ. ಯಾವದೈವದ ಬಲವಿದೆ ಅವರಿಗೆ? ಏನು ಮಾಡಲಿ? ' ಎಂದ ರಾಜನಿಗೆ ಸಂಜಯನು ಮತ್ತೆ ಪೇಳತೊಡಗಿದನು:

'ರಾಜನ್! ಪೂರ್ವದಲ್ಲಿ ನಡೆಸಿದ ಪುಣ್ಯಕರ್ಮಗಳ ಫಲವನ್ನೀಗ ಉಣ್ಣುವೆವು. ರಾಜ್ಯಲಾಭಕ್ಕೆಂದು ಮಾಡಿದ ಅಧರ್ಮ ಪರಂಪರೆಯು ರಾಜ್ಯಪ್ರಾಪ್ತಿಯನ್ನು ದೂರದೂಡಿ, ಮನಃಶಲ್ಯವಾಗಿ ಉಳಿಯುವುದು. ವಿಜ್ಞಾನಿವರನಾದ ನಿನಗೆ ಸ್ವಯಂ ವಿವೇಕವು ಪುಟ್ಟಲಿಲ್ಲ. ಶ್ರೀ ವೇದವ್ಯಾಸ ಪರಶುರಾಮ ಕಣ್ವ ನಾರದಾದಿ ಮಹಾನುಭಾವರು ಹೇಳಿದರೂ

ಯುಕ್ತಾಯುಕ್ತ ವಿಚಾರವನ್ನು ನೀನು ಮಾಡಲಿಲ್ಲ. ಈಗ ಬಹುದೂರ ಬಂದಿರುವೆವು. ಚಿಂತಿಸಿ ಮಾಡುವುದಿಲ್ಲ; ಮಾಡಿದುದನ್ನು ಉಂಡು ಚಿಂತಿಸುವದಿದೆ. ಪಾಂಡವರಿಗೆ ನೀನು ಮಾಡಿದ ದ್ರೋಹಗಳು ಬಹಳವಾಗಿವೆ ಮತ್ತು ಅಕ್ಷಮ್ಯವಾಗಿವೆ. "ಅವರೊಡನೆ ಯುದ್ಧ ಬೇಡ! ರಾಜ್ಯವನ್ನು ಕೊಡು!" ಎಂದು ನುಡಿದ ಶ್ರೀಕೃಷ್ಣನ ಅಮೃತವಚನಗಳು ನಿನಗೆ ವಿಷವಾದವು. ನಿನ್ನ ಮಗನ ವಿಷವಚನಗಳು ರುಚಿಯಾದವು. ಆಯಿತು! ಹಲುಬಿ ಫಲವಿಲ್ಲ. ಆದುದಾದುದನ್ನು ಕೇಳುತ್ತಾ ಕೂಡು!

ಹದಿನೇಳನೆಯ ದಿನ (ದ್ವಿತೀಯ ಚತುರ್ದಶಿ)ದ ಯುದ್ಧ ವೃತ್ತಾಂತವನ್ನು ವಿವರಿಸುವೆನು. ಪ್ರಭಾತವಾಗಲು ಪ್ರಭಾಕರಸುತನು ಪ್ರಭುವರನನ್ನು ಸೇರಿ ಇಂತು ನುಡಿದನು. 'ದುರ್ಯೋಧನ! ಇಂದು ಪಾಂಡವಮಧ್ಯಮನಿಂದ ಕೂಡಿ ಕಡಿದಾಡುವೆನು. ಇಂದು ನಾನಾದರೂ ಅರ್ಜುನನನ್ನು ಕೊಲ್ಲುವೆನು. ಅರ್ಜುನನಾದರೂ ನನ್ನನ್ನು ಕೊಲ್ಲುವನು. ಇತರ ವೀರರಿಂದ ಸಂಗ್ರಾಮನಿರತರಾಗಿದ್ದ ನಮಗೀರ್ವರಿಗೆ ಸರಿಯಾದ ರಣರಂಗ ಸಮಾಗಮವಾಗಿಲ್ಲ. ಇಂದು ನಾನು ಅರ್ಜುನನೊಡನೆ ಬಿಡದೆ ಕಾದಿ ಕೆಡಹುವೆನು. ಅವನನ್ನು ಕೊಲ್ಲದೆ, ನಿನಗೆ ಜಯಮಾಲೆ ತರದೆ, ರಣರಂಗದಿಂದ ಹಿಂದಿರುಗಿ ಬರೆನು, ತಿಳಿ! ಹಿಂದೆ ಅನ್ಯಮನಸ್ಕನಾಗಿದ್ದ ನನ್ನನ್ನು ಪಾರ್ಥನು ಗೆದ್ದಿರುವನು ನಿಜ! ಮುಂದೆಯೂ ಹಾಗಾಗುವುದೆಂದು ಹೆದರಬೇಡ! ನಮ್ಮಸೇನೆಯ ಬಹುಪ್ರವೀರರು ಹತರಾಗಿರುವರು ನಿಜ! ನಾನೂ ಶಕ್ರಶಕ್ತಿರಹಿತನಾಗಿರುವೆನು. ಆದರೂ ಭಯಪಡದೆ ವಿಜಯನೊಡನೆ ಕಡಿದಾಡುವೆನು. ಜಯವಾಗದಿರೆ, ಪ್ರಾಣವನ್ನಾದರೂ ಬಿಡುವೆನು. ಕೇಳು ನನ್ನ ಆತ್ಮವಿಶ್ವಾಸಕಾರಣವನ್ನು!'

'ಶತ್ರುವಿನಾಶ, ಶೀಘ್ರತೆ, ದೂರಪಾತನ, ಕೌಶಲ್ಯ, ಶರೀರಬಲ, ಶೌರ್ಯ, ಅಸ್ತ್ರ ವಿಜ್ಞಾನ, ವಿಕ್ರಮ, ಲಕ್ಷ್ಯಸಂಬಂಧಾವಧಾರಣಗಳಲ್ಲಿ ಅರ್ಜುನನು ನನ್ನನ್ನು ಮೀರಿಸಲಾರನು. ಹಿಂದೆ ವಿಶ್ವಕರ್ಮನು ಇಂದ್ರನಿಗಾಗಿ ವಿಜಯವೆಂಬ ಮಹಾಧನುಸ್ಸನ್ನು ನಿರ್ಮಿಸಿದನು. ಇಂದ್ರನು ಅದನ್ನು ಹಿಡಿದು ದೈತ್ಯರನ್ನು ಸುಲಭವಾಗಿ ಸಂಹರಿಸಿದನು. ಆ ಧನುಸ್ಸಿನ ಘೋಷವನ್ನು ಕೇಳಿ, ದೈತ್ಯರು ಮೂರ್ಛೆ ಬೀಳುವರು. ಅದು ಇಂದ್ರನಿಂದ ಭಾರ್ಗವನಿಗೆ ಬಂತು. ಶ್ರೀ ಪರಶುರಾಮನು ಅದನ್ನು ನನಗೆ ಪ್ರಸಾದಿಸಿದನು. ಅಂತಹ ದಿವ್ಯ ಧನುವಿನಿಂದ ಇಂದು ಇಂದ್ರನಂದನನೊಡನೆ ಕಾದುವೆನು. ವಿಜಯವು ಗಾಂಡೀವದಕಿಂತಲು ಶ್ರೇಷ್ಠ ಧನುವೆಂದು ತಿಳಿ! ಶ್ರೀ ಪರಶುರಾಮನು ಇಪ್ಪತ್ತೊಂದು ಸಲ, ಭೂತಲವನ್ನು ಸುತ್ತಿ, ಕ್ಷತ್ರಿಯಾಪಸದರನ್ನು ಕೊಂದುದು ಆ ಧನುರ್ನಿರ್ಗತ ಬಾಣಗಳಿಂದಲೇ! ಈ ವಿವರವನ್ನೂ, ಇನ್ನೂ ವಿಜಯಧನುರ್ಮಹಿಮೆಯನ್ನೂ ಮಹಾನುಭಾವನಾದ ನನ್ನ ಗುರುವರನು ನನಗೆ ತಿಳಿಸಿದನು. ವಿಜಯದಿಂದ ವಿಜಯನೊಡನೆ ಕಡಿದಾಡಿ ವಿಜಯವನ್ನು ತಂದು ನಿನಗಿತ್ತು ಸಬಾಂಧವನಾದ ನನ್ನ ಮಹಾರಾಜನಿಗೆ ಆನಂದದಿಂದ ವಿಜಯಮಾಲೆಯನ್ನು ಹಾಕುವೆನು. ಹತವೀರವು, ವೃತಸಾಗರವು ಆದ ಮಹೀಮಂಡಲವೆಲ್ಲವೂ ನಿಷ್ಕಂಟಕವೆನಿಸಿ, ನಿನ್ನದು ನಿನ್ನಿಂದ ನಿನ್ನ ಪುತ್ರ ಪೌತ್ರವಶವೂ ಆಗುವುದು. ನಿನ್ನ ಪ್ರೀತಿಗಾಗಿ ನಾನು ಮಾಡಲಾರದ ಕಾರ್ಯವಿಲ್ಲ.

ಧರ್ಮಾನುರಕ್ತನಾದ ಜಿತೇಂದ್ರಿಯ ಭಕ್ತರಿಗೆ ಮೋಕ್ಷವು ಸಿದ್ಧವಾಗಿದೆ; ಕರ್ಣಪಾಲಕನಾದ ದುರ್ಯೋಧನನಿಗೆ ರಾಜ್ಯ ಲಾಭವೂ ಸಿದ್ಧವಾಗಿದೆ.'

'ಏಕೆ ಹೆದರುವೆ? ಯಾವ ವಿಷಯದಲ್ಲಿ ನಾನು ಪಾರ್ಥನಿಗೆ ಕಡಿಮೆ ಹೇಳು! ಅಗ್ನಿಯು ಉರಿದಾಕ್ರಮಣಗೈದಾಗ ವನವದನ್ನು ತಡೆಯುವುದೇ? ಕರ್ಣನು ಉರಿದೆದ್ದು ವಿಕ್ರಮಿಸಿದಾಗ ಪಾಂಡವರವನನ್ನು ತಡೆಯಬಲ್ಲರೇ? ಒಂದು ಮಾತು ಮಾತ್ರ ನಿಜ! ಅರ್ಜುನನ ಗಾಂಡೀವವು ಅಭೇದ್ಯವು; ಅದರ ದಿವ್ಯ ಜ್ಯಾಲತೆಯು ಅಭೇದ್ಯವು; ಅವನ ತೂಣೀರದ್ವಯವು ಅಕ್ಷಯವು; ಅವನ ಸಾರಥಿಯು ಗೋವಿಂದನು; ಆದುದರಿಂದ ಅವನನ್ನು ಗೆಲ್ಲಲಾರೆನೆಂದು ತಿಳಿದಿರುವೆಯಾ? ಬಿಡು ಈ ಭ್ರಮೆಯನ್ನು. ಗಾಂಡೀವದಂತೆ ಇನ್ನೂ ಶ್ರೇಷ್ಠವಾದ ವಿಜಯವೆನ್ನಲ್ಲಿದೆ. ವಿಜಯದಿಂದ ಹೆಚ್ಚಾಗಿರುವ ನನ್ನಿಂದ ವಿಜಯವಾಗುವುದು.'

'ಸರ್ವಲೋಕನಮಸ್ಕೃತನಾದ ದಾಶಾರ್ಹನು ರಶ್ಮಿಗ್ರಾಹನು, ಅಗ್ನಿದತ್ತವಾದುದು ದಿವ್ಯಕಾಂಚನರಥವು, ಮತ್ತು ಅಚ್ಛೇದ್ಯವಾದ ಗಾಂಡೀವವು; ಮನೋಜವವಾದುವು ದಿವ್ಯತುರಗಗಳು, ಪ್ರಕಾಶಮಾನ ಧ್ವಜವು ಕಪಿರಾಜ ಭಯಂಕರವು; ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣನು ತಾನಾಗಿ ನಿಂತು, ರಥರಥಿಕರನ್ನು ಸಂರಕ್ಷಿಸುತ್ತಿರುವನು. ಇಂತಹ ಸೌಲಭ್ಯವೆನಗಿಲ್ಲ. ಆದರೂ ಬಿಡದೆ ಪಾರ್ಥನೊಡನೆ ಕಾದಲು ಪೋಗುವ ನನ್ನ ಕೆಚ್ಚದೆಯನ್ನು ಮೆಚ್ಚು!'

'ಎಲ್ಲ ಸಾಧನಗಳೂ ಸಾರಥಿಯ ಕೌಶಲ್ಯವನ್ನು ಅವಲಂಬಿಸಿರುವವು. ನನಗೆ ತಕ್ಕ ಸಾರಥಿಯು ಸಿಕ್ಕರೆ ಸಾಕು, ಅರ್ಜುನನನ್ನು ಒಂದೇ ಕ್ಷಣದಲ್ಲಿ ಗೆಲ್ಲಲಾರೆನೇ? ಕೃಷ್ಣನಿಗೆ ಸಾರಥ್ಯಕರ್ಮದಲ್ಲಿ ಸಮನಾದವನು ಶಲ್ಯನೊಬ್ಬನೇ! ಆ ಮಹಾಬಲನು ಕೃಷ್ಣ ಭೀಮಸದೃಶನೆಂದು ಬಲವಿಕ್ರಮಗಳಿಂದ ಖ್ಯಾತನಾಗಿರುವನು. ಅವನು ನನ್ನ ಸೂತನಾದರೆ, ನಿನ್ನ ವಿಜಯವು ಕಟ್ಟಿಟ್ಟ ಗಂಟೆಂದು ತಿಳಿ! ಅವನು ನನ್ನ ನಾರಾಚ, ಗರ್ಧ ಪತ್ರ ಬಾಣಾದ್ಯಾಯುಧಗಳನ್ನು ಸಂಗ್ರಹಿಸಿ, ನನ್ನರಥವನ್ನು ಸಜ್ಜುಗೊಳಿಸಿ, ಕೈಲಿ ರಶ್ಮಿಗಳನ್ನು ಹಿಡಿದು ನನ್ನ ಮುಂದೆ ಕುಳಿತನೆಂದರೆ, ಆಗ ನನ್ನನ್ನು ಕಣ್ಣೆತ್ತಿನೋಡಬಲ್ಲರೇ ಕೃಷ್ಣಾರ್ಜುನರು? ಕೃಷ್ಣನಕಿಂತಲು ಶಲ್ಯನು ಶ್ರೇಷ್ಠನು, ಅರ್ಜುನನಕಿಂತಲೂ ಕರ್ಣನು ಶ್ರೇಷ್ಠನು ಎಂದು ಲೋಕವು ಮೆಚ್ಚುವಂತಾಗುವುದು. ಅಶ್ವಹೃದಯವನ್ನು ಅಚ್ಯುತನಕಿಂತಲು ಶಲ್ಯನು ಚನ್ನಾಗಿ ತಿಳಿದಿರುವನು. ಮದ್ರರಾಜನಿಗೆ ಬಾಹುವೀರ್ಯದಲ್ಲಿ ನನಗೆ ಸಮರಿಲ್ಲವೆಂದೂ ಲೋಕವು ತಿಳಿದಿದೆ. ಶಲ್ಯನು ಸೂತಸುತನೆಂದು ನನ್ನನ್ನು ಕಡೆಗಣಿಸದೆ ನನ್ನ ಸಾರಥಿಯಾಗಿ ನಡೆದನೆಂದರೆ ನಾನು ರಥಿಕನಾಗಿ ಅರ್ಜುನನನ್ನು ಬೆರಗುಗೊಳಿಸಿ, ಕಡಿದಾಡುವೆನು. ಅರ್ಜುನನನ್ನು ಗೆದ್ದು ಕೊಂದು ಬರುವೆನು. ನಾನಾಗಿ ಶಲ್ಯನನ್ನು ಸಾರಥಿಯಾಗೆಂದು ಕೇಳಲಾರೆನು. ನೀನೀಕಾರ್ಯವನ್ನು ಮಾಡು! ತಡಮಾಡಬೇಡ! ಶಲ್ಯನು ಸಾರಥಿಯಾದರೆ, ಇಂದ್ರಾದಿ ಬೃಂದಾರಕರೆದುರಿಸಿನಿಂತರೂ, ಗೆದ್ದು ಬರುವೆನು, ಸುರಾಸುರರಿಗಜೇಯನಾದ ನನ್ನ ಮುಂದೆ ಹುಲು ಮಾನವರಾದ ಪಾಂಡವರು ನಿಲ್ಲಲಾರರು.'

ಆಹವಶೋಭಿಯಾದ ಅಧಿರಥನ ಮಾತನ್ನಾಲಿಸಿ ಆನಂದದಿಂದ ಅಭಿನಂದಿಸಿ ದುರ್ಯೋಧನನಿಂತೆಂದನು: 'ಮಿತ್ರ! ನಿನ್ನಿಷ್ಟಂದತೆ ನಡೆಯುವೆನು. ಬಹುತೂಣಯುಕ್ತವಾದ ಸರಸ್ರರಥಗಳು ನಿನಗೆ ಸಹಾಯವಾಗಿ ಸಂಗರರಂಗದಲ್ಲಿ ನಡೆಯುವವು. ನಿನ್ನ ನಾರಾಚಗಾರ್ಧಪತ್ರಾದಿಗಳನ್ನು ಹೊತ್ತು ಹತ್ತು ಶಕಟಗಳು ಬರುವವು. ನಾನಾದಿಯಾಗಿ ಸರ್ವವೀರರು, ರಾಜನ್ಯರು ಕೂಡ ನಿನ್ನ ಹಿಂದೆ ನಡೆದು ಕಾದುವೆವು. ಈಗ ಶಲ್ಯನನ್ನು ಬೇಡಿ, ನಿನಗೆ ಸಾರಥಿಯಾಗಿ ತರುವೆನು' ಇಂತು ನುಡಿದು ನಿನ್ನ ಮಗನು ರಾಜನ್! ಮದ್ರರಾಜನನ್ನು ಸೇರಿ, ವಿನಯದಿಂದ ಶಿರಬಾಗಿ ಪ್ರಣಯಮಧುರನಾಗಿಂತೆಂದನು:

'ಸತ್ಯವ್ರತ! ಪರಸೈನ್ಯ ಭಯಂಕರವಾದ ನಿನಗೆಣೆ ಕಾಣೆ. ರಣರಂಗವಿಹಾರ ಚತುರನಾದ ನಿನಗೆದುರಿಲ್ಲ. ಕರ್ಣನು ಸಭೆಯಲ್ಲಾಡಿದ ಮಾತನ್ನಾಲಿಸಿರುವೆ! ರಾಜಸಿಂಹರ ಮಧ್ಯದಲ್ಲಿ ಮಿಕ್ಕವರನ್ನೊಲ್ಲದೆ ನಿನ್ನನ್ನೇ ಬೇಡಲು ನಾನಾಗಿ ಬಂದಿರುವೆನು. ಮದ್ರೇಶ! ಪಾರ್ಥ ವಿನಾಶವಾಗಬೇಕಾಗಿದೆ. ನನಗೆ ಹಿತವೂ ಆಗಬೇಕಲ್ಲವೇ? ಒಲ್ಲೆನೆನ್ನದೆ ರಾಧೇಯನ ಸಾರಥಿಯಾಗಿ ನೀನು ನಿಂತರೆ, ಅವೆರಡೂ ಸಿದ್ಧಿಸಿ, ನಾನು ಧನ್ಯನಾಗುವೆನು. ರಾಧೇಯನು ನಿನ್ನ ಸಾರಥ್ಯದಿಂದ ಸನಾಥನಾಗಿ ಸಕಲ ಶತ್ರು ಜಯವನ್ನು ಸಾಧಿಸುವನು. ಕರ್ಣನಂತಹ ಮಹಾವೀರನಿಗೆ ನಿನ್ನಂತಹ ಸಾರಥಿಯಾದೊಡೆ, ಇನ್ನು ನಿಮ್ಮ ಮುಂದೆ ನಿಂತು ಕಾದಬಲ್ಲ ವೀರರುಂಟೇ? ಭಗವಾನ್ ವಾಸುದೇವನಿಗೆ ಬಲವಿಕ್ರಮಸಾರಥ್ಯಾದಿಗಳಲ್ಲಿ ನೀನು ಸಮನಂತೆ! ಬ್ರಹ್ಮನು ಮಹೇಶನಿಗೆ ಆದಂತೆ, ನೀನು ಕರ್ಣನಿಗೆ ಸಾರಥಿಯಾಗಿ, ಕೃಷ್ಣನು ಅರ್ಜುನನನ್ನು ಆಪತ್ತಿನಿಂದ ರಕ್ಷಿಸುವಂತೆ ಕರ್ಣನನ್ನು ಕಾಪಾಡು!'

ನಮ್ಮಲ್ಲಿ ಒಂಬತ್ತು ಮಹಾರಥಿಕರು ಶತ್ರುವಿನಾಶಂಕರರು. ಭೀಷ್ಮ, ದ್ರೋಣಕೃಪ, ಕರ್ಣ, ನೀನು, ಕೃತವರ್ಮ, ಶಕುನಿ, ಅಶ್ವತ್ಥಾಮ ನಾನು ಎಂಬವರಲ್ಲಿ ಭೀಷ್ಮ, ದ್ರೋಣರಿಲ್ಲದಂತಾಯಿತು. ಅವರೀರ್ವರು ವಿಕ್ರಮಿಸಿ ತಮ್ಮ ನವಾಂಶವನ್ನೇ ಅಲ್ಲದೆ ಇನ್ನೂ ಹೆಚ್ಚಾಗಿ ಶತ್ರುಜನರನ್ನು ನಾಶಪಡಿಸಿ, ಮೋಸದಿಂದ ಹತರಾಗಿ, ವೀರಸ್ವರ್ಗವನ್ನಲಂಕರಿಸಿದರು. ಭೀಷ್ಮನಿದ್ದರೂ ಸತ್ತಂತೇ ಆಗಿ ಶರಪಂಜರಲ್ಲಿರುವನು. ನನ್ನ ಸೈನ್ಯದ ಬಹುಭಾಗವು ನಾಶವಾಗಿದೆ. ಏಳಕ್ಷೌಹಿಣಿಗಳಿದ್ದ ಪಾಂಡವರ ಸೇನೆ ಅಷ್ಟು ನಷ್ಟವಾಗಿಲ್ಲ. ಈಗ ನಮ್ಮೀರ್ವರ ಸೇನೆಗಳು ಸಮಸಂಖ್ಯಾಕವಾದಂತಿವೆ. ಬಲವಂತರು ಸತ್ಯವಿಕ್ರಮರು ಆದ ಕುಂತೀತನಯರು ನನ್ನ ಬಲಶೇಷವನ್ನು ನಿಶ್ಶೇಷವಾಗಿಸದಂತೆ ನನಗೆ ನೆರವಾಗಿ ನಿಂತು, ನನ್ನಲ್ಲಿ ಕೃಪೆತೋರಿ, ನಮ್ಮನ್ನು ಕಾಪಾಡು!

ನನಗೆ ಹಿತವಾಗಲೆಂದು ಹವಣಿಸುವವನೆಂದರೆ ಕರ್ಣನೊಬ್ಬನೇ! ಅವನಷ್ಟೇ ಪ್ರಿಯನಾದವನೆಂದರೆ ಸರ್ವಲೋಕಮಹಾರಥನಾದ ಮದ್ರರಾಜನು. ಶಲ್ಯ! ಇದು ಸುಳ್ಳಲ್ಲ ಇಂದು ಕರ್ಣನು ದ್ವಂದ್ವಯುದ್ಧದಲ್ಲಿ ಅರ್ಜುನನನ್ನೆದುರಿಸಿ ಕೊಲ್ಲಲು ನಿಶ್ಚಯಿಸಿರುವನು. ಅವನ ಮನದಿಂದ ಜಯಾಸೆ ತುಂಬಿತುಳುಕುತ್ತಿದೆ. ಆದರೆ ತಕ್ಕ ಸಾರಥಿಯಿಲ್ಲದೆ ಅವನು ನಿರುತ್ಸಾಹನಾಗಿರುವನು. ಉತ್ತಮಸಾರಥಿಯಾಗಿ ಕೃಷ್ಣನು ಪಾರ್ಥನನ್ನಂತೆ ನೀನು ಕರ್ಣನ ತುರಗಾಭೀಶುಗ್ರಹಣವನ್ನಂಗೀಕರಿಸಿ ಅವನನ್ನು ಜಯಶ್ರೀಯುತನನ್ನಾಗಿ ಮಾಡು! ನಿನ್ನಂತಹ

ಸಾರಥಿಯು ಸಿಕ್ಕನೆಂದರೆ, ನಮ್ಮ ಕರ್ಣನೇನು ಮಾಡಲಾರನೇನು? ಮಾಡುವನೆಂಬುದು ಎಲ್ಲರಿಗೂ ವಿದಿತವೇ ಆಗಿದೆ.'

'ಹಿಂದೆ ಅರ್ಜುನನೊಬ್ಬನಿದ್ದೂ, ವಿರಾಟನಗರಿಯಲ್ಲಿ ನಮ್ಮನ್ನೆಲ್ಲ ಸೋಲಿಸಿದನು. ಇಂದು ಕೃಷ್ಣಸಾರಥಿಯು, ಕೃಷ್ಣರಕ್ಷಿತನು ಆದ ಅರ್ಜುನನಿನ್ನೆಂತು ವಿಕ್ರಮಿಸುವನೋ ಎಂದು ಹೆದರುತ್ತಿರುವೆನು. ನೋಡುತ್ತಿರುವೆನು ನಿತ್ಯವೂ ಪಾರ್ಥನ ಶತ್ರುಸಂಹಾರ ಚಾತುರ್ಯವನ್ನು! ನನ್ನ ವಿಜಯಾಶೆಯು ನಿಮ್ಮಿಬ್ಬರಲ್ಲಿ ಆಹಿತವಾಗಿದೆ. ಅರುಣನಿಂದ ಕೂಡಿ ಸೂರ್ಯನು ಕತ್ತಲನ್ನು ನಾಶಪಡಿಸುವಂತೆ, ನಿನ್ನಿಂದ ಕೂಡಿ ಕರ್ಣನು ಪಾಂಡವಸೇನೆಯನ್ನು ನಾಶಪಡಿಸಲ್ಕು ಸಹಕರಿಸು! ಉದಿತವಾದ ಸೂರ್ಯದ್ವಯದಂತೆ ಉರಿವ ಕರ್ಣಶಲ್ಯರ ಪ್ರತಾಪ ವನ್ನು ಸಹಿಸಲಾರದೆ ಪಾಂಡವ ಮಹಾರಥ ತಮಃಪಟಲವು ಕೊಚ್ಚಿ ಹಾಳಾಗಲಿ! ರಥಿಗಳಲ್ಲಿ ಶ್ರೇಷ್ಠನು ಕರ್ಣನು, ಸಾರಥಿಗಳಲ್ಲಿ ಶ್ರೇಷ್ಠನು ನೀನು. ನಿಮ್ಮಿರ್ವರ ಸಂಯೋಗವು ಅಪೂರ್ವವಾಗಲಿ! ನಿನ್ನ ಸಾರಥ್ಯದಿಂದ ಕರ್ಣನು ವಿಕ್ರಮಿಸಿ ಶತ್ರುದುಸ್ಸಹನಾಗಲಿ! ಶಲ್ಯಸಾರಥಿಕನಾದ ಕರ್ಣನು ರಣರಂಗದಲ್ಲಿ ದೇವತೆಗಳನ್ನೂ ಕಾದು ಗೆಲ್ಲುವನೆಂದಮೇಲೆ ಇನ್ನು ಹುಳು ಪಾಂಡವರ ಲೆಕ್ಕವೇನು! ಶಂಕಿಸಬೇಡ! ಕರ್ಣನಿಗೆ ಸೂತನಾಗು!'

ದುರ್ಯೋಧನನ ವಚನವನ್ನಾಲಿಸಿ ಶಲ್ಯನು ಕಿಡಿಕಿಡಿಯಾದನು. ಅವನ ಹುಬ್ಬು ಗಂಟಿಕ್ಕಿತು; ಕಣ್ಣುಗಳು ಕೆಂಪಾದವು; ತುಟಿ ಅದುರಿತು; ಅವನ ಕುಲ, ಐಶ್ವರ್ಯ, ವೀರ್ಯ, ಬಲ, ಶ್ರುತಗಳಿಗೆ ಪೆಟ್ಟುಬಿದ್ದಂತಾಯಿತು. ಶಲ್ಯನು ಕೈಗಳನ್ನಾಡಿಸುತ್ತಾ ಸಿಟ್ಟಿನಿಂದ ಕುರುರಾಜನಿಗಿಂತೆಂದನು : 'ಗಾಂಧಾರಿಪುತ್ರ! ಏನೆಂದೆ? ನಾನು ಕರ್ಣನಿಗೆ ಸಾರಥಿಯಾಗಬೇಕೆ? ಓಹೋ! ಇಂತಹ ಅಪಮಾನವೇ? ಏನೆಂದು ತಿಳಿದೆ ನನ್ನನ್ನು? ನಿನ್ನ ಮನದಿ ಶಲ್ಯನು ಕರ್ಣನಕಿಂತಲು ಅಧಮನಾದನೇ? ತಿಳಿ! ರಾಧೇಯನು ರಣದಲ್ಲಿ ನನಗೆ ಸಮನಲ್ಲ. ಅವನಿಗೆ ಮಿಾಸಲಿಟ್ಟ ಶತ್ರುಬಲವನ್ನು ನನಗೆ ಕೊಡು! ಅದನ್ನೂ ಇನ್ನೂ ಹೆಚ್ಚು ಪರಿಪಂಥಿಸೇನೆಯನ್ನು ನಾಶಪಡಿಸಿ, ನಿನ್ನ ಋಣ ತೀರಿತೆಂದೆನಿಸಿ, ಬಂದ ಹಾದಿ ಹಿಡಿದು ಹೋಗುವೆನು. ಅಥವಾ ಏಕವೀರನಾಗಿ ವಿಕ್ರಮಿಸಿ ಸಂಗ್ರಾಮದಿ ಶತ್ರುಗಳನ್ನು ಸುಡುವ ನನ್ನ ಸಾಹಸವನ್ನು ಕಣ್ಣಾರೆ ನೋಡಿ ತಿಳಿ. ಶಲ್ಯನಿಗೆ ಹೇಳಬೇಕಾದ ಶೌರ್ಯದ ರೀತಿಯನ್ನು! ನಾನೂ ಅಭಿಮಾನಧನನೆಂದು ಮನಗಂಡು ಮಾತಾಡು! ನೋಡು, ನನ್ನ ವಜ್ರ ಸಂಹನನವಾದ ಭುಜದ್ವಯವನ್ನು! ನೋಡೆನ್ನ ದಿವ್ಯ ಧನುವನ್ನು! ನೋಡೀ ವಿಷಸರ್ಪಸಮ ವಿಶಿಖಗಳನ್ನು! ನೋಡು ಸದಶ್ವವಾದೆನ್ನ ದಿವ್ಯ ಧನುವನ್ನು! ನೋಡು ಹೇಮಪಟ್ಟ ವಿಭೂಷಿತವಾದೆನ್ನ ಗದೆಯನ್ನು! ನೋಡಿ ಮಾತಾಡು! ಸೀಳಲಾಭೂತಲವನ್ನು? ಪುಡಿ ಮಾಡಲಾ ಬೆಟ್ಟಗಳನ್ನು? ಒಣಗಿಸಿಬಿಡಲಾ ಸಾಗರವನ್ನು? ಇಂತು ನಿನ್ನ ಶತ್ರುಮರ್ದನನು, ಕೀರ್ತಿವರ್ಧನನು ಆದ ಶಲ್ಯಮಹಾರಾಜನನ್ನು ಸೂತಸುತನಿಗೆ ಸೂತನಾಗೆನ್ನುವ ಕೆಚ್ಚೇ ಗಾಂಧಾರೀ ಸುತನಿಗೆ! ಶ್ರೇಷ್ಠ ಕ್ಷತ್ರಿಯನಾಗಿದ್ದು ನೀಚಸೂತನ ವಶನಾಗಿ ನಡೆಯಲೇ? ಅವನ ಮಾತಿನಂತೆ ಅವನ ರಥವನ್ನು ಹೊಡೆಯಲೇ? ನೀಚೋಚ್ಚರು ಉಚ್ಚ ನೀಚರಾಗುವ ಪಾಪಿ ಕಾಲ ಬಂತು! ಆಹಾ!

ದುರ್ಯೋಧನ! ಮುಖದಿಂದ ಬ್ರಾಹ್ಮಣರನ್ನು, ಬಾಹುಗಳಿಂದ ಕ್ಷತ್ರಿಯರನ್ನು, ಊರುಗಳಿಂದ ವೈಶ್ಯರನ್ನು, ಪಾದಗಳಿಂದ ಶೂದ್ರರನ್ನು ಸೃಜಿಸಿ, ಪ್ರಜಾಪತಿಯು ಕ್ರಮವಾಗಿ ಆ ವರ್ಣಗಳು ಉತ್ತಮವೆಂದು ನಿರ್ಣಯಿಸಿರುವನು. ಪ್ರತಿಲೋಮಾನುಲೋಮಜರೂ ಉಂಟು. ಎಲ್ಲ ವರ್ಣಗಳನ್ನು, ಧರ್ಮವ್ಯವಸ್ಥೆಯನ್ನು ಸಂರಕ್ಷಿಸುವ ಭಾರ ಕ್ಷತ್ರಿಯರಲ್ಲಿ ನಿಹಿತವಾಗಿದೆ. ಯಾಜನಾಧ್ಯಾಪನ ಪ್ರತಿಗ್ರಹಗಳನ್ನು ಲೋಕಾನುಗ್ರಹಕ್ಕೂ, ಯಜನ, ಅಧ್ಯಯನ, ದಾನಗಳನ್ನು ಸ್ವೋದ್ಧಾರಕ್ಕಾಗಿಯೂ ಮಾಡುವಂತೆ ವಿಪ್ರರು ಸ್ಥಾಪಿತರಾಗಿರುವರು. ಕೃಷಿಗೋರಕ್ಷಾವಾಣಿಜ್ಯಗಳನ್ನು ವೈಶ್ಯರಿಗಿತ್ತು, ಉತ್ತಮರ ಸೇವಾನಿಧಿಯನ್ನು ಶೂದ್ರರಿಗಿತ್ತಿರುವ ಬ್ರಹ್ಮದೇವನ ಆದೇಶದಂತೆ ಸೂತರು ಪರಿಚಾರಕರೆನಿಸಿರುವರು. ಅಂತಹ ಸೂತನಿಗೆ, ಮೂರ್ಧಾಭಿಷಕ್ತನು ರಾಜನ್ಯಸತ್ತಮನು, ಉತ್ತಮ ಕ್ಷತ್ರಿಯನು, ಮಹಾರಥನು ಆದ ನಾನು ಸಾರಥಿಯಾಗಿ 'ಏನಪ್ಪಣೆ?' ಎಂದು ಕೈಜೋಡಿಸಿ ನಿಲ್ಲಲೇ? ರಾಜನ್! ಸಾಕೀ ಅವಮಾನಪ್ರಸಂಗ! ನನಗೆ ಯುದ್ಧವೇ ಬೇಕಾಗಿಲ್ಲ. ಅಪ್ಪಣೆ ಕೊಡು! ನನ್ನ ಮನೆಗೆ ತೆರಳುವೆನು.'

ಇಂತು ನುಡಿದು ಶಲ್ಯನು ರಾಜಸಭೆಯನ್ನು ತ್ಯಜಿಸಿ ಹೊರಹೊರಟನು. ಅದನ್ನು ಕಂಡ ದುರ್ಯೋಧನನು ಎದ್ದುಹೋಗಿ, ಅವನನ್ನು ಸಮಾಧಾನಪಡಿಸಿ, ಕೈಹಿಡಿದು ಕರೆತಂದು ಕೂಡಿಸಿ, ಪ್ರೇಮಾದರಗಳಿಂದ ಇಂತೆಂದನು: 'ಶಲ್ಯ! ನೀ ನುಡಿದುದೆಲ್ಲವೂ ನಿಜ! ಆದರೂ ತ್ವರೆಪಡದೆ ನನ್ನ ಮನದಿಂಗಿತವನ್ನು ಕೇಳಿ ನಡೆ! ನನಗೆ ನಿನ್ನಲ್ಲಿ ಅವಿಶ್ವಾಸವಿಲ್ಲ. ನಿನಕಿಂತಲು ಕರ್ಣನು ಯಾವ ವಿಷಯದಲ್ಲಿಯೂ ಅಧಿಕನಲ್ಲ. ಮದ್ರೇಶರಾದ ಮಹಾನುಭಾವರು ಧರ್ಮವ್ಯತಿಕ್ರಮನನ್ನೆಂದಿಗೂ ಮಾಡುವರಲ್ಲವೆಂದು ನನಗೆ ತಿಳಿಯದೇ? ನಿನ್ನ ಪೂರ್ವಜರು ಋತ (ಸತ್ಯ) ನಿರತರಾದುದರಿಂದ ಋತಾಯನರೆಂದು ಖ್ಯಾತರಾಗಿರುವರು. ಅವರ ವಂಶದಿ ಜನಿಸಿ ಬಂದ ನೀನೂ ಆರ್ತಾಯನಿ ಎಂದು ಪ್ರಸಿದ್ಧನಾಗಿರುವೆ! ಯುದ್ಧದಿ ಕಾದುವ ಶತ್ರುಗಳ ಎದೆಗೆ ಶಲ್ಯವಾಗಿರುವ ನಿನ್ನನ್ನು ಶಲ್ಯನೆಂಬುದು ಸಾರ್ಥಕವಾಗಿದೆ. ನಿನ್ನಕಿಂತಲು ರಾಧೇಯನೇಕೆ, ನಾನೂ ಉತ್ತಮನಲ್ಲ. ಅಂತೆಯೇ ನಿನ್ನನ್ನು ಕರ್ಣನಿಗೆ ಸಾರಥಿಯಾಗಿರೆಂದು ಬೇಡುತ್ತಿರುವೆನು. ಧನಂಜಯನಕಿಂತಲು ಕರ್ಣನು ವೀರ್ಯಾದಿಗುಣವಂತನು; ನೀನು ವಾಸುದೇವನಕಿಂತಲು ಬಲವಂತನೆಂದು ಲೋಕವೇ ಸಾರುತ್ತಿದೆ. ಅಶ್ವಜ್ಞಾನದಲ್ಲಿ ನಿನಗೆ ಸಮನಲ್ಲ ವಾಸುದೇವನು. ಅವನಕಿಂತಲೂ ಅಶ್ವಹೃದಯವನ್ನು ಚೆನ್ನಾಗಿ ತಿಳಿದಿರುವ ನೀನು ಸಾರಥಿಯಾದೊಡೆ, ಕರ್ಣವಿಜಯವು ನಿಶ್ಚಿತವಾಯಿತು.'

ಆ ಮಾತಿಗೆ ಮೆದುವಾಗಿ ಶಲ್ಯನು, 'ರಾಜನ್! ಸರ್ವ ಸೇನಾಮಧ್ಯದಲ್ಲಿ ದೇವಕೀಪುತ್ರನಿಗೂ ಹೆಚ್ಚೆಂದು ನೀನಾಡಿದ ನುಡಿಗೆ ಪ್ರೀತನಾಗಿರುವೆನು. ಯಶೋವಂತನಾದ ರಾಧೇಯನಿಗೆ ಸಾರಥಿಯಾಗಲು ಸಮ್ಮತಿಸಿರುವೆನು. ನಿನ್ನ ಕೋರಿಕೆ ನೆರವೇರಲಿ! ಹೋಗು! ಆದರೆ ಒಂದು ಮಾತು ಕೇಳು! ಕರ್ಣನೊಡನೆ ಮಾತಾಡುವಾಗ ನನ್ನ ಮನಬಂದಂತೆ ನುಡಿವೆನು. ಅವನು ಮರುಮಾತಾಡದೆ, ಸಿಟ್ಟಾಗದೆ ಇರುವನಾದರೆ

ಮಾತ್ರ ನನ್ನ ಸಾರಥ್ಯವವನಿಗೆ ಸಿಗುವುದು' ಎಂದನು. ದುರ್ಯೋಧನನು ಅದಕ್ಕೊಪ್ಪಿ, ಕರ್ಣನಿಗೆ ಸುದ್ದಿಯನ್ನರುಹಿದನು.

## ೬. ತ್ರಿಪುರಾಸುರ ಸಂಹಾರ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು : 'ರಾಜನ್ !' ಸಂಜಯನು ಸಪ್ತದಶಮ ದಿನದ ಯುದ್ಧ ವಾರ್ತೆಯನ್ನು ಧೃತರಾಷ್ಟ್ರನಿಗೆ ತಿಳಿಸುತ್ತಿಂತೆಂದನು:

'ದುರ್ಯೋಧನನು ಕರ್ಣನಿಗೆ ಶಲ್ಯ ಸಮ್ಮತಿಯನ್ನರುಹಿ, ಮತ್ತೆ ಮದ್ರರಾಜನನ್ನು ಸೇರಿ, ಅವನಿಗೆ ಇಂತೆಂದನು: 'ಪೂರ್ವದಲ್ಲಿ ದೇವಾಸುರ ಸಂಗ್ರಾಮವು ಅತಿ ಭಯಂಕರವಾಗಿ ನಡೆಯಿತು. ಆಗ ನಡೆದ ವಿಚಿತ್ರವನ್ನು ಮಾರ್ಕಂಡೇಯನು ನಮ್ಮ ತಂದೆಗೆ ಪೇಳುತ್ತಿರಲು, ನಾನೂ ಕೇಳಿದೆನು. ಅದನ್ನೀಗ ನಿನಗೆ ತಿಳಿಸುವೆನು.

ಪರಸ್ಪರ ಜಿಗೀಷೆಯಿಂದ ಕಡಿದಾಡುವ ದೇವದಾನವರಲ್ಲಿ ತಾರಕಾಸುರನು ದೇವಸೇನೆಯನ್ನು ಹೆಮ್ಮಾರಿಯಂತೆ ಕಸಿಮುಸೆದು ಪೀಡಿಸಿದನು: ಆದರೂ ಶ್ರೀಶಾನುಗ್ರಹವಿದ್ದು ದೇವತೆಗಳೇ ಗೆದ್ದರು. ತಾರಕಾಸುರನು ದೇವಕುಮಾರನಿಹತನಾದನು. ಅವನ ಸುತರು ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬುವರು. ಅತ್ಯಂತ ನಿಯಮದಿಂದ ಕಠೋರ ತಪವನ್ನಾಚರಿಸಿ ಪಿತಾಮಹನನ್ನು ಮೆಚ್ಚಿಸಿದರು. ಬ್ರಹ್ಮನು ವರವನ್ನು ಬೇಡಿರೆನ್ನಲು, ಅವರು ತಾವು ಸರ್ವಭೂತಗಳಿಂದ ಸರ್ವದಾ ಅವಧ್ಯರಾಗಬೇಕೆಂದು ಬೇಡಿದರು. ಅವರ ಮಾತಿಗೆ ನಕ್ಕು ನಾಲ್ಮೊಗದ ದೇವನು 'ಅಸುರರೇ! ಸರ್ವಥಾ ಅವಧ್ಯತ್ವವೆಂಬುವದಿಲ್ಲ, ನಿಮಗೆ ಬೇಕಾದ ಇನ್ನೊಂದು ವರವನ್ನು ಬೇಡಿ!' ಎಂದನು. ಅವರು ಕೂಡಿ ಆಲೋಚಿಸಿ, ಸರ್ವಲೋಕೇಶ್ವರನನ್ನು ನೋಡಿ, 'ದೇವ! ನಮಗೆ ಈ ವರವನ್ನು ದಯಪಾಲಿಸು! ನಿನ್ನ ಅನುಗ್ರಹದಿಂದ ನಾವು ಮೂರು ವಿಮಾನ ಪುರಿಗಳಿಗೊಡೆಯರಾಗಿ, ಬೇಕಾದೆಡೆ ಸಂಚರಿಸುವೆವು. ಒಂದು ಸಾವಿರ ವರ್ಷವಾಗಲು ಮೂರು ಪುರಗಳಲ್ಲಿ ತಿರುಗುತ್ತಿದ್ದ ನಾವು ಒಂದೆಡೆ ಕಲೆಯುವೆವು. ಒಂದಾದ ನಮ್ಮ ಪುರಗಳನ್ನು ಒಂದೇ ಬಾಣದಿಂದ ಸುಡಬಲ್ಲ ದೇವವರನು ನಮಗೆ ಮೃತ್ಯುವಾಗಲಿ!' ಎಂದು ಬೇಡಿದರು. 'ತಥಾಸ್ತು!' ಎಂದು ಚತುರ್ಮುಖನು ಅಂತರ್ಹಿತನಾದನು.

ವರಗರ್ವಿತರಾದ ನರಾಶನರು ಮಹಾಸುರಶಿಲ್ಪಿಯಾದ ಮಯನನ್ನು ಕರೆಸಿ, ಅವನಿಂದ ಪುರತ್ರಯವನ್ನು ಮಾಡಿಸಿ ಕೊಂಡರು. ದೈತ್ಯದಾನವಪೂಜಿತನಾದ ಮಯನು ತನ್ನ ತಪೋ ಬಲದಿಂದ ದಿವ್ಯ ಪುರಗಳನ್ನು ನಿರ್ಮಿಸಿದನು: ಕಾಂಚನ ಪುರವನ್ನು ದ್ಯುಲೋಕದಲ್ಲಿಯು, ರಾಜತ ಪುರವನ್ನು ಅಂತರಿಕ್ಷದಲ್ಲಿಯು, ಆಯಸ ಪುರವನ್ನು ಭೂಮಿಯಲ್ಲಿಯು ಸ್ಥಾಪಿಸಿ, ತ್ರಿಪುರಾಸುರರ ವಶಕ್ಕೆ ಕೊಟ್ಟನು. ಶತಯೋಜನ ವಿಸ್ತಾರವು, ಬಹು ಪ್ರಾಕಾರ ತೋರಣವು, ಗೃಹಾಟ್ಟಾಲಕ ಭರಿತವು, ವಿಶಾಲ ರಾಜಮಾರ್ಗವು, ಪ್ರಸಾದದ್ವಾರ ಶೋಭಿತವು, ಕಾಮಗಮನವೂ ಆದ ಪುರತ್ರಯದಲ್ಲಿ ಅಸುರತ್ರಯವು ನೆಲಸಿತು. ತಾರಕಾಕ್ಷನು ಕಾಂಚನಪುರಿಯನ್ನು, ಕಮಲಾಕ್ಷನು ರಾಜತಪುರಿಯನ್ನು,

ವಿದ್ಯುನ್ಮಾಲಿಯು ಕಬ್ಬಿಣದೂರನ್ನು ಆಳುತ್ತಾ, ವರದರ್ಪಿತರಾಗಿ, ಮೂರು ಲೋಕದ ಜನರನ್ನು ಪೀಡಿಸತೊಡಗಿದರು. 'ಯಾವನು ಬ್ರಹ್ಮ? ಎಲ್ಲಿರುವನು ರುದ್ರ? ಎಂತಹವನು ವಿಷ್ಣು ? ' ವೆಂದು ನಿರ್ಭೀತರಾಗಿ ಸಾರುತ್ತಾ ಮೆರೆವ ಮಹಾ ದೈತ್ಯರನ್ನು ಆಶ್ರಯಿಸಿ ಲಕ್ಷಗಟ್ಟಲೆ ದಾನವರು ಆ ಪುರಗಳಲ್ಲಿ ಸುಖವಾಗಿ ವಾಸ ಮಾಡಿದರು.

ಎಲ್ಲ ಲೋಕದ ಕ್ಷುಲ್ಲ ದೈತ್ಯರಲ್ಲಿ ಸೇರಿ, ಮಯನು ಯೋಗಬಲದಿಂದೊದಗಿಸಿದ ಕಾಮೋಪಭೋಗಗಳಿಂದ ತೃಪ್ತರಾಗಿದ್ದರು. ತಾರಕಾಕ್ಷನ ಮಗನಾದ ಹರಿ ಎಂಬ ಮಹಾದೈತ್ಯನು ತೀವ್ರ ತಪವನ್ನು ಗೈದು, ಬ್ರಹ್ಮದೇವನಿಂದ ಅನಿತರ ಲಭ್ಯವಾದೊಂದು ವರವನ್ನು ಪಡೆದು ಬಂದನು. ತನ್ನ ಪುರದಲ್ಲಿ ಮೃತಸಂಜೀವನೀರಸಪೂರ್ಣವಾದ ಒಂದು ಬಾವಿಯನ್ನು ವರವಾಗಿ ಪಡೆದು, ಮಯನಿಂದ ಕಟ್ಟಿಸಿ, ಹರಿದಾನವನು ಸತ್ತ ದೈತ್ಯರನ್ನು ಅದರಲ್ಲಿ ಅದ್ದಿ ತೆಗೆದು, ಮತ್ತೆ ಬದುಕಿಸುತ್ತಿದ್ದನು. ಯುದ್ಧನಿಹತರಾದ ದೈತ್ಯದಾನವರು, ಅದೇ ರೂಪವೇಷಗಳಿಂದ ಮೇಲೆದ್ದು ಬಲವತ್ತರವಾಗಿ, ಪ್ರಜಾಪೀಡನತತ್ಪರರಾದರು. ಕೊಂದಂತೆ ಎದ್ದುಬರುವ ದೈತ್ಯರನ್ನು ನೋಡಿ, ದೇವತೆಗಳು ಆಶ್ಚರ್ಯಭಯಭರಿತರಾದರು. ಲೋಭ, ಮೋಹ ರೋಷಗಳಿಗೆ ನೆಲೆಯಾದ ತ್ರಿಪುರಾಸುರರನು ಲಜ್ಜಾವಿವೇಕಗಳನ್ನು ತೊರೆದು, ಅಕಾರ್ಯನಿರತರಾದರು. ಅವರ ಧಾಟಿಗೆ ತಾಳಲಾರದೆ ದೇವಗಂಧರ್ವರು ತಮ್ಮ ಸ್ಥಾನಗಳನ್ನೂ ಸಿರಿ-ಸಂಪತ್ತನ್ನೂ ಬಿಟ್ಟು ಪಲಾಯನಗೈದರು. ದುಷ್ಟದಾನವರು ದೇವೋದ್ಯಾನಗಳನ್ನು, ಋಷ್ಯಾಶ್ರಮಗಳನ್ನು, ರಮ್ಯನಗರಗಳನ್ನು ನಾಶಪಡಿಸಿ, ಹೊಲೆಗಲೆಸಿದರು; ಧರ್ಮ ಮರ್ಯಾದೆಯನ್ನು ಉಲ್ಲಂಘಿಸಿದರು. ಅದನ್ನು ಕಂಡು ದೇವಗಣಸಹಿತನಾದ ದೇವೇಂದ್ರನು ಕುಪಿತನಾಗಿ, ವಜ್ರಾಯುಧವನ್ನೆತ್ತಿ ಪುರಗಳನ್ನು ಪುಡಿಮಾಡಲೆಣಿಸಿದನು; ಪ್ರಯತ್ನವು ವ್ಯರ್ಥವಾಗಲು ಇಂದ್ರನು ಭೀತನಾಗಿ, ದೈತ್ಯರ ಉಪದ್ರವವನ್ನು ಬ್ರಹ್ಮನಿಗೆ ನಿವೇದಿಸಿ, ಅವರ ವಧೋಪಾಯವೇನೆಂದು ಕೇಳಿದನು.

ಭಗವಾನ್ ಚತುರ್ಮುಖನು 'ಇಂದ್ರಾದಿದೇವತೆಗಳಿರಾ! ನಿಮಗೆ ದ್ರೋಹವನ್ನು ಬಗೆದ ದಾನವರು ನನಗೂ ದ್ರೋಹವೆಸಗಿರುವರು. ದಾನವದೇವರೆಂಬ ಪಕ್ಷಪಾತವೆನಗಿಲ್ಲ. ಆದರೂ ನನ್ನನ್ನು ಮೆಚ್ಚಿಸಿ, ನನ್ನಿಂದ ವರ ಪಡೆದು, ನನ್ನನ್ನೇ ತಿರಸ್ಕರಿಸಿ ನಡೆವ ಅಧಾರ್ಮಿಕ ಸ್ವರೂಪದ ದಾನವದೈತ್ಯೇಯರನ್ನು ನಾಶಪಡಿಸದಿದ್ದರೆ ಲೋಕಹಿತವಾಗದು. ಆ ಮೂರುಪುರಗಳು ಇಷ್ಟರಲ್ಲೇ ಒಂದೆಡೇಕಲೆಯುವವು. ಆಗ ಒಂದೇ ಬಾಣದಿಂದ ಪುರತ್ರಯವನ್ನು ಭೇದಿಸುವ ದೇವವರನಿಂದ ಮಾತ್ರ ಅವರು ಸಾಯುವರು. ಇಂತು ನಾನೇ ವರವಿತ್ತಿರುವೆನು. ಅವರನ್ನು ಕೊಲ್ಲುವ ದೇವವರನೆಂದರೆ ರುದ್ರನೇ ಮತ್ತಿತ್ತರರಲ್ಲ. ಆತನಿಗೆ ತ್ರಿಪುರಾರಿ ಎಂಬ ಕೀರ್ತಿಯನ್ನು ಕೊಡವ ಭಗವಂತನ ಸತ್ಯಸಂಕಲ್ಪದಂತೆ ನಡೆಯಿರಿ! ಆತನನ್ನು ಶರಣಾಗಿ ಬೇಡಿರಿ! ಆ ಮಹಾದೇವನಿಂದ ನಿಮಗೆ ಶ್ರೇಯಸ್ಸಾಗುವುದು. ' ಎಂದಾಜ್ಞಾಪಿಸಿದನು.

ದೇವತೆಗಳು ಚತುರ್ಮುಖನನ್ನು ಪ್ರಾರ್ಥಿಸಿ, ಕರೆದುಕೊಂಡು, ಸರ್ವಾತ್ಮನಾ

ಶರಣಾಗತರಾಗಿ ಶಂಕರನನ್ನು ಸೇರಿದರು. ಭಯಕಾಲದಲ್ಲಿ ಅಭಯಪ್ರದನಾದ ಭವನನ್ನು ಭಕ್ತಿಯಿಂದ ಇಂದ್ರಾದಿ ವೃಂದಾರಕರು ಸ್ತುತಿಸಿದರು.

'ಮಹಾದೇವ! ನಮೋ ನಮಃ! ಸರ್ವಾತ್ಮಕ! ನಮಃ ಮನೋನಿಯಾಮಕನೇ! ನಿನಗೆನಮಃ. ಯಥಾರ್ಥಜ್ಞಾನದಿಂದ ಮನದಲ್ಲಿ ಅಂತರ್ಯಾಮಿಯಾದ ಸಂಕರ್ಷಣನನ್ನು ಭಜಿಸಿ, ಮನವನ್ನು ನಿಗ್ರಹಿಸಿ ವಶದಲ್ಲಿಟ್ಟಿರುವೆ! ತೇಜೋರಾಶಿಯಾದ ಉಮಾಪತಿಯೇ! ಪಾಪರಹಿತರಲ್ಲಿ ಅಗ್ರಗಣ್ಯನಿರುವೆ! ಭಕ್ತರು ಭಾವಿಸಿದಂತೆ ಬಹುರೂಪನಾಗಿ, ಅವರ ಕಣ್ಣನಗಳನ್ನು ತಣಿಸಿ ಪೊರೆವೆ!' ಎಂದು ನಮಸ್ಕರಿಸಿದರು. ಮಹಾದೇವನು ಬ್ರಹ್ಮದೇವನಿಗೆ ಶಿರಸಾನಮಿಸಿ, ದಿವ್ಯಾಸನದಿ ಕೂಡಿಸಿ, ಪೂಜಿಸಿದನು. ದೇವತೆಗಳೂ ಸತ್ಕೃತರಾಗಿ ಮಹಾದೇವನನ್ನು ಮತ್ತೆ ಸ್ತುತಿಸಿದರು. 'ದೇವಾಧಿದೇವ! ಧನ್ವಿನ್! ವನಮಾಲಿನ್! ದಕ್ಷಯಜ್ಞ ಧ್ವಂಸಕನೇ! ಸದಾಸ್ತುತನಾದದ ಲೋಕಹಿತಂಕರನಾದ, ನೀಲಕಂಠನಾದ, ಶೂಲಹಸ್ತನಾದ, ಪ್ರಶಸ್ತನಾದ, ರುದ್ರನಿಗೆ ಸಮಸ್ಕಾರ! ತಪೋನಿರತನಾಗಿ ಶ್ರೀಹರಿಯನ್ನು ಒಲಿಸಿಕೊಂಡ ಮಹಾನುಭಾವ! ಕುಮಾರನನ್ನು ಪೆತ್ತ ಮಹಾವೀರ್ಯ! ಕಾಮನನ್ನು ದಹಿಸಿದ ಮಹಾವೈರಾಗ್ಯ! ನಂಬಿದ ಜನರ ದುಃಖವನ್ನು ಕಳೆವ ಕರುಣಾಳು! ಬ್ರಾಹ್ಮಣಾದಿ ಸುಜನ ದ್ರೋಹಿ ರಾಕ್ಷಸರನ್ನು ನಾಶಪಡಿಸುವ ಈಶಾನ! ವನಸ್ಪತಿ, ಮನುಜ, ಗೋ, ಯಜ್ಞಗಳಿಗೆ ಅಧಿಪತಿಯಾದ ನಿನಗೆ ನಮೋನಮಃ.'

ಸುರಮುನಿಗಳ ಸ್ತುತಿಯನ್ನು ಕೇಳಿ, ಫಾಲಾಕ್ಷನು ಪ್ರಸನ್ನನಾಗಿ ಅಭಯವನ್ನಿತ್ತನು. ಆಗ ಚತುರ್ಮುಖನು ಶಂಕರನಿಗಿಂತೆಂದನು: 'ಶಂಕರ! ಶ್ರೀಹರಿದತ್ತವಾದ ಪ್ರಜಾಪತಿಪದದಲ್ಲಿ ಕೂತು, ಲೋಕವನ್ನು ಸೃಜಿಸುವ ನಾನು ದಾನವರಿಗೆ ಮಹಾವರವನ್ನಿತ್ತಿರುವೆನು. ವರದರ್ಪಿತರಾದ ತ್ರಿಪುರಾಸುರರು ಲೋಕ ಪೀಡಾಕರರಾಗಿರುವರು. ಅವರಿಗೆ ನೀನೇ ಸಂಹಾರಕವಾಗುವಂತೆ ಸಂಕಲ್ಪಿಸಿದ ನನ್ನ ಅನುಶಾಸನವನ್ನು ವಹಿಸಿ, ಅವರನ್ನು ಕೊಲ್ಲು! ಸರ್ವಲೋಕಗಳಿಗೆ ಹಿತವಾಗುವಂತೆ ವಿಕ್ರಮಿಸು! ದೇವತೆಗಳ ಪ್ರಾರ್ಥನೆಯನ್ನು ಮನ್ನಿಸು!'

ಆ ಮಾತಿಗೆ ಸ್ಥಾಣುವಿಂತೆಂದನು: 'ದೇವತೆಗಳಿರಾ! ನಿಮ್ಮ ಶತ್ರುಗಳು ಯಾರಾದರೂ ಅವರು ನನಗೆ ವಧ್ಯರೇ ಸರಿ! ಆದರೆ ಅವರು ವರದರ್ಪಿತರಾಗಿ ಬಲಿಷ್ಠರೂ ಆಗಿರುವರು. ನನ್ನ ಅರ್ಧತೇಜವನ್ನು ನಿಮಗೆ ಕೊಡುವೆನು. ನೀವೆಲ್ಲರೂ ಕೂಡಿ ನನ್ನ ತೇಜೋವರ್ಧಿತರೂ ಆಗಿ ದಾನವರನ್ನು ನಾಶಮಾಡಿರಿ!' ದೇವತೆಗಳಿಂತೆಂದರು: 'ಮಹೇಶ! ನಿನ್ನ ತೇಜೋಭಾಗವನ್ನು ಧರಿಸಲು ನಮ್ಮಿಂದಾಗದು. ದಾನವರು ನಮಗೂ ದ್ವಿಗುಣ ಬಲವಂತರಾಗಿರುವರು. ಹರಿದಾನವ ನಿರ್ಮಿತರ ಸಕೂಪದಿಂದ ಸತ್ತವರು ಕೂಡ ಎದ್ದು ಬರುತ್ತಿರುವರು. ಆದುದರಿಂದ ಅವರನ್ನು ನೀನೇ ಸಂಹರಿಸಿ, ನಮ್ಮನ್ನು ಕಾಪಾಡು!' ಮಹಾದೇವನು 'ಹಾಗೇ ಆಗಲಿ! ನಿಮ್ಮ ನಿಮ್ಮ ತೇಜೋಽರ್ಧಾಂಶವನ್ನು ನೀವೆಲ್ಲರೂ ನನಗೆ ಕೊಟ್ಟು ಸಹಕರಿಸಿ! ಆಗ ನಾನು ತ್ರಿಪುರಾಸುರರನ್ನು ಕೊಲ್ಲುವೆನು ಎಂದನು. ದೇವತೆಗಳಾ ಮಾತಿಗಂಗೀಕರಿಸಿ, ತಂತಮ್ಮ

ಬಲಾರ್ಧಗಳನ್ನು ಮಹೇಶನಿಗರ್ಪಿಸಿದರು. ರುದ್ರನು ದೇವತೇಜೋವರ್ಧಿತನಾಗಿ ದುಸ್ಸಹನೆನಿಸಿದನು. ದೇವಭಾಗಗಳಿಂದ ತುಂಬಿ ಮಹಾದೇವನೆಂದು ಖ್ಯಾತನಾದ ರುದ್ರನು ತನಗೆ ತಕ್ಕ ರಥ, ತುರಗ, ಧನುರ್ಬಾಣಗಳನ್ನು ಕಲ್ಪಿಸಿಕೊಡಿರೆಂದು ದೇವತೆಗಳಿಗೆ ಆಜ್ಞಾಪಿಸಿದನು.

ವೃಂದಾರಕರು ಲೋಕತ್ರಯದ ಸರ್ವಶಕ್ತಿಗಳನ್ನೊಟ್ಟುಗೂಡಿಸಿ, ವಿಶ್ವಕರ್ಮನನ್ನು ಕರೆಸಿ, ರಥಾದಿ ಪರಿಕರಗಳನ್ನು ನಿರ್ಮಿಸೆಂದು ಬೇಡಿದರು. ಆಗ ತ್ರಿಪುರ ಸಂಹಾರಯೋಗ್ಯವಾದ ರಥಾದಿ ಸಾಧನಗಳು ಸಿದ್ಧವಾದವು. ಸೋಮಾಗ್ನಿವಿಷ್ಣುಗಳು ರುದ್ರಶರದ ಕಾಂಡಶೃಂಗಗಳಲ್ಲಿ ನೆಲೆಸಿದರು; ವಿಶಾಲಪುರಮಾಲಿನಿಯಾದ ಭೂದೇವಿಯೇ ರಥವಾದಳು; ಮಂದರವು ಅಕ್ಷವಾಯಿತು; ಗಂಗೆ ಅಕ್ಷಾಧಾರಕಾಷ್ಠವಾದಳು. ದಿಕ್‌ವಿದಿಕ್ ದೇವತೆಗಳು ರಥಪರಿವಾರವಾದರು. ನಕ್ಷತ್ರಮಂಡಲವು ಯುಗಾಕ್ಷ ಸಂಧಾನವಾಯಿತು. ಕೃತಯುಗವು ನೊಗೆಯಾಯಿತು; ವಾಸುಕಿಯು ರಥಕೂಬರವಾದನು. ಚಕ್ರಾಧಾರ ಪಶ್ಚಾತ್ಕಾಷ್ಠಗಳಾದವು. ಹಿಮವದ್ವಿಂಧ್ಯಗಳು, ಉದಯಾಸ್ತಗಿರಿಗಳು ಚಕ್ರದ ಕಡ್ಡಿಗಳಾದವು; ಸಮುದ್ರವು ಅಕ್ಷಬಂಧನ ಪಾಶಜಾಲವಾಯಿತು. ಸಪ್ತರ್ಷಿಮಂಡಲವು ಚಕ್ರರಕ್ಷಣವಾಯಿತು. ಗಂಗಾ-ಯಮುನಾ-ಸರಸ್ವತಿಗಳು ತ್ರಿವೇಣುದಂಡಗಲಾದವು. ಆಕಾಶವು ಬಂಧನಸಾಮಗ್ರಿ ಆಯಿತು. ತಾರಕೆಗಳು ರಥತಲ್ಪವಾದವು; ಅಹೋರಾತ್ರಾದಿಗಳು ರಥಾಧೋಭಾಗದ ಬಂಧನಗಳಾದವು. ಧರ್ಮಾರ್ಥಕಾಮಗಳು ತ್ರಿವೇಣುಬಂಧನಗಳಾದವು. ಓಷಧೀವೀರುಧಗಳು ಗಂಟೆಗಳಾದವು! ಸೂರ್ಯಚಂದ್ರರು ಚಕ್ರಗಳಾದರು. ಚತುಶ್ಚಕ್ರದ ರಥದಲ್ಲಿ ದ್ಯುಲೋಕವು ಎರಡನೇ ಅಕ್ಷ(ಇರುಸು) ಆಯಿತು. ಧೃತರಾಷ್ಟ್ರಾದಿ ದಶನಾಗಪತಿಗಳು ತುರಗಬಂಧನ ರಜ್ಜುಗಳಾದರು. ಸಂವರ್ತಕ ಮೇಘಗಳು ಮೃದು ಚರ್ಮತಲ್ಪಗಳಾದವು. ಕರ್ಕೋಟಕ, ಧನಂಜಯ, ಕಾಲಪೃಷ್ಠ ನಹುಷರಾದಿ ನಾಗರಾಜರು ತುರಗವಾಲ ಬಂಧನವಾದರು. ಸುರಪತಿ, ಜಲಪತಿ, ಪ್ರೇತಪತಿ, ವಿತ್ತಪತಿಗಳು ಕುದುರೆಗಳಾದರು. ಸಿನೀವಾಲೀ, ಅನುಮತೀ, ಕುಹೂ, ರಾಕಾ ದೇವತೆಗಳು ಜೀನಾಗಲು, ಪಿತೃದೇವತೆಗಳು ಕಂಟಕಸ್ಥಾನಾಪನ್ನರಾದರು. ಮನಸ್ಸೇ ಅಧಿಷ್ಠಾನ ಪೀಠವಾಯಿತು; ಬುದ್ಧಿ ನಡೆವ ಮಾರ್ಗವಾಯಿತು; ವಿದ್ಯುತ್ತು ಧನುವಾಯಿತು: ವಷಟ್‌ಕಾರವು ಪ್ರತೋದವಾಯಿತು; ಗಾಯಿತ್ರಿಯು ತುರಗಶಿರೋಬಂಧನವಾಯಿತು; ಸಾವಿತ್ರಿಯು ಜ್ಯಾಪಾಶವಾದಳು; ಮೇರುವು ಧ್ವಜಯಷ್ಟಿಯಾಯಿತು; ತಟಿನ್ಮೇಘಗಳು ಪತಾಕೆಗಳಾದವು. ಕಾಲಚಕ್ರವು ಅಭೇದ್ಯ ಕವಚವಾಯಿತು. ಇಂತು ಕ್ಲುಪ್ತವಾದ ರಥವರವನ್ನು ನೋಡಿ ಎಲ್ಲ ಲೋಕಗಳ ತೇಜಃಪದಾರ್ಥಗಳ ಸಾರಸನ್ನಿಧಿ ಎಂದು ತಿಳಿದು ದೇವತೆಗಳು ಆಶ್ಚರ್ಯಭರಿತರಾದರು, ಮತ್ತು ರಥವು ಸಿದ್ಧವಾಯಿತೆಂದು ಶಂಕರನಿಗೆ ವಿಜ್ಞಾಪಿಸಿದರು.

ಅಂತಹ ರಥವನ್ನು ನೋಡಿ, ರುದ್ರನು ಸಂತುಷ್ಟನಾದನು; ತನ್ನ ದಿವ್ಯಾಯುಧಗಳನ್ನೆಲ್ಲ ಅದರಲ್ಲಿಡಿಸಿ, ಧ್ವಜವನ್ನೆತ್ತಿಸಿ, ಅದರಲ್ಲಿ ವೃಷಭರಾಜನನ್ನು

ಸ್ಥಾಪಿಸಿದನು. ಬ್ರಹ್ಮದಂಡ, ಕಾಲದಂಡ, ರುದ್ರದಂಡಗಳು ಪಾರ್ಶ್ವರಕ್ಷಕರಾಗಿ ನಡೆದವು. ಅಥರ್ವಾಂಗಿರಸರು ಚಕ್ರರಕ್ಷಕರಾದರು; ಋಗ್ಯಜುಸ್ಸಾಮ ವೇದಗಳು, ಇತಿಹಾಸ ಪುರಾಣಗಳು ಬೆಂಬಲವಾಗಿ ನಿಂತವು. ಆರು ಋತುಗಳ ಸಂವತ್ಸರವು ಧನುರ್ದಂಡವಾಯಿತು. ಕಾಲನೇ ರುದ್ರನಾಗಿ, ಕಾಲರಾತ್ರಿಯೇ ಜ್ಯಾಬಂಧವಾಗಲು, ವಿಷ್ಣುವೇ ಜಗತ್ಪ್ರಭುವೆಂದರಿತು ವೈಷ್ಣವೋತ್ತಮನಾದ ರುದ್ರನು ತನ್ನ ಅಂತರ್ಯಾಮಿಯಾದ ಶ್ರೀ ಮುಖ್ಯಪ್ರಾಣವಲ್ಲಭ ಶ್ರೀಹರಿಗೆ ನಮಿಸಿ, ಆ ಬಾಣದಲ್ಲಿ ಮನ್ಯುನಾಮಕ ಲಕ್ಷ್ಮೀನೃಸಿಂಹನ ಸನ್ನಿಧಿಯನ್ನು ತುಂಬಿದನು. ಭೃಗ್ವಂಗಿರಾದಿಮನ್ಯುಸಂಭವವಾದ ಕ್ರೋಧಾಗ್ನಿಯಿಂದ ತುಂಬಿ ಉರಿದೆದ್ದ ನೀಲಲೋಹಿತನು ಸಹಸ್ರ ಸೂರ್ಯಕಾಂತಿಯಿಂದ ದುರ್ನಿರೀಕ್ಷ್ಯನಾದನು. ಧರ್ಮಾಧರ್ಮಗಳನ್ನು ಆಶ್ರಯಿಸಿದ ದೇವದಾನವರನ್ನು ಪಾಲಿಸಿ ಕಾಲಿಸುವ ಲೋಕಪ್ರಭುವು ಬ್ರಹ್ಮದ್ವೇಷಿಗಳನ್ನು ನಾಶಪಡಿಸುವ ಮಹಾದೇವ ಜಂಗಮಾಜಂಗಮ ಜಗತ್ತನ್ನು ಪಾಲಿಸುವ ಪಶುಪತಿ ರಥವನ್ನು ಕಂಡು, ದಿವ್ಯಬಾಣವನ್ನು ಕೈಕೊಂಡು, ಪುಣ್ಯಗಂಧವಹನಾಗಿ ಮಂದಮಾರುತನು ಬೀಸುತ್ತಿರಲು, ತನ್ನಲ್ಲಿ ತಂದೆಯಾದ ಮುಖ್ಯಪ್ರಾಣನ ಸನ್ನಿಧಿಯನ್ನು ಕಲ್ಪಿಸಿ, ಮನಸಾ ನಮಿಸಿ, ರಥವನ್ನಾರೋಹಿಸಲು ಸಾಗಿದನು.

ಆಗ ಋಷಿಗಳು ವೇದಮಂತ್ರಗಳಿಂದ ಸ್ತುತಿಸಿದರು. ಗಂಧರ್ವರು ಹಾಡಿದರು. ಅಪ್ಸರೆಯರಾಡಿದರು. ವಂದಿಮಾಗಧರು ಪೊಗಳಿದರು. ವೃಂದಾರಕರು ಕೈಜೋಡಿಸಿ ನಿಂತರು. ಖಡ್ಗ ಧನುರ್ಬಾಣಗಳನ್ನು ಧರಿಸಿ ಬಂದ ಮಹಾದೇವನು ರಥದಲ್ಲಿ ಸಾರಥಿಯನ್ನು ಕಾಣದೆ, ನಿಂತು ನಗುತ್ತಾ 'ದೇವತೆಗಳಿರಾ ! ನನಗೆ ಸಾರಥಿಯಾಗುವವನಾರೆಂ'ದು ಕೇಳಿದನು. 'ನಿನಗೆ ಬೇಕಾದವನನ್ನು ಸಾರಥಿಯಾಗಿ ಪಡೆಯಬಹುದೆಂ'ದು ಸುರರಂದರು. ಮತ್ತೆ ರುದ್ರನಿಂತೆಂದನು: 'ಸಾಮಾನ್ಯ ಸಾರಥಿಯು ಸಾಲನು. ನನಕಿಂತಲು ಶ್ರೇಷ್ಠತರನಾದ ಸಾರಥಿಯನ್ನು ನೀವೇ ಹುಡುಕಿ ಕರೆತನ್ನಿ! ತಡಮಾಡಬೇಡಿ !' ಆ ಮಾತನ್ನಾಲಿಸಿ ದೇವತೆಗಳು ಪಿತಾಮಹನನ್ನು ಸಮೀಪಿಸಿ, ನಮಿಸಿ, ಕೈ ಜೋಡಿಸಿ ನಿಂತು, 'ಮಹಾಪ್ರಭೋ! ನಿನ್ನ ವಚನದಂತೆ ನಡೆದೆವು. ವೃಷಧ್ವಜನು ಪ್ರಸನ್ನನಾಗಿ ದಾನವಸಂಹಾರಕ್ಕೆಂದು ಸಿದ್ಧನಾಗಿ ನಿಂತಿರುವನು. ಚಿತ್ರಾಯುಧ ಸಮನ್ವಿತವಾದ ರಥವೂ ಸಜ್ಜಾಗಿದೆ. ಸಾರಥಿಯನ್ನು ಕಾಣದೆ ಚಿಂತಾಕ್ರಾಂತರಾಗಿರುವೆವು. ದೇವಕಾರ್ಯವು ಅವಶ್ಯ ಕರ್ತವ್ಯವೆಂದು ನೀನೇ ಅಭಯವಿತ್ತು, ಇಷ್ಟು ಕಾರ್ಯವನ್ನು ನೇರವೇರಿಸಿರುವೆ! ವೇದಗಳು ಕುದುರೆಗಳಾಗಿ, ಧರೆಯು ರಥವಾಗಿ, ಮೇರುವು ಧ್ವಜವಾಗಿ, ಸಾಕ್ಷಾನ್ಮಹೇಶನೇ ರಥಿಕನಾಗಿದ್ದು, ಸಾರಥಿಯಿಂದ ಕೆಲಸ ನಿಂತಿದೆ. ದೇವ ದೇವ! ತನ್ನಕಿಂತಲು ಶ್ರೇಷ್ಠತರವಾದ ಸಾರಥಿಯೇ ಆಗಬೇಕೆಂದು ರುದ್ರನ ಅಭಿಮತ; ಅದರಂತೆ ಸಾರಥಿಯಾಗಿ ಅವನನ್ನು ಕಾಪಾಡೆಂದು ನಿನ್ನನ್ನು ಬೇಡಲು ಬಂದಿರುವೆವು. ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ರುದ್ರಸಾರಥಿಯಾಗು; ನಿನ್ನಂತಹ ಸಾರಥಿ ಮತ್ತಿಲ್ಲ. ಸರ್ವಗುಣಗಳಿಂದ ಸರ್ವದೇವತೆಗಳಿಗೂ ಅಧಿಕನೆನಿಸಿ ಮೆರೆವೆ ! ನೀ ಕಾಪಾಡದಿರೆ ದೈತ್ಯ ಸಂಹಾರ ಕಾರ್ಯದಲ್ಲಿ ರುದ್ರಾದಿಗಳೆಲ್ಲರೂ ಅಸಮರ್ಥರಾಗುವರು. ದೇವತೆಗಳ ಜಯವೂ, ದಾನವರ ವಧೆಯೂ ನಿನ್ನಲ್ಲಿ ಆಹಿತವಾಗಿದೆ. ಬಂದು ರಥವನ್ನು ನಡೆಸು ! ದೇವಹಿತಕ್ಕಾಗಿ ಬಾಣದಲ್ಲಿ ನಿಂತ

ನಾರಾಯಣನಂತೆ, ಹರಿಸುತನಾದ ನೀನು ಸಾರಥಿಯಾಗಿ, ರುದ್ರನಿಗೆ ಜಯಕೀರ್ತಿಗಳನ್ನು ತಂದುಕೊಡು!' ಎಂದು ವಿನಯದಿಂದ ಪ್ರಾರ್ಥಿಸಿದರು.

ಬ್ರಹ್ಮದೇವನು ಅವರ ಪ್ರಾರ್ಥನೆಯನ್ನು ಮನ್ನಿಸಿ, ತಾನಿತ್ತ ವಚನದಂತೆ, ದೇವಕಾರ್ಯವನ್ನು ನೆರವೇರಿಸಲು ರುದ್ರಸಾರಥಿಯಾಗಿ ಬಂದನು. ಬ್ರಹ್ಮನು ಸಾರಥಿ ಸ್ಥಾನದಿ ಬಂದು ಕೂಡಲು, ಆ ಲೋಕಸ್ರಷ್ಟನ ಭಾರವನ್ನು ತಡೆಯಲಾರದೆ, ಕುದುರೆಗಳು ಮುಗ್ಗರಿಸಿದವು, ಮಹಾತೇಜಸ್ಕನಾಗಿ ಮೆರೆದ ಚತುರ್ಮುಖನು ಹಯರಾಜಿಯನ್ನು ಕೈಲಿ ಮುಟ್ಟಿ, ಮೇಲಕ್ಕೆಬ್ಬಿಸಿ, ಹಯರಶ್ಮಿಗಳನ್ನು ಹಿಡಿದು 'ರುದ್ರ! ಬಾ! ಕೂಡು ರಥಿಕನಾಗಿ' ಎಂದನು. ಮಹಾದೇವನು ವಾತವೇಗದಿಂದೋಡುವ ತುರಗಗಳನ್ನು ಕಟ್ಟಿದ ದಿವ್ಯಸ್ಯಂದನವನ್ನೇರಿದನು. ಖಡ್ಗ ಬಾಣ ಶರಾಸನಗಳನ್ನು ಧರಿಸಿ, ದಿವ್ಯತೇಜದಿಂದ ಮೂರ್ಲೋಕಗಳನ್ನು ದಹಿಸುವಂತೆ ಮೆರೆವ ಮಹಾದೇವನು ರಥಾರೂಢನಾಗಿ, ತನ್ನನ್ನ ಸ್ತುತಿಪ ದೇವಗಂಧರ್ವ ಋಷಿವರರನ್ನು ಕರುಣೆಯಿಂದ ವೀಕ್ಷಿಸಿ, ಇಂತೆಂದನು:

'ಇಂದ್ರಾದಿ ವೃಂದಾರಕರೇ! ಹೆದರಬೇಡಿ! ದೈತ್ಯತ್ರಯವು ಸಪುರಪರಿವಾರವಾಗಿ ನಷ್ಟರಾದರೆಂದು ತಿಳಿಯಿರಿ!' ಎಂದ ಮಂದಾಕಿನೀಧರನ ಮಾತನ್ನು ಕೇಳಿ, ಆನಂದದಿಂದ ದೇವವೃಂದವು 'ಮಹಾದೇವ! ನೀನಾಡಿದ ಮಾತು ಎಂದಿಗಾದರೂ ಸುಳ್ಳಾಗುವುದುಂಟೇ? ಪೊರೆ ಎಮ್ಮನ್ನು! ಕಡಿ ದೈತ್ಯರನ್ನು!' ಎಂದರು. ಎಲ್ಲ ದೇವತೆಗಳು ಉದ್ಯತಾಯುಧರಾಗಿ ಹಿಂಬಾಲಿಸಿ ನಡೆಯಲು, ಮಹಾದೇವನು, ಅನುಪಮ ರಥದಲ್ಲಿ ಕೂತು, ಸಮಾಗಮವನ್ನು ಪೊಂದುತ್ತಿರುವ ತ್ರಿಪುರಗಳಿಗಭಿಮುಖನಾಗಿ ನಡೆದನು. ಪ್ರಮಥ ಪಾರಿಷದರು ಸಿಂಹಾರವಗಳನ್ನು ಮಾಡುತ್ತಾ ಅನುಸರಿಸಿದರು. ಋಷಿಗಳು ವೇದ ಘೋಷವನ್ನು ಮಾಡುತ್ತಾ ಜಯವನ್ನು ಆಶ್ವಾಸಿಸಿದರು. ಲೋಕಗಳಿಗೆ ಅಭಯವನ್ನೀವ ಮಹೇಶನ ರಣಕೂತೂಹಲವನ್ನು ಕಂಡು ಜಗತ್ತೇ ಆನಂದಭರಿತವಾಯಿತು.

ಋಷಿವರರ ತಪೋಬಲದಿಂದಲು, ಬ್ರಹ್ಮದೇವನ ಸಾರಥ್ಯದಿಂದಲು, ನಾರಾಯಣಾಖ್ಯ ದಿವ್ಯಶರದಿಂದಲು, ಮಹಾ ಪರಾಕ್ರಮಿಯಾಗಿ ವಿಜೃಂಭಿಸಿದ ಮಹಾದೇವನು, ದೇವದುಂದುಭಿಧ್ವಾನಗಳನ್ನೂ, ಗಂಧರ್ವಗಾನವನ್ನೂ ಆಕರ್ಣಿಸುತ್ತಾಂ ನಡೆದನು. ಆಕಾಶವನ್ನು ಅಳಿವವೆಂಬಂತೆ ಹಯರಾಜಗಳು ಕೆನೆಯುತ್ತಾ ಅಂಬರದಿ ಓಡಿದವು. ಧ್ವಜದಲ್ಲಿದ್ದ ವೃಷಭರಾಜನು ದಿಕ್ಕುಗಳು ಮಾರ್ಮೊಳಗುವಂತೆ ಗುಟುರು ಹಾಕಿದಾಗ, ತಾರಕಾಕ್ಷಾದಿ ದೈತ್ಯರು ಅದನ್ನು ಕೇಳಿ, ಎದೆ ಒಡೆದರು. ಅವರಿಗೆ ದುರ್ನಿಮಿತ್ತಗಳು ತಲೆದೋರಿದವು. ಅವರ ಅಮೃತರಸದ ಬಾವಿಯು ಬರಿದಾಯಿತು. ಶ್ರೀಹರಿಯು ಆಕಳಾಗಿ, ಬ್ರಹ್ಮನು ಕರುವಾಗಿ, ಅಲ್ಲಿಗೆ ಬಂದು, ಅದರಲ್ಲಿ ಬಿದ್ದಂತೆ ಮಾಡಿ ಅಮೃತ ರಸವನ್ನು ಕುಡಿದು, ಬಾವಿಯನ್ನು ಬರಿದು ಮಾಡಿದರು. ರಾಕ್ಷಸರು ಹತಾಶರಾಗಿ, ಉಗ್ರ ಶಬ್ದಗಳನ್ನು ಮಾಡುತ್ತಾ, ಶೂಲಪಾಣಿಯನ್ನೆದುರಿಸಿ, ಕಾದಿದರು. ರುದ್ರನು ಕ್ರೋಧದುರ್ನಿರೀಕ್ಷ್ಯನಾಗಿ ಮುಂದೆ ಸಾಗಿದನು. ಧನುರ್ಭಾರ, ಬಾಣಭಾರ, ಸಾರಥಿಭಾರಗಳನ್ನು ತಡೆಯಲಾರದೆ ಭೂಮಿಯ ರಥವು ಬಾಗಿತು. ಆಗ ಶ್ರೀಹರಿಯು ವೃಷಭ ರೂಪನಾಗಿ ವೃಷಧ್ವಜನ ರಥ ಗಜಸಾರಥಿ ರಥಿಕ ಧ್ವಜಗಳನ್ನು ಎತ್ತಿ ಹಿಡಿದು,

ಕಂಪಿಸದಂತೆ ಎರಡಾಗಿ ಸೀಳಿದನು: ಮತ್ತು ತನ್ನ ಕುದುರೆಗಳು ಹೆದರದಂತೆ ಅವುಗಳ ಸ್ತನಭಾಗಗಳನ್ನು ಖಂಡಿಸಿದನು. ಅಂದಿನಿಂದ ಸಕಲ ವೃಷಾದಿ ಪಶುಗಳು ದ್ವಿಖುರವಾದವು, ತುರಗಗಳು ವಿಸ್ತನವಾದವು.

ವೃಷರೂಪೀ ನಾರಾಯಣನ ಮೇಲಿದ್ದ ರಥವರದಲ್ಲಿ ಕೂತ ಮಹಾದೇವನು, ಬ್ರಹ್ಮದೇವನ ಸಾರಥ್ಯ ಚಾತುರ್ಯದಿಂದ ತ್ರಿಪುರಗಳೊಂದೆಡೆ ಕಲೆತಾಗ, ಸರಿಯಾಗಿ, ತದಭಿಮುಖನಾಗಿದ್ದನು. ತತ್‌ಕ್ಷಣವೇ ಧನುವನ್ನೆತ್ತಿ, ಗುಣವನ್ನಿಟ್ಟು, ನಾರಾಯಣದೇವತಾಕವಾದ ಪಾಶುಪತ ಬಾಣವನ್ನು ಆಕರ್ಣಾಂತವಾಗಿ ಸೆಳೆದು ರುದ್ರನು ಜಯರುದ್ರ! ಮಹಾಬಾಹೋ! ಜಯಶಂಕರ ಶಂ ಕುರು! ಎಂದ ದೇವಜಯಧ್ವಾನಗಳನ್ನು ಕೇಳುತ್ತಾ, ತ್ರಿಪುರಗಳಿಗೆ ಗುರಿಯಿಟ್ಟು ಬಿಟ್ಟನು.

ತ್ರೈಲೋಕ್ಯಸಾರವಾದ ನಾರಾಯಣಶರವು ಉರಿಯುತ್ತಾ ತ್ರಿಪುರಗಳನ್ನು ಮುಟ್ಟಿ, ಸಂಪೂರ್ಣವಾಗಿ ದಹಿಸಿ, ಕೆಳಗೆ ಬೀಳಿಸಿತು. ಪುರವಾಸಿ ದುಷ್ಟದಾನವರ ಆರ್ತನಾದದೊಡನೆ ಪಶ್ಚಿಮಸಮುದ್ರದಲ್ಲಿ ಬಿದ್ದ ಪುರತ್ರಯವನ್ನು ಕಂಡು, ದೇವತೆಗಳು ಆನಂದಿಂದ ಆ ದೇವತ್ರಯವನ್ನು ಕೊಂಡಾಡಿದರು. ಪುರಗಳನ್ನು ದಹಿಸಿ, ಬಿಡದೆ ಉರಿಯುತ್ತಿರುವ ಹರಿಶಂಕರನನ್ನು ನೋಡಿ, ತ್ರಿನೇತ್ರನು ಕೈಜೋಡಿಸಿ ನಮಿಸಿ, 'ಮಹಾನೃಸಿಂಹ! ಏಕಿಷ್ಟು ಕೋಪ! ಸಾಕು! ತ್ರಿಪುರರು ನಷ್ಟರಾದರು! ಲೋಕಗಳು ನಿನ್ನ ಅಸ್ತ್ರವಹ್ನಿಯಿಂದ ಹಾಳಾಗದಂತೆ ಕಾಪಾಡು!' ಎಂದು ಬೇಡಿಕೊಂಡನು. ಆಗ ನಾರಾಯಣಾಸ್ತ್ರವು ಶಾಂತವಾಯಿತು, ಲೋಕಗಳು ವಿಜ್ವರವಾದವು. ದೇವಋಷಿ ಗಂಧರ್ವಾದಿ ಸುಜನರು ಪ್ರಸನ್ನರಾದರು. ಅಪ್ರತಿಮ ಪ್ರಭಾವನಾದ ಮಹಾದೇವನನ್ನು ಭಕ್ತಿಯಿಂದ ಸ್ತುತಿಸಿ, ಕೃತಕೃತ್ಯರಾಗಿ, ತಂತಮ್ಮ ಲೋಕಗಳನ್ನು ಸೇರಪೋದರು. ಇಂತು ದೇವಾಸುರಗಣಾಧ್ಯನಾದ ತ್ರ್ಯಕ್ಷನು, ತನಕಿಂತಲು ಉತ್ತಮನಾದ ಬ್ರಹ್ಮದೇವನ ಸಾರಥ್ಯಬಲದಿಂದ, ತ್ರಿಪುರಾಸುರನನ್ನು ಗೆದ್ದು ಲೋಕಹಿತವನ್ನು ಸಾಧಿಸಿದನು.' ಇಂತು ಮಾರ್ಕಂಡೇಯನು ನಮ್ಮ ತಂದೆಗೆ ಹೇಳಿದ ಕತೆಯನ್ನು ನಾನು ಕೇಳಿರುವೆನು.

ಮದ್ರರಾಜ! ರುದ್ರನಿಗೆ ಪಿತಾಮಹನಂತೆ, ರಾಧೇಯನಿಗೆ ನೀನು ಸಾರಥಿಯಾಗು! ನೀನು ಕರ್ಣನಕಿಂತಲು ಉತ್ತಮನು ಸಂಶಯವಿಲ್ಲ; ಅಷ್ಟೇ ಅಲ್ಲ, ನೀನು ಕೃಷ್ಣಪಾರ್ಥರಿಗೂ ಉತ್ತಮನು. ಯುದ್ಧದಲ್ಲಿ ರುದ್ರನೋ, ನೀತಿಯಲ್ಲಿ ಬ್ರಹ್ಮನೋ, ವಿಜಯದಲ್ಲಿ ವಿಷ್ಣುವೋ ಎಂಬಂತಿರುವ ನೀನು ನನ್ನ ಶತ್ರುಗಳನ್ನು ಗೆಲ್ಲಲು ಸಮರ್ಥನಿರುವೆ! ಇಂದು ಕರ್ಣನು ನಿನ್ನ ಸಾರಥ್ಯಬಲದಿಂದ ವರ್ಧಿತವೀರ್ಯನಾಗಿ, ಕೌಂತೇಯನನ್ನು ಸಂಹರಿಸುವಂತಾಗಲಿ! ನಿನ್ನಲ್ಲಿ ನನ್ನ ರಾಜ್ಯಾಶೆ, ಜೀವಿತಾಸೆಯೂ ಆಹಿತವಾಗಿದೆ. ಕರ್ಣನಿಗೆ ಸಾರಥಿಯು ನೀನಾದೊಡೆ, ನನ್ನ ಕೈಲಿ ವಿಜಯವು ಸಿಕ್ಕಿತೆಂದು ನಂಬಿರುವೆನು. ಕರ್ಣನು, ನಾನು, ನನ್ನ ರಾಜ್ಯ, ಯುದ್ಧಜಯ ಇವೆಲ್ಲವೂ ನಿನ್ನಿಂದ ಉಳಿಯಬೇಕಾಗಿವೆ.

ಭಾರ್ಗವಕುಲಜನಾದ ಮಾರ್ಕಂಡೇಯನು ನನ್ನ ತಂದೆಗೆ ಹೇಳಿದ ಇನ್ನೊಂದು ಕಥೆಯಿದೆ ಕೇಳು! ಚಿತ್ರವಾದೀ ವೃತ್ತಾಂತವನ್ನು ಕೇಳಿ, ನಿನ್ನ ಮನ ಬಂದಂತೆ ಮಾಡು! ಭಾರ್ಗವಕುಲದಲ್ಲಿ ಜನಿಸಿದ ಜಮದಗ್ನಿ ಮಹಾ ಮುನಿಗೆ ಪರಶುರಾಮನೆಂಬ

ಮಗನಾದನು; ಆತನು ಸ್ವಯಂ ತೇಜೋಬಲ ವೀರ್ಯಧೈರ್ಯಾದಿ ಗುಣಾನ್ವಿತನಾಗಿದ್ದನು. ಲೋಕಸಂಗ್ರಹಕ್ಕೆಂದು ಆತನೂ ತಾನು ಸರ್ವಜ್ಞನಾರಾಯಣನಾಗಿದ್ದೂ ಗುರುಕುಲವಾಸವನ್ನು ಮಾಡಿದನು. ಮಹೇಶನನ್ನು ತಪದಿಂದ ಮೆಚ್ಚಿಸಿ, ಆತನಿಂದ ದಿವ್ಯಾಸ್ತ್ರಗಳನ್ನು ಪೊಂದಿದನು. ಮಹಾದೇವನು ಮಹಾದೇವಿಗೆ 'ದೇವಿ! ರಾಮನೆಂದರೆ ನಾರಾಯಣನೆಂದು ತಿಳಿ! ನಮ್ಮ ಕುಲದೈವವಾದ ಶ್ರೀಹರಿಯೇ ಭಾರ್ಗವಕುಲಜನಾಗಿ ನನ್ನನ್ನು ತಪದಿಂದ ಸಂತೋಷಪಡಿಸಿದನೆಂದರೆ, ಇದಕ್ಕಿಂತ ವಿಡಂಬನೆ ಉಂಟೇ? ಅವನು ಸರ್ವಜ್ಞನು, ಸರ್ವಶಕ್ತನು, ಸರ್ವೋತ್ತಮನು. ದುಷ್ಟಜನ ಮೋಹನಾರ್ಥವಾಗಿ ನನ್ನನ್ನು ಕುರಿತು ತಪಮಾಡಿದಂತೆ, ನನ್ನಿಂದ ಅಸ್ತ್ರಗಳನ್ನು ಪಡೆದಂತೆ ನಟಿಸಿದನು. ಈ ಅಸ್ತ್ರದೇವತೆಗಳು ಸರ್ವರೂ ಆತನ ಕಿಂಕರರಾಗಿ ಸೇವಿಸುತ್ತಿರುವರು. ದೇವತೆಗಳನ್ನು ಪೀಡಿಸುವ ದೈತ್ಯರನ್ನು ರಾಮನು ವಧಿಸಿ, ಅವರಿಗೆ ಕ್ಷೇಮ ವಿಜಯಗಳನ್ನಿತ್ತಿರುವನು,' ಎಂದು ಪ್ರಶಂಸಿಸಿದನು. ಇಂತಹ ಲೋಕತ್ರಯ ವೀರನಾದ ಪರಶುರಾಮನು ಧನುರ್ವೇದವನ್ನು ಸಾಂಗವಾಗಿ ನಮ್ಮ ಕರ್ಣನಿಗೆ ಉಪದೇಶಿಸಿರುವನು.

ಶಲ್ಯ! ಕರ್ಣನು ಅಯೋಗ್ಯನಾಗಿದ್ದರೆ ಶ್ರೀ ಪರಶುರಾಮನು ಅವನಿಗೆ ಅಸ್ತ್ರಗಳನ್ನು ಕೊಡುತ್ತಿದ್ದನೇ? ಹೇಳು! ನಾನಂತೂ ಕರ್ಣನನ್ನು ಕಂಡು ಇವನು ಸೂತಸುತನಲ್ಲ, ದೇವಪುತ್ರನಿರುವನು. ಇಲ್ಲದಿರೆ ಇವನಿಗೆ ಸಹಜಕವಚ ಕುಂಡಲಗಳಿರುತ್ತಿದ್ದವೇ? ಇವನು ಸುಕ್ಷತ್ರಿಯ ವಂಶ ಸಂಭೂತನಿರಬೇಕೆಂದೇ ನನ್ನ ಮನವು ಒತ್ತಿ ಹೇಳುತ್ತಿದೆ! ನೋಡವನ ಪೀನ ಭುಜದ್ವಯವನ್ನು! ನೋಡು ದೀರ್ಘಪೀವರದೋರ್ದಂಡ ಯುಗವನ್ನು! ನೋಡು ವಿಶಾಲವಕ್ಷವನ್ನು! ನೋಡಿ ತಿಳಿ ಕರ್ಣನು ಸುಕ್ಷತ್ರಿಯನೆಂದು! ಮೃಗಿಯು ಮೃಗರಾಜನನ್ನು ಹೆರುವುದೇ! ಪ್ರತಾಪವಂತನು, ರಾಮಶಿಷ್ಯನು ಆದ ಕರ್ಣನಿಗೆ ಸಾರಥಿಯಾಗು! ರಥಿಕನಿಗೂ ಸಾರಥಿಯು ಶ್ರೇಷ್ಠತರನೆಂದು ರುದ್ರಚತುರ್ಮುಖರನ್ನು ನೋಡಿ ತಿಳಿ! ನಮ್ಮ ಪ್ರಾರ್ಥನೆಯನ್ನು ಮನ್ನಿಸು!'

ಶಲ್ಯನು ದುರ್ಯೋಧನವಚನವನ್ನಾಲಿಸಿ, ನಗುತ್ತಾ ಇಂತೆಂದನು: 'ರಾಜನ್! ನಾನೂ ತ್ರಿಪುರ ಕಥೆಯನ್ನು ಕೇಳಿರುವೆನು. ಶ್ರೀಕೃಷ್ಣನ ಮಹಿಮೆಯನ್ನೂ ಕೇಳಿ, ತಿಳಿದಿರುವೆನು. ಶ್ರೀಕೃಷ್ಣನು ಭೂತಭವದ್ಭವಿಷ್ಯಜ್ಜಗಗಳಿಗೆ ಒಡೆಯನಾದ ನಾರಾಯಣನು. ಅವನೀಗ ಪಾರ್ಥಸಾರಥಿಯಾಗಿ ಬಂದಿರುವನು. ಒಂದು ವೇಳೆ ನೀನು ತಿಳಿದಂತೆ, ಕರ್ಣನು ಕೌಂತೇಯನನ್ನು ಕೊಂದರೆ ಕೃಷ್ಣನು ಸುಮ್ಮನೆ ಕೂಡುವನೆಂದು ತಿಳಿಯಬೇಡ! ಶಂಖಚಕ್ರಗದಾಧನುರ್ಬಾಣಪಾಣಿಯಾಗಿ ಕ್ಷಣದಲ್ಲಿ ಆ ಮಹಾನುಭಾವನು ನಿನ್ನ ಸೈನ್ಯವನ್ನೆಲ್ಲ ನಿಮ್ಮನ್ನು ಕೂಡ ಸುಟ್ಟು ನಾಶಮಾಡುವನಿದಕೆ ಸಂಶಯವಿಲ್ಲ. ಅವಕ್ರವಿಕ್ರಮನಾದ ಚಕ್ರಪಾಣಿಗೆ ಎದುರಾಗಿ ನಿಲ್ಲುವವರಿಲ್ಲ; ನಿಂತರೆ ಗೆಲ್ಲುವವರಿಲ್ಲ.'

ಆ ಮಾತಿಗೆ ಖಿನ್ನನಾಗಿ ದುರ್ಯೋಧನನು 'ಶಲ್ಯರಾಜ! ಕರ್ಣನು ಸೂರಸುತನು. ಅವನು ಕೃಷ್ಣಾರ್ಜುನರಿಗೆ ಹೆದರುವವನಲ್ಲ. ಸರ್ವಶಸ್ತ್ರಾಸ್ತ್ರವೇದಿಯಾದ ಕರ್ಣನಿಗೆ ಅವರು ಸಮರಲ್ಲ. ಪ್ರತ್ಯಕ್ಷವಾಗಿ ಕರ್ಣವಿಕ್ರಮವನ್ನು ನೋಡುತ್ತಿರುವ ನಿನಗೆ ನಾನು ಹೇಳಬೇಕಾಗಿಲ್ಲ.

ಕರ್ಣನ ಧನುಷ್ಟಂಕಾರವನ್ನು ಕೇಳಿ, ಪಾಂಡವೀ ಸೇನೆಯು ದಿಕ್ಕೆಟ್ಟು ಓಡುವುದು. ಇಂದಿನವರೆಗೂ ಕರ್ಣನೊಡಗೂಡಿ ದ್ವಂದ್ವಯುದ್ಧವನ್ನು ಮಾಡುವ ಸಾಹಸಕ್ಕೆ ಸವ್ಯಸಾಚಿಯು ಕೈಹಾಕಿಲ್ಲ. ಭೀಮ-ನಕುಲ-ಸಹದೇವರನ್ನು ಸೋಲಿಸಿ, ಕುತ್ತಿಗೆಗೆ ಬಿಲ್ಲನ್ನು ಹಾಕಿ ಸೆಳೆದಾಡಿ ನಗೆಯಾಡಿದ ಕರ್ಣನು ಸಾಮಾನ್ಯನಲ್ಲ. ಅವನಿಗೆ ಸೋತು ಸಾತ್ಯಕಿಯಂತಹ ಮಾಹಾವೀರನು ರಣರಂಗ ವಿಮುಖನಾದನು. ಅಂತಹ ಕರ್ಣನನ್ನು ಪಾಂಡವರು ಖಂಡಿತವಾಗಿ ಗೆಲ್ಲಲಾರರು. ನೀನೂ ಮಹಾವೀರನಿರುವೆ! ನೀವೀರ್ವರೂ ಜೋಡಾಗಿ ರಥಿಕಸಾರಥಿಗಳಾಗಿ ನಿಂತರೆ ಅಗ್ನಿವಾಯುಗಳಿಗೆ ಸಿಕ್ಕ ವನದಂತೆ ಪಾಂಡವರು ಹಾಳಾಗದಿರುವರೇ? ಶತ್ರು ಹೃದಯ ಶಲ್ಯನಾದ ನೀನು ಕೃಷ್ಣನಿಗೂ ಬಲಾಧಿಕನಿರುವೆ! ಅರ್ಜುನನು ನಿಹತನಾದರೆ ಕೃಷ್ಣನೇ ಕಾದುವೆನೆಂದೆ! ಒಂದು ವೇಳೆ ಕರ್ಣನೇ ನಿಹತನಾದರೆ, ನೀನು ನನ್ನ ಸೈನ್ಯಕ್ಕೆ ಆಧಾರನಾಗಿ ನಿಲ್ಲುವ ಬಾಹುಬಲಸಮಗ್ರನಾಗಿರುವೆ! ಕೃಷ್ಣನು ಆಯುಧವನ್ನು ಹಿಡಿಯುವುದು ಸುಳ್ಳು! ನೀನು ಆಯುಧಪಾಣಿಯಾಗಿ ನನ್ನ ಶತ್ರುಗಳನ್ನು ಕೊಲ್ಲುವುದು ನಿಜ!' ಎಂದನು.

ಆಗ ಶಲ್ಯನು, 'ಗಾಂಧಾರೇ! ಕೃಷ್ಣನಕಿಂತಲೂ ವಿಶಿಷ್ಟನಹುದೆಂದು ರಾಜಸಭೆಯಲ್ಲಿ ನುಡಿದೆ! ಪ್ರೀತನಾದೆನು. ಕರ್ಣನಿಗೆ ಸಾರಥಿಯಾಗಿರುವೆನು. ಆದರೆ ನನ್ನ ಮನಕ್ಕೆ ಬಂದಂತೆ ಮಾತಾಡುವೆನು. ನೀನಾಗಲಿ, ಕರ್ಣನಾಗಲಿ, ನನ್ನ ಹಿತವನ್ನು ಅನ್ಯಥಾ ತಿಳಿಯಬಾರದು' ಎಂದನು. ಆ ಮಾತಿಗೆ ಕರ್ಣಸುಯೋಧನರು ಸಮ್ಮತಿಸಲು, ಶಲ್ಯನು ಕರ್ಣಸಾರಥಿಯಾದನು. ದುಯೋಧನನು 'ಶಲ್ಯ! ಕರ್ಣನು ಅರ್ಜುನನೊಡನೆ ಕೂಡಿ ಕಡಿದಾಡಲು ನಿಶ್ಚಯಿಸಿರುವನು. ಅವನು ಪಾಂಡವಸೇನೆಯನ್ನು ನಾಶಪಡಿಸಿ, ಅರ್ಜುನನನ್ನು ಕೊಂದುಬಿಡಲು ಹವಣಿಸುತ್ತಿರುವನು. ಅವನಿಗೆ ತಕ್ಕ ಸಾರಥಿಯಾಗಿ, ಅವನನ್ನು ವಿಜಯದ ಕಡೆ ನಡೆಸು!' ಎಂದನು. ಶಲ್ಯನು ಸುಯೋಧನನನ್ನು ಕರೆದಪ್ಪಿ, 'ದುರ್ಯೋಧನ! ನೀನು ನಿಯಮಿಸಿದಂತೆ ಸಾರಥ್ಯದಲ್ಲಿ ನಿಂತು, ಸರ್ವಾತ್ಮನಾ ನಿನ್ನ ಕಾರ್ಯವನ್ನು ಚನ್ನಾಗಿ ನಡೆಸಿಕೊಡುವೆನು. ಚಿಂತಿಸಬೇಡ! ಹಿತಕಾಮನಾಗಿ ಕರ್ಣನಿಗೆ ನಾನಾಡುವ ವಚನಗಳನ್ನು, ಪ್ರಿಯಾಪ್ರಿಯಸಮನಾಗಿ ಕರ್ಣನು ಸ್ವೀಕರಿಸಲಿ! ನೀನೂ ಅವನ್ನು ಲೆಕ್ಕಿಸಬೇಡ!' ಎಂದನು.

ಆಗ ಕರ್ಣನು ಶಲ್ಯನನ್ನು ಕಂಡು 'ಮದ್ರೇಶ! ಮಹಾದೇವನಿಗೆ ಬ್ರಹ್ಮದೇವನಂತೆ ನನಗೆ ನೀನು ಸಾರಥಿಯಾಗಿ ಕಾಪಾಡು! ನನ್ನ ಹಿತವನ್ನು ಸಾಧಿಸು!' ಎಂದನು. ಶಲ್ಯನು, 'ಕರ್ಣ! ಪರಸ್ತುತಿ, ಆತ್ಮನಿಂದೆ ಇವೆರಡೂ ಸಜ್ಜನರಿಗೆ ನಿಂದ್ಯವೆನಿಸಿರಲು ಇನ್ನು ಆತ್ಮಸ್ತುತಿ, ಪರನಿಂದೆ ಇವೆರಡೂ ನಿಂದ್ಯತರವೆಂದು ಹೇಳಬೇಕೆ? ಆದರೂ ನಿನ್ನ ಹಿತ, ನಿನ್ನ ಜೀವಿತಗಳನ್ನು ಉಪಲಕ್ಷಿಸಿ ನಾನಾಡುವ ಕಿಡಿಮಾತುಗಳನ್ನು ಲಕ್ಷಿಸದೆ ಸುಮ್ಮನಿರು! ಶಕ್ರಸಾರಥಿಯಾದ ಮಾತಲಿಯಂತೆ ನಾನು ಸೂತ ಕೃತ್ಯಚತುರನಿರುವೆನು. ನಿನ್ನ ತುರಗಗಳನ್ನು ವಿಜಯಕ್ಕಾಗಿ ವಿಜಯನಲ್ಲಿಗೆ ನಡೆಸುವೆನು. ನಡೆ!' ಎಂದನು. ದುರ್ಯೋಧನನು ಕರ್ಣನನ್ನು ಶಲ್ಯನ ಕೈಲ್ಲಿಟ್ಟು-ನಿಶ್ಚಿಂತನಾದನು. ಇಂತು ಪ್ರಥಮ ಚತುರ್ದಶಿಯ ರಾತ್ರಿ

ಕಳೆಯಲು ಕುರುಪಾಂಡವ ಸೇನೆಗಳು ಮತ್ತೆ ಯುದ್ಧಸಿದ್ಧವಾಗಿ, ಕುರುಕ್ಷೇತ್ರದಲ್ಲಿ ಬಂದು ನಿಂತವು.

## ೭. ಸಪ್ತದಶಮ ದಿನದ ಯುದ್ಧ — ಶಲ್ಯ = ಕರ್ಣ ಸಂವಾದ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

ರಾಜನ್! ಮರುದಿನ ಬೆಳಗಾಗುತ್ತಲೇ ಉಭಯವಾಹಿನಿಗಳು ಉತ್ಸಾಹದಿಂದ ರಣರಂಗದಲ್ಲಿ ಬಂದು ನಿಂತವು. ಶಲ್ಯನು ಕರ್ಣದುರ್ಯೋಧನರ ಪ್ರಾರ್ಥನೆಯಂತೆ ಕರ್ಣಸಾರಥಿಯಾದನು. ಕರ್ಣನು, 'ಶಲ್ಯ! ಸೂತಕೃತ್ಯನಿರತನಾಗಿ, ನನ್ನ ಸ್ಯಂದನವನ್ನು ಸಜ್ಜುಗೊಳಿಸಿ ತಾ!' ಎಂದನು. ಶಲ್ಯನು ಗಂಧರ್ವನಗರ ಸದೃಶವಾದ ರಥವನ್ನು ವಿಧಿವತ್ತಾಗಿ ಕಲ್ಪಿಸಿ, ಕರ್ಣನನ್ನು ಕಂಡು 'ಜಯ!' ಎಂದು ಆಶ್ವಾಸಿಸಿ ರಥವು ಸಿದ್ಧವಿದೆ ಎಂದು ತಿಳಿಸಿದನು. ಕರ್ಣನು ರಥತುರಗಾದಿಗಳನ್ನು ಪೂಜಿಸಿ, ಬ್ರಹ್ಮವಿದರು ಸ್ವಸ್ತಿವಾಚನಗಳು ಪೇಳುತ್ತಿರಲು ಪ್ರದಕ್ಷಿಣಿಸಿ, ಸೂರ್ಯನಿಗೆ ನಮಿಸಿ, 'ಶಲ್ಯ! ಏರು ರಥವನ್ನು!' ಎಂದನು. ಸಿಂಹವು ಮಂದರಾಚಲವನ್ನು ಏರಿದಂತೆ, ಏರಿ ಕೂತ ಶಲ್ಯರಾಜನನ್ನು ಕಂಡು, ಕರ್ಣನು ಕದನಕುತೂಹಲಿಯಾಗಿ, ಮೇಘವನ್ನೇರಿ ಬರುವ ಮಾರ್ತಾಂಡನಂತೆ, ರಥವನ್ನೇರಿ ಹೊರಟನು. ಆದಿತ್ಯಾಗ್ನಿಗಳಂತೆ ಬೆಳಗುವ ಕರ್ಣಶಲ್ಯರು ಸ್ವಭಟರ ಸಂಸ್ತವ ಶಬ್ದಗಳನ್ನಾಲಿಸುತ್ತಾ ಹೇಷಾರವದಿಂದ ಮುಂದೆ ಸಾಗುವ ಸ್ಯಂದನತುರಗಗಳನ್ನು ಮೆಚ್ಚುತ್ತಾ ಸಾಗಿದರು.

ಮಂದರಸ್ಥನಾದ ಮಾರ್ತಾಂಡನಂತೆ ರಣತಾಂಡವ ದೀಕ್ಷಿತನಾಗಿ ಮೆರೆವ ಕರ್ಣನನ್ನು ಸಮೀಪಿಸಿ, ದುರ್ಯೋಧನನು, "ಕರ್ಣ! ದ್ರೋಣ-ಭೀಷ್ಮರಿಂದಾಗದ ಸಾಹಸವನ್ನು ಇಂದು ನೀನು ಸಾಧಿಸು! ಸರ್ವ ಧನುರ್ಧಾರಿಗಳು ಬೆರಗಾಗುವಂತೆ ವಿಕ್ರಮಿಸು! ಭೀಷ್ಮದ್ರೋಣರು ಭೀಮಾರ್ಜುನರನ್ನು ಕೊಲ್ಲಬಹುದೆಂಬ ಭರವಸೆ ನನಗಿತ್ತು. ಆದರೆ ಅವರು ಪಾಂಡವರ ಪಕ್ಷಪಾತದಿಂದ ನನ್ನ ಜಯಾಶೆಯ ಹೆಮ್ಮರವನ್ನು ಕಿತ್ತೊಗೆದು, ತಾವೂ ಹತರಾದರು. ಕರ್ಣ! ವಜ್ರಪಾಣಿಯಂತೆ ವಿಜೃಂಭಿಸಿ, ನನ್ನ ಆಶಾಲತೆಯು ಮತ್ತೆ ಚಿಗುರುವಂತೆ ಮಾಡು! ಹಿಡಿ ಧರ್ಮರಾಜನನ್ನು! ಅಥವಾ ಕೊಲ್ಲು ಧನಂಜಯನನ್ನು! ಕೈಲಾದರೆ ಭೀಮನನ್ನು ಯಮನ ಮನೆಗಟ್ಟು! ಮಾದ್ರಿ ಪುತ್ರರು ಸಿಕ್ಕರೆ ಮತ್ತೆ ಬಿಡಬೇಡ! ಜಯವಾಗಲಿ ನಿನಗೆ! ಪಾಂಡವ ಸೈನ್ಯವನ್ನು ಸೀಳಿ ಚೆಂಡಾಡು!" ಎಂದು ಹುರಿದುಂಬಿಸಿದನು.

ಆಗ ಸಾವಿರ ತೂರ್ಯಗಳು, ಹತ್ತುಸಾವಿರ ಭೇರಿಗಳು ಮೊಳಗಿದವು. ದುರ್ಯೋಧನನ ವಚನದಿಂದ ಅಭಿನಂದಿತನಾದ ರಾಧೇಯನು, ಯುದ್ಧವಿಶಾರದನಾದ ಶಲ್ಯನನ್ನು ಕಂಡು 'ಸೂತ! ಹೊಡೆ ರಥವನ್ನು ಪಾರ್ಥನಲ್ಲಿಗೆ! ಅವನು ಇನ್ನಿಲ್ಲವೆನಿಸಿಬಿಡುವೆನು. ಇಂದು ಪಾರ್ಥನು ನನ್ನ ಬಾಹುವೀರ್ಯದ ರುಚಿಯನ್ನು ಕಂಡು ದಿಗ್ಭ್ರಾಂತನಾಗಲಿ! ಭೀಮಯಮಳಯುಧಿಷ್ಠಿರರು ನನ್ನ ಬಾಣಸಹಸ್ರದಿಂದ ಜರ್ಜರಿತಗಾತ್ರರಾಗಿ, ಯುದ್ಧವಿಮುಖರೋ ಅಥವಾ ಯಮಸಮ್ಮುಖರೋ ಆಗುವಂತೆ,

ಹೋರಾಡುವೆನು. ಪಾಂಡವನಾಶವನ್ನೂ, ದುರ್ಯೋಧನನ ಜಯವನ್ನೂ ಸಂಪಾದಿಸದಿರೆ, ನಾನು ಕರ್ಣನಲ್ಲ!' ಎಂದನು.

ಶಲ್ಯನು 'ಏನಂದೆ? ಸೂತನಂದನ! ಪಾಂಡವರೆಂದರೆ ಷಂಡತಿಲರೆಂದು ಈಗಲೂ ತಿಳಿದಿರುವೆಯಾ? ಮಹಾಬಲರು, ಸರ್ವಶಸ್ತ್ರಾಸ್ತ್ರಕುಶಲರು, ಯುದ್ಧರಂಗಾನಿ ವರ್ತಿಗಳು, ಸತ್ಯವಿಕ್ರಮರು ಆದ ಪಾಂಡವರನ್ನು ನೀನು ಸರಿಯಾಗಿ ಅರಿತಿಲ್ಲ. ಸಾಕ್ಷಾದಿಂದ್ರನೂ ಅವರೊಡನೆ ಕಾದಲು ಹಿಂಜರಿವನು. ರಾಧೇಯ! ಗಾಂಡೀವಟಂಕಾರವು ಕರ್ಣ ತಾಡಿತವಾಗುವವರೆಗೂ ಈ ಮಾತು. ಭೀಮಸೇನನು ಕುಂಜರಾನೀಕವನ್ನು ಭಂಜಿಸುತ್ತಾ ಬರುವುದನ್ನು ಕಂಡು, ಆಮೇಲೆ ಇಂತು ನುಡಿಯಲಾರೆ! ಧರ್ಮಜ ಯಮಳರು ನಿಶಿತ ಶರಸಂಕುಲವನ್ನಾಗಿಸಿದ ರಣಾಕಾಶವನ್ನು ಕಂಡಮೇಲೆ ಇಂತು ನುಡಿಯಲಾರೆ! ಧೃಷ್ಟದ್ಯುಮ್ನಾದಿ ಮಹಾವೀರರು ವಿಜೃಂಭಿಸಿದಾಗ ನಿನ್ನ ವಚನಪ್ರತಾಪವು ತಣ್ಣಗಾದೀತು!' ಎಂದನು.

ಮದ್ರರಾಜನ ಭಾಷಿತವನ್ನು ಲಕ್ಷಿಸದೆ, ಕರ್ಣನು 'ಇರಲಿ! ನಡೆ!' ಎಂದು ಮೂದಲಿಸಿದನು. ಕರ್ಣರಥವು ಮುಂದೆ ಸಾಗಿತು. ಕುರುವೀರರು ಪ್ರಹೃಷ್ಟಾಂತರಂಗರಾಗಿ, ಸಿಂಹನಾದಮಾಡುತ್ತಾ ಮುನ್ನಡೆದರು. ದುಂದುಭಿ ಭೇರೀನಿನಾದಗಳಿಂದ ಬಾಣಶಬ್ದಗಳು ಮೇಳವಿಸಿದವು. ಮೃತ್ಯುದೇವಿಗೆ ಆಹ್ವಾನತಾಂಬೂಲವನ್ನಿತ್ತು ಕುರುಸೇನೆಯು ಹಿಂದಿರುಗಬಾರದೆಂದು ನಿಶ್ಚಯಿಸಿ, ಪಾಂಡವಸೇನೆಯನ್ನು ಮುತ್ತಿ ಭಯಂಕರ ರಣದಲ್ಲಿ ತೊಡಗಿತು. ಆಕಾಶದಿಂದ ಉಲ್ಕೆಗಳುದುರಿದವು, ದಿಕ್ಕುಗಳು ಉರಿದಂತೆ ತೋರಿದವು. ಮೇಘವಿಲ್ಲದೆ ಸಿಡಿಲು ಬಡಿದವು. ಗಾಳಿ ಭೈರವಸ್ವನಗೈದು ಬೀಸಿತು. ಮೃಗಪಕ್ಷಿಗಳು ಕುರುಸೇನೆಗೆ ಅಪ್ರದಕ್ಷಿಣವಾಗಿ ತಿರುಗಿದವು. ಕರ್ಣನ ತುರಗಗಳು ಎರಡು ಹೆಜ್ಜೆಯಿಟ್ಟು ಮಗ್ಗರಿಸಿ ಬಿದ್ದವು ಗಾಳಿ ಹಿಂದಿನಿಂದ ಬೀಸುತ್ತಿರಲು, ಧ್ವಜವು ಮುಂದಕ್ಕೆ ಹಾರುತ್ತಾ, ಕರ್ಣಾದಿಗಳ ಮನದಲ್ಲಿ ಅಪಜಯದ ಭಯವನ್ನು ತುಂಬಿತು! ಅಂತರಿಕ್ಷದಿಂದ ಎಲುಬಿನ ಮಳೆಬಿತ್ತು. ಸೈನಿಕರ ಕೈಲಿದ್ದ ಶಸ್ತ್ರಗಳು ಕಾವೇರಿದವು! ಧ್ವಜಗಳು ಕಂಪಿಸಿದವು! ವಾಹನಗಳು ಕಣ್ಣೀರು ಸುರಿಸಿದವು. ಇಂತಹ ದಾರುಣೋತ್ಪಾತಗಳನ್ನು ನೋಡಿ ದೈವಮೋಹಿತರಾದ ಕುರುವೀರರು ಲೆಕ್ಕಿಸದೆ ಪರಮೋತ್ಸಾಹದಿಂದ ಮುನ್ನುಗ್ಗಿ ಪಾಂಡವಸೇನೆಯ ನಾಶ ಸಮೀಪಿಸಿದೆ! ಎಂದು ತಿಳಿದು, ಜಯಧ್ವಾನಗಳನ್ನು ಮಾಡಿದರು.

ಕರ್ಣನು ಭೀಷ್ಮದ್ರೋಣರ ವಿಕ್ರಮವನ್ನೂ ಪಾರ್ಥಭೀಮರ ಅತಿವಿಕ್ರಮವನ್ನೂ ತುಲನೆಮಾಡಿ ತಿಳಿದು, ಅಭಿಮಾನದರ್ಪ ಕ್ರೋಧಗಳಿಂದ ಉರಿದೆದ್ದು, ನಿಟ್ಟುಸಿರಿಟ್ಟು ಶಲ್ಯನಿಗಿಂತೆಂದನು: 'ಶಲ್ಯ! ಕ್ರುದ್ಧನಾದ ವಜ್ರಪಾಣಿಗೂ ನಾನು ಹೆದರುವವನಲ್ಲ! ಭೀಷ್ಮದ್ರೋಣರ ಪತನವನ್ನು ಕಂಡು ನಾನು ಎದೆಯೊಡೆದಿಲ್ಲ. ಮಹೇಂದ್ರವಿಷ್ಣುಪ್ರತಿಮರಾದ ದ್ರೋಣಪಿತಾಮಹರು ಅವಧ್ಯರೆನಿಸಿದ್ದೂ. ಶತ್ರುನಿಹತರಾದರೆಂದರೆ, ಅವರು ಅವೀರ್ಯರೆಂದಲ್ಲ, ಪರರು ದೈವಬಲಸಹಿತರೆಂದು ತಿಳಿದು ನಾನು ನಿರ್ಭಯನಾಗಿರುವೆನು. ಇಲ್ಲದಿರೆ ವಿಪ್ರಪುಂಗವನ ಅಸ್ತ್ರಪಕ್ಷಿಯಿಂದ

ಬೆಂದುಬೂದಿಯಾಗದಿರುತ್ತಿತ್ತೇ ಪಾಂಡವೀಸೇನೆ? ನಿಜ ನುಡಿವೆನು ಕೇಳು! ಉಗ್ರರೂಪೀಮೃತ್ಯುವಿನಂತೆ ಮೇಲೇರಿ ಬರುವ ಸವ್ಯಸಾಚಿಯನ್ನು ತಡೆಯುವ ಸಮರ್ಥವೀರನು ಈ ಕರ್ಣನೊಬ್ಬನೇ ತಿಳಿ. ಆಚಾರ್ಯನಲ್ಲಿ ಶಿಕ್ಷಾಪ್ರಸಾದವಿತ್ತು, ಬಲವಿತ್ತು ಧೈರ್ಯವಿತ್ತು, ಮಹಾಸ್ತ್ರಜಾಲವಿತ್ತು, ಅಂತಹ ಧನುರ್ಗುರುವೇ ಮೃತನಾದನೆಂದರೆ ಮಿಕ್ಕವರೂ ಅಸನ್ನಮರಣರಾಗಿರುವರೆಂದೇ ನಾನು ತಿಳಿಯದಿಲ್ಲ. ಜಗತ್ತಿನಲ್ಲಿ ಯಾರೂ ಶಾಶ್ವತರಲ್ಲ. ವಿದ್ಯಾವೀರ್ಯವಿಕ್ರಮಗಳೆಲ್ಲವೂ ದೈವಯೋಗಕ್ಕೆ ಸಮವಲ್ಲ. ನಾಳೆ ಬೆಳಗಾಗುವುದರೊಳಗೆ ಈಗಿರುವವರೆಲ್ಲರಿರುವುದಿಲ್ಲ. ಜೀವನವು ಜಲಬುದ್ಬುದವೆಂದು ನಾನು ತಿಳಿದಿರುವೆನು. ಆದರೂ ರಾಜ ಋಣಕ್ಕಾಗಿ ಕಡಿದಾಡಿ ಪ್ರಾಣಾರ್ಪಣವನ್ನಾದರೂ ಮಾಡಿಬಿಡಲು, ನಡೆವ ನನ್ನನ್ನು ಯಾರೂ ಅಂಜಿಸಿ, ಹಿಂದಿರುಗಿಸಲಾರರು. ಧೃತರಾಷ್ಟ್ರಸುತನು ಪರಾಜಿತನಾಗುವನು. ಅವನ ಅಂತಃಪುರವು ದುಃಖಾಕ್ರೋಶಭರಿತವಾಗದ ಮುನ್ನ, ಅವನ ಸೋದರರನ್ನೆಲ್ಲ ಸವರಿ ಸಮೀರಕುಮಾರನು ಸತ್ಯ ಪ್ರತಿಜ್ಞನಾಗದ ಮುನ್ನ ನನ್ನ ಪಾಲಿನ ಕರ್ತವ್ಯವನ್ನು ನೆರವೇರಿಸಿ ಸಾಯುವೆನು. ಹೊಡೆ ರಥವನ್ನು ಸತ್ಯಸಂಧನಾದ ಧರ್ಮಜನೆಡೆಗೆ! ಅಥವಾ ಯಾರಾದರೇನು? ಪಾಂಡವಮಾತ್ರನೆಡೆಗೆ! ಅವರನ್ನಾದರೂ ಸಂಹರಿಸುವೆನು, ಅಥವಾ ದ್ರೋಣನು ಪೋದಮಾರ್ಗವನ್ನನುಸರಿಸಿ ಪೋಗುವೆನು. ಮಿತ್ರದ್ರೋಹಿಯಂತೆ ರಣಮುಖವಿಮುಖನಾಗಲಾರೆನು. ದೈವಪ್ರಹಿತವಾಗಿ ಬರುವ ಮೃತ್ಯುವಿಗೆ ಪ್ರಾಜ್ಞರೆಂಬ ವೈಷಮ್ಯವಿಲ್ಲ; ಅಜ್ಞರೆಂಬ ನಿಷ್ಕರುಣೆಯೂ ಇಲ್ಲ. ದಿಷ್ಟದ ಇಷ್ಟದಂತೆ ನಡೆಯಲಿ! ಅಂತಕನ ಸತ್ಕಾರವೆನಗೆ ಸಿದ್ಧವಾಗಲಿ! ನನ್ನ ಮಿತ್ರನಾಗಿ, ರಾಜ್ಯವಿತ್ತು, ಸೋದರನಿಗೂ ಮಿಗಿಲಾಗಿ ಪ್ರೇಮವಿತ್ತು, ನಂಬಿರುವ ಗಾಂಧಾರೀಸುತನಿಗಾಗಿ ಪ್ರಿಯಭೋಗಗಳನ್ನೂ, ದಾರಾಸುತರನ್ನೂ, ಕೊನೆಗೆ ದುಸ್ತ್ಯಜಜೀವಿತವನ್ನು ಕೂಡ ಬಿಡಲು ಸಿದ್ಧನಿರುವೆನು.

ಶಲ್ಯ! ಈ ನನ್ನ ರಥವನ್ನು ದಿವ್ಯವೆಂದು ತಿಳಿ! ಹೇಮತ್ರಿಕೋಷ್ಠವು, ರಜತತ್ರಿ ವೇಣುವು, ತುರಗವರಯೋಜಿತವು, ವ್ಯಾಘ್ರಚರ್ಮಾವೃತವು ಆದ ಈ ದಿವ್ಯರಥವನ್ನು ನನಗೆ ಶ್ರೀಪರಶುರಾಮನಿತ್ತಿರುವನು. ವಿಜಯವೆಂಬ ವಿಚಿತ್ರದಿವ್ಯ ಶರಾಸನವನ್ನು, ದಿವ್ಯಾಸ್ತ್ರಗಳನ್ನು ಆತನೇ ದಯಪಾಲಿಸಿರುವನು. ನನ್ನ ಧ್ವಜ, ಗದೆ, ನಾರಾಚನಿವಹ, ಕರ್ಕಶಖಡ್ಗ, ದಿವ್ಯಶಂಖ, ಉಗ್ರಪತಾಕೆ, ಸಮರರಂಗದಲ್ಲಿ ಸಾಕ್ಷಾದ್ರುದ್ರನೇ ನಿಂತು ಸವ್ಯಸಾಚಿಯನ್ನು ಸಂರಕ್ಷಿಸುತ್ತಿದ್ದರೂ ನಾನು ಬಿಡದೆ ಕಾದಿ ಅವನನ್ನು ಕೊಲ್ಲಬಲ್ಲೆನು ಯಮವರುಣಕುಬೇರಪಾವಕರೇ ಸಗಣರಾಗಿ ಅರ್ಜುನನಿಗೆ ಸಹಾಯವಾಗಿ ನಿಂತರೂ, ಅವರನ್ನು ಗೆದ್ದು, ಅವನನ್ನು ಕೊಲ್ಲುವೆನು.'

ಶಲ್ಯನಾ ಮಾತಿಗೆ ನಕ್ಕು 'ಸಾಕುಮಾಡು ಸೂತಕುಮಾರ ನಿನ್ನ ವಾಗಾಡಂಬರವನ್ನು ನರವರನಾದ ಧನಂಜಯನೆಲ್ಲಿ? ನರಾಧಮನಾದ ನೀನೆಲ್ಲಿ? ತ್ರಿದಶೇಶರಕ್ಷಿತವಾದ ಸುರಪುರದಂತಿರುವ ದ್ವಾರಕೆಯಿಂದ ಪುರುಷೋತ್ತಮನ ತಂಗಿಯನ್ನು ತರಲು ಪಾರ್ಥನಿಗಲ್ಲದೆ ಮತ್ತೋರ್ವನಿಗೆ ಶಕ್ಯವೆ? ಸೂಕರವ್ಯಾಜದಿಂದ ಸುರೇಶನಾದ ಮಹಾದೇವನೊಡನೆ

ಕಾದಿ ಮೆಚ್ಚಿಸಲು ಅರ್ಜುನನಿಗಲ್ಲದೆ ಬೇರೊಬ್ಬನಿಗೆ ಸಾಧ್ಯವೇ? ಖಾಂಡವವನ್ನು ಪಾವಕನಿಗಿತ್ತು , ಸಕಲದೇವವೃಂದವನ್ನು ನಿರ್ಜಿಸಿ ತಡೆಯಲು ಸವ್ಯಸಾಚಿಗಲ್ಲದೆ ಇನ್ನೊಬ್ಬನಿಗೆ ಸುಕರವೇ? ಪ್ರಿಯಕಲಹನಾದ ನಿನ್ನ ಮಿತ್ರನನ್ನು ಚಿತ್ರರಥನು ಕಟ್ಟಿ ಕೊಂಡೊಯ್ಯುತ್ತಿರಲು, ಪ್ರಥಮಪಲಾಯನಪರನು ನೀನೇ ಅಲ್ಲವೇ? ಅವನನ್ನು ಬಿಡಿಸಿ ಉಳಿಸಿದವರು ಭೀಮಾರ್ಜುನರಲ್ಲವೇ? ಉತ್ತರಗೋಗ್ರಹಕಾಲವನ್ನು ನೆನೆ. ಅರ್ಜುನನೋರ್ವನೇ ಗುರು ಗುರುಸುತ ಕುರುಪಿತಾಮಹ ಕುರುರಾಜಾದಿಗಳನ್ನು ಗೆದ್ದು ಕೆಡಹಿದಾಗ ನೀನೆಲ್ಲಿದ್ದೆ? ಆಗ ಏಕೆ ಗೆಲ್ಲಲಿಲ್ಲ ಪಾರ್ಥನನ್ನು?' ಎಂದು ಆಕ್ಷೇಪಿಸಿದನು.

ಮದ್ರರಾಜನ ಪರುಷವಚನಗಳಿಂದ ರೋಷಾರುಣಿತನಯನನಾಗಿ ರಾಧಾತನಯನು 'ಇರಲಿ! ಸಾಕುಮಾಡು ನಿನ್ನ ಮಾತಿನ ಮಲ್ಲತನವನ್ನು ನಡೆಯಲಿದೆ. ಸಮರ ಕರ್ಣಪಾರ್ಥರಿಗೆ. ಗೆಲ್ಲಲಿ ಅರ್ಜುನ ನನ್ನನ್ನು; ಆಗ ನಿನ್ನ ಹೊಗಳಭಟ್ಟತನದ ಹುಚ್ಚು ಹೊಳೆ ಹರಿಸುವೆಯಂತೆ! ಹೊಡೆ ರಥವನ್ನು!' ಎಂದನು. ಶಲ್ಯನು ಸೇನಾನಿವಹದಲ್ಲಿ ತೂರಿ ಹೋಗುತ್ತಿರಲು, ಕರ್ಣನು ಪಾಂಡವ ಕೌರವ ಸೈನಿಕರನ್ನು ಕಂಡು 'ಅರ್ಜುನನನ್ನು ತೋರಿ ಅವನೆಲ್ಲಿರುವನು? ಶ್ವೇತವಾಹನನನ್ನು ತೋರಿಸಿದವನಿಗೆ ಬೇಡಿದಷ್ಟು ಧನವನ್ನು ಕೊಡುವೆನು. ಧನಂಜಯನನ್ನು ತೋರಿದವನಿಗೆ ರತ್ನಪೂರ್ಣ ಶಕಟವನ್ನು ಕೊಟ್ಟು ಸತ್ಕರಿಸುವೆನು. ಅದು ಸಾಲದೆಂದರೆ ನೂರು ಗೋಗಳನ್ನು ಕೊಡುವೆನು. ಶತಗ್ರಾಮಗಳನ್ನು ಅಶ್ವತರೀ ರಥವನ್ನು, ನೂರಾನೆಗಳನ್ನು, ಹೇಮ ಭಾಂಡಾರಗಳನ್ನು, ಮಣಿಗಣವನ್ನು, ಅಲಂಕೃತರಥವನ್ನು, ರಾಜಭೋಗಗಳನ್ನು ಕೊನೆಗೆ ನನ್ನ ರಾಜ್ಯವನ್ನಾದರೂ ಕೊಟ್ಟು, ಅರ್ಜುನದರ್ಶಕನನ್ನು ತೃಪ್ತಿಪಡಿಸುವೆನು. ಎಲ್ಲಿ ಆ ಪಾರ್ಥ? ತೋರಿ'! ಎಂದು ಘೋಷಿಸಿದನು. ಆ ಮಾತನ್ನಾಲಿಸಿ ದುರ್ಯೋಧನಾದಿ ಕೌರವರು ಪರಮಾನಂದ ಭರಿತರಾಗಿ, ಶಂಖನಾದಗಳನ್ನು ಮಾಡಿದರು.

ಶಲ್ಯನು ಕರ್ಣನನ್ನು ನೋಡಿ, ಅಪಹಸಿಸಿ ಇಂತೆಂದನು : 'ಸೂತಪುತ್ರ! ಸಾಯಲು ಇಷ್ಟೇಕೆ ತ್ವರೆ? ಸವ್ಯಸಾಚಿಯನ್ನು ಕಂಡ ಕರ್ಣನು ಕಥಾಮಾತ್ರಾವಶಿಷ್ಟನಾಗುವನು. ಸೌವರ್ಣರತ್ನಗ್ರಾಮತುರಗಗಜಾದಿಗಳನ್ನು ಕೊಡುವ ದುಂದುಗಾರಿಕೆ ಬೇಡ! ಅಪಾತ್ರರಿಗಿತ್ತು, ನಿನ್ನದಲ್ಲದ ಸಂಪತ್ತನ್ನು ತೂರಿ, ನಿನ್ನ ಮರಣವನ್ನೇಕೆ ಆಹ್ವಾನಿಸುವೆ? ಏನನ್ನೂ ಕೊಡದೆ, ಅರ್ಜುನವಾಸುದೇವರನ್ನು ಇಂದು ರಣರಂಗದಲ್ಲಿ ಮೃಗತೃಷ್ಣಿಕಾಜಲಪಾನವೆಂದು ತಿಳಿ! ಮೂರ್ಖನಂತೆ ಮಾತಾಡಬೇಡ! ಕಾರ್ಯಾಕಾರ್ಯವನ್ನರಿಯದೆ, ಬಹ್ವಬದ್ಧವಚನವನ್ನು ಆಡುವ ನಿನಗೆ ಕೇಡುಕಾಲ ಮೂಡಿದಂತಿದೆ. ಕಂಠದಲ್ಲಿ ಕಲ್ಲನ್ನು ಕಟ್ಟಿಕೊಂಡು ಕಡಲಿನಲ್ಲಿ ಬಿದ್ದವನಂತೆ, ಬೆಟ್ಟದ ಪ್ರಪಾತಕ್ಕೆ ಹಾರಿದವನಂತೆ, ಏಕಾಕಿಯಾಗಿ ಶ್ರೀಕೃಷ್ಣಾರ್ಜುನರನ್ನೆದುರಿಸಿ ಹಾಳಾಗಬೇಡ! ಸರ್ವಯೋಧಸಮನ್ವಿತನಾಗಿ ಕಡಿದಾಡು! ಕೆಲಕಾಲ ಬದುಕಿರು! ಈಡಾಡಬೇಕೆಂದಿರುವ ಧನಾದಿಗಳಿಂದ ಯಜ್ಞಾದಿ ಸತ್ಕರ್ಮಗಳನ್ನು ಮಾಡು! ನನ್ನ ವಚನವನ್ನು ಕಿವಿಗೊಟ್ಟು ಕೇಳಿ, ಅದರಂತೆ ನಡೆ! ನಿನಗೂ ಹಿತವಾಗುವುದು. ನಿನ್ನ ರಾಜನಿಗೂ ಸುಖವಾಗುವುದು.'

ಕರ್ಣನಾ ಮಾತಿಗೆ ಕುಪಿತನಾಗಿ ಇಂತೆಂದನು: 'ಮದ್ರರಾಜ! ನನ್ನ ಬಾಹು ವೀರ್ಯವನ್ನವಲಂಬಿಸಿ, ಅರ್ಜುನನೊಡನೆ ಕಾದಲಿರುವೆನು; ನಿನ್ನಂತಹ ಮಿತ್ರಮುಖ ಶತ್ರುವಿನ ಸಾರಥಿ ಕೃತ್ಯವನ್ನಲ್ಲ. ನನ್ನನ್ನು ಹೆದರಿಸಲು ಹೆಣಗುವ ನಿನ್ನ ಕುಟಿಲ ಪ್ರಯತ್ನವೆನ್ನ ಮುಂದೆ ಸಾಗದು. ಇಂದ್ರಾದಿ ದೇವತೆಗಳು ವಾರಿಸಿದರೂ ಬಿಡದ ನನ್ನ ಅರ್ಜುನಸಂಹಾರಕಾರ್ಯವನ್ನು ನಿನ್ನಂತಹ ನೀಚರು ನಿಲ್ಲಿಸಬಲ್ಲರೇ? ಸುಮ್ಮನಿರು!' ಶಲ್ಯನು ಕರ್ಣನ ಕೋಪವನ್ನರಿತು, ಮತ್ತೆ ರೇಗಿಸಲೆಣಿಸಿ ಇಂತೆಂದನು: "ಕರ್ಣ! ಒಣ ಸಾಹಸ ಒಳಿತಲ್ಲ. ದಿವ್ಯ ಧನುರ್ಮುಕ್ತ ತೀಕ್ಷ್ಣ ಬಾಣಗಳಿಂದ ಅರ್ಜುನನು ನಿನ್ನನ್ನು ಪೀಡಿಸಿದಾಗ ಪಶ್ಚಾತ್ತಾಪಪಡಬೇಕಾದೀತು! ತಾಯಿಯ ತೊಡೆಯಲ್ಲಿರುವ ಬಾಲಕನು ಚಂದ್ರನನ್ನು ಹಿಡಿಯಲೆಣಿಸಿದಂತೆ, ನೀನು ಅರ್ಜುನನನ್ನು ಹಿಡಿಯಲೆಣಿಸುತ್ತಿರುವೆ! ತೀಕ್ಷ್ಣಧಾರವಾದ ತ್ರಿಶೂಲದಿಂದ ಗಾತ್ರವನ್ನು ತಿವಿದುಕೊಂಡ ಮೂರ್ಖನಂತೆ, ಪಾರ್ಥನನ್ನೆದುರಿಸಿ ನೀನು ಉಳಿಯಲಾರೆ! ಕ್ರುದ್ಧಸಿಂಹದ ಜಟಾಜಾಲವನ್ನು ಪಿಡಿದು ಸೆಳೆವ ನರಿಯಂತೆ, ಅರ್ಜುನನನ್ನು ರಣಕ್ರೀಡೆಗೆಂದು ಕರೆದು ಕೆಡುವೆ! ಮಹಾವಿಷಸರ್ಪವನ್ನು ಕೈ ಕೋಲಿನಿಂದ ತಿವಿಯುವ ದಡ್ಡನಾಗಬೇಡ! ಭೀಕರ ಸಾಗರವನ್ನು ಹಣ್ಣೆಮೆಯಂದು ಹಡಗಿಲ್ಲದೆ ದಾಟಲೆಣಿಸುತ್ತಿರುವೆ! ಪನ್ನಗವು ಪತಗರಾಜನನ್ನಂತೆ, ವತ್ಸವು ವೃಷರಾಜನನ್ನಂತೆ, ನೀನು ಪಾರ್ಥನನ್ನೆದುರಿಸಿ ಕೆಡುವೆ; ಮಹಾಮೇಘನಾದವನ್ನು ಕೇಳಿ, ಕಪ್ಪೆಯು ಒಟಗುಟ್ಟಿದಂತೆ, ಜಂಬದ ಮಾತನ್ನಾಡಿ ಸುಯೋಧನನನ್ನು ಮೆಚ್ಚಿಸಬಲ್ಲೆಯಾಗಲಿ ಪಾರ್ಥನನ್ನು ಗೆಲ್ಲಬಲ್ಲೆಯಾ? ಮೊಲಗಳ ಹಿಂಡಿನಲ್ಲಿದ್ದ ನರಿಯು ಮೃಗರಾಜನಾಗುವುದೇ? ಗಾಂಡೀವಟಂಕಾರವನ್ನು ಕೇಳುವವರೆಗೂ, ಪಾರ್ಥಬಾಣಗಳಿಂದ ಬೀಳುವವರೆಗೂ, ವಚನವಿಕ್ರಮವನ್ನಾದರೂ ತೋರು; ನಿತ್ಯಸಿಂಹನಾದ ಧನಂಜಯನೆಲ್ಲಿ? ನಿತ್ಯಸೃಗಾಲನಾದ ನೀನೆಲ್ಲಿ? ಆತ್ಮಕರ್ಮಗಳಿಂದ ಕರ್ಣಪಾರ್ಥರು ಮೂಷಿಕ ಮಾರ್ಜಾಲಗಳಂತೆ, ಶುನಕವ್ಯಾಘ್ರಗಳಂತೆ, ಸೃಗಾಲಸಿಂಹಗಳಂತೆ, ಶರಕುಂಜರಗಳಂತೆ ಖ್ಯಾತರಾಗಿರುವರು. ನೀನು ಅನೃತವಾದರೆ ಪಾರ್ಥನು ಸತ್ಯವು; ನೀನು ವಿಷ; ಪಾರ್ಥನು ಅಮೃತವು.'

ಕರ್ಣನು ಶಲ್ಯನ ವಾಕ್ಶಲ್ಯಪೀಡಿತನಾಗಿ, ಸಿಟ್ಟಿನಿಂದ ಇಂತೆಂದನು: 'ಶಲ್ಯ! ಗುಣವಂತರು ಗುಣರಾಜಿಯನ್ನು ಗುಣವಂತನೇ ಬಲ್ಲನಾಗಲಿ ನಿನ್ನಂತಹ ಗುಣಹೀನನಲ್ಲ. ಅರ್ಜುನನ ವೀರ್ಯಶೌರ್ಯಗಳನ್ನು, ಧನುರ್ಬಾಣಾದಿ ಸಾಧನ ಸಂಪತ್ತಿಯ ಮಹಿಮೆಯನ್ನು ನಾನರಿತಿರುವೆನು. ಶ್ರೀಕೃಷ್ಣನ ಮಹಿಮೆಯನ್ನೂ ನಿನಕಿಂತಲು ಚನ್ನಾಗಿ ತಿಳಿದಿರುವೆನು. ಹಾಗೆಯೇ ನನ್ನ ವೀರ್ಯವಿಕ್ರಮಗಳನ್ನೂ ತುಲನೆ ಮಾಡಿ ತಿಳಿದಿರುವೆನು. ಬಹುಕಾಲದಿಂದ ಪೂಜಿತವಾಗಿ, ಬಂಗಾರದ ಬತ್ತಳಿಕೆಯಲ್ಲಿಟ್ಟು ತಂದ ನಾಗಬಾಣವನ್ನಲ್ಲಿದೆ. ಅದರಿಂದ ನಾನು ಮೇರುವನ್ನು ಸೀಳಬಲ್ಲೆನು. ಅಂತಹ ಘೋರಬಾಣವು ಅರ್ಜುನಪ್ರಾಣಾಪಹರಣಕ್ಕಾಗಿ ಮೀಸಲಾಗಿದೆ. ನನಗೆ ವಾಸುದೇವ ಧನಂಜಯರ ಪರಿಚಯವಿಲ್ಲ. ಕೃಷ್ಣನಲ್ಲಿ ಲಕ್ಷ್ಮಿ ನೆಲಸಿರುವಳು; ಭೀಮನಲ್ಲಿ ಬಲಜ್ಞಾನಗಳು ನೆಲಸಿರುವವು; ಪಾರ್ಥನಲ್ಲಿ ಜಯವು ಆಹಿತವಾಗಿದೆ. ಇಂತಹ ವೀರರೊಡನೆ ಕಾದಲು

ನಿಲ್ಲುವ ಕೆಚ್ಚೆದೆ ಕರ್ಣನಿಗಲ್ಲದೆ ಮತ್ತಾರಿಗಿದೆ? ಅರ್ಜುನ ಗಾಂಡೀವ ಕೃಷ್ಣಚಕ್ರಗಳು ಭೀರುಗಳಿಗೆ ತ್ರಾಸಜನಕವಾಗಲಿ ಕರ್ಣನಿಗಲ್ಲ.

ದುಷ್ಟ ಸ್ವಭಾವನು, ಯುದ್ಧಭೀರುವು ಆದ ನಿನ್ನ ಶತ್ರುಪ್ರಶಂಸಾವಚನಗಳಿಗೆ ನಾನು ಹೆದರಿ, ಮಣಿಯುವವನಲ್ಲ. ಸ್ನೇಹಿತರಂತೆ ಬಂದ ಶತ್ರುಗಳನ್ನು ನಂಬಿ, ನನ್ನ ಮಿತ್ರ ದುರ್ಯೋಧನನು ಕೆಟ್ಟ. ಮೊದಲು ಮಹಾವೀರರೆಂದು ನೀನು ಪ್ರಶಂಸಿಸುವ ಕೃಷ್ಣಪಾರ್ಥರನ್ನು ಕೊಂದು, ಆಮೇಲೆ ನಿನ್ನನ್ನೂ ಅವರಿಗೆ ವಂದಿಯಾಗಿರಲು, ಯಮನ ಮನೆಗೆ ಕಳಿಸುವೆನು. ದುಷ್ಟ ದೇಶದವನಾದ ನಿನಗೆ ಸದ್ಬುದ್ಧಿ, ಕೃತಜ್ಞತೆ, ಆರ್ಜವ ಮುಂತಾದ ಸುಗುಣಗಳ ಪರಿಚಯವೆಂತು ಬಂದೀತು? ವಾಸುದೇವಸಹಸ್ರವನ್ನೂ ಪಾರ್ಥಶತವನ್ನೂ ಕೂಡ ನಾನೊಬ್ಬನೇ ಸಂಹರಿಸಿಬಿಡುವೆನು.

ಆಬಾಲಗೋಪಾಲವಾಗಿ ಪ್ರಸಿದ್ಧವಾಗಿರುವ ನಿನ್ನ ಕಾಡುದೇಶೀಯರ ಕೇಡು ನಡತೆಯನ್ನು ಯಾರರಿಯರು? ಶಲ್ಯ! ಮದ್ರಕರಷ್ಟು ದುರ್ಮಾರ್ಗರಿಲ್ಲ. ರಾಜಸಭೆಯಲ್ಲೆ ವಿವಿಧ ದೇಶಸಂಚಾರ ಚತುರರಾದ ವಿಪ್ರರು ವರ್ಣಿಸಿದ ಮದ್ರಕರ ದುರ್ಗುಣಗಳನ್ನು ಪೇಳುವೆನು ಕೇಳು; ಉತ್ತರವಿದ್ದರೆ ಬೊಗಳು! ಮದ್ರಕರು ದುರಾತ್ಮರು; ವರಸೆ ಇಲ್ಲ; ಅಲ್ಲಿಯ ಸ್ತ್ರೀ ಜನರು ವ್ಯಭಿಚಾರಪರರು; ಅವರು ತಿನ್ನುವುದು ಹಿಟ್ಟಿನ ಮುದ್ದೆ ಮಿಾನು, ಗೋಮಾಂಸ, ಕುಡಿವದು ಹೆಂಡ; ಸ್ವೈರಿಣಿಯರಿಗೆ ಜನಿಸಿ, ಕಾಮಪ್ರಲಾಪಮತ್ತರಾದ ಮದ್ರಕರಿಗೆ ಧರ್ಮದ ಗಂಧವೂ ಗೊತ್ತಿಲ್ಲ. ಮದ್ರಕನಲ್ಲಿ ಸ್ನೇಹವಿಲ್ಲ. ಗಾಂಧಾರನಲ್ಲಿ ಶೌಚವಿಲ್ಲ. ಅವರು ಬ್ರಹ್ಮದ್ವೇಷಿಗಳು. ಅವರ ಸಂಗದಿಂದ ಮನುಜನು ಪತಿತನೆನಿಸುವನು. ವೃಶ್ಚಿಕ! ಹತಂತೇ ವಿಷಂ ಎಂಬ ಮಂತ್ರಕ್ಕೆ ಮದ್ರನಲ್ಲಿ ಸ್ನೇಹವಿಲ್ಲ; ಧರ್ಮವಿಲ್ಲ ಎಂಬ ಸತ್ಯದ ಆಣೆ ಇಟ್ಟರೆ, ವೃಶ್ಚಿಕ ವಿಷವು ನಷ್ಟವಾಗುವುದನ್ನು ನಾನು ಅನುಭವಿಸಿ ತಿಳಿದಿರುವೆನು. ತಿಷ್ಠನ್ಮೂತ್ರರಾದ ಮದ್ರಸ್ತ್ರೀಯರಿಗೆ ಲಜ್ಜೆ, ಧರ್ಮ, ಪಾತಿವ್ರತ್ಯಗಳು ಶಶವಿಷಾಣಗಳು; ಶೌಚವು ಗೊತ್ತಿಲ್ಲದ ವಸ್ತು; ನಖಶಿಖಪರ್ಯಂತವಾಗಿ ಕುಕರ್ಮಪೂರ್ಣನಾದ ಮದ್ರಕರಲ್ಲಿ ರಾಜನಾದ ನಿನಗೆ ಧರ್ಮವೆಂದರೆ ಏನೆಂದು ತಿಳಿಯುವ ಬಗೆಯಾದರೂ ಹೇಗೆ? ರಣಮರಣದಷ್ಟು ಉತ್ತಮ ಧರ್ಮವಿಲ್ಲ ಕ್ಷತ್ರಿಯನಿಗೆ; ಧಾರ್ತರಾಷ್ಟ್ರನಿಗೆ ಪ್ರಿಯಸಖನಾಗಿ ಅವನಿಗಾಗಿ ಪ್ರಾಣವನ್ನಾದರೂ ಅರ್ಪಿಸಲಿರುವೆನು. ನನ್ನನ್ನು ಅರ್ಜುನನು ಕೊಲ್ಲಲಿ; ಅಥವಾ ನಾನಾದರೂ ಅವನನ್ನು ಕೊಲ್ಲುವೆನು. ನನ್ನನ್ನು ರಣರಂಗದಿಂದ ವಿಮುಖನನ್ನಾಗಿಸಲು ತೆಗಳುವ ನಿನ್ನ ಯತ್ನ ವ್ಯರ್ಥವೆಂದು ತಿಳಿ; ಪಾಂಡವರನ್ನು ವಹಿಸಿ ಮಾತಾಡುವ ನಿನ್ನ ಗೂಢಚರ್ಯವನ್ನು ನಾನರಿಯದಿಲ್ಲ. ಈಗ ನಿನ್ನ ತಲೆಯನ್ನು ಕೆಡಹಬೇಕೆಂದಿದೆ; ಆದರೂ ಮಿತ್ರನಾದ ದುರ್ಯೋಧನನ ಮುಖವನ್ನು ನೋಡಿ, ಸಹಿಸಿ ಸುಮ್ಮನಿರುವೆನು. ಮತ್ತೊಂದು ಸಲ ಇಂತು ಮಾತಾಡಿದರೆ ಕೊಲ್ಲದೆ ಬಿಡೆನು ತಿಳಿ ; ಇರಲಿ ನಡೆ ಮುಂದಕ್ಕೆ.'

ಆ ಮಾತನ್ನು ಲಕ್ಷಿಸದೆ ಶಲ್ಯನಿಂತೆಂದನು : 'ಸೂತಸುತ ; ಸಂಗ್ರಾಮಾನಿ ವರ್ತಿಗಳಾದ ಚಕ್ರವರ್ತಿಗಳ ಸದ್ವಂಶದಲ್ಲಿ ಜನಿಸಿರುವೆನು, ಸ್ವಯಂ ಧರ್ಮ

ಪರಾಯಣನಾಗಿರುವೆನು. ಮದ್ಯವನ್ನು ಹೀರಿ ಮೈಮರೆತವನಂತೆ ಪ್ರಮಾದವಶನಾಗಿರುವ ನಿನಗೆ ಹಿತಚಿಕಿತ್ಸೆಮಾಡಿ, ಉಳಿಸಲೆಣಿಸುವ ನನ್ನನ್ನೇ ಕೊಲ್ಲಲೆಣಿಸುವ ನಿನ್ನಂತಹ ಮೂರ್ಖರಿಲ್ಲ. ಕುಲಪಾಂಸನನಾಗಿ ಕೌರವ ಕುಲವನ್ನು ಸಮೂಲವಾಗಿ ನಾಶಮಾಡಲು ಬಂದಿರುವ ನಿನ್ನಂತಹ ಪಾಪಿ ಇನ್ನಿಲ್ಲ. ನಾನೆಂದಿಗೂ ಯಾವ ಪಾಪವನ್ನೂ ಮಾಡಿಲ್ಲ. ನಿನ್ನಂತಹ ದಂಭೋಕ್ತಿಗಳನ್ನು ಕೇಳಿ, ನನಗೆ ಕಾಕಾಖ್ಯಾನವು ನೆನಪಿಗೆ ಬಂದಿದೆ. ಸಾರಥಿಯಾಗಿರುವ ನನ್ನಿಂದ ಹಿತವಚನವು ಶ್ರವಣೀಯವೆನಿಸಿದೆ ಕೇಳು:

## ೮. ಹಂಸಕಾಕೀಯೋಪಾಖ್ಯಾನ

ಶಲ್ಯನು 'ಕರ್ಣ! ಪ್ರತಿವೀರರ ಬಲಾಬಲಗಳು, ಸಾಮ್ಯವೈಷಮ್ಯಗಳು, ಸ್ವರಥಿಕನ ಸ್ವೇದಶ್ರಮಗಳು, ಹಯಶಕ್ತಿ, ಆಯುಧಪರಿಜ್ಞಾನ, ಶಕುನಗಳು, ಮೃಗಪಕ್ಷಿರುತಗಳು, ಶಲ್ಯಪ್ರತಿಕ್ರಿಯೆ, ಅಸ್ತ್ರಪ್ರತಿಯೋಗ ಮುಂತಾದವನ್ನರಿತು, ರಥವನ್ನು ಕುಟುಂಬವೆಂದು ತಿಳಿದು, ರಥಿಕನನ್ನು ಕಾಪಾಡುವವನೇ ಸಾರಥಿಯು; ಬರಿ ಬಂಡಿಬೋವನಲ್ಲ.

ಸಮುದ್ರತೀರದಲ್ಲಿದ್ದ ನಗರದಲ್ಲಿ ವೈಶ್ಯನೊಬ್ಬನಿದ್ದನು. ಧನಧಾನ್ಯಸಮೃದ್ಧನಾದ ಆ ವೈಶ್ಯನು ಯಾಗದಾನಗಳನ್ನು ಚನ್ನಾಗಿ ಮಾಡಿ, ಸ್ವಧರ್ಮನಿರತನಾಗಿದ್ದನು. ಅವನಿಗೆ ಬಹುಪುತ್ರರಿದ್ದರು. ಧರ್ಮಪ್ರಧಾನನಾಗಿ ರಾಜನ ರಾಜ್ಯದಲ್ಲಿ ನಿರ್ಭಯನಾಗಿದ್ದ ವೈಶ್ಯನು ಸರ್ವಭೂತ ದಯಾವಂತನಾಗಿದ್ದನು. ಅವನ ಸುತರು ಬಾಲ್ಯಕ್ರೀಡಾನಿರತರಾಗಿ, ಮನೆಯ ಮುಂದೆ ಒಂದು ಕಾಗೆಯನ್ನು ಉಂಡ ಎಂಜಲನ್ನವನ್ನು ಹಾಕಿ, ಪೋಷಿಸುತ್ತಿದ್ದರು. ಅವರಿತ್ತ ದಧಿಕ್ಷೀರ ಪಾಯಸ ಘೃತಶರ್ಕರಾದಿ ಮೃಷ್ಟಾನ್ನವನ್ನುಂಡು ಆ ಕಾಗೆ ಕೊಬ್ಬಿ, ತನ್ನವರನ್ನೂ, ತನಕಿಂತಲು ಶ್ರೇಷ್ಠರನ್ನೂ ತೆಗಳುತ್ತಿತ್ತು.

ಒಂದು ದಿನ ವೈಶ್ಯಬಾಲರು ಕಾಗೆಯೊಡಗೂಡಿ ಸಮುದ್ರತೀರದಲ್ಲಿ ಆಡುತ್ತಿರಲು, ಹಂಸಸಮೂಹವೊಂದಲ್ಲಿಗೆ ಬಂತು. ರಾಜಹಂಸಗಳನ್ನು ನೋಡಿ, ಅವುಗಳ ಗಮನವೇಗವನ್ನು ಮೆಚ್ಚಿ ಬಾಲಕರು ಕಾಗೆಯನ್ನು ಸಮೀಪಿಸಿ 'ಕಾಕರಾಜ! ಪಕ್ಷಿಗಳಲ್ಲಿ ನೀನೇ ಶ್ರೇಷ್ಠನಲ್ಲವೇ?' ಎಂದು ಕೇಳಿದರು. ಉಚ್ಛಿಷ್ಟದರ್ಪಿತವಾದ ಕಾಕವು 'ನಾನೇ ವಿಹಗಶ್ರೇಷ್ಠನು. ನನ್ನ ಜಾತಿಯಲ್ಲಾಗಲಿ, ಇತರ ಪಕ್ಷಿ ಜಾತಿಯಲ್ಲಾಗಲಿ ನನಗೆ ಸಮರಿಲ್ಲ. ನೋಡುತ್ತಿರಿ! ಗಮನ ವೇಗದಲ್ಲಿ ಅಲ್ಲಿರುವ ಹಂಸರಾಜನನ್ನು ಸೋಲಿಸಿ ಬರುವೆನು' ಎಂದಿತು.

ಕಾಕವು ಹಂಸರಾಜಿಯನ್ನು ಸಮೀಪಿಸಿ, ಅವರ ರಾಜನನ್ನು ವಿಚಾರಿಸಿ, ತಿಳಿದು 'ನನ್ನೊಡನೆ ಹಾರು!' ಎಂದು ಅದನ್ನು ಕಾಲ್ಕೆರೆದು ಕರೆಯಿತು. ಕಾಕದರ್ಪವನ್ನು ಕಂಡು, ಚಕ್ರಾಂಗಗಳು ನಕ್ಕು, 'ನಾವಾರೆಂದು ತಿಳಿದೆ! ಮಾನಸ ಸರೋವರವೇ ನಮ್ಮ ನೆಲೆ. ದೂರಪಾತವೆಮಗೆ ಲೀಲಾಜಾಲ. ಹಂಸಗಳೆಂಬರೆಮ್ಮನ್ನು. ನಮ್ಮಲ್ಲಿ ಬಲ್ಲಿದನೊಡನೆ ಪಂದೆ ಹಾಕಿ ಹಾರುವ ಸಾಹಸವೇ ಒಂದು ಕಾಗೆಗೆ? ನೀನೆಂತು ಹಾರುವೆ ಹೇಳು!' ಎಂದವು. ಆ ಮಾತಿಗೆ ನಕ್ಕು, ವೈಶ್ಯಪುತ್ರರ ಕಡೆ ನೋಡಿ, ಮತ್ತೆ ಅವರನ್ನೀಕ್ಷಿಸಿ, ಕಾಕಾವು 'ವಿಚಿತ್ರ

ವಿವಿಧ ಪಾತರೀತಿಗಳನ್ನು ನಾನು ಬಲ್ಲೆನು; ಅವು ನೂರೊಂದಿವೆ ಕೇಳಿ! ಉಡ್ಡೀನ, ಅವಡೀನ, ಪ್ರಡೀನ, ಡೀನ, ನಿಡೀನ, ಸಂಡೀನ, ತಿರ್ಯಕ್‌ಡೀನ, ವಿಡೀನ, ಪರಿಡೀನ, ಪರಾಡೀನ, ಸುಡೀನ, ಅಭಿಡೀನ, ಮಹಾಡೀನ, ಅವಡೀನ, ಸ್ವಡೀನ, ಡೀನಡೀನ, ಸಂಪಾತ, ಸಮುದೀಷ,ಗತಾಗತ, ಪ್ರತಿಗತ, ಮುಂತಾದ ಬಹು ಚಿತ್ರಗತಿಗಳಿಂದ ಹಾರಿ ನನ್ನ ಬಲಚಾತುರ್ಯಗಳನ್ನು ತೋರುವೆನು. ಹೇಳಿ! ನಿರಾಶ್ರಯವಾದ ನಭಸ್ತಲವನ್ನತಿಕ್ರಮಿಸಿ, ಸಾಗರವನ್ನು ದಾಟುವ ಸಾಹಸವಂತನು ನಿಮ್ಮಲ್ಲಿರುವನೇ?' ಎಂದಿತು. ಆ ಮಾತನ್ನಾಲಿಸಿ ತಮ್ಮ ಸಾಕು ಕಾಗೆಯ ಆರ್ಭಟವನ್ನು ಮೆಚ್ಚಿ, ಬಾಲಕರು ಕುಣಿದಾಡಿದರು.

ರಾಜಹಂಸವು 'ಎಲವೋ ಕಾಗೆ! ಎಲ್ಲ ಪಕ್ಕಿಗಳು ಒಂದೇ ಪಾತವನ್ನರಿತಿರಲು ನೀನು ನೂರೊಂದು ಗತಿಗಳನ್ನು ತಿಳಿದವನೆಂದೆ! ನನಗೆ ಒಂದೇ ಗಮನ ಗತಿ ಬರುವುದು. ಆದರಿಂದ ಹಾರುವ ನನ್ನೊಡನೆ, ಸಾಗರವನ್ನು ದಾಟು! ಎಂದಿತು. ಅಲ್ಲಿದ್ದ ಕಾಗೆಗಳು ಹಂಸವನ್ನಪಹಸಿಸಿ 'ಒಂದು ಪಾತವರಿತ ದಡ್ಡ ಹಕ್ಕಿ, ಶತಪಾತ ಚತುರನಾದ ಕಾಕರಾಜನನ್ನು ಗೆಲ್ಲಬಲ್ಲುದೇ?' ಎಂದು ಆಕ್ಷೇಪಿಸಿದವು.

ಆಗ ಹಂಸ-ಕಾಕಗಳು ಸ್ಪರ್ಧೆಯಿಂದ ಸಮುದ್ರದ ಮೇಲೆ ಹಾರತೊಡಗಿದವು. ಹಂಸವು ಸುನಾಯಾಸವಾಗಿ, ಋಜುಗತಿಯಿಂದ ಹಾರುತ್ತಿತ್ತು. ಕಾಕವು ಶತಾಧಿಕವಿಚಿತ್ರಗತಿಯಿಂದ ಹಾರುತ್ತಾ, ಹಾರುತ್ತಾ, ಹಂಸವನ್ನು ಮೀರುವಂತೆ ತೋರಿತು. ಅದನ್ನು ನೋಡಿ ಕಾಗೆಗಳು ಹಂಸಗಳನ್ನು ನಗೆಯಾಡಿದವು. ನೋಡನೋಡುತ್ತಿರಲು ಹಂಸವು ಪಶ್ಚಿಮ ದಿಶೆಗೆ ಬಾಣದಂತೆ ಹಾರಿ, ಮಕರಾಲಯವನ್ನು ದಾಟತೊಡಗಿತು. ಅದರ ಹಿಂದೆ ಹೋಗುವ ಕಾಗೆ ಆಯಾಸದಿಂದ ಕಂಗೆಟ್ಟಿತು. ಮಹಾಸತ್ವಭಯಂಕರವು, ಮಹೋರ್ಮಿಸಂಕುಲವು ಆದ ಸಾಗರವನ್ನೀಕ್ಷಿಸಿ, ದುರಂತವಾದ ಅನಂತಾಕಾಶವನ್ನುಪಲಕ್ಷಿಸಿ, ಕಾಗೆ ಎದೆಗುಂದಿತು. ಬಹು ಶ್ರಾಂತವಾದ ಕಾಕವು ಬಾಯಿ ಬಿಡುತ್ತಾ, ಹಂಸವನ್ನು ಸಮೀಪಿಸಲು ಹೋಗಿ, ರೆಕ್ಕೆಗಳು ಸೋತು ಸಮುದ್ರದಲ್ಲಿ ಬೀಳುವಂತಾಯಿತು. ಅದರ ರೆಕ್ಕೆಗಳು ಮೇಲೆರಗುವ ಅಲೆಗಳಿಂದ ತೊಯ್ದವು. ಅದರ ತುಂಡವು ನೀರಿನಲ್ಲಿ ಮುಳುಗಿತು. ಸಾಯಲಿರುವ ಕಾಗೆಯನ್ನು ಕಂಡ ರಾಜಹಂಸವು ಸತ್ಪುರುಷ ವ್ರತವನ್ನು ನೆನೆದು, ಕಡುಕಷ್ಟದಿಂದ ಅದನ್ನು ಕಾಪಾಡಲೆಣಿಸಿ ಸಮೀಪಿಸಿ ಇಂತೆಂದಿತು:

'ಕಾಕರಾಜ! ಈಗ ನೀನು ಹಾರಾತ್ತಿರುವ ಗತಿಯ ಹೆಸರೇನು? ಬಾ ಮೇಲಕ್ಕೆ! ಹಾರು ಮುಂದಕ್ಕೆ!' ಎಂದ ಹಂಸನನ್ನು ನೋಡಿ, ಕಾಗೆಯು ಕಣ್ಣೀರಿಡುತ್ತಾ ಏಳುತ್ತಾ ಬೀಳುತ್ತಾ, ಸಮುದ್ರದ ಪಾರವನ್ನು ಕಾಣಲಾರದೆ, ಇಂತೆಂದಿತು: 'ಹಂಸರಾಜ! ಕಾಪಾಡೆನ್ನನ್ನು! ಕಾ, ಕಾ, ಎಂದೊದರುವ ಕಾಗೆಗಳಿಗೆ ಸಮುದ್ರದಾಚೆಯ ದಡಕ್ಕೆ ಹಾರಲು ಬರುವುದೇ? ಪ್ರಸನ್ನನಾಗು! ಪರರ ಮನೆ ಎಂಜಲನ್ನವನ್ನು ತಿಂದು ಕೊಬ್ಬಿ, ಗರುಡನು ನಾನೆಂದು ಭ್ರಮಿಸಿದೆನು, ತಪ್ಪಾಯಿತು. ಶರಣಾಗತನಾದೆನ್ನ ಪ್ರಾಣವನ್ನುಳಿಸು! ಬದುಕಿದ್ದರೆ, ಮುಂದೆಂದಿಗೂ ಪರರನ್ನು ಅವಮಾನಿಸುವುದಿಲ್ಲ. ಕೃಪದೋರು!'

ಇಂತು ಬೇಡುವ ಕಾಗೆಯನ್ನು ನೀರಿನಲ್ಲಿ ಮುಳುಗದಂತೆ ಮೇಲಕ್ಕೆತ್ತಿ, ಹೊತ್ತು ಹಂಸವು ಅನಾಯಾಸವಾಗಿ ದಡಸೇರಿಸಿತು; ಅದರ ಪ್ರಶಂಸೆಗೆ ಕಾಯದೆ ರಾಜಹಂಸವು ತನ್ನವರೊಡಗೂಡಿ, ಮಾನಸಸರವನ್ನು ಸೇರಪೋಯಿತು.

ಕರ್ಣ ! ವೈಶ್ಯಬಾಲರ ಪೋಷಣೆಯಿಂದ ಸೊಕ್ಕಿ ಹಂಸದಿಂದ ಸ್ಪರ್ಧಿಸಿದ ಕಾಗೆಯಂತೆ, ನೀನು ದುರ್ಯೋಧನಾದಿಗಳಿತ್ತ ರಾಜ್ಯವೈಭವದಿಂದ ಮದಮತ್ತನಾಗಿ ಅರ್ಜುನನೊಡನೆ ಸೆಣಸಿ ಸಾಯಲಿರುವೆ ! ಸದೃಶರನ್ನೇ ಅಲ್ಲದೇ, ನಿನಗೂ ಶ್ರೇಷ್ಠರನ್ನು ಕೂಡ ಕಡೆಗಣಿಸಿ ನುಡಿವೆ ! ದ್ರೋಣ ದ್ರೌಣಿ ಕೃಪ ಭೀಷ್ಮರು ಸಹಾಯವಾಗಿದ್ದರೂ, ವಿರಾಟನಗರದಲ್ಲಿ ಗೋಗಣವನ್ನು ಬಿಡಿಸಬಂದ ಪಾರ್ಥನನ್ನು-ಒಬ್ಬಂಟಿಗನನ್ನು ನೀನು ಗೆಲ್ಲಲಾರದೆ ಓಡಿಹೋದೆ ! ಭೀಮಕೃಷ್ಣಸಹಿತನಾಗಿ ಉರಿಯುತ್ತಾ ಬರುವ ಪಾರ್ಥಾಗ್ನಿಗೆ ಭೀಷ್ಮಾದಿ ರಕ್ಷಕರಹಿತನಾಗಿರುವ ನೀನು ಶಲಭನಂತಾಗುವೆ ತಿಳಿ ! ದ್ವೈತವನದಲ್ಲಿ ಗಂಧರ್ವರಿಗೆ ಸೋತ, ಗಂಧರ್ವರನ್ನು ಗೆದ್ದು ನಿನ್ನ ರಾಜನನ್ನು ಬಿಡಿಸಿದ ಪಾರ್ಥನೊಡನೆ ಕಾದಲು ಕಾದಿರುವ ನಿನಕಿಂತ ಮೂರ್ಖರಿಲ್ಲ. ಕೃಷ್ಣಪಾರ್ಥರಾರೆಂಬುದನ್ನು ನಿನ್ನ ಗುರುವೇ ಹೇಳಿ ವಾರಿಸಿದರೂ ನೀನು ಅವರೊಡನೆ ವೈರವನ್ನು ಬಿಟ್ಟಿಲ್ಲ. ಸರ್ವಭೂತಗಳಲ್ಲಿ ಬ್ರಾಹ್ಮಣನು ಉತ್ತಮನು; ಸರ್ವ ವೀರರಲ್ಲಿ ಪಾರ್ಥನು ಉತ್ತಮನು. ಕಾಗೆಗಾದರೂ ವಿವೇಕ ಬಂತು, ಹಂತವನ್ನಾಶ್ರಯಿಸಿ ಬದುಕಿತು. ನಿನಗಷ್ಟಾದರೂ ಅರಿವಿಲ್ಲ, ಅರ್ಜುನ ಶರಶತದಿಂದ ಗಾಯಗೊಂಡಾಗ ನಿನಗೂ ಅವನಿಗೂ ಇರುವ ಅಂತರವು ಗೊತ್ತಾದೀತು! ಸೂರ್ಯಚಂದ್ರರಂತೆ ಬೆಳಗುವ ಕೃಷ್ಣಪಾರ್ಥರನ್ನು ಕರ್ಣನೆಂಬ ಹೊನ್ನೇ ಹುಳ ಗೆಲ್ಲುವುದಂತೆ ! ಅಹಾ ! ನಿನ್ನ ವಿಕತ್ಥನವನ್ನು ಕೇಳಿ, ನನಗೆ ಅಸಹ್ಯವಾಗಿದೆ. ಸುಮ್ಮನಿರು ಸಾಕು ! ' ಎಂದನು.

ಮದ್ರಾಧಿಪನ ಅಪ್ರಿಯ ವಚನಗಳನ್ನಾಲಿಸಿ, ಕರ್ಣನು 'ಎಲವೋ ದುಷ್ಟಮಿತ್ರ ! ಗೊತ್ತಿದೆ ನನಗೆ ವಾಸುದೇವಾರ್ಜುನರ ವಿಕ್ರಮ. ಪಾಂಡವನಲ್ಲಿ ಮಹಾಸ್ತ್ರಗಳಿವೆ; ಆದರೂ ನಾನೇನು ಸಾಮಾನ್ಯನಲ್ಲ. ನಾನು ಭಾರ್ಗವರಾಮದೇವನ ಶಿಷ್ಯನೆಂದು ತಿಳಿ ! ಆ ಸ್ವಾಮಿಯು ಕೊಟ್ಟ ಶಾಪದಿಂದ ಬಂದ ಕುಂದಿಗಾಗಿ ನೊಂದಿರುವೆನು. ಬ್ರಾಹ್ಮಣನೆಂದು ಹೇಳಿಕೊಂಡು, ಶ್ರೀ ಭಾರ್ಗವನ ಸೇವೆ ಮಾಡುತ್ತಿದ್ದಾಗ, ದೇವರಾಜನು ಅರ್ಜುನ ಪಕ್ಷಪಾತದಿಂದ ನನ್ನ ವಿದ್ಯೆಗೆ ವಿಘ್ನವನ್ನು ತರಲೆಣಿಸಿ, ಕೀಟರೂಪದಿಂದ ನನ್ನ ತೊಡೆಯನ್ನು ಕೊರೆದನು. ಅಲ್ಲಿ ತಲೆ ಇಟ್ಟು ಮಲಗಿದ್ದ ಗುರುವರನಿಗೆ ನಿದ್ರಾಭಂಗವಾಗಬಾರದೆಂದು ನಾನು ಸುಮ್ಮನೆ, ನೋವನ್ನು ಸಹಿಸಿಕೊಂಡು ಕೂತಿದ್ದೆನು. ನನ್ನ ರಕ್ತದ ಕವೋಷ್ಣಸ್ಪರ್ಶದಿಂದ ಎಚ್ಚೆತ್ತ ಶ್ರೀರಾಮನು, ನನ್ನ ಧೈರ್ಯವನ್ನು ಕಂಡು 'ನೀನು ವಿಪ್ರನಲ್ಲ. ಯಾರು ನೀನು ಹೇಳು!' ಎಂದು ಜಬರಿಸಿ ಕೇಳಿದನು. ನಾನು ನನ್ನ ಸೂತತನವನ್ನು ತಿಳಿಸಲು, ರೋಷ ಪರೀತಚೇತನಾದ ಭಗವಂತನು, 'ಎಂತಹ ಮೋಸಮಾಡಿದೆ? ಮೃತಿಕಾಲದಲ್ಲಿ ನೀನೆನ್ನಲ್ಲಿ ಕಲಿತ ಅಸ್ತ್ರಗಳು ನಿನಗೆ ಪ್ರತಿಭಾತವಾಗದಿರಲಿ! ಅಬ್ರಾಹ್ಮಣನಾಗಿದ್ದೂ ಬಾಹ್ಮಣನೆಂದ ನಿನ್ನ ಶಿಷ್ಯತ್ವವಿನ್ನು ಸಾಕು. ಹೊರಡಿಲ್ಲಿಂದ ! ' ಎಂದು ಶಾಪವನ್ನಿತ್ತನು. ನನಗೆ ಮೃತಿಕಾಲವಿನ್ನೂ ಬಂದಿಲ್ಲವೆಂದು. ಶ್ರೀ ಭಾರ್ಗವಾನುಗ್ರಹದಿಂದ ಪ್ರತಿಭಾತವಾಗುತ್ತಿರುವ ದಿವ್ಯಾಸ್ತ್ರಗಳಿಂದಲೇ

ತಿಳಿದು, ಧೈರ್ಯದಿಂದ ಕಾದುವೆನು. ಧನಂಜಯನನ್ನು ಮೃತ್ಯುಮುಖದಲ್ಲಿ ಹೊಗಿಸಿ, ಸಮುದ್ರವು ಉಕ್ಕೇರಿ ತೀರ ಗ್ರಾಮಗಳನ್ನಂತೆ ಬಾಣಜಾಲದಿಂದ ಪಾಂಡವಸೇನೆಯನ್ನು ಕೊಚ್ಚಿಹಾಕಿ, ವಿಕ್ರಮಿಸಿ, ಜಯಲಕ್ಷ್ಮಿಯನ್ನು ದುರ್ಯೋಧನನಿಗೆ ಸಮರ್ಪಿಸುವೆನು. ಸೂರಸುತನಾದೆನಗೆ ಅರ್ಜುನನು ಅಜೇಯನಲ್ಲ. ಖಾಂಡವವನ ದಾಹಕನು, ಕಾಲಕೇಯನಿವಾತಕವಚಾದಿ ದಾನವನಾಶಕನು, ದಿವ್ಯಾಸ್ತ್ರವೇತ್ತನು ' ತ್ರಿಲೋಕವಿಖ್ಯಾತನು ಆದ ಅರ್ಜುನನಿಂದ ದ್ವಂದ್ವಯುದ್ಧದಲ್ಲಿ ನಿಲ್ಲಬಲ್ಲನೆಂದರೆ ಕರ್ಣನೊಬ್ಬನೇ ; ಮತ್ತೊಬ್ಬನಿಲ್ಲ.

ನಿನ್ನ ಪರುಷವಚನಗಳಿಗೆ ನಾನು ಹೆದರುವವನಲ್ಲ. ನಿನ್ನನ್ನು ಕ್ಷಮಿಸಿ ಸುಮ್ಮನಿರುವ ನನ್ನಲ್ಲಿ ನಿನಗೆ ದ್ರೋಹಭಾವನೆ ತರವಲ್ಲ. ಕಾಲವನ್ನರಿತು, ರಾಜನಿಗಾಗಿ ಕಾದುವ ನಾನು ನಿನ್ನ ಕಿಡು-ನುಡಿಗಳನ್ನು ಲೆಕ್ಕಿಸದಿರುವೆನು. ದುರ್ಯೋಧನನು ಯುದ್ಧಾರಂಭವನ್ನು ಸರಿಯಾದ ಸುಮುಹೂರ್ತದಲ್ಲಿ ಮಾಡಿಲ್ಲವೆಂದು ತೋರುತ್ತಿದೆ. ಅವನಿಗೆ ನಿನ್ನಂತಹ ಮಿತ್ರಮುಖಶತ್ರುಗಳು ಮಾಡುತ್ತಿರುವ ದ್ರೋಹವನ್ನು ಕಂಡು ವ್ಯಾಕುಲಿತನಾಗಿರುವೆನು. ನಾನವನ ಜಯಕ್ಕಾಗಿ ಸೆಣಸುತ್ತಿರಲು, ನಿನ್ನಂತಹವರು ಅವನ ಸಾವಿಗಾಗಿ ಕಾದಿರುವಿರಿ! ಆನಂದಪಡಿಸಿ, ಕೊಟ್ಟು ತೃಪ್ತಿಪಡಿಸಿ, ಆಪತ್ತಿನಲ್ಲಿ ಕಾಪಾಡಿ, ಗುಪ್ತಾಲೋಚನೆಯಲ್ಲಿ ನೆರವಾಗಿ, ಗುಟ್ಟನ್ನು ಬಚ್ಚಿಟ್ಟು, ಗೌರವವನ್ನು ತೋರುವವನನ್ನು ಮಿತ್ರನೆಂಬರು ನಿರುಕ್ತಿಚತುರರು. ಅಂತೆಯೇ ಹಿಂಸಿಸಿ, ಹರಿಸಿ, ಆಯಾಸಪಡಿಸಿ, ಸುಖದಿಂದ ತೊಲಗಿಸಿ ದುಃಖಪಡಿಸುವವನನ್ನು ಶತ್ರುವೆಂಬರು ಶತ್ರುಲಕ್ಷಣಗಳೆಲ್ಲವೂ ನಿನ್ನಲ್ಲಿವೆ. ನಾನು ನಿನ್ನ ಪ್ರೀತಿಗಾಗಿ ಕಾದುತ್ತಿಲ್ಲ ; ದುರ್ಯೋಧನನ ಜಯಕ್ಕಾಗಿ ತಿಳಿ ! ನೋಡುವೆ ಎನ್ನ ಅಸ್ತ್ರವಿಕ್ರಮವನ್ನು! ನೋಡಿ ಅಳುವೆ ಅರ್ಜುನ ಮರಣವನ್ನು! ಬ್ರಹ್ಮಾಸ್ತ್ರ, ಭಾರ್ಗವಾಸ್ತ್ರ ವಾರುಣಾಸ್ತ್ರ, ಮುಂತಾದ ದಿವ್ಯಾಸ್ತ್ರಸಂಪನ್ನನಾದ ನಾನು ದಂಡಹಸ್ತಯಮನಿಗೂ, ಪಾಶಹಸ್ತವರುಣನಿಗೂ, ವಜ್ರಹಸ್ತವಾಸವನಿಗೂ, ಗದಾಹಸ್ತಕುಬೇರನಿಗೂ ಹೆದರೆನು.

ಅರ್ಜುನನೊಡನೆ ಕಾದುವಾಗ ಮರಣವೇ ಬಂದರೂ ನನ್ನ ರಾಜನಿಗಾಗಿ ಆನಂದದಿಂದ ಸಾಯುವೆನಾಗಲಿ, ಹೆದರಿ ಓಡುವುದಿಲ್ಲ.

ಒಂದು ದಿನ ಅಸ್ತ್ರಾಭ್ಯಾಸತತ್ಪರನಾಗಿ ತಿರುಗುತ್ತಿದ್ದೆನು. ಒಬ್ಬ ವಿಪ್ರನ ಹೋಮಧೇನುವಿನ ಕರುವಿಗೆ ನನ್ನ ಬಾಣವು ತಾಕಿತು. ವಿಜನವಾಗಿದ್ದ ವನದಲ್ಲಿ ಆಶ್ರಮವಿತ್ತೆಂದು ನನಗೆ ತಿಳಿಯದೆ, ಬಾಣಪ್ರಯೋಗ ಮಾಡಿದುದರಿಂದ ವತ್ಸವು ಮೃತವಾಯಿತು. ಬ್ರಾಹ್ಮಣನು ಕುಪಿತನಾಗಿ, 'ಸಂಗ್ರಾಮರಂಗದಿ ಯುದ್ಧರತನಾಗಿರುವ ನಿನಗೆ ಮರಣಕಾಲವು ಒದಗಿ ಬಂದಾಗ, ನಿನ್ನ ರಥಚಕ್ರವು ಭೂವಿವರದಲ್ಲಿ ಸಿಕ್ಕಿಬೀಳಲಿ! ' ಎಂದು ಶಪಿಸಿದನು. ನಾನು ಆ ವಿಪ್ರನ ಕಾಲಿಗೆರಗಿ 'ಅಯ್ಯಾ! ಕ್ಷಮಿಸು! ತಿಳಿಯದೆ ಆದ ಅಪರಾಧವಿದು. ನಿನಗೆ ಗೋಸಹಸ್ರವನ್ನು ಕೊಡುವೆನು. ರಥ ತುರಗಗಜ ಬಲೀವರ್ದಗಳನ್ನೀವೆನು. ಪ್ರಸನ್ನನಾಗು!' ಎಂದು ಬೇಡಿದೆನು. ಅವನು 'ಸೂತನಂದನ! ನಾನಾಡಿದುದೆಂದೂ ಸುಳ್ಳಾಗಿಲ್ಲ. ಅನೃತವನ್ನು ನುಡಿದು ನನಗೆ ಗೊತ್ತಿಲ್ಲ. ನನಗೆ ಕೊಟ್ಟ ಶಾಪವನ್ನು ತಿರುಗಿಸುವದಕ್ಕಾಗುವುದಿಲ್ಲ. ನೀನು ಪಶ್ಚಾತ್ತಾಪಗೊಂಡಿರುವೆ! ನಿನ್ನ ಪರಲೋಕ

ಗತಿಗೆ ಬಾಧಕವಿಲ್ಲ ಹೋಗು!' ಎಂದನು. ಉಭಯಶಾಪಗಳಿಂದ ನೊಂದು, ನಿನ್ನ ಕಟುವಚನಗಳನ್ನು ಸಹಿಸಿರುವೆನು.

ನೀಚರಿಗೆ ವಚನಪಾರುಷ್ಯವು ಹೆಚ್ಚಂತೆ! ನನ್ನಲ್ಲಿರುವ ಗುಣಬಾಹುಲ್ಯವನ್ನು ಲಕ್ಷಿಸದೆ ಶತ್ರುಗುಣಲೇಣವನ್ನು ವಿಸ್ತರಿಸಿ ಬೊಗಳುವ ನಿನ್ನನ್ನು ಸಾರಥಿಯಾಗಿರುವುದರಿಂದಲೂ, ದುರ್ಯೋಧನ ಪಕ್ಷೀಯನಿರುವುದರಿಂದಲೂ, ಕೊಲ್ಲದೆ ಕ್ಷಮಿಸಿಬಿಟ್ಟಿರುವೆನು. ಅಂತೆಯೇ ನನ್ನಿಂದ ವಚನವನ್ನು ಪಡೆದು ಉಳಿದೆ! ಶಲ್ಯರು ಸಾವಿರವಾದರೂ ಕರ್ಣನೊಬ್ಬನಿಗೆ ಸರಿಯಲ್ಲ, ಕೇಳಿಲ್ಲಿ, ನಿನ್ನ ದೇಶದ, ನಿನ್ನವರ ದುಷ್ಟಗುಣವನ್ನು! ವಾಹೀಕರೆಂದರೇನೆಂದು ತಿಳಿದೆ! ಮದ್ರವಾಹೀಕದೇಶಗಳು ಗಂಗಾಯಮುನಾರಹಿತವಾಗಿವೆ. ಕುರುಕ್ಷೇತ್ರದಿಂದ ದೂರವಾಗಿವೆ. ಅವು ಧರ್ಮ ಬಾಹ್ಯಗಳೆಂದೇ ವಾಹೀಕ ದೇಶಗಳೆಂಬರು. ಅಲ್ಲಿ ರಾಜದ್ವಾರದಲ್ಲಿ ಗೋವರ್ಧನವೆಂಬ ಗೋಹತ್ಯಾಶಾಲೆ, ಸುಭದ್ರವೆಂಬ ಸುರಾಭಾಂಡಗೃಹಗಳಿವೆ. ಆಸವಮತ್ತರಾಗಿ ನರ್ತಿಸುವ ನಗ್ನಪ್ರಾಯ ನಾರಿಯರು ಶಾಕಲನಗರದಲ್ಲಿ ನಿನ್ನ ದೇಶ ಕಲಂಕಪ್ರತಿಮೆಯರಾಗಿರುವರು. ಸ್ವೈರಿಣೀಜಾತರಿಗೆ ಧರ್ಮವೇನು? ಅಧರ್ಮವೇನು? ಕಟ್ಟುವುದು ಕಂಬಲ; ಕುಡಿಯುವುದು ಹೆಂಡ; ಕುಣಿಯುವುದು ಬೀದಿಗಳಲ್ಲಿ; ಆಡುವುದು ಲಿಂಗಭಗಶಬ್ದಗಳನ್ನು; ಮೃದಂಗಾನಕ ಶಂಖಮರ್ದಲಗಳನ್ನು ಬಾರಿಸಿ, ಕತ್ತೆ ಒಂಟೆಗಳನ್ನೇರಿ, ಕಿಲಕಿಲ ನಗುತ್ತಾ ತಿರುಗುವ ನಿರ್ಲಜ್ಜ ವನಿತೆಯರಿಗೆ ನೀತಿಯಿಲ್ಲ; ನಿಯಮವಿಲ್ಲ, ಪಾತಿವ್ರತ್ಯವಾ ದೇಶದಿಂದ ಕಾಲ್ತೆಗೆದು ಬಹು ಕಾಲವಾಯಿತು. ಶತದ್ರು, ವಿಪಾಶಾ, ಐರಾವತೀ, ಚಂದ್ರಭಾಗಾ, ವಿತಸ್ತಾ ಎಂಬ ಐದು ನದಿಗಳು ಸಿಂಧು ನದದೊಡನೆ ಸೇರಿ ಹರಿವ ಆರಟ್ಟ, ವಾಹೀಕ, ಮದ್ರಾದಿ ದೇಶಗಳಲ್ಲಿ ಜನರು ಧರ್ಮದ ವಾಸನೆಯನ್ನರಿಯರು; ಕುರಿ ಒಂಟೆಗಳ ಹಾಲು ಕುಡಿವರು.

ಯುಗಂಧರವೆಂಬ ನಗರವಂತೆ; ಅಲ್ಲಿ ಕತ್ತೆ ಒಂಟೆಗಳ ಹಾಲು ಕುಡಿವರಂತೆ, ಅಚ್ಯುತಸ್ಥಲವೆಂಬ ಊರಂತೆ; ಅಲ್ಲಿ ಆಗಮ್ಯಾಗಮನವು ಸಾಮಾನ್ಯವಂತೆ, ಭೂತಿಲಯವೆಂಬ ಕೆರೆಯಂತೆ; ಅಲ್ಲಿ ಸರ್ವ ಚಂಡಾಲ ವಿಪ್ರಸಂಗತ ಸ್ನಾನವಂತೆ; ಇಂತಹ ದೇಶದಲ್ಲಿ ವಿಧಿಯಿಲ್ಲದೆ ಒಂದು ದಿನವಿದ್ದು, ಎರಡನೇ ದಿನವೂ ಬಿಡದಿದ್ದರೆ, ಅಂತ ಹವನು ಪತಿತನೆಂದೇ ಹೇಳುವರು. ಹಿಮವತ್ಪರ್ವತ ದೇಶಗಳು, ಕುರು, ಪಾಂಚಾಲ, ಶಾಲ್ವ, ಮಾತ್ಸ್ಯ, ನೈಮಿಷ, ಕೋಶಲ, ಕಾಶ, ಪೌಂಡ್ರ, ಕಾಲಿಂಗ, ಮಾಗಧ, ಚೇದಿ, ಅಂಗ, ವಂಗ, ಆಂಧ್ರ, ಕರ್ಣಾಟ, ಪಾಂಡ್ಯ, ಕೇರಳ ದೇಶಗಳು ಧರ್ಮಯುಕ್ತವಾಗಿವೆ. ಅಲ್ಲಿ ವರ್ಣಸಂಕರವಿಲ್ಲ; ಸ್ವೇಚ್ಛಾಚಾರವಿಲ್ಲ; ಸರ್ವಾನ್ನ ಭೋಜನವಿಲ್ಲ, ಬೀದಿಯಲ್ಲಿ ಅನ್ನವನ್ನಿಟ್ಟು ಮಾರುವುದಿಲ್ಲ.

ಕ್ಷತ್ರಿಯನಿಗೆ ಭೈಕ್ಷವು ಮಲವಂತೆ; ಬ್ರಾಹ್ಮಣನಿಗೆ ಅವ್ರತವೇ ಮಲವಂತೆ; ಸ್ತ್ರೀಯರಲ್ಲಿ ಮದ್ರಸ್ತ್ರೀಯರು ಮಲವಂತೆ; ಮನುಜರಲ್ಲಿ ಮ್ಲೇಂಛರು ಮಲವಂತೆ; ಪರವಿತ್ತಾಪಹಾರಕರು, ಮದ್ಯಪಾಯಿಗಳು, ಗುರುದಾರಾವ ಮರ್ಶಕರು, ಕೃತಘ್ನರು, ದೇವಾಲಯ ಧ್ವಂಸಕರು, ವಾಕ್ಕಠಿನರು, ಉಚ್ಛಿಷ್ಟಪ್ರಿಯರು ಆದ ಮ್ಲೇಂಛರಂತೆ ಮದ್ರಕರೂ ನಿಂದ್ಯರೇ ಸರಿ! ಯವನರು ಧರ್ಮವನ್ನರಿತಿದ್ದೂ ತಾವು ಮಾಡಿಕೊಂಡ ಧರ್ಮಸಂಕೇತ

ವನ್ನು ಹಠದಿಂದ ಹಿಡಿದು, ವೈದಿಕ ಧರ್ಮದ್ವೇಷಿಗಳಾಗಿರುವರು. ಹಿತರಲ್ಲಿ ದ್ರೋಹವನ್ನು ಬಗೆದ ಮದ್ರಕರಿಗೆ ರಾಜನಾದ ನಿನಗೆ ಧರ್ಮವೆಂತು ತಿಳಿದೀತು! ಸುಮ್ಮನಿರು 'ಎಂದು ನಿಂದಿಸಿದನು.

ಶಲ್ಯನು, 'ಕರ್ಣ! ನಿನ್ನ ಅಂಗದೇಶದ ವೈನವನ್ನಿಷ್ಟು ಕೇಳು! ಆತುರರನ್ನು ತ್ಯಜಿಸಿ, ಸ್ವದಾರಸುತರನ್ನು ಮಾರುವ ಅಂಗರಷ್ಟು ನೀಚರಲ್ಲ ಮದ್ರಕರು. ಎಲ್ಲ ದೇಶಗಳಲ್ಲಿ ವಿಪ್ರ ಕ್ಷತ್ರಿಯ ವೈಶ್ಯ ಶೂದ್ರಾದಿ ಸಜ್ಜನರೂ ಇರುವರು; ದುರ್ಜನರೂ ಇರುವರು. ಇನ್ನೊಬ್ಬರನ್ನು ನಿಂದಿಸುವಾಗ ನೂರು ನಾಲಿಗೆ ನೀಚರಿಗೆ; ದೇಶಮಾತ್ರದಿಂದ ಗುಣವನ್ನು ತಿಳಿಯಲಾಗದು. ಇದ್ದಾರೆ ಎಲ್ಲ ಕಡೆಯೂ ದೇವತೆಗಳಂತಹ ಗುಣವಂತರು!' ಎಂದನು. ಅವರ ಜಗಳವನ್ನು ಕೇಳಿ, ದುರ್ಯೋಧನನು ಬಂದು, ಅವರೀರ್ವರನ್ನು ಸಮಾಧಾನಪಡಿಸಿದನು. ಮಿತ್ರಭಾವದಿಂದ ರಾಧೇಯನು, ಅಂಜಲೀಬಂಧದಿಂದ ಶಲ್ಯನು ಶಾಂತರಾದರು.

## ೯. ಸಪ್ತದಶಮ ದಿನದ ಸಂಕುಲ ಸಮರ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್! ಕರ್ಣನು ಧೃಷ್ಟದ್ಯುಮ್ನರಕ್ಷಿತವಾದ ಪಾಂಡವವಾಹಿನಿಯನ್ನು ಕಂಡು, ಉತ್ಸಾಹಭರಿತನಾಗಿ ಕದನರಂಗದಲ್ಲಿ ಪ್ರವೇಶಿಸಿದನು. ಭೇರಿದುಂದುಭಿನಾದಗಳು ದಿಕ್ಕುಗಳಲ್ಲಿ ಪ್ರತಿಧ್ವನಿಸಿದವು. ಕರ್ಣನ ಸೇನಾಪತ್ಯದಲ್ಲಿ ನಡೆವ ಕುರುಸೇನೆಯು ಮಹಾವ್ಯೂಹದಲ್ಲಿ ರಚಿತವಾಗಿತ್ತು. ಅದರ ಬಲಪಕ್ಕದಲ್ಲಿ ಕೃಪ, ಮಾಗಧ, ಕೃತವರ್ಮರು ನಿಂತರು. ಅವರ ಹಿಂದೆ ಉಲೂಕ ಶಕುನಿಯರು ಸಭಟರಾಗಿ ನಿಂತರು. ಇಪ್ಪತ್ತುನಾಲ್ಕುಸಾವಿರ ರಥಗಳಿಂದ ಕೂಡಿ ಸುಶರ್ಮಾದಿ ತ್ರಿಗರ್ತ ಸಂಸಪ್ತಕರು ಎಡಬದಿಯಲ್ಲಿ ನಿಂತರು. ಕಾಂಬೋಜ, ಶಕ, ಯವನರು ಅವರ ಹಿಂದೆ ನಿಂತರು. ಮಧ್ಯದ ಸೇನಾಮುಖದಲ್ಲಿ, ಸೂರ್ಯಪ್ರಭನಾದ ಕರ್ಣನು ಸೇನಾನೇತನಾಗಿ ನಡೆದನು. ವ್ಯೂಹದ ಹಿಂದುಗಡೆ ಮದ್ದಾನೆಯನ್ನೇರಿ ದುಶ್ಶಾಸನನು ಬಂದನು. ಮಧ್ಯದಲ್ಲಿ ದುರ್ಯೋಧನನು ಅಶ್ವತ್ಥಾಮನಿಂದಲು, ನಿಜ ಸೋದರರಿಂದಲು ಕೂಡಿ ನಡೆದನು. ಹಿಂದೆ ನಡೆಯುವ ಮದ್ದಾನೆಗಳ ಸಾವಿರ ಸೈನ್ಯವು ನಡೆಯುವ ಬೆಟ್ಟಗಳಂತೆ ಕಂಗೊಳಿಸಿದವು. ಹಯಹೇಷಗಳೊಂದಿಗೆ ಗಜಘೀಂಕಾರಗಳು ಮುಗಿಲು ಮುಟ್ಟಿದವು. ಬೃಹಸ್ಪತಿವಿಹಿತವಾದ ಮಹಾ ವ್ಯೂಹದಲ್ಲಿ ನಡೆದು ಬರುವ ಕುರುಸೇನೆಯು ಪರಮಭಯಂಕರವಾಯಿತು.

ಧರ್ಮರಾಜನು ಆ ವ್ಯೂಹರಚನೆಯನ್ನು ಕಂಡು, 'ಅರ್ಜುನ! ಕಂಡೆಯಾ ಕರ್ಣನ ವ್ಯೂಹರಚನಾಚಾತುರ್ಯವನ್ನು ! ಅದಕ್ಕೆ ತಕ್ಕಂತಹ ಪ್ರತಿವ್ಯೂಹವನ್ನು ರಚಿಸಿ, ಶತ್ರುವಿಜಯವನ್ನು ಸಾಧಿಸು!' ಎಂದನು. ಅರ್ಜುನನು ಪ್ರಧಾನ ಸೇನಾಪತಿ ವಧದಿಂದ ಸರ್ವವಿಜಯವು ಸಾಧಿತವಾಗುವುದೆಂದು ತಿಳಿದು, ತಾನು ರಾಧೇಯನನ್ನು, ಭೀಮಸೇನರು ಸುಯೋಧನನನ್ನು, ನಕುಲನು ವೃಷಸೇನನನ್ನು, ಸಹದೇವನು ಶಕುನಿಯನ್ನು, ಶತಾನೀಕನು

ದುಶ್ಶಾಸನನನ್ನು, ಸಾತ್ಯಕಿಯು ಕೃತವರ್ಮನನ್ನು, ಪಾಂಡ್ಯಸುತನು ದ್ರೌಣಿಯನ್ನು, ಮುತ್ತಿ ಕಾದುವಂತೆ ನಿಶ್ಚಯಿಸಿ, ಧರ್ಮರಾಜನು ಕೃಪನೊಡನೆ ಕಾದುವಂತೆ ಪ್ರಾರ್ಥಿಸಿದನು.

ವೈಶ್ವಾನರಾಗ್ನಿಯೇ ಅಗ್ನಿ, ಸೋಮ, ವರಣ, ವಾಯುಗಳ ಬಲದಿಂದ ಬೃಂಹಿತವಾದ ಶ್ವೇತಾಶ್ವಗಳಾಗಿ ಹೊತ್ತ ದಿವ್ಯ ರಥದಲ್ಲಿ ಕೇಶವಾರ್ಜುನರು ಕೂತು ಬರುತ್ತಿರಲು ನೋಡಿ, ತಿಳಿದು ಶಲ್ಯನು, 'ಕರ್ಣ! ನೋಡಲ್ಲಿ! "ಅರ್ಜುನನೆಲ್ಲಿ? ತೋರಿರೆನಗೆ!" ಎಂದು ಚೀರಾಡಿದೆ! ಅಪ್ರಯತ್ನವಾಗಿ ದಿವ್ಯರಥಾರೂಢರಾದ ಕೇಶವಾರ್ಜುನರ ದರ್ಶನವಾಯಿತೆನ್ನು! ಬ್ರಹ್ಮ, ಶಿವ, ಶಕ್ರ, ವರುಣರನ್ನು ಹೊತ್ತ ಕುದುರೆಗಳವು. ಮೇಘದ ನೊರಹಿನಂತೆ ಕೇಳಬರುವ ಆ ರಥನೇಮಿಧ್ವಾನವೆಷ್ಟು ಭಯದವಾಗಿದೆ! ಭೂಮಿಯು ಕಂಪಿಸುತ್ತಿದೆ! ಮಾಹಾವಾತವು ನಿನ್ನ ಸೇನೆಯ ಮುಖದಲ್ಲಿ ಧೂಳೆರಚುತ್ತಾ ಬೀಸುತ್ತಿದೆ. ಭಾನುಮಂಡಲವು ಕಬಂಧಾಕಾರಮೇಘದಿಂದ ಆವೃತವಾಗಿದೆ. ಕಂಕಗೃಧ್ರಗಳು ಹಾರಾಡುತ್ತಿವೆ. ಕುರುಕ್ಷೇತ್ರದಿ ಕಾದಲು ಬಂದ ವೀರರು ಉಳಿಯರೆಂದು ದುಃಶಕುನಗಳು ಸೂಚಿಸುತ್ತಿವೆ.

ಅಪರಾಜಿತನಾದ ಕುಂತೀಸುತನು ಕಪಿಕೇತನನಾಗಿ ಮೆರೆಯುತ್ತಿರುವನು ಶ್ರೀಕೃಷ್ಣನ ಕೌಸ್ತುಭವಿಂದು ಬಲು ಬೆಳಗುತ್ತಿದೆ. ಅವನ ಶಂಖ, ಗದಾ, ಶಾರ್ಙ್ಗ, ಚಕ್ರಗಳು ರಣವಾಡಲು ಹಾತೊರೆಯುವಂತೆ ಇವೆ. ವಾತವೇಗವಾದ ತುರಗಗಳ ವಲ್ಗುಗತಿಯನ್ನು, ಶ್ರೀಕೃಷ್ಣನ ಸಾರಥ್ಯರೀತಿಯನ್ನು ನೋಡಿ ತಿಳಿ! ಕೇಳಾಗಾಂಡೀವ ಟಂಕಾರವನ್ನು! ಶ್ವೇತವಾಹನನೊಡನೆ ಕಾದಾಡಲು ತವಕಿಸುವ ನಿನ್ನ ಮನೋರಥವೀಡೇರಿತು. ಅರ್ಜುನನನ್ನು ನೀನಿಂದು ಕೊಂದರೆ ನೀನೇ ಇನ್ನು ನಮಗೆ ರಾಜನಾಗುವೆ! ಆದರೆ ಸಂಸಪ್ತಕಸಾಗರವವನನ್ನು ಮುತ್ತಿ ನಿನ್ನ ಕಡೆಗೆ ಬಿಡದೆ ಕಡಿದಾಡುತ್ತಿದೆ. ಏನು ಮಾಡುವೆ?' ಎಂದನು.

ಕರ್ಣನು 'ಅಹುದು! ಸಂಸಪ್ತಕರ ಕೈಲಿ ಸಿಕ್ಕ ಪಾರ್ಥನು ಉಳಿದು ಬಂದರಲ್ಲವೇ ನನ್ನೊಡನೆ ಕಡಿದಾಡಿ ಸಾಯುವುದು! ಯೋಧಸಾಗರದಲ್ಲಿ ಮುಳುಗಿರುವ ಪಾರ್ಥನ ಕಥೆ ಮುಗಿಯಿತು' ಎಂದನು. ಶಲ್ಯನು ನಕ್ಕು 'ಹಾಗಾಗದು, ವರುಣನನ್ನು ನೀರಿನಿಂದಲು, ಅಗ್ನಿಯನ್ನು ಕೆಂಡದಿಂದಲು ಕುಟ್ಟಿ ಸಾಯಿಸಲಾಗುವುದೇ? ಗಾಳಿಯನ್ನು ಕದಲದಂತೆ ಕಟ್ಟಿಡಬಹುದೇ? ಸಮುದ್ರವನ್ನು ಕೈಯಿಂದ ಈಸಲಾಗುವುದೇ? ಪಾರ್ಥನನ್ನು ಸಂಸಪ್ತಕರು ಗೆಲ್ಲುವರೇ? ನಿನ್ನಿಂದಲಾದರೂ ಅರ್ಜುನನ ಸಂಹಾರವು ಸಾಧಿತವಾಗುವುದೇ? ಬಾಯಮಾತಿನ ಸಂತೋಷವನ್ನು ಅರ್ಜುನನೆದುರಿಸುವವರೆಗಾದರೂ ಪಡುತ್ತಿರು!'

ಅಲ್ಲಿ ಭೀಮಸೇನನು ನಿನ್ನ ಸೇನೆಯನ್ನು ಮಾರಿ ಮುಸುಕಿದಂತೆ ನಾಶಪಡಿಸುತ್ತಿರುವನು. ಧರ್ಮರಾಜಾದಿಗಳೂ ವಿಕ್ರಮಿಸುತ್ತಿರುವರು. ನೋಡು ಪಾಂಡವ ಸೇನಾನಿಯಾದ ಧೃಷ್ಟದ್ಯುಮ್ನನನ್ನು, ದ್ರೌಪದೇಯರು, ಸಿಂಹವನ್ನು ಶಾರ್ದೂಲಗಳಂತೆ, ಅವನನ್ನು ರಕ್ಷಿಸುತ್ತಿರುವರು. ಸಾತ್ಯಕಿಯು ಯುಗಾಂತ ಕಾಲನಂತೆ ಉರಿಯುತ್ತಿರುವನು. ಯಾರಕಡೆ ಹೊಡೆಯಲಿ ನಿನ್ನ ರಥವನ್ನು?' ಎಂದನು.

ಪಾರ್ಥನು ಸಂಸಪ್ತಕರನ್ನು ಮುತ್ತಿ, ಕಾಲದಂಡ ಸದೃಶವಾದ ನಿಶಿತಕಾಂಡಗಳಿಂದ

ಅವರ ಸೇನೆಯನ್ನು ನಾಶಪಡಿಸಿದನು. ಕ್ರುದ್ಧರುದ್ರನು ಪಶುಗಳನ್ನಂತೆ ಪಾರ್ಥನು ಸಂಸಪ್ತಕತ್ರಿಗರ್ತ ಸೈನಿಕರನ್ನು ಸಂಹರಿಸಿದನು. ದಾರುಣ ಭೇರೀನಾದದೊಂದಿಗೆ ಶಂಖಸಹಸ್ರಗಳು ಮೊಳಗಿದವು. ಕರ್ಣನು ಪಾಂಡವಸೇನೆಯನ್ನು ಮುತ್ತಿ, ದೇವೇಂದ್ರನು ಅಸುರರನ್ನಂತೆ, ಶತ್ರುಸೈನಿಕರನ್ನು ಸಂಹರಿಸಿದನು. ಅವನ ನಿಶಿತಬಾಣಗಳಿಗೆ ಸಿಕ್ಕ ಭಾನುದೇವ, ಚಿತ್ರಸೇನ, ಸೇನಾಬಿಂದು, ತಪನ, ಶೂರಸೇನರೆಂಬ ಪಂಚಪಾಂಚಾಲರು ಪಂಚತ್ವವನ್ನೈದಿದರು. ಮತ್ತೆ ಬಂದು ಮುತ್ತಿದ ಹತ್ತು ಯೋಧರನ್ನು ವೈಕರ್ತನನು ಕತ್ತರಿಸಿ ಕೆಡಹಿದನು. ಅವನಿಗೆ ಪೃಷ್ಠರಕ್ಷಕನಾಗಿ ವೃಷಸೇನನು, ಚಕ್ರರಕ್ಷಕರಾಗಿ ಸುಷೇಣ ಸತ್ಯಸೇನರು, ಪ್ರಾಣಗಳಿಗಂಜದೆ ಹೋರಾಡುತ್ತಿದ್ದರು. ಪುತ್ರತ್ರಯ ಪಾಲಿತನಾಗಿ ಮೆರೆವ ಕರ್ಣನ ಧಾಟಿಯನ್ನು ನಿಲ್ಲಿಸಲೆಣಿಸಿ, ಭೀಮಸೇನ, ಧೃಷ್ಟದ್ಯುಮ್ನ, ಸಾತ್ಯಕಿ, ಶಿಖಂಡಿ, ದ್ರೌಪದೇಯರು ಒಮ್ಮೆಗೆ ಬಂದು ಮುತ್ತಿದರು. ಸಂಕುಲಸಮರವು ದಾರುಣವಾಯಿತು.

ಸುಷೇಣನು ಪಿತೃಸಹಾಯಕ್ಕೆಂದು ಮುನ್ನುಗ್ಗಿ, ಭೀಮಸೇನನ ಧನುವನ್ನು ಭಲ್ಲದಿಂದ ಮುರಿದನು. ಮತ್ತು ಏಳು ಬಾಣಗಳಿಂದ ಎದೆಗೆ ಹೊಡೆದು ಗರ್ಜಿಸಿದನು. ಭೀಮಸೇನನು ಮತ್ತೊಂದು ಧನುವೆತ್ತಿ, ಸುಷೇಣನ ಧನುವನ್ನು ಮುರಿದು, ಹತ್ತು ಬಾಣಗಳಿಂದ ಪೀಡಿಸಿ, ಎಪ್ಪತ್ತರಿಂದ ಕರ್ಣನನ್ನೂ ಪೀಡಿಸಿದನು. ಅವನ ಸುತನಾದ ಭಾನುಸೇನನು ತಡೆಯಲು, ಕಿಡಿಯಾಗಿ ಭೀಮನು ಹತ್ತು ಬಾಣಗಳಿಂದ ಅವನ ಸೂತತುರಗಗಳನ್ನು ಕೊಂದು, ಅವನನ್ನೂ ಸಂಹರಿಸಿದನು. ಕೃಪ ಕೃತವರ್ಮರು ತಾಕಲು ಅವರ ಬಿಲ್ಲನ್ನೂ ಮುರಿದು, ಓಡಿಸಿದನು. ದುಶ್ಶಾಸನನನ್ನು ಮೂರು ಬಾಣಗಳಿಂದಲು, ಶಕುನಿಯನ್ನು ಆರು ಶರಗಳಿಂದಲು, ಉಲೂಕನನ್ನು ಏಳು ಶರಗಳಿಂದಲು ಹೊಡೆದು, ಉಲೂಕಪತತ್ರಿಗಳ ತುರಗರಾಜಿಯನ್ನು ಕೆಡಹಿದನು. 'ಭೀಮಸೇನನು ಸುಷೇಣ! ಸತ್ತೆ!' ಎಂದು ಬಿಟ್ಟ ಬಾಣವನ್ನು ಕರ್ಣನು ಛೇದಿಸಿ, ಮಗನನ್ನು ಕಾಪಾಡಿದನು. ಭೀಮನು ಬಿಟ್ಟ ಬಾಣಗಳನ್ನೆಲ್ಲ ಕಡಿದು ಸುಷೇಣನನ್ನು ಕಾಪಾಡಿದ ಕರ್ಣನು ಅವನನ್ನು ದೂರ ಸರಿಸಿ, ತಾನೇ ವೃಕೋದರನನ್ನೆದುರಿಸಿ ನಿಂತನು.

ಸುಷೇಣನು ನಕುಲನೊಡನೆ ಕಾದತೊಡಗಿದನು. ಸಾತ್ಯಕಿಯು ವೃಷಸೇನನ ಸೂತನನ್ನು ಮೂರು ಬಾಣಗಳಿಂದ ಕೆಡಹಿ, ಏಳರಿಂದ ಕುದುರೆಗಳನ್ನು ಕೊಂದು, ಮತ್ತೆ ಮೂರರಿಂದ ಅವನ ಎದೆಗೆ ಹೊಡೆದನು. ವೃಷಸೇನನು ಮೂರ್ಛೆಬಂದಂತಾಗಿ ಮತ್ತೆ ಎಚ್ಚತ್ತು, ಖಡ್ಗಚರ್ಮಪಾಣಿಯಾಗಿ ಸಾತ್ಯಕಿಯನ್ನು ಸಂಹರಿಸಲೆಣಿಸಿ, ಮೇಲೇರಿ ಬಂದನು. ಸಾತ್ಯಕಿಯು ಅವನ ಖಡ್ಗಚರ್ಮಗಳನ್ನು ದಶಬಾಣಗಳಿಂದ ಚೂರಾಗಿಸಲು, ನಿಸ್ಸಹಾಯನಾಗಿದ್ದ ವೃಷಸೇನನನ್ನು ದುಶ್ಶಾಸನನು ತನ್ನ ರಥದಲ್ಲಿ ಕೂಡಿಸಿಕೊಂಡು ಸಂರಕ್ಷಿಸಿದನು. ಆಗ ವೃಷಸೇನನು ಬೇರೊಂದು ರಥವೇರಿ, ಪಾಂಡವಯೋಧರನ್ನು ಬಾಣಪೀಡಿತರನ್ನಾಗಿಸಿ, ಮತ್ತೆ ಕರ್ಣನಿಗೆ ಪೃಷ್ಠರಕ್ಷಕನಾಗಿ, ನಿಂತನು. ದುಶ್ಶಾಸನನು ಸಾತ್ಯಕಿಯಿಂದ ವಿರಥನಾಗಿ ಬೇರೊಂದು ರಥವೇರಿ ಹೋದನು.

ಕರ್ಣನನ್ನೆದುರಿಸಿ ಪಾಂಡವವೀರರು ಬಿಟ್ಟ ನೂರಾರು ಬಾಣಗಳು

ಖಂಡಿತವಾದವು. ಕರ್ಣನು ಭೀಮ, ಪಾರ್ಷತ, ಶೈನೇಯ, ಸಹದೇವ, ನಕುಲ, ದ್ರೌಪದೇಯರನ್ನು ಕ್ರಮವಾಗಿ ಅರವತ್ತುನಾಲ್ಕು, ಏಳು, ಏಳು, ಮೂವತ್ತು, ಎಪ್ಪತ್ತುಮೂರು ಬಾಣಗಳಿಂದ ಪೀಡಿಸಿ, ವಿಕ್ರಮಿಸಿದನು. ಶರಸಂಧಾನ ಪ್ರಯೋಗಗಳು ತಿಳಿಯದಂತೆ ಬಿಡುವ ಬಾಣಗಳು ವರ್ಷಧಾರೆಗಳಂತೆ ಪಾಂಡವ ಸೈನಿಕರನ್ನು ಮುಟ್ಟಿ ರಕ್ತನದಿಗಳನ್ನು ಹರಿಸಿದವು. ಕರ್ಣನು ಎದುರಿಲ್ಲದೆ ಮುನ್ನುಗ್ಗಿ, ಧರ್ಮರಾಜನನ್ನು ಸಮೀಪಿಸುತ್ತಿದ್ದನು. ಭೀಮಾದಿಗಳು ಮುನ್ನುಗ್ಗಿ ಕೌರವ ವಾಹಿನಿಯನ್ನು ನಾಶಪಡಿಸುತ್ತಿರುವುದನ್ನು ಕಂಡು, ಸಾತ್ಯಕಿ ಶಿಖಂಡಿಗಳು ಧರ್ಮರಾಜನಿಗೆ ರಕ್ಷಕರಾದರು.

ಕರ್ಣನು ಕಾಲಾಂತಕನಂತೆ ಮುತ್ತುವ ಭಟರನ್ನು ಕೊಂದು ಯುಧಿಷ್ಠಿರನನ್ನು ಮಂತ್ರೌಷಧಿಕ್ರಿಯಾತೀತವಾದ ವ್ಯಾಧಿಯಂತೆ ಮುತ್ತಿದನು. ಬ್ರಹ್ಮವಿದರು ಮೃತ್ಯುವಿನನ್ನಂತೆ ಸಾತ್ಯಕಿ ಶಿಖಂಡಿಪ್ರಮುಖರು ಕರ್ಣನನ್ನು ತಡೆದು ಕಾದಿದರು. ಧರ್ಮಜನು ಕರ್ಣನನ್ನು ಕಂಡು, ಕುಪಿತನಾಗಿ, ಇಂತೆಂದನು: 'ಕರ್ಣ! ಅಸಮವಿಕ್ರಮನಾದ ಪಾರ್ಥನೊಡನೆ ಸದಾ ಸ್ಪರ್ಧಿಸುವೆ! ಧಾರ್ತರಾಷ್ಟ್ರಮತದಲ್ಲಿ ನಿಂತು ನಮ್ಮನ್ನು ಕಡುನೊಯಿಸಿದೆ! ನಿನ್ನ ಬಲವೀರ್ಯಗಳಿಗೆ ದ್ವೇಷದ ಮೆರುಗಿಟ್ಟು ಇಂದು ಕಾದಾಡು. ನಿನ್ನ ಯುದ್ಧಶ್ರದ್ಧೆಯನ್ನು ಉಡುಗಿಸುವೆನು' ಇಂತು ನುಡಿದು ಧರ್ಮರಾಜನು ಹತ್ತು ಸುವರ್ಣಪುಂಖಬಾಣಗಳಿಂದ ರಾಧೇಯನನ್ನು ಪೀಡಿಸಿದನು. ಕರ್ಣನೂ ಹತ್ತು ಬಾಣಗಳಿಂದ ಧರ್ಮಜನನ್ನು ಪೀಡಿಸಿದನು. ಧರ್ಮರಾಜನ ಕ್ರೋಧಾಗ್ನಿಯು ದೇಹರೋಮಕೂಪಗಳಿಂದ ಹೊರಬಂದಂತೆ ಆತನು ರಕ್ತಗಾತ್ರನಾದನು. ಯಮದಂಡನಿಭವಾದ ಶರದಿಂದ ಸೂತಸುತನನ್ನು ಹೊಡೆಯಲು, ಅದು ಅವನ ಬಲಪಕ್ಕದಲ್ಲಿ ನಾಟಿ ನಿಂತಿತು. ಕರ್ಣನು ಬಿಡದೆ ಬಾಣಪರಂಪರೆಯಿಂದ ಧರ್ಮಜನ ತುರಗ ಧ್ವಜ ಸೂತರನ್ನು ಕೆಡಹಿ, ನಿರಾಯುಧನಾಗಿದ್ದ ರಾಜನನ್ನು ಹಿಡಿಯಲೆಳಸಿ, ಮೇಲೇರಿ ಬಂದನು. ಆಗ ಧರ್ಮಜನು ಮತ್ತೊಂದು ರಥವೇರಿ ರಣರಂಗದಿಂದ ದೂರ ಸರಿದನು! ಕರ್ಣನು ಆತನ ಬೆನ್ನಟ್ಟಿ ಮುತ್ತಿ, ಕಟುವಚನಗಳಿಂದಿತೆಂದನು : 'ಧರ್ಮರಾಜ! ಭರತಕುಲದಲ್ಲಿ ಜನಿಸಿ, ಯುದ್ಧ ವಿಮುಖನಾದೆ!. ಆಹಾ! ಪ್ರಾಣಗಳೆಷ್ಟು ಪ್ರಿಯ ನಿನಗೆ? ನೀನು ಸ್ವಾಧ್ಯಾಯ ಜಪ ಯಜ್ಞಾದಿ ವಿಪ್ರಕರ್ಮಕುಶಲನಾಗಲಿ, ಕ್ಷತ್ರಧರ್ಮನಿರತನಲ್ಲ. ಇನ್ನು ಮುಂದೆ ನನ್ನಂತಹ ಮಹಾವೀರರೊಡನೆ ಕಾದಲು ತವಕಿಸಬೇಡ! ಎಲ್ಲಿ ನಿನ್ನ ಕೃಷ್ಣ? ಏಕೆ ಆ ಮಹಾನುಭಾವನೀಗ ನಿನ್ನನ್ನು ಸಂರಕ್ಷಿಸಲಿಲ್ಲ? ಹೋಗು ಹೋಗು!'

ಇಂತೆಂಬ ಕರ್ಣನನ್ನು ತಡೆದು ಶಲ್ಯನು 'ಕರ್ಣ! ದುಡುಕಿ ನುಡಿಯುವದು ಉಚಿತವಲ್ಲ. ಧರ್ಮರಾಜನ ಗಾತ್ರವತಿಪವಿತ್ರವು. ಅದನ್ನು ಮುಟ್ಟದೆಯಾದರೆ ಸುಟ್ಟು ಬೀಳುವೆ! ಜೋಕೆ!' ಎಂದನು. ಕರ್ಣನು ಧರ್ಮಜನನ್ನು ಬಿಟ್ಟು, ಬೇರೆ ಕಡೆಗೆ ಹೋದನು. ಕಚಾಕಚಿ, ಬಾಹಾಬಾಹವಿ, ಮುಷ್ಟಾಮುಷ್ಟಿ, ದಂತಾದಂತೆಯಾಗಿ ಕಡಿದಾಡಿ ಚತುರಂಗಸೇನೆಯು ದೇಹವನ್ನಿಲ್ಲಿಟ್ಟು, ಪಾಪವನ್ನು ಬಿಟ್ಟು, ಸ್ವರ್ಗವನ್ನು ಮುಟ್ಟಿತು. ಕರ್ಣನು ಶಲ್ಯನನ್ನು ನೋಡಿ, 'ಭೀಮಸೇನನಲ್ಲಿಗೆ ನಡೆ!' ಎಂದಾಜ್ಞಾಪಿಸಿದನು. ಭೀಮನು

ಧರ್ಮರಾಜನನ್ನವಮಾನಿಸಿ, ಭಗವಂತನನ್ನು ಧಿಕ್ಕರಿಸಿದ ಕರ್ಣನಿಗೆ ತಕ್ಕ ಶಿಕ್ಷೆ ನೀಡದೆ ಬಿಡೆನೆಂದು ಕಡುಕೋಪದಿಂದ ಅವನನ್ನು ಮುತ್ತಿದನು. ಸಾತ್ಯಕಿ ಧೃಷ್ಟದ್ಯುಮ್ನರು ಭೀಮನ ಆಜ್ಞೆಯಂತೆ, ಧರ್ಮರಾಜನಿಗೆ ರಕ್ಷಕರಾಗಿ ನಿಂತರು. 'ನನ್ನೆದುರಿಗೆ ಧರ್ಮಜನನ್ನು ಏಕವಚನನ್ನಾಗಿಸಿ ನಿಂದಿಸಿದ ಸೂತನಂದನನನ್ನು ಕೊಂದೇ ಬರುವೆನು. ನಂದನಂದನನನ್ನು ಪರೋಕ್ಷದಿ ನಿಂದಿಸಿದ ದುಷ್ಟನ ನಾಲಿಗೆಯನ್ನು ಸೀಳಿಬಿಡುವೆನೆಂದೆನ್ನ ಪ್ರತಿಜ್ಞೆ ಎಂದಮೇಲೆ, ಎನ್ನ ಮುಂದೇ ನಿಂದಿಸಿದ ಪಾಪಿ ಕರ್ಣನಿನ್ನು ಬದುಕಿರನು' ಎಂದು ಭೀಮನು ರೋಷಾರುಣಿತಲೋಚನನಾಗಿ ಕರ್ಣನನ್ನು ತಾಕಿದನು.

ಶಲ್ಯನು 'ಕರ್ಣ! ಕರ್ಣ! ನೋಡಲ್ಲಿ ಕ್ರುದ್ಧನಾಗಿ ಬರುವ ಭೀಮನನ್ನು! ದೀರ್ಘಕಾಲದಿಂದ ಕೂಡಿಟ್ಟ ಕ್ರೋಧಾಗ್ನಿಯನ್ನು ನಿನ್ನ ಮೇಲೆ ಬಿಡಲು ಬರುತ್ತಿರುವನು. ಅಭಿಮನ್ಯುವಿನ ಮೃತಿಯನ್ನು, ಘಟೋತ್ಕಚನ ಸಾವನ್ನು ನೋಡಿದಾಗಲೂ ಭೀಮನಿಷ್ಟು ಭಯಂಕರನಾಗಿದ್ದಿಲ್ಲ. ಯುಗಾಂತಾಗ್ನಿಯಂತೆ ಉರಿಯುತ್ತಾ ಬರುವ ಭೀಮನು ತ್ರಿಲೋಕದ ಸರ್ವವೀರರನ್ನು ಜಯಿಸಬಲ್ಲನು' ಎಂದನು. ಕರ್ಣನು ಯುದ್ಧಾಭಿನಂದಿಯಾಗಿ ರಭಸದಿಂದ ಮುತ್ತುವ ಭೀಮನನ್ನು ಕಂಡು, ಶಲ್ಯನಿಗಿಂತೆಂದನು: 'ಭೀಮಸೇನನು ನೀನಂದಂತೆ ಮಹಾಶೂರನು. ಕ್ರೋಧನನಾದರೆ ಆ ವೀರನನ್ನೆದುರಿಸಿ ಉಳಿಯುವುದಿಲ್ಲ. ಇವನು ಪ್ರಾಣಬಲಾಧಿಕನು. ಶರೀರದ ಲಕ್ಷ್ಯವಿಲ್ಲದ್ದೇ ಕಾದುವ ಸಾಹಸಿಯು. ಕೇವಲ ಬಾಹುಬಲದಿಂದ ಕೀಚಕನನ್ನು ಮರ್ದಿಸಿ, ಪ್ರಿಯ ಸತಿಗೆ ಹಿತವನ್ನು ಸಾಧಿಸಿದ ಸತ್ಯಪ್ರತಿಜ್ಞನು. ದಂಡವನ್ನೆತ್ತಿ ಮೇಲೆರಗುವ ಮೃತ್ಯುವನ್ನೂ ಲೆಕ್ಕಿಸದೇ ಗೆಲ್ಲುವ ಬಲ್ಲಿದನು. ಅಂತಹ ಭೀಮನೊಡನೆ ರಣಸಮಾಗಮವನ್ನು ಬಯಸಿದ್ದ ನನಗಿಂದು ಪಬ್ಬವೆಂತೆನಿಸಿದೆ. ಮೊದಲು ಭೀಮನನ್ನು ಸಂಹರಿಸಿ ಆಮೇಲೆ ಸವ್ಯಸಾಚಿಯ ಕೂಡ ಕಡಿದಾಡುವೆನು' ಎಂದನು. ಶಲ್ಯನು 'ಹಾಗೆಯೇ ಮಾಡು ಕರ್ಣ! ನಿನ್ನ ಮನೋಭಿಲಾಷೆ ಈಡೇರಲಿ! ಮುಂದೆ ಬಿದ್ದಿರುವ ಭೀಮನನ್ನು ಮೊದಲು ತಡೆದು ಜಯಿಸು! ಅನಂತರವಲ್ಲವೇ ಅರ್ಜುನನ ವಿಚಾರ?' ಎಂದು ಭೀಮನ ಕಡೆಗೆ ರಥವನ್ನು ನಡೆಸಿದನು.

ಕರ್ಣ-ಭೀಮಸಮಾಗಮವತಿಭಯದವಾಯಿತು. ಭೀಮಸೇನನು ಅಸಂಖ್ಯಾತ ಬಾಣಗಳಿಂದ ಪೀಡಿಸಿ ಗರ್ಜಿಸಿದನು. ಕರ್ಣನು ಭೀಮನ ಧನುವನ್ನು ಮುರಿದು ತ್ರೀವ್ರನಾರಾಚಗಳಿಂದ ಎದೆಗೆ ಹೊಡೆದನು. ಭೀಮನು ಮತ್ತೊಂದು ಧನುವನ್ನು ಪಿಡಿದು, ನಿಶಿತಶರಗಳಿಂದ ಪೀಡಿಸಿದನು. ಕರ್ಣನು ಬಿಟ್ಟ ಇಪ್ಪತ್ತೈದು ಬಾಣಗಳಿಂದ ತಾಡಿತನಾದ ಭೀಮನು ಕುಪಿತನಾಗಿ, ಭಾರವಾದೊಂದು ಸಾಯಕದಿಂದ ಕರ್ಣನ ಎದೆಗೆ ಹೊಡೆದನು. ಕರ್ಣನು ಮೂರ್ಛಿನಾಗಿ ರಥಮಧ್ಯದಿ ಬಿದ್ದಿರಲು, ನೋಡಿ, ಭೀಮನು ರಥದಿಂದಿಳಿದು, ಖಡ್ಗಪಾಣಿಯಾಗಿ ಕರ್ಣರಥಕ್ಕೆ ಹಾರಿದನು. ಶ್ರೀಕೃಷ್ಣನನ್ನು ನಿಂದಿಸಿದ ಕರ್ಣನ ನಾಲಿಗೆಯನ್ನು ಸೆಳೆದು ಕೊಯ್ಯಲು ಯತ್ನಿಸುವ ಭೀಮನನ್ನು ಕಂಡು ಶಲ್ಯನು 'ಭೀಮಸೇನ! ಕರ್ಣನನ್ನು ಸಂಹರಿಸಬೇಡ! ಅವನು ಮೂರ್ಛಾಗ್ರಸ್ತನಾಗಿರುವನು. ಅರ್ಜುನನೊಡನೆ ಕಾದಲು ತವಕಿಸುವ ಕರ್ಣನನ್ನು ನೀನು ಕೊಂದರೆ ಅರ್ಜುನಪ್ರತಿಜ್ಞೆಯು ವ್ಯರ್ಥವಾದೀತು!' ಎಂದು ವಾರಿಸಿ, ರಥವನ್ನು ದೂರ ಸರಿಸಿದನು.

ಕರ್ಣನೋರ್ವನೇ ಪಾಂಡವರನ್ನೆಲ್ಲ ಕೊಲ್ಲುವನೆಂದು ನಂಬಿದ್ದ ಕೌರವರು ಕರ್ಣ ಪರಾಜಯದಿಂದ ಎದೆಗುಂದಿದರು. ಕೆಲ ಭಟರು ರಣರಂಗದಿಂದ ಕಾಲ್ತೆಗೆದರು. ದುರ್ಯೋಧನನು ತನ್ನ ಸೋದರಾದಿ ವೀರರನ್ನು ರಕ್ಷಣೆಗಾಗಿ ಕಳಿಸಿದನು. ಉರಿಯುತ್ತಿರುವ ಕಾಲಾಗ್ನಿಯನ್ನು ಪತಂಗಗಳಂತೆ ಕೌರವವೀರರು ಭೀಮಸೇನನನ್ನು ಮುತ್ತಿ ನಷ್ಟರಾದರು. ಶ್ರುತವಾನ್, ದುರ್ಧರ, ಕ್ರಾಥ, ವಿವಿತ್ಸು, ವಿಕಟ, ಸಮ, ನಂದಕ, ಉಪನಂದಕ, ದುಷ್ಪ್ರಧರ್ಷ, ಸುಬಾಹು, ವಾತವೇಗ, ಸುವರ್ಚಸ, ದಮ, ಧನುರ್ಗ್ರಾಹ, ಜಲಸಂಧ, ಶಲ, ಸಹ ಮೊದಲಾದವರು ಭೀಮನನ್ನು ಶರವರ್ಷದಲ್ಲಿ ಮುಳುಗಿಸಿದರು.

ಭೀಮಸೇನನು ಅವರ ಬಾಣಗಳನ್ನು ಖಂಡಿಸಿ, ಹದಿನೈದು ಧಾರ್ತರಾಷ್ಟ್ರ ರಥಿಕರನ್ನೂ, ವಿವಿತ್ಸುವಿನನ್ನು ಸಂಹರಿಸಿದನು. ವಿಕಟ, ಸಹ, ಕ್ರಾಥರು ಮುತ್ತಲು ಅವರನ್ನೂ ಕೊಂದನು. ಮಿಕ್ಕ ನಿನ್ನ ಸುತರನ್ನೂ ಬಂದಂತೆ ಯಮಮಂದಿರಕ್ಕೆ ಕಳಿಸಿದನು. ಸೂತಪುತ್ರನದನ್ನು ಕಂಡು ಖಿನ್ನನಾಗಿ, ಭೀಮನನ್ನು ತಡೆದು ಕಾದತೊಡಗಿದನು. ದುರ್ಯೋಧನಾದಿಗಳು ನೋಡುತ್ತಿರಲು, ಭೀಮನು ಏಳು ಬಾಣಗಳಿಂದ ಕರ್ಣನನ್ನು ಪೀಡಿಸಿ, ಗರ್ಜಿಸಿದನು. ಕರ್ಣನು ಭೀಮನ ಧನುವನ್ನು ಮುರಿದು, ಕಂಕಪತ್ರಗಳಿಂದ ತಾಟಿಸಿದನು. ಭೀಮನು ಪರಿಘವನ್ನೊಗೆಯಲು ಅದನ್ನು ಖಂಡಿಸಿ ಕೆಡಹಿದನು. ಭೀಮನು ಮತ್ತೊಂದು ಧನುವೆತ್ತಿ, ಶರವರ್ಷದಿಂದ ಕುರುಸೇನೆಯನ್ನು ಮುಚ್ಚಿದನು. ಒಂದು ಬಾಣದಿಂದ ಎದೆಗೆ ಹೊಡೆಯಲು, ಕರ್ಣನು ಮತ್ತೆ ಮೂರ್ಛಿತನಾದನು. ಮತ್ತೆ ಎಚ್ಚತ್ತು ಕರ್ಣನು ರೋಷಕಷಾಯಿತನೇತ್ರನಾಗಿ ಇಪ್ಪತ್ತೈದು ಕಂಕಪತ್ರಗಳಿಂದ ಭೀಮನನ್ನು ಪೀಡಿಸಿ, ಒಂದು ಬಾಣದಿಂದ ಆತನ ಧ್ವಜವನ್ನು, ನಾಲ್ಕರಿಂದ ಕುದುರೆಗಳನ್ನು ಕೆಡಹಿದನು. ಮತ್ತೊಂದು ಭಲ್ಲದಿಂದ ಭೀಮನ ಧನುವನ್ನು ಮುರಿದನು. ಆಗ ಭೀಮಸೇನನು ಗದಾಪಾಣಿಯಾಗಿ ರಥದಿಂದಿಳಿದು ಅನಿಲನು ಮೇಘಗಳನ್ನಂತೆ ಏಳುನೂರಾನೆಗಳನ್ನು ಸೀಳಿ ಕೆಡಹಿದನು ಕುಂಭ, ಕಟಕ, ನೇತ್ರಾದಿ ಮರ್ಮಗಳಲ್ಲಿ ಹೊಡೆದು ಮತ್ತೆ ಏಳುನೂರು ಮದ್ದಾನೆಗಳನ್ನು ಯೋಧಾಂಬಷ್ಠಸಮೇತವಾಗಿ ಕುಟ್ಟಿ ಕೊಂದನು.

ಭೂತಲದಿ ಬಂದುನಿಂತ ಭೂತಪತಿಯೋ, ಎಂಬಂತೆ, ಭೀಮನು ಶಕುನಿಯ ನಾಲ್ಕುನೂರು ಮದ್ದಾನೆಗಳನ್ನೂ, ನೂರಾರು ರಥಗಳನ್ನೂ, ಸಾವಿರಾರು ತುರಗಸಾದಿಪದಾತಿಗಳನ್ನೂ ಗದೆಯಿಂದಲೇ ನಾಶಪಡಿಸಿದನು. ಭೀಮನ ವೀರ್ಯಾಗ್ನಿಯಲ್ಲಿ ಕುರುಸೇನೆಯು ಚರ್ಮದಂತೆ ಸಂಕುಚಿತವಾಯಿತು. ಕುರುವೀರರು ಭೀತಿಯಿಂದ ದಿಕ್ಕೆಟ್ಟು ಓಡಿಹೋದರು. ಭೀಮನು ಬಂದು ಮುತ್ತಿದ ಐದುನೂರು ರಥಿಕರನ್ನು, ವಿಷ್ಣುವು ಅಸುರರನ್ನಂತೆ ಗದೆಯಿಂದ ಕುಟ್ಟಿ ಕೊಂದನು. ಶಕುನಿಯು ಕುಪಿತನಾಗಿ ಮೂರುಸಾವಿರ ಅಶ್ವಿಕ ದಳದಿಂದ ಬಂದು ಮುತ್ತಲು, ವೃಕೋದರನು ಅವರನ್ನೆಲ್ಲ ಕೊಂದು, ಸಹದೇವನ ಪ್ರತಿಜ್ಞೆಯನ್ನು ನೆನೆದು, ಶಕುನಿಯನ್ನು ಸೋಲಿಸಿ ಕಳಿಸಿದನು. ಆಗ ಧರ್ಮರಾಜನನ್ನು ಬಾಣಗಳಿಂದ ಹೊಡೆದು ಪೀಡಿಸುವ ರಾಧೇಯನು ಆತನ ಕಣ್ಣಿಗೆ ಬಿದ್ದನು. ಭೀಮನು ರಾಧೇಯನ ರಥವನ್ನು ಸೇರೆಂದು ತನ್ನ ಸೂತನಿಗೆ

ಆಜ್ಞಾಪಿಸಿ, ತಾನೂ ರಥಾರೂಢನಾಗಿ, ಶರವರ್ಷದಲ್ಲಿ ಸೂತ ಸುತನನ್ನು ಮುಣುಗಿಳಿದನು. ಕರ್ಣನೂ ಶರಜಾಲದಿಂದ ಪಾಂಡವದ್ವಿತೀಯನನ್ನು ಮುಚ್ಚಿದನು. ಅದ್ವಿತೀಯ ಶೂರನಾದ ಭೀಮ ಅವನ ಶರಗಳನ್ನು ಖಂಡಿಸಿ, ಪೀಡಿಸುವದನ್ನು ನೋಡಿ, ಮಧ್ಯಾಕಾಶಗತ-ಮಾರ್ತಾಂಡನು ಕುಪಿತನಾದಂತೆ ತೋರಿದನು.

ನದಿಗಳೆರಡು ಕಲೆತಂತೆ, ಪರ್ವತಗಳೆರಡು ಢೀಕೊಡುವಂತೆ, ಮೇಘಗಳೆರಡು ಗರ್ಜಿಸುವಂತೆ ಕಲೆತು, ತಾಕಿ, ಗರ್ಜಿಸುವ ಕುರುಪಾಂಡವ ಯೋಧರಲ್ಲಿ ಪರಸ್ಪರ ಹತರಾಗಿ ಬಹುಸಂಖ್ಯಾಕರು ಬಿದ್ದರು. ರಾಜನ್! ನಾನಂದಿನ ರಣವನ್ನು ಕಂಡು ಇನ್ನು ಕೌರವರಿಗೆ ಉಳಿಗಾಲವಿಲ್ಲ ಎಂದು ನಿಶ್ಚಯಿಸಿ, ಚಿಂತಾಕ್ರಾಂತನಾದೆನು.

ಶಲಭಗಳಂತೆ ಹಾರುವ ಶರಗಳಿಂದಲು, ಘೂರ್ಣಿಸುತ್ತಾ ಬರುವ ಪ್ರಾಸ, ಶೂಲಭಿಂಡಿ, ಪಾಲ, ಶಕ್ತಿ, ತೋಮರಗಳಿಂದಲು, ರಣರಂಗವು ನಿರವಕಾಶವಾಯಿತು. ಹಯ ಗಜಸಾದಿ ಭಟರ ತಲೆಗಳಿಂದ ರಣಭೂಮಿಯು ಮಳೆಗಾಲದಿ ಇಂದ್ರಗೋಪಗಳಿಂದ ತುಂಬಿದ ಬೈಲಂತೆ ಕಂಡಿತು. ಹೊಡೆಯುವವರಾರು, ಓಡುವವರಾರು, ಬೀಳುವವರಾರು, ಚೀರುವವರಾರು, ಬಾಯಿ ಬಿಡುವವರಾರು, ಸಾಯುತ್ತಿರುವವರಾರು ಎಂಬುವುದೊಂದನ್ನೂ ಲೆಕ್ಕಿಸದೆ, ವೀರಸ್ವರ್ಗವನ್ನು ಸೂರೆಗೊಳ್ಳಲೆಣಿಸಿ ಕಾದುವ ಉಭಯ ಸೈನಿಕರ ವಿಹಾರವು ಅಂಬರದಿ ನಿಂತ ಸಿದ್ಧಚಾರಣರ ಪ್ರಶಂಸೆಗೆ ಪಾತ್ರವಾಯಿತು. ರಕ್ತನದಿಗಳ ಇಕ್ಕೆಲಗಳಲ್ಲಿ ನಿಂತು ವಿಕೃತಾರವವನ್ನು ಮಾಡುವ ಕ್ರವ್ಯಾದ ಪಶುಪಕ್ಷಿಗಳು ಯೋಧರ ಎದೆಗೂಡಿನಲ್ಲಿ ದಿಗಿಲನ್ನು ತುಂಬಿದವು. ರಣರಂಗವು ಪ್ರೇತರಾಜಾಂಗಣವಾಯಿತು.

ಸಂಸಪ್ತಕ ಸೈನ್ಯವನ್ನು ನಾಶಗೊಳಿಸುವ ಪಾರ್ಥನನ್ನು ವಾರಿಸಿ, ಸುಶರ್ಮನು ಹತ್ತು ಬಾಣಗಳಿಂದ ಪಾರ್ಥನನ್ನು ಪೀಡಿಸಿದನು. ಜನಾರ್ದನನನ್ನು ದಕ್ಷಿಣಭುಜದಿ ಮೂರು ಬಾಣಗಳಿಂದ ಹೊಡೆದು, ತ್ರಿಗರ್ತರಾಜನು ಒಂದರಿಂದ ಅರ್ಜುನ ಕೇತುವಿನನ್ನು ತಾಟಿಸಿದನು. ಕೇತುಸ್ಥಿತನಾಗಿದ್ದ ವಾನರ ರಾಜನು ಭಯಂಕರ ಸಿಂಹನಾದವನ್ನು ಮಾಡಲು ಕುರುಸೈನಿಕರು ಭಯದಿಂದ ನಿಶ್ಚೇಷ್ಟರಾದರು. ಒಂದು ಕ್ಷಣಕಾಲ ನಾನಾಪುಷ್ಪಸಮಾಕೀರ್ಣವಾದ ಚೈತ್ರರಥವನದಂತಿದ್ದ ಸೇನೆಯು ಮತ್ತೆ ತಿಳಿದು, ಅರ್ಜುನನನ್ನು ವಿವಿಧಾಯುಧಗಳಿಂದ ಮುತ್ತಿ ಹೊಡೆಯಿತು. ಅರ್ಜುನನು ಅವರ ಆಯುಧಗಳನ್ನು ತುಂಡರಿಸಿ, ಅವರನ್ನೂ ಸಂಹರಿಸಿದನು. ಆಗ ಸಂಸಪ್ತಕ ಪದಾತಿಗಳು ಬಂದು ರಥವನ್ನು, ತುರಗಗಳನ್ನು, ಚಕ್ರಗಳನ್ನು ಪಿಡಿದು ಕದಲದಂತೆ ಮಾಡಿದರು. ಕೆಲವರು ಶ್ರೀಕೃಷ್ಣನ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ಕೆಲವರು ಪಾರ್ಥನನ್ನು ಪಿಡಿದರು. ಶ್ರೀಕೃಷ್ಣನು ಇರುವೆಗಳಂತೆ ಮುತ್ತುವ ಸಾವಿರಾರು ಸೈನಿಕರನ್ನು ಕೊಡವಿ ಕೆಡಹಿದನು. ಮತ್ತೂ ಅರ್ಜುನನನ್ನು ಪಿಡಿದ ಸೈನಿಕರನ್ನೂ ನೂಕಿ ಕೆಡಹಿದನು. ಆಗ ಅರ್ಜುನನು ಗಾಂಡೀವಯುಕ್ತವಾದ ಅಂಜಲಿಕಗಳಿಂದ ಆಸನ್ನಭಟರನ್ನೂ

ತೀವ್ರನಾರಾಚಗಳಿಂದ ದೂರಸ್ಥಯೋಧರನ್ನೂ ಸಂಹರಿಸಿ, ದೇವದತ್ತವನ್ನೂದಿದನು. ಶ್ರೀಕೃಷ್ಣನು ಪಾಂಚಜನ್ಯವನ್ನೂದಿದನು. ಶತ್ರುಗಳು ಭೀತರಾದರು. ಅರ್ಜುನನು ನಾಗಾಸ್ತ್ರವನ್ನು ಬಿಟ್ಟು ಅವರ ಪದಗಳನ್ನು ಬಂಧಿಸಿದನು. ಸಾವಿರಾರು ಸರ್ಪಗಳು ಪಾಶಗಳಂತೆ ಪಾದಗಳಿಗೆ ಸುತ್ತಿ ನಿಲ್ಲಿಸಲು, ಕದಲಲಾರದಿದ್ದ ತ್ರಿಗರ್ತವಾಹಿನಿಯು ಅರ್ಜುನಬಾಣಾಗ್ನಿಗೆ ಸಿಕ್ಕು ಬೂದಿಯಾಯಿತು. ಅದನ್ನು ಕಂಡು ಸುಶರ್ಮನು ಸೌಪರ್ಣಾಸ್ತ್ರವನ್ನು ಪ್ರಯೋಗಿಸಿ, ತನ್ನವರ ನಾಗಬಂಧವನ್ನು ಬಿಡಿಸಿದನು. ಹಾರಿಬರುವ ಗರುಡಪಕ್ಷಿಗಳು ಸರಿದಾಡುವ ನಾಗಗಳನ್ನು ತುಂಡರಿಸಿದವು. ತ್ರಿಗರ್ತಯೋಧರು ಬಂಧಮುಕ್ತರಾಗಿ, ಮತ್ತೆ ಅರ್ಜುನನ ಮೇಲೇರಿ ಬಂದರು. ಅರ್ಜುನನು ಐಂದ್ರಾಸ್ತ್ರವನ್ನು ಪ್ರಯೋಗಿಸಿ, ವರ್ಷಧಾರೆಯಂತೆ ಸುರಿವ ಬಾಣಕೋಟಿಯಿಂದ ಅವರನ್ನು ಹಿಂದೆ ಸರಿಸಿ, ಸಂಹರಿಸಿದನು. ಅರ್ಜುನನ ಧಾಟಿಗೆ ಸಿಕ್ಕ ಸಂಸಪ್ತಕ, ತ್ರಿಗರ್ತ, ಗೋಪಾಲ ಸೇನೆಗಳ ಬಹುಭಾಗವು ನಷ್ಟವಾಯಿತು.

ಕೃಪನು ಪಾಂಡವೀಸೇನೆಯನ್ನು ಮರ್ದಿಸುವದನ್ನು ಕಂಡ ಶಿಖಂಡಿಯು ಕೆಂಡವಾಗಿ, ಆಚಾರ್ಯನನ್ನು ಮುತ್ತಿ ಏಳು ಬಾಣಗಳಿಂದ ಪೀಡಿಸಿದನು. ಕೃಪನು ನಾಲ್ಕು, ಒಂದು, ನೂರು ಬಾಣಗಳಿಂದ ಶಿಖಂಡಿಯು ಕುದುರೆಗಳನ್ನು, ಸೂತನನ್ನು ಅವನ ಯೋಧರನ್ನು ಸಂಹರಿಸಿದನು. ಶಿಖಂಡಿಯ ಕತ್ತಿಗುರಾಣಿಗಳನ್ನು ಪಿಡಿದು ಬರಲು, ಕೃಪನು ಅವನ್ನು ಖಂಡಿಸಿದನು. ಶಿಖಂಡಿಯು ಗೌತಮನಿಂದ ಸಾಯದಂತೆ ಧೃಷ್ಟದ್ಯುಮ್ನನು ಅವನನ್ನು ತನ್ನ ರಥದಿ ಕೂಡಿಸಿಕೊಂಡನು. ಕೃತವರ್ಮನು ಧೃಷ್ಟದ್ಯುಮ್ನನನ್ನು, ದ್ರೋಣಪುತ್ರನು ಧರ್ಮರಾಜನನ್ನು, ದುರ್ಯೋಧನನು ಮಾದ್ರೀಸುತರನ್ನು, ಕರ್ಣನು ಭೀಮಸೇನನನ್ನು ತಡೆದು, ಕೃಪನಿಗೆ ನೆರವಾದರು. ಕೃಪನ ಬಾಣಗಳಿಂದ ಮತ್ತೆ ವಿರಥನು, ವ್ಯಾಯುಧನು, ಆದ ಶಿಖಂಡಿಯು ರಣರಂಗದಿಂದ ದೂರ ಸರಿದನು. ಕೃಪನು ತನ್ನನ್ನು ಮುತ್ತಿದ ಸುಕೇತುವಿನನ್ನು ಸಂಹರಿಸಿ, ಪಾಂಚಾಲನ ಸೇನೆಯನ್ನು ಓಡಿಸಿದರು.

ಧೃಷ್ಟದ್ಯುಮ್ನನು ಕೃತವರ್ಮನಿಂದ ಹೋರಾಡಿ, ಅವನ ಸೂತಾಶ್ವಗಳನ್ನು ಕೊಲ್ಲಲು, ಕೃತವರ್ಮನು ರಣವಿಮುಖನಾದನು. ಅಶ್ವತ್ಥಾಮನ ಬಾಣವೇಗವನ್ನು ಸಹಿಸಿ ಹೋರಾಡುವ ಯುಧಿಷ್ಠಿರನು ಉಭಯಸೇನೆಗಳಿಂದ ಪ್ರಶಂಸಿಸಲ್ಪಟ್ಟನು. ವರ್ಷಧಾರೆಗಳಂತೆ ಬರುವ ಬ್ರಾಹ್ಮಣ ವರನ ಬಾಣಗಳಿಂದ ನಭವು ತುಂಬಿ, ಹಾರುವ ಪಕ್ಷಿಗಳಿಗಾತಂಕವಾಯಿತು. ಸಾತ್ಯಕಿಯು ಧರ್ಮರಾಜನಿಗೆ ನೆರವಾಗಿ ಬಂದು ದ್ರೌಣಿಯೊಡನೆ ಕಾದತೊಡಗಿದನು. ಆಚಾರ್ಯಪುತ್ರನು ಅವರೀರ್ವರನ್ನೂ ಅಲಕ್ಷ್ಯ ಭಾವನನಾಗಿ ಬಾಣಶತದಿಂದ ಪೀಡಿಸಿದನು. ದ್ರೌಪದೇಯರನ್ನು ಹತ್ತು ಹತ್ತು ಬಾಣಗಳಿಂದ ಹೊಡೆದು, ಅಶ್ವತ್ಥಾಮನು-ಸಿಂಹವು ಕುರಿಹಿಂಡಿನಲ್ಲಿಯಂತೆ ನುಗ್ಗಿ ತತ್ಕಾಲದ ಮಾರ್ತಾಂಡನಂತೆ ಪ್ರಚಂಡ ಪ್ರತಾಪದಿಂದ ದುರ್ನಿರೀಕ್ಷ್ಯನಾದನು.

## ೧೦. ಕರ್ಣವಿಕ್ರಮ ಧರ್ಮಜ ಶಿಬಿರಯಾನ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಅಶ್ವತ್ಥಾಮನು ಸಾತ್ಯಕಿಯನ್ನು ಇಪ್ಪತ್ತೈದು ಬಾಣಗಳಿಂದಲು, ಶ್ರುತಕೀರ್ತಿಯನ್ನು ಒಂಬತ್ತರಿಂದಲು, ಸುತಸೋಮನನ್ನು ಐದರಿಂದಲು, ಶ್ರುತಕರ್ಮನನ್ನು ಎಂಟರಿಂದಲು, ಪ್ರತಿವಿಂಧ್ಯನನ್ನು ಮೂರು ಶರಗಳಿಂದಲು, ಶತಾನೀಕನನ್ನು ಒಂಬತ್ತರಿಂದಲು, ಧರ್ಮಜನನ್ನು ಐದರಿಂದಲು ಹೊಡೆದು, ಧರ್ಮಜ ಶತಾನೀಕರ ಬಿಲ್ಲನ್ನು ಮುರಿದನು. ಧರ್ಮರಾಜನು ಭಲ್ಲರಿಂದ ದ್ರೌಣಿಯ ಧನುವನ್ನು ಮುರಿಯಲು, ದ್ರೌಣಿಯು ಮತ್ತೊಂದು ಧನುವೆತ್ತಿ, ಧರ್ಮಜನ ಕುದುರೆಗಳನ್ನು ತಾಡಿಸಿ, ಓಡಿಸಿ, ಸಾತ್ಯಕಿಯ ಸಾರಥಿಯನ್ನು ಕೊಂದನು. ಸಾತ್ಯಕಿಯ ಕುದುರೆಗಳು ದಿಕ್ಕೆಟ್ಟೋಡಿದವು.

ಆಗ ಧರ್ಮಜನು ರೋಷಾಮರ್ಷಸಮನ್ವಿತನಾಗಿ 'ಗುರುಪುತ್ರ! ಆಚಾರ್ಯನೆಷ್ಟು ಪ್ರೀತಿಯನ್ನಿಟ್ಟಿದ್ದನೆಮ್ಮಲ್ಲಿ? ಆಚಾರ್ಯಪುತ್ರನಿಗಾ ಪ್ರೀತಿಯ ಸಹಸ್ರಾಂಶವೂ ಇಲ್ಲದಾಯಿತಲ್ಲ! ಕೃತಜ್ಞತೆಯಾದರೂ ಬೇಡವೇ? ನನ್ನನ್ನೇ ಕೊಲ್ಲಲೆಣಿಸುವದುಚಿತವೇ? ಬ್ರಾಹ್ಮಣವರನೆನಿಸಿರುವೆ! ತಪಸ್ಸ್ವಾಧ್ಯಾಯಗಳನ್ನು ಬದಿಗಿಟ್ಟು, ಬಿಲ್ಲನ್ನು ಪಿಡಿದೆ! ನಿನ್ನ ಬ್ರಾಹ್ಮಣ್ಯವೇನಾಯಿತೋ ವಿಚಾರಿಸಿ ತಿಳಿ! ನೀನು ನೋಡುತ್ತಿರಲು, ಕೌರವರನ್ನು ನಾನು ಕೇವಲ ಧರ್ಮ ವಾಸುದೇವರ ಬಲದಿಂದ ಗೆಲ್ಲುವೆನು' ಎಂದನು. ಆ ಮಾತಿನ ಸತ್ಯತೆಯನ್ನರಿತು ಅಶ್ವತ್ಥಾಮನು ಬದಲು ಮಾತಾಡದೆ, ಶರವರ್ಷದಿಂದ ಪಾಂಡವನನ್ನು ಮುಚ್ಚಿದನು. ಪಾಂಡವ ಜ್ಯೇಷ್ಠನು ಗುರುಪುತ್ರನನ್ನು ಬಿಟ್ಟು ಬೇರೆಡೆಗೆ ಹೋದನು.

ಭೀಮಸೇನನು ಕರ್ಣನನ್ನು ಸೋಲಿಸಿ ಕುರುಸೇನೆಯನ್ನು ನಾಶಪಡಿಸಿದನು. ದುಯೋಧನನು ನಕುಲ ಸಹದೇವರನ್ನು ಸೋಲಿಸಿ, ತನ್ನನ್ನು ತಡೆದ ಧೃಷ್ಟದ್ಯುಮ್ನನನ್ನು ಇಪ್ಪತ್ತು ಬಾಣಗಳಿಂದ ಪೀಡಿಸಿದನು. ಒಂದು ಭಲ್ಲದಿಂದ ಅವನ ಬಿಲ್ಲನ್ನೂ ಮುರಿದನು. ಪಾರ್ಷತನು ಮತ್ತೊಂದು ಧನುವೆತ್ತಿ, ಹದಿನೈದು ಬಾಣಗಳಿಂದ ಹೊಡೆದನು. ಕುರುರಾಜನು ಮೈಯೆಲ್ಲ ಗಾಯವಾಗಿ, ವಸಂತಕಾಲದ ಪುಷ್ಪಿತಕಿಂಶುಕದಂತೆ ಕಂಗೊಳಿಸಿದನು. ದುರ್ಯೋಧನನು ಧೃಷ್ಟದ್ಯುಮ್ನನ ಧನುವನ್ನು ಮುರಿದು, ಅವಕಾಶವನ್ನೀಯದೆ, ಹತ್ತು ಬಾಣಗಳನ್ನು ಅವನ ಲಲಾಟದಲ್ಲಿ ನಾಟಿಸಿದನು. ಫುಲ್ಲಪಂಕಜಕ್ಕೆ ಮುತ್ತಿದ ಭ್ರಮರಗಳಂತೆ ಬಾಣಗಳು ಮುಖಕ್ಕೆ ಬಡಿಯಲು ಪಾರ್ಷತನು ರಕ್ತಸಿಕ್ತಗಾತ್ರನಾದನು. ಅವನು ಮತ್ತೊಂದು ಧನುವೆತ್ತಿ, ಹದಿನಾರು ಭಲ್ಲಗಳನ್ನು ಪ್ರಯೋಗಿಸಿ, ದುರ್ಯೋಧನನ ತುರಗ ಸೂತರನ್ನು ಕೊಂದು, ಧನುವು ಮುರಿದು, ಅವನೊಗೆದ ಶಕ್ತಿ, ಖಡ್ಗ, ಗದಾಗಳನ್ನು ಖಂಡಿಸಿದನು. ಮತ್ತೊಂದರಿಂದ ಧ್ವಜವನ್ನೂ ಕೆಡಹಿದನು. ವಿರಥನಾದ ಕುರುರಾಜನನ್ನು ಮಾಗಧ ದಂಡಧಾರನು ತನ್ನ ರಥದಿ ಕೂಡಿಸಿಕೊಂಡನು.

ಕರ್ಣನು ಅದನ್ನು ಕಂಡು ರಾಜಸಹಾಯಕ್ಕಾಗಿ ಧಾವಿಸಿದನು. ಸಾತ್ಯಕಿಯೂ

ಅವನ ಬೆನ್ನಟ್ಟಿ, ಬಾಣವರ್ಷವನ್ನು ಸುರಿಸಿದನು. ಕರ್ಣನು ತನ್ನನ್ನು ಮುತ್ತಿದ ವ್ಯಾಘ್ರಕೇತು, ಸುಶರ್ಮ, ಚಿತ್ರ, ಉಗ್ರಾಯುಧ, ಜಯ, ಶುಕ್ಲ, ರೋಚಮಾನ, ಸಿಂಹಸೇನ, ದುರ್ಜಯ, ಮೊದಲಾದ ಪಾಂಚಾಲ ವೀರರನ್ನು ಬಾಣಗಳಿಂದ ಪೀಡಿಸಿ ಬಹುಸಹಸ್ರ ಯೋಧರನ್ನು ಸಂಹರಿಸಿದನು. ಜಿಷ್ಣು, ಜಿಷ್ಣುಕರ್ಮಾ, ದೇವಾಪಿ, ಭದ್ರ, ದಂಡ, ಚಿತ್ರಚಿತ್ರಾಯುಧ, ಹರಿ, ಸಿಂಹಕೇತು, ರೋಚಮಾನ, ಶಲಭ ಮುಂತಾದ ಮಹಾರಥರು ಚೇದಿವೀರರು ಕರ್ಣಾಸ್ತ್ರಗಳಿಗೆ ತುತ್ತಾಗಿ, ಸತ್ತರು. ಕರ್ಣಬಾಣಪೀಡಿತವಾದ ಸಾವಿರಾರು ಗಜಗಳು ವಜ್ರಾಹತವಾದ ಪರ್ವತಗಳಂತೆ ನೆಲಕ್ಕುರುಳಿದವು. ಸಿಂಹವು ಮೃಗಮಧ್ಯದಿ ತೂರಿ ಹೋಗುವಂತೆ ಕರ್ಣನು ನಿರ್ಭಯನಾಗಿ, ಪಾಂಚಾಲ ಸೈನಿಕರನ್ನು ಸಂಹರಿಸುತ್ತಾ ರಣರಂಗದಿ ಎದುರಿಲ್ಲದೆ ವಿಹರಿಸಿದನು. ತನ್ನನ್ನು ಮುತ್ತುವ ಶಿಖಂಡಿ, ಪಾರ್ಷತ, ದ್ರೌಪದೇಯರನ್ನು ಮುತ್ತಿ, ಘೋರಯುದ್ಧ ನಿರತನಾದ ಕರ್ಣನು ಪಾಂಚಾಲರನ್ನು ಸೋಲಿಸಿ, ಅವರ ಸೇನೆಯನ್ನು ನಾಶಪಡಿಸಿದನು. ಅಂತೆಯೇ ಭೀಮಸೇನನು ಕುರುಸೈನಿಕರನ್ನೂ ಗಜಯೂಥವನ್ನೂ ನಾಶಮಾಡಿದನು.

ಅರ್ಜುನನು ಸಂಸಪ್ತಕರನ್ನು ನಿಗ್ರಹಿಸಿ, ಶ್ರೀಕೃಷ್ಣನನ್ನು 'ಕರ್ಣನ ಕಡೆಗೆ ರಥವನ್ನು ನಡೆಸು!' ಎಂದು ಬೇಡಿದನು. ಕೃಷ್ಣಪಾರ್ಥರ ರಥವನ್ನು ಹೊತ್ತು ದಿವ್ಯಶ್ವೇತವಾಹಗಳು ಕರ್ಣನ ಕಡೆಗೆ ನಡೆಯುವುದನ್ನು ಕಂಡು, ದುರ್ಯೋಧನನು ಮತ್ತೆ ಸಂಸಪ್ತಕರನ್ನು ಕಳಿಸಿದನು. ಒಂದು ಸಾವಿರ ರಥಿಕರು, ಮುನ್ನೂರಾನೆಗಳು, ಹದಿನಾಲ್ಕುಸಾವಿರ ಕುದುರೆಗಳು, ಎರಡು ಲಕ್ಷ ಕಾಲ್ಬಲವು ಬಂದು ಅರ್ಜುನನನ್ನು ಮುತ್ತಿದವು. ತುಮುಲ ಯುದ್ಧ ಪ್ರಾರಂಭವಾಯಿತು. ಅರ್ಜುನನು ಸುದಕ್ಷಿಣಾನುಜನನ್ನು ಅವನ ಕಾಂಭೋಜ ಸೈನಿಕರನ್ನು ಹತ್ತುಸಾವಿರ ಯೋಧರನ್ನು ಸಂಹರಿಸಿದನು.

ಅಶ್ವತ್ಥಾಮನು ಪಾಂಡವಮಧ್ಯಮನ ವಿಜೃಂಭಣವನ್ನು ಸಹಿಸದೆ, ತಡೆದು ತೀಕ್ಷ್ಣಶರಗಳಿಂದ ಯಾದವ ಪಾಂಡವರನ್ನು ಪೀಡಿಸಿದನು. ಪಾಂಡವಮಧ್ಯಮನ ವಿಕ್ರಮವು ವಕ್ರ ಮೃದುವಾದುದನ್ನು ಕಂಡು, ಕುಪಿತನಾಗಿ ಶ್ರೀಕೃಷ್ಣನು 'ಅರ್ಜುನ! ದ್ರೋಣಪುತ್ರನನ್ನು ಹೊಡೆದೋಡಿಸಲಾರದ ನಿನ್ನ ಮಾರ್ದವವನ್ನು ಕಂಡು ಆಶ್ಚರ್ಯವಾಗಿದೆ. ಗುರುಪುತ್ರನೆಂಬ ಪಕ್ಷಪಾತವೋ? ಅಥವಾ ನಿನ್ನ ಭುಜವಿಕ್ರಮವೇ ಕುಂಠಿಸಿತೋ? ಗಾಂಡೀವವಲ್ಲವೇ ಪಿಡಿದಿರುವುದು? ವಿಕ್ರಮಿಸಿ, ಇವನನ್ನು ತಡೆದು ಸೋಲಿಸು!' ಎಂದು ಹುರಿದುಂಬಿಸಿದನು. ಅರ್ಜುನನು ಕ್ರುದ್ಧನಾಗಿ ಅಶ್ವತ್ಥಾಮನ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಹೂಡಿ. ಹದಿನಾಲ್ಕು ಭಲ್ಲಗಳಿಂದ ಅವನ ಧ್ವಜ ಛತ್ರಪತಾಕೆಗಳನ್ನು ಕೆಡಹಿ, ನಾಲ್ಕು ಕುದುರೆಗಳನ್ನು ಕೊಂದು, ಸೂತನನ್ನು ಪೀಡಿಸಿ, ಧನುವನ್ನು ಮುರಿದು, ಇಬ್ಬರು ಚಕ್ರರಕ್ಷಕರನ್ನು ಸಂಹರಿಸಿದನು. ಅಶ್ವತ್ಥಾಮನು ಶಕ್ತಿ, ಪರಿಘ, ಗದಾ, ತೋಮರಗಳನ್ನೆಸೆಯಲು, ಅವನ್ನು ಖಂಡಿಸಿ, ಪಾರ್ಥನು ವತ್ಸದಂತಗಳನ್ನವನ ಜತ್ರುದೇಹದಲ್ಲಿ ನಾಟಿಸಿದನು. ಆಗ ಗುರುಸುತನು ಮೂರ್ಛೆಹೊಂದಿ, ರಥನೀಡದಲ್ಲಿ ಮಲಗಿದನು. ಅವನ ಸೂತನು ರಥವನ್ನು ದೂರ ಸರಿಸಿ, ಶೀತಲೋಪಚಾರಗೈದನು.

ಅಶ್ವತ್ಥಾಮನು ಎಚ್ಚತ್ತು, ತಮ್ಮ ವೀರರನ್ನು ಹುರಿದುಂಬಿಸುವ ದುರ್ಯೋಧನನ ವಚನಗಳನ್ನು ಕೇಳಿ, ಅವನನ್ನು ಸಮಾಧಾನಿಸಿ ಇಂತೆಂದನು: 'ರಾಜನ್! ನೀವೆಲ್ಲರೂ ನೋಡುತ್ತಿರಲು, ಪಾಪಿ ಧೃಷ್ಟದ್ಯುಮ್ನನು ನ್ಯಸ್ತಶಸ್ತ್ರನಾಗಿದ್ದ ನಮ್ಮ ತಂದೆಯನ್ನು ಕೊಂದನು. ಆ ಸೇಡಿನಿಂದಲು, ನಿನಗೆ ಮಿತ್ರಕಾರ್ಯವನ್ನೆಸಗುವ ಕರ್ತವ್ಯಚಿಂತೆಯಿಂದಲು, ನಾನೀಗ ಪ್ರತಿಜ್ಞೆಯನ್ನು ಮತ್ತೆ ಘೋಷಿಸುತ್ತಿರುವೆನು. ಕೇಳಿ! ಧೃಷ್ಟದ್ಯುಮ್ನನನ್ನು ಕೊಲ್ಲದೆ, ನನ್ನ ಕವಚವನ್ನು ಮೈಯಿಂದಿಳಿಸುವುದಿಲ್ಲ. ಅವನನ್ನು ಕೊಲ್ಲದೆ ಪ್ರತಿಜ್ಞೆ ಸುಳ್ಳಾದರೆ, ನನಗೆ ಪುಣ್ಯಲೋಕಗಳು ಸಿಗದಂತಾಗಲಿ!'

ಆ ಪ್ರತಿಜ್ಞೆಯನ್ನಾಲಿಸಿ, ದುರ್ಯೋಧನಾದಿ ಯೋಧರು, ಕುರು ಸೈನಿಕರು ಸಿಂಹನಾದಗಳನ್ನು ಮಾಡುತ್ತಾ, ಪಾಂಡವ ಸೈನಿಕರನ್ನು ಮುತ್ತಿ ಪ್ರಾಣಾಶೆ ತೊರೆದು ಕಾದಿದರು. ರಣರಂಗದಿಂದ ಅಪಯಾತರಾಗುವ ಭೀತಪಾಂಚಾಲರನ್ನು ಕಂಡು, ಅರ್ಜುನನು, 'ಕೃಷ್ಣ! ಕರ್ಣನ ಧಾಟಿಗೆ ನಿಲ್ಲಲಾರದೆ ನಮ್ಮ ಭಟರು ಓಡುತ್ತಿರುವರು. ಧರ್ಮರಾಜನ ರಥದ ಕೇತುವು ಕಾಣಬಾರದಾಗಿದೆ. ದಿವಸದ ಎರಡು ಯಾಮಗಳು ಕಳೆದಿವೆ. ಧರ್ಮರಾಜನಿಗೆ ಏನಾಪತ್ತು ಬಂದೆಯೋ ಎಂದು ನನ್ನ ಮನವು ಆಂದೋಲಿತವಾಗಿದೆ. ಆತನನ್ನು ಕಣ್ಣಾರೆ ಕಂಡು, ನಿಶ್ಚಿಂತನಾಗಿ, ಮತ್ತೆ ಶತ್ರುಗಳಿಂದ ಕಡಿದಾಡಬರುವೆನು' ಎಂದನು.

ಶ್ರೀಕೃಷ್ಣನು ರಥವನ್ನು ಧರ್ಮಜನ ಕಡೆಗೆ ನಡೆಸುತ್ತಾ, ರಣರಂಗದ ಭೀಭತ್ಸವನ್ನು ಭೀಭತ್ಸುನಿಗೆ ವರ್ಣಿಸಿದನು. ಜಲವನ್ನು ತರಲು ಪೋಗುವರಾರೋ, ತಂದ ಜಲವನ್ನು ಕಾಣದ ಮುನ್ನ ಪ್ರಾಣವನ್ನು ಬಿಟ್ಟವರಾರೋ, ಓಡಿಹೋಗುವರಾರೋ, ಆನೆಗಳ ಕೆಳಗೆ ಸಿಕ್ಕುಬಿದ್ದು ನರಳುವವರಾರೋ, ಕೈಕಾಲು ಕಡಿದು ವೇದನಾತುರರಾರೋ ಆಗಿ ರಣರಂಗವೆಲ್ಲವು ಬಲು ಭಯಾನಕವಾಗಿತ್ತು. ಶ್ರೀಕೃಷ್ಣನು ಪಾಂಡವನಿಗೆ ಅಕ್ಷತರಾಗಿದ್ದ ಧರ್ಮಜ, ಭೀಮ, ಪಾರ್ಷತ, ಸಾತ್ವತ, ಯಮಳರನ್ನು ಕೈಯಿಂದ ತೋರಿ ಅವನನ್ನು ಸಮಾಧಾನಪಡಿಸಿದನು.

ಪರ್ವತಕ್ಕೆ ಬಡಿದು ಕದಲಿಸಲಾರದೆ ಹಿಂದಿರುಗುವ ಜಲಪ್ರವಾಹಗಳಂತೆ ಪಾಂಡವಸೇನಾ ಸಮೂಹವು ಕರ್ಣನನ್ನು ತಾಕಿ ಹಿಮ್ಮೆಟ್ಟಿತು. ಕರ್ಣನನ್ನು ತಾಕಿ, ಧೃಷ್ಟದ್ಯುಮ್ನನು ಇಪ್ಪತ್ತು ಬಾಣಗಳಿಂದ ಪೀಡಿಸಿದನು. ಕರ್ಣನು ವಿಜಯಧನುರ್ಮುಕ್ತವಾದ ಒಂಬತ್ತು ಶರಗಳಿಂದ ಅವನ ಧನುವನ್ನು ಮುರಿದು, ಗಾತ್ರವನ್ನು ಜರ್ಜರೀಕರಿಸಿದನು. ಮತ್ತೊಂದು ಬಾಣದಿಂದ ಅವನನ್ನು ಕೊಲ್ಲಲೆಣಿಸಿ ಪ್ರಯೋಗಿಸಲು, ಆ ಬಾಣವನ್ನು ಸಾತ್ಯಕಿಯು ಮಧ್ಯೆ ತುಂಡರಿಸಿ ಕೆಡಹಿದನು. ಆಗ ಸಾತ್ಯಕಿ ಕರ್ಣರಿಗೂ ಧೃಷ್ಟದ್ಯುಮ್ನ ಗುರುಸುತರಿಗೂ ಭಯಂಕರ ಕದನವಾಯಿತು.

ಗುರುಸುತನು 'ಎಲವೋ ಬ್ರಹ್ಮಹಂತಕ! ನಿಂತು ಕಡಿದಾಡು! ನಿನ್ನನ್ನಿಂದು ಜೀವದಿಂದ ಬಿಡೆನು' ಎಂದು ಶರಜಾಲದಲ್ಲಿ ಅವನನ್ನು ಮುಚ್ಚಿದನು. ದ್ರೋಣನಿಗೆ ಮೃತ್ಯುವು ತಾನಾದಂತೆ, ತನಗೆ ಮೃತ್ಯುವು ದ್ರೋಣಪುತ್ರನೆಂದು ತಿಳಿದಿದ್ದ ಧೃಷ್ಟದ್ಯುಮ್ನನು,

ರಣರಂಗದಲ್ಲಿ ತನಗೆ ಶಸ್ತ್ರಮೃತಿಯಿಲ್ಲವೆಂದರಿತು, ನಿರ್ಭಯನಾಗಿ, ಗುರುಸುತನ ಚಾಪವನ್ನು ತುಂಡರಿಸಿದನು. ಅಶ್ವತ್ಥಾಮನು ಕ್ರುದ್ಧನಾಗಿ ಹಾವಿನಂತೆ ಬುಸುಗುಟ್ಟುತ್ತಾ, ಪಾರ್ಷತನ ಧನು ಶಕ್ತಿ ಗದಾ, ಧ್ವಜಗಳನ್ನು ಕತ್ತರಿಸಿ, ನಿಮಿಷಾರ್ಧದಲ್ಲಿ ಅವನ ಹಯ ಸೂತರನ್ನು ಕೊಂದು, ಭೂಮಿಯಲ್ಲಿ ನಿಂತಿದ್ದ ಪಾರ್ಷತನನ್ನು ಹಿಡಿಯಲೆಣಿಸಿ, ಗುರುಸುತನು ಓಡಿಬಂದನು. ಗುರುಪುತ್ರನ ಬಾಣಗಳು ಪಾರ್ಷತನ ಚರ್ಮವನ್ನು ಕೂಡ ಭೇದಿಸದಾದವು. ಅವನು ಖಡ್ಗವನ್ನೆಸೆದನು. ಅದು ಕೂಡ ವ್ಯರ್ಥವಾಯಿತು. ಧನುಸ್ಸಿನ ಜ್ಯಾಬಂಧದಿಂದ ಅಶ್ವತ್ಥಾಮನು ಧೃಷ್ಟದ್ಯುಮ್ನನ ಕುತ್ತಿಗೆಯನ್ನು ಕರಕರ ಕೊಯ್ಯಲು ಹವಣಿಸುವದನ್ನು ಕಂಡು ಭೀಮಸೇನನು ಪಾರ್ಷತನ ನೆರವಿಗೆ ಬಂದು, ಗುರುಸುತನನ್ನು ತೀಕ್ಷ್ಣಬಾಣಗಳಿಂದ ಪೀಡಿಸಿದನು.

ಧೃಷ್ಟದ್ಯುಮ್ನನನ್ನು ನೆಲದಿ ಕೆಡಹಿ, ತುಳಿದಿಟ್ಟು, ಕೊಲ್ಲಲೆಣಿಸುವ ಗುರುಸುತನನ್ನು ಕಂಡು, ಶ್ರೀಕೃಷ್ಣನೀ ವಿಷಮಸ್ಥಿತಿಯನ್ನು ಪಾರ್ಥನಿಗೆ ತೋರಿ, ಕ್ಷಣಾರ್ಧದಲ್ಲಿ ತನ್ನ ರಥವನ್ನವರೀರ್ವರ ಮಧ್ಯದಲ್ಲಿ ನಿಲ್ಲಿಸಿದನು. ಅರ್ಜುನನು ಧೃಷ್ಟದ್ಯುಮ್ನನನ್ನು ಪಿಡಿದೆಳೆವ ಗುರುಸುತನ ಮೇಲೆ ಬಹುನಾರಾಚಗಳನ್ನು ಬಿಟ್ಟನು. ಅವು ವಲ್ಮೀಕವನ್ನು ಹೋಗುವ ಹಾವುಗಳಂತೆ ಆತನ ಶರೀರವನ್ನು ಹೊಕ್ಕವು. ಅಶ್ವತ್ಥಾಮನು ಭೀಮಾರ್ಜುನಶರಪೀತನಾಗಿ ದ್ರುಪದಪುತ್ರನನ್ನು ಬಿಟ್ಟು, ತನ್ನ ರಥವನ್ನೇರಿ, ಅರ್ಜುನನೊಡನೆ ಬಾಣಯುದ್ಧವನ್ನು ಪ್ರಾರಂಭಿಸಿದನು. ಧೃಷ್ಟದ್ಯುಮ್ನನು ತನಗೆ ನೆರವಾಗಲು ಬಂದ ಸಹದೇವನ ರಥವನ್ನೇರಿ ಪೋದನು.

ಅಶ್ವತ್ಥಾಮನು ಅರ್ಜುನನನ್ನು ಮುತ್ತಿ, ಕ್ಷಣದಲ್ಲಿ ಅವನನ್ನು ಶರಪಂಜರದಲ್ಲಿ ಬಂಧಿಸಿದನು. ದಿಗ್ಭ್ರಾಂತನಾಗಿರಲು ಕಂಡು ಶ್ರೀಕೃಷ್ಣನು ಅವನನ್ನಾಲಿಂಗಿಸಿ, ಕೈಲಿ ಸವರಿ, ಅವನಿಗೆ ಬಲ ಧೈರ್ಯಗಳನ್ನಿತ್ತನು. ಅರ್ಜುನನು ಗುರುಸುತನ ಶರಪಂಜರವನ್ನು ಖಂಡಿಸಿ, ಆತನನ್ನು ಬಾಣಶತದಿಂದ ಪೀಡಿಸಿದನು. ಅಶ್ವತ್ಥಾಮನು ಅರ್ಜುನನ ಬಿಲ್ಲಿನ ನಾರನ್ನು ಕಡಿದನು. ಅದು ಅಚ್ಛೇದ್ಯವಾದುದರಿಂದ ಲತೆಯಂತೆ ಅಂಕುರಿಸಿ ಮತ್ತೆ ನಿಂತಿತು. ಅರ್ಜುನನು ಭಲ್ಲದಿಂದ ದ್ರೌಣಿಸಾರಥಿಯನ್ನು ಕೆಡಹಿದನು. ಅಶ್ವತ್ಥಾಮನು ಹೆದರದೆ ಮತ್ತೆ ಶರಪಂಜರದಲ್ಲಿ ಬಂಧಿಸಿ, ಅರ್ಜುನನನ್ನು ನಿಶ್ಚೇಷ್ಟನಾಗಿಸಿದನು. ಶ್ರೀಕೃಷ್ಣನು ಪಾರ್ಥನನ್ನಪ್ಪಿ, ಎಚ್ಚರಗೊಳಿಸಿ ಅವನಲ್ಲಿ ಬಲ ಧೈರ್ಯಗಳನ್ನು ತುಂಬಿದನು. ಆಗ ಅರ್ಜುನನು ಅಶ್ವತ್ಥಾಮನ ಕುದುರೆಗಳ ರಶ್ಮಿಗಳನ್ನು ಕಡಿದನು. ಅವು ದಿಕ್ಕೆಟ್ಟು ಓಡತೊಡಗಿದವು.

ಅಶ್ವತ್ಥಾಮನು 'ಅರ್ಜುನನಿಗೆ ಕೇಶವಸಹಾಯವಿದೆ. ಅವನು ಅಜಯನು. ಅವನ ಬಿಲ್ಲು ಅಚ್ಛೇದ್ಯವು. ಅಶ್ವಗಳು ಅವಧ್ಯವು. ತೂಣದ್ವಯವು ಅಕ್ಷಯವು. ಕಪಿಧ್ವಜವು ಭಯಂಕರವು. ನಾನೇನೂ ಮಾಡಲಾರೆನು' ಎಂದು ಚಿಂತಿಸುತ್ತಾ ಹೋದನು. ಪಾಂಡ್ಯನು ಗುರುಸುತನನ್ನು ಮುತ್ತಲು, ಆತನ ಸಿಟ್ಟೆಲ್ಲ ಅವನ ಮೇಲೆ ಪ್ರಯೋಗಿಸಲ್ಪಟ್ಟಿತೆಂಬಂತೆ ಆಗಿ ದ್ವಿತೀಯ ಪಾಂಡ್ಯನು ಅಶ್ವತ್ಥಾಮನ ಬಾಣಗಳಿಗೆ ತುತ್ತಾಗಿ ಸತ್ತನು. ಪಾರ್ಥನು ಮಾಗಧರಾದ ದಂಡಧಾರಾದಿಗಳನ್ನು ಸಂಹರಿಸಿ, ಮತ್ತೆ ಗುರುಸುತನಿಗೆ ಎದುರಾದನು.

ಅಶ್ವತ್ಥಾಮನು ಶರಜಾಲದಲ್ಲಿ ಪಾರ್ಥನನ್ನು ಮುಚ್ಚಿದನು. ಅರ್ಜುನನು ಅಶ್ವತ್ಥಾಮನ ಶರವ್ರಾತವನ್ನು ಖಂಡಿಸಿ, ನಿಶಿತ ಭಲ್ಲದಿಂದ ಆತನನ್ನು ವಿರಥಗೊಳಿಸಿ ಕರ್ಣನಿಂದ ಕಡಿದಾಡಲಾರಂಭಿಸಿದನು. ಸೂತನು ಅಶ್ವತ್ಥಾಮನನ್ನು ಬೇರೆಡೆಗೆ ಕೊಂಡುಪೋದನು. ಕರ್ಣನು ವಿಜಯಧನುವನ್ನು ಪಿಡಿದು, ಶರಜಾಲದಿಂದ ಪೀಡಿಸಲು, ವಿಜಯನು ಅವನ್ನು ಖಂಡಿಸಿ, ಕರ್ಣನ ತುರಗರಾಜಿಯನ್ನು ಸಂಹರಿಸಿದನು. ಶಲ್ಯನು ರಥವನ್ನು ಮತ್ತೆ ಬೇರೆ ಕುದುರೆಗಳಿಂದ ಯೋಜಿಸುತ್ತಿರಲು, ಪಾರ್ಥನು ಸಂಸಪ್ತಕಶೇಷವನ್ನು ನಾಶಪಡಿಸಿ ಹೋದನು.

ಭೀಮಸೇನನು ಪಾಂಚಾಲಯೋಧರಿಂದ ಕೂಡಿ ಕುರುಸೈನಿಕರನ್ನು ಹೊಡೆದು ಕೊಂದು, ಓಡಿಸಿ ವಿಕ್ರಮಿಸಿದನು. ಆತನ ಸಿಂಹನಾದವು ಎಡೆಬಿಡದೆ ಕೇಳಬರುತ್ತಿತ್ತು. ಭೀಮಶರಾಘಾತದಿಂದ ರಥಿಕರು ರಥದಿಂದಲು, ಹಸ್ತಿಕರು ಆನೆಗಳಿಂದಲು, ಸಾದಿಗಳು ಅಶ್ವಗಳಿಂದಲು ಕೆಳಗೆ ಬಿದ್ದು, ಯಮನ ಪುರಿ ಸೇರಿದರು. ಆತನ ಗದಾಘಾತದಿಂದ ಗಜಯೂಥಗಳು ವೇದನಾತುರವಾಗಿ ಯಮಪ್ರಾಂಗಣದಲ್ಲಿ ಗೀಳಿಟ್ಟವು; ಕುದುರೆಗಳು ಯಮವಾಜಿಶಾಲೆಯಲ್ಲಿ ನಿಂತು ಕೆನೆದವು. ಶಕ್ತಿ, ತೋಮರ, ಪರಿಘ, ಗದಾದಿ ಸಾಧನಗಳನ್ನೆತ್ತಿ ಹೊಡೆವ ವೃಕೋದರನ ವೀರವಿಹಾರದಲ್ಲಿ ಮೂರಕ್ಷೌಹಿಣಿಯ ಕುರುಸೇನೆಯು ನಾಶವಾಯಿತು. ನರಸಿಂಹನಂತೆ ಭಯಂಕರನು, ಪುರಂದರನಂತೆ ದುರ್ನಿವಾರನು ಆದ ಭೀಮನ ಧಾಟಿಗೆ ಹೆದರಿ, ಕುರುಸೈನಿಕರು ಪಲಾಯನಗೈದರು.

ಕರ್ಣನು ಬಹು ಪ್ರಯತ್ನದಿಂದ ತನ್ನವರನ್ನು ಓಡದಂತೆ ನಿಲ್ಲಿಸಿ, ತಾನು ಶಿಖಂಡಿಯನ್ನು ತಾಕಿದನು. ಆಗ ಉಭಯ ಸೇನೆಗಳು ಮತ್ತೆ ಪರಸ್ಪರ ವಧಾಕಾಂಕ್ಷೆಯಿಂದ ಕಲೆತು ಹೋರಾಡಿದವು. ಶಿಖಂಡಿ ಕರ್ಣರಿಗೂ, ಪಾರ್ಷತ ದುಃಶಾಸನರಿಗೂ, ನಕುಲ ವೃಷಸೇನರಿಗೂ, ಯುಧಿಷ್ಠಿರ ಚಿತ್ರಸೇನರಿಗೂ, ಸಹದೇವೋಲೂಕರಿಗೂ, ಸಾತ್ಯಕಿ ಶಕುನಿಯರಿಗೂ, ಅರ್ಜುನ ದ್ರೋಣಪುತ್ರರಿಗೂ, ಭೀಮಸೇನ ಕುರುಸುತರಿಗೂ ದ್ವಂದ್ವಯುದ್ಧವಾಯಿತು. ಕರ್ಣನಿಗೆ ಶಿಖಂಡಿಯು, ದುಃಶಾಸನನು ಧೃಷ್ಟದ್ಯುಮ್ನನಿಗೂ ಸೋತರು. ವೃಷಸೇನನಕುಲರು ಉಭಯರೂ ವಿರಥರಾಗಿ ರಣವಿರತರಾದರು. ಸಹದೇವನು ಉಲೂಕನ ಧನುವನ್ನು ಮುರಿದು, ಸೂತ ತುರಗಗಳನ್ನು ಕೊಲ್ಲಲು, ಅವನು ಭೀತನಾಗಿ ತ್ರಿಗರ್ತಸೇನೆಯನ್ನು ಪ್ರವೇಶಿಸಿ, ಉಳಿಸಿದನು. ಸಾತ್ಯಕಿಯು ಶಕುನಿಯನ್ನು ಶರಜಾಲದಿಂದ ಪೀಡಿಸಿ, ಕುದುರೆಗಳನ್ನು, ಸಾರಥಿಯನ್ನು ಕೊಲ್ಲಲು, ಅವನು ಉಲೂಕನು ತಂದ ರಥವನ್ನೇರಿ, ರಣರಂಗಕ್ಕೆ ತೊಲಗಿದನು.

ಭೀಮಸೇನನು ನಿನ್ನ ಸುತವರನನ್ನು ಮುತ್ತಿ, ಒಂದೇ ಮುಹೂರ್ತದಲಿ, ಅವನ ತುರಗಸೂತರನ್ನು ಕೊಂದು, ರಥಧ್ವಜಪತಾಕೆಗಳನ್ನು ಮುರಿದು, ಸಿಂಹನಾದ ಮಾಡಿದನು. ಮಿಕ್ಕ ಕೌರವಯೋಧರಾಗ ಕುರುರಾಜನನ್ನು ಕಾಪಾಡಿ, ತಾವು ಭೀಮಸೊಡನೆ ಕಾದಿದರು. ಕೃಪನು ಯುಧಾಮನ್ಯುವಿನನ್ನೂ, ಕೃತವರ್ಮನು ಉತ್ತಮೌಜನನ್ನೂ ಸೋಲಿಸಿದರು. ಭೀಮಸೇನನು ಮುತ್ತಿದ ನೂರಾರು ಯೋಧರನ್ನು ನಿಶಿತ ಬಾಣಗಳಿಂದ ಸಂಹರಿಸಿ,

ಗಜಸೇನೆಯನ್ನು ಗದೆಯಿಂದ ಸದೆಬಡಿದು ಕೊಂದನು. ಆನೆಯನ್ನೆತ್ತಿ ಮತ್ತೊಂದಾನೆಯ ಮೇಲೆಸೆದು, ಸಯೋಧಾಂಬಷ್ಟವಾಗಿ ಕೊಲ್ಲುವ ಭೀಮಸೇನನನ್ನು ಕಂಡು ಕುರುವೀರರು ಕಾಲಾಂತಕನಿಗಂತೆ ಅಂಜಿ ಓಡಿದರು. ಚಂದನಾಗರುಗಂಧಚರ್ಚಿತವಾಗಿದ್ದ ಭೀಮಸೇನನ ಭುಜದ್ವಯವು ರಕ್ತದ ಕಲೆಯಿಲ್ಲದೆ ಆತನ ಅಸಮಾನ, ಅಸಹಾಯ, ಅನಾಯಾಸ ವಿಕ್ರಮವನ್ನು ಸಾರುತ್ತಿತ್ತು.

ರಣರಂಗದ ಮತ್ತೊಂದೆಡೆ ಕರ್ಣಧರ್ಮರಾಜ ಸಮಾಗಮವಾಯಿತು. ದುರ್ಯೋಧನನ ಹಿತವನ್ನೆಣಿಸಿ, ರಾಧೇಯನು ರಾಜನನ್ನು ಹಿಡಿಯಲು ಹವಣಿಸಿದನು. ಸೂತಪುತ್ರನ ಮೂರು ಬಾಣಗಳಿಗೆ ಧರ್ಮರಾಜನು ನೂರು ಬಾಣಗಳನ್ನರ್ಪಿಸಿದನು. ರಾಜರಕ್ಷೆಗೆಂದು ಬಂದ ಮಾದ್ರೀಸುತನನ್ನು ವಿರಥನನ್ನಾಗಿಸಿ, ರಾಧೇಯನು ದಂತವರ್ಣವು ಕಾಲವಾಲವು ಆದ ಧರ್ಮಜನ ತುರಗಚತುಷ್ಟವನ್ನು ಸಂಹರಿಸಿದನು. ಇನ್ನೊಂದು ಭಲ್ಲದಿಂದ ಆತನ ಶಿರಸ್ತ್ರಾಣವನ್ನು ಕೆಡಹಿದನು. ವ್ಯಶ್ವರಥರಾದ ನಕುಲ ಧರ್ಮರಾಜರು ಖಿನ್ನರಾಗಿ, ಸಹದೇವನ ರಥವನ್ನೇರಿದರು.

ಮಾತುಲನಾದ ಮದ್ರರಾಜನು ಮಾದ್ರೀಸುತರ ಅವಸ್ಥೆಯನ್ನು ಕಂಡು ಮರುಗಿ ಕರ್ಣನಿಗಿಂತೆಂದನು : 'ಕರ್ಣ! ಇಂದು ಪಾರ್ಥನಿಂದ ಹೋರಾಡಬಂದ ನಿನಗೆ ಇವರಿಂದೇನು ಪ್ರಯೋಜನ? ಕವಚವು ಹರಿದು, ಮೈಯೆಲ್ಲ ಗಾಯವಾಗಿ, ಕ್ಷೀಣಬಾಣನು, ಶ್ರಾಂತಸಾರಥಿಯು ಆಗಿರುವ ಧರ್ಮಜನ ಮೇಲೇಕಿಷ್ಟು ರೋಷ? ಪಾರ್ಥನ ಮೇಲೆ ತೋರಬೇಕಾದ ಪರಾಕ್ರಮವನ್ನು ಇವರ ಮೇಲೆ ತೋರಿ, ಅಪಹಾಸಕ್ಕೀಡಾಗುವೆ!' ಆ ಮಾತನ್ನು ಲಕ್ಷಿಸದೆ ಕರ್ಣನು ಧರ್ಮಜನನ್ನು ಬಾಣಜಾಲದಿಂದ ಜರ್ಜರಿತಗಾತ್ರನನ್ನಾಗಿಸಿ, ನಕುಲ ಸಹದೇವರನ್ನೂ ಪೀಡಿಸಿದನು.

ಆಗ ಶಲ್ಯನು 'ಕರ್ಣ! ಅಲ್ಲಿ ನೋಡು! ಅರ್ಜುನನು ವಿಕ್ರಮಿಸಿ, ರಥೋದಾರರನ್ನು ಚೆಂಡಾಡುತ್ತಿರುವನು. ಭೀಮಸೇನನು ದುರ್ಯೋಧನನೊಡನೆ ಕಾದಿ ಅವನನ್ನು ವಿರಥಬಾಣನನ್ನಾಗಿಸಿ, ಹಿಡಿದು ಕೊಲ್ಲಲು ಹವಣಿಸುತ್ತಿರುವನು. ರಾಧೇಯ! ನಿನ್ನ ರಾಜನೇ ಮೃತನಾದ ಮೇಲೆ ಧರ್ಮರಾಜನ ಗೆಲುವಿನಿಂದ ನಿನಗೇನು ಲಾಭ?' ಎಂದನು. ಕರ್ಣನು ಭೀಮವಿಕ್ರಮವನ್ನೂ, ದುರ್ಯೋಧನನ ಸೋಲನ್ನೂ ಉಪಲಕ್ಷಿಸಿ, ಶಲ್ಯನು ವೇಗದಿಂದ ಹೊಡೆದು ರಥದಿಂದ ಕುರುರಾಜನನ್ನು ಸಂರಕ್ಷಿಸಲು, ಸಮೀಪಿಸಿದನು. ಧರ್ಮಜನು ರಕ್ತಸಿಕ್ತಗಾತ್ರನಾಗಿ ಸಹದೇವನ ರಥದಲ್ಲಿ ಕೂತು ಶಿಬಿರವನ್ನು ಸೇರಿದನು.

ವೈದ್ಯರು ಬಾಣ ಶಲ್ಯಗಳನ್ನು ತೆಗೆದು, ಚಿಕಿತ್ಸೆ ಮಾಡಿದರು. ಧರ್ಮಜನು ಸ್ನಾನಮಾಡಿ, ಹೃದಯದಲ್ಲಿ ಅಪಜಯಾಪಮಾನಶಲ್ಯಗಳು ನಟ್ಟು ಪೀಡಿಸುತ್ತಿರಲು, ಶಯನದಲ್ಲಿ ಮಲಗಿದನು. ಆತನ ಅಪ್ಪಣೆ ಪಡೆದು, ಸಿಂಹಗರ್ಜನೆ ಮಾಡುತ್ತಾ ಹೋರಾಡುತ್ತಿದ್ದ ಭೀಮಸೇನನ ನೆರವಿಗಾಗಿ ತೆರಳಿದರು ಮಾದ್ರೀಸುತರು. ರಣರಂಗದಿ ಧೃಷ್ಟದ್ಯುಮ್ನನು ಕೃತವರ್ಮನನ್ನು ವಿರಥನನ್ನಾಗಿಸಲು ಅವನು ಕೃಪಾಚಾರ್ಯನ ರಥವನ್ನೇರಿ ಹೋದನು. ಭೀಮಸೇನನು ಕರ್ಣನನ್ನು ವಿರಥನನ್ನಾಗಿಸಿ, ಅವನ ಮಗನಾದ ಸುಷೇಣನನ್ನು

ಅವನೆದುರಿಗೆ ಸಂಹರಿಸಿದನು. ಮತ್ತು ದರ್ಯೋಧನನನ್ನು ವಿರಥನನ್ನೂ ವ್ಯಾಯುಧನನ್ನೂ ಮಾಡಿ ಓಡಿಸಿ ಸಿಂಹನಾದ ಮಾಡಿದನು.

## ೧೧. ಧರ್ಮರಾಜ ಧನಂಜಯ ಸಂವಾದ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್! ಪಾರ್ಥನು ಕುರುಸೇನೆಯನ್ನು ನಾಶಪಡಿಸುತ್ತಾ, ಅಶ್ವತ್ಥಾಮನಿಗೆ ಎದುರಾದನು. ಶರವೃಷ್ಟಿಯಿಂದ ಮುಣುಗಿಸಿದ ಗುರುಸುತನನ್ನು ಅರ್ಜುನನು ಐಂದ್ರಾಸ್ತ್ರದಿಂದ ಬಾಣಕೋಟಿಯನ್ನು ಸೃಜಿಸಿ, ಅಶ್ವತ್ಥಾಮನ ರಥವನ್ನು ಮುಚ್ಚಿದನು. ಗುರುಪುತ್ರನು ಕಂಕಪತ್ರಗಳಲ್ಲಿ ಪ್ರತ್ಯಸ್ತ್ರವನ್ನಿಟ್ಟು, ಅರ್ಜುನನ ಶರವೃಷ್ಟಿಯನ್ನು ವಾರಿಸಿ, ನೂರು ಬಾಣಗಳಿಂದ ಮುರಾರಿಯನ್ನೂ, ಮುನ್ನೂರರಿಂದ ಪಾರ್ಥನನ್ನೂ ಪೀಡಿಸಿ, ಶರಪಂಜರದಿಂದ ಬಂಧಿಸಿದನು. ಶ್ರೀಕೃಷ್ಣನಿಂದ ಮೋಚಿತನಾಗಿ ಅರ್ಜುನನು ಅಶ್ವತ್ಥಾಮನ ತುರಗರಾಜಿಯ ಕಡಿವಾಣಗಳನ್ನು ಕಡಿದನು. ಅವು ಬೆದರಿ ಓಡತೊಡಗಿದವು.

ಆಗ ದುರ್ಯೋಧನನು ಕರ್ಣನನ್ನು ಸಮೀಪಿಸಿ, ಇಂತೆಂದನು: 'ಕರ್ಣ! ಅಶ್ವತ್ಥಾಮನು ಅರ್ಜುನನಿಗೆ ಸೋತುಹೋದುದನ್ನು ಕಂಡು, ನಮ್ಮ ಸೈನಿಕರು ಪಾರ್ಥನಿಗೆ ಹೆದರಿ ಓಡುತ್ತಿರುವರು. ನಿನ್ನೆದುರಿಗೇ ಹೀಗಾಗುವದುಚಿತವಲ್ಲ. ನಿನ್ನ ವಿಕ್ರಮಕ್ಕೆ ತಕ್ಕಂತೆ ವಿಜೃಂಭಿಸಿ, ಪಾಂಡವರನ್ನು ಚೆಂಡಾಡು!' ಆ ಮಾತಿಗೆ ಸಮ್ಮತಿಸಿ ಕರ್ಣನು ವಿಜಯಧನುವಿನಲ್ಲಿ ಭಾರ್ಗವಾಸ್ತ್ರವನ್ನಿಟ್ಟು ಪ್ರಯೋಗಿಸಿದನು. ಆಗ ಉರಿಯುತ್ತಿರುವ ಅರ್ಬುದಾರ್ಬುದ ಬಾಣಗಳು ಬಿಲ್ಲಿನಿಂದ ಹೊರಟು, ಪಾಂಡವಸೈನಿಕರನ್ನು ಸುಡಲಾರಂಭಿಸಿದವು. ಗಜವಾಜಿಗಳು ಸುಟ್ಟುಬಿದ್ದವು. ಭಟರು ಓಡಿಹೋದರು. ಆರ್ತನಾದಗಳು ಅಂಬರದಿ ತುಂಬಿದವು. ಅರ್ಜುನನು ತನ್ನವರ ದೀನಸ್ಥಿತಿಯನ್ನು ಕಂಡು, ಅನುಕಂಪಾರ್ದ್ರನಾಗಿ 'ವಾಸುದೇವ! ಸೂತಪುತ್ರನ ಭಾರ್ಗವಾಸ್ತ್ರವನ್ನು, ಅದರಿಂದ ಹಾಳಾಗುತ್ತಿರುವ ನಮ್ಮ ಭಟರನ್ನು ಕಂಡೆಯಾ? ಕರ್ಣನನ್ನು ಸೋಲಿಸಲಾಗದೆ ಚಿಂತೆಗೀಡಾಗಿರುವೆನು. ಎದುರಿಸಿ ಸಾಯುವದಕ್ಕಿಂತ, ಕಾದು ಸಮಯದಲ್ಲಿ ಸಂಹರಿಸಿ ಜಯಗಳಿಸುವುದೇ ಒಳಿತೆಂದು ಜೀವಿಸಿರುವೆನು. ಜೀವನ್ ಭದ್ರಾಣಿ ಪಶ್ಯತಿ!' ಎಂದನು. ಶ್ರೀಕೃಷ್ಣನು 'ಅಹುದು! ಅರ್ಜುನ! ಧರ್ಮರಾಜನು ಕರ್ಣಬಾಣಪೀಡಿತನಾಗಿ ನೊಂದು ಶಿಬಿರವನ್ನು ಸೇರಿರುವನು. ಆ ಮಹಾನುಭಾವನನ್ನು ಕಂಡು, ಆಶ್ವಾಸಿಸಿ, ಅಪ್ಪಣೆ ಪಡೆದು, ಆನಂತರು ಅಂಗರಾಜನನ್ನು ಕೊಲ್ಲಲು ಬರುವಿಯಂತೆ' ಎಂದನು. ಧನಂಜಯ ಕೃಷ್ಣರು ಶಿಬಿರಾಭಿಮುಖವಾಗಿ ನಡೆದರು. ಭಾರ್ಗವಾಸ್ತ್ರವು ಅಪ್ರತಿವಾರಣವೂ ಅಮೋಘವೂ ಆದರೂ, ಓಡಿಹೋಗುವವರನ್ನು ಬಾಧಿಸದು. ಅಂತೆಯೇ ಶ್ರೀಕೃಷ್ಣನು ಪಾರ್ಥನನ್ನು ಹಿಂದಿರುಗಿಸಿ, ಬೇರೆಡೆಗೆ ಕೊಂಡುಹೋದನು. ಅವರ ಸೈನಿಕರು ಕರ್ಣಬಾಣಪೀಡಿತರಾಗಿ ವಿವರ್ಣ ವದನರಾಗಿದ್ದರು. ಅವರನ್ನು ಉತ್ಸಾಹಗೊಳಿಸುತ್ತಾ, ಕಾದುತ್ತಿರುವ ಭೀಮಸೇನನನ್ನು ನೋಡಿ, ಅರ್ಜುನನು ಧರ್ಮರಾಜನ ಪ್ರವೃತ್ತಿಯನ್ನು ಪ್ರಶ್ನಿಸಿದನು.

ಭೀಮಸೇನನು 'ಅರ್ಜುನ! ಧರ್ಮರಾಜನು ಕರ್ಣಬಾಣಪೀಡಿತನಾಗಿ, ಗಾಯಗೊಂಡು ಶಿಬಿರದಲ್ಲಿರುವನು. ಅವನನ್ನು ಅಭಿನಂದಿಸಿ, ಉತ್ಸಾಹಗೊಳಿಸಿ ಬಾ! ನಾನೀಗ ಶತ್ರುಗಳಿಂದ ಕಾದುತ್ತಿರುವೆನು. ನಾನೇ ಹೊರಟರೆ, ಶತ್ರುಜನರು ನನ್ನನ್ನು ಭೀತನೆಂದು ತಿಳಿದಾರು! ಆದುದರಿಂದ ನೀನೇ ಹೋಗು!' ಎಂದನು.

ಸತ್ಯಪರಾಕ್ರಮನಾದ ಭೀಮಸೇನನ ಮಾತನ್ನು ಮೆಚ್ಚಿ, ಅರ್ಜುನನು ತನ್ನೊಡನೆ ಕಾದುಬರುತ್ತಿದ್ದ ಸಂಸಪ್ತಕ ದಳವನ್ನೂ ಆತನಿಗೇ ಸಮರ್ಪಿಸಿ, ಶಿಬಿರವನ್ನು ಸೇರಿದನು. ವಾಸುದೇವ ಧನಂಜಯರು ರಥದಿಂದಿಳಿದು, ಧರ್ಮರಾಜನ ಶಿಬಿರವನ್ನು ಪ್ರವೇಶಿಸಿದರು. ವಾಸುದೇವ ದಿವ್ಯಪಾಟಲಗಂಧವು ಮಂದಿರವನ್ನು ತುಂಬಲು, ಧರ್ಮರಾಜನು ಅರ್ಧಶ್ರಮರಹಿತನಾಗಿ, ಶಯನದಿಂದೆದ್ದು ಕೂತನು. ಅವರೀರ್ವರು ವಂದಿಸಲು ಆನಂದದಿಂದ ಕರೆದಪ್ಪಿ ಜಂಭಾಸುರನನ್ನು ಕೊಂದುಬಂದ ಸುರೇಂದೋಪೇಂದ್ರರನ್ನು ಬೃಹಸ್ಪತಿಯಂತೆ ಅಭಿನಂದಿಸಿದನು. ಆತನು ಅರ್ಜುನನು ಕೃಷ್ಣ ಸಹಾಯದಿಂದ ಕರ್ಣನನ್ನು ಕೊಂದುಬಂದಿರುವನೆಂದೇ ತಿಳಿದು, ಆನಂದದಿಂದ ಮಧುರ ಗದ್ಗದಿತವಚನನಾಗಿ ಇಂತೆಂದನು:

'ದೇವಕೀಮಾತ! ಕುಂತೀಮಾತ! ನಿಮಗೆ ಸ್ವಾಗತವು. ನೀವೀರ್ವರು ಅಕ್ಷತಗಾತ್ರರಾಗಿ ಬಂದುದು ಕಂಡು ಆನಂದವಾಗಿದೆ. ಸೂತಪುತ್ರನು ಹತನಾದನೇ? ಸರ್ವಶಸ್ತ್ರವಿಶಾರದನು, ಧಾರ್ತರಾಷ್ಟ್ರಹಿತರತನು, ಪರಶುರಾಮ ಶಿಷ್ಯನು, ಸರ್ವಲೋಕ ವಿಶಾರದನು. ಶತ್ರುಗಣಮರ್ದನನು ಆದ ಕರ್ಣನು ನಿನ್ನ ನಿಶಿತ ಬಾಣಗಳಿಗೆ ತುತ್ತಾದನೇ ? ನಿನ್ನ ಪ್ರತಿಜ್ಞೆಯು ಪೂರ್ಣವಾಯಿತೇ ? ತೇಜೋಬಲಗಳಿಂದ ಅನಿಲಾನಲತುಲ್ಯನು, ಪಾತಾಳಗಂಭೀರನು ಆದ ಕರ್ಣನನ್ನು ಕೊಂದು ಬಂದಿರುವೆಯಾ? ಪಾರ್ಥ! ಹೇಳು! ಅವನಿಗೆ ಸೋತುಬಂದಿರುವೆನು. ನನ್ನ ಕೇತುವನ್ನು ಕೆಡಹಿ, ಚಕ್ರರಕ್ಷರನ್ನು ವಧಿಸಿ, ಕುದುರೆಗಳನ್ನು ಕೊಂದು ಮಹಾವೀರನಾದ ಕರ್ಣನು ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೇಯರೆದುರಿಗೇ ನನ್ನನ್ನು ಆಡಬಾರದ ಮಾತಾಡಿ ಅವಮಾನಿಸಿದನು. ಭೀಮಸೇನನು ದುರ್ಯೋಧನನಿಂದ ಕಾದುವುದನ್ನು ಕಂಡು, ನನ್ನನ್ನು ಬಿಟ್ಟುಹೋದ ಕರ್ಣನ ವಚನಶಲ್ಯದ ನೋವು ಬಾಣವೇದನೆಗೂ ಮಿಾರಿದೆ. ಭೀಮಸೇನನ ಪ್ರಭಾವದಿಂದ ಬದುಕಿರುವೆನು. ಕರ್ಣನಂತಹ ಅಪ್ರತಿಮ ವೀರನನ್ನು ಹೇಗೆ ಗೆಲ್ಲುವದೆಂದು ಹದಿಮೂರು ವರ್ಷಗಳಕಾಲ ನಿದ್ರೆಗೈಯದೆ ಚಿಂತಿಸುತ್ತಿದ್ದೆನು. ಜಗವೆಲ್ಲವೂ ಕರ್ಣಮಯವಾಗಿದ್ದಂತಿತ್ತು ನನ್ನ ಮನಸ್ಸಿಗೆ. ಅಂತಹ ಕರ್ಣನನ್ನು ನನ್ನ ತಮ್ಮನಾದ ಗಾಂಡೀವಧನುರ್ಧರನು ಕೊಲ್ಲುವನೆಂದು ಸಮಾಧಾನವೂ ಹೊಂದಿದ್ದೆನು. ಇಂದು ನೀವೆಲ್ಲರೂ ಜೀವದಿಂದಿರಲು, ರಣರಂಗದಿ ಕರ್ಣನಿಗೆ ಸೋತು, ಜೀವಬಿಟ್ಟವದಂತೆ ಬಂದಿರುವೆನು. ನನಗೆ ಬದುಕಿನ ಆಶೆಯಿಲ್ಲ. ರಾಜ್ಯದಿಂದ ಪ್ರಯೋಜನವಿಲ್ಲ. ಭೀಷ್ಮದ್ರೋಣ ಕೃಪರೆಸಗದ ಮಹಾಪಾಪವನ್ನಿಂದು ನನಗೆ ಕರ್ಣನೆಸಗಿರುವನು. ಆ ಕರ್ಣನನ್ನು ಕೊಂದು, ನನಗೆ ಆನಂದವನ್ನು ತಂದೆಯಾ? ಎಂತು ಕೊಂದೆ

ರಾಧೇಯನನ್ನು? ಅರ್ಜುನ! ನಮ್ಮ ಪರಮಶತ್ರುವಾದ ಸೂತಪುತ್ರನು ರಣನಿಹತನಾಗಿ, ಭೂತಲದಿ ಬಿದ್ದಿರುವನೇ? ನಿನ್ನನ್ನು ಕೊಲ್ಲದೇ, ಪಾದಗಳನ್ನು ತೊಳಿಸಿಕೊಳ್ಳೆನೆಂದು ದುಷ್ಪ್ರತಿಜೆಗ್ಯೆದ ಪಾಪಿ ಕರ್ಣನು ನಿನ್ನ ನಿಶಿತಬಾಣಗಳಿಗೆ ತುತ್ತಾಗಿ ಸತ್ತನೇ? ಪತಿವ್ರತೆಯಾದ ದ್ರೌಪದಿಯನ್ನು ನಿಂದಿಸಿ ನುಡಿದ ಸೂತನಂದನನು ದುರ್ಯೋಧನನ ಪ್ರೀತಿಗಾಗಿ ದರ್ಪದ ನುಡಿಗಳನ್ನಾಡಿದ ಜಂಬಗಾರ ನಮ್ಮನ್ನು ಷಂಢತಿಲರೆಂದ ದುರ್ಮತಿ, ಭೀಮಸೇನನಿಗೆ ಬಲುಸಲ ಸೋತ ಹೇಡಿ, ಕೊನೆಗೆ ನಿನ್ನಿಂದ ಸಂಹೃತನಾದನೇ? ಇಂದ್ರನು ವೃತ್ರನನ್ನಂತೆ ನೀನು ಕರ್ಣನನ್ನು ಕೊಂದು ಬಂದಿರುವೆಯಾ?'

ಆ ಮಾತನ್ನಾಲಿಸಿ ಅರ್ಜುನನು ಅತಿಖಿನ್ನನಾಗಿ, ತಲೆತಗ್ಗಿಸಿ, ಅಣ್ಣನಿಗಿಂತೆಂದನು: 'ಇಲ್ಲ ಅಣ್ಣ! ನಾನಿನ್ನೂ ಆ ಕರ್ತವ್ಯವನ್ನು ಪೂರೈಸಿ ಬಂದಿಲ್ಲ. ಸಂಸಪ್ತಕರಿಂದ ಕಡಿದಾಡಿ, ಕಡಿದಾಡಿ, ಕರ್ಣನನ್ನು ಕೂಡಿ ಕಾದುವ ಅವಕಾಶವಿಲ್ಲದೆ ಬರುತ್ತಿರಲು, ಅಶ್ವತ್ಥಾಮನು ವಿಷಸರ್ಪಸಮ ಭೀಕರ ನಾರಾಚಗಳಿಂದ ನನ್ನನ್ನು ಪೀಡಿಸಿದನು. ನನ್ನಿಂದ ಕೂಡಿ, ಕಡಿದಾಡುವ ಅಶ್ವತ್ಥಾಮನು ಎಂಟೆತ್ತುಗಳೆಳೆವ ಎಂಟು ಶಕಟಗಳಲ್ಲಿ ತುಂಬಿತಂದ ಬಾಣಶತಸಹಸ್ರವನ್ನು ನನ್ನಮೇಲೂ, ವಾಸುದೇವನಮೇಲೂ ಪ್ರಯೋಗಿಸಿದನು. ನಾನವನ ಬಾಣಗಳನ್ನು ಖಂಡಿಸಿ, ಅವನ ಸೂತನನ್ನು ಕೊಂದು ಅವನನ್ನು ರಣರಂಗದಿಂದ ದೂರ ಓಡಿಸಿ ಬರುತ್ತಾ, ಭೀಮಸೇನನಿಂದ ನೀನಿಲ್ಲಿರುವ ವಿಚಾರವನ್ನರಿತು, ಇಲ್ಲಿಗೆ ನಿನ್ನನ್ನು ನೋಡಲೆಂದು ಬಂದೆನು, ಚಿಂತಿಸಬೇಡ! ರಾಜನ್! ಇಂದು ಸೂತಪುತ್ರನು ಪಾತಾಲವನ್ನು ಹೊಕ್ಕರೂ ಬಿಡದೆ, ಹಿಡಿದು, ನಿಶಿತಬಾಣಗಳಿಂದ ಕೆಡಹಿ, ಸೇಡನ್ನು ತೀರಿಸಿ ಬಂದು, ನಿನಗೆ ಆ ವಾರ್ತೆಯನ್ನರುಹಿ ಆನಂದಪಡಿಸುವೆನು. ಕರ್ಣನನ್ನು ಸಸುತಪರಿವಾರವನ್ನು ನಾನಿಂದು ಕೊಲ್ಲದೆ, ಹಿಂದಿರುಗಿ ಬರೆನು. ನನ್ನನ್ನು ಆಶೀರ್ವದಿಸಿ ಕಳಿಸು!'

ಆ ಮಾತನ್ನಾಲಿಸಿ, ಕರ್ಣನಿನ್ನೂ ಜೀವಿಸಿರುವನೆಂದು ತಿಳಿದು, ಕೋಪದಿಂದಲು, ಕರ್ಣಬಾಣಾಘಾತವೇದನೆಯಿಂದಲು ವ್ಯೆಮರೆತು ಧರ್ಮರಾಜನು ಅರ್ಜುನನಿಗಿಂತೆಂದನು: "ಅರ್ಜುನ! ಒಳ್ಳೆಯದಾಯಿತು! ಸೂತಪುತ್ರನಿಂದ ಉಳಿದುಬಂದೆಯಲ್ಲ! ನಿನ್ನ ಸೈನ್ಯಗಳವನ ಧಾಟಿಗೆ ನಿಲ್ಲಲಾರದೆ ಸೋತು ರಣರಂಗವನ್ನು ನಿನ್ನಂತೆ ಬಿಟ್ಟಿರುವಂತಿದೆ. ಕರ್ಣನಿಗೆ ಭೀತನಾಗಿ ಭೀಮನಲ್ಲಿ ಸಕಲಶತ್ರು ಸಹನಭಾರವನ್ನಿಟ್ಟು, ಅಂಜುಬುರುಕನಂತೆ, ನೀನು ರಣವಿಮುಖನಾಗಿ ಬಂದುದು ನಿನ್ನಂತಹ ವೀರನಿಗುಚಿತವಲ್ಲ. ಪೃಥಾದೇವಿಯ ಗರ್ಭದಿಂದ ಜನಿಸಿಬಂದು, ಆಕೆಯ ವೀರಸೂ ಎಂಬ ಖ್ಯಾತಿಯನ್ನು ಇಂದು ಹಾಳು ಮಾಡಿದೆ! ಕರ್ಣನನ್ನು ಕೊಲ್ಲುವೆನೆಂದ ನಿನ್ನ ಪ್ರತಿಜ್ಞೆ ಏನಾಯಿತು? ಅಂದೇ ದ್ವೈತವನದಲ್ಲಿ 'ಕರ್ಣನನ್ನು ಗೆಲ್ಲಲಾರೆನೆಂದು ನೀನಂದಿದ್ದರೆ, ಬೇರೊಂದು ಆಲೋಚನೆಯನ್ನು ಮಾಡಬಹುದಿತ್ತು. ರಣಮಧ್ಯದಲ್ಲಿ ತಂದು ನಿಲ್ಲಿಸಿ, ನಮ್ಮನ್ನು ಕೈಬಿಡುವೆ ಎಂದು ನಾವಾರೂ ತಿಳಿದಿದ್ದಿಲ್ಲ. ರಣರಂಗಕ್ಕೆಂದು ತೆರಳುವ ನಿನ್ನಲ್ಲಿ ಆಹಿತವಾದ ನಮ್ಮ ವಿಜಯಾಶೆಗಳು, ಕರ್ಣನಿಂದ ಸೋತುಬಂದ ನಿನ್ನನ್ನು ಕಂಡು ನಾಶವಾದವು. ಹಣ್ಣೆನಾಶಿಗೆ ಹಾಕಿದ ಹಲಸು, ತೆಂಗುಗಳು ಹೂಬಿಟ್ಟು ಬರಡಾದವು.

ರಾಜ್ಯದಾಶೆಯು ಬಡಿಶಕ್ಕೆ ಹತ್ತಿದ ಮಾಂಸದಂತೆ, ವಿಷಸಹಿತ ಅನ್ನದಂತೆ, ನಮ್ಮನ್ನು ವಿನಾಶದ ಕಡೆಗೆ ಆಕರ್ಷಿಸಿತು. ವರ್ಷಕ್ಕಾಗಿ ಹಾತೊರೆವ ಚಾತಕಗಳಂತೆ, ಹದಿಮೂರು ವರ್ಷಗಳ ಕಾಲ ನಿನ್ನ ವಿಕ್ರಮ ವಿಜಯಾಶೆಯಿಂದ ಕಾದಿದ್ದ ನಮ್ಮನ್ನಿಂದು, ಧನಂಜಯ! ನಿರಾಶಾನರಕಕೂಪದಲ್ಲಿ ಕೆಡಹಿದೆ!

ನಿನ್ನ ಜನನ ಕಾಲದಿ, 'ಈ ನಿನ್ನ ಪುತ್ರನು ವಾಸವಸಮ ವಿಕ್ರಮನು. ಇವನು ಸರ್ವಶತ್ರುಗಳನ್ನೂ ಗೆಲ್ಲುವನು. ಖಾಂಡವವನ್ನು ಸುಡುವಾಗ ದೇವತೆಗಳನ್ನೂ ಲೆಕ್ಕಿಸನು. ಇವನಂತಹ ಧನುರ್ಧರರಿಲ್ಲದಂತಾಗುವುದು. ದಾನವರನ್ನು ಗೆದ್ದು ಪಶುಪತಿಯನ್ನು ಮೆಚ್ಚಿಸಿ, ಪಾಶುಪತಾದಿ ದಿವ್ಯಾಸ್ತ್ರಗಳನ್ನು ಪೊಂದುವನು. ಕಾಂತಿಯಲ್ಲಿ ಶಶಾಂಕನನ್ನು, ಜವದಲ್ಲಿ ವಾಯುವನ್ನು, ಸ್ಥೈರ್ಯದಲ್ಲಿ ಮೇರುವಿನನ್ನು ಕ್ಷಮೆಯಲ್ಲಿ ಧರೆಯನ್ನು ಪ್ರಕಾಶದಲ್ಲಿ ಪ್ರಭಾಕರನನ್ನು ಶೌರ್ಯದಲ್ಲಿ ಶಕ್ರನನ್ನು ಬಲ-ವಿಜಯಗಳಲ್ಲಿ ವಿಷ್ಣುವಿನನ್ನು ಪೋಲುವ ಇವನಿಂದ ನಿನ್ನ ಶತ್ರುಗಳೆಲ್ಲರೂ ನಷ್ಟವಾಗುವರು. ನಿನ್ನ ಮಿತ್ರರು ಅಭಿವರ್ಧಿತರಾಗುವರು' ಎಂಬ ಅಂತರಿಕ್ಷವಾಣಿಯು ವ್ಯರ್ಥವಾದುದನ್ನು ಕಂಡು, ದೇವತೆಗಳೂ ಸುಳ್ಳಾಡುವರೇನೋ ಎಂಬ ಶಂಕೆ ಮೂಡುತ್ತಿದೆ! ಋಷಿಗಳ ವಚನಗಳಿಂದಲೂ ನಿನ್ನ ಬಲ-ವೀರ್ಯ ಧೈರ್ಯಗಳನ್ನು ತಿಳಿದು ನಾನು ಸುಯೋಧನನಿಗೆ ಶಿರಬಾಗದೆ ಇದ್ದೆನು. ವಿಶ್ವಕರ್ಮನಿರ್ಮಿತ ದಿವ್ಯರಥವಿದ್ದು ಮೇಲೆ ಹಾರುವ ಕಪಿಧ್ವಜವಿದ್ದು ಸಾರಥಿಯಾಗಿ ಕೃಷ್ಣನಿದ್ದು ನೀನೆಂತು ಕರ್ಣನಿಗೆ ಹೆದರಿ ಓಡಿಬಂದೆ? ಆ ನಿನ್ನ ಗಾಂಡೀವವನ್ನು ಕೊಡು ಕೇಶವನಿಗೆ! ಅವನಾದರೂ ಕರ್ಣನನ್ನು ಕೊಂದು ಬರಲಿ! ಅಥವಾ ಮತ್ತಾವ ವೀರನಿಗಾದರೂ ನಿನ್ನ ಬಿಲ್ಲನ್ನು ಕೊಟ್ಟು ಸುಮ್ಮನೆ ಕೂಡು! ಪಂಚಮ ಮಾಸದಲ್ಲಿ ಪೃಥಾಗರ್ಭದಿಂದ ಸ್ರಾವಿತನಾಗಿದ್ದರೂ ಚನ್ನಾಗಿತ್ತು. ಅಥವಾ ನೀನು ಹುಟ್ಟದಿದ್ದರೇನೇ ಪೃಥೆಗೆ ಹಿತವಾಗುತ್ತಿತ್ತು. ಸಂಗ್ರಾಮರಂಗದಿಂದ ಓಡಿಬಂದ ನಿನಗೆ ಧಿಕ್ಕಾರವಿರಲಿ! ನಿನ್ನ ಗಾಂಡೀವಕ್ಕೆ ಧಿಕ್ಕಾರವಿರಲಿ!'

ಯುಧಿಷ್ಠಿರನ ಮಾತಿಗೆ ಕೆರಳಿ ಕಿರೀಟಿಯು ಕತ್ತಿಯನ್ನೊರೆಯಿಂದ ಸರಸರ ಸೆಳೆದು ಧರ್ಮರಾಜನನ್ನು ಕೊಲ್ಲಬೇಕೆಂದು ಮುಂದೆ ಬಂದನು. ಶ್ರೀಕೃಷ್ಣನು ಅವನ ಇಂಗಿತವನ್ನರಿತು, ಅವನನ್ನು ಹಿಡಿದು ನಿಲ್ಲಿಸಿ, 'ಪಾರ್ಥ! ಏನಿದು? ಖಡ್ಗವನ್ನೆತ್ತಿ ಯಾರನ್ನು ಕೊಲ್ಲಲಿರುವೆ? ಯಾರಿಲ್ಲಿ ನಿನ್ನ ಶತ್ರುಗಳು? ಧಾರ್ತರಾಷ್ಟ್ರರು ರಣರಂಗದಿ ಭೀಮಸೇನನಿಂದ ಕಡಿದಾಡಿ ಸಾಯುತ್ತಿರುವರು. ಧರ್ಮರಾಜನನ್ನು ನೋಡಿ ಹೋಗಲು ಬಂದೆಯಲ್ಲವೇ? ನೋಡಿದೆ ರಾಜನನ್ನು, ಅವನು ಕುಶಲದಿಂದಿರುವದನ್ನೂ ಕಂಡೆ! ಅದನ್ನು ಕಂಡು ಆನಂದಿಸುವುದನ್ನು ಬಿಟ್ಟು ಅವಿವೇಕಿಯಾಗಿ, ಮಿತ್ರಮಧ್ಯದಲ್ಲಿ ಶತ್ರುವಿನಂತೆ ವರ್ತಿಸುವ ನಿನ್ನನ್ನು ನೋಡಿ ನನಗೆ ಆಶ್ಚರ್ಯವಾಗುತ್ತಿದೆ!' ಎಂದನು.

ಪಾರ್ಥನು ಕೃಷ್ಣನ ಕೈಬಿಡಿಸಿಕೊಂಡು ಕೋಪದಿಂದ ಇಂತೆಂದನು : 'ಶ್ರೀಕೃಷ್ಣ! ನಾನು ಪ್ರತಿಜ್ಞೆಯನ್ನು ಮಾಡಿದಂತೆ ನಡೆಯಬೇಕಲ್ಲವೆ? ಇನ್ನೊಬ್ಬನಿಗೆ

ಗಾಂಡೀವವನ್ನು ಕೊಡು !' ಎಂದು ನುಡಿವ ಯಾರನ್ನಾದರೂ ಕೊಲ್ಲುವೆನೆಂಬ ನನ್ನ (ಉಪಾಂಶು) ರಹಸ್ಯ ಪ್ರತಿಜ್ಞೆಯಂತೆ, ಅಂತು ನಿನ್ನೆದುರಿಗೇ ನುಡಿದ ಧರ್ಮರಾಜನನ್ನು ಸಂಹರಿಸಿ, ಸತ್ಯದ ಋಣವನ್ನು ತೀರಿಸುವೆನು. ಇದ್ದ ವಿಷಯವಿದು. ತಿಳಿಸಿರುವೆನು ನಿನಗೆ ! ಸರ್ವಜ್ಞನಾದ ನಿನ್ನ ವಚನದಂತೆ ನಡೆಯುವೆನು. ಏನು ಮಾಡಲಿ ಹೇಳು !' ಆ ಮಾತಿಗೆ ಶ್ರೀಕೃಷ್ಣನು 'ಧಿಕ್! ಧಿಕ್ ! ಅರ್ಜುನ ! ನಿನಗೆ ಧಿಕ್ಕಾರ ! ನಿನ್ನ ಪ್ರತಿಜ್ಞೆಗೆ ಧಿಕ್ಕಾರ ! ನೀನಿನ್ನೂ ಸಾಕಷ್ಟು ಮಹಚ್ಚರಣಸೇವೆಯನ್ನು ಮಾಡಿಲ್ಲವೆಂದು ಇಂದು ಗೊತ್ತಾಯಿತು. ಕಾರ್ಯಾಕಾರ್ಯಗಳನ್ನು ಅಕಾರ್ಯಕಾರ್ಯಗಳೆಂದು ತಿಳಿದ ಮೂರ್ಖನಂತಾದೆ ! ಧರ್ಮಸೂಕ್ಷ್ಮವನ್ನು ತಿಳಿಯುವದು ದುಷ್ಕರವು. ಸಾಹಸಿಸಿ ಮುಂದೆ ಹರಿಯುವವನು ಮೂರ್ಖನೇ ಸರಿ ! ಧರ್ಮಾಧರ್ಮಜ್ಞಾನವು ವೇದಾದಿ ಸಚ್ಛಾಸ್ತ್ರದಿಂದಲೇ ಅಲ್ಲದೆ ಸ್ವಬುದ್ಧಿಯಿಂದಲ್ಲ. ನಿನ್ನಂತಹ ಧರ್ಮನಿಷ್ಠುರನಲ್ಲಿ ಧರ್ಮಸೂತ್ರವಿದ್ದರೆ ಅದು ಬಹು ಪ್ರಾಣಿಗಳಿಗೆ ಕೊರಳ ಉರುಲಾಗಿ ಹೋಗುವುದು. ತಾತ ಪ್ರಾಣಿವಧೆಗಿಂತ ಪಾಪವಿಲ್ಲ. ಪ್ರಾಣಿಯನ್ನು ಉಳಿಸಲು ಸತ್ಯವನ್ನಾದರೂ ಬಿಡಬಹುದು. ಹೀಗಿರಲು ಅಣ್ಣನನ್ನು ಧಾರ್ಮಿಕನಾದ ಮಹಾರಾಜನನ್ನು ಕೊಲ್ಲಲು ಹುಚ್ಚನಂತೆ ಹವಣಿಸುವ ನಿನ್ನನ್ನು ಕಂಡು ಸಖೇದಾಶ್ಚರ್ಯವಾಗಿದೆ. ಯುದ್ಧವಿಮುಖನು, ಅಶಸ್ತ್ರುವು, ಶರಣಾಗತನು, ವಿಶಸ್ತ್ರನು, ಪ್ರಮತ್ತನು ಆದವನು ವಧ್ಯನಲ್ಲವೆಂದು ಹೇಳುವರು. ಧರ್ಮರಾಜನು ನಿನಗೆ ವಧ್ಯನಾದನೇ ? ಆಹಾ ! ಬಾಲ್ಯದಲ್ಲಿ ನೀನು ಮನದಲ್ಲಿ ಮಾಡಿಕೊಂಡ ಉಪಾಂಶುವ್ರತವಾರಿಗೆ ಗೊತ್ತು ? ಅದನ್ನರಿತು ಧರ್ಮರಾಜನು ನಿನ್ನನ್ನು ಅವಮಾನಿಸಲಾಡಿದನೇ ? ಎಂತಹ ಮೂರ್ಖನಾದೆ ! ನಿನ್ನ ಅಣ್ಣ ಧರ್ಮ ಮೂರ್ತಿ, ಮಹಾರಾಜ, ಮಹಾತಪೋಧನ, ಇಂತಹ ಅಣ್ಣನು ವಧ್ಯನಾಗಿ, ನಿನ್ನ ಹಾಳು ಉಪಾಂಶುವ್ರತವು ಹೆಚ್ಚಾಯಿತೇ ? ಭೀಮಸೇನ ಧರ್ಮರಾಜ, ಕುಂತೀ, ವಿದುರ ಮುಂತಾದ ಧರ್ಮಜ್ಞರು ನಿನ್ನ ದುಷ್ಪ್ರಯತ್ನವನ್ನು ಕಂಡು ಏನೆಂದಾರು ! ಕೇಳು ಧರ್ಮಸೂಕ್ಷ್ಮವನ್ನು ! ಕೇಳಿ ನಡೆ !

ಸತ್ಯದ ತತ್ವವನ್ನರಿತು ಪೇಳುವದು ದುಷ್ಕರವು. ಸತ್ಯವು ಒಂದು ಸಲ ಆಡಬಾರದ್ದೆನಿಸುವುದು. ಅಸತ್ಯವನ್ನೊಂದು ಸಲ ಆಡಬೇಕಾಗಿ ಬರುವುದು. ಸತ್ಯವು ಸಜ್ಜನ ಭೂತಗಳಿಗೆ ಅಪಕಾರಿಯಾದರೆ ಅದು ಅನೃತದಂತೇ ಪಾಪಸಾಧನವಾಗುವದು. ವಿವಾಹ ವಿಷಯದಲ್ಲಿ, ರತಿಯಲ್ಲಿ, ಪ್ರಾಣರಕ್ಷಣೆಯಲ್ಲಿ, ಧನನಾಶದಲ್ಲಿ, ವಿಪ್ರಗೋಸುಜನ ಹಿತದಲ್ಲಿ, ಸತ್ಯವು ಬಾಧಕವಾಗುವತಿದ್ದರೆ, ಬಿಟ್ಟು ಅಸತ್ಯದಿಂದಲಾದರೂ ಪರಹಿತವನ್ನು ಸಾಧಿಸಬೇಕು. ಸತ್ಯಾನೃತಗಳನ್ನರಿತು ತಿಳಿದವನೇ ಧರ್ಮವೇತ್ತನು. ಸತ್ಯವನ್ನು ಹೇಳಬಹುದು. ಸತ್ಯವೆಂದರೇನೆಂದು ತಿಳಿದು ನುಡಿಯುವದು ಕಷ್ಟ. ಧರ್ಮವನ್ನು ಉಪದೇಶಿಸಬಹುದು. ಧರ್ಮವಾವುದೆಂದು ತಿಳಿದು ಸರಿಯಾಗಿ ನಡೆಸುವುದು ಕಷ್ಟ !

ಹಿಂದೆ ಬಲಾಕನೆಂಬ ವ್ಯಾಧನಿದ್ದನು. ಅವನು ಪುತ್ರದಾರಾಪಿತೃ ಜನರ ಜೀವನಕ್ಕೆಂದು ಬೇಟೆಯಾಡಿ ಜೀವಿಸುತ್ತಿದ್ದನು. ಮನಬಂದಂತೆ ಕೊಲ್ಲುವ ಹಿಂಸ್ರಕನಲ್ಲದ ಆ ವ್ಯಾಧನು ನಿತ್ಯವೂ ಸತ್ಯವಚನನೂ, ಸ್ವಧರ್ಮನಿರತನೂ ಆಗಿದ್ದನು. ಒಂದು ದಿನ ಅವನೊಂದು ವಿಚಿತ್ರ ಮೃಗವನ್ನು ನದೀತೀರದಿ ಕಂಡನು. ಅದು ಕುರುಡಾಗಿದ್ದರೂ, ವಾಸನೆ ಹಿಡಿದು, ಕಂಡ ಮೃಗಗಳನ್ನು ಕೊಲ್ಲುತ್ತಿತ್ತು. ಅದನ್ನವನು ಜೀವನಾರ್ಥಿಯಾಗಿ ಕೊಂದನು. ತತ್‌ಕ್ಷಣವೇ ಅಂಬರದಿಂದ ಅವನ ಮೇಲೆ ಪುಷ್ಪವರ್ಷವಾಯಿತು. ಮೃಗಹತ್ಯೆಯಿಂದ ಸ್ವರ್ಗವಾಯಿತೆಂದು ಭ್ರಮಿಸಬೇಡ! ಆ ದುಷ್ಟಮೃಗವು ಮೃಗರೂಪದಿಂದಿದ್ದ ದೊಡ್ಡ ರಾಕ್ಷಸನು. ಜಗನ್ನಾಶಕ್ಕಾಗಿ ತಪಗೈದ ಅವನನ್ನು ಕೊಂದುದರಿಂದ, ಜಗದ್ಧಿತವನ್ನು ಸಾಧಿಸಿದ ವ್ಯಾಧನು ಮಹತ್ಪುಣ್ಯವನ್ನು ಹೊಂದಿದನು.

ಹಿಂದೆ ಕೌಶಿಕನೆಂಬ ಋಷಿವರನಿದ್ದನು. ಆ ಮುನಿಯ ಆಶ್ರಮವನ್ನು ಕೆಲಪಾಂಥರು ದಸ್ಯುಭಯದಿಂದ ಹೊಕ್ಕು ಅಡಗಿದ್ದರು. ಕಳ್ಳರು ಬಂದು ಪಾಂಥರೆಲ್ಲಿಂದು ಮುನಿಯನ್ನು ಕೇಳಿದರು. ಸತ್ಯವಚನತತ್ಪರನಾದ ಕೌಶಿಕನು ಪಾಂಥರಡಗಿದ್ದ ಪೊದರುಗಳನ್ನವರಿಗೆ ತೋರಿಸಿ, ತಾನು ಸತ್ಯವನ್ನಾಡಿ ಉಳಿದೆನೆಂದು ತಿಳಿದನು. ಕಳ್ಳರು ಜನರನ್ನು ಕೊಂದು, ಅವರ ಧನವನ್ನಪಹರಿಸಿಕೊಂಡು ಹೋದರು. ಕೌಶಿಕನಿಗಾಪಾಪವು ಹತ್ತಿ ಬಿಡದೆ, ನರಕಗಳಲ್ಲಿ ಕೆಡಹಿ, ಪೀಡಿಸಿತು.

ಆದುದರಿಂದ ಧರ್ಮಸೂಕ್ಷ್ಮವನ್ನು ತಿಳಿಯುವದು ಬಹು ಕಷ್ಟವೆಂದನು ! ಅರ್ಜುನ ! ಪುಣ್ಯಸಾಧನವಾದ ಧರ್ಮವನ್ನು ಶಾಸ್ತ್ರದಿಂದಲು, ಮಹಜ್ಜನ ವಚನದಿಂದಲು ತಿಳಿಯಬೇಕಾಗಲಿ ಶುಷ್ಕ ತರ್ಕದಿಂದಲ್ಲ. ಹಿಂಸೆ ಮಾಡಿ, ಅಹಿಂಸಾಧರ್ಮವನ್ನು ಉಳಿಸಲಾಗದು. ಧಾರಣಕಾರ್ಯದಿಂದ ಧರ್ಮವೆನಿಸುವುದಾಗಲಿ ಹಿಂಸೆಯಿಂದಲ್ಲ. ಕೆಲವರು ದುಷ್ಟರು ಅನ್ಯೋನ್ಯಸುಖಹೇತುವೆಂದು ಪರದಾರಾಗಮನಾದಿ ಕುಕಾರ್ಯಗಳನ್ನು ಮಾಡಿ ಧರ್ಮವೆಂಬುವರು. ಅವರಿಗೆ ವೇದವಚನದಲ್ಲಿ ವಿಶ್ವಾಸವಿಲ್ಲ. ವೇದ ಬಾಹಿರವಾದ ಎಂತಹ ಕಾರ್ಯವೇ ಆಗಲಿ ಅದು ಧರ್ಮವೆನಿಸದು ತಿಳಿ ! ವೇದದೂಷಕರಷ್ಟು ದುಷ್ಟರಿಲ್ಲ. ಅವರಿಂದ ಕೂಡಿ ಮಾತಾಡುವದೂ ಪಾಪಹೇತುವೇ ಆಗುವುದು. ಆದುದರಿಂದ ವೇದವಿರೋಧವಿಲ್ಲದೆ ಪರಸುಖಸಾಧನವಾಗುವದಾದರೂ ಧರ್ಮವೇ ಸರಿ ಎಂದು ತಿಳಿದು, ಅಂತೆಯೇ ನಡೆ ! ಪಾಪಿಗಳಿಗೆ ಧನವನ್ನು ಕೊಡಬಾರದು. ಧನವಿದ್ದೂ ಇಲ್ಲವೆಂದರೆ ಅನೃತ ಪಾಪಬರುವದೆಂದು ಶಂಕಿಸಬೇಡ. ಪಾಪಿಗಳಿಗಿತ್ತ ಧನವು ಅನ್ಯಾಯಕಾರ್ಯನಿಯುಕ್ತವಾಗಿ ಬಹು ಹಿಂಸೆಗೆ ಕಾರಣವಾಗುವುದು. ಜಾಲರಿಗಿತ್ತ ಟಂಕವು ಜಾಲವನ್ನು ಕೊಂಡು, ಸಾವಿರಾರು ಮೀನುಗಳ ಸಾವಿಗೆ ಕಾರಣವಾದಂತೆ ಪಾಪಿಗಳಿಗಿತ್ತ ಧನವು ಪಾಪಕಾರಣವಾಗಿ, ದಾತನನ್ನು ಕೂಡ ನರಕದಲ್ಲಿ ಬೀಳಿಸುವದು. ಅರ್ಜುನ ! ಈಗ ಹೇಳು ! ಧರ್ಮರಾಜನು ವಧ್ಯನೇ ? ಅಥವಾ ನೀನು ದಡ್ಡನೇ ?'

ಅರ್ಜುನನಿಂತೆಂದನು: 'ಶ್ರೀಕೃಷ್ಣ! ಮಹಾಪ್ರಾಜ್ಞವಲ್ಲಭನಾದ ನಿನಗೆ ತಕ್ಕಂತೆ

ಮಾತಾಡಿದೆ! ನಿಜ! ನೀನೇ ನಮ್ಮ ತಂದೆ! ನೀನೇ ನಮ್ಮ ತಾಯಿ! ನೀನೇ ಗತಿ ನೀನೇ ಪರಮಾಪ್ತ ನಮಗೆ! ನಿನಗೆ ಗೊತ್ತಿಲ್ಲದಿಲ್ಲ, ಅವಧ್ಯನಾದ ಧರ್ಮರಾಜನನ್ನು ಕೊಲ್ಲಲೆಣಿಸಿದ ನನ್ನ ಅಪರಾಧವನ್ನು ಕ್ಷಮಿಸು! ಆದರೆ ಮತ್ತೊಬ್ಬನಿಗೆ ಗಾಂಡೀವವನ್ನು ಕೊಟ್ಟುಬಿಡೆಂದವವನ್ನು ಕೊಲ್ಲುವೆನೆಂಬ ನನ್ನ ಪ್ರತಿಜ್ಞೆಯೂ ಸುಳ್ಳಾಗಬಾರದಲ್ಲವೇ? ಪ್ರತಿಜೆಯನ್ನು ಮಾಡಿ, ಅದನ್ನು ನಡೆಸದೆ ಬಿಟ್ಟವನು ಜೀವಚ್ಛವವೇ ಸರಿ! ಪಾಂಡವಜ್ಯೇಷ್ಠನು ನನ್ನಿಂದ ವಧ್ಯನಾಗದೆ - ನನ್ನ ಪ್ರತಿಜ್ಞೆಯು ಸುಳ್ಳಾಗದೆ - ಇರುವಂತೆ ನಾನೇನು ಮಾಡಲಿ?'

ವಾಸುದೇವನಿಂತೆಂದನು: 'ಅರ್ಜುನ! ಮಹಾರಾಜನು ಕರ್ಣನಿಗೆ ಸೋತು ಕ್ಷತಗಾತ್ರನಾಗಿ, ಶಿಬಿರವನ್ನು ಸೇರಿದ್ದನು. ನೀನು ಕರ್ಣನನ್ನು ಕೊಲ್ಲದೆ ಬಂದುದನ್ನು ಕಂಡು, ಅವನು ಕೋಪ ವಿಷಾದ ನಿರಾಶೆಗಳಿಂದ ಆಡಿದ ಮಾತನ್ನು ಮರೆತು ಬಿಡು! ಕರ್ಣನು ಹತನಾದರೆ ಕೌರವರಿದ್ದೂ ಸತ್ತಂತೆ! ಆದುದರಿಂದ ಅವನನ್ನು ಕೊಲ್ಲದೆ ಬಂದ ಬಗೆಯನ್ನು ಕೇಳಿದ ಅಣ್ಣನನ್ನು ಅವಿವೇಕಿಯಾಗಿ ಕೊಲ್ಲುವುದು ಸರ್ವಥಾ ಅನ್ಯಾಯವು. ಪ್ರತಿಜ್ಞೆಯನ್ನು ಪಾಲಿಸುವುದೂ ಸರಿ! ಇಂತಹ ಧರ್ಮ ಸಂಕಟದಲ್ಲಿ ನಾ ಹೇಳಿದಂತೆ ನಡೆದು ಧರ್ಮವನ್ನೂ ಧರ್ಮಜನನ್ನೂ ಉಳಿಸಿಕೋ! ಸಂಭಾವಿತನಿಗೆ ಅವಮಾನವೇ ಮರಣವೆನಿಸುವುದು. ನೀನು, ಭೀಮಾದಿಗಳು ಕೂಡಿ ಸಂಭಾವಿಸುವ ಮಹಾರಾಜನನ್ನು ತ್ವಂಕಾರ, ಹುಂಕಾರಗಳಿಂದ ತಿರಸ್ಕರಿಸಿದರೆ, ಅವನನ್ನು ಕೊಂದಂತೆ ಆಗಿ, ನಿನ್ನ ಪ್ರತಿಜ್ಞೆ ಸಫಲವಾಗುವುದು. ಅಂಗಿರಸರು ಇಂತೇ ಹೇಳಿದರು. 'ಮೊದಲು ಪ್ರತಿಜ್ಞೆಗಾಗಿ ನಿಂದಿಸಿ, ಆಮೇಲೆ ನಿಜವನ್ನರುಹಿ, ಚರಣಗಳಿಗೆರಗಿ ಕ್ಷಮೆ ಬೇಡು!'

ಆಗ ಅರ್ಜುನನು ಧರ್ಮಜನನ್ನು ಇಂತು ನಿಂದಿಸತೊಡಗಿದನು: 'ರಾಜನ್! ಭೀಮಸೇನನು ನನ್ನನ್ನು ನಿಂದಿಸಲರ್ಹನೇ ಆಗಿರುವನು. ಏಕೆಂದರೆ ಆತನೆಂದಿಗೂ ರಣವಿಮುಖನಾದದ್ದಿಲ್ಲ. ಕರ್ಣನಿಗೆ ಸೋತುಬಂದ ನೀನೆನ್ನನ್ನು ನಿಂದಿಸಲಾಗದು. ಕುಂಜರ ಯೂಥವನ್ನು ಭಂಜಿಪ ಪ್ರಭಂಜಸುತನಿಂತಾಡಲಿ, ಕರ್ಣನಿಗಂಜಿ ಬಂದ ಧರ್ಮರಾಜನಲ್ಲ. ಧೃತರಾಷ್ಟ್ರಸುತರನ್ನು ಕೊಂದೀಡಾಡುವ, ಅನೇಕ ರಥಿಕರನ್ನು ಚೆಂಡಾಡುವ, ಹಸ್ತಿ ತುರಗರಾಜಿಯನ್ನು ನಾಶಪಡಿಸುವ, ಪದಾತಿಲಕ್ಷವನ್ನು ಲಕ್ಷಿಸದೆ ಕಾಲಿನಿಂದ ತುಳಿದು ಸವರುವ, ಭೀಮಸೇನನಿಂತಾಡಬಹುದಾಗಲಿ ನೀನಲ್ಲ, ವೃಥಾ ವಾಗ್ಬಲನಾದ ನಿನಗೆ ನನ್ನ ಬಲಪರಾಕ್ರಮಗಳೇನು ಗೊತ್ತು? ಅಧರ್ಮವೆಂದು ಗೊತ್ತಿದ್ದೂ ಸಹದೇವನು ವಾರಿಸಿದರೂ ಕೇಳದೆ ಜೂಜಾಡಿ ಸೋತ ನಿನ್ನಿಂದ ನಾವೆಷ್ಟು ಕಷ್ಟಗಳಿಗೀಡಾದೆವೋ ಆ ದೇವನಿಗೇ ಗೊತ್ತು. ಏಕೆ ಸುಮ್ಮನೆ ವಾಗ್ಬಾಣಗಳಿಂದ ನಮ್ಮನ್ನು ಪೀಡಿಸುವೆ? ಸಾಕುಮಾಡು ನಿನ್ನ ವಾಕ್ತಾಪವನ್ನು!'

ಇಂತು ನಿಂದಿಸಿ, ಸತ್ಯಪ್ರತಿಜ್ಞನಾದ ಪಾರ್ಥನು ರೂಕ್ಷ ವಚನಗಳಿಂದ ಅಣ್ಣನನ್ನು ನೋಯಿಸಿದ ಪಾಪದ ಪ್ರಾಯಶ್ಚಿತ್ತಕ್ಕೆಂದು, ತನ್ನನ್ನು ತಾನು ಕೊಂದುಕೊಳ್ಳಲು

ಹವಣಿಸಿ, ಕತ್ತಿಯನ್ನೆತ್ತಿದನು. ಆಗ ಶ್ರೀಕೃಷ್ಣನು 'ಅರ್ಜುನ ! ಏನಿದು ಮತ್ತೆ ಕತ್ತಿಯನ್ನೆತ್ತಿ ಯಾರನ್ನು ಕೊಲ್ಲಲಿರುವೆ ? ಮತ್ತೆ ಧರ್ಮವಿಷಯಕ ಸಂಶಯವು ಮೂಡಿ ಬಂದಿದ್ದರೆ ಕೇಳು !' ಎಂದನು. ಅರ್ಜುನನು 'ಕೃಷ್ಣ! ನಾನಾರನ್ನೂ ಕೊಲ್ಲುವದಿಲ್ಲ. ನನ್ನನ್ನು ನಾನೇ ಕೊಂದುಕೊಳ್ಳುವೆನು. ಧರ್ಮಾತ್ಮನೂ, ಪೂಜ್ಯನೂ, ಜ್ಯೇಷ್ಠ ಸೋದರನೂ ಆದ ಧರ್ಮರಾಜನನ್ನು ನಿಂದಿಸಿದುದಕ್ಕೆ ಪ್ರಾಯಶ್ಚಿತ್ತವಾಗಿದೆ ಈ ನನ್ನ ಆತ್ಮಹತ್ಯೆ !' ಎಂದನು. ಶ್ರೀಕೃಷ್ಣನು ನಕ್ಕು ಅರ್ಜುನನಿಗಿಂತೆಂದನು:

'ಅರ್ಜುನ ! ಧರ್ಮವನ್ನೆಲ್ಲ ನೀನೇ ಅರಿತಿರುವೆ ಎಂಬಂತಿದೆ ನಿನ್ನ ವರ್ತನವು. ಆತ್ಮಹತ್ಯೆಯು ಭ್ರಾತೃವಧೆಗೂ ಮಿಗಿಲಾದ ಪಾತಕವಾಗಿದೆ. ಸಾಧನ ಶರೀರವಿದು ಹರಿದಯದಿ ಬಂದದ್ದು ! ಸಾಧಾರಣವಲ್ಲ! ಸಂಧ್ಯಾಪೂಜಾದಿಗಳಿಂದ (ಕರಗಳಿಂದ) ಧರ್ಮವು, ದೇವಮಂದಿರ ಗಮನಾದಿಗಳಿಂದ (ಪಾದಗಳಿಂದ) ಪುಣ್ಯಕಾಮಗಳು, ಶ್ರವಣಾದಿಗಳಿಂದ ಮೋಕ್ಷವು ಸಂಪಾದಿತವಾಗುವುದು ಶರೀರವಿದ್ದವನಿಗೇ ! ಆದುದರಿಂದ ಆತ್ಮಹತ್ಯೆಯು ಮಹಾನರ್ಥಕರವು. ಆತ್ಮಹತ್ಯೆಯೇ ತಕ್ಕ ಪ್ರಾಯಶ್ಚಿತ್ತವದಾಗಲೇಬೇಕೆಂದಿದ್ದರೆ, ಆತ್ಮಹತ್ಯೆಗೆ ಪ್ರತಿನಿಧಿಯಾದ ಆತ್ಮಸ್ತುತಿಯನ್ನು ಮಾಡಿಕೊಂಡು, ನಿಷ್ಪಾಪನಾಗು !' ಆ ಮಾತಿಗೆ ಸಮ್ಮತಿಸಿ ಅರ್ಜುನನು ತನ್ನನ್ನು ತಾನು ಪೊಗಳಿಕೊಳ್ಳುತ್ತಾ ಧರ್ಮಜನಿಗಿಂತೆಂದನು:

'ಅಣ್ಣ! ನನ್ನಂತಹ ಧನುರ್ಧರ ವೀರರೀ ಮೂರ್ಲೋಕಗಳಲ್ಲಿಯೂ ಇಲ್ಲ. ಪಿನಾಕಧರನ ಪರಮಾನುಗ್ರಹದಿಂದ ಚರಾಚರ ಜಗವನ್ನೆಲ್ಲ ಕ್ಷಣದಲ್ಲಿ ಸುಡಬಲ್ಲೆನು. ನನ್ನಿಂದ ನಿನ್ನ ರಾಜಸೂಯವು ಸಾಧಿತವಾಯಿತು. ನನ್ನಿಂದ ಮಯಸಭೆಯು ನಿನ್ನದಾಗಿ ಬಂತು. ನನ್ನಿಂದ ಕೌರವ ಸೈನಿಕರು ಎರಡಕ್ಷೌಹಿಣಿಗಳಿಗೂ ಹೆಚ್ಚಾಗಿ ನಿಹತರಾಗಿರುವರು. ಸಂಸಪ್ತಕ ವೀರರೂ ಅಲ್ಪಾವಶಿಷ್ಟರಾಗಿರುವರು. ನನ್ನಿಂದ ಇಂದು ಕರ್ಣನೂ ನಿಹತನಾಗುವನು. ನೀನು ಮಹಾರಾಜನಾಗಿ ಆನಂದದಿಂದಿರುವಂತೆ ಮಾಡಬಲ್ಲನೀ ಪಾರ್ಥ !'

ಇಂತು ಸ್ತುತಿಸಿಕೊಂಡ ಪಾರ್ಥನು ತನ್ನ ಮಾತಿಗೆ ತಾನೇ ಲಜ್ಜಿತನಾಗಿ, ಖಡ್ಗವನ್ನು ಕೋಶಕ್ಕೆ ಸೇರಿಸಿ, ತಲೆಬಾಗಿ ಧರ್ಮರಾಜನ ಚರಣಗಳಿಗೆ ನಮಿಸಿ, ನಿಂತು, ಕೈಮುಗಿದಿಂತು ನುಡಿದನು: 'ರಾಜನ್ ! ಕ್ಷಮಿಸೆನ್ನ ಅವಿನಯವನ್ನು ! ನಾನೇಕೆ ಹೀಗಾಡಿದೆನೋ ಹೀಗೆ ಮಾಡಿದೆನೋ ನೀನು ಸ್ವಲ್ಪ ಕಾಲದಲ್ಲಿಯೇ ತಿಳಿಯುವೆ ! ನನ್ನನ್ನು ಆಶೀರ್ವದಿಸಿ ಕಳಿಸು ! ಅಣ್ಣ! ಭೀಮಸೇನನಿಗೆ ಅನುಚರನಾಗಿ ಕೌರವರನ್ನು ಮಟ್ಟಿಕ್ಕಿ, ದುಷ್ಟ ಸೂತಸುತನನ್ನು ಕೊಂದು ಬರುವೆನು. ನಿನಗಾನಂದವನ್ನು ತರುವೆನು. ಕರ್ಣನನ್ನು ಕೊಂದಾಗದೆ, ಈ ಕವಚವನ್ನು ಬಿಚ್ಚೆನು.'

ಆಗ ಧರ್ಮರಾಜನು ಶಯನದಿಂದೆದ್ದು ಬಂದನು. ಅರ್ಜುನನಿಂದೆಯಿಂದ ನೊಂದ ಆ ಮಹಾನುಭಾವನ ಮುಖಕಮಲವು ಬಾಡಿ, ಕಣ್ಣೀರಿಡುತ್ತಿತ್ತು. ಆತನು ಗದ್ಗದಿತಕಂಠನಾಗಿ 'ಅರ್ಜುನ ! ನೀನಂದುದೆಲ್ಲವೂ ನಿಜವೇ ಆಗಿದೆ. ನನ್ನಿಂದ

ಪಡಬಾರದ ಪಾಡಿಗೀಡಾಗಿ ನೊಂದಿರುವಿರಿ ! ಕುಲಾಂತಕನು, ದ್ಯೂತಾದಿ ವ್ಯಸನವಶನು, ಮೂಢಬುದ್ಧಿಯು, ಪಾಪಿಯೂ ಆದ ನನ್ನನ್ನು ಕೊಂದು, ನೀವೆಲ್ಲರೂ ಸುಖವಾಗಿರಿ ! ಅಥವಾ ನಾನು ವನವಾಸಕ್ಕೆಂದು ಹೊರಟುಹೋಗುವೆನು. ಭೀಮಸೇನನೇ ರಾಜನಾಗಲಿ ! ನೀನು ಯುವರಾಜನಾಗಿರು ! ನನಗೆ ಬದುಕಿನಿಂದ ಏನೂ ಆಗಬೇಕಾದುದಿಲ್ಲ. ನನ್ನಂತಹ ಷಂಡನಿಗೆ ರಾಜ್ಯವನ್ನಾಳುವ ಶಕ್ತಿಯೂ ಇಲ್ಲ. ರೋಷಾನ್ವಿತನಾಗಿ ನೀನಾಡಿದ ಮಾತಿಗೆ ನನಗೆ ರೋಷವಿಲ್ಲ. ಸಾಕೀ ಬವಣೆ, ಈ ಬಂಧುಹತ್ಯೆ, ಈ ನಿತ್ಯಶಂಕಿತ ಜೀವನ !' ಎಂದು ಧರ್ಮರಾಜನು ಶಯನದಿಂದೆದ್ದು ಹೊರಡಲು ಅನುವಾದನು.

ವಾಸುದೇವನವನನ್ನು ತಡೆದು, ಕೈಪಿಡಿದು ಕೂಡಿಸಿ, 'ರಾಜನ್ ! ಶಾಂತನಾಗು ! ಅರ್ಜುನನು 'ಗಾಂಡೀವವನ್ನಿನ್ನೊಬ್ಬನಿಗೆ ಕೊಡು' ಎಂದವನನ್ನು ಕೊಲ್ಲುವುದಾಗಿ (ಉಪಾಂಶು) ಪ್ರತಿಜ್ಞೆಯನ್ನು ಮಾಡಿದ್ದನು. ಅದು ನಿನಗೆ ಗೊತ್ತಿಲ್ಲದೆ, ನೀನು ಆ ಮಾತನ್ನಂದೆ ! ಪೂಜ್ಯರ ನಿಂದೆಯೇ ವಧೆ ಎಂದು ನನ್ನ ಮತವನ್ನರಿತೇ ಪಾರ್ಥನು ನಿನ್ನನ್ನು ನಿಂದಿಸಿ, ಕೊಂದಷ್ಟು ಕಾರ್ಯ ನಡೆಸಿ, ಸತ್ಯಪ್ರತಿಜ್ಞನಾದನು. ಆದರೆ ಪೂಜ್ಯನಿಂದೆಯಿಂದ ನೊಂದು, ಬದುಕಿರಲಾರದೆ, ಆತ್ಮಹತ್ಯೆಯನ್ನು ಮಾಡಲು ಹೊರಟಾಗ, ಅರ್ಜುನನಿಗೆ 'ಆತ್ಮಪ್ರಶಂಸೆಯೇ ಮರಣ' ವೆಂಬ ನನ್ನ ಮಾತಿನಂತೆ, ಆತ್ಮಸ್ತುತಿಯು ಅವಶ್ಯ ಕರ್ತವ್ಯವಾಯಿತು. ಇಲ್ಲದಿರೆ ಧರ್ಮವು ಉಳಿಯುತ್ತಿದ್ದಿಲ್ಲ. ಅವನು ಬುದ್ಧಿಪೂರ್ವಕವಾಗಿ, ಪರನಿಂದಾ, ಆತ್ಮಪ್ರಶಂಸೆಗಳನ್ನು ಮಾಡಿಲ್ಲ. ಅಂತಹ ನೀಚನಲ್ಲ ನಿನ್ನ ತಮ್ಮನು. ಅವನನ್ನು ಸರಿಯಾಗಿ ತಿಳಿ ! ತಿಳಿದು ಅವನನ್ನು ಕ್ಷಮಿಸು ! ಧರ್ಮರಾಜ ! ಧರ್ಮಸೂಕ್ಷ್ಮವನ್ನು ನಿನಗೆ ಮತ್ತೊಬ್ಬನು ತಿಳಿಸಬೇಕಾಗಿಲ್ಲ. ಸತ್ಯ ಸಂರಕ್ಷಣೆಗಾಗಿ ನಿನ್ನನ್ನು ನಿಂದಿಸಿ, ಅದರಿಂದ ನೊಂದು ಆತ್ಮಹತ್ಯಾ ಸಮವಾದ ಆತ್ಮಪ್ರಶಂಸೆಯನ್ನು ಮಾಡಿಕೊಂಡ ಪಾರ್ಥನನ್ನು ನೀನು ಕ್ಷಮಿಸು ! ಇಂದು ಪಾಪಿ ರಾಧೇಯನ ರಕ್ತವನ್ನು ಭೂಮಿಗೆ ಉಣಿಸುವೆವು. ನಮ್ಮಿರ್ವರಿಗೂ ಹಿರಿಯನಾದ ನಿನಗೆ ಶರಣಾಗತರಾಗಿ, ಕ್ಷಮಿಸೆಂದು ಬೇಡುವ ನಮ್ಮನ್ನು ಆಶೀರ್ವದಿಸಿ ಕಳಿಸು !'

ಇಂತು ಬೇಡಿ, ಕಾಲಿಗೆರಗುವ ಶ್ರೀಕೃಷ್ಣನನ್ನು ಧರ್ಮರಾಜನು ವಾರಿಸಿ, ಕೂಡಿಸಿ, ಕೈಮುಗಿದಿಂತೆಂದನು : 'ಶ್ರೀಕೃಷ್ಣ ! ನಿನ್ನ ಮಾತಿನಿಂದ ನನ್ನ ವ್ಯಸನ ಸಂಶಯಗಳು ದೂರವಾದವು. ಘೋರ ವ್ಯಸನದಿ ಬೀಳಲಿರುವ ನಮ್ಮಿರ್ವರನ್ನು ನೀನು ಉಳಿಸಿದೆ. ಮತ್ತು ಧರ್ಮದಲ್ಲಿ ನಡೆಸಿಹೆ. ಅಜ್ಞಾನಮೋಹಿತರಾದ ನಮ್ಮ ಕಣ್ಣನ್ನು ತೆರೆಯಿಸಿ ಕಾಪಾಡಿದೆ. ನಿನ್ನ ಅನುಗ್ರಹದಲ್ಲಿ ನಾವು ಶೋಕಸಾಗರವನ್ನು ದಾಟಬೇಕಾಗಿದೆ ಪ್ರಭೋ ! ನೀನೇ ನಮಗೆ ಗತಿಯು !'

ವಾಸುದೇವನು ಇನ್ನೂ ವಿಮನಸ್ಕನಾಗಿದ್ದ ಧರ್ಮರಾಜನನ್ನು ಆಶ್ವಾಸಿಸಲೆಣಿಸಿ ಅರ್ಜುನನಿಗಿಂತೆಂದನು. 'ಪಾರ್ಥ ! ಧರ್ಮಜನನ್ನು ಕೊಲ್ಲಪೋದುದೊಂದು ತಪ್ಪು ನೀನು ನೀನು ಎಂದು ಜರೆದುದು ಮತ್ತೊಂದು ತಪ್ಪು. ಆದುದರಿಂದ ಪಾಪಮೋಚಿತ

ನಾಗಲೆಣಿಸುವ ನಿನ್ನಿಂದ ಧರ್ಮರಾಜನು ಪ್ರಾರ್ಥಿತನಾಗಲಿ! ವಂದಿಸಿ, ಕ್ಷಮೆಯಾಚಿಸಿ, ಅಣ್ಣನ ಅನುಗ್ರಹವನ್ನು ಪಡೆ! ನಿನಗೆ ಜಯವಾಗಲಿ!' ಆ ಮಾತಿನಂತೆ ಪಾರ್ಥನು ಧರ್ಮರಾಜನ ಕಾಲಿಗೆ ಬಿದ್ದನು. ಅವನ ಪಶ್ಚಾತ್ತಾಪದ ಕಣ್ಣೀರು ಅವನ ಪಾದಗಳಿಗಭಿಷೇಕವಾಯಿತು. ಅವನ ಮುಗಿದ ಕೈಗಳು ಅವನ ಪುಷ್ಪಾಂಜಲಿಯಾದವು. ಧರ್ಮರಾಜನು ಪ್ರೇಮಾರ್ದ್ರಮನಸ್ಕನಾದನು. 'ಪಾರ್ಥ!' ಎಂದವನನ್ನು ಬಿಗಿದಪ್ಪಿ ಅವನ ಕಣ್ಣೀರೊರೆಸಿ, ತಾನೂ, ತಡೆಯಲಾರದೆ ರೋದಿಸಿದನು.

'ಪಾರ್ಥ ! ಕರ್ಣನು ಸರ್ವಸೈನಿಕ ಮಧ್ಯದಲ್ಲಿ ನನ್ನನ್ನು ವಿರಥನನ್ನಾಗಿಸಿ, ನನ್ನನ್ನು ಗಾಯಗೊಳಿಸಿ, ಅವಮಾನಿಸಿದನು. ನನಗೆ ಜೀವನವೇ ದುರ್ಭರವಾಯಿತು! ಇಂದು ನೀನು ಕರ್ಣನನ್ನು ಸಂಹರಿಸಿ, ಸೇಡನ್ನು ತೀರಿಸದೊಡೆ, ನಾನು ಬದುಕಿರಲಾರೆನು. ತಿಳಿ' ಎಂದ ಧರ್ಮಜನಿಗೆ ಪಾರ್ಥನಿಂತೆಂದನು : 'ಅಣ್ಣ ! ನಿನ್ನಾಣೆಗೂ, ಭೀಮಣ್ಣನಾಣೆಗೂ, ಪ್ರಿಯರಾದ ಯಮಳರಾಣೆಗೂ ಕರ್ಣನನ್ನು ಕೊಂದೇ ಬರುವೆನು ಚಿಂತಿಸಬೇಡ ! ಶ್ರೀಕೃಷ್ಣನ ಅನುಗ್ರಹದಿಂದ ಸತ್ಯಪ್ರತಿಜ್ಞನಾಗಿ ಬರುವೆನು. ನನ್ನನ್ನಾಶೀರ್ವದಿಸಿ ಕಳಿಸು ! '

ಶ್ರೀಕೃಷ್ಣನು 'ಅರ್ಜುನ ! ಸಂಶಯ ಪಡಬೇಡ ! ರಣದಲ್ಲಿ ಕರ್ಣನನ್ನಿಂದು ಕೊಲ್ಲುವೆ ! ಧರ್ಮರಾಜನು ಅಕ್ಷತಗಾತ್ರನಾಗಿರುವುದನ್ನು ನೋಡಿ ಹೋಗಲು ಬಂದೆವಲ್ಲವೇ ? ದೈವಾನುಗ್ರಹದಿಂದ ಸುಖಿಯಾಗಿರುವ ಸೋದರನನ್ನು ಕಂಡೆ! ನಡೆ ರಣರಂಗಕ್ಕೆ! ಕೂಡು ಭೀಮಸೇನನನ್ನು! ಕಡಿದಾಡು ಶತ್ರುಬಲವನ್ನು!' ಎಂದನು.

ಧರ್ಮಜನು ಅರ್ಜುನನನ್ನು ಮತ್ತೆ ಕರೆದಪ್ಪಿ 'ಅರ್ಜುನ ! ನನ್ನ ಆಶೀರ್ವಾದವಿದೆ. ಹೋಗಿ ಕರ್ಣನನ್ನು ಸಂಹರಿಸಿ ಬಾ ! ನಾನಂದ ಮಾತಿಗೆ ಸಿಟ್ಟಾಗಬೇಡ ! ಅದನ್ನು ಮರೆತುಬಿಡು ! ' ಎಂದನು. ಅರ್ಜುನನು ಧರ್ಮಜನಿಗೆ ಶಿರಬಾಗಿ ನಮಿಸಿ, 'ಬಲಗರ್ವಿತನಾದ ರಾಧೇಯನ ರಕ್ತವನ್ನು ಕುಡಿಯಲು ನನ್ನ ಬಾಣಗಳು ಕುಡಿ ಚಾಚುತ್ತಿವೆ. ಕರ್ಣನನ್ನು ಕೊಂದು ಬಂದು ನಿನಗಾ ಆನಂದದ ವಾರ್ತೆಯನ್ನರುಹುವೆನು' ಎಂದನು.

ಪಾರ್ಥನು ಗೋವಿಂದನ ಕಡೆ ತಿರುಗಿ, 'ಕೃಷ್ಣ ! ನನ್ನ ರಥವನ್ನು ಸಜ್ಜುಗೊಳಿಸಿಡಿಸು ! ಆಯುಧಗಳನ್ನು, ಅಶ್ವಗಳನ್ನು ಪೂಜಿಸಿ, ಕರ್ಣವಧೆಗಾಗಿ ತೆರಳುವೆನು' ಎಂದನು. ಶ್ರೀಕೃಷ್ಣನು ದಾರುಕನಿಗಾಜ್ಞಾಪಿಸಲು, ಅವನು ರಥವನ್ನು ಸಕಲ ಸನ್ನದ್ಧವನ್ನಾಗಿ ತಂದು ನಿಲ್ಲಿಸಿದನು. ವಿಪ್ರರ ಸ್ವಸ್ತಿವಾಚನಗಳನ್ನು ಕೇಳುತ್ತಾ ಪಾರ್ಥನು ಪಾರ್ಥಸಾರಥಿಯು, ರಥವನ್ನಾರೋಹಿಸಿ, ರಣರಂಗದ ಕಡೆ ನಡೆದರು.

ಶೀತಲ ವಿಮಲ ಮಾರುತವು ಅನುಕೂಲವಾಗಿ ಬೀಸಿತು. ಚಾಷ ಕ್ರೌಂಚಗಳು ಪ್ರದಕ್ಷಿಣಾಕಾರವಾಗಿ ತಿರುಗಿದವು. ಪಾಂಡವ ಸೈನಿಕರು ರಣರಂಗವನ್ನು ಪ್ರವೇಶಿಸಿದ ಪಾರ್ಥನನ್ನು ಕಂಡು, ಉತ್ಸಾಹದಿಂದ ಜಯಧ್ವಾನಗಳನ್ನು ಮಾಡಿದರು.

## ೧೨. ದುಶ್ಶಾಸನ ವಧೆ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್! ಕರ್ಣನನ್ನು ವಧಿಸಬೇಕೆಂದು ತೆರಳಿದ ಅರ್ಜುನನು "ಎಂತು ಸಾಧಿಸಲಿ ಈ ಮಹತ್ಕಾರ್ಯವನ್ನು? ಎಂತು ಗೆಲ್ಲುವುದು ರಾಧೇಯನನ್ನು?" ಎಂದು ಚಿಂತಿಸುತ್ತಿದ್ದನು. ಅದನ್ನರಿತು ವಾಸುದೇವನು, "ಪಾರ್ಥ! ಚಿಂತಿಸಬೇಡ! ಕೊಲ್ಲುವೆ ಕರ್ಣನನ್ನು! ಭೀಷ್ಮ ದ್ರೋಣಾದಿಗಳನ್ನು ಸೋಲಿಸಿ, ಭಗದತ್ತ ಶ್ರುತಾಯು ಕಾಂಬೋಜರಾದಿ ಮಹಾ ವೀರರನ್ನು ಸಂಹರಿಸಿದ ನಿನಗೆ ಕರ್ಣನಾವ ಲೆಕ್ಕ? ದಿವ್ಯಾಸ್ತ್ರಗಳಿವೆ, ಅಸಂಮೋಹವಿದೆ, ಬಲವಿದೆ. ದೇವಾಸುರರೆತ್ತಿ ಬಂದರೂ ಗೆಲ್ಲಬಲ್ಲೆ! ನೀನು ನರಾವೇಶದಿಂದ ಕೂಡಿ ದುರ್ಜಯನಾಗಿರುವೆ ಎಂದು ಋಷಿಗಳು ಸಭೆಯಲ್ಲಿ ಹೇಳಿದರಲ್ಲವೇ? ತಿಳಿ! ಆದರೂ ಕರ್ಣನು ಸಾಮಾನ್ಯನಲ್ಲ. ಅವನು ಮಹಾಸ್ತ್ರವೇದಿಯು, ದೇಶಕಾಲ ವಿಭಾಗಜ್ಞನು, ಚಿತ್ರಯೋಧಿಯು ಆದ ಮಹಾರಥನು. ಬಹು ಯತ್ನದಿಂದ, ಮೈ ಎಲ್ಲ ಕಣ್ಣು ಮಾಡಿಕೊಂಡು ಬಾಣವರ್ಷವನ್ನು ಸುರಿಸಿ, ವಿಪನ್ಮೇಘವಲಯದಲ್ಲಿ ಕರ್ಣಸೂರ್ಯನನ್ನು ಮುಣುಗಿಸಿ ಬಿಡು! ಸಂತತ ಪಾಂಡವದ್ವೇಷಿಯಾದ ಆ ಪಾಪಿಯನ್ನುಳಿಸಬೇಡ! ಅವನಲ್ಲಿಟ್ಟ ದುರ್ಯೋಧನ ಜಯಾಶಾಲತೆಯನ್ನು ಬೇರಿಂದ ಕಿತ್ತೊಗೆದುಬಿಡು! ಖಡ್ಗಜಿಹ್ವನು, ಧನುರಾಸ್ಯನು, ಶರದಂಷ್ಟ್ರನು, ದರ್ಪಬಹುಲನು ಆದ ಕರ್ಣವ್ಯಾಘ್ರನನ್ನು ಕೊಂದು, ನಿಮ್ಮಣ್ಣನಿಗೆ ಹಿತವನ್ನು ಸಾಧಿಸು! ಇಂದಿಗೆ ಹದಿನೇಳು ದಿನಗಳಾಗುತ್ತಿವೆ ಯುದ್ಧಾರಂಭವಾಗಿ. ಕೌರವವಾಹಿನಿಯು ನಷ್ಟಪ್ರಾಯವಾಗಿದೆ. ಪಾಂಡವವಾಹಿನಿಯೂ ಬಹಳ ಉಳಿದಿಲ್ಲ. ನಿನ್ನನ್ನು ಬಿಟ್ಟರೆ ಕರ್ಣನನ್ನು ಕೊಲ್ಲುವವರಿಲ್ಲ. ಭೀಮನನ್ನು ಬಿಟ್ಟರೆ ದುರ್ಯೋಧನನನ್ನು ಕೊಲ್ಲುವವರಿಲ್ಲ. ಅಭಿಮನ್ಯು ಕುಮಾರನನ್ನು ಕೊಂದ ಪಾಪಿ ಜಯದ್ರಥನನ್ನು ಕೊಂದೆ! ಉತ್ತರಗೋಗ್ರಹಣದಿ ನೀನೊಬ್ಬನೇ ಸಕಲ ಕೌರವರನ್ನು ಗೆದ್ದೆ! ಇಂದು ಕರ್ಣನೊಬ್ಬನಿಗೆ ನೀನಂಜುವ ಕೆಲಸವಿಲ್ಲ. ಪಿನಾಕಪಾಣಿಯನ್ನು ನೆನೆದು, ಯುದ್ಧವನ್ನಾರಂಭಿಸು! ನಿನಗೆ ಜಯವಾಗುವಂತೆ ನಾನು ಸಹಕರಿಸುವೆನು. ಕರ್ಣನಿಗೆ ಹೆದರಿ ಓಡುತ್ತಿರುವ ಪಾಂಚಾಲಯೋಧರನ್ನು ವಿಜೃಂಭಿಸಿ, ಧೈರ್ಯ ತುಂಬಿ ಹಿಂದಿರುಗಿಸು! ನೋಡಲ್ಲಿ ಭೀಮಸೇನನನ್ನು! ಕರ್ಣಸುಯೋಧನರನ್ನು ತಡೆದು ಕಾದುವ ಆ ಮಹಾವೀರನಿಗೆ ನೆರವಾಗು!' ಎಂದು ಹುರಿದುಂಬಿಸಿದನು. ಅರ್ಜುನನು ಕೇಶವಸಮಾಶ್ವಾಸಿತನಾಗಿ, ಧೈರ್ಯೋತ್ಸಾಹಗಳಿಂದ ರಣರಂಗದಲ್ಲಿ ಮುನ್ನಡೆದನು. 'ಕೃಷ್ಣ! ನೀನು ಲೋಕೇಶನಾದ ಶ್ರೀಹರಿಯು! ನಿನ್ನ ಸಹಾಯವಿದ್ದರೆ, ಮೂರ್ಲೋಕದ ವೀರರನ್ನು ಗೆಲ್ಲಬಲ್ಲೆ. ಇನ್ನು ಪಾಪಿ ಕರ್ಣನ ಲೆಕ್ಕವೇನು? ಹೊಡೆ ಎನ್ನ ರಥವನ್ನು ಕರ್ಣಾಭಿಮುಖವಾಗಿ! ಇಂದು ಕರ್ಣ-ಪಾರ್ಥರ ಸಂಗ್ರಾಮವು ಅಸದೃಶ ವೆನಿಸುವಂತಾಗುವದು. ಇಂದು ಭೂತಲವು ವಿಕರ್ಣವಾಗುವದು! ಇಂದು ಧೃತರಾಷ್ಟ್ರನು ರಾಷ್ಟ್ರರಹಿತನಾಗಿ, ತನ್ನ ಅವಿವೇಕವನ್ನು ತಾನೇ ನಿಂದಿಸುವಂತಾಗುವದು! ಇಂದು

ಪಗಡೆಗಳನ್ನೊಗೆದ ಶಕುನಿಯು ಪಣವಾಗಿ ಪ್ರಾಣಗಳನ್ನಿಟ್ಟು, ಸಹದೇವನಿಗೆ ಸೋಲಬೇಕಾಗುವದು. ಇಂದು ಭೀಮಸೇನನ ಕಠೋರ ಪ್ರತಿಜ್ಞೆಯು ಪರಿಪಾಲಿತ ವಾಗುವದು! ಇಂದು ಅಭಿಮನ್ಯುವಿನ ಸೇಡನ್ನು ತೀರಿಸಿಬಿಡುವೆನು' ಎಂದು ತ್ವರೆಪಡಿಸುವ ಅರ್ಜುನನನ್ನು ಶ್ರೀಕೃಷ್ಣನು ಉಭಯಸೇನಾ ಮಧ್ಯದಿ ತಂದು ನಿಲ್ಲಿಸಿದನು.

ರಾಜನ್ ! ಆಗ ತುಮುಲವಾದ ಯುದ್ಧವಾರಂಭವಾಯಿತು. ಕೃಪನು ಶಿಖಂಡಿಯಿಂದಲು, ಸುಯೋಧನನು ಸಾತ್ಯಕಿಯಿಂದಲು, ಅಶ್ವತ್ಥಾಮನು ಶ್ರುತ (ಪಾಂಚಾಲ)ನಿಂದಲು, ಚಿತ್ರಸೇನನು ಯುಧಾಮನ್ಯುವಿನಿಂದಲು, ವೃಷಸೇನನು ಉತ್ತಮೌಜನಿಂದಲು, ಶಕುನಿಯು ಸಹದೇವನಿಂದಲು, ಕೃತವರ್ಮನು ನಕುಲನಿಂದಲು, ಕರ್ಣನು ಧೃಷ್ಟದ್ಯುಮ್ನನಿಂದಲು, ಸಂಸಪ್ತಕರು ಅರ್ಜುನನಿಂದಲು, ದುಃಶಾಸನನು ಭೀಮನಿಂದಲು ಕೂಡಿ, ದ್ವಂದ್ವಯುದ್ಧವನ್ನು ಮಾಡಿದರು. ಉತ್ತಮೌಜನು ಕರ್ಣಾತ್ಮಜನನ್ನು ಸೋಲಿಸಿ, ಕರ್ಣಾನುಜನನ್ನು ಸಂಹರಿಸಿದನು. ಶಿಖಂಡಿಯು ಕೃಪನನ್ನು ವಿರಥನನ್ನಾಗಿಸಲು, ನೋಡಿ, ಅಶ್ವತ್ಥಾಮನು ಅವನನ್ನು (ಮಾತುಲನನ್ನು) ತನ್ನ ರಥದಿ ಕೂಡಿಸಿಕೊಂಡು ಹೋದನು.

ಮಹಾರಥರನೇಕರು ತನ್ನನ್ನು ಮುತ್ತಿ ಹೊಡೆಯಲು, ಭೀಮನು ಅವರ ಶರಗಳನ್ನು ಖಂಡಿಸಿ, 'ಸಾರಥೇ! ವಿಶೋಕ! ಇವರನ್ನತಿಕ್ರಮಿಸಿ, ಧಾರ್ತರಾಷ್ಟ್ರರಿದ್ದಲ್ಲಿಗೆ ನಡೆ! ಅವರನ್ನು ಯಮನಲ್ಲಿಗೆ ಕಳಿಸಬೇಕಾಗಿದೆ!' ಎಂದನು. ಅಂತೆಯೇ ರಥವು ಕೌರವವ್ಯೂಹವನ್ನು ಪ್ರವೇಶಿಸಿತು. ಭೀಮನನ್ನು ಕೊಲ್ಲಬೇಕೆಂದು ಕೌರವವೀರರು ಬಿಟ್ಟ ಬಾಣಪರಂಪರೆಯಿಂದ ಭೀಮರಥವು ಮುಚ್ಚಲ್ಪಟ್ಟಿತು. ವೃಕೋದರನು ಅವರ ಬಾಣಗಳನ್ನೆಲ್ಲ ಖಂಡಿಸಿ, ಅವರ ನಾಗ, ತುರಗ, ರಥಗಳನ್ನು ಧ್ವಂಸಿಸಿದನು. ಪ್ರಳಯಕಾಲದ ದಂಡಪಾಣಿಯಂತೆ ಮೆರೆದು ಗದೆಯನ್ನು ಬೀಸುವ ಭೀಮನ ಮಹಾವೇಗವನ್ನು ತಡೆಯಲಾರದೆ, ಬಾಯ್ದೆರೆದು ಬರುವ ಹುಲಿಗೆ ಕ್ಷುದ್ರ ಶಶಗಳಂತೆ ಕೌರವವೀರರು ತುತ್ತಾಗಿ ಸತ್ತರು.

ವಿಶೋಕನು ಭೀಮನನ್ನು ಕಂಡು 'ಆಯುಷ್ಮನ್ ! ಉಳಿದಿರುವ ಆಯುಧ ವಿವರವನ್ನು ಕೇಳು ! ಆರೆತ್ತುಗಳೆಳೆವ ಒಂದು ಬಂಡಿಯಲ್ಲಿ ಅರವತ್ತು ಸಾವಿರ ಮಾರ್ಗಣಗಳು, ಹತ್ತು ಸಾವಿರ ಭಲ್ಲಗಳು, ಎರಡು ಸಾವಿರ ನಾರಾಚಗಳು, ಮೂರು ಸಾವಿರ ಪ್ರದರಗಳು ಇರುತ್ತವೆ. ಅಂತಹ ಬಂಡಿಗಳು ಆರು ಇನ್ನೂ ಉಳಿದಿವೆ. ಅಸಹಾಯಶೂರನಾದ ನಿನಗೆ ಇವು ಮುಗಿದರೂ ಗದಾ ಖಡ್ಗಗಳಿವೆ. ಶತ್ರು ನಿರ್ಮೂಲನ ಸಮರ್ಥವಾದ ಬಾಹುದ್ವಯವಿದೆ. ನಿಶ್ಶಂಕನಾಗಿ ಮುಂದೆ ಸಾಗು' ಎಂದು ವಿಜ್ಞಾಪಿಸಿದನು. ಭೀಮಸೇನನು 'ಧರ್ಮರಾಜನ ಕುಶಲವನ್ನರಿತು ಬರಲೆಂದು ಹೋದ ಅರ್ಜುನನಿನ್ನೂ ಬಂದಿಲ್ಲ; ಏಕಿರಬಹುದು ವಿಶೋಕ ?' ಎಂದು ಕೇಳಿದನು. ಆ ವೇಳೆಗೆ ಗಾಂಡೀವ ಟಂಕಾರವು ದೇವದತ್ತ ಪಾಂಚಜನ್ಯಧ್ವಾನಗಳೊಡನೆ ಬೆರತು, ಅವರ ಕಿವಿಗೆ ಬಿತ್ತು. ವಿಶೋಕನು 'ಮಹಾನುಭಾವ ! ನಿನ್ನ ಸರ್ವ

ಕಾಮಿತಗಳೀಡೇರುವವು. ಧರ್ಮನು ಕುಶಲಿ ಎಂದಾಘೋಷವೇ ಸಾರುತ್ತಿದೆ. ಅಲ್ಲಿ ನೋಡು ! ಚಕ್ರಧರ ದೇವನು ರಶ್ಮಿಧರನಾಗಿ, ಕೌರವಸೇನಾ ಮಧ್ಯದಿ ರಥವನ್ನು ಹೊಗಿಸಿರುವನು. ನಾಲ್ಕುನೂರು ಮಹಾರಥಗಳಿಂದ ಕೂಡಿ ನಿನ್ನ ತಮ್ಮನು ನಮ್ಮ ರಥವನ್ನು ಸಮೀಪಿಸುತ್ತಿರುವನು' ಎಂದನು. ಪ್ರಿಯವಾರ್ತೆಯನ್ನರುಹಿದ ವಿಶೋಕನಿಗೆ ಬಹುಮಾನವಿತ್ತು ಭೀಮಸೇನನು ಹತ್ತಿರಕ್ಕೆ ಬಂದ ಗೋವಿಂದನಿಗೆ ಮನಸಾ ವಂದಿಸಿ, ಅರ್ಜುನನನ್ನಭಿನಂದಿಸಿದನು. ಧರ್ಮರಾಜನ ಕ್ಷೇಮವನ್ನರಿತು ಪಾರ್ಥಭೀಮಸೇನರು ವಾಯು-ಪರ್ಜನ್ಯರಂತೆ ವಿಜೃಂಭಿಸಿ, ಶರವರ್ಷದಲ್ಲಿ ಕುರುಸೈನಿಕರನ್ನು ತೃಣದಂತೆ ಕೊಚ್ಚಿಹಾಕಿದರು. ಭೀಮಸೇನನನ್ನು ಶರಜಾಲದಿ ಪೀಡಿಸಿದ ವೀರರು ಯಮಪೀಡೆಗೆ ಗುರಿಯಾದರು. ಅರ್ಜುನನನ್ನು ಕಾಂಡವೃಷ್ಟಿಯಿಂದ ಮುಚ್ಚಿದ ಯೋಧರು ವೀರಸ್ವರ್ಗವನ್ನು ಸೂರೆಗೊಂಡರು.

ಭೀಮಸೇನನು ತನ್ನನ್ನು ಮುತ್ತಿದ ಶತ್ರುಸೇನೆಯಿಂದ ಮಹಾಮೀನವು ಜಾಲದಿಂದಂತೆ ನುಸುಳಿ, ಅವರನ್ನೂ ಅವರ ಹತ್ತುಸಾವಿರ ಗಜಸೇನೆಯನ್ನೂ ಗದೆಯಿಂದ ಕೊಂದನು. ಐದುಸಾವಿರ ಕುದುರೆಗಳು, ನೂರಾರು ರಥಗಳು, ಎರಡುಲಕ್ಷ ಕಾಲ್ಬಲವೂ ಭೀಮಗದಾಘಾತದಿಂದ ನಾಶವಾಯಿತು. ಕೇಶಶೈವಾಲವು, ಮಾಂಸಕರ್ದಮವು, ಅಸ್ಥಿಶಂಖವು, ನರಮೀನವು, ಶೀರ್ಷೋಪಲವು ಆದ ರಕ್ತಮಹಾನದಿಯು ರಣರಂಗದಲ್ಲಿ ಹರಿಯಿತು.

ಆಗ ದುರ್ಯೋಧನಪ್ರೇರಿತನಾದ ಶಕುನಿಯು ಭೀಮನನ್ನು ವೇಲೆಯು ಸಮುದ್ರವನ್ನಂತೆ ತಡೆದು, ನಿಶಿತ ಶರಗಳಿಂದ ಪೀಡಿಸಿದನು. ಶಕುನಿಯ ಬಾಣಗಳಿಂದ ಭೀಮಸೇನನ ಎಡಪಕ್ಕದ ಕವಚವು ಸೀಳಲ್ಪಟ್ಟು ಬಿತ್ತು. ಭೀಮನು ಕ್ರುದ್ಧನಾಗಿ, ತೀವ್ರಬಾಣದಿಂದ ಹೊಡೆದನು. ಶಕುನಿಯು ಅದನ್ನು ಖಂಡಿಸಿದನು. ಭೀಮನು ಅವನ ಧನುವನ್ನು ಮುರಿದನು. ಶಕುನಿಯು ಮತ್ತೊಂದು ಧನುವನ್ನೆತ್ತಿ, ಹದಿನಾರು ಭಲ್ಲಗಳಿಂದ ಭೀಮನನ್ನು ಪೀಡಿಸಿದನು. ಭೀಮಸೇನನು ಶಕ್ತಿಯನ್ನೆಸೆಯಲು ಅದನ್ನು ಖಂಡಿಸಿದನು. ಭೀಮನು ಸುಬಲಸುತನ ಸೂತತುರಗಗಳನ್ನು ಸಂಹರಿಸಿ, ಧನುವನ್ನು ಖಂಡಿಸಿ, ನಿಶಿತಬಾಣದಿಂದ ಹೊಡೆದನು. ಶಕುನಿಯು ಮೂರ್ಛಿತನಾಗಿ ಬೀಳಲು ನೋಡಿ ಭೀಮಸೇನನು ಸಹದೇವನ ಪ್ರತಿಜ್ಞೆಯನ್ನು ನೆನೆದು, ಅವನನ್ನು ಕೊಲ್ಲದೆ ಬಿಟ್ಟನು. ಆಗ ದುರ್ಯೋಧನನು ಮಾವನನ್ನು ರಥದಲ್ಲಿಟ್ಟುಕೊಂಡು, ದೂರ ಸರಿದನು. ಭೀಮವಿಕ್ರಮವನ್ನು ಕಂಡು, ಕುರುವೀರರು ರಣವಿಮುಖರಾಗಿ ಓಡಿಹೋದರು.

ರಾಜನ್ ! ಹದಿನೇಳನೆಯ ದಿನದ ಅಪರಾಹ್ಣ ಯುದ್ಧವನ್ನು ವರ್ಣಿಸುವೆನು ಕೇಳು ! ಕರ್ಣನ ಮಾತಿನಂತೆ ಶಲ್ಯನು ಪಾಂಚಾಲ ಸೃಂಜಯರ ಕಡೆಗೆ ಅವನ ರಥವನ್ನು ನಡೆಸಿದನು. ಆಕರ್ಣಾಂತವಾಗಿ ಸೆಳೆದು ಬಿಡಲ್ಪಡುವ ಕರ್ಣಬಾಣಗಳೊಂದೂ ವ್ಯರ್ಥವಾದುದಿಲ್ಲ. ಶಿಖಂಡಿ, ಪಾರ್ಷತ, ಸಾತ್ಯಕಿಯರು ತನ್ನನ್ನು ಮುತ್ತಲು,

ಪಗಡೆಗಳನ್ನೊಗೆದ ಶಕುನಿಯು ಪಣವಾಗಿ ಪ್ರಾಣಗಳನ್ನಿಟ್ಟು ಸಹದೇವನಿಗೆ ಸೋಲಬೇಕಾಗುವದು. ಇಂದು ಭೀಮಸೇನನ ಕಠೋರ ಪ್ರತಿಜ್ಞೆಯು ಪರಿಪಾಲಿತ ವಾಗುವದು! ಇಂದು ಅಭಿಮನ್ಯುವಿನ ಸೇಡನ್ನು ತೀರಿಸಿಬಿಡುವೆನು' ಎಂದು ತ್ವರೆಪಡಿಸುವ ಅರ್ಜುನನನ್ನು ಶ್ರೀಕೃಷ್ಣನು ಉಭಯಸೇನಾ ಮಧ್ಯದಿ ತಂದು ನಿಲ್ಲಿಸಿದನು.

ರಾಜನ್ ! ಆಗ ತುಮುಲವಾದ ಯುದ್ಧವಾರಂಭವಾಯಿತು. ಕೃಪನು ಶಿಖಂಡಿಯಿಂದಲು, ಸುಯೋಧನನು ಸಾತ್ಯಕಿಯಿಂದಲು, ಅಶ್ವತ್ಥಾಮನು ಶ್ರುತ (ಪಾಂಚಾಲ)ನಿಂದಲು, ಚಿತ್ರಸೇನನು ಯುಧಾಮನ್ಯುವಿನಿಂದಲು, ವೃಷಸೇನನು ಉತ್ತಮೌಜನಿಂದಲು, ಶಕುನಿಯು ಸಹದೇವನಿಂದಲು, ಕೃತವರ್ಮನು ನಕುಲನಿಂದಲು, ಕರ್ಣನು ಧೃಷ್ಟದ್ಯುಮ್ನನಿಂದಲು, ಸಂಸಪ್ತಕರು ಅರ್ಜುನನಿಂದಲು, ದುಃಶಾಸನನು ಭೀಮನಿಂದಲು ಕೂಡಿ, ದ್ವಂದ್ವಯುದ್ಧವನ್ನು ಮಾಡಿದರು. ಉತ್ತಮೌಜನು ಕರ್ಣಾತ್ಮಜನನ್ನು ಸೋಲಿಸಿ, ಕರ್ಣಾನುಜನನ್ನು ಸಂಹರಿಸಿದನು. ಶಿಖಂಡಿಯು ಕೃಪನನ್ನು ವಿರಥನನ್ನಾಗಿಸಲು, ನೋಡಿ, ಅಶ್ವತ್ಥಾಮನು ಅವನನ್ನು (ಮಾತುಲನನ್ನು) ತನ್ನ ರಥದಿ ಕೂಡಿಸಿಕೊಂಡು ಹೋದನು.

ಮಹಾರಥರನೇಕರು ತನ್ನನ್ನು ಮುತ್ತಿ ಹೊಡೆಯಲು, ಭೀಮನು ಅವರ ಶರಗಳನ್ನು ಖಂಡಿಸಿ, 'ಸಾರಥೇ ! ವಿಶೋಕ ! ಇವರನ್ನತಿಕ್ರಮಿಸಿ, ಧಾರ್ತರಾಷ್ಟ್ರರಿದ್ದಲ್ಲಿಗೆ ನಡೆ ! ಅವರನ್ನು ಯಮನಲ್ಲಿಗೆ ಕಳಿಸಬೇಕಾಗಿದೆ !' ಎಂದನು. ಅಂತೆಯೇ ರಥವು ಕೌರವವ್ಯೂಹವನ್ನು ಪ್ರವೇಶಿಸಿತು. ಭೀಮನನ್ನು ಕೊಲ್ಲಬೇಕೆಂದು ಕೌರವವೀರರು ಬಿಟ್ಟ ಬಾಣಪರಂಪರೆಯಿಂದ ಭೀಮರಥವು ಮುಚ್ಚಲ್ಪಟ್ಟಿತು. ವೃಕೋದರನು ಅವರ ಬಾಣಗಳನ್ನೆಲ್ಲ ಖಂಡಿಸಿ, ಅವರ ನಾಗ, ತುರಗ, ರಥಗಳನ್ನು ಧ್ವಂಸಿಸಿದನು. ಪ್ರಳಯಕಾಲದ ದಂಡಪಾಣಿಯಂತೆ ಮೆರೆದು ಗದೆಯನ್ನು ಬೀಸುವ ಭೀಮನ ಮಹಾವೇಗವನ್ನು ತಡೆಯಲಾರದೆ, ಬಾಯ್ತೆರೆದು ಬರುವ ಹುಲಿಗೆ ಕ್ಷುದ್ರ ಶಶಗಳಂತೆ ಕೌರವವೀರರು ತುತ್ತಾಗಿ ಸತ್ತರು.

ವಿಶೋಕನು ಭೀಮನನ್ನು ಕಂಡು 'ಆಯುಷ್ಮನ್ ! ಉಳಿದಿರುವ ಆಯುಧ ವಿವರವನ್ನು ಕೇಳು ! ಆರೆತ್ತುಗಳೆಳೆವ ಒಂದು ಬಂಡಿಯಲ್ಲಿ ಅರವತ್ತು ಸಾವಿರ ಮಾರ್ಗಣಗಳು, ಹತ್ತು ಸಾವಿರ ಭಲ್ಲಗಳು, ಎರಡು ಸಾವಿರ ನಾರಾಚಗಳು, ಮೂರು ಸಾವಿರ ಪ್ರದರಗಳು ಇರುತ್ತವೆ. ಅಂತಹ ಬಂಡಿಗಳು ಆರು ಇನ್ನೂ ಉಳಿದಿವೆ. ಅಸಹಾಯಶೂರನಾದ ನಿನಗೆ ಇವು ಮುಗಿದರೂ ಗದಾ ಖಡ್ಗಗಳಿವೆ. ಶತ್ರು ನಿರ್ಮೂಲನ ಸಮರ್ಥವಾದ ಬಾಹುದ್ವಯವಿದೆ. ನಿಶ್ಶಂಕನಾಗಿ ಮುಂದೆ ಸಾಗು' ಎಂದು ವಿಜ್ಞಾಪಿಸಿದನು. ಭೀಮಸೇನನು 'ಧರ್ಮರಾಜನ ಕುಶಲವನ್ನರಿತು ಬರಲೆಂದು ಹೋದ ಅರ್ಜುನನಿನ್ನೂ ಬಂದಿಲ್ಲ; ಏಕಿರಬಹುದು ವಿಶೋಕ ?' ಎಂದು ಕೇಳಿದನು. ಆ ವೇಳೆಗೆ ಗಾಂಡೀವ ಟಂಕಾರವು ದೇವದತ್ತ ಪಾಂಚಜನ್ಯಧ್ವಾನಗಳೊಡನೆ ಬೆರತು, ಅವರ ಕಿವಿಗೆ ಬಿತ್ತು. ವಿಶೋಕನು 'ಮಹಾನುಭಾವ ! ನಿನ್ನ ಸರ್ವ

ಕಾಮಿತಗಳೀಡೇರುವವು. ಧರ್ಮನು ಕುಶಲಿ ಎಂದಾಘೋಷವೇ ಸಾರುತ್ತಿದೆ. ಅಲ್ಲಿ ನೋಡು ! ಚಕ್ರಧರ ದೇವನು ರಶ್ಮಿಧರನಾಗಿ, ಕೌರವಸೇನಾ ಮಧ್ಯದಿ ರಥವನ್ನು ಹೊಗಿಸಿರುವನು. ನಾಲ್ಕುನೂರು ಮಹಾರಥಗಳಿಂದ ಕೂಡಿ ನಿನ್ನ ತಮ್ಮನು ನಮ್ಮ ರಥವನ್ನು ಸಮೀಪಿಸುತ್ತಿರುವನು' ಎಂದನು. ಪ್ರಿಯವಾರ್ತೆಯನ್ನರುಹಿದ ವಿಶೋಕನಿಗೆ ಬಹುಮಾನವಿತ್ತು ಭೀಮಸೇನನು ಹತ್ತಿರಕ್ಕೆ ಬಂದ ಗೋವಿಂದನಿಗೆ ಮನಸಾ ವಂದಿಸಿ, ಅರ್ಜುನನನ್ನಭಿನಂದಿಸಿದನು. ಧರ್ಮರಾಜನ ಕ್ಷೇಮವನ್ನರಿತು ಪಾರ್ಥಭೀಮಸೇನರು ವಾಯು-ಪರ್ಜನ್ಯರಂತೆ ವಿಜೃಂಭಿಸಿ, ಶರವರ್ಷದಲ್ಲಿ ಕುರುಸೈನಿಕರನ್ನು ತೃಣದಂತೆ ಕೊಚ್ಚಿಹಾಕಿದರು. ಭೀಮಸೇನನನ್ನು ಶರಜಾಲದಿ ಪೀಡಿಸಿದ ವೀರರು ಯಮಪೀಡೆಗೆ ಗುರಿಯಾದರು. ಅರ್ಜುನನನ್ನು ಕಾಂಡವೃಷ್ಟಿಯಿಂದ ಮುಚ್ಚಿದ ಯೋಧರು ವೀರಸ್ವರ್ಗವನ್ನು ಸೂರೆಗೊಂಡರು.

ಭೀಮಸೇನನು ತನ್ನನ್ನು ಮುತ್ತಿದ ಶತ್ರುಸೇನೆಯಿಂದ ಮಹಾಮೀನವು ಜಾಲದಿಂದಂತೆ ನುಸುಳಿ, ಅವರನ್ನೂ ಅವರ ಹತ್ತುಸಾವಿರ ಗಜಸೇನೆಯನ್ನೂ ಗದೆಯಿಂದ ಕೊಂದನು. ಐದುಸಾವಿರ ಕುದುರೆಗಳು, ನೂರಾರು ರಥಗಳು, ಎರಡುಲಕ್ಷ ಕಾಲ್ಬಲವೂ ಭೀಮಗದಾಘಾತದಿಂದ ನಾಶವಾಯಿತು. ಕೇಶಶೈವಾಲವು, ಮಾಂಸಕರ್ದಮವು, ಅಸ್ಥಿಶಂಖವು, ನರಮೀನವು, ಶೀರ್ಷೋಪಲವು ಆದ ರಕ್ತಮಹಾನದಿಯು ರಣರಂಗದಲ್ಲಿ ಹರಿಯಿತು.

ಆಗ ದುರ್ಯೋಧನಪ್ರೇರಿತನಾದ ಶಕುನಿಯು ಭೀಮನನ್ನು ವೇಲೆಯು ಸಮುದ್ರವನ್ನಂತೆ ತಡೆದು, ನಿಶಿತ ಶರಗಳಿಂದ ಪೀಡಿಸಿದನು. ಶಕುನಿಯ ಬಾಣಗಳಿಂದ ಭೀಮಸೇನನ ಎಡಪಕ್ಕದ ಕವಚವು ಸೀಳಲ್ಪಟ್ಟು ಬಿತ್ತು. ಭೀಮನು ಕ್ರುದ್ಧನಾಗಿ, ತೀವ್ರಬಾಣದಿಂದ ಹೊಡೆದನು. ಶಕುನಿಯು ಅದನ್ನು ಖಂಡಿಸಿದನು. ಭೀಮನು ಅವನ ಧನುವನ್ನು ಮುರಿದನು. ಶಕುನಿಯು ಮತ್ತೊಂದು ಧನುವನ್ನೆತ್ತಿ ಹದಿನಾರು ಭಲ್ಲಗಳಿಂದ ಭೀಮನನ್ನು ಪೀಡಿಸಿದನು. ಭೀಮಸೇನನು ಶಕ್ತಿಯನ್ನೆಸೆಯಲು ಅದನ್ನು ಖಂಡಿಸಿದನು. ಭೀಮನು ಸುಬಲಸುತನ ಸೂತತುರಗಗಳನ್ನು ಸಂಹರಿಸಿ, ಧನುವನ್ನು ಖಂಡಿಸಿ, ನಿಶಿತಬಾಣದಿಂದ ಹೊಡೆದನು. ಶಕುನಿಯು ಮೂರ್ಛಿತನಾಗಿ ಬೀಳಲು ನೋಡಿ ಭೀಮಸೇನನು ಸಹದೇವನ ಪ್ರತಿಜ್ಞೆಯನ್ನು ನೆನೆದು, ಅವನನ್ನು ಕೊಲ್ಲದೆ ಬಿಟ್ಟನು. ಆಗ ದುರ್ಯೋಧನನು ಮಾವನನ್ನು ರಥದಲ್ಲಿಟ್ಟುಕೊಂಡು, ದೂರ ಸರಿದನು. ಭೀಮವಿಕ್ರಮವನ್ನು ಕಂಡು, ಕುರುವೀರರು ರಣವಿಮುಖರಾಗಿ ಓಡಿಹೋದರು.

ರಾಜನ್ ! ಹದಿನೇಳನೆಯ ದಿನದ ಅಪರಾಹ್ಣ ಯುದ್ಧವನ್ನು ವರ್ಣಿಸುವೆನು ಕೇಳು ! ಕರ್ಣನ ಮಾತಿನಂತೆ ಶಲ್ಯನು ಪಾಂಚಾಲ ಸೃಂಜಯರ ಕಡೆಗೆ ಅವನ ರಥವನ್ನು ನಡೆಸಿದನು. ಆಕರ್ಣಾಂತವಾಗಿ ಸೆಳೆದು ಬಿಡಲ್ಪಡುವ ಕರ್ಣಬಾಣಗಳೊಂದೂ ವ್ಯರ್ಥವಾದುದಿಲ್ಲ. ಶಿಖಂಡಿ, ಪಾರ್ಷತ, ಸಾತ್ಯಕಿಯರು ತನ್ನನ್ನು ಮುತ್ತಲು,

ಕರ್ಣನು ಹೆದರದೆ, ಅವರ ಬಾಣಗಳಿಗೆ ಪ್ರತಿಬಾಣಗಳನ್ನಿತ್ತು, ದ್ರೌಪದೇಯರನ್ನು ವಿರಥರನ್ನಾಗಿಸಿ, ಸಾತ್ಯಕಿಯನ್ನು ವಿತುರಗನನ್ನಾಗಿಸಿ ಓಡಿಸಿದನು. ಕರ್ಣನು ತೂಣದಿಂದ ಬಾಣವನ್ನಾವಾಗ ಸೆಳೆಯುವನೋ, ಬಾಣವನ್ನು ಬಿಲ್ಲಿಗೇರಿಸುವುದಾಗಲೋ, ಬಿಡುವುದಾವಾಗಲೋ ಎಂಬುದೊಂದೂ ತಿಳಿಯಬಾರದಂತೆ ಇತ್ತು- ಸೂರ್ಯನು ಕಿರಣಗಳಿಂದ ಕತ್ತಲನ್ನಂತೆ - ಕರ್ಣನು ಶರಗಳಿಂದ ಶತ್ರುಶಿರಗಳನ್ನು ಕತ್ತರಿಸಿದನು. ಪಾಂಚಾಲರು ವೃಷನ ಪ್ರತಾಪಕ್ಕೆ ತಾಳಲಾರದೆ ಪಲಾಯನಗೈದರು. ಕರ್ಣಬಾಣಗಳಿಂದ ಆಕಾಶವು ಮೇಘಾವೃತವಾದಂತೆ ಅಂಧಕಾರಬಂಧುರವಾಯಿತು. ಪಾಂಚಾಲರ ಎರಡು ಸಾವಿರ ರಥಿಕರನ್ನು, ಅನೇಕ ಸಾಹಸ್ರ ಪದಾತಿಗಳನ್ನು ಸಂಹರಿಸಿದನು.

ಕರ್ಣನಿಗೆ ಹೆದರಿ ಓಡುವ ಪಾಂಚಾಲರನ್ನು ಕಂಡು, ಅರ್ಜುನನು ಅವನನ್ನು ತಡೆಯಲೆಣಿಸಿ, ಬಂದು ಶರಜಾಲದಲ್ಲಿ ಕರ್ಣರಥವನ್ನು ಮುಚ್ಚಿದನು. ಶಲ್ಯನು 'ನೀನೆಣಿಸಿದಂತೆ ಅರ್ಜುನ ಸಮಾಗಮವಾಯಿತಿನ್ನು, ಸ್ಥಿರನಾಗಿ ಹೋರಾಡು! ಕರ್ಣ! ಕೊಲ್ಲು ಪಾರ್ಥನನ್ನು ! ನಮಗೆ ಹಿತವನ್ನೂ ನಿನ್ನ ರಾಜನಿಗೆ ಜಯವನ್ನೂ ಗಳಿಸಿಕೊಡು ! ಅರ್ಜುನನನ್ನು ಗೆಲ್ಲುವ ವೀರರಿನ್ನಾರೂ ನಮ್ಮಲ್ಲಿಲ್ಲ. ಧರ್ಮರಾಜನಿಗೆ ನೀ ಮಾಡಿದ ಅವಮಾನದಿಂದ ಕುಪಿತನಾಗಿ ಬರುವ ಅರ್ಜುನನನ್ನು ಎದುರಿಸಿ, ಅವನನ್ನು ಜಯಿಸಿ, ಸಂಹರಿಸು ! ಕೃಷ್ಣ ಪಾರ್ಥರನ್ನು ಕ್ಷಣದಲ್ಲಿ ಗೆಲ್ಲುವೆನೆಂದೆ ! ಕೊಲ್ಲುವೆನೆಂದೆ ! ನಿನ್ನ ವಚನವನ್ನು ಸತ್ಯವಾಗಿಸು ! ವಿಕ್ರಮಿಸು ! ' ಎಂದನು. ಆ ಮಾತಿಗೆ ಮೆಚ್ಚಿ ಕರ್ಣನು 'ಶಲ್ಯ ! ಈಗ ಸರಿಯಾಗಿ ನಿಜಮಿತ್ರನಂತೆ ನುಡಿಯುತ್ತಿರುವೆ ! ಪ್ರೀತನಾದೆನು. ನೋಡುತ್ತಿರೆನ್ನ ಪರಾಕ್ರಮವನ್ನು ! ಭಯಪಡಬೇಡ ಧನಂಜಯನಿಗೆ ! ಇಂದು ಜಗವು ವಿಪಾರ್ಥವಾಗುವುದಿಲ್ಲದಿರೆ ವಿಕರ್ಣವಾಗುವುದು. ಇಂದು ಶ್ವೇತವಾಹನನನ್ನು ಕೊಂದು ನಾನು ರಾಜಋಣದಿಂದ ಮುಕ್ತನಾಗುವೆನು. ಶ್ರೀಭಾರ್ಗವನ ಅಸ್ತ್ರಗಳನ್ನು ಪಡೆದು ಬಂದ ನನ್ನ ರಣಪಾಂಡಿತ್ಯವು ದೇವ ಗಣ ಪ್ರಶಂಸೆಗೆ ಪಾತ್ರವಾಗುವುದು' ಎಂದನು. ಶಲ್ಯನು 'ಕರ್ಣ ! ನನಗೇಕೋ ನಿನ್ನ ವಿಜಯದಲ್ಲಿ ಸಂಶಯವಿದೆ. ಪಾರ್ಥನೇ ಅಜಯ್ಯನೆಂಬರು. ಇನ್ನು ಕೃಷ್ಣಸಹಿತನಾದ ಪಾರ್ಥನನ್ನು ಎದುರಿಸಿ ಕಾದುವ ಕೆಚ್ಚಾರಿಗಿದೆ ? ' ಎಂದನು. ಕರ್ಣನು 'ಶಲ್ಯ ! ಇರಲಿ ಅಜಯ್ಯನು, ಇರಲಿ ಕೃಷ್ಣ ಸಹಾಯನು ಆಗಿರಲಿ ಪಾರ್ಥನು. ನನಗಾ ಭಯವಿಲ್ಲ. ಅವನನ್ನು ನಾನಾದರೂ ಕೊಲ್ಲುವೆನು. ನನ್ನನ್ನವನಾದರೂ ಕೊಲ್ಲಲಿ ! ನಡೆ ಮುಂದೆ' ಎಂದನು.

ಶಲ್ಯನು ಭೀತನಾಗಿ ಇಂತೆಂದನು: 'ಕರ್ಣ ! ಅತಿ ಸಾಹಸಿಯಾಗಬೇಡ ! ಅಕ್ಷಯತೂಣಗಳು, ದಿವ್ಯರಥ, ಅವಧ್ಯಾಶ್ವಗಳು, ಅಚ್ಛೇದ್ಯಜಾಬಂಧ, ಅಭೇದ್ಯ ಧನುವು, ಅತಿಭಯಂಕರ ಕಪಿಧ್ವಜ, ಅಪ್ರತಿವಾರಣವಾದ ಪಾಶುಪತ, ಅನಂತವೀರ್ಯನಾದ ಸಾರಥಿ ಅವನ ಗುಣಗಳನ್ನು ವರ್ಣಿಸಿ ಮುಗಿಸಲು ಆರಿಗೂ ಅಳವಲ್ಲ. ಅವನ ವಿಕ್ರಮವು ಅವಕ್ರವು. ಅವನ ಸಂಕಲ್ಪವು ಅಮೋಘವು. ಇಂತಹ

ಕೃಷ್ಣನೇ ಸಾರಥಿ. ಕರ್ಣ! ಇಂತಹ ದಿವ್ಯವಸ್ತುಗಳಲ್ಲೊಂದು ನಿನ್ನಲ್ಲಿಲ್ಲ. ಅರ್ಜುನನಲ್ಲಿ ಎಲ್ಲವೂ ಇವೆ. ಇದ್ದ ಕವಚಕುಂಡಲಗಳನ್ನು ಕಳೆದುಕೊಂಡೆ ! ಇಂದ್ರಶಕ್ತಿಯನ್ನೂ ರಾಕ್ಷಸನಲ್ಲಿ ವಿನಿಯೋಗಿಸಿಬಿಟ್ಟೆ ! ಎಂತು ಪಾಂಡವನನ್ನು ಗೆಲ್ಲುವೆ ? ಎಂತು ವಿಜಯವನ್ನು ಸಾಧಿಸುವೆ ? ನನಗೆ ಕೃಷ್ಣಪಾರ್ಥರನ್ನೊಂದೇ ರಥದಲ್ಲಿ ಕಂಡು ಹೆದರಿಕೆಯಾಗುತ್ತಿದೆ.' ಕರ್ಣನು ಶಲ್ಯನ ಮಾತಿಗೆ ಭೀತನಾಗದೆ 'ನಡೆ ಮುಂದಕ್ಕೆ' ಎಂದನು.

ಸಂಕುಲ ಯುದ್ಧವು ಆರಂಭವಾಯಿತು. ಭೀಮಸೇನನೆಂಬ ಮದ್ದಾನೆಯು ಕುರುಸೇನಾಸರೋವರವನ್ನು ನಿಶ್ಶಂಕವಾಗಿ ಹೊಕ್ಕು, ಶತ್ರುಮುಖಕಮಲಗಳನ್ನು ಕಿತ್ತೊಗೆಯಿತು. ಅದನ್ನು ನೋಡಿ ಸಹಿಸದೆ, ಹಿಡಿಯಬೇಕೆಂದು ಬಂದ ಯೋಧ -ವ್ಯಾಧರನ್ನು ಅದು ತುಳಿದು ಪುಡಿ ಮಾಡಿತು. ರಣರಂಗವು ರಕ್ತಾಕ್ರಾಂತವಾಗಿ, ರಕ್ತ ಗಗನದಂತಿರಲು, ಅದರ ಮಧ್ಯದಲ್ಲಿ ಭೀಮಸೇನನು ಚಂದ್ರಮನಂತೆ ಕಂಗೊಳಿಸಿದನು. ಕಡಿದು ಬಿದ್ದ ಕೈದುಗಳು, ಚೆಲ್ಲಿ ಬಿದ್ದ ಮಣಿಭೂಷಣಗಳು ತಾರೆಗಳಂತಿದ್ದವು. ಶರಾಸಾರವು ನಿಬಿಡವಾಗಿ ವಿಸ್ತರಿಸಲು, ಪ್ರಭಾಕರನು ಕಾಣದಂತಾಗಿ, ಕತ್ತಲು ಕವಿದು ರಣರಂಗದಲ್ಲಿಯೂ ರಾತ್ರಿಯಾಯಿತು.

ಆಗ ಧನಂಜಯನು ಭೀಮನಿಗೆ ನೆರವಾಗಲು ನಿಶ್ಚಯಿಸಿ, ನಿಶಿತ ಶರಗಳಿಂದ ಶತ್ರುಗಳನ್ನು ನಿಗ್ರಹಿಸಿ, ರಣಭೂಮಿಯಲ್ಲಿ ವೈತರಣಿಯನ್ನು ಹರಿಸಿದನು. ಸತ್ತುಬಿದ್ದ ಆನೆಗಳನ್ನು ತಪ್ಪಿಸಿ ಮುಂದೆ ಸಾಗುವ ಅರ್ಜುನರಥವು ಮೇಘಮಂಡಲವನ್ನು ತೂರಿ ಬರುವ ಸೂರ್ಯರಥದಂತಿತ್ತು. ಕುರುಸೈನಿಕರು ಜೀವಿತಾಶೆಯಿಂದ ಧನಂಜಯನಿಗೆ ದೂರ ಸರಿದರು. ಶೂಲಭಿಂಡಿವಾಲತೋಮರಾದಿ ವಿವಿಧಾಯುಧಪಾಣಿಗಳಾಗಿ ಅರ್ಬುದಮ್ಲೇಂಛರು ಅರ್ಜುನನನ್ನು ಮುತ್ತಬರುವದನ್ನು ಕಂಡು, ಭೀಮಸೇನನು ಹತಾವಶೇಷರನ್ನು ಕೆಲರನ್ನು ಬಿಟ್ಟು, ತಮ್ಮನ ಸಹಾಯಕ್ಕೆಂದು ಧಾವಿಸಿ ಬಂದನು. ಭೀಮನು ಗದಾಪಾಣಿಯಾಗಿ ತುರಗ ಗಜ ಸೇನೆಗಳನ್ನು ನಾಶಪಡಿಸಿದನು. ಆತನ ಗದೆಗೆ ಸಾಕಷ್ಟು ರಕ್ತ ಮಾಂಸವಸಾಮೇದಸ್ಸುಗಳು ಹತ್ತಿ ತೃಪ್ತಿ ಆದಂತಿತ್ತು. ಕಾಲ ದಂಡವನ್ನು ಹಿಡಿದುಬಂದ ಯಮನಂತಿರುವ ಭೀಮನನ್ನು ಕಂಡು ಎದೆಯೊಡೆದು ಕುರುವೀರರು ಪಲಾಯನಗೈದರೂ, ಆತನ ಗದೆ ಅವರಿಗೆ ಬಡಿದು ಅವರನ್ನು ಯಮನ ಮನೆಗೆ ಓಡಿಸುತ್ತಿತ್ತು. ಭೀಮನನ್ನು ಬೀಳುತ್ತಿರುವ ಗಜಘಟಾಜಲದಿಂದ ತಿಳಿಯಬಹುದಿತ್ತು.

ಭೀಮಸೇನನು ಮತ್ತೆ ತನ್ನ ರಥವನ್ನೇರಿ, ಅರ್ಜುನ ಪೃಷ್ಠರಕ್ಷಕನಾಗಿ ತೆರಳಿದನು. ಅರ್ಜುನ ವಿಶಿಖವಹ್ನಿಗೆ ಸಿಕ್ಕ ಕುರುವೀರರು, ಕಾಳ್ಗಿಚ್ಚಿಗೆ ಸಿಕ್ಕ ಶಲಭಗಳಂತೆ ಬೆಂದು ಬೂದಿಯಾದರು. ಅವಿಷಹ್ಯಶರಸಂಪಾತ ಭಯಂಕರವಾದ ಅರ್ಜುನ ಗಾಂಡೀವವು ರಥನೇಮಿಧ್ವಾನದೊಂದಿಗೆ ಮೊರಹುತ್ತಿತ್ತು. ಇನ್ನಿಂದು ತಾವು ಉಳಿಯುವದಿಲ್ಲವೆಂದು ಕೌರವಯೋಧರು ನಿಶ್ಚಯಿಸಿ, ಪ್ರಾಣಪಣವನ್ನಿಟ್ಟು ಕಾಳಗಕ್ಕಿಳಿದರು. ಗಾಂಡೀವಧನ್ವನ ಪ್ರಚಂಡ ಪ್ರತಾಪಕ್ಕೆ ಹೆದರಿ, ಕೆಲವರು ಕರ್ಣನಿಗೆ ಶರಣಾದರು.

ಕರ್ಣನು ಹೆದರದೆ, ಅವರ ಬಾಣಗಳಿಗೆ ಪ್ರತಿಬಾಣಗಳನ್ನಿತ್ತು, ದ್ರೌಪದೇಯರನ್ನು ವಿರಥರನ್ನಾಗಿಸಿ, ಸಾತ್ಯಕಿಯನ್ನು ವಿತುರಗನನ್ನಾಗಿಸಿ ಓಡಿಸಿದನು. ಕರ್ಣನು ತೂಣದಿಂದ ಬಾಣವನ್ನಾವಾಗ ಸೆಳೆಯುವನೋ, ಬಾಣವನ್ನು ಬಿಲ್ಲಿಗೇರಿಸುವುದಾಗಲೋ, ಬಿಡುವುದಾವಾಗಲೋ ಎಂಬುದೊಂದೂ ತಿಳಿಯಬಾರದಂತೆ ಇತ್ತು- ಸೂರ್ಯನು ಕಿರಣಗಳಿಂದ ಕತ್ತಲನ್ನಂತೆ - ಕರ್ಣನು ಶರಗಳಿಂದ ಶತ್ರುಶಿರಗಳನ್ನು ಕತ್ತರಿಸಿದನು. ಪಾಂಚಾಲರು ವೃಷನ ಪ್ರತಾಪಕ್ಕೆ ತಾಳಲಾರದೆ ಪಲಾಯನಗೈದರು. ಕರ್ಣಬಾಣಗಳಿಂದ ಆಕಾಶವು ಮೇಘಾವೃತವಾದಂತೆ ಅಂಧಕಾರಬಂಧುರವಾಯಿತು. ಪಾಂಚಾಲರ ಎರಡು ಸಾವಿರ ರಥಿಕರನ್ನು ಅನೇಕ ಸಾಹಸ್ರ ಪದಾತಿಗಳನ್ನು ಸಂಹರಿಸಿದನು.

ಕರ್ಣನಿಗೆ ಹೆದರಿ ಓಡುವ ಪಾಂಚಾಲರನ್ನು ಕಂಡು, ಅರ್ಜುನನು ಅವನನ್ನು ತಡೆಯಲೆಣಿಸಿ, ಬಂದು ಶರಜಾಲದಲ್ಲಿ ಕರ್ಣರಥವನ್ನು ಮುಚ್ಚಿದನು. ಶಲ್ಯನು 'ನೀನೆಣಿಸಿದಂತೆ ಅರ್ಜುನ ಸಮಾಗಮವಾಯಿತಿನ್ನು, ಸ್ಥಿರನಾಗಿ ಹೋರಾಡು! ಕರ್ಣ! ಕೊಲ್ಲು ಪಾರ್ಥನನ್ನು ! ನಮಗೆ ಹಿತವನ್ನೂ ನಿನ್ನ ರಾಜನಿಗೆ ಜಯವನ್ನೂ ಗಳಿಸಿಕೊಡು ! ಅರ್ಜುನನನ್ನು ಗೆಲ್ಲುವ ವೀರರಿನ್ನಾರೂ ನಮ್ಮಲ್ಲಿಲ್ಲ. ಧರ್ಮರಾಜನಿಗೆ ನೀ ಮಾಡಿದ ಅವಮಾನದಿಂದ ಕುಪಿತನಾಗಿ ಬರುವ ಅರ್ಜುನನನ್ನು ಎದುರಿಸಿ, ಅವನನ್ನು ಜಯಿಸಿ, ಸಂಹರಿಸು ! ಕೃಷ್ಣ ಪಾರ್ಥರನ್ನು ಕ್ಷಣದಲ್ಲಿ ಗೆಲ್ಲುವೆನೆಂದೆ ! ಕೊಲ್ಲುವೆನೆಂದೆ ! ನಿನ್ನ ವಚನವನ್ನು ಸತ್ಯವಾಗಿಸು ! ವಿಕ್ರಮಿಸು ! ' ಎಂದನು. ಆ ಮಾತಿಗೆ ಮೆಚ್ಚಿ ಕರ್ಣನು ' ಶಲ್ಯ ! ಈಗ ಸರಿಯಾಗಿ ನಿಜಮಿತ್ರನಂತೆ ನುಡಿಯುತ್ತಿರುವೆ ! ಪ್ರೀತನಾದೆನು. ನೋಡುತ್ತಿರೆನ್ನ ಪರಾಕ್ರಮವನ್ನು ! ಭಯಪಡಬೇಡ ಧನಂಜಯನಿಗೆ ! ಇಂದು ಜಗವು ವಿಪಾರ್ಥವಾಗುವುದಿಲ್ಲದಿರೆ ವಿಕರ್ಣವಾಗುವುದು. ಇಂದು ಶ್ವೇತವಾಹನನನ್ನು ಕೊಂದು ನಾನು ರಾಜಋಣದಿಂದ ಮುಕ್ತನಾಗುವೆನು. ಶ್ರೀಭಾರ್ಗವನ ಅಸ್ತ್ರಗಳನ್ನು ಪಡೆದು ಬಂದ ನನ್ನ ರಣಪಾಂಡಿತ್ಯವು ದೇವ ಗಣ ಪ್ರಶಂಸೆಗೆ ಪಾತ್ರವಾಗುವುದು ' ಎಂದನು. ಶಲ್ಯನು 'ಕರ್ಣ ! ನನಗೇಕೋ ನಿನ್ನ ವಿಜಯದಲ್ಲಿ ಸಂಶಯವಿದೆ. ಪಾರ್ಥನೇ ಅಜಯ್ಯನೆಂಬರು. ಇನ್ನು ಕೃಷ್ಣಸಹಿತನಾದ ಪಾರ್ಥನನ್ನು ಎದುರಿಸಿ ಕಾದುವ ಕೆಚ್ಚಾರಿಗಿದೆ ? ' ಎಂದನು. ಕರ್ಣನು 'ಶಲ್ಯ ! ಇರಲಿ ಅಜಯ್ಯನು, ಇರಲಿ ಕೃಷ್ಣ ಸಹಾಯನು ಆಗಿರಲಿ ಪಾರ್ಥನು. ನನಗಾ ಭಯವಿಲ್ಲ. ಅವನನ್ನು ನಾನಾದರೂ ಕೊಲ್ಲುವೆನು. ನನ್ನನ್ನವನಾದರೂ ಕೊಲ್ಲಲಿ ! ನಡೆ ಮುಂದೆ' ಎಂದನು.

ಶಲ್ಯನು ಭೀತನಾಗಿ ಇಂತೆಂದನು: 'ಕರ್ಣ ! ಅತಿ ಸಾಹಸಿಯಾಗಬೇಡ ! ಅಕ್ಷಯತೂಣಗಳು, ದಿವ್ಯರಥ, ಅವಧ್ಯಾಶ್ವಗಳು, ಅಚ್ಛೇದ್ಯಜಾಬಂಧ, ಅಭೇದ್ಯ ಧನುವು, ಅತಿಭಯಂಕರ ಕಪಿಧ್ವಜ, ಅಪ್ರತಿವಾರಣವಾದ ಪಾಶುಪತ, ಅನಂತವೀರ್ಯನಾದ ಸಾರಥಿ ಅವನ ಗುಣಗಳನ್ನು ವರ್ಣಿಸಿ ಮುಗಿಸಲು ಆರಿಗೂ ಅಳವಲ್ಲ. ಅವನ ವಿಕ್ರಮವು ಅವಕ್ರವು. ಅವನ ಸಂಕಲ್ಪವು ಅಮೋಘವು. ಇಂತಹ

ಕೃಷ್ಣನೇ ಸಾರಥಿ. ಕರ್ಣ! ಇಂತಹ ದಿವ್ಯವಸ್ತುಗಳಲ್ಲೊಂದು ನಿನ್ನಲ್ಲಿಲ್ಲ. ಅರ್ಜುನನಲ್ಲಿ ಎಲ್ಲವೂ ಇವೆ. ಇದ್ದ ಕವಚಕುಂಡಲಗಳನ್ನು ಕಳೆದುಕೊಂಡೆ ! ಇಂದ್ರಶಕ್ತಿಯನ್ನೂ ರಾಕ್ಷಸನಲ್ಲಿ ವಿನಿಯೋಗಿಸಿಬಿಟ್ಟೆ ! ಎಂತು ಪಾಂಡವನನ್ನು ಗೆಲ್ಲುವೆ ? ಎಂತು ವಿಜಯವನ್ನು ಸಾಧಿಸುವೆ ? ನನಗೆ ಕೃಷ್ಣಪಾರ್ಥರನ್ನೊಂದೇ ರಥದಲ್ಲಿ ಕಂಡು ಹೆದರಿಕೆಯಾಗುತ್ತಿದೆ.' ಕರ್ಣನು ಶಲ್ಯನ ಮಾತಿಗೆ ಭೀತನಾಗದೆ 'ನಡೆ ಮುಂದಕ್ಕೆ' ಎಂದನು.

ಸಂಕುಲ ಯುದ್ಧವು ಆರಂಭವಾಯಿತು. ಭೀಮಸೇನನೆಂಬ ಮದ್ದಾನೆಯು ಕುರುಸೇನಾಸರೋವರವನ್ನು ನಿಶ್ಶಂಕವಾಗಿ ಹೊಕ್ಕು, ಶತ್ರುಮುಖಕಮಲಗಳನ್ನು ಕಿತ್ತೊಗೆಯಿತು. ಅದನ್ನು ನೋಡಿ ಸಹಿಸದೆ, ಹಿಡಿಯಬೇಕೆಂದು ಬಂದ ಯೋಧ -ವ್ಯಾಧರನ್ನು ಅದು ತುಳಿದು ಪುಡಿ ಮಾಡಿತು. ರಣರಂಗವು ರಕ್ತಾಕ್ರಾಂತವಾಗಿ, ರಕ್ತ ಗಗನದಂತಿರಲು, ಅದರ ಮಧ್ಯದಲ್ಲಿ ಭೀಮಸೇನನು ಚಂದ್ರಮನಂತೆ ಕಂಗೊಳಿಸಿದನು. ಕಡಿದು ಬಿದ್ದ ಕೈದುಗಳು, ಚೆಲ್ಲಿ ಬಿದ್ದ ಮಣಿಭೂಷಣಗಳು ತಾರೆಗಳಂತಿದ್ದವು. ಶರಾಸಾರವು ನಿಬಿಡವಾಗಿ ವಿಸ್ತರಿಸಲು, ಪ್ರಭಾಕರನು ಕಾಣದಂತಾಗಿ, ಕತ್ತಲು ಕವಿದು ರಣರಂಗದಲ್ಲಿಯೂ ರಾತ್ರಿಯಾಯಿತು.

ಆಗ ಧನಂಜಯನು ಭೀಮನಿಗೆ ನೆರವಾಗಲು ನಿಶ್ಚಯಿಸಿ, ನಿಶಿತ ಶರಗಳಿಂದ ಶತ್ರುಗಳನ್ನು ನಿಗ್ರಹಿಸಿ, ರಣಭೂಮಿಯಲ್ಲಿ ವೈತರಣಿಯನ್ನು ಹರಿಸಿದನು. ಸತ್ತುಬಿದ್ದ ಆನೆಗಳನ್ನು ತಪ್ಪಿಸಿ ಮುಂದೆ ಸಾಗುವ ಅರ್ಜುನರಥವು ಮೇಘಮಂಡಲವನ್ನು ತೂರಿ ಬರುವ ಸೂರ್ಯರಥದಂತಿತ್ತು. ಕುರುಸೈನಿಕರು ಜೀವಿತಾಶೆಯಿಂದ ಧನಂಜಯನಿಗೆ ದೂರ ಸರಿದರು. ಶೂಲಭಿಂಡಿವಾಲತೋಮರಾದಿ ವಿವಿಧಾಯುಧಪಾಣಿಗಳಾಗಿ ಅರ್ಬುದರ್ಮ್ಲೇಂಛರು ಅರ್ಜುನನನ್ನು ಮುತ್ತಬರುವದನ್ನು ಕಂಡು, ಭೀಮಸೇನನು ಹತಾವಶೇಷರನ್ನು ಕೆಲರನ್ನು ಬಿಟ್ಟು ತಮ್ಮನ ಸಹಾಯಕ್ಕೆಂದು ಧಾವಿಸಿ ಬಂದನು. ಭೀಮನು ಗದಾಪಾಣಿಯಾಗಿ ತುರಗ ಗಜ ಸೇನೆಗಳನ್ನು ನಾಶಪಡಿಸಿದನು. ಆತನ ಗದೆಗೆ ಸಾಕಷ್ಟು ರಕ್ತ ಮಾಂಸವಸಾಮೇದಸ್ಸುಗಳು ಹತ್ತಿ ತೃಪ್ತಿ ಆದಂತಿತ್ತು. ಕಾಲ ದಂಡವನ್ನು ಹಿಡಿದುಬಂದ ಯಮನಂತಿರುವ ಭೀಮನನ್ನು ಕಂಡು ಎದೆಯೊಡೆದು ಕುರುವೀರರು ಪಲಾಯನಗೈದರೂ, ಆತನ ಗದೆ ಅವರಿಗೆ ಬಡಿದು ಅವರನ್ನು ಯಮನ ಮನೆಗೆ ಓಡಿಸುತ್ತಿತ್ತು. ಭೀಮನನ್ನು ಬೀಳುತ್ತಿರುವ ಗಜಘಟಾಜಲದಿಂದ ತಿಳಿಯಬಹುದಿತ್ತು.

ಭೀಮಸೇನನು ಮತ್ತೆ ತನ್ನ ರಥವನ್ನೇರಿ, ಅರ್ಜುನ ಪೃಷ್ಠರಕ್ಷಕನಾಗಿ ತೆರಳಿದನು. ಅರ್ಜುನ ವಿಶಿಖವಹ್ನಿಗೆ ಸಿಕ್ಕ ಕುರುವೀರರು, ಕಾಳ್ಗಿಚ್ಚಿಗೆ ಸಿಕ್ಕ ಶಲಭಗಳಂತೆ ಬೆಂದು ಬೂದಿಯಾದರು. ಅವಿಷಹ್ಯಶರಸಂಪಾತ ಭಯಂಕರವಾದ ಅರ್ಜುನ ಗಾಂಡೀವವು ರಥನೇಮೀಧ್ವಾನದೊಂದಿಗೆ ಮೊರಹುತ್ತಿತ್ತು. ಇನ್ನಿಂದು ತಾವು ಉಳಿಯುವದಿಲ್ಲವೆಂದು ಕೌರವಯೋಧರು ನಿಶ್ಚಯಿಸಿ, ಪ್ರಾಣಪಣವನ್ನಿಟ್ಟು ಕಾಳಗಕ್ಕಿಳಿದರು. ಗಾಂಡೀವಧನ್ವನ ಪ್ರಚಂಡ ಪ್ರತಾಪಕ್ಕೆ ಹೆದರಿ, ಕೆಲವರು ಕರ್ಣನಿಗೆ ಶರಣಾದರು.

ಕರ್ಣನು ಹೆದರದೆ ಪಾಂಡವಸೇನೆಯನ್ನು ನಾಶಪಡಿಸಿದನು. ಜನಮೇಜಯನೆಂಬ ಪಾಂಚಾಲರಾಜನ ಸೂತನನ್ನು ಕೆಡಹಿ, ಶತಾನೀಕ ಸುತಸೋಮರನ್ನು ಧನುಸ್ಸುಗಳನ್ನು ಮುರಿದು, ಭಲ್ಲಗಳಿಂದ ನೋಯಿಸಿದನು. ಧೃಷ್ಟದ್ಯುಮ್ನನನ್ನು ಆರು ಬಾಣಗಳಿಂದ ಪೀಡಿಸಿ, ಅವನ ಕುದುರೆಗಳನ್ನು ಕೊಂದನು. ಸಾತ್ಯಕಿಯನ್ನೂ ವಿರಥನನ್ನಾಗಿಸಿ, ಕರ್ಣನು ವಿಶೋಕನೆಂಬ ಕೇಕಯ ರಾಜಪುತ್ರನನ್ನು ಸಂಹರಿಸಿದನು. ಕೇಕಯ ಸೇನಾನಿಯು ಕುಪಿತನಾಗಿ, ಕರ್ಣಪುತ್ರನಾದ ಪ್ರಸೇನನನ್ನು ವಾರಿಸಿ, ಕರ್ಣನನ್ನು ದಶಬಾಣಗಳಿಂದ ಪೀಡಿಸಿದನು. ಕರ್ಣನು ಮೂರು ಬಾಣಗಳಿಂದ ಅವನ ಕೈಗಳನ್ನೂ ತಲೆಯನ್ನೂ ಕೆಡಹಿದನು. ಪ್ರಸೇನನು ಸಾತ್ಯಕಿಯನ್ನು ವಿರಥನನ್ನಾಗಿಸಿ, ಅವನು ಕುಪಿತನಾಗಿ ಒಗೆದ ಶಕ್ತಿಗೆ ತುತ್ತಾಗಿ ಸತ್ತನು. ಕರ್ಣನು ಕ್ರುದ್ಧನಾಗಿ ಶಿನಿಪ್ರವೀರನನ್ನು ಕೊಲ್ಲಬೇಕೆಂದು, ನಿಶಿತಬಾಣವನ್ನು ಬಿಟ್ಟನು. ಅದನ್ನು ಶಿಖಂಡಿಯು ಖಂಡಿಸಿ, ವ್ಯರ್ಥಗೊಳಿಸಿದನು. ಕರ್ಣನು ವಿಕ್ರಮಿಸಿ ಶಿಖಂಡಿಯ ಸೂತಾಶ್ವಜಾತವನ್ನು ಸಂಹರಿಸಿ, ಧ್ವಜವನ್ನು ಕೆಡಹಿ, ಪಾರ್ಷತಪುತ್ರನನ್ನು ಸಂಹರಿಸಿದನು.

ಇಂತು ವಿಜೃಂಭಿಸಿದ ಕರ್ಣನನ್ನು ತಡೆದು ಕಿರೀಟಿಯು ಬಾಣಕೋಟಿಯಲ್ಲವನ ರಥವನ್ನು ಮುಳುಗಿಸಿದನು. ಆಗ ರೌದ್ರಮುಹೂರ್ತವು ಉದಿತವಾಯಿತು. ಭೀಮಸೇನಾರ್ಜುನರು ವಿಕ್ರಮಿಸಿ, ಕುರುಸೈನಿಕರನ್ನು ನಾಶಪಡಿಸುತ್ತಿದ್ದರು. ಕರ್ಣನೂ ಕಡಿಮೆಯೆನಿಸದೆ ಇಪ್ಪತ್ತೈದು ಪಾಂಚಾಲ ವೀರರನ್ನು ಸಂಹರಿಸಿದನು. ಉತ್ತಮೌಜ ಯುಧಾಮನ್ಯು ಶಿಖಂಡಿ ಮುಂತಾದವರು ಎದುರಿಸಿದಂತೆ, ಅವರ ಧ್ವಜಗಳನ್ನು ಕೆಡಹಿ, ಸೂತರನ್ನು ಕೊಂದು, ತುರಗಗಳನ್ನು ಸಂಹರಿಸಿ, ಧನುಸ್ಸುಗಳನ್ನು ಖಂಡಿಸಿ, ಅವರನ್ನೂ ಐದೈದು ಶರಗಳಿಂದ ಪೀಡಿಸಿದನು. ಜ್ಯಾಲತೆಯನ್ನಾಕರ್ಣಾಂತವಾಗಿ ಸೆಳೆದು, ಟಂಕಾರದಿಂದ ಬಿಡುವ ಕರ್ಣನ ಬಾಣಶಬ್ದವೂ ಘೋರವಾಗಿ, ಸಾದ್ರಿದ್ರುಮವಾದ ಭೂತಲವು ಸೀಳಿಹೋಗುವದೆಂಬಂತಿತ್ತು. ಕರ್ಣನು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜನನ್ನು ಆರರಿಂದಲೂ, ಯುಧಾಮನ್ಯುವಿನನ್ನು ಮೂರರಿಂದಲೂ, ಧೃಷ್ಟದ್ಯುಮ್ನ ಸೋಮಕರನ್ನು ಮೂರು ಮೂರು ನಾರಾಚಗಳಿಂದಲೂ ಪೀಡಿಸಿದನು. ಪಂಚಪಾಂಚಾಲರು ಕರ್ಣನಿಗೆ ಸೋತು ನಿರ್ವಿಣ್ಣರಾಗಿರಲು, ಓಡಿಬಂದು ದ್ರೌಪದೇಯರು ತಮ್ಮ ಮಾತುಲರನ್ನು ತಮ್ಮ ರಥಗಳಲ್ಲಿರಿಸಿಕೊಂಡು ಕಾಪಾಡಿದರು.

ಸಾತ್ಯಕಿಯು ಕರ್ಣಕೃಪಕೃತವರ್ಮಸುಯೋಧನರಿಂದ ಕಾದಿ, ಅವರನ್ನೆಲ್ಲ ತನ್ನ ನಿಶಿತ ಬಾಣಗಳಿಂದ ಪೀಡಿಸಿದನು. ಮರುದ್ಗಣವು ಶಕ್ರನನ್ನಂತೆ, ಪಾಂಚಾಲ ವೀರರು ಶಿನಿವೀರನನ್ನು ಕರ್ಣಕೃಪಾದಿಗಳಿಂದ ಕಾಪಾಡಿದರು. ಒಂದೆಡೆ ನಿನ್ನ ಮಗನಾದ ದುಶ್ಶಾಸನನು ಭೀಮನನ್ನೆದುರಿಸಿ, ಶರವರ್ಷದಲ್ಲಿ ಮುಳುಗಿಸಿದನು. ಮಹಾರುರುವನ್ನು ಸಿಂಹದಂತೆ ಭೀಮಸೇನನು ಮಹಾವೇಗದಿಂದ ಹಾರಿ, ಭಯಂಕರ ಯುದ್ಧವನ್ನು ಮಾಡಿದನು. ಅವರ ಬಾಣಯುದ್ಧವು ಅತಿ ದಾರುಣವಾಯಿತು. ಶಂಬರ ಶಕ್ರರಂತೆ

ದುಶ್ಶಾಸನ ವೃಕೋದರರು ಕಡಿದಾಡಿ ಪರಸ್ಪರ ಬಾಣಗಳಿಂದ ತಾಡಿತರಾಗಿ, ವಾಸಿತ ಕರಿಣಿಗಳಾಗಿ ಕಡಿದಾಡುವ ವನಗಜಗಳಂತೆ ಕಂಡರು. ವೃಕೋದರನು ದುಶ್ಶಾಸನನ ಧನುವನ್ನು ಮುರಿದು, ಧ್ವಜವನ್ನು ಕೆಡಹಿದನು. ಮತ್ತು ಒಂದು ಭಲ್ಲದಿಂದ ಹಣೆಗೆ ಹೊಡೆದು, ಮತ್ತೊಂದರಿಂದ ಅವನ ಸಾರಥಿಯನ್ನು ಕೊಂದನು. ದುಶ್ಶಾಸನನು ಮತ್ತೊಂದು ಧನುವೆತ್ತಿ ಹನ್ನೆರಡು ಬಾಣಗಳಿಂದ ಭೀಮನನ್ನು ತಾಡಿಸಿದನು. ತಾನೇ ತುರಗಗಳನ್ನು ನಡೆಸುತ್ತಾ ಸಾರಥಿಯೂ ಆಗಿ ಹೋರಾಡುವ ದುಃಶಾಸನನು ವಜ್ರಕಠಿನವು, ಮಣಿಚಿತ್ರಿತವು ಆಗಿದ್ದ ಮಹಾಶರದಿಂದ ಭೀಮನನ್ನು ಹೊಡೆದನು. ಆ ಶರಾಘಾತದಿಂದ ಕಂಪಿತನಾದಂತೆ ತೋರಿದ ಭೀಮನು ಒಂದು ಸಲ ಗುಡುಗಿ, ಹತ್ತು ಶರಗಳಿಂದ ನಿನ್ನ ಕುಮಾರನನ್ನು ಪೀಡಿಸಿದನು. ಭೀಮಸೇನನ ಶಕ್ತಿಯನ್ನು ಖಂಡಿಸಿ, ಮತ್ತೊಂದು ಶರದಿಂದ ದುಶ್ಶಾಸನನು ಭೀಮನನ್ನು ಎದೆಗೆ ಹೊಡೆದು ಆರ್ಭಟಿಸಿದನು. ಭೀಮಸೇನನ ಕ್ರೋಧಾಬ್ಧಿಯು ಉಕ್ಕೇರಿತು. ಆತನ ಕಣ್ಣುಗಳು ಕಿಡಿ ಕಾರಿದವು. 'ಭಲೆ ! ವೀರನಿರುವೆ ! ಈ ನನ್ನ ಗದೆಯನ್ನು ತಡೆದುಕೋ !' ಎಂದು ಭೀಮನು ಗದೆ ಪಿಡಿದು ಬರುತ್ತಾ 'ದುರಾತ್ಮಾ! ರಣಮಧ್ಯದಲ್ಲಿ ಇಂದು ನಿನ್ನ ರಕ್ತವನ್ನು ಕುಡಿವೆನು. ನಿನ್ನ ಸಹಾಯಕರನ್ನು ಕರೆ !' ಎಂದು ಗರ್ಜಿಸಿದನು.

ದುಶ್ಶಾಸನನು ಶಕ್ತಿಯನ್ನೆಸೆದನು. ಭೀಮನ ಗದೆಯು ಆ ಶಕ್ತಿಯನ್ನು ಪುಡಿ ಮಾಡಿ, ದುಶ್ಶಾಸನನ ತಲೆಗೆ ಬಡಿಯಿತು. ಮದಜಲವನ್ನು ಕಾರುವ ಭದ್ರಗಜದಂತೆ ದುಶ್ಶಾಸನನು ರಕ್ತಸಿಕ್ತಮುಖನಾದನು. ಅವನೆತ್ತಿ ಒಗೆದ ಗದೆಯನ್ನು ತುಂಡರಿಸಿ, ಭೀಮಸೇನನು ಗದೆಯನ್ನೊಗೆಯಲು, ಅದರ ಆಘಾತಕ್ಕೆ, ದುಶ್ಶಾಸನನ ತುರಗ ಸೂತರು ಹೇಳಹೆಸರಿಲ್ಲದೆ ರಥವೂ ಚೂರ್ಣವಾಯಿತು. ಭೀಮನು ಗದೆಯನ್ನು ಸ್ವೀಕರಿಸಿ, ಮೇಲೇರಿ ಬರುವದನ್ನು ಕಂಡು, ದುಶ್ಶಾಸನನು ಓಡತೊಡಗಿದನು. ಹತ್ತು ಧನುಗಳ ಅಂತರದಲ್ಲಿ ಭೀಮಸೇನನು ಅವನನ್ನು ಹಿಂದಟ್ಟಿ ಹಿಡಿದನು. ದುಃಶಾಸನನ ಕವಚವು ಭೀಮಶರಗಳಿಂದ ನಿರ್ಭಿನ್ನವಾಗಿತ್ತು. ಭೀಮನ ಕೈಲಿ ಸಿಕ್ಕ ಕುರುರಾಜ ಸೋದರರನ್ನು ಕಂಡು, ಕುರುವೀರರು ಭೀತರಾಗಿ ಆರ್ತನಾದಗಳನ್ನೂ, ಪಾಂಚಾಲ ಪಾಂಡವ ವೀರರು ಹರ್ಷಧ್ವಾನಗಳನ್ನೂ ಮಾಡಿದರು.

ದುಃಶಾಸನನು ಹುಲಿಯ ಕೈಲಿ ಸಿಕ್ಕ ಹುಲ್ಲೆಯಂತೆ ಹೊಯ್ದಾಡಿದನು. ಅವನ ವಸ್ತ್ರಭೂಷಣಗಳು ಅಸ್ತವ್ಯಸ್ತವೂ , ರಕ್ತಸಿಕ್ತವೂ ಆಗಿದ್ದವು. ಅವನು ವೇದನಾತುರನಾಗಿ ಬಾಯ್ಬಾಯಿ ಬಿಡುತ್ತಿದ್ದನು. ದುಃಶಾಸನನನ್ನು ಪಿಡಿದು ಕೆಡಹಿ, ಒದ್ದಾಡುವ ಜಿಂಕೆಯ ಮೇಲೆ ಕೂತ ಸಿಂಹದಂತೆ, ಭೀಮಸೇನನು ಅವನ ಎದೆಯ ಮೇಲೆ ಕಾಲಿಟ್ಟು ಸಿಂಹನಾದವನ್ನು ಮಾಡಿದನು. ಅದನ್ನು ಕೇಳಿ, ಕುರುಮಹಾರಥರು ಮೂರ್ಛಾಕುಲರಾದರು. ಪಾಂಡವವೀರರೂ ಕೂಡ ದಿಕ್ಕು ತೋಚದಂತಾಗಿ, ನಿಶ್ಚೇಷ್ಟರಾಗಿ ನಿಂತರು.

ರಾಜನ್ ! ಭೀಮಸೇನನು ನಿನ್ನ ಸುತರು ತಮಗೆ ಬಗೆದ ದ್ರೋಹಗಳನ್ನೆಲ್ಲ

ಕರ್ಣನು ಹೆದರದೆ ಪಾಂಡವಸೇನೆಯನ್ನು ನಾಶಪಡಿಸಿದನು. ಜನಮೇಜಯನೆಂಬ ಪಾಂಚಾಲರಾಜನ ಸೂತನನ್ನು ಕೆಡಹಿ, ಶತಾನೀಕ ಸುತಸೋಮರನ್ನು ಧನುಸ್ಸುಗಳನ್ನು ಮುರಿದು, ಭಲ್ಲಗಳಿಂದ ನೋಯಿಸಿದನು. ಧೃಷ್ಟದ್ಯುಮ್ನನನ್ನು ಆರು ಬಾಣಗಳಿಂದ ಪೀಡಿಸಿ, ಅವನ ಕುದುರೆಗಳನ್ನು ಕೊಂದನು. ಸಾತ್ಯಕಿಯನ್ನೂ ವಿರಥನನ್ನಾಗಿಸಿ, ಕರ್ಣನು ವಿಶೋಕನೆಂಬ ಕೇಕಯ ರಾಜಪುತ್ರನನ್ನು ಸಂಹರಿಸಿದನು. ಕೇಕಯ ಸೇನಾನಿಯು ಕುಪಿತನಾಗಿ, ಕರ್ಣಪುತ್ರನಾದ ಪ್ರಸೇನನನ್ನು ವಾರಿಸಿ, ಕರ್ಣನನ್ನು ದಶಬಾಣಗಳಿಂದ ಪೀಡಿಸಿದನು. ಕರ್ಣನು ಮೂರು ಬಾಣಗಳಿಂದ ಅವನ ಕೈಗಳನ್ನೂ ತಲೆಯನ್ನೂ ಕೆಡಹಿದನು. ಪ್ರಸೇನನು ಸಾತ್ಯಕಿಯನ್ನು ವಿರಥನನ್ನಾಗಿಸಿ, ಅವನು ಕುಪಿತನಾಗಿ ಒಗೆದ ಶಕ್ತಿಗೆ ತುತ್ತಾಗಿ ಸತ್ತನು. ಕರ್ಣನು ಕ್ರುದ್ಧನಾಗಿ ಶಿನಿಪ್ರವೀರನನ್ನು ಕೊಲ್ಲಬೇಕೆಂದು, ನಿಶಿತಬಾಣವನ್ನು ಬಿಟ್ಟನು. ಅದನ್ನು ಶಿಖಂಡಿಯು ಖಂಡಿಸಿ, ವ್ಯರ್ಥಗೊಳಿಸಿದನು. ಕರ್ಣನು ವಿಕ್ರಮಿಸಿ ಶಿಖಂಡಿಯ ಸೂತಾಶ್ವಜಾತವನ್ನು ಸಂಹರಿಸಿ, ಧ್ವಜವನ್ನು ಕೆಡಹಿ, ಪಾರ್ಷತಪುತ್ರನನ್ನು ಸಂಹರಿಸಿದನು.

ಇಂತು ವಿಜೃಂಭಿಸಿದ ಕರ್ಣನನ್ನು ತಡೆದು ಕಿರೀಟಿಯು ಬಾಣಕೋಟಿಯಲ್ಲವನ ರಥವನ್ನು ಮುಳುಗಿಸಿದನು. ಆಗ ರೌದ್ರಮುಹೂರ್ತವು ಉದಿತವಾಯಿತು. ಭೀಮಸೇನಾರ್ಜುನರು ವಿಕ್ರಮಿಸಿ, ಕುರುಸೈನಿಕರನ್ನು ನಾಶಪಡಿಸುತ್ತಿದ್ದರು. ಕರ್ಣನೂ ಕಡಿಮೆಯೆನಿಸದೆ ಇಪ್ಪತ್ತೈದು ಪಾಂಚಾಲ ವೀರರನ್ನು ಸಂಹರಿಸಿದನು. ಉತ್ತಮೌಜ ಯುಧಾಮನ್ಯು ಶಿಖಂಡಿ ಮುಂತಾದವರು ಎದುರಿಸಿದಂತೆ, ಅವರ ಧ್ವಜಗಳನ್ನು ಕೆಡಹಿ, ಸೂತರನ್ನು ಕೊಂದು, ತುರಗಗಳನ್ನು ಸಂಹರಿಸಿ, ಧನುಸ್ಸುಗಳನ್ನು ಖಂಡಿಸಿ, ಅವರನ್ನೂ ಐದೈದು ಶರಗಳಿಂದ ಪೀಡಿಸಿದನು. ಜ್ಯಾಲತೆಯನ್ನಾಕರ್ಣಾಂತವಾಗಿ ಸೆಳೆದು, ಟಂಕಾರದಿಂದ ಬಿಡುವ ಕರ್ಣನ ಬಾಣಶಬ್ದವೂ ಘೋರವಾಗಿ, ಸಾದ್ರಿದ್ರುಮವಾದ ಭೂತಲವು ಸೀಳಿಹೋಗುವದೆಂಬಂತಿತ್ತು. ಕರ್ಣನು ಶಿಖಂಡಿಯನ್ನು ಹನ್ನೆರಡು ಬಾಣಗಳಿಂದಲೂ, ಉತ್ತಮೌಜನನ್ನು ಆರರಿಂದಲೂ, ಯುಧಾಮನ್ಯುವಿನನ್ನು ಮೂರರಿಂದಲೂ, ಧೃಷ್ಟದ್ಯುಮ್ನ ಸೋಮಕರನ್ನು ಮೂರು ಮೂರು ನಾರಾಚಗಳಿಂದಲೂ ಪೀಡಿಸಿದನು. ಪಂಚಪಾಂಚಾಲರು ಕರ್ಣನಿಗೆ ಸೋತು ನಿರ್ವಿಣ್ಣರಾಗಿರಲು, ಓಡಿಬಂದು ದ್ರೌಪದೇಯರು ತಮ್ಮ ಮಾತುಲರನ್ನು ತಮ್ಮ ರಥಗಳಲ್ಲಿರಿಸಿಕೊಂಡು ಕಾಪಾಡಿದರು.

ಸಾತ್ಯಕಿಯು ಕರ್ಣಕೃಪಕೃತವರ್ಮಸುಯೋಧನರಿಂದ ಕಾದಿ, ಅವರನ್ನೆಲ್ಲ ತನ್ನ ನಿಶಿತ ಬಾಣಗಳಿಂದ ಪೀಡಿಸಿದನು. ಮರುದ್ಗಣವು ಶಕ್ರನನ್ನಂತೆ, ಪಾಂಚಾಲ ವೀರರು ಶಿನಿವೀರನನ್ನು ಕರ್ಣಕೃಪಾದಿಗಳಿಂದ ಕಾಪಾಡಿದರು. ಒಂದೆಡೆ ನಿನ್ನ ಮಗನಾದ ದುಶ್ಶಾಸನನು ಭೀಮನನ್ನೆದುರಿಸಿ, ಶರವರ್ಷದಲ್ಲಿ ಮುಳುಗಿಸಿದನು. ಮಹಾರುರುವನ್ನು ಸಿಂಹದಂತೆ ಭೀಮಸೇನನು ಮಹಾವೇಗದಿಂದ ಹಾರಿ, ಭಯಂಕರ ಯುದ್ಧವನ್ನು ಮಾಡಿದನು. ಅವರ ಬಾಣಯುದ್ಧವು ಅತಿ ದಾರುಣವಾಯಿತು. ಶಂಬರ ಶಕ್ರರಂತೆ

ದುಶ್ಶಾಸನ ವೃಕೋದರರು ಕಡಿದಾಡಿ ಪರಸ್ಪರ ಬಾಣಗಳಿಂದ ತಾಡಿತರಾಗಿ, ವಾಸಿತ ಕರಿಣಿಗಳಾಗಿ ಕಡಿದಾಡುವ ವನಗಜಗಳಂತೆ ಕಂಡರು. ವೃಕೋದರನು ದುಶ್ಶಾಸನನ ಧನುವನ್ನು ಮುರಿದು, ಧ್ವಜವನ್ನು ಕೆಡಹಿದನು. ಮತ್ತು ಒಂದು ಭಲ್ಲದಿಂದ ಹಣೆಗೆ ಹೊಡೆದು, ಮತ್ತೊಂದರಿಂದ ಅವನ ಸಾರಥಿಯನ್ನು ಕೊಂದನು. ದುಶ್ಶಾಸನನು ಮತ್ತೊಂದು ಧನುವೆತ್ತಿ ಹನ್ನೆರಡು ಬಾಣಗಳಿಂದ ಭೀಮನನ್ನು ತಾಡಿಸಿದನು. ತಾನೇ ತುರಗಗಳನ್ನು ನಡೆಸುತ್ತಾ ಸಾರಥಿಯೂ ಆಗಿ ಹೋರಾಡುವ ದುಃಶಾಸನನು ವಜ್ರಕಠಿನವು, ಮಣಿಚಿತ್ರಿತವು ಆಗಿದ್ದ ಮಹಾಶರದಿಂದ ಭೀಮನನ್ನು ಹೊಡೆದನು. ಆ ಶರಾಘಾತದಿಂದ ಕಂಪಿತನಾದಂತೆ ತೋರಿದ ಭೀಮನು ಒಂದು ಸಲ ಗುಡುಗಿ, ಹತ್ತು ಶರಗಳಿಂದ ನಿನ್ನ ಕುಮಾರನನ್ನು ಪೀಡಿಸಿದನು. ಭೀಮಸೇನನ ಶಕ್ತಿಯನ್ನು ಖಂಡಿಸಿ, ಮತ್ತೊಂದು ಶರದಿಂದ ದುಶ್ಶಾಸನನು ಭೀಮನನ್ನು ಎದೆಗೆ ಹೊಡೆದು ಆರ್ಭಟಿಸಿದನು. ಭೀಮಸೇನನ ಕ್ರೋಧಾಬ್ಧಿಯು ಉಕ್ಕೇರಿತು. ಆತನ ಕಣ್ಣುಗಳು ಕಿಡಿ ಕಾರಿದವು. 'ಭಲೆ ! ವೀರನಿರುವೆ ! ಈ ನನ್ನ ಗದೆಯನ್ನು ತಡೆದುಕೋ !' ಎಂದು ಭೀಮನು ಗದೆ ಪಿಡಿದು ಬರುತ್ತಾ 'ದುರಾತ್ಮಾ! ರಣಮಧ್ಯದಲ್ಲಿ ಇಂದು ನಿನ್ನ ರಕ್ತವನ್ನು ಕುಡಿವೆನು. ನಿನ್ನ ಸಹಾಯಕರನ್ನು ಕರೆ !' ಎಂದು ಗರ್ಜಿಸಿದನು.

ದುಶ್ಶಾಸನನು ಶಕ್ತಿಯನ್ನೆಸೆದನು. ಭೀಮನ ಗದೆಯು ಆ ಶಕ್ತಿಯನ್ನು ಪುಡಿ ಮಾಡಿ, ದುಶ್ಶಾಸನನ ತಲೆಗೆ ಬಡಿಯಿತು. ಮದಜಲವನ್ನು ಕಾರುವ ಭದ್ರಗಜದಂತೆ ದುಶ್ಶಾಸನನು ರಕ್ತಸಿಕ್ತಮುಖನಾದನು. ಅವನೆತ್ತಿ ಒಗೆದ ಗದೆಯನ್ನು ತುಂಡರಿಸಿ, ಭೀಮಸೇನನು ಗದೆಯನ್ನೊಗೆಯಲು, ಅದರ ಆಘಾತಕ್ಕೆ, ದುಶ್ಶಾಸನನ ತುರಗ ಸೂತರು ಹೇಳಹೆಸರಿಲ್ಲದೆ ರಥವೂ ಚೂರ್ಣವಾಯಿತು. ಭೀಮನು ಗದೆಯನ್ನು ಸ್ವೀಕರಿಸಿ, ಮೇಲೇರಿ ಬರುವದನ್ನು ಕಂಡು, ದುಶ್ಶಾಸನನು ಓಡತೊಡಗಿದನು. ಹತ್ತು ಧನುಗಳ ಅಂತರದಲ್ಲಿ ಭೀಮಸೇನನು ಅವನನ್ನು ಹಿಂದಟ್ಟಿ ಹಿಡಿದನು. ದುಃಶಾಸನನ ಕವಚವು ಭೀಮಶರಗಳಿಂದ ನಿರ್ಭಿನ್ನವಾಗಿತ್ತು. ಭೀಮನ ಕೈಲಿ ಸಿಕ್ಕ ಕುರುರಾಜ ಸೋದರರನ್ನು ಕಂಡು, ಕುರುವೀರರು ಭೀತರಾಗಿ ಆರ್ತನಾದಗಳನ್ನೂ, ಪಾಂಚಾಲ ಪಾಂಡವ ವೀರರು ಹರ್ಷಧ್ವಾನಗಳನ್ನೂ ಮಾಡಿದರು.

ದುಃಶಾಸನನು ಹುಲಿಯ ಕೈಲಿ ಸಿಕ್ಕ ಹುಲ್ಲೆಯಂತೆ ಹೊಯ್ದಾಡಿದನು. ಅವನ ವಸ್ತ್ರಭೂಷಣಗಳು ಅಸ್ತವ್ಯಸ್ತವೂ , ರಕ್ತಸಿಕ್ತವೂ ಆಗಿದ್ದವು. ಅವನು ವೇದನಾತುರನಾಗಿ ಬಾಯ್ಬಾಯಿ ಬಿಡುತ್ತಿದ್ದನು. ದುಃಶಾಸನನನ್ನು ಪಿಡಿದು ಕೆಡಹಿ, ಒದ್ದಾಡುವ ಜಿಂಕೆಯ ಮೇಲೆ ಕೂತ ಸಿಂಹದಂತೆ, ಭೀಮಸೇನನು ಅವನ ಎದೆಯ ಮೇಲೆ ಕಾಲಿಟ್ಟು ಸಿಂಹನಾದವನ್ನು ಮಾಡಿದನು. ಅದನ್ನು ಕೇಳಿ, ಕುರುಮಹಾರಥರು ಮೂರ್ಛಾಕುಲರಾದರು. ಪಾಂಡವವೀರರೂ ಕೂಡ ದಿಕ್ಕು ತೋಚದಂತಾಗಿ, ನಿಶ್ಚೇಷ್ಟರಾಗಿ ನಿಂತರು.

ರಾಜನ್ ! ಭೀಮಸೇನನು ನಿನ್ನ ಸುತರು ತಮಗೆ ಬಗೆದ ದ್ರೋಹಗಳನ್ನೆಲ್ಲ

ನೆನೆದು, ನೆನೆದು, ಕ್ರೋಧಾವಿಲನಾದನು. ಅಚಿಂತ್ಯಕರ್ಮನು, ಅದ್ಭುತಬಲನು ಆದ ಭೀಮಸೇನನು ಚಿತ್ರಲಿಖಿತವಾದಂತಿರುವ ರಣರಂಗದ ಉಭಯ ಸೇನೆಗಳನ್ನೂ, ಕಾಲಕೆಳಗೆ ಸಿಕ್ಕು ವಿಲವಿಲ ತೊನೆದಾಡುವ ದುಃಶಾಸನನನ್ನೂ ಕಂಡು, ತನ್ನ ಕ್ರೋಧಾಗ್ನಿಯನ್ನವನಲ್ಲಿ ಕೇಂದ್ರೀಕರಿಸಿ 'ಶ್ರೀ ಲಕ್ಷ್ಮೀನೃಸಿಂಹ ! ಮನ್ಯೋ !' ಎಂದು ಗರ್ಜಿಸಿದನು. ಆ ನಾದದಿಂದ ಕರ್ಣಾದಿ ಸರ್ವಯೋಧರು ಎದೆಯೊಡೆದು, ದುಃಶಾಸನನ ಆಶೆ ಬಿಟ್ಟು ದೂರ ಸರಿದರು.

'ಇವನಲ್ಲವೇ ದುರ್ಯೋಧನಹತಕನ ಪಾಪಿ ಸೋದರ ? ಇವನಲ್ಲವೇ ರಜಸ್ವಲೆಯು, ನಿರಪರಾಧಿನಿಯು, ಮಾಯಾದ್ಯೂತಜಿತ ಭರ್ತೃರಕ್ಷಾರಹಿತಳು ಆದ ದೇವಿಯ ಕೇಶರಾಶಿಯನ್ನು ಪಿಡಿದು ಸೆಳೆದ ಮಹಾಪಾತಕಿ ? ಇವನಲ್ಲವೇ ಪತಿವ್ರತಾ ಶಿರೋಮಣಿಯಾದ ಪಾಂಚಾಲಿಯ ವಸ್ತ್ರಾಪಕರ್ಷಣವನ್ನು ಮಾಡಿದ ನೀಚ ? ಇವನಲ್ಲವೇ ಗೌಃ ಗೌಃ ಎಂದೊದರಿದ ಉನ್ಮತ್ತ ?' ಎಂದು ನೆನೆದಂತೆ ಭೀಮಸೇನನ ಕೋಪಾಗ್ನಿಯು ಪ್ರಳಯಾಭೀಲವಾಯಿತು.

'ಎಲವೋ ಕೌರವವೀರರೇ ! ಕರ್ಣ, ಸುಯೋಧನ, ಕೃಪ, ಕೃತವರ್ಮಾಶ್ವತ್ಥಾಮಶಲ್ಯರೇ ! ನಿಮ್ಮೆದುರಿಗೇ ನಿರ್ಭಯನಾಗಿ ಪ್ರತಿಜ್ಞಾನಿರ್ವಹಣ ಕಾರ್ಯದಕ್ಷನಾದ ಭೀಮಸೇನನಿಂದ - ಕೈಲಾದರೆ ಕಾಪಾಡಿಕೊಳ್ಳಿ ಈ ಪಾಪಿ ದುಶ್ಶಾಸನನ್ನು!' ಇಂತು ಸಾರಿ, ಭೀಮಸೇನನು - ಮಹಾಗಜಕುಂಭವನ್ನು ಕೇಸರಿಯಂತೆ - ದುಶ್ಶಾಸನನ ಮೇಲೆರಗಿ, ಗದೆಯಿಂದ ವಕ್ಷವನ್ನು ಸೀಳಿ, ನಿಶಿತಖಡ್ಗದಿಂದ ಅವನ ಎದೆ ತಿವಿದನು. ಗದಗದ ನಡುಗುತ್ತಾ, ಅಳುವ ದುಶ್ಶಾಸನನ ಬಿಸಿ ನೆತ್ತರು ಮೇಲಕ್ಕೆ ಚಿಮ್ಮಿತು. ತನ್ನ ಪ್ರತಿಜ್ಞೆಯನ್ನು ನೆನೆದು ಭೀಮಸೇನನು "ನೃಸಿಂಹ ! ನೃಸಿಂಹ ! ಶ್ರೀನೃಸಿಂಹ" ಎಂದು ಆ ಕವೋಷ್ಣರಕ್ತವನ್ನು ಪ್ರಳಯಕಾಲಾಭೀಲಜ್ವಾಲಾಕರಾಳಮುಖನಾದ ಶ್ರೀಲಕ್ಷ್ಮೀನೃಸಿಂಹನಿಗರ್ಪಿಸಿ, ತಾನೂ ಕುಡಿದನು. ಆಸ್ವಾದಿಸಿ, ಆಸ್ವಾದಿಸಿ, ಕ್ರುದ್ಧನಾದ ಭೀಮಸೇನನು 'ತಾಯಿಯ ಹಾಲು, ಜೇನು ತುಪ್ಪ, ಸಕ್ಕರೆ, ತುಪ್ಪ, ಕಬ್ಬಿನ ರಸ, ಪಾನಕ, ಹಾಲು, ಮೊಸರು, ಕೊನೆಗೆ ಅಮೃತವು ಕೂಡ ನನಗೆ ಇಂದು ನನ್ನ ಶತ್ರುವಿನ ಕೋಷ್ಣರಕ್ತದಷ್ಟು ಮಧುರವೆನಿಸಲಿಲ್ಲ' ಎಂದು ಕುಡಿದಂತೆ ಮಾಡಿದನು.

ಯುದ್ಧಯಜ್ಞದಲ್ಲಿ ದುಶ್ಶಾಸನನ ಶೋಣಿತಸೋಮರಸವನ್ನು ಮನ್ಯುನಾಮಕ ನೃಸಿಂಹದೇವನಿಗರ್ಪಿಸಿ, ತಾನು ಕುಡಿದಂತೆ ಮಾಡಿದರೂ, ಮನುಜರಕ್ತವು ಅಪೇಯವೆಂದು ಧರ್ಮಶಾಸ್ತ್ರಪನ್ನರಿತ ಭೀಮಸೇನನು ರಕ್ತವನ್ನು ದಂತಗಳ ಅಂತರ್ಭಾಗವನ್ನು ಪ್ರವೇಶಿಸಗೊಡದೆ ಕಾರಿದನು. ಶತ್ರುಗಳನ್ನು ಹೆದರಿಸುವದಕ್ಕಾಗಿ ಪಾನಮಾಡಿದಂತೆ ನಟಿಸಿ, ಪ್ರತಿಜ್ಞೆಯನ್ನೂ ಸತ್ಯವಾಗಿಸಿಕೊಂಡನು. ಇಂತು ಭಯಂಕರಾಕಾರನಾಗಿ ನಿಂತು ಗರ್ಜಿಸುವ ಭೀಮನನ್ನು ನೋಡಿ, ಕೆಲಸೈನಿಕರು ವ್ಯಥಿತರಾಗಿ ಮೂರ್ಛೆ ಬಿದ್ದರು. ಕೆಲವರು ಕೈಯಿಂದ ಕಳಚಿಬಿದ್ದ ಕೈದುಗಳನ್ನು ತಿಳಿಯದೆ ಕಲ್ಲುಗೊಂಬೆಗಳಂತೆ, ಗರಬಡಿದು ನಿಂತರು. ಕೆಲವರು ಕಣ್ಣುಗಳನ್ನು ಮುಚ್ಚಿ ಅಪಸ್ವರವಾಗಿ

ಕೂಗಿಕೊಂಡರು. 'ಇವನು ಮನುಜನಲ್ಲವೆಂದು' ಕೂಗುತ್ತಾ, 'ಓಡಿ ಬದುಕಿಕೊಳ್ಳಿ' ಎಂದು ತಮ್ಮವರನ್ನು ಕರೆಯುತ್ತಾ, ಕೆಲರು ಓಡಿಹೋದರು.

ಭೀಮಸೇನನು ರಕ್ತಾಂಜಲಿಯನ್ನೆತ್ತಿ ಬೀಸಿ, ಲೋಕದ ವೀರರೆಲ್ಲ ದಿಗ್ಭ್ರಮರಾಗಿ ಕೇಳುತ್ತಿರಲು, ಇಂತೆಂದನು: 'ಪುರುಷಾಧಮ ! ದುಶ್ಶಾಸನ ! ಬೊಗಳು ಗೌಃ ಗೌಃ ಎಂದು ಮತ್ತೊಂದು ಸಲ ! ಅಪತಿಯಾದೆ ಎಂದು ನೀನಂದವಳಿಂದು ಸಪತಿಯೇ ತಾನೆಂದು ತೋರುವಂತಾಯಿತು. ಆಗ ಸಪತಿಕರಾಗಿದ್ದ ವನಿತೆಯರಿಂದು ವಿಪತಿಕರಾದರು. ನೋಡು ಸರ್ವೋತ್ತಮನಾದ ಶ್ರೀಹರಿಯ ವಿಚಿತ್ರ ಶಕ್ತಿಯ ಮಹಿಮೆಯನ್ನು! ಷಂಢತಿಲರು ವೀರ್ಯಯುತತಿಲರಾದರು.

ಎಲವೋ ಪಾಪಿ ! ಅಂದು ನಮ್ಮನ್ನು ಪಶುಗಳೆಂದು ಕರೆದು ಕುಣಿದಾಡಿದೆಯಲ್ಲವೇ ? ನೋಡು ಶ್ರೀಶಾನುಗ್ರಹದಿಂದ ನಿಜವಾದ ಪಶು(ಪ್ರಾಯ)ಗಳನ್ನು ಕೊಂದು ನಾವಿಂದು ಕುಣಿದಾಡಿದೆವು. ಪ್ರಮಾಣ ಕೋಟಿಯಲ್ಲಿ ಕಟ್ಟಿ ಕೆಡಹಿದಿರಿ ! ಅನ್ನದಲ್ಲಿ ಕಾಲಕೂಟವನ್ನಿಟ್ಟಿರಿ ! ಕೃಷ್ಣಸರ್ಪಗಳಿಂದ ಕಚ್ಚಿಸಿದಿರಿ ! ಅರಗಿನ ಮನೆಯಲ್ಲಿಟ್ಟು ಸುಟ್ಟಿರಿ ! ಮೋಸದ ಜೂಜಾಡಿ, ರಾಜ್ಯವನ್ನು ಕಸಿದಿರಿ ! ಸತಿಯನ್ನು ಹಿಡಿದು, ಸಭೆಗೆ ಸೆಳೆದು, ವಸನವನ್ನೂ ಸೆಳೆಯಲು ಹವಣಿಸಿದಿರಿ ! ವಿರಾಟ ನಗರದ ಬವಣೆ, ರಣರಂಗದ ಹಿಂಸೆ, ಕಾಪಟ್ಯ ಒಂದೇ ಎರಡೇ ? ನಾವು ಪಡಬಾರದ ವ್ಯಸನಗಳಿಗೆ ಸಿಗಲು ಕಾರಣರಾದಿರಿ ! ಸುಖವನ್ನು ನಮ್ಮ ಕಣ್ಣಿಗೆ ತೋರಗೂಡದೆಂದು ಹಠ ಹಿಡಿದಿರಿ ! ಧೃತರಾಷ್ಟ್ರನ ಪಕ್ಷಪಾತ, ಬಂಧು ದ್ರೋಹಗಳಿಂದ ಇಷ್ಟನರ್ಥವಾಯಿತು! ಸತಿಯನ್ನು ಸೆಳೆತಂದ ಕೈಗಳೀಗ ನೆಲದಲ್ಲಿ ಒದ್ದಾಡುತ್ತಿವೆ ! ಗೌಃ ಗೌಃ ಎಂದೊದರಿದೆಯಲ್ಲವೇ ? ನೀನು ನಿನ್ನಣ್ಣನು ತೃಣವಾದರೆ ನಾವು ನಂದೀಶನಂತಹ ಗೋವೃಷಗಳು ಅಥವಾ ನೀನೂ ದುರ್ಯೋಧನನೂ ಗೌಃ ಆದರೆ, ನಾನು ಮತ್ತು ಅರ್ಜುನನೂ ಶಾರ್ದೂಲಗಳು. ಕಂಡೆಯಲ್ಲ ಶಾರ್ದೂಲ ವಿಕ್ರೀಡಿತವನ್ನು ! ' ಎಂದು ನಿರ್ಭಯನಾಗಿ, ಶತ್ರುಜನಮಧ್ಯದಲ್ಲಿ ಭೀಮನು ಶಾರ್ದೂಲದಂತೆ-ದುರ್ಲಲಿತ ನರ್ತನವನ್ನು ಮಾಡಿದನು. ಎರಡೂ ಕೈಗಳನ್ನೂರಿ, ಹಾರುತ್ತಾ ಹುಲಿಯಂತೆ ಕುಣಿವ ವೃಕೋದರನನ್ನು ಕಂಡು, ಭೀತನಾದ ಕರ್ಣನ ಕೈಯಿಂದ ವಿಜಯಧನುವು ಜಾರಿ ಬಿತ್ತು. ಅವನು ಬೆರಗಾಗಿ ತೇಲಗಣ್ಣಿಂದ ನೋಡುತ್ತಾ ನಿಂತನು. ಅಶ್ವತ್ಥಾಮನು ರಣರಂಗವನ್ನೇ ಬಿಟ್ಟು ದೂರ ಸರಿದನು. ಶಲ್ಯನು ಉದ್ಬೋಧಿಸಲು, ತಿಳಿದು, ಕರ್ಣನು ಭೀತಭೀತನಾಗಿ ಕದನವನ್ನಾರಂಭಿಸಲು, ಸಿದ್ಧನಾದನು.

ಭೀಮಸೇನನು ರುಧಿರಾರ್ದ್ರಗಾತ್ರನಾಗಿ ಕುಣಿಯುತ್ತಾ, ಸತ್ತ ದುಃಶಾಸನನನ್ನು ಬಿಟ್ಟು, ದುರ್ಯೋಧನನ ಮೇಲೆರಗಿದನು. ಉಗ್ರಪೌರುಷನಾದ ವೃಕೋದರನನ್ನು ಕಂಡು, ಹೆದರಿ ಸುಯೋಧನನು ಓಡಿಹೋದನು. ಪಾಂಡವಸೇನೆಯೂ ದಿಕ್ಕು

ತೋಚದೆ ಕೃಷ್ಣಾರ್ಜುನರಲ್ಲಿಗೆ ತೆರಳಿತು. ಕೌರವಸೇನೆಯಂತೂ ದಿಕ್ಕೆಟ್ಟು ಪಲಾಯನ ಗೈದಿತು. ಮುಹೂರ್ತಪರ್ಯಂತವಾಗಿ ರಣಭೂಮಿಯು ಶೂನ್ಯವಾಯಿತು.

ಕೌರವರನ್ನು ಪಶುಗಳಂತೆ ಚಿಂತಿಸಿ, ತಾನು ಹುಲಿಯಂತೆ ವಿಕ್ರಮ ವಿಹಾರವನ್ನು ಮಾಡುವ ಭೀಮಸೇನನನ್ನು ಕಂಡು, ಕಷ್ಣಾರ್ಜುನರು ಅವನನ್ನು ಸಮೀಪಿಸಿ ಪ್ರತಿಜ್ಞಾನಿರ್ವಹಣ ಮಾಡಿದುದಕ್ಕಾಗಿ, ಅಭಿನಂದಿಸಿದರು. ಭೀಮಸೇನನು 'ಇನ್ನೊಂದು ಪ್ರತಿಜ್ಞೆ ಇದೆ! ಇಂದು ಯುದ್ಧಯಜ್ಞದ ಸೋಮರಸಪಾನವಾಯಿತು. ನಾಳೆ ಪಶುವಿನನ್ನೂ ಸಂಹರಿಸಿ, ಶ್ರೀಕೃಷ್ಣ ! ದುಷ್ಟಸಂಹಾರದ ಸಂಪೂರ್ಣ ಪುಣ್ಯವನ್ನು ನಿನಗರ್ಪಿಸುವೆನು' ಎಂದನು. ಇಂತೆಂದು ವಂದಿಸಿದ ಭೀಮನನ್ನು 'ಭೀಮಸೇನ ! ಸತ್ಯಪ್ರತಿಜ್ಞನಾದೆ ! ಧರ್ಮವನ್ನರಿತು ನಡೆದೆ ! ಶುದ್ಧಭಾಗವತ ಧರ್ಮರತನಾದ ನಿನಕಿಂತಲು ನನಗೆ ಪ್ರೀತಿಪಾತ್ರರಿನ್ನಿಲ್ಲ. ದುರ್ಯೋಧನಪಶುವಿನನ್ನೂ ಸಂಹರಿಸಿ, ಸತ್ಯಪ್ರತಿಜ್ಞನಾದೆ! ನಿನ್ನಿಂದ ಅಧರ್ಮವು ನಶಿಸಿ, ಧರ್ಮರಾಜನು ಸುಖಿಸುವನು' ಎಂದು ಪ್ರಶಂಸಿಸಿದನು. ಕೃಷ್ಣಾರ್ಜುನರು ನಗುನಗುತ್ತಾ ಕುರುವಾಹಿನಿಯ ಕಡೆ ನಡೆದರು.

ಚಿತ್ರಸೇನನೆಂಬ ಕರ್ಣಾನುಜನನ್ನು ಸಂಹರಿಸಿ ಯುಧಾಮನ್ಯುವು ಭೀಮನನ್ನು ಸೇರಿ, ಆತನು ರಥವೇರಿ ನಡೆಯಲು ಚಕ್ರರಕ್ಷಕನಾಗಿ ಹಿಂಬಾಲಿಸಿದನು. ಭೀಮನು ತನ್ನನ್ನು ಮುತ್ತಿದ ನಿಷಂಗಿ, ಕವಚಿ, ಪಾಶೀ, ದಂಡಧಾರ, ಧನುರ್ಧರ, ಅಲೋಲುಪ ಸಹ, ಪಂಢ, ವಾತವೇಗ, ಸುವರ್ಚರೆಂಬ ಹತ್ತು ಕುರುಕುಮಾರರನ್ನು ವಧಿಸಿ, ಮತ್ತೆ ಕುರುಸೇನೆಯನ್ನು ಮುತ್ತಿದನು.

## ೧೩. ದೇವಸಂವಾದ

ಸಂಜಯನು ನಿರೂಪಿಸಿದನು:

'ರಾಜನ್ ! ಅಂತಕನಂತೆ ವಿಜೃಂಭಿಸಿ ವಿಹರಿಸುವ ವೃಕೋದರನ ವೀರ್ಯ ಪರಾಕ್ರಮಗಳನ್ನು ಕಂಡು ವೃಷನು ವಿವಶಚಿತ್ತನಾಗಿರಲು ಅವನ ಭೀತಿಯನ್ನರಿತು ಶಲ್ಯನು "ರಾಧೇಯ ! ವ್ಯಥೆಪಟ್ಟು ಮಾಡುವುದಿಲ್ಲ. ಭೀಮಸೇನನ ಭಯದಿಂದ ಓಡಿಹೋಗುತ್ತಿರುವ ರಾಜರನ್ನೂ ಭ್ರಾತೃವ್ಯಸನಕರ್ಶಿತನಾಗಿರುವ ದುರ್ಯೋಧನನನ್ನೂ ನಿನ್ನ ವಿಕ್ರಮ ವಿಹಾರದಿಂದ ಸಂತೈಸು ! ಪುರುಷಶಾರ್ದೂಲನಾದ ಕರ್ಣನು ಶತ್ರುಪ್ರತಾಪಕ್ಕೆ ಹೆದರುವದು ಸರಿಯಲ್ಲ. ಅರ್ಜುನನನ್ನು ಕೊಲ್ಲುವ ಭಾರವನ್ನು ನಿನ್ನಲ್ಲಿಟ್ಟಿರುವನು ದುರ್ಯೋಧನನು. ಅವನನ್ನು ನಿರಾಶೆಗೊಳಿಸಬೇಡ !" ಎಂದು ಹುರಿದುಂಬಿಸಿದನು.

ಜಯವಾದರೆ ರಾಜ್ಯಸುಖಗಳೂ, ಅಪಜಯವಾದರೆ ಸ್ವರ್ಗಕೀರ್ತಿಗಳೂ, ಸಿದ್ಧವೆಂದು ಕರ್ಣನು ಪ್ರಾಣ ಪಣವನ್ನಿಟ್ಟು ಪಾರ್ಥನಿಂದ ಕಾದಾಡನಿಶ್ಚಯಿಸಿದನು. ಅವನ ಮಗನಾದ ವೃಷಸೇನನು ದುಶ್ಶಾಸನನ ವಧೆಯ ಸೇಡಿನಿಂದ ಕೆರಳಿದ

ಸಿಂಹದಂತೆ - ಪಾಂಡವಸೇನೆಯಮೇಲೆರಗಿದನು. ವೃಕೋದರನನ್ನು ಮುತ್ತಲು ಹೋಗುವ ವೃಷಸೇನನನ್ನು ನಕುಲನು ತಡೆದು, ಬಾಣಜಾಲದಿಂದ ಮುಚ್ಚಿದನು. ವೃಷಸೇನನೂ ನಕುಲನನ್ನು ಬಾಣವರ್ಷದಲ್ಲಿ ಮುಣುಗಿಸಿ, ನಾಲ್ಕು ಬಾಣಗಳಿಂದ ನಕುಲನ ಜವನಾಶ್ವಗಳನ್ನು ಕೊಂದನು. ನಕುಲನು ರಥದಿಂದ ಕೆಳಗಿಳಿದು, ಖಡ್ಗಚರ್ಮಧರನಾಗಿ, ಶಾಮಿತ್ರನು ಪಶುಗಳನ್ನಂತೆ ವೃಷಸೇನನ ಮೂರುಸಾವಿರ ಯೋಧರನ್ನು ಸಂಹರಿಸಿದನು. ಅವನನ್ನು ಹದಿನೆಂಟು ಬಾಣಗಳಿಂದ ಪೀಡಿಸಿ ವೃಷಸೇನನು ಅವನ ಖಡ್ಗಚರ್ಮಗಳನ್ನೂ ಚೂರಾಗಿ ಖಂಡಿಸಿದನು. ನಕುಲನು ವ್ಯಾಯುಧನಾಗಿ ಭೀಮಸೇನನ ರಥವನ್ನೇರಿ ಕೂತನು. ಕರ್ಣಕುಮಾರನು ಬಿಡದೆ ನಿಶಿತ ಬಾಣಪರಂಪರೆಯಿಂದ ಭೀಮನಕುಲರನ್ನು ಪೀಡಿಸಿದನು. ಅವನನ್ನು ನಿರ್ಲಕ್ಷಿಸಿ, ಭೀಮಸೇನನು ಅರ್ಜುನನ್ನು ಕಂಡು 'ಅರ್ಜುನ ! ಕರ್ಣಪುತ್ರನ ವಿಕ್ರಮವನ್ನು ಕಂಡೆಯಾ ? ಇವನನ್ನು ಯಮಪುರಿಗೆ ಕಳಿಸಿ, ನಿನ್ನ ವಚನವನ್ನು ಸತ್ಯಮಾಡು !' ಎಂದು ತಾನು ಶಕುನಿ ವೃಕರೇ ಮೊದಲಾದ ಗಾಂಧಾರವೀರರಿಂದ ಕಾದತೊಡಗಿದನು.

ಕುಳಿಂದನು ಕೃಪನನ್ನೆದುರಿಸಿ, ಪೀಡಿಸಲು ಆಚಾರ್ಯನು ನಿಶಿತ ಭಲ್ಲಗಳಿಂದ ಅವನನ್ನೂ ಅವನೇರಿದ ಆನೆಯನ್ನೂ ಸಂಹರಿಸಿದನು. ಶಕುನಿಯು ಕುಳಿಂದಪುತ್ರನನ್ನು ಸಂಹರಿಸಿದನು. ದುರ್ಯೋಧನನು ಅವನ ತಮ್ಮನನ್ನು ಕೊಂದು ಕುಳಿಂದರ ಗಜಸೇನೆಯನ್ನು ಗದಾಪಾಣಿಯಾಗಿ ನಾಶಪಡಿಸಿದನು.

ಅರ್ಜುನನು ವೃಷಸೇನನನ್ನು ಎದುರಿಸಿ, - ಮಹೇಂದ್ರನು ನಮುಚಿಯನ್ನಂತೆ - ಬಾಣಶತದಿಂದ ಪೀಡಿಸಿದನು. ವೃಷಸೇನನು ಉಗ್ರಶರದಿಂದ ಅರ್ಜುನನನ್ನು ಭುಜಮೂಲದಲ್ಲಿ ಪೀಡಿಸಿದನು. ಮತ್ತು ಒಂಭತ್ತು ಬಾಣಗಳಿಂದ ಕೃಷ್ಣನನ್ನು ಹೊಡೆದು, ಹತ್ತು ಬಾಣಗಳಿಂದ ಪಾರ್ಥನನ್ನು ಪೀಡಿಸಿದನು. ಅರ್ಜುನನು ಹುಬ್ಬುಗಂಟಿಕ್ಕಿ, ಕಣ್ಣಿನಲ್ಲಿ ಕಿಡಿಕಾರುತ್ತಾ ಕರ್ಣದುರ್ಯೋಧನರಿಗಿಂತು ಸಾರಿ ಹೇಳಿದನು. 'ಕರ್ಣ ! ಜನರು ಪೇಳಲು ನಾನು ತಿಳಿದುದೆಂತೆಂದರೆ ಕೇಳು ! ಅಂದು ನೀವು ಬಹುವೀರರು ನನ್ನ ಸುತನೊಬ್ಬನನ್ನು ಮುತ್ತಿ ಅಧರ್ಮದಿಂದ ಕಡಿದಾಡಿ, ನಿರಾಯುಧನಾಗಿ ಮಾಡಿ ಕೊಂದಿರಂತೆ ! ಇಂದು ನೀವೆಲ್ಲರೂ ನೋಡುತ್ತಿರಲು, ನಿನ್ನ ಸುತನನ್ನು ರಣದಲ್ಲಿ ಸಾಯುಧನಾಗಿರುವಾಗಲೇ ಸಂಹರಿಸಿಬಿಡುವೆನು. ಕೈಲಾದರೆ ಅವನನ್ನು ನೀವು ಕಾಪಾಡಿಕೊಳ್ಳಿ ! ಅವನನ್ನು ಕೊಂದು ಆಮೇಲೆ ನಿನ್ನನ್ನೂ ಕೊಲ್ಲುವೆನು. ಅಧಮಾಧಮನಾದ ಆ ನಿಮ್ಮ ರಾಜನಿಂದ ಪ್ರಾರಂಭವಾದ ಯುದ್ಧಾನರ್ಥವನ್ನು ಕಂಡು, ಅವನನ್ನು ಪ್ರೇರಿಸಿದ ನಿನ್ನ ಅವಿವೇಕದ ಫಲವನ್ನೂ ಅನುಭವಿಸು.'

ಭಯಪಟ್ಟಿದ್ದರೂ ಬಿಡದೆ ಕಿಡಿಬಾಣಗಳನ್ನು ತನ್ನ ಮೇಲೆ ಬಿಡುವ ವೃಷಸೇನನನ್ನು ಕಂಡು ಅರ್ಜುನನು ನಗುತ್ತಾ, ಹತ್ತು ಬಾಣಗಳನ್ನು ಬಿಟ್ಟನು. ಏಕಕಾಲದಲ್ಲಿ ಆ

ಬಾಣಗಳು ವೃಷಸೇನನ ಧನುವನ್ನು ತುರಗಗಳನ್ನು ಸಾರಥಿಯನ್ನು ಧ್ವಜವನ್ನು, ಎರಡು ಕೈಗಳನ್ನು, ಶಿರವನ್ನು ಕೆಡಹಿದವು. ವಜ್ರಾಹತವಾದ ಪರ್ವತದಂತೆ ಕೆಳಗುರುಳಿದ ವೃಷಸೇನನ್ನು ಕಂಡು, ಕೌರವರು ಹಾಹಾಕಾರ ಮಾಡಿದರು.

ಕರ್ಣನು ಸಿಟ್ಟಾಗಿ ಅರ್ಜುನನೊಡನೆ ಕಾದಲು ಬಂದನು. ಅವನನ್ನು ನೋಡಿ ವಾಸುದೇವನು 'ಪಾರ್ಥ ! ಸ್ಥಿರನಾಗು ! ನಿನಗೆ ಸರಿಯಾದ ಪ್ರತಿಯೋಧನೀಗ ದೊರಕಿದನು. ಅವನೂ ಶ್ವೇತಹಯನೇ ! ಅವನೂ ದಿವ್ಯಾಸ್ತ್ರವೇತ್ತನೇ ! ನಾಗಕಕ್ಷಯುತವಾದ ಅವನ ಧ್ವಜವು ಆಕಾಶದಲ್ಲಿ ಬರೆಯುತ್ತಿದ್ದಂತೆ ಹಾರಾಡುತ್ತಿದೆ. ಧಾರಾಧರದಂತೆ ಶರಧಾರೆಗಳನ್ನು ಬಿಡುವ ಕರ್ಣನನ್ನು ನೋಡು ! ದುಂದುಭಿ ನಾದಗಳನ್ನು ಮೀರಿ ಕೇಳಬರುವ ಆ ಮಹಾರಥನ ಧನುಷ್ಟಂಕಾರವನ್ನು ಕೇಳು ! ಅಮಿತಬಲನಾದ ಶಲ್ಯರಾಜನು ಅವನ ಸಾರಥಿಯಾಗಿರುವನು. ಬಹುಪ್ರಯತ್ನದಿಂದ ವಿಕ್ರಮಿಸಿ, ಇವನನ್ನು ಸಂಹರಿಸು ! ಇನ್ನೊಬ್ಬರಿಗೆ ಇವನು ಅಜಯ್ಯನಿರುವನು. ಶರ್ವನನ್ನು ಕಂಡವರಿಲ್ಲ; ಆದರೆ ಮಹಾದೇವನನ್ನು ಕಂಡದ್ದಲ್ಲದೇ ರಣದಲ್ಲಿ ಮೆಚ್ಚಿಸಿ ಪಾಶುಪತವನ್ನು ನೀನು ತಂದಿರುವೆ ! ನೆನೆ ಶಂಕರನನ್ನು ! ನಿನಗೆ ಜಯವಾಗುವದು' ಎಂದನು.

ಅರ್ಜುನನು 'ದೇವದೇವ ! ಸರ್ವಲೋಕಗುರುವು, ಬ್ರಹ್ಮಶಂಕರಶಕ್ರಾದಿ ದೇವವಂದಿತನು ಆದ ನಿನ್ನ ಅನುಗ್ರಹದಿಂದ ನಾನು ಜಯವನ್ನು ಗಳಿಸುವೆನು. ಶಂಕರನ ದಯದಿಂದ ಕೊಲ್ಲುವೆನು ಕರ್ಣನನ್ನು ! ಸಂಶಯವಿಲ್ಲ. ಹೊಡೆ ರಥವನ್ನು ಕರ್ಣಾಭಿಮುಖವಾಗಿ ! ' ಎಂದನು. ರಣದಲ್ಲಿ ಕರ್ಣಾರ್ಜುನರ ರಥಗಳು ಎದುರು-ಬದುರಾಗಿ ನಿಂತವು. ವೃಷಸೇನವಧೆಯನ್ನು ಕಂಡ ಕರ್ಣನು ಕೆರಳಿ, ಸಿಂಹದಂತೆ ಅರ್ಜುನನ ರಥವನ್ನು ಮುತ್ತಿದನು. ಸೂರ್ಯದ್ವಯವು ಸಂಧಿಸಿತೆಂಬಂತೆ ಕರ್ಣಾರ್ಜುನರ ರಣಸಮಾಗಮವು ಅತಿಭಯಂಕರವಾಯಿತು.

ತ್ರೈಲೋಕ್ಯ ವಿಜಯಕ್ಕಾಗಿ ಕಾದುವ ಮಹೇಂದ್ರವಿರೋಚನರಂತೆ ಕರ್ಣಾರ್ಜುನರು ಕಲೆತಾಗ ಲೋಕಗಳೆಲ್ಲವು ವ್ಯಾಕುಲವಾದವು. ಕಪಿಧ್ವಜವು ಹಸ್ತಿಕಕ್ಷ ಧ್ವಜದಿಂದ ತಿಕ್ಕಾಡಿತು. ಪಾರ್ಥಿವರು ಪಾರ್ಥಕರ್ಣರ ದ್ವಂದ್ವಯುದ್ಧವನ್ನು ನೋಡುತ್ತಾ ಬಾಹುಸ್ವನಗಳನ್ನು ತಲಶಬ್ದಗಳನ್ನು ಸಿಂಹನಾದಗಳನ್ನು ಮಾಡಿದರು. ಉಭಯವೀರರನ್ನು ಹುರಿದುಂಬಿಸಲು ಉಭಯಸೈನಿಕರು ಶಂಖತೂರ್ಯಾದಿಗಳನ್ನು ಊದಿ ಜಯಜಯನಾದಗಳನ್ನು ಮಾಡಿದರು.

ಮಹಾರಥಿಕರಿಬ್ಬರು, ದಿವ್ಯರಥಗಳಲ್ಲಿ ಕೂತು, ಮಹಾಚಾಪಹಸ್ತರಾಗಿ, ಖಡ್ಗ ಶಕ್ತಿ ಪ್ರಾಸಾದಿಗಳನ್ನು ಸಜ್ಜುಗೊಳಿಸಿಟ್ಟು, ಯುದ್ಧಸನ್ನದ್ಧರಾಗಿರುವುದು ದರ್ಶನೀಯವೆನಿಸಿತು. ರಕ್ತಚಂದನವನ್ನು ಹಚ್ಚಿ ಛತ್ರಚಾಮರವ್ಯಜನಪತಾಕಾ ಶೋಭಿತರಾಗಿ, ಗೋವೃಷಗಳಂತೆ ಗುಡುಗುವ ಕರ್ಣಪಾರ್ಥರು ಅನ್ಯೋನ್ಯವಧವನ್ನಿಚ್ಛಿಸಿ ನಿಂತರು. ಶಾರ್ದೂಲಸಮವಿಕ್ರಮನಾಗಿ ಮೆರೆವ ಕರ್ಣನನ್ನು ಕಂಡು ಕೌರವರು

ಹರ್ಷಧ್ವಾನ ಮಾಡಿದರು. ಸಿಂಹವಿಕ್ರಮನಾದ ಅರ್ಜುನನನ್ನು ಕಂಡು ಪಾಂಡವವೀರರು ಹರ್ಷಧ್ವಾನವನ್ನು ಮಾಡಿದರು.

ಅಂಬರದಿ ನಿಂತ ದೇವ ಮುನಿ ಸಿದ್ಧ ಚಾರಣರು ವಿಸ್ಮಯಾವಿಷ್ಟಚಿತ್ತರಾಗಿ ನೋಡತೊಡಗಿದರು. ಆಗ ತ್ರಿಲೋಕದ ಜನರೇ ಇಬ್ಬಗೆಯಾದಂತಿತ್ತು. ನಿನ್ನ ಮಕ್ಕಳು ಕರ್ಣನನ್ನೂ, ಧೃಷ್ಟದ್ಯುಮ್ನಾದಿ ಪಾಂಚಾಲಪಾಂಡವರು ಅರ್ಜುನನನ್ನೂ ವಹಿಸಿ ನಿಂತರು. ಕರ್ಣನು ಗೆಲ್ಲುವನೆಂದು ಕೌರವರೂ, ಅರ್ಜುನನೇ ಗೆಲ್ಲುವನೆಂದು ಪಾಂಡವರೂ ಪಂದ್ಯಕಟ್ಟಿ ಸಂರಂಭದಿಂದ ಜಗಳವಾಡತೊಡಗಿದರು. ಈ ವಿವಾದವು ಅಂಬರದಿ ನೆರೆದಿದ್ದ ದೇವದಾನವರಿಗೂ ವ್ಯಾಪಿಸಿತು. ಪಕ್ಷಗಳನ್ನು ವಹಿಸಿ, ವಿವದಿಸುವ ಸಮಯದಲ್ಲಿ ದುರ್ಯೋಧನನ ಸೇನಾಪತಿಯಾದುದರಿಂದ, ಕರ್ಣನನ್ನು ದಾನವಾದಿಗಳೂ, ಶ್ರೀಕೃಷ್ಣಭಕ್ತನಾದುದರಿಂದ ಪಾರ್ಥನನ್ನು ದೇವರ್ಷಿಗಂಧರ್ವರೂ ವಹಿಸಿ, ಪಂದ್ಯಗಳನ್ನೊಡ್ಡಿ, ಜಗಳವಾಡತೊಡಗಿದರು. ಭೂದೇವಿ, ಗಿರಿ, ಸಾಗರನದೀವೃಕ್ಷ, ಓಷಧಿ, ರತ್ನ, ವೇದಪುರಾಣೇತಿಹಾಸ, ವಸುದೇವತೆಗಳು, ಸಿದ್ಧ ಸಾಧ್ಯ ರುದ್ರರು, ಮುನಿಗಳು, ಗಂಧರ್ವರು, ಸರ್ಪರಾಜರು, ಅಗ್ನೀಂದ್ರಚಂದ್ರಯಮವರುಣವಾಯುಪವಮಾನರು ಅರ್ಜುನನ ಪಕ್ಷ ವಹಿಸಿದರು. ದಾನವರು, ದೈತ್ಯೇಯರು, ಪಿಶಾಚ-ಗುಹ್ಯಕರು, ಪಾಪಿಜನರು ಕರ್ಣನ ಪಕ್ಷವನ್ನು ವಹಿಸಿದರು.

ದೇವರ್ಷಿ ಪ್ರಜಾಪತಿಗಳಿಂದ ಕೂಡಿ ಬ್ರಹ್ಮದೇವನೂ, ಪ್ರಮಥಗಣಸಹಿತನಾದ ರುದ್ರದೇವನು ಅಲ್ಲಿಗೆ ಬಂದರು. ಶಿವನು ಜನಕನಾದ ಶತಾನಂದನನ್ನು ಕಂಡು, 'ಪಿತಾಮಹ ! ಭೀಮನು ದೇವತೆಗಳಿಗೆ ಆಶ್ರಯನು. ದುರ್ಯೋಧನನು ಅಸುರರಿಗೆ ಆಶ್ರಯನು. ಅವರಿಗೆ ಪ್ರಿಯರಾಗಿ, ಅವರ ಜಯಕ್ಕಾಗಿ ಸೆಣಸುತ್ತಿರುವ ಪಾರ್ಥಕರ್ಣರೀಗ ದೇವಾಸುರರಿಗೆ ಪ್ರಾಣಸದೃಶರಾಗಿರುವರು. ಅವರಿಬ್ಬರನ್ನು ವಹಿಸಿ, ದೇವಾಸುರರು ಯುದ್ಧಕ್ಕಿಳಿದರೆ ಜಗನ್ನಾಶವಾದೀತು! ಆದುದರಿಂದ ಅರ್ಜುನ ಕರ್ಣರಿಗೆ ಯುದ್ಧವು ಸಮವಾಗಲಿ ! ಯಾರೂ ಜಯಿಸದಿರಲಿ ! ಆಗ ದೇವದಾನವರೂ ಸುಮ್ಮನಾಗುವರು !' ಎಂದನು. ಆ ಮಾತನ್ನಾಲಿಸಿ, ದೇವೇಂದ್ರನು ಬ್ರಹ್ಮನಿಗೆ ಕೈಮುಗಿದು 'ಶ್ರೀಕೃಷ್ಣನಿರುವಲ್ಲಿ ಜಯವೆಂದು ನೀವೇ ಹೇಳಿ, ಅಭಯವನ್ನಿತ್ತಿರುವಿರಿ ! ಶ್ರೀಕೃಷ್ಣನು ಪಾರ್ಥವಿಜಯಕ್ಕಾಗಿ ಸಂಕಲ್ಪಿಸಿರುವನು. ಆದುದರಿಂದ ಪಾರ್ಥನಿಗೇ ಜಯವಾಗಲಿ ! ದುರ್ಯೋಧನನಿಗೆ ಅಪಜಯವಾಗಲಿ ! ಅದಕ್ಕಾಗಿಯೇ ಕರ್ಣನು ಸಂಹೃತನಾಗಲಿ !' ಎಂದು ಬೇಡಿದನು. ಸೂರ್ಯನು, 'ಕರ್ಣನೇ ಜಯಿಸಲಿ !' ಎಂದನು. ಬ್ರಹ್ಮದೇವನು 'ಅರ್ಜುನನು ಜಯಿಸುವನು. ಖಾಂಡವವನ್ನು ದಹಿಸಿ, ದಾನವರನ್ನು ಜಯಿಸಿ, ತ್ರಿಶೂಲಿಯನ್ನು ಮೆಚ್ಚಿಸಿ, ಶ್ರೀಕೃಷ್ಣನನ್ನು ಸಾರಥಿಯಾಗಿ ಪಡೆದ ಕಪಿಧ್ವಜನೇ ಗೆಲ್ಲುವನು ! ಕರ್ಣನು ದುರ್ಯೋಧನನ ವಶನಾಗಿ ಮಾಡಿದ ಪಾಪಫಲವಾಗಿ ಅಪಜಯವನ್ನು ಹೊಂದಿ, ಮರಣವನ್ನಪ್ಪುವನು. ಜಗತ್ಪ್ರಭುವು

ಶಂಖಚಕ್ರಗದಾಧರನು ಆದ ಸಾಕ್ಷಾನ್ನಾರಾಯಣನೇ ಶ್ರೀಕೃಷ್ಣರೂಪನಾಗಿ, ಅವನ ವಿಜಯವನ್ನು ಸಾಧಿಸಿ ಕೊಡುವಾಗ, ಯಾರಿಂದಲೂ ಅದನ್ನು ಅನ್ಯಥಾಕರಿಸಲಾಗದು. ವನವಾಸಕ್ಲಿಷ್ಟರು, ಗುಣಸಂಪನ್ನರು, ಧರ್ಮಯುತರು, ವಿದ್ಯಾವಿನಯನಿಧಿಗಳು ಆದ ಪಾಂಡವರಿಗೆ ಸೋಲಾಯಿತೆಂದರೆ, ಅಧರ್ಮವೇ ಮೇಲೆದ್ದು ನಗ್ನನರ್ತನಮಾಡಿ, ಲೋಕಗಳನ್ನು ಹಾಳುಮಾಡೀತು ! ನರನಾರಾಯಣಾವತಾರರಾದ ಅರ್ಜುನ-ವಾಸುದೇವರನ್ನು ಗೆಲ್ಲುವರೀ ಹದಿನಾಲ್ಕು ಲೋಕಗಳಲ್ಲಿಲ್ಲ. ಕರ್ಣನು ಶೂರನೆಂದು ಖ್ಯಾತನಾಗಿ ಪುಣ್ಯಲೋಕಗಳನ್ನು ಹೊಂದುವನು. ಕೃಷ್ಣಪಾರ್ಥರಿಗೇ ವಿಜಯವಾಗುವುದು. ಭೂಮಿಯಲ್ಲಿ ಪುಟ್ಟಿದವರನ್ನು ವಹಿಸಿ, ನೀವೇಕೆ ಜಗಳಾಡುವಿರಿ ? ಸುಮ್ಮನೇ ನೋಡಿ !' ಎಂದು ಸಮಾಧಾನಪಡಿಸಿದನು. ರುದ್ರನೂ ಅದನ್ನು ಅನುಮೋದಿಸಿದನು. ದೇವಾಸುರರು ಸುಮ್ಮನೆ ನೋಡುತ್ತಾ ನಿಂತರು.

ಅರ್ಜುನಕರ್ಣರಿಗೆ ಯುದ್ಧವಾರಂಭವಾಯಿತು. ಭೀಮಸೇನನು ಅರ್ಜುನನ ಬೆನ್ನು ಬಿಡದೆ ಕಾದುಕೊಂಡಿದ್ದನು. ಸಾತ್ಯಕಿ ಧೃಷ್ಟದ್ಯುಮ್ನಾದಿ ವೀರರು ಪಾರ್ಶ್ವರಕ್ಷಕರಾಗಿ ನಡೆದರು. ದ್ರೌಣಿದುರ್ಯೋಧನಾದಿಗಳು ಕರ್ಣನಿಗೆ ನೆರವಾಗಿ ನಿಂತರು. ಮೊದಲು ಕರ್ಣನು ಅರ್ಜುನನನ್ನು ಮೀರಿಸಿ, ಶರಲಾಘವವನ್ನು ತೋರಿ, ಬಾಣಗಣದಿಂದ ಅವನನ್ನು ಪೀಡಿಸಿದನು. ಅದನ್ನು ಕಂಡು ಭೀಮಸೇನನು 'ಅರ್ಜುನ ! ಮೃದುವಾಗಬೇಡ ! ಶಾರ್ದೂಲವನ್ನು ಕೋಲಿನಿಂದ ಹೊಡೆದೋಡಿಸಲಾಗುವುದೇ ? ನಿನ್ನ ಸಂಪೂರ್ಣವೀರ್ಯವನ್ನು ತೋರಿ, ಈ ದುಷ್ಟನನ್ನು ಸಂಹರಿಸು. ಇವನು ಸತ್ತರೆ ದುರ್ಯೋಧನನೂ ಸತ್ತಂತೆಯೇ ಸರಿ. ಇಲ್ಲದಿರೆ ನನಗೆ ಬಿಡು ಈ ಕರ್ಣನನ್ನು ! ಒಂದೇ ಕ್ಷಣದಲ್ಲಿ ಗದೆಯಿಂದ ಕುಟ್ಟಿ ಇವನನ್ನು ಅಂತಕನ ಹತ್ತಿರ ಸೇರಿಸುವೆನು !' ಎಂದು ಸಿಟ್ಟಾಗಿ ಹುರಿದುಂಬಿಸಿದನು. ಶ್ರೀಕೃಷ್ಣನೂ ಅವನ ನರಾವೇಶವನ್ನು ನೆನಪಿಗೆ ಕೊಟ್ಟು ಉತ್ಸಾಹಪಡಿಸಿದನು.

ಅರ್ಜುನಕರ್ಣರು ರಣರಂಗದಲ್ಲಿ ನಿಂತಾಗ ಅವರ ಧ್ವಜಗಳು ತಿಕ್ಕಾಡಿದವು. ಕಪಿಯು ಹಸ್ತಿಕಕ್ಷವನ್ನು — ಗರುಡನು ಪನ್ನಗವನ್ನಂತೆ — ಪೀಡಿಸಲು, ಹಸ್ತಿಯು ಕಪಿಯನ್ನು ಪೀಡಿಸಿತು. ಕುದುರೆಗಳು ಕೆನೆದವು. ಪುಂಡರೀಕಾಕ್ಷನು ರಕ್ತಾಕ್ಷನಾಗಿ ಶಲ್ಯನನ್ನು ನೋಡಲು, ಶಲ್ಯನು ದೃಷ್ಟಿಶಲ್ಯಗಳಿಂದ ಕೃಷ್ಣನನ್ನು ವೀಕ್ಷಿಸಿದನು.

ಕರ್ಣನು 'ಶಲ್ಯ ! ಪಾರ್ಥನು ನನ್ನನ್ನು ವಧಿಸಿದರೆ ನೀನೇನು ಮಾಡುವೆ? ನಿಜ ಹೇಳು !' ಎಂದನು. ಶಲ್ಯನು ಕ್ರುದ್ಧನಾಗಿ 'ಕರ್ಣ ! ಹಾಗಾದಾಗ ನಾನೊಬ್ಬನೇ ವಿಕ್ರಮಿಸಿ ಕೃಷ್ಣಪಾರ್ಥರನ್ನು ಕೊಲ್ಲುವೆನು' ಎಂದನು. ಅರ್ಜುನನು ಅಂತೆಯೇ ಕೇಳಲು, ನಕ್ಕು ಗೋವಿಂದನಿಂತೆಂದನು: 'ಸೂರ್ಯಮಂಡಲವು ಕಳಚಿಬೀಳಬಹುದು; ಮಹೋದಧಿಯು ಬರಿದಾಗಬಹುದು; ಅಗ್ನಿ ತಣ್ಣಗಾಗಬಹುದು; ಆದರೆ ಕರ್ಣನು ಧನಂಜಯನನ್ನು ಗೆಲ್ಲಲಾಗದು. ತಿಳಿ !" ಒಂದು ವೇಳೆ ಹಾಗಾದರೆ ಜಗವೇ ಉಳಿಯದೇ ಹೋದೀತು !' ಆ ಮಾತಿಗೆ ಮೈಪೆರ್ಚಿಸಿ, ಪಾರ್ಥನು 'ಕೃಷ್ಣ !

ಇಂದೇ ಕರ್ಣಪತ್ನಿಯರು ವಿಪತಿಕರಾದರೆಂದು ತಿಳಿ ! ಈ ಪಾಪಿಯು ಮಾಡಿರುವ ದ್ರೋಹಗಳನ್ನು ನೆನೆದಂತೆ ನನ್ನ ಕ್ರೋಧಾಗ್ನಿಯು ಉರಿದೇಳುತ್ತಿದೆ. ಇಂದು ಅಭಿಮನ್ಯು ಜನನಿಯನ್ನು - ಸೇಡನ್ನು ತೀರಿಸಿಬಂದ ಪಾರ್ಥನು ಅನುನಯಿಸುವನು. ನಿಮ್ಮ ಸೋದರತ್ತೆಯು ವೀರಪುತ್ರನನ್ನು ಕಂಡು ಆನಂದಿಸುವಳು. ಕೃಷ್ಣೆಯು ಪರಿಭವಕ್ಲೇಶವನ್ನು ಮರೆಯುವಳು. ಧರ್ಮರಾಜನು ಆನಂದಿಸುವನು. ನಿನ್ನ ದಯವು ಒಂದಿರಲಿ ಸಾಕು ! ' ಎಂದು ಕರ್ಣನನ್ನು ನೂರು ಬಾಣಗಳಿಂದ ತಾಟಿಸಿದನು. ಕರ್ಣನೂ ಅವನನ್ನು ನೂರು ಬಾಣಗಳಿಂದ ಹೊಡೆದು ಆರ್ಭಟಿಸಿದನು. ಇತರ ಸೈನಿಕರು ಪರಸ್ಪರ ವಧಾತುರರಾಗಿ ಕಡಿದಾಡಿದರು.

ಆಗ ಅಶ್ವತ್ಥಾಮನು ದುರ್ಯೋಧನನನ್ನು ಸೇರಿ, ಅವನ ಕೈಯನ್ನು ತನ್ನ ಕೈಲಿ ಪಿಡಿದು, ಸಂತೈಸುತ್ತಾ 'ಮಹಾರಾಜ ! ಪ್ರಸನ್ನನಾಗು ! ಸಾಕೀ ಯುದ್ಧ! ಸಂಧಿಯನ್ನು ಮಾಡಿಕೊಂಡು, ಈಗ ಉಳಿದವರಾದರೂ ಜೀವಿಸಿ ಇರಿ ! ಬ್ರಹ್ಮ ಸಮನಾದ ಆಚಾರ್ಯನು ಸತ್ತನು. ಮಹಾರಥವರನಾದ ಪಿತಾಮಹನು ಮೃತಪ್ರಾಯನಾದನು. ನಿನ್ನ ಸೇನೆಯ ಬಹುಭಾಗವು ನಷ್ಟವಾಗಿದೆ. ಪಾಂಡವರಿಂದ ಕೂಡಿ ಬದುಕು ! ಧನಂಜಯನು ನನ್ನ ಮಾತಿಗೆ ಎದುರಾಡನು. ಜನಾರ್ದನನಿಗೆ ವಿರೋಧವು ಬೇಕಾಗಿಲ್ಲವೆಂದು ನೀನರಿಯದಿಲ್ಲ. ಯುಧಿಷ್ಠಿರನು ಕಲಹಪ್ರಿಯನಲ್ಲ. ಭೀಮಸೇನನನ್ನು ನಾನು ಶಾಂತಮಾಡಿ, ಸ್ನೇಹದಲ್ಲಿ ನಿಲ್ಲಿಸುವೆನು. ಯಮಳರು ನನಗೆದುರಾಡರು. ಸಂಧಿ ಮಾಡಿ ಪ್ರಜಾವರ್ಗಕ್ಕೂ ಹಿತಕರನಾಗು ! ಧನಂಜಯ ಭೀಮಸೇನರ ವಿಕ್ರಮವನ್ನು ಕಂಡಿರುವೆ ! ಅವರಿದಕ್ಕೂ ಹೆಚ್ಚು ಭಯಂಕರರು. ಅವರಿಂದ ವೈರ ಬೇಡ ! ನಾನು ಅವರಿಗೆ ಹೆದರಿ ಇಂತು ನುಡಿಯುವೆನೆಂದು ಚಿಂತಿಸಬೇಡ ! ನಾನು ಅವಧ್ಯನಿರುವೆನು. ನನ್ನ ಮಾವ ಕೃಪನೂ ಅವಧ್ಯನಿರುವನು. ನಿನ್ನಲ್ಲಿರುವ ಸೌಹಾರ್ದದಿಂದ, ನಿನ್ನ ಹಿತಕ್ಕಾಗಿ ನುಡಿಯುವ ನನ್ನ ಮಾತಿನಂತೆ ನಡೆ. ಕರ್ಣನನ್ನು ಪಾಂಡವಮಿತ್ರನನ್ನಾಗಿ ಮಾಡುವುದನ್ನು ನನಗೆ ಬಿಡು ! ಪ್ರತಾಪವಂತರು, ಧನವಂತರು, ಹಿತವಚನರು, ಬುದ್ಧಿವಂತರು ಎಂದು ಮಿತ್ರರು ನಾಲ್ಕು ವಿಧ. ಪಾಂಡವರಲ್ಲಿ ಇವೆಲ್ಲ ಗುಣಗಳಿವೆ. ಕೇಳೆನ್ನ ಮಾತನ್ನು ! ' ಎಂದನು.

ದುರ್ಯೋಧನನು ಆ ಮಾತಿಗೆ ಹುಸಿನಕ್ಕು, 'ಆಚಾರ್ಯಪುತ್ರ ! ನನ್ನ ಮಾತನ್ನು ಕೇಳು ! ಭೀಮಸೇನನೆಂಬ ದುರ್ಮತಿಯು ನನ್ನ ಪ್ರಿಯ ಸೋದರನನ್ನು ಪಶುವಿನನ್ನಂತೆ ಕೊಂದು, ರಕ್ತವನ್ನು ಕುಡಿದು, ಕುಣಿದಾಡಿದುದನ್ನು ನೀನೂ ಕಂಡೆಯಲ್ಲವೇ ? ಅಂತಹ ಖಲನಿಂದ ಸಂಧಿಯು ಎಂದಿಗೂ ಆಗದು. ಇದು ನಮ್ಮ ಸ್ವರೂಪವೈರವಿದನ್ನಾರಿಸಲು ಆರಿಗೂ ಸಾಧ್ಯವಿಲ್ಲ. ನೀವಾರೂ ಏನೂ ಮಾಡಬೇಡಿರಿ ! ಕರ್ಣನು, ಆಯಾಸದಿಂದ ಗತವೀರ್ಯನಾಗಿರುವ ಪಾರ್ಥನನ್ನು ಇಂದು ಸಂಹರಿಸಿಬಿಡುವನು. ನಾನು ದುಃಶಾಸನನ ವೈರಿಯನ್ನು ಕೊಲ್ಲುವೆನು, ಚಿಂತಿಸಬೇಡ ! ' ಎಂದು ತನ್ನ ಸೈನಿಕರನ್ನು ಪಾಂಡವರ ಮೇಲೆ ದಾಳಿಯಿಡುವಂತೆ ಆಜ್ಞಾಪಿಸಿದನು.

# ೧೪. ಕೃಷ್ಣಾರ್ಜುನ ಯುದ್ಧ — ಕರ್ಣವಧೆ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್ ! ಪಾರ್ಥಾದಿರಥಿಗಳ ಕಾಳಗವು ಅತಿ ಭೀಕರವಾಯಿತು. ಕರ್ಣನು ಹನ್ನೆರಡು ಬಾಣಗಳನ್ನು ಬಿಟ್ಟನು. ಪಾರ್ಥನು ಹತ್ತು ಶರಗಳಿಂದ ಅವನ್ನು ಖಂಡಿಸಿ, ಎರಡು ಕೈಗಳಿಂದ ಬಾಣವರ್ಷವನ್ನು ಬಿಟ್ಟು ಕರ್ಣರಥವನ್ನು ಮುಚ್ಚಿದನು. ಅರ್ಜುನನು ಬಿಟ್ಟ ಬಾಣಗಳನ್ನು ಕರ್ಣನು ಪ್ರತಿಬಾಣಗಳಿಂದ ಖಂಡಿಸಿ ಕೆಡಹಿದನು. ಅರ್ಜುನನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಕೌರವಯೋಧರ ಅಂಬರ ಶರೀರಗಳು ಅಗ್ನಿಜ್ವಾಲೆಗಳಿಂದ ಸುಡಲಾರಂಭಿಸಿದವು. ಕರ್ಣನು ವಾರುಣಾಸ್ತ್ರದಿಂದ ಅದನ್ನು ಶಾಂತಗೊಳಿಸಿ, ಮಳೆಧಾರೆಗಳಿಂದ ಅಗ್ನಿಯನ್ನಾರಿಸಿದನು. ಮೇಘಗಳು ಮುಚ್ಚಿ ದಿಗಂತಗಳು ಅಂಧಕಾರಬಂಧುರವಾದವು. ಅರ್ಜುನನು ವಾಯವ್ಯಾಸ್ತ್ರದಿಂದ ಬಿರುಗಾಳಿಯನ್ನೆಬ್ಬಿಸಿ, ಆ ಮೇಘಮಂಡಲವನ್ನು ಚೆದರಿಸಿ, ಇಂದ್ರಾಸ್ತ್ರವನ್ನು ಪ್ರಯೋಗಿಸಿದನು. ಗಾಂಡೀವದಿಂದ ತೀಕ್ಷ್ಣ ಬಾಣಗಳು ಸಾವಿರಗಟ್ಟಲೆ ಹೊರಬಂದು, ಕರ್ಣನ ರಥವನ್ನು ಮುಚ್ಚಿದವು. ಶರವಿದ್ಧನಾಗಿ ರಕ್ತಸಿಕ್ತವಾದ ಕರ್ಣನು ಕುಪಿತನಾದನು. ಅವನು ಭಾರ್ಗವಾಸ್ತ್ರವನ್ನು ಪ್ರಯೋಗಿಸಿದನು. ಆಗ ಇಂದ್ರಾಸ್ತ್ರವು ಶಾಂತವಾಯಿತು. ಕರ್ಣಬಾಣಗಳಿಂದ ನಿಹತರಾದ ಪಾಂಚಾಲ ಸೋಮಕಭಟರ ಭಿನ್ನ ದೇಹಗಳಿಂದ ರಣರಂಗವು ತುಂಬಿಹೋಯಿತು.

ಭೀಮಸೇನನು ಕರ್ಣವಿಕ್ರಮವನ್ನು ಕಂಡು, ಕೈ ಕೈ ಹಿಸುಕಿ, ಸಿಟ್ಟಿನಿಂದ 'ಅರ್ಜುನ ! ಶ್ರೀಕೃಷ್ಣನೆಂದರೆ ಸಾಕ್ಷಾದ್ವಿಷ್ಣುವು. ಅಂತಹ ಸ್ವಾಮಿಯು ಸಾರಥಿಯಾಗಿರಲು, ಏಕೆ ಹೆದರುವೆ ? ಸ್ಥಾಣುವಿನ ಕೈಗಳಲ್ಲಿ ಸಿಕ್ಕು, ಆತನ ಆಲಿಂಗನದಿಂದ ವಜ್ರಸದೃಶದೇಹನಾದ ನಿನ್ನನ್ನು ಕರ್ಣನ ಬಾಣಗಳೆಂತು ಗಾಯಗೊಳಿಸಿದವು ? ನೀನು ನೋಡುತ್ತಿರಲು ಅಧರ್ಮಪಕ್ಷಪಾತಿಯಾದ ಸೂತಸುತನು ಪಾಂಚಾಲಯೋಧರನ್ನು ಸಂಹರಿಸುತ್ತಿರುವನು. ನಿನ್ನ ಬಾಣಗಳನ್ನೆಲ್ಲ ಇವನು ವ್ಯರ್ಥಗೊಳಿಸಿ, ಇನ್ನೂ ಜೀವಿಸಿರುವನೆಂದರೆ, ಆಶ್ಚರ್ಯವಾಗಿದೆ ! ಈ ಪಾಪಿಯು ನಿರ್ಭೀತನಾಗಿ ನಮ್ಮನ್ನು ಷಂಢತಿಲರೆಂದು ಬೈದು, ಕೃಷ್ಣೆಯನ್ನು ಅಪತಿಕಳಂತಾದೆ ಎಂದು ನಿಂದಿಸಿದುದನ್ನು ಮರೆತೆಯಾ ? ಉಪೇಕ್ಷಿಸದೆ ಇವನನ್ನು ಕೊಲ್ಲು !' ಎಂದು ರೇಗಿಸಿದನು. ವಾಸುದೇವನು 'ಏನಿದು ಅರ್ಜುನ ! ನಿನ್ನ ಬಾಣಗಳಷ್ಟು ಅಗ್ಗವಾದವೇ ಸೂತಸುತನಿಗೆ ? ಕೊಲ್ಲಿವನನ್ನು ! ವಿಷ್ಣುವೀರ್ಯದಿಂದ ವಿಜೃಂಭಿತನಾಗಿ ವಜ್ರಪಾಣಿಯು, ನಮುಚಿಯನ್ನು ಕೊಂದಂತೆ, ನನ್ನಿಂದ ಪ್ರೇರಿತನಾಗಿ ಕರ್ಣನನ್ನು ಸಂಹರಿಸು ! ಸಾಗರ ಮೇಖಲವು, ಸಪತ್ತನವನಾಚಲವು ಆದ ಭೂವಲಯವನ್ನು ಗೆದ್ದು ಧರ್ಮರಾಜನಿಗೆ ಸಮರ್ಪಿಸು !' ಎಂದನು.

ಕೃಷ್ಣ ಭೀಮರ ವಚನಾಂಕುಶದಿಂದ ಪ್ರೇರಿತವಾಗಿ ಪಾರ್ಥಮದಗಜವು,

ಕೌರವ ಸೈನ್ಯವಾಹಿನಿಯನ್ನು ಹೊಕ್ಕು ಶರಕರಗಳಿಂದ ಶತ್ರುಮುಖಕಮಲಗಳನ್ನು ಕಿತ್ತೊಗೆಯಿತು. ಪಾರ್ಥನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಬ್ರಹ್ಮಾಸ್ತ್ರದಿಂದಲೇ ವಾರಿಸಿ, ಕರ್ಣನು ಬಾಣಶತದಿಂದ ಪಾರ್ಥನನ್ನೂ ವಾಸುದೇವನನ್ನೂ ಪೀಡಿಸಿದನು. ಅರ್ಜುನನು ಮಹಾಸ್ತ್ರದಿಂದ ಶತಸಹಸ್ರ ಬಾಣಗಳನ್ನು ಸೃಜಿಸಿ ಶತ್ರುಶಿರಕರ ಪಾದಾಯುಧಗಳನ್ನು ಕತ್ತರಿಸಿ, ಕೆಡಹಿದನು. ಕುರುವೀರರು ಆರ್ತನಾದ ಮಾಡುತ್ತಾ ಮತ್ತೆ ಕರ್ಣನ ಮೊರೆ ಹೊಕ್ಕರು. ಕರ್ಣನು ಅರ್ಜುನನ ಜ್ಯಾಲತೆಯನ್ನು ಮುರಿದನು. ಅದು ತನ್ನಷ್ಟಕ್ಕೇ ತಾನೇ ಚಿಗುರಿ ಮೇಲೆದ್ದು ಮತ್ತೆ ದೃಢವಾಯಿತು. ಇಂತು ಹತ್ತು ಸಲ ಖಂಡಿಸಿದರೂ ಬೆಳೆದುನಿಂತ ಗಾಂಡೀವ ಜ್ಯಾಬಂಧವು ಅಚ್ಛೇದ್ಯವೆಂದರಿತು ಕರ್ಣನು, ತನ್ನನ್ನು ಕೊಲ್ಲಲೆಣಿಸಿ ಬಿಟ್ಟ ಅರ್ಜುನನ ಘೋರ ಶರವನ್ನು ಹತ್ತು ಚೂರಾಗಿ ಕತ್ತರಿಸಿದನು. 'ಭಲೇ ಕರ್ಣ ! ಭಾಪು ಅರ್ಜುನ !' ಎಂಬ ಶಬ್ದಗಳು ಅಂಬರದಿಂದ ಕೇಳಬಂದವು. ಅರ್ಜುನನು ಕರ್ಣನಿಗೆ ನೆರವಾಗಿ ನಿಂತ ದುರ್ಯೋಧನ, ಕೃಪ, ದ್ರೌಣಿ, ಕೃತವರ್ಮರನ್ನು ಕ್ಷಣದಲ್ಲಿ ವಿರಥರನ್ನಾಗಿಸಿ, ಶರಶತದಿಂದ ಜರ್ಜರಿತಗಾತ್ರರನ್ನು ಮಾಡಿದನು. ಆಗ ಅವರು ರಣವಿಹ್ವಲರಾಗಿ, ಪಾರ್ಥಕರ್ಣರ ಯುದ್ಧವನ್ನು ನೋಡುತ್ತಾ ನಿಂತರು.

ಅರ್ಜುನನ ವಿಕ್ರಮವು ಹೆಚ್ಚಾಗುತ್ತಾ ಬಂದುದನ್ನು ಕಂಡು, ಕರ್ಣನು ನಾಗಬಾಣವನ್ನು ಧನುವಿಗೆ ಜೋಡಿಸಿದನು. ಹಿಂದೆ ಖಾಂಡವವನದಾಹಕಾಲದಿ ಅಶ್ವಸೇನನೆಂಬ ತಕ್ಷಕಪುತ್ರನು ಉಳಿದಿದ್ದನಲ್ಲವೇ ? ಅವನ ತಾಯಿಯು ಅವನನ್ನು ನುಂಗಿ, ಅರ್ಜುನನ ಬಾಣಕ್ಕೆ ತುತ್ತಾಗಿ, ಬಾಲದಲ್ಲಿದ್ದ ಅವನನ್ನು ಉಳಿಸಿದ್ದಳು. ಆ ಸೇಡಿನಿಂದ ಉರಿಯುತ್ತಿದ್ದ ಅಶ್ವಸೇನನು ಕರ್ಣನ ನಾಗಬಾಣದಲ್ಲಿ ಬಂದು ಸೇರಿದ್ದನು. ಆ ನಾಗಬಾಣವನ್ನು ಕರ್ಣನು ಅರ್ಜುನ ಸಂಹಾರಕ್ಕೆಂದೇ ಮೀಸಲಿಟ್ಟು ನಿತ್ಯವೂ ಚಂದನ ಪುಷ್ಪಗಳಿಂದ ಪೂಜಿಸುತ್ತಿದ್ದನು.

ಕರ್ಣನು ನಾಗಾಸ್ತ್ರವನ್ನು ಬಿಡುವಾಗ ಬಹು ದುಃಶಕುನಗಳು ಕಾಣಿಸಿದವು. ದಿಕ್ಕುಗಳು ಉರಿಯುವಂತೆ ತೋರಿದವು. ಆಕಾಶದಿಂದ ಕೊಳ್ಳಿಗಳು ಉದುರಿದವು. ಲೋಕಪಾಲರು ಹಾಹಾಕಾರ ಮಾಡಿದರು. 'ಆಯಿತಿನ್ನು ಅರ್ಜುನನ ಸಂಹಾರ'ವೆಂದು ಕೌರವರು ನಿಶ್ಚಯಿಸಿದರು. 'ನನ್ನ ಸುತನೆಂತು ಪಾರಾಗುವನೆ'ಂದು ಇಂದ್ರನು ತತ್ತರಿಸಿದನು. ಬ್ರಹ್ಮಾದಿ ರುದ್ರಾಂತರು ವಿಜಯನಿಗೇ ಜಯವೆಂದು ನಿಶ್ಚಿಂತರಾಗಿದ್ದರು.

ಆಗ ನಾಗಬಾಣವನ್ನು ನೋಡಿ ಶಲ್ಯನು 'ಕರ್ಣ ! ತಡೆ ! ಕುತ್ತಿಗೆಗೆಂದು ನೀನು ಗುರಿ ಇಟ್ಟಿರುವೆ. ಅದು ಗುರಿ ತಪ್ಪುವಂತಿದೆ. ಶಿರಸ್ಸಿಗೆ ಸರಿಯಾಗಿ ನೋಡಿ ಬಿಡು ಬಾಣವನ್ನು !' ಎಂದನು. ಕರ್ಣನು ಅವನ ವಿಪರೀತ ವಚನಗಳಿಂದ ಕಿಡಿಕಿಡಿಯಾದನು. 'ಶಲ್ಯ ! ಸುಮ್ಮನಿರು ! ಈ ಕರ್ಣನು ಎರಡು ಸಲ ಗುರಿಯಿಡುವ ದಡ್ಡನಲ್ಲ. ಬಿಟ್ಟ ಶರವನ್ನು ಮತ್ತೆ ಬಿಡುವ ಹೇಡಿ ಅಲ್ಲ. ನೋಡುತ್ತಿರು ಈ ಬಾಣದಿಂದಲೇ ಕೆಳಗೆ ಬೀಳುವ ಅರ್ಜುನಶಿರವನ್ನು!' ಎಂದು ನಾಗಬಾಣವನ್ನು

ಅರ್ಜುನನ ಗಲವನ್ನುದ್ದೇಶಿಸಿ ಬಿಟ್ಟನು. ಅದು ಅಶ್ವಸೇನನ ಕ್ರೋಧದಿಂದ ಉರಿಯುತ್ತಾ ವೇಗದಿಂದ ಅರ್ಜುನನ ಕಡೆ ನಡೆದು, ಅಂತರಿಕ್ಷದಲ್ಲಿ ಬರುತ್ತಿತ್ತು. ಶ್ರೀಕೃಷ್ಣನು ನಿಮೇಷ ಮಾತ್ರದಲ್ಲಿ ಆ ಬಾಣವನ್ನು ವ್ಯರ್ಥಗೊಳಿಸಲೋಸುಗ ತನ್ನ ಪಾದದಿಂದ ರಥವನ್ನು ತುಳಿದು, ಭೂಮಿಯಲ್ಲಿ ಬಾಗಿಸಿದನು. ಶ್ರೀಕೃಷ್ಣನ ಭಾರಕ್ಕೆ ಸಹಿಸಲಾರದೆ, ಶ್ವೇತವವಾಹಗಳು ಮುಗ್ಗರಿಸಿದವು. ರಥದ ಎಡಚಕ್ರವೂ ಭೂಮಿಯಲ್ಲಿ ಐದಂಗುಲದಷ್ಟು ಪ್ರವೇಶಿಸಿದುದರಿಂದ ರಥವು ಬಾಗಿ ನಿಂತಿತು.

ಕರ್ಣನು ಪರಶುರಾಮನನ್ನು ನೆನೆದು ಆ ಭಗವಂತನು ಪ್ರಸಾದಿಸಿದ ಬ್ರಹ್ಮಾಸ್ತ್ರವನ್ನು ನಾಗಶರದಲ್ಲಿ ಅಭಿಮಂತ್ರಿಸಿ ಬಿಟ್ಟಿದ್ದನು. ಬ್ರಹ್ಮಾಸ್ತ್ರ ನಾಗಶರ, ಅಶ್ವಸೇನರ ವೇಗವು ಅನಿವಾರ್ಯವಾಗಿತ್ತು. ಆದುದರಿಂದ ಅರ್ಜುನನಿಗೆ ಪ್ರತಿಬ್ರಹ್ಮಾಸ್ತ್ರದಿಂದ, ಅದನ್ನು ವಾರಿಸುವ ಅವಕಾಶ ಸಿಗಲಿಲ್ಲ. ಇದನ್ನರಿತು ಸರ್ವಜ್ಞನು, ಸರ್ವಶಕ್ತನು ಆದ ಶ್ರೀಕೃಷ್ಣನು, ರಥವನ್ನು ತುಳಿದು ಕೆಳಗಿಳಿಸಿದನು. ಆಗ ಕುತ್ತಿಗೆಗೆ ಗುರಿಯಿಟ್ಟ ನಾಗಶರವು ವೇಗದಿಂದ ಬಂದು ಬಾಗಿದ ರಥದ ವೇಗದಿಂದ ಗುರಿತಪ್ಪಿ ಅರ್ಜುನನ ಕಿರೀಟವನ್ನು ಹೊತ್ತುಕೊಂಡು ಹೋಯಿತು.

ಆ ಕಿರೀಟವನ್ನು ಬ್ರಹ್ಮದೇವನು ಇಂದ್ರನಿಗಾಗಿ ಮಾಡಿಸಿ, ಅನುಗ್ರಹಪೂರ್ವಕವಾಗಿ ಕೊಟ್ಟಿದ್ದನು. ಇಂದ್ರನದನ್ನು ದಾನವಸಂಹಾರಕಾರ್ಯ ಚತುರನಾದ ಪಾರ್ಥನಿಗೆ ಕೊಟ್ಟಿದ್ದನು. ನಾಗಶರದ ಆಘಾತದಿಂದ ವರವಜ್ರವೈಡೂರ್ಯಾದಿಮಣಿಖಚಿತವಾದ ಕಿರೀಟವು ಚೂರುಚೂರಾಗಿ ಕೆಳಗೆ ಬಿತ್ತು. ಅತಿಸಿಟ್ಟಿನಿಂದ ಬಿಟ್ಟ ತನ್ನ ನಾಗಶರವು ಬ್ರಹ್ಮಾಸ್ತ್ರತಕ್ಷಕಸುತರಿಂದ ಕೂಡಿದ್ದೂ ವ್ಯರ್ಥವಾದುದನ್ನು ಕಂಡು, ಕರ್ಣನು ಬೆರಗಾದನು.

ಅಸ್ತಾದ್ರಿಯಿಂದ ಕೆಳಗೆ ಬಿದ್ದ ಸೂರ್ಯಮಂಡಲದಂತೆ, ಹೇಮಜಾಲಸಮನ್ವಿತವು, ವಜ್ರಮಾಣಿಕ್ಯಖಚಿತವು ಆದ ಅರ್ಜುನ ಕಿರೀಟವು ಬಿತ್ತು. ಅರ್ಜುನನೂ ವಿಷಾದಾಶ್ಚರ್ಯಭರಿತನಾದನು. ಬಾಗಿದ ರಥವನ್ನು ಮತ್ತೆ ಭುಜಬಲದಿಂದ ಮೇಲೆತ್ತಿ ಸರಿಪಡಿಸಿ ಕೂತ ಪಾರ್ಥಸಾರಥಿಯನ್ನು ಕಂಡು ದೇವಋಷಿಗಂಧರ್ವರು ಶ್ರೀಶನ ಭಕ್ತವಾತ್ಸಲ್ಯವನ್ನು ಕೊಂಡಾಡಿ ಪಾಡಿದರು. ಕೃತಜ್ಞತಾಶ್ರುಪೂರ್ಣನಯನನಾಗಿ ಪಾರ್ಥನು ಶ್ರೀಕೃಷ್ಣನಿಗೆ ಶಿರಬಾಗಿ ನಮಿಸಿದನು. ಅರ್ಜುನನು ತನ್ನ ತಲೆಗೆ ಧವಳದುಕೂಲವನ್ನು ಸುತ್ತಿ ಬಿಳಿಮೇಘದಲ್ಲಿದ್ದ ನೀಲಮೇಘದಂತೆ ಕಂಗೊಳಿಸಿದನು. ಗೋಕರ್ಣಳ (ಹಾವು) ಮಗನನ್ನು ಗೋವರ (ಶರ) ದಲ್ಲಿಟ್ಟು ಗೋಪುತ್ರ (ಸೂರ್ಯಪುತ್ರ)ನು ಬಿಡಲು ನೋಡಿ, ಗೋಪಾಲಕ ಗೋಪತಿಯು ಗೋವಿವರದದಲ್ಲಿ (ಭೂಮಿ) ಗೋಪತಿ (ಇಂದ್ರ) ಸುತನ ರಥವನ್ನು ಹೊಗಿಸಿ, ಗೋ (ವಜ್ರ) ಮಯಕಿರೀಟವನ್ನು ಮಾತ್ರ ಕಳೆದು, ಗೋ (ಭಾರತಿ) ರಮಣ ಸಹೋದರನನ್ನು ಕಾಪಾಡಿದನು. ಗೋವಿಂದನಿಗೆ ನಮೋನಮಃ !

ಆಗ ಅಶ್ವಸೇನನು ಕಿರೀಟವು ಮಾತ್ರ ಪತಿತವಾಗಿ, ಅರ್ಜುನನು ಬದುಕಿರುವುದನ್ನು

ಕಂಡು, ಕುಪಿತನಾದನು. ಅವನು ಕರ್ಣನನ್ನು ಸೇರಿ, 'ಕರ್ಣ ! ಗುರಿ ತಪ್ಪಿ ಹೀಗಾಯಿತು. ಮತ್ತೊಂದು ಸಲ, ಇನ್ನೊಂದು ಬಾಣದಲ್ಲಿಟ್ಟು ನನ್ನನ್ನು ಕಳಿಸು ! ನಿನ್ನ ವೈರಿಯನ್ನು ತಪ್ಪದೆ ಕೊಂದು ಬರುವೆನು' ಎಂದು ಬೇಡಿದನು. ಆ ಮಾತಿಗೊಪ್ಪದೆ ಕರ್ಣನು 'ಮೊದಲು ನೀನಾರು ಹೇಳು !' ಎಂದನು. ಅಶ್ವಸೇನನು ಖಾಂಡವದಾಹದಲ್ಲಿ ಉಳಿದು, ತಾಯಸಾವಿನ ಸೇಡನ್ನು ತೀರಿಸಲು ಬಂದಿರುವ ತಕ್ಷಕ ಪುತ್ರನು ತಾನೆಂದು ಹೇಳಿದನು. ಕರ್ಣನು ಅವನ ಸಹಾಯವನ್ನು ತಿರಸ್ಕರಿಸಿ, 'ಎಲವೋ ಹಾವೇ ! ನಿನ್ನ ಮಾರ್ಗವನ್ನು ನೀನು ನೋಡಿಕೋ ! ನಿನ್ನ ವೈರಿಯು ನನ್ನ ವೈರಿಯಾದನೆಂಬ ಮಾತ್ರಕ್ಕೆ, ಅನ್ಯ ಸಹಾಯ ಪಡೆದು ಅರಿಜಯವನ್ನು ಸಾಧಿಸುವ ಹೇಡಿ ಅಲ್ಲ ರಾಧಾಸುತನೆಂದು ತಿಳಿ ! ಬಿಟ್ಟ ನಾಗಶರವನ್ನು ಮತ್ತೆ ತೊಡಲಾರೆನು. ಇದು ನನ್ನ ವ್ರತವು. ನಡೆ ಇಲ್ಲಿಂದ !' ಎಂದನು.

ಅಶ್ವಸೇನನು ತಾನಾಗಿ ಪಾರ್ಥನನ್ನು ಸಂಹರಿಸಲು ನಿಶ್ಚಯಿಸಿ, ಬಾಣದಂತೆ ಉರಿಯುತ್ತಾ ಅರ್ಜುನನ ಕಡೆ ನಡೆದನು. ಶ್ರೀಕೃಷ್ಣನು, 'ಅರ್ಜುನ ! ನೋಡಲ್ಲಿ ! ಹಿಂದೆ ವನದಾಹದಲ್ಲಿ ಉಳಿದ ಅಶ್ವಸೇನನೆಂಬ ತಕ್ಷಕಸುತನು ನಿನ್ನನ್ನು ಕೊಲ್ಲಲೆಣಿಸಿ ಬಹುವೇಗದಿಂದ ಬರುತ್ತಿರುವನು. ಕರ್ಣಬಾಣದಲ್ಲಡಗಿ ಬಂದಿದ್ದ ಈ ಪಾಪಿಯ ಪ್ರಯತ್ನವು ವ್ಯರ್ಥವಾಯಿತು. ದ್ವಿಗುಣಿತ ಕೋಪದಿಂದ ತಾನಾಗಿ ನಿನ್ನ ಮೇಲೇರಿ ಬರುವ ಈ ದುಷ್ಟ ಸರ್ಪವನ್ನು ಖಂಡಿಸಿ ಸಂಹರಿಸು !' ಎಂದು ಎಚ್ಚರಿಸಿದನು.

ಅರ್ಜುನನು ಶರವೇಗದಿಂದ ಬರುವ ನಾಗನನ್ನು ನೋಡಿ, ಆರು ಶರಗಳಿಂದ ಅವನನ್ನು ಖಂಡಿಸಿ ಕೆಡಹಿದನು. ಅದೇ ಸಮಯದಲ್ಲಿ ದಶಬಾಣಗಳಿಂದ ತನ್ನನ್ನು ಪೀಡಿಸಿದ ಕರ್ಣನನ್ನು ನೂರು ಬಾಣಗಳಿಂದ ತಾಡಿಸಿ, ಸಿಂಹನಾದ ಮಾಡಿದನು. ಕರ್ಣನು ಬಾಣವಿದ್ಧಗಾತ್ರನಾಗಿ, ಕೋಪಾರುಣಿತನೇತ್ರನೂ ಆದನು. ಅವನು ಜನಾರ್ದನನನ್ನು ಹನ್ನೆರಡು ಬಾಣಗಳಿಂದ ಪೀಡಿಸಿ, ಅರ್ಜುನನನ್ನು ಮತ್ತೆ ನೂರು ಶರಗಳಿಂದ ಪೀಡಿಸಿದನು. ಆನಂದಮಯಗಾತ್ರನಾದ ಶ್ರೀ ಕಳತ್ರನು ಕರ್ಣಬಾಣಗಳಿಗೆ ವಿದ್ಧನಾಗಿ, ರಕ್ತಸಿಕ್ತನಾದಂತೆ ತೋರಿದನು. ಅದನ್ನು ಕಂಡು ಕೌರವರು ಕರ್ಣನನ್ನು ಪ್ರಶಂಸಿಸಿದರು. ಅರ್ಜುನನು ಕ್ರುದ್ಧನಾಗಿ, ಮಣಿಗಣಾಲಂಕೃತವಾದ ಕರ್ಣನ ಕವಚವನ್ನು ಶರನಿವಹದಿಂದ ಸೀಳಿ, ಕೆಡಹಿದನು. ಅಂತೆಯೇ ಕುಂಡಲಗಳನ್ನೂ ಕೆಡಹಿ, 'ಕರ್ಣ ! ನಿನ್ನ ಸಹಜ ಕವಚ ಕುಂಡಲಗಳನ್ನೂ ಇಂತೇ ಕೆಡಹುವ ಸಮರ್ಥನು ನಾನೆಂದು' ತೋರಿದನು.

ವಿಕವಚನಾದ ಕರ್ಣನು ವಿಜಯನ ನಿಶಿತ ಬಾಣಗಳಿಂದ ಮರ್ಮಗಳಲ್ಲಿ ತಾಡಿತನಾಗಿ, ಕಾರುವ ರಕ್ತಪ್ರವಾಹಗಳಿಂದ ಕೆಂಪಾಗಿ, ಅಸ್ತಂಗತನಾಗುತ್ತಿದ್ದ ಸೂರ್ಯಮಂಡಲದಂತೆ ಕಂಗೊಳಿಸಿದನು. ಗೈರಿಕಧಾತು ಚಿತ್ರಿತವಾದ ಪರ್ವತದಂತೆ ಕಾಣುವ ಕರ್ಣನು ಹೆದರದೆ ಯಮದಂಡ ಸದೃಶವಾದ ಬಾಣಗಳಿಂದ ಪಾರ್ಥನನ್ನೂ ಪಾರ್ಥಸಾರಥಿಯನ್ನೂ ಪೀಡಿಸಿದನು. ಅರ್ಜುನನು ಅವನ ಬಾಣಗಳನ್ನು ಖಂಡಿಸಿ,

ಕಾಂಡಶತದಿಂದ ಹೊಡೆದನು. ಕರ್ಣನು ವಿವಶನಾಗಿ, ರಥನೀಡದಲ್ಲಿ ಸುಮ್ಮನೆ ಕೂಡಲು ನೋಡಿ, ಅರ್ಜುನನೂ ಸುಮ್ಮನಾದನು. ಅದನ್ನು ಕಂಡು ಶ್ರೀಕೃಷ್ಣನು, 'ಅರ್ಜುನ ! ಪ್ರಮಾದವಶನಾಗಬೇಡ ! ವೈರಿಯು ಸಿಕ್ಕಾಗ ಬಿಡಬಾರದು. ಶತ್ರುವಿಜೃಂಭಣಕ್ಕೆ ಅವಕಾಶವನ್ನೀವ ಹುಚ್ಚರುಂಟೇ ? ವ್ಯಸನಮಗ್ನರಾದ ವೈರಿಗಳನ್ನು ಬಿಡದೆ ಕೆಡಹುವ ಬುದ್ಧಿವಂತನು ರಾಜ್ಯ ಧರ್ಮ ಕೀರ್ತಿಗಳನ್ನು ಗಳಿಸಿ ಸುಖಿಸುವನು. ಹೊಡೆ ಅವನನ್ನು !' ಎಂದನು.

ಅರ್ಜುನನು ಶರವೃಷ್ಟಿಯಲ್ಲಿ ಕರ್ಣರಥ, ಸೂತ, ತುರಗಗಳನ್ನು ಮುಣುಗಿಸಿದನು. ವತ್ಸದಂತಗಳಿಂದ ಗಾಯಗೊಂಡ ಕರ್ಣನು ಪುಷ್ಪಿತಾಶೋಕದಂತೆ ಬೆಳಗಿದನು. ಅರ್ಜುನಶರಗಳಿಗೆ ಪ್ರತಿಶರಗಳನ್ನರ್ಪಿಸಿ, ಹೆದರದೆ ಕಾದುವ ಕರ್ಣನು ದೇವಗಂಧರ್ವಾದಿ ಸಕಲರ ಪ್ರಶಂಸೆಗೆ ಪಾತ್ರನಾದನು. ಇಂತು ಬಹು ಘೋರಯುದ್ಧವು ನಡೆಯುತ್ತಿರಲು, ಕಾಲನು ಕರ್ಣನ ಮರಣವನ್ನು ಸೂಚಿಸುವನೆಂಬಂತೆ ಕರ್ಣನ ರಥವು ಭೂಮಿಯಲ್ಲಿ ಇಳಿಯತೊಡಗಿತು. ವಿಪ್ರಶಾಪದ ಫಲಕಾಲವೆಂಬಂತೆ ಭೂಮಿಯು ತನ್ನ ರಥದ ಎಡಚಕ್ರವನ್ನು ನುಂಗುತ್ತಿರುವದನ್ನು ಕಂಡು, ಕರ್ಣನು ನಿರ್ವಿಣ್ಣನಾದನು. ಶ್ರೀ ಭಾರ್ಗವನಿತ್ತ ಅಸ್ತ್ರ ಮಂತ್ರಗಳ ನೆನಪೂ (ನೆನಹೂ) ಅವನಿಗೆ ಬಾರದಾಯಿತು.

ಕರ್ಣನು ಕೈಗಳನ್ನೆತ್ತಿ ಆಡಿಸುತ್ತಾ, ದೈವವನ್ನೂ ಧರ್ಮವನ್ನೂ ಉದ್ದೇಶಿಸಿ ಇಂತೆಂದನು: 'ಧರ್ಮಪ್ರಧಾನರನ್ನು ಧರ್ಮವು ರಕ್ಷಿಸುವುದೆನ್ನುವರು. ನಾವು ನಿತ್ಯವೂ ಧರ್ಮರತರಾಗಿದ್ದೂ ನಷ್ಟರಾಗುತ್ತಿರುವೆವೆಂದರೆ, ಇದಕ್ಕಿಂತಲು ಅನ್ಯಾಯವು ಉಂಟೇ ?' ಎಂದು ಚಿಂತಿಸುವಾಗ, ರಥವು ಬಾಗಿ, ಅವನ ಕುದುರೆಗಳು ಮುಗ್ಗರಿಸಿದವು. ಸೂತನಾಗಿದ್ದ ಶಲ್ಯನು ನೊಗೆಯಿಂದ ಜಾರಿದನು. 'ಸರ್ವಶರವು ವ್ಯರ್ಥವಾಯಿತು. ಸಹಜ ಕವಚ ಕುಂಡಲಗಳು ಅಪಹೃತವಾದವು. ವಿದ್ಯೆಯನ್ನಿತ್ತ ಗುರುಗಳು ಶಾಪವನ್ನಿತ್ತರು. ಅಲ್ಪ ವಿಷಯಕ್ಕಾಗಿ ವಿಪ್ರನು ಮಹಾ ಶಾಪವನ್ನು ಕೊಟ್ಟನು. ಅಂಗರಾಜ್ಯವನ್ನಿತ್ತು ಪ್ರಾಣಸಖನಾಗಿದ್ದ ದುರ್ಯೋಧನ ಮಹಾರಾಜನ ಋಣವನ್ನು ತೀರಿಸದಾದೆನು. ಅವನಿಗೆ ಅಪಾರ ನಷ್ಟವಾಗಿದೆ. ಧರ್ಮಕ್ಕೆ ಜಯವೆಂಬುವರು. ಆದರೆ ನಮ್ಮ ವಿಷಯದಲ್ಲಿ ಆ ಮಾತು ವಿಪರೀತವಾಗಿದೆ !' ಎಂದು ಕರ್ಣನು, ದುರ್ಯೋಧನ ಪಕ್ಷಪಾತದಿಂದ ಚಿಂತಿಸಿ, ಮತ್ತೆ ಇಂತೆಂದು ಆಲೋಚಿಸಿದನು. 'ಧರ್ಮಾತ್ಮರಿಗೆ - ಪಾಂಡವರಿಗೆ ಜಯವಾಗದೆ, ಅಧರ್ಮಿಷ್ಠರಾದ ಕೌರವರಿಗೆ ಜಯವಾಗುವುದೇ ? ಹಾಗಾಗಬಾರದು. ಪಾಪಿ ಕೌರವರನ್ನು ಸೇರಿ, ನಿಷ್ಪಾಪಿಗಳೂ ಕೆಟ್ಟರು. ದೈವೇಚ್ಛೆಗೆದುರಿಲ್ಲ !'

ಇಂತು ಚಿಂತಿಸಿ, ಕರ್ಣನು ವಿವಿಧ ಬಾಣಗಳಿಂದ ಪಾರ್ಥ ಕೃಷ್ಣರನ್ನೂ ವೃಕೋದರನನ್ನೂ ಪೀಡಿಸಿದನು. ಅವನ ಬಾಣಗಳನ್ನು ವ್ಯರ್ಥಗೊಳಿಸಿ, ಅರ್ಜುನನು ಶರಜಾಲದಿಂದ ಅವನನ್ನು ಪೀಡಿಸಿದನು. ಕರ್ಣನ ರಥವು ಭೂವಿವರದಲ್ಲಿ ಕುಸಿಯುತ್ತಿತ್ತು. ಆಗ ರಾಧೇಯನು ರಥದಿಂದಿಳಿದು, ರಥಚಕ್ರವನ್ನೆತ್ತತೊಡಗಿದನು.

ಮಹಾಬಲನಾದ ಕರ್ಣನು ಎಷ್ಟು ಪ್ರಯತ್ನಿಸಿದರೂ, ರಥವು ಮೇಲಕ್ಕೇಳಲಿಲ್ಲ. 'ಅರ್ಜುನ ! ಸ್ವಲ್ಪ ನಿಲ್ಲು ! ಬಾಣಗಳನ್ನು ಬಿಡಬೇಡ ! ಕಾಪುರುಷನಂತೆ ವರ್ತಿಸಬೇಡ ! ಯುದ್ಧಧರ್ಮಗಳನ್ನರಿತಿರುವೆ ! ವೇದಾಂತಶಾಸ್ತ್ರದ ಅವಭೃತವನ್ನು ಹೊಂದಿರುವೆ ! ನಿನಗೆ ಹೆದರಿ ಹೇಳುವ ಮಾತಲ್ಲ ನೋಡಿಲ್ಲಿ ! ನನ್ನ ರಥದ ವಾಮ ಚಕ್ರವು ಕುಸಿದಿದೆ. ಅದನ್ನೆತ್ತಿ ಮತ್ತೆ ರಥದಿ ಕೂತು, ನಿನ್ನೊಡನೆ ಕಾದುವೆನು. ಶೂರತಮನಾದ ನಿನಗೆ ತಿಳಿಯದುದಿಲ್ಲ. ವಿಶಸ್ತ್ರನನ್ನು, ಶರಣಾಗತನನ್ನು, ವಿರಥನನ್ನು, ಯಾಚಮಾನನನ್ನು, ನಿದ್ರಾಮತ್ತನನ್ನು, ಹೊಡೆಯಬಾರದೆಂದು ಸಾಧು ವೃತ್ತವಿದೆ. ತಡೆ ಸ್ವಲ್ಪ' ಎಂದು ಕೂಗಿ ಹೇಳುವ ಕರ್ಣನ ಮಾತನ್ನಾಲಿಸಿ, ಪಾರ್ಥನು ಕೃಷ್ಣನ ಕಡೆ ನೋಡಿ, ಸುಮ್ಮನೆ ಕೂತನು.

ಶ್ರೀಕೃಷ್ಣನು ನಕ್ಕು, ಅರ್ಜುನನನ್ನು ಬಿಟ್ಟು ರಾಧೇಯನ ಕಡೆ ತಿರುಗಿ, ಇಂತೆಂದನು: 'ಕರ್ಣ ! ಧರ್ಮದ ಸ್ಮರಣೆಯು ಈಗ ಬಂತೇ ನಿನಗೆ ? ಪ್ರಾಯಃ ನೀಚರು ಸಂಕಟಗಳೊದಗಿದಾಗ ದೈವವನ್ನೂ, ಧರ್ಮವನ್ನೂ ಬೈವರು. ಆದರೆ ತಾವು ಮಾಡಿದ ಕರ್ಮಗಳಿಗೆ ತಕ್ಕಂತೆ ಫಲ ಕೊಡುವದು ಧರ್ಮ. ಧರ್ಮವನ್ನು ಕೆಡದಂತೆ ರಕ್ಷಿಸುವುದು ದೈವವು ಎಂಬ ಸತ್ಯವನ್ನವರು ಅರಿಯರು. ಅಂತೆಯೇ ದೈವವನ್ನು ತಮ್ಮ ಕಷ್ಟಗಳಿಗಾಗಿ ನಿಂದಿಸುವರು. ತಮ್ಮ ಪಾಪಕರ್ಮಗಳನ್ನು ನಿಂದಿಸರು ! ರಾಧೇಯ ! ಧರ್ಮಾಧರ್ಮ ಸ್ವರೂಪವನ್ನು ಚನ್ನಾಗಿ ವಿಚಾರಿಸದೆ, ಅವಿವೇಕಿಗಳಂತೆ ನಡೆದೆ ! ಅದರ ಫಲವನ್ನೀಗ ಅನುಭವಿಸುತ್ತಿರುವೆ ! ಒಂದೇ ಎರಡೇ ? ನೀನು ದುರ್ಯೋಧನ ದಾಸನಾಗಿ ನಡೆಸಿದ ಅಧರ್ಮಗಳೆಷ್ಟೋ ಇವೆ ! ಕೇಳು !

ವಾರಿಸಲು ಸಮರ್ಥರಾಗಿದ್ದು ಪಾಪಕೃತ್ಯವನ್ನು ವಾರಿಸದೆ ಇದ್ದವರು ಕೂಡ, ಪಾಪವನ್ನೆಸಗಿದವರೆಂದು ಗಣಿಸಲ್ಪಡುವರು. ಏಕವಸ್ತ್ರಳು, ರಜಸ್ವಲೆಯು ಆಗಿದ್ದ ದ್ರೌಪದಿಯನ್ನು ಸಭೆಗೆ ಸೆಳೆಸಿದೆ ! ದುಃಶಾಸನ, ಶಕುನಿ, ದುರ್ಯೋಧನರಂತಹ ಪಾಪಿಗಳ ಹೇಯ ಕಾರ್ಯಗಳಿಗೆ ಸಹಾಯಕನಾದೆ ! ಆಗ ಧರ್ಮದ ನೆನಪೇ ಬರಲಿಲ್ಲ ? ದ್ಯೂತಾನಭಿಜ್ಞನಾದ ಧರ್ಮರಾಜನನ್ನು ಮಾಯಾದ್ಯೂತದಲ್ಲಿ ಶಕುನಿಯು ಸೋಲಿಸಿದಾಗ ನಿನ್ನ ಧರ್ಮಜ್ಞಾನವೆಲ್ಲಡಗಿತ್ತು ? ಕರ್ಣ ! ಹದಿಮೂರು ವರ್ಷಗಳೂ ಕಳೆದು, ತಮ್ಮ ರಾಜ್ಯವನ್ನು ಬೇಡಿದ ಸತ್ಯಸಂಧರಿಗೆ ರಾಜ್ಯವನ್ನು ಕೊಡಕೂಡದೆಂದಾಗ ನಿನ್ನ ಧರ್ಮವೇನಾಗಿತ್ತು ? ಭೀಮಸೇನನಿಗೆ ವಿಷ ಇಟ್ಟು ನದಿಯಲ್ಲಿ ಕಟ್ಟಿ ಕೆಡಹಿ, ಸರ್ಪಗಳಿಂದ ಕಡಿಸುವಾಗ ನಿಮಗೇಕೆ ಧರ್ಮದ ಸ್ಮರಣೆ ಬರಲಿಲ್ಲ. ವಾರಣಾವತದಲ್ಲಿ ಮಲಗಿದ್ದ- ಪಾರ್ಥರಿದ್ದ ಮನೆಗೆ ಅರಗಿನ ಮನೆ ಅಲ್ಲವೇ ಅದು ? - ಬೆಂಕಿ ಹಚ್ಚುವಾಗ ನಿನ್ನ ಧರ್ಮವೆಲ್ಲಿ ಹೋಗಿತ್ತು ? ದುಃಶಾಸನನಿಂದ ಪೀಡಿಸಲ್ಪಡುವ ಕೃಷ್ಣೆ ಅತ್ತಾಗ, ನೀನು ನಕ್ಕೆ ! ಆಗ ನಿನ್ನ ಧರ್ಮಜ್ಞಾನವೇನಾಗಿತ್ತು ? ಅಪತಿಕಳಾದೆ ! ಕೌರವಾಂತಃಪುರವನ್ನು ಸೇರು ! ಎಂದು ಬೊಗಳುವಾಗ ನಿನಗೇಕೆ ಧರ್ಮದ ನೆನಪಾಗಲಿಲ್ಲ ? ರಾಜ್ಯಲೋಭದಿಂದ ಕಾದಾಡಲು ನಿಂತು

ಸರ್ವರಾಜಾರ್ಹರಾದ ಪಾಂಡವರಿಗೆ ಪಂಚಗ್ರಾಮಗಳನ್ನೂ ಕೊಡಿಸದ ನಿನಗೆ ಧರ್ಮಾಧರ್ಮ ವಿಚಾರವೀಗ ಬಂತೇ ? ರಣರಂಗದಲ್ಲಿ ನಿರಾಯುಧನಾಗಿದ್ದ ಅಭಿಮನ್ಯುವಿನನ್ನು ಆರು ವೀರರು ಮುತ್ತಿ ಕೆಡಹುವಾಗ ಪುಟ್ಟದ ಧರ್ಮಜ್ಞಾನವು ಈಗ ನಿನಗೆ ಹುಟ್ಟಿಬಂತೇ ? ಆಗ ಧರ್ಮವನ್ನೂ ಧರ್ಮಜ್ಞಾನವನ್ನೂ ಮರೆತು, ಈಗ ಧರ್ಮವನ್ನು- ಅಧರ್ಮಿಷ್ಠನಾಗಿ ಧಾರ್ಮಿಕರಿಗೆ ಉಪದೇಶ ಮಾಡಲು ತೊಡಗಿ, ಬರಿಯ ಕಂಠಶೋಷಣವನ್ನು ಮಾಡಿಕೊಂಡೆ ! ಹಿಂದೆ ನಲರಾಜನು ಪುಷ್ಕರನೆಂಬ ಪಾಪಿಯಿಂದ ದ್ಯೂತಜಿತನಾದನು. ಆದರೆ ಕೊನೆಗೆ ಧರ್ಮಬಲದಿಂದ ಅವನು ಕಲಿಯನ್ನು ನಿಗ್ರಹಿಸಿ, ಪುಷ್ಕರನನ್ನು ಸೋಲಿಸಿ, ರಾಜ್ಯವನ್ನು ಸಂಪಾದಿಸಿ ಸುಖಿಸಿದನು. ಅಂತೆಯೇ ಕಲಿ ದುರ್ಯೋಧನನನ್ನು ಕೊಂದು, ಪುಷ್ಕರನಂತಹ ಶಕುನಿಯನ್ನು ಸಂಹರಿಸಿ, ಪಾಂಡವರು ರಾಜ್ಯಪ್ರಾಪ್ತಿಯಿಂದ ಸುಖಿಸುವರು ' ಎಂದನು.

ಕರ್ಣನು ಕೃಷ್ಣವಚನವನ್ನಾಕರ್ಣಿಸಿ, ಲಜ್ಜೆಯಿಂದ ತಲೆತಗ್ಗಿಸಿ, ಉತ್ತರವನ್ನು ಕೊಡಲಾರದೆ ಸುಮ್ಮನಿದ್ದನು. ಕರ್ತವ್ಯವನ್ನರಿತು ಕರ್ಣನು ಪರಾಕ್ರಮದಿಂದ ಹೋರಾಡತೊಡಗಿದನು. ಅರ್ಜುನನೂ ದಿವ್ಯಬಾಣಗಳಿಂದ ಅವನನ್ನು ಪೀಡಿಸಿದನು. 'ಇವನು ರಥದಲ್ಲಿ ಕೂತರೆ ದುರ್ಜಯನಾಗುವನು. ಅವಕಾಶ ಕೊಡದೆ ಇವನನ್ನು ಸಂಹರಿಸು ! ' ಎಂಬ ಕೃಷ್ಣವಚನವನ್ನಾಲಿಸಿದ ಪಾರ್ಥನ ನೇತ್ರಾದಿ ವಿವರಗಳಿಂದ ಕ್ರೋಧಾಗ್ನಿ ಕಣಗಳು ಹೊರಬಂದವು. ಅವನು ಪ್ರಾಂಜಲಿಕವೆಂಬ ಬಾಣದಿಂದ ಕರ್ಣನ ರಥದ ಹಸ್ತಿಕಕ್ಷಾಧ್ವಜವನ್ನು ಕಡಿದು ಕೆಡಹಿದನು. ಕನಕಮಣಿ ಚಿತ್ರಿತವಾದ ಧ್ವಜದೊಡನೆ, ಕೌರವರ ಜಯಾಶೆಯೂ ಕಡಿದು ಬಿತ್ತು. ಅರ್ಜುನನು ಸೂರ್ಯರಶ್ಮಿಪ್ರತಾಪವು, ಕಾಲಾನಲಭಯಂಕರವು, ಯಮದಂಡಸನ್ನಿಭವು ಆದ ಅಂಜಲಿಕವೆಂಬ ಬಾಣವನ್ನು ಗಾಂಡೀವದಿ ಜೋಡಿಸಿ, ರುದ್ರದತ್ತವಾದ ಆ ಬಾಣದಲ್ಲಿ ಸತ್ಯ ಧರ್ಮಗಳನ್ನು ಆವಾಹಿಸಿದನು.

'ನಾನು ಗುರುಶುಶ್ರೂಷೆಯನ್ನು ನಿಷ್ಕಪಟನಾಗಿ ಗೈದಿದ್ದರೆ, ನನ್ನ ಸತ್ಯ ಧರ್ಮ ವ್ರತಗಳಿಂದ ಭಗವಂತನು ಪ್ರೀತನಾಗಿದ್ದರೆ, ಈ ನನ್ನ ಬಾಣವು ಕರ್ಣಪ್ರಾಣಹರ ವಾಗಲಿ ! ' ಎಂದು ಪ್ರತಿಜ್ಞೆಗೈದು, ಅರ್ಜುನನು ಆ ಬಾಣವರವನ್ನು ಕರ್ಣನ ಕುತ್ತಿಗೆಗೆ ಗುರಿಯಿಟ್ಟು ಬಿಟ್ಟನು. ರಥಚಕ್ರವನ್ನೆತ್ತುತ್ತಾ ವರಶರಗಳನ್ನು ಬಿಡುತ್ತಾ ಕೂತಿದ್ದ ಕರ್ಣನನ್ನು ಸಮೀಪಿಸಿ, ಆ ಮಹಾಸ್ತ್ರಯುತವಾದ ತೀಕ್ಷ್ಣ ಬಾಣವು ಹದಿನೇಳನೆಯ ದಿನದ ಅಪರಾಹ್ಣ ಮುಗಿಯುತ್ತಿರುವ ಸಮಯದಲ್ಲಿ ಕರ್ಣನ ಕುತ್ತಿಗೆಯನ್ನು ಖಂಡಿಸಿತು. ಅವನ ಶಿರವು ಶರವೇಗದಿಂದ ಮೇಲೆ ಹಾರಿ ಮತ್ತೆ ಕೆಳಗೆ ಬಿತ್ತು, ಆಮೇಲೆ ಕರ್ಣದೇಹವೂ ನೆಲಕ್ಕುರುಳಿತು. ಸುಖೋಚಿತವು, ಸುರೂಪವು ಆದ ಉದಾರಕರ್ಮನ ದೇಹವು ಬಿದ್ದುದನ್ನು ಕಂಡು, ಕೌರವರು ಹಾಹಾಕಾರ ಮಾಡಿ, ರೋದಿಸಿದರು. ಪಾಂಡವವೀರರು ವಿಜಯಧ್ವಾನಗಳನ್ನು ಮಾಡಿದರು. ಪಾಂಡವರು ಶಂಖಗಳನ್ನೂದಿದರು. ಧೃಷ್ಟದ್ಯುಮ್ನಾದಿ ವೀರರು ಕೃಷ್ಣಪಾರ್ಥರನ್ನು ಪ್ರಶಂಸಿಸಿ,

ಸಿಂಹನಾದಗಳನ್ನು ಮಾಡಿದರು. ಪ್ರಶಾಂತನಾದ ಅಗ್ನಿಯೋ, ಅಸ್ತಂಗತನಾಗುತ್ತಿರುವ ಸೂರ್ಯನೋ, ಎಂಬಂತೆ ಕರ್ಣನ ಶಿರವು ರಣರಂಗದಲ್ಲಿ ವಿರಾಜಿಸಿತು. ಕರ್ಣ ಭಾಸ್ಕರನು ಪಾರ್ಥಕಾಲನ ಪರಾಕ್ರಮದಿಂದ ಅಸ್ತಂಗತನಾದನು. ಕರ್ಣನ ತೇಜವು ಭಾಸ್ಕರ ಮಂಡಲವನ್ನು ಪ್ರವೇಶಿಸಿ, ಉಪರತವಾಯಿತು. ಶಲ್ಯನು ವಿವರ್ಣವದನನಾಗಿ, ಕರ್ಣರಹಿತವು, ಧ್ವಜಹೀನವು ಆದ ರಥವನ್ನು ಶಿಬಿರದ ಕಡೆಗೆ ಕೊಂಡು ಹೋದನು. ದುರ್ಯೋಧನನು ಕರ್ಣ ಮರಣದಿಂದ ದುಃಖಪರವಶನಾಗಿ, ಸೇನಾವಹಾರವನ್ನು ಗೈದು, ಮಿಕ್ಕ ಸೋದರರೊಡನೆ, ಶಿಬಿರವನ್ನು ಸೇರಿದನು.

## ೧೫. ಕೌರವ ಪಲಾಯನ — ಧರ್ಮಜ ಹರ್ಷ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಸಹಸ್ರನೇತ್ರಪ್ರತಿಮಾನನಾದ ಸಹಸ್ರಕಿರಣಸುತನು ಸಹಸ್ರಾಕ್ಷಸುತನ ಬಾಣದಿಂದ ಹತನಾಗಿ - ಸೂರ್ಯನು ಪಶ್ಚಿಮದಿಶೆಯನ್ನು ಸೇರುವಾಗ - ಅಸ್ತಂಗತನಾದನು. ಅರ್ಜುನ ಪ್ರತಾಪವನ್ನು ಸಹಿಸಲಾರದೆ ಕುರುಭಟರು ಓಡಿಹೋದರು. ಆಯುಧರಹಿತವು ಛಿನ್ನಧ್ವಜವುಆದ ರಥವನ್ನು ತೆಗೆದುಕೊಂಡು ಶಲ್ಯನು ಖಿನ್ನನಾಗಿ ಕೌರವಶಿಬಿರವನ್ನು ಸೇರಿದನು. ದುರ್ಯೋಧನನು ದುಃಖಾವೇಗದಿಂದ "ಕರ್ಣ ! ಕರ್ಣ !" ಎಂದು ರೋದಿಸಿದನು. ಆಕಾಶದಿಂದ ಸೂರ್ಯಬಿಂಬವೇ ಕಳಚಿ ಬಿತ್ತೆಂಬಂತಿರುವ ಕರ್ಣದೇಹವನ್ನಪ್ಪಿ ಗೋಳಾಡಿ, ಕುರುರಾಜನು ನಿರುತ್ಸಾಹನಾಗಿ, ಶಿಬಿರವನ್ನು ಸೇರಪೋದನು.

ಮದ್ರರಾಜನು ಕುರುರಾಜನನ್ನು ಸಮೀಪಿಸಿ, ದುಃಖೋದ್ವೇಗದಿಂದ ಮಾತಾಡಲಾರದೆ, ಬಿಕ್ಕಿ ಬಿಕ್ಕಿ ರೋದಿಸಿ, ಮೆಲ್ಲಗೆ ಇಂತೆಂದನು: 'ರಾಜನ್ ! ಇಂತಹ ಯುದ್ಧವನ್ನು ನಾನೆಂದೂ ಕಂಡಿಲ್ಲ. ಅನ್ಯೋನ್ಯಪ್ರಹಾರಗಳಿಂದ ಉಭಯಸೇನೆಗಳೂ ಪ್ರಾಯಃ ನಷ್ಟವಾಗಿವೆ. ಕರ್ಣಾರ್ಜುನರ ಕಾಳಗವು ಅನನ್ಯಾದೃಶವಾಗಿತ್ತು. ಕರ್ಣನು ಪಾರ್ಥವಾಸುದೇವರಿಗೂ ಭೀತಿಪ್ರದನಾಗಿ ಹೋರಾಡಿದನು. ಆ ಮಹಾನುಭಾವನು ಪ್ರಾಣಗಳಿಗೆ ಹೆದರದೆ ಕಾದಿ, ಕೊನೆಗೆ ನಿನಗಾಗಿ ಪ್ರಾಣಾರ್ಪಣ ಮಾಡಿದನು. ದೈವಾನುಕೂಲವಿಲ್ಲದೆ ಕುಬೇರಯಮವಾಸವಸಮವೀರನಾದ ಕರ್ಣನು ಸತ್ತನಾಗಲಿ ಪಾರ್ಥ ವಿಕ್ರಮದಿಂದಲ್ಲ. ವೀರ್ಯ ಶೌರ್ಯ ಧೈರ್ಯ ಗಾಂಭೀರ್ಯ ಔದಾರ್ಯ, ತೇಜ, ಬಲಗಳಿಂದ ಅವನಿಗೆ ಸಮರಿಲ್ಲ. ಅಂತಹ ಕರ್ಣನು ನಿಹತನಾದುದನ್ನು ಕಂಡು, ವಿಧಿಗೆ ಎದುರಿಲ್ಲವೆಂದು ತಿಳಿದಿರುವೆನು. ದುರ್ಯೋಧನ ! ಕರ್ಣನಿಗಾಗಿ ಶೋಕಿಸಬೇಡ! ಆ ಮಹೋದಾರವಿಕ್ರಮನು ವೀರಸ್ವರ್ಗವನ್ನು ಸೂರೆಗೊಂಡಿರುವನು. ಮನಸ್ಸಮಾಧಾನವನ್ನು ತಂದುಕೊಂಡು, ಮುಂದಿನ ಯುದ್ಧಕಾರ್ಯವನ್ನು ನಡೆಸು ! ಜಯವು ಯಾರಲ್ಲಿಯೂ ಸ್ಥಿರವಲ್ಲ.' ಆ ಮಾತಿಗೆ ಬದುಲಾಡಲಾಗದೆ, ದುರ್ಯೋಧನನು ನಿಟ್ಟುಸುರಿಟ್ಟು ತಲೆತಗ್ಗಿಸಿ, ಚಿಂತಾಕ್ರಾಂತನಾಗಿ ಕೂತನು.

ರಾಜನ್ ! ಕರ್ಣನು ನಿಹತನಾದುದನ್ನು ಕಂಡು, ವಿಜಯಹರ್ಷಿತನಾದ ಪಾರ್ಥನು ಸಿಂಹನಾದವನ್ನು ಮಾಡಿ, ದೇವದತ್ತವನ್ನೂದಿದನು. ಅದನ್ನು ಕೇಳಿ ನಿನ್ನ ಸುತರು ವ್ಯಥಿತರಾದರು. ಓಡಿಹೋಗುತ್ತಿರುವ ಕುರುವೀರರನ್ನು ಹಿಂದಿರುಗಿಸಲಾರದೆ, ಅವರೂ ಓಡಿ, ಶಿಬಿರವನ್ನು ಸೇರಿದರು. ನಡುಕಡಲಿನಲ್ಲಿ ಒಡೆದ ಹಡಗಿನಲ್ಲಿದ್ದವರಂತೆ ಕರ್ಣನನ್ನು ಕಳೆದುಕೊಂಡ ಕೌರವರು ಕಣ್ಣೀರಿಟ್ಟು, ಆಕ್ರಂದಿಸಿದರು. ಭೀಮಾರ್ಜುನರು ಹಿಂಬಾಲಿಸಿ ಕೊಲ್ಲುವರೆಂಬ ಭಯದಿಂದ ಕೌರವಭಟರೂ ಕಾಂದಿಶೀಕರಾಗಿ ಓಡಿಹೋದರು. ಸೊಂಡಿಲ ಕಡಿದ ಗಜಗಳು, ರಥಿಕರಿಲ್ಲದ ಸೂತರು, ಸಾದಿಗಳಿಲ್ಲದ ಕುದುರೆಗಳು, ರಣರಂಗವನ್ನು ಬಿಟ್ಟು ಹೋಗುವದನ್ನು ಕಂಡು, ಕಾಲ್ಬಲವೂ ಕಾಲಿಗೆ ಬುದ್ಧಿ ಹೇಳಿತು.

ದುರ್ಯೋಧನನದನ್ನು ಕಂಡು, ಸ್ವಲ್ಪ ಅಹಃಶ್ಶೇಷವಿರುವದರಿಂದ ಮತ್ತೆ ಯುದ್ಧಭೂಮಿಯನ್ನು ಸೇರಿ, ತನ್ನ ಸೂತನಿಗಿಂತೆಂದನು: 'ಸೂತ ! ಯಾರೇ ಹೋಗಲಿ ! ನಾನಿಂದು ನನ್ನ ಪ್ರಾಣಮಿತ್ರನನ್ನು ಕೊಂದ ಅರ್ಜುನನನ್ನು ಕೊಲ್ಲದೆ ಹಿಂತಿರುಗುವದಿಲ್ಲ. ಹೊಡೆ ರಥವನ್ನು ಅರ್ಜುನನಲ್ಲಿಗೆ ! ಅವನನ್ನು ಸಂಹರಿಸಿ, ಕರ್ಣನ ಋಣವನ್ನು ತೀರಿಸುವೆನು. ಆಮೇಲೆ ಆ ದುಷ್ಟಭೀಮನನ್ನು ಯಮಪುರಿಗಟ್ಟುವೆನು' ಎಂದನು. ಕ್ರೋಧದುರ್ನಿರೀಕ್ಷ್ಯನಾದ ಕುರುರಾಜನು ವಿಕ್ರಮಿಸುವದನ್ನು ಕಂಡು, ಇಪ್ಪತ್ತೈದು ಸಾವಿರ ಪದಾತಿ ಭಟರು ದುರ್ಯೋಧನನನ್ನು ಹಿಂಬಾಲಿಸಿ, ಯುದ್ಧರಂಗವನ್ನು ಪ್ರವೇಶಿಸಿದರು. ಪಾಂಡವಕೌರವ ಭಟರಿಗೆ ಮತ್ತೆ ತುಮುಲ ಯುದ್ಧಾರಂಭವಾಯಿತು.

ಭೀಮಸೇನನು ಧರ್ಮರತನಾದುದರಿಂದ ಪದಾತಿಗಳನ್ನು ಪದಾತಿಯಾಗಿ, ಎದುರಿಸಲು ರಥದಿಂದಿಳಿದನು; ಗದಾಪಾಣಿಯಾಗಿ ಬರುವ ಭೀಮನನ್ನು ಮುತ್ತಿ ನಿನ್ನ ಸೈನಿಕರು ಗದಾಪರಿಘಶೂಲಪ್ರಾಸಗಳನ್ನು ಪ್ರಯೋಗಿಸಿದರು. ಭೀಮಸೇನನು ಗದೆಯಿಂದ ಅವನ್ನು ಕೆಡಹಿ ಅವರನ್ನೂ ಕೆಡಹಿದನು. ಜಾತರೂಪಚಿತ್ರವಾದ ಭೀಮ- ಭೀಮಗದೆಯು ಅವರನ್ನೆಲ್ಲ ಸಂಹರಿಸಿತು. ಭೀಮಸೇನಾಗ್ನಿಯಲ್ಲಿ ಪತಂಗ ಸೈನಿಕರು ಬಿದ್ದು ನಷ್ಟರಾದರು. ಧನಂಜಯ ಧೃಷ್ಟದ್ಯುಮ್ನರು ಭೀಮಸೇನನಿಗೆ ನೆರವಾಗಿ ನಿಂತು ಕುರುಸೇನೆಯನ್ನು ನಾಶಪಡಿಸಿದರು. ನಕುಲಸಹದೇವರು ಶಕುನಿಯನ್ನು ಮುತ್ತಿ ಅವನ ಕುದುರೆಗಳನ್ನೂ ಸೂತನನ್ನು ಸಂಹರಿಸಿದರು. ಆ ಹೊತ್ತಿಗೆ ಇತರ ಕುರುವೀರರು ಬರಲು ಹೋರಾಟ ಘೋರವಾಯಿತು. ಅರ್ಜುನನು ಗಾಂಡೀವ ಮುಕ್ತ ನಾರಾಚಗಳಿಂದ ನೂರು ರಥಿಕರನ್ನೂ ಇಪ್ಪತ್ತೈದು ಸಾವಿರ ಕಾಲ್ಬಟರನ್ನೂ ಸಂಹರಿಸಿದನು. ಧೃಷ್ಟದ್ಯುಮ್ನನೂ ಕೌರವ ಯೋಧರೊಡನೆ ಹೋರಾಡಿ, ಅವರನ್ನು ಸೋಲಿಸಲು ಮತ್ತೆ ಕೌರವ ಸೇನೆಯು ಓಡಿಹೋಯಿತು. ಚೇಕಿತಾನ, ಶಿಖಂಡಿ, ಸಾತ್ಯಕಿ, ದ್ರೌಪದೇಯರು ಬಹು ಸೈನಿಕರನ್ನು ಮುತ್ತಿ ನಾಶಪಡಿಸಿದರು.

ಓಡಿ ಹೋಗುವ ವೀರರನ್ನು, ಕೈಬೀಸಿ, ಕರೆದು ದುರ್ಯೋಧನನೂ, ಅಸಂಭ್ರಾಂತನಾಗಿ, ತನ್ನನ್ನು ಮುತ್ತುವ ಪಾಂಡವವೀರರನ್ನು ಸಾವಿರ ಭಟರನ್ನು

ಸಂಹರಿಸಿದನು. ಓಡುವ ಭಟರನ್ನು ಕುರಿತು, 'ಎಲವೋ ಭಟರೇ! ಕುರುವೀರರೇ! ಎಲ್ಲಿಗೆ ಓಡುವಿರಿ ! ಎಲ್ಲಿದ್ದರೂ ಸಾವಿಲ್ಲದಿಲ್ಲ. ಪಾಂಡವವೀರದ್ವಯವಿಂದು ಕಾಲಯಮರಂತೆ ಕಾದಾಡಿ, ನಮ್ಮ ಸೇನೆಯನ್ನು ನಾಶಪಡಿಸುತ್ತಿರುವದು. ಹಾಗೆಂದು ಹೆದರಬೇಕೆ ? ಅವರ ಬಲವೂ ಬಹುಶಃ ನಷ್ಟವಾಗಿದೆ. ಸಂಖ್ಯೆಯಲ್ಲಿ ನಾವೇ ಹೆಚ್ಚಿರುವೆವು. ಕೃಷ್ಣಪಾರ್ಥರೂ ಅಲಸಿ ನಿಶ್ಶಕ್ತರಾಗಿರುವರು. ಇದೇ ಸಮಯವವರನ್ನು ಗೆಲ್ಲಲು. ನಾನು ಬಿಡದೆ ವಿಕ್ರಮಿಸಿ, ಅವರನ್ನೆಲ್ಲ ಕೊಂದುಬಿಡುವೆನು. ಪಾಪಿ ಪಾಂಡವರನ್ನು ಕೊಂದು, ನನಗಾಗಿ ಸತ್ತ ಮಿತ್ರರ ಋಣವನ್ನು ತೀರಿಸುವೆನು. ಒಂದು ವೇಳೆ ಮರಣವೇ ಆದೀತು! ಆದರೂ ಶ್ರೇಯಸ್ಕರವೆಂದು ತಿಳಿಯಿರಿ! ಯುದ್ಧಮರಣವು ವೀರಸ್ವರ್ಗಾಪಾದಕವಾಗಿದೆ ! ' ಎಂದು ಕೂಗುವ ಮಹಾರಾಜನ ಮಾತನ್ನು ಲೆಕ್ಕಿಸದೆ ಕೌರವ ಸೈನಿಕರು ದಿಕ್ಕಾಪಾಲಾಗಿ ಓಡಿಹೋದರು.

ಆಗ ಶಲ್ಯನು ಖಿನ್ನನಾಗಿ, ದುರ್ಯೋಧನನಿಗಿಂತೆಂದನು: 'ಮಹಾರಾಜ! ನೋಡು ರಣರಂಗವನ್ನು ! ಎಲ್ಲಿ ನೋಡಿದರೂ ನಾಗಾಶ್ವರಥಿಕಸಾದಿಪದಾತಿಗಳು ಭಿನ್ನ ಭಿನ್ನ ಗಾತ್ರರಾಗಿ ಬಿದ್ದಿರುವರು. ನಮ್ಮ ಸೈನಿಕರು ಕವಚ, ಧನುರ್ಬಾಣ, ಶೂಲಾದಿ ಸಾಧನಗಳಿಗೆ ಎರವಾಗಿ, ಭಯದಿಂದ ಓಡಿಹೋಗುತ್ತಿರುವರು. ರಥಗಳ ಚಕ್ರಗಳು ಮುರಿದು ಬಿದ್ದಿವೆ. ಶರಪ್ರಹಾರಹತರಾದ ಭಟರ ದೇಹಗಳು ರಕ್ತನದಿಗಳಲ್ಲಿ ತೇಲಿ ಹೋಗುತ್ತಿವೆ ! ಧನಂಜಯಕರ್ಣರ ವಿವಿಧ ಬಾಣಸಹಸ್ರದಿಂದ ಹತರಾದ ಸೈನಿಕ ಕೋಟಿಯು ರಥಮಾರ್ಗಕ್ಕೆ ಪ್ರತಿಬಂಧಕವಾಗಿದೆ. ನಮ್ಮವರು ಕರ್ಣನ ಮೃತಿಯಿಂದ ನಿರುತ್ಸಾಹರಾಗಿದ್ದಾರೆ. ಹಾ ಕರ್ಣ ! ಎಂಬ ಕೂಗೆಲ್ಲೆಡೆಯಿಂದ ಕೇಳಬರಹತ್ತಿದೆ. ಕರ್ಣನ ಮೃತಿಯನ್ನು ಕಂಡು, ಕುಮಾರನೆಂಬ ಮಮತೆಯಿಂದ ಅವನನ್ನು ಸಹಸ್ರ ಕರಗಳಿಂದ ಅಪ್ಪಿ, ಅವನ ರಕ್ತದಿಂದ ಸಿಕ್ತನಾದಂತಿರುವ ಭಗವಾನ್ ಸೂರ್ಯನು ರಕ್ತಾರುಣವರ್ಣನಾಗಿ, ಅಸ್ತಂಗತನಾಗುತ್ತಿರುವನು.

ರಾಜ್ಯಭೋಗಗಳನ್ನೂ ದಾರಾಪುತ್ರರನ್ನೂ ಬಿಟ್ಟು ಕೇವಲ ಕೀರ್ತಿಗಾಗಿ ಕಾದಾಡಿದ ಮಹಾರಾಜರು ನಿನಗಾಗಿ ಪ್ರಾಣಾರ್ಪಣ ಮಾಡಿರುವರು. ಸಾಕೀಗ ಯುದ್ಧ! ದುರ್ಯೋಧನ! ನಡೆ ಶಿಬಿರಕ್ಕೆ ! ನಾಳೆ ಶತ್ರುಸಂಹಾರವನ್ನು ಸಾಧಿಸುವೆಯಂತೆ ! ' ಎಂದನು. 'ಹಾ ಕರ್ಣ ! ' ಎಂದುಸುರುತ್ತಾ, ನಿಡುಸುಯ್ಯುವ ದುರ್ಯೋಧನನನ್ನು ಸಮಾಶ್ವಸಿಸಿ, ದ್ರೌಣಿ, ಕೃತವರ್ಮ, ಶಲ್ಯರು, ಶಿಬಿರದ ಕಡೆಗೆ ಕರೆದುಕೊಂಡು ಹೋದರು.

ವೃಕೋದರನು ದುರ್ಯೋಧನ ಪಲಾಯನವನ್ನು ಕಂಡು, ಹರ್ಷೋದ್ರಿಕ್ತನಾಗಿ, ಕುಣಿದಾಡಿದನು. ಅರ್ಜುನಕೇಶವರು ಶಂಖವಾದ್ಯಗಳನ್ನು ಮಾಡಿ, ಶಿಬಿರವನ್ನು ಸೇರಿದರು. ಶ್ರೀಕೃಷ್ಣನು ಪಾರ್ಥನನ್ನು ಬಿಗಿದಪ್ಪಿ ಹರ್ಷಮೂರ್ತಿಯಾಗಿ ಇಂತೆಂದನು: 'ಪಾರ್ಥ ! ವಜ್ರಪಾಣಿಯು ವೃತ್ರನನ್ನು ಕೊಂದನು. ನೀನು ಕರ್ಣನನ್ನು ಕೊಂದೆ ! ಇಂದ್ರವೃತ್ರರ ಯುದ್ಧದಂತೆ ಪಾರ್ಥಕರ್ಣರ ಸಂಗ್ರಾಮವು ಭೂಮಂಡಲದಲ್ಲಿ ವಿಖ್ಯಾತ

ವಾಗುವದು. ನಿನ್ನ ಕೀರ್ತಿಯು ನಿಷ್ಕಳಂಕ ಚಂದ್ರಮನ ಚಂದ್ರಿಕೆಯಂತೆ ಲೋಕವೆಲ್ಲವನ್ನು ಧವಳಗೊಳಿಸಿತು. ಧರ್ಮರಾಜನಿಗೆ ಈ ಸಂತಸದ ಸುದ್ದಿಯನ್ನು ತಿಳಿಸಿ, ಆನಂದ ಪಡಿಸುವುದು ನಮ್ಮ ಪ್ರಥಮ ಕರ್ತವ್ಯವಾಗಿದೆ!' ಎಂದನು. ಆಗ ಪಾರ್ಥ ಕೇಶವರು ವೃಕೋದರನಿಂದ ಕೂಡಿ, ಧರ್ಮರಾಜನ ಶಿಬಿರವನ್ನು ಸೇರಿದರು. ವಂದಿಸಿ ನಿಂತ ವೀರತ್ರಯರನ್ನೂ, ಆನಂದಬಾಷ್ಪತುಂದಿಲನಾದ ನೇತ್ರಗಳಿಂದ ನೋಡಿ, ಅರ್ಜುನ ಮುಖದಿಂದ ಕರ್ಣನಿಧನವನ್ನು ಕೇಳಿ, ಧರ್ಮರಾಜನು, ಅವರನ್ನು ಕರೆದಪ್ಪಿ ಕೃತಜ್ಞತಾಪೂರ್ಣನೇತ್ರಗಳಿಂದ ಕೃಷ್ಣನನ್ನವಲೋಕಿಸಿದನು. ಶ್ರೀಕೃಷ್ಣನು ಧರ್ಮರಾಜನನ್ನಭಿನಂದಿಸಿ ಇಂತೆಂದನು: 'ದೈವಾನುಗ್ರಹದಿಂದ ಪಾರ್ಥನು ಕರ್ಣನನ್ನೆದುರಿಸಿ, ಕೊಂದು ಕುಶಲಿಯಾಗಿ ಬಂದಿರುವನು; ವೃಕೋದರಯಮಳರೂ, ನೀನೂ ಅಕ್ಷತಗಾತ್ರರಾಗಿ ಕ್ಷೇಮದಿಂದಿರುವಿರಿ! ದೈವಾನುಗ್ರಹದಿಂದ ಪಾರ್ಥನು ಕರ್ಣನನ್ನು ಸಂಹರಿಸಿ, ನಿನಗೆ ವಿಜಯವನ್ನು ತಂದಿರುವನು. ರಾಜೇಂದ್ರ! ನಿನ್ನ ವಿಜಯವು ನಿಶ್ಚಯವಾಯಿತು. ಕೃಷ್ಣೆಯನ್ನು ನಿಂದಿಸಿದ ಪಾಪಿಗಳ ರಕ್ತವನ್ನು ಭೂಮಿದೇವಿಗೆ ಕುಡಿಸಿ, ಶತ್ರುಗಳನ್ನು ನಿಗ್ರಹಿಸಿ, ಬಂದಿರುವ ನಿನ್ನ ಸೋದರರನ್ನು ಪಾರ್ಷತ, ಸಾತ್ಯಕಿ, ಪ್ರಮುಖ ಸೇನಾಪತಿಗಳನ್ನು ಆಶೀರ್ವದಿಸು! ನಿನ್ನನ್ನು ಗಾಯಗೊಳಿಸಿದ್ದಲ್ಲದೆ, ನಿಂದಿಸಿ ನೋಯಿಸಿದ ಸೂತನಂದನನು ರಣರಂಗದಲ್ಲಿ ನಿಹತನಾಗಿ ಬಿದ್ದಿರುವನು. ತೋರುವೆನವನನ್ನು ನಿನಗೆ ಬಾ!' ಎಂದ ದೇವಕೀನಂದನನನ್ನು ಧರ್ಮರಾಜನು ಅಭಿವಂದಿಸಿ, 'ಪ್ರಭೋ! ನೀನೊಲಿದು ನಿಂತಿರಲು, ನಿನ್ನವರಿಗಾವುದು ದುರ್ಲಭವು. ನಿನ್ನ ಸಹಾಯದಿಂದ ಪಾರ್ಥನು ಕರ್ಣನನ್ನು ಸಂಹರಿಸಿ, ನನ್ನ ಮನಶ್ಶಲ್ಯವನ್ನು ಕಿತ್ತೂಗೆದನು. ನಿನ್ನ ಅನುಗ್ರಹದಿಂದ ಭೀಮಸೇನನೂ ನಿಸ್ತೀರ್ಣಪ್ರತಿಜ್ಞನಾಗಬೇಕಾಗಿದೆ. ನೀನಲ್ಲದಿನ್ನೊಂದು ದೈವವನ್ನರಿಯದ ಪಾಂಡವರನ್ನು ಕೌರವಸೇನಾ ಸಾಗರದ ಪಾರವನ್ನು ಸೇರಿಸಿ ಪೊರೆವ ಭಾರ ನಿನ್ನದಯ್ಯಾ ಜಿಯ್ಯಾ! ನೀನೆಂದು ನಮ್ಮ ಸಾರಥಿಯಾಗಿ ಬಂದೆಯೋ, ಅಂದೇ ಭೀಷ್ಮ-ದ್ರೋಣ-ಕರ್ಣ-ಶಲ್ಯರಾದಿ ಕುರುವೀರರು ನಿಹತಪ್ರಾಯರಾದರು' ಎಂದು ವಂದಿಸಿದನು.

ಶ್ರೀಕೃಷ್ಣನನ್ನನುಸರಿಸಿ ಪಾಂಡವ ವೀರರು ರಣಾಂಗಣವನ್ನು ಸೇರಿದರು. ಕಡಿಯಲ್ಪಟ್ಟು ಬಿದ್ದ ಕದಂಬದಂತೆ ಕಂಗೊಳಿಪ ಕರ್ಣನನ್ನು ನೋಡಿ, ಧರ್ಮರಾಜನು ವಿಸ್ಮಿತನಾದನು. 'ಗೋವಿಂದ! ಎಂತಹ ವೀರ ಸತ್ತಮನಿವನು! ಪೃಥಿವಿಯಲ್ಲಿ ಇವನಿಗೆ ಸಮವೀರರಿಲ್ಲ. ಇವನ ಸಾವಿನಿಂದ ದುರ್ಯೋಧನನು ಹತಾಶನಾದನು. ಇವನ ವಿಜಯದಿಂದ ನಾನು ವಿಜಯವಂತನಾದೆನು. ನಿನ್ನ ಪ್ರಸಾದವಿದು! ಇಲ್ಲದಿರೆ ಸಹಸ್ರನೇತ್ರನಾದ ಕರ್ಣನನ್ನು ಪಾರ್ಥನು ಗೆಲ್ಲುತ್ತಿದ್ದನೇ? ಹದಿಮೂರು ವರ್ಷ ಕಾಲವಹರ್ನಿಶವೂ ಕರ್ಣನಿಗೆ ಹೆದರುತ್ತಿದ್ದ ನಾವಿಂದು ಸುಖವಾಗಿ ನಿದ್ರಿಸುವೆವು. ಇಂತು ನುಡಿದು ಧರ್ಮರಾಜನು, ಅರ್ಜುನನನ್ನು ಮತ್ತೆ ಕರೆದಪ್ಪಿ ಆಶೀರ್ವದಿಸಿದನು. ಭೀಮಾರ್ಜುನ, ನಕುಲ, ಸಹದೇವ, ಸಾತ್ಯಕಿ, ಧೃಷ್ಟದ್ಯುಮ್ನ ಶಿಖಂಡಿ ಪ್ರಮುಖ

ಪಾಂಚಾಲ ಪಾಂಡವ ವೀರರು ವಿಜಯಧ್ವಾನಗಳಿಂದ ಧರ್ಮಜನನ್ನಭಿನಂದಿಸಿ ಮತ್ತೆ ತಂತಮ್ಮ ಶಿಬಿರಗಳಿಗೆ ತೆರಳಿದರು.

ಧೃತರಾಷ್ಟ್ರ ಮಹಾರಾಜ ! ಇಂತು ನಿನ್ನ ಅವಿವೇಕದಿಂದ ಮಹಾಯುದ್ಧವಾಗಿ, ಮಹಾರಥರೆಷ್ಟೋ ಸಾವಿರ ಮೃತರಾದರು. ಮುಂದೆ ಶಲ್ಯನು ಸೇನಾಪತಿಯಾಗಿ ಅರ್ಧದಿನ ಹೋರಾಡಿದನು" ಎಂದು ಸಂಜಯನು ನಿರೂಪಿಸಿದನು.

ವೈಶಂಪಾಯನನು ಜನಮೇಜಯನನ್ನು ನೋಡಿ 'ಮಹಾರಾಜ ! ಕರ್ಣಪರ್ವ ಕಥೆಯನ್ನು ಶ್ರೀವ್ಯಾಸಾನುಗ್ರಹದಿಂದ ತಿಳಿದು ನಿನಗೆ ಪೇಳಿದೆನು. ಕರ್ಣಪರ್ವವನ್ನು ಹೇಳಿ-ಕೇಳಿದವರು ಮಹಾಯಜ್ಞಶತಫಲವನ್ನು ಹೊಂದಿ ಸುಖಿಸುವರು. ಯಜ್ಞನೆಂದರೆ ಶ್ರೀಮಹಾಲಕ್ಷ್ಮೀಪತಿಯಾದ ವಿಷ್ಣುವು. ಆತನು ಬ್ರಹ್ಮ, ಶಂಕರ, ಶಕ್ರ, ಸೂರ್ಯ, ಯಮ, ವರುಣಾದಿ ದೇವತಾ ನಿಯಾಮಕನಾಗಿರುವನು. ಅವನೇ ಶ್ರೀಕೃಷ್ಣನು. ನರನೇ ಪಾರ್ಥನು. ಮುಖ್ಯಪ್ರಾಣನೇ ಭೀಮನು. ಅಶ್ವಿನೀದೇವದ್ವಯವೇ ನಕುಲಸಹದೇವರು. ಇಂತಹ ಮಹಾನುಭಾವರ ಪುಣ್ಯಕರವಾದ ಮಹಿಮೆಯನ್ನು ಪ್ರತಿಪಾದಿಸುವ ಭಾರತವನ್ನು ಅಸೂಯಾಮಾತ್ಸರ್ಯರಹಿತರಾಗಿ ಹೇಳುವವರು, ಕೇಳುವವರು ಕೂಡ ಧನ-ಧಾನ್ಯ ಯಶೋವಿಜಯ ವೀರ್ಯಾರೋಗ್ಯ ಸಂತಾನ ಸಂಯುತರಾಗಿ ಸುಖಿಸುವರು. ವಿಪ್ರರು ವೇದಾಧ್ಯಯನ ಫಲವನ್ನೂ, ಕ್ಷತ್ರಿಯರು ರಣವಿಜಯ ರಾಜ್ಯಸುಖಗಳನ್ನೂ, ವೈಶ್ಯರು ಧನಗೋಧಾನ್ಯಸಮೃದ್ಧಿಯನ್ನೂ, ಶೂದ್ರಾದಿ ಜನರು ಪಾಪನಿವೃತ್ತಿಯನನ್ನೂ ಹೊಂದುವರು. ಕರ್ಣಪರ್ವವು ಸರ್ವಸುಜನರಿಗೆ ವಿಷ್ಣು ಭಕ್ತಿ ನಿಜಜ್ಞಾನ, ವಿಷಯ ವಿರಕ್ತಿಗಳನ್ನು ಕೊಡುವುದಾಗಿದೆ. ದಿನವೂ ಕಪಿಲಾಗೋದಾನಮಾಡುತ್ತಾ ಒಂದು ವರ್ಷ ಕಳೆದರೆ ಸಿಗುವ ಮಹಾ ಪುಣ್ಯವನ್ನು, ಕರ್ಣಪರ್ವವನ್ನು ಶ್ರದ್ಧೆಯಿಂದ ಹೇಳಿ, ಕೇಳಿದವರು ಪೊಂದಿ ಸುಖಿಸುವರು.

**ಕರ್ಣಪರ್ವ ಮುಗಿಯಿತು**



# ೯. ಶಲ್ಯಪರ್ವ

## ೧. ಕರ್ಣವಧಾನಂತರ ವೃತ್ತಾಂತ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಇಂತು ಕೌರವರು ರಣದಲ್ಲಿ ಸೋತು, ಕರ್ಣರಹಿತರಾಗಿ ಶಿಬಿರವನ್ನು ಸೇರಿದರು. ಕೃತವರ್ಮ, ಶಕುನಿ, ಕೃಪ, ಗುರುಪುತ್ರ, ಸುಶರ್ಮ, ಶಲ್ಯರು, ಹಿಂಬಾಲಿಸಿ ಬರಲು, ದೀನವದನನಾಗಿ ದುರ್ಯೋಧನನು ಆತ್ಮವಿಜಯದಲ್ಲಿ ಹತಾಶನಾಗಿ, ಶಿಬಿರವನ್ನು ಸೇರಿದನು. ಅವನ ಯೋಧರೆಲ್ಲರು ವಿಕ್ಷತಗಾತ್ರರಾಗಿದ್ದರು. ಭೀಷ್ಮನು ಹತ್ತು ದಿನಗಳು, ದ್ರೋಣನು ಐದು ದಿನಗಳು, ಕರ್ಣನು ಎರಡು ದಿನಗಳು, ಹೋರಾಡಿ, ದುರ್ಯೋಧನನ ವಿಜಯಾಶೆಯಂತೆ ಅಸ್ತಂಗತರಾದರು.

ದುರ್ಯೋಧನನು ಶೋಕಾರ್ಣವಮಗ್ನನಾಗಿ, ಕರ್ಣನ ಮೃತಿಯಿಂದ ನಿರ್ವಿಣ್ಣನಾದನು. " ಹಾ ಕರ್ಣ ! ಹಾ ಕರ್ಣ !" ಎಂಬ ಶೋಕೋದ್ಗಾರಗಳು ಒಣ ಮುಖದಿಂದ ಹೊರಬಂದವು. ಹತಶೇಷರಿಂದ ಕೂಡಿ ಅವನು, ಕಾಲೆಳೆದುಕೊಂಡು, ಶಿಬಿರವನ್ನು ಸೇರಿದನು. ಶಾಸ್ತ್ರನಿಶ್ಚಿತವಾದ ಕಾರಣಗಳಿಂದ ರಾಜರು ಅವನ ದುಃಖವನ್ನು ಕಳೆದು, ಸಮಾಧಾನಪಡಿಸಲು ಯತ್ನಿಸಿದರು. ಆದರೂ ಕರ್ಣನ ವಧದಿಂದಾದ ಮನೋವ್ಯಥೆ ಅವನನ್ನು ಬಿಡದೆ ಕಾಡುತ್ತಿತ್ತು. ದೈವವು ಪುರುಷಕಾರದಕ್ಕಿಂತಲು ಬಲವತ್ತರವೆಂದು ಅವನು ತಿಳಿದು, ವಿಧಿಗೆ ತಲೆಬಾಗಿ, ಸಂಗ್ರಾಮವನ್ನು ಮುನ್ನಡೆಸಬೇಕೆಂದು ನಿಶ್ಚಯಿಸಿದನು. ಶಲ್ಯನನ್ನು ಸೇನಾಪತಿಯಾಗಿ ಮಾಡಿ, ರಾಜಪುಂಗವನು ಮಿತ್ರರಾಜರಿಂದ ಕೂಡಿ, ರಣರಂಗಕ್ಕೆ ತೆರಳಿದನು. ಹದಿನೆಂಟನೆಯ ದಿನದ ಯುದ್ಧವು (ಅಮಾವಾಸ್ಯೆ) ಅತಿಘೋರವು, ಮಹಾನರ್ಥಫಲವು ಆಯಿತು. ದೇವಾಸುರರಂತೆ ಪಾಂಡವರು ಕೌರವರು ಕಡಿದಾಡಿದರು. ಅಂದು ಮಧ್ಯಾನ್ಹಕಾಲದಲ್ಲಿ ಶಲ್ಯನು ಧರ್ಮರಾಜನಿಂದ ಹತನಾದನು. ಆಗ ನಿರ್ಬಂಧುವಾದ ದುರ್ಯೋಧನನು ನೈರಾಶ್ಯಭೀತಿಗಳಿಂದ ರಣರಂಗದಿಂದ ತೊಲಗಿ, ಕೃಷ್ಣದ್ವೈಪಾಯನವೆಂಬ ಮಡುವಿನಲ್ಲಿ ಅವಿತು ಕೂತನು. ಅಂದೇ ಅಪರಾಹ್ಣದಲ್ಲಿ, ಅವನನ್ನು ಹೃದಯದಿಂದ ಹೊರಬರಿಸಿ, ಗದಾಪಾಣಿ ವೃಕೋದರನು ತೊಡೆ ಮುರಿದು ಕೆಡಹಿದನು. ಅಲ್ಲಿಗೆ ಸರ್ವಕೌರವ ನಾಶವು ಸಂಪೂರ್ಣವಾಗಿ, ವೃಕೋದರನು ನಿಸ್ತೀರ್ಣಪ್ರತಿಜ್ಞನಾದನು.

ರಾಜನ್ ! ಆಗ ಕೌರವರ ಕಡೆ ಸಾಯದೆ ಉಳಿದವರೆಂದರೆ ಅಶ್ವತ್ಥಾಮ, ಕೃಪ, ಕೃತವರ್ಮರೆಂಬ ಮೂವರು ಮಹಾರಥರೇ. ಅಂದು ರಾತ್ರಿ ಅವರು ಪಾಂಡವ ಶಿಬಿರವನ್ನು ಹೊಕ್ಕು, ದ್ರೌಪದೇಯರೈವರನ್ನು ಧೃಷ್ಟದ್ಯುಮ್ನ ಶಿಖಂಡಿ ಮುಖರನ್ನು ಅಶ್ವತ್ಥಾಮನೂ, ಮಿಕ್ಕ ಕಾಂದಿಶೀಕರನ್ನು ಕೃಪ ಕೃತವರ್ಮರು ಸಂಹರಿಸಿದರು.

ಶಿಬಿರದಲ್ಲಿಲ್ಲದುದರಿಂದ ಪಾಂಡವರು ಉಳಿದರು. ಕೇಶವ ಸಾತ್ಯಕಿಯರೂ ಉಳಿದು ಅಂತು ಏಳು ವೀರರಲ್ಲಿಯೂ ಮೂರು ವೀರರಿಲ್ಲಿಯೂ ಉಳಿದರು.

ಮರುದಿನ ಪೂರ್ವಾಹ್ಣದಲ್ಲಿ ಸಂಜಯನು ಶಿಬಿರದಿಂದ ಹಿಂದಿರುಗಿ ಹಸ್ತಿನಾಪುರಿಯನ್ನು ಸೇರಿದನು. ಅವನು ಸಕಲ ಕೌರವವಿನಾಶವನ್ನು ಧೃತರಾಷ್ಟ್ರನಿಗೆ ತಿಳಿಸಲು ಬಂದಿದ್ದನು. ದುಃಖಶೋಕ ಸಮನ್ವಿತನಾದ ಸೂತನ ಮೈ ನಡಗುತ್ತಿರಲು, ಕೈಗಳನ್ನೆತ್ತಿ ಆಡಿಸುತ್ತಾ, ದುಃಖಾವೇಗದಿಂದ 'ಹಾ ರಾಜನ್!' ಎಂದು, ಮುಂದುಸುರಲಾರದೆ, ರೋದಿಸತೊಡಗಿದನು. ಅವನನ್ನು ಕಂಡು, ಆದ ಅನರ್ಥವನ್ನು ತಿಳಿದು ಅಂತಃಪುರವೇ ಆರೋದಮಾರೋದವಾಯಿತು.

ಸಂಜಯನು 'ಹಾ ! ಸತ್ತೆವು ! ' ಮಹಾರಾಜನು ಮೃತನಾದನು. ಕಾಲಗತಿಗೆದುರಿಲ್ಲ. ಶಕ್ರಸಮವಿಕ್ರಮರಾದ ನಮ್ಮ ವೀರರು ಪಾಂಡವರಿಗೆ ಸಿಕ್ಕು ಸತ್ತರು. ಯಾರು ಉಳಿದಿಲ್ಲ!' ಎಂದು ನೆಲದಿ ಬಿದ್ದನು. ಅದನ್ನು ಕಂಡು, ರಾಜಾಂತಃಪುರದ ಜನರು ಮಹಾದುಃಖದಿಂದ ಆಕ್ರಂದಿಸಿದರು. ಆ ಕುಮಾರಪರಿವಾರವಾದ ಅಂತಃಪುರವೇ 'ಹಾ ಮಹಾರಾಜ!' ಎಂದು ಎದ್ದು ಅಳುವಂತಾಯಿತು. ಸ್ತ್ರೀಪುರುಷರು ಅಲ್ಲಿಂದಿಲ್ಲಿಗೆ ದಿಕ್ಕು ತೋಚದೆ ಓಡಾಡಿದರು. ಮಹಾಶೋಕಪೀಡಿತವಾದ ರಾಜಪರಿವಾರವು ಹೋ ಎಂದು ಕೂಗಿ, ಹುಚ್ಚು ಹಿಡಿದಂತೆ ನಿಂತಿತು.

ಸಂಜಯನು ಪ್ರಜ್ಞಾನೇತ್ರನಾದ ಧೃತರಾಷ್ಟ್ರನನ್ನು ಸಮೀಪಿಸಿ, ವಂದಿಸಿ, ಅಳುತ್ತಾ, 'ರಾಜನ್ ! ನಾನು, ಸಂಜಯನೆಂಬ ಪಾಪಿಯು, ಬಹು ಕೆಟ್ಟವಾರ್ತೆಯನ್ನರುಹಲು ಬಂದಿರುವೆನು ಕೇಳು ! ಮದ್ರಾಧಿಪನಾದ ಶಲ್ಯನು ಹತನಾದನು; ಸೌಬಲನಾದ ಶಕುನಿಯೂ ಸತ್ತನು. ಅವನ ತಮ್ಮನಾದ ಉಲೂಕನು ಮೃತನಾದನು. ಕಾಂಭೋಜ, ಶಕ, ಸಂಸಪ್ತಕರು, ಮ್ಲೇಂಛರು, ಪಾರ್ವತೀಯರು, ಯವನರು, ನಲ್ದಿಕ್ಕುಗಳಿಂದ ಬಂದಿದ್ದ ರಾಜರು, ರಾಜಪುತ್ರರು ಎಲ್ಲರೂ, ರಣರಂಗ ನಿಹತರಾದರು. ರಾಜನ್! ಏನು ಹೇಳಲಿ ! ನಿನ್ನ ಮಗನಾದ ದುರ್ಯೋಧನನು ತೊಡೆ ಮುರಿದು, ದ್ವೈಪಾಯನ ಸರಸ್ತೀರದಲ್ಲಿ ಬಿದ್ದಿರುವನು. ಪಾಂಡವರ ಕಡೆಯವರಾದ ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೇಯರು, ಉತ್ತಮೌಜ, ಯುಧಾಮನ್ಯು, ಮೊದಲಾದವರು ಗುರುಪುತ್ರಾದಿಗಳಿಗೆ ಸಿಕ್ಕು ಮೃತರಾದರು. ಚೇದಿ, ಪಾಂಚಾಲ, ಪ್ರಭದ್ರಕರಲ್ಲಿ ಯಾರೂ ಉಳಿದಿಲ್ಲ. ನಿನ್ನ ಪುತ್ರರೆಲ್ಲರೂ ಭೀಮನಿಹತರಾದರು. ಭೀಮಸೇನನ ಪ್ರತಿಜ್ಞೆಯೊಡನೆ ಕೌರವ ವಿನಾಶವೂ ಸಂಪೂರ್ಣವಾಯಿತು. ನರ ಗಜಸಾದಿರಥಿಕರೊಬ್ಬರೂ ಉಳಿದಿಲ್ಲ. ಶಿಬಿರಗಳು ಶೂನ್ಯಪ್ರಾಯವಾಗಿವೆ. ಕಾಲ ಮೋಹಿತರಾಗಿ ಕಡಿದಾಡಿ, ಕಾಲನ ಮನೆಗೆ ತೆರಳಿದರು ಕೌರವ ಪಾಂಡವ ಭಟರು. ಅವರಲ್ಲಿ ಕೇಶವ ಸಾತ್ಯಕಿ ಧರ್ಮ ಭೀಮಾರ್ಜುನ ನಕುಲ ಸಹದೇವರೂ, ನಿಮ್ಮಲ್ಲಿ ಕೃತವರ್ಮ, ಕೃಪಾಶ್ವತ್ಥಾಮರೂ ಮಾತ್ರ ಉಳಿದಿರುವರು. ಮಹಾರಾಜ ! ದುರ್ಯೋಧನ

ಮಹಾರಾಜನ ವೈರಬೀಜವಿಂದು ಬೆಳೆದು ವಿಷವೃಕ್ಷವಾಗಿ, ಸರ್ವ ಗಜತುರಗ ಸಾದಿರಥಿಕರನ್ನು ಹೇಳಹೆಸರಿಲ್ಲದಂತೆ ನಾಶಮಾಡಿತು. ಈ ಹಾಳು ವಾರ್ತೆಯನ್ನು ನಿನಗೆ ಹೇಳಲು, ಈ ಪಾಪಿ ಸಂಜಯನು ಮಾತ್ರ ಉಳಿದಿರುವನು' ಎಂದು ನೆಲದಲ್ಲಿ ಕುಕ್ಕರಿಸಿ ಬಿದ್ದು ಅಳಲಾರಂಭಿಸಿದನು.

ಧೃತರಾಷ್ಟ್ರನು ಆ ಮಾತನ್ನಾಲಿಸಿ, ಎಚ್ಚರದಪ್ಪಿ ಬಿದ್ದನು. ಗಾಂಧಾರಿಯೂ ಶೋಕಕರ್ಶಿತಳಾಗಿ, ಮೂರ್ಛೆ ಬಿದ್ದಳು. ಅದನ್ನು ಕಂಡು ಕೌರವನಾರಿಯರು ನೆಲದಿ ಹೊರಳಿ ಬಿದ್ದು ಅತ್ತರು. ಕ್ರೂರ ದುಸ್ಸಹ ವಾರ್ತೆಯನ್ನು ಕೇಳಿದ ರಾಜಕುಲವು ವ್ಯಾಕುಲವಾಯಿತು. ಧೃತರಾಷ್ಟ್ರನು ಮೆಲ್ಲನೆ ಎಚ್ಚತ್ತು ಹುಚ್ಚನಂತೆ ದಿಕ್ಕು ದಿಕ್ಕು ನೋಡಿ, 'ಸಂಜಯ ! ಏನಂದೆ ? ನನ್ನ ಪುತ್ರನು ಮೃತನಾದನೇ ? ನನಗಿನ್ನಾರು ದಿಕ್ಕು ?' ಎಂದು ಮತ್ತೆ ಮೂರ್ಛಿತನಾದನು. ಬಂಧುನಾರಿಯರು ಶೀತಲೋಪಚಾರಗಳನ್ನು ಮಾಡಿ, ವ್ಯಜನಗಳಿಂದ ಬೀಸಿದರು. ಆಗ ಗಾಂಧಾರಿ ಧೃತರಾಷ್ಟ್ರರು ಮೈತಿಳಿದು ಹೋ ! ಎಂದೊದರಿ ಸ್ವಲ್ಪಕಾಲ ಕಲ್ಬೊಂಬೆಗಳಂತೆ ಕೂತರು. ಅವರ ಮುಖದಿಂದ ನಿಟ್ಟುಸಿರು, ಅವರ ಕಂಗಳಿಂದ ಬಿಸಿಕಣ್ಣೀರು ಸಂತತವಾಗಿ ಹೊರಬಂತು. ಸಂಜಯನೂ ಅವರಿಂದ ಕೂಡಿ ರೋದಿಸಿದನು. ಅಂತಃಪುರದ ನಾರಿಯರು ಮೂರ್ತಿವೆತ್ತ ಶೋಕರಸದಂತೆ ನಿಂತರು.

ಧೃತರಾಷ್ಟ್ರನು ಅಂತಃಪುರದ ನಾರೀಗಣವನ್ನು ಅಲ್ಲಿಂದ ಒಳಮನೆಗೆ ಕಳಿಸಿ, ನಿಡುಸುಯ್ದು ಗದ್ಗದಿತಕಂಠನಾಗಿ, ಸಂಜಯನಿಗಿಂತೆಂದನು : 'ಸಂಜಯ ! ನನಗೆ ಹುಚ್ಚು ಹಿಡಿದಂತಾಗಿದೆ ! ಸ್ತ್ರೀಯರೆಲ್ಲರೂ ಅಂತರ್ಮಂದಿರವನ್ನು ಸೇರಿದರೇ ? ಯಾರಿಲ್ಲ ತಾನೆ ? ಏನು ನಡೆಯಿತು ರಣರಂಗದಲ್ಲಿ ? ಎಂತಾಯಿತು ಸರ್ವನಾಶ ? ಹೇಳು! ಸ್ಥಿರನಾಗಿ ಕೇಳುವೆನು' ಎಂದನು. ಸಂಜಯನು 'ಮಹಾರಾಜ ! ಯಾರೂ ಇಲ್ಲಿಲ್ಲ, ಕೇಳು ! ಹೇಳುವೆನು ರಣವೃತ್ತವನ್ನು ! ಶೋಕಿಸಿ ಫಲವಿಲ್ಲ. ವಿಧೀ ಬಲೀಯವಾಗಿದೆ. ನಮ್ಮ ಕೈಲಿ ಏನೂ ಇಲ್ಲ, ತಂದುಕೋ ಸಮಾಧಾನವನ್ನು ! ' ಎಂದನು.

ಧೃತರಾಷ್ಟ್ರನು ಹೊಗೆಯಾಡುವ ಅಗ್ನಿಕುಂಡದಂತೆ, ನಿಡುಸುಯ್ಯುತ್ತಾ ಕೈಗಳನ್ನು ಅಲ್ಲಾಡಿಸುತ್ತಾ ಚಿಂತಾಶೂನ್ಯಹೃದಯನಾಗಿ ಸಂಜಯನಿಗಿಂತು ನುಡಿದನು. "ಸಂಜಯ ! ರಣರಂಗದಿ ನನ್ನ ಸುತರೆಲ್ಲರೂ ಮೃತರಾಗಿ, ಪಾಂಡವರು ಮಾತ್ರ ಅಕ್ಷತಗಾತ್ರರಾಗಿ ಉಳಿದಿರುವರೆಂದು ಕೇಳಿ, ನನಗೆ ಬಹು ದುಃಖವಾಗಿದೆ ! ಆಶ್ಚರ್ಯವೂ ಆಗಿದೆ ! ನನಗೆ ಜೀವನವು ದುರ್ಭರವೆನಿಸಿದೆ. ಇನ್ನು ನಾನೇಕೆ ಬದುಕಿರಬೇಕು ? ಯಾರಿರುವರೆನ್ನವರು ಹೇಳು! ಸಕಲ ಪುತ್ರನಾಶವನ್ನು ಕೇಳಿಯೂ, ಒಡೆದು ಚೂರಾಗದಿರುವ ಈ ನನ್ನ ಗುಂಡಿಗೆಯು ಕಲ್ಲಿಗಿಂತ ಕಠಿಣವೆಂದು ತೋರುತ್ತಿದೆ.

ಹಾ ಪುತ್ರರೇ ! ಕಣ್ಣಿಲ್ಲದ ಕುರುಡನಾಗಿದ್ದೂ ಕೈಯಿಂದ ಮುಟ್ಟಿ ತಿಳಿದು, ನನ್ನ

ಕರುಳಿನ ತಿರುಳಾದ ನಿಮ್ಮ ರೂಪ ಬಲ ವೀರ್ಯಾದಿಗಳನ್ನರಿತು, ಪ್ರಾಣಾಧಿಕರೆಂದು ಪ್ರೀತಿಸಿ ಬೆಳೆಸಿದನು. ಬಾಲಭಾವದಿಂದ ಯೌವ್ವನವನ್ನು ಹೊಂದಿ, ಮತ್ತೆ ಮಧ್ಯವಯಸ್ಕರಾದ ನಿಮ್ಮ ವಿಕ್ರಮ ವಿಹಾರಗಳನ್ನು ಕಿವಿಯೇ ಕಣ್ಣಾಗಿ ಕೇಳಿ, ತಿಳಿದು ಆನಂದಪಡುತ್ತಿದ್ದೆನು. ಅಂತಹ ಪ್ರಿಯ ಪುತ್ರರಿಂದು ನಿಶ್ಶೇಷವಾಗಿ ಮೃತರಾದರೆಂದು ಕೇಳಿ, ನಾನೇಕೆ ಸಾಯದೆ ಬದುಕಿರುವೆನೆಂದು ವ್ಯಥೆಯಾಗಿದೆ. ನೂರು ಸುತರಲ್ಲಿ ಒಬ್ಬನನ್ನಾದರೂ ಮುದುಕನಿಗೆ ಊರುಗೋಲಾಗಿರಲೆಂದು ಉಳಿಸದೆ ನನ್ನ ಶತ್ರುಗಳು ಸಂಹರಿಸಿಬಿಟ್ಟರಲ್ಲ ! ನಾನೆಂತಹ ಪಾಪ ಮಾಡಿದೆನೋ ?

ರಾಜೇಂದ್ರ ! ನಿನ್ನಂತಹ ಸುತರತ್ನನನ್ನು ಕಳೆದುಕೊಂಡ ನನಗಿನ್ನಾರು ದಿಕ್ಕು? ಆವುದು ಗತಿ ? ನಿನ್ನನ್ನು ಬಿಡದೆ ಅನುಸರಿಸುವ ಪೃಥ್ವೀಪಾಲರ ಹಿಂದೆ ನೀನೂ ಹೋದೆಯಾ ? ಒಂದು ಸಲ ಬಂದು ನನಗೆ ಹೇಳಿ ಹೋಗಬಾರದೇ ? ಸಾಮಾನ್ಯ ಯೋಧನಂತೆ ನಿನ್ನಂತಹ ಮಹಾರಾಜನೂ ಮಣ್ಣಿನಲ್ಲಿ ಬಿದ್ದು ಸಾಯುವಂತಾಯಿತೇ ? ನಿನ್ನ ಸುಹೃದ್ಬಾಂವರಿಗಿನ್ನಾರು ರಕ್ಷಕರು? ವೀರ! ಈ ಕುರುಡ ಮುದುಕನನ್ನು ಬಿಟ್ಟು ನೀನೆಲ್ಲಿಗೆ ಹೋಗುವೆ? ನಿನ್ನನ್ನು ಕೊಂದ ಪಾಪಿ ಪಾರ್ಥನು, ನಿನ್ನ ಅಭಿಮಾನ ಪ್ರೀತಿಗಳನ್ನೂ ಕೊಂದನೇ? ಅಪರಾಜಿತನಾದ ನಿನ್ನನ್ನು ಆ ಭೀಮನೆಂತು ಕೊಂದನು? ಹಾ ! ಮಗನೇ ! ಇನ್ನು ನನ್ನನ್ನು ಕಂಡು 'ತಾತ ! ತಾತ !' ಎಂದು ಕರೆಯುವರಾರು ? ನನಗೆ ಪ್ರಾತಃಕಾಲದಿ ವಂದಿಸಿ 'ಮಹಾರಾಜ!'ಎಂದು ಕರೆದು, ಲಾಲಿಸುವ ನಿನ್ನಂತಹ ಪುತ್ರರತ್ನನೆಂತು ಸಿಗುವನು ನನ್ನಂತಹ ಪಾಪಿಗೆ ?

ರಾಜನ್ ! ಸರ್ವಸರ್ವಂಸಹೆಯನ್ನೂ ನಾನೇ ಆಳುವೆನು. ಪಾಂಡವರಿಗೆ ಐದೂರಲ್ಲ ಸೂಜಿಯ ಮೊನೆಗಿದ್ದ ಮಣ್ಣನ್ನೂ ಕೊಡೆನು. ಭಗದತ್ತ ಕೃಪ, ಜಯದ್ರಥರಿರುವರು ; ಭೂರಿಶ್ರವ, ಶಲ್ಯ, ಬಾಹ್ಲೀಕ, ಸೋಮದತ್ತರಿರುವರು ; ಗುರುಸುತನಿರುವನು. ಭೀಷ್ಮ ದ್ರೋಣರು ರಣದುರ್ಜಯರು. ಮಾಗಧ, ಶಕುನಿ, ಬೃಹದ್ಬಲರು ಮಹಾವೀರರು. ಅಲಾಯುಧ ಅಲಂಬುಷರ ಬೆಂಬಲವಿದೆ. ಎಲ್ಲರಿಗೂ ಮಿಗಿಲಾದ ಕರ್ಣನು ನನಗಾಗಿ ಕಾದು ಜಯವನ್ನು ತರುವನು. ಇಂತಹ ಸಹಾಯ ಸಂಪನ್ನನಾದ ನನಗೆ ಸಂಧಿಯ ಮಾತೇಕೆ ? ನಾನೊಬ್ಬನೇ ಪಾಂಡವರನ್ನೆಲ್ಲ ಕೊಂದು ಬರುವೆನು. ಅವರಿಗೆ ಸಹಾಯನಾಗಿರುವ ಕೃಷ್ಣನು ನನಗೆ ಹೆದರಿ, ಯುದ್ಧ ಮಾಡುವದಿಲ್ಲವೆಂದು, ಕೇವಲ ಸಾರಥಿಯಾಗಿ, ಬಂದಿರುವನು. ನನಗೆ ವಿಜಯವು ನಿಶ್ಚಿತವು !' ಎಂಬಿತ್ಯಾದಿ ವಚನಗಳನ್ನು, ಸಂಜಯ! ದುರ್ಯೋಧನನು ಬಹುಸಲ ನುಡಿದಿರುವನು.

ಅವನ ಮಾತುಗಳೆಲ್ಲ ಸುಳ್ಳಾದವು. ಪಾಂಡವರು ಐವರೂ ತಂತಮ್ಮ ಪ್ರತಿಜ್ಞೆಗಳನ್ನು ಪೂರ್ಣವಾಗಿಸಿ, ವಿಜಯವಂತರಾದರು. ಭೀಮಸೋರ್ವನು ಗದಾಪಾಣಿಯಾಗಿ ನನ್ನ ಸುತರನ್ನು ನೂರು ಜೀವಾತುಗಳನ್ನೂ ಬಿಡದೆ ಕೊಂದನೆಂದರೆ, ನಾನೆಷ್ಟು ದುರದೃಷ್ಟವಂತನು ! ಶಿಖಂಡಿಯು ಭೀಷ್ಮನನ್ನು ಕೆಡಹಿದನೆಂದರೆ, ನರಿಯು ಸಿಂಹನನ್ನು ಸೋಲಿಸಿದಂತಾಯಿತಲ್ಲವೇ ? ಸರ್ವಶಾಸ್ತ್ರಶಸ್ತ್ರಪಾರಂಗತನಾದ ಆಚಾರ್ಯನು

ಅಸ್ತಸನ್ಯಾಸಗೈದು , ಅಸು ನೀಗಬೇಕೆ ? ಗಜಯುದ್ಧವಿಶಾರದನಾದ ಭಗದತ್ತನು, ಕುಲವೃದ್ಧರಾದ ಸೋಮದತ್ತ ಶಲ, ಭೂರಿ, ಭೂರಿಶ್ರವ, ಬಾಹ್ಲೀಕರು ನಿಹತರಾಗುವಾಗ ನಮ್ಮ ಅದೃಷ್ಟದೀಪವು ನಂದಿಹೋಗಿತ್ತೇ ? ಅಳಿಯ ಜಯದ್ರಥನ ಶಿರದಂತೆ ನಮ್ಮ ಭಾಗದೇಯವೂ ಹಾರಿಹೋಯಿತೇ ? ಆವಂತ್ಯರು, ಅಲಂಬುಷಾಲಾಯುಧರು, ಶ್ರುತಾಯುಶತಾಯುಬೃಹದ್ಬಲರು, ನಾರಾಯಣಗೋಪಾಲಕರು, ಸಂಸಪ್ತಕಕೋಟಿ, ಮೈದುನ ಶಕುನಿ ಎಲ್ಲರೂ ರಣರಂಗದಿ ಸಾವನ್ನಪ್ಪುವಂತಾಗಲು, ನಮ್ಮ ಪ್ರಾಚೀನ ಪಾಪವಾದರೂ ಏನು ? ಎಷ್ಟು ವೀರರು ಯಮ ಮಂದಿರವನ್ನು ಸೇರಿದರು ! ಎಷ್ಟು ಜನನಷ್ಟ ! ಎಲ್ಲಕ್ಕೂ ಅದೃಷ್ಟವೇ ಕಾರಣವು ! ಅದೃಷ್ಟಯುಕ್ತರು ವರ್ಧಿತರಾಗಿ, ದೈವಬಲ ಹೀನರು ನಷ್ಟರಾಗುವರೆನ್ನಲು, ಭಾರತಯುದ್ಧವೇ ದೃಷ್ಟಾಂತವಾಗಿದೆ !

ಅದೃಷ್ಟಹೀನನಾದವನನ್ನು ಹಣೆಯಲ್ಲಿ ಪುತ್ರಮಿತ್ರಹೀನನಾಗೆಂದೂ ಬರೆದಿತ್ತೇನೋ ! ಮುದುಕನಾದೆ. ಹುಟ್ಟಿದೆನು ಕುರುಡನಾಗಿ ! ಈಗ ಶತ್ರುಗಳ ಕೈಲಿ ಸಿಕ್ಕು ದುಃಖಪಡುವಂತಾಯಿತು. ಸಂಜಯ ! ನನಗೆ ವನವಾಸವೇ ಮೇಲೆಂದು ಕಾಣುತ್ತಿದೆ. ಹಗೆಯ ಮನೆಯ ಮುಂದೆ ಬಿದ್ದು ಅವರಿಡುವ ಕೂಳಿಂದ ಬದುಕಿರುವದಕ್ಕಿಂತಲು ನನಗೆ ಸಾವೇ ಲೇಸೆನಿಸಿದೆ. ರೆಕ್ಕೆಗಳಿಲ್ಲದ ಹಕ್ಕಿಯಂತೆ ದಿಕ್ಕೆಟ್ಟು ಅಳುವ ನನ್ನ ಕಣ್ಣೀರನ್ನೊರೆಸುವವರಿಲ್ಲದಂತಾಯಿತು ! ಏನು ಮಾಡಲಿ ? ಎಲ್ಲಿಗೆ ಹೋಗಲಿ ? ಭೀಮಸೇನನ ಕಠಿನ ವಚನಗಳನ್ನೆಂತು ಕೇಳಲಿ ! ಮತ್ತೆ ಮತ್ತೆ ನುಡಿದ ಅವನ ಪ್ರತಿಜ್ಞೆಗಳೆಲ್ಲ ನೆರವೇರಿದವು. ದುಃಖಸಾಗರದಲ್ಲಿ ಬಿದ್ದ ನನಗೆ ಗಾಂಧಾರಿಗೆ ದಿಕ್ಕಿಲ್ಲದಂತಾಯಿತು."

ಇಂತು ಬಹುಕಾಲ ರೋದಿಸಿ ಧೃತರಾಷ್ಟ್ರನು ನಿಡುಸುಯ್ದು ಸಂಜಯನಿಗಿಂತೆಂದನು : "ಸಂಜಯ ! ನೀನಂದಂತೆ ವಿಧಿಗೆದುರಿಲ್ಲ. ವಿಧಿಯು ಕೃಷ್ಣರೂಪದಿಂದ ಪಾಂಡವರಿಗಾಸರೆಯಾಗಿ ನನ್ನ ಮಕ್ಕಳನ್ನು ವಧಿಸಿತು. ನಾವು ಮಾಡಿಕೊಂಡ ಸೇನಾಪತಿಗಳೆಲ್ಲ ಸತ್ತರು. ಭೀಷ್ಮ, ದ್ರೋಣ, ಕರ್ಣರಂತೆ, ಸೇನಾಪತಿಯಾದ ಶಲ್ಯನೂ ಹತನಾದನು. ನನ್ನಂತಹ ಅವಿವೇಕಿಯು ಇನ್ನಿಲ್ಲ ಇಷ್ಟಾಗುವುದೆಂದು ವಿದುರನು ಮೊದಲೇ ಹೇಳಿದರೂ, ಅವನ ಮಾತಿನಂತೆ ನಾನು ನಡೆಯಲಿಲ್ಲ. ಮಗನೆಂಬ ಅಭಿಮಾನದಿಂದ ಒಳಗೂ ಕುರುಡನಾಗಿ, ನಿರಪರಾಧಿ ಪಾಂಡವರಿಗೆ ದ್ರೋಹವನ್ನೆಸಗಿಸಿದೆನು. ಅದರ ಫಲವನ್ನು ಈಗ ದೈವವೆನ್ನಿಂದ ಉಣಿಸುತ್ತಿರುವುದು. ದುರ್ಯೋಧನಾಪರಾಧದಿಂದ ಸರ್ವ ಕೌರವ ಕುಲವೂ ನಾಶವಾಗುವುದೆಂದು ವಿದುರನು ನುಡಿದ ಮಾತು ಸತ್ಯವಾಯಿತು. ತಿಳಿದೂ ತಿಳಿಯದ ಮೂರ್ಖನಾಗಿ ಕೆಟ್ಟೆನು. ದೈವದಿಂದ ಮಂಕಾಗಿ ಧರ್ಮಾಧರ್ಮಗಳನ್ನು ತಿಳಿಯಲಾರದೆ, ಬಲವಂತರು, ಧರ್ಮವಂತರು ಆದ ತಮ್ಮನ ಮಕ್ಕಳಿಗೆ ಅನ್ಯಾಯ ಮಾಡಿ, ಈಗ ಅದರ ದುಷ್ಫಲವನ್ನು ಉಣ್ಣುತ್ತಿರುವೆನು. ಇರಲಿ ! ಶಲ್ಯನು ಸೇನಾಪತಿಯಾಗಿ ಏನು ಮಾಡಿದನು? ಅವನಿಗೆ ರಕ್ಷಕರಾರಿದ್ದರು ? ಭರತಕುಲಕ್ಕೆ ಕ್ಷಯಂಕರವಾದ ಭೀಕರ ರಣವೆಂತು ನಡೆಯಿತು ? ಮೊದಲಿನಿಂದಲು ವರ್ಣಿಸು ! ಸ್ಥಿರನಾಗಿ ಕೇಳುವೆನು" ಎಂದನು.

ಸಂಜಯನು ಅಮಾವಾಸ್ಯೆಯ ಪ್ರಾತರ್ಯುದ್ಧವನ್ನು ವರ್ಣಿಸತೊಡಗಿದನು. ರಾಜನ್ ! 'ಸೂತಪುತ್ರನು ನಿಹತನಾಗಲು, ಕುರುಸೈನಿಕರು ಭೀತರಾಗಿ ಓಡಿಹೋದರು. ಪಾಂಡವಸೈನಿಕರು ಅವರನ್ನು ಬೆನ್ನಟ್ಟಿ ಸಂಹರಿಸಿದರು. ಭೀಮಾರ್ಜುನರ ಸಿಂಹನಾದವನ್ನು ಕೇಳಿ ನಿನ್ನ ಸುತರು ಎದೆಗುಂದಿದರು. ಓಡುವ ಸೈನಿಕರನ್ನು ನಿಲ್ಲಿಸುವುದೂ, ಮೇಲೇರೀಬರುವ ಪಾಂಡವ ವಾಹಿನಿಯನ್ನು ತಡೆಗಟ್ಟುವುದೂ ದುಶ್ಶಕವಾಗಿ, ಅವರು ಅಗಾಧ ಸಮುದ್ರಮಧ್ಯದಲ್ಲಿ ಹಡಗ ಒಡೆದು ಕೊಚ್ಚಿಹೋಗುವ ನಾವಿಕರಂತೆ ದಿಙ್ಮೂಢರಾದರು. ಸಿಂಹಪೀಡಿತವಾಗುವ ಶಶಗಳಂತೆ ಕೌರವರು ತಮ್ಮನ್ನು ರಕ್ಷಿಸುವ ನಾಥರಿಲ್ಲದೆ ದಿಕ್ಕೆಟ್ಟರು. ಕೊಂಬು ಮುರಿದ ಎತ್ತುಗಳಂತೆ, ಹಲ್ಲು ಕಿತ್ತ ಹಾವಿನಂತೆ ಭಗ್ನದರ್ಪವಾಗಿ ಅವರು ಶಿಬಿರಗಳನ್ನು ಸೇರಿದರು. ಕರ್ಣನೊಡನೆ ಸೂರ್ಯನೂ ಅಸ್ತಂಗತನಾದನು. ಚತುರ್ದಶಿಯ ಸಾಯಂಕಾಲದಲ್ಲಿ ನಿರ್ದಶರಾದ ಕೌರವಭಟರು, ಹಿಂದಿರುಗಿ ನೋಡುತ್ತಾ 'ಅಕ್ಕೊ ಅರ್ಜುನ ! ಅದೇ ಭೀಮ !' ನೆಂದು ಜೀವಭಯದಿಂದ ಚೀರುತ್ತಾ ಓಡಿಹೋದರು. ಕೆಲವರು ಸಾದಿರಹಿತತುರಗಗಳನ್ನು ಕೆಲವರು ರಥಹಿತತುರಗಗಳನ್ನು ಏರಿ ರಣರಂಗದಿಂದ ತೊಲಗಿದರು. ವ್ಯಾಘ್ರಚೋರಾದ್ಯುಪದ್ರವಕ್ಕೆ ಸಿಕ್ಕ ಸಾರ್ಥದಂತಾಯಿತು ಕೌರವಸೇನೆ. ಎಲ್ಲಿ ನೋಡಿದರೂ ಅವರಿಗೆ ಭೀಮಾರ್ಜುನರೇ ಕಾಣಬರುವಂತಾಗಿ, ನಿಲ್ಲದೆ ಓಡತೊಡಗಿ ತಮ್ಮ ರಾಜನನ್ನೂ ಅವನ ವೀರಾಲಾಪಗಳನ್ನು ಲಕ್ಷಿಸದೆ ಹೊರಟುಹೋದರು.

ದುರ್ಯೋಧನನು ತನ್ನ ಸೂತನಿಗೆ ರಥವನ್ನು ಭೀಮಾರ್ಜುನರ ಸಮೀಪದಲ್ಲಿ ಸೇರಿಸುವಂತೆ ಆಜ್ಞಾಪಿಸಿದನು. ಅವನ ಹಿಂದೆ ಇಪ್ಪತ್ತೈದು ಸಾವಿರ ವೀರಭಟರು ಬಂದರು. ಭೀಮಸೇನನು ಅವರನ್ನೆಲ್ಲ ಗದಾಪಾಣಿಯಾಗಿ ಸಂಹರಿಸಿದನು. ದಂಡವನ್ನು ಪಿಡಿದು ಬರುವ ಯಮನಂತೆ ಮೇಲೆರಗುವ ವೃಕೋದರನನ್ನು ಕಂಡು, ಮಿಕ್ಕ ಕೌರವಭಟರು ಮತ್ತೆ ಓಡತೊಡಗಿದರು. ಧೃಷ್ಟದ್ಯುಮ್ನನೂ ಅನೇಕ ಯೋಧರನ್ನು ನಾಶಪಡಿಸಿದನು. ಧನಂಜಯ, ಸಾತ್ಯಕಿ, ನಕುಲ, ಸಹದೇವರೂ ಕೌರವಸೇನೆಯನ್ನು ವಿವಿಧ ರಂಗಗಳಲ್ಲಿ ಮುತ್ತಿ ಸಂಹರಿಸಿದರು.

ದುರ್ಯೋಧನನು ಕರ್ಣರಹಿತನಾಗಿದ್ದೂ ಎದೆಗುಂದದೆ, ಪಾಂಡವಯೋಧರಿಂದ ಕಾದತೊಡಗಿದನು. ಓಡಿಹೋಗುವ ತನ್ನ ಸೈನ್ಯವನ್ನು ಧೈರ್ಯ ತುಂಬಿ, ಹಿಂದಿರುಗಿಸಲು ನಿಶ್ಚಯಿಸಿ ಅವನಿಂತೆಂದನು : 'ಎಲವೋ ಕುರುಭಟರೇ ! ಏಕೆ ಓಡುವಿರಿ ? ಎಲ್ಲಿ ಹೋದರೂ ಭೀಮಾರ್ಜುನರಿಂದ ಉಳಿಯಲಾಗದು ತಿಳಿಯಿರಿ ! ಕ್ಷತ್ರಧರ್ಮವನ್ನು ಬಿಟ್ಟು ಇಲ್ಲಿ ಕೀರ್ತಿಗೂ, ಅಲ್ಲಿ ಸ್ವರ್ಗಸುಖಗಳಿಗೂ, ಕೆಡಬೇಡಿ ಆ ! ಕಾದು ಸತ್ತರೆ ಸ್ವರ್ಗವಿದೆ ! ಗೆದ್ದರೆ ರಾಜ್ಯಸುಖವಿದೆ ! ಹಿಂದಿರುಗಿ ಕಾದಾಡಿ ! ಶತ್ರುಗಳು ಶ್ರಾಂತರಾಗಿರುವರು. ನಮ್ಮಕ್ಕಿಂತಲು ಸ್ವಲ್ಪ ಸಂಖ್ಯಾತರಾಗಿರುವರು. ಅವರನ್ನು ಸಂಹರಿಸುವುದಷ್ಟು ದುಷ್ಕರವಲ್ಲ. ರಾಧೇಯನನ್ನು ಕೊಂದು, ಆಚಾರ್ಯನನ್ನು ಕಡಿದು, ಭೀಷ್ಮಪಿತಾಮಹನನ್ನು ಕೆಡಹಿ, ನಮ್ಮ ಬಂಧುಮಿತ್ರರನ್ನು ನಾಶಪಡಿಸಿದ ಪಾಪಿಗಳನ್ನು ಕೊಂದು, ಸೇಡು ತೀರಿಸದೆ ನಾವು ಬದುಕಿ ಏನು ಪ್ರಯೋಜನ ?'

ಆ ಮಾತನ್ನಾಲಿಸಿ, ಕೆಲಭಟರು ಮತ್ತೆ ರಣರಂಗವನ್ನು ಪ್ರವೇಶಿಸಿ, ಕಾದ ತೊಡಗಿದರು. ತುಮುಲ ಯುದ್ಧವಾರಂಭಿಸಿತು. ಮೃತ್ಯುವನ್ನಪ್ಪಲು ನಿಶ್ಚಯಿಸಿ ಕಾದುವ ಕೌರವಭಟರನ್ನು ವಿಜಯೋತ್ಸಾಹಿಗಳಾದ ವಿಜಯನ ಸೈನಿಕರು ಸುಲಭವಾಗಿ ನಾಶಪಡಿಸಿದರು. ಆಯೋಧನವು ಅತಿ ಘೋರವಾಯಿತು. ರುದ್ರನ ನರ್ತನ ಶಾಲೆಯೋ, ಯಮಭಟರ ಶಿಕ್ಷಾಮಂದಿರವೋ ಎಂಬಂತಿರುವ ರಣಭೂಮಿಯನ್ನು ನೋಡಿ, ತನ್ನವರಿಗಾಗುವ ಸರ್ವನಾಶವನ್ನು ತಿಳಿದು ಕುರುರಾಜನು ಖಿನ್ನನಾದನು. ತನಗಾಗಿ ಸತ್ತ ಪಾರ್ಥಿವರನ್ನು ನೆನೆದು ಅವನು ಶೋಕೋಪಹತಚಿತ್ತನಾದನು. ಪಾರ್ಥರ ವಿಕ್ರಮವನ್ನು ಕಂಡು ಅವನು ಹತಾಶನಾದನು. ನಿಡುಸುಯ್ಯು ಕರ್ಣನಿಗಾಗಿ ಕಣ್ಣೀರಿಡುವ ಕೌರವೇಶನನ್ನು ನೋಡಿ, ಕೃಪಾಚಾರ್ಯರು ಕನಿಕರಪಟ್ಟು ಸಮೀಪಿಸಿ ಮೆಲ್ಲಗೆ ಇಂತೆಂದನು:

'ಮಹಾರಾಜ ! ಕೇಳೆನ್ನ ಹಿತವಚನವನ್ನು ! ಸಿಟ್ಟಾಗಿ ಫಲವಿಲ್ಲ, ಶೋಕಿಸಿ ಪ್ರಯೋಜನವಿಲ್ಲ. ಆದ ಅನರ್ಥವಾಗಿ ಹೋಯಿತು. ಮುಂದಿನ ಹಿತವನ್ನಾದರೂ ಸಾಧಿಸು ! ಕ್ಷತ್ರಿಯರಿಗೆ ಯುದ್ಧಧರ್ಮದಕ್ಕಿಂತಲು ಶ್ರೇಯಸ್ಕರವಿನ್ನೊಂದಿಲ್ಲ. ಅದು ಸ್ವರ್ಗಸೋಪಾನವಾಗಿದೆ. ನಿಜ ! ಶತ್ರುವಧೆಯು ಪರಧರ್ಮವು. ಪಲಾಯನವು ಮಹಾಪಾಪವು. ಅಂತೆಯೇ ತಿಳಿದು ನಿನ್ನವರೆಷ್ಟೋ ವೀರಮಹಾರಥರು ರಣನಿಹತರಾಗಿ, ವೀರಸ್ವರ್ಗವನ್ನು ಸೂರೆಗೊಂಡಿರುವರು. ಭೀಷ್ಮನು ಹತಪ್ರಾಯನಾಗಿರುವನು. ದ್ರೋಣಕರ್ಣರು ನಿಹತರಾದರು. ಜಯದ್ರಥಲಕ್ಷ್ಮಣರು ಸತ್ತರು. ಮಹದ್ಭಾರವನ್ನು ಪೊತ್ತಿದ್ದ ಕರ್ಣನೂ ನಿನ್ನ ಜಯಿಶಾಲತೆಯಂತೆ, ಕಡಿದು ಬಿದ್ದನು. ನಮ್ಮಲ್ಲಿ ಮಹಾರಥರು ಐದಾರು ಜನರು ಮಾತ್ರ ಉಳಿದಿರುವರು. ಅವರಲ್ಲಿ ಅನೇಕರು ಉಳಿದಿರುವರು. ಕೃಷ್ಣಸಾರಥಿಯಾದ ಅರ್ಜುನನು ಶ್ರೀಕೃಷ್ಣ ಕೃಪೆಯಂಬ ಗಾಳಿಯಿಂದ ಅಗ್ನಿಯಂತೆ ವಿಜೃಂಭಿಸುತ್ತಿರುವನು. ವೃಕೋದರನು ಅಕ್ಷೌಹಿಣೀ ಷಟ್ಕವನ್ನು ನಾಶಪಡಿಸಿ, ನಿರಾಯಾಸನಾಗಿ, ಗರ್ಜಿಸುತ್ತಿರುವನು. ಅವನು ರಣದಲ್ಲಿ ಸೋತುದನ್ನು ಯಾರೂ ಎಂದೂ ಕಂಡಿಲ್ಲ. ವಾನರಕೇತು, ಪಾಂಚಜನ್ಯ, ವಿರಾವಗಳು ಪಾಂಡವರಿಗೆ ಜಯವನ್ನು ಘೋಷಿಸುತ್ತಿವೆ. ಗಾಂಡೀವವು ಸಂತತಟಂಕಾರವಾಗಿ, ಎಡೆಬಿಡದೆ ಕೇಳಬರುತ್ತಾ ನಮ್ಮ ವೀರರಿಗೆ ಮರಣಾಪಾದಕವಾಗಿದೆ. ಶ್ವೇತಾಶ್ವಗಳು ಆಕಾಶ ಪತ್ರದಲ್ಲಿ ಕಾಲಿಂದ ಬರಿಯುತ್ತಾ ಓಡುತ್ತಿವೆ. ಧರ್ಮರಾಜನೂ ಇಂದು ಯುಧಿಷ್ಠಿರನಾಗಿ, ಕಾಲಯಮನಂತೆ ವಿಜೃಂಭಿಸುತ್ತಿರುವನು.

ರಾಜನ್ ! ನಿನ್ನನ್ನು ಹೆದರಿಸಲು ಹೇಳುವ ಮಾತಲ್ಲ! ಅವಧ್ಯನಾದ ನನಗೆ ಯಾರ ಅಂಜಿಕೆಯೂ ಇಲ್ಲ. ಕೇವಲ ನಿನ್ನ ಹಿತಕ್ಕಾಗಿ ಹೇಳುತ್ತಿರುವೆನು. ಆಚಾರ್ಯನೆಂದರೆ ಪಿತೃಸಮನಲ್ಲವೇ ? ಕೇಳೆನ್ನ ಮಾತನ್ನು! ನಿನ್ನ ಸೇನೆಯನ್ನು ದವ ದಹನನು ಕಾಡು ಹುಲ್ಲಾವಲನ್ನಂತೆ ಅರ್ಜುನನು ಸುಟ್ಟು ಪೂರ್ತಿನಾಶ ಮಾಡದ ಮುನ್ನ, ಪ್ರಳಯ ರುದ್ರನಂತೆ ವಿಜೃಂಭಿಸಿ ವೃಕೋದರನು ನಿನ್ನ ಮಿಕ್ಕ ತಮ್ಮಂದಿರನ್ನೂ ನಿನ್ನನ್ನು ಗದೆಯಿಂದ ಕುಟ್ಟಿ ಕೆಡಹದ ಮುನ್ನ ಯುದ್ಧದ ಮತ್ತಿನಿಂದ ಎಚ್ಚತ್ತು ನಿನಗೇ

ತಮ್ಮಂದಿರೇ ಆದ ಪಾಂಡವರಿಂದ ಸಂಧಿಮಾಡಿಕೋ! ಹದಿನೇಳು ದಿನಗಳಾಗುತ್ತಿವೆ ಇಂದಿಗೆ, ಸರ್ವನಾಶಕವಾದೀ ಯುದ್ಧಾರಂಭವಾಗಿ! ಇನ್ನೊಂದು ದಿನವಾದರೆ ಸರ್ವನಾಶವು ಸಂಪೂರ್ಣವಾಗುವುದು. ಅಂತಹ ಅನರ್ಥಕ್ಕೆ ಎಡೆಗೊಡಬೇಡ! ಭೀಮಾರ್ಜುನರನ್ನು ಗೆಲ್ಲಲು ದೇವಾಸುರರಿಗೆ ಶಕ್ಯವಿಲ್ಲ. ಇಂದು ಅಮಾವಾಸ್ಯೆ (ಚತರ್ದಶಿಯ ಉಪರಿ). ಇಂದಿನ ರಾತ್ರಿಯಂತೆ (ಚಂದ್ರನಿಲ್ಲದ ರಾತ್ರಿಯಂತೆ) ನಿನ್ನ ಸೇನೆ ಹತವೀರವಾಗಿ, ದುಃಖಾಂಧಕಾರ ಬಂಧುರವಾಗಿದೆ. ಭೀಮನು ಮಾಡಿದ ಪ್ರತಿಜ್ಞೆಗಳೆಲ್ಲ ಪ್ರಾಯಃಪೂರ್ಣವಾಗಿವೆ. ಮುಂದೆಯೂ ಅವನ ಕಠೋರ ಪ್ರತಿಜ್ಞೆಯನ್ನು ನಡೆಯದಂತೆ ಮಾಡಿ ತಡೆಯುವುದು ಸಂಧಿಯ ಶೀತಲಹಸ್ತಗಳಲ್ಲಿದೆ.

ಮಹಾಪರಾಧಗಳನ್ನು ಮಾಡಿರುವ ನಮ್ಮನ್ನು ಪಾಂಡವರೆಂತು ಕ್ಷಮಿಸುವರು? ಎಂತು ಸಂಧಿಯಾಗುವುದು ? ಎಂದು ಚಿಂತಿಸಬೇಡ! ಸರ್ವರು ಆತ್ಮಸುಖಕ್ಕಾಗಿ, ಬೇಕಾದಂತೆ ಬೇಕಾದ ಕೃತಿಗಳನ್ನೆಸಗುವರು. ಇದು ಲೋಕರೂಢಿಯಾಗಿದೆ. ಪರೋಪಕಾರ ಕೃತಿಗಳನ್ನೆಸಗುವುದೂ ತನ್ನ ದೇಹದ ಸುಖಕ್ಕಲ್ಲವೇ ? ಪರದುಃಖದಾತನಲ್ಲಿ ಅದೇ ದುಃಖವು ತಿರುಗಿ ಬೀಳುವುದೆಂಬ ನಾಡ ನುಡಿ ನಮ್ಮಲ್ಲಿ ಸತ್ಯವಾಯಿತು. ಆತ್ಮಸುಖಕ್ಕಾಗಿ ಬೇಕಾದುದನ್ನು ಮಾಡಿ, ಕೊನೆಗೆ ಆತ್ಮನಾಶಕವಾದ ಯುದ್ಧವನ್ನು ಮಾಡುವುದು ನಿನಗೆ ಶ್ರೇಯಸ್ಕರವಲ್ಲ. ನಿನ್ನನ್ನು ನೀನು ಉಳಿಸಿಕೊಳ್ಳಲಾದರೂ ಸಂಧಿಯನ್ನು ಸಾಧಿಸು! ಬೃಹಸ್ಪತಿಯು, 'ಹೀನಬಲನಿಂದ ಸಂಧಿ ಕೂಡದು; ಸಮಬಲನಿಂದ ಸಂಧಿಯುದ್ಧಗಳಿಲ್ಲ; ಅಧಿಕ ಬಲನಿಂದ ಯುದ್ಧವು ಒಳಿತಲ್ಲ' ಎಂದು ಹೇಳಿರುವನು. ಅಧಿಕ ಬಲರಾಗಿರುವ ಪಾಂಡವರಿಂದ ಸಂಧಿ ಮಾಡಿಕೊಂಡು ಚಿರಕಾಲ ಬಾಳು! ಆದುದನ್ನು ಮರೆತುಬಿಡು!' ಎಂದನು.

ದುರ್ಯೋಧನನಾ ಮಾತಿಗೆ ಬದುಲಾಡದೆ, ತಲೆತಗ್ಗಿಸಿ, ಚಿಂತಿಸುತ್ತಿರಲು, ನೋಡಿ ಆಚಾರ್ಯ ಕೃಪನು ಮತ್ತೆ ಇಂತೆಂದನು: 'ರಾಜನ್! ಯಾರು ಹಿತವರೋ ನಿನಗೆ ತಿಳಿಯದು. ಹಿತರನ್ನು ಕಡೆಗಣಿಸಿ, ಹಿತಶತ್ರುಗಳನ್ನು ತಲೆಗೇರಿಸಿಕೊಂಡುದರಿಂದ ಹೀಗಾಯಿತು. ಧರ್ಮರಾಜನಿಗೆ ವಂದಿಸಿ, ಅರ್ಧ ರಾಜ್ಯವನ್ನು ಹೊಂದಿ ಸುಖದಿಂದಿರುವುದು ಅವಮಾನಕರವಲ್ಲ. ಬಿಡದೆ ಕಾದಿ ಸಾಯುವುದು ಮೂಢತನದ ಪರಮಾವಧಿ ತಿಳಿ! ಧೃತರಾಷ್ಟ್ರನು ಉಭಯರಿಗೂ ಹಿರಿಯನು. ಆ ಮಹಾರಾಜನ ಮಾತನ್ನು ಪಾಂಡವರು ಮೀರಿ ನಡೆಯುವರಲ್ಲ. ಗೋವಿಂದನ ಮಾತಿಗೆ ಗೆರೆ ಗೀಚಿದರೆ ದಾಟದೆ ವಿಧೇಯರಾಗಿರುವ ಪೃಥಾಸುತರಿಗೂ ಬಂಧುಹತ್ಯೆ ನಿವಾರಿತವಾದರೆ ಸಮ್ಮತವೇ ಆಗಿದೆ. ಈಗ ರಣವು ಮರಣಾಪಾದಕವು-ಸಂಧಿಯು ಬಂಧುಪ್ರೀತಿ ಸಂಧಾಯಕವು. ವಿಚಾರಿಸಿ ನಿನಗೆ ಯುಕ್ತವೆನಿಸಿದಂತೆ ನಡೆ!'

ಉಭಯ ಕುಲಹಿತಕರನಾದ ಗೌತಮನ ವಚನಗಳನ್ನಾಲಿಸಿ, ಕುರುರಾಜನು ನಿಟ್ಟುಸಿರಿಟ್ಟು ಸ್ವಲ್ಪಕಾಲ ಸುಮ್ಮನಿದ್ದು ಆಚಾರ್ಯನಿಗಿಂತೆಂದನು: 'ಆಚಾರ್ಯ! ನಿಜವಾದ ಹಿತನಂತೆ ನುಡಿದಿರುವೆ! ನಿಜವಾದ ಹಿತನಂತೆ ನನ್ನ ಕಡೆ ನಿಂತು ಕದನ

ದಲ್ಲಿ ವಿಕ್ರಮಿಸಿ ಶತ್ರುನಾಶವನ್ನೂ ಸಾಧಿಸಿರುವೆ; ಆದರೆ ಸಾಯುವವನಿಗೆ ಔಷಧದಂತೆ, ನಿನ್ನ ವಚನಗಳೆನಗೆ ರುಚಿಸದಾಗಿವೆ. ಅತಿಬಲರಾದ ಪಾಂಡವರು ಹೀನಬಲನಾದ ನನ್ನಿಂದ ಸಂಧಿಯನ್ನೆಂದಿಗೂ ಮಾಡಿಕೊಳ್ಳರು.

ಮಹಾರಾಜ್ಯ ವಿಭವವನ್ನು ಒಂದು ಕ್ಷಣದ ಅಕ್ಷದ್ಯೂತದಲ್ಲಿ ಕಸಿದೆವು. ಮಹಾಸತಿಯನ್ನು ಸಭೆಗೆ ಎಳತರಿಸಿ, ಸೀರೆ ಸೆಳೆದವು. ದೂತನಾಗಿ ಬಂದ ಕೃಷ್ಣನನ್ನು ಕಟ್ಟಿಹಾಕಲೆಣಸಿದೆವು. ಕೃಷ್ಣೆಯು ನಮ್ಮ ಸಭೆಯಲ್ಲಿ ಹರಿಸಿದ ಕಣ್ಣೀರಿನ ಬಿಂದುವೊಂದಕ್ಕೆ ನಮ್ಮ ರಕ್ತದ ಕಡಲ ಹರಿಸದೆ, ಹರಿಯ ಸಿಟ್ಟು ಬಗೆಹರಿಯದು. ಆ ಮಾತನ್ನಂದು ಕೃಷ್ಣೆಗೆ ಹೇಳಿದ ಕೃಷ್ಣನು ಇಂದು ಅದನ್ನು ನಡೆಸಿ ಕೊಡುತ್ತಿರುವುದನ್ನು ಕಣ್ಣಾರ ನೋಡುತ್ತಿರುವೆನು. ದುಶ್ಶಾಸನ ರಕ್ತಪಾನದಿಂದ ಅಡಗದ ಅವನ ತೃಷ್ಣೆ ದುರ್ಯೋಧನ ರಕ್ತವನ್ನು ಭೂದೇವಿಯು ಕುಡಿದಾಗ ಪೂರಾ ತೀರುವುದು. ಅಂತಹ ಕೃಷ್ಣಭೀಮರಿಂದ ನನಗೆಲ್ಲಿಯ ಸಂಧಿ ? ಅಭಿಮನ್ಯು ಜನಕನಿಂದ ನನಗೇತರ ಹಿತಸಂಧಿ ? ಪಾಂಡವರೆಲ್ಲರೂ ಬದ್ಧವೈರರಾಗಿರುವರು. ದುರ್ಯೋಧನನು ಸಾಯುವವರೆಗೂ, ಅವರು ಶರೀರದಿಂದ ಕವಚಗಳನ್ನು ಬಿಚ್ಚರು. ಖಡ್ಗಗಳನ್ನು ಒರೆಯಲ್ಲಿ ಸೇರಿಸರು ! ಇಂತಹ ಕಠೋರಚಿತ್ತರಿಂದ ನನಗೆಂತು ಸಂಧಿಯಾಗುವುದು ? ವಿಪ್ರೋತ್ತಮ ! ನನಗೆ ಯುದ್ಧಮರಣವೇ ಶ್ರೇಯಸ್ಕರವು ! ಸಂಧಿಯಲ್ಲ. ಹತಬಂಧುರನಾದ ನನಗಿನ್ನೇಕೆ ರಾಜ್ಯಸುಖಗಳು ?

ಭರ್ತೃಪಂಚಕದ ಪ್ರತಿಜ್ಞಾ ಸಿದ್ಧಿಯನ್ನುದ್ದೇಶಿಸಿ, ಕೃಷ್ಣೆ ನೆಲದಿ ಮಲಗಿ, ಸೇಡಿನ ಕಿಡಿಯನ್ನಾರಿಸದೆ, ತೀವ್ರ ತಪಗೈದಿರುವಳಂತೆ, ಹದಿಮೂರು ವರ್ಷ ! ಅವಳಿಗೆ ವಾಸುದೇವ ಸಹೋದರನು ತನ್ನ ಮಾನದರ್ಪಗಳನ್ನು ಬದಿಗಿಟ್ಟು ದಾಸಿಯಂತೆ ಉಪಚರಿಸಿದನಂತೆ ! ಇಂತು ನಿಂತ ಕಾಂತಾನಿಮಿತ್ತ ದ್ವೇಷಾಗ್ನಿಯು ಎಂದಿಗೂ ಆರದು. ಅಭಿಮನ್ಯು ನಾಶಾಜ್ಯಾಹುತಿಯಿಂದ ಅದು ಭುಗಿಲ್ಲೆಂದು ಉರಿದೆದ್ದಿದೆ. ನಮ್ಮ ಪ್ರಾಣಾಹುತಿಯಿಂದಲ್ಲದೆ ಅದು ಶಾಂತವಾಗದು.

ಆಚಾರ್ಯ ! ಸಾಗರಾಂಬರವಾದ ಸರ್ವ ಸರ್ವಂಸಹೆಯನ್ನು ಸಾಟಿಯಿಲ್ಲದೆ ಆಳಿ, ಸಮ್ರಾಜರಿತ್ತ ಕಪ್ಪಕಾಣಿಕೆಗಳನ್ನು ಕೈಮುಟ್ಟಿ ಮಾತ್ರ ಸ್ವೀಕರಿಸಿದ, ದುರ್ಯೋಧನ ಮಹಾರಾಜನಿಂದು, ಕಾರ್ಪಣ್ಯದಿಂದ ಕಂಗಾಲಾಗಿ, ಕಂಕಭಟ್ಟನ ಮುಂದೆ ಕೈಚಾಚಿ ಬೇಡುವನೇ ? ಧರ್ಮರಾಜನನ್ನು ದಾಸನಂತೆ ಹಿಂಬಾಲಿಸುವನೇ ? ಉಂಡೇ ಬೇಕಾದ ಭೋಗಗಳನ್ನು ! ಕೊಟ್ಟೆ ಬಹುದಾನಗಳನ್ನು ! ಮಾಡಿದೆ ಯಜ್ಞಯಾಗಗಳನ್ನು! ಇಂದು ಕೃಪಣನಾಗಿ ಬೇಡಿ ಬದುಕಲಾರೆನು. ನನಗೆ ಸಂಧಿ ಬೇಡ ! ಹೀಗಂದನೆಂದು ಸಿಟ್ಟಾಗಬೇಡ ! ಶತ್ರುಮೂರ್ಧದಿ ಕಾಲಿಟ್ಟ ಕುರುರಾಜನು ಸತ್ತರೂ ಹಗೆಯ ಕಾಲಿಗೆ ತಲೆ ಇಡನು. ಉಂಡುಟ್ಟು ಕೊಟ್ಟು ಕಾಡಿ, ಕಡಿದಾಡಬಲ್ಲೆನಾಗಲಿ ಬೇಡಲಲ್ಲ. ಕ್ಷತ್ರಿಯನಿಗೆ ಗೃಹಮರಣವು ಶ್ರೇಯಸ್ಕರವಲ್ಲ. ಅರಣ್ಯದಲ್ಲಾಗಲಿ ರಣದಲ್ಲಾಗಲಿ ಸತ್ತ ಕ್ಷತ್ರಿಯನು ಶಕ್ರಲೋಕವನ್ನು ಸೇರುವನು.

ಕ್ರತುಯಾಜಿಗಳು, ಶೂರರು, ಆರ್ಯವೃತ್ತರು, ಧೀಮಂತರು, ಶಸ್ತ್ರಾವಭೃತಸ್ನಾತರು, ಪರಿಪೂತರು ಆಗಿಹೋದ ಕುರುಕುಲದಲ್ಲಿ ಹುಟ್ಟಿರುವೆನು. ಅನಿವರ್ತಿ ಶೂರರು ಏರಿಹೋದ ಯಶಃಸೋಪಾನವಿನ್ನೂ ಮುರಿದು ಬಿದ್ದಿಲ್ಲ. ದ್ರೋಣ, ಕರ್ಣ, ಜಯದ್ರಥ, ದುಶ್ಶಾಸನರಾದಿಯಾಗಿ ನನ್ನವರು ನನ್ನ ಬರುವಿಕೆಯನ್ನು ನೋಡುತ್ತಿರುವರು. ಈಗ ಸಂಧಿ ಮಾಡಿಕೊಂಡು ನಾನು ಬದುಕಿದ್ದರೆ ಮುಂದೆ ಯಶಸ್ಸೋಪಾನ ಮಾರ್ಗವು ಮುಚ್ಚಿಹೋಗಿ, ನನಗೆ ದುರ್ಗಮವಾದೀತು!

ನನಗೆ ಈಗ ರಾಜ್ಯದಲ್ಲಿಲ್ಲ ಗುರಿ! ಸೇಡಿನಲ್ಲಿದೆ. ನನ್ನವರನ್ನು ಕೊಂದವರನ್ನು ಕೊಂದು, ಅವರ ಋಣವನ್ನು ತೀರಿಸಿ, ಆಮೇಲೆ ನಾನೂ ಸಾಯುವೆನು. ಬಂಧು ಮಿತ್ರರಿಲ್ಲದ, ಸಿರಿಸಂಪತ್ತಿಲ್ಲದ, ಸ್ತ್ರೀಬಾಲ ರೋದನಭರಿತವಾದ, ಶೂನ್ಯಶ್ಮಶಾನ ಸದೃಶವಾದ ಭೂಮಂಡಲವನ್ನು ನನ್ನ ಶತ್ರುಗಳ ಪಾಲಿಗೇ ಬಿಟ್ಟು ಹೋಗುವೆನು. ಕರೆಯುತ್ತಿದೆ ನನ್ನನ್ನು ಕೈಬೀಸಿ ಕಮನೀಯ ಸ್ವರ್ಗ!' ಇಂತು ನುಡಿದ ಕುರುರಾಜನ ಮಾತನ್ನು ಕೇಳಿ ಕೃಪನು ವಿಧಿಗೆ ತಲೆಬಾಗಿ, ಸುಮ್ಮನಾದನು. ಅಂದು ಸಾಯಂಕಾಲವಾಗಲು, ಕೌರವ ವಾಹಿನಿಯ ಹಿಮವತ್ಪರ್ವತದ ತಪ್ಪಲು ಪ್ರದೇಶಗಳನ್ನು ಸೇರಿ, ಆ ರಾತ್ರಿ ಕಳೆದರು. ದುರ್ಯೋಧನನು ಆಚಾರ್ಯನಿಗರುಹಿದ ವಚನಗಳನ್ನು ಕೇಳಿ, ಅವರು ತಮ್ಮ ರಾಜನ ಅಭಿಮಾನವನ್ನು ಮೆಚ್ಚಿ ತಾವೂ ಯುದ್ಧ ನಿಶ್ಚಯವಂತರಾದರು. ಮರುದಿನ (ಅಮಾವಾಸ್ಯೆ) ಬೆಳಗಾಗಲು ಅವರು ಮತ್ತೆ ರಣರಂಗವನ್ನು ಸೇರಿ, ಯುದ್ಧ ಸನ್ನದ್ಧರಾಗಿ ನಿಂತರು.

## ೨. ಶಲ್ಯ ಸೇನಾಪತ್ಯ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಒಂದು ಯೋಜನದ ಹಿಮವತ್ ಪ್ರಸ್ಥದಿಂದ ಹಿಂದಿರುಗಿದ ಕುರುಸೇನೆಯು, ಕಂಕಾಳಾಬೀಲವು ದುಸ್ಸಹ ದುರ್ಗಂಧವು, ಕಂಕಗೃಧ್ರಾದಿಕ್ರವ್ಯಾದ ಗಣಾಕೀರ್ಣವು, ಭೀರುಭಯಂಕರವು ಆದ ಕುರುಕ್ಷೇತ್ರದ ರಣರಂಗದಲ್ಲಿ ಮಹಾವ್ಯೂಹಾಕಾರವಾಗಿ ನಿಂತಿತು. ಶಲ್ಯ, ಚಿತ್ರಸೇನ, ಶಕುನಿ, ಅಶ್ವತ್ಥಾಮ, ಕೃಪ, ಕೃತವರ್ಮ, ಸುಷೇಣ, ಧೃತಸೇನರು ಸೇನಾಮುಖದಲ್ಲಿ ನಿಂತಿದ್ದರು. ಕರ್ಣಮೃತಿಯಿಂದ ಧೃತಿಹೀನರಾಗಿದ್ದೂ ರಣಮರಣವನ್ನಪೇಕ್ಷಿಸಿ, ಅವರು ಸರಿಯಾದ ಸೇನಾಪತಿಯನ್ನು ಆರಿಸಿ, ಅವನ ನೇತೃತ್ವದಲ್ಲಿ ನಡೆದು ಕಾದಲು ಸಿದ್ಧರಿದ್ದರು. ಆಗ ದುರ್ಯೋಧನನು ಅವರ ಇಂಗಿತವನ್ನರಿತು, ಗುರುಸುತನ ಕಡೆಗೆ ನೋಡಿದನು.

ಅಶ್ವತ್ಥಾಮನೆಂದರೆ ಸಾಮಾನ್ಯನಲ್ಲ. ಆ ಮಹಾವೀರನು ಸರ್ವವಿಧ ಯುದ್ಧ ವಿದ್ಯಾವಿಶಾರದನು. ಕಾದುನಿಂತರೆ ಕಾಲಾಂತಕನು. ಕೊಲ್ಲತೊಡಗಿದರೆ ಕ್ರೂರ ರುದ್ರನು. ಶಿವನು, ಕಂಬುಗ್ರೀವನು, ವಿಶಾಲನೇತ್ರನು, ಶುಭ್ರೋನ್ನತ ಗಾತ್ರನು. ಪ್ರಿಯಂವದನು, ವ್ಯಾಘ್ರವದನನು, ಮೇರುಗಂಭೀರನು, ಮಹಾಶಿರನು, ವಿಶಾಲ ಭುಜನು, ಅಗ್ನಿತೇಜನು,

ದಲ್ಲಿ ವಿಕ್ರಮಿಸಿ ಶತ್ರುನಾಶವನ್ನೂ ಸಾಧಿಸಿರುವೆ; ಆದರೆ ಸಾಯುವವನಿಗೆ ಔಷಧದಂತೆ, ನಿನ್ನ ವಚನಗಳೆನಗೆ ರುಚಿಸದಾಗಿವೆ. ಅತಿಬಲರಾದ ಪಾಂಡವರು ಹೀನಬಲನಾದ ನನ್ನಿಂದ ಸಂಧಿಯನ್ನೆಂದಿಗೂ ಮಾಡಿಕೊಳ್ಳರು.

ಮಹಾರಾಜ್ಯ ವಿಭವವನ್ನು ಒಂದು ಕ್ಷಣದ ಅಕ್ಷದ್ಯೂತದಲ್ಲಿ ಕಸಿದೆವು. ಮಹಾಸತಿಯನ್ನು ಸಭೆಗೆ ಎಳತರಿಸಿ, ಸೀರೆ ಸೆಳೆದವು. ದೂತನಾಗಿ ಬಂದ ಕೃಷ್ಣನನ್ನು ಕಟ್ಟಿಹಾಕಲೆಣಿಸಿದೆವು. ಕೃಷ್ಣೆಯು ನಮ್ಮ ಸಭೆಯಲ್ಲಿ ಹರಿಸಿದ ಕಣ್ಣೀರಿನ ಬಿಂದುವೊಂದಕ್ಕೆ ನಮ್ಮ ರಕ್ತದ ಕಡಲ ಹರಿಸದೆ, ಹರಿಯ ಸಿಟ್ಟು ಬಗೆಹರಿಯದು. ಆ ಮಾತನ್ನಂದು ಕೃಷ್ಣೆಗೆ ಹೇಳಿದ ಕೃಷ್ಣನು ಇಂದು ಅದನ್ನು ನಡೆಸಿ ಕೊಡುತ್ತಿರುವುದನ್ನು ಕಣ್ಣಾರ ನೋಡುತ್ತಿರುವೆನು. ದುಶ್ಶಾಸನ ರಕ್ತಪಾನದಿಂದ ಅಡಗದ ಅವನ ತೃಷ್ಣೆ ದುರ್ಯೋಧನ ರಕ್ತವನ್ನು ಭೂದೇವಿಯು ಕುಡಿದಾಗ ಪೂರಾ ತೀರುವುದು. ಅಂತಹ ಕೃಷ್ಣಭೀಮರಿಂದ ನನಗೆಲ್ಲಿಯ ಸಂಧಿ ? ಅಭಿಮನ್ಯು ಜನಕನಿಂದ ನನಗೇತರ ಹಿತಸಂಧಿ ? ಪಾಂಡವರೆಲ್ಲರೂ ಬದ್ಧವೈರರಾಗಿರುವರು. ದುರ್ಯೋಧನನು ಸಾಯುವವರೆಗೂ, ಅವರು ಶರೀರದಿಂದ ಕವಚಗಳನ್ನು ಬಿಚ್ಚರು. ಖಡ್ಗಗಳನ್ನು ಒರೆಯಲ್ಲಿ ಸೇರಿಸರು ! ಇಂತಹ ಕಠೋರಚಿತ್ತರಿಂದ ನನಗೆಂತು ಸಂಧಿಯಾಗುವುದು ? ವಿಪ್ರೋತ್ತಮ ! ನನಗೆ ಯುದ್ಧಮರಣವೇ ಶ್ರೇಯಸ್ಕರವು ! ಸಂಧಿಯಲ್ಲ. ಹತಬಂಧುರನಾದ ನನಗಿನ್ನೇಕೆ ರಾಜ್ಯಸುಖಗಳು ?

ಭರ್ತೃಪಂಚಕದ ಪ್ರತಿಜ್ಞಾ ಸಿದ್ಧಿಯನ್ನುದ್ದೇಶಿಸಿ, ಕೃಷ್ಣೆ ನೆಲದಿ ಮಲಗಿ, ಸೇಡಿನ ಕಿಡಿಯನ್ನಾರಿಸದೆ, ತೀವ್ರ ತಪಗೈದಿರುವಳಂತೆ, ಹದಿಮೂರು ವರ್ಷ ! ಅವಳಿಗೆ ವಾಸುದೇವ ಸಹೋದರನು ತನ್ನ ಮಾನದರ್ಪಗಳನ್ನು ಬದಿಗಿಟ್ಟು ದಾಸಿಯಂತೆ ಉಪಚರಿಸಿದನಂತೆ ! ಇಂತು ನಿಂತ ಕಾಂತಾನಿಮಿತ್ತ ದ್ವೇಷಾಗ್ನಿಯು ಎಂದಿಗೂ ಆರದು. ಅಭಿಮನ್ಯು ನಾಶಾಜ್ಯಾಹುತಿಯಿಂದ ಅದು ಭುಗಿಲ್ಲೆಂದು ಉರಿದೆದ್ದಿದೆ. ನಮ್ಮ ಪ್ರಾಣಾಹುತಿಯಿಂದಲ್ಲದೆ ಅದು ಶಾಂತವಾಗದು.

ಆಚಾರ್ಯ ! ಸಾಗರಾಂಬರವಾದ ಸರ್ವ ಸರ್ವಂಸಹೆಯನ್ನು ಸಾಟಿಯಿಲ್ಲದೆ ಆಳಿ, ಸಮ್ರಾಜರಿತ್ತ ಕಪ್ಪಕಾಣಿಕೆಗಳನ್ನು ಕೈಮುಟ್ಟಿ ಮಾತ್ರ ಸ್ವೀಕರಿಸಿದ, ದುರ್ಯೋಧನ ಮಹಾರಾಜನಿಂದು, ಕಾರ್ಪಣ್ಯದಿಂದ ಕಂಗಾಲಾಗಿ, ಕಂಕಭಟ್ಟನ ಮುಂದೆ ಕೈಚಾಚಿ ಬೇಡುವನೇ ? ಧರ್ಮರಾಜನನ್ನು ದಾಸನಂತೆ ಹಿಂಬಾಲಿಸುವನೇ ? ಉಂಡೇ ಬೇಕಾದ ಭೋಗಗಳನ್ನು ! ಕೊಟ್ಟೆ ಬಹುದಾನಗಳನ್ನು ! ಮಾಡಿದೆ ಯಜ್ಞಯಾಗಗಳನ್ನು! ಇಂದು ಕೃಪಣನಾಗಿ ಬೇಡಿ ಬದುಕಲಾರೆನು. ನನಗೆ ಸಂಧಿ ಬೇಡ ! ಹೀಗಂದನೆಂದು ಸಿಟ್ಟಾಗಬೇಡ ! ಶತ್ರುಮೂರ್ಧದಿ ಕಾಲಿಟ್ಟ ಕುರುರಾಜನು ಸತ್ತರೂ ಹಗೆಯ ಕಾಲಿಗೆ ತಲೆ ಇಡನು. ಉಂಡುಟ್ಟು ಕೊಟ್ಟು ಕಾಡಿ, ಕಡಿದಾಡಬಲ್ಲೆನಾಗಲಿ ಬೇಡಲಲ್ಲ. ಕ್ಷತ್ರಿಯನಿಗೆ ಗೃಹಮರಣವು ಶ್ರೇಯಸ್ಕರವಲ್ಲ. ಅರಣ್ಯದಲ್ಲಾಗಲಿ ರಣದಲ್ಲಾಗಲಿ ಸತ್ತ ಕ್ಷತ್ರಿಯನು ಶಕ್ರಲೋಕವನ್ನು ಸೇರುವನು.

ಕ್ರತುಯಾಜಿಗಳು, ಶೂರರು, ಆರ್ಯಾವೃತ್ತರು, ಧೀಮಂತರು, ಶಸ್ತ್ರಾವಭೃತಸ್ನಾತರು, ಪರಿಪೂತರು ಆಗಿಹೋದ ಕುರುಕುಲದಲ್ಲಿ ಹುಟ್ಟಿರುವೆನು. ಅನಿವರ್ತಿ ಶೂರರು ಏರಿಹೋದ ಯಶಃಸೋಪಾನವಿನ್ನೂ ಮುರಿದು ಬಿದ್ದಿಲ್ಲ. ದ್ರೋಣ, ಕರ್ಣ, ಜಯದ್ರಥ, ದುಶ್ಶಾಸನರಾದಿಯಾಗಿ ನನ್ನವರು ನನ್ನ ಬರುವಿಕೆಯನ್ನು ನೋಡುತ್ತಿರುವರು. ಈಗ ಸಂಧಿ ಮಾಡಿಕೊಂಡು ನಾನು ಬದುಕಿದ್ದರೆ ಮುಂದೆ ಯಶಸ್ಸೋಪಾನ ಮಾರ್ಗವು ಮುಚ್ಚಿಹೋಗಿ, ನನಗೆ ದುರ್ಗಮವಾದೀತು!

ನನಗೆ ಈಗ ರಾಜ್ಯದಲ್ಲಿಲ್ಲ ಗುರಿ! ಸೇಡಿನಲ್ಲಿದೆ. ನನ್ನವರನ್ನು ಕೊಂದವರನ್ನು ಕೊಂದು, ಅವರ ಋಣವನ್ನು ತೀರಿಸಿ, ಆಮೇಲೆ ನಾನೂ ಸಾಯುವೆನು. ಬಂಧುಮಿತ್ರರಿಲ್ಲದ, ಸಿರಿಸಂಪತ್ತಿಲ್ಲದ, ಸ್ತ್ರೀಬಾಲ ರೋದನಭರಿತವಾದ, ಶೂನ್ಯಶ್ಮಶಾನ ಸದೃಶವಾದ ಭೂಮಂಡಲವನ್ನು ನನ್ನ ಶತ್ರುಗಳ ಪಾಲಿಗೇ ಬಿಟ್ಟು ಹೋಗುವೆನು. ಕರೆಯುತ್ತಿದೆ ನನ್ನನ್ನು ಕೈಬೀಸಿ ಕಮನೀಯ ಸ್ವರ್ಗ!' ಇಂತು ನುಡಿದ ಕುರುರಾಜನ ಮಾತನ್ನು ಕೇಳಿ ಕೃಪನು ವಿಧಿಗೆ ತಲೆಬಾಗಿ, ಸುಮ್ಮನಾದನು. ಅಂದು ಸಾಯಂಕಾಲವಾಗಲು, ಕೌರವ ವಾಹಿನಿಯು ಹಿಮವತ್ಪರ್ವತದ ತಪ್ಪಲು ಪ್ರದೇಶಗಳನ್ನು ಸೇರಿ, ಆ ರಾತ್ರಿ ಕಳೆದರು. ದುರ್ಯೋಧನನು ಆಚಾರ್ಯನಿಗರುಹಿದ ವಚನಗಳನ್ನು ಕೇಳಿ, ಅವರು ತಮ್ಮ ರಾಜನ ಅಭಿಮಾನವನ್ನು ಮೆಚ್ಚಿ ತಾವೂ ಯುದ್ಧ ನಿಶ್ಚಯವಂತರಾದರು. ಮರುದಿನ (ಅಮಾವಾಸ್ಯೆ) ಬೆಳಗಾಗಲು ಅವರು ಮತ್ತೆ ರಣರಂಗವನ್ನು ಸೇರಿ, ಯುದ್ಧ ಸನ್ನದ್ಧರಾಗಿ ನಿಂತರು.

## ೨. ಶಲ್ಯ ಸೇನಾಪತ್ಯ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಒಂದು ಯೋಜನದ ಹಿಮವತ್ ಪ್ರಸ್ಥದಿಂದ ಹಿಂದಿರುಗಿದ ಕುರುಸೇನೆಯು, ಕಂಕಾಳಾಬೀಲವು ದುಸ್ಸಹ ದುರ್ಗಂಧವು, ಕಂಕಗೃಧ್ರಾದಿಕ್ರವ್ಯಾದ ಗಣಾಕೀರ್ಣವು, ಭೀರುಭಯಂಕರವು ಆದ ಕುರುಕ್ಷೇತ್ರದ ರಣರಂಗದಲ್ಲಿ ಮಹಾವ್ಯೂಹಾಕಾರವಾಗಿ ನಿಂತಿತು. ಶಲ್ಯ, ಚಿತ್ರಸೇನ, ಶಕುನಿ, ಅಶ್ವತ್ಥಾಮ, ಕೃಪ, ಕೃತವರ್ಮ, ಸುಷೇಣ, ಧೃತಸೇನರು ಸೇನಾಮುಖದಲ್ಲಿ ನಿಂತಿದ್ದರು. ಕರ್ಣಮೃತಿಯಿಂದ ಧೃತಿಹೀನರಾಗಿದ್ದೂ ರಣಮರಣವನ್ನಪೇಕ್ಷಿಸಿ, ಅವರು ಸರಿಯಾದ ಸೇನಾಪತಿಯನ್ನು ಆರಿಸಿ, ಅವನ ನೇತೃತ್ವದಲ್ಲಿ ನಡೆದು ಕಾದಲು ಸಿದ್ಧರಿದ್ದರು. ಆಗ ದುರ್ಯೋಧನನು ಅವರ ಇಂಗಿತವನ್ನರಿತು, ಗುರುಸುತನ ಕಡೆಗೆ ನೋಡಿದನು.

ಅಶ್ವತ್ಥಾಮನೆಂದರೆ ಸಾಮಾನ್ಯನಲ್ಲ. ಆ ಮಹಾವೀರನು ಸರ್ವವಿಧ ಯುದ್ಧ ವಿದ್ಯಾವಿಶಾರದನು. ಕಾದುನಿಂತರೆ ಕಾಲಾಂತಕನು. ಕೊಲ್ಲತೊಡಗಿದರೆ ಕ್ರೂರ ರುದ್ರನು. ಶಿವನು, ಕಂಬುಗ್ರೀವನು, ವಿಶಾಲನೇತ್ರನು, ಶುಭ್ರೋನ್ನತ ಗಾತ್ರನು. ಪ್ರಿಯಂವದನು, ವ್ಯಾಘ್ರವದನನು, ಮೇರುಗಂಭೀರನು, ಮಹಾಶಿರನು, ವಿಶಾಲ ಭುಜನು, ಅಗ್ನಿತೇಜನು,

ಆದ ಅಶ್ವತ್ಥಾಮನು ಗುಣಗಳನ್ನು ಲಕ್ಷಣಗಳನ್ನು ಕಲೆಸಿ ವಿಧಾತ ನಿರ್ಮಿಸಿದ ವಿಗ್ರಹದಂತೆ ಕಂಗೊಳಿಸಿದನು. ವೇಗದಲ್ಲಿ ಗರುಡವಾತರನ್ನು ಪ್ರಕಾಶದಲ್ಲಿ ಅಗ್ನಿಸೂರ್ಯರನ್ನು, ಬುದ್ಧಿಯಲ್ಲಿ ಕವಿಕಾವ್ಯರನ್ನು, ಕಾಂತಿಯಲ್ಲಿ ಇಂದ್ರಚಂದ್ರರನ್ನು ರೂಪದಲ್ಲಿ ಜಯಂತವಸಂತರನ್ನು ಪೋಲ್ವ ಅಶ್ವತ್ಥಾಮನು ಸುಲಕ್ಷಣಾಕರನು, ಶ್ರುತಿವಿದ್ಯಾ ರತ್ನಾಕರನು, ಶತ್ರುಮರ್ದನನು ಮಿತ್ರವರ್ಧನನು ಆಗಿ ವಿರಾಜಿಸುತ್ತಿದ್ದನು. ಹತ್ತಂಗಗಳ ನಾಲ್ಕುಪಾದಗಳ ಧನುರ್ವೇದವಾ ಮಹಾನುಭಾವನ ಮುಖದಲ್ಲಿ ನೆಲೆಮಾಡಿ ನಿಂತಿತ್ತು. ಸಾಂಗವೇದಗಳನ್ನೋದಿ ತ್ರಿನೇತ್ರನನ್ನಾರಾಧಿಸಿ, ಅಯೋನಿಜಳಾದ ಕೃಪೀದೇವಿಯಲ್ಲಿ ಅಯೋನಿಜನಾದ ದ್ರೋಣಾಚಾರ್ಯನಿಂದ ಜನಿಸಿ, ಅಪ್ರತಿಮ ಪ್ರತಾಪನೆನಿಸಿ, ಸರ್ವವಿದ್ಯೆಗಳ ಪಾರವನ್ನು ತರಿಸಿ, ಮಿತ್ರನೆಂದು ದುರ್ಯೋಧನನನ್ನು ವರಿಸಿ ನಿಂತ ಗುರುಸುತನು ದುರ್ಯೋಧನನ ನೇತ್ರಗೋಚರನಾದನು.

ಆ ಮಹಾತ್ಮನು ಸೇನಾಪತಿಯಾಗಲಿಷ್ಟಪಡನೆಂದರಿತು, ಕುರುರಾಜನು 'ಯಾರನ್ನು ಸೇನಾಪತಿಯಾಗಿ ಆರಿಸಲಿ ? ಯಾವ ವೀರನಿಂದ ನಮಗೆ ವಿಜಯ ಸಾಧಿತವಾದೀತು ? ನಮಗೆ ನೀನೇ ಗತಿ. ನಿನ್ನ ಮಾತಿನಂತೆ ನಿಂತು ಕಾದುವೆವು' ಎಂದು ಕೇಳಿದನು.

ಅಶ್ವತ್ಥಾಮನಿಂತೆಂದನು : 'ರಾಜನ್ ! ಶಲ್ಯನು ನಿನ್ನ ಸೇನಾಧಿನೇತನಾಗಲಿ ! ಕುಲವೀರ್ಯತೇಜೋಯಶೋಬಲ ಶ್ರೀಯುತನಾದ ಮದ್ರರಾಜನಿಗೆ ಸರಿವೀರರಿನ್ನಾರಿಲ್ಲ. ಪಾಪ ! ಕೊಟ್ಟಮಾತಿಗೆ ಕಟ್ಟುಬಿದ್ದು ಸೋದರಳಿಯಂದಿರನ್ನು ಬಿಟ್ಟು ನಿನಗೆ ಸಹಾಯನಾಗಿ ಬಂದಿರುವ ಶಲ್ಯರಾಜನು ಕೃತಜ್ಞನಾದುದರಿಂದ, ನಿನ್ನ ವಿಜಯವನ್ನು ನಿರ್ಮತ್ಸರನಾಗಿ ಸಾಧಿಸುವನು. ದೇವತೆಗಳಿಗೆ ಸ್ಕಂದನಂತೆ, ನಮಗೆ ಶಲ್ಯನು ಸೇನಾನೇತನಾಗಲಿ !' ಆ ಮಾತಿಗೆ ಮಿಕ್ಕ ರಾಜನ್ಯರು ಸಮ್ಮತಿಯನ್ನು ಸೂಚಿಸಿ, "ಜಯಶಲ್ಯ ! ಜಯ ದುರ್ಯೋಧನ !" ಎಂಬ ಶಬ್ದಗಳನ್ನು ಮಾಡಿದರು.

ದುರ್ಯೋಧನನು ರಥದಲ್ಲಿದ್ದ ಶಲ್ಯರಾಜನಲ್ಲಿಗೆ ನಡೆದುಬಂದು, ಸಮೀಪದಲ್ಲಿ ನಿಂದು, ಕೈಮುಗಿದು, 'ಮದ್ರರಾಜ ! ಮಿತ್ರನಾಗಿ ಬಂದುದಕ್ಕೆ, ಮಿತ್ರಋಣವನ್ನು ತೀರಿಸುವ ಕಾಲವು ಬಂದಿದೆ ! ಯುದ್ಧದಲ್ಲಲ್ಲವೇ ಮಿತ್ರಾಮಿತ್ರರ ಪರೀಕ್ಷೆ ! ನೀನೆಮ್ಮ ಸೇನೆಗೆ ನಾಯಕನಾಗಿ ನಡೆಸು ! ನಿನ್ನ ಸಹಾಯದಿಂದ ಪಾಂಡವಾದಿ ಸರ್ವಶತ್ರು ವೀರರನ್ನು ಗೆದ್ದು ನಾವು ರಾಜ್ಯವನ್ನು ಪೊಂದಿ ಸುಖಿಸುವೆವು ! ನಿನ್ನ ಪ್ರತಾಪದಿಂದ ಪಾಂಚಾಲರು ನಿರುತ್ಸಾಹರಾಗುವರು !' ಎಂದು ಪ್ರಾರ್ಥಿಸಿದನು.

ಶಲ್ಯನು 'ಕುರುರಾಜ ! ನೀನೇನು ನುಡಿವೆಯೋ ಅದರಂತೆ ನಡೆವುದೆನ್ನ ಕರ್ತವ್ಯವಾಗಿದೆ. ನಿನ್ನ ಪ್ರೀತಿಗಾಗಿ ನನ್ನ ರಾಜ್ಯಧನಗಳನ್ನೇ ಅಲ್ಲದೆ ಪ್ರಾಣಗಳನ್ನೂ ಕೊಡಲು ಸಿದ್ಧನಿರುವೆನು' ಎಂದನು. ಆಗ ಅತುಲನಾದ ಪಾಂಡವ ಮಾತುಲನನ್ನು ದುರ್ಯೋಧನನು ಸೇನಾಪತ್ಯದಲ್ಲಿ ಪಟ್ಟಗಟ್ಟಿದನು. 'ದುರ್ಯೋಧನ ! ಮಹಾರಾಜ ! ಕೇಳಿಲ್ಲಿ ! ಆ ರಥದಲ್ಲಿ ಕೂತುಬರುವ ಕೃಷ್ಣಧನಂಜಯರು ನನಗೆ ಸಮರಲ್ಲ.

ನಾನು ಕ್ರುದ್ಧನಾದನೆಂದರೆ, ಸಸುರಾಸುರ ನರನಾದ ಜಗವನ್ನೇ ಗೆಲ್ಲಬಲ್ಲೆನು; ಇನ್ನು ಪಾಂಡವರ ಪಾಡೇನು ? ನಿನ್ನ ಸೇನಾಪತಿಯಾಗಿ, ಶತ್ರುದುರ್ಭೇದ್ಯವಾದ ಮಹಾವ್ಯೂಹವನ್ನೊಡ್ಡಿ ನಿನಗೆ ಜಯವನ್ನು ತಂದುಕೊಡುವೆನು' ಎಂಬುವ ಶಲ್ಯ ಸೇನಾಪತಿಯ ಮಾತಿಗೆ ಮೆಚ್ಚಿ ಕುರುಸೈನಿಕರು ಜಯಶಬ್ದಗಳನ್ನು ಮಾಡಿದರು.

ಶಲ್ಯನು ಮೈಯುಬ್ಬಿ, 'ಸುಯೋಧನ ! ನಿಶ್ಚಿಂತನಾಗು ! ಇಂದಿನ ರಣದಲ್ಲಿ ವಿಕ್ರಮವಿಹಾರ ಭಯಂಕರನಾದ ಶಲ್ಯನಿಂದ ಪಾಂಡವರು ಸಾಯುವರು; ಇಲ್ಲದಿರೆ ಶಲ್ಯನು ಸಾಯುವನು, ವಾಸುದೇವ ಧನಂಜಯರು, ದ್ರೌಪದೇಯರು, ಸಾತ್ಯಕಿ ಭೀಮರು, ನನ್ನ ಅಳಿಯಂದಿರಾದ ನಕುಲ ಸಹದೇವರು, ಮಹಾರಾಜ ಯುಧಿಷ್ಠಿರನು ಕೂಡ ನೋಡಿ ಬೆರಗಾಗುವರು ನನ್ನ ಕೋದಂಡ ಪಾಂಡಿತ್ಯವನ್ನು ! ಹುಲ್ಲೆಗಳನ್ನು ಹುಲಿಯಂತಾಗಿ ವಿಜೃಂಭಿಸುವ ಮದ್ರರಾಜನ ರಣವಿಹಾರ ಕೌಶಲವು ಭೀಷ್ಮ ದ್ರೋಣರನ್ನು ಮರೆಸುವಂತಾಗುವುದು' ಎಂದು ಶಂಖವನ್ನೂದಿದನು. ಅದನ್ನು ಕೇಳಿ, ಹೃಷ್ಟರಾದ ಕುರುವೀರರು ಕರ್ಣ ವ್ಯಸನವನ್ನು ಮರೆತು ಶಲ್ಯನಿಂದ ದುರ್ಯೋಧನನ ವಿಜಯವು ನಿಶ್ಚಯವೆಂದರಿತು ಯುದ್ಧಸುಮುಖರಾಗಿ ನಡೆದರು. ಯುದ್ಧವು ಪ್ರಾರಂಭವಾದಾಗ ಹದಿನೆಂಟನೆಯ ದಿನವಾದ ಅಮಾವಾಸ್ಯೆ ಆಗಿತ್ತು.

ಧರ್ಮರಾಜನು ನಿನ್ನ ಸೈನ್ಯದ ಕೋಲಾಹಲವನ್ನೇ ಕೇಳಿ, ಎಲ್ಲ ರಾಜರು ಕೇಳುತ್ತಿರಲು ವಾಸುದೇವನಿಗಿಂತೆಂದನು: 'ಮಾಧವ ! ಶಲ್ಯರಾಜನು ಕೌರವ ಸೇನಾಪತಿಯಾಗಿ ಬರುತ್ತಿರುವನು. ಅವಕ್ರವಿಕ್ರಮನಾದ ಮದ್ರರಾಜನಿಂದ ನಡೆಸಲ್ಪಡುತ್ತಿರುವ ಕುರುಸೇನೆಯು ದುರ್ನಿವಾರವಾಗಿರುವುದು. ಮುಂದೆ ನಾವೆಂತು ನಡೆಯಬೇಕೋ, ಎಂತು ಜಯವನ್ನು ಗಳಿಸಲಾಗುವುದೋ ನೀನೇ ಹೇಳು ! ನಮಗೆ ನೀನಲ್ಲದಿನ್ನಾರು ರಕ್ಷಕರು ?' ಎಂದನು.

ವಾಸುದೇವನು, 'ಮದ್ರರಾಜನು ಬಲವಂತನು. ಅವನು ಚಿತ್ರಯುದ್ಧ ವಿಶಾರದನೂ ಆಗಿರುವನು. ಭೀಷ್ಮದ್ರೋಣ ಕರ್ಣರಂತಹ ವೀರನಾದ ಶಲ್ಯನೊಡನೆ ನಿಂತು ಕಾದಬಲ್ಲವರೆಮ್ಮಲ್ಲಿ ಬಹು ವೀರರಿಲ್ಲ. ಶಿಖಂಡಿ ಧೃಷ್ಟದ್ಯುಮ್ನರಿಗೂ ಹೆಚ್ಚು ಬಲವಂತನವನು. ಭೀಮಸಮಬಲರೆಂಬರವನನ್ನು ! ಅವನನ್ನು ಶಾರ್ದೂಲಸಮ ವಿಕ್ರಮನಾದ ನೀನು ವಿಕ್ರಮಿಸಿ ಕೊಲ್ಲಬಲ್ಲೆ ! ನಿನ್ನವನಾಗಿಯೂ ಶತ್ರುಪಕ್ಷವನ್ನು ಸೇರಿ, ನಿನ್ನವರನ್ನು ನಾಶಪಡಿಸಲು ಬರುತ್ತಿರುವ ಶಲ್ಯನನ್ನು ಶಕ್ರ ಶಂಬರನ್ನಂತೆ ಸಂಹರಿಸು ! ಮದ್ರರಾಜನು ಮೃತನಾದನೆಂದರೆ ನಿನ್ನ ವಿಜಯವು ನಿಶ್ಚಯವೆಂದು ತಿಳಿ !' ಎಂದನು.

ಧರ್ಮರಾಜನಾ ಮಾತನ್ನಾಲಿಸಿ, ಮಾತುಲನೆಂಬ ಮಮತೆಯನ್ನು ಬಿಟ್ಟು ಬಂದ ಶಲ್ಯನನ್ನು ಕೊಲ್ಲಲು ನಿಶ್ಚಯಿಸಿದನು. ಭೀಷ್ಮ ದ್ರೋಣರೆಂಬ ಮಹೋದಧಿ ರತ್ನಾಕರಗಳನ್ನು ದಾಟಿ, ಕರ್ಣನೆಂಬ ಮಡುವಿನನ್ನು ಈಜಿ ಪಾರಾಗಿ, ಬಂದ ಧರ್ಮರಾಜನಿಗೆ ಶಲ್ಯನು ಗೋಷ್ಪದದ ಕುಣಿಯಂತೆ ಕಂಡನು. ತಪೋವೀರ್ಯಕ್ಷಾತ್ರ

ಬಲಗಳನ್ನು ಪ್ರದರ್ಶಿಸಲು ನಿಶ್ಚಯಿಸಿ, ಧರ್ಮಜನು ಶ್ರೀಕೃಷ್ಣನನ್ನು ಪೂಜಿಸಿ, ಸೈನ್ಯಸನ್ನಾಹ ನಡೆಸಿದನು.

ಕೌರವಸೇನೆಯೂ ಮೃತ್ಯುವಿಗೆ ಹೆದರದೆ ಮುನ್ನಡೆಯಿತು. ಕೃಪ, ಕೃತವರ್ಮ, ದ್ರೌಣಿ, ಶಲ್ಯ, ಶಕುನಿ, ಕೈತವಾದಿ, ಮಹಾರಥರು ದುರ್ಯೋಧನನನ್ನು ಕಂಡು, ಸಭೆಗೂಡಿ, 'ಪಾಂಡವರೊಡನೆ ಕಡಿದಾಡುವಾಗ ಒಬ್ಬೊಂಟಿಗನಾಗಿ ಸೆಣಸಬಾರದು. ನಾಲ್ಕೈದು ವೀರರಿಂದ ಕೂಡಿ ಪಾಂಡವ ವೀರರನ್ನು ಮುತ್ತಿ ಒಬ್ಬೊಬ್ಬರನ್ನು ಬೇರ್ಪಡಿಸಿ, ಕೊಂದುಬಿಡಬೇಕು. ಅನ್ಯರಕ್ಷೆಗಾಗಿ ಬರದೆ, ತಾನಾಗಿ ಕಾದುವ ವೀರನು ಮಹಾಪಾಪ ಭಾಜನಾಗುವನು' ಎಂದು, ನಿಬಂಧನವನ್ನು ಮಾಡಿಕೊಂಡರು. ಅವರ ಸೇನೆಯು ನಡೆಯುತ್ತಿರಲು, ಕ್ಷುಬ್ಧ ಮಹಾಸಾಗರದಂತೆ ಕಂಗೊಳಿಸಿತು.

ಮಹಾರಾಜ ! ಇಂತಹ ಸೈನ್ಯವೆಲ್ಲವು ಒಂದರ್ಧ ದಿನದಲ್ಲಿ ನಷ್ಟಪ್ರಾಯವಾಯಿತೆಂದರೆ, ನಮ್ಮ ದುರದೃಷ್ಟವು ಅಪಾರವೆಂದು ತಿಳಿ ! ನಿನ್ನ ಮಗನ ಆಶೆಯು ಬಲವತ್ತರವಾಗಿ, ಎಲ್ಲರನ್ನೂ ಮೃತ್ಯುಮುಖದಲ್ಲಿ ಕೆಡಹಿ ತಾನೂ ಕಡಿದು ಬಿತ್ತು. ಪಾರ್ಥರನ್ನು ಕೊಲ್ಲುವನೆಂಬ ಹಠ, ಜಯಿಸುವೆನೆಂಬ ಆಶೆ, ಬಂಧುಮಿತ್ರರ ಸಾವಿನ ಸೇಡು ಎಲ್ಲವೂ ಮುಪ್ಪರಿಯಾಗಿ ಮೂಡಲು, ದರ್ಯೋಧನನು ಅವೇ ತನ್ನ ಕೊರಳ ಉರುಳಾಗುವದೆಂಬ ಸತ್ಯವನ್ನರಿಯದೆ, ರಣಾಂಗಣದಲ್ಲಿ ನುಗ್ಗಿದನು.

ಕರ್ಣನ ಮೃತಿಯಿಂದ ಬೆಂಡಾದ ಸೇನೆಯನ್ನು ಹುರಿದುಂಬಿಸಿ, ಶಲ್ಯನು ಮಹಾವ್ಯೂಹವನ್ನು ರಚಿಸಿದನು. ಸರ್ವತೋಭದ್ರವೆಂಬ ವ್ಯೂಹದ ಮಧ್ಯದಲ್ಲಿ ಶಲ್ಯನು ದಿವ್ಯರಥದಲ್ಲಿ ಮಹಾಧನುರ್ಧರನಾಗಿ ಮೆರೆವನು. ಅದರ ಮುಂಭಾಗದಲ್ಲಿ ಅಶ್ವತ್ಥಾಮನು, ದುರ್ಯೋಧನನು ಬಲಭಾಗದಲ್ಲಿಯು, ಶಕುನಿಯು ಎಡಗಡೆಯು ನಿಂತರು. ಕುರುಕುಮಾರರು (ಉಳಿದವರು) ದುರ್ಯೋಧನನಿಗೆ ಪಾರ್ಶ್ವರಕ್ಷಕರಾದರು. ಕೃಪಕೃತವರ್ಮರು ಶಕುನಿಯ ಹಿಂದುಗಡೆ ನಡೆದರು. ಅಶ್ವತ್ಥಾಮನನ್ನು ರಕ್ಷಿಸುತ್ತಾ ಕಾಂಬೋಜರು ನಡೆದರು.

ಪಾಂಡವರು ಕೂಡ ಮಹಾವ್ಯೂಹವನ್ನು ರಚಿಸಿ ಮುನ್ನಡೆದರು. ಅಗ್ರಭಾಗದಿ ಭೀಮನಿರಲು, ಶ್ರೀಶ ಪಾರ್ಥರು ಬಲಗಡೆ, ಯಮಳರು ಎಡಗಡೆ ನಿಂತರು. ಧರ್ಮರಾಜನು ಮಧ್ಯದಲ್ಲಿ ಧೃಷ್ಟದ್ಯುಮ್ನ ಸಾತ್ಯಕಿ ರಕ್ಷಿತನಾಗಿದ್ದನು ಎಂದು ಸಂಜಯನು ವರ್ಣಿಸಿದನು.

ಧೃತರಾಷ್ಟ್ರನು 'ಸಂಜಯ ! ಅಂದು ಪ್ರಾತಃಕಾಲ ಉಳಿದ ಸೈನ್ಯಭಾಗ ವೆಷ್ಟಿತ್ತು ? ಉಭಯ ಸೇನೆಗಳ ಸಂಖ್ಯೆಯನ್ನು ತಿಳಿಸು !' ಎಂದನು.

ಸಂಜಯನು 'ಮಹಾರಾಜ ! ಕೌರವ ಸೇನೆಯಲ್ಲಿ ಹನ್ನೊಂದು ಸಾವಿರ ರಥಗಳು, ಹತ್ತು ಸಾವಿರದ ಏಳುನೂರು ಗಜಗಳು, ಎರಡು ಲಕ್ಷ ಕುದುರೆಗಳು, ಒಂಬತ್ತು ಕೋಟಿ, ಪದಾತಿಗಳು ಉಳಿದಿದ್ದರು. ಪಾಂಡವ ಸೇನೆಯಲ್ಲಿ ಆರು ಸಾವಿರ

ರಥಗಳು, ಆರು ಸಾವಿರ ಗಜಗಳು, ಹತ್ತು ಸಾವಿರ ಕುದುರೆಗಳು, ಒಂದು ಕೋಟಿ ಕಾಲಬಲವು ಉಳಿದಿತ್ತು.

ಆಗ ತುಮುಲ ಯುದ್ಧವು ಪ್ರಾರಂಭವಾಯಿತು. ಭೀಮನು ಕೃಪನಿಂದಲು, ಧರ್ಮಜನು ಶಲ್ಯನಿಂದಲು, ಅರ್ಜುನನು ಕೃತವರ್ಮನಿಂದಲು, ನಕುಲನು ಶಕುನಿಯಿಂದಲು, ಸಹದೇವನು ಉವಾಕಕೈತವರಿಂದಲು ದ್ವಂದ್ವಯುದ್ಧದಲ್ಲಿ ತೊಡಗಿದರು. ದೇವಾಸುರರಂತೆ ಸೆಣೆಸಿ ಇತರ ಯೋಧರು ಕಡಿದಾಡಿದರು. ಸೊಂಡಿಲು ಕಡಿದು ಓಡುವ ಗಜಗಳ ಘೀಂಕಾರವು ಮೇಘಸ್ವನದಂತಿತ್ತು. ರಥಿಗಳು ಗಜಗಳಿಗೆ ಸಿಕ್ಕು ಪುಡಿಯಾದರು. ಸಾದಿಗಳು ಭಟರನ್ನು ಚೆಂಡಾಡಿದರು. ಶಕ್ತಿತೋಮರ ಪರ ಶುಕುಂತಪ್ರಾಸ ಶೂಲ ಖಡ್ಗ ಪರಿಘಾದಿ ಆಯುಧಗಳಿಂದ ಕಡಿಯಲ್ಪಟ್ಟು ಕಾಲ್ಬಟರು ಕದನರಂಗದಲ್ಲಿ ವೀರಶಯನವನ್ನು ಪೊಂದಿದರು. ವಾದ್ಯಘೋಷಗಳು, ಗಜಘೀಂಕಾರಗಳು, ಹಯಹೇಷೆಗಳು, ರಥಿಕರ ಸಿಂಹನಾದಗಳು, ಪದಭಟರ ವೀರಾಲಾಪಗಳು ಬೆರೆತು ದಿಕ್ಕುಗಳಲ್ಲಿ ವ್ಯಾಪಿಸಿದಾಗ, ಯಮರಾಜನ ಇಪ್ಪತ್ತೇಳು ನರಕಗಳು ನೆಲಕ್ಕಿಳಿದು ಬಂದಂತೆ ಕಾಣಿಸಿತು. ಕಾಲುಕಡಿದು, ಕೈಕಡಿದು, ಬಿದ್ದ ಸೈನಿಕರ ಆರ್ತನಾದಗಳು ಭಯಂಕರವಾಗಿದ್ದವು. ಹಯಮಾತಂಗಗಳು ರಾಶಿರಾಶಿಯಾಗಿ ಸತ್ತುಬಿದ್ದಿದ್ದವು. ಪರಲೋಕವನ್ನು ಸೇರಿಸಲು ಕೊಂಡುಹೋಗುವಂತೆ ರಕ್ತನದಿಗಳು ಕಂಕಾಳಗಳಿಂದ ತುಂಬಿ ಹರಿದವು. ರಕ್ತವೇ ನೀರಾಗಿ, ರಥಗಳು ಸುಳಿಗಳಾಗಿ, ಧ್ವಜಗಳು ಗಿಡಗಳಾಗಿ, ಅಸ್ಥಿಗಳು ಮರಳಾಗಿ, ಭುಜಗಳು ಮಕರಿಗಳಾಗಿ, ಧನಸ್ಸುಗಳು ಅಲೆಗಳಂತಾಗಿ, ಹಸ್ತಿನಿವಹವು ಬೆಟ್ಟಗಳಾಗಿ, ಹಯನಿಕರವು ಬಂಡೆಗಲ್ಲುಗಳಾಗಿ, ಮೇದೋಮಜ್ಜೆಗಳು ಕೆಸರಾಗಿ, ಕೂದಲು ಶೈವಾಲವಾಗಿ, ಶ್ವೇತಛತ್ರಗಳು ಹಂಸಗಳಾಗಿ, ಗದೆಗಳು ಹಡಗಗಳಾಗಿ, ಚಕ್ರಗಳು ಸುಳಿಗಳಾಗಿ, ಹರಿದ ರಣರಕ್ತನದಿಯು ಶೂರರಿಗೆ ಹರ್ಷಕರವೂ ಭೀರುಗಳಿಗೆ ಭಯಂಕರವೂ ಆಗಿ ಯಮಲೋಕವನ್ನು ಸೇರಿತು.

## ೩. ಶಲ್ಯವಿಕ್ರಮ — ಸಂಕುಲ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್ ! ಆಗ ಸಂಕುಲಯುದ್ಧವು ಆರಂಭಿಸಿತು.

ಭೀಮಾರ್ಜುನರು ವಿಕ್ರಮಿಸಿ, ಶತ್ರುಸಂಹಾರವನ್ನು ಮಾಡತೊಡಗಿದರು. ಕೌರವರು ಅವರ ಪ್ರತಾಪದಿಂದ ಬೆಂದು, ಭಯಭೀತರಾಗಿ ಓಡಿದರು. ದೇವದತ್ತ ಪೌಂಡ್ರಗಳ ಆರಾವವವರಿಗೆ ಮೃತ್ಯುವಿನ ಕರೆಯಂತಿತ್ತು. ಧೃಷ್ಟದ್ಯುಮ್ನ ಶಿಖಂಡಿಯರು ಶಲ್ಯನನ್ನು ಮುತ್ತಿದರು. ನಕುಲಸಹದೇವರು ಉವಾಕಶಕುನಿಯನ್ನು ಮುತ್ತಿದರು. ಸಾತ್ಯಕಿ ಚೇಕಿತಾನರು ಕೃಪನನ್ನು ಮುತ್ತಿದರು.

ಭೀಮಸೇನನು ತನ್ನನ್ನು ಮುತ್ತಿದ ಗುರುಸುತನಿಂದ ಹೋರಾಡಿ, ಅತಿ ಪ್ರಯಾಸ

ವಿಲ್ಲದೇ ಆತನ ಧನುವನ್ನು ಮುರಿದು, ಅಶ್ವಗಳನ್ನು ಸಂಹರಿಸಿದನು. ಬಾಣಸಂಚಯರಹಿತನಾದ ಅಶ್ವತ್ಥಾಮನು ರಣರಂಗದಿಂದ ಹಿಂದಿರುಗಿದನು. ಶಲ್ಯನು ಧರ್ಮರಾಜನ ತುರಗರಾಜಿಯನ್ನು ಕೊಂದು ಅವನನ್ನು ವಿರಥನನ್ನಾಗಿಸಿದನು. ಆಗ ಕಪಿಧ್ವಜನು ಶಲ್ಯನನ್ನು ಮುತ್ತಿ ಭಯಂಕರ ರಣದಲ್ಲಿ ತೊಡಗಿದನು. ಅಶ್ವತ್ಥಾಮನು ಮತ್ತೊಂದು ರಥವನ್ನೇರಿ ಬಾಣಾದ್ಯಾಯುಧಗಳಿಂದ ಕೂಡಿಬಂದು, ಭೀಮಸೇನನನ್ನು ಮುತ್ತಿ ಶರಗಳಿಂದ ಮುಚ್ಚಿದನು. ದುರ್ಯೋಧನನೂ ಗುರುಸುತನಿಗೆ ನೆರವಾಗಿ, ಮಾರುತಿಯನ್ನು ನೂರಾರು ಶರಗಳಿಂದ ಪೀಡಿಸಿದನು. ಭೀಮಸೇನನು ಅವರಿಬ್ಬರಿಂದ ಕಡಿದಾಡಿ, ಅನೇಕ ಬಾಣಗಳಿಂದ ಪೀಡಿಸಿ, ಓಡಿಸಿದನು.

ದ್ರೌಪದೇಯರು ಯುಯುತ್ಸು ಶಿಖಂಡಿ ಸಹಿತರಾಗಿ ಕುರುರಾಜನ ಸೋದರರನ್ನು ಬಾಣಶತದಿಂದ ಪೀಡಿಸಿ, ಶಲ್ಯನ ಸಹಾಯಕ್ಕೆ ಬರದಂತೆ ವಾರಿಸಿದರು. ಸಹದೇವನು ಶಕುನಿಯನ್ನೂ, ನಕುಲನು ಉವಾಕನನ್ನೂ, ಧೃಷ್ಟದ್ಯುಮ್ನನು ಕೃತವರ್ಮನನ್ನೂ, ಸಾತ್ಯಕಿಯು ಕೃಪಾಚಾರ್ಯನನ್ನೂ ವಾರಿಸಿ, ಚಿತ್ರಯುದ್ಧರತರಾದರು. ಅವರ ಶರಲಾಘವವು ಪ್ರಶಂಸಾಪಾತ್ರವಾಗಿತ್ತು. ಜಿತಕಾಶಿಗಳಾದ ಪಾಂಡವಯೋಧರು ನಿರುತ್ಸಾಹರಾದ ಕುರುಯೋಧರನ್ನು ಸೋಲಿಸಿ, ಓಡಿಸುತ್ತಿದ್ದರು. ಪ್ರಿಯರಾದ ಪುತ್ರಮಿತ್ರರನ್ನು ಬಂಧುಜನರನ್ನು ಮಾತುಲಭಾಗಿನೇಯರನ್ನು ವಿಕಲಾಂಗರಾಗಿ ಸಾಯಲಿರುವವರನ್ನು ಬಿಟ್ಟು ಕುರುಯೋಧರು ಯುದ್ಧರಂಗದಿಂದ ಓಡತೊಡಗಿದರು.

ಅದನ್ನು ಕಂಡು ಮದ್ರರಾಜನು ರೋಷಾಮರ್ಷವಶನಾಗಿ, ತಾನು ವಿಕ್ರಮಿಸಿ, ಅವರನ್ನು ಹಿಂದಿರುಗಿಸಲೆಣಿಸಿ, ತನ್ನ ಸೂತನಿಗಿಂತೆಂದನು: 'ಸೂತ ! ಹೊಡೆ ನನ್ನ ರಥವನ್ನು ಯುಧಿಷ್ಠಿರನಲ್ಲಿಗೆ ! ಅವನ ಶ್ವೇತಛತ್ರವು ಅಲ್ಲಿ ಕಾಣುತ್ತಿದೆ ನೋಡು ! ನಾನು ವಿಕ್ರಮಿಸಿದರೆ ಪಾರ್ಥರೆನಗೀಡಲ್ಲ ' ಎಂದನು. ಸೂತನಂತೆಯೇ, ಶಲ್ಯ ರಥವನ್ನು ಧರ್ಮರಾಜನ ಕಡೆಗೆ ಹೊಡೆದನು. ಶಲ್ಯನ ವೇಗವನ್ನು ಬೆಟ್ಟವು ನದಿವೇಗವನ್ನಂತೆ ತಡೆದು ಪಾಂಡವಯೋಧರು ಬಾಣಗಳಿಂದ ಅವನನ್ನು ಪೀಡಿಸಿದರು. ಮುಂದೆ ಸಾಗಿದ ಶಲ್ಯನನ್ನು ಕಂಡು, ಕುರುವೀರರೂ ಹಿಂದಿರುಗಿ ಬಂದು ಅವನಿಗೆ ನೆರವಾಗಿ ನಿಂತರು. ಸಂಗ್ರಾಮವು ಭೀಕರವಾಯಿತು. ಅಶ್ವಗಜಭಟಪದಾಘಾತದಿಂದ ಮೇಲೆದ್ದ ಕೆಂದೂಳಿಯು, ಚಿಮ್ಮಿದ ರಕ್ತಪ್ರಸಾರದಿಂದ ಅಡಗಿ ಕೂತಿತು.

ನಕುಲನು ಚಿತ್ರಸೇನ (ಕರ್ಣಪುತ್ರ) ನನ್ನು ಮುತ್ತಿದಾಗ ಬಾಣವರ್ಷದಲ್ಲಿ ಉಭಯ ವೀರರು ಮುಣುಗಿ, ಕಾಣಬರದಾದರು. ಕೃತಾಸ್ತ್ರರು , ಬಲವಂತರು, ರಥಚರ್ಯಾವಿಶಾರದರು ಆದ ನಕುಲ ಚಿತ್ರಸೇನರು ಪರಸ್ಪರ ವಧಾತುರರಾಗಿ ಕಡಿದಾಡಿದರು. ಚಿತ್ರಸೇನನು ನಕುಲನ ಧನುವನ್ನು ಭಲ್ಲದಿಂದ ಮುರಿದು, ಮೂರು ಶರಗಳನ್ನು ಅವನ ಲಲಾಟದಲ್ಲಿ ನಾಟಿಸಿದನು. ತ್ರಿಶೃಂಗವಾದ ಪರ್ವತದಂತೆ ನಕುಲನು ವಿರಾಜಿಸಿದನು. ಗೈರಿಕಧಾತು ಚಿತ್ರಿತವಾದ ಗೋತ್ರದಂತೆ ಮಾದ್ರೀಪುತ್ರನು ರಕ್ತಸಿಕ್ತಗಾತ್ರನಾದನು. ಅವನ ನೇತ್ರಗಳು ಕೋಪಾರುಣಿತವಾದವು. ಶಿಲಾಶಿತವಾದ

ಬಾಣಗಳಿಂದ ಚಿತ್ರಸೇನನು ನಕುಲನ ತುರಗಗಳನ್ನು ಕೆಡಹಿ, ಧ್ವಜವನ್ನು ಬೀಳಿಸಿ, ಸೂತನನ್ನು ಕೊಂದು, ಆರ್ಭಟಿಸಿದನು. ವಿರಥನಾದ ನಕುಲನು ಖಡ್ಗಪಾಣಿಯಾಗಿ ರಥದಿಂದಿಳಿದು, ಗುರಾಣಿಯಿಂದ ಚಿತ್ರಸೇನನ ಬಾಣಗಳನ್ನು ವ್ಯರ್ಥಗೊಳಿಸಿ, ಸಿಂಹವು ಮಂದರವನ್ನಂತೆ ಅವನ ರಥವನ್ನೇರಿ, ಖಡ್ಗದಿಂದ ಅವನ ಶಿರವನ್ನು ಖಂಡಿಸಿದನು. ಸರ್ವಸೈನಿಕರು ನೋಡುತ್ತಿರಲು, ಕರ್ಣಪುತ್ರನನ್ನು ಕೊಂದ ನಕುಲನ ವಿಕ್ರಮವನ್ನು ಕಂಡು ಕುರುವೀರರು ನಿಬ್ಬೆರಗಾದರು. ಪಾಂಡವ ವೀರರು ಜಯಧ್ವಾನಗಳನ್ನು ಮಾಡಿ, ಅವನಿಗೆ ನೆರವಾಗಿ ನಿಂತರು.

ಅಣ್ಣನ ಮೃತಿಯನ್ನು ಕಂಡು ಕುಪಿತರಾಗಿ ಸುರಸೇನ, ಸತ್ಯಸೇನರು ನಕುಲನನ್ನು ಮುತ್ತಿ ಶರಾಸಾರದಿಂದ ಪೀಡಿಸಿದರು. ಮಹಾವನದಲ್ಲಿ ಮದಗಜವನ್ನು ಕೊಲ್ಲಲೆಣಿಸಿ ಹಾರುವ ಹುಲಿಗಳಂತೆ ಅವರು ನಕುಲನ ಮೇಲೇರಿ ಬಂದರು. ನಕುಲನು ಮತ್ತೊಂದು ರಥವನ್ನೇರಿ, ಬೇರೊಂದು ಧನುವನ್ನು ಪಿಡಿದು, ಆ ಸೋದರರನ್ನು ಬಾಣವೃಷ್ಟಿಯಲ್ಲಿ ಮುಣುಗಿಸಿದನು. ನಿಶಿತಬಾಣಗಳಿಂದ ಸತ್ಯಸೇನನ ಕುದುರೆಗಳನ್ನು ಕೆಡಹಿ, ನಕುಲನು, ಅವನ ಧನುವನ್ನು ಭಲ್ಲದಿಂದ ಮುರಿದು, ಎರಡೆರಡು ಬಾಣಗಳಿಂದ ಅವರೀರ್ವರನ್ನು ಗಾಯಗೊಳಿಸಿದನು. ಸುರಷೇಣನು ಪಾಂಡವನ ಬಿಲ್ಲನ್ನು ಕ್ಷುರಪ್ರದಿಂದ ಖಂಡಿಸಿದನು. ನಕುಲನು ಮತ್ತೊಂದು ಧನುಸ್ಸನ್ನು ಪಿಡಿದು, ಅವನ ಧನುವನ್ನು ಮುರಿದು, ಧ್ವಜವನ್ನು ಕೆಡಹಿ, ಸತ್ಯಸೇನನ ಧನುವನ್ನೂ ಮುರಿದನು. ಕೌರವಭಟರು ಹಾಹಾಕಾರ ಮಾಡಿದರು. ಅವರೀರ್ವರು ತನ್ನ ರಥದ ಅಶ್ವಸೂತರನ್ನು ಕೆಡಹಲಿರುವುದನ್ನು ತಿಳಿದು, ನಕುಲನು ಅವರ ಬಾಣಗಳನ್ನು ಮಧ್ಯೇಮಾರ್ಗದಿ ಖಂಡಿಸಿ, ರಥಶಕ್ತಿಯನ್ನೆತ್ತಿ ಒಗೆದನು. ಆ ಶಕ್ತಿಯು ಎದೆಗೆ ಬಡಿಯಲು ಸತ್ಯಸೇನನು ರಕ್ತ ಕಾರಿ ಸತ್ತುಬಿದ್ದನು.

ಆಗ ಸುರಸೇನನು ಕ್ರುದ್ಧನಾಗಿ ದ್ವಿಗುಣೀಕೃತ ವಿಕ್ರಮದಿಂದ ವಿಜೃಂಭಿಸಿ, ನಕುಲನ ಕುದುರೆಗಳನ್ನು ನಾಲ್ಕು ಬಾಣದಿಂದ ಕೆಡಹಿ, ಒಂದು ಭಲ್ಲದಿಂದ ಸಾರಥಿಯನ್ನು ಕೊಂದು, ಐದರಿಂದ ಧ್ವಜವನ್ನು ಖಂಡಿಸಿ, ಕೆಳಗಿಳಿದು ಬರುವ ನಕುಲನನ್ನು ಹತ್ತು ಶರಗಳಿಂದ ಹೊಡೆದನು. ನಕುಲನು ಗುರಾಣಿಯಿಂದ ಅವನ ಶರಗಳನ್ನು ಕೆಡಹಿ, ತಾನು ಸುತಸೋಮ (ದ್ರೌಪದೇಯ)ನ ರಥವೇರಿ ಕೂತನು. ಸುರಸೇನನು ತಂದೆಮಕ್ಕಳನ್ನೀರ್ವರನ್ನೂ ಬಾಣಜಾಲದಿಂದ ಪೀಡಿಸಿ, ಸಿಂಹನಾದ ಮಾಡಿದನು. ನಕುಲನು ಅರ್ಧಚಂದ್ರ ಬಾಣವನ್ನು ಪ್ರಯೋಗಿಸಿ, ಸುರಸೇನನನ್ನು ಸಂಹರಿಸಿದನು. ಕರ್ಣಪುತ್ರರ ವಧೆಯನ್ನೂ ನಕುಲನ ವಿಕ್ರಮವನ್ನೂ ಕಂಡು, ಕೌರವಭಟರು ಓಡುತ್ತಿರಲು ಶಲ್ಯನು ಮತ್ತೆ ವೀರಾಲಾಪಗಳಿಂದ ಅವರನ್ನು ಹಿಂದಿರುಗಿಸಿದನು.

ಧರ್ಮರಾಜನಿಗೆ ನೆರವಾಗಿ ನಿಂತು ಭೀಮ, ಸಾತ್ಯಕಿ, ಪಾರ್ಷತ, ನಕುಲ ಸಹದೇವರು ಅವನನ್ನು ಶಲ್ಯಶರಾಘಾತದಿಂದ ರಕ್ಷಿಸುತ್ತಿದ್ದರು. ನಿನ್ನವರಾದ ಕೃಪ,

ಕೃತವರ್ಮ, ಗುರುಸುತರೂ ಶಲ್ಯನ ಸಹಾಯಕರಾಗಿ ನಿಂತು ಹೋರಾಡಿದರು. ಕೌರವ ಪಾಂಡವ ಮಹಾರಥರ ಬಾಣಾಗ್ನಿಯಲ್ಲಿ ಉಭಯ ಭಟರು ಪ್ರಾಯಃ ನಷ್ಟರಾದರು. ಪೂರ್ವಾಹ್ನವು ಮುಗಿದು ಮಧ್ಯಾನ್ಹವಾದಂತೆ ಮಾರ್ತಾಂಡನು ಚಂಡಕಿರಣನಾದನು. ಅಂತೆಯೇ ಪಾಂಡವವೀರರೂ ಚಂಡಪ್ರತಾಪರಾದರು. ಶಲ್ಯನು ಮಧ್ಯಂದಿನ ಮಾರ್ತಾಂಡನಂತೆ ಉರಿದೆದ್ದು ಪಾಂಡವಸೇನಾ ಕಕ್ಷವನ್ನು ಬಾಣಾಗ್ನಿಯಿಂದ ಸುಟ್ಟು ನಾಶಪಡಿಸಿದನು.

ಆಗ ಬಹುದುಶ್ಶಕುನಗಳು ಕಂಡುಬಂದವು. ಧೂಮಕೇತುಗಳು ಸೂರ್ಯಮಂಡಲವನ್ನು ಹೊಡೆದು, ಕೆಳಗೆ ಬಿದ್ದವು. ಮೃಗಮಹಿಷಪಕ್ಷಿಗಳು ಸೇನೆಗಳಿಗೆ ಅಪ್ರದಕ್ಷಿಣವಾಗಿ ಸಂಚರಿಸಿದವು; ಕಾಗೆ ಗೂಬೆಗಳು ಮಹಾರಥರ ಧ್ವಜಗಳಲ್ಲಿ ಬಂದು ಕೂತು, ವಿಕೃತಾರವವನ್ನು ಮಾಡಿದವು. ಶುಕ್ರಕುಜರು ಬುಧನಿಂದ ಸಂಯೋಗವನ್ನು ಹೊಂದಿದರು. ಶಕುನಗಳನ್ನು ಲೆಕ್ಕಿಸದೆ, ಸಾಯಲು ಹೊರಟ ಕುರುಪಾಂಡವ ವೀರರಿಗೆ ಭೀಕರ ಸಂಗ್ರಾಮವಾಯಿತು.

ಶಲ್ಯನು ಕುಂತೀಪುತ್ರನನ್ನು ಮುತ್ತಿ ಕನಕಪುಂಖ ಬಾಣಗಳಿಂದ ಅವನನ್ನು ಪೀಡಿಸಿದನು. ಮೇಘದಿಂದ ಹೊರಹೊಮ್ಮುವ ಮಿಂಚಿನಂತೆ, ಸಿಡಿಲಿನಂತೆ ಶಲ್ಯನ ಬಾಣಗಳು ಧರ್ಮಜನನ್ನು ಪೀಡಿಸಿದವು. ಯುಧಿಷ್ಠಿರನು ಕ್ರುದ್ಧನಾಗಿ ಐದು ಬಾಣಗಳಿಂದ ಶಲ್ಯನನ್ನು ಪೀಡಿಸಿದನು. ಅವನಿಗೆ ನೆರವಾಗಿದ್ದ ಅನೇಕ ಯೋಧರೂ ಬಾಣವರ್ಷದಲ್ಲಿ ಶಲ್ಯನನ್ನು ಮುಣುಗಿಸಿದರು. ಶಲ್ಯಶರವು ಧರ್ಮರಾಜನ ಬಗಲನ್ನು ಗಾಯಗೊಳಿಸಿ ನೆಲಕ್ಕೆ ಬಿತ್ತು. ಭೀಮಸೇನನಾಗ ಕ್ರುದ್ಧನಾಗಿ, ಐದು ಬಾಣಗಳಿಂದ ಶಲ್ಯನನ್ನು ಪೀಡಿಸಿದನು. ಸಹದೇವ ನಕುಲ ದ್ರೌಪದೇಯರೂ ಶರಜಾಲದಿಂದ ಮದ್ರರಾಜನನ್ನು ಮುಚ್ಚಿದರು. ಉವಾಕ ಶಕುನಿ ಕೃಪ ಕೃತವರ್ಮರು ಶಲ್ಯನಿಗೆ ನೆರವಾಗಿ ಹೋರಾಡಿದರು.

ಕೃತವರ್ಮನು ಭೀಮಸೇನನ ಕುದುರೆಗಳನ್ನು ಸಂಹರಿಸಿದನು. ಭೀಮನು ಗದೆಯನ್ನೆತ್ತಿ ಬಂದು ಅವನ ರಥಸೂತತುರಗಗಳನ್ನು ನಾಶಪಡಿಸಲು, ಕೃತವರ್ಮನು ಪಲಾಯಿತನಾದನು. ಭೀಮಸೇನನು ಮತ್ತೊಂದು ರಥವನ್ನೇರಿ ತನ್ನನ್ನು ಮುತ್ತಿದ ಕುದುರೆಗಳನ್ನು ಮತ್ತೆ ಕೆಡಹಿದ ಅಶ್ವತ್ಥಾಮನ ಮೇಲೆ ಗದಾಪಾಣಿಯಾಗಿ ಎರಗಿದನು. ಅಶ್ವತ್ಥಾಮನ ಕುದುರೆಗಳು ಸೂತ, ರಥ ಎಲ್ಲವೂ ಪುಡಿಯಾದವು. ಗದೆಯ ಪೆಟ್ಟಿಗೆ ಹೆದರಿ, ದ್ರೋಣಸುತನು ದೂರ ಸರಿದನು. ಗದೆಯನ್ನು ಪಿಡಿದು, ಹಲ್ಲುಕಡಿಯುತ್ತಾ ಬರುವ ವೃಕೋದರನಿಗೆ ಯಮನಿಗಂತೆ ಹೆದರಿ, ಕುರುಭಟರು ಕಾಲ್ತೆಗೆದರು. ಸರ್ವಲೋಕವಿಖ್ಯಾತವು ಸರ್ವಾಯಸವು ಕನಕಚಿತ್ರಿತವು, ಯಮದಂಡಭಯಂಕರವು, ಗಜವಾಜಿಭಟ ವಿನಾಶಕರವೂ ಆದ ಗದೆಯನ್ನು ಪಿಡಿದು ಬರುವ ಭೀಮಸೇನನನ್ನು ನೋಡಿ, ಶಲ್ಯನು ಹೆದರದೆ, ತೋಮರವನ್ನೆತ್ತಿ ಹೊಡೆದನು. ಭೀಮನು ಗದೆಯಿಂದ ಶಲ್ಯನ ತುರಗಗಳನ್ನು ಕೊಂದು, ತೋಮರ ಘಾತವನ್ನು ನಿರ್ಲಕ್ಷಿಸಿ, ಅದೇ

ತೋಮರದಿಂದ ಶಲ್ಯನನ್ನು ಹೊಡೆದನು. ಶಲ್ಯನು ಭೀತನಾಗಿ, ರಥದಿಂದಿಳಿದು ಉಳಿದನು. ತೋಮರದ ಪೆಟ್ಟಿಗೆ ಸಿಕ್ಕು ಅವನ ಸೂತನು ನುಗ್ಗಾಗಿ ಸತ್ತನು. ಭೀಮಸೇನನ ಅಸಮಾನ ವಿಕ್ರಮವನ್ನು ಕಣ್ಣಾರೆ ಕಂಡು, ಶಲ್ಯನು ತಾನು ಅವನಿಗೆ ಎಂದೂ ಸಮಬಲನಲ್ಲ ಎಂದು ತಿಳಿದು, ಭೀಮಬಲವನ್ನು ಮೆಚ್ಚಿದರು.

ಗದಾಪಾಣಿಯಾಗಿ ಶಲ್ಯನು ಭೀಮನನ್ನು ಮುತ್ತಿದಾಗ, ಅವರೀರ್ವರ ಗದಾಯುದ್ಧವನ್ನು ನೋಡಲೆಣಿಸಿ, ಉಭಯ ವೀರರು ಸುಮ್ಮನೆ ನಿಂತರು. ಶೃಂಗಸಹಿತ ಪರ್ವತವನ್ನು ಕೆಡಹುವ ವಜ್ರಪಾಣಿಯಂತೆ, ದಂತಸಹಿತ ಭದ್ರಗಜವನ್ನು ಮುತ್ತುವ ಸಿಂಹದಂತೆ, ಭೀಮನು ಗದಾಸಹಿತನಾಗಿ ನುಗ್ಗುವ ಶಲ್ಯನನ್ನು ಗದೆಯಿಂದ ತಡೆದು, ಕಾದಿದನು. ಎರಡು ಗದೆಗಳು ಖಣಿಲ್ ಖಣಿಲ್ ಎಂದು ಶಬ್ದಿಸಿ, ಕಿಡಿಗಾರಿದವು. 'ಮದ್ರಾಧಿಪನನ್ನು ಗದಾಯುದ್ಧದಲ್ಲಿ ತಡೆಯಬಲ್ಲವನೆಂದರೆ ಭೀಮಸೇನನೇ ! ಮತ್ತೊಬ್ಬನಿಲ್ಲ. ಭೀಮಸೇನನನ್ನು ಗದಾಪಾಣಿಯಾಗಿ ಎದುರಿಸಬಲ್ಲವನೆಂದರೆ ಶಲ್ಯನೇ! ಬೇರೊಬ್ಬರಿಲ್ಲ' ಎಂದು ಪ್ರಶಂಸಿಸುತ್ತಾ ಯೋಧರು ವಿಸ್ಮಿತರಾಗಿ ನಿಂತಿದ್ದರು.

ಗದೆಗಳಿಂದ ಹೋರಾಡುವ ಶಲ್ಯವೃಕೋದರರು ಮಂಡಲಾಕಾರವಾಗಿ ತಿರುಗುತ್ತಾ ಗದೆಗಳಿಂದ ಹೊಡೆಯುತ್ತಾ, ಭೀಕರಯುದ್ಧವನ್ನು ಮಾಡಿ, ರಕ್ತಸಿಕ್ತಗಾತ್ರರಾದರು. ಭೀಮಸೇನನು ಆಯಾಸವಿಲ್ಲದೆ ಸುಲಲಿತವಾಗಿ ಹೋರಾಡುತ್ತಿರಲು, ಶಲ್ಯನು ಕಷ್ಟದಿಂದ ಕಾದುತ್ತಿದ್ದನು. ಪರಸ್ಪರ ಗದಾಘಾತಗಳಿಂದ ಉಭಯರೂ ನೆಲದಿ ಬಿದ್ದರೂ, ಭೀಮಸೇನನು ತಟ್ಟನೆ ಎದ್ದು ಗದೆಯಿಂದ ಶಲ್ಯನನ್ನು ಹೊಡೆಯಬಂದನು. ಶಲ್ಯನು ಮೂರ್ಛಾವಶನಾಗಿ ಕದಲದೆ ಬಿದ್ದಿರುವುದನ್ನು ಕಂಡು, ಭೀಮಸೇನನು ಹಿಂದಿರುಗಿದನು. ಕೃಪನು ಶಲ್ಯನನ್ನೆತ್ತಿ ತನ್ನ ರಥದಲ್ಲಿಟ್ಟುಕೊಂಡು ಹೋದನು. ತನ್ನನ್ನು ಮುತ್ತುವ ಕುರುಯೋಧರನ್ನು ಸಂಹರಿಸುವ ಭೀಮನನ್ನು ದುರ್ಯೋಧನನು ತಡೆದು ಕಾದಿದನು. ದ್ರೋಣಸುತನು ಮುತ್ತಲು ಭೀಮನು ಆತನೊಡನೆ ಕಾದುತ್ತಿದ್ದನು. ಆಗ ದುರ್ಯೋಧನನನ್ನು ಚೇಕಿತಾನನು ಆವರಿಸಿ ಬಾಣಜಾಲದಿಂದ ಮುಚ್ಚಿದನು. ಕುರುರಾಜನು ಪಾಂಚಾಲ ರಾಜಪುತ್ರನನ್ನು ಪ್ರಾಸಾಯುಧದಿಂದ ಸಂಹರಿಸಿ, ಮೂರುಸಾವಿರ ಯೋಧರಿಂದ ಕೂಡಿ, ಧನಂಜಯನಿಂದ ಕಡಿದಾಡಿದನು.

ವಿಜಯವನ್ನು ಪಡೆಯಲು ಅಥವಾ ವೀರ ಸ್ವರ್ಗವನ್ನು ಸೇರಲು ಕಡಿದಾಡುವ ಕುರುಯೋಧರನ್ನು ವೀರಸ್ವರ್ಗಕ್ಕೆ ಕಳಿಸಿ, ವಿಜಯನು ವಿಜಯವನ್ನು ಧರ್ಮರಾಜನಿಗೆ ತಂದಿತ್ತನು; ಅವರಾದರೂ ರಾಜಋಣದಿಂದಲು, ದೇಹಗಳಿಂದಲು ಮುಕ್ತರಾದರು. ಭೀಮಸೇನನು ದ್ರೋಣಸುತನನ್ನು ಮತ್ತೆ ವಿರಥಗೊಳಿಸಿ, ಅವನಿಗೆ ನೆರವಾದ ದುರ್ಯೋಧನನನ್ನೂ ವಿರಥಗೊಳಿಸಿದನು.

ಶಲ್ಯನು ಧರ್ಮರಾಜನನ್ನು ಕೊಲ್ಲಬೇಕೆಂದು ಸಂಕಲ್ಪಿಸಿ, ನಿಶಿತಬಾಣ ಪರಂಪರೆಯಿಂದ ಆತನನ್ನು ಪೀಡಿಸಿದನು. ಧರ್ಮರಾಜನು ಅವನ ಬಾಣಗಳನ್ನು

ಖಂಡಿಸಿ, ಹದಿನಾಲ್ಕು ಬಾಣಗಳಿಂದ ಶಲ್ಯನನ್ನು ಪೀಡಿಸಿದನು. ಶಲ್ಯನು ಆನತಪರ್ವವಾದ ಶರದಿಂದ ಯುಧಿಷ್ಠಿರನನ್ನು ಪೀಡಿಸಿದನು. ಧರ್ಮರಾಜನು ಶಲ್ಯನ ಸಾರಥಿಯನ್ನು ಒಂಬತ್ತು ಬಾಣಗಳಿಂದ ಪೀಡಿಸಿ, ಅವನ ಚಕ್ರರಕ್ಷಕರಾದ ಚಂದ್ರಸೇನ, ದ್ರುಮಸೇನರನ್ನು ಸಂಹರಿಸಿದನು. ಶಲ್ಯನು ಕುಪಿತನಾಗಿ ಇಪ್ಪತ್ತೈದು ಚೇದಿ ರಥಿಕರನ್ನು ಸಂಹರಿಸಿ, ಸಾತ್ಯಕಿಯನ್ನು ಇಪ್ಪತ್ತೈದು ಶರಗಳಿಂದಲು, ಭೀಮಸೇನನನ್ನು ಏಳು ಬಾಣಗಳಿಂದಲು, ನಕುಲಸಹದೇವರನ್ನು ನೂರು ನಾರಾಚಗಳಿಂದಲು ಪೀಡಿಸಿದನು. ಧರ್ಮರಾಜನು ಶಲ್ಯನ ಧ್ವಜವನ್ನು ಭಲ್ಲದಿಂದ ಕೆಡಹಿ, ಶಲ್ಯನ ಬಾಣವರ್ಷವನ್ನು ತಡೆದು, ಅವನನ್ನು ನೂರು ಬಾಣಗಳಿಂದ ಪೀಡಿಸಿದನು. ಶಲ್ಯನು ಕ್ರುದ್ಧನಾಗಿ ಧರ್ಮರಾಜನ ಧನುವನ್ನು ಮುರಿದು, ಭೀಮ, ಸಾತ್ಯಕಿ ಯಮಳರನ್ನು ಶರವರ್ಷದಲ್ಲಿ ಮುಣುಗಿಸಿದನು. ಶಲ್ಯಪರಾಕ್ರಮವನ್ನು ನೋಡಿ, ದುರ್ಯೋಧನಾದಿ ವೀರರು ಹರ್ಷಧ್ವಾನಗಳನ್ನು ಮಾಡಿದರು.

ಭೀಮಸೇನನು ಶತ್ರುಹೃದಯ ಶಲ್ಯನಾದ ಶಲ್ಯನನ್ನು ಒಂದು ಭಲ್ಲದಿಂದ ಪೀಡಿಸಿ, ಮತ್ತೆ ಏಳುಶರಗಳನ್ನವನ ಶರೀರದಿ ನಾಟಿಸಿದನು. ಸಾತ್ಯಕಿಯು ಶತಶರಗಳನ್ನು, ನಕುಲನು ಐದು ಬಾಣಗಳನ್ನು, ಸಹದೇವನು ಏಳು ವಿಶಿಖಗಳನ್ನು ಪ್ರಯೋಗಿಸಿ, ಶಲ್ಯನನ್ನು ಪೀಡಿಸಿದರು. ಶಲ್ಯ ಆಶೀವಿಷಗಳಂತೆ ಭಯಂಕರವಾದ ಅವರ ಬಾಣಗಳನ್ನು ಖಂಡಿಸಿ, ಐದೈದು ಬಾಣಗಳಿಂದ ಅವರನ್ನು ಹೊಡೆದನು. ಶಲ್ಯನು ಧರ್ಮರಾಜನ ಧನುವನ್ನು ಮುರಿದು, ಮಿಕ್ಕ ನಾಲ್ವರನ್ನು ಮೂರು ಮೂರು ಬಾಣಗಳಿಂದ ಪೀಡಿಸಿದನು. ನಕುಲನು ಶಕ್ತಿಯನ್ನೆಸೆಯಲು ಅದನ್ನು ಖಂಡಿಸಿದನು; ಭೀಮನು ಬಿಟ್ಟ ಕನಕಪುಂಖ ಬಾಣವನ್ನೂ ತುಂಡರಿಸಿದನು. ಶಲ್ಯ ವಿಕ್ರಮವನ್ನು ಸಹಿಸಲಾರದೆ ಪಾಂಡವಭಟರು ದೂರ ಸರಿದರು.

ಧರ್ಮರಾಜನಿಂತು ಚಿಂತಿಸಿದನು 'ಮಾಧವನಾಡಿದ ಮಾತೆಂತು ಸತ್ಯವಾದೀತು ? ಕ್ರುದ್ಧನಾಗಿರುವ ಶಲ್ಯನು ನನ್ನ ಸೇನೆಯನ್ನು ನಾಶಪಡಿಸುತ್ತಿರುವನು' ಎಂದು ಚಿಂತಿಸಿ, ಶರವೃಷ್ಟಿಯಲ್ಲಿ ಮದ್ರರಾಜನ ರಥವನ್ನು ಮುಚ್ಚಿ ತನ್ನ ಸೈನಿಕರನ್ನು ಹಿಂದಿರುಗಿಸಿದನು. ಧರ್ಮರಾಜನ ಶರವೃಷ್ಟಿಯನ್ನು ತಡೆದು ಶಲ್ಯರಾಜನು ಶಲಭ ಪಂಕ್ತಿಯಂತೆ ಸಂತತವಾದ ಶರವೃಷ್ಟಿಯಿಂದ ಮುತ್ತಿದ ಭಟರನ್ನು ಮೃತ್ಯು ಗಹ್ವರದಲ್ಲಿ ನೂಕಿದನು.

ಅರ್ಜುನನು ಅಶ್ವತ್ಥಾಮನಿಂದಲು, ಸುಶರ್ಮನಿಂದಲು ಕಾದಿ, ಗುರುಸುತನನ್ನು ಮೂರು ಬಾಣಗಳಿಂದ ಪೀಡಿಸಿದನು. ಮತ್ತು ಇತರ ವೀರರನ್ನು ಶರಜಾಲದಲ್ಲಿ ಮುಚ್ಚಿದನು. ಅರ್ಜುನ ನಾಮಾಂಕಿತ ಬಾಣಗಳು ರಣಾಂಗಣದಿ ಹಾರಿದಂತೆ, ಕುರುವೀರರು ವೀರಸ್ವರ್ಗವನ್ನು ಸೇರಿದರು. ರಣರಂಗದಲ್ಲೆಲ್ಲಿ ನೋಡಿದರೂ ಅರ್ಜುನನೇ ಕಾಣಬರುತ್ತಿದ್ದನು. ಧನಂಜಯನು ಧನುಶ್ಚಟಭಟ ಶಬ್ದಗಳಿಂದ ಶರಜ್ವಾಲೆಗಳನ್ನು ಕಾರಿ, ಕೌರವಸೇನಾ ಕಕ್ಷವನ್ನು ಸಟ್ಟುಬಿಟ್ಟನು. ಚಕ್ರಗಳು ಮುರಿದು,

ನೊಗೆ ತುಂಡಾಗಿ, ಕುದುರೆಗಳು ಸತ್ತು, ಧ್ವಜಗಳುದುರಿ, ಸೂತರಿಲ್ಲದ ಸಾವಿರಾರು ರಥಗಳು ರಥಿಕರಹಿತವಾಗಿದ್ದವು. ಶಿರಸ್ಸುಗಳುದುರಿ ಬೀಳುವ ಶಬ್ದವು ಸಂತತವಾಗಿತ್ತು. ಛತ್ರ, ವ್ಯಜನ, ಮುಕುಟ, ಭೂಷಣಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು.

ಮಾಂಸಶೋಣಿತಗಳಿಂದ ಕೆಸರಾದ ರಣಭೂಮಿಯಲ್ಲಿ ರಥಗಳು ಬೇಗ ಚಲಿಸದಾದವು. ಅರ್ಜುನನು ಎರಡು ಸಾವಿರ ರಥಿಕರನ್ನು ಸಂಹರಿಸಿದನು. ಅವನನ್ನು ಮುತ್ತಿ ಅಶ್ವತ್ಥಾಮನು, ಬಾಣವರ್ಷದಲ್ಲಿ ಮುಣುಗಿಸಿದನು. ನಿದಾಘಾಂತ್ಯದಲ್ಲಿ ಮಳೆಗರೆವ ಮೇಘದ್ವಯದಂತೆ ಶರವೃಷ್ಟಿಗೈದು, ವಾಸಿತೆಗಾಗಿ ಕಾದುವ ವೃಷಭದ್ವಯದಂತೆ ಬಾಣಗಳಿಂದ ಪೀಡಿಸಿ, ಅರ್ಜುನಾಶ್ವತ್ಥಾಮರು ಭಯಂಕರ ರಣನಿರತರಾದರು. ಗುರುಸುತನು ಪಾರ್ಥನನ್ನು ಹನ್ನೆರಡು ಬಾಣಗಳಿಂದಲು, ವಾಸುದೇವನನ್ನು ಹತ್ತು ಶರಗಳಿಂದಲು ಪೀಡಿಸಿದನು. ಬೀಭತ್ಸುವು ನಕ್ಕು, ಗಾಂಡೀವವನ್ನು ಟಂಕರಿಸಿ, ಗುರುಪುತ್ರನೆಂದು ಸ್ವಲ್ಪ ಕಾಲ ತಡೆದು, ಅವನ ಬಾಣಗಳನ್ನು ಖಂಡಿಸಿ, ಸೂತನನ್ನು ತುರಗಗಳನ್ನು ಕೊಂದನು. ಅದೇ ರಥದಲ್ಲಿ ಕದಲದೆ ನಿಂತ ಅಶ್ವತ್ಥಾಮನು ಮುಸಲವನ್ನೆತ್ತಿ ಬಿಸುಟಿದನು. ಪಾರ್ಥನು ಅದನ್ನು ಆರು ಬಾಣಗಳಿಂದ ಏಳು ತುಂಡುಗಳನ್ನಾಗಿಸಿ, ಕೆಡಹಿದನು. ಗುರುಸುತನು ನಾಗಫಣದಂತೆ ಭಯಂಕರವಾದ ಪರಿಘವನ್ನೊಗೆದನು. ಅರ್ಜುನನು ಅದನ್ನೂ ಐದು ತುಂಡುಮಾಡಿ, ಮೂರು ಶರಗಳಿಂದ ಗುರುಸುತನನ್ನು ಪೀಡಿಸಿದನು.

ಅಶ್ವತ್ಥಾಮನು ಅರ್ಜುನ ಶರಪೀಡಿತನಾಗಿ, ಅವನನ್ನು ಬಿಟ್ಟು ಸುರಥನನ್ನೆದುರಿಸಿದನು. ಪಾಂಚಾಲನು ಸುದೃಢ ಧನುವನ್ನು ಪಿಡಿದು, ನಿಶಿತಶರಗಳಿಂದ ಗುರುಸುತನನ್ನು ಪೀಡಿಸಿದನು. ಗುರುಸುತನು ಸಿಟ್ಟಿನಿಂದ ಹುಬ್ಬುಗಂಟಿಕ್ಕಿ, ತುಟಿಗಳನ್ನು ನೆಕ್ಕಿ ಹುಲಿಯಂತಾದನು. ಧನುರ್ಗುಣ ಟಂಕಾರದೊಡನೆ ಹೊರಬಂದ ಅಶ್ವತ್ಥಾಮನ ಶರವು ಸುರಥನ ಹೃದಯವನ್ನು ಸೀಳಿ ಅವನನ್ನು ರಥದಿಂದ ಕೆಡಹಿತು. ಅಶ್ವತ್ಥಾಮನಾಗ ಮತ್ತೊಂದು ರಥವನ್ನೇರಿ, ಅರ್ಜುನನೊಡನೆ ಕಾದತೊಡಗಿದನು.

## ೪. ಶಲ್ಯವಧೆ

ಸೂರ್ಯನು ಮಧ್ಯಂದಿನಗತನಾಗಿರಲು ಪ್ರಚಂಡ ರಣವು ಪ್ರಚಂಡತರವಾಯಿತು. ದುರ್ಯೋಧನನು ಧೃಷ್ಟದ್ಯುಮ್ನನಿಂದ ಕಾದಿ, ದ್ರೋಣ ಹಂತಕನೆಂಬ ಸಿಟ್ಟಿನಿಂದ, ತೀಕ್ಷ್ಣಶರಗಳಿಂದ ಪೀಡಿಸಿದನು. ದುರ್ಯೋಧನನನ್ನು ಎಪ್ಪತ್ತು ಬಾಣಗಳಿಂದ ಪೀಡಿಸಿ, ಮತ್ತೆ ಮುತ್ತುವ ಪಾರ್ಷತನನ್ನು ತಡೆದು, ರಾಜಸಹೋದರರು ಕಡಿದಾಡಿದರು. ಶಲ್ಯನು ನಿಶಿತನಾರಾಚಗಳಿಂದ ಪಾಂಡವ ಸೇನೆಯನ್ನು ಸಂಹರಿಸುತ್ತಿರಲು, ತಡೆದು ನಕುಲನು ಅವನನ್ನು ಶರಜಾಲದಿಂದ ಮುಚ್ಚಿದನು. ಶಲ್ಯನು ಅವನ ಬಾಣಗಳನ್ನು ಖಂಡಿಸಿ, ತನ್ನನ್ನು ಮುತ್ತಿದ ಭೀಮ, ಧರ್ಮಜ, ಯಮಳ, ಸಾತ್ಯಕಿಯರನ್ನು ಐದು, ಮೂರು, ಮೂರು, ಮೂರು, ನೂರು ಬಾಣಗಳಿಂದ ಪೀಡಿಸಿ,

ನಕುಲನ ಧನುವನ್ನು ಮುರಿದನು. ನಕುಲನು ಬೇರೊಂದು ಬಿಲ್ಲನ್ನೆತ್ತಿ ಶರಸಹಸ್ರದಿಂದ ಮದ್ರರಾಜನ ರಥವನ್ನು ಮುಚ್ಚಿದನು. ಯುಧಿಷ್ಠಿರ ಸಹದೇವರು ಹತ್ತು ಹತ್ತು ಬಾಣಗಳಿಂದಲು, ಭೀಮಸೇನನು ಅರವತ್ತು ಬಾಣಗಳಿಂದಲು, ಸಾತ್ಯಕಿಯು ಹತ್ತರಿಂದಲು ಮದ್ರರಾಜನನ್ನು ಪೀಡಿಸಿದರು.

ಶಲ್ಯನು ಸಾತ್ಯಕಿಯನ್ನು ಎಪ್ಪತ್ತು ಬಾಣಗಳಿಂದ ಪೀಡಿಸಿ, ಮತ್ತೆ ಏಳು ಬಾಣಗಳನ್ನು ಬಿಟ್ಟನು; ಮತ್ತು ಅವನ ಧನುವನ್ನು ಮುಷ್ಟಿದೇಶದಲ್ಲಿ ಮುರಿದನು; ನಾಲ್ಕು ಬಾಣಗಳಿಂದ ಸಾತ್ಯಕಿಯು ನಾಲ್ಕು ಕುದುರೆಗಳನ್ನು ಕೊಂದು, ಅವನನ್ನು ವಿರಥನನ್ನಾಗಿಸಿದನು. ಸಾತ್ಯಕಿಯು ಮತ್ತೊಂದು ರಥವನ್ನು ತರಿಸಿ, ಮತ್ತೆ ಧರ್ಮ ರಾಜಾದಿಗಳಿಗೆ ನೆರವಾಗಿ ನಿಂತು, ಶಲ್ಯರಾಜನನ್ನು ಶತಶರಗಳಿಂದ ಪೀಡಿಸಿದನು. ಸಾತ್ಯಕಿ ಶಲ್ಯರಾಜರು ಶಂಬರಾಮರರಾಜರಂತೆ ಕಾದಿದರು. ಸಾತ್ಯಕಿಯು ಹತ್ತು ಬಾಣಗಳ ಪೆಟ್ಟಿಗೆ ನೊಂದ ಶಲ್ಯನು ಇಪ್ಪತ್ತು ಬಾಣಗಳಿಂದ ಅವನನ್ನು ಪೀಡಿಸಿದನು. ಪಾಂಡವವೀರರು ಸಾತ್ಯಕಿಯ ಸಹಾಯಕ್ಕಾಗಿ ಬರಲು, ಕೌರವವೀರರು ಶಲ್ಯ ಸಹಾಯಕ್ಕೆ ಬಂದು ಕಾದಿದರು. ಅಂಬರವು ಬಾಣಜಾಲದಿಂದ ಅಂಧಕಾರ ಬಂಧುರವಾಯಿತು.

ಶಲ್ಯರಾಜನ ವಿಕ್ರಮ ವಿಜೃಂಭಣೆಯಿಂದ ಕೌರವೀರರು ಉತ್ಸಾಹಭರಿತರಾಗಿ, ಶತ್ರುವೀರರನ್ನು ಸದೆಬಡಿಯತೊಡಗಿದರು. ಪಾಂಡವಭಟರು ಓಡುವುದನ್ನು ಭೀಮಸೇನನು ನಿವಾರಿಸಿ, ಶಲ್ಯವೇಗವನ್ನು ವೇಲೆಯು ಸಮುದ್ರವನ್ನಂತೆ ತಡೆದನು. ಆಗ ಧರ್ಮರಾಜನು ರೋಷಾವಿಷ್ಟನಾಗಿ ಮದ್ರರಾಜನನ್ನು ಮುತ್ತಿ ಜಯವಧೆಗಳಲ್ಲೊಂದನ್ನು ಹೊಂದಲು ನಿಶ್ಚಯಿಸಿ ಹೋರಾಡಿದನು.

'ಪಾಂಚಾಲ ಪಾಂಡವ ವೀರರೇ ! ಭೀಷ್ಮನು ಶರಶಯ್ಯಾನಿಹಿತನಾದನು. ದ್ರೋಣನು ಮೃತನಾದನು. ಕರ್ಣನು ಹತನಾದನು. ಅನ್ಯವೀರರು ಪರಲೋಕಗತರಾದರು. ಪರಾಕ್ರಮದಿಂದ ಉರಿದೆದ್ದು ನಿಮ್ಮ ನಿಮ್ಮ ಭಾಗದ ಶತ್ರುನಾಶ ಕಾರ್ಯವನ್ನು ನೀವು ಸಾಧಿಸಿ, ಕೃತಕೃತ್ಯರಾಗಿರುವಿರಿ ! ನನ್ನ ಭಾಗವಾಗಿ ಶಲ್ಯರಾಜನು ಉಳಿದಿರುವನು. ಇಂದು ನಾನಾತನನ್ನು ವಧಿಸಿ, ಕೃತಕೃತ್ಯನಾಗುವೆನು. ನಕುಲಸಹದೇವರು ನನ್ನ ಚಕ್ರರಕ್ಷರಾಗಿರಲಿ ! ಮಾತುಲನೆಂಬ ಅಭಿಮಾನವನ್ನು ಬಿಟ್ಟು ಕ್ಷತ್ರ ಧರ್ಮ ನಿಷ್ಠುರತೆಗೆ ತಲೆಬಾಗಿ, ನಾನಿಂದು ಶಲ್ಯನನ್ನು ಸಂಹರಿಸುವೆನು. ಶೈನೇಯ ಪಾರ್ಷತರೆನ್ನ ಪೃಷ್ಠರಕ್ಷಕರಾಗಿ ನಡೆಯಲಿ ! ಪಾರ್ಥಭೀಮರು ನನಗೆ ಪುರಸ್ಸರರಾಗಿರುವರು. ಇಂತು ರಕ್ಷಿತನಾಗಿ ನಾನು ಶಲ್ಯನನ್ನು ಪರಾಕ್ರಮದಲ್ಲಿ ಮೀರಿ, ವಿಕ್ರಮಿಸಲು ಶಕ್ತನಾಗುವೆನು' ಎಂದು ನುಡಿದ ಧರ್ಮರಾಜನಿಗೆ ರಕ್ಷಕರಾಗಿ ಭೀಮಾದಿ ವೀರರು ನಡೆದರು.

ಪಾಂಚಾಲರು ಸಿಂಹನಾದಗಳನ್ನು ಮಾಡಿ, ವಿವಿಧ ಭೇರೀದುಂದುಭಿ ತೂರ್ಯ ಶಂಖಾದಿ ವಾದ್ಯಗಳನ್ನು ಮೊಳಗಿಸಿ ಮುನ್ನುಗ್ಗಿದರು. ಅರ್ಜುನನು ಆಹವಶೋಭಿಯಾದ

ಮದ್ರರಾಜನನ್ನು ಆರು ಬಾಣಗಳಿಂದ ಹೊಡೆದನು. ಬಹುಕಾಲಪರ್ಯಂತವು ಅರ್ಜುನ ಶಲ್ಯರ ಯುದ್ಧವು ಸಮವಾಗಿ ನಡೆದು ಯಾರು ಗೆಲ್ಲುವರೆಂದು ತಿಳಿದುಬರುತ್ತಿದ್ದಿಲ್ಲ. ಶಲ್ಯರಾಜನು ವಜ್ರಸಮವಾದ ಬಾಣದಿಂದ ಎದೆಯಲ್ಲಿ ಹೊಡೆಯಲು, ಅರ್ಜುನನು ಮೂರ್ಛಿತನಾದನು, ಮತ್ತೆ ಎಚ್ಚತ್ತು ಪಾರ್ಥನು ಮದ್ರರಾಜನ ಕಾರ್ಮುಕವನ್ನು ಖಂಡಿಸಿದನು. ಅವನಿನ್ನೊಂದು ಧನುವನ್ನೆತ್ತಿ ಸೌರ, ಯಾಮ್ಯ, ಪಾರ್ಜನ್ಯಗಳೆಂಬ ಅಸ್ತ್ರಗಳನ್ನು ಬಿಟ್ಟನು. ಅವನ್ನೆಲ್ಲವನ್ನು ಅರ್ಜುನನು ಇಂದ್ರಾಸ್ತ್ರದಿಂದ ನಾಶಪಡಿಸಿ, ಅವನ ಧನುವನ್ನು ಮುರಿದನು. ಶಲ್ಯನು ಕುಪಿತನಾಗಿ ಗದೆಯನ್ನೆತ್ತಿ ಅರ್ಜುನನ ಎದೆಗೆ ಗುರಿಯಿಟ್ಟು ಪ್ರಯೋಗಿಸಿದನು. ಗದಾವಿದ್ಧನಾದ ಅರ್ಜುನನು ಮತ್ತೆ ಮೂರ್ಛಿತನಾದುದನ್ನು ಕಂಡು ಕೌರವವೀರರು ಜಯಘೋಷ ಮಾಡಿದರು. ಅರ್ಜುನನು ಎಚ್ಚತ್ತು, ಶಲ್ಯನನ್ನು ನಿಶಿತಬಾಣದಿಂದ ಎದೆಗೆ ಹೊಡೆದನು. ಆ ಪೆಟ್ಟಿಗೆ ವಿಹ್ವಲಿತಾಂಗನಾಗಿ ಶಲ್ಯನು ಮೂರ್ಛೆ ಬಂದಂತಾಗಿ, ಧ್ವಜವನ್ನು ಹಿಡಿದು ಸುಮ್ಮನೆ ನಿಂತನು.

ಸ್ವಲ್ಪ ಹೊತ್ತಿಗೆ ಎಚ್ಚತ್ತು ಶಲ್ಯನು ಯಮದಂಡನಿಭವಾದ ಕಾಂಡದಿಂದ ಹೊಡೆದನು. ಆ ಬಾಣವು ಸ್ತನಾಂತರದಲ್ಲಿ ಬಿದ್ದು ಗಾಯಗೊಳಿಸಲು, ಅರ್ಜುನನೂ ಕಣ್ಣಿಗೆ ಕತ್ತಲು ಕವಿದಂತಾಗಿ, ಧ್ವಜಯಷ್ಟಿಯನ್ನವಲಂಬಿಸಿ ನಿಂತನು. ಶ್ರೀಕೃಷ್ಣ ಸ್ಪರ್ಶಯಿಂದ ಎಚ್ಚತ್ತು ಕ್ರುದ್ಧನಾದ ಅರ್ಜುನನು ಮದ್ರರಾಜನನ್ನೆದುರಿಸಿ, ಅನೇಕ ನಿಶಿತಬಾಣಗಳಿಂದ ಅವನ ಛತ್ರ ಧ್ವಜಗಳನ್ನು ಕೆಡಹಿ, ಸಾರಥಿಯನ್ನು ಕೊಂದನು. ಮದ್ರರಾಜನು ಕುದುರೆಗಳು ವಶಕ್ಕೆ ಬಾರದೆ ಓಡಿದಂತೆ ರಥದಲ್ಲಿದ್ದು ದೂರ ಸರಿದನು.

ದುರ್ಯೋಧನನು ಕಳಿಸಿದ ಮತ್ತೊಂದು ರಥವನ್ನೇರಿ, ಶಲ್ಯನು ಧರ್ಮರಾಜನನ್ನು ಮುತ್ತಿ ಶರವರ್ಷದಲ್ಲಿ ಮುಣುಗಿಸಿದನು. ದ್ರೋಣಾಚಾರ್ಯನಿಂದ ಧನುರ್ವಿದ್ಯೋಪದೇಶವನ್ನು ಪೊಂದಿ, ಕೃತಹಸ್ತನೆನಿಸಿದ ಪ್ರಶಸ್ತಗುಣನಾದ ಧರ್ಮರಾಜನು, ಶಲ್ಯಶರಗಳನ್ನು ಖಂಡಿಸಿ, ಹಿಂಜರಿಯದೆ ಕಾದತೊಡಗಿದನು. ದುರ್ಯೋಧನನು ಭೀಮಸೇನನನ್ನು ಮುತ್ತಿ ಅವನ ಧ್ವಜವನ್ನು ಧನುವನ್ನು ಮುರಿದನು. ಭೀಮಸೇನನು ರಥಶಕ್ತಿಯನ್ನೆತ್ತಿ ಬಿಸುಟಿದನು. ಅದು ಎದೆಗೆ ತಗುಲಿ ಕುರುರಾಜನು ರಥನೀಡದಲ್ಲಿ ಮೂರ್ಛೆ ಬಿದ್ದನು. ಆಗ ವೃಕೋದರನು ಮತ್ತೊಂದು ಧನುವನ್ನೆತ್ತಿ ನಿಶಿತಭಲ್ಲದಿಂದ ಸಾರಥಿಯನ್ನು ಕೆಡಹಿದನು. ದುರ್ಯೋಧನನ ಕುದುರೆಗಳು ದಿಕ್ಕೆಟ್ಟೋಡಿದವು, ಅದನ್ನು ಕಂಡು ಕೃಪಾಶ್ವತ್ಥಾಮರು, ರಥವನ್ನು ನಿಲ್ಲಿಸಿ, ಕುರುರಾಜನಿಗೆ ಶೀತಲೋಪಚಾರಗಳಿಂದ ಎಚ್ಚರ ಬರಿಸಿದರು.

ಧರ್ಮರಾಜನು ಮಾದ್ರೇಶನನ್ನು ಮುತ್ತಿ ಶರವರ್ಷದಿಂದ ಪೀಡಿಸಿದನು. ಶಲ್ಯನು ಧರ್ಮರಾಜನ ಸೂತನನ್ನು ಕೆಡಹಿ ಶರಪಂಚಕದಿಂದ ಆತನನ್ನು ಪೀಡಿಸಿದನು. ಧರ್ಮರಾಜನು ಕ್ರುದ್ಧನಾದನು, ಆತನ ಮೈ ನಡುಗಿತು; ಕಣ್ಣು ಕೆಂಪಾಯಿತು,

ತಾನೇ ರಥಿಯೂ, ಸಾರಥಿಯೂ ಆಗಿ ಕಡಿದಾಡುವ ಧರ್ಮರಾಜನ ಸಾಹಸವು ಪ್ರಶಂಸನೀಯವಾಗಿತ್ತು. ಸ್ವಭಾವ ಮೃದುದಾಂತನಾದ ಕುಂತೀಪುತ್ರನು ದಾರುಣನಾದನು. ಅವನ ಭಲ್ಲಗಳು ಸಾವಿರಾರು ಯೋಧರನ್ನು ಯಮಧರ್ಮನಲ್ಲಿಗೆ ಕಳುಹಿದವು. ಸಾಶ್ವಸಾದಿಗಳನ್ನು ಸಸೂತರಥಿಕರನ್ನು ಸಾಂಬಷ್ಠಗಜಾರೋಹರನ್ನು ಸಂಹರಿಸುವ ಧರ್ಮರಾಜನನ್ನು ತಡೆದು ಶಲ್ಯನು ಕಂಕಪತ್ರಗಳಿಂದ ಆತನ ಮೈಯನ್ನು ಮುಚ್ಚಿದನು. ಪರಸ್ಪರ ಬಾಣಘಾತಗಳಿಂದ ಶಲ್ಯ ಧರ್ಮಜರು ಪುಷ್ಪಿತಕಿಂಶುಕಗಳಂತೆ ಕಂಗೊಳಿಸಿದರು.

'ಮದ್ರಾಧಿಪನನ್ನು ವಧಿಸಿ ಧರ್ಮಜನು ಧರೆಯನ್ನಾಳುವನೆ'ಂದು ಕೆಲರಂದರೆ, 'ಶಲ್ಯನು ಧರ್ಮಜನನ್ನು ವಧಿಸಿ, ವಸುಧೆಯನ್ನು ಸುಯೋಧನನಿಗೀವನೆ'ಂದು ಕೆಲರಂದರು. ಶಲ್ಯನು ಶರಶತದಿಂದ ಧರ್ಮರಾಜನನ್ನು ಪೀಡಿಸಿ, ಮತ್ತೊಂದರಿಂದ ಆತನ ಧನುವನ್ನು ಮುರಿದನು. ಧರ್ಮಜನು ಮತ್ತೊಂದು ಧನುವನ್ನೆತ್ತಿ ಶಲ್ಯನ ಧನುವನ್ನು ಮುರಿದು, ನಾಲ್ಕು ಭಲ್ಲಗಳಿಂದ ಅವನ ತುರಗಗಳನ್ನು ಸಂಹರಿಸಿದನು; ಎರಡು ಬಾಣಗಳಿಂದ ಶಲ್ಯನ ಸಾರಥಿಯನ್ನೂ ಪಾರ್ಶ್ವ ರಕ್ಷಕರನ್ನೂ ಸಂಹರಿಸಿ, ಒಂದರಿಂದ ಧ್ವಜವನ್ನು ಕೆಡಹಿ ಧರ್ಮರಾಜನು ಸಿಂಹನಾದ ಮಾಡಿದನು. ಶಲ್ಯನ ಕುದುರೆಗಳೋಡತೊಡಗಲು, ಅಶ್ವತ್ಥಾಮನು ತಡೆದು, ಶಲ್ಯನನ್ನು ಮತ್ತೊಂದು ರಥವನ್ನಿತ್ತು, ಧರ್ಮರಾಜನಿಂದ ಕಾಪಾಡಿದನು.

ಶಲ್ಯನು ಧರ್ಮರಾಜನ ವಿಜೃಂಭಣವನ್ನು ಸಹಿಸದೆ, ಮತ್ತೆ ಅವನನ್ನು ಮುತ್ತಿ ಸಿಂಹನಾದ ಮಾಡಿದನು. ಶಲ್ಯನನ್ನು ಮುತ್ತಿ ಭೀಮಸೇನ ಸಾತ್ಯಕಿ ಸಹದೇವರು ವಿವಿಧ ವಿಶಿಖಗಳಿಂದ ವೇಧಿಸಿದರು. ಶಲ್ಯನು ಕಾಲಾಂತಕನಂತೆ ಕ್ರುದ್ಧನಾಗಿ, ಸಹಸ್ರ ಕಿರಣನಂತೆ ಚಂಡಕಾಂಡಗಳನ್ನು ಪ್ರಯೋಗಿಸಿ, ಪಾಂಡವಾನೀಕನನ್ನು ನಾಶಪಡಿಸಿದನು. ಭೀಮಸೇನನನ್ನು ಮೂರುಬಾಣಗಳಿಂದಲು, ಸಾತ್ಯಕಿಯನ್ನು ಹತ್ತು ನಾರಸಗಳಿಂದಲು, ಸಹದೇವನನ್ನು ಆರು ಶರಗಳಿಂದಲು ಪೀಡಿಸಿ, ಮದ್ರೇಶನು ಮತ್ತೆ ಧರ್ಮಜನನ್ನು ಮುತ್ತಿದನು. ಅರ್ಜುನ ವಾಸುದೇವ ಭೀಮಸೇನ ಮಾದ್ರೀಸುತ ಸಾತ್ಯಕಿ ಪಾರ್ಷತರು ಧರ್ಮಜನನ್ನು ಸುತ್ತುವರಿಸಿ, ರಕ್ಷಕರಾಗಿ ನಿಂತರು.

ಧರ್ಮರಾಜನು ಮೂರು ನಿಶಿತ ಶರಗಳನ್ನು ಶಲ್ಯನ ಎದೆಗೆ ನಾಟಿಸಿದನು. ಗಾಯಗೊಂಡ ಮದ್ರೇಶನನ್ನು ರಕ್ಷಿಸಬೇಕೆಂದು, ಕೃಪ ಕೃತವರ್ಮ ಗುರುಸುತರಾದಿ ಕೌರವಯೋಧರು ಅವನ ಸುತ್ತನಿಂತು, ಪಾಂಡವ ರಥಿಕರೊಡನೆ ಕಾದಿದರು. ಶಲ್ಯ ಧರ್ಮಜರು ಅನ್ಯೋನ್ಯ ಬಾಣಗಳಿಂದ ಪೀಡಿತರಾಗಿ, ಆಮಿಷಕ್ಕಾಗಿ ಕಡಿದಾಡುವ ಶಾರ್ದೂಲದ್ವಯದಂತೆ ಕಂಡರು. ಅವರ ಧನುಷ್ಟಂಕಾರವು ಸಂತತವಾಯಿತು; ಬಾಣ ಪ್ರಸಾರವು ನಿರಂತರವಾಯಿತು. ಧರ್ಮಜನ ತೀಕ್ಷ್ಣ ಭಲ್ಲವು ಎದೆಗೆ ಬಡಿದು ಮೂರ್ಛಿತನಾದ ಶಲ್ಯನು, ಮತ್ತೆ ಎಚ್ಚತ್ತು ಶತಶರಗಳಿಂದ ಧರ್ಮಜನನ್ನು ಪೀಡಿಸಿದನು. ಮಹೇಂದ್ರನಮುಚಿಗಳಂತೆ ಕಡಿದಾಡುವ ಧರ್ಮಜಶಲ್ಯರ ರಣವಿಹಾರವು ದರ್ಶನೀಯವೆನಿಸಿತು.

ಶಲ್ಯನು ಧರ್ಮಜನಿಗೆ ನೆರವಾಗಿ ಬಂದ ಭೀಮಸೇನನನ್ನು ಒಂಬತ್ತು ಬಾಣಗಳಿಂದ ಹೊಡೆದು, ಧರ್ಮಜನ ಕವಚವನ್ನು ಎರಡು ಬಾಣಗಳಿಂದ ಸೀಳಿ, ಕೆಡಹಿದನು. ಶಲ್ಯನಿನ್ನೊಂದು ಬಾಣದಿಂದ ಧರ್ಮರಾಜನ ಧನುವನ್ನು ಮುರಿದನು. ಕೃಪನು ಅವನ ಸೂತನನ್ನು ಸಂಹರಿಸಿದನು. ಶಲ್ಯನು ಮತ್ತೆ ನಾಲ್ಕು ಬಾಣಗಳಿಂದ ಧರ್ಮಜನ ಕುದುರೆಗಳನ್ನು ಸಂಹರಿಸಿದನು. ವ್ಯಾಯುಧ ಸೂತತುರಗನಾದುದರಿಂದ ಅಸಹಾಯನಾಗಿದ್ದ ಧರ್ಮರಾಜನನ್ನು ಶಲ್ಯಬಾಣಗಳಿಂದ ಕಾಪಾಡಲೆಣಿಸಿ ಭೀಮಸೇನನು ಧಾವಿಸಿ ಬಂದು, ಶಲ್ಯನ ಧನುವನ್ನು ಮುರಿದನು; ಇನ್ನೊಂದು ಬಾಣದಿಂದ ಶಲ್ಯನ ಸಾರಥಿಯ ತಲೆಯನ್ನುರುಳಿಸಿ, ಭೀಮಸೇನನು ನಾಲ್ಕು ನಾರಾಚಗಳಿಂದ ಅವನ ಕುದುರೆಗಳನ್ನೂ ಸಂಹರಿಸಿದನು. ವಿರಥನಾದರೂ ಬಿಡದೆ ಖಡ್ಗಪಾಣಿಯಾಗಿ, ಕಡಿದಾಡುವ ಮದ್ರೇಶನು ಭೀಮಸೇನನ ಬಾಣಗಳಿಗೆ ಸಿಕ್ಕು ವಿಕವಚನಾದನು.

ಶಲ್ಯನು ಮತ್ತೊಂದು ರಥವನ್ನೇರಿ ಸಾತ್ಯಕಿ, ಧೃಷ್ಟದ್ಯುಮ್ನರನ್ನು ಮುತ್ತಿ ಅವರನ್ನು ವಿರಥರನ್ನಾಗಿಸಿದನು. ನಕುಲಸಹದೇವರ ಚಾಪಗಳನ್ನು ಮುರಿದು ಶಂಖಧ್ವಾನವನ್ನು ಮಾಡಿದ ಶಲ್ಯನನ್ನು ನೋಡಿ, ಭೀಮಸೇನನು ಮತ್ತೆ ಮದ್ರೇಶನ ಹಯಗಳನ್ನು ಕೆಡಹಿ, ಮತ್ತೊಂದು ರಥವನ್ನೇರಿ ಬರಲು, ಆ ಕುದುರೆಗಳನ್ನು ಸಂಹರಿಸಿದನು. ಶಲ್ಯನು ಕ್ರುದ್ಧನಾಗಿ ಖಡ್ಗಚರ್ಮಗಳನ್ನು ಧರಿಸಿ, ಕುಂತೀಸುತನನ್ನು ಕೊಲ್ಲಲೆಣಿಸಿ ಮೇಲೇರಿ ಹೋದನು. ಕಾಲಾಂತಕನಂತೆ ಬರುವ ಶಲ್ಯನನ್ನು ಧೃಷ್ಟದ್ಯುಮ್ನ, ಸಾತ್ಯಕಿ, ಶಿಖಂಡಿ, ದ್ರೌಪದೇಯರು ತಡೆದರು. ಭೀಮಸೇನನು ಅವನ ಗುರಾಣಿಯನ್ನು ತುಂಡರಿಸಿದನು. ಶಲ್ಯನು ಕತ್ತಿಯನ್ನು ತಿರುಗಿಸುತ್ತಾ ಬರಲು, ಭೀಮನು ಅದನ್ನೂ ಖಂಡಿಸಿದನು. ಅಸಹಾಯನಾದ ಶಲ್ಯನನ್ನು ನೋಡಿ, ಪಾಂಡವ ಸೈನಿಕರು 'ಸತ್ತನು ಶಲ್ಯ' ನೆಂದು ಕೂಗಾಡಿದರು; ಕೌರವಯೋಧರು ದಿಕ್ಕೆಟ್ಟು ಓಡಿದರು.

ಶಲ್ಯನು ಕೌರವ ವಿಜಯದಲ್ಲಿ ಹತಾಶನಾದನು, ಧರ್ಮರಾಜನ ಸೋಲನ್ನು ದೇವತೆಗಳೂ ಸಾಧಿಸಲಾರರೆಂದು ಮನಗಂಡನು. ಅವನ ಮೈ ರಕ್ತಸಿಕ್ತವಾಗಿತ್ತು ಕುರುರಾಜನ ಋಣವನ್ನು ತೀರಿಸಿದ ತನಗೆ ಜೀವಿತದಿಂದ ಪ್ರಯೋಜನವಿಲ್ಲವೆಂದು ಶಲ್ಯನು ಧರ್ಮರಾಜನ ಬಾಣಕ್ಕೆ ತುತ್ತಾಗಿ, ವೀರಸ್ವರ್ಗವನ್ನು ಸೂರೆಗೊಳ್ಳಲೆಣಿಸಿದನು. ದೆಬ್ಬೆತಿಂದ ಸಿಂಹವು ಮೃಗಯುರಾಜನ ಮೇಲೆರಗುವಂತೆ ಶಲ್ಯನು, ಧರ್ಮರಾಜನ ಮೇಲೆ ಧಾವಿಸಿ ಬಂದನು. ಧರ್ಮರಾಜನು ಗೋವಿಂದನ ವಚನವನು ನೆನೆದನು. ಶಲ್ಯನನ್ನು ಸಂಹರಿಸಲು ನಿಶ್ಚಯಿಸಿ, ಮಣಿಹೇಮದಂಡವು, ಕನಕಪ್ರಕಾಂಡವು, ನಿತ್ಯ ಪೂಜಿತವು, ಚಂದನ ಮಾಲ್ಯಚರ್ಚಿತವು ಆದ ರುದ್ರದತ್ತ ಶಕ್ತಿಯನ್ನು ಧರಿಸಿ, ಧರ್ಮರಾಜನು ಸಿಟ್ಟಿನಿಂದ ಶಲ್ಯನನ್ನೀಕ್ಷಿಸಿದನು. ನಿಷ್ಕಲ್ಮಷನು, ಸತ್ಯಭೂಷಣನು, ಪೂತಚಿತ್ತನು ತಪೋವಿತ್ತನು ಆದ ಧರ್ಮರಾಜನ ಕ್ರೂರಕಟಾಕ್ಷದಿಂದ ಉರಿದುಬೀಳದೆ ಮದ್ರರಾಜನಿನ್ನು ಉಳಿದಿದ್ದನೆಂದರೆ ಪರಮಾಶ್ಚರ್ಯಕರವಾಗಿದೆ !

ಆ ಶಕ್ತಿಯನ್ನು ಬ್ರಹ್ಮದೇವನ ಆಜ್ಞೆಯಂತೆ ವಿಶ್ವಕರ್ಮನು ನಿರ್ಮಿಸಿ, ರುದ್ರನಿಗಿತ್ತಿದ್ದನು. ಉರಿಯುವ ಆ ಶಕ್ತಿಯು ಕಿಡಿಗಳನ್ನು ಕಾರುತ್ತಿತ್ತು. ಯಮದಂಡವೋ, ಕಾಲರಾತ್ರಿಯ ಪಾಶವೋ, ಬ್ರಹ್ಮದಂಡವೋ ಎಂಬಂತೆ ಭೀಷಣವಾದ ಶಕ್ತಿಯು ನಿತ್ಯವು ಗಂಧಾರ್ಘ್ಯಪಾನ ನಿವೇದನಗಳಿಂದ ಪೂಜಿತವಾಗಿ ಧರ್ಮಜನ ಮನೆಯಲ್ಲಿತ್ತು. ವಜ್ರನಾಲವು, ವೈದೂರ್ಯಚಿತ್ರಿತವು, ಘಂಟಾಕಿಂಕಿಣೀ ಸಮಲಂಕೃತವು ಆದ ಅಮೋಘ ಶಕ್ತಿಯನ್ನು ಅಜಾತಶತ್ರುವು ಕೈಲಿ ಹಿಡಿದು, ದಿವ್ಯರಥದಲ್ಲಿ ಕೂತು ದಿವ್ಯಾಸ್ತ್ರಮಂತ್ರಗಳಿಂದಲು, ತನ್ನ ಸತ್ಯಧರ್ಮ ತಪಶ್ಶಕ್ತಿಗಳಿಂದಲು, ಕೂಡಿಸಿ, 'ಸತ್ತೆ ಶಲ್ಯ !' ಎಂದು ಗರ್ಜಿಸಿ ಎಸೆದನು.

ಶಲ್ಯನು ಉರಿಯುವ ಶಕ್ತಿಯನ್ನು ಕೈಲಿ ಹಿಡಿಯಲು ಯತ್ನಿಸಿದನು. ಶಕ್ತಿಯು ಅವನ ಕೈಗಳ ಹಿಡಿತಕ್ಕೆ ಸಿಗದೆ, ಎದೆಗೆ ತಗುಲಿ, ಅವನ ರಕ್ತವನ್ನು ಹೀರಿ, ನೆಲದಿ ಬಿತ್ತು. ಶಲ್ಯನು ಮರ್ಮಾಘಾತಕ ಶಕ್ತಿಯ ಪೆಟ್ಟಿಗೆ, ನಾಸಿಕಾ, ಮುಖ, ಕರ್ಣನೇತ್ರಗಳಿಂದ ರಕ್ತಕಾರಿ, ನೆಲದಲ್ಲಿ ಬಿದ್ದು ಮೃತನಾದನು. ಅವನ ಹೃದಯವು ಶಕ್ತಿಪ್ರವೇಶದಿಂದ, ಕುಮಾರ ಶಕ್ತಿ ಭಿನ್ನ ಕ್ರೌಂಚ ಪರ್ವತದಂತೆ, ಕಂಗೊಳಿಸಿತು. ಎರಡು ಕೈಗಳನ್ನು ಚಾಚಿ, ನೆಲದಿ ಬಿದ್ದ ಶಲ್ಯರಾಜನು, ವಜ್ರಾಹತವಾದ ಗಿರಿಶೃಂಗದಂತಿದ್ದನು. ಬಹುಕಾಲ ಪಾಲಿತಳಾದ ಧರಾವನಿತೆಯನ್ನು ಬಿಟ್ಟು ಹೋಗುವಾಗ ಸರ್ವಾಂಗಾಲಿಂಗನವನ್ನು ಕೊಡುತ್ತಿರುವಂತೆ, ಶಲ್ಯನು ಮಲಗಿದ್ದನು. ಧರ್ಮಯುದ್ಧದಲ್ಲಿ ಧರ್ಮಕ್ಕೆ ಕಟ್ಟುಬಿದ್ದು ಅಧರ್ಮದ ಕಡೆಗೆ ಹೋರಾಡಿ, ಧರ್ಮನಿಂದ ಮೃತನಾದ ಶಲ್ಯರಾಜನು ದೇವಋಷಿ ಪ್ರಶಂಸೆಗೆ ಪಾತ್ರನಾದನು. ಶಕ್ತಿಭಿನ್ನ ಹೃದಯನಾದರೂ, ವಿಗತ ಜೀವನಾದರೂ ಶಲ್ಯರಾಜನು ಸುಖಸುಪ್ತನಾಗಿದ್ದಂತೆ ತೋರಿದನು. ಅವನ ವೀರಕ್ಷತ್ರಿಯ ಕಳೆ ಎಳ್ಳಷ್ಟೂ ಕುಂದಿದ್ದಿಲ್ಲ.

ಧರ್ಮರಾಜನು ಶಲ್ಯವಧದಿಂದ ಕ್ರುದ್ಧರಾಗಿ ಮುತ್ತುವ ಕುರುವೀರರನ್ನು ಗರುಡನು ಪನ್ನಗಗಳನ್ನಂತೆ ಬಾಣವರ್ಷದಿ ಮುಣುಗಿಸಿ, ಸಂಹರಿಸಿದನು. ರಕ್ತಪ್ರವಾಹವು ಮೈಯಿಂದ ಹರಿಯುತ್ತಿರಲು, ಆಯುಧರಹಿತರಾದ ಕೌರವಭಟರು, ಪಾಂಡವರಿಗೆ ಹೆದರಿ, ಓಡಿಹೋದರು. ಮದ್ರರಾಜ ಸಹೋದರನು ಸೇಡಿನಿಂದ ಬಿಟ್ಟ ಬಾಣಶತವನ್ನು ತುಂಡರಿಸಿ, ಧರ್ಮರಾಜನು ಆರು ಬಾಣಗಳಿಂದ ಪೀಡಿಸಿ, ಒಂದರಿಂದ ಅವನ ಧನುವನ್ನು ಮುರಿದನು; ಎರಡರಿಂದ ಅವನ ಧ್ವಜವನ್ನು ಕೆಡಹಿದನು. ಮತ್ತೊಂದು ನಿಶಿತಭಲ್ಲದಿಂದ ಅವನ ತಲೆಯನ್ನುರುಳಿಸಿದನು. ಸ್ವರ್ಗದಿಂದುರುಳುವ ಕ್ಷೀಣಪುಣ್ಯರಂತೆ ಶಲ್ಯಾನುಜನು ರಥದಿಂದ ಬಿದ್ದು ಮೃತನಾದನು. ಮದ್ರರಾಜನ್ಯರೀರ್ವರ ಮರಣವನ್ನು ಕಂಡು, ಕುರುಸೈನಿಕರು ಹಾಹಾಕಾರಗಳನ್ನು ಮಾಡುತ್ತಾ ಓಡಿಹೋದರು. ಸಾತ್ಯಕಿಯು ಅವರನ್ನು ಬೆನ್ನತ್ತಿ ಸಂಹರಿಸಿದನು.

ಕೃತವರ್ಮನು ಸಾತ್ಯಕಿಯನ್ನು ತಡೆದು, ಬಾಣಜಾಲದಿಂದ ಪೀಡಿಸಿದನು.

ವಾರ್ಷ್ಣೇಯ ಕುಲಸಂಭವರಾದ ಹಾರ್ದಿಕ್ಯಶೈನೇಯರು ಸಿಂಹಯುಗದಂತೆ ಕಾದಾಡಿದರು. ಕೃತವರ್ಮನು ಹತ್ತು ಬಾಣಗಳಿಂದ ಸಾತ್ಯಕಿಯನ್ನು ಪೀಡಿಸಿ, ನಾಲ್ಕು ಶರಗಳಿಂದ ಹಯಗಳನ್ನು ಗಾಯಗೊಳಿಸಿ, ಒಂದರಿಂದ ಅವನ ಧನುಸ್ಸನ್ನು ಮುರಿದನು. ಶಿನಿಪುಂಗವನು ಮತ್ತೊಂದು ಧನುವನ್ನು ಪಿಡಿದು, ಹತ್ತು ಬಾಣಗಳಿಂದ ಹಾರ್ದಿಕ್ಯನನ್ನು ಪೀಡಿಸಿದನು. ಮತ್ತು ಕರಲಾಘವವನ್ನು ತೋರಿ, ಸಾತ್ಯಕಿಯು ಕೃತವರ್ಮನ ರಥಾಕ್ಷವನ್ನು ಭಲ್ಲದಿಂದ ಖಂಡಿಸಿದನು; ನಾಲ್ಕು ಶರಗಳಿಂದ ಕುದುರೆಗಳನ್ನು ಕೊಂದನು; ಎರಡರಿಂದ ಸೂತಪಾರ್ಶ್ವರಕ್ಷಕರನ್ನು ಕೆಡಹಿದನು. ಕೃತವರ್ಮನು ವಿರಥನಾಗಿರಲು ನೋಡಿ, ಕೃಪನು ಅವನನ್ನು ತನ್ನ ರಥದಲ್ಲಿರಿಸಿ ಕೊಂಡು ಹೋದನು.

ಪ್ರಾಯವಾಗಿ ಸರ್ವನಾಶವಾದುದನ್ನು ಕಂಡು, ಕುರುರಾಜನು ನಿರ್ವಿಣ್ಣನಾದನು. ಓಡಿಹೋಗುವ ಭಟಸಾದಿಗಳ ಧೂಳಿ ಗಗನಕ್ಕೆ ಹಾರಿ, ರಣರಂಗವು ಅಸ್ಪಷ್ಟಪ್ರಕಾಶವಾಯಿತು. ರಕ್ತನದಿಗಳು ಹರಿದವು. ಪಾಂಡವರು ಜಯಕಾಶಿಗಳಾಗಿ, ಸಿಂಹನಾದಗಳನ್ನು ಮಾಡಿ, ಶಂಖಗಳನ್ನೂದಿದರು. ದುರ್ಯೋಧನನದನ್ನು ಸಹಿಸದೆ ಅವರನ್ನು ಮುತ್ತಿ ಕಾದಿದನು. ಧೃಷ್ಟದ್ಯುಮ್ನ, ಸಾತ್ಯಕಿ, ಶಿಖಂಡಿಯರು ಪಾಂಡವವೀರರಿಗೆ ಸಹಾಯರಾಗಿ ನಿಂತರು. ಕೃತವರ್ಮನು ಮತ್ತೊಂದು ರಥವನ್ನೇರಿ ಬಂದನು. ಕೃಪಾಶ್ವತ್ಥಾಮರೂ ತಮ್ಮ ರಾಜನಿಗೆ ನೆರವಾಗಿ ನಿಂತರು.

ಧರ್ಮರಾಜನು ಕೃತವರ್ಮನ ಕುದುರೆಗಳನ್ನು ಸಂಹರಿಸಿ, ಕೃಪನನ್ನು ಆರು ಭಲ್ಲಗಳಿಂದ ಪೀಡಿಸಿದನು. ಕೃತವರ್ಮನು ಅಶ್ವತ್ಥಾಮನ ರಥವೇರಿ ಹೋದನು. ಕೃಪನು ಯುಧಿಷ್ಠಿರನನ್ನು ಆರುಬಾಣಗಳಿಂದ ಪೀಡಿಸಿದನು. ಧರ್ಮರಾಜನು ಆತನನ್ನು ಹತ್ತು ವಿಶಿಖಗಳಿಂದ ಹೊಡೆದೋಡಿಸಿದನು. ಪಾರ್ಥರು ಪರಮಪ್ರಹೃಷ್ಟರಾಗಿ ಶಂಖಗಳನ್ನೂದಿ, ಧರ್ಮರಾಜನನ್ನು ಪ್ರಶಂಸಿಸಿದರು. ಮಾದ್ರೀಪುತ್ರರು, ನಾನಾವಿಧ ವಾದ್ಯಗಳಿಂದ ಧರ್ಮರಾಜನ ವಿಜಯವನ್ನು ಘೋಷಿಸಿದರು. ಅವರು ಕಳಿಸಿದ ಚಾರರು ರಾಜ್ಯದ ಸಮಸ್ತಭಾಗಗಳಲ್ಲಿಯೂ, ಧರ್ಮರಾಜನ ವಿಜಯವನ್ನು ಪ್ರಕಟಿಸಲು ಹೋದರು.

## ೫. ಸಂಕುಲಯುದ್ಧ (೧೮ ನೇ ದಿನ)

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಶಲ್ಯನು ಹತನಾಗಲು, ಅವನ ಪದಾನುಗರು, ಏಳೂನೂರು ರಥಿಕರು, ಮುಖ್ಯ ಸೇನಾಕಕ್ಷದಿಂದ ಹೊರಹೊರಟು ಪಾಂಡವ ಬಲವನ್ನು ಮುತ್ತಲೆಂದು ಸಾಗಿದರು. ಮಹಾಗಜಾರೂಢನಾಗಿ, ಅಚಲಶೃಂಗದಿ ನಿಂತ ಸೂರ್ಯನಂತೆ ಬೆಳಗುವ ಕುರುರಾಜನು, ಅವರನ್ನು ಕಂಡು, 'ಇದು ಸಮಯವಲ್ಲ; ಎಲ್ಲರೂ ಕಲೆತು ಕಾದೋಣವೆಂದು ವಾರಿಸಿದನು. ಆದರೂ ಅವನ ಮಾತಿಗೆ ಕಿವಿಗೊಡದೆ,

ಮದ್ರವೀರರು ಧರ್ಮರಾಜನನ್ನು ಸಂಹರಿಸಲು ನಿಶ್ಚಯಿಸಿ, ಮುನ್ನುಗ್ಗಿದರು. ಮರಣ ಜಯಗಳಲ್ಲೊಂದನ್ನು ನಿಶ್ಚಯಿಸಿ, ಧನುಷ್ಟಂಕಾರ ಸಿಂಹನಾದಗಳನ್ನು ಮಾಡಿ, ಶರವರ್ಷದಿಂದ ಪಾಂಡವಸೇನೆಯನ್ನು ಮುತ್ತಿದ ಮದ್ರವೀರರ ಸೇಡನ್ನು ತಿಳಿದು, ಅರ್ಜುನ ವೃಕೋದರ ಯಮಳರು ಅವರೊಡನೆ ಕಾದತೊಡಗಿದರು. ಧರ್ಮರಾಜನು ಶ್ರಾಂತನಾಗಿರುವುದನ್ನರಿತು ಸಾತ್ಯಕಿ ದ್ರೌಪದೇಯರು ಆತನಿಗೆ ರಕ್ಷಕರಾಗಿ ನಿಂತರು. ಧೃಷ್ಟದ್ಯುಮ್ನ, ಶಿಖಂಡಿ, ಯುಧಾಮನ್ಯು, ಉತ್ತಮೌಜ, ಚೇಕಿತಾನ ಮುಂತಾದವರು ಮಿಕ್ಕ ಕುರುವೀರರನ್ನೆದುರಿಸಿದರು.

ಮಕರನಿಕರವು ಸಾಗರವನ್ನಂತೆ ಪಾಂಡವವೀರರು ಮದ್ರವೀರರನ್ನು ಕ್ಷೋಭೆ ಪಡಿಸುತ್ತಾ ವಿಕ್ರಮಿಸಿದರು. ಮದ್ರವೀರರು ಮುತ್ತಿದಾಗ ಪುರೋವಾತದಿಂದ ಗಂಗೆಯಂತೆ ಪಾಂಡವಸೇನೆ ಕಂಪಿಸಿತು. ಮಹಾವಾತವು ಗಿಡಗಳನ್ನಂತೆ ಮದ್ರವೀರರು ಪಾಂಡವಭಟರನ್ನು ಉನ್ಮೂಲಿಸಿದರು : 'ಎಲ್ಲಿರುವನು ಯುಧಿಷ್ಠಿರನು ? ಎಲ್ಲಿ ವೃಕೋದರ ? ಧೃಷ್ಟದ್ಯುಮ್ನ ಶೈನೇಯರನ್ನು ಕೊಲ್ಲದೆ ಬಿಡೆವು. ಅರ್ಜುನನನ್ನು ಅವನ ತಂದೆಯ ಸ್ವರ್ಗಕ್ಕೆ ಕಳಿಸುವೆವು' ಎಂದು ಗರ್ಜಿಸುತ್ತಾ ಬರುವ ಮದ್ರರಥಿಕರನ್ನು ದ್ರೌಪದೇಯರು ತಡೆದು ಕಾದಿದರು. ಸಾತ್ಯಕಿಯು ಅವರ ರಥಚಕ್ರಗಳನ್ನು ಮುರಿದು, ನಿಶಿತಭಲ್ಲಗಳಿಂದ ಧ್ವಜಗಳನ್ನು ಕೆಡಹಿ ಅವರನ್ನು ಸಂಹರಿಸಿದನು.

ದುರ್ಯೋಧನವಚನವನ್ನು ಮನ್ನಿಸದೆ ತಾವಾಗಿ ಬೇರ್ಪಟ್ಟು ಕಾದುವ ಮದ್ರವೀರರನ್ನು ನೋಡಿ, ಅವರು ಉಳಿಯರೆಂದು ತಿಳಿದು, ಗಾಂಧಾರರಾಜನು, ದುರ್ಯೋಧನನಿಗಿಂತೆಂದನು: 'ಮಹಾರಾಜ ! ಬೇಡವೆಂದರೂ ಕೇಳದೆ ಮುನ್ನುಗ್ಗಿ ಮದ್ರವೀರರು ಪಾಂಡವಾಗ್ನಿಗೆ ಶಲಭಗಳಾಗುತ್ತಿರುವರು. ನಿನ್ನೆದುರಿಗೆ ಹೀಗಾಗುವುದು ಸರಿಯಲ್ಲ. ಮೊದಲೇ ಎಲ್ಲರೂ ಕಲೆತು ಕಾದಬೇಕೆಂಬ ಕಟ್ಟಳೆಯನ್ನು ಮುರಿದು, ಕಟ್ಟಳೆವಿಗಿಳಿದ ಮದ್ರವೀರರ ಪಾಡು ನೋಡು !' ಆ ಮಾತಿಗೆ ದುರ್ಯೋಧನನು, 'ಏನು ಮಾಡಲಿ ? ವಾರಿಸಿದರೂ ಕೇಳದೆ ಮುನ್ನುಗ್ಗುವ ಮೂರ್ಖರಿಗೆ ಶಾಸ್ತಿ ಆಗಲಿ ! ' ಎಂದನು. ಶಕುನಿಯು, 'ರಾಜನ್ ! ಅವರು ಸೇಡಿನಿಂದ ಹೋಗಿರುವರು. ನಿನ್ನ ಆಜ್ಞೆ ಮೀರಿದರೆಂಬ ಸಿಟ್ಟನ್ನು ಬಿಡು ! ಉಪೇಕ್ಷಿಸಿ ಅವರನ್ನು ಸಾಯಗೊಡಬೇಡ ! ವಾಜಿಗಜರಥಭಟರೊಡನೆ ನಾವೂ ಮುನ್ನುಗ್ಗಿ ಅವರನ್ನು ಪಾಂಡವರಿಂದ ಕಾಪಾಡಲು ಯತ್ನಿಸುವುದೀಗ ಪ್ರಥಮ ಕರ್ತವ್ಯವಾಗಿದೆ' ಎಂದು ಹುರಿದುಂಬಿಸಿದನು.

ಮತ್ತೆ ಕುರುಸೇನೆಯು ಸಿಂಹನಾದಗಳನ್ನು ಮಾಡುತ್ತಾ 'ಕೊಲ್ಲಿರಿ ! ಹೊಡೆಯಿರಿ ! ಹಿಡಿಯಿರಿ ! ಕಡಿಯಿರಿ !' ಎಂದು ಕೂಗುತ್ತಾ ಮುಂದೆ ಸಾಗಿ ಪಾಂಡವಸೇನೆಯನ್ನು ಮುತ್ತಿತು. ಪಾಂಡವರು ಮದ್ರರಾಜನ ವೀರರಥಿಕರನ್ನು ಸುತ್ತುಗಟ್ಟಿ ತಡೆದು, ಕೊಲ್ಲುತ್ತಿದ್ದರು. ಒಂದು ಮುಹೂರ್ತದವರೆವಿಗೂ ಬಾಣಯುದ್ಧವಾಯಿತು. ಆಮೇಲೆ ಹಸ್ತಾಹಸ್ತಿ, ಕಚಾಕಚಿ, ಬಾಹಾಬಾಹವಿ, ಮುಷ್ಟಾಮುಷ್ಟಿ

ಯಾಗಿ ತುಮುಲರಣವು ಭೀಕರವೆನಿಸಿತು. ಮದ್ರರಾಜ ವೀರರು ವಿಹತರಾಗುತ್ತಿರುವುದನ್ನು ಕುರುಸೇನಾನಿಗಳು ಕಂಡರು. ಮಧ್ಯದಲ್ಲಿ ಸಿಕ್ಕು, ನುಗ್ಗುನುರಿಯಾಗುತ್ತಿರುವ ಮದ್ರವೀರರು, ಸಹಾಯವಾಗಿ ಬಂದ ಕುರುಸೇನೆಯನ್ನು ಕಂಡು, ಇಮ್ಮಡಿಯಾದ ರಣೋತ್ಸಾಹದಿಂದ ಕಡಿದಾಡಿದರು. ಎದ್ದೆದ್ದು ಬೀಳುವ ಕಬಂಧಗಳಿಂದ ರಣಭೂಮಿ ತುಂಬಿತು. ಆದಿತ್ಯಮಂಡಲದಿಂದ ಉಲ್ಕೆಗಳು ಉದುರಿದವು. ಭಗ್ನರಥಗಳಿಂದಲು, ನೊಗೆಗಳಿಂದಲು, ಸತ್ತ ರಥಿಕರಿಂದಲು, ಮೃತತುರಗಗಳಿಂದಲು ಕದನರಂಗವು ಕಡುಭಯಂಕರವಾಯಿತು. ನೊಗೆಯನ್ನೆಳೆದುಕೊಂಡು ತುರಗಗಳು ಓಡಿದವು. ಭಗ್ನಚಕ್ರಗಳಾದ ರಥಗಳು ರಕ್ತನದಿಯಲ್ಲಿ ದ್ವೀಪಗಳಂತೆ ನಿಂತಿದ್ದವು. ಅವನ್ನೆಳೆಯಲಾರದೆ ಕುದುರೆಗಳು ಒದ್ದಾಡುತ್ತಿದ್ದವು. ಕೆಲವೆಡೆ ರಥಾರ್ಧವನ್ನು ಸೆಳೆದುಕೊಂಡು ಓಡುವ ಹಯಗಳು, ಕೆಲವಡೆ ರಥದಿಂದ ಬೀಳುತ್ತಿರುವ ರಥಿಕರು, ಕೆಲವೆಡೆ ಅವಕಾಶವನ್ನು ನೋಡಿ ಓಡುವ ಕಾಂದಿಶೀಕರು ಕಂಡುಬಂದರು. ಮದ್ರರಾಜನ ರಥಿಕರನ್ನು ಪ್ರಾಯಃ ನಾಶಗೊಳಿಸಿ, ಪಾಂಡವವೀರರು, ಬರುವ ಕೌರವವಾಹಿನಿಯಿಂದ ಕಾದತೊಡಗಿದರು.

ಪಾಂಚಾಲ ನಿಶಿತ ಬಾಣ ಶತಗಳು ಕುರುಭಟಶತವನ್ನಾಹುತಿಗೊಂಡವು. ಬಾಣರವದಿಂದ ಶಂಖಾರವಗಳು ಮುಗಿಲು ಮುಟ್ಟಿದವು. ಕುರುಸೇನೆ ಗಗ್ಗೋಲಾಯಿತು. ಜಿತಕಾಶಿಗಳಾದ ಪಾಂಡವವೀರರಿಗೆ ಹೆದರಿ, ಮದ್ರರಾಜನು ನಿಹತನಾದುದರಿಂದ ಸೇನಾಪತಿರಹಿತರಾಗಿ, ಕುರುಭಟರು ರಣರಂಗದಿಂದ ಓಡತೊಡಗಿದರು. ಅದನ್ನು ಕಂಡು ನಿನ್ನ ಸುತರೂ ರಣವಿಮುಖರಾದರು. ಅಗಾಧ ಮಹೋದಧಿ ಮಧ್ಯದಲ್ಲಿ ಮುರಿದ ಹಡಗಿನಲ್ಲಿದ್ದ ವಣಗ್ಜನರಂತೆ ಹತಶೂರರಾದ ಕುರುಕುಮಾರರು ಅಪಾರ ಪಾಂಡವವಾಹಿನಿಯ ಪಾರಕಾಣದೆ ಕಂಗೆಟ್ಟರು. ಸಿಂಹಪೀಡಿತ ಮೃಗಗಳಂತೆ ಅನಾಥರಾದ ಕುರುವೀರರು ಸೇನಾಪತಿಯ ನೆರಳನ್ನು ಬಯಸಿದರು. ಕೊಂಬು ಮುರಿದ ವೃಷಭಗಳಂತೆ, ಹಲ್ಲು ಕಿತ್ತಿದ ಹಾವುಗಳಂತೆ ನಿರ್ವಿಣ್ಣರಾದ ಕುರುಭಟರು ದಿಕ್ಕೆಟ್ಟು ಓಡಿದರು.

ಆಗ ಮಧ್ಯಾಹ್ನ ಸಮಯವಾಗಿತ್ತು. ಚೆದುರಿದ ಸೈನಿಕರನ್ನು ಒಟ್ಟುಗೂಡಿಸಲಾಗದೆ, ಕೂಡಿಸಿ ಪರಾಕ್ರಮಿಸಲಾರದೆ ವಿಕ್ರಮಿಸಿ ಗೆಲ್ಲಲಾರದೆ, ಕೌರವ ಸೇನಾಪತಿಗಳು ನಿರುತ್ಸಾಹರಾದರು. ಭೀಷ್ಮ, ದ್ರೋಣ, ಕರ್ಣರು ಬಿದ್ದಾಗ ನಮ್ಮವರಿಗಾದ ಭಯ ಶೋಕಗಳು ಮತ್ತೆ ಶಲ್ಯನ ಮೃತಿಯಿಂದ ಮುಮ್ಮಡಿಯಾಗಿ ಮರುಕಳಿಸಿದವು. ಅವರ ಜಯಾಶೆ ದೂರವಾಯಿತು. ರಾಜನ್! ಪ್ರವೀರರು ಮೃತರಾದರು. ಸೇನಾಪತಿಗಳಾರೂ ಉಳಿಯಲಿಲ್ಲ. ಮುತ್ತಿದವರು ಮತ್ತೆ ಹಿಂದಿರುಗುತ್ತಿದ್ದಿಲ್ಲ. ಪಾಂಡವವೀರರು ವಿಜೃಂಭಿಸುತ್ತಿದ್ದರು. ಮಧ್ಯಾಹ್ನದ ಉರಿಬಿಸಿಲು ಭಯಂಕರವಾಗಿತ್ತು. ಪಾಂಡವರ ಪ್ರತಾಪವು ಇನ್ನೂ ಭಯದವಾಗಿತ್ತು. ಕೌರವ ಪದಾತಿಗಳು ಸತ್ತ ಸಾದಿಗಳನ್ನು ಕೆಡಹಿ,

ಓಡುತ್ತಿರುವ ಕುದುರೆಗಳ ಕಡಿವಾಣಗಳನ್ನು ಹಿಡಿದು ನಿಲ್ಲಿಸಿ, ಅವನ್ನೇರಿ, ರಣರಂಗದಿಂದ ಪಾರಾದರು. ಸಿಕ್ಕ ವಾಹನಗಳನ್ನೇರಿ ಪಲಾಯನ ಪರರಾಗುತ್ತಿರುವ ಭಟರನ್ನು ನಿಲ್ಲಿಸುವುದು ದುಶ್ಶಕವಾಯಿತು. ಓಡುವವರನ್ನು ಹಿಂಬಾಲಿಸಿ ಪಾಂಚಾಲಭಟರು ಕೊಲ್ಲುತ್ತಿದ್ದರು.

'ಇಂದು ಧರ್ಮರಾಜನು ಅಜಾತಶತ್ರುವಾದನು. ಸತ್ಯವ್ರತನಾದ ಯುಧಿಷ್ಠಿರನನ್ನು ವರಿಸಿ ರಾಜ್ಯಲಕ್ಷ್ಮಿಯು ದುರ್ಯೋಧನನ ಕೈಬಿಟ್ಟಳು. ಪುತ್ರರೆಲ್ಲರೂ

ಇಂದವನಿಗೆ ವಿದುರನ ಮಾತುಗಳು ಸತ್ಯವೆಂಬ ಜ್ಞಾನವಾಗುವುದು. ಪಾಂಡುನಂದನರಿಗಿತ್ತ ದುಃಖವೀಗ ಮರುಕಳಿಸಿ, ಮಕ್ಕಳನ್ನೆಲ್ಲ ಮೃತ್ಯುಮುಖದಲ್ಲಿ ಕೆಡಹಿದಾಗ, ಅಂಧರಾಜನಿಗೆ ಶ್ರೀಕೃಷ್ಣನ ವಚನದಂತೆ ನಡೆಯದ ಅಪರಾಧದ ಪಶ್ಚಾತ್ತಾಪವಾಗುವುದು. ಅರ್ಜುನನ ಗಾಂಡೀವ, ಭೀಮಸೇನನ ಗದೆ ಎಂದರೆ ಏನೆಂಬ ಅರಿವು ಅವನಿಗೀಗಲಾದರೂ ಮೂಡಿಬರುವುದು. ದುಶ್ಶಾಸನನಿಗಾದ ಪಾಡನ್ನು ನೆನೆದು ಕಂಪಿಸಿ, ದುರ್ಯೋಧನನ ಮೃತಿಯನ್ನೂ ಕೇಳಿ, ಧೃತರಾಷ್ಟ್ರನ ಶೋಕ ತಟಾಕವು ತುಂಬಿತುಳುಕುವುದು. ಶಕುನಿಯು ಸತ್ತಾಗ, ನಕುಲಸಹದೇವರ ದ್ರೋಹದ ಫಲವಿದೆಂದು ತಿಳಿದು, ಧೃತರಾಷ್ಟ್ರನು, ಮನೆಸೊಸೆಗೆ ಮಾಡಿದ ಮಾನಹಾನಿಯ ಪಾಪದ ವಿಷಫಲವನ್ನು ಉಣ್ಣಬೇಕಾಗುವುದು. ಧನಂಜಯನಾರಿಗೆ ಕಾದುವನೋ ಭೀಮಸೇನಾನಾರಿಗೆ ನಾಯಕನೋ, ಶ್ರೀಕೃಷ್ಣನಾರಿಗೆ ರಕ್ಷಕನೋ, ಅಂತಹ ಧರ್ಮರಾಜನಿಗಲ್ಲದೆ, ಪಾಪಿ ಕೌರವರಿಗೆ ಜಯವಾಗುವುದೇ ?' ಎಂದು ಮಾತಾಡಿಕೊಂಡರು ಯೋಧರವರು.

ಧನಂಜಯನು ರಥಾನೀಕವನ್ನು ಬೆನ್ನಟ್ಟಿ ನಿಶಿತಬಾಣಗಳಿಂದ ಅವರನ್ನು ಕೊಂದು ಕೆಡಹುತ್ತಿದ್ದನು. ಭೀಮಸೇನಭಯದಿಂದ ಓಡುವ ರಥಿಕರನ್ನು ನಾರಾಚಗಳಿಂದ ಕೆಡಹುವ ಕಿರೀಟಿಯನ್ನು ಕಂಡು, ದುರ್ಯೋಧನನು ತನ್ನ ಸೂತನಿಗೆ 'ಪಾಪಿ ಪಾರ್ಥನು ನನ್ನ ಸೇನೆಯನ್ನು ನಿಶ್ಶೇಷಗೊಳಿಸುತ್ತಿರುವನು. ನನ್ನ ರಥವನ್ನವನ ಹಿಂದೆ ನಿಲ್ಲಿಸು ! ಆಗ ಅವನು ಮಧ್ಯದಲ್ಲಿ ಸಿಕ್ಕಿ ಸಾಯುವನು. ಹಿಂದಿನಿಂದ ಮುತ್ತಿದ ನನ್ನನ್ನು ನೋಡಿ, ಓಡುತ್ತಿರುವ ಕುರುವೀರರು ಹಿಂದಿರುಗಿ ತಾಕಿದಾಗ ಅರ್ಜುನನು ಎರಡು ಮೇಷಗಳ ಮಧ್ಯೆ ಸಿಕ್ಕು ನರಿಯಂತಾಗುವನು' ಎಂದು ಆಜ್ಞಾಪಿಸಿದನು. ಸಿಂಹನಾದಗಳನ್ನು ಮಾಡುವ ಪಾಂಡವಯೋಧರ ಧಾಟಿಗೆ ನಿಲ್ಲಲಾರದೆ, ಬಾಣಗಳಿಗೆ ಸಿಕ್ಕು ನರಳುವ ಕುರುಭಟರು ಆರ್ತನಾದಗಳನ್ನು ಮಾಡುತ್ತಿದ್ದರು.

ಶೂರಸಮ್ಮತವಾದ ಕೌರವೇಶನ ಮಾತಿನಂತೆ ಅವನ ಸಾರಥಿಯು ಕಾಂಚನ ರಥವನ್ನು ಪಾರ್ಥನ ಹಿಂದುಗಡೆ ನಿಲ್ಲಿಸಿದನು. ಗಜಾಶ್ವರಥಹೀನರಾದ ಕೌರವಯೋಧರು ಇಪ್ಪತ್ತೊಂದು ಸಾವಿರ ಪದಾತಿಬಲವನ್ನು ಕೈಕೊಂಡು ಕುರುರಾಜನಿಗೆ ನೆರವಾಗಿ ನಿಂತರು. ಪ್ರಾಣಾಶೆಯನ್ನು ತೊರೆದು ಕಾದುವ ಕಾಲ್ಬಲದಿಂದ ಕೂಡಿ

ಕುರುರಾಜನು ಕೌಂತೇಯರನ್ನು ಮುತ್ತಿದನು. ಮಹಾಸಮ್ಮರ್ದವಾಯಿತು. ಅನೇಕ ದೇಶಜರಾದ ಯೋಧರು ವಿಜಯಕ್ಕಾಗಿ, ಕೊನೆಯ ಯತ್ನವನ್ನು ಮಾಡಿ, ಪಾಂಡವಸೈನಿಕರನ್ನೆದುರಿಸಿ, ಹೋರಾಡಿದರು.

ಭೀಮಸೇನನು ಧೃಷ್ಟದ್ಯುಮ್ನ ಸಹಿತನಾಗಿ ಪದಾತಿಗಳನ್ನು ವಾರಿಸಿ, ಅರ್ಜುನನನ್ನು ರಥಿಕಾದಿ ವೀರರೊಡನೆ ಕಾದಲು ಅವಕಾಶ ಕಲ್ಪಿಸಿದನು. ಹಾರುತ್ತಾ ಚೀರುತ್ತಾ, ಕೇಕೆಹಾಕುತ್ತಾ ಚತುರಂಗಬಲವು ಭೀಮಸೇನನನ್ನು ಮುತ್ತಿ ಸಾವಿಗೆ ತಲೆಯೊಡ್ಡಿ ಕಾದಿತು. ಪದಾತಿಗಣವು ಮುತ್ತಿದಾಗ ಭೀಮಸೇನನು ಮೈನಾಕಪರ್ವತದಂತೆ ನಿಶ್ಚಲನಾಗಿದ್ದನು. ಪದಾತಿಗಣವನ್ನು ಪದಾತಿಯಾಗೇ ಮುತ್ತಲು ನಿಶ್ಚಯಿಸಿ, ಆ ಮಹಾತ್ಮನು ಗದಾಪಾಣಿಯಾಗಿ ರಥದಿಂದಿಳಿದನು. ಜಾತರೂಪ ಪರಿಚ್ಛಿನ್ನವು, ಶತ್ರುಶೋಣಿತಕ್ಲಿನ್ನವು ಆದ ಭೀಮಗದೆಯನ್ನು ಕಂಡು, ಕೌರವಭಟರು ಕಾಲ್ತೆಗೆದರು. ಭೀಮಸೇನನು ಪ್ರಳಯಾಂತಕನಂತೆ ಅವರ ಮೇಲೆರಗಿ ಇಪ್ಪತ್ತೊಂದು ಸಾವಿರ ಯೋಧರನ್ನು ಒಬ್ಬನೂ ಉಳಿಯದಂತೆ ಸಂಹರಿಸಿದನು. ಧೃಷ್ಟದ್ಯುಮ್ನನು ಭೀಮಪರಾಕ್ರಮವನ್ನು ನೋಡುತ್ತಾ ಬೆರಗಾಗಿ ನಿಂತಿರಲು, ರಕ್ತರೂಷಿತಗಾತ್ರನಾಗಿ ಭೀಮಸೇನನು ಮತ್ತೆ ತನ್ನ ರಥವನ್ನೇರಿದನು. ಮಹಾವಾತಘಾತದಿಂದ ಪಾತಿತವಾದ ಪುಷ್ಪಿತ ಪಲಾಶಗಳಂತೆ ರುಧಿರಕ್ಲಿನ್ನರಾದ ಪದಾತಿಗಳು ನೆಲದಿ ಹರಡಿ ಬಿದ್ದಿದ್ದರು.

ಆಗ ದುರ್ಯೋಧನಾದಿಗಳು ರಣಪರಾಙ್ಮುಖರಾಗಿ ಹೋಗುತ್ತಿರುವುದನ್ನು ಕಂಡು ಧರ್ಮರಾಜನು ಅವರನ್ನು ಹಿಂಬಾಲಿಸಿ, ಬಾಣಗಣದಿಂದ ಪೀಡಿಸಿದನು. ಅವನಿಗೆ ನೆರವಾಗಿ, ಇತರ ಯೋಧರೂ ನಿಂತು, ಕಾಂದಿಶೀಕರನ್ನು ಕಡಿದು ಕೆಡಹಿದರು. ದುರ್ಯೋಧನನು ಹಿಂದಿರುಗಿ, ಓಡುವ ತನ್ನವರನ್ನು ಕೂಗಿ ಕರೆದನು. 'ಕುರುವೀರರೇ ! ಓಡಬೇಡಿ ! ಎಲ್ಲಿ ಹೋದರೂ ಮೃತ್ಯುವು ನಮ್ಮನ್ನು ಕಬಳಿಸದೆ ಬಿಡದು. ಅಲ್ಪಸಂಖ್ಯಾಕರಾಗಿರುವ ಪಾಂಡವ ಭಟರಿಗೆ ಹೆದರುವದು ಸರಿಯಲ್ಲ ! ಕೃಷ್ಣಭೀಮಾರ್ಜುನರೂ ಆಲಸಿ ಸೋತಿರುವರು. ನಾವೆಲ್ಲರೂ ಕಲೆತು ಕಾದಿದರೆ ವಿಜಯವು ಅವರಿಂದ ನಮ್ಮನ್ನು ಸೇರುವುದು. ಓಡಿದರೆ ಬಿಡುವರಲ್ಲ ನಮ್ಮ ವೈರಿಗಳು ; ಹಿಂಬಾಲಿಸಿ ಕೊಲ್ಲುವರು. ಕ್ಷತ್ರಿಯರಾಗಿ ರಣರಂಗದಿಂದ ಪಲಾಯನಗೈದು ಅಪಕೀರ್ತಿ ಭಾಜನರಾಗುವಿರಿ ! ರಣಮರಣದಿಂದ ಕೀರ್ತಿಗೆ ಕುಂದು ಬರದು; ವೀರಸ್ವರ್ಗವೂ ಸಿಗುವುದು. ಅಂತಕನಿಗೆ ಶೂರರು ಭೀರುಗಳೆಂಬ ಭೇದವಿಲ್ಲ. ಕ್ರುದ್ಧನಾದ ಭೀಮಸೇನನನ್ನೆದುರಿಸಿ ಸಾಯುವುದು ಶ್ರೇಯಸ್ಕರವಾಗಲಿ, ಪಲಾಯನವಲ್ಲ. ಹಿಂದಿರುಗಿರಿ !' ಎಂದು ತಾನು ಪಾಂಡವ ಯೋಧರನ್ನು ತಾಕಿ, ಶರವರ್ಷದಲ್ಲಿ ಅವರನ್ನು ಮುಣುಗಿಸಿದನು. ಅದನ್ನು ಕಂಡು ಅವನ ಯೋಧರೂ ರಣರಂಗವನ್ನು ಹೊಕ್ಕು ಕಾದಿದರು.

ತ್ರಿಲೋಕವಿಶ್ರುತನಾದ ವಿಜಯನು ಹಿಂದಿರುಗಿ ಮುತ್ತುವ ಕುರುಯೋಧರನ್ನು ಕೃಷ್ಣನಿಗೆ ತೋರಿ, ನಗುನಗುತ್ತಾ, ಅವರನ್ನು ತನ್ನ ಶರಜಾಲದಿಂದ ಮೃತ್ಯುಮಂದಿರಕ್ಕೆ

ಅಟ್ಟಿದನು. ಮ್ಲೇಂಛರಾಜನಾದ ಶಾಲ್ವನು ಪಾಂಡವ ಬಲವನ್ನು ಮುತ್ತಿ ಆನೆಯು ಕಮಲಾಕರವನ್ನಂತೆ ಅಲ್ಲಕಲ್ಲೋಲಪಡಿಸಿದನು. ಪ್ರಭಿನ್ನಪರ್ವದಂತಿರುವ ಮಹಾಗಜವನ್ನೇರಿ ಶಾಲ್ವನು ಮಹಿಷಾರೂಢ ಯಮನಂತೆ ಪಾಂಡವ ಸೈನಿಕರನ್ನು ಶಿತಶರಗಳಿಂದ ಸಂಹರಿಸಿದನು. ಐರಾವತವನ್ನೇರಿದ ವಜ್ರಧರನಂತೆ ವಿಜೃಂಭಿಸುವ ಶಾಲ್ವನು "ಹಾ ಹಾ!" ಎಂದೊದರುತ್ತಾ ಹತಾಶರಾದ ಕುರುವೀರರ ಹೃದಯ ಭೂಮಿಯಲ್ಲಿ ಜಯಾಶಾಲತೆಯನ್ನು ಪುಟ್ಟಿಸಿದನು. ಅವನ ಆನೆಯು ಗೀಳಿಡುತ್ತಾ ಮೇಲೇರಿ ಬಂದು, ಪಾಂಡವ ಭಟರನ್ನು ಸೊಂಡಿಲಿನಿಂದ ಎತ್ತೊಗೆದು ಕಾಲಿಂದ ತುಳಿದು, ರಥಗಳನ್ನು ಮೇಲೆತ್ತಿ ಕೆಡಹಿ ನಾಶಪಡಿಸಿತು. ಶಾಲ್ವನ ಧಾಟಿಗೆ ತಡೆಯಲಾರದೆ, ಪಾಂಚಾಲ ಪಾಂಡವವಾಹಿನಿಯು ದಿಕ್ಕೆಟ್ಟೋಡಿತು. ಕೌರವ ವೀರರು ಶಾಲ್ವನನ್ನು ಪ್ರಶಂಸಿಸಿ, ಜಯಘೋಷವನ್ನು ಮಾಡಿದರು.

ಅವರ ಹರ್ಷಧ್ವಾನವನ್ನು ಕೇಳಿ ದ್ರುಪದಪುತ್ರನು ಸಹಿಸದೆ, ಶಾಲ್ವನನ್ನು ಮುತ್ತಿ ಬಾಣಶತದಿಂದ ಅವನನ್ನೂ ಅವನ ಆನೆಯನ್ನೂ ಪೀಡಿಸಿದನು. ಶಾಲ್ವನು ಅಂಕುಶದಿಂದ ತಿವಿದು ಭದ್ರಗಜವನ್ನು ದ್ರುಪದಾತ್ಮಜನ ಮೇಲೇರಿಸಿದನು. ಧೃಷ್ಟದ್ಯುಮ್ನನು ಉಗ್ರವೇಗದಿಂದ ತುಂಡವನ್ನೆತ್ತಿಕೊಂಡು ಬರುವ ಆನೆಯನ್ನು ಮೂರು ತೀಕ್ಷ್ಣಬಾಣಗಳಿಂದ ಕುಂಭಸ್ಥಲದಿ ತಾಟಿಸಿದನು; ಮತ್ತು ಐನೂರು ಬಾಣಗಳಿಂದ ಶಾಲ್ವನನ್ನು ಪೀಡಿಸಿದನು. ಆನೆಯು ಕುಂಭದಿಂದ ರಕ್ತವು ಕಾರುತ್ತಿರಲು ನೋವನ್ನು ತಡೆಯಲಾರದೆ ಹಿಂದಿರುಗಿ ಓಡಿತು. ಶಾಲ್ವನು ಹೆದರದೆ ತೋತ್ರಾಂಕುಶಗಳಿಂದ ತಿವಿದು ಅದನ್ನು ಮತ್ತೆ ಧೃಷ್ಟದ್ಯುಮ್ನನಿಗಭಿಮುಖವಾಗಿ ನಿಲ್ಲಿಸಿ, ಅವನ ರಥವನ್ನು ತುಳಿಸಲು ಪ್ರೇರಿಸಿದನು. ಹುಂಕರಿಸಿ ಬರುವ ಗಜರಾಜನನ್ನು ನೋಡಿ, ಧೃಷ್ಟದ್ಯುಮ್ನನು ಭಯದಿಂದ ತನ್ನ ರಥವನ್ನಿಳಿದು, ಗದಾಪಾಣಿಯಾಗಿ, ದೂರ ಸರಿದು ನಿಂತನು. ಆನೆಯು ಸೂತತುರಗಸಹಿತವಾದ ರಥವನ್ನೆತ್ತಿ ಆಕಾಶಕ್ಕೆ ಚಿಮ್ಮಿತು. ಮತ್ತೆ ಕೆಳಗೆ ಬಿದ್ದ ಕಾಂಚನರಥವನ್ನು ಕಾಲಿಂದ ತುಳಿದು ಪುಡಿಪುಡಿ ಮಾಡಿತು.

ಪಾಂಚಾಲ ರಾಜಪುತ್ರನ ಅವಸ್ಥೆಯನ್ನು ಕಂಡು ಭೀಮ, ಶಿಖಂಡಿ, ಸಾತ್ಯಕಿ ಪ್ರಮುಖರು ಅಲ್ಲಿಗೆ ಬಂದರು. ಅವರ ಬಾಣಗಳು ನಾಲ್ಕು ನಿಟ್ಟಿನಿಂದ ಬಡಿಯಲು, ಶಾಲ್ವನ ಗಜವು ಗೈರಿಕಾ ಸಮಲಂಕೃತ ಪರ್ವತದಂತೆ, ರಕ್ತಸಿಕ್ತವಾಯಿತು. ಅದರ ಮೇಲಿದ್ದು ಶಾಲ್ವನು ತನ್ನನ್ನು ಮುತ್ತುವ ಪಾಂಡವ ರಥಿಕರನ್ನು ಬಾಣಗಳಿಂದ ಪೀಡಿಸಿ ಹಿಮ್ಮೆಟ್ಟಿಸಿದನು. ಪಾಂಚಾಲ ಪಾಂಡವ ಸೃಂಜಯ ಸೈನಿಕರು ಅವನ ದಾಳಿಯನ್ನು ತಡೆಯಲಾರದೆ, ಅವನ ಬಾಣಗಳಿಂದ ಕ್ಷತಗಾತ್ರರಾಗಿ, ಹಾಹಾಕಾರಗಳನ್ನು ಮಾಡಿದರು. ಧೃಷ್ಟದ್ಯುಮ್ನನು ಅಚಲ ಶೃಂಗಸಮವಾದ ಗದೆಯನ್ನೆತ್ತಿ ವೇಗದಿಂದ ಗಜವನ್ನು ಮುತ್ತಿ ಹೊಡೆದನು. ಭೂಕಂಪದಿಂದ ಚಲಿಸುವ ಬೆಟ್ಟದಂತೆ, ತೂಗಿ, ಕುಂಭಸ್ಥಲದಿಂದ ರಕ್ತದ ಧಾರೆಗಳಿಳಿಯುತ್ತಿರಲು, ಮುಖದಿಂದ ರಕ್ತವು ಹರಿಯಲು

ಶಾಲ್ವನ ಗಜವು ನೆಲದಿ ಬಿದ್ದು ಗೀಳಿಟ್ಟು ಪ್ರಾಣ ಬಿಟ್ಟಿತು. ಕುರುಯೋಧರದನ್ನು ನೋಡಿ, ಹಾಹಾಕಾರ ಮಾಡಿದರು. ಶಾಲ್ವನು ಆನೆಯಿಂದ ಧುಮುಕಿ ನಿಂತಿರಲು ಅದನ್ನು ನೋಡಿ, ಸಾತ್ಯಕಿಯು ನಿಶಿತಭಲ್ಲದಿಂದ ಅವನ ಶಿರವನ್ನು ಖಂಡಿಸಿದನು. ಅದನ್ನು ನೋಡಿ ಕುರುಭಟರು ಭಯದಿಂದ ರಣವಿಮುಖರಾಗಿ ಓಡಿದರು.

ಕೃತವರ್ಮನು ವಿಕ್ರಮಿಸಿ ಅವರನ್ನು ತಡೆದು ನಿಲ್ಲಿಸಿದನು. ಬೆಟ್ಟದಂತೆ ಗಟ್ಟಿಯಾಗಿ ನಿಂತಿದ್ದ ಕೃತವರ್ಮನು ಬಿಡದೆ ಬಂದು ತಾಕುವ ಪಾಂಡವ ಸೈನಿಕರನ್ನು ಭಂಜಿಸಿ, ಸಿಂಹನಾದ ಮಾಡಿದನು. ಅದನ್ನು ನೋಡಿ ಸಹಿಸದೆ ಸಾತ್ಯಕಿಯು ಕೃತವರ್ಮನನ್ನು ಮುತ್ತಬಂದನು. ಮಧ್ಯದಲ್ಲಿ ತಾಕಿದ ಕ್ಷೇಮಕೀರ್ತಿಯನ್ನು ಯಮನ ಮನೆಗೆ ಕಳಿಸಿ, ನಿಶಿತಶರಗಳಿಂದ ಹಾರ್ದಿಕ್ಯನನ್ನು ಪೀಡಿಸಿದನು. ಕೃತವರ್ಮ ಸಾತ್ಯಕಿಯರು ಶಸ್ತ್ರಪ್ರಹರಗಳಿಂದ ಕಡಿದಾಡುವಾಗ, ಅವರ ಚಿತ್ರಯುದ್ಧವನ್ನು ಪಾಂಚಾಲ ಪಾಂಡವ ಯೋಧರು ಆಶ್ಚರ್ಯಚಕಿತರಾಗಿ ನೋಡುತ್ತಾ ನಿಂತರು. ಕುಂಜರಯುಗವು ದಂತಗಳಿಂದ ಕಡಿದಾಡುವಂತೆ ಯದುಪುಂಗವರು ಬಾಣವೃಷ್ಟಿಯಿಂದ ಪರಸ್ಪರ ವಿಕ್ಷತಗಾತ್ರರಾದರು. ಅವರ ಬಾಣಗಳು ಆಕಾಶದಲ್ಲಿ ಹಾರುವ ಪಕ್ಷಿಗಳಂತೆ ಕಂಡವು.

ಕೃತವರ್ಮನು ನಾಲ್ಕು ಬಾಣಗಳಿಂದ ಶಿನಿಪುಂಗವನ ವಾಜಿಗಳನ್ನು ಪೀಡಿಸಿದನು. ಸಾತ್ಯಕಿಯು ಸಿಟ್ಟಾಗಿ ಎಂಟು ದಿವ್ಯಬಾಣಗಳಿಂದ ಕೃತವರ್ಮನನ್ನು ಪೀಡಿಸಿದನು. ಕೃತವರ್ಮನು ಮೂರು ಬಾಣಗಳಿಂದ ಸಾತ್ಯಕಿಯನ್ನು ಪೀಡಿಸಿ, ಒಂದರಿಂದ ಅವನ ಧನುಸ್ಸನ್ನು ಮುರಿದನು. ಸಾತ್ಯಕಿಯು ಬೇಗನೆ ಬೇರೊಂದು ಧನುಸ್ಸನ್ನು ಪಿಡಿದು, ಸಿಟ್ಟಾಗಿ, ಹತ್ತು ಬಾಣಗಳಿಂದ ಕೃತವರ್ಮನ ಸೂತನನ್ನು ಕೊಂದು, ಕುದುರೆಗಳನ್ನು ಕೆಡಹಿ, ಧ್ವಜವನ್ನು ಖಂಡಿಸಿದನು. ಕೃತವರ್ಮನು ಕ್ರುದ್ಧನಾಗಿ ಭುಜಬಲವನ್ನೆಲ್ಲ ಕೂಡಿಸಿ ಶೂಲವನ್ನೆತ್ತಿ ಒಗೆದನು. ಸಾತ್ವತನು ಅದನ್ನು ಬಾಣಗಳಿಂದ ತುಂಡರಿಸಿ, ಒಂದು ಭಲ್ಲದಿಂದ ಕೃತವರ್ಮನ ಎದೆಗೆ ಹೊಡೆದನು. ಕೃತಹಸ್ತನಾನ ಸಾತ್ಯಕಿಯ ಪೆಟ್ಟಿಗೆ ಕೃತವರ್ಮನು ವಿಹ್ವಲನಾಗಿ ಬಿದ್ದನು. ಕೃಪನಾಗ ಅವನನ್ನು ಎತ್ತಿ ತನ್ನ ರಥದಲ್ಲಿಟ್ಟುಕೊಂಡು ಹೋದನು. ಶೈನೇಯನ ವಿಕ್ರಮಕ್ಕೆ ಹೆದರಿ ಕುರುವೀರರು ರಣಪರಾಙ್ಮುಖರಾದರು.

ದುರ್ಯೋಧನನು ಪಲಾಯನಪರರಾದ ತನ್ನ ಯೋಧರನ್ನು ನೋಡಿ ಕುಪಿತನಾದನು. ಎಲ್ಲರೊಡನೆ ಏಕಾಕಿಯಾಗಿ ಕಾದುವ ಸಾಹಸದಿಂದ ದುರ್ಯೋಧನನು ಅಸಂಭ್ರಾಂತನಾಗಿ ಮುನ್ನುಗ್ಗಿದನು. ಧೃಷ್ಟದ್ಯುಮ್ನ, ಶಿಖಂಡಿ, ದ್ರೌಪದೇಯರನ್ನು ದುರ್ನಿವಾರನಾಗಿ ಬಾಣಗಳಿಂದ ಪೀಡಿಸುತ್ತಾ, ಸಂಗ್ರಾಮರಂಗದಿ ಎಲ್ಲಿ ನೋಡಿದರೂ ತಾನೇ ಆಗಿ, ದುರ್ಯೋಧನನು, ಮೃತ್ಯುವಿನಂತೆ ಭಯಂಕರನಾದನು. ಆಗ ಕೃತವರ್ಮನು ಬೇರೊಂದು ಸ್ಯಂದನವನ್ನೇರಿ ಅವನಿಗೆ ನೆರವಾದನು. ರುದ್ರನಂತೆ ಉರಿದೆದ್ದ ಸುಯೋಧನನ ಬಾಣಜ್ವಾಲೆಗಳಿಂದ ಪಾಂಡವ ಸೇನಾಕಕ್ಷವು ಸುಟ್ಟು ಬಿದ್ದಿತು.

ಮೇಘವು ಧಾರೆಗಳಿಂದ ಧರಾತಲವನ್ನಂತೆ, ದುರ್ಯೋಧನನು ಬಾಣಗಳಿಂದ ಪಾಂಚಾಲರನ್ನು ಮುಚ್ಚಿ ಕೊಚ್ಚಿಹಾಕಿದನು. ಪಾಂಡವ ಬಲದಲ್ಲಿ ಕುರುರಾಜನ ಬಾಣವಿದ್ದನಾಗದ ಸೈನಿಕನೊಬ್ಬನಾದರೂ ಇದ್ದಿಲ್ಲ. ಅಂಬರವು ಬಾಣಮಯವಾಗಿ ಪೃಥ್ವಿಯು ಕಂಕಾಳಮಯವಾಗುವಂತೆ ಕಾದಿದ ಕುರುರಾಜನ ಕ್ಷಿಪ್ತ ಹಸ್ತ ಪ್ರಾಶಸ್ತ್ಯವನ್ನು ಶತ್ರುಗಳೂ ಕೊಂಡಾಡಿದರು.

ದುರ್ಯೋಧನನು ಧರ್ಮರಾಜನನ್ನು ಮುತ್ತಿ ನೂರು ಶರಗಳಿಂದಲು, ಭೀಮಸೇನನನ್ನು ಎಪ್ಪತ್ತು ನಾರಾಚಗಳಿಂದಲು, ಸಹದೇವನನ್ನು ಎಪ್ಪತ್ತು ಬಾಣಗಳಿಂದಲು, ನಕುಲನನ್ನು ಅರವತ್ತುನಾಲ್ಕರಿಂದಲು, ದ್ರೌಪದೇಯರನ್ನು ಐದೈದು ವಿಶಿಖಗಳಿಂದಲು, ಧೃಷ್ಟದ್ಯುಮ್ನನನ್ನು ಏಳು ಕಾಂಡಗಳಿಂದಲು, ಸಾತ್ಯಕಿಯನ್ನು ಮೂರು ಭಲ್ಲಗಳಿಂದಲು ಪೀಡಿಸಿ, ಸಿಂಹನಾದ ಮಾಡಿದನು. ಏಕವೀರನಾಗಿ ಬಹು ವೀರರಿಂದ ಕಾದುವ ಕೌರವೇಶನು ವಿಜೃಂಭಿಸಿ, ಸಹದೇವನ ಧನುವನ್ನು ಮುರಿದನು. ಸಹದೇವನು ಮತ್ತೊಂದು ಧನುವನ್ನು ಪಿಡಿದು, ಒಂಬತ್ತು ಬಾಣಗಳಿಂದ ಕುರುರಾಜನನ್ನು ಪೀಡಿಸಿದನು. ನಕುಲನು ಹತ್ತು ಶರಗಳಿಂದ ಹೊಡೆದು, ಸಿಂಹನಾದ ಮಾಡಿದನು. ಸಾತ್ಯಕಿಯು ಒಂದು ಬಾಣದಿಂದಲು, ದ್ರೌಪದೇಯರು ಮೂವತ್ತೈದು ಬಾಣಗಳಿಂದಲು, ಭೀಮಸೇನನು ಎಪ್ಪತ್ತು ಶರಗಳಿಂದಲು, ಪೀಡಿಸಿದರೂ, ವರ್ಷಧಾರೆಗಳಿಂದ ಪರ್ವತದಂತೆ, ಚಲಿಸದೆ ಕುರುರಾಜನು ಕಾದುತ್ತಿದ್ದನು. ಆಗ ಧಾರ್ತರಾಷ್ಟ್ರರು ಅವನಿಗೆ ನೆರವಾಗಿ ಬಂದು ನಿಂತರು. ಯುದ್ಧವು ಘೋರವಾಯಿತು. ಮಳೆಗಾಲದಿ ಹೋರೆಂದು ಗರ್ಜಿಸುವ ಸಾಗರದಂತೆ ಸೇನಾದ್ವಯವು ವೀರಾಲಾಪಗಳನ್ನು ಮಾಡಿತು.

ಪಾಂಡವ ವಾಹಿನಿಯನ್ನು ಮುತ್ತುವ ಕುರುಬಲವನ್ನು ತಡೆದು ಭೀಮಸೇನನು ಬಾಣವರ್ಷದಿಂದ ದಿಕ್ಕುವಿದಿಕ್ಕುಗಳನ್ನು ಮುಚ್ಚಿದನು. ದ್ರೋಣಪುತ್ರನು ವೃಕೋದರನನ್ನು ತಡೆದು, ಭೀಕರ ಸಮರರತನಾದನು. ಶಕುನಿಯು ಧರ್ಮರಾಜನನ್ನು ತಾಕಿ, ನಾಲ್ಕು ಶರಗಳಿಂದ ಆತನ ನಾಲ್ಕು ಕುದುರೆಗಳನ್ನು ಕೊಂದನು. ವಿರಥನಾದ ಧರ್ಮಜನು ಸಹದೇವನ ರಥವನ್ನೇರಿ, ಮತ್ತೊಂದು ರಥವನ್ನು ತಂದ ಸೂತನ ವಿಜ್ಞಾಪನೆಯನ್ನಾಲಿಸಿ, ಅದರಲ್ಲಿ ಕೂತು, ಮತ್ತೆ ಶಕುನಿಯನ್ನು ತಾಕಿದನು. ಧರ್ಮರಾಜನು ಆಕರ್ಣಾಂತವಾಗಿ ಸೆಳೆದುಬಿಟ್ಟ ಬಾಣಗಳೊಂಬತ್ತು ಶಕುನಿಯನ್ನು ತಾಕಿ, ಕವಚವನ್ನು ಸೀಳಿ ಕೆಳಗೆ ಬಿದ್ದವು.

ಉವಾಕನು(ಶಕುನಿಪುತ್ರ) ನಕುಲನನ್ನು ಮುತ್ತಿ ಶರವರ್ಷದಿಂದ ಮುಚ್ಚಿದನು. ನಕುಲನು ಮಹದ್ಬಾಣ ಪರಂಪರೆಯಿಂದ ಉವಾಕನ ರಥವನ್ನು ಮುಚ್ಚಿದನು. ಧೃಷ್ಟದ್ಯುಮ್ನನು ದುರ್ಯೋಧನನಿಂದ ಕಾದಿ, ಚಿತ್ರಯುದ್ಧ ಕೌಶಲವನ್ನು ತೋರಿದನು. ಗೌತಮನು ದ್ರೌಪದೇಯರಿಂದ ಕಾದಿದನು. ಇಂತು ಸಂಕುಲ ಯುದ್ಧವು ನಡೆಯುತ್ತಿರಲು ಅಪರಾಹ್ಣ ಸಮಯವಾಯಿತು.

## ೬. ಅಷ್ಟಾದಶ ದಿನದ ಯುದ್ಧ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ರಾಜನ್ ! ಅಪರಾಹ್ಣವಾಗಲು ರಣವು ಭೀಕರವಾಯಿತು. ನರರು ನರರಿಂದಲು, ರಥಿಕರು ರಥಿಕರಿಂದಲು, ಸಾದಿಗಳು ಸಾದಿಗಳಿಂದಲು, ಹಸ್ತಿಯೋಧರು ಹಸ್ತಿಯೋಧರಿಂದಲು ಕಾದಿ, ಶತ್ರುಸಂಹಾರ ಮಾಡಿದರು. ಅಶ್ವಗಜಗಳ ಸಂಚಾರದಿಂದ ಮೇಲೆದ್ದ ದೂಳಿಯು ಅಂಬರದಿ ವ್ಯಾಪಿಸಿ, ಕಣ್ಣು ಕಾಣದಂತಾಯಿತು. ರಜೋವ್ಯಾಪ್ತಿಯಿಂದ ಮೇಘಮಂಡಲದಿಂದೆಂಬಂತೆ, ಸೂರ್ಯಪ್ರಕಾಶವು ಮಂದವಾಯಿತು. ವೀರಶೋಣಿತವು ಚಿಮ್ಮಿದಾಗ ಮತ್ತೆ ರಜಃಪಟಲವು ಅಡಗಿ ಕೂತಿತು. ಮಹಾರಾಜ ! ದ್ವಂದ್ವಯುದ್ಧ ನಿರತರಾದ ಆಹವಶೂರರು ಯಥಾಶಕ್ತಿ ಕಡಿದಾಡಿ, ಉರುಳುತ್ತಿರುವುದನ್ನು ಕಣ್ಣಾರೆ ಕಂಡು, ನಾನು ಆಶ್ಚರ್ಯಭಯಸಂಭ್ರಮ ಭರಿತನಾದೆನು. ಕವಚಾಯುಧಗಳ ಶಬ್ದವು ವಾದ್ಯಶಬ್ದದೊಡನೆ ಮುಗಿಲಿಗೇರಿತು.

ದುರ್ಯೋಧನನು ಓಡೆದುಹೋಗುವ ತನ್ನ ಸೇನೆಯನ್ನೊಟ್ಟುಗೂಡಿಸಿ, ಪಾಂಡವ ಯೋಧರೊಡನೆ ಸ್ಥಿರನಾಗಿ ನಿಂತು ಕಾದಿದನು. ದೇವಾಸುರ ರಣದಂತೆ ಸುದಾರುಣವಾದ ಯುದ್ಧದಲ್ಲಿ ಕೆಲವರು ಹತರಾದರೆ, ಕೆಲವರು ಪರಾಙ್ಮುಖರಾದರು. ಧರ್ಮರಾಜನು ಯುದ್ಧವಿಜಯವನ್ನು ಸಾಧಿಸಲು ನಿಶ್ಚಯಿಸಿ, ಮುನ್ನುಗ್ಗಿ ಮೂರು ಶರಗಳಿಂದ ಕೃಪನನ್ನೂ, ನಾಲ್ಕರಿಂದ ಕೃತವರ್ಮನನ್ನು ಪೀಡಿಸಿ, ಅವನ ಕುದುರೆಗಳನ್ನು ಕೊಂದನು. ಕೃತವರ್ಮನು ವಿರಥನಾಗಿ ಅಶ್ವತ್ಥಾಮನ ರಥವನ್ನೇರಿದನು. ಕೃಪನು ಕುಪಿತನಾಗಿ ಎಂಟು ಶರಗಳಿಂದ ಧರ್ಮಜನನ್ನು ಪೀಡಿಸಿ, ಸಿಂಹನಾದ ಮಾಡಿದನು. ಆಗ ದುರ್ಯೋಧನ ಪ್ರೇಷಿತರಾದ ಏಳುನೂರು ರಥಿಕರು ಕೃಪನಿಗೆ ನೆರವಾಗಿ ನಿಂತು, ಧರ್ಮರಾಜನ ರಥವನ್ನು ಶರವರ್ಷದಲ್ಲಿ ಮುಣುಗಿಸಿದರು. ಶಿಖಂಡಿ ಪ್ರಮುಖ ವೀರರು, ಮೇಘಮಂಡಲಚ್ಛನ್ನನಾದ ರವಿಯಂತೆ ಕುರುಯೋಧ ಶರಜಾಲಮಗ್ನನಾದ ಯುಧಿಷ್ಠಿರನಿಗೆ ಸಹಾಯವಾಗಿ ಬಂದು, ಅವರ ಶರಸಮೂಹವನ್ನು ಖಂಡಿಸಿದರು. ಯಮರಾಜ್ಯವಿವರ್ಧನವಾದ ಘೋರ ಸಂಗ್ರಾಮದಲ್ಲಿ ರಕ್ತನದಿಗಳು ಹರಿದವು. ನಿನ್ನವರಂತೆ, ಶತ್ರುಯೋಧರೂ ಮೃತರಾಗಿ ಬಿದ್ದರು. ಶಂಖನಾದಗಳಿಂದಲು, ಸಿಂಹನಾದಗಳಿಂದಲು ರಣರಂಗದ ದಿಗಂತಗಳು ಪ್ರತಿಧ್ವನಿಸಿದವು.

ಕವಚವು ಸೀಳಿ, ರಕ್ತದಿ ತೊಯ್ದ ರಥಿಕರು ರಥಗಳಿಂದ ಉರುಳಿದರು. ಜಯ ಗೃಧ್ರಿಗಳು ಪಲಾಯನರತರನ್ನು ಬಿಡದೆ ಬಾಣಗಳಿಂದ ಹೊಡೆದು ಕೆಡಹಿದರು. ಸರ್ವ ವಿನಾಶ ಸೂಚಕವಾದ ಉತ್ಪಾತಗಳು ತಲೆದೋರಿದವು. ಸಪರ್ವತವನವಾದ ಭೂಮಿಯು ಕಂಪಿಸಿತು. ದಂಡಾಕಾರವಾದ ಕೊಳ್ಳಿಗಳು ಆಕಾಶದಿಂದ ಉದುರಿದವು. ರವಿ ಮಂಡಲವು ಮಧ್ಯಾಹ್ನದಲ್ಲಿ ನಿಷ್ಪ್ರಭವಾಯಿತು. ವಾತಗಳು ಘರ್ಘರಧ್ವನಿಯಿಂದ

ಪ್ರತಿಕೂಲವಾಗಿ ಬೀಸಿದವು. ಧೂಳಿನ ಮಳೆ ಬಿತ್ತು. ಆನೆಗಳು ನಡುಗಿ ಕಣ್ಣೀರಿಟ್ಟವು. ಕುದುರೆಗಳು ವಿಕಾರವಾಗಿ ಕೂಗಿಕೊಂಡವು.

ರಮಣೀಯವಾದ ಕುರುಕ್ಷೇತ್ರವು ಭೀಕರ ಜುಗುಪ್ಸಿತವಾಯಿತು. ಪವಿತ್ರವಾದ ಸಮಂತಪಂಚಕವು ರಕ್ತದಿಂದ ತುಂಬಿತ 'ುಳುಕಿತು. ವಿನಾಶಸೂಚಕ ದುಶ್ಶಕುನಗಳನ್ನು ಲೆಕ್ಕಿಸದೆ ಉಭಯಸೇನಾನಿಗಳು ಮೃತ್ಯುವಿಗೆ ಕರೆಯಿತ್ತು ತಂತಮ್ಮ ಸೈನಿಕರಿಂದ ರಣಕಣದಿ ಧುಮುಕಿದರು. ಆಗ ಶಕುನಿಯು ಪಾಂಡವವಾಹಿನಿಯು ಮುನ್ನುಗ್ಗುವುದನ್ನು ಕಂಡನು. ಹಿಂದಿನಿಂದ ಮುತ್ತಿ ಅವರನ್ನು ಹಿಂಸಿಸಿ ನಾಶಪಡಿಸಲು ನಿಶ್ಚಯಿಸಿ, ಅವನು ತನ್ನ ಹತ್ತುಸಾವಿರ ಕುದುರೆ ಸವಾರರಿಂದ ಕೂಡಿ ಬಂದನು. ಆ ಸಾದಿಗಳು ಪ್ರಾಸಪಾಣಿಗಳಾಗಿ, ಹುಂಕರಿಸುತ್ತಾ, ಹಿಂದಿನಿಂದ ಮುತ್ತಿ ತಿವಿದಾಗ, ಪಾಂಡವವಾಹಿನಿಯು ದಿಕ್ಕೆಟ್ಟಿತು. ಶಕುನಿಯ ಮೋಸವನ್ನರಿತು ಧರ್ಮರಾಜನು ಸಹದೇವನನ್ನು ಹಿಂದಿರುಗಿಸಿ, ಅವರೊಡನೆ ಹೋರಾಡುವಂತೆ ಆಜ್ಞಾಪಿಸಿ, ತಾನು ಮುನ್ನಡೆದನು.

ಸಹದೇವನು ದ್ರೌಪದೇಯರಿಂದ ಕೂಡಿ, ಶಕುನಿಯ ಅಶ್ವಬಲವನ್ನು ಮುತ್ತಿದನು. ಚಾಪ ಬಾಣಧರರಾದ ಯೋಧರೇರಿದ ಏಳುನೂರಾನೆಗಳು, ಐದುಸಾವಿರ ತುರಗ ಯೋಧರು, ಮೂರುಸಾವಿರ ಪದಾತಿಗಳು ಸಹದೇವನನ್ನನುಸರಿಸಿದರು. ಸಹದೇವನು ಹಿಂದಿರುಗಿ ಶಕುನಿಯ ಅಶ್ವಸೇನೆಯನ್ನು ನಾಶಪಡಿಸತೊಡಗಿದನು. ಉದ್ಯಗತದಾ ಪ್ರಾಸಮುಸಲಪಾಣಿಗಳಾಗಿ ಉಭಯಸೇನೆಗಳು ತುಮುಲಯುದ್ಧವನ್ನು ಮಾಡಿದರು. ಶೂರಹಸ್ತದಿಂದ ಮುಕ್ತವಾದ ಶಕ್ತಿಗಳು ಸಿಡಿಲಂತೆ ಬಡಿದು ಭಟರನ್ನು ಕೆಡಹಿದವು. ಪ್ರಾಸಗಳಿಂದ ತಿವಿದು ಶತ್ರುಶಿರಗಳನ್ನೆತ್ತಿ ಹಿಡಿದು ಗರ್ಜಿಸುವ ಗಾಂಧಾರರು ಮುನ್ನಡೆದರು. ಅವರನ್ನು ಬಾಣಗಳಿಂದ ಹೊಡೆದು ಕೆಡಹಿದ ಪಾಂಡವ ಭಟರು, ಅವರ ಕುದುರೆಗಳನ್ನೂ ಕೆಡಹಿದರು. ಒಬ್ಬ ಭಟನಾದರೂ ರಕ್ತಸಿಕ್ತನಾಗದವನಿಲ್ಲದೆ, ಗಾಯಗೊಳ್ಳದವನಿಲ್ಲದೆ, ರಣವು ದಾರುಣವಾಯಿತು. ರಕ್ತವನ್ನು ಕಾರಿ ಸಾಯುವ ವೀರರು ರಣಭೂಮಿಯಲ್ಲಿ ಹರಡಿಬಿದ್ದರು. ಕೇಶಾಕೇಶಿಯಾಗಿ ಕಾದಿ, ಪರಸ್ಪರ ವಧೆ ಸಾಧಿಸಿದ ಯೋಧರು, ಹಾಗೇ ಬಿದ್ದರು. ಕುದುರೆಯೋಧರನ್ನು ಕೆಳಗೆಳೆದು ಮಲ್ಲಯುದ್ಧದಲ್ಲಿ ಕೊಂದರು ಕೆಲಭಟರು. ಅಶ್ವಭಟ ಶರೀರದಿಂದ ಆಕ್ರಾಂತವಾದ ರಣರಂಗವು ರಥದುರ್ಗಮವಾಯಿತು. ಶಕುನಿಯು ಪಾಂಡವವಾಹಿನಿಯ ದಾಳಿಗೆ ನಿಲ್ಲಲಾರದೆ, ಉಳಿದ ಆರುಸಾವಿರ ಸಾದಿಗಳಿಂದ ಹಿಂದಿರುಗಿ ಹೋದನು. ಪಾಂಡವವಾಹಿನಿಯೂ ಶ್ರಾಂತವಾಗಿ, ಉಳಿದ ಆರುಸಾವಿರ ಯೋಧರಿಂದ ಹಿಂದಿರುಗಿತು.

ರಥಗಳಿಗೆ ಸುಗಮ ಮಾರ್ಗವಿಲ್ಲದೆ ಗಜ ತುರಗ ಭಟ ಶರೀರಾಕ್ರಾಂತವಾದ ರಣರಂಗದಿಂದ ತೆರಳಿ, ಸಹದೇವ ದ್ರೌಪದೇಯರು, ಧೃಷ್ಟದ್ಯುಮ್ನನನ್ನು ಸೇರಿದರು. ಶಕುನಿಯು ಮತ್ತೆ ಬಂದು ಧೃಷ್ಟದ್ಯುಮ್ನನ ಸೇನೆಯ ಪಾರ್ಶ್ವವನ್ನು ತಾಕಿದನು.

ಪ್ರಾಸಗಳಿಂದ ಕೊಂದು ವಿಜೃಂಭಿಸುವ ಗಾಂಧಾರರಾಜ ಭಟರನ್ನು ಧೃಷ್ಟದ್ಯುಮ್ನನ ಸೈನಿಕರು ತಡೆದು, ಖಡ್ಗಹಸ್ತರಾಗಿ ಕಡಿದು ಕೆಡಹಿದರು. ತಾಲವೃಕ್ಷಗಳಂತೆ ಬೀಳುವ ಸೈನಿಕರ ದೇಹಗಳು ಪಟಪಟ ಶಬ್ದವನ್ನು ಮಾಡಿದವು. ಆಮಿಷದಾಶೆಗೆ ಕಡಿದಾಡುವ ಕಂಕಪಕ್ಷಿಗಳಂತೆ, ಗಾಂಧಾರ ಪಾಂಚಾಲರು ಜಯಾಶೆಯಿಂದ ಕಡಿದಾಡಿ, ರಣನಿಹತರಾದರು. ಯೋಧರು ಬಿದ್ದಾಗ, ಅವರ ಕುದುರೆಗಳು ದಿಕ್ಕೆಟ್ಟು ಓಡಿಹೋದವು. ಅವನ್ನು ಹಿಡಿದೇರಿ ಕಾಂದಿಶೀಕರು ರಣರಂಗದಿಂದ ಓಡಿಹೋದರು. ಶ್ರಮದಿಂದ ಕೂತ ವೀರರು, ನೀರಡಿಕೆಯಿಂದ ಬಾಯಿಬಿಡುವ ಯೋಧರು, ಗಾಯಗೊಂಡು ಸಾಯುತ್ತಿರುವ ಸೈನಿಕರು, ನರಳುವ ನರರು, ರಕ್ತಸಿಕ್ತವಾದ ಕುದುರೆಗಳು, ಯೋಧರ ವಿವಿಧಾಯುಧಗಳು ರಣರಂಗದಿ ತುಂಬಿರಲು ನೋಡಿ, ದುರ್ಯೋಧನನು ನಿಟ್ಟುಸಿರಿಟ್ಟು ಜಯಾಶೆಯನ್ನು ಬಿಟ್ಟನು. ಪ್ರಾಣವಿರುವವರೆಗೂ ಹೋರಾಡುತ್ತಿರುವ ಗಾಂಧಾರ ಪಾಂಚಾಲರ ಸಾಹಸವನ್ನು ನೋಡಿ, ಕುರುರಾಜನು ತಾನೂ ಸಾಯುವವರೆಗೂ ಕಾದಲು ನಿಶ್ಚಯಿಸಿದನು. ರಕ್ತವಸಾಮಾಂಸಗಳ ದುರ್ಗಂಧವು ರಣರಂಗದಲ್ಲಿ ತುಂಬಿ ದುಸ್ಸಹವಾಯಿತು.

ಶಕುನಿಯ ಅಶ್ವಸೈನ್ಯವನ್ನು ಮುತ್ತಿ ಧೃಷ್ಟದ್ಯುಮ್ನನ ರಥಗಜತುರಗ ಪದಾತಿ ಸೇನೆಯು ಭೀಕರವಾಗಿ ಕಡಿದಾಡಿತು. ಯುದ್ಧಸಾಗರದ ಪಾರವನ್ನು ಸೇರಿಬಿಡಲು, ನಿಶ್ಚಯಿಸಿ ಅವರು ಶಕುನಿಯ ಸೈನಿಕರನ್ನು ಬಾಣ, ಖಡ್ಗ, ಶೂಲ, ಶಕ್ತಿಗಳಿಂದ ಹೊಡೆದು ಕೆಡಹಿದರು. ಪದಾತಿಗಳು ಪಾದಗಳಿಂದ ಒದೆದು, ಮುಷ್ಟಿಗಳಿಂದ ತಿವಿದು, ಕುದುರೆಗಳನ್ನು ಬೆದರಿಸಿ, ಅವು ಓಡುತ್ತಿರಲು, ಶೂಲಗಳಿಂದ ಸಾದಿಗಳನ್ನು ಸಂಹರಿಸಿದರು. ಪುಣ್ಯಕ್ಷಯವಾದಾಗ, ವಿಮಾನದಿಂದುರುಳುವ ಸಿದ್ಧ ಪುರುಷರಂತೆ, ಆನೆಗಳಿಂದ, ಅಶ್ವಗಳಿಂದ, ರಥಗಳಿಂದ ಯೋಧರು ಕೆಳಗುರುಳಿದರು.

ಆಗ ಶಕುನಿಯು ಉಳಿದಿರುವ ಏಳುನೂರಾಶ್ವಿಕರನ್ನು ಹುರಿದುಂಬಿಸಿ, ತಾನೂ ಪಾಂಚಾಲರೊಡನೆ ಕಾದುತ್ತಿದ್ದನು. ರಥಾರೂಢನಾಗಿ, ಶ್ವೇತಚ್ಛತ್ರದಡಿಯಲ್ಲಿ ನಿಂತಿರುವ ದುರ್ಯೋಧನನನ್ನು ನೋಡಿ, ಶಕುನಿಯು ಅವನನ್ನು ಸೇರಹೋದನು. ಅನೇಕ ರಥಿಕರು ಕವಚಧಾರಿಗಳಾಗಿ ಅವನ ಸುತ್ತ ನಿಂತು, ಸಿಂಹನಾದ ಮಾಡುತ್ತಿದ್ದರು. ಶಕುನಿಯು ಅವರಿಗೆ ಉತ್ಸಾಹವನ್ನು ತುಂಬುತ್ತಾ ಇಂತೆಂದನು: 'ದುರ್ಯೋಧನ! ಸಹದೇವನ ಅಶ್ವಸೇನೆಯನ್ನು ಪೂರಾ ನಾಶಪಡಿಸಿ ಬಂದಿರುವೆನು. ನೀನೂ ವಿಕ್ರಮಿಸಿ, ರಥಿಕರೊಡಗೂಡಿ ಮುತ್ತಿ ಪಾಂಡವ ರಥಿಕರನ್ನು ಸಂಹರಿಸು ! ಜೀವಿತವನ್ನು ಪಣವಾಗಿಟ್ಟು ಕಾದಿದರೆ, ವಿಜಯವೆಂತಾಗುವುದು ? ಮೊದಲು ಧರ್ಮರಾಜನನ್ನು ಮುತ್ತಿ ಅವನಿಗೆ ರಕ್ಷಕರಾಗಿರುವ ರಥಿಕರನ್ನು ನಾಶ ಪಡಿಸೋಣ! ಆಮೇಲೆ ಗಜಯೂಥವನ್ನೂ, ತುರಗರಾಜಿಯನ್ನೂ ಸಂಹರಿಸುವುದು ಸುಲಭವಾಗುವುದು. ಪದಾತಿವರ್ಗವು ನಮ್ಮ ಪದಾತಿಗಳ ಖಡ್ಗಕ್ಕೆ ತುತ್ತಾಗುವುದು. ಹೆದರುವ ಕೆಲಸವಿಲ್ಲ. ಮುನ್ನುಗ್ಗಿ ವಿಜಯವನ್ನು ಸಾಧಿಸಬೇಕಾಗಿದೆ.'

ಶಕುನಿಯ ಮಾತಿನಿಂದ ವಿಜೃಂಭಿಸಿ ಕುರುಯೋಧರು ವೇಗವಾಗಿ ಮುನ್ನುಗ್ಗಿ ಪಾಂಡವಾನೀಕಿಯನ್ನು ಮುತ್ತಿದರು. ತೂಣೀರಗಳಿಂದ ಬಾಣಗಳನ್ನು ಸೆಳೆದು, ಬಿಲ್ಲಿಗೆ ಜೋಡಿಸಿ, ಬಿಡುವ ಕುರುವೀರರ ವಿಜೃಂಭಣವು ದುರ್ನಿವಾರವಾಗಿತ್ತು. ಬಾಣಗಳ ಸಾಲುಗಳು ಹಾರಿದಂತೆ ಉಭಯ ಸೈನಿಕರ ಕಬಂಧಗಳು ನೆಲಕ್ಕುರುಳಿದವು.

ಆಗ ಕುಂತೀಪುತ್ರನು ದೇವಕೀಪುತ್ರನಿಗಿಂತೆಂದನು: 'ವಾಸುದೇವ ! ಹೊಡೆ ನನ್ನ ರಥವನ್ನು ಕುರುವಾಹಿನಿಯ ರಥಿಕರೆಡೆಗೆ! ಇಂದು ಅವರನ್ನು ಮುಗಿಸಿಬಿಡುವೆನು ಜನಾರ್ಧನ ! ಇಂದಿಗೆ ಹದಿನೆಂಟು ದಿನಗಳಾದವಲ್ಲವೇ ? ಅನಂತವಾದ ಸೇನಾವಾಹಿನಿಯು ಇಂದು ನಿರ್ಜೀವನವಾಗಿ, ಶುಷ್ಕದಾರುಣವಾಗಿದೆ. ದೈವವಿಲಾಸವನ್ನರಿತವರಿಲ್ಲ ! ಸಮುದ್ರಕಲ್ಪವಾದ ಧಾರ್ತರಾಷ್ಟ್ರನ ಸೇನೆಯು ಗೋಷ್ಪದದಷ್ಟಾಗಿದೆ. ಭೀಷ್ಮತಾತನು ನುಡಿದಂತೆ, ಅಂದಿಗೇ ರಣವನ್ನು ಬಿಟ್ಟು ದುರ್ಯೋಧನನು ನಮ್ಮ ರಾಜ್ಯವನ್ನು ನಮಗಿತ್ತಿದ್ದರೆ, ಇಷ್ಟನರ್ಥವಾಗುತ್ತಿದ್ದಿಲ್ಲ. ದುರ್ಯೋಧನನಷ್ಟು ದುಷ್ಟಬುದ್ಧಿ ಇನ್ನಿಲ್ಲ. ಧಾರ್ತರಾಷ್ಟ್ರರಷ್ಟು ಮೂರ್ಖರಿಲ್ಲ. ಬ್ರಹ್ಮವಿದ್ವರನಾದ ದ್ರೋಣನೂ ನಿಹತನಾದನು. ನಂಬಿದ ಮಿತ್ರಪರನಾದ ಕರ್ಣನೂ ಸತ್ತನು. ವೃಷಸೇನ, ಶ್ರುತಾಯು, ಶ್ರುತಾಯುಧ, ಜಲಸಂಧರು ರಣಮರಣವನ್ನಪ್ಪಿದರು. ಭೂರಿಶ್ರವ, ಭಗದತ್ತ ಶಲ, ಶಲ್ಯ, ಸೋಮದತ್ತರು ವೀರಸ್ವರ್ಗ ಸೇರಿದರು. ಆವಂತ್ಯ ಕೈಕೇಯ, ಜಯದ್ರಥ ದುಶ್ಶಾಸನರು ಕುರುರಾಜನಿಗಾಗಿ ಪ್ರಾಣಾರ್ಪಣ ಮಾಡಿದರು. ಮಾಂಡಲಿಕ ರಾಜನ್ಯರು ಸಾವಿರಗಟ್ಟಲೆ ಸಂಹೃತರಾದರು. ಇಷ್ಟಾದರೂ ದುಷ್ಟ ದುರ್ಯೋಧನನು ಕೆಟ್ಟ ಹಠವನ್ನು ಬಿಡಲೊಲ್ಲನು! ಭೀಮಸೇನ ವಿಕ್ರಮವನ್ನು ನೋಡಿ, ಆ ಮಹಾಭುಜನ ಪ್ರತಿಜ್ಞೆಯು ಸತ್ಯವಾಗುವದೆಂದರಿತೂ, ಇನ್ನು ಕಾದಾಡುವ ಕೌರವೇಶನ ಅವಿವೇಕವತಿಶಯವೆನಿಸಿದೆ. ಅವನ ಮೋಹ, ಅವನ ಮಿಥ್ಯಾಜ್ಞಾನ, ಅವನ ಲೋಭ ಎಲ್ಲವೂ ಸೇರಿ, ಅವನನ್ನು ಸಂಧಿಯಿಂದ ದೂರಸೆಳೆದು ಹಾಳುಮಾಡುತ್ತಿದೆ. ಹುಟ್ಟಿದನು ಪೂತವಾದ ಕುರುಕುಲದಲ್ಲಿ! ಓದಿದನು ದ್ರೋಣಾಚಾರ್ಯರಲ್ಲಿ! ಆದರೂ ಆ ದುಷ್ಟನಿಗೆ ಜ್ಞಾನೋದಯವಾಗಲಿಲ್ಲ. ಗುಣದಿಂದಲು, ಬಲದಿಂದಲು, ಶೌರ್ಯದಿಂದಲು, ಹೆಚ್ಚಾಗಿರುವ ಶತ್ರುಗಳಿಂದ ಕಾದುವ ಅವನ ಮೂರ್ಖತನಕ್ಕೇನೆಂಬೆ! ನಿನ್ನ ಹಿತವಚನವನ್ನೂ ಲೆಕ್ಕಿಸದೆ, ನಮ್ಮಿಂದ ಸಂಧಿಗಿಚ್ಛಿಸದೆ, ಕುಲನಾಶವನ್ನು ಸಾಧಿಸಿದನು. ಭೀಷ್ಮ ದ್ರೋಣರು ಅವನಿಗೆ ಹಿತರಾಗಲಿಲ್ಲ. ಕುಲಾಂತಕರನಾಗಬೇಕೆಂದೇ ಅವನು ಹುಟ್ಟಿದನೆಂದು ತೋರುತ್ತಿದೆ. ಯುದ್ಧ ಯುದ್ಧವೆಂದು ಪ್ರಲಪಿಸುವ ಕರ್ಣ ಶಕುನಿ ದುಶ್ಶಾಸನರು ಅವನಿಗೆ ಹಿತರಾದರು. ಅವನು ಬುದ್ಧಿಪೂರ್ವಕವಾಗಿ ಕಾದಲು ನಿಂತಿರುವುದನ್ನು ನೋಡಿ, ಜಗತ್ತಿಗೆ ಹಿಂಸೆಯನ್ನೀಯಲು ಹುಟ್ಟಿರುವ ದೊಡ್ಡ ರಾಕ್ಷಸನೆಂದು ಕಾಣುತ್ತಿದೆ.

ಮಹಾತ್ಮ ವಿದುರನು 'ದುರ್ಯೋಧನನಷ್ಟು ಭಗವದ್ದ್ವೇಷಿ ಮತ್ತಿಲ್ಲ. ಜೀವವಿರುವವರೆಗೂ ಅವನು ನಿಮಗೆ ರಾಜ್ಯವನ್ನೀಯುವನಲ್ಲ. ನಿಮಗೆ ದ್ರೋಹ ಬಗೆವಲ್ಲಿ ಅವನಿಗೆ ತೃಪ್ತಿ ಇಲ್ಲ. ಯುದ್ಧಮಾಡಿ, ಅವನನ್ನು ಕೊಂದು ನೀವು ಸುಖಿಸ

ಬೇಕಾಗಲಿ, ಬೇರೊಂದು ಮಾರ್ಗವಿಲ್ಲ.' ಎಂದು ಅಂದೇ ಹೇಳಿದನು. ಆ ಮಾತು ಅಕ್ಷರಶಃ ನಿಜವಾಯಿತು. ಜಾಮದಗ್ನ್ಯವೇದವ್ಯಾಸರ ಮಾತನ್ನು ಕೇಳದ ದುರ್ಬುದ್ಧಿಯು ಇಂದು ಸರ್ವರಾಜರನ್ನು, ಗಜತುರಗಾದಿ ಜೀವಜಾತವನ್ನು, ಅಮಿತ ಭಟರನ್ನು ನಾಶಪಡಿಸಿ, ತಾನೂ ನಷ್ಟನಾಗುತ್ತಿರುವನು. 'ಇವನಿಂದ ಸಕಲಕ್ಷತ್ರಿಯ ಕುಲವು ಕ್ಷಯವನ್ನೈದುವುದೆಂದು, ದುರ್ಯೋಧನನು ಹುಟ್ಟಿದಾಗ ಸಿದ್ಧರು ಹೇಳಿದ್ದರಂತೆ! ಅದು ನಿಜವಾಯಿತು. ಎಲ್ಲ ಭಟರು ಸತ್ತಮೇಲೆ ನೋಡಿ ತೃಪ್ತನಾಗಿ, ಈ ಹಿಂಸಾಮಯನು ತಾನು ಸಾಯಲೆಣಿಸಿ, ನಮ್ಮೊಡನೆ ನಿಂತು ಕಾದುವನು. ಆದುದರಿಂದ ಅವನ ಶಿಬಿರವೆಲ್ಲ ಶೂನ್ಯವಾಗುವಂತೆ ಕುರುರಾಜನಿಗಾಗಿ ಹೋರಾಡುವ ಎಲ್ಲ ವೀರರನ್ನು ಸಂಹರಿಸುವೆನು. ಧರ್ಮರಾಜನ ವಿಜಯವನ್ನು ಸಾಧಿಸುವೆನು.'

ಇಂತು ನುಡಿದು ಅರ್ಜುನನು ಅಭೀತನಾಗಿ ಕುರುವಾಹಿನಿಯನ್ನು ಪ್ರವೇಶಿಸಿದನು. ಅವನ ಶ್ವೇತತುರಗಗಳು ಎಲ್ಲೆಡೆ ಕಾಣಬರುತ್ತಿದ್ದವು. ಅರ್ಜುನ ನಾಮಾಂಕಿತ ಶರಗಳು ಸಾದಿ ಭಟ ರಥಿಕರನ್ನು ಮುಚ್ಚಿ ಪೀಡಿಸಿದವು. ಗಾಂಡೀವ ಪ್ರೇಷಿತವಾದ ಕಾಂಡಗಳು ಸಿಡಿಲಂತೆ ಬಡಿದಾಗ ಕುರುವೀರರು ಸಾವಿರಾರು ಸಂಖ್ಯಾಕರು ಜೀವಕ್ಕೆರವಾದರು. ಶರಚಾಪಧರನಾದ ಧನಂಜಯನು ಕುಂಜರಕುಂಭಗಳನ್ನು ಸೀಳಿ, ರಥಧ್ವಜಗಳನ್ನು ಕೆಡಹಿ, ತುರಗ ಕಂಠಗಳನ್ನು ಖಂಡಿಸಿ, ಭಟರನ್ನು ಸಂಹರಿಸಿ ಕೌರವ ಸೇನಾವನದಲ್ಲಿ ದಾವಾದಹನದಂತೆ ಸಂಚರಿಸಿದನು. ಇಂತು ಚಾಪಕುಂಡನು, ಬಾಣಜ್ವಾಲನು, ರಥರಜೋಧೂಮನು, ಕೃಷ್ಣವರ್ತ್ಮನು ಆದ ಧನಂಜಯನು ಉರಿದೆದ್ದು ನಿನ್ನ ಪುತ್ರರ ಸೇನಾಟವಿಯನ್ನು ಸುಟ್ಟು ನಾಶಪಡಿಸಿದನು. ದೈತ್ಯರನ್ನು ನಾಶಪಡಿಸುವ ವಜ್ರಪಾಣಿಯಂತೆ ಅರ್ಜುನನು ದ್ವಿತೀಯ ಬಾಣವನ್ನೊಬ್ಬನನ್ನು ಕೊಲ್ಲಲು ಬಿಡದೆ, ಅದ್ವಿತೀಯ ಶೂರನಾಗಿ ವಿಹರಿಸಿದನು.

ಪ್ರಯತ್ನಿಸಿ ಪಾರ್ಥರ ಪರಾಜಯವನ್ನು ಪಡೆಯಲು ಹವಣಿಸುವ ಕುರುವೀರರು, ಗಾಂಡೀವ ಮುಕ್ತನಾರಾಚಗಳಿಗೆ ಪ್ರಾಣಗಳನ್ನರ್ಪಿಸಿ, ವಿಹತಸಂಕಲ್ಪರಾದರು. ಅವರ ರಥಗಳು ಮುರಿದುಬಿದ್ದವು. ಕೆಲವರ ಸಾಯಕ ಸಂಚಯವು ಕ್ಷೀಣವಾಯಿತು. ಕೆಲವರು ಸೂತರಹಿತ ರಥಗಳನ್ನು ತಾವೇ ನಡೆಸಿಕೊಂಡು ರಣಭೂಮಿಗೆ ದೂರರಾದರು. ಕೆಲವರು ವಿಕಲಾಂಗರಾಗಿ ಬಾಯಿಬಿಡುವ ಪಿತೃಭ್ರಾತೃ ಸುಹೃಜ್ಜನರನ್ನು ಹೊತ್ತು ಶಿಬಿರದಲ್ಲಿ ಸೇರಿಸಿ, ಚಿಕಿತ್ಸೆ ನಡೆಸಿ ಅಲ್ಲೇನಿಂತರು. ಕೆಲವೀರರು ಹಿಂದಿರುಗಿ ಬಂದು ಅರ್ಜುನನೊಡನೆ ಕಾದಾಡಿ, ರಣರಂಗ ವಿಮುಖರಾಗದೆ, ಸ್ವರ್ಗವನ್ನಲಂಕರಿಸಿದರು. ಕೆಲವರು ನೀರನ್ನು ತಂದು ತೃಷಿತರಿಗಿತ್ತು, ತುರಗಗಳಿಗೆ ಕುಡಿಸಿ, ವಿಶ್ರಾಂತಿ ತೆಗೆದುಕೊಂಡರು.

ಧೃಷ್ಟದ್ಯುಮ್ನ, ಶಿಖಂಡಿ, ಶತಾನೀಕರು ರಥಿಕ ಸಹಸ್ರದಿಂದ ಕೂಡಿ ಕುರುಬಲವನ್ನು ತಾಕಿ, ನಿಶ್ಶೇಷವಾಗಿ ಮಾರಣಹೋಮವನ್ನು ನಡೆಸಿದರು. ದುರ್ಯೋಧನನು ಕ್ರುದ್ಧನಾಗಿ, ಅವರನ್ನು ತಡೆದು ಬಾಣತತಿಯಿಂದ ಪೀಡಿಸಿದನು. ಧೃಷ್ಟದ್ಯುಮ್ನನು ದುರ್ಯೋಧನನ ಕುದುರೆಗಳನ್ನು ಕೊಂದು, ಎರಡು ಬಾಣಗಳನ್ನು ಅವನ ಬಾಹುಮೂಲ, ವಕ್ಷಗಳಲ್ಲಿ

ನಾಟಿಸಿದನು. ಅಂಕುಶದಿ ತಿವಿದ ಆನೆಯಂತೆ ಕೆರಳಿ ಕುರುರಾಜನು ನಾಲ್ಕು ಬಾಣಗಳಿಂದ ಧೃಷ್ಟದ್ಯುಮ್ನನ ತುರಗಗಳನ್ನು ಕೊಂದು, ಮತ್ತೊಂದು ಭಲ್ಲದಿಂದ ಅವನ ಸಾರಥಿಯನ್ನು ಕೊಂದನು. ವಿರಥನು ವಿಕ್ಷತನು ಆಗಿದ್ದ ದುರ್ಯೋಧನನು ಮದಗಜವನ್ನೇರಿ ಶಕುನಿಯನ್ನು ಸೇರಪೋದನು. ಶಕುನಿಯು ತನ್ನ ರಥವನ್ನವನಿಗಿತ್ತು ತಾನು ಬೇರೊಂದು ರಥವನ್ನೇರಿ, ಇಬ್ಬರೂ ಕಲೆತು ಧರ್ಮಜನನ್ನು ಮುತ್ತಿದರು.

ದುರ್ಯೋಧನನು ಕ್ರುದ್ಧನಾಗಿ ಧರ್ಮರಾಜನನ್ನು ಶತಕಾಂಡಗಳಿಂದ ಪೀಡಿಸಿ, ಅವನ ಕುದುರೆಗಳನ್ನು ಸಂಹರಿಸಿದನು. ಯಮಳರು ಬಂದು ಐದು-ಹತ್ತು ಶರಗಳಿಂದ ಪೀಡಿಸಲು ಕೆರಳಿ ಕುರುರಾಜನು ಅವನ ತುರಗ ತತಿಯನ್ನೂ ಕೆಡಹಿ, ಅವರನ್ನೂ ವಿರಥರನ್ನಾಗಿಸಿದನು. ಅರ್ಜುನನು ದುರ್ಯೋಧನನ ವಿಕ್ರಮವನ್ನು ತಡೆಯಲೆಣಿಸಿ, ಬಂದು ಮುತ್ತಲು, ನಿಶಿತಭಲ್ಲದಿಂದ ಅವನನ್ನು ಹೊಡೆದನು. ಆ ಭಲ್ಲವು ಎದೆಗೆ ತಗುಲಿದಾಗ ಅರ್ಜುನನು ಮೂರ್ಛೆ ಬಂದಂತಾಗಿ, ರಥ ನೀಡದಲ್ಲಿ ಸುಮ್ಮನೆ ಕೂತನು.

ಭೀಮಸೇನನು ಅರ್ಜುನನ ನೆರವಿಗೆ ಬಂದು, ಕುರುರಾಜನ ಬಾಣ ತತಿಯನ್ನು ಖಂಡಿಸಿ, ಅವನ ಕುದುರೆಗಳನ್ನು ಕೊಂದು, ಧನುಸ್ಸನ್ನು ಮುರಿದು, ಧ್ವಜವನ್ನು ಕೆಡಹಿ, ಸೂತನನ್ನು ಸಂಹರಿಸಿದನು. ದುರ್ಯೋಧನನು ರಥದಿಂದ ಕೆಳಗಿಳಿದು, ಮದಗಜವನ್ನೇರಿ ದೂರ ಸಾರಿದನು. ವೃಕೋದರನ ನೆರವಿಗೆ ಬಂದ ಧೃಷ್ಟದ್ಯುಮ್ನ, ಸಾತ್ಯಕಿ, ನಕುಲಸಹದೇವರನ್ನು ದುರ್ಯೋಧನನು ಆನೆಯ ಮೇಲಿಂದ ಬಿಟ್ಟ ವಿಶಿಖಶತದಿಂದ ವಿಗತತುರಗರನ್ನು ಮಾಡಿ ಅವರೊಗೆದ ಆಯುಧಗಳನ್ನೆಲ್ಲ ತುಂಡರಿಸಿ, ಅವರನ್ನು ಐದೈದು ಬಾಣಗಳಿಂದ ಪೀಡಿಸಿದನು. ವೃಕೋದರನು ನಿಶಿತ ಭಲ್ಲವನ್ನು ಪ್ರಯೋಗಿಸಿ, ಅವನೇರಿದ್ದ ಆನೆಯ ಕುಂಭವನ್ನು ಸೀಳಲು, ಅದು ಝುರೀಯುತ ಗಿರೀಂದ್ರನಂತೆ ರಕ್ತ ಕಾರುತ್ತಾ ಗೀಳಿಟ್ಟು, ಕೆಳಗೆ ಬಿತ್ತು. ದುರ್ಯೋಧನನು ಬೇಗನೆ ಕೆಳಗೆ ಧುಮುಕಿ, ಜವನಾವಶ್ವವನ್ನೇರಿ, ಓಡಿಹೋದನು.

ಮೂರುಸಾವಿರ ಗಜಸೇನೆಯಿಂದ ಶಕುನಿಯು ರಣಸನ್ನಾಹವನ್ನು ನಡೆಸುತ್ತಿರಲು, ನೋಡಿ ದುರ್ಯೋಧನನು ಅವನನ್ನು ಸಮೀಪಿಸಿ ನಿಟ್ಟುಸಿರಿಡುತ್ತಾ ಒಂದು ಮರದ ಕೆಳಗೆ ನಿಂತು ವಿಶ್ರಾಂತಿ ಪಡೆಯುತ್ತಿದ್ದನು. ಆಗ ಅರ್ಜುನನು ಶಕುನಿಯ ಗಜಾನೀಕವನ್ನು ಮುತ್ತಿ ನಿಶಿತಭಲ್ಲಗಳಿಂದ ತುಂಡ ಕರ್ಣ ಪಾದ ವಾಲಗಳನ್ನು ಕತ್ತರಿಸಿ ಅವನನ್ನು ಕೆಡಹಿದನು. ವಜ್ರಪಾಣಿಯು ಕೆಡಹಿದ ಪರ್ವತಗಳಂತೆ ಆನೆಗಳು ಕೆಳಗುರುಳಿ ಬಿದ್ದವು. ಕೆಲಗಜಗಳು ಮರ್ಮಾಘಾತಿಕರತಾಡಿತವಾಗಿ ಹುಚ್ಚೆದ್ದು ತಮ್ಮ ಸೈನಿಕರನು ತುಳಿಯುತ್ತಾ ಓಡಿದವು.

ಭೀಮಸೇನನು ಗದಾಪಾಣಿಯಾಗಿ ರಥದಿಂದಿಳಿದು, ಗಜಾನೀಕವನ್ನು ಮುತ್ತಿ ನಾಶಪಡಿಸಿದನು. ಗದಾಘಾತಗಳಿಂದ ತಲೆಗಳೊಡೆದು ಬೀಳುವ ಗಜ ಶರೀರಗಳಿಂದ ರಣರಂಗವು ಕಲ್ಲುಬಂಡೆಗಳಿಂದ ತುಂಬಿದ ಗಿರಿಕಂದರದಂತೆ ಕಾಣಬಂತು. ಗದಾಹಸ್ತನಾದ ವೃಕೋದರನೆದುರಿಗೆ ನಿಲ್ಲಲಾರದೆ, ಕುರುವೀರರು ಓಡಿಹೋದರು. ಆತನ ಸಿಂಹಗರ್ಜನವನ್ನಾಲಿಸಿ ಆನೆಗಳು ನಿಂತಲ್ಲೇ ಸತ್ತುಬಿದ್ದವು. ಭಟರು ಶಕ್ಯನ್ನೂತ್ರ

ಗಳನ್ನು ಸ್ರವಿಸಿ ನಿಶ್ಚೇಷ್ಟರಾದರು. ಅಶ್ವಗಳೋಡಿದವು. ಯುಧಿಷ್ಠಿರ ಯಮಳರು ವಿಕ್ರಮಿಸಿ, ಗಾರ್ಧಪತ್ರಗಳಿಂದ ಗಜ ತುರಗರಾಜಿಯನ್ನು ಗಾಯಗೊಳಿಸಿದರು. ಗಜಸೇನೆಯು ನಾಶವಾದುದನ್ನು ಕಂಡು ದುರ್ಯೋಧನನು ಹತಾಶನಾದನು.

ರಥಸೇನೆಯಲ್ಲಿ ಮಹಾರಾಜನನ್ನು ಕಾಣದೆ ಅಶ್ವತ್ಥಾಮ ಗೌತಮ ಕೃತವರ್ಮರು 'ಎಲ್ಲಿ ಮಹಾರಾಜ? ದುರ್ಯೋಧನನೆಲ್ಲಿರುವನು?' ಎಂದು ಕಾತರರಾಗಿ ಕೇಳುತ್ತಾ ಬಂದರು. ದುರ್ಯೋಧನನೂ ಹತನಾದನೇನೋ ಎಂಬ ಶಂಕೆಯಿಂದ ಕಳೆಗುಂದಿ, ಪ್ರಶ್ನಿಸುವ ವೀರತ್ರಯರನ್ನು ಸೈನಿಕರು ಕೈಗಳಿಂದ ಶಕುನಿಯು ನಿಂತೆಡೆ ತೋರಿ, ಉತ್ತರಿಸಿದರು. ಕೆಲವೀರರು 'ದುರ್ಯೋಧನನೆಲ್ಲಿದ್ದರೇನು? ಅವನಿಂದ ಏನು ನಿಂತಿದೆ? ವೀರರಾದುದಕ್ಕೆ ವಿಜೃಂಭಿಸಿ, ಶತ್ರುನಾಶವನ್ನು ಸಾಧಿಸಿ, ವೀರಸ್ವರ್ಗವನ್ನು ಸೂರೆಗೊಳ್ಳಿರಿ!' ಎಂದರು. ವೀರತ್ರಯವು ರಣಕ್ಕಿಳಿಯದೆ, ಶಕುನಿಯನ್ನು ಸೇರ ಪೋದುದನ್ನು ನೋಡಿ, ಕುರುಸೈನಿಕರು, ಜೀವದ ಹಂಗು ತೊರೆದು ಕಡಿದಾಡಿದರು.

ಗಜರಥಸೇನೆಗಳು ನಿರ್ನಾಮವಾಗಲು ಸಾದಿಭಟರು ಕಡಿದಾಡುತ್ತಿದ್ದರು. ಇಂತು ಕುರುಸೇನೆಯು ನಿಹತಪ್ರಾಯವಾದುದನ್ನು ಕಣ್ಣಾರೆ ಕಂಡು, ನಾನು ಸೇನಾಮಧ್ಯವನ್ನು ಪ್ರವೇಶಿಸಿದೆನು. ಕಿರೀಟಿ ಶರಪೀಡಿತರಾಗಿ ಓಡುತ್ತಿದ್ದ ಕುರುಭಟರನ್ನು ಬಿಡದೆ ಧೃಷ್ಟದ್ಯುಮ್ನಾಗ್ನಿಯು ಸುಡುತ್ತಿತ್ತು. ರಣವು ದಾರುಣವಾಯಿತು. ಕುರುಸೇನೆಯ ಸೋಲು ಸಂಪೂರ್ಣವಾಯಿತು. ಪಾಂಡವರ ಗೆಲವೂ ನಿಶ್ಚಿತವಾಯಿತು. ದುರದೃಷ್ಟದಿಂದ ನಾನು ಸಾತ್ಯಕಿಯ ಕೈಗೆ ಸಿಕ್ಕೆನು. ಆ ಮಹಾರಥನು ನನ್ನನ್ನು (ಸಂಜಯ) ಜೀವಗ್ರಾಹವಾಗಿ ಹಿಡಿದು, ಸೆಳೆದುಕೊಂಡು ಹೋಗುತ್ತಿದ್ದನು. ಧೃಷ್ಟದ್ಯುಮ್ನನು ನಗುತ್ತಾ 'ಸಾತ್ಯಕೇ! ಇವನನ್ನೇಕೆ ಹಿಡಿದೆ? ಇವನಿಂದ ಯಾರಿಗೆ ಏನು ಪ್ರಯೋಜನ? ಕೊಂದುಬಿಡು ಈ ದುಷ್ಟ ಧೃತರಾಷ್ಟ್ರ ಸೂತನನ್ನು!' ಎಂದನು. ಸಾತ್ಯಕಿಯು ನನ್ನನ್ನು ಕೊಲ್ಲಲೆಣಿಸಿ, ಖಡ್ಗವನ್ನೋರೆಯಿಂದ ಸೆಳೆದಾಗ, ನಾನು ಭೀತನಾಗಿ ನಡುಗುತ್ತಾ ಕಣ್ಣು ಮುಚ್ಚಿದೆನು. ಆಗ ಶ್ರೀಕೃಷ್ಣದ್ವೈಪಾಯನರು ಅಲ್ಲಿ ಪ್ರತ್ಯಕ್ಷರಾದರು. ಅವರು 'ಸಾತ್ಯಕೇ! ಬಿಡು ಸಂಜಯನನ್ನು! ಇವನು ಹಂತವ್ಯನಲ್ಲ!' ಎಂದು ನನ್ನನ್ನು ಬಿಡಿಸಿದರು. ಶ್ರೀವ್ಯಾಸಾನುಗ್ರಹದಿಂದ ಬದುಕಿ ಬಂದೆನು.

ಬರುತ್ತಾ ಕಂಡ ಕಡು ಹಾನಿಯನ್ನು ನೆನೆದು, ನಾನೇಕೆ ಬದುಕಿರುವೆನೆಂದು ಪರಿತಾಪ ಪಡುತ್ತಿರುವೆನು. ಅಶ್ವತ್ಥಾಮ ಕೃಪ ಕೃತವರ್ಮರು ಮಹಾರಾಜನನ್ನು ಸೇರಪೋಗುತ್ತಾ, ಭೀಮನಿಗೆದುರಾದರು. ಕೌರವಾಂತಕನಲ್ಲಿ ಸೇಡಿನಿಂದ ಅವರು ಮೂವರು ತೀವ್ರ ನಿಶಿತ ಬಾಣಗಳಿಂದ ಭೀಮನನ್ನು ನೋಯಿಸಿದರು. ಭೀಮಸೇನನು ಕ್ರುದ್ಧನಾಗಿ ಅವರೊಡನೆ ಕಾದುತ್ತಿರಲು ಅರ್ಜುನನೂ ಬಂದನು. ಭೀಮಾರ್ಜುನರು ವಿವಿಧ ಬಾಣಗಳಿಂದ ವೀರತ್ರಯವನ್ನೂ ಪೀಡಿಸಿ, ಅವರ ತುರಗಗಳನ್ನು ಸಂಹರಿಸಿದರು. ಬೇರೆ ರಥಗಳಲ್ಲಿ ಕೂತು ಬಂದಂತೆ ಅನೇಕ ಸಲ ಅವರನ್ನು ವಿರಥರನ್ನಾಗಿಸಿ, ಕಳಿಸಿದ ಭೀಮಾರ್ಜುನರ ಅಮಾನುಷ ವೀರವಿಹಾರವು ಆಶ್ಚರ್ಯಕರವಾಗಿತ್ತು.

ಆಗ ನಿನ್ನ ಉಳಿದ ಸುತರು ದುರ್ಮರ್ಷಣ, ಶ್ರುತಾಂತ, ಜೈತ್ರ, ಭೂರಿಬಲ, ರವಿ, ಜಯತ್ಸೇನ, ಸುಜಾತ, ದುರ್ವಿಮೋಚನ, ದುಷ್ಪ್ರಧರ್ಷಣ, ಶ್ರುತರ್ವರೆಂಬುವ ದಶಮಹಾರಥರು, ಭೀಮಸೇನನನ್ನು ಪ್ರಳಯಾಗ್ನಿಯನ್ನು ಪತಂಗಗಳಂತೆ ಮುತ್ತಿ ಕಾದಿದರು. ಭೀಮಸೇನನು ಕ್ಷುರಪ್ರ, ಭಲ್ಲ, ಗಾರ್ಧಪತ್ರ, ಕಂಕಪತ್ರಾದಿ ಬಾಣಗಳಿಂದ ಕ್ರಮವಾಗಿ ದುರ್ಮರ್ಷಣ, ಶ್ರುತಾಂತ, ಜಯತ್ಸೇನ, ರವಿ, ಜೈತ್ರ, ಭೂರಿಬಲ, ದುರ್ವಿಮೋಚನ, ದುಷ್ಪ್ರಧರ್ಷಣ, ಸುಜಾತರನ್ನು ವಧಿಸಿದರು. ಶ್ರುತರ್ವನು ಹತ್ತು ಬಾಣಗಳಿಂದ ಪೀಡಿಸಲು, ಭೀಮಸೇನನು ಪರ್ವಕಾಲದ ಸಮುದ್ರದಂತೆ ವಿಜೃಂಭಿಸಿ ಹತ್ತು ಬಾಣಗಳಿಂದ ಶ್ರುತರ್ವನ ಸೂತ, ತುರಗ, ಧ್ವಜಗಳನ್ನು ಕೆಡಹಿ, ವಿರಥನನ್ನಾಗಿಸಿದನು. ಶ್ರುತರ್ವನು ಸಿಟ್ಟಿನಿಂದ ಖಡ್ಗ ಚರ್ಮಧರನಾಗಿ ಮೇಲೇರಿ ಬಂದನು. ಭೀಮಸೇನನು ಅವನ ಖಡ್ಗವನ್ನು ಖಂಡಿಸಿ, ಗುರಾಣಿಯನ್ನು ಚೂರಾಗಿಸಿ, ಶರದಿಂದ ಶಿರವನ್ನು ಕೆಡಹಿದನು. ಸಕಲ ಕೌರವರು ದುರ್ಯೋಧನ ಸುದರ್ಶರಿಬ್ಬರನ್ನು ಬಿಟ್ಟು ಉಳಿದೆಲ್ಲರು ನಷ್ಟವಾದುದನ್ನು ಕಂಡು ಕೌರವಸೇನೆಯು ಬಂದು ರಭಸದಿಂದ ಭೀಮಸೇನನನ್ನು ನಾಶಪಡಿಸಿ ಪ್ರತಿಜ್ಞಾಪಾಲನೆಯಿಂದ ತಾನು ಸಾರ್ಥಕಜನ್ಮನಾದೆನೆಂದು ತಿಳಿದನು. ಅಂದು ಭೀಮಸೇನನಿಂದ ಏಳುನೂರಾನೆಗಳು, ಐನೂರು ರಥಗಳು, ಎಂಟುನೂರು ಅಶ್ವಿಕರು, ಹತ್ತುಸಾವಿರ ಪದಾತಿಗಳು ಸಂಹೃತರಾದರು.

ಶಕುನಿಯಿಂದ ಕೂಡಿ ವಾಜಿಸೇನಾ ಮಧ್ಯದಲ್ಲಿದ್ದ ದುರ್ಯೋಧನನನ್ನು ಕಂಡು ಶ್ರೀಕೃಷ್ಣನು 'ಅರ್ಜುನ! ಶತ್ರುಗಳು ಪ್ರಾಯಃ ನಷ್ಟರಾದರು. ಸಂಜಯನು ಸಾತ್ಯಕಿಯ ಕೈಗೆ ಸಿಕ್ಕು ವ್ಯಾಸರ ದಯದಿಂದ ಬದುಕಿಹೋದನು. ದುರ್ಯೋಧನ ಸುದರ್ಶರನ್ನುಳಿದು ಸರ್ವ ಕುರುಕುಮಾರರು ಭೀಮಹತರಾದರು. ಅಶ್ವತ್ಥಾಮ ಕೃಪ ಕೃತವರ್ಮರು ನಿಮ್ಮಿಂದ ಕಾದಿ ವಿರಥರಾಗಿ, ಕುರುರಾಜನನ್ನು ಸೇರಪೋದರು. ಅವರು ಜಯಾಶೆಯನ್ನೆಂದೋ ಬಿಟ್ಟಿರುವರು. ಪಾಪಿ ದುರ್ಯೋಧನನು ಸರ್ವನಾಶವನ್ನು ಸಾಧಿಸಿ ತಾನೀಗ ರಣಮಧ್ಯದಲ್ಲಿ ನಿಮ್ಮನ್ನು ಕೂಡಿ ಕಾದಲು ಪ್ರಯತ್ನಿಸಿರುವನು. ಗಜಾನೀಕವು ಭೀಮಸೇನನಿಂದ ನಿಶ್ಶೇಷವಾಗಿ ನಾಶವಾಯಿತು. ಇನ್ನು ದುರ್ಯೋಧನನನ್ನು ವಧಿಸಿ, ಭೀಮಸೇನನು ಸತ್ಯಪ್ರತಿಜ್ಞನಾಗುವುದುಳಿದಿದೆ!' ಎಂದನು.

ಅರ್ಜುನನು 'ಅಹುದು! ಶ್ರೀಕೃಷ್ಣ! ಅವರಕಡೆ ಉಳಿದಿರುವರೆಂದರೆ ದುರ್ಯೋಧನ ಸುದರ್ಶರು, ಮತ್ತು ಅಶ್ವತ್ಥಾಮ ಕೃಪ ಕೃತವರ್ಮರು, ಉವಾಕ ಶಕುನಿ ಸುಶರ್ಮರೂ ಉಳಿದಿರುವರು. ಧಾರ್ತರಾಷ್ಟ್ರನಲ್ಲಿ ಐನೂರು ಕುದುರೆಗಳು, ಇನ್ನೂರು ರಥಗಳು, ಒಂದುನೂರು ಗಜಗಳು, ಮೂರುಸಾವಿರ ಭಟರು ಉಳ್ಳ ಸೇನೆ ಉಳಿದಿದೆ. ಇಂದು ಸರ್ವಶತ್ರು ಸಂಹಾರವನ್ನು ಸಾಧಿಸುವೆನು. ಯುದ್ಧಕುತೂಹಲಿಯಾಗಿ ನಿದ್ದೆ ಮಾಡದಿದ್ದ ಧರ್ಮರಾಜನು ನಿಶ್ಚಿಂತನಾಗಿ ನಿದ್ರಿಸುವಂತೆ, ವಿಜಯವನ್ನು ನಿನ್ನ ದಯದಿಂದ ಸಂಪಾದಿಸುವೆನು. ದುರಾತ್ಮನಾದ ಶಕುನಿಯು ಸಭೆಯಲ್ಲಿ ಅಪಹರಿಸಿದ ಸಿರಿಸಂಪತ್ತುಗಳು, ರಾಜ್ಯರತ್ನಗಳು, ಧರ್ಮಜನಿಗೆ ಮತ್ತೆ ಸಮರ್ಪಿಸುವೆನು. ಹೊಡೆ ರಥವನ್ನು ಶತ್ರುಸೇನೆಯ

ಕಡೆಗೆ!' ಎಂದು ದೇವದತ್ತವನ್ನೂದಿದನು. ಭೀಮ ನಕುಲ ಸಹದೇವರು ಸಿಂಹನಾದಗಳನ್ನು ಮಾಡಿ, ದುರ್ಯೋಧನ ಶಕುನಿ ಸುಶರ್ಮರನ್ನು ಮುತ್ತಿ ಕಾದಿದರು.

ಸುದರ್ಶ ಭೀಮಸೇನರು, ಸುಶರ್ಮ ಪಾರ್ಥರು, ಸಹದೇವ ದುರ್ಯೋಧನರು, ಉವಾಕ ನಕುಲರು ದ್ವಂದ್ವಯುದ್ಧ ನಿರತರಾದರು. ದುರ್ಯೋಧನನು ಪ್ರಾಸವನ್ನೆತ್ತಿ ಹೊಡೆಯಲು, ಸಹದೇವನು ಮೂರ್ಛಿತನಾಗಿ, ಮತ್ತೆ ಎಚ್ಚತ್ತು ಸಿಟ್ಟಿನಿಂದ, ದುರ್ಯೋಧನನನ್ನು ಶರಶತದಿಂದ ಪೀಡಿಸಿದನು. ಪಾರ್ಥನು ತ್ರಿಗರ್ತಸಾದಿಗಳನ್ನು ಸಂಹರಿಸಿ, ತ್ರಿಗರ್ತರಾಜ ಸೋದರನಾದ ಸತ್ಯಕರ್ಮನನ್ನು ಯಮಸದನಕ್ಕಟ್ಟಿದನು. ಸುಶರ್ಮನು ಮುತ್ತಲು, ದೀರ್ಘವೈರವನ್ನು ಕಾರುತ್ತಾ, ಮೂರು ಬಾಣಗಳಿಂದ ಅವನನ್ನು ಪೀಡಿಸಿದನು. ಸುಶರ್ಮನು ಕ್ರೋಧರಕ್ತೇಕ್ಷಣನಾಗಿ ಆರು ಕ್ಷುರಪ್ರಗಳಿಂದ ಪಾರ್ಥನನ್ನು, ಮೂರು ಶರಗಳಿಂದ ಮುರಾರಿಯನ್ನು ಪೀಡಿಸಿ, ಆರ್ಭಟಿಸಿದನು. ಅರ್ಜುನನು ಯಮದಂಡ ಸಮವಾದ ಕಾಂಡವನ್ನೆತ್ತಿ ಅಭಿಮಂತ್ರಿಸಿ ಪ್ರಯೋಗಿಸಿದನು. ಆ ಶರವು ನಿರಾಘಾಟವಾಗಿ ಸಾಗಿ, ಸುಶರ್ಮನ ಎದೆಯನ್ನು ಸೀಳಿತು. ತ್ರಿಗರ್ತೇಶನು ಆರ್ತನಾದದಿಂದ ನೆಲಕ್ಕುರುಳಿದನು. ಅವನ ಸಾವಿಗೆ ಕ್ರುದ್ಧರಾಗಿ ಬಂದ ಏಳು ಎಂಟು ಮತ್ತು ಮೂವತ್ತು ರಥಿಕರು ಪಾಂಡವ ಮಧ್ಯಮನ ಬಾಣಾಗ್ನಿಗೆ ಆಹುತಿಯಾದರು.

ಭೀಮಸೇನನು ಸುದರ್ಶನನ್ನು ಕ್ಷುರಪ್ರದಿಂದ ಸಂಹರಿಸಿ, ಯಮದರ್ಶನ ಮಾಡಿಸಿದನು. ಇಂದ್ರಾಶನಿ ಸಮಭಯಂಕರನಾದ ಬಾಣಗಳಿಂದ ಭೀಮನು, ಮುತ್ತಿದ ಸರ್ವ ಕುರುಸೇನೆಯನ್ನೂ ನಾಶಪಡಿಸಿದನು. ಅರ್ಜುನನು ಸಂಸ್ತಕ ತ್ರಿಗರ್ತಸೇನೆಯನ್ನು ಸಂಪೂರ್ಣವಾಗಿ ನಾಶಪಡಿಸಿದನು.

ಮಹಾರಾಜ! ಅದನ್ನು ಕಂಡು ದುಃಖಾವೇಗದಿಂದ ನಿಟ್ಟುಸಿರಿಟ್ಟು ಬರುತ್ತಿರುವ ನನ್ನ ಕಣ್ಣಿಗೆ ಸಹದೇವ ಶಕುನಿ ಸಂಗ್ರಾಮವು ನೇತ್ರಗೋಚರವಾಯಿತು.

## ೭. ಶಕುನಿಪತನ — ದುರ್ಯೋಧನಾಪಯಾನ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು:

'ಮಹಾರಾಜ ! ಶಕುನಿಯು ಸಹದೇವನನ್ನೆದುರಿಸಿ ಶರವರ್ಷದಲ್ಲಿ ಅವನನ್ನು ಮುಣುಗಿಸಿದನು. ಸಹದೇವನು ಅವನ ಬಾಣಗಳನ್ನು ಖಂಡಿಸಿ, ಪತಂಗಗಳ ಸಾಲಿನಂತೆ ಸಾರುವ ನಾರಾಚಗಳಿಂದ ಅವನನ್ನು ಪೀಡಿಸಿದನು. ಉವಾಕನು ಹತ್ತು ಬಾಣಗಳಿಂದ ಭೀಮನನ್ನು ಪೀಡಿಸಿದನು. ಶಕುನಿಯು ಮೂರು ಶರಗಳಿಂದ ಭೀಮನನ್ನೂ, ಒಂಬತ್ತು ವಿಶಿಖಗಳಿಂದ ಸಹದೇವನನ್ನೂ ಪೀಡಿಸಿ, ಮಗನಿಗೆ ನೆರವಾದನು. ಕಂಕಬರ್ಹಿಣವಾಜಿತವು, ಸ್ವರ್ಣಪುಂಖವು ಆದ ಬಾಣಗಳನ್ನು ಆಕರ್ಣಾಂತವಾಗಿ ಸೆಳೆದು ವೀರರು ನಾಲ್ವರು ಪ್ರಯೋಗಿಸಿ ಹೊಡೆದಾಡಿದರು. ಮೇಘವು ತನ್ನ ಜಲಧಾರೆಯಿಂದ ಆಕಾಶವನ್ನಂತೆ, ಅವರು ಶರಧಾರೆಯಿಂದ ದಿಕ್ಕುಗಳನ್ನು ತುಂಬಿದರು. ಆಕಾಶವು ಬಾಣಗಳಿಂದ ತುಂಬಿ ಕತ್ತಲಾದಂತಾಯಿತು.

ಶರಚ್ಛಿನ್ನಗಾತ್ರರಾದ ಭಟರು ಬಿದ್ದು ನರಳುತ್ತಿದ್ದರು. ಕುದುರೆಗಳು ಓಡುತ್ತಾ ಅವರನ್ನು ತುಳಿದು ಕೊಂದವು. ಸತ್ತವೀರರನ್ನು ಸೆಳೆದುಕೊಂಡು ಕೆಲತುರಗಗಳ ರಣಾಂಗಣದಿಂದ ದೂರ ಸರಿದವು. ಕವಚಗಳು ಮುರಿದುಬಿದ್ದಿದ್ದವು. ಪ್ರಾಸ ಖಡ್ಗ ಶೂಲಗಳು ತುಂಡಾಗಿದ್ದವು. ಅಸಿಶಕ್ತಿ ತೋಮರಗಳಿಂದ ಕದನಾಂಗಣವು ಕುಸುಮ ಶಬಲವಾದ ಉದ್ಯಾನದಂತಿತ್ತು. ಯೋಧರು ಪರಸ್ಪರ ವಧಾತುರರಾಗಿ ವಿಹರಿಸಿದರು. ತೆರೆವಕಣ್ಣಿನ, ಕಚ್ಚಿದ ತುಟಿಯ, ಮುಖಗಳು ಹರಡಿ, ಪದ್ಮಪೂರ್ಣ ಸರೋವರದಂತೆ ರಣಭೂಮಿಯು ಕಂಡಿತು. ಖಡ್ಗವನ್ನು ಪರಶುವನ್ನು ತೋಮರವನ್ನು ಪಿಡಿದಿದ್ದ ಕೈಗಳು ಹಾಗೆ ಬಿದ್ದಿದ್ದವು. ಪರಶುಗಳಿಂದ ತಲೆಕೆಳಗುರುಳಿದರೂ, ಕಬಂಧಗಳು ರಕ್ತವನ್ನು ಚಿಮ್ಮುತ್ತಾ ನೆಗೆಯುವ ಭೀಕರ ದೃಶ್ಯವು ಅತಿಘೋರವಾಗಿತ್ತು. ರಣಭೂಮಿಯಲ್ಲಿ ಕಡಿದಾಡುತ್ತಿದ್ದ ವೀರರಿಗೂ ಹೆಚ್ಚು ಕಂಕಗೃಧ್ರವಾಯಸಾದಿ ಪಕ್ಷಿಗಳಿದ್ದವು. ಹೆಣಗಳನ್ನು ಕಿತ್ತು ತಿನ್ನುವ ಸೃಗಾಲವೃಕ ಶ್ವಾನಾದಿಗಳಿಗೆ ಲೆಕ್ಕವಿಲ್ಲ.

ಅಲ್ಪಾವಶಿಷ್ಟರಾಗಿದ್ದ ಕೌರವ ಸೈನಿಕರನ್ನು ಜಯಕಾಶಿಗಳಾದ ಪಾಂಡವ ಸೈನಿಕರು ಕಾದಿ, ಕಡಿದಾಡಿದರು. ಶಕುನಿಯು ಕ್ರುದ್ಧನಾಗಿ ಸಹದೇವನನ್ನು ಪ್ರಾಸದಿಂದ ಹೊಡೆದು, ಗಾಯಪಡಿಸಿದನು. ಆಗ ಭೀಮಸೇನನು ತಮ್ಮನಿಗೆ ಸಹಾಯನಾಗಿ ಬಂದು, ನಾರಾಚಗಳ ನೂರುಗಳು, ಸಾವಿರಗಳನ್ನು ಬಿಟ್ಟು, ಕುರುವಾಹಿನಿಯನ್ನು ಶೋಷಿಸಿ, ಸಿಂಹನಾದ ಮಾಡಿದನು. ಆ ಶಬ್ದದಿಂದ ಭೀತರಾಗಿ ಹಯವಾರಣ ಯೋಧರು ಮೂರ್ಛಿತರಾದರು. ಕೆಲವರು ಓಡಿಹೋದರು.

ದುರ್ಯೋಧನನು ಅವರನ್ನು ನೋಡಿ 'ಮೂರ್ಖರೇ! ಏಕೆ ಓಡುವಿರಿ? ಹಿಂದಿರುಗಿ ಕಡಿದಾಡಿರಿ! ವೀರಸ್ವರ್ಗದ ಬಾಗಿಲಿನ್ನೂ ತೆರೆದಿದೆ! ಇಲ್ಲಿ ಕೀರ್ತಿಯನ್ನು ನಿಲ್ಲಿಸಿ, ಅಲ್ಲಿ ಸ್ವರ್ಗಸುಖವನ್ನು ಅನುಭವಿಸುವುದನ್ನು ಬಿಟ್ಟು, ಭೀರುಗಳಾಗಿ ಓಡಲು ತರವಲ್ಲ' ಎಂದು ಅವರಿಗೆ ಧೈರ್ಯ ತುಂಬಿದನು. ಶಕುನಿಯ ಪದಾನುಗರು ಕೆಲವರು ಹಿಂದಿರುಗಿ ಮತ್ತೆ ಕಾದತೊಡಗಿದರು. ಸೈನ್ಯವು ವೀರ ಕೋಲಾಹಲದಿಂದ ಕ್ಷುಬ್ಧಮಹಾಸಾಗರದಂತಾಯಿತು. ಶಕುನಿ ಪದಾನುಗರನ್ನು ಮುತ್ತಿ ಪಾಂಡವ ಸೈನಿಕರು ಕೊಂದು ಕೆಡಹಿದರು.

ನಕುಲನು ಶಕುನಿಯನ್ನು ಮುತ್ತಿ ಹಯಗಳನ್ನು ಗಾಯಗೊಳಿಸಿ, ಧನುವನ್ನು ಮುರಿದನು. ಯುದ್ಧದುರ್ಮದನಾದ ಶಕುನಿಯು ಮತ್ತೊಂದು ಧನುವೆತ್ತಿ ಅರವತ್ತು ಬಾಣಗಳಿಂದ ನಕುಲನನ್ನೂ, ಎಪ್ಪತ್ತು ಕಾಂಡಗಳಿಂದ ಭೀಮನನ್ನೂ ಹೊಡೆದನು. ಉವಾಕನೂ ಎಪ್ಪತ್ತುಬಾಣಗಳಿಂದ ಭೀಮನನ್ನು ಹೊಡೆದು, ತಂದೆಗೆ ಸಹಾಯವಾಗಿ ನಿಂತು, ಸಹದೇವನನ್ನೂ ಎಪ್ಪತ್ತು ವಿಶಿಖಗಳಿಂದ ತಾಟಿಸಿದನು. ಅವನನ್ನು ತೊಂಬತ್ತು ಶರಗಳಿಂದ ಪೀಡಿಸಿ, ಭೀಮಸೇನನು, ಶಕುನಿಯನ್ನು ಅರವತ್ತುನಾಲ್ಕರಿಂದಲು, ಅವನ ಪಾರ್ಶ್ವರಕ್ಷಕರನ್ನು ಮೂರು ಮೂರು ಶರಗಳಿಂದಲು ಹೊಡೆದನು. ಅವರು ಭೀಮನ ಗೊಡವೆಗೆ ಹೋಗಲು ಹೆದರಿ, ಸಹದೇವನನ್ನು ಒಮ್ಮೆಗೆ ಮುತ್ತಿ ಶರವೃಷ್ಟಿಯಿಂದ

ಮುಚ್ಚಿದರು. ವಿದ್ಯುತ್ಸಹಿತ ಮೇಘಗಳು ಮಳೆಯಿಂದ ಗಿರಿಯನ್ನು ಮುಚ್ಚಿದಂತಾಯಿತು. ಸಹದೇವನು ಒಂದು ಭಲ್ಲದಿಂದ ಉವಾಕನ ಶಿರವನ್ನು ಕೆಡಹಿದನು.

ತನ್ನೆದುರಿಗೇ ತನ್ನ ಮಗನನ್ನು ಕೊಂದ ಸಹದೇವನನ್ನು ಕಂಡು ಶಕುನಿಯು ಯುದ್ಧವಾಗದ ಮುನ್ನ ವಿದ್ಯಾವಿನಯ ಸಂಪನ್ನನಾದ ವಿದುರನಾಡಿದ ಮಾತನ್ನು ನೆನೆದನು. ಅವನ ಕಣ್ಣುಗಳಲ್ಲಿ ಕಣ್ಣೀರು ತುಂಬಿಬಂತು. ಒಂದು ಕ್ಷಣಕಾಲ ಚಿಂತಾ ಶೂನ್ಯ ಹೃದಯನಾದ ಶಕುನಿಯು ಸುಮ್ಮನಿದ್ದನು. ಅವನ ವದನದಿಂದ ದುಃಖದ ಬಿಸಿಯುಸಿರು 'ಉಸ್' ಎಂದು ಹೊರಬಂತು. ಅವನು ಮತ್ತೆ ಸೇಡಿಗೆ ಮನಸಿತ್ತು ಮುನಿದು, ಮೂರು ಬಾಣಗಳಿಂದ ಸಹದೇವನನ್ನು ಹೊಡೆದನು. ಆ ಬಾಣಗಳನ್ನು ಖಂಡಿಸಿ, ಸಹದೇವನು ಒಂದು ಭಲ್ಲದಿಂದ ಶಕುನಿಯ ಧನುವನ್ನು ಮುರಿದನು. ಶಕುನಿಯು ಖಡ್ಗವನ್ನೆತ್ತಿ ಕಡುವೇಗದಿಂದೆಸೆದನು. ಸಹದೇವನು ಅದನ್ನು ತುಂಡರಿಸಿದನು. ಶಕುನಿಯು ಮಹಾಗದೆಯನ್ನೆತ್ತಿ ಬಿಸುಟಿದನು. ಘೋರರೂಪವಾದ ಗದೆಯನ್ನೂ ಸಹದೇವನು ನಗುನಗುತ್ತಾ ಎರಡಾಗಿಸಿ ಕೆಡಹಿದನು. ಶಕುನಿಯು ಘಂಟಾಲಂಕೃತವಾದ ಶಕ್ತಿಯನ್ನು ಪ್ರಯೋಗಿಸಿದನು. ಸಹದೇವನು ಅದನ್ನು ಮೂರು ಬಾಣಗಳಿಂದ ಖಂಡಿಸಿದನು. ಶಕುನಿಯು ಕ್ರುದ್ಧನಾಗಿ, ಪ್ರಾಸವನ್ನೆಸೆಯಲು, ಅದನ್ನೂ ಖಂಡಿಸಿ ಸಹದೇವನು ಅವನು ತನ್ನ ಭಾಗವೆಂಬುದನ್ನು ನೆನೆದು ಅವನನ್ನು ಸಂಹರಿಸಿಬಿಡಲು ನಿಶ್ಚಯಿಸಿದನು.

ಕಾಂಚನರಥದಲ್ಲಿ ಕೂತು, ಜ್ಯಾಲತೆಯನ್ನು ಆಕರ್ಣಾಂತವಾಗಿ ಸೆಳೆದು, ಮೃತ್ಯುಸದೃಶ ಬಾಣವನ್ನು ಪ್ರಯೋಗಿಸುವ ಸಹದೇವನು ಶಕುನಿಯನ್ನು ನೋಡಿ, ಸಿಟ್ಟಿನಿಂದ ಇಂತೆಂದನು: 'ಗಾಂಧಾರಾಪಸದ! ನಿಂತು ಕಡಿದಾಡು! ಓಡಿಹೋಗ ಬೇಡ! ಅಂದು ಸಭೆಯಲ್ಲಿ ಅಕ್ಷಗಳಿಂದ ಮಾಯಾದ್ಯೂತವನ್ನಾಡಿ, ಧರ್ಮಜನನ್ನು ಮೋಸಗೊಳಿಸಿದ ಪಾಪವನ್ನಿಂದು ಅನುಭವಿಸುವೆ! ಅಂದು ಅಕ್ಷಗಳಿಂದ ನೀನು ಕೊಂಡ ರಾಜ್ಯವನ್ನಿಂದು ಧರ್ಮಯುದ್ಧದಲ್ಲಿ ಬಾಣಗಳಿಂದ ಪಡೆಯುವೆನು. ಕರ್ಮ ಫಲವನ್ನಾರೂ ಉಣ್ಣದಿರಲಾಗದು ತಿಳಿ ! ಅಂದು ನಮ್ಮನ್ನು ನೋಡಿ ನಕ್ಕ ದುರಾತ್ಮರಿಂದು ಉಳಿದಿಲ್ಲ. ಕುಲಾಂಗಾರನಾದ ಕುರುರಾಜನೊಬ್ಬನಿರುವನು. ಆ ನೀಚನ ಮಾವನಾದ ನೀನೊಬ್ಬನುಳಿದಿರುವೆ! ಇಂತು ನಿನ್ನ ತಲೆಯನ್ನುರುಳಿಸಿ, ಅಂದ ಮಾತಿನಿಂತೆ ಆಚರಿಸಿ, ಸತ್ಯದ ಋಣವನ್ನು ತೀರಿಸುವೆನು.

ಇಂತು ನುಡಿದು ಸಹದೇವನು ರಕ್ತಾಕ್ಷನಾಗಿ ವೇಗವತ್ತರ ಶರಗಳಿಂದ ಶಕುನಿಯನ್ನು ಪೀಡಿಸಿದನು. ಅವನ ವದನದಿಂದ ಸಿಟ್ಟಿನ ಹುಂಕಾರವೂ, ಅವನ ಧನುವಿನಿಂದ ನಿಶಿತಬಾಣವೂ ಒಮ್ಮೆಗೆ ಹೊರಹೊಮ್ಮಿ, ಶಕುನಿಯ ಹೃದಯವನ್ನು ವ್ಯಥೆಪಡಿಸಿದವು. ಶಕುನಿಯು ಶರಶತವನ್ನು ಬಿಡಲು, ಸಹದೇವನು ಅವನ್ನು ಖಂಡಿಸಿ, ನಾಲ್ಕು ಬಾಣಗಳಿಂದ ಅವನ ಕುದುರೆಗಳನ್ನೂ, ಒಂದರಿಂದ ಸೂತನನ್ನೂ ಕೊಂದು, ಮತ್ತೆರಡರಿಂದ ಧ್ವಜಚಾಪಗಳನ್ನು ಮುರಿದನು. ಶಕುನಿಯು ಪ್ರಳಯರುದ್ರನಂತಾದನು. ಅವನು

ಸಹದೇವನನ್ನು ಕೊಲ್ಲಲೆಣಿಸಿ, ಜಾಂಬೂನದ ಚಿತ್ರಿತವಾದ ಪ್ರಾಸವನ್ನೆತ್ತಿ 'ಸತ್ತೆ! ಸಹದೇವ' ಎಂದು ಗರ್ಜಿಸಿ ಒಗೆದನು. ಸಹದೇವನು ಭಲ್ಲಗಳಿಂದ ಅವನ ಪ್ರಾಸವನ್ನು ಕಡಿದು, ಸಿಂಹನಾದ ಮಾಡಿದನು. ಶಕುನಿಯು ಭಯದಿಂದ ಕಂಪಿಸುತ್ತಿರಲು ನೋಡಿ, ಅವನು ಓಡದ ಮುನ್ನ ಸಹದೇವನು ಸರ್ವಾವರಣ ನಿವಾರಣವಾದ ಬಾಣದಿಂದ ಶಕುನಿಯ ಶಿರವನ್ನು ಖಂಡಿಸಿದನು. ಇಂತು ಕುರುಕುಲ ನಾಶಕಾರಣವಾದ ರಣವೃಕ್ಷಕ್ಕೆ, ಬೀಜಭೂತನಾದ ಶಕುನಿಯನ್ನು ಸಂಹರಿಸಿ, ಸತ್ಯಪ್ರತಿಜ್ಞನಾದ ಸಹದೇವನನ್ನು, ಸಕಲ ಸೃಂಜಯ ಪಾಂಡವವೀರರು ಸಂತೋಷದಿಂದ ಪ್ರಶಂಸಿಸಿ, ಜಯಜಯ ನಾದಗಳನ್ನೂ ಮಾಡಿದರು. 'ಮೋಸಗಾರನಿಗೆ ತಕ್ಕ ಶಿಕ್ಷೆ ಆಯಿತು; ದುರ್ಯೋಧನನಿಗೆ ದಿಕ್ಕಿಲ್ಲದೆ ಹೋಯಿತು' ಎಂದು ಪಾಂಡವಯೋಧರು ಶಂಖಗಳನ್ನೂದಿದರು.

ಆಗ ಶಕುನಿಯ ಪದಾನುಗರು ಜೀವಿತದಾಶೆಯನ್ನು ಬಿಟ್ಟು ಸಹದೇವನನ್ನು ಮುತ್ತಿ ಶರಜಾಲದಿಂದ ಪೀಡಿಸಿದರು. ಅವರನ್ನು ತಡೆದು, ಅರ್ಜುನನು ಅವರು ಬಿಟ್ಟ ಶಕ್ತಿ, ಪ್ರಾಸ, ತೋಮರ, ಬಾಣಾದಿಗಳನ್ನು ಕಡಿದು ಕೆಡಹಿದನು. ಅವರನ್ನು ಗಾಂಡೀವನಿರ್ಮುಕ್ತ ಬಾಣಗಳು ಯಮಲೋಕಕ್ಕೆ ಕಳಿಸಿದವು. ಭೀಮಸೇನನ ಗದೆಯು ವಿಜೃಂಭಿಸಿ, ಅವರನ್ನು ಅಧೋಲೋಕಗಳಿಗಟ್ಟಿತು.

ದುರ್ಯೋಧನನು ಹತಶೇಷವಾದ ಅಲ್ಪಸೇನೆಯನ್ನೊಂದೆಡೆ ಕರೆದು, ನಿಲ್ಲಿಸಿ, ಅವರಿಗಿಂತೆಂದನು : 'ಇನ್ನು ರಣಮರಣಕ್ಕಿಂತ ನಮಗೆ ಬೇರೊಂದು ಗತಿಯಿಲ್ಲ. ಪಾಂಚಾಲ್ಯನಾದ ಪಾರ್ಷತನನ್ನು ಸಂಹರಿಸಿ ಬನ್ನಿ! ಪಾಂಡವರನ್ನೂ ವಿಕ್ರಮಿಸಿ ಕೊಂದುಬಿಡಿ! ಸತ್ತರೂ ಚಿಂತೆಯಿಲ್ಲ. ಹಿಂದಿರುಗಬೇಡಿ!' ಎಂದ ರಾಜನ ಮಾತನ್ನು ಶಿರಸಾವಹಿಸಿ, ಸೈನಿಕ, ರಥಿಕ, ಸಾದಿಗಳು ಪಾಂಡವ ಬಲವನ್ನು ಮುತ್ತಿ ವೀರವಿಹಾರಗೈದರು. ಅವರನ್ನು ಸುತ್ತುಗಟ್ಟಿ ಪಾಂಡವಯೋಧರು ನಿಶ್ಶೇಷವಾಗಿ ನಾಶಪಡಿಸಿದರು. ಸಾವಿರಾರು ರಾಜನ್ಯರಲ್ಲಿ ದುರ್ಯೋಧನನೊಬ್ಬನು ಉಳಿದನು. ಏಕದಶಾಕ್ಷೌಹಿಣಿಗಳಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮರು ಮೂವರಲ್ಲದೆ ಯಾವ ರಥಿಕನೂ ಉಳಿಯಲಿಲ್ಲ. ಸರ್ವಸಹಾಯ ಹೀನನಾದ ಸುಯೋಧನನು ಆಯೋಧನ ಭೂಮಿಯನ್ನು ವೀಕ್ಷಿಸಿ, ಕಣ್ಣೀರಿಟ್ಟನು ; ಎಡೆಬಿಡದೆ ನಿಟ್ಟುಸಿರಿಡುತ್ತಾ ಕುರುರಾಜನು ಪಾಂಡವವೀರರ ಜಯಘೋಷಗಳನ್ನೂ, ಶಂಖಾರವಗಳನ್ನೂ ಕೇಳಿ ನಿರುತ್ಸಾಹನಾದನು. ಮೇದಿನೀಮಂಡಲವೇ ಶೂನ್ಯವಾದಂತೆ ಕಂಡಿತಾ ಪಾಂಡವ ವೈರಿಗೆ! ಅವನು ರಣರಂಗವನ್ನು ಬಿಟ್ಟು ದೂರ ಹೋಗಬೇಕೆಂದು ನಿಶ್ಚಯಿಸಿ, ಒಂದು ಕುದುರೆಯನ್ನೇರಿ ಹೊರಟನು.

ಪಾಂಡವರ ಸೇನೆಯೂ ಸ್ವಲ್ಪಾವಶಿಷ್ಟವಾಗಿತ್ತು. ಇನ್ನೂರು ರಥಗಳ, ಏಳು ನೂರಾನೆಗಳ, ಐದುಸಾವಿರ ತುರಗಗಳ, ಹತ್ತುಸಾವಿರ ಪದಾತಿಗಳ ಸೇನೆಯೇ ಅವರಿಗೆ ಉಳಿದುದು. ಏಳಕ್ಷೌಹಿಣಿಯ ಸೇನೆಯಲ್ಲಿ ಉಳಿದ ಸೇನಾಭಾಗವನ್ನು ನೇತಾರನಾಗಿ ಧೃಷ್ಟದ್ಯುಮ್ನನು ನಡೆಸಿ, ವಿಜಯವನ್ನು ಸಂಪೂರ್ಣಗೊಳಿಸಲು, ರಣರಂಗದಲ್ಲಿ

ತಿರುಗುತ್ತಿದ್ದನು. ಸಮರರಂಗದಲ್ಲಿ ಸಹಾಯಕರಿಲ್ಲದೆ, ಹಿಡಿಯಲು ಆಯುಧವಿಲ್ಲದೆ, ಏರಲು ರಥವಿಲ್ಲದೆ, ಕಾದಲು ಧೈರ್ಯವಿಲ್ಲದೆ, ಕೌರವ ಮುಖ್ಯನು ರಣವಿಮುಖನಾದನು. ಅವನು ಹೋಗುವಾಗ ತಡೆದ ಸಾತ್ಯಕಿಯನ್ನು ಪ್ರಾಸದಿಂದ ಹೊಡೆದು, ಮೂರ್ಛೆಗೊಳಿಸಿ, ದುರ್ಯೋಧನನು ಅಡ್ಡಬಂದ ಪಾಂಡವ ಯೋಧರನ್ನನೇಕರನ್ನು ಚಂಡಾಡಿದನು. ಭೀಮಸೇನನು ನಿಶಿತಬಾಣಗಳಿಂದ ಅವನ ಪ್ರಾಸವನ್ನು ಖಂಡಿಸಿ, ಕುದುರೆಯನ್ನೂ ಸಂಹರಿಸಿದನು. ಆಗ ದುರ್ಯೋಧನನು ರಣರಂಗದಲ್ಲಿರಲು ಮನವಿಲ್ಲದೆ ಅಲ್ಲಿ ಕಾಲುಗಳು ನಿಲ್ಲದೆ ಗದಾಕಲಿತ ಭುಜನಾಗಿ, ಹಿಂದಿರುಗಿ ನೋಡುತ್ತಾ ಹೊರಟುಹೋದನು. ಏಕಾದಶಚಮೂಭರ್ತನಾದ ನಿನ್ನ ಪುತ್ರನು ಏಕಾಕಿಯಾಗಿ, ರಣಭೂಮಿಯಿಂದ ದೂರವಾಗಿ ಹೋಗುತ್ತಾ ಇಂತು ಚಿಂತಿಸಿದನು:

'ಆಹಾ ! ವಿದುರನಾಡಿದುದೆಲ್ಲವೂ ಸತ್ಯವಾಯಿತು. ಭೂಮಂಡಲದ ಕ್ಷತ್ರಿಯರೆಲ್ಲರೂ ಕುರುಕ್ಷೇತ್ರದ ರಣಾಂಗಣದಲ್ಲಿ ಮೃತ್ಯುವಿಗೆ ತುತ್ತಾಗಿ ಬಿದ್ದರು. ನನ್ನ ಬಲವೆಲ್ಲವೂ ನಿಹತವಾಯಿತು. ಸೋದರನೊಬ್ಬನಾದರೂ ಉಳಿಯಲಿಲ್ಲ. ಅಕಟಾ ! ಶಕುನಿ ವಧೆಯಿಂದ ಸಾಂಗವಾದ ಪಾಂಡವ ವಿಜಯವು ನನ್ನ ವಧೆಯಿಂದ ಸಂಪೂರ್ಣವಾಗುವುದು. ಆಗಲಿ! ನನಗಾದರೂ ಬದುಕಬೇಕೆಂದಿಲ್ಲ' ಇಂತು ಚಿಂತಿಸಿ ದುರ್ಯೋಧನನು ರಣರಂಗದಿಂದ ಕ್ರೋಶದೂರದಲ್ಲಿದ್ದ ಕೃಷ್ಣದ್ವೈಪಾಯನವೆಂಬ ಸರಸ್ತೀರವನ್ನು ಸೇರಿದನು. ಅವನ ಶರೀರವು ಶರವಿಕ್ಷತವಾಗಿತ್ತು. ಕವಚವು ಸೀಳಿತ್ತು. ಅವನ ಕಣ್ಣಿಂದ ಸಂತತವಾಗಿ ಅಶ್ರುಬಿಂದುಗಳುದುರುತ್ತಿದ್ದವು. ಗದೆ ಮಾತ್ರ ನಿಜಸ್ನೇಹಿತನಂತೆ, ಅವನ ಬದಿಯಲಿ ಹೊಂದಿಕೊಂಡಿತ್ತು. ಧೃತರಾಷ್ಟ್ರ ಮಹಾರಾಜ! ಏನು ಹೇಳಲಿ? ಇಂತಹ ದೀನಾವಸ್ಥೆಯಲ್ಲಿದ್ದ ಸಕಲ ರಾಜ ಕುಲನಾಥನು ನನ್ನ ಪಾಪಿ ಕಣ್ಣಿಗೆ ಬಿದ್ದನು. ಸಾತ್ಯಕಿಯು 'ಹೋಗು ! ಸಂಜಯ !' ಎಂದು ವೇದವ್ಯಾಸರ ಅಪ್ಪಣೆಯಂತೆ, ನನ್ನನ್ನು ಕೊಲ್ಲದೆ ಬಿಟ್ಟಾಗ; ನಾನು ಎಲ್ಲ ಸಮಾಚಾರವನ್ನು ನಿನಗರುಹಬೇಕೆಂದು ಬರುತ್ತಿದ್ದೆನು. ಆಗ ಸಾಯಂಕಾಲವಾಗುತ್ತಿತ್ತು. ನಿರಾಯುಧನು, ವಿಕವಚನು ಆಗಿದ್ದುದರಿಂದ ನಾನು ಧೃಷ್ಟದ್ಯುಮ್ನನಿಂದ ಬಿಡಲ್ಪಟ್ಟು ನಗರಾಭಿಮುಖನಾಗಿ ಬರುತ್ತಾ ನಿನ್ನ ಮಗನನ್ನು ಕಂಡೆನು.

ರಕ್ತಸಿಕ್ತಗಾತ್ರನು, ಗದಾಮಾತ್ರ ಸಹಾಯನು, ದುಃಖಾಶ್ರುಪೂರ್ಣನೇತ್ರನು ಆದ ಮಹಾರಾಜನನ್ನು ಕಂಡು, ನನ್ನ ದುಃಖದ ಕಟ್ಟೆ ಒಡೆದಂತಾಯಿತು. ನಾನು ರೋದಿಸಿ, ಆತನನ್ನು ಸಮೀಪಿಸಿ, ವಂದಿಸಿದೆನು. ಒಂದು ಮುಹೂರ್ತ ಕಾಲವೇನೂ ಮಾತಾಡದೆ ಸುಮ್ಮನೆ ಕಣ್ಣೀರಿಡುವ ಕೌರವೇಶನನ್ನು ಎಂತು ಸಮಾಧಾನಪಡಿಸುವುದೆಂದು ತೋಚದೆ, ನಾನೂ ಅಳುತ್ತಾ ನಿಂತೆನು. ಸರ್ವಪ್ರತ್ಯಕ್ಷದರ್ಶಿಯಾದ ನನ್ನಿಂದ ರಣರಂಗದಲ್ಲಿ ನಡೆದ ಎಲ್ಲ ವಿಧದ ವೃತ್ತಾಂತವನ್ನರಿತು, ದುರ್ಯೋಧನನು ಸೋದರರನ್ನೂ, ಕರ್ಣಾದಿ ಮಿತ್ರರನ್ನೂ, ಸಹಾಯಕ ರಾಜನ್ಯರನ್ನೂ ನೆನೆನೆನೆದು ರೋದಿಸಿದನು. ದೀರ್ಘವಾಗಿ ನಿಡುಸುಯ್ದು ದುರ್ಯೋಧನನು ನನ್ನನ್ನು ಕರೆದು, ಕೈಯಿಂದ ನನ್ನ ಕೈಪಿಡಿದು ಇಂತೆಂದನು:

'ಸಂಜಯ! ಜೀವದಿಂದ ನಗರಕ್ಕೆ ಹೋಗುತ್ತಿರುವುದೆಂದರೆ ನೀನೊಬ್ಬನೆ! ನನ್ನ ಸಹಾಯಕರೆಲ್ಲರೂ ಸತ್ತರು. ಪಾಂಡವರು ಸಸಹಾಯರಾಗಿರುವರು. ಪ್ರಜ್ಞಾಚಕ್ಷುವಾದ ನರೇಶನನ್ನು ಕಂಡು ಎಲ್ಲ ವೃತ್ತಾಂತವನ್ನೂ ತಿಳಿಸು! ನಾನು ದ್ವೈಪಾಯನ ಹ್ರದವನ್ನು ಪ್ರವೇಶಿಸಿರುವೆನೆಂದೂ ಹೇಳು! ಪುತ್ರ, ಭ್ರಾತೃ, ಮಿತ್ರರಹಿತನಾಗಿ, ಪಾಂಡವರಿಗೆ ಸೋತಿರುವ ನನಗೆ ಜೀವದಾಶೆ ಉಳಿದಿಲ್ಲ. ಬಲು ಗಾಯಗೊಂಡು, ವಿಶ್ರಾಂತಿ ಪಡೆಯಲೆಣಿಸಿ, ಹ್ರದವನ್ನು ಹೋಗುವೆನು. ಮುಂದೆ ನನ್ನವರು ಬದುಕಿದರೆ ನಾನೂ ಬದುಕಿರುವೆನು. ಇಲ್ಲದಿರೆ ನಾನೂ ಗದಾಯುದ್ಧದಲ್ಲಿ ಭೀಮನ ಗದೆಯಿಂದ ಸಾಯುವೆನೆಂದೂ ತಿಳಿಸು.'

ಇಂತು ಹೇಳಿ ದುರ್ಯೋಧನನು ದ್ವೈಪಾಯನ ಹ್ರದವನ್ನು ಹೊಕ್ಕನು. ವಿದ್ಯಾಬಲದಿಂದ ಜಲವನ್ನು ಸಂಸ್ತಂಭಿಸಿ ಮಹಾರಾಜನು ಕೂತಿರಲು, ಅಶ್ವತ್ಥಾಮ, ಗೌತಮ, ಕೃತವರ್ಮರು ಅವನನ್ನು ಹುಡುಕಿಕೊಂಡು ಬಂದರು. ಅವರು ನನ್ನನ್ನು ಕಂಡು, ಬೇಗಬೇಗ ತಮ್ಮ ಕುದುರೆಗಳನ್ನು ಹೊಡೆದುಕೊಂಡು, ನನ್ನನ್ನು ಸಮೀಪಿಸಿದರು. 'ಎಲ್ಲಿರುವನು ಮಹಾರಾಜ! ಹೇಳು ಸಂಜಯ! ಅವನು ಬದುಕಿರುವನೋ? ಇಲ್ಲವೋ?' ಎಂದು ಕೇಳಿದರು.

ನಾನು ಹ್ರದದಲ್ಲಡಗಿರುವ ಮಹಾರಾಜನನ್ನು ಅವರಿಗೆ ತಿಳಿಸಿದೆನು. 'ಹಾ! ಕಷ್ಟಂ! ಎಂತಹ ಅವಸ್ಥೆ ಬಂತು ಸಕಲ ಮಹೀಮಂಡಲವನ್ನಾಳುವ ಮಹಾರಾಜನಿಗೆ! ನಾವು ಮೂವರು ಇನ್ನೂ ಬದುಕಿರುವೆವೆಂದು ಅವನಿಗೆ ತಿಳಿದಿರಲಿಕ್ಕಿಲ್ಲ' ಎಂದು ಅವರು ಅಲ್ಲೇ ಕೂತು, ವಿಲಪಿಸುತ್ತಿದ್ದರು. ನಾನು ಶಿಬಿರವನ್ನು ಸೇರಿದೆನು' ಇಂತು ಸಂಜಯನು ನುಡಿದನು.

ಸೂರ್ಯನು ಅಸ್ತಂಗತನಾಗುತ್ತಿದ್ದನು. ಸರ್ವ ಕೌರವಕ್ಷಯವನ್ನು ತಿಳಿದು ಶಿಬಿರದ ವೃದ್ಧರು, ಸ್ತ್ರೀಬಾಲ ಜನರು ರೋದಿಸಿದರು. ಅವರ ಆರ್ತಧ್ವನಿಯು ರೋದಸೀಕುಹರವನ್ನು ತುಂಬಿ ಬಹು ಕರುಣಾಜನಕವಾಗಿತ್ತು. ಕುರರೀ ಪಕ್ಷಿಗಳಂತೆ ರೋದಿಸುವ ರಮಣಿಯರು ಎದೆಬಡಿದುಕೊಂಡು, ತಲೆಚಚ್ಚಿಕೊಂಡರು. ಹಾಹಾಕಾರಗಳು ಸಂತತವಾದವು. ದುರ್ಯೋಧನಾಮಾತ್ಯರು ಕಣ್ಣೀರಿಡುತ್ತಾ, ರಾಜದಾರೆಯರನ್ನೂ ಪರಿವಾರವನ್ನೂ ಕರೆದುಕೊಂಡು, ಹಸ್ತಿನಾವತಿಗೆ ತೆರಳಿದರು. ವೇತ್ರಹಸ್ತರು ಬಂಡಿಗಳಲ್ಲಿ ಶಯನೀಯಗಳನ್ನು ವಿಭೂಷಣಗಳನ್ನು ಆಸನ ಪಟಗೃಹಗಳನ್ನು ಹೇರಿ, ಹಸ್ತಿನಾವತಿಗೆ ಕೊಂಡುಹೋದರು. ಅಶ್ವತರೀ ರಥಗಳಲ್ಲಿ ಮಿಕ್ಕ ವೃದ್ಧಾದಿ ಜನರು ಹೊರಟರು.

ಅಸೂರ್ಯಂಪಶ್ಯರಾದ ರಾಜನಾರಿಯರು ಅಂದು ಅನಾವರಣರಾಗಿ ನಗರವನ್ನು ಪ್ರವೇಶಿಸುವುದನ್ನು ಕಂಡು ಪುರಜನರು ಅನುಕಂಪಾಯುತರಾಗಿ ವಿಲಪಿಸಿದರು. ಆಗೋಪಾಲಾವಿಪಾಲವಾದ ಹಸ್ತಿನಗರ ಜನಸಮೂಹವೇ ಅವರ ದೀನಾವಸ್ಥೆಗೆ ಕಣ್ಣೀರಿಟ್ಟು ಮರುಗಿತು.

ಯುಯುತ್ಸುವು ಸಮಯವನ್ನರಿತು ಕರ್ತವ್ಯವನ್ನು ನಿರ್ವಹಿಸಲೆಣಿಸಿದನು. 'ಸರ್ವ

ಕೌರವರು ಹತರಾದರು. ಭೀಷ್ಮನು ಶರಪಂಜರದಲ್ಲಿರುವನು. ದ್ರೋಣ ಕರ್ಣ ಶಲ್ಯರಾದಿ ಮಹಾವೀರರು ರಣನಿಹತರಾದರು. ಧೃತರಾಷ್ಟ್ರನ ಮಕ್ಕಳಲ್ಲಿ ಉಳಿದಿರುವನೆಂದರೆ ನಾನೊಬ್ಬನೆ! ದುರ್ಯೋಧನನು ವನಪ್ರವೇಶ ಮಾಡಿದರೂ ಭೀಮಸೇನನ ಗದಾಘಾತದಿಂದ ತಪ್ಪಿಸಿಕೊಳ್ಳಲಾರನು. ಭಯವಿಹ್ವಲರಾಗಿ ಕುರು ವೀರ ಪರಿವಾರವು ತತ್ತರಿಸುತ್ತಿದೆ. ಅವರನ್ನು ಕರೆದುಕೊಂಡು ಹಸ್ತಿನಾವತಿಯನ್ನು ಸೇರುವುದು ಸರಿ ಎಂದು ತೋರುತ್ತಿದೆ' ಎಂದು ಚಿಂತಿಸಿ, ಯುಯುತ್ಸುವು ಧರ್ಮರಾಜನನ್ನು ಅಪ್ಪಣೆ ಕೇಳಿದನು.

ಧರ್ಮಜನು ವೇಶ್ಯಾಪುತ್ರನ ಮನದ ತಾಪವನ್ನರಿತು, ಹೋಗೆಂದು ಅಪ್ಪಣೆ ಕೊಟ್ಟನು. ಯುಯುತ್ಸುವು ರಥವನ್ನೇರಿ, ಶಿಬಿರವನ್ನು ಸೇರಿದನು. ಅಲ್ಲಿಂದ ಉಳಿದ ರಾಜಪತ್ನಿಯರನ್ನು, ಮಿಕ್ಕ ಸ್ತ್ರೀಜನವನ್ನು, ಪಾಚಕಾದಿ ಪರಿವಾರವನ್ನು, ಕಂಚುಕಿ ದ್ವಾರಪಾಲರನ್ನು ತಾನಾಗಿ ಮುಂದೆ ಸಾಗುತ್ತಾ ಶತ್ರುಹಸ್ತಗತರಾಗದಂತೆ ಕಾಪಾಡಿ ಊರು ಸೇರಿಸಿದನು. ಅಲ್ಲಿ ಸಂಜಯನನ್ನು ಕಂಡು 'ಸಂಜಯ! ಶಕುನಿಯು ಹತನಾದನು. ಸಕಲ ಬಂಧುಮಿತ್ರವೀರರಹಿತನಾದ ದುರ್ಯೋಧನನು ಗದಾಪಾಣಿಯಾಗಿ, ಪ್ರಾಙ್ಮುಖನಾಗಿ, ತೆರಳಿದನು. ಸ್ಕಂಧಾವಾರವು ಭಯವ್ಯಾಕುಲವಾಗಿತ್ತು. ಅದನ್ನು ಕಂಡು, ನಾನು ಧರ್ಮರಾಜನ ಅನುಜ್ಞೆಯನ್ನು ಪಡೆದು, ರಾಜದಾರೆಯರನ್ನು ಪರಿವಾರವನ್ನು ಕರೆತಂದಿರುವೆನು' ಎಂದನು. ಜನಮೇಜಯ! ಆಗ ಸಂಜಯನು, 'ಯುಯುತ್ಸು! ಕುಲಧರ್ಮವನ್ನು ರಕ್ಷಿಸದೆ! ಕುಲನಾರಿಯರನ್ನು ಉಳಿಸಿ ತಂದೆ! ಅಂಶುಮಂತನಂತೆ ನಿಶ್ಶೇಷವಾಗಿರುವ ಕುರುಕುಲಕ್ಕೆ ನೀನು ಉಳಿದಿರುವೆ! ಲುಬ್ಧನು, ದೂರಾಲೋಚನಾರಹಿತನು, ಆದ ಧೃತರಾಷ್ಟ್ರನಿಗೆ ಗತಿ ಇಲ್ಲದಾಯಿತು. ಅವನಿಗೆ ಊರುಗೋಲಾಗಿ ನೀನಾದರು ಉಳಿದಿರುವೆಯಲ್ಲ!' ಎಂದು ಅವನನ್ನು ಅಂದು ರಾತ್ರಿ, ಅಲ್ಲೇ ಇದ್ದು ಮರುದಿನ ಮತ್ತೆ ಧರ್ಮರಾಜನಲ್ಲಿಗೆ ಹೋಗೆಂದು ಬೇಡಿದನು. ಇಂತು ನುಡಿದು, ಕಣ್ಣೀರಿಡುತ್ತಾ ಸಂಜಯನು, ಯುಯತ್ಸುವಿನನ್ನು ಬಿಟ್ಟು, ಧೃತರಾಷ್ಟ್ರನ ಪ್ರಾಸಾದವನ್ನು ಸೇರ ಪೋದನು.

ಅದು ನಿರಾನಂದವಾಗಿತ್ತು. ಅಲ್ಲಿ ಜೀವಕಳೆಯೇ ನಷ್ಟವಾದಂತಿತ್ತು. ಬೇರಿಂದ ಕಿತ್ತೊಗೆದ ಗಿಡಗಳಿಂದ ಪಾಳಾಗಿ ಕಾಣಸುವ ಉದ್ಯಾನದಂತೆ, ರಾಜಾಂತಃಪುರವು ನೀರವಭಯದವಾಗಿತ್ತು. ಯುಯುತ್ಸುವು ತನ್ನ ಮನೆಯಲ್ಲಿ ಆ ರಾತ್ರಿ ಕಳೆದು, ಮರುದಿನ ಹೋಗಲೆಣಿಸಿ, ನಿಂತನು.

ಶಲ್ಯಪರ್ವ ಮುಗಿಯಿತು



# ೧೦. ಗದಾಪರ್ವ

## ೧. ಧರ್ಮ ದುರ್ಯೋಧನ ಸಂವಾದ

ಶ್ರೀ ವೈಶಂಪಾಯನನು ಶ್ರೀ ಜನಮೇಜಯನಿಗೆ ನಿರೂಪಿಸಿದನು :

'ರಾಜನ್ ! ಸಂಜಯ ಮುಖದಿಂದ ಸಮರ ರಂಗದಲ್ಲಿ ನಡೆದ ಸರ್ವಸೈನ್ಯ ಸಂಹಾರ ವೃತ್ತಾಂತವನ್ನು ಕೇಳಿ, ಅತ್ಯಂತ ಖಿನ್ನನಾದ ಅಂಧರಾಜನು, 'ಸಂಜಯ ! ಪಾಂಡವರಿಂದ ಹತರಾಗದೆ ಕೃತವರ್ಮ ಕೃಪಾಶ್ವತ್ಥಾಮರು ಮೂವರು ಮಹಾರಥರು ಮಾತ್ರ ಉಳಿದರೆಂದೆ! ಮತ್ತಾರು ಉಳಿದಿರುವರು? ಮಂದಬುದ್ಧಿಯಾದ ನನ್ನ ನಂದನನು ಸರ್ವ ಮಿತ್ರಬಂಧುಗಳಿಗೆರವಾಗಿ ಮುಂದೇನು, ಮಾಡಿದನು ? ಅಶ್ವತ್ಥಾಮ ಮುಂತಾದವರೇನು ಮಾಡಿದರು ?' ಎಂದು ಕೇಳಿದನು.

ಸಂಜಯನು ನಿರೂಪಿಸಿದನು :

'ರಾಜನ್ ! ಹತರಾದ ಕ್ಷತ್ರಿಯರ ವನಿತೆಯರು ತಂತಮ್ಮ ಪರಿವಾರ ಗುಪ್ತರಾಗಿ ರಣರಂಗದ ಸ್ಕಂಧಾವಾರ ಶಿಬಿರಗಳನ್ನು ಬಿಟ್ಟು, ದುಃಖದ ಕಣ್ಣೀರಿನ ಕಡಲಿನಲ್ಲಿ ನಿಟ್ಟುಸಿರಿನ ಬಿರುಗಾಳಿಗೆ ಸಿಕ್ಕಂತಾಗಿ ದಿಕ್ಕೆಟ್ಟು ಕೊಚ್ಚಿಹೋದರು. ಶಿಬಿರಗಳು ಶೂನ್ಯವಾದವು. ಪಾಂಡುಪುತ್ರರ ಜಯನಿನಾದಗಳು ನಿರಾತಂಕವಾಗಿ ಕೇಳಬರುತ್ತಿದ್ದವು. ಸಾಯಂಕಾಲವಾಗುತ್ತಿತ್ತು. ಅಶ್ವತ್ಥಾಮಾದಿ ವೀರರಿಗೆ ರಣರಂಗದಲ್ಲಿರಲು ಮನಸ್ಸಾಗಲಿಲ್ಲ. ಅವರು ಸುಯೋಧನನನ್ನು ಹುಡುಕಿಕೊಂಡು, ಹ್ರದವನ್ನು ಸೇರಿ ಅಲ್ಲಿ ಅಡಗಿದ್ದ ರಾಜವೃತ್ತಾಂತವನ್ನು ನನ್ನಿಂದ ತಿಳಿದರು.

ಧರ್ಮರಾಜನೂ ದುರ್ಯೋಧನನನ್ನು ವಧಿಸಿ, ವಿಜಯವನ್ನು ಸಾಂಗವಾಗಿಸಲು ಕೋರಿ, ತನ್ನವರಿಂದ ಕೂಡಿ, ಕುರುರಾಜನಿಗಾಗಿ ಎಲ್ಲ ಕಡೆ ಹುಡುಕಿದನು. ಕ್ರುದ್ಧರಾದ ಪಾಂಡುಪುತ್ರರ ವೀರಾಲಾಪಗಳು ರಣರಂಗದ ರೋದಸಿಯಲ್ಲಿ ಪ್ರತಿಧ್ವನಿಸಿ, ತಮಗೆ ತಾವೇ ಉತ್ತರರೂಪವಾಗಿ ಹಿಂದಿರುಗಿದವು. ಎಷ್ಟು ಹುಡುಕಿದರೂ ಕುರುರಾಜನ ಕುರುಹನ್ನು ಕಾಣಲಾರದೆ, ಪಾಂಡವ ಸೈನಿಕರು ಶ್ರಾಂತವಾಹನರಾಗಿ, ಶಿಬಿರಗಳಿಗೆ ಹಿಂದಿರುಗಿದರು. ಪಾಂಡವರೂ ಶಿಬಿರಗಳಲ್ಲಿ ಕೂತು, ಕುರುರಾಜನನ್ನು ಕಾಣದಾದುದಕ್ಕಾಗಿ, ಕುತುಕದಿಂದ ಚಿಂತಿಸುತ್ತಿದ್ದರು.

ರಾಜನ್ ! ನಿನ್ನ ಮಗನು ಹ್ರದವನ್ನು ಹೊಕ್ಕವನೇ ಜಲವನ್ನು ಸಂಸ್ತಂಭಿಸಿ, ತನಗೆ ದುರ್ವಾಸರಿತ್ತ ಮೃತಸಂಜೀವನೀ ಮಂತ್ರವನ್ನು ಜಪಿಸತೊಡಗಿದನು. ಆ ಮಂತ್ರವನ್ನೂ ಏಳುದಿನ ಬಿಡದೆ ಜಪಿಸಿ, ದುರ್ಯೋಧನನು ಸತ್ತ ಕುರುವೀರರನ್ನು ಬದುಕಿಸಲೆಣಿಸಿದನು. ಆಗ ಅವನು ದುರ್ಜಯನೇ ಆಗುತ್ತಿದ್ದನು. ಸರ್ವನಾಶವಾಗಿದ್ದೂ ದುರ್ಯೋಧನನ

ದುರಾಶಾವಿಷಲತೆಯು, ಮತ್ತೆ ಚಿಗುರಿ ಮೇಲೇಳಲು ಹವಣಿಸಿತು. ಮನುಜನೊಂದು ಬಗೆದರೆ ಮಾಧವನಿನ್ನೊಂದು ಬಗೆವನಲ್ಲವೇ ? ದುರ್ಯೋಧನನು ಅಶ್ವತ್ಥಾಮಾದಿಗಳ ಕರೆಗೆ ಓಗೊಟ್ಟು ಜಪವನ್ನು ಬಿಟ್ಟು ಮೇಲಕ್ಕೆದ್ದು ಬರಬೇಕಾಯಿತು.

'ರಾಜನ್ ! ಎದ್ದು ಬಾ ! ಯುದ್ಧವನ್ನು ಮುಂದುವರಿಸೋಣ ! ಗೆದ್ದು ಪೃಥ್ವಿಯನ್ನಾಳು ! ಇಲ್ಲದಿರೆ ಸತ್ತು ಸ್ವರ್ಗವನ್ನು ಸೇರು ! ದುರ್ಯೋಧನ ! ಶತ್ರುಬಲವೂ ಕ್ಷೀಣವಾಗಿದೆ. ಉಳಿದ ಕೆಲಭಟರೂ ಅಲಸಿರುವರು. ನಿನ್ನ ಪರಾಕ್ರಮ ವೇಗವನ್ನು ಅವರು ಸಹಿಸಲಾರರು. ನಾವೂ ನಿನಗೆ ರಕ್ಷಕರಾಗಿರುವೆವು. ಹಾಗೂ ನೆರವಾಗಿ ನಿಂತು ಕಡಿದಾಡುವೆವು. ಎದ್ದು ಬಾ ! ' ಎಂದು ಕರೆದ ಗುರುಸುತನಿಗೆ ದುರ್ಯೋಧನನು ನೀರಿನಲ್ಲಿಂದಲೇ 'ಸರ್ವ ವೀರಕ್ಷಯವಾದ ಕುರುಕ್ಷೇತ್ರದ ಪ್ರಚಂಡ ಯುದ್ಧದಲ್ಲಿ ಅಳಿಯದೆ ಉಳಿದಿರುವ ನಿಮ್ಮನ್ನು ಕಂಡು ಸಂಭ್ರಮವಾಗಿದೆ. ನಾನು ಬಲು ಗಾಯಗೊಂಡಿರುವೆನು. ಅಲಸಿಕೆ ತೀರಲಿ! ನೀವೂ ಶ್ರಾಂತರಾಗಿರುವಿರಿ! ಸ್ವಲ್ಪ ವಿಶ್ರಮಿಸಿ, ಪುನಃ ವಿಜೃಂಭಿಸಿ, ಶತ್ರುಗಳನ್ನು ಗೆಲ್ಲೋಣ! ಪಾಂಡವರ ವಿಜಯ ಸಂರಂಭವು ಆರಲಿ! ಈಗ ಅವರನ್ನು ಕೆಣಕಲಾಗದು. ನಿಮ್ಮ ರಾಜಭಕ್ತಿಯು ಮೆಚ್ಚತಕ್ಕದ್ದಾಗಿದೆ! ಈ ರಾತ್ರಿ ಕಳೆಯಲಿ! ನಾಳೆ ಬೆಳಗಾಗುತ್ತಲೇ ನಿಮ್ಮೊಡನೆ ಕೂಡಿ ಶತ್ರುಗಳನ್ನು ಕೊಲ್ಲುವೆನು. ನನಗೆ ವಿಶ್ರಾಂತಿ ಕೊಡಿ! ' ಎಂದು ಬದುಲುತ್ತರವಿತ್ತು ಸುಮ್ಮನಾದನು.

ಆ ಮಾತಿಗೊಪ್ಪದೆ ಅಶ್ವತ್ಥಾಮನಿಂತೆಂದನು: 'ರಾಜನ್! ಯುದ್ಧದುರ್ಮದನಾದ ನಿನ್ನಂತಹ ವೀರನಿಗೆ ಶತ್ರುಗಳಿಗಂಜಿ ನೀರಿನಲ್ಲಡಗಿರುವುದು ಶೋಭಾಕರವಲ್ಲ. ಎದ್ದು ಬಾ ! ಶತ್ರುಗಳನ್ನು ಮುತ್ತಿ ಸೀಳಿಸಿಗಿಯೋಣ ! ನನ್ನ ಪ್ರತಿಜ್ಞೆಯನ್ನು ಕೇಳು ! ನಾನು ಮಾಡಿರುವ ಇಷ್ಟಾಪೂರ್ತಗಳನ್ನು ಸತ್ಯದಾನಗಳನ್ನು ಮುಟ್ಟಿ ಆಣೆಯಿಟ್ಟಾಡುವೆನು. ಕೇಳು ! ಇಂದು ಸೋಮಕ ಪಾಂಚಾಲರನ್ನು ಸರ್ವರನ್ನೂ ಸಂಹರಿಸುವೆನು. ಇಂದಿನ ನಿಶೆಯು ನಾಳಿನ ಉಷೆಯನ್ನು ಸೇರುವ ಮುನ್ನ, ನಾನವರನ್ನು ಕೊಲ್ಲದಿದ್ದರೆ, ಯಜ್ಞಶೀಲರ ಪುಣ್ಯಲೋಕಗಳೆನಗಾಗದಿರಲಿ ! ಸರ್ವ ಪಾಂಚಾಲರನ್ನು ಸಂಯಮನಿಗೆ ಮುಟ್ಟಿಸಿ, ಆಮೇಲೆ ಕವಚವನ್ನು ಬಿಚ್ಚುವೆನು, ಇದು ಸತ್ಯ ! '

ಇಂತವರು ಮಾತಾಡುತ್ತಿರಲು, ಅಲ್ಲಿಗೆ ಕೆಲವರು ವ್ಯಾಧರು ಬಂದರು. ಮಾಂಸಾಭಾರಗಳನ್ನು ಹೊತ್ತು ನೀರಡಿಸಿ, ದ್ವೈಪಾಯನ ಸರವನ್ನು ಸೇರಲು ಬರುವ ಬೇಡರನ್ನು ನೋಡದೆ, ಅಶ್ವತ್ಥಾಮಾದಿ ವೀರರು ಕುರುರಾಜನಿಗೆ ನೀರಿಂದ ಮೇಲೆದ್ದು ಬರುವಂತೆ ಪ್ರಾರ್ಥಿಸಿ ನುಡಿಯುತ್ತಿದ್ದರು. ಭೀಮಸೇನನ ಶಾಸನದಂತೆ ಬೇಟೆಯಾಡಿ, ಮೇಧ್ಯ ಪಶುಮಾಂಸಗಳನ್ನು ತಂದರ್ಪಿಸುತ್ತಿದ್ದ ಮೃಗವ್ಯಾಧರು ಸದ್ದುಮಾಡದೆ, ಹೊದರುಗಳಲ್ಲವಿತು, ಅವರ ಸಂಭಾಷಣವನ್ನೆಲ್ಲ ಕೇಳಿ, ವಿಸ್ಮಯಭರಿತರಾದರು. ದುರ್ಯೋಧನನ ವಚನವನ್ನು ಕೇಳಿ ಅವರು ದಿಗ್ಭ್ರಾಂತರಾದರು. ಅವನು ವಿಶಸನ ವಿಮುಖನಾಗಿ ಮೇಲೆದ್ದು ಬರದಿರಲು, ಇವರು ಯುದ್ಧಕಾಂಕ್ಷಿಗಳಾಗಿ ಅವನನ್ನು ನಿರ್ಬಂಧ ಪಡಿಸುತ್ತಿದ್ದರು. ಎಲ್ಲವನ್ನೂ ಕೇಳಿ ವ್ಯಾಧರು, ಮೆಲ್ಲನೆ ಅಡಗಿ ಕೂತಿದ್ದ ಹೊದರುಗಳಿಂದ

ಹಿಂದೆ ಹಿಂದೆ ಸರಿದು, ಅಲ್ಲಿ ಒಂದೆಡೆ ಕೂತು ಆಲೋಚಿಸಿದರು. 'ಪಾಂಡುಪುತ್ರರು ಹುಡುಕಿ ಕಾಣಲಾರದೆ ನಮ್ಮನ್ನೂ ಕಂಡಿರೇನೆಂದು ಕೇಳಿದ ದುರ್ಯೋಧನನ ಇರುವಿಕೆಯು, ದೈವವಶದಿಂದ ನಮಗೆ ಗೊತ್ತಾಯಿತು. ಹ್ರದದಲ್ಲಡಗಿದ ಕುರುರಾಜನು ಮತ್ತು ಅವನೊಡಗೂಡಿ ಮಾತಾಡುತ್ತಿರುವ ಮೂವರು ವೀರರು ಕೂಡ ನಮ್ಮನ್ನು ನೋಡಿಲ್ಲ. ಈ ಕ್ಷಣವೇ ಹೋಗಿ ದುರ್ಯೋಧನನ ವೃತ್ತಿಯನ್ನು ಧರ್ಮರಾಜನಿಗೆ ತಿಳಿಸೋಣ! ರೋಷ ಪೂರಿತನಾಗಿರುವ ದುರ್ಯೋಧನನ ಹ್ರದಪ್ರವೇಶವನ್ನು ತಿಳಿದು, ಭೀಮಸೇನನು ಪ್ರೀತನಾಗಿ ನಮಗೆ ಬಹು ಧನಾದಿಗಳನ್ನಿತ್ತು, ಸತ್ಕರಿಸುವನು. ಈ ಮಾಂಸಭಾರಗಳಿಂದೇನಾದೀತು! ನಡೆಯಿರಿ ಪಾಂಡುಪುತ್ರರ ಶಿಬಿರಕ್ಕೆ!'

ಇಂತು ಚಿಂತಿಸಿ, ಮೃಗವ್ಯಾಧರು ಸರಸ್ತೀರದಿಂದ ಸರಸರ ಸರಿದು, ಮಾಂಸಭಾರಗಳನ್ನು ಬಚ್ಚಿಟ್ಟು ಓಡುತ್ತಾ ಶಿಬಿರವನ್ನು ಸೇರಿದರು. ಪಾಂಡವರು ಪಾಪಿ ದುರ್ಯೋಧನನಿಗಾಗಿ ಹುಡುಕಿ, ಕಾಣದೆ, 'ಪ್ರತಿಜ್ಞಾಪಾರವನ್ನು ಸೇರಿ, ಭೀಮಸೇನನು ಕೃತಾರ್ಥನಾಗುವುದೆಂತು ? ಎಂತ ಶತ್ರುಶೇಷವು ನಿಶ್ಶೇಷವಾಗುವುದು ?' ಎಂದು ಚಿಂತಿಸುತ್ತಿದ್ದರು. ಅವರ ಚಾರರು, ಕುರುಕ್ಷೇತ್ರದ ಪ್ರತ್ಯಂಗುಲವನ್ನು ಬಿಡದೆ ಹುಡುಕಿ, ಕುರುರಾಜನ ಕುರುಹು ಕಾಣದೆ, ಹಿಂದಿರುಗಿ, ಧರ್ಮರಾಜನಿಗೆ ದುರ್ಯೋಧನ ತಿರೋಧಾನವನ್ನು ತಿಳಿಸುತ್ತಿದ್ದರು. ಆ ಹೊತ್ತಿಗೆ ಮೃಗವ್ಯಾಧರು ಧಾವಿಸಿಬಂದು, ದ್ವಾರಪಾಲರ ನಿರೋಧವನ್ನು ಲೆಕ್ಕಿಸದೆ, ಶಿಬಿರವನ್ನು ಹೊಕ್ಕು, ಭೀಮಸೇನನಿಗೆ ವಂದಿಸಿ, ಕಂಡು ಕೇಳಿದ ಸರ್ವ ವೃತ್ತಾಂತವನ್ನು ಆತನಿಗೆ ತಿಳಿಸಿದರು. ಭೀಮನು ಪ್ರೀತನಾಗಿ, ಅವರನ್ನು ಧನವಸ್ತ್ರಗಳಿಂದ ಸತ್ಕರಿಸಿ, ಕಳಿಸಿದನು.

'ರಾಜನ್! ದುರ್ಯೋಧನನು ದ್ವೈಪಾಯನ ಹ್ರದದಲ್ಲಿ ಅಡಗಿ ಕೂತಿರುವನು. ಅವನನ್ನು ಮೇಲಕ್ಕೆ ಬರುವಂತೆ ಪ್ರೇರಿಸಿ, ಅಶ್ವತ್ಥಾಮ ಕೃಪಕೃತವರ್ಮರು ರಣ ಕುತೂಹಲದಿಂದ ನಮ್ಮೊಡನೆ ಕಾದಲು ಬರುವರಂತೆ! ಈ ಸುದ್ದಿಯನ್ನು ನನ್ನ ಮೃಗವ್ಯಾಧರು ತಂದಿರುವರು' ಎಂದ ಭೀಮಸೇನನ ವಚನದಿಂದ ಧರ್ಮರಾಜಾದಿಗಳು ಪ್ರಹರ್ಷಿತರಾದರು. ತತ್ಕ್ಷಣವೇ ಅವರೆಲ್ಲರೂ ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು, ಅಲ್ಲಿಂದ ತೆರಳಿ, ಸರಸ್ತೀರವನ್ನು ಸೇರಿದರು. ಪಾಂಡವ ಪಾಂಚಾಲ ಸೈನಿಕರು ಸಿಂಹನಾದಗಳನ್ನು ಮಾಡುತ್ತಾ ಅವರನ್ನು ಅನುಸರಿಸಿ ಬಂದರು. ಸಿಕ್ಕ ದುರ್ಯೋಧನ! ಕಾಣಬಂದನು ಪಾಪಿ ಕುರುರಾಜನು!' ಎಂದು ಕೂಗುತ್ತಾ ಸೋಮಕಭಟರು ಸರಸ್ತೀರದಲ್ಲಿ ನಿಂತು ಗದ್ದಲವೆಬ್ಬಿಸಿದರು. ವೇಗದಿಂದ ಬರುವ ರಥಗಳ ನೇಮೀಶಬ್ದಗಳಿಂದಲು, ಸೈನಿಕರ ಸಿಂಹನಾದಗಳಿಂದಲು ದಿಗಂತಗಳು ಪ್ರತಿಧ್ವನಿಸಿದವು. ಬರುವ ಪಾಂಡವರ ಸದ್ದನ್ನು ಕೇಳಿ, ಕೃತವರ್ಮ ಕೃಪಾಶ್ವತ್ಥಾಮರು ದುರ್ಯೋಧನನ ಅನುಜ್ಞೆಪಡೆದು ವನವನ್ನು ಪ್ರವೇಶಿಸಿದರು. ದುರ್ಯೋಧನನು ಮತ್ತೆ ಹ್ರದವನ್ನು ಹೊಕ್ಕು, ಜಲವನ್ನು ಸಂಸ್ತಂಭಿಸಿ ಕೂತನು. ಅಶ್ವತ್ಥಾಮಾದಿಗಳು ಒಂದು ಆಲದ ಮರದಡಿಯಲ್ಲಿ ಅಡಗಿ, ಕುರುರಾಜನನ್ನು ಕುರಿತು ಚಿಂತಿಸುತ್ತಿದ್ದರು.

ಭೀಮಸೇನಾರ್ಜುನರು, ನಕುಲಸಹದೇವರು, ಧೃಷ್ಟದ್ಯುಮ್ನ ಶಿಖಂಡಿಯರು ಸಾತ್ಯಕಿ ದ್ರೌಪದೇಯರು, ಧರ್ಮಕೃಷ್ಣರನ್ನು ಹಿಂಬಾಲಿಸಿ ಬಂದರು. ಧರ್ಮರಾಜನು ದ್ವೈಪಾಯನ ಹ್ರದವನ್ನು ಸೇರಿ, ಅದರ ಅಗಾಧಜಲದಲ್ಲಿ ಅಡಗಿದ್ದ ದುರ್ಯೋಧನನನ್ನು, ಹುತ್ತಿನಿಂದ ಹಾವಿನನ್ನಂತೆ, ಹೊರತೆಗೆಯಲೆಣಿಸಿದನು. ರಥಾದಿ ವಾಹನಗಳಿಂದ ಇಳಿದು ಪಾಂಚಾಲ ಸೃಂಜಯ ಸೋಮಕ ಸೈನಿಕರು, ಸ್ತಂಭಿತವಾಗಿರುವ ಹ್ರದದ ಸುತ್ತಲು ನಿಂತರು. ಧರ್ಮರಾಜನು ಆಶ್ಚರ್ಯಭರಿತನಾಗಿ, ಅಪ್ರಮೇಯ ಮಹಿಮನಾದ ಅಚ್ಯುತನಿಗಿಂತೆಂದನು:

'ಶ್ರೀಕೃಷ್ಣ! ಕಂಡೆಯಾ ದುಷ್ಟರಿಗಿತ್ತ ಮಂತ್ರದ ದುಷ್ಫಲವನ್ನು! ಹ್ರದವನ್ನೀಗ ಮನುಜ ಮಾತ್ರರಿಂದ ಸುಪ್ರವೇಶವಾಗದಂತೆ, ಸಂಸ್ತಂಭಿಸಿ, ದುರ್ವಾಸರಿತ್ತ ಮಂತ್ರದಿಂದ ನಮ್ಮನ್ನು ನಾಶಪಡಿಸಲೆಣಿಸುವ ದುರ್ಯೋಧನನನ್ನು ಹೊರ ಸೆಳೆದು, ಸಂಹರಿಸದೆ, ವಿಧಿಯಿಲ್ಲ. ದ್ಯೂತೋಪಾಯ ಚತುರನಾದ ಶಕುನಿಯಿಂದ ರಹಿತನಾದ ಕುಟಿಲನಿಗೆ ಮಂತ್ರೋಪಾಯವೇ ಶರಣ್ಯವಾಯಿತು. ಇವನ ದುರ್ಮಂತ್ರವನ್ನು ಕೆಡಿಸಿ, ಸಾಕ್ಷಾದಿಂದ್ರನೇ ರಕ್ಷಕನಾಗಿ ನಿಂತರೂ, ನಾವಿವನನ್ನು ಇಂದು ಕೊಲ್ಲದೆ ಬಿಡೆವು. ಮಾಯಾವಿಯನ್ನು ಮಾಯೆಯಿಂದಲೇ ಗೆಲ್ಲಲಾಗುವುದಾಗಲಿ ನ್ಯಾಯ ಮಾರ್ಗದಿಂದಲ್ಲ. ಹಾವನ್ನು ಕೋಲಿಂದ ಹೊಡೆದು ಕೊಲ್ಲಬೇಕಾಗಲಿ, ಕೈಲಿಪಿಡಿದು ಕಡಿದಾಡಿ ಅಲ್ಲ. ಭೀಕರ ಸರ್ಪ ವ್ಯಾಘ್ರ, ದುರ್ಜನರೊಂದೇ ಜಾತಿ! ಅವರಿಗೆ ಮಾಯೆಯೇ ಮದ್ದು' ಆ ಮಾತನ್ನು ಕೇಳಿ, ಶ್ರೀಕೃಷ್ಣನು 'ಧರ್ಮರಾಜ! ನೀನಾಡಿದುದೆಲ್ಲವೂ ಧರ್ಮವೇ ಆಗಿದೆ. ಮಾಯಾವಿಯನ್ನು ಮಾಯೆಯಿಂದ ಕೊಲ್ಲಬೇಕೆಂಬ ದುಷ್ಟಶಾಸನರೂಪ ಧರ್ಮವನ್ನು ಮರೆಯಬೇಡ! ದುಷ್ಟ ದುರ್ಯೋಧನನು ಸರ್ವ ಮಿತ್ರಪುತ್ರ ರಾಜನ್ಯರಹಿತನಾಗಿದ್ದೂ ಇನ್ನೂ ಜೀವಭಯದಿಂದ ಜೀವರಾಶಿಯಲ್ಲಡಗಿ ಕೂತಿರುವನು. ಪ್ರಾಣಿಗಳಿಗೆ ಶರೀರವು ದುಸ್ತ್ಯಜನವಾಗಿದೆ! ಆದರೆ ಈ ಲಜ್ಜಾರಹಿತನಿಗೆ ಯುದ್ಧ ಯುದ್ಧ ಎಂದು ಒದರಿದ ರಣಾಂಧನಿಗೆ ಇಂದು ಯುದ್ಧವೇ ಬೇಡವಾಗಿದೆ! ಎಳೆ ಅವನನ್ನು ಕಟೂಕ್ತಿಪಾಶಗಳಿಂದ ಹೊರಕ್ಕೆ! ಇಂದ್ರನು ಕ್ರಿಯಾಭ್ಯುಪಾಯಗಳಿಂದಲೇ ದಾನವರನ್ನು ಗೆದ್ದನು. ಕೇವಲ ಪರಾಕ್ರಮವು ಋಜುವೀರರಿಗೆ! ಇಂತಹ ದುಷ್ಟ ಮಾಯಾವಿಗಳಿಗೆ ಕ್ರಿಯಾಭ್ಯುಪಾಯಗಳಿಂದಲೇ ಸಾವು. ಅವರಿಗೆ ವೀರಮರಣವಿಲ್ಲ. ವೀರಸ್ವರ್ಗವೂ ಇಲ್ಲ. ನಿತ್ಯನರಕ ಯೋಗ್ಯನಾದ ಪಾಪತಮ ಕಲಿದುರ್ಯೋಧನನನ್ನು ಎಂತು ಹುಳದಂತೆ ಹಿಚುಕಿ ಕೊಂದರೂ ಪಾಪವಿಲ್ಲ. ಲೋಕಕ್ಷೇಮಕ್ಕಾಗಿ ವಿಷ್ಣುವು ಕ್ರಿಯಾಭ್ಯುಪಾಯಗಳನ್ನು ಪ್ರಯೋಗಿಸಿ, ಹಿರಣ್ಯಾಕ್ಷನನ್ನು ಸಂಹರಿಸಿದನು; ಕ್ರಿಯಾಬಲದಿಂದ ಬಲಿರಾಜನನ್ನು ಯಾಚಿಸಿ, ಉಪಾಯದಿಂದ ಅವನ ಸಿರಿಯನ್ನು ಸೆಳೆದು ಸುರಪತಿಗಿತ್ತು, ಸುಜನರನ್ನು ಸಲುಹಿದನು; ಉಪಾಯದಿಂದಲೇ ನರನೂ ಮೃಗನೂ ಆಗಿ ಹಿರಣ್ಯಕಶಿಪುವನ್ನು ಕೊಂದನು. ಇಲ್ಲದಿರೆ ಬ್ರಹ್ಮವರ ಗರ್ವಿತನಾದ ಆ ದುಷ್ಟನು ತಾನು ಅಜರಾಮರನೆನಿಸಿ ಇತರ ಪ್ರಾಣಿಗಳಿಗೆ ಮೃತ್ಯುವಾಗುತ್ತಿದ್ದನು. ಪೌಲಸ್ತ್ಯಸುತನಾದ ರಾವಣಾಸುರನನ್ನು

ಮಾಧವನು ಮನುಜನಾಗಿ ಅವತರಿಸಿ, ಕೊಂದನು. ವೃತ್ರಾಸುರನನ್ನು ವಂಚಿಸಿ ವಜ್ರಾಯುಧನು ಸಂಹರಿಸಿ, ಲೋಕಕ್ಷೇಮಂಕರನಾದನು. ತ್ರಿಪುರಾಸುರರನ್ನು ಕ್ರಿಯಾಬಲದಿಂದಲೇ ಶಂಕರನು ನಾಶಪಡಿಸಿದನು. ವಿಪ್ರಚಿತ್ತಿತಾರಕರು, ಇಲ್ವಲವಾತಾಪಿವಿರೋಚನರು, ಸುಂದೋಪಸುಂದರು ಎಲ್ಲ ದುಷ್ಟರೂ ಕ್ರಿಯಾಭ್ಯುಪಾಯಗಳಿಂದಲೇ ಸಂಹೃತರಾದರು. ಅವರ ದುಷ್ಟವರಗಳು ಅವರಿಗೆ ವೀರಮರಣಾಪಾದಕಗಳಾಗಲಿಲ್ಲ. ಧರ್ಮರಾಜ! ಬಚ್ಚಿಟ್ಟುಕೊಂಡಿರುವ ಈ ಕೌರವ ಹಂತಕನನ್ನು ನೀರಿನಿಂದ ಹೊರಸೆಳೆದು ನಾಶಪಡಿಸು! ನಿಷ್ಕಂಟಕಮಹೀ ರಾಜ್ಯಸಿರಿಯನ್ನು ಉಪಭೋಗಿಸು! ಭೀಮಸೇನನ ಪ್ರತಿಜ್ಞೆಯೂ ಪೂರ್ಣವಾಗಲಿ!' ಎಂದನು.

ವಾಸುದೇವನ ವಾಕ್ಯವನ್ನಾಲಿಸಿ ಪಾಂಡುಸುತವರನು, ನೀರಿನಲ್ಲಿ ಅಡಗಿದ್ದ ಸುಯೋಧನನನ್ನು ಅಪಹಸಿಸಿ ಇಂತು ಅಧಿಕ್ಷೇಪಿಸಿದನು: 'ಸುಯೋಧನ! ಎಂತಹ ಹೇಡಿಯಾದೆ! ಸರ್ವ ಕ್ಷತ್ರಿಯರನ್ನು ನಾಶಪಡಿಸಿ, ಸ್ವಕುಲವನ್ನೂ ಹಾಳು ಮಾಡಿ, ನೀನು ಮಾತ್ರ ಬದುಕಿರಬೇಕೆಂದು ಜಲಾಶಯವನ್ನು ಹೊಕ್ಕು ಅಡಗಿರುವೆ! ಆ ನಿನ್ನ ದರ್ಪವೇನಾಯಿತು? ನಿನ್ನ ದುರಭಿಮಾನವೀ ನೀರಲ್ಲಿ ಕರಗಿಹೋಯಿತೇ? ಭೀತನಲ್ಲದಿರೆ ಜಲಸ್ತಂಭನ ಮಾಡಿ ಅಡಗಿರುವುದೇತಕ್ಕೆ? ಎದ್ದು ಬಾ! ನಮ್ಮೊಡನೆ ಯುದ್ಧವಾಡು! ಶೂರವರನೆಂದು ಜನರಲ್ಲಿ ಖ್ಯಾತನಾಗಿ, ಈಗ ಈ ಬಗೆ ಪ್ರಾಣಭಯದಿಂದ ನೀರಲ್ಲಿ ಕೂತಿರುವುದು ನಿನಗೆ ತರವಲ್ಲ. ಉತ್ತಮ ಕುಲದವನಿರುವೆ! ವೀರಕ್ಷತ್ರಿಯನಿರುವೆ! ಯುದ್ಧವಿಮುಖನಾಗಿ, ಭಯದಿಂದ ನೀರಿನಲ್ಲಿ ಕೂತಾಗಲೇ, ಕುಲಪ್ರತಾಪ ಕೀರ್ತಿಗಳನ್ನು ಕಳೆದುಕೊಂಡು, ಜೀವಚ್ಛವನಂತಾದೆ! ರಣಪಲಾಯನ ಗೈದೆ! ನೀರಿನಲ್ಲಿ ಉಸಿರುಕಟ್ಟಿ ಕೂತಿರುವೆ! ಯುದ್ಧದ ಕರೆಗೆ ಓಗೊಡದಿರುವೆ! ಇದು ಧರ್ಮದ ರೀತಿ ಅಲ್ಲ. ಯುದ್ಧ ಪಾರವನ್ನು ಸೇರದೆ, ಕೇವಲ ಜೀವನದಾಶೆಯಿಂದ ಬಚ್ಚಿಟ್ಟುಕೊಂಡ ನಿನ್ನಂತಹ ಹೇಡಿ ಮತ್ತಿಲ್ಲ. ಪುತ್ರಭ್ರಾತೃ ಪಿತೃಗುರುಮಿತ್ರ ಮಾತುಲ ಪರಿವಾರದವರೆಲ್ಲ ಸತ್ತದ್ದನ್ನು ಕಣ್ಣಾರೆ ಕಂಡು, ಅವರ ನಾಶವನ್ನು ಕೈಯಾರೆ ಸಾಧಿಸಿ, ಇನ್ನೂ ಎಂತಾದರೂ ಬದುಕಿರಬೇಕೆಂಬ ಹಂಬಲದಿಂದ, ನೀರಿನಲ್ಲಿ ಕೂತ ನಿನಗೆ ನಾಚಿಕೆ ಇಲ್ಲ. ಶೂರಮಾನಿಯಾದ ನೀನು ಶೂರನಲ್ಲ. ಶತ್ರುವಿಮುಖರಾಗಿ ಶೂರರು ಓಡುವುದಿಲ್ಲ. ಶೂರನು ನಾನೆಂದು ಸಾವಿರಸಲ ಸಭೆಗಳಲ್ಲಿ ಜಂಬಕೊಚ್ಚಿ ಕೊಚ್ಚೆಯ ಕೊಳದಲ್ಲಿ ಅವಿತು ಕೂಡಲು ಕಾರಣವೇನು? ಏಳು! ಹೊರ ಬಂದು ಯುದ್ಧಮಾಡು! ಬಿಡು ಭಯವನ್ನು! ಕ್ಷತ್ರಧರ್ಮದಿಂದ ನೋಡಲು ನಿನಗೆ ಯುದ್ಧವೇ ಆಶ್ರಯಣೀಯವು; ಕೊಳವಲ್ಲ. ಕರ್ಣ ಶಕುನಿದುಶ್ಶಾಸನರ ಬಲದಿಂದ ಗರ್ಜಿಸಿ, ಅಮರ್ತ್ಯನಂತೆ ವರ್ತಿಸಿ, ಈಗ ಮರ್ತ್ಯನಾದೆಯಾ? ಗರ್ಜಿಸಿ ಮಾಡಿದ ಮಹಾಪರಾಧಗಳ ಫಲವನ್ನು ಉಣ್ಣದೇ ತಪ್ಪದೆಂದು ಮನಗಂಡೆಯಾ?

ಸುಯೋಧನ! ಎಲ್ಲಿ ನಿನ್ನ ಪೌರುಷ? ಎಲ್ಲಿ ಅವಿತಿದೆ ನಿನ್ನ ದುರಭಿಮಾನ? ಏನು ಜಂಬ! ಎಂತಹ ಮದ! ಎಷ್ಟು ಮೋಹ! ಅದೆಷ್ಟು ಗುರುಜನಾವಮಾನ! ಎಂತಹ

ದೈವತಿರಸ್ಕಾರ! ಎಲ್ಲವೂ ಹಾಳಾಯಿತು. ಸರ್ವನಾಶಕನಾದ ನಿನ್ನಂತಹ ಕುಲಪಾಂಸನನ್ನು ಉಳಿಸುವೆವೆಂದು ತಿಳಿದೆಯಾ? ಏಳು! ನಮ್ಮನ್ನು ಗೆದ್ದು ರಾಜ್ಯವನ್ನಾಳು! ಅಥವಾ ನಮ್ಮಿಂದ ರಣನಿಹತನಾಗಿ ಬೀಳು! ಒಮ್ಮೆಗಾದರೂ ರಾಜನಂತೆ ನಡೆ! ಮಹಾರಥನಂತೆ ವಿಕ್ರಮಿಸು!"

ಧರ್ಮರಾಜನ ಮಾತಿಗೆ ದುರ್ಯೋಧನನು ನೀರಿನಲ್ಲಿದ್ದೇ, ಉತ್ತರವಿತ್ತನು: "ಮಹಾಬಾಹೋ! ಪ್ರಾಣಭಯವೆಲ್ಲರಿಗೂ ಸಹಜವಾಗಿದೆ. ಆದರೆ ನಾನು ಜೀವದಾಶೆಯಿಂದ ಓಡಿ ಬಂದಡಗಿರುವ ಹೇಡಿ ಅಲ್ಲ ಕೇಳು! ರಥವಿಲ್ಲ; ತೂಣೀರ ಧನುಗಳಿಲ್ಲ; ಪಾರ್ಷ್ಣಿಸಾರಥಿಗಳು ಹತರಾದರು. ಒಬ್ಬನಾಗಿ ಉಳಿದೆನು. ಶ್ರಾಂತನಾಗಿ ಕೊಳದಲ್ಲಡಗಿದೆನು; ಪ್ರಾಣಭಯದಿಂದಲ್ಲ. ಶತ್ರುಗೋಚರನಾಗದೆ, ಸ್ವಲ್ಪಕಾಲ ವಿಶ್ರಮಿಸಲು, ಕೊಳವೆಯನ್ನು ಹೊಕ್ಕು, ಜಲಸ್ತಂಭನಗೈದು ಕೂತಿರುವೆನು. ನೀವೂ ಅಲಸಿರುವಿರಿ. ಇಂದು ವಿಶ್ರಮಿಸಿ, ನಾಳೆ ಬನ್ನಿ! ನಾನು ಹೊರ ಬಂದು ನಿಮ್ಮೊಡನೆ ಕಾದುವೆನು."

ಧರ್ಮರಾಜನು 'ದುರ್ಯೋಧನ! ನಮಗೆ ಅಲಸಿಕೆಯಾಗಿಲ್ಲ. ನೀನೂ ಚಿರಕಾಲ ಕೊಳದಲ್ಲಡಗಿ ವಿಶ್ರಾಂತಿ ಹೊಂದಿರುವೆ! ಏಳೇಳು! ಯುದ್ಧವಾಡು! ಗೆದ್ದು ರಾಜ್ಯವನ್ನಾಳು! ಇಲ್ಲದಿರೆ ಹತನಾಗಿ ಬೀಳು!' ಎಂದನು. ದುರ್ಯೋಧನನು ನಿಡುಸುಯ್ದು 'ಧರ್ಮರಾಜ! ಯಾರಿಗಾಗಿ ರಾಜ್ಯವನ್ನು ಬಯಸಲಿ? ಯಾರುಳಿದಿಹರು ನನ್ನವರೆಂಬುವರು? ಪೃಥ್ವಿಯು ಹತಕ್ಷತ್ರರತ್ನವಾಗಿ ಶ್ಮಶಾನಸದೃಶವಾಗಿದೆ. ವಿಧವೆಯಂತೆ ನಷ್ಟಮಂಗಳವಾಗಿರುವ ಧರಾಮಂಡಲವಾರಿಗೆ ಬೇಕಾಗಿದೆ? ಅದನ್ನು ನೀನೇ ಉಪಭೋಗಿಸು! ಪಾಂಚಾಲಪಾಂಡವರನ್ನೆಲ್ಲ ಸಂಹರಿಸಿ, ನಿನ್ನನ್ನು ಗೆದ್ದು, ಕೊಲ್ಲದೆ ನನ್ನ ಸೇಡು ತೀರದು. ಆದರೂ ನನಗೀಗ ಯುದ್ಧವು ಬೇಕಿಲ್ಲ. ದ್ರೋಣಕರ್ಣ ಪಿತಾಮಹರಂತಹ ವೀರರ ಸಹಾಯವನ್ನು ಕಳೆದುಕೊಂಡ ನನಗೇಕೆ ರಾಜ್ಯ? ರತ್ನಗಳಿಲ್ಲದ ಬರಿಮಣ್ಣಿನ ಬರಡು ಭೂಮಿಯನ್ನು ನಿನಗೇ ಬಿಟ್ಟಿರುವೆನು. ಮಿತ್ರಪುತ್ರ ಭ್ರಾತೃರಹಿತನಾದ ನನಗೆ ಜೀವನವೇ ಬೇಡವಾಗಿದೆ. ನಾನು ಚೀರಾಜಿಧರನಾಗಿ, ವನದಲ್ಲಿ ವಾಸಿಸುವೆನು. ಬಂಧುಗಳಿಲ್ಲದ ಅಶ್ವಗಜರಥಗಳಿಲ್ಲದ, ರತ್ನಧನಗಳಿಲ್ಲದ ರಾಜ್ಯವನ್ನು ನೀನೇ ಆಳು!' ಎಂದನು.

ಮೃತಸಂಜೀವಿನೀ ಮಂತ್ರವನ್ನು ಸಾಧಿಸಿ ತನ್ನವರನ್ನೆಲ್ಲ ಬದುಕಿಸಿ, ಪಾಂಡವರನ್ನು ಕಾಧಿ ಕೊಲ್ಲಲು ಬಯಸಿ ಮಾತಾಡುವ ದುಷ್ಟನ ಮರ್ಮವನ್ನರಿತು ಧರ್ಮರಾಜನು ಮತ್ತೆ ಇಂತೆಂದನು: 'ದುರ್ಯೋಧನ! ನೀರಿನಲ್ಲಡಗಿ, ಆರ್ತನಾಗಿ ಪ್ರಲಪಿಸಿ ಫಲವಿಲ್ಲ. ನಾನು ಶಕುನಿಯಂತೆ ಮಾಯಗಾರನಲ್ಲ. ಅವನ ಅಳಿಯನಾದ ನಿನ್ನ ಮಾಯೋಪಾಯವನ್ನು ಮುರಿಯದೆ ಬಿಡುವುದಿಲ್ಲ. ಎದ್ದು ಬಾ! ಕಡಿದಾಡು! ಬೇರೊಂದು ಮಾರ್ಗ ನಿನಗಿಲ್ಲ. ನೀನು ರಣಪಲಾಯಿತನಾದಾಗಲೇ ಅವನೀ ಮಂಡಲವೆನ್ನದಾಯಿತು. ಅಂದಮೇಲೆ ನೀನು ಕೊಡುವುದೇನು ಬಂತು? ನೀನು ದಾನವಾಗಿತ್ತ ರಾಜ್ಯವನ್ನು

ಸ್ವೀಕರಿಸಲು ನಾನು ವಿಪ್ರನಲ್ಲ. ಸುಕ್ಷತ್ರಿಯನಿಗೆ ಪ್ರತಿಗ್ರಹವು ಅಧರ್ಮವೆನಿಸಿದೆ. ನಿನ್ನನ್ನು ಸಂಹರಿಸಿ, ವೀರ್ಯೋಪಾರ್ಜಿತವಾದ ಪೃಥ್ವಿಯನ್ನಾಳುವೆನು. ಅರಾಜನಾಗಿರುವ ನಿನಗೆ ಕೊಡುವುದಕ್ಕೇನಿದೆ? ಕೊಡುವ ಮನವಿದ್ದಿದ್ದರೆ, ಅಂದೇ ನಮ್ಮ ನ್ಯಾಯದಾಯವನ್ನು ಕೊಡುತ್ತಿದ್ದೆ! ಕುಲವು ಹಾಳಾಗದಿರಲಿ, ಎಲ್ಲರೂ ಕೂಡಿ ಸುಖವಾಗಿ ಬಾಳೋಣವೆಂದು ಶ್ರೀಕೃಷ್ಣನ ಮುಖದಿಂದ ಹೇಳಿಕಳುಹಿದ ಸಂಧಿಯ ಮಾತಿಗೆ ಸೂಜ್ಯಗ್ರದ ಮೃತ್ಕಣವನ್ನೂ ಕೊಡಲಾಗದೆಂದು ತಿರಸ್ಕರಿಸಿ, ಇಂದು ಎಲ್ಲ ಭೂಮಿಯನ್ನೂ ಕೊಡುವೆನೆಂಬ ಹುಚ್ಚಿಗೆ ಏನೆನ್ನಬೇಕು? ಪರಾಭೂತನಾಗಿರುವ ನಿನಗೆ ದಾನಾಧಿಕಾರವೇ ಇಲ್ಲ; ಕಸಿದುಕೊಂಬುವ ಪರಾಕ್ರಮವೂ ಇಲ್ಲ.

ಪೃಥ್ವೀಮಂಡಲವನ್ನಾಳಿದೆ! ಐಶ್ವರ್ಯದಿಂದ ಮೆರೆದೆ! ಹಿರಿಯರನ್ನು ಜರಿದೆ! ಅಂತು ಉರಿದೆದ್ದ ರಾಜರಾಜನಿಗೆ ಎಲ್ಲವನ್ನೂ ಬಿಟ್ಟು ವನವನ್ನು ಸೇರುವುದು ಅತ್ಯಂತವಾಗಿ ಅಪಹಸನೀಯವಾಗಿದೆ. ಮೂಢನಾಗಿ ಕರ್ತವ್ಯವನ್ನು ಮರೆತಿರುವೆ! ಪೃಥ್ವೀರಾಜ್ಯವನ್ನು ಬಿಟ್ಟುಕೊಟ್ಟರೂ, ನಿನ್ನನ್ನು ಜೀವದಿಂದ ನಾವು ಬಿಡುವವರಲ್ಲ. ನಮ್ಮನ್ನು ಗೆದ್ದು ಪೃಥ್ವಿಯನ್ನಾಳು! ಅಥವಾ ನಮ್ಮಿಂದ ನಿಹತನಾಗಿ ಬೀಳು! ನೀನು ನಾವು ಉಭಯರು ಉಳಿಯಲಾಗದು. ಆಗ ಜನರು ಯಾರು ಗೆದ್ದರು, ಯಾರು ಸೋತರೆಂಬುದನ್ನರಿಯದೆ ಸಂಶಯಗ್ರಸ್ತರಾಗುವರು. ದುಷ್ಟಚಿತ್ತನಾದ ನಿನ್ನ ವಧೆಯಿಂದ ಮತ್ತೆ ಕುರುಪಾಂಡವ ಯುದ್ಧವು ಪುನರಾವರ್ತಿತವಾಗದೆ ಹೋಗುವುದು. ಈಗ ಸರ್ವನಾಶವನ್ನು ಸಾಧಿಸಿ, ನಿಷ್ಕಾರಣವಾಗಿ ಭಟಾಶ್ವಗಜರಾಜಿಯನ್ನು ನಾಶಗೊಳಿಸಿದೆ! ಸಾಕಿನ್ನು ನಿನ್ನ ಕೃತ್ಯವು ಕೊನೆಗಾಣಲಿ! ನಿನ್ನ ಜೀವಿತವೀಗ ನನ್ನ ಕೈಲಿದೆ. ಬೇಕಾದರೆ ಬದುಕು ಹೋಗೆಂದು ನಿನ್ನನ್ನು ಬಿಡಬಲ್ಲೆನು. ಆದರೆ ದುಷ್ಟಚಿತ್ತನಾದ ನಿನ್ನಿಂದ ಮತ್ತೆಂತಹ ಉಪದ್ರವಗಳು ಉದಿಸುವವೋ ಎಂಬ ಶಂಕೆಯಿಂದ ನಿನ್ನನ್ನು ಸಂಹರಿಸದೆ ಬಿಡೆವು.

ಕೇಳು ನೀನೆಸಗಿದ ಮಹಾಕಾರ್ಯಗಳನ್ನು! ಮನೆಯಲ್ಲಿಟ್ಟು ಸುಟ್ಟೆ! ಆಶೀವಿಷಗಳಿಂದ ಕಚ್ಚಿಸಿದೆ! ಅನ್ನದಲ್ಲಿ ವಿಷವಿಟ್ಟೆ! ಮಡುವಿನಲ್ಲಿ ಕೆಡಹಿಸಿದೆ! ಮೋಸದ ಜೂಜಿನಲ್ಲಿ ರಾಜ್ಯವನ್ನು ಅಪಹರಿಸಿದೆ! ನಿರಪರಾಧಿನಿ ಕೃಷ್ಣೆಯನ್ನು ಸಭೆಗೆ ಕರಿಸಿ, ಸೀರೆಸೆಳೆಸಿ, ಅವಾಚ್ಯಗಳಾಡಿದೆ! ಐದುಗ್ರಾಮಗಳಿತ್ತರೆ ಸಾಕೆಂದರೂ ಕೇಳದೆ ಕದನಕ್ಕೆ ಕಾಲ್ಕೆರೆದೆ! ಗುರುಹಿರಿಯರು, ದೇವವಿಪ್ರರು, ಸುಜನಬಂಧುಜನರು ಎಂಬ ಗೌರವಾದರಗಳನ್ನು ಗಾಳಿಗೆ ತೂರಿದೆ! ಸ್ವೇಚ್ಛಾಚಾರಿಯಾಗಿ ಮೆರೆದೆ! ಒಂದೇ ಎರಡೇ? ನೀನು ಮಾಡಿದ ಪಾಪಗಳನಂತವಾಗಿವೆ. ಶ್ರೀಕೃಷ್ಣನನ್ನು ಬಂಧಿಸಲು ಹವಣಿಸಿದ ನಿನ್ನಕ್ಕಿಂತಲು ಪಾಪತಮನು ಮತ್ತಿಲ್ಲ. ನಿನಗೆ ಜೀವದಾನ ಮಾಡುವುದು ಲೋಕನಾಶಕರವು; ಮೃತ್ಯುವಿನ ಕಾಲಿಗೆ ಗೆಜ್ಜೆಕಟ್ಟಿದಂತೆ. ಏಳೇಳು! ಯುದ್ಧಮಾಡು! ನಿನ್ನ ಅಂಧಂತಮವು ನಿನ್ನನ್ನು ಕರೆಯುತ್ತಿದೆ!' ಎಂದನು.

## ೨. ಶ್ರೀಕೃಷ್ಣ ವಚನ

ಸಂಜಯನ ವಚನವನ್ನಾಲಿಸಿ, ತನ್ನ ಮಗನ ಅವಸ್ಥೆಗೆ ನೊಂದು, ಧೃತರಾಷ್ಟ್ರನು 'ಸಂಜಯ! ನನ್ನ ಮಗನು ಪ್ರಕೃತಿಯಿಂದಲೇ ಮಹಾಮಾನಿಯು, ಅವನೆಂದಿಗೂ ಯಾರಿಂದಲು ತರ್ಜಿಸಿಕೊಂಡರಿಯನು. ಅವನೆದುರಿಗೆ ನಿಂತು 'ಅಲ್ಲ!' ಎಂಬ ಧೈರ್ಯವಾರಿಗಿತ್ತು? ಅವನ ಶ್ವೇತಾತಪತ್ರವು ಭಾನುಮಂಡಲದಂತೆ ಬೆಳಗಿತ್ತು. ಅವನ ಆಜ್ಞಾ ಚಕ್ರವು ಅವ್ಯಾಹತವಾಗಿತ್ತು. ಮ್ಲೇಂಛಯ ವನರಾಜರು ಅವನ ಪ್ರಸಾದದ ಕಟಾಕ್ಷಕ್ಕಾಗಿ ಕಾದಿದ್ದರು. ಅವನ ವೈಭವವನ್ನು ಪ್ರತ್ಯಕ್ಷವಾಗಿ ನೀನು ಕಂಡಿರುವೆ! ಅಂತಹ ದುರ್ಯೋಧನನಿಂದು ನಿರ್ಗತಿಕನಾಗಿ, ನಿರ್ಮಿತ್ರಪುತ್ರ ಪರಿವಾರನಾಗಿ, ನಿರ್ಜನ ವನದಲ್ಲಿ ಇಂತಹ ತರ್ಜನಭರ್ಜನಗಳಿಗೀಡಾದನೇ? ಹಾ! ಕಷ್ಟಂ! ಜಯಕಾಶಿಯಾದ ಧರ್ಮರಾಜನ ಬಿರುನುಡಿಗಳಿಗೆ ನನ್ನ ಮಗನೇನೆಂದು ಉತ್ತರಿಸಿದನು? ಹೇಳು?' ಎಂದನು.

ಸಂಜಯನು ನಿರೂಪಿಸಿದನು:

'ರಾಜನ್! ನೀರಿನಲ್ಲಡಗಿದ್ದ ಕುರುರಾಜನು ಧರ್ಮಜನ ಕಟುವಚನಗಳನ್ನಾಲಿಸಿ, ನಿಡುಸುಯ್ದನು. ಅವನು ಸಲಿಲಗಳಿಂದ ಹೊರಬಂದನು. ಕೈಗಳನ್ನು ಸಿಟ್ಟಿನಿಂದಾಡಿಸುತ್ತಾ ಸುತ್ತು ಅವಲೋಕಿಸಿದನು. ಅವನ ಕಣ್ಣಲ್ಲಿ ನೀರು ತುಂಬಿ ಬಂತು. ಯುದ್ಧವಾಡಲು ನಿಶ್ಚಯಿಸಿ, ಕೌರವೇಶನು ಧರ್ಮರಾಜನನ್ನುಪಲಕ್ಷಿಸಿ ಇಂತೆಂದನು: 'ರಾಜನ್! ನೀನು ಸಬಂಧುಮಿತ್ರನಾಗಿರುವೆ! ಸರಥವಾಹನನಾಗಿರುವೆ! ಸಾಯುಧನಾಗಿರುವೆ! ನಾನು ಏಕಾಕಿಯು; ವಿರಥನು; ನಿರಾಯುಧನು; ಬಹುಶತ್ರುಗ್ರಸ್ತನು; ಪದಾತಿಯು ಆಗಿರುವೆನು. ಯುಧಿಷ್ಠಿರ! ಒಬ್ಬಂಟಿಗನಾಗಿ ಬಹುವೀರರಿಂದ ಕಡಿದಾಡುವುದು ಧರ್ಮವಲ್ಲ. ನೀವು ಒಬ್ಬೊಬ್ಬರಾಗಿ ಬಂದು ನನ್ನಿಂದ ಕಡಿದಾಡಿ! ನಾನು ಕ್ಷತಗಾತ್ರನಾಗಿರುವೆನು. ಕವಚ ಧನುರಾದಿ ಸಾಧನವಿಲ್ಲ, ನೆರವಾಗುವ ಸೈನಿಕರಿಲ್ಲ. ನಿನಗೆ ಹೆದರಿ ಹೇಳುವ ಮಾತಲ್ಲ. ನಿನ್ನಿಂದ, ಪಾರ್ಥನಿಂದ, ಯಮಳರಿಂದ, ಪಾಂಚಾಲರಿಂದ, ಸಾತ್ಯಕಿಯಿಂದ ನನಗೆ ಭಯವಿಲ್ಲ. ವೃಕೋದರನಿಗೂ ನಾನು ಹೆದರೆನು. ಕೃಷ್ಣನನ್ನೂ ಲೆಕ್ಕಿಸೆನು. ನಿಮ್ಮನ್ನೆಲ್ಲರನ್ನೂ ಮುತ್ತಿ, ಕಾದಿ, ಕೊಲ್ಲಬಲ್ಲೆನು. ಆದರೆ ಧರ್ಮದ ಕಡೆ ನೋಡಿ, ನುಡಿಯುವೆನು. ಧರ್ಮದಿಂದ ಕೀರ್ತಿ. ಧರ್ಮದಿಂದ ಇಹಪರ ಸುಖ. ಋತುಗಳನ್ನಾರನ್ನೂ ನುಂಗುತ್ತಾ ಬರುವ ಸಂವತ್ಸರದಂತೆ, ನಾನು ನಿಮ್ಮನ್ನಾರು ವೀರರನ್ನು ಕೊಂದು ಕೆಡಹಬಲ್ಲೆನು. ಸೂರ್ಯನ ಕಿರಣಗಳಿಂದ ನಕ್ಷತ್ರಗಳಂತೆ, ನನ್ನ ಪ್ರತಾಪದಿಂದ ನೀವು ನಷ್ಟರಾಗುವ ಕಾಲ ಬಂದಿದೆ. ನಿಂತು ಕಡಿದಾಡಿ! ಇಂದು ತೀರಿಸುವೆನು ಮಿತ್ರ ಕರ್ಣನ ಋಣವನ್ನು! ಇಂದಾರಿಸುವೆನು ನನ್ನ ಸೇಡಿನ ಕಿಡಿಯನ್ನು ನಿಮ್ಮ ರಕ್ತದಿಂದ! ಇಂದು ಬಾಹ್ಲೀಕ ದ್ರೋಣ ಭೀಷ್ಮರನ್ನು ಕೊಂದ ಪಾಪಕ್ಕೆ, ಜಯದ್ರಥ, ಭಗದತ್ತ, ಶಲ್ಯ, ಭೂರಿಶ್ರವರನ್ನು ಕೊಂದ ಮೋಸಕ್ಕೆ, ಶಕುನಿ ಲಕ್ಷ್ಮಣರನ್ನು ಕೆಡಹಿದ ಹಿಂಸೆಗೆ ತಕ್ಕ ಪ್ರಾಯಶ್ಚಿತ್ತ

ಕೊಡಿಸುವೆನು ನಿಮಗೆ! ಇಂದು ಅವರೆಲ್ಲರ ಋಣವನ್ನು ಬಗೆಹರಿಸಿ, ಅವರ ಮನಕ್ಕೆ ಶಾಂತಿಕೊಡುವೆನು, ಬನ್ನಿ! ಬನ್ನಿ!' ಎಂದು ರೋಷದಿಂದ ಮುಂದೆ ಬಂದನು.

ಧರ್ಮರಾಜನವನ ಮಾತಿಗೆ ನಕ್ಕು ಇಂತೆಂದನು: 'ಸುಯೋಧನ! ಅಂತೂ ಕೊನೆಗೆ ಕ್ಷತ್ರಧರ್ಮದ ನೆನಪಾಯಿತೇ ನಿನಗೆ! ಇಂದಾದರೂ ಶೂರನಾದೆಯಾ? ಯಾರನ್ನಾದರೂ ಮುನ್ನುಗ್ಗಿಸುವ ಮಹಾರಾಜನಿಂದು ಮಹಾವೀರನಾದನೇ? ಒಬ್ಬನಿದ್ದೂ ನಮ್ಮೆಲ್ಲರನ್ನು ಕೂಗಿ ಕಾದಲು ಕರೆವ ಗಂಡಾದೆಯಾ? ಅಂತೂ ಸಮರವೆಂದರೇನೆಂದು ಕೊನೆಗೆ ತಿಳಿದೆಯಲ್ಲ! ಧರ್ಮವನ್ನು ನೆನೆದೆಯಲ್ಲ! ಧರ್ಮವಿದ್ದೆಡೆ ಅಚ್ಯುತನೆಂಬ ಮಾತು ಸುಳ್ಳಲ್ಲ, ಕೇಳು! ನಾವು ಧರ್ಮವನ್ನು ಬಿಟ್ಟಿಲ್ಲ. ಭೀಷ್ಮನು ಸ್ವಚ್ಛಂದ ಮರಣನು; ದ್ರೋಣನು ಶಸ್ತ್ರಪ್ರಾಣಿಯಾಗಿರವವರೆಗೂ ಅವಧ್ಯನು. ಕರ್ಣನು ಗುರುವಿಪ್ರ ಶಾಪೋಪಹತನು. ಜಯದ್ರಥನು ತಲೆಕೆಡಹುವವರನ್ನು ಕೊಲ್ಲುವ ವರ ಪಡೆದನು. ಇಂತು ಅವರವರ ವರಶಾಪಗಳಿಗೆ ತಕ್ಕ ಪ್ರತಿಕ್ರಿಯೆ ನಡೆಸಿ, ನಾವು ಗೆದ್ದಿರುವೆವು. ಇದರಲ್ಲಿ ನಮ್ಮ ಅಧರ್ಮವೇನೂ ಇಲ್ಲ. ಅಚ್ಯುತ ವಿಪ್ರ ಸುಜನ ನಿಂದಕರಿಗೆ ಪರರಲ್ಲಿ ಸ್ವಗತ ಪಾಪಾರೋಪಣೆ ಮಾಡುವುದು ಸಹಜವಾಗಿದೆ. ಆದರೂ ನಾವು ಧರ್ಮವನ್ನು ಬಿಡುವುದಿಲ್ಲ. ಕೇಳು! ನಿನಗಿಷ್ಟವಾದ ಆಯುಧವನ್ನು ಹಿಡಿದು, ನಿನಗೆ ಸಮ್ಮತವಾದ ಪಾಂಡವ ವೀರನೋರ್ವನಿಂದ ಕಾದಿ ಕಡಿದಾಡು. ನಮ್ಮೈವರಲ್ಲಿ ಯಾರು ಸೋತರೂ, ನಿನ್ನದೇ ರಾಜ್ಯ! ನೀನು ಸೋತುಬಿದ್ದರೆ ನಮ್ಮದೇ ರಾಜ್ಯ! ಮಿಕ್ಕ ನಾವೆಲ್ಲರೂ ಸುಮ್ಮನೆ ಪ್ರೇಕ್ಷಕರಾಗಿರುವೆವು' ಎಂದನು.

'ಆಗಲಿ! ಶೂರನೊಬ್ಬನನ್ನಾರಿಸಿ ಪಡೆವೆನು. ನನಗಿಷ್ಟವಾದ ಆಯುಧವೆಂದರೆ ಈ ನನ್ನ ಗದೆ! ಗದೆ ಹಿಡಿದು, ಪದಾತಿಯಾದ, ನನ್ನೊಡನೆ ಕಾದುವ ವೀರನು ಮುಂದೆ ಬಂದು ನಿಲ್ಲಲಿ! ಅತ್ಯದ್ಭುತವಾದ ಗದಾಯುದ್ಧವನ್ನು ಎಲ್ಲರೂ ನೋಡಲಿ! ಶಕ್ರನಿಗೂ ಹೆದರದೆ ಗದೆಪಿಡಿದು ಕಾದುವೆನು. ನಿಮ್ಮೆಲ್ಲರನ್ನೂ ಗದೆಯಿಂದ ಕುಟ್ಟಿ ಕೊಲ್ಲುವೆನು' ಎಂದು ನುಡಿವ ದುರ್ಯೋಧನನಿಗೆ ಧರ್ಮರಾಜನು ಸಿಟ್ಟಿನ ಭರದಿಂದ ಆಲೋಚಿಸದೆ ಇಂತೆಂದನು:

'ಸುಯೋಧನ! ನೀರಿಂದ ಈಚೆಗೆ ಬಾ! ನನ್ನೊಡನೆ ಕಾದು ಗದೆಪಿಡಿದು! ಪುರಷವರನೆನಿಸು! ಇಂದ್ರನಾಶ್ರಯನಾಗಿ ನಿಂತರೂ, ಇಂದು ನಿನ್ನನ್ನು ಕೊಲ್ಲದೆ ಬಿಡೆನು. ಆ ಮಾತಿಗೆ ಸಿಟ್ಟಾಗಿ ಸುಯೋಧನನು ಮಹಾನಾಗನಂತೆ ಬುಸುಗುಟ್ಟಿ ಕಶಾತಾಡಿತ ಜಾತ್ಯಶ್ವದಂತೆ, ಮುಂದೆ ಸರಿದು, ಗದೆಯನ್ನು ಭುಜದಲ್ಲಿಟ್ಟು ನಿಂತನು. ಆಯಸವೂ, ವಜ್ರಸಾರವು, ಕಾಂಚನ ಚಿತ್ರವು ಆದ ಗದೆಯನ್ನೆತ್ತಿ ನಿಂತ ನಿನ್ನ ಪುತ್ರನು ಶೃಂಗಯುತ ಪರ್ವತದಂತೆ, ಕಂಗೊಳಿಸಿದನು. ಸಂಕ್ರುದ್ಧನಾದ ಪ್ರಳಯ ಕಾಲರುದ್ರನಂತೆ ನಿಂತಿದ್ದ ದುರ್ಯೋಧನನು ಅತಿ ಭಯಂಕರನಾಗಿದ್ದನು. ವಜ್ರಹಸ್ತ ಶಕ್ರನೋ, ಶೂಲಪಾಣಿ ಶರ್ವನೋ, ದಂಡಕರ ಕೃತಾಂತನೋ ಪಾಶಧರವರುಣನೋ ಎಂಬಂತೆ ಮೆರೆವ ಕುರುರಾಜನನ್ನು ಕಂಡು, ಪಾಂಚಾಲ ವೀರರು ಹೆದರಿ ಹಿಂದೆಸರಿದರು. ಪಾಂಡವರು

ಜಲದಿಂದೆದ್ದು ಬಂದು ಯುದ್ಧಕ್ಕಾಗಿ ನಿಂತ ಸುಯೋಧನನನ್ನು ಕಂಡು ಪ್ರಹರ್ಷಿತರಾದರು. ಪ್ರತಿಜ್ಞಾಪಾಲನ ಕಾತರನಾದ ವೃಕೋದರನ ದಕ್ಷಿಣಹಸ್ತವು ದಿವ್ಯಗದೆಯ ಮೇಲಾಡಿತು. ಅದನ್ನು ಕಂಡು ಸರ್ವ ಪಾಂಚಾಲ ಸೈನಿಕರು ಉತ್ಸಾಹದಿಂದ ಕೈಗಳನ್ನು ತಟ್ಟಿ ಜಯನಿನಾದಗಳನ್ನು ಮಾಡಿದರು.

ಆದ ಅವಮಾನವನ್ನು ಸಹಿಸದೆ, ಸುಯೋಧನನು ಹಲ್ಲುಕಡಿದು, ಹುಬ್ಬುಗಂಟಿಕ್ಕಿ, ಕಿಡಿಗಣ್ಣಿನಿಂದ ಎಲ್ಲರನ್ನೊಮ್ಮೆ ವೀಕ್ಷಿಸಿದನು. ಶ್ರೀಕೃಷ್ಣನೊಡನೆ ತನ್ನ ಸುತ್ತುವರಿಸಿ ನಿಂತಿದ್ದ ಪಾಂಡವರನ್ನು ನೋಡಿ, ದುರ್ಯೋಧನನಿಂತೆಂದನು:

'ಕೈ ಚಪ್ಪಾಳೆ ತಟ್ಟಿದ ಅಪಹಾಸ್ಯಕ್ಕೆ ತಕ್ಕ ಶಿಕ್ಷೆಯನ್ನೀಯಲು ಕೌರವೇಶನಿನ್ನೂ ಸಮರ್ಥನಿರುವನು. ಪಾಂಚಾಲರಿಂದ ಕೂಡಿ, ಪಾಂಡವರು ಈಗಲೇ ಯಮನ ಮನೆ ಸೇರುವರು.' ಇಂತು ನುಡಿದು ನಿನ್ನ ಪುತ್ರನು ಹೊರಬಂದು ನಿಂತನು. ಅವನ ಮೈಯಿಂದ ನೆಂದ ರಕ್ತದ ಧಾರೆಗಳು ಹರಿದವು. ಝರೀಪೂರದಿಂದ ಗಿರಿಯಂತೆ ಶೋಭಿಪ ದುರ್ಯೋಧನನನ್ನು ಕಂಡು ಪಾಂಚಾಲರು ಸಂಭ್ರಾಂತರಾದರು. ಮೇಘಗಂಭೀರ ಸ್ವರದಿಂದ ಯುದ್ಧಾಹ್ವಾನವನ್ನೀಯುತ್ತಾ ಸುಯೋಧನನಿಂತೆಂದನು: 'ಧರ್ಮರಾಜ! ನೀವು ಒಬ್ಬರಾದ ಮೇಲೊಬ್ಬರಾಗಿ ನನ್ನೊಡನೆ ಕಾದಲು ಬನ್ನಿ! ಬಹುವೀರರು ಒಬ್ಬನನ್ನು ಮುತ್ತುವುದು ನ್ಯಾಯವಲ್ಲ. ಕವಚರಹಿತನು, ಶ್ರಾಂತನು, ನೀರಿಂದೆದ್ದು ಬಂದವನು, ಗಾಯಗೊಂಡವನು ಆಗಿರುವೆನು. ಸೈನಿಕ ಸಹಾಯವಿಲ್ಲ. ನಾನು ಎಲ್ಲರೊಡನೆ ಒಮ್ಮೆಗೆ ಕಾದಾಡಲು ಸಿದ್ಧನಿರುವೆನು. ಯುಕ್ತಾಯುಕ್ತಗಳ ವಿಚಾರವನ್ನು ನಿನಗೇ ಬಿಟ್ಟಿರುವೆನು.'

ಧರ್ಮರಾಜನಿಂತೆಂದನು: 'ಸುಯೋಧನ! ಅಭಿಮನ್ಯುವಿನನ್ನು ಬಹುವೀರರು ಮುತ್ತಿ ಕೊಂದಾಗ ನಿನಗೇಕೆ ನ್ಯಾಯಾನ್ಯಾಯ ವಿಚಾರವು ಹೊಳೆಯಲಿಲ್ಲ? ಕ್ಷತ್ರಧರ್ಮವು ಬಹುಕ್ರೂರವು, ನಿರಪೇಕ್ಷವು ಮತ್ತು ವಿಚಾರಶೂನ್ಯವು ಅಹುದೆನ್ನು! ನೀವೆಲ್ಲರೂ ಧರ್ಮವನ್ನರಿತೇ ಇಂತು ನಡೆದಿರಿ! ನ್ಯಾಯವಾಗಿ ಕಾದಿ ಮಡಿವವರಿಗೇ ಶಕ್ರಲೋಕವು ಸುಪ್ರವೇಶವಾಗಿದೆ. ಆಗಿಲ್ಲದ ಧರ್ಮಚಿಂತೆ ಈಗೇಕೆ ಬಂತು? ಆಪತ್ತಿನಲ್ಲಿ ಸಿಲುಕಿದಾಗ ಮಾತ್ರ ದುರ್ಜನರು ಧರ್ಮವಿಚಾರವನ್ನು ಹೆರರಿಗೆ ಮಾತ್ರ ಉಪದೇಶಿಸುವರು. ಐಶ್ವರ್ಯಪದವಿಗಳಿರುವಾಗ ಪರಲೋಕವೆಂಬುದಿಲ್ಲವೆನ್ನುವರು. ಕವಚವನ್ನೀವೆವು; ತೊಡು! ಕಟ್ಟುಕೇಶರಾಶಿಯನ್ನು! ನಿನಗಾವ ಪರಿಕರವು ಬೇಕೋ ಅದನ್ನೆಲ್ಲ ತೆಗೆದುಕೋ! ಇನ್ನೊಂದು ಸೌಲಭ್ಯವನ್ನೀಯುವೆನು ಕೇಳು! ಪಾಂಡವರೈವರಿಗೂ ನೀನು ಸಮಾಪರಾಧವನ್ನೆಸಗಿರುವೆ! ಅವರಲ್ಲಿ ನಿನಗೆ ಬೇಕಾದೊಬ್ಬನನ್ನು ಆರಿಸಿಕೊಂಡು ಗದಾಯುದ್ಧ ಮಾಡು! ಅವನು ಬಿದ್ದರೆ ನೀನೇ ರಾಜನಾಗುವೆ! ನೀನು ಬಿದ್ದರೆ ನಮ್ಮದಾಗುವುದು ಮಹೀರಾಜ್ಯ. ಯುದ್ಧಜೀವಿತವನ್ನು ಬಿಟ್ಟು ಮತ್ತೇನನ್ನಾದರೂ ಅಪೇಕ್ಷಿಸಿದರೆ, ನಿನಗೆ ಅದನ್ನು ಒದಗಿಸುವೆನು.'

ಆಗ ಸುಯೋಧನನು ಕಾಂಚನಚಿತ್ರಿತ ದೃಢಕವಚವನ್ನು, ಶಿರಸ್ತ್ರಾಣವನ್ನು ತೊಟ್ಟು ಕಾಂಚನ ಗಿರಿರಾಜನಂತೆ ಕಂಗೊಳಿಸಿದನು. ಸನ್ನದ್ಧನು, ಸಗದನು, ಸಂಗ್ರಾಮ ಸಜ್ಜಿತನು

ಆದ ಕುರುರಾಜನು ಪಾಂಡವರಿಗಿಂತೆಂದನು : 'ನಿಮ್ಮಲ್ಲಿ ಒಬ್ಬನೊಡನೆ ಗದಾಯುದ್ಧವಾಡಲು ನಾನು ಸಿದ್ಧನಿರುವೆನು. ಸಹದೇವನನ್ನು ನಕುಲನನ್ನು ಅರ್ಜುನನ್ನು ಧರ್ಮರಾಜನನ್ನು ಕೊನೆಗೆ ವೃಕೋದರನನ್ನಾದರೂ ಎದುರಿಸಿ ಕಾದಬಲ್ಲೆನು; ಕಾದು ಗೆಲ್ಲಲೂಬಲ್ಲೆನು ; ಗೆದ್ದು ಕೊಲ್ಲಲು ಬಲ್ಲೆನು. ವೈರವಹ್ನಿಯನ್ನು ಲಾಕ್ಷಾಗೃಹದಲ್ಲಿ ಹೊತ್ತಿಸಿದೆನು. ಇಂದು ಅದನ್ನು ತೃಪ್ತಿಪಡಿಸಿ ಆರಿಸುವೆನು. ಗದಾಯುದ್ಧದಲ್ಲಿ ನನಗೆ ಸಮರಿಲ್ಲ ತಿಳಿ! ನೀವೆಲ್ಲರೊಂದಾಗಿ ಬಂದರೂ ಬಿಡದೆ ಎಲ್ಲರನ್ನೂ ಗದೆಯಿಂದ ಹೊಡೆದು ಸಂಹರಿಸುವೆನು. ಇದು ಗರ್ವದ ಬರಿಮಾತಲ್ಲ, ಅಂತೇವಾಡಿ ಭೀಮಸೇನನೇ ನನಗೆ ಪ್ರತಿವೀರನಾದುದರಿಂದ ಅವನೊಡನೆ ಕಾದಿ ಅವನನ್ನು ಆಮೇಲೆ ನಿಮ್ಮನ್ನೂ ಕೊಂದು ನನ್ನ ಮಾತನ್ನು ಸತ್ಯವೆನಿಸುವೆನು. ಈಗಲೇ ನನ್ನ ಮಾತಿನ ಸತ್ಯತ್ವ ಮಿಥ್ಯಾತ್ವಗಳು ತಿಳಿಯಲ್ಪಡಲಿ! ಗದೆಯನ್ನು ಧರಿಸಿ ನನ್ನೊಡನೆ ಕಾದಬಲ್ಲ ಗಂಡುಗಲಿ ಮುಂದೆ ಬರಲಿ!'

ಇಂತು ಗರ್ಜಿಸಿ ನುಡಿವ ಕೌರವೇಶನ ಮಾತನ್ನಾಲಿಸಿ, ಶ್ರೀಕೃಷ್ಣನು ಧರ್ಮರಾಜನಲ್ಲಿ ಕುಪಿತನಾಗಿ ಇಂತೆಂದನು: 'ಯುಧಿಷ್ಠಿರ! ಎಂತಹ ಅವಿವೇಕಿಯಾದೆ! ಒಂದುವೇಳೆ ಇವನು ನಿನ್ನೊಡನೆ ಕಾದಲು ಸಿದ್ಧನಾಗಿ ಅಥವಾ ಅರ್ಜುನ ನಕುಲ ಸಹದೇವರಲ್ಲಿ ಒಬ್ಬನನ್ನು ಆರಿಸಿಕೊಂಡಿದ್ದರೆ ಎಂತಹ ಅನರ್ಥವಾಗುತ್ತಿತ್ತು ! ಎಷ್ಟು ಸಾಹಸಿಸಿ ಮಾತಾಡಿದೆ! ಒಬ್ಬನನ್ನು ಪಾಂಡವನನ್ನು ಕೊಂದು ರಾಜನಾಗೆಂದ ನಿನ್ನ ಅನಾಲೋಚಿತ ಸಾಹಸ ವಚನಗಳನ್ನು ಕೇಳಿ, ನನಗೆ ಆಶ್ಚರ್ಯವಾಗಿದೆ. ನೀವಾರೂ ದುರ್ಯೋಧನನಿಂದ ಗದೆಪಿಡಿದು ಕಾದಲು ಸಮರ್ಥರಲ್ಲವೆಂದು ನಾನು ತಿಳಿದಿರುವೆನು. ಇವನು ಹದಿಮೂರು ವರ್ಷಗಳ ಕಾಲ ಸಂತತ ಗದಾವಿದ್ಯಾಭ್ಯಾಸವನ್ನು ಮಾಡಿರುವನು. ಭೀಮಸೇನನಂತೆ ಕಬ್ಬಿಣದ ಪ್ರತಿಮೆಯನ್ನು ಮಾಡಿಸಿ, ಅದರಿಂದ ಕೂಡಿ ಅಭ್ಯಸಿಸಿ, ಎಂತು ಭೀಮನನ್ನು ಕೊಲ್ಲುವುದೆಂಬ ಚಿಂತೆಯಿಂದ ದುಡಿದಿರುವನು. ನಿಸ್ಸಹಾಯನೆಂಬ ಅನುಕ್ರೋಶದಿಂದ ನೀನು ಸಾಹಸಿಸಿ ನುಡಿದ ಮಾತು ಅಪಾಯಕಾರಿಯಾಗಿದೆ. ಇವನೊಡನೆ ನಿಂತು ಕಾದಬಲ್ಲ ಗದಾವೀರನೆಂದರೆ ಭೀಮಸೇನನೊಬ್ಬನೇ ! ಮತ್ತೋರ್ವನೀ ಮಹೀಮಂಡಲದಲ್ಲಿಲ್ಲ. ಭೀಮಸೇನನು ವನವಾಸಾಜ್ಞಾತವಾಸ ಕಾಲದಲ್ಲಿ ಸತತಾಭ್ಯಾಸವನ್ನು ಮಾಡಿಲ್ಲ.

ಗದಾಹಸ್ತನಾದ ದುರ್ಯೋಧನನನ್ನು ಗೆಲ್ಲಲು ದೇವಾಸುರರೂ ಸಮರ್ಥರಲ್ಲ. ನಿಮ್ಮ ನಾಲ್ವರನ್ನು ದುರ್ಯೋಧನನು ಸಂಹರಿಸಬಲ್ಲನು. ಪ್ರಾಣಾಶೆಯನ್ನೂ ತೊರೆದು ಕಡಿದಾಡುವ ಸುಯೋಧನನನ್ನು ಗೆಲ್ಲುವುದು ಕಷ್ಟ ! ಕೊಲ್ಲುವುದಂತೂ ಕಷ್ಟತರ! ಆದರೂ ಒಂದು ಉಪಾಯವನ್ನವಲಂಬಿಸಿ, ಭೀಮಸೇನನು ಇವನನ್ನು ಕೊಲ್ಲಬಲ್ಲನು. ಬಲವಿಷಯದಲ್ಲಿ ಭೀಮನಿಗೆ ಸಮರೇಳೇಳು ಲೋಕಗಳಲ್ಲಿಯೂ ಇಲ್ಲ ನಿಜ ! ದುರ್ಯೋಧನನೂ ಶಿಕ್ಷಾಕುಶಲನಾಗಿ ದುರ್ಜಯನೆನಿಸಿರುವನು.

'ಊರುವೇಗದ ಗದೆಯಿಂದ ನಿನ್ನ ಊರುವನ್ನು ಮುರಿವೆ' ನೆಂಬ ಭೀಮಸೇನನ

ಪ್ರತಿಜ್ಞೆಯೂ ಸತ್ಯವಾಗಬೇಕಲ್ಲವೇ? ಗದಾಯುದ್ಧದಲ್ಲಿ ನಾಭಿಯ ಕೆಳಗೆ ಹೊಡೆಯುವುದು ಅಧರ್ಮವೆಂದು ಲೋಕಸಿದ್ಧವಾಗಿದೆ. ಪ್ರತಿಜ್ಞಾಪಾಲನವು ವಿಶೇಷಧರ್ಮವು. ಲೋಕಸಿದ್ಧ ಗದಾಯುದ್ಧ ನಿಯಮವು ಸಾಮಾನ್ಯ ಧರ್ಮವು. ಸಾಮಾನ್ಯ ಧರ್ಮದಿಂದ ವಿಶೇಷ ಧರ್ಮವು ಕೆಡಬಾರದು. ಯುದ್ಧನಿಯಮವನ್ನು ಮೀರಿದರೂ ಅಧರ್ಮವು ಪ್ರತಿಜ್ಞೆಯನ್ನು ಪಾಲಿಸದೆ ಬಿಡುವುದೂ ಇನ್ನೂ ಅಧರ್ಮವು. ಇಂತು ಉಭಯ ಧರ್ಮಗಳು ಅನಿವಾರ್ಯವಾದಾಗ ಲೋಕನಿಯಮವನ್ನುಲ್ಲಂಘಿಸಿ, ಪ್ರತಿಜ್ಞಾಪಾಲನ ಮಾಡುವುದು ಕರ್ತವ್ಯವು. 'ನ ಹಿಂಸ್ಯಾತ್ ಸರ್ವಾಭೂತಾನಿ' ಎಂಬ ಸಾಮಾನ್ಯ ಶ್ರುತಿಯನ್ನು ಪಾಲಿಸುತ್ತಾ ಗೋಹತ್ಯಾ ನಿರತವಾದ ವ್ಯಾಘ್ರವನ್ನು ಕೊಲ್ಲದೇ ಇರಲಾಗುವುದೇ? ಎಂತಹ ಸಾಧುವಾದರೂ ವೃಶ್ಚಿಕ ಸರ್ಪ ವ್ಯಾಘ್ರಾದಿ ದುಷ್ಟಸಂಹಾರದಿಂದ ಲೋಕ ಕ್ಷೇಮವಾಯಿತೆಂದು ಸಂತಸಿಸಬೇಕೆಂದು ಧರ್ಮಶಾಸ್ತ್ರಗಳು ಸಾರುತ್ತಿವೆ. ಅಂತೆಯೇ ಕಿಂಚಿತ್‌ವ್ಯಾಜದಿಂದ ಊರುಭಂಗವನ್ನು ಅಂದರೆ ಸಕ್ಥಿದೇಶದಲ್ಲಿ ಹೊಡೆದು ಭೀಮಸೇನನು ಉಭಯ ಧರ್ಮಗಳನ್ನೂ ಪಾಲಿಸುವನು. ಸಕ್ಥಿಯು ನಾಭಿಗೆ ಸಮ ದೇಶವೂ, ಊರುವಿಗೆ ಸಂಬದ್ಧವೂ ಆಗಿರುವುದರಿಂದ ಭೀಮಸೇನನು ಊರುಭಂಗವನ್ನು ಮಾಡಿ ಪ್ರತಿಜ್ಞಾಪಾಲನ ವಿಶೇಷ ಧರ್ಮವನ್ನೂ ಲೋಕಸಿದ್ಧ ನಿಯಮದಂತೆ ನಾಭಿಯ ಕೆಳಗೆ ಹೊಡೆಯದೆ ಸಾಮಾನ್ಯ ಧರ್ಮವನ್ನೂ ಪಾಲಿಸುವನು.

ಸತ್ಯತ್ಯಾಗ ರೂಪನಾದ ಅಧರ್ಮಕ್ಕೆ ಹೆದರಿ ಅಲ್ಲವೇ ನೀನು ಹದಿಮೂರು ವರ್ಷಗಳವರಿಗೂ ರಾಜ್ಯವನ್ನು ಬಿಟ್ಟೆ! ಅಂತಹ ಸತ್ಯಕ್ಕಾಗಿ ಕಿಂಚಿದ್ವ್ಯಾಜದಿಂದ ಊರುಭಂಗವನ್ನು ಸಾಧಿಸುವ ಭೀಮಸೇನನೆಂದಿಗೂ ಅಧರ್ಮದ ಹೊಸ್ತಿಲಲ್ಲಿಯೂ ಕಾಲಿಡುವವನಲ್ಲ. ಭೀಮಸೇನನು ನಿರ್‍ವ್ಯಾಜಬಲದಿಂದ ನಾಭಿಯ ಮೇಲೇ ಹೊಡೆದು ದುರ್ಯೋಧನನನ್ನು ಕೊಲ್ಲಬಲ್ಲನು. ಪ್ರಬಲವಾದ ಪ್ರತಿಜ್ಞಾ ರಕ್ಷಣಕ್ಕಾಗಿ ತೊಡೆಗಳನ್ನು ಹೊಡೆದು ಕೆಡಹಬೇಕು. ಅತ್ಯಧಿಕ ಬಲಿಷ್ಠನಾದ ಜರಾಸಂಧನನ್ನು ಮರ್ಮಸ್ಥಾನವಲ್ಲದಿರುವಲ್ಲಿ ಗುದ್ದಿ ಕೊಂದ ಭೀಮನಿಗೆ ದುರ್ಯೋಧನನ ಲೆಕ್ಕವೇನು? ಅನೇಕಾಕ್ಷೌಹಿಣೀ ಶತ್ರುಭಂಜಕನಿಗೆ ಕುರುರಾಜನನ್ನೊಬ್ಬನ ಭಯವೇನು?

ನನ್ನಿಂದಲೂ ಶ್ರೀಕೃಷ್ಣ ಬಲರಾಮ (ಶುಕ್ಲಕೇಶ) ನಿಂದಲು ಬಹುವರ್ಷ ಕಲಿತ ಭೀಮನಿಗೆ ಗದಾಭ್ಯಾಸವೂ ಇದೆ, ಗದಾಕೌಶಲವೂ ಇದೆ. ದುರ್ಯೋಧನನು ಪ್ರಯತ್ನ ಬಹುಲನು; ಭೀಮನಷ್ಟು ಕುಶಲನಲ್ಲ. ಅಲ್ಪವಾದ ಕಾರ್ಯದಲ್ಲಿ ಮಹಾಪ್ರಯತ್ನವನ್ನು ತೋರುವುದು ನೈಜವೀರಲಕ್ಷಣವಲ್ಲ. ಸಿಂಹವು ಹಸ್ತಿಮಸ್ತಭೇದನಕ್ಕಾಗಿ ತೊಡಗಿಸುವ ನಿಜಖರನಖರರಾಜಿಯ ತೀಕ್ಷ್ಣತೆಯನ್ನು ಮೂಷಿಕಸಂಹಾರದಲ್ಲಿ ತೋರುವುದಿಲ್ಲ. ದುರ್ಯೋಧನನೆಷ್ಟು ಪ್ರಯತ್ನ ಮಾಡಿದ್ದರೂ, ಬಲಕೌಶಲಾಧಿಕನಾದ ಭೀಮಸೇನನು ಅವನನ್ನು ಅತಿಪ್ರಯತ್ನವಿಲ್ಲದೇನೇ ಸಂಹರಿಸಬಲ್ಲನು.

ಪ್ರತಿಜ್ಞಾಪಾಲನವು ಮುಖ್ಯಧರ್ಮವು. ಆ ಧರ್ಮವನ್ನು ರಕ್ಷಿಸಲು ಮಾಡುವುದೆಲ್ಲವೂ ಧರ್ಮವೇ! ಇಂತು ಧರ್ಮರಹಸ್ಯವನ್ನು ತಿಳಿದವರೆಂದರೆ ನಾವೀರ್ವರೇ!

(ಭೀಮ ಕೃಷ್ಣರು) ಮತ್ತೊಬ್ಬರಿಗೆ ಅಷ್ಟು ತತ್ವಜ್ಞಾನವಾಗದು. ಧರ್ಮರಾಜ! ಆದುದರಿಂದ ಲೋಕಸಿದ್ಧ ಧರ್ಮಪಾಲನೆಗಾಗಿ ಭೀಮಸೇನನು, ಆಪತ್ಸಮಯವಲ್ಲದಿದ್ದರೂ ಆಪತ್ಸಮಯದಲ್ಲಿ ವ್ಯಾಜಾಶ್ರಯಣ ಮಾಡಿಯಾದರೂ ಸತ್ಯಪ್ರತಿಜ್ಞರಾಗಬೇಕೆಂಬ ಧರ್ಮವನ್ನು ಲೋಕದ ಜನರಿಗೆ ನೋಡಿಸಲು ಮತ್ತು ಲೋಕನಿಂದೆಯನ್ನು ದೂರೀಕರಿಸಲು ಕೋರಿ, ಒಂದು ವ್ಯಾಜ (ಸಕ್ಥಿಭೇದನ) ದಿಂದ ದುರ್ಯೋಧನನನ್ನು ಸಂಹರಿಸುವನು.

ಧರ್ಮರಾಜ! ಇಂತು ಭೀಮಸೇನನಿಂದ ಸಂಹೃತನಾಗಲಿರುವ ದುರ್ಯೋಧನನನ್ನು ಗದಾಯುದ್ಧದಲ್ಲಿ ಕಲೆತು ಹೊಡೆದಾಡಲೆಣಿಸಿ, ಮಹಾಕಷ್ಟಕ್ಕೆ ಗುರಿಯಾಗುತ್ತಿದ್ದೆ! ಶಕುನಿಯು ಜೂಜಾಡಲು ಕರೆದಂತೆ, ನೀನೂ ನಿನ್ನ ತಮ್ಮಂದಿರ ಪ್ರಾಣಗಳನ್ನು ಪಣವಿಟ್ಟು ಯುದ್ಧದ್ಯೂತಕ್ಕೆ ನಿಂತು ಕರೆದೆ! ಎಲ್ಲ ಶತ್ರುಗಳನ್ನೂ ಸಂಹರಿಸಿ, ಯುದ್ಧದ ಕೊನೆಯಲ್ಲಿ ಒಬ್ಬನಿಂದ ಕಾದಿ, ರಾಜ್ಯವನ್ನೇ ಕಳೆದುಕೊಂಬುವ ಹುಂಬನಾದೆ!'

ಶ್ರೀಕೃಷ್ಣಾಭಿಪ್ರಾಯವನ್ನರಿತು, ಧರ್ಮರಾಜನನ್ನು ಅನುನಯಿಸಿ ಧೈರ್ಯ ತುಂಬುತ್ತಾ ಭೀಮಸೇನನಿಂತೆಂದನು: 'ಶ್ರೀಕೃಷ್ಣ! ಚಿಂತಿಸುವ ಕೆಲಸವಿಲ್ಲ. ಇಂದು ದೀರ್ಘವೈರವನ್ನು ವೈರಿಯನ್ನೂ ಮುಗಿಸಿಬಿಡುವೆನು. ನಿನ್ನ ದಯವೊಂದಿರಲಿ! ಮಧುಸೂದನ! ಧರ್ಮರಾಜನ ವಿಜಯಧ್ವಜವನ್ನು ಹಾರಿಸಿ, ದುರ್ಯೋಧನನ ಗದೆಗೂ ಬಹುಗುಣ ಗುರುತರವಾಗಿರುವ ನನ್ನ ಗದೆಯು ಪಾಂಡವ ಜಯವನ್ನು ಪೂರ್ಣವಾಗಿ ಸಾಧಿಸುವುದು. ಸಸುರಾಸುರ ಮಾನವರನ್ನೆದುರಿಸಿ ನಿಲ್ಲುವ ನನಗೆ ಪಾಪಿ ಸುಯೋಧನನ ಲೆಕ್ಕವೇನು?' ಆ ಮಾತಿಗೆ ಸಂತಸಿಸಿ, ಶ್ರೀಕೃಷ್ಣನು 'ಮಹಾಬಲ! ನಿನ್ನಾಶ್ರಯಿಸಿ ಧರ್ಮರಾಜನು ನಿಹತಶಾತ್ರವನಾದನು. ನಿನ್ನ ಬಲವಿಕ್ರಮಗಳು ಧರ್ಮವಿಜಯವನ್ನು ಸಾಧಿಸಿದವು. ಎಲ್ಲ ಧಾರ್ತರಾಷ್ಟ್ರರನ್ನು ಕೊಂದ ನಿನ್ನ ವಿಕ್ರಮಾಗ್ನಿಗೆ ದುರ್ಯೋಧನ ಪಶುವು ಪೂರ್ಣಾಹುತಿಯಾಗುವುದು. ಸಾಗರಾಂತವಾದ ವಸುಮತಿಯು ವಿಜಯಮಾಲೆಯನ್ನು ಕೈಲಿ ಪಿಡಿದು ಧರ್ಮನ ಕೊರಳಿಗೆ ಹಾಕಲಿರುವಳು. ಶಚೀಪತಿಗಾಗಿ ಕಾದುವ ಕೇಶವನಂತೆ, ಕಾದಿ, ಪಾಪಿ ದುರ್ಯೋಧನನನ್ನು ಕೊಂದು, ಧರ್ಮನಿಗೆ ಪಟ್ಟಗಟ್ಟು! ಸಕ್ಥಿನಿಯನ್ನು ಹೊಡೆದು ಉಭಯ ಧರ್ಮಗಳನ್ನೂ ಪಾಲಿಸು! ಎಚ್ಚರದಿಂದ ಹೊಡೆದಾಡು! ದುರ್ಯೋಧನನು ಸಾಮಾನ್ಯನಲ್ಲ. ಕೃತಿಯು, ಬಲವಂತನೂ ಅಲ್ಲದೆ ಕುಟಿಲನೂ ಆಗಿರುವನು ನಡೆ! ನಿನಗೆ ಜಯವಾಗಲಿ!' ಎಂದು ಅಭಿನಂದಿಸಿದನು.

ಭೀಮಸೇನನು ಮೈಪೆರ್ಚಿ, ಗದೆಯನ್ನೆತ್ತಿಪಿಡಿದು ಮುಂದೆ ಬಂದನು. ಅವನ ವಿಕ್ರಮ ವಚನಗಳು ಕ್ರಿಯಾರೂಪವಾದುವೆಂದು ನಂಬಿ, ಧರ್ಮಜ ಪಾರ್ಥ ಯಮಳರು, ಸಾತ್ಯಕಿ ಪಾರ್ಷತರು ಪ್ರಶಂಸಿಸಿದರು. ಭೀಮಬಲನಾದ ಭೀಮಸೇನನು ಸೃಂಜಯರಿಂದ ಕೂಡಿ ನಿಂತಿದ್ದ ಧರ್ಮರಾಜನಿಗಿಂತೆಂದನು: 'ಧರ್ಮರಾಜ! ನಾನೀಗ ದುರ್ಯೋಧನನಿಂದ ಹೋರಾಡಿ, ಅವನ ತೊಡೆಮುರಿದು, ಕೆಡಹಿ ಬರುವೆನು. ಈ ಪುರುಷಾಧಮನು ಎಂದಿಗೂ ನನ್ನನ್ನು ಗೆಲ್ಲಲು ಸಮರ್ಥನಲ್ಲ. ಬಹುಕಾಲದಿಂದ ಅಡಗಿಸಿಟ್ಟಿದ್ದ ಕ್ರೋಧಾಗ್ನಿಯನ್ನು ಶುಷ್ಕತರುವಿನಂತೆ ನಿಸ್ಸಾರನಾಗಿರುವ ದುರ್ಯೋಧನನಲ್ಲಿ ಬಿಟ್ಟು ಸುಟ್ಟು

ಬರುವೆನು. ನಿನ್ನ ಹೃದಯ ಶಲ್ಯವನ್ನು ಕಿತ್ತೊಗೆವೆನು. ಪಾಪಿ ಸುಯೋಧನನಿನ್ನಿಲ್ಲವೆಂದು ತಿಳಿ ! ನಿಶ್ಚಿಂತನಾಗು ! ರಾಜ್ಯದಿಂದ, ಸಿರಿಯಿಂದ ಬಂಧುಗಳಿಂದ ಮಾತ್ರವಲ್ಲದೆ ದುರ್ಯೋಧನನು ಪ್ರಾಣಗಳಿಂದಲೂ ರಹಿತನಾಗುವನು. ನಾನು ತನ್ನ ಸುತನನ್ನು ಕೊಂದ ವಾರ್ತೆ ಕೇಳಿ, ಧೃತರಾಷ್ಟ್ರನು ಶಕುನಿ ಬುದ್ಧಿಪರಿಕಲ್ಪಿತವಾದ ಅನರ್ಥವನ್ನು ಚಿಂತಿಸಿ ಅಳಲಿ! '

ಇಂತಾಡಿ, ಭೀಮಸೇನನು ಗದಾಪರಿಕಲಿತ ಭುಜನಾಗಿ, ಶಕ್ರನು ವೃತ್ರನನ್ನಂತೆ, ದುರ್ಯೋಧನನನ್ನು ಎದುರಿಸಿ ರಣಾಹ್ವಾನವನ್ನಿತ್ತನು. ದುರ್ಯೋಧನನು ಕ್ರುದ್ಧನಾಗಿ, ಗದಾಹಸ್ತನಾಗಿ ನಿಂತಾಗ, ಎರಡು ಮದ್ದಾನೆಗಳು ಕಲೆತಂತಾಯಿತು. ಯೂಥಪರಿಭ್ರಷ್ಟವಾದ ಮಾತಂಗವು ಸಿಂಹದ ಕೈಲಿ ಸಿಕ್ಕಂತಾಯಿತು ಕುರುರಾಜನ ಅವಸ್ಥೆ. ಆದರೂ ಅವನು ಭಯವನ್ನೂ, ಗ್ಲಾನಿಯನ್ನೂ, ವ್ಯಥೆಯನ್ನು ತೋರದೆ ಸ್ಥಿರನಾಗಿ ನಿಂತನು. ಆಗ ಭೀಮಸೇನನು ದುರ್ಯೋಧನನಿಗಿಂತೆಂದನು:

'ರಾಜನಾದ ಧೃತರಾಷ್ಟ್ರನು, ಅವನ ಮಗನಾದ ನೀನು ಮಾಡಿದ ಮಹಾಪರಾಧಗಳನ್ನು ನೆನೆ! ವಾರಣಾವತದ ಗೃಹ ದಾಹವನ್ನು, ದ್ರೌಪದೀಪರಿಕ್ಲೇಶವನ್ನು ವನವಾಸ ಕಷ್ಟವನ್ನು ನಾವು ಅನುಭವಿಸಿದೆವೆಂದರೆ, ಅದು ನಿನ್ನ ಮತ್ತು ಶಕುನಿಯ ಕುತಂತ್ರದಿಂದ. ನಾವು ನಿನಗೇನಪರಾಧಗೈದೆವೆಂದು ನಮ್ಮಲ್ಲಿ ವಿಷಕಾರುವೆ! ನಿರಪರಾಧಿ ಗಳಿಗೆಸಗಿದ ದ್ರೋಹವಿಂದು ನಿನ್ನನ್ನೇ ಕಾಡಿ ತಿನ್ನುತ್ತಿದೆ ನಿನ್ನ ದುಷ್ಟಹಠ, ದುರಭಿಮಾನಗಳಿಂದ ಎಷ್ಟನರ್ಥವಾಯಿತು ! ಭೀಷ್ಮಪಿತಾಮಹನು ಶರಶಯನಗತನಾದನು. ದ್ರೋಣ ಕರ್ಣ ಶಲ್ಯಾದಿ ವೀರರು ನಿನ್ನಿಂದ ಹಾಳಾದರು. ವೈರಮೂಲ ಕಾರಣನಾದ ಶಕುನಿಯೂ ಸತ್ತನು. ನಿನ್ನ ಭ್ರಾತೃಪುತ್ರರೆಲ್ಲರೂ ನಷ್ಟರಾದರು. ಅನೇಕ ರಾಜರು ನಿನಗಾಗಿ ಪ್ರಾಣತೊರೆದರು. ದ್ರೌಪದೀ ಕ್ಲೇಶಭಾಜನನಾದ ಪ್ರಾತಿಕಾಮಿಯೂ ಸತ್ತನು. ಕುಲನಾಶಕನು ನೀನೊಬ್ಬನುಳಿದಿರುವೆ! ಅಧಮಾಧಮನಾದ ನಿನ್ನನ್ನು ಗದೆಯಿಂದ ಹೊಡೆದು, ಊರುಭಂಗವನ್ನು ಸಾಧಿಸಿ, ಸತ್ಯಪ್ರತಿಜ್ಞನಾಗುವೆನು. ಇಂದು ನಿನ್ನನ್ನು ಕೊಲ್ಲದೆ ಬಿಡೆನು. ನಿನ್ನ ದುಷ್ಟದರ್ಪವೆಲ್ಲವೂ ನಿನ್ನಂತೆ ಪುಡಿಯಾಗುವುದು. ದುರ್ಮಾರ್ಗ ! ಪಾಂಡವ ದ್ರೋಹದ ಫಲವನ್ನೀಗ ಉಣ್ಣುವೆ!'

ಆ ಮಾತಿಗೆ ದುರ್ಯೋಧನನಿಂತೆಂದನು: 'ಎಲವೋ! ಸುಮ್ಮನೇ ಬೊಗಳ ಬೇಡ! ಮಾತಾಡಿದಂತೆ ಮಾಡು! ನನ್ನೊಡನೆ ಗದಾಯುದ್ಧವಾಡಿ ಉಳಿದವರಿಲ್ಲ ಬಾ ! ಇಂದು ನಿನ್ನ ಯುದ್ಧಶ್ರದ್ಧೆಯನ್ನು ಹಿಂಗಿಸುವೆನು. ನೋಡೀ ನನ್ನ ದುರ್ಧರ ಗದೆಯನ್ನು! ಶಾರದಾಭ್ರದಂತೆ ವೃಥಾಗರ್ಜಿಸುವುದು ವೀರಲಕ್ಷಣವಲ್ಲ. ನಿನಗಿರುವ ಬಲವನ್ನೆಲ್ಲ ತೋರಿ, ಕಾದಾಡು! ಆ ಮಾತನ್ನಾಲಿಸಿ, ದುರ್ಯೋಧನನ ಧೈರ್ಯವನ್ನು ಎಲ್ಲರೂ ಪ್ರಶಂಸಿಸಿದರು; ತಲಶಬ್ದಗಳಿಂದ ಮದ್ದಾನೆಯನ್ನಂತೆ ಮತ್ತೆ ರೇಗಿಸಿದರು. ಆನೆಗಳು ಗೀಳಿಟ್ಟವು; ಕುದುರೆಗಳು ಕೆನೆದವು. ಸೈನಿಕರು ಸಿಂಹನಾದ ಮಾಡಿದರು.

ಸುದಾರುಣವಾದ ಗದಾಯುದ್ಧವು ಪ್ರಾರಂಭವಾಗುವುದಿತ್ತು. ಆಗ ತಾಲಧ್ವಜನಾದ

ಬಲರಾಮದೇವನು ಶಿಷ್ಯರಿಬ್ಬರ ಗದಾಯುದ್ಧವನ್ನರಿತು, ಅಲ್ಲಿಗೆ ಬಂದನು. ಆತನನ್ನು ಕಂಡು ಪ್ರೀತರಾಗಿ, ಪಾಂಡವರು, ಎದ್ದು ಹೋಗಿ, ಕರೆತಂದು, ಪೂಜಿಸಿದರು. ಶ್ರೀಕೃಷ್ಣನೂ ಅಣ್ಣನಿಗೆ ವಂದಿಸಿದನು. ಬಲರಾಮನು ಗದಾಹಸ್ತರಾಗಿ ನಿಂತಿದ್ದ ಭೀಮ ದುರ್ಯೋಧನರನ್ನೊಮ್ಮೆ ವೀಕ್ಷಿಸಿ, ಮತ್ತೆ ಧರ್ಮರಾಜಾದಿಗಳ ಕಡೆ ನೋಡಿದನು.

'ಕೃಷ್ಣ! ಯುದ್ಧಪೂರ್ವದಲ್ಲೇ ನಾನು ತೀರ್ಥಯಾತ್ರೆಗೆಂದು ತೆರಳಿದೆನು. ಅಂದು ಪುಷ್ಯನಕ್ಷತ್ರವಿತ್ತು. ಇಂದು ಶ್ರವಣ ನಕ್ಷತ್ರವಿದೆ. ಆದುದರಿಂದ ಮೃಗಶಿರದಿಂದ ಹದಿನೆಂಟು ದಿನವಾಗಿದೆ ಯುದ್ಧಾರಂಭವಾಗಿ; ನಾನು ತೀರ್ಥಯಾತ್ರೆಯಲ್ಲಿದ್ದುದು ಒಂದು ನಕ್ಷತ್ರ ಚಕ್ರವಾಗಿ, ಮತ್ತೆ ಪುಷ್ಯದಿಂದ ಹದಿನೈದು ದಿನಗಳಿಂದ ಅಂದರೆ ನಲವತ್ತೆರಡು ದಿನಗಳು. ಈಗ ಹದಿನೆಂಟು ದಿನಗಳಿಂದ ಧರ್ಮಯುದ್ಧವಾಗಿದೆ, ಧರ್ಮವಿಜಯವೂ ಗೋಚರವಾಗುತ್ತಿದೆ. ಚಂದ್ರನು ಪಿತೃಲೋಕದಲ್ಲಿ ಸನ್ನಿಹಿತನಾಗಿ ಧರ್ಮಕ್ಕಾಗಿ ಮೃತರಾದವರಿಗೆ ದಿವ್ಯದೇಹಪ್ರದನಾಗಿರುವನು. ಇಂತಹ ಪಿತೃದೈವತ್ಯವಾದ ಮಘೆಯಲ್ಲಿ ಸಪ್ತರ್ಷಿಗಳಿರುವ ಪುಣ್ಯಕಾಲದಲ್ಲಿ ದ್ರೋಣಾದಿ ವೀರರು ಐಹಿಕಶರೀರವನ್ನು ಬಿಟ್ಟು ಪುಣ್ಯಲೋಕವನ್ನೈದಿರುವರು. ಈಗ ಶಿಷ್ಯರಿಬ್ಬರ ಗದಾಯುದ್ಧವನ್ನು ನೋಡಬಯಸಿ, ಬೇಗ ಇಲ್ಲಿಗೆ ಬಂದಿರುವೆನು' ಎಂದು ಬಲರಾಮನು ಕೂತನು.

## ೩. ತೀರ್ಥಯಾತ್ರೆ - ೧

ವೈಶಂಪಾಯನನು ಶ್ರೀ ಜನಮೇಜಯನಿಗೆ ನಿರೂಪಿಸಿದನು :

'ರಾಜನ್ ! ಧರ್ಮರಾಜನು ಹಲಾಯುಧನನ್ನು ಆದರದಿಂದ ಕರೆದಪ್ಪಿ ಸ್ವಾಗತವಿತ್ತು ದಿವ್ಯಾಸನದಿ ಕೂಡಿಸಿದನು. ಶ್ರೀಕೃಷ್ಣಾರ್ಜುನರು ಪ್ರೀತಿಯಿಂದ ಆಲಿಂಗಿಸಿದರು. ಮಾದ್ರೀಪುತ್ರರು, ದ್ರೌಪದೇಯರು ವಂದಿಸಿದರು. ರಣಕಣದಲ್ಲಿಂದಲೇ ಭೀಮ ದುರ್ಯೋಧನರು ಶಿರಬಾಗಿ ಪೂಜಿಸಿದರು. 'ರೌಹಿಣೇಯ ! ನೋಡು ಗದಾ ಯುದ್ಧವನ್ನು !' ಎಂದ ಸಭಿಕರ ಮಾತಿಗೆ ಸಂತಸಿಸಿ, ಬಲರಾಮನು ಯಥೋಚಿತ ಕುಶಲವಾರ್ತೆಯನ್ನು ನಡೆಸಿ, ಶ್ರೀಕೃಷ್ಣಸಾತ್ಯಕಿಯರನ್ನು ಕರೆದಪ್ಪಿ ತಲೆ ಮೂಸಿ, ಕೂತನು. ಇಂದ್ರೋಪೇಂದ್ರರು ಚತುರ್ಮುಖನನ್ನಂತೆ ಯದುಪುಂಗವರೀರ್ವರು ಬಲದೇವನನ್ನು ಪೂಜಿಸಿ, ಅವನ ಸಮೀಪದಲ್ಲಿ ಕೂತರು. ನೀಲವಸನನು, ಧವಳದೇಹನು ಆದ ಹಲಾಯುಧನು ನಕ್ಷತ್ರಗಣ ಮಧ್ಯದಿ ಚಂದ್ರಮನಂತೆ ವಿರಾಜಿಸಿದನು.

ಜನಮೇಜಯನು ತೀರ್ಥಯಾತ್ರೆಯ ವಿವರವನ್ನು ತಿಳಿಯಬಯಸಿ "ಮಹಾ ಮುನೇ! ಹಿಂದೆ ಯಾರ ಕಡೆಯೂ ನಿಂತು ಹೋರಾಡುವ ಇಷ್ಟವಿಲ್ಲದೆ ಬಲದೇವನು ಕೆಲ ವಿಪ್ರ ಯಾದವರಿಂದ ಕೂಡಿ ತೀರ್ಥಯಾತ್ರೆಗೆ ಹೊರಟನೆಂದೆ! ಯುದ್ಧದ ಕೊನೆಯ ದಿನ ಆತನು ಅಲ್ಲಿಗೆ ಬರಲು ಕಾರಣವೇನು ? ಯಾವ ತೀರ್ಥಗಳನ್ನಾತನು ಸೇವಿಸಿದನು? ಯಾವ ಕ್ಷೇತ್ರಗಳನ್ನು ಕಂಡನು ? ಎಲ್ಲವನ್ನೂ ವಿಸ್ತಾರವಾಗಿ ಹೇಳು !" ಎಂದು ಪ್ರಾರ್ಥಿಸಿದನು.

ವೈಶಂಪಾಯನನಿಂತೆಂದನು :

ಉಪಪ್ಲಾವ್ಯದಲ್ಲಿ ಪಾಂಡವರಿದ್ದಾಗ, ಶ್ರೀಕೃಷ್ಣನು ರಾಯಭಾರಿಯಾಗಿ ಕುರುರಾಜಧಾನಿಗೆ ಹೊರಟನು. ಅಲ್ಲಿ ಧೃತರಾಷ್ಟ್ರನನ್ನು ದುರ್ಯೋಧನಾದಿಗಳನ್ನು ಕಂಡು, ಆಡತಕ್ಕ ವಚನಗಳನ್ನಾಡಿ, ಸಂಧಿಗಾಗಿ ಪ್ರಯತ್ನಿಸಿದನು. ಆದರೆ ರಾಜಾ ದುರ್ಯೋಧನನು ಸಂಧಿಗೊಡಂಬಡಲಿಲ್ಲ. ಕೆಲಸವಾಗದೆ ಹಿಂದಿರುಗಿ ಬಂದ. ಶ್ರೀಕೃಷ್ಣನು ಪುಷ್ಯದಲ್ಲಿ ಪಾಂಡವ ಸೇನೆಯನ್ನು ಕುರುಕ್ಷೇತ್ರಕ್ಕೆ ಸಾಗಿಸಿದನು. ಯುದ್ಧವು ನಿಶ್ಚಿತವಾಯಿತು. ಬಲರಾಮನು ದುರ್ಯೋಧನನಿಗೂ ಸಹಾಯ ಮಾಡೆಂದು ಕೃಷ್ಣನನ್ನು ಬೇಡಿದನು. ಅಧರ್ಮ ಪಕ್ಷಕ್ಕೆ ನನ್ನ ಸಹಾಯವಿಲ್ಲೆಂದು ಶ್ರೀಕೃಷ್ಣನು ನುಡಿದನು. ಆದುದರಿಂದ ಬಲರಾಮನು ಸಿಟ್ಟಾಗಿ, ಸರಸ್ವತಿ ತೀರದ ಕ್ಷೇತ್ರಗಳನ್ನು ನೋಡಿಬರುವೆನೆಂದು ಹೇಳಿ, ತೀರ್ಥಯಾತ್ರೆಗೆ ಹೊರಟನು. ಆಗ ಶ್ರೀಕೃಷ್ಣನ ಅನುಮತಿ ಪಡೆದು ಭೋಜವಂಶದ ಕೃತವರ್ಮನು ಒಂದು ಅಕ್ಷೌಹಿಣೀಸೇನಾ ಸಮೇತನಾಗಿ, ದುರ್ಯೋಧನನ ಕಡೆ ನಿಂತು, ಕಾದಲು ಪೋದನು. ಯುಯುಧಾನನು ಶ್ರೀಕೃಷ್ಣನೊಡಗೂಡಿ ಬಂದು ಪಾಂಡವರ ಕಡೆ ನಿಂತನು. ಪುಷ್ಯದಲ್ಲಿ ಶ್ರೀಕೃಷ್ಣನು ಹೊರಟನು ; ಬಲರಾಮನೂ ಅಂದೇ ತೀರ್ಥಯಾತ್ರೆಗೆ ತೆರಳಿದನು. ಆಮೇಲೆ ಎಂಟು ದಿನಗಳ ನಂತರ ಕೃತವರ್ಮನು ಅನುರಾಧೆಯಲ್ಲಿ ತೆರಳಿ, ಕುರುರಾಜನನ್ನು ಸೇರ ಪೋದನು.

ಬಲರಾಮನು ಪರಿವಾರದಿಂದ ಬೇಕಾದ ಸಂಭಾರಗಳನ್ನು ತರೆಸಿದನು. ದ್ವಾರಕೆಯಿಂದ ಪುರೋಹಿತರು, ಋತ್ವಿಜರು, ವಿಪ್ರರು ಬಂದರು. ಸುವರ್ಣ ರಜತವಸನಶಯನ ಭಾಂಡಗಜತುರಗ ಸ್ಯಂದನಾದಿ ದಾನಾರ್ಥ ವಸ್ತುಗಳು ಹೇರಳವಾಗಿ ಶೇಖರಿಸಲ್ಪಟ್ಟವು. ಖರೋಷ್ಟ್ರಗಳು ಸಂಭಾರಗಳನ್ನು ಹೊತ್ತು ನಡೆದವು. ಶಕಟಗಳು ನೂರಾರು ಬಂದವು. ಕುರು ಕ್ಷೇತ್ರದ ಸರಸ್ವತಿಯ ತೀರದ ಪುಣ್ಯ ಸ್ಥಲಗಳನ್ನೆಲ್ಲ ನೋಡಿಬರಲು ಸಂಕಲ್ಪಿಸಿ, ಸಂಕರ್ಷಣನು, ಸ್ವಸ್ತಿಪುಣ್ಯಾಹವನ್ನು ಮಾಡಿಕೊಂಡು, ತೆರಳಿದನು. ದೇಶ ದೇಶಗಳಲ್ಲಿರುವ ದೇವತಾ ಮೂರ್ತಿಗಳನ್ನು ಪೂಜಿಸಲು ಬೇಕಾದ ದ್ರವ್ಯಗಳನ್ನೂ, ಅಲ್ಲಿರುವ ತೀರ್ಥವಾಸಿಗಳಿಗೆ ಕೊಡಬೇಕಾದ ದಾನ ವಸ್ತುಗಳನ್ನು ದಂಡಿಯಾಗಿ ತೆಗೆಸಿಕೊಂಡು ಬಲರಾಮನು ಹೊರಟನು.

ಮುಂದಾಗಿ ನಡೆದ ಪರಿವಾರವು ಸಿದ್ಧಪಡಿಸಿದ ಭಕ್ಷ್ಯಪಾನೀಯಗಳನ್ನಿತ್ತು ವಿಪ್ರಾದಿಗಳನ್ನು ತೃಪ್ತಿಪಡಿಸಿ, ಬಲರಾಮನು ಜಂಗಮ ಸ್ಥಾವರ ಭಗವನ್ಮೂರ್ತಿದ್ವಯವನ್ನೂ ಪೂಜಿಸಿದನು. ಯಾರಿಗೇನಿತ್ತರೆ ತೃಪ್ತಿಯೋ, ಆ ವಸ್ತುವನ್ನೀಯಲು ಬಲರಾಮನು ಮುಂಬರುತ್ತಿದ್ದನು. ವಾಹನ, ವಸನ, ಭೋಜನ, ಪಾನ, ಆಭರಣಗಳನ್ನು ಬೇಡಿದವರಿಗೆ ಆಯಾ ವಸ್ತುಗಳು ಸಿದ್ಧವಾಗುತ್ತಿದ್ದವು. ಬಲರಾಮನ ಹಿಂದೆ ತೀರ್ಥಯಾತ್ರೆಗೆಂದು ಹೊರಟವರಲ್ಲಿ ವರ್ತಕರು, ಶೂದ್ರರು, ಶಿಲ್ಪಕಾರರು, ಪಣ್ಯಜನರು ಕೂಡ ಇದ್ದರು. ಅವರಿಗೆ ಸ್ವವ್ಯಾಪಾರವೂ ನಡೆದು, ತೀರ್ಥಸೇವಾ ಸುಜನಸಂಗ, ತೀರ್ಥದೇವಮಹಿಮಾ ಶ್ರವಣಗಳಿಂದ ಪುಣ್ಯಲಾಭವೂ ಆಗುತ್ತಿತ್ತು.

ಬಲರಾಮನು ನಿಯಮನಿರತರಾದ ವಿಪ್ರರಿಗೆ ಧೇನು ಸಹಸ್ರವನ್ನಿತ್ತನು. ಬಂಗಾರದ ಕೋಡನ್ನಿಟ್ಟು ಬೆಳ್ಳಿಯ ಗೊರಜನ್ನು ತೊಡಿಸಿ, ಪೀತಾಂಬರವನ್ನು ಹೊದಿಸಿ, ಕರುವಿಂದ ಕೂಡಿಸಿ ಇತ್ತ ಗೋದಾನಧಾರಾಜಲಪ್ರವಾಹವು ಉಪನದಿಯಾಗಿ, ಸರಸ್ವತಿಯಲ್ಲಿ ಸೇರುತ್ತಿತ್ತು. ತೀರ್ಥದಲ್ಲಿ ತೀರ್ಥರಿಗಿತ್ತ ಅರ್ಥವು ಸಾರ್ಥಕವಾಯಿತು. ಕುರುಕ್ಷೇತ್ರದಿಂದ ಪ್ರಾರಂಭಿಸಿ, ಸಾರಸ್ವತ ತೀರ್ಥಗಳನ್ನು ಕ್ರಮವಾಗಿ ಸೇವಿಸುತ್ತಾ ಹೊರಟ ಬಲರಾಮನ ಯಾತ್ರಾ ವಿವರವನ್ನು ವರ್ಣಿಸುವೆನು ಕೇಳು!

ಮೊದಲು ಪ್ರಭಾಸವನ್ನು ವರ್ಣಿಸುವೆನು. ಅಲ್ಲಿ ಸ್ನಾನಮಾಡಿ ಚಂದ್ರನು ರಾಜಯಕ್ಷ್ಮ ರೋಗದಿಂದ ಮುಕ್ತನಾಗಿ, ಪ್ರಕಾಶಿಸಿದನು. ಹಿಂದೆ ದಕ್ಷನೆಂಬ ಪ್ರಜಾಪತಿಯು ತನ್ನ ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ಕೊಟ್ಟು ಮದುವೆ ಮಾಡಿದನು. ಅಶ್ವಿನಿ ಮೊದಲಾದ ಅವರು ತನ್ನಾಮಕ ನಕ್ಷತ್ರದೇವತೆಗಳೇ ಆಗಿದ್ದರು. ಅವರಲ್ಲಿ ರೋಹಿಣಿಯು ರೂಪಸಂಪತ್ತಿನಿಂದ ಇತರ ಪತ್ನಿಯರಿಗಿಂತಲೂ ಅಧಿಕಳಾಗಿದ್ದಳು. ಅಂತೆಯೇ ನಿಶಾಕರನು ರೋಹಿಣಿಯನ್ನು ಹೆಚ್ಚು ಪ್ರೀತಿಯಿಂದ ನೋಡತೊಡಗಿ, ಸದಾ ಅವಳ ಮನೆಯಲ್ಲೇ ಇರುತ್ತಿದ್ದನು. ಅದನ್ನು ಕಂಡು ಇತರ ತಾರೆಯರು ಕುಪಿತರಾದರು. ಅವರು ತಮ್ಮ ತಂದೆಯಾದ ದಕ್ಷನ ಮುಂದೆ ದೂರಿದರು. ದಕ್ಷನು 'ಚಂದ್ರ! ನಕಾಂಚನ ಸ್ತ್ರಿಯಂ ಪರಿಹರೇತ್!' ಎಂಬ ಶ್ರುತಿ ವಚನಕ್ಕೆ ವಿರೋಧವೆಸಗಬೇಡ! ಅಧರ್ಮಭಾಜನನಾಗುವೆ ತಿಳಿ! ಎಲ್ಲ ಪತ್ನಿಯರನ್ನೂ ಸಮಪ್ರೀತಿಯಿಂದ ನೋಡು!' ಎಂದು ದಂಡಿಸಿದನು. ಚಂದ್ರನು ಮತ್ತೆ ರೋಹಿಣೀ ರತನಾಗಿ ಇತರ ತಾರೆಯರನ್ನು ಕಣ್ಣೆತ್ತಿ ನೋಡದಾದನು. ಮೂರು ಸಲ ಹೇಳಿ, ಸಾಕಾಗಿ, ದಕ್ಷನು ಸಿಟ್ಟಿನಿಂದ ಯಕ್ಷ್ಮ(ಕ್ಷಯರೋಗ)ವನ್ನು ಸೃಜಿಸಿ, ಚಂದ್ರನಲ್ಲಿಗೆ ಕಳಿಸಿದನು. ಚಂದ್ರನು ದಿನದಿನಕ್ಕೆ ಕೃಶನಾಗುತ್ತಾ ಹೋದನು. ಆ ರೋಗ ನಾಶಕ್ಕಾಗಿ ಎಷ್ಟೋ ದಾನಗಳನ್ನು, ಇಷ್ಟಿಗಳನ್ನು ಮಾಡಿದರೂ, ಶಾಪಗ್ರಸ್ತನಾದ ಚಂದ್ರನು ಆರೋಗ್ಯವಂತನಾಗಿ ಬೆಳಗಲಿಲ್ಲ. ಚಂದ್ರನು ಕ್ಷೀಣನಾಗಲು, ಬೆಳೆ ಇಲ್ಲದಾಯಿತು. ಧಾನ್ಯಗಳು ನಿಸ್ಸಾರವಾದವು. ಓಷಧಿಗಳು ಕ್ಷೀಣವಾಗಲು, ಪ್ರಾಣಿಗಳು ನಾಶವಾಗತೊಡಗಿದವು. ಪ್ರಜರು ಕೃಶರಾದರು. ದೇವತೆಗಳು ಸೋಮನನ್ನು 'ಏನಿದು? ಇಂತು ಕಳೆಗುಂದಿರುವೆ! ಏಕೆ ಹೀಗಾದೆ!' ಎಂದು ಕೇಳಿದರು.

ಚಂದ್ರನು ದಕ್ಷಶಾಪವನ್ನು ತಿಳಿಸಲು, ದೇವತೆಗಳು ದಕ್ಷನನ್ನು ಸೇರಿ 'ದಕ್ಷ! ಓಷಧೀಶನು ಕ್ಷೀಣನಾದರೆ, ಬೆಳೆಯಿಲ್ಲ. ಬೆಳೆಯಿಲ್ಲದಿದ್ದರೆ ಪ್ರಾಣ ನಾಶವಾಗುವುದು. ಪ್ರಾಣ ನಾಶವಾದರೆ ನಮಗೆ ಹವಿರ್ದಾನವಿಲ್ಲ. ನಾವೂ ಕ್ಷೀಣರಾದರೆ ಜಗತ್ತೇ ನಾಶವಾದೀತು! ಆದುದರಿಂದ ಮಹಾತ್ಮ! ಪ್ರಸನ್ನನಾಗಿ, ಚಂದ್ರನು ರೋಗಮುಕ್ತನಾಗುವಂತೆ ಅನುಗ್ರಹಿಸು!' ಎಂದು ಬೇಡಿದನು. ದಕ್ಷನು 'ನನ್ನ ಮಾತೆಂದಿಗೂ ಸುಳ್ಳಾಗದು. ಶಶಧರನು ಶಶಿವದನೆಯರನ್ನು ಎಲ್ಲರನ್ನು ಸಮನಾಗಿ ನೋಡಲಿ! ಮತ್ತು ಸರಸ್ವತಿಯ ತೀರದ ಪಶ್ಚಿಮ ಸಮುದ್ರದ ದಡದಲ್ಲಿರುವ ಪ್ರಭಾಸ

ತೀರ್ಥದಲ್ಲಿ ಮೀಯಲಿ! ಆಗ ಮಾಸಾರ್ಧಿ ನನ್ನ ಶಾಪ ನಿಮಿತ್ತಕ ಕ್ಷಯವನ್ನೂ ಮಾಸಾರ್ಧಿ ಪ್ರಭಾಸ ತೀರ್ಥಸೇವಾಸಾಧಿತ ಪುಣ್ಯದಿಂದ ವೃದ್ಧಿಯನ್ನೂ ಹೊಂದುವನು' ಎಂದು ವಿಶಾಪವಿತ್ತನು.

ಚಂದ್ರನು ಪ್ರಭಾಸವನ್ನು ಸೇರಿ, ಅಲ್ಲಿ ಸಮುದ್ರದಲ್ಲಿಯೂ, ಸರಸ್ವತಿಯಲ್ಲಿಯೂ ಮಿಂದು, ಸೋಮನಾಥೇಶ್ವರನನ್ನು ಪೂಜಿಸಿದನು. ಅಂದು ಅಮಾವಾಸ್ಯೆಯಾಗಿತ್ತು. ಆ ಪುಣ್ಯದಿಂದ ಚಂದ್ರಮನು ಪುನಃ ಕಾಂತಿವಂತನಾದನು. 'ಸ್ವಸ್ತ್ರೀಯರಿಗೆ ಅಪಚಾರ ಮಾಡಬೇಡ! ವಿಪ್ರರನ್ನು ಅವಗಣಿಸಬೇಡ!' ಎಂದು ಬುದ್ಧಿವಾದವನ್ನು ಹೇಳಿ, ಬ್ರಹ್ಮದೇವನು 'ಚಂದ್ರನಿಗೆ ಪ್ರಕೃಷ್ಟಭಾಸವನ್ನಿತ್ತ ಈ ಕ್ಷೇತ್ರವು ಪ್ರಭಾಸವೆಂದು ಖ್ಯಾತವಾಗಲಿ! ಇಲ್ಲಿ ಸ್ನಾನದಾನಗಳ ಗೈದವರು ಸರ್ವಪಾಪ ಮುಕ್ತರಾಗಲಿ!' ಎಂದು ವರವಿತ್ತನು. ಇಂತಹ ಪ್ರಭಾಸವನ್ನು ಸೇವಿಸಿ, ದಾನವಿತ್ತು, ಬಲರಾಮನು ಅಲ್ಲಿಂದ ಉತ್ತರಕ್ಕೆ ತೆರಳಿ, ಚಮಸೋದ್ಭೇದ, ಉದಪಾನಗಳೆಂಬ ತೀರ್ಥಗಳನ್ನು ಸೇರಿದನು.

ಉದಪಾನವೆಂಬಲ್ಲಿ ತ್ರಿತನೆಂಬ ಋಷಿವರನಿರುತ್ತಿದ್ದನು. ಅವನ ಅಣ್ಣಂದಿರು ಏಕತ, ದ್ವಿತರೆಂಬವರೂ ಅಲ್ಲೇ ಸರಸ್ವತೀ ತೀರದ ಆಶ್ರಮಗಳಲ್ಲಿರುತ್ತಿದ್ದರು. ಅವರು ವೇದವೇದಾಂಗ ಪಾರಂಗತರಾದುದನ್ನು ಕಂಡು, ಪ್ರೀತನಾಗಿ ಅವರ ತಂದೆ ಗೌತಮನು ತಪಗೈದು, ಉತ್ತಮಲೋಕವನ್ನು ಸೇರಿದನು. ಆ ಮೂವರಲ್ಲಿ ತ್ರಿತನು ಅಧ್ಯಯನ ಕರ್ಮತಪೋನಿಯಮಗಳಿಂದ ಶ್ರೇಷ್ಠನಾಗಿದ್ದನು. ಒಂದು ದಿನ ಏಕತ ದ್ವಿತರು ಯಜ್ಞಮಾಡಲು ಸಂಕಲ್ಪಿಸಿ, ಯಜ್ಞಸಾಧನವಾದ ಪಶುಧನಗಳನ್ನು ಯಾಚಿಸಲು ರಾಜರಲ್ಲಿ ತೆರಳಿದರು. ಉತ್ತಮ ವಿದ್ಯಾಕೀರ್ತಿ ಸಂಪನ್ನನಾದ ತ್ರಿತನನ್ನು ಕರೆದುಕೊಂಡು ಹೋದುದರಿಂದ, ಅವರಿಗೆ ಪುಷ್ಕಲ ಧನಲಾಭವಾಯಿತು; ಮತ್ತು ಯಜ್ಞಗಳನ್ನು ಮಾಡಿಸಿ, ಸಾವಿರಾರು ಪಶುಗಳನ್ನೂ ದಕ್ಷಿಣೆಯಾಗಿ ಪಡೆದರು.

ಆ ಪಶುಗಳನ್ನು ಕೊಂಡು ತ್ರಿತನು ಮುಂದೆ ನಡೆಯುತ್ತಿರಲು, ಪಶುಗಣವನ್ನು ಹಿಂದಿನಿಂದ ನಡೆಸಿಕೊಂಡು ಏಕತದ್ವಿತರು ಬರುತ್ತಿದ್ದರು. ಏಕತದ್ವಿತರು ತಮ್ಮಲ್ಲಿ ತಾವೇ ಮಾತಾಡಿಕೊಂಡ ಬಗೆ ಕೇಳು! "ತ್ರಿತನು ಯಜ್ಞಕುಶಲನೂ, ವೇದನಿಷ್ಠಿತನೂ ಆಗಿರುವನು. ಈ ಗೋಗಣವನ್ನು ನಾವೀರ್ವರೇ ಸ್ವೀಕರಿಸಿದರೂ ಅವನಿಗೆ ನಷ್ಟವಿಲ್ಲ. ಮತ್ತೆ ಬೇಕಾದಷ್ಟು ಗೋಸಂಪತ್ತಿಯನ್ನು ಅವನು ಸಂಪಾದಿಸಬಲ್ಲನು. ರಾತ್ರಿಯಾಗಲಿ! ಅವನನ್ನು ಬಿಟ್ಟು ನಾವು ಗೋಗಣವನ್ನು ಹೊಡೆದುಕೊಂಡು, ಹೊರಟುಹೋಗೋಣ!" ಇಂತು ಚಿಂತಿಸಿ, ಅವರು ನಡೆಯುತ್ತಿರಲು, ರಾತ್ರಿ ಆಯಿತು.

ಮುಂದೆ ಹೋಗುತ್ತಿದ್ದ ತ್ರಿತನು ದೈವವಶದಿಂದ, ಹಾದಿಯಲ್ಲಿ ನಿಂತು ಗುರುಗುಟ್ಟುವ ತೋಳವನ್ನು ಕಂಡನು. ಅವನು ಭಯಭ್ರಾಂತನಾಗಿ ಓಡುತ್ತಾ ಸರಸ್ವತಿಯ ತೀರದಲ್ಲಿದ್ದ ಒಂದು ಹಾಳುಬಾವಿಯಲ್ಲಿ ಬಿದ್ದನು. ಲತಾವೀರುಧಗಳಿಂದ ತುಂಬಿ, ನೀರಿಲ್ಲದೆ, ಭಯಂಕರವಾದ ಬಾವಿಯಲ್ಲಿ ಬಿದ್ದ ತ್ರಿತನು ಗಟ್ಟಿಯಾಗಿ ಕೂಗಿಕೊಂಡನು. ಅವನ ಆರ್ತನಾದವನ್ನು ಏಕತದ್ವಿತರು ಕೇಳಿದರು. ವೃಕಭಯದಿಂದಲು, ಪಶುಲೋಭದಿಂದಲು

ಅವರು ಅಣ್ಣನನ್ನು ಬಾವಿಯಿಂದ ತೆಗೆಯದೆ, ಪಶುಗಳನ್ನು ಕೊಂಡು ಹೊರಟುಹೋದರು. ನರಕದಲ್ಲಿ ಪಾಪಿಯಂತೆ, ಕೂಪದಿ ಬಿದ್ದ ತ್ರಿತನು, ಮೃತ್ಯುಭೀತನಾಗಿ, ಸೋಮಪಾನದಿಂದ ಉತ್ತಮಲೋಕವನ್ನು ಪಡೆಯಲೆಣಿಸಿದನು. ಅದೃಷ್ಟದಿಂದ ಅವನು ಬಾವಿಯಲ್ಲಿ ಜೋತುಬಿದ್ದ ಸೋಮಲತೆಯನ್ನು ಕಂಡನು. ಪಾಂಸುಮಯವಾದ ಕೂಪದಲ್ಲಿ ಸಲಿಲವನ್ನೂ ಅಗ್ನಿಗಳನ್ನು ಧ್ಯಾನಿಸಿ, ಸನ್ನಿಧೀಕರಿಸಿದನು. ತಾನೇ ಹೋತನಾಗಿ ತ್ರಿತನು ಸೋಮಲತೆಯನ್ನು ಕಲ್ಲಿನಿಂದ ಕುಟ್ಟಿ ಸೋಮಾಭಿಷವ ಮಾಡಿ, ಉಕ್ಕಿಬಂದ ನೀರನ್ನೇ ಅಜ್ಯವನ್ನಾಗಿ ಮಾಡಿ, ಋಗ್ಯಜುಸ್ಸಾಮ ಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸಿ, ಯಜ್ಞವನ್ನು ನಡೆಸಿದನು. ತ್ರಿತನ ವೇದಘೋಷವು ದ್ಯುಲೋಕವನ್ನು ಮುಟ್ಟಿತು.

'ಉದಪಾನದಲ್ಲಿ ತ್ರಿತನ ಯಜ್ಞವು ನಡೆದಿದೆ. ಅಲ್ಲಿಗೆ ದೇವತೆಗಳು ಹೋಗಿ ಅವನಿಂದ ಕೊಡುವ ಯಜ್ಞಭಾಗವನ್ನು ಸ್ವೀಕರಿಸಿ ! ಇಲ್ಲದಿರೆ ಆ ಮಹಾನುಭಾವನು ಬೇರೆ ದೇವತೆಗಳನ್ನೇ ಸೃಜಿಸಲು ಯತ್ನಿಸಬಹುದು!' ಎಂಬ ಬ್ರಹಸ್ಪತಿಯ ವಚನವನ್ನಾಲಿಸಿ, ಇಂದ್ರಾದಿ ದೇವತೆಗಳು, ತ್ರಿತನ ಯಜ್ಞವಾಟಕ್ಕೆ ಧಾವಿಸಿ ಬಂದರು. ಯಜ್ಞದೀಕ್ಷಿತನಾಗಿ ಮಂತ್ರಗಳನ್ನುಚ್ಚರಿಸುತ್ತಾ, ತ್ರಿತನು ಅಗ್ನಿಯಂತೆ ಬೆಳಗುತ್ತಿದ್ದನು. 'ಅಯ್ಯಾ! ತ್ರಿತ! ನಾವು ದೇವತೆಗಳು! ಯಜ್ಞಭಾಗಗಳನ್ನು ಸ್ವೀಕರಿಸಲು ಬಂದಿರುವೆವು' ಎಂದ ಬೃಂದಾರಕರ ಮಾತಿಗೆ ಆನಂದಿಸಿ, ತ್ರಿತನು ಅವರಿಗೆ ಹವಿರ್ಭಾಗಗಳನ್ನು ಮಂತ್ರಾದರಗಳಿಂದ ಹೋಮಿಸಿ, ಸಮರ್ಪಿಸಿದನು. ಅವರು ಪ್ರೀತರಾಗಿ 'ವರವನ್ನು ಬೇಡು' ಎಂದರು. ತ್ರಿತನು 'ನನ್ನನ್ನು ಕೂಪದಿಂದ ಉದ್ಧರಿಸಿರಿ! ಈ ಬಾವಿಯಲ್ಲಿ ಸ್ನಾನ ಮಾಡಿದವರಿಗೆ ಸೋಮಪಾನ ಮಾಡಿದ ಸುಜನರ ಗತಿಯಾಗಲಿ!' ಎಂದು ಬೇಡಿದನು. ತತ್‌ಕ್ಷಣವೇ ತರಂಗತುಂಗಳಾದ ಸರಸ್ವತಿಯು ಬಾವಿ ತುಂಬಿ, ಹೊರಬಂದಳು. ತ್ರಿತನೂ ತೇಲಿ ಹೊರಬಿದ್ದನು. ದೇವತೆಗಳು ಅವನು ಬೇಡಿದ ವರವಿತ್ತು ಅಂತರ್ಧಿತರಾದರು. ತ್ರಿತನೂ ತನ್ನ ಆಶ್ರಮಕ್ಕೆ ಬಂದನು. 'ಪಶುಲೋಭದಿಂದ ನನ್ನಲ್ಲಿ ಕನಿಕರವಿಲ್ಲದೆ ಹೋದುದರಿಂದ ಏಕತದ್ವಿತರೆಂಬ ಪಾಪಾತ್ಮರು ತೋಳಗಳಾಗಿ ಜನಿಸಲಿ!' ಎಂದು ಶಾಪವಿತ್ತು, ತ್ರಿತನು, ತಾನು ಉದಪಾನ ತೀರ್ಥದಲ್ಲಿ ತಪೋನಿರತನಾದನು.

ಉದಪಾನದಲ್ಲಿ ಸ್ನಾನದಾನಾದಿಗಳನ್ನು ಮಾಡಿ, ಬಲರಾಮನು, ವಿದಶನವೆಂಬ ತೀರ್ಥವನ್ನು ಸೇರಿದನು. ದುಷ್ಟಜನರು ಮಾಡುವ ಹೇಸಿಗೆ ಮೈಲಿಗೆಗಳಿಗೆ ರೋಸಿ ಸರಸ್ವತಿಯು, ಅಂತರ್ವಾಹಿನಿಯಾಗಿ, ಮರೆಯಾದುದರಿಂದ, ಆ ತೀರ್ಥಕ್ಕೆ ವಿನಶನವೆಂದು ಖ್ಯಾತಿ ಬಂತು. ಅಲ್ಲಿಂದ ತೆರಳಿ ಬಲರಾಮನು, ಗಂಧರ್ವಾಪ್ಸರಸ್ಸೇವಿತವಾದ ಸುಭೂಮಿಕೆ ಎಂಬ ತೀರ್ಥವನ್ನು ಸೇರಿದನು; ಅಲ್ಲಿಂದ ಗರ್ಗಸ್ರೋತವನ್ನು ಸೇರಿ, ಕಾಲಜ್ಞಾನವನ್ನು ನಿರೂಪಿಸುವ ಜ್ಯೋತಿಶ್ಶಾಸ್ತ್ರವನ್ನು ರಚಿಸಿದ ಗರ್ಗಋಷಿಯ ಆಶ್ರಮದಲ್ಲಿದ್ದ ಋಷಿಗಳನ್ನು ಪೂಜಿಸಿದನು ; ಅಲ್ಲಿಂದ ಶಂಖತೀರ್ಥವನ್ನು ಮುಟ್ಟಿದನು. ಅಲ್ಲಿದ್ದ ಮಹಾವೃಕ್ಷದ ಫಲಗಳಿಂದ ಯಕ್ಷವಿದ್ಯಾಧರ, ರಾಕ್ಷಸ, ಪಿಶಾಚ, ಸಿದ್ಧರು, ಉಪಜೀವಿಸಿ, ಮನುಜ ದೃಷ್ಟಿಗೋಚರರಾಗದೆ ನಿವಸಿಸುತ್ತಿದ್ದರು.

ಬಲರಾಮನು ಅಲ್ಲಿಂದ ದ್ವೈತವನವನ್ನು ಸೇರಿ, ಮುನಿಜನರನ್ನು ದಾನಾದಿಗಳಿಂದ ಸಂತೋಷಪಡಿಸಿದನು. ಅಲ್ಲಿಂದ ಗಂಧರ್ವಸೇವಿತವು, ಪನ್ನಗಬಹುಲವು ಆದ ನಾಗಧನ್ವ ತೀರ್ಥವನ್ನು ಸೇರಿದನು. ಅಲ್ಲಿ ದೇವತೆಗಳು ವಾಸುಕಿಗೆ ಪನ್ನಗ ರಾಜ ಪದವಿಯನ್ನಿತ್ತು ಪಟ್ಟಗಟ್ಟಿದ್ದರು. ತೀರ್ಥೋಪವಾಸವನ್ನು ಮಾಡಿ, ಗಂಗಾ ಪೂಜೆ ನಡೆಸಿ, ಬಲರಾಮನು ಪಾತ್ರರಿಗೆ ವಿವಿಧ ದಾನಗಳನ್ನಿತ್ತು ಅನ್ನದಿಂದ ಸರ್ವರನ್ನು ತೃಪ್ತಿಪಡಿಸಿದನು.

ಅಲ್ಲಿಂದ ಪೂರ್ವಮುಖಿಯಾಗಿ ಹರಿವ ಸರಸ್ವತಿಯ ತೀರದ ನೈಮಿಶಾರಣ್ಯವನ್ನು ಸೇರಿದನು. ಹಿಂದೆ ನೈಮಿಶಾರಣ್ಯದಲ್ಲಿ ದ್ವಾದಶವಾರ್ಷಿಕವಾದ ಸತ್ರಯಾಗವು ನಡೆದಿತ್ತು. ಬಹು ಋಷಿಗಳು ಅಲ್ಲಿಗೆ ತೀರ್ಥಸೇವನೆಗೆಂದು ಬಂದು ನೆರೆದರು. ಅವರ ಅಗ್ನಿಹೋತ್ರಗಳಿಂದ ನದೀತೀರವು ಪ್ರಕಾಶಿಸಿತು. ಅವರ ವೇದಘೋಷದಿಂದ ದಿಕ್ಕುಗಳು ತುಂಬಿದವು. ಸಾವಿರಗಟ್ಟಲೆ ಮುನಿಗಳು ಬಂದಾಗ, ನದೀತೀರದಲ್ಲಿ ಸ್ಥಳವಿಲ್ಲದೆ ಹೋಯಿತು. ಅವರಲ್ಲಿ ದಯೆದಿಂದ ಸರಸ್ವತಿಯು ಕುಂಜಪುಂಜದಿಂದ ಹೊರಬಂದು ಪೂರ್ವಾಭಿಮುಖಿಯಾಗಿ ಹರಿದಳು; ಆಮೇಲೆ ಮತ್ತೆ ಪಶ್ಚಿಮಮುಖಿಯಾದಳು. ಇಂತಹ ಗೋಮತೀ ಸರಸ್ವತಿಯಲ್ಲಿ ಮಿಂದು, ಬಲರಾಮನು ವಿವಿಧ ದಾನಗಳನ್ನಿತ್ತನು.

ಸಪ್ತಸಾರಸ್ವತ ತೀರ್ಥದಲ್ಲಿ ಬಲರಾಮನು ಏಳುನದಿಗಳಲ್ಲಿ ಮಿಂದು, ದಾನವಿತ್ತನು. ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮನೋರಮಾ, ಓಘವತೀ, ಸುರೇಣು, ವಿಮಲೋದಕಾ ಎಂಬ ಸಪ್ತನದಿಗಳು ಅಲ್ಲಿ ಹರಿಯುತ್ತಿರುವವು. ಪಿತಾಮಹನಿಂದ ಆಹೂತಳಾಗಿ ಸುಪ್ರಭಾ ನದಿಯು ಪುಷ್ಕರಕ್ಷೇತ್ರದಲ್ಲಿ ಹರಿದಳು. ಗಯಾ ಕ್ಷೇತ್ರದಲ್ಲಿ ಗಯರಾಜನ ಯಜ್ಞದಲ್ಲಿ ಪುಟ್ಟಿ ವಿಶಾಲೆಯು ಪ್ರವಹಿಸಿದಳು. ಉತ್ತರ ಕೋಶಲದಲ್ಲಿ ಉದ್ದಾಲಕನ ಯಜ್ಞದಲ್ಲಿ ಧ್ಯಾತಳಾಗಿ, ಮನೋರಮೆಯು ಪ್ರವಹಿಸಿದಳು. ಕುರುಕ್ಷೇತ್ರದಲ್ಲಿ ಹರಿವ ಸರಸ್ವತಿಯು ಸುರೇಣು ಎಂದು ಖ್ಯಾತಳಾದಳು. ವಸಿಷ್ಠನಿಂದ ಆಹೂತಳಾಗಿ, ಓಘವತಿಯೂ ಕುರುಕ್ಷೇತ್ರದಲ್ಲಿ ಪ್ರವಹಿಸಿದಳು. ಚತುರ್ಮುಖನಿಂದ ಆಹೂತಳಾಗಿ, ವಿಮಲೋದೆಯು ಹಿಮವತ್ಪರ್ವತದಿಂದ ಹರಿದು ಬಂದಳು. ಈ ಎಲ್ಲ ನದಿಗಳಿಗೆ ಸಪ್ತಸಾರಸ್ವತ ತೀರ್ಥವೆಂಬುವರು.

ಆ ತೀರ್ಥದಲ್ಲಿದ್ದ ಮಂಕಣಕನು ದಿವ್ಯಸ್ತ್ರೀ ದರ್ಶನದಿಂದ ವೀರ್ಯಸ್ಖಲನವಾಗಲು, ಅದನ್ನು ಏಳುಕಲಶಗಳಲ್ಲಿಟ್ಟನು. ಆಗ ಹುಟ್ಟಿದವರು, ವಾಯುವೇಗ, ವಾಯುಬಲ, ವಾಯುಹಾ, ವಾಯುಮಂಡಲ, ವಾಯುಜ್ವಾಲ, ವಾಯುಚಕ್ರ, ವಾಯುರೇತರೆಂಬ ಮರುತ್ತುಗಳು. ಅವರಿಂದ ಮರುತ್ತಗಳ ಗಣವು ಉದಿಸಿತು. ಮಂಕಣಕನೊಂದು ದಿನ ಕುಶಗಳನ್ನು ಸಂಗ್ರಹಿಸುತ್ತಿರಲು, ಕುಶಾಗ್ರದಿಂದ ಬೆರಳು ಗಾಯವಾಯಿತು. ಗಾಯದಿಂದ ರಕ್ತವು ಹರಿಯಲಿಲ್ಲ; ಶಾಕರಸವೇ ಹರಿಯಿತು. ಅನ್ನರಸವು ಪಾಕದಿಂದ ಪರಿಣಾಮ ಹೊಂದದಿರುವುದನ್ನು ಕಂಡು, ತನಗೆ ವಯಃಪರಿಪಾಕವಿಲ್ಲ, ಮುಪ್ಪಿಲ್ಲವೆಂದು ತಿಳಿದು ಮಂಕಣನು ಆನಂದದಿಂದ ಕುಣಿದಾಡತೊಡಗಿದನು. ಅವನ ತೇಜೋಮೋಹಿತವಾದ

ಭೂತಜಾತವೂ ಕುಣಿಯತೊಡಗಿತು. ಅವನ ಹುಚ್ಚನ್ನು ವಾರಿಸಿ, ಲೋಕವನ್ನು ಉಳಿಸಲೆಣಿಸಿ, ಮಹಾದೇವನು ವಿಪ್ರರೂಪದಿಂದ ಬಂದು 'ಮಂಕಣ! ಏಕೆ ಕುಣಿವೆ?' ಎಂದು ಕೇಳಿದನು. ಮಂಕಣನು 'ಬ್ರಹ್ಮನ್ ! ಕಾಣೆಯಾ ನನ್ನ ಮಹಿಮೆಯನ್ನು! ನೋಡು! ಗಾಯಗೊಂಡ ನನ್ನ ಬೆರಳಿಂದ ಶಾಕರಸವು ಹರಿದು, ನನಗೆ ಮುಪ್ಪಿಲ್ಲವೆಂದು ಸಾರುತ್ತಿದೆ!' ಎಂದನು. ವಿಪ್ರನು ನಕ್ಕು 'ಇದೇನು ಆಶ್ಚರ್ಯ! ನೋಡೆನ್ನ ಮಹಿಮೆಯನ್ನು!' ಎಂದು ಬೆರಳಿನಿಂದ ಹೆಬ್ಬೆರಳಿಗೆ ಹೊಡೆದನು. ಆ ಗಾಯದಿಂದ ಧವಳಭಸ್ಮವೇ ಹರಿಯಿತು. ಮಂಕಣನು ಮೃತ್ಯುಂಜಯನನ್ನರಿತು, ಶಿರಬಾಗಿ, ನಮಿಸಿ ತನ್ನ ಅವಿನಯವನ್ನು ಕ್ಷಮಿಸೆಂದನು.

'ಮಹಾದೇವ! ಶಂಭೋ! ಶಂಕರ! ಸುರಾಸುರ ನರರಿಗೆ ನೀನೇ ಗತಿ! ನಿನ್ನಿಂದ ಅಹಂಕಾರಾದಿ ಜಗವು ಸೃಷ್ಟವಾಗಿದೆ. ಎಲ್ಲ ಕಡೆ ಮನೋರೂಪನಾಗಿ, ನೀನು ವ್ಯಾಪ್ತನಾಗಿರುವೆ! ಕೊನೆಗೆ ಭೂತಪಂಚಕವನ್ನು ಲಯಗೊಳಿಸುವೆ! ಮಹಾಪ್ರಭೋ! ನಿನ್ನಿಂದ ದೇವಸುಜನರಿಗೆ ಸುಖವಾಗುವುದು. ಸನಕಾದಿ ವಂದ್ಯನಾದ ನಿನಗೆ ನಮಸ್ಕಾರ!' ಎಂದು ವಂದಿಸಿದ ಮಂಕಣನಲ್ಲಿ ಪ್ರೀತನಾಗಿ, ಈಶ್ವರನು 'ನಿನ್ನ ತಪವು ಕ್ಷಯಿಸದೆ ಬೆಳೆಯಲಿ! ನಿನ್ನ ಆಶ್ರಮದಲ್ಲಿ ನಾನು ಲಿಂಗರೂಪನಾಗಿ ಸದಾ ಸನ್ನಿಹಿತನಾಗಿರುವೆನು. ನನ್ನನ್ನು ಭಜಿಸಿದವರು ಸರ್ವಪಾಪಮುಕ್ತರೂ, ಸರ್ವೇಷ್ಟಯುಕ್ತರೂ ಆಗುವರು !' ಎಂದು ವರವಿತ್ತು ಅಂತರ್ಹಿತನಾದನು. ಮಂಕಣನು ಸುಕನ್ಯೆಯಲ್ಲಿ ವಾಯ್ವಾವೇಶಯುತನಾದ ಚ್ಯವನನಿಂದ ಜನಿಸಿದ ತಪೋನಿಧಿ ಎಂದು ತಿಳಿ !

ಬಲರಾಮನು ಮಂಕಣಾದಿ ಋಷಿಜನರನ್ನು ಸತ್ಕರಿಸಿ, ಅಲ್ಲಿಂದ ತೆರಳಿ, ಔಶನಸ, ಕಪಾಲಮೋಚನವೆಂಬ ತೀರ್ಥದ್ವಯವನ್ನು ಸೇರಿ, ಸೇವಿಸಿದನು. ಹಿಂದೆ ಶ್ರೀರಾಮನು ಜನ ಸ್ಥಾನದಲ್ಲಿರುವಾಗ ಅನೇಕ ದುಷ್ಟ ರಾಕ್ಷಸರನ್ನು ಸಂಹರಿಸಿದನು. ಅಲ್ಲಿದ್ದ ಮಹೋದರನೆಂಬ ಮುನಿಗೆ ಒಬ್ಬ ರಾಕ್ಷಸನ ಶಿರವು ಬಡಿದು, ಬಿಡದೆ ಜಂಘೆಯಲ್ಲಂಟಿ ನಿಂತಿತು. ಅದರ ದುರ್ವಾಸನೆಯಿಂದಲು, ಬಡಿದ ಗಾಯದಿಂದಲು ನೊಂದು, ಮಹೋದರನು, ಅನೇಕ ತೀರ್ಥಗಳಲ್ಲಿ ಮಿಂದನು. ಆದರೂ ಕಪಾಲವು ಬಿಡದೆ ಹತ್ತಿತ್ತು. ಈ ತೀರ್ಥದಲ್ಲಿ ಮಿಂದಾಗ ಕಪಾಲವು ಬಿದ್ದುದರಿಂದಲೇ, ಕಪಾಲಮೋಚನವೆಂದು ತೀರ್ಥವು ಖ್ಯಾತವಾಯಿತು.

ಅಲ್ಲಿಂದ ಬಲರಾಮನು ರುಷಂಗುಮುನಿಯ ಆಶ್ರಮವನ್ನು ಸೇರಿದನು. ಅಲ್ಲಿರುವ ಪೃಥುತೀರ್ಥದಲ್ಲಿ ಮಿಂದು ದಾನವಿತ್ತನು. ರುಷಂಗುನೆಂಬ ವಿಪ್ರನು ಬಹು ವೃದ್ಧನಾಗಿ, ದೇಹನ್ಯಾಸವನ್ನು ಮಾಡಬಯಸಿದನು. ತನ್ನ ಸುತರಿಗೆ ತನ್ನನ್ನು ಪೃಥೂದಕಕ್ಕೆ ಸೇರಿಸಿ! ಎಂದು ಆಜ್ಞಾಪಿಸಿದನು. ಅದರಂತೆ ಅವರು ತಂದೆಯನ್ನು ಹೊತ್ತು, ಪೃಥೂದಕ ತೀರ್ಥವನ್ನು ಸೇರಿಸಿದರು. ಅಲ್ಲಿರುವ ಶತಾಧಿಕ ತೀರ್ಥಗಳಲ್ಲಿ ಮಿಂದು ಪುನೀತನಾದ ರುಷಂಗುವು ತನ್ನ ಸುತರಲ್ಲಿ ಪ್ರೀತನಾಗಿ, 'ಪೃಥೂದಕದಲ್ಲಿ ಸ್ನಾನ ಮಾಡಿದವನು ಸ್ನಾನ ಮಾಡಿಸಿದವರು ಕೂಡ ಸರ್ವಪಾಪ ಮುಕ್ತರಾಗಿ, ದಿವ್ಯಲೋಕವನ್ನು ಸೇರುವರು' ಎಂದು ವರವಿತ್ತನು.

ಆ ಪೃಥೂದಕದಲ್ಲಿ ತಪಗೈದು ರಾಜರ್ಷಿಗಳಾದ ಸಿಂಧುದ್ವೀಪ, ಆರ್ಷ್ಟಿಷೇಣ, ವಿಶ್ವಾಮಿತ್ರರು ಬ್ರಹ್ಮರ್ಷಿಗಳೆನಿಸಿದರು. ಆರ್ಷ್ಟಿಷೇಣನೆಂಬ ದ್ವಿಜನು ಗುರುಕುಲದಲ್ಲಿ ಬಹುಕಾಲ ವಾಸಿಸಿ, ಪೃಥೂದಕದಲ್ಲಿ ಚಿರತಪವನ್ನು ಮಾಡಿ, ಸಿದ್ಧನಾದನು. 'ಪೃಥೂದಕ ಸ್ನಾತರಿಗೆ ವಾಜಿಮೇಧ ಫಲ ಸಿಗಲಿ! ಇಲ್ಲಿ ಕ್ರೂರಮೃಗ ಬಾಧೆಯು ಇಲ್ಲದಂತಾಗಲಿ! ಸ್ವಲ್ಪಕಾಲವಿಲ್ಲಿ ವಾಸಿಸಿದವರಿಗೂ ಮಹಾಫಲ ಸಿಗಲಿ!' ಅಂತೆಯೇ ತಪಗೈದು ಸಿಂಧುದ್ವೀಪ ದೇವಾಪಿಗಳು ಬ್ರಹ್ಮರ್ಷಿಸಮರೆನಿಸಿದರು.

ಹಿಂದೆ ಕುಶೀಕಾನ್ವಯದಲ್ಲಿ ಗಾಧಿ ಎಂಬ ರಾಜನು ಇದ್ದನು. ಅವನು ಮಗನೇ ವಿಶ್ವಾಮಿತ್ರನು. ಅವನು ಪ್ರಜಾಪೀಡಕರಾದ ದುಷ್ಟರಾಕ್ಷಸರನ್ನು ಸಂಹರಿಸಿ, ಶ್ರಾಂತನಾಗಿ, ವಸಿಷ್ಠಾಶ್ರಮವನ್ನು ಸೇರಿ, ವಿಶ್ರಮಿಸುತ್ತಿದ್ದನು. ಅವನು ಮತ್ತು ಅವನ ಸೈನಿಕರು ಮಾಡಿದ ಅಪಚಾರದಿಂದ ಕುಪಿತನಾಗಿ ವಸಿಷ್ಠನು ತನ್ನಲ್ಲಿದ್ದ ನಂದಿನೀಧೇನುವಿನನ್ನು ಪ್ರಾರ್ಥಿಸಿ, ಘೋರರೂಪ ಶಬರರನ್ನು ಸೃಜಿಸಿದನು. ಶಬರರಿಂದ ಪೀಡಿತರಾದ ಸೈನಿಕರು ವಿಶ್ವಾಮಿತ್ರನಿಗೆ ಮೊರೆಯಿಟ್ಟರು. ವಿಶ್ವಾಮಿತ್ರನ ಅಸ್ತ್ರಶಸ್ತ್ರಗಳು ವಸಿಷ್ಠನ ಬ್ರಹ್ಮದಂಡದ ಮುಂದೆ ವ್ಯರ್ಥವಾದವು. ಆಗ ವಿಶ್ವಾಮಿತ್ರನ ತಪೋಬಲವೇ ಶ್ರೇಯಸ್ತರವೆಂದು ಚಿಂತಿಸಿ, ಪೃಥೂದಕ ತೀರ್ಥದಲ್ಲಿ ತೀವ್ರ ತಪವನ್ನು ಮಾಡಿದನು. ಬಹುಸಹಸ್ರ ವರ್ಷದ ತಪಃಪ್ರಭಾವದಿಂದ ವಿಶ್ವಾಮಿತ್ರನು ಬ್ರಹ್ಮರ್ಷಿಯಾದನು. ಅಂದಿನಿಂದ ಅದು ಬ್ರಹ್ಮಯೋನಿ ಎಂದು ಖ್ಯಾತವಾಯಿತು. ಅಂತಹ ತೀರ್ಥವರದಲ್ಲಿ ಬಹುದಾನಗಳನ್ನಿತ್ತು, ಬಲರಾಮನು ಮುಂದೆ ಸಾಗಿ, ಬಕದಾಲ್ಭ್ಯಾಶ್ರಮವನ್ನು ಸೇರಿದನು. ಆ ತೀರ್ಥಕ್ಕೆ ಅವಾಕೀರ್ಣವೆಂದು ಹೆಸರು. ಬಕದಾಲ್ಭ್ಯನೆಂಬ ಮಹಾನುಭಾವನು ಅಲ್ಲಿ ತೀವ್ರತಪವನ್ನು ಮಾಡಿದನು. ವಿಶ್ವಜಿತ್ ಎಂಬ ಯಾಗವನ್ನು ಮಾಡಿದ ಪಾಂಚಾಲರಾಜನಿಂದ ನೈಮಿಶಾರಣ್ಯ ಮುನಿಗಳು ದಕ್ಷಿಣೆಯಾಗಿ ಇಪ್ಪತ್ತೊಂದು ಪಶು(ಗೋ)ಗಳನ್ನು ಪಡೆದರು. ಬಕನು ಆ ಗೋವುಗಳನ್ನು ಅವರಿಗೇ ಬಿಟ್ಟು, ಧೃತರಾಷ್ಟ್ರನ ಸಭೆ ಸೇರಿ, ಪಶುಗಳಿಗಾಗಿ ಯಾಚಿಸಿದನು. ದೈವವಂಚಿತನಾದ ಧೃತರಾಷ್ಟ್ರನು 'ಈ ಸತ್ತ ಗೋವುಗಳಿವೆ! ಇದನ್ನು ಕೊಂಡು ಹೋಗು!' ಎಂದು ಸಿಟ್ಟಿನಿಂದ ನುಡಿದನು. ಸತ್ತ ಪಶುಗಳನ್ನು ಕೊಟ್ಟ ರಾಜನನ್ನು ಹಾಳುಮಾಡಲು ನಿಶ್ಚಯಿಸಿ, ದಾಲ್ಭ್ಯನು ಅವಕೀರ್ಣ ತೀರ್ಥದಲ್ಲಿ ದೀಕ್ಷಿತನಾಗಿ, ಮೃತ ಪಶುಮಾಂಸವನ್ನು ಧೃತರಾಷ್ಟ್ರನ ರಾಜ್ಯನಾಶವನ್ನೇ ಸಂಕಲ್ಪಿಸಿ, ಹೋಮಿಸಿದನು. ಪರಶುವಿನಿಂದ ವನದಂತೆ, ದಾರುಣ ಯಜ್ಞದಿಂದ ಧೃತರಾಷ್ಟ್ರನ ರಾಜ್ಯವು ಕ್ಷೀಣವಾಯಿತು. ಎಷ್ಟು ಶಾಂತಿ ವಿಧಾನಗಳನ್ನು ನಡೆಸಿದರೂ, ರಾಜ್ಯವು ಕ್ಷಯವಾಗುತ್ತಿತ್ತು. ವಿಪ್ರರಿಂದ ಬಕನ ಹೋಮ ವಿಧಾನವನ್ನು, ತತ್ಫಲವಾಗಿ ತನ್ನ ರಾಜ್ಯವು ಕ್ಷಾಮಢಾಮರ ಪೀಡಿತವಾಗಿರುವುದನ್ನು ತಿಳಿದು, ಧೃತರಾಷ್ಟ್ರನು, ಅವಕೀರ್ಣ ಕ್ಷೇತ್ರಕ್ಕೆ ಬಂದು, ಬಕನಿಗೆ ಕ್ಷಮಿಸೆಂದು ಬೇಡಿದನು. ಪ್ರಜಾಕ್ಷೇಮಕ್ಕಾಗಿ ಅಳುತ್ತಾ ಬೇಡುವ ರಾಜನಲ್ಲಿ ಕೃಪೆದೋರಿ, ಬಕನು ಯಜ್ಞವನ್ನು ಮುಗಿಸಿ, ರಾಜ್ಯಕ್ಷೇಮಕ್ಕೆಂದು ಬೇರೆ ಆಹುತಿಗಳನ್ನಿತ್ತನು. ಆಗ ಧೃತರಾಷ್ಟ್ರನು ಪ್ರೀತನಾಗಿ ಅನೇಕ ಪಶುಗಳನ್ನೀಯಲು, ಬಕನು ಅವನ್ನು ಸ್ವೀಕರಿಸಿ, ನೈಮಿಷಾರಣ್ಯವನ್ನು ಸೇರಿದನು.

# ೪. ತೀರ್ಥಯಾತ್ರೆ - ೨

ಅವಕೀರ್ಣ ತೀರ್ಥದಲ್ಲಿ ಮಾಂಸಾಹುತಿಯನ್ನಿತ್ತು, ಬೃಹಸ್ಪತಿಯು, ದೇವತಾ ವೃದ್ಧಿಯನ್ನೂ, ರಾಕ್ಷಸನಾಶವನ್ನೂ ಸಾಧಿಸಿದನು. ಅಲ್ಲಿ ದಾನಗಳನ್ನಿತ್ತು, ಬಲದೇವನು ಯಾಯಾತವೆಂಬ ತೀರ್ಥವನ್ನು ಸೇರಿದನು. ಅಲ್ಲಿ ಬೇಕಾದ್ದನ್ನು ಕೊಟ್ಟು ವಿಪ್ರರನ್ನು ಸಂತೋಷಪಡಿಸಿ, ಯಯಾತಿಯು, ಯಜ್ಞಗಳನ್ನು ಮಾಡಿ, ಪುಣ್ಯಲೋಕವನ್ನು ಸೇರಿದ್ದನು. ಅಂತಹ ಪುಣ್ಯತೀರ್ಥದಿಂದ ಸಾಗಿ ಬಲರಾಮನು ವಸಿಷ್ಠಾಪವಾಹವೆಂಬ ತೀರ್ಥವನ್ನು ಸೇರಿದನು.

ವಸಿಷ್ಠನ ತೇಜೋವಿಶೇಷದಿಂದ ಪರಾಭೂತನಾದ ವಿಶ್ವಾಮಿತ್ರನು ಅಲ್ಲಿ ತೀವ್ರತಪವನ್ನು ಮಾಡುತ್ತಿದ್ದನು. ಸ್ಪರ್ಧೆಯಿಂದ ವಿಶ್ವಾಮಿತ್ರನೊಂದು ದಿನ ಇಂತು ಚಿಂತಿಸಿದನು. 'ಈ ನದಿಯು ಆ ಕಡೆ ತೀರದಲ್ಲಿರುವ ವಸಿಷ್ಠನನ್ನು ನನ್ನ ಹತ್ತಿರ ಸೆಳೆತರುವಂತಾಗಿಸಿದರೆ, ನನ್ನ ಸೇಡು ತೀರುವುದು; ವಿಶ್ವಾಮಿತ್ರನು ಕ್ರೋಧಸಂರಕ್ತ ಲೋಚನನಾಗಿ, ಸರಸ್ವತಿಯನ್ನು ಧ್ಯಾನಿಸಿ, ತಪೋಬಲದಿಂದ ಪ್ರತ್ಯಕ್ಷೀಕರಿಸಿಕೊಂಡನು. 'ವಸಿಷ್ಠನನ್ನಿಲ್ಲಿಗೆ ಸೆಳೆದು ತಾ! ಆತನನ್ನು ಸಂಹರಿಸಿಬಿಡುವೆನು' ಎಂದ ವಿಶ್ವಾಮಿತ್ರನ ಮಾತನ್ನಾಲಿಸಿ, ಸರಸ್ವತಿಯು ವಸಿಷ್ಠನ ಪ್ರಭಾವವನ್ನೂ, ವಿಶ್ವಾಮಿತ್ರನ ಕೋಪವನ್ನೂ ಅರಿತು, ಕೌಶಿಕಾಜ್ಞೆಯನ್ನು ನಡೆಸಲಾರದೆ, ಬಿಡಲಾರದೆ ಹೊಯ್ದಾಡಿದಳು. ತನ್ನನ್ನು ಶಪಿಸುವನೆಂಬ ಭೀತಿಯಿಂದ ನದೀದೇವಿಯು ನಡೆದುದನ್ನು ವಸಿಷ್ಠನಿಗೆ ತಿಳಿಸಿದಳು. ಆಗ ವಸಿಷ್ಠನಿಂತೆಂದನು: 'ಚಿಂತಿಸಬೇಡ! ನನ್ನನ್ನು ಆತನಲ್ಲಿಗೆ ಸೆಳೆದುಕೊಂಡು ಹೋಗು! ಆ ಮಹಾತ್ಮನ ಶಾಪಕ್ಕೆ ಗುರಿಯಾಗಬೇಡ! ನನ್ನನ್ನು ವಿಶ್ವಾಮಿತ್ರನು ಕೊಲ್ಲಲಾರನು'

ಸರಸ್ವತಿಯು ತನ್ನಲ್ಲಿ ದಯೆ ತೋರಿದ ವಸಿಷ್ಠನನ್ನು ಹೇಗಾದರೂ, ಕಾಪಾಡಬೇಕೆಂದೆಣಿಸಿ, ವಸಿಷ್ಠನನ್ನು ತನ್ನ ತುಂಗತರಂಗಗಳ ಮೇಲಿಟ್ಟು ವಹಿಸಿ, ವಿಶ್ವಾಮಿತ್ರನ ಬಳಿಗೆ ಹರಿದಳು. ವಿಶ್ವಾಮಿತ್ರನು ಆಗ ಅಗ್ನಿಹೋತ್ರಗಳಿಗಾಹುತಿಯನ್ನು ಕೊಡುತ್ತಿದ್ದನು. ವಸಿಷ್ಠನು ನದೀಪ್ರವಾಹದಲ್ಲಿ ತೇಲಿಹೋಗುತ್ತಾ, ಸರಸ್ವತೀ ದೇವಿಯನ್ನು ಇಂತು ನುತಿಸಿದನು: 'ಅಂಬೆ! ಬ್ರಹ್ಮಸರದಿಂದ ಹುಟ್ಟಿ ಬಂದಿರುವೆ! ನಿನ್ನ ದಯಾಸರವೇ ಜಲವೆನಿಸಿ ಜಗದಲ್ಲಿ ವಿವಿಧ ನದೀರೂಪವಾಗಿ ಪ್ರವಹಿಸುತ್ತಾ, ಜಗಜ್ಜೀವನ ಪ್ರದಳಾಗಿರುವೆ. ದ್ಯುಲೋಕದಲ್ಲಿ ವಿದ್ಯುದ್ರೂಪಳಾಗಿ ಮೇಘಗಳಲ್ಲಿ ನೀರನ್ನು ತುಂಬಿ, ಮಳೆಗರೆದು, ಜಗವನ್ನು ರಕ್ಷಿಸುವೆ! ಜಗಜ್ಜನನಿ! ಪುಷ್ಟಿ ತುಷ್ಟಿ ಕೀರ್ತಿ, ದ್ಯುತಿ, ಸಿದ್ಧಿ ಬುದ್ಧಿ ಮೊದಲಾದ ಪೆಸರುಗಳಿಂದ ಖ್ಯಾತಳಾಗಿ, ತತ್ತದ್ಗುಣಗಳನ್ನು ದೇವಮಾನವಾದಿ ಭಕ್ತರಿಗೆ ಕೊಟ್ಟು ಕರುಣಿಸುವೆ! ವಾಣಿ! ವಾಕ್ಸತ್ವವೂ ನಿನ್ನ ಸೊತ್ತಾಗಿದೆ. ಸ್ವಾಹಾಕಾರದಿಂದ ಕೊಡಲ್ಪಡುವ ಹವಿರ್ದಾನವನ್ನು ಸ್ವೀಕರಿಸಿ ಭಕ್ತರನ್ನು ಕೈಬಿಡದೆ ಕಾಪಾಡುವೆ! ನಿನಗೆ ನಮಸ್ಕಾರ!' ಇಂತು ನುತಿಸಿದ ಮುನಿವರನಲ್ಲಿ ಪ್ರೀತಳಾಗಿ, ಸರಸ್ವತಿಯು ಆತನನ್ನು ಕೊಲ್ಲಲೆಂದು ಬರುವ ವಿಶ್ವಾಮಿತ್ರನಿಗೆ ಸಿಗದಂತೆ, ರಭಸದಿಂದ ಹರಿದು ವಸಿಷ್ಠನನ್ನು

ದೂರಕ್ಕೆ ಕೊಂಡುಹೋದಳು. ವಿಶ್ವಾಮಿತ್ರನದನ್ನು ಕಂಡು, ಕುಪಿತನಾಗಿ, 'ನನ್ನನ್ನು ವಂಚಿಸಿದೆಯಾದುದರಿಂದ ರಕ್ತವಾಹಿನಿಯಾಗಿ ಪ್ರವಹಿಸು' ಎಂದು ಶಾಪವಿತ್ತನು. ಅಂದಿನಿಂದ ಆ ನದಿಯು ಆ ತೀರ್ಥದಲ್ಲಿ ಶೋಣಿತವಾಹಿನಿಯಾಗಿ ರಕ್ತದಿಂದಲೇ ಹರಿದಳು. ವಸಿಷ್ಠಾಪವಾಹತೀರ್ಥವು ರಕ್ತಮಯವಾಯಿತು. ರಾಕ್ಷಸರು ಅಲ್ಲಿಗೆ ಬಂದು ಅದರ ರಕ್ತವನ್ನು ಕುಡಿದು, ತೃಪ್ತರಾಗಿ, ಅಲ್ಲೇ ಸುಖವಾಗಿ ನೆಲೆಸಿದರು.

ಕೆಲ ಕಾಲವಾಯಿತು. ತೀರ್ಥಸ್ನಾನಕ್ಕೆಂದು ಬಂದ ಮುನಿವರರು, ರಕ್ತನದಿಯನ್ನು ಕಂಡು, ವಿಷಾದಾಶ್ಚರ್ಯಭರಿತರಾದರು. ನದೀದೇವಿಯು ತನ್ನ ವೃತ್ತಾಂತವನ್ನು ತಿಳಿಸಿ, ಆ ಋಷಿವರರಿಂದ ಶಾಪವಿಮೋಚನವನ್ನು ಯಾಚಿಸಿದಳು. ಅವರು ತಪೋ ನಿಯಮಗಳಿಂದಲು, ಉಪವಾಸ ವ್ರತಗಳಿಂದಲು ಮಹಾದೇವನನ್ನು ಮೆಚ್ಚಿಸಿ, ಆ ಹೊತ್ತಿಗೆ ಶಾಂತನಾಗಿದ್ದ ವಿಶ್ವಾಮಿತ್ರನ ಅನುಮತಿಯನ್ನು ಪಡೆದು, ನದೀದೇವಿಯನ್ನು ಉದ್ಧರಿಸಿದರು. ಜಲವು ಯಥಾಪೂರ್ವವಾಗಿ ಶುದ್ಧವಾಯಿತು. ವಿಶ್ವಾಮಿತ್ರನು ತನ್ನ ಕೋಪವನ್ನು ಬಿಟ್ಟು, ಶಾಂತನಾದನು. ಕ್ಷಣಕೋಪರಲ್ಲವೇ ಮಹಾನುಭಾವರು!

ರಾಕ್ಷಸರು ರಕ್ತಪಾನರಹಿತರಾಗಿ, ಮುನಿಗಳಿಗಿಂತೆಂದರು: 'ನಾವು ಪಾಪವನ್ನು ಮಾಡಿ, ಬ್ರಹ್ಮರಾಕ್ಷಸರಾಗಿ ಜನಿಸಿರುವೆವು ನಿಜ! ಯೋನಿ ದೋಷದಿಂದಲು, ಗುರುವಿಪ್ರದೇವತಾ ತಿರಸ್ಕಾರದಿಂದಲು, ವರ್ಣಸಂಕರದಿಂದಲು ನಮಗೆ ಈ ಪಾಪಿ ಯೋನಿಯು ಬಂದಿರುವುದೆಂದು, ನಿಮ್ಮಂತಹ ಸುಜನರು ಪೇಳುವರು. ನಮಗೆ ವಿಹಿತವಾದ ಆಹಾರವನ್ನು ಕಲ್ಪಿಸಿರಿ! ಮತ್ತು ನಮ್ಮಲ್ಲಿ ಪಶ್ಚಾತ್ತಾಪ್ತರಾಗಿರುವವರಿಗೆ ಈ ಪಾಪಿ ದೇಹದಿಂದ ಮುಕ್ತಿಯನ್ನು ಅನುಗ್ರಹಿಸಿ!' ಋಷಿಗಳು ಪಶ್ಚಾತ್ತಾಪದಿಂದ ನೊಂದ ರಕ್ಷೋಜೀವರನ್ನು ನಿಷ್ಪಾಪರನ್ನಾಗಿಸುವಂತೆ, ಶೋಣಾನದೀ ದೇವಿಯನ್ನು ಬೇಡಿ, ಅವರನ್ನು ಉದ್ಧರಿಸಿದರು. ಮತ್ತು 'ಕೀಟದುಷ್ಟವು, ಸೀನು, ಕೆಮ್ಮು ಮೊದಲಾದವುಗಳಿಂದ ದೂಷಿತವು, ಉಚ್ಚಿಷ್ಟ ಕೇಶದೂಷಿತವು, ಕಣ್ಣೀರಿನಿಂದ ಮಲಿನವು, ಅನಿವೇದಿತವು ಆದ ಆಹಾರವಿನ್ನು ಮೇಲೆ ಇಂತಹ ಕುಯೋನಿ ಜಾತರಿಗೆ ಸೇರಲಿ!' ಎಂದು ಅವರನ್ನು ಸಂತೈಸಿ ಕಳಿಸಿದರು.

ಹಿಂದೆ ಮಹೇಂದ್ರನು ನಮುಚಿದಾನವನನ್ನು ಗೆಲ್ಲಲಾರದೆ, ಅವನೊಡನೆ ಸ್ನೇಹದಿಂದಿದ್ದು ಸಮಯಕ್ಕಾಗಿ ಕಾದಿದ್ದನು. 'ನನ್ನನ್ನು ಕೊಲ್ಲಬೇಕಾದರೆ, ಹಸಿಯಿಲ್ಲದ, ಒಣಗಿರದ, ವಸ್ತುವಿನಿಂದ, ಹಗಲಾಗದ ರಾತ್ರಿಯಾಗದ ಸಮಯದಲ್ಲಿ ನೀನು ಕೊಲ್ಲು!' ಎಂದ ದುಷ್ಟ ನಮುಚಿಯ ಮಾತಿನಂತೆ, ಇಂದ್ರನು ಅವನನ್ನು ಸಾಯಂಕಾಲದಲ್ಲಿ, ಸಮುದ್ರದ ನೊರೆಯನ್ನು ವಜ್ರಾಯುಧಕ್ಕೆ ಹಚ್ಚಿ ಅದರಿಂದ ಹೊಡೆದು ಸಂಹರಿಸಿದನು. ಮಿತ್ರಹತ್ಯಾ ಪಾಪದಿಂದ ಪೀಡಿತನಾದ ಇಂದ್ರನು ಬ್ರಹ್ಮದೇವನಿಗೆ ಶರಣಾಗತನಾಗಿ, ಆತನ ಮಾತಿನಂತೆ, ಈ ತೀರ್ಥದಲ್ಲಿ ಮಿಂದು, ಪೀಡಾಮುಕ್ತನಾದನು.

ಪೂರ್ವದಲ್ಲಿ ಮಾಹೇಶ್ವರ ತೇಜವನ್ನು ಧರಿಸಿ ಅಗ್ನಿಯು ದುರ್ಧರ್ಷನಾಗಿ ಮೆರೆದನು. ಆ ತೇಜವನ್ನು ವಹಿಸಲಾಗದೆ ಹವ್ಯವಾಹನು ಬ್ರಹ್ಮಾಜ್ಞೆಯಂತೆ ಅದನ್ನು ಗಂಗೆಯಲ್ಲಿ

ಬಿಟ್ಟನು. ದುಸ್ಸಹ ಮಹಾದೇವ ವೀರ್ಯವನ್ನು ಗಂಗೆಯು ಶರಸ್ತಂಬದಲ್ಲಿಟ್ಟಳು. ಅಲ್ಲಿ ಬೆಳೆದ ತೇಜಸ್ವಂತ ಕುಮಾರನು ಷಟ್‌ಕೃತ್ತಿಕಾ ದೇವಿಯರ ಅಭೀಷ್ಟದಂತೆ ಷಣ್ಮುಖನಾಗಿ, ಅವರ ಹಾಲನ್ನುಂಡು ಕಾರ್ತಿಕೇಯನೆನಿಸಿದನು. ಆತನು ಜನಿಸಿ ಬೆಳೆದ ಹಿಮವತ್ಪರ್ವತ ಕಂದರವು ಕಾಂಚನಮಯವಾಯಿತು. ಇಂತು ಮಹಾದೇವ ಕುಮಾರನು, ಅಗ್ನಿಕುಮಾರನಾಗಿ, ಗಾಂಗೇಯನೆನಿಸಿ, ಶರವಣಭವನಾಗಿ ಬೆಳೆದು, ಕಾರ್ತಿಕೇಯನೆಂದು ಪ್ರಖ್ಯಾತನಾದನು. ಬೃಹಸ್ಪತಿಯು ಆತನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ನಡೆಸಿದನು. ಕುಮಾರನು ಕೈಲಾಸ ಶಿಖರದ ನ್ಯಗ್ರೋಧತರು ಮೂಲದಲ್ಲಿ ಪಾರ್ವತಿಪರಮೇಶ್ವರರನ್ನು ಕಂಡು ವಂದಿಸಿದನು. ದೇವತೆಗಳಿಗೆ ಸೇನಾಪತಿಯಾಗೆಂದು ಹರಸಿದ ಮಹಾದೇವನ ಆಜ್ಞೆಯಂತೆ ಕುಮಾರನು ದೇವಸೇನಾಪತಿಯಾದನು. ಪಟ್ಟಾಭಿಷೇಕವನ್ನು ಮಾಡಿ, ವರಿಸಿದ ದೇವತೆಗಳಿಗೆ ಒಲಿದು ತಾರಕಾಸುರನನ್ನು ಕೊಂದು, ಕುಮಾರನು ದೇವತಾಜಯ ಪ್ರದನಾದನು. ಸ್ಕಂದ, ಶಾಖ, ವಿಶಾಖ, ನೈಗಮೇಯ ಎಂಬ ನಾಲ್ಕು ರೂಪಗಳಿಂದ ವಿರಾಜಮಾನನಾಗಿ, ಶಿವ, ಶಿವಾ, ಪಾವಕ, ಗಂಗೆಯರನ್ನು ಭಜಿಸಿದ ಕುಮಾರನು ಬ್ರಹ್ಮವರದಿಂದ ಸೇನಾಪತ್ಯದಲ್ಲಿ ಸ್ಥಿರನಾದನು. ಬ್ರಹ್ಮದೇವನು ಕುಮಾರನಿಗೆ ನಂದಿಸೇನ, ಲೋಹಿತಾಕ್ಷ, ಘಂಟಾಕರ್ಣ, ಕುಮುದಮಾಲಿ ಎಂಬ ಪಾರ್ಷದರನ್ನು ಕೊಟ್ಟು ಆಶೀರ್ವದಿಸಿದನು. ಮಹಾದೇವನು ಕಾಮನೆಂಬ ಮಾಯಾವಿಶಾರದನನ್ನು ಕೊಟ್ಟನು. ಯಮನು ಉನ್ಮಾಥ ಪ್ರಮಾಥರನ್ನು, ಸೂರ್ಯನು ಸುಭ್ರಾಜಭಾಸ್ವರರನ್ನು, ಚಂದ್ರನು ಮಣಿಸುಮಣಿಯರನ್ನು, ಅಗ್ನಿಯು ಜ್ವಾಲಾಜ್ಯೋತಿಗಳನ್ನು, ಇಂದ್ರನು ಉತ್ಕ್ರೋಶ ಪಂಚಕರನ್ನು, ಅಶ್ವಿನಿಗಳು ವರ್ಧನನಂದರನ್ನೂ, ತ್ವಷ್ಟನು ಚಕ್ರಾನುಚಕ್ರರನ್ನು, ವರುಣನು ಯಮಾತಿಯಮರನ್ನು, ವಾಯುವು ಬಲಾತಿಬಲರನ್ನು, ಧಾತನು ಡಂಬರಾಡಂಬರವನ್ನು, ವಿಷ್ಣುವು ಚಕ್ರವಿಕ್ರಮ ಸಂಕ್ರಮರನ್ನು ಕೊಟ್ಟನು.

ದೇವಾಸೇನಾಪತಿಯು ವಿವಿಧಾಯುಧ ಸಂಪನ್ನರೂ, ಚಿತ್ರಾಭರಣಕವಚರೂ, ವಿವಿಧವದನರೂ, ಭಯಂಕರರೂ ಆದ ಸೈನಿಕರಿಂದ ಕೂಡಿ, ಮಯೂರವನ್ನೇರಿ, ತಾಮ್ರಚೂಡಧ್ವಜನಾಗಿ, ಶಕ್ತಿಯನ್ನು ಧರಿಸಿ ದೈತ್ಯರನ್ನು ಸಂಹರಿಸಲು ತೆರಳಿದನು. ತಾರಕ, ಮಹಿಷ, ತ್ರಿಪಾದ, ಹ್ರದೋದರ, ಮುಂತಾದ ದುಷ್ಟದಾನವರು ದೇವಸೇನಾಪತಿಯನ್ನೆದುರಿಸಿ, ಅಗ್ನಿಜ್ವಾಲೆಗೆ ಬಿದ್ದ ಶಲಭಗಳಂತೆ ನಿಹತರಾದರು. ದಾನವರಿಗೆ ಆಶ್ರಯವಾಗಿದ್ದ ಕ್ರೌಂಚಪರ್ವತವನ್ನು ಭೇದಿಸಿ, ಅದರ ರಂಧ್ರದಿಂದ ರಾಕ್ಷಸ ಪ್ರದೇಶಗಳನ್ನು ಪ್ರವೇಶಿಸಿ, ಕುಮಾರನು ಅಮರಾರಿ ಗಣವನ್ನು ನಾಶಗೊಳಿಸಿದನು. ಕುಮಾರ ವಿಜಯವನ್ನು ಕಂಡು ದೇವತೆಗಳು ಪ್ರಹರ್ಷಿತರಾಗಿ, ಪುಷ್ಪವರ್ಷವನ್ನು ಗರೆದರು. ಗಂಧರ್ವರು ಪಾಡಿದರು. ಅಪ್ಸರೆಯರು ನರ್ತನಗೈದರು. ಅಂತಹ ಕುಮಾರಾಭಿಷೇಕವೆಂಬ ತೀರ್ಥದಲ್ಲಿ ಮಿಂದು, ಬಲದೇವನು, ವಿವಿಧ ದಾನ ಭೋಜನಗಳಿಂದ ವಿಪ್ರರನ್ನು ಸಂತೋಷಪಡಿಸಿ, ಅಲ್ಲಿಂದ ತೆರಳಿದನು.

ಅಗ್ನಿತೀರ್ಥವನ್ನು ಸೇರಿ ಬಲರಾಮನು ಅಲ್ಲಿಯೂ ಸ್ನಾನದಾನಗಳನ್ನು ಮಾಡಿದನು.

ಭೃಗುಶಾಪದಿಂದ ಭೀತನಾಗಿ ಅಗ್ನಿಯು ಶಮೀಗರ್ಭದಲ್ಲಿ ಅಡಗಿ ಕೂತನು. ವ್ಯಾಪ್ತವಹ್ನಿಯು ಸಂಕುಚಿತನಾಗಿ, ಲೋಕವು ತಳಮಳಿಸಿತು. ಆಗ ದೇವತೆಗಳು ವಹ್ನಿಯನ್ನು ಹುಡುಕಿ, ಶಮೀಗರ್ಭದಲ್ಲಡಗಿದ್ದ ಪಾವಕನನ್ನು ಸರ್ವ ಭಕ್ಷಕನಾದರೂ ನಿರ್ಲಿಪ್ತನಾಗೆಂದು ವರವನ್ನಿತ್ತು ಸಂತೋಷಪಡಿಸಿದರು. ಲೋಕಗಳು ವಿಜ್ವರವಾದವು. ಅಲ್ಲಿಂದ ತೆರಳಿ ಬಲದೇವನು ಕೌಬೇರ ತೀರ್ಥವನ್ನು ಸೇರಿದನು.

ಕುಬೇರನಲ್ಲಿ ತಪಗೈದು ಧನಾಧಿಪತ್ಯವನ್ನೂ ಲೋಕಪಾಲಕತ್ವವನ್ನೂ ಪಡೆದನು. ಆ ತೀರ್ಥದಲ್ಲಿ ಮಿಂದು ಬಲರಾಮನು ಬದರಪಾಚನವೆಂಬ ತೀರ್ಥವನ್ನು ಸೇರಪೋದನು. ಹಿಂದೆ ಶ್ರುತಾವತಿ ಎಂಬ ಭರದ್ವಾಜ ಕುಮಾರಿ, ಇಂದ್ರನೇ ತನಗೆ ಪತಿಯಾಗಬೇಕೆಂದು ತೀವ್ರತಪಗೈಯುತ್ತಿದ್ದಳು. ಅವಳ ಭಕ್ತಿಗೆ ಮೆಚ್ಚಿ ಶಚೀಪತಿಯು, ವಿಪ್ರರೂಪದಿಂದ ಪ್ರತ್ಯಕ್ಷನಾದನು. ಮುನಿಕನ್ಯೆಯು ವಿಪ್ರನನ್ನು ಪೂಜಿಸಿ 'ಮಹಾತ್ಮ! ಶಕ್ರಭಕ್ತಳಾದ ನನ್ನ ಪಾಣಿಗ್ರಹಣವನ್ನುಳಿದು ಬೇಕಾದುದನ್ನು ಬೇಡು! ಕೊಡುವೆನು!' ಎಂದಳು. ಇಂದ್ರನು ಅವಳ ತಪೋವ್ರತ ನಿಯಮಗಳಿಗೆ ಪ್ರೀತನಾಗಿ, 'ಶಚೀಪತಿಯ ಕೈಪಿಡಿವೆ! ನಿನ್ನಿಷ್ಟ ನೆರವೇರುವುದು. ಈ ಐದುಬದರಗಳನ್ನು ಬೇಯಿಸಿ, ನನಗೆ ಸಮರ್ಪಿಸು!' ಎಂದು ಅಂತರ್ಧಿತನಾದನು.

ಶ್ರುತಾವತಿಯು ಬದರಗಳನ್ನು ಬೇಯಿಸುತ್ತಾ, ಕಾಷ್ಠಗಳಿಲ್ಲದಾಗಲು, ತನ್ನ ಕಾಲುಗಳನ್ನೇ ಒಲೆಯಲ್ಲಿಟ್ಟು ಬದರಪಾಚನದಲ್ಲಿ ತೊಡಗಿದಳು. ಸುಟ್ಟಪಾದಗಳು ಶಕ್ರ ಮಹಿಮೆಯಿಂದ ಮತ್ತೆ ಬೆಳೆಯುತ್ತಿದ್ದವು. ಇಂತು ಬಹುಕಾಲ ನಡೆಯಿತು. ತ್ರಿಭುವನೇಶನು ಅವಳಲ್ಲಿ ಪ್ರೀತನಾಗಿ 'ಶುಭೇ! ಪ್ರೀತನಾಗಿರುವೆನು. ಈ ದೇಹವನ್ನು ಬಿಡು! ದೇವಲೋಕದಲ್ಲಿ ನನ್ನ ಸತಿಯಾಗುವೆ! ಈ ತೀರ್ಥವು ಬದರಪಾಚನವೆಂಬ ಪೆಸರಿನಿಂದ ಖ್ಯಾತವಾಗಿ ನಿನ್ನ ಕೀರ್ತಿಯನ್ನು ಸಾರುತ್ತಿರುವುದು. ಇದರಲ್ಲಿ ಮಿಂದವರು ಪಾಪಮುಕ್ತರಾಗಿ, ಇಂದ್ರಲೋಕವನ್ನು ಸೇರುವರು' ಎಂದು ವರವನ್ನಿತ್ತನು.

"ಹಿಂದೆ ಸಪ್ತರ್ಷಿವರರಿಲ್ಲಿ ವಾಸವಾಗಿ, ತಪಗೈಯುತ್ತಿದ್ದರು. ಆಗ ಹನ್ನೆರಡು ವರ್ಷಕಾಲ ಮಳೆ ಇಲ್ಲದೆ, ದುರ್ಭಿಕವು ತಲೆದೋರಿತು. ಒಂದು ದಿನ ಮಹಾದೇವನು ವಿಪ್ರರೂಪಧರನಾಗಿ, ಅರುಂಧತಿಯ ಮನೆಗೆ ಬಂದನು. ಆಕೆಯು ಆತನಿಗೆ ಸ್ವಾಗತವಿತ್ತು, 'ಅನ್ನವಿಲ್ಲ, ಬದರುಗಳಿವೆ! ಅವನ್ನೇ ಸ್ವೀಕರಿಸಿರಿ!' ಎಂದು ಪ್ರಾರ್ಥಿಸಿದಳು. ಮಹಾದೇವನು 'ಬದರಗಳನ್ನು ಬೇಯಿಸಿಕೊಡು!' ಎಂದನು. ಅರುಂಧತಿಯು ಬದರಗಳನ್ನು ಪಾಕಗೊಳಿಸುತ್ತಾ, ಮಹಾದೇವನು ಪೇಳುತ್ತಿದ್ದ ಪುಣ್ಯಕಥೆಗಳನ್ನು ಕೇಳಿದಳು. ದ್ವಾದಶವರ್ಷಗಳಾದವು. ಮಳೆಯೂ ಬಂತು. ಋಷಿಗಳು ಪರ್ವತದಿಂದ ಫಲಗಳನ್ನಾರಿಸಿ, ತಂದರು. ಮಹಾದೇವನು ಅರುಂಧತಿಯ ಸೌಶೀಲ್ಯ ವಿನಯ ವಿಪ್ರಭಕ್ತಿಗಳಿಗೆ ಮೆಚ್ಚಿ ಅವರಿಗೆ ಪ್ರತ್ಯಕ್ಷನಾದನು.

'ಕಲ್ಯಾಣಿ! ಬದರಗಳನ್ನು ಬೇಯಿಸುತ್ತಾ ಹನ್ನೆರಡು ಹಾಯನಗಳನ್ನು ಆಹಾರವಿಲ್ಲದೆ, ಪುಣ್ಯಕಥಾಶ್ರವಣದಲ್ಲಿ ಕಳೆದೆ! ಪ್ರೀತನಾಗಿರುವೆನು. ಬೇಕಾದ ವರವನ್ನು ಬೇಡು!'

ಎಂದ ಮಹಾದೇವನಿಗೆ ಆ ಪರಮಸಾಧ್ವಿ ಇಂತೆಂದಳು 'ಶಂಭೋ! ನಮೋನಮಃ ಈ ತೀರ್ಥದಲ್ಲಿ ಮೂರು ದಿನವಿದ್ದು ಉಪವಾಸದಿಂದ ಹರಿ ಕಥೆಯನ್ನಾಲಿಸಿದವರು, ಹನ್ನೆರಡುವರ್ಷದ ತೀರ್ಥಸೇವನ ಫಲವನ್ನು ಹೊಂದುವಂತಾಗಲಿ!' ಶಂಕರನು ಆಕೆಯ ಮಹೋದಾರ ಭಾವನೆಗೆ ಮೆಚ್ಚಿ 'ಅರುಂಧತಿ! ಮಹಾಭಾಗೇ! ಬದರಪಾಚನ ತೀರ್ಥದಲ್ಲಿ ಒಂದು ದಿನ ಮಿಂದವನು ಪಾಪಮುಕ್ತನಾಗುವನು. ಇಲ್ಲಿ ದೇಹನ್ಯಾಸ ಗೈದವನು ಪುಣ್ಯಲೋಕವನ್ನು ಹೊಂದುವನು' ಎಂದು ವರವಿತ್ತನು. ಶ್ರುತಾವತಿ! ನೀನಾದರೂ ಇಲ್ಲಿ ದೇಹವನ್ನು ಬಿಟ್ಟು ನನ್ನ ಸ್ವರ್ಗವನ್ನು ಸೇರುವೆ!"

ಇಂತು ನುಡಿದ ಇಂದ್ರನ ಮಾತಿನಂತೆ ಶ್ರುತಾವತಿಯು, ಬದರಪಾಚನ ತೀರ್ಥದಲ್ಲಿ ದೇಹನ್ಯಾಸಗೈದು, ಇಂದ್ರಲೋಕವನ್ನು ಸೇರಿದಳು. ಅಂತಹ ತೀರ್ಥವನ್ನು ಸೇವಿಸಿ, ಬಲರಾಮನು ಇಂದ್ರತೀರ್ಥವನ್ನು ಸೇರಿದನು. ಅಲ್ಲಿ ನೂರು ಯಾಗಗಳನ್ನು ಮಾಡಿ, ಇಂದ್ರನು ಭೂರಿದಕ್ಷಿಣೆಗಳಿಂದ ಬೃಹಸ್ಪತ್ಯಾದಿ ಮುನಿವರರನ್ನು ಸಂತೋಷಪಡಿಸಿ, ಶತಕ್ರತುನೆನಿಸಿದನು. ಶ್ರೀಪರಶುರಾಮ ತೀರ್ಥದಲ್ಲಿ ಹಿಂದೆ ಭಾರ್ಗವನು ನೂರಾರು ಯಜ್ಞಗಳನ್ನು ಮಾಡಿ, ಕಶ್ಯಪಾದಿ ಮುನಿವರರಿಗೆ, ತಾನು ಜಯಿಸಿದ ಭೂಮಿಯನ್ನೆಲ್ಲ ದಾನವಾಗಿ ಕೊಟ್ಟನು. ಇಂದ್ರತೀರ್ಥ, ರಾಮತೀರ್ಥಗಳನ್ನು ಸೇವಿಸಿ, ಬಲದೇವನು ಯಮುನಾತೀರ್ಥವನ್ನು ಸೇರಿದನು. ಅದು ವರುಣನು ರಾಜಸೂಯ ಯಾಗವನ್ನು ಮಾಡಿದ ಪುಣ್ಯಕ್ಷೇತ್ರವು. ಅಲ್ಲಿಂದ ತೆರಳಿ ಬಲರಾಮನು ಆದಿತ್ಯತೀರ್ಥವನ್ನು ಸೇರಿದನು. ಸೂರ್ಯನು ತಪೋನಿಯಮಗಳಿಂದ ಜ್ಯೋತಿರ್ಗಣಾಧಿಪತ್ಯವನ್ನು ಸಂಪಾದಿಸಿದ ಆದಿತ್ಯತೀರ್ಥವನ್ನು ಸೇವಿಸಿ, ಬಲರಾಮನು ಅಲ್ಲಿಯ ನದಿಯ ಇಕ್ಕೆಲಗಳಲ್ಲಿದ್ದ ದ್ವೈಪಾಯನ, ಶುಕಮುನಿಗಳ ಆಶ್ರಮವನ್ನು ಕಂಡನು.

ಆ ತೀರ್ಥದ ದಡದಲ್ಲಿ ಅಸಿತದೇವಲನೆಂಬ ಮಹರ್ಷಿಯು ವಸಿಸುತ್ತಿದ್ದನು. ಕ್ರೋಧವರ್ಜಿತನು, ಕಾಂಚನಲೋಷ್ಠಸಮದರ್ಶನನು ಆದ ದೇವಲನು ನಿತ್ಯವೂ ಅತಿಥಿಪೂಜಾನಿರತನಾಗಿದ್ದನು. ಜೈಗೀಷವ್ಯನೆಂಬ ಸಿದ್ಧಮುನಿವರನು ಅವನ ಆಶ್ರಮಕ್ಕೆ ಬಂದನು. ಆತನು ಶಂಕರಾಂಶ ಸಂಭೂತನೆಂದು ತಿಳಿ! ದೇವಲ ಜೈಗಿಷವ್ಯರೊಂದೇ ಆಶ್ರಮದಲ್ಲಿದ್ದೂ ಪರಸ್ಪರ ದರ್ಶನವಿಲ್ಲದೆ ಬಹು ಕಾಲ ಕಳೆದರು. ಜೈಗೀಷವ್ಯನು ಒಂದುದಿನ ಭಿಕ್ಷಾಕಾಲದಲ್ಲಿ ದೇವಲನ ಮನೆಗೆ ಬಂದನು. ದೇವಲನು ಸಂಭ್ರಮದಿಂದ ಎದುರ್ಗೊಂಡು, ಆ ಮುನಿರಾಜನನ್ನು ಕರೆತಂದು ಪೂಜಿಸಿದನು. ಜೈಗೀಷವ್ಯನ ದಿವ್ಯತೇಜದಿಂದ ಮುಗ್ಧನಾದ ದೇವಲನು, ಆತನ ಮೌನದಿಂದ ವಿಸ್ಮಿತನಾದನು.

ಒಂದು ದಿನ ದೇವಲನು ಕಲಶವನ್ನು ಪಿಡಿದು ಸಮುದ್ರಜಲಕ್ಕಾಗಿ ಅಂತರಿಕ್ಷ ಮಾರ್ಗದಲ್ಲಿ ಹಾರಿ, ಸರಿತ್ಪತಿಯನ್ನು ಸೇರಿದನು. ಅಲ್ಲಿ ಸಮುದ್ರತೀರದಿ ಕೂತು ಜಪನಿರತನಾದ ಜೈಗೀಷವ್ಯನನ್ನು ಕಂಡನು. ದೇವಲನು ಸ್ನಾನಮಾಡಿ, ಜಲಪೂರ್ಣ ಕಲಶದಿಂದ ಕೂಡಿ, ತನ್ನ ಆಶ್ರಮವನ್ನು ಸೇರಿದನು. ಅಲ್ಲಿ ಆಶ್ರಮದ್ವಾರದಲ್ಲಿ ಆಸೀನನಾಗಿದ್ದ ಜೈಗೀಷವ್ಯನನ್ನು ನೋಡಿ ದೇವಲನು ದಿಗ್ಭ್ರಮೆಗೊಂಡನು. ಯೋಗ

ಪ್ರಭಾವದಿಂದ ತನ್ನನ್ನೂ ಅಬ್ಬರಗೊಳಿಸಿದ ಜೈಗೀಷವ್ಯನನ್ನು ತಿಳಿಯಲಪೇಕ್ಷಿಸಿ, ದೇವಲನು ಅಂತರಿಕ್ಷಕ್ಕೆ ಹಾರಿದನು. ಅಲ್ಲಿ ಸಿದ್ಧರು ಜೈಗೀಷವ್ಯನನ್ನು ಪೂಜಿಸುತ್ತಿದ್ದರು. ಕ್ರಮವಾಗಿ ಪಿತೃಲೋಕ, ಯಮಲೋಕ, ಸೋಮಲೋಕ, ಅಗ್ನಿಹೋತ್ರಿ ಲೋಕ, ಅಗ್ನಿಷ್ಟೋಮವಾಜಪೇಯರ ಲೋಕ, ರಾಜಸೂಯಾಶ್ವಮೇಧ ಯಾಜಿಗಳ ಲೋಕ, ಸತ್ರಯಾಜಿ ಲೋಕ, ವಸುಲೋಕ, ಆದಿತ್ಯಲೋಕ, ರುದ್ರ ಲೋಕಗಳನ್ನು ಹೊಕ್ಕು ದೇವಲನು ಅಲ್ಲಲ್ಲಿ ಪೂಜಿತನಾಗುತ್ತಿರುವ ಜೈಗೀಷವ್ಯನನ್ನು ಕಂಡು, ಪರಮಾಶ್ಚರ್ಯಭರಿತನಾದನು. ಅಲ್ಲಿರುವ ಸಿದ್ಧಪುರುಷರನ್ನು ನೋಡಿ, 'ಮಹಾತ್ಮನಾದ ಜೈಗೀಷವ್ಯನ ಪ್ರಭಾವವನ್ನು ತಿಳಿಸಿಕೊಡಿ' ಎಂದು ದೇವಲನು ಕೇಳಿದನು.

ಸಿದ್ಧರು 'ದೇವಲ! ಜೈಗೀಷವ್ಯನು ಸುವ್ರತನು; ಸುಪ್ರಭಾವನು; ಯೋಗಾರೂಢನು. ಆ ಮಹಾನುಭಾವನು ಬ್ರಹ್ಮಲೋಕವನ್ನು ಸೇರಿರುವನು. ಅಲ್ಲಿಗೆ ನೀನು ಹೋಗಲಾಗದು!' ಎಂದರು. ಆಗ ದೇವಲನು ಹಿಂದಿರುಗಿ, ತನ್ನ ಆಶ್ರಮಕ್ಕೆ ಬಂದನು. ಅಲ್ಲಿ ನಿಂತ ಜೈಗೀಷವ್ಯನನ್ನು ನೋಡಿ, ದೇವಲನು ವಿನಯ ಸಂಭ್ರಾಮಾನ್ವಿತನಾಗಿ ಆತನಿಗೆ ನಮಿಸಿದನು. ಜೈಗೀಷವ್ಯನು ದೇವಲನಿಗೆ ಮೋಕ್ಷಧರ್ಮವನ್ನೂ, ಸನ್ಯಾಸ ವಿಧಿಯನ್ನೂ ಉಪದೇಶಿಸಿದನು. ದೇವಲನು ಸನ್ಯಾಸಿಯಾದರೆ ತಮಗೆ ಅನ್ನವಿಭಾಗವೆಂತೆಂದು ಭೂತಗಳು ಪಿತೃಗಳು ಚಿಂತಿಸಿದರು. ಮೋಕ್ಷಮಾರ್ಗವನ್ನು ಬಿಟ್ಟರೆ ಮತ್ತೆ ತಮ್ಮನ್ನು ಫಲ ಮೂಲ ಪರ್ಣಗಳಿಗಾಗಿ ಹಿಂಸಿಸುವನೆಂದು ಓಷಧಿಗಳು ರೋದಿಸಿದವು. ದೇವಲನು ಎಲ್ಲವನ್ನೂ ವಿಚಾರಿಸಿ, ಕೊನೆಗೆ ಸನ್ಯಾಸವನ್ನವಲಂಬಿಸಿ ಸರ್ವಭೂತಗಳಿಗೆ ಅಭಯವಿತ್ತು, ತಾನು ದಿವ್ಯಲೋಕವನ್ನು ಸೇರಿದನು. ಇಷೀಕಾತೂಲವು ಅಗ್ನಿಯಲ್ಲಿ ಬಿದ್ದರೆ ಸುಡುವಂತೆ, ಅವನ ಪಾಪಕರ್ಮಗಳೆಲ್ಲವೂ ಸುಟ್ಟುಹೋದವು. ಸಂಚಿತನಾಶ, ಆಗಾಮಿಕರ್ಮ ಫಲಾಶ್ಲೇಷಗಳಿಂದ ಶುದ್ಧನಾದ ದೇವಲನು ಪ್ರಾರಬ್ಧಭೋಗಾನಂತರದಲ್ಲಿ ಮುಕ್ತನಾದನು. ತಪಸ್ತೇಜೋಯೋಗಪ್ರಭಾವಗಳಿಂದ ಮಹಾಮಹಿಮರಾದ ದೇವಲ-ಜೈಗೀಷವ್ಯರ ಆಶ್ರಮಗಳನ್ನು ಕಂಡು, ಬಲದೇವನು ಆನಂದತುಂದಿಲನಾದನು. ಅಲ್ಲಿಂದ ತೆರಳಿ ಆತನು ಸೋಮತೀರ್ಥ, ದಧೀಚತೀರ್ಥಗಳನ್ನು ಮುಟ್ಟಿ ಅಲ್ಲಿ ಸ್ನಾನ ದಾನಗಳನ್ನು ಮಾಡಿದನು.

ಹಿಂದೆ ದಧೀಚನೆಂಬ ಮುನಿಯು ತೀವ್ರತಪೋನಿರತನಾಗಿದ್ದನು. ಆತನ ತಪವನ್ನು ಕೆಡಿಸಲೆಂದು ಇಂದ್ರನು ಅಲಂಬುಷೆ ಎಂಬ ಅಪ್ಸರೆಯನ್ನು ಕಳಿಸಿದನು. ಸರಸ್ವತಿಯಲ್ಲಿ ದೇವತರ್ಪಣವನ್ನೀಯುತ್ತಿರುವ ದಧೀಚನು ಅಪ್ಸರೆಯರ ದರ್ಶನದಿಂದ ಚಲಿತನಾದನು. ಆ ನದೀದೇವಿಯು ದಧೀಚವೀರ್ಯವನ್ನು ಧರಿಸಿ, ಸಕಾಲದಲ್ಲಿ ಗಂಡುಕೂಸನ್ನು ಪಡೆದಳು. ಆಕೆಯು ತಂದೊಪ್ಪಿಸಿದ ಮಗುವನ್ನು ದಧೀಚನು ಸಾಕಿ, ಯುಕ್ತ ಕಾಲದಲ್ಲಿ ಉಪನಯನವನ್ನು ನಡೆಸಿ, ವೇದವೇದಾಂಗಗಳನ್ನು ಕಲಿಸಿ ಕೊಟ್ಟನು.

ಇಂದ್ರಾದಿ ದೇವತೆಗಳು ಕಾಲಾಂತರದಲ್ಲಿ ದೈತ್ಯರನ್ನು ಗೆಲ್ಲುವ ಉಪಾಯವನ್ನು

ಚಿಂತಿಸಿ, ದಧೀಚನಿಗೆ ಶರಣುಬಂದರು. ಆ ಮಹಾಮುನಿಯ ಅಸ್ಥಿಗಳನ್ನು ಬೇಡಿ, ಪಡೆದು, ಇಂದ್ರನು ಅವನ್ನೊಳಗೊಂಡ ವಜ್ರ, ಚಕ್ರ, ಗದಾ, ದಂಡಾದ್ಯಾಯುಧಗಳನ್ನು ವಿಶ್ವಕರ್ಮನಿಂದ ನಿರ್ಮಾಣಗೊಳಿಸಿದನು. ವಜ್ರಪಾಣಿಯಾದ ಇಂದ್ರನು ವೃತ್ರಾದಿ ತೊಂಭತ್ತುಸಾವಿರ ದಾನವರನ್ನು ಸಂಹರಿಸಿ, ಲೋಕಕ್ಷೇಮಂಕರನಾದನು.

ಒಂದುಸಲ ಭೀಕರ ಕ್ಷಾಮವು ತಲೆದೋರಿ ಹನ್ನೆರಡು ವರ್ಷಗಳವರೆಗೂ ಬಿಡದೆ ಕಾಡಿತು. ಜೀವನಾರ್ಥಿಗಳಾದ ಋಷಿಗಳು ಆಶ್ರಮಗಳನ್ನು ಬಿಟ್ಟು ಬೇರೆ ದೇಶಗಳಿಗೆ ಹೊರಟರು. ಅವರಂತೆ ನದೀಕುಮಾರನಾದ ಸಾರಸ್ವತನೂ ಹೊರಟು ನಿಂತಾಗ ಅವನ ತಾಯಿ ಸರಸ್ವತಿಯು 'ಕುಮಾರ! ಹೋಗಬೇಡ! ನಿನಗೆ ಜೀವನಾಧಾರವಾದ ಆಹಾರವನ್ನು ನಾನು ಕೊಡುವೆನು' ಎಂದು, ಮತ್ಸ್ಯಗಳನ್ನು ತಂದು ಕೊಟ್ಟಳು. ಸಾರಸ್ವತನು ಆಪತ್ಕಾಲವೆಂದು ಅವನ್ನು ಸ್ವೀಕರಿಸಿ, ತನ್ನ ಪ್ರಾಣಗಳನ್ನೂ ತನ್ನಲ್ಲಿದ್ದ ವೇದಗಳನ್ನೂ ಉಳಿಸಿಕೊಂಡನು. ಕ್ಷಾಮವು ಕಳೆದು ಸುಭಿಕ್ಷವು ಉಂಟಾಯಿತು. ಹನ್ನೆರಡು ವರ್ಷಗಳವರೆವಿಗೂ ಆಹಾರಕ್ಕಾಗಿ ಅಲೆಯುತ್ತಿದ್ದ ಇತರ ಮುನಿಗಳು ನಿತ್ಯ ಸ್ವಾಧ್ಯಾಯವಿಲ್ಲದೆ ವೇದಭಾಗ್ಯವನ್ನು ಕಳೆದುಕೊಂಡಿದ್ದರು. ತಮಗೆ ವೇದ ಲಾಭವೆಂತೆಂದು ಅವರು ಚಿಂತಿಸಿದರು.

ಒಂದು ದಿನ ಮುನಿವರನೊಬ್ಬನು ಸ್ವಾಧ್ಯಾಯನಿರತನಾಗಿ, ವೇದಘೋಷದಿಂದ ವನವನ್ನು ರಂಜಿಸುವ ಸಾರಸ್ವತನನ್ನು ಕಂಡು, ಮಿಕ್ಕ ಮುನಿಗಳಿಂದ ಕೂಡಿ, ಅವನನ್ನು ಸೇರಿದನು. 'ಅಯ್ಯಾ! ನಮಗೆ ವೇದಗಳನ್ನು ಕಲಿಸಿಕೊಡು!' ಎಂದ ಮುನಿಜನರಿಗೆ ಸಾರಸ್ವತನಿಂತೆಂದನು: 'ನನಗೆ ಶಿಷ್ಯರಾಗಿ ಕಲಿತುಕೊಳ್ಳಿರಿ!' ಆಗ ಮುನಿಗಳು 'ನೀನು ಬಾಲಕನಿರುವೆ!' ಎಂದು ಶಂಕಿಸಿದರು. ಸಾರಸ್ವತನು, 'ಗುರು ಶಿಷ್ಯ ಧರ್ಮವು ನಷ್ಟವಾಗಬಾರದು. ಶಿಷ್ಯರಾಗದವರಿಗೆ ವೇದವನ್ನು ಹೇಳುವದು ಅಧರ್ಮವು. ಅದರಿಂದ ಅವರೀರ್ವರು ನಷ್ಟರಾಗುವರು ಅಥವಾ ಗುರು ಶಿಷ್ಯರಲ್ಲಿ ವೈರವು ಉದ್ಭವಿಸುವದು. ವಯಸ್ಸಿನಿಂದಾಗಲಿ, ವಿತ್ತದಿಂದಲಾಗಲಿ, ಬಂಧುತ್ವದಿಂದಲಾಗಲಿ ದೊಡ್ಡವರಾಗುವುದಿಲ್ಲ. ಅನೂಚಾನ ವೇದಾಭ್ಯಾಸವಂತನೇ ದೊಡ್ಡವನು. ಹೀಗೆಂದು ಋಷಿಗಳು ನುಡಿದಿರುವರು' ಎಂದನು. ಋಷಿಗಳು ಅವನ ಶಿಷ್ಯರಾಗಿ, ವೇದಗಳನ್ನು ಕಲಿತರು. ಸಾರಸ್ವತನ ಶಿಷ್ಯರು ಅರವತ್ತುಸಾವಿರ ಮುನಿಗಳೆಂದು ಖ್ಯಾತರಾಗಿ, ಧನಾಪೇಕ್ಷೆಯಾಗದ ಗುರುವಿಗೆ ಒಂದೊಂದು ಮುಷ್ಟಿ ದರ್ಭೆಯನ್ನು ತಂದು, ಅವನ ಆಸನಕ್ಕೆಂದು, ಸಮರ್ಪಿಸಿದರು.

ಅಲ್ಲಿಂದ ತೆರಳಿ ಬಲರಾಮನು ಕನ್ಯಾತೀರ್ಥವನ್ನು ಸೇರಿದನು. ಹಿಂದೆ ಗರ್ಗನೆಂಬ ಋಷಿಶ್ರೇಷ್ಠನು ತನ್ನ ಮನಃಪುತ್ರಿಯಿಂದ ಕೂಡಿ ಅಲ್ಲಿದ್ದನು. ಒಂದು ದಿನ ಗರ್ಗನು ಪುಣ್ಯಲೋಕವನ್ನು ಸೇರಿದನು. ಕನ್ಯಾಮಣಿಯು ಅದೇ ಆಶ್ರಮದಲ್ಲಿ ಉಗ್ರತಪೋನಿರತಳಾಗಿದ್ದಳು. ಬಹುಕಾಲವಾಯಿತು, ವಾರ್ಧಕ್ಯದಿಂದ ಅವಳ ದೇಹವು ಕರ್ಶಿತವಾಯಿತು. ಜೀರ್ಣದೇಹವನ್ನು ಬಿಟ್ಟು ಪರಲೋಕವನ್ನು ಸೇರ ಬಯಸುವ ಕನ್ಯೆಯನ್ನು ಕಂಡು ನಾರದನಿಂತೆಂದನು:

'ಅನಘೇ! ಘೋರತಪವನ್ನಾಚರಿಸಿರುವೆ ನಿಜ! ಆದರೆ ನಿನಗೆ ಪುಣ್ಯಲೋಕಗಳು ಸಿಗಲಾರವು. ನೀನು ಅಸಂಸ್ಕೃತಳಿರುವೆ!' ಆ ಮಾತನ್ನು ಕೇಳಿ ವೃದ್ಧಕನ್ಯೆಯು ಮುನಿಸಭೆಯಲ್ಲಿ ನಿಂತು, 'ನನ್ನ ಕೈಪಿಡಿವ ಮುನಿಗೆ ನನ್ನ ತಪಸ್ಸಿನ ಅರ್ಧ ಫಲವನ್ನು ಕೊಡುವೆನು' ಎಂದಳು. ಗಾಲವಪುತ್ರನಾದ ಶೃಂಗವಂತನು 'ಕನ್ಯೆ! ಒಂದೇ ಒಂದು ರಾತ್ರಿ ನಿನ್ನೊಡನಿರುವೆನು. ಹೆಚ್ಚಿಗೆ ಕೇಳಬೇಡ! ಈ ನಿಬಂಧನೆಗೆ ಒಪ್ಪಿದರೆ ನಿನ್ನನ್ನು ಮದುವೆಯಾಗುವೆನು' ಎಂದನು. ಅದಕ್ಕೊಪ್ಪಿ ಗರ್ಗಪುತ್ರಿಯು ಗಾಲವಪುತ್ರನನ್ನು ಮದುವೆಯಾದಳು.

ದಿವ್ಯಾಭರಣಸಂಪನ್ನಳು, ದಿವ್ಯವಯೋವಿಲಾಸಯುತಳು, ದಿವ್ಯಗಂಧಾನುಲೇಪನಳು ಆದ ಕನ್ಯೆಯೊಂದಿಗೆ ಒಂದು ರಾತ್ರಿಯನ್ನು ಕಳೆದು ಶೃಂಗವಂತನು ತನ್ನನ್ನು ಬಿಟ್ಟು ದಿವ್ಯ ಲೋಕಗಳನ್ನು ಸೇರಪೋಗುವ ಕನ್ಯೆಯನ್ನು ಬಿಟ್ಟಿರಲಾರದೆ ವಿರಹ ದುಃಖಪೀಡಿತನಾದನು. ಸಮಯಬಂಧದಂತೆ ಕನ್ಯೆಯು ತನ್ನ ತಪಸ್ಸಿನ ಅರ್ಧವನ್ನವನಿಗಿತ್ತು, ಆ ತೀರ್ಥಮಹಿಮೆಯನ್ನಿಂತು ಪ್ರಶಂಸಿಸಿದಳು. 'ಎಂಟು ವರ್ಷದ ವಿಪ್ರನು ನಾಲ್ಕು ವೇದಗಳನ್ನೂ ನಾಲ್ಕು ದಶವರ್ಷ ಕಾಲದವರೆಗೂ ಪಠಿಸಬೇಕು. ಆಗ ಅವನಿಗೆ ನಲವತ್ತೆಂಟು ವರ್ಷಗಳ ವಯಸ್ಸಾಗುವದು. ಎಂಟು ವರ್ಷದವಳಾದ ಪತ್ನಿಯನ್ನು, ಸ್ನಾತಕನಾಗಿ ಗುರುಸೇವೆಯಲ್ಲಿ ಎರಡು ವರ್ಷ ಕಳೆದು ಐವತ್ತು ವರ್ಷದವನಾದಾಗ ವಿವಾಹವಾಗಿ, ಮತ್ತೆ ಎಂಟು ವರ್ಷ ಕಳೆದು; ಯೌವನಸ್ಥಳಾದ ಸತಿಯನ್ನು ಸ್ವೀಕರಿಸಬೇಕು. ಅಂದರೆ ಅವನು ಐವತ್ತೆಂಟು ವರ್ಷಗಳವರೆವಿಗೂ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದಿರುವನು, ಎಂದಾಗುವದು. ಇಂತಹ ಬ್ರಹ್ಮಚರ್ಯವ್ರತದ ಫಲವು, ಈ ಕನ್ಯಾತೀರ್ಥದಲ್ಲಿ ಒಂದು ರಾತ್ರಿ ವಾಸಮಾಡುವವರಿಗೆ ಸಿಗುವುದು.' ಇಂತು ನುಡಿದು, ಕನ್ಯೆಯು ದೇವಲೋಕವನ್ನು ಸೇರಿದಳು. ಶೃಂಗವಂತನೂ ಅವಳಿತ್ತ ತಪೋರ್ಧಫಲದಿಂದ, ದೇವಲೋಕವನ್ನು ಸೇರಿ, ಅವಳಿಂದ ಕೂಡಿ, ಸುಖವಾಗಿದ್ದನು.

ಕನ್ಯಾತೀರ್ಥದಲ್ಲಿರುವಾಗ ಬಲದೇವನು ಶಲ್ಯನು ಮೃತನಾದ ಸುದ್ದಿಯನ್ನು ಕೇಳಿ, ಸಮಂತಪಂಚಕದ ಮಾರ್ಗದಿಂದ ಪರಿಕ್ರಮಿಸಿ, ಕುರುಕ್ಷೇತ್ರವನ್ನು ಸೇರಿದನು. ಅಲ್ಲಿದ್ದ ಋಷಿಗಳು ಆತನಿಗೆ ಕುರುಕ್ಷೇತ್ರದ ಮಹಿಮೆಯನ್ನು ತಿಳಿಸಿದರು.

"ಹಿಂದೆ ಕುರುರಾಜನು ಈ ಕ್ಷೇತ್ರವನ್ನು ಸ್ವರ್ಣಲಾಂಗಲದಿಂದ ಉತ್ತುತ್ತಿದ್ದನು. ಬ್ರಹ್ಮದೇವನ ಯಜ್ಞವಾಟದ ಉತ್ತರವೇದಿಯಾದ ಸಮಂತಪಂಚಕದಿಂದ ಹಿಡಿದು, ದೇವತೆಗಳು ಸತ್ರಯಾಗವನ್ನು ಮಾಡಿದ ತರಂತುಕಾರಂತುಕ ತೀರ್ಥಗಳ ಪರಿವಿಗೂ ಇರುವ ಕುರುಕ್ಷೇತ್ರವು ಅತ್ಯಂತ ಪುಣ್ಯಭೂಮಿಯಾಗಿರುವುದರಿಂದ ಅಲ್ಲಿ ಮೃತರಾದವರೆಲ್ಲರೂ ಸ್ವರ್ಗವನ್ನು ಸೇರಬೇಕೆಂದು ಸಂಕಲ್ಪಿಸಿ, ಕುರುರಾಜನು ಭೂಮಿಯನ್ನು ಉತ್ತುತ್ತಿದ್ದನು. ಅವನ ವ್ಯವಸಾಯ ತೀವ್ರತೆಯನ್ನರಿತು, ಶಕ್ರನು ಅವನಿಗೆ ಪ್ರತ್ಯಕ್ಷನಾಗಿ 'ರಾಜನ್! ಇಲ್ಲಿ ಮೃತರಾದ ಮಾತ್ರಕ್ಕೆ ಸ್ವರ್ಗವಾಸರಾಗಬೇಕೆಂಬ ಹಠವು ಉಚಿತವಲ್ಲ.

ನಿರಾಹಾರರಾಗಿ ತಪಗೈದವರಾಗಲಿ, ಯುದ್ಧದಲ್ಲಿ ಧರ್ಮಕ್ಕಾಗಿ ಮೃತರಾದವರಾಗಲಿ ಸ್ವರ್ಗವನ್ನು ಸೇರುವಂತೆ ವರವಿತ್ತಿರುವೆನು. ನಿನ್ನ ತೀವ್ರತಪವನ್ನು ನಿಲ್ಲಿಸು!' ಎಂದನು. ಕುರುರಾಜನು ತೃಪ್ತನಾಗಿ, ತನ್ನ ಪ್ರಯತ್ನವನ್ನು ನಿಲ್ಲಿಸಿದನು. ಆತನ ಹೆಸರಿನಿಂದ ಕುರುಕ್ಷೇತ್ರವು ಖ್ಯಾತವಾಯಿತು.

ಕುರುಕ್ಷೇತ್ರದ ಧೂಳಿಯು ಸೋಕಿದರೆ ಸಾಕು, ದುಷ್ಕೃತಿಯು ಕೂಡಾ ಪಾಪಮುಕ್ತನಾಗಿ, ಪುಣ್ಯಲೋಕವನ್ನು ಸೇರುವನು. ಅಲ್ಲಿರುವ ನೃಸಿಂಹದೇವನನ್ನು ಪೂಜಿಸಿದವರು ಸುಗತಿಯನ್ನು ಪಡೆಯುವರು.

ಬಲದೇವನು ಅಲ್ಲಿಂದ ತೆರಳಿ, ಬ್ರಹ್ಮಚಾರಿಣಿಯಾಗಿ ದಿವ್ಯಲೋಕವನ್ನು ಸೇರಿದ ಶ್ರೀಮತಿಯ ಆಶ್ರಮವನ್ನು ನೋಡಿದನು. ಪ್ಲಕ್ಷಪ್ರಸ್ರವಣ, ಕಾರಪವನಗಳನ್ನು ನೋಡಿ, ಬಲರಾಮನು ಮಿತ್ರಾವರುಣರ ಆಶ್ರಮವನ್ನು ಸೇರಿದನು. ಅಲ್ಲಿ ನಾರದನು ರಾಮನನ್ನು ನೋಡಲು ಬಂದು, ಪೂಜಿತನಾದನು. ಯುದ್ಧವೃತ್ತಾಂತವನ್ನು ತಿಳಿಯಲಪೇಕ್ಷಿಸಿದ ಬಲದೇವನಿಗೆ ನಾರದನಿಂತೆಂದನು:

"ಯಾದವರ್ಷಭ! ಕೇಳು! ಭೀಷ್ಮನು ಶರಪಂಜರಶಯಿತನಾದನು. ದ್ರೋಣ, ಕರ್ಣ, ಜಯದ್ರಥ, ಭೂರಿಶ್ರವ, ಶಲ್ಯರು ಹತರಾದರು. ಈಗ ಕೌರವರಾಜನ ಕಡೆ ಕೃಪಕೃತವರ್ಮಾಶ್ವತ್ಥಾಮರೆಂಬ ಮೂವರು ಮಹಾರಥರು ಮಾತ್ರ ಉಳಿದಿರುವರು. ಪಾಂಡವರ ಕಡೆ ಕೃಷ್ಣ ಸಾತ್ಯಕಿ ಸಮೇತರಾದ ಪಂಚಪಾಂಡವರು ಉಳಿದಿರುವರು. ದುರ್ಯೋಧನನು ದ್ವೈಪಾಯನ ಹ್ರದದಲ್ಲಿ ಅಡಗಿ ಕೂತಿದ್ದನು. ಪಾಂಡವರು ಉಗ್ರವಚನಗಳಿಂದ ಅವನನ್ನು ಹೊರಕ್ಕೆ ತಂದರು. ಈ ಸಮಯದಲ್ಲಿ ದುರ್ಯೋಧನನು ಭೀಮಸೇನನಿಂದ ಗದಾಯುದ್ಧವಾಡಲು ಸಿದ್ಧನಾಗಿ ನಿಂತಿರುವನು. ನಿನ್ನ ಶಿಷ್ಯರೀರ್ವರು ಮಾಡುವ ಗದಾಯುದ್ಧವನ್ನು ನೋಡಬೇಕೆಂದಿದ್ದರೆ ಬೇಗನೆ ಹೊರಡು!"

ಆಗ ಬಲದೇವನು ಸಂಭ್ರಮದಿಂದ, ತೆರಳಿ, ಕೃಷ್ಣದ್ವೈಪಾಯನ ಸರೋವರವನ್ನು ಸಮೀಪಿಸಿದನು. ಆತನನ್ನು ಪೂಜಿಸಿ, ಪಾಂಡವರು ಕೂಡಿಸಿದರು. ಇಂತು ಸರಸ್ವತೀ ತೀರ್ಥಮಹಿಮೆಯನ್ನು ನಿನಗೆ ನಿರೂಪಿಸಿದೆನು ಜನಮೇಜಯ! ಇದನ್ನು ಕೇಳಿದವರು ಪಾಪಮುಕ್ತರಾಗುವರು.

ಶ್ರೀ ಬಲದೇವನ ತೀರ್ಥಯಾತ್ರೆ ಮುಗಿಯಿತು.

## ೫. ಗದಾಯುದ್ಧ

ಶ್ರೀ ವೈಶಂಪಾಯನನು ಶ್ರೀ ಜನಮೇಜಯನಿಗೆ ನಿರೂಪಿಸಿದನು:

'ಧೃತರಾಷ್ಟ್ರನು ಸಂಜಯನ ಯುದ್ಧವರ್ಣನವನ್ನು ಕೇಳಿ, ದುಃಖದಿಂದ ಕಣ್ಣೀರಿಟ್ಟು ನಿಡುಸುಯ್ದು ಮೆಲ್ಲಗೆ ಇಂತೆಂದನು: 'ಸಂಜಯ! ಎಂತಹ ಅನರ್ಥವಾಯಿತು! ನನ್ನ ಪುತ್ರನು ಭೀಮಸೇನನಿಂದ ಎಂತು ಕಾದಿದನು? ಎಂತು ಬಿದ್ದನು? ಎಲ್ಲವನ್ನೂ

ಹೇಳು! ಸ್ಥಿರನಾಗಿ ಕೇಳುವೆನು. ಸಮಸ್ತಪುತ್ರಮಿತ್ರಾದಿ ಜನರನ್ನು ಕಳೆದುಕೊಂಡು, ಇನ್ನೂ ಬದುಕಿರುವೆನೆಂದರೆ, ನನ್ನ ಗುಂಡಿಗೆ ಕಲ್ಲಿನಿಂದ ಮಾಡಿದ್ದಾಗಿರಬೇಕು! ಹಾ! ಕಷ್ಟಂ! ಏನು ಮಾಡಲಿ! ಯಾರೆನಗೆ ದಿಕ್ಕು? ' ಎಂದು ಅಳಲಾರಂಭಿಸಿದನು.

ಸಂಜಯನಿಗೂ ಕಂಣೀರು ಬಂತು. ಅವನು ರಾಜನನ್ನು ದೈವಗತಿಗೆದುರಿಲ್ಲವೆಂದು ಸಮಾಧಾನಪಡಿಸಿ, ಇಂತು ವರ್ಣಿಸಿದನು: 'ರಾಜನ್! ಬಲದೇವನ ಸಾನ್ನಿಧ್ಯದಿಂದ ದುರ್ಯೋಧನನ ಉತ್ಸಾಹವು ಇಮ್ಮಡಿಸಿತು. ಅವನು ಸಂಕರ್ಷಣನಿಗೆ ಶಿರಬಾಗಿ ವಂದಿಸಿದನು. ಆಗ ಬಲರಾಮನು 'ಧರ್ಮರಾಜ! ಇನ್ನು ಯುದ್ಧ ಬೇಡ! ಸಾಕಷ್ಟು ಬಂಧುನಾಶವಾಗಿದೆ. ಪೃಥ್ವಿಯ ಮಹಾವೀರರೆಲ್ಲರೀ ರಣರಂಗದಲ್ಲಿ ವೀರಶಯನ ವನ್ನಲಂಕರಿಸಿರುವರು. ನಿನ್ನ ವಿಜಯವು ನಿಶ್ಚಿತವಾಗಿದೆ! ದುರ್ಯೋಧನನಿಂದ ಕೂಡಿ ಬಾಳು!' ಎಂದನು. ಧರ್ಮರಾಜ ದುರ್ಯೋಧನರೀರ್ವರೂ ಆ ಮಾತಿಗೆ ಒಡಂಬಡದಿರಲು, ಬಲರಾಮನು ಖಿನ್ನನಾಗಿ, 'ಹೋಗಲಿ! ಕುರುಕ್ಷೇತ್ರವು ಪರಮಪಾವನವಾಗಿದೆ. ಅಲ್ಲಿ ರಣ ನಿಹತರಾದವರಿಗೆ ವೀರಸ್ವರ್ಗವಾಗುವುದೆಂದು ಋಷಿಜನರು ಕೀರ್ತಿಸುವರು. ಆದುದರಿಂದ ಸಮಂತಪಂಚಕದ ಸಮೀಪವನ್ನು ಸೇರಿ, ಅಲ್ಲಿ ಭೀಮ ದುರ್ಯೋಧನರು ಕಾದಲಿ!' ಎಂದನು. ಅಂತೆಯೇ ಕೃಷ್ಣದ್ವೈಪಾಯನ ಸರಸ್ತೀರದಿಂದ ಸಾಗಿ, ಅವರೆಲ್ಲರು, ಆಚೆಯ ದಡದ ಸಮೀಪದಲ್ಲಿದ್ದ ಸಮಂತಪಂಚಕ ಭೂಮಿಯನ್ನು ಸೇರಿದರು.

ಕವಚವನ್ನು ತೊಟ್ಟು ಗದೆಯನ್ನು ಭುಜದ ಮೇಲಿಟ್ಟು, ಮದ್ದಾನೆಗಳಂತೆ ಬರುವ ಭೀಮಸೇನ ದುರ್ಯೋಧನರನ್ನು ನೋಡಿ, ಅಂತರಿಕ್ಷದ ಸಿದ್ಧಚಾರಣರು 'ಸಾಧು! ಭಾಪು!' ಎಂದು ಪ್ರಶಂಸಿಸಿದರು. ರಣರಂಗವು ಶಂಖಭೇರೀಧ್ವಾನಗಳಿಂದ ಮಾರ್ಮೊಳಗಿತು. ಶೂರರ ಸಿಂಹನಾದಗಳು ದಿಕ್ಕುಗಳಲ್ಲಿ ವ್ಯಾಪಿಸಿದವು. ಆ ನರವರರು ಕುರುಕ್ಷೇತ್ರವನ್ನು ಸೇರಿ, ಸರಸ್ವತೀ ನದಿಯ ದಕ್ಷಿಣತೀರದಲ್ಲಿ, ಅನೂಷರ ಭೂಪ್ರದೇಶವನ್ನಾರಿಸಿ, ಅಲ್ಲಿ ಗದಾಯುದ್ಧವಾಗಲಿ ಎಂದು ನಿರ್ಣಯಿಸಿದರು.

ದುರ್ಯೋಧನನು ಪಶ್ಚಿಮಾಭಿಮುಖನಾಗಿ ನಿಲ್ಲಲು, ಭೀಮಸೇನನು ಅವನೆ ದುರಿನಲ್ಲಿ ಪೂರ್ವಾಭಿಮುಖನಾಗಿ ನಿಂತನು. ಇಬ್ಬರ ಕೈಗಳಲ್ಲಿದ್ದ ಕಾಂಚನ ಗದೆಗಳು ಮೇರುಶೃಂಗಗಳಂತೆ ಬೆಳಗಿದವು. ಕವಚಾಲಂಕೃತನಾಗಿ, ಮಹಾಗದೆಯನ್ನೆತ್ತಿ ಹಿಡಿದ ಭೀಮಸೇನನು ಗರುಡನಂತೆ ಕಂಗೊಳಿಸಿದನು. ಇಬ್ಬರ ತಲೆಗಳಲ್ಲಿ ಕಾಂಚನ ಶಿರಸ್ತ್ರಾಣವು, ಶರೀರಗಳಲ್ಲಿ ಅಯೋಮಯ ಕವಚವು ಶೋಭಿಸುತ್ತಿರಲು, ಅಲಂಕೃತವಾದ ಭದ್ರಗಜದ್ವಯದಂತೆ ಆ ವೀರರು ವಿರಾಜಿಸಿದರು. ರಣಮಂಡಲದ ಪ್ರಾಕ್ಪಶ್ಚಿಮ ಪ್ರದೇಶಗಳಲ್ಲಿ ನಿಂತ ಯೋಧಯುಗಳವು, ಚಂದ್ರಸೂರ್ಯರಂತೆ ಪ್ರಕಾಶಿಸಿದರು. ನೋಟದಿಂದ ಕ್ರೂರರಾಗಿ, ಸುಡುವಂತೆ ನೋಡುವ ಮಹಾರಥರು ಸಿಂಹಗಳಂತೆ ರಾರಾಜಿಸಿದರು. ಯುದ್ಧಸಿದ್ಧರಾಗಿ ನಿಂತ ಭೀಮ ದುರ್ಯೋಧನರು ಉದ್ಯತಗದರಾಗಿ, ಸೊಂಡಿಲವನ್ನೆತ್ತಿದ ಆನೆಗಳೋ, ಶಿಖರದಿಂದುನ್ನತವಾದ ಪರ್ವತಗಳೋ ಎಂಬಂತೆ ಕಂಡರು.

ದುರ್ಯೋಧನನು ತುಟಿಯನ್ನು ನೆಕ್ಕಿ, ಹಲ್ಲಿಂದ ಕಟಕಟ ಕಡಿದು, ಕಿಡಿಗಣ್ಣಿನಿಂದ ನೋಡುತ್ತಾ ಭೀಮಸೇನನನ್ನು ಕೈಬೀಸಿ ಕಾದಲು ಕರೆದನು. ಅದ್ರಿ ಸಾರಮಯವಾದ ಗದೆಯನ್ನು ಪಿಡಿದ ಭೀಮಸೇನನು, ಸಿಂಹದಂತೆ ಗುಡುಗಿ, ಪ್ರತಿಸಿಂಹವನ್ನಂತೆ ದುರ್ಯೋಧನನನ್ನು ರಣಕಣಕ್ಕೆ ಕರೆದನು.

ವಾಸುದೇವ ಕೈಟಭರಂತೆ, ವಾಸವವೃತ್ರಾಸುರರಂತೆ, ರಾಮರಾವಣರಂತೆ, ನೃಸಿಂಹಹಿರಣ್ಯಕಶಿಪುಗಳಂತೆ ಕಂಗೊಳಿಪ ವೃಕೋದರ ದುರ್ಯೋಧನರು ಗದಾಯುದ್ಧ ಸನ್ನದ್ಧರಾಗಿ ನಿಂತರು. ಶರತ್ಕಾಲದಲ್ಲಿ ವಾಸಿತೆಕರಿಣಿಗಾಗಿ ಕಡಿದಾಡುವ ಕರಿರಾಜರಂತೆ ಸೂಗಾಡುತ್ತಾ, ಭುಜಗಾಧಿಪರಂತೆ ಭುಸುಗುಟ್ಟುತ್ತಾ, ಸಿಂಹಗಳಂತೆ ಗರ್ಜಿಸುತ್ತಾ, ಅಗ್ನಿಪರ್ವತಗಳಂತೆ ಕಿಡಿಗಾರುತ್ತಾ, ಪ್ರಳಯಪಯೋಧಿಗಳಂತೆ ಉಬ್ಬುತ್ತಾ, ವಾಯುಚಲಿತ ಮೇಘಗಳಂತೆ ಸರಿಯುತ್ತಾ, ಅಗ್ನಿಸೂರ್ಯರಂತೆ ಬೆಳಗುತ್ತಾ ನಿಂತ ದುರ್ಯೋಧನ ವೃಕೋದರರು ಲೋಕಭಯ ವಿಸ್ಮಯಕಾರಣರಾದರು. ಹುಬ್ಬನ್ನು ಗಂಟಿಕ್ಕಿ, ಹಲ್ಲುಕಡಿದು ಕಿಡಿಗಾರುವ ಕಂಗಳಿಂದ ನೋಡಿ, ಗದೆಗಳನ್ನು ಪಿಡಿದೆತ್ತಿ ಮುಂದೆ ಸಾಗಿ ಸಮೀಪಿಸಿದ ವೀರರನ್ನು ಕಂಡು ಅಲ್ಲಿದ್ದವರು ಉಸಿರುಕಟ್ಟಿದಂತಾಗಿ, ಚಿತ್ರಪ್ರತಿಮೆಗಳಂತೆ ನಿಂತರು.

ಆಗ ದುರ್ಯೋಧನನು ಧರ್ಮಜನನ್ನು ನೋಡಿ 'ಕೂತು ನೋಡಿ ನಮ್ಮಿರ್ವರ ಗದಾಯುದ್ಧವನ್ನು!' ಎಂದನು. ಆ ಮಾತಿಗೊಪ್ಪಿ ಧರ್ಮರಾಜಾದಿ ಪಾಂಡವರು ನಾಲ್ವರು, ಶ್ರೀಕೃಷ್ಣಬಲರಾಮಯುಯುಧಾನರು, ಮಿಕ್ಕ ಪಾಂಚಾಲಸೃಂಜಯರು ದೂರ ಸರಿದು ಸುತ್ತುಗಟ್ಟಿ ಕೂತರು. ಮಧ್ಯದಲ್ಲಿ ಕೂತ ಬಲರಾಮಕೃಷ್ಣರು ಚಂದ್ರದ್ವಯದಂತೆ ಪ್ರಕಾಶಿಸಿದರು. ದುರ್ಯೋಧನವೃಕೋದರರು ಮೊದಲು ಕಟುವಚನಗಳಿಂದ ಪರಸ್ಪರವಾಗಿ ನಿಂದಿಸಿದರು. ಭೀಮಸೇನನನ್ನು ಕದನಕ್ಕೆಂದು ಕರೆದ ಕುರುರಾಜನ ಅಪಜಯವು ಅಪಶಕುನಗಳಿಂದ ಸೂಚಿತವಾಯಿತು. ಬಿರುಗಾಳಿಗೆದ್ದ ಧೂಳಿಯಿಂದ ಅಂಬರವು ತುಂಬಿತು. ದಿಕ್ಕುಗಳಲ್ಲಿ ಕತ್ತಲು ಕವಿಯಿತು. ಸಿಡಿಲು ಬಡಿಯಿತು. ಉಲ್ಕೆಗಳು ಉದುರಿದವು. ಭೂತಲವು ಕಂಪಿಸಿತು. ನರಿಗಳು ಮುಖವೆತ್ತಿ ರೋದಿಸಿದವು. ಬಾವಿಗಳಿಂದ ನೀರು ಉಕ್ಕಿ ಹರಿಯಿತು. ಶರೀರಗಳಿಲ್ಲದೆ ಶಬ್ದಗಳು ಕೇಳಬಂದವು.

ಆಗ ಭೀಮಸೇನನು ತನ್ನ ಅಣ್ಣನಾದ ಯುಧಿಷ್ಠಿರನ ಕಡೆ ತಿರುಗಿ, ಇಂತೆಂದನು: 'ಅಣ್ಣ! ಈ ಪಾಪಿಯು ನನ್ನನ್ನು ಗೆಲ್ಲಲಾರನು, ನಿಶ್ಶಂಕನಾಗಿರು! ಬಹುಕಾಲದ ಕ್ರೋಧಾಗ್ನಿಯನ್ನು ಕಾರಿ ಈ ವಿಷವೃಕ್ಷವನ್ನು ಸುಟ್ಟುಬಿಡುವೆನು. ಶ್ರೀಕೃಷ್ಣಾನುಗ್ರಹವಿದೆ ನನ್ನಲ್ಲಿ ಚಿಂತಿಸಬೇಡ! ನಿನ್ನ ಮನಸ್ಸಿನ ಚಿಂತಾಶಲ್ಯವನ್ನಿಂದು ಕಿತ್ತೊಗೆವೆನು. ಈ ಕುರುಕುಲಕಲಂಕನ ತೊಡೆಗಳನ್ನು ಮುರಿದು, ನಾನು ಸತ್ಯಪ್ರತಿಜ್ಞನಾಗುವೆನು. ಕೀರ್ತಿಜಯಮಾಲೆಗಳನ್ನು ನಿನ್ನ ಕೊರಳಿಗೆ ಹಾಕುವೆನು. ಈ ಪಾಪತಮನು ಮತ್ತೆ ಹಸ್ತಿನಾವತಿಯನ್ನು ಪ್ರವೇಶಿಸದಂತಾಗುವದು. ವಿಷದಾನ, ಸರ್ಪದಂಶನ, ಹ್ರದಶಯನ, ಗೃಹದಾಹ, ಮಾಯಾದ್ಯೂತ, ಸಭಾವಮಾನ, ರಾಜ್ಯಹರಣ, ವನವಾಸ, ಅಜ್ಞಾತವಾಸ ಮುಂತಾದ ವ್ಯಸನಗಳಿಗೆ ನಮ್ಮನ್ನು ಗುರಿಮಾಡಿದ ಕುರುಕುಲಾಧಮನು ಇನ್ನಿಲ್ಲವೆಂದು

ತಿಳಿ! ಅಬ್ಬ! ಇಂದು ಸತ್ಯದ ಋಣವು ತೀರುವುದು. ಇಂದಿವನ ಆಯುರ್ದಾಯದ ಕೊನೆ ಕಾಣಿಸಿತು. ಇವನಿನ್ನು ತನ್ನನ್ನು ಮುದ್ದಿಸಿ, ಹಾಳುಮಾಡಿದ ತಂದೆತಾಯಂದಿರನ್ನು ಕಾಣಲಾರನು. ಶಂತನುನಂತಹ ಮಹಾತ್ಮನ ವಂಶವನ್ನು ಕೆಡಿಸಲು ಪುಟ್ಟಿದ ಪಾಪಿಯ ಕೈಯಿಂದ ರಾಜ್ಯಲಲನೆಯು ನುಸುಳಿ ನಿನ್ನನ್ನು ಸೇರುವಳು. ಇವನ ಪತನವನ್ನಾಲಿಸಿ, ಇವನ ತಂದೆಗೆ ತಾನು ಮಾಡಿದ ಮಹಾಪರಾಧಗಳ ನೆನಪಾಗುವದು.'

ಇಂತು ನುಡಿದು ಗದಾದಂಡವನ್ನು ಪಿಡಿದು ತನಗೆದುರಾಗಿ ನಿಂತ ವೃಕೋದರನನ್ನು ಕಂಡು ದುರ್ಯೋಧನನು ಕಿಡಿಕಿಡಿಯಾದನು. ಅವನನ್ನು ಲೆಕ್ಕಿಸದೆ ಭೀಮಸೇನನು 'ಎಲವೋ ಪಾಪಿ! ನೆನೆ ನಿನ್ನ ದುಷ್ಕೃತಿಗಳನ್ನು, ನಿಮ್ಮಪ್ಪನ ದುಷ್ಟಬುದ್ಧಿಯಿಂದಲು, ನಿನ್ನ ಮಾವನ ಮಾಯೋಪಾಯಗಳಿಂದಲು, ನಿನ್ನ ಮಿತ್ರರ ಅವಿನೀತಿಯಿಂದಲು ನಡೆದ ಕುಲನಾಶದ ಪಾಪಕ್ಕೆ ನೀನೇ ಭಾಜನನಾಗಿರುವೆ! ದ್ರೌಪದಿಯ ಕಣ್ಣೀರಿಗೆ ಬದುಲಾಗಿ ನಿನ್ನ ರಕ್ತವನ್ನು ಹರಿಸುವೆನು. ದ್ಯೂತವಂಚನೆಗೈದೆ! ಶ್ರೀಕೃಷ್ಣನನ್ನು ಅವಮಾನಿಸಿದೆ! ನಿನ್ನಂತಹ ಪಾಪಿ ಮತ್ತಿಲ್ಲ. ನಿನ್ನಿಂದ ನಾವು ಪಟ್ಟ ಕಷ್ಟಗಳಿಗೆ ಕೊನೆಯಿಲ್ಲ. ಯಾವ ಅಪರಾಧ ಮಾಡಿದೆವೆಂದು ನಮ್ಮನ್ನಿಷ್ಟು ಪೀಡಿಸಿದೆ? ಬೊಗಳು! ಆ ಎಲ್ಲ ವ್ಯಸನಗಳಿತ್ತ ದ್ರೋಹದ ಶಿಕ್ಷೆಯನ್ನು ಇಂದು ಈ ಗದೆಯಲ್ಲಿಟ್ಟು ನಿನ್ನ ತೊಡೆಗಳನ್ನು ಕುಟ್ಟಿ ಕೆಡಹುವೆನು. ಪ್ರತಿಜ್ಞಾಹಾನಿಕಿಂತಲು ಗದಾಸಮರ ಸಮಯ ಭಂಗವು ಹಿರಿಯ ತಪ್ಪಲ್ಲ. ಪ್ರತಿಜ್ಞೆಯನ್ನು ಪಾಲಿಸಿ, ಸತ್ಯವನ್ನು ಸಂರಕ್ಷಿಸುವ ವೃಕೋದರನಿಗೆ ಧರ್ಮಹಾನಿಯೂ ಇಲ್ಲ ತಿಳಿ! ಧರ್ಮದ್ರೋಹಿಯಾದ ನಿನ್ನನ್ನೆಂತು ಕೊಂದರೂ ಪಾಪವಲ್ಲ. ಇಂದೆನ್ನ ಕೈಗೆ ಸಿಕ್ಕೆ! ಇನ್ನುಳಿಯಲಾರೆ! ಭೀಷ್ಮಪಿತಾಮಹನು ನಿನಗಾಗಿ ಕಾದಿ, ಶರತಲ್ಪದಿ ಮಲಗಿದನು. ದ್ರೋಣ ಕರ್ಣ ಶಲ್ಯರು ನಿನಗಾಗಿ ಮಡಿದರು. ವೈರಮೂಲನಾದ ಪಾಪಿ ಶಕುನಿಯು ನಿರ್ಮೂಲನಾದನು. ಕೃಷ್ಣಾಕ್ಲೇಶಕಾರಣನಾದ ಪ್ರಾತಿಕಾಮಿಯೂ ಸತ್ತನು. ಎಲ್ಲ ವೀರರು ಮೃತರಾಗಲು ನೀನೇ ಕಾರಣನಾದೆ! ಇಂದು ನಿನ್ನನ್ನು ಕೊಂದು ಭೂಭಾರವನ್ನಿಳಿಸುವೆನು.'

ಆ ಮಾತಿಗೆ ಸಿಟ್ಟಾಗಿ ದುರ್ಯೋಧನನು 'ನಿಲ್ಲಿಸು ನಿನ್ನ ಡಂಭವಚನಗಳನ್ನು! ಎಲವೋ ವೃಕೋದರ! ಇಂದು ನಿನ್ನ ಯುದ್ಧಶ್ರದ್ಧೆಯನ್ನು ಕಳೆದು, ನಿನ್ನನ್ನು ಯಮನ ಮನೆಗೆ ಕಳಿಸುವೆನು. ಸುಮ್ಮನೆ ಬೊಗಳಬೇಡ! ನಿನ್ನ ಮಾತುಗಳಿಗೆ ಹೆದರುವನಲ್ಲ ಕೌರವೇಶನು! ನಿನ್ನೊಡನೆ ಗದಾಯುದ್ಧವಾಡಬೇಕೆಂದು ಹಂಬಲಿಸಿದ ನನ್ನ ಕೋರಿಕೆ ಇಂದು ಈಡೇರಿತು. ಮಾಡಿದ ವಿದ್ಯಾಭ್ಯಾಸವು ಸಾರ್ಥಕವಾಗುವ ಕಾಲ ಬಂತು. ಬಾ! ಬಾ! ಮಾತಿನಿಂದ ತೋರಿದ್ದನ್ನು ಕೈಯಿಂದ ಪೂರ್ಣಮಾಡು!' ಎಂದು ಮೇಲೇರಿ ಬಂದನು. ಸೃಂಜಯ ಪಾಂಚಾಲರು ತಲ ಶಬ್ದಗಳಿಂದ ಅಪಹಸಿಸಿ, ಕುರುರಾಜನನ್ನು ರೇಗಿಸಿದರು. ಮಹಾತ್ಮನಾದ ಪಾಂಡವನು ಗದೆಯನ್ನೆತ್ತಿ ದುರ್ಯೋಧನನನ್ನು ಮುತ್ತಿದನು.

ಕೊಂಬುಗಳಿಂದ ತಿವಿದಾಡುವ ವೃಷಭಗಳಂತೆ, ಅವರು ಗದೆಗಳಿಂದ ಹೊಡೆದಾಡಿ, ಕಾದಿದರು. ಗದಾದಂಡಗಳು ಘಣಿಲ್! ಘಣಿಲ್! ಎಂದು ಮೊರಹಿದವು.

ಭೀಮಸೇನ ಕುರುರಾಜರ ಗದಾಯುದ್ಧವು ತುಮುಲವೂ, ರೋಮಾಂಚಕಾರಿಯೂ ಆಯಿತು. ಇಂದ್ರ ವಿರೋಚನರಂತೆ ಪರಸ್ಪರ ವಧಾಕಾಂಕ್ಷಿಗಳಾಗಿ ಅವರು ಗದೆಗಳಿಂದ ರಕ್ತಸಿಕ್ತಸರ್ವಾಂಗರಾದರು. ಪುಷ್ಪಿತ ಕಿಂಶುಕಗಳಂತೆ, ಗೈರಿಕಧಾತು ರಂಜಿತ ಪರ್ವತಗಳಂತೆ ಕಾಣಬರುವ ಭೀಮಸುಯೋಧನರು ಬಹುಕಾಲ ಹೋರಾಡಿ ಶ್ರಾಂತರಾದರು. ಸ್ವಲ್ಪಹೊತ್ತು ಸುಮ್ಮನಿದ್ದು ಅವರು ಮತ್ತೆ ಗದಾಯುದ್ಧದಲ್ಲಿ ತೊಡಗಿ, ಕಾದಿದರು; ಅವರ ದಾರುಣ ಯುದ್ಧವನ್ನು ಕಂಡು, ಸಿದ್ಧಚಾರಣ ಗಂಧರ್ವರು, ಯಾರು ಗೆಲ್ಲುವರೆಂದು ತಿಳಿಯಲಾರದೆ, ವಿಸ್ಮಿತರಾದರು.

ಸೋದರರೀರ್ವರು ಪರಸ್ಪರ ವಧೆಗೆ ತೊಡಗಿ, ಮರ್ಮಗಳನ್ನು ಮುಟ್ಟಿ ಹೊಡೆಯಬೇಕೆಂದು, ಸೆಣಸಿದರು. ಯಮದಂಡಸದೃಶವಾದ ದುರ್ಯೋಧನನ ಗದೆಯನ್ನು ಇಂದ್ರಾಶನಿಸಮವಾದ ಭೀಮಗದೆಯು ಬಡಿದಾಗ, ಕಿಡಿಗಳು ಹಾರಿದವು. ಅವುಗಳ ಶಬ್ದವು ಸಿಡಿಲಂತಿತ್ತು. ಮಂಡಲಾಕಾರವಾಗಿ ತಿರುಗುತ್ತಾ, ಸಮಯ ನೋಡಿ ಹೊಡೆಯುತ್ತಾ ಅವರು ಭಕ್ಷಾರ್ಥವಾಗಿ ಕಡಿದಾಡುವ ಭೀಕರ ಮಾರ್ಜಾಲಗಳಂತೆ ಗುರುಗುಟ್ಟುತ್ತಿದ್ದರು. ಪ್ರಯತ್ನಬಹುಲನಾಗಿ, ಶತ್ರುತಾಡನವನ್ನು ತಪ್ಪಿಸಿಕೊಂಡು ಭೀಮನನ್ನು ಹೊಡೆಯಲು ದುರ್ಯೋಧನನು ಹವಣಿಸುತ್ತಿದ್ದನು. ವಿಚಿತ್ರಮಂಡಲಾಕಾರನಾಗಿ ತಿರುಗುತ್ತಾ ಭೀಮಸೇನನು ಅವನ ಗದೆಯ ಪೆಟ್ಟಿಗೆ ಸಿಗದೆ, ಅನಾಯಾಸವಾಗಿ ಹೋರಾಡುತ್ತಿದ್ದನು.

ಗತ(ಶತ್ರುಸಮುಖನಾಗಿ ಬರುವುದು), ಪ್ರತ್ಯಾಗತ (ಬೇಗನೆ ಹಿಂದೆ ಹಿಂದಾಗಿ ನಡೆಯುವುದು), ಅಸ್ತ್ರಯಂತ್ರ (ಮರ್ಮಸ್ಥಾನದಿ ಹೊಡೆದು ಶತ್ರುವಿನನ್ನು ನೋಯಿಸುವುದು), ಸ್ಥಾನ (ಬಲಕ್ಕೆ ಸಾಗಿ ನಿಲ್ಲುವುದು), ಪರಿಧಾವನ (ಹೊಡೆತಕ್ಕೆ ಸಿಗದಂತೆ ವೇಗವಾಗಿ ಚಲಿಸುವುದು), ಅಭಿದ್ರವಣ (ಇದ್ದಕ್ಕಿದ್ದಂತೆ ಮೇಲೆ ಬೀಳುವುದು), ಅಕ್ಷೇಪ (ಮುಂದಾದ ಶತ್ರುವಿನನ್ನು ಸರಿದು ಮುಗ್ಗರಿಸುವಂತೆ ಮಾಡುವುದು), ಅವಸ್ಥಾನ (ದೃಢವಾಗಿ ನಿಲ್ಲುವುದು), ಸವಿಗ್ರಹ, (ಬಿದ್ದ ಶತ್ರುವು ಮೇಲಕ್ಕೆದ್ದ ಮೇಲೆ ಕಾದುವುದು), ಪರಾವರ್ತನ (ಹೊಡೆಯಲೆಂದು ಸುತ್ತುವುದು), ಸಂವರ್ತ (ಶತ್ರು ಗಮನನವನ್ನು ನಿರೋಧಿಸುವುದು), ಅವಪ್ಲುತ (ಬಾಗಿ ತಪ್ಪಿಸಿಕೊಂಬುವುದು), ಉಪಪ್ಲುತ (ಹಿಂದಕ್ಕೆ ಸರಿದು ತಪ್ಪಿಸಿಕೊಂಬುವುದು), ಉಪನ್ಯಸ್ತ (ಸಮೀಪಿಸಿ ಆಯುಧದಿಂದ ಹೊಡೆಯುವುದು), ಅಪನ್ಯಸ್ತ (ಹಿಂದಿರುಗಿ ಕೈಯೆತ್ತಿ ಹೊಡೆಯುವುದು) ಮುಂತಾದ ಗದಾಯುದ್ಧ ನೈಪುಣ್ಯಗಳನ್ನು ತಿಳಿದು ಕಾದುವ ಕೌರವ ವೀರರು ಕಾದು, ಕಾದು, ವಂಚಿಸಿ, ಬಾಗಿ, ಸರಿದು, ಹಿಂದಕ್ಕೆ ಸಾಗಿ, ಮೇಲೇರಿ ಕಡಿದಾಡಿದರು.

ಕೋರೆಗಳಿಂದ ತಿವಿದುಕೊಂಡ ಮದ್ದಾನೆಗಳಂತೆ, ಮೈ ಎಲ್ಲ ರಕ್ತಮಯವಾಗಿ ದುರ್ಯೋಧನ ಭೀಮಸೇನರು ಗದಾಯುದ್ಧವಾಡುತ್ತಿರಲು, ಸಾಯಂಕಾಲವಾಗುತ್ತ ಬಂತು. ದುರ್ಯೋಧನನು ಎಡಕ್ಕೆ ಜರುಗಿದರೆ, ಭೀಮನು ಬಲಕ್ಕೆ ತಿರುಗುತ್ತಿದ್ದನು. ಇದ್ದಕ್ಕಿದ್ದಂತೆ ದುರ್ಯೋಧನನು ಮುಂದಕ್ಕೆ ಹಾರಿ, ಭೀಮಸೇನನ ಪಾರ್ಶ್ವವನ್ನು ಗದೆಯಿಂದ ಹೊಡೆದನು. ಆ ಪ್ರಹಾರವನ್ನು ಲೆಕ್ಕಿಸದೆ, ಭೀಮಸೇನನು ತನ್ನ ಗದೆಯಿಂದ

ದುರ್ಯೋಧನನ ಭುಜಕ್ಕೆ ಹೊಡೆದನು. ಅವರ ಗದೆಗಳಿಂದ ಕಿಡಿಗಳು ಹಾರಿದವು, ಅವರ ಕವಚಗಳು ಮುರಿದವು, ನೋಡುವವರಿಗೆ ಭೀಮನಕಿಂತಲು ದುರ್ಯೋಧನನೇ ಪ್ರಬಲತರನೆಂದು ತೋರಿತು, ಶಿಕ್ಷಾವೈಭವದಿಂದ ಸಾಟಿಯಿಲ್ಲದ ಕುರುರಾಜನು ಸ್ವಾಭಾವಿಕ ಗದಾಸಮರ ಸಾರ್ವಭೌಮನಾದ ಸಮೀರಕುಮಾರನ ಸಾಟಿ ಅಲ್ಲದಿದ್ದರೂ, ಅವನ ತಾತ್ಕಾಲಿಕ ವಿಕ್ರಮವನ್ನು ಕಂಡು, ಸೃಂಜಯ ಪಾಂಚಾಲರು, ಬೆರಗಾಗಿ ನಿಂತರು.

ಅವರ ಗದೆಗಳ ಖಣಲ್ ಶಬ್ದಗಳು ನಿರಂತರವಾದವು. ಅವರ ಸಿಂಹ ಗರ್ಜನಗಳು ಭೀಕರವಾದವು. ಸ್ಥಿರನಾಗಿ ನಿಂತಿದ್ದ ವೃಕೋದರನನ್ನು ಕಂಡು ದುರ್ಯೋಧನನು ಕೆಂಗಣ್ಣನಾಗಿ, ಗದೆ ಎತ್ತಿ ಹೊಡೆದನು. ಮಹಾವೇಗದಿಂದ ಬರುವ ಆ ಗದೆಯನ್ನು ಭೀಮನು ತನ್ನ ಗದೆಯಿಂದ ಬಡಿದನು. ಎರಡು ವಜ್ರಾಯುಧಗಳು ಢೀ ಕೊಟ್ಟಂತೆ ಕಿಡಿಗಳು ಹಾರಿ, ಪರ್ಜನ್ಯಗರ್ಜಾನುಕಾರಿ ಭೀಷಣ ಘೋಷಣದಿಂದ ಅಲ್ಲಿದ್ದವರ ಕಿವಿಗಳು ಗಡಿಚಿಕ್ಕಿದವು. ವ್ಯರ್ಥಪ್ರಯತ್ನನಾದ ಕುರುರಾಜನು ಪ್ರಳಯಾಗ್ನಿಯಂತೆ ಉರಿದೆದ್ದು, ಗದೆಯನ್ನೆತ್ತಿ ಭೀಮನ ತಲೆಗೆ ಹೊಡೆದನು. ಪುಷ್ಪಹಾರದಂತೆ ಗದಾಪ್ರಹಾರವನ್ನು ಸ್ವೀಕರಿಸಿ ಚಲಿಸದೆ ನಿಂತ ವೃಕೋದರನನ್ನು ಕಂಡು, ದೇವಗಂಧರ್ವಚಾರಣರು ಅಂಬರದಿ ನಿಂತು, ಪ್ರಶಂಸಿಸಿದರು. ಸಮರಾಂಗಣದ ಸೈನಿಕರು ಸಿಂಹನಾದಗಳಿಂದ ಪಾಂಡವಸಿಂಹನನ್ನು ಹುರಿದುಂಬಿಸಿದರು.

ಭೀಮಸೇನನು ಹೇಮಪರಿಷ್ಕೃತವು ಗುರುಭಾರವು ಆದ ತನ್ನ ಗದೆಯನ್ನೆತ್ತಿ ಗಿಡಗದಂತೆ ಹಾರಿ, ದುರ್ಯೋಧನನ ತಲೆಗೆ ಗುರಿಯಿಟ್ಟು ಹೊಡೆದನು. ದುರ್ಯೋಧನನು ಲಾಘವದಿಂದ ಎಡಕ್ಕೆ ಹಾರಿ, ಆ ಪೆಟ್ಟನ್ನು ತಪ್ಪಿಸಿಕೊಂಡನು. ಭೀಮನ ಗದೆ ನೆಲದಿ ಬಿದ್ದು ಸಿಡಿಲಂತೆ ಭೂತಲವನ್ನು ಸೀಳಿತು. ಭೀಮಸೇನನು ಗದೆಯನ್ನೆತ್ತಿ ಮತ್ತೆ ಮುಂಬರುವಾಗ, ಕುರುರಾಜನು ಅವಕಾಶವನ್ನು ಕಂಡು ಭೀಮನ ಎದೆಗೆ ಹೊಡೆದನು. ಭೀಮಸೇನನು ಆಗ ಗದಾಪ್ರಹಾರದಿಂದ ಸ್ವಲ್ಪ ಸುಮ್ಮನೆ ನಿಂತು, ದಂಡತಾಡಿತಭುಜಂಗಮನಂತಾಗಿ, ರೋಷದಿಂದ ಮೇಲೇರಿ ಬಂದು, ದುರ್ಯೋಧನನ ಪಕ್ಕಕ್ಕೆ ಹೊಡೆದನು. ದುರ್ಯೋಧನನು ಮೂರ್ಛೆ ಬಂದಂತಾಗಿ ಮುಗ್ಗರಿಸಿ ಬಿದ್ದನು. ಅದನ್ನು ಕಂಡು ಪಾಂಚಾಲರು ಹರ್ಷದಿಂದ ಸಿಂಹನಾದ ಮಾಡಿದರು. ದುರ್ಯೋಧನನು ರೋಷಾಮರ್ಷವಶನಾಗಿ, ಮತ್ತೆ ಮೇಲಕ್ಕೆದ್ದು ಮಹಾಸರ್ಪದಂತೆ ಬುಸುಗುಟ್ಟುತ್ತಾ ಕಣ್ಣಿನಿಂದ ಸುಡುವನೆಂಬಂತೆ ನೋಡುತ್ತಾ ಭೀಮನನ್ನು ಮುತ್ತಿದನು. ಲಲಾಟದಲ್ಲಿ ಬಿದ್ದ ಕೌರವನ ಗದೆಯನ್ನು ಭೀಮನು ಸ್ವೀಕರಿಸಿ, ಅಚಲದಂತೆ ಅಚಲನಾಗಿ, ಪ್ರಭಿನ್ನಕುಂಜರರಾಜನಂತೆ ಶೋಭಿಸಿದನು. ವೀರಹಣನಾದ ಭೀಮಸೇನನ ಗದೆಯು ದುರ್ಯೋಧನನ ತಲೆಗೆ ತಗುಲಿದಾಗ, ಕುರುರಾಜನು ವಜ್ರಾಹತವಾದ ಪರ್ವತದಂತೆ, ನೆಲದಲ್ಲಿ ಬಿದ್ದನು.

ಸ್ವಲ್ಪ ಹೊತ್ತಿಗೆ ಮೇಲಕ್ಕೆದ್ದು ಸುಯೋಧನನು, ಸುತ್ತು ನೋಡಿ, ಗದೆಯನ್ನೆತ್ತಿ

ಹಗೆಯನ್ನೆಲ್ಲ ತುಂಬಿ, ಸಿಂಹನಾದ ಮಾಡಿ, ಭೀಮನ ಪಕ್ಕಕ್ಕೆ ಹೊಡೆದನು, ಭೀಮನು ನೆಲಕ್ಕೆ ಮುಗ್ಗರಿಸಿದನು. ನರೋತ್ತಮನು ಮತ್ತೆ ಮೇಲಕ್ಕೆದ್ದು ತುಟಿ ನೆಕ್ಕಿ, ಹಲ್ಲು ಕಡಿದು, ಭೀಮಗದೆಯನ್ನೆತ್ತಿ ಮುಂದೆ ಸಾಗಿದನು.

ಆಗ ಅರ್ಜುನನು 'ವಾಸುದೇವ ! ಏನಿದು? ಭೀಮಸೇನನಿಂದು ಸಾಕಷ್ಟು ವಿಕ್ರಮಿಸದಿರಲು ಕಾರಣವೇನು ? ' ಎಂದು ಕೇಳಿದನು. ಶ್ರೀಕೃಷ್ಣನಿಂತೆಂದನು - 'ಅರ್ಜುನ ! ಭಯಪಡಬೇಡ ! ಕಾಗೆಗಳು ಬೇಗಬೇಗ ಹಾರಿ ಬೇಗ ಬೀಳುವವು. ಹಂಸಗಳು ಮೆಲ್ಲಗೆ ಹಾರುತ್ತಾ ಆಮೇಲೆ ಮಹಾವೇಗದಿಂದ ಹೋಗುವವು. ಭೀಮಸೇನನು ಬಲವತ್ತರನು, ವ್ಯಾಜದಿಂದ ಹೊಡೆದು ಆತನು ಸುಯೋಧನನನ್ನು ಕೊಲ್ಲುವನು. ವ್ಯಾಜೋಪಯೋಗವಿಲ್ಲದಿರೆ, ಪ್ರತಿಜ್ಞಾಭಂಗವಾಗಿ ಸತ್ಯಕ್ಕೆ ಅವನು ದೂರನಾಗಬೇಕಾದೀತು ! ಮಾಯಗಾರರಾದ ದೈತ್ಯರನ್ನು ಮಾಯೆಯಿಂದಲ್ಲದೆ ನ್ಯಾಯದಿಂದ ಕೊಲ್ಲಲಾಗದು. ವೃತ್ರವಿರೋಚನರು ಮಾಯೆಯಿಂದಲೇ ಸಂಹೃತರಾದರು. ಮಾಯಾವಿಶ್ರೇಷ್ಠನಾದ ದುಷ್ಟ ದುರ್ಯೋಧನನನ್ನು ಮಾಯೆಯಿಂದಲೇ ಕೊಲ್ಲಲಿ ವೃಕೋದರನು. ಅದೆಂದಿಗೂ ಅಧರ್ಮವಾಗದು. ದುಷ್ಟಸಾಹಸಿಗಳನ್ನು ಜೀವಿತ ನಿರಾಶರನ್ನು ಎದುರಿಸಿ ಗೆಲ್ಲುವದು ಶಕ್ರನಿಗೂ ಸುಲಭವಲ್ಲ. ದುರ್ಯೋಧನನು ಎಲ್ಲ ಬಂಧು ಮಿತ್ರರನ್ನು ಕಳೆದುಕೊಂಡು, ಜೀವಿತದಲ್ಲಿ ಜಿಗುಪ್ಸಿತನಾಗಿ, ಸಾಹಸದಿಂದ ಕಡಿದಾಡುತ್ತಿರುವನು. ಆದರೂ ಅವನು ಭೀಮಸೇನನಿಗೆ ಎಣೆಯಲ್ಲ'

ಅರ್ಜುನ ಕೇಶವನ ವಚನವನ್ನಾಲಿಸಿ, ಭೀಮಸೇನನು ತನ್ನ ಕಡೆ ನೋಡುವಾಗ ತನ್ನ ತೊಡೆಯನ್ನು ತಟ್ಟಿ ಪ್ರತಿಜ್ಞೆಯು ಅವಶ್ಯವಾಗಿ ಪಾಲನೀಯವೆಂದು ಸೂಚಿಸಿದನು. ಶ್ರೀಕೃಷ್ಣನೂ ಅಭ್ಯನುಜ್ಞೆಯನ್ನಿತ್ತನು. ಭೀಮಸೇನನು ಕೃತನಿಶ್ಚಯನಾಗಿ, ವಿಚಿತ್ರವಾಗಿ ಮಂಡಲಾಕಾರದಿಂದ ತಿರುಗುತ್ತಾ ವಿಕ್ರಮಿಸಿದನು. ಪಾಂಡವನ, ಸವ್ಯಾಪಸವ್ಯ ಸಂಚಾರಗಳಿಂದ ಕುರುರಾಜನು ದಿಗ್ಭ್ರಮೆಗೊಂಡನು. ಎಲ್ಲಿಂದ ಎಂತು ಹೊಡೆಯುವನೋ ಎಂಬ ಶಂಕೆಯಿಂದ ಅವನು ಮುಂದೆ ಸಾಗಿ, ಬಾಗಿ ಭೀಮನನ್ನು ಹೊಡೆಯಲೆಣಿಸಿದನು. ಅವನ ಇಂಗಿತವನ್ನರಿತು ವೃಕೋದರನು ಗದೆಯನ್ನೆತ್ತಿ ಬೀಸಿದನು. ಕುರುರಾಜನು ಹಠಾತ್ತಾಗಿ, ಹಿಂದಕ್ಕೆ ಸರಿದು, ಗದೆಯ ಆಘಾತದಿಂದ ಪಾರಾದನು. ದುರ್ಯೋಧನನು ಸಮಯವನ್ನು ಸಾಧಿಸಿ ಗದೆಯಿಂದ ಭೀಮನನ್ನು ಭುಜದಲ್ಲಿ ಹೊಡೆದನು. ವಜ್ರಪಾತಸದೃಶವಾದ ಗದಾಪ್ರಹಾರದಿಂದ ಭೀಮನು ಸುಮ್ಮನೆ ನಿಂತಾಗ, ಮುಂಬರಲೆಂದು ಸುಯೋಧನನು ಸುಮ್ಮನಿದ್ದನು. ಆಗ ಭೀಮಸೇನನು ವೇಗದಿಂದ ಧಾವಿಸಿ ಗದೆಯನ್ನೆತ್ತಿ ಬರುವುದನ್ನು ನೋಡಿ, ಸುಯೋಧನನು ಅವನನ್ನು ವಂಚಿಸಿ, ತಪ್ಪಿಸಿಕೊಳ್ಳಲೆಂದು, ಮೇಲಕ್ಕೆ ಹಾರಿದನು, ಮತ್ತು ತಲೆಯನ್ನು ನೆಲದಲ್ಲಿಟ್ಟು ತೊಡೆಗಳನ್ನು ಮೇಲೆ ಮಾಡಿದನು. ಅವನ ವಂಚನೆಯನ್ನರಿತು, ಭೀಮಸೇನನು ವೇಗದಿಂದ ಗದೆಯನ್ನು ಬೀಸಿ, ಅವನ ಎರಡು ತೊಡೆಗಳನ್ನೂ ಮುರಿದನು.

ಭೀಮಸೇನನ ಗದೆಯು ಸಕ್ಥಿಪ್ರದೇಶ ಅಂದರೆ ಕಟಿಸಂಧಿಗಳಲ್ಲಿ ಬಡಿದುದರಿಂದ

ದುರ್ಯೋಧನನ ತೊಡೆಗಳು ಮುರಿದು, ಭೀಮಸೇನನ ಪ್ರತಿಜ್ಞೆಯೂ ನೆರವೇರಿತು; ಸಕ್ಥಿ ಅಂದರೆ ನಾಭಿಯ ಸಮ ಪ್ರದೇಶವಾದುದರಿಂದ ಗದಾಯುದ್ಧ ಮರ್ಯಾದೆಯೂ ಪರಿಪಾಲಿತವಾಯಿತು. ನಾಭಿಯ ಕೆಳಗೆ ಹೊಡೆಯಬಾರದೆಂದು ಗದಾಯುದ್ಧ ನಿಯಮವಿದೆ. ಪ್ರತಿಜ್ಞೆಯೂ ರಕ್ಷಿತವಾಗಬೇಕಲ್ಲವೇ ? ತಲೆಕೆಳಗಾಗಿರುವ ವಂಚಕನ ನಾಭಿಗೆ ಮೇಲ್ಭಾಗವೇ ಆಯಿತು. ಸಕ್ಥಿ ಮತ್ತು ಊರುದಂಡಗಳು ಮತ್ತು ಸಕ್ಥಿಯು ನಾಭಿಗೆ ಸಮಪ್ರದೇಶವಾದುದರಿಂದ ಭೀಮಸೇನನಿಗೆ ಗದಾಯುದ್ಧ ನಿಯಮವನ್ನು ಉಲ್ಲಂಘಿಸಿದ ಪಾಪವಿಲ್ಲ. ಪ್ರತಿಜ್ಞಾಪಾಲನ ತತ್ಪರನಾದ ವೃಕೋದರನು ಸಕ್ಥಿವ್ಯಾಜದಿಂದ ದುರ್ಯೋಧನನ ತೊಡೆಗಳನ್ನೂ ಮುರಿದು ಸತ್ಯ ಧರ್ಮಗಳನ್ನೆರಡನ್ನೂ ಉಳಿಸಿಕೊಂಡನು.

ದ್ರೌಪದೀದೇವಿಯನ್ನು ನೋಡಿ, ತೊಡೆ ತೋರಿಸಿದುದರಿಂದ ಒಂದು ತೊಡೆಯನ್ನೂ, ವನವಾಸಕ್ಕಾಗಿ ಹೋಗುವಾಗ ನಗೆಯಾಡಿದುದಕ್ಕಾಗಿ ಇನ್ನೊಂದು ತೊಡೆಯನ್ನೂ ಮುರಿದು, ಭೀಮಸೇನನು ಸತ್ಯಪ್ರತಿಜ್ಞನಾದನು. ಆಗ ಇಂದ್ರಾದಿ ದೇವತೆಗಳು ಆಕಾಶದಿಂದ ಪುಷ್ಪವೃಷ್ಟಿಯನ್ನು ಸುರಿಸಿ, ದುಷ್ಟಸಂಹಾರಕನಾದ ಭೀಮಸೇನನನ್ನು ಪ್ರಶಂಸಿಸಿದರು. ರಾಕ್ಷಸದಾನವರು ರಕ್ತವೃಷ್ಟಿಯನ್ನು ಸುರಿಸಿ ದುರ್ಯೋಧನನ ಪತನಕ್ಕಾಗಿ ಶೋಕಿಸಿದರು. ದುರ್ಯೋಧನನು ಭಗ್ನೋರುದಂಡನಾಗಿ, ಬುಡಕಡಿದ ಸಾಲದಂತೆ ನೆಲಕ್ಕುರುಳಿದನು. ಪಕ್ಷಿಮೃಗ ಭೂತಗಳು ಭಯಂಕರವಾಗಿ ಕಿರುಚಿಕೊಂಡವು. ಭೂತಲವು ಕಂಪಿಸಿತು. ಉಲ್ಕೆಗಳುದುರಿದವು.

ದುರ್ಯೋಧನ ಪತನವನ್ನು ಕಂಡು, ಪಾಂಚಾಲಸೃಂಜಯರು ಹರ್ಷಧ್ವಾನಗಳನ್ನು ಮಾಡಿದರು. ಭೇರೀ, ದುಂದುಭಿ, ಶಂಖ, ಕಾಹಳಗಳ ವಿವಿಧಧ್ವಾನಗಳು ದಿಕ್ಕುವಿದಿಕ್ಕುಗಳಲ್ಲಿ ವ್ಯಾಪಿಸಿದವು. ದೇವದಾನವರು ಭೀಮ ಸುಯೋಧನರನ್ನು ಪ್ರಶಂಸಿಸುತ್ತಾ, ತಂತಮ್ಮ ನೆಲೆಗಳನ್ನು ಸೇರಿದರು. ಉನ್ಮತ್ತಮಾತಂಗವು ಸಿಂಹದಿಂದ ಸೀಳಲ್ಪಟ್ಟು ಬಿದ್ದಂತೆ, ನೆಲದಿ ಬಿದ್ದು ನರಳುವ ದುರ್ಯೋಧನನನ್ನೂ ವಿಜಯವಂತನಾದ ಭೀಮಸೇನನನ್ನೂ ಕಂಡು, ಪಾಂಡವರು ಪ್ರಹರ್ಷಿತರಾದರು. ಶ್ರೀಕೃಷ್ಣನೂ ಭೀಮಸೇನನನ್ನು ಕರೆದಪ್ಪಿ, ಅಭಿನಂದಿಸಿದನು.

## ೬. ಧರ್ಮವಿಜಯ

ವೈಶಂಪಾಯನನು ಪೇಳಿದನು:

'ರಾಜನ್ ! ಮಹಾಶಾಲದಂತೆ ಬಿದ್ದಿರುವ ದುರ್ಯೋಧನನನ್ನು ಕಂಡು ಪ್ರಹರ್ಷಿತಾಂತರಂಗರಾದ ಪಾಂಚಾಲ ಸೃಂಜಯರು ಜಯನಿನಾದಗಳನ್ನು ಮಾಡಿ, ಕುಣಿದಾಡಿದರು. ಆಗ ಭೀಮಸೇನನು ಇಂತು ನುಡಿದನು: "ಕೌರವಕುಲಾಧಮ! ಪೂರ್ವದಲ್ಲಿ ನಮ್ಮನ್ನು ಕಂಡು "ಗೌಃ ಗೌಃ" ಎಂದೊದರಿದ ಅವಹಾಸದ ಫಲವನ್ನು ಅನುಭವಿಸು !" ಎಂದು ಭೀಮಸೇನನು ತನ್ನ ಎಡಗಾಲಿನಿಂದ ದುರ್ಯೋಧನನ ತಲೆಗೆ ಒದ್ದನು. ಕ್ರೋಧಸಂರಕ್ತಲೋಚನನಾಗಿ ಭೀಮಸೇನನು ಮತ್ತೆ ಅವನಿಯಲ್ಲಿ

ಹೊರಳಾಡುವ ಅವನೀಶನಿಗೆ ಇಂತೆಂದನು: 'ಹಿಂದೆ ಗೌಃ ಗೌಃ ಎಂದು ನಗುತ್ತಾ ಕುಣಿದಾಡಿದೆ! ಇಂದು ನಿನ್ನನ್ನು ಕೊಂದು ನಾವೂ ಕುಣಿದಾಡುವೆವು. ಮನೆಗೆ ಬೆಂಕಿ ಇಟ್ಟು ಅನ್ನದಲ್ಲಿ ವಿಷವಿಟ್ಟು ಕೊಲ್ಲುವವರಲ್ಲ ಪಾಂಡವರು. ಸರ್ಪಗಳನ್ನು ಮೇಲೆ ಹರಿಯಬಿಡುವವರಲ್ಲ. ಹೊಂಡದಲ್ಲಿ ಕಟ್ಟಿ ನೂಕುವವರಲ್ಲ. ಜೂಜಾಡಿ ರಾಜ್ಯವನ್ನು ಕಸಿಯುವ ಮೋಸಗಾರರಲ್ಲ ನಾವು ನಿನ್ನಂತೆ ವಂಚಕರಲ್ಲ. ಪರಾಕ್ರಮದಿಂದ ವಿಜೃಂಭಿಸಿ, ಶತ್ರುನಾಶವನ್ನು ಸಂಪಾದಿಸಿರುವೆವು. ಪಾಪತಮನಾದ ನಿನ್ನ ಒಂದೊಂದಪರಾಧಕ್ಕೆ ಒಂದೊಂದು ಸಲ ವಧಿಸಬೇಕು.

ಕೇಶವ ! ಅರ್ಜುನ ! ಧರ್ಮರಾಜ ! ಯಮಳರೇ ! ಧೃಷ್ಟದ್ಯುಮ್ನ ! ಯುಯುಧಾನರೇ ! ಕೇಳಿರಿ ! ರಜಸ್ವಲೆಯಾಗಿದ್ದ ರಮಣೀಮಣಿಯನ್ನು ರಾಜಸಭೆಗೆ ಸೆಳೆತಂದ ಧೃತರಾಷ್ಟ್ರಪುತ್ರನನ್ನು ಇಂದು ಕೊಂದವನು ನಾನಲ್ಲ ! ಅವನ ಪಾಪವೇ ಅವನನ್ನು ಕೊಂದಿತು. ಯಾಜ್ಞಸೇನಿಯ ತಪಸ್ಸೇ ಅವನ ಆಯುವನ್ನು ಕೊನೆಗೊಳಿಸಿದೆ. ನಮ್ಮನ್ನು ಷಂಡತಿಲರೆಂದು ನಿಂದಿಸಿದ ದುಷ್ಟರು ಸಪುತ್ರಮಿತ್ರಬಾಂಧವರಾಗಿ ಸಮೂಲನಾಶವನ್ನೈದಿರುವರು. ನಮಗೆ ಸ್ವರ್ಗನರಕಗಳ ಆಶೆಅಂಜಿಕೆಗಳಿಲ್ಲ. ಇನ್ನೊಂದು ಮಹಾಪರಾಧವನ್ನು ಮಾಡಿರುವ ಈ ಪಾಪಿಗೆ ಇದೇ ತಕ್ಕ ಶಿಕ್ಷೆ!' ಎಂದು ವೃಕೋದರನು ಮತ್ತೆ ಕುರುರಾಜನ ಶಿರವನ್ನು ಕಾಲಿನಿಂದ ಪರಾಮರ್ಶಿಸಿದನು. ಮತ್ತು ಋಷಭಸೂಕ್ತವನ್ನು ನೆನೆದು, ಶ್ರೀಹರಿಯ ಚರಣಕಮಲಗಳಿಗೆ ವಂದಿಸಿ, ಆನಂದದಿಂದ ಕುಣಿದಾಡಿದನು.

ಭೀಮಸೇನನು ದುರ್ಯೋಧನನೇ ಮೊದಲಾದ ಹರಿಗುರುದ್ವೇಷಿಗಳ ಪುಣ್ಯಗಳನ್ನೂ ಪೂರ್ಣವಾಗಿ ಅವರಿಂದ ಸೆಳೆದು, ಮಿಥ್ಯಾಜ್ಞಾನಿಗಳನ್ನು ಹರಿದ್ವೇಷಿಗಳನ್ನು ಅಂಧಂತಮಸ್ಸಿನಲ್ಲಿ ಕೆಡಹಿದನು. ದುರ್ಯೋಧನನ ತಲೆಯನ್ನಾಕ್ರಮಿಸಿ ಸರ್ವ ದುಷ್ಟರನ್ನೂ ಪಾದತಾಡನದಿಂದ ತಿರಸ್ಕರಿಸಿದನು.

## ಋಷಭಸೂಕ್ತಾರ್ಥ

"ಪಾಂಡುರಾಜ ಧೃತರಾಷ್ಟ್ರರ ಮಕ್ಕಳಾದುದರಿಂದ ಅರ್ಧರಾಜ್ಯಕ್ಕೆ ಅರ್ಹರಾದುದರಿಂದ ಸಮಾನರೆನಿಸಿದ ವೈರಿಗಳ ಮಧ್ಯದಲ್ಲಿಯು, ಕುಂತೀ ಗಾಂಧಾರೀಸುತರಾದುದರಿಂದ ಸಪತ್ನರೆನಿಸಿದ ವೈರಿಗಳಲ್ಲಿಯು, ಶ್ರೇಷ್ಠನಾದ ನನ್ನನ್ನು ಶತ್ರುಸಂಹಾರಕನನ್ನಾಗಿ ಮಾಡು! ಸ್ವಾಭಾವಿಕವಾಗಿ ದೇವಾಸುರ ವಿಭಾಗದವರಾದ ಪಾಂಡವ ಕೌರವರಿಗೆ ವೈರವಿದ್ದೇ ಇದೆ. ಅಸುರರಾದ ಕೌರವರಿತ್ತ ಕಷ್ಟಗಳನ್ನು ಶ್ರೀಹರಿಸಂಕಲ್ಪವೆಂದು ಅನುಭವಿಸಿ ಸಹಿಸಿದ ದೇವತೆಗಳಾದ ಪಾಂಡವರಲ್ಲಿ ನನ್ನನ್ನು ವಿಶೇಷ ಪ್ರಕಾಶಯುತನನ್ನಾಗಿ ಮಾಡು! ವಿದ್ಯಾದೇವತೆಗಳು ವಿದ್ಯಾಪತಿಯಾದ ನನ್ನನ್ನು ಭಾವಿ ಬ್ರಹ್ಮನೆಂದು ತಿಳಿದು ವಂದಿಸಿ, ಸೇವಿಸುವಂತೆ ಮಾಡು ! ಶ್ರೀಹರೇ! ನಾನು ನಿನ್ನ ಪರಮಾನುಗ್ರಹದಿಂದ ಇಂದ್ರನಂತೆಯೇ ನಾಶರಹಿತನು, ಕ್ಷತರಹಿತನು, ವೈರಿನಾಶಕನು ಆಗಿರುವೆನು. ಈ ನಿನ್ನ ದ್ವೇಷಿಗಳು ನನ್ನ ಪಾದದ ಕೆಳಗೆ ಬಿದ್ದಿರಲಿ ! ನನ್ನ ಪಾದಗಳ

ಕೆಳಗೇ ಪರಸೈನಿಕರನ್ನಂತೆ, ನನ್ನ ಸೈನಿಕರನ್ನೂ ಧನುಷ್ಕೋಟಿಗಳಂತೆ ಬಿಗಿದಿಡಲ್ಪಟ್ಟಿರುವರೇನೋ ಎಂಬಂತೆ, ಬಂಧಿಸಿ ಇಟ್ಟಿರುವೆನು. ಹೇ ವಿದ್ಯಾಪತಿಯಾದ ವೇದವ್ಯಾಸದೇವನೇ ! ಇವರೆಲ್ಲರು ನನ್ನ ಮಾತಿಗೆ ಬದಲು ಕೊಡಲಾರದವರಾಗಿ, ವಾದದಲ್ಲಿ ಸೋತುಹೋಗಲಿ ! ಏಕೆಂದರೆ ಅವರು ಅಪ್ರಾಮಾಣಿಕರು ಮತ್ತು ಮಿಥ್ಯಾವಾದಿಗಳಾಗಿರುವವರು.

ನಾನು ಸಕಲ ಜಗಜ್ಜನ್ಮಾದಿಕಾರಣನು, ಸಕಲ ಜೀವಧಾರಕನು ಆದ ನಾರಾಯಣನ ಆಜ್ಞೆಯಿಂದ ಅವತರಿಸಿ, ಇತರಾಜೇಯರಾದ ದುಷ್ಟವಾದಿಗಳನ್ನೆಲ್ಲ ಜಯಿಸಿರುವೆನು. ಮುಂದೆಯೂ ಜಯಿಸುವೆನು. ಅವರ ಪುಣ್ಯಕರ್ಮಗಳನ್ನೂ, ವಿದ್ಯಾಫಲಗಳನ್ನೂ ಪೂರ್ಣವಾಗಿ ಸೆಳೆದು, ಅವರನ್ನು ಅಧೋಲೋಕಗಳಲ್ಲಿ ಕೆಡಹುವೆನು. ಅಂತಹ ದೈವದ್ರೋಹಿಗಳ ಕಾಮ್ಯಕರ್ಮ ಫಲವಾದ ಸ್ವರ್ಗಾದಿ ಪುಣ್ಯ ಲೋಕಗಳು ಅವರಿಗೆ ಸಿಗದಂತೆ ಮಾಡುವೆನು. ಅಂತಹವರು ಮಾಡಿದ ಪುಣ್ಯವೆಲ್ಲವೂ ನನ್ನನ್ನೇ ಸೇರುವುದರಿಂದ ಸರ್ವಜೀವನ ನಾಯಕನೆನಿಸಿ, ನಾನು ಉತ್ತಮನಾಗಿರುವೆನು. ದುಷ್ಟರಾದ ಕಲ್ಯಾದಿ ಸರ್ವತಾಮಸಜೀವರ ತಲೆಗಳನ್ನು ತುಳಿದು ವಿಕ್ರಮಿಸಿ, ಲೋಕತ್ರಯದಲ್ಲಿ ತ್ರಿವಿಕ್ರಮನ ಕೀರ್ತಿಯನ್ನು ಸಾರುವೆನು, ನೀರಿನ ಕೆಳಗೆ ಕೆಸರಿನಲ್ಲಿ ಬಿದ್ದಿರುವ ಮಂಡೂಕಗಳಂತೆ, ನೀವು ದುಃಖಾತಿರೇಕದಿಂದ ಆರ್ತನಾದ ಮಾಡಿರಿ ! ಸುಜನರಿಗೆ ಸದ್ಗತಿಯು ಎಂತೋ, ಅಂತೇ ನಿಮ್ಮಂತಹ ತಮೋ ಯೋಗ್ಯರಿಗೆ ತಮಸ್ಸೇ ನಿಶ್ಚಿತವಾಗಿದೆ.

ದುರ್ಯೋಧನ ! ಶ್ರೀಕೃಷ್ಣನನ್ನು ಬಂಧಿಸಲು ಹವಣಿಸಿದೆ ! ಶ್ರೀಕೃಷ್ಣನನ್ನು ಪಣವಾಗಿಡೆಂದು ಬೊಗಳಿದೆ ! ಆದುದರಿಂದ ನಿನ್ನಂತಹ ಪಾಪಿ ಇಲ್ಲ ! ಅಂತೆಯೇ ನಿನ್ನ ತಲೆಯನ್ನೊದ್ದು ನನ್ನ ತೃತೀಯ ಪ್ರತಿಜ್ಞೆಯನ್ನೂ ಪೂರ್ಣವಾಗಿ ಮಾಡಿರುವೆನು.

ಇಂತು ನುಡಿದು ಕುಣಿದಾಡುವ ಭೀಮಸೇನನನ್ನು ತಡೆದು, ಮೆಚ್ಚದೆ, ಧರ್ಮಜನಿಂತೆಂದನು: 'ಭೀಮಸೇನ ! ಮುಗಿಯಿತು ವೈರ ! ತೀರಿತು ಪ್ರತಿಜ್ಞೆ, ವೀರನಾಗಿ ವಿಕ್ರಮಿಸಿ, ಧೀರನಾಗಿ ಪ್ರತಿಜ್ಞೆ ಪೂರೈಸಿ, ನೀಚನಾಗಿ ತುಳಿದಾಡಬೇಡ ! ಧರ್ಮಾತಿಕ್ರಮಣವಿಂದು ನಿನಗುಚಿತವಲ್ಲ. ಏಕದಶಾ ಚಮೂನಾಥನು, ಕೌರವ ಕುಲಜನು ಆದ ದುರ್ಯೋಧನನನ್ನು ಪಾದದಿಂದ ಮುಟ್ಟಬಹುದೇ ? ಬಂಧುಗಳಿಲ್ಲ; ಮಿತ್ರರು ಸತ್ತರು ; ರಾಜ್ಯವು ಕೈಬಿಟ್ಟಿತು ; ತೊಡೆ ಮುರಿಯಿತು ; ಶೋಚ್ಯಾವಸ್ಥೆಯಲ್ಲಿರುವ ಕುರುರಾಜನನ್ನು ಅಷ್ಟು ಅವಗಣಿಸಬೇಡ ! ಮಹಾಧಾರ್ಮಿಕನೆಂದು ಖ್ಯಾತಿಪೆತ್ತ ಭೀಮಸೇನನಿಗಿಂದು ಇಂತಹ ವಿಷಮಬುದ್ಧಿ ಏಕೆ ಬಂತು ? ' ಎಂದು ಧರ್ಮಜನು ಕಣ್ಣೀರಿಡುತ್ತಾ ನಿಂತನು. 'ದುರ್ಯೋಧನ ! ಪೂರ್ವಕೃತವಾದ ಕರ್ಮಫಲವನ್ನು ಉಣ್ಣದಿರಲಾಗದು. ಅಣ್ಣ ತಮ್ಮಂದಿರಾದ ನಾವು ಪರಸ್ಪರ ವಧಾತುರರಾಗಿ ರಣಕಣಕ್ಕಿಳಿದೆವೆಂದರೆ, ದೈವವು ದುರ್ಲಂಘ್ಯವೆಂದು ತೋರುತ್ತಿದೆ. ಇಷ್ಟು ಅನರ್ಥವನ್ನು ನೀನಾಗಿ ತಂದುಕೊಂಡೆ ! ' ಎಂದ ಧರ್ಮರಾಜನನ್ನು ದಂಡಿಸುತ್ತಾ ಶ್ರೀಕೃಷ್ಣನಿಂತೆಂದನು: 'ರಾಜನ್ ! ನಿನ್ನ ಅಭಿಪ್ರಾಯವೇನೋ ನೀನೇ ಅರಿಯೆ ! ಭೀಮಸೇನನನ್ನು

ದುರ್ಯೋಧನನು ಸಂಹರಿಸಿದ್ದರೆ, ನಿನಗೆ ಸಂತಸವಾಗುತ್ತಿತ್ತೇ ಹೇಳು! ಅಥವಾ ಭೀಮಸೇನನ ಪ್ರತಿಜ್ಞೆ ನೆರವೇರದೆ, ಅವನು ಅಸತ್ಯವಚನನಾಗಬೇಕಿತ್ತೇ ? ಮೂರ್ಖನಂತೆ ಮಾತಾಡಬೇಡ! ಭೀಮಸೇನನ ವಿಜಯವನ್ನು ನಿನ್ನ ವಿಜಯವೆಂದು ಕಾಣದೆ, ದುಷ್ಟ ಶ್ರೇಷ್ಠನ ವಧೆಗೆ ಸಂತೋಷಪಡದೆ, ಅವಿವೇಕಿಯಂತೆ ನಿಂದಿಸುವ ನಿನ್ನನ್ನು ಕಂಡು, ನನಗೆ ಆಶ್ಚರ್ಯ ಜುಗುಪ್ಸೆಗಳು ಹುಟ್ಟಬರುತ್ತಿವೆ.'

ಆಗ ಬಲದೇವನು ಹಲವನ್ನೆತ್ತಿ ಮೇಲಕ್ಕೆದ್ದು ನಿಂತು, 'ಭೀಮಸೇನ! ಧಿಕ್ಕಾರವಿರಲಿ ನಿನಗೆ ! ನಾಭಿಯ ಕೆಳಗೆ ಹೊಡೆದು ಗದಾಯುದ್ಧ ಧರ್ಮವನ್ನು ಕೆಡಿಸಿದ ನಿನ್ನ ಸ್ವೇಚ್ಛಾವೃತ್ತಿಯನ್ನು ಈ ಹಲಾಯುಧನು ಸಹಿಸನು' ಎಂದು, ಭೀಮನ ಮೇಲೆರಗಿದನು. ಶ್ವೇತಗಿರಿಶೃಂಗದಂತೆ ಶೋಭಿಸುವ ಬಲರಾಮನ ಹಲಕ್ಕೆ ಹೆದರದೆ, ಭೀಮಸೇನನು ಗದೆಯನ್ನೆತ್ತಿ ಮುಂದೆ ಬಂದನು. ಅದನ್ನು ಕಂಡು, ಶ್ರೀಕೃಷ್ಣನು, 'ಬಲದೇವ ! ತಡೆ !' ಎಂದು ಆತನ ಕೈಗಳನ್ನು ಹಿಡಿದು ನಿಲ್ಲಿಸಿ, ಇಂತೆಂದನು:

'ಅಣ್ಣ ! ಆತ್ಮವೃದ್ಧಿ ಆತ್ಮಮಿತ್ರವೃದ್ಧಿ ಆತ್ಮಮಿತ್ರಮಿತ್ರವೃದ್ಧಿಗಳಂತೆ, ಶತ್ರುಕ್ಷಯ, ಶತ್ರುಮಿತ್ರಕ್ಷಯ, ಶತ್ರುಮಿತ್ರಮಿತ್ರಕ್ಷಯಗಳೂ ಶ್ರೇಯಸ್ಸಾಧಕಗಳೆನಿಸುವವು. ಆತ್ಮಮಿತ್ರಕ್ಷಯವು ಆತ್ಮಕ್ಷಯದಂತೆ ಶ್ರೇಯೋಬಾಧಕವಾಗಿದೆ. ನಮ್ಮ ಮಿತ್ರರು ಪಾಂಡವರು. ಶುದ್ಧಪೌರುಷರಾದ ಪಾಂಡವರಿಗೆ, ಅದರಲ್ಲಿಯೂ ಭೀಮಸೇನನಿಗೆ ಅಧರ್ಮದ ಸೋಂಕಿಲ್ಲ. ಶುದ್ಧಭಾಗವತ ಧರ್ಮನಿರತನಾದ ವೃಕೋದರನು ಅನ್ಯಾಯ ಯುದ್ಧವನ್ನಾಡಿಲ್ಲ. ಪಾಂಡವರು ಪಾಪಿ ದುರ್ಯೋಧನನಿಂದ ಪೊಂದಿದ ಕಷ್ಟಗಳು ಎಂದೂ ಯಾರೂ ಯಾರಿಗೂ ಕೊಟ್ಟಂತಹವುಗಳಲ್ಲ. ಪ್ರತಿಜ್ಞಾಪಾಲನವು ಅಧರ್ಮವಾಗುವುದೇ ಆಲೋಚಿಸು ! ಹೇಳಿ, ಹೇಳಿ, ತೊಡೆಗೆ ಹೊಡೆದ ಭೀಮನ ತಪ್ಪಿಲ್ಲ. ತಲೆಕೆಳಗಾಗಿ ವಂಚಿಸಲು ಹವಣಿಸಿದ ಮಾಯಗಾರನ ತಪ್ಪನ್ನು ಮರೆಯ ಬೇಡ ! ಸುಮ್ಮನೆ ಸುಜನರಲ್ಲಿ ಸಿಟ್ಟಾಗಬೇಡ! ಪಾಂಡವರ ವಿಜಯವನ್ನು ಅಭಿನಂದಿಸು! ಅವರು ನಮ್ಮ ಸೋದರತ್ತೆಯ ಮಕ್ಕಳು. ನಿನ್ನ ಆಶ್ವಾಸನಾದರಗಳಿಗೆ ಪಾತ್ರರು.'

ಆ ಮಾತಿಗೆ ತಲೆಯಾಡಿಸಿ, ಬಲದೇವನು 'ಕೃಷ್ಣ ! ಧರ್ಮವು ಅರ್ಥಕಾಮಗಳಿಂದ ಸಂಕುಚಿತವಾಗುವುದು. ಲೋಭದಿಂದ ಅರ್ಥಾಶೆಯೂ, ಅತಿ ವಿಷಯಾಸಕ್ತಿಯು ಕಾಮದಿಂದಲು ಹುಟ್ಟಿ ನರನನ್ನು ಧರ್ಮದಿಂದ ದೂರೀಕರಿಸುವವು. ಧರ್ಮಾರ್ಥಗಳನ್ನು ಕಾಮದಿಂದ ಕೆಡಿಸದೆ, ಧರ್ಮಕಾಮಗಳನ್ನು ಅರ್ಥದಿಂದ ಕೆಡಿಸದೆ, ಕಾಮಾರ್ಥಗಳನ್ನು ಧರ್ಮದಿಂದ ಪೀಡಿಸದೆ, ಜೀವಿಸುವವನು ಸುಖವಂತನಾಗುವನು. ಧರ್ಮವನ್ನು ಅರ್ಥಕಾಮಗಳಿಂದ ಪೀಡಿಸಿ, ಪಾಂಡವರು ಧರ್ಮದೂರಾದರು. ನೀನೇನೋ ತೋಚಿದ್ದನ್ನು ನುಡಿದು, ಭೀಮಸೇನನು ಧರ್ಮದೂರನಲ್ಲವೆಂದು ಸಾಧಿಸಿದೆ ! ಇದು ಧರ್ಮವಲ್ಲ; ಧರ್ಮಚ್ಛಲವು; ಆದುದರಿಂದ ಇಲ್ಲಿ ನನ್ನ ಕೆಲಸವಿಲ್ಲ. ದುರ್ಯೋಧನನು ಧರ್ಮಯುದ್ಧವನ್ನೇ ಮಾಡಿರುವನು. ಅವನಿಗೆ ವೀರಗತಿಯಾಗುವುದು' ಎಂದು ನುಡಿದು ಬಲದೇವನು, ರಭಸದಿಂದ ರಥವನ್ನೇರಿ, ದ್ವಾರಕೆಗೆ ಹೊರಟುಹೋದನು.

ಧರ್ಮಾಧರ್ಮವಿಚಾರದಿಂದ ಅಧೋವದನನಾಗಿದ್ದ ಧರ್ಮರಾಜನಿಗೆ ಶ್ರೀಕೃಷ್ಣನಿಂತೆಂದನು: 'ಧರ್ಮರಾಜ ! ಯಾರು ಅಧರ್ಮಿಗಳು ? ಭೀಮನೋ ? ದುರ್ಯೋಧನನೋ ?' ಆ ಮಾತಿಗೆ ಧರ್ಮಜನು, 'ಕೃಷ್ಣ ! ದುರ್ಯೋಧನನೇ ಅಧರ್ಮಿಯು ನಿಜ ! ಆದರೆ ಭೀಮಸೇನನು ಕಾಲಿನಿಂದ ಒದೆಯಬಾರದಿತ್ತು. ಅರಣ್ಯವಾಸದ ಕ್ಲೇಶ, ದ್ರೌಪದೀ ಪರಿಭವ, ದ್ಯೂತವಂಚನೆ, ದುಷ್ಟವಚನ ಮುಂತಾದ ವ್ಯಸನಗಳನ್ನು ನೆನೆನೆನೆದು ತಪಿಸುತ್ತಿದ್ದ ಭೀಮಸೇನನ ವೈರಾಗ್ನಿಯು ಇಂತು ಉರಿದೆದ್ದು ಇಂದು ಶಾಂತವಾಯಿತೆಂದು ಕಾಣುತ್ತಿದೆ. ಲೋಭಿಯು, ದುಷ್ಟಾತ್ಮನು, ಕಾಮಿಯು, ವಂಚಕನು ಆದ ದುರ್ಯೋಧನನು ಅಂಧಂತಮೋಲೋಕವನ್ನು ಸೇರಲಿ ! ಆದರೆ ಭೀಮಸೇನನಿಗೆ ಅಧರ್ಮದ ಲೇಪವಾಯಿತೇನೋ ಎಂದು ಚಿಂತಿಸುವೆನು' ಎಂದನು.

ವಾಸುದೇವನು "ಧರ್ಮರಾಜ, ಅತಿಪಾಪಿಗಳನ್ನು ಧರ್ಮದಿಂದ ಸಂಹರಿಸಬಾರದು. ದೈತ್ಯರನ್ನು ವಂಚಿಸಿ ವಧಿಸಿದ ಇಂದ್ರಾದಿ ದೇವತೆಗಳು ಅಧರ್ಮಿಷ್ಠರೆಂದು ತಿಳಿಯಬೇಡ ! ಅಂತೆಯೇ ದುಷ್ಟಶಿಖಾಮಣಿಯಾದ ದುರ್ಯೋಧನನನ್ನು ವಂಚಿಸಿ ಕೊಂದರೂ ಪಾಪವಿಲ್ಲ. ಭೀಷ್ಮದ್ರೋಣಕರ್ಣರನ್ನು ವ್ಯಾಜದಿಂದ ಸಂಹರಿಸಿದಾಗ ಪುಟ್ಟದ ಅಧರ್ಮಚಿಂತೆ ಈಗೇಕೆ ಬಂತು ? ಪ್ರತಿಜ್ಞಾಪಾಲನಕ್ಕಾಗಿ ತೊಡೆಗಳನ್ನು ಮುರಿದ ಭೀಮನ ತಪ್ಪಿಲ್ಲ. 'ಗದೆಯಿಂದ ತೊಡೆ ಮುರಿಯುವೆನು' ಎಂದು ಪ್ರತಿಜ್ಞೆಗೈದ ಭೀಮಸೇನನನ್ನು ಆಗಲೇ "ಅದು ಗದಾ ಯುದ್ಧಧರ್ಮವಲ್ಲ" ಎಂದು ವಾರಿಸದೇ ಪ್ರತಿಜ್ಞೆಯನ್ನು ಪಾಲಿಸಿದ ತಮ್ಮನನ್ನು ತಪ್ಪೆಂದು ನಿಂದಿಸುವದು ಅಧರ್ಮವೇ ಸರಿ ! ಅಮರ್ಮಸ್ಥಾನದಲ್ಲಿ ಜರಾಸಂಧನನ್ನು ಹೊಡೆದು ಸೀಳಿದ ಭೀಮಸೇನನಿಗೆ ದುರ್ಯೋಧನನನ್ನು ಕೊಲ್ಲುವ ಸಾಮರ್ಥ್ಯವಿದ್ದೇ ಇದೆ. ಆದರೂ ಲೋಕದಲ್ಲಿ ಪ್ರತಿಜ್ಞಾಪಾಲನಕ್ಕಾಗಿ ನಡೆಸುವ ಆಪದ್ಧರ್ಮವನ್ನು ಸಾರಿ ತಿಳಿಸಲು ಭೀಮನು ಕೌರವನ ತೊಡೆಗಳನ್ನು ಮುರಿದಿಹನು. ಬ್ರಾಹ್ಮಣವೇಷದಿಂದ ನಿರಾಯುಧನಾಗಿ ಹೋಗಿ, ಮಾಗಧನನ್ನು ಕೊಂದ ಭೀಮನು ಅಧರ್ಮಿಯಾಗದೆ, ವಂಚಕ ದುರ್ಯೋಧನನನ್ನು ನಾಭಿಯ ಮೇಲೆತ್ತಿದ್ದ ತೊಡೆಗಳಲ್ಲಿ ಹೊಡೆದ ವೃಕೋದರನು ಅಧರ್ಮಿ ಆದನೇ ? ಸ್ವಾಭಾವಿಕವಾಗಿ ದುರ್ಯೋಧನನು ಜರಾಸಂಧನಕಿಂತಲು ಪಾಪಿಯು. ಇಂತಹ ಅಧಮಾಧಮನನ್ನು ಸಂಹರಿಸುವ ವಿಷಯದಲ್ಲಿ ಧರ್ಮಾಧರ್ಮ ಶಂಕೆಯೇ ಇಲ್ಲ. ದುಷ್ಟಸಂಹಾರವೆಂತಾದರೂ ಲೋಕಹಿತವಾದುದರಿಂದ ಧರ್ಮವೇ ಆಗಿದೆ" ಎಂದನು.

ಬಲರಾಮನಿಗೂ, ಸರ್ವಜನರಿಗೂ ತಾನು ಪೇಳಿದ ಧರ್ಮ ನಿಶ್ಚಯವನ್ನು ಕೇಳಿಯೂ ಸಂಶಯಚಿತ್ತನಾಗಿ ಪ್ರಶ್ನಿಸುವ ಧರ್ಮರಾಜನ ಸಂಶಯವನ್ನು ಪೂರ್ಣವಾಗಿ ಕಳೆಯದೆ ಸತ್ಯಸಂಕಲ್ಪನಾದ ಶ್ರೀಕೃಷ್ಣನು ಭೂಭಾರಹರಣ ದೈತ್ಯಸಂಹರಣ ಪುಣ್ಯಫಲಗಳನ್ನು ಭೀಮಸೇನನಿಗೇ ಹೊಂದಿಸಿ ಅನುಗ್ರಹಿಸಿದನು. ಮತ್ತೆ ಮತ್ತೆ ಪೇಳುವ ಕೃಷ್ಣಪರಮಾತ್ಮನ ನುಡಿಗಳಿಂದ ಅರ್ಜುನನು ಭೀಮಸೇನನನ್ನು ಧರ್ಮ

ದುರ್ಯೋಧನನು ಸಂಹರಿಸಿದ್ದರೆ, ನಿನಗೆ ಸಂತಸವಾಗುತ್ತಿತ್ತೇ ಹೇಳು! ಅಥವಾ ಭೀಮಸೇನನ ಪ್ರತಿಜ್ಞೆ ನೆರವೇರದೆ, ಅವನು ಅಸತ್ಯವಚನನಾಗಬೇಕಿತ್ತೇ ? ಮೂರ್ಖನಂತೆ ಮಾತಾಡಬೇಡ! ಭೀಮಸೇನನ ವಿಜಯವನ್ನು ನಿನ್ನ ವಿಜಯವೆಂದು ಕಾಣದೆ, ದುಷ್ಟ ಶ್ರೇಷ್ಠನ ವಧೆಗೆ ಸಂತೋಷಪಡದೆ, ಅವಿವೇಕಿಯಂತೆ ನಿಂದಿಸುವ ನಿನ್ನನ್ನು ಕಂಡು, ನನಗೆ ಆಶ್ಚರ್ಯ ಜುಗುಪ್ಸೆಗಳು ಹುಟ್ಟಬರುತ್ತಿವೆ.'

ಆಗ ಬಲದೇವನು ಹಲವನ್ನೆತ್ತಿ ಮೇಲಕ್ಕೆದ್ದು ನಿಂತು, 'ಭೀಮಸೇನ! ಧಿಕ್ಕಾರವಿರಲಿ ನಿನಗೆ ! ನಾಭಿಯ ಕೆಳಗೆ ಹೊಡೆದು ಗದಾಯುದ್ಧ ಧರ್ಮವನ್ನು ಕೆಡಸಿದ ನಿನ್ನ ಸ್ವೇಚ್ಛಾವೃತ್ತಿಯನ್ನು ಈ ಹಲಾಯುಧನು ಸಹಿಸನು' ಎಂದು, ಭೀಮನ ಮೇಲೆರಗಿದನು. ಶ್ವೇತಗಿರಿಶೃಂಗದಂತೆ ಶೋಭಿಸುವ ಬಲರಾಮನ ಹಲಕ್ಕೆ ಹೆದರದೆ, ಭೀಮಸೇನನು ಗದೆಯನ್ನೆತ್ತಿ ಮುಂದೆ ಬಂದನು. ಅದನ್ನು ಕಂಡು, ಶ್ರೀಕೃಷ್ಣನು, 'ಬಲದೇವ ! ತಡೆ !' ಎಂದು ಆತನ ಕೈಗಳನ್ನು ಹಿಡಿದು ನಿಲ್ಲಿಸಿ, ಇಂತೆಂದನು:

'ಅಣ್ಣ ! ಆತ್ಮವೃದ್ಧಿ ಆತ್ಮಮಿತ್ರವೃದ್ಧಿ ಆತ್ಮಮಿತ್ರಮಿತ್ರವೃದ್ಧಿಗಳಂತೆ, ಶತ್ರುಕ್ಷಯ, ಶತ್ರುಮಿತ್ರಕ್ಷಯ, ಶತ್ರುಮಿತ್ರಮಿತ್ರಕ್ಷಯಗಳೂ ಶ್ರೇಯಸ್ಸಾಧಕಗಳೆನಿಸುವವು. ಆತ್ಮಮಿತ್ರಕ್ಷಯವು ಆತ್ಮಕ್ಷಯದಂತೆ ಶ್ರೇಯೋಬಾಧಕವಾಗಿದೆ. ನಮ್ಮ ಮಿತ್ರರು ಪಾಂಡವರು. ಶುದ್ಧಪೌರುಷರಾದ ಪಾಂಡವರಿಗೆ, ಅದರಲ್ಲಿಯೂ ಭೀಮಸೇನನಿಗೆ ಅಧರ್ಮದ ಸೋಂಕಿಲ್ಲ. ಶುದ್ಧಭಾಗವತ ಧರ್ಮನಿರತನಾದ ವೃಕೋದರನು ಅನ್ಯಾಯ ಯುದ್ಧವನ್ನಾಡಿಲ್ಲ. ಪಾಂಡವರು ಪಾಪಿ ದುರ್ಯೋಧನನಿಂದ ಪೊಂದಿದ ಕಷ್ಟಗಳು ಎಂದೂ ಯಾರೂ ಯಾರಿಗೂ ಕೊಟ್ಟಂತಹವುಗಳಲ್ಲ. ಪ್ರತಿಜ್ಞಾಪಾಲನವು ಅಧರ್ಮವಾಗುವುದೇ ಆಲೋಚಿಸು ! ಹೇಳಿ, ಹೇಳಿ, ತೊಡೆಗೆ ಹೊಡೆದ ಭೀಮನ ತಪ್ಪಿಲ್ಲ. ತಲೆಕೆಳಗಾಗಿ ವಂಚಿಸಲು ಹವಣಿಸಿದ ಮಾಯಗಾರನ ತಪ್ಪನ್ನು ಮರೆಯ ಬೇಡ ! ಸುಮ್ಮನೆ ಸುಜನರಲ್ಲಿ ಸಿಟ್ಟಾಗಬೇಡ! ಪಾಂಡವರ ವಿಜಯವನ್ನು ಅಭಿನಂದಿಸು! ಅವರು ನಮ್ಮ ಸೋದರತ್ತೆಯ ಮಕ್ಕಳು. ನಿನ್ನ ಆಶ್ವಾಸನಾದರಗಳಿಗೆ ಪಾತ್ರರು.'

ಆ ಮಾತಿಗೆ ತಲೆಯಾಡಿಸಿ, ಬಲದೇವನು 'ಕೃಷ್ಣ ! ಧರ್ಮವು ಅರ್ಥಕಾಮಗಳಿಂದ ಸಂಕುಚಿತವಾಗುವುದು. ಲೋಭದಿಂದ ಅರ್ಥಾಶೆಯೂ, ಅತಿ ವಿಷಯಾಸಕ್ತಿಯು ಕಾಮದಿಂದಲು ಹುಟ್ಟಿ, ನರನನ್ನು ಧರ್ಮದಿಂದ ದೂರೀಕರಿಸುವವು. ಧರ್ಮಾರ್ಥಗಳನ್ನು ಕಾಮದಿಂದ ಕೆಡಿಸದೆ, ಧರ್ಮಕಾಮಗಳನ್ನು ಅರ್ಥದಿಂದ ಕೆಡಿಸದೆ, ಕಾಮಾರ್ಥಗಳನ್ನು ಧರ್ಮದಿಂದ ಪೀಡಿಸದೆ, ಜೀವಿಸುವವನು ಸುಖವಂತನಾಗುವನು. ಧರ್ಮವನ್ನು ಅರ್ಥಕಾಮಗಳಿಂದ ಪೀಡಿಸಿ, ಪಾಂಡವರು ಧರ್ಮದೂರಾದರು. ನೀನೇನೋ ತೋಚಿದ್ದನ್ನು ನುಡಿದು, ಭೀಮಸೇನನು ಧರ್ಮದೂರನಲ್ಲವೆಂದು ಸಾಧಿಸಿದೆ ! ಇದು ಧರ್ಮವಲ್ಲ; ಧರ್ಮಚ್ಛಲವು; ಆದುದರಿಂದ ಇಲ್ಲಿ ನನ್ನ ಕೆಲಸವಿಲ್ಲ. ದುರ್ಯೋಧನನು ಧರ್ಮಯುದ್ಧವನ್ನೇ ಮಾಡಿರುವನು. ಅವನಿಗೆ ವೀರಗತಿಯಾಗುವುದು' ಎಂದು ನುಡಿದು ಬಲದೇವನು, ರಭಸದಿಂದ ರಥವನ್ನೇರಿ, ದ್ವಾರಕೆಗೆ ಹೊರಟುಹೋದನು.

ಧರ್ಮಾಧರ್ಮವಿಚಾರದಿಂದ ಅಧೋವದನನಾಗಿದ್ದ ಧರ್ಮರಾಜನಿಗೆ ಶ್ರೀಕೃಷ್ಣನಿಂತೆಂದನು: 'ಧರ್ಮರಾಜ ! ಯಾರು ಅಧರ್ಮಿಗಳು ? ಭೀಮನೋ ? ದುರ್ಯೋಧನನೋ ?' ಆ ಮಾತಿಗೆ ಧರ್ಮಜನು, 'ಕೃಷ್ಣ ! ದುರ್ಯೋಧನನೇ ಅಧರ್ಮಿಯು ನಿಜ ! ಆದರೆ ಭೀಮಸೇನನು ಕಾಲಿನಿಂದ ಒದೆಯಬಾರದಿತ್ತು. ಅರಣ್ಯವಾಸದ ಕ್ಲೇಶ, ದ್ರೌಪದೀ ಪರಿಭವ, ದ್ಯೂತವಂಚನೆ, ದುಷ್ಟವಚನ ಮುಂತಾದ ವ್ಯಸನಗಳನ್ನು ನೆನೆನೆನೆದು ತಪಿಸುತ್ತಿದ್ದ ಭೀಮಸೇನನ ವೈರಾಗ್ನಿಯು ಇಂತು ಉರಿದೆದ್ದು ಇಂದು ಶಾಂತವಾಯಿತೆಂದು ಕಾಣುತ್ತಿದೆ. ಲೋಭಿಯು, ದುಷ್ಟಾತ್ಮನು, ಕಾಮಿಯು, ವಂಚಕನು ಆದ ದುರ್ಯೋಧನನು ಅಂಥಂತಮೋಲೋಕವನ್ನು ಸೇರಲಿ ! ಆದರೆ ಭೀಮಸೇನನಿಗೆ ಅಧರ್ಮದ ಲೇಪವಾಯಿತೇನೋ ಎಂದು ಚಿಂತಿಸುವೆನು' ಎಂದನು.

ವಾಸುದೇವನು "ಧರ್ಮರಾಜ, ಅತಿಪಾಪಿಗಳನ್ನು ಧರ್ಮದಿಂದ ಸಂಹರಿಸಬಾರದು. ದೈತ್ಯರನ್ನು ವಂಚಿಸಿ ವಧಿಸಿದ ಇಂದ್ರಾದಿ ದೇವತೆಗಳು ಅಧರ್ಮಿಷ್ಠರೆಂದು ತಿಳಿಯಬೇಡ ! ಅಂತೆಯೇ ದುಷ್ಟಶಿಖಾಮಣಿಯಾದ ದುರ್ಯೋಧನನನ್ನು ವಂಚಿಸಿ ಕೊಂದರೂ ಪಾಪವಿಲ್ಲ. ಭೀಷ್ಮದ್ರೋಣಕರ್ಣರನ್ನು ವ್ಯಾಜದಿಂದ ಸಂಹರಿಸಿದಾಗ ಪುಟ್ಟದ ಅಧರ್ಮಚಿಂತೆ ಈಗೇಕೆ ಬಂತು ? ಪ್ರತಿಜ್ಞಾಪಾಲನಕ್ಕಾಗಿ ತೊಡೆಗಳನ್ನು ಮುರಿದ ಭೀಮನ ತಪ್ಪಿಲ್ಲ. 'ಗದೆಯಿಂದ ತೊಡೆ ಮುರಿಯುವೆನು' ಎಂದು ಪ್ರತಿಜ್ಞೆಗೈದ ಭೀಮಸೇನನನ್ನು ಆಗಲೇ "ಅದು ಗದಾ ಯುದ್ಧಧರ್ಮವಲ್ಲ" ಎಂದು ವಾರಿಸದೇ ಪ್ರತಿಜ್ಞೆಯನ್ನು ಪಾಲಿಸಿದ ತಮ್ಮನನ್ನು ತಪ್ಪೆಂದು ನಿಂದಿಸುವದು ಅಧರ್ಮವೇ ಸರಿ ! ಅಮರ್ಮಸ್ಥಾನದಲ್ಲಿ ಜರಾಸಂಧನನ್ನು ಹೊಡೆದು ಸೀಳಿದ ಭೀಮಸೇನನಿಗೆ ದುರ್ಯೋಧನನನ್ನು ಕೊಲ್ಲುವ ಸಾಮರ್ಥ್ಯವಿದ್ದೇ ಇದೆ. ಆದರೂ ಲೋಕದಲ್ಲಿ ಪ್ರತಿಜ್ಞಾಪಾಲನಕ್ಕಾಗಿ ನಡೆಸುವ ಆಪದ್ಧರ್ಮವನ್ನು ಸಾರಿ ತಿಳಿಸಲು ಭೀಮನು ಕೌರವನ ತೊಡೆಗಳನ್ನು ಮುರಿದಿಹನು. ಬ್ರಾಹ್ಮಣವೇಷದಿಂದ ನಿರಾಯುಧನಾಗಿ ಹೋಗಿ, ಮಾಗಧನನ್ನು ಕೊಂದ ಭೀಮನು ಅಧರ್ಮಿಯಾಗದೆ, ವಂಚಕ ದುರ್ಯೋಧನನನ್ನು ನಾಭಿಯ ಮೇಲೆತ್ತಿದ್ದ ತೊಡೆಗಳಲ್ಲಿ ಹೊಡೆದ ವೃಕೋದರನು ಅಧರ್ಮಿ ಆದನೇ ? ಸ್ವಾಭಾವಿಕವಾಗಿ ದುರ್ಯೋಧನನು ಜರಾಸಂಧನಕಿಂತಲು ಪಾಪಿಯು. ಇಂತಹ ಅಧಮಾಧಮನನ್ನು ಸಂಹರಿಸುವ ವಿಷಯದಲ್ಲಿ ಧರ್ಮಾಧರ್ಮ ಶಂಕೆಯೇ ಇಲ್ಲ. ದುಷ್ಟಸಂಹಾರವೆಂತಾದರೂ ಲೋಕಹಿತವಾದುದರಿಂದ ಧರ್ಮವೇ ಆಗಿದೆ" ಎಂದನು.

ಬಲರಾಮನಿಗೂ, ಸರ್ವಜನರಿಗೂ ತಾನು ಪೇಳಿದ ಧರ್ಮ ನಿಶ್ಚಯವನ್ನು ಕೇಳಿಯೂ ಸಂಶಯಚಿತ್ತನಾಗಿ ಪ್ರಶ್ನಿಸುವ ಧರ್ಮರಾಜನ ಸಂಶಯವನ್ನು ಪೂರ್ಣವಾಗಿ ಕಳೆಯದೆ ಸತ್ಯಸಂಕಲ್ಪನಾದ ಶ್ರೀಕೃಷ್ಣನು ಭೂಭಾರಹರಣ ದೈತ್ಯಸಂಹರಣ ಪುಣ್ಯಫಲಗಳನ್ನು ಭೀಮಸೇನನಿಗೇ ಹೊಂದಿಸಿ ಅನುಗ್ರಹಿಸಿದನು. ಮತ್ತೆ ಮತ್ತೆ ಪೇಳುವ ಕೃಷ್ಣಪರಮಾತ್ಮನ ನುಡಿಗಳಿಂದ ಅರ್ಜುನನು ಭೀಮಸೇನನನ್ನು ಧರ್ಮ

ನಿರತನೆಂದೇ ತಿಳಿದನು. ಭೀಮಸೇನನ ಪ್ರಭಾವವನ್ನರಿತವರು ಸಂಶಯವಿಲ್ಲದೆ ಧರ್ಮವೆಂದೇ ನಿಶ್ಚಯಿಸಿ ದುರ್ಯೋಧನನ ಹನನವನ್ನು ಇತರರು ಆಪದ್ಧರ್ಮವೆಂದು ತಿಳಿದರು. ರುದ್ರವರದಿಂದ ಗದಾಶಿಕ್ಷೆಯಲ್ಲಿ ಪ್ರಬಲನಾದುದರಿಂದಲು, ಜರಾಸಂಧ-ದುರ್ಯೋಧನರು ಸದೃಶರಾದರೂ, ಸ್ವಭಾವದಿಂದ ದುಷ್ಟತಮನಾದ ಕಲಿ ದುರ್ಯೋಧನನನ್ನು ಕೊಂದ ಮುಖ್ಯಪ್ರಾಣಾವತಾರನಾದ ಭೀಮನಲ್ಲಿ ಅಧರ್ಮವಿಚಾರವೇ ಪುಟ್ಟದು.

ವಾಸುದೇವನನ್ನು ಸಮೀಪಿಸಿ, ಭೀಮಸೇನನು ವಂದಿಸಿ, ಧರ್ಮರಾಜನಿಗೂ ಕೈಮುಗಿದು, ಆನಂದಕಂದಳಿತಹೃದಯಾರವಿಂದನಾಗಿ, 'ರಾಜನ್! ನಿಹತಕಂಟಕವಾದ ಮಹೀರಾಜ್ಯವಿಂದು ನಿನ್ನದಾಯಿತು. ಪಾಲಿಸು ಪ್ರಜರನ್ನು! ಧರ್ಮವನ್ನು ನಡೆಸು. ವೈರಮೂಲಕಾರಣನಾದ ಮಹಾಪಾಪಿಯು ಇಂದು ನಿಹತನಾಗಿ ಬಿದ್ದಿರುವನು. ದುಃಶಾಸನ ಕರ್ಣ ಶಕುನಿ ಪ್ರಭೃತಿಗಳಾದ ನಿನ್ನ ಶತ್ರುಗಳು ನಿರ್ಮೂಲರಾದರು. ವನಪರ್ವತನದೀಪತ್ತನಾಲಂಕೃತವು, ರತ್ನನಿಧಿಸಮಂಚಿತವು ಆದ ಭೂಮಂಡಲವು ನಿನ್ನ ಕರಗತವಾಯಿತು' ಎಂದು ಅಭಿನಂದಿಸಿದನು.

ಧರ್ಮರಾಜನು ಪ್ರಹರ್ಷಿತನಾಗಿ 'ಅಹುದು ವೃಕೋದರ! ಶ್ರೀಕೃಷ್ಣನ ದಯೆಯಿಂದ ಸುಯೋಧನಾದಿ ಶತ್ರುಗಳು ಹತರಾದರು. ವೈರವಹ್ನಿಯು ಶಾಂತವಾಯಿತು. ವಸುಂಧರೆ ಕೈ ಸೇರಿದಳು. ಅದೃಷ್ಟದಿಂದ ನಾವು ರಣರಂಗದಿಂದ ಪಾರಾಗಿ ಜೀವದಿಂದುಳಿದೆವು. ನಮ್ಮ ಮಾತೆಯು ವೀರಮಾತೆ ಎನಿಸಿದಳು. ನಿನ್ನಿಂದ ನಮ್ಮ ವಿಜಯವು ಸಾಧಿತವಾಗಿ ಸಂಪೂರ್ಣವಾಯಿತು' ಎಂದು ಭೀಮನನ್ನಪ್ಪಿ ಅಭಿನಂದಿಸಿದನು. ಪಾಂಚಾಲಸೃಂಜಯರು ಹರ್ಷಧ್ವನಗಳಿಂದ, ಶಂಖಧ್ವಾನಗಳಿಂದ ದಿಕ್ಕುಗಳನ್ನು ತುಂಬಿದರು. "ಭೀಮಸೇನ! ಎಂತಹ ದುಷ್ಕರಕರ್ಮವನ್ನು ಸಾಧಿಸಿದೆ! ಮಹಾವೀರ! ನಿನಗೆ ಸಮರಿಲ್ಲ. ಮಹಾಬಲ ನಿನ್ನೆದುರಿಗೆ ನಿಲ್ಲುವ ಶತ್ರುಗಳಿಲ್ಲ. ಇಂದ್ರನು ವೃತ್ರನನ್ನಂತೆ ನೀನು ಕೌರವರಾಜನನ್ನು ಕೊಂದು, ವಿಜಯ ದುಂದುಭಿಯನ್ನು ಮೊಳಗಿಸಿದೆ. ನಿನ್ನ ಹೊರತನ್ಯರಿಲ್ಲ ಕೌರವನನ್ನು ಕೊಲ್ಲುವ ವೀರರು. ಸಿಂಹವು ಮಹಿಷಶಿರವನ್ನಂತೆ ನೀನು ದುರ್ಯೋಧನನ ಶಿರವನ್ನು ಒದ್ದೆ. ಧರಾತ್ಮನಾದ ಯುಧಿಷ್ಠಿರನಿಗೆ ದ್ರೋಹಬಗೆದವರನ್ನೆಲ್ಲ ಸವರಿ, ಸಮವರ್ತಿಯ ಲೋಕವನ್ನು ಸೇರಿಸಿದ ಮಹಾನುಭಾವನು ನೀನು. ದುರ್ಯೋಧನನ ವಧೆಯಿಂದ ನಿನ್ನ ನಿಷ್ಕಳಂಕ ಕೀರ್ತಿಚಂದ್ರಿಕೆಯು ದಿಗಂತ ವ್ಯಾಪ್ತವೂ ಜಾರಚೋರ ನಿಶಾಚರ ವಂಚಕಾದಿ ದುರ್ಜನ ಸಂತಾಪಕವೂ ಆಗಿ ಪಸರಿಸಿತು' ಎಂದು ಅಲ್ಲಿ ನೆರೆದ ಸುಜನರು ಕೊಂಡಾಡಿದರು.

ಶ್ರೀಕೃಷ್ಣನು ಅವರ ಮಾತನ್ನಾಲಿಸಿ ಇಂತೆಂದನು: 'ರಾಜನ್ಯರೇ! ಈ ಪಾಪಿಯು ಅಂದೇ ಸತ್ತನು! ಎಂದು ವಿದುರ ದ್ರೋಣ ಕೃಪ ಪಿತಾಮಹರ ಮಾತನ್ನು ಕೇಳಲಿಲ್ಲವೋ, ಎಂದು ದ್ರೌಪದೀದೇವಿಯನ್ನವಮಾನಿಸಿ ತೊಡೆ ತಟ್ಟಿದನೋ, ಎಂದು ನನ್ನ ಸಂಧಿ

ವಚನಗಳಿಗೆ ಸಮ್ಮತಿಸದೆ ನನ್ನನ್ನೇ ಕಟ್ಟಲು ಹವಣಿಸಿದನೋ, ಎಂದು ಮಾಯಾದ್ಯೂತವನ್ನಾಡಿದನೋ, ಅಂದೇ ಸತ್ತನು. ಸತ್ತ ಹಾವಿನಂತಿರುವ ಇವನನ್ನು ವಚನದಂಡಗಳಿಂದ ತಿವಿದೇನು ಪ್ರಯೋಜನ? ನಡೆಯಿರಿ ಶಿಬಿರಗಳಿಗೆ, ಪಾಪಾತ್ಮನು ಹತನಾದನು' ಎಂದನು.

ಭಗವಂತನ ಅಧಿಕ್ಷೇಪವಚನವನ್ನಾಲಿಸಿ, ದುರ್ಯೋಧನನು ರೋಷದಿಂದ ಉರಿದೆದ್ದನು. ಕೈಗಳನ್ನು ನೆಲದಲ್ಲೂರಿ ನಡುವಿನ ಮೇಲೆ ಆತು ಕೂತು, ಭ್ರೂಮಧ್ಯವನ್ನು ಗಂಟಿಕ್ಕಿ, ಕೆಂಗಣ್ಣನಾಗಿ ಕೇಶವನನ್ನು ನೋಡಿದ ದುರ್ಯೋಧನನು ಹೆಡೆಯೆತ್ತಿ ಭುಸುಗುಟ್ಟುವ ಕೃಷ್ಣಸರ್ಪದಂತೆ ಕಂಡನು. ಪ್ರಾಣಾಂತಕಾರಿಯಾದ ವೇದನೆಯನ್ನೂ ಲೆಕ್ಕಿಸದೆ, ಕುರುರಾಜನು ವಾಸುದೇವನನ್ನು ನಿಂದಿಸತೊಡಗಿದನು. ಅತಿ ಪಾಪಿಗಳಿಗೆ ಭಗವನ್ನಿಂದೆ, ಭಗವದ್ಭಕ್ತನಿಂದೆ, ಆತ್ಮಪ್ರಶಂಸೆಗಳು ಸ್ವಾಭಾವಿಕವಲ್ಲವೇ ? ವಿಶೇಷಾಕಾರವಾಗಿ ಆ ಮೂರನ್ನೂ ಸಾಯುವಾಗ ಬಿಡದೆ ಮಾಡಿದ ದುರ್ಯೋಧನನಿಗೆ ಅಂಧಂತಮಸ್ಸು ಹೇಗೆ ತಪ್ಪುವದು? ಒಂದೊಂದರಿಂದಲೇ ಅಂಧಂತಮಸ್ಸಾಗುವದು ಶಾಸ್ತ್ರಸಿದ್ಧವೂ, ವೇನಾದಿಪಾಪಿಗತಿಪ್ರಸಿದ್ಧವೂ ಆಗಿದೆ.

'ಕಂಸದಾಸಪುತ್ರ! ನಿನಗೆ ಲಜ್ಜೆ ಇಲ್ಲ. ಅಧರ್ಮದ ಗದಾಘಾತವನ್ನು ಧರ್ಮನೆಂಬುವ ನಿನಗೆ ಜ್ಞಾನವಿಲ್ಲ. ತೊಡೆಯನ್ನು ಮುರಿಯಲು ಸೂಚಿಸಿದವನು ನೀನೇ ಅಲ್ಲವೇ ? ಸಾವಿರಾರು ವೀರರಾಜರನ್ನು ಮೋಸಮಾಡಿ ಕೊಲ್ಲಿಸಿದ ನಿನ್ನಂತಹ ಮಾಯಗಾರನಿಲ್ಲ. ಸತ್ತ ಮಹಾಪುರುಷರನ್ನು ಕಂಡು ನಿನಗೆ ದಯ ಪುಟ್ಟಲಿಲ್ಲ. ಶಿಖಂಡಿಯನ್ನು ಮುಂದಿಟ್ಟು ಅರ್ಜುನನಿಂದ ಹೊಡೆಸಿ ಭೀಷ್ಮರನ್ನು ಕೆಡಹಿಸಿದೆ. ಆನೆಯನ್ನು ಕೊಲ್ಲಿಸಿ ಅಶ್ವತ್ಥಾಮನು ಹತನಾದನೆಂದು ಕೂಗಿಸಿ, ಆಚಾರ್ಯನನ್ನು ನ್ಯಸ್ತಶಸ್ತ್ರನನ್ನಾಗಿಸಿದೆ. ಆಗ ಪಾಪಿ ಧೃಷ್ಟದ್ಯುಮ್ನನು ಆತನನ್ನು ಕೊಂದು ನೀಚತಮನಾದನು. ಅವನನ್ನು ಆ ಕುಕಾರ್ಯವನ್ನು ಮಾಡದಂತೆ ನೀನೇಕೆ ನಿಲ್ಲಿಸಲಿಲ್ಲ? ಅರ್ಜುನನ್ನು ಕೊಲ್ಲಲು ಕಾದಿಟ್ಟ ಶಕ್ತಿಯನ್ನು ಘಟೋತ್ಕಚನಲ್ಲಿ ಬಿಡುವಂತೆ ಮಾಡಿ ಕರ್ಣನನ್ನು ಮೋಸಗೊಳಿಸಿದೆ. ನಿನ್ನಂತಹ ಪಾಪಿ ಮತ್ತಿಲ್ಲ. ಕೈಕಡಿದು ನರಳುವ ಭೂರಿಶ್ರವನನ್ನು ಕೊಲ್ಲುವ ಸಾತ್ಯಕಿಯನ್ನು ನೀನೇಕೆ ವಾರಿಸದೆ ಹೋದೆ ? ಉತ್ತಮ ವೀರನಾದ ಕರ್ಣನು ತನ್ನ ರಥವನ್ನೆತ್ತುತ್ತಿರುವಾಗ ಕೊಲ್ಲಿಸಿದುದು ಯಾವ ಧರ್ಮ? ಅಶ್ವಸೇನನು ಬಾಣಾಕಾರನಾಗಿ ಬಂದರೆ ರಥವನ್ನು ತುಳಿದು, ಅರ್ಜುನನನ್ನು ಕಾಪಾಡಿದುದು ಯಾವ ನ್ಯಾಯ? ಸರಿಯಾದ ಧರ್ಮ ಮಾರ್ಗದಿಂದ ಪಾಂಡವರು ಕಾದಲಿಲ್ಲವೆಂದರೆ ನಿನ್ನ ಕುಚೋದನೆಯಿಂದಲ್ಲವೇ ? ನೀನು ಅನಾರ್ಯನು; ಮಾಯಾವಿಯು; ಧರ್ಮಶೂನ್ಯನು; ನೀನಿಲ್ಲದಿದ್ದರೆ ನಾವು ರಾಜ್ಯದಲ್ಲಿ ಸ್ಥಿರರಾಗಿ, ಪಾಂಡವರು ವನದಲ್ಲಿ ಸ್ಥಿರರಾಗಿ ಬದುಕಿ, ಇಷ್ಟು ಜನಕ್ಷಯವಾಗುತ್ತಿದ್ದಿಲ್ಲ. ಸ್ವಧರ್ಮರತರಾದ ನಮ್ಮನ್ನು ವಂಚಿಸಿ, ಕೊಲ್ಲಿಸಿದ ನೀನೇ ಮಹಾಪಾಪಿಯು, ನಾನಲ್ಲ 'ಎಂದು ನಿಂದಿಸಿ, ದುರ್ಯೋಧನನು ನೆಲದಿ ಬಿದ್ದು ಹೊರಳಾಡಿದನು.

ಆ ದುರ್ಮಾರ್ಗನ ಮಾತಿಗೆ ವಾಸುದೇವನಿಂತು ಪ್ರತ್ಯುತ್ತರವನ್ನಿತ್ತನು:

'ಗಾಂಧಾರೀ ! ಸಪುತ್ರಮಿತ್ರನಾಗಿ ಹತನಾದೆ. ಅದಕ್ಕೆ ಕಾರಣನು ನಾನಲ್ಲ. ನೀನು ಮಾಡಿದ ಪಾಪಕರ್ಮಗಳ ಫಲವನ್ನು ನೀನು ಉಣ್ಣುತ್ತಿರುವೆ. ನನಗೆ ವೈಷಮ್ಯವಿಲ್ಲ; ನಾನು ನಿಷ್ಕರುಣನಲ್ಲ. ಆದರೂ ಹಾಗೆಂದು ತಿಳಿದು ನನ್ನನ್ನು ದ್ವೇಷಿಸುವರು ದೈತ್ಯಾದಿ ದುಷ್ಟಜೀವರು. ದುಷ್ಟರಿಗೆ ಪರನಿಂದಾಕಾಲದಲ್ಲಿ ಸಾವಿರ ನಾಲಿಗೆಗಳು. ಪರಪೀಡಾಸಮಯದಲ್ಲಿ ಸಾವಿರ ಕೈಗಳು. ಅವರಿಗೆ ತಾವು ಮಾಡಿದ ಅಪರಾಧಗಳ ನೆನಪಾಗುವದಿಲ್ಲ. ನೀನು ಪಾಪಿಗಳಲ್ಲಿ ಪಾಪಿಯಾದುದರಿಂದಲೇ ಸಂಧಿಗೊಡಂಬಡದೆ ಪಾಂಡವರಿಗೆ ಅವರ ರಾಜ್ಯವನ್ನು ಕೊಡದೆ, ಕೊನೆಗೆ ಐದೂರನ್ನು ಕೊಡದೆ, ಯುದ್ಧ ಯುದ್ಧವೆಂದು ಕುಣಿದಾಡಿ, ಇಷ್ಟನರ್ಥವನ್ನು ತಂದೆ. ನಿನ್ನಿಂದ ಇಷ್ಟು ಜನ ನಷ್ಟವಾಯಿತು. ಲಕ್ಷಾರು ಮಹಾರಥರು, ಕೊಟ್ಯಾರು ಕುದುರೆಗಳು, ಸಾವಿರಾರು ಆನೆಗಳು, ರಣರಂಗದಲ್ಲಿ ಬಿದ್ದು ಮೃತರಾಗುವದನ್ನು ಕಣ್ಣಾರ ಕಾಣಬೇಕೆಂಬ ರಾಕ್ಷಸೀ ಕ್ರೂರಾಕಾಂಕ್ಷೆಗೆ ನೀನು ದಾಸನಾದೆ. ಭೀಷ್ಮದ್ರೋಣರು ಸೂಚಿಸಿದಂತೆ ಅವರ ಇಚ್ಛಾನುಸಾರವಾಗಿ ಪಾಂಡವರು ಅವರನ್ನು ಕೊಂದರು. ನಿನ್ನಂತಹ ಪಾಪತಮನ ಪಕ್ಷದಲ್ಲಿ ಕಡಿದಾಡಿದುದರಿಂದ ಅವರು ಹತರಾದರೂ ತಾಪಪಡದೆ ದೈವಗತಿಗೆ ಶಿರಬಾಗಿ ಪ್ರಾಣಾರ್ಪಣ ಮಾಡಿದರು. ಕರ್ಣನ ಅಸ್ತ್ರಗಳು ಸ್ಫುರಿಸದಾಗಲು ಗುರುದ್ರೋಹವೇ ಕಾರಣವು. ಅವನ ರಥವು ಇಳೆಯಲ್ಲಿಳಿಯಲು ಅವನ ಗೋಹತ್ಯೆಯೇ ಕಾರಣವು. ಅವನನ್ನು ನಿರಾಯುಧನಾಗಿರಲು ಕೊಲ್ಲಲು ಅಭಿಮನ್ಯುವಧೆಯೇ ಕಾರಣವು. ಪಾಪ ಪ್ರತಿಫಲವನ್ನುಣ್ಣದೇ ಯಾರಿಗೂ ತಪ್ಪಿಸಿಕೊಳ್ಳಲಾಗದು. ಅಶ್ವಸೇನನ ಮೋಸವೇ ಅವನನ್ನು ಸಂಹರಿಸಿತು. ನಿನ್ನಂತೆ ನುಡಿದು ನಿನ್ನಂತೆ ನಡೆದ ಕರ್ಣನು ದುಷ್ಟನೆನಿಸಿ ವಧ್ಯನಾದನು.

ಮೂಢ ! ಪಾಂಡುರಾಜನ ರಾಜ್ಯವನ್ನು ಮಾಯಾದ್ಯೂತದಲ್ಲಿ ಅಪಹರಿಸಿದೆ. ಅದು ಧರ್ಮವೇ ? ದ್ರೌಪದೀದೇವಿಯನ್ನು ಅವಮಾನಿಸಿದೆ. ಅದು ಬಂಧುತ್ವ ಲಕ್ಷಣವೇ ? ಅರಣ್ಯದಲ್ಲಿದ್ದ ನಿರಪರಾಧಿಗಳನ್ನು ದಂಭದಿಂದ ಮೆರೆದು ನೋಯಿಸಲೆಣಿಸಿದೆ. ಅದು ರಾಜತ್ವವೇ? ಗಂಧರ್ವರಿಂದ ಬಿಡಿಸಿ ಪ್ರಾಣಭಿಕ್ಷೆ ನೀಡಿದ ಸೋದರವೀರರನ್ನು ಕೂಡಿ ಕಾದಿದೆ. ಅದು ಕೃತಜ್ಞತೆಯೇ ? ಶಕುನಿಮಾತಿಗೆ ಕಿವಿಗೊಟ್ಟು ವ್ಯಾಸಾದಿ ಮಹಾನುಭಾವರನ್ನು ಜರಿದೆ, ಅದು ವಿವೇಕವೇ ? ಭೀಮಸೇನನಿಗೆ ವಿಷವನ್ನಿಡಲು, ಅವನೇನಪರಾಧಗೈದಿದ್ದನು? ನೀನು ಮಾಡಿದ ಅಕಾರ್ಯವಾವುದು ಉಳಿದಿದೆ? ಹೇಳು ! ಲಾಕ್ಷಾಗ್ರಹದಲ್ಲಿಟ್ಟು ಸುಡಿಸಿದೆ. ರಜಸ್ವಲೆಯಾದ ಅತ್ತಿಗೆಯ ಸೀರೆ ಸೆಳಿಸಿದೆ. ನಿನ್ನ ತಾಯಿಯ ಸೀರೆ ಸೆಳೆದಂತೆ ಆಗಲಿಲ್ಲವೇ ? ಆ ನೀಚತಮ ಕಾರ್ಯ? ಇಂತಹ ಪಾಪದ ಕಾರ್ಯವನ್ನು (ನಿನ್ನುಳಿದು) ಮಾಡಿದವರನ್ನು ಮತ್ತೊಬ್ಬರನ್ನು ತೋರು? ಛೀ ! ನಿನಗೆ ನಾಚಿಕೆ ಇಲ್ಲ ! ಆಗ ತೋರದ ನ್ಯಾಯ, ಆಗ ತೋರದ ಧರ್ಮ ಈಗ ಸ್ಮರಣೆಗೆ ಬಂತೇ ? ಎಂದು ದುಷ್ಟ ಸಭೆಯಲ್ಲಿ ತೊಡೆ ತಟ್ಟಿದೆಯೋ ಅಂದೇ ನಿನ್ನನ್ನು ಕೊಲ್ಲದೇ ಬಿಟ್ಟಿರುವ ಭೀಮಸೇನನ ದಯಾದಾಕ್ಷಿಣ್ಯ ವೈರಾಗ್ಯ ವೀರ್ಯಾದಿ ಗುಣಗಳ ಜ್ಞಾನ ನಿನ್ನಂತಹ ನಿಕೃಷ್ಟದುಷ್ಟಮತಿಗೆ ಎಂತಾಗುವದು?

ಧರ್ಮಜನಿಗೆ ದ್ಯೂತಜ್ಞಾನವಿದ್ದಿಲ್ಲ. ಅವನೊಡನೆ ನೀನಾಡದೆ, ಶಕುನಿಯನ್ನಾಡಿಸಿದ ನಿನ್ನ ಮೋಸವನ್ನು, ನಿನ್ನ ದಡ್ಡತನವನ್ನು, ಲೋಕವರಿಯದೆಂದು ತಿಳಿಯಬೇಡ ! ಸರ್ಪಗಳಿಂದ ಕಚ್ಚಿಸಿದೆ ! ಸರ್ಪದಂತೆ ನಡುವು ಮುರಿದು ಬಿದ್ದಿರುವೆ! ವಿಷವನ್ನಿಟ್ಟೆ ! ವಿಷವನ್ನು ತಿಂದಂತೆ ಮರಣಯಾತನೆಪಡುತ್ತಿರುವೆ ! ಮನೆಯಲ್ಲಿಟ್ಟು ಸುಟ್ಟೆ! ನಿನ್ನ ಪುಣ್ಯಲೇಶವೂ ಸುಟ್ಟುಹೋಯಿತು ! ರಾಜ್ಯವನ್ನು ಕಸಿದೆ ! ತಮಃಪ್ರಾಪ್ತಿಯು ನಿಶ್ಚಿತವಾಯಿತು. ನಿನ್ನ ಪಾಪಕೃತ್ಯಗಳ ಫಲವನ್ನು ಉಂಡು, ಪರರನ್ನು ನಿಂದಿಸಿ, ಮಹಾಪಾಪವನ್ನು ಸಾಧಿಸುತ್ತಿರುವೆ ! ತೃಣಬಿಂದುವಿನ ಆಶ್ರಮದಲ್ಲಿ ಕೃಷ್ಣೆಯನ್ನಪಹರಿಸಿದ ಪಾಪವು ನಿನ್ನ ಭಾವನಾದ ಜಯದ್ರಥನನ್ನು ಕೊಂದಿತು. ಸೀರೆಸೆಳೆದ ಪಾಪವು ನಿನ್ನ ತಮ್ಮನಾದ ದುಶ್ಶಾಸನನ ಎದೆಯನ್ನು ಸೀಳಿತು. ರಾವಣನಿಂದ ಲಂಕೆಯೇ ಹಾಳಾದಂತೆ, ನಿನ್ನಿಂದ ಉಭಯ ಸೈನ್ಯಗಳೂ ನಷ್ಟವಾದವು. ಅಷ್ಟು ಜನ ನಷ್ಟದ ಪಾಪವೂ ಮೂಲಕಾರಣನಾದ ನಿನ್ನ ತಲೆಯ ಮೇಲಿದೆ ತಿಳಿ ! ಪಾಪಿಗಳನ್ನು ಅನುಸರಿಸಿದ ಸುಜನರೂ ಪಾಪಿಗಳೇ ಆಗುವರು. ಅಂತೆಯೇ ದುಷ್ಟಸಂಗದಿಂದ ವಧ್ಯರಾದ ಭೀಷ್ಮ ದ್ರೋಣಾದಿಗಳನ್ನು ಕೊಂದುದರಿಂದ ನಮ್ಮ ಪಾಂಡವರಿಗೆ ಯಾವ ಪಾಪವೂ ಇಲ್ಲ. ತನ್ನ ಪಾಪಗಳನ್ನು ಪರರಲ್ಲಿ ಆರೋಪಿಸುವುದು ನಿನ್ನಂತಹ ತಮೋ ಯೋಗ್ಯರಿಗೆ ಸಹಜವೇ ಆಗಿದೆ. ಪಾಪ ಮಾಡದೆ, ಧರ್ಮದಿಂದಲೇ ನಡೆಯುವುದು ಪಾಂಡವರಂತಹ ಸುಜನರಿಗೆ ಸ್ವಾಭಾವಿಕವಾಗಿದೆ. ಪಾಂಡವರು ಮಾಡಿರುವ ಪಾಪವನ್ನು ಒಂದನ್ನು ಬೆರಳೆತ್ತಿ ತೋರಿಸುವವನು ಯಾವನೂ ಇಲ್ಲ ! ಪಾಪತಮನಾಗಿ ಧರ್ಮ ಮಾರ್ಗಗಾಮಿಗಳನ್ನು ನಿಂದಿಸಿ, ಕುಜನ ಮಧ್ಯದಲ್ಲಿ ನಿರಪರಾಧಿ ಎಂದು ತೋರುವ ನಿನಗೆ ಅಂಧಂತಮೋಲೋಕದ ನಿರಂತರ ದುಃಖವು ಕಾದಿದೆ.

ಎಲವೋ ಸುಯೋಧನ! ಯಾವ ಗುರುಗಳನ್ನು ವಿಧೇಯನಾಗಿ ಸೇವಿಸಿದೆ? ಯಾವ ವಿದ್ಯೆಯನ್ನು ವಿನಯದಿಂದ ಕಲಿತೆ? ಯಾವ ಹಿರಿಯರ ಮಾತನ್ನು ಮನ್ನಿಸಿದೆ? ಯಾವ ಸುಜನರನ್ನು ಮೆಚ್ಚಿಸಿದೆ? ಹೇಳು ನೀನು ಮಾಡಿರುವ ಒಂದು ಸತ್ಕಾರ್ಯವನ್ನು ! ಅಥವಾ ನೀನು ಮಾಡದಿರುವ ಅಕಾರ್ಯವನ್ನು ಒಂದನ್ನಾದರೂ ಪೆಸರಿಸು ! ಹಿತರ ನುಡಿಕೇಳದೆ, ಲೋಭವನ್ನು ಬಿಡದೆ, ನೀನಾಗಿ ನಿನ್ನನ್ನು ಕೆಡಿಸಿಕೊಂಡೆ ! ನಗುತ್ತಾ ಮಾಡಿದೆ ! ಅಳುತ್ತಾ ಅನುಭವಿಸು!"

ಆಗ ದುರ್ಯೋಧನನು ಹಲ್ಲುಕಡಿದು ಸಿಟ್ಟಿನಿಂದ ಇಂತೆಂದನು: 'ಅಗ್ನಿಹೋತ್ರಗಳನ್ನಿಟ್ಟೆನು. ಯಜ್ಞಗಳನ್ನು ಮಾಡಿದೆನು. ಬೇಕಾದಷ್ಟು ದಾನಗಳನ್ನಿತ್ತೆನು, ಶತ್ರುಶಿರದಲ್ಲಿ ಮೆಟ್ಟಿನಿಂತೆನು. ಕ್ಷತ್ರಬಂಧುಗಳಿಗೆ ವಿಹಿತವಾದ ರಣಮರಣವನ್ನಪ್ಪಿ ದಿವ್ಯಗತಿಯನ್ನು ಹೊಂದುವೆನು. ಇಂತಹ ವೀರಮರಣವಿನ್ನಾರಿಗೆ ಒದಗಿ ಬಂದಿದೆ ! ಮಹೀಮಂಡಲವನ್ನಾಳಿದೆನು. ಬೇಕಾದ ಭೋಗಗಳನ್ನನುಭವಿಸಿದೆನು. ಈಗ ನನ್ನ ಪುತ್ರಮಿತ್ರಾದಿಗಳನ್ನು ಕಲೆಯಲು ಸ್ವರ್ಗವನ್ನು ಸೇರಪೋಗುವೆನು. ನನ್ನ ಮರಣವನ್ನು

ನೋಡಿ, ನಾನು ನಿಷ್ಪಾಪನೆಂದು ತಿಳಿ ! ನಾನು ಮಾಡಿದ ದೋಷವೇನೋ ನನಗಂತೂ ಗೊತ್ತಿಲ್ಲ. ಕಪಟಯೋಧಿಗಳಾದ ಪಾಂಡವರು ರಣದಲ್ಲಿ ಉಳಿದರೂ, ನರಕದಿಂದ ಉಳಿಯರು.

ಅವರೇ ಆಳಲಿ ಈ ಭೂಮಿಯನ್ನು ! ಏನಿದೆ ಇಲ್ಲಿ ? ವೀರರೆಲ್ಲರು ಸತ್ತರು. ರತ್ನರಹಿತವು, ವೀರವರ್ಜಿತವು ಆದ ಬರಿಮಣ್ಣಿನ ರಾಜ್ಯವು ಅವರದೇ ಆಗಲಿ!" ಆಗ ಅಂಬರದಿಂದ ಪುಷ್ಪವೃಷ್ಟಿ ಆಯಿತು. ಗಂಧರ್ವರು ಪಾಡಿದರು. ಅಪ್ಸರೆಯರಾಡಿದರು. ಸಿದ್ಧರು 'ಸಾಧು ! ಸರಿಯಾಗಿದೆ !' ಎಂದು ನುಡಿದರು. ದುರ್ಯೋಧನನು ಅದನ್ನೆಲ್ಲವನ್ನೂ ಕಂಡು, ಭಗವನ್ನಿಂದೆಯೇ ಶ್ರೇಯಸ್ಸಾಧನವೆಂದು ನಿಶ್ಚಯಿಸಿದನು. ಇಲ್ಲದಿರೆ ಮಿಥ್ಯಾಜ್ಞಾನಿಗಳಿಗೆ ಅಂಧತಮಃಪ್ರಾಪ್ತಿಯು ಹೇಗಾದೀತು ? ಭಗವನ್ನಿಂದಕರನ್ನೂ ಭಗವದ್ಭಕ್ತ ನಿಂದಕರನ್ನೂ ದೇವತೆಗಳು ಪುಷ್ಪವೃಷ್ಟಿಯಿಂದ ಸತ್ಕರಿಸಿ, ತಮ್ಮ ಸ್ವರ್ಗಕ್ಕೆ ಕರೆಸುವುದಾದರೆ, ಇನ್ನು ಭಕ್ತಿ ಜ್ಞಾನವಿರಕ್ತಿಗಳನ್ನಾರು ವಾಂಛಿಸುವರು ? ಪರಮವಿಷ್ಣು ಭಕ್ತರಾದ ದೇವತೆಗಳು ಪರಮಪಾಪಿಯಾದ ದುರ್ಯೋಧನನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ, ಪಾಂಡವರನ್ನು ಹೀಯಾಳಿಸುವರೇ ? ಎಂದಿಗೂ ಇಲ್ಲ. ವಿಷ್ಣುದ್ವೇಷವೇ ಪುಷ್ಪವೃಷ್ಟಿಗೆ ಕಾರಣವೆಂದರೆ, ಅಂತೆಯೇ ಹರಿದ್ವೇಷಿಗಳಾದ ಜರಾಸಂಧ, ಪೌಂಡ್ರಕ, ಶಿಶುಪಾಲ, ಕಂಸ, ನರಕಾಸುರ, ದುಶ್ಶಾಸನರು ಸಾಯುವಾಗ ಪುಷ್ಪವೃಷ್ಟಿಯು ಏಕಾಗಲಿಲ್ಲ? ಪುಷ್ಪವೃಷ್ಟಿಯೇ ದುರ್ಯೋಧನನ ನಿರ್ದೋಷಿತ್ವಕ್ಕೆ ಸಾಕ್ಷಿ ಎಂದು ತಿಳಿದವರು, ಅವನು ಮಾಡಿದ ಜತುಗೃಹದಾಹ, ವಿಷದಾನ, ಪರದಾರಾಧಿಮರ್ಶನ, ಪರರಾಜ್ಯಾಪಹಾರ, ಯುದ್ಧಹತ ಮುಂತಾದ ಆತತಾಯಿಪಾಪಗಳಿಗೆ ಸಿದ್ಧರಾಗಬೇಕಾದೀತು! ದುರ್ಯೋಧನನ ಮಿಥ್ಯಾಜ್ಞಾನವನ್ನೂ ಹರಿದ್ವೇಷವನ್ನೂ ಸ್ಥಿರಪಡಿಸುವದಕ್ಕೆಂದೇ ಬೃಂದಾರಕರು ಸುಮವೃಷ್ಟಿಯನ್ನು ಭಗವತ್ಸಂಕಲ್ಪಾನುಸಾರವಾಗಿಯೇ ಸುರಿಸಿದರೆಂದು ತಿಳಿಯಬೇಕು.

ಶ್ರೀಕೃಷ್ಣನು 'ಸಕಲ ಸುಜನರೀ ವಿಷಯವನ್ನು ತಿಳಿಯಿರಿ ! ಪಾಂಡವರಿಂದ ಅಧರ್ಮವೆಂದಿಗೂ ನಡೆದದ್ದಿಲ್ಲ. ಧರ್ಮವಿದ್ದಲ್ಲಿ ನಾನಿರುವೆನು. ನಾನಿದ್ದಲ್ಲಿ ಜಯವೆಂದೂ ತಿಳಿಯಿರಿ ! ಇದು ಸತ್ಯ ! ಗದಾಪಾಣಿಯಾದ ಧಾರ್ತರಾಷ್ಟ್ರನು ತಲೆಕೆಳಗಾದ ಸಮಯದಲ್ಲಿ ಹೊಡೆದ ಭೀಮಸೇನನು ಗದಾಯುದ್ಧ ಮರ್ಯಾದೆಯನ್ನೂ ಊರುಭಂಗ ಪ್ರತಿಜ್ಞೆಯನ್ನೂ ರಕ್ಷಿಸಿರುವನು. ಶತ್ರುನಾಶವಾಯಿತು. ಕೃತಕೃತ್ಯರಾಗಿರುವಿರಿ. ನೀವೆಲ್ಲರು ನಡೆಯಿರಿನ್ನು ಶಿಬಿರಗಳಿಗೆ !' ಎಂದು ಪುನಃ ಧರ್ಮವಿಧಿಯನ್ನು ಸಾರಿದನು. ಇಷ್ಟು ಹೇಳಿದರೂ ಯುಧಿಷ್ಠಿರನು ಪುಷ್ಪವೃಷ್ಟಿ ದರ್ಶನದಿಂದ ಸಂಶಯಗ್ರಸ್ತನಾದನು ; ದುರ್ಯೋಧನನು ಅಧರ್ಮಹತನಾದನೆಂದು ಬಲರಾಮಾಶ್ವತ್ಥಾಮ ಸಂಜಯರು, ದುರ್ಯೋಧನನ ಸ್ನೇಹವಶರಾಗಿ ತಿಳಿದರು. ವಾಸುದೇವನ ವಚನದಿಂದ ಸಂಹೃಷ್ಟಾಂತರಂಗರಾಗಿ, ಸಕಲ ಸೃಂಜಯ ಪಾಂಚಾಲರೂ ಸಿಂಹನಾದಗಳನ್ನು ಮಾಡುತ್ತಾ ಶಿಬಿರಗಳಿಗೆ ತೆರಳಿದರು. ಶ್ರೀಕೃಷ್ಣ ಭೀಮಾರ್ಜುನರ ಪಾಂಚಜನ್ಯ, ಪೌಂಡ್ರ, ದೇವದತ್ತ ಧ್ವಾನಗಳು ಧರ್ಮವಿಜಯವನ್ನು ದಿಕ್ಕುವಿದಿಕ್ಕುಗಳಲ್ಲಿ ಪಸರಿಸಿದವು.

## ೭. ಗಾಂಧಾರೀ ಶಮನ

ಶ್ರೀ ವೈಶಂಪಾಯನನು ಶ್ರೀ ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಕೃತಕೃತ್ಯರಾದ ಪಾಂಡವರು ಶಿಬಿರಗಳಿಗೆ ಸೇರಿದರು. ಪರಿಘ ಬಾಹುಗಳಾದ ಪಾಂಚಾಲರು, ಸಿಂಹಸಂಹನನರಾದ ಸೃಂಜಯರು, ಯುಯುತ್ಸು ಸಾತ್ಯಕಿಯರು, ಧೃಷ್ಟದ್ಯುಮ್ನ ಶಿಖಂಡಿ ದ್ರೌಪದೇಯರು, ಇತರ ಸೈನಿಕರು ತಂತಮ್ಮ ಶಿಬಿರಗಳನ್ನು ಪ್ರವೇಶಿಸಿದರು. ಅನಂತರದಲ್ಲಿ ಪಾಂಡವರು ಕೌರವ ಶಿಬಿರವನ್ನು ಪ್ರವೇಶಿಸಿದರು. ಅಲ್ಲಿ ವಿಜನವಾದ ರಂಗಸ್ಥಲದಂತೆ ನೀರವವಾದ ಪಟಕುಟಿಗಳನ್ನು ಅಲ್ಲಿದ್ದ ಸ್ತ್ರೀಜನರನ್ನು ಅವರಿಗೆ ಕಾವಲಿದ್ದ ವರ್ಷವರರನ್ನು (ನಪುಂಸಕ ಸೇವಕರು) ವೃದ್ಧಾಮಾತ್ಯರನ್ನು ಕಂಡು, ಪಾಂಡವರು ರಥಗಳಿಂದ ಇಳಿದು ನಡೆದು ಬಂದರು.

ನಿತ್ಯಪ್ರಿಯಹಿತಂಕರನಾದ ಶ್ರೀಕೃಷ್ಣನು ಅರ್ಜುನನಿಗಿಂತೆಂದನು: 'ಅರ್ಜುನ ! ಗಾಂಡೀವದ ಗುಣವನ್ನಿಳಿಸು ! ಪಿಡಿತೂಣಗಳನ್ನು ಇಳಿ ರಥದಿಂದ; ನಾನು ಆಮೇಲೆ ಇಳಿಯುವೆನು !' ಎಂದ ಕೇಶವನ ಮಾತಿನಂತೆ, ಅರ್ಜುನನು ಗಾಂಡೀವಪಾಣಿಯಾಗಿ, ಅಕ್ಷಯ ತೂಣಗಳನ್ನೂ ಕೊಂಡು ರಥದಿಂದಿಳಿದನು. ಸರ್ವಜ್ಞನಾದ ಶ್ರೀಕೃಷ್ಣನು ಹಯರಶ್ಮಿಗಳನ್ನು ನೊಗೆಯಲ್ಲಿಟ್ಟು ಕೆಳಗಿಳಿದು ಬಂದನು. ಪದ್ಮಸುಂದರ ಪಾದಾರವಿಂದಗಳೆರಡು ಕೆಳಗಿಳಿಯಲು, ರಥವು ಇದ್ದಕ್ಕಿದ್ದಂತೆ ಉರಿದೆದ್ದು ಭಸ್ಮವಾಯಿತು. ಮೊದಲೇ, ಧ್ವಜದಿಂದ ಕಪಿರಾಜನು ಅಂತರ್ಧಾನವನ್ನು ಹೊಂದಿದ್ದನು. ದ್ರೋಣಕರ್ಣರ ದಿವ್ಯಾಸ್ತ್ರಗಳಿಂದ ಹೀಗಾಯಿತೆಂದು ಹೇಳಿ. ಶ್ರೀಕೃಷ್ಣನು ತನ್ನ ಸಾನಿಧ್ಯದಿಂದಲು, ಪ್ರಭಾವದಿಂದಲು, ಬ್ರಹ್ಮಾಸ್ತ್ರಾದಿಗಳು ಸುಮ್ಮನಿದ್ದು ತಾನು ಕೈಬಿಟ್ಟು ಬಂದುದರಿಂದ, ಈಗ ರಥವನ್ನು ಕುದುರೆಗಳನ್ನು ತೂಣೀರಾದಿ ಸಾಧನಜಾತವನ್ನು ಸುಟ್ಟು ಬೂದಿ ಮಾಡಿದವು ಎಂದು ತಿಳಿಸಿದನು.

'ಧರ್ಮರಾಜ ! ಪ್ರಬಲ ಶತ್ರುಗಳಿಂದ ಪಾರಾದೆ ! ದೈವಾನುಗ್ರಹದಿಂದ ನೀನು, ಭೀಮಸೇನ, ಅರ್ಜುನ, ನಕುಲ, ಸಹದೇವರು ಅಕ್ಷತಗಾತ್ರರಾಗಿರುವಿರಿ ! ನಿಹತ ಶತ್ರುಮಂಡಲವಾದ ಭೂಖಂಡವನ್ನು ಅಖಂಡನಂತೆ ಆಳು ! ಹಿಂದೆ ಉಪಪ್ಲಾವ್ಯದಲ್ಲಿ ನೀನಾಡಿದ ಮಾತನ್ನು ನೆನೆ ! 'ಕೃಷ್ಣ! ಈ ನನ್ನ ತಮ್ಮನು, ನಿನ್ನ ಭಾವ ಮೈದುನನೂ, ಸ್ನೇಹಿತನೂ ಅಹುದು. ಇವನನ್ನಿಂದು ನನ್ನ ಪ್ರಾಣವನ್ನಂತೆ ನಿನ್ನ ಕೈಯಲ್ಲಿಟ್ಟು ರಕ್ಷಿಸೆಂದು ಬೇಡುವೆನು' ಎಂದ ನಿನ್ನ ಮಾತಿನಂತೆ ಇವನನ್ನು ಶತ್ರುಜನರ ಅಸ್ತ್ರಶಸ್ತ್ರಘಾತಗಳಿಂದ ಸಂರಕ್ಷಿಸಿ, ಇಂದು ಮತ್ತೆ ತಂದು, ನಿನಗೊಪ್ಪಿಸುತ್ತಿರುವೆನು. ವಿಜಯಿಯಾದೆ ! ಭೀಮಸೇನನಿಂದ ಜಯಿಯಾದೆ ! ಯಮಳರಿಂದ ಸುಕ್ಷೇಮಿಯಾದೆ ! ಎಲ್ಲವನ್ನೂ ಕಂಡು ನಾನು ಸುಖಿಯಾದೆನು. ನನ್ನಾನಂದಕ್ಕೆ ಪಾರವಿಲ್ಲ !' ಎಂದ ನಿತ್ಯಾನಂದ ಮಹೋದಧಿಗೆ, ಕೃತಜ್ಞನಾದ ಧರ್ಮರಾಜನು ನಮಿಸಿ, ಬಾಷ್ಪಾಕುಲನೇತ್ರನು, ಪುಲಕಾಂಚಿತಗಾತ್ರನು ಆಗಿ, ಇಂತೆಂದನು:

"ಶ್ರೀಕೃಷ್ಣ ! ಪ್ರತ್ಯಕ್ಷವಾಗಿ ಕಂಡೆನು ನಿನ್ನ ಮಹಿಮೆಯನ್ನು. ಭೀಷ್ಮದ್ರೋಣ ಕರ್ಣರ ಬ್ರಹ್ಮಾಸ್ತ್ರಾದಿ ದಿವ್ಯಾಸ್ತ್ರಗಳನ್ನು ವ್ಯರ್ಥಗೊಳಿಸಲು ಜಗತ್ಪ್ರಭುನಾದ ನಿನ್ನ ಹೊರತಿನ್ನಾರು ಸಮರ್ಥರು ? ನಿನ್ನ ದಯದಿಂದ ಶತ್ರುಸಮೂಹವು ನಿಹತವಾಯಿತು. ನಿನ್ನ ಅನುಗ್ರಹದಿಂದ ವಿಜಯವು ಕರಗತವಾಯಿತು. ಪರಮೈಶ್ವರ್ಯಧುರ್ಯ ! ನಿನಗೆ ನಮೋನಮಃ ಕೇಳಿರುವೆನು. ನಿನ್ನ ಮಹಾಮಹಿಮೆಯನ್ನು, ಶ್ರೀಕೃಷ್ಣದ್ವೈಪಾಯನರ ಮುಖದಿಂದ ! ಅರಿತಿರುವೆನು ನೀನು ಜಗಜ್ಜನ್ಮಾದಿ ಕಾರಣನೆಂದು, ನಿನ್ನ ಕರ್ಮಗಳು ಅಮೋಘಗಳು ! ನಿನ್ನ ಲೀಲೆಗಳು ಜನಪಾವನಗಳು ! ನಿನ್ನ ತೇಜವು ಸೂರ್ಯಾದಿಭಾಸಕವು ! ನಿನ್ನ ಗುಣಗಳು ಅನಂತ ! ನಿನ್ನ ಮಹಿಮೆಯು ಅಪ್ರಮೇಯವು, ಧರ್ಮವಿದ್ದೆಡೆ ನೀನು ; ನೀನಿದ್ದೆಡೆ ವಿಜಯವು. ನಿನ್ನಿಂದ ಸಂಕಲ್ಪಿತವಾದ ಧರ್ಮವಿಜಯವು ಭೀಮಸೇನಾರ್ಜುನರಿಂದ ಸಂಪಾದಿತವಾಯಿತು.

ಕೌರವ ಶಿಬಿರದಲ್ಲಿದ್ದ ರಜತ, ಸುವರ್ಣ, ರತ್ನ, ಮಣಿ, ಮೌಕ್ತಿಕಗಳನ್ನೂ ಕಂಬಲಾಜಿನದುಕೂಲಗಳನ್ನು ದಾಸಾದಾಸೀನಿವಹವನ್ನು ಸ್ವೀಕರಿಸಿ, ವಿಜಿತಾರಿಗಳಾದ ವಿಜಯಾದಿಗಳು ಅಲ್ಲೇ ನೆಲೆಸಿದರು. ಆಗ ಶ್ರೀಕೃಷ್ಣನು 'ಮಂಗಲಾರ್ಥವಾಗಿ ಶಿಬಿರವನ್ನು ಬಿಟ್ಟು ಓಘವತೀನದಿಯ ಸ್ನಾನಕ್ಕೆ ಹೊರಡಿರೆಂದು ಆಜ್ಞಾಪಿಸಿದನು. ಅಂತೆಯೇ ಪಾಂಡವರು ಶಿಬಿರವನ್ನು ಬಿಟ್ಟು ದೂರ ಸರಿದು, ಸ್ನಾತರಾಗಿ ಬಂದು, ಆ ರಾತ್ರಿಯನ್ನು ಶಿಬಿರದಲ್ಲಿ ಕಳೆಯಲೆಣಿಸಿದರು. ಧರ್ಮರಾಜನು ಗಾಂಧಾರೀಧೃತರಾಷ್ಟ್ರರನ್ನು ಸಮಾಧಾನ ಪಡಿಸಲೆಣಿಸಿ, ತಾನಾಗಿ ಹೋಗಲು ಹೆದರಿ, ಶ್ರೀಕೃಷ್ಣನನ್ನು ಕಳಿಸಿದನು.

ದುರ್ಯೋಧನನು ಹತನಾದನು. ಆದರೆ ಗದಾಯುದ್ಧ ಮರ್ಯಾದೆಯನ್ನು ಮೀರಿ, 'ಅಧರ್ಮದಿಂದ ಅವನನ್ನು ಕೊಂದೆವೆಂಬ ಸಂಶಯವು ಧರ್ಮರಾಜನನ್ನು ಪೀಡಿಸುತ್ತಿತ್ತು. ಆದುದರಿಂದ ಆತನು ಗಾಂಧಾರೀ ಧೃತರಾಷ್ಟ್ರರನ್ನು ನೋಡಿ, ಮಾತಾಡಲು ಹೆದರಿದನು. ಘೋರವಾದ ತಪವನ್ನು ಮಾಡುತ್ತಾ(ಪತಿಯಂತೆ ಅಂಧಕಲ್ಪಳಾಗಿ) ಕಾಲ ಕಳೆವ ಗಾಂಧಾರಿಯು ತನ್ನ ತಪಶ್ಶಕ್ತಿಯಿಂದ ಮೂರು ಲೋಕಗಳನ್ನು ಸುಡಬಲ್ಲಳೆಂದು ಶಂಕಿಸಿ, ಧರ್ಮರಾಜನು ಭಯ ಶೋಕಸಮನ್ವಿತನಾದನು. 'ವಾಸುದೇವ ! ಗಾಂಧಾರಿಯನ್ನು ಸಮಾಧಾನ ಪಡಿಸುವುದು ಪ್ರಥಮಕರ್ತವ್ಯವು. ಆಕೆಯು ಪುತ್ರವಧ ಶ್ರವಣದಿಂದ ಕ್ರೋಧದೀಪ್ತಳಾಗಿರುವಳು. ಗೋವಿಂದ ! ನಿನ್ನ ಪ್ರಸಾದದಿಂದ ನಿಹತಕಂಟಕವಾದ ರಾಜ್ಯವನ್ನು ಗೆದ್ದೆವು. ಆದರೂ ನಮ್ಮ ಹಣೆಯಲ್ಲಿ ಶಾಂತಿಸುಖಗಳು ಬರೆಯಲ್ಪಟ್ಟಿಲ್ಲವೆಂದು ತೋರುತ್ತಿದೆ. ಹಿಂದೆ ದೇವಾಸುರ ಯುದ್ಧದಲ್ಲಿ ಇಂದ್ರನಿಗೆ ನೆರವಾಗಿ ನಿಂತ ಉಪೇಂದ್ರನಂತೆ, ನೀನು ನಮಗೆ ಸಹಾಯವಾಗಿ ನಿಂತು ಕಾಪಾಡಿದೆ! ನಮಗಾಗಿ ನಾನಾ ಶಸ್ತ್ರಪ್ರಹರಣಗಳನ್ನು ಸಹಿಸಿದೆ ! ಅನೇಕ ಪರುಷ ವಚನಗಳನ್ನು ಆಲಿಸಿದೆ! ದುರ್ಯೋಧನನು ಹತನಾಗಿ, ಆ ನಿನ್ನ ನಮ್ಮ ಪ್ರಯತ್ನಗಳೆಲ್ಲವೂ ಸಫಲವಾದವು.

ಅಂತು ಕಷ್ಟದಿಂದ ಸಂಪಾದಿಸಿದ ವಿಜಯರಾಜ್ಯಗಳು ಗಾಂಧಾರೀ ಕ್ರೋಧಾಗ್ನಿಯಲ್ಲಿ ಬಿದ್ದು ಹಾಳಾಗದಂತೆ ಮಾಡುವುದು ನಿನ್ನ ಕೈಲಿದೆ. ಮಹಾತಪಶ್ಶಾಲಿನಿ

ಯಾದ ಗಾಂಧಾರಿಯು ಪುತ್ರಪೌತ್ರವಧದಿಂದ ಕ್ರುದ್ಧಳಾಗಿ ಶಪಿಸಿಬಿಟ್ಟರೆ ನಾವು ಉಳಿಯಲಾರೆವು. ಆದುದರಿಂದ ನೀನಾಗಿ, ಹೋಗಿ, ಆಕೆಯ ಕೋಪವನ್ನಿಳಿಸು! ಪುತ್ರಶೋಕವನ್ನಳಿಸು ! ನಮ್ಮನ್ನು ಉಳಿಸು ! ಈ ಕಾರ್ಯವನ್ನು ನೆರವೇರಿಸಲು, ನಿನ್ನ ಹೊರತಿನ್ನಾರೂ ಸಮರ್ಥರಲ್ಲ. ನೀನು ಕರ್ತನಿರುವೆ ಜಗಗಳಿಗೆ ! ಸಂಹರ್ತನಿರುವೆ ! ಹೇತುಸಮ್ಮಿತ ವಚನಗಳಿಂದ ಆಕೆಯನ್ನು ಶಾಂತಪಡಿಸು ! ಪಿತಾಮಹನಾದ ಪೂಜ್ಯ ವೇದವ್ಯಾಸನೂ ಅಲ್ಲಿಗೆ ಬರುವನು. ನೀವಿಬ್ಬರೂ ಕೂಡಿ, ಪಾಂಡವರ ಹಿತವನ್ನು ಸಾಧಿಸಿ" ಎಂದು ಪ್ರಾರ್ಥಿಸಿದ ಧರ್ಮಜನ ಮಾತಿನಂತೆ, ಶ್ರೀಶನು, ದಾರುಕನು ತಂದ ದಿವ್ಯರಥವನ್ನೇರಿ, ಹಸ್ತಿನಾವತಿಗೆ ತೆರಳಿದನು.

ಧೃತರಾಷ್ಟ್ರನ ಅಂತಃಪುರವನ್ನು ಸೇರಿ, ರಥದಿಂದಿಳಿದು, ಕೇಶವನು ತನ್ನ ಆಗಮನವನ್ನು ತಿಳಿಸಿ, ಪ್ರವೇಶಿಸಿದನು. ಋಷಿರೂಪ ಭಗವಂತನೂ ಅಲ್ಲೇ ಬಂದಿದ್ದನು. ಲೋಕೇಶನು ಲೋಕಾನುಕರಣನಾಗಿ ಕೃಷ್ಣದ್ವೈಪಾಯನನಿಗೆ ವಂದಿಸಿ, ಗಾಂಧಾರೀ ಧೃತರಾಷ್ಟ್ರರಿಗೆ ಅಭಿವಾದಿಸಿ, ರಾಜನ ಸಮೀಪದಿ ಕೂತು, ಶೋಕದಿಂದ ಕಣ್ಣೀರಿಟ್ಟು ಕಾಲಕ್ಕೆ ತಕ್ಕಂತೆ ಇಂತೆಂದನು: 'ರಾಜನ್ ! ನಿನಗೆಲ್ಲವೂ ಗೊತ್ತಿದೆ. ನಡೆದುದನ್ನು ಪುನರುಚ್ಚರಿಸಬೇಕಿಲ್ಲ. ಪಾಂಡವರ ಅಪರಾಧವೇನೂ ಇಲ್ಲ. ನಿನ್ನ ಮನಸ್ಸಿಗೆ ಅನುಕೂಲಕರವಾಗಿ ನಡೆದ ತಮ್ಮನ ಮಕ್ಕಳಿಗೆ ಅನ್ಯಾಯವಾಯಿತೆಂದು, ನಿನಗೆ ತಿಳಿಯದಿಲ್ಲ. ಧರ್ಮವತ್ಸಲನಾದ ನೀನು ಅವರನ್ನು ಪುತ್ರರಂತೆ ಸಾಕಿ ಸಲಹಿದೆ ! ಅಣ್ಣತಮ್ಮಂದಿರ ಕಲಹವನ್ನು ನಿಲ್ಲಿಸಿದ್ದರೆ, ಸಕಲ ಕ್ಷತ್ರಕುಲ ನಾಶವಾಗುತ್ತಿದ್ದಿಲ್ಲ. ದ್ಯೂತದಲ್ಲಿ ಮೋಸಗಾರನಿಗೆ ಸೋತು, ಸಮಯದಂತೆ ವನವಾಸವನ್ನೂ ಅಜ್ಞಾತವಾಸವನ್ನೂ ಮಾಡಿ, ಇನ್ನೂ ಹೇಳಲಾಗದ ಬಹು ಕ್ಲೇಶಗಳನ್ನು ಪಟ್ಟು, ಯಾಚಿಸಿದ ಮಕ್ಕಳಿಗೆ ಐದು ಗ್ರಾಮಗಳನ್ನಾದರೂ ಕೊಡಿಸಲಾರದೆ ಹೋದೆ ! ನಾನು ಯುದ್ಧವಾಗಬಾರದೆಂದು ಪಟ್ಟ ಪ್ರಯತ್ನವು ನಿನ್ನ ಮನಸ್ಸಿಗೆ ಬರಲಿಲ್ಲ. ಭೀಷ್ಮಬಾಹ್ಲೀಕ, ಸೋಮದತ್ತ, ಕೃಪ, ದ್ರೋಣ, ವಿದುರರು ಹೇಳಿದ ಹಿತನುಡಿಗಳನ್ನು ಕಾಲಮಹಿಮೆಗೊಳಗಾಗಿ ಕೇಳದೆ ದುಷ್ಪರಿಣಾಮವನ್ನು ಅನುಭವಿಸಬೇಕಾಯಿತು. ಉಭಯಸೇನೆಗಳೂ ನಷ್ಟವಾದವು. ಕಾಲೋಪಹತಚಿತ್ತರಿಗೆ ಹೀಗೆ ಅಜ್ಞಾನವು ಕವಿದು ಮುತ್ತುವುದು. ನಿನ್ನಂತಹ ಪ್ರಾಜ್ಞನೂ ಮೂಢನಂತೆ ನಡೆದನೆಂದರೆ, ದೈವಸಂಕಲ್ಪಕ್ಕೆ ಎದುರಿಲ್ಲವೆಂದು ತೋರುತ್ತಿದೆ.

ಮಹಾತ್ಮರಾದ ಪಾಂಡವರ ತಪ್ಪು ಎಳ್ಳಷ್ಟೂ ಇಲ್ಲವೆಂದು ನೀನೆಣಿಸಬೇಕು ! ತಿಳಿದು ಆಲೋಚಿಸಿ ಆತ್ಮದೋಷವನ್ನೂ, ಪರಗುಣವನ್ನೂ ಸ್ಮರಿಸಿ, ಪಾಂಡವರನ್ನು ಕ್ಷಮಿಸು ; ಅಸೂಯಾ ದ್ವೇಷಗಳನ್ನು ವರ್ಜಿಸು ! ನಿನಗೂ, ಗಾಂಧಾರಿಗೂ ಗತಿಯು ಪಾಂಡವರೇ ಆಗಿರುವರು. ಅವರಿಂದ ನಿನ್ನ ಕುಲವಂಶಗಳು ಬೆಳೆಯಬೇಕಾಗಿವೆ. ಅವರಿಂದ ನಿಮಗೆ ಪಿಂಡಾದಿ ಪಾರಲೌಕಿಕ ಲಾಭಗಳಾಗಬೇಕಾಗಿವೆ. ಒಳ್ಳೆಯ ಮನಸ್ಸಿನಿಂದ ಬರುವ ಪಾಂಡವರನ್ನು ಒಳ್ಳೆಯ ಮನಸ್ಸಿನಿಂದ ಕರೆದು ಪಾಲಿಸು ! ಬಿಡು ದುಃಖವನ್ನು! ಧರ್ಮರಾಜನಂತಹ ಸಜ್ಜನನಿಲ್ಲ. ಅವನಿಗೆ ನಿನ್ನಲ್ಲಿ ಅಪಾರ ಗೌರವಾದರ

ಭಕ್ತಿಗಳಿವೆ. ಅವನು ಯುದ್ಧದಲ್ಲಿ ನಡೆದ ಬಂಧುಹತ್ಯೆಗಾಗಿ ಸದಾ ಶೋಕಿಸುತ್ತಿರುವನು. ನಿಮ್ಮನ್ನು ನೆನೆದು ನಿಮ್ಮ ಪುತ್ರಶೋಕಕ್ಕೆ ಕಾರಣನಾದೆನೆಂಬ ಚಿಂತೆಯಿಂದಲು, ನಿಮ್ಮನ್ನು ಕಾಣಲು ಲಜ್ಜೆಯಿಂದಲು, ಈಗ ತಾನಾಗಿ ಬರದೆ ನನ್ನನ್ನು ಕಳಿಸಿ, ಕ್ಷಮಾ ದಯೆಗಳನ್ನು ಬೇಡುತ್ತಿರುವನು.

ಅಂಬ! ಗಾಂಧಾರೀ ! ಕೇಳೆನ್ನ ಮಾತನ್ನು ಮನಸ್ಸಮಾಧಾನದಿಂದ ! ನಿನಗೆ ಸಮಳಾದ ಶುಭ ಪತಿವ್ರತೆಯನ್ನು ನಾನು ಕಂಡಿಲ್ಲ. ಅಂದು ರಾಜಸಭೆಯಲ್ಲಿ ನಾನು ಕೇಳುತ್ತಿರಲು ನೀನಾಡಿದ ಬುದ್ಧಿವಾದದ ಮಾತನ್ನು ಯಾವ ಬುದ್ಧಿವಂತನು ಮೆಚ್ಚದಿರುವನು ? ಉಭಯಪಕ್ಷಗಳಿಗೆ ಹಿತವಾಗಲೆಂದು ನೀನಂದ ಮಾತು ನಿನ್ನ ನಂದನರಿಗೆ ರುಚಿಸಲಿಲ್ಲ. ನಿನ್ನ ವಚನಗಳೆಲ್ಲವೂ ಸತ್ಯವಾದವು. ಧರ್ಮವಿದ್ದಲ್ಲಿ ಜಯವೆಂದ ನಿನ್ನ ಸತ್ಯವಚನದಿಂದ ಧರ್ಮರಾಜನು ವಿಜಯವಂತನಾಗಿರುವನು. ಸುಮ್ಮನೆ ಅತ್ತು ಫಲವಿಲ್ಲ. ಆದುದಕ್ಕೆ ಶೋಕಿಸಬೇಡ! ನಿನ್ನ ಪಾದಸೇವಾ ಕಾತರರಾಗಿರುವ ಪಾಂಡವರನ್ನು ಕೃಪೆದೋರಿ, ಆಶೀರ್ವದಿಸು ! ಸಿಟ್ಟಾದರೆ, ಕಣ್ತೆರೆದು, ಚರಾಚರ ಜಗವನ್ನು ಸುಡಬಲ್ಲೆ! ಅಂತಹ ತಪೋಬಲ ನಿನ್ನದು ! ಸಜ್ಜನರನ್ನು ಶಪಿಸುವುದರಿಂದ ಅದನ್ನು ವ್ಯರ್ಥವಾಗಿ ಕೆಡಿಸಬೇಡ !"

ಗಾಂಧಾರಿಯು ಶ್ರೀಕೃಷ್ಣನ ಮಾತುಗಳೆಲ್ಲ ಯಥಾರ್ಥವೆಂದರಿತು, 'ನಿಜ ಕೃಷ್ಣ ! ನೀನಂದಂತೆ ಪಾಂಡವರ ತಪ್ಪಿಲ್ಲ. ಆಧಿಯಿಂದ ನೊಂದು, ಪುತ್ರಶೋಕದಿಂದ ಬೆಂದ ನನ್ನ ಬುದ್ಧಿಗೆ ಮಂಕುಕವಿದಿತ್ತು. ಈಗ ನಿನ್ನ ವಚನ ಪ್ರಕಾಶದಿಂದ ನನಗೆ ವಿವೇಕವು ಮೂಡಿಬಂತು. ಗೋವಿಂದ ! ಮುದುಕರು, ಹತಪುತ್ರರು, ವಿಗತಬಂಧುಗಳು ಆದ ನಮಗೆ ನೀನೇ ಗತಿಯು ! ಪಾಂಡವರೇ ನಮ್ಮನ್ನು ಸಂರಕ್ಷಿಸಬೇಕಲ್ಲದೆ ಮತ್ತಾರಿರುವರು ? ' ಎಂದು, ವಸನಾಂಚಲದಿಂದ ಮುಖವನ್ನು ಮುಚ್ಚಿ ರೋದಿಸಿದಳು.

ಪುತ್ರಶೋಕದಿಂದ ಸಂತಪ್ತಳಾಗಿ ಅಳುವ ಗಾಂಧಾರಿಯನ್ನು ಶ್ರೀಕೃಷ್ಣನು ಹೇತುಸಮ್ಮಿತ ವಚನಗಳಿಂದ ಆಶ್ವಾಸಿಸಿ, ದ್ರೌಣಿಯ ದುರ್ಭಾವನೆಯನ್ನು ನೆನೆದು, ತನ್ನ ಭಕ್ತರಾದ ಪಾಂಡವರ ಯೋಗಕ್ಷೇಮಗಳನ್ನು ರಕ್ಷಿಸಲು, ತ್ವರೆಯಿಂದ ರಥವೇರಿ ಹೊರಟನು. ವಿಷಯವನ್ನರಿತು ಧೃತರಾಷ್ಟ್ರನು, 'ಶ್ರೀಕೃಷ್ಣ ! ಬೇಗ ಹೊರಡು ! ಅಶ್ವತ್ಥಾಮನ ಕ್ರೂರಹಿಂಸೆಯಿಂದ ಪಾಂಡವರನ್ನು ಕಾಪಾಡು ! ಆಗಲಿ ! ಮತ್ತೊಮ್ಮೆ ಪಾಂಡವರಿಂದ ಕೂಡಿಬಂದು, ನಿನ್ನ ದರ್ಶನವನ್ನು ಕೊಡು !' ಎಂದು ಕಳಿಸಿದನು.

ಶ್ರೀಕೃಷ್ಣನು ಕೃತಕೃತ್ಯನಾಗಿ ಸಾಗಿ, ಪಾಂಡವರ ಶಿಬಿರವನ್ನು ಸೇರಿ, ಅವರಿಗೆ ಎಲ್ಲ ವಿಷಯವನ್ನೂ ತಿಳಿಸಿ, ಮನಶ್ಶಾಂತಿಯನ್ನಿತ್ತು ಆ ರಾತ್ರಿಯನ್ನು ಕೌರವಶಿಬಿರದಲ್ಲೇ ಪಾಂಡವರಿಂದ ಕೂಡಿ, ಕಳೆದನು.

## ೮. ಅಶ್ವತ್ಥಾಮಾಭಿಷೇಕ

ವೈಶಂಪಾಯನನು ಜನಮೇಜಯನಿಗೆ ಪೇಳಿದನು :

'ಧೃತರಾಷ್ಟ್ರನು ಪುತ್ರವ್ಯಸನ ಪೀಡಿತನಾಗಿ 'ಸಂಜಯ ! ನನ್ನ ಮಗನು ಸಕ್ಥಿದೇಶದಲ್ಲಿ ಭಗ್ನನಾಗಿ ಭೂಮಿಯಲ್ಲಿ ಬಿದ್ದನೆಂದೆ. ಅಂತು ನರಳುವವನನ್ನು ಶಿರದಲ್ಲಿ ಕಾಲಿಂದ ಒದ್ದನಲ್ಲ ವೃಕೋದರನು ! ಆಹಾ ! ಎಂತಹ ಅವಮಾನ ! ಬಹುಮಾನಿಯಾದ ನನ್ನ ಪುತ್ರನೇನೆಂದನು ? ಏನು ಮಾಡಿದನು ? ಪಾಂಡವರ ಸಹಜ ವೈರಿಯು, ಅತಿಕೋಪನು ಆದ ದುರ್ಯೋಧನನಿಗೆಂತಹ ವ್ಯಸನವು ಒದಗಿತು!' ಎಂದು ಕೇಳಿದನು.

ಸಂಜಯನಿಂತೆಂದನು : 'ರಾಜನ್ ! ಎಲ್ಲವನ್ನೂ ಹೇಳುವೆನು ಕೇಳು ! ತೊಡೆಮುರಿದು, ಮಣ್ಣಲ್ಲಿ ಹೊರಳಾಡುವ ಮಹಾರಾಜನನ್ನು ಕಂಡು, ಶೋಕಾಕುಲನಾಗಿ ನಾನು ಸಮೀಪಿಸಿದೆನು. ಅವನು ಕೆದರಿದ ಕೂದಲನ್ನು ಸರಿಸಿ, ದಶ ದಿಕ್ಕುಗಳಿಗೂ ನೋಡಿ, ಉರಗದಂತೆ ಉಸಿರಿಡುತ್ತಾ ನನ್ನನ್ನು ಕರೆದನು. ಕೈಗಳನ್ನೂರಿ ಕೂತು, ತಲೆಕೂದಲು ಹಾರುತ್ತಿರಲು, ಹಲ್ಲುಕಡಿದು, ಕೆಂಗಣ್ಣನಾಗಿ, ಪಾಂಡವರನ್ನು ನಿಂದಿಸಿದನು. 'ಸಂಜಯ ! ನೋಡು ನನ್ನ ದೀನಾವಸ್ಥೆಯನ್ನು ! ಎಂತಹ ವೀರವರರಿದ್ದರು ನನ್ನ ಸೇನೆಯಲ್ಲಿ ! ಯಾರಿದ್ದರೇನು ಮಾಡಿದರು ? ಭೀಷ್ಮ, ದ್ರೋಣ, ಕರ್ಣ, ಶಲ್ಯ, ಕೃಪ, ಶಕುನಿ, ಅಶ್ವತ್ಥಾಮ, ಎಲ್ಲರೂ ಇದ್ದೂ ನನ್ನ ಪಾಲಿಗೆ ಯಾರೂ ಇಲ್ಲದಂತಾಯಿತು. ಕಾಲವು ದುರತಿಕ್ರಮವಾಗಿದೆ ! ಇಲ್ಲದಿರೆ ಏಕಾದಶ ಚಮೂನಾಥನಾದ ಕೌರವೇಶನಿಗಿಂತಹ ಕಷ್ಟದೆಶೆ ಬರುತ್ತಿತ್ತೆ ? ಇನ್ನೂ ಉಳಿದ ನನ್ನವರಿಗೆ ನನ್ನ ಸಂದೇಶವನ್ನು ಮುಟ್ಟಿಸು !

ಭೀಮಸೇನನು ಕೋಪದಿಂದ ನನ್ನ ತಲೆಯನ್ನು ಒದ್ದನು. ಇಂತಹ ಹೇಯ ಕರ್ಮವನ್ನೆಸಗಿದವನು ಧರ್ಮಜ್ಞನೇ ? ಅಂತಹವನನ್ನು ಯಾರಾದರೂ ಗೌರವಿಸುವರೇ? ಇರಲಿ ! ನನ್ನ ಜನನೀಜನಕರಿಗೆ ಬರಬಾರದ ದುಃಖವು ಬಂತು. ದುಃಖಾರ್ತರಾಗಿ ರೋದಿಸುವ ಗಾಂಧಾರೀ ಧೃತರಾಷ್ಟ್ರರಿಗೆ ನನ್ನ ವಿಜ್ಞಪ್ತಿಯನ್ನು ತಿಳಿಸು !

ಬೇಕಾದಷ್ಟು ಸುಖಗಳನ್ನನುಭವಿಸಿದೆನು. ಭೃತ್ಯರನ್ನಾಳಿದೆನು. ಸಸಾಗರ ಮಹೀಮಂಡಲವನ್ನು ಪಾಲಿಸಿದೆನು. ಶತ್ರುಶವಗಳನ್ನು ತುಳಿದು, ಶಿರದಿ ಕಾಲಿಟ್ಟು ಮೆರೆದೆನು. ಮಿತ್ರರಿಗೆ ಪ್ರಿಯವನ್ನು ಸುರಿದೆನು. ರಣಮರಣವನ್ನು ಪೊಂದಿ, ಸ್ವರ್ಗವನ್ನು ಸೂರೆಗೊಳ್ಳುವೆನು. ಇಂತಹ ಸನ್ಮರಣವು ದುರ್ಲಭವಾಗಿದೆ. ಧರ್ಮ ಧನಕಾಮಗಳನ್ನು ಇಹದಲ್ಲಿ ಸೇವಿಸಿ, ಪರಲೋಕ ಸುಖಕ್ಕಾಗಿ ಸಾಗುವ ನನಗೆ, ನನ್ನ ಚಿಂತೆಯಿಲ್ಲ. ಪರರ ಅಂಗಳದಲ್ಲಿ ಅವರಿಡುವ ಅನ್ನಕ್ಕಾಗಿ ಬಾಯ್ಬಿಡುವ ನಮ್ಮ ಜನನೀಜನಕರಿಗಾಗಿ ಚಿಂತಿಸುತ್ತಿರುವೆನು.

ವಿಧಿಪೂರ್ವಕವಾಗಿ ಓದಿದೆನು, ಯಥೇಚ್ಛವಾಗಿ ಕೊಟ್ಟೆನು, ನಿಶ್ಶಂಕನಾಗಿ ಮೆರೆದೆನು. ದಂಡಿಯಾಗಿ ಕೂಡಿಟ್ಟೆನು. ಇದ್ದಷ್ಟು ಕಾಲ ನಿರ್ಭಯನಾಗಿ ಬದುಕಿದೆನು. ಒಳ್ಳೆಯ ವೀರಮರಣವೂ ಒದಗಿಬಂತು. ನನ್ನ ಸಮರಿನ್ನಾರು? ಶತ್ರುಗಳನ್ನು ಅಗ್ನಿಯಿಂದಲು

ವಿಷದಿಂದಲು, ಮೋಸದಿಂದಲು, ಮಲಗಿದ್ದಾಗಲು, ಮೈಮರೆತಿದ್ದಾಗಲು ಕೊಲ್ಲಬಹುದೆಂದು ನೀತಿಶಾಸ್ತ್ರವಿದೆ. ನನ್ನ ಶತ್ರುಗಳು ದೈವಬಲವಿದ್ದು ಸಾಯಲಿಲ್ಲ. ಅವರೇ ಮೋಸದಿಂದ ನನ್ನನ್ನು ಕೊಂದರು. ಸಂಜಯ ! ಅಶ್ವತ್ಥಾಮನನ್ನು, ಕೃಪನನ್ನು, ಕೃತವರ್ಮನನ್ನು ಕಂಡರೆ, "ಪಾಂಡವರಂತಹ ಅಧರ್ಮಿಗಳಿಲ್ಲ, ಅವರನ್ನು ನಂಬಿ ಕೆಡಬೇಡಿ!" ಎಂದು ನನ್ನ ಮಾತಾಗಿ ತಿಳಿಸು ! '

ಆಗ ದುರ್ಯೋಧನನು ಚಾರರನ್ನು ಕರೆದು ಅವರಿಗಿಂತೆಂದನು: 'ಅಧರ್ಮದಿಂದ ಕೌರವೇಶನು ನಿಹತನಾದನೆಂದು ಸಾರಿರಿ! ನಾನು ಸಾಯುತ್ತಿರುವೆನು. ಸ್ವರ್ಗದಲ್ಲಿರುವ ನನ್ನವರನ್ನು ಸೇರಪೋಗುತ್ತಿರುವೆನು; ಅಳಬೇಡಿ ! ಕೇಳಿ ! ದ್ರೋಣ, ಕರ್ಣ, ಶಲ್ಯ, ವೃಷಸೇನ, ಶಕುನಿ, ಜಲಸಂಧ, ಭಗದತ್ತ, ಸೈಂಧವ, ಲಕ್ಷ್ಮಣ ಮುಂತಾದ ವೀರರು ಸಾವಿರಾರು ಬಂಧುಮಿತ್ರರು ನನ್ನನ್ನು ಕರೆಯುತ್ತಿರುವರು. ಭ್ರಾತೃಗಳನ್ನೆಲ್ಲರನ್ನೂ ಗಂಡನನ್ನೂ ಕಳೆದುಕೊಂಡ ನನ್ನ ತಂಗಿ, ದುಶ್ಶಲೆ ಎಷ್ಟು ದುಃಖಿಸುತ್ತಿರುವಳೋ ಪಾಪ ! ಸೊಸೆಯರಿಂದ ಕೂಡಿ ನಮ್ಮ ತಾಯಿಯು ಎಷ್ಟು ರೋದಿಸುವಳೋ ! ನಮ್ಮಪ್ಪನನ್ನು ಯಾರಿನ್ನು ಪೋಷಿಸುವರು ! ಏನು ಗತಿ ಅವರಿಗೆ ! ಭಾನುಮತಿ ಇನ್ನು ಬಹುಕಾಲ ಬದುಕಲಾರಳು! ನನ್ನ ಮಿತ್ರನಾದ ಚಾರ್ವಾಕನಿಗೆ ನನ್ನ ದುರ್ದಶೆ ಗೊತ್ತಾದರೆ ಸಾಕು ! ಅವನು ನನ್ನ ಮರಣದ ಸೇಡನ್ನು ತೀರಿಸಿಬಿಡುವನು. ಸಮಂತಪಂಚಕದಲ್ಲಿ, ರಣರಂಗದಲ್ಲಿ ಸತ್ತ ನನಗೆ ಪುಣ್ಯಲೋಕಗಳು ಸ್ಥಿರವಾಗಿವೆ !' ಆ ಮಾತನ್ನಾಲಿಸಿ, ಚಾರರು 'ಹೋ' ಎಂದು ಅತ್ತರು. ಅವರಿಗೆ ಜಗವೇ ಶೂನ್ಯವಾಗಿ ಕಾಣಿಸಿತು. ಅವರು ದ್ರೋಣಪುತ್ರನನ್ನು ಸೇರಿ, ಎಲ್ಲ ವೃತ್ತಾಂತವನ್ನೂ ತಿಳಿಸಿದರು.

ವಾರ್ತಾಹರರಿತ್ತ ದುರ್ಯೋಧನನ ಆರ್ತಸಂದೇಶವನ್ನು ಕೇಳಿ, ಗುರುಪುತ್ರನು ಉರಿದೆದ್ದನು. ಅವನು ಕೃಪ ಕೃತವರ್ಮರಿಂದ ಕೂಡಿ, ಕುರುರಾಜನಿದ್ದಲ್ಲಿಗೆ ಧಾವಿಸಿ ಬಂದನು. ರಥಗಳಿಂದ ಇಳಿದು, ವೀರತ್ರಯವು, ವಾಯುವೇಗದಿಂದ ಮಹಾ ಸಾಲದಂತಿದ್ದ ದುರ್ಯೋಧನನನ್ನು ಸಮೀಪಿಸಿತು. ಆದಿತ್ಯಚಕ್ರವು ಕಳಚಿಬಿತ್ತೋ ಝುಂಝಾವಾತದಿಂದ ಸಮುದ್ರವು ಒಣಗಿತೋ, ಎಂಬಂತೆ ಬೆಳಗಿ, ಬೆಳಗದಿದ್ದ ಕುರುರಾಜನನ್ನು ಕಂಡು ಅವರು ರೋದಿಸಿದರು. ಮೈಯೆಲ್ಲ ಮಣ್ಣಾಗಿ, ರಕ್ತದ ಮಡುವಿನಲ್ಲಿ ನರಳುತ್ತಾ, ನಡುವು ಮುರಿದು, ನಿಸ್ಸಹಾಯನಾಗಿದ್ದ ಕೌರವೇಶನನ್ನು ಮುತ್ತಿ ನರಿನಾಯಿಗಳು, ಹದ್ದುಗಿಡಗಗಳು, ಕಿತ್ತು ತಿನ್ನುತ್ತಿದ್ದವು. ಅವನು ವೇದನಾತುರನಾಗಿ ಹೊರಳಾಡುತ್ತಿದ್ದನು. ಹುಬ್ಬುಗಂಟಿಕ್ಕಿ, ಹಲ್ಲು ಕಡಿಯುತ್ತಾ, ಕಿಡಿಗಣ್ಣಿನಿಂದ ನೋಡುವ ಕುರುರಾಜನು ಹೆಬ್ಬುಲಿಯಂತೆ ಭಯಂಕರನಾಗಿದ್ದನು.

ಮೂವರು ಮಹಾರಥರು ದುರ್ಯೋಧನನ ಹತ್ತಿರ ಕೂತರು. ಅವರನ್ನು ಕಂಡು, ನರಿನಾಯಿಗಳು ದೂರ ಸರಿದವು. ಹದ್ದುಗಳು ಹಾರಿಹೋದವು. ಆಗ ದ್ರೌಣಿಯು ಕಣ್ಣೀರಿಟ್ಟು, ಇಂತೆಂದನು:

'ಮಹಾರಾಜ! ಎಂತಹ ಕಾಲ ಬಂತು ! ನಿನ್ನಂತಹ ಸರ್ವಸರ್ವಂಸಹಾಭರ್ತನು

ನಿರ್ಜನವನದಲ್ಲಿ ಸಾಯಬೇಕಾಯಿತೇ ! ನಿನ್ನಂತಹ ರಾಜನ್ಯವಂದಿತ ಚಕ್ರವರ್ತಿಯು ಮಣ್ಣಲ್ಲಿ ಬಿದ್ದು ಹೊರಳುವಂತಾಯಿತೇ ! ಹಾ ಕಷ್ಟಂ ! ನಿನ್ನ ಪ್ರಿಯ ಸೋದರರೆಲ್ಲಿ ಹೋದರು ? ಎಲ್ಲಿ ದುರ್ಲಲಿತನಾದ ದುಶ್ಶಾಸನ ? ಎಲ್ಲಿ ಹೋದರು ಆ ನಿನ್ನ ಸುಹೃದ್ವರರು ? ಸತ್ಯಕ್ಕೆ ಕಾಲವಿಲ್ಲ. ಮಹಾರಾಜ ! ಶ್ವೇತಚ್ಛತ್ರವಿಲ್ಲ ! ರಥವಿಲ್ಲ! ವ್ಯಜನವಿಲ್ಲ ! ಸೇನೆ ಹಾಳಾಯಿತು. ಸರ್ವಲೋಕಾಧಿಪತಿಯಾದ ನಿನಗೇ ಇಂತಹ ದುರ್ದಶೆ ಒದಗಿತೆಂದರೆ, ಇನ್ನಾರಲ್ಲಿ ಸಂಪತ್ತು ಸ್ಥಿರವಾಗಿರುವುದು ! ಇಂದ್ರನಿಗೆ ಅಸೂಯೆ ಪುಟ್ಟಿಸುವಂತಹ ಐಶ್ವರ್ಯವನ್ನು ಪೊಂದಿ, ಮೆರೆದ ಕುರುರಾಜನಿಗೆ ಇಂತಹ ಗತಿಯೇ ? ಅಯ್ಯೋ ! ನೋಡಲಾರೆನೀ ಪಾಪಿ ಕಣ್ಣುಗಳಿಂದ ನಿನ್ನ ಈ ದೀನತೆಯನ್ನು ! ' ಇಂತೆಂದು ರೋದಿಸುವ ಗುರುಪುತ್ರನನ್ನೂ, ಕೃಪಕೃತವರ್ಮರನ್ನೂ ನೋಡಿ, ನಿನ್ನ ಮಗನು, ಕಣ್ಣೀರನ್ನೊರೆಸಿಕೊಂಡು, ಇಂತೆಂದನು :

'ಲೋಕಧರ್ಮವೇ ಇಂತಹದು. ಮೃತ್ಯುವು ಅನಿವಾರ್ಯವಾಗಿದೆ. ಮನೆಯಲ್ಲಿ ಮಂಚದ ಮೇಲೆ ಮಲಗಿ ಸಾಯದೇ, ಕದನರಂಗದಲ್ಲಿ ಕಡಿದು, ಮಡಿವ ನನಗಾಗಿ ರೋದಿಸುವುದು ಉಚಿತವಲ್ಲ. ನೀವೆಲ್ಲರೂ ಕಂಡಂತೆ, ನಾನು ಎಂದೂ ಯುದ್ಧ ವಿಮುಖನಾಗಿಲ್ಲ; ಎಂದೂ ಬೇಡಿದವರಿಗೆ ಇಲ್ಲವೆಂದಿಲ್ಲ. ಪಾಪಿಗಳು ಮೋಸದಿಂದ ನನ್ನನ್ನು ಕೊಂದರು. ರಣರಂಗದಿಂದ ಪಾರಾಗಿ ನೀವು ಉಳಿದಿರುವುದನ್ನು ಕಂಡು, ನನಗೆ ತೃಪ್ತಿಯಾಗಿದೆ. ನನ್ನಲ್ಲಿರುವ ಪ್ರೀತಿಯಿಂದ ನೊಂದು, ಕೊರಗಬೇಡಿರಿ ! ನನಗೆ ಸ್ವರ್ಗವು ನಿಶ್ಚಿತವಾಗಿದೆ ! ಶ್ರೀಕೃಷ್ಣನ ಪ್ರಭಾವವನ್ನು ಅರಿಯದವನಲ್ಲ. ಆದರೂ ಅವನಿಗೂ ಹೆದರದೆ, ಸ್ವಧರ್ಮದಲ್ಲಿ ನಿಂತು ಕಾದಿರುವೆನು. ಅವನ ಮೇಲಿರುವ ಮತ್ತು ವೃಕೋದರನ ಮೇಲಿರುವ ನನ್ನ ಹಗೆ ಎಂದಿಗೂ ತೀರದು. ನೀವೂ ನನ್ನ ವಿಜಯಕ್ಕಾಗಿ ಸೆಣಸಿ ಕಾದಿರುವಿರಿ ! ಅದು ದೈವಸಂಕಲ್ಪಕ್ಕೆ ಬರಲಿಲ್ಲ.'

ಇಂತು ನುಡಿದು, ಜಾರುವ ಕಣ್ಣೀರನ್ನೊರೆಸಿಕೊಂಡು, ದುರ್ಯೋಧನನು ಸುಮ್ಮನೆ ಕೂತನು. ಅಂತಹ ಮಿತ್ರನನ್ನು ಅವನ ದೀನದಶೆಯನ್ನು ಕಂಡು, ಗುರುಸುತನು ಕೆಂಡವಾದನು; ಅವನು ಕೈಕೈ ಹಿಸುಕಿಕೊಂಡು ಹಲ್ಲುಕಡಿದು, ಕಣ್ಣೀರಿಟ್ಟು, ಗದ್ಗದಸ್ವರದಿಂದ ಇಂತೆಂದನು : 'ರಾಜನ್ ! ಕೇಳು ! ನಮ್ಮ ತಂದೆಯನ್ನೂ ಆ ಪಾಪಿಗಳು ಮೋಸದಿಂದ ಕೊಂದರು. ಧೃಷ್ಟದ್ಯುಮ್ನಾದಿ ಪಾಂಚಾಲರನ್ನೆಲ್ಲ ಕೊಲ್ಲದೆ ನನಗೆ ಮನಶ್ಶಾಂತಿ ಇಲ್ಲ. ಈಗ ನಿನಗಾದ ಗತಿಯನ್ನು ಕಂಡು ನನಗಾದ ದುಃಖವು ಹೇಳತೀರದು. ಸತ್ಯದಾಣೆಯಾಗಿ ನುಡಿವೆನು. ಸರ್ವ ಪಾಂಚಾಲರನ್ನು ಕೊಂದು, ವಾಸುದೇವನೇ ನಿಂತು ಕಾಪಾಡಿದರೂ ಬಿಡದೆ, ನನ್ನ ವೈರಾಗ್ನಿಯನ್ನಾರಿಸುವೆನು. ನನಗೆ ಆಜ್ಞೆಯನ್ನು ಕೊಡು. '

ಆ ಮಾತನ್ನಾಲಿಸಿ ದುರ್ಯೋಧನನು ಪ್ರೀತನಾದನು. 'ಆಚಾರ್ಯ ! ಜಲ ಪೂರ್ಣ ಕಲಶವನ್ನು ತಾ ! ' ಎಂದು ಕೃಪನಿಗೆ ಹೇಳಿ, ಆತನು ತಂದ ಜಲದಿಂದ ಅಭಿಷೇಕವನ್ನು ಮಾಡಿಸಲೆಣಿಸಿ, ದುರ್ಯೋಧನನು ಇಂತೆಂದನು : 'ವಿಪ್ರರು ರಾಜನಿಯೋಗದಲ್ಲಿದ್ದು ಯುದ್ಧವನ್ನು ಮಾಡಬಹುದು. ನನ್ನ ಅನುಜ್ಞೆಯಿಂದ

ಅಶ್ವತ್ಥಾಮನಿಗೆ ಸೇನಾಪತಿ ಪಟ್ಟವನ್ನು ಕಟ್ಟಿ ಅಭಿಷೇಕಿಸು ! ' ಎಂದು ಕೃಪನಿಗೆ ಹೇಳಿದನು. ಅಂತೆಯೇ ಕೃಪನು ಅಶ್ವತ್ಥಾಮನನ್ನಭಿಷೇಕಿಸಿ, ಸೇನಾಪತಿಯನ್ನಾಗಿ ಮಾಡಿದನು. ಅಶ್ವತ್ಥಾಮನು 'ಏನು ಮಾಡಲಿ ಹೇಳು' ಎಂದನು. ಆಗ ಅಶ್ವತ್ಥಾಮನನ್ನು ಕರೆದಪ್ಪಿ ದುರ್ಯೋಧನನಿಂತೆಂದನು : 'ಆಚಾರ್ಯಪುತ್ರ ! ಮಹೀಮಂಡಲದಲ್ಲಿ ಪಾಂಡವರಿಲ್ಲದಂತೆ ಮಾಡು! ಅವರ ಸಂತತಿಯನ್ನು ನಾಶಮಾಡು! ನನ್ನ ಹೆಂಡತಿಯಲ್ಲಿ ಮಗನನ್ನು ಉತ್ಪಾದಿಸಿ, ಆ ಮಗನಿಗೆ ರಾಜ್ಯವನ್ನಿತ್ತು ರಕ್ಷಿಸು!' ಎಂದು, ತನ್ನ ಕೈಯಿಂದ ಮಣ್ಣನ್ನೆತ್ತಿ ಗುರುಪುತ್ರನಿಗೆ ಪಾಂಸ್ವಭಿಷೇಕವನ್ನು ಮಾಡಿದನು. 'ಹಾಗೇ ಮಾಡುವೆನು' ಎಂದು ಹೇಳಿ, ಗುರುಸುತನು ದುರ್ಯೋಧನನ ಅನುಜ್ಞೆ ಪಡೆದು, ಸಿಂಹನಾದ ಮಾಡುತ್ತಾ ಅಲ್ಲಿಂದ ತೆರಳಿದನು. ಶ್ರೀಕೃಷ್ಣಭೀಮಾರ್ಜುನರ ಭಯದಿಂದ ಆತನು ಕೃಪಾಚಾರ್ಯನನ್ನೂ ಕೃತವರ್ಮನನ್ನೂ ಕರೆದುಕೊಂಡು, ವನವನ್ನು ಪ್ರವೇಶಿಸಿದನು.

ಯುಯುತ್ಸುವು ಹಸ್ತಿನಗರಕ್ಕೆ ತೆರಳಿದ ನಂತರ, ಶ್ರೀಕೃಷ್ಣನೂ ಅಲ್ಲಿಗೇ ಹೋಗಿ, ಗಾಂಧಾರೀ ಧೃತರಾಷ್ಟ್ರರನ್ನು ಸಮಾಧಾನಪಡಿಸಿ, ಹಿಂದಿರುಗಿ ಬಂದನು. ಅಂದಿನ ರಾತ್ರಿಯನ್ನು ಶ್ರೀಕೃಷ್ಣಸಾತ್ಯಕಿ ಸಹಿತರಾದ ಪಂಚಪಾಂಡವರು ಕೌರವರ ಶಿಬಿರದಲ್ಲಿಯೇ ಕಳೆದರು. ಶ್ರೀ ವ್ಯಾಸದೇವರು ಗಾಂಧಾರಿ ಧೃತರಾಷ್ಟ್ರರನ್ನು ಅನುನಯಿಸಿ, ಅವರ ಶೋಕವನ್ನು ವೈರಾಗ್ಯಜ್ಞಾನ ವಚನಗಳಿಂದ ಅಪನಯಿಸಿ, ಅಂತರ್ಹಿತರಾದರು.

**ಗದಾಪರ್ವ ಮುಗಿಯಿತು**



# ೧೧. ಸೌಪ್ತಿಕ ಸ್ತ್ರೀ ಪರ್ವಗಳು

## ೧. ಕೃಪೋಪದೇಶ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಕೇವಲ ಅರ್ಥಕಾಮನು ಉಭಯಲೋಕಗಳಿಗೆ ಕೆಡುವನು. ದುರ್ಯೋಧನನು ರಾಜ್ಯಲೋಭದಿಂದ ಸಕಲ ಬಂಧುಗಳನ್ನೂ ನಾಶಪಡಿಸಿ, ತಾನೂ ಸತ್ತನು. ವಿಪ್ರನು ಪರಧರ್ಮಾನುಸರಣವನ್ನು ಮಾಡಿ, ಪರಧರ್ಮದಲ್ಲಿಯೂ ನಿಂದ್ಯ ಕರ್ಮಗಳನ್ನೇ ಮಾಡಿ ಕೆಡುವನು. ಅಶ್ವತ್ಥಾಮನು ಅತ್ಯಂತ ಹೇಯಕರ್ಮವನ್ನು ಮಾಡಿ, ಶ್ರೀಕೃಷ್ಣನ ಶಾಪಕ್ಕೆ ಗುರಿಯಾದನು.

ಅಶ್ವತ್ಥಾಮ ಕೃಪ ಕೃತವರ್ಮರು ದಕ್ಷಿಣಾಮುಖವಾಗಿ ತೆರಳಿ, ಶಿಬಿರ ಸಮೀಪದಿಂದ ದೂರ ಸರಿದರು. ಸೂರ್ಯನು ಅಸ್ತಂಗತನಾಗುತ್ತಿದ್ದನು. ಕುದುರೆಗಳನ್ನು ಬಿಚ್ಚಿ, ಅವರು ಕೃಷ್ಣಾರ್ಜುನರ ಭಯದಿಂದ ಗಹನವನದಲ್ಲಿ ಅವಿತು ಕೂತರು. ಅವರ ಶರೀರಗಳನು ಕ್ಷತವಿಕ್ಷತವಾಗಿದ್ದವು. ಪಾಂಡವರನ್ನು ಚಿಂತಿಸಿ ಅವರು ನಿಡುಸುಯ್ದು, ರಾಜನಿಗಾಗಿ ಕಣ್ಣೀರಿಟ್ಟರು. ಆಗ ಅವರ ಕಿವಿಗೆ ಪಾಂಡವರ ಜಯಘೋಷಗಳು ಕೇಳಬಂದವು. ಮತ್ತೆ ಸ್ವಲ್ಪ ದೂರ ಸರಿದು, ಕುದುರೆಗಳಿಂದಿಳಿದು, ರೋಷ ಕ್ರೋಧ ವಿಷಾದಗಳಿಂದ ಮನವು ತುಳುಕುತ್ತಿರಲು, ಒಂದು ಆಲದ ಮರದ ಬುಡದಲ್ಲಿ ಕೂತು ಆಲೋಚಿಸತೊಡಗಿದರು.

ಧೃತರಾಷ್ಟ್ರನು ತನ್ನ ಮಗನ ಪತನವನ್ನಾಲಿಸಿ ದುಃಖಾಕುಲನಾಗಿ ಕಣ್ಣೀರಿಡುತ್ತಾ ಸಂಜಯನಿಗಿಂತೆಂದನು: 'ಸಂಜಯ! ಹತ್ತುಸಾವಿರ ಆನೆಗಳ ಬಲವುಳ್ಳ ನನ್ನ ಮಗನನ್ನು ಭೀಮನು ಸಂಹರಿಸಿದನೆಂದರೆ, ನನಗೆ ವಿಶ್ವಾಸವೇ ಹುಟ್ಟಲೊಲ್ಲದು. ವಂದಿಜನಸುತ್ತನು, ವಜ್ರಸಂಹನನು, ವಜ್ರಸಮಬಲನು ಆದ ದುರ್ಯೋಧನನನ್ನು ಪಾಂಡವರು ಕೊಂದು ಬಿಟ್ಟರೇ? ಮನುಜರಿಂದ ದೈವವನ್ನು ಉಲ್ಲಂಘಿಸಲಾಗದು! ಎಷ್ಟು ಸೈನ್ಯವಿದ್ದರೇನು! ಎಷ್ಟು ಪ್ರಯತ್ನಿಸಿದರೇನು! ನನ್ನ ಮಗಳು ಉಳಿಯಲಿಲ್ಲ. ನೂರು ಮಕ್ಕಳನ್ನೂ ಕಳೆದುಕೊಂಡು, ಇನ್ನೂ ನಾನು ಬದುಕಿರುವೆನೆಂದರೆ, ಸಂಜಯ! ನನ್ನ ಗುಂಡಿಗೆ ಅಯೋಮಯವೋ ಏನು! ಇನ್ನು ಮುಪ್ಪಿನ ಮುದುಕರಾದ ನಮಗೇನು ಗತಿ? ಎಲ್ಲಿ ಹೋಗಲಿ? ಪಾಂಡವರ ರಾಜ್ಯದಲ್ಲಿ ನಾನಂತೂ ಇರಲಾರೆನು. ಸ್ವಯಂ ರಾಜನಾಗಿದ್ದು ರಾಜಜನಕನಾಗಿದ್ದು, ಈಗ ಪಾಂಡವರನ್ನು ಆಶ್ರಯಿಸಿ ಬದುಕುವುದಾದರೂ ಹೇಗೆ? ರಾಜರ ತಲೆಗಳ ಮೇಲೆ ನಡೆದು, ಪರರಿಗೆ ಕೈಯೊಡ್ಡಿ ಹೇಗೆ ಬೇಡಲಿ? ನೂರು ಮಕ್ಕಳನ್ನೂ ಕೊಂದವನಿಟ್ಟ ಅನ್ನವನ್ನು ಹೇಗೆ ಉಣ್ಣಲಿ?

ಕೊನೆಗೂ ವಿದುರನ ಮಾತು ಸತ್ಯವಾಯಿತು ಅವನಂತೆ ನಡೆಯದೆ ನನ್ನ ಸುತರು ಧ್ವಸ್ತರಾದರು. ನಾನೂ ಕೆಟ್ಟೆನು; ಅಧರ್ಮದಿಂದ ನನ್ನ ಮಗನನ್ನು ಕೊಂದ ಭೀಮಸೇನನ

ಬಿರುನುಡಿಗಳನ್ನೆಂತು ಕೇಳಲಿ? ಹಾ! ಎಂತಹ ವ್ಯಸನಕ್ಕೀಡಾದೆನು! ಸಂಜಯ! ಕೃಪ ದ್ರೌಣಿ ಕೃತವರ್ಮರು ಮುಂದೇನು ಮಾಡಿದರು?' ಎಂದ ರಾಜನನ್ನು ಕಂಡು ಸಂಜಯನೂ ದುಃಖಾವಿಲನಾದನು. ಸಮಾಧಾನ ತಂದುಕೊಂಡು ಸಂಜಯ ವೃತ್ತಾಂತವನ್ನು ವರ್ಣಿಸತೊಡಗಿದನು.

ಶಿಬಿರದಿಂದ ನಾತಿದೂರವಾದ ವನಪ್ರದೇಶವನ್ನು ಸೇರಿ, ಕೃಪ ದ್ರೌಣಿ ಕೃತವರ್ಮರು ಅಲ್ಲಿದ್ದ ನ್ಯಗ್ರೋಧ ತರು ಮೂಲದಿ ಕೂತರು. ಸರೋವರದಿ ಜಲಪಾನವನ್ನು ಮಾಡಿ, ಕುದುರೆಗಳಿಗೂ ಕುಡಿಸಿ, ನಾನಾ ಮೃಗ ಸೇವಿತವು, ನಾನಾಪಕ್ಷಿ ಸಂಕುಲವು, ನಾನಾದ್ರುಮಲತಾ ನಿಬಿಡವು, ನಾನಾ ಸರ್ಪ ಭಯಂಕರವು, ನಾನಾ ಸರೋವರಶೀತಲವು, ನಾನಾಪುಷ್ಪಗಂಧಿತವು ಆದ ವನವನ್ನು ಪ್ರವೇಶಿಸಿ, ಆಲದ ಮರವನ್ನು ಸೇರಿ ಕೂತಿದ್ದ ವೀರತ್ರಯರಮನೋಗಹ್ವರಗಳಲ್ಲಿ ದುಃಖದಂತೆ, ವನದಲ್ಲಿ ಸಾಯಂಕಾಲದ ಅಂಧಕಾರವು ಕವಿದುತುಂಬಿತು. ಸಂಧ್ಯಾಕಾರ್ಯವನ್ನು ಮುಗಿಸಿ ರಾತ್ರಿಯಾಗುವಾಗ, ಗಿಡದ ಬುಡದಲ್ಲಿ ಕೂತಿದ್ದ ವೀರರ ಮನೋಗಗನದಲ್ಲಿ, ಸಂಧ್ಯಾಭ್ರಗಳಂತೆ ರಾಗ ದ್ವೇಷಗಳು ಸುಳಿದಾಡಿದವು.

ಸರ್ವಜಗದ್ಧಾತ್ರಿಯಾದ ರಾತ್ರೀದೇವಿಯ ತನ್ನ ವಿಶಾಲ ಕರಗಳಿಂದ ಪಶ್ಚಿಮಪೂರ್ವ ಪರ್ವತಗಳ ಶೃಂಗಗಳಿಗೆ ಕಟ್ಟಿದ್ದ ಭೂತಲದೋಲೆಯಲ್ಲಿ ಭೂತಶಿಶುಗಳನ್ನಿಟ್ಟು ತೂಗಿ, ಜೋಗುಳವನ್ನು ಹಾಡುವಳೆಂಬಂತೆ, ವಿವಿಧ ಪಕ್ಷಿನಿನಾದಗಳು ಕೇಳಿಸಿದವು. ವ್ಯಾಪಿಸುವ ಅಂಧಕಾರದಂತೆ, ವೀರತ್ರಯರ ಮನವು ವಿವಿಧಾಲೋಚನಾ ಬಂಧುರವಾಯಿತು. ಗ್ರಹನಕ್ಷತ್ರತಾರಾಗಣವು ತಮ್ಮ ಕುಕರ್ಮಗಳಿಗೆ ಸಾಕ್ಷಿಯಾಗಿವೆ. ಎಂಬುದನ್ನವರು ಮರೆತರು. ಘೋರವಾದ ಅಮಾವಾಸ್ಯೆಯ ರಾತ್ರಿಯು ಸರ್ವಜಗವನ್ನು ನುಂಗಿ, ತಾನೇತಾನಾಗಿತ್ತು. ಗಗನವು ನಕ್ಷತ್ರಗಣಾನ್ವಿತವಾಗಿ, ಜಗಕ್ಕೆ ಹೊಂದಿಸಿದ ಮುತ್ತಿನ ಹಚ್ಚಡದಂತಿತ್ತು. ದುಷ್ಟವಾದಿಗಳಂತೆ ಪಕ್ಷಿಗಣವೂ, ರಾತ್ರಿಂಚರ ಮೃಗಗಳೂ ಕೂಗತೊಡಗಿದವು. ಹಗಲೆಲ್ಲ ದುಡಿದು ದಣಿದ ಗೃಹಸ್ಥರಂತೆ, ದಿವಾ ಚರಜಂತುಗಳು ನಿದ್ರಿಸಿದವು. ಚಂಡಕರನಿಲ್ಲದುದರಿಂದ ಹಿಂಡುಹಿಂಡಾಗಿ ರಾತ್ರಿಂಚರರು ತಿರುಗಾಡಿದರು. ಕ್ರೂರ ಸರ್ಪಗಳ ಸಂಚಾರವು ಅವ್ಯಾಹತವಾಯಿತು. ತಮೋಯೋಗ್ಯರಂತೆ ಗೂಗೆಗಳು ಕತ್ತಲಿಗಾಗಿ ಹಾತೊರೆದವು. ಕಾಳರಾತ್ರಿಯ ಕಗ್ಗತ್ತಲು ಮುತ್ತಿಬಂದಾಗ ಮೂವರು ವೀರರು ಕಡುಹೆದರಿ, ಸಮೀಪವಾಗಿ ಸರಿದು ಕೂತರು. ದುರ್ಯೋಧನನ ಪತನದಿಂದಲು ಪಾಂಡವವಿಜಯದಿಂದಲು ಅವರು ದುಃಖ ಕ್ರೋಧಸಮನ್ವಿತರಾಗಿದ್ದರು.

ಯುದ್ಧಶ್ರಮದಿಂದ ನೊಂದ ಅವರ ಶರೀರಗಳು ಅವಶವಾಗಿ, ಅವನಿಗೆರಗಿದವು. ಮೈಯೆಲ್ಲ ಗಾಯಗಳಾಗಿ, ನಿಸ್ಸತ್ವರಾಗಿದ್ದುದರಿಂದ ಅವರು ಮುಲುಗುತ್ತಾ ಮಲಗಿಕೊಂಡರು. ಸುಖೋಚಿತರಿಗೆ ದುಃಖವು, ಮಹಾರ್ಹಶಯನರಿಗೆ ಭೂಶಯನವು ದೈವಬಲದಿಂದ ವಿಹಿತವಾಯಿತು. ಶ್ರಮಶೋಕಯುತರಾದ ಕೃಪ ಕೃತವರ್ಮರು ಬೇಗನೆ ನಿದ್ರೆಯನ್ನಪ್ಪಿದರು. ಕ್ರೋಧಾಮರ್ಷವಶನಾದ ಗುರುಸುತನಿಗೆ ನಿದ್ರೆ ಬರಲಿಲ್ಲ. ಸುತ್ತೂ ನೋಡುತ್ತಾ ಕೂತಿದ್ದ ಅಶ್ವತ್ಥಾಮನಿಗೆ ಆಲದ ಮರದಲ್ಲಿ ಗೂಡಿಟ್ಟು ನಿದ್ರಿಸುತ್ತಿದ್ದ ಕಾಗೆಗಳು ಕಾಣಬಂದವು.

ಇದ್ದಕ್ಕಿದ್ದಂತೆ ಒಂದು ಗೂಬೆಯು ಅಲ್ಲಿಗೆ ಬಂತು. ಪಿಂಗಲವರ್ಣವು, ಅಗ್ನಿನೇತ್ರವು ಆಗಿದ್ದ ಗೂಬೆಯು ಕಡು ಭಯಂಕರವಾಗಿತ್ತು. ಮೆಲ್ಲನೆ ಬಂದು ಗೂಬೆಯು ರೆಂಬೆಯಲ್ಲಿ ಕೂತು ಸಿಕ್ಕ ಕಾಗೆಗಳನ್ನೆಲ್ಲ ತನ್ನ ತೀಕ್ಷ್ಣ ತುಂಡು ನಖರಗಳಿಂದ ಸಂಹರಿಸಿತು. ಕೆಲವು ಕಾಗೆಗಳು ರೆಕ್ಕೆಕಡಿದು ಕೆಲವು ಕುತ್ತಿಗೆ ಮುರಿದು, ಕೆಲವು ಕಾಲು ಕಡಿದು, ಸತ್ತುಬಿದ್ದವು. ಒಂದು ಕ್ಷಣದಲ್ಲಿ ಕಾಗೆಗಳ ಆರ್ತನಾದದಿಂದ ದಿಕ್ಕುಗಳು ತುಂಬಿದಂತೆ ಕಾಕಶರೀರಗಳಿಂದ ಮರವು ತುಂಬಿಹೋಯಿತು. ಶತ್ರುಸಂಹಾರವನ್ನು ಸಾಧಿಸಿ, ಸಂತೋಷದಿಂದ ಹಾರಿಹೋದ ದಿವಾಂಧವನ್ನು ಕಂಡು, ಅದರ ಕೃತ್ಯವನ್ನು ಉಪಶ್ರುತಿಯಾಗಿ ಸ್ವೀಕರಿಸಿ, ಅಶ್ವತ್ಥಾಮನು, ತಾನು ಕೂಡ ಮಲಗಿರುವ ಪಾಂಡವರನ್ನೂ ಪಾಂಚಾಲರನ್ನೂ ಕೊಂದುಬಿಡಬೇಕೆಂದು ನಿಶ್ಚಯಿಸಿದನು. 'ಪಕ್ಷಿರಾಜನ ದ್ವಾರಾ ಭಗವಂತನೇ ನನಗೆ ಆದೇಶವನ್ನಿತ್ತಿರುವನು. ನಿಷ್ಪಾಂಡವವನ್ನಾಗಿ ಭೂಮಿಯನ್ನು ಮಾಡುವ ನನ್ನ ಪ್ರತಿಜ್ಞೆಯೂ ನೆರವೇರಲಿ! ಶತ್ರುನಾಶವಾಗುವ ಕಾಲವೂ ಪ್ರಾಪ್ತವಾಯಿತೆಂದು ತೋರುತ್ತಿದೆ. ಜಿತಕಾಶಿಗಳಾಗಿ ಮೆರೆವ ಪಾಂಡವರನ್ನು ರಣದಲ್ಲಿ ಮುತ್ತಿ ಕೊಲ್ಲುವುದೀಗ ನನಗೆ ಸಾಧ್ಯವಾಗದು. ಅವರು ಬಲವಂತರು; ಉತ್ಸಾಹಯುತರು; ದುರ್ಯೋಧನನಿಗೆ ಮಾತು ಕೊಟ್ಟಂತೆ ಅವರನ್ನು ಕೊಲ್ಲಬೇಕೆಂದರೆ ಮೋಸದಿಂದಲೇ ಆಗಲಿ ಋಜುಮಾರ್ಗದಿಂದಲ್ಲ. ವಂಚನೆಯಿಂದ ನಮ್ಮ ತಂದೆಯನ್ನೂ ನನ್ನ ರಾಜನನ್ನೂ ಕೊಂದ ಪಾಂಡವರನ್ನು ವಂಚಿಸಿ ಕೊಂದರೆ ಪಾಪವಿಲ್ಲ. ನ್ಯಾಯದಿಂದ ಕಡಿದಾಡಿ ಸಾಯುವುದಕ್ಕಿಂತ ವಂಚಿಸಿ ಜಯಿಸುವುದು ಲೇಸು. ವಂಚಿಸಿ ಕೊಲ್ಲುವುದು ನಿಸ್ಸಂಶಯವಾಗಿದೆ. ಯುದ್ಧವಾಡಿ ಕೊಲ್ಲುವುದು ಸಂಶಯಿತವಾಗಿದೆ. ಆದುದರಿಂದ ಶಾಸ್ತ್ರ ನಿಪುಣರು ನಿಶ್ಚಿತಾರ್ಥವಾದ ಕಾರ್ಯದಲ್ಲಿ ತೊಡಗುವರು. ಒಂದು ವೇಳೆ ನಿಂದೆ ಬಂದರೆ ಬರಲಿ! ಕ್ಷತ್ರಧರ್ಮದಲ್ಲಿ ನಿಂತ ನನಗೆ ಜಯಸಾಧನೆಯು ಮುಖ್ಯವಾಗಿದೆ. ನಿಂದಾಸ್ತುತಿಗಳಿಂದ ನನಗೆ ಪ್ರಯೋಜನವಿಲ್ಲ. ಪಾಂಡವರಷ್ಟು ನಿಂದಿತಕರ್ಮರಿಲ್ಲ. ಅವರು ಮಾಡದ ಮೋಸವಿಲ್ಲ. ಆದರೂ ಕ್ಷತ್ರಧರ್ಮರತರಾದ ಪಾಂಡವರು ನಿಂದ್ಯರಾಗದೇ, ಧರ್ಮಿಷ್ಠರೆನಿಸಿವರು. ಅಂತೆಯೇ ನಾನೇಕೆ ಮಾಡಬಾರದು?

ಶತ್ರುಗಳು ಶ್ರಾಂತರಾದಾಗ, ಹರಿದು ಓಡುವಾಗ, ಊಟಮಾಡುವಾಗ, ನಿದ್ರಿಸುವಾಗ, ಕುಡಿದು ಮೈಮರೆತಾಗ, ಪ್ರಯಾಣಿಸುವಾಗ, ಆಗ ಈಗ ಎನ್ನದೆ ಕೈಗೆ ಸಿಕ್ಕಾಗ, ಅವರನ್ನು ನಿಶ್ಶೇಷವಾಗಿ ನಾಶಮಾಡುವುದು ಬುದ್ಧಿವಂತರ ಲಕ್ಷಣವೆಂದು ನೀತಿಶಾಸ್ತ್ರವಚನಗಳಿವೆ. ಆದುದರಿಂದ ನಿದ್ರಿಸುತ್ತಿರುವ ಪಾಂಡವಪಾಂಚಾಲರನ್ನು ಕೊಂದು; ನನ್ನ ರಾಜನಿಗೆ ಪ್ರೀತಿಯನ್ನು ಸಾಧಿಸುವೆನು.'

ಇಂತು ಚಿಂತಿಸಿ ಗುರುಸುತನು, ಮಲಗಿದ್ದ ಕೃಪ ಭೋಜರನ್ನು ತಟ್ಟಿ ಎಬ್ಬಿಸಿದನು. ಅವರು ಕಣ್ಣೊರಸಿಕೊಂಡು ಕೂತರು. ಗುರುಪುತ್ರನವರಿಗಿಂತೆಂದನು: 'ಮಾವ! ಮಿತ್ರ! ಕೇಳಿರೆನ್ನ ಮಾತನ್ನು! ಮಹಾಬಲನಾದ ನಮ್ಮ ರಾಜನು ಮೋಸದಿಂದ ಹತನಾದನು. ಪಾಂಡವರನ್ನು ಮುತ್ತಿಕಾದಿದೆವೆಂದರೆ ದುರ್ಯೋಧನನ ಪ್ರೀತಿಗಾಗಿ ಅಲ್ಲವೇ? ಯುದ್ಧ

ವಿಕ್ರಮನಾದ ಕುರುರಾಜನನ್ನು ಬಹು ವೀರರು ಮುತ್ತಿ ಭೀಮನಿಂದ ಕೊಲ್ಲಿಸಿದರು. ಏಕಾದಶ ಚಮೂನಾಥನು ಕ್ಷುದ್ರ ವೃಕೋದರನ ಗದೆಯ ಪೆಟ್ಟಿನಿಂದ ತೊಡೆಮುರಿದು, ಸಾಯುತ್ತಿರುವನು. ಮೂರ್ಧಾಭಿಷಿಕ್ತನಾದ ಕೌರವ ರಾಜನ ತಲೆಯನ್ನು ಕಾಲಿನಿಂದ ಮುಟ್ಟಿದ ಕೆಟ್ಟ ಭೀಮನ ಕುಕೃತ್ಯವನ್ನು ನಿಂದಿಸದೆ ಪಾಂಚಾಲರು ನಕ್ಕು, ಕುಣಿದಾಡಿದರು; ಶಂಖಗಳನ್ನೂದಿ ದುಂದುಭಿಗಳನ್ನು ಬಾರಿಸಿದರು. ಅಶ್ವಹೇಷಗಳಿಂದಲೂ, ಗಜಘೀಂಕಾರಗಳಿಂದಲು, ಸಿಂಹನಾದಗಳಿಂದಲು, ರಥನೇಮಿ ಧ್ವಾನಗಳಿಂದಲೂ ಮೆರೆಯುತ್ತಾ ಹೋಗುವ ಪಾಂಡವರನ್ನು ಕಂಡು ನನ್ನ ಹೃದಯದಲ್ಲಿ ಕೆಂಡ ಸುರಿದಂತಾಯಿತು. ಕೌರವೇಶನ ಕಡೆ ಉಳಿದಿರುವ ಮಹಾರಥರೆಂದರೆ ನಾವು ಮೂವರೇ! ಸರ್ವಾಸ್ತ್ರಕೋವಿದರು, ನಾಗಾಯುತಪ್ರಾಣರು ಆದ ಮಹಾವೀರರು ಸಾವಿರಗಟ್ಟಲೆಯಾಗಿ ರಣ ಭೂಮಿಯಲ್ಲಿ ಪ್ರಾಣಗಳನ್ನು ನೀಗಿದರು. ದೈವವು ದುರ್ಲಂಘ್ಯವಾಗಿದೆ! ಆದುದಾಯಿತು. ಮುಂದಿನ ಕಾರ್ಯವನ್ನು ಆಲೋಚಿಸಿ! ನಿಮ್ಮ ಮನಸ್ಸು ಸ್ಥಿಮಿತವಾಗಿದ್ದರೆ, ಈಗ ನಾವೇನು ಮಾಡಿದರೆ ಶ್ರೇಯಸ್ಸಾದೀತೋ ಅದನ್ನು ಹೇಳಿ!'

ಆ ಮಾತಿಗೆ ಕೃಪಾಚಾರ್ಯನಿಂತೆಂದನು: 'ನಿನ್ನ ಮಾತನ್ನಾಲಿಸಿ, ನಿನ್ನ ಅಭಿಪ್ರಾಯವನ್ನು ತಿಳಿದೆನು. ಕೇಳು ನನ್ನ ವಚನವನ್ನು. ದೈವವು ಪ್ರಧಾನವು; ಪುರುಷಕಾರವು ಅಪ್ರಧಾನ ಕಾರಣವು. ಒಂದು ಕಾರ್ಯವಾಗಬೇಕೆಂದರೆ ಪುರುಷಕಾರವೂ, ದೈವಾನುಕೂಲವೂ ಎರಡೂ ಇರಬೇಕು. ಸುಕೃತ್ಯವಾಗಲಿ ಕುಕೃತ್ಯವಾಗಲಿ - ನಡೆಯುವುದು ದೈವದಿಂದ; ನಡೆಯದಿರುವುದು ದೈವದಿಂದಲೇ; ವನೇಚರರು ಕೇವಲ ಪರ್ಜನ್ಯದಿಂದ ಜೀವಿಸಬಲ್ಲರು. ಕೃಷೀವಲರು ಕೃಷಿಯಿಂದ ಮಾತ್ರವಲ್ಲದೆ ಪರ್ಜನ್ಯವನ್ನೂ ಅಪೇಕ್ಷಿಸುವರು. ದೈವವು ಪುರುಷಕಾರವನ್ನು ಅತಿಯಾಗಿ ಅವಲಂಬಿಸದೇ ಪುರುಷಕಾರವೇ ದೈವವನ್ನು ಅವಲಂಬಿಸಿರುವುದು. ಪ್ರಯತ್ನ ಹೀನನಿಗೆ ದೈವವು ಫಲಿಸದೆ, ಸುಮ್ಮನಿರುವುದು; ದೈವವಂತನಿಗೆ ಪ್ರಯತ್ನವು ಬೇಗನೆ ಫಲಿಸುವುದು, ಮಳೆ ಬರಬೇಕು, ಒಳ್ಳೆಯ ಕ್ಷೇತ್ರವಿರಬೇಕು, ಬೀಜ ಬಿತ್ತಿರಬೇಕು, ಇಷ್ಟಿದ್ದರೂ ಫಲವು ಚೆನ್ನಾಗಿ ಬರದೆ ಹೋಗುವುದನ್ನು ಕಂಡು, ದೈವವೇ ಬಲವತ್ತರವೆಂದು ತಿಳಿಯಬೇಕು. ಹಾಗೆಂದು ಸುಮ್ಮನೆ ಕೂತವನಿಗೆ ಏನೂ ದೊರೆಯದು. ಆಲಸರು ಅಪ್ರಯತ್ನರಾಗಿ ಕೆಡುವರು; ಮತ್ತು ದೈವವೀವ ಫಲದಿಂದ ವಂಚಿತರಾಗುವರು. ಇದನ್ನರಿತು ಬುದ್ಧಿವಂತರು ಸರ್ವದಾ ಉತ್ಥಾನಶೀಲರಾಗಿ ಫಲವಂತರಾಗುವರು. ಮಾಡಿ ಪಡೆಯದವರಂತೆ ಮಾಡದೆ ಪಡೆಯುವವರೂ ದೈವಾದ್ಧೀರೆಂದು ತಿಳಿ! ದಕ್ಷನು ಮಾಡಿ ಪಡೆಯದಿದ್ದರೂ ನಿಂದ್ಯನಾಗನು ಆಲಸನು ಮಾಡದೆ ಪಡೆದರೂ ನಿಂದಿತನಾಗುವನು. ಆದುದರಿಂದ ಬುದ್ಧಿವಂತನು ದೈವವನ್ನು ನಂಬಿ, ಸದಾ ಪ್ರಯತ್ನವನ್ನು ಮಾಡುವನು. ಅವನಿಗೆ ಪ್ರಸನ್ನರಾಗಿ ದೇವತೆಗಳು ಫಲವನ್ನು ಕೊಡುವರು. ವೃದ್ಧ ಜನರಿಂದ ಯುಕ್ತಾಯುಕ್ತಗಳನ್ನು ತಿಳಿದು ಯುಕ್ತವನ್ನೇ ಮಾಡಿ, ಅಯುಕ್ತವನ್ನು ಬಿಡುವ ಮನುಜನು ಸುಖಿಸುವನು. ರಾಗದಿಂದಲು, ಕ್ರೋಧದಿಂದಲು, ಭಯದಿಂದಲು, ಲೋಭದಿಂದಲು ಕೆಟ್ಟವನಾಗಿ ಅರ್ಥವನ್ನು ಅನ್ಯಾಯವಾಗಿ ಬೇಡುವವನು ಕೊನೆಗೆ ಅರ್ಥ ಪ್ರಾಣಗಳಿಗೆ ಎರವಾಗುವನು. ದುರ್ಯೋಧನನು ಮೂಢನು,

ಕಡುಲೋಭಿಯು, ಅಸಮರ್ಥನೂ, ಆಗಿದ್ದೂ ವೃದ್ಧರನ್ನು ಕೇಳದೆ, ಅವರಂತೆ ನಡೆಯದೆ, ಗುಣವಂತರಾದ ಪಾಂಡವರಿಂದ ವೈರವನ್ನು ಬೆಳೆಸಿದನು. ಮೊದಲಿನಿಂದಲು ದುಶ್ಶೀಲನು, ಧೈರ್ಯಹೀನನು ಆಗಿ ವಂಚನೆಯಿಂದ ಸಂಪತ್ತನ್ನು ಸಂಪಾದಿಸಿದುದರ ಫಲವಾದ ಸಂತಾಪವನ್ನಿಂದು ಅನುಭವಿಸುತ್ತಿರುವನು.

'ಅಶ್ವತ್ಥಾಮ! ತಿಳಿಮನದಿಂದ ಆಲೋಚಿಸು? ಬಿಡು ಕ್ರೋಧ ರೋಷಗಳನ್ನು! ಪಾಪ ಪುರುಷನಾದ ದುರ್ಯೋಧನನನ್ನನುಸರಿಸಿ, ನಾವೂ ಕೆಟ್ಟೆವು. ಇಂತಹ ಸುಜನದ್ರೋಹ, ಭಗವದ್ದ್ರೋಹಗಳನ್ನು ಮಾಡಿದೆವೆಂಬ ಚಿಂತೆಯಿಂದ ನನಗೆ ಮತಿಯೇ ಕೆಟ್ಟಿದೆ. ನಮಗೆ ತೋರದ ವಿಷಯವನ್ನು ವೃದ್ಧರಿಂದ ತಿಳಿದು ನಡೆಯಬೇಕು. ನಾವೀಗ ಗಾಂಧಾರೀ ಧೃತರಾಷ್ಟ್ರರನ್ನೂ, ಮಾಹಮತಿಯಾದ ವಿದುರನನ್ನೂ ಕಂಡು, ಅವರ ವಚನದಂತೆ ನಡೆಯೋಣ. ಇದೇ ಶ್ರೇಯಸ್ಕರವೆಂದು ನನಗೆ ತೋರುತ್ತಿದೆ.'

ಧರ್ಮಾರ್ಥಸಹಿತನಾದ ಕೃಪನ ಮಾತನ್ನು ಒಪ್ಪದೆ, ಶೋಕಾಗ್ನಿ ದಗ್ಧಹೃದಯನಾದ ಅಶ್ವತ್ಥಾಮನು, ಅವರಿಗಿಂತೆಂದನು: 'ವಿಭಿನ್ನಬುದ್ಧಿಗಳಾಗಿರುವ ಜನರು ತಮಗೆ ತೋಚಿದ್ದೇ ಸರಿಯೆಂದು ನಂಬಿ, ತಾವೇ ಬುದ್ಧಿವಂತರೆಂದು ಸಾರುತ್ತಿರುವರು, ನಾನು ನೀವೆಂದಲ್ಲ; ಎಲ್ಲರೂ ತಮ್ಮನ್ನು ತಾವು ಪ್ರಶಂಶಿಸಿಕೊಂಬುವರು. ಇದು ಲೋಕಸಹಜ ಲಕ್ಷಣವು. ಮತ್ತೆ ಮತ್ತೆ ಮತ್ತೊಬ್ಬರ ಅಭಿಪ್ರಾಯವನ್ನಲ್ಲಗಳೆದು, ತಮ್ಮವಾದವೇ ಸರಿ ಎಂದು ಹೇಳುವರು. ಜೀವರ ಸ್ವಭಾವವು ವಿಚಿತ್ರವು, ಅನೇಕ ವಿಧವೂ ಆಗಿದೆ. ಅದಕ್ಕೆ ತಕ್ಕಂತೆ ಅವರ ಮಾತೂ ವಿಚಿತ್ರವಾಗಿದೆ. ಕೃತವರ್ಮ ವ್ಯಾಧಿಯನ್ನರಿತು ವೈದ್ಯರೂ ವಿವಿಧ ಚಿಕಿತ್ಸೆಗಳನ್ನು ನಡೆಸುವರು. ಮತ್ತೊಬ್ಬ ವೈದ್ಯನು ಅದನ್ನಲ್ಲವೆಂದು ಬೇರೆ ಔಷಧ ಕೊಡುವನು.

ಒಬ್ಬನಿಗೆ ಯೌವನದಲ್ಲಿರುವ ಬುದ್ಧಿಯು ವಾರ್ಧಕ್ಯದಲ್ಲಿರದು, ತನ್ನ ವಿಚಾರವು ಸರಿಯಲ್ಲವೆಂದು ತಾನೇ ತಿಳಿಯುವುದೂ ಉಂಟು. ಮನುಜನು ಚೆನ್ನಾಗಿ ವಿಚಾರಿಸಿ, ಆಮೇಲೆ ತನಗೆ ಶ್ರೇಯಸ್ಕರವಾವುದೆಂದು ತಾನೇ ನಿಶ್ಚಯಿಸಿ ನಡೆಯಬೇಕಾಗಲಿ, ಪರಬುದ್ಧಿಯಂತೆ ನಡೆದವನಿಗೆ ಶ್ರೇಯಸ್ಸಿಲ್ಲ. ಬಂದಿರುವ ಮಹಾನಷ್ಟವನ್ನು ಪ್ರತೀಕಾರದಿಂದಲೇ ಕಳೆದು, ನಮ್ಮ ಶೋಕವನ್ನೂ ಕಳೆದುಕೊಳ್ಳುಬೇಕೆಂದು ನನಗೆ ತೋರುತ್ತಿದೆ.

ಪ್ರಜಾಪತಿಯು ವಿವಿಧ ವರ್ಣದ ಪ್ರಜರನ್ನು ಸೃಜಿಸಿ, ಅವರವರಿಗೆ ತಕ್ಕ ಕರ್ಮಗಳನ್ನೂ ವಿಧಿಸಿದನು. ವಿಪ್ರನಿಗೆ ವೇದಾಧ್ಯಯನವು, ಕ್ಷತ್ರಿಯನಿಗೆ ಪರಾಕ್ರಮವು, ವೈಶ್ಯನಿಗೆ ದಾಕ್ಷ್ಯವು, ಶೂದ್ರನಿಗೆ ಅನುಕೂಲ್ಯತೆಯು ಸ್ವಭಾವ ಗುಣಗಳಾಗಿವೆ. ಅದಾಂತನಾದ ವಿಪ್ರನು ಅಸಾಧುವೆನಿಸುವನು. ಭೀರುನಾದ ಕ್ಷತ್ರಿಯನು ಅಧಮನೆನಿಸುವನು. ಅದಕ್ಷನಾದ ವೈಶ್ಯನು ನಿಂದಿತನಾಗುವನು. ಪ್ರತಿಕೂಲನಾದ ಶೂದ್ರನು ಅಪವಿತ್ರನಾಗುವನು. ನಾನು ಶ್ರೇಷ್ಠ ವಿಪ್ರಕುಲದಲ್ಲಿ ಜನಿಸಿದ್ದೂ, ಮಂದಭಾಗ್ಯನಾದುದರಿಂದ ಕ್ಷತ್ರ ಧರ್ಮವನ್ನು ಕೈಪಿಡಿದೆನು. ಕ್ಷತ್ರಧರ್ಮವು ಪರಾಕ್ರಮವೆಂದು ತಿಳಿದೂ, ವಿಪ್ರಧರ್ಮವನ್ನು ಪಿಡಿದು ಸುಮ್ಮನೆ ಕೂತರೆ,

ನನ್ನನ್ನು ಸಾಧು ಸಜ್ಜನರು ಮೆಚ್ಚರು. ದಿವ್ಯಾಸ್ತ್ರಗಳನ್ನು ಕಲಿತು, ದಿವ್ಯ ಧನುವನ್ನು ಹಿಡಿದು, ಅಶ್ವತ್ಥಾಮನು ತಂದೆಯ ಹತ್ಯೆಗೆ ಪ್ರತಿಕ್ರಿಯೆಯನ್ನು ಮಾಡಲಿಲ್ಲವೆಂದರೆ, ಇದಕ್ಕಿಂತ ಅವಮಾನವು ಉಂಟೇ? ಇಂದು ನಾನು ನನ್ನ ತಂದೆಯ ಸೇಡನ್ನೂ ನನ್ನ ರಾಜನ ಹಗೆಯನ್ನೂ ತೀರಿಸಿ, ಅನೃಣಿಯಾಗುವೆನು.

ಪಾಚಾಲರಿಂದು ತಮ್ಮ ಶಿಬಿರಗಳಲ್ಲಿ ಮೈಮರೆತು, ಮಲಗಿರುವರು. ಕವಚಗಳನ್ನು ಬಿಚ್ಚಿಟ್ಟು , ಜಯಹರ್ಷದಿಂದ ವಿಶ್ವಸ್ತರಾಗಿ ಮಲಗಿರುವ ಪಾಂಚಾಲರನ್ನು ದೀರ್ಘನಿದ್ರೆಗೊಪ್ಪಿಸಿ, ಮತ್ತೆ ಏಳದಂತೆ ಮಾಡುವೆನು. ಆಮೇಲೆ ಪಾಂಡುಸುತರನ್ನು ಮರ್ದಿಸುವೆನು. ಪಾಂಡವ ಶಿಬಿರವನ್ನು ಸುಟ್ಟುಹಾಳುಮಾಡುವೆನು. ಅಗ್ನಿಯು ಕಕ್ಷವನ್ನಂತೆ, ಇಂದ್ರನು ದಾನವರನ್ನಂತೆ, ರುದ್ರನು ಪಶುಗಳನ್ನಂತೆ, ಉರಿದೆದ್ದು ವಿಕ್ರಮಿಸಿ, ಸಂಹಾರಮಾಡಿ, ಸಂತೋಷಪಡುವೆನು. ಹಗೆತೀರಿಸಿದ ಹರ್ಷಕ್ಕಿಂತ ಲೋಕದಲ್ಲಿ ಹಿರಿಯ ಲಾಭವಿಲ್ಲ. ನಮ್ಮ ತಂದೆಯ ಋಣವನ್ನಿಂದು ತೀರಿಸುವೆನು.

ಈಗ ಹೋಗಿ, ಪಶುಬುದ್ಧಿಯಾದ ಧೃಷ್ಟದ್ಯುಮ್ನನ ಶಿರವನ್ನು ಕತ್ತರಿಸಿ ಹಾಕುವೆನು. ಪಾಂಚಾಲರನ್ನೆಲ್ಲ ಪಂಚತ್ವವನ್ನೈದಿಸಿ, ಕೃತಕೃತ್ಯನಾಗುವೆನು.'

ಅವನ ಕ್ರೋಧ ತೀಕ್ಷ್ಣತೆಯನ್ನರಿತು ಕೃಪನು 'ಆಗಲಿ! ನಿನ್ನನ್ನು ವಾರಿಸಲು ವಜ್ರಪಾಣಿಯಿಂದಲೂ ಆಗದು. ಬೆಳಗಾಗಲಿ! ಕವಚವನ್ನು ಬಿಚ್ಚಿಟ್ಟು ವಿಶ್ರಮಿಸು! ನಾನೂ ಕೃತವರ್ಮನೂ ನಿನ್ನನ್ನನುಸರಿಸಿ ಬರುವೆವು. ರಥಾರೂಢರಾಗಿ ನಾವು ಮೂವರೂ ನಾಳೆ ಶತ್ರುಗಳೊಡನೆ ಹೋರಾಡೋಣ! ಸರ್ವಪಾಂಚಾಲರನ್ನೂ ನಾಶಮಾಡಲು ನೀನು ಸಮರ್ಥನಿರುವೆ. ವಿಶ್ರಾಂತನಾದರೆ ಸ್ವಸ್ಥಚಿತ್ತನಾಗುವೆ! ರಥಿಶ್ರೇಷ್ಠನಾದ ನಿನ್ನನ್ನೆದುರಿಸಿ ನಿಲ್ಲಲು ಶಕ್ರನೂ ಹೆದರುವನು. ನಿನಗೆ ನಾವಿಬ್ಬರೂ ಜೋಡಾದರೆ ಇನ್ನುಳಿಯುವರಾರು? ನಮಗೂ ಶ್ರಮವಾಗಿದೆ. ವಿಕ್ರಮೋರ್ಜಿತರಾದ ಅಶ್ವತ್ಥಾಮ ಕೃತವರ್ಮರಿಗೆ ಅಸಾಧ್ಯವಿಲ್ಲ. ನಾನೂ ಸರ್ವಾಸ್ತ್ರಕೋವಿದನಿರುವೆನು. ಎಲ್ಲ ಶತ್ರುಗಳನ್ನೂ ನಾಶಮಾಡೋಣ! ಸಂಶಯಪಡಬೇಡ! ಬೆಳಗಾಗುತ್ತಲೇ ರಥಾರೂಢರಾಗಿ, ಶತ್ರುಗಳನ್ನು ಮುತ್ತಿ ಹೆಸರನ್ನು ಉಚ್ಚರಿಸಿ, ಉಚ್ಚರಿಸಿ, ಸಂಹರಿಸುವೆಯಂತೆ! ಸ್ವಲ್ಪ ನಿದ್ರೆಮಾಡು! ಪಾಂಚಾಲಪಾಂಡವರ ಸಂಹಾರವನ್ನು ನೋಡಿ ನಾಳಿನ ಸೂರ್ಯನು ಅಸ್ತಂಗತನಾಗುವನು; ಅಥವಾ ನಾವು, ಸಂಹೃತರಾಗಿ ಸ್ವರ್ಗವನ್ನು ಸೇರುವೆವು. ಇದು ಸತ್ಯವೆಂದು ತಿಳಿ!' ಎಂದನು.

ಮಾತುಲನ ಹಿತದ ಮಾತನ್ನು ಮನ್ನಿಸದೆ, ಮಹಾದೇವಾಂಶಸಂಭೂತನಾದ ಅಶ್ವತ್ಥಾಮನು ಸಿಟ್ಟಿನಿಂದ ಮಾವನಿಗಿಂತೆಂದನು: 'ರೋಗಾರ್ತ, ರೋಷವಶ, ಅರ್ಥ ಚಿಂತಾಪರ, ಕಾಮುಕ ಎಂಬ ನಾಲ್ವರಿಗೆ ನಿದ್ದೆ ಬರದಿರುವುದು. ನನ್ನ ಕ್ರೋಧವು ಹಗಲಾದಾಗ ಸ್ವಪ್ನದಂತೆ ನಾಳಿಗೆ ನಿಲ್ಲದೆ ನಾಶವಾಗುವುದು. ದಿವಾರಾತ್ರವೂ ತಂದೆಯ ವಧೆಯನ್ನು ನೆನೆದು ಕುದಿಯುತ್ತಿರುವ ನನಗೆ ನಿದ್ದೆ ಬರುವುದಾದರೂ ಹೇಗೆ? ನೀವೆಲ್ಲರೂ ನೋಡುತ್ತಿರಲು ನನ್ನ ತಂದೆಯನ್ನು ಪಶುವಿನನ್ನಂತೆ ಕಡಿದ ಪಾಪಿಯ ಮೂಗಿನಲ್ಲಿ ಇನ್ನೂ ಉಸಿರಾಡುತ್ತಿದೆ ಎಂದರೆ, ಇದಕ್ಕಿಂತಲೂ ಅವಮಾನವಿದೆಯೇ? "ದ್ರೋಣನು ಸತ್ತನು"

ಎಂದು ಕೂಗಾಡಿದ ಪಾಂಚಾಲರ ನಾಲಿಗೆಯನ್ನು ಸೀಳುವವರೆಗೂ ನನಗೆ ನಿದ್ದೆ ಬರದು. ಧೃಷ್ಟದ್ಯುಮ್ನನನ್ನು ಕೊಲ್ಲದ ನನಗೆ ಜೀವಿತದಿಂದ ಪ್ರಯೋಜನವಿಲ್ಲ.

ತೊಡೆಮುರಿದು ಬಿದ್ದ ಮಹಾರಾಜನನ್ನು ನರಿ-ನಾಯಿಗಳು ತಿನ್ನುತ್ತಿರುವುದನ್ನು ನೋಡಿ, ನನ್ನ ಹೃದಯವು ನುಚ್ಚುನೂರಾಗಿದೆ. ಯಾವ ಮಿತ್ರನಿಗಾರಾಜನ ದೀನಾವಸ್ಥೆ ಕಣ್ಣೀರು ತರಿಸದು ? ಅವನಾಡಿದ ದೀನಾಲಾಪಗಳಿಗೆ ಯಾವ ರಾಜಭಕ್ತನು ದುಃಖಸಂತಪ್ತನಾಗದಿರುವನು ? ನಾನು ಜೀವಂತನಾಗಿರಲು ಹೀಗಾದುದಕ್ಕೆ ನನ್ನ ಶೋಕಸಾಗರವು ಉಕ್ಕೇರಿ ಬರುತ್ತಿದೆ. ಪಾಂಚಾಲವಿನಾಶವೇ ನನ್ನ ಗುರಿಯಾಗಿದೆ. ವಾಸುದೇವ ರಕ್ಷಿತನಾಗಿರುವ ಪಾಂಡವರನ್ನು ನಾಶಮಾಡಲು ನಾನು ಸಮರ್ಥನಲ್ಲ; ಪಾಪಿ ಪಾಂಡವರ ಮೇಲಿನ ಕೋಪವನ್ನು ಹತ್ತಿಡಲೂ ಸಮರ್ಥನಾಗಿಲ್ಲ. ಆದುದರಿಂದ ವಿಕ್ರಮಿಸಿ ಪುತ್ರನಾಶದಿಂದ ಬೆಂದ ಹೃದಯಕ್ಕೆ ಪಾಂಚಾಲ ಪಾಂಡವ ಸಂಹಾರದ ಶಾಂತಿ ಜಲವನ್ನೆರೆದು, ಅನಂತರ ಸುಲಭವಾಗಿ ನಿದ್ದೆ ಮಾಡುವೆನು.'

ಕೃಪಾಚಾರ್ಯನಿಂತೆಂದನು : 'ಏನು ಓದಿದರೇನು ? ಎಲ್ಲಿ ಪುಟ್ಟಿದರೇನು ? ಅಜಿತೇಂದ್ರಿಯನು ಧರ್ಮಾರ್ಥಗಳನ್ನು ಚೆನ್ನಾಗಿ ತಿಳಿಯಲಾರನು. ಬುದ್ಧಿವಂತನಾದರೂ ವಿನಯವರ್ಜಿತನು ಅಜ್ಞಾನಿ ಎನಿಸುವನು, ಶೂರನಾದ ಮೂಢಬುದ್ಧಿಯು, ಪಂಡಿತರನ್ನು ಸೇವಿಸಿದರೂ, ಸೌಟು ಸೂಪರಸವನ್ನಂತೆ ಧರ್ಮಮರ್ಮವನ್ನು ತಿಳಿಯಲಾರನು. ವಿನಯವಂತನು ಒಂದು ಮುಹೂರ್ತದ ಪಂಡಿತ ಬೋಧೆಯಿಂದ, ನಾಲಿಗೆ ಸೂಪರಸವನ್ನಂತೆ, ಧರ್ಮಮರ್ಮವನ್ನು ತಿಳಿಯುವನು. ಬುದ್ಧಿವಂತನು ಪಂಡಿತ ಸೇವೆಯಿಂದ ಸರ್ವಾಗಮ ರಹಸ್ಯವನ್ನು ತಿಳಿದು, ನ್ಯಾಯ ಧರ್ಮಗಳಿಗೆ ವಿರೋಧ ಮಾಡದಿರುವನು. ತನಗೆ ತಿಳಿಯದೆ, ಪರರನ್ನು ಕೇಳದೆ ವರ್ತಿಸುವ ಪಾಪಿಯು ದೈವ ಪ್ರಾಪ್ತವಾಗಲಿರುವ ಶುಭಫಲದಿಂದ ದೂರನಾಗಿ, ದುಃಖವನ್ನೇ ಹೊಂದುವನು. ಹಿತವಚನವವನಿಗೆ ರುಚಿಸದು. ಲಕ್ಷಣವಂತನು ಸುಹೃಜ್ಜನರ ಮಾತಿಗೆ ಮನಸಿತ್ತು ಪಾಪದಿಂದ ದೂರನಾಗುವನು. ಅವಲಕ್ಷಣನು ಮಿತ್ರಬಂಧುಗಳ ಮಾತಿಗೆ ಕಿವಿಗೊಡದೆ ಪಾಪ ಕಾರ್ಯಗಳನ್ನು ಮಾಡಿ ಕೆಡುವನು. ಮಿತ್ರರು ವಿಚಾರಶೀಲರಾಗದ ಕೆಡುಕೆಲಸವನ್ನು ಮಾಡಲು ತೊಡಗಿದಾಗ ವಾರಿಸುವುದು ಪ್ರಾಜ್ಞರ ಕರ್ತವ್ಯವಾಗಿದೆ. ಅವರಂತೆ ನಡೆದವನು ಪಾಶ್ಚಾತ್ತಾಪಾಗ್ನಿಶಿಖೆಗೆ ಬೀಳದೆ ಸುಖಿಸುವನು.

ಅಶ್ವತ್ಥಾಮ ! ಮಲಗಿದ್ದವರನ್ನು ಕೊಲ್ಲಬಹುದೆಂಬ ನೀತಿಶಾಸ್ತ್ರ ವಚನವನ್ನು ಧರ್ಮಶಾಸ್ತ್ರವು ಅಲ್ಲಗಳೆಯುತ್ತಿದೆ. ರಥಕವಚಾದಿ ಸಾಧನಗಳಿಲ್ಲದವರು, ಶರಣಾಗತರು, ತಲೆಕೆದರಿ ನಿಂತವರು, ವಾಹನರಹಿತರು, ಮಲಗಿದವರು -ಇಷ್ಟು ಜನರು ವಧಾರ್ಹರಲ್ಲ. ಯಾರೂ ಶತ್ರುಗಳಿಲ್ಲವೆಂಬ ನಂಬಿಕೆಯಿಂದ, ಶವಗಳಂತೆ ಮಲಗಿರುವ ಪಾಂಚಾಲರನ್ನು ಕೊಲ್ಲುವ ದುಷ್ಟಚಿತ್ತನು, ಆಚಂದ್ರಾರ್ಕವಾಗಿ ನರಕಪತಿತನಾಗುವನು. ನೀನು ಸರ್ವಾಸ್ತ್ರ ವಿದಗ್ರಣಿಯಾಗಿರುವ ! ಪಾಪವು ಸ್ವಲ್ಪವಾದರೂ ನಿನ್ನಲ್ಲಿಲ್ಲ. ಈಗೇಕೆ ಇಂತಹ ದುರಾಲೋಚನೆಗೆ ಮನಸಿತ್ತೆ ? ಇಂತಹ ನೀಚಕೃತ್ಯವು ನಿನ್ನಂತಹ ಸಂಭಾವಿತನಿಗೆ

ಸಲ್ಲದು. ಶುದ್ಧ ವಸನದಿ ಕಾಡಿಗೆಯ ಚುಕ್ಕೆಯಿಟ್ಟಂತೆ ನಿನ್ನ ಕೀರ್ತಿಯನ್ನು ಮಲಿನಗೊಳಿಸಬೇಡ!'

ಆ ಮಾತಿಗೆ ಅಶ್ವತ್ಥಾಮನಿಂತೆಂದನು: 'ಮಾವ! ನೀನಾಡಿದುದ್ದೆಲ್ಲವೂ ನಿಜ. ಆದರೆ ಧರ್ಮಸೇತುವನ್ನು ಪಾಂಡವರು ಮುರಿದಿರುವರು. ಶಸ್ತ್ರಸನ್ಯಾಸವನ್ನು ಮಾಡಿದ ನನ್ನ ತಂದೆಯನ್ನು ಪಾಪಿ ಧೃಷ್ಟದ್ಯುಮ್ನನು ಕೊಂದುದು ಧರ್ಮವೇ? ರಥಚಕ್ರವನ್ನೆತ್ತುತ್ತಿದ್ದ ಕರ್ಣನ್ನನ್ನು ಅರ್ಜುನನು ಕೊಂದದ್ದು ನ್ಯಾಯವೆ? ಭೀಷ್ಮನನ್ನು ಶಿಖಂಡಿಯ ಹಿಂದೆ ನಿಂತು ಕೆಡಹಿದ ಅರ್ಜುನನು ಯಾವ ಧರ್ಮವಂತನು? ಪ್ರಾಯೋಪವಿಷ್ಟನಾಗಿದ್ದ ಭೂರಿಶ್ರವನನ್ನು ಕೊಂದ ಸಾತ್ಯಕಿಯು ಏನು ಸತ್ಯವಂತನು? ಗದಾಯುದ್ಧ ನಿಬಂಧನೆಯನ್ನು ಮುರಿದು ದುರ್ಯೋಧನನನ್ನು ಭೀಮನು ಕೊಂದುದು ಧರ್ಮವೇ? ಏಕಾಕಿಯಾಗಿದ್ದ ಕುರುರಾಜನನ್ನು ಬಹುವೀರರು ಸುತ್ತ ಗಟ್ಟಿ, ಹೆದರಿಸಿ, ನಿಂದಿಸಿ, ಅನ್ಯಾಯದಿಂದ ಕೊಲ್ಲಿಸಿದರು! ಅದು ನ್ಯಾಯವೇ? ವಾರ್ತಿಕರಿಂದ ನನ್ನ ರಾಜನು ಕಳಿಸಿದ ಸಂದೇಶವು ಸಾವಿರ ಬಾಣಗಳಂತೆ ನನ್ನ ಮನಃಫಲಕದಲ್ಲಿ ಮೂಡಿ ನೋಯಿಸುತ್ತಿದೆ. ಇಂತಹ ಪಾಪಗಳನ್ನು ಮಾಡಿದ ಪಾಪಿಗರನ್ನು ನೀನೇಕೆ ನಿಂದಿಸಲಿಲ್ಲ! ಧರ್ಮವಂತನಾದ ದುರ್ಯೋಧನನನ್ನೇಕೆ ನಿಂದಿಸುವೆ? ಮೋಸಕ್ಕೆ ಮೋಸ ಮಾಡುವ ನನ್ನನ್ನೇಕೆ ವಾರಿಸುವೆ? ಪಾಂಡವ ಪಾಂಚಾಲರನ್ನು ಕೊಂದರೆ ಪಾಪವೆಂದೆ! ಬರಲಿ ಪಾಪ! ಆ ಪಾಪದಿಂದ ಪತಂಗವಾಗಿ, ಕೀಟವಾಗಿ, ಹುಟ್ಟಿ ಅನುಭವಿಸುವೆನಾಗಲಿ, ನನ್ನ ನಿಶ್ಚಿತ ಕಾರ್ಯದಿಂದ ಹಿಂದಿರುಗಲಾರೆನು. ನನ್ನನ್ನು ವಾರಿಸುವವನೀ ಲೋಕದಲ್ಲಿಲ್ಲ.'

## ೨. ಪಾಂಚಾಲ ವಧೆ

ಪ್ರತಾಪವಂತನಾದ ದ್ರೋಣಪುತ್ರನು ಸಿಟ್ಟಿನಿಂದೆದ್ದು, ಕುದುರೆಗಳನ್ನು ಕಟ್ಟಿ ರಥದಿ ಕೂತು ಶಿಬಿರಾಭಿಮುಖವಾಗಿ ಹೊರಟನು. 'ಎಲ್ಲಿ ಹೋಗುವೆ? ಏನು ಮಾಡುವೆ? ಹೇಳು? ನಾವೂ ಬರುವೆವು. ಮೂವರು ಕಲಿತು ಬಂದೆವು; ಮೂವರೂ ಸುಖ ದುಃಖಗಳನ್ನು ಹಂಚಿಕೊಳ್ಳುವಂತಾಗಲಿ!' ಎಂದು ಕೇಳುವ ಕೃಪ ಕೃತವರ್ಮರಿಗೆ, ಗುರುಸುತನು ತನ್ನ ಉದ್ದೇಶವನ್ನು ತಿಳಿಸಿದನು: 'ಸಾವಿರಾರು ಯೋಧರನ್ನು ಸಂಹರಿಸಿದ ನನ್ನ ತಂದೆಯು ನ್ಯಸ್ತಶಸ್ತ್ರವಾಗಿರುವಾಗ ಪಾಪಿ ಪಾರ್ಷತನು ಕೊಂದನು. ಅವನನ್ನು ಕೊಂದು ಬರುವೆನು. ಅವನಿಗೆ ಶಸ್ತ್ರವಿಜಿತವಾದ ಪುಣ್ಯಲೋಕಗಳಿಲ್ಲದಂತೆ ಮಾಡುವೆನು. ತೊಡಿರಿ ಕವಚಗಳನ್ನು! ಪಿಡಿಯಿರಿ ಧನುಃಖಡ್ಗಗಳನ್ನು! ರಥವನ್ನೇರಿ ನನ್ನ ಹಿಂದೆ ಬನ್ನಿ!'

ಆಗ ಕೃಪಕೃತವರ್ಮರು ತಮ್ಮ ರಥಗಳನ್ನೇರಿ, ಅಶ್ವತ್ಥಾಮನನ್ನು ಹಿಂಬಾಲಿಸಿದರು. ಯಜ್ಞರ ತ್ರೇತಾಗ್ನಿಗಳಂತೆ ಉರಿಯುತ್ತಾ ಅವರು ಶಿಬಿರದ ದ್ವಾರದೇಶವನ್ನು ಸೇರಿದರು. ಅಶ್ವತ್ಥಾಮನು ಕೃಪ ಕೃತವರ್ಮರನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ತಾನು ದ್ವಾರವನ್ನು ಸಮೀಪಿಸಿದನು. ಅಲ್ಲಿ ಮಹಾಕಾಯವು, ಚಂದ್ರಾರ್ಕಸದೃಶವು, ಆದ ಮಹಾಭೂತವನ್ನು ಕಂಡು ಅಶ್ವತ್ಥಾಮನು ಹಿಂಜರಿದು ನಿಂತನು. ಅವನ ಮೈ ನವಿರೆದ್ದಿತು. ಭೂತವು

ವ್ಯಾಘ್ರಚರ್ಮವನ್ನು ಉಟ್ಟು, ಕೃಷ್ಣಾಜಿನವನ್ನು ಹೊದ್ದಿತ್ತು ನಾಗತ್ರಯವು ಅದರ ಯಜ್ಞೋಪವೀತವಾಗಿತ್ತು. ಅನೇಕ ಬಾಹುಗಳಿಂದ ನಾನಾ ಪ್ರಹರಣಗಳನ್ನು ಪಿಡಿದು, ಮಹಾಸರ್ಪಗಳನ್ನು ಬಾಹುಮೂಲದಿ ಅಂಗದವನ್ನುಂತೆ ಬಿಗಿದು, ಆ ಮಹಾಭೂತವು ಕೋರೆಗಳನ್ನು ಮಸೆದು ಸಾವಿರಾರು ಕಣ್ಣುಗಳಿಂದ ಕಿಡಿಗಾರುತ್ತಿತ್ತು. ವಿಚಿತ್ರ ಭೂಷಣಾಲಂಕೃತವು, ಜ್ವಾಲಾಮಾಲಾ ಕುಲಾನನವು ಆದ ಭೂತವನ್ನು ವರ್ಣಿಸಲು ಸಾಧ್ಯವಿಲ್ಲ! ಅದರ ವೇಷವತಿ ಭಯಂಕರವಾಗಿತ್ತು! ಅದನ್ನು ನೋಡಿ ಎಂತಹ ಕಲ್ಲು ಗುಂಡಿಗೆಯೂ ಒಡೆದೀತು! ಮುಖನಾಶಿಕಾ ಶ್ರವಣಗಳಿಂದಲು, ಅಕ್ಷಿಸಹಸ್ರದಿಂದಲು, ಅಗ್ನಿಜ್ವಾಲೆಗಳು ಉಕ್ಕಿ ಬರುತ್ತಿದ್ದವು. ಆ ಭೂತವು ಕೋಟಿ ವಾಸುದೇವರೂಪಗಳಿಂದ ಆವೃತವಾಗಿತ್ತು. ಅವೂ ಭಯಂಕರವಾಗಿದ್ದವು. ಶಂಖ ಚಕ್ರಗದಾಧರಗಳಾದ ಹೃಷೀಕೇಶರೂಪಗಳೂ ಜ್ವಾಲಾಮಾಲಾಭೀಲವಾಗಿದ್ದವು. ಲೋಕಭಯಂಕರವಾದ ಅದ್ಭುತ ಭೂತವನ್ನು ನೋಡಿ ಹೆದರದೆ ದ್ರೌಣಿಯು ದಿವ್ಯಾಸ್ತ್ರವರ್ಷವನ್ನು ಸುರಿಸಿದನು. ಅವನ ಅಸ್ತ್ರಗಳನ್ನು ನುಂಗಿ ಭೂತವು ಸಮುದ್ರಜಲವನ್ನು ನುಂಗುವ ವಡವಾಗ್ನಿಯಂತೆ ಬೆಳಗಿತು. ಅಶ್ವತ್ಥಾಮನು ಶರಗಳನ್ನು ಬಿಟ್ಟನು; ಭೂತವು ಅವನ್ನೂ ನುಂಗಿತು; ಗುರುಸುತನು ರಥ ಶಕ್ತಿಯನ್ನೊಗೆದನು. ರಥಶಕ್ತಿಯು ಭೂತಕ್ಕೆ ತಗುಲಿ ಚೂರಾಗಿ ಬಿತ್ತು. ಬಂಗಾರದ ಪಿಡಿಯ ಖಡ್ಗವನ್ನು ಎಸೆಯಲು ಭೂತವು ಅದನ್ನೂ ನುಂಗಿಬಿಟ್ಟಿತು. ಬಿಲದಲ್ಲಿ ನಕುಲದಂತೆ, ಭೂತ ಮುಖವನ್ನು ಹೊಕ್ಕ ಕತ್ತಿಯನ್ನು ನೋಡಿ, ದ್ರೌಣಿಯು ಕುಪಿತನಾಗಿ ಇಂದ್ರಕೇತುವಿನಂತೆ ಮೆರೆವ ಗದೆಯನ್ನೊಗೆದನು. ಭೂತವು ಅದನ್ನೂ ನುಂಗಿತು. ಸರ್ವಾಯುಧಗಳು ಕ್ಷೀಣವಾಗಲು ಅಶ್ವತ್ಥಾಮನು ನಿರ್ವಿಣ್ಣನಾಗಿ ಸುತ್ತಮುತ್ತ ನೋಡಿದನು. ಎಲ್ಲಿ ನೋಡಿದರೂ ಆಕಾಶವನ್ನು ತುಂಬಿನಿಂತ ಜನಾರ್ದನರೂಪಗಳು ಅವನಿಗೆ ಕಂಡವು.

ನಿರಾಯುಧನಾದ ದ್ರೋಣಪುತ್ರನು ಕೃಪವಚನವನ್ನು ನೆನೆದು, 'ಮಿತ್ರ ಬಂಧುಗಳು ನುಡಿದ ಪಥ್ಯವಚನವನ್ನು ಅಪ್ರಿಯವೆಂದು ತ್ಯಜಿಸಿ, ತನಗೆ ತೋಚಿದಂತೆ ನಡೆವ ಮೂಢನು ಕಷ್ಟಕ್ಕೀಡಾಗುವನು. ಶಾಸ್ತ್ರದಲ್ಲಿ ಅವಧಾರ್ಥರೆಂದು ಹೇಳಲ್ಪಟ್ಟ ಜನರನ್ನು ಕೊಲ್ಲಲು ಹವಣಿಸುವನು. ಧರ್ಮದೂರನಾಗಿ ಪಾಪಿ ಎನಿಸುವನು, ಕೃಪಕೃತವರ್ಮರ ಹಿತನುಡಿಯನ್ನಾಲಿಸದೆ ಕೆಟ್ಟೆನು. ಗೋವು, ಬ್ರಾಹ್ಮಣ, ರಾಜ, ಸ್ತ್ರೀಜನ, ಶಿಶುಗಳು, ಸ್ನೇಹಿತ, ಗುರುವು ತಾಯಿ, ತಂದೆ, ನಿಸ್ಸತ್ವ, ಜಡ, ಅಂಧ, ಸುಪ್ತ, ಭೀತ, ಮತ್ತ, ಮುಂತಾದವರನ್ನು ಶಸ್ತ್ರಘಾತದಿಂದ ಕೊಲ್ಲಬಾರದೆಂದು ಗುರುಜನರು ಉಪದೇಶವಿತ್ತಿರುವರು. ಸನಾತನ ಧರ್ಮಮಾರ್ಗವನ್ನು ಉಲ್ಲಂಘಿಸಿದ ನನಗಿಂದು ಘೋರಸಂಕಟವು ಪ್ರಾಪ್ತವಾಯಿತು. ಹಿಂದಿರುಗಿ ಹೋಗುವುದು ಹೇಡಿತನವೆನಿಸುವುದು; ಭೂತವನ್ನೆದುರಿಸಿ ನಿಲ್ಲುವುದು ಆತ್ಮಹತ್ಯೆಯೇ ಸರಿ! ಏನು ಮಾಡಲಿ? ಪ್ರತಿಜ್ಞೆಯನ್ನೆಂತು ನಿರ್ವಹಿಸಲಿ? ದೈವವೇ ಪುರುಷಕಾರದಕಿಂತಲು ಬಲವತ್ತರವಾಗಿದೆ! ಅಧರ್ಮದಲ್ಲಿ ತೊಡಗಿದ ಕಲುಷಮತಿಯನ್ನು ದೈವವೇ ಈರೂಪದಿಂದ ನಿವಾರಿಸುತ್ತಿದೆ. ಆದುದರಿಂದ ನನ್ನಕಾರ್‍ಯಸಾಧನೆಗಾಗಿ, ದೈವವನ್ನೇ ಪ್ರಾರ್ಥಿಸುವೆನು. ಅದರಿಂದ ವಿಘ್ನವು ದೂರವಾಗಿ ನನ್ನ ಶತ್ರುನಾಶವು ಪೂರ್ಣವಾಗುವದು, ಕಪರ್ದಿಯ,

ಉಮಾಪತಿಯು, ಅನಾಮಯನು, ಕಪಾಲಮಾಲಿಯು, ಭಗನೇತ್ರಹರನು, ಪಾಪಹರನು; ತಪೋವಿಕ್ರಮಸಂಪನ್ನನು, ಶೂಲಪಾಣಿಯು ಆದ ಶಂಕರನಿಗೆ ಶರಣಾಗತನಾಗುವೆನು,' ಎಂದು ಚಿಂತಿಸಿ, ರಥದಿಂದಿಳಿದನು.

ದ್ರೋಣಪುತ್ರನು ಕೈ ಜೋಡಿಸಿ ನಿಂತು ಶ್ರೀಹರಿಯನ್ನೂ, ತದಾಶ್ರಿತನಾದ ರುದ್ರದೇವನನ್ನೂ ಸ್ತುತಿಸತೊಡಗಿದನು. 'ಉಗ್ರ, ಸ್ಥಾಣು, ಶಿವ, ರುದ್ರ, ಸರ್ವ ಶರ್ವ, ಈಶಾನ, ಈಶ್ವರ, ಗಿರಿಶ, ವರದ, ದೇವ, ಭವಭಾವನ, ಈಶ, ಶಿತಿಕಂಠ, ಅಜ, ಶುಕ್ರ, ದಕ್ಷಕ್ರತುಹರ, ಹರ ವಿಶ್ವರೂಪ, ವಿರೂಪಾಕ್ಷ, ಬಹುರೂಪ, ಉಮಾಪತಿ, ಶ್ಮಶಾನವಾಸಿ, ದೃಪ್ತ, ಮಹಾಗಣಪತಿ, ವಿಭು, ಖಟ್ವಾಂಗಧಾರಿ, ಜಟಿಲ, ಬ್ರಹ್ಮಚಾರಿ ಮೊದಲಾದ ನಾಮಗಳಿಂದ ಖ್ಯಾತನಾದ ಮಹಾದೇವನಿಗೂ, ಅವನನ್ನು ನಿಯಮಿಸುತ್ತಾ ನಿಂತಿರುವ ಜನಾರ್ದನನಿಗೂ ನಮಸ್ಕಾರಶತವು. ತ್ರಿಪುರಘಾತಿಯೇ! ನಿನ್ನ ಅಂತರ್ಯಾಮಿಯಾದ ಶ್ರೀಹರಿಪ್ರೀತಿಗಾಗಿ, ನನ್ನನ್ನೇ ಪಶುವನ್ನಾಗಿ ಹೋಮಿಸಿಕೊಳ್ಳುವೆನು.

ಮಹಾದೇವ! ವಿಲೋಹಿತ! ನೀಲಕಂಠ! ದುರ್ನಿವಾರಣ! ತಪೋನಿಷ್ಠ ತಪಸ್ವಿವಲ್ಲಭ! ತ್ರಿಲೋಚನ! ಪಾರಿಷದಪ್ರಿಯ! ಗೌರೀಹೃದಯಮಂದಿರ ವಿಹಾರ! ಕುಮಾರಜನಕ! ವೃಷವಾಹ! ದೇಶರಕ್ಷಕ! ಹಿರಣ್ಯಕವಚ! ಚಂದ್ರಮೌಳಿ! ಪರಮ ಭಕ್ತಿಯಿಂದ ನಿನ್ನ ಚರಣಾರವಿಂದಗಳನ್ನು ನಂಬಿ ಬಂದಿರುವೆನು. ಆಪತ್ತಿನಿಂದ ನನ್ನನ್ನು ಕಾಪಾಡು! ಸರ್ವದೇವಾದಿ ಭೂತಗಳನ್ನೂ ಹೋಮಿಸಿ, ನಿನ್ನ ಪ್ರೀತಿಗಾಗಿ ಯಜ್ಞಮಾಡುವೆನು.

ಆಗ ಅಶ್ವತ್ಥಾಮನ ಮುಂಭಾಗದಲ್ಲಿ ಕಾಂಚನವೇದಿಯು ತಲೆದೋರಿತು. ಅದರಲ್ಲಿ ಜ್ವಾಲಾಭೀಲವಾದ ಅಗ್ನಿಯು ಉರಿಯುತ್ತಿತ್ತು. ಅದರ ಸುತ್ತಲು ವಿಚಿತ್ರ ಪ್ರಮಥ ಭೂತಪಿಶಾಚಗಳು ಕುಣಿದಾಡುತ್ತಿದ್ದವು. ಶೈಲದಂತೆ ಬೆಳೆದುನಿಂತ ಗಣಗಳು; ವರಾಹ ಗೋಮಹಿಷ ಮಾತಂಗ ಮಾರ್ಜರ ವ್ಯಾಘ್ರವದನರು, ಮಕರಮುಖರು, ಕಪೋತಮುಖರು ಆದ ಪ್ರಮಥರು; ಶತಘ್ನಿ, ಭಿಂಡಿಪಾಲ, ತ್ರಿಶೂಲ, ಖಡ್ಗ, ಪರಶು, ದಂಡ, ವಜ್ರ, ಶಕ್ತಿ ಮುಸಲ, ಪಾಶ, ಧನುಸ್ಸು, ಮುಂತಾದ ಆಯುಧಗಳನ್ನು ಹಿಡಿದ ಪಾರಿಷದರು; ಮಹಾದೇವನ ಸ್ತುತಿಗಳನ್ನು ನುಡಿದ ಮಾಹೇಶ್ವರ ಭಕ್ತರು, ಭೇರೀ ಶಂಖ ಮೃದಂಗ ಡಮರುಗಳನ್ನು ಬಾರಿಸುವ ಕಿಂಕರರು ಸುತ್ತುಗಟ್ಟಿ ನಿಂತರು.

ಅಶ್ವತ್ಥಾಮನು ಜೀವದಾಶೆ ತೊರೆದನು. ಧನುಸ್ಸನ್ನು ಹಿಡಿದು, ಗೋಧಾಂಗುಲಿ ತ್ರಾಣವನ್ನು ಕಟ್ಟಿ, ಆತನು ತಾನೇ ತನ್ನ ದೇಹವನ್ನು ಶ್ರೀಹರಿ ಪ್ರೀತಿಗಾಗಿ ಹೋಮಿಸಲು ಸಿದ್ಧನಾದನು. ಧನುಸ್ಸುಗಳೇ ಸಮಿಧಗಳೆಂತಲು, ಶರಗಳೇ ಪವಿತ್ರಗಳೆಂತಲು, ದೇಹವೇ ಹವಿಸ್ಸೆಂತಲು ತಿಳಿದು ರುದ್ರಾಂತರ್ಗತ ಶ್ರೀಹರಿಯನ್ನು ಧ್ಯಾನಿಸಿ, ಯಜ್ಞವನ್ನು ಸಂಕಲ್ಪಿಸಿದನು.

ಶ್ರೀಹರಿ ಶಕ್ತಿಯು ಅಚಿಂತ್ಯಾದ್ಭುತವಾಗಿದೆ. ಏಕೆಂದರೆ ಲೋಕದಲ್ಲಿ ಜನರು ತಮ್ಮನ್ನು ತಾವೇ ಕೊಂದುಕೊಳ್ಳುವರು; ರುದ್ರನು ಅಶ್ವತ್ಥಾಮನಿಂದ ಯುದ್ಧಮಾಡಿ, ತನ್ನ ಸ್ವರೂಪ ಭೂತನೇ ಆದ ಅವನನ್ನು ಕೊಲ್ಲಲೆಣಿಸಿದನು; ಅವನ ಆಯುಧಗಳನ್ನೆಲ್ಲ ನುಂಗಿಬಿಟ್ಟನು.

ಆದರೂ ಅಶ್ವತ್ಥಾಮನು ಮರಣಕಾಲವು ಬಂತೆಂದು ತಿಳಿದು ಹೆದರದೆ, 'ಅಯಂಮದ್ದೇಹ ವಿಷ್ಣವೇಸ್ವಾಹಾ!' ಎಂದು ಹೋಮಿಸಿ, ತನ್ನ ದೇಹವನ್ನು ನುಂಗೆಂದು ಮಹಾದೇವನಿಗೆ (ಭೂತ) ಸಮರ್ಪಿಸಿದನು. ಮತ್ತು ಶಿಬಿರದೊಳಗೆ ಕೊಲ್ಲಲ್ಪಡುವ ಜೀವರನ್ನೂ 'ನಿಖಿಲದೇವಾ ಅಪಿ ವಿಷ್ಣವೇಸ್ವಾಹಾ!' ಎಂದು ಹೋಮಿಸಿ, ತತ್‌ಕ್ಷಣವೇ ಅವರನ್ನೂ ಭಕ್ಷಿಸು! ಎಂದು ಭೂತಮಹಾದೇವನಿಗೂ, ಶ್ರೀಹರಿಗೂ ಸಮರ್ಪಿಸಿದನು. 'ಇದುಶ್ರೀಹರಿ ಯಜ್ಞವು! ಆದುದರಿಂದ ನಿನ್ನ ಯಜ್ಞಕ್ಕೆ ನೀನೇ ವಿಘ್ನವನ್ನು ತಂದಿಡಬೇಡವೆಂದೂ' ಪ್ರಾರ್ಥಿಸಿದನು.

ಇಂತು ಮಾನಸಿಕ ಯಜ್ಞದಿಂದ ಪೂಜಿಸಿದ ಗುರುಸುತನಲ್ಲಿ ಪ್ರೀತನಾಗಿ ಮಹಾದೇವರು ಪ್ರತ್ಯಕ್ಷನಾದನು. ಭೂತವು ಅಂತರ್ಧಿತವಾಯಿತು. ಮಹಾದೇವನು ನಗುನಗುತ್ತಾ 'ಅಶ್ವತ್ಥಾಮ! ನಿನ್ನ ತಪೋನಿಷ್ಠೆಗೆ ಮೆಚ್ಚಿದೆನು. ಕ್ಷಾಂತಿ ಭಕ್ತಿ, ಧೃತಿ, ಬುದ್ಧಿ ವಾಕ್, ಸತ್ಯ ಶೌಚಗಳಿಂದ ನಿನಗೆ ಸಮರಿಲ್ಲ, ನನಗೆ ಶ್ರೀಕೃಷ್ಣನಕಿಂತಲು ಇಷ್ಟತಮರಿಲ್ಲ. ವಾಸುದೇವಾಜ್ಞೆಯಿಂದಲೇ ನಾನು ಶಿಬಿರ ದ್ವಾರದಲ್ಲಿ ಭೂತಾಕಾರನಾಗಿ ನಿಂತು, ಕಾಪಾಡುತ್ತಿದ್ದೆನು. ಪಾಂಚಾಲರ ಜೀವಿತವು ಕೊನೆಗಾಣುವ ಕಾಲ ಬಂದಿದೆ. ಶಿಬಿರವನ್ನು ಪ್ರವೇಶಿಸು! ನಿನ್ನ ಕಾರ್ಯವನ್ನು ಮುಗಿಸು!' ಎಂದು ಅವನ ಆಯುಧಗಳನ್ನೂ ದಿವ್ಯಖಡ್ಗವನ್ನೂ ಇತ್ತು, ಅಂತರ್ಧಿತನಾದನು.

ಮಹಾದೇವನು ತನ್ನ ಅವತಾರವೇ ಆದ ಅಶ್ವತ್ಥಾಮನಲ್ಲಿ ಸನ್ನಿಹಿತನಾಗಿ ವಿಶೇಷ ತೇಜೋಬಲವೇಗಗಳನ್ನು ತುಂಬಿದನು. ಭೂತಪ್ರೇತಗಳು ಅದೃಶ್ಯರಾಗಿ ಹಿಂಬಾಲಿಸಲು ಅಶ್ವತ್ಥಾಮನು ಕೃಪಕೃತವರ್ಮರನ್ನು ಶಿಬಿರದ್ವಾರದಲ್ಲಿ ನಿಂತು, ತನ್ನಿಂದ ತಪ್ಪಿಸಿಕೊಂಡು ಓಡಿಬರುವವರನ್ನು ಬಿಡದೆ ಸಂಹರಿಸುವಂತೆ ಕಟ್ಟಪ್ಪಣೆಯಿತ್ತು, ತಾನು ಶಿಬಿರವನ್ನು ಪ್ರವೇಶಿಸಿದನು. ಅವನ ಭಯಾನಕ ರೂಪವನ್ನೂ ತೇಜೋವಿಶೇಷವನ್ನೂ ಕಂಡು, ಅವರು ವಿಸ್ಮಿತರಾದರು.

ಅಶ್ವತ್ಥಾಮನು ಅದ್ವಾರದಿಂದ ಪಾಂಡವ ಶಿಬಿರವನ್ನು ಹೊಕ್ಕನು. ಎಲ್ಲರೂ ಮಲಗಿ ನಿದ್ದೆಮಾಡುತ್ತಿದ್ದರು. ಕ್ರುದ್ಧನಾದ ದ್ರೌಣಿಯು ಧನುಃಖಡ್ಗಗಳನ್ನು ಧರಿಸಿ, ಧೃಷ್ಟದ್ಯುಮ್ನನ ಮನೆಯನ್ನು ಪ್ರವೇಶಿಸಿದನು. ಬಿಳಿಯ ದುಕೂಲದ ಸುಖಾಸ್ತರಣದಲಿ, ಮಲಗಿದ್ದ ಧೃಷ್ಟುದ್ಯುಮ್ನನನ್ನು ಕಂಡು, ಗುರುಪುತ್ರನು ಕಿಡಿಕಿಡಿಯಾಗಿ, ಹಲ್ಲು ಕಡಿದನು; ಅಲ್ಲಿ ಅಲಂಕಾರವಾಗಿಟ್ಟಿದ್ದ ಪೂಮಾಲೆಗಳನ್ನು ಕಡಿದೀಡಾಡಿ, ಧೂಪಪಾತ್ರೆಯನ್ನು ಒಡೆದು, ಎಡಗಾಲಿನಿಂದ ಪಾರ್ಷತನ ಎದೆಗೆ ಒದ್ದನು; ಧೃಷ್ಟದ್ಯುಮ್ನನು ಎಚ್ಚತ್ತು ಬಂದಿರುವವನು ಗುರುಸುತನೆಂದು ತಿಳಿದನು. ನಿತ್ಯವೂ ಅವನಿಗೆ ಅಶ್ವತ್ಥಾಮನು ಖಡ್ಗಹಸ್ತನಾಗಿ ಸ್ವಪ್ನದಲ್ಲಿ ಕಾಣಬರುತ್ತಿದ್ದನು; ಕಾಳರಾತ್ರಿಯು ಅವನನ್ನು ಸೆಳೆದುಕೊಂಡು ದಕ್ಷಿಣದಿಶೆಗೆ ಹೋಗುತ್ತಿದ್ದಳು. ಇಂತಹ ಸ್ವಪ್ನಗಳಿಂದ ಅವನು ತನ್ನನ್ನು ಗುರುಸುತನು ಕೊಲ್ಲದೆ ಬಿಡನೆಂದು ಅರಿತಿದ್ದನು.

ಎದ್ದು ಬರುತ್ತಿದ್ದ ಧೃಷ್ಟದ್ಯುಮ್ನನನ್ನು ಕೂದಲು ಹಿಡಿದು ಜಗ್ಗಿ, ಅಶ್ವತ್ಥಾಮನು ನೆಲದಿ

ಕೆಡಹಿ, ಅವನ ಎದೆಯ ಮೇಲೆ ಕೂತನು. ಆಗ ಅಶ್ವತ್ಥಾಮನನ್ನು ಕಂಡು, ಪಾರ್ಷತನು 'ಆಚಾರ್ಯಪುತ್ರ! ನನಗೂ ಖಡ್ಗವನ್ನು ಕೊಡು! ರಣದಲ್ಲಿ ಕಡಿದಾಡಿ ಸಾಯುವೆನು. ಶಸ್ತ್ರಮರಣದಿಂದ ನನಗೆ ಪುಣ್ಯಲೋಕವಾಗುವಂತೆ ಮಾಡು!' ಎಂದು ಬೇಡಿದನು. ಅವನ ಅಸ್ಪಷ್ಟ ವಚನಗಳನ್ನಾಲಿಸಿ, ದ್ರೌಣಿಯು 'ಕುಲಪಾಂಸನ! ಆಚಾರ್ಯಘಾತಿಗಳಿಗೆ ಪುಣ್ಯಲೋಕವಾಗಲಾರದು. ನಿನಗೆ ಶಸ್ತ್ರಮರಣವನ್ನು ಕೊಡದೆ, ಪಶುವಿನನ್ನಂತೆ, ಕೊಲ್ಲುವೆನು. ನನ್ನ ತಂದೆಯನ್ನು ನ್ಯಸ್ತಶಸ್ತ್ರನಾಗಿದ್ದಾಗ, ನೀನು ಕೊಂದುದನ್ನು ಮರೆತೆಯಾ? ಅಂತಹ ನೀಚನಿಗೆ ದುರ್ಮರಣವೇ ಯೋಗ್ಯವಾಗಿದೆ ಸಾಯಿ!' ಎಂದು ಪಾದಗಳಿಂದ ಮರ್ಮಗಳಲ್ಲಿ ತಾಡಿಸಿದನು. ಅಶ್ವತ್ಥಾಮನು ಧನುರ್ಗುಣದಿಂದ ಪಾರ್ಷತನ ಕಂಠಕ್ಕೆ ಬಿಗಿದು, ಮಥಿಸಿ, 'ಬ್ರಹ್ಮಹನ್! ಗುರುದ್ರೋಹೀ!' ಎನ್ನುತ್ತಾ ಕೊಂದನು.

ಗುರುಪುತ್ರನು ಸಿಂಹವು ಮತ್ತಗಜವನ್ನಂತೆ ಸೀಳುವಾಗ ಧೃಷ್ಟದ್ಯುಮ್ನನ ಆರ್ತನಾದಗಳಿಂದ ಸ್ತ್ರೀಜನವೂ, ರಕ್ಷಕರೂ ಎಚ್ಚತ್ತರು. ಮೇಲೆ ಕೂತು ಕೊಲ್ಲುವ ಅಶ್ವತ್ಥಾಮನನ್ನು ಅವರು ಭೂತವೆಂದು ತಿಳಿದು, ಭಯದಿಂದ ಮಾತು ಬರದೆ ನಿಂತರು. ಅಶ್ವತ್ಥಾಮನಲ್ಲಿಂದ ತೆರಳಿದ ಮೇಲೆ ಅವನು ದ್ರೋಣಪುತ್ರನೆಂಬ ಅರಿವಾಗಿ, ಸೇವಕರು ಗಟ್ಟಿಯಾಗಿ ರೋದಿಸಿದರು. ಶೋಕಪರಾಯಣರಾದ ತರುಣಿಯರ ಆಕ್ರಂದನವು ಕತ್ತಲನ್ನು ಸೀಳಿಕೊಂಡು ಶಿಬಿರದಲ್ಲಿ ವ್ಯಾಪಿಸಿತು. ವೀರರು ಎಚ್ಚತ್ತು 'ಏನು ಏನಾಯಿತು?' ಎನ್ನುತ್ತಾ ಆಯುಧಗಳನ್ನು ಹುಡುಕಿ, ಹಿಡಿದು ಬಂದರು. ಸ್ತ್ರೀಯರಿಂದ ನಡೆದ ದುರಂತವನ್ನರಿತು ಅವರು ರಥದಲ್ಲಿದ್ದ ಗುರುಪುತ್ರನನ್ನು ಮುತ್ತಿದರು. ಅವರನ್ನೆಲ್ಲ ರೌದ್ರಾಸ್ತ್ರದಿಂದ ಸಂಹರಿಸಿ ಅಶ್ವತ್ಥಾಮನು ಮತ್ತೊಂದು ಮನೆಯನ್ನು ಹೊಕ್ಕನು. ಅಲ್ಲಿ ಉತ್ತಮೌಜನು ಮಲಗಿದ್ದನು. ಅವನನ್ನೂ ಎದೆಯಲ್ಲಿ ಕೂತು ಸಂಹರಿಸಿದನು. ಅವನು ಮನುಷ್ಯನಲ್ಲ ರಾಕ್ಷಸನೆಂದು ತಿಳಿದು ಅಭಿಕ್ರಮಿಸಿ ಬಂದ ಯುಧಾಮನ್ಯುವಿನ ಗದಾಪ್ರಹಾರವನ್ನು ನಿರ್ಲಕ್ಷಿಸಿ ಅಶ್ವತ್ಥಾಮನು ಅವನನ್ನು ಹಿಡಿದು ನೆಲದಿ ಕೆಡಹಿ, ಪಶುವಿನನ್ನಂತೆ ಖಡ್ಗದಿಂದ ಹೊಡೆದು ಕೊಂದನು.

ಅಲ್ಲಲ್ಲಿ ಮಲಗಿದ್ದ ಪಾಂಚಾಲವೀರರನ್ನು ಅಲ್ಲಲ್ಲೇ ಸಂಹರಿಸಿ, ತನ್ನನ್ನೆದುರಿಸಿದ ಸೈನಿಕರನ್ನೂ ರಕ್ಷಕರನ್ನೂ ಕಡಿದು ಕೆಡಹಿದನು. ಖಡ್ಗವಿಹಾರವಿಶಾರದನಾದ ಅಶ್ವತ್ಥಾಮನ ಮುಂದೆ ನಿಂತವರೆಲ್ಲರು ಕ್ಷಣದಲ್ಲಿ ಎರಡು ತುಂಡಾಗಿ ಉರುಳಿ ಬೀಳುತ್ತಿದ್ದರು. ಯೋಧರನ್ನು ಕುದುರೆಗಳನ್ನು ಆನೆಗಳನ್ನು ಕೊಂದು ರಕ್ತಸಿಕ್ತಗಾತ್ರನು, ಅರುಣನೇತ್ರನು ಆಗಿದ್ದ ಗುರುಪುತ್ರನು, ಪ್ರಳಯ ರುದ್ರನಂತೆ ಕಂಗೊಳಿಸಿದನು. ಅಮಾನುಷ ವ್ಯಾಪಾರವನ್ನು ಮಾಡುವ ಅತಿಭೀಷಣನಾದ ದ್ರೌಣಿಯನ್ನು ಕಂಡು 'ಅವನು ಮನುಷ್ಯನಲ್ಲ! ರಾಕ್ಷಸನೆ'ಂದು ತಿಳಿದು ಕೆಲಕ್ಷತ್ರಿಯ ವೀರರು ಕಣ್ಣುಗಳನ್ನು ಮುಚ್ಚಿ ಕಿರುಚಿಕೊಂಡರು. ಕೆಲವರು ಓಡಿಹೋದರು. ಶಿಬಿರದಿಂದ ಹೊರಬರುವ ಪ್ರಾಣ ಮಾತ್ರರನ್ನು ಪ್ರಾಣದಿಂದ ಹೊರಬಿಡದೆ ಗೌತಮ-ಭೋಜರು ಕಡಿದು ಕೆಡಹುತ್ತಿದ್ದರು. ಅಂದು ಕಾಳರಾತ್ರಿಯು ಕಾಲಾಂತಕನಿಂದ ಕೂಡಿ, ಪಾಂಡವಶಿಬಿರದಲ್ಲಿ ಹತ್ಯಾಕಾಂಡವನ್ನು ಮಾಡಿದಳು.

ಮಿಕ್ಕವರಾರೆಂದು ಹುಡುಕುವ ಅಶ್ವತ್ಥಾಮನ ಕಣ್ಣಿಗೆ ದ್ರೌಪದೇಯರೈವರು

ಕಾಣಿಸಿದರು. ಅವರು ಆದ ಗದ್ದಲದಿಂದ ಎಚ್ಚತ್ತು, ಧನುರ್ಬಾಣಪಾಣಿಗಳಾಗಿ ಸೋಮಕರಿಂದ ಕೂಡಿ, ಗುರುಪುತ್ರನನ್ನು ಮುತ್ತಿ, ಶರವ್ರಾತದಿಂದ ಪೀಡಿಸಿದರು. ಪ್ರಭದ್ರಕರು, ಶಿಖಂಡಿಯು ಕೂಡ ಬಂದು ದ್ರೋಣಪುತ್ರನನ್ನು ಮುತ್ತಿದರು. ಭಾರದ್ವಾಜನು ಅವರನ್ನು ಕಂಡು, ಹಸಿದ ಹುಲಿಯಂತಾದನು. ಸಿಂಹನಾದವನ್ನು ಮಾಡಿ ಸಹಸ್ರಚಂದ್ರವಿಮಲವಾದ ಚರ್ಮವನ್ನು (ಗುರಾಣಿ) ಪಿಡಿದು ಖಡ್ಗವನ್ನು ಝಳಪಿಸಿ ಮಹಾವೇಗದಿಂದ ಹಾರಿ, ಪ್ರತಿವಿಂಧ್ಯನ ಕುಕ್ಷಿಯಲ್ಲಿ ತಿವಿದು ಕೊಂದು ಅಶ್ವತ್ಥಾಮನು ಸುತಸೋಮನ ಪ್ರಾಸವನ್ನು ತುಂಡರಿಸಿ, ಖಡ್ಗವನ್ನೆತ್ತಿ ಬರುವ ಅವನ ಪಕ್ಕದಲ್ಲಿ ಹೊಡೆದು ಸಂಹರಿಸಿದನು. ಶತಾನೀಕನು ರಥಚಕ್ರವನ್ನೆತ್ತಿ ಹೊಡೆಯಲು, ಅವನನ್ನು ಹೊಡೆದು ಕೆಡಹಿ, ಗುರುಸುತನು ಖಡ್ಗದಿಂದ ತಲೆಯನ್ನು ತುಂಡರಿಸಿದನು. ಶ್ರುತಕರ್ಮನು ಪರಿಘದಿಂದ ಹೊಡೆದನು. ಅಶ್ವತ್ಥಾಮನು ಅವನ ಮುಖದಲ್ಲಿ ಖಡ್ಗವನ್ನು ತಿವಿದು, ಸಂಹರಿಸಿದನು. ವಿಕೃತಚೀತ್ಕಾರವನ್ನು ಮಾಡಿ ಶ್ರುತಕರ್ಮನು ಬಿದ್ದನು. ಆ ಶಬ್ದದಿಂದ ರೋಷಿತನಾಗಿ ಶ್ರುತಕೀರ್ತಿಯು ಧಾವಿಸಿಬಂದು, ಅಶ್ವತ್ಥಾಮನನ್ನು ಶರವರ್ಷದಲ್ಲಿ ಮುಳುಗಿಸಿದನು. ಗುರುಸುತನು ಗುರಾಣಿಯಿಂದ ಶರವರ್ಷವನ್ನು ವಿಫಲಗೊಳಿಸಿ, ಅವನ ಸಕುಂಡಲ ಶಿರವನ್ನು ಹೊಡೆದು ಕೆಡಹಿದನು.

ಭೀಷ್ಮಹಂತಕನಾದ ಶಿಖಂಡಿಯನ್ನು ನೋಡಿ, ಕುಪಿತನಾದ ಗುರುಪುತ್ರನು ಶಿಲೀಮುಖದಿಂದ ಅವನ ಲಲಾಟವನ್ನು ಗಾಯಗೊಳಿಸಿದನು. ಮಹಾಬಲನಾದ ಶಿಖಂಡಿಯು ಕ್ರುದ್ಧನಾಗಿ ಬಾಣವರ್ಷವನ್ನು ಸುರಿದನು. ಅವನ ಬಾಣಗಳನ್ನು ತಡೆದು ಅಶ್ವತ್ಥಾಮನು ನಡುವಿಗೆ ಖಡ್ಗದಿಂದ ಹೊಡೆದು ಎರಡು ತುಂಡಾಗಿ ಕಡಿದು ಅವನನ್ನು ಕೊಂದನು. ಪ್ರಭದ್ರಕರನ್ನೂ ವಿರಾಟನ ವೀರರನ್ನೂ ದ್ರುಪದ ಪುತ್ರರ ಮಿತ್ರರನ್ನೂ ಹುಡುಕಿ ಹುಡುಕಿ, ಸಂಹರಿಸಿದನು. ಶಿಬಿರದಲ್ಲಿ ಗಂಡುಹುಳುವಿಲ್ಲದಂತೆ ಕೊಂದು, ವೀರವಿಹಾರಗೈದ ಅಶ್ವತ್ಥಾಮನು ಕಾಳರಾತ್ರಿಗೆ ಔತಣವಿತ್ತನು.

ಆದರೂ ದ್ರೌಪದೇಯರಲ್ಲಿ ಶರ್ವತ್ರಾತನೆಂಬ ಭೀಮಸುತನು ಮಾತ್ರ ಉಳಿದು ಕೊಂಡನು. ಕಾಶಿರಾಜನು ತನ್ನ ಮಗಳ ಸುತನಿಗೆ ಅವಧ್ಯತ್ವವನ್ನು ಬೇಡಿ, ಶಿವನಿಂದ ವರವನ್ನು ಪಡೆದಿದ್ದನು. ಕೊಟ್ಟವರವನ್ನು ಸತ್ಯವಾಗಿಸಲು ಶಿವನು ಶರ್ವತ್ರಾತನೆಂಬ ಕಾಲೀದೇವಿಯ ಮಗನನ್ನು ಶಿಬಿರದಿಂದ ಹೊತ್ತು ಕೈಲಾಸವನ್ನು ಸೇರಿಸಿ, ತನ್ನ ಅವತಾರರೂಪವಾದ ಅಶ್ವತ್ಥಾಮನಿಂದ ಕಾಪಾಡಿದನು. ಶರ್ವತ್ರಾತನೆಂದು ಸಾರ್ಥಕನಾಮನಾದ ಭೀಮಪುತ್ರನು ಮತ್ತೆ ಭೂಮಿಗೆ ಇಳಿದು ಬರಲಿಲ್ಲ. ಪರೀಕ್ಷಿತನೇ ರಾಜನಾಗಬೇಕೆಂಬ ಭಗವದಿಚ್ಛೆಯನ್ನರಿತ ಮಹಾದೇವನು ಶರ್ವತ್ರಾತನನ್ನು ಕೈಲಾಸದಲ್ಲಿಟ್ಟು ಸಲಹುತ್ತಿದ್ದನು. ಮುಂದೆ ಅಶ್ವತ್ಥಾಮರೂಪದಿಂದಲೂ ಶರ್ವತ್ರಾತನನ್ನು ಬಿಟ್ಟು, ನಿಷ್ಪಾಂಡವವಾಗಬೇಕೆಂದು ಬ್ರಹ್ಮಶಿರೋನಾಮಕಾಸ್ತ್ರಪ್ರಯೋಗಿಸಿರುವದರಿಂದ ಶರ್ವತ್ರಾತನು ಉಳಿದನು.

ಸ್ವಪ್ನದಲ್ಲಿ ಕಾಳರಾತ್ರಿಯು ನರಾಶ್ವಕುಂಜರಗಳನ್ನು ಪಾಶದಿಂದ ಕಟ್ಟಿ,

ಸೆಳೆದುಕೊಂಡು ಹೋಗುತ್ತಿದ್ದುದನ್ನು ಕಂಡು ಶಿಬಿರದವರು ಪ್ರಳಯವೇ ಬಂತೆಂದು ಥರಥರ ನಡುಗಿದರು. ರಕ್ತಾಂಬರವನ್ನುಟ್ಟು, ಪಾಶಗಳಿಂದ ಪ್ರೇತಗಳನ್ನು ಕಟ್ಟಿ ಸೆಳೆದಾಡುವ ಕಾಳಿಯನ್ನೂ ಖಡ್ಗಹಸ್ತನಾದ ಅಶ್ವತ್ಥಾಮನನ್ನೂ ಅವರು ಸ್ವಪ್ನದಲ್ಲಿ ನಿತ್ಯವೂ ಕಾಣುತ್ತಿದ್ದರು. ದೈವಹತರಾದ ಪಾಂಚಾಲ ಮತ್ಸ್ಯ ಸೃಂಜಯರು ಕಂಡ ಸ್ವಪ್ನಗಳು ಸತ್ಯವೇ ಆದವು. ಗೊಂದಲವೆದ್ದು ಶಿಬಿರವು ಆಕುಲವ್ಯಾಕುಲವಾಯಿತು. ಎದ್ದು ಬಂದ ಸಾವಿರಾರು ಸೈನಿಕರು ಅಶ್ವತ್ಥಾಮನ ಖಡ್ಗಕ್ಕೆ ಬಲಿಯಾದರು. ಕಾಲುಕಡಿದು, ತಲೆಕಡಿದು, ಪಕ್ಕಮುರಿದು, ಗುಂಡಿಗೆ ತೆರೆದು, ಬಿದ್ದ ಸೈನಿಕರಿಂದಲು, ಸತ್ತುಬಿದ್ದ ಗಜಾಶ್ವಗಳಿಂದಲು, ಮೃತ ಮಹಾವೀರರಿಂದಲು, ಶಿಬಿರವು ಮಹಾಸ್ಮಶಾನವಾಯಿತು. ಯಾರದು? ಏನಾಯಿತು? ಎಂದು ಬರುವವರ ತಲೆಗಳನ್ನು ಕಡಿದು ಕೆಡಹುವ ಗುರುಸುತನ ಹತ್ಯಾಕಾಂಡವು ದಾರುಣವಾಯಿತು.

ನಿದ್ರಾಂಧರಾಗಿ ತೂಗುತ್ತಾ ಬರುವವರನ್ನು, ತನ್ನನ್ನು ಕಂಡು ಹೆದರಿ ಅಡಗಿಕೊಂಡವರನ್ನು, ರಥವೇರಿ ಬಂದ ವೀರರನ್ನು ಕೊಂದು ಅಶ್ವತ್ಥಾಮನು ಶಿಬಿರವನ್ನು ಮದ್ದಾನೆಯು ಮಹಾಸರವನ್ನಂತೆ ಧ್ವಂಸಮಾಡಿದನು. ಆಗ ಚೇಕಿತಾನನು ಚೇದಿಕರೂಷಮಾತ್ಸ್ಯರಿಂದ ಕೂಡಿ, ಗುರುಸುತನನ್ನು ಮುತ್ತಿದನು. ಅಶ್ವತ್ಥಾಮನು ಅವರನ್ನೆಲ್ಲ ಖಡ್ಗದಿಂದಲೇ ಹೊಡೆದು ಕೆಡಹಿ, ಸ್ತ್ರೀಬಾಲವೃದ್ಧಸೇವಕಾದಿ ಸರ್ವರೂ ನಾಶವಾಗಲೆಂದು ಶಿಬಿರಕ್ಕೆ ಬೆಂಕಿ ಹಚ್ಚಿದನು.

ನಿದ್ರಾರ್ತರಾದವರು ಅತ್ತಿತ್ತ ಓಡಿದರು. ಕೆಲವರು ಅಸಂಬದ್ಧವಾಗಿ ಮಾತಾಡಿದರು. ಕೆಲವರು ಶಸ್ತ್ರಗಳಿಗಾಗಿ ಹುಡುಕಾಡಿದರು. ಯಾರು ಬಂದಿರುವರು? ಏನಾಗುತ್ತದೆ ಎಂದು ಗೊತ್ತಾಗದೆ ಕೆಲವರು ತತ್ತರಿಸಿದರು. ಕೆಲವರು ಕುಸಿದುಬಿದ್ದ ಶಿಬಿರಗಳಲ್ಲಿ ಸಿಕ್ಕು, ಅಗ್ನಿದಗ್ಧರಾದರು. ಕೆಲವರು ಭಯದಿಂದ ಮಲಮೂತ್ರಗಳನ್ನು ವಿಸರ್ಜಿಸಿದರು. ಆನೆಗಳು, ಕುದುರೆಗಳು ಬಂಧನರಜ್ಜುಗಳನ್ನು ಕಡಿದುಕೊಂಡು ಓಡತೊಡಗಿದವು. ರಾಕ್ಷಸ ಪಿಶಾಚ ಭೂತಗಳ ಸ್ವೇಚ್ಛಾಸಂಚಾರದಿಂದ ಶಿಬಿರವು ಸಿಂಹವ್ಯಾಘ್ರಾಕುಲವಾದ ವನದಂತೆ ಭಯಂಕರವಾಯಿತು. ಅಮಾವಾಸ್ಯೆಯ ಕಗ್ಗತ್ತಲಿನಲ್ಲಿ ಕಾಣದಂತಾಗಿ ಒಬ್ಬರನ್ನೊಬ್ಬರು ತುಳಿದಾಡಿ ಬಿದ್ದರು. ಕೆಲವರು ತಮ್ಮವರನ್ನೇ ಶತ್ರುಗಳೆಂದು ಭ್ರಮಿಸಿ, ಸಂಹರಿಸಿದರು. ದೈವೋಪಹತಚೇತಸ್ಕರಾದ ಪಾಂಡವಶಿಬಿರವಾಸಿ ಜನರ ಹಾಹಾಕಾರಗಳು ದಿಕ್ಕುಗಳಲ್ಲಿ ವ್ಯಾಪಿಸಿದವು. ಹೊರಬಂದವರಾರೂ ಉಳಿಯದಂತೆ ಕೃಪಕೃತವರ್ಮರ ನಿಶಾತಖಡ್ಗಗಳು ಸಂತತವಾಗಿ ಬೀಸಾಡುತ್ತಿದ್ದವು. ಅವರು ಮಿಕ್ಕ ಮೂರು ದಿಕ್ಕಿನಲ್ಲಿದ್ದ ಮನೆಗಳಿಗೆ ಬೆಂಕಿ ಹಚ್ಚಿದರು.

ಶಿಬಿರವು ಉರಿವ ಪ್ರಕಾಶದಲ್ಲಿ ಅಶ್ವತ್ಥಾಮನ ಖಡ್ಗಮಾರಣ ಕರ್ಮವು ಇನ್ನೂ ಭಯಂಕರವಾಯಿತು. ಮೇಲೇರಿ ಬರುವ, ಓಡಿಹೋಗುವ, ಮಲಗಿರುವ ಯಾವ ಭಟನೂ ಉಳಿಯದಂತೆ ಸಂಹರಿಸಿ ಅಶ್ವತ್ಥಾಮನು ಶಿಬಿರದಲ್ಲಿ ಪ್ರಳಯಯಮನಂತೆ ಸಂಚರಿಸಿದನು. ಸಾಂಗದವು, ಸಾಯುಧವು ಆದ ಬಾಹುಸಹಸ್ರವು ಹರಡಿಬಿದ್ದಿತ್ತು. ತೆರೆದ ಕಂಠನ, ಕಚ್ಚಿದ

ತುಟಿಯ, ತಲೆಗಳು ರಕ್ತದಲ್ಲಿ ತೇಲಿಹೋದವು. ತಲೆ ಕಡಿದ ಕಬಂಧಗಳು ಎದ್ದುನಿಂತು, ರಕ್ತವನ್ನು ಚಿಮ್ಮಿ, ನೆಲಕ್ಕುರುಳಿದವು. ತೊಡೆಗಳು, ಪಾದಗಳು, ಪಾರ್ಶ್ವಗಳು, ಕೈಗಳು, ಕಡಿದುದರಿಂದ ನರಳುವ ಭಟರ ಆರ್ತನಾದಗಳು ಮುಗಿಲು ಮುಟ್ಟಿದವು. ತಮವು ಭೀಕರವಾಗಿ ಜಗದಿ ತುಂಬಿತು; ಭೂಮಿಯು ಮೃತನರಾಶ್ವ ಮಾತಂಗ ಕಂಕಾಳಾಂಕ್ರಾಂತವಾಗಿ ಭೀಕರವಾಯಿತು. ಯಕ್ಷರಾಕ್ಷಸ ಭೂತಪ್ರೇತಗಳಿಗೆ ಹಬ್ಬವಾಯಿತು. ಕ್ರುದ್ಧನಾದ ದ್ರೋಣಪುತ್ರನಿಂದ ಖಂಡಿಸಲ್ಪಟ್ಟು ಬಿದ್ದಿರುವ ಸೈನಿಕರು 'ಅಣ್ಣ! ಭಾವ! ಮಾವ! ಕಕ್ಕ! ತಾತ! ಪುತ್ರ!' ಎಂದು ಕೂಗಿ ಕರೆದರು. ಅವರು ಆ ಹೊತ್ತಿಗೆ ಅಶ್ವತ್ಥಾಮನ ಖಡ್ಗಕ್ಕೆ ಬಲಿಯಾಗಿ ಬಿದ್ದಿದ್ದರು.

'ಕ್ರುದ್ಧ ಧಾರ್ತರಾಷ್ಟ್ರ ಇಂತಹ ದಾರುಣ ಹತ್ಯೆಯನ್ನು ಮಾಡಲಿಲ್ಲ. ಕ್ರೂರಕರ್ಮನಾದ ರಾಕ್ಷಸರು ಒಂದೇ ರಾತ್ರಿಯಲ್ಲಿ ಸರ್ವನಾಶ ಮಾಡಿದರು. ಪಾರ್ಥರೂ, ಶ್ರೀಕೃಷ್ಣರೂ ಇಲ್ಲದುದರಿಂದ ಹೀಗಾಯಿತು. ಜನಾರ್ದನನಿಂದ ರಕ್ಷಿತರಾದ ಧರ್ಮರಾಜಾದಿಗಳನ್ನು ಗೆಲ್ಲುವುದು ಸುರಾಸುರನರೋರಗ ರಾಕ್ಷಸರಿಗಳವಲ್ಲ. ಬ್ರಹ್ಮಣ್ಯರು, ಸತ್ಯವಚನರು, ದಾಂತರು, ಸರ್ವಭೂತಾನುಕಂಪಿಗಳು ಆದ ಪಾಂಡವರು ಎಂದೂ ಪ್ರಸುಪ್ತರನ್ನು ಕೊಂದದ್ದಿಲ್ಲ. ನ್ಯಸ್ತಶಸ್ತ್ರರನ್ನು, ಕೃತಾಂಜಲಿ ಪುಟರನ್ನು, ಓಡಿಹೋಗುವವರನ್ನು, ಬಿಚ್ಚಿದ ತಲೆ ಉಳ್ಳವರನ್ನೂ, ಎಂದೂ ಅವರು ಕೊಂದಿಲ್ಲ. ಏನು ಪಾಪ ಮಾಡಿದೆವೋ, ಇಂತಹ ಅನರ್ಥವೆಮಗೆ ಒದಗಿಬಂತು!' ಎಂದು ವಿಲಪಿಸುವ ಜನರೂ, ಉತ್ತರಕ್ಷಣದಲ್ಲೇ ಅಶ್ವತ್ಥಾಮನ ಕತ್ತಿಗೆ ತುತ್ತಾಗುತ್ತಿದ್ದರು. ಪಶುಪತಿಯು ಪಶುಗಳನ್ನಂತೆ ಅಶ್ವತ್ಥಾಮನು ಶಿಬಿರಸ್ಥರನ್ನು ಎಲ್ಲರನ್ನೂ ಸಂಹರಿಸಿದನು. ಕೆಲವರು ಅಗ್ನಿಶಿಖೆಗಳಿಗೆ ಸಿಕ್ಕು ಸುಟ್ಟುಹೋದರು; ಮಿಕ್ಕವರು ಗುರುಸುತನ ಕೈಗೆ ಸಿಕ್ಕು ಖಂಡಿತರಾದರು; ಇನ್ನೂ ತಪ್ಪಿಸಿಕೊಂಡವರು ಶಿಬಿರದ ಹೊರಗಿದ್ದ, ಕೃಪಕೃತವರ್ಮರಿಗೆ ಸಿಕ್ಕು, ಸತ್ತರು.

## ೩. ದುರ್ಯೋಧನನ ಪ್ರಾಣತ್ಯಾಗ

ಶ್ರೀ ವೈಶಂಪಾಯನನು ಜನಮೇಜಯನಿಗೆ ಪೇಳಿದನು:

ಸಂಜಯನೆಲ್ಲವನ್ನು ದಿವ್ಯದೃಷ್ಟಿಯಿಂದ ತಿಳಿದು, ಧೃತರಾಷ್ಟ್ರನಿಗೆ ಮತ್ತೆ ಇಂತೆಂದನು: 'ರಾಜನ್! ಅಶ್ವತ್ಥಾಮನಿಂದ ಸಂಹೃತರಾದ ನರರನ್ನು ಭಕ್ಷಿಸುವ ರಾಕ್ಷಸರು ಕೋಲಾಹಲದಿಂದ ಶಿಬಿರ ದೇಶವನ್ನು ತಂಬಿ, ಮಾಂಸಗಳನ್ನು ತಿನ್ನುತ್ತಾ, ರಕ್ತವನ್ನು ಕುಡಿಯುತ್ತಾ ತಿರುಗಾಡಿದರು. ಮಧ್ಯರಾತ್ರಿಯಲ್ಲಿ, ರೌದ್ರಕ್ರವ್ಯಾದಗಳೂ ಗರ್ಜಿಸುತ್ತಾ ಸಂಚರಿಸಿದವು. ಅಶ್ವತ್ಥಾಮನು ಪಿತೃಋಣವನ್ನು ತೀರಿಸಿದ ಸಂತೋಷದಿಂದ ಶಿಬಿರದಿಂದ ಹೊರಬಂದನು. ಸರ್ವಭೂತಗಳನ್ನು ಸುಟ್ಟು ನಾಶಪಡಿಸುವ ಪ್ರಳಯಾಗ್ನಿಯಂತೆ ವಿಜೃಂಭಿಸಿ, ಗುರುಸುತನು ಆರಿದ ಅಗ್ನಿಯಂತೆ ನಿಶ್ಶಬ್ದವಾಗಿ ಹೊರಬಂದನು.

ಅಲ್ಲಿದ್ದ ಕೃಪಭೋಜರಿಗೆ ಸರ್ವಸಂಹಾರವನ್ನು ಸಾಧಿಸಿದ ತನ್ನ ವೃತ್ತಾಂತವನ್ನು

ತಿಳಿಸಿದನು. ಅಕ್ಷತನಾಗಿ ಹೊರಬಂದ ಅಶ್ವತ್ಥಾಮನನ್ನು ಕಂಡು, ಅವರು ಅತ್ಯಂತ ಹರ್ಷಿತರಾದರು. ಹೊರಬಂದ ಪಾಂಚಾಲ ಸೋಮಕರನ್ನು ಬಿಡದೆ ಕೆಡಹಿದುದನ್ನವನಿಗೆ ತೋರಿಸಿ ಕೃಪಕೃತವರ್ಮರು ಅವನನ್ನು ಅಭಿನಂದಿಸಿದರು. ಇಂತು ಆ ರಾತ್ರಿಯು ಪಾಂಚಾಲ ಪಾಂಡವಸುತ ಸೃಂಜಯಾದಿ ವೀರರಿಗೆ ಮೃತ್ಯುರಾತ್ರಿಯಾಯಿತು. ಕಾಲವು ದುರತಿಕ್ರಮವಾಗಿದೆ! ರಾಜನ್! ನಿಶ್ಚಿಂತರಾಗಿ ಮಲಗಿದ್ದವರು ಮರುದಿನದ ಪ್ರಾತಃಕಾಲವನ್ನು ಕಾಣಲಿಲ್ಲ.'

ಇಂತು ನುಡಿದ ಸಂಜಯನನ್ನು ಕಂಡು ವ್ಯಸನಾಕ್ರಾಂತನಾದ ಧೃತರಾಷ್ಟ್ರನು ಇಂತೆಂದನು: 'ಸಂಜಯ! ನನ್ನ ಪುತ್ರನ ವಿಜಯಾರ್ಥಿಯಾಗಿದ್ದವನಾಗಿದ್ದರೆ ಅಶ್ವತ್ಥಾಮನು ಇಂತಹ ಪ್ರಯತ್ನವನ್ನು ಮೊದಲೇ ಯಾಕೇ ಮಾಡಲಿಲ್ಲ? ಕ್ಷುದ್ರನಾದ ನನ್ನ ಮಗನು ಸಾಯುತ್ತಾ ಬಿದ್ದಿರುವಾಗ ಏನು ಮಾಡಿ ಏನು ಪ್ರಯೋಜನ ? ಮಹಾತ್ಮನಾದ ದ್ರೋಣಪುತ್ರನು ಮತ್ತೇನು ಮಾಡಿದನು ಹೇಳು?' ಎಂದು ಕೇಳಿದ ರಾಜನಿಗೆ ಸಂಜಯನು ವರ್ಣಿಸತೊಡಗಿದನು.

'ರಾಜನ್! ಪಾರ್ಥಕೇಶವರಿರಲು, ಸಾತ್ಯಕಿ ಇರಲು ಇಂತಹ ಕರ್ಮವನ್ನು ಮಾಡಲು ಹೆದರಿದ ಅಶ್ವತ್ಥಾಮನು ಶಿಬಿರದಲ್ಲಿ ಅವರಿಲ್ಲದುದರಿಂದ ದುಷ್ಕೃತ್ಯವನ್ನು ನಡೆಸಲು ಸಮರ್ಥನಾದನು. ಸಾಕ್ಷಾದಿಂದ್ರನೂ ಪಾಂಡವರಿರಲು ಕೃಷ್ಣನಿರಲು ಅವರನ್ನು ಸಂಹರಿಸಲಾರನು ತಿಳಿ! ಮಲಗಿ ವೈಮರೆತವರನ್ನು, ರುದ್ರವರದಿಂದಲು ವಾಸುದೇವಾನುಜ್ಞೆಯಿಂದಲು ಕೊಂದು, ಅಶ್ವತ್ಥಾಮನು ಕೃಪ ಕೃತವರ್ಮರಿಂದ ಕೂಡಿ, ಆನಂದಿಂದ ಕುಣಿದಾಡಿದನು. ಆಮೇಲೆ ಅವನು ಅವರಿಗೆ ಇಂತೆಂದನು: 'ಪಾಂಚಾಲರನ್ನೆಲ್ಲರನ್ನೂ ಕೊಂದೆನು. ದ್ರೌಪದೇಯರೂ ಸತ್ತರು. ಸೋಮಕ ಮಾತ್ಸ್ಯರೆಲ್ಲರೂ ಯಮನ ಮನೆ ಸೇರಿದರು. ಕೃತಕೃತ್ಯರಾದೆವು. ಈಗ ಹೋಗಿ ನಮ್ಮ ರಾಜ ರಾಜನು ಜೀವದಿಂದಿದ್ದರೆ ಅವನಿಗೆ ಸೇಡುತೀರಿಸಿದ ಸುದ್ದಿಯನ್ನು ಮುಟ್ಟಿಸೋಣ!'

ಇಂತು ನಿಶ್ಚಯಿಸಿ ಅವರು ರಥಗಳನ್ನೇರಿ, ದುರ್ಯೋಧನನಿದ್ದಲ್ಲಿಗೆ ತೆರಳಿದರು. ಅದನ್ನು ಕಂಡು ಕೃತವರ್ಮನ ಖಡ್ಗಪ್ರಹಾರವನ್ನು ತಪ್ಪಿಸಿಕೊಂಡು, ಸತ್ತಂತೆ ಬಿದ್ದಿದ್ದ ಧೃಷ್ಟದ್ಯುಮ್ನನ ಸೂತನು ಅಶ್ವಾರೂಢನಾಗಿ, ಉಪಪ್ಲಾವ್ಯವನ್ನು ಸೇರಿ ಎಲ್ಲ ವೃತ್ತಾಂತವನ್ನೂ ದ್ರೌಪದೀಪ್ರಮುಖರಿಗೆ ತಿಳಿಸಿದನು. ಆಕೆಯು ಕೌರವ ಶಿಬಿರದಲ್ಲಿದ್ದ ಭೀಮಸೇನನಿಗೆ ತಿಳಿಸಿ, ರೋದಿಸಿದಳು. ಭೀಮಸೇನನು ಆಕೆಯನ್ನು ಸಮಾಧಾನಪಡಿಸಿ, ಅಶ್ವತ್ಥಾಮನನ್ನು ಹುಡುಕತೊಡಗಿದನು. ಇಷ್ಟರಲ್ಲಿ ವೀರತ್ರಯವು ದುರ್ಯೋಧನನನ್ನು ಸಮೀಪಿಸಿ, ರಥದಿಂದಿಳಿದು, ಅವನನ್ನು ಸಮೀಪಿಸಿತು. ದುರ್ಯೋಧನನು ಮರಣಾಂತಿಕ ವೇದನಾವಿಲನಾಗಿದ್ದನು.

ತೊಡೆಗಳು ಮುರಿದು ಮೈಮೇಲೆ ಪ್ರಜ್ಞೆಯಿಲ್ಲದೆ ರಕ್ತವನ್ನು ಕಾರಿಕೊಂಡು, ವಸುಧಾತಲದಿ ಬಿದ್ದು ನರಳುವ ನರೇಶನನ್ನೂ ಅವನನ್ನು ಕಿತ್ತಿ ತಿನ್ನುತ್ತಿರುವ ಮೃಗ ಪಕ್ಷಿಗಳನ್ನು ನೋಡಿ, ಅಶ್ವತ್ಥಾಮಕೃಪಕೃತವರ್ಮರು ಸಂತಾಪದಿಂದ ಕಣ್ಣೀರಿಡುತ್ತಾ, ಅವನ ಸುತ್ತೂ

ಕೂತರು. ಮೃಗಪಕ್ಷಿಗಳನ್ನು ಹೊಡೆದೊಡಿಸಿ, ಅವರು ಶೋಕಾರ್ತರಾಗಿ, ಸಾಯುವ ನೋವಿಗೆ ನರಳುವ ದುರ್ಯೋಧನನ ಅವಸ್ಥೆಯನ್ನು ಕಂಡು ಅನುತಾಪಪಟ್ಟರು.

'ಏಕಾದಶಾಕ್ಷೌಹಿಣೀ ಭರ್ತನಿಗೆ ಇಂತಹ ಆರ್ತಿಯೇ! ಹಾ ಕಷ್ಟಂ! ರುಧಿರೋಕ್ಷಿತನಾಗಿ ಸರ್ವಕ್ಷಿತೀಶನು ಬರಿನೆಲದಿ ಬಿದ್ದಿರುವನಲ್ಲ! ಕನಕಸಮವರ್ಣನಾದ ಕೌರವೇಶನು ರಕ್ತರೂಷಿತನಾದನೇ! ಚಂದನಗಂಧಲೇಪನವನ್ನು ಸ್ವೀಕರಿಸಿ ಶೋಭಿಸುವ ಸುಯೋಧನನು ಧೂಳಿಯಲ್ಲಿ ಹೊರಳಾಡುತ್ತಿರುವನು. ದೈವವೆಷ್ಟು ನಿಷ್ಕರುಣವು! ಸೋದರ ಮಿತ್ರ ಪರಿವಾರ ಸೇವಿತನಿಂದು ಏಕಾಕಿಯಾಗಿ ಸಾಯುತ್ತಿರುವನು. ಕನಕ ಚಿತ್ರಿತವಾದ ಗದೆಯು ಮಾತ್ರ ಮರಣಕಾಲದಲ್ಲಿಯೂ ಬಿಡದೆ, ಶಯನ ಸಖಿಯಾದ ಪ್ರಿಯ ಭಾಮಿನಿಯಂತೆ, ಪಕ್ಕದಲ್ಲಿ ಬಿದ್ದುಕೊಂಡಿದೆ. ಇವನೊಡನೆ ಇದೂ ಸ್ವರ್ಗವನ್ನು ಸೇರಪೋಗುವಂತಿದೆ. ಮೂರ್ಧಾಭಿಷಿಕ್ತನಾದ ರಾಜನಿಗೆ ಪಾದತಾಡನವೇ? ಶತ್ರುಭಯಂಕರನಾದ ದುರ್ಯೋಧನನು ಶತ್ರುವಶನಾಗಿ, ನಡುವು ಮುರಿದು ಸಾಯಬೇಕಾಯಿತೇ? ಹಾ! ರಾಜನ್ಯರು ದೂರದಲ್ಲಿ ನಿಂತು, ಭಯದಿಂದ ಸೇವಿಸುತ್ತಿರಲು ಶೋಭಿಸುತ್ತಿದ್ದ ಚಕ್ರವರ್ತಿಯನ್ನು ನರಿನಾಯಿಗಳು ಕಿತ್ತುತಿನ್ನಬೇಕೇ? ಅರ್ಥವನ್ನಿತ್ತು ವಿಪ್ರರನ್ನು ಸಂತೋಷಗೊಳಿಸಿದ ಮಹಾರಾಜನು ಇಂದು ಮಾಂಸವನ್ನಿತ್ತು ಕ್ರವ್ಯಾದಿಗಳನ್ನು ತೃಪ್ತಿಪಡಿಸುತ್ತಿರುವನಲ್ಲ!' ಎಂದು ಕೃಪಾಚಾರ್ಯನು ಮುಖವನ್ನು ಕೈಗಳಿಂದ ಮುಚ್ಚಿ, ಅಳಲಾರಂಭಿಸಿದನು.

ಅಶ್ವತ್ಥಾಮನು ತನ್ನ ಮಿತ್ರನೂ, ರಾಜನೂ ಆದ ದುರ್ಯೋಧನನ ದೀನಾವಸ್ಥೆಗೆ ಕಡುನೊಂದು ಇಂತು ವಿಲಪಿಸಿದನು: 'ರಾಜಶಾರ್ದೂಲ! ಸರ್ವ ಧನುರ್ಧಾರಿಗಳಲ್ಲಿ ಮುಖ್ಯನೆನಿಸಿ ಮೆರೆದೆ! ಯುದ್ಧದಲ್ಲಿ ಕುಬೇರನಂತೆ ವಿಕ್ರಮಿಸಿದೆ! ಸಂಕರ್ಷಣನಿಗೆ ಪ್ರಿಯಶಿಷ್ಯನಾಗಿ, ಗದಾಯುದ್ಧದಲ್ಲಿ ಅಸಮಾನನಾದೆ! ಏಕೆ ಭೀಮಸೇನನಿಗೆ ಸೋತೆ? ವಿಧಿಗೆ ತಲೆಬಾಗಿ, ತಲೆ ಕೆಳಗಾದೆಯಾ? ಬಲವಂತನು ಶಿಕ್ಷಾಚತುರನು ಆದ ನಿನ್ನನ್ನು ತೊಡೆ ಮುರಿದು ಆ ಪಾಪಾತ್ಮನು ಕೊಲ್ಲಲು ಆಸ್ಪದವೇಕಿತ್ತೆ? ದೈವವು ಬಲವತ್ತರವಾಗಿದೆ! ಇಲ್ಲದಿರೆ ಭೀಮನು ನಿನ್ನಂತಹ ಗದಾಯುದ್ಧ ನಿಪುಣನನ್ನು ಕೊಲ್ಲಲಾಗುತ್ತಿತ್ತೇ? ಮೋಸದಿಂದ ಹೊಡೆದು, ಕೊಂದ ವೃಕೋದರನು ಧರ್ಮವಂತನೆನಿಸಿದನು ಶ್ರೀಕೃಷ್ಣನಿಗೆ! ಎಂತಹ ಪಾಪಿ ಕಾಲವು ಬಂತು! ಧರ್ಮಯುದ್ಧದಲ್ಲಿ ನಿಂತು, ಗದೆಗಳಿಂದ ಹೊಡೆದಾಡಿ, ಅಧರ್ಮದಿಂದ ಕೊಂದುಕೆಡಹಿದುದಲ್ಲದೇ, ಕಾಲಿನಿಂದ ತಲೆಯನ್ನೊದೆಯಬಹುದೇ? ಕೃಷ್ಣನಿಗೆ ಧಿಕ್ಕಾರವಿರಲಿ! ಭೀಮನಿಗೆ ಧಿಕ್ಕಾರವಿರಲಿ! ಧಿಕ್ಕಾರವಿರಲಿ ಧರ್ಮರಾಜನಿಗೆ! ನಿನ್ನನ್ನು ಕೊಂದ ಭೀಮಸೇನನ ಅಪಕೀರ್ತಿಯು, ಆಚಂದ್ರಾರ್ಕವಾಗಿ ನಿಂತು ಹೋಗುವುದು. ರಾಜನ್! ಬಲದೇವನೇ, 'ನಿನಗೆ ಸಮಾನರಾದ ಗದಾಯುದ್ಧ ನಿಪುಣರಿಲ್ಲ. ಭೀಮಸೇನನು ಅನ್ಯಾಯದಿಂದ ನಿನ್ನನ್ನು ಕೊಂದಿರುವನು, ನ್ಯಾಯದಿಂದಲ್ಲ!' ಎಂದು ಹೇಳಿರುವನು. ಅದು ಸತ್ಯವಾಗಿದೆ. ಕ್ಷತ್ರಿಯನಿಗೆ ವಿಹಿತವಾದ ರಣಮರಣವನ್ನಪ್ಪಿದ ನಿನಗೆ ಸ್ವರ್ಗವು ನಿಶ್ಚಿತವಾಗಿದೆ. ದುರ್ಯೋಧನ! ನಿನಗಾಗಿ ಚಿಂತಿಸುವ ಕೆಲಸವಿಲ್ಲ.

ಆದರೂ, ಹತಪುತ್ರರು ವೃದ್ಧರು ಆಗಿರುವ ನಿನ್ನ ಜನನೀಜನಕರಿಗಾಗಿ ಶೋಕಿಸುವೆನು. ನಿನ್ನಿಂದ ಸನಾಥರಾಗಿ ಸುಖವಾಗಿದ್ದ ಗಾಂಧಾರೀ ಧೃತರಾಷ್ಟ್ರರಿಂದು ನಿನ್ನ ವಧೆಯಿಂದ ಅನಾಥನಾಗಿ, ದುಃಖಪಡುತ್ತಿರುವರು. ನಿನ್ನನ್ನು ಕೊಂದ ಪಾಂಡವರ ಪಡಸಾಲೆಯಲ್ಲಿ ಬಿದ್ದಿದ್ದು, ಅನ್ನಕ್ಕಾಗಿ ಬೇಡಬೇಕಾಗಿ, ಅವರು ಎಷ್ಟು ದುಃಖಿಸುವರೋ ಪಾಪ! ಧಿಕ್ಕಾರ ವಿರಲಿ ಕೃಷ್ಣಾರ್ಜುನರಿಗೆ! ಧರ್ಮವನ್ನು ತಿಳಿದವರೆಂದೆನಿಸಿ ಅಧರ್ಮದಿಂದ ಹೊಡಿಸಿದ ಕೃಷ್ಣಾರ್ಜುನರೂ, ಅಧರ್ಮದಿಂದ ಹೊಡೆದು ಕೊಂದ ವೃಕೋದರನೂ, ಇಂದಿನಿಂದ ಧರ್ಮಧ್ವಜರೆನಿಸಿ ನಿಂದನೀಯರಾಗುವರು! ಗಾಂಧಾರೇ, ಧರ್ಮದಿಂದ ಹೋರಾಡಿ, ರಣರಂಗದಿ ವೀರಶಯನವನ್ನು ಅಲಂಕರಿಸಿದ ನೀನೇ ಧನ್ಯನು! ನಿನ್ನಂತಹ ಪುತ್ರಸತ್ತಮನನ್ನು ಕಳೆದುಕೊಂಡ ನಿನ್ನ ಪಿತೃಗಳು ನಿರ್ಭಾಗ್ಯರೇ ಸರಿ! ನಿನ್ನನ್ನು ಕೂಡಿ, ಅಥವಾ ನಿನ್ನಕ್ಕಿಂತಲು ಮುಂಚೆಯೇ ಸ್ವರ್ಗವನ್ನು ಸೇರದಿರುವ ಮೂವರಿಗೆ ನಮಗೆ ಧಿಕ್ಕಾರವಿರಲಿ! ಹಾ! ಬೇಕಾದ್ದನ್ನಿತ್ತು, ಪ್ರಜಾಹಿತನಾಗಿ ಕಾಪಾಡಿದ ಮಹಾರಾಜನನ್ನು ಹಿಂಬಾಲಿಸದೆ, ಬದುಕಿರುವ ನಾವು ಜೀವಚ್ಛವರೇ ಸರಿ! ನಮ್ಮಂತಹ ಪಾಪಿಗಳಿಲ್ಲ. ನನಗೆ, ನಮ್ಮಪ್ಪನಿಗೆ, ನಮ್ಮ ಮಾವನಿಗೆ ರತ್ನ ಸಮೃದ್ಧಗೃಹಗಳನ್ನಿತ್ತು, ಮಿತ್ರಬಾಂಧವರಿಂದ ಕೂಡಿಸಿ, ಸುಖಪಡಿಸಿದ ನಿನ್ನಂತಹ ಮಹೋದಾರನನ್ನು ನಾವೆಂತು ಮರೆಯುವೆವು! ಭೂರಿದಕ್ಷಿಣೆಗಳನ್ನಿತ್ತು ಬಹು ಯಜ್ಞಗಳನ್ನು ಮಾಡಿದ ಮಹಾರಾಜನ ಋಣವೆಂತು ತೀರುವುದು? ಎಲ್ಲ ರಾಜರಿಂದ ಕೂಡಿ, ವೀರಸ್ವರ್ಗವನ್ನಲಂಕರಿಸಿದ ನಿನ್ನನ್ನು ಹಿಂಬಾಲಿಸದೆ, ನಿಂತಿರುವ ನಮ್ಮಂತಹ ಪಾಪಿಗಳಿನ್ನಿಲ್ಲ. ಧರ್ಮಯುದ್ಧದಲ್ಲಿ ಸಾಯದೆ, ನಿನ್ನನು ಕೂಡಿ ಸ್ವರ್ಗವನ್ನು ಸೇರದೆ, ಬದುಕಿರಲು, ನಾವು ಮಾಡಿದ ಪಾಪವಾದರೂ ಯಾವುದು? ನೀನಿಲ್ಲದೆ ನಾವೆಂತು ಜೀವಿಸುವೆವು? ಇನ್ನೆಲ್ಲಿ ಶಾಂತಿ ನಮಗೆ? ಇನ್ನೆಲ್ಲಿಯ ಸುಖ?

ದುರ್ಯೋಧನ! ಹೋಗು! ಸೇರು ಸ್ವರ್ಗವನ್ನು! ನಮಗೆ ದುರ್ಲಭವಾಗಿರುವ ಬಂಧುಮಿತ್ರ ಸಂದರ್ಶನವು ನಿನಗಾಗುವುದು. ನಮ್ಮ ತಂದೆಯು, ನಿನ್ನ ಪೂಜ್ಯ ಪ್ರಿಯತಮ, ದ್ರೋಣಾಚಾರ್ಯನಿಗೆ ವಂದಿಸು! ಅಶ್ವತ್ಥಾಮನೆಂಬ ನಿಮ್ಮ ಪುತ್ರನು ಧೃಷ್ಟದ್ಯುಮ್ನನೆಂಬ ಪಾಪಿಯನ್ನು ಸಪುತ್ರ ಮಿತ್ರಬಂಧುಪರಿವಾರವಾಗಿ ಕೊಂದಿರುವನು; ಸೇಡನ್ನು ತೀರಿಸಿರುವನು! ಎಂದು ತಿಳಿಸು! ಬಾಹ್ಲಿಕ, ಸೋಮದತ್ತ, ಸೈಂಧವ, ತೀರಿಸಿರುವನು! ಎಂದು ತಿಳಿಸು! ಬಾಹ್ಲಿಕ, ಸೋಮದತ್ತ, ಸೈಂಧವ, ಭೂರಿಶ್ರವ, ಮುಂತಾದ ಮಹಾನುಭಾವರನ್ನು ಅಪ್ಪಿ, ಅನಾಮಯವನ್ನು ವಿಚಾರಿಸು! ಮಿತ್ರಸತ್ತಮಾ! ಹೊರಡು!' ಎಂದು ಅಶ್ವತ್ಥಾಮನು ಉಚ್ಚಸ್ವರದಿಂದ ರೋದಿಸಿದನು.

ಆ ಮಾತನ್ನಾಲಿಸಿ, ದುರ್ಯೋಧನನು ಹೊರಳಿ, ಮಂದ ದೃಷ್ಟಿಯಿಂದ, ಗುರು ಸುತನನ್ನು ವೀಕ್ಷಿಸಿದನು. ಆಗ ಅಶ್ವತ್ಥಾಮನು ಮತ್ತೆ ಇಂತೆಂದನು: 'ದುರ್ಯೋಧನ! ಜೀವದಿಂದಿರುವೆಯಾ? ಕೇಳೊಂದು ಸುಖಕರವಾದ ವಾರ್ತೆಯನ್ನು! ಎಲ್ಲರನ್ನೂ ಕೊಂದು ಬಂದಿರುವೆನು. ಪಾಂಡವರೈವರು, ಶ್ರೀಕೃಷ್ಣಸಾತ್ಯಕಿಯರು ಇಂತು ಏಳು ಜನರಲ್ಲಿ

ಉಳಿದಿರುವರು. ನಿನ್ನವರು ನಾವು ಮೂವರು ಮಾತ್ರ ಉಳಿದಿರುವೆವು. ಇಲ್ಲಿ ನೋಡು! ನಿಷ್ಪಾಂಡವ ಮಹೀಮಂಡಲವನ್ನು ಸಾಧಿಸಿ, ದ್ರೌಪದೇಯರನ್ನು ಐವರನ್ನೂ ಕೊಂದು, ಅವರ ತಲೆಗಳನ್ನು ತಂದಿರುವೆನು. ಧೃಷ್ಟದ್ಯುಮ್ನ ಹತಕನು ಸತ್ತನು, ಪಾಂಚಾಲ ಸೃಂಜಯರೆಲ್ಲರೂ ಸತ್ತರು. ಮಾತ್ಸ್ಯರಾರೂ ಉಳಿದಿಲ್ಲ. ಅವರು ಮಾಡಿದ ಕುಕರ್ಮಕ್ಕೆ ಪ್ರತಿಕೃತಿಯನ್ನು ನಡೆಸಿ, ಸೇಡನ್ನು ತೀರಿಸಿ, ಬಂದಿರುವೆನು. ಪಾಂಡವರೂ ಹತಪುತ್ರರಾದರು. ಶಿಬಿರದಲ್ಲಿ ಮಲಗಿದ್ದವರನ್ನೆಲ್ಲ ದೀರ್ಘನಿದ್ರೆಯಲ್ಲಿ ಮಲಗಿಸಿದೆನು' ಎಂದು ತಂದ ತಲೆಗಳನ್ನೆತ್ತಿ ತೋರಿದನು.

ರಕ್ತಸಿಕ್ತವಾದ ದ್ರೌಪದೇಯರ ಶಿರಗಳನ್ನು ನೋಡಿ, ದುರ್ಯೋಧನನು, ಮನಸ್ಸಿಗಾದ ತೃಪ್ತಿಯಿಂದ ತಲೆಎತ್ತಿ, ಅಶ್ವತ್ಥಾಮನಿಗಿಂತೆಂದನು: 'ಗುರುಪುತ್ರ! ಗಾಂಗೇಯ, ದ್ರೋಣ, ಕರ್ಣರು ಮಾಡದ ಮಹಾಕಾರ್ಯವನ್ನು ಮಾಡಿ, ನನಗೆ ಪ್ರೀತಿಯನ್ನು ತಂದಿರುವೆ! ನಿನ್ನಂತಹ ಮಿತ್ರವಿಲ್ಲ. ಕೃಪಭೋಜರೂ ನನಗೆ ಪ್ರೀತಿಯ ಕೆಲಸವನ್ನು ಮಾಡಿರುವರು. ಶಿಖಂಡಿ ಧೃಷ್ಟದ್ಯುಮ್ನರಂತಹ ಸೇನಾಪತಿಗಳನ್ನು ಕೀಟಗಳನ್ನಂತೆ ಕೊಂದ ನೀನು ಇಂದ್ರಸಮ ವಿಕ್ರಮನಿರುವೆ! ನಿನಗೆ ಸ್ವಸ್ತಿಯಾಗಲಿ! ಮತ್ತೆ ಸಮಾಗಮವಾಗುವುದು ಸ್ವರ್ಗದಲ್ಲೇ!' ಎಂದು ನುಡಿದು, ದುರ್ಯೋಧನನು ತಲೆ ನೆಲಕ್ಕೆ ಹಾಕಿ, ಪ್ರಾಣಗಳನ್ನು ಬಿಟ್ಟನು. ಅವನ ಶರೀರವು ನಿಶ್ಚೇತನವಾಗಿ ಕ್ಷಿತಿಯಲ್ಲಿ ಬಿತ್ತು.

ಮಹಾರಾಜ! ನಿನ್ನ ತನಯನು ಅಪ್ಪಿ ಕಳಿಸಲು ಅಶ್ವತ್ಥಾಮ, ಗೌತಮ, ಕೃತವರ್ಮರು ದುಃಖಭಾರದಿಂದೆಂಬಂತೆ, ಅಲ್ಲಿಂದ ಮೆಲ್ಲನೆ ಸರಿದು, ಶ್ರೀಕೃಷ್ಣ ಭೀಮಾರ್ಜುನರ ಭಯದಿಂದ, ರಥಗಳನ್ನೇರಿ, ದಿಕ್ಕಿಗೊಬ್ಬರಾಗಿ, ಬೇರ್ಪಟ್ಟು ಹೊರಟು ಹೋದರು. ಅಶ್ವತ್ಥಾಮನು ತಾನು ಶಿಬಿರ ಪ್ರವೇಶವನ್ನು ಮಾಡುವ ಮೊದಲೇ, ನ್ಯಗ್ರೋಧತರು ಮೂಲದಲ್ಲಿ ತೂಕಡಿಸುತ್ತಿದ್ದಾಗ, ಕಂಡ ಸ್ವಪ್ನವೆಲ್ಲಿ ಸತ್ಯವಾಗುವುದೋ, ಎಂಬ ಭಯದಿಂದ, ರಥದಲ್ಲಿ ಕೂತು, ಓಡತೊಡಗಿದನು. ಆಗ ಪ್ರತ್ಯೂಷವಾಗುತ್ತಿತ್ತು.

ರಾಜನ್! ಇಷ್ಟನರ್ಥವಾಯಿತೆಂದರೆ, ಅದು ನಿನ್ನ ಉಪೇಕ್ಷೆಯಿಂದಲೇ ಎಂದು ತಿಳಿ! ನಿನ್ನ ಪುತ್ರನನ್ನು ಕುರಿತು, ಶೋಕಿಸುವ ನನ್ನ ದಿವ್ಯದೃಷ್ಟಿಯು ನಷ್ಟವಾಯಿತು. ಶ್ರೀವೇದವ್ಯಾಸ ದೇವರ ಇಚ್ಛೆಯಂತೆ ನಾನು ಸಾಮಾನ್ಯರಂತಾದೆನು.' ಇಂತು ನುಡಿದು, ನಿಟ್ಟುಸಿರಿಡುತ್ತಾ ಕೂತ ಸಂಜಯನನ್ನು ತಿಳಿದು, ಅಂಧ ನೃಪತಿಯು ನಿಡುಸುಯ್ದು, ಚಿಂತಾಪರನಾದನು. ಇಲ್ಲಿಗೆ ಸಂಜಯ ವಾಕ್ಯವು ಮುಗಿಯಿತು. ಶ್ರೀರಸ್ತು.

## ೪. ಐಷೀಕ ಪರ್ವ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

ರಾಜನ್! ಅನ್ಯಾಯದ ಜಯವು ಅಪಜಯ ಸಮವಾಗುವುದು. ಜಯಿಸಿದ ಸಂತೋಷದ ಹಿಂದೆಯೇ ಶೋಕಭಯಗಳು ಮುತ್ತಿ ಪೀಡಿಸುವವು.

ಮರುದಿನ ಬೆಳಗಾಯಿತು. ಧೃಷ್ಟದ್ಯುಮ್ನನ ಸೂತನು ಧರ್ಮರಾಜನನ್ನು ನೋಡಿ, ಆದ ಅನರ್ಥವನ್ನು ತಿಳಿಸಿದನು. 'ರಾಜನ್! ಶಿಬಿರದಲ್ಲಿ ಮಲಗಿದ್ದು, ಮೈಮರೆತ ಧೃಷ್ಟದ್ಯುಮ್ನನನ್ನೂ, ದ್ರೌಪದೇಯರನ್ನೂ, ಶಿಖಂಡಿ ಚೇಕಿತಾನರಾದಿ ಸರ್ವ ಪಾಂಚಾಲಮತ್ಸ್ಯರನ್ನು ಗುರುಪುತ್ರನು ಖಡ್ಗಪಾಣಿಯಾಗಿ ಸಂಹರಿಸಿದನು. ಗಜಾಶ್ವಗಳೂ ಹತವಾದವು ನಿನ್ನ ಬಲವೆಲ್ಲವೂ ನಾಶವಾಯಿತು. ಕೆಡುವಾರ್ತೆಯನ್ನು ಮುಟ್ಟಿಸಲು ನಾನೊಬ್ಬನು ಉಳಿದುಬಂದಿರುವೆನು. ದ್ರೌಪದೀದೇವಿಯರಿಗೂ ಈ ವಾರ್ತೆಯನ್ನು ಮುಟ್ಟಿಸಿರುವವೆನು' ಎಂದು ಸೂತನು ದುಃಖಿಸುತ್ತಾ, ನಿಂತನು. ಸಿಡಿಲಿನ ಬಡಿತದಿಂದೆಂಬಂತೆ, ಕೆಡುಸುದ್ದಿಯನ್ನು ಕೇಳಿದ ಧರ್ಮರಾಜನು ಮೂರ್ಛಿತನಾಗಿ, ನೆಲಕ್ಕೆ ಬಿದ್ದನು. ಸಾತ್ಯಕಿಯು ಆತನನ್ನು ಹಿಡಿದೆಬ್ಬಿಸಿದನು. ಈ ವಾರ್ತೆಯನ್ನು ದ್ರೌಪದಿಯಿಂದ ತಿಳಿದ ಭೀಮಸೇನಾದಿಗಳೂ ಧರ್ಮರಾಜನನ್ನು ಆಶ್ವಾಸಿಸಿದರು. ಗೆದ್ದೆವೆಂಬುವಾಗ ಸೋತೆವೆಂಬಂತಾಗಿ, ಧರ್ಮರಾಜನು ಶೋಕವ್ಯಾಕುಲಚಿತ್ತನಾದನು. ಪುತ್ರಶೋಕವು ದುರ್ಭರ ದುಸ್ಸಹವಲ್ಲವೇ?

'ಅರ್ಥಗತಿಯು ದುರ್ವಿಧವಾಗಿದೆ! ಸೋತವರು ಗೆಲ್ಲುವುದುಂಟು! ಅಂತೆಯೇ ಗೆದ್ದವರು ಸೋಲುವುದೂ ಉಂಟು. ಸೋದರ, ಪಿತೃ, ಮಿತ್ರ, ಪೌತ್ರರೆನ್ನದೆ ರಾಜ್ಯಕ್ಕಾಗಿ ಕಡಿದಾಡಿ, ಅವರನ್ನೆಲ್ಲ ಕೊಂದು, ರಾಜ್ಯವೆಮ್ಮದಾಯಿತೆಂದು ವಿಶ್ವಸ್ತರಾಗಿರುವಾಗ, ಒಂದು ರಾತ್ರಿಯು ಕಳೆಯುವುದರಲ್ಲಿ, ನಮ್ಮವರನ್ನೆಲ್ಲ ಒಬ್ಬ ವೀರನು ಕೊಂದು ನಮ್ಮ ರಾಜ್ಯಪ್ರಾಪ್ತಿಯನ್ನು ವ್ಯರ್ಥಗೊಳಿಸಿರುವನು. ಅರ್ಥವು ಮಹಾನರ್ಥಕಾರಿಯಾಗಿದೆ, ಈಗ ನಮ್ಮ ಜಯವು ಅಪಜಯ ಸಮವೇ ಆಯಿತು. ದುಃಖವನ್ನು ಸಂಪಾದಿಸಿದೆವು, ಸರ್ವಬಂಧು ನಾಶದಿಂದ; ರಾಜ್ಯವನ್ನಲ್ಲ. ಪಾಪದಿಂದ ಬಂದ ಅರ್ಥ, ಬಂಧುವಧೆಯಿಂದ ಬಂದರಾಜ್ಯ, ಇವೆರಡೂ ದುಃಖಪ್ರದವಾಗಲಿ, ಸುಖಕಾರಣವಾಗಲಾರವು. ನಾವೀಗ ಗೆದ್ದರೂ ಸೋತಂತಾದೆವು; ಶತ್ರುಗಳು ಸತ್ತೂ ಗೆದ್ದಂತಾದರು! ಆಹಾ! ಬಾಣದಂಷ್ಟ್ರನು, ಖಡ್ಗಜಿಹ್ವನು, ಧನುರಾಸ್ಯಗಹ್ವರನು, ಜ್ಯಾತಲಶಬ್ದಗರ್ಜಿತನು, ನರಸಿಂಹನು ಆದ ಕರ್ಣನ ಕೈಯಿಂದ ಉಳಿದು ಬದುಕಿದವರೂ ಇಂದು, ನಮ್ಮ ಪ್ರಮಾದದಿಂದ ಹತರಾದರು. ಶಿಬಿರವನ್ನು ಬಿಟ್ಟು, ನಾವಿಲ್ಲಿಗೆ ಬರಬಾರದಿತ್ತು. ಕೃಷ್ಣಾರ್ಜುನರಿಲ್ಲದೆ, ಭೀಮನಿಲ್ಲದೆ, ಇಷ್ಟು ಅನರ್ಥವಾಯಿತು.

ರಥವೆಂಬ ಹ್ರದದಿಂದಲು, ಬಾಣವರ್ಷವೆಂಬ ಅಲೆಗಳಿಂದಲು, ಶಕ್ತಿಪರಶು ಭಲ್ಲಗಳೆಂಬ ಮೀನಗಳಿಂದಲು, ನಾಗಗಳೆಂಬ ನಕ್ರಗಳಿಂದಲು, ಧನುಸ್ಸುಗಳೆಂಬ ಸುಳಿಗಳಿಂದಲು, ಮಹಾಶರಗಳೆಂಬ ನೊರೆಯಿಂದಲು, ಜ್ಯಾತಲನೇಮಿಶಬ್ದಗಳೆಂಬ ಘೋಷದಿಂದಲು ಕೂಡಿ ಸಂಗ್ರಾಮವೆಂಬ ಚಂದ್ರೋದಯದಿಂದ ಉಕ್ಕೇರಿ ಬರುವ ದ್ರೋಣನೆಂಬ ಸಮುದ್ರವನ್ನು, ಶಸ್ತ್ರಾಸ್ತ್ರನೌಕೆಗಳಲ್ಲಿ ಕೂತು ದಾಟಿ ಬಂದವರು, ಇಂದು ಅಶ್ವತ್ಥಾಮನೆಂಬ ಕಿರುಹೊಳೆಯಲ್ಲಿ ಕೊಚ್ಚಿಹೋದರು. ಪ್ರಮತ್ತನಿಗೆ ಅರ್ಥಸಿದ್ಧಿಯಿಲ್ಲ. ಪ್ರಮಾದವು ಸರ್ವಾನರ್ಥಗಳಿಗೆ ಮೂಲ ಕಾರಣವಾಗಿದೆ. ಭೀಷ್ಮವಹ್ನಿಯು,

ಧ್ವಜಧೂಮವನ್ನು ಕಾರಿ, ಶರಜ್ವಾಲೆಗಳನ್ನು ಚಾಚಿ, ಕೋಪಸಮೀರನಿಂದ ಉರಿದೆದ್ದು, ಧನುರ್ಘೋಷವನ್ನು ಮಾಡಿ ಮಹಾಸೇನಾ ಕಕ್ಷವನ್ನು ಸುಡುವಾಗ ಇಷ್ಟನರ್ಥವಾಗಿದ್ದಿಲ್ಲ. ಪ್ರಮಾದವೇ ಶತ್ರುವು ; ಅಪ್ರಮತ್ತನಾಗಿ ಇಂದ್ರನು ದಾನವರನ್ನು ಸದೆಬಡಿದು ಸಖವಾಗಿರುವನು.

ಎಂತಹ ವೀರವರರು, ಒಂದೇ ಕ್ಷಣದಲ್ಲಿ, ನಮ್ಮ ಪ್ರಮಾದದಿಂದ ಸಂಹೃತರಾದರು! ಪ್ರಮತ್ತನನ್ನು ಶೀಕೀರ್ತಿ ವಿದ್ಯಾತಪೋವಿಭವಗಳು ಕೈಬಿಡುವವು ಸಿಟ್ಟಿನಿಂದ ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟವರು ಸ್ವರ್ಗವನ್ನು ಸೇರಿದರು. ಅವರಿಗಾಗಿ ಶೋಕಿಸಿ ಪ್ರಯೋಜನವಿಲ್ಲ. ಕೃಷ್ಣೆಗಾಗಿ ಶೋಕಿಸುವೆನು! ಆ ಸಾಧ್ವಿಯು ಎಲ್ಲ ಸುತರನ್ನೂ ಕಳೆದುಕೊಂಡು ಎಂತು ಜೀವಿಸುವಳು? ಭ್ರಾತೃಪುತ್ರಬಂಧುಗಳೆಲ್ಲರೂ ನಿಹತರಾದುದನ್ನು ನೋಡಿ, ವಿಸಂಜ್ಞಳಾಗಿ, ದ್ರೌಪದಿಯು ರೋದಿಸುವಾಗ, ಎಂತು ಸಮಾಧಾನಪಡಿಸಲಿ! ಸಖಾರ್ಹಳಾದ ಪಾರ್ಷತಿಗೆ ಕಷ್ಟಗಳೇ ಸಂಭವಿಸುತ್ತಿವೆ' ಇಂತು ಚಿಂತಿಸಿ, ಧರ್ಮರಾಜನು, ನಕುಲನಿಂದ ದ್ರೌಪದೀದೇವಿಯನ್ನು ಶಿಬಿರಕ್ಕೆ ಕರೆತರಿಸಿದನು.

ಧರ್ಮರಾಜನು ಶಿಬಿರವನ್ನು ಸೇರಿ, ದಾರುಣ ಹತ್ಯೆಗೆ ಗುರಿಯಾಗಿ, ಬಿದ್ದಿದ್ದ ಸುತಮಿತ್ರಶ್ಯಾಲರನ್ನು ಕಂಡನು. ರಕ್ತಸಿಕ್ತಗಾತ್ರರಾಗಿ, ವಿಭಿನ್ನಶರೀರರಾಗಿ, ತಲೆ ಕಡಿದು, ಚಿತ್ರವಧಗೆ ಸಿಕ್ಕುಬಿದ್ದಿದ್ದ ವೀರ ಪಾಂಚಾಲರನ್ನು ಕಂಡು, ಧರ್ಮರಾಜಾದಿಗಳು ಮೂರ್ಛಿತರಾದರು. ಮತ್ತೆ ಎಚ್ಚತ್ತು, ಅವರು 'ಹೋ' ಎಂದು ಅಳತೊಡಗಿದರು. ಧರ್ಮರಾಜನು ಕಣ್ಣೀರು ಕೋಡಿಯಾಗಿ ಹರಿಯಲು, ಗಡಗಡ ನಡುಗುತ್ತಾ, ಮೈಮೇಲೆ ಎಚ್ಚರವಿಲ್ಲದೆ ಬಿದ್ದನು. ಮಿತ್ರರು ಆತನನ್ನು ಸಮಾಧಾನಪಡಿಸಿದರು. ಆಗ ನಕುಲನ ರಥದಲ್ಲಿ ಕೂತು ಪರಮಾರ್ತರೂಪಳಾದ ದ್ರೌಪದಿಯು ಅಲ್ಲಿಗೆ ಬಂದಳು. ಅಪ್ರಿಯ ವಾರ್ತೆಯನ್ನು ಕೇಳಿ, ಆಕೆಯು ವ್ಯಥಿತಳಾಗಿ, ಮಹಾವಾತದಿಂದ ಕಂಪಿಸುವ ಕದಲೀಕಾಂಡದಂತೆ, ಕೆಳಗೆ ಬಿದ್ದಳು. ಆಕೆಯ ಪದ್ಮಸುಂದರವದನವು ಶೋಕಕರ್ಶಿತವಾಗಿ, ರಾಹುಗ್ರಸ್ತ ಚಂದ್ರಮನಂತೆ, ಕಂಡಿತು. ಫುಲ್ಲಪದ್ಮ ಪಲಾಶವಿಶಾಲವಾದ ಆಕೆಯ ಲೋಚನಗಳಿಂದ ಸಂತತಾಶ್ರುಧಾರೆ ಹರಿಯಿತು. ನೆಲದಿಬಿದ್ದು ರೋದಿಸುವ ಕೃಷ್ಣೆಯನ್ನು ಸತ್ಯವಿಕ್ರಮನಾದ ಭೀಮಸೇನನು ಕೈಗಳಿಂದ ಹಿಡಿದು, ಕೂಡಿಸಿ, ಕಣ್ಣೀರನ್ನೊರೆಸಿ, ಸಮಾಶ್ವಾಸಿಸಿದನು. ದ್ರೌಪದಿಯು ಅಳುತ್ತಾ ಸಾಧಿಕ್ಷೇಪವಚನಗಳಿಂದ ಧರ್ಮರಾಜನಿಗಿಂತೆಂದಳು:

'ಮಹಾರಾಜ! ಕ್ಷಾತ್ರಧರ್ಮರತನಾಗಿ ಮೆರೆದೆ! ಯಮರಾಜನಿಗೆ ಮಕ್ಕಳನ್ನೊಪ್ಪಿಸಿ, ಅಖಿಲ ಮಹೀಮಂಡಲವನ್ನು ಗೆದ್ದೆ! ಒಳ್ಳೆಯದಾಯಿತು! ನೀನಂತೂ ಸುಕ್ಷೇಮದಿಂದಿರುವೆಯಲ್ಲ! ಮತ್ತಮಾತಂಗಗಮನನಾದ ಅಭಿಮನ್ಯುವು ಮೃತ್ಯುವಿಗೆ ತುತ್ತಾದನೆಂಬ ಚಿಂತೆ ಇನ್ನೇಕೆ? ಇಲ್ಲಿ ಮಕ್ಕಳನ್ನೆಲ್ಲ ಅಶ್ವತ್ಥಾಮನ ಖಡ್ಗಧಾರೆಗೆ ಧಾರೆಯೆರೆದು, ಅಲ್ಲಿ ಶಿಬಿರದಲ್ಲಿ ನಿಶ್ಚಿಂತರಾಗಿ ಮಲಗಿದ್ದ ನೀವಾದರೂ ಉಳಿದಿರಿ! ಆಹಾ! ಶೂರವರರೆಂದು ಖ್ಯಾತರಾದ ಆತ್ಮಜರನ್ನೆಲ್ಲ, ಬಲಿಯಿತ್ತೂ, ಇನ್ನೂ ಬದುಕಿರುವೆನೆಂಧರೆ, ನನ್ನ ಗುಂಡಿಗೆ

ಶಿಲಾಮಯವೋ ಏನು ? ಪಾಪಿ ದ್ರೌಣಿಗೆ ಎದುರಿಲ್ಲದಂತಾಯಿತಲ್ಲ! ಯುದ್ಧದಲ್ಲಿ ವಿಕ್ರಮಿತಿ ಕ್ಷತ್ರಿಯನಲ್ಲದವನು, ಸುಕ್ಷತ್ರ ವೀರಪುತ್ರರನ್ನು ಕಟುಕನಂತೆ ಕೊಂದರೂ, ಸುಕ್ಷತ್ರವೀರರಾದವರಿಗೆ ರೋಷವಿರಬೇಡವೇ ? ಇಂದು ಆ ಪಾಪಿಯನ್ನು ಕೊಂದು ಬರದಿದ್ದರೆ, ನಾನು ಇಲ್ಲೇ ಹೀಗೇ ಕೂತು ಪ್ರಾಣಗಳನ್ನು ಬಿಟ್ಟುಬಿಡುವೆನು.'

ಇಂತು ನುಡಿದು, ಪ್ರಾಯೋಪವಿಷ್ಟಳಾದ ಯಾಜ್ಞಸೇನಿಯನ್ನು ನೋಡಿ, ರಾಜರ್ಷಿ ಧರ್ಮಜರು 'ಶುಭೇ! ಶೋಕಿಸಿ ಫಲವಿಲ್ಲ ಕೇಳು! ನಿನ್ನ ಪುತ್ರರು ಧರ್ಮಯುದ್ಧದಲ್ಲಿ, ಧರ್ಮದಿಂದ ಕಡಿದಾಡಿ, ಪುಣ್ಯ ಲೋಕಗಳನ್ನು ಸೇರಿದವರು. ಅಶ್ವತ್ಥಾಮನು, ವಿಪ್ರನಾಗಿದ್ದೂ, ನಮ್ಮ ಗುರುಪುತ್ರನಾಗಿದ್ದೂ, ಅಧರ್ಮದಿಂದ ಅವರನ್ನು ಕೊಂದು, ಮಹಾಪಾಪಭಾಜನನಾಗಿರುವನು. ನಿನ್ನ ಭ್ರಾತೃಪುತ್ರರಿಗಾಗಿ ಶೋಕಿಸುವುದು ತರವಲ್ಲ. ದ್ರೌಣಿಯು ಭಯದಿಂದ ಓಡಿ, ವನವನ್ನು ಸೇರಿರುವನು. ಅವನನ್ನೆಂತು, ಕಾದಿ, ಸಂಹರಿಸಲಾಗುವುದು ? ಆಲೋಚಿಸು !' ಎಂದನು. ದ್ರೌಪದಿಯು 'ಅವನನ್ನು ಸಂಹರಿಸಲಾಗದಿರೆ ಅವನ ತಲೆಯಲ್ಲಿರುವ ಮಹಾಮಣಿಯನ್ನು ಕಿತ್ತು, ತಂದುಕೊಡಿ ! ಆಗ ನನ್ನ ರೋಷವು ಶಾಂತವಾಗುವುದು,' ಎಂದಳು.

ಆಗ ದ್ರೌಪದಿಯು ಭೀಮಸೇನನನ್ನು ಸಮೀಪಿಸಿ, 'ಭೀಮಸೇನ! ಕ್ಷತ್ರಧರ್ಮವನ್ನು ಸ್ಮರಿಸಿ, ನನ್ನ ಹಗೆಯನ್ನು ತೀರಿಸು! ಶಂಬರನನ್ನು ಇಂದ್ರನನ್ನಂತೆ, ಆ ಪಾಪಿಯನ್ನು ಸಂಹರಿಸು! ವಿಕ್ರಮ ಬಲ ಸಾಹಸಗಳಲ್ಲಿ ನಿನ್ನಂತಹ ವೀರನಿನ್ನೊಬ್ಬನಿಲ್ಲ. ನಮಗೊದಗಿದ ನಾನಾ ಕಷ್ಟಗಳಿಂದ ನಮ್ಮನ್ನು ಪಾರುಮಾಡಿದ ಬುದ್ಧಿವೀರ್ಯವಿಕ್ರಮಸಂಪನ್ನನು ನೀನೆಂದು ಲೋಕವೆಲ್ಲವೂ ಅರಿತಿಹುದು. ವಾರಣಾವತದ ಅರಗಿನ ಮನೆಯಿಂದ, ಬಕ ಹಿಡಿಂಬ ಕಿಮ್ಮೀರ ಜಟಾಸುರರಿಂದ, ಕಾಪಾಡಿದವರಾರು? ವಿರಾಟ ನಗರದಲ್ಲಿ ಕೀಚಕ ಪೀಡಿತಳಾದ ನನ್ನನ್ನು ಪೊರೆದವರಾರು ? ವನದಲ್ಲಿ ಜಯದ್ರಥನಿಂದ ರಕ್ಷಿಸಿದವರಾರು ? ಪೌಲೋಮಿಯನ್ನು ಇಂದ್ರನಂತೆ, ನನ್ನನ್ನು ಪ್ರೀತಿಸಿ, ಪೊರೆವ ನಿನ್ನ ಹೊರತಿನ್ನಾರೆನಗೆ ದಿಕ್ಕು? ಪುತ್ರಶೋಕದಿಂದುರಿವ ನನ್ನ ಮನಸ್ಸಿನ ಸಂತಾಪವನ್ನಾರಿಸು!' ಎಂದು ಪ್ರಾರ್ಥಿಸಿದಳು.

ಮಹಾಬಲನಾದ ಕೌಂತೇಯನು ದ್ರೌಪದಿಯ ವಚನವಾಯುವಿನಿಂದ ಉರಿದೆದ್ದನು. ಕಾಂಚನ ಚಿತ್ರಿತವಾದ ಮಹಾರಥವನ್ನೇರಿ, ನಕುಲನನ್ನು ಸಾರಥಿಯಾಗಿಟ್ಟು ಭೀಮಸೇನನು, ಗುರುಪುತ್ರನನ್ನು ಹಿಂಬಾಲಿಸಿದನು. ದುರ್ಧರನಾದ ಭೀಮಸೇನನು ಹೊರಟುದುದನ್ನು ನೋಡಿ, ಯಾದವ ಕುಲಲಲಾಮನು ಧರ್ಮರಾಜನಿಗಿಂತೆಂದನು:

'ಪಾಂಡವ ಜ್ಯೇಷ್ಠ! ಪುತ್ರಶೋಕಪರಾಯಣನಾಗಿ, ವೃಕೋದರನು ಸೇಡಿನಿಂದ ಉರಿಯುತ್ತಾ, ಏಕಾಂಗಿಯಾಗಿ ಅಶ್ವತ್ಥಾಮನ ಬೆನ್ನಟ್ಟಿ ಹೋಗಿರುವನು. ಭೀಮಸೇನನು ನಿನಗೆ ಪ್ರಿಯತರನಾಗಿರುವನು ; ನನಗೂ ಪ್ರಿಯತಮನಾಗಿರುವನು. ಅವನೀಗ ಅಶ್ವತ್ಥಾಮನಿಂದ ಕಾದಲು ಹೊರಟು, ಆಪನ್ಮಗ್ನನಾದಂತಿರುವನು. ಅಶ್ವತ್ಥಾಮನು ಕ್ರೂರಸಾಹಸಿಯು ; ಅವನಾವ ಕುಕರ್ಮಕ್ಕೂ ಹೇಸುವುದಿಲ್ಲ, ಭೀಮನಿಗೆ ನೆರವಾಗಿ ನಾವು ಹೋಗುವುದಾವಶ್ಯಕವಾಗಿದೆ. ಕೇಳು ಒಂದು ರಹಸ್ಯ ವೃತ್ತವನ್ನು! ದ್ರೋಣಾಚಾರ್ಯನು

ಬ್ರಹ್ಮಶಿರೋನಾಮಕ ಮಹಾಸ್ತ್ರವನ್ನು ಪುತ್ರನಾದ ಅಶ್ವತ್ಥಾಮನಿಗೆ ಉಪದೇಶಿಸಿದನು. ಸರ್ವಧನುರ್ಧರ ಶ್ರೇಷ್ಠನಾದ ದ್ರೋಣನು ಪ್ರಿಯ ಶಿಷ್ಯನಾದ ಧನಂಜಯನಿಗೂ ಅದನ್ನು ಕೊಟ್ಟಿರುವನು. ಅಶ್ವತ್ಥಾಮನಿಗೆ ಉಪದೇಶಿಸುವಾಗ ಧನುರಾಚಾರ್ಯನು, ಆತನ ಚಪಲಕ್ರೂರ ಸ್ವಭಾವವನ್ನರಿತು ಇಂತು ಎಚ್ಚರಿಸಿದನು: 'ಪುತ್ರ! ಬ್ರಹ್ಮಶಿರೋನಾಮಕಾಸ್ತ್ರವು ಬಹುಭಯಂಕರವು. ಇದಕ್ಕೆ ಮಂತ್ರವು ಗಾಯತ್ರಿಯು ; ಮಂತ್ರಧ್ಯಾನರಕ್ತನು ಚತುರ್ಮುಖನು; ಮಂತ್ರದೇವತೆಯು ಸವಿತೃನಾಮಕ ಶ್ರೀನಾರಾಯಣನು. ಇದು ಸರ್ವ ಪೃಥ್ವಿಯನ್ನೂ ಸುಡಬಲ್ಲದು. ಇಂತಹ ಭಯಂಕರಾಸ್ತ್ರವನ್ನು ಮನುಷ್ಯರಲ್ಲಿ, ಎಂತಹ ಪರಮಾಪತ್ತಿನಲ್ಲಿಯೂ ಪ್ರಯೋಗಿಸಬೇಡ!' ಎಂದು ಹೇಳಿ, ಅಸ್ತ್ರವನ್ನಿತ್ತನು. 'ನೀನು ಸಜ್ಜನರಂತೆ ನಡೆಯುತ್ತಿಲ್ಲ. ದುರ್ಜನ ಸ್ನೇಹದಿಂದ ಕೆಡುವೆ! ಜೋಕೆ!' ಎಂದು ಮತ್ತು ಎಚ್ಚರಿಸಿದ ತಂದೆಯ ಮಾತಿನಂತೆ ನಡೆಯಲಾರದೆ, ಅಸ್ತ್ರವನ್ನು ಉಪಯೋಗಿಸಲಾರದೆ, ಗುರುಪುತ್ರನು ನಿರಾಶನಾಗಿ, ದುರ್ಯೋಧನ ಪ್ರೀತಿಯನ್ನೆಂತು ಸಾಧಿಸಬೇಕೆಂಬ ಚಿಂತೆಯಿಂದ, ಮಹೀಮಂಡಲದಲ್ಲಿ ಸಂಚರಿಸುತ್ತಿದ್ದನು.

ನೀವು ವನವಾಸವನ್ನು ಮಾಡುತ್ತಿದ್ದ ಕಾಲವದು. ಒಂದು ದಿನ ಅಶ್ವತ್ಥಾಮನು ದ್ವಾರಕೆಗೆ ಬಂದನು. ವೃಷ್ಣಿ ಯಾದವರವನನ್ನು ಸತ್ಕರಿಸಿದರು. ಸಮುದ್ರ ತೀರದಲ್ಲಿ ಕೂತು, ಅವನು ತನ್ನ ಸ್ವರೂಪವನ್ನು ಧ್ಯಾನಮಾಡುತ್ತಿದ್ದನು. ಅವನು ಏಕಾಂತದಲ್ಲಿ ನನ್ನನ್ನು ಕಂಡು, ನಗುತ್ತಾ ಇಂತೆಂದನು: 'ಶ್ರೀಕೃಷ್ಣ! ನನ್ನ ತಂದೆಯಾದ ದ್ರೋಣನು ಬಹುಕಾಲ ತಪಸ್ಸು ಮಾಡಿ, ಅಗಸ್ತ್ಯರಿಂದ ಬ್ರಹ್ಮಶಿರೋನಾಮಕಾಸ್ತ್ರವನ್ನು ಪಡೆದನು. ಅದನ್ನು ನಾನು ಆತನಿಂದ ಹೊಂದಿರುವೆನು. ಅಂತಹ ಬ್ರಹ್ಮಶಿರವನ್ನು ಸ್ವೀಕರಿಸಿ, ಅದಕ್ಕೆ ಬದಲಾಗಿ, ಸರ್ವರಿಪು ನಾಶಕವಾದ ನಿನ್ನ ಚಕ್ರವನ್ನು ನನಗೆ ಕೊಡು!' ನಾನೆಷ್ಟು ವಾರಿಸಿದರೂ, ಕೇಳದೆ ಗುರುಸುತನು, ಅಸ್ತ್ರವನ್ನು ಕೊಡೆಂದು ಹಠಹಿಡಿದನು. ದೇವ, ಮಾನವ, ದಾನವ, ಗಂಧರ್ವ, ಪತಗೋರಗ, ಯಕ್ಷಾದಿ, ಸರ್ವಜೀವರಾಶಿಯೂ, ಬಲವಿಕ್ರಮಗಳಲ್ಲಿ ನನ್ನ ಕೊಟ್ಯಂಶದಿಂದಲೂ ಸಮಾನರಲ್ಲವೆಂದು ತಿಳಿಸಿ, ನಾನು, 'ಗುರುಪುತ್ರ! ಇದು ಧನುಸ್ಸು! ಇಕೋ ಶಕ್ತಿ! ಇದೇ ಚಕ್ರವು! ಗದೆಯು ಇಲ್ಲಿದೆ ನೋಡು! ಯಾವ ಅಸ್ತ್ರವು ನಿನಗೆ ಬೇಕೋ, ನೀನಾಗಿ ಎತ್ತಿ, ತೆಗೆದುಕೋ! ನಿನ್ನ ಬ್ರಹ್ಮಶಿರವನ್ನು ನಾನು ಒಲ್ಲೆನು' ಎಂದೆನು.

ಅಶ್ವತ್ಥಾಮನು ನನ್ನಿಂದ ಸ್ಪರ್ಧಿಸಲೆಣಿಸಿ, ಸಹಾಸ್ರಾರವು, ವಜ್ರನಾಭವು ಆದ ನನ್ನ ಚಕ್ರವನ್ನು ಆರಿಸಿಕೊಂಡನು. ನಾನು 'ಕೊಂಡು ಹೋಗು!' ಎಂದೆನು. ದ್ರೌಣಿಯು, ಹಾರಿಬಂದು, ಎಡಗೈಯಿಂದ ಚಕ್ರವನ್ನೆತ್ತಲು ಪ್ರಯತ್ನಿಸಿದನು; ಕೈಲಾಗದಿರಲು ಬಲಗೈಯಿಂದ ಪ್ರಯತ್ನಿಸಿದನು. ಸರ್ವಬಲವನ್ನು ಉಪಯೋಗಿಸಿ, ಎರಡು ಕೈಗಳಿಂದಲೂ, ಚಕ್ರವನ್ನು ಎತ್ತಲಾರದೆ, ಕೊನೆಗೆ ಕದಲಿಸಲಾರದೆ, ಅಶ್ವತ್ಥಾಮನು, ಖಿನ್ನನಾಗಿ, ಹಿಂದಿರುಗಿದನು. ನಾನು ಅವನನ್ನು ಕರೆದು ಇಂತೆಂದೆನು:

'ಅಶ್ವತ್ಥಾಮ! ಗಾಂಡೀವಧನ್ವನು, ಕಪಿಪ್ರವರಕೇತನನು ಆದ ಅರ್ಜುನನು ನನಗೆ ಪ್ರಿಯತಮನು. ದೇವದೇವನಾದ ಶಂಕರನೊಡನೆ ದ್ವಂದ್ವಯುದ್ಧವಾಡಿ, ಆತನನ್ನು

ಮೆಚ್ಚಿಸಿ, ಪಾಶುಪತವನ್ನು ಪಡೆದ ಧನಂಜಯನಕ್ಕಿಂತಲು ನನಗೆ ಪ್ರಿಯತರರಿಲ್ಲ. ಅವನಿಗೆ ನಾನೀಯಲಾರದ ವಸ್ತುವೀಲೋಕದಲ್ಲಿಲ್ಲ. ಅಂತಹ ಪಾರ್ಥನೂ ನನ್ನ (ಸ್ವರೂಪ ಭೂತವಾದದರಿಂದ ಅದೇಯವಾದ) ಚಕ್ರವನ್ನು ಎಂದೂ ಬೇಡಿಲ್ಲ. ಹಿಮವತ್ಪರ್ವತದಲ್ಲಿ ತಪಮಾಡಿ ಪಡೆದ ಪ್ರದ್ಯುಮ್ನಕುಮಾರನೆಂದೂ ಇಂತಹ ಮಾತಾಡಿಲ್ಲ. ಅತಿಬಲನಾದ ರಾಮನೂ ನಿನ್ನಂತೆ ಚಕ್ರವನ್ನು ಬೇಡುವ ಅವಿವೇಕಿಯಾಗಿಲ್ಲ. ಭಾರತಾಚಾರ್ಯನ ಪುತ್ರನೆಂದು, ನಿನ್ನನ್ನು ಯಾದವರು ಸತ್ಕರಿಸಿದರೆಂದು, ಮೈಮರೆತು, ಅಸಾಧ್ಯ ವರವನ್ನು ಬೇಡಿದೆ! ಇರಲಿ! ಚಕ್ರವನ್ನು ಹಿಡಿದು, ಯಾರಿಂದ ಕಾದಬೇಕೆಂದಿರುವೆ! ಹೇಳು!'

ದ್ರೌಣಿಯು ನನ್ನನ್ನು ಕಂಡು, 'ಕೃಷ್ಣ! ನಿನ್ನೊಡನೆ ಕಾದಬೇಕೆಂದಿರುವೆನು. ಅವನೀಮಂಡಲವನ್ನು ನಿಷ್ಪಾಂಡವವನ್ನಾಗಿಸಿ, ದುರ್ಯೋಧನನಿಗೆ ಕೊಡಬೇಕೆಂದು, ಚಕ್ರವನ್ನು ಬೇಡಿದೆನು' ಎಂದು ಉತ್ತರಿಸಿದನು. ಚಕ್ರವನ್ನು ನನ್ನ ಹೊರತಿನ್ನಾರೂ ಹಿಡಿದೆತ್ತಲಾರರೆಂದು ಒಪ್ಪಿಕೊಂಡ ಗುರುಸುತನಿಗೆ, ನಾನು ಅಶ್ವಗಜರತ್ನಗಳನ್ನಿತ್ತು, ಸತ್ಕರಿಸಿ, ಕಳಿಸಿದೆನು. ಇಂತಹ ಸಂರಂಭಿಯು, ದುರಾತ್ಮನು, ಚಪಲನು, ಕ್ರೂರನು ಆದ ಅಶ್ವತ್ಥಾಮನಿಂದ, ಋಜುಮಾರ್ಗವರ್ತನನಾದ ವೃಕೋದರನನ್ನು ಕಾಪಾಡಲು ಹೊರಟಿರುವೆನು. ನೀವೂ ಬನ್ನಿ!' ಎಂದು ಅವಸರದಿಂದ ರಥವನ್ನೇರಿ, ಶ್ರೀಕೃಷ್ಣನು, ತನ್ನ ಪಕ್ಕಗಳಲ್ಲಿ ಧರ್ಮಾರ್ಜುನರನ್ನು ಕೂಡಿಸಿಕೊಂಡು, ತೆರಳಿದನು.

ಅಶ್ವತ್ಥಾಮನ ಬ್ರಹ್ಮಶಿರವು ಅಮೋಘವಾಗಬೇಕು ; ಮತ್ತು ವೃಕೋದರನ ಅವಧ್ಯತ್ವವೂ ಉಳಿಯಬೇಕು; ಇವೆರಡೂ ಶ್ರೀಹರಿ ಸಂಕಲ್ಪಕ್ಕೆ ಸಮ್ಮತವೇ! ಆದುದರಿಂದ ಶ್ರೀಕೃಷ್ಣನು ತಾನಾಗಿ ಹೊರಟನು. ಗರುಡಕೇತನವೆತ್ತಿ, ಬಲಗಡೆ ಶೈಬ್ಯವನ್ನೂ, ಎಡಗಡೆ ಸುಗ್ರೀವವನ್ನೂ, ಅವುಗಳ ಹಿಂದುಗಡೆ ಮೇಘಪುಷ್ಪವಲಾಹಕಗಳನ್ನೂ ಕಟ್ಟಿ, ದಾರುಕನು ತಂದ ವಿಶ್ವಕರ್ಮನಿರ್ಮಿತ ದಿವ್ಯರಥವನ್ನೇರಿದ ಶ್ರೀಕೃಷ್ಣನು, ಅರ್ಜುನ ಧರ್ಮಜರಿಂದ ಕೂಡಿ, ಅಶ್ವಿನೀ ದೇವ್ದಯಯುತನಾದ ವಾಸವನಂತೆ, ಕಂಗೊಳಿಸಿದನು. ಅಶ್ವತ್ಥಾಮನ ಅಸ್ತ್ರದಿಂದ ಭೀಮಸೇನನಿಗೆ ಯಾವ ಭಯವೂ ಇಲ್ಲ. ಆದರೂ ಲೋಕಗಳು ಹಾಳಾಗದಿರಲಿ! ಎಂಬ ದಯೆಯಿಂದ ಶ್ರೀಕೃಷ್ಣನು ಸರಸರನೆ ಪಯಣಿಸಿ, ಭಾಗೀರಥಿಯ ತೀರವನ್ನು ಸೇರಿದನು.

ಭೀಮಸೇನನು ಕ್ರೋಧದೀಪ್ತನಾಗಿ ಕಾದಿ, ಕ್ಷಣದಲ್ಲಿ ದ್ರೌಣಿಯನ್ನು ನಿರಾಯುಧ ನನ್ನಾಗಿಸಿದನು. ಭೀಮನಿಗೆ ಸೋತು, ಅಶ್ವತ್ಥಾಮನು ಧರ್ಮಕೃಷ್ಣಾರ್ಜುನರನ್ನೂ ಕಂಡು, ವ್ಯತಿಥನಾದನು. ಪ್ರಾಣಸಂಕಟವು ಒದಗಿ, ದಿಕ್ಕುತೋಚದೆ, ಅಶ್ವತ್ಥಾಮನು, ದಿವ್ಯಾಸ್ತ್ರವನ್ನು ಚಿಂತಿಸಿ, ಇಷೀಕಾಕಾಂಡದಲ್ಲಿ, ಅದನ್ನು ಅಭಿಮಂತ್ರಿಸಿ, 'ಅಪಾಂಡವವಾಗಲಿ!' ಎಂದು ದಾರುಣ ವಚನವನ್ನುಚ್ಚರಿಸಿ, ಪ್ರಯೋಗಿಸಿದನು. ಸರ್ವಲೋಕ ನಾಶಕವಾದ ಬ್ರಹ್ಮಶಿರವು ಇಷೀಕಾಗತವಾಗಿ, ಪ್ರಳಯಾಗ್ನಿಯಂತೆ, ಉರಿದು, ವ್ಯಾಪಿಸಿತು.

ವಾಸುದೇವನು ಭೀಮಸೇನನ ಅವಧ್ಯತ್ವವನ್ನರಿತು, ಇತರ ವಿನಾಶ ವಾಗದಿರಲೆಂದು, ಅರ್ಜುನನಿಗಿಂತು ನುಡಿದನು. ಭೀಮಸೇನನು ಧೈರ್ಯದಿಂದ

ನಿಂತಿದ್ದನು ಗಾಯತ್ರೀಮಂತ್ರವೇ ಅಸ್ತ್ರಮಂತ್ರವು; ಅದಕ್ಕೆ ಅಭಿಮಾನಿಯೂ, ಧ್ಯಾತನು ಆದ ಭೀಮಸೇನನನ್ನು ಆ ಬ್ರಹ್ಮಶಿರೋನಾಮಕಾಸ್ತ್ರವು ಏನೂ ಮಾಡಲಾರದು. ಶ್ರೀನಾರಾಯಣನೇ ಮಂತ್ರದೇವತೆಯು; ಇಷ್ಟನ್ನೂ ತಿಳಿದು ಭೀಮನು ಪ್ರತ್ಯಸ್ತ್ರವನ್ನು ಪ್ರಯೋಗಿಸುವನಲ್ಲದುದರಿಂದ ಸುಮ್ಮನಿದ್ದನು. ಅಂತೆಯೇ ಶ್ರೀಕೃಷ್ಣನು ಅರ್ಜುನನನ್ನು ನೋಡಿ, 'ಅರ್ಜುನ! ಅರ್ಜುನ! ತಡಮಾಡಬೇಡ! ದ್ರೋಣನಿತ್ತ ಬ್ರಹ್ಮಶಿರವು ನಿನ್ನಲ್ಲಿದೆ. ನಿನ್ನನ್ನು, ಧರ್ಮಜ ನಕುಲ ಸಹದೇವರನ್ನೂ ಉಳಿಸಿಕೊಳ್ಳಲು ಪ್ರತಿ ಬ್ರಹ್ಮಶಿರವನ್ನೇ ಬಿಡು!' ಎಂದು ಪ್ರೇರಿಸಿದನು.

ಕೇಶವನ ನುಡಿಯಂತೆ ಪರವೀರಾಂತಕನಾದ ಕುಂತೀಸುತನು, ರಥದಿಂದಿಳಿದು ಆಚಮಿಸಿ, 'ಸ್ವಸ್ತಿಯಾಗಲಿ ದ್ರೋಣಾಚಾರ್ಯ ಪುತ್ರನಿಗೆ! ನನಗೆ ಸ್ವಸ್ತಿಯಾಗಲಿ! ಧರ್ಮಾದಿ ಸೋದರರಿಗೆ ಸ್ವಸ್ತಿಯಾಗಲಿ! ಸರ್ವ ಲೋಕಗಳಿಗೆ ಸ್ವಸ್ತಿಯಾಗಲಿ!' ಎಂದನು, ದೇವಗುರುಗಳಿಗೆ, ಮನಸಾ ಸಮಿಸಿದನು; ಅಸ್ತ್ರವು ಅಸ್ತ್ರದಿಂದ ಶಾಂತವಾಗುವಂತೆ ಸಂಕಲ್ಪಿಸಿ, ಅರ್ಜುನನು ಬ್ರಹ್ಮಶಿರವನ್ನು ಪ್ರಯೋಗಿಸಿದನು. ಬ್ರಹ್ಮಸಮನಾದ ಭೀಮಸೇನನು ಅಸ್ತ್ರಾಭಿಮಾನಿಯಾಗಿರುವುದರಿಂದ, ಅಸ್ತ್ರಪಾತವು ಅವನಲ್ಲಿ ಸಲ್ಲದು. ಅಂತಹ ಅಸ್ಥಾನದಲ್ಲಿ ಪ್ರಯುಕ್ತವಾದ ಮಹಾಸ್ತ್ರವು ಅಶ್ವತ್ಥಾಮನನ್ನೇ ಸಂಹರಿಸುವುದೆಂಬ ಭಯದಿಂದ 'ಸ್ವಸ್ತಿ ದ್ರೋಣಸುತನಿಗೆ' ಎಂದು ಅರ್ಜುನನು ದಯಾನ್ವಿತನಾಗಿ ನುಡಿದನು.

ಅಸ್ತ್ರವನ್ನರಿಯದ ಧರ್ಮಜ ನಕುಲ ಸಹದೇವರಲ್ಲಿಯೂ (ಅಸ್ತ್ರಾಭಿಮಾನಿಯಲ್ಲಂತೆ) ಪ್ರಯುಕ್ತವಾದ ಅಸ್ತ್ರವು ಅಶ್ವತ್ಥಾಮನನ್ನೇ ಸಂಹರಿಸೀತು! ಎಂಬ ಶಂಕೆಯಿಂದ ಗುರುಭಕ್ತನಾದ ಅರ್ಜುನನು 'ಅಶ್ವತ್ಥಾಮನಿಗೆ ಸ್ವಸ್ತಿ!' ಎಂದು ನುಡಿದನು, 'ವಿಧಿಯಿಲ್ಲದೆ ಬಿಡುವ ನನಗೂ ಸ್ವಸ್ತಿ!' ಎಂದನು.

ತನ್ನ ಮತ್ತು ಗುರುಸುತನ ಅಸ್ತ್ರದ್ವಯದಿಂದ ಲೋಕದ ಜೀವರು ಹಾಳಾಗದಿರಲೆಂಬ ದಯೆಯಿಂದ, ಪಾರ್ಥನು 'ಸ್ವಸ್ತಿ ಪ್ರಾಣಿಗಳಿಗೆ!' ಎಂದು ನುಡಿದನು.

ಇಂತು ನುಡಿದು ಪಾರ್ಥನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಯುಗಾಂತಾಗ್ನಿಯಂತೆ ಉರಿಯುವ ಎರಡು ಬ್ರಹ್ಮಶಿರಗಳು ಲೋಕನಾಶಕರವಾಗುವುದೆಂದು ಸರ್ವಭೂತಾಂತರ್ಯಾಮಿಯಾದ ಶ್ರೀಕೃಷ್ಣದ್ವೈಪಾಯನನು ಅಲ್ಲಿ ಪ್ರತ್ಯಕ್ಷನಾಗಿ, ಅಸ್ತ್ರದ್ವಯ ಮಧ್ಯದಲ್ಲಿ ನಿಂತನು.

ಪುರಾಣಪುರಷನು, ಅನಂತಶಕ್ತಿಯು, ಕ್ಷರಾಕ್ಷರಪುರುಷರಿಂದಲು ಉತ್ತಮನಾದ ಸತ್ಯವತೀಸುತನು ಎರಡು ಅಸ್ತ್ರಗಳ ಮೇಳನವಾಗದಂತೆ, ದೂರವಾಗಿಟ್ಟು, ಅಶ್ವತ್ಥಾಮಾರ್ಜುನರಿಗಿಂತೆಂದನು: 'ಅಸ್ತ್ರಜ್ಞರು ಪೂರ್ವದಲ್ಲಿಯೂ ಇದ್ದರು; ಈಗಲೂ ಇರುವರು; ಆದರೆ ಅವರು ನಿಮ್ಮಂತಹ ಲೋಕವಿನಾಶಕಾರಿಯಾದ ಕ್ರೂರ ಕರ್ಮವನ್ನು ಮಾಡಲಿಲ್ಲ. ಸಜ್ಜನರು ಮಹಾಪತ್ಕಾಲದಲ್ಲಿಯೂ ಲೋಕೋಪದ್ರವ ಕಾರ್ಯಗಳನ್ನು ಮಾಡದಿರುವರು.'

ಆ ಮಾತಿಗೆ ತಲೆಬಾಗಿ ಅರ್ಜುನನು 'ದೇವಾ! ಮಹಾಪತ್ತಿನಲ್ಲಿ ಅಸ್ತ್ರಶಾಂತಿಗಾಗಿ ನಾನು ಬ್ರಹ್ಮಾಸ್ತ್ರವನ್ನು ಬಿಡಬೇಕಾಯಿತು, ಕ್ಷಮಿಸು!' ಎಂದು ಪ್ರಾರ್ಥಿಸಿದನು.

ಅಶ್ವತ್ಥಾಮನು 'ಸ್ವಾಮಿನ್! ಪ್ರಾಣಸಂಕಟವು ಒದಗಿತು. ಭೀಮಸೇನನ ಭಯದಿಂದ ಬ್ರಹ್ಮಶಿರವನ್ನು ಪ್ರಯೋಗಿಸಿದೆನು. ಕ್ಷಮಿಸು!' ಎಂದು ಪ್ರಾರ್ಥಿಸಿದನು.

ಆಗ ಶ್ರೀವೇದವ್ಯಾಸನು ಅರ್ಜುನನಿಗಿಂತೆಂದನು: ನಾರದನೂ ಅಲ್ಲಿಗೆ ಬಂದಿದ್ದು ಅವರ ಮಾತನ್ನು ಅನುಮೋದಿಸಿದನು. 'ಅರ್ಜುನ! ಅಸ್ತ್ರವನ್ನು ಇಬ್ಬರೂ ಹಿಂತೆಗೆದುಕೊಳ್ಳಿರಿ!' ಎಂದ ದೇವನಿಗೆ ಅರ್ಜುನನು, 'ಅಸ್ತ್ರವು ಶಾಂತವಾಗಲೆಂದು ಪ್ರತ್ಯಸ್ತ್ರವನ್ನು ಬಿಟ್ಟೆನು. ನನ್ನ ಅಸ್ತ್ರವನ್ನು ಹಿಂತೆಗೆದುಕೊಂಡ ಕ್ಷಣವೇ, ಪಾಪಕರ್ಮರತನಾಗಿರುವ ದ್ರೌಣಿಯ ಅಸ್ತ್ರವು ನಮ್ಮನ್ನು ಸುಡದಂತೆ, ಲೋಕಗಳಿಗೂ ಹಿತವಾಗುವಂತೆ, ತಾವು ಅನುಗ್ರಹಿಸಿರಿ!' ಎಂದು ಬೇಡಿದನು, ಮತ್ತು ತನ್ನ ಅಸ್ತ್ರವನ್ನು ಉಪಸಂಹರಿಸಿ, ಹಿಂತೆಗೆದುಕೊಂಡನು. ಅಂತು ಹಿಂತೆಗೆಯಲು ಅರ್ಜುನನಲ್ಲದೆ ಮತ್ತೊಬ್ಬನು ಸಮರ್ಥನಲ್ಲ. ಆ ಜನ್ಮ ಬ್ರಹ್ಮಚಾರಿವ್ರತನಿಷ್ಠನಾದವನಿಗೆ ಮಾತ್ರ, ಬ್ರಹ್ಮದೇವನ ಅಸ್ತ್ರವು ಹಿಂತೆಗೆದುಕೊಳ್ಳಲು ಬರುವುದು. ಅಬ್ರಹ್ಮಚಾರಿಯು ಪ್ರಯೋಗಿಸಿದ ಬ್ರಹ್ಮಶಿರವನ್ನು ಹಿಂತೆಗೆದುಕೊಂಡರೆ, ಅದು ಅವನನ್ನೇ ಸಂಹರಿಸಿಬಿಡುವುದು.

ಅರ್ಜುನನು ಸತ್ಯವ್ರತಧರನು, ಶೂರನು, ಬ್ರಹ್ಮಚಾರಿಯು (ಸ್ವಪತ್ನೀಮಾತ್ರನಿಷ್ಠನು), ಗುರುಭಕ್ತನು ಆದುದರಿಂದ ಅವನು ಅಸ್ತ್ರವನ್ನು ಹಿಂತೆಗೆಯಲು ಸಮರ್ಥನಾದನು. ಆದರೆ ದ್ರೌಣಿಯು ತನ್ನ ಅಸ್ತ್ರವನ್ನು ಹಿಂತೆಗೆದುಕೊಳ್ಳಲಾರದೆ ಹೋದನು. ದುಷ್ಟ ದುರ್ಯೋಧನನ ಪಕ್ಷಪಾತದಿಂದಲು, ಅವನ ಪತ್ನಿಯಲ್ಲಿ ಸಂತಾನವನ್ನು ಪುಟ್ಟಿಸುವ ದುಷ್ಟವಾಗ್ದಾನದಿಂದಲು ಅಶ್ವತ್ಥಾಮನು ಬ್ರಹ್ಮಚರ್ಯಪರಿಹೀನನಾಗಿದ್ದನು. ಆತನು ದ್ವೈಪಾಯನನಿಗೆ ನಮಸ್ಕರಿಸಿ, 'ದೇವ! ಭೀಮಸೇನ ಭಯದಿಂದ ಅಸ್ತ್ರವನ್ನು ಬಿಟ್ಟೆನು. ಆತನು ಅಧರ್ಮದಿಂದ ಧಾರ್ತರಾಷ್ಟ್ರನನ್ನು ಕೊಂದನೆಂಬ ಸಿಟ್ಟಿನಿಂದ ಈ ಅಕಾರ್ಯವನ್ನು ಮಾಡಿದೆನು. ಅಪಾಂಡವವಾಗಬೇಕೆಂದು ಸಂಕಲ್ಪಿಸಿ ಅಸ್ತ್ರವನ್ನು ನಾನು ಹಿಂದೆಗೆಯಲಾರದಿರುವೆನು' ಎಂದನು.

ಶ್ರೀವ್ಯಾಸನು, 'ತಾತ! ಧನಂಜಯನು ನಿನ್ನಂತೆ ರೋಷದೂಷಿತನಾಗಿ, ಅಸ್ತ್ರವನ್ನು ಬಿಟ್ಟಿಲ್ಲ, ಮತ್ತು ನಿನ್ನ ನಾಶವಾಗಲೆಂದು ಅವನು ಸಂಕಲ್ಪಿಸಿಲ್ಲ! ಸ್ವಸ್ತಿ ದ್ರೌಣಿಗೆ!' ಎಂದೇ ಪ್ರಾರ್ಥಿಸಿ ಬಿಟ್ಟಿರುವನು. ಈಗ ಬ್ರಹ್ಮಚಾರಿಯಾಗಿರುವ ಅವನಿಂದ ಅಸ್ತ್ರವು ಉಪಸಂಹೃತವಾಯಿತು. ನಿನ್ನ ತಂದೆಯಿಂದ ದಿವ್ಯಾಸ್ತ್ರವನ್ನು ಪಡೆದು ಅರ್ಜುನನು ಮಹಾಪತ್ತಿನಲ್ಲಿಯೂ ಅಸ್ತ್ರವನ್ನು ಬಿಟ್ಟಿಲ್ಲ, ಕ್ಷತಧರ್ಮರತನು, ಗುರುಭಕ್ತನು ಆದ ಅರ್ಜುನನನ್ನೂ, ಅವನ ಭ್ರಾತೃಬಂಧುಗಳನ್ನೂ ಕೊಲ್ಲಬೇಕೆಂಬ ದುಷ್ಟಹಠ, ನಿನಗೆ ಸಲದು. ಎರಡು ಬ್ರಹ್ಮಶಿರೋನಾಮಕ ಅಸ್ತ್ರಗಳು ಪ್ರತಿಯುಕ್ತವಾದರೆ, ಆ ರಾಷ್ಟ್ರದಲ್ಲಿ ಹನ್ನೆರಡು ವರ್ಷಗಳು ಮಳೆಗರೆಯದೆ ಕ್ಷಾಮಡಾಮರಗಳು ತಲೆದೋರುವವು. ಪ್ರಜಾಹಿತನಾದ ಪಾರ್ಥನು ಅಸ್ತ್ರವನ್ನು ಹಿಂತೆಗೆದುಕೊಂಡಿರುವನು. ಪಾಂಡವ ಜ್ಯೇಷ್ಠನಾದ ಧರ್ಮರಾಜನಾಗಲಿ, ಧರ್ಮನಿರತನಾದ ವೃಕೋದರನಾಗಲಿ ಅಧರ್ಮದಿಂದ ರಾಜ್ಯವನ್ನು ಬಯಸುವವರಲ್ಲ. ದುರ್ಯೋಧನನು

ಧರ್ಮದಿಂದಲೇ ಸಂಹೃತನಾಗಿರುವನು. ಅಸ್ತ್ರವನ್ನು ಹಿಂತೆಗೆಯಲಾರದಿದ್ದ ನೀನು, ಸ್ವಾಭಾವಿಕ ಮಣಿಯನ್ನಾದರೂ ಕೊಡು ಭೀಮಸೇನನಿಗೆ! ಅದನ್ನು ಸ್ವೀಕರಿಸಿ, ಪಾಂಡವರು ನಿನ್ನ ಪ್ರಾಣಗಳನ್ನು ಉಳಿಸಿ, ಕಳಿಸುವರು' ಎಂದು ಆಜ್ಞಾಪಿಸಿದನು.

ಭೀಮಸೇನನಿಗೆ ಸೋತು, ನಿರ್ವಿಣ್ಣನಾಗಿದ್ದ ಗುರುಪುತ್ರನು, 'ವ್ಯಾಸದೇವ! ಕೌರವರನ್ನು ಗೆದ್ದು ಪಾಂಡವರು ಪಡೆದಿರುವ ಮಣಿಗಳಿಗೆಲ್ಲ ಹೆಚ್ಚಾದ ನನ್ನ ಮಣಿಯು ಮಹಾನರ್ಘವು, ರೋಗಹರವು, ಜರಾಮರಣವರ್ಜಕವು, ಕ್ಷುತ್ಪಿಪಾಸಾನಿವರ್ತಕವು, ದುರ್ಗಂಧತಮೋನಾಶಕವು ಆಗಿದೆ. ಇದು ಸಹಜವಾಗಿರುವುದರಿಂದ ದುಸ್ತ್ಯಜವೂ ಅಹುದು. ಆದರೂ ತಮ್ಮ ಆಜ್ಞೆಯಂತೆ ಮಣಿಯನ್ನು ಭೀಮಸೇನನಿಗೆ ಕೊಡುತ್ತಿರುವೆನು. ಅಸ್ತ್ರವನ್ನು ಮಾತ್ರ ಹಿಂತೆಗೆಯಲಾರೆನು. ಪಾಂಡವರು ಮಾತ್ರ ಅಸ್ತ್ರದಿಂದ ಮುಕ್ತರಾಗಲಿ!' ಎಂದು, ಮಣಿಯನ್ನು ಭೀಮಸೇನನಿಗೆ ಕೊಟ್ಟನು.

ಶ್ರೀವ್ಯಾಸನು, 'ಪಾಂಡವರನ್ನು ಉಳಿದು ನಿನ್ನ ಅಸ್ತ್ರವು ಅವರ ಪತ್ನಿಯರ ಗರ್ಭವನ್ನು ಕೆಡಹಲಿ! ಪಾಂಡವರನ್ನು ಸಂಹರಿಸಲು ನೀನು ಸಮರ್ಥನಲ್ಲ!' ಎಂದನು. ಅಂತೆಯೇ ದ್ರೌಣಿಯು ಗರ್ಭಗಳಲ್ಲಿ ಅಸ್ತ್ರವನ್ನು ಕೆಡಹಿದನು. ಆಗ ಅರ್ಜುನನು ವೇದಾಧಿಪನ ಆಜ್ಞೆಯಿಂದ, ದ್ರೌಣಿಯ ಅಸ್ತ್ರವನ್ನು ಉಪಸಂಹರಿಸಿದನು. ಶ್ರೀಕೃಷ್ಣನು ಪಾಂಡವ ವಂಶವನ್ನು ಉಳಿಸಲೆಣಿಸಿ, ಅಶ್ವತ್ಥಾಮನಿಗಿಂತೆಂದನು: 'ವಿರಾಟ ಸುತೆಯು ಗರ್ಭಿಣಿಯಾಗಿರುವಳು. ಅವಳು ಉಪಪ್ಲಾವ್ಯದಲ್ಲಿದ್ದಾಗ, ಓರ್ವ ವಿಪ್ರವರನು ಅವಳನ್ನು ಕಂಡು, 'ಕುರು ಪಾಂಡವ ವೀರರು ರಣರಂಗ ನಿಹತರಾಗಿ, ಉಳಿದವರ ವಂಶತಂತುಗಳು ನಿಂತು ಹೋಗುವ ಪ್ರಸಂಗ ಬರುವುದು. ಆಗ ನಿನ್ನ ಮಗನು ಹುಟ್ಟಿ, ಉಭಯ ವಂಶವಿವರ್ಧನಾಗುವನು. ಪರಿಕ್ಷೀಣವಾದ ವಂಶವನ್ನು ಬೆಳೆಸುವುದರಿಂದ ಅವನನ್ನು ಪರೀಕ್ಷಿತನೆಂಬುವರು' ಎಂದು ಅಪ್ಪಣೆ ಕೊಟ್ಟನು. ಅಂತಹ ಸಾಧುವಿಪ್ರನ ವಚನವು ಸುಳ್ಳಾಗಲಾರದು ತಿಳಿ! ನಿನ್ನ ಅಸ್ತ್ರವನ್ನು, ಅವಳ ಗರ್ಭವನ್ನುಳಿದು, ಮಿಕ್ಕವುಗಳಲ್ಲಿ ಹಾಕು ಬೇಕಾದರೆ!' ಎಂದನು.

ಅಶ್ವತ್ಥಾಮನು 'ಕೃಷ್ಣ! ನೀನು ಭಗಿನೀ ಸುತನಾದ ಅಭಿಮನ್ಯುವಿನ ಸಂತಾನವನ್ನು ಮಾತ್ರ, ಉಳಿಸಲೆಣಿಸಿರುವೆ! ಪಕ್ಷಪಾತದಿಂದ ವರ್ತಿಸುವ ನಿನ್ನ ಮಾತನ್ನು ನಾನು ಕೇಳಲಾರೆನು' ಎಂದನು. ಶ್ರೀಕೃಷ್ಣನು 'ಹಾಗೆ ಹಠವಿದ್ದರೆ, ಪರೀಕ್ಷಿತನ ಮೃತ ಶರೀರದಲ್ಲಿ ನಿನ್ನ ಅಸ್ತ್ರವನ್ನು ಬೀಳಿಸು! ಅದನ್ನು ನಾನು ಮತ್ತೆ ಬದುಕಿಸುವೆನು. ನೋಡು ನನ್ನ ಸಾಮರ್ಥ್ಯವನ್ನು! ನಿನ್ನ ದುಷ್ಟಸಂಕಲ್ಪವು ನನ್ನ ಸಂಕಲ್ಪಕ್ಕೆ ವಿರುದ್ಧವಾಗಿರುವುದರಿಂದ, ನೆರವೇರದು' ಎಂದನು. ಅಶ್ವತ್ಥಾಮನು 'ಹಾಗಾದರೂ ನನ್ನ ಅಸ್ತ್ರವನ್ನು ಗರ್ಭದಲ್ಲೇ ಕೆಡಹುವೆನು' ಎಂದನು. ಶ್ರೀಕೃಷ್ಣನು (ಅಶ್ವತ್ಥಾಮನೂ ತನ್ನ ಭಕ್ತನೇ ಆದುದರಿಂದ) ಸ್ವಲ್ಪ ಕ್ರುದ್ಧನಾಗಿ. 'ಅಶ್ವತ್ಥಾಮ! ದುಷ್ಟಸಹವಾಸವು ನಿನ್ನನ್ನು ಎಷ್ಟು ಕೆಡಿಸಿತು! ದುಷ್ಟಾತ್ಮ! ನಿನಗೆ ಶಕ್ಯವಾದುದೆಲ್ಲವನ್ನೂ ಮಾಡು! ನಾನು ನಿನ್ನ ಎಲ್ಲ ಪ್ರಯತ್ನಗಳನ್ನು ವಿಫಲಗೊಳಿಸಿ, ಪಾಂಡವ ಸಂತಾನವನ್ನು ಉಳಿಸುವೆನು. ಪರೀಕ್ಷಿತನು ಅರವತ್ತು ವರ್ಷಗಳ ಕಾಲ

ಭೂಮಂಡಲವನ್ನು ಧರ್ಮದಿಂದ ಶಾಸಿಸುವನು. ಕೃಪಾಚಾರ್ಯನ ದೆಸೆಯಿಂದ ಸರ್ವಾಸ್ತ್ರವಿದನಾಗಿ, ಅಶ್ವಮೇಧಾದಿ ಬಹು ಯಜ್ಞಗಳನ್ನು ಮಾಡಿ, ಪ್ರಖ್ಯಾತನಾಗುವನು. ನನ್ನ ತಪಸ್ಸತ್ಯ ಪರಾಕ್ರಮಗಳನ್ನಾದರೂ ನೋಡು! ಒಂದು ಸಾವಿರ ವರ್ಷಗಳವರೆಗೂ ಪಾಂಡವ ಸಂತತಿಯು ಭಾರತವರ್ಷದಲ್ಲಿ ಉಳಿದು ಆಳುವುದು. ಅಲ್ಲಿಯವರೆಗೂ ಅದನ್ನು ಯಾರೂ ಎಲ್ಲಿಯೂ ಸಂಹರಿಸಲು ಸಮರ್ಥರಾಗಿದಿರುವರು.

ವಿಷ್ಣುವಿಮುಖನಿಗೆ ಮೋಕ್ಷಾಕಾಂಕ್ಷೆಯು ಫಲಿಸದಿರುವಂತೆ, ನನ್ನ ಸಂಕಲ್ಪಕ್ಕೆ ವಿರುದ್ಧವಾಗಿ, ದುಷ್ಟಸಂಕಲ್ಪನಾದೆ! ಪಾಂಡವ ವಂಶವನ್ನಳಿಸಿ, ದುರ್ಯೋಧನ ವಂಶವನ್ನು ಉಳಿಸುವ ಇಚ್ಛೆಯಿಂದ ಮಹಾಪಾತಕಿಯಾಗಿ ಕೆಟ್ಟೆ! ಬಾಲಜೀವಿತ ಘಾತುಕನು, ಪಾಪಕರ್ಮರತನು, ಪಾಪಿ ಮಿತ್ರನು ಆಗಿರುವೆ! ನಿನ್ನ ಪಾಪಕರ್ಮದ ಫಲವನ್ನು ಅನುಭವಿಸು! ಸಾವಿರ ವರ್ಷಗಳವರೆಗೂ ಮಹೀಮಂಡಲದಲ್ಲಿ ಅಲೆಯುತ್ತಿರು! ಜನಮಧ್ಯದಲ್ಲಿ ನಿನ್ನ ವಾಸವಿರಬೇಡ! ಕಾಡುಗಳಲ್ಲಿ ಕಪಿಯಂತೆ ತಿರುಗು! ದುರ್ಗಂಧಯುಕ್ತನು, ವ್ಯಾಧಿಗ್ರಸ್ತನು ಆಗಿ, ನರರಿರುವಲ್ಲಿ, ಕೋಲಾಹಲರೂಪವಾದ ಧ್ವನಿಯನ್ನು ಮಾಡುತ್ತಾ, ಅವರ ಶಿರದಲ್ಲಿ ಆರೂಢನಾಗಿರು!' ಎಂದು ಶಾಪವಿತ್ತನು.

ಶ್ರೀವ್ಯಾಸನೂ ಆ ಶಾಪವನ್ನನುಮೋದಿಸಿ, ಇಂತೆಂದನು: 'ನಮ್ಮ ಹಿತವಚನವನ್ನಾಲಿಸದೆ, ದಾರುಣ ಕರ್ಮವನ್ನು ಮಾಡಿದೆ! ಬ್ರಾಹ್ಮಣನೆನಿಸಿ, ಸಜ್ಜನನೆನಿಸಿ, ದ್ರೋಣ ಪುತ್ರನೆನಿಸಿ, ಮಾಡಬಾರದ ಕುಕೃತ್ಯವನ್ನು ಮಾಡಿರುವೆ! ಆದುದರಿಂದ ಮೂಢ! ಶ್ರೀಕೃಷ್ಣನಿತ್ತ ಶಾಪದಂತೆ, ಅಲೆಯುತ್ತಿರು!'

ಶ್ರೀಹರಿಯ ವ್ಯಾಸವಾಸುದೇವ ರೂಪದ್ವಯದಿಂದ ಶಪ್ತನಾದ ಅಶ್ವತ್ಥಾಮನು ಸತ್ಯವತೀಸುತನಿಗೆ ವಂದಿಸಿ, ಇಂತೆಂದನು: 'ಪ್ರಭೋ! ನನಗೆ ಬೇಕೆನಿಸಿದಾಗ ನಿನ್ನ ದಿವ್ಯದರ್ಶನವಾಗುವಂತೆ, ಅನುಗ್ರಹಿಸು! ಸಾವಿರ ವರ್ಷಗಳ ನಂತರವಾದರೂ ನಿನ್ನ ಪಾದಸೇವಾ ಭಾಗ್ಯವೆನಗೆ ಸಿಗಲಿ!' ಎಂದು ಬೇಡಿದನು. ವೇದವ್ಯಾಸನು 'ಓಂ' ಎಂದು ಅನುಮತಿಯನ್ನೀಯಲು, ಆ ಗುರುಪುತ್ರನು ಅವರಿಗೆ ವಂದಿಸಿ, ಅಲ್ಲಿಂದ ಹೊರಟು ಹೋದನು.

ಅಶ್ವತ್ಥಾಮನು ತಾನು ಕಂಡ ಸ್ವಪ್ನವು ಸತ್ಯವಾಯಿತೆಂದು ಸ್ಮರಿಸುತ್ತಾ ತೆರಳಿದನು. 'ದ್ರೌಪದೀಪುತ್ರರ ಸಂಹಾರವನ್ನು ಮಾಡಿದ ಅಶ್ವತ್ಥಾಮನನ್ನು, ಅರ್ಜುನನು ಹಿಂಬಾಲಿಸಿದನು. ದ್ರೌಪದಿಗೆ ಗುರುಪುತ್ರನನ್ನು ಕೊಂದು ಬರುವುದಾಗಿ ಹೇಳಿ ಬಂದ ಅರ್ಜನನು ಕೃಷ್ಣಸಾರಥಿಯಾಗಿ ಬಂದನು. ಉಭಯರೂ ಬ್ರಹ್ಮಾಸ್ತ್ರವನ್ನು ಬಿಟ್ಟರು. ಅರ್ಜುನನು ಕೃಷ್ಣವಚನದಿಂದ ಎರಡು ಅಸ್ತ್ರಗಳನ್ನೂ ಉಪಸಂಹರಿಸಿದನು. ಪಾರ್ಥನು ಗುರುಸುತನನ್ನು ಶಿಬಿರಕ್ಕೆ ತಂದನು. ದ್ರೌಪದಿಯು ಅವನನ್ನು ಬಿಡುವಂತೆ ಪ್ರಾರ್ಥಿಸಿದಳು. ಭೀಮಸೇನನು ಕೊಲ್ಲುವುದುಚಿತವೆಂದನು. ಶ್ರೀಕೃಷ್ಣನು ಉಭಯರ ವಚನಗಳನ್ನೂ ಸತ್ಯವಾಗಿಸೆಂದು, ಅರ್ಜುನಿಗಾಜ್ಞಾಪಿಸಿದನು. ಅರ್ಜುನನು ಮಣಿಯನ್ನು ತೆಗೆದು ದ್ರೌಪದಿಗಿತ್ತನು; ಆಕೆಯು ಅದನ್ನು ಧರ್ಮರಾಜನಿಗೆ ಕೊಟ್ಟಳು. ಅಶ್ವತ್ಥಾಮನ ಮಣಿಯನ್ನು

ಅಪಹರಿಸಿದುದರಿಂದ ಅವನನ್ನು ಕೊಂದಂತೆ ಆಯಿತು. ಇತ್ಯಾದಿ ಸ್ವಪ್ನವೃತಾಂತವು ಪ್ರಾಯಃ ಸತ್ಯವಾಯಿತೆಂದು ಸ್ಮರಿಸುತ್ತಾ, ಅಶ್ವತ್ಥಾಮನು 'ಶ್ರೀಹರಿ ಸಂಕಲ್ಪಕ್ಕೆದುರಿಲ್ಲ. ಮನುಜರ ಸಂಕಲ್ಪಗಳು ತದ್ವಿರುದ್ಧವಾದರೆ, ವ್ಯರ್ಥವಾಗುವವು' ಎಂದು ತಿಳಿದನು. ಶ್ರೀಕೃಷ್ಣನಿಂದ ಕೊಡಲ್ಪಟ್ಟ ಶಾಪವನ್ನು ಅನುಭವಿಸಿ, ಆತನು, ಮುಂದಿನ ದ್ವಾಪರ ಯುಗದಲ್ಲಿ, ಪುನಃ ವೇದವ್ಯಾಸರ ಶಿಷ್ಯನಾಗಿ, ವೇದವಿಭಾಗವನ್ನು ಮಾಡುವನು. ಆಮೇಲೆ ಆತನು ದ್ರೌಣಿವ್ಯಾಸನೆನಿಸಿ, ಶ್ರೀವೇದವ್ಯಾಸಾನುಗ್ರಹದಿಂದ ಸಪ್ತರ್ಷಿಗಳಲ್ಲಿ ಒಬ್ಬನಾಗಿ, ಮುಂದಿನ ಮನ್ವಂತರದಲ್ಲಿ ಮುಕ್ತನಾಗಿ, ತನ್ನ ಮೂಲರೂಪವಾದ ರುದ್ರನಿಂದ, ಐಕ್ಯವನ್ನು ಪೊಂದುವನು.

ಕೃಪಾಚಾರ್ಯನು ಪಾಂಡವರಿಗೆ ಆಚಾರ್ಯನಾಗಿ, ಅವರಿಂದ ಪೂಜಿತನಾಗಿದ್ದನು. ಪರೀಕ್ಷಿತಾದಿ ರಾಜರ್ಷಿಗಳಿಗೆ ಆಚಾರ್ಯನಾಗಿ ಆತನು ಅನೇಕ ಯಜ್ಞಗಳನ್ನು ನಡೆಸಿದನು. ಒಂದುಸಾವಿರ ವರ್ಷವಾಗಲು, ಪಾಂಡವ ಸಂತಾನವು ನಾಶವಾಗುವುದು. ಆಗ ಕೃಪನು ಶ್ರೀವ್ಯಾಸರ ಶಿಷ್ಯನಾಗಿ ಭಜಿಸಿ, ಅವರ ಅನುಗ್ರಹದಿಂದ, ಅಶ್ವತ್ಥಾಮನಂತೆ, ತಾನೂ ಸಪ್ತರ್ಷಿಗಳಲ್ಲಿ, ಒಬ್ಬನಾಗುವನು. ಕೃತವರ್ಮನು ಶ್ರೀಕೃಷ್ಣನ ಅನುಮತಿಯನ್ನು ಪಡೆದು ದ್ವಾರಕೆಗೆ ಹೊರಟುಹೋದನು.

ಪಾಂಡವರು ಶಿಬಿರವನ್ನು ಸೇರಿದರು. ಆರ್ತಳಾದ ಪಾರ್ಷತಿಯನ್ನು ನೋಡಿ, ಪಾಂಡವರು ಆಕೆಯನ್ನು ಸುತ್ತುಗಟ್ಟಿ ನಿಂತು, ಸಮಾಶ್ವಾಸಿಸಿದರು. ಧರ್ಮರಾಜನಿಂದ ಅನುಮತಿಯನ್ನು ಪಡೆದು, ಭೀಮಸೇನನು ಮಣಿಯನ್ನು ಆಕೆಯ ಕೈಗಿತ್ತು, ಇಂತೆಂದನು:

'ಯಾಜ್ಞಸೇನಿ! ಶೋಕಿಸಬೇಡ! ಕ್ಷತ್ರಧರ್ಮವೇ ಕಠೋರವು. 'ಗೋವಿಂದ ನನಗೆ ಯಾರೂ ದಿಕ್ಕಿಲ್ಲ. ಪತಿಗಳಲ್ಲ; ಪುತ್ರರಲ್ಲ; ನೀನೂ ಅಲ್ಲ; ಧರ್ಮರಾಜನಿಗೆ ಸಂಧಿಯೇ ಬೇಕಾಗಿರುವಾಗ, ನೀವಾರಿದ್ದೇನು ಫಲ?' ಎಂದು ಅಂತಹ ವೀರವಚನ ಗಳನ್ನಾಡಿ, ಶ್ರೀಕೃಷ್ಣನನ್ನು ಯುದ್ಧವೇ ನಿಶ್ಚಯವಾಗಲಿ! ಎಂದು ಬೇಡಿ, ಯುದ್ಧದಲ್ಲಿ ಅನಿವಾರ್ಯವಾದ ಬಂಧುಮರಣಾದಿಗಳಿಗೆ, ಶುದ್ಧವೈಷ್ಣವ ಧರ್ಮನಿರತಳಾದ ನೀನು ಶೋಕಿಸುವುದು ತರವಲ್ಲ!

ನೋಡೆನ್ನ ಕಡೆ! ಕುಡಿದೆನು ದುಶ್ಶಾಸನನ ಬಿಸಿನೆತ್ತರವನ್ನು! ಮುರಿದೆನು ದುರ್ಯೋಧನನ ತೊಡೆಗಳನ್ನು! ಕಡಿದೆನು ಅವನ ತಮ್ಮಂದಿರನ್ನೆಲ್ಲರನ್ನು! ವೈರವಹ್ನಿಗೆ ಪೂರ್ಣಾಹುತಿಯನ್ನಿತ್ತಿರುವೆನು. ಕ್ಷತ್ರಧರ್ಮರತರಾದ ನಾವು ಸರ್ವಥಾ ನಿಂದ್ಯಕರ್ಮ ವನ್ನೊಂದನ್ನೂ ಮಾಡಿಲ್ಲ. ಇದು ಶ್ರೀಕೃಷ್ಣನೇ ಬಲ್ಲ! ಬ್ರಾಹ್ಮಣನೆಂದು ಮನ್ನಿಸಿ, ಗುರುಪುತ್ರ ನೆಂದು ಮಾನಿಸಿ, ಅಶ್ವತ್ಥಾಮನನ್ನು ಮಣಿಯನ್ನೂ ಕೀರ್ತಿಯನ್ನೂ ಕಸಿದುಕೊಂಡು ಉಳಿಸಿ ಕಳಿಸಿರುವೆವು.'

ದ್ರೌಪದಿಯು 'ಒಳ್ಳೆಯದಾಯತು! ಗುರುಪುತ್ರನು ನಮಗೆ ಮಾನ್ಯನೇ ಸರಿ! ಸೇಡು ತೀರಿಸಿ ಬಂದ ನಿಮಗೆ ಧನ್ಯವಾದಗಳು!' ಎಂದು, ಆ ಮಣಿಯನ್ನು ಧರ್ಮರಾಜನಿಗೆ ಕೊಟ್ಟಳು. ರಾಜಯೋಗ್ಯವಾದ ಮಣಿಯನ್ನು ಭೀಮಸೇನನು, ದ್ರೌಪದಿಗೆ

ಕೊಟ್ಟುದುದರಿಂದ, 'ಭೀಮನು ಸ್ತ್ರೀಪಕ್ಷಪಾತಿಯು' ಎಂಬ ಶಂಕೆಯು ಜನರಿಗೆ ಪುಟ್ಟಬಹುದು. ಆದುದರಿಂದ ಭರ್ತೃಸ್ನೇಹ ಪೂರಿತಳಾದ ದ್ರೌಪದಿಯು, ಅಂತಹ ಅಪವಾದವನ್ನು ತಪ್ಪಿಸಲೆಂದು, ಆ ಮಣಿಯನ್ನು, ಧರ್ಮರಾಜನಿಗೇ ಕೊಟ್ಟಳು. ಧರ್ಮರಾಜನು ಮಣಿಯನ್ನು ಶಿರದಲ್ಲಿ ಧರಿಸಿ, ಚಂದ್ರಯುಕ್ತ ಗಿರಿರಾಜನಂತೆ ಶೋಭಿಸಿದನು.

ಅನಂತರದಲ್ಲಿ ಶ್ರೀವೇದವ್ಯಾಸ ಯಾದವೇಶರಿಂದ ಕೂಡಿ, ಪಾಂಡವರು ಹಸ್ತಿನಾವತಿಯನ್ನು ಸೇರಿದರು. ಶ್ರೀಹರಿಭಕ್ತರು ಕಾಮಾದಿ ಶತ್ರುಗಳನ್ನು ನಿಗ್ರಹಿಸಿ, ಅಪರೋಕ್ಷಜ್ಞಾನವನ್ನೂ ಹೊಂದಿ, ಸರ್ವೇಶನಾದ ಶ್ರೀಹರಿಯ ಲೋಕವನ್ನಂತೆ, ಪಾಂಡವರು, ಸಕಲ ಶತ್ರುಗಳನ್ನು ಸಂಹರಿಸಿ, ಶ್ರೀಕೃಷ್ಣ ವೇದವ್ಯಾಸರ ದಯದಿಂದ ವಿಜಯೋಪೇತರಾಗಿ, ಹಸ್ತಿನಾವತಿಯ ನಿಜರಾಜ್ಯವನ್ನು ಹೊಂದಿದರು.

## ೫. ಧರ್ಮಜ ವಾಸುದೇವ ಸಂವಾದ

ಶೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

ಧರ್ಮರಾಜನು ಕೃಷ್ಣನನ್ನು ನೋಡಿ, ಶೋಕಾರ್ತನಾಗಿ, ಇಂತು ಪ್ರಶ್ನಿಸಿದನು: 'ಮಹಾರಥರಾದ ನಮ್ಮ ಸುತರು, ಮಹಾರಥವರರಾದ ಧೃಷ್ಟದ್ಯುಮ್ನಾದಿ ಪಾಂಚಾಲರು, ಒಬ್ಬ ಅಶ್ವತ್ಥಾಮನಿಗೆ ಸಿಕ್ಕು, ಮೃತರಾಗಲು, ಕಾರಣವೇನು? ಕೃತಾಸ್ತ್ರರೂ, ವಿಕ್ರಮ ವಿರಾಜಿತರೂ ಆದ ದ್ರೌಪದೇಯರಿಗೆಂತು ದಾರುಣ ಮರಣವಾಯಿತು? ದ್ರೋಣನಂತಹ ಮಹಾಧಾನುಷ್ಕನೂ ಧೃಷ್ಟದ್ಯುಮ್ನನನ್ನೆದುರಿಸಲು, ಹೆದರುತ್ತಿದ್ದನು. ಅಂತಹ ವೀರನಿಗೆಂತಹ ಮರಣ ಬಂತು! ಅಶ್ವತ್ಥಾಮನಿಪ್ಪುದುಷ್ಕರ ಕಾರ್ಯವನ್ನಾರ ಸಹಾಯವಿಲ್ಲದೆ ಸಾಧಿಸಿದ ಬಗೆಯಾದರೂ ಹೇಗೆ?' ಎಂದು ಕೇಳಿದ ಧರ್ಮರಾಜನಿಗೆ ಶ್ರೀಕೃಷ್ಣನು ಇಂತು ಪೇಳಿದನು:

'ದ್ರೌಣಿಯು ಮಾತ್ರ ನಿನ್ನ ಪುತ್ರಾದಿಗಳನ್ನು ಸಂಹರಿಸಿರುವನೆಂದು ತಿಳಿಯಬೇಡ! ಅಶ್ವತ್ಥಾಮನು ರುದ್ರದೇವನಿಗೆ ಶರಣಾಗತನಾಗಿ, ಆತನಿಂದ ವೀರ್ಯ, ಶೌರ್ಯ, ಕ್ರೌರ್ಯಗಳನ್ನು ಪಡೆದು, ವಿಜೃಂಭಿಸಿದುದರಿಂದ, ಇಂತಾಯಿತು. ದೈವವಿಧಿಗೆದುರಿಲ್ಲ, ಧರ್ಮರಾಜ! ಅವರಿಗಾಗಿ ನೀನು ಶೋಕಿಸಲಾಗದು.

ಮಹಾದೇವನನ್ನು ನಾನು ಚೆನ್ನಾಗಿ ಅರಿತಿರುವೆನು. ನನ್ನನ್ನಾತನು ಸಂಪೂರ್ಣವಾಗಿ ತಿಳಿದಿಲ್ಲ, ಕೇಳು! ಮಹಾದೇವನ ಮಹಿಮೆಯನ್ನು! ರುದ್ರನು ಭೂತ ಪಂಚಕ ಪಿತನಾಗಿರುವನು. ಅವನಿಂದ ಹುಟ್ಟಿ, ಬೆಳೆದ ಭೂತಗಳು ಅವನಿಂದ ಸಂಹೃತವಾಗುವವು. ಹಿಂದೆ ಪಿತಾಮಹನಿಂದ ಜನಿಸಿಬಂದ ರುದ್ರನು ಆತನಿತ್ತ ಏಕಾದಶನಾಮ, ಭಾರ್ಯಾ, ಸ್ಥಾನಗಳನ್ನು ಪೊಂದಿ, ಆತನಾಜ್ಞೆಯಂತೆ, ಸೃಜಿಸಲೆಣಿಸಿ, ಭೂತಪಿಶಾಚ ಪ್ರಮಥರನ್ನು ಸೃಜಿಸಿದನು. ರುದ್ರಪ್ರಜರು ರೌದ್ರರಾಗಿ, ಮಿಕ್ಕ ಭೂತಗಳನ್ನು ನುಂಗತೊಡಗಲು, ಪಿತಾಮಹನು ರುದ್ರನನ್ನು ಕರೆದು, 'ಸಾಕೀಭಯಂಕರ ಸೃಷ್ಟಿ! ತಪವನ್ನು ಮಾಡಿ ಒಳ್ಳೆಯ

ಸೃಷ್ಟಿ ಮಾಡು!' ಎಂದಾಜ್ಞಾಪಿಸಿದನು. ಅಂತೆಯೇ ರುದ್ರನು ಸಮುದ್ರದಲ್ಲಿ ಮುಣುಗಿ, ತಪವನ್ನಾರಂಭಿಸಿ, ಶ್ರೀಸಂಕರ್ಷಣನನ್ನು ಧ್ಯಾನಿಸುತ್ತಿದ್ದನು.

ಬ್ರಹ್ಮದೇವನು ಬಹುಕಾಲದ ತಪಸ್ಸಿನಲ್ಲಿ ತೊಡಗಿರುವ ಮಹಾದೇವನನ್ನು ನೋಡಿ, ಭೂತಸೃಷ್ಟಿಗಾಗಿ, ಮರೀಚ್ಯಾದಿ ಪ್ರಜೇಶರನ್ನು ಸೃಜಿಸಿದನು. ಅವರಿಂದ ಭೂಮಿಯು ಪ್ರಾಣಿಸಮೃದ್ಧವಾಗಿ, ಪ್ರಕಾಶಿಸಿತು. ಪ್ರಜಾಪತಿಗಳ ಪ್ರಾರ್ಥನೆಯಂತೆ, ಪ್ರಜಾಪತಿಯಾದ ಬ್ರಹ್ಮನು, ಅವರಿಗೆ ಬೇಕಾದಷ್ಟು ಭೂಪ್ರದೇಶವನ್ನೂ, ಓಷಧೀ (ಧಾನ್ಯ) ಸಮೃದ್ಧಿಯನ್ನೂ ಕೊಟ್ಟು, ಪೋಷಿಸಿದನು. ಮನುರಾಜಾದಿಗಳು ಪ್ರತಿಸೃಷ್ಟಿಯನ್ನು ಮಾಡಿದಾಗ, ಲೋಕಗಳು ಜನಸಮೃದ್ಧವಾದವು. ಪಿತಾಮಹನೂ ತುಷ್ಟನಾದನು.

ಆಗ ಮಹಾದೇವನು ಜಲದಿಂದೆದ್ದು ಬಂದನು. ಪ್ರಜಾಸಮೃದ್ಧವಾಗಿದ್ದ ಭೂತಲವನ್ನು ಕಂಡು, ಕುಪಿತನಾಗಿ, ರುದ್ರನು ತನ್ನ ಲಿಂಗವನ್ನು ಭೂಮಿಯಲ್ಲಿ ಸ್ಥಾಪಿಸಿ, ಇನ್ನು ಮುಂದೆ ದಾಂಪತ್ಯಧರ್ಮದಿಂದ ಪ್ರಜಾಜನನವಾಗಲೆಂದು ಸಂಕಲ್ಪಿಸಿದನು. ಅಂತೆಯೇ ಪ್ರಜರು ಮೈಥುನ ಧರ್ಮದಿಂದ ವೃದ್ಧಿಪೊಂದತೊಡಗಿದರು. ರುದ್ರನು ಮಂಜವನವನ್ನು ಸೇರಿ, ಮತ್ತೆ ತಪಸ್ಸನ್ನು ಮಾಡಿದನು.

ಬ್ರಹ್ಮದೇವನು ದೇವದೇವನಾದ ವರಾಹನಿಂದ ಯಜ್ಞಸಾಧನಗಳಾದ ದರ್ಭೆಹವಿ, ಆಜ್ಯ, ಚಮಸ, ಸ್ರುಕ್, ಸ್ರುವ, ಸಮಿತ್ತುಗಳನ್ನು ಪಡೆದು, ಯಜ್ಞನಾಮಕ ಹರಿಪ್ರೀತಿಗಾಗಿ, ಯಜ್ಞವನ್ನು ಮಾಡಿದನು. ಅಂತೆಯೇ ಪ್ರಜಾಪತಿಗಳೂ ಯಜ್ಞಗಳನ್ನು ನಡೆಸಿದರು. ರುದ್ರನು ತಪಸ್ಸಿನಲ್ಲಿ ತೊಡಗಿದ್ದುದರಿಂದ ಆತನಿಗೆ ಯಜ್ಞಭಾಗವನ್ನು ಕೊಡದೆ, ದೇವತೆಗಳು ಯಜ್ಞಗಳನ್ನು ಮಾಡುತ್ತಿದ್ದರು. ಮಹಾದೇವನು ಕ್ರುದ್ಧನಾಗಿ, ಯಜ್ಞಭಂಗವನ್ನು ಮಾಡಲೆಣಿಸಿ, ಪ್ರಥಮ ಭಂಗಸಾಧನವಾದ ಧನುಸ್ಸನ್ನು ಸೃಜಿಸಿದನು. ಆ ಧನುಸ್ಸು ಪಂಚಹಸ್ತ(ಮೊಳ) ಪ್ರಮಾಣವಾಗಿತ್ತು. ಈಶ್ವರಾರಾಧನೆಯಿಲ್ಲದ, ಶ್ರೀಹರಿ ಪ್ರೀತಿಗಾಗಿ ಮಾಡದ ಯಜ್ಞವು ಅಂತವತ್ಫಲವು ಅಥವಾ ವ್ಯರ್ಥವು ಎಂದು ತೋರಿಸಲು, ಮಹಾದೇವನು ಧನುರ್ಧಾರಿಯಾಗಿ, ಯಜ್ಞವನ್ನು ಧ್ವಂಸಗೊಳಿಸಿದನು. ದೇವತೆಗಳು ಭೀತರಾಗಿ, ಬ್ರಹ್ಮ ದೇವನಿಗೆ ಮೊರೆಯಿಟ್ಟರು. ಆಗ ಯಜ್ಞಪಾವಕನು ಮೃಗರೂಪದಿಂದ ಓಡಿಹೋದನು. ರುದ್ರನು ಅದನ್ನು ಬೆನ್ನಟ್ಟಿ ಪಿಡಿಯಲು ಹವಣಿಸಿದನು. ಆತನು ಮಿತ್ರನ ಬಾಹುಗಳನ್ನೂ, ಭಗನ ನಯನಗಳನ್ನೂ, ಪೂಷನ ದಂತಗಳನ್ನೂ ಧನುಷ್ಕೋಟಿಯಿಂದ ನಾಶಪಡಿಸಿದನು.

'ದೇವತೆಗಳನ್ನು ಪರಿಪಾಲಿಸು! ಯಜ್ಞವನ್ನು ರಕ್ಷಿಸು!' ಎಂದು ಆಜ್ಞಾಪಿಸಿದ ಬ್ರಹ್ಮದೇವನ ವಚನದಂತೆ, ಮಹಾದೇವನು, ದೇವತೆಗಳಲ್ಲಿ ಕರುಣಿಸಿ, ಯಜ್ಞವನ್ನು ಉದ್ಧರಿಸಿದನು, ಮತ್ತೂ, ವ್ಯಂಗ್ಯರಾದ ದೇವತೆಗಳಲ್ಲಿ ದಯದೋರಿ, ಅವರನ್ನು ಸಾಂಗಗೊಳಿಸಿದನು. ಆಗ ಮಹಾದೇವನು ತ್ಯಜಿಸಿದ ಕೋಪವೇ ಬಡನಾಗ್ನಿಯೆನಿಸಿ, ಶ್ರೀಲಕ್ಷ್ಮೀನೃಸಿಂಹನ ಸನ್ನಿಧಾನದಿಂದ ಉರಿಯುತ್ತಾ, ನೀರನ್ನು ಹೀರುತ್ತಾ, ಸಮುದ್ರದಲ್ಲಿ ವಿರಾಜಿಸುತ್ತಿದೆ. ಅಂದಿನಿಂದ ಯಜ್ಞದ ಶಿಷ್ಟಭಾಗವನ್ನು ಮಹಾದೇವನಿಗಿತ್ತು, ದೇವತೆಗಳು ಆತನನ್ನು ಸಂತೋಷಪಡಿಸಿದರು. ರುದ್ರಪ್ರಸಾದದಿಂದ ಜಗವೆಲ್ಲವೂ, ಶಾಂತವೂ,

ಸುಖಮಯವೂ ಆಗಿ ಬೆಳೆಯಿತು. ರುದ್ರನು ಕ್ರುದ್ಧನಾದರೆ ಜಗವು ಕ್ಷುಬ್ಧವಾಗುವುದು; ರುದ್ರನು ಶಾಂತನಾದರೆ ಜಗವು ಪ್ರಸನ್ನವಾಗುವುದು. ಆತನಿಂದ ನಿಹತರಾಗಿರುವರು ನಿನ್ನ ಪುತ್ರಶ್ಯಾಲರು ದೈವೇಚ್ಛೆಗೆ ಎದುರಿಲ್ಲ ತಿಳಿ! ದ್ರೌಣಿಯು ಮಾಡಿದ್ದನ್ನು ಮನಸ್ಸಿನಲ್ಲಿಟ್ಟು, ವ್ಯಸನಪಡಬೇಡ! ಮುಂದಿನ ಕಾರ್ಯಗಳನ್ನು ನಡೆಸು!'

ಇಂತು ನುಡಿದ ಶ್ರೀಕೃಷ್ಣ ವಚನವನ್ನಾಲಿಸಿ, ಧರ್ಮರಾಜನು ಸಮಾಧಾನ ಪೊಂದಿದನು.

# ಸ್ತ್ರೀ ಪರ್ವ

## ೧. ಧೃತರಾಷ್ಟ್ರ ಶೋಕ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಜಯಶಾಲಿಗಳಾದ ಪಾಂಡವರು ಹಸ್ತಿನಾವತಿಯನ್ನು ಸೇರಿದರು. ಧೃತರಾಷ್ಟ್ರನನ್ನು ನೋಡಬೇಕೆಂದು ಅವರು ಸನ್ನದ್ಧರಾಗಿ ಬರುತ್ತಿದ್ದರು. ಧೃತರಾಷ್ಟ್ರನು ನೂರು ಸುತರನ್ನೂ ಕಳೆದುಕೊಂಡು ಕೊಂಬೆಗಳೆಲ್ಲ ಕಡಿದ ಗಿಡದಂತೆ ದೀನದರ್ಶನ ನಾಗಿದ್ದನು. ಪುತ್ರಶೋಕದಿಂದ ಸಂತಪ್ತನಾಗಿ, ಚಿಂತಿಸುತ್ತಾ, ಕಣ್ಣೀರಿಡುವ ಮಹಾರಾಜನನ್ನು ಸಮೀಪಿಸಿ, ಸಂಜಯನು ತಾನೂ ಕಣ್ಣೀರಿಟ್ಟು, ಆತನಿಗಿಂತೆಂದನು:

'ಮಹಾರಾಜ! ಸುಮ್ಮನೆ ಏಕೆ ಅಳುವೆ? ಎಷ್ಟು ಶೋಕಿಸಿದರೂ ಫಲವಿಲ್ಲ. ಹದಿನೆಂಟಕ್ಷೌಹಿಣಿಗಳ ಸೈನ್ಯವು ನಿಶ್ಶೇಷವಾಗಿ ನಾಶವಾಯಿತು. ನಿರ್ಜನ ಶೂನ್ಯವಾಯಿತು. ವಸುಮತೀಮಂಡಲ ಅನೇಕ ದೇಶಗಳಿಂದ ಬಂದು, ನಿನ್ನ ನಂದನನಿಗಾಗಿ ಕಾದ ಅನೇಕ ರಾಜರು, ಸೇನಾಪತಿಗಳು, ಭಟರು ಎಲ್ಲರೂ ಹತರಾದರು. ಮುಂದಿನ ಕಾರ್ಯವನ್ನಾಚರಿಸು! ಪಿತೃ, ಭ್ರಾತೃ, ಪುತ್ರ, ಶ್ಯಾಲ, ಮಿತ್ರಬಂಧುಗಳಿಗೆ ಪ್ರೇತಕಾರ್ಯಗಳನ್ನು ನಡೆಸು!'

ಜನಮೇಜಯ! ಸಂಜಯ ವಚನವನ್ನಾಲಿಸಿದ ಧೃತರಾಷ್ಟ್ರನ ಶೋಕವಹ್ನಿಯು ಉರಿದೆದ್ದಿತು. ಆತನು ಮಹಾವಾತಘಾತದಿಂದ ಬಿದ್ದ ಗಿಡದಂತೆ, ಮೂರ್ಛಿತನಾಗಿ ಬಿದ್ದನು. ಮತ್ತೆ ಎಚ್ಚತ್ತು, ಆತನಿಂತು ಶೋಕಿಸಿದನು: 'ಸಂಜಯ! ಹತಪುತ್ರ ಸುಹೃಜ್ಜನನಾಗಿ ನಾನೆಂತು ಪೃಥ್ವಿಯಲ್ಲಿ ಬಾಳಲಿ! ಬಂಧುಹೀನನಾದ ನನಗೆ ಜೀವಿತದಿಂದೇನು ಪ್ರಯೋಜನ? ಮುದಿಪಕ್ಷಿಗೆ ರೆಕ್ಕೆಗಳು ಕಡಿದು ಬಿದ್ದಂತಾಯಿತಲ್ಲ! ಕಣ್ಣಿಲ್ಲದ ಮುದುಕನಿಗೆ ಕೈಕೋಲಾಗಿರಲು ಒಬ್ಬ ಸುತನಾದರೂ ಉಳಿಯಲಿಲ್ಲ. ನನ್ನ ಜೀವನ ಸೂರ್ಯನು ಅಸ್ತಗಿರಿಯನ್ನು ಮುಟ್ಟಿರುವಂತಿದೆ. ಸುಹೃಜ್ಜನರ ಸುವಚನಗಳನ್ನು ಆಲಿಸದೆ, ಇಷ್ಟನರ್ಥಕ್ಕೀಡಾದೆನು. ಭಗವಾನ್ ಪರಶುರಾಮರು ಹೇಳಿದರು. ನಾರದನೂ ಹಿತವನ್ನರುಹಿದನು; ಶ್ರೀವೇದವ್ಯಾಸರೂ ಉಪದೇಶಿಸಿದರು; ನಾನು ಮಂದಭಾಗ್ಯನಾಗಿ,

ಅವರಾರ ಮಾತನ್ನೂ ಕೇಳಲಿಲ್ಲ. ಸಭಾಮಧ್ಯದಲ್ಲಿ ಶ್ರೀಕೃಷ್ಣನಾಡಿದ ಅಮೃತ ವಚನಗಳೆನಗೆ ಕಹಿಯಾದವು. ಪುತ್ರನನ್ನು ನಿಯಮಿಸದೆ, ಯುದ್ಧವನ್ನು ನಿಲ್ಲಿಸದೆ, ಈಗ ಮಹಾದುಃಖಕ್ಕೆ ಭಾಜನನಾಗಿರುವೆನು. ಪಿತಾಮಹನಾದ ಭೀಷ್ಮನ ಧರ್ಮಯುಕ್ತ ಭಾಷಣವನ್ನೂ ಮನ್ನಿಸಲಿಲ್ಲ.

ದುಶ್ಶಾಸನನನ್ನು ಕೊಂದು ಭೀಮಸೇನನು ರಕ್ತಪಾನವನ್ನು ಮಾಡಿದ ವೃತ್ತಾಂತವನ್ನು ಕೇಳಿ ಆದರೂ, ನನಗೆ ವಿಜಯಾಶೆ ಸಾಯಲಿಲ್ಲ. ಭೀಷ್ಮನು ಶರಪಂಜರಶಯಿತನಾದನು. ದ್ರೋಣನು ನಿಹತನಾದನು. ಕರ್ಣಸೂರ್ಯನು ಅಸ್ತಂಗತನಾದನು. ಶಲ್ಯನು ಸತ್ತನು; ಎಲ್ಲವನ್ನೂ ಕೇಳುತ್ತಾ, ಏನನ್ನೂ ನಿವಾರಿಸಲಾರದೆ ಕೂತಿರುವೆನು. ನನ್ನ ಎದೆ ಒಡೆಯುತ್ತಿದೆ! ನಾನಿನ್ನು ಬದುಕಿರಲಾರೆನು.

ಈ ಜನ್ಮದಲ್ಲಿ ನಾನು ಮಾಡಿದಪಾಪದ ನೆನಪೆನಗಿಲ್ಲ. ಯಾವ ಜನ್ಮದ ಯಾವ ಪಾಪಫಲವೋ ಈಗ ನನ್ನ ಕೈಗೆ ಬಂದಿದೆ! ಏನು ಮಾಡಲಿ! ಎಲ್ಲಿ ಹೋಗಲಿ! ವಿಧಾತನಿಗೆ ಏಕೆ ದಯವಿಲ್ಲ? ಕುರುಡನಾಗಿ ಹುಟ್ಟಿದೆನು! ತಮ್ಮನ ಬಾಹುಬಲದಿಂದ ರಾಜ್ಯವಾಳಿದೆನು; ಅವನೂ ಸತ್ತನು. ಅವನ ಮಕ್ಕಳಿಗೆ ಅನ್ಯಾಯ ಮಾಡಿದೆನು. ಮುಪ್ಪು ಕವಿದು ಬಂತು. ಮಕ್ಕಳು ಎಲ್ಲರೂ, ಒಬ್ಬನೂ ಉಳಿಯದಂತೆ, ಸತ್ತರು. ದೈವೇಚ್ಛೆಗೆ ಎದುರಿಲ್ಲವೆಂದು ತೋರುತ್ತದೆ. ನನ್ನಕ್ಕಿಂತಲು ದುಃಖಿತರೀ ಲೋಕದಲ್ಲಿರುವರೇ? ಇಂತಹ ನನ್ನನ್ನು ನೋಡಲು ಪಾಂಡವರು ಬರುತ್ತಿರುವರಂತೆ! ಅವರನ್ನೆಂತು ಕಾಣಲಿ? ಬೇಗನೆ ನನಗೆ ಸಾವು ಬರಬಾರದೇ? ಹಾ!' ಎಂದು ಗೋಳಾಡುವ ಮಹಾರಾಜನಿಗೆ ಸಂಜಯ ನಿಂತೆಂದನು.

'ಮಹಾರಾಜ! ಅಳಬೇಡ! ಧರ್ಮಶಾಸ್ತ್ರಗಳನ್ನು ಗುರುಗಳಿಂದ ಕೇಳಿ, ತಿಳಿದ ನಿನಗೆ ಮತ್ತೊಬ್ಬರು ಹೇಳುವ ಪ್ರಮೇಯವಿಲ್ಲ. ವೇದಶಾಸ್ತ್ರಗಳನ್ನು ತಿಳಿದು ವೃದ್ಧರನ್ನು ಸೇವಿಸಿ ವಿಜ್ಞನೆನಿಸಿದ ನಿನಗೆ ವಿಧಿಪ್ರಾಪ್ತವಾದ ಅನರ್ಥಕ್ಕಾಗಿ ಅಳುವುದು ತರವಲ್ಲ. ಸೃಂಜಯನೂ ನಿನ್ನಂತೆ ಪುತ್ರಶೋಕಾಭಿ ತಪ್ತನಾಗಿದ್ದಾಗ, ಮುನಿಗಳು ಅವನನ್ನು ಶಾಸ್ತ್ರ ವಚನಗಳಿಂದ ಸಮಾಧಾನಪಡಿಸಿದರಂತೆ! ಯೌವನಮತ್ತನಾಗಿ, ಕಣ್ಣುಕಾಣದೆ, ಕೆಡುಕಾರ್ಯಗಳನ್ನು, ಕೈಯಾರ ಮಾಡಿದ ನಿನ್ನ ಕುಮಾರನನ್ನು ವಾರಿಸದೆ, ಈಗ ಕಣ್ಣೀರಿಂದ ಕೈತೊಳೆಯ ಬೇಕಾಯಿತು. ಲೋಭಿಯಾಗಿ ಪರಾರ್ಥವನ್ನಂತೆ, ಸ್ವಾರ್ಥವನ್ನೂ ಹಾಳುಮಾಡಿಕೊಂಡೆ! ಒಂದಂಚಿನ ಕತ್ತಿಯಂತೆ ಪಕ್ಷಪಾತಿಯಾಗಿ, ಒಬ್ಬರ ಹಿತವನ್ನೆಣಿಸಿ, ಮತ್ತೊಬ್ಬರ ಹತಿಯನ್ನು ಬಯಸಿದೆ! ಸತತವೂ ಶಕುನಿ ದುಶ್ಶಾಸನ ಕರ್ಣ ದುರ್ಯೋಧನರಂತಹ ಕುಜನರನ್ನು ಕೂಡಿ, ಮಂತ್ರಾಲೋಚನೆ ಮಾಡಿದೆ! ಭೀಷ್ಮ, ಗಾಂಧಾರೀ, ವಿದುರ, ದ್ರೋಣ, ಕೃಪರಂತಹ ವಿವೇಕಿಗಳನ್ನು ತಿರಸ್ಕರಿಸಿದೆ! ನಾರದಾದಿ ಋಷಿವರರ ವಚನಗಳನ್ನು ಕೇಳಲಿಲ್ಲ! ಶ್ರೀಪರಶುರಾಮ ವೇದವ್ಯಾಸರ ವಚನದಂತೆ ಸಂಧಿಗೆ ಮನಕೊಡಲಿಲ್ಲ. ಶ್ರೀಕೃಷ್ಣನ ಮಾತನ್ನು ಮನ್ನಿಸಲಿಲ್ಲ.

ನಿನ್ನ ಮಗನು ಬಹುದುರ್ಮಾರ್ಗನು; ಅಲ್ಪಬುದ್ಧಿಯು. ದುರಭಿಮಾನಿಯಾಗಿ

'ಯುದ್ಧ! ಯುದ್ಧ!' ಎಂದು ಕುರಿಯಂತೆ ಕಾಲ್ಕೆರೆದ ದುರ್ಯೋಧನನಿಂತು ಸರ್ವ ನಾಶಮೂಲ ಕಾರಣನಾದನು. ಅಸಂತುಷ್ಟನು, ಕ್ರೂರನು, ನೀಚತಮನು ಆದ ಮಗನ ಮಾತಿಗೆ ಶಾಸ್ತ್ರಜ್ಞನು, ಬುದ್ಧಿವಂತನು, ಸತ್ಯವಂತನು ಆದ ತಂದೆಯು ಕಿವಿಗೊಟ್ಟು, ಅಧರ್ಮವನ್ನು ಲಾಲಿಸಿದನೆಂದರೆ, ಅತ್ಯಾಶ್ಚರ್ಯಕರವಾಗಿದೆ. ಯುದ್ಧಕ್ಕಾಗಿ ಹಾತೊರಿದು ನಿನ್ನ ಮಗನು ತನ್ನವರನ್ನೇ ಅಲ್ಲದೆ, ಸರ್ವಕ್ಷತ್ರವನ್ನೂ ನಾಶಮಾಡಿ, ತಾನೂ ಸತ್ತನು. ಅವನ ಶತ್ರುಗಳು ಜಯಶ್ರೀ ಕೀರ್ತಿಯುತರಾದರು. ಉಭಯರಿಗೂ ಮಧ್ಯಸ್ಥನಾಗಿದ್ದ ನಿನ್ನಿಂದ ಅರ್ಧವಿಭಾಗವು ಸರಿಯಾಗಿ ನಡೆದಿದ್ದಿದ್ದರೆ, ಇಷ್ಟನರ್ಥವಾಗುತ್ತಿದ್ದಿಲ್ಲ. ಮೋಹ, ಸ್ನೇಹ, ಪಕ್ಷಪಾತಗಳಿಗೆ ನೆಲೆಯಾಗಿ, ನ್ಯಾಯ, ಧರ್ಮ, ಸತ್ಯಗಳನ್ನು ಹೊರಹಾಕಿದುದರಿಂದ, ಈಗ ಪಶ್ಚಾತ್ತಾಪಪಡುವಂತಾಯಿತು. ಮೊದಲೇ ತಿಳಿದು ನಡೆಯದೆ, ಪಾಪಕೂಪ ಪತಿತನಾದ ಮನುಜರು, ಸರ್ವಪುರುಷಾರ್ಥಹೀನನಾಗುವನು. ಪುತ್ರಸ್ನೇಹದಿಂದ ಹಿತ ವಲ್ಲದ ಪ್ರಿಯವನ್ನವನಿಗೆ ಮಾಡಲು ಹೋಗಿ, ಸಾನುಜನಾದ ಪುತ್ರನನ್ನು ಕಳೆದುಕೊಂಡೆ! ಅತ್ತುಫಲವಿಲ್ಲ. ಆದ ಅನರ್ಥವನ್ನು ಅನುಭವಿಸುವುದೊಂದೇ ಉಳಿದಿದೆ. ಕೇವಲ ಮಧು ಕೋಶವನ್ನು ನೋಡುತ್ತಾ, ಕೆಳಗಿನ ಪ್ರಪಾತವನ್ನು ನೋಡದೆ ಬಿದ್ದು ಸತ್ತವನಂತೆ, ಶೋಚನೀಯನಾಗಿರುವೆ! ಸಾವಿರ ವರ್ಷಗಳು ಶೋಕಿಸಿದರೂ ಸತ್ತ ಮಕ್ಕಳು ಬರುವುದಿಲ್ಲ. ಶೋಕವು ವಿಜ್ಞಾನ ವಿವೇಕಗಳನ್ನು ಕೆಡಿಸುವುದು. ಅವಿವೇಕಿಯು ಉಭಯಲೋಕಗಳಿಗೂ ಕೆಡುವನು.

ಕೈಯಾರೆ ಕಿಚ್ಚಿಟ್ಟು, ಕಟಿವಸ್ತ್ರವು ಉರಿಯುತ್ತಿರಲು, ಕುಣಿದಾಡಿ ಕೂಗುವ ಹುಚ್ಚನಂತಾಗಿರುವೆ! ನೀನಾಗಿ ತಂದುಕೊಂಡ ವಿಷಾನ್ನವನ್ನು ನೀನೇ ಉಣ್ಣಬೇಕಾಗಿದೆ. ನಿಮ್ಮ ದುರ್ವಚನ ವಾಯುವಿನಿಂದ ಉರಿದೆದ್ದ ಭೀಮಭಯಂಕರಾಗ್ನಿಗೆ ನಿನ್ನ ಸುತರು ಶಲಭಗಳಾಗಿ ಹೋದರು. ಅರ್ಜುನಶರಾಗ್ನಿಗೆ ಸಿಕ್ಕು ಸತ್ತವರಿಗಾಗಿ ಶೋಕಿಸಿ, ನೀನೇನು ಸಾಧಿಸುವೆ? ಮೂಢರಂತೆ ಅಶ್ರುಮಲಿನ ಮುಖನಾಗಿ ರೋದಿಸುವ ನಿನ್ನನ್ನು ಯಾವ ಪಂಡಿತನೂ ಮೆಚ್ಚುವುದಿಲ್ಲ. ಕಿಡಿಗಾರಿ, ನಿನ್ನ ಹೃದಯ ಕುಹರವನ್ನು ಸುಡುತ್ತಿರುವ ಶೋಕಾಗ್ನಿಯನ್ನು ಬುದ್ಧಿಜಲದಿಂದ ಆರಿಸು! ಪ್ರಾಜ್ಞನಂತೆ ನಡೆ!'

ಆಗ ವಿದುರ ವೇದವ್ಯಾಸರು ಅಲ್ಲಿಗೆ ಬಂದರು. ಸಂಜಯನ ಮಾತನ್ನಾಲಿಸಿ, ಬಿಡದೆ ರೋದಿಸುವ ಧೃತರಾಷ್ಟ್ರನಿಗೆ, ಬುದ್ಧಿವಂತನಾದ ವಿದುರನು ಇಂತೆಂದನು: 'ರಾಜನ್! ಏಳೇಳು! ನೆಲದಿ ಬಿದ್ದು ಗೋಳಾಡಿ ಫಲವಿಲ್ಲ. ಮನೋಬಲದಿಂದ ಶೋಕವನ್ನು ಹಿಂಗಿಸು! ಎಲ್ಲ ಮರ್ತ್ಯರೂ ಒಂದು ದಿನ ಸಾಯಲೇಬೇಕಾಗಿದೆ! ಇದು ವಿಧಿನಿಯಮವು. ಧನಸಂಚಯವು ನಾಶಾಂತವಾಗಿದೆ; ವೃದ್ಧಿಯು ಪತನಾಂತವಾಗಿದೆ; ಸಂಯೋಗವು ವಿಯೋಗಾಂತವಾಗಿದೆ; ಜೀವಿತವು ಮರಣಾಂತವಾಗಿದೆ. ಯಮರಾಜನು ಕುರುಕ್ಷೇತ್ರದಲ್ಲಿ ಬಂದು ನಿಂತಿರುವಾಗ, ಕುರುಪಾಂಡವ ಸೈನಿಕರು ಕಡಿದಾಡದಿರಲಾದೀತೇ? ಸಾಯದಿರಲಾದೀತೇ? ಹೇಳು! ಮನೆಯಲ್ಲಿದ್ದವರಿಗೆ ಮರಣವಿಲ್ಲವೇ ಮಹಾರಣರಂಗ ದಿಂದ ಬದುಕಿ ಬಂದವರಿಲ್ಲವೇ? ಆಯುಃಪರಿಮಿತಿಯು ಕಾಲಕರ್ಮ ಸಂಯೋಗದಿಂದ

ಕೊನೆಗಂಡಾಗ, ಎಲ್ಲರೂ ಸಾಯುವರು. ಕಾಲನಕಿಂತ ಬಲವಂತರಿಲ್ಲ ಅವನನ್ನು ದಾಟಿ ಜೀವಿಸಿರಲು ಯಾರಿಂದಲೂ ಆಗದು. ಎಲ್ಲಿಂದಲೋ ಬಂದು, ಇಲ್ಲಿ ಕೆಲಕಾಲವಿದ್ದು, ಎಲ್ಲಿಗೋ ಹೋಗುವ ಭೂತಗಳಿಗಾಗಿ ರೋದಿಸುವುದು ವ್ಯರ್ಥವು. ಅಳುವವರು ಸತ್ತವನ ಸಂಗಡ ಹೋಗುವುದಿಲ್ಲ; ತಾವೂ ಅವನಂತೆ ಸಾಯದಿರುವುದೂ ಇಲ್ಲ. ಜನನ ಮರಣಗಳು ದಿವಾರಾತ್ರಗಳಂತೆ ಅನಿವಾರ್ಯಗಳು.

ಕಾಲನಿಗೆ ಪಕ್ಷಪಾತವಿಲ್ಲ. ಪಾಮರ ಪಂಡಿತರೆನ್ನದೆ, ಬಾಲವೃದ್ಧರೆನ್ನದೆ, ಬಡವ ಬಲ್ಲಿದರೆನ್ನದೆ, ಸ್ತ್ರೀಪುರುಷರೆನ್ನದೆ, ಕಾಲನು ಭಗವದಿಚ್ಛಾನುಸಾರವಾಗಿ ಭೂತಶರೀರಗಳನ್ನು ನಾಶಪಡಿಸುವನು. ಅವನಿಗೆ ಪ್ರಿಯರಿಲ್ಲ; ದ್ವೇಷೀಗಳಿಲ್ಲ; ಬಿರುಗಾಳಿಯು ತೃಣಾಗ್ರಗಳನ್ನು ಸೆಳೆದೊಯ್ವಂತೆ, ಕಾಲನು ಜೀವರನ್ನು ಕೊಂಡು ಪೋಗುವನು. ಸಾರ್ಥಜನರ ಗಮನಾಗಮನಗಳಂತೆ, ಸಂಸಾರದ ಜೀವರ ಹುಟ್ಟುಸಾವುಗಳು ಯಾರು, ಯಾವಾಗ, ಎಂತು ಹೊರಡಬೇಕೆಂಬುದನ್ನು ಕಾಲವೇ ನಿರ್ಣಯಿಸುವುದು. ಕಾಲನು ಎಲ್ಲರಿಗೂ ಮೊದಲಾಗಿ ಓಡುತ್ತಿರುವನು. ಕಾಲನನ್ನು ದಾಟಿಪೋದವರಿಲ್ಲ. ಸರ್ವಭೂತಗಳು ಕಾಲನಾಮಕ ಹರಿಪ್ರೇರಣೆಯಂತೆ, ಹುಟ್ಟಿ, ಬೆಳೆದು, ಸಾಯುತ್ತಿದೆ. ಯುದ್ಧಮೃತರಿಗೆ ಪುಣ್ಯಲೋಕಗಳಾಗಿವೆ; ಆದುದರಿಂದ ಅವರಿಗಾಗಿ ಶೋಕಿಸಬಾರದು. ಸ್ವಾಧ್ಯಾಯನಿರತರು, ಸುಚರಿತವ್ರತರು ಆದ ಭೀಷ್ಮಾದಿ ಸುಜೀವರಿಗೆ ಅನ್ಯಥಾಗತಿ ಇಲ್ಲ. ದುರ್ಯೋಧನಾದಿ ದುಷ್ಟಜೀವರಿಗೆ ಸದ್ಗತಿಯೂ ಇಲ್ಲ. ಶಾಸ್ತ್ರನಿರ್ಣಯವೇ ಹೀಗಿದೆ! ಅರಿತರಿತೂ ದುಃಖಪಡುವುದೆಂದರೆ, ಅಜ್ಞಾನದಿಂದಲೇ! ಜನನೀಜನಕಾತ್ಮಜ ಮುಂತಾದವರು ದೇಹಬಾಂಧವರು ಜೀವಬಾಂಧವರಲ್ಲ. ದೇಹವೆಂಬ ನಿಮಿತ್ತವು ತೊಲಗಲು, ಅವರಾರೋ ಅವರಿಗೆ ನಾವಾರೋ! ಜೀವಬಾಂಧವರೆಂದರೆ ಶ್ರೀಹರಿಯು, ಪ್ರಾಣಾದಿತತ್ತ್ವೇಶರು, ಇತರ ಮನುಜರಲ್ಲ. ಸತ್ತರೆ ಸ್ವರ್ಗವನ್ನೂ, ಕೊಂದರೆ ಕೀರ್ತಿಯನ್ನೂ ಕೊಡುವ ಧರ್ಮಯುದ್ಧವೆಂದಿಗೂ ನಿಷ್ಫಲವಲ್ಲ. ರಣನಿಹತ ಸುಜೀವರು ಇಂದ್ರದೇವನ ಅತಿಥಿಗಳಾಗಿ, ಸಕಲ ಸ್ವರ್ಗಸುಖಗಳನ್ನೂ ಅನುಭವಿಸುವರು.

ಭೂರಿದಕ್ಷಿಣೆಗಳನ್ನಿತ್ತು ಯಜ್ಞವನ್ನು ಮಾಡಿದವರಿಗಿಂತಲು, ವಿದ್ಯಾತಪೋವಿನಯವಂತರಿಗಿಂತಲು, ರಣನಿಹತರು ಹೆಚ್ಚಿನ ಸುಖವನ್ನು ಸ್ವರ್ಗದಲ್ಲಿ ಸೂರೆಗೊಂಬುವರು. ಶರೀರಾಗ್ನಿಯಲ್ಲಿ ಶರಾಹುತಿಯನ್ನಿತ್ತು, ಶರಾಹುತಿಯನ್ನು ಸಹಿಸಿ ಹೋರಾಡಿದ ವೀರರಿಗೆ ವೀರಸ್ವರ್ಗವು ಮೀಸಲಾಗಿದೆ. ಕ್ಷತ್ರಿಯನಿಗೆ ಧರ್ಮಯುದ್ಧಮರಣದಕಿಂತಲು ಶ್ರೇಯಸ್ಕರವಿಲ್ಲ. ಅಂತಹ ವೀರಮರಣವನ್ನಪ್ಪಿದ ಪುಣ್ಯವಂತರಿಗಾಗಿ ನೀನೇಕೆ ಶೋಕಿಸುವೆ? ಮನೋಧೈರ್ಯವನ್ನು ಪಿಡಿದು ಸಂಬಾಳಿಸಿಕೋ! ಶೋಕಮಗ್ನಳಾಗಿ ಕರ್ತವ್ಯ ಕರ್ಮಾದಿಗಳನ್ನು ಬಿಡುವುದು ತರವಲ್ಲ. ಸಾವಿರ ಜನನೀಜನಕರನ್ನು ಲಕ್ಷ ಸುತದುಹಿತೆಯರನ್ನು, ನೂರಾರು ದಾರೆಯರನ್ನು, ಸಂಸಾರದಲ್ಲಿ ಪಡೆದು, ಇಲ್ಲಿಗೆ ಬಂದಿರುವೆವು. ಅವರೀಗ ನಮಗೇನಾಗಬೇಕು? ನಾವೀಗ ಅವರಿಗೇನಾಗಬೇಕು? ಮೂಢನು ದಿನದಿನವೂ ಸಾಯುವನು; ಪಂಡಿತನು ಅಜರಾಮರನಂತಿರುವನು.

'ಯುದ್ಧ! ಯುದ್ಧ!' ಎಂದು ಕುರಿಯಂತೆ ಕಾಲ್ಕೆರೆದ ದುರ್ಯೋಧನನಿಂತು ಸರ್ವ ನಾಶಮೂಲ ಕಾರಣನಾದನು. ಅಸಂತುಷ್ಟನು, ಕ್ರೂರನು, ನೀಚತಮನು ಆದ ಮಗನ ಮಾತಿಗೆ ಶಾಸ್ತ್ರಜ್ಞನು, ಬುದ್ಧಿವಂತನು, ಸತ್ಯವಂತನು ಆದ ತಂದೆಯು ಕಿವಿಗೊಟ್ಟು, ಅಧರ್ಮವನ್ನು ಲಾಲಿಸಿದನೆಂದರೆ, ಅತ್ಯಾಶ್ಚರ್ಯಕರವಾಗಿದೆ. ಯುದ್ಧಕ್ಕಾಗಿ ಹಾತೊರಿದು ನಿನ್ನ ಮಗನು ತನ್ನವರನ್ನೇ ಅಲ್ಲದೆ, ಸರ್ವಕ್ಷತ್ರವನ್ನೂ ನಾಶಮಾಡಿ, ತಾನೂ ಸತ್ತನು. ಅವನ ಶತ್ರುಗಳು ಜಯಶ್ರೀ ಕೀರ್ತಿಯುತರಾದರು. ಉಭಯರಿಗೂ ಮಧ್ಯಸ್ಥನಾಗಿದ್ದ ನಿನ್ನಿಂದ ಅರ್ಧವಿಭಾಗವು ಸರಿಯಾಗಿ ನಡೆದಿದ್ದಿದ್ದರೆ, ಇಷ್ಟನರ್ಥವಾಗುತ್ತಿದ್ದಿಲ್ಲ. ಮೋಹ, ಸ್ನೇಹ, ಪಕ್ಷಪಾತಗಳಿಗೆ ನೆಲೆಯಾಗಿ, ನ್ಯಾಯ, ಧರ್ಮ, ಸತ್ಯಗಳನ್ನು ಹೊರಹಾಕಿದುದರಿಂದ, ಈಗ ಪಶ್ಚಾತ್ತಾಪಪಡುವಂತಾಯಿತು. ಮೊದಲೇ ತಿಳಿದು ನಡೆಯದೆ, ಪಾಪಕೂಪ ಪತಿತನಾದ ಮನುಜರು, ಸರ್ವಪುರುಷಾರ್ಥಹೀನನಾಗುವನು. ಪುತ್ರಸ್ನೇಹದಿಂದ ಹಿತ ವಲ್ಲದ ಪ್ರಿಯವನ್ನವನಿಗೆ ಮಾಡಲು ಹೋಗಿ, ಸಾನುಜನಾದ ಪುತ್ರನನ್ನು ಕಳೆದುಕೊಂಡೆ! ಅತ್ತುಫಲವಿಲ್ಲ. ಆದ ಅನರ್ಥವನ್ನು ಅನುಭವಿಸುವುದೊಂದೇ ಉಳಿದಿದೆ. ಕೇವಲ ಮಧು ಕೋಶವನ್ನು ನೋಡುತ್ತಾ, ಕೆಳಗಿನ ಪ್ರಪಾತವನ್ನು ನೋಡದೆ ಬಿದ್ದು ಸತ್ತವನಂತೆ, ಶೋಚನೀಯನಾಗಿರುವೆ! ಸಾವಿರ ವರ್ಷಗಳು ಶೋಕಿಸಿದರೂ ಸತ್ತ ಮಕ್ಕಳು ಬರುವುದಿಲ್ಲ. ಶೋಕವು ವಿಜ್ಞಾನ ವಿವೇಕಗಳನ್ನು ಕೆಡಿಸುವುದು. ಅವಿವೇಕಿಯು ಉಭಯಲೋಕಗಳಿಗೂ ಕೆಡುವನು.

ಕೈಯಾರೆ ಕಿಚ್ಚಿಟ್ಟು, ಕಟಿವಸ್ತ್ರವು ಉರಿಯುತ್ತಿರಲು, ಕುಣಿದಾಡಿ ಕೂಗುವ ಹುಚ್ಚನಂತಾಗಿರುವೆ! ನೀನಾಗಿ ತಂದುಕೊಂಡ ವಿಷಾನ್ನವನ್ನು ನೀನೇ ಉಣ್ಣಬೇಕಾಗಿದೆ. ನಿಮ್ಮ ದುರ್ವಚನ ವಾಯುವಿನಿಂದ ಉರಿದೆದ್ದ ಭೀಮಭಯಂಕರಾಗ್ನಿಗೆ ನಿನ್ನ ಸುತರು ಶಲಭಗಳಾಗಿ ಹೋದರು. ಅರ್ಜುನಶರಾಗ್ನಿಗೆ ಸಿಕ್ಕು ಸತ್ತವರಿಗಾಗಿ ಶೋಕಿಸಿ, ನೀನೇನು ಸಾಧಿಸುವೆ? ಮೂಢರಂತೆ ಅಶ್ರುಮಲಿನ ಮುಖನಾಗಿ ರೋದಿಸುವ ನಿನ್ನನ್ನು ಯಾವ ಪಂಡಿತನೂ ಮೆಚ್ಚುವುದಿಲ್ಲ. ಕಿಡಿಗಾರಿ, ನಿನ್ನ ಹೃದಯ ಕುಹರವನ್ನು ಸುಡುತ್ತಿರುವ ಶೋಕಾಗ್ನಿಯನ್ನು ಬುದ್ಧಿಜಲದಿಂದ ಆರಿಸು! ಪ್ರಾಜ್ಞನಂತೆ ನಡೆ!'

ಆಗ ವಿದುರ ವೇದವ್ಯಾಸರು ಅಲ್ಲಿಗೆ ಬಂದರು. ಸಂಜಯನ ಮಾತನ್ನಾಲಿಸಿ, ಬಿಡದೆ ರೋದಿಸುವ ಧೃತರಾಷ್ಟ್ರನಿಗೆ, ಬುದ್ಧಿವಂತನಾದ ವಿದುರನು ಇಂತೆಂದನು: 'ರಾಜನ್! ಏಳೇಳು! ನೆಲದಿ ಬಿದ್ದು ಗೋಳಾಡಿ ಫಲವಿಲ್ಲ. ಮನೋಬಲದಿಂದ ಶೋಕವನ್ನು ಹಿಂಗಿಸು! ಎಲ್ಲ ಮರ್ತ್ಯರೂ ಒಂದು ದಿನ ಸಾಯಲೇಬೇಕಾಗಿದೆ! ಇದು ವಿಧಿನಿಯಮವು. ಧನಸಂಚಯವು ನಾಶಾಂತವಾಗಿದೆ; ವೃದ್ಧಿಯು ಪತನಾಂತವಾಗಿದೆ; ಸಂಯೋಗವು ವಿಯೋಗಾಂತವಾಗಿದೆ; ಜೀವಿತವು ಮರಣಾಂತವಾಗಿದೆ. ಯಮರಾಜನು ಕುರುಕ್ಷೇತ್ರದಲ್ಲಿ ಬಂದು ನಿಂತಿರುವಾಗ, ಕುರುಪಾಂಡವ ಸೈನಿಕರು ಕಡಿದಾಡದಿರಲಾದೀತೇ? ಸಾಯದಿರಲಾದೀತೇ? ಹೇಳು! ಮನೆಯಲ್ಲಿದ್ದವರಿಗೆ ಮರಣವಿಲ್ಲವೇ ಮಹಾರಣರಂಗ ದಿಂದ ಬದುಕಿ ಬಂದವರಿಲ್ಲವೇ? ಆಯುಃಪರಿಮಿತಿಯು ಕಾಲಕರ್ಮ ಸಂಯೋಗದಿಂದ

ಕೊನೆಗಂಡಾಗ, ಎಲ್ಲರೂ ಸಾಯುವರು. ಕಾಲನಕಿಂತ ಬಲವಂತರಿಲ್ಲ ಅವನನ್ನು ದಾಟಿ ಜೀವಿಸಿರಲು ಯಾರಿಂದಲೂ ಆಗದು. ಎಲ್ಲಿಂದಲೋ ಬಂದು, ಇಲ್ಲಿ ಕೆಲಕಾಲವಿದ್ದು, ಎಲ್ಲಿಗೋ ಹೋಗುವ ಭೂತಗಳಿಗಾಗಿ ರೋದಿಸುವುದು ವ್ಯರ್ಥವು. ಅಳುವವರು ಸತ್ತವನ ಸಂಗಡ ಹೋಗುವುದಿಲ್ಲ; ತಾವೂ ಅವನಂತೆ ಸಾಯದಿರುವುದೂ ಇಲ್ಲ. ಜನನ ಮರಣಗಳು ದಿವಾರಾತ್ರಗಳಂತೆ ಅನಿವಾರ್ಯಗಳು.

ಕಾಲನಿಗೆ ಪಕ್ಷಪಾತವಿಲ್ಲ. ಪಾಮರ ಪಂಡಿತರೆನ್ನದೆ, ಬಾಲವೃದ್ಧರೆನ್ನದೆ, ಬಡವ ಬಲ್ಲಿದರೆನ್ನದೆ, ಸ್ತ್ರೀಪುರುಷರೆನ್ನದೆ, ಕಾಲನು ಭಗವದಿಚ್ಛಾನುಸಾರವಾಗಿ ಭೂತಶರೀರಗಳನ್ನು ನಾಶಪಡಿಸುವನು. ಅವನಿಗೆ ಪ್ರಿಯರಿಲ್ಲ; ದ್ವೇಷಿಗಳಿಲ್ಲ; ಬಿರುಗಾಳಿಯು ತೃಣಾಗ್ರಗಳನ್ನು ಸೆಳೆದೊಯ್ವಂತೆ, ಕಾಲನು ಜೀವರನ್ನು ಕೊಂಡು ಪೋಗುವನು. ಸಾರ್ಥಜನರ ಗಮನಾಗಮನಗಳಂತೆ, ಸಂಸಾರದ ಜೀವರ ಹುಟ್ಟುಸಾವುಗಳು ಯಾರು, ಯಾವಾಗ, ಎಂತು ಹೊರಡಬೇಕೆಂಬುದನ್ನು ಕಾಲವೇ ನಿರ್ಣಯಿಸುವುದು. ಕಾಲನು ಎಲ್ಲರಿಗೂ ಮೊದಲಾಗಿ ಓಡುತ್ತಿರುವನು. ಕಾಲನನ್ನು ದಾಟಿಪೋದವರಿಲ್ಲ. ಸರ್ವಭೂತಗಳು ಕಾಲನಾಮಕ ಹರಿಪ್ರೇರಣೆಯಂತೆ, ಹುಟ್ಟಿ, ಬೆಳೆದು, ಸಾಯುತ್ತಿದೆ. ಯುದ್ಧಮೃತರಿಗೆ ಪುಣ್ಯಲೋಕಗಳಾಗಿವೆ; ಆದುದರಿಂದ ಅವರಿಗಾಗಿ ಶೋಕಿಸಬಾರದು. ಸ್ವಾಧ್ಯಾಯನಿರತರು, ಸುಚರಿತವ್ರತರು ಆದ ಭೀಷ್ಮಾದಿ ಸುಜೀವರಿಗೆ ಅನ್ಯಥಾಗತಿ ಇಲ್ಲ. ದುರ್ಯೋಧನಾದಿ ದುಷ್ಟಜೀವರಿಗೆ ಸದ್ಗತಿಯೂ ಇಲ್ಲ. ಶಾಸ್ತ್ರನಿರ್ಣಯವೇ ಹೀಗಿದೆ! ಅರಿತರಿತೂ ದುಃಖಪಡುವುದೆಂದರೆ, ಅಜ್ಞಾನದಿಂದಲೇ! ಜನನೀಜನಕಾತ್ಮಜ ಮುಂತಾದವರು ದೇಹಬಾಂಧವರು ಜೀವಬಾಂಧವರಲ್ಲ. ದೇಹವೆಂಬ ನಿಮಿತ್ತವು ತೊಲಗಲು, ಅವರಾರೋ ಅವರಿಗೆ ನಾವಾರೋ! ಜೀವಬಾಂಧವರೆಂದರೆ ಶ್ರೀಹರಿಯು, ಪ್ರಾಣಾದಿತತ್ತ್ವೇಶರು, ಇತರ ಮನುಜರಲ್ಲ. ಸತ್ತರೆ ಸ್ವರ್ಗವನ್ನೂ, ಕೊಂದರೆ ಕೀರ್ತಿಯನ್ನೂ ಕೊಡುವ ಧರ್ಮಯುದ್ಧವೆಂದಿಗೂ ನಿಷ್ಫಲವಲ್ಲ. ರಣನಿಹತ ಸುಜೀವರು ಇಂದ್ರದೇವನ ಅತಿಥಿಗಳಾಗಿ, ಸಕಲ ಸ್ವರ್ಗಸುಖಗಳನ್ನೂ ಅನುಭವಿಸುವರು.

ಭೂರಿದಕ್ಷಿಣೆಗಳನ್ನಿತ್ತು ಯಜ್ಞವನ್ನು ಮಾಡಿದವರಿಗಿಂತಲು, ವಿದ್ಯಾತಪೋವಿನಯವಂತರಿಗಿಂತಲು, ರಣನಿಹತರು ಹೆಚ್ಚಿನ ಸುಖವನ್ನು ಸ್ವರ್ಗದಲ್ಲಿ ಸೂರೆಗೊಂಬುವರು. ಶರೀರಾಗ್ನಿಯಲ್ಲಿ ಶರಾಹುತಿಯನ್ನಿತ್ತು, ಶರಾಹುತಿಯನ್ನು ಸಹಿಸಿ ಹೋರಾಡಿದ ವೀರರಿಗೆ ವೀರಸ್ವರ್ಗವು ಮೀಸಲಾಗಿದೆ. ಕ್ಷತ್ರಿಯನಿಗೆ ಧರ್ಮಯುದ್ಧ ಮರಣದಕಿಂತಲು ಶ್ರೇಯಸ್ಕರವಿಲ್ಲ. ಅಂತಹ ವೀರಮರಣವನ್ನಪ್ಪಿದ ಪುಣ್ಯವಂತರಿಗಾಗಿ ನೀನೇಕೆ ಶೋಕಿಸುವೆ? ಮನೋಧೈರ್ಯವನ್ನು ಪಿಡಿದು ಸಂಬಾಳಿಸಿಕೋ! ಶೋಕಮಗ್ನಳಾಗಿ ಕರ್ತವ್ಯ ಕರ್ಮಾದಿಗಳನ್ನು ಬಿಡುವುದು ತರವಲ್ಲ. ಸಾವಿರ ಜನನೀಜನಕರನ್ನು ಲಕ್ಷ ಸುತದುಹಿತೆಯರನ್ನು, ನೂರಾರು ದಾರೆಯರನ್ನು, ಸಂಸಾರದಲ್ಲಿ ಪಡೆದು, ಇಲ್ಲಿಗೆ ಬಂದಿರುವೆವು. ಅವರೀಗ ನಮಗೇನಾಗಬೇಕು? ನಾವೀಗ ಅವರಿಗೇನಾಗಬೇಕು? ಮೂಢನು ದಿನದಿನವೂ ಸಾಯುವನು; ಪಂಡಿತನು ಅಜರಾಮರನಂತಿರುವನು.

ಮೂಢನಿಗೆ ಸಾವಿರಹರ್ಷ ಕಾರಣಗಳಂತೆಯೇ, ಸಾವಿರ ದುಃಖ ಸ್ಥಾನಗಳೂ ಒದಗುವವು. ಪಂಡಿತನು ಅದಕ್ಕೆ ಹಿಗ್ಗದೆ, ಇದಕ್ಕೆ ಕುಗ್ಗದೆ, ನಿರ್ವಿಕಾರನಾಗಿರುವನು. ಕಾಲಕ್ಕೆ ದ್ವೇಷಮೈತ್ರಿಗಳಿಲ್ಲ! ಅದು ಸರ್ವರನ್ನೂ ಸೆಳೆಯುವುದೆಂದು ತಿಳಿದವನಿಗೆ ಮರಣದ ಅಂಜಿಕೆಯೂ ಇಲ್ಲ. ನಾವು ಮಲಗಿರುವಾಗಲೂ ಎಚ್ಚತ್ತಿರುವ ಕಾಲವನ್ನು ನಾವು ಗೆಲ್ಲಲಾಗುವುದೇ? ಯೌವನವು ಸುಮಸದೃಶವು ಐಶ್ವರ್ಯವು ತಟಿಚ್ಚಂಚಲವು; ರೂಪವು ಭ್ರಾಮಕವು; ಪ್ರಿಯಸಂವಾಸವು ಅನಿತ್ಯವು; ಆರೋಗ್ಯವು ಅಪಥ್ಯದೂಷಿತವು; ಆಯುವು ದಿವಸದಂತೆ ಕ್ಷಯಶೀಲವು; ಶರೀರವು ಗೃಹದಂತೆ ಜರ್ಜರಿತವು; ಇದನ್ನೆಲ್ಲ ತಿಳಿದು ಪಂಡಿತನು ಸುಖಿಸುವನು.

ಎಲ್ಲ ಜೀವರಿಗೂ ತಪ್ಪದೆ ಬರುವ ಮರಣಕ್ಕಾಗಿ, ಒಬ್ಬನು ಶೋಕಿಸಿ ಮಾಡುವದಾದರೂ ಏನು? ಪ್ರಯತ್ನಿಸಿ ಕೂಡ, ಮರಣಾದಿ ವಿಪತ್ತು ತೊಲಗದಿದ್ದರೆ, ದೈವ ವಿಲಾಸಕ್ಕೆ ಶಿರಬಾಗಿ, ನಿರ್ವಿಕಾರನಾಗಿ ಅನುಭವಿಸುವವನು ಮುಕ್ತಿಯೋಗ್ಯನೆನಿಸುವನು. ದುಃಖದ ಪ್ರತೀಕಾರವೆಂದರೆ ಅದನ್ನು ಮರೆತುಬಿಡುವುದೇ ಆಗಿದೆ. ಮರೆಯದೆ ಮರುಗಿದಂತೆಲ್ಲ ದುಃಖಾಗ್ನಿಯು ಉದ್ರಿಕ್ತವಾಗಿ, ವೃಕ್ಷಕೋಟರಾಗ್ನಿಯು ಗಿಡವನ್ನಂತೆ, ಆಶ್ರಯವನ್ನು ನಾಶಪಡಿಸುವುದು. ಅನಿಷ್ಟವು ಬಂದೊದಗಿ ಇಷ್ಟವು ದೂರವಾಗುವುದೇ ದುಃಖವು. ಅಲ್ಪಬುದ್ಧಿಗಳನ್ನು ದುಃಖವು ಪೀಡಿಸಿದಂತೆ ವಿವೇಕಿಗಳನ್ನು ಪೀಡಿಸದು. ಶೋಕದಿಂದ ಅರ್ಥವಿಲ್ಲ; ಧರ್ಮವಿಲ್ಲ; ಬರಿಯ ದುಃಖದಿಂದ ಕಾರ್ಯತ್ಯಾಗ, ಪುರುಷಾರ್ಥ ನಾಶಗಳೇ ಆಗಲಿ ಯಾವ ಫಲವೂ ಇಲ್ಲ. ಸಂತುಷ್ಟನಿಗೆ ಅರ್ಥವು ಸುಖಕರವಾಗುವುದು; ಅತೃಪ್ತನಿಗೆ ಅರ್ಥದಿಂದ ಆಶಾಲೋಭಗಳು ಪುಟ್ಟಿ, ಅದರಿಂದ ಅವನು ಸಂತೋಷ ದೂರನಾಗುವನು. ಮಾನಸಿಕ ದುಃಖವನ್ನು ಪ್ರಜ್ಞಾಬಲದಿಂದಲು ಕಳೆದು, ಬುದ್ಧಿವಂತನು ಸುಖಿಸುವನು.

ಕರ್ಮಫಲವನ್ನು ಎಲ್ಲರೂ ಅನುಭವಿಸಲೇಬೇಕು. ಅದನ್ನು ತಪ್ಪಿಸಿಕೊಳ್ಳಲು ಯಾರಿಂದಲೂ ಆಗದು. ನಮ್ಮ ನಮ್ಮ ಕರ್ಮವು ಫಲಪ್ರದಾನ ಸಮಯವನ್ನು ನಿರೀಕ್ಷಿಸಿ, ನಮ್ಮನ್ನು ಬೆನ್ನತ್ತಿ ಬರುತ್ತಿರುವುದು. ಮಲಗಿದಾಗಲು, ನಿಂತಾಗಲು, ಓಡುವಾಗಲು, ಏನೇ ಮಾಡುವಾಗಲು, ನಮ್ಮ ಕರ್ಮವು ಹಿಂಬಾಲಿಸಿ ಬರುವುದು. ಯಾವ ಅವಸ್ಥೆಯಲ್ಲಿ ಯಾವ ಶುಭಾಶುಭ ಕರ್ಮವನ್ನು ಮಾಡಿರುವನೋ, ಆಯಾಅವಸ್ಥೆಯಲ್ಲಿ ಮನುಜನು ಆ ಕರ್ಮಫಲವನ್ನು ಉಣ್ಣಲೇಬೇಕಾಗುವುದು. ಆದುದರಿಂದ ಶ್ರೀಹರಿಯೇ ನಮ್ಮ ನಿಜಬಂಧುವು; ಅವನಲ್ಲಿಟ್ಟ ಮನಸ್ಸೂ ಬಂಧುವಿನಂತೆ. ನಮ್ಮನ್ನು ಕಾಪಾಡುವುದು; ಅವನನ್ನು ಬಿಟ್ಟು, ವಿಷಯಗಳಲ್ಲಿಟ್ಟ ಮನಸ್ಸೇ ಶತ್ರುವಾಗಿ; ನಮ್ಮನ್ನು ಕೆಡಿಸಿಬಿಡುವುದು. ನಾವು ಮಾಡಿರುವ ಪಾಪಗಳನ್ನು ನಮ್ಮ ಮನಸ್ಸೇ ಸಾಕ್ಷಿಯಾಗಿ ನೋಡುವುದು. ಮನೋನಾಮಕ ಶ್ರೀಶನು ಪಾಪಪುಣ್ಯಗಳಿಗೆ ಫಲವಾಗಿ ದುಃಖಸುಖಗಳನ್ನು ತಂದು ಕೊಡುವನು. ಕುಕರ್ಮ ಮಾಡಿದವನಿಗೆ ಸುಖವಿಲ್ಲ; ಸುಕರ್ಮ ಮಾಡಿದವನಿಗೆ ದುಃಖವಿಲ್ಲ. ಮಾಡದ ಕರ್ಮದ ಫಲವನ್ನು ಯಾರೂ ಉಣ್ಣಬೇಕಾಗಿಲ್ಲ. ಮಾಡಿದ್ದನ್ನು

ಉಣ್ಣದೇ ಇರಲಾಗುವುದಿಲ್ಲ. ಆದುದರಿಂದ ನಿನ್ನಂತಹ ಬುದ್ಧಿವಂತರು ಜ್ಞಾನವಿರೋಧಿಗಳಾದ ಕರ್ಮಫಲಗಳಲ್ಲಿ ಆಸಕ್ತರಾಗುವುದಿಲ್ಲ.'

## ೨. ವಿದುರೋಪದೇಶ

ಧೃತರಾಷ್ಟ್ರನು ವಿದುರನ ವಚನಾಮೃತ ಪಾನದಿಂದ ಸ್ವಲ್ಪ ಚೇತರಿಸಿಕೊಂಡು, ಇಂತು ಪ್ರಶ್ನಿಸಿದನು.

'ವಿದುರ! ನಿನ್ನ ಸುಭಾಷಿತಗಳಿಂದ ನನ್ನ ಮನೋವ್ಯಾಕುಲತೆಯು ದೂರವಾಯಿತು. ಇಷ್ಟಗಳು ದೂರವಾಗಿ, ಅನಿಷ್ಟಗಳು ಒದಗಿಬಂದಾಗ ಆಗುವ ಮಾನಸಿಕ ದುಃಖವನ್ನು ಮನುಜನು ಎಂತು ಕಳೆದುಕೊಳ್ಳಬಹುದು? ಇನ್ನೂ ಉಪದೇಶಿಸಿ, ನನ್ನ ಶೋಕವನ್ನು ಕಳೆ!'

ಆಗ ವಿದುರನಿಂತೆಂದನು: 'ರಾಜನ್! ಇಷ್ಟಾನಿಷ್ಟಗಳ ನಿಜಜ್ಞಾನವಿಲ್ಲದೆ ಮನುಜರು ಶೋಕಪಡುವರು. ಕೇಳು! ದುಃಖವು ಅನುಪಾದೇಯವಾಗಿದೆ; ಅದರಂತೆ ವೈಷಯಿಕ ಸುಖವೂ ಮೋಕ್ಷವಿರೋಧಿಯಾದುದರಿಂದ ಅನುಪಾದೇಯವೇ ಆಗಿದೆ. ಕದಲೀಕಾಂಡದಂತೆ ದುರ್ಬಲನಿಸ್ಸಾರವಾದುದೀ ಸಂಸಾರ. ಸರ್ವಪದಾರ್ಥಗಳು ಅಶಾಶ್ವತಗಳು. ಪ್ರಾಜ್ಞರಾಗಲಿ, ಮೂಢರಾಗಲೀ, ಧನಿಕರಾಗಲೀ, ಬಡವರಾಗಲಿ, ಸತ್ತು ಬೂದಿಯಾಗುವರು. ಕಾಲನಿಗೆ ಕೊಲ್ಲಲು ಎಲ್ಲರೂ ಸಮರೇ; ಮಾನವರೆಲ್ಲರ ದೇಹಗಳು ರಕ್ತಮಾಂಸಾದಿ ನಿರ್ಮಿತವೇ! ಅದರಲ್ಲಿ ವಿಶೇಷವಿಲ್ಲ; ಎಲ್ಲವೂ ಮಣ್ಣಾಗಿ ಹೋಗುವವೇ! ಕುಲವೆಂತಲು, ವಿದ್ಯೆಯಂತಲು, ರೂಪವೆಂತಲು ಯಾರೂ ಜಂಬಕೊಚ್ಚುವ ಕೆಲಸವಿಲ್ಲ. ಮನೆಗಳಂತೆ ಭಿನ್ನವಾಗಿರುವ ದೇಹಗಳನ್ನು ಆತ್ಮವೆಂದು ಭ್ರಮಿಸಿ, ದೇಹದ ಕುಲ ಜಾತಿ ವಿದ್ಯಾ ಧನ ರೂಪಗಳ ಮದರಿಂದ ಕಣ್ಣುಕಾಣದೆ, ವಂಚಕರಾಗಿ ಕುಕೃತ್ಯನಿರತರಾದವರಿಗೆ ಸದ್ಗತಿಯಿಲ್ಲ. ಆತ್ಮನು ಅನಾದಿನಿತ್ಯನು. ಹಳೆಯ ಬಟ್ಟೆಗಳನ್ನು ಬಿಟ್ಟು ನೂತನ ವಸನಗಳನ್ನುಡುವಂತೆ, ಜೀವನು ಹಿಂದಿನ ಶರೀರಗಳನ್ನು ಬಿಟ್ಟು, ಹೊಸ ಶರೀರದಲ್ಲಿ ಬಂದಿರುವನು. ಜನನ ಮರಣ ರೂಪವಾದ ಸಂಸಾರಚಕ್ರದ ಬಂಧದಿಂದ ಬಿಡಿಸಿಕೊಳ್ಳಬೇಕಾದರೆ, ಶರೀರವೇ ನಾನೆಂಬ ಅಹಂಕಾರವನ್ನೂ, ದಾರಾಸುತಾದಿಗಳು ನನ್ನವೆಂಬ ಮಮಕಾರವನ್ನೂ ಬಿಡಬೇಕು.

ಕರ್ಮವೇ ಸುಖದುಃಖ ಕಾರಣವು. ಅನಾದಿ ಕರ್ಮವು ಬೀಜವಾಗಿ ನಾನಾ ಯೋನಿಗಳಲ್ಲಿ ಜೀವನನ್ನು ತರುವುದು. ಆಗ ಅವನು ಮಾಡಿದ ಕರ್ಮವು ಮುಂದಿನ ಜನ್ಮಗಳ ಕಾರಣವಾಗುವುದು. ಕರ್ಮವು ಸ್ವತಂತ್ರ ಫಲಪ್ರದವಲ್ಲ; ಕರ್ಮಫಲಪ್ರದನು ಶ್ರೀಶನೇ! ಅವರವರ ಯೋಗ್ಯತೆಯಂತೆ, ಕರ್ಮಗಳನ್ನು ಮಾಡಿಸಿ, ಶ್ರೀಹರಿಯು ತದ್ಯೋಗ್ಯ ಫಲಗಳನ್ನು ಅವರಿಗೆ ಕೊಡುತ್ತಿರುವನು. ಮಣ್ಣಿನ ಗಡಿಗೆಯಂತೆ ಶರೀರವು. ಕಾಲದಿಂದ ಅದು ಯಾವಾಗಲಾದರೂ ನಾಶವಾಗಬಹುದು. ಮಾಡುವಾಗ, ಒಣಗಿಸುವಾಗ, ಇಳಿಸುವಾಗ, ಸುಡುವಾಗ, ಬುಡಕಟ್ಟುವಾಗ, ರಾಶಿಯಲ್ಲಿರುವಾಗ, ನೀರು ತರುವಾಗ,

ಯಾವಾಗಲಾದರೂ ಗಡಿಗೆ ಒಡೆಯಬಹುದು; ಅದರಂತೆ ಬಾಲ್ಯ ಯೌವನ ವಾರ್ಧಕ್ಯಗಳಲ್ಲಿ ಯಾವಾಗಲಾದರೂ, ಶರೀರವು ಸಾಯಬಹುದು. ದಿನ, ಪಕ್ಷ, ಮಾಸ, ವರ್ಷಗಳು ಆಯುರ್ಮಾರ್ಗದ ಅಳತೆಗಲ್ಲುಗಳು. ಆ ಮಾರ್ಗದಲ್ಲಿ ಮನುಜನು ಎಲ್ಲಿ, ಯಾವಾಗ, ಕಾಲವ್ಯಾಘ್ರನಿಗೆ ತುತ್ತಾಗುವನೋ ಯಾರೂ ಅರಿಯರು. ಇಂತು ಮರಣವು ಈಶ್ವರನಿಯತವಾಗಿ, ಕಾಲಕರ್ಮ ಸಂಯೋಗದಿಂದ, ಆಯುವು ಮುಗಿಯಲು ಬರುವುದೆಂದು ತಿಳಿದು, ವಿವೇಕಿಯು ಶೋಕಪಡಬಾರದು. ಕೆರೆಯಲ್ಲಿ ಮೀನುಗಳಂತೆ, ಸಂಸಾರದಲ್ಲಿ ಜೀವರು ತೇಲಿ ಮುಳುಗುತ್ತಲಿರುವರು. ಜ್ಞಾನನೌಕೆಯೇ ಅಂತಹವರಿಗೆ ತರಣೋಪಾಯವು ಸಂಸಾರಗಹನದಲ್ಲಿದ್ದೂ ಇಲ್ಲದಂತೆ, ಭೂತಗಳು ಸಂಯೋಗ ವಿಯೋಗಗಳಿಂದ ಹಿಗ್ಗದೆ, ಕುಗ್ಗದೆ, ನಿರ್ವಿಕಾರರಾದ ಶ್ರೀಹರಿ ಭಕ್ತರು, ಗುರುದ್ವಾರಾ ಜ್ಞಾನವನ್ನಾರ್ಜಿಸಿ, ಕೊನೆಗೆ ಪರಮಗತಿಯನ್ನೈದುವರು.'

ಧೃತರಾಷ್ಟ್ರನು 'ವಿದುರ! ಸಂಸಾರವು ಗಹನವೆಂದೆ! ಅದರ ಗಹನ ಸ್ವಭಾವವನ್ನು ತಿಳಿಸಿಕೊಟ್ಟು, ಅದನ್ನು ದಾಟುವ ಸಾಧನಗಳನ್ನೂ ವರ್ಣಿಸು!' ಎಂದು ಕೇಳಿದನು.

ವಿದುರನಿಂತೆಂದನು: 'ರಾಜನ್! ಕರ್ಮಾನುಗನಾಗಿ ಜೀವನು ಪಿತೃರೇತಃ ಕಣಾಶ್ರಯನಾಗಿ, ಮಾತೃಗರ್ಭವನ್ನು ಪ್ರವೇಶಿಸುವನು. ಒಂದು ದಿನದಲ್ಲಿ ಶುಕ್ಲ ಶೋಣಿತ ಬಿಂದುದ್ವಯವು ಕಲಲದಂತಾಗುವುದು. ದಶರಾತ್ರಗಳಿಗೆ ಅದು ಬುದುದಾತಾರ ವಾಗುವುದು. ಹೀಗೆಯೇ ಬೆಳೆದು ಗರ್ಭವು ಐದು ತಿಂಗಳಾಗಲು, ಜೀವ ಚೈತನ್ಯವು ವಿಶೇಷ ಚೇಷ್ಟಾವಂತವಾಗುವುದು. ಹತ್ತು ತಿಂಗಳಿಗೆ ಗರ್ಭವು ಸರ್ವಾಂಗ ಸಂಪೂರ್ಣ ವಾಗುವುದು. ಮಲಮೂತ್ರಗರ್ತದಲ್ಲಿ, ಮಾಂಸಶೋಣಿತ ಕರ್ದಮದಿಗ್ಧನಾಗಿ ಗರ್ಭ ಕೋಶದ ಆಂತ್ರಗಳಿಂದ ಪರಿವೃತನಾಗಿ ಬಿದ್ದ ಜೀವನಿಗೆ ಗರ್ಭವಾಸದಲ್ಲಿ ಮಹಾದುಃಖ ವಾಗುವುದು. ಹತ್ತು ತಿಂಗಳಾದಾಗ, ವಾಯುಪ್ರೇರಿತನಾಗಿ ಗರ್ಭಗತನು ಅಧೋಮುಖನಾಗಿ ಯೋನಿದ್ವಾರದಿಂದ ಹೊರಬರುವಾಗ ಮಹಾಕ್ಲೇಶವನ್ನು ಪೊಂದುವನು.

ಬಾಲ್ಯದಲ್ಲಿ ಅವನನ್ನು ಅವನ ಚಿತ್ತವನ್ನರಿಯದವರು ತಮಗೆ ಬೇಕಾದಂತೆ ಬೆಳೆಸುವರು. ಬೆಳೆದಂತೆ ಬಾಲಕನನ್ನು ಶಿಕ್ಷಿಸುವರು; ಯೌವನವನ್ನು ಪೊಂದಿ, ಶರೀರದಂತೆ ಕಾಮ ಕ್ರೋಧಗಳೂ ಬೆಳೆಯಲು, ನಟವಿಟಧೂರ್ತರ ಸಹವಾಸದಿಂದ, ಜೀವನು ದುಷ್ಟ ಕಾರ್ಯಗಳನ್ನೆಸಗುವನು. ದುಷ್ಟಸಂಗವು ಮಧುರವೆನಿಸುವುದು; ಇಂದ್ರಿಯಗಳು ಪಾಶಗಳಂತೆ ವಿಷಯಗಳತ್ತ ಸೆಳೆಯುವುವು; ಹಿಂದಿನ ಕರ್ಮಗಳು ವ್ಯಾಧಿರೂಪವಾಗಿ ಪೀಡಿಸುವವು. ಬಂಧುಗಳು ನಕ್ರಗಳಂತೆ ರಕ್ತವನ್ನು ಹೀರಿ, ಮಾಂಸವನ್ನು ತಿಂದು, ಜೀವನು ಅಸ್ಥಿಪಂಜರ ನಾದಾಗ, ಬಿಟ್ಟುಹೋಗುವರು. ಜೀವನ ಫಲವು ವಿಷಮಯವಾದಾಗ, ಬದುಕು ಬೇಡ ವೆನಿಸುವುದು. ಯಮನ ಮಹಿಷಕಂಠಘಂಟೆಯು ಕಿವುಡುಕಿವಿಗೆ ಕೇಳಿಸದು. ಸಹಜೀವರ ಮರಣಯಾತನೆಯು ಕುರುಡುಕಣ್ಣಿಗೆ ಕಾಣಿಸದು. ಮೃತ್ಯುದೇವಿಯ ಕರಾಳವಿಕೃತಾಟ್ಟಹಾಸದ ಚಿಂತೆ ಮನಕ್ಕೆ ಬಾರದು. ಎಲ್ಲವೂ ಶಾಶ್ವತವೆಂದು ನಂಬಿ, ಸಾಧನಜಾತವನ್ನು ಮರೆತು,

ಶ್ರೀಹರಿ ದೂರನಾದ ಪಾಪಿಜೀವನು, ಯಮರಾಜನ ಲೋಕವನ್ನು ಸೇರಿ, ಅನೇಕ ನರಕದುಃಖ ಭಾಜನನಾಗುವನು.

ಪಾಪಶೇಷದಿಂದ ಮತ್ತೆ ಗರ್ಭಗತನಾದ ಜೀವನು ಹುಟ್ಟಿ, ಬೆಳೆದು ಮತ್ತೆ ಸಾವಿನ ಕಡೆ ನಡೆಯುವನು. ಮೇಕೆಯಂತೆ ಯಮಹಿಂಸಾಗಾರವನ್ನು ಸೇರುವ ಭಯವಿಲ್ಲದೆ, ಜೀವನು ಮತ್ತೆ ಮತ್ತೆ ಹುಟ್ಟಿ ಸಾಯುತ್ತಿರುವನು. ಲೋಭದಿಂದ ಧರ್ಮದೂರನೂ, ಕ್ರೋಧದಿಂದ ಭಕ್ತಿದೂರನೂ, ಮೋಹದಿಂದ ಜ್ಞಾನದೂರನೂ ಆಗಿ ಮನುಜನು ಮೈಮರೆತು, ಉನ್ಮತ್ತನಾಗುವನು. ಕುಲೀನನಾಗಿ ವಿನೀತನಾಗದೆ, ದೀನರನ್ನು ಅವಗಣಿಸುವನು. ಧನಿಕನಾಗಿ ದಾಸಿಯಾಗದೆ, ದರಿದ್ರರನ್ನು ಹೀಯಾಳಿಸುವನು. ವಿದ್ವಾಂಸನಾಗಿ ಕರುಣೆಯಾಗದೆ, ಪರರನ್ನು ವಾದಸರಣಿಗೆ ಇಳಿಸಿ, ಖಂಡಿಸಿ, ನಿಂದಿಸುವನು. ತಾನು ಮೂರ್ಖನಾಗಿ, ಪರರನ್ನು ಮೂರ್ಖರೆಂಬುವನು. ಇತರರಿಗೆ ಉಪದೇಶಿಸುವನಾಗಲಿ, ತನ್ನನ್ನು ತಾನು ಶಾಸಿಸಿ ನಡೆಯನು. ಇಂತಹ ಮನುಜಾಧಮರು ಮತ್ತೆ ಮನುಜರಾಗದೆ, ಪಶುಗಳಾಗಿ ಹುಟ್ಟುವರು.

ಕುಲೀನರಾದರೇನು, ಅಲ್ಲದವರೇನು ; ವಿದ್ವಾಂಸರೇನು, ದಡ್ಡರೇನು; ಧನಿಕರಾದರೇನು, ಬಡವರೇನು ; ಎಲ್ಲರೂ ಕೊನೆಗೆ ಯಮರಾಜನ ಅಂಗಳದಲ್ಲೇ ಕಲೆತು ಶಿಕ್ಷೆಗೊಳಗಾಗಿರುವ ಕಳ್ಳರಂತೆ ನಿಂತಿರುವರು. ಅವರ ಎಲ್ಲ ದೇಹಗಳು ಪಂಚಭೂತಗಳಿಂದ ಬಂದು, ಪಂಚಭೂತಗಳಲ್ಲೇ ಸೇರಿಹೋಗುವವು. ದೇಹರಹಿತ ಜೀವರಿಗೆ ಕುಲ ರೂಪ ವಿದ್ಯಾದಿ ವಿಶೇಷಣಗಳಿಂದ ಆಗುವ ಹೆಚ್ಚಳವಾವುದೂ ಇಲ್ಲ. ಧರಣಿಯಲ್ಲಿ ಬಿದ್ದು ಹಾಳಾಗುವ ದೇಹವೇ ತಾನೆಂಬ ಭ್ರಮೆಯಿಂದ, ಜೀವರು ಅನೋನ್ಯವಂಚನೆಗೈದು ನರಕ ಪಾತ್ರರಾಗುತ್ತಿರುವರು. ಶರೀರವು ಅಧ್ರುವವು; ಅದರಿಂದ ಸಾಧಿತವಾಗುವ ಧರ್ಮವು ಶಾಶ್ವತವು; ಎಂದು ತಿಳಿದು ನರನು ಧರ್ಮವಂತನಾಗಿ ನಡೆದರೆ, ತಪ್ಪದೆ ಪುಣ್ಯಲೋಕವನ್ನು ಪೊಂದಿ ಸುಖಿಸುವನು.

ಸಂಸಾರ ಗಹನವು ದುಸ್ತರವಾಗಿದೆ. ಅದನ್ನು ಶ್ರೀಹರಿಗುರುದಯದಿಂದ ಮಾತ್ರ ದಾಟಬಹುದು. ಪರಮರ್ಷಿಗಳು ಸ್ವಾಧ್ಯಾಯ, ಯಜ್ಞ, ದಾನ, ನಿಗ್ರಹಗಳಿಂದ ಸಂಸಾರ ಮುಕ್ತರಾಗಿ, ಶ್ರೀಹರಿಲೋಕವನ್ನು ಸೇರುವರು. ಸ್ವಯಂಪ್ರಾದುರ್ಭೂತನಾಗುವ ಶ್ರೀಶನಿಗೂ, ಸ್ವತಂತ್ರ ಶ್ರೀಹರಿಯ ಪುತ್ರನಾದ ಚತುರ್ಮುಖನಿಗೂ ನಮಸ್ಕರಿಸಿ, ಸಂಸಾರ ಗಹನವನ್ನು ವರ್ಣಿಸುವೆನು ಕೇಳು !

ಹಿಂದೆ ದ್ವಿಜನೊಬ್ಬನು ಸಂಸಾರ ಗಹನದಲ್ಲಿ ತಿರುಗುತ್ತಾ, ದುರ್ಗಮಾಟವಿಯನ್ನು ಸೇರಿದನು. ಅಲ್ಲಿ ಬಹುಕ್ರೂರ ಮೃಗಗಳಿದ್ದವು. ಮಹಾಭಯಂಕರಾಕಾರದ ಸಿಂಹ, ವ್ಯಾಘ್ರ, ಗಜ, ಭಲ್ಲೂಕ, ವೃಕಾದಿ ಮೃಗಗಳ ವಿವಿಧರಾವಗಳಿಂದ ಆ ಗಹನವು ಪ್ರತಿಧ್ವನಿಸುತ್ತಿತ್ತು. ಮೃತ್ಯುದೇವಿಯೂ ಆ ವನವನ್ನು ಕಂಡು ಹೆದರುವಂತಿತ್ತು. ಅಂತಹ ವನವನ್ನು ಹೊಕ್ಕು, ಸುತ್ತು ನೋಡಿದಾಗ, ವಿಪ್ರನ ಎದೆ ಝಲ್ಲೆಂತು ; ಮೈ ನಡುಗಿತು ; ರೋಮಾಂಚವು ಪುಟ್ಟಿತು. ಭಯದಿಂದ ದಿಕ್ಕೆಟ್ಟು ಓಡುತ್ತಾ, ಸುತ್ತೂ ನೋಡುತ್ತಾ, ವನದಿಂದ ಹೊರಬರುವ

ಮಾರ್ಗವನ್ನು ಹುಡುಕುತ್ತಾ, ಅವನು ತತ್ತರಿಸಿದನು. ಅವನ ಮೈ ಬೆವರಿಟ್ಟಿತು. ಎಷ್ಟು ದೂರ ಹೋದರೂ, ಕ್ರೂರ ಮೃಗಗಳವನನ್ನು ಬೆಂಬತ್ತಿ ಬರುತ್ತಿದ್ದವು.

ಬಳ್ಳಿಗಳು ಹಬ್ಬಿ , ಬಲೆಯಂತಿದ್ದ ಕಂದರವು ತೆರೆದ ಮೃತ್ಯುವದನಂದಂತಿತ್ತು. ಬೆಟ್ಟದ ಬಂಡೆಗಳು ಮುಗಿಲಿಗೆತ್ತಿದ ಮಹಾಸರ್ಪ ಫಣೆಗಳಂತಿದ್ದವು. ಗಿಡಗಳು ಅಂಬರ ಚುಂಬಿಗಳಾಗಿ, ಶಾಖಾಕರಗಳಿಂದ ದಿಗಂತಗಳನ್ನು ವ್ಯಾಪಿಸಿದ್ದವು. ವನಮಧ್ಯದಲ್ಲಿ ಒಂದು ಬಾವಿ, ಅದರ ಸುತ್ತ ತೃಣಜಾಲ; ತೃಣಪರ್ಣಗಳಿಂದ ಮುಚ್ಚಲ್ಪಟ್ಟು, ಕಾಣಬರದಿದ್ದ ಕೂಪದಲ್ಲಿ ವನಚಾರಿ ವಿಪ್ರನು ಬಿದ್ದು, ಒದ್ದಾಡಿದನು. ಊರ್ಧ್ವಪಾದನೂ, ಅಧೋಮುಖನೂ ಆಗಿ ಬಾವಿಗೆ ಬಿದ್ದ ದ್ವಿಜನು, ಲತಾಪರ್ಣಗಳ ಜಾಲದಲ್ಲಿ ಸಿಕ್ಕಿಬಿದ್ದು ಜೋತಾಡಿದನು. ಪನಸವೃಕ್ಷದಿಂದ ಜೋತುಬಿದ್ದಿರುವ ಫಲದಂತೆ ಬಿಡಿಸಿಕೊಳ್ಳಲಾರದೆ, ಅಲ್ಲೇ ಅಲ್ಲಾಡುವ ದ್ವಿಜನಿಗೆ ಮಹಾಸರ್ಪವು ಗೋಚರವಾಯಿತು. ಅದರಿಂದ ತಪ್ಪಿಸಿಕೊಳ್ಳಲು ಸೆಣಸಿ, ಕೂಪಮುಖವನ್ನು ಸೇರ ಸರಿದ ಜೀವನಿಗೆ ಮಹಾಗಜದ ಘೀಂಕಾರವು ಕೇಳಬಂತು. ಗಜರಾಜನ ಆರುಮುಖಗಳನ್ನು, ಕಪ್ಪುಮೈಯನ್ನು, ಹನ್ನೆರಡು ಪಾದಗಳನ್ನು ನೋಡಿ ಅವನ ಮೈಗಡಗಡ ನಡುಗಿತು. ಕಣ್ಣಿಗೆ ಕತ್ತಲು ಕವಿಯಿತು. ಮೆಲ್ಲನೆ ಸರಿದು ಸಮೀಪಿಸುವ ಮಹಾಗಜದಿಂದ ದೂರವಾಗಲೆಣಿಸಿ, ಅತ್ತ ಹಬ್ಬಿದ ಲತೆಗಳನ್ನು ಪಿಡಿದು, ಏರಿಬರುವ ದ್ವಿಜನನ್ನು, ಲತೆಗಳ ಕೊನೆಯಲ್ಲಿ ಗೂಡುಕಟ್ಟಿದ ಜೇನುದುಂಬಿಗಳು, ಕಡಿದು ಪೀಡಿಸಿದವು. ಗೂಡಿನಿಂದ ಜಾರಿಕಾರುವ ಜೇನು ಅವನನ್ನಾಕರ್ಷಿಸಿತು. ಗಜ ಸರ್ಪ ಮಧುಕರಗಳನ್ನೂ, ಅವು ನೀಡುತ್ತಿರುವ ಪೀಡೆಯನ್ನೂ ಮರೆತು, ದ್ವಿಜನು ಮಧು ಲೋಭದಿಂದ ನಾಲಿಗೆ ಚಾಚಿ, ಮಧುಬಿಂದುಗಳನ್ನು ಕುಡಿಯುತ್ತಾ, ತೃಪ್ತನಾಗದೆ, ದ್ವಿಜನು ತನ್ನ ಸುತ್ತಲು ನಿಂತು, ನೆತ್ತಿಯಲ್ಲಿ ನೃತ್ಯವಾಡುವ ಮೃತ್ಯುವಿನನ್ನು ಕಾಣದಾದನು. ಸಾಕೀ ಹೊಲಸು ಜೀವಿತವೆಂಬ ನಿರ್ವೇದವವನಿಗೆ ಪುಟ್ಟದಾಯಿತು. ಅವನು ನಂಬಿ ಪಿಡಿದಿದ್ದ ಬಳ್ಳಿಗಳ ಬುಡಗಳನ್ನು ಮೂಷಿಕಗಳು ಮುನ್ನೂರರವತ್ತು ಕಡಿದು, ಕಡಿದು ಹಾಕುತ್ತಿದ್ದವು. ಅಷ್ಟೇ ಬಿಳಿ ಇಲಿಗಳೂ ಕಪ್ಪು ಮೂಷಿಕಗಳಿಗೆ ಜೋಡಾಗಿದ್ದವು.

ವನದುರ್ಗಾಂತರದಲ್ಲಿ, ಪರಮಭಯಂಕರಳಾದ ಕೃಷ್ಣರಮಣಿಯನ್ನು ಕಂಡು ಹೆದರಿ, ಕೂಪದಿ ಬಿದ್ದ ದ್ವಿಜನ ಜೀವಿತಾಶೆಯಂತೆ, ಲತೆಗಳು ಒಂದೊಂದಾಗಿ ಕಡಿದು ಬಿದ್ದವು. ಕೂಪದ ಬುಡದ ಮಹಾಸರ್ಪವನ್ನೂ, ಕೂಪಮುಖದಿ ಕಾದಿದ್ದ ಮಹಾಗಜವನ್ನೂ, ಪ್ರಪಾತದ ಅಗಾಧತಲವನ್ನೂ, ಪಿಡಿದ ಬಳ್ಳಿಗಳನ್ನು ಕಡಿವ ಇಲಿಗಳನ್ನೂ ಕೂಗಾಡುವ ಕ್ರೂರಮೃಗಗಳನ್ನೂ, ಕಡಿವ ಮಧುಕರಗಳನ್ನೂ, ಕಂಡು ಮನುಜನು ಸಾಯುವ ಭಯದಿಂದ ನಡುಗುತ್ತಿದ್ದರೂ, ಮಧುಬಿಂದುಗಳನ್ನು ಹೀರುವ ತೃಷ್ಣೆಯಿಂದ, ವಿರಕ್ತನಾಗದೆ, ಆಶಾಲತೆಯನ್ನವಲಂಬಿಸಿ, ಜೋತಾಡುತ್ತಿದ್ದನು.

ಮಹಾರಾಜ! ಮೋಕ್ಷವಿದರು ನುಡಿದ ಆಧ್ಯಾತ್ಮಿಕ ಕಥೆಯನ್ನು ನನ್ನ ಮತಿಗೆ ತೋರಿದಷ್ಟು ನಿನಗಾಗಿ ವರ್ಣಿಸಿದೆನು. ಇದು ದ್ವಿಜಮಾತ್ರನ ಕಥೆಯಲ್ಲ; ನಮ್ಮೆಲ್ಲರ ಕಥೆಯು ಆಗಿದೆ. ಇದರ ತತ್ವವನ್ನರಿತು, ನಡೆದ ಧೀರನು ಮುಕ್ತನಾಗುವನು. ಅದರ ಅರ್ಥವನ್ನರುಹುವೆನು ಕೇಳು!

ವನವೆಂದರೆ ಸಂಸಾರವು; ಕ್ರೂರಮೃಗಗಳೇ ವ್ಯಾಧಿಗಳು; ಕೃಷ್ಣರಮಣಿಯೇ ಜರೆಯು. ಅವಳ ಅಪ್ಪುಗೆಯೇ ಮುಪ್ಪು; ಅವಳು ಮನುಜರನ್ನು ವರಿಸಿ, ಅವನ ರೂಪವರ್ಣಗಳನ್ನು ಕೆಡಿಸುವಳು. ಕೂಪವೇ ದೇಹವು. ಸರ್ಪವೇ ಕಾಲವು; ಸರ್ವ ಭೂತಾಂತಕನಾದ ಕಾಲಸರ್ಪದಿಂದ ದೂರಾಗಲೆಣಿಸಿ, ಹಿಡಿಯುವ ಬಳ್ಳಿಗಳೇ ಮನುಜನ ಜೀವಿತಾಶೆ; ಕುಂಜರವೇ ಸಂವತ್ಸರವು; ಮುಖಷಟ್ಕವೇ ಋತುಗಳು; ದ್ವಾದಶ ಪಾದಗಳೇ ಮಾಸಗಳು. ವತ್ಸರಗಜವು ಮೆಲ್ಲನೆ ಬಂದು ಆಯುಃಖಂಡಗಳನ್ನು ತುಂಡರಿಸುವುದು. ಲತಾವೃಕ್ಷಮೂಲಗಳನ್ನು ಕಡಿವ ಮೂಷಿಕಗಳಂತೆ ದಿವಾರಾತ್ರಗಳು. ದುಂಬಿಗಳೇ ಕಾಮ; ಮಧುಬಿಂದುಗಳೇ ವಿಷಯ ಸುಖಗಳು; ಬಿಂದುಮಾತ್ರ ಸುಖವಿದ್ದು ಸಮುದ್ರಮಾತ್ರ ದುಃಖವಿರುವ ಸಂಸಾರಗಹನವನ್ನರಿತು, ಹೇಯವೆಂದು ವರ್ಣಿಸಿ, ಅತ್ಯಂತೋಪಾದೇಯವಾದ ಶ್ರೀಹರಿ ಚರಣಾರವಿಂದವನ್ನು ಭಜಿಸಿದ ನರನು ಸಕಲಾನಿಷ್ಟಗಳನ್ನು ಕಳೆದುಕೊಂಡು, ಸರ್ವಾಭೀಷ್ಟ ಸಿದ್ಧಿಯನ್ನು ಪೊಂದುವನು.

ಪಥಿಕನು ದೀರ್ಘ ಮಾರ್ಗವನ್ನು ಕ್ರಮಿಸಿ ಪೋಗುವಾಗ, ಅಲ್ಲಲ್ಲಿ ನಿಂತು, ವಿಶ್ರಮಿಸಿ ಪೋಗುವಂತೆ, ಜನರು ಗರ್ಭವಾಸದಲ್ಲಿದ್ದು ಮತ್ತೆ ಪುಟ್ಟಿ ಮುಂದೆ ಸಾಗುವರು. ಬುದ್ಧಿವಂತನು ಗರ್ಭವಾಸವನ್ನೂ ಅದರ ಬೆಂಬಿಡದೆ ಬರುವ ಮೃತ್ಯುವನ್ನೂ ದಾಟಿ, ಭಕ್ತಿಪಾಥೇಯನಾಗಿ, ಬೇಗ ನಡೆದು, ವೈಕುಂಠವೆಂಬ ಗಮ್ಯಸ್ಥಾನವನ್ನು ಸೇರುವನು. ಸಂಸಾರದ ಅಸಾರತೆಯನ್ನರಿತು, ಇದ್ದೂ ಇರದಂತೆ, ನಿರ್ಲಿಪ್ತನಾದವನೇ ಪಂಡಿತನು; ಹುಟ್ಟುತ್ತಾ ಸಾಯುತ್ತಾ ಇರುವವನೇ ಮೂರ್ಖನು. ಕ್ರೂರಮೃಗಗಳಂತೆ ಪೀಡಿಸುವ ಅಧಿವ್ಯಾಧಿಗಳಿಗೆ ಸಿಕ್ಕು ನರನು ನರಳುತ್ತಾ ಸಾಯುವನು; ಸಾಯದೆ ಉಳಿದರೂ ಜರೆಯು ಅವನನ್ನು ಬಗ್ಗು ಬಡಿಯುವುದು. ಜರೆಯಿಂದ ಶಿಥಿಲಗಾತ್ರನಾಗಿ, ಕೊನೆಗೆ ಮೃತ್ಯುವಿಗೆ ತುತ್ತಾಗದೆ ಇರಲಾಗದು. ಆದುದರಿಂದ ಮೃತ್ಯುಪಾಶವಿಶಾತನಿಯಾದ ಜ್ಞಾನಖಡ್ಗವನ್ನು ಪಿಡಿದು, ವೈರಾಗ್ಯವೆಂಬ ಗುರಾಣಿಯಿಂದ ಶತ್ರುಷಟ್ಕದ ವಿಷಯ ಬಾಣಗಳಿಗೆ ಸಿಗದಂತೆ ಕಡಿದಾಡಿ, ಸಾಹಸ ಧೈರ್ಯಗಳಿಂದ ಭಕ್ತಿಮಾರ್ಗದಲ್ಲಿ ನಡೆದು ಪೋಗಬೇಕು. ಸಂವತ್ಸರ, ಋತು, ಮಾಸ, ಪಕ್ಷ, ದಿನ, ಘಟಿಕೆಗಳಿಂದ ಆಯುವು ಕ್ಷಯವಾಗುತ್ತಿರುವುದನ್ನರಿತು, ಶ್ರೀಹರಿಪ್ರಸಾದ ಸಂಪಾದನೆಯಲ್ಲಿ ಜಾಗ್ರತನಾಗಿರಬೇಕು.

ಕರ್ಮವಶವಾಗಿ ಬಂದ ಶರೀರವೇ ರಥವು; ಬುದ್ಧಿಯೇ ಸಾರಥಿಯು; ಇಂದ್ರಿಯಗಳೇ ಕುದುರೆಗಳು; ಮನಸ್ಸೇ ಕಡಿವಾಣ; ಕರ್ಮದ್ವಯವೇ ಚಕ್ರಗಳು; ಶಾಸ್ತ್ರವಿಹಿತ ಸನ್ಮಾರ್ಗದಲ್ಲಿ ನಡೆದ ಜೀವರಥಿಕನು ಶ್ರೀಹರಿಲೋಕವನ್ನೂ ದುರ್ಮಾರ್ಗಗಾಮಿಯು ನರಕಗರ್ತವನ್ನೂ ಸೇರುವರು. ಕುದುರೆಗಳಂತೆ ಓಡಿದವನು ಸತ್ತು ಹುಟ್ಟುವನು. ಕುದುರೆಗಳನ್ನು ನಿಯಮಿಸಿ, ತನ್ನಂತೆ ನಡೆಯಿಸಿದವನು ಸಾಯದೆ, ಹುಟ್ಟದೆ, ಮುಕ್ತನಾಗುವನು.

ಧೃತರಾಷ್ಟ್ರ ! ನಿನ್ನ ಇಂದ್ರಿಯಗಳಿಗೆ ನೀನು ದಾಸನಾಗಿ ಮಹಾನರ್ಥವನ್ನು ಹೊಂದಿದೆ! ರಾಜ್ಯನಾಶ, ಮಿತ್ರನಾಶ, ಸುತಬಂಧು ನಾಶಗಳಾದುವೆಂದರೆ, ಅದು ನಿನ್ನ

ಲೋಭ ಮೋಹಗಳಿಂದ ! ಇಂದ್ರಿಯ ಜಯದಲ್ಲಿ ಉದಾಸೀನನಾಗಿ ಕೆಟ್ಟೆ ! ಯತೇಂದ್ರಿಯನಿಗೆ ಕ್ರೋಧ ಲೋಭಗಳ ಉಪಟಳವಿಲ್ಲ. ಅವನು ಸಂತುಷ್ಟನಾಗುವನು. ಸಂತುಷ್ಟನಿಗೆ ಶಾಂತಿ ಸಿಗುವುದು ! ನಿನ್ನನ್ನು ಅಧಿಕ್ಷೇಪಿಸಲೆಂದು ಆಡಿದ್ದಲ್ಲ! ಅನುತಾಪದಿಂದ ಹೇಳಿದ ಮಾತಿದು. ಪರಮಾತ್ಮನ ಇಚ್ಛೆಯಂತೆ ಬಂದು ದುಃಖಗಳಿಗೆ ಕುಗ್ಗದೆ, ಧೀರನು ಬುದ್ಧಿಬಲದಿಂದ ಮೇಲೆದ್ದು ಜ್ಞಾನೌಷಧವನ್ನು ಸೇವಿಸಿ, ದುಃಖರೋಗವನ್ನು ಜಯಿಸುವನು.

ವಿಕ್ರಮದಿಂದ ದುಃಖವನ್ನು ಗೆಲ್ಲಲಾರೆ ! ಮಿತ್ರ ಬಂಧುಗಳು ನಿನ್ನ ದುಃಖವನ್ನು ಹರಿಸಲಾರರು. ಅರ್ಥವನ್ನು ವೆಚ್ಚಿಸಿ ದುಃಖವನ್ನು ದೂರಮಾಡಲಾಗದು. ಕೇವಲ ಬುದ್ಧಿಬಲದಿಂದಲು, ಜ್ಞಾನದಿಂದಲು ದುಃಖವನ್ನು ಕಳೆಯಬಹುದಾಗಿದೆ. ಎಲ್ಲರಲ್ಲಿಯು ದಯೆದೋರು ! ಮೈತ್ರಿಯನ್ನು ಪಾಲಿಸು ! ಪರಮಾತ್ಮನು ದಯಪಾಲಿಸಿರುವ ಮನುಜದೇಹವೆಂಬ ರಥವು ಬಂದಿದೆ ! ಅದಕ್ಕೆ ಸತ್ಯ, ದಮ, ತ್ಯಾಗ, ಮನಃಪ್ರಸಾದವೆಂಬ ನಾಲ್ಕು ಕುದುರೆಗಳನ್ನು ಕಟ್ಟು ! ಬುದ್ಧಿಯನ್ನು ಸಾರಥಿಯಾಗಿಡು ! ಮನಸ್ಸೆಂಬ ಕಡಿವಾಣವನ್ನು ಬಿಗಿ ಹಿಡಿ ! ಆಗ ನೀನು ಮೃತ್ಯುಭಯದಿಂದ ಮುಕ್ತನಾಗಿ, ಬ್ರಹ್ಮಲೋಕವನ್ನು ಸೇರುವೆ ! ಈಗ ನಿರರ್ಥಕ ಶೋಕವನ್ನು ತ್ಯಜಿಸಿ ಪುತ್ರ ಬಂಧು ಮಿತ್ರಾದಿಗಳಿಗೆ ತಿಲೋದಕಗಳನ್ನರ್ಪಿಸು !'

ಆ ಮಾತನ್ನಾಲಿಸಿ, ಪುತ್ರಶೋಕ ಸಂತಪ್ತನಾದ ಧೃತರಾಷ್ಟ್ರನು ಮೂರ್ಛಿತನಾದನು. ಅವನು ಬಿದ್ದಿರಲು ನೋಡಿ ಬಂಧುಗಳು, ಸ್ತ್ರೀಜನರು, ಪರಿವಾರದವರು ರೋದಿಸತೊಡಗಿದರು. ಸ್ತ್ರೀಜನರು ಶೀತಲೋಪಚಾರಗಳನ್ನು ಮಾಡಿ, ಮೈಸವರಿ ವ್ಯಜನಗಳಿಂದ ಬೀಸಿದರು. ಬಹಳ ಹೊತ್ತಿಗೆ ಎಚ್ಚತ್ತು ಧೃತರಾಷ್ಟ್ರನು ಅಳತೊಡಗಿದನು. 'ಮಾನುಷ ಜನ್ಮಕ್ಕೆ ಧಿಕ್ಕಾರವಿರಲಿ ! ಇಲ್ಲಿದ್ದಂತೆ ಇನ್ನಾವ ಜನ್ಮದಲ್ಲಿಯೂ ಅಭಿಮಾನ ವಿಶೇಷವಿಲ್ಲ. ಪುತ್ರದಾರ ಮಿತ್ರಾದಿಗಳಿಂದ ಜೀವಿಸಿ, ಅವರು ಅಗಲಿ ಹೋದಾಗ ದುಃಖವನ್ನು ಪಡಬೇಕಾಗಿ, ಮರುಗುವ ಮನುಜರಿಗೆ ಧಿಕ್ಕಾರವಿರಲಿ ! ಪುತ್ರ ಮಿತ್ರ ಬಂಧುನಾಶಗಳು ವಿಷಾಗ್ನಿ ಸದೃಶಗಳಾಗಿ ನೋಯಿಸುತ್ತಿವೆ. ಮೈಯೆಲ್ಲ ಉರಿದಂತಿದೆ ! ಬುದ್ಧಿಗೆ ಮಂಕು ಕವಿದಿದೆ. ಸತ್ತರೆ ಸಾಕು ! ಎನ್ನಿಸುತ್ತಿದೆ ! ಮಂದಭಾಗ್ಯನಾದ ನನಗೆ ಇಂತಹ ಮಹಾವ್ಯಸನವು ಪ್ರಾಪ್ತವಾಯಿತು. ಪ್ರಾಣತ್ಯಾಗದ ಹೊರತಿನ್ನಾವುದೂ ದುಃಖಾಂತವೆನಗಿಲ್ಲ' ಇಂತು ನುಡಿದು ಶೋಕಧ್ಯಾನಪರನಾಗಿ, ಸುಮ್ಮನೆ ಕೂತ ಧೃತರಾಷ್ಟ್ರನನ್ನು ನೋಡಿ, ಅವನ ವರಜನಕನಾದ ಶ್ರೀಕೃಷ್ಣದ್ವೈಪಾಯನನು, ಸಮಾಧಾನ ವಚನಗಳಿಂದಿಂತೆಂದನು :

'ಧೃತರಾಷ್ಟ್ರ ! ಕೇಳೆನ್ನ ಮಾತನ್ನು ! ಧರ್ಮಾರ್ಥಶಾಸ್ತ್ರಗಳನ್ನು ಕೇಳಿ, ತಿಳಿದಿರುವೆ ! ತಿಳಿಯಬೇಕಾದುದನ್ನೆಲ್ಲ ತಿಳಿದ ಜಾಣನಿಗೆ, 'ಮರ್ತ್ಯರೆಂದಾದರೂ ಯಾವುದೋ ಒಂದು ವಿಧವಾಗಿ, ಸಾಯಬೇಕಾಗುವು' ದೆಂದು ಮತ್ತೆ ಹೇಳಬೇಕಿಲ್ಲ. ಜೀವನ ಶರೀರಗಳು ಅಧ್ರುವಗಳು ! ಜನನ ಮರಣಗಳು ಅನಿವಾರ್ಯಗಳು. ನಿನ್ನ ಮಗನ ನೆವದಿಂದ

ಕಾಲನಾಮಕ ಪರಮಾತ್ಮನು ಭಾರತರಣದಲ್ಲಿ ಸರ್ವರಾಜಾದಿಗಳನ್ನು ಸಂಹರಿಸಿ, ಭೂಭಾರವನ್ನಿಳಿಸಿದನು. ಅವಶ್ಯಂಭಾವಿಯಾದ ಭಾರತ ಯುದ್ಧದಲ್ಲಿ ಸತ್ತು, ಉತ್ತಮಗತಿಯನ್ನು ಹೊಂದಿರುವ ವೀರರಿಗಾಗಿ ಏಕೆ ಶೋಕಿಸುವೆ ? ಶಾಂತಿಯನ್ನು ಸಾಧಿಸಲು ನಾನು, ವಿದುರ ಮುಂತಾದವರು ಪ್ರಯತ್ನಿಸಿದೆವು; ಆದರೆ ದೈವಯೋಗದಿಂದ ರಣವೇ ನಿಶ್ಚಿತವಾಯಿತು. ದೈವದೆದುರು ಪುರುಷಕಾರವು ನಡೆಯಲಾರದು. ದೇವತೆಗಳ ಸಭೆಯಲ್ಲಿ ನಡೆದ ವೃತ್ತಾಂತವನ್ನು ನಿನ್ನ ಪುತ್ರಶೋಕವನ್ನು ಕಳೆಯಲೋಸುಗ ನಿನಗೆ ನಿರೂಪಿಸುವೆನು.

ಒಂದು ದಿನ, ಇಂದ್ರಸಭೆಯಲ್ಲಿ ದೇವತೆಗಳೆಲ್ಲ ನೆರೆದಿದ್ದರು. ನಾರದಾದಿ ಋಷಿವರರೂ ಬಂದಿದ್ದರು. ಆಗ ಪೃಥ್ವೀದೇವಿಯು ಬಂದು 'ದೇವತೆಗಳಿರಾ! ಬ್ರಹ್ಮ ಸದನದಲ್ಲಿ ನನಗೆ ಮಾತಿತ್ತಂತೆ, ನೀವು ಭೂಭಾರಹರಣ ಕಾರ್ಯದಲ್ಲಿ ಬೇಗನೆ ನಿರತರಾಗಿರಿ ! ಭೂಮಿಯಲ್ಲವತರಿಸಿ, ಅಲ್ಲಿ ಪುಟ್ಟಿರುವ ದುಷ್ಟ ರಾಜಾದಿಗಳನ್ನು ಸಂಹರಿಸಿರಿ!' ಎಂದು ಪ್ರಾರ್ಥಿಸಿದಳು. ಆಗ ಲೋಕನಮಸ್ಕೃತನಾದ ಶ್ರೀವಿಷ್ಣುವು ನಗುತ್ತಾ ಪೃಥ್ವಿಗಿಂತೆಂದನು. 'ಧೃತರಾಷ್ಟ್ರನ ನೂರು ಜನ ಸುತರಲ್ಲಿ, ದೊಡ್ಡವನಾದ ದುರ್ಯೋಧನನ ನೆವದಿಂದ ನಿನ್ನ ಕಾರ್ಯವಾಗುವುದು. ಆ ದುಷ್ಟಶ್ರೇಷ್ಠನಿಂದ ಆಹೂತರಾಗಿ, ಕುರುಕ್ಷೇತ್ರದಿ ಬಂದು ನಿಂತು, ಕಡಿದಾಡುವ ವೀರರು, ಪರಸ್ಪರ ವಧೆಯನ್ನು ಸಾಧಿಸುವರು. ನಿನ್ನ ಭಾರವು ಇಳಿಯುವುದು.

ದುರ್ಯೋಧನನು ಲೋಕನಾಶಕಾರಣನಾಗಿ ಜನಿಸಿರುವನು. ಅವನು ದುಷ್ಟತಮನಾದ ಕಲಿಯ ಅಂಶದಿಂದ ಗಾಂಧಾರಿಯಲ್ಲಿ ಜನಿಸಿದನು. ರೋಷಪೂರ್ಣನು, ಚಪಲನು, ಕ್ರೋಧನು, ದುಷ್ಟಮಿತ್ರನು ಆದ ದುರ್ಯೋಧನನಿಂದ ಇಷ್ಟು ಅನರ್ಥವಾಯಿತು. ದೈವಯೋಗದಿಂದ ಅವನಿಗೆ ಅಂತಹ ದುಷ್ಟರೇ ಸೋದರ ಮಿತ್ರ ಬಂಧುಗಳಾಗಿ ಪುಟ್ಟಿದರು. ಶಕುನಿಯು ದ್ವಾಪರದೈತ್ಯನು, ಕರ್ಣನು ಸಹಸ್ರವರ್ಮ ದೈತ್ಯಾವೇಶಯುಕ್ತನು, ಎಂತಹ ರಾಜನೋ, ಅಂತಹ ಪ್ರಜರಾಗುವರು. ಧಾರ್ಮಿಕ ರಾಜನಾದರೆ, ಅಧಾರ್ಮಿಕರು ಹೆದರಿ, ಧರ್ಮದಿಂದ ನಡೆಯುವರು. ಅಧಾರ್ಮಿಕ ರಾಜನಾದರೆ, ಧರ್ಮವಂತರು ಬದುಕಲಾರದೆ ಸಾಯುವರು. ಸ್ವಾಮಿಯ ಗುಣದೋಷಗಳು, ಭೃತ್ಯರಿಗೂ ಉಂಟಾಗುವವು. ದುಷ್ಟರಾಜನಾದ ನಿನ್ನ ಮಗನನ್ನು ಅನುಸರಿಸಿ, ನಿನ್ನ ಪುತ್ರರೆಲ್ಲರೂ ನಷ್ಟರಾದರು.

ಈ ವಿಷಯವನ್ನರಿತ ನಾರದರು ಮೊದಲೇ, ರಾಜಸೂಯಯಾಗವನ್ನು ಮಾಡಲಿರುವ ಧರ್ಮಜನ ಸಭೆಯಲ್ಲಿ ಭೂಭಾರಹರಣ ಕಾರಣವಾದ ಮಹಾರಣವು ಜರುಗುವುದೆಂದು ಪ್ರಕಟಿಸಿದ್ದನು. ನಿನ್ನ ಪುತ್ರರನ್ನು ಅವರು ಮಾಡಿದ ದುಷ್ಟಕಾರ್ಯಗಳೇ ಕೊಂದಿರುವವು; ಪಾಂಡವರಲ್ಲ! ಪಾಂಡವರೆಂದಿಗೂ ನಿನಗೆ ಸ್ವಲ್ಪವಾದರೂ ದ್ರೋಹ ಬಗೆದಿಲ್ಲ. ದೇವಗುಹ್ಯವನ್ನು ನಿನಗರುಹಿದೆನು. ಶೋಕಿಸುವ ಕಾರಣವೇ ಇಲ್ಲ. ಶೋಕಿಸಿ ಪ್ರಯೋಜನವೂ ಇಲ್ಲ. ಪ್ರಾಣತ್ಯಾಗವನ್ನು ಮಾಡಲು, ಯಾರೂ ಸ್ವತಂತ್ರರಲ್ಲ.

ದೈವೀದುರ್ವಿಪಾಕವೆಂದು ತಿಳಿದು, ಪಾಂಡವರಲ್ಲಿ ಸಿಟ್ಟಾಗಬೇಡ! ಅವರೂ ನಿನ್ನ ಮಕ್ಕಳೇ! ಸತ್ಪುತ್ರರಲ್ಲಿ ಸ್ನೇಹವನ್ನು ಬೆಳೆಸು! ಇದೇ ವೃತ್ತಾಂತವನ್ನು ನಾನು ಧರ್ಮಜನಿಗೆ ಹೇಳಿದೆನು. ಅವನು ಸಂಧಿಗಾಗಿ ಬಹುವಿಧದಿಂದ ಪ್ರಯತ್ನಿಸಿದನು. ವಿಧಿಯು ಅನತಿಕ್ರಮಣೀಯವಾಗಿರಲು ಯಾರೇನು ಮಾಡುವದು? ಎಲ್ಲರೂ ಎಂದಾದರೂ ಯಮಮಂದಿರವನ್ನು ಸೇರಲೇ ಬೇಕು.

ನೀನು ಧರ್ಮವನ್ನರಿತಿರುವೆ. ಬುದ್ಧಿವಂತನಿರುವೆ. ಪ್ರಾಣಿಗಳ ಜನನ ಮರಣಗಳು ಮುಕ್ತಿಪರ್ಯಂತರವೂ ತಪ್ಪವೆಂದು ತಿಳಿದೂ, ಶೋಕಿಸುವುದು ತರವಲ್ಲ. ಧರ್ಮರಾಜನು ನಿನ್ನ ಪ್ರಾಣತ್ಯಾಗ ನಿಶ್ಚಯವನ್ನು ಕೇಳಿದನೆಂದರೆ ತಾನೇ ಮೊದಲು ಪ್ರಾಣತ್ಯಾಗ ಮಾಡಿಬಿಡುವನು. ಅವನಂತಹ ದಯಾಳುಗಳಿಲ್ಲ. ಪಶುಪಕ್ಷಿ ಕೀಟಗಳಲ್ಲಿಯೂ ದಯ ದೋರುವ ಧರ್ಮಜನು ನಿನ್ನಲ್ಲಿ ದಯದೋರದಿರುವನೇ? ವಿಧಿಯು ಬಲೀಯವೆಂದು ತಿಳಿ! ಪಾಂಡವರಲ್ಲಿ ಕರುಣೆ ಬೀರು! ನನ್ನ ವಚನವನ್ನು ಮನ್ನಿಸಿ. ಆತ್ಮಹತ್ಯೆಗೆ ಸಿದ್ಧನಾಗಬೇಡ! ಪಾಂಡವರಿಂದ ರಕ್ಷಿತನಾಗಿ ಬಾಳು. ಹಾಗಾದರೆ ನಿನ್ನ ಕೀರ್ತಿಯು ಲೋಕದಲ್ಲಿ ನಿಲ್ಲುವದು. ನಿನಗೆ ಮಹಾಧರ್ಮಫಲವೂ ಲಭಿಸುವುದು. ಪುತ್ರಶೋಕವು ಅಗ್ನಿಯಂತೆ ದುಃಸಹವಾಗಿದೆ ನಿಜ. ಆದರೆ ಅದನ್ನು ಪ್ರಜಾಬಲದಿಂದ ಆರಿಸಿ ಶಾಂತನಾಗು.'

ಧೃತರಾಷ್ಟ್ರನು ವ್ಯಾಸವಚನಗಳನ್ನಾಲಿಸಿ, ಸ್ವಲ್ಪ ಸುಮ್ಮನಿದ್ದು ನಿಡುಸುಯ್ದು "ತಂದೇ, ಮಹಾ ಶೋಕಾಗ್ನಿಯಿಂದ ಬೆಂದ ನನ್ನ ಬುದ್ಧಿಯೇ ಕೆಟ್ಟಿದೆ, ನೀನು ನುಡಿದ ವಚನಗಳಿಂದ ದೈವನಿಯೋಗವೇ ಹೀಗಿತ್ತೆಂದು ತಿಳಿದು ನಾನು ಪ್ರಾಣಗಳನ್ನು ಧರಿಸಿರುವೆನು. ಶೋಕವನ್ನು ಹತ್ತಿಕ್ಕಲು ಪ್ರಯತ್ನಿಸುವೆನು." ಎಂದನು. ಶ್ರೀವ್ಯಾಸದೇವನು ಅವನನ್ನು ಸಂತೈಸಿ, ಅಂತರ್ಹಿತನಾದನು.

## ೩. ಧೃತರಾಷ್ಟ್ರ ಕೋಪಶಮನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: "ರಾಜನ್! ದುರ್ಯೋಧನನು ಸಸೈನ್ಯನಾಗಿ ನಿಹತನಾದುದನ್ನು ಕಂಡು, ದುಃಖಾವಿಲನಾದ ಸಂಜಯನು ಧೃತರಾಷ್ಟ್ರನನ್ನು ಸೇರಿ, ಇಂತೆಂದನು - ಮಹಾರಾಜ! ನಾನಾ ದೇಶದ ರಾಜರು ಮೃತರಾದರು. ನಿನ್ನ ಸುತರೆಲ್ಲರೂ ಸತ್ತರು. ವೈರವಹ್ನಿಯು ಉರಿದೆದ್ದು ಕುರುಕ್ಷೇತ್ರದಿ ನೆರೆದಿದ್ದ ಸರ್ವವೀರಕಕ್ಷವನ್ನು ನಿಶ್ಶೇಷವಾಗಿ ಸುಟ್ಟು ತಾನೂ ಕೊನೆಗೊಂಡಿತು. ನಿನ್ನ ಮಗನು ಪಾಂಡವರಿಗೆ ಯಾಚಿಸಿದ ಗ್ರಾಮಗಳನ್ನಾದರೂ ಕೊಡದುದರಿಂದ ಇಷ್ಟು ಕುಲನಾಶವಾಯಿತು. ಪುತ್ರಪೌತ್ರರಿಗೂ, ನಿನ್ನ ಪಿತೃಗಳಿಗೂ ತಿಲಾಂಜಲಿಯನ್ನು ಕೊಟ್ಟು, ಪ್ರೇತಕಾರ್ಯಗಳನ್ನು ನಡೆಸು." ಆ ವಚನ ವಜ್ರಾಘಾತದಿಂದ ಧೃತರಾಷ್ಟ್ರನು ಸತ್ತವನಂತೆ ಕೆಳಗೆ ಬಿದ್ದನು. ಮತ್ತೆ ಎಚ್ಚತ್ತು ಅಳುವ ರಾಜನಿಗೆ ವಿದುರನು ಇಂತೆಂದನು:

"ಭರತರ್ಷಭ ! ಅಳಬೇಡ ! ಏಳೇಳು ! ಎಲ್ಲ ಭೂತಗಳೂ ಸಾಯುವವೇ! ಪ್ರಕೃತಿಯಿಂದ ಪುಟ್ಟಿ ಬಂದು, ಬೆಳೆದು, ಪ್ರಕೃತಿಯಲ್ಲೇ ಸೇರಿ ಪೋಗುವ ಶರೀರಗಳಿಗೇಕೆ ಶೋಕ ? ಅತ್ತು ಸತ್ತವರಿಲ್ಲ, ದುಃಖಿಸಿ ಬದುಕಿಸಿಕೊಂಡವರಿಲ್ಲ, ಕಾಲವನ್ನು ಯಾರೂ ದಾಟಲಾರರು, ಕಾಲಕ್ಕೆ ಪ್ರಿಯರಾಗಿ ಉಳಿದವರಿಲ್ಲ, ಕಾಲಕ್ಕೆ ಅಪ್ರಿಯರೆಂಬ ಹಗೆ ಇಲ್ಲ, ಕಾಲದಿಂದ ಕರ್ಷಿತರಾಗಿ ಭೂತಗಳು ಕಾಲಕರ್ಮ ಸಂಯೋಗದಿಂದ ಆಯುವು ಮುಗಿದಾಗ, ಸಾಯುವರು. ಅವರಿಗಾಗಿ ಶೋಕಿಸಬಾರದು. ನಿನ್ನ ಬುದ್ಧಿ ಬಲದಿಂದ ನಿನ್ನನ್ನು ನೀನೇ ಸಮಾಧಾನಪಡಿಸಿಕೊಂಡು, ಮುಂದಿನ ಪ್ರೇತಕಾರ್ಯಗಳನ್ನು ಮಾಡು !"

ಧೃತರಾಷ್ಟ್ರನು, 'ವಿದುರ ! ಹಾಗೇ ಮಾಡುವೆನು ಗಾಂಧಾರಿಯನ್ನು ಕರೆಸು ! ಎಲ್ಲ ಭಾರತ ನಾರಿಯರು ನನ್ನ ಸೊಸೆಯರು ಬರಲಿ ! ಕುಂತಿಯನ್ನೂ ಕರೆದುಕೊಂಡು, ರಣರಂಗಕ್ಕೆ ಹೋಗೋಣ !' ಎಂದನು. ಎಲ್ಲರೂ ರಥಗಳನ್ನೇರಿ, ರಣರಂಗದ ಕಡೆ ಹೊರಟರು. ಗಾಂಧಾರೀ ಪ್ರಮುಖ ನಾರಿಯರ ಆರ್ತನಾದಗಳಿಂದ ಅಂಬರವು ತುಂಬಿತು. ಅವರ ದುಃಖವನ್ನು ಕಂಡು, ವಿದುರನು, ತಾನೂ ದುಃಖಿತನಾದನು. ಆದರೂ ಅವನು ಧೀರನಾದುದರಿಂದ ದುಃಖೋದ್ವೇಗವನ್ನು ತಡೆದು, ಅವರನ್ನು ಸಮಾಧಾನಪಡಿಸಿದನು. ಶಿಬಿಕೆಗಳಲ್ಲಿ ಕೂತುಬರುವ ರಾಜತರುಣಿಯರನ್ನು ನೋಡಿ, ಅವರ ಆರ್ತನಾದಗಳನ್ನು ಕೇಳಿ, ಕುರುರಾಜಧಾನಿಯೇ ಕಣ್ಣೀರಿಟ್ಟಿತು. ಅಸೂರ್ಯಂಪಶ್ಯರಾದ ಕುಮಾರಿಯರು, ಆವರಣಹಿತರಾಗಿ, ಹಸ್ತಿನಾವತಿಯ ರಾಜಮಾರ್ಗಗಳಲ್ಲಿ ನಡೆದುಬಂದರು. ಆ ಕುಮಾರಪರಿವಾರವಾದ ರಾಜಾಂತಃಪುರವು ಶೋಕವೇ ಬಹುರೂಪವಾಗಿ ಮೂರ್ತಿವೆತ್ತು ಬಂದಂತಿತ್ತು. ದೇವತೆಗಳಿಗೂ ಕಾಣಬರದಿದ್ದ ತನ್ವಂಗಿಯರು, ತಪೋನಿಷ್ಠೆಯಿಂದ ಕೆಳಗಿಳಿದು ಬಂದ ವೃಂದಾರಕ ಸುಂದರಿಯರಂತೆ ಕಂಡರು. ಭೂಷಣಗಳನ್ನು ತೆಗೆದಿಟ್ಟು ಕೇಶರಾಶಿಯನ್ನು ಬಿಚ್ಚಿ ಏಕವಸ್ತ್ರವನ್ನುಟ್ಟು ನಾರಿಯರು ಅನಾಥೆಯರಾಗಿ, ಸೌಧಗಳಿಂದ ಹೊರಬಂದಾಗ, ಶ್ವೇತಪರ್ವತ ಗುಹೆಗಳಿಂದ ಹೊರಬರುವ ನಾಥರಹಿತ ಹರಿಣಿಯರಂತೆ ಕಂಡರು. ಪುತ್ರಭ್ರಾತೃಭರ್ತೃ ಜನರನ್ನು ಹೆಸರಿಟ್ಟು ಕೂಗಿ, ಗಟ್ಟಿಯಾಗಿ ಅಳುವ ನಾರೀಗಣವು ಮೆಲ್ಲನೆ ಸಾಗಿ, ರಣಾಂಗಣವನ್ನು ಮುಟ್ಟಿತು.

ರಣರಂಗದ ಭೀಕರ ದರ್ಶನದಿಂದ ಅವರ ಶೋಕವಹ್ನಿಯು ಉರಿದೆದ್ದಿತು. ಎದೆಬಡಿದುಕೊಂಡು, ಕೇಶಗಳನ್ನು ಹರಡಿಕೊಂಡು, ಕಣ್ಣೀರಿಟ್ಟು ಗೋಳಾಡಿ, ಕೆಳಗೆ ಬಿದ್ದು ಹೊರಳಾಡಿ, ತಲೆ ಚಚ್ಚಿಕೊಂಡು ರೋದಿಸುವ ರಾಜನಾರಿಯರು ಕಿಂಕರ್ತವ್ಯ ಮೂಢರಾದರು. ಸಖೀಜನರ ಮುಂದೆ ಕೂಡ ನಾಚಿ ತಲೆ ಎತ್ತದಿದ್ದ ತರುಣೀಮಣಿಯರು ಲಜ್ಜೆ ತೊರೆದು, ಶ್ವಶ್ರೂಶ್ವಶುರ ಜನರ ಮುಂದೆ ಅಳುತ್ತಾ ನಿಂತರು. ಎಲ್ಲರೂ ವಿಯೋಗ ದುಃಖಿತೆಯರಾದುದರಿಂದ ಸಮಾಶ್ವಸಿಸಿ ತಡೆಯಬಲ್ಲವರಿಲ್ಲದೆ, ನಾರೀಗಣ ಶೋಕಧ್ವನಿಯಿಂದ ರಣಾಂಗಣವು ಪ್ರತಿಧ್ವನಿಸುತ್ತಲೇ ಇತ್ತು. ದೀನನಾದ

ದೈವೀದುರ್ವಿಪಾಕವೆಂದು ತಿಳಿದು, ಪಾಂಡವರಲ್ಲಿ ಸಿಟ್ಟಾಗಬೇಡ! ಅವರೂ ನಿನ್ನ ಮಕ್ಕಳೇ ! ಸತ್ಪುತ್ರರಲ್ಲಿ ಸ್ನೇಹವನ್ನು ಬೆಳೆಸು ! ಇದೇ ವೃತ್ತಾಂತವನ್ನು ನಾನು ಧರ್ಮಜನಿಗೆ ಹೇಳಿದೆನು. ಅವನು ಸಂಧಿಗಾಗಿ ಬಹುವಿಧದಿಂದ ಪ್ರಯತ್ನಿಸಿದನು. ವಿಧಿಯು ಅನತಿಕ್ರಮಣೀಯವಾಗಿರಲು ಯಾರೇನು ಮಾಡುವದು ? ಎಲ್ಲರೂ ಎಂದಾದರೂ ಯಮಮಂದಿರವನ್ನು ಸೇರಲೇ ಬೇಕು.

ನೀನು ಧರ್ಮವನ್ನರಿತಿರುವೆ. ಬುದ್ಧಿವಂತನಿರುವೆ. ಪ್ರಾಣಗಳ ಜನನ ಮರಣಗಳು ಮುಕ್ತಿಪರ್ಯಂತರವೂ ತಪ್ಪವೆಂದು ತಿಳಿದೂ, ಶೋಕಿಸುವುದು ತರವಲ್ಲ. ಧರ್ಮರಾಜನು ನಿನ್ನ ಪ್ರಾಣತ್ಯಾಗ ನಿಶ್ಚಯವನ್ನು ಕೇಳಿದನೆಂದರೆ ತಾನೇ ಮೊದಲು ಪ್ರಾಣತ್ಯಾಗ ಮಾಡಿಬಿಡುವನು. ಅವನಂತಹ ದಯಾಳುಗಳಿಲ್ಲ. ಪಶುಪಕ್ಷಿ ಕೀಟಗಳಲ್ಲಿಯೂ ದಯ ದೋರುವ ಧರ್ಮಜನು ನಿನ್ನಲ್ಲಿ ದಯದೋರದಿರುವನೇ ? ವಿಧಿಯು ಬಲೀಯವೆಂದು ತಿಳಿ ! ಪಾಂಡವರಲ್ಲಿ ಕರುಣೆ ಬೀರು ! ನನ್ನ ವಚನವನ್ನು ಮನ್ನಿಸಿ. ಆತ್ಮಹತ್ಯೆಗೆ ಸಿದ್ಧನಾಗಬೇಡ ! ಪಾಂಡವರಿಂದ ರಕ್ಷಿತನಾಗಿ ಬಾಳು. ಹಾಗಾದರೆ ನಿನ್ನ ಕೀರ್ತಿಯು ಲೋಕದಲ್ಲಿ ನಿಲ್ಲುವದು. ನಿನಗೆ ಮಹಾಧರ್ಮಫಲವೂ ಲಭಿಸುವುದು. ಪುತ್ರಶೋಕವು ಅಗ್ನಿಯಂತೆ ದುಃಸಹವಾಗಿದೆ ನಿಜ. ಆದರೆ ಅದನ್ನು ಪ್ರಜಾಬಲದಿಂದ ಆರಿಸಿ ಶಾಂತನಾಗು.'

ಧೃತರಾಷ್ಟ್ರನು ವ್ಯಾಸವಚನಗಳನ್ನಾಲಿಸಿ, ಸ್ವಲ್ಪ ಸುಮ್ಮನಿದ್ದು ನಿಡುಸುಯ್ದು "ತಂದೇ, ಮಹಾ ಶೋಕಾಗ್ನಿಯಿಂದ ಬೆಂದ ನನ್ನ ಬುದ್ಧಿಯೇ ಕೆಟ್ಟಿದೆ, ನೀನು ನುಡಿದ ವಚನಗಳಿಂದ ದೈವನಿಯೋಗವೇ ಹೀಗಿತ್ತೆಂದು ತಿಳಿದು ನಾನು ಪ್ರಾಣಗಳನ್ನು ಧರಿಸಿರುವೆನು. ಶೋಕವನ್ನು ಹತ್ತಿಕ್ಕಲು ಪ್ರಯತ್ನಿಸುವೆನು." ಎಂದನು. ಶ್ರೀವ್ಯಾಸದೇವನು ಅವನನ್ನು ಸಂತೈಸಿ, ಅಂತರ್ಹಿತನಾದನು.

## ೩. ಧೃತರಾಷ್ಟ್ರ ಕೋಪಶಮನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: "ರಾಜನ್ ! ದುರ್ಯೋಧನನು ಸಸೈನ್ಯನಾಗಿ ನಿಹತನಾದುದನ್ನು ಕಂಡು, ದುಃಖಾವಿಲನಾದ ಸಂಜಯನು ಧೃತರಾಷ್ಟ್ರನನ್ನು ಸೇರಿ, ಇಂತೆಂದನು - ಮಹಾರಾಜ ! ನಾನಾ ದೇಶದ ರಾಜರು ಮೃತರಾದರು. ನಿನ್ನ ಸುತರೆಲ್ಲರೂ ಸತ್ತರು. ವೈರವಹ್ನಿಯು ಉರಿದೆದ್ದು ಕುರುಕ್ಷೇತ್ರದಿ ನೆರೆದಿದ್ದ ಸರ್ವವೀರಕಕ್ಷವನ್ನು ನಿಶ್ಶೇಷವಾಗಿ ಸುಟ್ಟು ತಾನೂ ಕೊನೆಗೊಂಡಿತು. ನಿನ್ನ ಮಗನು ಪಾಂಡವರಿಗೆ ಯಾಚಿಸಿದ ಗ್ರಾಮಗಳನ್ನಾದರೂ ಕೊಡದುದರಿಂದ ಇಷ್ಟು ಕುಲನಾಶವಾಯಿತು. ಪುತ್ರಪೌತ್ರರಿಗೂ, ನಿನ್ನ ಪಿತೃಗಳಿಗೂ ತಿಲಾಂಜಲಿಯನ್ನು ಕೊಟ್ಟು, ಪ್ರೇತಕಾರ್ಯಗಳನ್ನು ನಡೆಸು." ಆ ವಚನ ವಜ್ರಾಘಾತದಿಂದ ಧೃತರಾಷ್ಟ್ರನು ಸತ್ತವನಂತೆ ಕೆಳಗೆ ಬಿದ್ದನು. ಮತ್ತೆ ಎಚ್ಚತ್ತು ಅಳುವ ರಾಜನಿಗೆ ವಿದುರನು ಇಂತೆಂದನು:

"ಭರತರ್ಷಭ ! ಅಳಬೇಡ ! ಏಳೇಳು ! ಎಲ್ಲ ಭೂತಗಳೂ ಸಾಯುವವೇ! ಪ್ರಕೃತಿಯಿಂದ ಪುಟ್ಟಿ ಬಂದು, ಬೆಳೆದು, ಪ್ರಕೃತಿಯಲ್ಲೇ ಸೇರಿ ಪೋಗುವ ಶರೀರಗಳಿಗೇಕೆ ಶೋಕ ? ಅತ್ತು ಸತ್ತವರಿಲ್ಲ, ದುಃಖಿಸಿ ಬದುಕಿಸಿಕೊಂಡವರಿಲ್ಲ. ಕಾಲವನ್ನು ಯಾರೂ ದಾಟಲಾರರು, ಕಾಲಕ್ಕೆ ಪ್ರಿಯರಾಗಿ ಉಳಿದವರಿಲ್ಲ, ಕಾಲಕ್ಕೆ ಅಪ್ರಿಯರೆಂಬ ಹಗೆ ಇಲ್ಲ. ಕಾಲದಿಂದ ಕರ್ಷಿತರಾಗಿ ಭೂತಗಳು ಕಾಲಕರ್ಮ ಸಂಯೋಗದಿಂದ ಆಯುವು ಮುಗಿದಾಗ, ಸಾಯುವರು. ಅವರಿಗಾಗಿ ಶೋಕಿಸಬಾರದು. ನಿನ್ನ ಬುದ್ಧಿ ಬಲದಿಂದ ನಿನ್ನನ್ನು ನೀನೇ ಸಮಾಧಾನಪಡಿಸಿಕೊಂಡು, ಮುಂದಿನ ಪ್ರೇತಕಾರ್ಯಗಳನ್ನು ಮಾಡು !"

ಧೃತರಾಷ್ಟ್ರನು, 'ವಿದುರ ! ಹಾಗೇ ಮಾಡುವೆನು ಗಾಂಧಾರಿಯನ್ನು ಕರೆಸು ! ಎಲ್ಲ ಭಾರತ ನಾರಿಯರು ನನ್ನ ಸೊಸೆಯರು ಬರಲಿ ! ಕುಂತಿಯನ್ನೂ ಕರೆದುಕೊಂಡು, ರಣರಂಗಕ್ಕೆ ಹೋಗೋಣ !' ಎಂದನು. ಎಲ್ಲರೂ ರಥಗಳನ್ನೇರಿ, ರಣರಂಗದ ಕಡೆ ಹೊರಟರು. ಗಾಂಧಾರೀ ಪ್ರಮುಖ ನಾರಿಯರ ಆರ್ತನಾದಗಳಿಂದ ಅಂಬರವು ತುಂಬಿತು. ಅವರ ದುಃಖವನ್ನು ಕಂಡು, ವಿದುರನು, ತಾನೂ ದುಃಖಿತನಾದನು. ಆದರೂ ಅವನು ಧೀರನಾದುದರಿಂದ ದುಃಖೋದ್ವೇಗವನ್ನು ತಡೆದು, ಅವರನ್ನು ಸಮಾಧಾನಪಡಿಸಿದನು. ಶಿಬಿಕೆಗಳಲ್ಲಿ ಕೂತುಬರುವ ರಾಜತರುಣಿಯರನ್ನು ನೋಡಿ, ಅವರ ಆರ್ತನಾದಗಳನ್ನು ಕೇಳಿ, ಕುರುರಾಜಧಾನಿಯೇ ಕಣ್ಣೀರಿಟ್ಟಿತು. ಅಸೂರ್ಯಂಪಶ್ಯರಾದ ಕುಮಾರಿಯರು, ಆವರಣಹಿತರಾಗಿ, ಹಸ್ತಿನಾವತಿಯ ರಾಜಮಾರ್ಗಗಳಲ್ಲಿ ನಡೆದುಬಂದರು. ಆ ಕುಮಾರಪರಿವಾರವಾದ ರಾಜಾಂತಃಪುರವು ಶೋಕವೇ ಬಹುರೂಪವಾಗಿ ಮೂರ್ತಿವೆತ್ತು ಬಂದಂತಿತ್ತು. ದೇವತೆಗಳಿಗೂ ಕಾಣಬರದಿದ್ದ ತನ್ವಂಗಿಯರು, ತಪೋನಿಷ್ಠೆಯಿಂದ ಕೆಳಗಿಳಿದು ಬಂದ ವೃಂದಾರಕ ಸುಂದರಿಯರಂತೆ ಕಂಡರು. ಭೂಷಣಗಳನ್ನು ತೆಗೆದಿಟ್ಟು ಕೇಶರಾಶಿಯನ್ನು ಬಿಚ್ಚಿ ಏಕವಸ್ತ್ರವನ್ನುಟ್ಟು ನಾರಿಯರು ಅನಾಥೆಯರಾಗಿ, ಸೌಧಗಳಿಂದ ಹೊರಬಂದಾಗ, ಶ್ವೇತಪರ್ವತ ಗುಹೆಗಳಿಂದ ಹೊರಬರುವ ನಾಥರಹಿತ ಹರಿಣೆಯರಂತೆ ಕಂಡರು. ಪುತ್ರಭ್ರಾತೃಭರ್ತೃ ಜನರನ್ನು ಹೆಸರಿಟ್ಟು ಕೂಗಿ, ಗಟ್ಟಿಯಾಗಿ ಅಳುವ ನಾರೀಗಣವು ಮೆಲ್ಲನೆ ಸಾಗಿ, ರಣಾಂಗಣವನ್ನು ಮುಟ್ಟಿತು.

ರಣರಂಗದ ಭೀಕರ ದರ್ಶನದಿಂದ ಅವರ ಶೋಕವಹ್ನಿಯು ಉರಿದೆದ್ದಿತು. ಎದೆಬಡಿದುಕೊಂಡು, ಕೇಶಗಳನ್ನು ಹರಡಿಕೊಂಡು, ಕಣ್ಣೀರಿಟ್ಟು ಗೋಳಾಡಿ, ಕೆಳಗೆ ಬಿದ್ದು ಹೊರಳಾಡಿ, ತಲೆ ಚಚ್ಚಿಕೊಂಡು ರೋದಿಸುವ ರಾಜನಾರಿಯರು ಕಿಂಕರ್ತವ್ಯ ಮೂಢರಾದರು. ಸಖೀಜನರ ಮುಂದೆ ಕೂಡ ನಾಚಿ ತಲೆ ಎತ್ತದಿದ್ದ ತರುಣೀಮಣಿಯರು ಲಜ್ಜೆ ತೊರೆದು, ಶ್ವಶ್ರೂಶ್ವಶುರ ಜನರ ಮುಂದೆ ಅಳುತ್ತಾ ನಿಂತರು. ಎಲ್ಲರೂ ವಿಯೋಗ ದುಃಖಿತೆಯರಾದುದರಿಂದ ಸಮಾಶ್ವಸಿಸಿ ತಡೆಯಬಲ್ಲವರಿಲ್ಲದೆ, ನಾರೀಗಣ ಶೋಕಧ್ವನಿಯಿಂದ ರಣಾಂಗಣವು ಪ್ರತಿಧ್ವನಿಸುತ್ತಲೇ ಇತ್ತು. ದೀನನಾದ

ಧೃತರಾಷ್ಟ್ರನು ಅವರಿಂದ ಕೂಡಿ ಬಂದು, ರಣಾಂಗಣವನ್ನು ಸೇರಿದನು. ಅವನನ್ನನುಸರಿಸಿ, ಶಿಲ್ಪಿ ವಣಿಜ, ವೈಶ್ಯರೇ ಮುಂತಾದ ಕರ್ಮಜೀವಿಜನರು ಬಂದರು. ಅವರೆಲ್ಲರ ಆರ್ತನಾದಗಳು ದಿವಿಗೆ ಮುಟ್ಟಿ ದೇವಗಂಧರ್ವರೂ ಅನುತಾಪ ಪಟ್ಟರು. ಯುಗಾಂತಕಾಲದ ಪ್ರಳಯಾಗ್ನಿಯು ಭೂತಜಾಲವನ್ನು ಸುಟ್ಟುಬಿಟ್ಟಂತಿದ್ದ ರಣರಂಗವನ್ನು ನೋಡಿ, ಎಲ್ಲರೂ ಎದೆಒಡೆದು ಆಕ್ರೋಷಿಸಿದರು.

ಒಂದು ಕ್ರೋಶ ದೂರ ಹೋದಮೇಲೆ ಅವರು ಕೃಪಕೃತವರ್ಮಾಶ್ವತ್ಥಾಮರನ್ನು ಕಂಡರು. ಅಶ್ರುಕಂಠನಾಗಿ ನಿಡುಸುಯ್ಯುತ್ತಾ ವಿಲಪಿಸುವ ಧೃತರಾಷ್ಟ್ರನನ್ನು ನೋಡಿ, ಮೂವರೂ ವೀರರು ರಥದಿಂದಿಳಿದು ಆತನನ್ನು ಸಮೀಪಿಸಿ, "ಮಹಾರಾಜ, ವೀರದುಷ್ಕರವಾದ ಕಾರ್ಯವನ್ನು ಮಾಡಿ, ರಣರಂಗದಲ್ಲಿ ಕಡಿದಾಡಿ, ನಿನ್ನ ಮಗನು ವೀರಸ್ವರ್ಗವನ್ನು ಸೂರೆಗೊಂಡಿರುವನು. ವೀರರೆಲ್ಲರೂ ಮೃತರಾದರು. ಯಾರೂ ಉಳಿದಿಲ್ಲ. ಉಳಿದಿರುವರೆಂದರೆ ನಾವು ಮೂವರೇ" ಎಂದು ತಿಳಿಸಿದರು. ಆಗ ಕೃಪಾಚಾರ್ಯನು ಪುತ್ರಶೋಕಾರ್ತಳಾದ ಗಾಂಧಾರಿಗೆ ಇಂತೆಂದನು:

"ಸುಬಲಪುತ್ರಿ ! ನಿನ್ನ ಪುತ್ರರು ನಿರ್ಭಯರಾಗಿ ಕಡಿದಾಡಿ, ರಣದಲ್ಲಿ ವಿಕ್ರಮಿಸಿ ಶತ್ರುಗಳನ್ನು ಸಂಹರಿಸಿ, ತಾವೂ ವೀರಶಯನದಲ್ಲಿ ಮಲಗಿದರು. ಶಸ್ತ್ರನಿರ್ಜಿತವಾದ ಪುಣ್ಯಲೋಕಗಳು ಆ ವೀರರಿಗೆ ಲಭಿಸಿವೆ. ಅವರು ದೇವತೆಗಳಂತೆ ಭಾಸ್ವರದೇಹರಾಗಿ ವಿಹರಿಸುತ್ತಿರುವರು. ಅವರಲ್ಲಿ ಪರಾಙ್ಮುಖನಾಗಿ ರಣರಂಗದಿಂದೋಡಿದವನೊಬ್ಬನೂ ಇಲ್ಲ; ಶತ್ರು ಶಸ್ತ್ರದಿಂದ ತಪ್ಪಿಸಿಕೊಳ್ಳಲು ಕೈಮುಗಿದು ಯಾಚಿಸಿದ ಭೀರುವಿಲ್ಲ. ಇಂತಹ ವೀರ ಕ್ಷತ್ರಿಯರಿಗೆ ಸ್ವರ್ಗವಾಸವು ನಿಶ್ಚಿತವೆಂದು ಪುರಾಣಗಳು ಸಾರುತ್ತಿವೆ. ಅವರಿಗಾಗಿ ನೀನು ಶೋಕಿಸಬಾರದು.

ಅವರ ಶತ್ರುಗಳಾದ ಪಾಂಡವರೂ ಕಡಿಮೆ ನಷ್ಟಪಟ್ಟಿಲ್ಲ. ಕೇಳು, ನಾವು ಸಾಧಿಸಿದ ಶತ್ರುನಾಶದ ವೃತ್ತವನ್ನು ! ಭೀಮಸೇನನು ಅಧರ್ಮದಿಂದ ನಿನ್ನ ಸುತನನ್ನು ಕೊಂದುದನ್ನು ಕೇಳಿ, ನಾವು ಮೂವರು ನಿನ್ನೆಯ ರಾತ್ರಿಯೇ ಪಾಂಡವ ಶಿಬಿರವನ್ನು ಹೊಕ್ಕು ಮಲಗಿದ್ದ ಧೃಷ್ಟದ್ಯುಮ್ನಾದಿ ಪಾಂಚಾಲರನ್ನೂ, ದ್ರೌಪದೇಯರೈವರನ್ನೂ ಚಿತ್ರವಧೆಗೈದೆವು. ಮೂವರೇ ವೀರರು ನಿಂತು ಪಾಂಡವರಂತಹ ಪ್ರಬಲ ಶತ್ರುಗಳನ್ನು ರಣದಲ್ಲಿ ಹೋರಾಡಿ ಗೆಲ್ಲಲಾರೆವೆಂದು ಮನಗಂಡು, ಈಗ ಅವರ ಕಣ್ಣಿಗೆ ಬೀಳಲು ಹೆದರಿ ಓಡಿಹೋಗುತ್ತಿರುವೆವು. ಆ ಮಹಾವೀರರು ಇಷ್ಟರಲ್ಲಿಯೇ ಇಲ್ಲಿಗೆ ಬರಲಿರುವರು. ಪುತ್ರಬಂಧು ಹಂತಕರಾದ ನಮ್ಮನ್ನು ಅವರು ಎಂದಿಗೂ ಜೀವಂತ ಬಿಡರು. ಅವರ ಸೇಡಿಗೆ ನಾವು ತುತ್ತಾಗಲಾರೆವು.

ರಾಜನ್ ! ನಮಗೆ ಅಪ್ಪಣೆ ಕೊಡು ! ಸುಮ್ಮನೆ ಶೋಕಿಸಿ ಫಲವಿಲ್ಲ. ಆದುದಾಯಿತು. ಧೈರ್ಯವನ್ನವಲಂಬಿಸು ! ಕ್ಷತ್ರಧರ್ಮವು ನಿಷ್ಠುರವಾಗಿದೆ. ಮೃತ್ಯುವು ನಿರ್ದಯವಾಗಿದೆ. ದೈವವು ಬಲವತ್ತರವಾಗಿದೆ. ಧರ್ಮವು ದುರ್ಜೇಯವಾಗಿದೆ. ಪಾಂಡವರಿಗೆ ಅನುಕೂಲನಾಗಿರು."

ಇಂತು ನುಡಿದು ದ್ರೌಣಿ, ಗೌತುಮ, ಯಾದವರು ಅಲ್ಲಿಂದ ತೆರಳಿ, ಗಂಗಾ-ತೀರವನ್ನು ಮುಟ್ಟಿ ಅಲ್ಲಿ ಬೇರೆ ಬೇರೆಯಾಗಿ ಮೂರು ದಿಕ್ಕಿಗೆ ಪಯಣಿಸಿದರು. ಕೃಪನು ಹಸ್ತಿನಾವತಿಗೆ ಬಂದನು. ಗುರುಸುತನು ವ್ಯಾಸಾಶ್ರಮಕ್ಕೆಂದು ಹೊರಟನು. ಕೃತವರ್ಮನು ದ್ವಾರಕೆ ಸೇರಿದನು. ಗುರುಸುತನು ಭೀಮನಿಗೆ ಸೋತು, ಮಣಿಯನ್ನಿತ್ತು ಮಾಡಿದ ಅಕಾರ್ಯಕ್ಕಾಗಿ ಕೃಷ್ಣದ್ವಯಶಪ್ತನಾಗಿ, ಸಂಚರಣಶೀಲನಾದನು. ಕೃಪನು ಪಾಂಡವರಿಗೆ ಆಚಾರ್ಯನಾಗಿ ಸುಖದಿಂದಿದ್ದನು.

ಗಜಪುರಿಯಿಂದ ಹೊರಟು ರಣರಂಗದಲ್ಲಿ ಬಂದಿರುವ ಧೃತರಾಷ್ಟ್ರನನ್ನು ನೋಡಬೇಕೆಂದು ಧರ್ಮರಾಜನು ನಿಶ್ಚಯಿಸಿದನು. ಪುತ್ರಶೋಕಾರ್ತನಾದ ಧೃತರಾಷ್ಟ್ರನನ್ನು ನೋಡಿ, ವಂದಿಸಿ, ಸಮಾಧಾನಪಡಿಸಲೆಣಿಸಿ ಪುತ್ರಶೋಕಾರ್ತನಾದ ಧರ್ಮರಾಜನು ಶಿಬಿರದಿಂದ ಹೊರಟು, ರಣಭೂಮಿಯನ್ನು ಪ್ರವೇಶಿಸಿದನು. ಭೀಮಾರ್ಜುನ ಯಮಳರೂ ಆತನನ್ನನುಸರಿಸಿ ಬಂದರು. ಶ್ರೀಕೃಷ್ಣನು ಸಾತ್ಯಕಿಯಿಂದ ಕೂಡಿ ಬಂದನು. ಯುಯುತ್ಸುವು ಶೋಕಾರ್ತಳಾದ ದ್ರೌಪದೀದೇವಿಯನ್ನು ಕರೆದು ಕೊಂಡು ಬಂದನು. ಪಾಂಚಾಲ ತರುಣಿಯರು ಆಕೆಯನ್ನು ಹಿಂಬಾಲಿಸಿದರು.

ಸ್ತ್ರೀವೃಂದವು ಗಂಗಾತೀರದಲ್ಲಿ ಕೂತು, ತಮ್ಮ ಪತಿಪುತ್ರಬಂಧುಗಳನ್ನು ನೆನೆದು ರೋದಿಸುತ್ತಿದ್ದರು. ಕುರರೀಪಕ್ಷಿಗಳಂತೆ ಅಳುವ ಅವರ ಆರ್ತನಾದವು ಧರ್ಮಜನ ಹೃದಯರಸವನ್ನು ಕಲಕಿತು. "ಧರ್ಮರಾಜನ ಸಮನಾದ ಧರ್ಮಜರಿಲ್ಲವೆಂಬುವರು" ಆ ಮಾತೀಗ ಸುಳ್ಳಾಯಿತು. ಎಂತಹ ನಿಂದ್ಯಕರ್ಮವನ್ನು ಮಾಡಿ, ಎಷ್ಟು ಜನರ ಹೊಟ್ಟೆಯಲ್ಲಿ ಕೆಂಡವನ್ನು ಸುರಿದಿಹನು. ಎಷ್ಟು ಜನರ ತಲೆಗೆ ವಜ್ರಾಘಾತವನ್ನಿತ್ತಿರುವನು. ಪುತ್ರ, ಭ್ರಾತೃ, ಪಿತೃ, ಗುರು, ಮಿತ್ರರೆನ್ನದೆ ಎಲ್ಲರನ್ನು ಭೀಕರ ರಣಚಂಡಿಗೆ ಬಲಿಕೊಟ್ಟನಲ್ಲ! ಪಿತಾಮಹನನ್ನೂ ಆಚಾರ್ಯನನ್ನೂ ಕೆಡಹಿ, ಸಂಪಾದಿಸಿದ ರಾಜ್ಯದಿಂದ ನಿನಗೇನು ಸುಖವಾಗುವುದು ? ಅಭಿಮನ್ಯು ದ್ರೌಪದೇಯರನ್ನು ಕಳೆದುಕೊಂಡು ಪಡೆದಿರುವ ರಾಜ್ಯದಿಂದ ನಿನಗೇನು ಪ್ರಯೋಜನ ? ಎಂತು ಇಂತಹ ಕಟುಕನಾದೆ ?' ಎಂದು ತನ್ನನ್ನು ನಿಂದಿಸುವ ಸುಂದರಿಯರ ಸಾಲನ್ನು ದಾಟಿ, ಭಿನ್ನ ಹೃದಯನಾದ ಧರ್ಮರಾಜನು, ತನ್ನ ದೊಡ್ಡಪ್ಪನಿಗೆ ನಮಸ್ಕರಿಸಿದನ್ನು ತಂತಮ್ಮ ನಾಮಗಳನ್ನು ಉಚ್ಚರಿಸಿ, ನಮಸ್ಕರಿಸಿದ ಪಾಂಡವರನ್ನು ಹತ್ತಿರ ಕರೆದು ಧೃತರಾಷ್ಟ್ರನು ಮೊದಲು ಧರ್ಮರಾಜನನ್ನು ಆಲಂಗಿಸಿದನು. ಅವನ ಹೃದಯ ಕುಂಡದಲ್ಲಿ ಹೊತ್ತಿದ್ದ ಪುತ್ರಶೋಕಾಗ್ನಿಯು, ಭೀಮನವಂತು ಬಂದಾಗ ಉರಿದೆದ್ದಿತು. ಶೋಕವಹ್ನಿಯು ಕ್ರೋಧವಾಯು ಸಮೀರಿತವಾಯಿತು. ಧೃತರಾಷ್ಟ್ರನು ದುಷ್ಟಬುದ್ಧಿಗೆ ವಶನಾಗಿ, ಕಾಡು-ಮೇಡುಗಳನ್ನು ಸುಡುವ ಕಿಚ್ಚಿನಂತೆ, ಭೀಮನನ್ನು ನಾಶಮಾಡಲು ಸಂಕಲ್ಪಿಸಿ, ವಿಜೃಂಭಿಸಿದನು. ಅಂಧರಾಜನ ದುಷ್ಟಸಂಕಲ್ಪವನ್ನರಿತ ಶ್ರೀಕೃಷ್ಣನು, ಮೊದಲೇ ತರಿಸಿಟ್ಟಿದ್ದ ಅಯೋಮಯ ಭೀಮ ಪ್ರತಿಮೆಯನ್ನು ಮುಂದಕ್ಕೆ ಸರಿಸಿ, ಭೀಮಸೇನನನ್ನು ದೂರ ಸೆಳೆದನು. ಆ ಪ್ರತಿಮೆಯನ್ನು ಗದಾ ವಿದ್ಯಾಭ್ಯಾಸಕ್ಕೆಂದು ದುರ್ಯೋಧನನು ಮಾಡಿಸಿದ್ದನು.

ವಜ್ರಕಾಯನಾದ ಭೀಮಸೇನನನ್ನಪ್ಪಿ ಕೊಲ್ಲಲು ಧೃತರಾಷ್ಟ್ರನೆಂದಿಗೂ ಸಮರ್ಥನಲ್ಲ. ಆದರೂ ಭೀಮನನ್ನಪ್ಪಿ ನಾಶಮಾಡಲಾಗದೆ, ಸುಮ್ಮನಾಗುವ ಧೃತರಾಷ್ಟ್ರನ ದುಷ್ಟಚಿತ್ತವು ಪ್ರಕಟವಾಗದೆ ಹೋದೀತು ! ಪುತ್ರನಾಶವಾದರೂ, ಪಶ್ಚಾತ್ತಾಪಪಡದೆ, ನಿರಪರಾಧಿ ಪಾಂಡವರನ್ನು ದ್ವೇಷಿಸುವ, ವಿಶೇಷವಾಗಿ ಭೀಮಸೇನನಿಗೆ ದ್ರೋಹವನ್ನು ಮಾಡಲೆಣಿಸುವ ಧೃತರಾಷ್ಟ್ರನ ದುಷ್ಟ ಹೃದಯವನ್ನೆಲ್ಲರೂ ತಿಳಿಯಲೆಂದು, ಶ್ರೀಕೃಷ್ಣನು ಭೀಮಸೇನನನ್ನು ತನ್ನ ಕೈಗಳಿಂದ ಸೆಳೆದು ಆಯಸ ಪ್ರತಿಮೆಯನ್ನು ಮುಂದಕ್ಕೆ ಮಾಡಿದನು. ಧೃತರಾಷ್ಟ್ರನು ಭೀಮನೇ ಸಮೀಪಿಸಿದನೆಂದು ಭ್ರಮಿಸಿ, ಆಯಸ ಭೀಮನನ್ನು ಸೆಳೆದು 'ಹಾ! ಭೀಮ !' (ಸಂಹೃತನಾದೆಯಾ ?) ಎಂದು ಬಿಗಿದಪ್ಪಿ ಅದನ್ನು ಪುಡಿ ಪುಡಿ ಮಾಡಿದನು. ಮತ್ತು ಆಯಸ ಪ್ರತಿಮೆಯನ್ನು ಪುಡಿ ಮಾಡಿದ ಆವೇಗದಿಂದ ತಾನೂ ಕೆಳಗೆ ಬಿದ್ದನು. ಗಜಾಯುತ ಬಲನಾದ ಧೃತರಾಷ್ಟ್ರನು ಮುಖದಿಂದ ರಕ್ತವನ್ನು ಕಾರಿಕೊಂಡನು. ಅದನ್ನು ಕಂಡು, ಸಂಜಯನು ಓಡಿಬಂದು, ಅಂಧರಾಜನನ್ನು ಮೇಲಕ್ಕೆಬ್ಬಿಸಿ, ಮುಖ ತೊಳೆದು, 'ಏಕಿಷ್ಟು ಕೋಪ? ಇಂತಹ ಅಕಾರ್ಯವನ್ನು ನೀನು ಮಾಡಬಾರದು' ಎಂದು ಸಮಾಧಾನಪಡಿಸಿದನು. 'ಹಾ ! ಭೀಮಸೇನ ! ಮೃತ ನಾದೆಯಾ ?' ಎಂದಳುವ ಧೃತರಾಷ್ಟ್ರನನ್ನು ನೋಡಿ ಶ್ರೀಕೃಷ್ಣನು, ''ಮಹಾರಾಜ ! ಅಳಬೇಡ ! ನೀನು ಭೀಮಸೇನನನ್ನು ಕೊಂದಿಲ್ಲ; ಕೊಲ್ಲಲಾರೆ ! ಅವನಂತಹ ಕಬ್ಬಿಣದ ಗೊಂಬೆಯನ್ನು ಅಪ್ಪಿ ಪುಡಿ ಮಾಡಿರುವೆ ! ದೇವಾಸುರರಿಂದಲೂ ಅಜೇಯನಾದ ಭೀಮಸೇನನು ಸುಖವಾಗಿರುವನು. ನಿನ್ನ ಕೋಪವನ್ನರಿತು, ನಾನೇ ಭೀಮನ ಪ್ರತಿಮೆಯನ್ನು ಸಮರ್ಪಿಸಿದೆನು; ನಿನ್ನ ಈ ದುಷ್ಟಚಿತ್ತವು ಈಗ ಪ್ರಕಟವಾಯಿತು. ಮಕ್ಕಳು ನಷ್ಟರಾದರೂ, ನಿನ್ನ ಪಾಪ ಬುದ್ಧಿಯು ನಷ್ಟವಾಗಿಲ್ಲ. ಪುತ್ರಶೋಕಾಭಿಸಂತಪ್ತನಾಗಿ, ಭೀಮನನ್ನು ಕೊಲ್ಲಲೆಣಿಸಬಹುದೇ ? ಕೋಟಿಗಜ ಪ್ರತಿಮಬಲನಾದ ಭೀಮಸೇನನನ್ನು ನೀನು ಕೊಲ್ಲಬಲ್ಲೆಯಾ? ಎಂತಹ ಕಿಡಿಗೇಡಿತನ ! ಅವನನ್ನು ಕೊಂದರೆ ನಿನ್ನ ಪುತ್ರರು ಬದುಕಿ ಬರುವರೇ? ಎಂತಹ ಮೂರ್ಖತನ ! ನಮ್ಮ ಹಿತವಚನಗಳಿಗೆ ಕಿವಿಗೊಡದೆ, ದುಷ್ಟಪುತ್ರರಂತೆ ಕುಣಿದಾಡಿ, ಯುದ್ಧವನ್ನು ಹೂಡಿ, ಅದರಿಂದ ಆದ ಅನರ್ಥಕ್ಕೆ ಪರರನ್ನು ದೂಷಿಸುವುದೇ ? ಪುತ್ರಶತವನ್ನಲ್ಲ ಪಾಪಶತವನ್ನು ಬೆಳೆಸಿ, ಈಗ ಪಾಪಫಲವನ್ನು ಉಣ್ಣದಿರಲಾಗುವುದೇ? ಭೀಮಸೇನನ ಮೇಲೆ ಸಿಟ್ಟಾಗಿ ಕೆಡಬೇಡ."

ರಾಜನ್ ! ಭರತಕುಲದಲ್ಲಿ ಹುಟ್ಟಿರುವೆ. ವೇದಶಾಸ್ತ್ರಗಳನ್ನು ಓದಿರುವೆ. ಇಂತಹ ಮಹಾಪ್ರಾಜ್ಞನೆನಿಸಿ, ನಿರಪರಾಧಿಗಳಲ್ಲಿ ಸಿಟ್ಟಾಗುವ ಪಾಪಬುದ್ಧಿಗೇಕೆ ಎಡೆಗೊಟ್ಟೆ? ಅಂದೇ ಭೀಷ್ಮ, ದ್ರೋಣ, ವಿದುರ, ಸಂಜಯಾದಿಗಳು ಹಿತವನ್ನರುಹಿದರು. ನಾನೂ ಹೇಳಿದೆನು. ಅದು ನಿನಗೆ ರುಚಿಸಲಿಲ್ಲ. ಬಲಶೌರ್ಯಪ್ರಭಾವಗಳಿಂದಲೇ ಅಲ್ಲದೆ ಧರ್ಮದಿಂದಲೂ ಅಧಿಕರಾದ ಪಾಂಡವರು ಗೆಲ್ಲುವರೆಂದು ನಿನಗರಿಯದಿಲ್ಲ.

ಸ್ವದೋಷಗಳನ್ನು ತಿಳಿದು, ತಿದ್ದಿಕೊಂಡ ನರನು ಪರಮ ಶ್ರೇಯಸ್ಸನ್ನು ಪೊಂದುವನು. ತನಗೆ ತಿಳಿಯದಿದ್ದರೆ ಇತರರು ಪೇಳುವ ಹಿತವಚನಗಳನ್ನು ಕೇಳಿ, ಅದರಂತೆ ನಡೆಯದಿರುವವನು ಪರಮಾಪತ್ತನ್ನು ಹೊಂದಿ, ಶೋಕಭಾಜನನಾಗುವನು.

ರಾಜನ್ ! ದುರ್ಯೋಧನನಿಗೆ ವಶನಾಗಿ, ಅವನಂತೆ ನಡೆದೆ. ಧರ್ಮ ದೂರನಾದೆ. ನಿನ್ನ ಪಾಪವು ನಿನ್ನ ಮಕ್ಕಳನ್ನು ಕೊಂದಿರಲು ಭೀಮನಲ್ಲಿ ಏಕೆ ಸಿಟ್ಟಾಗುವೆ? ಪಾಂಚಾಲಿಯನ್ನು ಸಭೆಗೆ ಸೆಳೆಸಿದ ಪರಮ ಪಾಪಿಯು ಭೀಮಸೇನನಿಂದ ಹತನಾದನು. ಪಾಂಡವರೆಂಬ ಮಲಗಿದ್ದ ಸಿಂಹಗಳನ್ನು ಹೊಡೆದೆಬ್ಬಿಸಿ, ಕೆಣಕಿ, ವೈರಪ್ರತಿಕ್ರಿಯೆಯನ್ನಾಚರಿಸುವ ಅವರ ವಿಕ್ರಮಕ್ಕೆ ಅಸೂಯೆಪಡಬಾರದು. ಪಾಂಡವರಿಗೆ ವನವಾಸವನ್ನು ವಿಧಿಸಿದ ಪಾಪಿಕೈಗಳೀಗ ಮುರಿದು ಬಿದ್ದಿರುವವು. ಅವನ್ನು ವಾರಿಸದ ಕೈಗಳೀಗ ಕಣ್ಣೀರನ್ನೊರೆಸುತ್ತಿರುವವು. ಧೃತರಾಷ್ಟ್ರ ! ಸುಮ್ಮನೆ ಸಿಟ್ಟಾಗಿ ಫಲವಿಲ್ಲ. ನಿನ್ನ ದುಷ್ಕೃತ್ಯವನ್ನು ಸ್ಮರಿಸಿ, ಪಶ್ಚಾತ್ತಾಪಪಡುವದನ್ನು ಬಿಟ್ಟು, ದುಷ್ಟಪುತ್ರ ನಾಶದ ಸಿಟ್ಟಿನಿಂದ ಸುಜನದ್ರೋಹವನ್ನೆಸಗಿ, ಪಾಪಭಾಜನನಾಗುತ್ತಿರುವೆ. ಇದು ನಿನಗುಚಿತವಲ್ಲ ತಿಳಿ !' ಎಂದನು.

ಶ್ರೀಕೃಷ್ಣವಚನವು ಸತ್ಯವೆಂದು ತಿಳಿದು; ಧೃತರಾಷ್ಟ್ರನು "ಮಹಾನುಭಾವ ! ನಿಜ ! ನೀನಂದಂತೆ ನಾನು, ದುಷ್ಟಭಾವನೆಗೆಡೆಕೊಟ್ಟೆನು ! ಪುತ್ರಸ್ನೇಹವು ಬಲವತ್ತರವಾಗಿ ನನ್ನ ಧೀರತೆಯನ್ನು ಕೆಡಿಸಿತು. ಭೀಮಸೇನನಲ್ಲಿ ನನಗೆ ಸಿಟ್ಟಿಲ್ಲ. ಪಾರ್ಥಿವೇಂದ್ರರು ಹತರಾದರು. ಪುತ್ರಮಿತ್ರರು ಮೃತರಾದರು. ನನ್ನವರೆಂಬುವರಾರೂ ಉಳಿದಿಲ್ಲ. ಕೃಷ್ಣ! ಶೋಚನೀಯ ದಶೆಯಲ್ಲಿ ಇಳಿದಿರುವ ನನ್ನಲ್ಲಿ ಪ್ರೀತಿಯನ್ನು ತೋರು ! ನೀನು ಮತ್ತು ಪಾಂಡವರಲ್ಲದೆ ಈ ಅಂಧರಾಜನಿಗಾರು ದಿಕ್ಕು?' ಎಂದು ರೋದಿಸಿದನು.

ಧೃತರಾಷ್ಟ್ರನು ಭೀಮಾರ್ಜುನ ನಕುಲಸಹದೇವರನ್ನು ಕರೆದು, ಬಿಗಿದಪ್ಪಿ ತಲೆ ಮೂಸಿ, ಮೈ ಸವರಿ, 'ಕಲ್ಯಾಣಮಸ್ತು' ಎಂದಾಶೀರ್ವದಿಸಿದನು.

## ೪. ಗಾಂಧಾರೀ ಸಾಂತ್ವನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಧೃತರಾಷ್ಟ್ರನ ಅಪ್ಪಣೆ ಪಡೆದು ಪಾಂಡವರು ಗಾಂಧಾರಿಯನ್ನು ಸಮೀಪಿಸಿ, ವಂದಿಸಿದರು. ಶ್ರೀಕೃಷ್ಣನು ಅವರ ಹಿಂದೆಯೇ ನಿಂತಿದ್ದನು. ಶತ್ರುಸಂಹಾರವನ್ನು ಸಾಧಿಸಿ ಬಂದ ಧರ್ಮರಾಜನನ್ನು ತಿಳಿದು, ಗಾಂಧಾರಿಯು ಪುತ್ರಶೋಕದಿಂದ ಮತಿಗೆಟ್ಟು ಶಪಿಸಬೇಕೆಂದು ನಿಶ್ಚಯಿಸಿದಳು. ಅವಳ ಪಾಪಮತಿಯನ್ನು ತಿಳಿದು, ಸರ್ವಜ್ಞನಾದ ಬಾದರಾಯಣದೇವನು ಅಲ್ಲಿ ಪ್ರತ್ಯಕ್ಷನಾದನು. ಗಂಗಾಪಾವನಸಲಿಲಗಳ ಪುಣ್ಯಗಂಧವನ್ನು ವಹಿಸಿ ಬಂದ ಆ ಯೋಗೇಶನು ಅವಳ ಮನೋಗತವಾದ ದುಷ್ಟಾಭಿಪ್ರಾಯವನ್ನು ತಿಳಿದು, ವಾರಿಸುತ್ತ ಇಂತೆಂದನು.

"ಗಾಂಧಾರಿ ! ಸಮಾಧಾನ ತಂದುಕೋ ! ಪಾಂಡವರಲ್ಲಿ ಕೋಪ ಮಾಡುವದುಚಿತವಲ್ಲ. ದುಡುಕಿ ನುಡಿಯಬೇಡ ! ಕೇಳೆನ್ನ ಮಾತನ್ನು ! ನಿನ್ನ ಸ್ವಭಾವದಂತೆ ಶಾಂತಚಿತ್ತಳಾಗು ! ಹದಿನೆಂಟು ದಿನಗಳ ಯುದ್ಧದಲ್ಲಿ ಪ್ರತಿನಿತ್ಯವೂ ಬಂದು ವಂದಿಸಿ, ನಿನ್ನಿಂದ ವಿಜಯಾಶೀರ್ವಾದವನ್ನು ಬೇಡಿದ ನಿನ್ನ ಮಗನಿಗೆ ನೀನೇನನ್ನುತ್ತಿದ್ದೆ ! 'ಮಗನೇ ! ಧರ್ಮವೆಲ್ಲಿಯೋ ಅಲ್ಲಿ ಜಯವು ! ಏನೆಂದು ಆಶೀರ್ವದಿಸಲಿ ಅಧರ್ಮಿಷ್ಠರಾದ ಸುತರನ್ನು?' ಎಂದು ನೀನಂದ ಮಾತುಗಳು ಸತ್ಯವಾಗಿವೆ. ಆ ಮಾತನ್ನು ಮರೆಯಬೇಡ ! ಧರ್ಮವಂತರಾದ ಪಾಂಡವರು ತುಮುಲರಣರಂಗದಿಂದ ಪಾರಾಗಿ ಬಂದಿರುವರು. ವಿಜಯಶ್ರೀ ಅವಳನ್ನು ವರಿಸಿರುವಳೆಂದರೆ ಅದು ನಿನ್ನ ಆಶೀಃಪ್ರಭಾವವೇ ಸರಿ ! ಅಂದು ಅಂತು ಆಶೀರ್ವದಿಸಿ, ಇಂದು ಇಂತು ಶಾಪವನ್ನು ಕೊಡಬಹುದೇ ? ಕ್ಷಮಾಶೀಲಳೆಂದು ಖ್ಯಾತಳಾಗಿ ಕ್ರೋಧವಶಳಾಗಬಹುದೇ ? ಶ್ರೀಕೃಷ್ಣನಿದ್ದಲ್ಲಿ ಧರ್ಮವಿದೆ. ಧರ್ಮವಿದ್ದಲ್ಲಿ ಜಯವಿದೆ. ಈ ಧರ್ಮರಹಸ್ಯವನ್ನರಿತು ಸಿಟ್ಟನ್ನು ಬಿಡು, ಸತ್ಯವಾದಿನಿಯಾಗು, ಆಶೀರ್ವದಿಸು, ಪುತ್ರರನ್ನು !"

ಶ್ರೀವ್ಯಾಸವಚನವನ್ನಾಲಿಸಿ, ಗಾಂಧಾರಿಯು ಸ್ವಲ್ಪ ಶಾಂತಳಾದಳು. ಭಗವನ್ ಪಾಂಡವರಲ್ಲಿ ಸಿಟ್ಟಿಲ್ಲ. ಅವರು ನಾಶವಾಗಬೇಕೆಂದು ನಾನು ಇಚ್ಛಿಸುವುದಿಲ್ಲ. ಪುತ್ರಶೋಕದಿಂದ ಮತಿಗೆಟ್ಟು ಶಪಿಸತೊಡಗಿದ್ದ ನನ್ನನ್ನು ವಾರಿಸಿ, ಕಾಪಾಡಿದೆ. ಒಳ್ಳೆಯದಾಯಿತು. ಕುಂತಿಯ ಸುತರು ನನ್ನ ಸುತರಲ್ಲವೇ? ನಾನೂ ನನ್ನ ಪತಿಯೂ ಪಾಂಡವರಿಂದಲೇ ರಕ್ಷಿತರಾಗಬೇಕಲ್ಲವೇ ! ಪಾಂಡವರ ಅಪರಾಧವಿಲ್ಲೆಂದು ನಾನು ಮೊದಲಿನಿಂದಲೂ ತಿಳಿದಿರುವೆನು. ಪಾಪಿ ಶಕುನಿಯಿಂದಲು, ಕರ್ಣದುಶ್ಶಾಸನರಿಂದಲೂ ಕೂಡಿ, ಅವರಂತೆ ನಡೆದು, ಸ್ವಯಂ ದುಷ್ಟನಾದ ದುರ್ಯೋಧನನು ಇಷ್ಟು ಅನರ್ಥವನ್ನು ಸಾಧಿಸಿದನು. ಅರ್ಜುನ ಭೀಮಸೇನರ ಅಪರಾಧವೇನೂ ಇಲ್ಲ. ಧರ್ಮ ನಕುಲಸಹದೇವರಂತೂ ಸರ್ವಥಾ ನಿರಪರಾಧಿಗಳಿರುವರು. ದುರಹಂಕಾರದಿಂದ ಕಣ್ಣು ಕಾಣದೆ ಕಡಿದಾಡಿ ಮಡಿದ ಕೌರವರು ತಾವು ಸತ್ತುದಲ್ಲದೆ ಸಾವಿರಾರು ಕ್ಷತ್ರಿಯ ವೀರರನ್ನೂ, ಕೋಟ್ಯಾರು ಸೈನಿಕರನ್ನೂ, ಅಶ್ವಗಜಗಳನ್ನೂ ಸಾಯುವಂತೆ ಮಾಡಿದರು. ಅವರು ಧರ್ಮದ್ರೋಹದಿಂದ ಸತ್ತರು. ಆದರೆ ಧರ್ಮಿಷ್ಠರಾದ ಪಾಂಡವರು ಅಧರ್ಮವನ್ನವಲಂಬಿಸಿದುದನ್ನು ಕಂಡು ನನಗೆ ಶೋಕವಿಷಾದಾಶ್ಚರ್ಯಗಳು ಮೂಡಿಬರುತ್ತಿವೆ.

ಶ್ರೀವಾಸುದೇವನೆದುರಿಗೇ ಭೀಮಸೇನನು ನನ್ನ ಮಗನ ತೊಡೆಯನ್ನು ಮುರಿದನಲ್ಲ! ಗದಾಯುದ್ಧ ನಿಯಮವನ್ನುಲ್ಲಂಘಿಸಿ, ನಾಭಿಯ ಕೆಳಗೆ ಹೊಡೆದನಲ್ಲ! ಎಂಬ ಅಸಮಾಧಾನವು ನನ್ನನ್ನು ಪೀಡಿಸುತ್ತಿದೆ ! ಧರ್ಮಿಷ್ಠರು ಪ್ರಾಣಸಂಕಟ ದಲ್ಲಿಯೂ ಧರ್ಮವನ್ನು ಬಿಡರೆಂದು ಕೇಳಿರುವ ಮಾತು ಭೀಮನಲ್ಲಿ ಸುಳ್ಳಾಯಿತೆಂದು ಕಂಡು, ನನಗೆ ಆಶ್ಚರ್ಯಶೋಕಗಳು ಉಂಟಾಗಿವೆ !' ಎಂದಳು. ಶ್ರೀವ್ಯಾಸರು

ಭೀಮವದನವನ್ನು ವೀಕ್ಷಿಸಿದರು. ಅವರ ಇಂಗಿತವನ್ನರಿತು, ಭೀಮಸೇನನು ಭೀತನಾದವನಂತೆ ಗಾಂಧಾರಿಯನ್ನು ಸಂತೈಸುತ್ತಿಂತೆಂದನು:

'ಧರ್ಮಾಧರ್ಮದ ವಿಚಾರವು ನನಗೆ ತಿಳಿಯದಿಲ್ಲ ಅಂಬ! ಪ್ರಾಣಸಂದೇಹವು ಒದಗಿದಾಗ ಧರ್ಮಾಧರ್ಮ ವಿಚಾರವನ್ನು ಬದಿಗಿಟ್ಟು ಹರಿದ್ವೇಷಿಯನ್ನು ಸಂಹರಿಸಬೇಕು. ಅದರಿಂದ ಧರ್ಮವೂ ಉಳಿದು, ಹರಿದ್ವೇಷಿ ವಧರೂಪ ಪುಣ್ಯವೂ ಬರುವುದು. ಹರಿದ್ವೇಷಿ ಶ್ರೇಷ್ಠನಾದ ದುರ್ಯೋಧನನ ವಧೆಯಿಂದ ನನಗೆ ಪಾಪವಿಲ್ಲ.

ಅಧರ್ಮದಿಂದ ನಾನು ನಿನ್ನ ಮಗನನ್ನು ಕೊಂದಿಲ್ಲ. ನನಗೆ ಪ್ರಾಣಸಂದೇಹವೂ ಇಲ್ಲ. ಪ್ರತಿಜ್ಞಾಹಾನಿಯೇ ಪ್ರಾಣಸಂದೇಹವು. ಪ್ರತಿಜ್ಞೆಯನ್ನು ನಡೆಸದೆ ಬದುಕಿದ್ದರೂ ಸತ್ತಂತೆಯೇ ಸರಿ! ಪ್ರತಿಜ್ಞೆಯಂತೆ ಧರ್ಮಯುದ್ಧದಲ್ಲಿ ಶತ್ರುಗಳನ್ನೆದುರಿಸಿ, ಸಂಹರಿಸುವ ಕ್ಷತ್ರಿಯನಿಗೆ ಅಧರ್ಮದ ಸೋಂಕಿಲ್ಲ. ನಿನ್ನ ಮಗನೆಂಬ ಅಭಿಮಾನವನ್ನು ಬಿಡು! ಕಲಿರೂಪನಾದ ದುರ್ಯೋಧನನಷ್ಟು ಪಾಪಿ ಮತ್ತಿಲ್ಲ. ಅಂತಹ ಪಾಪಿಯನ್ನು ಧರ್ಮಮಾರ್ಗದಿಂದ ಕೊಲ್ಲಬಾರದು; ಪಾಪಿಗಳನ್ನು ವಂಚಿಸಿ ಕೊಲ್ಲುವುದು ದೇವತೆಗಳಲ್ಲಿಯೂ ಪ್ರಸಿದ್ಧವಾಗಿದೆ. 'ನಿಕೃತ್ಯಾ ನಿಕೃತಿಂ ಹನ್ಯಾತ್, ನಿಕೃತ್ಯಾ ನೈವ ಧಾರ್ಮಿಕಾನ್' ಎಂಬ ವೇದವಚನದಂತೆ, ಧರ್ಮಿಷ್ಠರನ್ನು ವಂಚಿಸಿ ಕೊಲ್ಲಬಾರದು; ಪಾಪಿಗಳನ್ನು ವಂಚಿಸದೆ ಕೊಲ್ಲಬಾರದು. (ಪೈಂಗಿಶ್ರುತಿ) ಮೋಸದಿಂದ ರಾಜ್ಯವನ್ನು ಕಸಿದ ಅಧರ್ಮಿಷ್ಠನಿಗೆ, ವಿಷಮ ವಧೆಯೇ ಸರಿಯಾದದ್ದು. ಸೈನ್ಯವೆಲ್ಲವೂ ನಷ್ಟವಾದರೂ, ವ್ಯಥೆಪಡದೆ, ಪಾಂಡವ ನಾಶಕ್ಕಾಗಿ ಹಾತೊರೆವ ಪಾಪಿಯನ್ನು ಉಳಿಸಬಾರದೆಂದು, ನಾನು ಅವನ ತೊಡೆ ಮುರಿದು, ಪ್ರತಿಜ್ಞೆಯನ್ನು ಪೂರೈಸಿದೆನು. ಏಕವಸನಳಾಗಿದ್ದ ಪಾಂಚಾಲಿಯನ್ನು ಸಭೆಗೆ ಸೆಳೆಸಿದ ಮಹಾಪರಾಧವು ಅಕ್ಷಮ್ಯವೇ ಸರಿ! ಅಂತಹ ಪಾಪಿಯನ್ನು ವಧಿಸದೆ ಗತ್ಯಂತರವಿಲ್ಲ; ನಮ್ಮ ರಾಜ್ಯವನ್ನು ನಾವು ಹೊಂದಬೇಕಾದರೆ, ರಾಜ್ಯಚೋರನನ್ನು ಕೊಲ್ಲಲೇ ಬೇಕಾಯಿತು.

ದ್ರೌಪದಿಯನ್ನು ನೋಡಿ, ಎಡತೊಡೆಯನ್ನು ತೋರಿದುದರಿಂದ, ದುರ್ಯೋಧನನ ಆ ತೊಡೆಯನ್ನು ಮುರಿಯಬೇಕಾಯಿತು. ವನವಾಸಕ್ಕೆ ತೆರಳುವಾಗ ನಗೆಯಾಡಿ, ತೊಡೆ ತಟ್ಟಿದುದರಿಂದ, ಬಲತೊಡೆಯನ್ನೂ ಮುರಿಯಬೇಕಾಯಿತು. ಇಂತು ಪ್ರತಿಜ್ಞಾಪಾಲನೆಗೈದ ನಮ್ಮಲ್ಲಿ ನೀನು ಸಿಟ್ಟಾಗಿ ಫಲವಿಲ್ಲ. ಅಂದು ನಿನ್ನೆದುರಿಗೆ, ನಿಂದ್ಯಕರ್ಮಗಳನ್ನು ಮಾಡಿದ ಮಗನನ್ನು ದಂಡಿಸಿ, ಹತ್ತಿಡಲಾರದವಳು. ಇಂದು ನಿರಪರಾಧಿಗಳಾದ ನಮ್ಮನ್ನು ದಂಡಿಸತೊಡಗಿರುವುದು, ಆಶ್ಚರ್ಯಕರವಾಗಿದೆ. ಅಂದೇ ನಿನ್ನ ಮಕ್ಕಳನ್ನು ಕೊಲ್ಲದಿರಲು ಧರ್ಮರಾಜನ ಅನುಮತಿ ಇಲ್ಲದುದೇ ಕಾರಣವೆಂದು ತಿಳಿ! ಇಲ್ಲದಿರೆ ನಿನ್ನ ಸುತರು ನರಕಪತಿತರಾಗಿ ಹದಿಮೂರು ವರ್ಷಗಳಾಗಿ ಹೋಗುತ್ತಿದ್ದವು. ಇಂದು ವೈರಾಂತವನ್ನು ಕಂಡಿರುವೆವು. ಧರ್ಮರಾಜನು ರಾಜ್ಯದಲ್ಲಿ ಸುಪ್ರತಿಷ್ಠಿತನಾಗಿರುವನು. ನನ್ನ ಹಗೆಯೂ ತೀರಿತು. ವಿಚಾರಮಾಡಿ ಶಾಂತಳಾಗು!'

ಆ ಮಾತಿಗೆ ಗಾಂಧಾರಿಯು ಇಂತೆಂದಳು: 'ತಾತ! ಇರಲಿ! ನೀನಾಡಿದುದೆಲ್ಲವೂ ನಿಜ! ಆದರೆ ದುಶ್ಶಾಸನನ್ನು ಕೆಡಹಿ, ಅವನ ರಕ್ತವನ್ನು ಕುಡಿದುದಾವ ನ್ಯಾಯ? ಹೇಳು! ಅನಾರ್ಯ ಜನರೂ ಮಾಡಲು ಹೇಸುವ ನರರಕ್ತ ಪಾನವನ್ನು ನೀನೆಂತು ಮಾಡಿದೆ?' ಭೀಮಸೇನನಿಂತೆಂದನು: 'ತನ್ನಂತೇ ತಮ್ಮನಾಗಿರುವುದರಿಂದ, ತಮ್ಮನ ರಕ್ತವನ್ನು ಕುಡಿವುದು, ತನ್ನ ರಕ್ತಪಾನದಂತೆ, ಗರ್ಹಿತವಾಗಿದೆ. ಅಂತಹ ಕ್ರೂರಕರ್ಮವನ್ನು ವೃಕೋದರನೆಂದಿಗೂ ಮಾಡುವನಲ್ಲ ಅಂಬ! ರಕ್ತವನ್ನು ಪಾನಮಾಡುವೆನೆಂಬ ಪ್ರತಿಜ್ಞೆಯನ್ನು ರಕ್ಷಿಸಲು, ನಾನು ಅವನ ರಕ್ತವನ್ನು ಕುಡಿದಂತೆ, ಮಾಡಿದೆನು; ಆ ರಕ್ತವು ನನ್ನ ದಂತಗಳ ಅಂತರ್ಭಾಗವನ್ನು ಪ್ರವೇಶಿಸಲಿಲ್ಲ. ಮಹಾಪಾಪಕ್ಕೆ ಮಹಾಶಿಕ್ಷೆಯನ್ನೇ ವಿಧಿಸಬೇಕೆಂದು, ನರಾಶನಾಂತನಾದ ದುಶ್ಶಾಶನನಿಗೆ ರಕ್ತಪಾನರೂಪ ಶಿಕ್ಷೆಯನ್ನೆ ವಿಧಿಸಿದೆನು. ಪತಿವ್ರತಾ ಕೇಶಕರ್ಷಣ, ವಸ್ತ್ರಾಪಹರಣಗಳೆಂಬ ಮಾಹಾಪಾಪಕ್ಕೆ ತಕ್ಕ ಶಿಕ್ಷೆಯಾಗಿ, ರಕ್ತಪಾನವನ್ನು ಮಾಡಿದೆನು. ಹಾಗೆ ಪ್ರತಿಜ್ಞೆಯನ್ನು ಪೂರೈಸದೇ ಹೋಗಿದ್ದರೆ, ನಾನು ಕ್ಷತ್ರಧರ್ಮದಿಂದ ಚ್ಯುತನಾಗುತ್ತಿದ್ದೆನು. ಅಪಕಾರಿಗಳಾದ ಪುತ್ರರನ್ನು ನಿಗ್ರಹಿಸಿ ಇಡಲಾರದೆ, ನಿರಪರಾಧಿಗಳಾದ ನಮ್ಮನ್ನೀಗ ನಿಂದಿಸುವುದು ನ್ಯಾಯವಲ್ಲ. ಶತ್ರುಗಳನ್ನು ಹೆದರಿಸುವುದಕ್ಕಾಗಿಯೂ, ನಾನು ರಕ್ತಪಾನವನ್ನು ಮಾಡಿದಂತೆ ತೋರಿಸಿದೆನು. ವೇದದೃಷ್ಟವಾದ ಧರ್ಮಶಾಸನವು ದುಷ್ಟಜನ ಶಿಕ್ಷಾರ್ಥವೇ ಆಗಿದೆ. ಅಧಿಕಾರಿ ಗಳಲ್ಲದವರಿಗೆ ವೇದಾಧ್ಯಯನದಿಂದ ಜಿಹ್ವಾಚ್ಛೇದವೂ. ಅರ್ಥಾವಧಾರಣದಿಂದ ಹೃದಯ ವಿದಾರಣವೂ, ಶಿಕ್ಷೆಗಳಾಗಿ ವಿಧಿಸಲ್ಪಟ್ಟಿದೆ ಆಗಲಿ ಅಧಿಕಾರಿಗಳಿಗಲ್ಲ. ಅಂತೆಯೇ ಪ್ರತಿಜ್ಞಾ ಪಾಲನರೂಪ ಧರ್ಮವು ದುಷ್ಟರನ್ನು ಕುರಿತೇ ಪ್ರತಿಪಾದಿಸಲ್ಪಟ್ಟಿದೆ' ಎಂದನು.

ಆಗ ಗಾಂಧಾರಿಯು ನಿರುತ್ತರಳಾಗಿ ಸುಮ್ಮನಿದ್ದು, ಮತ್ತೆ ಇಂತೆಂದಳು: 'ಭೀಮಸೇನ! ಕುರುಡರಿಬ್ಬರಿಗೆ ಮುಪ್ಪಿನಲ್ಲಿ ಉರುಗೋಲಾಗಿರಲು ಒಬ್ಬ ಮಗನನ್ನಾದರೂ ಉಳಿಸದೆ, ಎಲ್ಲರನ್ನೂ ಸಂಹರಿಸಿದುದೇತಕ್ಕೆ?' ಎಂದು ಕೇಳಿದ ಗಾಂಧಾರಿಗೆ ಭೀಮಸೇನನಿಂತೆಂದನು: 'ಅಂಬ, ನಿನ್ನ ದುರದೃಷ್ಟದಿಂದ ನಿನ್ನ ಮಕ್ಕಳಲ್ಲಿ ಒಬ್ಬನಾದರೂ ಸುಜನರಿದ್ದಿಲ್ಲ. ಅವರೆಲ್ಲರೂ ಅಪರಾಧಿಗಳೇ ಆಗಿರುವರು. ಶ್ರೀಹರಿ ದ್ವೇಷಿಗಳೂ, ಬಾಲ್ಯದಿಂದಲು ಅನೇಕ ಪಾಪಕರ್ಮ ಗಳನ್ನು ಮಾಡಿದವರೂ ಆದ ನಿನ್ನ ಮಕ್ಕಳು ನನಗೆ ವಧಾರ್ಹರಾದರು. ಮತ್ತು ಶ್ರೀಕೃಷ್ಣನ ನುಡಿಗಳಿಗೆ ಸಿಡಿದೆದ್ದು, ಸಭಾತ್ಯಾಗವನ್ನು ಮಾಡಿದ ದುಷ್ಟಚತುಷ್ಟಯವನ್ನನುಸರಿಸಿ, ಅವರೆಲ್ಲರೂ ಸಭೆಯಿಂದೆದ್ದು ಹೋದರು. ಶ್ರೀಕೃಷ್ಣಾವಮಾನವನ್ನು ಮಾಡಿದ ಅವರೆಲ್ಲರೂ ಸಾಪರಾಧಿಗಳೆನಿಸಿ, ನನಗೆ ವಧ್ಯರೇ ಆದರು. ಅಂದು ಅವರನ್ನು ಹತ್ತಿಟ್ಟು, ಅನ್ಯಾಯದಿಂದ ಕಾಪಾಡಲಾರದ ನೀನು, ಇಂದು ಅವರನ್ನು ಅಂತಕನ ಕೈಲಿಂದಲು ಕಾಪಾಡಲಾರದಿರುವೆ! ಸುಮ್ಮನೆ ನಮ್ಮನ್ನು ನಿಂದಿಸಿ ಫಲವಿಲ್ಲ.'

ಭೀಮಸೇನನ ಮಾತನ್ನಾಲಿಸಿ, ಗಾಂಧಾರಿಯು ಬದುಲಿಡಲಾರದೆ 'ಧರ್ಮಜನೆಲ್ಲಿ?' ಎಂದು ಕೇಳಿದಳು. ಆಗ ಧರ್ಮರಾಜನು, ಪುತ್ರಪೌತ್ರವಧಾರ್ತಳಾದ ಗಾಂಧಾರಿಯನ್ನು ಭಯಭಕ್ತಿಗಳಿಂದ ಸಮೀಪಿಸಿ, 'ತಾಯೇ! ನಿನ್ನ ಪುತ್ರರನ್ನು

ಕೊಂದಪಾಪಿಯು ಶಾಪಾರ್ಹನಿರುವನು. ಸಕಲ ಪೃಥ್ವೀಜನ ನಾಶಕ್ಕೆ ಹೇತುಭೂತನಾದ ನನ್ನನ್ನು ಶಪಿಸು! ನನಗೆ ಜೀನಿತದಲ್ಲಿ ಜಿಗುಪ್ಸೆ ಉಂಟಾಗಿದೆ. ರಾಜ್ಯಧನ ಭೋಗಗಳೆನಗೆ ಬೇಡವಾಗಿದೆ. ಮಿತ್ರಬಂಧು ಹಂತಕನಾದ ನನ್ನನ್ನು ನಿನ್ನ ಶಾಪಾಗ್ನಿಯಿಂದ ಸುಟ್ಟುಬಿಡು!' ಎಂದು ವಂದಿಸಿದನು. ತನ್ನ ಮುಂದೆ ನಿಂತು, ವಂದಿಸಿ ಭೀತನಾಗಿ ಮಾತಾಡುವ ಧರ್ಮರಾಜನಲ್ಲಿ ರೋಷವನ್ನು ತ್ಯಜಿಸಲೆಣಿಸಿ, ಗಾಂಧಾರಿಯು ಸುಮ್ಮನೆ ನಿಟ್ಟುಸಿರಿಡುತ್ತಾ ಕೂತಳು. ಆದರೂ ಅವಳ ರೋಷಾಗ್ನಿಯು ತನ್ನ ಕೆಲಸವನ್ನು ಮಾಡದಿರಲಿಲ್ಲ. ಪಾದಾವನತನಾಗಿ ಬಾಗಿದ್ದ ಧರ್ಮಜನ ಪಾದದ ಬೆರಳುಗಳು ಪಟ್ಟಬಂಧಗಳ ಸಂದಿನ ದ್ವಾರಾ, ಗಾಂಧಾರಿಯ ದೃಷ್ಟಿಗೆ ಬಿದ್ದವು. ತತ್‌ಕ್ಷಣವೇ ಚಂದ್ರರೇಖಾ ಸುಂದರ ನಖನಾದ ಧರ್ಮರಾಜನ ಕಾಲಿನ ಉಗುರುಗಳು ಸುಟ್ಟಂತಾಗಿ ಕಪ್ಪಾದವು. ಧರ್ಮಜನು ಕುನಖನಾದುದನ್ನು ಕಂಡು, ಅರ್ಜುನನು ಭೀತನಾಗಿ, ಶ್ರೀವಾಸುದೇವನ ಹಿಂದೆ ಅಡಗಿ ನಿಂತನು.

ಆಗ ಗಾಂಧಾರಿಯು ವಿಗತಕ್ರೋಧಳಾಗಿ, ಪಾಂಡವರನ್ನು ಸಮೀಪಕ್ಕೆ ಕರೆದು, ತಾಯಿಯಂತೆ ಲಾಲಿಸಿ, ಆಶೀರ್ವದಿಸಿದಳು. ಆಕೆಯ ಅಪ್ಪಣೆಪಡೆದು, ಧರ್ಮರಾಜಾದಿಗಳು, ನಿಜಮಾತೆಯಾದ ಪೃಥಾದೇವಿಯನ್ನು ಸಮೀಪಿಸಿ, ಪಾದಗಳನ್ನು ಮುಟ್ಟಿ ವಂದಿಸಿದರು. ರಣಪ್ರಳಯಾಗ್ನಿಯಿಂದ ಪಾರಾಗಿ ಬಂದ ನಂದನರನ್ನು ಬಹು ಕಾಲವಾದ ಮೇಲೆ ಕಂಡ ತಾಯಿಯ ಕರಳು ಕಲಕಿ, ಕಣ್ಣುಗಳಲ್ಲಿ ನೀರು ಹರಿಯಿತು. ಆಕೆಯು ಮುಖವನ್ನು ಮುಚ್ಚಿಕೊಂಡು ರೋದಿಸಿದಳು. ಪಾಂಡವರಿಗೂ ಕಣ್ಣೀರನ್ನು ತಡೆಯಲಾಗಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಕುಂತಿಯು, ಕಣ್ಣೀರೊರಿಸಿಕೊಂಡು, ಮಕ್ಕಳನ್ನು ನೋಡಿದಳು. ಕ್ಷತವಿಕ್ಷತಗಾತ್ರರಾದ ಪುತ್ರರನ್ನು ಕಂಡಾಗ, ಆಕೆಯು, ಉಳಿದು ಬಂದ ಮಕ್ಕಳನ್ನು ತಂದೊಪ್ಪಿಸಿದ, ಶ್ರೀವತ್ಸಲನಾದ, ವಾಸುದೇವನಿಗೆ ಕೃತಜ್ಞಳಾಗಿ, ಮನಸಾ ನಮಸ್ಕರಿಸಿದಳು. ಒಬ್ಬೊಬ್ಬರನ್ನಾಗಿ ಕರೆದಪ್ಪಿ ಮೈದಡವಿ, ಮೂಸಿ, ಕುಂತೀದೇವಿಯು ತನ್ನ ಆಧಿಯನ್ನು ಕಳೆದುಕೊಂಡಳು. ಆಗ ಮಕ್ಕಳನ್ನು ಕಳೆದುಕೊಂಡು, ಕಣ್ಣೀರಿಂದ ತನ್ನ ಕಾಲನ್ನು ತೊಯಿಸುವ ಕೃಷ್ಣಾದೇವಿಯು ಕುಂತಿಯ ಕಣ್ಣಿಗೆ ಕಾಣಿಸಿದಳು. ''ಆರ್ಯೇ! ಸೌಭದ್ರನೆಲ್ಲಿ? ನಿನ್ನ ಮಕ್ಕಳೆಲ್ಲಿ?'' ಎಂದು ಕೇಳಿದರೆ, ಏನೆಂದು ಉತ್ತರಿಸಲಿ? ಮತ್ತೆ ಅವರನ್ನು ತಂದು ಎಂತು ತೋರಿಸಲಿ? ಮೃತ್ಯುವಿನ ಬಾಯಲ್ಲಿ ಮಕ್ಕಳನ್ನು ನೂಕಿಬಂದ ನನ್ನ ಮುಖವನ್ನು ನಿನಗೆಂತು ತೋರಿಸಲಿ? ಪುತ್ರರಹಿತಳಾದ ನನಗೆ ಯಾವ ರಾಜ್ಯದಿಂದೇನು? ಯಾವ ಭೋಗಗಳಿಂದೇನು?' ಎಂದು ರೋದಿಸುವ ದ್ರುಪದನಂದಿನಿಯನ್ನು ಕೈಪಿಡಿದು ಮೇಲೆತ್ತಿ, ಕಣ್ಣೀರೊರಿಸಿ, ಕುಂತಿಯು ಸಮಾಧಾನಪಡಿಸಿದಳು. ಆದರೂ ಆಕೆಗೂ ತಡೆಯಲಾಗದಷ್ಟು ದುಃಖವಾಗಿ, ಕುಂತಿಯು ತಾನೂ ರೋದಿಸುತ್ತಾ, ಸಮಾನ ವ್ಯಸನಳಾದ ಗಾಂಧಾರಿಯ ಕಡೆಗೆ ದ್ರೌಪದ್ಯಾದಿ ಸ್ತ್ರೀಜನರನ್ನು ಕರೆದುಕೊಂಡು ನಡೆದಳು.

ಗಾಂಧಾರಿಯು 'ಪುತ್ರಿ! ಅಳಬೇಡಮ್ಮ! ನೋಡೆನ್ನ ಕಡೆ! ನಿನ್ನಂತೆ ಪುತ್ರರನ್ನೆಲ್ಲ

ಕಳೆದುಕೊಂಡೂ, ಗುಂಡಿನಂತೆ ಬದುಕಿರುವೆನು. ದೈವೀದುರ್ವಿಪಾಕವೇ ಹೀಗಿತ್ತೆಂದು ತೋರುತ್ತಿದೆ. ವಿದುರನು ನುಡಿದಂತೆ, ದುರ್ಯೋಧನ ವ್ಯಾಜದಿಂದ ಲೋಕನಾಶವಾಗಿ ಹೋಯಿತು. ಶ್ರೀಕೃಷ್ಣನು ಸಂಧಿಭಂಗವಾದಾಗಲೇ ನುಡಿದಂತೆ, ಸರ್ವರಾಜನ್ಯರಾದಿ ಪ್ರಜರೂ ನಷ್ಟರಾದರು. ಆಗಬಾರದುದಾಗಿ ಹೋಯಿತು! ಯಾರೇನೂ ಮಾಡಲಾರದ ವಿಷಯದಲ್ಲಿ ಶೋಕಿಸಿ, ಫಲವಿಲ್ಲ. ಸಂಗ್ರಾಮರಂಗದಲ್ಲಿ ನಿಹತರಾದ ವೀರರಿಗಾಗಿ ಅಳಬಾರದಂತೆ! ಅತ್ತು ಮಾಡುವುದಾದರೇನು? ನನ್ನಂತೆ ಶೋಕಾರ್ತಳಾದ ನಿನ್ನನ್ನು ನಾನೆಂತು ಸಮಾಧಾನಪಡಿಸಲಿ? ನನ್ನನ್ನು ನೀನೇನು ನುಡಿದು ಸಮಾಧಾನಪಡಿಸುವೆ? ಭರತಕುಲ ವನಕ್ಕೆ ನಾನೇ ಕೈಯಾರ ಕಿಚ್ಚಿಟ್ಟು, ಈಗ ರೋದಿಸಿ ಫಲವೇನು? ನನ್ನ ದುಷ್ಟಪುತ್ರರಿಂದ ಇಷ್ಟನರ್ಥವಾಯಿತು' ಎಂದು ದ್ರೌಪದೀದೇವಿಯೇ ಮುಂತಾದ ತರುಣೀಜನವನ್ನು ಸಮಚಿತ್ತರನ್ನಾಗಿಸಿದಳು.

ಆದರೂ ಅವಳ ಕೋಪವಹ್ನಿಯು ಕಿಂಚಿಚ್ಛೇಷವಾಗಿತ್ತು. ಆಕೆಯ ತಪೋಬಲವು ಆಕೆಯ ಯೋಗ್ಯತೆಗೆ ಹೆಚ್ಚಾಗಿತ್ತು. ಕುರುಡನಾದ ಗಂಡನ ಕೈಪಿಡಿದು ಗಾಂಧಾರಿಯು ಕಣ್ಣುಗಳಿಗೆ ಪಟ್ಟಬಂಧನವನ್ನಿಟ್ಟು, ಏಕಪತ್ನಿ ವ್ರತದಿಂದ, ಕುರುಡಿಯಂತಾಗಿ, ಮಾಡಿದ ತಪೋವಿಭವದಿಂದ, ಆಕೆಯ ಪುಣ್ಯವು, ಧೃತರಾಷ್ಟ್ರನ ಪುಣ್ಯವನ್ನು ಮೀರಿತ್ತು. ಅದು ಎಂದಿಗಾದರೂ ಸುಜನಬಾಧಕವಾಗುಬಹುದೆಂದು, ಶ್ರೀಭಗವಾನ್ ವೇದವ್ಯಾಸನು, ಆಕೆಯ ಹೆಚ್ಚಿನ ಪುಣ್ಯವನ್ನು ಕಳೆಯಲೆಣಿಸಿದನು. ಮಹಜ್ಜನಾಪರಾಧರಿಂದ ಎಂತಹ ಸುಜನರೂ ಕ್ಷೀಣಪುಣ್ಯರಾಗುವರು. ಶ್ರೀಕೃಷ್ಣನಲ್ಲಿ ಕುಪಿತಳಾಗಿ ಶಾಪವನ್ನು ಕೊಡುವುದರಿಂದ ಗಾಂಧಾರಿಯ ಅಧಿಕ ಪುಣ್ಯ ಕ್ಷಯವಾಗಿ, ಪಾಂಡವ ಕ್ಷೇಮವೂ ಸಂಪಾದಿತವಾಗುವುದು. ಮಹಾಸಾಧ್ವಿಯು, ಧರ್ಮಿಷ್ಠಳು ಆದ ಗಾಂಧಾರಿಯು ಬಹುಶೋಕಕ್ಕೆ ಆಧೀನಳಾಗದೇ, ಶ್ರೀಕೃಷ್ಣನನ್ನು ಶಪಿಸುವಷ್ಟು ಅವಿವೇಕಿಯಾಗಳು. ಅವಳಿಗೆ ಶೋಕಾಧಿಕ್ಯವಾಗಬೇಕಾದರೆ, ಪುತ್ರಮೃತಶರೀರಗಳನ್ನು ನೋಡಬೇಕು. ಪಟ್ಟಬಂಧನದಲ್ಲಿದ್ದ ನೇತ್ರಗಳಿಂದ, ಆಕೆಯು ನೋಡಲಾರಳು. ಆದುದರಿಂದ ಅವಳಿಗೆ ದಿವ್ಯದೃಷ್ಟಿಯನ್ನಿತ್ತು, ಶೋಕವಹ್ನಿಯನ್ನು ಉರಿದೆಬ್ಬಿಸಿ, ಶ್ರೀಕೃಷ್ಣನಿಗೆ ಶಾಪವನ್ನು ಕೊಡಿಸಿ, ಅವಳ ಅಧಿಕ ಪುಣ್ಯವನ್ನು ಕಳೆದು ಸ್ವಪತಿಯಕಿಂತಲೂ ಕಡಿಮೆ ಪುಣ್ಯವಂತಳನ್ನಾಗಿ ಅಂದರೆ ಸ್ವಯೋಗ್ಯತಾಸಮ ಪುಣ್ಯವಂತಳನ್ನಾಗಿ ಮಾಡಬೇಕೆಂದು, "ಏ ಧಮಾನದ್ವಿಟ್, ಉಭಯಸ್ಯರಾಜಾ" ಎಂದು ವೇದದಲ್ಲಿ ಪ್ರತಿಪಾದಿತನಾದ, ನಿಷ್ಪಕ್ಷಪಾತಿ ಭಗವಂತನು, ವೇದವ್ಯಾಸರೂಪದಿಂದ ಗಾಂಧಾರಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದನು. ಅತಿ ದೂರದಲ್ಲಿರುವ ಭೀಕರದೃಶ್ಯಗಳೆಲ್ಲವೂ ಚನ್ನಾಗಿ ಕಾಣಿಸುವಂತೆ ಮಾಡಿದ ದೇವನ ಸಂಕಲ್ಪದಂತೆ, ಗಾಂಧಾರಿಯು ಎಲ್ಲವನ್ನೂ ಕಂಡು, ಶೋಕವಶಳಾದಳು.

## ೫. ಗಾಂಧಾರೀ ವಿಲಾಪ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

"ರಾಜನ್! ಶ್ರೀವೇದವ್ಯಾಸನಿತ್ತ ದಿವ್ಯದೃಷ್ಟಿಯಿಂದ ಗಾಂಧಾರಿಯು ಸರ್ವನಾಶವನ್ನು ಚನ್ನಾಗಿ ನೋಡಿದಳು. ದೂರದಲ್ಲಿ ಬಿದ್ದ ಪುತ್ರಾದಿ ಶರೀರಗಳೂ ಹತ್ತಿರವಿದ್ದಂತೆ ಕಂಡು, ಅವಳ ಶೋಕವು ತೀವ್ರವಾಯಿತು. ಅಸ್ಥಿರಾಶಿಗಳನ್ನು, ಕೇಶಪಾಶಗಳನ್ನು, ರಕ್ತನದಿಗಳನ್ನು ನೋಡಿದ ಗಾಂಧಾರಿಗೆ, ಭಯಶೋಕಗಳು ಉಕ್ಕೇರಿ ಬಂದು ಮೈ ಪುಲಕಿತವಾಯಿತು. ತಲೆಯಿಲ್ಲದ ದೇಹಗಳನ್ನೂ, ತಲೆಗಳನ್ನೂ, ಕಡಿದುಬಿದ್ದ ಕೈಕಾಲುಗಳನ್ನೂ, ಸತ್ತುಬಿದ್ದ ಆನೆಕುದುರೆಗಳನ್ನೂ, ಮುರಿದುಬಿದ್ದ ರಥಗಳನ್ನೂ, ಖಡ್ಗಾದಿ ವಿವಿಧಾಯುಧಗಳನ್ನೂ ನೋಡುತ್ತಾ, ಧೃತರಾಷ್ಟ್ರಪರಿವಾರವು ಮುಂದೆ ಸಾಗಿ, ಆಯೋಧನ ಭೂಮಿಯ ಮಧ್ಯವನ್ನು ಸೇರಿತು. ಶ್ಮಶಾನದಂತೆ ಭಯಂಕರವಾಗಿದ್ದ ರಣರಂಗವನ್ನೂ, ಅಲ್ಲಿ ಬಿದ್ದಿದ್ದ ಬಂಧು ಜನರನ್ನೂ ಕಂಡು ಕುರುನಾರಿಯರು ಕುರರಿಗಳಂತೆ ಅಳುತ್ತಾ, ರಥಗಳಿಂದಿಳಿದು, ತಂತಮ್ಮ ಪತಿ, ಪುತ್ರ, ಭ್ರಾತೃಶರೀರಗಳ ಹತ್ತಿರ ಕೂತರು. ಕೆಲವರು ದುಃಖಾವೇಗದಿಂದ ಮೂರ್ಛಿತ ರಾದರು, ಕೆಲವರು ತಲೆಚಚ್ಚಿಕೊಂಡು, ಎದೆ ಬಡಿದುಕೊಳ್ಳುತ್ತಾ, ರೋದಿಸಿದರು.

ದಿವ್ಯದೃಷ್ಟಿಯಿಂದ ಸಕಲವನ್ನು ನೋಡಿದ ಗಾಂಧಾರಿಯು ಶೋಕಾರ್ತಳಾಗಿ ಶ್ರೀಕೃಷ್ಣ ನನ್ನು ಕರೆದು ಪುರುಷೋತ್ತಮನ ಮುಂದೆ ತನ್ನ ದುಃಖವನ್ನು ತೋಡಿಕೊಂಡಳು. "ಪುಂಡರಿಕಾಕ್ಷ! ನೋಡೆನ್ನ ಸೊಸೆಯರನ್ನು! ಪತಿಗಳನ್ನು ಕಳೆದುಕೊಂಡು, ಕುರರಿಗಳಂತೆ ಅಳುವ ಅಬಲೆಯರ ಗೋಳು ಕಲ್ಲನ್ನೂ ಕರಗಿಸುವಂತಿದೆ. ಪುರುಷವ್ಯಾಘ್ರರಾದ ಕರ್ಣ ದ್ರೋಣಾಭಿಮನ್ಯು ದ್ರುಪದಶಲ್ಯರು ಉರಿದು ಆರಿದ ಅಗ್ನಿಗಳಂತೆ, ನಿಸ್ತೇಜಸ್ಕರಾಗಿ ಬಿದ್ದಿರುವರು. ವೀರರಿಟ್ಟಿದ್ದ ಅಂಗದ ಕೇಯೂರವಲಯಕುಂಡಲ ಕಿರೀಟಾದ್ಯಾಭರಣಗಳು ಚೆಲ್ಲಾಪಿಲ್ಲಿಯಾಗಿ ಹರಡಿಬಿದ್ದಿವೆ. ವೀರರ ಹಸ್ತಗಳು ಕಡಿದುಬಿದ್ದಿದ್ದರೂ, ಹಿಡಿದ ಖಡ್ಗ, ಶಕ್ತಿ, ಗದಾ, ತೋಮರ, ಪರಿಘ, ಶರಶರಾಸನಾದಿ ವಿವಿಧಾಯುಧಗಳನ್ನು ಬಿಡದೆ, ಹಾಗೇ ಹಿಡಿದಿವೆ. ಅವರ ತಲೆಗಳು ಈಗಲೂ ಬಿರಿಗಣ್ಣಿನಿಂದಲು, ಕಚ್ಚಿದ ತುಟಿಯಿಂದಲು, ಭಯಂಕರವಾಗಿದೆ.

ಅಲ್ಲಿ ನೋಡು! ಕ್ರೂರಮೃಗಗಳು ಶವಗಳನ್ನು ಕಿತ್ತು, ತಿನ್ನುತ್ತಿವೆ. ಕಂಕಗೃಧ್ರಾದಿ ಪಕ್ಷಿಗಳು ಮಾಂಸಭಕ್ಷಣನಿರತವಾಗಿವೆ. ಸತ್ತುಬಿದ್ದಿರುವ ಪುತ್ರಾದಿಗಳನ್ನು ಕಂಡು, ನನ್ನ ಎದೆ ಉರಿಯುತ್ತಿದೆ. ಶೋಕಾಗ್ನಿಯಿಂದ ನಾನು ಸುಟ್ಟುಬೀಳುವೆನು. ಜಯದ್ರಥನನ್ನು, ದ್ರೋಣಕರ್ಣರನ್ನು, ಅಭಿಮನ್ಯುವಿನನ್ನು ನೋಡಿ, ಇಂಥ ಮಹಾವೀರರೆಂತು ಸತ್ತರೆಂದು ಬುದ್ಧಿಭ್ರಮಿಸುತ್ತದೆ. ದುರ್ಯೋಧನವಶರಾಗಿ ಬಂದು, ಕುರುಕ್ಷೇತ್ರದಲ್ಲಿ ನಿಂತು, ಕಡಿದಾಡಿ, ಕೋಟ್ಯಾದಿ ವೀರಭಟರು ನಿಹತರಾಗಿರುವುದನ್ನು ನೋಡಿ, ಅವರ ಬಂಧುಗಳಿಗೇನಿನ್ನು ದಿಕ್ಕೆಂದು ಚಿಂತಿಸುವ ನನ್ನ ಹೃದಯದ ಬಡಿತ ನಿಂತುಹೋಗುತ್ತಿದೆ. ನನಗೆ ಹುಚ್ಚುಹಿಡಿದಂತಾಗಿದೆ. ಕೃಷ್ಣ! ಎಂತಹ ಪಾಪಿ ನಾನು! ಎಲ್ಲ ಸುತರನ್ನೂ ಕಳೆದುಕೊಂಡೆನಲ್ಲ! ಮೃದುಶಯನದಲ್ಲಿ ಮಲಗಬೇಕಾದವರು, ರಣಭೂಮಿಯ ಬರಿನೆಲದಲ್ಲಿ ಬಿದ್ದಿರುವರಲ್ಲ! ಹಾ! ಪರಿವಾರ ಸೇವಿತರಾಗಿದ್ದವರು ಈಗ ಕ್ರೂರ ಮೃಗಪಕ್ಷಿ ಭಕ್ಷಿತರಾಗುತ್ತಿರುವರಲ್ಲ! ಚಂದನಾಗರು ಗಂಧವನ್ನು ಹಚ್ಚಿದವರು, ರಕ್ತದ ಕೆಸರಿನಲ್ಲಿ, ಮಣ್ಣಿನಲ್ಲಿ ಹೊರಳಾಡುತ್ತಿರು

ವರು. ಇವರ ಮಾಲೆಗಳು ಅಸ್ತವ್ಯಸ್ತವಾಗಿವೆ. ಇವರ ಶಸ್ತ್ರಗಳು ಹರಡಿಬಿದ್ದಿವೆ. ಇವರ ರಥಗಳು ಮುರಿದುಬಿದ್ದಿವೆ. ವಂದಿಮಾಗಧರ ಸ್ತುತಿಪಾಠಗಳನ್ನು ಕೇಳಬೇಕಾದವರು, ತಮ್ಮ ವಿಯೋಗದಿಂದ ಅಳುವ ತರುಣಿಯರ ರೋದನವನ್ನು ಕೇಳುತ್ತಿರುವರು. ಅತ್ತತ್ತ ಕುರುನಾರಿಯರು ಅಶ್ರುಮಲಿನ ಮುಖಗಳನ್ನು ಕೈಲಿ ಮುಚ್ಚಿ, ತಾವೂ ಸತ್ತವರಂತೆ ನಾಥರ ಮುಂದೆ ಕೂತಿರುವರು.

ಗೌರಾಂಗಿಯರು, ನವಯೌವನವತಿಯರು, ಕುಲಸಂಪನ್ನೆಯರು ಆದ ದುರ್ಯೋಧನ ಸತಿಯರು ತಮ್ಮ ಬದುಕಿನ್ನು ಭಾರವಾಯಿತೆಂದು, ರೋದಿಸುವ ಶಬ್ದವನ್ನು ನಾನೆಂತು ಕೇಳಲಿ? ಅವರನ್ನೆಂತು ಸಂತೈಸಲಿ? ಅತ್ತತ್ತು ಅವರು ತಮ್ಮ ಜೀವಿತವನ್ನು ಬಿಟ್ಟು ಬಿಡುವರಿದು ನಿಜ. ತಲೆಗಳನ್ನು ತೊಡೆಗೆ ಆನಿಸಿ, ಶಿಲಾಪ್ರತಿಮೆಯಂತೆ ಕೂತಿರುವ ಕುರುನಾರಿಯರನ್ನಾರು ಸಮಾಧಾನಪಡಿಸಬಲ್ಲರು? ಚಿಂತಾಜಡರಾಗಿ ನಿಂತ ಕಾಂತೆಯರ ಸಂತಾಪವಹ್ನಿಯು ಆರುವುದೆಂತು? ಪಿತೃ, ಪುತ್ರ, ಪತಿಗಳ ಮೃತಿಯನ್ನು ಕಂಡು, ಎದೆ ಹೊಡೆದುಕೊಂಡು ಅಳುವ ಅಬಲೆಯರನ್ನು ಆತ್ಮಹತ್ಯೆ ಮಾಡಿಕೊಳ್ಳದಂತೆ ವಾರಿಸುವುದೆಂತು? ಬಿದ್ದ ಶವರಾಶಿಯನ್ನು ದಾಟಲಾರದೆ, ತಮ್ಮವರನ್ನು ಹುಡುಕಿ ಕಾಣದಿರುವ ಕುಮಾರಿಯರನ್ನು ಕೈಪಿಡಿದು ಕರೆದುಕೊಂಡು, ಕಾಂತರನ್ನು ಸೇರಿಸಲು, ಕೃತಾಂತನೊಬ್ಬನೇ ಸಮರ್ಥನಾಗಿರುವನು. ಎಂತಹ ವ್ಯಸನಕ್ಕೀಡಾದೆವು! ಜನಾರ್ದನ! ಇವರ ದುರ್ಗತಿಗೆ ಕಾರಣೀಭೂತನಾದ ದುರ್ಯೋಧನನನ್ನು ಪಡೆದ ನನ್ನಕಿಂತಲು ಪಾಪಿನಿ ಮತ್ತಾರು? ಪೂರ್ವ ಜನ್ಮಗಳಲ್ಲಿ ಮಾಡಿದ ಮಹಾ ಪಾಪದಿಂದ, ನಾನು ಪುತ್ರಶತವನ್ನು ನುಂಗಿ, ಗುಂಡಾಗಿ ಸಾಯದೆ ಕೂತಿರುವಂತಾಯಿತು. ಆದರೆ ಇವರಿಗೀ ಗತಿ ಬರಲು, ಇವರು ಯಾವ ಪಾಪವನ್ನು ಮಾಡಿರುವರು? ನನ್ನ ಪಾಪದ ವಿಷ ಫಲವನ್ನು ಇವರೆಲ್ಲರೂ ನನ್ನ ಬಂಧುಗಳಾದುದರಿಂದ ಈಗ ಉಣ್ಣಬೇಕಾಯಿತೇ?

ಹಾ ದುರ್ಯೋಧನಕುಮಾರ! ಬಾರಯ್ಯಾ! ಏಕೆ ಮಲಗಿರುವೆ? ಮೈಎಲ್ಲ ರಕ್ತವಾಗಿದೆ ಏಕೆ? ಬಂದು ವಂದಿಸು! ಆಲಿಂಗಿಸು ನನ್ನನ್ನು! ಹಾ ಪುತ್ರ! ಇನ್ನೆಲ್ಲಿಯ ಪುತ್ರ! ಇನ್ನಾರೆ ನನಗೆ ದಿಕ್ಕು!

ಶ್ರೀಕೃಷ್ಣ! ಯುದ್ಧಕ್ಕೆಂದು ಹೊರಟ ದುರ್ಯೋಧನನು ಬಂದು ವಂದಿಸಿ, 'ಅಂಬ, ನನಗೆ ಜಯವಾಗಲೆಂದು ಹರಸು!' ಎಂದು ಪ್ರಾರ್ಥಿಸಿದನು. ನಾನು ಪುರುಷ ವ್ಯಾಘ್ರ! ಹೋಗು! ಕಡಿದಾಡು! ಶತ್ರುಸಂಹಾರವನ್ನು ಸಾಧಿಸು! ಆದರೆ ನಿನಗೆ ಜಯವಾಗದು. ನನ್ನ ಮನಸ್ಸು ನುಡಿಯುತ್ತಿದೆ. ಧರ್ಮವಿದ್ದಲ್ಲಿ ಜಯವಾಗುವುದು. ಮಗನೇ! ಮರಣಕ್ಕಂಜಬೇಡ! ಶತ್ರುಗಳಿಗೆ ಬೆನ್ನು ತೋರಿಸಬೇಡ! ಶಸ್ತ್ರಜಿತವಾದ ಲೋಕವನ್ನು ಹೊಂದುವೆ! ಹೋಗೆಂದು ನುಡಿದು ಕಳಿಸಿದೆನು. ದೈವವೇ ಅಂತು ನನ್ನ ಬಾಯಿಂದ ನುಡಿಸಿರಬೇಕು! ದುರ್ಯೋಧನಾದಿಗಳ ಮರಣಕ್ಕೆ ನಾನು ದುಃಖಿಸುವುದಿಲ್ಲ. ಆದರೆ ಪುತ್ರಹೀನನಾಗಿ, ದಿಕ್ಕೆಟ್ಟ ಅಂಧ ರಾಜನಿಗಾಗಿ ಶೋಕಿಸುವೆನು.

ಕೃಷ್ಣ! ನೋಡೀ ಕುರುರಾಜನನ್ನು! ಯುದ್ಧದುರ್ಮದನಾಗಿ, ಕಾದಿ, ವೀರಶಯನದಿ

ಮಲಗಿರುವನು. ಮೂರ್ಧಾಭಿಷಿಕ್ತರಾದ ರಾಜನ್ಯರ ಒಡೆಯನಿಂದು ನೆಲದಿ ಬಿದ್ದಿರುವನು. ಎಂತಹ ಕಾಲ ವಿಪರ್ಯಯ! ಸುಂದರ ಪರಿಚಾರಿಕೆಯರು ಬೀಸಣಿಕೆಗಳಿಂದ ಬೀಸುತ್ತಿರಲು, ಸುಖಶಯನದಲ್ಲಿ ಮಲಗಿದ್ದವನು, ಕಂಕಗೃಧ್ರಗಳ ರೆಕ್ಕೆಗಳ ಗಾಳಿಯಲ್ಲಿ ಉಟ್ಟ ವಸನವು ಹಾರುತ್ತಿರುಲು, ಪ್ರಾಣರಹಿತನಾಗಿ ಬಿದ್ದಿರುವನು. ನಾರೀಜನ ಲಾಲಿತನನ್ನು ನರಿಗಳು ಕಿತ್ತು ತಿನ್ನುತ್ತಿವೆ. ಸಿಂಹಹತವಾದ ಭದ್ರಗಜದಂತೆ, ಭೀಮಹತನಾದ ದುರ್ಯೋಧನನು ಭಿನ್ನವಕ್ಷನಾಗಿರುವನು. ಹನ್ನೊಂದ ಕ್ಷೌಹಿಣಿಗಳ ಸೇನೆಯೂ, ಇವನನ್ನು ಉಳಿಸಿಕೊಳ್ಳಲಾರದೆ ಹೋಯಿತಲ್ಲ! ವಿದುರ ಭೀಷ್ಮಾದಿ ವೃದ್ಧರ ಹಿತನುಡಿಗೆ ಕಿವಿಗೊಡದೆ, ಮಂದಬುದ್ಧಿಯಾಗಿ ಮರಣವನ್ನಪ್ಪಿ, ಹದಿಮೂರು ವರ್ಷಗಳ ಕಾಲವೂ ಆಳಿದ ಭೂಮಂಡಲವನ್ನು ಶತ್ರುಗಳಿಗೆ ಕೊಟ್ಟುಬಿಟ್ಟೆನು. ನಿನ್ನೆ ರಾಜನೆನಿಸಿದ್ದ ನನ್ನ ಪುತ್ರನಿಂದು ರಣರಂಗದಿ ಶವವಾಗಿ ಬಿದ್ದಿರುವನು.

ಪುತ್ರವಧೆಕಿಂತಲು, ಪುತ್ರವಧುವಾದ ಭಾನುಮತಿಯ ದಶೆಗೆ ನಾನು ಶೋಕಿಸುತ್ತಿರುವೆನು. ಪುತ್ರಭರ್ತೃಮರಣದಿಂದ ನೊಂದ ಅವಳಿನ್ನು ಬದುಕಿರಲಾರಳು. ಲಕ್ಷ್ಮಣನ ಮೈದಡವಿ, ಕಣ್ಣೀರಿಂದ ತೋಯಿಸುವ ಭಾನುಮತಿಯನ್ನೆಂತು ಸಂತೈಸಲಿ? ದುರ್ಯೋಧನನನ್ನಪ್ಪಿ, ಧೂಳಿಯಲ್ಲಿ ಹೊರಳಾಡುವ ಸೊಸೆಗೆ ಏನು ಸಮಾಧಾನವಚನವನ್ನು ನುಡಿಯಲಿ? ತಲೆಯನ್ನು ಚಚ್ಚಿಕೊಂಡು ಅಳುವ ಸೊಸೆಯರನ್ನೆಂತು ಸಮುದಾಯಿಸಲಿ? ಮಾಧವ! ನೂರು ಮಕ್ಕಳನ್ನು ಮೃತ್ಯುವಿಗೆ ಒಪ್ಪಿಸಿರುವ ನನಗೇಕೆ ಸಾವು ಬರಲೊಲ್ಲದು? ಪ್ರಾಸಾದಾಗ್ರದಲ್ಲಿ ರತ್ನನೂಪುರಗಳನ್ನು ಧರಿಸಿದ ಚರಣಗಳಿಂದ ಸಂಚರಿಸುವ ಮಂದಗಮನೆಯರು, ತಮ್ಮ ಪತಿವಿಯೋಗದಿಂದ ಸಂತಪ್ತರಾಗಿ, ರೋದಿಸುತ್ತಾ, ನನ್ನ ಕಡೆಗೆ ಓಡಿಬರುತ್ತಿರುವರು. ದುಶ್ಶಾಸನ ಪತ್ನಿಯು ಭಯಂಕರ ರಣರಂಗವನ್ನೂ, ಎದೆಸೀಳಿ ಬಿದ್ದ ಗಂಡನನ್ನೂ ನೋಡಿ, ಚಿಟ್ಟನೇ ಚೀರಿ, ಮೂರ್ಛೆಬಿದ್ದಿರುವಳು. ಕುರು ಸ್ತ್ರೀಜನದ ಆಕ್ರಂದನವು ದಾರುಣವಾಗಿದೆ. ಯೌವ್ವನದ ಹೊಸ್ತಿಲಲ್ಲಿ ಕಾಲಿಟ್ಟು ಸುಖಾನುಭವವನ್ನು ಪೂರ್ಣವಾಗಿ ಪಡೆಯದ ಕುಲಪತಿಯರು, ಲಜ್ಜಾವತಿಯರು, ಬಂದು, ತಮ್ಮ ಪತಿಗಳನ್ನು ತೋರೆಂದರೆ, ನಾನು ಅವರಿಗೆ ಏನುತ್ತರ ಕೊಡಲಿ? ಪಾಪಪುಣ್ಯಗಳ ಫಲವಾದ ದುಃಖ ಸುಖಗಳನ್ನು ಉಣ್ಣದೇ ಇರಲಾಗದು.

'ದುರ್ಯೋಧನ! ಶಕುನಿಯ ಸಹವಾಸವನ್ನು ಬಿಡು! ಕಲಹಪ್ರಿಯನಾದ ಮಾತುಲನಿಂದ ಕೆಡುವೆ! ಅವನು ಪಗಡೆಗಳನ್ನಲ್ಲ! ಪಾಪ ಬೀಜಗಳನ್ನು ಬಿತ್ತಿ, ಆಡುತ್ತಿರುವನು! ಪಾಂಡವರಿಂದಲ್ಲ; ಮೃತ್ಯುವಿನೊಡನೆ ಆಡುತ್ತಿರುವನು. ಬಿಡು ಇವನನ್ನು! ಪಾಂಡವರಿಂದ ಸಂಧಿಮಾಡಿ, ಬದುಕು!' ಎಂದು ಅನೇಕ ರೀತಿಯಿಂದ ನುಡಿದ ನನ್ನ ವಚನಗಳು ದುರ್ಯೋಧನನಿಗೆ ವಿಷಾದವಾದವು.

ಇಲ್ಲಿ ನೋಡು! ಭೀಮನ ಗದಾಘಾತದಿಂದ ವೀಶಿರ್ಣಗಾತ್ರನಾಗಿ ವಿಕರ್ಣನು ಬಿದ್ದಿರುವನು. ಇಲ್ಲಿ ದುರ್ಮುಖ ದುರ್ಮರ್ಷಣರು ಬಿದ್ದಿರುವರು. ಚಿತ್ರಸೇನನಿಲ್ಲಿ ಧೂಳಿಯಲ್ಲಿ ಮಲಗಿರುವನು. ವಿವಿಂಶತಿ ದುಃಸ್ಸಹರೂ ಸತ್ತುಬಿದ್ದಿರುವರು. ಮೃತನಾಗಿದ್ದರೂ

ಅಭಿಮನ್ಯುವಿನ ಮುಖವು ಪ್ರಭಾವಿಲಸಿತವಾಗಿಯೇ ಇದೆ. ಪಾಪ! ಉತ್ತರೆಯ ಗತಿಯೇನು? ನಿನ್ನ ಅಳಿಯನಾಗಿ, ಧನಂಜಯ ಸುತನಾಗಿ, ಅತಿರಥನೆನಿಸಿದ ಅಭಿಮನ್ಯುವೂ ಭೂಮಿಯಲ್ಲಿ ಬಾಳದೇ ಸಾಯಬೇಕೇ? ಅವನನ್ನಾದರೂ ನೀನೇಕೆ ಉಳಿಸಲಿಲ್ಲ? ಅಭಿಮನ್ಯೋ! ನನ್ನನ್ನು ನೋಡಿ ಏಕೆ ನಮಸ್ಕರಿಸದಿರುವೆ? ಎಂದೂ ನನ್ನಮೇಲೆ ಸಿಟ್ಟಾಗದವನಿಂದೇಕೆ ಸಿಟ್ಟಿನಿಂದ ಸುಮ್ಮನಿರುವೆ? ನಿನಗೆ ನನ್ನ ಕುಪುತ್ರರು ಮಾಡಿರುವ ಅಪರಾಧವಿರಬಹುದು! ಆದರೆ ನಾನೇನು ದ್ರೋಹ ಬಗೆದಿರುವೆನು. ಹೇಳು! ವತ್ಸಾ! ಒಂದು ಮಾತಾಡು! ಕುಲದೀಪಕನಾಗಿ ಬೆಳೆಯಬೇಕಾದ ನೀನು, ಅಲ್ಪವಯಸ್ಕನಾಗಿದ್ದಾಗಲೇ, ಉರಿದೆದ್ದು, ನಂದಿಹೋದೆಯಾ? ಆರು ಜನ ಅತಿರಥರು ಬೇಕಾಯಿತೇ, ಇಪ್ಪತ್ತುನಾಲ್ಕು ವರ್ಷದ ಚಿಕ್ಕ ಬಾಲಕನನ್ನು ಕೊಲ್ಲಲು? ನಿನ್ನನ್ನು ಕಳೆದು ಕೊಂಡು, ಪಾರ್ಥರಿನ್ನೆಂತು ಬದುಕುವರು? ಬಾಲ! ಹೋಗಲಿ ಬಿಡು! ನನ್ನನ್ನೂ ನೀನಿರುವೆಡೆಗೆ ಕರೆದುಕೊಂಡು ಹೋಗು!

ಕೃಷ್ಣ! ಕರ್ಣನಿಲ್ಲಿ ಬಿದ್ದಿರುವನು. ಇದಿಗೋ ಆಚಾರ್ಯದ್ರೋಣನು! ಹಾ! ಎಂತಹ ವೀರರಿಗೆಂತಹ ಗತಿ ಬಂತು! ಯಾವ ವೀರನ ಸಹಾಯದಿಂದ ನನ್ನ ಮಗನು ಜಯಾಶೆಯ ನ್ನಿಟ್ಟು ಸೆಣಸಿದನೋ, ಯಾವ ಶೂರನ ಅಸ್ತ್ರಪಾಂಡಿತ್ಯಕ್ಕೆ ಪಾಂಡವರು ಹೆದರುತ್ತಿದ್ದರೋ, ಅಂತಹ ಕರ್ಣನೀಗ ರಣನಿಹತನಾಗಿರುವನು. ಆವಂತೀರಾಜರಾದ ವಿಂದಾನುವಿಂದರು, ಕಾಂಬೋಜಾಧಿಪನು ಇಲ್ಲಿ ಬಿದ್ದಿರುವರು. ಇಲ್ಲಿ ಜಯದ್ರಥನಿರುವರು! ಅಕಟಾ! ಇವನ ತಲೆ ಏನಾಯಿತು? ಅರಣ್ಯವಾಸದಲ್ಲಿ ದ್ರೌಪದಿಯನ್ನು ಅವಮಾನಿಸಿದಾಗಲೇ ಇವನು ಭೀಮಗದೆಗೆ ತುತ್ತಾಗಬೇಕಿತ್ತು . ಅಭಿಮನ್ಯು ಮೃತಿಯನ್ನು ಸಾಧಿಸಲು ಇವನು ಬದುಕಿದ್ದಾನೆಂದು ತೋರುತ್ತಿದೆ. ಇಂತಹ ದುಷ್ಟಪತಿಯನ್ನು ಕಟ್ಟಿಕೊಂಡು, ನನ್ನ ಮಗಳೇನು ಸುಖಪಟ್ಟಳು! ದುಸ್ಸಲೆಗಿನ್ನೇನು ಗತಿ? ಅವಳನ್ನೆಂತು ಸಮಾಧಾನಪಡಿಸಲಿ?

ಯುದ್ಧದಲ್ಲಿ ಜಯಾಪಜಯಗಳು ನಿಶ್ಚಿತವಲ್ಲ. ಭೀಷ್ಮನಂತಹ ಪರಾಕ್ರಮಿ, ಇಂದು ಶರತಲ್ಪದಲ್ಲಿ ಮಲಗಿರುವನು. ಮಹಾಸ್ತ್ರವೇದಿಯೂ, ಧನುರಾಚಾರ್ಯನೂ ಆದ ದ್ರೋಣನಿಗೆ, ರಥನೀಡಗಳೇ ಚಿತಿಕಾಷ್ಠಗಳಾಗಿರುವವು. ವೀರರಿಗೆ ದುರ್ನಿರೀಕ್ಷ್ಯರಾದ ಕರ್ಣಶಲ್ಯರನ್ನು ಕಂಕಗೃಧ್ರಗಳು ಕಿತ್ತುತಿನ್ನುತ್ತಿವೆ. ದ್ರೋಣಶಿಷ್ಯರಾದಿ ದ್ವಿಜವರರು ಕೃಪಿಯನ್ನು ಕರೆದುಕೊಂಡು ಬಂದು, ದ್ರೋಣಸಂಸ್ಕಾರವನ್ನು ಮಾಡಿ, ಸಾಮಮಂತ್ರಗಳನ್ನು ಉಚ್ಚರಿಸುತ್ತಾ, ಗಂಗೆಯಲ್ಲಿ ತಿಲೋದಕಗಳನ್ನೀಯಲು ಹೊರಟಿರುವರು. ಭೂರಿಶ್ರವನು ಕೈಪಿಡಿದು ಪ್ರಾಯೋಪ ವಿಷ್ಟನಾಗಿರಲು, ಅವನನ್ನು ಕೊಂದ ಸಾತ್ಯಕಿಯನ್ನು ನಿಂದಿಸುತ್ತಾ, ಭೂರಿಶ್ರವಪತ್ನಿಯು ಗೋಳಾಡುತ್ತಿರುವಳು. ಗಾಂಧಾರ ರಾಜನಾದ ಶಕುನಿಯನ್ನು, ಸಹದೇವನು ಮಾವನೆಂದು ಮನ್ನಿಸದೆ ಕೊಂದನೆಂದರೆ, ಇನ್ನು ಇದಕ್ಕಿಂತಲೂ ಪೌರುಷ್ಯವಿದೆಯೇ? ಧರ್ಮಯುದ್ಧದಲ್ಲಿ ನಿಹತರಾದ ವೀರರಿಗೆ ಸ್ವರ್ಗವಾಗುವುದೆಂಬುವರು. ಶಸ್ತ್ರಜಿತವಾದ ಲೋಕಗಳು, ಅಕ್ಷವಿದ್ಯಾವಿದ್ಯನೂ, ಮಾಯಾವಿಯೂ ಆದ ಶಕುನಿಗೂ ಲಭಿಸಿವೆಯೇ?

ಕಾಂಬೋಜ, ಜಯತ್ಸೇನ, ಚೇದಿರಾಜ, ದ್ರುಪದ, ವಿರಾಟರು, ಪುತ್ರಮಿತ್ರ

ಸಹಿತರಾಗಿ ಮಡಿದು ರಣಮಂಡಲವನ್ನು ದೇಹಗಳಿಂದಲೂ, ಸ್ವರ್ಗವನ್ನು ಆತ್ಮಗಳಿಂದಲೂ ಅಲಂಕರಿಸಿರುವರು. ಯಾರು ಉಳಿದವರೆಂದು ಹುಡುಕಿ ನೋಡಿದರೂ, ಯಾರೂ ಜೀವ ದಿಂದಿಲ್ಲವೆಂದು, ಅವರ ಶರೀರಗಳು ಸಾರುತ್ತಿವೆ! ಕೃಷ್ಣ! ಎಂತಹ ಭೀಕರದೃಶ್ಯ! ಎಷ್ಟು ಜನ ನಾಶ! ಏನು ರಣಕಾಠಿನ್ಯ! ದೈವವು ಸಾಧಿಸಲಾರದ ಕಾರ್ಯವಾವುದೂ ಇಲ್ಲ ಅಂದೇ ವಿದುರನು 'ಪುತ್ರರಲ್ಲ; ಶತ್ರುಗಳು; ಇವರಲ್ಲಿ ಅಭಿಮಾನವನ್ನು ಬಿಡು!' ಎಂದು ಹೇಳಿದನು. ಪುತ್ರರು ಶತ್ರುಗಳಂತಾಗಿ ಸರ್ವನಾಶವನ್ನು ಸಾಧಿಸಿದರು. ಆದರೆ ನಾನು ಅಭಿಮಾನವನ್ನು ಬಿಡಲಾರದೆ ದುಃಖಕ್ಕೀಡಾಗಿರುವೆನು. ಎಲ್ಲ ಪುತ್ರರೂ ಮೃತರಾಗಿ ಬಿದ್ದಿರುವುದನ್ನು ಕಂಡೂ, ನಾನು ಬದುಕಿರುವೆನಲ್ಲ. ನನಗೇಕೆ ಸಾವು ಬರದಿದೆ?'

ಇಂತು ರೋದಿಸಿ, ಗಾಂಧಾರಿಯು ಮೂರ್ಛಿತಳಾಗಿ ಬಿದ್ದಳು. ದಾಸಿಯರ ಶೀತ ಲೋಪಚಾರಗಳಿಂದ ಎಚ್ಚತ್ತು, ದಿವ್ಯದೃಷ್ಟಿಯು ಕೊನೆಗಾಣಲು, ಶೋಕ ರೋಷಪರೀತ ಚಿತ್ತಳಾದಳು. ದುಃಖಾವೇಗದಿಂದ ಅವಳ ವಿವೇಕವು ನಷ್ಟವಾಯಿತು. ಪುತ್ರಶೋಕ ಪರಿಪ್ಲುತಳಾದ ಗಾಂಧಾರಿಯು ಸಿಟ್ಟಿನಿಂದ, ಶ್ರೀಕೃಷ್ಣನನ್ನು ಶಪಿಸುತ್ತಿಂತೆಂದಳು:

'ಪಾಂಡವಧಾರ್ತರಾಷ್ಟ್ರರು ಅಣ್ಣತಮ್ಮಂದಿರು ಬೇರಿಲ್ಲ! ಅವರ ಜಗಳವನ್ನು ನೀನು ನಿವಾರಿಸಬಹುದಿತ್ತು. ನಿನಗೆ ಅಶಕ್ಯವಾದುದೀಲೋಕದಲ್ಲಿಲ್ಲ. ಆದರೆ ಸಂಧಿಯಾಗಿ ಕೌರವರು ಉಳಿಯುವುದು ನಿನಗೆ ಬೇಕಾಗಲಿಲ್ಲ. ಬೇಕೆಂದೇ ಯುದ್ಧವನ್ನು ಹೂಡಿಸಿ, ಕುರುಕುಲ ನಾಶವನ್ನು ನೀನು ಸಾಧಿಸಿದೆ! ಕೃಷ್ಣ! ಪತಿಶುಶ್ರೂಷೆಯಿಂದ ನಾನು ಪುಣ್ಯವನ್ನು ಸಂಪಾದಿಸಿರುವೆನು. ಆ ಪುಣ್ಯಬಲದಿಂದ ನಿನ್ನನ್ನು ಶಪಿಸಿ, ನನ್ನ ಕ್ರೋಧಾಗ್ನಿಯನ್ನಾರಿಸುವೆನು. ಪರಸ್ಪರ ವಧಾತುರರಾಗಿ ಹೊಡೆದಾಡುವ ಕೌರವ ಪಾಂಡವರನ್ನು ವಾರಿಸದೆ, ಅವರ ನಾಶವನ್ನು ಸಾಧಿಸಿದ ನಿನ್ನ ಯಾದವ ಬಂಧುಗಳೂ ಇಂದಿನಿಂದ ಮೂವತ್ತಾರನೇ ವರ್ಷದಲ್ಲಿ ಪರಸ್ಪರವಾಗಿ ಕಡಿದಾಡಿ, ಎಲ್ಲರೂ ಸಾಯುವಂತಾಗಲಿ! ನೀನೂ ಕುತ್ಸಿತವ್ಯಾಧನ ಬಾಣಕ್ಕೆ ಗುರಿಯಾಗು!' ಎಂದು ನುಡಿದ ಗಾಂಧಾರಿಯ ಶಾಪವನ್ನು ಅದು ತನ್ನ ಇಚ್ಛೆಗೆ ಅನುಕೂಲವೆಂದು ಶ್ರೀಕೃಷ್ಣನು 'ಅಸ್ತು' ಎಂದು ಅನುಮೋದಿಸಿದನು. ಸರ್ವ ಸಮರ್ಥನಾದ ಶ್ರೀಶನಿಗೆ, ಗಾಂಧಾರಿಯ ಶಾಪವನ್ನು ವ್ಯರ್ಥಮಾಡಲು ಬರುತ್ತಿತ್ತು. ಆದರೆ ಅವಳ ಅಧಿಕತಪಃಪುಣ್ಯವನ್ನು ಕಳೆದು, ಅವಳ ಗಂಡನಕಿಂತ ಕಡಿಮೆ ಮಾಡಲೆಣಿಸಿದ ಶ್ರೀಕೃಷ್ಣನು ಅವಳ ಶಾಪವನ್ನು ಸ್ವೀಕರಿಸಿದನು.

ಶ್ರೀಶನು ನಗುತ್ತಾ, 'ಗಾಂಧಾರಿ! ದೈವಸಂಕಲ್ಪದಂತೆ ಶಪಿಸಿದ ನಿನ್ನ ವಚನವು ಸತ್ಯವಾಗಲಿ! ವೃಷ್ಣಿವೀರರನ್ನು ಸಂಹರಿಸಬಲ್ಲವರು ಬೇರೆಯಿಲ್ಲ. ಆದುದರಿಂದ ಅವರು ಪರಸ್ಪರವಾಗಿ ಕಡಿದಾಡಿ, ಈ ಲೋಕವನ್ನು ಬಿಡುವಂತೆ ನಾನು ಅನುಮೋದಿಸಿರುವೆನು' ಎಂದು ಮತ್ತೆ ಅವಳಿಗಿಂತು ನುಡಿದನು:

'ಗಾಂಧಾರಿ! ಬಿಡು ಶೋಕವನ್ನು! ತ್ಯಜಿಸು ರೋಷವನ್ನು! ಈರ್ಷ್ಯಾಳುವು, ದುರಭಿಮಾನಿ, ದುಷ್ಟಚಿತ್ತ, ಪಾಪಿಯೂ ಆದ ಮಗನನ್ನು ದಂಡಿಸಿ, ಕುಲನಾಶವಾಗದಂತೆ ಮಾಡದೆ, ಸುಮ್ಮನೆ ಪರರನ್ನು ನಿಂದಿಸಿ, ಪಾಪಸಾಧನವನ್ನು ಮಾಡುತ್ತಿರುವೆ.

ವೈರಪುರುಷನು. ಪಾಪತಮನು ಆದ ನಿನ್ನ ಮಗನು ಯಾರ ಮಾತನ್ನೂ ಕೇಳುವವನಲ್ಲ. ಅವನಿಂದಾಗಿದೆ ಕುಲನಾಶ, ಅವನಿಗೆ ಸೇರಿದೆ ಎಲ್ಲ ಪಾಪರಾಶಿ! ಅವನಿಗಾಗಿ ರೋದಿಸಿ, ಪಾಪಪಕ್ಷಪಾತಿ ಎನಿಸುವೆ ತಿಳಿ! ದುಃಖದಿಂದ ದುಃಖವು ಹೆಚ್ಚಾಗುವುದು. ಚಿತ್ತಸಮಾಧಾನದಿಂದ ಸುಖವು ಲಭಿಸುವುದು. ಯುದ್ಧಮೃತರಾದ ಸುಜನರಿಗೆ ವೀರ ಸ್ವರ್ಗವಾಗಲಿ, ನಿನ್ನ ಮಕ್ಕಳಂತಹ ಪಾಪಿಗಳಿಗಲ್ಲ. ಅವರಿಗೆ ಅಂಧಂತಮವೇ ಪ್ರಾಪ್ಯವಾಗಿದೆ. ಕ್ಷತ್ರಿಯಳಿರುವೆ! ಯುದ್ಧಾರ್ಥಿಸುತರನ್ನು ಪಡೆದೆನೆಂದು ತೃಪ್ತಳಾಗು! ಬ್ರಾಹ್ಮಣಿಯು ತಪಸ್ವಿಯನ್ನೂ, ಕ್ಷತ್ರಿಯಳು ವೀರರನ್ನೂ, ವೈಶ್ಯಳು ಪಶುಧನಸಮೃದ್ಧನನ್ನೂ ಶೂದ್ರಳು ಜನಾನುಕೂಲವರ್ತನನನ್ನೂ ಪಡೆದು ಸಾರ್ಥಕ ಜೀವನರಾಗುವರು.'

ವಾಸುದೇವನ ವಚನವನ್ನಾಲಿಸಿ, ಗಾಂಧಾರಿಯು ಸುಮ್ಮನಾದಳು. ಧೃತರಾಷ್ಟ್ರನು ಪುತ್ರಶೋಕವನ್ನು ಬುದ್ಧಿಬಲದಿಂದ ತಡೆದಿಟ್ಟು, ಧರ್ಮರಾಜನನ್ನು ಕರೆದು "ರಣರಂಗದಲ್ಲಿ ನಿಹತರಾದವರೆಷ್ಟು ಜನ?" ಎಂದು ಕೇಳಿದನು. ಧರ್ಮರಾಜನು ನಯಭಯಗಳಿಂದ ತಲೆತಗ್ಗಿಸಿ, 'ರಾಜನ್! ಕೇಳು! (66,10,20,000) ಅರವತ್ತಾರುಕೋಟಿ, ಹತ್ತುದಶಲಕ್ಷ, ಇಪ್ಪತ್ತುಸಾವಿರ ಯೋಧರು ರಣನಿಹತರಾಗಿರುವರು. ಹದಿನಾಲ್ಕು ಸಾವಿರ ಯೋಧರು ಕಾಣಬರದೆ ಹೋಗಿರುವರು. ಮತ್ತು ಆರುಸಾವಿರದ ಐನೂರುಹತ್ತು ಯೋಧರ ಗತಿಯೂ ತಿಳಿಯಬರದಾಗಿದೆ' ಎಂದನು.

ಧೃತರಾಷ್ಟ್ರನು 'ಧರ್ಮರಾಜ! ಯುದ್ಧ ಮೃತರಾದವರಿಗಾವಗತಿಗಳಾಗಿರುವವು ಹೇಳು!' ಎಂದನು. ಧರ್ಮರಾಜನು, 'ಜನಕ! ಯುದ್ಧಮೃತರಅನೇಕವಿಧ. ಜೀವಸ್ವಭಾವವನ್ನು ಅನುಸರಿಸಿ, ಅವರಿಗೆ ಗತಿಗಳಾಗುವವು. ನಗುನಗುತ್ತಾ, ಧರ್ಮ ಯುದ್ಧವೆಂದು ತಿಳಿದು ಕಾದಿ, ಮಡಿದವರು ದೇವರಾಜಪುರಿಯನ್ನು ಸೇರಿರುವರು. ಕೇವಲ ಯುದ್ಧಮರಣವನ್ನು ಮಾತ್ರ ಅಪೇಕ್ಷಿಸಿ ಸತ್ತವರು ಯಮಗಂಧರ್ವ ಲೋಕವನ್ನು ಸೇರಿದರು. ಕ್ಷತ್ರಧರ್ಮವನ್ನು ಬಿಡದೆ ಕಡಿದಾಡಿ, ಶ್ರೀಹರಿಧ್ಯಾನದಿಂದ ಪ್ರಾಣಬಿಟ್ಟವರು ಬ್ರಹ್ಮಸದನವನ್ನು ಮುಟ್ಟಿದರು. ಶ್ರೀಹರಿ ದ್ವೇಷಿಗಳು ತಮಸ್ಸನ್ನು ಸೇರಿರುವರು.' ಎಂದನು. 'ಇಂತಹ ಜ್ಞಾನವು ನಿನಗೆ ಹೇಗೆ ಬಂತು? ಎಂದು ಕೇಳಿದ ಧೃತರಾಷ್ಟ್ರನಿಗೆ, ಧರ್ಮಜನು "ಇಂದ್ರಿಯ ಜಯವಂತನು, ಶ್ರೀಹರಿಭಕ್ತನು, ದೇವಬ್ರಾಹ್ಮಣ ಸೇವಾನಿರತನು, ಸತ್ಯವಚನನು ಆದವರಿಗೆ ಇಂತಹ ಜ್ಞಾನವು ಚಿರಂತನಾಭ್ಯಾಸ ಬಲದಿಂದ ಲಭಿಸುವುದು. ಲೋಮಶರಂಬ ಋಷಿವರರ ಕೃಪೆಯಿಂದ ನನಗೆ ಇಂತಹ ಶಕ್ತಿಯುಂಟಾಗಿದೆ" ಎಂದನು.

ಧೃತರಾಷ್ಟ್ರನು 'ಇಷ್ಟು ಮೃತ ವೀರರಿಗೆ ಮುಂದೇನು ಗತಿ? ಅವರ ಸಂಸ್ಕಾರ ವೆಂತು?' ಎಂದು ಕೇಳಿದನು. ಆಗ ಧರ್ಮರಾಜನು ಧೃತರಾಷ್ಟ್ರನನ್ನು ಮುಂದಿಟ್ಟು ಕೊಂಡು ಬಂದು ಶವಸಂಸ್ಕಾರವನ್ನು ಪಂಚಸೂತರ ದ್ವಾರಾ ಮಾಡಿಸಿದನು. ಧೌಮ್ಯರು ಪುರೋಹಿತರಾದರು. ಸೂತರು, ಸುಧರ್ಮ ಮುಂತಾದವರು, ಸಂಜಯಸಹಿತರಾಗಿ, ನಕುಲ-ಸಹದೇವರ ಸೂಚನೆಯಂತೆ, ಯೋಗ್ಯ ಸಂಸ್ಕಾರಗಳನ್ನು ಮಾಡಿದರು.

ಆಗ ಶ್ರೀಕೃಷ್ಣನು ದ್ರೌಪದಿಯನ್ನು ಕರೆದು, ತಂತಮ್ಮ ಭರ್ತೃಶರೀರಗಳನ್ನಷ್ಟಿ,

ಕೂದಲು ಬಿರಿಹಾಕಿಕೊಂಡು ಅಳುವ ದುರ್ಯೋಧನಾದಿಗಳ ಪತ್ನಿಯರನ್ನು ಆಕೆಗೆ ತೋರಿಸಿ, ತನ್ನ ಪ್ರತಿಜ್ಞೆಯನ್ನು ಸತ್ಯವಾಗಿಸಿದನು. ದ್ರೌಪದೀ ದೇವಿಯು ಕೃತಜ್ಞಳಾಗಿ, ಪರಿಪೂರ್ಣ ಷಡ್ಗುಣಸಂಪನ್ನನಾದ ಶ್ರೀಹರಿಯನ್ನು ನುತಿಸಿ ವಂದಿಸಿದಳು.

ಪಾಂಡವರು ದ್ರೋಣ ಶಲ್ಯಾದಿ ಪ್ರಸಿದ್ಧ ವೀರರ ಶರೀರಗಳಿಗೆ ಸಂಸ್ಕಾರವನ್ನು ತಾವಾಗಿ ನಿಂತು ಮಾಡಿಸಿದರು. ಐವರು ಸೂತರು ದುರ್ಯೋಧನಾದಿ ಅಸಜ್ಜನರ ಶರೀರಗಳನ್ನು ಸರಸ್ವತಿಯಲ್ಲಿ ಬಿಸಾಡಿದರು. ಭೀಮಾರ್ಜುನರು ಅಸಜ್ಜನಸಂಸ್ಕಾರ ಕಾರ್ಯದಲ್ಲಿ ಅಭಿಪ್ರಾಯವಿಲ್ಲದೆ ಸುಮ್ಮನೆ ನಿಂತಿದ್ದರು. ಬಂಧುಸ್ನೇಹವಶನಾಗಿ ಧರ್ಮಜನು, ನಕುಲ ಸಹದೇವರಿಂದ ಕೂಡಿ, ಸೂತರಿಗೆ ಆಜ್ಞಾಪಿಸಿ ಮುಖ್ಯವೀರರ ಸಂಸ್ಕಾರವನ್ನು ಮಾಡಿಸಿದನು. ಅತ್ಯಧಿಕ ಸಂಖ್ಯಾಕ ಶವಗಳು ರಣರಂಗದಲ್ಲಿ ಹಾಗೇ ಹರಡಿ ಬಿದ್ದಿದ್ದವು. ವಿದುರ ಯುಯುತ್ಸು ಸಂಜಯರು ಕಾಷ್ಠಸಂಚಯನಾದಿ ಕಾರ್ಯಗಳಲ್ಲಿ ನೆರವಾದರು. ರಥದಂಡಗಳನ್ನು, ಚಂದನಾಗರು ಕಾಷ್ಠಾಜ್ಯತೈಲಗಳಿಂದ ಕೂಡಿಸಿ, ಚಿತಿಗಳನ್ನು ಮಾಡಿ, ಧೌಮ್ಯಾದಿವಿಪ್ರರು ಪುರೋಹಿತ ಕೃತ್ಯವನ್ನು ನಡೆಸುತ್ತಿರಲು, ಇಂದ್ರಸೇನಜಯರೇ ಮುಂತಾದ ಸೂತರು, ವಿವಿಧವೀರರ ಸಂಸ್ಕಾರಗಳನ್ನು ಮಾಡಿ, ಮುಗಿಸಿದರು. ಭೂರಿಶ್ರವ, ಶಲ, ಶಲ್ಯ, ಅಭಿಮನ್ಯು, ಧೃಷ್ಟಕೇತು, ಸೋಮದತ್ತ, ದ್ರುಪದ, ವಿರಾಟ, ಕ್ಷೇಮಧನ್ವ, ಶಿಖಂಡಿ, ಧೃಷ್ಟದ್ಯುಮ್ನ, ಚೇಕಿತಾನ, ಯುಧಾಮನ್ಯು, ಉತ್ತಮೌಜ, ಬೃಹತ್ಸೇನ, ದ್ರೌಪದೇಯರೈವರು, ಭಗದತ್ತ, ಕರ್ಣ, ಇವರೇ ಮುಂತಾದವರಿಗೆ ಶಾಸ್ತ್ರದೃಷ್ಟವಾದ ಸಂಸ್ಕಾರವನ್ನು ಮಾಡಿ, ಪಿತೃಮೇಧಾದಿ ಉತ್ತರಕಾರ್ಯಗಳೂ ನಡೆಯುವಂತೆ, ಧರ್ಮರಾಜನು ನೋಡಿಕೊಂಡನು. ರಾಜಶಾಸದದಂತೆ ವಿದುರನು, ಅನೇಕ ದೇಶಗಳಿಂದ ಬಂದು ಯುದ್ಧಮೃತರಾದವರಿಗೆ ಕ್ರಿಯಾಕಲಾಪವನ್ನು ವಿಪ್ರಮುಖದಿಂದ ನೆರವೇರಿಸಿದನು.

ಅನಂತರ ಅವರೆಲ್ಲರೂ ಗಂಗೆಯನ್ನು ಸೇರಿ, ಪುತ್ರ, ಪಿತೃ, ಭ್ರಾತೃ, ಮಾತುಲ, ಗುರು, ಬಂಧುಜನರಿಗೆ ತಿಲೋದಕಗಳನ್ನು ಕೊಟ್ಟರು. ಮಹೋದಧಿಸಂಕಾಶವಾದ ಗಂಗಾ ನದಿಯು, ತರುಣೀರೋದನ, ವಿಪ್ರರ ಋಕ್ಸಾಮಮಂತ್ರ ಪಠನಗಳಿಂದಲು, ಕ್ರಿಯಾ ಕೋಲಾಹಲದಿಂದಲು, ನಿರಾನಂದವಾಗಿ ಕಂಡಿತು.

ಆಗ ಕುಂತೀದೇವಿಯು ಅಳುತ್ತಾ, ಧರ್ಮರಾಜನನ್ನು ಸಮೀಪಿಸಿ, ಮೆಲ್ಲನೆ ಇಂತೆಂದಳು: "ರಥಯೂಥಪ ಭಯಂಕರನು, ವೀರಲಕ್ಷಣಲಕ್ಷಿತನು ಆದ ಕರ್ಣನಿಗೂ ತಿಲಾಂಜಲಿಯನ್ನು ಕೊಡು ! ರಾಧೇಯನೆಂದು ಪ್ರಖ್ಯಾತನಾಗಿದ್ದ ಕರ್ಣನು ನನ್ನ ಪುತ್ರನಿರುವನು. ಅವನು ನಿಮಗೆ ಅಣ್ಣನಾಗಬೇಕು ಕನ್ಯಾದಶೆಯಲ್ಲಿ ಸೂರ್ಯವಂಶಸಂಜಾತ ನಾದುದರಿಂದ, ಅವನು ನನ್ನಿಂದ ದೂರನಾಗಿರಬೇಕಾಯಿತು. ಅವನಿಗೆ ಪ್ರಾಣಗಳಿಕಿಂತಲು, ಕೀರ್ತಿಯೇ ಪ್ರಿಯತರವಾಗಿತ್ತು. ಅಂತೆಯೇ ಅವನು ಕೃತಜ್ಞನಾಗಿ, ದುರ್ಯೋಧನನಿಗಾಗಿ, ಕಾದಿ, ಮಡಿದನು. ಅವನಿಗೂ ಉದಕದಾನವನ್ನು ಮಾಡಿರಿ!"

ಮಾತೆಯ ವಚನವಜ್ರದಿಂದ ನೊಂದು, ಪಾಂಡವರು ಇನ್ನೂ ದುಃಖಿತರಾದರು. ಯುಧಿಷ್ಠಿರನು ಸ್ವಲ್ಪ ಸಿಟ್ಟಾಗಿ ತಾಯಿಗಿಂತೆಂದನು: "ಏನೆಂದೆ ? ಶರತರಂಗವು,

ಧ್ವಜಾವರ್ತವು, ವೀರತಿಮಿಂಗಿಲವು, ರಥಹ್ರದವು ಆದ ರಣಸಮುದ್ರದಲ್ಲಿ ನಿರ್ಭಯನಾಗಿ ಚರಿಸಿದ ಮಹಾರಥವರನಾದ ಕರ್ಣನು ಅಗ್ರಜನೇ? ಅಮ್ಮಾ! ಅಗ್ನಿಯನ್ನು ವಸ್ತ್ರದಿಂದಂತೆ, ಆ ನಿನ್ನ ಮಗನನ್ನು ಇಷ್ಟು ದಿನ ಎಂತು ಮುಚ್ಚಿಟ್ಟಿದ್ದೆ? ನಿನ್ನ ರಹಸ್ಯ ವೃತ್ತಾಂತ ಗೋಪನದಿಂದ ನಾವು ಕೆಟ್ಟಿವು! ಅಣ್ಣನನ್ನು ಕೊಂದಂತಾಗಿ, ನಮ್ಮ ಪಾಪಕ್ಕೆ ಎಣೆಯಿಲ್ಲದಾಗಿದೆ. ಅಭಿಮನ್ಯು ದ್ರೌಪದೇಯರ ನಾಶದಕಿಂತಲು, ಕರ್ಣನಾಣವೇ ದುಃಖತರವಾಗಿದೆ. ನನ್ನ ಶರೀರವು ಅಗ್ನಿಯಲ್ಲಿಟ್ಟಂತೆ ಉರಿಯುತ್ತಿದೆ. ಹಾ! ಎಂತಹ ಕಠೋರಳಾದೆ! ಇನ್ನು ಮುಂದೆ, ಸ್ತ್ರೀಯರ ಮನಸ್ಸಿನಲ್ಲಿ ರಹಸ್ಯವಾವುದೂ ನಿಲ್ಲದಂತಾಗಲಿ!'' ಇಂತು ಶಪಿಸಿ, ಧರ್ಮಜನು ಕರ್ಣನಿಗೆ ಉದಕಗಳನ್ನಿತ್ತನು ಮತ್ತು ಕರ್ಣಸ್ತ್ರೀಯರನ್ನು ಕರಿಸಿ, ಸಮಾಶ್ವಸಿಸಿ, ಅವನಿಗೆ ಮುಂದಿನ ಕಾರ್ಯಗಳನ್ನು ಮಾಡಿಸಿದನು.

ಶ್ರೀಕೃಷ್ಣನಾರದರು ಧರ್ಮರಾಜನನ್ನು ಸಮಾಧಾನಪಡಿಸಿದರು. ಶ್ರೀಶನು 'ಧರ್ಮಜ! ಈ ವಿಷಯವನ್ನರಿತಿದ್ದು, ನಾನು ಕರ್ಣನಿಗೆ 'ಕರ್ಣ! ನೀನು ಕೌಂತೇಯನು; ರಾಧೇಯಸಲ್ಲ, ಕ್ಷತ್ರಿಯನು; ಸೂತನಲ್ಲ, ಪಾಂಡವರನ್ನು ಸೇರು, ನೀನೇ ರಾಜನಾಗುವೆ! ಪಾಂಡವರು ಅಣ್ಣನಾದ ನಿನಗೆ ವಿಧೇಯರು, ಸಹಾಯಕರೂ ಆಗಿರುವರು' ಎಂದು ಹೇಳಿದೆನು. ಆದರೆ ಕರ್ಣನು ದುಷ್ಟಸ್ನೇಹದಿಂದ ಮತಿಗೆಟ್ಟು, ರಾಜ್ಯವನ್ನೂ ಒಲ್ಲದೆ, ಸೋದರರನ್ನು ತಿರಸ್ಕರಿಸಿ, ದುರ್ಯೋಧನನನ್ನೇ ವರಿಸಿದನು. ನಿಮಗೆ ಈ ರಹಸ್ಯವನ್ನು ಹೇಳಬಾರದೆಂದು ನನ್ನಿಂದ ವಚನವನ್ನು ಪಡೆದಿದ್ದನು. ಅವನ ಹಣೆಯಲ್ಲಿ ವಿಧಿ ಹಾಗೆ ಬರೆದಿತ್ತು. ಚಿಂತಿಸಬೇಡ!' ಎಂದು ಸಮಾಧಾನಪಡಿಸಿದನು.

ಅನಂತರದ ಪುಷ್ಯ ಬಹುಳ ಪಂಚಮಿಯಂದು ಧರ್ಮರಾಜನು ಪಟ್ಟಾಭಿಷಿಕ್ತನಾದನು. ಆತನು ಭೀಷ್ಮನನ್ನು ಸೇರಿ, ಆ ಮಹಾನುಭಾವನಿಂದ ಧರ್ಮರಹಸ್ಯಗಳನ್ನು ತಿಳಿದು, ಶೋಕರಹಿತನೂ, ಶಾಂತಚಿತ್ತನೂ ಆಗಿದ್ದನು. ಇಂತು ಶ್ರೀಶಾನುಗ್ರಹದಿಂದ ಪಾಂಡವರು ವಿಜಯಶ್ರೀಯುತರಾಗಿ, ತಮ್ಮ ರಾಜ್ಯದಲ್ಲಿ ಸುಪ್ರತಿಷ್ಠಿತರಾಗಿ ಸುಖವಾಗಿದ್ದರು.

ಸ್ತ್ರೀ ಪರ್ವ ಮುಗಿಯಿತು



# ಶಾಂತಿ ಪರ್ವ

## ೧. ಕರ್ಣ ವೀರ್ಯ ಕಥನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಧರ್ಮರಾಜನು ಮಾರ್ಗಶಿರ ಶುದ್ಧ ತ್ರಯೋದಶಿಯಿಂದ ಪ್ರಾರಂಭಿಸಿದ ಯುದ್ಧವನ್ನು ಅಮಾವಾಸ್ಯೆಯಂದು ಮುಗಿಸಿ, ಕ್ಷತ್ರಿಯರಿಗುಚಿತವೆಂದು ವಿಹಿತವಾದಂತೆ, ಹನ್ನೆರಡು ದಿನಗಳವರೆಗೂ ಬಂಧುಗಳಿಗೆ ಪ್ರೇತಕಾರ್ಯ, ಜಲಾನ್ನದಾನಾದಿಗಳನ್ನು ಮಾಡಿ, ಆಶೌಚವನ್ನು ಕಳೆದುಕೊಂಡು, ಸೋದರರಾದಿ ಸ್ವಜನರಿಂದ ಪುರವನ್ನು ಪ್ರವೇಶಿಸಿದನು. ಸಮರಹತರ ಸಪಿಂಡರಿಗೆ ಸದ್ಯಶುದ್ಧಿ ಎಂದು ಮನುರಾಜನ ನುಡಿಯಿದೆ. ಆದರೂ ಪಶುವಿನಂತೆ ಹತರಾದವರಿಗಾದರೂ, ಶಾವಾಶೌಚವನ್ನು ನಡೆಸಬೇಕಾಗುವುದರಿಂದ, ಪುಷ್ಯಶುದ್ಧ ದ್ವಾದಶಿಯವರೆಗೂ, ಪುರಬಹಿಃ ಪ್ರದೇಶದಲ್ಲಿದ್ದು, ತತ್ಕಾರ್ಯಗಳನ್ನು ಆತನು ಮುಗಿಸಿದನು.

ಜನಮೇಜಯ ! ಭಾರತವು ಬರಿ ಕಥೆಯಲ್ಲ. ಧರ್ಮಾರ್ಥಕಾಮಮೋಕ್ಷಗಳನ್ನು ನಿರೂಪಿಸುವ ಮಹಾಗ್ರಂಥ ರಾಜವಾಗಿದೆ. ಧರ್ಮ ಧನ ಕಾಮಗಳನ್ನು ಮಾತ್ರ ಸ್ವೀಕರಿಸುವವರು ಅಲ್ಪಬುದ್ಧಿಗಳೆ ಸರಿ! ಧರ್ಮದಿಂದ ಮನಶುದ್ಧಿಯನ್ನೂ, ಅರ್ಥದಿಂದ ಯಜ್ಞದಾನಗಳನ್ನೂ, ಕಾಮದಿಂದ ವೈರಾಗ್ಯಯುತ ಜೀವನವನ್ನೂ ಬೇಡಿ, ಆ ಮೂರರಿಂದ ಮೋಕ್ಷವನ್ನು ಪಡೆಯಲೆಣಿಸುವವರು ಉತ್ತಮರು ! ಇವರಿಬ್ಬರಿಗೆ ದೃಷ್ಟಾಂತವಾಗಿ ಕೌರವಪಾಂಡವರು ವಿರಾಜಿಸುತ್ತಿರುವರು. ಧರ್ಮರಾಜನು ರಾಜ್ಯದಲ್ಲಿ ಅಭಿಷಿಕ್ತರಾಗಿ, ಶಾಂತಿಯನ್ನು ಪೊಂದಿ, ಪ್ರಜರಿಗೂ ಶಾಂತಿಯನ್ನು ತುಂದು, ಸಖಿಸಿದ ವೃತ್ತಾಂತವನ್ನು ಈಗ ನಿನಗೆ ಪೇಳುವೆನು.

ಪ್ರಜಾರಂಜಕನಾದ ಪಾಲಕನಾರೇ ಆಗಲಿ, ರಾಜನೆನಿಸುವನು. ರಾಜನು ಕಾಮ ಲೋಭಾದಿಹೀನನು, ವೈರಾಗ್ಯವಂತನು, ಆದರೆ ಮೋಕ್ಷವನ್ನು ಪೊಂದುವನು. ಧರ್ಮರಾಜನು ಅಂತಹ ರಾಜನ್ಯನೆಂದು ತಿಳಿ! ಅಂತಹ ರಾಜಧರ್ಮವನ್ನು ಮೊದಲು ಹೇಳಿ, ಆಮೇಲೆ, ಆಪದ್ಧರ್ಮವನ್ನೂ, ಕೊನೆಗೆ ಮೋಕ್ಷಧರ್ಮವನ್ನೂ ನಿರೂಪಿಸುವೆನು.

ಗಾಂಗಮಂಗಳ ತೀರದಲ್ಲಿದ್ದ ಪಾಂಡವರನ್ನು ಕುರಿತು, ದ್ವೈಪಾಯನ, ನಾರದ ದೇವಲ, ದೇವಸ್ಥಾನ , ಕಣ್ವ , ಪ್ರಮುಖ ಋಷಿವರರು ಬಂದರು. ವೇದಾರ್ಥವಿಚಾರ ಕುಶಲರಾದ ಮುನಿಗಳನ್ನು, ವೇದೋಕ್ತಾಚಾರನಿಷ್ಠರಾದ ಗೃಹಸ್ಥರನ್ನು, ವೇದಪಠ ನಿರತರಾದ ಸ್ನಾತಕರನ್ನು ಎದುರ್ಗೊಂಡು, ಕರೆತಂದು ಧರ್ಮರಾಜನು ಪೂಜಿಸಿ ದಿವ್ಯಾಸನಗಳಲ್ಲಿ ಕೂಡ್ರಿಸಿದನು. ಪುಣ್ಯದೇವನದೀ ತೀರದಲ್ಲಿ ದೇವತೆಗಳಂತೆ ಕಂಗೊಳಿಸುವ ಮುನಿವರರು ಶೋಕವ್ಯಾಕುಲನಾಗಿದ್ದ ಧರ್ಮಜನನ್ನು ಸಮಾಶ್ವಸಿಸಿದರು.

ಆಗ ನಾರದನು, ಶ್ರೀಕೃಷ್ಣದ್ವೈಪಾಯನಾದಿ ಮುನಿವರರ ಅಪ್ಪಣೆಪಡೆದು

ಧರ್ಮರಾಜನಿಗಿಂತೆಂದನು : "ಧರ್ಮಜ! ನಿಮ್ಮ ಬಾಹುಬಲದಿಂದಲು, ಶ್ರೀಕೃಷ್ಣ ಪ್ರಸಾದದಿಂದಲು ಜಯವನ್ನು ಗಳಿಸಿರುವೆ! ಧರ್ಮವು ನಿನ್ನಲ್ಲಿದ್ದುದರಿಂದ ನಿನಗೆ ವಿಜಯವಾಗಿದೆ. ಲೋಕಭಯಂಕರ ರಣರಂಗದಿಂದ ಬದುಕಿ ಪಾರಾಗಿ, ಸೋದರ ಸಹಿತನಾಗಿ, ಕ್ಷೇಮದಿಂದಿರುವ ನಿನ್ನನ್ನು ನೋಡಿ ಆನಂದವಾಗಿದೆ. ಆದರೆ ನೀನು ಚಿಂತಾ ಕ್ರಾಂತನಾಗಿರುವುದನ್ನು ಕಂಡು ಆಶ್ಚರ್ಯವಿಷಾದಗಳೂ ಪುಟ್ಟಿಬರುತ್ತಿವೆ."

ಧರ್ಮರಾಜನು "ಶ್ರೀಕೃಷ್ಣಬಾಹುಬಲವನ್ನು ನಂಬಿ, ಮಹೀಮಂಡಲವನ್ನೆಲ್ಲ ಗೆದ್ದಿರುವೆವು. ಭೀಮಾರ್ಜುನರ ಬಲವೀರ್ಯಗಳಿಂದಲು, ಬ್ರಾಹ್ಮಣರ ಆಶೀರ್ವಾದ ಪ್ರಭಾವದಿಂದಲು ಜಯವನ್ನು ಪಡೆದಿದ್ದರೂ, ನನ್ನ ಹೃದಯದಲ್ಲಿ ಜ್ಞಾತಿವಧೆಗೈದ ಚಿಂತೆಯು ಉರಿದೆದ್ದು, ಪೀಡಿಸುತ್ತಿದೆ. ಸೌಭದ್ರ ದ್ರೌಪದೇಯರನ್ನು ಕಳೆದುಕೊಂಡ ನಾವು ಗೆದ್ದೂ ಸೋತವರಂತೇ ಆದೆವು. 'ರಾಜ್ಯಮಾರಿಕೆಗೆ ಮಗನನ್ನು ಬಲಿಕೊಟ್ಟು ಬಂದಿರೇ?' ಎಂದು ಕೇಳುವ ಸುಭದ್ರೆಗೆ ಏನು ಹೇಳಲಿ? ಇಲ್ಲಿಂದ ಹೊರಟು ದ್ವಾರಕೆಯನ್ನು ಸೇರಿದ ಕೃಷ್ಣನನ್ನು ನೋಡಿ, ದ್ವಾರಕಾವಾಸಿ ಜನರು, 'ಕಂಸನನ್ನು ಕೊಂದು, ಸ್ವಜನ ಹಿಂಸೆಯನ್ನು ವಾರಿಸಿದ ನೀನು, ನಿನ್ನ ಅಳಿಯನೂ ಸಾಧುವು ಆದ ಅಭಿಮನ್ಯುವಿನನ್ನೇಕೆ ಕಾಪಾಡಿ ಕೊಳ್ಳಲಿಲ್ಲ?' ಎಂದು ಅಧಿಕ್ಷೇಪಿಸದಿರುವರೇ? ಹತಪುತ್ರಳು, ಹತಸೋದರಳು ಆದ ದ್ರೌಪದಿಯನ್ನೆಂತು ಸಂತೈಸಲಿ?

ಉಗುರುಸುತ್ತಿನ ಮೇಲಿನ ಒನಿಕೆಪೆಟ್ಟಿನಂತೆ, ಇನ್ನೊಂದು ಚಿಂತಾಕರ ವಿಷಯವನ್ನು ಹೇಳುವೆನು. ಅಣ್ಣನಾಗಿದ್ದ ಕರ್ಣನನ್ನು ತಿಳಿಸದೇ ಇದ್ದ ಕುಂತೀದೇವಿಯ ಮೌನ ಕಾಠಿನ್ಯಗಳಿಗೆ ಆಶ್ಚರ್ಯಶೋಕಗಳಾಗುತ್ತಿವೆ. ನಾಗಾಯುತಬಲನು, ಅಪ್ರತಿರಥನು, ದಾನರತನು, ಧಾರ್ತರಾಷ್ಟ್ರಾಶ್ರಯನು, ಅಕ್ಷೀಣಪರಾಕ್ರಮನು, ನಿತ್ಯಸಂರಬ್ಧನು, ಶೀಘ್ರಾಸ್ತ್ರನು, ಚಿತ್ರಯೋಧಿಯು, ಆದ ಕರ್ಣನು, ಕಾನೀನನಂತೆ! ನಮ್ಮ ಅಣ್ಣನಂತೆ! ಗಂಗೆಯಲ್ಲಿ ಬಿಡಲ್ಪಟ್ಟವನನ್ನು ರಾಧಾತಿರಥರು ಸಾಕಿಬೆಳೆಸಿದುದರಿಂದ ಅವನು ರಾಧೇಯನೆನಿಸಿದನು. ಅಂತಹ ಅಣ್ಣನನ್ನು ರಾಜ್ಯಲೋಭದಿಂದ ಕೊಂದ ಪಾಪದಿಂದ, ನನ್ನ ಮನವು ಪಶ್ಚಾತ್ತಾಪಾಗ್ನಿಗೆ ಸಿಲುಕಿ, ನೋಯುತ್ತಿದೆ.

ಇದನ್ನು, ನಮ್ಮಲ್ಲಿ ಯಾರಾದರೂ ಅರಿತಿದ್ದಿದ್ದರೆ, ಇಷ್ಟನರ್ಥವಾಗುತ್ತಿದ್ದಿಲ್ಲ. ಕರ್ಣನೂ ಸೂಚಿಸಲಿಲ್ಲ. ಕರ್ಣನನ್ನು ನಮ್ಮ ಕ್ಷೇಮವಿಜಯಗಳಿಗಾಗಿ ಹೋಗಿ ಯಾಚಿಸಿದ ನಮ್ಮ ತಾಯಿಯೂ ತಿಳಿಸಲಿಲ್ಲ. 'ದುರ್ಯೋಧನನನ್ನು ಬಿಡಲಾರೆನು, ಸಂಕಟದಲ್ಲಿ ಮಿತ್ರ ತ್ಯಾಗವನ್ನು ಮಾಡುವ ನಿರ್ದಯನಾಗಲಾರೆನು. ಉಪಕಾರವೆಸಗಿರುವ ಕುರುರಾಜನಿಗಪಕಾರವೆಸಗಿ ಕೃತಘ್ನನೆನಿಸಲಾರೆನು. ಸಮರದಲ್ಲಿ ಸಮ್ಮುಖನಾಗಿ ಹೋರಾಡಿ, ಸವ್ಯಸಾಚಿಯನ್ನು ಜಯಿಸಿ, ಸಂಹರಿಸುವೆನು. ಅಂಬ! ನನ್ನಿಂದ ಕೂಡಿಯಾಗಲಿ, ಅರ್ಜುನನಿಂದ ಐವರೇ ಮಕ್ಕಳು ಉಳಿಯುವರು. ಕರ್ಣಾರ್ಜುನರಿಬ್ಬರಿಗೆ ಈ ಲೋಕದಲ್ಲಿ ಸ್ಥಳವಿಲ್ಲ. ಇನ್ನುಳಿದ ನಾಲ್ವರನ್ನು, ಕೈಗೆ ಸಿಕ್ಕರೂ, ನಾನು ಕೊಲ್ಲುವುದಿಲ್ಲ' ಎಂದು ಕರ್ಣನಂದನಂತೆ! ಅಂತಹ ಮಹೋದಾರರನ್ನು ನಾವು ಕೊಂದೆವಲ್ಲ ಎಂಬ ಚಿಂತೆಗೆ ಸಿಲುಕಿ,

ಕೊರಗುತ್ತಿರುವೆನು. ದ್ರೌಪದಿಯ ಕ್ಲೇಶವನ್ನು ಕಂಡು, ಉಕ್ಕೇರುವ ನನ್ನ ಕ್ರೋಧಸಾಗರವು, ಕರ್ಣನನ್ನು ನೋಡಿ ಮತ್ತೆ, ಇಳಿಯುತ್ತಿತ್ತು. ಅವನ ಮುಖವನ್ನು ನೋಡಿ, ನಮ್ಮ ತಾಯಿಯ ಮುಖವು ನೆನಪಿಗೆ ಬಂದು, ಇವನೆಮ್ಮ ಬಂಧುವೆಂದು, ನನ್ನ ಮನವು ಸಂಶಯಿಸುತ್ತಿತ್ತು. ಅವನ ಪಾದಗಳಂತೂ, ಕುಂತಿಯ ಪಾದಗಳಂತೇ ಇದ್ದವು. ಸಾದೃಶ್ಯಕಾರಣವು ಗೋಚರವಾಗದೆ, ಮನವು ತಡಪಡಿಸುತ್ತಿತ್ತು. ಇಂತಹ ಕರ್ಣನು ವಿಪ್ರಶಾಪ ಗುರುಶಾಪಗಳಿಗೆ ಗುರಿಯಾದನೆಂದರೆ ಆಶ್ಚರ್ಯವಾಗಿದೆ! ದೇವರ್ಷೇ! ನೀನು ಎಲ್ಲವನ್ನೂ ಅರಿತವನಿರುವೆ! ಕರ್ಣವೃತ್ತಾಂತವನ್ನು ನಮಗೆ ತಿಳಿಸು!' ಎಂದು ಪ್ರಾರ್ಥಿಸಿದನು.

ನಾರದನು ಕರ್ಣವೃತ್ತಾಂತವನ್ನು ವಿವರವಾಗಿ ತಿಳಿಸಿ 'ಧರ್ಮರಾಜ! ಕರ್ಣನು ಅಪ್ರತಿವೀರನಿದ್ದನು ನಿಜ! ದೇವರಹಸ್ಯವನ್ನು ನಿನಗರುಹುವೆನು ಕೇಳು! ದೇವತೆಗಳವತರಿಸಿ, ಶ್ರೀಹರಿ ಸೇವೆಗಾಗಿ ನಿಂತರು. ಅವರಲ್ಲಿ ಕೆಲವರು ಕೌರವನ ಕಡೆಯೂ ಸೇರಿ, ಪಾಂಡವ ಸೇನೆಯೊಡನೆ ಕಾದಿದರು ದ್ರೋಣ, ಭೀಷ್ಮ ಕರ್ಣಾದಿಗಳಂತಹ ಧಾನುಷ್ಕರು. ಬಾಹ್ಲೀಕ, ಭೂರಿಶ್ರವ, ಭಗದತ್ತ, ಶಲ್ಯರಂತಹ ಬಲಿಷ್ಠರು ತನ್ನ ಕಡೆಯಿದ್ದರೆಂದೇ ದುರ್ಯೋಧನನು ಧೈರ್ಯದಿಂದ ರಣಕಣಕ್ಕಿಳಿದನು. ಇಂತಹ ದೇವವೀರರ ಸಹಾಯವಿಲ್ಲದಿರೆ, ಕುರುರಾಜನು ಎದೆಗುಂದಿ, ರಣದೂರ ನಾಗುತ್ತಿದ್ದರು. ಹಾಗಾದಿದ್ದರೆ, ಯುಗಾಂತಸಮಯದ ಭೂಭಾರಹರಣ ಕಾರ್ಯ ವಾಗುತ್ತಿದ್ದಿಲ್ಲ. ಅಂತೆಯೇ ಶ್ರೀಹರಿ ಸಂಕಲ್ಪಾನುಸಾರವಾಗಿ ನಡೆವ ದೇವಮುನಿ ಜನರು ಅವತರಿಸಿ, ಕಾದಿ, ಸಾಧನವನ್ನು ಮಾಡಿಕೊಂಡು, ಸಕಲ ಕ್ಷತ್ರಸಮೂಹವನ್ನೂ ನಾಶಗೊಳಿಸಿ, ತಂತಮ್ಮ ಲೋಕವನ್ನು ಸೇರಿದರು.

ಕರ್ಣನು ದೈವವಿಲಾಸದಿಂದ ಕಾನೀನನಾಗಿ ಜನಿಸಿದನು. ನೀಚಕುಲನು ವೀರ್ಯಾಧಿಕನಾದರೆ ಬಾಧಕವಿಲ್ಲ; ಆದರೆ ಅವನು ಸ್ವಭಾವದುಷ್ಟನೋ ಅಥವಾ ಸಂಗದುಷ್ಟನೋ ಆದಾಗ ಮಾತ್ರ, ತನ್ನಕಿಂತ ಉತ್ತಮರಲ್ಲಿ ಸ್ಪರ್ಧಿಸಿ, ರಾಜಸಹಿತ ಪ್ರಜಾಸಮೂಹವನ್ನು ನಾಶಗೊಳಿಸುವನು. ಕರ್ಣನು ಸೂತನೆನಿಸಿ, ದುರ್ಯೋಧನ ಸ್ನೇಹದಿಂದ, ಪಾಂಡವ ದ್ವೇಷವನ್ನು ಸಾಧಿಸಿದನು. ಬಾಲ್ಯದಿಂದಲು ಅವನು ಅರ್ಜುನನ ಧನುಃಪಾಂಡಿತ್ಯವನ್ನು ಮೆಚ್ಚದೆ, ಅದನ್ನು ಮೀರಲು ಹವಣಿಸಿದನು. ವಾಸುದೇವನ ಬಾಂಧವ್ಯಸ್ನೇಹಗಳಿಂದಲು, ಪ್ರಜಾನುರಾಗದಿಂದಲು ಮೆರೆವ ಪಾರ್ಥನನ್ನು ಕಂಡು, ಉರಿವ ಕರ್ಣನಿಗೆ ಅವನು ಮುಖ್ಯವೈರಿಯಾದನು. ಅವನಂತೆ ಬ್ರಹ್ಮಾಸ್ತ್ರವನ್ನು ಕಲಿಯಲೆಣಿಸಿ, ಯಾಚಿಸಿದ ಕರ್ಣನ ಕುಲ, ಸ್ವಭಾವ, ದುಷ್ಟಸಂಗಗಳನ್ನರಿತು, ದ್ರೋಣನು ನಿರಾಕರಿಸಿದನು. ಆಗ ಸೂತಸುತನು ಭಾರ್ಗವಗೋತ್ರಜನೆಂದು ಹೇಳಿಕೊಂಡು, ಶ್ರೀ ಪರಶುರಾಮ ದೇವನನ್ನು ಆಶ್ರಯಿಸಿದನು! ಮಹೇಂದ್ರಗಿರಿಯಲ್ಲಿದ್ದು, ಮಹಾತಪಸ್ವಿಯನ್ನು ಮಹಾ ಭಕ್ತಿಯಿಂದ ಸೇವಿಸಿದನು.

ಶ್ರೀಭಾರ್ಗವನು ಸರ್ವಜ್ಞನಾಗಿದ್ದೂ, ತಿಳಿಯದವನಂತೆ, ಕರ್ಣನನ್ನು ಶಿಷ್ಯನಾಗಿ, ಸ್ವೀಕರಿಸಿ, ಬ್ರಹ್ಮಾಸ್ತ್ರಾದಿ ದಿವ್ಯಶಸ್ತ್ರಾಸ್ತ್ರಗಳನ್ನು ಅವನಿಗೆ ದಯಪಾಲಿಸಿದನು. ಅವನು

ಕ್ಷತ್ರಿಯನೆಂದು ಆತನಿಗೆ ಗೊತ್ತಿಲ್ಲವೇ ? ಆದರೂ ಕರ್ಣನು ವೀರನಾಗಲಿ ! ಅವನ ವೀರ್ಯವನ್ನು ನಂಬಿ ದುರ್ಯೋಧನನು ಕಾದಲು ನಿಲ್ಲಲಿ ! ಅವನ ಯೋಗ್ಯತೆಗೆ ತಕ್ಕ ತಮಃಪ್ರಾಪ್ತಿಯು. ಸರ್ವಜನ ನಾಶಪಾಪಸಾಧಕನಾಗುವ ಕುರುರಾಜನಿಗಾಗಲಿ ! ಎಂದೆ ಆ ಸತ್ಯಸಂಕಲ್ಪನು ಸುಮ್ಮನಿದ್ದನು.

ಒಂದು ದಿನ ಕರ್ಣನು ವಿಪ್ರನೋರ್ವನ ವತ್ಸವನ್ನು ಪ್ರಮಾದವಶನಾಗಿ ಕೊಂದನು. ತನ್ನನ್ನು ಕ್ಷಮಿಸೆಂದು ಬೇಡಿದ ಕರ್ಣನಿಗೆ ಆ ವಿಪ್ರನಿಂತೆಂದನು: 'ಕರ್ಣ! ಯಾರಲ್ಲಿ ಸ್ಪರ್ಧಿಸುತ್ತಿರುವೆಯೋ, ಯಾರನ್ನು ಕೊಲ್ಲಲೆಂದು ಅಸ್ತ್ರಾಭ್ಯಾಸವನ್ನು ನಡೆಸಿರುವೆಯೋ, ಅವನಿಂದ ಕೂಡಿ, ಕಾದುವ ನಿನ್ನ ಮೃತಿಕಾಲದಲ್ಲಿ, ನಿನ್ನ ರಥಚಕ್ರವು ಭೂಮಿಯಲ್ಲಿ ಹೂತು ನಿಲ್ಲುವುದು ! ಪ್ರಮತ್ತವಾಗಿ ಮೇಯುತ್ತಾ, ನಿನ್ನನ್ನರಿಯದಿದ್ದ ಕರುವಿನನ್ನು ಕೊಂದಂತೆ, ಪ್ರಮತ್ತನಾಗಿ ರಥಚಕ್ರವನ್ನೆತ್ತುತ್ತಿರುವ ನಿನ್ನನ್ನು, ನಿನ್ನ ಶತ್ರುವು ಕೊಲ್ಲುವನು' ಇಂತು ಶಪಿಸಿದ ವಿಪ್ರನಿಗೆ ಕರ್ಣನು ಗೋಧನರತ್ನಗಳನ್ನಿತ್ತು, ಕ್ಷಮೆಪಡೆಯಲು ಯತ್ನಿಸಿದನು. ವಿಪ್ರನು ಧನಾದಿಗಳನ್ನೊಲ್ಲದೆ, 'ನನ್ನ ವಚನವು ಸುಳ್ಳಾಗದು. ಶಾಪವನ್ನು ನಾನು ಹಿಂದಿರುಗಿಸಲಾರದಿರುವೆನು. ನಡೆ ! ' ಎಂದನು.

ಶ್ರೀಭಾರ್ಗವ ಸೇವಾನಿರತನಾಗಿದ್ದ ಕರ್ಣನು ಆ ಮಹಾನುಭಾವನ ಶಾಪಕ್ಕೂ ಗುರಿಯಾದನು. ಒಂದು ದಿನ ಶಿಷ್ಯವತ್ಸಲನಾದ ಭಾರ್ಗವರಾಮನು ಕರ್ಣನ ತೊಡೆಯಲ್ಲಿ ತಲೆಯಿಟ್ಟು ಮಲಗಿದ್ದನು. ಭಲ್ಲೂಕ ಕ್ರಿಮಿಯೊಂದು ಅವನ ತೊಡೆಯನ್ನು ಕೊರೆಯ ತೊಡಗಿತು. ಮೈಯೆಲ್ಲ ಮುಳ್ಳಾಗಿ, ಮೊನಚಾದ ಕೋರೆಗಳಿಂದ ಕಡಿದು ಪೀಡಿಸುವ ಕ್ರಿಮಿಯನ್ನು ತೊಡೆಯಲ್ಲಿ ಸೇರಿಸುವುದರಿಂದ ಕೊಲ್ಲಲಾರದೆ, ದೂರಸರಿಸಲಾರದೆ, ಕರ್ಣನು ವೇದನೆಯನ್ನು ಸಹಿಸಿಕೊಂಡಿದ್ದನು. ಶ್ರೀರಾಮನ ನಿದ್ರಾ ಭಂಗಕ್ಕೆ ಹೆದರಿ ಸುಮ್ಮನಿದ್ದ ಕರ್ಣನ ತೊಡೆ ರಕ್ತಮಯವಾಯಿತು. ದೇವನಿಗೆ ರಕ್ತಸ್ಪರ್ಶವಾದಾಗ, ಆತನು ಎಚ್ಚತ್ತು, 'ಏನೆದು ? ಎಲ್ಲಿಯದೀ ರಕ್ತ ? ' ಎಂದು ಕೇಳಿದನು. ಕರ್ಣನು ಕ್ರಿಮಿಯನ್ನೂ, ತೊಡೆಯನ್ನೂ ತೋರಿದನು. ಶ್ರೀಶನು ನೋಡಿದ ಕೂಡಲೇ ಕ್ರಿಮಿಯು ಪ್ರಾಣಗಳನ್ನು ಬಿಟ್ಟಿತು. ಅಂತರಿಕ್ಷದಲ್ಲಿ ಭೀಷಣರೂಪನಾದ ರಾಕ್ಷಸನೋರ್ವನು ಕಾಣಿಸಿಕೊಂಡನು. ಅವನು ರಾಮನಿಗೆ ವಂದಿಸಿ, 'ಭೃಗುಶಾರ್ದೂಲ! ನಿನ್ನ ದಯದಿಂದ ಕ್ರಿಮಿಯೋನಿಯಿಂದ ಮುಕ್ತನಾದೆನು. ನನ್ನನ್ನು ದಂಶನೆಂಬ ದಾನವನೆಂದು ತಿಳಿ! ಭೃಗುದಯಿತೆಯನ್ನು ಅಪಹಾರ ಮಾಡಲೆಣಿಸಿ, ಆ ಮುನಿವರನಿಂದ ಕ್ರಿಮಿಯಾಗೆಂದು ಶಪ್ತನಾದೆನು. ಶಾಪಮೋಚನವನ್ನು ಬೇಡಿದ ನನಗೆ, 'ಭಾರ್ಗವರಾಮನು ನಿನ್ನನ್ನು ಉದ್ಧರಿಸುವನು' ಎಂದನುಗ್ರಹಿಸಿದನು. ಇಂದು ಪಾಪಿಜನ್ಮದಿಂದ ಮುಕ್ತನಾದೆನು' ಎಂದು ನುಡಿದು, ತನ್ನ ಲೋಕವನ್ನು ಸೇರಿದನು.

ಆಗ ಪರಶುರಾಮನು ಕ್ರೋಧದಿಂದ ಕರ್ಣನನ್ನು ಅವಲೋಕಿಸಿ, 'ಮೂಢ! ನೀನು ವಿಪ್ರನಲ್ಲ! ವಿಪ್ರನಿಂದ ಇಂತಹ ದುಸ್ಸಹ ವೇದನೆ, ಸಹಿಸಲಾಗುವುದಿಲ್ಲ. ನೀನಾರು? ನಿಜವನ್ನು ಹೇಳು ! ' ಎಂದು ಕೇಳಿದನು. ಕರ್ಣನು ಭೀತನಾಗಿ ವಂದಿಸಿ, 'ದೇವ ! ನೀನಾಡಿದಂತೆ, ನಾನು ವಿಪ್ರನಲ್ಲ. ಕ್ಷತ್ರಿಯನೂ ಅಲ್ಲ. ಸೂತ ಕುಲಜನಾದ ನನ್ನನ್ನು

ರಾಧಾಧಿರಥಪುತ್ರನೆಂದು ಹೇಳುವರು. ಅಸ್ತ್ರಲೋಭದಿಂದ ವಿಪ್ರನೆಂದು ಸುಳ್ಳಾಡಿದೆನು. ವಿದ್ಯಾಪ್ರದನಾದ ಗುರುವು ತಂದೆಯಂತಲ್ಲವೇ ? ಆದುದರಿಂದ ಭಾರ್ಗವಗೋತ್ರ ಜನೆಂದೆನು. ತಪ್ಪಾಯಿತು. ಕ್ಷಮಿಸು!' ಎಂದು ಬೇಡಿದನು.

ಶ್ರೀರಾಮನು ಸರೋಷನಾಗಿ, 'ಅಸ್ತ್ರಲೋಭದಿಂದ ಮಿಥ್ಯಾವಚನನಾದೆ ! ಆದುದರಿಂದ ನಿನ್ನ ಶತ್ರುನಿನೊಡನೆ ಕಾದುವಾಗ, ಅದೂ ನಿನ್ನ ವಧಕಾಲದಲ್ಲಿ ಬ್ರಹ್ಮಾಸ್ತ್ರವು ನಿನಗೆ ಪ್ರತಿಭಾತವಾಗದೆ ಹೋಗಲಿ! ಅಬ್ರಾಹ್ಮಣನಲ್ಲಿ ಬ್ರಹ್ಮಾಸ್ತ್ರವು ಶಾಶ್ವತವಾಗಿರುವುದಿಲ್ಲ. ನನ್ನ ಆಶ್ರಮದಲ್ಲಿ ಅನೃತವಚನನಿಗೆ ಸ್ಥಳವಿಲ್ಲ ಹೋಗು!' ಎಂದು ಶಪಿಸಿ, ಕಳಿಸಿದನು.

ಕರ್ಣನು ದುರ್ಯೋಧನನನ್ನು ಸೇರಿ, ಕೃತಾಸ್ತ್ರನಾಗಿರುವೆನೆಂದು ತಿಳಿಸಿ, ಅವನ ಸುಹೃದ್ವರನಾದನು. ಆಗ ಕಳಿಂಗ ದೇಶದ ರಾಜಪುರದಲ್ಲಿ, ಆ ದೇಶದ ರಾಜನಾದ ಚಿತ್ರಾಂಗದನು ತನ್ನ ಕುವರಿಯ ಸ್ವಯಂವರವನ್ನು ಸಾರಿದನು. ದುರ್ಯೋಧನನು ಕರ್ಣ ನೊಡಗೂಡಿ ಅಲ್ಲಿಗೆ ಬಂದನು. ಶಿಶುಪಾಲ, ಜರಾಸಂಧ, ಭೀಷ್ಮ, ಬಭ್ರು, ನೀಲ, ರುಕ್ಮಿ ಸೃಗಾಲ, ಶತಧನ್ವ ಮುಂತಾದ ರಾಜನ್ಯರು ಕನ್ಯಾರ್ಥಿಗಳಾಗಿ ಬಂದರು. ರಾಜಕುಮಾರಿಯು ಧಾತ್ರೀಕುಂಚುಕಿ ಪರಿವಾರದಿಂದ ಸ್ವಯಂವರ ಮಂಟಪವನ್ನು ಪ್ರವೇಶಿಸಿ, ರಾಜರನ್ನು ನೋಡುತ್ತಾ, ಹೊರಟಳು. 'ದುರ್ಯೋಧನ ಮಹಾರಾಜ' ನೆಂದು ಸಾರಿದ ವರ್ಷಧರರ ವಚನದಿಂದ ತಿಳಿದೂ, ತನ್ನನ್ನು ವರಿಸದೆ, ಮುಂದೆಸಾಗಿದ ಕನ್ಯೆಯ ದಿಟ್ಟತನವನ್ನು ಸಹಿಸದೆ, ದುರ್ಯೋದನನು, ಅವಳನ್ನು ಬಲಾತ್ಕಾರದಿಂದ ಅಪಹರಿಸಿ, ರಥದಲ್ಲಿಟ್ಟುಕೊಂಡು, ತೆರಳಿದನು. ಕರ್ಣನು ಅವನ ಪೃಷ್ಠರಕ್ಷಕನಾಗಿ, ಮೇಲೇರಿ ಬರುವ ರಾಜನ್ಯರನ್ನೆಲ್ಲ ಸೋಲಿಸಿ, ಓಡಿಸಿದನು.

ಜರಾಸಂಧನು ಸಿಟ್ಟಿನಿಂದ ಕರ್ಣನನ್ನು ಮುತ್ತಿದನು. ಅವರೀರ್ವರಿಗೆ ದಾರುಣ ಯುದ್ಧವಾಯಿತು. ಧನುಸ್ಸುಗಳು ಮುರಿದು, ಬಾಣಗಳು ಉಳಿಯದೆ, ಖಡ್ಗಾದಿ ಶಸ್ತ್ರಗಳು ತಂಡಾಗಿ, ಕರ್ಣಜರಾಸಂಧರು ಬಾಹುಯುದ್ಧಕ್ಕಿಳಿದರು. ಕರ್ಣನು ತನಗಾಗಿ ಸ್ಪರ್ಧಿಸದೆ, ತನ್ನ ರಾಜನಿಗಾಗಿ ಕಾದಿದ್ದರಿಂದ, ಜರಾಸಂಧನನ್ನು ಗೆದ್ದನು. ಅವನನ್ನು ಕೆಡಹಿ, ಕಾಲನ್ನು ತುಳಿದಿಟ್ಟು, ಮತ್ತೊಂದು ಕಾಲನ್ನು ಪಿಡಿದು, ಎರಡಾಗಿ ಸೀಳಲೆಣಿಸುವ ಕರ್ಣನ ವಿಕ್ರಮವನ್ನರಿತು, ಜರಾಸಂಧನು, ವೈರವನ್ನು ಬಿಟ್ಟು, ಮಾಲಿನಿ ಎಂಬ ನಗರವನ್ನವನಿಗೆ ಕೊಟ್ಟು, ಅವನಿಂದ ಸ್ನೇಹವನ್ನು ಬೆಳೆಸಿದನು. ಅಲ್ಲಿದ್ದು ಕರ್ಣನು, ದುರ್ಯೋಧನನಿತ್ತ ಅಂಗರಾಜ್ಯವನ್ನೂ, ಚಂಪಾ ನಗರವನ್ನೂ ಪೊಂದಿ, ಪಾಲಿಸಿದನು. ಅಂದಿನಿಂದ ಕರ್ಣನ ಪ್ರತಾಪವು ಜಗದ್ವಿಖ್ಯಾತವಾಯಿತು.

ದೇವೇಂದ್ರನು ಕ್ರಿಮಿಯಲ್ಲಿದ್ದು, ಪ್ರೇರಿಸಿದುದರಿಂದ ಗುರುಶಾಪಕ್ಕೀಡಾದ ಕರ್ಣನು, ವಿಪ್ರರೂಪದಿಂದ ಯಾಚಿಸಿದ ದೇವೇಂದ್ರನಿಗೆ ಕವಚ ಕುಂಡಲಗಳನ್ನು ಕೊಟ್ಟು, ತನ್ನ ನಾಶವನ್ನು ತಾನಾಗಿ ತಂದುಕೊಂಡನು. ವಿಪ್ರಶಾಪದಿಂದ ರಥವು ಕುಗ್ಗಿತು. ಗುರುಶಾಪದಿಂದ ಬ್ರಹ್ಮಾಸ್ತ್ರವು ಸ್ಫುರಿಸಲಿಲ್ಲ. ಕುಂತಿಗೆ ವರವಿತ್ತುದರಿಂದ ಕೈಗೆ ಸಿಕ್ಕ ಧರ್ಮಜ ಯಮಳರನ್ನು ಅವನು ಕೊಲ್ಲದೆ ಬಿಡಬೇಕಾಯಿತು. ಭೀಷ್ಮನು ಅರ್ಧರಥನೆಂದು ಅವಮಾನಿಸಿದನು.

ಶಲ್ಯನು ತೇಜೋವಧೆಗೈದು, ನಿರುತ್ಸಾಹಪಡಿಸಿದನು ವಾಸುದೇವನು, 'ಕೌಂತೇಯನು ನೀನು; ರಾಧೇಯನಲ್ಲ' ವೆಂದು ತಿಳಿಸಿ, ವೈರವನ್ನು ಕಡಿಮೆ ಮಾಡಿದನು.

ಅವನನ್ನು ಮುತ್ತಿದ ಅರ್ಜುನನು ಕೃಪ ದ್ರೋಣರಿಂದ ವಿದ್ಯೆ ಕಲಿತು, ಬ್ರಹ್ಮಾಸ್ತ್ರ ದಿನಗಳನ್ನರಿತಿದ್ದನು, ರುದ್ರ ದೇವೇಂದ್ರ, ಕುಬೇರ, ವರುಣಾದಿಗಳಿಂದ ದಿವ್ಯಾಸ್ತ್ರಗಳನ್ನು ಪಡೆದಿದ್ದನು. ಗಾಂಡೀವ ಧನುವು, ಅಕ್ಷಯ ತೂಣಗಳು, ಕಪಿಧ್ವಜದಲ್ಲಿ ವಾಯುನಂದನ, ಬಗಲಿಗೆ ನಿಂತು ಕಾಯುವ ಭೀಮಸೇನ, ರಥಸಾರಥಿಯಾಗಿ ಸಂರಕ್ಷಿಸುತ್ತಿದ್ದ ವಾಸುದೇವ ಇಂತಹ ಸಾಧನ ಸಂಪತ್ತಿಯಿದ್ದ ಸವ್ಯಸಾಚಿಯು ದೈವಾನುಗ್ರಹದಿಂದ ಕರ್ಣನಂತಹ ಪ್ರಬಲ ಶತ್ರುವಿನನ್ನು ಸಂಹರಿಸಿದನು. ಯುದ್ಧಮೃತವಾಗಿ, ಸ್ವರ್ಗವನ್ನು ಸೇರಿರುವ ಕರ್ಣನಿಗಾಗಿ ಶೋಕಿಸಬಾರದು.' ಎಂದು ಸಮಾಧಾನಪಡಿಸಿದನು.

ದೇವರ್ಷಿಯ ವಚನವನ್ನಾಲಿಸಿ, ಚಿಂತಾಕ್ರಾಂತನಾಗಿ ಕೂತಿದ್ದ ಧರ್ಮಜನಿಗೆ ಕುಂತೀದೇವಿಯು ಇಂತೆಂದಳು: 'ಯುಧಿಷ್ಠಿರ! ಶೋಕಿಸಿ ಫಲವಿಲ್ಲ. ಮೊದಲೇ ನಾನು ಕರ್ಣನಿಗೆ ಅವನು ಪಾಂಡವೇಯನೆಂದು ತಿಳಿಸಿದೆನು. ಸೂರ್ಯನೂ ತಂದೆಯಾದುದರಿಂದ ಹಿತವನ್ನುರುಹಿದನು. ನನ್ನಿಂದಾಗಲಿ, ಸೂರ್ಯನಿಂದಾಗಲಿ, ಕರ್ಣನನ್ನು ನಿರ್ವೈರನನ್ನಾಗಿಸಲು ಸಾಧ್ಯವಾಗಲಿಲ್ಲ. ನಿನ್ನಿಂದ ಕೂಡಿ, ಬಾಳಲು ಅವನು ಸಮ್ಮತಿಸಲಿಲ್ಲ. ಪಾಂಡವ ದ್ವೇಷವನ್ನು ಅದರಲ್ಲಿಯೂ ಅರ್ಜುನ ದ್ವೇಷವನ್ನು ಅವನು ಬಿಡಲಿಲ್ಲ. ಅರ್ಜುನನನ್ನು ಕೊಲ್ಲಲೇಬೇಕೆಂಬ ಅವನ ಹಠವನ್ನು ಕಂಡು, ನಾನು ರೋಸಿ ಅವನನ್ನು ಉಪೇಕ್ಷಿಸಿದೆನು.' ಆ ಮಾತಿಗೆ ಧರ್ಮರಾಜನು 'ಸ್ತ್ರೀಜನರಲ್ಲಿ ರಹಸ್ಯವು ಉಳಿಯದಿರಲಿ!' ಎಂದು ಶಪಿಸಿ, ತಾನು ಬಂಧುವಧೆಯಿಂದ, ನಿರ್ವಿಣ್ಣನಾಗಿ, ತಲೆತಗ್ಗಿಸಿ, ಕೂತನು.

## ೨. ಸೋದರ ಸಂವಾದ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಧರ್ಮರಾಜನು ಶೋಕಕರ್ಶಿತನಾಗಿ, ಕರ್ಣಹಂತನಾದ ಅರ್ಜುನನಿಗಿಂತೆಂದನು: 'ಪಾರ್ಥ! ವನದಲ್ಲಿದ್ದೋ, ಅಥವಾ ವೃಷ್ಣ್ಯಂಧಕ ಪುರಗಳಲ್ಲಿ ಭಿಕ್ಷೆ ಬೇಡಿಯೋ ಬದುಕಬಹುದಿರಲು, ನಾವು ಜ್ಞಾತಿವಧೆಯಿಂದ, ದುರ್ಗತಿಗೀಡಾದೆವು. ನಾವು ಬಂಧುಪ್ರೀತಿಯನ್ನು ಬಿಟ್ಟು, ಕಡಿದಾಡಿದುದರಿಂದ, ನಮ್ಮ ಶತ್ರುಗಳಿಗೆ ಆನಂದವಾಯಿತು. ನಮ್ಮ ಪುರುಷಾರ್ಥಗಳೆಲ್ಲವೂ ಹಾಳಾದವು. ನಮ್ಮವರನ್ನು ಕೊಂದು, ನಾವು ಧರ್ಮದೂರರೂ ಆದೆವು. ಕ್ಷತ್ರಧರ್ಮಕ್ಕೆ ಧಿಕ್ಕಾರವಿರಲಿ! ರೋಷವಶರಾಗಿ ಕಾದು, ಕೊಂದು, ಪಡೆದ ರಾಜ್ಯಕ್ಕೆ ಧಿಕ್ಕಾರವಿರಲಿ! ವನಚಾರಿ ಸ್ವಭಾವಗಳಾದ, ಕ್ಷಮೆ, ದಮ, ಶೌಚ, ವೈರಾಗ್ಯ, ಅಮತ್ಸರ, ಅಹಿಂಸಾ, ಸತ್ಯಗಳನ್ನು ಅನುಸರಿಸದೆ, ಲೋಭದಿಂದ ಮತಿಗೆಟ್ಟು, ದಂಭದಿಂದ ಉರಿದೆದ್ದು, ಮೋಹದಿಂದ ಕೊಂದು, ಈಗ ದುಃಖಮಾತ್ರ ಭಾಜನರಾಗಿರುವೆವು. ನಾಯಿಗಳು ಮಾಂಸಖಂಡಕ್ಕಾಗಿ ಕಡಿದಾಡಿದಂತೆ, ನಾವು ಜಗಳವಾಡಿದೆವು; ಬಂಧುಗಳು ಸತ್ತು, ಬಿಟ್ಟುಹೋದ ರಾಜ್ಯವಾರಿಗೆ ಸುಖವೀಯಬಲ್ಲದು?

ಸುವರ್ಣರಾಶಿಯಿಂದ, ಗವಾಶ್ವಗಜ; ರಾಜಿಯಿಂದ, ಭೂಖಂಡದಿಂದ ಯಾವುದರಿಂದ ಲಾಗಲಿ, ಸತ್ತ ಮಿತ್ರಬಂಧುಗಳನ್ನು ಮತ್ತೆ, ಪಡೆಯಬಲ್ಲೆವೇ?

ಕಾಮಕ್ರೋಧವಶರಾಗಿ ಕಡಿದಾಡಿ, ಗೆದ್ದಾಗ ಕುಣಿದಾಡಿ, ಸತ್ತಾಗ ಅತ್ತ ವೀರರಿಗೆ ನರಕವೇ ಆಗಲಿ, ಧರ್ಮಯುದ್ಧ ಲಭ್ಯವಾಗುವ ಸ್ವರ್ಗಾದಿ ಪುಣ್ಯಲೋಕವೂ ಆಗಿಲ್ಲ. ಗೌರೀವ್ರತಾದಿಗಳನ್ನೂ, ದುರ್ಗೋತ್ಸವಾದಿಗಳನ್ನೂ, ಲಕ್ಷ್ಮೀನಾರಾಯಣ ಮಂಗಳವನ್ನೂ ಮಾಡಿ ಬೇಡಿ ಮಕ್ಕಳನ್ನು ಪಡೆಯುವರು. ಗರ್ಭನಿಂತರೆ ಕೂಸುನಿಲ್ಲದು, ಕೂಸು ಬೆಳೆದರೆ ಯುವಕರಾಗಿ ಉಳಿಯರು; ಉಳಿದರೆ ಸಂಭಾವಿತರೆನಿಸರು; ಸಂಭಾವಿತರು ಕೂಡ ಸುಖವನ್ನು ಕೊಡರು. ಇಂತು ಜನನೀಜನಕರು ಕಷ್ಟಮಾತ್ರ ಫಲವಾಗಿ ಜೀವಿಸ ಬೇಕಾಗುವುದು.

ಅಂಬ! ಗಾಂಧಾರೀ, ಧೃತರಾಷ್ಟ್ರನು ಮಕ್ಕಳಿಂದ ಏನು ಸುಖಿಸಿದರು? ನಮ್ಮಿಂದ ನಿಮಗೇನು ಸುಖವಾಯಿತು? ಏನೂ ಇಲ್ಲ. ಕಾಮಲೋಭವಶರಾಗಿ, ಪರದ್ರವ್ಯದಾರಾ ರಾಜ್ಯರತ್ನಗಳಿಗೆ ಕೈಹಾಕುವ ಕುಪುತ್ರರನ್ನು ವಾರಿಸದೆ, ಗಾಂಧಾರೀಧೃತರಾಷ್ಟ್ರರಿಗೀ ದುಃಖ ಬಂತು. ಕ್ರೋಧವಶರಾಗಿ ಕಡಿದಾಡಿ, ಗೆದ್ದ ನಮಗೆ ಮಾತ್ರ ಏನು ಸುಖವಿದೆ? ಕಡಿದಾಡಿ ಸತ್ತ ಕೌರವ ಪಾಂಚಾಲ ವೀರರು ನರಿ ಕೂಪದಿ ಬಿದ್ದರು. ಗೆದ್ದೆವೆಂದು ಹಿಗ್ಗುವ ನಮ್ಮ ಜಯವೂ, ಶೂನ್ಯಾಗಾರಗಳನ್ನೂ, ವಿಧವೆಯರನ್ನೂ, ನಿರ್ಗತಿಕ ವೃದ್ಧರನ್ನೂ ನೋಡಿದಾಗ, ಅಪಜಯದಂತೆ ದುಃಖಪ್ರದವೇ ಆಗಿದೆ. ಇಷ್ಟು ಜನರನ್ನು ಕೊಂದ ಪಾಪವು ಪಾಪಿ ದುರ್ಯೋಧನನನ್ನೇ ಸೇರಿದೆ ನಿಜ! ಆದರೆ ಅವರುಂಡು ಬಿಟ್ಟು ಹೋದ, ಧನ, ರತ್ನ ಧಾನ್ಯ, ಸಿಂಹಾಸನ ಭೂಖಂಡಗಳಿಂದ ಸುಖವನ್ನು ಕಾಣಲಾರದೆ, ಶೋಕಕ್ಕೀಡಾಗಿ ನಾವು ಕಾಮಭೋಗ ದೂರವಾಗಿ, ಬದುಕುವಂತಾಗಿದೆ. ದುರ್ಯೋಧನ ಪಾಪಬುದ್ಧಿಯನ್ನು ತಿದ್ದದ ಧೃತರಾಷ್ಟ್ರನಿಂದ ಇಷ್ಟಾಯಿತು! ಕುಲೀನನಾಗಿರುವ ಯಾವ ನರನು ವೃದ್ಧಸಭೆಯಲ್ಲಿ, ಯುದ್ಧದುರ್ಮದನಾದ ದುರ್ಯೋಧನನಂತೆ ನುಡಿಯುವನು? ದುಷ್ಟದುರ್ಯೋಧನನಿಂದ, ರಣಕಣಕ್ಕಿಳಿದು, ಅವಧಾರ್ಹರಾದ ಗುರುಹಿರಿಯರನ್ನು, ಕ್ಷತ್ರ ಧರ್ಮದ ನೆವವಿಟ್ಟು ಕೊಂದ ನಮ್ಮಂತಹ ನಿಂದನೀಯರಿಲ್ಲ. ಕೊಲ್ಲುವವರೆಗೂ ಇದ್ದ ರೋಷದ್ವೇಷಗಳು, ಕೊಂದ ಮೇಲೆ ಶೋಕದುಃಖಗಳಾಗಿ ಕಾಡುತ್ತಿವೆ.

ಮಾಡಿದ ಪಾಪದ ಪ್ರಾಯಶ್ಚಿತ್ತಕ್ಕಾಗಿ, ಗೆದ್ದ ರಾಜ್ಯವನ್ನು ಬಿಟ್ಟು, ವನವನ್ನು ಸೇರಿ, ತಪೋನಿರತನಾಗುವೆನು. ಧನಂಜಯ! ನನಗೆ ಅಪ್ಪಣೆ ಕೊಡಿ! ಪರಿಗ್ರಹದ ಸುಖಕ್ಕಾಗಿ ಕಾದಿದೆನು. ರಾಜ್ಯವನ್ನು ಅವರಿಗೇ ಕೊಟ್ಟು, ಕಾದಿ ಕೊಂದ ಪಾಪದ ಹೊರೆಯನ್ನು ನಾನು ಹೊತ್ತು, ವನದಲ್ಲಿದ್ದು, ಅದನ್ನು ಪಶ್ಚಾತ್ತಾಪಾಗ್ನಿಯಿಂದ ಸುಡುವೆನು. ಭೀಮಸೇನನು ರಾಜನಾಗಿ ಆಳಲಿ! ಅಥವಾ ನೀನೇ ರಾಜನಾಗು! ನನಗಂತೂ ರಾಜ್ಯವು ಬೇಡ! ಭೋಗಗಳನ್ನಂತೂ ಮೊದಲೇ ಒಲ್ಲೆನು."

ಇಂತು ನುಡಿದು, ಸುಮ್ಮನೆ ಕೂತ ಧರ್ಮರಾಜನಿಗೆ, ಪಾರ್ಥನು ಅಧಿ ಕ್ಷಿಪ್ತನಾದಂತಾಗಿ ಸ್ವಲ್ಪ ಸಿಟ್ಟಿನಿಂದ, ಇಂತೆಂದನು: 'ಅಹುದು! ಧರ್ಮಜ! ಸ್ವಜನರನ್ನು

ಕೊಂದೆವು; ದುಃಖವನ್ನು ಕೊಂಡೆವು! ಶತ್ರುಗಳಿಂದ ಕಾದಿದೆವು; ಕಷ್ಟವನ್ನು ಪಟ್ಟೆವು! ಆದುದೇನೋ ಆಯಿತು! ಈಗ ರಾಜ್ಯಸುಖಗಳು ಕೈಗೆ ಸಿಕ್ಕಿದ್ದರೂ, ಅವನ್ನೂ ಬಿಟ್ಟು ಮೂಢರಾಗುತ್ತಿರುವೆವು. ಧರ್ಮಯುದ್ಧದಲ್ಲಿ ಬಂದ ರಾಜ್ಯವೂ ನಿನಗೆ ಬೇಡವಾಗಿದೆ! ಮನುಜಮಾತ್ರರು ಸಾಧಿಸಲಾಗದ ಪ್ರಬಲಶತ್ರು ಜಯವು ಸಾಧಿಸಿ ಬಂತು. ದೇವತೆಗಳಿಗೂ ಸಿಗದ ಸುಖಭೋಗಗಳು ಸಿದ್ಧವಾಗಿ ಕೈಸೇರಿದವು! ಸ್ವವೀರ್ಯದ ಹಿರಿಮೆ, ಶ್ರೀಕೃಷ್ಣನ ಕರುಣೆ, ದುರ್ಯೋಧನಾದಿ ದುಷ್ಟಜನರ ಪಾಪ ಮೂರೂ ಕಲೆತು ತಂದ ವಿಜಯಶ್ರೀ ಕೀರ್ತಿಗಳು, ಮನೆಯ ಅಂಗಳಲ್ಲಿ ಬಂದು ನಿಂತಿವೆ! ಅಧರ್ಮಯುದ್ಧವೆಂದು ವೃಥಾ ಶಂಕಿಸಿ, ಜಯಭೋಗಕೀರ್ತಿಗಳನ್ನು ತ್ಯಜಿಸಿವನವನ್ನು ಸೇರಬೇಕೆಂಬ ಅಲ್ಪಬುದ್ಧಿಯು ನಿನಗೇಕೆ ಬಂತು? ಅಣ್ಣ! ಕೇಳು! ತನ್ನನ್ನು ತಾನಾಗಿ ಕಷ್ಟಪಡಿಸಿಕೊಂಡು, ಸಾಯುವನೂ, ಹಾಗೂ ಶತ್ರುವಧವನ್ನು ಮಾಡದ ಅಲಸನೂ, ರಾಜ್ಯಾನರ್ಥರೆನಿಸುವರು. ರಾಜ್ಯವೇ ನಿನಗೆ ಬೇಡವಾಗಿದ್ದಿದ್ದರೆ, ಯುದ್ಧಕ್ಕೇಕೆ ನಿಂತೆ? ಶತ್ರುರಾಜರನ್ನು ಕ್ರೋಧಾವಿಷ್ಟನಾಗಿ ಏಕೆ ಕೊಂದೆ?

ಕಡುದರಿದ್ರನೂ, ದಾರಾಪುತ್ರಪೋಷಣಾಸಮರ್ಥನೂ ಆದ ವಿಪ್ರನಿಗೆ ಭಿಕ್ಷಾಟನವೂ, ವನವಾಸವೂ ವಿಹಿತವಾಗಿದೆ; ನಿನಗಲ್ಲ. ಸಂಪನ್ನನೂ, ಖ್ಯಾತವಿಕ್ರಮನೂ, ಶತ್ರುಭಯಂಕರನೂ ಆಗಿದ್ದು ಈಗ ಭಿಕ್ಷೆ ಬೇಡಿ ಬದುಕುವೆನೆಂಬ ನಿನ್ನನ್ನು ಕಂಡು, ವಿವೇಕಿ ಜನರು ನಗುವರು. ಹುಟ್ಟಿರುವೆ ಭರತಕುಲದಲ್ಲಿ! ಗೆದ್ದಿರುವೆ ಪ್ರಬಲ ದುಷ್ಟ ಶತ್ರುಗಳನ್ನು! ಪಡೆದಿರುವೆ ಮಹೀಸಾಮ್ರಾಜ್ಯವನ್ನು! ಧರ್ಮಾರ್ಥಗಳನ್ನು ತ್ಯಜಿಸಿ, ಕಾಮವನ್ನು ಕಡೆಗಣಿಸಿ, ವನವನ್ನು ಸೇರುವ ಮೂಢನಿಗೆ ಮೋಕ್ಷವೂ ಇಲ್ಲ ತಿಳಿ!

ಅರ್ಥವನ್ನು ಕಷ್ಟಪಟ್ಟು ಸಂಪಾದಿಸಿ, ಧರ್ಮಕ್ಕಾಗಿ ವಿನಿಯೋಗಿಸದೆ, ತಾನೂ ತನ್ನವರಿಂದ ಕೂಡಿ ಉಣ್ಣದೆ, ಬಿಟ್ಟುಹೋದ ಮನುಜನು ಅದೇ ಅರ್ಥವನ್ನು ಸ್ವೀಕರಿಸಿದ ಅಪಾತ್ರರು ಮಾಡಿದ ಅಕಾರ್ಯಗಳಿಂದ ಬರುವ ಪಾಪಕ್ಕೆ ತಾನೂ ಭಾಜನನಾಗುವನು. ಮುನಿಗಳು ಧನಾದಿ ಸಂಗ್ರಹಣ ತತ್ಪರರಾಗಬಾರದು. ರಾಜರು ಧನಾದಿ ಸಂಗ್ರಹ ತತ್ಪರರಾಗದೇ ಇರಬಾರದು. ಇದು ನಹುಷನ ಮಾತು! ಧನಹೀನನಿಗೆ ಧಿಕ್ಕಾರವಿರಲಿ! ಎಂದು ಆ ಮಹಾನುಭಾವನು ಅರ್ಥದ ಪ್ರಾಮುಖ್ಯವನ್ನು ಸಾರಿರುವನು. ಅಜಗರನಾಗಿ ಬಿದ್ದಾಗ, ಸಿಕ್ಕಸಿಕ್ಕ ನರಾದಿ ಮಾಂಸವನ್ನು ತಿನ್ನಬೇಕಾಗಿ ಬಂದು, ನಹುಷನು, ಧನಾಭಾವವನ್ನು ನಿಂದಿಸಿದನು. ಎಂತಹ ದರಿದ್ರನೂ, ಧನದಿಂದಲೇ ಜೀವಿಸುವನು. ಅರ್ಥವಿಲ್ಲದವನು ಧರ್ಮವನ್ನೂ ಮಾಡಲಾರನು. ಧರ್ಮಿಷ್ಠನಾದವನ ಧನವನ್ನು ಕಸಿದರೆ ಸಾಕು, ಅವನ ಧರ್ಮವೂ ಕುಸಿದುಬೀಳುವುದು. ಧರ್ಮವನ್ನು ಸಾಧಿಸಲನುವಾಗುವ ಧನವನ್ನು ಅಪಹರಿಸುವ ಅಣ್ಣನನ್ನಾಗಲಿ, ತಂದೆಯನ್ನಾಗಲಿ, ಕ್ಷತ್ರಿಯರು ಕ್ಷಮಿಸಬಾರದು.

ಪಾಪದ ಬೇರು ದಾರಿದ್ರ್ಯ; ಅದನ್ನು ನೀನು ವರಿಸಲು ಹೋಗಬೇಡ! ಪತಿತನಂತೆ ನಿರ್ಧನನೂ ಪರಿವರ್ಜಿತನಾಗುವನು. ಅರ್ಥದಿಂದ ಕಾಮ; ಅರ್ಥದಿಂದ ಧರ್ಮ, ಅರ್ಥದಿಂದಲೇ ಮೋಕ್ಷ! ಅರ್ಥದಿಂದ ಪ್ರೀತರಾದ ಗುರುವರರು ಮೋಕ್ಷವನ್ನು ಜ್ಞಾನ ಪ್ರಸಾದಗಳ

ದ್ವಾರಾ ತಂದು, ಕೊಡಿಸುವರು. ಮುಮುಕ್ಷುಜೀವನ ಪ್ರಾಣಧಾರಣ ಮಾತ್ರವಾದರೂ ಅರ್ಥದಿಂದ ನಡೆಯಬೇಕಲ್ಲವೇ? ಅರ್ಥಹೀನನ ಕೆಲಸಗಳು, ಗ್ರೀಷ್ಮದ ಕಿರುಹೊಳೆಗಳಂತೆ ಕೆಡುವವು. ಅರ್ಥಹೀನರಿಗೆ ಮಿತ್ರರಿಲ್ಲ; ಬಂಧುಗಳಿಲ್ಲ; ದಾರಾಸುತರೂ ಅರ್ಥಹೀನನನ್ನು ದ್ವೇಷಿಸುವರು. ಅರ್ಥವಂತನು ಪಂಡಿತನೆನಿಸುವನು; ಅರ್ಥಹೀನನಿಗೆ ಎಲ್ಲವೂ ಇದ್ದೂ, ಏನೂ ಇಲ್ಲದಂತಾಗುವುದು. ಬೆಟ್ಟದಿಂದ ನದಿಯು ಹರಿದಂತೆ, ಧನದಿಂದ ಧರ್ಮ ಯಜ್ಞ ಸ್ವರ್ಗಗಳು ಸಂಭವಿಸುವವು. ಜ್ಞಾತಿವಧೆಗಂಜದೆ, ಕಡಿದಾಡಿ, ಸ್ವರ್ಗಭೋಗಗಳನ್ನು ದುಷ್ಟದೈತ್ಯರ ವಶವಾಗದಂತೆ ಕಾಪಾಡಿಕೊಳ್ಳುವ ದೇವತೆಗಳನ್ನು ನೋಡು! ವೇದಗಳನ್ನೋದು! ಯಜ್ಞಗಳನ್ನು ಮಾಡು! ಪಾತ್ರರಿಗೆ ನೀಡು! ಇವೆಲ್ಲ ಸತ್ಕಾರ್ಯಗಳಿಗೆ ಬೇಕಾಗುವ ಧನವನ್ನು ಕೂಡಿಡು! ಸ್ವಧರ್ಮದಿಂದ ಬಂದ ಧನವು ಪರಿಹರಣೀಯವಲ್ಲ. ಯದೃಚ್ಛಾಲಾಭತುಷ್ಟನಾದ ಶಿಷ್ಟನಿಗೆ ಧನವು ಪಾಪಕರಣವಾಗಲಾರದು.

ಪರದ್ರವ್ಯವೆಂದು ಕಪ್ಪಕಾಣಿಗೆ ಸುಂಕಗಳನ್ನು ಪರಿಹರಿಸುವ ರಾಜನಿಗೆ ರಾಜ್ಯವೇ ಉಳಿಯುವುದಿಲ್ಲ. ಧನವಿಲ್ಲದೆ ಅವನು ರಾಜಕಾರ್ಯಗಳನ್ನು, ಸಚಿವಸೇನಾಪ್ರಜರ ಪೋಷಣ ವನ್ನು ಮಾಡಲಾರದೆ, ನಿಂದ್ಯನೆನಿಸುವನು. ದರಿದ್ರ ರಾಜನಿಗೆ ರಾಜ್ಯವೂ ಇಲ್ಲ, ಪ್ರಜರೂ ಇಲ್ಲ. ಪ್ರಜರಿಂದ ಸ್ವೀಕರಿಸಿದ ದ್ರವ್ಯಗಳಿಂದ ಯಜ್ಞಯಾಗಗಳನ್ನೂ, ಪ್ರಜಾರಕ್ಷಣ, ದುಷ್ಟಶಿಕ್ಷಣ ಗಳನ್ನೂ ಮಾಡುವ ರಾಜನು ಪಾಪದೂರನಾಗುವುದಲ್ಲದೇ, ಪ್ರಜರ ಪುಣ್ಯದ ಷಷ್ಠಾಂಶಕ್ಕೆ ಪಾತ್ರನಾಗುವನು. ಸುತರು ಪಿತೃಧನಕ್ಕೆ ಅಧಿಕಾರಿಗಳಾಗುವಂತೆ, ರಾಜನು ಗೆದ್ದ ರಾಜ್ಯಕ್ಕೆ ಪಾಲಕನಾಗುವನು. ಧನವಂತನಾದ ರಾಜನಿಂದ ಧನವನ್ನು ಬೇಡಿ, ಪ್ರಜರು ಭಜಿಸುವರು. ದಿಲೀಪ, ನೃಗ, ನಹುಷ, ಅಂಬರೀಷ ಮಾಂಧಾತೃಗಳಾಳಿ ಹೋದ ಪೃಥ್ವಿಯು ಇಂದು ನಿನ್ನದಾಗಿದೆ. ಅವರಂತೆ ಆಳು! ವಿಪ್ರನಂತೆ ಸನ್ಯಾಸಿಯಾಗಬೇಡ! ಅವರಂತೆ ಯಜ್ಞಗಳನ್ನು ಮಾಡು! ಅಶ್ವಮೇಧಾದಿ ಯಜ್ಞಗಳನ್ನು ಮಾಡುವ ರಾಜನೊಡನೆ ಅವಭೃಥ ವನ್ನು ಮಾಡಿದ ಜನರೆಲ್ಲರು ಪಾವನರಾಗುವರು. ಮಹಾದೇವನು ಸರ್ವ ಭೂತ ಗಳನ್ನು ಪಶುಗಳನ್ನಾಗಿಸಿ, ಯಜ್ಞನಾಮಕ ಶ್ರೀಹರಿಯ ಪ್ರೀತಿಯನ್ನುದ್ದೇಶಿಸಿ ಸಂಹರಿಸಿದರೂ, ಮಹತ್ಪುಣ್ಯ ಭಾಜನನಾಗುವನು. ಯಾಜ್ಞೀಯ ಪಂಥೆಯು ಅನಾದಿ ನಿತ್ಯವಾಗಿದೆ. ಒಂದು ಪಶುವು, ಯಜಮಾನ ಪತ್ನಿಯರಿಬ್ಬರು, ಮೂರು ವೇದಗಳು ಅಧ್ವರ್ಯು, ಸಾಮಗ, ಬ್ರಹ್ಮ, ಹೋತೃಗಳೆಂಬ ನಾಲ್ಕು ಋತ್ವಿಜರು ಇಂತು ದಶಸಾಧನ ಸಂಭೃತವಾದ ಯಜ್ಞವನ್ನು ನಡೆಸು! ರಾಜನ್! ಭಿಕ್ಷಾಟನರೂಪ ಕುಮಾರ್ಗವನ್ನು ನೀನು ಅನುಸರಿಸಬೇಡ!."

ಧರ್ಮರಾಜನು, "ಅರ್ಜುನ! ಇಂದ್ರಿಯ ಮನಸ್ಸುಗಳನ್ನು ಬಿಗಿಹಿಡಿ! ಸ್ವಲ್ಪ ಆಲೋಚಿಸು! ನಾನು ಹೇಳಿದ ನಿವೃತ್ತಿಮಾರ್ಗವೇ ಉತ್ತಮವೆಂದು ನಿನಗೆ ತೋರದಿರದು. ನಿನ್ನ ಅರ್ಥಪ್ರಧಾನ ವಚನಗಳಿಗೆ ಮನಸೋತು ನಾನು ರಾಜ್ಯವನ್ನಾಳುವೆನೆಂದು ತಿಳಿಯಬೇಡ! ನನಗೆ ಗ್ರಾಮ್ಯಸುಖಾಭಿಲಾಷೆಯಿಲ್ಲ. ಕ್ಷೇಮಂಕರವಾದ ಮಾರ್ಗವಾವುದೆಂದು ಕೇಳು! ಕೇಳದಿದ್ದರೂ ನಾನೇ ಹೇಳುವೆನು ಕೇಳು! ಗ್ರಾಮ್ಯ ಸುಖಗಳನ್ನು ಬಿಟ್ಟು, ಅರಣ್ಯವನ್ನು ಸೇರಿ, ಫಲಮೂಲಾಹಾರನಾಗಿ, ಮೃಗಗಳಿಂದ ಕೂಡಿ ತಿರುಗುವೆನು. ಅದೇ ಸರಿಯಾದ ಮಾರ್ಗ."

ಎರಡು ಸಂಧ್ಯೆಗಳಲ್ಲಿ ಸ್ನಾನ ಅಗ್ನಿಯಲ್ಲಿ ಸಮಿಧಾಧಾನ, ಮಿತಾಹಾರಭೋಜನ, ನದೀಜಲಪಾನ, ಶೀತವಾತಾತಪಸಹನ ಶರೀರಶೋಷಣ ಕರ್ಣಮನೋಹರ ಮೃಗಪಕ್ಷಿವಿರಾವ ಶ್ರವಣ ರಮಣೀಯ ತರುಗುಲ್ಮಶಾದ್ವಲ ದರ್ಶನ ಪಿತೃದೇವತರ್ಪಣ ವಾನಪ್ರಸ್ಥಜನಸಹವಸನ, ಭೂತದ್ರೋಹ ವರ್ಜನ ಈ ಮೊದಲಾದ ಅರಣ್ಯಕ ಧರ್ಮಗಳನ್ನು ಅನುಸರಿಸುತ್ತಾ ಆಯುಸ್ಸಿರುವವರೆಗೂ ಜೀವಿಸಿರುವೆನು.

ಅಥವಾ ಅವಧೂತನಾಗಿ, ನೆಲದಲ್ಲಿ ಮಲಗಿ, ಮಣ್ಣಲ್ಲಿ ಹೊರಳಿ, ಜಡಾಂಧ ಮೂಕಬಧಿರನಂತೆ, ಇರುವೆನು. ಚತುರ್ವಿಧ ಜೀವರಾಶಿಗಳಿಗೆ ಬಾಧೆಕೊಡದೆ, ವನದಲ್ಲಿ ತಿರುಗುತ್ತಾ ಯಾರನ್ನೂ ಮಾರ್ಗವಾವುದೆಂದು ಕೇಳದೆ, ಯಾರಿಂದಲೂ ಕೂಡಿರದೆ, ನಿರಪೇಕ್ಷನು, ನಿರ್ಮಲನು ಆಗಿ ಜೀವನವನ್ನು ಮರಣದ ಪ್ರತೀಕ್ಷೆಯನ್ನು ಮಾಡುತ್ತಾ ಕಳೆಯುವೆನು. ಭಿಕ್ಷೆಗೆ ಬಂದರೂ ಹೊತ್ತಾದ ಮೇಲೆ ಎಲ್ಲರೂ ಉಂಡ ಮೇಲೆ ಬಂದು, ಸಿಕ್ಕರೆ ಉಂಬುವೆನು. ಇಲ್ಲದಿರೆ ಉಪವಾಸವಿರುವೆನು. ಎರಡು, ಮೂರು, ಅಥವಾ ಐದು ಮನೆಗಳ ಮುಂದೆ ನಿಂತು, ನೀಡಿದರೆ ಉಂಡು, ಇಲ್ಲದಿರೆ ಅಂದಿಗೆ ಹಾಗೇ ಇರುವೆನು. ಗೃಹಸ್ಥರಂತೆ ಧನಾದಿಗಳನ್ನು ಸಂಗ್ರಹಿಸದೆ, ಆತ್ಮಘಾತುಕರಂತೆ ಸಾಯಲು ಹವಣಿಸದೆ, ಜೀವನ ಮರಣಗಳನ್ನು ಸಾಧಿಸಲು ಯತ್ನಿಸದೆ, ದೇವನಿಟ್ಟಂತೆ, ಇಟ್ಟಷ್ಟು ಕಾಲ, ಇರುವೆನು. ಪಾಪದೂರನಾಗಿ, ದುಷ್ಟಸಂಗವನ್ನು ಬಿಟ್ಟು ಅಭಿಮಾನ ಪಾಶಗಳನ್ನು ಕಡಿದು ಗಾಳಿಯಂತೆ, ಸ್ವೇಚ್ಛೆಗೆ ಬಂದಂತೆ ತಿರುಗುವೆನು. ಆಶೆಗೆ ಸಿಕ್ಕು ಪಾಪಮಾಡಿದ್ದು ಸಾಕು. ಜನ್ಮಮೃತ್ಯುಜರಾವ್ಯಾಧಿ ದುಃಖ ದೋಷಗಳಿಂದ ಅಸಹ್ಯವಾದ ಸಂಸಾರಕೂಪದಿಂದ ಪಾರಾಗುವೆನು. ನನಗೆ ಈಗ ಲಭಿಸಿರುವ ಬುದ್ಧಿವಿಕಾಸವನ್ನು ಚನ್ನಾಗಿ, ವಿನಿಯೋಗಿಸಿ, ಶಾಶ್ವತ ಪುಣ್ಯಲೋಕಗಳನ್ನು ಪೊಂದುವೆನು"

ಆ ಮಾತಿಗೆ ನಕ್ಕು ಭೀಮಸೇನನಿಂತೆಂದನು: "ರಾಜನ್! ಛಾಂದಸನ ಅರ್ಥಜ್ಞಾನಶೂನ್ಯವಾದ ವೇದಪಾರಾಯಣದಂತೆ, ನಿನ್ನ ವಚನಗಳಿವೆ! ತತ್ವಾರ್ಥ ದರ್ಶನನಾಗದೆ, ಆಲಸನಾಗಿ, ರಾಜಧರ್ಮಗಳನ್ನು ಬಿಡುವ ನಿನಗೆ ಉಭಯಲೋಕಗಳೂ ಕೆಟ್ಟು ಸುಖದೂರನಾಗಬೇಕಾದೀತು! ಕ್ಷಾತ್ರಧರ್ಮ ಮಾರ್ಗದಲ್ಲಿ ಕ್ಷಮಾ, ದಯಾ, ಅನುಕಂಪಾ, ಕಾರುಣ್ಯಗಳಿಗೆ ಎಡೆಯಿಲ್ಲ. ಮೊದಲೇ ನಿನ್ನ ರಾಜ್ಯತ್ಯಾಗವನ್ನು ಅರಿತಿದ್ದರೆ, ನಾವು ಶಸ್ತ್ರವನ್ನೇ ಪಿಡಿಯುತ್ತಿದ್ದಿಲ್ಲ! ಯಾರನ್ನೂ ಕೊಲ್ಲುತ್ತಿದ್ದಿಲ್ಲ. ಸಾಯುವವರೆಗೂ ಭಿಕ್ಷಾವೃತ್ತಿಯನ್ನೇ ನಾವೂ ಅವಲಂಬಿಸುತ್ತಿದ್ದೆವು. ಇಂತಹ ದಾರುಣ ಯುದ್ಧವೂ ನಡೆಯುತ್ತಿದ್ದಿಲ್ಲ.

ನಿನಗೆ ರಾಜ್ಯವು ಬೇಕಾಯಿತು; ಆದರೆ ಹಿಂಸೆಯು ಬೇಡವಾಯಿತು. ರಾಜ್ಯವು ವೀರಭೋಜ್ಯವಾಗಿದೆ. ಸರ್ವಸ್ಥಾವರ ಜಂಗಮ ಜಗತ್ತೂ, ಪ್ರಾಣನಿಗೆ ಅನ್ನವಾಗಿದೆ. ಪ್ರಾಣನಿರುವವರೆಗೂ ಅನ್ನವನ್ನು ಶರೀರಕ್ಕೆ ನೀಡಬೇಕು. ಅನ್ನವು ರಾಜ್ಯಭೋಗಾದಿ ರೂಪವಾಗಿ ಬರುವುದು. ರಾಜ್ಯವು ಶತ್ರುವಧವಿಲ್ಲದೆ ಸಿಗದು. ಶತ್ರುಗಳಾದ ದುರ್ಯೋಧನಾದಿಗಳು ದುಷ್ಟರಾದುದರಿಂದ, ಅಂತಹವರನ್ನು ಕೊಂದ ನಮಗೆ ಪಾಪವಿಲ್ಲ

ಧರ್ಮಯುದ್ಧದಲ್ಲಿ ಗೆದ್ದಿರುವೆ ! ಪಾಪಿಗಳನ್ನು ಕೊಂದಿರುವೆ! ರಾಜ್ಯವನ್ನು ಹೊಂದಿರುವೆ! ಆಳಿ ಬಾಳು! ಅತ್ತು ಸಾಯಬೇಡ!

ಸ್ನಾನಮಾಡಿ, ಕೆಸರಿನಲ್ಲಿ ಬೀಳಬೇಡ ! ಕಷ್ಟಪಟ್ಟು ಗಿಡವೇರಿ, ಜೇನುಗೂಡನ್ನಿಳಿಸಿ ಕೆಳಗಿಟ್ಟು, ಕುಡಿಯದೆ, ಮಣ್ಣಲ್ಲಿ ಚೆಲ್ಲಬೇಡ! ಬಲುದೂರ ನಡೆದು, ಮನೆ ಸಿಕ್ಕಾಗ, ಹಿಂದಿರುಗಬೇಡ! ಶತ್ರುಗಳನ್ನು ಕೊಂದು, ನೊಂದು ನಿನ್ನನ್ನೇ ಕೊಂದುಕೋಬೇಡ! ಮೃಷ್ಟಾನ್ನವು ಸಿಕ್ಕಿದೆ; ಉಣ್ಣದಿರಬೇಡ ! ರಾಜ್ಯಲಕ್ಷ್ಮಿಯು ಕರಗತಳಾಗಿರುವಳು; ಆಳದೆ ಯತಿಯಾಗಬೇಡ ! ಅಣ್ಣನೆಂದು ನಂಬಿ, ನಿನ್ನಂತೆ ನಡೆದು, ನಾವು ಸುಖದೂರರಾಗಿ ಕೆಟ್ಟೆವು. ಕೈಲಾಗದ ನಪುಂಸಕರಂತೆ ಕಂಡ ಕಷ್ಟಗಳನ್ನು ಪಟ್ಟು ಕಡುಪರಾಭವವನ್ನು ಸಹಿಸಿದೆವು. ಕಷ್ಟಪಟ್ಟು ಸಂಪಾದಿಸಿದ ನಮ್ಮ ರಾಜ್ಯಸಂಪತ್ತನ್ನು ಕೈಯಾರ ಸೋತು, ಕಾಪುರುಷರಿಗೆ ಬಿಟ್ಟು ಕಂಡವರಲ್ಲಿ ಮುಸುಗಿಟ್ಟು ಕಾಲ ಕಳೆದು, ಕೊನೆಗೆ ದೈವಾನುಗ್ರಹದಿಂದ ಗೆದ್ದ ರಾಜ್ಯವನ್ನು ಅನುಭವಿಸುವುದೂ ತಪ್ಪಾಗುವುದೇ?

ಸನ್ಯಾಸವಾರಿಗೆ ಹೇಳು! ಆಪತ್ಕಾಲದಲ್ಲಿ ಜರಾಗ್ರಸ್ತನಿಗೆ ನೀನು ನುಡಿದಂತಹ ಸನ್ಯಾಸವು ಉಕ್ತವಾಗಿದೆ; ಶತ್ರುಪರಾಜಿತನಾದವನಿಗೆ ವಿಹಿತವಾಗಿದೆ. ಕ್ಷತ್ರಿಯನಾಗಿ, ಆಪತ್ತಿನಿಂದ ಪಾರಾಗಿ, ಶತ್ರುಗಳನ್ನು ಗೆದ್ದ ನಿನಗಲ್ಲ. ನಿನಗೆ ಯತ್ಯಾಶ್ರಮವು ದೂಷಿತವಾಗಿದೆ ತಿಳಿ ! ಹಿಂಸಾರ್ಥವಾಗಿ ಹುಟ್ಟಿ, ಹಿಂಸೆಯಿಂದ ಬದುಕುವವರಾಗಿ, ಹಿಂಸಾಧರ್ಮವನ್ನು ನಿಂದಿಸುವುದು ತರವಲ್ಲ. ಹಸಿವಾದಾಗ ಮಾತ್ರ ಕೊಲ್ಲುವ ಸಿಂಹಕ್ಕೆ ಪಾಪವಿಲ್ಲ. ಸಿಂಹವು ಹುಲ್ಲನ್ನು ತಿಂದಿರಲಾರದು. ಧಾತೃವಿನ ಸೃಷ್ಟಿಯೇ ಅಂತಿದೆ. ಸಕಲವಿಧ ಸೃಷ್ಟಿಕಾರಣನಾದ ಬ್ರಹ್ಮನನ್ನು ನಿಂದಿಸುವುದು ತಪ್ಪಾದೀತು! ಆತನು ಸೃಷ್ಟಿಸಿದಂತೆ ಇರುವ ಸಿಂಹಾದಿ ಮೃಗಗಳನ್ನು ಹಿಂಸ್ರಕವೆಂದು ನಿಂದಿಸುವುದೂ ವ್ಯರ್ಥವೇ ತಿಳಿ ! ದುಷ್ಟಹಿಂಸೆ ಪಾಪವಲ್ಲ, ಸಾಧುಹಿಂಸೆಯು ಪಾಪವಾಗಿದೆ. ಹಿಂಸೆಯೇ ಇಲ್ಲದಿರೆ ಜಗದಲ್ಲಿ ಜೀವನವೇ ಇಲ್ಲ. ಕ್ಷತ್ರಿಯರಿಗೆ ಸಹಜವಾದ ಧರ್ಮವು ದುಷ್ಟಶಿಕ್ಷಣವು. ಅಹಿಂಸಾ ಪರಮೋ ಧರ್ಮಃ ಎಂದು ಹಿಂಸಾಹಿಂಸೆಗಳ ಜ್ಞಾನವಿಲ್ಲದ ನಾಸ್ತಿಕರು ಹೇಳಿದ್ದನ್ನು ಕೇಳಿ, ಹಿಂಸೆಯನ್ನು ಸರ್ವಥಾ, ಸರ್ವದಾ, ಸರ್ವತ್ರ ಬಿಟ್ಟವನು, ಧರ್ಮಹಾನಿಯನ್ನೂ, ಅಧರ್ಮವೃದ್ಧಿಯನ್ನೂ ಸಂಪಾದಿಸಿ, ನರಕಭಾಜನನಾಗುವನು. ದುಷ್ಟಜನರನ್ನು ಹಿಂಸಿಸಿ ಕೊಲ್ಲುವುದೆ, ಪ್ರಜಾರಂಜಕನಾದ ಕ್ಷತ್ರಿಯನ ಪ್ರಥಮ ಕರ್ತವ್ಯವು.

ಮುಂಡನಾಗಿ, ದಿಗಂಬರನಾಗಿ, ತಿರುಗಿದರೆ ಸಾಲದು! ಡಂಭಾಚಾರನಿಗೆ ಉಭಯ ಲೋಕ ಸುಖಗಳೂ ಇಲ್ಲ. ಪುತ್ರಪೌತ್ರ ಪರಿತ್ಯಾಗದಿಂದ ಮೋಕ್ಷವಾಗುವುದಾದರೆ, ವರಾಹ ಸೃಗಾಲಗಳಿಗೆ ಮೊದಲಾಗಬೇಕಾದೀತು ! ಮನೆಯೇ ಇಲ್ಲದ ಮಂಡೂಕಸರ್ಪಾದಿಗಳಿಗೆ ಮೊದಲು ಮೋಕ್ಷವಾಗಬೇಕಾದೀತು! ಕದಲದೆ, ತಿನ್ನದೆ ಬಿದ್ದಿರುವ ಪರ್ವತವನಾದಿಗಳಿಗೆ ಮೊದಲು ಜ್ಞಾನಸಿದ್ಧಿಯಾಗಬೇಕಾದೀತು. ಮನಃಶುದ್ಧಿ ಶ್ರವಣ ಮನನ ಧ್ಯಾನಗಳು, ಭಕ್ತಿ ತಾರತಮ್ಯಜ್ಞಾನ, ಇವು ಮೋಕ್ಷ ಕಾರಣಗಳು.

ಬರಿಯ ಸನ್ಯಾಸವಲ್ಲ. ಗೃಹಸ್ಥನಾಗಿ ಸಾಧನ ಮಾಡಲಾಗದೆಂದು ಯಾವ ಶಾಸ್ತ್ರವೂ ಹೇಳುವುದಿಲ್ಲ. ಒಬ್ಬರ ಕರ್ಮಫಲವನ್ನು ಮತ್ತೊಬ್ಬರು ಉಣ್ಣುವುದಿಲ್ಲ. ನೀನು ಮಾಡಿದ ಸುಕರ್ಮವೇ ನಿನ್ನನ್ನು ಕಾಯುವುದು. ಪ್ರಜಾಪಾಲನ ಧರ್ಮರಕ್ಷಣ, ಅಧರ್ಮಶಿಕ್ಷಣ, ಯಜ್ಞಕಾರಣಗಳನ್ನು ಸ್ವಧರ್ಮವಾಗಿ ಪಡೆದು ಪುಟ್ಟಿರುವ ನಿನಗೆ ಸ್ವಧರ್ಮತ್ಯಾಗ, ಪರಮಧರ್ಮಸ್ವೀಕಾರಗಳು ಪಾಪವೆನಿಸುವವು. ಸ್ವಧರ್ಮದಲ್ಲಿ ಬಿಡದೆ ನಡೆಯುವ ರಾಜನಿಂದ, ಲೋಕಕ್ಷೇಮವೇ ಅಲ್ಲದೆ, ಶ್ರೀಹರಿ ಪ್ರೀತಿಯೂ ಆಗುವುದು. ಕಾಮಿತ ಸುಖಗಳನ್ನಿತ್ತ ಶ್ರೀಶನಿಗೆ ಸರ್ವವನ್ನು ಭಕ್ತಿಯಿಂದ ಸಮರ್ಪಿಸು! ಕಾಮಿತಗಳಲ್ಲಿ ಉತ್ತಮ ಕಾಮಿತನು ಶ್ರೀಹರಿಯೇ! ಅವನ ಪ್ರೀತಿಗಾಗಿ ಇತರ ಕಾಮ್ಯಗಳು. ಮೋಕ್ಷವೂ ಕಾಮ್ಯವೇ. ಅದನ್ನು ಅವನಾಗಿ ಕೊಟ್ಟರೆ ಪಡೆಯುವಂತೆ, ಅವನಾಗಿ ಕೊಟ್ಟಿರುವ ಅನಿಷಿದ್ಧ ಕಾಮಗಳನ್ನೂ ಅನುಭವಿಸು!"

ಭೀಮಸೇನನ ಮಾತನ್ನು ಮೆಚ್ಚಿ ಅರ್ಜುನನು ಇಂತೆಂದನು: "ಧರ್ಮರಾಜ! ಅರ್ಥಕಾಮಗಳನ್ನು ಬಿಡಲಾಗದು. ಶರೀರವೇ ಅರ್ಥಸಾಧನವು, ಮೋಕ್ಷವೇ ಕಾಮವು ಧರ್ಮವೇ ಅರ್ಥವು ಇಂತು ತಿಳಿದು ಅರ್ಥಕಾಮಗಳನ್ನು ವಿಹಿತವಾಗಿ ಪಡೆದು, ನಿಷಿದ್ಧವನ್ನು ಬಿಟ್ಟು ಜೀವಿಸುವುದೇ ಧರ್ಮವು. ಆದುದರಿಂದ ಯಮರಾಜನಂತೆ ಶತ್ರುಗಳ ಮೇಲೇರೀಹೋಗಿ ಕೊಂದ ನೀನು ಈಗ ಧರ್ಮರಾಜನಾಗಿ ಪಾಲಿಸು! ಪಾಲಿಸಿ, ಕೊನೆಗೆ ವಾನಪ್ರಸ್ಥನಾಗು! ಬೇಕಾದರೆ ಸನ್ಯಾಸಿಯೂ ಆಗು! ಅನಧಿಕಾರಿಗಳ ಸನ್ಯಾಸವು ಅನರ್ಥಹೇತುಕವಾಗಿದೆ ಕೇಳು!

ಹಿಂದೆ ಕೆಲವರು ವಿಪ್ರರು ಯೌವನದಲ್ಲೇ ಮನೆಗಳನ್ನು ಬಿಟ್ಟು ಯತಿಗಳಾಗ ಬೇಕೆಂದು ವನವನ್ನು ಸೇರಿದರು. ಮಾತಾಪಿತೃ ಗುರುಬಂಧು ಜನರ ಸೇವೆಯನ್ನು ಬಿಟ್ಟು ಕೇವಲ ಸನ್ಯಾಸ ಕಾತರರಾದ ಅವರನ್ನು ನೋಡಿ, ಇಂದ್ರನು ಕೃಪೆಮಾಡಿ, ಹಿರಣ್ಮಯ ಪಕ್ಷಿರೂಪದಿಂದ ಅವರಿಗೆ ಕಾಣಿಸಿ, ನಗುತ್ತಾ ಇಂತೆಂದನು: "ಆಹಾ! ವಿಘಸಾಶನರಷ್ಟು ಪುಣ್ಯಕರ್ಮರಿಲ್ಲ. ಅವರು ನಿಜವಾದ ಜ್ಞಾನಿಗಳು. ಅಂತಹವರೇ ಮೋಕ್ಷವನ್ನು ಪಡೆಯುವರು" ಆ ಮಾತನ್ನು ಕೇಳಿ, ದ್ವಿಜರು ತಾವೇ ವಿಘಸಾಶನರೆಂತಲು, ತಮ್ಮನ್ನೇ ಆ ಪಕ್ಷಿಯು ಸ್ತುತಿಸಿತೆಂತಲು ತಿಳಿದು, ಹಿಗ್ಗಿದರು. ಆಗ ಪಕ್ಷಿಯು 'ಎಲವೋ ಮಂದರೇ! ನಿಮ್ಮನ್ನಲ್ಲ ನಾನು ಸ್ತುತಿಸಿದುದು. ಮೈಥೂಳಾಗಿ ಪಕ್ಷಿಪಶುಗಳು ತಿಂದುಬಿಟ್ಟ ಉಚ್ಛಿಷ್ಟ ಫಲಪರ್ಣಗಳನ್ನು ತಿಂದಮಾತ್ರಕ್ಕೆ ನೀವು ವಿಘಸಾಶಿಗಳೇ? ಅವರು ಬೇರೆ ಇರುವರು!' ಎಂದಿತು. ಋಷಿಗಳು 'ಶಕುನೇ! ಅವರಾರು ಹೇಳು! ಅವರಂತೆ ಇರುವೆವು. ನಿನ್ನ ಮಾತಿನಲ್ಲಿ ನಮಗೆ ನಂಬಿಕೆ ಇದೆ' ಎಂದರು. ಶಕುನಿಯು ಇಂತೆಂದಿತು:

"ವಿಪ್ರವರರೇ! ಕೇಳಿ! ಚತುಷ್ಪದಗಳಲ್ಲಿ ಗೋವು ಶ್ರೇಷ್ಠವು! ಲೋಹಗಳಲ್ಲಿ ಕಾಂಚನವು ಶ್ರೇಷ್ಠವು! ಶಬ್ದಗಳಲ್ಲಿ ಓಂಕಾರ, ಮಂತ್ರ, ಮಂತ್ರೋಕ್ತ ಸಂಸ್ಕಾರಗಳು ಶ್ರೇಷ್ಠ! ದ್ವಿಪದರಲ್ಲಿ ವಿಪ್ರನು ಶ್ರೇಷ್ಠನು. ಜನನಾದಿ ಸ್ಮಶಾನಾಂತವಾದ ಸಂಸ್ಕಾರಗಳು

ವಿಪ್ರನಿಗೆ ವಿಹಿತವಾಗಿವೆ. ಯತಿಗೆ ಸ್ಮಶಾನ ಸಂಸ್ಕಾರವಿಲ್ಲ, ಮಿಕ್ಕವರಿಗೆಲ್ಲ ವರ್ಣದವರಿಗೂ ಅವರವರಿಗೆ ತಕ್ಕಂತೆ ಸಂಸ್ಕಾರಗಳಿವೆ. ಮಂತ್ರಪ್ರಕಾಶಿತವಾಗಿವೆ ಕರ್ಮಗಳು. ಕರ್ಮಲಭ್ಯವಾಗಿದೆ ಸ್ವರ್ಗವು. ಹಿಂದಿನ ಬುದ್ಧಿವಂತರು ಮಂತ್ರಗಳಿಂದ ಕರ್ಮಗಳನ್ನು ಮಾಡಿ, ಸ್ವರ್ಗವನ್ನು ಹೊಂದಿರುವರು.

ಮನುಜನು ನಿಯತಧ್ಯಾನದಿಂದ, ತನಗೆ ತಕ್ಕ ಗತಿಯನ್ನು ಹೊಂದುವನು. ಕರ್ಮದಿಂದ ಮನಶ್ಶುದ್ಧಿಯನ್ನು ಅದರಿಂದ ಜ್ಞಾನವನ್ನು ಪೊಂದಿದವನು. ಸಾಧನ ಸಂಪೂರ್ತಿಯಾಗಲು, ಅಹಸ್ಸು ದಿನ, ಶುಕ್ಲಪಕ್ಷ, ಮಾಸ, ಉತ್ತರಾಯಣ, ಸಂವತ್ಸರ ದೇವತೆಗಳಿಂದ ಕೂಡಿ ಆದಿತ್ಯಮಾರ್ಗದಲ್ಲಿ ನಡೆದು, ದಕ್ಷ ಇಂದ್ರ, ರುದ್ರ, ಮುಖ್ಯಪ್ರಾಣರ ದ್ವಾರಾ ಬ್ರಹ್ಮಲೋಕವನ್ನು ಸೇರುವನು. ಇದು ಅರ್ಚಿರಾದಿ ಮಾರ್ಗವು. ಪ್ರವೃತ್ತಿ ಕರ್ಮರತರು, ರಾತ್ರಿ, ಕೃಷ್ಣಪಕ್ಷ ದಕ್ಷಿಣಾಯನ ದೇವತೆಗಳನ್ನು ಕೂಡಿ ಪಯಣಿಸಿ, ಚಂದ್ರಮಸ ಲೋಕವನ್ನು ಸೇರಿ, ಮತ್ತೆ ಹುಟ್ಟುವನು. ಇದು ಧೂಮಾದಿ ಮಾರ್ಗವು. ಕರ್ಮ ಭೂಮಿಯಲ್ಲಿ ಹುಟ್ಟಿ, ಸಾಧನವನ್ನು ಮಾಡದೆ ಅಲಸರಾದ ಕಾಪುರುಷರು, ಧರ್ಮ ದೂರರಾಗಿ, ಪಾಪದ ನರಕದಲ್ಲಿ ಬೀಳುವರು. ಕರ್ಮಾಧಿಕಾರಯುಕ್ತವಾದ ಗಾರ್ಹಸ್ಥ್ಯವು ಸಿದ್ಧಿಭೂಮಿಯಾಗಿದೆ. ಸನ್ಯಾಸಿಗಳಿಗೆ ಮಾತ್ರ ಕರ್ಮವಿಲ್ಲವೇ? ಆದುದರಿಂದ ಸ್ವವಿಹಿತ ಕರ್ಮವನ್ನು ಮಾಡಿ, ತತ್ಫಲವನ್ನು ಬೇಡದೆ, ಶ್ರೀಹರಿಗರ್ಪಿಸಿ, ಜ್ಞಾನವನ್ನು ಸಂಪಾದಿಸಿದವನು, ಶ್ರೀಮುಖ್ಯಪ್ರಾಣನದ್ವಾರಾ, ಶ್ರೀಶನನ್ನು ಸೇರಿ, ಮುಕ್ತನಾಗುವನು. ದೇವತೋದ್ದೇಶಕವಾಗಿ ದ್ರವ್ಯತ್ಯಾಗವನ್ನು ಮಾಡಿ, ಯಜ್ಞಾದಿಗಳಿಂದ ಅವರನ್ನು ಅಂತರ್ಯಾಮಿ ಶ್ರೀಹರಿಯನ್ನು ಸಂತೋಷಪಡಿಸಿದವನು, ಪುತ್ರ ಪಶುಧನಾದಿ ಸಂಪತ್ತನ್ನಲ್ಲದೇ, ಮುಕ್ತಿಯನ್ನೂ ಹೊಂದುವನು. ಕರ್ಮಜ್ಞಾನಗಳಿಗೆ ಪರಸ್ಪರ ವಿರೋಧ ಬರದಂತೆ ವರ್ತಿಸುವ ಗೃಹಸ್ಥನು ಶ್ರೀಹರಿ ಪ್ರೀತಿಪಾತ್ರನಾಗುವನು. ಗೃಹಸ್ಥನಿಂದ ಇತರಾಶ್ರಮಿಗಳು ಜೀವಿಸಿ, ಯೋಗ್ಯ ಕರ್ಮಾನುಷ್ಠಾನವನ್ನು ನಡೆಸುವಂತಾಗುವರು. ಕುಟುಂಬವನ್ನು ಹರಿ ಕೊಟ್ಟ ಪರಿವಾರವೆಂದು, ತಿಳಿದು ಅವರನ್ನು ಪೋಷಿಸುತ್ತಾ, ಅತಿಥಿಗಳಿಗಿತ್ತು, ದೇವ ಪಿತೃ ಋಷಿ ಪೂಜನವನ್ನು ಮಾಡಿ, ಮಿಕ್ಕದ್ದನ್ನು ಭುಜಿಸುವ ನರನು ವಿಘಸಾಶನನೆನಿಸುವನು."

ಧರ್ಮಾರ್ಥಸಹಿತವಾದ ಶಕುನಿಯ ಮಾತನ್ನು ಕೇಳಿ, ದ್ವಿಜರು ಸನ್ಯಾಸವನ್ನು ಸ್ವೀಕರಿಸದೆ, ಗೃಹಸ್ಥರಾದರು. ಧರ್ಮರಾಜ! ಗೃಹಸ್ಥನಿರುವೆ! ಕ್ಷತ್ರಿಯನಿರುವೆ! ರಾಜ್ಯವನ್ನಾಳು! ಬಿಡು ಶೋಕವನ್ನು!

ರಾಜನ್! ವಿಶಾಖಯೂಪವೆಂಬ ಕ್ಷೇತ್ರವಿದೆ. ಅಲ್ಲಿ ದೇವತೆಗಳು ರಚಿಸಿದ ಅಗ್ನಿಕುಂಡಗಳು, ಸ್ಥಂಡಿಲದ ಇಟ್ಟಿಗೆಗಳು, ಈಗಲೂ ಕಾಣಬರುತ್ತಿವೆ. ಅವರು ತಾವು ಮಾಡಿದ ಪುಣ್ಯಕರ್ಮಗಳಿಂದ ಈಗ ದೇವತ್ವವನ್ನು ಹೊಂದಿರುವರು. ವಿಹಿತಕರ್ಮವನ್ನು ಬಿಟ್ಟವರು ನಾಸ್ತಿಕರೆನಿಸುವರು. ಅರ್ಥದಿಂದ ಧರ್ಮವು ಸಾಧ್ಯವಾಗಿದೆ. ಅರ್ಥವು ದೈವ, ಮಾನುಷವೆಂದು ಎರಡು ವಿಧ. ವಿದ್ಯೆಯೇ ದೈವವು. ಹಿರಣ್ಯಾದಿಗಳೇ ಮಾನುಷವು.

ವಿದ್ಯೆಗೆ ಧರ್ಮವು ಸಾಧನವೂ ಆಗಿದೆ; ಸಾಧ್ಯವೂ ಆಗಿದೆ. ಸ್ವಧರ್ಮವನ್ನು ಬಿಡದೆ ಮಾಡಿದವನೇ ವಿದ್ಯೆಯನ್ನೂ ಜ್ಞಾನವನ್ನೂ ಪಡೆಯುವನು. ಗುರುಕುಲ ವಾಸ ಶ್ರವಣಾದಿಗಳಿಲ್ಲದವನಿಗೆ ವಿದ್ಯೆಯೇ ಇಲ್ಲ. ಜ್ಞಾನ (ವಿದ್ಯೆ) ದಿಂದ ನಡೆಸಲ್ಪಟ್ಟ ಕರ್ಮವು ಧರ್ಮವೆನಿಸಿ, ಉಭಯ ಸುಖಸಾಧನವಾಗುವುದು.

ಮಾನುಷಾರ್ಥವೂ ವಿದ್ಯೆಗೆ ಕಾರಣವಾಗಿದೆ. ಹಿರಣ್ಯಾದಿಗಳಿಂದ ತುಷ್ಟರಾದ ಗುರುಗಳು ಕೈವಲ್ಯಪ್ರಾಪಕವಾದ ಜ್ಞಾನವನ್ನು ಕೊಟ್ಟು, ಹರಿಪ್ರಸಾದ ಪಾತ್ರನನ್ನಾಗಿ ಮಾಡುವರು. ಅರ್ಥವು ಗುರುತುಷ್ಟಿರೂಪ ಪುಣ್ಯವನ್ನು ಹುಟ್ಟಿಸುತ್ತವೆ. ಅನ್ನಾದಿ ಕಾಮದಿಂದಲ್ಲದೇ ಮಾಡಲ್ಪಟ್ಟ ಧರ್ಮವು, ಪುಣ್ಯಫಲವಾದ ಅನ್ನಾದಿಗಳನ್ನು ತಪ್ಪದೇ ತಂದುಕೊಡುವುದು. ಆಕಳನ್ನು ಕೊಂಡರೆ ಕರುವು ತಾನಾಗಿ ಬರುವುದಲ್ಲವೇ? ಕಾಮವು ನೀಚಪುರುಷಾರ್ಥವು! ಮೋಕ್ಷವು ಉತ್ತಮ ಪುರುಷಾರ್ಥವು! ಮೋಕ್ಷವು ಧರ್ಮಸಾಧ್ಯವಾಗಿದೆ. ಧರ್ಮವು ಅರ್ಥಸಾಧ್ಯವಾಗಿದೆ. ಆದುದರಿಂದ ರಾಜ್ಯಾದಿ ಸಂಪತ್ತನ್ನು ಶ್ರೀಹರಿ ಕೊಟ್ಟಿದೆಂದು ಅನುಭವಿಸು!"

ಆಗ ನಕುಲನಿಂತೆಂದನು: 'ರಾಜನ್! ವೇದದಲ್ಲಿ ಹೇಳಲ್ಪಟ್ಟ ಯಜ್ಞಾದಿ ಧರ್ಮಗಳಿಂದಲ್ಲದೆ ವಿಪ್ರಾದಿ ಸುಜನರು ಸ್ವರ್ಗಮುಕ್ತಿಗಳನ್ನು ಪಡೆಯಲಾರರು. ಗೃಹಸ್ಥಾಶ್ರಮಿಯು ಇತರಾಶ್ರಮಿಗಳಿಗೂ ಸಿಗದ ಮುಕ್ತಿಸುಖ ಸಹಿತ ಗಾರ್ಹಸ್ಥ್ಯ ಸುಖಗಳನ್ನು ಹೊಂದಲು, ಅವನ ಧರ್ಮಾಚರಣವೇ ಕಾರಣವು. ಧರ್ಮಾಚರಣವು ಧನದಿಂದ ಸಾಧ್ಯವಾಗಿದೆ. ಧರ್ಮಯುದ್ಧದಿ ಬಂದ ಧನಕನಕ ರತ್ನಗಳನ್ನು ಯಜ್ಞದಾನಾದಿಗಳಿಗೆ ವಿನಿಯೋಗಿಸಿ, ಕೃತಕೃತ್ಯನಾಗು!

ಅಹಂಮಮಾಭಿಮಾನವಿಲ್ಲದೆ ಕರ್ಮಫಲವನ್ನು ಬಿಟ್ಟವನು ಸಾತ್ವಿಕತ್ಯಾಗಿಯು. ನ್ಯಾಯಾರ್ಜಿತ ಧನಗಳನ್ನು ಬಿಟ್ಟು ವನದಲ್ಲಿದ್ದು ಪ್ರಾಣಬಿಡುವವನು ತಾಮಸ ತ್ಯಾಗಿಯು. ಮನೆ ಬಿಟ್ಟು ತಿರುಗುತ್ತಾ ಭಿಕ್ಷೆಯಿಂದ ಬದುಕುವವನು ಭಿಕ್ಷುಕನು! ಭಿಕ್ಷುಕನಾಗಲು ಕ್ಷತ್ರಿಯನಿಗೆ ಸಲ್ಲದು. ಪ್ರಜಾಪಾಲನ ಕ್ಲೇಶಕ್ಕೆ ಅಂಜಿ, ಎಲ್ಲವನ್ನೂ ಬಿಟ್ಟೋಡಿದ ಕ್ಷತ್ರಿಯನು ರಾಜಸತ್ಯಾಗಿಯು. ಅದು ಅವನಿಗೆ ಪಾಪವೇ ಆಗುವುದು. ಸನ್ಯಾಸಿಯಾದರೂ ಅರ್ಥಕಾಮವನ್ನು ಬಿಡದವನು ಧರ್ಮಧ್ವಜನೆನಿಸಿ, ನಿಂದ್ಯನಾಗುವನು. ಋಷಿಯು ಅಭಿಮಾನವನ್ನು ಬಿಡಬೇಕು. ಶಮ, ದಮ, ತ್ಯಾಗ, ಧೈರ್ಯ, ಸತ್ಯ, ಶೌಚ, ಆರ್ಜವ, ಯಜ್ಞಗಳನ್ನು ಫಲಾಪೇಕ್ಷಾರಹಿತನಾಗಿ ನಡೆಸುವ ರಾಜನಾಗಲಿ, ವಿಪ್ರನಾಗಲಿ ರಾಜರ್ಷಿ-ವಿಪ್ರರ್ಷಿ ಎನಿಸುವನು. ಅವನು ಗೃಹಸ್ಥನೇ ಆಗಲಿ; ಚಿಂತೆಯಿಲ್ಲ. ಪಿತೃದೇವಾತಿಥಿಗಳ ಪೂಜೆ, ಪ್ರಜಾಪಾಲನೆ, ಸ್ವರ್ಗ ಮೋಕ್ಷ ಸಂಪಾದನೆ, ಇವೆಲ್ಲವೂ ಗೃಹಸ್ಥನಿಗೆ ಸುಲಭವಾಗಿವೆ.

ಪ್ರಜಾಪತಿಯು (ವಿಷ್ಣುವು) ತನ್ನನ್ನು ಯಜ್ಞಾದಿಗಳಿಂದ ಪೂಜಿಸಲೆಂದು, ವಿಪ್ರಾದಿ ಪ್ರಜರನ್ನೂ, ಕಾಂಚನ ರಜತಾದಿ ದಕ್ಷಿಣೆಯನ್ನೂ, ವೀರುಧ ವೃಕ್ಷೌಷಧೀ ಧಾನ್ಯಘೃತಾದಿಗಳನ್ನೂ, ಅಜಾದಿ ಮೇಧ್ಯಪಶುಗಳನ್ನೂ, ಸೃಜಿಸಿ, ಗೃಹಸ್ಥಾಶ್ರಮದವರೇ

ಯಜ್ಞಗಳನ್ನು ಮಾಡಲೆಂದು ಸಂಕಲ್ಪಿಸಿದನು. ಇಂತಹ ಗಾರ್ಹಸ್ಥ್ಯವು ಬಂದು, ಇಂತಹ ರಾಜ್ಯಾದಿ ಸಂಪತ್ತು ಸಿಕ್ಕು, ಯಜ್ಞಾದಿಗಳನ್ನು ಮಾಡದ ರಾಜನು ಸನ್ಯಾಸಿಯಾದರೂ ಪಾಪಿ ಎನಿಸುವನು. ರಾಜನ್! ಅಶ್ವಮೇಧವನ್ನು ಮಾಡು! ಬ್ರಾಹ್ಮಣರು ಹೇಳುವ ಮತ್ತಾವ ಯಜ್ಞವನ್ನಾದರೂ ಮಾಡು! ಪ್ರಮಾದವಶನಾಗಿ, ಪ್ರಜರನ್ನು ಪಾಲಿಸದೆ, ಪಾಪಿಗಳಿಗೊಪ್ಪಿಸಿ, ಕಳ್ಳರಿಗೆ ಸಿಗಿಸಿ, ಹೋಗುವ ರಾಜನು, ಕಲಿ ದುರ್ಯೋಧನನಂತೆ ಮಹಾಪಾಪ ಭಾಜನನಾಗುವನು. ಅಶ್ವ ಧನ ಧಾನ್ಯ ವಸ್ತ್ರ ರತ್ನಗಳನ್ನೀಯದೇ, ವಿಪ್ರರನ್ನು ಸಂತೋಷಪಡಿಸದೆ, ನಂಬಿದ ಬಂಧುಗಳನ್ನು ಪೋಷಿಸದೆ ಇರುವ ರಾಜನೂ ಪಾಪಿ ಎನಿಸುವನು. ಪಾತ್ರರಿಗೀಯದೆ ನೀನೂ ಸುಖಿಸದೆ ಬಿಟ್ಟ ಧನಾದಿಗಳನ್ನು ಅಪಾತ್ರರು ಕೊಂಡುಪೋದಾಗ, ನೀನು ಉಭಯಲೋಕ ಸುಖಗಳಿಗೂ ಕೆಟ್ಟು ಪಶ್ಚಾತ್ತಾಪಪಡುವೆ! ಧನವನ್ನು ಬಿಟ್ಟು ಹೋದರೆ ಪುಣ್ಯವಿಲ್ಲ; ಕೊಟ್ಟು ಕಟ್ಟಿ ಉಟ್ಟು ಇಟ್ಟು ಸದ್ವಿನಿಯೋಗ ಮಾಡಿದರೆ ಮಹತ್ಪುಣ್ಯವಿದೆ. ಶತ್ರುಗಳನ್ನು ಕೊಂದು ರಾಜನಾದೆ! ರಾಜ್ಯವನ್ನು ಹೊಂದಿ ಧನಿಯಾದೆ! ಧನದಿಂದ ಧರ್ಮವನ್ನಾರ್ಜಿಸಿ ಸುಖಿಯಾಗು!"

ಸಹದೇವನಿಂತೆಂದನು: 'ರಾಜನ್! ಅರ್ಥವನ್ನು ಬಿಟ್ಟವನಿಗೆ ಶರೀರಯಾತ್ರೆಯೇ ಇಲ್ಲ; ಶರೀರವಿಲ್ಲದೇ ಜ್ಞಾನಾರ್ಜನವಿಲ್ಲ. ಸನ್ಯಾಸಿಯೂ ಸಕಲಾರ್ಥವನ್ನು ಬಿಡಲಾರನು. ಅಹಂಕಾರ ಮಮಕಾರಗಳಿಂದ ಬರುವ ಕರ್ತೃತ್ವ, ಸ್ವಾಮಿತ್ವಗಳನ್ನು ಬಿಡಬೇಕು; ಅರ್ಥವನ್ನಲ್ಲ. ಅರ್ಥರಹಿತವಾದ ಸುಖಾಭಾಸವು ನಮ್ಮ ಶತ್ರುಗಳಿಗಾಗಲಿ! ನಮಗದು ಬೇಡ! ಅಭಿಮಾನ ಪರಿತ್ಯಾಗದಿಂದ ಪಡುವ ರಾಜ್ಯಾದಿ ಸುಖವು ನಮಗಾಗಲಿ! ನಮ್ಮ ಮಿತ್ರರಿಗೂ ಆಗಲಿ! ಮಮ ಎಂಬುದೇ ಮೃತ್ಯುವು. ನಮಮ ಎಂಬುದೇ ಅಮೃತ. ಅವರೆಡೂ ಮನಸ್ಸಿನ ವ್ಯಾಪಾರಗಳು! ಆಶ್ರಮ ವಿಶೇಷದಿಂದ ತಾವಾಗಿ ಬರುವುದಿಲ್ಲ. ನಿರ್ಮಮತಾ, ಕ್ರೋಧರಾಹಿತ್ಯ, ಜ್ಞಾನಸಿದ್ಧಿಗಳು, ವನದಲ್ಲಿದ್ದೂ ಮಮತೆಬಿಡದವನು; ಮೃತ್ಯುವಿನ ವದನ ಗುಹೆಯಲ್ಲಿರುವನ ಮನೆಯಲ್ಲಿದ್ದೂ ಮಮತೆ ಬಿಟ್ಟವನು ಅಮೃತ ಮಂದಿರದಲ್ಲಿರುವನು. ಮಮತೆ ಬಿಡು! ರಾಜ್ಯವನ್ನಾಳು! ಜೀವಿತವನ್ನು ವ್ಯರ್ಥಗೊಳಿಸಬೇಡ! ಅಣ್ಣ! ನೀನು ನಮಗೆ ತಂದೆ, ತಾಯಿ, ಗುರುವೂ ಆಗಿರುವೆ! ನಿನ್ನ ದುಃಖದಿಂದ ನೊಂದು, ಅದು ವ್ಯರ್ಥವೆಂದು ನುಡಿದ ನನ್ನ ಪ್ರಲಾಪವನ್ನು ಮನ್ನಿಸು!'

## ೩. ದಂಡ ಮಹಿಮೆ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಆ ಮಾತನ್ನಾಲಿಸಿ ಮಾತನಾಡದೆ ಸುಮ್ಮನಿದ್ದ ಧರ್ಮರಾಜನಿಗೆ, ಮಹತ್ಕುಲ ಪ್ರಸೂತಳು, ಪತಿವ್ರತಾಮಣಿಯು ಆದ ದ್ರೌಪದಿಯು, ಮಧುರ ವಚನಗಳಿಂದ ಇಂತೆಂದಳು: "ಕುಂತೀಸುತವರ! ಸತತವೂ ದುಃಖಭಾಗಿಗಳಾಗಿ, ಈಗ ಶ್ರೀಕೃಷ್ಣ ದಯದಿಂದ, ಜಯ ಕೀರ್ತಿ ರಾಜ್ಯಗಳನ್ನು ಗಳಿಸಿರುವ ನಿನ್ನ ತಮ್ಮಂದಿರನ್ನು ಕರುಣಾ

ವಾತ್ಸಲ್ಯಪೂರಿತನಾಗಿ ನೋಡು! ನಿನ್ನ ವ್ಯಸನದಿಂದ ನೊಂದು ಅವರು ಹುಚ್ಚು ಹಿಡಿದಂತಾಗಿರುವರು. ದ್ವೈತವನದಲ್ಲಿ ನೀನೇನೆಂದೆ ? ನೆನೆ! "ಹದಿಮೂರು ವರ್ಷಗಳಾಗಲಿ! ದುರ್ಯೋಧನಾದಿಗಳನ್ನು ಕೊಂದು, ನಾವು ನಮ್ಮ ರಾಜ್ಯವನ್ನು ಪಡೆದು ಸುಖಿಸೋಣ! ಅವನಿಗೆ ಸಹಾಯರಾಗಿ ಬರುವವರನ್ನೆಲ್ಲ ಕೊಲ್ಲೋಣ!" ಎಂದೆ ಅಲ್ಲವೇ ? ಅಸ್ತ್ರಸಂಪಾದನೆಗೆಂದು ಅರ್ಜುನನನ್ನು ಕಳಿಸಿದುದು ಶತ್ರುವಿಜಯವನ್ನು ಕೋರಿ ಅಲ್ಲವೇ ? ಈಗ ಮತ್ತೇಕೆ ನಮ್ಮನ್ನು ನಿನ್ನ ವಚನ ಶೂಲಗಳಿಂದ ತಿವಿದು ನೋಯಿಸುವೆ? ಧೀರನಾಗು! ಅಧೀರನಿಗೆ ವಸುಧೆಯಿಲ್ಲ; ಧನವಿಲ್ಲ; ಸುಖವೂ ಇಲ್ಲ! ಅಂತಹ ಮಂದಪ್ರಜ್ಞನ ಮಡದಿ ಮಕ್ಕಳಿಗೆ ಸುಖಲೇಶವಿಲ್ಲ.

ಕ್ಷತ್ರಿಯನು ದಂಡಪ್ರಧಾನನಿರುವನು. ಧರ್ಮವಂತನು ಕೂಡ ದಂಡವಿಲ್ಲದೆ ಧರ್ಮವನ್ನು ಉಳಿಸಿ ಬೆಳೆಸಲಾರನು. ದಂಡರಹಿತನಿಗೆ ರಾಜ್ಯವಿಲ್ಲ! ಪ್ರಜರಿಲ್ಲ! ಸರ್ವಭೂತ ಮಿತ್ರತ್ವ, ದಾನ, ಅಧ್ಯಯನ, ತಪ, ಕ್ಷಾಂತಿಗಳು ವಿಪ್ರನಿಗೆ ; ಕ್ಷತ್ರಿಯನಿಗೆ ಅವು ಪ್ರಧಾನವಲ್ಲ! ಅಸಜ್ಜನರನ್ನು ಶಿಕ್ಷಿಸುವುದು, ಸಜ್ಜನರನ್ನು ರಕ್ಷಿಸುವುದು, ಇದೇ ದಂಡವು. ದಂಡವು ಅಪರಾಧ ಸಮವಾಗಿರಬೇಕು. ಕ್ಷತ್ರಿಯನು ಯುದ್ಧದಿಂದಂತೆ, ರಾಜ್ಯಪಾಲನ ಧರ್ಮದಿಂದ ಹೆದರಿ ಓಡಬಾರದು. ರಾಜನು ಕ್ಷಮಾ ಕ್ರೋಧಗಳನ್ನೂ, ನಿಗ್ರಹಾನುಗ್ರಹಗಳನ್ನೂ, ದಾನಾದಾನಗಳನ್ನೂ, ದೇಶ ಕಾಲ ಜನ ಯೋಗ್ಯತೆಗಳನ್ನರಿತು ಪ್ರಯೋಗಿಸಿ, ಧರ್ಮರಕ್ಷಕನೆನಿಸುವನು. ದಂಡರಹಿತನ ರಾಜ್ಯವು ಅರಾಜಕವಾಗಿ ಕೆಡುವುದು. ನೀನು ರಣದಲ್ಲಿ ಗೆದ್ದುದು ಶ್ರುತದಾನ ದಾಂತಿ, ಶಾಂತಿ, ಯಜ್ಞ, ಯಾಚನಗಳಿಂದಲ್ಲ ; ಬಲಪರಾಕ್ರಮಗಳಿಂದ! ಶ್ರೀಹರಿ ದಯದಿಂದ ಬಂದ ರಾಜ್ಯವನ್ನಾಳು !

ಜಂಬೂದ್ವೀಪಾದಿ ಏಳು ದ್ವೀಪಗಳ ರಾಜರು ನಿನಗೆ ಜಿತರಾದರು. ಅಪ್ರತಿಮ ವೀರನಾಗಿ ಕಡಿದಾಡಿ, ಬಂದ ರಾಜ್ಯವನ್ನು ಬಿಡುವುದುಚಿತವಲ್ಲ. ಶತ್ರುಸಾಹರು ಮತ್ತಸಿಂಹವಿಕ್ರಮರು, ವಿನಯಭೂಷಿತರು ಆದ ಸೋದರರರನ್ನು ಅಭಿನಂದಿಸು! ಅವರು ನಿನಗಾಗಿ ಕಾದಿ, ಗೆದ್ದು, ಈಗ ನಿನ್ನ ಶೋಕದಿಂದ ಮೂಢರಂತಾಗಿರುವರು. ಇನ್ನು ಬೇರೆಯವರಾಗಿದ್ದಿದ್ದರೆ, ನಿನ್ನನ್ನು ಹುಚ್ಚನೆಂದು ಬದಿಗಿಟ್ಟು ನಾಸ್ತಿಕನೆಂದು ನಿರ್ಲಕ್ಷಿಸಿ, ತಾವೇ ರಾಜ್ಯವಾಳುತ್ತಿದ್ದರು. ಬುದ್ಧ ಸನ್ಯಾಸಿಯಂತೆ, ನಾಸ್ತಿಕನೂ, ನಿರ್ವಿಣ್ಣನೂ ಆಗಿ, 'ಅಹಿಂಸೆ' ಎಂದು ಜಪಿಸುತ್ತಾ ಕೂಡುತ್ತಿರುವ ನಿನ್ನನ್ನು ನೋಡಿ, ನಮ್ಮತ್ತೆಯು ಸರ್ವಜ್ಞಳು ಆದ ಕುಂತೀದೇವಿಯು ಎಷ್ಟು ಪರಿತಪಿಸುವಳೋ ಪಾಪ!

ಹಿತವಚನಗಳನ್ನು ಕೇಳದವನಿಗೆ ಬಲಾತ್ಕರಿಸಿ, ಹಿತದಲ್ಲಿ ನಡೆಸಬೇಕಂತೆ! ಬಾಯಲ್ಲಿ ಔಷಧಿಯು ಇಳಿಯದಿದ್ದರೆ, ಮೂಗಿನಲ್ಲಿ ಓಷಧೀ ರಸವನ್ನು ಹಿಂಡಬೇಕಂತೆ! ರಾಜ್ಯವನ್ನೊಲ್ಲದವನು ವನದಲ್ಲೇ ಇರಬೇಕಿತ್ತು! ಮಕ್ಕಳನ್ನೆಲ್ಲ ರಣರಂಗದಲ್ಲಿ ಬಲಿಯಿಟ್ಟು ಬದುಕಿರುವ ನನ್ನ ಗೋಳೂ ನಿನಗೆ ಕೇಳಿಸದಾಗಿದೆ! ನನ್ನನ್ನಳಿಸಿದವರ, ಅವಮಾನಿಸಿದವರ ಪತ್ನಿಯರ ರೋದನವು ನಿನಗೆ ಬಹು ಚಿಂತಾಕಾರಣವಾಗಿದೆ ! ಏಕೆ ಕೊಂದೆ ಶಲ್ಯಾದಿ

ರಾಜರನ್ನು? ಏಕೆ ಕರೆಸಿದೆ ಶ್ರೀಕೃಷ್ಣನನ್ನು? ಭೀಷ್ಮ ದ್ರೋಣಾದಿ ವೀರರನ್ನು ನೋಡಿ, ಅವರ ವಧೋಪಾಯವನ್ನು ಏಕೆ ಕೇಳಿ ತಿಳಿದೆ? ಧರ್ಮರಾಜ! ಧೀರನಾಗು! ನೀನು ಧರ್ಮದಿಂದ ಗೆದ್ದಿರುವೆ! ರಾಜ್ಯವನ್ನಾಳು! ಮಾಂಧಾತೃ ದಿಲೀಪ ನಹುಷಾಂಬರೀಷರಂತೆ ವಿರಾಜಿಸುವ ನಿನ್ನ ಧರ್ಮಪಾಲನದಲ್ಲಿ ಪ್ರಜರು ಸುಖಿಸಲಿ! ಪ್ರಾಯಶ್ಚಿತ್ತಕ್ಕಾಗಿ ಬೇಕಾದರೆ ಯಜ್ಞಗಳನ್ನು ಮಾಡು! ಕೊಡು ದಾನಗಳನ್ನು."

ಆಗ ಅರ್ಜುನನಿಂತೆಂದನು: "ರಾಜನ್! ದಂಡದಿಂದಲ್ಲದೆ ರಾಜನು ರಂಜಿಸಲಾರನು. ದಂಡವೇ ಧರ್ಮರಕ್ಷಕವು. ದಂಡಭಯದಿಂದ ಪ್ರಜರು ಪಾಪದೂರರಾಗಿರುವರು. ದಂಡದಿಂದ ಧನವು ಸಂರಕ್ಷಿತವಾಗುವುದು. ದಂಡದಿಂದ ಕಾಮವು ಸಂರಕ್ಷಿತವಾಗುವುದು. ದಂಡವೆಂದರೆ ಇಂದ್ರಿಯ ನಿಗ್ರಹವೂ ಅಹುದು; ದಂಡವೆಂದರೆ ದುಷ್ಟಶಿಕ್ಷೆಯೂ ಅಹುದು! ಈ ಎರಡು ಬಾಹ್ಯಾಭ್ಯಂತರ ದಂಡಗಳನ್ನು ಪಿಡಿದಿರುವ ರಾಜನ ರಾಜ್ಯದಲ್ಲಿ ಪಾಪಿಗಳಿಲ್ಲ; ನಾಸ್ತಿಕರಿಲ್ಲ. ಜನರು ದಂಡಭೀತಿಯು ತೊಲಗಿದರೆ ಪಾಪವನ್ನು ಮಾಡಲು ಹವಣಿಸರು. ಇದು ಲೋಕಸ್ವಭಾವವು. ದುಷ್ಟರನ್ನು ದಂಡಿಸುವುದು ಹಿಂಸೆ ಎಂದು ಬಿಟ್ಟರೆ, ಜನರು ಒಬ್ಬರನ್ನೊಬ್ಬರು ಕೊಂದು ತಿಂದು ಬಿಡುವರು. ರಾಜದಂಡ, ಯಮದಂಡ, ಈ ಭಯದಿಂದಲೇ ಜನರು ಪಾಪವನ್ನು ಬಿಟ್ಟಿರುವರು. ದಂಡವೇ ಇಲ್ಲದಿರೆ ಲೋಕವೆಲ್ಲವೂ ಚೋರ, ವಿಟ, ದ್ಯೂತರತರಿಂದ ಪೀಡಿತವಾಗಿ, ಹಾಳಾದೀತು!

ವಿಪ್ರನನ್ನು ವಚನದಿಂದಲು ಕ್ಷತ್ರಿಯನನ್ನು ಮಿತವೇತನ ದಾನದಿಂದಲು, ವೈಶ್ಯನನ್ನು ಕರಾದಾನದಿಂದಲು, ಶೂದ್ರನನ್ನು ಸೇವೆಯಿಂದಲು ದಂಡಿಸಿ, ಧರ್ಮರತರನ್ನಾಗಿಸಬೇಕು. ಮೃದುಮನಸ್ಕನು, ತೀಕ್ಷ್ಣ ದಂಡನು ಆದ ರಾಜನ ರಾಜ್ಯವು ಅತ್ಯಂತ ಸುಖಪೂರ್ಣವಾಗುವುದು. ದಂಡಭಯದಿಂದ ವರ್ಣಾಶ್ರಮ ಧರ್ಮಗಳು ಸರಿಯಾಗಿ ನಡೆಯುವವು. ಶತ್ರುಗಳನ್ನು ಗೆಲ್ಲದೆ, ಯುದ್ಧದಲ್ಲಿ ಕೊಲ್ಲದೆ, ಆಕ್ರಮಿಸಿ ಆಳದೇ ಇರುವ ರಾಜನು ದರಿದ್ರನಾಗುವನು. ಅರ್ಥರಹಿತನಾದ ಅವನನ್ನು ಜನರೂ ಸೇರರು. ಇಂದ್ರನು ವೃತ್ರನನ್ನು ಕೊಂದು ಮಹೇಂದ್ರನಾದನು. ಲೋಕದಲ್ಲಿ ಶಿಕ್ಷಿಸುವ ದೇವತೆಗಳನ್ನು ಭಯಭಕ್ತಿಗಳಿಂದ ಪೂಜಿಸುವರು. ಬ್ರಾಹ್ಮಣರನ್ನು, ಬ್ರಹ್ಮನನ್ನು, ಪೂಷ ಮೊದಲಾದವರನ್ನು ಬಹು ಜನರು ಪೂಜಿಸುವರು. ರಾಜನನ್ನೂ ಧರ್ಮವಂತನು, ದಂಡಧರನು ಆಗಿದ್ದರೆ ಮಾತ್ರ ಪೂಜಿಸುವರು.

ಅಹಿಂಸೆ ಎಂಬ ಮಾತು ಆಪಾತ ಮನೋಹರವಾಗಿದೆ! ಸಂಪೂರ್ಣವಾಗಿ ಹಿಂಸೆಯನ್ನು ಬಿಟ್ಟವರಾರೂ ಇಲ್ಲ. ಜೀವನಿಗೆ ಜೀವನೇ ಜೀವನನಾಗಿರುವನು. ಬೆಕ್ಕು ಇಲಿಯನ್ನೂ, ಬೆಕ್ಕನ್ನೂ ನಾಯಿಯೂ, ನಾಯಿಯನ್ನು ಚಿತ್ರವ್ಯಾಘ್ರವೂ ತಿನ್ನುವವು. ಪುರುಷನು ಎಲ್ಲವನ್ನೂ ತಿನ್ನುವನು. ಪ್ರಾಣನು ಜೀವಧಾರಕನು! ಪ್ರಾಣನಿಗೆ ಆಹಾರವನ್ನು ಕೊಡಲೇಬೇಕು. ಆಹಾರವು ಪ್ರಾಣಮಯವಾಗಿದೆ. ಇದು ವಿಧಾತೃವಿಹಿತವಾದ ಧರ್ಮವು. ಉದಕದಲ್ಲಿ ಪ್ರಾಣಿಗಳಿರುವರು; ಫಲಗಳಲ್ಲಿರುವರು; ಶಾಕಧಾನ್ಯಗಳಲ್ಲಿರುವರು; ಎಲ್ಲರೂ

ಜೀವರಿಂದೇ ಜೀವಿಸುವರು. ಇನ್ನೆಲ್ಲಿಯ ಅಹಿಂಸೆ ಹೇಳು! ರೆಪ್ಪೆ ಹೊಡೆದಾಗ ಸೂಕ್ಷ್ಮಜೀವರು ಸಾಯುತ್ತಿರುವರು. ಆದುದರಿಂದ ವಿಹಿತವಾದ ಹಿಂಸೆಯು ಅನಿವಾರ್ಯವಾಗಿದೆ. ಶಾಸ್ತ್ರನಿಷಿದ್ಧ ಹಿಂಸೆಯು ಸರ್ವಥಾ ವರ್ಜನೀಯವಾಗಿದೆ. ಅಂತೆಯೇ 'ಅಹಿಂಸಾ ಪರಮೋ ಧರ್ಮಃ!' ಎಂದಿರುವರು. ಕ್ಷತ್ರಿಯರಿಗೆ ಶತ್ರುವಧ, ದುಷ್ಟಶಿಕ್ಷೆಗಳು ವಿಹಿತಹಿಂಸೆಗಳು. ಅವು ಪಾಪವಲ್ಲ. ದಂಡವನ್ನು ಬಿಟ್ಟ ರಾಜನ ದೇಶದಲ್ಲಿ ಪ್ರಜರು ಮೀನುಗಳಂತೆ ಪ್ರಬಲರಿಂದ ಭಕ್ಷಿತರಾಗಿ, ಹಾಳಾಗುವರು. ಅಗ್ನಿಯೂ ಆರಿ ಸುಮ್ಮನಿದ್ದಾಗ ಪೂತ್ಕಾರದಿಂದ ದಂಡಿತವಾಗಿ, ಸಿಡಿದೆದ್ದು ಉರಿಯುವುದನ್ನು ನೋಡಿಲ್ಲವೇ? ನಾಸ್ತಿಕರು, ವೇದನಿಂದಕರು ಮೊದಲಾದ ದುಷ್ಟರು ರಾಜದಂಡವಿಲ್ಲದುದರಿಂದ ಪ್ರಬಲರಾಗಿ ಬೊಗಳುತ್ತಿರುವರು. ಅಂತಹವರು ಕೂಡ ದಂಡದಿಂದ ಸರಿಹೋಗಿ, ಆಸ್ತಿಕರು, ಹಿಂಸಾವಿಮುಖರು ಆಗುವರು.

ದಂಡಚತುರನಾಗದವನ ರಾಜ್ಯದಲ್ಲಿ ಬಹ್ವನರ್ಥಗಳಾಗುವವು. ವಿಪ್ರರು ವೇದವನ್ನು ಓದರು. ಆಕಳು ಹಾಲು ಕೊಡದು; ಕನ್ಯೆ ವ್ಯಭಿಚರಿಸುವಳು. ಎಲ್ಲರೂ ಎಲ್ಲವೂ ನನ್ನದೆಂದು ಕಡಿದಾಡಿ ಸಾಯುವರು. ತಂತಮ್ಮ ಇಚ್ಛೆಗೆ ಬಂದಂತೆ ನುಡಿದು, ನಡೆಯುವರು. ಯಜ್ಞಯಾಗಗಳು ನಿಂತುಹೋಗುವವು. ಎಲ್ಲರೂ ವಿದ್ಯಾ ಪಾರಂಗತರೆಂದು ಹೇಳಿಕೊಂಬುವರು. ಸೇವಕರು ತಿರುಗಿಬೀಳುವರು. ಯುವಕರು ಸ್ವೇಚ್ಛಾವಿಹಾರಿಗಳಾಗುವರು. ಲೋಕವು ನರಕಪ್ರಾಯವಾಗುವುದು. ಎದ್ದು ಕುಣಿದಾಡುವ ನಾರಿಯರು ಪೂಜಿತರಾಗುವರು. ಎತ್ತು, ಕತ್ತೆ, ಕುದುರೆಗಳು ಭಾರವನ್ನು ಹೊರವು.

ಕೈಲಿ ಕೋಲಿದ್ದರೆ, ಕೋತಿಯು ಹಣ್ಣಿಗೆ ಹಾರದು; ನಾಯಿಯು ಹವಿಸ್ಸನ್ನು ತಿನ್ನದು; ಬೆಕ್ಕು ಹಾಲನ್ನು ಕದ್ದು ಕುಡಿಯದು! ಅಹಿಂಸೆ ಎಂದು ಸುಮ್ಮನೆ ಕೂತವನ ಹಾಲು, ಹಣ್ಣು, ಭೋಜನ, ವಸನ, ರತ್ನ, ಕನಕಗಳು ಚೋರಧೂರ್ತರಾದಿ ದುಷ್ಟರ ಪಾಲಾಗುವವು. ಸರ್ವ ಸಮಾರಂಭಗಳು ಅರ್ಥಾಧೀನವಾಗಿವೆ! ಅರ್ಥವನ್ನು ಕೆಡದೆ ಸಂರಕ್ಷಿಸುವುದು ದಂಡವಾಗಿದೆ ರಾಜನ್! ದಂಡವನ್ನು ಮಾಡಿ, ಶತ್ರುಗಳನ್ನು ಗೆದ್ದೆ! ಬಂದಿರುವ ರಾಜ್ಯಾದಿ ಸುಖರೂಪವಾದ ಅರ್ಥವನ್ನು ಏಕೆ ಬಿಡಲಿಚ್ಛಿಸುವೆ? ಯಜ್ಞ ಮಾಡು! ದಾನ ಕೊಡು! ಸುಖಪಡು!"

ಅರ್ಜುನ ವಚನವನ್ನಾಲಿಸಿ, ವಿದುರನು ಧರ್ಮರಾಜನಿಗಿಂತೆಂದನು: "ರಾಜನ್, ಅರ್ಥಕಾಮಗಳು ಧರ್ಮಕ್ಕಾಗಿ ಅಲ್ಲವೆ? ಧರ್ಮವೇ ಫಲವಾಗಿದೆ ಧನವೆಂಬ ಗಿಡಕ್ಕೆ! ಕ್ಷತ್ರಧರ್ಮದಿಂದ ನಡೆದೆ! ಶತ್ರುಗಳನ್ನು ಅವರಾಗಿ ಕಡಿದಾಗ ಕಡಿದೆ! ಅದು ನಿನ್ನ ತಪ್ಪಲ್ಲ. ಯುದ್ಧವೆಂದು ಹಾತೊರೆದ ಪಾಪಿ ದುರ್ಯೋಧನನಿಗೇ ಪ್ರಜಾದಿ ನಾಶದ ಪಾಪವು ಸೇರಿದೆ! ಧರ್ಮದಿಂದ ಬಂದಿರುವ ರಾಜ್ಯಕನಕರತ್ನಾದಿಗಳನ್ನು ಅನುಭವಿಸು! ದಾನವನ್ನೂ ಮಾಡು! ಧರ್ಮವೇ ಮೋಕ್ಷವನ್ನು ತಂದುಕೊಡುವುದು" ಎಂದನು.

ಭೀಮಸೇನನು ಧರ್ಮಜನ ನಿರ್ವೇದವನ್ನು ಕಂಡು, ಸ್ವಲ್ಪ ಸಿಟ್ಟಿನಿಂದ ಇಂತೆಂದನು: "ರಾಜನ್! ನಿನಗೆ ತಿಳಿಯದುದಿಲ್ಲ. ನಿನ್ನಂತೆ ನಡೆಯಲು ನಮ್ಮಿಂದಾಗದು.

ನಮ್ಮಂತೆ ನಡೆಯಲು ನಿನ್ನಿಂದಾಗದು. ಹೇಳಬಾರದೆಂದು ಸುಮ್ಮನಿದ್ದರೂ, ನಿನ್ನ ನಿಷ್ಕಾರುಣ ದುಃಖವು ನನ್ನನ್ನು ಹೇಳುವಂತೆ ಮಾಡುತ್ತಿದೆ. ಸರ್ವಶಾಸ್ತ್ರವಿಶಾರದನಾದ ನಿನ್ನ ದೈನ್ಯವು ಅತಿ ವಿಚಿತ್ರವಾಗಿದೆ. ನಿನ್ನಿಂದ ನಾವೂ ಹೇಡಿಗಳಂತೆ ಬೇಡಿ, ಕೇಡಿಗರಂತೆ ಕಾಡಿ, ಬದುಕಬೇಕಾಗುವುದೋ ಏನೋ? ನಿನಗೇಕಿಂತಹ ಮೋಹ ಬಂತು? ಅಣ್ಣ! ನೀನು ಅಧರ್ಮವನ್ನು ಮಾಡಿಲ್ಲ! ಅಧರ್ಮದಿಂದ ಗೆದ್ದಿಲ್ಲ! ಏಕೀ ಶೋಕ? ಕೇಳು!

ವ್ಯಾಧಿಯು ಎರಡು ವಿಧ! ಶಾರೀರ ವ್ಯಾಧಿಯು ಶೀತೋಷ್ಣವಾತಗಳೆಂಬ ಮೂರು ಧಾತುಗಳ ವಿಕಾರದಿಂದ ಉಂಟಾಗುತ್ತೆ. ಆಗ ಔಷಧದಿಂದ ಅದನ್ನು ಕಳೆಯಬೇಕು. ಮಾನಸಿಕ ವ್ಯಾಧಿಯು ಸತ್ವರಜಸ್ತಮೋ ಗುಣಗಳ ವಿಕಾರದಿಂದ ಉಂಟಾಗುತ್ತದೆ. ಆಗ ಅಭಿಮಾನತ್ಯಾಗದಿಂದ ಅದನ್ನು ಕಳೆಯಬೇಕು. ಆದಿವ್ಯಾಧಿಗಳನ್ನು ಮನಸಶಾರೀರಗಳೆಂದು ತಿಳಿದು, ಜೀವನು ನಿರಭಿಮಾನಿಯಾಗಿ ಸುಖಿಸುವನು. ಮೂಢರು ಸುಖ ಕಾಲದಲ್ಲಿಯೂ ಹಿಂದಿನ ದುಃಖವನ್ನು ನೆನೆದು, ಸುಖದೂರರಾಗುವುದಲ್ಲದೆ, ದ್ವಿಗುಣ ದುಃಖವಂತರಾಗುವರು. ಹಾಗಾಗಬೇಡ! ರಾಜ್ಯಪ್ರಾಪ್ತಿಯ ಸಮಯದಲ್ಲಿ ಆನಂದಿಸದೆ, ಯುದ್ಧರಂಗದ ಜನನಾಶವನ್ನು ನೆನೆದು, ಅಳುವ ನಿನ್ನನ್ನು ಕಂಡು, ನನಗೆ ಆಶ್ಚರ್ಯವಾಗಿದೆ. ನೆನೆದು ಶೋಕಿಸುವುದು ನಿನ್ನ ಸ್ವಭಾವವಾಗಿದ್ದರೆ ಹೇಳು! ಸಭಾಗತಳಾಗಿ ಕಷ್ಟಪಟ್ಟ ಕೃಷ್ಣೆಯ ಪರಿಭವವನ್ನೇಕೆ ಮರೆತೆ? ವನವಾಸದ ಕಷ್ಟಗಳನ್ನೇಕೆ ಮರೆತೆ? ಸೈಂಧವನ ದುಷ್ಕೃತ್ಯವನ್ನೆಂತು ಮರೆತೆ? ಕೀಚಕನಿತ್ತ ಪರಿಭವವನ್ನೆಂತು ಮರೆತೆ? ನಮ್ಮ ವ್ಯಸನವನ್ನು ನೆನೆದು ಬಾರದ ಅನುತಾಪವೀಗ, ದುಷ್ಟವಧೆಯನ್ನು ಕಂಡು ಬಂತೇ? ದುರ್ಯೋಧನಾದಿಗಳಿಗೆ ಕಷ್ಟದಿಂದ ಕಷ್ಟತರವಾದ ಗತಿಯೇ ಪ್ರಾಪ್ತವಾಗಿದೆ. ಅದಕ್ಕಾಗಿ ನೀನು ಶೋಕಿಸುವುದು ತರವಲ್ಲ.

ನೀನು ದ್ರೋಣ ಭೀಷ್ಮ ಶಲ್ಯರಿಂದ ಕಾದಿ ಗೆದ್ದೆ! ಆದರೆ ಈಗ ನಿನ್ನ ದುರ್ಬಲ ಮನಸ್ಸನ್ನು ಹತ್ತಿಡಲಾರದೆ, ಸೋತು ಕೂತಿರುವೆ! ಈ ಮಾನಸಿಕ ಯುದ್ಧದಲ್ಲಿ ಸಾಯಬೇಡ! ಶ್ರೀಕೃಷ್ಣ ದಯದಿಂದ ಪಾಪಿ ದುರ್ಯೋಧನಾದಿಗಳು ನಿಹತರಾದರು. ದ್ರೌಪದಿಯ ಕೇಶಪಾಶವನ್ನು ಸೆಳೆದ ಸೆಳೆಸಿದ ಪಾಪಿಗಳನ್ನು ಕೊಂದು, ಸೇಡನ್ನು ತೀರಿಸಿದೆವು. ರಾಜನಾಗು! ಆಳು! ಯಜ್ಞಗಳನ್ನು ಮಾಡು! ನಾವು ನಿನ್ನ ಕಿಂಕರರಾಗಿ ನಿಂತಿರುವೆವು. ಭಗವಾನ್ ವಾಸುದೇವನ ದಯವೂ ಇದೆ!

ಇವರೆಲ್ಲರೂ ಧರ್ಮ, ಅರ್ಥ, ಮೋಕ್ಷಗಳ ಹಿರಿಮೆಯನ್ನು ಹೇಳಿದರು. ಕಾಮವನ್ನು ನೀಚವೆಂದು ಕಾಮವೇ ಉತ್ತಮ ಪುರುಷಾರ್ಥವೆಂಬ ನನ್ನ ಮಾತನ್ನೂ ಕೇಳು! ಕಾಮವೆಂದರೆ ಕಾಮ್ಯ (ಕಾಮಿತ ವಸ್ತು) ಕಾಮ್ಯಗಳಲ್ಲಿ ಉತ್ತಮ ಕಾಮ್ಯನು ಶ್ರೀಹರಿ ಎಂದು ತಿಳಿ! ಅವನಾರಿಗೆ ಬೇಡ ಹೇಳು! ಅವನಿಗಾಗಿ ಧರ್ಮ, ಅರ್ಥ, ಮೋಕ್ಷಗಳು! ಅವನಿಗಾಗಿ, ಅವನ ಪ್ರೀತಿಗಾಗಿ, ಸನ್ಯಾಸ, ದಾನ, ಯಜ್ಞ, ವೇದಾಧ್ಯಯನ, ತಪೋ, ವ್ರತ, ಯಾತ್ರಾದಿ ಸತ್ಕಾರಗಳು. ಅವನಿತ್ತ ಸಕಲವಿಹಿತ ವಸ್ತುಗಳೂ ಕಾಮ್ಯಗಳೇ! ಎಲ್ಲ ಅನಿಷಿದ್ಧ ಭೋಗಗಳನ್ನೂ ಶ್ರೀಹರಿಗರ್ಪಿಸು! ನೀನೂ ಅನುಭವಿಸು! ಅಂತಹ ಕಾಮವು

ನೀಚವಲ್ಲ. ಧರ್ಮಾರ್ಥಗಳಿಗಿಂತ ಕಾಮವು ಉತ್ತಮವಾಗಿದೆ. ಧರ್ಮ, ಅರ್ಥ, ಮೋಕ್ಷಗಳೂ ಕಾಮಿತವಾಗಿದ್ದು, ಕಾಮವೆನಿಸುವವು. ದುಃಖವು ಅಕಾಮವು. ಅದನ್ನು ಯಾರು ಬೇಡರು. ಕಂಟಕಾದಿ ದುಃಖಸಾಧನವೂ ಅಕಾಮವೇ. ಮುಕ್ತಿಯನ್ನು ಬೇಕೆಂಬವನಿಗೆ ಮುಕ್ತಿಯು ಕಾಮವಾಗುವುದು. ಅದಕ್ಕಾಗಿ ಮಾಡುವ ಸಾಧನಗಳಾದ ವಿಜ್ಞಾನ ಭಕ್ತಿಗಳೂ ಕಾಮಿತಗಳೇ! ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಬೇಡುವುದು ಶ್ರೀಹರಿಗಾಗಿ, ಅಂದ ಮೇಲೆ ಶ್ರೀಹರಿಯೇ ಮುಖ್ಯಕಾಮಿತನು. ಮಿಕ್ಕವು ಅಮುಖ್ಯಗಳು, ಶ್ರೀಹರಿಯು ತನ್ನನ್ನು ನೋಡಿ, ತಾನೇ ಆನಂದಾಶ್ಚರ್ಯರೂಪನಾಗುವನಂತೆ! ಅಂತಹ ಆನಂದಮಯನನ್ನು ಬೇಡಿ, ಅವನ ಅನುಗ್ರಹಕ್ಕಾಗಿ ಭಕ್ತನಾಗು! ಬೇಕಾದ ಕಾಮಿತಗಳನ್ನು ಶ್ರೀಶನಿಗರ್ಪಿಸಿ, ತಾನೂ ಸ್ವೀಕರಿಸುವುದೇ ಭಕ್ತಲಕ್ಷಣವು.

ಕಾಮವೆಂದರೆ ಇಚ್ಛೆ ಎಂದು ತಿಳಿದಿರುವೆಯಾ? ತಿಳಿ! ಆದರೂ ಇಚ್ಛೆ ಅವರ್ಜನೀಯವಾಗಿದೆ, ಇಚ್ಛೆ ಇಲ್ಲದ ಚೇತನನಿಲ್ಲ. ಇಚ್ಛೆ ಜೀವಸ್ವಭಾವವಾಗಿದೆ. ಇಚ್ಛೆ ಇಲ್ಲದುದೆಂದರೆ ಜಡವೇ! ನೀನು ಜಡನಲ್ಲ; ಜೀವನು. ಅದರಲ್ಲಿ ಉತ್ತಮನು. ಇಚ್ಛೆಯು ಸ್ವರೂಪಭೂತವಾಗಿದೆ. ಆ ಸ್ವಭಾವವು ಮುಕ್ತಿಯಲ್ಲಿ ಆವಿರ್ಭೂತ ವಾಗುವುದು. ಅಂತಹ ಸ್ವರೂಪೇಚ್ಛೆಯು ಉತ್ತಮ ಜೀವರಿಗೆ ಉತ್ತಮವೇ ಆಗಿದೆ.

ಅಚೇತನೇಚ್ಛೆಯು ರಾಗ ದ್ವೇಷ ರೂಪವಾಗಿ ಬಂಧಕವಾಗಿದೆ. ಅದು ಕೆಟ್ಟದಾದುದರಿಂದ ಬಿಡಲು ಅರ್ಹವಾಗಿದೆ. ರಾಗ ದ್ವೇಷೇಚ್ಛೆಯನ್ನು ಬಿಡು! ಧರ್ಮಾರ್ಥ ಮೋಕ್ಷೇಚ್ಛೆಯನ್ನು ಬಿಡಬೇಡ! ಶಾಕಗಳಲ್ಲಿ ಲವಣದಂತೆ, ಚತುರ್ವಿಧ ಪುರುಷಾರ್ಥ ಗಳಲ್ಲಿಯೂ ಕಾಮ (ಇಚ್ಛೆ) ಇದ್ದೇ ಇದೆ. ಯಾವುದು ಸರಿಯೆಂದು ಕೇಳಬೇಡ! ವಿಹಿತವಾದುದೆಲ್ಲ ಸರಿಯೇ! ನಿಷಿದ್ಧವೆಲ್ಲ ಸರಿಯಲ್ಲ! ವಿಹಿತ ನಿಷಿದ್ಧಗಳನ್ನು ವೇದಗಳಿಂದ ತಿಳಿ! ವೇದ ಪ್ರತಿಪಾದಿತನಾದ ಶ್ರೀಕೃಷ್ಣನಿಂದ ತಿಳಿ! ಶ್ರೀಕೃಷ್ಣ ವ್ಯಾಸರು, 'ನೀನು ಅಧರ್ಮದಿಂದ ಗೆದ್ದಿಲ್ಲ; ಧರ್ಮದಿಂದಲೇ ಗೆದ್ದಿರುವೆ' ಎಂದು ಎಷ್ಟು ಸಲ ಹೇಳಿಲ್ಲ? ಆದರೂ ಅಧರ್ಮ ಶಂಕೆಯಿಂದ ನೀನು ಶೋಕಿಸುವುದು ಕಂಡು ಆಶ್ಚರ್ಯವಾಗಿದೆ. ಧರ್ಮದಿಂದಲೇ ಗೆದ್ದಿರುವೆವು. ದುಷ್ಟರನ್ನು ಕೊಂದು ಶ್ರೀಹರಿ ಸೇವೆಗೈದಿರುವೆವೆಂಬುವ ವಿಷಯದಲ್ಲಿ ನನಗೆ ಸಂದೇಹವಿಲ್ಲ, ಅರ್ಜುನನಿಗೂ ಇಲ್ಲ. ಏಕದಶ್ಯಾದಿ ವ್ರತಗಳಂತೆ, ವಿಹಿತವಾದ ಕ್ಷಾತ್ರಧರ್ಮದಲ್ಲಿ ನಡೆದು ಬಂದಿರುವ ಧರ್ಮರಾಜನಿಗೆ ಅಧರ್ಮ ಶಂಕೆ ಬರಬಾರದು.

ಧರ್ಮಾರ್ಥಕಾಮಗಳಲ್ಲಿ ಕಾಮವೇ ಉತ್ತಮವೆಂದನು. ಅಹುದು! ಕಾಮವು ಉತ್ತಮ, ಮಧ್ಯಮ, ಅಧಮವೆಂದು ಮೂರು ವಿಧ! ಧರ್ಮಾರ್ಥಗಳೆರಡಕ್ಕೂ ವಿರೋಧಿಯಾದ ಕಾಮವು ಅಧಮವು. ಪರಸ್ತ್ರೀಗಮನ, ದ್ಯೂತ, ಪಾನಗಳು ಅಧಮ ಕಾಮಿತಗಳು; ಅವು ಅರ್ಥವನ್ನು ಹಾಳುಮಾಡಿ, ಧರ್ಮವನ್ನು ಕೆಡಿಸಿ, ಜೀವನನ್ನು ನರಕಕ್ಕೆ ಹಾಕುವವು. ವ್ಯಾಪಾರವು ಮಧ್ಯಮಕಾಮ; ಅದು ಅರ್ಥಾವಿರೋಧಿಯಾದರೂ ಧರ್ಮವಿರೋಧಿಯಾಗಿದೆ. ಅಂತೆಯೇ ಧರ್ಮಾವಿರೋಧಿಯಾದರೂ ಅರ್ಥನಾಶಕರವಾದ

ವಿಶ್ವಜಿದ್ಯಾಗಾದಿಗಳೂ ಮಧ್ಯಮ ಕಾಮಿತಗಳೇ! ಉತ್ತಮ ಕಾಮಿತಗಳೆಂದರೆ ಜ್ಞಾನ, ಭಕ್ತಿ, ವೈರಾಗ್ಯ, ನಿಯತೋಪಾಸನೆಗಳು. ಅವನ್ನು ಬೇಡುವ ಬುದ್ಧಿಯೇ ಕಾಮವು. ಏಕೆಂದರೆ ಅವೇ ಮೋಕ್ಷಸಾಧನವಾಗಿವೆ. ಶ್ರೀಹರಿಯನ್ನು ಸೇರಿಸುವ ಮೋಕ್ಷವನ್ನು ಬೇಡು ! ಅದಕ್ಕಾಗಿ ಅಧಮಕಾಮವನ್ನು ಬಿಡು! ಮಧ್ಯಮಕಾಮ ಜಯಕ್ಕಾಗಿ ಯಜ್ಞದಾನಗಳನ್ನು ಮಾಡು! ಉತ್ತಮ ಕಾಮಿತಗಳಾದ ಭಕ್ತ್ಯಾದಿಗಳನ್ನು ಬೇಡು! ಶ್ರೀಹರಿಗಿತ್ತು, ಅವನಿತ್ತ ಪ್ರಸಾದಗಳಾದ ಸ್ರಕ್, ಗಂಧ, ವಸನ, ಭೂಷಣಗಳನ್ನು ಸ್ವೀಕರಿಸು! ಶ್ರೀಶನ ನಿವೇದಿತವನ್ನು ವಿಪ್ರಾದಿಗಳಿಗಿತ್ತು ಉಚ್ಛಿಷ್ಟವನ್ನು ಉಂಡು, ವಿಘಸಾಶನನಾಗು ! ಶ್ರೀಶನ ಬಂಧಕಶಕ್ತಿಯಿಂದ ಬಂದ ಸಂಸಾರಬಂಧವನ್ನು ಕಡಿ!

ನೋಡು ಸ್ವಾಮಿಯನ್ನು! ಎಷ್ಟು ಮನೋಹರನಾಗಿರುವನು! ಭಕ್ತಪ್ರಿಯನು, ಚಂದನಲಿಪ್ತನು, ದಿವ್ಯಮಾಲ್ಯಾಭರಣ ಭೂಷಿತನು ಆಗಿರುವ ಶ್ರೀಕೃಷ್ಣನೇ ನಮ್ಮ ಪರಮೇಷ್ಠನು. ಬೇಡು ಅವನ ಪ್ರೀತಿಯನ್ನು! ಕಾಮಿತಗಳಿಗೆ ಕಾಮ್ಯರೂಪವನ್ನಿತ್ತು, ಕಾಮ್ಯನಾಗಿ, ಜೀವರಲ್ಲಿ ಪ್ರಾಜ್ಞನಾಗಿ ವಿಷಯಗಳನ್ನುಂಡು, ಆನಂದಪಡಿಸುವ ಉತ್ತಮ ಕಾಮನು ಶ್ರೀಹರಿಯೇ! ಅವನಿತ್ತ ರಾಜ್ಯಾದಿಗಳನ್ನೇಕೆ ಬಿಡುವೆ? ಸುಖವಾಗಿರು!"

ಧರ್ಮರಾಜನು ಮೋಕ್ಷವನ್ನು ಪ್ರಶಂಸಿಸುತ್ತಾ, ಭೀಮಸೇನನ ಮಾತಿಗೆ ಸಮ್ಮತಿಸಿ, ಅರ್ಜುನನ ಅರ್ಥವಚನವನ್ನೊಪ್ಪದೆ, ಇಂತೆಂದನು: 'ಅರ್ಜುನ! ಅತೃಪ್ತಿ, ಪ್ರಮಾದ, ಮದ, ರಾಗ, ದ್ವೇಷ, ಬಲ, ಅಭಿಮಾನಗಳೆಂಬ ದೋಷಗಳಿಗೆ ಮನವಿತ್ತು ಇಂತಾಡುವೆ! ಸಕಲ ಭೂಮಿಯನ್ನಾಳಿದರೂ, ಒಂದು ಹೊಟ್ಟೆಯನ್ನು ತುಂಬಿಸ ಲೆಂದಲ್ಲವೇ? ಅದಕ್ಕಾಗಿ ಏಕೆ ದುರಾಶೆ? ಅತೃಪ್ತನನ್ನು ಸಂತೋಷಪಡಿಸಲಾಗದು. ಆಶೆಯನ್ನು ಹತ್ತಿಕ್ಕಿ, ಪರ್ಣಫಲಗಳನ್ನುಂಡು, ರಾಗದ್ವೇಷಗಳನ್ನು ವರ್ಜಿಸಿರುವ ಮುನಿವರರು ಆನಂದದಿಂದಿರುವರು. ಕರ್ಮಗಳನ್ನು ಮಾಡುವಲ್ಲಿ ಅಭಿಮಾನಸಹಿತರು, ಸ್ವರ್ಗಪ್ರಮುಖ ನಶ್ವರಲೋಕಗಳನ್ನೂ, ಅಭಿಮಾನರಹಿತರು ಬ್ರಹ್ಮಲೋಕವನ್ನೂ ಸೇರುವರು. ನಿರಭಿಮಾನಿಯಾದ ಜನಕರಾಜನು ನಗರವೆಲ್ಲವೂ ಸುಟ್ಟರೂ ತನ್ನದೇನೂ ಸುಟ್ಟಿಲ್ಲವೆಂದು ನಿಶ್ಚಿಂತನಾಗಿದ್ದನು. ಬೆಟ್ಟದ ಮೇಲಿರುವವನಿಗೆ ಕೆಳಗಿನವರಂತೆ, ಜಯಗರ್ವಿತನಾದವನಿಗೆ ದುರ್ಯೋಧನಾದಿಗಳ ಪತ್ನೀಜನರ ದುಃಖವು ತೃಣಪ್ರಾಯವಾಗಿದೆ. ಅವರ ದುಃಖದಿಂದ ಸುಖಪಡುವುದು ನಮಗೆ ಒಳಿತಲ್ಲ. ಭೂತಗಳೆಲ್ಲವೂ ಪರಸ್ಪರ ಭಿನ್ನವಾಗಿದ್ದರೂ, ಅವರ ಅಂತರ್ಯಾಮಿಯು ಒಬ್ಬನೇ ಇರುವನು. ಅವನೇ ಸೃಷ್ಟಿಯನ್ನು ಮಾಡಿ ಜೀವರನ್ನು ಹೊರಗಿಟ್ಟು, ಪ್ರಳಯದಲ್ಲಿ ಮತ್ತೆ ಒಳಗಿಡುವನು. ಅಂತಹ ಸ್ವಾಮಿಯನ್ನು ನೆನೆದು, ಯಾರಿಗೂ ದುಃಖವನ್ನು ಕೊಡದವನು ಮುಕ್ತಿಯನ್ನೈದುವನು.'

ಅರ್ಜುನನು "ರಾಜನ್! ಸಂತುಷ್ಟಿಯೇ ಮಹಾದ್ಭಾಗ್ಯವೆಂದೆ! ನಿಜ. ಏನೂ ಇಲ್ಲದವನಿಗೆ ಸಂತುಷ್ಟಿಯು ಅಭಾವ ವೈರಾಗ್ಯವೆನಿಸುವುದು. ಇದ್ದುದನ್ನೆಲ್ಲ ಶ್ರೀಹರಿಗರ್ಪಿಸಿ, ಭಜಿಸುವುದು ಸರಿಯಾದ ವೈರಾಗ್ಯವು. ಅದರಿಂದ ಸಂತುಷ್ಟಿ ದೊರೆತು ಶ್ರೀಹರಿಯೂ ಸಂತುಷ್ಟನಾಗುವನು. ಶುಷ್ಕವೈರಾಗ್ಯವು ಅಜ್ಞಾನಮೂಲಕವಾಗಿದೆ. ಜನಕರಾಜನು

ಹಿಂದೆ ರಾಜ್ಯಭೋಗಗಳನ್ನು ಬಿಟ್ಟು, ಕಷ್ಟಮುಷ್ಟಿಂಪಚನಾಗಲೆಣಿಸಿದನು. ನುಚ್ಚಿನ ಕಣಗಳನ್ನು ಪಿಡಿದು, ದೂಳಿಮುಚ್ಚಿದ ಮೈಯಲ್ಲಿ, ಹರಕು ಬಟ್ಟೆಯನ್ನುಟ್ಟು, ಸುಮ್ಮನೆ ಕೂತಿದ್ದ ಗಂಡನನ್ನು ನೋಡಿ, ಅವನ ಪತ್ನಿಯು ನೊಂದು, ಕುಪಿತಳಾಗಿ, ಅವನಿಗಿಂತೆಂದಳು: 'ಇದೇಕೆ ಕಾಪಾಲಿಯಂತಾದೆ! ರಾಜನ್! ಎಲ್ಲವನ್ನೂ ಬಿಡುವೆನೆಂದು ಬಂದವನ ಕೈಲಿ ಧಾನಾನಿಚಯವೇಕೆ ಬಂತು? ಭಿಕ್ಷೆಯನ್ನೂ ಬಿಡು! ಜೀವಿಸುವ ಆಶೆಯನ್ನೂ ಬಿಡಬಹುದೇ? ಧಾನಾರಾಶಿಯಲ್ಲಿಲ್ಲ ತೃಪ್ತಿ; ನಿನ್ನ ಮನಸ್ಸಿನಲ್ಲಿದೆ. ಆ ತೃಪ್ತಿಯನ್ನು ರಾಜ್ಯದಲ್ಲಿ ತರಲಾರದೇ ಹೋದ ನಿನ್ನ ಅಧೀರತೆಯನ್ನು ನಿಂದಿಸುವೆನು. ನಿನ್ನನ್ನಲ್ಲ. ಈಗ ನಿನಗೆ ಅತಿಥಿ ದೇವ ವಿಪ್ರ ಗುರು ಪೂಜೆಗಳು ಲೋಪಿಸಿದವು. ನಿನ್ನನ್ನು ನಂಬಿದ್ದ ಸತೀಸುತರು ದಿಕ್ಕಿಲ್ಲದಾದರು. ಕರ್ತವ್ಯವನ್ನು ಕಷ್ಟವೆಂದು ಬಿಟ್ಟು, ಸ್ವಾರ್ಥಪರನಾಗಿರುವ ನಿನಗೆ ಪುಣ್ಯಲೋಕವೆಂತಾಗುವುದು? ದೊಡ್ಡ ಮರವಾಗಿ, ನೆರಳಿತ್ತು, ಹಣ್ಣಿತ್ತು, ಈಗ ಕಲ್ಪವೃಕ್ಷವೇ ಭಿಕ್ಷೆ ಬೇಡಿತೆಂದೆನಿಸಬೇಡ! ನಿನ್ನ ಕಮಂಡಲುವನ್ನು ಒಡೆದರೆ, ಕಂಥೆಯನ್ನು ಕಸಿದರೆ, ತ್ರಿದಂಡವನ್ನು ಮುರಿದರೆ, ನಿನ್ನ ಮನಸ್ಸಿಗೆಷ್ಟು ನೋವಾಗುವುದು! ನೋವಾಗದಿದ್ದರೆ ರಾಜ್ಯವನ್ನಾಳುತ್ತಾ, ನಿರ್ವಿಕಾರನಾಗಿರಬಾರದೇಕೆ? ಹೇಳು! ರಾಜನು ಕಪ್ಪವನ್ನು ಸ್ವೀಕರಿಸಿ, ಪ್ರಜಾಹಿತ ಯಜ್ಞಗಳಿಗಿತ್ತು, ವಿಪ್ರರಿಗಿತ್ತು ನಿಷ್ಪಾಪನಾಗುವನು! ದಿಗಂಬರನಾಗಿ, ಮುಂಡನಾಗಿ, ಕಾಷಾಯಾಂಬರನಾಗಿ ಅಲ್ಲ."

ಆ ಸಾಧ್ವಿಯ ವಚನದಿಂದ ಕಣ್ತೆರೆದು, ಜನಕರಾಜನು ರಾಜ್ಯವನ್ನಾಳಿದನು; ಶಾಸ್ತ್ರಗಳನ್ನು ಕೇಳಿದನು! ಪರಬ್ರಹ್ಮನನ್ನು ತಿಳಿದನು! ಅಂತೆಯೇ ನಿರಭಿಮಾನಿಯಾಗಿ, ನನ್ನದೇನೂ ಸುಟ್ಟಿಲ್ಲವೆಂದನು. ಧರ್ಮರಾಜ! ನೀನೂ ಅವನಂತೆ ಕರ್ಮಾಧಿಕೃತನಿರುವೆ! ಪ್ರಜರನ್ನು ಪಾಲಿಸು! ಧರ್ಮವನ್ನೆಳಿಸು!" ಅರ್ಜುನನ ವಚನವನ್ನಾಲಿಸಿ, ಧರ್ಮಜನು ಇಂತೆಂದನು:

'ತಾತ! ನಾನೂ ಧರ್ಮವನ್ನರಿತಿರುವೆನು. ಶಾಸ್ತ್ರಗಳನ್ನು ಕೇಳಿರುವೆನು. ಕರ್ಮವನ್ನು ಮಾಡು! ಎಂದು ಕೆಲವಚನಗಳಿವೆ! ಬಿಡೆಂದು ಕೆಲವಚನಗಳಿವೆ! ಶಾಸ್ತ್ರಾರ್ಥವು ಸೂಕ್ಷ್ಮವಾಗಿದೆ. ಅಣ್ಣನೆಂಬ ಪ್ರೀತಿಯಿಂದ ನುಡಿವ ನಿನ್ನ ಮಾತಿನಂತೆ ನಾನು ಅರ್ಥಪ್ರಧಾನನಾಗಿ ರಾಜ್ಯವನ್ನಾಳಲಾರೆನು. ತಪಸ್ಸು, ತ್ಯಾಗ, ಅಧ್ಯಯನಗಳೇ ಶ್ರೇಯಸ್ಸಾಧನವೆಂದು ನಾನು ತಿಳಿದಿರುವೆನು. ಇಂದ್ರಿಯಗಳನ್ನು ನಿಗ್ರಹಿಸಿ ಸಕಲವನ್ನೂ ತ್ಯಜಿಸಿ ಪೋಗಲೆಣಿಸುವ ನನಗೆ ಅನರ್ಥವಾದ ಅರ್ಥವನ್ನೇಕೆ ಪ್ರಶಂಸಿಸಿ ಬೋಧಿಸುವೆ? ನನಗೆ ರಾಜ್ಯಧನಗಳು ಬೇಡ! ಭೀಮನೇ ರಾಜನಾಗಲಿ!'

## ೪. ಶ್ರೀ ವ್ಯಾಸ ವಚನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಧರ್ಮರಾಜಾದಿಗಳ ವಚನವನ್ನಾಲಿಸಿ, ದೇವಸ್ಥಾನವೆಂಬ ಋಷಿವರನು

ಇಂತೆಂದನು: "ಧರ್ಮರಾಜ! ಫಲ್ಗುಣನು ನಿನಕಿಂತಲು ವಯಸಾ ಚಿಕ್ಕವನಾದರೂ, ಸೂಕ್ಷ್ಮಜ್ಞಾನಿಯಾಗಿರುವನು (ಇಂದ್ರಾಂಶನು). ಆತನು ನುಡಿದುದು ಧರ್ಮಸಮ್ಮತವೂ, ಯುಕ್ತಿಯುಕ್ತವೂ ಆಗಿದೆ. ಆಳಲಾಗದ ರಾಜ್ಯವನ್ನು ಅತಿಕಷ್ಟದಿಂದ ಕಾದಿ, ಗೆದ್ದುದಾದರೂ ಏಕೆ? ಧರ್ಮಾರ್ಥಕಾಮಮೋಕ್ಷಗಳು ವಿಷ್ಣುಮಂದಿರದ ಸೋಪಾನಗಳು. ಅವನ್ನು ಕ್ರಮವಾಗಿ ಏರಿ ಹೋಗಬೇಕು. ಅರ್ಥವು ನ್ಯಾಯಾರ್ಜಿತವಾಗಿ ಬಂದಿದೆ! ಉಣ್ಣು! ಕೊಡು! ಯಜ್ಞಾದಿಗಳಿಂದ ಧರ್ಮವನಾರ್ಜಿಸು! ಧರ್ಮಕ್ಕಾಗಿ ಧನವನ್ನು ಯಾಚಿಸುವುದಕ್ಕಿಂತ ಸುಮ್ಮನಿರುವುದು ಲೇಸು! ಕೆಸರು ತುಳಿದು ಕಾಲನ್ನು ತೊಳೆದಂತೆ, ಯಾಚನಾಸಾಧ್ಯವಾದ ಧರ್ಮವು ಧನವು ನಿರರ್ಥಕವು. ವಿಪ್ರನು ಕೂಡ ಅದನ್ನು ಬಿಡುವುದು ಲೇಸು! ಯಾಚನೆಯು ಕ್ಷತ್ರಿಯನಿಗೆ ನಿಷಿದ್ಧವಾಗಿದೆ. ನಿನ್ನ ರಾಜ್ಯಧನಗಳು ಯಾಚಿಸಿ ಬಂದುವಲ್ಲ! ಜಯಿಸಿ, ನ್ಯಾಯವಾಗಿ ಪಡೆದವು. ಪಾತ್ರರಿಗೆ ವಿನಿಯೋಗಿಸಿ, ಧರ್ಮವನ್ನಾರ್ಜಿಸು! ಯಜ್ಞಗಳನ್ನು ಮಾಡಿ, ಮಿಕ್ಕ ಧನಾನ್ನವಸ್ತ್ರಾದಿ ಕಾಮಿತಗಳನ್ನು ಅನುಭವಿಸು! ತಪ್ಪಲ್ಲ. ಯಜ್ಞಗಳಲ್ಲಿ ಯಜ್ಞನಾಮಕ ಶ್ರೀಹರಿಯನ್ನರ್ಚಿಸಿ, ದೇವೇಂದ್ರನು, ರುದ್ರನು, ತಂತಮ್ಮ ವಿವಿಧೈಶ್ವರ್ಯ ಪದವೀ ಕೀರ್ತಿಗಳನ್ನು ಪಡೆದಿರುವರು. ಆವೀಕ್ಷಿತ, ಹರಿಶ್ಚಂದ್ರರಾದಿ ರಾಜನ್ಯರೂ, ಯಜದಿಂದ ದೇವಲೋಕವನ್ನು ಪಡೆದಿರುವರು.

ರಾಜನ್! ಸನ್ಯಾಸ, ಶಾಂತಿ, ತೃಪ್ತಿ ಕರ್ಮಪ್ರಯತ್ನ ಯಜ್ಞಗಳನ್ನು ಪ್ರಶಂಸಿಸುವ ಶಾಸ್ತ್ರಗಳಿವೆ! ವೀರ್ಯ, ಧರ್ಮರಕ್ಷಣ, ದಾನ, ಅಪಲಾಯನಗಳನ್ನು ಪ್ರಶಂಸಿಸುವ ಶಾಸ್ತ್ರಗಳೂ ಇವೆ. ಎಲ್ಲ ಶಾಸನಗಳೂ ಎಲ್ಲರಿಗೂ ಅಲ್ಲ. ನೀನು ಕ್ಷತ್ರಿಯನು! ಭಾರತನು! ದುಷ್ಟರನ್ನು ಕೊಂದು, ಪ್ರಜರಿಂದ ಕಪ್ಪವನ್ನು ಹರಿಸಿ, ಧರ್ಮದಿಂದ ಪಾಲಿಸುವುದು ನಿನಗೆ ಪಾಪವಲ್ಲ. ಪುತ್ರರಿಗೆ ರಾಜ್ಯವನ್ನಿತ್ತು, ವಾನಪ್ರಸ್ಥನಾಗಿ, ತಪವನ್ನು ಮಾಡುವುದು ಈಗಲ್ಲ! ಆ ಕಾಲವು ಬಂದಾಗ ಅದನ್ನು ಮಾಡುವೆಯಂತೆ!"

ಆಗ ಅರ್ಜುನನಿಂತೆಂದನು: 'ರಾಜನ್! ಕ್ಷಾತ್ರಧರ್ಮದಿಂದ, ರಾಜ್ಯವನ್ನು ಪಡೆದು, ಶೋಕಿಸಬಾರದು. ಕ್ಷಾತ್ರಧರ್ಮವು ಸ್ವಭಾವದಿಂದಲೇ ನಿಷ್ಠುರವಾಗಿದೆ. ಸಂಗ್ರಾಮ ಮರಣದಂತೆ ಶತ್ರುವಧೆಯೂ ಕ್ಷತ್ರಿಯನಿಗೆ ಪುಣ್ಯಪ್ರದವಾಗಿದೆ! ಶಸ್ತ್ರನಿತ್ಯನಾದ ರಾಜನು ಸಾಯಲಿಕ್ಕು, ಕೊಲ್ಲಲಿಕ್ಕೂ ಹಿಂಜರಿಯಬಾರದು. ಯಜ್ಞ, ದಾನ, ತಪಗಳಿಂದ. ವಿಪ್ರರಿಗೆ ಬರುವ ಪುಣ್ಯವು, ಕ್ಷತ್ರಿಯನಿಗೆ ಶತ್ರುವಧೆ, ಪ್ರಜಾಪಾಲನ, ತ್ಯಾಗಗಳಿಂದ ಬರುವುದು. ಬಿಡು ನಿರರ್ಥಕ ಶೋಕವನ್ನು! ದೈವೇಚ್ಛೆಗೆ ಬಂದುದನ್ನು ಯಾರೂ ನಿವಾರಿಸಲಾರರು.

ಆ ಮಾತಿಗೆ ಬದುಲಿಡದೆ ಸುಮ್ಮನಿದ್ದ ಧರ್ಮರಾಜನನ್ನು ಶ್ರೀವೇದವ್ಯಾಸನು ಇಂತು ಸಮಾಧಾನಪಡಿಸಿದನು: "ರಾಜನ್! ಭೀಮನ ಮಾತು ಸಕಲ ಪ್ರಾಜ್ಞ ಸಮ್ಮತವಾಗಿದೆ. ಅರ್ಜುನನೂ ಶಾಸ್ತ್ರಗೋಚರ ವಚನಗಳನ್ನಾಡಿರುವನು. ಗೃಹಸ್ಥ ವಿಧಿಯನ್ನು ನೀನು ಗೃಹಸ್ಥನಾಗಿರುವುದರಿಂದ ಚೆನ್ನಾಗಿ ನಡೆಸು! ಸ್ವಧರ್ಮವಾದ ಪ್ರಜಾಪಾಲನವನ್ನು ಬಿಡಬೇಡ! ವೇದವನ್ನೋದಿರುವೆ! ದಿವ್ಯತಪವನ್ನು ಮಾಡಿರುವೆ!

ಹಿಂದೆ ರಾಜ್ಯಭೋಗಗಳನ್ನು ಬಿಟ್ಟು, ಕಷ್ಟಮುಷ್ಟಿಂಪಚನಾಗಲೆಣಿಸಿದನು. ನುಚ್ಚಿನ ಕಣಗಳನ್ನು ಪಿಡಿದು, ದೂಳಿಮುಚ್ಚಿದ ಮೈಯಲ್ಲಿ, ಹರಕು ಬಟ್ಟೆಯನ್ನುಟ್ಟು, ಸುಮ್ಮನೆ ಕೂತಿದ್ದ ಗಂಡನನ್ನು ನೋಡಿ, ಅವನ ಪತ್ನಿಯು ನೊಂದು, ಕುಪಿತಳಾಗಿ, ಅವನಿಗಿಂತೆಂದಳು: 'ಇದೇಕೆ ಕಾಪಾಲಿಯಂತಾದೆ! ರಾಜನ್! ಎಲ್ಲವನ್ನೂ ಬಿಡುವೆನೆಂದು ಬಂದವನ ಕೈಲಿ ಧಾನಾನಿಚಯವೇಕೆ ಬಂತು? ಭಿಕ್ಷೆಯನ್ನೂ ಬಿಡು! ಜೀವಿಸುವ ಆಶೆಯನ್ನೂ ಬಿಡಬಹುದೇ? ಧಾನಾರಾಶಿಯಲ್ಲಿಲ್ಲ ತೃಪ್ತಿ; ನಿನ್ನ ಮನಸ್ಸಿನಲ್ಲಿದೆ. ಆ ತೃಪ್ತಿಯನ್ನು ರಾಜ್ಯದಲ್ಲಿ ತರಲಾರದೇ ಹೋದ ನಿನ್ನ ಅಧೀರತೆಯನ್ನು ನಿಂದಿಸುವೆನು. ನಿನ್ನನ್ನಲ್ಲ, ಈಗ ನಿನಗೆ ಅತಿಥಿ ದೇವ ವಿಪ್ರ ಗುರು ಪೂಜೆಗಳು ಲೋಪಿಸಿದವು. ನಿನ್ನನ್ನು ನಂಬಿದ್ದ ಸತೀಸುತರು ದಿಕ್ಕಿಲ್ಲದಾದರು. ಕರ್ತವ್ಯವನ್ನು ಕಷ್ಟವೆಂದು ಬಿಟ್ಟು, ಸ್ವಾರ್ಥಪರನಾಗಿರುವ ನಿನಗೆ ಪುಣ್ಯಲೋಕವೆಂತಾಗುವುದು? ದೊಡ್ಡ ಮರವಾಗಿ, ನೆರಳಿತ್ತು, ಹಣ್ಣಿತ್ತು, ಈಗ ಕಲ್ಪವೃಕ್ಷವೇ ಭಿಕ್ಷೆ ಬೇಡಿತೆಂದೆನಿಸಬೇಡ! ನಿನ್ನ ಕಮಂಡಲುವನ್ನು ಒಡೆದರೆ, ಕಂಥೆಯನ್ನು ಕಸಿದರೆ, ತ್ರಿದಂಡವನ್ನು ಮುರಿದರೆ, ನಿನ್ನ ಮನಸ್ಸಿಗೆಷ್ಟು ನೋವಾಗುವುದು! ನೋವಾಗದಿದ್ದರೆ ರಾಜ್ಯವನ್ನಾಳುತ್ತಾ, ನಿರ್ವಿಕಾರನಾಗಿರಬಾರದೇಕೆ? ಹೇಳು! ರಾಜನು ಕಪ್ಪವನ್ನು ಸ್ವೀಕರಿಸಿ, ಪ್ರಜಾಹಿತ ಯಜ್ಞಗಳಿಗಿತ್ತು, ವಿಪ್ರರಿಗಿತ್ತು ನಿಷ್ಪಾಪನಾಗುವನು! ದಿಗಂಬರನಾಗಿ, ಮುಂಡನಾಗಿ, ಕಾಷಾಯಾಂಬರನಾಗಿ ಅಲ್ಲ."

ಆ ಸಾಧ್ವಿಯ ವಚನದಿಂದ ಕಣ್ತೆರೆದು, ಜನಕರಾಜನು ರಾಜ್ಯವನ್ನಾಳಿದನು; ಶಾಸ್ತ್ರಗಳನ್ನು ಕೇಳಿದನು! ಪರಬ್ರಹ್ಮನನ್ನು ತಿಳಿದನು! ಅಂತೆಯೇ ನಿರಭಿಮಾನಿಯಾಗಿ, ನನ್ನದೇನೂ ಸುಟ್ಟಿಲ್ಲವೆಂದನು. ಧರ್ಮರಾಜ! ನೀನೂ ಅವನಂತೆ ಕರ್ಮಾಧಿಕೃತನಿರುವೆ! ಪ್ರಜರನ್ನು ಪಾಲಿಸು! ಧರ್ಮವನ್ನುಳಿಸು!" ಅರ್ಜುನನ ವಚನವನ್ನಾಲಿಸಿ, ಧರ್ಮಜನು ಇಂತೆಂದನು:

'ತಾತ! ನಾನೂ ಧರ್ಮವನ್ನರಿತಿರುವೆನು. ಶಾಸ್ತ್ರಗಳನ್ನು ಕೇಳಿರುವೆನು. ಕರ್ಮವನ್ನು ಮಾಡು! ಎಂದು ಕೆಲವಚನಗಳಿವೆ! ಬಿಡೆಂದು ಕೆಲವಚನಗಳಿವೆ! ಶಾಸ್ತ್ರಾರ್ಥವು ಸೂಕ್ಷ್ಮವಾಗಿದೆ. ಅಣ್ಣನೆಂಬ ಪ್ರೀತಿಯಿಂದ ನುಡಿವ ನಿನ್ನ ಮಾತಿನಂತೆ ನಾನು ಅರ್ಥಪ್ರಧಾನನಾಗಿ ರಾಜ್ಯವನ್ನಾಳಲಾರೆನು. ತಪಸ್ಸು, ತ್ಯಾಗ, ಅಧ್ಯಯನಗಳೇ ಶ್ರೇಯಸ್ಸಾಧನವೆಂದು ನಾನು ತಿಳಿದಿರುವೆನು. ಇಂದ್ರಿಯಗಳನ್ನು ನಿಗ್ರಹಿಸಿ ಸಕಲವನ್ನೂ ತ್ಯಜಿಸಿ ಪೋಗಲೆಣಿಸುವ ನನಗೆ ಅನರ್ಥವಾದ ಅರ್ಥವನ್ನೇಕೆ ಪ್ರಶಂಸಿಸಿ ಬೋಧಿಸುವೆ? ನನಗೆ ರಾಜ್ಯಧನಗಳು ಬೇಡ! ಭೀಮನೇ ರಾಜನಾಗಲಿ!'

## ೪. ಶ್ರೀ ವ್ಯಾಸ ವಚನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಧರ್ಮರಾಜಾದಿಗಳ ವಚನವನ್ನಾಲಿಸಿ, ದೇವಸ್ಥಾನವೆಂಬ ಋಷಿವರನು

ಇಂತೆಂದನು: " ಧರ್ಮರಾಜ ! ಫಲ್ಗುಣನು ನಿನಕಿಂತಲು ವಯಸಾ ಚಿಕ್ಕವನಾದರೂ, ಸೂಕ್ಷ್ಮಜ್ಞಾನಿಯಾಗಿರುವನು (ಇಂದ್ರಾಂಶನು). ಆತನು ನುಡಿದುದು ಧರ್ಮಸಮ್ಮತವೂ, ಯುಕ್ತಿಯುಕ್ತವೂ ಆಗಿದೆ. ಆಳಲಾಗದ ರಾಜ್ಯವನ್ನು ಅತಿಕಷ್ಟದಿಂದ ಕಾದಿ, ಗೆದ್ದುದಾದರೂ ಏಕೆ? ಧರ್ಮಾರ್ಥಕಾಮಮೋಕ್ಷಗಳು ವಿಷ್ಣುಮಂದಿರದ ಸೋಪಾನಗಳು. ಅವನ್ನು ಕ್ರಮವಾಗಿ ಏರಿ ಹೋಗಬೇಕು. ಅರ್ಥವು ನ್ಯಾಯಾರ್ಜಿತವಾಗಿ ಬಂದಿದೆ! ಉಣ್ಣು! ಕೊಡು! ಯಜ್ಞಾದಿಗಳಿಂದ ಧರ್ಮವನಾರ್ಜಿಸು! ಧರ್ಮಕ್ಕಾಗಿ ಧನವನ್ನು ಯಾಚಿಸುವುದಕ್ಕಿಂತ ಸುಮ್ಮನಿರುವುದು ಲೇಸು! ಕೆಸರು ತುಳಿದು ಕಾಲನ್ನು ತೊಳೆದಂತೆ, ಯಾಚನಾಸಾಧ್ಯವಾದ ಧರ್ಮವು ಧನವು ನಿರರ್ಥಕವು. ವಿಪ್ರನು ಕೂಡ ಅದನ್ನು ಬಿಡುವುದು ಲೇಸು! ಯಾಚನೆಯು ಕ್ಷತ್ರಿಯನಿಗೆ ನಿಷಿದ್ಧವಾಗಿದೆ. ನಿನ್ನ ರಾಜ್ಯಧನಗಳು ಯಾಚಿಸಿ ಬಂದುವಲ್ಲ! ಜಯಿಸಿ, ನ್ಯಾಯವಾಗಿ ಪಡೆದವು. ಪಾತ್ರರಿಗೆ ವಿನಿಯೋಗಿಸಿ, ಧರ್ಮವನ್ನಾರ್ಜಿಸು! ಯಜ್ಞಗಳನ್ನು ಮಾಡಿ, ಮಿಕ್ಕ ಧನಾನ್ನವಸ್ತ್ರಾದಿ ಕಾಮಿತಗಳನ್ನು ಅನುಭವಿಸು ! ತಪ್ಪಲ್ಲ. ಯಜ್ಞಗಳಲ್ಲಿ, ಯಜ್ಞನಾಮಕ ಶ್ರೀಹರಿಯನ್ನರ್ಚಿಸಿ, ದೇವೇಂದ್ರನು, ರುದ್ರನು, ತಂತಮ್ಮ ವಿವಿಧೈಶ್ವರ್ಯ ಪದವೀ ಕೀರ್ತಿಗಳನ್ನು ಪಡೆದಿರುವರು. ಆವೀಕ್ಷಿತ, ಹರಿಶ್ಚಂದ್ರರಾದಿ ರಾಜನ್ಯರೂ, ಯಜದಿಂದ ದೇವಲೋಕವನ್ನು ಪಡೆದಿರುವರು.

ರಾಜನ್! ಸನ್ಯಾಸ, ಶಾಂತಿ, ತೃಪ್ತಿ ಕರ್ಮಪ್ರಯತ್ನ ಯಜ್ಞಗಳನ್ನು ಪ್ರಶಂಸಿಸುವ ಶಾಸ್ತ್ರಗಳಿವೆ ! ವೀರ್ಯ, ಧರ್ಮರಕ್ಷಣ, ದಾನ, ಅಪಲಾಯನಗಳನ್ನು ಪ್ರಶಂಸಿಸುವ ಶಾಸ್ತ್ರಗಳೂ ಇವೆ. ಎಲ್ಲ ಶಾಸನಗಳೂ ಎಲ್ಲರಿಗೂ ಅಲ್ಲ. ನೀನು ಕ್ಷತ್ರಿಯನು! ಭಾರತನು! ದುಷ್ಟರನ್ನು ಕೊಂದು, ಪ್ರಜರಿಂದ ಕಪ್ಪವನ್ನು ಹರಿಸಿ, ಧರ್ಮದಿಂದ ಪಾಲಿಸುವುದು ನಿನಗೆ ಪಾಪವಲ್ಲ. ಪುತ್ರರಿಗೆ ರಾಜ್ಯವನ್ನಿತ್ತು, ವಾನಪ್ರಸ್ಥನಾಗಿ, ತಪ ವನ್ನು ಮಾಡುವುದು ಈಗಲ್ಲ! ಆ ಕಾಲವು ಬಂದಾಗ ಅದನ್ನು ಮಾಡುವೆಯಂತೆ!"

ಆಗ ಅರ್ಜುನನಿಂತೆಂದನು: 'ರಾಜನ್ ! ಕ್ಷಾತ್ರಧರ್ಮದಿಂದ, ರಾಜ್ಯವನ್ನು ಪಡೆದು, ಶೋಕಿಸಬಾರದು. ಕ್ಷಾತ್ರಧರ್ಮವು ಸ್ವಭಾವದಿಂದಲೇ ನಿಷ್ಠುರವಾಗಿದೆ. ಸಂಗ್ರಾಮ ಮರಣದಂತೆ ಶತ್ರುವಧೆಯೂ ಕ್ಷತ್ರಿಯನಿಗೆ ಪುಣ್ಯಪ್ರದವಾಗಿದೆ ! ಶಸ್ತ್ರನಿತ್ಯನಾದ ರಾಜನು ಸಾಯಲಿಕ್ಕು, ಕೊಲ್ಲಲಿಕ್ಕೂ ಹಿಂಜರಿಯಬಾರದು. ಯಜ್ಞ, ದಾನ, ತಪಗಳಿಂದ. ವಿಪ್ರರಿಗೆ ಬರುವ ಪುಣ್ಯವು, ಕ್ಷತ್ರಿಯನಿಗೆ ಶತ್ರುವಧೆ, ಪ್ರಜಾಪಾಲನ, ತ್ಯಾಗಗಳಿಂದ ಬರುವುದು. ಬಿಡು ನಿರರ್ಥಕ ಶೋಕವನ್ನು ! ದೈವೇಚ್ಛೆಗೆ ಬಂದುದನ್ನು ಯಾರೂ ನಿವಾರಿಸಲಾರರು.

ಆ ಮಾತಿಗೆ ಬದುಲಿಡದೆ ಸುಮ್ಮನಿದ್ದ ಧರ್ಮರಾಜನನ್ನು ಶ್ರೀವೇದವ್ಯಾಸನು ಇಂತು ಸಮಾಧಾನಪಡಿಸಿದನು: "ರಾಜನ್ ! ಭೀಮನ ಮಾತು ಸಕಲ ಪ್ರಾಜ್ಞ ಸಮ್ಮತವಾಗಿದೆ. ಅರ್ಜುನನೂ ಶಾಸ್ತ್ರಗೋಚರ ವಚನಗಳನ್ನಾಡಿರುವನು. ಗೃಹಸ್ಥ ವಿಧಿಯನ್ನು ನೀನು ಗೃಹಸ್ಥನಾಗಿರುವುದರಿಂದ ಚೆನ್ನಾಗಿ ನಡೆಸು ! ಸ್ವಧರ್ಮವಾದ ಪ್ರಜಾಪಾಲನವನ್ನು ಬಿಡಬೇಡ ! ವೇದವನ್ನೋದಿರುವೆ ! ದಿವ್ಯತಪವನ್ನು ಮಾಡಿರುವೆ!

ಧೈರ್ಯದಿಂದ ಕರ್ತವ್ಯವನ್ನು ನಿರ್ಣಯಿಸು ! ಪಿತೃಪೈತಾಮಹವಾದ ರಾಜ್ಯವನ್ನಾಳು! ರಾಜರಿಗೆ ಯಜ್ಞ, ವಿದ್ಯಾರ್ಜನೆ, ಪ್ರಯತ್ನಶೀಲತೆ, ದ್ರವ್ಯಾರ್ಜನೆ, ದಂಡಧಾರಣ, ಪ್ರಜಾಪಾಲನ, ಪಾತ್ರಪ್ರತಿಪಾದನೆ, ಮೊದಲಾದವು ಕರ್ತವ್ಯಗಳಾಗಿವೆ. ಸನ್ಯಾಸ, ಭೀತಿ, ಕಾತರ್ಯ, ಪಲಾಯನಗಳಲ್ಲ. ರಾಜಧರ್ಮಗಳಲ್ಲಿ ದುಷ್ಟಶಿಕ್ಷೆಯಷ್ಟು ಪವಿತ್ರವಾದುದಿನ್ನೊಂದಿಲ್ಲ. ದುಷ್ಟರನ್ನು ಮನ್ನಿಸುವ ರಾಜನನ್ನೂ, ಅತ್ಯಂತ ಸಂಗಿಯಾದ ವಿಪ್ರನನ್ನೂ ಭೂದೇವಿಯು ಸಹಿಸದೆ, ನುಂಗಿಬಿಡುವಳು.

ಪ್ರಜಾಪತಿಯಾದ ದಕ್ಷನಂತೆ ದಂಡಧಾರಣವನ್ನು ಮಾಡಿದ ಸುದ್ಯುಮ್ನ ರಾಜನು ಸಿದ್ಧಿಯನ್ನು ಹೊಂದಿದನು. ಬಾಹುದಾ ನದೀತೀರದ ಆಶ್ರಮಗಳಲ್ಲಿ ಶಂಖಲಿಖಿತರೆಂಬ ಸೋದರ ಮುನಿಗಳು ವಾಸಿಸಿದ್ದರು. ಅವರ ಆಶ್ರಮಗಳು ನಿತ್ಯಪುಷ್ಪ ಫಲಗಳಿಂದ ರಮಣೀಯವಾಗಿದ್ದವು. ಒಂದು ದಿನ ಲಿಖಿತನು, ಶಂಖನ ಆಶ್ರಮಕ್ಕೆ ಬಂದನು. ಆಗ ಶಂಖನು ಎಲ್ಲಿಗೋ ಹೋಗಿದ್ದನು. ಲಿಖಿತನು ಶಂಖನ ಫಲವೃಕ್ಷಗಳಿಂದ ಹಣ್ಣುಗಳನ್ನು ಕಿತ್ತು, ತಿನ್ನುತ್ತಿದ್ದನು. ಶಂಖನು ಆಶ್ರಮಕ್ಕೆ ಹಿಂದಿರುಗಿ ಬಂದಾಗ ಹಣ್ಣುಗಳನ್ನು ತಿನ್ನುತ್ತಿದ್ದ ತಮ್ಮನನ್ನು ಕಂಡನು. 'ಎಲ್ಲಿಯವೀ ಫಲಗಳೆಂ'ದ ಶಂಖನಿಗೆ, ಲಿಖಿತನು 'ಇಲ್ಲಿಯವೇ!' ಎಂದನು. ಶಂಖನು ಸಿಟ್ಟಿನಿಂದ 'ಕೇಳದೇ ಫಲವನ್ನು ತೆಗೆದುದರಿಂದ ಕಳ್ಳನಂತಾದೆ ! ರಾಜನಲ್ಲಿಗೆ ಹೋಗು! ಹೇಳು ನಡೆದುದನ್ನು! ಕಳ್ಳನಿಗೆ ಕೊಡುವ ಶಿಕ್ಷೆಯನ್ನು ಹೊಂದಿ, ಶುದ್ಧನಾಗಿ ಬಾ!' ಎಂದನು.

ಲಿಖಿತನು ಆ ದೇಶವನ್ನಾಳುವ ಸುದ್ಯುಮ್ನನ ಭವನವನ್ನು ಸೇರಿ, ದ್ವಾರಪಾಲರಿಂದ ಹೇಳಿಕಳಿಸಿದನು. ರಾಜನು ಭಯಭಕ್ತಿಗಳಿಂದ ಲಿಖಿತನನ್ನೆದುರ್ಗೊಂಡು, ಕರೆತಂದು, 'ಕೂಡೆಂ' ದನು. ವಿಪ್ರರ್ಷಿಯು ಕೂಡದೆ, ನಿಂತುಕೊಂಡೇ 'ರಾಜನ್, ನಾನು ಶಿಕ್ಷಾರ್ಥನಾಗಿ ಬಂದಿರುವೆನು. ಅಣ್ಣನ ವನವನ್ನು ಹೊಕ್ಕು, ಕೇಳದೆ, ತೆಗೆದು ಹಣ್ಣನ್ನು ತಿಂದ ಚೋರಪ್ರಾಯನಾದ ನನಗೆ ಚೋರದಂಡವನ್ನು ವಿಧಿಸು!' ಎಂದು ಬೇಡಿದನು.

ರಾಜನಾ ಮಾತನ್ನಾಲಿಸಿ, ಭೀತನಾಗಿ "ಮುನಿವರ! ದಂಡಧಾರಣ ವಿಷಯದಲ್ಲಿ ರಾಜನು ಮಾತ್ರ ಸಮರ್ಥನೆಂದು ನೀನು ತಿಳಿದಿದ್ದರೆ ಕೇಳು! ಕ್ಷಮಿಸಲು ಕೂಡ, ಅಧಿಕಾರಿಯಾಗಿರುವೆನು. ಹೇಳಿಕೊಂಡ ಪಾಪವು ನಷ್ಟವಾಯಿತು. ಪಶ್ಚಾತ್ತಾಪದಿಂದ ಶುದ್ಧನಾಗಿರುವೆ! ಇನ್ನೇಕೆ ಶಿಕ್ಷೆ?" ಎಂದನು. ಲಿಖಿತನು 'ರಾಜನ್! ಹಾಗಲ್ಲ ಕೇಳು! ಅಣ್ಣನಾಜ್ಞೆಯಂತೆ ನಡೆಯುವೆನು. ರಾಜಶಾಸನದಿಂದ ದಂಡಿತನಾಗದವನ ಪಾಪ ಕರ್ಮವು ಉಳಿದು, ಯಮಶಾಸನಕ್ಕೀಡು ಮಾಡುವುದು' ಎಂದನು. ಸುದ್ಯುಮ್ನನು ಶಿಕ್ಷಾವಿಧಿಯಂತೆ, ಲಿಖಿತನ ಕೈಗಳನ್ನು ಕಡಿಸಿ, ಕಳಿಸಿದನು.

ಲಿಖಿತನು ಶಂಖನನ್ನು ಸೇರಿ, 'ರಾಜಶಿಕ್ಷಿತನಾಗಿರುವೆನು. ನನ್ನ ಫಲಾಪಹರಣವನ್ನು ಕ್ಷಮಿಸು !' ಎಂದನು. ಶಂಖನು 'ಧರ್ಮಜ್ಞ! ನಿನ್ನ ಮೇಲಿನ ಸಿಟ್ಟಿನಿಂದ ಮಾಡಿದ ಕೆಲಸವಲ್ಲ. ಧರ್ಮವನ್ನು ಮೀರಿ ನಡೆದ ತಮ್ಮನು, ಪ್ರಾಯಶ್ಚಿತ್ತದಿಂದ ಶುದ್ಧನಾಗಿ, ನಿಷ್ಪಾಪನಾಗಲಿ ! ಎಂದು, ನಿನ್ನನ್ನು ರಾಜನಲ್ಲಿಗೆ ಕಳಿಸಿದೆನು. ಹೋಗು ! ಬಾಹುದೆಯಲ್ಲಿ

ಮಿಂದು, ದೇವ, ಋಷಿ, ಪಿತೃಗಳಿಗೆ ತರ್ಪಣವನ್ನಿತ್ತು ಬಾ !' ಎಂದನು. ಲಿಖಿತನು ನದಿಯಲ್ಲಿ ಮಿಂದು, ತರ್ಪಣವನ್ನೀಡಬೇಕೆಂದು ಚಿಂತಿಸಿದಾಗ, ಜಲಜಕೋಮಲವಾದ ಕರಗಳು ಮೂಡಿಬಂದವು. ಅವನು ವಿಸ್ಮಿತನಾಗಿ, ತರ್ಪಣವನ್ನಿತ್ತು, ಶಂಖನಲ್ಲಿಗೆ ಓಡಿಬಂದು, ಕೈಗಳನ್ನು ತೋರಿ, ವಂದಿಸಿದನು. ಶಂಖನು 'ತಮ್ಮ ! ತಪೋಬಲದಿಂದ, ನಿನ್ನ ಕರಗಳನ್ನು ಸಂಪಾದಿಸಿದೆನು. ಸುಖಿವಾಗಿರು ! ಹೋಗು !' ಎಂದನು. ಲಿಖಿತನು "ದ್ವಿಜವರ ! ಇಂತಹ ತಪಶ್ಶಾಲಿಯು, ಕರುಣಾಮಯನು ಆಗಿರುವ ನೀನು ಮೊದಲೇ ನನ್ನನ್ನೇಕೆ ಶಾಸಿಸಿ, ಪಾವನಗೊಳಿಸದೆ, ರಾಜನಲ್ಲಿಗೆ ಕಳಿಸಿದೆ ?" ಎಂದು ಕೇಳಿದನು. ಶಂಖನು 'ದಂಡಧಾರಣವು ರಾಜಕರ್ತವ್ಯವೆಂದರಿತು, ವಿಪ್ರನಾದ ನಾನು, ಹಾಗೆ ಮಾಡಿದೆನು. ದಂಡಿಸಿದ ರಾಜನೂ, ದಂಡಿಸಲ್ಪಟ್ಟ ನೀನೂ ಪಾವನರಾದಿರಿ! ನಿನ್ನನ್ನು ದಂಡಿಸದಿದ್ದ ರಾಜನು, ಇತರ ಚೋರರನ್ನೂ ದಂಡಿಸಲಾರದೆ, ಪ್ರಜರನ್ನು ರಕ್ಷಿಸಲಾರದೆ, ಪಾಪ ಭಾಜನನಾಗುತ್ತಿದ್ದನು' ಎಂದನು.

ಧರ್ಮರಾಜ! ಪಾಲಿಸಿದ ಪ್ರಜರ ಪುಣ್ಯದಂತೆ, ದಂಡಿಸಲ್ಪಡದ ದುಷ್ಟರ ಪಾಪವೂ ರಾಜನನ್ನು ಸೇರುವುದು. ದುಷ್ಟರನ್ನು ಕೊಂದು, ರಾಜನಾದ ನೀನು ದುಃಖಿಸುವುದು ತರವಲ್ಲ, ಕ್ಷತ್ರಿಯ ಧರ್ಮವೇ ಇಂತಿದೆ! ಬಹುಕಾಲದ ವನವಾಸಾದಿ ಕ್ಲೇಶದಿಂದ ನೊಂದ ನಿನ್ನ ಸೋದರ ಸತೀ ಸೇವಕರನ್ನು ಸುಖಪಡಿಸುವುದು ನಿನ್ನ ಕರ್ತವ್ಯವಲ್ಲವೇ ? ಧರ್ಮಾರ್ಥ ಕಾಮಗಳನ್ನು ಅವರಿಂದ ಕೂಡಿ ಅನುಭವಿಸು ! ಮುಂದೆ ವನವನ್ನು ಸೇರುವೆಯಂತೆ!

ಮಹಾರಾಜನು ಪ್ರಜರಿಂದ ಕಪ್ಪವಾಗಿ ಷಡಂಶದ್ರವ್ಯವನ್ನು ತೆಗೆದುಕೊಂಡು, ಅವರನ್ನು ದುಷ್ಟಬಾಧೆಯಿಂದ ರಕ್ಷಿಸದಿದ್ದರೆ, ಪ್ರಜರ ಪಾಪದ ಚತುರ್ಥಾಂಶವನ್ನೂ ಹೊಂದಿ, ನರಕಭಾಜನನಾಗುವನು. ಧರ್ಮಶಾಸ್ತ್ರದಂತೆ ದುಷ್ಟಶಾಸನವನ್ನು ಮಾಡಿದವನಿಗೆ ನರಕಭಯವಿಲ್ಲ. ಕಾಮಕ್ರೋಧಗಳಿಗೆ ಎಡೆಯಾಗದೆ, ಶಾಸ್ತ್ರಾನುಸಾರವಾದ ದುಷ್ಟಹಿಂಸೆಯು ಪಾಪವಲ್ಲ. ರಾಜನು ಪಾಪಿಗಳಿಂದ ಸ್ನೇಹಮಾಡದೆ, ಶತ್ರುವಧದಿಂದ ಹಿಂಜರಿಯದೆ, ರಾಜ್ಯವನ್ನು ಪಾಲಿಸಿ, ಪುಣ್ಯವಂತನೆನಿಸುವನು. ಶೂರರನ್ನು, ವೈಶ್ಯರನ್ನು ಯಜ್ಞನಿರತ ವಿಪ್ರರನ್ನು, ವಿದ್ವಾಂಸರನ್ನು, ಆರ್ಯಗುಣರನ್ನು ಗೌರವಿಸಿ, ಅವರು ನುಡಿದ ಮಾತಿಗೆ ಬೆಲೆಕೊಟ್ಟು, ಪಾಲಿಸುವ ರಾಜನು ಸುಖಿಸುವನು! ಅವನ ಪ್ರಜರೂ ಸುಖಿಸುವರು. ಎಷ್ಟೇ ಗುಣವಂತನಾದರೂ ಅಮಾತ್ಯನನ್ನೊಬ್ಬನನ್ನೇ ಅನುಸರಿಸದೆ, ರಾಜನು ಬಹು ವಿವೇಕಿಗಳ ಮತವನ್ನರಿತು ವರ್ತಿಸಬೇಕು. ರಾಜನು ದುರಭಿಮಾನಿಯು, ಅಸೂಯಾಪರನು, ಪ್ರಜಾರಕ್ಷಣೋದಾಸೀನನು, ದುರ್ವಿನೀತನು ಆದರೆ, ಅವನ ರಾಜ್ಯವು ಹಾಳಾಗುವುದು. ತಸ್ಕರರಿಂದ ಹಾಳಾಗಿ ನೊಂದ ಪ್ರಜರ ಗೋಳು, ರಾಜನಿಗೆ ಬಡಿಯುವುದು.

ಹಿಂದೆ ವಾಜಿಗ್ರೀವನೆಂಬ ರಾಜನಿದ್ದನು. ಶತ್ರುಗಳನ್ನೆದುರಿಸಿ, ಕಾದಿ, ಅವರನ್ನು ಸಂಹರಿಸಿದ ಹಯಗ್ರೀವ ರಾಜನು, ಬಹ ಸಂಖ್ಯಾಕರಾದ ಶತ್ರುರಾಜರ ಕೈಲಿ ಸಿಕ್ಕು

ಕೊಲ್ಲಲ್ಪಟ್ಟರೂ, ಸ್ವಧರ್ಮರತನಾದುದರಿಂದ ಸ್ವರ್ಗಲೋಕದಲ್ಲಿ ಸುಖವಾಗಿರುವನು. ಕ್ಷತ್ರಿಯರ ಯುದ್ಧಯಜ್ಞದಲ್ಲಿ ಧನುವೇ ಯೂಪವು; ಜ್ಯಾಬಂಧವೇ ಪಶುರಜ್ಜುವು; ಬಾಣವೇ ಸ್ರುಕ್ಕು; ಖಡ್ಗವೇ ಸ್ರುವವು; ರುಧೀರವೇ ಆಜ್ಯವು; ರಥವೇ ವೇದಿಯು; ಕ್ರೋಧವೀರ್ಯಗಳೇ ಅಗ್ನಿಯು; ನಾಲ್ಕು ಕುದುರೆಗಳೇ ಚಾತುರ್ಹೋತ್ರಸಮೂಹವು! ಅಂತಹ ಯಜ್ಞಕುಂಡದಲ್ಲಿ ಶತ್ರುಗಳೆಂಬ ಹವಿಸ್ಸನ್ನು ಹೋಮಿಸಿ, ರಾಜಸಿಂಹನು ಯುದ್ಧಯಜ್ಞಕರ್ತನೆನಿಸಿ, ಪಾಪಮುಕ್ತನು, ಪುಣ್ಯಯುಕ್ತನು ಆಗುವನು. ವಿದ್ವಾಂಸನು, ಶ್ರದ್ಧಾವಂತನು, ಬುದ್ಧಿವಂತನು, ಶಾಸ್ತ್ರಪ್ರಮಾಣನು, ವೇದಚತುರನು, ಚತುರ್ವರ್ಣಪಾಲಕನು, ಸಂಗ್ರಾಮವಿಕ್ರಮನು ಯಜ್ಞದಾನದಕ್ಷನು, ದುಷ್ಟಶಾಸಕನು, ಆದ ವಾಜಿಗ್ರೀವನು ಸ್ವರ್ಗದಲ್ಲಿ ಆನಂದದಿಂದಿರುವನು. ಅವನಂತೆ ಗುಣವಂತನಾಗಿರುವ ನಿನಗೇಕೆ ನಿರರ್ಥಕ ಶೋಕ?"

ವ್ಯಾಸರ ವಚನವನ್ನಾಲಿಸಿ, ಧರ್ಮಜನು ಇಂತೆಂದನು: 'ನನಗೆ ರಾಜ್ಯವು ಬೇಕಿಲ್ಲ. ಭೋಗಗಳು ಹೇಯವೆನಿಸಿವೆ. ನನ್ನ ಮನಸ್ಸರವು ದುಃಖವಿಷದಿಂದ ತುಂಬಿ ತುಳುಕುತ್ತಿದೆ. ಪತಿಪುತ್ರರನ್ನೂ ಭ್ರಾತೃಮಾತುಲರನ್ನೂ ಕಳೆದುಕೊಂಡು ಅಳುತ್ತಿರುವ ನಾರಿಯರ ಗೋಳು ನನ್ನ ಕಿವಿಗೆ ಕಟ್ಟಿದಂತಿದೆ. ನನಗೆ ಶಾಂತಿ ಎಂತು ಸಿಗುವುದು ?' ಆಗ ಶ್ರೀವ್ಯಾಸರಿಂತೆಂದರು: 'ಕಾಲಕರ್ಮ ಸಂಯೋಗದಿಂದ ಕರ್ಮಫಲಗಳು ಮನುಜರಿಗೆ ಬರುವವು. ಅವನ್ನು ಉಣ್ಣದಿರಲು ಯಾರಿಗೂ ಶಕ್ಯವಿಲ್ಲ. ಕಾಲಕ್ಕೆದುರಿಲ್ಲ. ಕಾಲವು ಭಗವದಧೀನವಾಗಿ ಕರ್ಮಫಲವನ್ನು ತಂದುಣಿಸುವಾಗ, ಎಲ್ಲರೂ ಅದನ್ನು ಅನುಭವಿಸಬೇಕಾಗುವುದು. ಕಾಲಕ್ಕೆ ಮೂರ್ಖರೆಂದು ಸಿಟ್ಟಿಲ್ಲ! ಪಂಡಿತರೆಂಬ ಅಭಿಮಾನವಿಲ್ಲ! ಕಾಲಬಲದಿಂದ ಗಾಳಿಬೀಸುವುದು! ಮಳೆಬೀಳುವುದು! ಹೂಗಳು ವಿಕಸಿಸುವವು ! ಹಣ್ಣು ಪಕ್ವವಾಗುವುದು. ಚಂದ್ರನು ಪೂರ್ಣನಾಗುವನು. ನದಿಗಳು ಹರಿವವು! ಸೂರ್ಯನು ಅಸ್ತಂಗತನಾಗುವನು! ದಿನ, ರಾತ್ರಿ, ಮಾಸ, ವರ್ಷ, ಯುಗಗಳು ಉರುಳಿಹೋಗುವವು.

ಹಿಂದೆ ಸೇನಾಜಿದ್ರಾಜನು ಇಂತು ನುಡಿದಿರುವನು : 'ಕಾಲಗತಿಯು ದುರ್ನಿವಾರವಾಗಿದೆ. ಅದು ಎಲ್ಲ ಮರ್ತ್ಯರನ್ನೂ ಎಂದೋ ಒಂದು ದಿನ ನುಂಗಿ ಬಿಡುವುದು. ರಾಜರು ಶತ್ರುಜನರನ್ನು ಕೊಂದಾಗಲೂ, ಶತ್ರುಗಳು ರಾಜನನ್ನು ಕೊಂದಾಗಲೂ ಯಾರೂ ಸ್ವತಂತ್ರಸಂಹಾಕರಲ್ಲ! ಯಾರೂ ಸ್ವತಂತ್ರಸಂಹೃತರಲ್ಲ. ಕೊಲ್ಲಲ್ಪಡುವುದಾದರೂ ಶರೀರವಾಗಲಿ, ಜೀವರಲ್ಲ! ಜೀವರು ಸ್ವರೂಪದಿಂದ ಜನನಮರಣಗಳನ್ನು ಹೊಂದರು. ಅವರು ಅನಾದಿನಿತ್ಯರು; ಸರ್ವದಾಭಗವದಧೀನರು. ಸತ್ತ ಗಂಡಂದಿರನ್ನು ಅಪ್ಪಿ ದುಃಖದಿಂದ ಅಳುತ್ತಾ, ತಲೆ ಚಚ್ಚಿಕೊಂಡು ದುಃಖವನ್ನು ಇಮ್ಮಡಿಗೊಳಿಸಿಕೊಂಬುವ ಮೂರ್ಖರಿಗೆ ದುಃಖತರಣೋಪಾಯವು ಗೊತ್ತಿಲ್ಲ. ಸತ್ತವರ ಹಿಂದೆ ಸತ್ತುಹೋಗಲು, ಅವರು ಸಿದ್ಧರಿಲ್ಲ. ಅವರ ಪ್ರಲಾಪವು ನಿರರ್ಥಕವು. ಅವರ ಶೋಕವು ಬೂಟಕವು. ಅಂತಹವರಿಗಾಗಿ ನೀನೇಕೆ ಅಳುವೆ ! ಮೂಢನಿಗೆ ಒಂದು

ದಿನದಲ್ಲಿ ಸಾವಿರ ಶೋಕಸ್ಥಾನಗಳು; ನೂರು ದುಃಖಬೀಜಗಳು; ನೂರಾರು ಹರ್ಷ ಸ್ಥಾನಗಳು. ಅವು ಪಂಡಿತನಗಿಲ್ಲ. ಸುಖದುಃಖಗಳು ರಾತ್ರಿಂದಿನಗಳಂತೆ ತಿರುಗುತ್ತಿರುವವು. ಆಶೆಯೇ ದುಃಖವು! ತೃಪ್ತಿಯೇ ಸುಖವು. ನಿತ್ಯವೂ ಸುಖವಿಲ್ಲ! ನಿತ್ಯವೂ ದುಃಖವಿಲ್ಲ. ಸುಜೀವರು ಸುಖದುಃಖಗಳಿಗೆ ಉಬ್ಬದೆ, ಕುಗ್ಗದೆ, ಸಮಚಿತ್ತರಾಗಿ, ಪರಮ ಸಂತೋಷದಿಂದಿರುವರು.

ರಾಜನ್! ಸ್ವಲ್ಪ ಕಾಲ ಪ್ರಿಯವನ್ನಾಚರಿಸದಿರುವವನಿಗೆ, ದಾರಾ ಪುತ್ರಭೃತ್ಯಾದಿಗಳಲ್ಲಿ ಯಾರು ಎಂತಹವರು? ಯಾರು ಏನಾಗಬೇಕು ತನಗೆ? ಏನು ಕಾರಣ? ಎಂಬ ವಿಷಯವು ಮನೋಗೋಚರವಾದೀತು! ಆದುದರಿಂದ ಪ್ರಾಪಂಚಿಕ ಬಂಧುತ್ವವು ಅಶಾಶ್ವತವೆಂದು ತಿಳಿದು, ಅಭಿಮಾನರಹಿತನಾಗು! ಅತಿಬುದ್ಧಿಶಾಲಿಯು ತಿಳಿದು ನಿಶ್ಚಿಂತನಾಗಿರುವನು. ಅತಿಮೂಢನು ತಿಳಿಯದೆ ನಿಶ್ಚಿಂತನಾಗಿರುವನು. ಮಧ್ಯಮನು ತಿಳಿದೂ ತಿಳಿಯದವನಾಗಿ ದುಃಖಪಡುವನು. ದುಃಖವು ಅಜ್ಞಾನಮೂಲವಾಗಿದೆ; ದುಃಖಪಡುವುದರಿಂದ ಪರದುಃಖವು ನಾಶವಾಗದು. ಕಾಲಪ್ರಾಪ್ತವಾದ ದುಃಖಕ್ಕೆ ಔಷಧವೆಂದರೆ ಪರಾಪರತತ್ವ ವಿವೇಕವೇ; ಮತ್ತೊಂದಲ್ಲ. ಯುದ್ಧ, ವಿಜಯ, ದಂಡಧಾರಣಗಳು ರಾಜರಿಗೆ ಸ್ವಧರ್ಮವಾಗಿವೆ. ಅಲ್ಲಿ ನಡೆವ ಹಿಂಸೆಯು ಅನಿವಾರ್ಯವಾಗಿದೆ. ಅದಕ್ಕೆ ಪರಿಹಾರವೆಂದರೆ ಯಜ್ಞದಾನಗಳೇ! ಅವನ್ನು ಮಾಡು! ನಿಶ್ಚಿಂತನಾಗಿ, ರಾಜ್ಯವನ್ನಾಳು!'

ಆಗ ಧರ್ಮರಾಜನು, 'ಅರ್ಜುನ! ಧನವೇ ಪ್ರಧಾನವೆಂದೆ! ನಿರ್ಧನನಿಗೆ ಸುಖವಿಲ್ಲ ಸ್ವರ್ಗವಿಲ್ಲವೆಂದೆ! ಆ ಮಾತನ್ನು ನಾನೊಪ್ಪಲಾರೆನು. ನಿರ್ಧನಿಗಳಾದ ಮುನಿಗಳು ವೇದಾಧ್ಯಯನ ಯಜ್ಞತಪೋನಿರತರಾಗಿ ಪುಣ್ಯಲೋಕಗಳನ್ನು ಹೊಂದಿಲ್ಲವೇ? ವಿಪ್ರರು ಪ್ರಾಯಃ ನಿರ್ಧನರು! ಅವರಿಗೆ ಪುಣ್ಯಲೋಕಗಳಿಲ್ಲ ವೆನ್ನಬಹುದೇ? ಹಾಗಲ್ಲ! ವೈಖಾನಸರು ಜ್ಞಾನನಿಷ್ಠರು. ಅರುಣಾದಿ ತಪೋನಿಧಿಗಳು ವೇದವನ್ನೋದಿ, ತಿಳಿದು, ಸ್ವರ್ಗವನ್ನು ಸೇರಿರುವರು. ಅವರ ಉತ್ತಮಗತಿಗೆ ಕಾರಣವಾದುದು ತೃಪ್ತಿ! ತೃಪ್ತಿಗೆ ಧನವು ಬಲುದೂರವು! ತೃಪ್ತಿಯಿಂದಲೇ ಸ್ವರ್ಗ; ತೃಪ್ತಿಯಿಂದಲೇ ಸುಖ! ಅರ್ಥವು ಕ್ರೋಧಹರ್ಷಗಳಿಂದ ಕೂಡಿದೆ. ಅದು ವಾಂಛನೀಯವಲ್ಲ. ಇಚ್ಛಾದ್ವೇಷಗಳನ್ನು ಬಿಟ್ಟು, ಕೂರ್ಮವು ತನ್ನ ಅಂಗಗಳನ್ನಂತೆ, ಅನಾಯಾಸವಾಗಿ ಇಂದ್ರಿಯಗಳನ್ನು ನಿಗ್ರಹಿಸಿ, ಭೂತದ್ರೋಹವನ್ನು ಬಿಟ್ಟವನು ಬ್ರಹ್ಮಜ್ಞಾನವನ್ನು ಹೊಂದಿ, ಮುಕ್ತನಾಗುವನು. ಅಲ್ಪ ಧನಕ್ಕಾಗಿ ಆಶೆಪಟ್ಟು, ಭೂತ ದ್ರೋಹವನ್ನೆಸಗಿದವನು ಮಹಾಪಾಪಿ ಎನಿಸುವನು.

ಮೂರು ವರ್ಷಗಳಿಗಾಗುವಷ್ಟು ಬೆಳೆ ಬಂದರೆ, ಅದನ್ನು ಸೋಮಯಾಗದಲ್ಲಿ ವೆಚ್ಚಿಸಬೇಕು! ಒಂದು ವರ್ಷಕ್ಕಾಗುವಂತೆ ಬೆಳೆ ಬಂದರೆ, ಅದನ್ನು ಅತಿಥಿಪರಿವಾರ ಗಳಿಗಾಗಿ ವೆಚ್ಚಿಸಬೇಕು. ಅಂದಮೇಲೆ ಧಾನ್ಯಾದಿ ಅರ್ಥವು ತನ್ನದಲ್ಲ; ದೇವತೆಗಳದೆಂದು ತಿಳಿದು ಬರುವುದಿಲ್ಲವೇ? ಬ್ರಹ್ಮದೇವನು ಮನುಜರಿಗೆ ಯಜ್ಞತಪೋದಾನಗಳಲ್ಲಿ

ವಿತ್ತವ್ಯಯವನ್ನೂ ದೇವತೆಗಳಿಗೆ ವರ್ಷ ವಾಯು ಶೀತಾತಪದಾನದಿಂದ ಮನುಜ ಪೋಷಣವನ್ನೂ ವಿಧಿಸಿರುವನು. ಅರ್ಥವು ದಾನಕ್ಕಾಗಿ ವಿನಿಯೋಗಿಸುವುದರಲ್ಲಿಯೂ ಮನುಜನು ಎಚ್ಚರದಿಂದಿರಬೇಕು. ಅನರ್ಹರಿಗೆ ಕೊಟ್ಟು, ಅರ್ಹರಿಗೆ ಕೊಡದೆ ಮನುಜನು ಅರ್ಥದಿಂದ ಪಾಪವನ್ನೇ ಸಂಪಾದಿಸುವನು. ಇಂತಹ ಅರ್ಥವು ನನಗೆ ಬೇಡವಾಗಿದೆ.

ಅರ್ಥವಾರಿಗೋಸ್ಕರವೆಂದು ಸಂಪಾದಿಸಿದೆವೋ, ಅಂತಹ ಬಂಧುಗಳೆಲ್ಲರು ಹತರಾದರು. ಇನ್ನೇಕೆ ನಮಗೆ ರಾಜ್ಯಧನಗಳು? ಅಭಿಮನ್ಯು ದ್ರೌಪದೇಯರು, ವಿರಾಟ, ದ್ರುಪ, ಧೃಷ್ಟದ್ಯುಮ್ನ, ಯುಧಾಮನ್ಯೂತ್ತಮೌಜರು, ಎಲ್ಲ ಹಿತವರಿಗಿಲ್ಲದೆ ಹೋದ ಅರ್ಥವೆಮಗೇಕೆ? ರಾಜ್ಯಕಾಮುಕನಾಗಿ, ಅತ್ಯುಗ್ರ ಮಾರಣ ಕರ್ಮವನ್ನು ಮಾಡಿ ನೊಂದಿರುವೆನು. ಶಿಖಂಡಿಯನ್ನು ಮುಂದಿಟ್ಟು, ಭೀಷ್ಮರನ್ನು ಕೊಂದೆವು. ತಾತನು ಎತ್ತಿ, ಹೊತ್ತು, ಲಾಲಿಸಿ, ಪಾಲಿಸಿದುದಕ್ಕೆ, ನಾವಿತ್ತ ಸೇವಾನಿಧಿಯಿದು! ಎಂತಹ ಕೃತಘ್ನರಾದೆವು ! ಮಗನು ಸತ್ತನೆಂದು ಸುಳ್ಳುನುಡಿದು ಆಚಾರ್ಯನನ್ನು ಕೊಂದೆವು! ಎಂತಹ ಮೋಸ ! ಅಭಿಮನ್ಯುವಿನನ್ನು ಸಿಂಹಗಳ ಗುಹೆಯಲ್ಲಿ ಮದ್ದಾನೆಯನ್ನಂತೆ ನಾನೇ ಕುರುವೀರವ್ಯೂಹದಲ್ಲಿ ಹೊಗಿಸಿ ಕೊಲ್ಲಿಸಿದೆನು. ಎಂತಹ ರಾಜ್ಯಲೋಭ! ಬೇಡ ನನಗೆ ರಾಜ್ಯ! ಚಿಂತಾಗ್ನಿಯಲ್ಲಿ ಬೆಂದು ಸಾಯುವುದೇ ನನಗೆ ಈಗ ಉಳಿದಿರುವ ಮಾರ್ಗ ! ಪ್ರಾಯೋಪವೇಶಗೈದು ಪ್ರಾಣಗಳನ್ನು ಬಿಡಲು ನಿಶ್ಚಯಿಸಿರುವೆನು. ನೀವೆಲ್ಲರೂ ಸುಖವಾಗಿರಿ! ಹೊರಡಿ ಇಲ್ಲಿಂದ!'

ಇಂತು ಬಂಧುಶೋಕ ವಿಹ್ವಲನಾಗಿ ಕೂತ ಧರ್ಮರಾಜನನ್ನು ಸಮಾಧಾನ ಪಡಿಸುತ್ತಾ, ಶ್ರೀವ್ಯಾಸರಿಂತೆಂದನು: "ರಾಜನ್! ಶೋಕವಿಹ್ವಲನಾಗಬೇಡ! ಇದು ನಿನಗೆ ತರವಲ್ಲ. ಭೀಷ್ಮದ್ರೋಣಾದಿಗಳು ತಾವು ಪಾಪಿಪಕ್ಷದಲ್ಲಿರುವುದನ್ನು ತಿಳಿದು, ಪಶ್ಚಾತ್ತಾಪಪಟ್ಟು, ನಿತ್ಯವೂ ನಿಮ್ಮ ವಿಜಯಕ್ಕಾಗಿ ಪ್ರಾರ್ಥಿಸುತ್ತಿದ್ದರು. ಅಂತೆಯೇ ಅವರೇ ತಮ್ಮ ವಧೆಯ ಉಪಾಯವನ್ನು ನಿನಗೆ ತಿಳಿಸಿದರು. ಅವರಿಗೆ ನಿಮ್ಮಲ್ಲಿ ದ್ವೇಷಕೋಪಗಳಿಲ್ಲ. ನಿಮ್ಮ ಜಯಕ್ಕಾಗಿ ಸಂತೋಷಪಟ್ಟಿರುವ ಸುಜನರೆಲ್ಲರ ಪ್ರತಿನಿಧಿಯಾಗಿರುವ ಭೀಷ್ಮಪಿತಾಮಹನಿಂದಲೇ, ನಿನ್ನ ನಿರ್ದೋಷಿತ್ವವನ್ನು ನೀನು ತಿಳಿಯಬಹುದಾಗಿದೆ. ರಾಜನ್ ! ಇನ್ನುಳಿದವರು ಕಾಲಾಧೀನರಾದರು. ಜನನಮರಣಗಳಂತೆ, ಸಂಯೋಗ ವಿಯೋಗಗಳೂ ದೈವಾಧೀನವಾಗಿದೆ. ಎಲ್ಲರೂ ಒಂದೇ ದಿನ ಬಂದವರಲ್ಲ; ಒಂದೇ ದಿನ ಹೋಗುವವರಲ್ಲ. ದೇಹಬಾಂಧವರು ಬೇರೆ ! ಜೀವಬಾಂಧವರು ಬೇರೆ ! ಗುರು ದೇವ ಋಷಿಗಳು ಜೀವಬಾಂಧವರು. ಅವರು ನುಡಿದಂತೆ ನಡೆದಿರುವೆ ! ನಾರಾಯಣ ದ್ವೇಷಿ ದುರ್ಯೋಧನನಿಗಾಗಿ, ಕಾದಿದವರೂ ಪಾಪಿಗಳೇ ! ಅವರನ್ನು ಎಂತು ಕೊಂದರೂ, ಕ್ಷತ್ರಿಯರಿಗೆ ಪಾಪವಿಲ್ಲ. ನಿನ್ನಲ್ಲಿರುವ ಪಕ್ಷಪಾತದಿಂದ ನಾವು ನುಡಿಯುವವರಲ್ಲ. ಧರ್ಮವನ್ನು ಶಾಸ್ತ್ರದಂತೆ ತಿಳಿದು ಹೇಳುವ ಬಲುಸುಜನರ ಮಾತಿನಿಂದ ನೀನು ನಿರ್ದೋಷಿ ಎಂದೇ ತಿಳಿ ! ಕೃಷ್ಣಾದಿಗಳ ವಚನವನ್ನು ಔಪಚಾರಿಕವೆಂದು ತಿರಸ್ಕರಿಸಿ ನಡೆಯುವುದು ನಿನಗೆ

ತರವಲ್ಲ. ರಾಜ್ಯಧನಗಳನ್ನು ಪ್ರಜಾವಿಪ್ರರಿಗಾಗಿ ವಿನಿಯೋಗಿಸು ! ಕ್ಷತ್ರಿಯನಾಗಿ ಹುಟ್ಟಿರುವೆ! ದೇವನು ಹುಟ್ಟಿಸಿದಂತೆ ವರ್ತಿಸು! ವಿಪ್ರರಂತಲ್ಲ. ಅವಧೂತರಂತಲ್ಲ! ನಾಸ್ತಿಕರಂತಲ್ಲ.

ಹಿಂದೆ ವಿದೇಹರಾಜನು ದುಃಖಶೋಕತಪ್ತನಾಗಿ, ಅಶ್ಮಕನನ್ನು 'ವಿಪ್ರವರ ! ಸುಖದುಃಖಾದಿಗಳನ್ನು ನರನು ಎಂತು ಸ್ವೀಕರಿಸಬೇಕು? ಅವನಿಗೆ ಶ್ರೇಯಸ್ಸಾಗುವುದೆಂತು?' ಎಂದು ಕೇಳಿದನು. ಅಶ್ಮಕನಿಂತೆಂದನು: 'ರಾಜನ್! ನರನು ಮೊದಲು ಹುಟ್ಟುವನು. ಅವನ ಹಿಂದೇ ಅವನ ಕರ್ಮಾನುಸಾರವಾದ ಸುಖದುಃಖಗಳೂ ಬರುವವು. ಅವು ಕಾಲವು ಬಂದಾಗ ಫಲವನ್ನು ಕೊಡುವವು. ಹುಟ್ಟಿದ ಕೂಡಲೇ ದೇಹಾಭಿಮಾನವೂ ಬರುವುದು. ತಾನು ದೊಡ್ಡವನು ಪಂಡಿತನು ಮಹಾ ಕುಲೀನನು ಧನಾಢ್ಯನು ತಾನು ದೇವಾಂಶನಿರಬೇಕು. ದೇವನೇ ಅಹುದೆಂಬ ದುರಹಂಕಾರದಿಂದ ಉನ್ಮತ್ತನಾದವನು ತನ್ನ ಧನವನ್ನು ದುಂದುಗಾರಿಕೆಯಿಂದ ಕಳೆದುಕೊಂಡು, ಪರಧನಕ್ಕೆಂದು ಹರಿದಾಡುವನು. ಪರರನ್ನು ಹಿಂಸಿಸುವನು. ಅಂತಹ ದುಷ್ಟರನ್ನು ಹತ್ತಿಕ್ಕಲು ರಾಜನೇ ಸಮರ್ಥನು. ರಾಜನು ಅವಧೂತನಂತೆ ಸಾಯಲು ಕೂತರೆ, ದುಷ್ಟರ ಉಪಟಳವು ಹೆಚ್ಚಾಗಿ, ಲೋಕವು ಹಾಳಾದೀತು. ಅದರಿಂದ ಬರುವ ಪಾಪವು ಪ್ರಜಾರಕ್ಷಣ ದುಷ್ಟಶಿಕ್ಷಣಗಳನ್ನು ಮಾಡದ ರಾಜನನ್ನು ಸೇರುವುದು. ಕೆಲವು ದುಃಖಗಳು ವಿಷಯ ತೃಷೆಯಿಂದ ಬರುವವು. ಕೆಲವು ಜರಾಮರಣಗಳಿಂದ ಬರುವವು. ಕರ್ಮಾನುರೂಪನಾಗಿ ಬರುವ ಸುಖದುಃಖಾದಿಗಳಿಂದ ತಪ್ಪಿಸಿಕೊಳ್ಳಲಾಗದು.

ಸಾಗರಪರ್ಯಂತವಾದ ವಸುಂಧರೆಯನ್ನು ಗೆದ್ದು ಆಳಿದ ಸಾರ್ವಭೌಮರಿಗೂ ಸಾವು ತಪ್ಪಿಲ್ಲ. ಮುಪ್ಪನ್ನಪ್ಪಿ ಸಾವನ್ನಪ್ಪುವರೆಂದು ತಿಳಿಯಬೇಡ! ಯುವಕರು ಬಾಲಕರು ಕೂಡ ಸಾಯುತ್ತಿರುವರು. ಅವರ ಕಾಮಿತವಸ್ತುಗಳು ಮಾತ್ರ ಅವರ ಹಿಂದೆ ಹೋಗದೇ ಇಲ್ಲೇ ಉಳಿಯುವವು. ಪ್ರಿಯವಿಯೋಗವು ಅಪ್ರಿಯಸಂಯೋಗವು ಅದೃಷ್ಟಾಧೀನವಾಗಿದೆ. ವಿಧಿಗೆದುರಿಲ್ಲ. ವಿಧಿಯು ಗಂಧವರ್ಣ ರಸಸ್ಪರ್ಶಶಕ್ತಿಗಳನ್ನು ಕಳೆದು ಫಲಗಳನ್ನಂತೆ, ಶರೀರಗಳನ್ನು ನುಂಗಿಬಿಡುವುದು. ಕಾಲದಿಂದ ಬರುವ ಆಸನ, ಶಯನ, ಉತ್ಥಾನ, ಭೋಜನಗಳು ಕೂಡ ವಿಧಿದತ್ತವಾಗಿದೆ. ವಿಧಿವಿಲಾಸವು ವಿಚಿತ್ರವಾಗಿದೆ.

ವೈದ್ಯರು ರೋಗದಿಂದ ನರಳುತ್ತಿದ್ದಾರೆ. ಬಲವಂತರು ದುರ್ಬಲರಾಗುತ್ತಾರೆ. ಶ್ರೀಮಂತರು ಷಂಡರಾಗಿದ್ದಾರೆ. ದರಿದ್ರರಿಗೆ ಬಹುಸಂತಾನವಿದೆ. ಬೇಕೆಂಬ ಧನಿಕರಿಗೆ ಮಕ್ಕಳಿಲ್ಲ. ಬದುಕು ಬೇಕೆಂಬವರಿಗೆ ವ್ಯಾಧಿ, ಅಗ್ನಿ, ಜಲ, ಶಸ್ತ್ರ, ಹಸಿವೆ, ವ್ಯಾಘ್ರಾದಿ ಮೃಗಗಳು, ವಿಷ, ಜ್ವರಗಳು ಮರಣಾಪಾದಕವಾಗಿದೆ. ಸಾಯಬೇಕೆಂಬವರಿಗೆ ದೀರ್ಘಜೀವನದಲ್ಲಿ ಬೇಜಾರಾಗಿದೆ. ಶ್ರೀಮಂತರಿಗೆ ಜೀರ್ಣಶಕ್ತಿ ಇಲ್ಲ. ದರಿದ್ರರಿಗೆ ಕೊಳ್ಳುವ ಶಕ್ತಿಯಿಲ್ಲ. ಬಹುಶ್ರುತರು ಮೃಗಯಾ, ದ್ಯೂತ, ಪಾನ, ವೇಶ್ಯಾ, ವಿವಾದಗಳಲ್ಲಿ ರತರಾಗಿ ದಡ್ಡರಂತಿದ್ದಾರೆ. ಇದೆಲ್ಲವೂ ಅದೃಷ್ಟಪ್ರೇರಕನಾದ ಕಾಲನಾಮಕ

ಹರಿಮಹಿಮೆ ಎಂದಲ್ಲದೆ ಬೇರೆ ಕಾರಣವಿಲ್ಲ. ವಾಯು, ಆಕಾಶ, ಅಗ್ನಿ, ಚಂದ್ರ, ಸೂರ್ಯರನ್ನೂ, ಅಹೋರಾತ್ರಗಳನ್ನೂ ನಿರ್ಮಿಸಿರುವನು. ಅವುಗಳಿಂದಂತೆ, ಸುಖದುಃಖಗಳಿಂದಲೂ ತಪ್ಪಿಸಿಕೊಳ್ಳಲಾಗದು. ಶೀತೋಷ್ಣವಾತವರ್ಷಗಳಂತೆ, ಕಾಲದಲ್ಲಿ ಸುಖದುಃಖಗಳೂ ಬರುವವು. ಔಷಧ, ಮಂತ್ರ, ಜಪ, ಹೋಮಗಳಿಂದ ಕಾಲಮೃತ್ಯುವು ದೂರವಾಗದು. ಸತ್ತಮೇಲೆ ಯಾರು, ಯಾರಿಗೆ ಎಂತಹ ಬಂಧುಗಳೆಂದು ಗೊತ್ತಾಗುವುದು. ತಂದೆ, ತಾಯಿ, ಅಣ್ಣ ಭಾವ, ಮಗ, ಸೊಸೆ ಇವರೆಲ್ಲರೂ ಜೀವನಮಾರ್ಗದಲ್ಲಿ ಬಂದು ಸೇರಿದ ಪಾಂಥರು! ಅವರು ಎಂದು ಯಾರನ್ನು ಎಂತು ಬಿಟ್ಟುಹೋಗುವರೋ ಕಾಲನಿಗೇ ಗೊತ್ತು.

ಪರಲೋಕವು ಪ್ರತ್ಯಕ್ಷಸಿದ್ಧವಲ್ಲ! ಆದರೂ ಸ್ವರ್ಗನರಕಗಳಿವೆಯೆಂದು ಆಗಮಶಾಸ್ತ್ರಗಳಿಂದ ತಿಳಿಯಬೇಕು. ಪಿತೃ ದೇವರ ಕಾರ್ಯಗಳನ್ನು ಮಾಡಬೇಕು. ಯಜ್ಞಗಳನ್ನು ನಡೆಸಬೇಕು. ಧರ್ಮಾರ್ಥಕಾಮಗಳನ್ನು ಸಂಪಾದಿಸಬೇಕು. ರಸಾಯನಗಳನ್ನು ಕುಡಿದವರೂ ಮುಪ್ಪಿಗೆ ಸಿಕ್ಕು ನರಳುವುದನ್ನು ನೋಡಿ, ಕಳೆದ ದಿನ ರಾತ್ರಿ ಕ್ಷಣಗಳು ತಿರುಗಿ ಬರುವುದಿಲ್ಲವೆಂದರಿತು, ಬುದ್ಧಿವಂತನು ಶ್ರೀಹರಿ ಸೇವಾನಿರತನಾಗ ಬೇಕು. ದೇಹದಿಂದ ದೇಹವು ಹುಟ್ಟಿದಾಗ ಜೀವನು ಅದರಲ್ಲಿ ಸೇರುತ್ತಾನೆ. ಆ ದೇಹದ ನೆವದಿಂದ ದಾರಾಪುತ್ರಾದಿಗಳೂ ಬರುವರು. ಅವರೆಲ್ಲರೊಂದೇ ದಿನ ಬಂದಿಲ್ಲ. ಒಂದೇ ದಿನ ಕೂಡಿಹೋಗುವುದಿಲ್ಲ. ತನ್ನ ಶರೀರವೇ ತನ್ನೊಡನೆ ಬಾರದೆಂದ ಮೇಲೆ, ಇತರ ಬಂಧುಗಳು ಬಾರರೆಂದು ಹೇಳಬೇಕೇ? ವಿದೇಹರಾಜ! ನಿಮ್ಮ ತಾತನೀಗ ಎಲ್ಲಿರುವನು? ತಂದೆ ಏನಾಗಿರುವನು? ಅವರನ್ನು ನೀನು ಕಾಣಲಾರದಂತೆ, ಅವರೂ ನಿನ್ನನ್ನು ಕಾಣದಿರುವರು. ಶಾಸ್ತ್ರಚಕ್ಷುವಾಗಿ ವಿಹಿತ ಧರ್ಮದಿಂದ ನಡೆ! ನಿನ್ನ ಪುಣ್ಯವೇ ನಿನ್ನ ಹಿಂದೆ ಬರುವುದು. ದೇವ, ಋಷಿ, ಪಿತೃ ಋಣಗಳನ್ನು, ಯಜ್ಞ, ವೇದಾಧ್ಯಯನ, ಶ್ರಾದ್ಧಗಳಿಂದಲು, ನರಭೂತಋಣಗಳನ್ನು, ಪ್ರಜಾಪಾಲನ, ದಾನಗಳಿಂದಲು ಕಳೆದುಕೊಂಡು, ದೇವನಿತ್ತ ಜಾತಿ, ವರ್ಣ ಆಶ್ರಮಗಳಿಗೆ ತಕ್ಕಂತೆ ನಡೆ! ಸಂಸಾರದ ಹಾದಿಯು ಹಾವಿನಂತೆ ಮಲಗಿದೆ. ಎಚ್ಚರದಿಂದ ನಡೆ! ಯಜ್ಞಶೀಲನಾಗು! ಪ್ರಜರನ್ನು ರಕ್ಷಿಸು! ವೇದವನ್ನೋದು! ಇಹಪರಲೋಕ ಸುಖಗಳೆರಡೂ ನಿನ್ನವಾಗುವವು ಎಂದು ಅಶ್ಮಕನು ಪೇಳಲು, ಕೇಳಿ, ವಿದೇಹರಾಜನು ಸಮಚಿತ್ತನಾಗಿ, ಮುನಿಯನ್ನು ಪೂಜಿಸಿ, ಕಳಿಸಿದನು. ಧರ್ಮರಾಜ! ನೀನೂ ವಿದೇಹರಾಜನಂತೆ ಧರ್ಮಾತ್ಮನಿರುವೆ! ಕ್ಷಾತ್ರಧರ್ಮದಲ್ಲಿ ನಡೆದು, ಅಧರ್ಮವನ್ನು ತುಳಿದು, ಹರಿಸೇವೆಗೈದಿರುವೆ! ಸುಮ್ಮನೆ ವ್ಯಸನವಶನಾಗಬೇಡ! ರಾಜ್ಯಭೋಗಗಳನ್ನು ಹರಿಗರ್ಪಿಸಿ, ಅನುಭವಿಸು!'

ಇಂತು ನುಡಿದ ಶ್ರೀವ್ಯಾಸರ ವಚನವನ್ನಾಲಿಸಿ, ಶೋಕಕ್ಕೆ ಸರಿಯಾದ ಕಾರಣವಿಲ್ಲವೆಂದರಿತೂ, ಧರ್ಮರಾಜನು ಸುಮ್ಮನಿದ್ದನು. ಆಗ ಅರ್ಜುನನು 'ಶ್ರೀಕೃಷ್ಣ! ನಮ್ಮಣ್ಣನ ಶೋಕಭರವನ್ನು ಕಂಡು, ನಮಗೂ ಅಧರ್ಮದ ಶಂಕೆ

ಬರುವಂತಾದೀತು ! ನೀನು ಅವನ ಶೋಕವನ್ನು ಕಳೆದು, ನಿನ್ನ ಅಮೃತವಚನಗಳಿಂದ ಸಂತೈಸು!' ಎಂದು ಶ್ರೀಕೃಷ್ಣನನ್ನು ಬೇಡಿದನು. ಆಗ ಶ್ರೀಕೃಷ್ಣನು ನಗುತ್ತಾ ಧರ್ಮರಾಜನ ಕಡೆ ತಿರುಗಿ, ಆತನ ಚಂದನರೂಷಿತವಾದ ಭುಜಾದಂಡವನ್ನು ಕೈಯಿಂದ ಪಿಡಿದು, ಸೂರ್ಯೋದಯದಲ್ಲಿ ವಿಕಸಿತವಾಗುವ ಶರತ್ಪಂಕಜದಂತೆ ಸುಂದರನಾದ ವದನಾರವಿಂದದಿಂದ, ಮಂದಹಾಸಮಧುವನ್ನು ಬೀರುತ್ತಾ ಇಂತು ನುಡಿದನು.

## ೫. ಶ್ರೀಕೃಷ್ಣವ್ಯಾಸ ವಚನ

ಶ್ರೀಕೃಷ್ಣನಿಂತೆಂದನು: " ಧರ್ಮರಾಜ! ಶೋಕವನ್ನು ಬಿಡು ! ಸತ್ತವರೆಂದಿಗೂ ಹಿಂದಿರುಗರು. ಗಾತ್ರಶೋಷಣದಕಿಂತ ರೋದಿಸಿ, ಹೆಚ್ಚೇನೂ ಸಾಧಿಸಲಾರೆ ! ರಣಾಭಿಮುಖರಾಗಿ, ಕಾದಿ ಮಡಿದ ಶೂರರು ಸ್ವರ್ಗದಲ್ಲಿ ಸುಖವಾಗಿರುವರು. ಆ ಮಹಾನುಭಾವರಿಗಾಗಿ, ನೀನೇಕೆ ಶೋಕಿಸುವೆ? ಹಿಂದೆ ಸೃಂಜಯನೆಂಬ ರಾಜನಿದ್ದನು. ಅವನ ಸುತನು ಸತ್ತನು. ಆಗ ಸುಮ್ಮನೆ ಬಿಡದೆ ಅಳುತ್ತಿದ್ದ ಸೃಂಜಯನಿಗೆ ನಾರದನಿಂತು ಉಪದೇಶಿಸಿದನು :

'ಸೃಂಜಯ ! ಸತ್ತರೆ ಮಾತ್ರ ಸುಖದುಃಖಗಳು ಕೊನೆಗಾಣುವವೆಂದು ತಿಳಿಯಬೇಡ ! ಪ್ರತಿ ಶರೀರದಲ್ಲಿಯೂ, ಸತ್ತಮೇಲೆಯೂ ಸ್ವರ್ಗನರಕಾದಿ ಸುಖದುಃಖಗಳಿದ್ದೇ ಇರುವವು. ಮುಕ್ತಿಪರ್ಯಂತವೂ ಜನನಮರಣಗಳು ಬೆಂಬಿಡವು. ಸಂಸಾರದಲ್ಲಿ ಸುಖದುಃಖ ಪರಿಹಾರವೆಂದರೆ ಅಭಿಮಾನ ತ್ಯಾಗವೇ; ಸುಖದುಃಖ ನಾಶವಲ್ಲ. ಸುಖದುಃಖಗಳಿಂದ ಆಗುವ ಮನೋವಿಕಾರಗಳನ್ನು ತಡೆದು ನಿರ್ವಿಕಾರನಾಗಿ ಇರುವುದೇ ಮುಕ್ತಿ ಸಮಸುಖವು. ಅದನ್ನು ಹೊಂದಿದವನೆಲ್ಲಿದ್ದರೇನು ! ಅವನ ಮನವು ಸುಖದುಃಖ ಸ್ವಾಮಿಯಾದ ಶ್ರೀಹರಿ ದರ್ಶನದಿಂದ ನಿಷ್ಪಾಪವಾಗಿರುವುದು. ಎಂತೆಂತಹವರೋ ಸತ್ತಿರುವರು; ಅವರಿಗಾಗಿ ಅತ್ತವರೂ ಉಳಿದಿಲ್ಲ.

ಆವೀಕ್ಷಿತ ಮರುದ್ರಾಜನನ್ನು ಕೇಳದವರಿಲ್ಲ. ಅವನ ಯಜ್ಞದಲ್ಲಿ ಇಂದ್ರಾದಿ ದೇವತೆಗಳು ಪ್ರತ್ಯಕ್ಷವಾಗಿ ಬಂದು ನಿಂತರು. ವಿಶ್ವದೇವತೆಗಳು ಸಭಾಸದರಾದರು. ಬೃಹಸ್ಪತಿ ಸಂವರ್ತರು ಋತ್ವಿಜರಾದರು. ಮರುದ್ದೇವತೆಗಳು ಬಡಿಸಿದರು. ಬೇಕಾದಷ್ಟು ದಕ್ಷಿಣೆ ಹೊನ್ನಿನ ಹೊಳೆಯಾಗಿ ಹರಿಯಿತು. ಅಂತಹ ಆವೀಕ್ಷಿತನೇ ಮೃತನಾದನು. ಇನ್ನು ನಿನ್ನ ಮಗನ ಮೃತಿಗಾಗಿ ಏಕೆ ಅಳುವೆ? ಧರ್ಮಜ್ಞಾನ ವೈರಾಗ್ಯೈಶ್ವರ್ಯಗಳೆಂಬ ನಾಲ್ಕು ಶುಭಗಳಿಂದ ನಿನಕಿಂತಲೂ ಹೆಚ್ಚಾದ ಮಹನೀಯರೆಷ್ಟೋ ಜನ ಸತ್ತುಹೋದರು. ನಿನ್ನ ಪಾಡೇನು ?

ಸುಹೋತ್ರನಾದ ಅತಿಥಿ ಎಂಬ ಚಕ್ರವರ್ತಿಯು ಕುರುಜಾಂಗಲದಲ್ಲಿದ್ದನು. ಅವನ ರಾಜ್ಯದಲ್ಲಿ ಬಂಗಾರದ ಮಳೆ ಕರೆಯಿತು. ಅದನ್ನೆಲ್ಲ ಅವನು ವಿಪ್ರರಿಗೆ ದಾನ ಮಾಡಿದನು. ಯಜ್ಞಗಳನ್ನೆಷ್ಟೋ ಮಾಡಿ, ಇಂದ್ರಾದಿ ವೃಂದಾರಕರನ್ನು ಆನಂದಪಡಿಸಿದನು. ನಿನ್ನ ಮಗನು ಯಜ್ಞಕರ್ತನೂ ಅಲ್ಲ; ದಾನೋದಾರನೂ ಅಲ್ಲ. ಅವನಿಗಾಗಿ ನೀನೇಕೆ ಅಳುವೆ?

ಅಂಗರಾಜನಾದ ಬೃಹದ್ರಥನೂ ಸತ್ತಿರುವನು. ಅವನು ಸಾವಿರ ಕುದುರೆಗಳನ್ನು ಸಾವಿರ ಆನೆಗಳನ್ನೂ, ಸಾವಿರ ಕನ್ಯೆಯರನ್ನೂ, ಯಜ್ಞದಕ್ಷಿಣೆಯಾಗಿ ಕೊಟ್ಟನು. ಅವನಿತ್ತ ಸೋಮರಸದಿಂದ ಇಂದ್ರನೂ, ದಕ್ಷಿಣೆಗಳಿಂದ ವಿಪ್ರರೂ ಪ್ರಮೋದಭರಿತರಾದರು. ಸೃಂಜಯ ! ಅಂಥವನೇ ಸತ್ತನೆಂದ ಮೇಲೆ, ನಿನ್ನ ಕ್ಷುದ್ರಸುತನಿಗಾಗಿ ಏಕೆ ಶೋಕಿಸುವೆ? ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ, ಷೋಡಶೀ, ವಾಜಪೇಯ, ಅತಿರಾತ್ರ, ಉಪ್ತೋರ್ಯಾಮ ಎಂಬ ಏಳುಸೋಮ ಸಂಸ್ಥೆಗಳಲ್ಲಿ ಮಹಾದಾನ ಮಾಡಿದ ಅಂಗನೇ ಈಗಿಲ್ಲ. ನಿನ್ನ ಸುತನಿಗೇಕೆ ಶೋಕ?

ಔಶೀನರ ಶಿಬಿರಾಜನು ಭೂಚಕ್ರವನ್ನು ಗೆದ್ದು ಏಕಚ್ಛತ್ರಾಧಿಪತಿಯಾದನು. ಯಜ್ಞಗಳನ್ನು ಮಾಡಿ, ಬೇಕಾದಷ್ಟು ಗೋದಾನವನ್ನು ಮಾಡಿದನು. ದೌಷ್ಯಂತಿ ಭರತನು ಮುನ್ನೂರುಕುದುರೆಗಳನ್ನು ಕಟ್ಟಿ, ಯಮುನಾ ತೀರದಲ್ಲಿಯು, ಸರಸ್ವತೀ ತೀರದಲ್ಲಿ ಇಪ್ಪತ್ತು ಕುದುರೆಗಳನ್ನೂ, ಗಂಗಾತೀರದಲ್ಲಿ ಹದಿನಾಲ್ಕು ಕುದುರೆಗಳನ್ನೂ ಕಟ್ಟಿ, ಅಶ್ವಮೇಧಗಳನ್ನು ಮಾಡಿದನು. ಕೈಗಳಿಂದ ಗಗನವನ್ನು ಹಿಡಿಯಲಾಗದಂತೆ ಭರತನ ಯಜ್ಞಗಳಂತಹ ಯಜ್ಞಗಳನ್ನು ಯಾರೂ ಮಾಡಲಾರರು. ದಾಶರಥಿ ರಾಮನಿದ್ದನು. ಅವನಂತಹ ವಿಪ್ರವತ್ಸಲರು, ಪ್ರಜಾನುರಾಗಿಗಳಿಲ್ಲ. ಅವನ ರಾಜ್ಯದಲ್ಲಿ ಅನಾಥರಿಲ್ಲ; ವಿಧವೆಯರಿಲ್ಲ; ರಾಮರಾಜ್ಯದಲ್ಲಿ ನಿತ್ಯವೂ ಸುಭಿಕ್ಷವಾಗಿತ್ತು. ಅಂತಹ ಶ್ರೀರಾಮನೀಗ ಪರಂಧಾಮವನ್ನೈದಿರುವನು. ಅವನು ಜಾರೂಥ್ಯಯಜ್ಞಗಳನ್ನು ಮಾಡಿರುವನು. ಅಂದರೆ ತ್ರಿಗುಣದಕ್ಷಿಣೆಗಳನ್ನು ವಿಪ್ರರಿಗಿತ್ತಿರುವನು. ಹನ್ನೊಂದು ಸಾವಿರ ವರ್ಷಗಳ ರಾಜ್ಯವಾಳಿದನು. ಭಗೀರಥನೇನು ಸಾಮಾನ್ಯನೇ? ಅವನು ತಪಗೈದು ಗಂಗೆಯನ್ನಿಳೆಗೆ ತಂದನು. ಭೂರಿದಕ್ಷಿಣೆಗಳಿತ್ತು ಸಾವಿರ ಯಜ್ಞಗಳನ್ನು ಮಾಡಿದನು. ದಿಲೀಪನು ರಾಜ್ಯವನ್ನೆಲ್ಲ ದಕ್ಷಿಣೆಯಾಗಿತ್ತ ಮಹೋದಾರನು. ಅವನ ಮನೆಯಲ್ಲಿ ವೇದಘೋಷಗಳು, ಜ್ಯಾಶಬ್ದಗಳು, ದಾನಧಾರಾನಿನಾದಗಳು ನಿಂತದ್ದೇ ಇಲ್ಲ. ಮಾಂಧಾತನಂತಹ ಚಕ್ರವರ್ತಿ ಇಲ್ಲ. ಇಂದ್ರನೇ ಅವನಿಗೆ ಅಮೃತವನ್ನುಣಿಸಿದನೆಂಬರು. ಹನ್ನೆರಡೇ ದಿನದಲ್ಲಿ ಅವನು ಹನ್ನೆರಡು ವರ್ಷದವನಂತೆ ಬೆಳೆದು, ಹನ್ನೆರಡುನೂರು ಫಲಗಳ ಭಾರಉಳ್ಳವನಾದನು. ಪಕ್ವಪುರುಷ ಶರೀರದ ಭಾರವದೇ ಅಲ್ಲವೇ? ಅವನೇ ಮಹಾಪರಾಕ್ರಮಿಯಾಗಿ, ಸೂರ್ಯಕಿರಣಗಳು ಹೋಗುವ ದೇಶಗಳನ್ನೆಲ್ಲ ಗೆದ್ದು ಧರ್ಮಿಷ್ಠನಾಗಿ ಪಾಲಿಸಿದನು. ಅಶ್ವಮೇಧ ರಾಜಸೂಯಗಳನ್ನು ನೂರಾರು ಮಾಡಿದನು. ಯಯಾತಿಯು ಸಾಗರಾಂಬರವಾದ ಸರ್ವ ಭೂಮಂಡಲದ ಒಡೆಯ ನಾಗಿದ್ದನು. ರಾಕ್ಷಸರನ್ನು ಗೆದ್ದು, ದೇವತೆಗಳಿಗೆ ಜಯವನ್ನು ತಂದಿತ್ತ ಮುಚುಕುಂದನು ಬ್ರಹ್ಮಣ್ಯನಾಗಿದ್ದನು. ಅಂಬರೀಷನು ಮಹಾದಾನಿಯಾಗಿದ್ದನು. ಶತಬಿಂದುರಾಜನು ಸಹಸ್ರ ಪುತ್ರವಂತನಾಗಿದ್ದನು. ಗಯ ರಾಜನು ನೂರು ವರ್ಷಗಳ ಕಾಲ ಹುತಶಿಷ್ಟವನ್ನು ಮಾತ್ರ ಉಂಡು ಜೀವಿಸಿದನು. ಅಗ್ನಿಯು ಪ್ರಸನ್ನನಾದಾಗ, ಗಯನು ದಾನಕ್ಕಾಗಿ ಅಕ್ಷಯಧನ ವನ್ನೂ, ಧರ್ಮಶ್ರದ್ಧೆಯನ್ನೂ, ಶ್ರೀಹರಿ ಭಕ್ತಿಯನ್ನೂ ವರವಾಗಿ ಬೇಡಿದನು.

ರಂತಿದೇವನು ಅತಿಥಿ ಪೂಜಾತತ್ಪರನಾಗಿದ್ದನು. ಅವನು ಗೋದಾನಗಳಿತ್ತಿದ್ದನ್ನು ಎಣಿಸಲಾಗದು. ಆದರೆ ಆಕಳುಗಳನ್ನು ಎರೆದು ದಾನಮಾಡುವಾಗ, ಹರಿದ ನೀರು ಚರ್ಮಣ್ವತಿ ಎಂಬ ನದಿಯಾಗಿ ಹರಿಯಿತೆಂದರೆ, ಅವನ ಗೋದಾನ ಸಂಖ್ಯೆ ಊಹಿಸಬಹುದಾಗಿದೆ.

ನೃಗನೂ ಗೋದಾನಶೌಂಡನಾಗಿದ್ದನು. ಸಗರಚಕ್ರವರ್ತಿಯು ಸಾಗರವನ್ನು ಬೆಳೆಸಿದನು. ಅವನ ಹಿಂದೆ ಅರವತ್ತುಸಾವಿರ ಪುತ್ರರು ನಡೆದು ಬರುತ್ತಿದ್ದರು. ಅವನು ಅಶ್ವಮೇಧ ಸಹಸ್ರವನ್ನು ನಡೆಸಿದನು. ಪೃಥುರಾಜನು ಪೃಥ್ವೀಜನಕನೆನಿಸಿ, ಪ್ರಜರಿಗೆ ಅನ್ನ ಸಮೃದ್ಧಿಯನ್ನೂ ಇರಲು ನಗರಗ್ರಾಮ ವ್ಯವಸ್ಥೆಯನ್ನೂ ಕಲ್ಪಿಸಿದನು. ರಂಜಕನಾದುದರಿಂದ ರಾಜನೆನಿಸಿ, ಕ್ಷತದಿಂದ ಸುಜನರನ್ನು ಉಳಿಸುವನಾದುದರಿಂದ ಕ್ಷತ್ರನೆನಿಸಿ, ಪೃಥುರಾಜನು ವಿರಾಜಿಸಿದನು. ಇಂತಿಂತಹ ರಾಜಸತ್ತಮರು ಮೃತರಾದರು. ನೀನು ನಿನ್ನ ಮಗನು ಮೃತನಾದುದಕ್ಕೆ ಸುಮ್ಮನೆ ಅಳುತ್ತಿರುವೆ! ಅವನು ಯಜ್ವನೂ ಅಲ್ಲ; ದಾನಿಯೂ ಅಲ್ಲ; ವೀರನೂ ಅಲ್ಲ, ಧರ್ಮವಿಶಾಲನೂ ಅಲ್ಲ; ಸೃಂಜಯ! ಶೋಕಧ್ಯಾನಪರನಾಗಿ ಏಕೆ ಕೂತಿರುವೆ? ನನ್ನ ಉಪದೇಶವು ಸಾಯಲಿರುವವನಿಗೆ ಪಥ್ಯದಂತೆ, ನಿನ್ನಲ್ಲಿ ವ್ಯರ್ಥವಾಯಿತೇ?'

ಧರ್ಮರಾಜ! ಕೇಳು! ಇಂತು ನುಡಿದ ನಾರದನ ವಚನವನ್ನಾಲಿಸಿ, ಸೃಂಜಯನು, 'ಇಲ್ಲ ಮಹರ್ಷೇ! ಕೇಳಿ ತಿಳಿದೆನು ನಿನ್ನ ಉಪದೇಶವನ್ನು! ಆದರೂ ಮೃತಪುತ್ರನನ್ನು ನೀನು ಹಿಂದೆ ವಚನವಿತ್ತಂತೆ, ಬದುಕಿಸಿಕೊಡು! ನನ್ನನ್ನು ಶೋಕಸಾಗರದಿಂದ ಉದ್ಧರಿಸು!' ಎಂದು ಕೇಳಿದನು. ಆಗ ಅಂತೆಯೇ ಸುವರ್ಣಷ್ಠೀವಿ ಎಂಬ ಪುತ್ರನನ್ನು ಇಂದ್ರನ ಅನುಮತಿ ಪಡೆದು, ಬದುಕಿಸಿಕೊಟ್ಟನು."

ಇಂತು ಶ್ರೀಕೃಷ್ಣನು ಪೇಳಲು ಧರ್ಮರಾಜನು 'ಶ್ರೀಕೃಷ್ಣ! ಸುವರ್ಣಷ್ಠೀವಿಯು ಎಂತು ಮೃತನಾದನು! ಅವನ ವೃತ್ತಾಂತವನ್ನು ಹೇಳು!' ಎಂದು ಪ್ರಶ್ನಿಸಿದನು. ಶ್ರೀಕೃಷ್ಣನಿಂತೆಂದನು: 'ರಾಜನ್! ಹಿಂದೆ ನಾರದ ಪರ್ವತರೆಂಬ ದೇವರ್ಷಿಗಳು, ಮನುಜರ ಮಧ್ಯದಲ್ಲಿ ಕೆಲ ಕಾಲವಿರಬೇಕೆಂದು ಬಂದರು. ನಾರದನು ಮಾತುಲನು; ಪರ್ವತನು ಸೋದರಳಿಯನು. ಮಾವ ಅಳಿಯಂದಿರು ಸೃಂಜಯನ ಮನೆಗೆ ಬಂದು, ಅಲ್ಲೇ ಕೆಲಕಾಲವಿರುವ ತಮ್ಮ ಸಂಕಲ್ಪವನ್ನು ತಿಳಿಸಿದರು. ಸೃಂಜಯನು ಸಂತೋಷದಿಂದ ಅವರಿಗೆ ಸಕಲೋಪಚಾರಗಳನ್ನು ಒದಗಿಸಿ, ತನ್ನ ಕುಮಾರಿಯಾದ ಸುಕುಮಾರಿಯನ್ನು ಅವರ ಸೇವೆಗೆಂದು ನಿಲ್ಲಿಸಿದನು. ಅವರೀರ್ವರು "ಒಬ್ಬನ ಮನಸ್ಸಿನ ಸಂಕಲ್ಪವನ್ನು ಎಂತಹದೇ ಆಗಲಿ ಬಚ್ಚಿಡದೆ, ಮತ್ತೊಬ್ಬನಿಗೆ ತಿಳಿಸಬೇಕೆಂದೂ, ಹಾಗೇ ತಿಳಿಸದಿದ್ದಲ್ಲಿ ಶಾಪಪಾತ್ರನಾಗಬೇಕೆ"ಂದೂ ನಿಬಂಧನೆ ಮಾಡಿಕೊಂಡಿದ್ದರು.

ಸುಕುಮಾರಿಯ ಸುರೂಪದಿಂದ ನಾರದನು ಮೋಹಿತನಾದನು. ಅದನ್ನು ಸಮಯದಂತೆ ಪರ್ವತನಿಗೆ ತಿಳಿಸದೆ, ನಾರದನು ಆಕೆಯನ್ನು ಪ್ರೀತಿಸತೊಡಗಿದನು. ಪರ್ವತನು ತಪೋಬಲದಿಂದ ಅದನ್ನರಿತು, 'ಸಮಯಭಂಗವನ್ನು ಮಾಡಿದೆ!

ವಿವಾಹ ಸಮಯದಿಂದ ಮೊದಲ್ಗೊಂಡು ನೀನು ಅವಳಿಗೆ ಕೋತಿಮುಖನಾಗಿ ಕಾಣುವಂತಾಗಲಿ ! ' ಎಂದು ಶಾಪವನ್ನಿತ್ತನು. ನಾರದನು 'ಮದುವೆಯೇ ಆಗದ ಮುಂಚಿತವಾಗಿ, ತಿಳಿಸುವುದಾದರೂ ಎಂತೆಂದಾಲೋಚಿಸದೆ ಶಾಪವಿತ್ತೆ! ಆದುದರಿಂದ ನೀನು ಸ್ವರ್ಗಲೋಕವನ್ನು ಸೇರುವ ಶಕ್ತಿಯಿಂದ ರಹಿತನಾಗು ! ' ಎಂದು ಪ್ರತಿಶಾಪವನ್ನಿತ್ತನು.

ಕೆಲಕಾಲವಾಯಿತು. ಸುಕುಮಾರಿಯು ವಾನರರೂಪನಾದ ಪತಿಯನ್ನು ಅವಗಣಿಸದೆ, ಪ್ರೀತಿಸುತ್ತಿದ್ದಳು. ಒಂದು ದಿನ ನಾರದನು ಪರ್ವತನನ್ನು ಕಂಡನು. ಪರ್ವತ ನಾರದರು ಪರಸ್ಪರ ಶಾಪಗಳನ್ನು ಹಿಂದೆಗೆದುಕೊಂಡರು. ದೇವರೂಪಿಯಾದ ನಾರದನು ತನ್ನ ಪತಿಯಲ್ಲವೆಂದು ಓಡುವ ಸುಕುಮಾರಿಯನ್ನು ಸಮಾಧಾನಪಡಿಸಿ, ಪರ್ವತನು ತಾನು ಸ್ವರ್ಗವನ್ನು ಸೇರಿದನು.

ಒಂದು ದಿನ ಪರ್ವತನಾರದರು ಸೃಂಜಯನನ್ನು ಕಂಡು, 'ನಿನ್ನ ಉಪಚಾರಾದರಗಳಿಗೆ ಪ್ರೀತರಾಗಿರುವೆವು. ನಿನಗೆ ಬೇಕಾದ ವರವನ್ನು ಬೇಡು! ಆ ವರದಿಂದ ದೇವಪೀಡೆಯಾಗಲಿ, ಮನುಜನಾಶವಾಗಲಿ ಆಗಬಾರದು. ಅಂತಹ ವರ ಬೇಡು! ' ಎಂದರು. ಸೃಂಜಯನು, 'ದೇವರಾಜಸಮನಾಗುವ ಸುತನನ್ನು ಕೊಡಿ !' ಎಂದು ಬೇಡಿದನು. ಪರ್ವತನು, 'ರಾಜನ್ ! ದೇವರಾಜನನ್ನು ಅವಮಾನಿಸಿದೆ! ನಿನಗೆ ಮಗನಾಗುವನು, ಆದರೆ, ಅವನು ಬಹುಕಾಲ ಬಾಳನು. ಸುವರ್ಣಷ್ಠೀವಿ ಎಂಬ ನಾಮದಿಂದ ಅವನು ಖ್ಯಾತನಾಗುವನು. ಅವನು ಉಗುಳಿದ್ದೆಲ್ಲ ಬಂಗಾರ ವಾಗುವುದು ! ಅವನನ್ನು ಇಂದ್ರನಿಂದ ಕಾಪಾಡು ! ' ಎಂದನು. ಸೃಂಜಯನು ಭೀತನಾಗಿ "ಮುನಿವರರೇ ! ನನ್ನ ಮಗನು ಆಯುಷ್ಮಂತನಾಗಿರಲಿ ! ನನಗಿನ್ನೇನು ಬೇಡ!" ಎಂದು ಬೇಡಿದನು. ಪರ್ವತನು ಇಂದ್ರಭಯದಿಂದ ಸುಮ್ಮನಿದ್ದನು. ಆಗ ನಾರದನು, 'ಆಗಲಿ ! ನಿನ್ನ ಮಗನೂ ಸತ್ತರೂ, ಮತ್ತೆ ನಾನು ಇಂದ್ರಾನುಮತಿಯನ್ನು ಪಡೆದು, ಅವನನ್ನು ಬದುಕಿಸಿಕೊಡುವೆನು ' ಎಂದು ಅಭಯವಿತ್ತನು.

ಸೃಂಜಯನಿಗೆ ಸುತನಾದನು. ಅವನು ಉಗುಳಿದುದು ಬಂಗಾರವಾಗುತ್ತಿತ್ತು. ಸುವರ್ಣಷ್ಠೀವಿ ಎಂಬ ಅವನ ಹೆಸರು ಸಾರ್ಥಕವಾಯಿತು. ಅವನು ಬಲವೀರ್ಯತೇಜೋಯುತನಾಗಿ ಬೆಳೆಯತೊಡಗಿದನು. ಇಂದ್ರನದನ್ನು ಕಂಡು, ತನಗೆ ಸಮನಾಗುವನೆಂಬ ಶಂಕೆಯಿಂದ, ವಜ್ರಾಯುಧವನ್ನು ಅವನ ಸಂಹಾರಕ್ಕೆಂದು ಕಳಿಸಿದನು. ಬಾಲಕನು ಗಂಗಾನದಿಯ ತೀರದಲ್ಲಿ ಆಡಿಕೊಳ್ಳುತ್ತಿರುವಾಗ, ಇಂದ್ರವಜ್ರದೇವತೆಯು (ಚೋರರೂಪವಾಗಿ ದೂರ ಕೊಂಡು ಹೋಗಿ) ವ್ಯಾಘ್ರರೂಪದಿಂದ ಅವನನ್ನು ಸಂಹರಿಸಿತು. ಸೃಂಜಯನು ಬಾಲನ ಮೃತಿಗೆ ಅಳುತ್ತಾ ಕೊನೆಗೆ ನಾರದನನ್ನು ಸ್ಮರಿಸಿದನು. ನಾರದನು ಮಾತಿನಂತೆ, ಆ ಬಾಲಕನನ್ನು ಬದುಕಿಸಿ ಕೊಟ್ಟನು. ಸುವರ್ಣಷ್ಠೀವಿಯು ಬಹುಕಾಲ ರಾಜ್ಯವಾಳಿ, ಕಾಲಧರ್ಮವನ್ನು ಹೊಂದಿದನು. ಧರ್ಮರಾಜ ! ನಾರದನಿಲ್ಲೇ ಇರುವನು ಕೇಳು ನಾನು ಪೇಳಿದ್ದು ಸತ್ಯವೋ ಅಲ್ಲವೋ ಎಂದು, ನಿನಗೆ ಸಂಶಯವಿದ್ದರೆ"

ಆ ಮಾತಿಗೆ ನಾರದನು 'ಧರ್ಮಜ ! ವಾಸುದೇವನಾಡಿದುದು ಸತ್ಯವಾಗಿದೆ. ಅಂತಂತಹ ರಾಜರೂ ಮೃತರಾದರು. ಮೃತಿಯು ಜೀವನನಾಟಕದ ಅಂತಿಮಾಂಕವಾಗಿದೆ. ನಾಟಕದ ಸೂತ್ರಧಾರನು ಶ್ರೀಕೃಷ್ಣನಾಗಿದ್ದಾನೆ. ಬಿಡು ಶೋಕವನ್ನು ! ರಾಜ್ಯವನ್ನಾಳಿ, ಸುಖವಾಗಿರು !' ಎಂದನು. ಆಗ ಶ್ರೀವ್ಯಾಸರು, 'ಧರ್ಮರಾಜ! ಪಿತೃಪೈತಾಮಹವಾದ ರಾಜ್ಯವನ್ನು ದುಷ್ಟರಿಂದ ಕಸಿದೆ! ಅದನ್ನಾಳದೆ ಹೇಡಿಯಂತಾಗಬೇಡ! ವಿಪ್ರ ಧರ್ಮವು ಯಜ್ಞ ತಪೋ ಜಪ ವೇದಾಧ್ಯಯನಗಳಾಗಿವೆ. ಅವು ನಿರ್ವಿಘ್ನವಾಗಿ ನಡೆಯಲು ರಾಜನೇ ಕಾರಣನು. ವಿಪ್ರಸಜ್ಜನ ಘಾತುಕರಾದ ದುಷ್ಟರನ್ನು ದಂಡಿಸು ! ಸ್ವಧರ್ಮವನ್ನು ನಡೆಸು! ನೀನು ಸ್ವತಂತ್ರಕರ್ತನಲ್ಲ ಸ್ವತಂತ್ರ ಕರ್ಮಫಲಭೋಕ್ತನೂ ಅಲ್ಲ. ಈಶ್ವರನಿಟ್ಟಂತೆ ಇರು ! ದಂಡಶಾಸ್ತ್ರವನ್ನು ಮಾಡಿದವರಿಗೆ, ಶಸ್ತ್ರದಿಂದ ರಾಜದಂಡಿತರನ್ನು ಕೊಲ್ಲುವವರಿಗೆ ಕೂಡ, ಪಾಪವಿಲ್ಲ. ಎಲ್ಲವನ್ನೂ ಮಾಡಿ, ಮಾಡಿಸುವ ಈಶ್ವರನಿಗೂ ಪಾಪಲೇಪವಿಲ್ಲ. ನಾನು ಕರ್ತನೆಂಬ ದುರಹಂಕಾರಿಗೆ ಪಾಪ. ಅದು ನಿನಗಲ್ಲ. ಸುಮ್ಮನೆ ಶೋಕಿಸ ಬೇಡ! ಧರ್ಮದಿಂದ ಗೆದ್ದಿರುವ ನಿನಗೆ ಅಧರ್ಮಶಂಕೆ ಏಕೆ ಬಂತು? ಬೇಕಾದರೆ ಮುಂದೆ, ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವೆಯಂತೆ ! ಮೊದಲು, ರಾಜ್ಯಾಧಿಷ್ಠಿತನಾಗಿ, ಪ್ರಜರನ್ನು ಪಾಲಿಸು ! ಸೋದರರನ್ನು ಸುಖಪಡಿಸು!

ಸ್ವತಂತ್ರನಾದ ಈಶ್ವರನಿಂದ ಜನನಮರಣಗಳು, ಸುಖದುಃಖಗಳು ಬರುವವು. ತಮ್ಮ ಅಧೀನವಲ್ಲದ ಸುಖದುಃಖಾದಿಗಳಿಗೆ ಜೀವರು ದುಃಖಿಸುವುದು, ಉಬ್ಬಿ ಹಾರುವುದು ಅನುಚಿತವೇ ಸರಿ! ಹಿಂದೆ ದೇವಾಸುರ ಯುದ್ಧದಲ್ಲಿ ಸೋತ ದೈತ್ಯರು, ಈಗ ರಾಜರಾಗಿ ಹುಟ್ಟಿದರು. ಅವರು ವಿಪ್ರತಪೋಬಲವನ್ನು ದಕ್ಷಿಣಾದಿಗಳನ್ನಿತ್ತು, ಗಳಿಸಿ, ದರ್ಪಿತರಾದರು. ಅಂತಹ ದೈತ್ಯರು ಇಪ್ಪತ್ತೆಂಟು ಸಾವಿರ ಸಂಖ್ಯಾಕರ, ನರರೂಪದಿಂದ ವಿಪ್ರಾದಿಗಳಲ್ಲಿಯೂ ಜನಿಸಿದರು. ಅವರು ಧರ್ಮವನ್ನು ಅಧರ್ಮವೆಂದರು. ಅಧರ್ಮವನ್ನು ಧರ್ಮವೆಂದರು. ಅಂತಹವರ ನಾಶಕ್ಕಾಗಿ, ಶ್ರೀಕೃಷ್ಣನು ಅವತರಿಸಿ, ಅವರನ್ನು ನಿಮ್ಮ ದ್ವಾರಾ ಸಂಹರಿಸಿ, ಭೂಭಾರವನ್ನಿಳಿಸಿರುವನು. ಅಂತಹ ಧರ್ಮಸ್ಥಾಪನೆಗೆ ಸಹಕರಿಸಿದ ನಿಮಗೆ ಪಾಪಲೇಶವೂ ಇಲ್ಲ. ಅಶ್ವಮೇಧ ಯಜ್ಞವು ಒಳ್ಳೆಯ ಪ್ರಾಯಶ್ಚಿತ್ತವಾಗಿದೆ. ಅದನ್ನು ಮಾಡಿ, ವಿಪಾಪನಾಗು. ಇಂತಹ ನೂರು ಯಜ್ಞಗಳನ್ನು ಮಾಡಿದ ಇಂದ್ರನು ಸ್ವರ್ಗಾಧಿಪನಾಗಿರುವನು.

ನೀನು ಗೆದ್ದಿರುವ ರಾಜರ ಪುತ್ರ, ಪೌತ್ರರನ್ನು ಅವರವರ ರಾಜ್ಯದಲ್ಲಿ ನಿಲ್ಲಿಸಿ, ಅಭಯವನ್ನು ಕೊಡು ! ಸರ್ವ ರಾಷ್ಟ್ರಗಳಲ್ಲಿಯೂ ಧರ್ಮರಾಜನ ಧರ್ಮಪತಾಕೆಯು ಹಾರಲಿ! ಧರ್ಮವನ್ನು ರಕ್ಷಿಸು ! ಕೌಂತೇಯ ! ಆ ಹೊಣೆಯನ್ನು ಜಾರಿ ಬಿಟ್ಟು ಕೆಡ ಬೇಡ !

ಧರ್ಮಸ್ವರೂಪವನ್ನು ಅರುಹುವೆನು ಕೇಳು! ಅಧರ್ಮವನ್ನೂ ತಿಳಿ ! ಅದನ್ನು ಮಾಡು ! ಇದನ್ನು ಬಿಡು ! ವೇದವಿಹಿತವಾದ ಕರ್ಮವನ್ನು ಬಿಟ್ಟವನು, ವೇದವಿರುದ್ಧ ಕರ್ಮವನ್ನು ಮಾಡಿದವನು, ಇಬ್ಬರೂ ಪ್ರಾಯಶ್ಚಿತ್ತಮಾಡಿಕೊಳ್ಳಬೇಕು. ಕಪಟವರ್ತನವನ್ನು

ಬಿಡಬೇಕು. ಸೂರ್ಯನು ಹುಟ್ಟುವಾಗ ಮಲಗಿರುವವನೂ, ಅಸ್ತಂಗತನಾಗುವಾಗ ನಿದ್ರಿಸುವವನೂ, ಕೂಡ, ಕುನಖಿ, ಶ್ಯಾವದಂತರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಸ್ವರ್ಣಹಾರಿಯು ಕುನಖಿಯಾಗುವನು. ಸುರಾಪಾನರತನು ಶ್ಯಾವದಂತನಾಗುವನು. ಪರಿವಿತ್ತಿ (ಅಣ್ಣನಿರಲು ಮದುವೆಯಾದ ತಮ್ಮ), ಪರಿವಿತ್ತಿ (ಅಂತಹವನ ಅಣ್ಣ), ಬ್ರಹ್ಮಘ್ನ, ನಿಂದಕ, ದಿಧಿಷೂಪಪತಿ (ತಂಗಿ ಮದುವೆಯಾದ ಮೇಲೆ, ಮದುವೆಯಾಗದಿರುವ ಅಕ್ಕನನ್ನು ಮದುವೆಯಾದವನು), ದಿಧಿಷೂಪತಿ (ಅಕ್ಕನಿರಲು, ತಂಗಿಯನ್ನು ಮದುವೆಯಾದವನು), ನಷ್ಟವ್ರತನು, ಅಪಾತ್ರದಾತ, ಪಾತ್ರನಿಂದಕನು, ಗ್ರಾಮಘಾತಿ, ವೇದವಿಕ್ರೇತ, ಮಾಂಸವಿಕ್ರೇತ, ಗುರುಹಂತಕ, ಸ್ತ್ರೀಹಂತ, ಅಗ್ನಿದಾಯಿ, ಗುರುದ್ರೋಹಿ, ಇಂತಹವರು ಪಾಪಿಗಳು.

ಅಕಾರ್ಯಗಳನ್ನು ಹೇಳುವೆನು ತಿಳಿ! ಸ್ವಧರ್ಮತ್ಯಾಗ, ಪರಧರ್ಮಸ್ವೀಕಾರ, ಅಭಕ್ಷ್ಯಭಕ್ಷಣ, ಅಯಾಜ್ಯಯಾಜನ, ಶರಣಾಗತತ್ಯಾಗ, ಸೇವಕಹಿಂಸೆ, ರಸವಿಕ್ರಯ (ಲವಣ, ಗುಡ), ಗೋಗ್ರಾಸವರ್ಜನ, ವೈಶ್ವದೇವತ್ಯಾಗ, ಬ್ರಹ್ಮಸ್ವಾಪಹಾರ, ಪಿತೃದ್ರೋಹ, ಗುರುತಲ್ಪಗಮನ, ಸ್ವಪತ್ನೀತ್ಯಾಗ! ಇವು ಪಾಪಗಳು.

ಕೊಲ್ಲಬೇಕೆಂದು ಶಸ್ತ್ರವನ್ನೆತ್ತಿ ಬರುವನು ವಿಪ್ರನನ್ನಾದರೂ, ಅವನನ್ನು ಕೊಲ್ಲಬೇಕು. ಅದರಿಂದ ಬ್ರಹ್ಮಹತ್ಯೆ ಬರುವುದಿಲ್ಲ. ಧರ್ಮಸೂಕ್ಷ್ಮವು ದುರ್ಜ್ಞೇಯವಾಗಿದೆ. ಪ್ರಾಣಸಂಕಟದಲ್ಲಿ ಸುರಾಯುಕ್ತಮೂಲಿಕೆಯನ್ನು ಸೇವಿಸಿದರೆ ಪಾಪವಿಲ್ಲ! ಅನಂತರ ಪ್ರಾಯಶ್ಚಿತ್ತವಿದೆ. ಉದ್ದಾಲಕನ ಆಜ್ಞೆಯಂತೆ ಶ್ವೇತಕೇತುವಿನನ್ನು ಪಡೆದ ಶಿಷ್ಯನಿಗೆ ಗುರುತಲ್ಪಗಮನ ಪಾಪವು ತಾಕಲಿಲ್ಲ. ಪ್ರಾಣರಕ್ಷೆಗೆ, ಗೋವಿಪ್ರರಕ್ಷಣೆಗೆ, ವಿವಾಹ ವಿಷಯದಲ್ಲಿ ಸುಳ್ಳು ಹೇಳಿದರೆ ಪಾಪವಿಲ್ಲ. ನಪುಂಸಕ ಪತ್ನಿಗೆ ಧರ್ಮಸಂತಾನವನ್ನೀವ ಅವಳ ಪ್ರಾರ್ಥನೆಯಂತೆ ಒಂದೇ ಸಲ ಮುಟ್ಟುವ ತೇಜೋವಂತನಿಗೆ ಪಾಪವಿಲ್ಲ. ಶ್ರಾದ್ಧವೆಂದು ಪಶುಗಳನ್ನು ಕೊಲ್ಲುವ ವೃಥಾಭಿಮಾನಿಗೆ ಪಾಪವಿಲ್ಲದಿಲ್ಲ. ವ್ಯಭಿಚಾರಿಣಿಯನ್ನು ಅನ್ನಾಚ್ಛಾದನ ಮಾತ್ರವಿತ್ತು, ರತಿಯನ್ನು ಕೊಡದಿದ್ದರೆ ಪಾಪವಿಲ್ಲ. ಗೋಗಳನ್ನು ಹಿಂಸಿಸುವ ಹುಲಿಯನ್ನು ಕೊಂದರೆ ಪಾಪವಿಲ್ಲ.

ಈಗ ಪ್ರಾಯಶ್ಚಿತ್ತ ವಿಧಾನವನ್ನು ಕೇಳು! ಬ್ರಹ್ಮವಂತನು ಭಿಕ್ಷಾನ್ನವನ್ನು ಒಪ್ಪತ್ತು ಮಾತ್ರ ಉಂಡು, ನೆಲದಿ ಮಲಗಿ, ಹನ್ನೆರಡುವರ್ಷ ಕಾಲ ಪಶ್ಚಾತ್ತಾಪದಿಂದ ಕಳೆದು, ಶುದ್ಧನಾಗುವನು ಅಥವಾ ವೇದವನ್ನು ಜಪಿಸುತ್ತಾ ಮುನ್ನೂರು ಯೋಜನದ ಯಾತ್ರೆ ಮಾಡಿ, ಶುದ್ಧನಾಗುವನು. ಅಥವಾ ಸರ್ವಸ್ವವನ್ನಿತ್ತು ಶುದ್ಧನಾಗುವನು.

ಕೃಚ್ಛ್ರವೆಂದರೆ ಹನ್ನೆರಡು ದಿನದ ಪ್ರಾಯಶ್ಚಿತ್ತ ವಿಧಿ! ಮೂರುದಿನ ಬೆಳಿಗ್ಗೆ ಉಂಡು, ಮೂರು ದಿನ ಸಾಯಂಕಾಲದಲ್ಲಿ ಉಂಡು, ಮೂರು ದಿನ ಅಯಾಚಿತವನ್ನುಂಡು, ಮೂರು ದಿನ ಉಪವಾಸವಿದ್ದರೆ, ಒಂದು ಕೃಚ್ಛ್ರವಾಗುವುದು. ಮಾಸ ಕ್ರಮದಿಂದಲೂ ಕೃಚ್ಛ್ರವಿದೆ. ಇಂತು ಪ್ರಾಯಶ್ಚಿತ್ತದಿಂದ ಬ್ರಹ್ಮಹತ್ಯಾಪಾಪವು ನಷ್ಟವಾಗುವುದು. ಕ್ಷತ್ರಿಯನು ಅಶ್ವಮೇಧವನ್ನು ಮಾಡಿ, ಬ್ರಹ್ಮಹತ್ಯಾಮುಕ್ತನಾಗುವನು. ಗೋದಾನ ಸಹಸ್ರದಿಂದಲು,

ಬ್ರಾಹ್ಮಣ ಪ್ರಾಣರಕ್ಷಣೆಯಿಂದಲು ಕೂಡ ಬ್ರಹ್ಮಹತ್ಯೆಯು ನಿವಾರಿತವಾಗುವುದು. ವಿಪ್ರನಿಗೆ ಬೇಡಿದ್ದನ್ನಿತ್ತು, ಕೊಟ್ಟದ್ದನ್ನು ಹೇಳಿಕೊಳ್ಳದವನು ಸರ್ವಪಾಪಮುಕ್ತನಾಗುವನು. ಬೃಹಸ್ಪತಿಸವನವನ್ನು ಮಾಡಿದವನು ಸುರಾಪಾನ ಪಾಪವನ್ನು ಕಳೆದು, ಶುದ್ಧನಾಗುವನು. ಸರ್ವಸ್ವದಾನ ಮಾಡಿ ಸ್ವರ್ಣಸ್ತೇಯದಿಂದ ಮುಕ್ತನಾಗುವನು. ಪರಧನಾಪಹಾರವನ್ನು ಮಾಡಿದವನು ಮತ್ತೆ ಆ ಧನವನ್ನವನಿಗೆ ಮುಟ್ಟಿಸಿ, ಪಶ್ಚಾತ್ತಾಪದಿಂದ ಶುದ್ಧನಾಗುವನು. ಪಾಪಗಳೆಂತಹವೇ ಆಗಲಿ, ಚಾತುರ್ಮಾಸ್ಯವ್ರತದಿಂದಲು, ಅಥವಾ ಧಾರಣಾಪಾರಣ ವ್ರತದಿಂದಲು ಪರಿಹರಿಸುವುದು. ಶೌಚಾದಿಗಳು ವಿಪ್ರನಿಗೆ ನಾಲ್ಕು ಪಾದ, ಕ್ಷತ್ರಿಯನಿಗೆ ಮೂರು ಪಾದ, ವೈಶ್ಯನಿಗೆ ಎರಡು ಪಾದ, ಶೂದ್ರನಿಗೆ ಒಂದು ಪಾದದಷ್ಟೆಂದು ತಿಳಿದು, ಆಚರಿಸಬೇಕು. ಅಗಮ್ಯಾಗಮನವನ್ನು ಮಾಡಿದವನು, ಭಸ್ಮಶಯನನಾಗಿ, ಒದ್ದೆಯನ್ನುಟ್ಟು ಆರು ತಿಂಗಳು ಕಳೆಯಬೇಕು. ಅಜ್ಞಾನದಿಂದ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವು ಹೇಳಲ್ಪಟ್ಟಿತು. ಬುದ್ಧಿಪೂರ್ವಕವಾಗಿ ಪಾಪ ಮಾಡಿದವನು, ಪ್ರಾಯಶ್ಚಿತ್ತವನ್ನು ಹೆಚ್ಚಾಗಿ ಮಾಡಬೇಕು ! ಇಲ್ಲದಿರೆ ನರಕ ದುಃಖವನ್ನು ಅನುಭವಿಸಬೇಕು. ಪ್ರಾಯಶ್ಚಿತ್ತ ಶುದ್ಧಿಯು ಆಸ್ತಿಕರಿಗೆ, ನಾಸ್ತಿಕರಿಗೆ ವಿಶ್ವಾಸವಿಲ್ಲದುದರಿಂದ, ಅವರಿಗೆ ಪ್ರಾಯಶ್ಚಿತ್ತವು ಶುದ್ಧಿಕಾರಣವಾಗದು. ಅವರು ತಪ್ಪದೆ, ನರಕದಲ್ಲಿ ಬೀಳುವರು.

ಹಿಂದೆ ಋಷಿಗಳು ಸ್ವಾಯಂಭುವಮನುವಿನನ್ನು ಕಂಡು, ಧರ್ಮವನ್ನು ಕುರಿತು ಉಪದೇಶಿಸೆಂದು ಬೇಡಿದರು. ಮನುರಾಜನು ಧರ್ಮವನ್ನು, ಪಾತ್ರಾಪಾತ್ರ ವಿಚಾರವನ್ನು, ಪ್ರಾಯಶ್ಚಿತ್ತ ವಿಧಿಯನ್ನು ಅವರಿಗೆ ತಿಳಿಸಿದನು. 'ಪ್ರಾಯಶ್ಚಿತ್ತಗಳಲ್ಲಿ ಬ್ರಹ್ಮಜ್ಞಾನವು . ಶ್ರೇಷ್ಠವು ತೀರ್ಥಯಾತ್ರೆ, ಇತರ ಪ್ರಾಯಶ್ಚಿತ್ತಗಳು ಭಕ್ತರಿಗೆ ಪಾಪಪರಿಹಾರಕವಾಗುವವು. ಮಾನವನು ಗರ್ವವಂತನಾಗಬಾರದು. ದಾನ, ಅಧ್ಯಯನ ತಪಸ್ಸುಗಳು, ಅಹಿಂಸಾ, ಸತ್ಯವಚನಗಳು, ಅಕ್ರೋಧ, ಯಜ್ಞಮುಂತಾದವು ಧರ್ಮಗಳು. ಪ್ರವೃತ್ತಿಧರ್ಮವು ಸಂಸಾರ ಕಾರಣವಾಗಿದೆ. ನಿವೃತ್ತಿ ಧರ್ಮವು ಮೋಕ್ಷ ಕಾರಣವಾಗಿದೆ. ಕ್ರೋಧಮೋಹಗಳು ಪಾಪಕಾರಣಗಳು. ಪಾಪವನ್ನು ಮಂತ್ರಜಪದಿಂದಲು, ಹವಿಷ್ಯಭೋಜನದಿಂದಲು, ತೀರ್ಥಾಟನ ಶ್ರಮದಿಂದಲು ಕಳೆಯಬಹುದು. ವೇದಶಾಸ್ತ್ರಜ್ಞರು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಬ್ರಾಹ್ಮಣನು ಮೇಕೆ, ಒಂಟೆ, ಕತ್ತೆ, ಕುರಿ, ಮಾನುಷಿ, ಜಿಂಕೆಗಳ ಹಾಲು ಕುಡಿಯಬಾರದು. ಮತ್ಸ್ಯಾದಿಗಳನ್ನು ತಿನ್ನಬಾರದು. ರಾಜಾನ್ನವು ತೇಜಸ್ಸನ್ನೂ ಶೂದ್ರಾನ್ನವು ವರ್ಚಸ್ಸನ್ನೂ, ಸುವರ್ಣಕಾರಾನ್ನವು ಆಯುಸ್ಸನ್ನೂ, ಪ್ರೇತಾನ್ನವು ಕಾಂತಿಯನ್ನೂ ಹರಿಸಿಬಿಡುವುದು. ಅಗ್ನೀಷೋಮೀಯ ವಪಾಹೋಮದಕಿಂತಲು ಮುಂಚೆ ದೀಕ್ಷಿತಾನ್ನವನ್ನು ಉಣ್ಣಬಾರದು. ಬಡಿಗ, ಚರ್ಮಕಾರ, ರಜಕ, ವೈದ್ಯ, ಗ್ರಾಮರಕ್ಷಕ, ವೇಶ್ಯಾ, ಪರಿವಿತ್ತ, ವಂದಿಗಳಿಂದ ಅನ್ನವನ್ನು ಸ್ವೀಕರಿಸಬಾರದು. ಎಡಗೈಲಿ ಬಡಿಸಿದ್ದು ಹಳಸಿದ್ದು ಎಂಜಲು, ಬಚ್ಚಿಟ್ಟದ್ದು ಮೊದಲಾದ ಆಹಾರವನ್ನು ಉಣ್ಣಬಾರದು. ದೇವ, ಋಷಿ, ಪಿತೃ ಅತಿಥಿಗಳಿಗೀಯದ್ದನ್ನು ತಿನ್ನಬಾರದು. ಕೀರ್ತಿಗೆಂದು ಕೊಡುವವನಿಗೆ

ಪುಣ್ಯವಿಲ್ಲ. ಭಯದಿಂದ ಕೊಡುವವನಿಗೆ ಸ್ವರ್ಗವಿಲ್ಲ. ಧಾರ್ಮಿಕರು ನೃತ್ಯ ಗೀತ ಶೀಲರಾದ ನಟ ವಿಟ ಗಾಯಕರ ಸಂಗವನ್ನು ಮಾಡಲಾಗದು.

ವೇದವನ್ನೋದದ ವಿಪ್ರನಿಗಿತ್ತ ದಾನವು ವ್ಯರ್ಥವೆಂದು ತಿಳಿ! ದುಷ್ಟನಿಗೆ ದುಷ್ಕುಲನಿಗೆ, ದುಶ್ಶೀಲನಿಗೆ ಕೊಟ್ಟ ದಾನವು ದಾತನನ್ನೂ ನರಕದಲ್ಲಿ ಕೆಡಹುವುದು. ಅಪಾತ್ರನಿಗಿತ್ತ ದಾನವು ಕಪಾಲದಲ್ಲಿಟ್ಟ ನೀರಿನಂತೆ, ನಾಯಿಚರ್ಮದಲ್ಲಿಟ್ಟ ಹಾಲಿನಂತೆ, ಹಾಳಾಯಿತೆಂದು ತಿಳಿ! ಕಟ್ಟಿಗೆಯ ಆನೆಯಂತೆ, ಚರ್ಮಮಯ ಮೃಗದಂತೆ ವೇದಬಾಹಿರನಾದ ಬ್ರಾಹ್ಮಣನು, ನಿರರ್ಥಕನು.' ಇಂತು ಮನುರಾಜನು ಪೇಳಲು, ತಿಳಿದು, ಮುನಿಗಳು ಕೃತಾರ್ಥರಾದರು.

ಆಗ ಧರ್ಮರಾಜನು 'ವ್ಯಾಸ ಭಗವನ್ ! ಇನ್ನೂ ಧರ್ಮೋಪದೇಶವನ್ನು ಮಾಡಿ, ನನ್ನ ಮನಸ್ತಾಪವನ್ನು ಕಳೆಯಿರಿ! ರಾಜಧರ್ಮಗಳನ್ನು ತಿಳಿಸಿ! ಆಪದ್ಧರ್ಮಗಳನ್ನು ಹೇಳಿ! ಧರ್ಮಮಾರ್ಗದಲ್ಲಿ ನಡೆಯುತ್ತಾ, ನಾನು ರಾಜ್ಯವನ್ನು ಆಳುವೆನು' ಎಂದು ಕೇಳಿದನು.

ಶ್ರೀವ್ಯಾಸರು ನಾರದನ ಮುಖವನ್ನು ನೋಡಿ, ಮತ್ತೆ ಧರ್ಮರಾಜ ನಿಗಿಂತೆಂದರು: 'ಧರ್ಮರಾಜ! ಭೀಷ್ಮನನ್ನು ಕೇಳು! ಆತನು ನಿನ್ನ ಧರ್ಮಸಂಶಯಗಳನ್ನು ಕಳೆಯುವನು. ಭಾಗೀರಥಿಪುತ್ರನು, ದೇವಾದಿ ಮಹನೀಯರಿಂದ ಕೂಡಿ ಬೆಳೆದವನು, ಬೃಹಸ್ಪತಿ ಪರಶುರಾಮಾದಿ ಮಹನೀಯರ ಶಿಷ್ಯನು ಆದ ನಿನ್ನ ಪಿತಾಮಹನಂತೆ, ನಿನಗೆ ಆಪ್ತರಿಲ್ಲ. ಬ್ರಹ್ಮರ್ಷಿಗಣಮಧ್ಯದಲ್ಲಿ ಭಗವನ್ಮಹಿಮೆಯನ್ನಾಲಿಸುತ್ತಾ ಆತನು ಶರಪಂಜರದಿ ಮಲಗಿರುವನು. ಸ್ವಚ್ಛಂದಮರಣನಾದ ಭೀಷ್ಮನು, ಉತ್ತರಾಯಣವನ್ನು ಪ್ರತೀಕ್ಷಿಸುತ್ತಿರುವನು. ಅವನು ಧರ್ಮರಹಸ್ಯಗಳನ್ನು ನಿನಗೆ ತಿಳಿಸುವನು.' ಆ ಮಾತಿಗೆ ಧರ್ಮರಾಜನು, 'ಸ್ವಾಮೀ ! ಜ್ಞಾತಿಜನರನ್ನು ಕೊಂದು, ತಾತನನ್ನು ಕಾಪಟ್ಯದಿಂದ ಕೆಡಹಿದ ನನ್ನಂತಹ ಅಪರಾಧಿಯು ತನ್ನ ಮುಖವನ್ನು ತಾತನಿಗೆಂತು ತೋರಿಸುವನು? ' ಎಂದನು. ಆಗ ಶ್ರೀಕೃಷ್ಣನು ಧರ್ಮರಾಜನನ್ನು ನೋಡಿ, ಆತನ ದ್ವಾರಾ, ಚಾತುರ್ವರ್ಣ್ಯಾದಿ ಧರ್ಮವನ್ನು ಲೋಕದ ಸುಜನರಿಗೆ ಪ್ರಚಾರಪಡಿಸಲೆಣಿಸಿ, ನಗುತ್ತಾ ಇಂತೆಂದನು:

'ಧರ್ಮರಾಜ! ಶೋಕಲಾಲಸನಾಗಬೇಡ! ಭಗವಾನ್ ವ್ಯಾಸರು ಹೇಳಿದಂತೆ, ರಾಜ್ಯವನ್ನಾಳು! ನಿನ್ನ ಸೋದರರ ಪ್ರಾರ್ಥನೆಯನ್ನು ಮನ್ನಿಸು! ಹತಶಿಷ್ಟರಾದ ರಾಜರು ನಿನ್ನನ್ನು ಚಕ್ರವರ್ತಿಯಾಗಿ ಬಯಸುತ್ತಿರುವರು. ವಿಪ್ರರು ಶ್ರೀವ್ಯಾಸಮುಖರಾಗಿ, ನಿನ್ನ ಸಿಂಹಾಸನಾರೋಹಣ ಕಾರ್ಯದಲ್ಲಿ ಕುತುಕರಾಗಿರುವರು. ದ್ರೌಪದೀ ಕುಂತಿಯರ ಕೋರಿಕೆಯನ್ನೀಡೇರಿಸು ! ನಾವೂ ನಿನಗೆ ಬಂಧುಗಳು. ನಮಗೂ ಪ್ರೀತಿಯನ್ನು ತಂದುಕೊಡು ! ಲೋಕಹಿತಕ್ಕಾಗಿಯಾದರೂ, ಪಟ್ಟಗಟ್ಟಿಕೊಂಡು, ಧೃತರಾಷ್ಟ್ರಾದಿ ವೃದ್ಧರನ್ನು ಸಂತೋಷಪಡಿಸು! ' ಆ ಮಾತಿಗೊಪ್ಪಿ, ಧರ್ಮರಾಜನು, ತನ್ನ ಚಿಂತೆಯನ್ನು ಬಿಟ್ಟು, ಮಾನಸಶಾಂತಿಯನ್ನು ಹೊಂದಿದನು.

## ೬. ಧರ್ಮರಾಜ ಪಟ್ಟಾಭಿಷೇಕ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಧರ್ಮರಾಜನು ಉತ್ಸಾಹದಿಂದ ಎದ್ದುದನ್ನು ಕಂಡು, ಎಲ್ಲರಿಗೂ ಆನಂದವಾಯಿತು. ಪಾಂಡುಪ್ರಥಮನಂದನನು ಆನಂದದಿಂದ, ತಂದೆಯಾದ ಧೃತರಾಷ್ಟ್ರನಿಂದ ಕೂಡಿ, ಹಸ್ತಿನಾವತಿಯನ್ನು ಪ್ರವೇಶಿಸಬೇಕೆಂದು, ಸಿದ್ಧನಾದನು. ಶ್ರೀಕೃಷ್ಣಾಜ್ಞೆಯಂತೆ, ಧರ್ಮಪಟ್ಟಾಭಿಷೇಕಕ್ಕೆ ತಕ್ಕ ಸನ್ನಾಹಗಳೆಲ್ಲ ಸಜ್ಜಾಗಿ ನಡೆದಿದ್ದವು.

ಧರ್ಮಜನು ಸುಸ್ನಾತನಾಗಿ, ದೇವಬ್ರಾಹ್ಮಣರನ್ನು ಪೂಜಿಸಿದನು. ಕಂಬಲಾಜಿನವೃತವಾದ ದಿವ್ಯಕನಕ ರಥವು ಸಿದ್ಧವಾಗಿತ್ತು. ಅದಕ್ಕೆ ಹದಿನಾರು ಎತ್ತುಗಳನ್ನು ಕಟ್ಟಿದ್ದರು. ಆ ಬಿಳಿ ಎತ್ತುಗಳಿಗೆ ಸ್ವರ್ಣಾಭರಣ, ಪೀತಾಂಬರ, ಪುಷ್ಪಮಾಲೆಗಳಿಂದ, ಅಲಂಕರಿಸಿದ್ದರು. ವಂಧಿಮಾಗಧರು ಸ್ತೋತ್ರಗಳನ್ನು ಪಠಿಸುತ್ತಿದ್ದರು. ವಿಪ್ರರ ವೇದಘೋಷವು ಕಿವಿಗಿಂಪಾಗಿತ್ತು. ಧರ್ಮರಾಜನು ಶ್ರೀವ್ಯಾಸ ಕೃಷ್ಣರಿಗೆ ವಂದಿಸಿ, ರಥವನ್ನೇರಿದನು. ಭೀಮಸೇನನು ಸಾರಥಿಯಾಗಿ ಕೂತನು. ಅರ್ಜುನನು ಶ್ವೇತಚ್ಛತ್ರವನ್ನು ಪಿಡಿದು ಬಂದನು. ಮಾದ್ರಿನಂದನರು ಚಾಮರವ್ಯಜನಗಳನ್ನು ಪಿಡಿದು ನಡೆದರು. ಯುಯುತ್ಸುವು ರಥದಲ್ಲಿ ಕೂತು ಧರ್ಮರಾಜನನ್ನು ಹಿಂಬಾಲಿಸಿದನು. ಶೈಬ್ಯಸುಗ್ರೀವಯೋಜಿತವಾದ ರಥದಲ್ಲಿ ಶ್ರೀಕೃಷ್ಣನು ಸಾತ್ಯಕಿಯೊಡಗೂಡಿ, ಹೊರಟನು. ಧೃತರಾಷ್ಟ್ರನು ಗಾಂಧಾರಿಯಿಂದ ಕೂಡಿ, ಕುರುತರುಣಿಯರು, ವಿವಿಧ ರಥಗಳಲ್ಲಿ ಕೂತು ತೆರಳಿದರು. ಶ್ರೀವ್ಯಾಸಾದಿ ಮುನಿವರರು ಬಹುರಥಗಳಲ್ಲಿ ಕೂತು, ಹಸ್ತಿನಾಪುರಿಗೆ ತೆರಳಿದರು.

ಮಾರ್ಗವು ಸಂಕುಲವಾಯಿತು. ವಾದ್ಯಗಳು ಅಂಬರದಿ ಪ್ರತಿಧ್ವನಿಸಿದವು. ಪಾತಾಳತಲವಾಸಿನಾಗರಿಂದ ಮೊದಲ್ಗೊಂಡು, ಸ್ವರ್ಗವಾಸಿ ದೇವತೆಗಳವರೆವಿಗೂ ಸಕಲಜನರೂ ಆ ಉತ್ಸವದಲ್ಲಿ, ಉತ್ಸಾಹದಿಂದ ಪಾಲ್ಗೊಂಡರು. ಹಸ್ತಿನಾವತಿಯನ್ನು ಅಲಂಕರಿಸಿ, ಪುರದ ನರನಾರಿಯರು, ತಾವೂ ಸಿಂಗರಿಸಿಕೊಂಡು, ಧರ್ಮರಾಜನಿಗೆ ಭವ್ಯಸ್ವಾಗತವನ್ನು ನೀಡಿದರು.

ರಾಜಮಾರ್ಗವು ತಳಿಲನೀರಿನಿಂದ ಶುಭ್ರವಾಗಿತ್ತು. ಬೀದಿಗೆ ಎರಡು ಕಡೆ ಪತಾಕಾಧ್ವಜಗಳು ಧರ್ಮಜನನ್ನು ಕೈಬೀಸಿ ಕರೆದವು. ಮನೆಗಳ ಮುಂದಿಟ ಪೂರ್ಣ ಕುಂಭಗಳು, ನಾಗರಿಕರ ಭವ್ಯ ಸೌಹಾರ್ದವನ್ನು ತುಂಬಿಕೊಂಡಿದ್ದವು. ಮನೆಗಳ ಮುಂದಿನ ರಂಗವಲ್ಲಿಗಳು, ರಮ್ಯರಾಜ್ಯದ ರತ್ನಸಮೃದ್ಧಿಯನ್ನು ಸಾರುತ್ತಿದ್ದವು. ಅಲ್ಲಿಂದಿಲ್ಲಿಗೆ ಕಟ್ಟಿದ್ದ ಪೂಮಾಲೆಗಳ ಗಂಧವು ಘ್ರಾಣತರ್ಪಣವಾಗಿತ್ತು. ಧೂಪ ಪಾತ್ರೆಗಳಿಂದ ಹೊರಬಂದ ಧೂಮವಲಯಗಳು ಪಾಂಥರಿಗೆ ಆಹ್ವಾನವನ್ನಿತ್ತವು. ಸುಂದರ ಕನ್ಯೆಯರು ಮುಂದೆ ನಡೆಯುತ್ತಿದ್ದರು. ಇಂತಹ ನಗರವನ್ನು ಧರ್ಮರಾಜನು ಪ್ರವೇಶಿಸಿದನು.

ಪಾಂಡುನಂದನರನ್ನು ಕಂಡು, ಆನಂದಿಸಲು ಬಂದ ನಾರೀಸಮೂಹವು ಸೌಧಾಗ್ರಭಾಗಗಳಲ್ಲಿ ನಿಂತಾಗ, ಧರ್ಮರಾಜನೆಂಬ ಚಂದ್ರನನ್ನು ಕಂಡು, ಹಸ್ತಿನಾವತಿ ಎಂಬ ಸಮುದ್ರವು ಉಕ್ಕೇರಿತೆಂಬಂತೆ ತೋರಿತು. ನಗರ ನಾರಿಯರು, ನಾಚಿ, ಮೆಲ್ಲನೆ ನೋಡಿ, "ಪಾಂಚಾಲಿ ! ಎಂತಹ ಧನ್ಯಳಮ್ಮ ನೀನು! ಮಹರ್ಷಿಗಳನ್ನು ಪೂಜಿಪ ಗೌತಮಿಯಂತೆ ಕಂಗೊಳಿಪ ನಿನ್ನನ್ನು ಕಂಡು, ಕಷ್ಟಗಳಿಂದ ಪಾರಾಗಿ ಬಂದ ನಿನ್ನ ಪತಿದೇವರನ್ನು ಕಂಡು, ನಾವು ಧನ್ಯರಾದೆವು' ಎಂದು ಪೊಗಳಿದರು. ಅವರ ಪ್ರಶಂಸಾವಚನಗಳನ್ನು ಭೇರೀ ದುಂಧುಭಿ ತೂರ್ಯ ಪಟಹಾನಕ ಶಬ್ದಗಳು ಹೊತ್ತು, ಅಂಬರದಿ ನಿಂತ ದೇವ ಮುನಿ ಗಂಧರ್ವರಿಗೆ ಮುಟ್ಟಿಸಿದವು.

ಪೌರಜಾನಪದರ ಕರ್ಣ ಸುಖವಚನಗಳನ್ನು ಆಲಿಸುತ್ತಾ, ಧರ್ಮರಾಜನು ರಾಜಮಾರ್ಗವನ್ನತಿಕ್ರಮಿಸಿ, ರಾಜಪ್ರಾಸಾದವನ್ನು ಸೇರಿದನು. 'ದೈವಾನುಗ್ರಹದಿಂದ, ಕಷ್ಟಗಳಿಂದಲೂ, ರಣರಂಗದಿಂದಲೂ, ಪಾರಾಗಿ ಬಂದೆ! ದೇವದಯದಿಂದ ನಿಮ್ಮದಾದ ರಾಜ್ಯವು ನಿಮಗೆ ಬಂತು. ಮಹಾರಾಜ ! ಬಹುಕಾಲ ರಾಜನಾಗಿ ಬಾಳು ! ನಮ್ಮನ್ನು ಧರ್ಮದಿಂದ ಆಳು ! ' ಎಂತೆಂಬ ಪುರಜನರ ವಾಕ್ಯಗಳಿಂದ ಮೇಳವಿಸಿ, ರಾಜದ್ವಾರದಲ್ಲಿ ಆರತಿಗಳನ್ನೀವ ಅಂಗನೆಯರ ಮಂಗಳಗೀತೆಗಳು, ವಿಪ್ರರ ಆಶೀರ್ವಾದ ಘೋಷಗಳು, ಕರ್ಣಮನೋಹರವಾದವು. ಧರ್ಮಜಾದಿಗಳು ರಥಗಳಿಂದಿಳಿದು, ಮಂದಿರವನ್ನು ಪ್ರವೇಶಿಸಿದರು. ಶ್ರೀಕೃಷ್ಣನ ಆಜ್ಞೆಯಂತೆ, ಧರ್ಮರಾಜನು, ಗೃಹದೇವತಾಪೂಜೆಯನ್ನು ಗಂಧ, ಮಾಲ್ಯ, ರತ್ನಗಳಿಂದ ನಡೆಸಿದನು. ಮತ್ತೆ ಹೊರಬಂದು ನಿಂತ ಮಹಾರಾಜನನ್ನು ವಿಪ್ರವರರು ಆಶೀರ್ವದಿಸಿದರು. ತಾರಾಗಣ ಮಧ್ಯಂಗತನಾದ ಚಂದ್ರಮನಂತಿದ್ದ ಧರ್ಮರಾಜನು, ಧೌಮ್ಯರನ್ನು ಮೊದಲುಮಾಡಿ ಪೂಜಿಸಿ, ರತ್ನಹಿರಣ್ಯ, ಗೋ, ವಸ್ತ್ರಗಳನ್ನಿತ್ತು ಸತ್ಕರಿಸಿದನು. ವಿಪ್ರರ ಪುಣ್ಯಾಹ ಘೋಷವು ಶ್ರುತಿಮನೋಹರವಾಗಿಯು, ಮಿತ್ರಪ್ರೀತಿಜನಕವಾಗಿಯು ಕೇಳಬಂತು. ಜಯವನ್ನು ಸಾರುವ ದುಂದುಭಿಗಳು, ಶಂಖಗಳು ಮೊಳಗಿದವು.

ಆಗ ಚಾರ್ವಾಕನೆಂಬ ದುಷ್ಟರಾಕ್ಷಸನು, ವಿಪ್ರಭಿಕ್ಷುರೂಪದಿಂದ, ವಿಪ್ರರ ಮಧ್ಯದಿ ತೂರಿಬಂದು, ಧರ್ಮರಾಜನ ಮುಂದೆ ನಿಂತು ಪರುಷವಚನಗಳಿಂದ ಇಂತೆಂದನು: ಬ್ರಾಹ್ಮಣರು ಇವನಾರೆಂದು ತಿಳಿಯದೆ ದಿಗ್ಭ್ರಮೆ ಹೊಂದಿರಲು, ಅವರ ಅಪ್ಪಣೆಯನ್ನೂ ಪಡೆಯದೆ, ಆ ಧೂರ್ತಭಿಕ್ಷುಕನು, 'ಧರ್ಮರಾಜ ! ಈ ಎಲ್ಲ ವಿಪ್ರರ ಪ್ರತಿನಿಧಿಯಾಗಿ ಹೇಳುವ ಮಾತು ಕೇಳು ! ನಿನ್ನಂತಹ ಕೆಟ್ಟ ರಾಜನಿಲ್ಲ. ಸರ್ವಜ್ಞಾತಿ ವಧೆಯಿಂದ ಬಂದ ರಾಜ್ಯವನ್ನಾಳುವುದಕ್ಕಿಂತ, ನೀನು ಸಾಯುವುದೇ ಲೇಸು ! ಗುರುವೃದ್ಧ ಜ್ಞಾತಿ, ಮಿತ್ರರನ್ನು ಕೊಂದ ನಿನಗೆ, ಅದೇ ಸರಿಯಾದ ಪ್ರಾಯಶ್ಚಿತ್ತ ! ' ಎಂದನು. ಆ ಮಾತನ್ನಾಲಿಸಿ, ವಿಪ್ರರೆಲ್ಲರೂ 'ಹಾ! ಹಾ!' ಎಂದು ಆಕ್ರೋಶಿಸಿದರು. ಧರ್ಮಜನು ತಲೆತಗ್ಗಿಸಿ ನಿಂತನು. 'ಪ್ರಸನ್ನರಾಗಿರಿ ಬ್ರಾಹ್ಮಣರೇ ! ವ್ಯಸನಾರ್ಣವನ್ನು ದಾಟಿ ಬಂದ ಧಾರ್ಮಿಕರಾಜನನ್ನು ಇಂತು ನಿಂದಿಸಬಹುದೇ?' ಎಂದು ಕೇಳಿದ ಧರ್ಮಜನಿಗೆ

ವಿಪ್ರರಿತೆಂದರು : 'ರಾಜನ್ ! ಇವನು ನಮ್ಮ ಪ್ರತಿನಿಧಿಯಲ್ಲ. ಇವನಾಡಿದ ದುಷ್ಟವಚನಗಳು ನಮ್ಮವಲ್ಲ. ನಿನಗೆ ಸ್ವಸ್ತಿಯಾಗಲಿ ! ಶ್ರೀಸೌಭಾಗ್ಯಗಳು ಹೆಚ್ಚಲಿ!'

ವಿಪ್ರರು ಆಲೋಚಿಸಿ, ಆ ದುಷ್ಟನು, ದುರ್ಯೋಧನ ಸಖನಾದ ಚಾರ್ವಾಕನೆಂಬ ರಾಕ್ಷಸನೆಂದರಿತರು. ಅವರ ಕೋಪಾಗ್ನಿಯು ಪ್ರಜ್ವಲಿಸಿತು. ಅವರ ಹುಂಕಾರದಿಂದಲೇ ಚಾರ್ವಾಕನು ಭಸ್ಮೀಭೂತನಾದನು. ಮಹೇಂದ್ರವಜ್ರದಿಂದ ಬಿದ್ದ ಬೆಟ್ಟದಂತೆ ಚಾರ್ವಾಕನು ಬಿದ್ದನು. ಆ ಪಾಪಿಯನ್ನು ಸೇವಕರು ನಾಯಿಯನ್ನಂತೆ ಎಳೆದು, ಚಂಡಾಲರಿಗೊಪ್ಪಿಸಿದರು. ನಿಜವನ್ನರಿತ ಧರ್ಮರಾಜನು, ಮತ್ತೆ ಶಾಂತ ಹರ್ಷಿತನಾದನು.

ಆಗ ಸರ್ವಜ್ಞನಾದ ಶ್ರೀಕೃಷ್ಣನು, 'ಧರ್ಮರಾಜ ! ಬ್ರಾಹ್ಮಣರೆಂದರೆ ವಸುಧೆಯಲ್ಲಿ ತಿರುಗುವ ದೇವತೆಗಳು. ಅವರನ್ನು ನಿತ್ಯವೂ ಗೌರವಿಸುವೆನು. ಈ ದುಷ್ಟಭಿಕ್ಷುಕನು ಬ್ರಾಹ್ಮಣನಲ್ಲ. ಕೃತಯುಗದಲ್ಲಿ ಚಾರ್ವಾಕನೆಂಬ ರಾಕ್ಷಸನು ಬದರಿಕಾಶ್ರಮವನ್ನು ಸೇರಿ, ತಪವನ್ನು ಮಾಡಿದನು. ಬ್ರಹ್ಮದೇವನು ಪ್ರಸನ್ನನಾಗಲು ಅವನು 'ನನಗೆ ಸರ್ವಭೂತಗಳಿಂದ ಭಯ(ಮೃತ್ಯು) ಬರಬೇಡ!' ಎಂದು ಬೇಡಿದನು. 'ಸರೇ ! ಹಾಗೇ ಆಗಲಿ ! ಆದರೆ ಬ್ರಾಹ್ಮಣಾವಮಾನವು ನಿನ್ನ ಭಯವಾಗುವುದು' ಎಂದು ಬ್ರಹ್ಮನು ಅಂತರ್ಧಿತನಾದನು. ವರಬಲ ದರ್ಪಿತನಾಗಿ ಚಾರ್ವಾಕನು ದೇವತೆಗಳನ್ನು ಪೀಡಿಸಿದನು. ಅವರು ಬ್ರಹ್ಮನಿಗೆ ಶರಣು ಹೊಕ್ಕರು. ಬ್ರಹ್ಮನು, 'ದೇವತೆಗಳಿರಾ ! ಹೆದರಬೇಡಿ ! ಮುಂದೆ ದುರ್ಯೋಧನನೆಂಬ ರಾಜನು ಹುಟ್ಟುವನು. ಸಮಾನಗುಣರಾದ ದುರ್ಯೋಧನ ಚಾರ್ವಾಕರು ಸ್ನೇಹಿತರಾಗುವರು. ಆ ಪಕ್ಷಪಾತದಿಂದ ಚಾರ್ವಾಕನು ಪಾಂಡವರನ್ನು ನಿಂದಿಸಲು ತೊಡಗಿ, ವಿಪ್ರರನ್ನು ಅವಮಾನಿಸುವನು. ಆಗ ಅವನು ಬ್ರಹ್ಮದಂಡ ಹತನಾಗುವನು ' ಎಂದು ಕಳಿಸಿದನು. ಕ್ಷತ್ರಧರ್ಮದಿಂದ ಶತ್ರುಗಳನ್ನು ಗೆದ್ದಿರುವೆ! ಚಿಂತೆಪಡುವ ಕಾರಣವಿಲ್ಲ. ಮುಂದಿನ ಕಾರ್ಯಗಳು ನಡೆಯಲಿ !' ಎಂದು ಧರ್ಮರಾಜನನ್ನು ಸಮಾಧಾನಪಡಿಸಿದನು.

ಆಗ ಪಟ್ಟಾಭಿಷೇಕೋತ್ಸವವು ಪ್ರಾರಂಭವಾಯಿತು. ಕುಂತೀಸುತ ಜ್ಯೇಷ್ಠನು ಶ್ರೇಷ್ಠಕಾಂಚನ ಸಿಂಹಾಸನದಲ್ಲಿ ವಿರಾಜಿಸಿದನು. ಪ್ರಾಙ್ಮುಖನಾಗಿದ್ದ ಮಹಾರಾಜನ ಮುಂಭಾಗದ ಸಿಂಹಾಸನದಲ್ಲಿ ಸಾತ್ಯಕಿ, ವಾಸುದೇವರು ಮಂಡಿಸಿದರು. ಭೀಮಸೇನಾರ್ಜುನರು ರಾಜನ ಇಕ್ಕೆಲಗಳಲ್ಲಿ ಮಣಿಪೀಠಗಳನ್ನಲಂಕರಿಸಿದರು. ಪೃಥಾದೇವಿಯು ನಕುಲ ಸಹದೇವರೊಡಗೂಡಿ ದಾಂತಸಿಂಹಾಸನದಲ್ಲಿ ಕೂತಿದ್ದಳು. ಧೃತರಾಷ್ಟ್ರನ ಉತ್ತಮಾಸನದ ಪಕ್ಕಗಳಲ್ಲಿ ಆತನ ಪುರೋಹಿತನಾದ ಸುಧರ್ಮನು, ಧೌಮ್ಯ, ಯುಯುತ್ಸು ವಿದುರ, ಸಂಜಯರು ಯಥಾರ್ಥವಾಗಿ ಕೂತಿದ್ದರು. ಗಾಂಧಾರಿಯು ಧೃತರಾಷ್ಟ್ರನ ಹತ್ತಿರವಿದ್ದ ವರಪೀಠದಲ್ಲಿ ವಿರಾಜಿಸಿದಳು. ಧರ್ಮರಾಜನು ಸುವರ್ಣರಜತ ಭೋಗೋದಾನಗಳನ್ನು ಮಾಡಿ, ಸಿಂಹಾಸನದಲ್ಲಿ ಕೂತನು. ಪೌರರು, ಜಾನಪದರು ವಿವಿಧ ಮಂಗಳದ್ರವ್ಯಗಳನ್ನಿತ್ತು ಕಾಣಿಕೆಗಳನ್ನು ಸಮರ್ಪಿಸಿದರು. ಸುವರ್ಣರತ್ನಗಳು,

ಔದುಂಬರ ಪಾತ್ರೆಗಳು, ಶ್ವೇತಸರ್ಷಪಗಳು, ಪೂಮಾಲೆಗಳು, ಪೂರ್ಣಕುಂಭಗಳು, ಲಾಜಾಕ್ಷತೆಗಳು, ಗೋರಸಗಳು, ದರ್ಬೆಗಳು, ಸುವರ್ಣ ಪೀಠಗಳು, ಶಮೀ, ಪಿಪ್ಪಲ, ಪಾಲಾಶ ಸಮಿಧಗಳು, ಮಧುಘೃತಭಾಂಡಗಳು, ಔದುಂಬರಸ್ರುವ, ಶಂಖ, ಮುಂತಾದ ಅಭಿಷೇಕಚನಿಕಸಂಭಾರಗಳು, ಸಜ್ಜುಗೊಳಿಸಲ್ಪಟ್ಟಿದ್ದವು.

ಶ್ರೀಕೃಷ್ಣರ ಉಭಯರ ಅನುಜ್ಞೆ ಪಡೆದು, ಧೌಮ್ಯನು ಸ್ವಸ್ತಿವಾಚನವನ್ನು ನಡೆಸಿ ಪಟ್ಟಾಭಿಷೇಕದ ಹೋಮಾದಿ ಕೃತ್ಯಗಳನ್ನು ಸಾಂಗಗೊಳಿಸಿದನು. ಪ್ರಾಗುದಗ್ದೇಶದಲ್ಲಿದ್ದ ವೇದಿಯನ್ನು ರತ್ನರಂಗವಲ್ಲಿಯಿಂದ ಅಲಂಕರಿಸಿದ್ದರು. ಆ ಕನಕಪೀಠದಲ್ಲಿ ಕೃಷ್ಣಾಧರ್ಮಜರು ಕೂತರು. ವಿಧಿಮಂತ್ರಗಳಿಂದ ಆಹುತಿಗಳನ್ನಿತ್ತು, ಧೌಮ್ಯನು ಗಂಗಾದಿ ತೀರ್ಥಪೂರಿತ ಶಂಖವನ್ನು ಶ್ರೀಕೃಷ್ಣನ ಕರಕಮಲಗಳಲ್ಲಿ ಸಮರ್ಪಿಸಿದನು. ಶ್ರೀಕೃಷ್ಣನು ಗಂಗಾಧಾರೆಯೊಡನೆ ತನ್ನ ಆನಂದಬಿಂದುಗಳನ್ನು ಮೇಳವಿಸಿ, ಧರ್ಮರಾಜನಿಗೆ ಸಕಲಪೃಥ್ವೀ ರಾಜ್ಯಾಧಿಪತ್ಯದಲ್ಲಿ ಅಭಿಷೇಕಿಸಿ, ಆತನನ್ನು ಧನ್ಯನನ್ನಾಗಿಸಿದನು. ಪಾಂಚಜನ್ಯಹಸ್ತನಿಂದ ಪ್ರಶಸ್ತ ಗಂಗಾಧಾರಾಭಿಷಿಕ್ತನಾದ ಧರ್ಮರಾಜನು ಅಮೃತಮುಖನು, ದೇವೇಂದ್ರಸಖನು ಆದನು. ಆ ಶುಭವೇಳೆಯಲ್ಲಿ ರಾಜಪ್ರಾಸಾದದ ಮಂಗಳವು ಮಂಗಳವಾದ್ಯ ನಿನಾದಗಳಿಂದಲು, ಜಯಜಯ ಧ್ವಾನಗಳಿಂದಲು ತುಂಬಿ, ಧರ್ಮವಿಜಯವನ್ನೂ, ಶ್ರೀಶನ ಪರಮಾನುಗ್ರಹ ಫಲವನ್ನೂ ದಶದಿಕ್ಕುಗಳಿಗೆ ಸಾರಿತು.

ಧರ್ಮರಾಜನು ಬ್ರಾಹ್ಮಣರನ್ನು ನಿಷ್ಕಸಹಸ್ರಗಳಿಂದ ಪೂಜಿಸಿ, ಅವರ ಸ್ವಸ್ತಿವಾಚನಾಶೀರ್ವಾದಗಳನ್ನು ಶಿರಸಾ ಸ್ವೀಕರಿಸಿದನು. ರತ್ನಾಕ್ಷತೆಗಳನ್ನು ಸೂರೆಗೈದು ವಿಪ್ರರು, 'ಧರ್ಮರಾಜ ! ಶ್ರೀಶಾನುಗ್ರಹದಿಂದ ಜಯಿಸಿದೆ! ಸ್ವಧರ್ಮದಿಂದ ಗೆದ್ದಿರುವೆ! ದೇವರ ದಯದಿಂದ ನೀವು ಐವರೂ, ಅಕ್ಷತರಾಗಿ, ಕುಶಲ ದಿಂದಿರುವಿರಿ!' ಎಂದು ಅಭಿನಂದಿಸಿದರು. ಧರ್ಮಜನು ಧೃತರಾಷ್ಟ್ರಾದಿ ಹಿರಿಯರನ್ನೂ, ಶ್ರೀವ್ಯಾಸಾದಿ ಋಷಿವರರನ್ನೂ ವಂದಿಸಿ, ಪೂಜಿಸಿದನು. ಪ್ರಕೃತಿವರ್ಗದ ಮಂತ್ರ್ಯಾದಿ ಸೇವಕಾಂತ ಜನರನ್ನೂ ಯಥೋಚಿತವಾಗಿ ಸತ್ಕರಿಸಿದನು.

ಸಭಾಮಧ್ಯದಿ ನಿಂತು, ಧರ್ಮರಾಜನು 'ಸಭಿಕರೇ ! ಗುಣದೋಷಗಳನ್ನರಿತಿರುವ ವಿಪ್ರಪುಂಗವರ ಆಶೀರ್ವಾದಕ್ಕೆ ಪಾತ್ರರಾದ ಪಾಂಡುಸುತರಿಂದು ಧನ್ಯರಾದರು. ನಿರ್ಮತ್ಸರರಾಗಿರುವ ನಿಮ್ಮ ಅಭಿನಂದನದಿಂದಲು ನಾವು ಸಂಪ್ರೀತರಾಗಿರುವೆವು. ನನ್ನ ಪ್ರೀತಿಯನ್ನು ಬಯಸುವರಾಗಿದ್ದರೆ, ನನ್ನ ಈ ಸಂದೇಶದಂತೆ ನಡೆಯಿರಿ. ನಮ್ಮ ತಂದೆಯಾದ ಧೃತರಾಷ್ಟ್ರನೇ ರಾಜನು, ಆತನು ನನಗೆ ದೇವರಂತೆ ಪೂಜ್ಯನು. ಆತನ ಶಾಸನದಂತೆ, ನೀವೆಲ್ಲರು ನಡೆದುಕೊಳ್ಳಿರಿ ! ಜ್ಞಾತಿವಧೆಗೈದ ನನಗೆ ಈತನ ಶುಶ್ರೂಷೆಯೇ ನಿಜವಾದ ಪ್ರಾಯಶ್ಚಿತ್ತವಾಗಿದೆ. ಜಗತೀನಾಥನಾದ ಧೃತರಾಷ್ಟ್ರನು ಸರ್ವಥಾ ಸರ್ವರಿಂದಲು ಗೌರವೀಯನಾಗಿರುವನು' ಎಂದು ಆಶ್ವಾಸಿಸಿದನು.

ಮುಂದೆ ನಿಯೋಗವಿಭಾಗವು ನಡೆಯಿತು. ಕೌಂತೇಯಾಗ್ರಜನು ಭೀಮಸೇನನನ್ನು ಯುವರಾಜನನ್ನಾಗಿ ನಿಯಮಿಸಿದನು. ಮಂತ್ರನಿಶ್ಚಯಾದಿಗಳಲ್ಲಿ

ವಿದುರನು, ಆಯವ್ಯಯ ಚಿಂತನ ಕೃತಾಕೃತಪರಿಜ್ಞಾನಗಳಲ್ಲಿ ಸಂಜಯನು, ಬಲಪರಿಮಾಣ, ಭೃತ್ಯವೇತನ ದಾನ, ಕಾರ್ಯದರ್ಶನಗಳಲ್ಲಿ ನಕುಲನು, ಪರಚಕ್ರನಿರೋಧ ದುಷ್ಟಶಿಕ್ಷಣಗಳಲ್ಲಿ ಅರ್ಜುನನು, ದೇವಬ್ರಾಹ್ಮಣ ಕಾರ್ಯಗಳಲ್ಲಿ ಧೌಮ್ಯನು, ಅಂಗರಕ್ಷಣ ಕಾರ್ಯದಲ್ಲಿ ಸಹದೇವನು ನಿಯಮಿತರಾದರು. ಧರ್ಮಜನು ವಿದುರ ಸಂಜಯ ಯುಯುತ್ಸುಗಳನ್ನು ಧೃತರಾಷ್ಟ್ರನ ಪರಿಚರ್ಯದಲ್ಲಿ ಅಪ್ರಮತ್ತರಾಗಿರುವಂತೆ ನಿಯಮಿಸಿ, ಮಿಕ್ಕ ಆಯಾ ಕಾರ್ಯಗಳಲ್ಲಿ ತತ್ತದ್ಯೋಗ್ಯರನ್ನು ನಿಲ್ಲಿಸಿದನು.

ಧೃತರಾಷ್ಟ್ರನು ತನ್ನ ಪುತ್ರರಿಗೆ ಶ್ರಾದ್ಧಾದಿ ಕರ್ಮಗಳನ್ನು ಮಾಡಿದನು. ಧರ್ಮರಾಜನೂ, ದ್ರೋಣ, ಕರ್ಣ, ಧೃಷ್ಟದ್ಯುಮ್ನ, ಶಿಖಂಡಿ, ಅಭಿಮನ್ಯು, ಘಟೋತ್ಕಚ, ದ್ರುಪದ, ದ್ರೌಪದೇಯರಿಗೆ ಔರ್ಧ್ವದೈಹಿಕ ಕೃತ್ಯಗಳನ್ನು ಮಾಡಿಸಿ, ಅನೃಣನಾದನು. ಆತನ ಕೀರ್ತಿಯೂ ಸರ್ವಲೋಕಗಳಲ್ಲಿಯೂ ಹರಡಿತು. ಪ್ರಜರನ್ನು ಧರ್ಮದಿಂದ ಪಾಲಿಸಿ, ಧರ್ಮರಾಜನು, ಧೃತರಾಷ್ಟ್ರ ಗಾಂಧಾರೀ ವಿದುರರನ್ನೂ ಮಿಕ್ಕ ಮಾನ್ಯ ಕುರುಕುಲದವರನ್ನೂ, ಯೋಗ್ಯಗ್ರಹ, ರತ್ನ, ರಥ, ವಸ್ತ್ರಭೂಷಣ, ಭೃತಿಗಳನ್ನಿತ್ತು ಸತ್ಕರಿಸಿದನು.

ಮಹಾಪ್ರಾಜ್ಞನಾದ ಯುಧಿಷ್ಠಿರನು ಶ್ರೀಕೃಷ್ಣನಿಗೆ ಕೈ ಜೋಡಿಸಿ, ನಮಸ್ಕರಿಸಿ, 'ಕೃಷ್ಣ! ನಿನ್ನ ಪ್ರಸಾದದಿಂದಲು, ನಯ ಬಲ ಬುದ್ಧಿ ವಿಕ್ರಮಗಳಿಂದಲು, ನಾವು ತಿರುಗಿ ನಮ್ಮ ರಾಜ್ಯವನ್ನು ಪಡೆದೆವು. ದ್ವಿಜವರವಂದಿತನು, ಆದಿಪುರುಷನು, ಆದ ನಿನಗೆ ನಮಸ್ಕಾರವು ! ವಿಶ್ವವನ್ನು ನಿರ್ಮಿಸಿ, ಒಳಹೊಕ್ಕು ಪ್ರೇರಿಸುವೆ ! ವಿಶ್ವಭಿನ್ನನಾಗಿರುವೆ ! ವೈಕುಂಠ ! ಪುರುಷೋತ್ತಮ ! ಹಿಂದೆ ಪೃಶ್ನಿಗರ್ಭನಾಗಿದ್ದು ವಾಮನನಾಗಿದ್ದು ಅದೇ ದೇಹದಿಂದ ಈಗ ಶ್ರೀಕೃಷ್ಣನಾಗಿರುವೆ ! ಪ್ರಭೋ ! ಸರ್ವೋತ್ತಮನಾದ ನಿನ್ನ ವಶದಲ್ಲಿದೆ ಜೀವ ಜಡಾತ್ಮಕ ಜಗವೆಲ್ಲವು. ಯಮರಾಜನ ಅಂತರ್ಯಾಮಿಯಾಗಿ, ವೃಷಾಕಪಿ ಎನಿಸಿರುವೆ ! ಕರ್ಮಯೋಗ್ಯವಾದ ಪೂರ್ವ, ಉತ್ತರ, ಈಶಾನ್ಯ ಎಂಬ ದಿಕ್ಕುಗಳು ನಿನ್ನಿಂದ ಪಾವನವಾಗಿವೆ. ನೀನು ನಾಶರಹಿತನು, ನಿನಗೆಣೆಯಿಲ್ಲ. ಪ್ರಪಂಚದ ಪ್ರಭವಪ್ರಳಯಗಳಿಗೆ ಸ್ವತಂತ್ರನಿಮಿತ್ತ ಕಾರಣನು ನೀನು ! ಶಾರ್ಙ್ಗಚಕ್ರಪಾಣೇ ! ನಿನಗೆ ನಮಃ ' ಎಂದು ಸ್ತುತಿಸಿದನು.

ಶ್ರೀಕೃಷ್ಣನು ಧರ್ಮರಾಜನ ಸ್ತುತಿಗೆ ಪ್ರೀತನಾದನು. ನಿತ್ಯಾನಂದ ಮಹೋದಧಿಯಾದ ಶ್ರೀಶನ ನೇತ್ರಗಳು ಆನಂಬಾಷ್ಪ ತುಂದಿಲವಾದವು. ಆ ಸ್ವಾಮಿಯ ಗಾತ್ರವು ಪುಲಕಾಚಿತ್ರಿತವಾಯಿತು. ಆ ದಯಾನಿಧಿಯ ಅಮೃತವಚನಗಳು ಧರ್ಮರಾಜನನ್ನು ಅಭಿನಂದಿಸಿದವು. ಧರ್ಮರಾಜನು ಧೃತರಾಷ್ಟ್ರನ ಅನುಮತಿಯನ್ನು ಪಡೆದು, ತನ್ನವರಿಗೆ ಕೌರವರ ದಿವ್ಯಭವನಾದಿ ಸಕಲೈಶ್ವರ್ಯವನ್ನು ಕೊಟ್ಟು ಸತ್ಕರಿಸಿದನು. ಅವರು ಅರಣ್ಯದಲ್ಲಿ ಪಟ್ಟ ಕ್ಲೇಶಗಳನ್ನು ನೆನೆದು, ಅವರನ್ನು ಸಾಂತ್ವನಗೊಳಿಸಿದನು. ಭೀಮಸೇನನು ದ್ರೌಪದೀಕಾಲೀ ಸಹಿತನಾಗಿ, ದಿವ್ಯರತ್ನ ಸಮಾಕೀರ್ಣವು, ದಾಸದಾಸೀ ಸಮಾಕುಲವು ಆದ ದುರ್ಯೋಧನ ಮಂದಿರವನ್ನು ಪ್ರವೇಶಿಸಿ ಸುಖವಾಗಿ ವಸಿಸಿದನು. ಅರ್ಜುನನು

ದುಶ್ಶಾಸನ ಪ್ರಾಸಾದವನ್ನೂ, ನಕುಲನು ದುರ್ಮರ್ಷ ಮಂದಿರವನ್ನೂ, ಸಹದೇವನು ದುರ್ಮುಖ ಭವನವನ್ನೂ ಹೊಂದಿ ಸುಖವಾಗಿದ್ದರು. ಸುಧರ್ಮ ವಿದುರ ಧೌಮ್ಯ ಸಂಜಯರು ತಂತಮ್ಮ ಮನೆಗಳಲ್ಲಿ ನಿವಸಿಸಿ, ಧರ್ಮಜನ ರಾಜ್ಯಕಾರ್ಯಗಳಲ್ಲಿ ನಿರತರಾಗುತ್ತಿದ್ದರು. ಶ್ರೀಕೃಷ್ಣ ಸಾತ್ಯಕಿಯರು ಅರ್ಜುನ ಮಂದಿರದಲ್ಲಿ ಇರುತ್ತಿದ್ದರು. ಕುಂತೀದೇವಿಯು ಗಾಂಧಾರಿಯ ಮಂದಿರದಲ್ಲಿ ಇರುತ್ತಿದ್ದಳು.

## ೭. ಭೀಷ್ಮ ದರ್ಶನ

ಶ್ರೀವೈಶಂಪಾಯನನು ಜನಮೇಜಯನಿಗೆ ಪೇಳಿದನು:

'ರಾಜನ್ ! ಮಾರ್ಗಶಿರ ಬಹುಳ ಅಮಾವಾಸ್ಯೆಯಂದು ಯುದ್ಧವು ಮುಗಿಯಿತಲ್ಲವೇ? ಧರ್ಮರಾಜಾದಿಗಳು ಅಶೌಚನಿವೃತ್ತಿಯನ್ನು ಯುದ್ಧಪ್ರಾರಂಭದಿಂದ ಇಪ್ಪತ್ತುನಾಲ್ಕನೇ ದಿನದ ಕೊನೆಗೆ ಪೊಂದಿದರು. ಪುಷ್ಯ ಬಹುಳ ತೃತೀಯಾ (೨೫ ನೇ ದಿನ) ದಿನ ಶ್ರಾದ್ಧದಾನವನ್ನು ಮುಗಿಸಿದರು. ಚತುರ್ಥಿ (೨೬ನೇ ದಿನ)ಯಂದು ಪುರಪ್ರವೇಶ ಮಾಡಿದರು. ಪಂಚಮಿ (ಪುಷ್ಯಬಹುಳ ಪಂಚಮಿ) ಯಂದು ರಾಜ್ಯಾಭಿಷೇಕವಾಯಿತು. ೨೮ನೇ ದಿನ ಅಂದರೆ ಷಷ್ಠಿಯಂದು ಪ್ರಜರನ್ನು ಸಮಾಧಾನ ಪಡಿಸಿ, ನಿಯೋಗ ನಿರ್ವಹಣ ನಡೆಸಿದರು. ದಾನಗಳನ್ನು ಅಭ್ಯುದಯಾರುವಾಗಿ ಮಾಡಿ, ೨೯ನೇ ದಿನ ಅಂದರೆ ಸಪ್ತಮಿಯಂದು ಭೀಷ್ಮನನ್ನು ಕಂಡರು. ಅಂದಿನಿಂದ ಮೊದಲ್ಗೊಂಡು ಮಾಘಶುದ್ಧ ಸಪ್ತಮಿಯವರೆಗೂ ಉಪದೇಶವು ನಡೆಯಿತು. ಭೀಷ್ಮನು ಅಷ್ಟಮಿಯಂದು ಶರೀರತ್ಯಾಗಮಾಡಿದನು. (ಇದು ಒಂದು ರೀತಿಯ ದಿನಗಣನೆ).

ಪುಷ್ಯ ಶುದ್ಧ ದ್ವಿತೀಯಾ ದಿನವೇ ಸಂಪಾತನ್ಯಾಯದಿಂದ ಆಶೌಚನಿವೃತ್ತಿಯಾಯಿತು. ತೃತೀಯಾದಂದು ಶ್ರಾದ್ಧದಾನವನ್ನು ಚತುರ್ಥಿಯಂದು ಪುರಪ್ರವೇಶವನ್ನು ಮಾಡಿದರು. ಪಂಚಮಿಯಿಂದ ಪಟ್ಟಾಭಿಷೇಕವಾಯಿತು. ಷಷ್ಠಿಯ ದಿನ ಪ್ರಜಾಸಾಂತ್ವನ ದಾನಗಳು ನಡೆದವು. ಸಪ್ತಮಿಯಂದು ಭೀಷ್ಮನನ್ನು ಕಂಡರು. (ಯುದ್ಧಾರಂಭದಿಂದ ೨೫ ನೇ ದಿನ) ಅಂದಿನಿಂದ ಒಂದು ತಿಂಗಳು (೩೦ ದಿನ) ಭೀಷ್ಮೋಪದೇಶವು ನಡೆಯಿತು. ಅಂದಿಗೆ ಭೀಷ್ಮನು ನಲವತ್ತೈದು ದಿನಗಳ ಕಾಲ ಶರಶಯನದಲ್ಲಿದ್ದು, ಅಷ್ಟಮಿಯಂದು ತನ್ನ ಶರೀರವನ್ನು ಬಿಟ್ಟನು. (ಇದು ಸರಿಯಾದ ರೀತಿಯೆಂದು ತೋರುತ್ತಿದೆ. ವಿಚಾರಶೀಲರು ಗಮನಿಸಿ ತಿಳಿಸಬೇಕು.)

ಕುಂತೀಪುತ್ರನಾದ ಯುಧಿಷ್ಠಿರನು ರಾಜ್ಯವನ್ನು ಹೊಂದಿ, ಸಕಲ ಪ್ರಜರನ್ನು ಧರ್ಮದಿಂದ ಪಾಲಿಸಿದನು. ಅನುಜೀವಿಭೃತ್ಯರನ್ನು, ಅತಿಥಿ ಯಾಚಕರನ್ನು ಬೇಕಾದ್ದನ್ನಿತ್ತು ಸಂತೋಷಪಡಿಸಿದನು. ತಾನು ಪೌರವಿ ಎಂಬ ರಾಣಿಯೊಡನೆ ಪ್ರತ್ಯೇಕ ರಾಜಪ್ರಾಸಾದದಲ್ಲಿ ವಸಿಸುತ್ತಿದ್ದನು.

ಆಮೇಲೆ ಧರ್ಮರಾಜನು ಅರ್ಜುನ ಮಂದಿರದಲ್ಲಿದ್ದ ಶ್ರೀಕೃಷ್ಣನನ್ನು ಕಾಣಲು ಹೋದನು. ಶ್ರೀಕೃಷ್ಣನು ಮಣಿಹೇಮ ಮಂಚದಲ್ಲಿ ದಿವ್ಯಾಭರಣ ಭೂಷಿತನಾಗಿ ಕೂತಿದ್ದನು. ಉದಯ ಪರ್ವತಾಗ್ರದಿ ವಿರಾಜಿಪ ಸೂರ್ಯನೋ, ಬಂಗಾರದಲ್ಲಿ ಜೋಡಿಸಿದ ನೀಲಮಣಿಯೋ ಎಂಬಂತೆ ಕಂಗೊಳಿಪ ಶ್ರೀಕೃಷ್ಣನು ಕೌಸ್ತುಭಾಯುಕ್ತ ಕಂಧರನು, ಶ್ಯಾಮಸುಂದರನು, ದಯಾಬಂಧುರನು ಆಗಿ ಪ್ರಕಾಶಿಸಿದನು. ಶ್ರೀಕೃಷ್ಣನನ್ನು ಕಂಡ ಧರ್ಮರಾಜನು, ಶ್ರೀಕೃಷ್ಣನಿಗೆ ರೂಪೌದಾರ್ಯ ಧೈರ್ಯದಯಾ ಜ್ಞಾನ ವೀರ್ಯ ವಿಜ್ಞಾನಾದಿ ಗುಣಗಳಿಂದ ಸಮನೆಂದರೆ ಶ್ರೀಕೃಷ್ಣನೇ ಎಂದು ಮನಗಂಡನು. ಪುರುಷವಿಗ್ರಹನಾದ ವಿಷ್ಣುವಿನನ್ನು ಸಮೀಪಿಸಿ, ಧರ್ಮಜನು, ಹತ್ತಿರವಿದ್ದ ಸಿಂಹಾಸನದಿ ಕೂತು, 'ಶ್ರೀಕೃಷ್ಣ ! ರಾತ್ರಿಯು ಸುಖವಾಗಿ ಕಳೆಯಿತೇ ? ನಿನ್ನ ಬುದ್ಧಿಯು ಪ್ರಸನ್ನವಾಗಿದೆಯೇ ? ನಿನ್ನ ಅನುಗ್ರಹದಿಂದ ನಾವು ಗೆದ್ದೆವು. ಭೂರಾಜ್ಯವೆಮ್ಮದಾಯಿತು. ಧರ್ಮವನ್ನು ಬಿಡದೆ, ಜಯವನ್ನು ಗಳಿಸಿದೆವು' ಎಂದು ಮಧುರವಚನಗಳನ್ನಾಡಿದನು.

ಶ್ರೀಕೃಷ್ಣನು ಧರ್ಮಜನ ನುಡಿಗೆ ಬದುಲಿಡದೆ, ಅರೆಗಣ್ಣು ಮುಚ್ಚಿ, ಧ್ಯಾನಪರನಾಗಿದ್ದನು. ಅದನ್ನು ಕಂಡು ಧರ್ಮರಾಜನು 'ಕೃಷ್ಣ ! ಅಚ್ಚರಿಯಾಗಿದೆ! ಏನನ್ನು ಚಿಂತಿಸುವೆ? ಲೋಕತ್ರಯಕ್ಕೂ ಕ್ಷೇಮವಿದೆಯಲ್ಲವೇ? ಶರೀರ ವ್ಯಾಪಾರವನ್ನು ನಿಲ್ಲಿಸಿ, ಮುನಿವಲ್ಲಭನಂತೆ, ಗಂಭೀರ ಶಾಂತವದನನಾಗಿರಲು ಕಾರಣವೇನು?' ಎಂದು ಕೇಳಿದನು. ವಾಸುದೇವನಿಂತೆಂದನು: 'ಶರತಲ್ಪಗತನಾದ ನಿನ್ನ ಪಿತಾಮಹನು ನನ್ನನ್ನು ಧ್ಯಾನಿಸುತ್ತಿರುವನು. ಆರುತ್ತಿರುವ ಅಗ್ನಿಯಂತೆ, ಶರೀರವನ್ನು ಬಿಡಲಿರುವ ಭೀಷ್ಮನ ಕಡೆಗೆ ನನ್ನ ಮನವು ಹರಿದೋಡುತ್ತಿದೆ. ಸಿಡಿಲಂತೆ ಬಡಿವ ಬಾಣಗಳಿಂದ ದೇವರಾಜನಿಗೂ ದುಸ್ಸಹನು, ಎಲ್ಲ ರಾಜರನ್ನು ಗೆದ್ದು ಕಾಶೀರಾಜಕನ್ಯೆಯರನ್ನು ತಮ್ಮನಿಗಾಗಿ ತಂದ ಮಹಾವಿಕ್ರಮನು, ಇಪ್ಪತ್ತುಮೂರು ದಿನಗಳ ಕಾಲ ಭಾರ್ಗವರಾಮನಿಂದ ಹೋರಾಡಿ ಚಲಿಸದ ಧೈರ್ಯಶಿಯು, ಗಂಗಾದೇವಿಯ ಪ್ರೀತಿಯ ಪುತ್ರನು, ವಸಿಷ್ಠ ಬೃಹಸ್ಪತಿ ಭಾರ್ಗವರಾರಾಮನ ಶಿಷ್ಯನು, ವೇದವೇದಾಂಗ ಚತುರನು, ದಿವ್ಯಾಸ್ತ್ರಕೋವಿದನು, ಧರ್ಮಾಧರ್ಮ ವಿಚಕ್ಷಣನು ಆದ ಭೀಷ್ಮನ ಕಡೆಗೆ ನನ್ನ ಮನವು ಹರಿದೋಡುತ್ತಿದೆ. ಭೀಷ್ಮನಂತಹ ಧರ್ಮಜ್ಞಾನಿಯು ಇನ್ನಿಲ್ಲ. ಅವನು ಅಸ್ತಂಗತನಾಗಲಿರುವನು. ಮುಂದೆ ಲೋಕವು ಅಜ್ಞಾನಾಂಧಕಾರ ಬಂಧುರವಾಗುವುದು. ಧರ್ಮರಾಜ ! ನಿನ್ನ ಮನಸ್ಸಿನಲ್ಲಿರುವ ಧರ್ಮಸಂಶಯಗಳನ್ನು ಪಿತಾಮಹನಿಂದ ತಿಳಿದು, ಕೇಳಿಕೋ ! ಚಾತುರ್ಹೋತ್ರಾದಿ ಯಜ್ಞವಿಧಾನಗಳನ್ನು, ಚತುರ್ವರ್ಣಾಶ್ರಮ ಧರ್ಮಗಳನ್ನು ರಾಜಧರ್ಮ ಆಪದ್ಧರ್ಮ ಸ್ತ್ರೀಧರ್ಮಗಳನ್ನು ಕೇಳಿ ತಿಳಿ !'

ವಾಸುದೇವನ ವಚನಗಳನ್ನು ಕೇಳಿ, ಧರ್ಮರಾಜನು ತಾತನನ್ನು ನೆನೆದು ಕಣ್ಣೀರಿಟ್ಟನು. 'ಮಾಧವ ! ನೀನು ನುಡಿದಂತೆ, ಭೀಷ್ಮನು ಮಹಾನುಭಾವನಿರುವನು. ವಿಪ್ರರ ಮುಖದಿಂದ ಆತನ ಪ್ರಭಾವ ತಪೋಬಲ ವೀರ್ಯಗಳನ್ನು ಕೇಳಿ ತಿಳಿದಿರುವೆನು. ಅವನನ್ನು ಕಾಣಲು ನನ್ನ ಬುದ್ಧಿಯು ತವಕಿಸುತ್ತಿದೆ. ದಯಮಾಡಿ ನೀನು ಮುಂದೆ

ನಡೆ ! ನಿನ್ನನ್ನು ಅನುಸರಿಸಿ ನಾವೂ ಬರುವೆವು. ಉತ್ತರಾಯಣವು ಬರುತ್ತಲೇ, ಆತನು ಪುಣ್ಯಲೋಕಗಳನ್ನು ಸೇರಪೋಗುವನು. ಅಂತಹವನಿಗೆ ನಿನ್ನ ದಿವ್ಯದರ್ಶನವನ್ನಿತ್ತು ಕರುಣಿಸು ! ವೇದವೇದ್ಯನಾದ ನಿನ್ನ ದರ್ಶನಲಾಭವನ್ನಿತ್ತು, ನಮ್ಮ ತಾತನನ್ನು ಉದ್ಧರಿಸು ! '

ಆಗ ಶ್ರೀಕೃಷ್ಣನು ಸಾತ್ಯಕಿಯನ್ನು ಕಂಡು, ರಥವನ್ನು ಸಜ್ಜುಗೊಳಿಸೆಂದನು. ಸಾತ್ಯಕಿಯ ಆಜ್ಞೆಯಂತೆ, ದಾರುಕನು ದಿವ್ಯರಥವನ್ನು ಸಿದ್ಧಪಡಿಸಿ ತಂದನು. ಆ ರಥವು ಕನಕಮಯವಾಗಿತ್ತು ! ಮರಕತ, ಚಂದ್ರಕಾಂತ, ಸೂರ್ಯಕಾಂತ ಮಣಿಗಳಿಂದ ರಥವಿಟಂಕವು ಹೊಳೆಯುತ್ತಿತ್ತು. ಗರುಡಧ್ವಜವು ಮೇಲೆ ಹಾರುತ್ತಿತ್ತು. ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ನಾಲ್ಕು ಕುದುರೆಗಳು ಹರ್ಷದಿಂದ ಕೆನೆಯುತ್ತಿದ್ದವು. ಅಂತಹ ರಥವನ್ನೇರಿ ಶ್ರೀಕೃಷ್ಣನು ಸಾತ್ಯಕಿಯೊಡಗೂಡಿ, ಭೀಷ್ಮನಿದ್ದ ರಣರಂಗಕ್ಕೆ ತೆರಳಿದನು. ಪಾಂಡವರೂ ಆತನನ್ನು ಹಿಂಬಾಲಿಸಿ, ರಥಗಳಲ್ಲಿ ಕೂತು ಬಂದರು.

ಅಲ್ಲಿ, ಕುರುಪಿತಾಮಹನು ಉತ್ತರಾಯಣಕ್ಕೆಂದು ಕಾದಿದ್ದನು. ಸ್ವಚ್ಛಂದ ಮರಣನಾದ ಭೀಷ್ಮನ ದೇಹೋತ್ಸರ್ಗವನ್ನು ನೋಡಲೆಂದು, ಬ್ರಾಹ್ಮಣರು, ಋಷಿಗಳು ಬಂದು, ಆತನನ್ನು ಸುತ್ತಿ ಕೂತಿದ್ದರು. ಧರ್ಮರಾಜನಿತ್ತ ಸೇವಕವರ್ಗವು ಅವರ ಶುಶ್ರೂಷೆಯಲ್ಲಿ ತೊಡಗಿ, ಅಪ್ರಮತ್ತವಾಗಿತ್ತು. ಶ್ರೀವೇದವ್ಯಾಸ ಪರಶುರಾಮರನ್ನು ಮುಂದೆ ಮಾಡಿಕೊಂಡು ನಾರದ, ದೇವಸ್ಥಾನ, ವಾತ್ಸ್ಯ, ಆಶ್ಮಕ, ಸುಮಂತು, ಪೈಲ, ಜೈಮಿನಿ, ಶಾಂಡಿಲ್ಯ, ದೇವಲ, ಮೈತ್ರೇಯ, ಅಸಿತ, ವಸಿಷ್ಠ ಕೌಶಿಕ, ಹಾರೀತ, ಲೋಮಶ, ಆತ್ರೇಯ, ಭಾರದ್ವಾಜ, ಶುಕ್ರ, ಚ್ಯವನ, ವಾಲ್ಮೀಕಿ, ತುಂಬುರು, ರುರು, ಮೌದ್ಗಲ್ಯ, ತೃಣಬಿಂದು, ಪಿಪ್ಪಲಾದ, ಸಂವರ್ತ, ಪುಲಹ, ಕಚ, ಕಾಶ್ಯಪ, ಪುಲಸ್ತ್ಯ, ಕ್ರತು, ಪರಾಶರ, ಮರೀಚಿ, ಅಂಗಿರಾ, ಗೌತಮ, ಗಾಲವ, ಧೌಮ್ಯ, ವಿಭಾಂಡಕ, ಮಾಂಡವ್ಯ, ಮಾರ್ಕಂಡೇಯ, ಪೂರಣ, ಕೃಷ್ಣ ನಾನು (ವೈಶಂಪಾಯನ) ಮುಂತಾದ ಮುನಿಗಳು ಕೂತಿದ್ದರು. ಅಗ್ನಿಕುಂಡಗಳಲ್ಲಿ ಅಗ್ನಿಗಳಂತೆ, ದಿವ್ಯಾಸನಗಳಲ್ಲಿ ಹೊಳೆವ ಮುನಿವರರಿಂದ ಶ್ರೀಶಮಹಿಮೆಯನ್ನು ಕೇಳುತ್ತಿದ್ದ ಭೀಷ್ಮನು ನಕ್ಷತ್ರಮಧ್ಯದ ಚಂದ್ರಮನಂತೆ ಕಂಗೊಳಿಸಿದನು.

ಆತನು ಶರತಲ್ಪಗತನಾಗಿದ್ದೂ ಸಂತತ ಶ್ರೀಕಾಂತ ಸ್ಮರಣತತ್ಪರನಾಗಿದ್ದನು. ಹೃಷ್ಟಸ್ವರದಿಂದ ಹೃಷಿಕೇಶನನ್ನು ಸ್ತುತಿಸುತ್ತಾ ಭೀಷ್ಮನು ಇಂತೆಂದನು :

'ಶ್ರೀಕೃಷ್ಣ ! ನನ್ನ ವಚನ ತತಿಯಿಂದ ನೀನು ಪ್ರೀತನಾಗು ! ಮುಖ್ಯ ಪ್ರಾಣಾಂತರ್ಯಾಮಿಯು, ಚರಾಚರಸ್ವಾಮಿಯು, ಸರ್ವದೋಷದೂರನು, ಅನಂತ ಕಲ್ಯಾಣಗುಣಾಧಾರನು, ಅತ್ಯಂತೇಷ್ಟನು, ಸರ್ವಶ್ರೇಷ್ಠನು, ಬ್ರಹ್ಮರುದ್ರಾದಿ ಸರ್ವ ಸುಜನಾಪ್ರಮೇಯ ಪ್ರಭಾವನು, ಜಗಜ್ಜನ್ಮಾದಿ ಕಾರಣ ಲೀಲಾಸ್ವಭಾವನು, ಸರ್ವ ಪಾಪಹರನು, ಭಕ್ತಜನಸಂತರನು, ಸರ್ವತ್ರ ವ್ಯಾಪ್ತನು, ಪ್ರಕೃತಿಪ್ರಾಕೃತ ನಿರ್ಲಿಪ್ತನು

ಸಹಸ್ರಚರಣನು, ರಮಾರಮಣನು, ಭಕ್ತಪರಾಯಣನು, ಮುಖ್ಯಪ್ರಾಣ ಪ್ರಾಣನು ಸರ್ವದೇವೋಪಾಸ್ಯಚರಣನು, ವೀತಪಾಪನು, ಧೂತಭಕ್ತತಾಪನು, ಸರ್ವಶಬ್ದ ಮುಖ್ಯಾರ್ಥನು, ದತ್ತಮಹಾಪುರುಷಾರ್ಥನು, ಸ್ವಗತಭೇದರಹಿತನು, ಸ್ವಭಕ್ತಾತ್ಯಂತಹಿತನು, ಅಮಂದಾನಂದಸಾಂದ್ರನು, ನಿಸ್ತಂದ್ರನು, ದೇವಕೀ ವಸುದೇವನಂದನನು, ಗರುಡಧ್ವಜಭೂಷಿತಸ್ಯಂದನನು ಆದ ಶ್ರೀಕೃಷ್ಣನಿಗೆ ಶಿರಸಾವಂದನವು !

ಸೃಷ್ಟಿಕಾಲದಲ್ಲಿ ಜಗವನ್ನು ತುಂಬುವುದರಿಂದಲು, ಸ್ವಯಂಗುಣಗಳಿಂದ ತುಂಬಿರುವುದರಿಂದಲು ನಿನ್ನನ್ನು ಬ್ರಹ್ಮನೆಂಬುವರು. ಪ್ರಳಯಕಾಲದಲ್ಲಿ ಎಲ್ಲವನ್ನೂ ಒಳಗೆ ಸೆಳೆಯುವ ನಿನ್ನನ್ನು ಸಂಕರ್ಷಣನೆಂಬುವರು. ಅತೀಂದ್ರಿಯಮಹಿಮನಾದ ನಿನ್ನನ್ನು ಭಜಿಸಿ, ಭಕ್ತರು ಸರ್ವಕಾಮುಗಳನ್ನು ಪೊಂದುವರು. ಓಂ ಎಂದು ನಿನ್ನ ಹೆಸರು. ನೀನು ಸರ್ವದಾ ವಿರಾಜಮಾನ ನಿರ್ದೋಷ ಜ್ಞಾನಾನಂದ ಸ್ವರೂಪನು. ಜಂಗಮ ಸ್ಥಾವರಾತ್ಮಕವಾದ ಜಗವೆಲ್ಲವೂ ನಿನ್ನ ಅಧೀನದಲ್ಲಿದೆ.

ದ್ವಾದಶಾದಿತ್ಯರಲ್ಲಿ ದ್ವಾದಶರೂಪನಾಗಿ ಜಗವನ್ನು ಬೆಳಗುವೆ ! ಸೋಮಾಂತರ್ಯಾಮಿಯಾಗಿ ಅಮೃತಕಿರಣಗಳಿಂದ ಶುಕ್ಲಪಕ್ಷದಲ್ಲಿ ದೇವತೆಗಳನ್ನೂ ಕೃಷ್ಣಪಕ್ಷದಲ್ಲಿ ಪಿತೃಗಳನ್ನೂ ತೃಪ್ತಿಗೊಳಿಸುವೆ ! ವಿಪ್ರರು ಪಾಡುವ ವೇದಗಳಿಗೆ ಮುಖ್ಯ ಪ್ರತಿಪಾದ್ಯನಿರುವೆ ! ನಿನ್ನನ್ನು ಯಥಾಯೋಗ್ಯವಾಗಿ ತಿಳಿದು ಸುಜೀವರು ಮೃತ್ಯು ಮುಖದಿಂದ ಪಾರಾಗಿ, ಮುಕ್ತಿಯನ್ನೈದುವರು. ಗಾಯತ್ರ್ಯಾದಿ ಛಂದೋಬದ್ಧವಾದ ಋಗ್ಯಜುಸ್ಸಾಮ ಮಂಗಳಮಂತ್ರಗಳಿಂದ, ಪಂಚಧಾನ, ಕರಂಭ, ಪರಿವಾಪ, ಪುರೋಡಾಶ, ಪಯಸ್ಸುಗಳೆಂಬ ಐದುವಿಧ ಹವಿಸ್ಸನ್ನು ಶ್ರದ್ಧೆಯಿಂದ ಕೊಟ್ಟವರಿಗೆ ತಕ್ಕ ಯಜ್ಞಫಲವನ್ನು ನೀನು ಕೊಡುವೆ ! **ಆಶ್ರಾವಯ** ಎಂಬ ನಾಲ್ಕಕ್ಷರಗಳು, **ಅಸ್ತುಶ್ರೌಷಟ್** ಎಂಬ ನಾಲ್ಕಕ್ಷರಗಳು, **ಯಜ** ಎಂಬ ಎರಡಕ್ಷರಗಳು, **ಯೇಯಜಾಮ ಹೇ** ಎಂಬ ಐದಕ್ಷರಗಳು, **ವಷಟ್** ಎಂಬ ಎರಡಕ್ಷರಗಳು ಒಟ್ಟು ಹದಿನೇಳಕ್ಷರಗಳಿಂದ ಕರೆಯಲ್ಪಡುವ ದೇವನೇ ! ನಿನಗೆ ನಮಸ್ಕಾರವು ! ವೇದಪುರುಷನೇ ! ನಿನ್ನನ್ನು ಯಜು ಎಂಬುವರು. ಗಾಯತ್ರ್ಯಾದಿ ಛಂದಗಳು ನಿನ್ನ ಕೈ ಕಾಲುಗಳು. ಋಗ್ಯಜುಸ್ಸಾಮಗಳಿಂದ ನಡೆವ ಯಜ್ಞವೇ ನಿನ್ನ ಶಿರವು. ರಥಂತರ ಬೃಹತ್ಸಾಮಗಳು ನಿನ್ನ ಪ್ರೀತಿವಾಕ್ಯಗಳು. ವಿಶ್ವಸೃಜರಾದ ಮರೀಚ್ಯಾದಿಗಳು ಮಾಡಿದ ಸಾವಿರ ವರ್ಷದ ಜ್ಞಾನ ಯಜ್ಞವನ್ನು ಫಲಪ್ರದವನ್ನಾಗಿಸಲು ಆವಿರ್ಭವಿಸಿದ ಹಂಸರೂಪಿಗೆ ನಮೋನಮಃ. ವಾಕ್ಯಗಳು ಕೈಗಳಾಗಿ, ಸಂಧಿಗಳು ಬೆರಳುಪರ್ವಗಳಾಗಿ, ಸ್ವರಗಳು ಮುಖವಾಗಿ, ವ್ಯಂಜನಗಳು ಮಿಕ್ಕ ಅಂಗಗಳಾಗಿ ವಾಕ್ಪ್ರಪಂಚದಲ್ಲಿ ವ್ಯಾಪ್ತನಾಗಿರುವ ಪರಮಾಕ್ಷರನಿಗೆ ನಮಃ. ಸೂಕರರೂಪನಾಗಿ, ಭೂಮಿಯನ್ನು ಉದ್ಧರಿಸಿದ ವೀರ್ಯಾತ್ಮನಿಗೆ ನಮಃ.

ಫಣಾಸಹಸ್ರದ ಶೇಷಪರ್ಯಂಕದಲ್ಲಿ ಮಲಗಿರುವ ಯೋಗನಿದ್ರಾತ್ಮನಿಗೆ ನಮಃ. ಧರ್ಮವನ್ನು ನಡೆಸುವ ಸುಜನರನ್ನು ಪರಿಪಾಲಿಸುವ ಸತ್ಯಾತ್ಮನಿಗೆ ನಮಃ. ನಾನಾ ವಿಧ ಭಾಗವತ ಧರ್ಮಗಳಲ್ಲಿ ವಿಹಿತವಾದ ಯಾವ ಧರ್ಮವನ್ನಾಗಲಿ, ಶ್ರೀಹರಿ ಪ್ರೀತಿಗಾಗಿ,

ಆಚರಿಸಿದವರಿಗೆ ಯೋಗ್ಯಫಲವನ್ನೀವ ಧರ್ಮಾತ್ಮನಿಗೆ ನಮಃ. ಕಾಮಮಯವಾದ ದೇಹಗಳುಳ್ಳ ಜೀವರಿಗೆ ವಿಹಿತಕಾಮಗಳನ್ನೀವ ಕಾಮಾತ್ಮನಿಗೆ ನಮಃ. ಕ್ಷೇತ್ರವೆನಿಸುವ ಇಪ್ಪತ್ತೈದು ತತ್ವಗಳು, ಏಳು ವಿಕಾರಗಳಲ್ಲಿಯು, ನಿರ್ಲಿಪ್ತನಾಗಿ ನಿಂತು ಕ್ಷೇತ್ರಜ್ಞನೆನಿಸುವ ಕ್ಷೇತ್ರಾತ್ಮನಿಗೆ ನಮಃ. ಹನ್ನೊಂದಿಂದ್ರಿಯಗಳು ಪಂಚಭೂತಗಳು ಈ ಹದಿನಾರಕ್ಕೂ ಒಡೆಯನಾಗಿ, ಅವನ್ನು ಪ್ರೇರಿಸುವ ಸಾಂಖ್ಯಾತ್ಮನಿಗೆ ನಮಃ. ಅಜ್ಞಾನ ನಿದ್ರೆಯಿಂದೆಚ್ಚತ್ತು ಭಕ್ತಿಯೋಗದಿಂದಲು, ಪ್ರಾಣಾಯಾಮಾದಿ ಶಾರೀರಕ ಶುದ್ಧಿಯಿಂದಲು ಭಜಿಪರಿಗೆ ಪ್ರಕಾಶರೂಪನಾಗಿ ತೋರುವ ಯೋಗಾತ್ಮನಿಗೆ ನಮಃ. ಪುಣ್ಯಪಾಪರೂಪ ಉಭಯಕರ್ಮಗಳನ್ನು ಅಪರೋಕ್ಷ ಜ್ಞಾನದಿಂದ ಕಳೆದುಕೊಂಡು, ಭಕ್ತರು ಮತ್ತೆ ಜನನಮರಣಗಳನ್ನು ಹೊಂದದೆ, ವೈಕುಂಠದಲ್ಲಿರುವಂತೆ, ಅನುಗ್ರಹಿಸುವ ಮೋಕ್ಷಾತ್ಮನಿಗೆ ನಮಃ. ಯುಗಾಂತದಲ್ಲಿ ಪ್ರಳಯಾರ್ಕಸಂಕರ್ಷನಾಗಿ ಭೂತಗಳನ್ನು ದಹಿಸಿ, ನುಂಗುವ ಘೋರಾತ್ಮನಿಗೆ ನಮಃ. ವಟಪತ್ರಪುಟದಲ್ಲಿ ಬಾಲರೂಪನಾಗಿ ಸ್ವೇಚ್ಛೆಯಿಂದ ಮಲಗುವ ಮಾಯಾತ್ಮನಿಗೆ ನಮಃ. ಭುವನಾರಂಭವಾದ ಕಮಲವನ್ನು ನಾಭಿಯಿಂದ ಹೊರಹೊಮ್ಮಿಸಿದ ಪದ್ಮಾತ್ಮನಿಗೆ ನಮಃ. ಕೇಶಗಳಲ್ಲಿ ಮೇಘಗಳನ್ನೂ, ನಾಡಿಗಳಲ್ಲಿ ನದಗಳನ್ನೂ, ಕುಕ್ಷಿಯಲ್ಲಿ ನಾಲ್ಕು ಸಮುದ್ರಗಳನ್ನೂ ಪುಟ್ಟಿಸಿ ಧರಿಸಿರುವ ತೋಯಾತ್ಮನಿಗೆ ನಮಃ. ಸರ್ವಜಗವನ್ನೂ ಪುಟ್ಟಿಸಿ, ಅದರಲ್ಲಿ ಪ್ರವೇಶಿಸಿ, ಕೊನೆಗೆ ಸಂಹರಿಸಿ ಮೆರೆವನಿಮಿತ್ತ ಸ್ವತಂತ್ರಕಾರಣನಾದ ಹೇತ್ವಾತ್ಮನಿಗೆ ನಮಃ. ರಾತ್ರಿಯಾದರೂ ನಿದ್ರೆಗೈಯದೆ, ಹಗಲಾದರೂ ದುಡಿದು ದಣಿಯದೆ, ಸ್ವತಂತ್ರಕರ್ತನೂ, ಸರ್ವಸಾಕ್ಷಿಯೂ ಆಗಿರುವ ದ್ರಷ್ಟಾತ್ಮನಿಗೆ ನಮಃ. ಕಾರ್ಯಗಳನ್ನು ಅನಾಯಾಸವಾಗಿ ನಡೆಸಿ, ಫಲವನ್ನು ಬಯಸದೆ, ತಾನೂ ವಿಕಾರವನ್ನು ಹೊಂದದೆ, ಶಶ್ವದೇಕಪ್ರಕಾರನಾದ ಕಾರ್ಯಾತ್ಮನಿಗೆ ನಮಃ. ಇಪ್ಪತ್ತೊಂದು ಸಲ ಕ್ಷತ್ರಿಯದುಷ್ಟರನ್ನು ನಾಶಗೊಳಿಸಿದ ಕ್ರೌರ್ಯಾತ್ಮನಿಗೆ ನಮಃ. ಪ್ರಾಣಾಪಾನವ್ಯಾನೋದಾನಸಮಾನ ರೂಪನಾಗಿ, ಶರೀರ ವ್ಯಾಪಾರವನ್ನು ನಡೆಸುವ ಮುಖ್ಯಪ್ರಾಣಾಂತರ್ಯಾಮಿ ವಾಯ್ವಾತ್ಮನಿಗೆ ನಮಃ. ದಿನ ಮಾಸ ವರ್ಷ ಯುಗ ರೂಪಕಾಲಕ್ಕೆ ಪ್ರವರ್ತಕನಾದ ಕಾಲಾತ್ಮನಿಗೆ ನಮಃ. ಮುಖಬಾಹೂರು ಪಾದಗಳಿಂದ ವಿಪ್ರ ಕ್ಷತ್ರ ವೈಶ್ಯ ಶೂದ್ರ ವರ್ಣಗಳನ್ನು ಪಡೆದ ವರ್ಣಾತ್ಮನಿಗೆ ನಮಃ. ಮುಖದಿಂದ ಅಗ್ನಿಯನ್ನು, ತಲೆಯಿಂದ ದ್ಯುಲೋಕವನ್ನು, ನಾಭಿಯಿಂದ ಅಂತರಿಕ್ಷವನ್ನು, ಪಾದಗಳಿಂದ ಭೂಮಿಯನ್ನು, ಕಣ್ಣಿಂದ ಸೂರ್ಯನನ್ನು, ಕಿವಿಯಿಂದ ದಿಕ್ಕುಗಳನ್ನು ಪಡೆದ ಲೋಕಾತ್ಮನಿಗೆ ನಮಃ. ಕಾಲದಿಂದ ಭಿನ್ನನು, ದೇವತೆಗಳಿಂದ ಭಿನ್ನನು, ಮಹಾಲಕ್ಷ್ಮಿಯಿಂದ ಭಿನ್ನನು ಆಗಿ ಅವರನ್ನು ಪಾಲಿಪ ವಿಶ್ವಾತ್ಮನಿಗೆ ನಮಃ. ವಿಷಯರಾಗದಿಂದ ಮನೋಭಿಲಾಷೆಯನ್ನು ಪುಟ್ಟಿಸಿ, ಜೀವರ ಸಂಸಾರಕಾರಣನಾದ ಗೋಪ್ತಾತ್ಮನಿಗೆ ನಮಃ. ಅನ್ನಪಾನಗಳಲ್ಲಿ ನಿಂತು ಜೀವರಿಗೆ ಉಪಜೀವ್ಯನಾಗಿರುವ ಪ್ರಾಣಾತ್ಮನಿಗೆ ನಮಃ. ಚತುರ್ವಿಧಾನ್ನವನ್ನು ಜೀರ್ಣಗೊಳಿಸಿ, ಜೀವಧಾರಕನಾಗಿರುವ ಪಾಕಾತ್ಮನಿಗೆ ನಮಃ. ಕೆಂಗಣ್ಣು ಕೋರೆಯ ಮುಖ, ಮೊನಚಾದ ಉಗುರುಗಳನ್ನು

ಧರಿಸಿ, ದಾನವೇಂದ್ರನನ್ನು ಕೊಂದ ದೃಪಾತ್ಮನಿಗೆ ನಮಃ. ದೇವ ದಾನವ ಮಾನವಾದಿ ಜೀವರಿಗೆ ಸಾಕಲ್ಯೇನ ತಿಳಿಯಲು ಬಾರದ ಸೂಕ್ಷ್ಮಾತ್ಮನಿಗೆ ನಮಃ. ರಸಾತಲಗತನಾಗಿ, ಶೇಷಾಂತರ್ಯಾಮಿ ಅನಂತನೆನಿಸಿ, ಜಗವನ್ನು ಧರಿಪ ವೀರ್ಯಾತ್ಮನಿಗೆ ನಮಃ. ಅಹಂ ಮಮಕಾರವೆಂಬ ಮೋಹಪಾಶವನ್ನು ಬಿಗಿದು, ಸೃಷ್ಟಿಸ್ಥಿತಿಗಳನ್ನು ಸಾಧಿಸುವ ಜೀವೇಶನಾದ ಮೋಹಾತ್ಮನಿಗೆ ನಮಃ. ಪಂಚೇಂದ್ರಿಯಗಳಿಂದ ಬರುವ ಜ್ಞಾನಕ್ಕೆ ಕಾರಣನು, ಪ್ರೇರಕನು ಆದ ಜ್ಞಾನಾತ್ಮನಿಗೆ ನಮಃ. ಅಪ್ರಮೇಯ ದಿವ್ಯಶರೀರನು, ಸರ್ವಜ್ಞನು ಅನಂತ ಗುಣಪೂರ್ಣನು ಆದ ದಿವ್ಯಾತ್ಮನಿಗೆ ನಮಃ. ಜಟಾ, ದಂಡ, ಕಮಂಡಲಗಳನ್ನು ಗುರ್ತಾಗಿಟ್ಟು ಬ್ರಹ್ಮನನ್ನು ಸೃಜಿಸಿದ ಬ್ರಹ್ಮಾತ್ಮನಿಗೆ ನಮಃ. ಶೂಲ, ತ್ರಿನೇತ್ರ, ಲಿಂಗಗಳನ್ನು ಗುರ್ತಾಗಿ ಕೊಟ್ಟು, ರುದ್ರನನ್ನು ಸೃಜಿಸಿದ ರುದ್ರಾತ್ಮನಿಗೆ ನಮಃ. ಚಂದ್ರಮೌಳಿಯು, ವ್ಯಾಘ್ರಚರ್ಮಾಂಬರನು ಪಿನಾಕಶೂಲಹಸ್ತನು ಆದ ಉಗ್ರನಿಗೆ ಅಂತರ್ಯಾಮಿಯಾದ ಉಗ್ರಾತ್ಮನಿಗೆ ನಮಃ. ಸರ್ವಭೂತಗಳ ಅಂತರ್ಯಾಮಿಯು ಸರ್ವಭಿನ್ನನು, ಸ್ವಗತಭೇದ ವಿವರ್ಜಿತನು, ಸರ್ವಸ್ವಾಮಿಯು, ಕ್ರೋಧ ಲೋಭ, ಮೋಹವರ್ಜಿತನು, ಆದ ಸರ್ವಾತ್ಮನಿಗೆ ನಮಃ. ವಿಶ್ವವನ್ನು ಸೃಜಿಸಿ, ವಿಶ್ವದಲ್ಲಿ ವ್ಯಾಪಿಸಿ, ವಿಶ್ವಭಿನ್ನನಾಗಿ, ವಿಶ್ವವನ್ನಾಳುವ, ವಿಶ್ವಸಂಹಾರಕನಾದ ಶ್ರೀಕೃಷ್ಣನಿಗೆ ನಮೋ ನಮಃ.

ಮುರಾರೇ ! ಮೂರು ಲೋಕಗಳಲ್ಲಿ ತುಂಬಿ, ಮೂರು ಪ್ರಕೃತಿ ಗುಣಗಳಿಗೆ ಅತೀತನಾಗಿ, ಮೂರು ವಿಧ ಕರ್ಮಗಳ ಲೇಪವಿಲ್ಲದೆ, ಮೂರು ಕಾಲಗಳಲ್ಲಿಯು ನಿರ್ವಿಕಾರನಾಗಿದ್ದು, ಮೂರು ವಿಧ ಜೀವರಿಗೆ ಮೂರು ವಿಧ ಗತಿಯನ್ನೀವ ಮುಕುಂದನೇ! ನಿನಗೆ ನಮಃ. ಶಿರದಿಂದ ದ್ಯುಲೋಕವನ್ನು, ಪಾದಗಳಿಂದ ಭೂಮಿಯನ್ನು, ಕಿವಿಗಳಿಂದ ದಿಕ್ಕುಗಳನ್ನು, ಕಣ್ಣಿನಿಂದ ಸೂರ್ಯನನ್ನು, ವೀರ್ಯದಿಂದ ಪ್ರಜಾಪತಿಗಳನ್ನು ಸೃಜಿಸಿ, ಪ್ರೇರಿಸುವ ಸರ್ವಶಕ್ತನಿಗೆ ನಮಃ. ಅತಸೀಪುಷ್ಪಸಂಕಾಶನು, ಪೀತವಾಸನು, ಆದ ಗೋವಿಂದನಿಗೆ ನಮಸ್ಕರಿಸುವವರಿಗೆ ಯಾವ ಭಯವೂ ಇಲ್ಲ. ಶ್ರೀಕೃಷ್ಣನಿಗೆ ಮಾಡಿದ ನಮಸ್ಕಾರವು ಒಂದಾದರೂ, ಹತ್ತು ಅಶ್ವಮೇಧಗಳಿಗೆ ಸಮ ಪುಣ್ಯಪ್ರದವಾಗಿದೆ. ಇನ್ನೂ ಹೆಚ್ಚೆಂದೇ ಹೇಳಬಹುದು, ಏಕೆಂದರೆ ದಶಾಶ್ವಮೇಧಿಯು ತಿರುಗಿ ಪುಟ್ಟುವನು; ಕೃಷ್ಣನಮನಕರ್ತನು ಪುನರ್ಜನ್ಮವನ್ನು ಹೊಂದದೆ, ಮುಕ್ತನಾಗುವನು.

ಶ್ರೀಕೃಷ್ಣಪ್ರೀತಿಯೇ ವ್ರತವಾಗಿ, ಕೃಷ್ಣನನ್ನು ನೆನೆಯುತ್ತಾ, ವಿವಶರಾದವರು ಆನಂದ ದೇಹರಾಗಿ ಶ್ರೀಕೃಷ್ಣಲೋಕವನ್ನು ಸೇರುವರು. ಮಂತ್ರಹುತವಾದ ಆಜ್ಯವು ದೇವತೆಗಳಿಗೂ, ತದಂತರ್ಯಾಮಿ ಶ್ರೀಹರಿಗೂ ಸೇರುವಂತೆ, ಭಕ್ತರು ಶ್ರೀಹರಿಲೋಕವನ್ನು ಸೇರುವರು. ನರಕಭಯ ನಿವಾರಣನು, ಸಂಸಾರಸಾಗರ ಸಂತರಣ ತರಣಿಯು, ಬ್ರಹ್ಮಣ್ಯವೇದನು, ಗೋಬ್ರಾಹ್ಮಣ ಹಿತನು, ಸುಜನ ಜಗದ್ಧಿತನು ಗೋವಿಂದನು ಆದ ಶ್ರೀಕೃಷ್ಣನಿಗೆ ನಮೋ ನಮಃ. ಸಂಸಾರರೋಗ ಭೇಷಜವು, ಪ್ರಾಣವರ್ಗ ಜೀವನ ಪಾಥೇಯವು, ದುಃಖ ಶೋಕನಿವಾರಣವು ಆದ 'ಹರಿ' ಎಂಬ ಎರಡಕ್ಷರಗಳು ನನ್ನ

ನಾಲಿಗೆಯಲ್ಲಿ ಸದಾ ನುಡಿಯಲ್ಪಡಲಿ! ವಿಷ್ಣುಪ್ರಧಾನವಾಗಿದೆ ಜಗವೆಲ್ಲವು; ಶ್ರೀಶನಿಗೆ ಸಮರಿಲ್ಲ ; ಅಧಿಕರಿನ್ನೆಲ್ಲಿ? ಎಂಬ ಸತ್ಯದ ಬಲದಿಂದ ನನ್ನ ಪಾಪಗಳೆಲ್ಲವು ನಾಶವಾಗಲಿ! ನಿನ್ನನ್ನು ನಂಬಿ, ಅನ್ಯರನ್ನರಿಯದ ನಿನ್ನ ಭಕ್ತನಿಗೆ ಹಿತವಾದ ಗತಿಯನ್ನು ನೀನೇ ಕರುಣಿಸು ! ಪ್ರಭೋ! ನನ್ನ ಈ ವಚನಯಜ್ಞದಿಂದ ನಾರಾಯಣನು ಪ್ರೀತನಾಗಲಿ!'

ಇಂತು ಸ್ತುತಿಸಿ, ಭೀಷ್ಮನು ಕೈಗಳನ್ನೆತ್ತಿ ನಮಿಸಿ, ತನಗೆ ಇಂತು ಸ್ತುತಿಪ ಜ್ಞಾನವನ್ನಿತ್ತ ಶ್ರೀಕೃಷ್ಣನನ್ನು ಭಕ್ತಿಯಿಂದ ಸ್ಮರಿಸುತ್ತಾ, ಸುಮ್ಮನಾದನು. ಅವನ ಅಚಲಭಕ್ತಿಯನ್ನು ಕಂಡು, ಸುತ್ತ ನೆರೆದಿದ್ದ ಬ್ರಹ್ಮರ್ಷಿಗಳು ಆತನನ್ನು ಪ್ರಶಂಸಿಸಿದರು. ಆಗ ಶ್ರೀಕೃಷ್ಣನು ಅಲ್ಲಿಗೆ ದಯಮಾಡಿಸಿದನು. ಸಾತ್ಯಕಿ, ಪಾಂಡವರೈವರು, ಕೃಪ, ಯುಯುತ್ಸು ಸಂಜಯರು, ಶ್ರೀಶನ ಹಿಂದೆಯೇ ಬಂದರು. ಶ್ರೀಕೃಷ್ಣನು ಸಮಂತಪಂಚಕವನ್ನು ತೋರಿ, ಧರ್ಮರಾಜನಿಗೆ ಪರಶುರಾಮನು ಪಿತೃತರ್ಪಣವನ್ನಿತ್ತ ದಿವ್ಯಚರಿತೆಯನ್ನು ವರ್ಣಿಸಿದನು.

"ಹಿಂದೆ ಕುಶಿಕನೆಂಬ ರಾಜನು ಇಂದ್ರಸಮ ಪುತ್ರನನ್ನು ಬೇಡಿ ತೀವ್ರತಪವನ್ನು ಮಾಡಿದನು. ಇಂದ್ರನು, ಮತ್ತೊಬ್ಬ ಇಂದ್ರನಾಗಬಾರದೆಂದು, ತಾನಾಗಿ ಕುಶಿಕನಿಗೆ ಪುತ್ರನಾಗಿ ಅವತರಿಸಿದನು. ಆ ಪುತ್ರನನ್ನು ಗಾಧಿ ಎಂಬರು. ಗಾಧಿಯು ತನ್ನ ಮಗಳಾದ ಸತ್ಯವತಿಯನ್ನು ಋಚೀಕನೆಂಬ ಭಾರ್ಗವನಿಗೆ ಕೊಟ್ಟಿದ್ದನು. ಆ ಮಹರ್ಷಿಯು ಮಂತ್ರಿಸಿ ಇಟ್ಟ ಚರುದ್ವಯವನ್ನು ಸತ್ಯವತೀ ಗಾಧಿಪತ್ನಿಯರು ವ್ಯತ್ಯಸ್ತವಾಗಿ ಸ್ವೀಕರಿಸಿದರು. ಋಚೀಕನು, 'ಭದ್ರೇ ! ಮಾತೃಪ್ರೇಮದಿಂದ ನಿನ್ನ ಚರುವನ್ನು ಆಕೆಗಿತ್ತು, ಆಕೆಯ ಚರುವನ್ನು ನೀನು ಸ್ವೀಕರಿಸಿದೆ! ಅನ್ಯಾಯವಾಯಿತು. ನಿನ್ನ ಮಗನು ಕ್ರೂರಕರ್ಮನಾಗುವನು; ನಿನ್ನ ತಮ್ಮನು ಬ್ರಹ್ಮರ್ಷಿಯಾಗುವನು' ಎಂದು ನುಡಿದನು. ಹಾಗಾಗಬಾರದೆಂದು ಬೇಡಿದ ಸತಿಯಲ್ಲಿ ಕರುಣಿಸಿ, ಋಚೀಕನು 'ನಿನ್ನ ಮಗನೂ ಬ್ರಹ್ಮರ್ಷಿಯಾಗುವನು ; ಆದರೆ ನಿನ್ನ ಮೊಮ್ಮಗನು ಮಾತ್ರ ಕ್ರೂರನಾಗದಿರನು' ಎಂದನು. ಅಂತೆಯೇ ಗಾಧಿಪುತ್ರನಾದ ವಿಶ್ವಾಮಿತ್ರನು ತೀವ್ರ ತಪವನ್ನು ಮಾಡಿ, ಬ್ರಾಹ್ಮಣತ್ವವನ್ನು ಸಂಪಾದಿಸಿದನು. ಸತ್ಯವತಿಯ ಪುತ್ರನಾದ ಜಮದಗ್ನಿಗೆ ರೇಣುಕೆಯಲ್ಲಿ ಜನಿಸಿದ ಪರಶುರಾಮನು ಕುಠಾರಧಾರೆಯಿಂದ ಕ್ಷತ್ರರಕ್ತವನ್ನು ಹರಿಸಿ, ಸಮಂತಪಂಚಕವನ್ನು ನಿರ್ಮಿಸಿದನು. ಭಗವಂತನಾದ ಭಾರ್ಗವನ ಪರಶುವಿಗೆ ದುಷ್ಟಕ್ಷತ್ರಿಯರೆಲ್ಲರೂ ಪಶುಗಳಂತೆ ಬಲಿಯಾದರು. ಮುಂದೆ ಮತ್ತೆ ದುಷ್ಟರಾಜರ ಸಂಖ್ಯೆಯು ಅಪರಿಮಿತವಾದಾಗ, ಧರ್ಮರಾಜ! ಅವರು ಕುರುಕ್ಷೇತ್ರದ ಭಾರತಯುದ್ಧದಲ್ಲಿ ನಿಮ್ಮಿಂದ ಸಂಹೃತರಾದರು. ಪರಶುರಾಮನಂತೆ ದುಷ್ಟಸಂಹಾರವನ್ನು ಗೈದ ನೀನು ಶೋಕಪಡುವ ಕಾರಣವಿಲ್ಲ

ಶ್ರೀಭಾರ್ಗವನು ಇಪ್ಪತ್ತೊಂದು ಸಲ ಕಾರ್ತವೀರ್ಯಾರ್ಜುನನೇ ಮೊದಲಾದ ಕ್ಷತ್ರಿಯರನ್ನು ನಾಶಪಡಿಸಿ, ತಾನು ಗೆದ್ದ ಸಕಲ ಭೂಮಿಯನ್ನು ಕಶ್ಯಪನಿಗೆ ಧಾರೆ

ಎರೆದು ಅಶ್ವಮೇಧಾವಭೃಥವನ್ನು ಮಾಡಿದನು. ಕ್ಷತ್ರಿಯಕುಲದ ನಿಶ್ಶೇಷ ನಾಶವಾಗಬಾರದೆಂದು ಚಿಂತಿಸಿ, ಕಶ್ಯಪನು 'ಭಾರ್ಗವರಾಮ! ನನ್ನದಾದ ಭೂಮಿಯಲ್ಲಿ ದಾತನಾದ ನೀನಿರಬಾರದು. ದಕ್ಷಿಣಸಮುದ್ರ ತೀರವನ್ನು ಸೇರು' ಎಂದು ವಿಜ್ಞಾಪಿಸಿದನು. ಶ್ರೀಭಾರ್ಗವನು ಸಮುದ್ರದತ್ತವಾದ ಭೂಮಿಯನ್ನು ಪಡೆದು, ಮಹೇಂದ್ರಗಿರಿಯಲ್ಲಿ ತಪಗೈಯುತ್ತಿರುವನು. ಮುಂದೆ ಕ್ಷತ್ರಿಯರಿಲ್ಲದೆ, ಅರಾಜಕವಾಗಲು, ಭೂಮಿಯು ರಕ್ಷಕರನ್ನು ಕಾಣದೆ, ರಸಾತಲವನ್ನು ಹೊಕ್ಕಳು. ಆಗ ಕಶ್ಯಪನು ಆಕೆಯನ್ನು ತನ್ನ ತೊಡೆಯಲ್ಲಿಟ್ಟು, ಮಗಳಂತೆ ಪಾಲಿಸಿದನು. ಅಂತೆಯೇ ಭೂಮಿಯು ಕಾಶ್ಯಪಿ ಉರ್ವೀ ಎಂಬ ಹೆಸರುಗಳನ್ನು ಪಡೆದು ಖ್ಯಾತಳಾಗಿರುವಳು. ಆಕೆ ಕಶ್ಯಪನನ್ನು ಪ್ರಸನ್ನೀಕರಿಸಿಕೊಂಡು, 'ಬ್ರಹ್ಮನ್! ವಿಪ್ರರು ಪರಿಪಾಲಕರಾಗಲಾರರು. ದುಷ್ಟಹಿಂಸಾಪ್ರಧಾನವಾದ ರಾಜಧರ್ಮವು ಅವರಿಗೆ ಸಗ್ಗದು. ನನ್ನಿಂದ ಸಂರಕ್ಷಿಸಲ್ಪಟ್ಟ ರಾಜನ್ಯ ವಂಶಜರು ಉಳಿದಿರುವರು. ಹೈಹಯಕುಲಜಾತರು ಸ್ತ್ರೀ ಜನರಕ್ಷಿತರಾಗಿದ್ದು ಗರ್ಭಗತರಾಗಿ, ಭಾರ್ಗವನ ಕುಠಾರದಿಂದ ಪಾರಾಗಿದ್ದರು. ಅವರಿಂದ ಬೆಳೆದು ರಾಜ್ಯಾರ್ಹರಾಗಿರುವವರು. ಪೌರವದಾಯಾದನಾದ ವಿದೂರಥ ಸುತನು ಋಕ್ಷಪರ್ವತದಲ್ಲಿ ಕರಡಿಗಳಿಂದ ರಕ್ಷಿತನಾಗಿರುವನು. ಕರುಣಾಳುವಾದ ಪರಾಶರನಿಂದ ರಕ್ಷಿಸಲ್ಪಟ್ಟ ಸೌದಾಸಕುಲಜನೂ ಉಳಿದಿರುವನು. ಅವನನ್ನು 'ಸರ್ವಕರ್ಮ'ನೆಂಬುವರು. ಶಿಬಿಪುತ್ರನಾದ ಗೋಪತಿಯು ವನದಲ್ಲಿ ಗೋಗಣ ರಕ್ಷಿತನಾಗಿರುವನು. ದಧಿವಾಹನ ಪೌತ್ರನು, ದಿವಿರಥನ ಪುತ್ರನು ಆದ ಬೃಹದ್ರಥನು ಗೋಲಾಂಗೂಲ ವಾನರಗಳಿಂದ ಗೃಧ್ರಕೂಟದಲ್ಲಿ ರಕ್ಷಿತನಾಗಿರುವನು. ಮರುತ್ತ ರಾಜನ ಕುಲಜರು ಸಮುದ್ರರಕ್ಷಿತರಾಗಿ ಉಳಿದಿರುವರು. ಇವರೇ ಮೊದಲಾದ ಸುಕ್ಷತ್ರಿಯರಿಗೆ ಭೂಮಂಡಲಾಧಿಪತ್ಯವನ್ನು ಸಮರ್ಪಿಸು!' ಎಂದು ಬೇಡಿದಳು. ಕಶ್ಯಪನು ರಾಜನ್ಯರಿಗೆ ಅವರ ಪಿತೃಪೈತಾಮಹ ರಾಜ್ಯಗಳನ್ನಿತ್ತು, ಬ್ರಾಹ್ಮಣವತ್ಸಲರೂ, ಧರ್ಮತತ್ಪರರೂ ಆಗಿರುವಂತೆ ಅನುಶಾಸಿಸಿ, ತಾನು ತಪೋವನಕ್ಕೆ ತೆರಳಿದನು. ಶ್ರೀಭಾರ್ಗವನು ಸರ್ವಜ್ಞನಾದುದರಿಂದ, ಕ್ಷತ್ರಿಯ ಕುಲವರ್ಧನವನ್ನು ಅನುಮೋದಿಸಿ, ಸುಮ್ಮನಿದ್ದನು.

ಇಂತು ಭಾರ್ಗವ ಮಹಿಮೆಯನ್ನು ವರ್ಣಿಸುತ್ತಾ, ಪಾಂಡವರೊಡಗೂಡಿ ಭಗವಾನ್ ವಾಸುದೇವನು ಭೀಷ್ಮನನ್ನು ಸಮೀಪಿಸಿದನು. ವಿಪ್ರವರರ ಪ್ರಶಂಸಾವಚನಗಳು ಅವರ ಕಿವಿಗೆ ಬಡಿದವು. ಆಗ ಓಘವತೀ ನದೀತೀರದ ಪುಣ್ಯದೇಶದಲ್ಲಿ ಶರಪಂಜರ ಶಯಿತನಾಗಿದ್ದ ಭೀಷ್ಮನು ಅವರ ನೇತ್ರಗೋಚರನಾದನು. ತಟ್ಟನೆ ಅವರೆಲ್ಲರೂ ರಥಗಳಿಂದಿಳಿದು, ಪಾದಚಾರಿಗಳಾಗಿ, ಪಿತಾಮಹನನ್ನು ಸೇರಬಂದರು. ವ್ಯಾಸಭಾರ್ಗವಾದಿ ಮಹಾಮುನಿಗಳಿಗೆ ವಂದಿಸಿ, ಶ್ರೀಕೃಷ್ಣ ಸಾತ್ಯಕಿ ಧರ್ಮಜ ಭೀಮಸೇನ ಪಾರ್ಥ ನಕುಲ ಸಹದೇವರು, ಯುಯುತ್ಸು ಸಂಜಯ ಧೃತರಾಷ್ಟ್ರರು ಭೀಷ್ಮನನ್ನು ಸುತ್ತುವರಿಸಿ, ದಿವ್ಯಾಸನಗಳಲ್ಲಿ ಕೂತರು.

ಆರುತ್ತಿರುವ ಅಗ್ನಿಯಂತೆ ಶಾಂತನಾಗಿರುವ ಶಂತನುನಂದನನನ್ನು ಕಂಡು,

ಶ್ರೀಕೃಷ್ಣನು ಸ್ವಲ್ಪ ವ್ಯಸನಪಟ್ಟವನಂತಾಗಿ, ಇಂತು ಪ್ರಶ್ನಿಸಿದನು: 'ಪಿತಾಮಹ ! ನಿನ್ನ ಜ್ಞಾನೇಂದ್ರಿಯಗಳು ಮೊದಲಿನಂತೆ ಪ್ರಸನ್ನವಾಗಿರುವವೇ ? ನಿನ್ನ ಬುದ್ಧಿಯು ವ್ಯಾಕುಲವಾಗಿಲ್ಲವಲ್ಲ? ಶರವಿಘಾತದಿಂದ ಶರೀರವು ನೋಯುತ್ತಿರುವುದೇ? ಮಾನಸ ವ್ಯಥೆಕಿಂತಲು ಶಾರೀರವ್ಯಥೆಯು ಬಲುಪೀಡಿಸುವುದು. ತಂದೆಯನ್ನು ಸಂತೋಷಪಡಿಸಿ, ಸ್ವಚ್ಛಂದಮೃತ್ಯುವನ್ನು ಪಡೆದಿರುವ ನಿನ್ನಂತಹ ಪಿತೃಭಕ್ತರಿಲ್ಲ. ಅಂತಹ ಪಿತೃಪ್ರಸಾದವು ನನಗೂ ಸಿಗಲಿಲ್ಲ ! ಇತರರ ಪಾಡೇನು ? ಭಾರತ! ಜ್ಞಾನವೃದ್ಧನೂ ಆಗಿರುವೆ ! ಧರ್ಮಜ್ಞಾನಗಳನ್ನರಿತ ಮಹಾಪ್ರಾಜ್ಞನಾಗಿ, ಉಪದೇಶಕ ಶ್ರೇಷ್ಠನೆನಿಸಿರುವೆ ! ಸ್ತ್ರೀಸಹಸ್ರವಿದ್ದರೂ, ಸಮೃದ್ಧ ರಾಜ್ಯವಿದ್ದರೂ, ಆರೋಗ ಚಿರಜೀವನವಿದ್ದರೂ, ಊರ್ಧ್ವರೇತಸ್ಕನು, ಜಿತೇಂದ್ರಿಯನು, ವಿರಾಗಸಂಪನ್ನನು, ಆದ ಮಹಾನುಭಾವನೆಂದರೆ, ಭೀಷ್ಮನೊಬ್ಬನೆ ! ಸತ್ಯಧರ್ಮಗಳಿಗಾಗಿ ಶರ ಕೋದಂಡಗಳನ್ನು ಧರಿಸಿ, ವೇದ ಧನುರ್ವೇದಗಳಲ್ಲಿ ನಿಷ್ಣಾತನಾಗಿ, ಪಾಪಕರ್ಮವನ್ನೆಂದಿಗೂ ಮಾಡದೆ, ಸರ್ವಭೂತಹಿತರತನಾಗಿ, ಶತ್ರುಭಯಂಕರ ಮಹಾರಥನೆನಿಸಿ, ಮೆರೆವ ಭೀಷ್ಮನಿಗೆ ಸಮರಿಲ್ಲ.

ಅಷ್ಟವಸುಗಳ ಅಂಶಗಳಿರುವುದರಿಂದ ನವಮನಾಗಿದ್ದೂ, ಗುಣಗಳಿಂದ ಅನವಮನಾಗಿರುವೆ ! ಪುರುಷಸತ್ತ್ವನು ನೀನಹುದೆಂದು ನನಗೆ ಗೊತ್ತಿದೆ. ಸುಗುಣಗಳಿಂದ ದೇವತೆಗಳನ್ನೂ, ತಪಶ್ಶಕ್ತಿಯಿಂದ ಪಿತಾಮಹನನ್ನೂ, ತ್ಯಾಗದಿಂದ ಯತಿ, ಉತ್ಕಲರನ್ನೂ, ಪ್ರತಿಜ್ಞೆಗೈದನಂತರ ಊರ್ಧ್ವರೇತಸ್ಕನಾಗಿ, ರಾಜ್ಯವನ್ನೂ ಬಿಟ್ಟ ಕಠೋರ ನಿಯಮದಿಂದ ಪೃಷಧ್ರ ಅಸಮಂಜಸರನ್ನೂ, ನೆನಪಿಗೆ ತರುವ ಮಹಾನುಭಾವನು ನೀನು ! ನಿನ್ನಿಂದ ವರ್ಣಾಶ್ರಮ ಧರ್ಮಗಳನ್ನು ಕೇಳಿ, ತಿಳಿಯಲಿಚ್ಛಿಸಿ ಧರ್ಮರಾಜನು ಬೇಡುತ್ತಿರುವನು. ಚಾತುರ್ಹೋತ್ರ ವಿಧಾನವನ್ನು, ಸಾಂಖ್ಯಯೋಗಗಳನ್ನು, ದೇಶ ಜಾತಿ ಕುಲ ಧರ್ಮಗಳನ್ನು, ವೇದೋಕ್ತ ಶಿಷ್ಟೋಕ್ತ ವಿವಿಧ ಸಂಪ್ರದಾಯಗಳನ್ನು, ಪ್ರತಿಲೋಮ ಕುಲಧರ್ಮಗಳನ್ನು, ಇತಿಹಾಸ ಪುರಾಣ ರಹಸ್ಯಗಳನ್ನು, ಮನ್ವಾದಿ ಧರ್ಮಶಾಸ್ತ್ರಗಳನ್ನು, ಚೆನ್ನಾಗಿ ಅರಿತಿರುವೆ ! ಲೋಕದ ಧರ್ಮಸಂಶಯವನ್ನು ಬಿಡಿಸಬಲ್ಲವರಲ್ಲಿ ಅಗ್ರಗಣ್ಯನಿರುವೆ! ಪಾಂಡವೇಯನ ಧರ್ಮಸಂಶಯಗಳನ್ನು ನಿವಾರಿಸಿ, ಅವನ ಶೋಕವನ್ನು ಕಳೆ !'

ಶ್ರೀಕೃಷ್ಣ ವಚನವನ್ನಾಲಿಸಿ, ಭೀಷ್ಮನು 'ಪ್ರಭೋ ! ಕೃಷ್ಣ !' ಎಂದು ಕೈಜೋಡಿಸಿ, ಮತ್ತೆ ಇಂತು ಸ್ತುತಿಸಿದನು: 'ಭಗವನ್! ನೀನು ಜಗಜ್ಜನನಾದಿ ಕಾರಣನಿರುವೆ ! ನಿನಗೆ ಗೊತ್ತಿಲ್ಲದಿಲ್ಲ ! ಜೀವಜಡ ಭಿನ್ನನಾಗಿ, ಸ್ವರೂಪ ಸಾಮರ್ಥ್ಯದಿಂದ ಸರ್ವೋತ್ತಮನಾಗಿ ಮೆರೆವೆ! ನಿನ್ನನ್ನು ನಂಬಿರುವ ನಿನ್ನ ಭಕ್ತನಿಗೆ ಶ್ರೇಯಸ್ಸೆಂತಾಗುವುದೋ, ನೀನೇ ಆಲೋಚಿಸು ! ನಿನ್ನ ಹೊರತಿನ್ನಾರೆನಗೆ ದಿಕ್ಕು? ನಮೋ ನಮಃ' ಎಂದ ಭೀಷ್ಮನಿಗೆ ಶ್ರೀಕೃಷ್ಣನಿಂತು ಅನುಗ್ರಹಿಸಿದನು: 'ಭೀಷ್ಮ! ನಿನ್ನ ಉತ್ತಮ ಭಕ್ತಿಗೆ ಮೆಚ್ಚಿದೆನು. ಅಂತೆಯೇ ಪ್ರಸನ್ನನಾದ ನನ್ನ ದಿವ್ಯರೂಪದ ದರ್ಶನವು ನಿನಗೆ ದೊರಕಿತು. ಕಪಟಭಕ್ತನಿಗೆ, ದಾಂಭಿಕನಿಗೆ, ಅಶಾಂತನಿಗೆ, ನನ್ನ

ಜ್ಞಾನವಾಗದು. ನಿನಗೆ ದಿವ್ಯಲೋಕಗಳನ್ನು ನಾನು ಕೊಟ್ಟಿರುವೆನು ! ಮುಂದೆ ಮುಕ್ತಿಯನ್ನೂ ಕೊಡುವೆನು.

ಇಂದಿನಿಂದ (ಪುಷ್ಯಶುದ್ಧ ಅಷ್ಟಮಿ) ಮೂವತ್ತು ದಿನಗಳ ಕಾಲವಾದ ಮೇಲೆ, ನೀನು ಮರ್ತ್ಯ ದೇಹವನ್ನು ಬಿಟ್ಟು, ಶುಭಗತಿಯನ್ನು ಹೊಂದುವೆ! ನಿನ್ನ ಸೋದರರು ಅಷ್ಟವಸುಗಳು ಎಂಟನೆಯವನಾದ ದ್ಯುವಸುವಿನ ಅಂಶವನ್ನು ಅಂಬರದಿ, ದಿವ್ಯಮಾನಗಳಲ್ಲಿ ಕೂತು ಪ್ರತೀಕ್ಷಿಸುತ್ತಿರುವರು. ಉತ್ತರಾಯಣವು ಬಂದಾಗ ನೀನು ದ್ಯುವಸುರೂಪವನ್ನು ಸೇರುವೆ ! ಮುಂದೆ ಧರ್ಮವನ್ನು ಉಪದೇಶಿಸುವ ಸಮರ್ಥರಿಲ್ಲದಂತಾಗುವುದು. ಆದುದರಿಂದಲೇ ಧರ್ಮರಹಸ್ಯ ನಿಧಿಯಾಗಿರುವ ನಿನ್ನಿಂದ, ವಿವಿಧ ಸದ್ಧರ್ಮಗಳನ್ನು ತಿಳಿಯಲೆಣಿಸಿ, ಇವರೆಲ್ಲರೂ ಬಂದಿರುವರು. ಜ್ಞಾತಿವಧೆಗೈದ ಶೋಕದಿಂದ ಮತಿಗೆಟ್ಟಂತಾಗಿ, ರಾಜ್ಯಸುಖ ವಿಮುಖನಾಗಿರುವ ಧರ್ಮರಾಜನ ಮಾನಸ ಸರವು ತಿಳಿಗೂಡುವಂತೆ, ಧರ್ಮತತ್ತ್ವವನ್ನು ಅವನಿಗೆ ಉಪದೇಶಿಸು ! ಅವನ ಶೋಕವನ್ನು ಕಳೆ ! '

## ೮. ಭೀಷ್ಮೋಪದೇಶ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಭೀಷ್ಮನು ಭಗವದ್ವಚನವನ್ನಾಲಿಸಿ, ಕೈಜೋಡಿಸಿ, 'ಲೋಕನಾಥ ! ಶಿವ ನಾರಾಯಣಾಚ್ಯುತ ! ನಿನ್ನ ವಚನಾಮೃತದಿಂದ ಆನಂದಿತನಾದೆನು. ವಾಙ್ನಿಯಾಮಿಕೆಯಾದ ಮಹಾಲಕ್ಷ್ಮಿಗೆ ಪತಿಯಾದ ನಿನ್ನ ಸಮ್ಮುಖದಲ್ಲಿ, ನಾನು ಉಪದೇಶಿಸುವಂತಹವನೇ ? ಎಲ್ಲ ಸುವಚನನದಿಗಳೂ ನಿನ್ನ ವಚನವಾರ್ಧಿಯಲ್ಲಿ ಸಂಗತವಾಗಿವೆ ದೇವ! ಲೋಕದ ಬುದ್ಧಿವಂತರು ನುಡಿವ ಮಧುರವಚನಗಳೆಲ್ಲವೂ, ನಿನ್ನಿಂದ ಹೊರಬಂದುವಾಗಿವೆ. ಎಲ್ಲ ವಿದ್ಯೆಗಳಿಗೆ ಗುರುಗಳಾದ ಬ್ರಹ್ಮ ರುದ್ರೇಂದ್ರಾದಿ ದೇವತೆಗಳಿಗೆ ನೀನು ಗುರುವಾಗಿರುವೆ ! ನಿನ್ನ ಮುಂದೆ ಧರ್ಮವನ್ನರುಹುದೆಂದರೆ, ದೇವರಾಜನ ಮುಂದೆ ಸ್ವರ್ಗವನ್ನು ವರ್ಣಿಸಿದಂತೆ ! ಸಮುದ್ರದಲ್ಲಿ ಬಾವಿಯ ನೀರನ್ನು ತುಂಬಿದಂತೆ !

ಮಧುಸೂಧನ ! ಶರತಾಪದಿಂದ ವ್ಯಥಿತನಾಗಿರುವೆನು. ನನ್ನ ಬುದ್ಧಿಯು ಪ್ರಸನ್ನವಾಗಿಲ್ಲ. ಯಾವದ್ಧರ್ಮವನ್ನು ಅರುಹುವ ಪ್ರತಿಭೆಯು ಕುಂಠಿತವಾಗಿದೆ. ಬಲವಿಲ್ಲ ; ಪ್ರಾಣಗಳು ಚಲಿಸುತ್ತಿವೆ ; ಮರ್ಮಗಳು ನೋಯುತ್ತಿವೆ. ಮಾತು ಹೊರಡಲೊಲ್ಲದು. ನನ್ನನ್ನು ಕ್ಷಮಿಸು ! ನಿನ್ನ ಸನ್ನಿಧಿಯಲ್ಲಿ ಉಪದೇಶಿಸಲು ಹೊರಟ ಬೃಹಸ್ಪತಿಗೂ ನಾಲಿಗೆ ತಡಕಾಡುವುದು. ನನಗೆ ದಿಕ್ಕುತೋಚದಂತಾಗಿದೆ. ಕೇವಲ ನಿನ್ನ ಕೃಪೆಯಿಂದ ಇನ್ನೂ ಪ್ರಾಣಗಳನ್ನು ಹಿಡಿದಿಟ್ಟಿರುವೆನು. ನೀನೇ ಧರ್ಮರಾಜನಿಗೆ ಧರ್ಮೋಪದೇಶವನ್ನು ಮಾಡು ! ಗುರುಸನ್ನಿಧಿಯಲ್ಲಿ, ಶಿಷ್ಯನೇನು ಉಪದೇಶಿಸುವನು ? ನಿನ್ನ ಸನ್ನಿಧಿಯಲ್ಲಿ ನಾನೇನು ಪೇಳುವೆನು. '

ಆ ಮಾತಿಗೆ ವಾಸುದೇವನಿಂತೆಂದನು: 'ಕೌರವವಂಶತಿಲಕನಿಗೆ ತಕ್ಕಂತೆ ಮಾತನಾಡಿದೆ! ಸರ್ವಾರ್ಥ ದರ್ಶನನಾಗಿದ್ದೂ ತಿಳಿಯೆನೆಂಬುವುದು, ಸುಜನ ಲಕ್ಷಣವಾಗಿದೆ. ಬಾಣವೇದನೆಯ ವಿಷಯದಲ್ಲಿ ನಿನಗೊಂದು ವರವನ್ನು ಕೊಡುವೆನು ಕೇಳು! ನನ್ನ ಅನುಗ್ರಹದಿಂದ ನಿನಗೆ ಶರೀರಗ್ಲಾನಿ, ವೇದನೆಗಳು ಆಗದಿರಲಿ! ಹಸಿವೆ ನೀರಡಿಕೆಗಳು ಮಾಯವಾಗಲಿ! ನಿನ್ನ ಇಂದ್ರಿಯಗಳಲ್ಲಿ ಜ್ಞಾನಪ್ರವಾಹದ ದಿವ್ಯಸಂಚಾರವಾಗಲಿ! ನಿನ್ನ ಬುದ್ಧಿಯು ಪ್ರಸನ್ನವಾಗಲಿ! ಮೇಘಮುಕ್ತ ಚಂದ್ರನಂತೆ, ನಿನ್ನ ಮನಸ್ಸು ರಜಸ್ತಮೋವಿಕಾರರಹಿತವಾಗಿ, ಸಾತ್ವಿಕ ಪ್ರಚುರವಾಗಿ ಬೆಳಗಲಿ! ಧರ್ಮವಿವೇಕವು ಜಾಗ್ರತವಾಗಲಿ! ಚತುರ್ವಿಧವಾದ ಭೂತಗ್ರಾಮವು ಸಂಸಾರದಲ್ಲಿ ತಿರುಗುವುದನ್ನು, ಅವುಗಳ ಲಕ್ಷಣಗಳನ್ನು ಚೆನ್ನಾಗಿ ತಿಳಿದು, ಉಪದೇಶಿಸುವ ಸಾಮಾರ್ಥ್ಯವನ್ನು ನಿನಗಿತ್ತಿರುವೆನು.'

ಆಗ ವ್ಯಾಸಸಹಿತರಾದ ಮಹರ್ಷಿಗಳು ವೇದವಚನಗಳಿಂದ ಶ್ರೀಕೃಷ್ಣನನ್ನು ಪ್ರಶಂಸಿಸಿದರು. ಆಕಾಶದಿಂದ ದಿವ್ಯಪುಷ್ಪವರ್ಷವಾಯಿತು. ಶ್ರೀಕೃಷ್ಣಗಾಂಗೇಯ ಪಾಂಡವರ ಪ್ರಶಂಸಾವಚನಗಳು ದಿಕ್ಕುಗಳಲ್ಲಿ ತುಂಬಿದವು. ಅಂಬರದಿ ಅಪ್ಸರೆಯರಾಡಿದರು. ಗಂಧರ್ವರು ಪಾಡಿದರು. ಮಾರುತವು ಶೈತ್ಯಮಾಂದ್ಯ ಸೌರಭ್ಯಗಳಿಂದ ಸೂಸಿಬಂತು. ದಿಕ್ಕುಗಳು ಶಾಂತವಾದವು. ಭಗವಾನ್ ಸೂರ್ಯನು ಪ್ರತೀಚೀದಿಗಂತದಲ್ಲಿ, ರಕ್ತವರ್ಣನಾಗಿ, ವನವನ್ನು ಸುಡುವ ವಹ್ನಿಯಂತೆ, ಕಂಗೊಳಿಸಿದನು. ಪಕ್ಷಿಗಳು ಕಲಕಲ ನಾದವನ್ನು ಮಾಡುತ್ತಾ ಗೂಡನ್ನು ಸೇರಿದವು.

ಮಹರ್ಷಿಗಳು ಎದ್ದುನಿಂತರು. ಜನಾರ್ಧನ ಗಾಂಗೇಯ ಪಾಂಡವರ ಅಪ್ಪಣೆ ಪಡೆದು, ಅವರಿತ್ತ ವಂದನಾದಿ ಸತ್ಕಾರವನ್ನು ಸ್ವೀಕರಿಸಿ, 'ನಾಳೆ ಮತ್ತೆ ಬರುವೆವು' ಎಂದು ಬೀಳ್ಕೊಂಡು, ತಂತಮ್ಮ ಆಶ್ರಮಗಳಿಗೆ ಯೋಗಮಾರ್ಗದಿಂದ ತೆರಳಿದರು. ಕೇಶವಾದಿಗಳೂ ಭೀಷ್ಮನನ್ನು ಬೀಳ್ಕೊಂಡು, ರಥಗಳನ್ನೇರಿ, ಹಸ್ತಿನಾವತಿಯನ್ನು ಸೇರಿದರು. ಅರ್ಧರಾತ್ರಿಯಾದಾಗ ಪುರವನ್ನು ಸೇರಿ, ಪಾಂಡವಸೇನೆಯು ವಿಶ್ರಮಿಸಿತು. ಮಹೌಷಧಿಗಳಿಂದ ರಸವನ್ನು ಹೀರಿ ಸೂರ್ಯನು ಅಸ್ತಂಗತನಾಗಲು, ಭಗವಾನ್ ಶಶಾಂಕನು ತನ್ನ ಅಮೃತಕಿರಣಗಳಿಂದ ಮತ್ತೆ ಅಮೃತವನ್ನು ತುಂಬಿ ಮಹೌಷಧೀ ಲತೆಗಳನ್ನು ಆನಂದಗೊಳಿಸಿದನು. ಸಿಂಹಗಳು ಗುಹೆಗಳಲ್ಲಂತೆ, ಪಾಂಡವವೀರರು ಸುರಪುರ ಭವನಗಳಂತೆ ಕಂಗೊಳಿಪ, ತಮ್ಮ ದಿವ್ಯಮಂದಿರಗಳಲ್ಲಿ ಮಹಾರ್ಘಶಯನಗಳಲ್ಲಿ ಸುಖಸುಪ್ತರಾದರು.

ಪ್ರಾತಃಕಾಲವಾಗದ ಮುನ್ನ ಕೇಶವನು ಎಚ್ಚತ್ತು, ಸ್ನಾನಮಾಡಿದನು. ತನ್ನನ್ನು ತಾನೇ ಪೂಜಿಸಿ, ಧ್ಯಾನಿಸಿ, ಪೂಜಾಧ್ಯಾನಗಳು ಅವಶ್ಯ ಕರ್ತವ್ಯವೆಂದು ಲೋಕದ ಜನರನ್ನು ಅನುಶಿಕ್ಷಿಸಿದನು. ಅಂತಃಪುರ ಪ್ರಾಂಗಣದಲ್ಲಿ ಪಾಡುವ ವಂದಿ ಮಾಗಧರ ಮಧುರಾಲಾಪಗಳನ್ನು ಕೇಳುತ್ತಾ, ಮಧ್ಯಭವನವನ್ನು ಸೇರಿದನು. ಅಲ್ಲಿ ಪುರಾಣ ಪಠನವಾಗುವುದನ್ನು ಕೇಳಿ, ಮುಂಗಳದಲ್ಲಿ ಗಾಯಕರ ಗೀತಗಳನ್ನಾಲಿಸಿದನು.

ವೀಣಾಪಣವ ವೇಣುಮಧುರ ಮನೋಹರ ಶಬ್ದಗಳೊಡನೆ ಬೆರೆತು ಕೇಳಬರುವ ನರನಾರೀ ಜನರ ಸುಹಾಸ ಧ್ವನಿಯನ್ನಾಲಿಸಿ, ಗೋವಿಂದನು ಮಂದಸ್ಮಿತ ಸುಂದರವದನಾರವಿಂದನಾಗಿ, ಅವರನ್ನೆಲ್ಲರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದನು.

ಶ್ರೀಕೃಷ್ಣನು ಅಗ್ನಿಗಾಹುತಿಯನ್ನಿತ್ತನು! ಚತುರ್ವೇದ ವಿದರಾದ ವಿಪ್ರರನ್ನು ವಿಪುಲ ಗೋದಾನವನ್ನಿತ್ತು ಸತ್ಕರಿಸಿ, ಅವರ ಆಶೀರ್ವಚನಗಳನ್ನು ಸ್ವೀಕರಿಸಿದನು. ದಿವ್ಯಾದರ್ಶನದಲ್ಲಿ ತನ್ನನ್ನು ನೋಡಿಕೊಂಡು, ದಿವ್ಯಾಸನದಲ್ಲಿ ಮಂಡಿಸಿದನು; ಸಾತ್ಯಕಿಯನ್ನು ಕರೆದು, 'ಧರ್ಮರಾಜನು ಸಿದ್ಧನಾಗಿರುವನೇನೋ ನೋಡಿ ಬಾ'ರೆಂದು ಕಳಿಸಿದನು. ಧರ್ಮಜನು ಸಿದ್ಧನಾಗೇ ಇದ್ದನು. ಭೀಷ್ಮನಿಗೆ ಜನಸಮ್ಮರ್ದದ ಪೀಡೆಯಾಗಬಾರದೆಂದು, ಪರಿವಾರವನ್ನೂ, ಸೇನೆಯನ್ನೂ ಕರೆಯದೇ, ಧರ್ಮಜನು ತನ್ನ ಸೋದರರಿಂದೊಡಗೂಡಿ, ಶ್ರೀಕಷ್ಣನನ್ನು ಸೇರ ಬಂದನು. 'ರಾತ್ರಿ ಸುಖವಾಗಿ ಕಳಿಯಿತೇ ?' ಎಂಬ ಪರಸ್ಪರ ಸಂಭಾವನೆಗಳು ನಡೆದವು. ಭೀಷ್ಮನನ್ನು ನೋಡಪೋಗುವ ಅವರ ರಥಾಧ್ವನವು ಮೇಘ ಗರ್ಜನದಂತಿತ್ತು. ದಾರುಕಚೋದಿತವಾಗಿ ಶೈಬ್ಯ ಸುಗ್ರೀವ ಮೇಘಪುಷ್ಪ ವಲಾಹಕಗಳು ತಮ್ಮ ಖುರಗಳಿಂದ ಭೂತಲದಿ ಬರೆಯುವವೆಂಬಂತೆ, ವಾಯುವನ್ನು ಮೀರುವ ವೇಗದಿಂದ ಕುರುಕ್ಷೇತ್ರವನ್ನು ಸೇರಿದವು. ರಥಗಳಿಂದಿಳಿದು ಯದುದ್ವಯವೂ, ಪಾಂಡವಪಂಚಕವೂ ಭೀಷ್ಮನನ್ನು ಸಮೀಪಿಸಿ, ಅಲ್ಲಿ ನೆರೆದಿದ್ದ ಋಷಿವರರಿಗೆ ವಂದಿಸಿ, ದಿವ್ಯಾಸನಗಳಲ್ಲಿ ಕೂತರು. ಅವರ ಸುತ್ತಲು ಹತಶಿಷ್ಟರಾದ ರಾಜನ್ಯರೂ ಕೂತರು.

ಸ್ವಲ್ಪ ಹೊತ್ತು ನೀರವವಾಗಿತ್ತು. ಆಗ ನಾರದನು ಧರ್ಮರಾಜಾದಿಗಳಿಗಿಂತೆಂದನು: 'ಭಾರತ ! ಕೇಳಿ ಪ್ರಶ್ನೆಗಳನ್ನು ! ತಿಳಿಯಿರಿ ತತ್ವರಹಸ್ಯವನ್ನು ಮತ್ತು ಧರ್ಮಸೂಕ್ಷ್ಮಗಳನ್ನು ! ಸೂರ್ಯನು ಸಾಯಂಕಾಲದಲ್ಲಂತೆ, ಭೀಷ್ಮನು ಅಸ್ತಂಗತನಾಗಲಿರುವನು. ಮುಂದೆ ಇಂತಹ ತತ್ವಾರ್ಥದರ್ಶಿಯು ಸಿಗಲಾರನು' ಆ ಮಾತನ್ನಾಲಿಸಿ, ಧರ್ಮರಾಜಾದಿಗಳು ಧರ್ಮಪ್ರಶ್ನೆಗಳನ್ನು ಮಾಡಲೆಂದು ಮುಂದೆ ಸರಿದರು! ಆದರೆ ಕೇಳುವ ಧೈರ್ಯ ಸಾಲದೆ, ಅವರು ಒಬ್ಬರ ಮುಖವನ್ನೊಬ್ಬರು ನೋಡುತ್ತಾ, ಸುಮ್ಮನೆ ನಿಂತರು. ಧರ್ಮರಾಜನು ಶ್ರೀಕೃಷ್ಣನನ್ನು ನೋಡಿ 'ದೇವಕೀ ಪುತ್ರ ! ನಿನ್ನ ಹೊರತಿಲ್ಲಿ ಧರ್ಮಪ್ರಶ್ನೆಯನ್ನು ಕೇಳುವ ಸಮರ್ಥರಾರು? ನೀನು ಮೊದಲು ಪಿತಾಮಹನನ್ನು ಮಾತಾಡಿಸು! ಆಮೇಲೆ ನಾವು ಧರ್ಮಸಂಶಯಗಳನ್ನು ಕೇಳಿ, ತಿಳಿಯುವೆವು' ಎಂದನು.

ವಾಸುದೇವನು ಪಿತಾಮಹನನ್ನು ಸಮೀಪಿಸಿ, 'ರಾಜಸತ್ತಮ! ರಾತ್ರಿಯು ಸುಖವಾಗಿ ಕಳೆಯಿತೇ? ನೋವಿಲ್ಲ ತಾನೇ? ಬುದ್ಧೀಂದ್ರಿಯಗಳು ಪ್ರಸನ್ನವಾಗಿವೆಯೇ? ಎಂದು ಕೇಳಿದನು. ಭೀಷ್ಮನು ಕೃತಜ್ಞತೆಯಿಂದ ಕಂಬನಿ ಸುರಿಸಿ, 'ಶ್ರೀಕೃಷ್ಣ ! ನಿನ್ನ ಪ್ರಸಾದದಿಂದ ದಾಹ ಮೋಹ ರುಜಾ ಪೀಡೆಗಳಿಂದ ಮುಕ್ತನಾಗಿರುವೆನು. ಭೂತ ಭವದ್ಭವಿಷ್ಯಗಳನ್ನೆಲ್ಲ ಕರತಲಾಮಲಕದಂತೆ ಕಾಣುತ್ತಿರುವೆನು. ನಿನ್ನ ವರಪ್ರಭಾವದಿಂದ

ವೇದೇತಿಹಾಸ ಪುರಾಣ ಧರ್ಮಶಾಸ್ತ್ರಗಳ ಮರ್ಮಗಳು, ದೇಶ ಕಾಲ ಕುಲ ಧರ್ಮಗಳು ನನಗೆ ಚನ್ನಾಗಿ ಗೋಚರಿಸುತ್ತಿವೆ. ರಾಜ ಧರ್ಮ, ಆಪದ್ಧರ್ಮ, ಸ್ತ್ರೀಧರ್ಮ, ಮೋಕ್ಷಧರ್ಮಗಳನ್ನು ಹೇಳಬಲ್ಲೆನೆಂಬ ಉತ್ಸಾಹ ಬಲ ಧೈರ್ಯಗಳು ಮೂಡಿಬರುತ್ತಿವೆ. ಆದರೆ ಸರ್ವಸಮರ್ಥನು, ಸರ್ವಜ್ಞನು ಆದ ನೀನೇ ಪೇಳದೆ, ನನ್ನಿಂದ ಪೇಳಿಸುತ್ತಿರಲು ಕಾರಣವೇನು ? ' ಎಂದು ಕೇಳಿದನು.

ಶ್ರೀಕೃಷ್ಣನು ನಸುನಕ್ಕು ಇಂತೆಂದನು: 'ಕುರು ಪಿತಾಮಹ ! ಕೇಳು ! ನಾನು ಹೇಳುವುದಿದ್ದೇ ಇದೆ ! ಎಲ್ಲ ಗುರುಗಳಲ್ಲಿ ನಿಂತು ಜ್ಞಾನೋಪದೇಶವನ್ನು ಮಾಡುವ ನನಗೆ, ನನ್ನ ಭಕ್ತರ ಕೀರ್ತಿಯ ಪ್ರಸಾರವು ಬೇಕಾಗಿದೆ. ಚಂದ್ರನು ಅಮೃತಕಿರಣನಹುದೇ ಅಹುದು ! ನಾನು ಯಶಃಪೂರ್ಣನು ಅಹುದೇ ಅಹುದು. ಅದರಲ್ಲಿ ಆಶ್ಚರ್ಯ ಪಡಬೇಕಿಲ್ಲ. ಆದರೆ ನಿನ್ನಲ್ಲಿದ್ದು, ನಿನ್ನಿಂದ ಪೇಳಿಸಿ, ನಿನಗೆ ಕೀರ್ತಿಯನ್ನೀಯಲಿರುವ ನನ್ನ ದಿವ್ಯಸಂಕಲ್ಪಕ್ಕೆ ಆಶ್ಚರ್ಯಪಡಬೇಕು! ಯಶೋ, ಧೈರ್ಯ, ಜ್ಞಾನ, ವಿಜ್ಞಾನ, ವೀರ್ಯ, ಶೌರ್ಯ, ಸೌಂದರ್ಯ, ಐಶ್ವರ್ಯ, ಶ್ರೀ, ಹ್ರೀ, ಧೀ, ಪ್ರಭಾವ, ಬಲ, ಮತಿ, ನೀತಿ, ನಿಯತಿ, ಶಕ್ತಿ, ಸ್ಫೂರ್ತಿ, ಕಲಾ, ವಿದ್ಯಾ, ವೈಭವ, ದಾಕ್ಷಿಣ್ಯ, ನೈಪುಣ್ಯ, ಮಹೌದಾರ್ಯ, ಕಾರುಣ್ಯಾನಂದಾದಿ ಅನಂತ ಕಲ್ಯಾಣಗುಣ ನಿಧಿಯಾದ ನನ್ನ ಗುಣಪ್ರತಿಬಿಂಬಗಳಾದ ಯೋಗ್ಯಗುಣಗಳು ನನ್ನಿಂದ ಯೋಗ್ಯರಾದ ಜೀವರಿಗೆ ಲಭಿಸುವವು. ಈಗ ನಿನಗೆ ಯಶವನ್ನು ಕೊಡಲೆಣಿಸಿದ ನನ್ನ ಸಂಕಲ್ಪದಂತೆ ನಡೆ ! ಅಂತಹ ಪ್ರಖರಜ್ಞಾನವನ್ನು ನಾನಾಗಿ, ಯೋಗ್ಯಾಧಿಷ್ಠಾನನಾದ ನಿನಗೆ ಕೊಟ್ಟಿರುವೆನು. ನಿನ್ನ ಕೀರ್ತಿಯು ಆಚಂದ್ರಾರ್ಕಭೂತಲವಾಗಿ ನಿಲ್ಲುವುದು. ನಿನ್ನ ಮುಖದಿಂದ ಹೊರಬಂದ ಧರ್ಮವಚನಗಳು ವೇದಸಂವಾದಿಗಳಾಗಿ ಮಾನಿತವೆನಿಸುವವು. ಭೂವಲಯದಲ್ಲಿ ಕೀರ್ತಿಯು ನಿಂತಿರುವವರೆಗೂ, ಪುರುಷನು ಪುಣ್ಯಲೋಕಗಳಲ್ಲಿ ಸುಖವಾಗಿರುವನು. ನೀನು ವೃದ್ಧನೇ ಅಲ್ಲದೆ, ಶ್ರುತಾಚಾರ ಸಮನ್ವಿತನೂ ಅಹುದು. ಹುಟ್ಟಿದಂದಿನಿಂದ ಪಾಪವನ್ನು ಮಾಡಿ ಅರಿಯೆ ! ತಂದೆಯು ಮಗನಂತೆ, ಧರ್ಮರಾಜನಿಗೂ, ಮಿಕ್ಕವರಿಗೂ ಧರ್ಮೋಪದೇಶವನ್ನು ಮಾಡು ! ತಿಳಿದಿದ್ದೂ ಧರ್ಮವನ್ನು ಪೇಳದವರಿಗೆ ದೋಷಸ್ಪರ್ಶವಾಗುವುದು. ಧೈರ್ಯದಿಂದ ಧರ್ಮಜಾದಿಗಳಿಗೆ ಉಪದೇಶಿಸು ! '

ಆಗ ಭೀಷ್ಮನಿಂತೆಂದನು: "ಒಳ್ಳೆಯದು ! ಶ್ರೀಶ ! ನಿನ್ನಿಚ್ಛೆಯಂತೆ ನಡೆಯುವೆನು. ನನ್ನ ಮನೋವಚನ ಶಕ್ತಿಗಳು ಎಚ್ಚರವಾಗಿವೆ. ಧರ್ಮರಾಜನು ನನ್ನನ್ನು ಧರ್ಮವಿಷಯಕ ಪ್ರಶ್ನೆಗಳನ್ನು ಕೇಳಲಿ ! ಅವನಿಗೆ ಧರ್ಮವನ್ನುಪದೇಶಿಸಿ, ನಾನು ಧನ್ಯನಾಗುವೆನು. ಧರ್ಮಾತ್ಮನಾದ ಧರ್ಮಜನು ಹುಟ್ಟಿದಾಗ ಮಹರ್ಷಿಗಳು ಪ್ರೀತರಾದರು ! ವಿಶಾಲಯಶೋವಿರಾಜಿತರಾದ ಕುರುರಾಜರಲ್ಲಿ ಧರ್ಮಜನಿಗೆ ಸಮರಿಲ್ಲ. ಧೃತಿ, ದಮ, ಬ್ರಹ್ಮಚರ್ಯ, ಕ್ಷಮಾ, ಧರ್ಮ, ಓಜಸ್ತೇಜಗಳು ಧರ್ಮಜನಲ್ಲಿ ನೆಲೆಮಾಡಿ ನಿಂತಿವೆ. ಅತಿಥಿಸಂಬಂಧಿ ಪರಿವಾರವನ್ನು ಯಥಾ ಯೋಗ್ಯವಾಗಿ ಸತ್ಕರಿಸುವ ಧರ್ಮರಾಜನು ಸತ್ಯನಿತ್ಯನಾಗಿರುವನು. ಅವನು ಕಾಮದಿಂದಲಾಗಲಿ,

ಸಂರಂಭದಿಂದಾಗಲಿ, ಭಯದಿಂದಾಗಲಿ, ಅರ್ಥತೃಷೆಯಿಂದಾಗಲಿ ಅಧರ್ಮವನ್ನು ಆಚರಿಸದಿರುವನು. ಯಜ್ಞಾಧ್ಯಯನನಿರತನು, ಶ್ರುತಶಾಸ್ತ್ರನು ಆಗಿರುವನು. ಅಂತಹ ಧರ್ಮರಾಜನು ಪ್ರಶ್ನಿಸಲಿ?"

ಧರ್ಮರಾಜನು ಸುಮ್ಮನಿರಲು ನೋಡಿ, ವಾಸುದೇವನಿಂತೆಂದನು: 'ಧರ್ಮರಾಜನು ಲಜ್ಜಾಭಯಗಳಿಂದ ಕೇಳಲಾರದೆ ಸುಮ್ಮನಿರುವನು. ಜ್ಞಾತಿವಧೆಗೈದು, ಅಧರ್ಮವನ್ನು ಮಾಡಿದೆನೆಂಬ ಶಂಕೆಯಿಂದ ಲಜ್ಜಿತನಾಗಿ, ಪೂಜ್ಯರು ಗುರುಗಳು ಬಂಧುಗಳೆನ್ನದೆ, ಬಾಣಪೀಡಿತರನ್ನಾಗಿಸಿದ ಭಯದಿಂದ ಸಂಕುಚಿತನಾಗಿ, ಅವನು ನಿನ್ನನ್ನು ಪ್ರಶ್ನಿಸದಿರುವನು" ಆ ಮಾತಿಗೆ ಭೀಷ್ಮನಿಂತೆಂದನು: "ಶ್ರೀಕೃಷ್ಣ! ದಾನಾಧ್ಯಯನ ತಪಸ್ಸುಗಳು ಬ್ರಾಹ್ಮಣರಿಗೆ ವಿಹಿತಧರ್ಮಗಳಾಗುವಂತೆ, ಕ್ಷತ್ರಿಯರಿಗೆ ಸಮರದಲ್ಲಿ ಶತ್ರುದೇಹಪಾತನವು ಧರ್ಮವೇ ಆಗಿದೆ. ಪಿತೃಪಿತಾಮಹ ಮಾತುಲ ಸೋದರ ಗುರು ಸಂಬಂಧಿಗಳನ್ನು, ಅವರು ಕಪಟಿಗಳಾಗಿದ್ದರೆ, ಸಮರ ರಂಗದಲ್ಲಿ ಸಂಹರಿಸುವುದು ಧರ್ಮವೇ ಆಗಿದೆ. ಸಮಯ ಬಂಧವನ್ನು ಮುರಿವ ಲೋಭಿಗಳನ್ನು, ಗುರುಗಳಾಗಿದ್ದರೂ, ಬಿಡದೆ, ಕಾದಿ, ಕೊಲ್ಲುವ ಕ್ಷತ್ರಿಯನು ಧರ್ಮ ದೂರನಾಗನು. ರಕ್ತನದಿಗಳಿಂದಲು, ಕೇಶತೃಣಗಳಿಂದಲು, ಗಜಶೈಲಗಳಿಂದಲು, ಧ್ವಜದ್ರುಮಗಳಿಂದಲು, ಮಹೀಮಂಡಲವನ್ನಲಂಕರಿಸುವ ಕ್ಷತ್ರಿಯನಿಗೆ ಪಾಪವಿಲ್ಲ. ಕರೆದ ಶತ್ರುವಿನೊಡನೆ ಕಡಿದಾಡುವ ಕ್ಷತ್ರಿಯನು ಧರ್ಮ ಸ್ವರ್ಗ ಕೀರ್ತಿಗಳನ್ನು ಪೊಂದುವನೆಂದು, ಮನುರಾಜನು ನುಡಿದಿರುವನು"

ಆ ಮಾತನ್ನಾಲಿಸಿ ಧೈರ್ಯವಹಿಸಿ, ಧರ್ಮರಾಜನು ಪಿತಾಮಹನ ಪಾದಗಳಿಗೆ ವಂದಿಸಿ, ಕೈಜೋಡಿಸಿ, ನಿಂತನು. ಭೀಷ್ಮನು ಅವನನ್ನು ಕರೆದು, ತಲೆಮೂಸಿ, ಕೂಡೆಂದನು. "ಧರ್ಮರಾಜ! ಭಯಪಡದೆ, ಧರ್ಮವಿಷಯವನ್ನು ಕೇಳು!" ಎಂದ ಪಿತಾಮಹನನ್ನು ನೋಡಿ, ಧರ್ಮರಾಜನು ಹೃಷಿಕೇಶನಿಗೆ ವಂದಿಸಿ, ಭೀಮನ ಕಡೆ ನೋಡಿ, ತಾತನಿಗೆ ನಮಿಸಿ, ಗುರುಹಿರಿಯರ ಅಪ್ಪಣೆ ಪಡೆದು, ಇಂತೆಂದನು: "ತಾತ! ಪ್ರಜಾಪಾಲನ ರೂಪವಾದ ರಾಜಧರ್ಮವು ದುರ್ವಹವೆನಿಸಿದೆ. ಸರ್ವಜೀವರಿಗೆ ರಕ್ಷಕವಾಗಿರುವ ರಾಜಧರ್ಮವನ್ನು ಪೇಳು! ರಾಜಧರ್ಮರತನಿಗೆ ಧರ್ಮ ಅರ್ಥ ಕಾಮಗಳು ಸಿದ್ಧವಾಗುವವು. ಆನೆಗೆ ಅಂಕುಶದಂತೆ, ಕುದುರೆಗೆ ರಶ್ಮಿಗಳಂತೆ ರಾಜಧರ್ಮವು ಲೋಕದ ಜನರಿಗೆ ನಿಯಾಮಕವಾಗಿದೆ. ರಾಜರ್ಷಿಗಳು ನಡೆದು ಬಂದ ರಾಜಧರ್ಮ ಮಾರ್ಗವು ಕೆಟ್ಟಿತೆಂದರೆ, ಲೋಕದಲ್ಲಿ ಧರ್ಮವ್ಯವಸ್ಥೆಯು ಹಾಳಾಗಿ, ಆಕುಲ ವ್ಯಾಕುಲವಾಗುವುದು. ರಾಜಧರ್ಮವು ಪ್ರಜರನ್ನು ನರಕಕೂಪದಲ್ಲಿ ಬೀಳದಂತೆ ಕಾಪಾಡುವುದು. ಪಾಪವನ್ನು ಮಾಡಿದ ಜನರು ನರೇಂದ್ರರಿಂದ ಶಿಕ್ಷಿತರಾಗಿ ಪಾಪದೂರರಾಗುವರು. ಆದುದರಿಂದ ಇತರ ಧರ್ಮಗಳನ್ನು ಪೇಳುವುದಕ್ಕಿಂತ ಮೊದಲೇ ರಾಜಧರ್ಮಗಳನ್ನು ನನಗೆ ನಿರೂಪಿಸು! ನೀನು ಬುದ್ಧಿವದಗ್ರಣಿ ಎಂದು ವಾಸುದೇವನು ತಿಳಿಸಿರುವನು. ರಹಸ್ಯವಾದ ಧರ್ಮಮರ್ಮವನ್ನು ನಮಗೆ ಉಪದೇಶಿಸು!"

## ೯. ಭೀಷ್ಮೋಪದೇಶ (೨ನೇ ದಿನ)

ಭೀಷ್ಮನು ಧರ್ಮರಾಜನಿಗೆ ಉಪದೇಶಿಸಿದನು:

"ಸರ್ವೋತ್ತಮನಾದ ಧರ್ಮಸ್ವರೂಪ ಭಗವಂತನಿಗೆ ನಮಃ. ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣನಿಗೆ ನಮಃ. ಬ್ರಾಹ್ಮಣರಿಗೆಲ್ಲರಿಗೂ ನಮಃ. ವೇದ ಪರಂಪರಾಗತವಾದ ಧರ್ಮಗಳನ್ನು ಪೇಳುವೆನು ಕೇಳು! ಪಾಲನಾಧಿಕೃತನಾದವನು. ಕ್ಷತ್ರಿಯನಾಗಲಿ, ಅಕ್ಷತ್ರಿನಾಗಲಿ, ಪ್ರಜಾರಂಜಕನಾಗಿರಬೇಕು. ದೇವ ದ್ವಿಜ ಗುರು ಸೇವಾತತ್ಪರನಾದ ರಾಜನು, ಧರ್ಮಋಣವನ್ನು ತೀರಿಸುವನು.

ರಾಜನು ಪ್ರಯತ್ನಶೀಲನಾಗಿರಬೇಕು. ಉತ್ಥಾನಶೀಲನಾಗದ ರಾಜನ ಕಾರ್ಯಗಳು ಕೆಟ್ಟುಹೋಗುವವು. ದೈವ ಪುರುಷಕಾರಗಳೆರಡೂ ಕಾರ್ಯಸಿದ್ಧಿಗೆ ಸಮಕಾರಣವೆನಿಸುವವು. ದೈವಾನುಗ್ರಹವನ್ನು ಫಲಸಿದ್ಧಿಯಾದ ನಂತರ ಊಹಿಸಬಹುದಾಗಿದೆ! ಆದರೆ ಪುರುಷ ಪ್ರಯತ್ನವು ಮೊದಲಿನಿಂದಲು ಜಾಗ್ರತವಾಗಿದ್ದರೇನೇ ಫಲಸಿದ್ಧಿಯಾಗುವುದು. ಒಂದು ಸಲ ಕೆಲಸವು ಸಿದ್ಧಿಸದಿದ್ದರೆ, ರಾಜನು ನಿರಾಶನಾಗದೆ, ದೈವಭಕ್ತನಾಗಿ, ಮತ್ತೆ, ಪ್ರಯತ್ನಿಸಿ, ಫಲವನ್ನು ಹೊಂದುವನು.

ರಾಜನು ಸತ್ಯವಂತನಾಗಿರಬೇಕು. ಸತ್ಯವಂತನು ಇಹಪರಗಳಲ್ಲಿ ಸುಖಿಸುವನು. ಸತ್ಯವಂತನನ್ನು ಪ್ರಜರು ನಂಬುವರು. ಅಸತ್ಯಪರನು ಪ್ರಜಾವಿಶ್ವಾಸಾದರಗಳಿಗೆ ಎರವಾಗುವನು. ರಾಜನು ಗುಣವಂತನಾಗಿರಬೇಕು; ಶೀಲವಂತನಾಗಿರಬೇಕು! ಇಂದ್ರಿಯ ಜಯವಂತನು, ಸದಾಚಾರವಂತನು, ದಯಾಳುವು, ಅಚಪಲನು, ಧರ್ಮನಿರತನು, ಪ್ರಸನ್ನವದನನು, ಬಹುದಾನಶೀಲನು, ಅವಕ್ರನು, ಆದ ರಾಜನು ಸದಾ ಸಂಪದ್ಯುಕ್ತನಾಗಿರುವನು.

ರಾಜನು ಶತ್ರುರಂಧ್ರಾನ್ವೇಷಣದಂತೆ, ಸ್ವರಂಧ್ರಗೋಪನವನ್ನು, ಮಂತ್ರ ರಹಸ್ಯರಕ್ಷಣವನ್ನು ಮಾಡುತ್ತಿರಬೇಕು. ಅವನು ಯಥಾರ್ಥಭಾಷಿಯಾದರೇನೇ ಅಮಾತ್ಯಾದಿಗಳ ವಿಶ್ವಾಸವನ್ನು ಗಳಿಸಲರ್ಹನಾಗುವನು.

ರಾಜನು ಮೃದುಸ್ವಭಾವದವನಾದರೆ ತಿರಸ್ಕಾರವನ್ನು, ತೀಕ್ಷ್ಣನಾದರೆ ದೂರ ವರ್ಜನವನ್ನು ಪೊಂದುವನು. ಆದುದರಿಂದ ಪ್ರಜಾಪಾಲನು ಬಹುಮೃದುವಾಗದೆ, ಅತಿ ತೀಕ್ಷ್ಣನಾಗದೆ, ಪ್ರೀತ್ಯಾದರಗಳನ್ನು ಗಳಿಸುವನು. ಪುತ್ರ! ಬ್ರಾಹ್ಮಣರು ಅಪರಾಧಿಗಳಾದರೂ ಶರೀರದಂಡವನ್ನು ಅವರಲ್ಲಿ ಪ್ರಯೋಗಿಸಬೇಡ! ಮನುರಾಜನ ನುಡಿಕೇಳು! ನೀರಿನಿಂದ ಅಗ್ನಿಯು, ಬ್ರಾಹ್ಮಣ್ಯದಿಂದ ಕ್ಷಾತ್ರವು, ಕಲ್ಲಿನಿಂದ ಲೋಹವು ಪುಟ್ಟಬಂದಿವೆ. ಅಗ್ನಿ ಕ್ಷತ್ರಿಯ ಲೋಹಗಳು ತಮ್ಮ ಕಾರಣಗಳನ್ನು ಬಿಟ್ಟು, ಮಿಕ್ಕೆಲ್ಲ ಕಡೆ, ವೀರ್ಯವಂತವಾಗಿವೆ. ಕಲ್ಲಿಗೆ ಬಡಿವ ಲೋಹವೂ, ನೀರಿನಲ್ಲಿ ಬಿದ್ದ ಅಗ್ನಿಯೂ, ಕುಂಠಿತವೀರ್ಯವಾಗುವವು. ಅಂತೆಯೇ ವಿಪ್ರರನ್ನು ದ್ವೇಷಿಸುವ ರಾಜನು ಸಮೂಲ ನಾಶವನ್ನು ಹೊಂದುವನು. ದ್ವಿಜರಿಗೆ ಸದಾ ನಮಸ್ಕರಿಸು! ವೇದಯಜ್ಞ

ತಪೋನಿರತರಾದ ವಿಪ್ರರನ್ನು ಪೂಜಿಸು! ಲೋಕೋಪದ್ರವ ಕಾರಣರಾದರೆ, ವಿಪ್ರರೆನ್ನದೆ ದಂಡಿಸು ! ಶುಕ್ರಾಚಾರ್ಯನ ವಚನವನ್ನು ಕೇಳು ! ವೇದಾಂತಪಾರಂಗನಾದರೇನು! ವಿಪ್ರನು ಶಸ್ತ್ರಪಾಣಿಯಾಗಿ ಮೇಲೇರಿ ಬಂದನೆಂದರೆ, ಅವನನ್ನು ನಿಗ್ರಹಿಸಬೇಕು ! ಅಂತಹ ಧರ್ಮವರ್ಜಿತನನ್ನು ಕೊಂದರೆ, ವಿಪ್ರಹತ್ಯಾ ಪಾಪವಿಲ್ಲ. ಅವನ ಅಧರ್ಮಕ್ರೋಧವೇ ಅವನನ್ನು ಕೊಂದಿರುವುದೆಂದು ತಿಳಿ ! ಸೂರ್ಯಕಿರಣತಪ್ತವಾದ ಸ್ಫಟಿಕವು, ತೂಲಪಿಂಡವನ್ನು ಸುಟ್ಟು, ಅದೇ ಬೆಂಕಿಯಲ್ಲಿ ತಾನೂ ನಷ್ಟವಾದಂತೆ, ಅತ ತಾಯಿ (ದುಷ್ಟ) ಕ್ರೋಧವು ಅತತಾಯಿಯನ್ನೇ ಸುಡುವುದು. ಸಾಧ್ಯವಾದೆಲ್ಲ ರೀತಿಯಿಂದಲು ವಿಪ್ರರನ್ನು ರಕ್ಷಿಸು! ಮಹಾಪರಾಧಿಯಾದ ಬ್ರಾಹ್ಮಣನನ್ನು ದೇಶದಿಂದ ಹೊರ ಹಾಕಬೇಕು; ದೇಹದಿಂದಲ್ಲ. ಬ್ರಹ್ಮಹತ್ಯಾದಿ ಮಹಾಪಾಪಗಳನ್ನೆಸಗಿದ್ದರೂ, ವಿಪ್ರರನ್ನು ದಂಡನೀತಿಗೆ ಗುರಿಪಡಿಸಿ, ಕೊಲ್ಲಲಾಗದು. ಅಂತಹವರನ್ನು ದೇಶದಿಂದ ಹೊರಹಾಕು! ವಿಪ್ರಭಕ್ತರಾದ ರಾಜರು, ಧರ್ಮವಂತರಾಗುವರು. ಧರ್ಮಿಷ್ಠ ರಾಜರು ಪ್ರಜಾಪ್ರೀತಿ ಪಾತ್ರರಾಗುವರು. ಪ್ರಜಾಪ್ರೀತಿಯಂತಹ ಕೋಶವಿನ್ನೊಂದಿಲ್ಲ.

ಮರು, ಜಲ, ಪೃಥ್ವೀ, ವನ, ಪರ್ವತ, ನರದುರ್ಗಗಳಲ್ಲಿ ನರದುರ್ಗವು ಶ್ರೇಷ್ಠವಾಗಿದೆ. ನರಪ್ರೀತಿಯನ್ನು ದಯಾ ದಾನ ಸತ್ಯ ವಿಕ್ರಮಗಳಿಂದ ಗಳಿಸು ! ನರರ ಪ್ರೀತಿಗಾಗಿ, ಅಧರ್ಮವನ್ನು ಮಾಡಬೇಡ ! ಅತಿದಯಾವಂತನಾಗಿ, ದಂಡ್ಯರನ್ನು ಶಿಕ್ಷಿಸದೆ ಬಿಡಬೇಡ ! ಸಹಿಸುವ ಮದ್ದಾನೆಯ ತಲೆಮೇಲೇರಿ ಕೂಡುವ ಮಾವುಟಿಗನನ್ನು ನೋಡು ! ಅತಿಕ್ಷಮೆಯು ಅವಹೇಳನವನ್ನು ತರುವುದು. ಶೀತಲನು, ತಾಪಪ್ರದನು ಆಗದಿರುವ ವಸಂತರವಿಯಂತೆ, ರಾಜನು ಮೃದುಲನು ತೀಕ್ಷ್ಣನು ಆಗದೆ, ಯೋಗ್ಯತೆಯನ್ನರಿತು ವರ್ತಿಸಬೇಕು.

ಮಾಡುವ ಉಪಕಾರಾಪಕಾರಗಳಿಂದಲು, ನೇತ್ರಮುಖವಿಕಾರಗಳಿಂದಲು, ಸಾಮುದ್ರಿಕ ಲಕ್ಷಣಗಳಿಂದಲು, ನುಡಿವ ಮಾತಿನಿಂದಲು, ಮಿತ್ರ ಶತ್ರು ಜನರನ್ನು ತಿಳಿಯಬಹುದಾಗಿದೆ. ಮೃಗಯಾ, ದ್ಯೂತ, ದಿವಾನಿದ್ರೆ, ಪರನಿಂದೆ, ದುಷ್ಟಸ್ತ್ರೀ, ಸ್ನೇಹ, ಮದ, ವಾದ್ಯ, ಗೀತನೃತ್ಯಗಳು, ಪಾನ; ಎಂಬುವ ಕಾಮವ್ಯಸನಗಳು ಹತ್ತು. ಕ್ರೋಧ ವ್ಯಸನಗಳು ಎಂಟು; ಪೈಶುನ್ಯ, ಸಾಹಸ, ದ್ರೋಹ, ಈರ್ಷ್ಯಾ, ಅಸೂಯಾ, ಅರ್ಥದೂಷಣ, ವಾಕ್ಪಾರುಷ್ಯ, ದಂಡಪಾರುಷ್ಯಗಳೆಂಬವು. ಎಲ್ಲವೂ ಕಲೆತು ಹದಿನೆಂಟು ವ್ಯಸನಗಳು. ವ್ಯಸನಶೀಲನಾದವನು ಕೊನೆಗೆ ವ್ಯಸನದಾಸನಾಗುವನು. ಪಾನ, ದ್ಯೂತ, ವೇಶ್ಯಾ ಮೃಗಯಾ, ದಂಡಪಾರುಷ್ಯ, ವಾಕ್ಪಾರುಷ್ಯ, ಅರ್ಥದೂಷಣಗಳೆಂಬ ಏಳು ವ್ಯಸನಗಳು ಕಷ್ಟತಮವಾಗಿವೆ. ರಾಜನು ವ್ಯಸನಗಳಿಗೆ ಮನಸೋಲದೆ, ಪ್ರಜಾ ಪ್ರೀತಿಯನ್ನು ಗಳಿಸುವನು. ವ್ಯಸನಿಯಾದವನನ್ನು ಪ್ರಜರು ದ್ವೇಷಿಸುವರು; ಅಂಜಿ ದೂರ ಸರಿಯುವರು; ಕಷ್ಟದಲ್ಲಿ ಕೈ ಬಿಡುವರು. ರಾಜನು ತನ್ನ ಸುಖವನ್ನು ಲೆಕ್ಕಿಸದೆ, ಪ್ರಜಾಸುಸುಖವನ್ನು ಸಾಧಿಸಲು ಹೆಣಗಬೇಕು. ಗರ್ಭಿಣಿಯು ತನ್ನ ಪ್ರಿಯನನ್ನು ದೂರ ವಿಟ್ಟು, ಗರ್ಭಕ್ಷೇಮವನ್ನು ಸಾಧಿಸುವುದಿಲ್ಲವೇ ? ರಾಜನು ಧರ್ಮಪಾಲಕನಾಗಿ

ಲೋಕಹಿತವನ್ನು ಸಾಧಿಸುವಾಗ, ಧೀರನಾಗಬೇಕು! ದಂಡ್ಯರನ್ನು ಬಿಡದೆ ದಂಡಿಸಬೇಕು. ಗಜ ರಥ ತುರಗ ಪದಾತಿ ಸೈನ್ಯಯುಕ್ತನು, ಧೀರನು ಆದ ರಾಜನಿಗೆ ಭಯವಿಲ್ಲ.

ರಾಜನು ಧೀರಗಂಭೀರನಾಗಿರಬೇಕು. ಹಾಗಿಲ್ಲದೆ, ಪರಿಹಾಸ ಶೀಲನಾದರೆ ಅವಮಾನಿತನಾಗುವನು. ಸದಾ ಸಮೀಪವರ್ತಿಗಳಾಗಿರುವ ಭೃತ್ಯರೊಡನೆ ಕೂಡಿ, ಹಾಸ್ಯವಾಡುವ ರಾಜನ ಮರ್ಯಾದೆ ಕವಡೆಗೂ ಕಡೆಯಾಗುವುದು. ಭೃತ್ಯರು ತಮ್ಮ ಸ್ಥಾನದಲ್ಲಿ ನಿಲ್ಲರು! ರಾಜನ ಮಾತನ್ನು ಮೀರಿ ನಡೆವರು; ಅವನ ರಹಸ್ಯವನ್ನು ರಕ್ಷಿಸರು; ಹೇಳಿದ ಕೆಲಸವನ್ನು ಮಾಡರು; ಬೇಡಬಾರದ್ದನ್ನು ಬೇಡುವರು; ಅವನ ಆಹಾರ ಪಾನೀಯ ವಸ್ತ್ರಭೂಷಣಗಳನ್ನು ಕದಿವರು; ವಂಚಿಸಿ ಕಾರ್ಯವನ್ನು ಕೆಡಿಸುವರು; ಕೃತ್ರಿಮ ಶಾಸನ ಪತ್ರಗಳಿಂದ ಅವನ ದೇಶವನ್ನು ಹಾಳುಮಾಡುವರು; ಅಂತಃಪುರರಕ್ಷಕ ದಾಸಿಯರಿಂದ ಸ್ನೇಹ ಬೆಳೆಸಿ, ರಾಜಕುಲವನ್ನು ಕೆಡಿಸುವರು; ರಾಜನೆದುರಿಗೇ ನಿರ್ಭಯರಾಗಿ, ವಾತ, ಪೂತ್ಕಾರ, ಜೃಂಭಣ, ನಿಷ್ಠೀವನಗಳನ್ನು ಮಾಡುವರು; ರಾಜನನ್ನು ಅಣಕಿಸುವರು. ಭೃತ್ಯರು ಮಾಡುವ ಅಪಚಾರಗಳಿಗೆ, ರಾಜನ ಹರ್ಷುಲತ್ವವೇ ಕಾರಣವಾಗಿದೆ. ಹಾಸ್ಯಪ್ರಿಯತೆ ಹಗುರವಾಗಿದೆ. ಅಂತಹ ರಾಜನ ರಥ, ಗಜ, ತುರಗಾದಿ ವಾಹನಗಳೂ ಅವನ ಭೃತ್ಯರ ಪಾಲಾಗುವವು. ಇತಿಮಿತಿ ಬಿಟ್ಟ ಭೃತ್ಯರು ಸಭೆಯಲ್ಲಿಯೂ, 'ರಾಜನ್! ಇದು ನಿನ್ನ ತಪ್ಪು; ಇದನ್ನು ನೀನು ಮಾಡಬಾರದು' ಎಂದು ದಂಡಿಸಲಾರಂಭಿಸುವರು. ರಾಜನು ಸಿಟ್ಟಾದರೂ, ಅವರು ಭಯಪಡದೆ, ನಗೆಯಾಡುವರು. ಸಭೆಯಲ್ಲಿ ಸತ್ಕರಿಸಿದ ರಾಜನಮನ್ನಣೆಗೆ ತೃಪ್ತಿಪಡರು. ರಾಜನ ಅಲಂಕಾರಾನುಲೇಪನಾದಿಗಳನ್ನು ಪರರು ಕದ್ದೊಯ್ಯುತ್ತಿದ್ದರೂ, ಸೇವಕರು ಸುಮ್ಮನೆ ನಿಂತು ನಗುತ್ತಿರುವರು. ರಾಜನೊಡನೆ ಆಟವಾಡಬಯಸುವರು. 'ರಾಜನು ನಮ್ಮ ವಶ'ನೆಂದು, ಲೋಕದಲ್ಲಿ ಪ್ರಕಟಿಸುವರು; ಇಂತಹ ದೋಷಗಳನ್ನರಿತು, ರಾಜನು ಹರ್ಷುಲನು, ಮಾರ್ದವಯುತನು ಆಗದೆ, ಧೀರ ಗಂಭೀರನಾಗಿರಬೇಕು.

ರಾಜನು ಎಚ್ಚತ್ತು, ರಾಜಕಾರ್ಯಗಳನ್ನು ನಡೆಸಬೇಕು. ಶುಕ್ರನೀತಿಯನ್ನು ಕೇಳು! ಸರ್ಪವು ಇಲಿಗಳನ್ನಂತೆ ಭೂಮಿಯು, ಯುದ್ಧಕ್ಕಂಜುವ ರಾಜನನ್ನೂ ವೇದಾಧ್ಯಯನಕ್ಕಾಗಿ ಮಾಡುವ ಗುರುಕುಲದ ಕಷ್ಟಕ್ಕಂಜುವ ವಿಪ್ರನನ್ನೂ, ನುಂಗಿ ಬಿಡುವಳು. ರಾಜನ್! ಸಂಧಿವಿಗ್ರಹಗಳನ್ನು ಅರಿತು ನಡೆ! ರಾಜ್ಯವು ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ, ರಾಜ ಎಂಬುವ ಸಪ್ತಾಂಗಗಳಿಂದ ಕೂಡಿದೆ! ಯಾವುದೇ ಅಂಗಕ್ಕೆ ಹಾನಿಯಾಗದಂತೆ ರಾಜನು ರಕ್ಷಿಸಬೇಕು! ರಾಜ ದ್ರೋಹವನ್ನೆಸಗುವ ಗುರುವಾಗಲಿ, ಮಿತ್ರನಾಗಲಿ, ವಧ್ಯನೆನಿಸುವನು. ಅಹಂಕಾರದಿಂದ ಕಾರ್ಯಾಕಾರ್ಯಗಳನ್ನು ತಿಳಿಯದೆ, ಅಮಾರ್ಗಗಾಮಿಯಾದನೆಂದರೆ, ಗುರುವಿನನ್ನೂ ದಂಡಿಸಬೇಕೆಂದು, ಮರುದ್ರಾಜನ ಮತವಿದೆ. ಸಗರರಾಜನು ಪ್ರಜಾದ್ರೋಹಿಯಾದ ತನ್ನ ಮಗನನ್ನೂ ರಾಜ್ಯಭ್ರಷ್ಟನನ್ನಾಗಿ ಮಾಡಿದನು. ವಿಪ್ರನಿಂದೆಗೈದ ಶ್ವೇತಕೇತುವೆಂಬ

ಮಗನನ್ನು ಉದ್ದಾಲಕನು ಪರಿತ್ಯಜಿಸಿದನು. ರಾಜಧರ್ಮವು ಲೋಕರಂಜನ, ಧರ್ಮರಕ್ಷಣ, ನಿಷ್ಕಪಟ ವ್ಯವಹಾರ, ಸತ್ಯಪಾಲನವೆಂಬ ನಾಲ್ಕು ಪಾದಗಳಿಂದ ಕೂಡೆಯುತ್ತಿದೆ. ಅವನ್ನು ಚನ್ನಾಗಿರಿಸಿ, ನಡೆಸುವ ರಾಜನೇ ರಾಜನು.

ಕಾಲ ಕಾಲಕ್ಕೆ ಭೃತ್ಯವೇತನವನ್ನಿತ್ತು, ಕಪ್ಪಕ್ಕಾಗಿ ಕಣದಲ್ಲಿ ಕಾಳನ್ನಿಡಿಸಿ ಕೆಡಿಸದೆ, ಸತ್ಯವಚನನಾಗಿ, ಕ್ಷಮೆಯುಳ್ಳ ರಾಜನು ಶುಭವನ್ನು ಹೊಂದುವನು. ಅಂತರ್ಯಾಮಿಯನ್ನರಿತು, ಕ್ರೋಧವನ್ನು ತೊರೆದು, ಶಾಸ್ತ್ರಮಾರ್ಗವನ್ನು ಬಿಡದೆ, ಧರ್ಮಾರ್ಥ ಕಾಮಗಳಿಗೆ ಕೆಡದೆ, ಮೋಕ್ಷವನ್ನು ಬೇಡಿ, ನಡೆವ ರಾಜನಿಗೆ ಶುಭವಾಗುವುದು. ವರ್ಣಾಶ್ರಮ ಧರ್ಮರಕ್ಷಣೆಕ್ಕಿಂತ ಪುಣ್ಯವಿಲ್ಲ. ಧರ್ಮದ್ರೋಹದಕಿಂತ ಪಾಪವಿಲ್ಲ. ವರ್ಣಸಂಕರವಾಗದಂತೆ ಪಾಲಿಸುವ ರಾಜನು ಬಹುಪುಣ್ಯ ಲೋಕವನ್ನು ಹೊಂದುವನು.

ಎಂತಹ ಆಪ್ತನನ್ನೇ ಆಗಲಿ ರಾಜನು ನಂಬಿ, ಮೈಮರೆತಿರಬಾರದು. ಕೋಶ ಮಿತ್ರ, ಸೇನಾದಿಗಳನ್ನು ಪುಷ್ಕಲವಾಗಿ ಸಂಪಾದಿಸಿ, ಶತ್ರುಚ್ಛಿದ್ರವನ್ನು ತಿಳಿದು ಭೇದಿಸುವ ರಾಜನು ಸುಖಿಸುವನು. ಚಾರರನ್ನಿಟ್ಟು, ಚಾರರನ್ನು ಪರೀಕ್ಷಿಸುವ ಚಾರರನ್ನು ನಿಯಮಿಸಿ, ಗುಣದೋಷಗಳನ್ನು ವಿಚಾರಿಸಿ ತಕ್ಕ ಸ್ಥಾನದಲ್ಲಿಟ್ಟು, ರಾಜನು ಸುಖಿಸುವನು. ಬಲವಂತನಲ್ಲಿ ಸಂಧಿಯನ್ನು, ಸಮಬಲನಲ್ಲಿ ಯುದ್ಧವನ್ನು, ದುರ್ಬಲನಲ್ಲಿ (ಯಾನ) ದುರ್ಗಾಕ್ರಮಣವನ್ನು ಮಾಡುತ್ತಾ ರಾಜನು ಮುನ್ನಡೆಯಬೇಕು. ಬಲವಂತನು ಮುತ್ತಿದಾಗ ಆಸನ ಅಂದರೆ, ದುರ್ಗದಲ್ಲಡಗಿ ಉಳಿಯುವನು, ಸಮಬಲನು ಮುತ್ತಿದಾಗ, ದ್ವೈಧೀಭಾವ, (ದುರ್ಗಾಶ್ರಯ, ಪರರನ್ನು ಧಾನ್ಯಾದಿ ನಿರೋಧದಿಂದ ಪೀಡಿಸುವುದು), ಬಲಹೀನನು ಮುತ್ತಿದಾಗ, ಸಮಾಶ್ರಯಣ, ಅಂದರೆ ಮಿತ್ರಾಂತರರಿಂದ ಕೂಡಿ ಕಡಿದಾಡುವುದು ! ಇಂತು ಆರು ಉಪಾಯಗಳನ್ನು ತಿಳಿದು ನಡೆಸಿ, ತನ್ನ ಜಯವನ್ನೂ ಶತ್ರು ಪರಾಜಯವನ್ನೂ, ರಾಜನು ಸಾಧಿಸಬೇಕು.

ಚಾರಚಕ್ಷುವಾಗಿ ಯಮನಂತೆಯು, ಕೋಶವರ್ಧಕನಾಗಿ ಕುಬೇರನಂತೆಯು ಗುಣದೋಷವಿವೇಕಿಯಾಗಿ ಇಂದ್ರನಂತೆಯು ನಡೆವ ರಾಜನು ಸುಖಿಸುವನು. ಮಂತ್ರಿ, ಪುರೋಹಿತ, ಯುವರಾಜ, ಸೇನಾಪತಿ, ದ್ವಾರಪಾಲ, ಅಂತರ್ವೇಶಿಕ, ಕಾರಾಗಾರಾಧಿಕಾರೀ, ಧನಸಂಚಯಕಾರಿ, ಕೃತ್ಯಾಕೃತ್ಯವಿಚಾರಕ, ಪ್ರವೇಶಕ, ನಗರಾಧ್ಯಕ್ಷ, ಕಾರ್ಯನಿರ್ಮಾಣಕ, ಧರ್ಮಾಧ್ಯಕ್ಷ, ಸಭಾಧ್ಯಕ್ಷ, ದಂಡಪಾಲ, ದುರ್ಗಪಾಲ, ರಾಷ್ಟ್ರಾಂತಪಾಲಕ, ಅಟವೀಪಾಲಕ, ಎಂಬ ಹದಿನೆಂಟು ಸಂಸ್ಥಾನಿಕರನ್ನು ಪರೀಕ್ಷಿಸುವ ಚಾರರನ್ನು ನಿಯಮಿಸಿ, ಮಂತ್ರಿ, ಪುರೋಹಿತ, ಯುವರಾಜರನ್ನು ತಾನೇ ಪರೀಕ್ಷಿಸುತ್ತಾ ರಾಜನು ಎಚ್ಚರದಿಂದಿರಬೇಕು. ಅಮಾತ್ಯ, ರಾಷ್ಟ್ರ, ದುರ್ಗ ಕೋಶ, ದಂಡಗಳೆಂಬ ಐದುವರ್ಗಗಳನ್ನು ಶತ್ರುವಿನಲ್ಲಿ ಹೆಚ್ಚಾಗಿರದಂತೆ, ಬೆಳೆಸುವ ರಾಜನು ಬಲವಂತನಾಗುವನು.

ರಾಜನು ಪ್ರಸನ್ನವದನನು, ಅಮೃತಭಾಷಣನು, ವೃದ್ಧಸೇವಿಯು, ಸಜ್ಜನ

ರಕ್ಷಕನು ಆಗಿರಬೇಕು. ಅಸಜ್ಜನರಿಂದ ಕಸಿದು ಸಜ್ಜನರಿಗೆ ಕೊಡಬೇಕು. ಕುಲೀನರು, ನಿರೋಗಿಗಳು, ಶೂರರು, ಭಕ್ತರು ಆದ ಭೃತ್ಯರನ್ನಾರಿಸಿ, ಅವರ ವಿದ್ಯಾವಿವೇಕಗಳಿಗೆ ತಕ್ಕ ನಿಯೋಗಗಳಲ್ಲಿ ನಿಲ್ಲಿಸಬೇಕು. ಪರಲೋಕ ಭೀತಿ, ನೀತಿ, ಧರ್ಮಗಳನ್ನವಗಣಿಸದ ಸಾಧುಜನರೊಡನೆ, ರಾಜಕಾರ್ಯಾಲೋಚನೆ ಮಾಡಬೇಕು. ಪಂಡಿತಜನರಿಗೆ ರಾಜಭೋಗಗಳನ್ನು ಒದಗಿಸಬೇಕು ! ಆದರೆ ಛತ್ರ, ದಂಡ, ಆಜ್ಞಾ ಮುಂತಾದ ಅಧಿಕಾರವನ್ನು ಮತ್ತೊಬ್ಬರಿಗೆ ವಹಿಸಿಕೊಡಲಾಗದು. ಎಲ್ಲರನ್ನೂ ಶಂಕಿಸಿ, ಎಲ್ಲರಿಂದಲು ಅಪಹರಿಸುವ ನೃಪತಿಯು ಲೋಭಿಎನಿಸಿ, ತನ್ನವರಿಂದಲೇ ಕೊಲ್ಲಲ್ಪಡುವನು. ಲೋಕಚಿತ್ತವನ್ನರಿತು ನಡೆವ ರಾಜನನ್ನು ಪ್ರಜರು ಪ್ರಾಣದಂತೆ ರಕ್ಷಿಸುವರು. ಕ್ರೋಧರಹಿತನು, ವ್ಯಸನದೂರನು, ಜಿತೇಂದ್ರಿಯನು, ಮೃದುದಂಡನು, ತ್ಯಾಗಿಯು, ಪ್ರಾಜ್ಞನು, ಸುಪ್ರಸನ್ನನು, ಸರ್ವವರ್ಣಪಕ್ಷನು, ಆರಬ್ಧಾಂತಗಾಮಿಯು, ವೀರನು, ಆದ ರಾಜನು ಉತ್ತಮನೆನಿಸುವನು. ಪುತ್ರರಂತೆ ಪ್ರಜರನ್ನು ಕಾಪಾಡುವ ರಾಜನು ಉತ್ತಮನು. ಅಂತಹವನ ರಾಜ್ಯದಲ್ಲಿ ಪ್ರಜರು ನಿರ್ಭಯರಾಗಿರುವರು. ಅವರು ವೈಭವವನ್ನು ತೋರಿ ಮೆರೆಯಲು ಹೆದರರು; ಸ್ವಕರ್ಮನಿರತರಾಗುವರು; ಶಾರೀರ ಪ್ರೀತಿಕಿಂತಲು ಅವರ ಧರ್ಮಪ್ರೀತಿಯು ಹೆಚ್ಚಾಗಿರುವುದು. ರಾಜಾಧಿಕಾರಿಗಳಿಗೆ ವಿಧೇಯರಾಗಿ, ಜಗಳವಾಡದೆ ಪ್ರಜರು ದಾನ ಧರ್ಮರತರಾಗುವರು. ಕೂಟ, ಕಾಪಟ್ಯ, ಮಾಯಾ, ಮತ್ಸರಗಳಿಗೆಡೆಕೊಡದೆ, ತನ್ನ ರಾಜ್ಯದಲ್ಲಿರುವ ಜ್ಞಾನಿಗಳ ಹಿತವನ್ನು ಸಾಧಿಸಿ, ಸನ್ಮಾರ್ಗದಲ್ಲಿ ನಡೆವ ರಾಜಸತ್ತಮನು ಉಭಯಲೋಕ ಸುಖವನ್ನು ಹೊಂದುವನು. ಚಾರ ಮಂತ್ರಗಳನ್ನು ಹೊರಗೆಡಹದ ರಾಜನ ರಾಜ್ಯವು ಸ್ಥಿರವಾಗಿರುವುದು.

ರಾಜನು ರಕ್ಷಕನಾಗಿರಲು, ಮನೆ ಮಡದಿ ಮಕ್ಕಳು ಮತ್ತು ಧನ; ರಾಜನಿಲ್ಲದಿರೆ ಅವಾವೂ ಉಳಿಯಲಾರವು. ರಕ್ಷಣೆಯಿಂದ ರಾಜನು ಪೂಜ್ಯನಾಗಿರುವನು. ದುಷ್ಟರಿಂದ ಶಿಷ್ಟರನ್ನು ರಕ್ಷಿಸದ ರಾಜನು ಕಳ್ಳನೇ ಸರಿ ! ಇದು ಶುಕ್ರನ ಮಾತು. ಇನ್ನು ದಕ್ಷನಾಡಿದ ವಚನವನ್ನು ಕೇಳು ! ಉಪದೇಶಿಸದ ಆಚಾರ್ಯ, ಅಧ್ಯಯನವಿಲ್ಲದ ಋತ್ವಿಜ, ಪ್ರಿಯವನ್ನಾಡದ ಭಾರ್ಯೆ, ಊರನ್ನು ಬಿಡದ ಗೊಲ್ಲ, ಅಡವಿಯಲ್ಲಿರುವ ಕ್ಷೌರಿಕ ಮತ್ತು ರಕ್ಷಣೆಗೈಯದ ರಾಜ ಎಂಬ ಆರು ಜನರನ್ನು ಒಡೆದ ಹಡಗಿನನ್ನಂತೆ ಬಿಡಬೇಕು.

ರಾಜಧರ್ಮಗಳ ಸಾರವನ್ನು ಕೇಳು ! ಬೃಹಸ್ಪತಿ, ಶುಕ್ರಾಚಾರ್ಯ, ಮಹೇಂದ್ರ, ದಕ್ಷಪ್ರಜೇಶ, ಭಾರದ್ವಾಜ, ಗೌರಶಿರರ್ಷಿ ಎಂಬ ಆರು ಜನರು ರಾಜಶಾಸ್ತ್ರವನ್ನು ರಚಿಸಿದ ಮಹಾನುಭಾವರು. ಅವರೆಲ್ಲರೂ ರಕ್ಷಾಧರ್ಮವನ್ನು ಪ್ರಶಂಸಿಸಿರುವರು. ದುಷ್ಟಶಿಕ್ಷೆಯಿಲ್ಲದೆ ಪ್ರಜಾರಕ್ಷೆಯಾಗದು. ಆದುದರಿಂದ ದಂಡರಕ್ಷೆಗಳನ್ನು ಹಿಡಿದು ರಾಜನು ಎಚ್ಚರದಿಂದಿರಬೇಕು. ಗುಪ್ತಚಾರರನ್ನು, ಪ್ರಕಟರಾಯಭಾರಿಗಳನ್ನೂ ನಿಯಮಿಸಿ, ಕಾಲಕಾಲಕ್ಕೆ ತಕ್ಕಂತೆ ದಾನಾದಿಗಳನ್ನು ಮಾಡುತ್ತಾ ಶರೀರದಂಡ, ಅರ್ಥದಂಡಗಳನ್ನು ತಕ್ಕಂತೆ ಪ್ರಯೋಗಿಸಿ, ಸಾಧುಗಳ ಕೈಬಿಡದೆ, ಬಲವಂತರನ್ನು ಸಂತೋಷಪಡಿಸಿ, ಕೋಶವನ್ನೂ, ಸೇನೆಯನ್ನೂ ಬೆಳೆಸಿ, ಸದಾ ಪ್ರಯತ್ನಶೀಲನಾಗಿರುವ ರಾಜನು

ರಕ್ಷಾಚತುರನೆನಿಸುವನು. ಪ್ರಯತ್ನಶೀಲರಾದ ದೇವತೆಗಳು ಅಮೃತವನ್ನು ಪಡೆದರು. ಆಲಸರು, ಕಲಹಶೀಲರು, ಸ್ತ್ರೀದಾಸರು ಆದ ದೈತ್ಯರು ಕೈಲಿದ್ದ ಸುಧೆಯನ್ನು ಕಳೆದುಕೊಂಡರು. ವಚನವೀರರಾದ ಪಂಡಿತರು ಕೂಡ ಉತ್ಥಾನವೀರನಾದ ರಾಜನ ಬಾಗಿಲಲ್ಲಿ ನಿಂತು ಅವನೀವ ಸತ್ಕಾರಗಳಿಗೆ ಕಾದಿರುವರು.

ಪ್ರಯತ್ನರಹಿತನಾದ ರಾಜನು, ವಿಷರಹಿತ ಸರ್ಪದಂತೆ, ಶತ್ರುಪರಾಭವಕ್ಕೆ ಗುರಿಯಾಗುವನು. ದುರ್ಬಲನಾಗಿರುವನೆಂದು, ಶತ್ರುವನ್ನು ಉಪೇಕ್ಷಿಸಬಾರದು. ಅಗ್ನಿ ಸ್ವಲ್ಪವಾದರೂ ಮಹತ್ಕಾಷ್ಠವನ್ನು ಸುಡುವಂತೆ, ಸ್ವಲ್ಪವಿಷವೂ ಪ್ರಾಣವನ್ನು ತೆಗೆವಂತೆ, ಅಲ್ಪಶತ್ರುವು ಕೂಡ, ಉಪೇಕ್ಷಿತನಾದರೆ, ಕ್ರಮವಾಗಿ ಪ್ರಬಲನಾಗಿ, ಒಂದೇ ಅಂಗದಿಂದ ಚತುರಂಗಸಮನ್ವಿತನಾದ ರಾಜನನ್ನು ಗೆದ್ದು, ಸಂಹರಿಸಬಹುದು. ರಾಜದಂಡವು ದುರ್ಧರವಾಗಿದೆ. ಮೃದುವು, ಪ್ರಯತ್ನರಹಿತನು, ರಕ್ಷಾವಿಮುಖನು ಆದ ರಾಜನ ಕೈಯಿಂದ, ಅದು ಕಳಚಿಬೀಳುವುದು. ಶತ್ರುಜನರಲ್ಲಿ ಕಾಪಟ್ಯ, ವಂಚನೆ; ಪ್ರಜರಲ್ಲಿ ಲೋಕಸಂಗ್ರಹ, ಧರ್ಮಾಚರಣೆ, ಮಿತ್ರರಲ್ಲಿ ಆರ್ಜವ, ಬಹುಮಾನ, ವಿಪ್ರರಲ್ಲಿ ದಾನ ಮಾನಗಳು ಈ ಗುಣಗಳಿಂದಲೇ ಅದು ರಾಜನ ಕೈಬಿಡದೆ ನಿಂತು, ರಾಜ್ಯವನ್ನು ಕಾಪಾಡುವುದು.

ಧರ್ಮರಾಜ ! ರಾಜಧರ್ಮಗಳನ್ನು ಕೇಳಿದೆ ! ಲೇಶವಾಗಿ ಅವನ್ನು ನಾನು ನಿನಗೆ ನಿರೂಪಿಸಿರುವೆನು. ಮತ್ತೇನಾದರೂ ಕೇಳು ! ನಿನ್ನ ಸಂದೇಹವನ್ನು ಬಿಡಿಸುವೆನು' ಭೀಷ್ಮನ ಮಾತನ್ನಾಲಿಸಿ, ಆತನ ಧರ್ಮಜ್ಞಾನಕ್ಕೆ ಮೆಚ್ಚಿ ಶ್ರೀವ್ಯಾಸದೇವ, ವಾಸುದೇವ, ದೇವಸ್ಥಾನ, ಅಶ್ಮಕ, ಕೃಪ, ಸಂಜಯ, ಸಾತ್ಯಕಿ, ಪ್ರಮುಖರು ಪ್ರಶಂಸಿಸಿದರು. ಸಾಯಂಕಾಲವಾದುದನ್ನು ಕಂಡು, ಧರ್ಮಜನು 'ನಾಳೆ ಬರುವೆ'ನೆಂದು, ತಾತನ ಅಪ್ಪಣೆ ಪಡೆದು, ಅಲ್ಲಿಂದ ತೆರಳಿದನು. ದೃಷದ್ವತಿಯನ್ನು ಸೇರಿ, ಶ್ರೀಕೃಷ್ಣ ಪಾಂಡವಾದಿಗಳು, ಅಲ್ಲಿ ಸಂಧ್ಯಾಜಪಗಳನ್ನು ನೆರವೇರಿಸಿ, ಹಸ್ತಿನಾವತಿಯನ್ನು ಸೇರಿದರು. ಇಂತು ಪ್ರತಿ ನಿತ್ಯವೂ ಉಪದೇಶವು ಮಾಸಪರ್ಯಂತವಾಗಿ ಸಾಗಿತು.

## ೧೦. ಭೀಷ್ಮೋಪದೇಶಃ ರಾಜೋತ್ಪತ್ತಿ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು :

'ರಾಜನ್ ! ಮರುದಿನ ಬೆಳಗಾಗುತ್ತಲೇ, ಶ್ರೀಕೃಷ್ಣ ಪಾಂಡವಾದಿಗಳು ಕಾಲ್ಯಕೃತ್ಯಗಳನ್ನು ಮುಗಿಸಿ, ಭೀಷ್ಮನನ್ನು ಸೇರಬಂದರು. ಅಲ್ಲಿ ಸೇರಿದ್ದ ಶ್ರೀವ್ಯಾಸಾದಿ ಮಹರ್ಷಿಗಳಿಗೆ ವಂದಿಸಿ, ತಾತನಿಗೂ ನಮಿಸಿ, ಆತನ ಆಶೀರ್ವಾದವನ್ನು ಸ್ವೀಕರಿಸಿ, ಸುತ್ತುವರಿಸಿ, ಕೂತರು. ಧರ್ಮರಾಜನು ಪ್ರಾಂಜಲಿಪುಟನಾಗಿ ಭೀಷ್ಮ ನಿಗಿಂತೆಂದನು:

'ರಾಜನೆಂಬ ಶಬ್ದವು ಎಂತು ಉತ್ಪನ್ನವಾಯಿತು ? ಮೊದಲ ರಾಜನು ಎಂತು ಉದ್ಭವಿಸಿದನು ? ಅವಯವ, ಇಂದ್ರಿಯ, ಧಾತು, ಶರೀರಾದಿಗಳಿಂದ ಇತರರಂತೇ

ಕಾಣುವ ರಾಜನ ಹೆಚ್ಚಳವೇನು ? ಅವನಿಗೂ ಎಲ್ಲರಿಗಂತೆ ಜನನಮರಣಗಳಿವೆ. ಅವನು ತನಗೂ ಮಿಗಿಲಾದ ಬುದ್ಧಿವಂತರನ್ನೂ ಶೂರರನ್ನೂ ತನ್ನಧೀನರನ್ನಾಗಿಸಿ ಪಾಲಿಸುತ್ತಿರುವನು. ಅವನು ಪ್ರಸನ್ನನಾದರೆ, ಲೋಕವೆಲ್ಲವೂ ಪ್ರಸನ್ನವಾಗುವುದು. ಅವನು ಆಕುಲನಾದರೆ, ಲೋಕವೇ ಆಕುಲವಾಗುವುದು. ಒಬ್ಬ ನರಮಾತ್ರನಿಗೆ ದೇವತೆಯಂತೆ, ಜನರು ಬಾಗಿ ವಂದಿಸಿ, ಅವನ ಆಣತಿಯನ್ನು ಶಿರದಲ್ಲಿಟ್ಟು ನಡೆಯುತ್ತಿರುವರು. ಅಂತಹ ರಾಜನ ಮಹಿಮೆಯನ್ನು ಸಕಾರಣವಾಗಿ ತಿಳಿಸು !'

ಭೀಷ್ಮನಿಂತು ನುಡಿದನು: 'ಕೃತಯುಗದಲ್ಲಿ ಮೊದ ಮೊದಲು, ರಾಜ್ಯವಿಲ್ಲ; ರಾಜನಿದ್ದಿಲ್ಲ; ದಂಡವಿಲ್ಲ; ದಂಡಿಸುವನಿದ್ದಿಲ್ಲ; ಕೇವಲ ಧರ್ಮಬಲದಿಂದ ಪ್ರಜರು ಪರಸ್ಪರ ರಕ್ಷಣದಕ್ಷರಾಗಿದ್ದರು. ತಾಯಿಯಂತೆ ಸ್ನೇಹದಿಂದಲಲ್ಲದೆ ಭೃತ್ಯರಂತೆ ವೇತನದಿಂದಲಲ್ಲದೆ, ಜನರು ಧರ್ಮದಿಂದ ಪಾಲನವನ್ನೂ, ಧರ್ಮದಿಂದ ಸೇವನವನ್ನೂ ನಡೆಸಿಕೊಂಡು, ಸುಖವಾಗಿ ಜೀವಿಸಿದರು. ಹೀಗಿರುತ್ತಿರಲು ಪಾಲನ ಕ್ಲೇಶದಿಂದ, ಅವರು ಖಿನ್ನರಾದರು. ಕ್ರಮವಾಗಿ ಅವರನ್ನು ಮೋಹವು ಆವರಿಸಿತು. ಅವರ ಜ್ಞಾನವು ಲೋಪವಾಗುತ್ತಾ ಬಂತು. ಅದರಿಂದ ಮೋಹ (ಅಜ್ಞಾನ)ವು ಹೆಚ್ಚಿತು. ಅದರಿಂದ ಲೋಭ, ಲೋಭದಿಂದ ವಿಷಯಾಭಿಲಾಷೆ, ಅದರಿಂದ ಇಂದ್ರಿಯ ಪ್ರೀತಿಸಂಪಾದನ, ಅದರಿಂದ ಕಾಮ, ಅದು ಕೆಟ್ಟಾಗ ಕ್ರೋಧ. ಅದರಿಂದ ಮತ್ತೆ ಮೋಹವು ಪುಟ್ಟಿದವು. ರಾಗ ದ್ವೇಷವಶರಾದ ಮಾನವರು ಕಾರ್ಯಾಕಾರ್ಯ ವಿವೇಕವನ್ನು ಕಳೆದುಕೊಂಡರು. ಅಗಮ್ಯಾಗಮನ, ಅವಾಚ್ಯಾನು ವಚನ, ಅಭಕ್ಷ್ಯಭಕ್ಷಣಗಳಿಂದ ಅವರು ಕೆಟ್ಟು ಗುಣ ದೋಷ ಜ್ಞಾನವನ್ನು ಕಳೆದುಕೊಂಡರು. ನರರು ಪ್ರಾಯಃ ಕೆಟ್ಟು ಧರ್ಮದೂರರಾದರು; ವೇದಗಳನ್ನು ಮರೆತರು ; ಯಜ್ಞಗಳನ್ನು ಬಿಟ್ಟರು. ದುಷ್ಟ ಸಹವಾಸದಿಂದ ಕೆಟ್ಟ ಸುಜೀವರನ್ನು ನೋಡಿ, ದೇವತೆಗಳು ಅನುಕಂಪಾಕಂಪಿತರಾಗಿ, ಬ್ರಹ್ಮದೇವನಿಗೆ ಶರಣಾಗತರಾದರು.

ಬ್ರಹ್ಮದೇವನಿಂತೆಂದನು: 'ದೇವತೆಗಳಿರಾ ! ಕೇಳಿ ! ಕೆಳಗೆ ಹರಿವ ಮಳೆ ಗರೆದು ಮನುಜರನ್ನು ಕಾಪಾಡುವುದು ನಮ್ಮ ಕರ್ತವ್ಯ ! ಮೇಲೆ ಹರಿವ ಹವಿಯನ್ನಿತ್ತು ದೇವತೆಗಳನ್ನು ತೃಪ್ತಿಪಡಿಸುವುದು ಮಾನವ ಕರ್ತವ್ಯ. ಈಗ ಲೋಕದಲ್ಲಿ ಸ್ವಾಹಾಸ್ವಧಾಕಾರಗಳು ನಿಂತಿವೆಯಾಗಿ, ದೇವತೆಗಳೂ ನರರಂತೆ ಕ್ಷೀಣಿಸುತ್ತಿರುವರು. ಹವಿರ್ಧಾರೆಗಳಿಂದ ಮೇಲೇರಿ ದೇವಲೋಕವನ್ನು ಸೇರುವವರ ಸಂಖ್ಯೆ ಕಡಿಮೆಯಾಗಿ ಬಿಡುವುದು. ಇಂತಾಗದಂತೆ ಮಾನವ ಶ್ರೇಯಸ್ಸೆಂತಾಗುವುದೋ, ಸತ್ಯ ಸಂಕಲ್ಪನಾದ ಶ್ರೀಹರಿಯು ಸಾಧಿಸುವನು. ಅವನ ಇಚ್ಛೆಯಂತೆ ನಡೆವ ನಾನೂ ಮನುಜ ಶ್ರೇಯಸ್ಸಿಗಾಗಿ ಯತ್ನಿಸುವೆನು ! ಭಯಪಡುವ ಕೆಲಸವಿಲ್ಲ' ಇಂತು ಸಂತೈಸಿ, ದೇವತೆಗಳನ್ನು ಕಳಿಸಿ, ಸರಸ್ವತೀ ಕಾಂತನು ಲಕ್ಷ ಅಧ್ಯಾಯಗಳುಳ್ಳ ಧರ್ಮಶಾಸ್ತ್ರವನ್ನು ರಚಿಸಿ ಪ್ರಚಾರಪಡಿಸಿದನು.

ತ್ರಿವರ್ಗವೆನಿಸಿದ ಧರ್ಮಾರ್ಥ ಕಾಮಗಳನ್ನು ಅದರ ಫಲವಾದ ಭೂಸ್ವರ್ಗ

ಸುಖಗಳನ್ನು, ತಿಳಿಸಿ, ಅವು ಅಶಾಶ್ವತವು ಅಸಾರವೂ ಆಗಿರುವುದರಿಂದ ಬುದ್ಧಿವಂತರು ಅವಕ್ಕಾಗಿ ಯತ್ನಿಸಬಾರದೆಂದು ಉಪದೇಶಿಸಿದನು. ಶಾಶ್ವತವೂ ಸ್ವರೂಪಾನಂದ ಸಂಧಾಯಕವೂ ಆದ ನಿವೃತ್ತಿ ಕರ್ಮವನ್ನೂ, ಶ್ರವಣಮನನ ನಿಯತ ಧ್ಯಾನಗಳನ್ನೂ, ತತ್ಫಲವಾದ ಮೋಕ್ಷವನ್ನೂ ನಿರೂಪಿಸಿದನು. ಸತ್ವಾದಿ ಗುಣ ನಿಮಿತ್ತವಾಗಿ ಧರ್ಮಾದಿಗಳು ತ್ರಿವಿಧವೆನಿಸಿ, ಭಿನ್ನ ಭಿನ್ನ ಫಲವನ್ನು ಕೊಡುವವು. ದುಷ್ಟದಂಡನದಿಂದ ವಾಣಿಜ್ಯವೃದ್ಧಿಯು, ಪ್ರಜರಿಗೆ ಸುಖಸ್ಥಿತಿಯು, ತಪಸ್ವಿಗಳಿಗೆ ವೃದ್ಧಿಯು ಆಗುವುದೆಂದು ದಂಡಪ್ರಾಮುಖ್ಯವನ್ನು ಸಾರಿದನು. ನೀತಿಯು ರಕ್ಷಿತವಾದರೆ ಪ್ರಜರು ಸ್ವಸ್ಥಚಿತ್ತರಾಗಿರುವರು ! ಕುದೇಶವೂ ನೀತಿಯಿಂದ ರಕ್ಷಿತವಾಗಿ ಸುದೇಶವೆನಿಸುವುದು. ಕಲಿಯುಗವೂ ನೀತಿಯಿಂದ ಕೃತಯುಗವಾಗುವುದು. ಉಪಾಯಗಳು ವಿಕಲವಾಗಿದ್ದರೂ, ನೀತಿಯಿಂದ ಬಲಗೊಳ್ಳುವವು. ಸ್ನೇಹಿತರು ವಿಮುಖರಾಗಿದ್ದರೂ, ನೀತಿಯಿಂದ ಸುಮುಖರಾಗುವರು. ಕಾರ್ಯಗಳೆಷ್ಟು ಕಠಿನವಾದರೂ ನೀತಿಬಲದಿಂದ ನೆರವೇರುವವು. ಇಂತು ಷಡ್ವರ್ಗವು ನೀತಿಯಿಂದ ರಕ್ಷಿತವಾದರೆ ಮಾತ್ರ ಸುಖದಿಂದ ಸಾಗುವವು. ದಂಡನೀತಿಯು ತಪ್ಪಿತೆಂದರೆ ಷಡ್ವರ್ಗವು ಕೆಡುವುದು ! ಇದಕ್ಕೆ ಸಂಶಯವಿಲ್ಲ.

ತ್ರಯಿ (ಕರ್ಮಕಾಂಡ), ಆನ್ವೀಕ್ಷಿಕೀ (ಜ್ಞಾನಕಾಂಡ), ವಾರ್ತಾ (ಕೃಷಿ ವಾಣಿಜ್ಯಾದಿ ಜೀವಿತ ಕಾಂಡ), ದಂಡ ನೀತಿಗಳೂ ಆ ಶಾಸ್ತ್ರದಲ್ಲಿ ನಿರೂಪಿತವಾಗಿವೆ. ಅಮಾತ್ಯರಲ್ಲಿ ಮಿತ್ರಭೇದವು ತಲೆದೋರದಂತೆ, ಒಬ್ಬನನ್ನು ವೀಕ್ಷಿಸಲು ಮೂರು ಮೂರು ಚಾರರನ್ನು ನಿಯಮಿಸಿರಬೇಕು. ರಾಜಪುತ್ರರನ್ನು ಪರೀಕ್ಷಿಸುವ ಚಾರರೂ ನಿಯಮಿಸಲ್ಪಟ್ಟು, ಗುಪ್ತವಾಗಿ ವರ್ತಿಸುತ್ತಿರಬೇಕು. ಸಾಮ, ದಾನ, ಭೇದ, ದಂಡಗಳಲ್ಲದೆ, ಉಪೇಕ್ಷೆ ಎಂಬ ಐದನೇ ಉಪಾಯವೂ ಇದೆ. ಮಂತ್ರಾಲೋಚನೆಯನ್ನು ಗುಪ್ತವಾಗಿ ನಡೆಸುವುದಗತ್ಯವು. ಶತ್ರುಗಳಲ್ಲಿ ಮಿತ್ರಭೇದವನ್ನು ಪ್ರಯೋಗಿಸುವಾಗ ಮಾತ್ರ ಅದು ಪ್ರಕಟವಾಗಲು ಅವಕಾಶ ಕೊಟ್ಟಂತೆ ನಟಿಸಬೇಕು.

ಸಂಧಿಯು ಮೂರು ವಿಧ; ಭಯದಿಂದ ಮಾಡಿಕೊಳ್ಳುವ ಸಂಧಿಯು ಹೀನವು ! ಸತ್ಕಾರದಿಂದ ಮಾಡಿಕೊಳ್ಳುವ ಸಂಧಿಯು ಮಧ್ಯಮವು; ವಿತ್ತವನ್ನು ಕಪ್ಪವಾಗಿ ಪಡೆದು ನಡೆಸುವ ಸಂಧಿಯು ಉತ್ತಮವು; ತನ್ನ ಕೋಶವು ವೃದ್ಧವಾಗಿ, ಮಿತ್ರರು ಅನುಕೂಲರಿರುವಾಗಲು, ಶತ್ರುಕೋಶವು ಕ್ಷೀಣವಾಗಿ, ಅವರ ಮಿತ್ರರು ಪ್ರತಿಕೂಲರಾಗಿರುವಾಗಲು, ದಂಡಯಾತ್ರೆಯನ್ನು ಮಾಡುವುದೊಳಿತು. ಧರ್ಮದಿಂದ ಕಾದಿ ಗೆಲಿಯುವುದು ಉತ್ತಮ ವಿಜಯವು. ಅರ್ಥವನ್ನು ಕೊಟ್ಟು ಗೆಲ್ಲುವುದು ಮಧ್ಯಮ ವಿಜಯವು ; ಮೋಸಮಾಡಿ, ಕೊಂದು ಗೆಲ್ಲುವುದು ಅಸುರ ವಿಜಯವು. (ಸೌಪ್ತಿಕಪರ್ವದ ಅಶ್ವತ್ಥಾಮ ವಿಜಯ). ಉತ್ತಮ ಮಧ್ಯಮಾಧಮವೆನಿಸುವ ಪಂಚ ವರ್ಗಗಳು, ಅಂದರೆ, ಅಮಾತ್ಯ, ರಾಷ್ಟ್ರ, ದುರ್ಗ, ಬಲ, ಕೋಶಗಳನ್ನು ವರ್ಣಿಸಿದನು. ದಂಡವು ಪ್ರಕಾಶ (ಎಂಟು ವಿಧ) ಮತ್ತು ಅಪ್ರಕಾಶ (ಬಹುವಿಧ)ವೆಂದು ಎರಡು ವಿಧವಾಗಿದೆ. ಪ್ರಕಾಶವಾದ ದಂಡವೆಂದರೆ ಸೇವೆ, ರಥ, ಗಜ, ತುರಗ, ಪದಾತಿ,

ಬಿಟ್ಟಿ, ನಾವೆ, ಚಾರ, ಗುರುಗಳಿಂದ ನಡೆಯುತ್ತಿದೆ. ಅಪ್ರಕಾಶ ದಂಡವು ಮುಖ್ಯವಾಗಿ ವಿಷವಸ್ತ್ರ, ವಿಷಾನ್ನ, ಅಭಿಚಾರವೆಂದು ಮೂರು ವಿಧವಾಗಿದೆ. ಮಹಾವೃಶ್ಚಿಕದಂಶನ, ರಕ್ತಶೃಂಗಿ ಮೂಲಕಷಾಯ, ಸರ್ಪಗರಳಗಳು ಜಂಗಮಾ ಜಂಗಮ ಮಾರಕಗಳಾಗಿ ದಂಡಸಾಧನವೆನಿಸಿವೆ.

ರಾಜನು ಗ್ರಹನಕ್ಷತ್ರಾದಿಗಳ ಅನುಕೂಲ್ಯವನ್ನು, ಎಂಭತ್ತುನಾಲ್ಕು ವಿಧವಾದ ಭೂಬಲವನ್ನು, ಮಂತ್ರಯಂತ್ರಾದಿ ಆತ್ಮರಕ್ಷಣವನ್ನು, ರಥಾದಿ ಬಲನಿರ್ಮಾಣವನ್ನು, ವಿವಿಧ ಸೈನ್ಯವ್ಯೂಹ ವಿಧಾನವನ್ನು, ವಿಚಿತ್ರಯುದ್ಧ ಕೌಶಲವನ್ನು ಚನ್ನಾಗಿ ವಿಚಾರಿಸಿ ಪಡೆದು, ವಿಜಯವಂತನಾಗುವನು. ಗ್ರಹಯುದ್ಧಾದಿ ಉತ್ಪಾತಗಳನ್ನೂ, ಧೂಮಕೇತು, ಭೂಕಂಪ, ಉಲ್ಕಾಪಾತಾದಿ ದುಶ್ಶಕುನಗಳನ್ನು ವಾರಿಸಿ, ಯುದ್ಧಸಮಯವನ್ನು ಅರಿತು ಮುನ್ನಡೆಯಬೇಕು! ಅನುಕೂಲವಿಲ್ಲದಾಗ ಸುಪಲಾಯನವನ್ನು ಮೆಲ್ಲನೆ ಮಾಡಬೇಕು. ಸೈನಿಕರ ಉತ್ಸಾಹಕಾಲವನ್ನು ತಿಳಿದು ಮುಂದೆ ಸಾಗಿ, ಆಪತ್ಕಾಲವನ್ನರಿತು ಹಿಮ್ಮೆಟ್ಟಬೇಕು. ದುಂದುಭಿಧ್ವಾನ, ಅಗ್ನಿಜ್ವಾಲಾದೀಪನ, ವಸ್ತ್ರಚಾಲನಗಳೇ ಮುಂತಾದ ಸಂಕೇತಗಳನ್ನು ಅನುಸರಿಸಬೇಕು. ಆಟವಿಕರಿಂದಲು, ಚೋರರಿಂದಲು ಪರರಾಷ್ಟ್ರವನ್ನು ಪೀಡಿಸಬೇಕು. ಪ್ರತಿಮಾಕಾರಕರನ್ನು, ವಿಷವರ್ತಿಗಳನ್ನು, ಅಗ್ನಿದಾಹಕರನ್ನು ಕಳಿಸಿ, ಪರರಾಷ್ಟ್ರವನ್ನು ನಾಶಪಡಿಸಬೇಕು. ಬಲಾಧ್ಯಕ್ಷರನ್ನು ಧನವಿತ್ತು ಸ್ವಾಮಿದ್ರೋಹವೆಸಗಿಸಬೇಕು. ನಗರದುರ್ಗಗಳಿಗೆ ಧಾನ್ಯವು ಸೇರದಂತೆ ತಡೆಗಟ್ಟಬೇಕು. ಕೋಟೆಯ ಬಾವಿ, ಕೆರೆಗಳಿಗೆ ವಿಷವನ್ನು ಸುರಿಯಬೇಕು. ಮಂತ್ರತಂತ್ರಗಳಿಂದ ಗಜತುರಗ ಸಮೂಹವನ್ನು ನಾಶಪಡಿಸುವುದನ್ನೂ, ಭಕ್ತರಾದ ಸೇವಕರಲ್ಲಿರುವ ರಾಜವಿಶ್ವಾಸವನ್ನು ಕೆಡಿಸಿ, ಅವರನ್ನು ಕೊಲ್ಲಿಸುವುದನ್ನೂ, ಸಮರ್ಥರಾಜದೂತರಿಂದ ಪರಮರ್ಮ ಭೇದನವನ್ನೂ, ಸ್ವದೇಶ ದ್ರೋಹಿಗಳ ನಿರ್ಮೂಲನವನ್ನೂ, ರಾಜನು ಚನ್ನಾಗಿ ತಿಳಿದು ನಡೆಸಬೇಕು. ಮಲ್ಲಕ್ರೀಡಾ, ವ್ಯಾಯಾಮ, ಆಯುಧಾಭ್ಯಾಸ, ಅಲಬ್ಧ ಬಲಸಂಪಾದನ, ದಾನಗಳನ್ನು ಬಿಡದೆ ಮಾಡಿಸುತ್ತಾ ತಾನೂ ಮಾಡಬೇಕು. ರಾಜನು ಸಪ್ತವ್ಯಸನಗಳಿಗೆ ತುತ್ತಾಗದೆ, ದಾನಶೀಲನು, ಭೃತ್ಯಪೋಷಣನಿಷ್ಠನು ಆಗಿದ್ದರೆ ಜನಪ್ರಿಯನಾಗುವನು.

ಅನುವರ್ತಿಗಳು ದುಷ್ಟರಾದರೆ ಅವರನ್ನು ಪದವೀಭ್ರಷ್ಟರನ್ನು ಮಾಡಿ, ಚಾರರಿಂದ ಅವರ ವರ್ತನವನ್ನು ಗಮನಿಸಬೇಕು. ಸರ್ವದಾ ಸರ್ವರನ್ನು ಶಂಕಿಸಿ ನಡೆವ ರಾಜನಿಗೆ ಸುಖವಿಲ್ಲ. ಅರ್ಥವನ್ನು ಹೇರಳವಾಗಿ ಸಂಪಾದಿಸಿ, ಪಾತ್ರರಿಗಿತ್ತು, ಧರ್ಮಕಾರ್ಯಗಳಿಗೆ ವಿನಿಯೋಗಿಸಿ, ತಾನೂ ಭೋಗಿಸಬೇಕು. ಪೃಥ್ವೀ, ಪಶು, ಮಣಿ, ವಸ್ತ್ರ ದಾಸ ದಾಸೀಜನ, ಕಾಂಚನಗಳೆಂಬ ಆರು ದ್ರವ್ಯಗಳನ್ನು ಅಮಿತವಾಗಿ ಸಂಪಾದಿಸಬೇಕು. ಯಂತ್ರಗಳನ್ನು ನಿರ್ಮಿಸಿ, ಪರಚಕ್ರದಿಂದಾಗುವ ಅವಮರ್ದವನ್ನು ತಡೆಯಲಾಗುವುದು. ಕವಚ ಖಡ್ಗಾದಿ ನಿರ್ಮಾಣವನ್ನು ಹೆಚ್ಚಿಸಿ, ಪಣವ ಆನಕ ಶಂಖಭೇರಿಗಳನ್ನು ವಿಪುಲವಾಗಿಟ್ಟ ರಾಜನು ಪರಭಯಂಕರನಾಗುವನು. ವಿದ್ವಾಂಸರಿಂದ ಕೂಡಿ ಜ್ಞಾನಿಯಾಗುವನು. ಉತ್ಸವ ಸಮಾಜ ಸಭೆಗಳಲ್ಲಿ ಪಾಲ್ಗೊಂಡು ಪ್ರಜಾಪ್ರೀತಿಯನ್ನು ಪಡೆಯುವನು.

ಆಹಾರಯೋಜನ, ಧ್ವಜಾರೋಹಣ, ದಾನ, ಹೋಮ, ಶರೀರಾಲಂಕರಣ, ದೇವ ವಿಪ್ರಪೂಜನಗಳಲ್ಲಿ ಜಾಗ್ರತನಾದ ರಾಜನು ಜನಪ್ರಿಯನೆನಿಸುವನು. ವಿಪ್ರರನ್ನು ದೇಹದಂಡಕ್ಕೆ ಗುರಿಪಡಿಸದೆ, ಗುಣವಂತರಾದ ಯಾವ ಕುಲದವನನ್ನಾಗಲಿ ವಸ್ತ್ರಭೂಷಣ ಪ್ರಶಂಸೆಗಳಿಂದ ಗೌರವಿಸುವ ರಾಜನು ಸರ್ವಮಾನ್ಯನಾಗುವನು. ಶೌಚಾಭ್ಯಂಗಾದಿ ಎಪ್ಪತ್ತೆರಡು ಶರೀರ ಸಂಸ್ಕಾರ ಭೂಷಣಗಳಿಂದ ದರ್ಶನೀಯನಾಗುವನು.

ದೇಶ ಕಾಲ ಜಾತಿ ಧರ್ಮಗಳನ್ನು ಕೂಡ ಬ್ರಹ್ಮದೇವನು, ಆ ರಾಜನೀತಿ ಶಾಸ್ತ್ರದಲ್ಲಿ ನಿರೂಪಿಸಿರುವನು. ಆರ್ಯಪಥದಿಂದ ತಪ್ಪದೆ ಜನರು ನಡೆಯಬೇಕಾದರೆ ಅನುಸರಿಸುವ ರಾಜಧರ್ಮಗಳನ್ನೂ ವರ್ಣಿಸಿರುವನು. ದಂಡದಿಂದ ನಡೆಯುವ ಮತ್ತು ದಂಡವಿಧಾನವನ್ನು ನಿರ್ಣಯಿಸುವ ದಂಡನೀತಿಯನ್ನು ಬ್ರಹ್ಮನು ನಿರ್ಮಿಸಿ, ಲೋಕೋಪಕಾರವಾಗಲೆಂದು ಶಂಕರ ಶಕ್ರಾದಿ ದೇವತೆಗಳಿಗೆ ಉಪದೇಶಿಸಿದನು. ಪ್ರಜರು ಯುಗಾನುಸಾರವಾಗಿ ಅಲ್ಪಾಯುಷ್ಯರೂ, ಅಲ್ಪಮತಿಗಳು ಆಗುತ್ತಿರುವುದನ್ನು ಕಂಡು, ಶಂಕರನು ತಾನು ಸ್ವೀಕರಿಸಿದ ಇಪ್ಪತ್ತೈದುಸಾವಿರ ಅಧ್ಯಾಯಗಳ ದಂಡನೀತಿಯನ್ನು ಹತ್ತು ಸಾವಿರಕ್ಕೆ ಸಂಗ್ರಹಿಸಿ, ಇಂದ್ರನಿಗುಪದೇಶಿಸಿದನು. ಅದನ್ನು ವೈಶಾಲಾಕ್ಷವೆಂಬುವರು. ಇಂದ್ರನು ಐದು ಸಾವಿರಕ್ಕೆ ಸಂಗ್ರಹಿಸಿ ಉಪದೇಶಿಸಿದ ನೀತಿಶಾಸ್ತ್ರವನ್ನು ಬಾಹುದಂತಕವೆಂಬುವರು. ಮೂರು ಸಾವಿರ ಅಧ್ಯಾಯಗಳನ್ನು ಕಲಿತು, ಬೃಹಸ್ಪತಿಯು, ಒಂದು ಸಾವಿರಕ್ಕೆ ಸಂಗ್ರಹಿಸಿ ಉಪದೇಶಿಸಿದುದನ್ನು ಬಾರ್ಹಸ್ಪತ್ಯವೆನ್ನುವರು. ಅದನ್ನೇ ಶುಕ್ರನು ಒಂದು ಸಾವಿರ ಅಧ್ಯಾಯಗಳಲ್ಲಿ ಪೇಳಿದನು. ಇತರ ಮಹರ್ಷಿಗಳು ಅದನ್ನು ಮನುಜ ಬುದ್ಧಿಗೆ ತಕ್ಕಂತೆ ಸಂಗ್ರಹಿಸಿ, ಕೆಲ ಕೆಲ ಅಧ್ಯಾಯಗಳಲ್ಲಿ ಉಪದೇಶಿಸಿದರು.

ದಂಡಾದಿ ನೀತಿಯಿಂದ ಪ್ರಜಾರಕ್ಷಣವನ್ನು ಮಾಡಬಲ್ಲ ಸಮರ್ಥ ರಾಜನನ್ನೂ ನಿರ್ಮಿಸಿಕೊಡೆಂದು ಪ್ರಾರ್ಥಿಸಿದ ದೇವತೆಗಳ ವಚನವನ್ನು ಮನ್ನಿಸಿ, ಶ್ರೀವಿಷ್ಣುವು ವಿರಾಜನೆಂದರೆ ಬ್ರಹ್ಮನನ್ನು ನಿರ್ಮಿಸಿದನು. ಬ್ರಹ್ಮನಿಂದ ಕರ್ದಮನು, ಮನುವಂಶದಲ್ಲಿ ಅಂಗರಾಜನು ಜನಿಸಿದರು. ಅವನಿಗೆ ಮೃತ್ಯುಪುತ್ರಿಯಾದ ಸುನೀಥೆಯಲ್ಲಿ ವೇನನು ಜನಿಸಿದನು. ಅವನು ದುಷ್ಟರಾಜನಾದುದನ್ನು ಕಂಡು, ಋಷಿವರರು ಮಂತ್ರಪೂತ ಜಲಗಳಿಂದ ಅವನನ್ನು ಸಂಹರಿಸಿದರು. ವೇನನಲ್ಲಿ ಮನು ಸಂತಾನ ತಂತುವನ್ನು ಬೆಳೆಸಲೆಣಿಸಿದ ಋಷಿಗಳು, ಅವನ ಶರೀರವನ್ನು ಮಥಿಸಿದರು. ದಕ್ಷಿಣೋರುವನ್ನು ಮಥಿಸಿದಾಗ ನಿಷಾದನು ಜನಿಸಿ, ತದ್ವಂಶದ ಮೂಲಪುರುಷನಾದನು. ದಕ್ಷಿಣಬಾಹುವನ್ನು ಮಥಿಸಿದಾಗ ಪೃಥುರಾಜನು ಜನಿಸಿದನು. ಅವನು ಶ್ರೀಹರಿಯ ಆವೇಶದಿಂದ ಯುಕ್ತನಾಗಿ, ಸಕಲ ಶುಭಲಕ್ಷಣ ಲಕ್ಷಿತನಾಗಿದ್ದನು. ದಂಡನೀತಿಯು ಅವನನ್ನಾಶ್ರಯಿಸಿ, ಸಾರ್ಥಕವಾಯಿತು. ಆದಿರಾಜನೆನಿಸಿದ ಪೃಥುವು ಮಹರ್ಷಿಗಳನ್ನು, ಕರ್ತವ್ಯವನ್ನು ಉಪದೇಶಿಸಿರೆಂದು ಪ್ರಾರ್ಥಿಸಿದನು. ಆಗ ದೇವತೆಗಳೂ ಮುನಿಗಳೂ ಸೇರಿ, ' ರಾಜನ್ ! ನಿಯತ ಧರ್ಮವನ್ನು ನಿಶ್ಶಂಕನಾಗಿ ಪಾಲಿಸು !

ಪ್ರಿಯಾಪ್ರಿಯರೆಂಬ ಅಸ್ವಾಭಾವಿಕ ಭಾವನೆಯನ್ನು ಬಿಟ್ಟು, ನಿಷ್ಪಕ್ಷಪಾತಿಯಾಗಿ, ಪ್ರಜರನ್ನಾಳು! ಕಾಮ ಕ್ರೋಧ ಲೋಭ ಮಾನಗಳನ್ನು ದೂರದಲ್ಲಿಡು! ಯಾವನೇ ಆಗಲಿ ಧರ್ಮವನ್ನು ಕೆಡಿಸಲು ಹವಣಿಸಿದಾಗ, ಭೀತಿ ಪ್ರೀತಿಗಳನ್ನು ಹತ್ತಿಕ್ಕಿ ಶಿಕ್ಷಿಸು! ವೇದವು ಪ್ರಮಾಣವೆಂದು ತಿಳಿದು ಅನುಸರಿಸು! ವಿಪ್ರರನ್ನು ಮನ್ನಿಸು! ಅವರಲ್ಲಿ ದೇಹದಂಡನವನ್ನು ಪ್ರಯೋಗಿಸಲಾಗದು. ಧರ್ಮಸಂಕರ, ವರ್ಣಸಂಕರಗಳಷ್ಟು ಲೋಕನಾಶಕ ಪಾಪವಿಲ್ಲ. ಅದನ್ನು ತಡೆ!' ಎಂದು ಆಜ್ಞಾಪಿಸಿದರು. ವೈನ್ಯನು ಅವರ ಅಪ್ಪಣೆಯನ್ನು ಶಿರಸಾವಹಿಸಿ, ಧರ್ಮವನ್ನು ರಕ್ಷಿಸಿ, ಅಧರ್ಮವನ್ನು ಹತ್ತಿಕ್ಕಿದನು.

ಪುರೋಹಿತರಾಗಿ ಶುಕ್ರಾಚಾರ್ಯರು, ಮಂತ್ರಿಗಳಾಗಿ ವಾಲಖಿಲ್ಯರು, ಸಾರಸ್ವತರು, ಜ್ಯೋತಿಷಿಯಾಗಿ ಗರ್ಗರು ವಿರಾಜಿಸಿದರು. ವಿಷ್ಣು, ಬ್ರಹ್ಮ, ಮನುರಾಜ, ಉತ್ತಾನಪಾದ, ಧ್ರುವ, ಅಂಗ, ವೇನ, ಪೃಥು ಎಂಬ ಕ್ರಮದಲ್ಲಿ ಶ್ರೀಹರಿಯಿಂದ ಎಂಟನೆಯವನಾಗಿ ಬೆಳಗಿದ ಪೃಥುರಾಜನು, ತನ್ನ ಸಭೆಯಲ್ಲಿ ತನ್ನನ್ನು ಪೊಗಳಿಸಿಕೊಳ್ಳದೆ, ಶ್ರೀಹರಿಯನ್ನು ಮನಸಾರೆ ಪೊಗಳಿ, ಪಾಡಿರೆಂದು ಸೂತಮಾಗಧ ವಂದಿಜನರಿಗಾಜ್ಞಾಪಿಸಿದನು. ಅನೂಪದೇಶವನ್ನು ಸೂತನಿಗೂ, ಮಾಗಧದೇಶವನ್ನು ಮಾಗಧನಿಗೂ ಕೊಟ್ಟು, ಸತ್ಕರಿಸಿದನು. ವಿಷಮವಾಗಿದ್ದ ಭೂತಲವನ್ನು ಸಮೀಕರಿಸಿ, ಪಟ್ಟಣ, ಗ್ರಾಮ, ಖೇಟ, ಖರ್ವಟಾದಿ ವ್ಯವಸ್ಥೆಯನ್ನು ಮಾಡಿದನು. ಭೂಪಾಲ ದಕ್ಷನೆಂದು ಅಭಿಷಿಕ್ತನಾದ ಪೃಥುರಾಜನಲ್ಲಿ ಶ್ರೀಶನು ಸನ್ನಿಹಿತನಾಗಿದ್ದನು. ಅವನಿಗೆ ಭೂದೇವಿಯು ತನ್ನ ಮಡಿಲಿನಲ್ಲಿದ್ದ ಮಣಿಗಳನ್ನಿತ್ತು ಪೂಜಿಸಿದಳು. ಸಾಗರವಲ್ಲಭನು ಮುತ್ತುಗಳನ್ನೂ, ಇಂದ್ರನು ದಿವ್ಯೈಶ್ವರ್ಯವನ್ನೂ ಮೇರುವು ಕನಕರಾಶಿಯನ್ನೂ, ಕುಬೇರನು ಧರ್ಮಾರ್ಥಕಾಮ ಸಾಧಕವಾದ ಧನ ನಿಧಿಯನ್ನೂ ಸಮರ್ಪಿಸಿದರು. ಅವನ ರಾಜ್ಯದಲ್ಲಿ ಜರಾವ್ಯಾಧಿ ದುರ್ಭಿಕ್ಷಗಳಿದ್ದಿಲ್ಲ. ಸರ್ಪ, ವ್ಯಾಘ್ರ, ಚೋರಭಯವಿದ್ದಿಲ್ಲ. ಅನ್ಯೋನ್ಯ ಕಲಹವಿದ್ದಿಲ್ಲ. ಪೃಥುರಥಕ್ಕೆ ನದೀಪರ್ವತಗಳ ತಡೆಯಿದ್ದಿಲ್ಲ. ಪ್ರಜರು ಅರ್ಥಕಾಮಗಳನ್ನು ಧರ್ಮವಿಧೇಯವಾಗಿರುವಂತೆ ನಡೆಸಿದರು. ಪ್ರಜರನ್ನು ಇಂತು ರಂಜಿಸಿದ ಪೃಥುವು 'ರಂಜನಾತ್ ರಾಜಾ' ಎಂಬ ನುಡಿಯನ್ನು ಸಾರ್ಥಕಗೊಳಿಸಿದನು. ಕ್ಷತವೆಂದರೆ ಗಾಯಃ ದುಷ್ಟರಿಂದ ನೋಯದಂತೆ ಸುಜನರನ್ನು ರಕ್ಷಿಸಿದವನೇ ಕ್ಷತ್ರಿಯನು - ಇಂತು ಪೃಥುವು ನಿಜವಾದ ಕ್ಷತ್ರಿಯನಾದನು. ಅವನಿಗೆ ಮಗಳಂತಾದ ಭೂಮಿಯು ಪೃಥಿವಿ ಎನಿಸಿದಳು. ವಿಷ್ಣು ಸನ್ನಿಧಾನ ಬಲದಿಂದ ದುಷ್ಟಶಿಕ್ಷಕನಾದ ಪೃಥುವಿಗೆ ಲೋಕವೆಲ್ಲವು ವಂದಿಸಿ, ತಾನೂ ಧರ್ಮದಲ್ಲೇ ನಿಂತಿತು.

ವಿಷ್ಣುವಿನ ಲಲಾಟದಿಂದ ಬಂದ ಅರವಿಂದದಲ್ಲಿ ಶ್ರೀದೇವಿಯು ಪ್ರಾದುರ್ಭವಿಸಿದಳು. ಧರ್ಮನೆನಿಸಿದ ವಿಷ್ಣುವಿಗೆ ಶ್ರೀ ಎನಿಸಿದ ಲಕ್ಷ್ಮಿಯು ಪತ್ನಿಯಾದಳು. ಅಂತೆಯೇ ಧರ್ಮವೆಲ್ಲಿರುವುದೋ, ಅಲ್ಲಿ ಶ್ರೀಯೂ ಇರುವಳು. ಶ್ರೀಯಿದ್ದಲ್ಲಿ ಅರ್ಥವಿದ್ದು ಅಂತಹ ಅರ್ಥದಿಂದ ಧರ್ಮವೂ ವರ್ಧಿತವಾಗುವುದು. ಧರ್ಮಾರ್ಥಗಳಿಂದ ರಾಜ್ಯವೆಂಬ ರಥವು ಸಾಗುವುದು. ಅಂತಹ ರಾಜ್ಯರಥವನ್ನು,

ಪುಣ್ಯಬಲದಿಂದ ಹೊಂದಿದ ರಾಜನು, ಅದರ ಚಕ್ರಗಳನ್ನು ಮುರಿದು, ಅರ್ಥವನ್ನು ಕೇವಲ ಕಾಮಕ್ಕಾಗಿ ಉಪಯೋಗಿಸಿದನೆಂದರೆ, ಅವನ ರಾಜ್ಯವು ಉರುಳಿಬೀಳುವುದು. ಧರ್ಮಾರ್ಥರೂಪರಾದ ಶ್ರೀ ಶ್ರೀಶರಿರುವುದರಿಂದಲೆ, ರಾಜನು, ತಾನೂ ಎಲ್ಲರಂತೆ ಮನುಜ ಮಾತ್ರನಾದರೂ ಪೂಜನೀಯವಾಗಿ ಮೆರೆಯುವನು ! ಅವನು ಜಗವನ್ನೆಲ್ಲ ವಶದಲ್ಲಿಟ್ಟು, ಆಳಲು ಸಮರ್ಥನಾಗುವನು. ಸೌಮ್ಯನಾದ ರಾಜನನ್ನು ಕಂಡವನು ಕೂಡ ಸೌಭಾಗ್ಯವನ್ನೂ, ಸಿರಿಯನ್ನೂ, ಪೊಂದಿ ಸುಖಿಸುವಂತಾಗುವುದು. ದಂಡನೀತಿಯನ್ನು ಪಾಲಿಸದ ರಾಜನು ರಾಜನೇ ಅಲ್ಲ.

ದಂಡನೀತಿಯನ್ನಲ್ಲದೆ ಆಗಮ ಪುರಾಣೇತಿಹಾಸಗಳ ವರ್ಮವನ್ನೂ, ವರ್ಣಾಶ್ರಮ ಧರ್ಮವನ್ನೂ, ಚತುರ್ವಿಧ ಯಜ್ಞವಿತಾನ ವಿವರವನ್ನೂ, ನ್ಯಾಯ (ಯುಕ್ತಿ) ಶಾಸ್ತ್ರವನ್ನೂ, ತಪೋಜ್ಞಾನ ಸತ್ಯಮಹಿಮೆಯನ್ನೂ, ಶೌಚಾದಿ ಕರ್ಮಾಂಗ ವನ್ನೂ, ಅಹಿಂಸಾದಿ ವರ್ತನವನ್ನೂ, ಪಾಪ ಫಲ ನರಕಾದ್ಯನರ್ಥವನ್ನೂ, ವರ್ಣಿಸಿ ಪಿತಾಮಹನು ಉಪದೇಶಿಸಿದನು. ಅಂತಹ ಶಾಸ್ತ್ರದಂತೆ ನಡೆವ ನರದೇವನು ದೇವಸಮನೆಂದು ಖ್ಯಾತನಾಗುವನು. ಧರ್ಮರಾಜ ! ಇಂತು ರಾಜೋತ್ಪತ್ತಿಯನ್ನು ನಿನಗೆ ವರ್ಣಿಸಿದೆನು. ಮತ್ತೇನು ಕೇಳಲಿಚ್ಛಿಸುವೆ ? ' ಎಂದು ಗಾಂಗೇಯನು ಯುಧಿಷ್ಠಿರನಿಗೆ ಉಪದೇಶಿಸಿದನು.



## ೧೧. ವರ್ಣಾಶ್ರಮ ಧರ್ಮ ನಿರೂಪಣೆ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಭೀಷ್ಮನು ವರ್ಣಿಸಿದ ರಾಜೋತ್ಪತ್ತಿಯನ್ನು ತಿಳಿದು, ತುಷ್ಟನಾಗಿ ಯುಧಿಷ್ಠಿರನು ತಾತನಿಗೆ ಪ್ರೀತಿಯಿಂದ ವಂದಿಸಿ, ಮತ್ತೆ ಇಂತು ಕೇಳಿದನು: 'ತಾತ! ವರ್ಣಾಶ್ರಮ ಧರ್ಮಗಳನ್ನು ನನಗೆ ನಿರೂಪಿಸು! ರಾಜಧರ್ಮವನ್ನು ಇನ್ನೂ ವಿವರವಾಗಿ ಹೇಳು! ರಾಜ, ಅವನ ರಾಜ್ಯ, ಅದರಲ್ಲಿಯ ಪ್ರಜರು, ಅವರ ಸಂಪತ್ತು ವೃದ್ಧಿಯಾಗುವ ಬಗೆ ಹೇಗೆ? ಕೋಶ, ದಂಡ, ದುರ್ಗ, ಪ್ರಣಿಧಿಗಳ ಬಲದಿಂದ ರಾಜನು ನಿರಾತಂಕನಾಗಿರುವ ವಿಧಾನವಾವುದು! ಪುರೋಹಿತ, ಮಂತ್ರಿ, ಮಿತ್ರರೆಂತಹರಿರಬೇಕು? ಯಾರನ್ನು ರಾಜನು ನಂಬಲಾಗದು? ಎಲ್ಲ ವಿವರವನ್ನೂ ವರ್ಣಿಸು!'

ಭೀಷ್ಮನಿಂತು ಉಪದೇಶಿಸಿದನು: 'ಧರ್ಮಜ! ಶ್ರೀಕೃಷ್ಣರಿಗೆ ವಂದಿಸಿ, ವಿಪ್ರರಿಗೆ ನಮಿಸಿ, ಸನಾತನ ಧರ್ಮಗಳನ್ನು ವರ್ಣಿಸುವೆನು, ಕೇಳು! ಕ್ರೋಧವರ್ಜನ, ಸತ್ಯವಚನ, ಸಂವಿಭಾಗ (ಧನವನ್ನು ನ್ಯಾಯವಾಗಿ ಸಲ್ಲಬೇಕಾದಲ್ಲಿ ವಿನಿಯೋಗಿಸುವುದು), ಕ್ಷಮಾ, ಪ್ರಜಾದಾರಾದಿ ಪೋಷಣ, ಶೌಚ, ಅದ್ರೋಹ, ಆರ್ಜವ (ತ್ರಿಕರಣ ಶುದ್ಧಿ), ಭೃತ್ಯರಕ್ಷಣ ಎಂಬ ಒಂಬತ್ತೂ ಮಾನವ ಮಾತ್ರನಿಗೆ ವಿಹಿತವಾಗಿರುವ ಧರ್ಮಗಳಾಗಿವೆ. ಇವನ್ನು ಸರ್ವ ವರ್ಣದವರೂ ಬಿಡದೆ ಪಾಲಿಸಬೇಕು. ಇನ್ನು ವಿಪ್ರಧರ್ಮವನ್ನುರುಹುವೆನು. ಇಂದ್ರಿಯ ನಿಗ್ರಹವೇ ಉತ್ತಮ ಧರ್ಮವು. ವೇದಾಧ್ಯಯನದಿಂದ ವಿಪ್ರನು ಕೃತಾರ್ಥನಾಗುವನು. ಸ್ವವಿಹಿತ ಕರ್ಮವನ್ನು ಬಿಡದೆ, ನಿಷಿದ್ಧವನ್ನು ಮಾಡದೆ, ಜ್ಞಾನತೃಪ್ತನಾಗಿರುವ ವಿಪ್ರನು ಮುಕ್ತನಾಗುವನು. ದೇವನಾಗಿ ಕೊಟ್ಟ ಧನಾದಿಗಳಿದ್ದರೆ ವಿಪ್ರನು ವಿವಾಹಿತನಾಗಿ ದಾರಾಪುತ್ರ ಮಿತ್ರಭೃತ್ಯರಿಗಿತ್ತು, ಸುಜನರಿಗಿತ್ತು, ಮಿಕ್ಕದುದನ್ನು ತಾನು ಸ್ವಿಕರಿಸಬೇಕು. ವೇದ ಪ್ರತಿಪಾದಿತನಾದ ವಿಷ್ಣುವಿನನ್ನು ತಿಳಿದ ವಿಪ್ರನು ಸಾರ್ಥಕಜನ್ಮನಾಗುವನು. ಏನು ಮಾಡಲಿ, ಏನು ಬಿಡಲಿ ಮೈತ್ರವೆಂದರೆ ಸಂಧ್ಯಾವಂದನವನ್ನು ಮಾಡಿದ ವಿಪ್ರನು ನಿಜವಾಗಿ ಬ್ರಾಹ್ಮಣನೆನಿಸುವನುಃ ಅದನ್ನೂ ಬಿಟ್ಟವನು ಬ್ರಾಹ್ಮಣನೇ ಅಲ್ಲ.

ತತ್ವವಿಜ್ಞಾಪನೆಯು ಬ್ರಾಹ್ಮಣನಿಗೆ ಅತಿಮುಖ್ಯ ಧರ್ಮವಾಗಿದೆ. ಅಂತಹ ವಿಪ್ರನನ್ನು ಶರೀರ ದಂಡಾದಿಗಳಿಂದ ರಾಜನು ಶಿಕ್ಷಿಸಲಾಗದು. ವಿಪ್ರನಿಗೆ-ಅಪರಾಧವನ್ನೆಸಗಿದಾಗ ದಂಡವೆಂದರೆ, ಅರ್ಥನಾಶ, ದೇಶನಿಷ್ಕಾಸನ, ವಚನಗಳಿಂದ ಮಾತ್ರವೇ ಎಂದು ತಿಳಿ. ವಿಪ್ರನು ತನ್ನ ಭಾರ್ಯಾಪುತ್ರ ಭೃತ್ಯರನ್ನು ಕೂಡ ಹೊಡೆದು, ಬಡಿದು ಶಾಸಿಸಲಾಗದು. ಮಹಾಪರಾಧವೆಸಗಿದಾಗ ಮಾತ್ರ ಕಿಂಚಿತ್ ದೇಹ ದಂಡವು - ರಕ್ತಪಾತವಾಗದಂತೆ, ಅಂಗ ವೈಕಲ್ಯವಾಗದಂತೆ ಅಂದರೆ ಮೃದು ದಂಡವು ವಿಹಿತವಾಗಿದೆ. ಅರ್ಥದಂಡವನ್ನು ಕ್ಷತ್ರಿಯನಾದ ರಾಜನು ಮಾತ್ರ ಮಾಡಬಲ್ಲನು. ವಿಪ್ರನಿಗೆ ಅರ್ಥದಂಡ ಮಾಡುವ ಅಧಿಕಾರವಿಲ್ಲ. ಬ್ರಾಹ್ಮಣನು ಯದೃಚ್ಛಾ (ಶ್ರೀಶೇಚ್ಛಾ) ಲಾಭದಿಂದ ತುಷ್ಟನಾಗಿರಬೇಕು. ಭೈಕ್ಷದಿಂದಲೋ, ಯಾಜನ (ಯಜ್ಞಮಾಡಿಸಿ) ದಿಂದಲೋ, ಅವನು ಜೀವಿಸಬೇಕು.

ಅಧ್ಯಾಪನ ಮಾಡಿ ಧನ ಬೇಡುವುದು ಅಷ್ಟು ಯೋಗ್ಯವಲ್ಲ. ಆಪತ್ಕಾಲದಲ್ಲಿ ವಿಪ್ರನು ಕ್ಷತ್ರಿಯ ಧರ್ಮವನ್ನೋ (ದ್ರೋಣ ಕೃಪರಂತೆ) ಅಥವಾ ವೈಶ್ಯಧರ್ಮವನ್ನೋ ಅವಲಂಬಿಸಿ ಆಪತ್ತು ಕಳೆದ ನಂತರ ಪರಧರ್ಮವನ್ನು ಬಿಟ್ಟುಬಿಡಬೇಕು.

ಭಗವದ್ಧರ್ಮಪಾಲನವೇ ಅತಿಮುಖ್ಯ ಧರ್ಮವು. ಆದಕ್ಕಾಗಿ ಮಿಕ್ಕ ಯುದ್ಧಾದಿ ಧರ್ಮಗಳು, ದುಷ್ಟವಧೆಯನ್ನು ಭಗವತ್ಪ್ರೀತಿಗಾಗಿಯೇ ಮಾಡಬೇಕು. ರಾಜ್ಯಾದಿಗಳು ಆಶೆಗಳಿಂದಲ್ಲ, ಭಾಗವತ ಧರ್ಮಗಳನ್ನು ಅನುಸರಿಸದವನ ದುಷ್ಟವಧೆಯು ಮಹಾಫಲದಾಯಕ ವಾಗಲಾರದು.

ಶ್ರೀಹರಿಯೇ ಸ್ವತಂತ್ರನು, ಸರ್ವೇಶನು, ಜೀವಜಡಾತ್ಮಕ ಜಗದ್ವಿಲಕ್ಷಣನು ಸೃಷ್ಟ್ಯಾದಿ ಸರ್ವಕರ್ತನು ಎಂದು ಯೋಗ್ಯವಾಗಿ ಪೂಜಿಸುವುದು; ಸತ್ಕರ್ಮವನ್ನು ಶ್ರೀಹರಿ ಪ್ರೀತಿಗೆಂದು ಮಾಡಿ, ಫಲವನ್ನು ಶ್ರೀಶನಿಗೆ ಮುಖ್ಯ ಪ್ರಾಣನದ್ವಾರಾ ಸಮರ್ಪಿಸುವುದು; ಮೊದಲಾದವು ಸರ್ವಮನುಜರಿಗೆ ವಿಹಿತ ಧರ್ಮಗಳಾಗಿವೆ. ಶ್ರೀಹರಿ ಪ್ರೀತಿಸಾಧಕವಾದುದೆಲ್ಲವೂ ಧರ್ಮವೇ! ಶ್ರೀಶ ಪ್ರೀತಿಗಾಗದುದೆಲ್ಲವೂ ಅಧರ್ಮವೇ! ಧರ್ಮಾಧರ್ಮಗಳ ವಿವೇಕವನ್ನು ವೇದಾದಿ ಸಚ್ಛಾಸ್ತ್ರದಿಂದಲೂ, ಮಹಜ್ಜನರ ವಚನ ವರ್ತನಗಳಿಂದಲೂ ತಿಳಿಯಬೇಕು. ವೈಷ್ಣವರಲ್ಲಿಯೇ ಪರಸ್ಪರ ವಿರೋಧವಿದ್ದಂತೆ ಆದಾಗ ಬಹು ವೈಷ್ಣವರಂತೆ ನಡೆಯಬೇಕು. ಇಂತು ಸಾಧಾರಣ ಧರ್ಮಗಳನ್ನು ಜನರು ಬಿಡದೆ ನಡೆಸುವಂತೆ ಮಾಡುವುದು ಕ್ಷತ್ರಿಯನ ಕರ್ತವ್ಯವಾಗಿದೆ.

ಕ್ಷತ್ರಿಯನಿಗೆ ವಿಪ್ರರಿಂದ ಬಿಟ್ಟು ಮಿಕ್ಕೆಲ್ಲರಿಂದ ಕಪ್ಪಕಾಣಿಕೆಗಳನ್ನು ಪಡೆಯುವ ಅಧಿಕಾರವಿದೆ; ಸಾಮ, ದಾನ, ಭೇದ, ದಂಡಾದಿಗಳಿಂದ ಧರ್ಮವನ್ನು ರಕ್ಷಿಸುವ ಹೊಣೆಯೂ ಇದೆ. ದಂಡವನ್ನು ಕೊನೆಗೆ ಪ್ರಯೋಗಿಸಬೇಕು. ಯುದ್ಧದಲ್ಲಿ ಶತ್ರುಗಳಿಗೆ ಬೆನ್ನು ತೋರಿ ಓಡಲಾಗದು. ವಿಪ್ರನಿಗೆ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳಿವೆ; ಆದರೆ ಕ್ಷತ್ರಿಯನಿಗೆ ಸನ್ಯಾಸ ಬಿಟ್ಟು ಮಿಕ್ಕ ಮೂರರಲ್ಲಿ ಅಧಿಕಾರವಿದೆ. ವೈಶ್ಯನು ಬ್ರಹ್ಮಚರ್ಯ ಗಾರ್ಹಸ್ಥ್ಯಗಳಿಗೆ ಅಧಿಕಾರಿಯಾಗಿರುವನು. ಶೂದ್ರನು ಗಾರ್ಹಸ್ಥ್ಯಕ್ಕೆ ಮಾತ್ರ ಯೋಗ್ಯನು. ಕ್ಷತ್ರಿಯನು ಬೇಡಬಾರದು; ಕೊಡಬೇಕು, ಓದಿಸಬಾರದು, ಓದಬೇಕು. ಯಜ್ಞ ಮಾಡಿಸಬಾರದು; ಮಾಡಬೇಕು. ಪ್ರಜಾಪಾಲನವನ್ನು ಸದ್ರಾಜನು ಸಾಧಿಸಿ ಸತ್ಕೀರ್ತಿ ಪುಣ್ಯಗಳನ್ನು ಪಡೆಯಬೇಕಾದರೆ. ದುಷ್ಟ, ಕ್ರೂರ, ಚೋರ, ನಾಸ್ತಿಕ ವಧಾದಿ ಶಾಸನ ಕಾರ್ಯದಲ್ಲಿ ಸದಾ ಜಾಗರೂಕನಾಗಿರಬೇಕು. ಯಜ್ಞಕರ್ತನು ಪೊಂದುವ ಪಣ್ಯಲೋಕವನ್ನು ರಣನಿಹತನಾದ ಕ್ಷತ್ರಿಯನು ಪೊಂದುವನು. ರಣವಿಜಯಿಯು ಉಭಯ ಲೋಕಗಳನ್ನು ಪೊಂದಿ ಸುಖಿಸುವನು. ಗಾಯವಾಗದ ದೇಹದಿಂದ ಹಿಂದಿರುಗಿ ಬಂದ ರಾಜನನ್ನು ಧೀರರು ನೋಡಿ ಮೆಚ್ಚರು, ಪ್ರಜರನ್ನು ಅವರವರ ಧರ್ಮದಲ್ಲಿ ನಿಲ್ಲಿಸಿ ಆಳದ ರಾಜನನ್ನು ದೇವತೆಗಳು ಮೆಚ್ಚರು. ಏನು ಮಾಡಲಿ, ಏನು ಬಿಡಲಿ, ದುಷ್ಟಶಿಕ್ಷಣ ಶಿಷ್ಟ ರಕ್ಷಣಗಳನ್ನು ಮಾಡಿದವನೇ ನಿಜವಾದ ರಾಜನೆನಿಸುವನು.

ವೈಶ್ಯಧರ್ಮವನ್ನಾಲಿಸು! ದಾನ, ಅಧ್ಯಯನ, ಯಜ್ಞಗಳನ್ನು ಶ್ರದ್ಧೆಯಿಂದ ನಡೆಸುತ್ತಾ ಧನವನ್ನು ಹೇರಳವಾಗಿ ಸಂಗ್ರಹಿಸುವದು ವೈಶ್ಯಧರ್ಮವಾಗಿದೆ. ಧನಸಂಗ್ರಹಣವು

ನ್ಯಾಯವಾಗಿರಬೇಕು. ಪಶುಗಳನ್ನು ವೈಶ್ಯನು ತಂದೆಯಂತೆ ಪೋಷಿಸಬೇಕು. ಪ್ರಜಾಪತಿಯು ಸೃಷ್ಟಿಕಾಲದಲ್ಲಿ ವಿಪ್ರನಿಗೆ ವೇದವನ್ನೂ, ಕ್ಷತ್ರಿಯನಿಗೆ ದಂಡವನ್ನೂ, ವೈಶ್ಯನಿಗೆ ಪಶುಗಳನ್ನೂ, ಶೂದ್ರನಿಗೆ ತ್ರಿವರ್ಣ ಸೇವೆ (Service) ಯನ್ನೂ ದಯಪಾಲಿಸಿ, ಆಯಾ ಧರ್ಮವನ್ನು ಬಿಡಲಾಗದೆಂದು ಆಜ್ಞಾಪಿಸಿರುವನು. ಪಶುರಕ್ಷಾತತ್ಪರನಾದ ವೈಶ್ಯನ ವೃತ್ತಿಯನ್ನು ನಿರೂಪಿಸುವೆನು. ಆರುಧೇನುಗಳನ್ನು ರಕ್ಷಿಸುವವನು, ಒಂದಾಕಳ ಹಾಲಿಗೆ (ವೇತನ ಪಡೆಯಲು) ಯೋಗ್ಯನಾಗುವನು. ಒಂದು ವರ್ಷ ಕಾಲ ಒಂದು ನೂರಾಕಳುಗಳನ್ನು ಕಾದ ವೈಶ್ಯನು ಒಂದು ಗೋಮಿಥುನವನ್ನು ವೇತನವೆಂದು ಪಡೆಯಲರ್ಹನಾಗುವನು. ವ್ಯಾಪಾರದಲ್ಲಿ ಪಡೆದ ಧನದಲ್ಲಿ ಏಳನೇ ಒಂದಂಶದ ಧನಕ್ಕೆ ಅವನಿಗೆ ಅಧಿಕಾರವಿದೆ. ಸಸ್ಯಾದಿಗಳನ್ನು ಬೆಳೆಸಿದ ವೈಶ್ಯನಿಗೂ ವೃತ್ತಿಗಾಗಿ ಸಪ್ತಮಾಂಶವು ಮೀಸಲಾಗಿದೆ. ಕೃಷಿ ಗೋರಕ್ಷಾ ವಾಣಿಜ್ಯಗಳೇ ಅಲ್ಲದೇ ಕುಸೀದವೂ (ಬಡ್ಡಿ) ವೈಶ್ಯವೃತ್ತಿಯಾಗಿದೆ.

ಶೂದ್ರನಿಗೆ ಇತರ ವರ್ಣದವರಿಗೆ ವಿನಿಯೋಗವಾಗುವಂತೆ ಬೇಕಾದ ಪದಾರ್ಥಗಳನ್ನು ಒದಗಿಸಿ ಸೇವಿಸುವುದೇ ಧರ್ಮವಾಗಿದೆ. ಅವನು ಮಿಕ್ಕೆಲ್ಲ ವರ್ಣದವರಿಂದ ಭರಣೀಯನಾಗಿರುವನು. ಪರಿಚರ್ಯೆಯಲ್ಲಿ ನಿರತನಾದ ಶೂದ್ರನಿಗೆ ರಾಜಾದಿಗಳು ಛತ್ರ, ಶಿರೋವೇಷ್ಟನ, ಕಂಬಳ, ಪಾದರಕ್ಷಾ, ವ್ಯಜನ ಮುಂತಾದುವನ್ನು ಸದಾ ಪರಿಚಾರಕರೆಂದು ತಿಳಿದು ಕೊಟ್ಟು, ರಕ್ಷಿಸುತ್ತಿರಬೇಕು. ಶುಶ್ರೂಷನಾಗಿ ಸೇರಿದ ಶೂದ್ರನನ್ನು ಅನ್ನವಸ್ತ್ರ ವಸತಿಗಳಿತ್ತು ಪೋಷಿಸುವುದೆಲ್ಲರ ಕರ್ತವ್ಯವಾಗಿದೆ. ಅವನು ಮುದುಕನಾದ ಮೇಲೂ ಬಿಡದೆ ಪೋಷಿಸಬೇಕು. ಶೂದ್ರರಿಗೆ ಯಜ್ಞವಿಲ್ಲ; ಸ್ವಾಹಾ, ವಷಟ್‌ಕಾರಗಳಲ್ಲಿ ಅವರಿಗೆ ಅಧಿಕಾರವಿಲ್ಲ. ಆದರೂ ಅವನಿಗೂ ಸಣ್ಣ ಯಜ್ಞಗಳಿವೆ. ಗ್ರಹಶಾಂತಿ, ವೈಶ್ವದೇವಾದಿ ವಿಧಾನದಿಂದ ಶ್ರೌತಮಂತ್ರಗಳಿಲ್ಲದೆ, ಅವನು ವಿಪ್ರಮುಖನಾಗಿ ಯಜ್ಞಪುಣ್ಯಫಲವನ್ನು ಹೊಂದಬಹುದಾಗಿದೆ. ಇತರ ಸಂಕರ ಜಾತಿಯವರಿಗೆ ಅವರವರ ಧರ್ಮಗಳು ಜೀವನಾರ್ಥವಾಗಿಯೂ ವಿಹಿತವಾಗಿದೆ.

ಹರಿಪ್ರಿಯನಾಗದ ಪ್ರಥಮ ವರ್ಣದವನು ಜಾತಿಮಾತ್ರದಿಂದ ಪೂಜ್ಯನೆನಿಸನು. ಹರಿಪ್ರಿಯನಾದ ಶೂದ್ರನು ಕೂಡ ಪೂಜ್ಯನೇ ಆಗುವನು ಆದರೆ ಪ್ರಣಾಮ ಮುಂತಾದುವನ್ನು ಉತ್ತಮ ವರ್ಣದವರಿಂದ ಅವನು ಸ್ವೀಕರಿಸಬಾರದು. ಜ್ಞಾನೋಪದೇಶವನ್ನು ವಿಪ್ರನೇ ಮಾಡಲು ಅಧಿಕಾರಿಯು. ಅಂತಹ ವಿಪ್ರನಿಲ್ಲದಿರೆ, ಕ್ಷತ್ರಿಯ ವೈಶ್ಯಶೂದ್ರರು ಕ್ರಮವಾಗಿ ಧರ್ಮೋಪದೇಶವನ್ನು ಮಾಡಬಹುದು. ಅವರು ವಿಪ್ರಮುಖರಾಗಿಯೇ ಜ್ಞಾನವನ್ನು ತಂತಮ್ಮ ವರ್ಣದವರಿಗೆ ಅಥವಾ ಅಧಮ ವರ್ಣದವರಿಗೆ ಉಪದೇಶಿಸಬಹುದು. ವರ್ಣಯುಕ್ತರೆಲ್ಲರೂ ಅಜ್ಞಾನಿಗಳಾದರೆ ಇನ್ನು ವರ್ಣಬಾಹ್ಯರು ಅಜ್ಞಾನಿಗಳೆಂದು ಹೇಳಬೇಕಿಲ್ಲ. ವಿಪ್ರರು ಜ್ಞಾನದಿಂದ ಕೆಟ್ಟರೆ, ಎಲ್ಲರೂ ಕೆಟ್ಟಂತೆಯೇ ಸರಿ! ತಲೆಕೆಟ್ಟರೆ ಶರೀರವು ಉಳಿಯುವುದೇ?

ಸ್ತ್ರೀಯರಿಗೆ ಪಾತಿವ್ರತ್ಯವು ಮುಖ್ಯಧರ್ಮವು. ಪುರುಷರೂ ಏಕಪತ್ನೀ ವ್ರತರಾಗಿರಬೇಕು. ದೇವಋಷಿಸ್ತ್ರೀಕಾಮಿಯಾದವನ್ನು ಅಂಧಂತಮವನ್ನು ಹೊಂದುವನು. ಉತ್ತಮ ಸ್ತ್ರೀಕಾಮಿಯಾದವನ ಜ್ಞಾನಾನಂದನಿಧಿಯು ಹಾಳಾಗುವುದು. ಸ್ತ್ರೀಯರಿಗೂ ಅಧಮ

ಪುರುಷಾಕಾಂಕ್ಷೆಯಿಂದ ಅಧಿಕ ದೋಷವಿದೆ. ದೇವಮುನಿಗಂಧರ್ವತರುಣಿಯರೂ, ನರೋತ್ತಮ ಪತ್ನಿಯರೂ ವಾಂಛನೀಯರಲ್ಲ. ಅಂತಹ ಪರಸ್ತ್ರೀಕಾಮಿಯು ನರಕಾದ್ಯ ನರ್ಥಭಾಜನನಾಗುವನು. ಸಚ್ಛೂದ್ರರಿಗೆ ಪುರಾಣ ಭಾರತಾದಿ ಗ್ರಂಥ ಸಂದರ್ಭದಲ್ಲಿ ಶ್ರವಣಾಧಿಕಾರವಿದೆ. ವರ್ಣಬಾಹ್ಯರೂ ಹರಿನಾಮ ಸ್ಮರಣಾಧಿಕಾರಿಗಳೆನಿಸಿ ಉದ್ಧೃತರಾಗ ಬಲ್ಲರು.

(1) ವಿಷ್ಣುವಿಗೆ ಬ್ರಹ್ಮರುದ್ರರು ಸಮರು. (2) ರುದ್ರನು ವಿಷ್ಣುವಿಕಿಂತಲೂ ಉತ್ತಮನು. (3) ತ್ರಿಮೂರ್ತಿಗಳಿಗೆ ಭೇದವಿಲ್ಲ. (4) ಶ್ರೀಹರಿಯ ಅವತಾರಗುಣಕರ್ಮಗಳಲ್ಲಿ ಸ್ವಗತಭೇದವಿದೆ. (5) ಶ್ರೀಹರಿಯ ದೇಹವು ಭೌತಿಕವು: ಅವನೂ ಜೀವನಂತೆ ದುಃಖಿಯು. (6) ಹರಿಭಕ್ತರಲ್ಲಿ ತಾರತಮ್ಯವಿಲ್ಲ. (7) ವಿಷ್ಣು ವೈಷ್ಣವರಿಗೆ ದ್ರೋಹಮಾಡಬೇಕು. (8) ಶ್ರೀಹರಿಯು ಸ್ವತಂತ್ರನಲ್ಲ. (9) ಶ್ರೀಶನು ಅಪೂರ್ಣನು ಎಂಬ ಒಂಬತ್ತು ವಿಧ ವಿಷ್ಣುವಿರುದ್ಧ ಧರ್ಮಗಳು ಅಂಧಂತಮವನ್ನು ಹೊಂದಿಸುವ ಸಂಧನವಾಗಿವೆ.

ಮನುಜಾಧಮರು ಸಂಶಯಗ್ರಸ್ತರಾಗಿ ಅಂಧಂತಮವನ್ನೋ ನರಕವನ್ನೋ ಹೊಂದುವರು. ಮನುಜ ಮಧ್ಯಮರು ನಿತ್ಯ ಸಂಸಾರದಲ್ಲಿ ಹುಟ್ಟಿ ಸಾಯುತ್ತಾ, ನರಳುವರು. ಮನುಜೋತ್ತಮರು ಅಜ್ಞಾನಾದಿ ದೋಷಗಳನ್ನು ಕಳೆದುಕೊಂಡಂತೆ ಸ್ವಃ, ಮಹಃ ಆದಿ ಪುಣ್ಯಲೋಕಗಳನ್ನು ಸೇರಿ, ಸರ್ವದೋಷನಾಶವಾದಾಗ, ಶ್ರೀಹರಿಪ್ರಸಾದದಿಂದ ಮುಕ್ತ ರಾಗುವರು. ಇನ್ನು ಮುಕ್ತಿಯೋಗ್ಯರಾದ ದೇವ, ಋಷಿ, ಪಿತೃಚಕ್ರವರ್ತಿ, ನರೋತ್ತಮರು ಸ್ವರೂಪಾನಂದಾವಿರ್ಭಾವರೂಪ ಮುಕ್ತಿಯನ್ನೂ, ದೈತ್ಯರೂ ತದನುಚರರು ಕೂಡ ದುಃಖ ಮಯವಾದ ಅಂಧಂತಮವನ್ನು ಹೊಂದುವರು. ಯೋಗ್ಯಕರ್ಮದಿಂದ ಬಂದ ಜ್ಞಾನದಿಂದ ಮೋಕ್ಷ, ವಿಷ್ಣುಭಕ್ತರ ವಚನದಿಂದ ಪಾಪಶುದ್ಧಿಯಾಗುವುದು. ಇಂತು ತಿಳಿದು ಸುಜೀವರು ಸ್ವವಿಹಿತ ಕರ್ಮವನ್ನು ಮಾಡಿ, ತತ್ಫಲವನ್ನು ಶ್ರೀಹರಿಗರ್ಪಿಸಬೇಕು. ಶ್ರವಣ ಮನನ ಧ್ಯಾನಗಳನ್ನು ತಕ್ಕಂತೆ ಮಾಡಿ, ಅದರಿಂದ ಗುರುಪ್ರಸಾದತದ್ದ್ವಾರಾ ಅಪರೋಕ್ಷಜ್ಞಾನ ಅದರಿಂದ ಹರಿಪ್ರಸಾದ ಮೋಕ್ಷಗಳನ್ನು ಪಡೆಯಬೇಕು.

ಶ್ರದ್ಧೆಯಿಂದ ಗುರುವನ್ನು ಸೇವಿಸಿದ ಉಪಕೋಸಲನಿಗೆ ಅಗ್ನಿಗಳು ಬ್ರಹ್ಮೋಪದೇಶ ಗೈದು ಉದ್ಧರಿಸಿದಂತೆ, ಶ್ರದ್ಧಾವಂತನಿಗೆ ವಿದ್ಯಾಲಾಭವಾಗುವುದು. ಯಜ್ಞಶಾಲಾ ರಕ್ಷಣ, ವಿಪ್ರಾರಾಧನ, ಕಥಾಶ್ರವಣಗಳನ್ನು ಶ್ರದ್ಧೆಯಿಂದ ಮಾಡಿದ ಶೂದ್ರನಿಗೂ ಯಜ್ಞಫಲದಲ್ಲಿ ಸ್ವಭಾಗವು ಸಿಗುವುದು. ವೇದವನ್ನು ಓದಿದ ವಿಪ್ರನು ಪೂಜ್ಯನು ; ಓದದವನು ಶೂದ್ರ ನಂತೆಯೇ ಸರಿ. ಮಾನಸವೂ ದ್ರವ್ಯ ತ್ಯಾಗಾತ್ಮಕವೂ ಆದ ಯಜ್ಞದಲ್ಲಿ ಶ್ರದ್ಧಾವಂತರಾದರೆ ಸಾಕು ; ಸರ್ವವರ್ಣದವರೂ ಅಧಿಕೃತರಾಗಿರುವರು. ಅಂದರೆ ಇಂತಹ ಕಾಮದಿಂದ ಇಂತಹವನು ಮಾಡಲು ಪ್ರಾರ್ಥಿಸಿಕೊಂಡಂತೆ ನಾನು (ವಿಪ್ರನು) ಇಂತಹ ಯಜ್ಞವನ್ನು ಮಾಡುವೆನು ಎಂದು ಸಂಕಲ್ಪಿಸಿದ ವಿಪ್ರನು ಕೊಟ್ಟ ಯಜ್ಞಪೂರ್ತಿಯ ಫಲದಿಂದ ಶೂದ್ರಾದಿಗಳೂ ಯಜ್ಞಭಾಗಿಗಳೇ ಎನಿಸುವರು. ಅಕಾರವೆಂಬ ಒಂದಕ್ಷರವೇ

ಸ್ವರ್ಯೋಷ್ಮಗಳಿಂದ ಕೂಡಿ ಅನೇಕ ನಾಮ ರೂಪಗಳುಳ್ಳದ್ದಾಗುವಂತೆ, ಮೊದಲು ವಿಪ್ರನಾದ ಬ್ರಹ್ಮನಿಂದ ಅನೇಕ ವಿಕಾರಗಳನ್ನು ಪೊಂದಿ, ಇತರ ವರ್ಣದವರೂ ಪುಟ್ಟಿರುವರು. ಆಕಾರವೇ ಋಗ್ಯಜುಸ್ಸಾಮಾಥರ್ವರೂಪವಾಗಿ ಬೆಳೆದಂತೆ, ಬ್ರಹ್ಮದೇವನು ಬ್ರಾಹ್ಮಣವರ್ಣದಿಂದ ಗುಣವಿಕಾರಿಗಳಾದ ಇತರ ವರ್ಣಗಳನ್ನು ಸೃಜಿಸಿ ಪ್ರಕಟಿಸಿರುವನು. ವೈಖಾನಸರೆಂಬ ವಾನಪ್ರಸ್ಥರು ಎಲ್ಲ ವರ್ಣದವರೂ ತಂತಮ್ಮ ವರ್ಣಕ್ಕೆ ಯೋಗ್ಯವಾದ ವೈದಿಕ, ತಾಂತ್ರಿಕ, ಪೌರಾಣಿಕ ಯಜ್ಞಗಳನ್ನು ಮಾಡಲೇಬೇಕೆಂದು ನಿರೂಪಿಸಿರುವರು. ವಿಷ್ಣುಭಕ್ತರೆಂತಹವರೇ ಆಗಲಿ, ಕಳ್ಳರಾಗಲಿ ಪಾಪಿಗಳೇ ಆಗಲಿ - ಪಶ್ಚಾತ್ತಾಪದಿಂದ ಶುದ್ಧರಾಗುವರೆಂದು ಜ್ಞಾನಿಗಳು ಪೇಳುವರು. ಶ್ರದ್ಧೆಯಿಂದಲು, ವಿಷ್ಣುಭಕ್ತಿಯಿಂದಲು ಕೂಡಿದ ವಿಹಿತ ಕರ್ಮವೆಲ್ಲವು ಯಜ್ಞವೆನಿಸಿ, ಯಜ್ಞನಾಮಕ ಶ್ರೀಹರಿಪ್ರೀತಿಗೆ ಸಾಧನವಾಗುವುದು.

ಧರ್ಮರಾಜ ! ಈಗ ಆಶ್ರಮಧರ್ಮಗಳನ್ನು ವರ್ಣಿಸುವೆನು ಕೇಳು! ಬ್ರಾಹ್ಮಣ ವರ್ಣದವರಿಗೆ ಬ್ರಹ್ಮಚರ್ಯ, ಗ್ರಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬ ನಾಲ್ಕು ಆಶ್ರಮಗಳು ಸೇವ್ಯವಾಗಿವೆ. ಅಗ್ನ್ಯಾಧಾನ, ವೇದಾಧ್ಯಯನಗಳನ್ನು ಮಾಡಿದ ವಿಪ್ರನು ಪತ್ನೀ ಸಹಿತನಾಗಿ, ಅಥವಾ ಪತ್ನಿಯನ್ನು ಮಕ್ಕಳಿಗೆ ಒಪ್ಪಿಸಿ, ವಾನಪ್ರಸ್ಥನಾಗಬಹುದು. ಗೃಹಾಶ್ರಮದ ಕೃತ್ಯವೆಲ್ಲ ಮುಗಿಸಿ, ವನವನ್ನು ಸೇರುವವನು. ಆರಣ್ಯಕ ನಿಯಮಗಳನ್ನು ಶಾಸ್ತ್ರದಿಂದ ತಿಳಿದು, ಅನುಸರಿಸಬೇಕು. ಅವನು ಊರ್ಧ್ವರೇತಸ್ಕನಾಗಿ, ಭೈಕ್ಷದಿಂದ ಜೀವಿಸಬೇಕು. ವಿರಕ್ತಿ ಸಂಪನ್ನನಾದ ಬ್ರಹ್ಮಚಾರಿಯು ಗಾರ್ಹಸ್ಥ ವಾನಪ್ರಸ್ಥಗಳನ್ನು ದಾಟಿ ಸನ್ಯಾಸವನ್ನೇ ಸ್ವೀಕರಿಸಬಹುದು. ವಾನಪ್ರಸ್ಥನು ದುಷ್ಟವಿಷಯ ದೂರನಾಗಿ, ಯದೃಚ್ಛಾ ಲಾಭದಿಂದ ತುಷ್ಟನಾಗಿರಬೇಕು. ಜಿತೇಂದ್ರಿಯನು, ಚಿತ್ತವಿಕಾರರಹಿತನು, ಹರಿಗುರುಭಕ್ತನು, ಶಾಸ್ತ್ರವಿಚಾರರತನು ಆದ ವಾನಪ್ರಸ್ಥನು ಮೋಕ್ಷವನ್ನು ಹೊಂದುವನು.

ಗೃಹಸ್ಥನು ಕೂಡ ವೇದಗಳನ್ನೋದಿ, ತಿಳಿದು, ಸವರ್ಣದಾರೆಯಲ್ಲಿ ಸಂತಾನವನ್ನು ಪೊಂದಿ, ಅನಿಷಿದ್ಧ ಸುಖಗಳನ್ನನುಭವಿಸಿ, ಗುರುಗಳಿಂದ ಬ್ರಹ್ಮ (ಶಾಸ್ತ್ರ - ವಿಷ್ಣು) ವಿಚಾರವನ್ನು ಮಾಡಿ, ಜ್ಞಾನದಿಂದ ಮುಕ್ತನಾಗಬಹುದು. ಮಿತಾಶನನು, ದೇವತಾ ತಾರತಮ್ಯ ಜ್ಞಾನಿಯು, ಕೃತಜ್ಞನು, ಸತ್ಯವಚನನು, ಮೃದುಸ್ವಭಾವದವನು, ನಿಂದಾರ್ಹ ಕರ್ಮ ದೂರನು, ಕ್ಷಮಾವಂತನು, ದಾಂತನು, ಗುರುವಿಧೇಯನು, ಹವ್ಯಕವ್ಯ ಜಾಗರೂಕನು, ಅನ್ನದಾನರತನು, ಮಾತ್ಸರ್ಯ ಕಪಟ್ಯಾದಿ ದೋಷರಹಿತನು, ಇತರಾಶ್ರಮತ್ರಯಪೋಷಕನು, ವೇದವಿಹಿತ ಕರ್ಮಯಜ್ಞನಿಷ್ಠನು ಆದ ಗೃಹಸ್ಥನು ಶ್ರೀಹರಿಪ್ರಸಾದ ಪಾತ್ರನಾಗಿ ಮುಕ್ತನಾಗುವನು.

ನಾರಾಯಣರ್ಷಿಯು ನುಡಿದ ಗಾರ್ಹಸ್ಥ್ಯ ಪ್ರಶಂಸೆಯನ್ನು ಕೇಳು! ಸತ್ಯವಚನ ತ್ರಿಕರಣ ಶುದ್ಧಿ, ಅತಿಥಿ ಪೂಜನ, ಸ್ವದಾರರತಿ, ಧರ್ಮಾರ್ಥ ವಿರೋಧಿಯಾಗದ (ಕಾಮ) ಭೋಗಸೇವನ, ಪುತ್ರದಾರಾಪೋಷಣ, ವೇದಧಾರಣ, ಇವೇ ಮೊದಲಾದ ಧರ್ಮಗಳಿಂದ ಕೂಡಿದ ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಲ್ಲಿಯೂ ಶ್ರೇಷ್ಠವಾಗಿದೆ. ಅಂತಹ ಗೃಹಸ್ಥನು ಇಹಪರ ಲೋಕಗಳಲ್ಲಿ ಅಕ್ಷಯ ಸುಖವನ್ನು ಪೊಂದುವನು.

ಬ್ರಹ್ಮಚಾರಿಯು ಏಕಾಕಿಯಾಗಿರಬೇಕು. ಶ್ರೀಹರಿಸ್ಮರಣೆ ನಿರಂತರವಾಗಿರಬೇಕು. ಜಪ, ಮಂತ್ರಮನನ, ಗುರುಸೇವೆ, ವ್ರತನಿಷ್ಠೆ ಸುಮಗಂಧ ವರ್ಜ್ಯ, ದೇವತಾಪೂಜೆ, ಅಗ್ನಿಕಾರ್ಯ, ವೇದವೇದಾಂತ ವಿಚಾರ ಧ್ಯಾನ, ಮೊದಲಾದವು ಅವನ ಧರ್ಮಗಳಾಗಿವೆ. ಬ್ರಾಹ್ಮಣನು ಹಿಂಸಾಪರನಾಗಲೇಬಾರದು. ಯುದ್ಧಾದಿ ಹಿಂಸ್ರ ಕರ್ಮಗಳನ್ನು ಸ್ವಾಭಾವಿಕ ಧರ್ಮಗಳಾಗಿ ಪಡೆದಿರುವ ಕ್ಷತ್ರಿಯಾದಿಗಳಿಗೆ ಪಶುಯಜ್ಞಗಳು ವಿಹಿತವಾಗಿವೆ; ವಿಪ್ರರಿಗಲ್ಲ (ಮೋಕ್ಷಧರ್ಮ). ಕ್ಷತ್ರ ವೈಶ್ಯ ಶೂದ್ರಾದಿ ಕರ್ಮಗಳನ್ನು ಮಾಡುವ ಬ್ರಾಹ್ಮಣನು ಈ ಲೋಕದಲ್ಲಿ ನಿಂದಿತನಾಗುವುದಲ್ಲದೆ, ಪರಲೋಕದ ನರಕ ದುಃಖಕ್ಕೆ ಗುರಿಯಾಗುವನು. ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ, ಶಾಸ್ತ್ರವಿಚಾರವೆಂಬ ಆರು ಕರ್ಮಗಳನ್ನು ಮಾಡಿ, ದಾನಶೀಲರಾಗಿರುವ ವಿಪ್ರನಿಗೆ ಅಕ್ಷರಲೋಕವು ಕಾದಿದೆ. ಯಾವ ದೇಶಕಾಲಾವಸ್ಥೆಗಳಲ್ಲಿ ಯಾವನು ಎಂತಹ ಕರ್ಮವನ್ನು ಮಾಡಿರುವನೋ, ಅಂತಹ ಕರ್ಮಫಲವನ್ನು ಅವನು ತಪ್ಪದೆ ಉಣ್ಣಬೇಕಾಗುವುದು. ವಾಸನಾಬಲದಿಂದ ಫಲಾಪೇಕ್ಷೆಯನ್ನು ಹೊಂದಿ ಮಾಡುವ ಕರ್ಮ-ಅದು ವೇದಾಭ್ಯಾಸವೇ ಆದರೂ - ಕೃಷಿ, ವಾಣಿಜ್ಯ, ಕುಸೀದ(ಬಡ್ಡಿ), ಮೃಗಯಾದಿಗಳಂತೇ ಅಲ್ಪ ಫಲವೇ ಆಗುವುದು. ಕಾಲನಾಯಕ ಶ್ರೀಹರಿ ಪ್ರೇರಣೆಯಂತೆ, ಜನರು ತಮ್ಮ ಸ್ವಭಾವಕ್ಕೆ ತಕ್ಕಂತೆ ವಿವಿಧ ಕರ್ಮಗಳನ್ನು ಮಾಡಿ, ತತ್ಫಲವಾಗಿ, ಉತ್ತಮ, ಮಧ್ಯಮಾಧಮ ಲೋಕಗಳನ್ನು ಪೊಂದುವರು.

ವಿಪ್ರನೆಂದಿಗೂ ಶತ್ರುಸಂಹಾರ, ಜ್ಯಾಕರ್ಷಣ, ಕೃಷಿ, ವಾಣಿಜ್ಯ, ಪಶುಪಾಲನ, ನೀಚಸೇವನಗಳನ್ನು ಮಾಡಬಾರದು; ಆಪತ್ತಿನಲ್ಲಿ ಮಾಡಿದರೂ ಆಪತ್ತರಣವಾದ ಮೇಲೆ ಬಿಡಬೇಕು. ಪರದಾರಾಗಮನ, ಅನ್ನವಿಕ್ರಯ, ಮೋಸ, ರಾಜಶಾಸನ, ಕುಸೀದಗಳನ್ನು ಆಪತ್ತಿನಲ್ಲೂ ವಿಪ್ರನು ಮಾಡಬಾರದು. ಅಂತಹ ವಿಪ್ರನು ಶೂದ್ರನೇ ಸರಿ! ವೃಷಲೀಪತಿ, ದುಶ್ಚಾರಿತ್ರ, ವಿಕರ್ಮನಿರತ, ಪಿಶುನ - ಇಂತಹ ವಿಪ್ರರನ್ನು ದೇವ ಪಿತೃ ಕಾರ್ಯಗಳಲ್ಲಿ ನಿಯಂತ್ರಿಸಲಾಗದು. ದಾಂತನು, ಶಾಂತನು, ದಯಾವಂತನು ಯಜ್ಞ ತತ್ಪರನು, ಸುಖದುಃಖಸಮನು, ಮೃದುವು, ಕ್ಷಮಾಶೀಲನು ಆದ ವಿಪ್ರನು ವಿಷ್ಣು ಪ್ರೀತಿಯನ್ನು ಗಳಿಸುವನು. ಅವನಂತೆ ವೈಶ್ಯನೂ, ಶೂದ್ರನೂ, ರಾಜಪುತ್ರನೂ ಧರ್ಮಾಸಕ್ತರಾಗಿದ್ದರೆ, ವಿಷ್ಣು ಪ್ರೀತಿಗೆ ಪಾತ್ರರಾಗುವರು. ವರ್ಣಾಶ್ರಮ ಧರ್ಮಗಳು ನಡೆಸಲ್ಪಡದಿದ್ದರೆ ಲೋಕವೇ ಹಾಳಾದೀತು! ವರ್ಣಗಳಿಲ್ಲದೆ ಸಂಕರವು, ಆಶ್ರಮಗಳಿಲ್ಲದ ಧರ್ಮಹಾನಿಯು ಆದಾಗ ಪ್ರಜರು ವಿಧರ್ಮಿಗಳೂ, ಅಧರ್ಮಿಗಳೂ, ಆಗಿ ಕೆಡದಂತೆ ಇರಲು ವರ್ಣಾಶ್ರಮ ಧರ್ಮಗಳು ಅವಶ್ಯ ರಕ್ಷಣೀಯವಾಗಿವೆ.

ಧರ್ಮರಾಜ! ಸನ್ಯಾಸ ಧರ್ಮವನ್ನು ಕೇಳು! ಪುರಾಣಶ್ರವಣದಿಂದ ಆತ್ಮ ವಿಚಾರವನ್ನು ಮಾಡಿ, ವಿರಕ್ತನಾಗಿ ದಾರಾಪುತ್ರರಿಂದಲು, ರಾಜನಿಂದಲು ಅಪ್ಪಣೆ ಪಡೆದು ಶೂದ್ರನೂ - ಆಚಾರ ವಿಚಾರಗಳಿಂದ ಶುದ್ಧನಾಗಿದ್ದರೆ - ಸನ್ಯಾಸಿಯಂತಾಗಬಹುದು. ವೈಶ್ಯ ಕ್ಷತ್ರಿಯರಾದರೂ ವೈರಾಗ್ಯದಿಂದ - ಸ್ವಧರ್ಮಾಚರಣೆಯನ್ನು ಮಾಡಿದ

ಸನ್ಯಾಸಿಗಳಾಗಬಹುದು. ಕರ್ಮಫಲತ್ಯಾಗ, ಪರಬ್ರಹ್ಮ ಮಹಿಮಾಶ್ರವಣ, ಗುರುಸೇವನ ಮುಂತಾದವೇ ಈ ವರ್ಣತ್ರಯತರ ಸನ್ಯಾಸವೆನಿಸುವುದು. ವೇದವನ್ನೋದಿ, ಯಜ್ಞಗಳನ್ನು ಮಾಡಿ, ರಣವಿಜಯಿ ಎಂದು ಖ್ಯಾತನಾಗಿ, ಮಗನಿಗೋ ದತ್ತನಿಗೋ ರಾಜ್ಯ ವನ್ನೊಪ್ಪಿಸಿ, ದೇವ ಋಷಿ ಪಿತೃಗಳನ್ನು ತೃಪ್ತಿಪಡಿಸಿ, ರಾಜನು ವಾಸನಪ್ರಸ್ಥನಾಗಬಹುದು. ಬೇಕಾದರೆ ಅಂತ್ಯಕಾಲದಲ್ಲಿ ಸನ್ಯಾಸಿಯಾಗಬಹುದು. ಶ್ರವಣಾದಿಗಳು ನಡೆಯುವಂತೆ ಬದುಕಿರಲು, ಭಿಕ್ಷಾನ್ನವನ್ನು ಬೇಡಿ ಜೀವಿಸಬಹುದು. ನೈಷ್ಠಿಕವಾದ ಸನ್ಯಾಸವು ವಿಪ್ರೇತರರಿಗೆ ಕೂಡದೆಂದು ಮೊದಲೇ ನಿರೂಪಿಸಿರುವೆನು. ದುಷ್ಟಕರ್ಮತ್ಯಾಗವೇ ಅವರಿಗೆ ಸನ್ಯಾಸವಾಗಿದೆ.

ಎಲ್ಲ ಧರ್ಮಗಳು ನಿಲ್ಲಬೇಕಾದರೆ ರಾಜನಿಂದ ರಾಜಧರ್ಮವು ಇತರ ಧರ್ಮರಕ್ಷಕವೂ, ರಾಜಾಧರ್ಮವು ಇತರ ಧರ್ಮನಾಶಕವೂ ಆಗಿದೆ. ಹಸ್ತಿಪಾದದಲ್ಲಿ ಇತರ ಮೇಷಾದಿ ಪಾದಗಳಂತೆ, ಎಲ್ಲ ಧರ್ಮಗಳೂ ರಾಜಧರ್ಮದಲ್ಲಿ ಅಡಿಗಿ ನಿಂತಿವೆ. ಎಲ್ಲರಿಂದ ಧರ್ಮವನ್ನು ತಪೋದಾನ ಯಜ್ಞಗಳನ್ನು ಚನ್ನಾಗಿ ನಡೆಸಿದ ರಾಜನು ಅವರ-ವರ ಪುಣ್ಯದ ಷಡ್ಭಾಗ ಹಾರಿಯಾಗಿ, ಸರ್ವಧರ್ಮ ಫಲವನ್ನೂ ಹೊಂದುವನು. ದಂಡನೀತಿಯು ನಷ್ಟವಾದರೆ, ಸರ್ವಧರ್ಮಗಳೂ ನಷ್ಟವಾಗುವವು. ರಾಜನು ಧರ್ಮಿಷ್ಠನಾಗಿದ್ದರೆ, ಧರ್ಮ ನಡೆಯುವುದು. ವಿದ್ಯೆ ವರ್ಧಿತವಾಗುವುದು; ಪ್ರಜರು ಸುಖಿಸುವರು; ದಾನವು ಪುಷ್ಕಲವಾಗುವುದು. ಮೃಗಪಕ್ಷಿಗಳನ್ನು ನೀಚರು ಕೊಂದಾಗ, ಅವೂ ಹಾಳಾಗಿ, ಕೊಂದವರ ಪುಣ್ಯ-ಸುಖಗಳನ್ನೂ ನಾಶವಾಗಿಸುವಂತೆ, ಯಜ್ಞ, ದಾನ, ತಪೋ ಮುಖ್ಯ ಕರ್ಮ-ಧರ್ಮಗಳನ್ನು ರಕ್ಷಿಸದೆ ಚೋರ ನಾಸ್ತಿಕ ಧೂರ್ತರಿಂದ ಹಾಳು ಮಾಡಗೊಡುವ ರಾಜನು ತಾನೂ ಮಹಾಪಾಪವನ್ನು ಪೊಂದುವನು. ಧರ್ಮವನ್ನು ಕುತರ್ಕಗಳಿಂದಲೂ, ದುಷ್ಟ ಶಾಸ್ತ್ರಗಳಿಂದಲು ಕೆಡಿಸಿ, ಲೋಕನಾಶಕರಾಗುವ ದುಷ್ಟರನ್ನು ಶಾಸಿಸಿ, ಹತ್ತಿಕ್ಕಿ, ಧರ್ಮವನ್ನು ನಡೆಸುವುದು ರಾಜನ ಕರ್ತವ್ಯವಾಗಿವೆ.

ಹಿಂದೆ ಶೂರ ರಾಜನ್ಯರು ಬಹು ಜನರು ದಂಡ ನೀತಿಯನ್ನರಿಯಲು ಶ್ರೀವಿಷ್ಣುವಿನನ್ನು ಸೇರಿದರು. ಆಶ್ರಮ ಧರ್ಮ- ರಾಜ ಧರ್ಮಗಳಲ್ಲಿ ಯಾವುದು ದೊಡ್ಡದೆಂದು ಕೇಳಿದರು. ಶ್ರೀವಿಷ್ಣುವು, 'ರಾಜಧರ್ಮವೇ ದೊಡ್ಡದೆಂದೂ ವಸುರುದ್ರಾದಿತ್ಯ ಮರುದಾದಿ ದೇವತೆಗಳು ಕ್ಷತ್ರ ಧರ್ಮದಿಂದ ಲೋಕವನ್ನಾಳುವರೆಂದೂ ನಿರೂಪಿಸಿದನು. ಮಾಂಧಾತನೆಂಬ ರಾಜನ್ಯನು ಅನಾದಿ ನಿಧನನಾದ ದೇವ - ದೇವನನ್ನು ಆರಾಧಿಸಿ, ಪ್ರತ್ಯಕ್ಷೀಕರಿಸಿಕೊಂಡನು. ಶ್ರೀಶನು ತ್ರಿಲೋಕೇಶನಾದ ಮಹೇಂದ್ರನಂತೆ ರೂಪ ಧರಿಸಿ ಪ್ರತ್ಯಕ್ಷನಾದನು. ''ಮಾಂಧಾತ! ದೇವ - ದೇವನು, ಅನಂತಮಹಿಮನು, ಅವ್ಯಕ್ತನೂ ಆದ ಲಕ್ಷ್ಮೀಪತಿಯನ್ನು ನೋಡಬೇಕೆಂದುದೇಕೆ? ಇಂದ್ರ, ರುದ್ರ, ಬ್ರಹ್ಮಾದಿಗಳಿಂದ ಸಾಕಲ್ಯೇನ ಶ್ರೀಪತಿಯ ಮಹಾ ಮಹಿಮೆಯನ್ನು ತಿಳಿಯಲಾಗದು. ನೀನು ಶೂರನು, ಸುರಪ್ರಿಯನು, ಸತ್ಯ - ಧರ್ಮರತನು, ಭಕ್ತನೂ ಆಗಿರುವೆ! ನಿನಗೆ ಬೇಕಾದುದನ್ನು ಬೇಡು!'' ಎಂದ ಇಂದ್ರನಿಗೆ ಮಾಂಧಾತನಿಂತೆಂದನು: 'ಸುರೇಶ! ನಿನ್ನ ದಯದಿಂದ

ನಾನು ನಾರಾಯಣನನ್ನು ಕಾಣಬೇಕೆಂದು ಅಪೇಕ್ಷಿಸುವೆನು. ಅದಕ್ಕಾಗಿ ಸರ್ವರಾಜ್ಯಾದಿ ಕಾಮಿತಗಳನ್ನು ಬಿಟ್ಟು, ವನವನ್ನು ಸೇರುವೆನು. ರಾಜ್ಯವನ್ನಾಳಿದೆನು; ಯಜಗಳನ್ನು ಮಾಡಿದೆನು; ಯಶವನ್ನು ಜಗದಿ ತುಂಬಿದೆನು; ಆದರೆ ಕ್ಷಾತ್ರ ಧರ್ಮರತನಾದ ನನಗೆ ಅದಕ್ಕಿಂತಲು ಹೆಚ್ಚಾದ ಭಗವದ್ಧರ್ಮವನ್ನು ಪಾಲಿಸಲಾಗಲಿಲ್ಲ.'

ಆ ಮಾತಿಗೆ ಸುರರೊಡೆಯನಿಂತೆಂದನು: 'ರಾಜನ್, ಕೇಳು! ಕ್ಷತ್ರಿಯೇತರರು ಇತರರನ್ನು ಶಾಸಿಸಲಾರರು; ಧರ್ಮದಲ್ಲಿ ನಡೆಸಲಾರರು. ತಾವು ನಡೆಯುವುದನ್ನೂ ಬಿಟ್ಟು ಬಿಡಬಹುದು. ರಾಜನು ತಾನೂ ನಡೆದು, ಪರರನ್ನೂ ಧರ್ಮದಲ್ಲಿ ನಡೆಸುವ ಸದವಕಾಶವನ್ನು ಪಡೆದು ಪುಟ್ಟಿರುವನು. ಹಿಂದೆ ವಿಷ್ಣುವು ವಿಕ್ರಮಿಸಿ, ಚಕ್ರಪಾಣಿಯಾಗಿ, ಧರ್ಮಶತ್ರುಗಳಾದ ದುಷ್ಟರನ್ನೆಲ್ಲ ಸಂಹರಿಸಿ, ದೇವ, ಋಷಿ, ವಿಪ್ರ, ಗೋ, ಸುಜನರನ್ನು ಕಾಪಾಡಿದನು. ಇಲ್ಲದಿರೆ ದೈತ್ಯರ ಹಾವಳಿಯಿಂದ ಲೋಕವು ಹಾಳಾಗುತ್ತಿತ್ತು. ಆಶ್ರಮವರ್ಣಾದಿ ಧರ್ಮಗಳೂ ನಷ್ಟವಾಗುತ್ತಿದ್ದವು. ಇಂತು ಕ್ಷಾತ್ರ ಧರ್ಮವು ಲೋಕ ಕ್ಷೇಮ ಸಂಪಾದಕವೆನಿಸಿ, ಬಹು ಪುಣ್ಯಪ್ರದವಾಗಿದೆ. ಯುದ್ಧ, ಮರಣ, ಸರ್ವ ಭೂತರಕ್ಷಣೆ, ಪ್ರಜಾಪಾಲನೆ, ಪೀಡಿತಜನ ಮೋಚನಗಳನ್ನು ಮಾಡುವ ರಾಜನು, ಸನ್ಯಾಸಿಗಳಿಗಾಗುವ ಪುಣ್ಯ ಲೋಕಗಳನ್ನು ಸುಲಭವಾಗಿ ಪೊಂದುವನು. ಅಂತಹ ರಾಜನಿಗೆ ಸನ್ಯಾಸದಿಂದಾಗಬೇಕಾದ ಮಹತ್ತರ ಪ್ರಯೋಜನವಿಲ್ಲ. ಹುಟ್ಟಿನಿಂದ ರಕ್ಷಕನಾದ ರಾಜನು ಪ್ರಿಯಾ ಪ್ರಿಯರನ್ನು ಲೆಕ್ಕಿಸದೆ, ಧರ್ಮಾಧರ್ಮಗಳನ್ನು ಪಾಲಿಸಿ ವಾರಿಸಿ, ಪ್ರಜಾರಂಜಕನಾದನೆಂದರೆ, ಅವನಿಗೆ ಮೋಕ್ಷವು ಕಟ್ಟಿಟ್ಟ ಗಂಟೆಂದು ತಿಳಿ.

ಮನುಜರು ಸ್ವಭಾವದಿಂದ ನಿರ್ಧಾರ್ಮಿಕರು; ನಿರ್ಮರ್ಯಾದರು; ನಿತ್ಯಧನಸಂಪಾದನ ನಿಷ್ಠರು. ಆದುದರಿಂದ ಶಾಸಕರಿಲ್ಲದಿರೆ, ಅವರು ನಿರಂಕುಶವರ್ತನರಾಗಿ ತಾವು ಕೆಟ್ಟು, ಲೋಕವನ್ನೂ ಕೆಡಿಸುವರು. ಚತುರಾಶ್ರಮವರ್ಣ ಧರ್ಮಗಳನ್ನು ವ್ಯವಸ್ಥೆಯಿಂದ ತಿಳಿಸಿ ನಡೆಸುವ ಬ್ರಾಹ್ಮಣನು ತನ್ನ ಧರ್ಮದಿಂದ ಭ್ರಷ್ಟನಾದರೆ, ಅವನನ್ನು ಶೂದ್ರನೆಂದೇ ಗಣಿಸಿ, ಶಿಕ್ಷಿಸುವ ಅಧಿ ಕಾರವು ರಾಜನಿಗಿದೆ. ಆದುದರಿಂದ ರಾಜನ್! ನೀನು ಧರ್ಮ ರಕ್ಷಣೆಯನ್ನು ಮಾಡುತ್ತಾ ರಾಜ್ಯವನ್ನಾಳು! ನಿನ್ನ ಸ್ವಧರ್ಮದಿಂದಲೇ ನಿನಗೆ ವಿಷ್ಣು ಲೋಕವಾಗುವುದು' ಎಂದು ಪೇಳಿದ ಇಂದ್ರನನ್ನು ಮಾಂಧಾತನು ಇತರರ ಧರ್ಮಗಳನ್ನು ತಿಳಿಯಲು ಪ್ರಶ್ನಿಸಿದನು.

ಇಂದ್ರನಿಂತೆಂದನು: 'ರಾಜನ್, ದಸ್ಯು ಜನರಿಗೂ ಮಾತಾ ಪಿತೃಸೇವೆ, ಸತ್ಯ ವಚನ, ದಾನ, ವಿಪ್ರಪೂಜೆಗಳಿವೆ. ಅಂದಮೇಲೆ ಎಲ್ಲ ಸಂಕರವರ್ಣದವರೂ ತಂತಮ್ಮ ವೃತ್ತಿಯಿಂದಲೇ ಜೀವಿಸುತ್ತಾ, ಸತ್ಯ, ಭೂತದಯೆ, ಅಕಾಪಟ್ಯ, ವಿಷ್ಣುಭಕ್ತಿ ಮುಂತಾದ ಸ್ವಯೋಗ್ಯ ಧರ್ಮದಿಂದ ಶ್ರೀಹರಿಯ ದಯಾಪಾತ್ರರಾಗಿ, ಮುಕ್ತರಾಗಬಹುದಾಗಿದೆ. ಪ್ರವೃತ್ತ ನಿವೃತ್ತ ಧರ್ಮಗಳನ್ನರಿತು, ಶಾಸಿಸುವ ನಿನಗೆ ಶ್ರೀವಿಷ್ಣು ಪ್ರಸಾದವಾಗುವುದು' ಇಂತು ಉಪದೇಶಿಸಿ, ಶ್ರೀಹರಿಯು ಅಂತರ್ಧಿತನಾದನು.

ಧರ್ಮರಾಜ! ಇಂತಹ ರಾಜಧರ್ಮವು ಬಹು ಶ್ರೇಷ್ಠವಾಗಿದೆ. ಅನ್ಯಾಯವನ್ನು

ತಡೆದು, ನ್ಯಾಯವನ್ನು ನಡೆಸಲು ಅರ್ಹವಾದ ರಾಜನೀತಿಯನ್ನು ಕೈಬಿಟ್ಟ ರಾಜನು ಮಾರ್ಗಮಧ್ಯದಿ ನಡೆಸುವ ಸ್ನೇಹಿತನಿಲ್ಲದ ಕುರುಡನಂತೆ ಹಾಳಾಗುವನು.

## ೧೨. ರಾಜಧರ್ಮ ಮಹಿಮೆ

ಭೀಷ್ಮನು ಧರ್ಮರಾಜನಿಗೆ ನಿರೂಪಿಸಿದನು:

'ರಾಜನ್! ಎಲ್ಲ ಧರ್ಮಗಳೂ ರಾಜಧರ್ಮದಿಂದ ಉಳಿದಿವೆ ಎಂದು ಹೇಳಿದೆನು. ಯಾವ ವರ್ಣದವನೇ ಆಗಲಿ, ಯಾವ ಆಶ್ರಮಸ್ಥನೇ ಆಗಲೀ, ತನ್ನ ಧರ್ಮವನ್ನು ಬಿಡದೇ ನಡೆಸಬೇಕು. ಹಾಗೆ ನಡೆಸುವ ರಾಜನು ಧರ್ಮಪ್ರವರ್ತಕನೆನಿಸುವನು. ನಿನಗೆ ತಿಳಿಯದ ಧರ್ಮವಲ್ಲ; ಆದರೂ ಹೃದಯಾಂತರ್ಗತನಾದ ಶ್ರೀಶನ ಪ್ರೀತಿಗೆ ಧರ್ಮವು ಎಂತು ಸಾಧಕವೆಂಬುದನ್ನು ತಿಳಿಯಲಿಚ್ಛಿಸಿ ಪ್ರಶ್ನಿಸುವ ನಿನಗೆ ಧರ್ಮಸೂಕ್ಷ್ಮವನ್ನರುಹುವೆನು. ಕೇಳು! ಉತ್ತಮ ಲೋಕ ಪ್ರಾಪ್ತಿಗೆ ಜಾತಿ ಕಾರಣವಲ್ಲ, ಆಶ್ರಮ ಕಾರಣವಲ್ಲ; ಗುಣವೇ ಕಾರಣ. ಗುಣವು ಮಾಡುವ ಧರ್ಮದಿಂದ ವ್ಯಕ್ತವಾಗುವುದು. ಯಾವ ಧೀರನು ಯಾವ ವರ್ಣದ ಅಥವಾ ಯಾವ ಆಶ್ರಮದ ಧರ್ಮವನ್ನು ಚನ್ನಾಗಿ ನಡೆಸುವನೋ, ಅಂತಹನು ಯಾರೇ ಆಗಲಿ, ಯೋಗ್ಯ ಗತಿಯನ್ನು ಪೊಂದುವನು.

ಕಾಮದ್ವೇಷರಾಹಿತ್ಯ ರೂಪವಾದ ಸಮದರ್ಶಿತ್ವವು ಮತಿಯ ವಿಶೇಷ ಧರ್ಮವಾಗಿದೆ. ಅಂತಹ ಧರ್ಮವನ್ನು ತನಗೆ ಯೋಗ್ಯವಾದಂತೆ ನಡೆಸುವ ರಾಜನು ಸನ್ಯಾಸಿಗಳಿಗಾಗುವಂತಹ ಉತ್ತಮ ಲೋಕವನ್ನು ಪೊಂದುವನು. ಇತರ ವರ್ಣೇತರರು ಕೂಡ ಹರಿ ಭಕ್ತ್ಯಾದಿ ಧರ್ಮಗಳಿಂದ ಉತ್ತಮ ಲೋಕವನ್ನು ಹೊಂದಬಹುದು. ಯಾವ ಆಶ್ರಮ ವರ್ಣಗಳ ಗುಣವಿರುವುದೋ, ಆ ಲೋಕಗಳನ್ನು ಅಂತಹವರು ಸ್ವಯೋಗ್ಯತೆಗನುಸಾರವಾಗಿ ಪೊಂದುವರು. ನಿಗ್ರಹಾನುಗ್ರಹಗಳನ್ನರಿತ ಧೀರರಾಜನು ಸನ್ಯಾಸಿಗಳಿಗಾಗುವ ಸತ್ಯಲೋಕವನ್ನು ಪೊಂದಿ ಸುಖಿಸುವನು. ಉತ್ತಮರ ಪೂಜೆ, ಅನ್ನದ ಸಂವಿಭಜನ, ಖಿನ್ನಬಂಧುಪೋಷಣ, ಸನ್ಯಾಸಿಸತ್ಕಾರ, ಶಿಷ್ಟಪರಿಪಾಲನೆಗಾಗಿ ಯುದ್ಧ, ವೇದ, ತಾತ್ಪರ್ಯ ವಿಚಾರ, ಜಪ, ದೇವಪೂಜೆ, ಯುದ್ಧದಲ್ಲಿ ಅಪಲಾಯನ, ನಿಷ್ಕಾಪಟ್ಯ, ವಿಷ್ಣು ಗುರುಭಕ್ತಿ ಭೂತದಯೆ, ಮೃದುವಚನ, ವೃದ್ಧಮಾನನ, ಶರಣಾಗತ ಪರಿಪಾಲನ, ಸಾಧು ಪರಿಪೋಷಣ, ಸ್ಥಾನುಕುಲ, ವಿದ್ಯಾ, ವಯಸ್ಸುಗಳಿಗೆ ತಕ್ಕ ಗೌರವ, ದೇಶಧರ್ಮ, ಕುಲಧರ್ಮ ಪರಿಪಾಲನೆ ಮುಂತಾದ ಧರ್ಮಗಳನ್ನು ತಮಗೆ ತಕ್ಕಂತೆ ನಡೆಸಿದವರು ಸ್ವರ್ಗಾದಿ ಲೋಕಗಳನ್ನು ಪೊಂದುವರು. ಧರ್ಮ ಪ್ರವರ್ತನೆಯಲ್ಲಿ ಸಹಾಯ ಮಾಡುವವರು ಕೂಡ ಧರ್ಮಫಲವನ್ನು ಹೊಂದುವರು.

ಗೃಹಸ್ಥನಿಗೆ ಸರ್ವಧರ್ಮಪ್ರವರ್ತನೆಯು ಸುಕರವಾಗಿದೆ. ರಾಜನಿಗೆ ಎಲ್ಲರು ನಡೆಸುವ ಧರ್ಮಫಲದ ಷಡ್ಭಾಗವು ಸಿಗುವಂತಾಗಲು, ಅವನು ಧರ್ಮರಕ್ಷಕನಾಗಿರುವುದಲ್ಲದೆ, ಅಧರ್ಮ ಶಿಕ್ಷಕನಾಗಿರಬೇಕು. ಅಂತಹ ರಾಜನಿಲ್ಲದಿರೆ ಮಹಾನರ್ಥವಾಗುವುದು. ಅರಾಜಕವಾದ ರಾಷ್ಟ್ರವು ಚೋರ, ಶತ್ರುಪೀಡಿತವಾಗಿ ಹಾಳಾಗುವದು. ಮನುಜ

ಮುಖ್ಯಲಕ್ಷಣವಾದ ಸತ್ಯಾದಿ ಧರ್ಮವೇ ಕೆಟ್ಟಾಗ, ಮನುಜರು ಪಶುಪ್ರಾಯರಾಗುವರು. ಬಲವಂತರಿಂದ ಬಲಹೀನರು ಪೀಡಿತರಾಗುವರು. ಅಗ್ನಿಹೋತ್ರಾದಿ ಸತ್ಕಾರ್ಯಗಳು ನಿಂತುಹೋಗುವವು. ಶತ್ರುಗಳು ಪ್ರಜರ ಧನರತ್ನ ತರುಣಿಗಳನ್ನು ದೋಚಿಕೊಳ್ಳುವರು. ಅರಾಜಕದಷ್ಟು ಪಾಪವಿನ್ನೊಂದಿಲ್ಲ. ರಾಜನು ಬಲವಂತನೆನಿಸಲು ಅವನ ಧರ್ಮವೇ ಕಾರಣ. ಸುದುಹವಾದ ಆಕಳನ್ನು ತಿವಿಯುವುದಿಲ್ಲ; ತಪ್ತವಾಗದೆ ಬಾಗುವ ಕನಕಾದಿಗಳನ್ನು ಕಾಸುವುದಿಲ್ಲ. ಏನು ಮಾಡಿದರೂ ಬಾಗದ ಕಟ್ಟಿಗೆಯನ್ನು ಬಾಗಿಸ ಹೋಗುವುದಿಲ್ಲ. ಇಂತು ತಿಳಿದು, ಪ್ರಜರು ಬಲವಂತನಾದ ರಾಜನಿಗೆ ವಿಧೇಯರಾಗಿರಬೇಕು. ರಾಜನೇ ಕಾಪಾಡದಿದ್ದರೆ ಪ್ರಜರಿಗೆ ಧನವಿಲ್ಲ; ದಾರಾ ಪುತ್ರರಿಲ್ಲ. ಪ್ರಜರು ಮೀನುಗಳಂತೆ, ಪರಸ್ಪರ ಭಕ್ಷಣ ನಿರತರಾಗುವರು. ಪ್ರಜಾಪೀಡಕ ಪಾಪಿಗಳೂ ಪರರಿಂದ ಸಂಹರಿಸಲ್ಪಡುವರು. ಅದಾಸರು ದಾಸರಾಗುವರು. ಇಂತಹ ಅನರ್ಥವಾಗಬಾರದೆಂದು ಪ್ರಜರು ಹಿಂದೆ ಮನ್ವಾದಿ ರಾಜರನ್ನು ಆರಿಸಿಕೊಂಡು, ಅವರಂತೆ ನಡೆದು, ಸುಖಶಾಂತಿಗಳಿಂದ ಬಾಳಿದರು. ಪಿತಾಮಹನೇ ಮನುವನ್ನು ರಾಜನಾಗೆಂದು ನಿರ್ಮಿಸಿದನು. ಪಶುಗಳೈವತ್ತಿದ್ದವನಿಂದ ಒಂದನ್ನು, ಕನಕಧಾನ್ಯಗಳ ದಶಮ ಭಾಗವನ್ನು ರಾಜನಿಗೆ ಕಪ್ಪವಾಗಿತ್ತು, ಅವನ ಕೋಶವನ್ನು ಬೆಳೆಸಿದರು. ಆದರಿಂದ ಸೇನಾದುರ್ಗಶಸ್ತ್ರಾದಿಗಳನ್ನು ಸಂಪಾದಿಸಿದ ರಾಜನು ಬಲವಂತನಾಗಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿದನು. ಆದಿ ರಾಜನ ದಿವ್ಯ ತೇಜದಿಂದ ಬೆರಗಾಗಿ, ಬೆದರಿ, ಪಾಪಿಗಳು ಕೂಡ ಪಾಪ ಕರ್ಮಗಳನ್ನು ಬಿಟ್ಟು, ಒಳ್ಳೆಯವರಾದರು.

ಹಿಂದೆ ವಸುಮನಸನೆಂಬ ಕೌಶಲ್ಯ ರಾಜನಿದ್ದನು. ಅವನು ತನ್ನ ಮನೆಗೆ ಬಂದ ಬೃಹಸ್ಪತಿಯನ್ನು ಪೂಜಿಸಿ, "ಪ್ರಜಾಕ್ಷೇಮವೆಂತು? ಅವರು ವೃದ್ಧಿ ಹೊಂದುವುದು ಹೇಗೆ? ಅವರು ನಷ್ಟರಾಗುವುದಾವಾಗ?" ಎಂದು ಕೇಳಿದನು. ದೇವಗುರುವು ಅವನಿಗೆ ರಾಜ ಪೂಜಾಕರ್ತವ್ಯತೆಯನ್ನು ಉಪದೇಶಿಸಿದನು : 'ರಾಜಮೂಲವಾಗಿದೆ ಲೋಕದ ಧರ್ಮವು. ರಾಜನು ಶಿಕ್ಷಿಸುವನೆಂಬ ಭಯದಿಂದಲೇ ಜನರು ತಮ್ಮನ್ನು ತಾವು ತಿಂದು ಹಾಕದಿರುವರು. ಸೂರ್ಯಚಂದ್ರನ ಉದಯವಾಗದಿರೆ ಅಂಧಕಾರ ಕವಿಯುವಂತೆ, ನೀರೇ ಇಲ್ಲದಿರೆ ಮೀನುಗಳು ಸಾಯುವಂತೆ, ರಾಜನೆಂಬ ಶಿಕ್ಷಾರಕ್ಷಾ ದಕ್ಷನಿಲ್ಲದಿರೆ ಲೋಕದ ಪ್ರಜರೆಲ್ಲ ಅಧರ್ಮ ರುಚಿಗಳಾಗಿ, ಅಂಧಂತಮವನ್ನು ಸೇರಿ, ಕೆಡುವಂತಾದೀತು, ಸಂಪೂರ್ಣ ಲೋಕನಾಶವೇ ಆದರೂ ಆದೀತು! ನನ್ನದು ಎದಬ ವೈಯಕ್ತಿಕ ಹಕ್ಕೇ ನಷ್ಟವಾಗಿ, ಲೋಕವೆಲ್ಲ ದಸ್ಯುಪ್ರಾಯವಾಗುವುದು. ಯಾನ, ವಸನ, ಅಲಂಕರಣ, ನಾರೀ, ಮಂದಿರ, ಮುಖ್ಯಸುಂದರ ವಸ್ತುಗಳನ್ನು ಯಾರಿಂದ ಯಾರಾದರೂ ಕಸಿಯುವಂತಾದೀತು ! ರಾಜನೇ ದಂಡಿಸದಿರೆ ಜನರು ಪಿತೃಗುರು ಜನರನ್ನು ಪೋಷಿಸರು ; ಧನಕ್ಕಾಗಿ ಹಿಂಸಿಸುವರು. ಅರ್ಥವಂತರಿಗೆ ವಧ, ಕ್ಲೇಶರೂಪವಾದ ಅನರ್ಥವು ನಿತ್ಯವಾದೀತು ! ಅಕಾಲ ಮೃತ್ಯುವು, ಮಾರಿಕಾದ್ಯುಪದ್ರವ, ಚೋರ ಪೀಡೆಗಳಿಂದ ಪ್ರಜರು ಸರ್ವನಾಶವಾಗಿ, ಪ್ರಳಯವೇ ಬಂದಂತಾಗುವುದು. ಯೋನಿ

ದೋಷವನ್ನು ಗಣಿಸಿದವರು, ವರ್ಣಸಂಕರಕಾರಕರು, ಹುಟ್ಟಿ ಲೋಕವನ್ನು ಹಾಳುಮಾಡಿ, ಹೊಲೆಗಲಸುವರು.

ಯಜ್ಞ ದಕ್ಷಿಣೆಗಳು ನಿಲ್ಲುವವು. ವೇದಪಠನವು ವರ್ಜಿತವಾಗುವುದು. ವಿವಾಹವಿಲ್ಲದೆ ಅಪಹರಣಗಳಾಗುವವು. ಸಮಾಜದ ಕಟ್ಟಳೆಗಳು ಮುರಿಯಲ್ಪಡುವವು. ಜನರು ದಿಕ್ಕೆಟ್ಟು ಹಾಹಾಕಾರಗೈಯುವರು – ಇಂತು ಜಗವೆಲ್ಲವು ನಷ್ಟವಾಗಲು ರಾಜಾಭಾವವೇ ಕಾರಣವಾಗಿರುವುದು. ವಿಪ್ರರು ವೇದಧರ್ಮದೂರರಾಗುವರು. ಸ್ತ್ರೀಯರು ಪತಿನಿಂದಕರು ಜಾರಿಣಿಯರು ಸ್ವೇಚ್ಛಾವರ್ತನರೂ ಆಗುವರು. ಅವರ ಸಂತಾನವು ಅವರೇ ಮೇಲೆನಿಸುವುದು. ವಿದ್ಯಾಪೂರ್ತಿ ಗುರು ಪೂಜೆಗಳು ಮುಳುಗಿಹೋಗುವವು. ಹಂತಕನು, ಚೋರನು, ದುಷ್ಟನು ಆದವರನ್ನು ದಂಡಿಸುವವರಿಲ್ಲದೆ ಹೋಗಿ, ಜನರು ದೇಶಭ್ರಷ್ಟರಾಗಿ ಹೋಗುವರು. ರಾಷ್ಟ್ರದಲ್ಲಿ ದುರ್ಭಿಕ್ಷವು ತಲೆದೋರಿ, ಜನರು ಅನ್ನ ಪಾನಗಳಿಗೂ ಎರವಾಗಿ ಹೋಗುವರು. ಕನಕರಜತಗಳು ಸ್ವಾಪ್ನಪದಾರ್ಥಗಳಾಗುವವು. ಯಾರನ್ನು ಎಂತಹ ಹಿರಿಯರೂ ದಂಡಿಸಲಾರದೇ ನಿಸ್ಸಹಾಯಕರಾಗಿ, ಆಗುವ ಅನರ್ಥವನ್ನು ಸುಮ್ಮನೆ ನೋಡುತ್ತಾ ಅಳುವರು. ಆದುದರಿಂದ ರಾಜನಾದವನು ಧರ್ಮಿಷ್ಠನಾಗಿ, ಇಂತಹ ಅಕಾರ್ಯಗಳಿಗೆ ಆಸ್ಪದವೀಯದೆ, ದಂಡಪಾಣಿಯಂತೆ ದುಷ್ಟಶಿಕ್ಷೆಯನ್ನು ಮಾಡಿದನೆಂದರೆ, ಶಿಷ್ಟರಕ್ಷೆಯು ತನ್ನಿಂದ ತಾನೇ ಆಗುವುದು. ಧರ್ಮವು ಚತುಷ್ಪಾದವಾಗಿ ನಡೆಯುವುದು. ಯಜ್ಞಯಾಗಾದಿಗಳು ನಿರ್ವಿಘ್ನವಾಗುವವು. ವಿದ್ಯಾತಪೋದಾನಗಳು ವೃದ್ಧಿಯಾಗುವವು. ವಾರ್ತಾಕೃಷಿ ವ್ಯಾಪಾರಗಳು ಸಮೃದ್ಧವಾಗುವವು. ರಾಜನಿಲ್ಲದಿರೆ ಸರ್ವಾನರ್ಥ ಪರಂಪರೆಯಾಗುವಂತೆ, ರಾಜನಿರಲು ಸರ್ವಸಂಪತ್ಪರೆಯಾಗುವುದು. ಅಂತಹ ರಾಜನಲ್ಲಿ ಎಂಟು ಜನ ದೇವತೆಗಳ ಸನ್ನಿಧಾನವಿರುವುದು. ಆದುದರಿಂದ ರಾಜನು ಎಲ್ಲರಂತೆ ಮನುಜ ಮಾತ್ರನಲ್ಲವೆಂದರಿತು, ಪ್ರಜರು ಅವನನ್ನು ಗೌರವಿಸಬೇಕು.

ಪಾಪಿಗಳನ್ನು ತನ್ನ ತೇಜದಿಂದ ಸುಡುವಾಗ ಅಗ್ನಿಯು, ಚಾರರಿಂದ ಎಲ್ಲವನ್ನು ನೋಡುತ್ತಾ ಕ್ಷೇಮಂಕರನಾಗುವಾಗ ಸೂರ್ಯನು, ದುಷ್ಟರನ್ನು ಪುತ್ರಪೌತ್ರಮಂತ್ರಿ ಮಿತ್ರರಾದರೂ ಬಿಡದೆ ದಂಡಿಸಿ ಸಂಹರಿಸುವಾಗ ಯಮನು, ಅಧಾರ್ಮಿಕರನ್ನು ನಿಗ್ರಹಿಸಿ ಧಾರ್ಮಿಕರನ್ನು ಅನುಗ್ರಹಿಸುವಾಗ ಧರ್ಮನು, ಧನವನ್ನು ಕಪ್ಪವಾಗಿ ಪಡೆದು ದಾನವಾಗಿ ಕೊಡುವಾಗ ಕುಬೇರನು, ಪ್ರಜರ ಕಾಮಿತಗಳನ್ನು ಅಭಿವರ್ಷಿಸುವಾಗ ವರುಣನು, ವೈಭವದಿಂದ ಮೆರೆದಾಗ ಇಂದ್ರನು, ಗುಪ್ತಚರರಿಂದ ಎಲ್ಲ ಕಡೆ ತಾನೇ ಆದಂತಿರುವಾಗ ವಾಯುವು, ಇಂದ್ರಿಯ ನಿಗ್ರಹ, ಪ್ರಜಾಪಾಲನೆಗಳಲ್ಲಿ ಈಶಾನನು ಆದ ರಾಜನು ಸರ್ವಥಾ ಗೌರವನೀಯನಾಗಿರುವನು. ಉರಿದೆದ್ದ ಅಗ್ನಿಯು ಸ್ವಲ್ಪವಾಗಿ ಉಳಿಸಿದರೂ ಉಳಿಸುವನು; ರಾಜನು ಕ್ರುದ್ಧನಾದರೆ ನಿಶ್ಶೇಷವಾಗಿ ಸುಟ್ಟುಬಿಡುವನು. ಆದುದರಿಂದ ಅವನದಾದ ಕವಡಿಯನ್ನೂ ಕದಿಯಲಾಗದು. ರಾಜವಿತ್ತಾಪಹಾರಿಗಳಿಗೆ ಚಿರನರಕವೇ

ಗತಿ. ರಂಜನದಿಂದ ರಾಜನಾಗಿ, ಭೋಗದಾನಗಳಿಂದ ಭೋಜನಾಗಿ, ವಿವಿಧ ತೇಜದಿಂದ ವಿರಾಟನಾಗಿ, ಕ್ಷತ್ರದಿಂದ ಕಾಪಾಡಿ ಕ್ಷತ್ರಿಯನಾಗಿ, ನರರನ್ನು ಪಾಲಿಸಿ ನೃಪನಾಗಿ ಇರುವ ಪಾಲಕನು – ಕ್ಷತ್ರಿಯನೇ ಆಗಲಿ, ಅಕ್ಷತ್ರಿಯ ಜಾತಿಯವನೇ ಆಗಲಿ, ಗೌರವಪಾತ್ರನಾಗಿರುವನು.

ರಾಜನು ಕೃತಜ್ಞನು, ಪ್ರಾಜ್ಞನು, ದೃಢಭಕ್ತನು; ಜಿತೇಂದ್ರಿಯನು, ಧರ್ಮಸತ್ಯನು, ನೀತಿಚತುರನು ಆದ ಮಂತ್ರಿಗಳನ್ನು ನಿಯಮಿಸಿಕೊಳ್ಳಬೇಕು. ಅಸಹಾಯ ಶೂರನು, ದೃಢಭಕ್ತನು, ಅಕ್ಷುದ್ರನು ಆದ ಸೇನಾನಿಗಳನ್ನು ಪಡೆದಿರಬೇಕು. ರಾಜನು ತಾನು ಧರ್ಮಿಷ್ಠನು, ಸತ್ಯನಿತ್ಯನು, ಭೃತ್ಯವತ್ಸಲನು, ಯಜ್ಞಯಾಗಾದಿ ಪುಣ್ಯನಿರತನು ಆಗಿ ಯಶಃಕಾಂತಿಯಿಂದ ಲೋಕವನ್ನು ಬೆಳಗುವನಾಗಬೇಕು. ರಾಜನು ಮೊದಲು ತನ್ನನ್ನು ತಾನು ದುಷ್ಕಾಮಗಳಿಗೆ ವಶನಾಗದಂತೆ ಕಾಪಾಡಿಕೊಂಡರೆ– ಆಮೇಲೆ ತನ್ನವರನ್ನೂ ಪ್ರಜರನ್ನೂ ರಾಜ್ಯವನ್ನೂ ಕಾಪಾಡಿಕೊಳ್ಳಲು ಅರ್ಹನಾಗುವನು. ಜಿತೇಂದ್ರಿಯ ರಾಜನು ಶತ್ರುಗಳನ್ನು ಗೆಲ್ಲುವನು. ದಾನಶೀಲನು ಭೃತ್ಯಪ್ರಜರನ್ನು ವಶಪಡಿಸಿಡುವನು. ಯಜ್ಞರತನು ಬ್ರಾಹ್ಮಣಾಶೀರ್ವಾದವನ್ನು ಪಡೆದು ಸುಖಿಸುವನು.

ದುರ್ಗ, ಸೀಮಾಂತ, ನಗರ, ಉಪವನ, ಸಂಸ್ಥಾನ, ಗ್ರಾಮ, ಭೃತ್ಯರೆಂಬ ಏಳು ಸ್ಥಲಗಳಲ್ಲಿ ಗುಪ್ತಚಾರರನ್ನಿಟ್ಟು ರಾಜನು, ಅವರ ಮೇಲೆ ಚಾರರನ್ನಿಟ್ಟು, ಜಾಗರೂಕನಾಗಿರಬೇಕು. ಚಾರರು ಕುಲೀನರು, ಭಕ್ತರು, ಕಷ್ಟಸಹಿಷ್ಣುಗಳೂ, ಆಗಿರಬೇಕು. ಕೆಲವರು ಜಡಾಂಧ ಬಧಿರರಂತೆ, ಯತಿಗಳಂತೆ ಸಂಚರಿಸುತ್ತಿರಬೇಕು. ಅವರಿಂದ ತಿಳಿದುದನ್ನು ತಾನು ಆಪ್ತ ವಿಪ್ರ ಮಂತ್ರಿ ಪುತ್ರಸೇನಾನಿಗಳಿಂದ ಕೂಡಿ, ಚನ್ನಾಗಿ ವಿಚಾರಿಸಿ; ಕರ್ತವ್ಯತತ್ಪರನಾಗಬೇಕು. ಯುದ್ಧ ಸಮಯದಲ್ಲಿ ಬಲವಂತನಿಂದ ಸಂಧಿಯನ್ನು, ಸಮಾನನಿಂದ ದಾನಮಾನಗಳನ್ನು, ಬಲಹೀನನಿಂದ ವಿಗ್ರಹವನ್ನು, ಕುಟಿಲನಿಂದ ಭೇದವನ್ನು ನಡೆಸಬೇಕು.

ಯಾನವು ಗುಪ್ತವಾಗಿರಬೇಕು. ಶತ್ರುವು ಮಿತ್ರಹೀನನು, ಬಂಧುವರ್ಜಿತನು, ಅನ್ಯಶತ್ರು ಜಯ ವ್ಯಗ್ರಚಿತ್ತನು, ಅಜಾಗರೂಕನು ಆಗಿರುವಾಗ ದಂಡೆತ್ತಬೇಕು. ತಾನು ಹೊರಟಾಗ ನಗರರಕ್ಷಣೆಯನ್ನೊದಗಿಸಿಟ್ಟು, ಪೃಷ್ಠಬಲವನ್ನು ಕಾದಿಟ್ಟು (Reserve), ಮುನ್ನಡೆಯಬೇಕು. ಪರರಾಜ್ಯವನ್ನು ಶಸ್ತ್ರ, ವಿಷ, ವಹ್ನಿಗಳಿಂದ ಪೀಡಿಸಬೇಕು. ಪರರಾಜನ ಮಂತ್ರಿ, ಪುತ್ರ, ಸೇನಾನಿಗಳಲ್ಲಿ ಅಂತಃಕಲಹವನ್ನು ಪುಟ್ಟಿಸಬೇಕು. ಯುದ್ಧವ್ಯಸನಿಯಾಗದೆ, ಸಾಧ್ಯವಾದಷ್ಟು ಸಾಮ, ದಾನ, ಭೇದಗಳಿಂದಲೇ ಕಾರ್ಯವನ್ನು ಸಾಧಿಸಬೇಕು. ದುಷ್ಟರಿಂದ ಸೆಳೆದ ಧನವನ್ನು ಪೌರರಕ್ಷಣೆಗೆ ಮೀಸಲಾಗಿಡಬೇಕು. ಪುತ್ರಮಿತ್ರರಂತೆ ಪ್ರಜರನ್ನು ನೋಡಿ ಪಾಲಿಸುತ್ತಾ, ವ್ಯವಹಾರದಲ್ಲಿ ಮಾತ್ರ ಧರ್ಮಹಾನಿಯಾಗದಂತೆ, ಉಭಯರನ್ನೂ ಸಮಾನವಾಗಿ ಕಾಣಬೇಕು. ಅರ್ಥಿಪ್ರತ್ಯರ್ಥಿ ವಾಕ್ಯ ವಿಚಾರಗಳಲ್ಲಿ ಕುಶಲರಾದ ಪಂಡಿತರಿಂದ ಕೂಡಿ ರಾಜನು ಕಾರ್ಯ ನಿಶ್ಚಯವನ್ನು ಕೈಕೊಳ್ಳಬೇಕು. ಆಯವ್ಯಯ ವಿಚಾರಕ್ಕಾಗಿ, ಖಣಿಗಳಲ್ಲಿಯು, ಲವಣೋತ್ಪತ್ತಿ

ಸ್ಥಾನಗಳಲ್ಲಿಯು, ಧಾನ್ಯಾದಿ ಕ್ರಯಸ್ಥಾನಗಳಲ್ಲಿಯು, ನದೀತರಣಗಳಲ್ಲಿಯು, ರೇವುಗಳಲ್ಲಿಯು, ಅರಣ್ಯಕ ಪರಿಸರಗಳಲ್ಲಿಯು, ಆಪ್ತ ಪುರುಷರನ್ನಿಟ್ಟು ಸುಂಕವನ್ನು ವಸೂಲು ಮಾಡಬೇಕು.

ರಾಜನಿಗೆ ದಂಡ ಸಮಾನ ಧರ್ಮವಿಲ್ಲ. ಶತ್ರುಬಾಧೆ ಹೆಚ್ಚಾದರೆ ಮಾರ್ಗಗಳನ್ನು ನಿರೋಧಿಸಬೇಕು; ಧನಧಾನ್ಯಗಳವರಿಗೆ ಸಿಗದಂತೆ, ಹಾಲು ಮೊಸರು ಸಿಗದಂತೇ ಹಳ್ಳಿಯ ಜನರನ್ನೂ, ಧನಿಕರನ್ನೂ ದುರ್ಗಗಳಲ್ಲಿ ನಿಲ್ಲಿಸಿ, ಪೋಷಿಸಬೇಕು. ಸಸ್ಯವನ್ನು ಶತ್ರುಗಳಿಗೆ ಸಿಗದಂತೆ ತಾನೇ ಹರಿಸಿ ಅದರ ಬೆಲೆಯನ್ನು ಭೂಸ್ವಾಮಿಗಳಿಗೆ ಕೊಡಬೇಕು. ಧಾನ್ಯಾದಿಗಳನ್ನು ರಕ್ಷಿಸಿ ಹರಿಸಲಾಗದಿದ್ದರೆ, ಶತ್ರುಗಳಿಗೆ ಸಿಗದಂತೆ ಸುಟ್ಟು ನಾಶಪಡಿಸಬೇಕು. ನದಿಗಳನ್ನು ದಾಟಿ ಬರದಂತೆ ಸೇತುವೆಗಳನ್ನು ಕೆಡಹಿ ಸುಡಬೇಕು. ಕೆರೆಯ ನೀರನ್ನು ತೂಬು ತೆರೆದು ಹರಿಸಿಬಿಡಬೇಕು ; ಅದಾಗದಿರೆ ನೀರನ್ನು ವಿಷದೂಷಿತ ವನ್ನಾಗಿಸಬೇಕು. ತಾನು ಬಲವದ್ದುರ್ಗದಲ್ಲಿರುತ್ತಾ, ಶತ್ರು – ಶತ್ರುಗಳಿಂದ ಮೈತ್ರಿಯನ್ನು ಬೆಳೆಸಿ, ಅವರು ಅವನ ದೇಶವನ್ನು ಮುತ್ತುವಂತೆ ಮಾಡಿ, ಶತ್ರುವಿನನ್ನು ಹಿಂದಿರುಗಿ ಹೋಗುವಂತೆ ಮಾಡಬೇಕು. ಕ್ಷುದ್ರದುರ್ಗಗಳನ್ನು ತಾನಾಗಿ ಒಡೆಸಿ, ಕ್ಷುದ್ರವೃಕ್ಷಗಳನ್ನು ಕೆಡಿಸಿ, ಶತ್ರುಗಳಿಗೆ ಆಧಾರವಾಗದಂತೆ ನೋಡಿಕೊಳ್ಳಬೇಕು. ದೇವಾಲಯ ವೃಕ್ಷಗಳನ್ನು ಫಲವೃಕ್ಷಗಳನ್ನು ಬಿಟ್ಟು, ಮಿಕ್ಕವುಗಳ ಕೊಂಬೆಗಳನ್ನು ಕಡಿಸಿ ಬಿಡಬೇಕು. ಬುರುಜು ಗಳನ್ನೂ, ಗೋಪುರಗಳನ್ನೂ ಸರಿ ಮಾಡಿಸಿ, ಕಂದಕಗಳಲ್ಲಿ ತುಂಬುವಂತೆ ನೀರು ಬಿಡಬೇಕು. ಅದರಡಿಯಲ್ಲಿ ಶೂಲಗಳನ್ನು ನೆಡಿಸಿ, ನೀರಿನಲ್ಲಿ ಮೊಸಳೆಗಳನ್ನು ಬಿಡಬೇಕು. ಶತಘ್ನಗಳನ್ನು ಏರಿಸಿ, ದ್ವಾರಗಳಲ್ಲಿ ಶಿಲಾಯಂತ್ರಗಳನ್ನು ಸಜ್ಜುಗೊಳಿಸಬೇಕು. ಊರಲ್ಲಿಯ ಬಾವಿಗಳ ನೀರನ್ನು ವಿಷದೂಷಿತವಾಗದಂತೆ ರಕ್ಷಿಸಬೇಕು. ರಾತ್ರಿಯಲ್ಲಿಯೇ ಅಡಿಗೆ ಮಾಡಿ, ಕೆಂಡವನ್ನು ಆರಿಸಿಡುವಂತೆ, ಪ್ರಜರಿಗಾಜ್ಞಾಪಿಸಬೇಕು. ಹಗಲು ಬೆಂಕಿಯನ್ನು ಹೊತ್ತಿಸುವ ಪೌರರನ್ನು ರಾಜದ್ರೋಹಿಗಳೆಂದು ತಿಳಿದು, ಶಿಕ್ಷಿಸಬೇಕು. ಅದರಿಂದ ಪುರವು ವಹ್ನಿಗಾಹುತಿಯಾಗದಂತೆ, ರಕ್ಷಿತವಾಗುವುದು. ಅಗ್ನಿ ಹೋತ್ರವನ್ನು ಬಿಟ್ಟು ಮಿಕ್ಕ ಅಗ್ನಿಗಳು ಹಗಲು ಉರಿಸದಂತೆ ನೋಡಿಕೊಳ್ಳಬೇಕು.

ಭಿಕ್ಷುಕ, ಬಂಡಿಗಳಲ್ಲಿ ದಿನಸನ್ನು ಮಾರುವವ, ನಪುಂಸಕ, ಮತ್ತ, ಹುಚ್ಚ, ನಟ, ವಿಟ ಮುಂತಾದವರನ್ನು ಊರ ಹೊರಗೆ ಹಳ್ಳಿಗಳಿಗೆ ಕಳಿಸಬೇಕು. ರಾಜಮಾರ್ಗಗಳು ವಿಶಾಲವಾಗಿದ್ದು, ಅಲ್ಲಲ್ಲಿ ಅರವಟ್ಟಿಗೆಗಳನ್ನು ನಿಲ್ಲಿಸಬೇಕು. ಭಾಂಡಾಗಾರ, ಯೋಧಾಗಾರ, ಆಯುಧಾಗಾರ, ರಥಶಾಲೆ, ಗಜತುರಗ ಶಾಲೆಗಳೇ ಮುಂತಾದವು ತುಂಬಿ ಬಲವಾಗಿರಬೇಕು. ಪರಿಖಾ ಪ್ರತೋಲೀಸ್ಥಲಗಳನ್ನು , ರಹಸ್ಯದ್ವಾರಗಳನ್ನು , ಅಂತಃಪುರವನ್ನು ಭದ್ರವಾಗಿ ಕಾಪಾಡುತ್ತಾ, ಅದರ ಮರ್ಮಗಳನ್ನು ರಹಸ್ಯ ವಾಗಿಡಬೇಕು. ತೈಲ, ಮಧು, ಘೃತ, ಓಷಧಿ, ಧಾನ್ಯಾದಿಗಳನ್ನು ನಗರದ ರಹಸ್ಯ ಭೂಗೃಹಗಳಲ್ಲಿ ಹೇರಳವಾಗಿ ಸಂಗ್ರಹಿಸಡಬೇಕು. ಇದ್ದಿಲು, ಊಟದೆಲೆ, ಕುಶ, ಹುಲ್ಲು, ಕಟ್ಟಿಗೆ, ಇವುಗಳನ್ನೂ ಕೂಡಿಟ್ಟಿರಬೇಕು. ವಿಷ, ಶಲ್ಯ , ರೋಗ, ಕೃತ್ಯಗಳನ್ನು

ನಿವಾರಿಸುವ ವೈದ್ಯರನ್ನು ಸಿದ್ಧವಾಗಿಟ್ಟಿರಬೇಕು. ಸಂಶಯಾಸ್ಪದರಾದವರನ್ನು ಬಂಧಿಸಿ ಇಡಬೇಕು. ಭೃತ್ಯ ಮಂತ್ರಿಗಳನ್ನು, ವಿನೋದಪಡಿಸಿದ ನಟರನ್ನು, ಜಯವಾದ ಮೇಲೆ, ವಿವಿಧಾ ಮೌಲ್ಯ ವಸ್ತುಗಳನ್ನಿತ್ತು ಸತ್ಕರಿಸಬೇಕು.

ರಾಜವೆಂಬ ದೇಹಕ್ಕೆ ತಾನು, ಮಂತ್ರಿ, ತನ್ನ ಮಗ, ಕೋಶ, ಮಿತ್ರ, ಪುರ, ಗ್ರಾಮ ಇವು ಏಳು ಅಂಗಗಳು; ಸಂಧಿ, ಯಾನ, ವಿಗ್ರಹ, ದ್ವೈಧೀಭಾವಗಳನ್ನು ಸಮಯವನ್ನು ನೋಡಿ ಪ್ರಯೋಗಿಸುವ ರಾಜನು ಕುಶಲನೆನಿಸುವನು. ಅವನ ಅಂಗಸಪ್ತಕವು ಸುಖವಾಗಿರುವುದು.

ರಾಜನಿಗೆ ಯಜ್ಞದಾನ ತಪಃಕಾರ್ಯಗಳಿಗೂ ಹೆಚ್ಚು ಪುಣ್ಯಪ್ರದವಾದುದೆಂದರೆ, ಪ್ರಜಾಪಾಲನವೇ. ಪ್ರಜರನ್ನು ಧರ್ಮದಲ್ಲಿಟ್ಟು, ನಡೆಸುವ ರಾಜನು ಇಹಪರ ಶ್ರೇಯಃ ಪಾತ್ರನಾಗುವನು.

ಧರ್ಮರಾಜ! ವರ್ಣಧರ್ಮ ಮರ್ಯಾದೆಯನ್ನು ಚನ್ನಾಗಿ ರಕ್ಷಿಸುವ ರಾಜನು ಭಗವತ್ಪ್ರೀತಿಯನ್ನು ಪಡೆಯುವನು. ಕಾಲವು ರಾಜನನ್ನು ನಡೆಸುವುದಿಲ್ಲ. ರಾಜನೇ ಕಾಲವನ್ನು ನಡೆಸುವನು. ಧರ್ಮಿಷ್ಠನಾದ ರಾಜನಿಂದ ಕಲಿಯುಗವು ಕೂಡ, ಕೃತಯುಗದಂತಾಗುವುದು. ಕೃತಯುಗದಲ್ಲಿ ಜನರು ಅಧರ್ಮ ರುಚಿಗಳಲ್ಲ. ಅವರ ಯೋಗಕ್ಷೇಮಗಳನ್ನು ಯಾವ ಕುಂದಿಲ್ಲದೆ ರಕ್ಷಿಸುವ ಹೊಣೆ ಹೊತ್ತ ರಾಜನು ಧರ್ಮ ತತ್ಪರನಾಗಿದ್ದನು. ಋತು ಧರ್ಮಗಳು ವ್ಯತ್ಯಸ್ತವಾಗುತ್ತಿದ್ದಿಲ್ಲ. ಆಧಿವ್ಯಾಧಿಗಳ ಉಪಟಳವಿದ್ದಿಲ್ಲ. ಅಕಾಲಮರಣಗಳಿದ್ದಿಲ್ಲ. ಅಂತೆಯೇ ಅಕಾಲ ವಿಧವೆಯರೂ ಇದ್ದಿಲ್ಲ. ಕೃಪಣರಿದ್ದಿಲ್ಲ. ಪೃಥಿವಿಯಲ್ಲಿ ಬೆಳೆ ಉಳದೆ ಇದ್ದರೂ, ಸಮೃದ್ಧವಾಗಿ ಬೆಳೆಯುತ್ತಿತ್ತು. ತ್ವಕ್ (ಕಬ್ಬು) ಪತ್ರ, ಪುಷ್ಪ ಧಾನ್ಯಗಳಲ್ಲಿ ರಸವೀರ್ಯಗಳು ತುಂಬಿದ್ದವು. ಇಷ್ಟಿರಲು ರಾಜನು ದಂಡಧರನಾಗಿ ಚೋರರನ್ನು, ದುಷ್ಟರನ್ನು, ಅಧರ್ಮರತರನ್ನು, ಆಲಸರನ್ನು ಶಾಸಿಸುತ್ತಿದ್ದುದೇ ಕಾರಣ.

ತ್ರೇತಾಯುಗದಲ್ಲಿ ಧರ್ಮಪಾದಗಳಾದ ಸತ್ಯ, ಶೌಚ, ದಯಾ, ತಪಸ್ಸುಗಳ ಒಂದಂಶವು ಕಡಿಮೆಯಾಯಿತು. ಭೂಮಿಯು ಉತ್ತೇ ಬೆಳೆಯಿತು. ದ್ವಾಪರದಲ್ಲಿ ಎರಡು ಪಾದಧರ್ಮಾಂಶಗಳು ಮಾತ್ರ ಉಳಿದವು. ಪೃಥಿವಿ ಫಲಶಕ್ತಿಯೂ ಅರ್ಧವಾಯಿತು. ದಂಡನೀತಿಯನ್ನು ಅವಗಣಿಸಿ, ಧನಲೋಭದಿಂದ ರಾಜನು ಕಪ್ಪಗಳನ್ನು ಹೇರಿ, ಪ್ರಜರನ್ನು ಪೀಡಿಸಿದಾಗ, ಧರ್ಮದ ಏಕಪಾದ ಮಾತ್ರ ಉಳಿಯಿತು. ಅನೃತ, ದಂಭ, ಹಿಂಸೆ, ಮದಗಳಿಂದ ಧರ್ಮ ಪಾದಗಳು ಕೆಟ್ಟವು. ಕಲಿಯುಗವು ಪ್ರಬಲವಾದಂತೆ ಅಧರ್ಮವು ಹೆಚ್ಚಾಗುವುದು. ಸರ್ವರೂ ಸ್ವಧರ್ಮವನ್ನು ಬಿಡುವರು. ಶೂದ್ರರು ಸನ್ಯಾಸಿಗಳಾಗಿ ಭಿಕ್ಷೆ ಬೇಡುವರು. ವಿಪ್ರರು ನೀಚ ಸೇವೆಗೆ ಸಿದ್ಧರಾಗುವರು. ವರ್ಣಸಂಕರವಾಗಿ, ವೈದಿಕ ಧರ್ಮಗಳಾದ ಯಜ್ಞ ತಪೋದಾನಗಳು ನಿಂತುಹೋಗುವವು. ಮನುಜರ ಬಣ್ಣ, ಸ್ವರ, ಮನಸ್ಸು, ಆಚಾರ, ವಿಚಾರಗಳು ಕೆಡುವವು. ವ್ಯಾಧಿಗಳು ಹೆಚ್ಚಾಗುವವು. ಧಾನ್ಯಾದಿಗಳು ನೀರಸ, ನಿರ್ವೀರ್ಯವಾಗುವವು. ವಿಧವೆಯರು ವಿಪುಲರಾಗುವರು. ಪ್ರಜರು ನಿಂದ್ಯ

ಕಾರ್ಯಗಳಿಗೆ ಹೇಸದಿರುವರು. ಮಳೆ ಬರದೆ ಕೆಲವೆಡೆ ಬೆಳೆ ಕೆಟ್ಟರೆ, ಕೆಲವೆಡೆ ಬಂದು ಕೆಡುವುದು. ರಾಜನು ಪ್ರಜರನ್ನು ದುಷ್ಟಪೀಡೆಯಿಂದ ರಕ್ಷಿಸದಾಗುವನು. ಅವನೂ ದಂಡ್ಯನಾದ ಚೋರನಂತೆ ಕೇವಲ ಪರದ್ರವ್ಯವಾಂಛಕನಾಗಿರುವನು. ಇಂತು ಧರ್ಮವಂಚಕನಾದ ರಾಜನು ಅಥವಾ ಪಾಲಕನಾರೇ ಆಗಲಿ ಶಾಶ್ವತ ನರಕವನ್ನು ಹೊಂದುವನು.

ಆದುದರಿಂದ ಧರ್ಮರಾಜ! ದಂಡನೀತಿಯನ್ನು ಅನುಸರಿಸು! ಪ್ರಜರನ್ನು ನೀತಿಯಿಂದ ಪಾಲಿಸು! ನಿನಗೆ ದುಷ್ಟಕೌರವವಧೆಯಿಂದ ಪಾಪವಿಲ್ಲ; ಪ್ರತ್ಯುತ ಪುಣ್ಯವೇ ಬಂದಿದೆ. ಆಳು ಸಾಮ್ರಾಜ್ಯವನ್ನು! ಸುಖಿಯಾಗಿರು!"

ಇಂತು ನಿರೂಪಿಸಿದ ತಾತನಿಗೆ ಧರ್ಮಜನಿಂತೆಂದನು: 'ತಾತ! ರಾಜನೆಂತು ನಡೆದರೆ ಸುಖಿಸುವನು ? ಇಹಪರಶ್ರೇಯವೆಂತಾಗುವುದು ? ' ಇಂತು ಕೇಳಿದ ಧರ್ಮಜನಿಗೆ ಭೀಷ್ಮನಿಂತೆಂದನು: 'ರಾಜನ್! ಮೂವತ್ತಾರು ಗುಣಗಳಿವೆ. ಅವು ಗುಣವಿಶೇಷವಾಗಿ, ಫಲಾಧಿಕ್ಯ ಕಾರಣವಾಗಬೇಕಾದರೆ, ಮತ್ತೆ ಮೂವತ್ತಾರು ಗುಣಗಳಿಂದ ಜೋಡಾಗಿರಬೇಕು. ಆ ಜತೆಗಳನ್ನು ನಿರೂಪಿಸುವೆನು: ಕೇಳು ! (1) ಧರ್ಮವನ್ನು ರಾಗ ದ್ವೇಷ ಹೀನನಾಗಿ ಮಾಡಬೇಕು. (2) ಸ್ನೇಹ ಬೆಳೆಸಬೇಕು ; ಲೋಭದಿಂದಲ್ಲದೆ ಪರಲೋಕಕ್ಕಾಗಿ. (3) ಧನವನ್ನು ನಿಷ್ಠುರನಾಗದೆ ಸಂಪಾದಿಸಬೇಕು. (4) ಇಂದ್ರಿಯ ಪ್ರೀತಿಯನ್ನು ಧರ್ಮಾರ್ಥಗಳನ್ನು ಕೆಡಿಸದೆ ಪಡೆಯಬೇಕು. (5) ದೀನನಾಗದೆ ಪ್ರಿಯವನ್ನು ನುಡಿಯಬೇಕು. (6) ಹೊಗಳಿಕೊಳ್ಳದೆ, ಶೂರನಾಗಿರಬೇಕು. (7) ದಾನ ಕೊಡಬೇಕು, ಅಪಾತ್ರರಿಗಲ್ಲ. (8) ಪಂಡಿತನಾಗಬೇಕು, ಕಟು ವಚನನಾಗಬಾರದು. (9) ಸಂಧಿ ಬೆಳೆಸಬೇಕು, ಅನಾರ್ಯರಿಂದಲ್ಲ. (10) ಯುದ್ಧವನ್ನು (ಕ್ಷತ್ರಿಯನು) ಮಾಡಬೇಕು, ತಾನಾಗಿ ಏರಿಹೋಗಿ ಬಂಧುಗಳಿಂದಲ್ಲ. (11) ಭೃತ್ಯಚಾರರನ್ನಿಡಬೇಕು, ದಂಡಿಸಂಬಳವಿತ್ತು. (12) ಕೆಲಸ ಮಾಡಿಸಿಕೋಬೇಕು, ಪೀಡಿಸಿ ಅಲ್ಲ. (13) ಮಹತ್ತ ಯೋಜನವನ್ನು ತಿಳಿಸಿಕೊಡಬೇಕು. ದುಷ್ಟರಿಗಲ್ಲ. (14) ಕೇಳುವವರಿದ್ದರೆ ಗುಣಗಳನ್ನು ಹೇಳಬೇಕು. ತನ್ನ ಗುಣವನ್ನಲ್ಲ. (15) ದಾನ ಕೊಡಬೇಕು, ಅಸಾಧು ಜನರಿಗಲ್ಲ. (16) ಆಶ್ರಯಿಸಬೇಕು, ಕೀಳು ಜನರನ್ನಲ್ಲ. (17) ದಂಡಿಸಬೇಕು, ಚನ್ನಾಗಿ ವಿಚಾರಿಸಿ. (18) ಪ್ರಕಾಶಪಡಿಸಬೇಕು, ಮಂತ್ರವನ್ನಲ್ಲ. (19) ನೀಡಬೇಕು, ಲೋಭಿಗಳಿಗಲ್ಲ. (20) ವಿಶ್ವಾಸವಿಡಬೇಕು, ಕೇಡೆಣಿಸುವವರಲ್ಲಲ್ಲ. (21) ಮೆರೆಯಬೇಕು, ಅಂತಃಪುರವನಿತೆಯರನ್ನು ಬಚ್ಚಿಟ್ಟು. (22) ದುಷ್ಟಕಠಿನನಾಗಿರಬೇಕು, ಧರ್ಮವನ್ನು ಬಿಟ್ಟಲ್ಲ. (23) ತರುಣಿಯರ ಕೂಡಿರಬಹುದು, ಅತಿಯಾಗಲ್ಲ. (24) ಉಣ್ಣಬೇಕು, ಅಹಿತವನ್ನಲ್ಲ. (25) ಮಾನ್ಯರನ್ನು ಪೂಜಿಸಬೇಕು, ಅಹಂಕಾರದಿಂದಲ್ಲ. (26) ಗುರು ಸೇವೆ ಮಾಡಬೇಕು, ಕಪಟವನ್ನು ಬಿಟ್ಟು. (27) ದೇವತೆಗಳನ್ನು ಅರ್ಚಿಸಬೇಕು, ಹೇರಳ ವಾಗಿ ಹೆರರು ಮೆಚ್ಚಲಲ್ಲ. (28) ಸಂಪತ್ತನ್ನು ಪಡೆಯಬೇಕು, ಕ್ಷುದ್ರಮಾರ್ಗದಿಂದಲ್ಲ. (29) ಗುರು ಹಿರಿಯರನ್ನು ಸೇವಿಸಬೇಕು. (30) ಸಮರ್ಥನಾಗಿರಬೇಕು. ಕಾಲಾ

ಕಾಲಗಳನ್ನರಿತು. (31) ಒಳ್ಳೆಯ ವಚನವಾಡಬೇಕು. ಕೊಟ್ಟು ತಣಿಸಿ. (32) ಅನುಗ್ರಹಿಸಬೇಕು, ಆಮೇಲೆ ಆಕ್ಷೇಪಿಸದೆ. (33) ಯುದ್ಧಾದಿಗಳಲ್ಲಿ ಹೊಡೆಯಬೇಕು. ಮಿತ್ರಾ-ಮಿತ್ರರನ್ನರಿತು. (34) ಕೊಲ್ಲಬೇಕು, ಶತ್ರುಗಳನ್ನು ಕೊಂದ ಮೇಲೆ ಅಳಬಾರದು. ಶತ್ರು ಬಂಧುಗಳ ಕಣ್ಣೀರನ್ನು ಒರೆಸಬೇಕು. (35) ಸಿಟ್ಟಾಗಬೇಕು, ಕಾರಣವಿದ್ದರೆ. (36) ಮೃದುವಾಗಿರಬೇಕು. ಅಪಕಾರಿಗಳಿಗಲ್ಲ.

ಧರ್ಮರಾಜ ! ಈ ಗುಣಗಳನ್ನು ಸಂಪಾದಿಸು ! ರಾಜ್ಯವನ್ನಾಳು ! ಸುಖಪಡುವೆ ! ಇಂತಹ ಗುಣಗಳುಳ್ಳ ರಾಜನಿಗೆ ಇಹ ಪರಸುಖಗಳು ತಾವಾಗಿ ಬರುತ್ತವೆ" ಎಂದ ಭೀಷ್ಮನನ್ನು ನೋಡಿ, ವಂದಿಸಿ, ಧರ್ಮರಾಜನು ಮತ್ತೆ ಕೇಳಿದನು: 'ಪ್ರಜಾಶಾಸಕನಾದ ರಾಜನು ಮನಶ್ಚಿಂತೆಯಿಂದ ಮುಕ್ತನಾಗಿ ಧರ್ಮವನ್ನೂ ಕೆಡಿಸದೆ, ದಂಡನೀತಿಯಿಂದ ಪಾಲಿಸುವುದೆಂತು ?' ಭೀಷ್ಮನಿಂತೆಂದನು: 'ಧರ್ಮಮರ್ಮವನ್ನು ವಿಸ್ತಾರವಾಗಿ ಪ್ರಸ್ತಾಪಿಸಲು ಆರಿಗೂ ಅಳವಲ್ಲ. ಧರ್ಮನಿಷ್ಠರು, ವೇದಚತುರರು, ದೇವವ್ರತನಿರರೂ ಆದ ವಿಪ್ರೋತ್ತಮರನ್ನರಿತು - ಪೂಜಿಸಿ, ಕರ್ತವ್ಯವನ್ನು ಪ್ರಶ್ನಿಸಿ ತಿಳಿ! ಅವರ ನುಡಿಯಂತೆ ನಡೆ ! ಸ್ವಸ್ತಿವಾಚನವನ್ನು ನಿರ್ವರ್ತಿಸಿ, ದ್ವಿಜರ ಜಯಾಶೀರ್ವಾದಗಳನ್ನು ಪಡೆ! ಕಾಮ, ಕ್ರೋಧಗಳಿಗೆ ವಶನಾಗದೆ, ತ್ರಿಕರಣ ಶುದ್ಧಿಯಿಂದ, ಶುದ್ಧರಾದ ವಿಪ್ರರು ಉಪದೇಶಿಸಿದಂತೆ ರಾಜಕಾರ್ಯಗಳನ್ನು ನಿರ್ವಹಿಸು ! ಅಪ್ರಮತ್ತನಾಗಿರು ! ಕಾಮಕ್ರೋಧವಶನಾದ ರಾಜನಿಂದ ಅರ್ಥಧರ್ಮಗಳು ದೂರವಾಗುವವು. ನಿನ್ನ ಅರ್ಥಕಾರ್ಯಗಳಲ್ಲಿ ಅಲೋಭಿಗಳೂ, ಬುದ್ಧಿವಂತರೂ ಆದವರನ್ನು ನಿಯೋಜಿಸು ! ಕಾಮಿಯನ್ನು ಕ್ರೋಧಿಯನ್ನು ನಿಯೋಗಿಸಿದರೆ, ಅವರಿಂದ ಪ್ರಜರು ಪೀಡಿತರಾಗಿ, ರಾಜನನ್ನೇ ದ್ವೇಷಿಸುವರು. ಪ್ರಜರಿಂದ ಆರನೆಯ ಒಂದು ಭಾಗ ಧನಾದಿ ಕಪ್ಪವನ್ನು ಪಡೆದು ರಾಜನು ದಂಡದಿಂದ ದುಷ್ಟರನ್ನು ಶಾಸಿಸುವ ಹೊಣೆ ಹೊತ್ತಿರುವನು. ರಕ್ಷಕನು, ದುಷ್ಟಶಿಕ್ಷಕನು ; ದಾನರತನು, ಧರ್ಮಯುತನು, ಕಾಮಕ್ರೋಧದ್ವೇಷ ಹಿಂಸಾವಿದೂರನು, ಉದಾರನೂ, ಆದ ರಾಜನನ್ನು ಪ್ರಜರು ಪ್ರೀತಿಸುವರು. ಲೋಭವೆಂಬ ಒಂದೇ ದುರ್ಗುಣವು ಎಲ್ಲ ಸುಗುಣಗಳನ್ನೂ ಮರೆ ಮಾಡಿ ಕೆಡಿಸುವುದು. ಶಾಸ್ತ್ರವಿಹಿತವಲ್ಲದ ಕಪ್ಪ ಕಾಣಿಕೆಗಳನ್ನು ಹೇರಿ, ಪ್ರಜರ ರಕ್ತವನ್ನು ಹೀರುವ ರಾಜಪುರುಷನು ದುಷ್ಟವ್ಯಾಘ್ರನಂತೆ ವಧ್ಯನೇ ಸರಿ !

ಹಾಲಿದೆ ಎಂದು ಹುದುಗನ್ನು ಕೊಯ್ದವನಂತೆ (ಕಪ್ಪ) ಧನಕ್ಕಾಗಿ ಪ್ರಜರನ್ನು ಪೀಡಿಸುವ ರಾಜನೂ ಮೂರ್ಖನೆನಿಸುವನು. ಆಕಳನ್ನು ಸೇವಿಸಿ ಹಾಲು ಪಡೆದವನಂತೆ, ಧರ್ಮದಿಂದ ಪಾಲಿಸಿ, ಪ್ರಜರಿಂದ ಧನವನ್ನು ಮಿತವಾಗಿ ಷಡ್ಭಾಗಕ್ಕೆ ಮೀರದಂತೆ ಪೊಂದಿದ ರಾಜನು ಸುಖಿಸುವನು. ಚನ್ನಾಗಿ ರಕ್ಷಿತವಾದ ರಾಜ್ಯಧೇನುವು, ಧಾನ್ಯಹಿರಣ್ಯ, ರತ್ನ, ವಸ್ತ್ರಗಳನ್ನು ಕರೆದು, ತೃಪ್ತಿಪಡಿಸುವುದು, ಮಾಲಾಕಾರನಂತೆ ಪುಷ್ಪವನ್ನು ಗ್ರಹಿಸಿ, ಗಿಡವನ್ನು ಬೆಳೆಸಬೇಕಾಗಲಿ, ಅಂಗಾರಕನಂತೆ ಬೇರುಕಿತ್ತು ಕಟ್ಟಿಗೆ ಸುಟ್ಟು ನಾಶಪಡಿಸಬಾರದು. ಪರರಾಜೋಪದ್ರವವು ಉಂಟಾಗಲು, ಸಾಮದಿಂದಲೇ

ಸಮರ್ಥರಾದ ಪ್ರಜರಿಂದ ಸಕಲ ಧನಧಾನ್ಯಾದಿ ಸಾಮಗ್ರಿಯನ್ನು ಪಡೆಯಬೇಕು; ಧನವಂತನೆಂದು ವಿಪ್ರನಿಂದ ಧನವನ್ನು ಕಸಿದರೆ, ಅದು ರಾಜಗೃಹ (ವ್ರತ, ಪಿತೃ)ವನ್ನು ಬೆಂಕಿಯಿಂತೆ ಸುಟ್ಟು ನಾಶಪಡಿಸುವುದು; ಅಂತಾದ ಮೇಲೆ, ಮಧ್ಯಮರಿಂದಲು ಧನವನ್ನು ಕಸಿದ ರಾಜನು ಉಭಯಲೋಕಗಳಿಗೂ ಕೆಡುವನು.

ಇಂತು ಧರ್ಮದಿಂದ ಪ್ರಜರನ್ನು ಪಾಲಿಸು! ಯುಧಿಷ್ಠಿರ! ನಿನ್ನ ಮನಶ್ಚಿಂತೆಗಳೆಲ್ಲವೂ ಮಾಯವಾಗುವವು. ಧರ್ಮರಕ್ಷಕನಾದ ನಿನಗೆ ಸುಖಶಾಂತಿಗಳು ಕೈಗೂಡುವವು. ರಕ್ಷಕನಾದ ರಾಜನು ದುಷ್ಟ ಶಿಕ್ಷಕನಾಗದೆ ವಿಧಿಯಿಲ್ಲ. ಒಂದು ದಿನದ ಪ್ರಜಾಪಾಲನ ಧರ್ಮವು ಕೂಡ, ಹತ್ತು ಸಾವಿರ ವರ್ಷಗಳ ಸ್ವರ್ಗಸುಖಕ್ಕೆ ಕಾರಣವಾಗಿದೆ. ಪ್ರಜಾರಕ್ಷಣೆ ಮಾಡದ ಒಂದು ದಿನದ ಪಾಪವು ಕೂಡ, ಹತ್ತು ಸಾವಿರ ವರ್ಷಗಳ ನರಕ ದುಃಖಕ್ಕೆ ಕಾರಣವಾಗಿದೆ. ಪಾಲನದಿಂದ ಉಂಟಾಗುವ ಪುಣ್ಯವು ಯಜ್ಞದಾನ ತಪೋ ವೇದಾಧ್ಯಯನಗಳಿಂದ ಬರುವ ಸುಖಲೋಕಗಳನ್ನು ತಂದುಕೊಡಲು ಸಮರ್ಥವಾಗಿದೆ. ಧರ್ಮರಾಜ! ನೋಡು ಪಾಲನ ಮಹಿಮೆಯನ್ನು! ನೋಡು ಅದನ್ನು ನಡೆಸುವ ದಂಡ ನೀತಿಯ ಮಹಿಮೆಯನ್ನು! ಪಾಲಿಸು ರಾಜ್ಯವನ್ನು! ಶಿಕ್ಷಿಸು ದುಷ್ಟರನ್ನು! ಯಜ್ಞಗಳಿಂದ ಇಂದ್ರಾದಿ ದೇವತೆಗಳನ್ನು ತೃಪ್ತಿಪಡಿಸು! ಇಷ್ಟಕಾಮಿತಗಳನ್ನಿತ್ತು ಸುಹೃದ್ಬಂಧುಜನರನ್ನು ಮೋದ ಪಡಿಸು! ನೀನೂ ಸುಖಿಸು! ದುಷ್ಟ ಶಿಕ್ಷಣೆ, ಶಿಷ್ಟರಕ್ಷಣೆಗಳನ್ನು ಬಿಡದೆ ನಡೆಸು! ಸತ್ ಪ್ರಜಾರಕ್ಷಣಕ್ಕಾಗಿ, ದುಷ್ಟ ಶಿಕ್ಷಣವನ್ನು ಮಾಡದ ರಾಜಪುರುಷನಿಗೆ ಸುಖವಿಲ್ಲ; ಸ್ವರ್ಗವೂ ಇಲ್ಲ; ಮೋಕ್ಷವಂತೂ ಮೊದಲೇ ಇಲ್ಲ.

## ೧೩. ಬ್ರಹ್ಮಕ್ಷತ್ರ ಸೌಹಾರ್ದ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: ‘ ಭೀಷ್ಮನು ಧರ್ಮರಾಜನಿಗೆ ವರ್ಣಾಶ್ರಮ ಧರ್ಮಗಳನ್ನು ನಿರೂಪಿಸುತ್ತಾ ಪುರೂರವ ಮಾತರಿಶ್ವರ ಸಂವಾದವನ್ನು ಪೇಳಿದನು: “ಪುರೂರವನು ಬ್ರಾಹ್ಮಣನು ಎಂತು ಹುಟ್ಟಿರುವನು? ಅವನೆಂತು ಶ್ರೇಷ್ಠನಾಗುವನು?” ಎಂದು ಕೇಳಿದನು.

ಮಾತರಿಶ್ವನು ಹೇಳಿದನು: ‘ರಾಜನ್! ಮುಖದಿಂದ ವಿಪ್ರರನ್ನು ಸೃಜಿಸಿ, ಶ್ರೀಹರಿಯು ಅವನಿಗೆ ಧರ್ಮನಿಧಿಯನ್ನಿತ್ತು ಕಾಪಾಡಿ ಬೆಳೆಸೆಂದನು. ಬಾಹುಗಳಿಂದ ಕ್ಷತ್ರಿಯರನ್ನು ಸೃಜಿಸಿ ದಂಡ ನಿಧಿಯನ್ನಿತ್ತು ಶಿಕ್ಷಿಸಿ ರಕ್ಷಿಸಿ ದುಷ್ಟ ಶಿಷ್ಟರನ್ನು ಶಾಸಿಸೆಂದನು. ಊರುಗಳಿಂದ ವೈಶ್ಯರನ್ನು ಸೃಜಿಸಿ, ಗೋಧಾನ್ಯ ನಿಧಿಯನ್ನಿತ್ತು, ವಾರ್ತಾವೃತ್ತಿಯನ್ನು ಕಲ್ಪಿಸೆಂದನು. ಪಾದಗಳಿಂದ ಶೂದ್ರರನ್ನು ಸೃಜಿಸಿ, ಸೇವಾನಿಧಿಯನ್ನಿತ್ತು, ಸಕಲ ಸಹಾಯರಾಗೆಂದನು.

ಪೃಥಿವಿ ಎಲ್ಲವೂ ಧರ್ಮದಿಂದ ವಿಪ್ರನದಾಗಿದೆ. ಅವನು ಇತರ ವರ್ಣದವರಿಗೆ ಜ್ಞಾನವನ್ನಿತ್ತು ಗುರುವಾಗಿರುವನು. ಆದುದರಿಂದ ಪುರೂರವ! ಗೆದ್ದ ಭೂಮಂಡಲವನ್ನು

ಬ್ರಾಹ್ಮಣನಿಗೆ ಸಮರ್ಪಿಸಿ, ಅವನ ನುಡಿಯಂತೆ, ಪ್ರಜರನ್ನು ಪಾಲಿಸು. ಆಗ ನಿನಗೆ ಸ್ವರ್ಗ ಮೋಕ್ಷಗಳಾಗುವವು, ಕೃತಪ್ರಜ್ಞನು, ವಿನಯವಂತನು, ಕುಲೀನನು, ವಿದ್ಯಾ ತಪೋನಿರತನು ಆದ ಬ್ರಾಹ್ಮಣನು ರಾಜನಿಗೆ ತನ್ನ ನಯ ಧರ್ಮವಚನಗಳಿಂದ ಶ್ರೇಯಸ್ಸನ್ನುಂಟು ಮಾಡುವನು. ಕ್ಷತ್ರ ಧರ್ಮರತನು ಪ್ರಜಾವತ್ಸಲನು. ಅಹಂಕಾರ ದೂರನು, ದುಷ್ಟ ಶಿಕ್ಷಕನು. ಆದ ಪಾಲಕನು ಮಾಡುವ ಪುಣ್ಯ ಕಾರ್ಯಗಳ ಫಲವು, ಪಾಲಕ ಗುರುವಾದ ಪುರೋಹಿತನಿಗೂ ಬರುವುದು. ಅಂತೇ ಅವನಿಂದ ರಕ್ಷಿತರಾದ ಪ್ರಜರ ಪುಣ್ಯದಲ್ಲಿ ಷಡ್ಭಾಗವು ರಾಜನನ್ನು ಸೇರುವುದು. ರಾಜನಿದ್ದರೆ, ಅವನು ಧರ್ಮನಿಷ್ಠನಾಗಿದ್ದರೆ ಪ್ರಜರಿಗೆ ಅಭಯ ಲಾಭವಾಗುವುದು. ಶಾಂತರಾದ ಪ್ರಜರು ದುಷ್ಟಭಯರಹಿತರಾಗಿ, ಯಜ್ಞದಾನಗಳನ್ನು ಬಹು ಶ್ರದ್ಧೆಯಿಂದ ಮಾಡುವರು. ಬಿಸಿಲ ತಾಪವು ನೆರಳಿನಲ್ಲಿಯು, ಶೀತಬಾಧೆಯು ಅಗ್ನಿಯಿಂದಲು ನಿವಾರಿತವಾಗುವಂತೆ, ರಾಜಾಶ್ರಯವಿದ್ದರೆ ದುಷ್ಟ ಪೀಡೆಯೂ ತೊಲಗುವುದು. ರಕ್ಷಿಸುವ ರಾಜನು ಇಂದ್ರಾಗ್ನಿಯಮಧರ್ಮರಂತೆ ಗೌರವಿತನಾಗುವನು.

ರಾಜನು ಧರ್ಮಾಧರ್ಮ ಜ್ಞಾನವನ್ನು ತಿಳಿಯಲು ಪುರೋಹಿತನನ್ನು ಆಶ್ರಯಿಸಿ, ನಿಷ್ಕಪಟನು, ನಿರಾಶನು, ವೇದಕುಲನು ಆದ ವಿಪ್ರನ ವಚನದಂತೆ ನಡೆಯಬೇಕು. ರಾಜ ವಿಪ್ರರನ್ನು ಸನ್ಮಾನಿಸಿ ಪ್ರಜರು ಸುಖಿಸುವರು. ಅವರನ್ನು ಅವಮಾನಿಸಿ, ಕುಮಾರ್ಗರತರಾದ ಪ್ರಜರು ಉಭಯಲೋಕ ಸುಖದೂರರಾಗುವರು.'

ಹಿಂದೆ ಐಲನು ಕಶ್ಯಪನನ್ನು 'ಬ್ರಹ್ಮಕ್ಷತ್ರರಲ್ಲಿ ಯಾವ ವರ್ಣವು ಪ್ರಧಾನವು? ಏಕೆ? ಎಂದು ಕೇಳಿದನು. ಕಶ್ಯಪನು ನುಡಿದನು : 'ಬ್ರಹ್ಮಕ್ಷತ್ರವರ್ಣಗಳು ಪರಸ್ಪರಾನುಕೂಲರಾಗಿರಬೇಕು. ಕ್ಷತ್ರಿಯನು ಬ್ರಾಹ್ಮಣದ್ರೋಹಿಯಾದರೆ, ಅವನ ರಾಜ್ಯವು ಛಿನ್ನ ಭಿನ್ನವಾಗುವುದು. ಅವನನ್ನು ಪ್ರಜರು ಮ್ಲೇಂಛಸಂಭವನೆಂದು ತಿಳಿವರು. ಅಂತಹವನ ರಾಜ್ಯದಲ್ಲಿ, ಬೆಳೆಯಿಲ್ಲ, ವೇದಾಧ್ಯಯನವಿಲ್ಲ, ಯಜ್ಞವಿಲ್ಲ; ಅಂತೆಯೇ ರಾಜವಿರೋಧಿ ಯಾದ ಬ್ರಾಹ್ಮಣನಿಂದ ಲೋಕವು ಹಾಳಾಗುವುದು. ಧರ್ಮೋಪದೇಶವನ್ನು ಮಾಡುವವರಿಲ್ಲವಾಗುವುದು. ಯಜ್ಞದಾನಗಳು ನಿಂತುಹೋಗುವವು. ಅವರ ಧರ್ಮಗಳು ಕೆಡುವವು. ಆದುದರಿಂದ ಬ್ರಾಹ್ಮಣವೃಕ್ಷವನ್ನು ಕಡಿಯದೆ, ಉಪದೇಶ ಫಲವನ್ನು ಪೊಂದಿ ಬೆಳೆಸುವುದೆಲ್ಲರ ಕರ್ತವ್ಯವಾಗಿದೆ. ವೇದವಿದ್ಯಾ ವಿನಾಶಕರಾದ ದುಷ್ಟರಿಂದ ವಿಪ್ರನು ದೂಷಿತನಾದರೆ, ಆ ದೇಶದಲ್ಲಿ ಮಳೆ ಆಗದು. ಮಾರಿಕಾದ್ಯುಪದ್ರವಗಳೂ ಬರುವವು. ಸ್ತ್ರೀ ಹತ್ಯ, ಬ್ರಹ್ಮಹತ್ಯಗಳನ್ನು ಮಾಡಿದ ಪಾಪಿಗಳಿಗೆ ರಾಜಸಭೆಯಲ್ಲಿ ಸನ್ಮಾನ ಅನುಮೋದಗಳು ಸಿಕ್ಕಾಗ ಆಯಿತು. ಆ ರಾಜನ ರಾಜ್ಯದ ಅಂತಿಮಾಂಕ ಸಮಾಪ್ತಿ ಎಂದು ತಿಳಿ! ಆ ರಾಜನು ಪಾಪಿಪಕ್ಷಪಾತಿಯಾಗಿ, ತಾನೂ ಪಾಪವನ್ನೆಸಗುವನು. ಕಾಮಕ್ರೋಧ ವಶರಾಗಿ ಪ್ರಜರೂ ಪರಸ್ಪರ ಹಿಂಸೆಯಲ್ಲಿ ತೊಡಗುವರು. ಆಕಾಶದಲ್ಲಿ ಬೀಸುವ ಪ್ರಚಂಡ ವಾಯುವು ಆಕಾಶಗತ ಮೇಘವನ್ನು ತೂರಿಬಿಟ್ಟು ಭಯಂಕರ ವಿದ್ಯುದಶನಿಗಳನ್ನು ಪುಟ್ಟಿಸುವಂತೆ, ರಾಗದ್ವೇಷ ದೂಷಿತವಾದ ಮನಸ್ಸು ಅಲ್ಲಿರುವ

ಜೀವನನ್ನು ಪ್ರಚಂಡನಾಗಿ ಮಾಡುವುದು. ಅಗ್ನಿ ತಾನಾಗಿ ಸುಡುವುದಿಲ್ಲ, ಕಾಷ್ಠಾದಿಗಳಿಂದ ವರ್ಧಮಾನನಾದ ಅಗ್ನಿಯು ಊರನ್ನೇ ಸುಡಬಲ್ಲನು. ಅಂತೆಯೇ ಶಾಂತನಾದ ಜೀವನು ಕೂಡ ಅಹಂಮಮಕಾರಗಳಿಂದ ಕೆಟ್ಟು, ಪರಪೀಡಾಕಾರಕನಾಗುವನು. ಇಂತು ದುಷ್ಟಸಂಗದಿಂದ ರಾಜನೂ ದುಷ್ಟನಾಗಿ, ಧರ್ಮಾಧರ್ಮಜ್ಞಾನವನ್ನು ಕಳೆದುಕೊಂಡು ಪ್ರಜಾಪೀಡಕನಾಗುವನು. ಆದುದರಿಂದ ಉತ್ತಮ ವಿಪ್ರರನ್ನು ಪುರೋಹಿತರನ್ನಾಗಿಟ್ಟು ಧರ್ಮದಿಂದ ನಡೆವುದು ರಾಜನ ಕರ್ತವ್ಯವೆಂದು ಪೇಳಿದನು.

ಭೂಮಿಯು ಸಾಧ್ವಸಾಧುಗಳನ್ನು ಹೊತ್ತು ಪೋಷಿಸುವಳು. ಸೂರ್ಯನು ಸಾಧ್ವ ಸಾಧುಗಳಿಗೆ ಬೆಳಕನ್ನು ಕೊಡುವನು. ವಾಯುವು ಸಮವಾಗಿ ಬೀಸುವನು. ಜಲವು ಎಲ್ಲರನ್ನೂ ನಿರ್ಮಲವಾಗಿಸುತ್ತದೆ. ಆದರೆ ಸ್ವಾಭಾವಿಕ ಗುಣದಿಂದ ದೇವತೆಗಳಂತು ಸರ್ವಸಮರಾಗಿದ್ದರೂ, ಪರಲೋಕದಲ್ಲಿ ಪಾಪಿಗಳನ್ನು ನರಕಾದಿಗಳಲ್ಲಿಟ್ಟು ಶಾಸಿಸುವುದನ್ನೂ, ಪುಣ್ಯವಂತರನ್ನು ಸ್ವರ್ಗಾದಿಗಳಲ್ಲಿಟ್ಟು ಸುಖಪಡಿಸುವುದನ್ನೂ ಬಿಡುವುದಿಲ್ಲ. ಪಾಪ ಪುಣ್ಯಗಳಿಗೆ ಉಭಯಕ್ಕು ಸ್ವರ್ಗವಾಗುವುದಿದ್ದರೆ, ಲೋಕದಲ್ಲಿ ಯಾರೂ ಪುಣ್ಯವನ್ನು ಮಾಡುವುದೇ ಇಲ್ಲ. ರಾಜನು ಇದನ್ನರಿತು ನಿಜಪುರೋಹಿತನಂತೆ ಧರ್ಮದಿಂದ ನಡೆದು, ದುಷ್ಟರನ್ನು ಶಾಸಿಸಿದರೆ, ಭೂಲೋಕವೇ ಸ್ವರ್ಗವಾಗುವುದು.

ರಾಷ್ಟ್ರದ ಯೋಗಕ್ಷೇಮಗಳು ರಾಜನಲ್ಲಿವೆ, ರಾಜನ ಯೋಗಕ್ಷೇಮಗಳು ಪುರೋಹಿತನಲ್ಲಿವೆ. ಅಂತೆಯೇ ಪಾಪಗಳೂ ರಾಜಪುರೋಹಿತರನ್ನೇ ಸೇರುವವಾಗಿವೆ. ಮುಚುಕುಂದ ರಾಜನು ಅಲಕಾಧಿಪನಾದ ಕುಬೇರನ ಪುರಿಯನ್ನು ಸೇರಿದನು. ಅವನನ್ನು ಪರೀಕ್ಷಿಸಬೇಕೆಂದು ಕುಬೇರನು ಯಕ್ಷರಕ್ಷ ಸೈನ್ಯವನ್ನು ಕಳಿಸಿದನು. ಅವರಿಂದ ತನ್ನ ಸೇನೆಯು ಹತವಾಗುತ್ತಿರುವದನ್ನು ಕಂಡು, ಮುಚುಕುಂದನು, ತನ್ನ ಪುರೋಹಿತನಾದ ವಸಿಷ್ಠನಲ್ಲಿ ಮೊರೆಯಿಟ್ಟನು. ವಸಿಷ್ಠನಿತ್ತ ತಪೋಬಲದಿಂದ ವರ್ಧಿತನಾಗಿ ಮುಚುಕುಂದನು ಯಕ್ಷ ಸೇನೆಯನ್ನು ಓಡಿಸಿದನು. ಆಗ ಕುಬೇರನು ಪ್ರತ್ಯಕ್ಷನಾಗಿ, 'ರಾಜನ್! ಎಷ್ಟೋ ರಾಜನ್ಯ ವೀರರನ್ನು ಕಂಡಿರುವೆನು. ಆದರೆ ನಿನ್ನಂತಹನನ್ನು ಕಂಡಿಲ್ಲ. ಬ್ರಾಹ್ಮಣ ಬಲವನ್ನಾಶ್ರಯಿಸಿ, ಗೆದ್ದ ನಿನ್ನನ್ನು ನಾನು ಮೆಚ್ಚಲಾರೆನು' ಎಂದನು.

ಮುಚುಕುಂದನು 'ಹಾಗಲ್ಲ! ನಾನು ನ್ಯಾಯದಿಂದ ನಡೆದಿರುವೆನು. ಬ್ರಹ್ಮ ಕ್ಷತ್ರಗಳನ್ನು ಪರಸ್ಪರಾಶ್ರಯವಾಗಿರುವಂತೆ ಬ್ರಹ್ಮದೇವನು ಸೃಜಿಸಿದನು. ಅವೆರಡು ಬೇರೆ - ಬೇರಾದರೆ ಲೋಕ ಸುಖಸಾಧಕವಾಗಲಾರವು. ತಪೋ ಮಂತ್ರಬಲವು ವಿಪ್ರ ನಲ್ಲಿದೆ, ಅಸ್ತ್ರಬಾಹು ಬಲವು ಕ್ಷತ್ರಿಯನಲ್ಲಿದೆ. ಅವೆರಡರಿಂದ ಕೂಡಿ ಪ್ರಜಾಪಾಲನವು ನಡೆಸಬೇಕು. ಅಂತೆಯೇ ವಿಪ್ರಾಶ್ರಯನಾಗಿ ವರ್ತಿಸುವ ನನ್ನನ್ನು ನೀನಾಕ್ಷೇಪಿಸಿದುದು ನ್ಯಾಯವಲ್ಲ' ಎಂದನು. ಕುಬೇರನು ಪ್ರೀತನಾಗಿ 'ರಾಜ್ಯಾದಿಗಳನ್ನು ವರವಾಗಿ ಬೇಡು!' ಎಂದಾಗ, ಮುಚುಕುಂದನು, 'ದೇವ! ಬಾಹು ವಿರ್ಯಾರ್ಜಿತವಾಗದ ರಾಜ್ಯವೆನಗೆ ಬೇಡ! ನನಗೆ ಬ್ರಹ್ಮಬಲವಿದೆ; ಕ್ಷತ್ರಬಲವಿದೆ. ರಾಜ್ಯವನ್ನು ಬೇಕಾದಷ್ಟು ಸಂಪಾದಿಸಬಲ್ಲೆನು. ಆದುದರಿಂದ ವಿಷ್ಣು ಭಕ್ತಿಯನ್ನು ಕೊಡು!' ಎಂದು ವರ

ಬೇಡಿದನು. ಆ ಮಾತಿಗೆ ವಿಸ್ಮಿತನಾಗಿ ಕುಬೇರನು ನಿಜ ಕ್ಷಾತ್ರ ಧರ್ಮರತನಾದ ರಾಜವರನಿಗೇ ಅದೇ ವರವಿತ್ತು ಮರೆಯಾದನು. ನಿತ್ಯೋದ್ಯತ ಶಸ್ತ್ರನಾದ ರಾಜನಿಗೆ ನಿತ್ಯತಪೋರತನಾದ ವಿಪ್ರನ ಪೌರೋಹಿತ್ಯದಿಂದ ಜಗತ್ತೆಲ್ಲವೂ ವಶವಾಗಿ ನಿಲ್ಲುವುದು. ರಾಜನು ದುಷ್ಟ ಶಿಕ್ಷೆಯನ್ನೇ ಅಲ್ಲದೆ, ದಾನ ಯಜ್ಞಗಳನ್ನೂ ಮಾಡಬೇಕು. ರಾಜನು ಪೂಜಿಸಿದ ಧರ್ಮವು ಎಲ್ಲರಿಂದ ಸೇವಿತವಾಗುವುದು. ಪ್ರಜರು ಮಾಡುವ ಅಧ್ಯಯನ, ದಾನ, ಯಜ್ಞಾದಿ ಪುಣ್ಯ ಕರ್ಮಗಳ ಫಲದ ಕಾಲುಭಾಗವು ಧರ್ಮಿಷ್ಠಪಾಲಕನಿಗೆ ಸಿಗುವುದು. ಅಂತೆಯೇ ಪಾಪಾಂಶವೂ ಬರುವುದು. ಆದುದರಿಂದ ರಾಜನು ಅಧರ್ಮವನ್ನು ತಾನು ಬಿಡುವುದಲ್ಲದೆ, ಪ್ರಜರನ್ನೂ ಧರ್ಮಭ್ರಷ್ಟರಾದಾಗ ಶಾಸಿಸಬೇಕು.

ವಣಿಜಾದಿಗಳಿಗೆ ಚೋರೋಪದ್ರವವಾದಾಗ, ಕಳೆದ ಧನವನ್ನು ಹಿಂದಿರುಗಿಸಿ ಕೊಡಿಸಬೇಕು. ಅದು ಸಾಧ್ಯವಾಗದಿದ್ದರೆ, ತನ್ನ ಕೋಶದಿಂದ ಅದನ್ನು ಕೊಡಿಸಬೇಕು. ಬ್ರಹ್ಮಸ್ವಾಪಹಾರವಾಗದಂತೆ ಸರ್ವದಾ ಜಾಗರೂಕನಾಗಿರಬೇಕು. '

ಧರ್ಮರಾಜನು ಭೀಷ್ಮೋಪದೇಶವನ್ನು ಕೇಳಿ, 'ತಾತ! ನಾನು ರಾಜಸುಖವನ್ನು ಒಲ್ಲೆನು. ಧರ್ಮಕ್ಕಾಗಿ ಕಾದಿದೆನು. ಆದರೆ ರಾಜ್ಯವಾಳುವ ರಾಜನಿಗೆ ಧರ್ಮ ಫಲದಕಿಂತಲೂ, ಪಾಪ ಫಲವೇ ಹೆಚ್ಚಾಗಿ ಬರುವುದು. ನಾನು ವನಕ್ಕೇ ಹೋಗಿ, ತಪಗೈದು, ವನ್ಯಾಹಾರನಾಗಿ, ಧರ್ಮವನ್ನು ಸೇವಿಸುವೆನು' ಎಂದನು. ಭೀಷ್ಮನು 'ಧರ್ಮರಾಜ! ನಿನ್ನ ಅಭಿಪ್ರಾಯವು ತಿಳಿಯಿತು. ರಾಜ್ಯಾಂತೇ ನರಕಂ ಧ್ರುವಂ, ಎಂಬುದು ನಿಜ. ರಾಜನು ಚೋರಾದಿ ವಧೆ ಮಾಡಿಸುವಾಗ ಕ್ರೂರನಾಗದೆ ವಿಧಿಯಿಲ್ಲ. ದುಷ್ಟದಂಡದ ಶಾಸ್ತ್ರವನ್ನು ಮೀರಿ ನಡೆಯಲೂ ವಿಹಿತವಲ್ಲ. ರಾಜನಿಗೆ ಸ್ವಧರ್ಮವೇ ಪುಣ್ಯಪ್ರದವಾಗಲಿ, ಅನ್ಯಧರ್ಮವಲ್ಲ. ವನವಾಸ ಸನ್ಯಾಸಾದಿಗಳು ವಿಧರ್ಮಗಳಾದುದರಿಂದ, ಕ್ಷತ್ರಿಯನಾದ ನಿನಗೆ ಪಾಪ ಹೇತುಗಳೇ ಆಗುವವು. ಪ್ರತಿ ವರ್ಣಧರ್ಮದಲ್ಲಿಯು ಲೋಪದೋಷಗಳು ಸಂಭವಿಸಬಹುದು. ಆದರೆ ಹಾಗೆಂದು ಸ್ವಧರ್ಮವನ್ನು ಬಿಡಬಾರದು. ವಹಿಸಲು ಹುಟ್ಟಿದ ಕುದುರೆಯು, ಹೊಡೆಯಲ್ಪಟ್ಟು ಕೂಡ, ಚನ್ನಾಗಿಯೇ ವಹಿಸಿ ಓಡುವುದು. ಧರ್ಮಜ್ಞಾನವು ಸೂಕ್ಷ್ಮವಾಗಿದೆ. ದುಷ್ಟಹಿಂಸೆಯು ತುಚ್ಛವೇ ಆದರೂ, ಅದರ ಫಲವಾಗಿ ಉಂಟಾಗುವ ಬಹುಜನ ಸುಖವು ಬಲು ಪುಣ್ಯಪ್ರಧಾನವಾಗಿದೆ. ಧೀರನಾಗು; ಕಾತರನಾಗಿ ಕರ್ತವ್ಯ ವಿಮುಖನಾಗಬೇಡ! ಆಳು ರಾಜ್ಯವನ್ನು, ಒಳ್ಳೆಯ ಮಂತ್ರಿ ಪುರೋಹಿತರಿಂದ ನಿನ್ನ ಉಭಯಲೋಕದ ಯೋಗಕ್ಷೇಮಗಳು ರಕ್ಷಿತವಾಗುವವು. ಭಯಗ್ರಸ್ತನನ್ನು ಕೈಪಿಡಿದು, ದುಷ್ಟರಿಂದ ಕಾಪಾಡುವುದೇ ಸ್ವರ್ಗ.' ಕೌರವ ಕುಲಾಲಂಕಾರನಾಗಿರುವೆ! ಅಂತಹ ಸ್ವರ್ಗವನ್ನಿಲ್ಲೇ ಪಡೆ! ನಿನ್ನ ಸುಹೃನ್ಮಿತ್ರ ಬಂಧು ಜನರೂ ಸುಖಪಡಲಿ! ' ಎಂದು ಉಪದೇಶಿಸಿದನು.

ಧರ್ಮರಾಜನು! 'ತಾತ! ಬ್ರಾಹ್ಮಣನು ಯಾವಾಗ ನಿಂದ್ಯನಾಗುವನು? ಅವನನ್ನು ದಂಡಿಸುವ ವಿಧಾನವೆಂತು?' ಎಂದು ಕೇಳಿದನು. ಭೀಷ್ಮನು ನಿರೂಪಿಸಿದನು: 'ರಾಜನ್! ಶಮ, ದಮ, ಶಪಶ್ಶೌಚಗಳೆಂಬ ಸಲ್ಲಕ್ಷಣದಿಂದ ಕೂಡಿ, ಸರ್ವತ್ರ

ಶ್ರೀಹರಿಯ ಸನ್ನಿಧಾನವಿದೆ ಎಂದು ತಿಳಿದು, ತಕ್ಕಂತೆ ನಡೆವ ಬ್ರಾಹ್ಮಣರನ್ನು ಬ್ರಹ್ಮ ಸಮರಂತೆ ತಿಳಿದು ಗೌರವಿಸು! ವೇದಸಂಪನ್ನರಾಗಿ, ಸ್ವಕರ್ಮನಿರತರಾದವರನ್ನು ದೇವಸಮರೆಂದು ತಿಳಿ! ಜನ್ಮಕರ್ಮವಿಹೀನರು, ನೀಚಕರ್ಮರತರೂ ಆದವರನ್ನು ಶೂದ್ರರೆಂದು ತಿಳಿ! ಅಶ್ರೋತ್ರಿಯನು, ಕರ್ಮಭ್ರಷ್ಟನು ಆದ ಬ್ರಾಹ್ಮಣನು, ಅಬ್ರಾಹ್ಮಣನೇ ಸರಿ. ಅಂತಹವನಿಂದ ಕಪ್ಪವನ್ನು ತೆಗೆಯುವ ರಾಜನಿಗೆ ಪಾಪವಿಲ್ಲ. ಧರ್ಮಾಧಿಕಾರಿ, ದೇವಲಕ, ಜ್ಯೋತಿಷಿಕ, ಗ್ರಾಮಯಾಜಕ, ಮುಂತಾದವರು ಕೇವಲ ಧನಲೋಭದಿಂದ ಪ್ರವೃತ್ತರಾದರೆ ಬ್ರಾಹ್ಮಣಚಂಡಾಲರೆನಿಸುವರು. ಋತ್ವಿಕ್, ಪುರೋಹಿತ, ಮಂತ್ರಿ ದೂತ, ವಾರ್ತಾಹರ ಮೊದಲಾದವರು ವಿಪ್ರಕ್ಷತ್ರಿಯರು, ಅಶ್ವಾರೋಹ, ಗಜಾರೋಹ, ರಥಿ, ಪದಾತಿಗಳಾಗಿ ಕಾದುವ ವಿಪ್ರರು ವಿಪ್ರವೈಶ್ಯರು. ಇವರೆಲ್ಲರಿಂದ ಬ್ರಹ್ಮದೇವ ಸಮರನ್ನು ಬಿಟ್ಟು- ರಾಜನು ಕಪ್ಪವನ್ನು ಸ್ವೀಕರಿಸಬಹುದು. ಬ್ರಾಹ್ಮಣರು ವಿಕರ್ಮರತರಾದರೆ ಅವರನ್ನು ದಂಡಿಸಿ, ಧರ್ಮದಲ್ಲಿಡುವ ಅಧಿಕಾರವು ರಾಜನಿಗಿದೆ. ಜೀವನಕ್ಕಾಗಿ ಮಾತ್ರ ಕದಿಯಲು ತೊಡಗಿದವರಿಗೆ ಜೀವನವನ್ನು ಕಲ್ಪಿಸಿಕೊಡುವುದೂ, ರಾಜನ ಹೊಣೆಯಾಗಿದೆ. ವಿಪ್ರನನ್ನು ಧರ್ಮಭ್ರಷ್ಟನಾಗಗೊಡುವ ರಾಜನು ಆ ಪಾಪದ ಫಲವನ್ನು ಉಣ್ಣಬೇಕಾಗುವುದು.

ಕೇಕಯರಾಜನು ಆರಣ್ಯಕ ವ್ರತದಿಂದ ವೇದತಪೋನಿರತನಾಗಿರಲು, ಅವನನ್ನು ಒಬ್ಬ ರಾಕ್ಷಸನು ಹಿಡಿದು ಹಿಂಸಿಸ ಬಂದನು. ರಾಜನು 'ನನ್ನ ರಾಜ್ಯನಲ್ಲಿ ಕಳ್ಳನಿಲ್ಲ; ಲೋಭಿಯಿಲ್ಲ; ಮದ್ಯಪಾನರತನಿಲ್ಲ; ಅಗ್ನಿವರ್ಜಿತನಿಲ್ಲ. ನನ್ನ ರಾಜ್ಯದಲ್ಲಿ ವಿಪ್ರರು ಸೋಮಪರು; ಯಜ್ಞರತರು; ಅವರು ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನವೆಂಬ ಆರು ವಿಧ ಸ್ವಧರ್ಮವನ್ನು ಬಿಡರು. ಅವರನ್ನು ನಾನು ಚನ್ನಾಗಿ ಪೂಜಿಸಿ ತೃಪ್ತರನ್ನಾಗಿಸಿ ಧರ್ಮವನ್ನು ಬಿಡದಂತೆ ಪಾಲಿಸಿದೆನು. ಕ್ಷತ್ರಿಯರೂ ಧರ್ಮವನ್ನು ಉಲ್ಲಂಘಿಸಿದವರಿಲ್ಲ. ಓದಿಸದೆ ವೇದ ಓದಿ; ಮಾಡಿಸದೆ ಯಜ್ಞಗಳನ್ನೂ ಮಾಡಿ, ಹಿಡಿಯದೆ ದಾನಕೊಟ್ಟು ವೀರರಾಗಿರುವರು. ನನ್ನ ರಾಜ್ಯದ ವೈಶ್ಯರೂ ಧರ್ಮರತರೇ, ಮಾಯೆ ಬಿಟ್ಟು ಕೃಷಿಗೋರಕ್ಷಾವಾಣಿಜ್ಯಗಳನ್ನು ನಡೆಸಿ, ಶೌಚ, ಮೈತ್ರಿ, ದಯಾ, ದಾನವಂತರಾಗಿರುವರು. ಶೂದ್ರರೂ ಸ್ವಸ್ವ ಕರ್ಮತರರಾಗಿ ತ್ರಿವರ್ಣ ಸೇವಾರತರಾಗಿರುವರು. ಅನಾಥ, ವೃದ್ಧ, ದುರ್ಬಲ, ರೋಗಿ ದೀನ ಜನರನ್ನು ನಾನು ಕಡೆಗಣಿಸಲಿಲ್ಲ. ಅವರಿಗೆ ಅನ್ನವಸ್ತ್ರಗಳನ್ನು ಕಲ್ಪಿಸಿದೆನು. ನನ್ನ ದೇಶಕ್ಕೆ ಬಂದ ತಪಸ್ವಿಗಳು ಅಪೂಜಿತರಾಗಿ, ಬರಿಗೈಲಿ ಹೋಗಲಿಲ್ಲ; ಆತ್ಮವಿಜ್ಞಾನಸಂಪನ್ನನು, ಧರ್ಮಕುಶಲನು ಆದ ಪುರೋಹಿತನಂತೆ ನಡೆದಿರುವೆನು. ಗುರುದೇವಪೂಜನದಲ್ಲಿ ಅಪ್ರಮತ್ತನಾಗಿರುವೆನು. ಆದುದರಿಂದ ನನಗೆ ರಾಕ್ಷಸರ ಭಯವಿಲ್ಲ. ಗೋ, ಬ್ರಾಹ್ಮಣ ಪೂಜೆಯಿಂದಲು, ಯಜ್ಞಕರಣದಿಂದಲು ನನಗೆ ನಿತ್ಯವು ಸ್ವಸ್ತಿಯಾಗುವುದು' ಎಂದನು. ಆ ಮಾತನ್ನಾಲಿಸಿ ರಾಕ್ಷಸನು 'ರಾಜನ್! ಧರ್ಮಿಷ್ಠನಾಗಿರುವ ನಿನಗೆ ನನ್ನಿಂದ ಭಯವಿಲ್ಲ. ಯಾರಿಗೆ ವಿಪ್ರಬಲವಿದೆಯೋ, ಯಾರು ವೇದ ಧರ್ಮರತರೋ, ಯಾರು ಅತಿಥಿ

ಪೂಜಕರೋ, ಅವರಿಗೆ ರಾಕ್ಷಸನ ಭಯವಿಲ್ಲ. ಅವರಿಗೆ ಪುಣ್ಯಲೋಕಗಳು ಮೀಸಲಾಗಿವೆ' ಎಂದು ಅಲ್ಲಿಂದ ಹೊರಟುಹೋದನು.

ಧರ್ಮರಾಜ! ದ್ವಿಜರನ್ನು ರಕ್ಷಿಸು! ಅವರಿಂದ ನೀನು ರಕ್ಷಿತನಾಗುವೆ! ವಿಕರ್ಮಸ್ಥರಾದ ದ್ವಿಜರನ್ನು ಶಿಕ್ಷಿಸು! ಅವರನ್ನು ಧರ್ಮದಲ್ಲಿ ನಡೆಸು! ನಿನಗೆ ಮಹತ್ಪುಣ್ಯವು ಸಿಗುವುದು. ವಿಪ್ರನು ಅಶಕ್ತನಾದರೆ ರಾಜಧರ್ಮವನ್ನೋ, ಅದರಿಂದಲೂ ಜೀವಿಸಲಾರದಿರುವಾಗ ವೈಶ್ಯಧರ್ಮವನ್ನೋ ಅವಲಂಬಿಸಬಹುದು. ಆಪತ್ಕಾಲವು ತೊಲಗಲು ಮತ್ತೆ ಸ್ವಧರ್ಮವನ್ನೇ ಅವನು ಅನುಸರಿಸಬೇಕು. ವೈಶ್ಯಧರ್ಮದಲ್ಲಿ ನಿಂತ ವಿಪ್ರನು ಹೆಂಡ, ಉಪ್ಪು, ಎಳ್ಳು, ಗೋತುರಗ ಮೇಷಾದಿ ಪಶುಗಳು, ಮಧು, ಮಾಂಸ, ಪಕ್ವಾನ್ನ ಮುಂತಾದುವನ್ನು ಮಾರಬಾರದು. ಅಜದಲ್ಲಿ ಅಗ್ನಿ, ಮೇಷದಲ್ಲಿ ವರುಣ, ಅಶ್ವದಲ್ಲಿ ಸೂರ್ಯ, ಅನ್ನದಲ್ಲಿ ಧರಾದೇವಿ ಇರುವರು. ಅವನ್ನು ಮಾರಿದವನಿಗೆ ಅವರನ್ನು ಮಾರಿದ ಪಾಪವು ಬರುವುದು. ವಸ್ತುವಿನಿಮಯ ಕಾಲದಲ್ಲಿ ಪಕ್ವಾನ್ನವಿತ್ತು ಆ ಮಾನ್ನವನ್ನು ಕೊಟ್ಟರೆ, ಪಕ್ವಾನ್ನವನ್ನು ಮಾರಿದವನಿಗೆ ಪಾಪಲೇಪವಾಗುವುದು. ವಿನಿಮಯದಲ್ಲಿ ಮೋಸವಿಲ್ಲದ್ದು ಪಾಪವಲ್ಲ.

ಇಂತು ಪರಧರ್ಮಾವಲಂಬಿಗಳಾದ ಪ್ರಜರು ನೀತಿ – ನಿಯಮಗಳನ್ನು ಉಲ್ಲಂಘಿಸಿ, ಆಪತ್ತಿಲ್ಲದಿದ್ದರೂ, ಶಸ್ತ್ರಪಾಣಿಗಳಾದಾಗ ಲೋಕೋಪದ್ರವವಾಗುವುದು. ಆಗ ತಪೋಬಲ ಜ್ಞಾನ ಸಮನ್ವಿತರಾದ ಬ್ರಾಹ್ಮಣರನ್ನು ಆಶ್ರಯಿಸಿ ರಾಜನು ಧರ್ಮವನ್ನು ನಡೆಸಬೇಕು. ವಿಧರ್ಮರತರನ್ನು ಶಾಸಿಸಬೇಕು. ಕ್ಷತ್ರಿಯರು ಅಧರ್ಮರುಚಿಗಳಾದರೆ, ಅವರನ್ನು ದಂಡಿಸಿ, ಧರ್ಮದಲ್ಲಿ ನಿಲ್ಲಿಸುವ ಅಧಿಕಾರವು ವಿಪ್ರರಿಗಿದೆ. ನೀರಿನಿಂದ ಹುಟ್ಟಿದ ಅಗ್ನಿ, ಕಲ್ಲಿನಿಂದ ಲೋಹ, ವಿಪ್ರರಿಂದ ಪಾಲಕರು ಜನಿಸಿರುವರು. ಅಗ್ನಿ ಎಲ್ಲವನ್ನು ಸುಟ್ಟರೂ, ತನ್ನ ಜನಕವಾದ ಜಲವನ್ನು ಸುಡಲಾರದು; ಜಲ ವಿರೋಧದಿಂದ ಅದು ಆರಿಹೋಗುವುದು. ಅಂತೆಯೇ ಲೋಹವು ಕಲ್ಲಿನನ್ನು ಕಡಿಯಲಾರದು. ಕ್ಷತ್ರಿಯನು ವಿಪ್ರನನ್ನು ಹಿಂಸಿಸಲಾರನು; ಹಿಂಸಿಸುವ ಸಾಹಸಗೈದರೆ ತಾನೇ ನಷ್ಟವಾಗುವನು. ಆದುದರಿಂದ ವಿಪ್ರರನ್ನು ಆಶ್ರಯಿಸು! ಅವರಿಂದ ರಕ್ಷಿತನಾಗುವೆ! ವಿಪ್ರನರ ರಕ್ಷಣೆಗಾಗಿ ಮಡಿದ ಮಹಾವೀರನು ಬಹು ಪುಣ್ಯಲೋಕವನ್ನು ಹೊಂದುವನು; ಅಶ್ವಮೇಧಾವಭೃಥ ಫಲವವನಿಗೆ ಸಿಗುವುದು.

ಧರ್ಮಾಧರ್ಮ ವಿಚಾರವು ಬಹು ಗಹನವಾಗಿದೆ. ಉತ್ತಂಕನಿಗೆ ಹಿಂಸಾಮಯ ಸರ್ಪಯಾಗವೂ, ಪರಾಶರನಿಗೆ ರಾಕ್ಷಸಯಾಗವೂ ಧರ್ಮವೇ ಆಯಿತು; ಅವುಗಳಿಂದ ಅತಿಯಾಗಿ ಬೆಳೆದ ಸರ್ಪ ರಾಕ್ಷಸರು ಹತರಾಗಿ, ಲೋಕ ಕ್ಷೇಮವಾಯಿತು. ಲೋಕದಲ್ಲಿರುವ ರಾಜರೆಲ್ಲರೂ ಅಧರ್ಮರತರಾಗಿ, ವರ್ಣಸಂಕರ, ಧನದಾರಾಪಹರಣಗಳಿಗೆ ಕಾರಣರಾದಾಗ, ಪ್ರಜರನ್ನು ರಕ್ಷಿಸುವ ಶೂದ್ರರಾಜನೂ ಮಹತ್ಪುಣ್ಯವನ್ನು ಹೊಂದುವನು. ರಕ್ಷಕನಾಗಿ ಧರ್ಮವನ್ನು ನಿಲ್ಲಿಸುವ ಶೂದ್ರನೂ, ರಾಜನಂತೆ ಪೂಜ್ಯನಾಗುವನು. ಹಾಲು ಕೊಡದ ಆಕಳಿನಂತೆ, ಭಾರವನ್ನು ಹೊರದ ಎತ್ತಿನಂತೆ, ಬಂಜೆಯಾದ ಹೆಂಡತಿಯಂತೆ

ರಕ್ಷಣೆ ಮಾಡದ ರಾಜನು ಪೂಜಿತನಾಗನು. ಓದದ ವಿಪ್ರನೂ, ಧರ್ಮರಕ್ಷಣೆ ಮಾಡದ ರಾಜನೂ ನಿರರ್ಥಕರೇ ಸರಿ!

ಧರ್ಮರಾಜನು ಪುರೋಹಿತರನ್ನು ತಿಳಿಯಲಪೇಕ್ಷಿಸಲು, ಭೀಷ್ಮನು ಪುರೋಹಿತ, ಋತ್ವಿಗ್ಜನರ ಲಕ್ಷಣಗಳನ್ನು ಇಂತು ನಿರೂಪಿಸಿದನು: 'ಬ್ರಹ್ಮಾ, ಅಧ್ವರ್ಯ, ಉದ್ಗಾತ, ಸಾಮಗ, ಹೋತ ಮುಂತಾದ ಋತ್ವಿಜರು ಹರಿಸರ್ವೋತ್ತಮತ್ವಜ್ಞಾನಿಗಳು, ಪರಸ್ಪರ ಸೌಹಾರ್ದಯುತರು, ಸಮದರ್ಶಿಗಳೂ ಆಗಿರಬೇಕು, ಆರ್ಜವ, ಶಮ, ದಮ, ಅಕಾರ್ಯ, ಕರಣಲಜ್ಜೆ, ತಿತಿಕ್ಷೆ, ದಯೆ, ಸತ್ಯ, ಧೃತಿ, ಅಹಿಂಸೆ, ರಾಗದ್ವೇಷಪರಿವರ್ಜನ ಮುಂತಾದ, ಗುಣಗಳುಳ್ಳವನೇ ಬ್ರಹ್ಮಾಸನ ಪಾತ್ರನು. ಎಲ್ಲ ಋತ್ವಿಕ್ ಪುರೋಹಿತರೂ ಮಾನ್ಯರೇ – ಅವರವರ ಯೋಗ್ಯತೆಯಂತೆ. ಅವರಿಗೆ ಸರ್ವಸ್ವವನ್ನೂ ದಕ್ಷಿಣೆಯಾಗಿ, ಸಮರ್ಪಿಸಲು ಸಿದ್ಧನಾದ ಸಿರಿವಂತನೇ – ಕೊನೆಗೆ ಒಂದು ಸಾವಿರದ ಇನ್ನೂರು ನಾಣ್ಯಗಳನ್ನಾದರೂ ಕೊಡಬಲ್ಲವನೇ- ಯಜ್ಞ ಮಾಡಲು ಯೋಗ್ಯನು. ಆದರೂ ಯಥಾ ಶಕ್ತಿಯಾಗಿ ಕೊಡುವ ದರಿದ್ರನಿಗೆ ಯಜ್ಞಾಧಿಕಾರವಿಲ್ಲವೆಂದು ತಿಳಿಯಬೇಡ! ಶ್ರೀಹರಿ ಪ್ರೀತಿಗಾಗಿ ಸ್ವಲ್ಪವನ್ನೇ ಕೊಟ್ಟ ಸಕ್ತುಪ್ರಸ್ಥನಿಗೆ ಮೋಕ್ಷವಾಗಲಿಲ್ಲವೇ? ಆದುದರಿಂದ ಸರ್ವವರ್ಣದವರು ತಮಗೆ ಪೇಳಿರುವ ಯೋಗ್ಯ ಯಜದಾನ ಪೂಜಾದಿಗಳನ್ನು ಮಾಡಿ, ಸ್ವರ್ಗ ಮೋಕ್ಷಗಳನ್ನು ಪಡೆಯಲುಬಹುದಾಗಿದೆ.

ರಾಜನ್! ತಪವೇ ಯಜ್ಞ. ತಪವೆಂದರೆ ವೇದಾಧ್ಯಯನ ಮತ್ತು ಅದರ ಅರ್ಥ ವಿಚಾರವೆಂದು ತಿಳಿ! ಅದಕ್ಕಿಂತ ಮಿಗಿಲಾದ ತಪವಿಲ್ಲ. ಬರಿಯ ಶರೀರ ಶೋಷಣವಲ್ಲ; ಜ್ಞಾನವೇ ಮೋಚಕವು. ಕರ್ಮವು ಕೂಡ ಜ್ಞಾನಪೂರ್ವಕವಾಗಿ ಮಾಡಲ್ಪಟ್ಟಾಗ, ಮಹಾಫಲ ಪ್ರದವಾಗುವುದು. ಚಿತ್ತಿ(ಅಗ್ನಿ), ಸ್ರುಕ್, ಸ್ರುವ, ಆಜ್ಯ, ಚರು, ಪವಿತ್ರ, ಸಮಿತ್, ಯಜಮಾನ, ಹೋತ, ಪತ್ನೀ ಎಂಬ ಹತ್ತಂಶಗಳಿಂದ ಕೂಡಿದ ಯಜ್ಞವು ಶ್ರೀಹರಿಯ ಪ್ರೀತಿಗಾಗಿ ಜ್ಞಾನದಿಂದ ಮಾಡಲ್ಪಟ್ಟರೇನೇ, ಅನಂತ ಫಲಪ್ರದವಾಗುವುದು. ಸಾವಿರ ಮಾತಿನಿಂದೇನು? ಜ್ಞಾನವೇ ಸತ್ಕರ್ಮದ ಮುಖ್ಯ ಫಲವು. ಜ್ಞಾನದಿಂದಲೇ ಮೋಕ್ಷ'

ಧರ್ಮರಾಜನು 'ತಾತ! ಎಷ್ಟು ಸಣ್ಣ ಕೆಲಸವನ್ನಾಗಲಿ, ಒಬ್ಬನಿಂದಾಗಲಾರದೆಂದ ಮೇಲೆ ರಾಜ್ಯಪಾಲನವೆಂಬ ಮಹಾಕಾರ್ಯವೆಂತಾಗುವುದು? ಸಹಾಯಕರಾಗಿರುವ ಸಚಿವರೆಂತಹರಿರಬೇಕು? ರಾಜನು ಯಾರನ್ನು ನಂಬಬೇಕು? ಯಾರಿಂದ ಕೂಡಿ ಆಲೋಚಿಸಬೇಕು?' ಎಂದು ಕೇಳಿದನು.

ಭೀಷ್ಮನು ನುಡಿದನು: 'ರಾಜನಿಗೆ ನಾಲ್ಕು ಜನರು ಮಿತ್ರರೆನಿಸುವರು. (1) ಸಹಾರ್ಥ ಅಂದರೆ, ಶತ್ರುನಿರ್ಮೂಲನವೆಂಬ ಸಮಪ್ರಯೋಜನದಿಂದ ನೆರವಾಗುವನು. (2) ಭಜಮಾನ ಅಂದರೆ ಗೆದ್ದ ರಾಜ್ಯವನ್ನು ಹಂಚಿಕೊಳ್ಳಲು ಬಯಸುವವನು. (3) ಸಹಜ ಅಂದರೆ ಪಿತೃಪಿತಾಮಹರಿಂದ ಸ್ನೇಹಬಂಧುವಾಗಿ ಬಂದವನು. (4) ಕೃತ್ರಿಮ

ಅಂದರೆ ಹೆಚ್ಚು ಧನಾಶೆಯಿಂದ ಶತ್ರುವನ್ನು ಸೇರಪೋಗುವವನು. ಇವರಲ್ಲದೆ ಧರ್ಮಸ್ಥ ನೆಂಬವನು ಐದನೇ ಮಿತ್ರನು. ಇವರಲ್ಲಿ ಮಧ್ಯಮರಾದ ಭಜಮಾನ ಸಹಜರು ಲೇಸು. ಸಹಾರ್ಥನು ಜಯವಾದಾಗ ಎಲ್ಲವನ್ನೂ ತಾನೇ ಹರಿಸಿಬಿಡಬಹುದು. ಕೃತ್ರಿಮನು ಮೋಸಮಾಡಿ, ಧನಾಶೆಯಿಂದ ಶತ್ರುಪಕ್ಷವನ್ನು ಸೇರಬಹುದು. ಇನ್ನು ಧರ್ಮಸ್ಥನು ನಿಷ್ಪಕ್ಷಪಾತಿಯಾಗಿರುವಾಗ ನಂಬಲರ್ಹನು. ಅಂತು ಐದು ವಿಧ ಮಿತ್ರರನ್ನೂ ರಾಜನು ಮಂತ್ರಿಗಳಾಗಿಟ್ಟು ತಾನು ಪ್ರತ್ಯಕ್ಷವಾಗಿ ಎಲ್ಲರನ್ನೂ ಪರಿಶೀಲಿಸಿ, ಎಚ್ಚರದಿಂದಿರಬೇಕು. ಪ್ರಜಾರಕ್ಷಣದಲ್ಲಿ ಪ್ರಮಾದವೆಸಗಿದ ರಾಜನಿಗೆ ಪರಿಭವವು ತಪ್ಪಿದ್ದಲ್ಲ.

ಮನುಜರು ಚಪಲಚಿತ್ತರು. ಇಂದು ಮಿತ್ರರು ನಾಳೆ ಶತ್ರುಗಳಾಗಬಹುದು. ಆದುದರಿಂದ ರಾಜನು ಸದಾ ಜಾಗರೂಕನಾಗಿ, ಮಂತ್ರಿಗಳನ್ನೂ ಇತರ ಪರಿವಾರವನ್ನೂ ಪರೀಕ್ಷಿಸುತ್ತಿರಬೇಕು. ಕೆಟ್ಟ ಮಂತ್ರಿಯನ್ನು ಶಿಕ್ಷಿಸಿದುದು ಮತ್ತಾರಿಗೂ ತಿಳಿಯಬಾರದು. ಕರುಡು ವಿಶ್ವಾಸವು ಅಕಾಲ ಮೃತ್ಯುವಿನ ಬಾಯಲ್ಲಿ ನೂಕುವುದು. ಸೀಮಾಂತ ಪಾಲರನ್ನು ನಂಬಿ ಕೂಡಬಾರದು. ಅವನು ಧನಾಶೆಯಿಂದ ಶತ್ರುವಶನಾದರೆ, ಸ್ವರಾಷ್ಟ್ರದಲ್ಲಿ ಶತ್ರುಗಳು ನುಗ್ಗುವರು. ಕೆರೆಯ ತೂಬನ್ನು ಮುರಿದು, ಕಟ್ಟೆಯನ್ನೊಡೆದರೆ, ದೂರದಲ್ಲಿದ್ದ ಗದ್ದೆಗಳೂ ನೀರಿನಲ್ಲಿ ಮುಣುಗಿಹೋಗುವವು. ಕೆರೆಯ ತೂಬಿನ ಸಮೀಪದಲ್ಲಿದ್ದ ಭೂಸ್ವಾಮಿಯು ಸರಿಯಾಗಿ ನೋಡಿಕೊಂಡರೆ, ಎಲ್ಲ ಭೂಮಿಗಳೂ ಸುರಕ್ಷಿತವಾಗುವವು. ಕೆರೆ ಒಡೆದ ರೈತನಂತೆ, ಸೀಮಾಂತವನ್ನು ಮಾರುವ ಸಾಮಂತನೂ ಅಹಿತನೆಂದು ತಿಳಿದು, ಅವನನ್ನು ಸಂಹರಿಸಬೇಕು.

ಉತ್ತಮ ಮಿತ್ರನೆಂದರೆ, ರಾಜವೃದ್ಧಿಯಿಂದ ಹರ್ಷಿಸಿ, ರಾಜಕ್ಷಯದಿಂದ ದೀನನಾಗುವ ಮಂತ್ರಿಯೇ, ಅಂತಹನನ್ನು ನಂಬು! ಅವನ ಕೂಡಿ ಆಲೋಚಿಸು! ಅವನಲ್ಲಿ ಮಹತ್ಕಾರ್ಯಭಾರವನ್ನಿಡು! ಅವನನ್ನು ಭೋಗಧನಗಳಿತ್ತು ಸುಖಪಡಿಸು! ರಾಜ ಸಂಪತ್ತಿಗೆ ಅಸೂಯೆಪಡದೆ, ರಾಜದಾರಿದ್ರ್ಯಕ್ಕೆ ಮರಗುವ ಮಂತ್ರಿಯು ಸನ್ಮಿತ್ರನು ಅವನು ರೂಪವರ್ಣ ಸ್ವರಮನೋಹರನಾಗಿರಬೇಕು. ಕುಲೀನನು, ಬುದ್ಧಿವಂತನು, ದಕ್ಷನು, ಅನಿಂದ್ಯಕರ್ಮನು, ಗುರುದೇವ ಪೂಜಕನು, ಪ್ರಜಾಪೂಜಿತನು, ವೇದಚತುರನು, ಶಾಸ್ತ್ರಕೋವಿದನು ಆದ ಮಂತ್ರಿಯನ್ನು, ತಂದೆಯಂತೆ ಸಮ್ಮಾನಿಸು! ಒಂದು ಕಾರ್ಯವನ್ನು ಒಬ್ಬನಿಗೆ ವಪ್ಪಿಸಿಬಿಡು! ಇಬ್ಬರಿಗೊಪ್ಪಿಸಿದರೆ ಸ್ಪರ್ಧಾಸೂಯೆಗಳು ಹುಟ್ಟುವವು. ಆಡಿದ ಮಾತಿಗೆ ತಪ್ಪದೆ ನಡೆಯುವವನು, ಸತ್ಕೀರ್ತಿಕಾಮನು, ಭಯಕಾಮ ಲೋಭಗಳಿಂದ ಧರ್ಮವನ್ನು ಬಿಡದವನು, ಜಂಬಗಾರನಲ್ಲದವನು, ಶೂರನು, ವಿದ್ವಾಂಸನು ಇಂತಹವರು ನಿನ್ನ ಅಮಾತ್ಯರಾಗಿರಲಿ.

ರಾಜನು ಜ್ಞಾತಿಗಳಿಂದಲು ಎಚ್ಚತ್ತಿರಬೇಕು. ದುಷ್ಟಜ್ಞಾತಿಗಳು ವಿಷವಹ್ನಿ ದ್ರೋಹಗಳಿಂದ ಕೊಲ್ಲಲು ಹೇಸರು. ಸಾಮಂತರನ್ನೂ ಕಣ್ಣಿಟ್ಟು ಪರೀಕ್ಷಿಸುವ ರಾಜನು ಪರಮಕ್ಷೇಮವನ್ನು ಪಡೆಯುವನು. ಜ್ಞಾತಿ ಸಾಮಂತರನ್ನು ಗೌರವ ಪ್ರೀತಿಗಳಿಂದ

ಕಂಡು ಯಥಾಯೋಗ್ಯವಾಗಿ ಅಧಿಕಾರವಿತ್ತು ಸತ್ಕರಿಸುವುದರಿಂದ ರಾಜನು ಅವರ ಪ್ರೀತಿಗೆ ಪಾತ್ರನಾಗುವನು.'

## ೧೪. ಜ್ಞಾತಿ, ಮಿತ್ರ, ದೂತಾದಿ ಲಕ್ಷಣ

ಭೀಷ್ಮನು ಮಂತ್ರಿ ಪುರೋಹಿತ ಲಕ್ಷಣ ವ್ಯಾಪಾರಗಳನ್ನು ನಿರೂಪಿಸಲು, ಧರ್ಮರಾಜನು ಮತ್ತೆ ಪ್ರಶ್ನಿಸಿದನು: 'ತಾತ! ಜ್ಞಾತಿಗಳಲ್ಲಿ ಮಿತ್ರಾಮಿತ್ರರಿರುವರು. ಅವರನ್ನರಿತು ರಾಜನು ವರ್ತಿಸುವ ಬಗೆ ಎಂತು?'

ಭೀಷ್ಮನಿಂತೆಂದನು: 'ಹಿಂದೆ ಶ್ರೀಕೃಷ್ಣನೂ ಮನುಜರಂತೆ ನಟಿಸುತ್ತಾ ನಾರದರನ್ನು ಇದೇ ವಿಷಯವನ್ನು ಕೇಳಿದನು. ಶ್ರೀಕೃಷ್ಣನು 'ನಾರದ! ಮಂತ್ರಾಲೋಚನೆ ಮಾಡಲರ್ಹನಾದವನು ಮಿತ್ರನಹುದು; ಆದರೆ ಅವನು ಅಪಂಡಿತನಾದರೆ ಏನು ಪ್ರಯೋಜನ? ಪಂಡಿತನಾದರೂ ಆತ್ಮೀಯನು, ವಿಶ್ವಾಸಾರ್ಹನು, ದೈವಭಕ್ತನೂ ಆಗದಿದ್ದರೆ ಉಪಯೋಗವಿಲ್ಲ. ನೀನು ಸುಹೃದ್ವರನಾಗಿರುವೆ! ಜ್ಞಾತಿಗಳಿಗೆ ಕೊಡಬೇಕು, ಅವರ ಬಿರುನುಡಿ ಕೇಳಿ ಸುಮ್ಮನಿರಬೇಕು. ಇಂತಹ ಜ್ಞಾತಿದಾಸ್ಯವೆನಗೆ ಸರಿಬೀಳದು. ಆಹುಕನಲ್ಲಿ ಸ್ನೇಹದಿಂದ ಕೃಷ್ಣನು ನನ್ನನ್ನು ದ್ವೇಷಿಸುವನು ಎಂದು ಅಕ್ರೂರನು ನಿಂದಿಸುವನು. 'ಅಕ್ರೂರನಲ್ಲಿ ಸ್ನೇಹದಿಂದ ನನ್ನನ್ನು ದ್ವೇಷಿಸುವನೆಂದು ಆಹುಕನು ನಿಂದಿಸುವನು. ಇಂತು ಉಭಯ ನಿಂದೆಗೂ ನಾನು ಗುರಿಯಾಗಿರುವೆನು. ಅಣ್ಣನು ಬಲವಂತನು; ಗದನುಸುಕುಮಾರನು; ಪ್ರದ್ಯುಮ್ನನು ರೂಪವಂತನು; ಯಾದವರೆಲ್ಲ ದುರುತ್ಸಹರು. ಇಂತಹ ಮತ್ತರನ್ನು ಕಟ್ಟಿಕೊಂಡು ನಾನು ನಿರ್ವಹಿಸಲಾರದಿರುವೆನು. ಇಬ್ಬರು ಜೂಜುಗಾರರ ತಾಯಿಯಂತೆ ನಾನು ಯಾರಿಗೆ ಜಯವನ್ನು ಬಯಸಲಿ? ಯಾರಿಗೆ ಅಪಜಯವನ್ನು? ಇಂತು ಚಿಂತೆಗೀಡಾಗಿರುವ ನನಗೆ ಶ್ರೇಯವೆಂತು? ಹೇಳು!' ಎಂದು ಕೇಳಿದನು.

ನಾರದನು ಇಂತು ನುಡಿದನು: 'ಕೃಷ್ಣ! ಬಾಹ್ಯ, ಅಭ್ಯಂತರವೆಂಬ ಎರಡು ವಿಧವಾದ ಆಪತ್ತುಗಳು ಅನ್ಯಜನರಿಂದಲು, ಸ್ವಜನರಿಂದಲು ಬರುವವು. ಎಲ್ಲ ಜನರು ಅರ್ಥಕ್ಕಾಗಿ ಕಾದಾಡುವರೇ ಎಂದು ತಿಳಿ! ನೀನಾಗಿ ಗೆದ್ದ ರಾಜ್ಯವನ್ನು ಆಹುಕನಿಗಿತ್ತು, ಅಕ್ರೂರಾದಿಗಳಿಗೆ ಅಹಿತನಾದೆ! ಅವನಿಗೆ ಕೊಟ್ಟುದನ್ನು ವಾಂತವಾದ ಅನ್ನದಂತೆ - ಮತ್ತೆ ಹಿಂದಕ್ಕೆ ಪಡೆಯಲಾಗದು. ಮಹಾ ಪ್ರಯತ್ನದಿಂದ ಅದನ್ನು ಕಸಿದುಕೊಡಲು ಯತ್ನಿಸಿದರೆ, ಯುದ್ಧವೇ ಆಗಿ ಮಹಾಕ್ಷಯವಾಗುವುದು. ಆದುದರಿಂದ ಅಲೋಹವಾದ ಶಸ್ತ್ರದಿಂದ ಅವರೆಲ್ಲರ ನಾಲಿಗೆಯನ್ನು ಕಡಿದಿಡು! ಅವರು ಕಲಹವಾಡದಂತೆ ಬಾಯಿಗೆ ಬೀಗ ಹಾಕು! ಅನ್ನಾದಿಗಳನ್ನಿತ್ತು ಸತ್ಕರಿಸು! ವಸ್ತ್ರರತ್ನಗಳನ್ನು, ಬಿರುದು ಬಾವಲಿಗಳನ್ನೂ ಕೊಡು! ಅವರ ತಪ್ಪನ್ನು ಮನದಲ್ಲಿಡದೆ ಕ್ಷಮಿಸು! ಶಿಕ್ಷಿಸುವಾಗ ಮೃದುವಾಗು! ಯಥಾರ್ಹವಾಗಿ ಪುಜ್ಯರನ್ನು ಪೂಜಿಸು! ಸಂಘದಲ್ಲಿ ಬಲವಿದೆ. ಪರಸ್ಪರ ಭೇದದಿಂದ

ವಿರೋಧಿಸಿ ನಡೆದರೆ, ಸಂಘವು ಹಾಳಾಗುವುದು. ಚರಾಚರಗುರುವಾದ ನಿನಗೆ ಹೇಳಬೇಕಾದ್ದಿಲ್ಲ. ಇಂದ್ರಿಯನಿಗ್ರಹ, ಕ್ಷಮಾ, ದಾನ, ತ್ಯಾಗ, ಪ್ರಜ್ಞಾದಿಗುಣಗಳು ಉಳ್ಳ ಬುದ್ಧಿವಂತನು ಜ್ಞಾತಿ ಪ್ರೀತಿಯನ್ನು ಗಳಿಸುವನು. ಯದುಶ್ರೇಷ್ಠ! ನಿನ್ನಂತಹ ಸತ್‌ಪ್ರಭುವಿನನ್ನು ಪಡೆದು ಬಂದ ಯಾದವರು ಸಮೃದ್ಧಸಂಪದ್ಯುಕ್ತರಾಗಿ ಸುಖ ವಾಗಿರಲಿ ! '

ಅಮಾತ್ಯ ಮಿತ್ರ ಬಂಧು ಜನರನ್ನಂತೆ ರಾಜನು ಕೋಶವನ್ನೂ ರಕ್ಷಿಸಿ ವೃದ್ಧಿಗೊಳಿಸಬೇಕು. ಹಿಂದೆ ಕೋಶಲಾಧಿಪನಾದ ಕ್ಷೇಮದರ್ಶಿಗೆ ಕಾಲಕವೃಕ್ಷೀಯನೆಂಬ ಮುನಿಯು ಇಂತೆಂದನು: "ರಾಜನ್! ಈ ನನ್ನ ಕಾಗೆಯು ಸರ್ವದರ್ಶಿಯಾಗಿದೆ. ಅದು ತ್ರಿಕಾಲಗಳಲ್ಲಿ ನಡೆದುದನ್ನು ಹೇಳಬಲ್ಲದು" ಎಂದು ಪರೀಕ್ಷೆಗಾಗಿ, ತನ್ನ ಕಾಕ ವಚನದಂತೆ, ರಾಜಾಮಾತ್ಯಭೃತ್ಯ ಪರಿವಾರ ಜನರ ದೋಷಗಳನ್ನು, ರಾಜ ಸಮ್ಮುಖದಲ್ಲಿಯೇ ಹೇಳತೊಡಗಿದನು. ಇಂತಹವನು ಇಷ್ಟು ಧನವನ್ನು ಕೋಶಕ್ಕೆ ಸೇರಿಸದೆ ಅಪಹರಿಸಿರುವನೆಂಬ ವಿಪ್ರನ ಪ್ರತಿ ಮಾತೂ ಸತ್ಯವಾಗಿತ್ತು. ಅಂದಿನ ರಾತ್ರಿ, ಕುಪಿತರಾದ ಭೃತ್ಯರು ನಿದ್ರಿಸುತ್ತಿದ್ದ ಕಾಗೆಯನ್ನು ಕೊಂದರು. ಪಂಜರದಲ್ಲಿ ಬಾಣ ವಿದ್ಧವಾಗಿ ಬಿದ್ದಿದ್ದ ಕಾಗೆಯನ್ನು ಕಂಡು, ವಿಪ್ರನು 'ರಾಜನ್! ಪ್ರಜರ ಪ್ರಾಣಧನಗಳಿಗೆ ಒಡೆಯನಾಗಿ ರಕ್ಷಿಸುವ ನಿನ್ನಿಂದ ಅಭಯವನ್ನು ಬೇಡುತ್ತಿರುವೆನು. ಅರ್ಥನಾಶ ವಾಗುವುದನ್ನು ನುಡಿದ ಕಾಗೆಯಂತೆ, ನಾನೂ ದುಷ್ಟರಿಂದ ಸಾಯದಂತೆ ಕಾಪಾಡು! ನಿನಗೆ ಹಿತವನ್ನರುಹಲು ಬಂದಿರುವೆನು. ನಿನ್ನ ದೇಶವೆಲ್ಲಾ ತಿರುಗಿದೆನು. ಕಾಗೆಯ ಸಹಾಯದಿಂದ ನಿನ್ನ ಧನವನ್ನು ಕದಿವ ಕಳ್ಳ ಭೃತ್ಯರನ್ನೂ ಉದ್ಯೋಗಿಗಳನ್ನೂ ಅರಿತೆನು. ಅದನ್ನು ನಿನಗೆ ತಿಳಿಸಿ ಉಪಕರಿಸಲೆಂದು ಬಂದ ನನ್ನ ಕಾಗೆಯನ್ನು, ಅವರು ಕೊಂದರು. ರಾಜೋಪಜೀವಿಗಳಿಗೆ ಮಿತ್ರರೂ ಇರುವರು; ಶತ್ರುಗಳೂ ಇರುವರು. ಸೇವಕರನ್ನು ಪ್ರಮಾದವನ್ನೆಸಗಿದರೆ, ಅವನ ಪೂರ್ವೋಪಕಾರವನ್ನೆಲ್ಲ ಮರೆತು. ರಾಜನೂ ಶಿಕ್ಷಿಸುವನು; ರಾಜನಿಗೆ ಹಿತಮಾಡಲು ಹವಣಿಸಿದರೆ, ರಾಜ ಶತ್ರುಗಳೂ ದ್ವೇಷಿಸುವರು. ರಾಜಕೋಪದಂತೆ, ಶತ್ರುಕೋಪವೂ ಮರಣಾಂತಿಕವಾಗುವುದು. ರಾಜೋದ್ಯೋಗವು ಕತ್ತಿಯ ಮೇಲೆ ಸಾಮು. ಮಾನವನು ಜೀವದಾಶೆ ತೊರದೇ ರಾಜನ ಸೇವೆಗೆ ನಿಲ್ಲಬೇಕು. ಮಾತು, ನಡೆ, ಆಸನ, ಮುಖಚೇಷ್ಟೆ ಸ್ನೇಹಿತರನ್ನಾರಿಸುವಿಕೆ ಮುಂತಾದುದರಲ್ಲಿ ಸೇವಕನು ಎಚ್ಚತ್ತಿರಬೇಕು. ಹೆಡೆ ಎತ್ತಿದ ಹಾವು, ಉರಿಯುವ ಅಗ್ನಿ ಕೆರಳಿದ ಸಿಂಹ, ಮದವೇರಿದ ಆನೆ – ಇವುಗಳಿಗೂ ಮಿಗಿಲು ಭಯಂಕರನಾದವನು ಕುಪಿತ ರಾಜ. ಆದರೂ ನಿನ್ನ ಹಿತವನ್ನು ಬಯಸಿ ಹೇಳುವೆನು: ಕೇಳು! ನಿನ್ನ ಹಿತವನ್ನರುಹಿದ ಕಾಗೆಯನ್ನು ನಿನ್ನ ಅಮಾತ್ಯರು ಕೊಲ್ಲಿಸಿದರು. ಅದರಲ್ಲಿ ನಿನ್ನ ತಪ್ಪಿಲ್ಲ. ನಿನ್ನ ಮನೆಯಲ್ಲಿದ್ದು, ನಿನ್ನ ಧನಾದಿಗಳನ್ನು ಅಪಹರಿಸುತ್ತಿರುವವರು ಯಾರೆಂದು ನನಗೆ ಗೊತ್ತು. ಗೊತ್ತೆಂದೇ ಅವರು ನನ್ನನ್ನೂ ಕಾಗೆಯನ್ನಂತೆ ಕೊಲ್ಲಬೇಕೆಂದಿರುವರು. ಅವರು ಸೂತಾಧಿಗಳಿಗೆ ಧನವಿತ್ತು, ನಿನ್ನನ್ನೂ ಕೊಲ್ಲಿಸಬಹುದು. ಆಯುಸ್ಸಿದ್ದು ಉಳಿಯಬೇಕಾಗಲಿ,

ಇವರಿಂದ ತಪ್ಪಿ ಜೀವದಿಂದಿರುವುದು ದುಷ್ಕರವೇ ಸರಿ! ನನಗೆ ಅಪ್ಪಣೆ ಕೊಡು! ನಕಮೀನತಿಮಿಗಳಂತೆ ಸಜಾತೀಯ ವಿಜಾತೀಯ ದುರ್ಬಲ ಪ್ರಾಣಿಗಳನ್ನು ಕೊಂದು ತಿನ್ನುವ ರಾಜಾಮಾತ್ಯಾದಿ ಜನರ ಸಹವಾಸ ಸಾಕು! ಜಲದುರ್ಗವನ್ನು ನೌಕೆಯಿಂದಲು, ವನದುರ್ಗವನ್ನು ವಹ್ನಿಯಿಂದಲು ದಾಟಬಹುದು; ಆದರೆ ರಾಜದುರ್ಗವನ್ನು ದಾಟುವ ಉಪಾಯವೇ ಇಲ್ಲ. ಕತ್ತಲು ಕೋಣೆಯಂತಿರುವ ನಿನ್ನ ರಾಜ್ಯದಲ್ಲಿ ಏನು ಯಾವಾಗ ನಡೆಯುವುದೋ ನಿನಗೇ ತಿಳಿಯದೆಂದ ಮೇಲೆ ಇನ್ನು ನನಗೆಂತು ತಿಳಿಯುವುದು? ಒಹ್ವಾವರ್ತವಾದ ಸೀತಾನದಿಯಲ್ಲಿ ಹಡಗವೂ ಮುಣುಗುವಂತೆ, ಧರ್ಮಾಧರ್ಮ ವಿವೇಕರಹಿತವಾದ ಈ ರಾಜ್ಯದಲ್ಲಿ, ಹಿತಕಾರಿಯಾದ ನಾನೂ ನಷ್ಟವಾಗುವೆನು.

ಸರ್ಪಭರಿತವಾದ ಕೂಪದಂತಿರುವೆ! ಮಕರಾಕ್ರಾಂತ ನದಿಯಂತಿರುವೆ! ದಾವಾಗ್ನಿಯು ಹುಲ್ಲುಗಾವಲನ್ನು ಸುಡುತ್ತಾ, ಉರಿದೆದ್ದು ಮರವನ್ನೂ ಸುಡುವಂತೆ, ನಿನ್ನ ಅಮಾತ್ಯರಿಂದ ಬೆಳೆದ ವೈರವಹ್ನಿಯು ನಿನ್ನನ್ನು ಸುಟ್ಟುಬಿಡುವುದು. ನಿನ್ನಿಂದ ಬೆಳೆದು ನಿಂತು, ನೀನಿತ್ತುದನ್ನು ತಿಂದು, ನಿನ್ನದನ್ನು ಕದ್ದು, ನಿನ್ನ ಕೇಡನ್ನು ಸಾಧಿಸಪೋಗಿ, ತಮ್ಮ ಅಹಿತವನ್ನು ಸಾಧಿಸುವ ನನ್ನನ್ನು ಅವರು ದ್ವೇಷಿಸದಿರರು. ನಾನಿಲ್ಲಿರಲಾರೆನು. ಅಪ್ಪಣೆ ಕೊಡು!" ಎಂದನು.

ರಾಜನು, 'ಬ್ರಾಹ್ಮಣೋತ್ತಮ! ಹೋಗಬೇಡ! ನನ್ನ ಮನೆಯಲ್ಲಿಯೇ ಇರು. ನಿನ್ನನ್ನು ವಿಶೇಷವಾಗಿ ಸತ್ಕರಿಸುವೆನು. ನಿನಗಾಗದವರು ನನ್ನ ಮನೆ ಬಿಟ್ಟು ನಡೆಸು!' ಎಂದು ಬೇಡಿದನು. ಬ್ರಾಹ್ಮಣನು, 'ರಾಜನ್! ಮೊದಲು ನಿನ್ನ ಅಮಾತ್ಯರನ್ನು ದುರ್ಬಲರನ್ನಾಗಿಸಿಡು! ಕಾಗೆಯನ್ನು ಕೊಂದುದಕ್ಕೆ ಶಿಕ್ಷೆ ಎಂದು ಹೇಳದೆ ಭೃತ್ಯರನ್ನು ಕಿತ್ತೊಗೆ! ಅತಿ ದುಷ್ಟರನ್ನು ಗೋಪ್ಯವಾಗಿ ಕೊಲ್ಲಿಸಿಬಿಡು! ಅಕಸ್ಮಾತ್ತಾಗಿ, ಎಲ್ಲರನ್ನೂ ಕೊಲ್ಲಬಾರದು. ಹಾಗಾದಾಗ ಅದನ್ನು ತಿಳಿದು, ಅವರು ಕೂಡಿ, ಮೇಲೇರಿ ಬಂದರೆ, ನಿನಗೇ ಪ್ರಾಣಸಂಕಟವು ಒದಗೀತು! ನಾವು ವಿಪ್ರರು, ಮೃದುಸ್ವಭಾವರಾದುದರಿಂದ, ನಿಮ್ಮಂತೆಯೇ ಪರರು ಸುಖವಾಗಿರಬೇಕೆನ್ನುವೆವು. ನನಗೆ ನಿನ್ನ ಕ್ಷೇಮವು ಬೇಕು. ಆದುದರಿಂದ ಬಹುಪ್ರಜಾಕ್ಷೇಮವಾಗುವುದು. ಕಾಲಕವೃಕ್ಷೀಯನು ಸತ್ತರೆ ಚಿಂತೆಯಿಲ್ಲ. ಕೋಶಲರಾಜನಿಗಾಪತ್ತು ಬಂದರೆ, ಕೋಸಲ ಪ್ರಜರೆಲ್ಲ ದುಷ್ಟರ ವಶವಾಗಿ ಸಾಯುವಂತಾದೀತು! ನಿನ್ನ ತಂದೆಯ ಸ್ನೇಹಿತನ ಮಗನಾದ ನನ್ನನ್ನು ನಂಬು! ರಾಜಕಾರ್ಯಗಳನ್ನು ಅಮಾತ್ಯರಲ್ಲಿ ಬಿಟ್ಟು ಕೊಡಬೇಡ! ಧರ್ಮ ಜಾಗರೂಕನಾಗು!"

ಕೋಶಲರಾಜನು ಕಾಲಕವೃಕ್ಷೀಯ ವಚನವನ್ನು ಚಾಚೂ ತಪ್ಪದೆ ಪಾಲಿಸಿದನು. ದುಷ್ಟಾಮಾತ್ಯ ಸೇನಾಪತಿ ಭೃತ್ಯರನ್ನು ತೊಲಗಿಸಿ, ಸದಾಮಾತ್ಯಾದಿಗಳಿಂದ ಕೂಡಿ, ರಾಜ್ಯವನ್ನು ನಿಷ್ಕಂಟವನ್ನಾಗಿಸಿದನು. ಕಾಲಕವೃಕ್ಷೀಯನು ಅವನ ಪುರೋಹಿತನಾಗಿ, ಧರ್ಮಮಾರ್ಗದಲ್ಲಿ ಅವನನ್ನು ನಡೆಸಿ, ಶ್ರೇಯಃಸಂಪಾದಕನಾದನು."

ಧರ್ಮರಾಜನು ಸಭಾಸದರಾದಿ ಪರಿವಾರ ಲಕ್ಷಣವನ್ನು ತಿಳಿಯಲಪೇಕ್ಷಿಸಲು, ಭೀಷ್ಮನಿಂತೆಂದನು: 'ರಾಜನ್! ಅಕಾರ್ಯ ಲಜ್ಜಿತರು, ಇಂದ್ರಿಯ ಜಯವಂತರು, ಸತ್ಯವಚನರು, ಧೈರ್ಯವಂತರು ಆದವರೇ ಸದಸ್ಯರಾಗಿರಲು ಅರ್ಹರು. ಅಮಾತ್ಯರು ಶೂರರು, ಕ್ಷತ್ರಿಯರು, ಪಂಡಿತವಿಪ್ರರು, ಸಂತುಷ್ಟ ವೈಶ್ಯರು, ಉತ್ಸಾಹಿಶೂದ್ರರೂ ಆಗಿರಬೇಕು. ಕುಲೀನನು ಆಪತ್ತಿನಲ್ಲಿ ಮುನ್ನುಗ್ಗಿ ರಾಜರಕ್ಷಣೆ ಮಾಡಬಲ್ಲನು. ಅಂತಹ ಕುಲಶೀಲವಂತರು ನಿನ್ನ ಸ್ನೇಹಿತರಾಗಿರಬೇಕು. ಸ್ವದೇಶಜನರು, ವೀರರು, ರೂಪವಂತರು, ಬಹುಶ್ರುತರು, ಅನುರಾಗಯುತರು ಆದ ಅಂಗ ರಕ್ಷಕರನ್ನು ನಿಯಮಿಸು! ದುಷ್ಕುಲರು ಲುಬ್ಧರು, ಲಜ್ಜಾರಹಿತರು, ಆದ ಪರಿವಾರವು ಕೊಡುವಾಗ ಬಡಿವಾರವನ್ನೂ, ಕೊಡದಾಗ ಬಡಿದಾಟವನ್ನೂ, ತೋರುವರು. ರಾಜನು ಕಾಲವನ್ನರಿತು ವಸ್ತ್ರಾಂಬೂಲರತ್ನ ಖಡ್ಗಾದಿ ಸತ್ಕಾರಗಳಿಂದ ಅಮಾತ್ಯಾದಿ ಜನರನ್ನು ಸಂತೋಷಪಡಿಸುತ್ತಿರಬೇಕು. ನಿತ್ಯಾರ್ಥಿಗಳಲ್ಲಿ ವಿದ್ವಾಂಸರನ್ನು, ಸಚ್ಛೀಲರನ್ನು, ಸತ್ಯವಾದಿಗಳನ್ನು ತಿಳಿದು ಬೇಕಾದುದನ್ನಿತ್ತು ಸತ್ಕರಿಸು! ಅನ್ಯಾಯಪರರನ್ನು, ಸಮಯಾಸಮಯ ಜ್ಞಾನಶೂನ್ಯರನ್ನು ತಿರಸ್ಕರಿಸು!

ಗುಣವಂತನೊಬ್ಬನೇ ಸಾಕು! ವಿದ್ಯಾವಂತನೊಬ್ಬನೇ ಸಾಕು! ಸಮರ್ಥನೊಬ್ಬನೇ ಸಾಕು ! ಗುಣಹೀನರು, ದಡ್ಡರು, ಹೇಡಿಗಳು, ಆಲಸರು – ಸಾವಿರಾರು – ಕಲೆತರೂ ರಾಜಕಾರ್ಯವಾಗುವುದಿಲ್ಲ. ಇಂತು ತಿಳಿದು, ನಡೆವ ರಾಜನಿಗೆ ಅಮಿತ್ರರೂ ಹೆದರಿ ಮಿತ್ರರಾಗುವರು. ಮಿತ್ರರು ಪ್ರೀತಿಸಿ ಕೀರ್ತಿ ತರುವರು. ಮಂತ್ರಿಗಳು ಉತ್ತಮ ವಂಶದವರು, ವೇದಪಥನಿಷ್ಠರು, ಪರಂಪರಾಪ್ರಾಪ್ತರು, ಅನಹಂಕಾರಿಗಳೂ ಆಗಿರುವುದು ರಾಜ ಕ್ಷೇಮಕರವು. ವಿವಿಧ ಕಾರ್ಯನಿಷ್ಠರಾದ ಮಂತ್ರಿಗಳು ಐವರಿರಬೇಕು. ಅವರು ಅಲ್ಪಶ್ರುತರಾದರೆ, ಅರ್ಥನಿಶ್ಚಯ ಮಾಡಲಾರರು ; ಲೋಭಿಗಳಾದರೆ ಶತ್ರುವಶರಾಗುವರು ; ದುಷ್ಕುಲೀನರಾದರೆ ರಾಜದ್ರೋಹವನ್ನೆಸಗುವರು. ದುಶ್ಶೀಲರಾದರೆ ಅಂತಃಪುರವನ್ನು ದೂಷಿಸುವರು ; ಮದಮತ್ತರಾದರೆ ರಾಜ್ಯವು ಹಾಳಾಗುವುದು. ಮಾತ್ಸರ್ಯಯುತರಾದರೆ ಸತ್ಕಾರ್ಯಗಳು ನಿಂತುಹೋಗುವವು. ಇಂತಹ ದೋಷಿಗಳನ್ನು ಬಿಟ್ಟು ರಾಜನು ಧೀರರು, ವಿದ್ವಾಂಸರು, ಸತ್ಕುಲೀನರು, ಉದಾರಿಗಳು ಆದವರನ್ನೇ ನಿಯಮಿಸಬೇಕು.

ಕ್ಷುದ್ರಮಂತ್ರಿಯು – ಗಿಡದ ಕೋಟರಗಳಲ್ಲಿ ಹೊಕ್ಕ ಅಗ್ನಿಯಂತೆ – ರಾಜನನ್ನು ನಾಶಮಾಡುವನು. ಸಿಟ್ಟಾಗಿ ಶಿಕ್ಷಿಸಿದರೆ ಹಗೆ ಇಡದೆ, ಪರುಷವನ್ನಾಡಿದರೆ ಬದುಲಾಡದೆ, ಸದಾ ಕರ್ತವ್ಯಪರಾಯಣನಾದ ಮಂತ್ರಿಯನ್ನು ಅನುರಕ್ತನೆಂಬುವರು. ಕಪಟಿಯನ್ನು ಸರ್ವಥಾ ನಂಬಬಾರದು. ಶತ್ರುಬಾಂಧವನು, ಮಿತ್ರಶತ್ರುವು, ಕ್ರೋಧನನು, ದೂರ ದೇಶದವನು, ಅಶುಚಿಯು, ದಂಭವಚನನು ಇವರೆಲ್ಲರೂ ಮಂತ್ರಿಪದಾರ್ಹರಲ್ಲ. ತನ್ನ ತಪ್ಪನ್ನೂ ತಿಳಿವ ಮಂತ್ರಿಯಿಂದ ರಾಜ್ಯವು ಬೆಳಗುವುದು. ಮಂತ್ರಗೋಪನ ಸಮರ್ಥನಾದ ಮಂತ್ರಿಯಿಂದ ಶತ್ರುಜಯವು ಕೈಗೂಡುವುದು. ಸಾಂತ್ವನ ದಾನ

ಮಾನಗಳಿಂದ ಪ್ರಜರನ್ನು ವಶೀಕರಿಸಿಕೊಂಡ ಮಂತ್ರಿವರನಿಂದ ರಾಜ್ಯವು ರಕ್ಷಿತವಾಗುವುದು. ಅಂತಹ ಮಂತ್ರಿಗಳ ಸಂಖ್ಯೆ ಮೂರಕ್ಕೆ ಕಡಿಮೆಯಾಗಬಾರದು. ಐದಕ್ಕೆ ಹೆಚ್ಚಾಗಬಾರದು. ಒಳ್ಳೆಯ ಮಂತ್ರಿಗಳ ಮಂತ್ರಾಲೋಚನೆಯಿಂದ ರಾಷ್ಟ್ರವು ಭಯರಹಿತವೂ ಸಂಪತ್ಸಮೃದ್ಧವೂ ಆಗುವುದು. ರಾಜನೂ ಮಂತ್ರಿಗಳೂ ಮದಮಾನ ಕ್ರೋಧಲೋಭಾಸೂಯಾದಿ ದೋಷಗಳನ್ನು ಬಿಟ್ಟು ಅನ್ಯೋನ್ಯ ಪ್ರೀತಿಯಿಂದ ವರ್ತಿಸಿದರೆ, ಅವರಿಗೂ, ರಾಜ್ಯಕ್ಕೂ ಸುಖವಾಗುವುದು; ಛಲವು ಸರ್ವಥಾ ಕೂಡದು. ಅಶ್ವತ್ಥಾಮಾಹತಃ ಕುಂಜರಃ ಎನ್ನುವಾಗ ಧರ್ಮರಾಜನು ವಚನಚ್ಛಲನಾದನು. ಅಶ್ವತ್ಥಾಮನು ಉಪಪಾಂಡವಾದಿಗಳನ್ನು ಕೊಂದಾಗ ಕ್ರಿಯಾಚ್ಛಲನಾದನು. ಲಾಕ್ಷಾಗೃಹದಲ್ಲಿ ಕೌರವರ ಮಾನಸಚ್ಛಲವು ಕಾಣುವುದು.

ಮಂತ್ರಿತ್ರಯವು ಭಿನ್ನಾಭಿಪ್ರಾಯವಾದಾಗ, ರಾಜನು ತನ್ನ ಬುದ್ಧಿಯಿಂದ ಆಲೋಚಿಸಿ, ಆಮೇಲೆ ಅವರಿಗೆ ತಿಳಿಸಿ, ಏಕಮುಖರನ್ನಾಗಿಸಬೇಕು. ತನಗೂ ತಿಳಿಯದಾದ ವಿಷಯವನ್ನೂ ಜ್ಞಾನಿಯಾದ ವಿಪ್ರರಿಂದ ತಿಳಿಯಬೇಕು. ವಿಚಾರಿಸಿ, ನಿಶ್ಚಿತವಾದ ಕಾರ್ಯವನ್ನೇ ಮಾಡಬೇಕು.

ಮಂತ್ರ ನಿಶ್ಚಯವು ರಹಸ್ಯವಾಗಿ ನಡೆಯಬೇಕು. ಮಂತ್ರಾಗಾರದ ಸುತ್ತ-ಮುತ್ತಲೂ ಮತ್ತು ಮೇಲೆ(ಮಹಡಿ) ಕೆಳಗೂ (ಅಂತರ್ಗೃಹ) ಯಾರೂ ಇಲ್ಲದಂತೆ ನೋಡಿಕೊಳ್ಳಬೇಕು. ವಾಮನಕಾಯರು, ಕೃಶರು, ಕುಂಟರು, ಕುರುಡರು, ಹುಚ್ಚರು, ಸ್ತ್ರೀಯರು, ನಪುಂಸಕರು ಮುಂತಾದವರನ್ನು ಪರಿಸರದಲ್ಲಿಡದೆ ಗೋಡೆ ಪರದೆಗಳಿಲ್ಲದ ಬಯಲು ಮಾಳಿಗೆಯಲ್ಲಿ ಮಂತ್ರಾಲೋಚನೆ ಮಾಡಬೇಕು. ಅಂಗವಿಕಾರ, ನೇತ್ರವಿಕಾರಗಳಿಂದ ಇಂಗಿತವು ಗೊತ್ತಾಗಬಹುದು ; ಆದುದರಿಂದ ಶಾಂತಸ್ಥಿರಗಂಭೀರ ವದನರಾಗಿ ಮಂತ್ರಿಗಳು ರಾಜನೊಡನೆ ವಿಚಾರ ಮಾಡಬೇಕು.

ಮಂತ್ರಮೂಲಭೂತವಾದ ಪ್ರಜಾಸಂಗ್ರಹಣ ವಿಷಯದಲ್ಲಿ ಇಂದ್ರ ಗುರು ಸಂವಾದವನ್ನು ಹೇಳುವೆನು: ಇಂದ್ರನು ಬೃಹಸ್ಪತಿಯನ್ನು ಸೇರಿ, 'ಬ್ರಹ್ಮನ್! ಯಾವ ಗುಣದಿಂದ ರಾಜನು ಪ್ರಜಾಸಮ್ಮತನಾಗುವನು ಮತ್ತು ಕೀರ್ತಿಯನ್ನು ಗಳಿಸುವನು ?' ಎಂದು ಕೇಳಿದನು. ಬೃಹಸ್ಪತಿಯು 'ರಾಜನು ನಿಷ್ಕಪಟ ಪ್ರಿಯವಚನದಿಂದ ಪ್ರಜಾಸಮ್ಮತವಾಗಿ ಕೀರ್ತಿಯನ್ನೂ ಪಡೆಯುವನು. ಪ್ರಿಯವನ್ನಾಡದೆ, ಸದಾ ಹುಬ್ಬುಗಂಟಿಕ್ಕಿ ಕೂತಿರುವ ರಾಜನು ಪ್ರಜಾದ್ವೇಷವನ್ನು ಪಡೆಯುವನು. ಬಂದವನನ್ನು ಸೌಮ್ಯ ದೃಷ್ಟಿಯಿಂದ ನೋಡಿ, ಏಕೆ ಬಂದೆ? ಏನಾಗಬೇಕು. ಹೇಳು!' ಎಂದು ಕೇಳುವ ಪ್ರಭುವರನ ಮಂದಸ್ಮಿತವು ಸರ್ವಲೋಕವನ್ನು ಜಯಿಸಬಲ್ಲದು. ಒಳ್ಳೆಯ ಮಾತಿಲ್ಲದ ದಾನವೂ ಹಿತಕರವೆನಿಸುವುದಿಲ್ಲ. ಸಾಂತ್ವನ ಶೀಲರಾಜನು ಎಲ್ಲವನ್ನೂ ಕಸಿದರೂ ಅಹಿತವೆನಿಸುವುದಿಲ್ಲ. ದಂಡವನ್ನು ಪ್ರಯೋಗಿಸುವಾಗಲೂ ಸಾಂತ್ವಮಿಳಿತವಾಗಿರಬೇಕು. ಸಿಟ್ಟಿನ ಮಾತು ಪ್ರಜರನ್ನು ಉದ್ವೇಗಗೊಳಿಸಿಬಿಡುವುದು.

ಶ್ಲಕ್ಷ್ಣವು ಮಧುರವು, ಗಂಭೀರವು ಆದ ಸಾಂತ್ವನ ವಚನದಂತಹ ಪ್ರಜಾಸಂಗ್ರಹಣ ಸಾಧನವಿನ್ನೊಂದಿಲ್ಲ' ಎಂದು ತಿಳಿಸಿದನು.

ರಾಜನ ವ್ಯವಹಾರವು ಶುದ್ಧವಾಗಿರಬೇಕು. ಒಂದು ವಸ್ತುವಿ (ಗೃಹಾರಾಮಧನ ಕ್ಷೇತ್ರಗಳಿ) ಗಾಗಿ ಕಾದಾಡುವ ಇಬ್ಬರಲ್ಲಿ ಯಾರು ಸರಿ ಎಂದು ವಿಚಾರಿಸಿ, ಅವರಿಗೆ ಅದನ್ನು ಕೊಡಿಸಬೇಕಾಗಲಿ, ಅವರಿಬ್ಬರನ್ನು ತಳ್ಳಿ, ತಾನು ಕದಿಯಬಾರದು. ಶುಶ್ರೂಷಾ, ಶ್ರವಣ, ಗ್ರಹಣ, ಧಾರಣ, ಮನನ, ಊಹನ, ಅಮೋಹನ, ವಿಜ್ಞಾನ, ತತ್ವಜ್ಞಾನವೆಂಬ ಎಂಟು ಮಂತ್ರಗುಣಗಳಿಂದ ಯುಕ್ತರಾದ ವ್ಯವಹಾರವಿದರಿಂದ ಕೂಡಿ ವ್ಯವಹಾರಗಳನ್ನು ಪರಿಷ್ಕರಿಸಬೇಕು. ಎಂಟು ಗುಣಗಳೂ ಒಬ್ಬನಲ್ಲಿರುವುದಿಲ್ಲ ನಿಜ ! ಆದರೆ ಸಾಧ್ಯವಿದ್ದಷ್ಟು ಗುಣಗಳಿದ್ದವರಿಂದಲೇ ವಿಚಾರ ವಿನಿಮಯವೆಂದು ತಿಳಿ ! ವೇದವಿದರಾದ ಬ್ರಾಹ್ಮಣರು, ನಾಲ್ಕು ಜನರು, ಬಲಶೌರ್ಯಯುತರಾದ ಕ್ಷತ್ರಿಯರು ಎಂಟು ಜನರು, ವಿತ್ತಸಂಪನ್ನರಾದ ವೈಶ್ಯರು ಇಪ್ಪತ್ತೊಂದು ಜನರು, ವಿನಯ ಧುರ್ಯರಾದ ಶೂದ್ರರು ಮೂರು ಜನರು, ಅಂತು ಮೂವತ್ತಾರು ಮಂತ್ರಿಗಳನ್ನು ನಯ ವಿಚಾರಕರನ್ನಾಗಿಸಿ, ವ್ಯವಹಾರ ಕಾರ್ಯಗಳಲ್ಲಿ ನಿಯಮಿಸಬೇಕು. ಅವರು ಅರ್ಥಲೋಲುಪರಾಗಿರಬಾರದು. ವ್ಯಸನದೂರರಾಗಿರಬೇಕು. ಅಷ್ಟೇ ಪ್ರಧಾನರನ್ನು ನಿಯಮಿಸಿ ಅವರಲ್ಲಿ ಮುಖ್ಯನಿಗೆ ಎಲ್ಲರೂ ವಿಧೇಯರಾಗಿರುವಂತೆ ನಿಯಮಿಸಿ, ತಾನು ಪರಮಾಪ್ತನಾದ ಮುಖ್ಯಮಂತ್ರಿಯ ಮಾತಿಗೆ ವಿಧೇಯನೂ, ಕಾರ್ಯಕ್ಕೆ ಸ್ವಾಮಿಯೂ ಆಗಿರಬೇಕು. ರಾಷ್ಟ್ರದ ಸೀಮಾಂತ ರಕ್ಷಕರನ್ನು ಕಣ್ಣಿಟ್ಟು ನೋಡುತ್ತಿರಬೇಕು. ವ್ಯವಹಾರಗಳಲ್ಲಿ ಪರದ್ರವ್ಯಾಪಹಾರವನ್ನು ಮಾಡುವ ರಾಜನ ರಾಜ್ಯಾದಿಸಂಪತ್ತು ಹೊಸ ಗಡಿಗೆಯಲ್ಲಿಟ್ಟ ನೀರಿನಂತೆ, ಸ್ರವಿಸಿಹೋಗುವುದು. ಅವನು ಪ್ರಜಾಪೀಡಕನೆನಿಸಿ ಸ್ವರ್ಗ ದೂರನಾಗುವನು. ಧರ್ಮಸಿಂಹಾಸನದಲ್ಲಿ ಕೂತು, ನರಿಯಂತೆ ವ್ಯವಹರಿಸುವ ಕುಹಕ ರಾಜನು ಮತ್ತು ಮಂತ್ರಿ, ರಾಜಪುತ್ರಾದಿ ನ್ಯಾಯಾಧಿಕಾರಿಗಳು ಕೂಡ ಮಹಾ ನರಕವನ್ನು ಹೊಂದುವರು. ಬಲವಂತರಿಂದ ಪೀಡಿತರಾಗಿ, ಮೊರೆಯಿಡುವ ದುರ್ಬಲರನ್ನು ಕಾಪಾಡದ ರಾಜನು ಕಲಿರಾಜನೇ ಸರಿ !

ಸಾಲವಾಗಿ ಧನವನ್ನು ಸ್ವೀಕರಿಸಿ, ಮತ್ತೆ ಕೊಡುವಾಗ, ಸಾಲವನ್ನು ಒಪ್ಪಿಕೊಂಡ ವಿಷಯದಲ್ಲಿ ಸಾಕ್ಷಿಯು ಬೇಕಿಲ್ಲ. ಸಾಲವನ್ನೇ ಒಪ್ಪದಾಗ, ವಿವಾದ ಪರಿಹಾರಕ್ಕಾಗಿ ಸಾಕ್ಷಿಯು ಬೇಕಾಗುವನು. ಸಾಲವನ್ನು ತೆಗೆದುದು ನಿಜ. ಆದರೆ ಹಿಂದಿರುಗಿ ಕೊಟ್ಟಿರುವೆನೆಂದು ಪೇಳುವ ಪ್ರತಿವಾದಿಯು ಹಿಂದಿರುಗಿಸಿ ಕೊಟ್ಟ ವಿಷಯದಲ್ಲಿ ಪ್ರತ್ಯಕ್ಷ ಸಾಕ್ಷಿಯನ್ನು ಕೊಡಬೇಕು. ಸಾಕ್ಷಿಯೇ ಇಲ್ಲವೆಂದರೆ ಶಪಥವನ್ನು ಮಾಡಿಸಬೇಕು. ಅಥವಾ ಕಾದ ಕೊಡಲಿಯನ್ನು ಕೈಲಿ ಪಿಡಿದು ಪ್ರತಿವಾದಿಯು ಕೊಟ್ಟಿರುವೆನೆಂದು ಹೇಳಬೇಕು. ಅವನ ಕೈ ಸುಡದೆ ಇದ್ದರೆ ಅವನು ಅನೃಣಿ ಎಂದು ನಿರ್ಣಯಿಸಬೇಕು. ಅಪರಾಧಿಗಳನ್ನು ತಪ್ಪಿಗೆ ತಕ್ಕಂತೆ ಶಿಕ್ಷಿಸಬೇಕು. ಧನವಂತನು ಸುಳ್ಳಾದರೆ ಧನದಂಡವನ್ನೂ ವಿಧಿಸಬೇಕು. ರಾಜಹತ್ಯೆಗೆ ಯತ್ನಿಸಿದವನಿಗೆ ಚಿತ್ರವಧೆಯೇ ಶಿಕ್ಷೆ. ಗೃಹದಾಹಕ,

ಚೋರ, ಹಂತಕ, ವರ್ಣಸಂಕರಕಾರಕರಿಗೂ ದೇಹಾಂತ ಶಿಕ್ಷೆಯು ವಿಧಿಸಲಹುದು. ರಾಜನು ತಪ್ಪಿಗೆ ಮೀರಿದ ದಂಡವನ್ನೀಯಬಾರದು ; ಇತ್ತರೆ ಇಲ್ಲಿ ಅಪಕೀರ್ತಿಯನ್ನೂ ಅಲ್ಲಿ ನರಕವನ್ನೂ ಹೊಂದುವನು. ಇತರರ ಕಿಡಿಗೇಡಿ ನುಡಿಯನ್ನು ನಂಬಿ ಶಿಕ್ಷಿಸುವ ಪ್ರಭುವೂ ನರಕದಲ್ಲಿ ಬೀಳುವನು. ತಂದೆಯ ತಪ್ಪಿಗೆ ಮಗನನ್ನು ದಂಡಿಸಲಾಗದು ; ಬೇಕಾದರೆ ಕೆಲಕಾಲ ಮಗನನ್ನು ಬಂಧಿಸಿ, ತಂದೆಯನ್ನು ಬರುವಂತೆ ಮಾಡಿ, ತಕ್ಕಂತೆ ಶಿಕ್ಷಿಸಬೇಕು. ತಂದೆ ಬಾರದಿದ್ದರೆ, ಮಗನನ್ನು ಬಿಟ್ಟುಬಿಡಬೇಕು. ತಂದೆಯು ತಾನಾಗಿ ದೇಶಭ್ರಷ್ಟ ಶಿಕ್ಷೆಯನ್ನು ಅನುಭವಿಸುತ್ತಿರುವುದರಿಂದ, ಪ್ರತ್ಯೇಕ ಶಿಕ್ಷೆಯೇ ಬೇಕಾಗಿಲ್ಲ.

ದೂತ ಲಕ್ಷಣವನ್ನು ಕೇಳು ! ದೂತನು ಯಥೋಕ್ತವಾದಿಯಾಗಿರಬೇಕು. ಅಹಂಕಾರರಹಿತನು, ಕುಲೀನನು, ದಕ್ಷನು, ವೀರನು, ಮಧುರ ವಚನನು, ಶಾಸ್ತ್ರಕೋವಿದನು ಆಗಿರಬೇಕು. ದೂತನನ್ನು ಸರ್ವಥಾ ಸಂಹರಿಸಬಾರದು. ಪರೋಕ್ತಿಯನ್ನು ಅನುವದಿಸುವ ದೂತನನ್ನು ಸಿಟ್ಟಾಗಿ ವಧಿಸುವ ರಾಜನು. ತನ್ನ ಪಿತೃಗಳಿಂದ ಕೂಡಿ ನರಕದಲ್ಲಿ ಬೀಳುವನು. ದೂತನಿಗಿರಬೇಕಾದ ಏಳು ಲಕ್ಷಣಗಳು ಪ್ರತೀಹಾರಿಯಲ್ಲಿಯೂ ಇರಬೇಕು. ಸೇನಾಪತಿಯು ಮಂತ್ರಿಯಂತೆ ಧರ್ಮ ಶಾಸ್ತ್ರಾರ್ಥತತ್ವಜ್ಞನು, ಸಂಧಿವಿಗ್ರಹ ಕಾಲವಿದನು, ಧೈರ್ಯಬುದ್ಧಿಯುಕ್ತನು, ರಹಸ್ಯಗೋಪನ ಸಮರ್ಥನು, ಕುಲೀನನು, ಶುದ್ಧ ರಾಜಭಕ್ತನೂ ಆಗಿರಬೇಕಲ್ಲದೆ, ವ್ಯೂಹಯಂತ್ರಾಯುಧ ವಿದ್ಯಾವಿಚಕ್ಷಣನು, ಶೂರನೂ ಆಗಿರಬೇಕು. ರಾಜನು ತನ್ನ ಪುತ್ರಾದಿ ಬಂಧುಗಳನ್ನಾದರೂ ನಂಬಿ, ಮೈ ಮರೆತಿರಬಾರದೆಂದ ಮೇಲೆ ಮಂತ್ರಿ ಸೇನಾಪತಿಗಳನ್ನು ಕಣ್ಣಿಟ್ಟು ನೋಡಿ ನಡೆಸಬೇಕೆಂದು ಹೇಳಬೇಕೇ ?

ಈಗ ಪುರವನ್ನು ವರ್ಣಿಸುವೆನು ಕೇಳು! ಸರ್ವಸಂಪತ್ಪ್ರಧಾನವಾದ ದುರ್ಗವನ್ನಾಶ್ರಯಿಸಿ ಮಹಾನಗರವಿರಬೇಕು. ದುರ್ಗವು ನಿರ್ಜಲ ಮರುಭೂಮಿಯ ಮಧ್ಯದಲ್ಲಿ, ಮಣ್ಣಿನ ಕೋಟೆ,

ವಿಧವಾಗಿದೆ. ನಗರವು ಶೂರಜನಸಂಪನ್ನವು, ವೇದಘೋಷ ಮಧುರವು, ಸುರಕ್ಷಿತವು, ಪ್ರಶಾಂತವು ಆಗಿರಬೇಕು. ಉತ್ಸವಗಳು ಚನ್ನಾಗಿ ನಡೆಯುತ್ತಿರಬೇಕು. ಕಳ್ಳಕಾಕರ ಭಯವಿರಬಾರದು. ದೇವಾಲಯಗಳಲ್ಲಿ ಪೂಜೆ ಅವ್ಯಾಹತವಾಗಿರಬೇಕು. ವೈಶ್ಯರು ನಿರ್ಭಯರಾಗಿ ರತ್ನ ಕನಕರಾಶಿಗಳಿಂದ ವ್ಯವಹರಿಸಬೇಕು. ರಾಜನು ತನ್ನ ಪುರದಂತೆ, ಗ್ರಾಮಗಳನ್ನೂ ಶುಭ್ರ ಸುಂದರವಾಗಿರಿಸಿ, ರೋಗಚೋರ ಕ್ಷಾಮಾದ್ಯುಪ ದ್ರವಗಳಿಗೆ ಸಿಕ್ಕು ನಾಶವಾಗದಂತೆ ರಕ್ಷಿಸುತ್ತಿರಬೇಕು. ಕೋಶವನ್ನೇ ಅಲ್ಲದೆ ದುರ್ಗದಲ್ಲಿ ಲೋಹ, ತುಷ (ಹೊಟ್ಟು), ಅಂಗಾರ (ಇದ್ದಿಲು), ದಾರು, ವೇಣು, ಮೇಣ, ಮಜ್ಜಾ, ಅಸ್ಥಿ, ಔಷಧ, ಶಣ, ಅರಗು, ಸೀಸ, ಬಾಣ, ಧನುಸ್ಸು, ಖಡ್ಗ ಮುಂತಾದ ಯುದ್ಧ ಸಾಮಗ್ರಿಯನ್ನು ಹೇರಳವಾಗಿ ಸಂಗ್ರಹಿಸಬೇಕು. ಆಹಾರ ಪದಾರ್ಥಗಳ ಕೊರತೆ ಇರಬಾರದು. ಕೆರೆ, ಬಾವಿ, ಕಾಲುವೆಗಳ ನೀರು ವಿಷದೂಷಿತವಾಗದಂತೆ ಕಾವಲಿಡಬೇಕು. ಯುದ್ಧ ಸಮಯದಲ್ಲಿ ಮಂತ್ರಿ, ಪುರೋಹಿತ, ಸೇನಾಧಿಪ

ರಾಷ್ಟ್ರಪಾಲ, ಸೈನಿಕರನ್ನು ಹೆಚ್ಚಾಗಿ ಸತ್ಕರಿಸಬೇಕು. ಬಿರುದುಬಾವಲಿಗಳನ್ನವರಿಗೆ ನೀಡಬೇಕು. ಸರ್ವವರ್ಣದ ಪ್ರಜರು ಸ್ವಕರ್ಮನಿರತರಾಗಿರುವಂತೆ ನಡೆಸಬೇಕು. ಚಾರರನ್ನು ತಾನಾಗಿ ಕಂಡು, ವಿಷಯಗಳನ್ನು ತಿಳಿಯಬೇಕು. ಉದಾಸೀನರು, ಶತ್ರುಗಳು, ಮಿತ್ರರು ಇವರನ್ನು ವಿಚಾರಿಸಿ ವಚನಕ್ರಿಯಗಳಿಂದ ತಿಳಿದು ಉದಾಸೀನನಾಗಿ ವಧಿಸಿ, ರಕ್ಷಿಸಿ, ಸಮವರ್ತನನೆನಿಸಬೇಕು.

ಶಾಂತ ಸಮಯದಲ್ಲಿ ಯಜ್ಞಗಳನ್ನು ಮಾಡಬೇಕು; ದಾನಗಳನ್ನು ಕೊಡಬೇಕು. ಪ್ರಜರನ್ನು ಆಗಾಗ ಕಂಡು ಸಂತೈಸಬೇಕು. ಕೃಪಣರು, ಅನಾಥರು, ನಿರ್ಗತಿಕವಿಧವೆಯರು, ಕುರುಡು ಕುಂಟರು, ಮುಂತಾದವರ ಯೋಗ ಕ್ಷೇಮವನ್ನು ವಿಚಾರಿಸುತ್ತಿರಬೇಕು. ಆಶ್ರಮಗಳಿಗೆ ಪೋಗಿ, ನಿರಹಂಕಾರದಿಂದ ಮುನಿ ಜನರನ್ನು ಸೇವಿಸಬೇಕು. ಅವರಿಗೆ ಬೇಕಾದ ಧಾನ್ಯ ವಸ್ತ್ರ ಪಾತ್ರ ಚರ್ಮಗಳನ್ನಿತ್ತು ಸತ್ಕರಿಸಿ, ಅವರ ತಪೋಯಜ್ಞಗಳಿಗೆ ವಿಘ್ನವು ಬರದಂತೆ ನೋಡಿಕೊಬೇಕು.

ರಾಷ್ಟ್ರಪಾಲನ ಕ್ರಮವನ್ನರುಹುವೆನು. ಪ್ರತಿ ಗ್ರಾಮಕ್ಕೆ ಗ್ರಾಮಾಧಿಪನಿರಬೇಕು. ಹತ್ತು ಗ್ರಾಮಗಳಿಗೆ ಒಬ್ಬ ಮಂಡಲಾಧಿಪ; ದಶಮಂಡಲಾಧಿಪರಿಗೊಬ್ಬ ಸಾಮಂತನಿರಬೇಕು. ಅವರೆಲ್ಲರೂ ಕ್ರಮವಾಗಿ ರಾಜನಿಗೆ ವಿಧೇಯರಾಗಿರಬೇಕು. ಒಂದು ನೂರು ಗ್ರಾಮಗಳಿಗಧಿಪತಿಯಾದವನು ಒಂದು ಗ್ರಾಮದ ಧನಧಾನ್ಯನಿಧಿಗೆ ಒಡೆಯನೆನಿಸಿ, ರಾಜವಿಧೇಯನಾಗಿರುವವರೆಗೂ, ಅನುಭವಿಸಲು ಅರ್ಹನಾಗುವನು. ಸಹಸ್ರನಗರಾಧಿ ಪನು ಏಕನಗರ ಭೋಗಿಯಾಗುವನು.

ನಗರಕ್ಕೆ ಒಬ್ಬನಂತೆ ಸರ್ವಾರ್ಥಚಿಂತಕರಿರಬೇಕು. ಅವನು ಸರ್ವರಾಜಸೇವಕರನ್ನೂ ತನ್ನ ವಶದಲ್ಲಿಟ್ಟು ನ್ಯಾಯ ಪರಿಪಾಲನೆಯನ್ನೂ ಪ್ರಜಾರಕ್ಷೆಯನ್ನೂ ದುಷ್ಟಶಿಕ್ಷೆಯನ್ನೂ ಕರದಾನವನ್ನೂ ಮಾಡುತ್ತಿರುವನು. ರಾಷ್ಟ್ರಾಂತಪಾಲಕರೂ ಸಾಮಂತರಂತೆಯೇ ಸತ್ಕರಿಸಲ್ಪಡಲರ್ಹರು. ಇವರೆಲ್ಲರೂ ಶಾಂತಿಕಾಲದಿ ರಕ್ಷಾಧಿಕಾರಿಗಳಿಂದ ಕೂಡಿ, ಪ್ರಜಾಕ್ಷೇಮವನ್ನೂ ಕರಾದಾನ ದಂಡಗಳಿಂದ ಕೋಶವನ್ನೂ ಪ್ರೋತ್ಸಾಹಪಡಿಸಿ ಶಿಲ್ಪ ವಣಿಜ ಕರ್ಮವನ್ನೂ, ದಾನಮಾನಗಳಿಂದ ವೇದಾಧ್ಯಯನಾದಿ ವಿದ್ಯೆಗಳನ್ನೂ, ವೃದ್ಧಿಗೊಳಿಸುವುದಲ್ಲದೆ, ಯುದ್ಧಕಾಲದಿ ರಾಜಸಹಾಯಕ್ಕಾಗಿ ಧಾವಿಸಿ ಬರಬೇಕು. ವೃದ್ಧವಾದ ರಾಷ್ಟ್ರದಿಂದ ರಾಜನು ಕರವನ್ನು ಮೃದುವಾಗಿ, ಮಿತವಾಗಿ ಸ್ವೀಕರಿಸ ಬೇಕಾಗಲಿ, ಪ್ರಜರನ್ನು ಪೀಡಿಸಿ ಅಲ್ಲ. ರಾಜನ ಆಪತ್ತಿಗೆ ನೆರವಾಗುವ ಕೋಶವೆಂದರೆ ರಾಷ್ಟ್ರಪ್ರಜರೆ ! ಅವರನ್ನು ದಯೆದೋರಿ ಪೊರೆವ ರಾಜನು ಸುಖಿಯಾಗಿರುವನು. ಆಟವಿಕ ದಸ್ಯುಪರ ರಾಜರನ್ನು ಸುಲಿದು ಸೂರೆಗೈದು ಬಂದ ಧನದಿಂದ ಮಧ್ಯಮ ವರ್ಗದ ಪ್ರಜರನ್ನೂ ವಸ್ತುಜಾತದಿಂದ ಬಡವರನ್ನೂ ಸಂತೋಷಪಡಿಸುವುದರಿಂದ ರಾಜನು ಜನಪ್ರಿಯನಾಗುವನು. ಅಂತು ಜನಪ್ರಿಯನಿಗೆ ಯುದ್ಧ ಕ್ಷಾಮಾದಿ ವಿಪತ್ತು ಬಂದಾಗ, ಪ್ರಜರೇ ತಾವಾಗಿ ಧನವಸ್ತುಗಳನ್ನಿತ್ತು ನೆರವಾಗಿ ನಿಲ್ಲುವರು. ಪ್ರಾಕಾರರಕ್ಷಣ, ಭೃತ್ಯಭರಣ, ಸಂಗ್ರಾಮಕರಣ, ಮುಂತಾದುವುಕ್ಕೆಂದು ಬೇಕಾದ ಧನವನ್ನು

ಪ್ರಜರಿಂದ ಸಾಲವಾಗಿ ಪಡೆದು, ಆ ವಿಪತ್ತು ಪಾರಾದ ಮೇಲೆ, ಅವರ ಧನವನ್ನು ಹಿಂದಿರುಗಿಸಬೇಕು. ಗೋಮಿಗಳೆಂದು ಖ್ಯಾತರಾದ ವೈಶ್ಯನಾಯಕರಿಂದ ಧನವ್ಯವಹಾರವನ್ನು ಸುಲಲಿತವಾಗಿ ನೆರವೇರಿಸಬಹುದಾಗಿದೆ.

ಕೋಶಾರ್ಥಿಯಾದ ರಾಜನ ಕರ್ತವ್ಯವನ್ನು ತಿಳಿಸುವೆನು. ರಾಜನು ತನ್ನ ಶ್ರೇಯಸ್ಸನ್ನಂತೆ, ಪ್ರಜಾಶ್ರೇಯಸ್ಸನ್ನೂ ಕಾಪಾಡಿಕೊಂಡು ಬರಬೇಕು. ದೇಶಕಾಲಗಳನ್ನರಿತು, ಬುದ್ಧಿಬಲದಿಂದ ಕೋಶವನ್ನು ವೃದ್ಧಿಗೊಳಿಸಬೇಕು. ಧರ್ಮದಿಂದಲೇ ಕರಾದಾನವನ್ನು ಮಾಡಬೇಕು. ಕರುವಿಗೆ ಬಿಟ್ಟು ಕರೆಸಿಕೊಳ್ಳದಿದ್ದರೆ, ಕರುವು ಸಾಯುವುದು. ಸ್ತನಗಳನ್ನು ಕೊಯ್ದು ತೆಗೆದರೆ ಆಕಳೂ ಸಾಯುವುದು. ರಾಜನು ಭ್ರಮರದಂತೆ ಪುಷ್ಪಾಸಾರವನ್ನು ತೆಗೆಯಬೇಕಾಗಲಿ, ಗಿಡವನ್ನು ಕಡಿದು ಕೆಡಹಬಾರದು. ಜಿಗಣಿಯಂತೆ ಮೆಲ್ಲಗೆ ಸೆಳೆಯಬೇಕು. ಹುಲಿಯು ಶಿಶುವನ್ನು ಮೆಲ್ಲಗೆ, ಗಾಯವಾಗದಂತೆ ಕಚ್ಚಿ ಹಿಡಿದು ಒಯ್ಯುವಂತೆ ರಾಜನು ಮೃದುನಾಗಿ ಕಪ್ಪವನ್ನು ಸೆಳೆಯಬೇಕಾಗಲಿ, ಕ್ರೂರನಾಗಬಾರದು.

ಕರ್ಷಕನು ಮುಗುದಾಣಿಯನ್ನು ಬಿಗಿಸಿ, ಅದಮ್ಯ ಪಶುಗಳನ್ನು ವಶಕ್ಕೆ ತಂದು ಭಾರವನ್ನು ಹೊರಿಸುವಂತೆ, ರಾಜನು ದುಷ್ಟಪ್ರಜರನ್ನು ಪ್ರಯತ್ನಿಸಿ, ವಶಪಡಿಸಿಕೊಂಡು, ಕೆಲಸ ಮಾಡಿಸಿಕೊಳ್ಳಬೇಕು. ಮುಖ್ಯಪ್ರಜರು ವಶರಾದರೆ ಅವರ ದ್ವಾರಾ ಇತರ ಸಾಮಾನ್ಯರೂ ವಶರಾಗುವರು. ತುಂಟ ಕುದುರೆಯನ್ನು ಉಪಾಯದಿಂದ ವಶಪಡಿಸಿಕೋಬೇಕಾಗಲಿ, ದುಡುಕಿ ಏರಹೋದರೆ ಕೆಡಹಿಬಿಡುವುದು, ಮದ್ಯಶಾಲೆ, ವೇಶ್ಯಾಗಾರ, ವ್ಯಾಪಾರವೀಧಿ ನಟನರ್ತಕಶಾಲೆ, ಜೂಜುಮನೆ ಮೊದಲಾದ ಸ್ಥಲಗಳಲ್ಲಿರುವ ದುಷ್ಟರನ್ನು ರಾಷ್ಟ್ರಘಾತುಕರೆಂದು ತಿಳಿದು, ಜಾಗರೂಕನಾಗಿ ವೀಕ್ಷಿಸಿ, ಶಿಕ್ಷಿಸುತ್ತಿರಬೇಕು.

ಅನಾಪತ್ಕಾಲದಲ್ಲಿ ಯಾರೂ ಏನನ್ನೂ ಬೇಡಬಾರದು. ಬಿಕ್ಕೆ - ಬೇಡುವವರು ಹೆಚ್ಚಾದಂತೆ ಸೋಮಾರಿಗಳೂ ಹೆಚ್ಚಾಗಿ, ದುಡಿದು ಜೀವಿಸುವವರೇ ಇಲ್ಲವಾಗುವುದು. ಅದರಿಂದ ರಾಷ್ಟ್ರವು ದರಿದ್ರವಾಗುವುದು. ಕೆಲಸವನ್ನೇ ಮಾಡದೆ ಜೀವಿಸುವುದು ತಪ್ಪಾಗುವುದರಿಂದ, ಕೈ ಕಾಲು ಕಣ್ಣುಗಳಿದ್ದೂ ಯಾವ ಕೆಲಸವನ್ನೂ ಮಾಡದೆ ಭಿಕ್ಷೆಗೆಂದು ಬರುವ ಆಲಸರನ್ನು ರಾಜನು ಶಿಕ್ಷಿಸಬೇಕು. ಇಂತು ದುಷ್ಟಶಾಸಕನಾದ ರಾಜನಿಗೆ ಪ್ರಜರ ಪುಣ್ಯದಲ್ಲಿ ಚತುರ್ಥಾಂಶವು ಸಿಗುವುದು. ಕಾಮವೇ ಸರ್ವಪಾಪ ಮೂಲವಾಗಿದೆ. ಕಾಮವಶನಾದವನು, ಮದ್ಯ ಮಾಂಸಗಳನ್ನು, ಪರಧನದಾರೆಯರನ್ನು ರಾಗವಶನಾದ ದುಷ್ಟನು ಅಪಹರಿಸಿಬಿಡುವನು. ಕೆಲವರು ಕಷ್ಟದಲ್ಲಿ ಸಿಲುಕಿ ಯಾಚಿಸಿದರೆ, ಅಂತಹವರಿಗೆ ಪರೀಕ್ಷಿಸಿ ಧನವನ್ನು ಕೊಡಬಹುದು. ಶಾಠ್ಯ ಯಾಚಕನಿಗೆ ಏನೂ ಕೊಡಬಾರದು.

ಕೃಷಿ ಗೋರಕ್ಷಾವಾಣಿಜ್ಯಾದಿ ಕರ್ಮಗಳನ್ನು ಆಯಾ ಜಾತಿಯವರಿಂದ ಮಾಡಿಸಬೇಕು. ಎಲ್ಲ ಕರ್ಮವನ್ನು ಎಲ್ಲರೂ ಮಾಡಪೋದರೆ, ಕರ್ಮಕೌಶಲ್ಯ

ನಾಶವಾಗುವುದು. ಕೃಷ್ಯಾದಿ ಕರ್ಮಗಳಿಗೆ ಚೋರಾದಿಭಯವಾಗದಂತೆ, ಕಾಪಾಡಬೇಕು. ರಾಜ್ಯದಲ್ಲಿರುವ ಧನಿಕರನ್ನು ಸತ್ಕರಿಸಿ "ನನ್ನಿಂದ ಸಹಕರಿಸಿ ಪ್ರಜಾಪೀಡೆಯನ್ನು ತೊಲಗಿಸಿರಿ! ದೀನರನ್ನು ಸಲಹಿರಿ!" ಎಂದು ಅವರಿಂದ ಪ್ರಜಾಕಾರ್ಯವನ್ನು ಮಾಡಿಸಬೇಕು. ಧನವಂತ, ಪ್ರಾಜ್ಞ, ಶೂರ, ಧಾರ್ಮಿಕ, ತಪಸ್ವಿ, ಸತ್ಯವಾದಿ, ಬುದ್ಧಿವಂತ ರಾಜ ಈ ಎಂಟು ಜನರು ರಾಜ್ಯದ ಆಧಾರಸ್ತಂಭವಾಗಿರುವರು. ಇಂತು ರಾಜನು ಕೋಶವನ್ನು ರಾಷ್ಟ್ರವನ್ನು ಬೆಳೆಸಿ, ದಂಡದಿಂದ ಶತ್ರುಗಳನ್ನೂ ದುಷ್ಟರನ್ನೂ ನಿಗ್ರಹಿಸಿ, ಮಿತ್ರರನ್ನೂ ಪ್ರಜರನ್ನೂ ಸಂತೋಷ ಪಡಿಸಬಹುದಾಗಿದೆ."

## ೧೫. ಉತಥ್ಯಗೀತೆ ವಾಮ ದೇವಗೀತೆ ರಣಯಜ್ಞ

ಭೀಷ್ಮನು ಧರ್ಮರಾಜನಿಗೆ ನಿರೂಪಿಸಿದನು :

'ರಾಜನ್! ವಿಪ್ರರು ಮೂಲ ಫಲಗಳಿಗೆ ಮುಖ್ಯ ಪಾತ್ರರು. ಅರಣ್ಯದ ಮೂಲ ಫಲಗಳಲ್ಲಿ ಬ್ರಾಹ್ಮಣರಿಗಾಗಿ ಉಳಿದುದ್ದನ್ನು ಇತರರು ಸ್ವೀಕರಿಸಬಹುದು; ಆಶ್ರಮ ವೃತ್ತಿಯನ್ನು ಕೆಡಿಸಿ ಅಲ್ಲ. ವಿಪ್ರನು ದಾರಿದ್ರ್ಯಪೀಡಿತನಾಗಿ, ದೇಶತ್ಯಾಗ ಮಾಡುತ್ತಿದ್ದರೆ, ಅವನನ್ನು ನಿಲ್ಲಿಸಿ ರಾಜನು "ಗೊತ್ತಿಲ್ಲದೆ ನಾನು ನಿಮ್ಮನ್ನು ಜೀವಿಕೆಯನ್ನಿತ್ತು ರಕ್ಷಿಸಲಿಲ್ಲ, ತಪ್ಪಾಯಿತು ; ಇನ್ನು ಮುಂದೆ ಹಾಗಾಗದು. ನಿಮಗೆ ಶಾಶ್ವತ ವೃತ್ತಿಯನ್ನು ಕೊಡುವೆನು" ಎಂದು ಹೇಳಿ, ನಿಲ್ಲಿಸಬೇಕು. ಜೀವಿಕೆ ನಡೆಸಬೇಕಾಗಲಿ, ರಾಜರಥ, ದಂಡಾದಿಗಳನ್ನು ಕೇಳಿದರೆ ಕೊಡಬಾರದು. ಕೆಲ ವಿಪ್ರರು ವೇದವಿದರಾಗಿದ್ದರೆ, ಅವರಿಗೆ ಭೋಗಾದಿಗಳನ್ನೂ ಕೊಟ್ಟು ತನ್ನ ರಾಜ್ಯದಲ್ಲೇ ನಿಲ್ಲಿಸಿಕೋಬೇಕು. ವೇದ, ಯಜ್ಞ, ತಪೋನಿರತರಾದ ಬ್ರಾಹ್ಮಣರಿಂದ ರಾಷ್ಟ್ರವು ಸುಭಿಕ್ಷವು, ಸುರಕ್ಷಿತವು ಆಗುವುದು. ಧರ್ಮರಾಜ! ಶತ್ರುಗಳನ್ನು ಗೆಲ್ಲು! ಪ್ರಜರನ್ನು ರಕ್ಷಿಸು! ಯಜ್ಞಗಳನ್ನು ನಡೆಸು! ಸಮರ ರಂಗದಲ್ಲಿ ವಿಕ್ರಮಿಸು! ಪ್ರಜರನ್ನು ಸಂರಕ್ಷಿಸದವನು ರಾಜನೇ ಅಲ್ಲ. ರಾಜನು ಇತರರಿಗುಪದೇಶಿಸಿದಂತೆ, ತಾನೂ ನಡೆಯಬೇಕು. ಶುದ್ಧ ಚಾರಿತ್ರನಾದ ರಾಜನು ಶುದ್ಧಪ್ರಜನಾಗುವನು. ಆಂತರಿಕ ಶತ್ರುಗಳಾದ ಕಾಮ ಕ್ರೋಧಗಳನ್ನು ಸಂಹರಿಸಲು ಸಮರ್ಥನಾಗುವನು.

ರಾಜ ಮೂಲವಾಗಿದೆ ರಾಜ್ಯವೆಲ್ಲವು. ಆದುದರಿಂದ ರಾಜನು ತನ್ನನ್ನು ತಾನು ಸರ್ವ ವಿಧದಿಂದಲು ಕಾಪಾಡಿಕೋಬೇಕು. ಚಾರಚಕ್ಷುವಾಗಿ ರಾಜನು ನಗರ ಗ್ರಾಮ ಖೇಟಾಶ್ರಮಗಳಲ್ಲಿ ಜನರೇನೆಂಬುವರು ? ಯಾವ ರಾಜಗುಣವನ್ನು ಅವರು ಪ್ರಶಂಸಿಸುವರು ? ಯಾವ ದೋಷವನ್ನಾಡಿಕೊಳ್ಳುವರು ? ಪಂಡಿತರು, ಶೂರರು, ಸುಖವಾಗಿರುವರೇ ? ಇತ್ಯಾದಿ ವಿಚಾರಿಸಿ ತಿಳಿದು ರಾಜನು ತನ್ನನ್ನು ತಾನೂ ತಿದ್ದಿಕೋಬೇಕು. ಎಲ್ಲರನ್ನೂ ಯಾವಾಗಲೂ ಮೆಚ್ಚಿಸಲಾಗದು ನಿಜ ! ಆದರೆ ಸುಜನರು

ಮೆಚ್ಚುವಂದದಿ ನಡೆಯುವುದು ರಾಜನ ಕರ್ತವ್ಯವಾಗಿದೆ. ವರ್ತಕರು ಹೇಸಿ ರಾಜ್ಯವನ್ನು ಬಿಟ್ಟೋಡುವಷ್ಟು ಕಪ್ಪವನ್ನು ಹೇರಬಾರದು. ರೈತರು ಬೆಳೆದುದನ್ನೆಲ್ಲ ಕಸಿಯಬಾರದು. ಪ್ರಜಾಕ್ಷೇಮಸಾಧಕರಾದ ವೈಶ್ಯಶೂದ್ರರಿಂದ ರಾಜ್ಯದ ಸಿರಿಯು ಹೆಚ್ಚುವುದು. ಮನುಜರು ಸುಖ-ಶಾಂತಿಗಳಿಂದಿದ್ದರೆ ಯಜ್ಞದಿಂದ ದೇವತೆಗಳು; ದಾನದಿಂದ ವಿಪ್ರರು; ಗ್ರಾಸದಿಂದ ಪಶುಗಳು, ಪಿಂಡಾದಿಗಳಿಂದ ಪಿತೃಗಳು, ಭಿಕ್ಷೆಯಿಂದ ದೀನರು ತೃಪ್ತರಾಗುವರು.

ಹಿಂದೆ ಉತಥ್ಯನೆಂಬ ಬ್ರಹ್ಮರ್ಷಿಯು ಮಾಂಧಾತನಿಗೆ ಕ್ಷತ್ರ ಧರ್ಮಗಳನ್ನು ಉಪದೇಶಿಸಿದನು. ಅದನ್ನು ನಿನಗರುಹುವೆನು ಕೇಳು! 'ರಾಜನು ಕಾಮ ಭೋಗಗಳಿಗಾಗಿ ಅಲ್ಲದೆ ಧರ್ಮಪಾಲನೆಗಾಗಿ ಸೃಷ್ಟಿಸಲ್ಪಟ್ಟಿರುವನು. ರಾಜನೇ ಲೋಕರಕ್ಷಕನು. ಅವನು ಧರ್ಮದಿಂದಾಳಿದರೆ ದೇವನೆನಿಸುವನು. ಅಧರ್ಮದಿಂದಾಳಿದರೆ ದೈತ್ಯನೆನಿಸುವನು. ಭೂತಗಳು ಧರ್ಮದಲ್ಲಿ ನಿಂತಿವೆ. ಧರ್ಮವು ರಾಜನಲ್ಲಿ ನಿಂತಿದೆ. ಅಂತಹ ರಾಜನು ಧರ್ಮವನ್ನು ರಕ್ಷಿಸದಿರೆ, ಲೋಕವೆಲ್ಲವೂ ಹಾಳಾಗುವುದು. ಪಾಪಿಗಳನ್ನು ನಿಗ್ರಹಿಸದ ರಾಜನನ್ನು ದೇವತೆಗಳು ಶಪಿಸುವರು; ಪ್ರಜರು ದಿವಾರಾತ್ರವೆನ್ನದೆ ಸದಾ ಭಯಗ್ರಸ್ತರಾಗಿ ರಾಜನನ್ನು ನಿಂದಿಸುವರು. ಪಾಪಿಗಳನ್ನು ಶಿಕ್ಷಿಸದ ರಾಜನೂ ಪಾಪಿಯೇ ಸರಿ! ಅವನ ರಾಜ್ಯದಲ್ಲಿ - ಇದು ನನ್ನದು - ಎಂಬ ಮಾತಿಲ್ಲದೇ, ಕಳ್ಳಕಾಕರು, ದುಷ್ಟ ಧೂರ್ತರು ಪ್ರಬಲಿಸಿ - ಸಾಧುಜನರಿಗೆ ಉಳಿಗಾಲವಿಲ್ಲದೆ ಹೋಗುವುದು. ಎಲ್ಲ ವ್ಯವಸ್ಥೆಯು ಅಸ್ತವ್ಯಸ್ತವಾಗುವುದು. ಮನೆ ಮಾರು, ಭೂಮಿ ಕಾಣಿ, ಮಡದಿ ಮಕ್ಕಳು ಕೂಡ ಉಳಿಯದೆ ನಷ್ಟವಾಗಿ, ಅಧರ್ಮವು ಪ್ರಬಲಿಸುವುದು, ಯಜ್ಞ,ದೇವಪೂಜಾ, ವೇದಾಧ್ಯಯನ, ಅತಿಥಿಪೂಜನವು ಅನುಷ್ಠಾನಗಳು ನಿಂತುಹೋಗುವವು. ಋಷಿಗಳು ಹಿಂದೆ ತಮ್ಮ ತಪೋಬಲದಿಂದ ನಿರ್ಮಿಸಿ ಮನುಷ್ಯಾಧಿಪನೆಂದು ನಿಲ್ಲಿಸಿದ ರಾಜನೇ ಧರ್ಮಹೀನನು, ಪಾಪಿಜನ ಪಕ್ಷಪಾತಿಯು ಆದನೆಂದರೆ, ಇನ್ನು ಲೋಕಕ್ಷೇಮವಾದರೂ ಎಂತಾದೀತು? ಅಂತಹ ಧರ್ಮ ಹೀನರಾಜನು ವೃಷನಾಮಕ ಭಗವಂತನ ದ್ರೋಹವೆಸಗಿರುವುದರಿಂದ ವೃಷಲನೆನಿಸುವನು. ಧರ್ಮದ ಯೋನಿಯು ಬ್ರಾಹ್ಮಣನು, ರಕ್ಷಕನು ಕ್ಷತ್ರಿಯನು. ಬ್ರಾಹ್ಮಣನು ಧರ್ಮವನ್ನು ಪೇಳದಿರೆ, ಕ್ಷತ್ರಿಯನು ಧರ್ಮವನ್ನು ರಕ್ಷಿಸದಿರೆ, ಪ್ರಜನ ಪಾಡು ಹೇಳತೀರದು. ವಿರೋಚನನು ವಿಪ್ರಾಳಿಯಲ್ಲಿ ಅಸೂಯಾ ವಶನಾಗಿ, ತನ್ನಲ್ಲಿದ್ದ ಶ್ರೀತ್ವವನ್ನು ಕಳೆದುಕೊಂಡು, ಅಧರ್ಮಪುತ್ರನೇ ದರ್ಪನು. ದರ್ಪದಿಂದ ಅಸೂಯೆ: ಇವರೆಡರವಶನಾದ ರಾಜನು ವಿಪ್ರದ್ವೇಷವನ್ನು ಮಾಡಿ, ಕೆಡುವನು. ಅಸೂಯೆಯನ್ನು ಬಿಡು! ವಿಪ್ರವಿಧೇಯನಾಗು! ಧರ್ಮವನ್ನು ತಿಳಿದು ನಡೆ!

ಶಿಕ್ಷಿತನಾದ ಅಮಾತ್ಯ, ದುಷ್ಟಸ್ತ್ರೀಯರು,´ ಸರ್ಪಗಜತುರಗದುರ್ಗಗಳು, ವಿಷಮ ಪರ್ವತಗಳು - ಈ ವಿಷಯಗಳಲ್ಲಿ ರಾಜನು ಎಚ್ಚತ್ತಿರಬೇಕು. ಲೋಭ, ಕ್ರೋಧ, ದುರಭಿಮಾನಗಳನ್ನು ಬಿಡಬೇಕು. ಅವಿಜ್ಞಾತ ತರುಣಿಯರನ್ನು ಸ್ವೈರಿಣಿಯರನ್ನು ಪರಭಾರ್ಯೆಯನ್ನು, ಕನ್ಯೆಯನ್ನು ಮುಟ್ಟಬಾರದು. ವರ್ಣಸಂಕರವಾದಾಗ ಹುಟ್ಟುವರು ರಾಕ್ಷಸರೆಂದು ತಿಳಿ! ರಾಜನ ಪ್ರಮಾದಿಂದ ವರ್ಣಸಂಕರವಾಗಿ, ದುಷ್ಟಪ್ರಜೆ

ಹೆಚ್ಚಾಗುವುದು. ಹುಚ್ಚರು, ಮೂಕರು, ನಪುಂಸಕರು, ಅಂಗಹೀನರು ಹುಟ್ಟಲು ವರ್ಣಸಂಕರವೇ ಕಾರಣವು. ಅಧರ್ಮಿಷ್ಠನಾದ ರಾಜನ ರಾಜ್ಯದಲ್ಲಿ ಕಾಲಗುಣಗಳೇ ಬದಲಾಗುವವು, ಅತಿವೃಷ್ಟಿ, ಅನಾವೃಷ್ಟಿ, ವ್ಯಾಧಿಗಳಿಂದ ಪ್ರಜರು ಪೀಡಿತರಾಗುವರು. ದುಷ್ಟರಾಜನು ಪ್ರಜರನ್ನು ದುಷ್ಟರಿಂದ ರಕ್ಷಿಸಲಾರನು. ದುಷ್ಟರು ಅವನನ್ನು ಪೀಡಿಸಿ ಕೊಲ್ಲುವರು. ಆಗ ಪ್ರಜರೂ ಹಾಳಾಗುವರು.

ರಜಕನು ವಸ್ತ್ರವನ್ನೊಗೆಯುವಾಗ ಮಲವನ್ನು ಕಳೆಯಬೇಕಾಗಲಿ (ರಂಗನ್ನು) ವರ್ಣವನ್ನು ಕೆಡಿಸಬಾರದು. ರತ್ನಶೋಧಕನು ರತ್ನವನ್ನು ಸಾಣೆಹಿಡಿದು ಶೋಭಾವಂತವನ್ನಾಗಿ ಮಾಡಬೇಕಾಗಲಿ, ಮುರಿಯಬಾರದು. ಅಂತೆಯೇ ರಾಜನು ವರ್ಣವನ್ನು ಕೆಡಿಸದೆ ಪ್ರಜರನ್ನು ಸ್ವಧರ್ಮದಲ್ಲಿರಿಸಿ ನಡೆಸಬೇಕು. ಧರ್ಮಭ್ರಷ್ಟರನ್ನು ಶಿಕ್ಷಿಸಬೇಕು. ನಾನಾ ಕರ್ಮವಿಶಾರದರಾದ ಶೂದ್ರರು, ಗೋರಕ್ಷಾ ವ್ಯಾಪಾರಗಳಿಂದ ವೈಶ್ಯರು ದಂಡನೀತಿಯಿಂದ ರಾಜರು, ತಪೋಮಂತ್ರಯಾಗಗಳಿಂದ ಬ್ರಾಹ್ಮಣರು ಶೋಭಿಸುವರು. ಅವರವರ ವಿಹಿತಕರ್ಮವನ್ನು ಬಿಡದೆ ಪಾಲಿಸುವಂತೆ ನೋಡಿಕೊಳ್ಳುವ ರಾಜನು ಕೃತಯುಗವನ್ನು (ಕಲಿಯಲ್ಲಿಯೂ) ತರುವನು. ಧರ್ಮನಾಶಕನಾದ ರಾಜನು ಕಲಿಯುಗವನ್ನು ತಂದೊಡ್ಡಿ, ಪ್ರಜಾನಾಶಕನಾಗುವನು.

ದುರ್ಬಲರನ್ನು ಸಬಲರಿಂದ ಕಾಪಾಡುವುದು ರಾಜನ ಕರ್ತವ್ಯವಾಗಿದೆ. ಅಬಲರನ್ನು ಕಾಪಾಡುವುದು ಮಹಾಪುಣ್ಯವು. ದುರ್ಬಲನು ಪೀಡಿತನಾದಾಗ ಅವನ ಕಣ್ಣೀರು ರಾಜ್ಯವನ್ನು ಕೊಚ್ಚಿಹಾಕುವುದು. ಅವಮಾನಿತನು, ಪೀಡಿತನು ಆದವನ ಮೊರೆ ಕೇಳಿ ಧಾವಿಸಿ ಬರದ ರಾಜನು ತನ್ನ ಪುತ್ರ ಪೌತ್ರ ರಾಜ್ಯ ವೈಭವಗಳಿಗೆ ಎರವಾಗುವನು. ದುಷ್ಟರನ್ನು ಶಿಕ್ಷಿಸದ ರಾಜನು ಆ ಪಾಪದ ಫಲವನ್ನು ಹೊಂದುವನು. ಅವನೇ ಅಲ್ಲದೆ, ಅವನ ಸುತರು, ಪೌತ್ರರು ಅದನ್ನು ಉಣ್ಣಬೇಕಾಗುವುದು. ರಾಜಾಧಿಕಾರಿಗಳು ಗ್ರಾಮಗಳಲ್ಲಿ ಅನ್ಯಾಯವನ್ನು ನಡೆಸಿದರೆ, ಅವರ ತಪ್ಪಿಗೆ ರಾಜನು ಶಿಕ್ಷಿತನಾಗಿ, ರಾಜ್ಯಭ್ರಷ್ಟನಾಗುವನು. ವೃಕ್ಷವನ್ನಾಶ್ರಯಿಸಿದ ಪಕ್ಷಿಪಶುಗಳಂತೆ, ಪ್ರಜರನ್ನು ನಂಬಿ ಕಾಪಾಡುವ ರಾಜನು ಸುಖಿಸುವನು. ವೃಕ್ಷವನ್ನು ಕಡಿದು, ಸುಟ್ಟು ನಾಶಪಡಿಸಿದರೆ, ರಾಜನು ನಿರಾಶ್ರಯನಾಗುವನು.

ಅಮಾತ್ಯರನ್ನು ಗೌರವಿಸಿ, ದುಷ್ಟರನ್ನು ಶಿಕ್ಷಿಸಿ, ಪ್ರಜರಿಗೆ ರಾಜ್ಯದ ಸಂಪತ್ತನ್ನು ಹಂಚಿಕೊಟ್ಟು, ಅಬಲರನ್ನು ದುಷ್ಟಬಲರಿಂದ ಕಾಪಾಡಿ, ತಪ್ಪು ಮಾಡಿದರೆ ಸುತಮಿತ್ರರನ್ನೂ ದಂಡಿಸಿ, ವಣಿಜರನ್ನು ಕರಭಾರದಿಂದ ಪೀಡಿಸದೆ, ಯಜ್ಞಗಳಲ್ಲಿ ಭೂರಿದಕ್ಷಿಣೆಗಳನ್ನಿತ್ತು ಸತ್ಯವನ್ನು ಬಿಡದೆ, ಅತಿಥಿ ಅಭ್ಯಾಗತರನ್ನು ತಣಿಸಿ, ಯಮರಾಜನಂತೆ ನಿಷ್ಪಕ್ಷಪಾತಿಯಾಗಿ, ಮಧುರವಚನವನ್ನಾಡುತ್ತಾ, ಚಾರಚಕ್ಷನಾಗಿ ಪ್ರಜಾವರ್ತನವನ್ನು ತಿಳಿದು, ಸಹಸ್ರಾಕ್ಷನಂತೆ ಅಭೀಷ್ಟವರ್ಷಣನಾಗಿ, ಸಹಸ್ರಕರನಂತೆ ಪಾವನನಾಗಿ, ಪ್ರಜಾಪಾಲನೆಗೈವ ರಾಜನು ಉಭಯಲೋಕಸುಖವನ್ನು ಪೊಂದುವನು, ಮಾಂಧಾತ! ಹಿಂದಿನ ರಾಜರ್ಷಿಗಳ ನಡತೆಯನ್ನು ನಿನಗೆ ವಿವರಿಸಿದೆನು. ನೀನೂ ಅಂತೆಯೇ ನಡೆದು ಸುಖಿಯಾಗು!'

ಇಂತು ಉಪದೇಶಿಸಿದ ಉತಥ್ಯನ ವಾಕ್ಯದಂತೆ ನಡೆದು ಮಾಂಧಾತನು ಸಕಲ ಮಹೀಮಂಡಲವನ್ನು ಏಕಚ್ಛತ್ರಸಾರ್ವಭೌಮನಾಗಿ ಪರಿಪಾಲಿಸಿ, ಪ್ರಜಾರಂಜನೆಗೈದು, ಸ್ವರ್ಗವನ್ನು ಸೇರಿದನು. ಧರ್ಮರಾಜ! ನೀನೂ ಅಂತೆಯೇ ನಡೆ!

ರಾಜನು ಧರ್ಮವನ್ನು ಬಿಡದೆ ಸ್ಥಿರಚಿತ್ತನಾಗಿರಬೇಕು. ಅವನು ಒಳ್ಳೆಯ ಗುರುವನಾಶ್ರಯಿಸಿ ನಡೆದರೆ ಮಾತ್ರ ಧರ್ಮಸ್ಥಿರನಾಗಬಲ್ಲನು. ಹಿಂದೆ ವಸುಮಾನನೆಂಬ ರಾಜನು ಧರ್ಮಾರ್ಥಗಳ ವಿಷಯವಾಗಿ ಪ್ರಶ್ನಿಸಲು ವಾಮದೇವನಿಂತು ಉಪದೇಶಿಸಿದನು: 'ರಾಜನ್ ! ಧರ್ಮಾರ್ಥಗಳಲ್ಲಿ ಧರ್ಮವೇ ಶ್ರೇಯಸ್ಕರವು. ಧರ್ಮದಿಂದ ನಡೆವ ರಾಜನು ಪೃಥಿವಿಯನ್ನು ಗೆಲ್ಲಬಲ್ಲವನಾಗುವನು. ಧರ್ಮವಿಹೀನನು, ಧರ್ಮದಿಂದಲೇ ಅಲ್ಲದೆ ಅರ್ಥದಿಂದಲೂ ಕೆಡುವನು. ದುಷ್ಟಮಿತ್ರರಿಂದ ಕೂಡಿ ದುಷ್ಟರಾಜನು ವಧಾರ್ಹನಾಗುವನು. ಪಾಪಿಯಾದ ರಾಜನಿಂದ ಅವನ ಪರಿವಾರವು, ನಗರ ರಾಜ್ಯದ ಪ್ರಜರೂ ನಾಶರಾಗುವರು. ರಾವಣಪಾಪದಿಂದ ಲಂಕೆ ಹಾಳಾಗಲಿಲ್ಲವೇ? ಅರ್ಥವನ್ನು ಧರ್ಮಕ್ಕಿಡದೇ, ಕೇವಲ ಕಾಮಕ್ಕಿಟ್ಟವನು ಶೀಘ್ರವಾಗಿ ರಾಜ್ಯಭ್ರಷ್ಟನಾಗುವನು. ಧರ್ಮವಂತನು, ನದಿಗಳಿಂದ ಸಾಗರದಂತೆ, ಪ್ರಜರಿತ್ತ ಕಪ್ಪದಿಂದ ವೃದ್ಧಿ ಹೊಂದುವನು. ಧರ್ಮಕಾಮಾರ್ಥಗಳೆಂಬ ತ್ರಿವರ್ಗವನ್ನು ಸಂಪಾದಿಸುವೆಡೆ, ರಾಜನು ತೃಪ್ತನಾಗಿರಬಾರದು. ಅರ್ಥವಿದ್ದು ದಾನವೀಯದೆ, ಪ್ರಜರನ್ನು ಪೀಡಿಸಿ ಕೋಶವನ್ನು ಬೆಳೆಸಿಕೊಂಡವನು ಪ್ರಜಾದ್ರೋಹಿ ಎನಿಸಿ ನಷ್ಟವಾಗುವನು. ಪಾಪಿಗಳನ್ನು ಶಿಕ್ಷಿಸದ ರಾಜನು ಅಪಕೀರ್ತಿಯನ್ನು ಪೊಂದಿ ನಿಂದಿತನಾಗುವನು. ಆದುದರಿಂದ ಧರ್ಮವನ್ನು ತಿಳಿಸಿ ಕೊಡುವ ಗುರುವನ್ನು ಸಂಪಾದಿಸು! ಅವನ ಮಾತಿನಂತೆ ನಡೆ! ನಿನ್ನ ಅರ್ಥಕಾಮಧರ್ಮಗಳು ಕೆಡದಿರುವವು.

ದುರ್ಬಲರನ್ನು, ಸಾಧುಗಳನ್ನು, ದರಿದ್ರರನ್ನು ದುಷ್ಟರಾದ ಬಲವಂತರು, ನಾಸ್ತಿಕರು, ಧನವಂತರು, ಪೀಡಿಸಿದಾಗ ರಾಜನು ಅವರನ್ನು ಶಿಕ್ಷಿಸಿ, ಧರ್ಮವನ್ನು ರಕ್ಷಿಸಬೇಕು. ಅವಿನೀತರನ್ನು ಶಿಕ್ಷಿಸದ ರಾಜನ ರಾಜ್ಯವು ಅವರಿಂದಲೇ ನಷ್ಟವಾಗುವುದು. ಸ್ವಜನರು ಕೂಡ ಅವಿನೀತ ರಾಜನನ್ನು ಪ್ರೇಮಿಸರು. ಶಾಸ್ತ್ರಮರ್ಯಾದೆಯನ್ನು ಉಲ್ಲಂಘಿಸಿ, ಹಿರಿಯರ ಸಂಪ್ರದಾಯವನ್ನು ಮುರಿದು, ಸ್ವೇಚ್ಛಾಚಾರನಾದ ರಾಜನು ಸರ್ವಸ್ವನಾಶವನ್ನು ಹೊಂದುವನು.

ರಣದಲ್ಲಿ ಸಿಕ್ಕ ರಾಜನನ್ನು ಹಿಂದಿನ ಉಪಕಾರವನ್ನು ಮರೆತು - ಕೇವಲ ದ್ವೇಷದಿಂದ ಕೊಲ್ಲುವ ರಾಜನು ಧರ್ಮದೂರನೆನಿಸುವನು. ಶಕ್ತನಾಗಿದ್ದು ರಣಜಿತರನ್ನು ಸನ್ಮಾನಿಸಿ, ಅವರ ರಾಜ್ಯವನ್ನವರಿಗಿತ್ತು ಕಳಿಸುವ ರಾಜನು ಶ್ರೀಕೀರ್ತಿ ಕ್ಷೇಮಗಳನ್ನು ಪೊಂದುವನು. ಅಪ್ರಿಯರಿಗೂ ಪ್ರಿಯವನ್ನಾಚರಿಸುವ ಪ್ರಭುವು ಸರ್ವಪ್ರಿಯನಾಗುವನು. ಅನುಗತನು, ಪ್ರಿಯನು, ಇಂದ್ರಿಯ ಜಯವಂತನು, ಶಕ್ತನು, ಆದ ಭೃತ್ಯರನ್ನು ಮಹತ್ಕಾರ್ಯಗಳಲ್ಲಿ ನಿಯೋಗಿಸಿದ ರಾಜನು ಸಮೃದ್ಧರಾಜ್ಯನಾಗುವನು. ಮೂಢ, ಇಂದ್ರಿಯದಾಸ, ಮದ್ಯಪಾಯಿ, ಲೋಭಿ, ದುಶ್ಶೀಲ, ನೂತನ, ಜೂಜುಗಾರ,

ಬೇಟೆಗಾರ, ಮುಂತಾದವರನ್ನು ನಿಯೋಗಿಸುವ ರಾಜನು ಸಮೂಲನಾಶವನ್ನು ಹೊಂದುವನು.

ಬಲವಂತನಿಗೆ ಅಪಕಾರವೆಸಗಿ, ದೂರಮಾಡಿ, ರಾಜನು ನಿಶ್ಚಿಂತನಾಗಿ ಕೂಡಲಾಗದು. ಅವನು ಗಿಡಗದಂತೆ, ಮಿಂಚಿನಂತೆ, ಮೇಲೆರಗಬಹುದು. ಆದುದರಿಂದ ರಾಜನು ಜಾಗರೂಕನಾಗಿರಬೇಕು. ಮಿತಹಿತ ವಚನವಾಡಿ, ವಿಕ್ರಮದಿಂದ ಗೆದ್ದು ವಿನಯದಿಂದ ಕಲಿತು, ಧರ್ಮದಿಂದ ಆಳಿ, ರಣದಲ್ಲಿ ವೀರಶಮನವನ್ನು ಪೊಂದಿದ ರಾಜನಿಗೆ ಇಂದ್ರನು ಸ್ವಾಗತವಿತ್ತು ಸತ್ಕರಿಸುವನು. ರಕ್ಷಾಧಿಕಾರಿಗಳನ್ನು ಧರ್ಮಾನುಶಾಸನ ಮಾಡಲು ನಿಯಮಿಸಿ, ವೀಕ್ಷಿಸುತ್ತಾ, ಪಾಲಿಸುವ ರಾಜನು ಪ್ರಜಾರಂಜಕನೆನಿಸುವನು. ರಾಜನ್! ಪ್ರಜರಂತೆ ರಾಜನೂ ಮನುಜನೇ! ಸಾಯದೆ ಇರಲು ಅವನೇನು ಅಮರನಲ್ಲ. ಧರ್ಮಪಾಲನ, ದುರ್ಬಲರಕ್ಷಣ, ದುಷ್ಟರಿಂದ ಯುದ್ಧ, ಮಂತ್ರಗೋಪನ, ಯೋಗ್ಯಸುಖಾನುಭವಗಳೆಂಬ ಐದು ಉಪಾಯಗಳಿಂದ ರಾಜ್ಯವು ಸುಖ ಸಮೃದ್ಧವಾಗುವುದು.

ದಾತನು, ಮೃದು-ಮಧುರನು. ಧರ್ಮರತನು, ಮನುಜಸುಲಭನು ಆದವನನ್ನು ಜನರು ರಾಜನನ್ನಾಗಿ ಕೋರುವರು. ಗುರು-ಹಿರಿಯರನ್ನು ಮನ್ನಿಸಿ, ಅವರ ಶ್ರೇಯೋ ವಚನದಂತೆ ನಡೆವ ರಾಜನನ್ನು ಪ್ರಜರು ಪ್ರೀತಿಸುವರು. ಮಿತ್ರವಚನಕ್ಕೆ ಕಿವಿಗೊಡದೆ, ದುಷ್ಟರಂತೆ ಕುಣಿವ, ಮಾನ- ಮರ್ಯಾದೆಗಳನ್ನು ಲೆಕ್ಕಿಸದೆ ಧರ್ಮವನ್ನು ಮುರಿವ ರಾಜನು ರಾಜ್ಯ ಕುಲನಾಶಕನಾಗುವನು. ದುಷ್ಟಮಂತ್ರಿಗಳಿಂದ ಕೂಡಿದ ರಾಜನು ಕಾರ್ಯಸಾಫಲ್ಯವನ್ನು ಕಾಣಲಾರನು. ಗುಣವಂತರನ್ನು, ವಿದ್ಯಾವಂತರನ್ನು, ಸನ್ನಿಹಿತ ಬಂಧುಗಳನ್ನು ದ್ವೇಷಿಸುವ ನೃಪತಿಯು ಮೃತ್ಯುಗುಹೆಯಲ್ಲಿರುವವನು. ಅನುರಕ್ತರಾರು ? ದ್ವೇಷಿಗಳಾರು ? ಉದಾಸೀನರಾರು? ಎಂದು ತಿಳಿಯದೆ, ಅಕಾಲದಲ್ಲಿ ವ್ಯರ್ಥವಾಗಿ ಧನವನ್ನು ವೆಚ್ಚಿಸುತ್ತಾ, ದುರ್ಬಲನೆಂದು ಶತ್ರುಜನರನ್ನು ನಿರ್ಲಕ್ಷಿಸಿ ಬೆಳೆಯಗೊಟ್ಟು, ಮೈಮರೆತಿರುವ ರಾಜನು ಶೀಘ್ರವಾಗಿ ನಷ್ಟವಾಗುವನು.

ಯುದ್ಧವಿಲ್ಲದೆ ವಿಜಯವಾಗುವಂತಿದ್ದಾಗ ರಾಜನು ಯುದ್ಧಮಾಡಬಾರದು. ಯುದ್ಧ ವಿಜಯವು ಹಿಂಸಾಮಯವಾಗಿದೆ; ಅದನ್ನು ಸಾಧ್ಯವಾದಷ್ಟು ಪರಿವರ್ಜಿಸಿ, ಸಾಮದಾನ ಭೇದಗಳಿಂದಲೇ ವಿಜಯವನ್ನು ಗಳಿಸಬೇಕು. ದೃಢಮೂಲನಾದ ರಾಜನೇ ಯುದ್ಧದಿಂದ ರಾಜ್ಯಲಾಭವನ್ನು ಪಡೆಯಬಹುದಾಗಿದೆ. ಯಾವ ರಾಜನ ರಾಜ್ಯವು ಧನಧಾನ್ಯಭರಿತವೋ, ಯಾವನ ಮಂತ್ರಿ ಸೇನಾಪತಿಗಳು ಸಂತುಷ್ಟರೋ, ಯಾವನ ಸೈನಿಕರು ತುಷ್ಟರೇ ಅಲ್ಲದೆ ನಿಷ್ಠಾವಂತರೋ, ಯಾವನ ಗುರುಗಳು ವೇದ ವಿದ್ವರರೋ, ಅಂತಹ ರಾಜನು ದೃಢಮೂಲನೆನಿಸುವನು. ಅಂತಹವನು ಶತ್ರು ದುರ್ಬಲ ಕಾಲವನ್ನರಿತು ವಿಕ್ರಮಿಸಲು ಜಯವಾಗುವದು. ತನ್ನವರಲ್ಲಿ ಕಪಟಿಯಾಗದೆ, ಕ್ರೋಧವನ್ನು ಗೆಲ್ಲಲು ಸಮರ್ಥನಾಗಿ, ಆರ್ಯ ಜನರು ಬೇಡವೆಂದ ಕಾರ್ಯವನ್ನು ಮಾಡದೆ, ಜಿತಶತ್ರುಗಳನ್ನು ಕ್ಷಮಿಸುವ ರಾಜನು ಕಲ್ಯಾಣಭಾಜನ

ನಾಗುವನು. ಇಂತು ಕಲ್ಯಾಣವರ್ತನನಾದ ಮಹೀಪಾಲನು ನಿತ್ಯವಿಜಯಿಯಾಗಿ, ಉಭಯ ಲೋಕ ಸುಖಗಳನ್ನು ಸೂರೆಗೊಳ್ಳುವನು."

ಇಂತು ನುಡಿದ ವಾಮದೇವ ಋಷಿಯ ಉಪದೇಶದಂತೆ ನಡೆದು ವಸುಮನನು ಸುಖಿಸಿದನು. ಧರ್ಮರಾಜ! ನೀನೂ ಅಂತೆಯೇ ನಡೆ! ವಿಜಯವನ್ನು ಪೊಂದಿ ಸುಖಿಸುವೆ! ಪರಲೋಕಕ್ಕೂ ಕೆಡದಿರುವೆ!' ಎಂದು ಭೀಷ್ಮನು ನುಡಿದನು.

ಕ್ಷತ್ರಿಯನಾದ ಶತ್ರುವು ಅಕಸ್ಮಾತ್ತಾಗಿ ಮುತ್ತಿ 'ನಾನು, ನಿಮ್ಮನ್ನು ಧರ್ಮದಿಂದ ಪಾಲಿಸುವೆನು. ನ್ಯಾಯವಾದ ಕಪ್ಪವನ್ನು ಮಾತ್ರ ಕೊಡಿ!' ಎಂದು ಸಾರಿದರೆ, ಬಲಹೀನನು ಅವನಿಗೆ ವಿಧೇಯರಾಗಿ, ಕಪ್ಪವನ್ನು ಕೊಡಬೇಕು. ಬಲವಂತರಾಗಿದ್ದರೆ ಯುದ್ಧ ಮಾಡಿ ಗೆಲ್ಲಬೇಕು. ಯುದ್ಧದಲ್ಲಿ ಸೋತು ಹಿಂದಿರುಗಬಾರದು. ಯುದ್ಧದಲ್ಲಿ ಮರಣವನ್ನು ಹೊಂದಿದರೆ ವೀರಸ್ವರ್ಗವು ಸಿಗುವುದು. ಯುದ್ಧದಲ್ಲಿ ಒಬ್ಬನಿಂದ ಒಬ್ಬನೇ ಕಾದಲಹುದು. ವಿಕವಚನು, ವಿಶಸ್ತ್ರನು, ಹತವಾಹನು ಆದವನಿಂದ ಕಾದಾಡದೆ, ಕಾದಬೇಕು. ಸಸೈನ್ಯವಾದ ಶತ್ರುವಿನನ್ನು ಸಸೈನ್ಯನಾಗಿ ಎದುರಿಸಬೇಕು. ಧರ್ಮದಿಂದ ಕಾದುವವನೊಡನೆ ಧರ್ಮಯುದ್ಧವನ್ನು ಮಾಡಬೇಕಾಗಲಿ ಮೋಸದ ಯುದ್ಧವಾಡುವವನಿಂದ ಧರ್ಮಯುದ್ಧವನ್ನು ಮಾಡಬಾರದು. ನಿಕೃತಿಯನ್ನು ನಿಕೃತಿಯಿಂದಲೇ ಸಂಹರಿಸಬೇಕು. ರಥಿಯಿಂದ ರಥಿಯೇ, ಆಶ್ವಿಕನಿಂದ ಆಶ್ವಿಕನೇ, ಗಜಾರೂಢನಿಂದ ಗಜಾರೂಢನೇ, ಪದಾತಿಯಿಂದ ಪದಾತಿಯೇ ಕಾದಬೇಕು. ವ್ಯತ್ಯಸ್ತವಾದರೆ ಅಧರ್ಮವೆನಿಸುವುದು. ವಿಷಲಿಪ್ತ ಬಾಣದಿಂದ ಹೊಡೆಯಬಾರದು. ರಣದಲ್ಲಿ ತನ್ನನ್ನು ಕೊಂದ ವೀರರನ್ನು ನಿಂದಿಸಲಾಗದು.

ಧರ್ಮಯುದ್ಧದಲ್ಲಿ ತೊಡಗಿರುವ ವೃದ್ಧ, ನಿರಪತ್ಯ, ಶಸ್ತ್ರಹೀನ, ವಾಹನರಹಿತ, ಭಗ್ನಧನುಷ್ಕ ಮುಂತಾದವರನ್ನು ಕೊಲ್ಲಬಾರದು. ಗಾಯಗೊಂಡ ಶತ್ರುವಿನನ್ನೂ ಶಿಬಿರಕ್ಕೆ ತಂದು, ಚಿಕಿತ್ಸೆ ಮಾಡಿಸಿ, ಅವನನ್ನು ಅವನ ಮನೆಗೆ ಕಳುಹಬೇಕು. ಅಧರ್ಮದಿಂದ ಗೆದ್ದ ರಾಜನು ಪಾಪಭಾಜನನಾಗಿ ಆತ್ಮಹತ್ಯೆ ಮಾಡಿಕೊಂಡವನಂತೆ ನಿಂದ್ಯನೆನಿಸುವನು. ಪಾಪಕರ್ಮದಿಂದ ಧನವನ್ನು ಹೊಂದಿದ ಪಾಪಿಯು ತಾತ್ಕಾಲಿಕ ಸುಖವನ್ನು ಹೊಂದಬಹುದು; ಆದರೆ ಅವನು ತನ್ನ ಪಾಪದಿಂದಲೇ ತಾನು ಸಾಯುವನು. ಪಾಪಿಯು ಶುಚಿ ಜನರನ್ನು ದ್ವೇಷಿಸುವನು; ಅವನನ್ನು ದುಷ್ಟರು, ನಾಸ್ತಿಕರು ಸೇರಿ ಮತ್ತೂ ಕೆಡಿಸುವರು; ಶಾಸ್ತ್ರ ಮರ್ಯಾದೆಯನ್ನು ಗಣಿಸದೆ ಅವನು - ಚರ್ಮದ ತಿದಿಯಂತೆ ಉಬ್ಬಿ - ಕೊನೆಯುಸಿರು ಬಿಟ್ಟ ತಕ್ಷಣವೇ ನಿಸ್ಸಾರನಾಗುವನು, ತೀರದ ಗಿಡದಂತೆ ಅವನು ಕಾಲಪ್ರವಾಹದಲ್ಲಿ ಕೊಚ್ಚಿಹೋಗಿ, ಸಮೂಲನಾಗಿ ನಷ್ಟನಾಗುವನು. ಆದುದರಿಂದ ಅಧರ್ಮವಿಜಯವು ಪಾಪ ಮೂಲವೆಂದರಿತು ರಾಜನು ಧರ್ಮದಿಂದಲೇ ಕಾದಬೇಕು.

ಯುದ್ಧರಂಗದಲ್ಲಿ ಶಸ್ತ್ರವನ್ನು ಕೆಳಗಿಟ್ಟು ಶರಣಾಗತನಾದವನನ್ನು ಕೊಲ್ಲಬಾರದು. ರಾಜಕನ್ಯೆಯು ಸೆರೆ ಸಿಕ್ಕರೆ, ಅವಳನ್ನು ಕೇಳಿ, ಸಮ್ಮತಿ ಪಡೆದು, ಮದುವೆ

ಯಾಗಬಹುದು. ಇಲ್ಲದಿರೆ ಅವಳನ್ನು ಇಷ್ಟ ಪತಿಯಲ್ಲಿಗೆ ಸಬಹುಮಾನವಾಗಿ ಕಳಿಸಿಕೊಡಬೇಕು. ಚೋರರ ಧನ ಪಶುಗಳನ್ನು ಪಡೆದ ರಾಜನು, ಪಶುಗಳನ್ನು ಬ್ರಾಹ್ಮಣರಿಗಿತ್ತು, ಧನವನ್ನು ಬಡಬಗ್ಗರಿಗೆ ಹಂಚಬೇಕು. ಸೈನ್ಯಗಳೆರಡು ಸಂಧಿಸಿದಾಗ, ಹಿಂಸೆಯನ್ನು ತಡೆಯಲೆಣಿಸಿದ ವಿಪ್ರನು ಮಧ್ಯೆ ನಿಂತು ಶಾಂತಿ ಶಾಂತಿ ಎಂದೂದಿದರೆ, ಉಭಯರಾಜರೂ ಯುದ್ಧವನ್ನು ಬಿಟ್ಟು, ವಿಪ್ರಸಭೆಯಲ್ಲಿ ಸೇರಿ ಸಂಧಿ ಮಾಡಿಕೊಳ್ಳಬೇಕು.

ಧರ್ಮಭ್ರಷ್ಟನಾದ ರಾಜನನ್ನು ಶತ್ರುಪಕ್ಷದವರು ಮಿತ್ರರೂಪರಾಗಿ ಸೇರಿ, ಸಮಯವನ್ನು ಸಾಧಿಸಿ, ಸಂಹರಿಸುವರು. ಶುದ್ಧಜೀವನನಾದ ರಾಜನು ಅಲ್ಪರಾಜ್ಯದಿಂದಲೇ ಸಂತುಷ್ಟನಾಗಿ, ಇಂದ್ರನಂತೆ ಸುಖಿಸುವನು. ಧರ್ಮದಿಂದ ಗೆದ್ದ ಪ್ರತರ್ದನನು ಶತ್ರುರಾಜ್ಯದ ಧನಧಾನ್ಯಾದಿಗಳನ್ನು ಹೊಂದಿದನು. ದಿವೋದಾಸನು ಯಜ್ಞಾಂಗ ಧಾನ್ಯವನ್ನೂ, ಸಿದ್ಧಾನ್ನಗಳನ್ನೂ ಹರಿಸಿ, ನಿಂದ್ಯನಾದನು. ನಾಭಾಗನು ಶ್ರೋತ್ರಿಯ ಧನವನ್ನುಳಿದು ಮಿಕ್ಕದನ್ನು ಹರಿಸಿ ಬೇಕಾದ ಯಜ್ಞಗಳಲ್ಲಿ ಭೂರಿದಕ್ಷಿಣೆಯಾಗಿ ಕೊಟ್ಟು ಕೀರ್ತಿ ಪುಣ್ಯಗಳನ್ನು ಗಳಿಸಿದನು.

ಧರ್ಮಯುದ್ಧದಲ್ಲಿ ಸಾಧು ಅಸಾಧು ಎನ್ನದೆ, ಶತ್ರು ಪಕ್ಷದವರನ್ನು ಕೊಲ್ಲುವುದು ಅನಿವಾರ್ಯವಾಗಿದೆ. ಅದಕ್ಕಾಗಿ ವಿಜಯರಾಜನು ಯಜ್ಞಗಳನ್ನು ಮಾಡಿ, ದಕ್ಷಿಣೆಗಳನ್ನಿತ್ತು ಅನ್ನವನ್ನು ಕೊಟ್ಟು, ನಿಷ್ಪಾಪನಾಗುವನು. ಕ್ಷೇತ್ರಶೋಧಕನು ಕಳೆ ತೆಗೆದಾಗ, ಕಕ್ಷ (ಗಿಡಗಂಟೆಮುಳ್ಳು)ವು ನಷ್ಟವಾಗಿ, ಫಲವು ಉಳಿವಂತೆ, ರಾಜನು ಯಜ್ಞದಾನ ತಪಸ್ಸುಗಳಿಂದ ಪಾಪಹೀನನಾಗಿ, ಪುಣ್ಯವನ್ನೇ ಪಡೆಯುವನು.

ಬ್ರಾಹ್ಮಣ ರಕ್ಷಣೆಗಾಗಿ ಯುದ್ಧ ಮಾಡಿ, ತನ್ನ ದೇಹವನ್ನು ಯೂಪದಂತೆ ನಿಲ್ಲಿಸಿ ಮಡಿದವನು ರಣಯಜ್ಞದ ಫಲವಾದ ವೀರಸ್ವರ್ಗವನ್ನು ಪೊಂದುವನು. ಭೀತಿ ತೊರೆದು ಕಾದುವ ವೀರನನ್ನು ಕಂಡು ದೇವತೆಗಳು ಮೆಚ್ಚಿ, ಸ್ವರ್ಗ ದ್ವಾರವನ್ನು ಅವನಿಗಾಗಿ ತೆರೆದಿಡುವರು. ಆಹವರಂಗದಲ್ಲಿ ರಕ್ತವನ್ನು ಸುರಿಸಿ, ಗಾಯಗೊಂಡವನು ಸರ್ವಪಾಪಗಳಿಗೂ ಪ್ರಾಯಶ್ಚಿತ್ತವನ್ನು ಮಾಡಿಕೊಂಡಂತಾಗುವನು. ಅವನ ತಾಪವು ತಪವಾಗಿಬಿಡುವುದು. ಭೀರುಗಳಾದವರು ಹಿಂದೆ ನಿಲ್ಲುವರು; ಶೂರರು ಹೆದರದೆ ಮುನ್ನುಗ್ಗುವರು. ಅವರನ್ನು ನೋಡಿಯಾದರೂ, ಭೀತಿ ತೊರೆದು ಭೀರುಗಳೂ ಮುನ್ನುಗ್ಗುವರು. ಕೆಲ ಭೀರುಗಳನ್ನು ಸೇನಾಸಂಖ್ಯೆಯ ಹೆಚ್ಚಳಕ್ಕಾಗಿಯಾದರೂ ನಿಲ್ಲಿಸುವುದು ರಾಜನೀತಿಯಾಗಿದೆ. ತನ್ನನ್ನನುಸರಿಸಿ ಕಾದುವ ವೀರರನ್ನು ಶತ್ರುಗಳಿಗೊಪ್ಪಿಸಿ, ತಾನು ಮಾತ್ರ ಬದುಕಿರಬೇಕೆಂದು ಓಡಿಹೋಗುವ ಹೇಡಿಯನ್ನು ನೋಡಿ ನರಕವೂ ಹೇಸುವುದು. ಅಂತಹ ಪಾಪಿಯನ್ನು ಸ್ವಯೋಧರೇ ಕೊಂದರೂ ಪಾಪವಿಲ್ಲ. ಅದನ್ನು ನೋಡಿ ಇತರರಾದರೂ ಓಡದೆ ನಿಲ್ಲುವಂತಾಗುವುದು. ಹಾಸಿಗೆಯಲ್ಲಿ ಬಿದ್ದು ನರಳುತ್ತಾ, ಮಲಮೂತ್ರಗಳಲ್ಲಿ ಹೊರಳುತ್ತಾ ಸಾಯುವುದು ಕ್ಷತ್ರಿಯನಿಗೆ ಅಧರ್ಮವೆನಿಸುವುದು. ಶಸ್ತ್ರಮರಣವೇ ಕ್ಷತ್ರಿಯನಿಗೆ ಶ್ರೇಯಸ್ಕರವು. ಗಾಯವಾದಷ್ಟು

ಸ್ವರ್ಗ ಸುಖವು ಹೆಚ್ಚುವುದು; ಇಂದ್ರನು ಶತ್ರುಗಳಿಗೆ ಬೆನ್ನು ತೋರದ ಘನವೀರನನ್ನು, ತಾನಾಗಿ ಸ್ವಾಗತಿಸಿ, ಸನ್ಮಾನಿಸುವನು.

ನಾಭಾಗ ಸುತನಾದ ಅಂಬರೀಷನು ಸುದುರ್ಲಭವಾದ ಸ್ವರ್ಗವನ್ನು ಸೇರಿ, ಅಲ್ಲಿ ಇದ್ದ ಇಂದ್ರನ ಸಮೀಪದಲ್ಲಿದ್ದ ತನ್ನ ಸೇನಾಪತಿಯನ್ನು ಕಂಡನು. ವಿಮಾನದಲ್ಲಿ ಸುರಸುಂದರೀ ಸಮೇತನಾಗಿ ಸಂಚರಿಸುವ ಸೇನಾಪತಿಯನ್ನು ಕಂಡು ವಿಸ್ಮಿತನಾದ ಅಂಬರೀಷನು ಇಂದ್ರನನ್ನು ನೋಡಿ “ ದೇವರಾಜ ! ಸಾಗರಾಂತವಾದ ಮಹೀಮಂಡಲವನ್ನಾಳಿದೆನು ; ವರ್ಣಾಶ್ರಮ ಧರ್ಮಗಳು ಕೆಡದಂತೆ ಕಾಪಾಡಿದೆನು; ಗುರುಸೇವೆಗೈದು ವೇದಾದಿಗಳನ್ನೋದಿದೆನು; ಅನ್ನಪಾನಗಳಿಂದ ಅತಿಥಿಗಳನ್ನೂ, ಸ್ವಧೆಯಿಂದ ಪಿತೃಗಳನ್ನೂ, ಯಜ್ಞದಕ್ಷಿಣೆಗಳಿಂದ ಋಷಿಗಳನ್ನೂ, ಹೋಮಗಳಿಂದ ದೇವತೆಗಳನ್ನೂ ತಣಿಸಿದೆನು; ಧರ್ಮವನ್ನು ಬಿಡದೆ ಕಾದು, ಶತ್ರುಗಳನ್ನು ಗೆದ್ದೆನು. ಇವನು ನನ್ನ ಸೇನಾಪತಿಯಾದ ಸುದೇವನು. ಯಜ್ಞಗಳನ್ನು ಮಾಡದೆ, ದಕ್ಷಿಣೆಗಳನ್ನೀಯದೆ ಸುದೇವನು ನನ್ನಕಿಂತಲು ಉತ್ತಮ ಸುಖದಿಂದರಲು ಕಾರಣವೇನು ?” ಎಂದು ಕೇಳಿದನು.

ಇಂದ್ರನು ಇಂತೆಂದನು: ‘ರಾಜನ್! ನಿನ್ನ ಸೇನಾಪತಿಯು ಯುದ್ಧ ಯಜ್ಞವನ್ನು ಮಾಡಿ, ಅಲ್ಲಿ ಬೆನ್ನು ತೋರದೆ ಕಡಿದಾಡಿ ಮಡಿದಿರುವನು. ಕ್ಷತ್ರಿಯನಿಗೆ ರಣಯಜ್ಞಕ್ಕೆ ಮಿಗಿಲಾದ ಯಜ್ಞವಿಲ್ಲ. ರಣಯಜ್ಞವನ್ನು ವಿವರಿಸುವೆನು ಕೇಳು ! ರಣಯಜ್ಞದಲ್ಲಿ ಕುಂಜರಗಳೇ ಋತ್ವಿಜರು. ಅಶ್ವಗಳೇ ಅಧ್ವರ್ಯುಗಳು. ಶತ್ರುವೀರರ ಮಾಂಸವೇ ಹವಿಸ್ಸು; ರಕ್ತವೇ ಆಜ್ಯವು. ಸೃಗಾಲ ಗೃಧ್ರಕಾಕ ಕಂಕವೃಕಾದಿ ಮೃಗ ಪಕ್ಷಿಗಳೇ ಸದಸ್ಯರು, ಪ್ರಾಸತೋಮರ ಖಡ್ಗ ಪರಶುಕುಂತಾದಿ ಆಯುಧಗಳೇ ಸೃಕ್ಕು, ಪರಕಾಯ ಭೇದನ ಪ್ರವೀಣವಾದ ಬಾಣವೇ ಸ್ರುವವು. ಹುಲಿ ಚರ್ಮದ ಒರೆಯಲ್ಲಿಂದ ತೆಗೆಯಲ್ಪಟ್ಟ, ಆನೆಯದಂತ ಪಿಡಿಯುಳ್ಳ, ನಿಶಾತ ಖಡ್ಗವೇ ಸ್ಫಿಕ್ಕು. ಅಯ ಸಮಯವು ತೈಲದೌತವು ಆದ ಆಯುಧ ಸಮೂಹವೇ ಯಾಜ್ಞೀಯ ದ್ರವ್ಯರಾಶಿಯು. ಮುಡಿಯಿಂದ ಅಡಿಯವರೆಗೂ ರಕ್ತಸ್ನಾನವಾದಾಗ ಅದೇ ಅವಬೃಥವು. ಹೊಡಿ, ಕಡಿ ಎಂಬುವ ಶಬ್ದಗಳೇ ಸಾಮಗಾನವು. ಶತ್ರುಸೇನಾಮುಖವೇ ಹವಿರ್ಧಾನವು. ರಥಗಜತುರಗಪದಾತರಿಂದ ತುಂಬಿದ ರಣಭೂಮಿಯೇ ಅಗ್ನಿಕುಂಡವು. ಸಾವಿರಸಾವಾದಾಗ ಮೇಲೇರುವ ಕಬಂಧವೇ ಯೂಪಸ್ತಂಭವು. ತಲನಾದಗಳೇ ವಷಟ್ಕಾರಗಳು. ದುಂಧುಭಿಯೇ ಉದ್ಗಾತನು. ಇಂತಹ ರಣಯಜ್ಞದಲ್ಲಿ ಪ್ರಾಣ ದಕ್ಷಿಣೆಗಳನ್ನಿತ್ತು, ರಾಜನಿಗಾಗಲಿ, ವಿಪ್ರನಿಗಾಗಲಿ ಶರೀರ ತೊರೆದ ವೀರನು ನನ್ನ ಲೋಕವನ್ನು ಪೊಂದಿ ನಿನ್ನ ಸೇನಾಪತಿಯಂತೆ ಸುಖಿಸುವನು.

ಯಾವ ಶೂರನು ರಣವೇದಿಯನ್ನು ನೀಲಚರ್ಮದ ಪಿಡಿಯ ಖಡ್ಗಗಳನ್ನು ಪಿಡಿದ ಬಾಹುವಲ್ಲರಿಗಳಿಂದ ಅಲಂಕರಿಸುವನೋ, ಯಾರನ್ನು ಸಹಾಯವಾಗಿ ಕೋರದೆ ಹಿಂದಿರುಗಿ ನೋಡದೆ ಮುನ್ನುಗ್ಗಿ ಶತ್ರುಸಂಹಾರ ಮಾಡುವನೋ, ಅವನು ನನ್ನ

ಲೋಕವನ್ನು ಸೇರುವನು. ರಣವು ಒಂದು ನದಿಯಂತೆ ಎಂದು ತಿಳಿ! ಭೇರಿಗಳು ಮಂಡೂಕಗಳು; ಹರಿವ ರಕ್ತವೇ ಜಲಪ್ರವಾಹವು; ಅಸ್ಥಿಗಳೇ ಮರಳುಗಲ್ಲುಗಳು; ಮಾಂಸವೇ ಕೆಸರು; ಕೇಶರಾಶಿಗಳೇ ಪಾಚಿ; ಅಸಿಚರ್ಮಗಳೇ (ಗುರಾಣಿ) ಹಡಗಗಳು; ರಥಚಕ್ರಗಳೇ ಸುಳಿಗಳು; ಇಂತಹ ಭೀರುಭಯಂಕರ ನದಿಯನ್ನು ವೀರರು ಧೈರ್ಯದಿಂದ ದಾಟ್ಟಿಬಿಡುವುದೇ ಅವಗಾಹನ ಸ್ನಾನವು. ಸೇನಾ ನದಿಯನ್ನೂ, ಅದರಲ್ಲಿರುವ ವೀರನಕ್ರಗಳನ್ನೂ ಕಂಡು, ಹೆದರಿ ಓಡುವ ಹೇಡಿಯು ಸಾವಿರ ವರ್ಷಕಾಲ ಬಾಳನು; ಸತ್ತ ಮೇಲೆ ಅವನಿಗೆ ನರಕವು ಕಾದಿದೆ. ಯಾವ ವೀರನು ತನ್ನ ರಕ್ತವೆಂಬ ತಳಿಲ ನೀರನ್ನು ಚಲ್ಲಿ, ರಣರಂಗವೇದಿಯನ್ನು ತೊಯಿಸುವನೋ, ಅವನು ಇಂದ್ರ ಬೃಹಸ್ಪತಿಲೋಕಗಳನ್ನು ಸೇರುವನು. ವಿಕ್ರಮಿಸಿ ಸೇನಾಪತಿಯನ್ನು ಕೊಂದವನು, ಕೈಲಾಸವನ್ನು ಸೇರುವನು. ರಾಜನನ್ನೋ, ರಾಜಪುತ್ರನನ್ನೋ, ಕೊಂದು ತನ್ನ ಪ್ರಭುವಿಗೆ ಜಯವನ್ನು ಗಳಿಸಿ ಕೊಟ್ಟ ಶೂರನಿಗೆ ವಿಷ್ಣುಲೋಕವಾಗುವುದು. ರಣಹತನಾದ ವೀರನನ್ನು ಕುರಿತು ಅಳಬಾರದು. ರಣಹತನಿಗೆ ಆಶೌಚವಿಲ್ಲ; ಉದಕಕ್ರಿಯೆ ಬೇಡ; ದಹನಾದಿ ಸಂಸ್ಕಾರ ಬೇಡ; ಏನು ಲೋಪವಾದರೂ ಚಿಂತೆಯಿಲ್ಲ; ಅವನು ಅಕ್ಷಯ ಪುಣ್ಯಲೋಕದಲ್ಲಿ ಅಪ್ಸರೋವನಿತೆಯರಿಂದ ಕೂಡಿ, ಸುಖವಾಗಿರುವನು. ತಪೋಧರ್ಮದಾನ ವ್ರತಗಳಿಂದಾಗುವ ಪುಣ್ಯವು ಅವನಿಗೆ ರಣಮರಣದಿಂದಲೇ ಬರುವುದು. ಜಂಭ, ವೃತ್ರ, ಬಲ, ಪಾಕ, ವಿರೋಚನ, ನಮುಚಿ, ಶಂಬರ, ವಿಪ್ರಚಿತ್ತಿ ಮುಂತಾದ ದೈತ್ಯರನ್ನು ಕೊಂದು, ಲೋಕ ಕ್ಷೇಮವನ್ನು ಉಂಟು ಮಾಡಿದ ಪುಣ್ಯದಿಂದಲೇ ನಾನು ದೇವಾಧಿಪನಾಗಿ, ವಿರಾಜಿಸುವೆನು."

## ೧೬. ವಿಜಯಸಾಧನ

ಭೀಷ್ಮನು ಧರ್ಮರಾಜನಿಗೆ ನಿರೂಪಿಸಿದನು:

'ರಾಜನ್! ಹಿಂದೆ ಪ್ರತರ್ದನನು ಮಿಥಿಲೆಯನ್ನು ಮುತ್ತಿದಾಗ, ಮೈಥಿಲ ಜನಕನು ರಣಯಜ್ಞದಲ್ಲಿ ತೊಡಗಿ ತನ್ನ ಯೋಧರನ್ನು ಪ್ರೋತ್ಸಾಹಗೊಳಿಸುತ್ತಾ ಇಂತೆಂದನು: "ವೀರರೇ! ಕೇಳಿ! ರಣಮರಣವು ದುರ್ಲಭವಾಗಿದೆ. ಸತ್ತರೆ ಸ್ವರ್ಗವೂ, ಬದುಕಿ ಬಂದರೆ ವಿಜಯ ಸುಖವೂ ಆಗುವುದು. ವೀರರಿಗೆ ಭೀರುಗಳಿಗೆ ನರಕವೂ, ಅಪಕೀರ್ತಿಯೂ ತಪ್ಪವು" ಎಂದು ಅವರಿಗೆ ಮೈಥಿಲನು ತನ್ನ ಯೋಗಬಲದಿಂದ ಎರಡನ್ನೂ ನೋಡಿಸಿದನು. ಗಜಸೇನೆಯ ಮಧ್ಯದಲ್ಲಿ ರಥಸೇನೆಯನ್ನೂ ಅದರ ಮಧ್ಯದಲ್ಲಿ ತುರಗಸೇನೆಯನ್ನೂ, ಅದರ ಮಧ್ಯದಲ್ಲಿ ಪದಾತಿ ಸೇನೆಯನ್ನೂ ನಿಲ್ಲಿಸಿದನು. ಮಕರಿಗಳು ಸಾಗರವನ್ನಂತೆ ಶತ್ರುಸೇನೆಯನ್ನು ಕ್ಷೋಭೆಗೊಳಿಸಿದನು.

ಧರ್ಮರಾಜ! ವೀರಪ್ರೋತ್ಸಾಹವು ಅವಶ್ಯ ಕರ್ತವ್ಯವಾಗಿದೆ. ಓಡಿ ಹೋಗುತ್ತಿರುವ ಶತ್ರುಸೇನೆಯನ್ನು ಸ್ವಲ್ಪ ಬೆನ್ನಟ್ಟಿ ಹಿಂದಿರುಗಬೇಕು. ಅತಿಯಾಗಿ ಪೀಡಿಸಿದರೆ, ಶತ್ರುಗಳು

ನಿರುಪಾಯರಾಗಿ, ಹಿಂದಿರುಗಿ ಬಿದ್ದದ್ದೂ ಕಂಡುಬಂದಿದೆ. ಚರಜೀವಿಗಳಿಗೆ ಅಚರಜೀವಿಗಳು ಅನ್ನವು. ಚತುಷ್ಪಾದಿಗಳು ದ್ವಿಪಾದಿಗಳಿಗೆ ಅನ್ನವು. ನೀರಡಿಸಿದವನಿಗೆ ನೀರೇ ಅನ್ನವು. ಶೂರನಿಗೆ ಭೀರುಗಳೇ ಅನ್ನವು. ಪಾಣಿಪಾದೋದರಗಳಿಂದ ಸಮಾನರಾದರೂ ಧೈರ್ಯವಂತನ ಮುಂದೇ ಭೀರುಗಳು ನಿಲ್ಲಲಾರರು. ರಾಜ್ಯವು ವೀರಭೋಜ್ಯವಾಗಿದೆ. ಜಯಾರ್ಥಿಯಾದ ರಾಜನು ತನ್ನ ಸೇನೆಯನ್ನು ನಡೆಸುವ ವಿಧಾನವನ್ನು ತಿಳಿ! ಧರ್ಮವನ್ನು ಬಿಡದೆ ನ್ಯಾಯ ಯುದ್ಧವನ್ನು ಮಾಡಿ, ಸೇನೆಯನ್ನು ಪ್ರೋತ್ಸಾಹಗೊಳಿಸಿ, ನರಕಭಯವನ್ನು ತೋರಿಸಿ, ಗೆಲ್ಲುವುದೊಂದು ಮಾರ್ಗವು. ಇದು ಧರ್ಮವಿಜಯವೆನಿಸುವುದು. ಉಪಾಯಗಳಿಂದ ಗೆಲ್ಲುವುದು ಇನ್ನೊಂದು ಮಾರ್ಗವು. ಶತ್ರುಗಳು ನಿರ್ಮರ್ಯಾದರೂ, ದಸ್ಯುಪ್ರಾಯರೂ ಆದಾಗ ಈ ಮಾರ್ಗದಿಂದಲೇ ಗೆಲ್ಲಬೇಕು.

ಜೈತ್ರಯಾತ್ರೆಗೆ ಚೈತ್ರಮಾರ್ಗಶಿರಗಳು ಪ್ರಶಸ್ತ ಕಾಲವಾಗಿವೆ. ಆಗ ವಾತಾವರಣವು ಅತಿ ಶೀತವಾಗದೆ, ಅತ್ಯುಷ್ಣವೂ ಆಗದೆ ಹಿತವಾಗಿರುವುದು ಅಥವಾ ಶತ್ರು ಆಪತ್ತಿನಲ್ಲಿ ಸಿಲುಕಿದಾಗಲೂ ಯುಕ್ತ ಕಾಲವಾಗಿದೆ. ಯುದ್ಧಕ್ಕೆ ಹೊರಡುವ ರಾಜನು ತಕ್ಕ ಸಾಧನ ಸಾಮಗ್ರಿಯನ್ನು ಸಿದ್ಧಗೊಳಿಸಿಕೊಂಡಿರಬೇಕು. ಆಯುಧಗಳ ಹಿಡಿಗಾಗಿ ಗಜವ್ಯಾಘ್ರ ಮಹಿಷಾದಿ ಚರ್ಮಗಳನ್ನು ಶಲ್ಯ ಕಂಟಕ ಲೋಹಗಳನ್ನು, ಕವಚ ತೋಮರ ಚಾಮರ ಛತ್ರ ಧ್ವಜಗಳನ್ನು, ಖಡ್ಗ ಧನುಶ್ಶೂಲ ಭಿಂಡಿ ವಾಲಶಕ್ತಿ ಪರಶುಪ್ರಾಸಾದಿ ಆಯುಧಗಳನ್ನು ಬಾಣಭರಿತ ತೂಣೀರಗಳನ್ನು, ಕಿರೀಟಾಂಗದ ಹಾರಗಳನ್ನು ಸಮೃದ್ಧವಾಗಿ ಸಂಗ್ರಹಿಸಿಡಬೇಕು. ಸಮಭೂತಲವಿರುವಲ್ಲಿ ಪ್ರಯಾಣಿಸಬೇಕು. ಹಾದಿಯಲ್ಲಿ ಜಲತೃಣಗಳಿರುವಂತೆ ಮೊದಲೇ ನೋಡಿರಬೇಕು. ಜಾಣರಾದ ಚಾರರು ನಿರಪಾಯ ಮಾರ್ಗವನ್ನು ಸೂಚಿಸುತ್ತಿರಬೇಕು. ಅರಣ್ಯಗಳು ಬಂದಾಗ, ಅಟವಿಕ ವನಚರರನ್ನು ಮುಂದಿಟ್ಟು ನಡೆಯಬೇಕು. ಅಲ್ಲಲ್ಲಿ ದುರ್ಗವಿರಬೇಕು. ಅದು ಅಕಸ್ಮಾತ್ತಾಗಿ ಮೇಲೆರಗುವ ಶತ್ರುವಿನಿಂದ ಕಾಪಾಡುವುದು. ಸ್ಕಂಧಾವಾರವು ವನಸಮೀಪದಲ್ಲಿರಬೇಕೆಂದು ಬುದ್ಧಿವಂತರು ಹೇಳುವರು. ವನದಲ್ಲಡಗಿದ್ದ ಪದಾತಿ ಜನರು ಬಂದ ಶತ್ರುಗಳನ್ನು ಕೊಲ್ಲಲು ಸಮರ್ಥರಾಗುವರು.

ಸಪ್ತರ್ಷಿ ಮಂಡಲವನ್ನು ಬೆನ್ನಿಗೆ ಹಾಕಿಕೊಂಡು ಪ್ರಯಾಣಿಸಬೇಕು. ಗಾಳಿಯು ಹಿಂದಿನಿಂದ ಬೀಸುತ್ತಿರಬೇಕು. ಸೂರ್ಯ ಶುಕ್ರಗ್ರಹಗಳು ಬೆನ್ನಿಗಿರಬೇಕು. ಅಶ್ವಸೇನೆಗೆ ಕೆಸರಿಲ್ಲದ, ಪ್ರಾಕಾರಗಳಿಲ್ಲದ, ಹೆಂಟೆ ಕಲ್ಲುಗಳಿಲ್ಲದೆ ಇರುವ ಭೂಮಿಯು ಪ್ರಶಸ್ತವು. ರಥಭೂಮಿಯು ಕೆಸರು ಕುಣಿಗಳಿಲ್ಲದ್ದಾಗಬೇಕು. ಸಣ್ಣಗಿಡಗಳು ಮುಳ್ಳು ಪೊದೆಗಳುಳ್ಳ ಬಯಲು ಗಜಸೇನೆಗೆ ಪ್ರಶಸ್ತವು. ಪದಾತಿ ಭೂಮಿಯು ಬಹುದುರ್ಗವು, ವೇಣುವೇತ್ರ ಸಮಾಕುಲವು ಆಗಿರಬೇಕು. ರಥಾಶ್ವಬಹುಲವಾದ ಸೇನೆಯು ಮಳೆ ದಿನಗಳಲ್ಲಿ ಒಳ್ಳೆಯದಲ್ಲ! ಪದಾತಿ ನಾಗಬಹುಲವಾದ ಸೇನೆಯು ಆಗ ಒಳ್ಳೆಯದು. ಪದಾತಿ ಬಹುಲಸೇನೆಯು ಸದಾ ದೃಢವಾದುದು. ತಿಥಿ ನಕ್ಷತ್ರಗಳನ್ನು ತಿಳಿದು ದೈವಜ್ಞರನ್ನು

ಪೂಜಿಸಿ, ವಿಪ್ರಾಶೀರ್ವಾದವನ್ನು ಪಡೆದು ಹೊರಟ ರಾಜನು ವಿಜಯಶಾಲಿಯಾಗಿಯೇ ಬರುವನು.

ಯುದ್ಧವಾಡುವಾಗ, ಮಲಗಿದ್ದವರು, ನೀರಡಸಿದವರು, ಆಲಸಿದವರು, ಓಡುತ್ತಿರುವವರು, ಮಲಾದಿ ವೇಗಪೀಡಿತರು, ಪಾನಭೋಜನರತರು, ಗಾಯಗೊಂಡವರು, ಶರಣಾಗತರು, ಅಂಗಹೀನರು, ವಾಹನಹೀನರು, ನಿಶ್ಶಸ್ತ್ರರು, ತೃಣಾದಿ ಸಂಪಾದಕರು, ಪಾಚಕಾದಿ ದಾಸದಾಸೀ ಜನರು, ದ್ವಾರಪಾಲಕರು, ಮುಂತಾದವರನ್ನು ಸರ್ವಥಾ ಕೊಲ್ಲಬಾರದು. ಸೇನೆಯನ್ನು ಮುತ್ತಿ ಶತ್ರುಭಯಂಕರರಾಗಿ ಕಾದಿ ಗೆದ್ದು ಬಂದ ವೀರರನ್ನು ದ್ವಿಗುಣವೇತನವಿತ್ತು ಸತ್ಕರಿಸಬೇಕು. ಭೀರುಗಳನ್ನು ಮೊದಲೇ ಹಿಂದಿರುಗಿಸಿ ಕಳಿಸಬೇಕು; ಅಥವಾ ಹಿಂದೆ ಸಂಖ್ಯಾಧಿಕ್ಯಕ್ಕಾಗಿಯಾದರೂ ನಿಲ್ಲಿಸಿ, ಶೂರನಿದರ್ಶನದಿಂದ ಹುರಿದುಂಬಿಸಬೇಕು. ಅಲ್ಲಿಗೂ ನಿಲ್ಲದೆ ಓಡುವ ಹೇಡಿಗಳಿಂದ ಅಪಕೀರ್ತಿ, ಅಪಜಯ, (ವೇತನ) ಅರ್ಥನಾಶಗಳು ತಪ್ಪದೆಂದು ತಿಳಿದು ಅಂತಹವರನ್ನು ಸಂಹರಿಸಿದರೂ ತಪ್ಪಲ್ಲ. ಪಲಾಯನ ಪರರನ್ನು ಹಿಂಬಾಲಿಸಿ ಬರುವ ಶತ್ರುವೀರರ ಸಿಂಹನಾದಗಳಕಿಂತಲೂ ಕರ್ಣಕಠೋರವಿನ್ನೊಂದಿಲ್ಲ. ಶೂರನು ಮೃತ್ಯುವನ್ನು ಹೆದರದೆ ಎದುರಿಸಿ, ರಕ್ತವನ್ನು ಸುರಿಸಿ, ರಾಜಋಣವನ್ನು ತೀರಿಸುವನು; ಸತ್ತರೆ ಸದ್ಗತಿಯನ್ನು ಹೊಂದುವನು. ಅಲ್ಪತರ ಸೇನೆಯುಳ್ಳ ರಾಜನು ಸೂಚೀಮುಖ ವ್ಯೂಹವನ್ನು, ಬಹುಸೇನೆಯಿದ್ದಾಗ ಶಕಟವ್ಯೂಹವನ್ನು ಒಡ್ಡಬೇಕು. ಗಟ್ಟಿಯಾಗಿ ಕೈ ಎತ್ತಿ, ಗರ್ಜಿಸಬೇಕು. ಭೈರವನಾದಗಳೊಂದಿಗೆ ಭೇರೀ ದುದುಂಭಿಗಳು ಮೊಳಗ ಬೇಕು.

ಸಂಗರದಕ್ಷಮರಾದ ಜನರನ್ನು ವರ್ಣಿಸುವೆನು. ಗಾಂಧಾರಸಿಂಧುಸೌವೀರರು ಪ್ರಾಸಯುದ್ಧ ಚತುರರು; ಉಶೀನರರು ಸರ್ವಶಸ್ತ್ರ ನಿಪುಣರು; ಆಭೀರು ಜನರು ಬಲವಂತರು; ಮಾತಂಗಯುದ್ಧದಲ್ಲಿ ಮಾಗಧರು ನಿಪುಣರು; ಮಧುರಾವೀರರು, ಕಾಂಭೋಜಯವನರು ಮಲ್ಲಯುದ್ಧ ಕುಶಲರು; ದಾಕ್ಷಿಣಾತ್ಯರು ಖಡ್ಗ ಯುದ್ಧ ವಿಶಾರದರು; ಇವರೆಲ್ಲರೂ ಶತ್ರು ಭಯಂಕರರು. ಮೇಘಸ್ವನರು, ವ್ಯಾಘ್ರಮುಖರು ಅಂಗಾರನೇತ್ರರು, ವಕ್ರ ನಾಸಿಕರು, ತುರಂಗವೇಗರು ಆದವರನ್ನು ಪದಾತಿ ಸೇನೆಯಲ್ಲಿ ಸಂಗ್ರಹಿಸಬೇಕು. ಕ್ರೂರರು, ಕೃಶಗಾತ್ರರು, ಪಿಂಗಾಕ್ಷರು ಆದವರು ಸಾದಿಗಳಾಗಿರಲು ಅರ್ಹರು. ಬಲವಂತರು, ದೃಢಸ್ಥೂಲಕಾಯರು ಮಾರ್ಜಾಲನೇತ್ರರೂ ಉನ್ನತ ಭುಜರು ಆದವರನ್ನು ಗಜಸೇನೆಯಲ್ಲಿಡಬೇಕು. ರಥಸೇನೆಯಲ್ಲಿ ಅಸ್ತ್ರಶಸ್ತ್ರವಿದರು, ದೃಢಬಾಹುಗಳು ಉನ್ನತಗ್ರೀವರು ವಿಶಾಲವಕ್ಷರು, ಉಗ್ರಸ್ವರರು ಇರಲು ತಕ್ಕವರು.

ಧರ್ಮರಾಜ, ವಿಜಯವನ್ನು ತರುವ ಸೇನೆಗೆ ಶಕುನಾದಿ ಲಕ್ಷಣಗಳನ್ನು ಹೇಳುವೆನು. ದುಶ್ಶಕುನಗಳಾದರೆ, ಆಗ ಜಪಹೋಮಾದಿರೂಪವಾದ ಪ್ರತಿವಿಧಿಯನ್ನು ಆಚರಿಸಬೇಕು. ಯಾವ ರಾಜನ ಸೈನಿಕರು ಉತ್ಸಾಹ ಸಂತೋಷಭರಿತರೋ ಆ ರಾಜನು ಜಯವನ್ನು ಹೊಂದುವನು. ಅನುಕೂಲ ವಾಯುಗಳು ಬೀಸುವಾಗ, ಅನುಕೂಲ ಗ್ರಹಗತಿಯನ್ನು

ಗಮನಿಸಿ ತೆರಳಬೇಕು. ಅಗ್ನಿಹೋತ್ರವು ಪ್ರದಕ್ಷಿಣಾವರ್ತವಾಗಿ ಉರಿಯುತ್ತಿರಬೇಕು. ಹೋಮಾಹುತಿಯು ಪುಣ್ಯಗಂಧವನ್ನು ಸೂಸುತ್ತಿರಬೇಕು, ಭೇರಿದುಂಧುಭಿಧ್ವಾನಗಳು ಗಂಭೀರವಾಗಿರಬೇಕು. ಹಂಸ, ಕ್ರೌಂಚ ಚಾಷಾಧಿ ಶುಭ ಪಕ್ಷಿಗಳು ಮಂಗಲ ಕಲ ಕಲರವವನ್ನು ಮಾಡುತ್ತಿರಬೇಕು. ಪರಸ್ಪರ ಸೌಹಾರ್ದಯುತರು, ರಾಜಭಕ್ತರು, ಶುಚಿಶೀಲರು, ಆದ ಸೈನಿಕರಿರಬೇಕು. ಹಿಂದೆ ಬರುವ ಕಾಗೆ ಅರ್ಥಸಿದ್ಧಿಯನ್ನೂ ಮುಂದೆ ಎದುರ್ಗೊಂಬುವ ಕಾಗೆ ಅನರ್ಥವನ್ನು ಸೂಚಿಸುವುದು. ಇಂತಹ ಸೇನೆಯೊಡನೆ ಹೊರಟ ರಾಜನು ವಿಜಯಿಯಾಗುವನು.

ಸಾಧ್ಯವಾದಮಟ್ಟಿಗೂ ಪ್ರಯತ್ನಿಸಿ ಯುದ್ಧವನ್ನು ಮಾಡದೆ ಸಾಂತ್ವನದಿಂದಲೋ, ಭೇದದಿಂದಲೋ ಜಯಿಸುವ ರಾಜನು ಬುದ್ಧಿವಂತನು. ಯುದ್ಧವು ಹಿಂಸಾಮಯವಾಗಿದೆ. ವಿಧಿಯಿಲ್ಲದೆ, ದುರ್ಯೋಧನನಂತಹ ಹಠಿಯು ಎದುರಿಸಿದಾಗ ಕಾದಬೇಕು. ಸೇನೆಯು ದೊಡ್ಡದಾದ ಮಾತ್ರದಿಂದ ವಿಜಯವೆಂದು ತಿಳಿಯಬೇಡ! ಐವತ್ತು ವೀರರೇ ಸಾಕು ಸಾವಿರ ಹುಲು ಸೈನಿಕರನ್ನು ಗೆಲ್ಲಲು. ಆಯುಧನಾಶವನ್ನು, ಯೋಧಮರಣವನ್ನು ಉಪಲಕ್ಷಿಸಿ, ಸಂಧಿ ಮಾಡುವುದೊಳಿತು. ಸಂಧಿಯಾಗದೆ ಯುದ್ಧವೇ ಆದಾಗ, ಸೆರೆಸಿಕ್ಕ ರಾಜನನ್ನು ಕ್ಷಮಿಸಿ, ಬಿಡಬೇಕು. ಕ್ಷಮೆಯು ಬಹು ಕೀರ್ತಿಯನ್ನು ತರುವುದು. ಆದರೆ ದುರ್ಜನರಲ್ಲಿ ಕ್ಷಮೆಯು ಯುಕ್ತವಲ್ಲ. ಹೊಡೆದು ಪ್ರಿಯವಾಡುವುದು, ಕೊಂದು ರೋದಿಸುವುದು ಸುಜನ ಶತ್ರುಗಳ ವಿಷಯದಲ್ಲಿ. ರಾಜನಿಗಾಗಿ ಕಾದುವ ಸೈನಿಕರನ್ನು, ಶತ್ರುಗಳೆಂದ ಮಾತ್ರಕ್ಕೆ, ಚಿತ್ರವಧೆ ಮಾಡಲಾಗದು.

ಹಿಂದೆ ಇಂದ್ರನು ಬೃಹಸ್ಪತಿಯನ್ನು, 'ಗುರೋ! ಶತ್ರುಗಳನ್ನು ಹತ್ತಿಕ್ಕಿ, ಸಾಧ್ಯವಾದಷ್ಟು ಮಟ್ಟಿಗೆ ಸಂಹರಿಸದೆ, ವಶದಲ್ಲಿಟ್ಟು ವರ್ತಿಸುವ ಬಗೆ ಹೇಗೆ?' ಎಂದು ಕೇಳಿದನು. ಬೃಹಸ್ಪತಿಯು ಇಂತೆಂದನು: 'ದೇವೇಂದ್ರ! ರಾಜನು ಯುದ್ಧ ವ್ಯಸನಿಯಾಗಬಾರದು. ಅಕ್ಷಮೆ, ಕ್ರೋಧವೆಂಬ ಗುಣಗಳು ಮೂಢತನವನ್ನು ಸೂಚಿಸುವವು. ಕ್ರೋಧ, ಭಯ, ಹರ್ಷಗಳನ್ನು ಅಡಗಿಸಿಟ್ಟು ಕಾದುವ ವೀರರನ್ನು ಶತ್ರೂಗಳೂ ಮೆಚ್ಚುವರು. ಶತ್ರುಗಳಲ್ಲಿ ವಿಶ್ವಾಸವಿಡಬೇಕು. ಪ್ರಿಯವನ್ನಾಡಬೇಕು. ಶುಷ್ಕವೈರವನ್ನು ಬಿಡಬೇಕು. ವೃಥಾ ವಾದವನ್ನು ಮಾಡಬಾರದು. ಉದಾತ್ತ ಶತ್ರುಗಳಿಂದ ಉದಾತ್ತನಾಗಿರಬೇಕು. ಮಾಯುಗಾರರಲ್ಲಿ ವಂಚಕನಾಗೇ ಇರಬೇಕು. ಅವಮಾನಿತನಾಗಿ ಹೋದ ಶತ್ರು ವೀರನಿಂದ ಜಾಗರೂಕನಾಗಿರ ಬೇಕು. ದುಷ್ಟಶತ್ರುಗಳನ್ನು ಉಳಿಸಬಾರದು. ಅವನ ಸೇನೆಯಲ್ಲಿ ಭೇದವನ್ನು ಪುಟ್ಟಿಸಿ, ಧನರತ್ನಗಳನ್ನಿತ್ತು ಅವರನ್ನು ವಶಪಡಿಸಿಕೋಬೇಕು. ವಿಷಾಗ್ನಿ ವೇಶ್ಯೆಯರಿಂದ ಅವರನ್ನು ಗುಪ್ತವಾಗಿ ಕೊಲ್ಲಿಸಬೇಕು. ಮಾರ್ದವ ತೋರಿಸಿ ಕ್ರೂರನಾಗಿ, ಹಿಂದೆ ಸರಿದು ಮೇಲೆರಗಿ ಆಲಸ್ಯ ಮಾಡಿ ಸಮಯವನ್ನು ಸಾಧಿಸಿ, ಪ್ರಮಾದವಶನಾಗಿರುವ ಶತ್ರುವನ್ನರಿತು ಕಾದಿ, ಸಂಹರಿಸಬೇಕು. ಒಬ್ಬ ಆಪ್ತವೀರನಿಂದಲೇ ಆಗುವ ಕಾರ್ಯಕ್ಕೆ ಬಹು ಸೈನಿಕರನ್ನು ಬಲಿಕೊಡಬಾರದು. ಮಹಾಬಲನಾದ ಶತ್ರುವಿಗೆ ನಮಸ್ಕರಿಸಿ, ಬಿಡಿಸಿಕೊಂಡು, ಅವನು ಮೈಮರೆತಿರುವಾಗ ಮೇಲೇರಿ ಹೋಗಿ, ವಿಜಯವನ್ನು ಸಾಧಿಸಬೇಕು. ಮಿತ್ರಾ-ಮಿತ್ರರನ್ನು

ಅರಿತು, ರಾಜನು ಅವರಿಗೆ ತಕ್ಕಂತೆ ರಕ್ಷಾ ಶಿಕ್ಷೆಗಳನ್ನು ಪರೋದ್ವೇಜನವಾಗದಂತೆ ಮಾಡಬೇಕು. ರಾಜನು ಮೃದುವಾದರೆ ಅವಮಾನಿತನು, ತೀಕ್ಷ್ಣನಾದರೆ ದ್ವೇಷಿತನು ಆಗುವನು. ಮೃದು ತೀಕ್ಷ್ಣನಾಗಿ ಆಳುವ ರಾಜನು ಪ್ರಜಾಪ್ರಿಯನೆನಿಸುವನು.

ಪದಾತಿ ಬಹುಲವಾದ ಸೇನೆಯು ಯಂತ್ರಾಯುಧ ಸಮೃದ್ಧವಾಗಿರುವಾಗ, ಏರಿ ಹೋಗುವುದರಿಂದ ಬಹುಲಾಭವಾಗುವುದೆಂದು ತೋರಿದಾಗ, ರಾಜನು ಕೋಟೆಯಿಂದ ಹೊರಟು, ಶತ್ರು ಸೇನೆಯನ್ನು ಹಠಾತ್ತಾಗಿ ಮುತ್ತಿ ನಾಶಪಡಿಸಬೇಕು. ಮಾಯಾವಿಗಳನ್ನು ಮಾಯೆಯಿಂದ ಕೊಂದರೆ ಪಾಪವಿಲ್ಲ. "ನನ್ನ ಸೇನಾಪತಿಯು ರಾಜದ್ರೋಹಿಯು; ಮಂತ್ರಿಯು ದುಷ್ಟಾತ್ಮನು" ಎಂದು ರಾಜ್ಯದಲ್ಲಿ ಸಾರಿ, ಅವರನ್ನು ರಾತ್ರಿ ಯಾರೂ ತಿಳಿಯದಂತೆ, ಪರರಾಜ್ಯಕ್ಕೆ ಕಳಿಸಬೇಕು. ಅವರು ಪರರಾಜನನ್ನು ಸೇರಿ, ಅಲ್ಲಿ ಸ್ವರಾಜನಿಂದೆಯಿಂದ ವಿಶ್ವಾಸಗಳಿಸಿದಾಗ ರಾಜನ ಕಾರ್ಯವು ಸಿದ್ಧವಾಯಿತೆಂದು ತಿಳಿ! ಅಂತಹ ಗೂಢ ಚರರಿಂದ ಪರರಾಜನ ಸೈನಿಕರು ಹಣವನ್ನು ಪಡೆದು ಸ್ವರಾಜ ದ್ರೋಹವನ್ನು ಮಾಡುವರು. ಮಂತ್ರವಿದರು, ದಕ್ಷರು, ವೀರರು, ಕಷ್ಟ ಸಹಿಷ್ಣುಗಳು, ಪ್ರಾಣಪಣವನ್ನಿಟ್ಟವರು ಆದ ರಾಜಭಕ್ತರನ್ನೇ ಇಂತಹ ಕಾರ್ಯದಲ್ಲಿ ನಿಯಮಿಸಬೇಕು. ದುಷ್ಟ ಭೃತ್ಯರನ್ನಲ್ಲ.

ದುಷ್ಟಭೃತ್ಯ ಲಕ್ಷಣವನ್ನು ಕೇಳು! ರಾಜನನ್ನು ನಿಂದಿಸುವನು, ರಾಜಗುಣಗಳನ್ನು ಅಸೂಯೆಯಿಂದ ಕಡೆಗಣಿಸುವವನು, ತುಟಿಕಚ್ಚುವವನು, ತಲೆಯನ್ನು ಅಲ್ಲಾಡಿಸುವವನು, ಹುಬ್ಬನ್ನು ಗಂಟಿಕ್ಕುವವನು, ರಾಜಾಜ್ಞೆಯನ್ನು ಮೀರಿ ನಡೆಯುವವನು, ಶತ್ರುರಾಜ ಪ್ರಶಂಸಕನು ಇವರೆಲ್ಲರು ದುಷ್ಟಭೃತ್ಯರು. ಅಂತಹ ಭೃತ್ಯರು ರಾಜ ಸಮುಖದಲ್ಲಿ ತಲೆ ಎತ್ತಿ ನಿಲ್ಲನು! ಮನವಿತ್ತು ಮಾತಾಡನು; ತನ್ನ ರಾಜನ ಪ್ರಶಂಸೆಯನ್ನು ಮೆಚ್ಚನು; ರಾಜನ ದುಃಖಕ್ಕೆ ಹಿಗ್ಗುವನು. ರಾಜನ ಶ್ರೇಯಸ್ಸಿಗೆ ಸಹಿಸನು." ಇಂತು ನುಡಿದ ಗುರು ವಚನವನ್ನಾಲಿಸಿ, ಇಂದ್ರನು ಅಂತೆಯೇ ನಡೆದು ವಿಜಯಶಾಲಿಯಾದನು.

ವಿಜಯಸಾಧಕ ರಾಜನು ತನ್ನ ಕೋಶವನ್ನು ತುಂಬಿಸಿಡಬೇಕು. ಹಿಂದೆ ಕ್ಷೇಮದರ್ಶಿ ಎಂಬ ಕೌಶಲ ರಾಜನು ಕಾಲಕವೃಕ್ಷೀಯನನ್ನು ನೋಡಿ 'ಮುನಿರಾಜ! ನನ್ನ ಕೋಶವು ಬರಿದಾಗಿದೆ. ಸೇನೆಯನ್ನು ಪೋಷಿಸಲಾರದೆ, ನಿರ್ಬಲನಾಗಿರುವೆನು. ನನ ಗೇನು ಗತಿ? ಅರ್ಥಾಶೆಯನ್ನು ಬಿಟ್ಟು, ಸಂತುಷ್ಟರಾಗಿರುವ ಮಹಾತ್ಮರಿರುವರು. ನನಗೆ ಹಾಗಿರಲಾಗಿಲ್ಲ; ನನಗೆ ಮನಃಶಾಂತಿ ಎಂತು?' ಎಂದು ಕೇಳಿದನು. ಕಾಲಕವೃಕ್ಷೀಯನು ಇಂತೆಂದನು: 'ರಾಜನ್! ವೈರಾಗ್ಯಕ್ಕೆ ಸಮಾನವಾದ ಸುಖವಿಲ್ಲ. ಅರ್ಥನಾಶವಾಗದ ಮುನ್ನ ನೀನು ಎಚ್ಚರವಹಿಸಲಿಲ್ಲ. ನಿನ್ನ ದುಷ್ಟಮಂತ್ರಿ, ಸೇನಾಪತಿ, ಭೃತ್ಯರು ನಿನ್ನನೀ ಗತಿಗೆ ತಂದರು. ಅವರು ನ್ಯಾಯವಾಗಿ ನಿನಗೆ ಸಲ್ಲಬೇಕಾದ ಧನ ವಸ್ತು ರತ್ನ ವಸನಗಳನ್ನು ಅನ್ಯಾಯವಾಗಿ ಅಪಹರಿಸಿ, ನಿನ್ನನ್ನೂ, ಪ್ರಜರನ್ನೂ ವಂಚಿಸಿದರು. ಈಗ ಅತ್ತು ಫಲವಿಲ್ಲ. ನಿನಗೆ ಎರಡೇ ಮಾರ್ಗಗಳಿವೆ.

ಮನುಜನು ಸಂಪಾದಿಸಿದ ಧನವು ಅವನ ಹಿಂದೆ ಬರುವುದಿಲ್ಲ. ಇಲ್ಲದ ಧನವು ಬರುವುದುಂಟು; ಇದ್ದ ಧನವು ಹೋಗುವುದುಂಟು. ಯಾವುದೂ ಶಾಶ್ವತವಲ್ಲ. ಇಪ್ಪತ್ತು ಮೂವತ್ತು ವರ್ಷದವರು ಶತಾಯುಷಿಗಳೆದುರಿಗೇ ಸಾಯುತ್ತಿರುವರು. ಆದುದರಿಂದ ಧನಾದಿಗಳಲ್ಲಿ ಮಮತೆ ಬಿಡು. ಅಭಿಮಾನದಿಂದಲೇ ದುಃಖವು. ದೈವವೇ ಸುಖದುಃಖ ಪ್ರದವಾಗಿದೆ. ಅವನು ಕೊಟ್ಟದ್ದನ್ನುಣ್ಣು ಇದು ವೈರಾಗ್ಯಮಾರ್ಗವು. ಯದೃಚ್ಛಾಲಾಭಸಂತುಷ್ಟನು, ಮತ್ಸರರಹಿತನು ಆದವನು ದುಃಖವನ್ನು ಹೊಂದದಿರುವನು. ನಿನ್ನಲ್ಲಿಲ್ಲದೆ, ಪರರಲ್ಲಿರುವ ಸಂಪತ್ತಿಗೆ ವ್ಯಸನಪಡುವುದುಚಿತವಲ್ಲ. ಯೋಗಿ ಜನರು ತಾವಾಗಿ ತೊರೆದು ಬಿಡುವ ಧನಕ್ಕಾಗಿ ತತ್ತರಿಸಬೇಡ!

ಇನ್ನೊಂದು ಮಾರ್ಗವನ್ನೂ ತಿಳಿ! ನಿನಗೆ ಉತ್ಸಾಹ ಬಲಗಳಿದ್ದರೆ, ನಿಕೃತಿ ಪರರನ್ನು ಮೋಸದಿಂದಲೇ ಜಯಿಸು! ಮೋಸವೆಂದರೆ ಮೊದಲು ಶತ್ರುಗಳಿಂದಲೂ ಸ್ನೇಹವನ್ನು ಬೆಳೆಸು! ಕಾಮ ಕ್ರೋಧ ದಂಭಗಳನ್ನು ಬಿಡು! ಶ್ರದ್ಧೆಯಿಂದ ಕಾರ್ಯಗಳನ್ನು ಮಾಡಿ, ವಿಶ್ವಾಸವನ್ನು ಹುಟ್ಟಿಸು! ಶತ್ರುವಿಗೆ ಬಲಭುಜನೆನಿಸು! ದಾನವಿತ್ತು ಅವನ ಭೃತ್ಯರಲ್ಲೂ ಭೇದವನ್ನು ಪುಟ್ಟಿಸಿ ಅವನ ಬಂಧು ಜನರನ್ನೂ, ಬಿಲ್ವಫಲದಿಂದ ಬಿಲ್ವಫಲವನ್ನು ಕೆಡಹಿದಂತೆ, ಪರಸ್ಪರವಾಗಿ ಕಡಿದಾಡುವಂತೆ, ಅಥವಾ ಸಂಹರಿಸಿ ಕೊಳ್ಳುವಂತೆ ಮಾಡು! ಅವನ ಶತ್ರುಗಳಿಂದ ಕೂಡಿ, ಶತ್ರುಸೇನೆಯನ್ನು ನಾಶ ಪಡಿಸು! ಕ್ರಮವಾಗಿ ಬಣ, ಧನಮಿತ್ರ ಧನಸಮೃದ್ಧನಾದ ಮೇಲೆ, ನೀನೇ ವಿಕ್ರಮಿಸಿ, ಶತ್ರುವಿನನ್ನು ನಾಶಪಡಿಸು ! ಶತ್ರುನಗರದಲ್ಲಿ ನಿನ್ನ ಗೂಢಚಾರರು ಭಿಕ್ಷುಕ ಉನ್ಮತ್ತ, ಕಾಪಾಲಿ, ಬೌದ್ಧರೂಪದಿಂದ ಸಹಾಯಕರಾಗಿರಲಿ! ಶತ್ರುವಿಗೆ ದುಷ್ಕರ ಕಾರ್ಯಗಳಲ್ಲಿ ಪ್ರೋತ್ಸಾಹ ಕೊಡು! ಅವನನ್ನು ವೇಶ್ಯಾದಿ ವ್ಯಸನಗಳಿಗೆ ಗುರಿಮಾಡು! ದಾನಧರ್ಮಗಳನ್ನು ಸ್ವೇಚ್ಛೆಯಾಗಿ ಮಾಡಿಸಿದಾಗ ದಾನದಿಂದ ಪ್ರೀತರಾದ ವಿಪ್ರಾದಿಗಳಿಗೆ ನೀನು ಪ್ರೀತಿಪಾತ್ರನಾಗುವೆ. ಪ್ರಜರೂ ನಿನ್ನಲ್ಲಿ ಅನುರಕ್ತರಾಗುವರು. ಕೋಶವು ನಷ್ಟವಾದಾಗ ಶತ್ರುವು ದುರ್ಬಲನಾಗಿ, ತಾನಾಗಿ ನಿನ್ನ ವಶನಾಗುವನು.

ಇನ್ನೊಂದು ಮಾತನ್ನು ಕೇಳು! ನಿತ್ಯವೂ ಜಯವಾಗುವುದಿಲ್ಲ; ಅಪಜಯವೂ ಇಲ್ಲ. ಇದನ್ನರಿತು ಬುದ್ಧಿವಂತನು ಸಾಮದಿಂದಲೇ ಕಾರ್ಯವನ್ನು ಸಾಧಿಸಬೇಕು. ನಿಷ್ಕಪಟಿಯಾಗಿ ಸ್ನೇಹವನ್ನು ಬೇಡಿ, ದಾನಮಾನ ಭೋಜನಗಳಿಂದ ನಿನ್ನ ಶತ್ರುವನ್ನು ಸಂತೈಸು! ಮೈಥಿಲನು ಸಜ್ಜನ ಶಿರೋಮಣಿಯು. ಅಂತಹನೊಡನೆ ಮೋಸಭೇದಗಳು ಸಲ್ಲವು. ಶ್ರೇಯಸ್ಕಾಮರು ಸಂಧಿಯನ್ನು ಬಯಸುವರು."

ಇಂತು ಉಪದೇಶಿಸಿದ ಕಾಲಕವೃಕ್ಷೀಯನ ವಚನದಂತೆ ಕ್ಷೇಮದರ್ಶಿಯು ನಡೆದನು. ಅವನು ತನ್ನ ದುಷ್ಟಾಮಾತ್ಯರನ್ನು ಕಿತ್ತೊಗೆದು, ವಿರೋಧವನ್ನು ಬಿಟ್ಟು, ಮೈಥಿಲನಿಂದ ಸಂಧಿ ಮಾಡಿಕೊಂಡನು. ಮೈಥಿಲನು ಕೋಶಲರಾಜನನ್ನು ಗೌರವಿಸಿ, ಅವನ ಕೋಶಗಳನ್ನವನಿಗಿತ್ತು ಕಳಿಸಿದನು.

ಧರ್ಮರಾಜನು 'ತಾತ! ಜಯವನ್ನು ಪೊಂದಕೋರುವ ರಾಜನ ವರ್ತನವನ್ನು ತಿಳಿದೆನು. ಈಗ ಶೂರಗಣದ ಲಕ್ಷಣವನ್ನು ಹೇಳು. ಅವರು ಪರಸ್ಪರವಾಗಿ ಕಡಿದಾಡದೆ, ಬಲಯುತರಾಗಿ ಶತ್ರುಜಯವನ್ನು ಸಾಧಿಸುವಂತಾಗಲು ರಾಜನು ಏನು ಮಾಡಬೇಕು? ಅವರಿಂದ ಕೂಡಿ ಮಾಡುವ ಮಂತ್ರಾಲೋಚನೆಯು ರಹಸ್ಯವಾಗಿರುವ ಬಗೆ ಹೇಗೆ?' ಎಂದು ಕೇಳಿದನು.

ಭೀಷ್ಮನು ಹೇಳಿದನು: 'ರಾಜರಿಗೂ ಭಟರಿಗೂ ವಿರೋಧವನ್ನು ಪುಟ್ಟಿಸುವುವೆಂದರೆ ಕಾಮಕ್ರೋಧಗಳು. ಕಾಮದಿಂದ ಲೋಭವು, ಕಾಮಭಂಗದಿಂದ ಕ್ರೋಧವು ಪುಟ್ಟುವವು. ರಾಜನು ದುರಾಶಾಪರನಾಗಿ ಲೋಭವನ್ನು ವರಿಸಲು, ಭೃತ್ಯರೂ ಆಶಾದಾಸರಾಗಿ ಕ್ರೋಧವನ್ನು ವರಿಸುವರು. ಚಾರ ಮಂತ್ರಿ ಸೈನಿಕರು ಬೇಡಿದ್ದನ್ನು ಕೊಡಲಾರದೆ ರಾಜನು ಸಾಮಭೇದದಂಡಗಳನ್ನು ಪ್ರಯೋಗಿಸುವನು. ಪರಸ್ಪರ ಭಯಗ್ರಸ್ಥರಾದ ರಾಜರು ಭಟರು ಸೌಹಾರ್ದವಿಲ್ಲದೆ ಕೆಡುವರು. ಭೇದ ವಿರೋಧಗಳಿಗೆ ನೆಲೆಯಾದ ಸೈನಿಕರು ಶತ್ರುಗಳಿಗೆ ಸಿಕ್ಕು ಸಾಯುವರು. ಆದುದರಿಂದ ರಾಜನು ಅವರಲ್ಲಿ ಪರಸ್ಪರ ಮೈತ್ರಿಯನ್ನು ಬೆಳೆಸಬೇಕು. ಸಂಘಾತ ಬಲಪೌರುಷರಾದವರು ಸಂಪತ್ತನ್ನು ಗಳಿಸಬಲ್ಲರು. ಅವರಿಗೆ ಶತ್ರುಗಳು ಹೆದರುವರು. ಧರ್ಮಿಷ್ಠರು, ವ್ಯವಹಾರ ಕುಶಲರು, ಜ್ಞಾನವೃದ್ಧರು ಆದವರನ್ನು ನಾಯಕರನ್ನಾಗಿಟ್ಟುಕೊಂಡ ಸಂಘವು ಸರ್ವತೋಮುಖವಾಗಿ ಬೆಳೆಯುವುದು. ಗುಣಸತ್ತಮರು ಕಿರಿಯರಿಗೆ ವಿನಯ ನಯಾದಿಗುಣಗಳನ್ನು ನುಡಿದು, ನಡೆದು ಕಲಿಸುವರು. ಸಂಘವು ಬಲಿಷ್ಠವು, ಶೂರಜನ ನಿಷ್ಠವು, ಧನಧಾನ್ಯ ಸಮೃದ್ಧವು, ಶಾಸ್ತ್ರಚತುರವು ಆದರೆ, ದೇಶಕ್ಕೆ ಬಂದ ವಿಪತ್ತು- ಸೂರ್ಯನ ಬಿಸಿಲಿಗೆ ಹಿಮದಂತೆ ಕರಗಿಹೋಗುವುದು.

ಕ್ರೋಧ, ದಂಡ, ಪೌರುಷ, ವಧಾದಿ ನಿಗ್ರಹದಿಂದ, ಉದ್ವೇಜಿತವಾದ ಸೇನೆಯು ತಿರುಗಿ ಬಿದ್ದು, ರಾಜ ಮಂತ್ರಿಗಳನ್ನೂ ಸಂಹರಿಸಿಬಿಡುವುದು. ಆದುದರಿಂದ ರಾಜನು ಸಾಮ, ದಾನ, ಸನ್ಮಾನಗಳಿಂದಲೇ ಸೈನಿಕರನ್ನೂ, ಭೃತ್ಯರನ್ನೂ ವಶದಲ್ಲಿ ತರಬೇಕು. ರಾಜನ ಲೋಕಯಾತ್ರೆಯು ಅಮಾತ್ಯಾದಿ ಭೃತ್ಯರಲ್ಲೇ ಆಧಾರಪಟ್ಟಿದೆ.

ಮಂತ್ರರಹಸ್ಯವನ್ನು ಆಪ್ತಚಾರರು ತಿಳಿದಿರಬೇಕಾಗಲಿ, ಸರ್ವ ಭೃತ್ಯರೂ ಅಲ್ಲ. ನಗರದ ನಾನಾ ವಿಚಾರಗಳಿಗೆ ನಾನಾಧಿಕಾರಿಗಳು ಮತ್ತು ರಾಜದಲ್ಲಿಯು ವಿವಿಧಾಧಿ ಕಾರಿಗಳಿದ್ದು, ತಮ್ಮ ಕರ್ತವ್ಯವನ್ನು ಪ್ರಜಾಹಿತಕ್ಕಾಗಿ, ಪಾಲಿಸುತ್ತಿರಬೇಕು. ಒಂದು ರಾಜ್ಯದ ಅಂತಃಕಲಹವನ್ನು ನಿವಾರಿಸಲಾರದ ಅಧಿಕಾರಿಗಳು ದೇಶನಾಶವನ್ನು ತಂದೊಡ್ಡುವರು. ಕುಲವೃದ್ಧರು ಉಪೇಕ್ಷಿಸಿದಂತೆ ಕುಲವು ಕೆಡುತ್ತಾ ಹೋಗುವುದು. ಆಂತರಿಕ ಭಯಕಲಹಗಳಿಂದ ಪಾರಾದ ರಾಜನು ಬಾಹ್ಯ ಶತ್ರು ಕಲಹವನ್ನು ಸುಲಲಿತವಾಗಿ ದಾಟಬಲ್ಲನು. ಜಾತಿ, ಕುಲ, ಬುದ್ಧಿ, ವಯಸ್ಸು, ಧನಗಳಿಂದ ವಿರೋಧವು ಬರುವುದಿಲ್ಲ. ವಿರೋಧವು ಬಂದಿತೆಂದರೆ ಭೇದಬುದ್ಧಿ, ರಾಜನ ಪಕ್ಷಪಾತ, ಶತ್ರು ಧನದಿಂದಲೇ

ಎಂದು ತಿಳಿ!' ಇಂತು ವಿಜಯ ಸಾಧನವನ್ನು ಉಪದೇಶಿಸಿ ಭೀಷ್ಮನು ಧರ್ಮರಾಜನನ್ನು ಸಂಶಯ ಭಯದೂರನನ್ನಾಗಿ ಮಾಡಿದನು.

## ೧೭. ರಾಜ ಭೃತ್ಯ ನಿಯೋಗ ವಿಧಾನವು

ಧರ್ಮರಾಜನು ಭೀಷ್ಮನನ್ನು ನೋಡಿ, "ಪಿತಾಮಹ! ಧರ್ಮರಹಸ್ಯವನ್ನು ನನಗೆ ಉಪದೇಶಿಸು ! ಸರ್ವ ಧರ್ಮಗಳಲ್ಲಿ ಶ್ರೇಷ್ಠವಾದುದಾವುದು ?" ಎಂದು ಕೇಳಿದನು. ಭೀಷ್ಮನಿಂತೆಂದನು: 'ರಾಜನ್! ಮಾತಾಪಿತೃ ಗುರು ಪೂಜೆಯೇ ಶ್ರೇಷ್ಠ ಧರ್ಮವೆನಿಸಿದೆ. ಅದು ಇಹಪರಸುಖಸಾಧನವಾಗಿದೆ. ಅವರು (ಮಾತಾ ಪಿತೃ ಗುರುಗಳು) ಹೇಳಿದುದನ್ನು ಧರ್ಮಾಧರ್ಮ ವಿಚಾರ ಮಾಡದೆ, ನೆರವೇರಿಸಿಕೊಡಬೇಕು. ಹಾಗೆಂದು ನಿಷಿದ್ಧವನ್ನೆಂದಿಗೂ ಮಾಡಬಾರದು. ಅವರು ಧರ್ಮವನ್ನು ಬಿಟ್ಟು ಹೇಳರೆಂಬ ವಿಶ್ವಾಸವಿರಬೇಕು. ತಂದೆಯೇ ಗಾರ್ಹಪತ್ಯಾಗ್ನಿಯು; ತಾಯಿಯು ದಕ್ಷಿಣಾಗ್ನಿಯು ಆದರೆ ಗುರುವು ಆ ಹವನೀಯಾಗ್ನಿಯಂತಿರುವನು. ತ್ರೇತಾಗ್ನಿ ಸ್ವರೂಪರು, ತ್ರಿಲೋಕ ಪ್ರತಿನಿಧಿಗಳೂ ಆದ ಮಾತಾಪಿತೃಗುರುಗಳನ್ನು ನಿರ್ಮತ್ಸರನಾಗಿ ಪೂಜಿಸು !

ಪಿತೃಸೇವೆಯಿಂದ ಇಹವು, ಮಾತೃ ಸೇವೆಯಿಂದ ಪರಲೋಕವು, ಗುರುಸೇವೆಯಿಂದ ಬ್ರಹ್ಮಲೋಕವೂ ಲಭಿಸುವುದು. ಅವರ ಮಾತು ಮೀರಲಾಗದು. ಅವರನ್ನು ಬಿಟ್ಟು ತಿನ್ನಬಾರದು. ಅವರನ್ನು ನಿಂದಿಸಬಾರದು. ಅವರನ್ನು ಆದರದಿಂದ ಕಾಣದವನು ಮಾಡುವ ಪುಣ್ಯಕಾರ್ಯಗಳೆಲ್ಲವೂ ವ್ಯರ್ಥವೇ ಸರಿ! ಶ್ರೋತ್ರಿಯರು ಹತ್ತು ಜನರಿಗೂ ಆಚಾರ್ಯನು ಮಿಗಿಲು; ಹತ್ತು ಆಚಾರ್ಯರಿಗೆ ಉಪಾಧ್ಯಾಯನು ಮಿಗಿಲು, ಹತ್ತು ಉಪಾಧ್ಯಾಯರಿಗೂ ತಂದೆ ಮಿಗಿಲು. ತಂದೆಗಿಂತಲೂ ತಾಯಿ ಮಿಗಿಲು. ಸಕಲ ಪೃಥ್ವಿಯೂ ತಾಯಿಕಿಂತಲು ಹೆಚ್ಚಲ್ಲ. ಆಕೆಯೇ ಪ್ರಥಮ ಗುರುವೆನಿಸುವಳು.

ತಂದೆ ತಾಯಂದಿರಿಗೂ ಹೆಚ್ಚಾದವನು ಗುರುವು. ತಾಯಿ – ತಂದೆಗಳು ಶರೀರವನ್ನು ಮಾತ್ರ ಕೊಡುವವರಾದರೆ, ಗುರುವು ದಿವ್ಯಜ್ಞಾನವನ್ನು ಕೊಡುವನಾಗಿರುವನು. ಅವನಿತ್ತ ಜ್ಞಾನವು ಅಜರಾಮರವಾಗಿದೆ. ವಧಾರ್ಹವಾದ ಅಪರಾಧವನ್ನೆಸಗಿದರೂ ಪುತ್ರಾದಿಗಳು ಅವರು ಮೂವರನ್ನು ಕೊಲ್ಲಲಾಗದು. ರಾಜನು ವಧ್ಯರನ್ನು ದಂಡಿಸದೆ ದೂಷಿತನಾಗುವನು; ಆದರೆ ಮಾತಾಪಿತೃ ಗುರುಗಳ ವಿಷಯದಲ್ಲಿ ರಾಜನಂತೆ ದಂಡಿಸಬಾರದು. ದುಷ್ಟರಾದರೂ ಚಿಂತೆಯಿಲ್ಲ; ಗುರುಜನರನ್ನು ಪಾಲಿಸುವವನಲ್ಲಿ ದೇವತೆಗಳು ಅನುಗ್ರಹಿಸುವರು. ಪ್ರವಚನ ಕರ್ಮದಿಂದ ವೇದಾದಿ ಸಚ್ಛಾಸ್ತ್ರವನ್ನು ಉಪದೇಶಿಸಿ, ಮೋಕ್ಷ ಕಾರಣವಾದ ಜ್ಞಾನವನ್ನು ಕೊಡುವ ಗುರುವೇ ತಾಯೀ ಗುರುವೇ ತಂದೆ. ಗುರುವೇ ದೈವವೆಂದು ತಿಳಿದು ಸತ್ಕರಿಸು! ಗುರುದ್ರೋಹವು ಸರ್ವಥಾ ಸಲ್ಲದು. ಪಿತೃಪೂಜೆಯಿಂದ ಪ್ರಜಾಪತಿಯು, ಮಾತೃಪೂಜೆಯಿಂದ ಭೂದೇವಿಯು, ಗುರು ಪೂಜೆಯಿಂದ ವಿಷ್ಣುವು ಪ್ರೀತರಾಗುವರು. ಗುರುಪೂಜೆಯು

ದೇವಋಷಿ ಪಿತೃ ಪ್ರೀತಿ ಕಾರಣವಾಗಿದೆ. ತನ್ನನ್ನು ಹೆತ್ತು, ಸಾಕಿ ಸಲಹಿದ ತಂದೆ-ತಾಯಂದಿರನ್ನು ಪೋಷಿಸದ ಮಗನು ಮಹಾಪಾಪಿ ಎನಿಸುವನು. ಮಿತ್ರದ್ರೋಹಿ, ಕೃತಘ್ನ, ಸ್ತ್ರೀಹಂತಕ, ಗುರುದ್ರೋಹಿ, ಈ ನಾಲ್ವರಿಗೆ ಪ್ರಾಯಶ್ಚಿತ್ತವೇ ಇಲ್ಲ."

ಧರ್ಮರಾಜನು, 'ಜ್ಞಾನಿವರ! ಧರ್ಮವನ್ನು ಉಳಿಸಿಕೊಂಬುವ ಬಗೆ ಹೇಗೆ? ಸತ್ಯವೆಂದರೇನು? ಅನೃತವೆಂದರೇನು? ಅವೆರಡು ಬೆರೆತು ನಿಂತಿವೆ. ವಿವೇಚಿಸಿ ತಿಳಿವ ಬಗೆ ಹೇಗೆ? ಯಾವಾಗ ಸತ್ಯವನ್ನು ನುಡಿಯಬೇಕು? ಯಾವಾಗ ಅನೃತವನ್ನು ಆಡಬೇಕಾಗಿಬರುವುದು?' ಎಂದು ಕೇಳಿದನು.

ಭೀಷ್ಮನಿಂತೆಂದನು: "ರಾಜನ್! ಯಾವಾಗಲೂ ಸತ್ಯವನ್ನೇ ಹೇಳಬೇಕು. ಸತ್ಯದಕಿಂತಲು ಧರ್ಮವಿಲ್ಲ. ಬಹು ಜನೋಪಕಾರಕವಾದ ಅನೃತವೂ ಸತ್ಯವೆನಿಸುವುದು. ಅಂಧಕ ಮೃಗವಧೆಯು ಹಿಂಸೆ ಎನಿಸಿದರೂ, ಅದರಿಂದಾದ ಬಹು ಸಾಧು ಪ್ರಾಣಿ ರಕ್ಷಣದಿಂದ ವ್ಯಾಧನು ಸ್ವರ್ಗವನ್ನು ಹೊಂದಿದನಲ್ಲವೇ? ಕಳ್ಳರಿಗೆ ಪಾಂಥರನ್ನು ತೋರಿದ ಮುನಿಯು ಸತ್ಯವಚನನಾದರೂ, ಪರಪ್ರಾಣ ವಿಯೋಜನ ಕಾರಣನಾದುದರಿಂದ ನರಕವನ್ನೇ ಹೊಂದಿದನು. ಧರ್ಮಕಾಮನಾದರೆ ಸಾಲದು; ಧರ್ಮವೇನೆಂದು ತಿಳಿದಿರಬೇಕು. ಸತ್ಯಕಾಮನಾದರೆ ಸಾಲದು; ಸತ್ಯವೇನೆಂದರಿತಿರಬೇಕು. ಗಂಗಾತೀರದಲ್ಲಿದ್ದ ನಾಗರಹಾವಿನ ತತ್ತಿಗಳನ್ನು ಹೊಟ್ಟೆಗಾಗಿ ತಿಂದ ಗೂಬೆಗೆ ಪುಣ್ಯವೇ ಬಂತು. ಧರ್ಮಮರ್ಮವು ಗಹನವಾಗಿದೆ. ಅದನ್ನು ಹೀಗೆ, ಇಂತು ನುಡಿಯಲಳವಲ್ಲ. ಭೂತಗಳ ಅಭ್ಯುದಯಕ್ಕಾಗಿ ಧರ್ಮಪ್ರವಚನವು. ಆದುದರಿಂದ ಬಹುಸುಜನರಿಗೆ ವಿರೋಧವಾದುದು ಧರ್ಮವೇ ಅಲ್ಲ ಎಂದು ತಿಳಿ! ಧಾರಣ ಕರ್ಮವನ್ನು ಭೂತ ಹಿತಕ್ಕಾಗಿ ಮಾಡಿದಾಗ ಧರ್ಮವು ರಕ್ಷಿತವಾಗುವುದು. ಅಹಿಂಸಾಯುಕ್ತವಾದುದೆಲ್ಲವೂ ಧರ್ಮವೇ! ಅನರ್ಥಕಾರಣವಾಗದೆ ಪರಪ್ರೀತಿಕಾರಣವಾಗಿದ್ದು, ನಿಷಿದ್ಧವಾಗದೆ ಹಿತಮಿತವಾಗಿದ್ದು, ಸುಜನ ಹಿಂಸಾ ದೂರವಾಗಿದ್ದು, ದುಷ್ಟ ಶಿಕ್ಷಾಧಾರವಾದುದೆಲ್ಲವೂ ಧರ್ಮವೇ ಆಗಿದೆ. ವಿಧಿಚೋದಿತವೆಂದ ಮಾತ್ರಕ್ಕೆ ಹಿಂಸಾಕಾರವಾದ ಶ್ಯೇನಯಾಗವು ಧರ್ಮವಲ್ಲ.

ಚೋರರು ಕೇಳಿದಾಗ ಧನಿಕನು ಅಡಗಿರುವ ಸ್ಥಲವನ್ನು ಗೊತ್ತಿದ್ದೂ ಹೇಳದೆ ಇದ್ದವನಿಗೆ ಅನೃತ ದೋಷವಿಲ್ಲ. ಅವನಿಗೆ ಸತ್ಯವಚನದ ಪುಣ್ಯವೇ ಬರುವುದು. ಪಾಪಿಗಳ ಕೈಸೇರಿದ ಧನವು ಬಹುಜನಹಿಂಸೆಗೆ ಕಾರಣವಾಗುವುದು. ವ್ಯಾಧನ ಧನವು ಬಿಲ್ಲುಬಾಣಗಳಿಗೆ ನೆರವಾಗಿ ಬಹು ಸಾಧುಪಕ್ಷಿ ನಾಶಕ್ಕೆ ಕಾರಣವಾಗುವುದು. ಪ್ರಾಣ ಸಂಕಟದಲ್ಲಿಯು, ವಿವಾಹಸಾಧನದಲ್ಲಿಯೂ, ಅರ್ಥನಾಶದಲ್ಲಿಯು ಸುಳ್ಳಾಡಿದರೆ ತಪ್ಪಲ್ಲ. ಧರ್ಮಭಿಕ್ಷುಕನು ವೇಷಾಂತರದಿಂದಲಾದರೂ ಪರಹಿತವನ್ನು ಸಾಧಿಸಬೇಕು. ಋಣ ವಿಷಯದಲ್ಲಿ ಸತ್ಯವನ್ನು ನುಡಿಯದ ಸಾಕ್ಷಿಗಳು ಪಾಪವನ್ನು ಹೊಂದುವರು. ಧನವನ್ನು ಕೊಟ್ಟವನೊಬ್ಬನು ಮತ್ತು ದುಡಿಯುವನೊಬ್ಬನು ಕಲೆತು ವ್ಯವಹರಿಸಿದಾಗ ಬರುವ ಲಾಭದಲ್ಲಿ ಇಬ್ಬರೂ ಸಮಭಾಗಿಗಳೆನಿಸುವರು. ಆಗ ದುಡಿವನಲ್ಲಿದ್ದ ಧನವು ಚೋರಾಪಹೃತವಾದರೆ, ಅವನು ಶರೀರ ಸವಿಸಿ, ದುಡಿದು ಎಲ್ಲಾ

ಧನವನ್ನೂ ಕೊಡಬೇಕೆಂದು ಉತ್ತಮರ್ಣ (ಧನ ಕೊಟ್ಟವನು)ನು ಹೇಳಲಾಗದು. ಚೋರಾಪಹೃತವಾಗಿರುವುದನ್ನರಿತೂ, ನಿಜವನ್ನೂ ಹೇಳದ ಸಾಕ್ಷಿಗಳೂ ಅನೃತಭಾಜನರಾಗುವರು. ಚೋರರು ಕದ್ದರೆಂದು ಸುಳ್ಳು ಹೇಳಿದರೆ ಅಧಮರ್ಣನು ದಂಡಿತನಾಗಬೇಕು.

ಸ್ವಧರ್ಮವನ್ನು ಬಿಟ್ಟು, ಕ್ರೂರನಾಗಿ ವಂಚಿಸಿ ಜೀವನಗೈದ ಮನುಜನು ವಧ್ಯನೆನಿಸುವನು. ಧನವೇ ಶ್ರೇಯಸ್ಸು, ಧರ್ಮವಲ್ಲ- ಎಂಬವರೆಲ್ಲರೂ ಪಾಪಿಗಳೇ! ಅವರನ್ನು ಪ್ರೇತರಂತೆ ಪತಿತರೆಂದು ತಿಳಿ! ಯಜ್ಞದಾನ ತಪೋಹೀನರಾದ ಪಾಪಿಗಳ ಸಂಗವನ್ನು ಮಾಡಬಾರದು. ಪಾಪಿಗಳ ಮಧ್ಯದಲ್ಲಿ ಧರ್ಮವನ್ನು ಉಪದೇಶಿಸ ಬೇಡ! ಅವರು ಎಲ್ಲವನ್ನೂ ಧರ್ಮವೇ ಎಂದು ತಿಳಿದು, ನಡೆವರು. ತಿಳಿದೂ ನಡೆಯುವ ಪಾಪಿಗಳಿಗಿಂತ, ತಿಳಿದು ನಡೆಯದ ಧರ್ಮವಂತರೇ ಲೇಸು! ಅವರಿಗೆ ಅಧರ್ಮಜ್ಞಾನವಾದರೂ ಇದೆ, ಬಿಡಲು ಯತ್ನಿಸುತ್ತಿರುವರು. ಪಾಪಿಗಳು ಅಧರ್ಮವೆಂದು ತಿಳಿದೂ ಬಿಡದಿರುವರು. ಇಷ್ಟೇ ಅಲ್ಲದೇ ಅಧರ್ಮವನ್ನೇ ಧರ್ಮವೆಂದು ಸಾಧಿಸುವರು. ಅಂತಹ ನಾಸ್ತಿಕರಿಂದ ದೂರವಿರು! ರಾಜನಾಗಿದ್ದು ಅಂತಹವರನ್ನು ಕೊಲ್ಲದವನು ತಾನೂ ಪಾಪಿಯಾಗುವನು. ಮೋಸದಿಂದ ಬದುಕುವ ಪಾಪಿಗಳು ನರಕಾದ್ಯನರ್ಥವನ್ನು ಅನುಭವಿಸಿ, ಮುಂದೆ ಕಾಗೆ ಹದ್ದುಗಳಾಗಿ ಹುಟ್ಟುವರು. ಅಂತಹ ಮಾಯಾವಿಗಳಲ್ಲಿ ಮಾಯೆಯಿಂದಲೇ ನಡೆ! ಸಾಧುಗಳಿಗೆ ಸಾಧುವಾಗಿರು!

ಸಂಸಾರದಲ್ಲಿ ತಾಪತ್ರಯಗಳು ಬಹುಲವಾಗಿವೆ. ಅಂತಹ ದುರ್ಗಗಳನ್ನು ವರ್ಣಾಶ್ರಮ ಧರ್ಮಗಳನ್ನು ಯಥಾ ಯೋಗ್ಯವಾಗಿ ನಡೆಸುವ ವಿಪ್ರಾದಿ ಸುಜೀವರು ದಾಟಬಲ್ಲರು. ದಂಭವಿಲ್ಲದೆ, ಇಂದ್ರಿಯಗಳನ್ನು ನಿಗ್ರಹಿಸಿದವರು ನಿಂದಿಸಿದವರನ್ನು ನಿಂದಿಸದೆ, ಹಿಂಸಿಸಿದವರನ್ನು ಹಿಂಸಿಸದೆ, ದಾನವಿತ್ತು ಸ್ವೀಕರಿಸಿದವರು, ವೇದಾಧ್ಯಯನಶೀಲರು, ಮಾತಾ ಪಿತೃ ಗುರು ಸೇವಾರತರು, ದಿವಾ ನಿದ್ರೆ ಮಾಡದವರು, ಅತಿಥಿ ಪೂಜಕರು, ಆದ ವಿಪ್ರರು ದುರ್ಗಮತಾಪಗಳನ್ನು ಹೊಂದರು. ದುಷ್ಟದಂಡಕರು, ಸುಜನರಕ್ಷಕರು, ಪ್ರಜಾಪೀಡನ ವಿಮುಖರು, ರಣನಿಹತರು, ಗೋವಿಪ್ರಸಾಧುಗಳಿಗಾಗಿ ಮಡಿದವರು, ಆದ ಕ್ಷತ್ರಿಯರು ದುರ್ಗಗಳನ್ನು ದಾಟುವರು. ಮೋಸದಿಂದ ಧನವನ್ನು ಗಳಿಸದವರು, ಸತ್ಯವಚನರು ಲೋಭರಹಿತರು, ದಾನಶೀಲರು, ಸಂಶಾಂತಮನಸ್ಕರು ಆದ ವೈಶ್ಯರು ದುರ್ಗಗಳನ್ನು ದಾಟಬಲ್ಲರು. ಪರಸಂಪತ್ತಿಗೆ ಅಸೂಯಾವಶರಾಗದೆ, ಚೌರ್ಯನಿಂದೆಗಳನ್ನು ಬಿಟ್ಟು, ಬೆದರಿಸದೆ ಸಕಲರನ್ನು ಸಂತೋಷಪಡಿಸುವ ಶೂದ್ರರು ದುರ್ಗಗಳನ್ನು ದಾಟಬಲ್ಲರು. ಗುರುಜನರನ್ನು ಗೌರವಿಸುವವರು ಪರುಷವಚನವನ್ನಾಡದವರು. ವೃಥಾಹಿಂಸಾ ದೂರರು, ಆದ ಸರ್ವ ಮನುಜರು ದುರ್ಗಗಳನ್ನು ದಾಟಬಲ್ಲರು. ನಾರಾಯಣ ಭಕ್ತರಿಗೆ ತರಿಸಲಾಗದ ತಾಪತ್ರಯವಿಲ್ಲ, ಜೀವಿಸುವಂತಿರಲು, ಭೋಜನ, ಸಂತಾನಕ್ಕಾಗಿ ಸಂಭೋಗ, ಸತ್ಯಕ್ಕಾಗಿ ವಚನ, ದಾನಕ್ಕಾಗಿ ಧನ, ಎಂದು ತಿಳಿದು ನಡೆಯುವ

ಸುಜನರೂ ಎಷ್ಟೇ ಕಷ್ಟ ಬಂದರೂ ಎದೆಗುಂದದೆ ಗೋವಿಂದನನ್ನು ನಂಬಿ ವ್ಯಥೆಪಡದೆ ನಿಶ್ಚಿಂತರಾಗಿರುವರು.

ಪದ್ಮನಯನನು, ಪೀತವಸನನು, ಲಕ್ಷ್ಮೀರಮಣನು, ಪ್ರಾಣದೇವ ನಿಯಾಮಕನೂ ಆದ ಶ್ರೀವಾಸುದೇವನೇ ನಮಗೆ ತಂದೆಯು, ತಾಯಿಯು, ಬಂಧುವು, ಮಿತ್ರನು ಆಗಿರುವನು. ಅವನಿಂದಲೇ ಎಲ್ಲವು. ಪುರುಷೋತ್ತಮನು, ಬ್ರಹ್ಮಾಂಡದ ಒಳ ಹೊರಗೆ ವ್ಯಾಪಿಸಿರುವನು. ಅಂತಹ ಪ್ರಭುವರನು ನಿನ್ನ ಪ್ರಿಯಹಿತಗಳನ್ನು ಸಾಧಿಸಿ ಕೊಡಲು ಬದ್ಧಾದರನಾಗಿರುವನು. ಶ್ರೀಹರಿಯನ್ನು ನಂಬಿದ ಭಕ್ತರಿಗೆ ಕಷ್ಟವಿಲ್ಲ."

ಧರ್ಮರಾಜನು 'ತಾತ ! ಸೌಮ್ಯರು ಭಯಂಕರ ರೂಪರಾಗಿಯೂ, ಭಯಂಕರ ಸ್ವಭಾವರು ಸೌಮ್ಯ ರೂಪರಾಗಿಯೂ ಕಾಣಬರುತ್ತಿರುವರು. ನಿಜವಾಗಿ ಸೌಮ್ಯಾ ಸೌಮ್ಯರನ್ನು ತಿಳಿಯುವ ಬಗೆ ಹೇಗೆ?' ಎಂದು ಪ್ರಶ್ನಿಸಿದನು. ಭೀಷ್ಮನು ಇಂತೆಂದನು: 'ರಾಜನ್ ! ಹಿಂದೆ ಪೂರಿಕೆ ಎಂಬ ನಗರದಲ್ಲಿ ಪೌರಿಕನೆಂಬ ರಾಜನಿದ್ದನು. ಪರಹಿಂಸೆ ಮಾಡಿ, ಮಾಡಿ, ಆ ಪಾಪದಿಂದ ಪೌರಿಕನು ಮರುಜನ್ಮದಲ್ಲಿ ನರಿಯಾಗಿ ಹುಟ್ಟಿದನು. ಅವನು ಯಾವ ಜನ್ಮದ ಪುಣ್ಯದಿಂದಲೋ, ಪೂರ್ವಸ್ಮೃತಿಯುಕ್ತನಾಗಿದ್ದನು. ತಾನು ಹಿಂಸಾಪರನಾಗಿದ್ದುದರಿಂದ ನರಿಯಾದುದನ್ನರಿತು, ಆ ನರಿಯು ಹಿಂಸೆಯನ್ನು ಬಿಟ್ಟು, ಜೀವಿಸತೊಡಗಿತು. ಉದುರಿದ ಎಲೆ ಹಣ್ಣುಗಳಿಂದ ಜೀವಿಸುತ್ತಾ ತನ್ನ ಜನ್ಮಭೂಮಿಯಾದ ಸ್ಮಶಾನದಲ್ಲೇ ಇರುತ್ತಿತ್ತು; ಅವನ (ನರಿಯ) ಸ್ನೇಹಿತರು ಅವನಲ್ಲಿ ಮರುಕಗೊಂಡು, 'ಮಿತ್ರನೇ! ಏಕಿಲ್ಲಿ ಒಂಟಿಯಾಗಿ ಸ್ಮಶಾನದಲ್ಲಿರುವೆ? ಮಾಂಸಾದಿಗಳನ್ನು ಬಿಡುವುದು ನಮ್ಮ ಸಹಜಗುಣಕ್ಕೆ ವಿರೋಧವಾಗಿದೆ. ಬಾ! ನಮ್ಮೊಡನಾಡು! ತಿನ್ನು ಮಾಂಸವನ್ನು!' ಎಂದು ಕರೆದರು. ಪುರಿಕನಿಂತೆಂದನು: 'ಹುಟ್ಟು ಮುಖ್ಯವಲ್ಲ; ಗುಣವೇ ಮುಖ್ಯವು. ಕೀರ್ತಿಯನ್ನೂ ಪುಣ್ಯವನ್ನೂ ತರುವ ಕಾರ್ಯಗಳನ್ನು ಮಾಡುವೆನಾಗಲಿ, ಹಿಂಸಾಕೃತ್ಯವನ್ನಲ್ಲ. ದೇವನು ಹುಟ್ಟಿಸಿದಲ್ಲಿ ಶ್ಮಶಾನವಾದರೇನು ಇರುವೆನು. ಆಶ್ರಮದಲ್ಲಿದ್ದವನು ಬ್ರಹ್ಮಹತ್ಯೆ ಮಾಡಬಹುದು! ಮನೆಯಲ್ಲಿದ್ದವನು ಗೋದಾನ ನೀಡಬಹುದು. ನಡತೆಯೇ ಮುಖ್ಯವಾಗಲಿ, ದೇಶವಲ್ಲ. ಆಶ್ರಮದಲ್ಲಿ ಮಾಡಿದ ವ್ಯಭಿಚಾರವು ಪುಣ್ಯವಾಗುವುದಿಲ್ಲ; ಕೇವಲ ಹಿಂಸಾಪರರಾಗಿ ಮಾಂಸ ಲೋಲುಪರಾಗಿರುವ ನಿಮ್ಮ ಗೊಡವೆ ಬೇಡ! ಲೋಭ ಮೂಲಕವಾದ ಧರ್ಮಹಾನಿ, ಅಪಕೀರ್ತಿ, ಪರಲೋಕಹಾನಿ, ಎಂಬ ಮೂರು ಅನರ್ಥಗಳನ್ನು ಒಡ್ಡುವ ವೃತ್ತಿ ನನಗೆ ರುಚಿಸದು.'

ಪುರಿಕನ ಸೌಶೀಲ್ಯವನ್ನು ಕೇಳಿ, ಹುಲಿರಾಜನು ಮೆಚ್ಚಿ, ಅವನನ್ನು ಕಂಡು ತನ್ನ ಮಂತ್ರಿಯಾಗಿರುವಂತೆ ಬೇಡಿದನು. ಬೇಕಾದ ಭೋಗ ವೇತನಗಳನ್ನೂ ಕೊಡುವೆನೆಂದ ರಾಜನಿಗೆ ಗೋಮಾಯುವಿಂತೆಂದನು: 'ರಾಜನ್! ಅಮಾತ್ಯನನ್ನು ಅರಸಿ ಬಂದಿರುವುದು ಯೋಗ್ಯವಾಗಿದೆ. ದುಷ್ಟಾಮಾತ್ಯರು ರಾಜನಧನವನ್ನೇ ಅಲ್ಲದೆ ಪ್ರಾಣಗಳನ್ನೂ ಹರಿಸುವರು. ಜಯಶೀಲರು, ಪಂಡಿತರು, ಅನುರಕ್ತರು, ವ್ಯಸನ

ದೂರರು ಆದ ವಂತ್ರಿ ಮಿತ್ರರು ದುರ್ಲಭರು. ನನಗೆ ನಿನ್ನ ಮಂತ್ರಿಪದವಿ ಬೇಕಿಲ್ಲ. ನನಗೆ ನೀನೀಡುವ ಧನಗಳಿಂದ ಪ್ರಯೋಜನವಿಲ್ಲ. ನಿನ್ನ ಇತರ ಮಂತ್ರಿಗಳು ಪಾಪಿಗಳಾಗಿರುವರು. ಶ್ಲಾಘನೀಯ ಗುಣನಾದ ರಾಜನಾದರೂ ದುರ್ಮಂತ್ರಿ ಸಹವಾಸದಿಂದ ಕೆಡುವನು. ರಾಜಸೇವೆಯು ಕತ್ತಿಯ ಮೇಲೆ ಸಾಮಾಗಿದೆ. ಸ್ವಚ್ಛಂದನಾಗಿ ಜೀವಿಸುತ್ತಿರುವ ನನಗೆ ಸೇವಾ ಜೀವನವು ಒಗ್ಗದು. "ಅಪರಾಧವನ್ನೆಸಗಿರುವೆ!" ಎಂದು ನಿಂದಿಸಿ ರಾಜನು ಶಿಕ್ಷಿಸುವದಕ್ಕಿಂತಲೂ 'ಮೋಸಮಾಡಿರುವೆ, ದ್ರೋಹಿ' ಎನಿಸಿರುವೆ ಎಂದು ಆರೋಪಿಸಿದ ರಾಜನ ಕೋಪಕ್ಕೆ ತುತ್ತಾಗಿ ಸತ್ತವರೇ ಹೆಚ್ಚಿರುವರು.

ಆದರೂ ಸಮಯಬಂಧದಿಂದ ನಾನು ನಿನ್ನ ಮಂತ್ರಿಯಾಗಲು ಒಪ್ಪುವೆನು. 'ನನ್ನವರನ್ನು ನೀನು ಗೌರವಿಸಬೇಕು. ನನ್ನ ವೃತ್ತಿವೇತನಾದಿಗಳು ನಿನ್ನ ಕೈಲಿದ್ದು ನನಗೆ ಸಲ್ಲಬೇಕು. ಇತರ ಮಂತ್ರಿಗಳಿಂದ ಕೂಡಿ, ನಾನು ಮಂತ್ರಾಲೋಚನೆ ಮಾಡಲಾರೆನು. ಏಕಾಂತದಲ್ಲಿ ಬಂದು ನಿನಗೆ ಹಿತವನ್ನುರುಹುವೆನು. ನಾನು ನಿನಗೆ ಹೇಳಿ, ದಂಡವನ್ನು ಹೊರಿಸಿದೆನೆಂದು ದೂರುವಂತೆ, ಆಸ್ಪದವೀಯಬೇಡ. ಅವರಿವರ ಮಾತು ಕೇಳಿ, ನನ್ನನ್ನು ದಂಡಿಸಲಾಗದು.'

ವ್ಯಾಘ್ರನು ಅದಕ್ಕೆ ಸಮ್ಮತಿಸಿ, ಪುರಿಕನನ್ನು ಮಂತ್ರಿಯಾಗಿಟ್ಟು, ಅವನಂತೆ ನಡೆಯತೊಡಗಿದನು. ರಾಜಾದರಪಾತ್ರನಾದ ಪುರಿಕನನ್ನು ಕಂಡು, ಪೂರ್ವಮಂತ್ರಿಗಳು ಈರ್ಷ್ಯಾವಶರಾದರು. ಅವನಿಂದ ಸ್ನೇಹವನ್ನು ಬೆಳೆಸಿ, ಅವರು ಅವನನ್ನೂ ತಮ್ಮಂತೆ ಮೋಸ, ಲೋಭ, ಪೀಡೆ, ಆಲಸ್ಯ ಮುಂತಾದ ದುರ್ಗುಣಗಳಿಗೆ ಖಣಿಯನ್ನಾಗಿಸಬೇಕೆಂದು, ಪ್ರಯತ್ನಿಸಿ, ವಿಫಲರಾದರು. ಅವರ ದುರ್ವರ್ತನಗಳು ರಾಜನಿಗೆ ತಿಳಿಯಲಾರಂಭಿಸಿದವು. ಅವರ ಅನ್ಯಾಯ ಧನಾಗಮನವು ನಿಂತುಹೋಯಿತು. ಅವರ ಮಾತು ಪ್ರಜರಲ್ಲಿ ನಡೆಯದಾಯಿತು. ಕೊನೆಗೆ ದುರ್ಮಂತ್ರಿಗಳು ಒಟ್ಟುಗೂಡಿ, ಗೋಮಾಯುನನ್ನು ಬಗೆಹರಿಸಿಬಿಡಲು ನಿಶ್ಚಯಿಸಿದರು. ರಾಜನಿಗಾಗಿ ಮೀಸಲಾಗಿದ್ದ ಮಾಂಸವನ್ನು ಕದ್ದು ತಂದು, ಅವರು ಪುರಿಕನ ಮನೆಯಲ್ಲಿಟ್ಟರು. ಪುರಿಕನು ಎಲ್ಲವನ್ನರಿತೂ, ಸುಮ್ಮನಿದ್ದನು.

ಹಸಿದು ಬಂದು ಮಾಂಸವನ್ನು ಕಾಣದ ಹುಲಿರಾಜನು ಚೋರನಾರೆಂದು ಹುಡುಕಲು ಆಜ್ಞಾಪಿಸಿದನು. ಮಂತ್ರಿಗಳು 'ನಿಮ್ಮ ಮುಖ್ಯಮಂತ್ರಿಯ ಗುಹೆಯಲ್ಲಿ ನಿಮ್ಮ ಆಹಾರವಿದೆ! ಅವನು ಯಾವ ಬಾಯಿಂದ ಧರ್ಮಗಳನ್ನು ನುಡಿಯುವನೋ ಅದೇ ಬಾಯಿಂದ ನಿಮ್ಮ ಮಾಂಸವನ್ನು ತಿನ್ನುತ್ತಿರುವನು. ಆ ದಂಭಗಾರನ ಮಾತಿಗೆ ನೀವು ಮೋಸಹೋದಿರಿ' ಎಂದು ರಾಜನನ್ನು ಕರೆದುಕೊಂಡು ಹೋಗಿ, ನರಿಯ ಮನೆಯಲ್ಲಿ ಮಾಂಸ ರಾಶಿಯನ್ನು ತೋರಿಸಿದರು. ಹುಲಿರಾಜನು ಕುಪಿತನಾಗಿ, ನರಿಯನ್ನು ಕೊಲ್ಲಿರೆಂದು ಆಜ್ಞಾಪಿಸಿದನು. ಆಗ ಶಾರ್ದೂಲಜನನಿಯು ರಾಜನನ್ನು ತಡೆದು, 'ಪುತ್ರ! ಈ ನಿನ್ನ ದುಷ್ಟ ಸಚಿವರನ್ನು ನಂಬಬೇಡ! ಇವರು ಕಪಟಿಗಳು. ಸಾಧುವಾದ ಪುರಿಕನಿಂದ ತಮ್ಮ ದುಷ್ಕೃತಿಗಳಿಗೆ ತಡೆಯಾಯಿತೆಂದು, ಇವರೇ ಮಾಂಸವನ್ನು

ಕಿದ್ದು, ಅಲ್ಲಿಟ್ಟಿರುವವರು. ಪರಶ್ರೇಯಸ್ಸನ್ನು ಸಹಿಸದ ಕೇಡಿಗರನ್ನು ನಂಬಬಾರದು. ದುಷ್ಟ ಪ್ರಭಂಜನನು ಕಲ್ಪವೃಕ್ಷವನ್ನೂ ಕಿತ್ತೊಗೆಯುವನು. ಶುಚಿಶೀಲವಂತನನ್ನು ಲೋಭಿಗಳು ದ್ವೇಷಿಸುವರು. ಕಾರ್ಯಕುಶಲರನ್ನು ಅಲಸರು ದ್ವೇಷಿಸುವರು.

ಧನವಂತರನ್ನು ದರಿದ್ರರು ದ್ವೇಷಿಸುವರು. ಮೂರ್ಖರು ಪಂಡಿತರನ್ನು ದ್ವೇಷಿಸುವರು. ಶಾಸ್ತ್ರಪಾಂಡಿತ್ಯವಿದ್ದ ಮಾತ್ರದಿಂದ ಎಲ್ಲರೂ ಜ್ಞಾನಿ ಸುಜನರೆಂದು ತಿಳಿಯಬೇಡ! ಬೃಹಸ್ಪತಿಯೂ ದಡ್ಡನೆಂಬ ಪಂಡಿತ ಮಾನಿಗಳು ಎಷ್ಟೊ ಜನರಿರುವರು. ಹೊನ್ನೇಹುಳವು ಅಗ್ನಿಕಣದಂತೆ ಕಾಣುವುದು. ನಂಬಲಾಗದಿಂತಹ ಕುಜನರನ್ನು! ನೀನಾಗಿ ಕೊಟ್ಟಾಗ ಮಾಂಸವನ್ನು ಮುಟ್ಟದ ಪುರಿಕನು, ನಿನ್ನ ಮಾಂಸವನ್ನೇಕೆ ಕದಿಯುವನು? ವಿಚಾರಿಸು! ಪ್ರತ್ಯಕ್ಷವಾಗಿ ಕಂಡರೂ ಪರೀಕ್ಷಿಸಿ ನೋಡೆಂಬರು ಜ್ಞಾನಿಗಳು. ನೀನು ಪ್ರಭುವಾಗಿರುವುದರಿಂದ ಎಲ್ಲರನ್ನೂ ಕೊಲ್ಲಿಸಬಲ್ಲೆ! ಆದರೆ ಪ್ರಭುವು ಮಾನ್ವಿತನಾಗಿ, ಪರೀಕ್ಷಿಸಿ, ಶಿಕ್ಷಿಸಬೇಕು. ದುಡುಕಬಾರದು. ಸತ್ಪಾತ್ರನು ದುರ್ಲಭನು. ಪುರಿಕನು ಸಜ್ಜನನು. ದುಷ್ಟರ ಮಾತನ್ನು ಕೇಳಿ, ಸುಜನರನ್ನು ಕೊಂದ ರಾಜನು ಅದೇ ದುಷ್ಟರಿಗೆ ತಾನು ಆಹಾರವಾಗಿ ಸಾಯುವನು. ಒಬ್ಬ ಧರ್ಮಾತ್ಮನಿಂದ ನಿನ್ನ ಮಂತ್ರಿಗಳ ದುಸ್ತಂತ್ರವನ್ನು ನಾನು ತಿಳಿದೆನು' ಎಂದಳು.

ಹುಲಿರಾಜನು ವಿಚಾರಿಸಿ, ಸತ್ಯವನ್ನರಿತನು. ಪುರಿಕನನ್ನು ಕರೆಸಿ, ಮತ್ತೆ ಸನ್ಮಾನಿಸಿದನು. ಆಗ ಪುರಿಕನು ಅವನ ಸನ್ಮಾನವನ್ನು ಸ್ವೀಕರಿಸದೆ, ಪ್ರಾಯೋಪವೇಶವನ್ನು ನಿಶ್ಚಯಿಸಿದನು. ರಾಜನು ಅವನ ನಿಶ್ಚಯವನ್ನು ತಿಳಿದು, ಸ್ನೇಹ ಶೋಕ ಸಮಾಕುಲನಾಗಿ, ಪ್ರಾಯವನ್ನು ಗೈಯಲಾಗದೆಂದು ಬೇಡಿದನು. ಪುರಿಕನು ಕಣ್ಣೀರಿಟ್ಟು 'ರಾಜನ್! ಸಾಕು ನಿನ್ನ ಸೇವೆ! ದುಷ್ಟಮಂತ್ರಿವಚನಗಳಿಗೆ ಕಿವಿಗೊಟ್ಟ ನಿನ್ನ ಸಹವಾಸವು ಅಪಾಯಕಾರಿಯಾಗಿದೆ. ಅಸಂತುಷ್ಟರೂ, ಅವಮಾನಿತರು, ಪರಮಿತ್ರರು, ಲೋಭಿಗಳು, ಭೀತರು, ವಂಚಿತರು, ಹೃತಧನರು, ಮಾಯಾವಿಗಳು ಆದ ಭೃತ್ಯರಿಗೆ ರಾಜನಲ್ಲಿ ಪ್ರೀತಿಯಿಲ್ಲ. ನಿನಗೆ ನನ್ನಲ್ಲಿ ವಿಶ್ವಾಸವಿರಲಾರದು. ನಾನು ನಿನ್ನನ್ನು ನಂಬಿ ನಿಶ್ಚಿಂತನಾಗಿ ಇರಲಾರೆನು. ರಾಜರು ಚಪಲಚಿತ್ತರು. ಸತ್ಪುರುಷರನ್ನು ಕಾಪುರುಷರಿಂದ ಬೇರೆಂದು ತಿಳಿಯುವುದು ದುಸ್ತರವಾಗಿದೆ. ಸುಜನ ಭೃತ್ಯನಂತೆ, ನಿಶ್ಶಂಕರಾಜನೂ ಸಾವಿರದಲ್ಲೊಬ್ಬನೆಂದು ತಿಳಿ! ನಾನೂ ವಿರಕ್ತನಾಗಿರುವೆನು. ಈ ಹಾಳು ಯೋನಿಯಿಂದ ಪಾರಾಗುವೆನು. ನನಗೆ ಅಪ್ಪಣೆಕೊಡು!' ಇಂತು ನುಡಿದು ಪುರಿಕನು ಪ್ರಾಯೋಪವೇಶಗೈದು, ದಿವ್ಯಲೋಕವನ್ನು ಸೇರಿದನು. ಆದುದರಿಂದ ಧರ್ಮರಾಜ! ಮೇಲಿನ ವೇಷ ಭಾಷೆಗಳಿಂದ ಎಲ್ಲರೂ ಸುಜನರೆನ್ನಬೇಡ! ರಾಜನು ಧರ್ಮಾಧರ್ಮವಿಚಕ್ಷಣನಾಗಿ, ತಿಳಿದು ಜಾಗರೂಕನಾಗಿ ನಡೆಯಬೇಕು. ಹಿಂದೆ ಒಂದು ಉಷ್ಟ್ರವಿತ್ತು. ಆ ಮಹಾಂಗವು ಬ್ರಹ್ಮನನ್ನು ತಪದಿಂದ ಮೆಚ್ಚಿಸಿ, ಬಲು ದೀರ್ಘವಾಗಬಲ್ಲ ಕುತ್ತಿಗೆಯನ್ನು ಬೇಡಿ ಪಡೆಯಿತು. ವರವನ್ನು ಪಡೆದ ಒಂಟೆಗೆ, ತಿರುಗದೆ, ಕಷ್ಟಪಡದೇ ತಿನ್ನಬೇಕೆಂಬ ಚಪಲವಾಯಿತು. ಅದು ತನ್ನ ಕುತ್ತಿಗೆಯನ್ನು ಬೆಳೆಸಿ ದೂರದಲ್ಲಿದ್ದ

ಪರ್ವತಗುಹೆಯಲ್ಲಿ ತಲೆತೂರಿಸಿ, ಅಲ್ಲಿ ಬೆಳೆದಿದ್ದ ಬಳ್ಳಿ ಎಲೆಗಳನ್ನು ತಿನ್ನತೊಡಗಿತು. ಆಗ ಬಿರುಗಾಳಿಯೊಡನೆ ಮಳೆಯೂ ಬಂತು. ಆ ಮಳೆಗೆ ತಡೆಯಲಾರದೆ ನರಿಯೊಂದು ತನ್ನ ಪರಿವಾರದೊಡನೆ ಬಂದು ಆ ಗುಹೆಯನ್ನು ಹೊಕ್ಕಿತು. ನರಿಗಳು ಹಸಿವಿನಿಂದ ಬಳಲಿದ್ದವು. ಅವು ಒಂಟೆಯ ಕುತ್ತಿಗೆಯನ್ನು ಕಡಿದು ತಿನ್ನತೊಡಗಿದವು. ಒಂಟೆಯು ತಲೆಯನ್ನು ಗುಹೆಯಿಂದಾ ಹೊರತೆಗೆಯಲು ಸೆಣಸುತ್ತಾ, ನರಿಗಳು ಕುತ್ತಿಗೆಯನ್ನು ಕಡಿದು ಕೆಡಹಲು, ಪ್ರಾಣವನ್ನೇ ಬಿಟ್ಟಿತು. ಇಂತು ಆಲಸ್ಯಗುಣದಿಂದ ಒಂಟೆಯು ಸತ್ತಿತು. ರಾಜನು ಆಲಸನಾದರೆ ಅವನೂ ಒಂಟೆಯಂತೆ ಸಾಯುವನು. ಧರ್ಮರಾಜ! ಪ್ರಜಾಹಿತಕಾರ್ಯಗಳಲ್ಲಿ ಆಲಸನಾಗಬೇಡ! ಬುದ್ಧಿಯಿಂದ ಮಾಡುವ ಕರ್ಮವು ಉತ್ತಮವು. ಬಾಹುಗಳಿಂದ ಆಗುವ ಕೆಲಸವು ಮಧ್ಯಮವು, ಜಂಘೋಪಾದಗಳಿಂದ ಆಗುವ ಭಾರವಹನಾದಿಕರ್ಮವು ಅಧಮವೆಂದು ತಿಳಿ! ಪರೀಕ್ಷಿಸಿ ಕೆಲಸ ಮಾಡು! ಮಂತ್ರವನ್ನು ಗೋಪ್ಯವಾಗಿಡು! ಬುದ್ಧಿಶ್ರೇಷ್ಠರನ್ನು ನಂಬು! ವೀರರ ಸಹಾಯವನ್ನು ಗಳಿಸು! ಆಲಸನಾಗದೆ ಸದಾ ಜಾಗ್ರತನಾಗಿರು! ಇಂತು ನಡೆದು ಸುಖವನ್ನು ಪಡೆಯುವೆ!

ರಾಜನ್! ಶತ್ರುಗಳು ಅತಿವೃದ್ಧರಾದಾಗ ಬಾಗಿ ನಡೆ! ಒಂದು ಸಲ ಸಮುದ್ರ ರಾಜರು ಗಂಗಾದಿನದಿಗಳನ್ನು ಕಂಡು 'ನದೀ ದೇವತೆಗಳಿರಾ! ದೊಡ್ಡ ದೊಡ್ಡ ಮರಗಳನ್ನು ಬೇರು ಸಹಿತ ಕಿತ್ತು ತರುತ್ತಿರುವಿರಿ! ಆದರೆ ಹುಲ್ಲುಕಡ್ಡಿಗಳನ್ನು ಏಕೆ ತರುವುದಿಲ್ಲ? ಅಲ್ಪಶರೀರಗಳು, ಅಲ್ಪಬಲರು ಆದ ಸಣ್ಣ ಗಿಡಪೊದರು ಹುಲ್ಲು ಬಳ್ಳಿಗಳನ್ನು ಅಲಕ್ಷಿಸಿ ಬಿಟ್ಟಿರುವಿರೋ? ಅಥವಾ ಅವುಗಳಿಂದ ನಿಮಗೇನಾದರೂ ಪ್ರಯೋಜನವಿದೆ ಎಂದು ಬಿಟ್ಟು ಬರುವಿರೋ?' ಎಂದು ಕೇಳಿದನು. ಆಗ ಗಂಗೆಯು ನದಿಗಳ ಪರವಾಗಿ ಇಂತೆಂದಳು: 'ರಾಜನ್! ಕೇಳು! ಅಲ್ಪತೃಣಾದಿಗಳು ನಮ್ಮ ಭರಪೂರ ಪ್ರವಾಹವನ್ನು ನೋಡಿ ಶಿರಬಾಗಿ ನಮಿಸುವವು. ಅವುಗಳಿಂದ ನಮಗೆ ಯಾವ ಪ್ರಯೋಜನವೂ ಇಲ್ಲ. ಆದರೂ ಅವು ತೋರುವ ವಿನಯಕ್ಕೆ ಮೆಚ್ಚಿ ನಾವು ಅವನ್ನು ಕೊಚ್ಚಿ ತರದೆ, ಉಳಿಸಿ ಬರುವೆವು. ಮರಗಿಡಗಳು ಬಲವಂತವೆಂಬ ಗರ್ವದಿಂದ ಸೆಟೆದು ನಿಂತಿರುವುದನ್ನು ನೋಡಿ, ಸಿಟ್ಟಾಗಿ, ನಾವು ಅವನ್ನು ಕಿತ್ತುತರುವೆವು. ಆದುದರಿಂದ ಬಲವಚ್ಛತ್ರುಗಳಿಗೆ ಬಾಗಿ ನಡೆದು, ಆಪತ್ತಿನಿಂದ ಪಾರಾದ ರಾಜನು, ಮುಂದೆ ಬಲವಂತನಾಗಿ ಮತ್ತೆ ಅವನನ್ನು ಗೆಲ್ಲಬಲ್ಲವನಾಗುವನು.

ಧರ್ಮರಾಜನು 'ತಾತ! ಮೂರ್ಖನು ಪಂಡಿತಮಾನಿಯಾಗಿ, ನಿಂದಿಸುವಾಗ, ಸುಜನನೇನು ಮಾಡಬೇಕೆ'ಂದು ಕೇಳಿದನು. ಭೀಷ್ಮನಿಂತೆಂದನು: 'ವತ್ಸ! ಅಲ್ಪಬುದ್ಧಿಯು ನಿಂದಿಸಿದಾಗ, ಸಜ್ಜನನು ಸುಮ್ಮನಿರಬೇಕು. ಆದದರಿಂದ ಸುಜನನ ಪುಣ್ಯವು ಹೆಚ್ಚಿ, ಪಾಪವು ನಿಂದಿಸಿದವರನ್ನು ಸೇರುವುದು. ಟಿಟ್ಟಿಭದಂತೆ ಬಾಯದುಡುಕನು ವ್ಯರ್ಥಾಲಾಪನಾಗುವನು. 'ನೀನು ಸಾಯಿ!' ಎಂದು ಬೈದ ಮಾತ್ರಕ್ಕೆ ಸುಜನನು ಸಾಯನು. ಅವನನ್ನು ನಿಂದಿಸಿದ ದುರ್ಜನನೇ ಜನರಿಂದ ತಿರಸ್ಕೃತನಾಗಿ ಮೃತಕಲ್ಪನಾಗುವನು. ವನದಲ್ಲಿ ಒದರುವ ಕಾಗೆಯಂತೆ, ಕೂಗಿ ಕೂಗಿ, ಅವನೇ

ಸುಮ್ಮನಾಗುವನು. ಸಭೆಯಲ್ಲಿ ನಿಂತು ತನ್ನ ಮಾತೆಯನ್ನು ದೇವದತ್ತನು ಕೆಡಿಸಿದನೆಂದು ನಿಂದಿಸಿದ ಮೂರ್ಖನು, ತಾನು ಜಾರ ಪುತ್ರನೆಂಬುದನ್ನು ಮರೆತು, ಜನಾಪಹಾಸಕ್ಕೆ ಗುರಿಯಾಗುವನಲ್ಲವೇ? ನವಿಲು ಪಿಂಚವನ್ನೆತ್ತಿ ಕುಣಿವಾಗ, ಅದರ ಪೃಷ್ಠವು ಕಾಣಿಸುವಂತೆ, ಕುಜನನು ಪರನಿಂದೆ ಮಾಡುವಾಗ, ಅವನ ದೋಷಗಳೇ ಹೊರಬೀಳುವವು. ಪ್ರತ್ಯಕ್ಷವಾಗಿ ಪ್ರಶಂಶಿಸಿ, ಪರೋಕ್ಷವಾಗಿ ನಿಂದಿಸುವ ಮನುಜನು ನಾಯಿಯಂತೆ ನಿಂದ್ಯನಾಗುವನು. ಅಂತಹವನು ಜ್ಞಾನ, ಧರ್ಮ ಪರಲೋಕಗಳಿಗೆ ಎರವಾಗುವನು. ಅಂತಹವನನ್ನು ನಾಯಿಮಾಂಸದಂತೆ ದೂರದಲ್ಲಿಟ್ಟು ನಡೆಯುವುದು ಒಳಿತು. ಹೆಡೆ ಎತ್ತಿದಾಗ ನಾಗರಹಾವೆಂದು ತಿಳಿವಂತೆ, ನಿಂದಿಸಿದಾಗ ದುರ್ಜನನೆಂದು ತಿಳಿ! ಅವನನ್ನು ಪ್ರತಿನಿಂದಿಸಲು ಹೋಗಬೇಡ! ಮನುಜರೂಪದಿಂದ ಬಂದ ತೋಳದಂತೆ ಉನ್ಮತ್ತಮಾತಂಗದಂತೆ, ಬೊಗಳುವ ನಾಯಿಯಂತೆ, ಅವನು ತ್ಯಾಜ್ಯನಾಗಿರುವನು. ಉಚ್ಚರಿಗೆ ನೀಚರ ಸಹವಾಸವು ಒಳಿತಲ್ಲ, ಹೊಡೆದರೂ, ಮಣ್ಣು ತೂರಿದರೂ, ಹಲ್ಲು ಕಡಿದರೂ, ಹೆದರಿಸಿದರೂ ದುರ್ಜನರನ್ನು ಉಪೇಕ್ಷಿಸು! ಪರುಷವಚನರಿಗೆ ತಿರಸ್ಕಾರವೇ ಮದ್ದು."

ಧರ್ಮರಾಜನು, "ಅಭಿಷಿಕ್ತನಾದ ರಾಜನು ತನ್ನ ಪುತ್ರಮಿತ್ರ ಕಳತ್ರ ಸಮೇತನಾಗಿ ಆಳುತ್ತಾ ತನ್ನವರಿಗೂ ಪ್ರಜರಿಗೂ ಸುಖ ಶಾಂತಿಗಳನ್ನು ತಂದುಕೊಡುವ ಬಗೆ ಹೇಗೆ? ನೀನು ಹಿತವಚನನಾಗಿರುವೆ! ವಿದುರನಂತೆ ಮಹನೀಯನಿರುವೆ! ಕುಲಹಿತವೆಂತು ಸಿದ್ಧಿಸುವುದು? ಎಂತಹ ಭೃತ್ಯರನ್ನು ಪರಿಸರವರ್ತಿಗಳನ್ನಾಗಿ ನಿಯಮಿಸಲಹುದು?" ಎಂದು ಕೇಳಲು, ಭೀಷ್ಮನಿಂತೆಂದನು:

"ರಾಜನ್, ಅಸಹಾಯನಾಗಿ ಯಾವನಿಂದಲೂ ಬಾಳಲಾಗದು, ವಿಜ್ಞಾನಕೋವಿದರು, ಹಿತೈಷಿಗಳು, ಕುಲೀನರು, ಸ್ನೇಹ ಮಧುರರು, ಋಜುವರ್ತನರು, ರಹಸ್ಯಗೋಪನರು, ಸಚ್ಚೀಲರು, ಕಾಲಾಕಾಲಗಳನ್ನರಿತವರು, ಸಮ ದುಃಖ ಸುಖರು ಅರ್ಥರಕ್ಷಕರು. ಆದ ಮಂತ್ರಿ, ಸೇನಾಪತಿ ಭೃತ್ಯರುಗಳಿಂದ ಕೂಡಿದ ರಾಜನು ಸುಖ ಶಾಂತಿಗಳನ್ನು ಸಾಧಿಸಿ, ಪ್ರಜಾರಂಜಕನಾಗುವನು. ನೀಚ ಸಹವಾಸವು ಅನರ್ಥಕರವಾಗಿದೆ. ನೀಚರು ತಮ್ಮ ನೀಚ ಸ್ವಭಾವವನ್ನು ಎಂದಿಗೂ ಬಿಡರು. ಈ ವಿಷಯದಲ್ಲಿ ಶ್ರೀಪರಶುರಾಮದೇವನು 'ನೀಚರನ್ನು ಉತ್ತಮ ಸ್ಥಾನದಲ್ಲಿಡಬಾರದು. ನೀಚಮಧ್ಯಮೋತ್ತಮರನ್ನು ನೀಚಮಧ್ಯಮೋತ್ತಮ ಸ್ಥಾನಗಳಲ್ಲಿಡಬೇಕು. ವ್ಯತ್ಯಸ್ತವಾದರೆ ಕಾರ್ಯವು ಕೆಡವುದೆಂದು ಹೇಳಿದನು. ಆಗ ಕೇಳಿದ ಕಥೆಯೊಂದನ್ನು ನಿನಗರುಹುವೆನು.

ಹಿಂದೆ, ಒಬ್ಬ ಮುನಿಯು ನಿರ್ಜನಾರಣ್ಯದಲ್ಲಿದ್ದು ತಪಸ್ಸನ್ನು ಮಾಡುತ್ತಿದ್ದನು. ಮೂಲಫಲಮಾತ್ರಾಶನನಾಗಿ, ಇಂದ್ರಿಯಗಳನ್ನು ಜಯಿಸಿ, ಉಪವಾಸ ವ್ರತಶುದ್ಧನಾಗಿದ್ದ ಆ ಜ್ಞಾನಿಯ ಆಶ್ರಮದಲ್ಲಿ ವನ್ಯಮೃಗಗಳೂ ಶಾಂತವಾಗಿ ವಾಸಿಸುತ್ತಿದ್ದವು. ಒಂದು ನಾಯಿಯು ಪರಮವಿನಯದಿಂದ ಋಷಿವರನ ಬದಿಯಲ್ಲಿ ಕೂತು, ಭಕ್ತನಂತೆ ಸೇವಿಸುತ್ತಿತ್ತು. ಅದು ವನದಲ್ಲಿ ತಿರುಗುತ್ತಾ ಒಂದು ಚಿರತೆಯನ್ನು ಕಂಡಿತು. ಬಾಲವನ್ನೆತ್ತಿ ಆಡಿಸುತ್ತಾ ನಾಲಿಗೆ ಚಾಚಿ ತುಟಿ ನೆಕ್ಕುತ್ತಾ, ಬಾಯ್ತೆಗೆದು ಗುಡುಗುತ್ತಾ ಬರುವ

ಪರ್ವತಗುಹೆಯಲ್ಲಿ ತಲೆತೂರಿಸಿ, ಅಲ್ಲಿ ಬೆಳೆದಿದ್ದ ಬಳ್ಳಿ ಎಲೆಗಳನ್ನು ತಿನ್ನತೊಡಗಿತು. ಆಗ ಬಿರುಗಾಳಿಯೊಡನೆ ಮಳೆಯೂ ಬಂತು. ಆ ಮಳೆಗೆ ತಡೆಯಲಾರದೆ ನರಿಯೊಂದು ತನ್ನ ಪರಿವಾರದೊಡನೆ ಬಂದು ಆ ಗುಹೆಯನ್ನು ಹೊಕ್ಕಿತು. ನರಿಗಳು ಹಸಿವಿನಿಂದ ಬಳಲಿದ್ದವು. ಅವು ಒಂಟೆಯ ಕುತ್ತಿಗೆಯನ್ನು ಕಡಿದು ತಿನ್ನತೊಡಗಿದವು. ಒಂಟೆಯು ತಲೆಯನ್ನು ಗುಹೆಯಿಂದಾ ಹೊರತೆಗೆಯಲು ಸೆಣಸುತ್ತಾ, ನರಿಗಳು ಕುತ್ತಿಗೆಯನ್ನು ಕಡಿದು ಕೆಡಹಲು, ಪ್ರಾಣವನ್ನೇ ಬಿಟ್ಟಿತು. ಇಂತು ಆಲಸ್ಯಗುಣದಿಂದ ಒಂಟೆಯು ಸತ್ತಿತು. ರಾಜನು ಆಲಸನಾದರೆ ಅವನೂ ಒಂಟೆಯಂತೆ ಸಾಯುವನು. ಧರ್ಮರಾಜ! ಪ್ರಜಾಹಿತಕಾರ್ಯಗಳಲ್ಲಿ ಆಲಸನಾಗಬೇಡ! ಬುದ್ಧಿಯಿಂದ ಮಾಡುವ ಕರ್ಮವು ಉತ್ತಮವು. ಬಾಹುಗಳಿಂದ ಆಗುವ ಕೆಲಸವು ಮಧ್ಯಮವು, ಜಂಘೋಪಾದಗಳಿಂದ ಆಗುವ ಭಾರವಹನಾದಿಕರ್ಮವು ಅಧಮವೆಂದು ತಿಳಿ! ಪರೀಕ್ಷಿಸಿ ಕೆಲಸ ಮಾಡು! ಮಂತ್ರವನ್ನು ಗೋಪ್ಯವಾಗಿಡು! ಬುದ್ಧಿಶ್ರೇಷ್ಠರನ್ನು ನಂಬು! ವೀರರ ಸಹಾಯವನ್ನು ಗಳಿಸು! ಆಲಸನಾಗದೆ ಸದಾ ಜಾಗ್ರತನಾಗಿರು! ಇಂತು ನಡೆದು ಸುಖವನ್ನು ಪಡೆಯುವೆ!

ರಾಜನ್! ಶತ್ರುಗಳು ಅತಿವೃದ್ಧರಾದಾಗ ಬಾಗಿ ನಡೆ! ಒಂದು ಸಲ ಸಮುದ್ರ ರಾಜರು ಗಂಗಾದಿನದಿಗಳನ್ನು ಕಂಡು 'ನದೀ ದೇವತೆಗಳಿರಾ! ದೊಡ್ಡ ದೊಡ್ಡ ಮರಗಳನ್ನು ಬೇರು ಸಹಿತ ಕಿತ್ತು ತರುತ್ತಿರುವಿರಿ! ಆದರೆ ಹುಲ್ಲುಕಡ್ಡಿಗಳನ್ನು ಏಕೆ ತರುವುದಿಲ್ಲ? ಅಲ್ಪಶರೀರಗಳು, ಅಲ್ಪಬಲರು ಆದ ಸಣ್ಣ ಗಿಡಪೊದರು ಹುಲ್ಲು ಬಳ್ಳಿಗಳನ್ನು ಅಲಕ್ಷಿಸಿ ಬಿಟ್ಟಿರುವಿರೋ? ಅಥವಾ ಅವುಗಳಿಂದ ನಿಮಗೇನಾದರೂ ಪ್ರಯೋಜನವಿದೆ ಎಂದು ಬಿಟ್ಟು ಬರುವಿರೋ?' ಎಂದು ಕೇಳಿದನು. ಆಗ ಗಂಗೆಯು ನದಿಗಳ ಪರವಾಗಿ ಇಂತೆಂದಳು: 'ರಾಜನ್! ಕೇಳು! ಅಲ್ಪತೃಣಾದಿಗಳು ನಮ್ಮ ಭರಪೂರ ಪ್ರವಾಹವನ್ನು ನೋಡಿ ಶಿರಬಾಗಿ ನಮಿಸುವವು. ಅವುಗಳಿಂದ ನಮಗೆ ಯಾವ ಪ್ರಯೋಜನವೂ ಇಲ್ಲ, ಆದರೂ ಅವು ತೋರುವ ವಿನಯಕ್ಕೆ ಮೆಚ್ಚಿ ನಾವು ಅವನ್ನು ಕೊಚ್ಚಿ ತರದೆ, ಉಳಿಸಿ ಬರುವೆವು. ಮರಗಿಡಗಳು ಬಲವಂತವೆಂಬ ಗರ್ವದಿಂದ ಸೆಟೆದು ನಿಂತಿರುವುದನ್ನು ನೋಡಿ, ಸಿಟ್ಟಾಗಿ, ನಾವು ಅವನ್ನು ಕಿತ್ತುತರುವೆವು. ಆದುದರಿಂದ ಬಲವಚ್ಛತ್ರುಗಳಿಗೆ ಬಾಗಿ ನಡೆದು, ಆಪತ್ತಿನಿಂದ ಪಾರಾದ ರಾಜನು, ಮುಂದೆ ಬಲವಂತನಾಗಿ ಮತ್ತೆ ಅವನನ್ನು ಗೆಲ್ಲಬಲ್ಲವನಾಗುವನು.

ಧರ್ಮರಾಜನು 'ತಾತ! ಮೂರ್ಖನು ಪಂಡಿತಮಾನಿಯಾಗಿ, ನಿಂದಿಸುವಾಗ, ಸುಜನನೇನು ಮಾಡಬೇಕೆ'ಂದು ಕೇಳಿದನು. ಭೀಷ್ಮನಿಂತೆಂದನು: 'ವತ್ಸ! ಅಲ್ಪಬುದ್ಧಿಯು ನಿಂದಿಸಿದಾಗ, ಸಜ್ಜನನು ಸುಮ್ಮನಿರಬೇಕು. ಆದದರಿಂದ ಸುಜನನ ಪುಣ್ಯವು ಹೆಚ್ಚಿ, ಪಾಪವು ನಿಂದಿಸಿದವರನ್ನು ಸೇರುವುದು. ಟಿಟ್ಟಿಭದಂತೆ ಬಾಯದುಡುಕನು ವ್ಯರ್ಥಾಲಾಪನಾಗುವನು. 'ನೀನು ಸಾಯಿ!' ಎಂದು ಬೈದ ಮಾತ್ರಕ್ಕೆ ಸುಜನನು ಸಾಯನು. ಅವನನ್ನು ನಿಂದಿಸಿದ ದುರ್ಜನನೇ ಜನರಿಂದ ತಿರಸ್ಕೃತನಾಗಿ ಮೃತಕಲ್ಪನಾಗುವನು. ವನದಲ್ಲಿ ಒದರುವ ಕಾಗೆಯಂತೆ, ಕೂಗಿ ಕೂಗಿ, ಅವನೇ

ಸುಮ್ಮನಾಗುವನು. ಸಭೆಯಲ್ಲಿ ನಿಂತು ತನ್ನ ಮಾತೆಯನ್ನು ದೇವದತ್ತನು ಕೆಡಿಸಿದನೆಂದು ನಿಂದಿಸಿದ ಮೂರ್ಖನು, ತಾನು ಜಾರ ಪುತ್ರನೆಂಬುದನ್ನು ಮರೆತು, ಜನಾಪಹಾಸಕ್ಕೆ ಗುರಿಯಾಗುವನಲ್ಲವೇ? ನವಿಲು ಪಿಂಚವನ್ನೆತ್ತಿ ಕುಣಿವಾಗ, ಅದರ ಪೃಷ್ಠವು ಕಾಣಿಸುವಂತೆ, ಕುಜನನು ಪರನಿಂದೆ ಮಾಡುವಾಗ, ಅವನ ದೋಷಗಳೇ ಹೊರಬೀಳುವವು. ಪ್ರತ್ಯಕ್ಷವಾಗಿ ಪ್ರಶಂಶಿಸಿ, ಪರೋಕ್ಷವಾಗಿ ನಿಂದಿಸುವ ಮನುಜನು ನಾಯಿಯಂತೆ ನಿಂದ್ಯನಾಗುವನು. ಅಂತಹವನು ಜ್ಞಾನ, ಧರ್ಮ ಪರಲೋಕಗಳಿಗೆ ಎರವಾಗುವನು. ಅಂತಹವನನ್ನು ನಾಯಿಮಾಂಸದಂತೆ ದೂರದಲ್ಲಿಟ್ಟು ನಡೆಯುವುದು ಒಳಿತು. ಹೆಡೆ ಎತ್ತಿದಾಗ ನಾಗರಹಾವೆಂದು ತಿಳಿವಂತೆ, ನಿಂದಿಸಿದಾಗ ದುರ್ಜನನೆಂದು ತಿಳಿ! ಅವನನ್ನು ಪ್ರತಿನಿಂದಿಸಲು ಹೋಗಬೇಡ! ಮನುಜರೂಪದಿಂದ ಬಂದ ತೋಳದಂತೆ ಉನ್ಮತ್ತಮಾತಂಗದಂತೆ, ಬೊಗಳುವ ನಾಯಿಯಂತೆ, ಅವನು ತ್ಯಾಜ್ಯನಾಗಿರುವನು. ಉಚ್ಚರಿಗೆ ನೀಚರ ಸಹವಾಸವು ಒಳಿತಲ್ಲ. ಹೊಡೆದರೂ, ಮಣ್ಣು ತೂರಿದರೂ, ಹಲ್ಲು ಕಡಿದರೂ, ಹೆದರಿಸಿದರೂ ದುರ್ಜನರನ್ನು ಉಪೇಕ್ಷಿಸು! ಪರುಷವಚನರಿಗೆ ತಿರಸ್ಕಾರವೇ ಮದ್ದು."

ಧರ್ಮರಾಜನು, "ಅಭಿಷಿಕ್ತನಾದ ರಾಜನು ತನ್ನ ಪುತ್ರಮಿತ್ರ ಕಳತ್ರ ಸಮೇತನಾಗಿ ಆಳುತ್ತಾ ತನ್ನವರಿಗೂ ಪ್ರಜರಿಗೂ ಸುಖ ಶಾಂತಿಗಳನ್ನು ತಂದುಕೊಡುವ ಬಗೆ ಹೇಗೆ? ನೀನು ಹಿತವಚನನಾಗಿರುವೆ! ವಿದುರನಂತೆ ಮಹನೀಯನಿರುವೆ! ಕುಲಹಿತವೆಂತು ಸಿದ್ಧಿಸುವುದು? ಎಂತಹ ಭೃತ್ಯರನ್ನು ಪರಿಸರವರ್ತಿಗಳನ್ನಾಗಿ ನಿಯಮಿಸಲಹುದು?" ಎಂದು ಕೇಳಲು, ಭೀಷ್ಮನಿಂತೆಂದನು:

"ರಾಜನ್, ಅಸಹಾಯನಾಗಿ ಯಾವನಿಂದಲೂ ಬಾಳಲಾಗದು, ವಿಜ್ಞಾನಕೋವಿದರು, ಹಿತೈಷಿಗಳು, ಕುಲೀನರು, ಸ್ನೇಹ ಮಧುರರು, ಋಜುವರ್ತನರು, ರಹಸ್ಯಗೋಪನರು, ಸಚ್ಛೀಲರು, ಕಾಲಾಕಾಲಗಳನ್ನರಿತವರು, ಸಮ ದುಃಖ ಸುಖರು ಅರ್ಥರಕ್ಷಕರು. ಆದ ಮಂತ್ರಿ, ಸೇನಾಪತಿ ಭೃತ್ಯರುಗಳಿಂದ ಕೂಡಿದ ರಾಜನು ಸುಖ ಶಾಂತಿಗಳನ್ನು ಸಾಧಿಸಿ, ಪ್ರಜಾರಂಜಕನಾಗುವನು. ನೀಚ ಸಹವಾಸವು ಅನರ್ಥಕರವಾಗಿದೆ. ನೀಚರು ತಮ್ಮ ನೀಚ ಸ್ವಭಾವವನ್ನು ಎಂದಿಗೂ ಬಿಡರು. ಈ ವಿಷಯದಲ್ಲಿ ಶ್ರೀಪರಶುರಾಮದೇವನು 'ನೀಚರನ್ನು ಉತ್ತಮ ಸ್ಥಾನದಲ್ಲಿಡಬಾರದು. ನೀಚಮಧ್ಯಮೋತ್ತಮರನ್ನು ನೀಚಮಧ್ಯಮೋತ್ತಮ ಸ್ಥಾನಗಳಲ್ಲಿಡಬೇಕು. ವ್ಯತ್ಯಸ್ತವಾದರೆ ಕಾರ್ಯವು ಕೆಡವುದೆಂದು ಹೇಳಿದನು. ಆಗ ಕೇಳಿದ ಕಥೆಯೊಂದನ್ನು ನಿನಗರುಹುವೆನು.

ಹಿಂದೆ, ಒಬ್ಬ ಮುನಿಯು ನಿರ್ಜನಾರಣ್ಯದಲ್ಲಿದ್ದು ತಪಸ್ಸನ್ನು ಮಾಡುತ್ತಿದ್ದನು. ಮೂಲಫಲಮಾತ್ರಾಶನನಾಗಿ, ಇಂದ್ರಿಯಗಳನ್ನು ಜಯಿಸಿ, ಉಪವಾಸ ವ್ರತಶುದ್ಧನಾಗಿದ್ದ ಆ ಜ್ಞಾನಿಯ ಆಶ್ರಮದಲ್ಲಿ ವನ್ಯಮೃಗಗಳೂ ಶಾಂತವಾಗಿ ವಾಸಿಸುತ್ತಿದ್ದವು. ಒಂದು ನಾಯಿಯು ಪರಮವಿನಯದಿಂದ ಋಷಿವರನ ಬದಿಯಲ್ಲಿ ಕೂತು, ಭಕ್ತನಂತೆ ಸೇವಿಸುತ್ತಿತ್ತು. ಅದು ವನದಲ್ಲಿ ತಿರುಗುತ್ತಾ ಒಂದು ಚಿರತೆಯನ್ನು ಕಂಡಿತು. ಬಾಲವನ್ನೆತ್ತಿ ಆಡಿಸುತ್ತಾ ನಾಲಿಗೆ ಚಾಚಿ ತುಟಿ ನೆಕ್ಕುತ್ತಾ, ಬಾಯ್ತೆಗೆದು ಗುಡುಗುತ್ತಾ ಬರುವ

ಚಿರತೆಗೆ ಹೆದರಿ, ಶುನಕವು ಓಡಿಬಂದು, ಮುನಿಪಾದಕ್ಕೆರಗಿ, 'ಪೂಜ್ಯನೇ! ಈ ಮೃಗವು ನನ್ನನ್ನು ಕೊಲ್ಲಲು ಹವಣಿಸುತ್ತಿದೆ. ಅದರಿಂದ ಸಾಯದಂತೆ ನನ್ನನ್ನು ಕಾಪಾಡು! ಮಹಾನುಭಾವನಾದ ನಿನಗೆ ಅಸಾಧ್ಯವಲ್ಲ' ಎಂದು ಬೇಡಿತು. ಆ ಮುನಿಯು ಅದರ ಇಂಗಿತವನ್ನರಿತು, ಕರುಣಿಸಿ, ಅದನ್ನು ಚಿರತೆಯನ್ನಾಗಿ ಪರಿವರ್ತಿಸಿದನು. ನಾಯಿಯು ಚಿರತೆಯಾಗಿ ಮೇಲೆರಗಲು ಚಿರತೆ ಓಡಿಹೋಯಿತು.

ಒಂದು ದಿನ ಹುಲಿಯೊಂದು ನಾಯಿ ಚಿರತೆಯನ್ನು ಹೆದರಿಸಿತು. ಮುನಿಯು ಅದರ ಪ್ರಾರ್ಥನೆಯಂತೆ ಅದನ್ನು ಹುಲಿಯನ್ನಾಗಿ ಮಾಡಿದನು. ನಾಯಿ ಹುಲಿಯು ಭಯಂಕರ ಗರ್ಜನಗೈಯುತ್ತಾ, ವನಮೃಗಗಳನ್ನೆಲ್ಲ ಹೆದರಿಸಿ, ಕೆಲವನ್ನು ಕೊಂದು ಭಕ್ಷಿಸಿತು. ಒಂದು ದಿನ ಅದರ ಕಣ್ಣಿಗೆ ವನಗಜವೊಂದು ಬಿತ್ತು. ಹೆದರಿ ಬಂದ ನಾಯಿಯು ಆನೆಯೇ ಆಯಿತು. ಕ್ರಮವಾಗಿ ಅದು ಸಿಂಹವೂ ಆಯಿತು. ವನದಲ್ಲಿ ಎದುರಿಲ್ಲದೆ ತಿರುಗುತ್ತಾ, ಗರ್ಜಿಸುತ್ತಾ ಬೇಕಾದ ಮೃಗಗಳನ್ನು ಕೊಲ್ಲುತ್ತಾ ನಾಯಿ ಸಿಂಹವು ಬಹು ಭಯಂಕರ ಮೃಗ ರಾಜನೆನಿಸಿತು. ಪಶುಗಳು ವನಸಮೀಪಕ್ಕೆ ಬರಲು ಹೆದರಿ, ದೂರವಾಗಿ ಓಡಿಹೋದವು. ಒಂದು ದಿನ ಶರಭವನ್ನು ಕಂಡು ನಾಯಿ ಸಿಂಹವು ಹೆದರಿ ಬರಲು, ಮುನಿಯು ಅದನ್ನು ಶರಭವಾಗಿ ಮಾಡಿದನು. ನಾನಾಸತ್ವ ಭಯಂಕರವು, ಅಷ್ಟಪಾದವು, ಊರ್ಧ್ವನಯನವು ಆದ (ನಾಯಿ) ಶರಭವು ಅಂದಿನಿಂದ ನಿರ್ಭಯವಾಗಿ, ಇತರ ಮೃಗಗಳನ್ನು ಹೆದರಿಸಿ, ಆ ವನದಿಂದ ಓಡಿಸಿತು. ಅದು ಕಂಡ ಸಿಕ್ಕ ಪ್ರಾಣಿಗಳನ್ನು ಕೊಲ್ಲಲಾರಂಭಿಸಿತು. ಒಂದು ದಿನ ಶರಭವು ರಕ್ತ ತೃಪ್ತಿಯನ್ನು ಕಾಣದೆ, ಮುನಿಯನ್ನೇ ಕೊಲ್ಲಲು ನಿಶ್ಚಯಿಸಿತು. ಅದರ ದುರಭಿಪ್ರಾಯವನ್ನು ತಿಳಿದ ತಪಸ್ವಿಯು ಕುಪಿತನಾಗಿ ಅದನ್ನು ಮತ್ತೆ ನಾಯಿಯನ್ನಾಗಿ ಮಾಡಿ ಕಳಿಸಿದನು. ಆದುದರಿಂದ ಬುದ್ಧಿವಂತನಾದ ರಾಜನು ನೀಚರನ್ನು ಉತ್ತಮ ಪದವಿಗೆ ಏರಿಸಬಾರದು. ಆರ್ಜವ, ಕುಲ, ಸತ್ಯ, ವಿದ್ಯೆ, ಸಂತುಷ್ಟಿ, ಇಂದ್ರಿಯ ನಿಗ್ರಹ, ದಯೆ, ಪ್ರಭಾವ, ವಿನಯ, ಶೌರ್ಯ, ಧೈರ್ಯ ಮುಂತಾದ ಗುಣಗಳನ್ನು ಪರೀಕ್ಷಿಸಿ, ಯೋಗ್ಯರಾದ ಭೃತ್ಯರನ್ನು ನಿಯಮಿಸುವ ರಾಜನು ಸುಖಿಸುವನು.

ನಾಯಿಯನ್ನು ಸಿಂಹದ ಸ್ಥಾನದಲ್ಲಿ ಕೂಡಿಸಬೇಡ! ಸ್ವಜಾತಿಗುಣವು ಸಾಯುವವರೆವಿಗೂ ಬಿಡದು. ಸ್ವಜಾತಿ ಗುಣಸಂಪನ್ನರನ್ನು ತಕ್ಕ ಕರ್ಮಗಳಲ್ಲಿ ನಿಯಮಿಸಿದ ರಾಜನು ಮಹಾಫಲವನ್ನು ಹೊಂದುವನು ; ವಿಪರೀತವಾಗಿ ನಿಯಮಿಸುವುದರಿಂದ ಎಲ್ಲ ಕೆಲಸಗಳೂ ಕೆಡುವವು. ರಾಜನ್! ಸಿಂಹಗಳನ್ನು ನಿನ್ನ ಪರಿಸರವರ್ತಿಗಳನ್ನಾಗಿ ಇಡು! ನರಿನಾಯಿಗಳನ್ನಲ್ಲ. ಸಿಂಹಗಳ ಸಹವಾಸದಿಂದ ಅಸಿಂಹವೂ ಸಿಂಹವಾಗುವುದು. ನಾಯಿಗಳೊಡನಾಡುವ ಸಿಂಹವೂ, ಪರರನ್ನು ಕಂಡು ಬೊಗಳುತ್ತಾ ಬಾಲವನ್ನಾಡಿಸುತ್ತಾ ಸ್ವಗಾಂಭೀರ್ಯಾದಿ ಗುಣಗಳಿಗೆ ಎರವಾಗುವುದು. ಬಾಣದಂತೆ ಹೋಗಿ ಲಕ್ಷ್ಯವನ್ನು ಸಾಧಿಸುವ ಭೃತ್ಯರಿಂದ ರಾಜನು ಶ್ರೀಯುತನಾಗುವನು. ನಿನ್ನ ಕೋಶವು ಸಮೃದ್ಧವಾಗಿರಲಿ. ಕೋಶಮೂಲಧನವನ್ನು ಎಂದಿಗೂ ವೆಚ್ಚಸಬೇಡ !

ಹೆಚ್ಚಾದ ಧನದಿಂದ ಧರ್ಮಕಾಮುಗಳನ್ನು ಸಂಪೂರಿಸು! ಕೀರ್ತಿ ಗಳಿಸು! ಧನಧಾನ್ಯಾಗಾರಗಳನ್ನು, ಆಯುಧಾಗಾರಗಳನ್ನು ನಿತ್ಯವೂ ಪರೀಕ್ಷಿಸಿ, ಭವ್ಯಪೂರ್ಣವನ್ನಾಗಿ ಇಡು!' ಎಂದನು.

## ೧೮. ರಾಜ್ಯ ವ್ಯವಹಾರ ವಿವರ — ದಂಡಮಹಿಮೆ

ಧರ್ಮರಾಜನು ಪ್ರಶ್ನಿಸಿದನು: 'ತಾತ! ರಾಜವೃತ್ತವನ್ನು ವಿವರವಾಗಿ ವರ್ಣಿಸು! ಧರ್ಮಾರ್ಥಗಳಿಗೆ ಹಾನಿಯಾಗದಂತೆ ನಾನು ವ್ಯವಹರಿಸುವುದೆಂತು?' ಎಂದು ಕೇಳಲು ಭೀಷ್ಮನಿಂತೆಂದನು: 'ರಾಜನ್! ಪ್ರಜಾರಕ್ಷಣವೇ ರಾಜನ ಪ್ರಥಮ ಕರ್ತವ್ಯ ಧರ್ಮವಾಗಿದೆ. ನವಿಲಿನ ಬಣ್ಣಗಳಂತೆ, ರಾಜನು ತನ್ನ ವರ್ಣ ರೂಪಗಳನ್ನು ಬಹುವಿಧವಾಗಿ ಧರಿಸಬೇಕಾಗುವುದು. ದುಷ್ಟರಿಗೆ ತೀಕ್ಷ್ಣನು, ಮಾಯಾವಿಯು ಆದರೂ ಸಜ್ಜನರಿಗೆ ಮೃದುವು, ಋಜುವರ್ತನನು ಆಗಿರಬೇಕು. ಎಂತಹ ಕಾರ್ಯದಲ್ಲಿ ಹೇಗಿದ್ದರೆ ಹಿತವಾಗುವುದೋ ಅಂತಿರಬೇಕು. ಶರತ್ಕಾಲದ ನವಿಲಿನಂತೆ ಮೂಕನಾಗಿ, ಸೂಕ್ಷ್ಮದೃಷ್ಟಿಯಿಂದ ಎಲ್ಲವನ್ನೂ ಗಮನಿಸಬೇಕು; ಮಂತ್ರ ರಕ್ಷಣೆಯನ್ನು ಚನ್ನಾಗಿ ಮಾಡಬೇಕು. ಅರ್ಥರಕ್ಷಣೆಗಾಗಿ ಇಲ್ಲದ ಸಿಟ್ಟನ್ನು ತೋರಿ, ಪರಿವಾರದಿಂದ ಧನನಾಶವಾಗದಂತೆ ಕಾಪಾಡಬೇಕು. ಉದ್ಯತದಂಡನಾಗಿ ಶಿಕ್ಷಿಸುತ್ತಿರಬೇಕು. ಪರರಾಜ ರಸಸ್ಯಾದಿಗಳನ್ನು ಅಶ್ವಾದಿ ಪಾದಘಟ್ಟನದಿಂದ ನಾಶಪಡಿಸಬೇಕು. ಬೇಟೆಯ ನೆವದಿಂದ ಪರರಾಷ್ಟ್ರವನ್ನು ಹೊಕ್ಕು ಮರ್ಮವನ್ನರಿಯಬೇಕು. ಶತ್ರುವಿನಿಂದ ಕೂಟ ಸಂಧಿಯನ್ನು ಮಾಡಿ, ದೇವತಾ ದರ್ಶನ ವ್ಯಾಜದಿಂದ ದುರ್ಗವನ್ನು ಹೊಕ್ಕು, ಅವನನ್ನು ಗೆಲ್ಲಬೇಕು. ರಾತ್ರಿಯ ಕತ್ತಲಿನಲ್ಲಿ ತಿರುಗುವ ಮಯೂರದಂತೆ, ಯಾರ ಕಣ್ಣಿಗೂ ಬೀಳದೆ, ಅಂತಃಪುರ ಸ್ತ್ರೀಜನರ ವರ್ತನವನ್ನು ಪರೀಕ್ಷಿಸಬೇಕು.

ರಾಜನು ತನ್ನನ್ನು ತಾನು ಸಂರಕ್ಷಿಸಿಕೊಳ್ಳುತ್ತಿರಬೇಕು. ಕವಚವನ್ನು ಧರಿಸಿರಬೇಕು. ಶತ್ರು ಪ್ರಯುಕ್ತಳಾಗಿ ಬಂದ ವಿಷಕನ್ಯೆಯನ್ನು ಅವಳ ಉಸಿರ ಗಾಳಿಗೆ ಸಿಕ್ಕು ಸಾಯುವ ಮಕ್ಷಿಕವನ್ನು ಉಪಲಕ್ಷಿಸಿ ಪರಿವರ್ಜಿಸಬೇಕು. ಅಥವಾ ಸಂಹರಿಸಿಬಿಡಬೇಕು. ಅತಿ ಕ್ರುದ್ಧರನ್ನು, ವಂಚಕರನ್ನು, ಶತ್ರುಶಿಬಿರದ ನಟವಿಟ ವೇಶ್ಯಾಸೂದಾದಿಗಳನ್ನೂ ಉಳಿಸಬಾರದು. ಅರಣ್ಯದಲ್ಲಿ ಬಂದು ಮುತ್ತುವ ಶಲಭ ಸಮೂಹವು ವನನನ್ನು ನಿಷ್ಪತ್ರವಾಗಿಸುವಂತೆ, ಗುಂಪಾಗಿ ಮುತ್ತಿ ಶತ್ರುಸೇನೆಯನ್ನು ನಾಶಪಡಿಸಬೇಕು.

ತಾನು ನಡೆಯುವ ರೀತಿಯನ್ನು - ತನ್ನ ಬುದ್ಧಿ, ವಿಶ್ವಾಸ ಪಾತ್ರರ ಸಲಹೆ, ಶಾಸ್ತ್ರವಚನ ಈ ಮೂರು ಪ್ರಮಾಣಗಳಿಂದ ತಿವಿದು ನಿಶ್ಚಯಿಸಬೇಕು. ಸಾಧಕ ಬಾಧಕಗಳನ್ನು ವಿಚಾರಿಸಿ ನಡೆಯಬೇಕು. ಶೀಲಬುದ್ಧಿ ಸಂಪನ್ನನಾದವನನ್ನು ಅವನ ಬಲ ಸಾಹಸಗಳಿಗೆ ತಕ್ಕ ಕಾರ್ಯದಲ್ಲಿ ನಿಯೋಜಿಸಬೇಕು. ಕಾದ ಕಬ್ಬಿಣವನ್ನು ನೀರಿನಲ್ಲಿ ಹಾಕಿದ ತಕ್ಷಣವೇ ಅದು ಮೊದಲಿನಂತೆ ತಣ್ಣಗಾಗುವುದು; ಅಂತೆಯೇ ಬೃಹಸ್ಪತಿಯಂತಹ ಬುದ್ಧಿವಂತನು ಕೂಡ

ವಿಚಾರರಹಿತನಾದರೆ ತೇಜೋರಹಿತನಾಗುವನು. ನಿಯುಕ್ತರಾದ ಭೃತ್ಯರು ವೀಣಾ ತಂತ್ರಿಗಳಂತೆ ಶ್ರುತಿಬಿಡದೆ, ಏಕತಾನದಲ್ಲಿ ನಡೆಯುವುದನ್ನು ನಿರೀಕ್ಷಿಸಬೇಕು.

ರಾಜನು ಧರ್ಮಕ್ಕೆ ವಿರೋಧವಾಗದಂತೆ ಎಲ್ಲರಿಗೂ ಹಿತವನ್ನು ಮಾಡಬೇಕು. ಕಾಲದೇಶ ಮನುಜರನ್ನೂ ಲಕ್ಷಿಸಿ, ತಕ್ಕಂತೆ ನಡೆಯಬೇಕು. ತುಷ್ಟಚಾರರಿಂದಲು, ಶೂರಸೇನಾಪತಿಗಳಿಂದಲು, ಶಿಷ್ಟವಿಪ್ರರಿಂದಲು, ಪುಷ್ಟವರ್ತಕರಿಂದಲು, ಕಷ್ಟಪಡುವ ಶೂದ್ರರಿಂದಲು ರಾಜನು ಸಮುನ್ನತಿಯನ್ನು ಹೊಂದಿ, ವಿರಾಜಿಸುವನು. ಅಂತಹ ರಾಜನ ನಿಗ್ರಹಾನುಗ್ರಹಗಳಿಗೆ ಜನರು ಹೆದರುವರು ಮತ್ತು ಹಾತೊರೆವರು. ರಾಜನು ತನಗಿರುವ ನಿಧಿ ಸಂಖ್ಯೆಯನ್ನು ಯಾರಿಗೂ ಸೂಚಿಸಬಾರದು. ಪುಷ್ಪಗಳಿಂದ ದುಂಬಿಗಳು ಮಕರಂದವನ್ನಂತೆ, ರಾಜನು ಪ್ರಜರಿಂದ ಕಪ್ಪವನ್ನು ನೋಯಿಸದಂತೆ ಪಡೆಯಬೇಕು. ಧನವನ್ನು ಹೇರಳವಾಗಿ ಕೂಡಿಡಬೇಕು. ಅರ್ಥವೆಷ್ಟು ಸ್ವಲ್ಪವಾದರೂ, ಸಂಗ್ರಹಣೀಯವೇ! ಶತ್ರುವೆಷ್ಟು ಚಿಕ್ಕವನಾದರೂ, ಸಂಹರಣೀಯನೇ! ಬುದ್ಧಿವಂತನೆಷ್ಟು ಸಣ್ಣವನಾದರೂ ಸಂಮಾನನೀಯನೆ!

ತುಪ್ಪದ ಹನಿಗಳಿಂದ ಉರಿವ ಅಗ್ನಿಯಂತೆ, ಧನರಾಶಿಯು ಕೂಡಿಟ್ಟರೆ ಬೆಳೆಯುವುದು. ಬಲಹೀನನೆಂದು ಉಪೇಕ್ಷಿಸಲ್ಪಟ್ಟ ಶತ್ರುವು ಬೆಳೆದು ಬಲವಂತನಾಗಿ ಅರ್ಥಪ್ರಾಣಗಳನ್ನು ಅಪಹರಿಸುವನು. ಆದ್ದರಿಂದ ರಾಜನು ಅರ್ಥನಾಶಕ್ಕೆಡೆಗೊಡಬಾರದು, ಶತ್ರುಗಳಲ್ಲಿ ಉದಾಸೀನನಾಗಬಾರದು. ವಿದ್ಯೆ, ಧನ, ತಪಸ್ಸು ಕೀರ್ತಿ ಮುಂತಾದವುಗಳನ್ನು ಆಲಸರು ಹೊಂದಲಾರರು. ಅಮೂಲ್ಯವಾದ ಮನುಜ ದೇಹವು ಬಂದಾಗ ಆಲಸ್ಯವಿಲ್ಲದೆ ಶ್ರಮಿಸಿ ಅರ್ಥವನ್ನು ಕೂಡಿಟ್ಟು ಅದರಿಂದ ಧರ್ಮಮೋಕ್ಷಗಳನ್ನು ಸಾಧಿಸಬೇಕು. ಸಮಯವನ್ನು ಉಪಲಕ್ಷಿಸಿ, ಪ್ರಜರಿಂದ ಬಲಾತ್ಕಾರವಾಗಿ ಕರದಂಡಾದಿ ರೂಪದಿಂದ ಸೆಳೆದು ಕೋಶವನ್ನು ತುಂಬಬೇಕು. ವಿಷ್ಣು, ಪ್ರಾಣ, ರುದ್ರೇಂದ್ರಾದಿ ದೇವತೆಗಳಿಗೆ ಆವಾಸವಾಗಿರುವ ಮನುಜ ದೇಹವನ್ನು ಆಲಸನಾಗಿ ವ್ಯರ್ಥಗೊಳಿಸಿದವನು ಇಹಪರದೂರನಾಗುವನು. ಅರ್ಥಹೀನನಿಗೆ ಧರ್ಮವಿಲ್ಲ; ಕೊನೆಗೆ ಕಾಮಪೂರ್ತಿಯಾದರೂ ಆಗದು. ಧನಹೀನನು ದುರಾಶಾಪರನಾಗಿ ಪರರ ಧನದಾರ ಪುತ್ರಭೋಗ ಸಮೃದ್ಧಿಯನ್ನು ನೋಡಿ ಕುದಿಯುವನು. ಕೊನೆಗೆ ಚೌರ್ಯಹಿಂಸಾದಿ ಪಾಪಗಳಿಗೆ ಸಿದ್ಧನಾಗುವನು. ಆದುದರಿಂದ ಧನವನ್ನು ಅಪಾರವಾಗಿ ಗಳಿಸು! ಮತಿವಂತರನ್ನು, ಕುಲೀನರನ್ನು, ಶೀಲವಂತರನ್ನು, ವಿಕ್ರಮಶಾಲಿಗಳನ್ನು ಪೋಷಿಸು! ಅಂತಹವರಿಂದ ಕೂಡಿ, ರಾಜ ವ್ಯವಹಾರಗಳನ್ನು ನಡೆಸು!'

ಧರ್ಮರಾಜನು, 'ಪಿತಾಮಹನಿಂದ ಬಂದ ರಾಜಧರ್ಮವನ್ನು ಕೇಳಿದೆನು. ಸಮಸ್ತ ಭೂತಗಳು ದಂಡಾಧೀನವಾಗಿ, ಪಾಪದೂರವಾಗಿ ನಡೆಯುತ್ತಿವೆ. ದಂಡವು ರಾಜಹಸ್ತಗತವಾಗಿದೆ. ದಂಡದಿಂದ ಲೋಕವ್ಯವಹಾರವು ಸುಗಮವಾಗಿ, ಹಿತಕರವಾಗಿದೆ. ಅಂತಹ ದಂಡನೀತಿಗೆ ದೇವತೆ ಯಾರು? ಎಂತಹವನಾತನು? ಅವನ ರೂಪವೇನು? ದಡವು ಯಾರನ್ನು ಆಶ್ರಯಿಸಿ ನಿಂತಿದೆ? ಯಾವ ರೀತಿಯಿಂದ ನಡೆಯುವುದು? ಅದರ ವ್ಯಾಪ್ತಿಯು ಎಲ್ಲಿಯವರೆಗೆ ದಂಡವು ಜಾಗರೂಕವಾಗಿರುವುದೆಂತು? ದಂಡವನ್ನು ಹಿಡಿದು

ಎಡೆಬಿಡದೆ ರಕ್ಷಿಸುವನಾರು? ಶ್ರೇಷ್ಠದಂಡವಾವುದು? ಅದನ್ನು ಸರಿಯಾಗಿ ತಿಳಿವ ಬಗೆ ಹೇಗೆ? ಅದರ ಫಲವೇನು?' ಎಂದು ಪ್ರಶ್ನಿಸಲು ಭೀಷ್ಮನಿಂತೆಂದನು:

"ರಾಜನ್ ! ಶ್ರದ್ಧೆಯಿಂದ ಪಾಲಿಪ ರಾಜನು ಧರ್ಮವು ಕೆಡದಂತೆ ನೀಚರಿಂದ ಪರದ್ರವ್ಯಾದಿ ಹಾನಿಯಾಗದಂತೆ ನಡೆಸುವ ವ್ಯವಹಾರಕ್ಕೆ ದಂಡನೀತಿ ಎಂದು ಹೆಸರು. ಪ್ರಜಾರಕ್ಷಕವಾಗಿರುವ ವ್ಯವಹಾರಕ್ಕಿಂತಲು ಶ್ರೇಷ್ಠವಾದ ಧರ್ಮವು ಮತ್ತೊಂದಿಲ್ಲ. ರಾಜನು ಪ್ರಿಯಾಪ್ರಿಯರೆನ್ನದೆ, ನ್ಯಾಯಾನ್ಯಾಯ ವ್ಯವಸ್ಥೆಗೆ ಪ್ರಾಮುಖ್ಯತೆಯನ್ನಿತ್ತು ದಂಡಿಸುವುದು ಪರಮ ಧರ್ಮವಾಗಿದೆ. ಬ್ರಹ್ಮದೇವನು ಧರ್ಮವಚನ ಸ್ಥಾಪನ ಶಿಕ್ಷಣ ರೂಪವಾದ ದಂಡವನ್ನು ಮನುವಿಗೆ ಪೇಳಿದನು. ದಂಡದಿಂದ ಧರ್ಮಾರ್ಥಕಾಮಗಳು ಕೆಡದೆ, ಸರಿಯಾಗಿ ನಡೆಯುವವು. ದಂಡನ ಅಂತರಿಕ ರೂಪವು ದುಷ್ಟಸಂತಾಪಕವಾಗಿರುವುದರಿಂದ ಅಗ್ನಿಭಯಂಕರವಾಗಿದೆ. ಅದರ ಬಹೀರೂಪವು ಬಲು ಭಯಂಕರವಾಗಿದೆ. ನೀಲೋತ್ಪಲದಳಶ್ಯಾಮನು, ಚತುರ್ದಂಷ್ಟ್ರನು, ಚತುರ್ಭುಜನು, ಅಷ್ಟಪಾದನು, ಬಹುನೇತ್ರನು, ಶಂಕುಕರ್ಣನು, ಊರ್ಧ್ವರೋಮನು ಆಗಿರುವ ದಂಡನ ಮಹಿಮೆಯು ಅನಂತವಾಗಿದೆ.

ಸಂಹಾರಕನಾದುದರಿಂದ ರುದ್ರನೆನಿಸಿ ಮೆರೆವ ದಂಡದೇವನು ಅಗ್ನಿಯಂತೆ ಲೋಹಿತನೂ, ರಾಜನಿಗೆ ದ್ವೇಷ ಲೋಭಗಳನ್ನು ಪುಟ್ಟಿಸುವುದರಿಂದ ನೀಲನೂ ಆಗಿ ನೀಲಲೋಹಿತನೆಂದು ಖ್ಯಾತನಾಗಿರುವನು. ಮಾನಭಂಗ, ಧನಹರಣ, ಅಂಗವೈಕಲ್ಯ, ಪ್ರಾಣತ್ಯಾಜನ ಈ ನಾಲ್ಕು ವಿಧ ನಾಶವನ್ನು ಕೊಡುವ ದಂಡನು ಚತುರ್ದಂಷ್ಟ್ರನಾಗಿರುವನು. ಅವನು ನಾಲ್ಕು ಭುಜಗಳಿಂದ ಧನವನ್ನು ಗಳಿಸುವ ರೀತಿ ಎಂತೆಂದರೆ, ಪ್ರಜರಿಂದಲು ಸಾಮಂತರಿಂದಲೂ ಕಪ್ಪವನ್ನು ಸುಳ್ಳು ಹೇಳಿದ ವಾದಿಯಿಂದ ಸಾಲದ ದ್ವಿಗುಣ ಧನವನ್ನು ನಿಜವನ್ನು ಹೇಳುವ ಅದನ್ನೊಪ್ಪಿಕೊಳ್ಳುವ ವಾದಿ ಪ್ರತಿವಾದಿಗಳಿಂದ ಸಮಧನವನ್ನು(Court fee) ಸುಳ್ಳು ಹೇಳುವ ಪ್ರತಿವಾದಿಯಿಂದ ದ್ವಿಗುಣ ಧನವನ್ನು ಸ್ವೀಕರಿಸಿ, ಚೋರರಿಂದಲು ಕದರ್ಯರಿಂದಲು ಸರ್ವಸ್ವವನ್ನು ತೆಗೆಯುವ ನಾಲ್ಕು ಬಗೆಗಳಿಂದ ದಂಡನು ಚತುರ್ಭುಜನೆನಿಸಿರುವನು. (ಸಮ, ದ್ವಿಗುಣ, ಸರ್ವಸ್ವ, ಕಪ್ಪ).

ಈಗ ವ್ಯವಹಾರರೂಪೀ ದಂಡವನ್ನು ವಿವರಿಸುವೆನು. ಆವೇದನ, ಭಾಷೆ, ಸಂಪ್ರತಿಪತ್ತಿ, ಮಿಥ್ಯೋತ್ತರ, ಕಾರಣೋತ್ತರ, ವಾಙ್ಮಯ, ಪ್ರತಿಭಾ, ಕ್ರಿಯಾಫಲಸಿದ್ಧಿ ಎಂಬ ವ್ಯವಹಾರಾಂಗಗಳೇ ಅವನ ಎಂಟು ಪಾದಗಳು. 'ದೇವದತ್ತನು ನನಗೆ ನೂರು ಸುವರ್ಣಗಳು ಬಾಕಿ ಇರುವನು. ಅವನ್ನು ನಾನು, ಅವನಿಗೆ ಇಂತಹ ದಿನ, ಇಂತಹ ದೇಶದಲ್ಲಿ ಇಂತಹ ಸಾಕ್ಷಿಗಳೆದುರಿಗೆ ಕೊಟ್ಟಿರುವೆನು. ಅವನಿನ್ನೂ ನನ್ನ ಸಾಲವನ್ನು ಕೊಟ್ಟಿಲ್ಲ. ಅದನ್ನು ಕೊಡಿಸಿ!' ಎಂಬ ವಾದಿಯ ಲೇಖವನ್ನು ಆವೇದನವೆಂಬರು. ಪ್ರತ್ಯರ್ಥಿಯು ಬಂದು ಕೊಟ್ಟ ಪ್ರತ್ಯುತ್ತರಕ್ಕೆ ಭಾಷೆ ಎಂಬರು. ಸಭ್ಯರು (Judges & Jury) ಪ್ರತ್ಯರ್ಥಿ ವಾದಿಗಳನ್ನು ವಿಚಾರಿಸಬೇಕು. ಪ್ರತಿವಾದಿಯು ಸಾಲವನ್ನೊಪ್ಪಿಕೊಂಡರೆ, ಅವರಿಬ್ಬರಿಗೂ ದಂಡ (Penalty) ಇಲ್ಲ. ಇದನ್ನು ಸಂಪ್ರತಿಪತ್ತಿ ಎಂಬರು. (ಇದು ದಂಡ ಪಾದವಲ್ಲ)

'ನಾನು ಸಾಲವನ್ನು ತೆಗೆದೇ ಇಲ್ಲ'ಎಂಬುದು ಮಿಥ್ಯೋತ್ತರವು. 'ನಾನು ಸಾಲ ತೆಗೆದನು ನಿಜ! ಆದರೆ ಅದನ್ನು ತೀರಿಸಿಬಿಟ್ಟಿರುವೆನು' ಎಂಬುದು ಕಾರಣೋತ್ತರವು. ಮತ್ತೊಂದು ಕಾರಣೋತ್ತರವೆಂದರೆ, 'ನಾನು ಹಿಂದೆ ಈ ವಾದಿಯಿಂದ ಸಭೆಗೆ ತರಿಸಲ್ಪಟ್ಟಾಗ, ಅವನು ಸಾಲವನ್ನು ಕೊಟ್ಟಿಲ್ಲವೆಂದು ಋಜುವಾಗಿದೆ' ಎಂಬುವುದು. ಈ ಮೂರು ವಿಧ ಉತ್ತರ (Counter) ಗಳಲ್ಲಿಯು, ವಾದಿಪ್ರತಿವಾದಿಗಳು ತಂತಮ್ಮ ವಾದವನ್ನು ಋಜುವಾತು (Proof) ಪಡಿಸಲು ಸಾಕ್ಷಿಗಳನ್ನು ತಂದು ಹೇಳಿಸಬೇಕು. ಇದನ್ನು ಪ್ರಾಙ್ಞಯ ಎಂಬರು. ಸಾಕ್ಷಿ, ಪತ್ರ, ಭೋಗ (Possession), ಶಪಥ (Oath), ಪರೀಕ್ಷಾ (Ordeal) ಇತ್ಯಾದಿಗಳಿಗೆ ಕ್ರಿಯೆ ಎಂಬರು. ಅದರ ಫಲವನ್ನು ಲಕ್ಷಿಸಿ ಸಭಿಕರು ಕೊಡುವ ತೀರ್ಮಾನಕ್ಕೆ ಫಲವೆಂದು ಹೆಸರು. ಅದನ್ನು ಸಿದ್ಧಗೊಳಿಸುವುದು (Execution) ದಂಡಾಧಿಕಾರಿಗಳ ಕೈಯಲ್ಲಿದೆ. ಇಂತು ಎಂಟು ವಿಧವಾಗಿ ಚರಿಸುವ ದಂಡವನ್ನು ಅಷ್ಟಪಾದವೆಂಬರು. ದಂಡಾಧಿಕಾರಿಯು ವಾದಿ ಪ್ರತಿವಾದಿ ಸಾಕ್ಷಿ, ಪತ್ರಗಳನ್ನು ನೋಡುತ್ತಾ ಚನ್ನಾಗಿ ತಿಳಿದು, ಬಹುನೇತ್ರನೆನಿಸುವನು. ರಾಜಾಮಾತ್ಯ ಪುರೋಹಿತ ಪಾರ್ಷದ (Consellors) ರೂ ದಂಡನ ಕಣ್ಣುಗಳೆನಿಸುವರು. ರಾಜನು ದಂಡಿಸುವಾಗ ಶಂಕು ಕರ್ಣನಾಗಿ, ಅಂದರೆ ಚನ್ನಾಗಿ ಕಿವಿಗೊಟ್ಟು ಕೇಳಿ, ಉತ್ಫುಲ್ಲ ವಿಚಾರನಾಗಿ, ಅನಂತರ ಶಿಕ್ಷೆಯನ್ನು ಕೊಡಬೇಕು. ಊರ್ಧ್ವರೋಮನೆಂದರೆ ಸುವಿಚಾರಕನೆಂದು ಅರ್ಥವು, ಅವನು ಅನೇಕ ಸಂದೇಹ ಜಟಿಲನಾಗಿ, ವಾದಿಯಂತೆ ಕೆಲ ಸಲ ಮಾತಾಡಿ, ಪ್ರತಿವಾದಿಯಂತೆ ವಾದಿಸುವುದರಿಂದ ದ್ವಿಜಿಹ್ವನೆನಿಸುವನು.

ಧರ್ಮರೂಪೀ ದಂಡನು ತಾಮ್ರಾಸ್ಯನು, ಕೃಷ್ಣಮೃಗ ಚರ್ಮಧರನು ಆಗಿರುವನು. ಅವಹನೀಯಾದಿ ಅಗ್ನಿರೂಪನಾಗಿ ಅವನು ಯಜ್ಞಕಾರಣನಾಗಿರುವನು. ಅವನಿಂದಲೇ ದಾನ, ಉಪವಾಸ, ವ್ರತ, ಪ್ರಾಯಶ್ಚಿತ್ತ ಹೋಮಾದಿ ಶುಭಕರ್ಮಗಳು ನಡೆಯುತ್ತಿರುವವು. ತ್ರಿವಿಧದಂಡನು (ಅರ್ಥ, ವ್ಯವಹಾರ, ಧರ್ಮ) ನಿತ್ಯ ದುರಾಧರನಾಗಿ, ಖಡ್ಗ, ಧನು, ಗಧಾ, ಶಕ್ತಿ, ತ್ರಿಶೂಲ, ಮುದ್ಗರ, ಶರ, ಮುಸಲ, ಪರಶು, ಪಾಶ, ತೋಮರ, ಚಕ್ರಾದಿ ಮೂರ್ತಿಗಳಿಂದ ಲೋಕದಲ್ಲಿ ಸಂಚರಿಸುವನು. ಸೀಳಿ ಮುರಿದು, ಕುಟ್ಟಿ ಕೆಡಹಿ, ಕೊಂದು, ಶಿಕ್ಷಿಸುವುದೇ ಅವನ ವ್ಯಾಪಾರವು. ದಂಡನಿಗೆ ಶಾಸ್ತ್ರ, ಬ್ರಾಹ್ಮಣ, ಮಂತ್ರ, ಸ್ಮೃತಿಗಳೇ ಮಾತುಗಳು. ಶ್ರೀಗರ್ಭ, ವಿಜಯ ಶಾಸ್ತಾ, ವ್ಯವಹಾರ, ಸನಾತನ, ಧರ್ಮಪಾಲ, ಅಕ್ಷರ, ಸತ್ಯಗತ, ನಿತ್ಯಗ, ಅಗ್ರಜ, ಅಸಂಗ, ರುದ್ರತನಯ, ಶಿವಂಕರ ಮುಂತಾದ ಹೆಸರುಗಳಿಂದ ದಂಡನು ಸಾಕ್ಷಾದ್ವಿಷ್ಣುವೆಂದು ತಿಳಿ! ಅವನ ಪತ್ನಿಯು ದಂಡನೀತಿ, ಜಗದ್ಧಾತ್ರಿ, ಮುಂತಾದ ನಾಮಗಳಿಂದ ಖ್ಯಾತಳಾದ ಮಹಾಲಕ್ಷ್ಮಿಯು.

ದಂಡನ ರೂಪಗಳು ಹಲವು. ಧರ್ಮಾಧರ್ಮ ವ್ಯವಸ್ಥಾಪಕನಾದ ಶ್ರೀಹರಿಯು, ಅಲ್ಲಲ್ಲಿಯೇ ನೆಲಸಿ ದುಷ್ಟಶಿಕ್ಷಕನು, ಶಿಷ್ಟರಕ್ಷಕನು ಆಗಿರುವನು. ಅವನು ದಂಡನಾದರೆ, ಶ್ರೀದೇವಿಯು ನೀತಿಯಾಗಿರುವಳು. ಅವನು ದುಷ್ಟರನ್ನು ಶಿಕ್ಷಿಸುವನು. ಶ್ರೀದೇವಿಯು ಶಿಷ್ಟರನ್ನು ಬೇಕಾದುದನ್ನಿತ್ತು ರಕ್ಷಿಸುವಳು. ಈಕೆಯು ಆತನಂತೆಯೇ ನಡೆಯುವಳು. ದಂಡನೀತಿಯಿಂದ ರಾಜನೂ ಎಲ್ಲವನ್ನೂ ಅರಿಯಬಹುದಾಗಿದೆ.

ಅರ್ಥಾನರ್ಥಗಳು, ಸುಖದುಃಖಗಳು, ಧರ್ಮಾಧರ್ಮಗಳು ಮೊದಲಾದುವಲ್ಲಿ ಭಾಗ್ಯ, ಪುಣ್ಯ, ಗುಣ, ಅಕಾಮ, ಅಪ್ರಮಾದ, ಹರ್ಷ, ಶಮ, ದಮ, ದೈವ ಮೋಕ್ಷ ಅಭಯ, ಅಹಿಂಸೆ, ಯಜ್ಞ, ದಾನ, ಸಂಯಮ, ಆಯ, ವಿನಯ-ಸತ್ಯಜ್ಞಾನ ಶ್ರದ್ಧಾ ವ್ಯವಸಾಯ, ಲಾಭ, ಜಾಯಕಾರ್ಯ, ತ್ರಪಾ, ಸಂಪತ್ತು ತೇಜಕರ್ಮ ಪಾಂಡಿತ್ಯ, ಮುಂತಾದ ಸುಗುಣಗಳು ದಂಡನ ಅನುಗ್ರಹಕ್ಕೆ ಪಾತ್ರವಾಗಿವೆ. ಅಭಾಗ್ಯ ಪಾಪ ದೋಷ ಕಾಮ, ಪ್ರಮಾದ, ಕ್ರೋಧ, ಅಶಮ ಇಂದ್ರಿಯಲೌಲ್ಯ ನಾಸ್ತಿಕತೆ, ಬಂಧ ಭಯ ಹಿಂಸೆ ಲೋಭ, ಅಶ್ರದ್ಧೆ ಅಜ್ಞಾನ, ವಿಪತ್ತು ಅನ್ಯಥಜ್ಞಾನ, ಆಲಸತೆ, ವ್ಯಯ, ಅಹಂಕಾರ, ಅನೃತ, ನಾಶ, ಅಪಜಯ, ಅಕಾರ್ಯ, ನಿರ್ಲಜ್ಜಾ ಮುಂತಾದ ದುರ್ಗುಣಗಳು ದಂಡನಿಗೆ ನಿಗ್ರಹ ಪಾತ್ರವಾಗಿವೆ.

ದಂಡವು ಬ್ರಾಹ್ಮಣರಿಂದ ಪ್ರಕಾಶಿತವಾಗಿದೆ. ಧಾರ್ಮಿಕರಾದ ದ್ವಿಜಶ್ರೇಷ್ಠರು ಮಾಡುವ ಯಜ್ಞಗಳಿಂದ, ದೇವತೆಗಳು ಪ್ರೀತರಾಗಿ, ಮಳೆಗರೆವರು. ಮಳೆಯಿಂದ ಬೆಳೆ ಬಂದು, ಸರ್ವಭೂತಗಳು ಜೀವಿಸುವಂತಾಗುವುದು. ದೇವತಾ ಯಜ್ಞಗಳನ್ನು ಮಾಡದಿದ್ದರೆ, ಪ್ರಜರು ಅನ್ನವಿಲ್ಲದೆ ಸಾಯುವರು. ಧರ್ಮವನ್ನು ಬಿಡದಂತೆ ಸರ್ವಪ್ರಜರನ್ನು ನಿಗ್ರಹಿಸಿಡುವುದು ದಂಡವೇ. ದಂಡವು ವಿಪ್ರ-ಪ್ರಕಾಶಿತವಾಗಿ, ಕ್ಷತ್ರಿಯರಿಂದ ರಕ್ಷಿತವಾಗಿದೆ. ಬುದ್ಧಿವಂತರಾದ ಅಮಾತ್ಯರು,. ಕುಲ, ತೇಜ, ಓಜ, ಸಹ, ಆಖ್ಯಾನ, ದೇಹ, ಇಂದ್ರಿಯಗಳೆಂಬ ಎಂಟು ವಿಧವಾದ ಬಲದಿಂದ ದಂಡನೀತಿಯು ಪ್ರವರ್ತಿತವಾಗಿದೆ. ಆನೆ, ಕುದುರೆ, ರಥ, ಪದಾತಿ, ನಾವೆ, ದೇಶಿಕ, ಆನೀತ, ವಿಷ್ಟಿ ಎಂಬ ಎಂಟು ವಿಧ ಬಲವೂ ದಂಡ ನೀತಿಗೆ ಸಹಾಯಕವಾಗಿವೆ. ಮೌಹೂರ್ತಿಕರು, ಪ್ರಾಡ್ವಿವಾಕರು (Advocates) ಭಿಕ್ಷುರಾದಿ ವೇಷಚರರು, ರಸದರು (Cooks), ಮಿತ್ರರು, ಧನ ಧಾನ್ಯಗಳು, ಮುಂತಾದವು ಕೂಡ ದಂಡಶರೀರನಾದ ರಾಜನಿಗೆ ಅಂಗಗಳಂತೆ ಸಹಾಯಕವೆಂದು ತಿಳಿ!

ಬ್ರಹ್ಮದೇವನು ರಾಜನನ್ನು ಸೃಜಿಸಿ, ಅವನ ಕೈಗೆ ದಂಡವನ್ನು, ಬುದ್ಧಿಗೆ ನೀತಿಯನ್ನು ಕೊಟ್ಟು, ದಂಡನೀತಿಯ ಸಹಾಯದಿಂದ ಪ್ರಜಾಪಾಲನ ಮಾಡುವಂತೆ ಆಜ್ಞಾಪಿಸಿದನು. ಧರ್ಮಸ್ಥಾಪನ ಮಾಡಲು ಸ್ಥಾಪಿತವಾಗಿರುವ ದಂಡದಿಂದ ಲೋಕವು ಸುರಕ್ಷಿತವಾಗಿ ನಿಂತಿದೆ. ಪರದಾರಾಗಮನವು ಪಾಪವೆಂದು ಸಾರುವ ವೇದವು ದಂಡದ ಪಿಡಿಯಾಗಿದೆ. ಪ್ರಾಯಶ್ಚಿತ್ತವೇ ದಂಡದ ಕೋಶವು. ದಂಡದ ತೀಕ್ಷ್ಣಾಘಾತವೇ ದೋಷಿಜನರ ಶಿಕ್ಷೆ. ರಾಜನು ದಂಡ ಪ್ರಯೋಗವನ್ನು ಚನ್ನಾಗಿ ಅರಿತು ಶಿಕ್ಷಿಸಬೇಕು. ಅಪರಾಧಿಯನ್ನು ಶಿಕ್ಷಿಸದೆ .ಬಿಟ್ಟವನೂ ಮತ್ತು ನಿರಪರಾಧಿಯನ್ನು ಶಿಕ್ಷಿಸಿದವನೂ ಮಹಾಪಾಪವನ್ನು ಹೊಂದುವರು. ದಂಡನೀತಿಯು ಮನ್ವಾದಿ ಸ್ಮೃತಿಗಳಲ್ಲಿ ಸಿದ್ಧವಾಗಿದೆ. ಅವರು ಅದನ್ನು ವೇದಗಳಿಂದಲೇ ಆರಿಸಿ ರಚಿಸಿರುವರು. ವೇದಮೂಲವಾದ ದಂಡನೀತಿ ಶಾಸ್ತ್ರವು ಪ್ರಮಾಣವೆನಿಸಿದೆ. ವಿಷ್ಣುವಿನಿಂದ ಬ್ರಹ್ಮನಿಗೂ, ಬ್ರಹ್ಮನಿಂದ ರುದ್ರಮನುಗಳಿಗೂ, ಮನುವಿನಿಂದ ಇಕ್ಷ್ವಾಕು ಪ್ರಭೃತಿ ರಾಜನ್ಯರಿಗೂ

ಲಭಿಸಿ, ವೇದ ಮೂಲವಾಗಿರುವ ದಂಡನೀತಿಯು ಸರ್ವರಾಜರಿಗೂ ಪರಮ ಮಾನ್ಯವಾಗಿದೆ. ದಂಡಹಸ್ತನಾದ ರಾಜನು ಅನ್ಯಾಯವನ್ನು ಮಾಡಿದವರು ತನ್ನ ಬಂಧುಗಳಾದರೂ ಶಿಕ್ಷಿಸದೆ ಬಿಡಬಾರದು. ಸಕಲ ಲೋಕ ದಂಡಧಾರಕನು, ಬ್ರಹ್ಮರುದ್ರಾದಿ ದೇವ ವಂದ್ಯನು ಆದ ಶ್ರೀಹರಿಗೆ ನಮಸ್ಕಾರವು.

## ೧೯. ದಂಡೋತ್ಪತ್ತಿ — ಶೀಲಮಹಿಮೆ

ಭೀಷ್ಮನು ದಂಡೋತ್ಪತ್ತಿಯನ್ನು ವಿವರಿಸುತ್ತಾ ಧರ್ಮರಾಜನಿಗಿಂತೆಂದನು : 'ರಾಜನ್! ಹಿಂದೆ ಮಾಂಧಾತನು ವಸುಹೋಮನೆಂಬ ರಾಜನ್ಯನನ್ನು ಕಂಡು, 'ದಂಡವು ಎಂತು ಪುಟ್ಟಿತು? ಉತ್ತಮ ದಂಡವೆಂದರೇನು? ದಂಡವು ಜಾಗ್ರತವಾಗಿರುವ ಬಗೆ ಹೇಗೆ? ಕ್ಷತ್ರಿಯನಿಗೆ ದಂಡಾಧಿಕಾರವೆಂತು ಬಂತು? ನೀನು ಬೃಹಸ್ಪತಿಶುಕ್ರರು ರಚಿಸಿರುವ ರಾಜನೀತಿ ದಂಡಶಾಸ್ತ್ರಗಳನ್ನರಿತಿರುವೆ! ನಿನ್ನನ್ನು ಗುರುವೆಂದೆಣಿಸಿ, ಸತ್ಕರಿಸುವೆನು. ನನಗೀ ವಿವರಗಳನ್ನು ತಿಳಿಸಿ, ಸಲಹು!' ಎಂದು ಬೇಡಿದನು. ವಸುಹೋಮನಿಂತೆಂದನು:

'ರಾಜನ್! ಧರ್ಮಸ್ವರೂಪ ಭೂತವಾದ ದಂಡವು ಪ್ರಜರನ್ನು ಕೆಡದಂತೆ ನಡೆಸುತ್ತಿದೆ. ಹಿಂದೆ ಬ್ರಹ್ಮದೇವನು ಯಜ್ಞವನ್ನು ಮಾಡಲೆಣಿಸಿದನು. ತನಗೆ ತಕ್ಕ ಋತ್ವಿಜನನ್ನು ಕಾಣಲಾರದೆ, ಬಹುಕಾಲ ಚಿಂತಿಸಿದನು. ಆತನು ಶೀನಿದಾಗ ಕ್ಷುಪನೆಂಬ ಪ್ರಜಾಪತಿಯು ಜನಿಸಿದನು. ಅವನನ್ನು ಋತ್ವಿಜನೆನಿಸಿ ಬ್ರಹ್ಮನು ಯಜ್ಞವನ್ನಾರಂಭಿಸಿದನು. ದೀಕ್ಷಿತನಾದ ಪ್ರಜಾನಿಯಂತನನ್ನು ಕಂಡು ದಂಡವು ಅಂತರ್ಧಿತವಾಯಿತು, ದಂಡವಿಲ್ಲದೆ ಪ್ರಜರು ನಿರ್ಭೀತರಾಗಿ ಪಾಪಗಳನ್ನೆಸಗಿದರು.

ಜನರು ಪೇಯಾಪೇಯ, ಭೋಜ್ಯಾಭೋಜ್ಯ, ಕಾರ್ಯಾಕಾರ್ಯ ಎಂಬುವ ಜ್ಞಾನವಿಲ್ಲದೆ ಕೆಟ್ಟರು. ಆಗ ಪಿತಾಮಹನು ವಿಷ್ಣುವಿಗೆ ಶರಣಾಗತನಾಗಿ 'ಸಂಕರವಾಗದಂತೆ ಪ್ರಜರನ್ನು ಕಾಪಾಡು' ಎಂದು ಬೇಡಿದನು. ಭಗವಂತನು ಆಲೋಚಿಸಿ, ದಂಡವನ್ನು ಮತ್ತೆ ಸೃಜಿಸಿದನು. ಮತ್ತು ಧರ್ಮಚರಣವನ್ನು ನಡೆಸುವ ದಂಡನೀತಿಯನ್ನೂ ರಚಿಸಿ ಉಪದೇಶಿಸಿದನು. ಶೂಲಚಕ್ರವರಾಯುಧನಾದ ಭಗವನ್ ನಾರಾಯಣನು ದಂಡಧಾರಿಗಳಾಗಿ, ಆಯಾ ಜಾತಿಯನ್ನು ನಡೆಸುವ ಒಡೆಯರನ್ನು ನಿಯಮಿಸಿ, ದಂಡಮಹಿಮೆಯಿಂದ – ಲೋಕವು ಹಾಳಾಗದಂತೆ ನಿಲ್ಲಿಸಿ – ರಕ್ಷಿಸಿದನು.

ದೇವತೆಗಳಿಗೆ ಇಂದ್ರನು, ಪಿತೃಗಳಿಗೆ ಯಮನು, ಧನಗಳಿಗೆ ಕುಬೇರನು, ಪರ್ವತಗಳಿಗೆ ಮೇರುವು, ನದಿಗಳಿಗೆ ಸಮುದ್ರನು, ನೀರಿಗೆ ವರುಣನು, ಪ್ರಾಣಿಗಳಿಗೆ ಮುಖ್ಯ ಪ್ರಾಣನು, ತೇಜಸ್ಸುಗಳಿಗೆ ಅಗ್ನಿಯು, ರುದ್ರರಿಗೆ ಶಿವನು, ವಿಪ್ರರಿಗೆ ವಸಿಷ್ಠನು, ವಸುಗಳಿಗೆ ಪಾವಕನು, ನಕ್ಷತ್ರಗಳಿಗೆ ಚಂದ್ರನು, ಸೇನಾನಿಗಳಿಗೆ ಸ್ಕಂದನು, ಸಂಹಾರ ವಿನಯಾಧಾನಗಳಿಗೆ ಕಾಲನು ದಂಡಧಾರಿಗಳಾದರು. ಕ್ಷುಪನೆನ್ನುವ ಪ್ರಜಾಪತಿಯು ದಂಡನಿಯಾಮಕನಾದನು.

ಇಂತು ನಿಯಮಿಸಿ ಬ್ರಹ್ಮದೇವನು ಸಕಲ ಯಜ್ಞ ಫಲಪ್ರದ ವಿಷ್ಣುವಿನನ್ನು

ನಿರ್ವಿಘ್ನವಾಗಿ ಪೂಜಿಸಿ, ಸಕಲ ಕರ್ಮಫಲವನ್ನು ಶ್ರೀಶನಿಗರ್ಪಿಸಿ ಧನ್ಯನಾದನು. ವಿಷ್ಣುವು ದಂಡಶಾಸ್ತ್ರವನ್ನು ಬ್ರಹ್ಮನಿಗುಪದೇಶಿಸಿದನು. ಬ್ರಹ್ಮನು ರುದ್ರ ಅಂಗಿರಸರಿಗೆ, ಆತನು ಇಂದ್ರನಿಗೆ, ಆತನು ಮರೀಚಿಭೃಗುಗಳಿಗೆ, ಭೃಗುವು ಮಿಕ್ಕ ಋಷಿಗಳಿಗೆ, ಋಷಿಗಳು, ರಾಜನ್ಯರಿಗೆ ಉಪದೇಶಿಸಿದರು. ಸೂಕ್ಷ್ಮಧರ್ಮವನ್ನು ತಿಳಿಸುವ ನೀತಿಶಾಸ್ತ್ರವನ್ನು ಕ್ಷುಪನಿಂದ ಕಲಿತ ವೈವಸ್ವತಮನು ರಾಜನು ತನ್ನ ಮಕ್ಕಳಾದ ಇಕ್ಷ್ವಾಕು ಪ್ರಮುಖರಿಗೆ ಅದನ್ನು ಪೇಳಿದನು. ದಂಡದ ಮುಖ್ಯೋದ್ದೇಶವು ದುಷ್ಟರನ್ನು ಹತ್ತಿಕ್ಕುವುದೇ ಆಗಿದೆ. ಅವರಿಂದ ಪಡೆದ ಹಿರಣ್ಯಾದಿ ದಂಡಶುಲ್ಕವು ಇತರರನ್ನು ಹೆದರಿಸಿ, ಅಧರ್ಮದಿಂದ ದೂರವಿರಿಸಲು ಪ್ರಭಾವಶಾಲಿಯಾಗಿದೆ. ರಾಜನು ಲೋಭವಶನಾಗಿ ದಂಡ ಧನವನ್ನು ಸ್ವೀಕರಿಸಬಾರದು. ಇಂತು, ದಂಡವು ಪ್ರಾಣದಾರಾಧನ ರಕ್ಷಣವನ್ನು ಸಾಧಿಸಿ, ಪ್ರಜಾಪಾಲನದಲ್ಲಿ ಜಾಗರೂಕವಾಗಿದೆ.

ಇಂದ್ರನು ಜಾಗರೂಕನಾಗಿ ಧರ್ಮವೀಕ್ಷಣೆ ಮಾಡುತ್ತಿರುವನು. ಅಗ್ನಿವರುಣರು ಪ್ರಜಾಪತಿಗಳು, ಧರ್ಮವಿನಯರು, ವ್ಯವಸಾಯ ವ್ಯವಹಾರರು, ಓಷಧೀಪರ್ವತಗಳು, ನದೀ ಜ್ಯೋತಿಸ್ಸುಗಳು ಜಾಗ್ರತರಾಗಿ ಜಗವನ್ನು ಪಾಲಿಸುತ್ತಿರುವರು. ಇವರೆಲ್ಲರೂ ಬ್ರಹ್ಮದೇವನ ಅಧೀನರು. ಪಿತಾಮಹನು ಶಿವನನ್ನು ಮುಖ್ಯ ದಂಡಧಾರಿಯಾಗಿ ನಿಯಮಿಸಿ, ಆತನ ಕೈಲಿ ದಂಡವನ್ನಿತ್ತಿರುವನು. ದೇವದೇವನು, ಉಮಾಪತಿಯು, ಆದ ರುದ್ರನು ದಂಡಭಯ ಪ್ರದನಾಗಿ ಸರ್ವಲೋಕವನ್ನು ಶಾಸಿಸುತ್ತಿರುವನು." ಇಂತು ನುಡಿದ ವಸುಹೋಮನಂತೆ ನಡೆದು ಮಾಂಧಾತನು ಪ್ರಜಾಪಾಲನವನ್ನು ನಡೆಸಿ, ಪುಣ್ಯಲೋಕವನ್ನೈದಿದನು.'

ಧರ್ಮರಾಜನು, "ತಾತ ! ಧರ್ಮಾರ್ಥ ಕಾಮಗಳಿಗೆ ಮೂಲವಾವುದು ? ಅವನ್ನು ಚನ್ನಾಗಿ ನಡೆಸುವುದೆಂತು ; ಅವನ್ನು ಬೆರಿಸಿ ನಡೆಸುವುದೇ ? ಬೇರೆಯಾಗಿಸಿ ನಡೆಸುವುದೇ?" ಎಂದು ಕೇಳಿದನು. ಭೀಷ್ಮನಿಂತೆಂದನು : "ಧರ್ಮರಾಜ ! ಅರ್ಥವು ಧರ್ಮಮೂಲವಾಗಿದೆ. ಅರ್ಥದ ಫಲವು ಕಾಮವಾಗಿದೆ. ಧರ್ಮದಿಂದ ಬಾರದ ಅರ್ಥವನ್ನು ಅನರ್ಥವೆಂದು ತಿಳಿ! ಸಂಕಲ್ಪದಿಂದ ಧರ್ಮಾರ್ಥ ಕಾಮಗಳು. ಸಂಕಲ್ಪದಿಂದ ಧರ್ಮಾರ್ಥ ಕಾಮಗಳು. ಸಂಕಲ್ಪವು ವಿಷಯ ಗ್ರಾಹಕವಾಗಿದೆ. ವಿಷಯಗಳನ್ನು ಕೋರಿ ನಡೆಸುವ ಕರ್ಮವು ಪ್ರವೃತ್ತವೆನಿಸಿ, ಸ್ವರ್ಗ ನರಕಾದ್ಯಾಪಾದಕವಾಗಿದೆ. ನಿವೃತ್ತ ಕರ್ಮದಿಂದಲೇ ಮೋಕ್ಷವೆಂದು ತಿಳಿ ! ಧರ್ಮವು ಆರೋಗ್ಯ ಧನಗಳಿಗೂ, ಕಾಮ್ಯ ಧರ್ಮಾರ್ಥಗಳಿಗೆ ಅರ್ಥವು, ಇಂದ್ರಿಯ ಪ್ರೀತಿಗಾಗಿ ಕಾಮವು ಆದಾಗ ಧರ್ಮಾರ್ಥ ಕಾಮಗಳೆಲ್ಲವೂ ಹೇಯವೇ. ಶ್ರೀಹರಿ ಪ್ರೀತಿಗಾಗಿ ಧರ್ಮವು, ಯಜ್ಞದಾನದಾರಾತಿಥಿಗಳಿಗಾಗಿ ಅರ್ಥವು, ಜೀವನ ಯಾತ್ರೆ ಮಾತ್ರವಾಗಿ ಕಾಮವು ಆದಾಗ ತ್ರಿವರ್ಗವು ಉಪಾದೇಯವೇ ಆಗಿದೆ. ತ್ರಿವರ್ಗದಿಂದ ಚಿತ್ತಶುದ್ಧಿಯೇ ಮುಖ್ಯ ಪ್ರಯೋಜನವು. ಅದರಿಂದ ಶ್ರವಣಾದಿ ದ್ವಾರಾ ಮೋಕ್ಷವು ಲಭಿಸುವುದು. ವಿಷಯ ರೂಪ ಫಲಸಂಗವನ್ನು ಬಿಟ್ಟು ಧರ್ಮಾದಿಗಳನ್ನು ಅನಿಷಿದ್ಧವಾಗಿರುವಂತೆ ನಡೆಸುವುದರಿಂದ ಮಾತ್ರ ಮೋಕ್ಷಸಾಧನವಾಗಿ ಅವು ಪುರುಷಾರ್ಥಗಳೆನಿಸಬಲ್ಲವು. ಇದೇ ತ್ರಿವರ್ಗ ಸ್ವರೂಪವೆಂದು ತಿಳಿ!

ಫಲಾಭಿಸಂಧಿಯು ಧರ್ಮದ ಮಲವಾಗಿ ಅದರ ಸ್ವರೂಪವನ್ನೇ ಕೆಡಿಸಿಬಿಡುವುದು. ದಾನ ಭೋಗರಾಹಿತ್ಯವೇ ಅರ್ಥಮಲವು. ಕೇವಲೇಂದ್ರಿಯ ಪ್ರೀತಿಯೇ ಕಾಮ ಮಲವು. ನಿರ್ಮಲವಾದ ತ್ರಿವರ್ಗವು ಮೋಕ್ಷಾನಂದ ಸಂಧಾಯಕವಾಗುವುದು. ಹಿಂದೆ ಅಂಗರಿಷ್ಠನೆಂಬ ರಾಜನು ಕಾಮಂದಕ ಋಷಿಯನ್ನು ಕಂಡು 'ಕಾಮಮೋಹ ಬಲಾತ್ಕಾರದಿಂದ ಪಾಪವನ್ನೆಸಗಿದ ರಾಜನು ಪಶ್ಚಾತ್ತಾಪಪಟ್ಟು ಪಾಪರಹಿತನಾಗಲಹುದೇ ?' ಎಂದು ಕೇಳಿದನು. ಕಾಮಂದಕನಿಂತೆಂದನು : "ಧರ್ಮಾರ್ಥಗಳನ್ನು ಹಾಳು ಮಾಡಿ, ಕೇವಲ ಕಾಮವಶನಾದ ರಾಜನು ಪ್ರಜರನ್ನೂ ಹಾಳುಮಾಡುವನು. ಪ್ರಜರು ನಷ್ಟರಾದರೆ, ಅವನ ಅರ್ಥವೂ ಕೆಡುವುದು. ಅರ್ಥನಾಶದಿಂದ ರಾಜನು ಧರ್ಮವಿಹೀನನಾಗುವನು. ಅವನು ಕೊನೆಗೆ ನಾಸ್ತಿಕನಾಗಿ, ದುರಾಚಾರಿ ಎನಿಸುವನು. ಅವನ ಅನ್ಯಾಯ ವೃತ್ತಿಗೆ ರೋಸಿ, ಪ್ರಜರು ಅವನನ್ನು ಮನೆ ಹೊಕ್ಕ ಸರ್ಪವನ್ನಂತೆ, ದ್ವೇಷಿಸುವರು. ಅವನು ವಧ್ಯನೂ ಆಗಬಹುದು. ಆದುದರಿಂದ ರಾಜನು ಧರ್ಮಾರ್ಥಗಳಿಗೆ ಕೆಡದೆ, ಕಾಮವಶನಾಗದೆ ಉಳಿಯಬೇಕು. ವೇದಚತುರರಾದ ವಿಪ್ರರಿಂದ ತಿಳಿದು, ತನ್ನ ಕುಲವನ್ನು ಗಣಿಸಿ, ವಿಪ್ರಕ್ಷತ್ರರನ್ನು ಸನ್ಮಾನಿಸಿ, ಧರ್ಮಮಾರ್ಗವನ್ನು ಬಿಡದೆ ರಾಜನು ನಡೆದರೆ, ಹಿತವಾಗಿ ನುಡಿದರೆ, ಪಾಪದಿಂದ ದೂರನಾದರೆ, ಆಗ ಸುಖಿಸುವನು."

ಧರ್ಮರಾಜನು 'ತಾತ! ಧರ್ಮದ ಮೂಲವು ಶೀಲದಲ್ಲಿದೆ ಎಂಬರು. ಶೀಲವನ್ನೆಂತು ಹೊಂದಲಹುದು ? ಅದರ ಸ್ವರೂಪವೇನು ?' ಎಂದು ಕೇಳಿದನು. ಭೀಷ್ಮನಿಂತೆಂದನು: 'ಧರ್ಮರಾಜ ! ನಿನ್ನ ರಾಜಸೂಯದ ಮಹಾವೈಭವವನ್ನು ಕಣ್ಣಾರೆ ಕಂಡು ಸಹಿಸದೆ, ತನ್ನ ತಂದೆಯ ಮುಂದೆ ಅದನ್ನು ವರ್ಣಿಸಿ, ತನಗಂತಹ ಸಂಪತ್ತಿಲ್ಲವೆಂದು ದುಃಖಿಸಿದನು. ಧೃತರಾಷ್ಟ್ರನು 'ಪುತ್ರ ! ನಿನಗೇನು ಕಡಿಮೆಯಾಗಿದೆ ಹೇಳು !' ಎಂದು ಸಮಾಧಾನ ಪಡಿಸಿದನು. ದುರ್ಯೋಧನನು, 'ತಾತ! ಹತ್ತಾರು ಸಾವಿರ ಸ್ನಾತಕರು ನಿತ್ಯವೂ ಧರ್ಮರಾಜನ ಮನೆಯಲ್ಲಿ ಬಂಗಾರದ ತಟ್ಟೆಗಳಲ್ಲಿ ಮೃಷ್ಟಾನ್ನವನ್ನುಣ್ಣುತ್ತಿರುವರು. ಮಯ ಸಭೆಯ ವೈಭವವು ವರ್ಣನಾತೀತವಾಗಿದೆ. ನನಗಾಗದ ಪಾಂಡವರ ಸಿರಿ ನನ್ನ ಕಣ್ಣಿಗೆ ಕಾರವಾಗಿದೆ' ಎಂದು ನಿಟ್ಟುಸಿರಿಟ್ಟನು. ಆಗ ಧೃತರಾಷ್ಟ್ರನಿಂತೆಂದನು : 'ಪುತ್ರಕ ! ಅಂತಹ ಸಂಪತ್ತು ನಿನಗಾಗಬೇಕಾದರೆ ಶೀಲವಂತನಾಗಿ ಬಾಳು ! ಶೀಲವಂತನಿಗೆ ಮೂರ್ಲೋಕಗಳೂ ವಶವಾಗುವವು. ಶೀಲವಂತರಾದುದರಿಂದಲೇ ಮಾಂಧಾತ, ನಾಭಾಗ, ಜನಮೇಜಯಾದಿ ರಾಜನ್ಯರು ಸಕಲ ಮಹೀಮಂಡಲದ ಅಖಂಡ ಸಂಪತ್ತಿಗೆ ಒಡೆಯರಾದರು.' ದುರ್ಯೋಧನನು, 'ಶೀಲವೆಂದರೇನು ? ಅದನ್ನು ಹೊಂದುವುದೆಂತು ?' ಎಂದು ಕೇಳಿದನು. ಧೃತರಾಷ್ಟ್ರನಿಂತು ನುಡಿದನು :

'ಹಿಂದೆ ಪ್ರಹ್ಲಾದನು ಪರಾಕ್ರಮಿಸಿ, ಮಹೇಂದ್ರ ರಾಜ್ಯವನ್ನು ಗೆದ್ದನು. ಶೀಲವಂತನಾದುದರಿಂದ ಪ್ರಹ್ಲಾದನು ತ್ರಿಲೋಕಾಧಿಪನಾಗಿ ಸುಖವಾಗಿದ್ದನು. ಇಂದ್ರನು ಬೃಹಸ್ಪತಿಯ ಮೊರೆಹೊಕ್ಕು ಶ್ರೇಯವೆಂತೆ' ೦ದು ಕೇಳಿದನು. ಬೃಹಸ್ಪತಿಯು 'ಮೋಕ್ಷವೇ ಶ್ರೇಯವೆಂದನು. ಮೋಕ್ಷಕಾರಣವೇನೆಂದು ಕೇಳಿದ ಇಂದ್ರನಿಗೆ, ಬೃಹಸ್ಪತಿಯ ಕರೆಗೆ

ಓಗೊಟ್ಟು ಬಂದ ಭಾರ್ಗವನು 'ಜ್ಞಾನವೇ ಮೋಕ್ಷಕಾರಣವು; ಅದು ಪ್ರಹ್ಲಾದನಲ್ಲಿದೆ' ಎಂದನು. ಇಂದ್ರನು 'ನಿನಗೆ ಅವಕಾಶವಾಗುವವರೆಗೂ ಕಾಯುವೆ'ನೆಂದನು. ಪ್ರಹ್ಲಾದನು ಪ್ರೀತನಾಗಿ, ಸಮಯವನ್ನರಿತು; ವಿಪ್ರನಿಗೆ ಜ್ಞಾನವನ್ನು ಉಪದೇಶಿಸಿದನು. ವಿಪ್ರನು 'ತ್ರೈಲೋಕರಾಜ್ಯದ ಸಿರಿಯು ನಿನೆಗೆಂತು ಬಂತು ?' ಎಂದನು. ಪ್ರಹ್ಲಾದನು, 'ವಿಪ್ರೋತ್ತಮ ! ರಾಜನು ನಾನೆಂದು ವಿಪ್ರರನ್ನು ಅವಮಾನಿಸೆನು. ಅವರ ಸುವಚನತತಿಯನ್ನು ಮನದಲ್ಲಿಟ್ಟು ವಿಧೇಯನಾಗಿ ಪಾಲಿಸುವೆನು. ವಾಗ್‌ವಿದ್ಯರಾದ ಮಹಾತ್ಮರು ತಮ್ಮ ವಚನಮಧುರಧಾರೆಯಿಂದ ನನ್ನನ್ನು ತಣಿಸುತ್ತಾ ನಡೆಸುವರು. ಪುಸ್ತಕ ಮಾತ್ರ ಪಂಡಿತರು ನನ್ನಲ್ಲಿಲ್ಲ. ಇಂತು ಶೀಲವಂತನಾಗಿ, ತ್ರಿಲೋಕವನ್ನು ವಶದಲ್ಲಿಟ್ಟಿರುವೆನು' ಎಂದು, ನಿನ್ನ ಗುರುವೃತ್ತಿಯಿಂದ ಪ್ರೀತನಾದೆನು. ವರವನ್ನು ಬೇಡೆ 'ಂದನು. ಆಗ ಇಂದ್ರನು, 'ರಾಜನ್ ! ನಿನ್ನ ಶೀಲವನ್ನು ಕೊಡು' ಎಂದನು. ಇಂದ್ರನು ಅಂತೆಯೇ ವರ ಪಡೆದು, ಹೊರಟುಹೋದನು. ಇವನಾರೋ ಮಹಾತೇಜಸ್ವಿಯಾಗಿರುವನೆಂದು ಚಿಂತಿಸುತ್ತಿದ್ದ ಪ್ರಹ್ಲಾದನ ಶರೀರದಿಂದ ತೇಜೋಮೂರ್ತಿಯಾದೋರ್ವ ದೇವನು ಹೊರಬಂದನು. 'ನೀನಾರೆಂದು' ಕೇಳಲು, 'ಆತನು ನಿನ್ನನ್ನು ಬಿಟ್ಟು, ನೀನಿತ್ತ ವರದಂತೆ, ವಿಪ್ರನನ್ನು ಸೇರಪೋಗುವ ಶೀಲನು ನಾನು' ಎಂದು, ಹೋದನು. ಮತ್ತೋರ್ವ ತೇಜಸ್ವಿಯು ಶರೀರದಿಂದ ಹೊರಬರಲು ನೋಡಿ, ವಿಸ್ಮಿತನಾದ ಪ್ರಹ್ಲಾದನು 'ನೀನಾರು' ಎಂದನು. 'ನಾನು ಧರ್ಮನು. ಶೀಲವಿದ್ದಲ್ಲಿಗೆ ಹೋಗುತ್ತಿರುವೆನು. ಶೀಲವಿಲ್ಲದಲ್ಲಿ ಧರ್ಮವಿಲ್ಲ' ಎಂದು ಧರ್ಮನು ಹೋದನು. ಅವನ ಹಿಂದೆಯೆ ಕ್ರಮವಾಗಿ, ಸತ್ಯ, ವೃತ್ತ, ಬಲರೂ ಹೊರಟರು. ಕೊನೆಗೆ ಪ್ರಭಾಮಯಳು, ಕಮಲಕರಳು ಆದ ಶ್ರೀದೇವಿಯು ಹೊರ ಬಂದಳು. 'ಕಮಲಾಲಯೇ! ತಾಯೇ! ಎಲ್ಲಿಗೆ ಪೋಗುವೆ ! ಯಾರಾ ವಿಪ್ರನು ?' ಎಂದು ಕೇಳಿದ ಪ್ರಹ್ಲಾದನಿಗೆ, ಶ್ರೀದೇವಿಯು 'ರಾಜನ್ ಅವನು ಇಂದ್ರನು. ಶೀಲವ್ಯಾಜದಿಂದ ನಿನ್ನೆಲ್ಲ ಸಿರಿಯನ್ನು ಆತನು ಇಂದು ಪೊಂದಿರುವನು. ಶೀಲವನ್ನು ಕೊಟ್ಟಾಗಲೇ ಕೆಟ್ಟೆ! ಶೀಲವಿಲ್ಲದಲ್ಲಿ ಸಿರಿಯೂ ಇಲ್ಲ, ತಿಳಿ!' ಎಂದು ಹೇಳಿ ಆಕೆ, ತೆರಳಿ, ಇಂದ್ರನನ್ನು ಸೇರಿದಳು.

ದುರ್ಯೋಧನ ! ಶೀಲವೆಂದರೇನೆಂದು ತಿಳಿದೆ ? ಕೇಳು ! ಸರ್ವಭೂತಗಳಿಗೆ ದ್ರೋಹವನ್ನೆಸಗಬಾರದು. ತ್ರಿಕರಣಗಳಿಂದ ಶುದ್ಧನಾಗಿರಬೇಕು. ದಾನವನ್ನೀಯಬೇಕು. ದಂಭನನ್ನಾಗಬಾರದು. ತನಗೆ ಅಹಿತವಾದುದನ್ನು ಮತ್ತೊಬ್ಬರಿಗೆ ಬಯಸಬಾರದು. ಸಭೆಯಲ್ಲಿ ನಾಚುವಂತಹ ಕೆಲಸವನ್ನೆಂದಿಗೂ ಮಾಡಬಾರದು. ಸತ್ಯಧರ್ಮಗಳನ್ನು ಪಾಲಿಸಿ ನಡೆಯಬೇಕು, ಪರದಾರಾದ್ರವ್ಯಗಳನ್ನು ಆಶಿಸಲಾಗದು. ಇದು ಶೀಲವು. ಶೀಲವಂತನಾಗು ಸಿರಿವಂತನಾಗುವೆ ! ಸುಮ್ಮನೆ ಕುದ್ದು ಕೆಡಬೇಡ!'

ಇಂತು ನುಡಿದ ಧೃತರಾಷ್ಟ್ರನಂತೆ ನಡೆಯದೆ ದುರ್ಯೋಧನನು ದುಶ್ಶೀಲನಾಗಿ, ಸತ್ತನು. ಸುಶೀಲನಾದ ನೀನು ಉಳಿದೆ! ಧರ್ಮರಾಜ ! ಶೀಲವೃತ್ತಾಂತವನ್ನು ಹೇಳಿ ಕೇಳಿದವರೂ ಶೀಲವಂತರಾಗಿ ಸುಖಿಸುವರು.'

ಧರ್ಮರಾಜನು 'ತಾತ ! ಆಶೆ ಎಂತು ಪುಟ್ಟಿತು ? ಆಶೆಯಿಂದಲೇ ಜೀವನು ಬದುಕಿರುವನು. ಆಶೆಯೇ ಅವನ ಕಷ್ಟ ಕಾರ್ಪಣ್ಯಗಳಿಗೆ ಕಾರಣವಾಗಿದೆ. ಆಶೆಯನ್ನು ಗೆಲ್ಲುವುದಂತೂ ದುಷ್ಕರವೆನಿಸಿದೆ. ಆಶೆಗೊಳಗಾಗಿ ಅಲ್ಲವೇ ನಾನು ಬಂಧುಹತ್ಯೆಯನ್ನು ಮಾಡಿದೆನು ?' ಎಂದನು. ಭೀಷ್ಮನಿಂತೆಂದನು : 'ರಾಜನ್ ! ಆಶೆಯು ಆಕಾಶದಕಿಂತಲು ದೊಡ್ಡದು, ಸಮುದ್ರದಕಿಂತಲು ದುಸ್ತರವಾದುದು. ಹಿಂದೆ ಸುಮಿತ್ರನೆಂಬ ರಾಜನು ಬೇಟೆಯಾಡಲು ಹೊರಟನು. ಒಂದು ಜಿಂಕೆಗೆ ಅವನ ಬಾಣ ತಾಕಿತು. ಆದರೂ ಅದು ಅವನಿಗೆ ಬೀಳದೇ, ಅವನಿಗೆ ಸಿಗದೆ, ಆ ವನದಲ್ಲಿ ಅವನನ್ನು ದೂರಕ್ಕೆ ಕೊಂಡೊಯ್ದು, ಮಾಯವಾಯಿತು. ಮೃಗಾಶೆಯಿಂದ ಬಂದ ರಾಜನು ಶ್ರಾಂತನಾಗಿದ್ದನು. ಮೃಗವು ಸಿಕ್ಕದೆ, ಅವನ ಮನವು ಚಿಂತಿಸುತ್ತಿತ್ತು. ರಾಜನು ಒಂದು ಆಶ್ರಮವನ್ನು ಕಂಡು, ಅದರಲ್ಲಿದ್ದ ಮುನಿಗಳನ್ನು ಸೇರಿದನು. ಅವರು ಅವನಿಗೆ ಆತಿಥ್ಯವನ್ನಿತ್ತು ಬಂದ ಕಾರಣವೇನೆಂದರು. ರಾಜನು, ನಾನು ಸುಮಿತ್ರನೆಂಬ ಹೈಹಯ ಕುಲದ ರಾಜನು. ಬೇಟೆಗಾಗಿ ಅರಣ್ಯಕ್ಕೆ ಬಂದೆನು. ಮೃಗವನ್ನು ಬೆನ್ನತ್ತಿ, ಅದು ಸಿಗದಾಗ ! ಇಲ್ಲಿಗೆ ಶ್ರಾಂತನಾಗಿ ಬಂದೆನು. ನನ್ನಾಶೆ ಫಲಿಸಲಿಲ್ಲ. ದೇಹಶ್ರಮವೇನೋ ಬಹಳವಾಗಿದೆ. ಹಿಮವತ್ಪರ್ವತವನ್ನು ಏರಿ, ಸಮುದ್ರವನ್ನು ದಾಟಿ, ಆಕಾಶದಿ ತಿರುಗಾಡಿ ಬರಬಹುದು. ಆದರೆ ಆಶೆಯನ್ನು ಗೆಲ್ಲಲಾಗದು. ಒಂದು ಜಿಂಕೆಗಾಗಿ, ನಾನು ಪಟ್ಟ ಶ್ರಮವನ್ನು ನೆನೆದರೆ ನನ್ನನ್ನು ಕಂಡು ನಾನೇ ನಾಚುವಂತಾಗಿದೆ !' ಎಂದನು.

ಆ ಮುನಿವರರ ಮಧ್ಯದಲ್ಲಿದ್ದ ಋಷಭನೆಂಬ ಮುನಿಯು ನಕ್ಕು ರಾಜನಿಗಿಂತೆಂದನು:

## ೨೦. ಆಶಾವೃತ್ತಾಂತ ಆಪದ್ಧರ್ಮ

ಋಷಭನೆಂಬ ಋಷಿಯು ಸುಮಿತ್ರನಿಗೆ ಆಶಾವೃತ್ತಾಂತವನ್ನು ತಿಳಿಸುತ್ತಿಂತೆಂದನು :

'ರಾಜನ್ ! ಹಿಂದೆ ನಾನು ನರನಾರಾಯಣಾಶ್ರಮದಲ್ಲಿ ಕೆಲದಿನವಿದ್ದೆನು. ದಿವ್ಯವಾದ ಬದರಿಕಾಶ್ರಮದಲ್ಲಿ ವೇದ ಪಠನವು ಅಶ್ವಶೀರ್ಷಾದಿ ಮುನಿಗಳಿಂದ ಸಂತತವಾಗಿ ನಡೆದಿತ್ತು. ಆಗ ಅಲ್ಲಿಗೆ ತನುನೆಂಬ ಮಹರ್ಷಿಯು ಬಂದನು. ಅವನು ಅತಿ ಕೃಶನಾಗಿದ್ದನು. ಅವನ ತಲೆ, ಕೈಕಾಲುಗಳೂ ಕಡ್ಡಿಗಳಾಗಿದ್ದವು. ಆದರೆ ಆತನ ಮಾತು ಎಲ್ಲರಂತಿತ್ತು. ಆತನಿಗೆ ವಂದಿಸಿ, ಆಸನವನ್ನಿತ್ತು ನಾನು, ಇತರ ಮುನಿಗಳೂ ಆತನ ಸುತ್ತಲು ಕೂತೆವು. ಆತನು ನಮಗೆ ವಿವಿಧ ಧರ್ಮಗಳನ್ನು ಉಪದೇಶಿಸುವಾಗ, ಒಬ್ಬ ರಾಜನು, ನಿನ್ನಂತೆ ಶ್ರಾಂತನಾಗಿ, ಅಲ್ಲಿಗೆ ಬಂದನು. ಅವನು ಅರಣ್ಯದಲ್ಲಿ ಕಳೆದುಹೋದ ತನ್ನ ಮಗನನ್ನು ಹುಡುಕಿಕೊಂಡು ಬಂದಿದ್ದನು. ಏಕ ಪುತ್ರನನ್ನು ಕಾಣಬೇಕೆಂಬ ಆಶೆಯು ಅವನನ್ನು ಅಷ್ಟು ದೂರ ಸೆಳೆತಂದಿತ್ತು. ಪುತ್ರನಾಶೆಯೊಂದಿಗೆ ಅರಣ್ಯಸಂಚಾರ ಶ್ರಮವು ಅವನ ಹೃದಯವನ್ನು ಕಾಡುತ್ತಿತ್ತು.

ಅವನನ್ನು ಕಂಡು, ಅವನ ಆಶಾಪಾಶದ ಸೆಳೆತವನ್ನು ತಿಳಿದು, ತನುಮುನಿಯು

ಧ್ಯಾನಪರನಾದನು. ರಾಜನು ಖಿನ್ನವದನನಾಗಿ, 'ಮಹಾನುಭಾವ! ಮಗನನ್ನು ಕಾಣಬೇಕೆಂಬ ಆಶೆಯು ನನ್ನುನ್ನು ಜೀವದಿಂದುಳಿಸಿ, ತಿರುಗಿಸುತ್ತಿದೆ. ಆಶೆಕಿಂತಲು ಪ್ರಬಲವಾದುದಾವುದು ?' ಎಂದನು. ತನುಮುನಿಯು "ರಾಜನ್! ಒಬ್ಬ ಮಹಾ ಮುನಿಯು ನಿನ್ನ ಮಗನನ್ನು ನೋಡಿ, ವಲ್ಕಲಗಳನ್ನು, ಕಲಶವನ್ನು, ಸ್ವಲ್ಪ ಧನವನ್ನು ಬೇಡಿದನು. ನಿನ್ನ ಪುತ್ರನು ಆತನನ್ನು ಅವಮಾನಿಸಿದನು" ಎಂದನು. ರಾಜನು ಶ್ರಾಂತನಾಗಿರುವುದನ್ನು ಕಂಡು, ಮುನಿಗಳು ಅವನನ್ನು ಅತಿಥಿಸತ್ಕಾರವಿತ್ತು, ತಣಿಸಿ ಕೂಡಿಸಿದರು. ಸಪ್ತರ್ಷಿಗಳು ಧ್ರುವನನ್ನಂತೆ ಸುತ್ತುವರಿಸಿ ಕೂತ ಋಷಿಗಳು ಆ ರಾಜನನ್ನು 'ನಿನ್ನ ವೃತ್ತಾಂತವನ್ನು ಹೇಳು!' ಎಂದರು.

ರಾಜನಿಂತೆಂದನು : 'ನನ್ನನ್ನು ವೀರದ್ಯುಮ್ನನೆಂಬರು. ನನ್ನ ಮಗನು ಭೂರಿದ್ಯುಮ್ನನು. ಏಕಪುತ್ರನು ಅರಣ್ಯದಲ್ಲಿ ಕಾಣದಾಗಿರುವುದರಿಂದ, ಅವನನ್ನು ಹುಡುಕುತ್ತಾ ಬಂದಿರುವೆನು.' ಎಂದ ರಾಜನಿಗೆ ತನು ಮುನಿಯು ಮಾರುನುಡಿಯದೆ ಸುಮ್ಮನಿದ್ದನು. 'ಆಶೆಯು ಬಲು ಕೆಟ್ಟದು. ಭೂರಿದ್ಯುಮ್ನನಿಂದ ಅವಮಾನಿತನಾದೆನು. ಪರರ ಬೇಡಲಾರದೆಂದು, ತೀವ್ರತಪವನ್ನು ಕೈಕೊಂಡು ಕೃಶನಾಗಿರುವ ನನಗೆ ಇವನಿಂದ ಮತ್ತೆ ಉಪಕೃತನಾಗಬೇಕಿಲ್ಲ. ಆಶೆಯು ಅಂಕುರಿಸದಂತೆ ಕಿತ್ತೊಗೆಯುವೆನು.' ಇಂತು ಚಿಂತಿಸುವ ಮುನಿ ಕಾಂತನಿಗೆ ಭೂಕಾಂತನಿಂತೆಂದನು : 'ಮುನಿವರ! ಆಶೆಕಿಂತಲು ಕೃಶವಾದುದಿಲ್ಲವೆ ?' ಎಂದ ರಾಜನಿಗೆ ಮುನಿಯು 'ರಾಜನ್, ಆಶೆಯನ್ನು ಗೆದ್ದವನು ಪುಷ್ಟನು; ಆಶೆಗೆ ದಾಸನು ಕೃಶನು. ಆಶೆಯನ್ನು ಗೆಲ್ಲುವುದು ಬಲು ಕಷ್ಟವು. ಆಶೆಯಿಂದ ಕೃಶನಾದ ನನ್ನನ್ನು ನೋಡಿ, ಆಶೆಯ ಮಹಿಮೆಯನ್ನು ತಿಳಿ! ಆಶೆಯಿಂದ ಪ್ರೇರಿತನಾಗಿ ಬೇಡುವವನು ಬಲು ಕೃಶತರನು. ಕೃತಘ್ನರು, ಆಲಸರು, ಅಪಕಾರಿಗಳು ಮುಂತಾದವರನ್ನು ಅಂತು ಮಾಡುವ ಆಶೆಯು ನನ್ನಕಿಂತಲು ಕೃಶತರವು. ನಾರಿಯಲ್ಲಿರುವ ಪುತ್ರಾಶೆ, ವೃದ್ಧರಲ್ಲಿರುವ ಪುತ್ರಸೇವಾಶೆ, ಧನಿಗಳ ಧನಾಶೆ, ಮಗನನ್ನು ಹುಡುಕುತ್ತಾ ಬಂದ ನಿನ್ನಾಶೆ, ಕನ್ಯೆಯನ್ನೀವ ತಂದೆಯಿಂದ ಬರುವ ಶುಲ್ಕದಾಶೆ, ಇವೆಲ್ಲ ಆಶೆಗಳು ನನ್ನಕಿಂತಲೂ ಕೃಶತರಗಳು, ತಿಳಿ!' ಎಂದನು.

ರಾಜನು ಆ ಮುನಿಗೆ ವಂದಿಸಿ, 'ನನ್ನ ಮಗನನ್ನು ತಂದು ತೋರಿಸಿ!' ಎಂದು ಬೇಡಿದನು. ಆ ಮಹಾತ್ಮನು ಭೂರದ್ಯುಮ್ನನನ್ನು ತನ್ನ ತಪೋಬಲದಿಂದ ತರಿಸಿ, ತಂದೆಗೊಪ್ಪಿಸಿ, ತಾನು ನಿರ್ವಿಕಾರನಾಗಿ, ವನಕ್ಕೆ ತೆರಳಿದನು. ಇದನ್ನು ನಾನು ಕಂಡು ಬಂದೆನು' ಎಂಬ ಋಷಭನ ವಚನವನ್ನಾಲಿಸಿ, ಸುಮಿತ್ರನು ಮೃಗಾಶೆಯನ್ನು ಬಿಟ್ಟು ನಿಶ್ಚಿಂತನಾದನು. ಧರ್ಮರಾಜ! ನೀನಾದರೂ ಆಶಾಪಾಶವಶನಾಗದೆ ಧರ್ಮಸ್ಥಿರನಾಗಿ, ಪ್ರಜರನ್ನು ಪರಿಪಾಲಿಸು!'

ಆಗ ಧರ್ಮರಾಜನು ತಾತನನ್ನು ನೋಡಿ, 'ಪಿತಾಮಹ! ಅಮೃತ ಸೇಚನದಿಂದಂತೆ, ನಿನ್ನ ವಚನ ಶ್ರವಣದಿಂದ ತೃಪ್ತವಾಗದಿರುವೆನು. ನನಗೆ ಉತ್ತಮ ಧರ್ಮವನ್ನು ಮತ್ತೂ ನಿರೂಪಿಸು!' ಎಂದನು. ಭೀಷ್ಮನಿಂತೆಂದನು : 'ರಾಜನ್ ! ಹಿಂದೆ ಗೌತಮನು ತನ್ನ

ಆಶ್ರಮಕ್ಕೆ ದಯಮಾಡಿಸಿದ ಯಮರಾಜನನ್ನು ಇಂತೆಯೇ ಕೇಳಿದನು. ಆಗ ಯಮಧರ್ಮನು ಪೇಳಿದುದನ್ನೇ ನಿನಗೆ ಪೇಳುವೆನು ಕೇಳು! ಮಾತಾಪಿತೃ ಸೇವೆಕಿಂತಲು, ಉತ್ತಮ ಧರ್ಮವಿನ್ನೊಂದಿಲ್ಲ. ತಪಸ್ಸು, ಶೌಚ, ವ್ರತ, ಸತ್ಯ, ಅಹಿಂಸೆ, ವೇದಾಧ್ಯಯನ, ಅಶ್ವಮೇಧಾಧಿ ಯಜ್ಞಗಳು ಮುಂತಾದುವನ್ನು ಮಾಡಿದರೆ ಬರುವ ಪುಣ್ಯವು ತಂದೆತಾಯಂದಿರನ್ನು ಅಮತ್ಸರರಾಗಿ ಸೇವಿಸುವವರಿಗೆ ಬರುವುದು.'

ಧರ್ಮರಾಜನು, 'ತಾತ! ಆಪತ್ಸಮಯದಲ್ಲಿ ರಾಜನೆಂತು ಜೀವಿಸಬೇಕು ಹೇಳು!

ನಿರ್ಬಲವಾಗುವುದು; ಅಮಾತ್ಯರು ದ್ರೋಹ ಬಗೆವರು; ಮಂತ್ರರಹಸ್ಯವು ಬಯಲಾಗುವುದು; ಕೊನೆಗೆ ರಾಜ್ಯವೇ ಕೈಬಿಟ್ಟುಹೋಗುವಂತಾಗುವುದು. ದೇಶಕಾಲಗಳು ವಿಪರೀತವಾಗಿರುವವು; ಸಾಮವು ನಿರರ್ಥಕವಾಗಿರುವುದು; ಭೇದವು ಕೆಲಸ ಮಾಡದು; ಇಂತಹ ಮಹಾಪತ್ತು ಬಂದೊದಗಿದಾಗ, ರಾಜನ ಕರ್ತವ್ಯವೇನು?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ರಾಜನ್! ಬಹು ಪ್ರಶ್ನೆಗಳನ್ನು ಕೇಳುವೆ! ಗುಹ್ಯವಾದ ವಿಷಯಗಳನ್ನು ಕೇಳಬಾರದು. ನಾನು ಹೇಳಲುಬಾರದು. ಏಕೆಂದರೆ ಆಪದ್ಧರ್ಮಗಳನ್ನು ಹೇಳಿದರೆ, ಅವು ಶಾಶ್ವತ ಧರ್ಮಗಳೆಂದು ತಿಳಿದು ಅನಾಪತ್ತಿಯಲ್ಲಿಯೂ ಆಚರಿಸುವ ಆಲಸರೇ ಬಹಳ. ಆದರೂ ನೀನು ಕೇಳಿದೆ ಎಂದು ಸಂಗ್ರಹಿಸಿ, ಹೇಳುವೆನು. ರಾಜ್ಯವ್ಯವಹಾರ ನಿರ್ವಹಣ ಮಾತ್ರಕ್ಕಾಗಿ ನಾನೀಗ ನುಡಿಯುತ್ತಿರುವೆನು. ಪ್ರಜರನ್ನು ದುಃಖಪಡಿಸಿ, ಅವರಿಂದ ಬಲಾತ್ಕಾರನಾಗಿ ಧನವನ್ನು ಸೆಳೆಯುವ ರಾಜನು ಜೀವನ್ಮೃತನೆಂದು ತಿಳಿ! ಪ್ರಜಾ ಕೋಪಾಲನವು ಅಂತಹ ದುಷ್ಟ ರಾಜನನ್ನು ಎಂದಾದರೂ ಕೊಲ್ಲದೇ ಬಿಡದು. ಶಾಸ್ತ್ರವನ್ನು ಓದು! ಆಪದ್ಧರ್ಮವನ್ನು ತಿಳಿ! ಆಪತ್ಕಾಲದಲ್ಲಿ ಮಾತ್ರ ಅಂತೆಯೇ ನಡೆ!

ಸಂದೇಹ ಬಿಡು! ಆಪದ್ಧರ್ಮವನ್ನು ನುಡಿವೆನು. ರಾಜನು ಸರ್ವರೀತಿಯಿಂದಲು ಕೋಶವನ್ನು ತುಂಬಿಡಬೇಕು. ಕೋಶಕ್ಷಯದಿಂದ, ಬಲಕ್ಷಯವಾಗುವುದು. ಬಲಕ್ಷಯದಿಂದ ಶತ್ರುವೃದ್ಧಿಯಾಗುವುದು. ಇಂತಹ ಅನರ್ಥಪರಂಪರೆಗೆ ಎಡೆಗೊಡಬೇಡ! ಕೋಶವನ್ನು ಭೂಮಿಯನ್ನು ಅಗೆದು ಜಲವನ್ನು ಪಡೆವಂತೆ ಮಹಾಪ್ರಯತ್ನದಿಂದ ಪಡೆ! ಪ್ರಜರನ್ನು ಪೀಡಿಸಿಯಾದರು ಧನವನ್ನು ಹೊಂದಿ, ಆಪತ್ತನ್ನು ನಿವಾರಿಸಿಕೊಳ್ಳುವ ರಾಜನು, ಆಪನ್ನಿವೃತ್ತಿಯಾದ ನಂತರ, ಆ ಪ್ರಜರನ್ನು ಧನ ಬಹುಮಾನಗಳಿಂದ ಸತ್ಕರಿಸಬೇಕು. ಇದು ಮುಖ್ಯ ಧರ್ಮವಲ್ಲ; ಉಪಾಯ ಧರ್ಮವು, ಆದರೂ ಆಪತ್ತಿನಲ್ಲಿ ಅದೇ ಮುಖ್ಯ ಧರ್ಮವಾಗುವುದು ತಿಳಿ! ಜೀವನ ನಾಶವಾಗುವ ಕಾಲಕ್ಕೆ ಕೋಶಸಂಚಯವನ್ನು ವಿರೋಧಿಸುವ ಯಾವ ಧರ್ಮವೂ ಆದರಣೀಯವಲ್ಲ. ಧರ್ಮದಕಿಂತಲು ವೃತ್ತಿಯೇ ಗರೀಯವಾಗಿದೆ. ಬದುಕಿದ್ದವನಿಗೆ ಧರ್ಮವು; ಸತ್ತು ಮಾಡುವುದಾದರೂ ಏನು? ದುರ್ಬಲನಾದವನು ಧರ್ಮಿಷ್ಠನಾಗಿದ್ದರೂ, ಬಲವಂತರಾದ ಶತ್ರುಗಳಿಂದ ಪೀಡಿತನಾಗಿ ಕೆಡುವನು; ಆಗ ಧರ್ಮವೂ ಕೆಡುವುದು. ಶ್ರೇಷ್ಠ ಸನಾತನ ಧರ್ಮವನ್ನು ಅಳಿಯಗೊಡದೆ ಉಳಿಸಲು, ಕಿಂಚಿತ್ತಾದ ಹಿಂಸೆಯನ್ನು ಮಾಡಿ,

ಪ್ರಜರಿಂದ ಧನವನ್ನು ಪಡೆದು, ಅದೇ ಧನದಿಂದ ಅವರ ಮಾನ ಪ್ರಾಣಗಳನ್ನು ಉಳಿಸುವ ರಾಜನಿಗೆ ಪಾಪವಿಲ್ಲ; ಪ್ರತ್ಯುತ ಪುಣ್ಯವೇ ಬರುವುದು.

ಕೇವಲ ಧರ್ಮ ಸಹಾಯನಾದ ರಾಜನು ಕೋಶಹೀನನಾಗಿದ್ದರೆ ಶತ್ರುಗಳಿಗೆ ಅಗ್ಗವಾಗುವನು. ಅವನು ಕೋಶವನ್ನು ಬೆಳೆಸಿ, ಸೈನ್ಯವನ್ನು ಕೂಡಿಸದಿದ್ದರೆ, ರಣರಂಗದಲ್ಲಿ ಮಡಿದು ಸಗ್ಗವನ್ನು ಸೇರಬೇಕಾಗುವುದು. ಪ್ರಜಾಪೀಡಾರೂಪವಾದ ಪಾಪಕ್ಕೆ ಪ್ರಾಯಶ್ಚಿತ್ತವಿದೆ. ರಾಜನು ಶತ್ರುವಶನಾದರೆ, ಸರ್ವನಾಶವೇ ಆದೀತು! ಆದುದರಿಂದ ಛಾಂದಸ ವಿಪ್ರನಂತೆ ಮೂಢನಾಗಿ, ಧರ್ಮ - ಧರ್ಮ ಎಂದು ಜಪಿಸುತ್ತಾ ಕೂತ ರಾಜನು, ಸ್ವಧರ್ಮ ಭ್ರಷ್ಟನಾಗಿ, ನರಕಾದ್ಯನರ್ಥವನ್ನು ಹೊಂದುವನು.

ಧರ್ಮವೇದಿ ಜನರ ನುಡಿ ಕೇಳು! ಕ್ಷತ್ರಿಯನಿಗೆ ಉದ್ಯಮ, ನೈಪುಣ್ಯ, ಬಾಹುವೀರ್ಯಗಳು ಸ್ವಭಾವಸಿದ್ಧ ಗುಣಗಳಾಗಿವೆ. ವೃತ್ತಿಹೀನನಾದ ಕ್ಷತ್ರಿಯನು ಭಿಕ್ಷೆ ಬೇಡಬಾರದು. ದರ್ಪದಿಂದ ಮೇಲೆರಗಿ ಪ್ರಜರನ್ನು ಹೆದರಿಸಿ, ನಯಭಯಗಳಿಂದ, ಧನವನ್ನು ಸಂಗ್ರಹಿಸಿ, ಬಲವಂತನಾಗಬೇಕು. ಆದರೆ ಎಂತಹ ಆಪತ್ತು ಬಂದರೂ ಸರೇ, ರಾಜನು ತಾಪಸರ ಮತ್ತು ವಿಪ್ರರ ಧನ ವಸ್ತು ವಾಹನಾದಿಗಳನ್ನು ಕಸಿಯಲಾಗದು. ವಿಪ್ರನು ಆಪಕ್ಕಾಲದಲ್ಲಿ ಅಯಾಜ್ಯರಲ್ಲಿ ಹೋಗಿ ಯಾಜಕನಾಗಬಹುದು; ಪ್ರಾಣಸಂಕಟದಲ್ಲಿ ಅವನು ಅ ಭೋಜ್ಯವನ್ನು ತಿನ್ನಬಹುದು; ಅಂತೆಯೇ ಆಪತ್ತಿಗೆ ಸಿಕ್ಕ ರಾಜನು ಸಿಕ್ಕೆಲ್ಲ ಕಡೆಗಳಿಂದ ಧನವನ್ನು ಸಂಗ್ರಹಿಸಿ ಬಲವಂತನಾಗಬೇಕು. ಪೀಡಿತನಾದವನು ಪ್ರಾಣರಕ್ಷಣೆಗಾಗಿ ಹಿತ್ತಲ ಬಾಗಿಲಿನಿಂದ ಓಡಲು ತಪ್ಪಲ್ಲ; ಹೆಬ್ಬಾಗಿಲಿಗೆ ಬಂದರೆ ಅವನನ್ನು ಶತ್ರುಗಳು ತುಂಡರಿಸಿಬಿಡುವರು. ಪ್ರಾಣವನ್ನು ಉಳಿಸಿಕೊಂಡ ವೀರನು ಸಮಯವನ್ನು ಸಾಧಿಸಿ, ಶತ್ರುಗಳನ್ನು ಗೆದ್ದು, ಮತ್ತೆ ಸುಖಿಸಬಲ್ಲನು.

ಕ್ಷತ್ರಿಯನಿಗೆ ಯಾಚನೆಯು ವಿಹಿತವಲ್ಲ, ವೈಶ್ಯನಂತೆ ಅಥವಾ ಶೂದ್ರನಂತೆ ಅವನು ಜೀವಿಸಲಾಗದು. ಆದುದರಿಂದ ಸ್ವಧರ್ಮವಾದ ವಿಕ್ರಮ ವಿಜಯ ವೀರಸ್ವರ್ಗಗಳೇ ಅವನಿಗೆ ಶರಣ್ಯವಾಗಿವೆ. ಅಂತಹ ರಾಜನು ಆಪತ್ತಿನಲ್ಲಿ ಪ್ರಜಾವಳಿಯಿಂದ ಧನವನ್ನು ಪಡೆಯಲು ಮಾಡುವ ಎಂತಹ ಉಪಾಯವೂ ಅನುಸರಣೀಯವೇ ಆಗಿದೆ. ಆದರೆ ಆಪತ್ತಿನಿಂದ ಪಾರಾದ ರಾಜನು ಆಮೇಲೆ ಅವರಿಗೆ ಅವರಿಂದ ಪಡೆದ ವಸ್ತು ಧನ ವಾಹನಾದಿಗಳನ್ನು ಹಿಂದಿರುಗಿಸಿ ಕೊಡಬೇಕು. ಇಲ್ಲದಿದ್ದರೆ, ಅವನು ಲೋಭಿ ಎನಿಸಿ, ಇಹದಿ ಅಪಕೀರ್ತಿಯನ್ನೂ, ಪರ ದಿನರಕವನ್ನೂ ಹೊಂದಬೇಕಾಗುವುದು. ಈ ವಿಷಯದಲ್ಲಿ ಸಂಶಯವಿಲ್ಲ.

ರಾಜನು ಅಳಿಸಬಲ್ಲ, ಉಳಿಸಬಲ್ಲ, ಲೋಕೋತ್ತರ ಪುರುಷನಿರುವನು. ಅಂತಹವನು ತಾನು ಅಳಿಯುವ ಕಾಲದಲ್ಲಿ ತನ್ನನ್ನು ಉಳಿಸಿಕೊಂಡು, ಪ್ರಜರನ್ನು ಶತ್ರುಕೃತ ಪೀಡೆಯಿಂದ ಉಳಿಸಲು ಸಮರ್ಥನಾಗಬೇಕೆಂದು, ಪ್ರಜರಿಂದ ಧನ ಸಂಗ್ರಹವನ್ನು ಮಾಡುವುದು ತಪ್ಪಲ್ಲ. ಹಿಂಸೆಯೇ ಇಲ್ಲದ ಜೀವನವೇ ಇಲ್ಲ. ಅರಣ್ಯವಾಸಿ, ಏಕಾಕಿ ಅವಧೂತನಿಗೂ ಹಿಂಸೆಯಿಂದಲೇ ಜೀವಿಸಿರುವುದು ಅನಿವಾರ್ಯವಾಗಿದೆ. ಫಲ ಪರ್ಣಗಳನ್ನು ಕಿತ್ತುವಾಗ

ವೃಕ್ಷಗಳಿಗೆ ಹಿಂಸೆಯಾಗುವುದೆಂದು, ಬಿಟ್ಟು ಕೂಡುವವರುಂಟೇ? ಆದುದರಿಂದ ಹಣೆಯಲ್ಲಿ ಬರೆದಂತಾಗಲಿ! ಎಂದು ಕೂಡುವ ಮೂರ್ಖನು ಸಾಯುವಂತೆ ಸಾಯಬಾರದು. ರಾಜನಂತೂ ಸರ್ವಥಾ ನಿರ್ವಿಣ್ಣನಾಗಬಾರದು. ಅನಿರ್ವೇದಃ ಶ್ರಿಯೋಮೂಲಂ! ತನ್ನ ಶರೀರಕ್ಕೆ ವಿಪತ್ತು ಬಂದಾಗ, ರಾಜನು, ರಾಜ್ಯಕೋಶ, ದಂಡ, ಧರ್ಮ, ಮಿತ್ರ, ಪ್ರಜಾ, ಬಲಗಳನ್ನು ಲೆಕ್ಕಿಸದೆ, ವ್ಯಯಿಸಿ, ತಾನು ಉಳಿದುಕೊಳ್ಳಬೇಕು. ರಾಜನು ಉಳಿದರೆ, ಅವೆಲ್ಲವೂ ಮತ್ತೆ ಚಿಗುರೆತ್ತಿ ಬೆಳೆಯುವವು.

ಬೀಜಕ್ಕಾಗಿ ತೆಗೆದಿಟ್ಟ ಧಾನ್ಯವನ್ನು ತಿನ್ನಬಾರದು, ತಿಂದರೆ ಬೀಜವಿಲ್ಲ, ಬೀಜ ನಾಶದಿಂದ ಸಸ್ಯ ಸಂಪತ್ತಿಯು ಕೈಗೂಡದು. ಅಂತೆಯೇ ರಾಜನು ಉಳಿದು, ರಾಜ್ಯವನ್ನು ಉಳಿಸಬೇಕು. ಯಾರನ್ನೂ ಎಂದೂ ಪೀಡಿಸದೆ ಕೋಶವು ಬೆಳೆಯುವುದಾದರೂ ಎಂತು. ಯಜ್ಞವನ್ನು ಮಾಡುವ ವಿಪ್ರನು ಕೂಡ, ಬಹು ಜನರಲ್ಲಿ ಬೇಡಿ, ಪೀಡಿಸಿ, ತಂದ ಧನವನ್ನು ಸದ್ವಿನಿಯೋಗ ಮಾಡುತ್ತಿರುವನು. ಇನ್ನು ರಾಜನು ಹಿಂಸಿಸದೆ, ಕೋಶವನ್ನು ಎಂತು ಬೆಳೆಸಲಾದೀತು? ಆದುದರಿಂದ ಅರ್ಥಕ್ಕಾಗಿ ಮಾಡುವ ಹಿಂಸೆಯೂ ಧರ್ಮವೇ ಆಗುವುದು. ಆಪತ್ತಿನಲ್ಲಿ ಹಿಂಸೆ ಮಾಡೆನೆಂದರೆ ಅನರ್ಥವೇ ಆಗುವುದು.

ಯೂಪವನ್ನು ಛೇದಿಸಿತರುವವರು, ಪಶುವನ್ನು (ಪಿಷ್ಟಪಶುವೇ ಆಗಲಿ) ಹಿಂಸಿಸಿ ವಪೆಯನ್ನು ತೆಗೆವರು, ವಪೆಯಿಂದ ಅಗ್ನಿಯಲ್ಲಿ ಆಹುತಿಯನ್ನೀವರು. ಎಲ್ಲವೂ ಹಿಂಸೆಯೇ ಎಂದು ಯಜ್ಞವನ್ನು ಬಿಡುವರುಂಟೆ? ಮೋಕ್ಷಾಖ್ಯ ಮಹಾ ಪ್ರಯೋಜನಕ್ಕಾಗಿ, ಸ್ವಲ್ಪ ಹಿಂಸೆಯನ್ನು ಸಹಿಸುವರು. ಅಂತೆಯೇ ರಾಜನು ಸ್ವಲ್ಪ ಹಿಂಸೆಯಿಂದ ಪ್ರಜಾಧನವನ್ನು ಕಸಿದರೆ ತಪ್ಪಲ್ಲ, ಆಪತ್ತು ತೀರಿದ ಮೇಲೆ ಹಿಂದಿರುಗಿಸಿ ಕೊಡದಿದ್ದರೆ, ಅಥವಾ ಸತ್ಕಾರಾದಿ ಪ್ರತಿನಿಧಿಯನ್ನು ಕೊಡದಿದ್ದರೆ ಮಾತ್ರ ತಪ್ಪಾಗುವುದು. ಧರ್ಮರಾಜ! ಈಗ ನಾನು ಹೇಳಿರುವುದು ಕೇವಲ ಆಪದ್ಧರ್ಮವೆಂದು ತಿಳಿ! ವಿತ್ತಕ್ಕಾಗಿ ಕಾದಾಡುವರನ್ನು ಪಶುಗಳೆಂದು ತಿಳಿ! ವಿತ್ತವಲ್ಲ ಮುಖ್ಯವಾದುದು. ಧರ್ಮವೇ ಮುಖ್ಯವು. ಧರ್ಮಕ್ಕೆ ಆಪತ್ತು ಬಂದಾಗ, ವಿತ್ತವನ್ನಾರ್ಜಿಸಿ, ಧರ್ಮವನ್ನುಳಿಸು! ಧನವಂತನಿಂದ ಧರ್ಮಕಾಮಗಳು ಸಂಪಾದ್ಯವಾಗಿವೆ. ಧನಹೀನನಿಗೆ ಧರ್ಮವೆಲ್ಲಿ? ಕಾಮವಂತೂ ಇಲ್ಲವೇ ಇಲ್ಲ. ಧನದಿಂದ ಧರ್ಮವನ್ನಾರ್ಜಿಸು! ಧರ್ಮದಿಂದ ಮೋಕ್ಷ ಸುಖವೂ ಕರತಲಾಮಲಕವಾಗುವುದು.'

ರಾಜಧರ್ಮ ಮುಗಿದುದು

# ಆಪದ್ಧರ್ಮ

## ೧. ಪಲಿತ ರೋಮಶ ಸಂವಾದ

ಶ್ರೀ ವೈಶಂಪಾಯನರ್ಷಿಯು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಧರ್ಮರಾಜನು ಭೀಷ್ಮನಿಂದ ರಾಜಧರ್ಮವನ್ನು ತಿಳಿದು ಆಪದ್ಧರ್ಮವನ್ನು ಕೇಳಲಿಚ್ಛಿಸಿ, ಇಂತೆಂದನು:

'ಪಿತಾಮಹ ! ರಾಜನು ಕ್ಷೀಣವಿತ್ತನಾಗುವನು. ಬಂಧುಕ್ಷಯ ಭಯವು ಪೀಡಿಸುವುದು. ದುರ್ಗಾದಿ ಸ್ಥಲದಿಂದ ಹೊರಬಂದು ಹೋರಾಡಲು ಅಸಮರ್ಥನಾಗಿರುವನು. ಅಮಾತ್ಯರು ದ್ರವ್ಯಾಶೆಯಿಂದ ಶತ್ರುವಶರಾಗುವರು. ಮಂತ್ರವು ಬಯಲಾಗುವುದು. ಮಿತ್ರರು ನಿರ್ಧನನೆಂದು ಕೈಬಿಡುವರು. ಶತ್ರುಗಳು ಮುತ್ತಿರುವರು. ಅಂತಹ ಆಪತ್ತಿನಲ್ಲಿ ಏನು ಮಾಡಿದರೆ ಒಳಿತಾಗುವುದು ?' ಎಂದನು.

ಭೀಷ್ಮನು 'ರಾಜನ್ ! ಧರ್ಮಾರ್ಥಕುಶಲನಾದ ರಾಜನು ಮೊದಲು ಸಂಧಿ ಮಾಡಿಕೋಬೇಕು. ಶತ್ರುಕರಗತವಾದ ಗ್ರಾಮಾದಿಗಳನ್ನು ಬಿಡಿಸಿಕೊಂಡು, ಮೆಲ್ಲನೆ ಆಳಬೇಕು. ಶತ್ರುವು ದುಷ್ಟನಾದರೆ, ಕೆಲಗ್ರಾಮಗಳನ್ನು ಬಿಟ್ಟುಕೊಟ್ಟಾದರೂ ಸಂಧಿಯನ್ನೇ ಮಾಡಿಕೋಬೇಕು. ದುಷ್ಟತರನಾದರೆ ರಾಜಧಾನಿಯನ್ನು ಬಿಟ್ಟು ದೂರ ಸರಿದು, ಸಮಯವರಿತು ಭೇದ ದಂಡಗಳಿಂದ ರಾಜ್ಯವನ್ನು ಮತ್ತೆ ಪಡೆಯಬೇಕು. ಅತಿದುಷ್ಟನಾದರೆ ತಾನು ಉಳಿದುಕೊಂಡು ಪಾರಾಗಬೇಕು. ಅಂತಃಪುರವು ಶತ್ರು ಕರಗತವಾದಾಗ, ಅವರೋಧ ಜನರಿಂದ ಪಾರಾಗಬೇಕು. ಬೇಗನೆ ಸಂಧಿ ಮಾಡಿಕೊಂಡು ಉಳಿಯಬೇಕು. ಅದು ಸಾಧ್ಯವಾಗದಿದ್ದರೆ, ರಣವನ್ನಿತ್ತು ಕಾದಿ ಸಾಯಬೇಕು. ಒಂದು ವೇಳೆ ಅನುರಕ್ತರು, ಹೃಷ್ಟರು, ಸ್ವಾಮಿಭಕ್ತರು ಆದ ಸೈನಿಕರು ಕೆಲವರೇ ಸಾಕು, ರಾಜನನ್ನು ಸಾಯದಂತೆ ಕಾಪಾಡಬಲ್ಲರು ; ಆಗ ಅವನು ಗೆಲ್ಲಬಹುದು. ಯುದ್ಧ ಮರಣವು ಸ್ವರ್ಗ ಸಂಪಾದಕವಾಗಿದೆ. ಮೃದುವಚನದಿಂದ ಸಂಧಿಯು ಸಾಧಿಸುವಂತಿದ್ದರೆ, ಯುದ್ಧವನ್ನು ಬಿಡಬೇಕು.

ಧರ್ಮವು ಕೆಟ್ಟು, ಜನರು ಕಳ್ಳಕಾಕರಂತಾದಾಗ ವಿಪ್ರನು ಏನು ಮಾಡಿಯಾದರೂ ಜೀವಿಸಿದರೆ ತಪ್ಪಲ್ಲ. ಜಗತೀತಲವೆಲ್ಲವು ಬ್ರಾಹ್ಮಣ ಸ್ವತ್ವವೆನಿಸಿದೆ. ರಾಜನು ಇದನ್ನರಿತು, ಅಸಾಧು ಜನರಿಂದ ಧನವನ್ನು ಕಸಿದು, ಸಾಧುಜನರಿಗೆ ಕೊಡಬೇಕು. ತಾನು ಆ ಧನದಲ್ಲಿ ಸ್ವಲ್ಪವನ್ನೂ ಮುಟ್ಟದೆ, ಪ್ರಜರ ಕೋಪಕ್ಕೆ ಗುರಿಯಾಗದೆ, ಲೋಭಿ ಧನವನ್ನು ಮಾತ್ರ ತೆಗೆದು ವಿಪ್ರಾದಿ ಸಾಧು ಜನರಿಗೆ ಕೊಡಬೇಕು. ರಾಷ್ಟ್ರದ್ವಯಗಳಲ್ಲಿರುವ ಕದರ್ಯರನ್ನು ದಂಡಿಸಿ ಅವರ ಧನದಿಂದ ಕೋಶವನ್ನು ಬೆಳೆಸಬೇಕು.

ರಾಜನು ರೋಷಾಸೂಯಾವಶರಾಗಿ ನುಡಿವ ದುಷ್ಟರ ಮಾತನ್ನು ನಂಬಿ ನಡೆಯಬಾರದು. ಸುಜನರಾದರೆ ಎಂದಿಗೂ ಪರದೋಷಗಳನ್ನು ಎತ್ತಿ ಹಿಡಿಯುವುದಿಲ್ಲ.

ಗರ್ವಿತನಾಗಿ ಉತ್ಪಥದಲ್ಲಿ ನಡೆವ ಗುರುವಿನನ್ನಾದರೂ ಶಾಸಿಸಿ, ಧರ್ಮದಲ್ಲಿ ನಡೆಸಬೇಕು. ತಮ್ಮನೆಂಬ ಪಕ್ಷಪಾತವನ್ನು ಬಿಟ್ಟು, ಲಿಖಿತನ ಕೈಕಡಿಸಿದ ಶಂಖಿನ ಧರ್ಮನಿಷ್ಠುರತೆಯನ್ನು ವಿಚಾರಿಸಿ ತಿಳಿ! ವೇದಗಳಿಂದಲು, ಮನ್ವಾದಿ ಸ್ಮೃತಿಗಳಿಂದಲು ಮತ್ತು ತನ್ನ ಮನಃಸಾಕ್ಷಿಯಿಂದಲು, ಧರ್ಮವನ್ನು ತಿಳಿದು ನಡೆಯಬೇಕು. ಧರ್ಮ ರಹಸ್ಯವು ಗಹನವಾಗಿದೆ. ಸಜ್ಜನರು ನಡೆದ ಮಾರ್ಗದಲ್ಲಿ ನಡೆಯುವವನಿಗೆ ಧರ್ಮಹಾನಿ ಇಲ್ಲ. ಹಿಂದಿನ ರಾಜರ್ಷಿಗಳು ಹಾಗೆಯೇ ನಡೆದಿರುವರು. ಧರ್ಮರಾಜ! ನೀನೂ ಹಾಗೆಯೇ ನಡೆ!

ಧರ್ಮಜ! ಕೋಶವಿಲ್ಲದವನಿಗೆ ಬಲವಿಲ್ಲ. ಅಬಲನಿಗೆ ಶ್ರೇಯಸ್ಸಿಲ್ಲ. ರಾಜ್ಯವೂ ಇಲ್ಲ ಆದುದರಿಂದ ಕೋಶವೃದ್ಧಿಯಲ್ಲಿ ಜಾಗ್ರತನಾಗಿರು! ದೊಡ್ಡವನಾಗಿ ಬಾಳಿದವನಿಗೆ ದಾರಿದ್ರ್ಯವು ಮರಣಸಮವೆನಿಸಿದೆ. ದರಿದ್ರನು ಭೃತ್ಯರನ್ನು ತೃಪ್ತಿಪಡಿಸಲಾರದೆ, ಅವಮಾನಿತನಾಗುವನು. ಅವನಿಗೆ ಗೌರವವಿಲ್ಲ. ಸಂಪತ್ತು ಅತ್ಯದ್ಭುತ ಮಹಿಮಾನ್ವಿತವಾಗಿದೆ. ಸ್ತ್ರೀ ಜನರ ಮರ್ಯಾದೆಯನ್ನು ವಸ್ತ್ರದಂತೆ, ಧನ ಸಮೃದ್ಧಿಯು ನರನ ಅವಗುಣಗಳನ್ನು ಮುಚ್ಚುತ್ತದೆ. ಅಂತಹ ಧನವಿಲ್ಲದೆ, ಕೇವಲ ದರಿದ್ರನಾದ ರಾಜನು ಅರಣ್ಯದಲ್ಲಿರುವುದು ಲೇಸು. ಅಲ್ಲಿ ಮೃಗಗಳಿಂದ ಕೂಡಿ ತಿರುಗುತ್ತಾ, ಸಮರ್ಯಾದರಾದ ದಸ್ಯುಜನರಿಂದ ಸಹಾಯ ಪಡೆದು ಜೀವಿಸುತ್ತಾ, ನಿಶ್ಚಿಂತನಾಗಿರಬಹುದು.

ದಸ್ಯುಗಳಿಗೂ ಧರ್ಮವಿದೆ. ಅದನ್ನು ಮೀರದೆ ನಡೆದ ದಸ್ಯು ಜನರ ಸಹಾಯದಿಂದ ರಾಜನು ಮತ್ತೆ ತನ್ನ ರಾಜ್ಯವನ್ನು ತಿರುಗಿ ಪಡೆಯಬಹುದು. ದಯಾ ಧರ್ಮರಹಿತನನ್ನು ನೋಡಿ, ಕಳ್ಳರೂ ಹೆದರಿ ತ್ಯಜಿಸುವರು. ಇಹಕ್ಕಂಜದೆ, ಪರಕ್ಕೆ ವಿಶ್ವಾಸವಿಡದೆ ಜೀವಿಸುವ ನಾಸ್ತಿಕನನ್ನು ಕ್ರೂರ ಕರ್ಮರಾದ ದಸ್ಯು ಜನರು ನಂಬದೆ ಕೊಂದುಬಿಡುವರು. ಪರದಾರಾಮರ್ಶನ, ಕೃತಘ್ನತೆ, ಬ್ರಾಹ್ಮಣ ವಿತ್ತಾಪಹರಣ – ನಿಶ್ಶೇಷಹರಣ, ಕನ್ಯಾಪಹಾರ, ಗ್ರಾಮಾಧಿಕಾರ, ವಿವಾಹ ವಿಘ್ನಕರಣ, ಮುಂತಾದವು ಕಳ್ಳರಿಗೂ ವಿಗರ್ಹಿತವಾಗಿವೆ.

ಧರ್ಮೋಪದೇಶವು ಪರೋಕ್ಷ ಫಲಕವಾಗಿದೆ. ವೃಥಾ ಧರ್ಮಾ-ಧರ್ಮ ವಿಚಾರವನ್ನು ಬಿಟ್ಟು, ಆಪತ್ತಿನಲ್ಲಿ ಪಾರಾಗುವ ಉಪಾಯವನ್ನು ಆಲೋಚಿಸಬೇಕು. ಆ ಮೇಲೆ ವಿದ್ಯಾ, ಕುಲ, ಮಿತ್ರ, ಬುದ್ಧಿ, ಧನ, ತಪಃ, ಸೈನ್ಯ, ವೀರ್ಯ, ಮಂತ್ರಿ, ದೈವ ಬಲಗಳೆಂಬ ದಶವಿಧ ಬಲಗಳನ್ನು ಸಂಪಾದಿಸಿ, ಜಯಿಸಿ, ಬೇಕಾದಷ್ಟು ಧರ್ಮವನ್ನು ನಡೆಸಲಾದೀತು! ಶ್ರೀಸಮೃದ್ಧಿಯೇ ಶ್ರೇಯೋ ಮೂಲವಾಗಿದೆ. ದರಿದ್ರನಂತಹ ಪತಿತನಿಲ್ಲವೆಂಬರು. ಬಲವಂತನು ಧರ್ಮವನ್ನು ನಡೆಸಬಲ್ಲವನು. ಬಲಹೀನನು ಕೇವಲ ಉಪದೇಶಿಸಬಲ್ಲನು. ಬಲವು ಧನಾಧೀನವಾಗಿದೆ. ಧರ್ಮಲತೆಯು ಬಲರ ಸಾಲವನ್ನು ಆಶ್ರಯಿಸಿ ನಿಂತಿದೆ. ವೇದವನ್ನೋದಿ, ವಿಪ್ರರನ್ನು ಸೇವಿಸಿ, ರಾಜನೇ ತಾನು ಪಡೆದ ಧನದಿಂದ ಧರ್ಮವನ್ನು ನಡೆಸಿ, ಸುಖಿಸಬಲ್ಲನು. ಆಪತ್ಕಾಲದಲ್ಲಿ ಧನವನ್ನು ಗಳಿಸಲು ಮಾಡಿದ ಪೀಡಾದಿಗಳನ್ನು ಯಜ್ಞದಾನರಂಜನಗಳಿಂದ ತೊಳೆದು, ನಿಷ್ಪಾಪನಾಗಿ ರಾಜನು ಪ್ರಜಾಪ್ರೀತಿಯನ್ನೇ ಪಡೆಯುವನು. ಹಿಂದೆ ಕಾಯವ್ಯನೆಂಬ ನಿಷಾದನಿದ್ದನು. ಅವನು ಪಾರಿಯಾತ್ರ ಪರ್ವತ ಪರಿಸರದಲ್ಲಿದ್ದನು. ಧರ್ಮಜ್ಞನು, ವೃಥಾಹಿಂಸಾದೂರನೂ, ಆದ ಅವನನ್ನು ಬಹು ಜನ

ಕಳ್ಳರು ತಮ್ಮ ನಾಯಕನಾಗಿರೆಂದು ಬೇಡಿದರು. ಅವನು ಅವರನ್ನು ನೋಡಿ, 'ಸ್ತ್ರೀ ಬಾಲವೃದ್ಧರನ್ನು ಕೊಲ್ಲಬಾರದು. ಸತ್ಯ-ಧರ್ಮಗಳಿಗೆ ಹಾನಿಬಂದಾಗ, ಪ್ರಾಣ ಪಣವಿಟ್ಟು ಧರ್ಮವನ್ನು ಉಳಿಸಬೇಕು. ಸ್ತ್ರೀಪಶುಗಳನ್ನು ಹಿಂಸಿಸಬಾರದು. ಯಾರದೇ ಆಗಲಿ ಧನವನ್ನು ನಿಶ್ಶೇಷವಾಗಿ ಅಪಹರಿಸಬಾರದು. ಶಿಷ್ಟಜನರನ್ನು ಬಡ್ಡಿ ಹೇರಿ ರಕ್ತ ಹೀರುವ ಜಿಗಣೆಗಳಂತೆ, ಧನವನ್ನೆಳೆದು ಪೀಡಿಸುವ ಕದರ್ಯರನ್ನು ಮಾತ್ರ ಮುತ್ತಿ ಧನವನ್ನು ತರಬೇಕು. ತಂದ ಧನದ ಅರ್ಧದಷ್ಟು ದೇವ ದ್ವಿಜಸುಜನರಿಗೆ ನೀಡಬೇಕು. ಇಂತಾದರೆ ನಾನು ನಿಮಗೆ ನಾಯಕನಾಗಿರುವೆನು' ಎಂದನು. ಚೋರರು ಅಂತೆಯೇ ನಡೆದು ಪಾಪದೂರರಾಗುವುದಲ್ಲದೆ ಸುಖವಾಗಿದ್ದರು.

ಇಂತಹ ಮರ್ಯಾದೆಯಿಲ್ಲದ ದಸ್ಯುಜನರಿಂದ ಸರ್ವಸ್ವವನ್ನೂ ಹರಿಸಲು ರಾಜನಿಗೆ ಅಧಿಕಾರವಿದೆ. ಭೂಮಿಯಲ್ಲಿ ಜ್ಞಾನವು ಬ್ರಾಹ್ಮಣಾಧೀನವಾಗಿರುವಂತೆ, ಧನವು ಕ್ಷತ್ರಿಯಾಧೀನವಾಗಿದೆ. ಅಭೋಗ್ಯವಾದ ಜಾಲಿಬೇವುಗಳನ್ನು ಕಡಿದು, ಉರಿಸಿ, ಭೋಗ್ಯವಾದ ವ್ರೀಹ್ಯಾದಿಗಳನ್ನು ಬೇಯಿಸಿ ತಯಾರಿಸುವಂತೆ. ಲೋಭಿ ದುಷ್ಟರ ಧನವನ್ನು ಕಸಿದು ರಾಜನು ಸುಜನರನ್ನು ಪೋಷಿಸಬೇಕು. ದೇವರಿಲ್ಲ ; ಪಿತೃಪೂಜೆಯಿಲ್ಲ ; ಅತಿಥಿ ಸತ್ಕಾರ ವಿಲ್ಲ; ತಾನೂ ಉಣ್ಣುವುದಿಲ್ಲ ; ಇಂತಹ ಲೋಭಿಯ ಧನವು ನಿರುಪಯೋಗಿ ಯಾಗಿರುವುದಕಿಂತಲೂ, ಸುಜನ ಭೋಗಕ್ಕಾಗಿ ವಿನಿಯುಕ್ತವಾದರೆ ಒಳಿತಲ್ಲವೇ? ಧರ್ಮಜ್ಞಾನವು ಸೂಕ್ಷ್ಮವಾಗಿದೆ. ಚೆನ್ನಾಗಿ ವಿಚಾರಿಸಿ ನಡೆದ ರಾಜನು ಸುಖಿಸುವನು.

ಹಿಂದೆ ಒಂದು ಸರೋವರದಲ್ಲಿ ದೀರ್ಘದರ್ಶಿ ಪ್ರಾಪ್ತಕಾಲಜ್ಞ, ದೀರ್ಘಸೂತ್ರರೆಂಬ ಮೀನುಗಳು ನಿವಸಿಸುತ್ತಿದ್ದವು. ಸರೋವರದಲ್ಲಿ ನೀರು ಸ್ವಲ್ಪವಾಗಿರುವ ಕಾಲವನ್ನು ನೋಡಿ, ಬೆಸ್ತರು ಸಣ್ಣ ಕಾಲುವೆಗಳನ್ನು ತೋಡಿ, ಆ ನೀರನ್ನು ತಗ್ಗಿಗೆ ಹರಿಸಿದರು. ಸರೋವರವು ಬರಿದಾಗುತ್ತಾ ಬಂತು; ಆಗ ದೀರ್ಘದರ್ಶಿಯು 'ಮಿತ್ರರೇ! ಕಾಲುವೆಗಳು ಬತ್ತಿಹೋಗುವಮುನ್ನ ಬೇರೆಡೆಗೆ ಹೋಗೋಣ! ಇಲ್ಲದಿರೆ, ಬೆಸ್ತರ ಬಲೆಗೆ ಸಿಕ್ಕು ಸಾಯಬೇಕಾದೀತು!' ಎಂದನು. ಪ್ರಾಪ್ತಕಾಲಜ್ಞನು 'ಆಗಲಿ! ಅಂತಹ ಆಪತ್ತು ಬಂದಾಗ ಆಲೋಚಿಸಬಹುದು' ಎಂದನು. ದೀರ್ಘಸೂತ್ರನು ನಿರ್ಲಕ್ಷಿಸಿ ಸುಮ್ಮನಿದ್ದನು. ಜಾಲಗಾರರು ಬಲೆ ಬೀಸಲು ಬರುವ ಮೊದಲೇ ದೀರ್ಘದರ್ಶಿಯು ಕಾಲುವೆಯ ದ್ವಾರಾ, ಕೆಳಗಿನ ಕೆರೆಗೆ ಹೋಗಿ ಸೇರಿಬಿಟ್ಟಿದ್ದನು. ಪ್ರಾಪ್ತಕಾಲಜ್ಞನು ಬಲೆಯನ್ನು ಕಂಡು ಹೆದರಿ, ತತ್‌ಕ್ಷಣವೇ ಬುದ್ಧಿಯನ್ನು ಉಪಯೋಗಿಸಿ, ಬಲೆಯಲ್ಲಿ ಬಿದ್ದು ಒದ್ದಾಡುವ ಮೀನುಗಳ ಮಧ್ಯದಲ್ಲಿ, ಬಲೆಯನ್ನು ಸುಮ್ಮನೆ ಕಚ್ಚಿಕೊಂಡು ಜೋತಾಡುತ್ತಿದ್ದನು. ಬೆಸ್ತರು ಅವನೂ ಸಿಕ್ಕಿರುವನೆಂದು ತಿಳಿದು, ಬಲೆಯನ್ನು ತೊಳೆದರು. ಆಗ ಪ್ರಾಪ್ತಕಾಲಜ್ಞನು ಮೆಲ್ಲನೆ ನೀರಿಗೆ ಜಾರಿ, ಉಳಿದನು. ದೀರ್ಘಸೂತ್ರನು ಬಲೆಗೆ ಸಿಕ್ಕುಸತ್ತನು. ಧರ್ಮರಾಜ! ಮುಂಬರುವ ವಿಪತ್ತಿಗೆ ಮೊದಲೇ ಪ್ರತಿಕ್ರಿಯೆಯನ್ನಾಚರಿಸುವ ಅನಾಗತವಿಧಾತನು ಸುಖಿಸುವನು. ವಿಪತ್ತೊದಗಿದಾಗ ಬುದ್ಧಿಶಕ್ತಿಯನ್ನು ಬಳಸಿ ಪಾರಾಗಬಹುದು ಪ್ರಾಪ್ತಕಾಲಜ್ಞನು. ಆದರೆ ದೀರ್ಘಸೂತ್ರನು ವಿಪತ್ತೆಂಬ ಹುಲಿಯ ಬಾಯಿಗೆ ತುತ್ತಾಗಿ ಸಾಯುವನು.'

ಧರ್ಮರಾಜನು, 'ತಾತ ! ಬಹುಶತ್ರುಗಳು ಕಲೆತು, ನಿರ್ಮೂಲಿಸ ಬಂದಾಗ ಮನುಜನೆಂತು ಪಾರಾಗಬೇಕು ? ಶತ್ರು-ಮಿತ್ರ , ಮಿತ್ರ - ಶತ್ರುಗಳಾಗಬಹುದು. ಆಗ ರಾಜನೆಂತು ವರ್ತಿಸಲಹುದು ?' ಎಂದು ಕೇಳಿದನು.

ಭೀಷ್ಮನಿಂತೆಂದನು : 'ಪ್ರಾಕೃತ ಮಿತ್ರ - ಶತ್ರುಗಳು ಶಾಶ್ವತರಲ್ಲ. ಕಾಲವನ್ನು, ಪ್ರಯೋಜನವನ್ನು ನೋಡಿ, ಅವರು ಶತ್ರುತ್ವ, ಮಿತ್ರತ್ವಗಳನ್ನು ತೋರುವರು. ದೇಶ ಕಾಲಗಳನ್ನು, ಕಾರ್ಯಾ - ಕಾರ್ಯಗಳನ್ನು ವಿಚಾರಿಸಿ, ತಕ್ಕಂತೆ ನಡೆಯಬೇಕು. ಪ್ರಾಣ, ರಕ್ಷಣೆ, ಧನ ರಕ್ಷಣೆ ಮಾಡಲೆಣಿಸುವವನು ಶತ್ರುಗಳಿಂದ ಕೂಡ ತಾತ್ಕಾಲಿಕ ಸಂಧಿ ಮಾಡಿ ಕೊಳ್ಳಬೇಕಾಗುವುದು.

ಈ ವಿಷಯದಲ್ಲಿ ಮಾರ್ಜಾಲ ಮೂಷಿಕ ಸಂವಾದವನ್ನು ಹೇಳುವೆನು, ಕೇಳು ! ಮಹಾರಣ್ಯದಲ್ಲಿ ಆಲದ ಮರದ ಅಡಿಯಲ್ಲಿ ಶತದ್ವಾರವಾದ ಬಿಲವನ್ನು ಮನೆಮಾಡಿ ಕೊಂಡು ಪಲಿತನೆಂಬ ಮೂಷಿಕವಿತ್ತು. ಅದೇ ಗಿಡದ ಕೊಂಬೆಯಲ್ಲಿ ಲೋಮಶನೆಂಬ ಬೆಕ್ಕೂ ಇತ್ತು. ಒಂದು ದಿನ ಬೇಟೆಗಾರನೊಬ್ಬ ಬಂದು ಬಲೆವೊಡ್ಡಿ ಹೋದನು. ಆ ದಿನ ರಾತ್ರಿ ಬೆಕ್ಕೂ ಬಲೆಗೆ ಸಿಕ್ಕು ಒದ್ದಾಡುತ್ತಿತ್ತು. ಅದನ್ನು ಕಂಡು ಪಲಿತನು ನಿರ್ಭಯನಾಗಿ ಹೊರ ಬಂದು, ಬಲೆಯಲ್ಲಿದ್ದ ಆಹಾರವನ್ನು ತಿನ್ನುತ್ತಿದ್ದನು. ಆಗ ಒಂದು ಮುಂಗಿಯು, ಅಲ್ಲಿಗೆ ಬಂದು, ಇಲಿಯನ್ನು ಹಿಡಿಯಲು ಹವಣಿಸಿತು. ಅದೇ ಸಮಯದಲ್ಲಿ ಚಂದ್ರಕನೆಂಬ ಗೂಬೆಯೂ ಗಿಡದ ಮೇಲೆ ಬಂದು ಕೂತಿತು. ಹರಿಣವೆಂಬ ಮುಂಗಿಯು ಗೂಬೆಯು ತೊಲಗಿದ ಮೇಲೆ ಇಲಿಯನ್ನು ಹಿಡಿಯಲೆಣಿಸಿತು. ಗೂಬೆಯು ಮುಂಗಿಯ ಗಮನವನ್ನು ಪ್ರತೀಕ್ಷಿಸಿ, ಇಲಿಯ ಮೇಲೆ ಹಾರಬೇಕೆಂದಿತು. ಪಲಿತನು ಉಭಯ ಶತ್ರುಗಳ ಮಧ್ಯದಿ ಸಿಕ್ಕನು. ಬೆಕ್ಕು, ಮುಂಗಿ, ಗೂಬೆಗಳಿಂದ ಉಳಿವ ಬಗೆ ಎಂತೆಂಬ ಚಿಂತೆಗೀಡಾಗಿ, 'ಬಯಲಿಗೆ ಬಂದರೆ ಮುಂಗಿಯು ನುಂಗುವುದು. ಇಲ್ಲಿಯೇ ನಿಂತರೆ ಗೂಬೆಯು ಹಾರಿಸಿಕೊಂಡು ಹೋಗುವುದು. ಇನ್ನು ಬೆಕ್ಕು ಚಿಕ್ಕದ ಬಲೆಯಲ್ಲಿ ಸಿಕ್ಕು ಬಿದ್ದಿರುವುದರಿಂದ, ನನ್ನನ್ನು ಏನೂ ಮಾಡಲಾರದೆ, ಸುಮ್ಮನಿದೆ. ಈಗ ನನಗೆ ಜೀವನವನ್ನು ಉಳಿಸಿಕೊಳ್ಳಲು ಒಂದೇ ಮಾರ್ಗವಿದೆ. ರೋಮಕನಿಗೆ ಶರಣಾಗಿ, ಅವನನ್ನು ಬಲೆಯಿಂದ ಬಿಡಿಸುವ ಆಶೆ ತೋರಿ, ಗೂಬೆ ಮುಂಗಿಗಳಿಂದ ಪಾರಾಗಬೇಕು. ಧೃತಿಗೆಡದೆ, ಮೆಲ್ಲನೆ ಕೆಲಸ ಮಾಡಬೇಕು. ಮಾರ್ಜಾರನೂ ಪ್ರಾಣ ಸಂಶಯದಲ್ಲಿರುವನು. ನಾನೂ ಪ್ರಾಣಸಂಶಯದಲ್ಲಿರುವೆನು. ಸಮಾನ ದುಃಖದಲ್ಲಿ ಸ್ನೇಹವು ಬೇಗನೆ ಸಿದ್ಧಿಸುವುದು. ರೋಮಶನಿಂದ ನನಗಿ ಈಗ ಭಯವಿಲ್ಲ. ಅವನು ನನ್ನ ಜನ್ಮಶತ್ರುವಾದರೂ ಆಪತ್ತಿನಲ್ಲಿ ಶರಣ್ಯನಾಗಿರುವನು. ಅಸಮರ್ಥನು, ಅಪಂಡಿತನು ಆದ ಮಿತ್ರನಕಿಂತಲೂ, ಸಮರ್ಥನು, ಪಂಡಿತನು ಆದ ಶತ್ರುವೇ ಸಮಾಶ್ರಯಣೀಯನು' ಎಂದು ಚಿಂತಿಸಿತು.

ಪಲಿತನು ರೋಮಶನನ್ನು ಸೇರಿ, 'ಮಿತ್ರ ! ಕೇಳೆನ್ನ ಮಾತನ್ನು. ಅಭಯವನ್ನು ಬೇಡಿ ಬಂದಿರುವೆನು. ನಿನ್ನಂತೆ ನಾನೂ ಪ್ರಾಣಸಂಕಟಕ್ಕೀಡಾಗಿರುವೆನು. ನನ್ನನ್ನು ಕೊಲ್ಲದೆ, ಹತ್ತಿರವಿಟ್ಟು, ಮುಂಗಿ ಗೂಬೆಗಳಿಂದ ಕಾಪಾಡು ! ನಾನು ನಿನ್ನ ಉಪಕೃತಿಯನ್ನು

ಮರೆಯದೆ, ಬಲೆಯ ಬಂಧನವನ್ನು ಕಡಿದು, ನಿನ್ನನ್ನು ಚಂಡಾಲನ ಕೈಸಿಕ್ಕು ಸಾಯದಂತೆ ಉಳಿಸುವೆನು. ನಮ್ಮಿಬ್ಬರಿಗೂ ಹಿತವಾಗುವಂತೆ ಹೇಳುವ ನನ್ನ ಮಾತನ್ನು ನಂಬು! ನೀನು ಗಿಡದ ಮೇಲೆ, ನಾನು ಗಿಡದ ಬುಡದಲ್ಲಿ; ಇಂತು ನಾವಿಬ್ಬರು ಸಮಾನದೇಶವಾಸಿಗಳಾಗಿ ಬಂಧುಗಳೆನಿಸಿರುವೆವು. ಮೈತ್ರಿಯು ಸಾಪ್ತಪದೀನವಾಗಿದೆ! ಪಾಶವನ್ನು ನೀನಾಗಿ ಕಡಿಯಲಾರೆ! ಶತ್ರುವೆಂದು ನನ್ನನ್ನು ಕಡೆಗಣಿಸಬೇಡ! ನೀನು ನನ್ನನ್ನು ಬದುಕಿಸು! ನಾನು ನಿನ್ನನ್ನು ಬದುಕಿಸುವೆನು' ಎಂದನು. ಲೋಮಶನು ಆ ಮಾತಿನ ಸತ್ಯತೆಯನ್ನು ತಿಳಿದು, ಸಂತೋಷದಿಂದ ಇಲಿಯನ್ನು ತನ್ನ ಒಡಲಲ್ಲಿಟ್ಟು, ಇಲಿರಾಜ! ನಿನಗೆ ಶ್ರೇಯವಾಗಲಿ! ನಿನ್ನನ್ನು ಗೂಬೆಗೆ ಸಿಗದೆ ಮುಂಗಿಯ ಬಾಯ ತುತ್ತಾಗದೆ, ನಿಂತು ಕಾಪಾಡುವೆನು. ಆದರೆ ನನ್ನನ್ನು ನಂಬಿಸಿ ಚಂಡಾಲನಿಗೊಪ್ಪಿಸಬೇಡ! ಪಾಶಗಳನ್ನು ಕಡಿದು ನನ್ನನ್ನು ಬಿಡಿಸು! ನಾನು ನನ್ನ ಮಿತ್ರಬಾಂಧವರು ಜೀವವಿರುವವರೆಗೂ ನಿನಗೆ ಋಣಿಗಳಾಗಿರುವೆವು' ಎಂದನು.

ಮಾರ್ಜಾಲದ ಮಡಿಲಲ್ಲಿ ಮಿಸುಕದೆ ಮಲಗಿದ್ದ ಮೂಷಿಕವನ್ನು ನೋಡಿ ಮುಂಗಿಯು ಗೂಬೆಯು ಬೆರಗಾದವು. ಬಲವಂತರಾದರೂ, ಅವರಿಬ್ಬರಿಗೂ ಮೂಷಿಕವನ್ನು ಕೆಣಕಿ ಹಿಡಿಯುವ ಧೈರ್ಯವು ಬರಲಿಲ್ಲ. ಸ್ವಲ್ಪ ಹೊತ್ತು ನೋಡಿ ನಿರಾಶರಾದ ಚಂದ್ರಕ ಹರಿಣರು ಅಲ್ಲಿಂದ ದೂರ ಸರಿದರು. ಪಲಿತನು ರೋಮಶನ ಪಾಶಗಳನ್ನು ಕಡಿಯಲು ಆರಂಭಿಸಿ, ನಿದಾನವಾಗಿ ಸಾಗುವದನ್ನು ಉಪಲಕ್ಷಿಸಿ, ಲೋಮಶನು 'ಮಿತ್ರ ! ಏಕೆ ಆಲಸ್ಯಮಾಡುತ್ತಿರುವೆ! ನಿನ್ನನ್ನು ಶತ್ರುಗಳಿಂದ ನಾನು ಕಾಪಾಡಲಿಲ್ಲವೇ ? ಬೇಗನೆ ಪಾಶಗಳನ್ನು ಕಡಿ; ನನ್ನನ್ನು ಚಂಡಾಲನಿಗೆ ಸಿಕ್ಕದಂತೆ ಬಿಡಿಸಿ ಕಾಪಾಡು! ಹಿಂದೇನಾದರೂ ಅಪರಾಧವನ್ನು ಮಾಡಿದ್ದರೂ, ಅದನ್ನು ಮರೆತುಬಿಡು' ಎಂದು ತ್ವರೆಪಡಿಸಿದನು.

ಪಲಿತನು 'ಮಿತ್ರ! ಸ್ವಲ್ಪ ತಡೆ! ನಮ್ಮೀರ್ವರ ಮೈತ್ರಿಯು ಸ್ವಾಭಾವಿಕವಲ್ಲ. ಆಪತ್ಸಮಯದಲ್ಲಿ ಮಾಡಿಕೊಂಡ ಮೈತ್ರಿಯನ್ನು ಬಲವಂತನು ಆಪನ್ನಿವೃತ್ತಿಯನ್ನು ಪೊಂದಿ ಗಣಿಸುವುದಿಲ್ಲ. ನಾನೀಗ ಬಲು ಜಾಗರೂಕನಾಗಿರಬೇಕು. ಲೋಕದಲ್ಲಿ ಪ್ರಯೋಜನವನ್ನು ಉಪಲಕ್ಷಿಸಿ ಮಿತ್ರರು, ಶತ್ರುಗಳು ಆಗುವರು. ಶತ್ರುವು ಸ್ವಾಭಾವಿಕನಾದರೂ, ಆಪತ್ತಿನಲ್ಲಿ ಸಿಕ್ಕುಬಿದ್ದಾಗ ಏನೂ ಮಾಡಲಾರನು. ಹಾಗೆಂದು ಆಪತ್ತು ಪಾರಾದ ಮೇಲೂ ಅವನು ಸುಮ್ಮನಿರನು. ಆದುದರಿಂದ ನಿನ್ನನ್ನು ಸಂಪೂರ್ಣವಾಗಿ ನಂಬಲಾಗದು. ಕೇಳು! ನಿನ್ನ ಉಪಕಾರವನ್ನು ಮರೆಯುವ ಕೃತಘ್ನನಲ್ಲ ! ಬರಲಿ ಚಂಡಾಲನು ! ಅವನು ದೂರದಲ್ಲಿರುವಾಗಲೇ ನಿನ್ನ ಪಾಶಗಳನ್ನು ಉಳಿದಿರುವ ಒಂದೆರಡನ್ನೂ- ತುಂಡರಿಸುವೆನು. ಆಗ ನಿನಗೆ ನನ್ನನ್ನು ಕೊಂದು ತಿನ್ನುವ ಚಾಪಲ್ಯ ಹುಟ್ಟಲಾರದು. ಹುಟ್ಟಿದರೂ ಚಂಡಾಲನಿಂದ ಪಾರಾಗಬೇಕೆಂಬ ತ್ವರೆಯಲ್ಲಿ ಅವಕಾಶವು ಸಿಗಲಾರದು' ಎಂದನು.

ಸ್ವಲ್ಪ ಹೊತ್ತಿಗೆ ಬೆಳಗಾಯಿತು. ಕೃಷ್ಣಪಿಂಗಳನು, ಸ್ಥೂಲಶಿಖನು, ಶಂಕುಕರ್ಣನು, ಘೋರದರ್ಶನನು ಆದ ಚಾಂಡಾಲನು ಶಸ್ತ್ರಪಾಣಿಯಾಗಿ ಬರುತ್ತಿದ್ದನು. ಅವನ ಮುಂದೆ ಕೆನ್ನಾಯಿಗಳು ನಾಲಿಗೆ ಚಾಚಿಕೊಂಡು ಓಡುತ್ತಿದ್ದವು. ಯಮದೂತನಂತಿರುವ

ಪರಿಘನಾಮಕ ಬೇಟೆಗಾರರನ್ನು ಕಂಡು ಮಾರ್ಜಾಲಮೂಷಿಕಗಳ ಎದೆಯೊಡೆದವು. ಇಲಿಯು ಪಾಶವನ್ನು ಕಡಿಯಿತು. ಬೆಕ್ಕು ಬದುಕಿದೆ' ನೆಂದು ಚಂಗನೆ ಹಾರಿ, ಗಿಡವನ್ನೇರಿತು. ಇಲಿಯು ಬಿಲವನ್ನು ಹೊಕ್ಕಿತು. ಬೇಟೆಗಾರನು, ಬಲೆಯ ಜಾಲವು ಕಡಿದು ಬಿದ್ದಿರುವುದನ್ನು ಕಂಡು, ನಿರಾಶನಾಗಿ ಹೊರಟುಹೋದನು.

ಲೋಮಶನು ಪಲಿತನ ಬಿಲದ ಮುಂದೆ ಕೂತು 'ಮಿತ್ರ! ಬಾ ಹೊರಗೆ. ನನ್ನಿಂದ ಸ್ನೇಹವನ್ನು ಬೆಳೆಸು! ನಿನ್ನ ಉಪಕಾರವನ್ನು ಎಂದಿಗೂ ಮರೆಯಲಾರನು. ನಾನು ನನ್ನವರು ನಿನಗೆ ದಾಸರಾಗಿರುವೆವು. ನಿನಗೆ ಬೇಕಾದುದನ್ನು ಇತ್ತು ನನ್ನ ಕೃತಜ್ಞತೆಯನ್ನು ತೋರುವೆನು. ಅನುಮಾನಿಸಬೇಡ! ನೀನು ಯುಕ್ತಿವಂತನು. ನಾನು ಬಲವಂತನು. ನಮ್ಮೀರ್ವರ ಬುದ್ಧಿದೇಹಬಲಗಳ ಸಮ್ಮಿಲನವಾಗಲಿ! ನಿನ್ನನ್ನು ಮಂತ್ರಿಯಾಗಿರಿಸಿ ಗೌರವಿಸುವೆನು' ಎಂದನು.

ಪಲಿತನಿಂತೆಂದನು: 'ಲೋಮಶ! ಕೇಳಿದೆ ನಿನ್ನ ಮಾತನ್ನು! ನನ್ನ ಮಾತನ್ನಿಷ್ಟು ಕೇಳು! ಮಿತ್ರ ಶತ್ರು ಸ್ವಭಾವಗಳನ್ನು ತಿಳಿಯದೆ, ವಿಪರೀತ ವರ್ತನನಾಗುವ ಮೂಢನು ಸರ್ವನಾಶವನ್ನು ಹೊಂದುವನು. ಶತ್ರುಗಳು ಮಿತ್ರರೂಪರಾಗಿ ಬರುವರು. ಮಿತ್ರರು ಶತ್ರುರೂಪವಾಗಿ ಬರುವರು. ಸಾಮರ್ಥ್ಯ ಕಾಲ, ದೇಶ ಪ್ರಯೋಜನ ಇವುಗಳಿಂದ ಮಿತ್ರಶತ್ರುಗಳಾಗುವರು. ನೀನೆನಗೆ ಆಪತ್ತಿನಲ್ಲಿ ಮಿತ್ರನಾಗಿದ್ದೆ! ನಿಜ! ಆದರೆ ಈಗ ಹಾಗಲ್ಲ; ನನಗೆ ಆಪತ್ತಿಲ್ಲ; ರಾತ್ರಿ ಎಲ್ಲ ಬಲೆಯಲ್ಲಿ ಬಿದ್ದ ನಿನಗೀಗ ಹಸಿವೆ ಇದೆ. ನಿನ್ನ ಆಹಾರವು ನಾನು, ನನ್ನ ಮಾರಕನು ನೀನು. ಮನಸ್ಸಿನ ಚಪಲತೆಯಿಂದ ಮಾತಾಡುವ ನಿನ್ನ ಮಾತನ್ನು ನಂಬಲಾಗದು. ನಂಬಿ ಹೊರಬಂದರೆ ನೀನು ಕೊಂದುಬಿಡುವೆ! ನೀ ಕೊಲ್ಲದಿದ್ದರೂ ನಿನ್ನವರು ನನ್ನನ್ನು ಕೊಲ್ಲದೆ ಬಿಡರು. ನನ್ನ ಮೇಲಿನ ಆಕಸ್ಮಾತ್ ಪ್ರೀತಿಗೆ ನಿನ್ನ ಹಸಿವೆಯೇ ಕಾರಣವೆಂದು ನಾನು ತಿಳಿಯದಿಲ್ಲ. ಒಡಹುಟ್ಟಿದವರು, ಕೈಹಿಡಿದ ಹೆಂಡತಿ, ಸುತರು ಇವರು ಬಂಧುಗಳೆನಿಸಿ ಹಿತಬಯಸುವರು. ಕಾರ್ಯವಾದ ಮೇಲೆ ಮೈತ್ರಿಯೂ ಮಾಸುವುದು. ಬೆಳಿಗ್ಗೆ ಮಿತ್ರನಾಗಿ ಕಾಪಾಡಿದೆ! ಈಗ ಮಿತ್ರ ವೇಷದಿಂದ ಬಂದ ಶತ್ರುವೇ! ಸಾಕು ನಿನ್ನ ಚಾಪಲ್ಯವನ್ನು ತಿಳಿದೆನು. ಇನ್ನಿಲ್ಲಿರುವುದು ನನಗೆ ಹಿತಕರವಲ್ಲ. ನಿನಗೆ ಒಳಿತಾಗಲಿ! ಹೋಗು! ದಾರಾ ಧನಗಳನ್ನೂ ತ್ಯಜಿಸಿ ಶರೀರವನ್ನು ಉಳಿಸಿಕೊಳ್ಳಬೇಕೆಂದು ಜ್ಞಾನಿಜನರ ನುಡಿ ಇದೆ'

ಆದುದರಿಂದ ಧರ್ಮರಾಜ! ಆಪತ್ತಿಗೆ ಸಿಲುಕಿದ ರಾಜನು ಸಮಾನ ಸಂಕಟದಲ್ಲಿರುವ ಶತ್ರುವನ್ನು ನಂಬಿ ಸಹಾಯ ಪಡೆಯಬಹುದು. ಆದರೆ ಬಲವಂತನಾದ ಶತ್ರುವಿನಿಂದ ಅಪಾಯವಿದ್ದೇ ಇರುತ್ತದೆಂದು ತಿಳಿದು, ಅವನನ್ನು ನಂಬಿಯು, ನಂಬದಂತೆ ನಡೆಯಬೇಕು. ಹೆದರಿಕೆ ಇಲ್ಲದಲ್ಲಿಯೂ ಆಪತ್ತಿದೆ ಎಂಬಂತೆ ಎಚ್ಚವಾಗಿರು! ಕಾಲವನ್ನರಿತು ಸಂಧಿ ವಿಗ್ರಹಗಳನ್ನು ನಡೆಸು! ಮಂತ್ರರಹಸ್ಯವನ್ನು ಚನ್ನಾಗಿ ಕಾಪಾಡು! ವಿಪ್ರವರರಿಂದ ಕೂಡಿ ಆಲೋಚಿಸಿ, ಅವರ ಮಾತಿನಂತೆ ನಡೆ! ವಿಶ್ವಾಸಾವಿಶ್ವಸನೀಯ ವಿಷಯದಲ್ಲಿ ಒಂದು ಕಥೆ ಇದೆ.

ಪೂರ್ವಕಾಲದಲ್ಲಿ ಕಾಂಪಿಲ್ಯವೆಂಬ ನಗರವನ್ನು ಬ್ರಹ್ಮದತ್ತ ಎಂಬ ರಾಜರ್ಷಿಯು ಆಳುತ್ತಿದ್ದನು. ಅವನ ಅಂತಃಪುರದಲ್ಲಿ ಚಿರಕಾಲದಿಂದ ವಾಸವಾಗಿದ್ದ ಪೂಜನಿ ಎಂಬ ಪಕ್ಷಿಯು ಸರ್ವಭೂತಗಳ ಭಾಷೆಯನ್ನು ಅರಿತಿತ್ತು. ಆ ಪಕ್ಷಿಗೆ ಒಂದು ಮರಿಯು ಜನಿಸಿದ ದಿನವೇ ಬ್ರಹ್ಮದತ್ತನ ರಾಣಿಯು ಒಬ್ಬ ಮಗನನ್ನು ಪ್ರಸವಿಸಿದಳು. ಆ ಮಕ್ಕಳು ಬೆಳೆಯುತ್ತಿದ್ದರು. ಅವರಲ್ಲಿ ಸಮಾನ ಪ್ರೀತಿಯಿಂದ ವರ್ತಿಸುತ್ತಿದ್ದ ಪೂಜನಿಯು ಸಮುದ್ರ ತೀರದಿಂದ ಎರಡು ಫಲಗಳನ್ನು ನಿತ್ಯವೂ ತಂದು, ಅವರಿಗೆ ಕೊಡುತ್ತಿತ್ತು. ಅಮೃತ ಭರಿತವಾದ ಫಲಗಳನ್ನುಂಡು ರಾಜಪುತ್ರನೂ ಪೂಜನೀಪುತ್ರನೂ ಬಲತೇಜಸ್ಸಂಪನ್ನರಾದರು. ಒಂದು ದಿನ ರಾಜಪುತ್ರನು ಆಡುತ್ತಾಡುತ್ತಾ, ಒಡನಾಡುವ ಪೂಜನೀ ಪುತ್ರನ ಕತ್ತು ಹಿಸುಕಿದಾಗ, ಅದು ಸತ್ತುಬಿದ್ದಿತು.

ಪೂಜನಿಯು ಸಾಯಂಸಮಯದಲ್ಲಿ ಬಂದು ನೋಡಿದಾಗ, ಅವಳ ದುಃಖವು ಹೃದಯ ವಿದ್ರಾವಕವಾಯಿತು. 'ಹಾ! ಪುತ್ರನೇ! ನಿರಪರಾಧಿಯಾದ ನಿನ್ನನ್ನು ಪಾಪಿ ರಾಜ ಪುತ್ರನು ಕೊಂದುಬಿಟ್ಟನೇ? ಕ್ಷತ್ರಿಯರಂತಹ ಕೃತಘ್ನರಿಲ್ಲ. ತಮ್ಮ ಕೆಲಸವಾಗುವವರೆಗೂ ಕಾಲನ್ನೂ, ಕೆಲಸವಾದ ಮೇಲೆ ಕತ್ತನ್ನೂ ಹಿಡಿಯುವ ಕೃತಘ್ನರಿಗೆ ಸ್ನೇಹ, ಪ್ರೇಮ, ದಯೆಗಳೆಂಬ ಸದ್ಗುಣ ರತ್ನದ ಕಿರಣ ಲೇಶವೂ ಸೋಕುವುದೇ? ಆಗಲಿ; ಇದಕ್ಕೆ ಪ್ರತಿಮಾಡದೆ ಬಿಡೆನು' ಇಂತು ಚಿಂತಿಸಿ, ದುಃಖವಶಳಾದ ಪೂಜನಿಯು ರಾಜಪುತ್ರನನ್ನು ಸೇರಿ, ಅವನ ಕಣ್ಣುಗಳನ್ನು ಕಿತ್ತು ಬಿಸುಟಿತು.

ಅಂಧನಾದ ಪುತ್ರನನ್ನು ನೋಡಿ, ಬ್ರಹ್ಮದತ್ತನು ದುಃಖಿತನಾದರೂ, ಕುಪಿತನಾಗದೆ, ಪೂಜನಿಗಿಂತೆಂದನು: 'ಪೂಜನಿ! ನಾವು ನಿಮಗೆಸಗಿದ ದ್ರೋಹಕ್ಕೆ ಸರಿಯಾದ ಶಿಕ್ಷೆಯನ್ನಿತ್ತೆ! ಒಳ್ಳೆಯದಾಯಿತು! ನಮಗೆ ಸಿಟ್ಟಿಲ್ಲ. ನೀನಾದರೂ ನಮ್ಮ ಮನೆ ಬಿಟ್ಟು ಹೋಗಬೇಡ! ಎಂದಿನಂತೆ ನಿಶ್ಚಿಂತವಾಗಿರು!' ಆ ಮಾತಿಗೆ ಪೂಜನಿಯು 'ರಾಜನ್! ಅದಾಗದು. ಅಪರಾಧವನ್ನೆಸಗಿ, ಅಲ್ಲೇ ಇರಬಾರದು. ವೈರವು ಕಿಡಿಯಂತೆ ಅಡಗಿದ್ದರೂ, ಬಿಡದೆ ಉರಿದೇಳುವುದು. ಅದರಿಂದ ವಂಶದ ಕುಡಿಗಳೂ ಮುರಿದು ಬೀಳುವವು. ವೈರಿಗಳಲ್ಲಿ ವಿಶ್ವಾಸವನ್ನೂ ಸರ್ವಥಾ ಮಾಡಲಾಗದು. ತಂದೆ ತಾಯಂದಿರು ಪೂಜಾಪೇಕ್ಷಿಗಳು; ಹೆಂಡತಿಯು ಜರಾಪಾದಕಳು; ಮಗನು ಬೀಜನಾಗಿ ಉಳಿದು ವಂಶವನ್ನು ಬೆಳೆಸುವವನು; ಸೋದರರು ಧನಾದಿಹಾರಕರು. ಉಪಕಾರಾಪೇಕ್ಷಿಗಳು ಸ್ನೇಹಿತರು; ಜೀವನು ತಾನೊಬ್ಬನೇ ತನ್ನನ್ನು ನಂಬಿ ಉದ್ಧರಿಸಿಕೊಳ್ಳಬೇಕಲ್ಲದೆ, ಯಾರನ್ನೂ ನಂಬಲಾಗದು. ಸಾಕು ಈ ಮನೆಯ ವಾಸ! ಸಮ್ಮಾನಿತಳಾಗಿದ್ದಲ್ಲಿ ಅವಮಾನಿತಳಾಗಬಾರದು. ಅಪಕಾರಕ್ಕೆ ತಕ್ಕ ಪ್ರತೀಕಾರವನ್ನು ಮಾಡಿದವರನ್ನು ಜನರು ಕ್ಷಮಿಸರು. ಅಂತಹವರನ್ನೂ ವೈರಿಗಳೆಂದೇ ತಿಳಿದರು.

ವೈರಲತೆಗೆ ಐದು ಬೇರುಗಳು. ಸ್ತ್ರೀಕೃತ ವೈರವು ಕೃಷ್ಣಶಿಶುಪಾಲರಿಗೆ; ವಾಸ್ತು(ಗೃಹ) ಕೃತವೈರವು ಕೌರವಪಾಂಡವರಿಗೆ; ವಾಕ್ಯವೈರವು ದ್ರೋಣದ್ರುಪದರಿಗೆ; ಜಾತಿ ವೈರವು ಮೂಷಕಮಾರ್ಜಾಲಗಳಿಗೆ; ಅಪರಾಧ ಜನಿತ ವೈರವು ನಮ್ಮಿಬ್ಬರಿಗೆ! ಕೃತಜ್ಞನಾದ ನೀನು

ನಾನೀಯುತ್ತಿದ್ದ ಫಲಗಳಿಗೆ ವೈರವನ್ನೀಯುವವನಿಲ್ಲ. ಪ್ರತ್ಯಪಕಾರವನ್ನು ಮಹಾತ್ಮನಾದುದರಿಂದ ಎಣಿಸುವುದೂ ಇಲ್ಲ. ಆದರೂ ಕೃತವೈರರಿಗೆ ಸಹವಾಸವು ಒಳಿತಲ್ಲವೆಂದು ನೀತಿಶಾಸ್ತ್ರಗಳು ಸಾರುತ್ತಿವೆ. ಕೋಪಾಗ್ನಿಯನ್ನು ಧನ ಪರಾಕ್ರಮ ವಿದ್ಯಾಸಾಮವಚನಗಳಿಂದ ಆರಿಸಲಾಗುವುದಿಲ್ಲ. ನಿನ್ನ ಮಗನು ನನ್ನ ಮಗನನ್ನು ಕೊಂದನು, ನಾನು ನಿನ್ನ ಮಗನನ್ನು ಅಂಧನಾಗಿರಿಸಿದೆನು. ಮುಂದಿನ ನಿನ್ನ ಕಾರ್ಯ ವೆಂದರೆ ನನ್ನನ್ನು ಕೊಲ್ಲುವುದೇ! ಎಲ್ಲವೂ ಕಾಲದಿಂದಲೇ ಆಗುತ್ತದೆಂಬ ಮಾತನ್ನು ನಾನು ಒಪ್ಪಲಾರೆನು. ಕರ್ಮಸಂಯೋಗವೂ ಇರಬೇಕು. ಕಾಲದಿಂದಲೇ ರೋಗವು ಗುಣವಾಗುವುದಾದರೆ ವೈದ್ಯರಿಂದ ಏನು ಕೆಲಸ? ಎಲ್ಲವೂ ಕಾಲಾಧೀನವೆಂದು ಸುಮ್ಮನೆ ಕೂಡಬಹುದೇ? ದೇವಾಸುರರು ಕಡಿದಾಡುವುದೇತಕ್ಕೆ? ಕಾಲವೆಂದು ಸುಮ್ಮನೆ ಕೂಡುವರೇ ಹೇಳು! ಕರ್ತೃತ್ವವೇ ಇಲ್ಲವೆಲ್ಲವೂ ಕಾಲಾಧೀನವೆಂದರೆ ಧರ್ಮಾಧರ್ಮಗಳ ಉಪದೇಶವು ಯಾರಿಗೆ? ವಿಧಿನಿಷೇಧವಚನಗಳಿಗೆ ಅರ್ಥವೇನು? ಆದುದರಿಂದ ಜೀವರೂ ಕರ್ತೃಗಳೆಂದು ತಿಳಿ! ಅವರ ಕರ್ಮಕ್ಕೆ ತಕ್ಕಂತೆ ಭಗವಂತನು ಕಾಲದಲ್ಲಿದ್ದು ಫಲವನ್ನು ಕೊಡುತ್ತಿರುವನು. ಜೀವರಿಗೆ ಸ್ವಾತಂತ್ರ್ಯವಿಲ್ಲ; ಕರ್ತೃತ್ವವಿದೆ. ಭಗವದಧೀನ ಕರ್ತೃಗಳಾದ ಜೀವರು ಮಾಡುವ ಕರ್ಮಗಳು ಸ್ವಭಾವ ವೈಚಿತ್ರ್ಯದಿಂದ ಬಹುವಿಧವಾಗಿ, ವಿಚಿತ್ರ. ಪುನಃ ಪರಿಣಾಮವನ್ನು ತಂದೊಡ್ಡುವವು. ಆಗ ಮಿತ್ರ-ಶತ್ರುಗಳು ಪುಟ್ಟುವರು. ನನಗೆ ಇಲ್ಲಿ ಹಿತವಿಲ್ಲ. ನಿನ್ನನ್ನು ನೋಡುತ್ತಿರುವುದೂ ಹಿತವಲ್ಲ.

ಬ್ರಹ್ಮದತ್ತ ; ಜರೆಯು ದುಃಖವೆನಿಸಿದೆ. ಅರ್ಥನಾಶವೂ ದುಃಖವೆನಿಸಿದೆ. ಅನಿಷ್ಟಸಂವಾಸವೂ ದುಃಖವೇ! ಪರ ದುಃಖವನ್ನರಿತವನು ಬರಿ ಮಾತಾಡನು. ಸಭೆಯಲ್ಲಿ ಮಹಾಜನರಿಗೆ ದುಃಖವನ್ನು ಕುರಿತು ಉಪದೇಶಿಸುವವನು ಬರಿಯ ಬಾಯ ಬಡುಕನು. ಅವನಿಗೆ ಪರ ದುಃಖದ ಅರಿವೇ ಇಲ್ಲ. ದುಃಖದಿಂದ ಹೃದಯ ಹ್ರದವು ತುಂಬಿದಾಗ ನಾಲಿಗೆಯ ಕೊನೆಗೆ ಮಾತು ಬರದು. ನನ್ನ ದುಃಖವು ನಿನ್ನ ಮಾತಿಗೆ ಮೀರಿದೆ. ನಿನ್ನ ದುಃಖವು ನನ್ನ ಮಾತಿಗೆ ಶಮಿಸದು. ಮಣ್ಣ ಗಡಿಗೆಯಂತೆ ಒಡೆದ ನಮ್ಮ ಮೈತ್ರಿಯನ್ನು ಮತ್ತೆ ಕೂಡಿಸಲಾಗದು. ವೈರಿಗಳನ್ನು ನಂಬಿದವನಿಗೆ ಬಂಡೆಯ ಮೇಲೆತ್ತಿ ಕುಕ್ಕಲ್ಪಟ್ಟ ಗಡಿಗೆಯ ಗತಿಯು ತಪ್ಪದು.

ಪಥ್ಯವನ್ನು ನುಡಿಯುತ್ತಾ, ಅಪಥ್ಯವನ್ನು ಮೆದ್ದವನು ಬಿದ್ದನೆಂದು ತಿಳಿ! ಮಳೆಯ ಅರಿವಿಲ್ಲದೆ ಬಿತ್ತಿದವನು ಸಾಲ ಹೊತ್ತನೆಂದು ತಿಳಿ! ತನ್ನಯೋಗ್ಯತೆಯನ್ನು ಅಳಿಯದೆ ಕೆಡು ಮಾರ್ಗದಲ್ಲಿ ನಡೆದವನು ಸತ್ತನೆಂದು ತಿಳಿ! ಆದುದರಿಂದ ನನಗೆ ವೈರಿಯಾದ ನಿನ್ನಲ್ಲಿ ಇರಲಾಗದು. ಪುರುಷ ಪ್ರಯತ್ನವೇ ಇಲ್ಲದೆ ದೈವವೇ ಫಲಿಸುವುದೆಂಬುವನು ಆಲಸನು. ಆತ್ಮಹಿತವನ್ನರಿತು ವಿಚಾರಿಸಿ, ನಡೆವ ವಿವೇಕಿಗೆ ದೈವವು ಸಹಾಯಕವಾಗಿ ಫಲವನ್ನು ಕೊಡುವುದು. ವಿದ್ಯಾ, ಶೌರ್ಯ, ದಾಕ್ಷ್ಯ, ಬಲ, ಧೈರ್ಯಗಳಿದ್ದಲ್ಲೇ ದೈವವು ಅನುಕೂಲವಾಗಿರುವುದು.

ವಿದ್ಯಾವಂತನಿಗೆ ಯಾವ ದೇಶವಾದರೇನು? ಅವನು ಯರಿಗೂ ಹೆದರನು,

ಯಾರನ್ನೂ ಹೆದರಿಸನು. ಸ್ವಲ್ಪವಾದರೂ ಅವನ ಕೈಲಿ ಅರ್ಥವು ಬಹಳವಾಗಿ ಬೆಳೆಯುವುದು. ಮನೋನಿಗ್ರಹದಿಂದ ಅವನು ಸುಖಿಸುವನು.

ಮನೆ ಮನೆ ಎಂದು ಕದಲದಿರುವ ಮನುಜನು ಕೂಪಸ್ಥಮಂಡೂಕದಂತೆ ತನ್ನವರಿಗೆ ತಿನ್ನುವ ಮಾಂಸವಾಗುವನು. ವ್ಯಾಧಿದುರ್ಭಿಕ್ಷ ದುರ್ಜನಪೀಡಿತವಾದ ಸ್ಥಲವನ್ನು ಸ್ವಜನ್ಮಭೂಮಿ ಎಂದು ಬಿಡದವರು ನಷ್ಟರಾಗುವರು. ಮಾನವಿಲ್ಲದ ಮಾತೃಭೂಮಿಕಿಂತಲು ಮಾನವೀವ ಮರುಭೂಮಿಯೇ ಲೇಸು! ಕುಪುತ್ರನಲ್ಲಿ ವಿಶ್ವಾಸವಿಲ್ಲ, ಕುಭಾರ್ಯೆಯಲ್ಲಿ ರತಿ ಇಲ್ಲ, ಕುರಾಜ್ಯದಲ್ಲಿ ಶಾಂತಿಯಿಲ್ಲ, ಕುದೇಶದಲ್ಲಿ ಜೀವಿಕೆಯಿಲ್ಲ. ಪ್ರೇಮವನ್ನಾಡಿದರೆ ಹೆಂಡತಿ ನಿಜ ! ಸುಖವನ್ನಿತ್ತು ಸಲಹಿದರೆ ಮಗನು ನಿಜ ! ವಿಶ್ವಾಸವಿತ್ತರೆ ಮಿತ್ರನು ನಿಜ ! ಜೀವನವಿತ್ತರೆ ಸ್ವದೇಶವು ನಿಜ ! ಧರ್ಮನೇತ್ರನಾದ ರಾಜನಿರುವಲ್ಲಿ ಎಲ್ಲವೂ ಇದೆ. ರಾಜನು ಅಧರ್ಮಿಷ್ಠನಾದರೆ ಯಾವುದೂ ಇಲ್ಲ. ರಾಜನೆಂಬ ತಸ್ಕರನ ಕೈಲಿ ಸಿಕ್ಕು ಪ್ರಜರು ಪಡುವ ಪಾಡು ಹೇಳತೀರದು. ರಾಜನು ಬಾಯಿಂದ ಅಭಯವನ್ನು ನುಡಿಯುತ್ತಾ, ಕೈಯಿಂದ ಕೊಲ್ಲಬಂದರೆ ಯಾರು ಉಳಿಯುವರು ? ತಾಯಿಯಂತೆ ಪ್ರೇಮಿಸಿ, ತಂದೆಯಂತೆ ಪಾಲಿಸಿ, ಗುರುವಿನಂತೆ ಬೋಧಿಸಿ ಅಗ್ನಿಯಂತೆ ದುಷ್ಟದಹನನಾಗಿ, ಯಮನಂತೆ ದಂಡಿಸಿ, ಕುಬೇರನಂತೆ ಕೊಟ್ಟು, ರಕ್ಷಿಸಿದರೆ ಮಾತ್ರ ರಾಜನು ರಾಜ ಶಬ್ದವನ್ನು ಸಾರ್ಥಕಪಡಿಸುವನು.''

ಇಂತು ನುಡಿದು ಪೂಜನಿಯು ಬ್ರಹ್ಮದತ್ತನನ್ನು ಬೀಳ್ಕೊಂಡು, ಯಥೇಚ್ಛವಾಗಿ ಹೊರಟುಹೋದಳು. ಆದುದರಿಂದ ಧರ್ಮರಾಜ ! ವಿಶ್ವಾಸವಿಲ್ಲದೆ ಬದುಕಲಾಗದು. ಹಾಗೆಂದು ಎಲ್ಲರನ್ನೂ ನಂಬಬಾರದು. ಯುಕ್ತಾಯುಕ್ತಗಳನ್ನು ವಿಚಾರಿಸಿ, ವಿಶ್ವಾಸವಿಟ್ಟು ನಡೆಯುವ ನರನು ಇಹಪರಗಳಲ್ಲಿ ಸುಖಿಸುವನು.

## ೨. ಆಪತ್ತಿನಲ್ಲಿ ಜೀವನ ವಿಧಾನ

ಧರ್ಮರಾಜನು 'ತಾತ ! ಯುಗಾಂತದಲ್ಲಿ ಧರ್ಮವು ಕ್ಷೀಣವಾದಾಗ, ದಸ್ಯು ಪೀಡೆಯು ಹೆಚ್ಚಾದಾಗ ರಾಜಾದಿ ವಿಪ್ರರು ಎಂತು ಜೀವಿಸಬೇಕು ?' ಎಂದು ಕೇಳಿದನು.

ಭೀಷ್ಮನಿಂತೆಂದನು : 'ರಾಜನು ಆಪತ್ಸಮಯದಲ್ಲಿ ವರ್ತಿಸಬೇಕಾದ ರೀತಿಯನ್ನು ಹೇಳುವೆನು. ಸೌವೀರ ದೇಶದ ರಾಜನಾದ ಶತ್ರುಂಜಯನು ಭಾರದ್ವಾಜ ಮುನಿಯನ್ನು ಕಂಡು, 'ಮುನಿವರ ! ಅಲಬ್ಧಾರ್ಥವನ್ನು ಎಂತು ಪೊಂದಬೇಕು ? ಪೊಂದಿದ ಅರ್ಥವನ್ನು ಬೆಳೆಸುವುದೆಂತು ? ಬೆಳೆಸಿದುದನ್ನು ಕೆಡದೆ ರಕ್ಷಿಸುವುದೆಂತು ? ರಕ್ಷಿತವನ್ನು ಚೆನ್ನಾಗಿ ವಿನಿಯೋಗಿಸುವುದೆಂತು ? ' ಎಂದು ಕೇಳಿದನು. ಭಾರದ್ವಾಜನಿಂತೆಂದನು : 'ರಾಜನು ಸದಾ ಉದ್ಯತ ದಂಡನಾಗಿರಬೇಕು. ದಂಡಪಾಣಿಗೆ ಹೆದರಿದಂತೆ ಮೃದುಹೃದಯನಿಗೆ ಯಾರೂ ಹೆದರರು. ದಂಡವನ್ನು ತಿಳಿದು ಉಪಯೋಗಿಸದ ರಾಜನ ಜೀವನವು ದಂಡನಾಗುವುದು. ಗಿಡದ ಮೂಲಾಳಿಯಂತೆ ದಂಡವು. ಗಿಡದ ಪುಷ್ಪ ಫಲ ವರ್ಗಗಳೇ ಧರ್ಮಕಾಮಾರ್ಥಗಳು. ಮೂಲವನ್ನು ಕಡಿದು ಗಿಡವನ್ನುಳಿಸಲಾಗದು.

ಆಪತ್ತಿನಲ್ಲಿ ರಾಜನು ಸುಮಿತ್ರರಿಂದ ಕೂಡಿ, ಸುವಿಕ್ರಮಿಸಿ, ಸುಯುದ್ಧವನ್ನು ಮಾಡಬೇಕು. ಆಗ ಜಯವು ಸಿಗದಾದರೆ ಸುಪಲಾಯನವನ್ನು ಮಾಡಿ, ಸಂಧಿಯಿಂದ ವಿಶ್ವಾಸವನ್ನು ಪುಟ್ಟಿಸಿ, ಕಾಲಾಂತರದಲ್ಲಿ ಮೇಲೆರಗಿ ಜಯಿಸಬೇಕು. ಶತ್ರುವು ಸಂಧಿ ಮಾಡಿರುವನೆಂದು ನಂಬಿ ಕೂಡಬಾರದು. ಮನೆ ಹೊಕ್ಕ ನಾಗರಹಾವಿನನ್ನಂತೆ ಶತ್ರುವನ್ನು ಕಣ್ಣಿಟ್ಟು ನಿರೀಕ್ಷಿಸಿ, ಸಿಕ್ಕಾಗ ಕೊಲ್ಲಬೇಕು. ಹಿಂದೆ ನಡೆಸಿದ ಮೈತ್ರಿಯನ್ನು ತೋರಿ, ಮುಂದೆ ಮಾಡಬಹುದಾದ ಉಪಕಾರವನ್ನು ಹೇಳಬೇಕು. ಅಂಜಲಿಯೊಡ್ಡಿ, ಕೈಯೊಡ್ಡಿ, ಆಣೆ ಮಾಡಿ, ನಮಸ್ಕರಿಸಿ, ಅವನ ಕಣ್ಣೀರೊರೆಸಬೇಕು. ಭುಜದ ಮೇಲೆ ಹೊತ್ತು ತಂದ ಗಡಿಗೆಯನ್ನಂತೆ ಕಾಲವನ್ನರಿತು ನೆಲಕ್ಕಪ್ಪಳಿಸಿ ನಾಶಪಡಿಸಬೇಕು. ಕಳ್ಳಿಕಟ್ಟಿಗೆಯಂತೆ ಉರಿದೇಳಬೇಕಾಗಲಿ, ಹೊಟ್ಟಿನಂತೆ ಹೊಗೆಯಾಡಬಾರದು. ಕೃತಘ್ನರಿಂದ ಅರ್ಥ ಸಂಬಂಧವನ್ನು ಮಾಡಬಾರದು.

ಅರ್ಥಿಗಳ ಕಾರ್ಯವನ್ನು ಪೂರ್ತಿ ಮುಗಿಸಿ ಕೊಡಬಾರದು; ಕೋಕಿಲೆಯಂತೆ ತನ್ನ ಕುಟುಂಬವನ್ನು ಬೇರೆಯವರಿಂದ ಪೋಷಿಸಿಕೊಳ್ಳಬೇಕು; ಕರ್ಷಕರ, ಜಲಸೇತು (Dam) ಬಂಧಕ್ಕಾಗಿ ಕರ್ಷಕರಿಂದ ತನ್ನ ಭೂಮಿಯನ್ನು ಊಳಿಸಿಕೊಳ್ಳಬೇಕು; ನೂರೆತ್ತಿನ ವ್ಯಾಪಾರದ ವರ್ತಕನಿಂದ ರಾಜ ವ್ಯಾಪಾರವೂ ನಡೆಸಿಕೊಳ್ಳಬೇಕು. ಅಟವೀಮಾರ್ಗ ರಕ್ಷಣೆಗಾಗಿ ಪಾಂಥಾದಿಗಳಿಂದ ಸುಂಕವನ್ನು, ನದಿರೇವುಗಳಲ್ಲಿ ದಾಟಿಸುವ ರಾಜನ ಆನೆಗಳನ್ನು ಸಾಕಲು, ಆ ಗ್ರಾಮ ಜನರಿಂದ ಶುಲ್ಕವನ್ನು ವಸೂಲು ಮಾಡಬೇಕು. ಇಂತು ರಾಜಕೀಯ ಕುಟುಂಬವನ್ನು ಪ್ರಜಾದ್ವಾರಾ ಪೋಷಿಸಿದಂತಾಗುವುದು.

ವರಾಹದಂತೆ ಶತ್ರುಮೂಲಗಳನ್ನು ಕಿತ್ತೊಗೆಯಬೇಕು. ಮೇರುವಿನಂತೆ ಅಚಂಚಲನು, ಅನುಲ್ಲಂಘನೀಯನು ಆಗಿರಬೇಕು. ನಟನಂತೆ ನಗುತ್ತಾ, ಅಳುತ್ತಾ, ಸಿಟ್ಟಾಗುತ್ತಾ ನಟಿಸಿ ಒಳಗೆ ನಿರ್ವಿಕಾರನಾಗಿರಬೇಕು. ಹಾವಿನಂತೆ ಅವ್ಯರ್ಥ ಕೋಪನು, ಭಕ್ತ ವರದ ದೇವನಂತೆ ಮಹಾ ಸಂಪತ್ಪ್ರದನು ಆಗಿರಬೇಕು. ರಾಜನು ನಿತ್ಯೋದ್ಯತನಾಗಿ ಸದಾ ಲೋಕ ಪರೀಕ್ಷಣ ತತ್ಪರನಾಗಿರಬೇಕು. ಆಲಸರು, ಕ್ಲೀಬರು, ಲೋಕವಾದಭೀರುಗಳು, ದುರಭಿಮಾನಿಗಳು, ಪರಸಹಾಯಾಪೇಕ್ಷಕರು ಇವರು ಎಂದಿಗೂ ಅರ್ಥವಂತರಾಗಲಾರರು. ಬಕದಂತೆ ಆಲೋಚಿಸಿ, ಸಿಂಹದಂತೆ ವಿಕ್ರಮಿಸಿ, ತೋಳದಂತೆ ವಂಚಿಸಿ, ಮೊಲದಂತೆ ಓಡಿಹೋಗುವ ರಾಜನು ಶ್ರೇಯೋಭಾಜನನಾಗುವನು. ಪಾನ, ದ್ಯೂತ, ವೇಶ್ಯಾ, ಮೃಗಯಾ, ಗೀತ ನರ್ತನಗಳಾದಿ ವ್ಯಸನಗಳಿಗೆ ದೂರನಾಗಿರಬೇಕು.

ಆಪತ್ತಿನಲ್ಲಿ ಚಾಪೆಯ ಮೇಲಾದರೂ ಮಲಗಬೇಕು. ಕಿಡಿಮಾತಿಗೆ ಕಿವುಡನಂತಿರಬೇಕು. ದೇಶಕಾಲಗಳನ್ನರಿತು ವಿಕ್ರಮಿಸಬೇಕು. ದಂಡಿಸಿ ಗೆದ್ದ ಶತ್ರುವಿನನ್ನು ಉದಾಸೀನನಾಗಿ ಬಿಟ್ಟವನು, ಮೃತ್ಯುವಿನನ್ನು ಕಟ್ಟಿಕೊಂಡಂತೆಯೇ ಸರಿ! ವಿಜಯ ವೃಕ್ಷವು ಪುಷ್ಪಿತವಾಗಬಹುದು; ಫಲವಂತವಾಗದು; ಫಲವಾಗಬಹುದು, ನಿಲುಕದು; ನಿಲುಕಬಹುದು, ಪಕ್ವವಾಗಿರದು. ಆದುದರಿಂದ ಬಿಡದೆ ಕಡಿದಾಡಿ ವಿಜಯವಂತನಾಗಬೇಕು.

ಪರರಿಗೆ ಕೊಡುವಾಗ ಆಶೆ ತೋರಬೇಕು. ಆಶೆಗೆ ವಿಘ್ನವನ್ನು ತೋರಬೇಕು. ವಿಘ್ನವೇಕೆಂದರೆ ನಿಮಿತ್ತ (ಶಕುನ)ವನ್ನು ನುಡಿಯಬೇಕು. ಅಂತೂ ಶತ್ರುಜನರಿಗೆ ಏನೂ ಕೊಡಬಾರದು. ಶತ್ರುವಿಜಯದಲ್ಲಿ ಸಂಶಯದಿಂದ ತೂಗಾಡಬಾರದು. ಸತ್ತರೆ ಸ್ವರ್ಗವಿದೆ ; ಗೆದ್ದರೆ ಜಯವಿದೆ, ಎಂದು ಸಾಹಸಿಸಿ, ಮುನ್ನುಗ್ಗಬೇಕು. ಕೈಗೆ ಸಿಕ್ಕ ಶತ್ರುವಿನನ್ನು ಬಿಟ್ಟವನು ; ಮುಂದೆ ಸಿಗುವನೆಂದು ಪ್ರತೀಕ್ಷಿಸುವನು ; ಇವರಿಬ್ಬರೂ ಬುದ್ಧಿವಂತರಲ್ಲ. ಶತ್ರುವಿನಿಂದ ಸಂಧಿಗೈದು ಮೈಮರೆತವನು, ಗಿಡದ ಮೇಲೆ ನಿದ್ರಿಸಿದವನಂತೆ ಕೆಳಗೆ ಬೀಳುವನು. ಶತ್ರುಗಳಿಗೆ ಶತ್ರುಗಳಿದ್ದರೆ, ಅವರನ್ನು ಸಾಮದಾನಗಳಿಂದ ತನ್ನಲ್ಲಿ ಕೂಡಿಸಿಕೊಂಡು, ಬಲವಂತನಾಗಿ, ಶತ್ರುವಿನನ್ನು ನಾಶಪಡಿಸಬೇಕು. ಚಾರರನ್ನು ಪಾಷಂಡ, ಭಿಕ್ಷುಕ, ನಾಸ್ತಿಕಾದಿ ವೇಷಧಾರಿಗಳನ್ನು ಮಾಡಿ, ನದೀ, ಕ್ಷೇತ್ರ, ಪ್ರಪಾ, ಸಭೆ, ಜನಕೂಟಗಳಲ್ಲಿ ನಿಲ್ಲಿಸಬೇಕು. ಅವರ ಮಾತನ್ನು ಪರೀಕ್ಷಿಸಿ ತಿಳಿದು ನಡೆಯಬೇಕು. ಪುತ್ರನಾಗಲಿ, ಭ್ರಾತನಾಗಲಿ ರಾಜ್ಯಾರ್ಥವನ್ನು ಕೆಡಿಸಬಂದರೆ, ಅವರನ್ನು ನಿರ್ದಾಕ್ಷಿಣ್ಯವಾಗಿ ಸಂಹರಿಸಬೇಕು. ಇತರರನ್ನು ತಾನು ಪೂರ್ತಿ ನಂಬದೆ, ತನ್ನನ್ನು ಅವರು ನಂಬುವಂತೆ ವರ್ತಿಸಬೇಕು.

ರಾಜನಿಗೆ ವಿಶ್ವಾಸವನ್ನಿಡುವ ಜನರೂ ಇರುವರು. ಅವನು ಸದಾ ಕ್ರೂರನಾಗಬಾರದು. ಅಂತವನನ್ನು ಪ್ರಜರು ದ್ವೇಷಿಸುವರು. ಶತ್ರುವಿನ ಎತ್ತಿದ್ದು ಎಂದು ಸಿಟ್ಟಿನಿಂದ ಅದರ ಕೊಂಬನ್ನು ಕಚ್ಚಿ ಮುರಿಯಲು ಯತ್ನಿಸಬಾರದು. ಶುಷ್ಕವೈರವು ನಿರರ್ಥಕವಾಗಿದೆ. ಧರ್ಮಾರ್ಥ ಕಾಮಗಳನ್ನು ತ್ರಿವರ್ಗವೆಂಬರು. ಧರ್ಮದಿಂದ ಅರ್ಥ ಪೀಡೆಯೂ ಅರ್ಥ(ಲೋಭ)ದಿಂದ ಧರ್ಮಪೀಡೆಯೂ, ಕಾಮದಿಂದ ಧರ್ಮಾರ್ಥಗಳ ಪೀಡೆಯು ಆಗದಂತೆ, ತ್ರಿವರ್ಗವನ್ನು ರಕ್ಷಿಸಬೇಕು. ಧರ್ಮದ ಫಲವು ಅರ್ಥವೆಂತಲು ಅರ್ಥದ ಪ್ರಯೋಜನವು ಕಾಮವೆಂದಲು, ಕಾಮಫಲವು ಇಂದ್ರಿಯ ಪ್ರೀತಿ ಎಂತಲು ತಿಳಿಯುವರು. ಕ್ಷುದ್ರರು ಧರ್ಮಫಲವು ಚಿತ್ತಶುದ್ಧಿಯು; ಅರ್ಥಫಲವು ಯಜ್ಞಾದಿ ಧರ್ಮವು; ಕಾಮಫಲವು ಜೀವನಮಾತ್ರ ಸಿದ್ಧಿಯು ಆಗಿದೆ.

ಅಗ್ನಿಶೇಷ, ಋಣಶೇಷ, ವ್ಯಾಧಿಶೇಷಗಳನ್ನಂತೆ ಶತ್ರುಶೇಷವನ್ನೂ ಉಳಿಸಬಾರದು. ಉಳಿಸಿದರೆ ಅಗ್ನಿಯಿಂದ ಮನೆ ಸುಟ್ಟು ಬೀಳುವುದು ; ಸಾಲ ತೀರದೇ ಬೆಳೆಯುವುದು ; ಮರಣಪಾದಕವಾಗುವುದು ! ಶತ್ರುವು ಸರ್ವನಾಶಕನಾಗುವನು. ಪರರಾಷ್ಟ್ರವನ್ನು ಹೊಕ್ಕು ಅಲ್ಲಿ ಜನನಾಶ, ಧನನಾಶ, ಸಸ್ಯನಾಶ, ಮಾರ್ಗನಾಶಗಳಿಂದ ವಿಜೃಂಭಿಸಿದವನು ಬೇಗನೆ ವಿಜಯವನ್ನು ಗಳಿಸುವನು. ಹದ್ದಿನಂತೆ ದೂರದೃಷ್ಟಿಯು, ಬಕನಂತೆ ನಿಶ್ಚಲನು, ಶುನಕನಂತೆ ಜಾಗರೂಕನು, ಸಿಂಹನಂತೆ ನಿರ್ದಯ ವಿಕ್ರಮನು ಕಾಗೆಯಂತೆ ಪರೇಂಗಿತಜ್ಞನು, ಹಾವಿನಂತೆ ಗೊತ್ತಿಲ್ಲದೆ ಹೋಗುವವನು, ಆದ ರಾಜನ ಆಪತ್ತು ಬೇಗ ನಿವಾರಿತವಾಗುವುದು.

ರಾಜನು ಸದಾ ತೀಕ್ಷ್ಣನಾಗಬಾರದು ; ಅಂತಹವನಿಗೆ ಪ್ರಜರು ಹೆದರಿ, ದೂರವಿರುವವರು. ಸದಾ ಮೃದುವಾಗಬಾರದು ; ಅಂತಹವನನ್ನು ಪ್ರಜರು

ಅವಮಾನಿಸುವರು; ಕಾಲವನ್ನರಿತು ಮೃದುವೂ, ತೀಕ್ಷ್ಣನೂ ಆದ ರಾಜನ ಕಾರ್ಯಗಳು ಚೆನ್ನಾಗಿ ನೆರವೇರುವವು.

ಇಂತು ನುಡಿದು ಭಾರಧ್ವಾಜನಂತೆ ನಡೆದು, ಸೌವೀರರಾಜನು ಸುಖಿಸಿದನು.

ಇನ್ನು ಬ್ರಾಹ್ಮಣನು ಆಪತ್ಕಾಲದಲ್ಲಿ ವರ್ತಿಸುವ ವಿಧಾನವನ್ನು ಕೇಳು! ರಾಜ ಮೂಲವಾಗಿದೆ ಪ್ರಜರ ಯೋಗಕ್ಷೇಮ, ಸುಭಿಕ್ಷ, ಆರೋಗ್ಯ, ಅಭಯಗಳೆಂಬ ರಾಜ್ಯ ಸೌಖ್ಯವು ; ಕಲಿಯು ಕೂಡ ಧರ್ಮಿಷ್ಠನಾದ ರಾಜನ ಆಳ್ವಿಕೆಯಲ್ಲಿ ಕೃತಯುಗ ಸಮವೆನಿಸಬಲ್ಲದು. ಅಂತಹ ರಾಜನು ಅಧರ್ಮಪರನಾದಾಗ, ವಿಪ್ರನು ವಿಜ್ಞಾನಬಲದಿಂದ ವಿಪತ್ಕಾಲವನ್ನು ಕಳೆಯಬೇಕು. ವಿಪತ್ಸಮಯದಲ್ಲಿ ವಿಧಿನಿಷೇಧ ಗಣನೆಯನ್ನು ಸ್ವಲ್ಪ ಬದಿಗಿಟ್ಟು ಜೀವಿಸಿರಲು ಬೇಕಾದ ವೃತ್ತಿಯನ್ನು ಬ್ರಾಹ್ಮಣನು ಅವಲಂಬಿಸಬಹುದು; ಆದರೆ ವಿಪನ್ನಿವೃತ್ತಿ ಆದ ತತ್‌ಕ್ಷಣವೇ ಆ ವೃತ್ತಿಯನ್ನು ಬಿಟ್ಟು, ಸ್ವಧರ್ಮವನ್ನು ನಡೆಸ ಬೇಕಾಗುವುದು.

ತ್ರೇತಾದ್ವಾಪರಗಳ ಸಂಧಿಕಾಲದಲ್ಲಿ ವೀರಕ್ಷಾಮವು ತಲೆದೋರಿ, ಹನ್ನೆರಡು ವರ್ಷ ಕಾಲ ಪ್ರಜರನ್ನು ಕಾಡಿತು. ಪ್ರಜರು ಅತಿವೃದ್ಧರಾಗಿದ್ದರು. ಸಹಸ್ರಾಕ್ಷನು ಮಳೆ ಹನಿಯನ್ನು ಕೂಡ ದಯಪಾಲಿಸಲಿಲ್ಲ. ಗುರುವು ವಕ್ರಗತಿಯಿಂದ ಸಂಚರಿಸಿದನು. ಚಂದ್ರನು ಕಳಾಹೀನನಾಗಿ ದಕ್ಷಿಣ ದಿಕ್ಕನ್ನು ಆಶ್ರಯಿಸಿದನು, ಮಂಜುಕೂಡ ಕಾಣಬರದಾಯಿತು. ಇನ್ನು ಮೇಘವೆಲ್ಲಿ? ನದಿಗಳು ಒಣಗಿ ನಿಂತವು. ದೈವ ವಿಧಿಯಿಂದ ದುಷ್ಟ ರಾಜರು ತಲೆದೋರಿ ಬಹು ವಿಪತ್ತುಗಳಿಗೆ ಕಾರಣರಾದರು. ಕೆರೆ - ಬಾವಿಕುಂಟೆಗಳು ನೀರಸ ನಿಸ್ತೇಜವಾದವು. ಅನ್ನವಿಲ್ಲದೆ, ಜನರು ಸಾಯತೊಡಗಿದರು. ಕೃಷಿ ನಿಂತಿತು. ಗೋವುಗಳು ನಷ್ಟವಾದವು. ಅಂಗಡಿ ಬೀದಿಗಳು ಮುಚ್ಚಿಕೊಂಡವು. ಯಜ್ಞಗಳು ನಿಂತು ಹೋದವು. ವೇದಾಧ್ಯಯನ ಶಬ್ದವು ಅಡಗಿತು. ಭೂತಲವು ಅಸ್ಥಿಸಂಚಯ ಸಂಕೀರ್ಣವಾಯಿತು. ನಗರಗಳು ಬರಿದಾದವು. ಗ್ರಾಮಗಳು ಕೊಳ್ಳಿಯಿಟ್ಟಂತೆ ಶೂನ್ಯ ಭೀಕರವಾದವು. ಚೋರರಿಂದಲೂ, ದುಷ್ಟರಾಜರಿಂದಲೂ, ಪೀಡಿತರಾದ ಜನರ ಹಾಹಾರವಗಳು ದಿಕ್ಕು ವಿದಿಕ್ಕುಗಳಲ್ಲಿ ವ್ಯಾಪಿಸಿದವು. ವೃದ್ಧ ಜ್ಞಾನಿ ಜನರ ಮಾತು ರುಚಿಸದಾಯಿತು. ಅವರೂ ಸತ್ತರು. ಹೇಳುವವರಿಲ್ಲ; ಕೇಳುವವರಿಲ್ಲ. ಗೋವೃಷ ಮಹಿಷಾ ಜಾವಿಗಳನ್ನು ಕೊಂದು ತಿಂದುದಾಯಿತು. ನರರು ಪರಸ್ಪರವಾಗಿ ಕಿತ್ತು ತಿನ್ನುವ ಗತಿ ಬಂತು. ರಕ್ಷಾಕರ್ತೃ ಜನರು ಪೀಡಕರಾದರು. ಭೂತಲವು ಶ್ಮಶಾನ ಸಮವಾಯಿತು. ಮುನಿ ಜನರು ಆಶ್ರಮಗಳನ್ನು ತೊರೆದು, ಎಲೆ, ಹುಲ್ಲು ತಿನ್ನುತ್ತಾ, ಕಾಡು ಸೇರಿದರು.

ಆ ಸಮಯದಲ್ಲಿ ವಿಶ್ವಾಮಿತ್ರನು ತನ್ನ ದಾರಾಪುತ್ರರನ್ನು ಒಂದು ಗ್ರಾಮದಲ್ಲಿ ಬಿಟ್ಟು, ತಾನು ಆಹಾರಾರ್ಥಿಯಾಗಿ ತಿರುಗುತ್ತಿದ್ದನು. ಏನು ದೊರೆತರೆ ಅದನ್ನೇ ತಿಂದು ಜೀವವನ್ನು ಬಿಗಿ ಹಿಡಿದ ಮುನಿವರನಿಗೆ ಕೆಲಕಾಲವೇನೂ ಸಿಗಲಿಲ್ಲ. ಹಸಿವೆಗೆ ಆತನ ಪ್ರಾಣಗಳು ಹಾರಿಹೋಗಲಿದ್ದವು. ಒಂದು ದಿನ ಆತನು ಚಂಡಾಲ ಪಲ್ಲಿಯನ್ನು

ಸೇರಿದನು. ಆ ಹಳ್ಳಿಯು ಭೀಭತ್ಸವಾಗಿತ್ತು. ಹಂದಿ, ಕತ್ತೆ, ಎಮ್ಮೆಗಳ ಕಂಕಾಳಗಳು ಹರಡಿ ಬಿದ್ದಿದ್ದವು. ಗಡಿಗೆಯ ಚೂರುಗಳು ಚೆಲ್ಲಾಪಿಲ್ಲಿಯಾಗಿದ್ದವು. ಹಾವಿನ ಪೊರೆಗಳಿಂದ ಸುತ್ತಲ್ಪಟ್ಟ ಕುಟೀರಗಳಲ್ಲಿ ಶವಪ್ರಾಯರಾಗಿದ್ದ ಚಂಡಾಲರು ಮಲಗಿದ್ದರು. ಅಲ್ಲಿದ್ದ ಗುಡಿಗಳಲ್ಲಿ ಗೂಬೆಗಳು ಮನೆ ಮಾಡಿದ್ದವು. ನಾಯಿಗಳು ಕೂಡ ನಡೆಯಲಾರದೆ ನಡೆಯುತ್ತಿದ್ದವು.

ವಿಶ್ವಾಮಿತ್ರನು ಕ್ಷುದ್ಬಾಧೆಗೆ ಸಿಲುಕಿ, ಆ ಹಳ್ಳಿಯನ್ನು ಹೊಕ್ಕು, ಕೈಲಾಗದೆ ನೆಲದಲ್ಲಿ ಬಿದ್ದನು. 'ವೃಥಾ ಸಾಯುವೆನಲ್ಲ! ಏನು ಮಾಡಲಿ? ಎಂತು ಉಳಿಯಲಿ?' ಎಂದು ಚಿಂತಿಸುವ ಮುನಿಗೆ ತಂತಿಗೆ ತಗಲಿ ಹಾಕಿದ್ದ ನಾಯಿಯ ಮಾಂಸ ಖಂಡಗಳು ಕಂಡು ಬಂದವು. 'ವಿಪ್ರನಾದರೇನು? ಪ್ರಾಣ ರಕ್ಷಣೆಗೆ ಪ್ರಯತ್ನಪಡದೆ ಸಾಯಲಾಗುವುದೇ? ನಾಯಿಯ ಮಾಂಸವೆಂದು ತಿನ್ನದೆ ಬಿಟ್ಟರೆ ಬದುಕಿರಲಾಗುವುದೇ?' ಇಂತು ಚಿಂತಿಸಿ, ಆ ಮಹಾತ್ಮನು ಮೆಲ್ಲನೆ ಸರಿದು, ಸರಿದು, ಚಂಡಾಲನ ಮನೆ ಮುಂದಿದ್ದ ಶುನಕ (ತೊಡೆಯ) ಮಾಂಸಕ್ಕೆ ಕೈ ಹಾಕಿದನು. ಆಗ ಚಂಡಾಲನು 'ಯಾರದು? ತಂತಿಗೆ ಕೈಹಾಕುವ ಕಳ್ಳನಾರು? ಎಲವೋ ಸತ್ತೇ! ನಿನ್ನನ್ನು ಕೊಲ್ಲದೆ ಬಿಡೆನು' ಎಂದು ಎದ್ದು ಬಂದನು.

'ವಿಶ್ವಾಮಿತ್ರನು ನಾನು; ಹೊಡೆಯಬೇಡ! ಹಸಿವಿಗೆ ತಾಳಲಾರದೆ ನಿನ್ನ ಮಾಂಸವನ್ನು ಕದಿಯಲು ಬಂದಿರುವೆನು!' ಎಂದು ಮುನಿವರನನ್ನು ಗುರ್ತಿಸಿ, ಭಯಭೀತನಾದ ಚಂಡಾಲನು ಕಣ್ಣಿನ ಸಿಳ್ಳನ್ನು ಒರೆಸಿಕೊಂಡು, ಕೈಮುಗಿದು ನಿಂತು, 'ಸ್ವಾಮಿ! ಏನಿದು ಅನ್ಯಾಯ? ಇದು ನಾಯ ಮಾಂಸವಲ್ಲ!' ಎಂದನು. ಮುನಿಯು, 'ಮಿತ್ರ! ಹಸಿವಿಗೆ ಪ್ರಾಣಗಳು ಜಾರುತ್ತಿವೆ. ಭಕ್ಷ್ಯಾಭಕ್ಷ್ಯಜ್ಞಾನವಿದೆ? ಆದರೆ ಪ್ರಾಣರಕ್ಷಣೆಗಾಗಿ ವಿಪ್ರನು ಅಗ್ನಿಯಂತೆ ಬ್ರಹ್ಮಮುಖಜಾತನಾಗಿರುವದರಿಂದ ಸರ್ವಾನ್ನಾನುಮತಿಯನ್ನು ಆಪತ್ತಿನಲ್ಲಿ ಮಾತ್ರ ಪಡೆದಿರುವನು. ಭಿಕ್ಷೆ ಸಿಗಲಿಲ್ಲ, ಸಾಯಲಾರದೆ, ನಾಯ ಮಾಂಸಕ್ಕೆ ಕೈ ಹಾಕಿದೆನು. ನಿಜ! ನನ್ನನ್ನು ತಡೆಯಬೇಡ!' ಎಂದನು.

ಚಂಡಾಲನು 'ಬ್ರಾಹ್ಮಣೋತ್ತಮ! ಹಂದಿಗಿಂತಲು ಶ್ವಾನವನ್ನು ಅಧಮವೆಂಬುವರು. ಅದೂ ಚಂಡಾಲನ ನಾಯಿ ಮಾಂಸ! ಬೇರೆ ಆಹಾರವನ್ನು ಹುಡುಕು! ತಪಸ್ಸನ್ನು ಕೆಡಿಸಿಕೋಬೇಡ!' ಎಂದನು. ಮುನಿಯು 'ಚಂಡಾಲ! ಕೇಳಿಲ್ಲಿ! ಹೋಗುತ್ತಿವೆ ಎನ್ನ ಪ್ರಾಣಗಳು. ಪ್ರಾಣಸಂಕಟವು ಒದಗಿದಾಗ ಧರ್ಮಾಧರ್ಮ ವಿಚಾರವಿಲ್ಲ, ಸಮರ್ಥನಾದಾಗ ಭಕ್ಷ್ಯಾಭಕ್ಷ್ಯ ವಿವೇಕವನ್ನು ಅನುಸರಿಸಬೇಕು. ಮರಣವನ್ನು ಸುಮ್ಮನೆ ಅಪ್ಪಬಾರದು. ಜೀವಂತನಿಗೆ ಧರ್ಮ ಪುಣ್ಯ, ಮುಂತಾದ ಸಾಧನ ವಿಶೇಷಗಳು; ಸತ್ತವನಿಗಲ್ಲ. ಈಗ ನಿನ್ನ ಮಾಂಸವನ್ನು ತಿಂದು, ನಿನ್ನ ದಯದಿಂದ ಉಳಿದು, ಮುಂದೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳುವೆನು. ಸಂಶಯಪಡಬೇಡ!' ಎಂದನು. ಚಂಡಾಲನು 'ಪಂಚನಖಿಗಳಾದ ಶಶ, ಶಲ್ಯಕಾದಿಗಳು ಮಾತ್ರ ಭಕ್ಷಣಯೋಗ್ಯವಾಗಿವೆ. ನಾಯಿ ಮಾಂಸವು ಬಹುನಿಷಿದ್ಧವಾಗಿದೆ. ವಿಪ್ರನಾದ ನಿನಗೆ ಇದು ಯುಕ್ತವಲ್ಲ. ಅದನ್ನು ಕೊಟ್ಟ ನನಗೆ

ಪಾಪ ಬಂದೀತು!' ಎಂದನು. ವಿಶ್ವಾಮಿತ್ರನು 'ಹಿಂದೆ ಹಸಿವೆಯನ್ನು ಹಿಂಗಿಸಲು ಅಗಸ್ತ್ಯನು ರಾಕ್ಷಸ(ವಾತಾಪಿ)ನನ್ನು ತಿಂದು, ಸಾಗರದ ಉಪ್ಪು ನೀರನ್ನು ಕುಡಿದನು. ವಿಪ್ರನನ್ನುಳಿಸುವ ನಿನಗೆ - ಮುಂದೆ ಜೀವಿಸಿ ನಾನು ಗೈವ ತಪೋವೇದಾಧ್ಯಯನಗಳ ಪುಣ್ಯದ ಭಾಗವು ಬರುವುದು ಪಾಪವಿಲ್ಲ. ನಾನು ನಿಷಿದ್ಧ ಭಕ್ಷಣವೆಂಬ ಶಾಖಾಚ್ಛೇದವನ್ನು ಮಾಡಿದರೂ, ಧರ್ಮವೃಕ್ಷವನ್ನು ಉಳಿಸಬಲ್ಲೆನು' ಎಂದನು.

ಆಗ ಚಂಡಾಲನು 'ಬೇಡ! ನಿನ್ನ ಧರ್ಮವನ್ನು ಬಿಡಬೇಡ! ಮುಂದೆ ಜನರು ನಿನ್ನ ಆಚರಣೆಯನ್ನು ದೃಷ್ಟಾಂತೀಕರಿಸಿ, ನುಡಿದು, ಕೆಡುವಂತಾದೀತು!' ಎಂದನು. ವಿಶ್ವಾಮಿತ್ರನು, 'ನನ್ನನ್ನು ತಡೆಯಬೇಡ! ಮುಂದಿನ ಜನರೂ ಇಂತಹ ಪ್ರಾಣಾಪಾಯದಲ್ಲಿ ಹೀಗೇ ಮಾಡಲಿ! ಆಮೇಲೆ ಪ್ರಾಯಶ್ಚಿತ್ತವನ್ನೂ ಮಾಡುವರಾಗಲಿ ಕೇಳು! ಕೆರೆಯ ಕಪ್ಪೆಗಳು ಕೂಗುತ್ತವೆಂದು ಎತ್ತುಗಳು ನೀರು ಕುಡಿಯದೇ ಹಿಂದಿರುಗುವವೇ? ನಿನಗೆ ಧರ್ಮ ರಹಸ್ಯವು ತಿಳಿಯದು' ಎಂದು, ಆ ಮಾಂಸದ ತುಂಡನ್ನು ಜೀವಿತಾರ್ಥಿಯಾಗಿ ಹರಿಸಿದನು.

'ಇದು ನಾಯಿ ಮಾಂಸವಾದರೂ, ಈಗ ಪ್ರಾಣಾಧಾರಕವಾದ ಆಹಾರವಾಗಿದೆ. ಇದನ್ನು ದೇವತೆಗಳಿಗೆ ಸಮರ್ಪಿಸಿ, ತಿನ್ನುವೆನು' ಇಂತು ಚಿಂತಿಸಿ, ವಿಶ್ವಾಮಿತ್ರನು, ಬ್ರಾಹ್ಮವಿಧಿಯಿಂದ ಕಾಡಿನಲ್ಲಿ ಅಗ್ನಿಯನ್ನು ಹೊತ್ತಿಸಿ, ಇಂದ್ರಾಗ್ನಿಗಳನ್ನು ಧ್ಯಾನಿಸಿ, ಚರುಶ್ರಪಣವನ್ನು ಮಾಡಿದನು. ಮಾಡಿಮಾಡುತ್ತಿರುವಾಗ ಮೋಡಗಳು ಕವಿದು ಬಂದವು. ವಿಶ್ವಾಮಿತ್ರನು ಇಂದ್ರಾದಿಗಳಿಗೆ ಕೊಡಬೇಕೆಂದು ಹವಿರ್ಭಾಗವನ್ನು ವಿಭಾಗಿಸುತ್ತಿದ್ದನು. ಆಗ ಮಳೆ ಬಿದ್ದು, ಕ್ಷಣದಲ್ಲಿ ಭೂತಲವು ಜಲಾಕ್ರಾಂತವಾಯಿತು. ಅದನ್ನು ಕಂಡು, ವಿಶ್ವಾಮಿತ್ರನು ಹವಿರ್ಭಾಗವನ್ನು ಉಪಸಂಹರಿಸಿ, ತಾನು ಹವಿಶ್ಶೇಷವನ್ನು ಸ್ವೀಕರಿಸದೆ, ನೀರಿನಿಂದಲೇ ಪ್ರಾಣಧಾರಣವನ್ನು ಮಾಡಿ, ನೀರಿನಿಂದಲೇ ಆರಬ್ಧವಾದ ಯಜ್ಞವನ್ನು ಮುಗಿಸಿ, ಧನ್ಯನಾದನು. ಅದರಿಂದ ದೇವರ್ಷಿ ಪಿತೃಗಳು ಪ್ರೀತರಾದರು ಧರ್ಮರಾಜ! ವ್ಯಸನದಲ್ಲಿ ಸಿಕ್ಕುಬಿದ್ದ ಜ್ಞಾನಿಯು ಸರ್ವೋಪಾಯಗಳಿಂದ ತಾನು ಉಳಿದು, ಮುಂದೆ ಧರ್ಮವನ್ನುಳಿಸಬೇಕು. ಧರ್ಮಾಧರ್ಮ ವ್ಯವಸ್ಥೆಯು ಕಾಲವನ್ನು ಅವಸ್ಥೆಯನ್ನು ಅವಲಂಬಿಸಿದೆ. ಅನಾಪತ್ತಿನಲ್ಲಿ ಧರ್ಮವ್ಯವಸ್ಥೆಯನ್ನು ಮೀರಲಾಗದು. ಆಪತ್ತಿನಲ್ಲಿ ಮೀರಿ ನಡೆದರೂ, ಅದು ನಿವೃತ್ತವಾದ ಮೇಲೆ ಕೂಡ ಅಧರ್ಮನಿರತನಾಗಬಾರದು.'

ಧರ್ಮರಾಜನು, 'ತಾತ! ದಸ್ಯುಧರ್ಮಕ್ಕು ರಾಜಧರ್ಮಕ್ಕೂ ಭೇದವೇ ಇಲ್ಲದಂತಾಯಿತಲ್ಲ. ಪ್ರಜರನ್ನು ಕೊಳ್ಳೆಹೊಡೆದು, ಧನವನ್ನಾರ್ಜಿಸುವ ಹಿಂಸಾಕೃತ್ಯವು ಉಭಯರಿಗೂ ಸಮಾನವಾಗಿದೆ. ಇಂತಹ ಘೋರ ವ್ಯಾಪಾರವೆನಗೆ ಬೇಡವಾಗಿದೆ' ಎಂದನು. ಭೀಷ್ಮನಿಂತೆಂದನು: 'ರಾಜನ್! ನೀನು ಆಗಮಗಳನ್ನು ಚನ್ನಾಗಿ ವಿಚಾರಿಸಿಲ್ಲವೆಂದು ತೋರುತ್ತಿದೆ. ಕೇವಲ ಧರ್ಮಶಾಸ್ತ್ರಗಳನ್ನರಿತರೆ ಸಾಲದು; ನೀತಿಶಾಸ್ತ್ರ, ಅರ್ಥಶಾಸ್ತ್ರಗಳನ್ನೂ ವಿಚಾರಿಸಿ, ಧರ್ಮವನ್ನು ಕೆಡಿಸದಂತೆ ಪರಿಪಾಲಿಸು! ಬುದ್ಧಿಯನ್ನು ಉಪಯೋಗಿಸಿ, ಕಾಲದೇಶಗಳನ್ನು ತೂಗಿ ನೋಡಿ, ನಿನ್ನ ಸ್ವಧರ್ಮವನ್ನು ಬಿಡದೆ, ನಡೆ! ಧರ್ಮವನ್ನು ಮಾತ್ರ ಹಿಡಿಯಲಾಗದು. ಕೆಲಕಾಲದಲ್ಲಿ ಧರ್ಮವಾಗಿರುವುದು, ಮತ್ತೊಂದು ಕಾಲದಲ್ಲಿ

ಧರ್ಮವಾಗದು. ಅಹಿಂಸೆಯಿಂದ ಧರ್ಮವಿಲ್ಲ, ಆದರೆ ಚೋರರನ್ನೂ ಹುಲಿಯನ್ನೂ ಹಿಂಸಿಸಬೇಕಾಗಿ ಬರುವುದು. ಪ್ರಜರಿಂದ ಪ್ರಜಾಕ್ಷೇಮರ ಕ್ಷಣೆಗಳಿಗಾಗಿ ಷಡ್ಭಾಗವನ್ನು ಪಡೆದ ರಾಜನು ಚೋರ ಸಮನೆಂತಾಗುವನು? ಪ್ರಜರು ತಾವಾಗಿ ರಾಜನನ್ನು ಪೂಜಿಸಿ, ಧನವಿತ್ತು, ಅವನಿಗಾಗಿ ಕಾದಿ ಸಾಯುವುದಕ್ಕೂ ಹಿಂಜರಿಯದಿರಲು ಕಾರಣವೇನು? ಪ್ರಜಾಕ್ಷೇಮ; ಧರ್ಮರಕ್ಷಣೆಗಳೇ ಅಲ್ಲವೇ? ದುರ್ಬಲನು ದರಿದ್ರನು ಆದ ರಾಜನು ರಕ್ಷಿಸಲು ಸಮರ್ಥನಾಗನು. ಆದುದರಿಂದ ಶಂಕಿಸಬೇಡ! ಪ್ರಜರಿಂದ ಧನವನ್ನು ಸಂಗ್ರಹಿಸು! ಅವರನ್ನು ರಕ್ಷಿಸು! ಯಜ್ಞದಾನಗಳನ್ನು ಮಾಡು! ತಪಶ್ಶೀಲರಾದ ಬ್ರಾಹ್ಮಣರಂತೆ ನಡೆ! ಅವರನ್ನು ಯಥಾರ್ಥವಾಗಿ ಪೂಜಿಸು! ರಾಜ (ಕ್ಷತ್ರಿಯ)ನಾಗಿ ಹುಟ್ಟಿರುವೆ. ರಾಜನಾಗಿ ಮೆರೆ! ಶುಷ್ಕತರ್ಕವನ್ನು ಅವಲಂಬಿಸಬೇಡ! ಶಾಸ್ತ್ರವನ್ನರಿತವರಿಂದ ಆಲೋಚಿಸು; ಎಲ್ಲ ಜನರ ಧರ್ಮಗಳಲ್ಲಿಯೂ ಯಾವದಾದರೂ ದೋಷವಿದ್ದೇ ಇದೆ. ದೇವ ದೇವನಿತ್ತ ಕ್ಷತ್ರಿಯ ಜನ್ಮಕ್ಕೆ ದುಷ್ಟಹಿಂಸೆಯು ಧರ್ಮವೇ ಆಗಿದೆ. ದುಷ್ಟ ಹಿಂಸೆಯನ್ನು ಮಾಡದ ರಾಜನನ್ನು ಚೋರನೆಂದು ತಿಳಿ! ಕಾಗೆಗಳು ಮೀನುಗಳನ್ನು ಹಾರಿಸಿಕೊಂಡು ಹೋಗುವಂತೆ, ಪರದ್ರವ್ಯಾದಿಗಳನ್ನು ಕದಿವ ಕಳ್ಳರನ್ನು ದಂಡಿಸದ ರಾಜನು ಕ್ಷತ್ರಿಯ ಕುಲಕಜ್ಜಲನೆಂದು ತಿಳಿ! ಅಶಿಷ್ಟ ನಿಗ್ರಹವೇ ಶಿಷ್ಟಪಾಲನವು. ಅದನ್ನು ಮಾಡು! ಇದು ತನ್ನಷ್ಟಕ್ಕೆ ತಾನೇ ಸಿದ್ಧಿಸುವುದು.'

## ೩. ಶರಣಾಗತರಕ್ಷಣ

ಧರ್ಮರಾಜನು 'ತಾತ ಆಪತ್ತಿಗೆ ಸಿಲುಕಿ, ಶರಣಾಗತರಾಗಿ ಬಂದವರನ್ನು ಎಂತು ನೋಡಿಕೊಳ್ಳಬೇಕು?' ಎಂದು ಕೇಳಿದನು. ಭೀಷ್ಮನು ಇಂತು ನುಡಿದನು: 'ರಾಜನ್! ಶರಣಾಗತನಾದರೆ, ಶತ್ರುವಿನನ್ನೂ ಬಿಡದೆ ರಕ್ಷಿಸಬೇಕು. ಶರಣಾಗತ ರಕ್ಷಣಕ್ಕೆ ಸಮವಾದ ಪುಣ್ಯವಿಲ್ಲ. ಹಿಂದೆ ಮುಚುಕುಂದನು ಕೇಳಲು ಭಾರ್ಗವನು ಶರಣಾಗತರಕ್ಷಣ ಮಹಿಮೆಯನ್ನು ಇತಿಹಾಸ ಮುಖವಾಗಿ, ವರ್ಣಿಸಿದನು:

ವ್ಯಾಧನೋರ್ವನು ವಿಹಂಗಮ ಕುಲಾಂತಕನಾಗಿ, ಅರಣ್ಯದಲ್ಲಿದ್ದನು. ಹೆಂಡತಿಯೊಡನೆ ವನದಲ್ಲಿದ್ದು, ಅತಿ ಕ್ರೂರ ವೃತ್ತಿಯಿಂದ ಜೀವಿಸುವ ವ್ಯಾಧನನ್ನು ಅವನವರೂ ಕೂಡ ರೋಸಿ, ತ್ಯಜಿಸಿದರು. ಅವನನ್ನು ಕಂಡು, ಯಮದೂತನೇ ಬಂದನೆಂದು ತಿಳಿದ ಮೃಗ ಪಕ್ಷಿಗಳು ದೂರ ಓಡುತ್ತಿದ್ದವು. ಒಂದು ದಿನ ಬೇಟೆಯಾಡಲು ಹೋಗಿದ್ದ ವ್ಯಾಧನು, ಅರಣ್ಯದಲ್ಲಿ ಗಾಳಿಮಳೆಗಳಿಗೆ ಸಿಕ್ಕನು. ಕಣ್ಣುಚ್ಚಿ ತೆಗೆಯುವಷ್ಟರಲ್ಲಿ, ನೆಲವೆಲ್ಲವು ನೀರಾಯಿತು. ಗಿಡಗಳು ಬೇರೊಡನೆ ಉರುಳಿದವು. ರಾತ್ರಿಯೂ ಆಗಿ ಕತ್ತಲು ಸುತ್ತಲೂ ವ್ಯಾಪಿಸಿತು. ಗಡಿಗೆಗಳಿಂದ ಎಡೆಬಿಡದೆ ಸುರಿದಂತೆ ಮಳೆಯ ಧಾರೆಗಳು ಬೀಳುತ್ತಿದ್ದವು. ಮೋಡ ಕವಿದು ಚುಕ್ಕೆಗಳು ಕಾಣದಾದವು. ಗಾಳಿಮಳೆಗೆ ಸಿಕ್ಕ ವ್ಯಾಧನು ಚಳಿಯಿಂದ ಗದಗದ ನಡುಗುತ್ತಿದ್ದನು. ಮೃಗಪಕ್ಷಿಗಳ ಆಕ್ರಂದನವು ಆ ವನದ ನೀರವತೆಯನ್ನು ಭೇದಿಸಿಕೊಂಡು ಬರುತ್ತಿತ್ತು. ದಿಕ್ಕು ತೋಚದೆ, ನಿಂತಿದ್ದ ಬೇಡನಿಗೆ ಕಪೋತಿಯೊರ್ವಳು

ಚಳಿಗೆ ಚಡಪಡಿಸುತ್ತಾ; ನೆಲದಿ ಬಿದ್ದವಳು ಕಂಡಳು. ದಯಾರಹಿತನಾದ ಬೇಡನು ಆ ಹೆಣ್ಣು ಪಾರಿವಾಳವನ್ನು ತನ್ನ ಬುಟ್ಟಿಯಲ್ಲಿಟ್ಟು, ನಡುಗುತ್ತಾ ನಡೆದು ಒಂದು ಆಲದ ಗಿಡವನ್ನು ಸೇರಿದನು. ಅಲ್ಲಿ ಮಳೆಗಾಳಿಗಳ ಕಾಟವಿದ್ದಿಲ್ಲ. ಅಂದಿನ ರಾತ್ರಿಯನ್ನು ಅಲ್ಲೇ ಕಳೆಯಲು ನಿಶ್ಚಯಿಸಿ, ವ್ಯಾಧನು, ತನ್ನ ಚಿಕ್ಕ ಬಲೆಗಳು, ಬಾಣಬಿಲ್ಲುಗಳು, ಬುಟ್ಟಿಗಳನ್ನು ನೆಲದಲ್ಲಿಟ್ಟು, ವಿಶ್ರಮಿಸಿದನು.

ಆಗ ಮಳೆಯೂ ನಿಂತಿತು. ಗಾಳಿಯೂ ಅಡಗಿತು. ಆಕಾಶವು ನಿರ್ಮಲವಾಯಿತು. ಚುಕ್ಕೆಗಳೂ ಮಿನುಗಿದವು. ವಿಧಾತನು ಪರೋಪಕಾರಕ್ಕೆಂದೇ ನಿರ್ಮಿಸಿದ ಸುಜನನಂತೆ, ಆಲದ ಮರವು ತನ್ನ ನೆರಳನ್ನು ಆಶ್ರಯವಾಗಿಸಿ, ಮಳೆಗಾಳಿಗಳಿಂದ ರಕ್ಷಿಸಿತು. ಮನೆಗೆ ತೆರಳುವ ಮನ ಮಾಡಿದ ಬೇಡನು, ಇನ್ನೂ ನಡುರಾತ್ರಿಯಾಗಿರುವುದನ್ನು ಕಂಡು, ಅಲ್ಲೇ ತಂಗಿದನು. ಅವನಿಗೆ ಚಳಿ ಬಹಳವಾಯಿತು; ನಿದ್ದೆ ಬರದೆ ಅವನು ನಡುಗುತ್ತಾ ಕೂತಿದ್ದನು.

ಅದೇ ಗಿಡದಲ್ಲಿ ಗೂಡನ್ನು ಕಟ್ಟಿಕೊಂಡು ಒಂದು ಪಾರಿವಾಳಗಳ ಜತೆ ಇತ್ತು. ಕಪೋತನು ತನ್ನ ಹೆಂಡತಿ, ಪ್ರಾತಃಕಾಲದಿ ಹೋದವಳು, ನಡುರಾತ್ರಿಯಾದರೂ ಬಾರದಿರುವುದನ್ನು ಕಂಡು, 'ಅಯ್ಯೋ! ಏನು ಮಾಡಲಿ? ಎಲ್ಲಿರುವಳು ನನ್ನ ಪ್ರಿಯತಮೆ! ಏಕೆ ಹಿಂದಿರುಗಿ ಬರಲಿಲ್ಲ? ಅಡವಿಯಲ್ಲಿ ಅವಳಿಗೆ ಏನು ಅಪಾಯವಾಯಿತೋ. ಅವಳಿಲ್ಲದ ನನ್ನ ಮನೆಯು ಶೂನ್ಯವಾಗಿದೆ. ಪುತ್ರಪೌತ್ರ ಬಂಧು ಭೃತ್ಯರಿದ್ದರೂ ಭಾರ್ಯಾಹೀನನಿಗೆ ಮನೆಯು ಶೂನ್ಯವೇ ಸರಿ! ಗೃಹಿಣಿಯನ್ನು ಗೃಹವೆಂಬರು; ಬರೀ ಗೃಹವನ್ನಲ್ಲ. ಗೃಹಿಣೀಹೀನವಾದ ಗೃಹವು ಅರಣ್ಯವೆನಿಸುವುದು. ರಕ್ತನೇ ತ್ರಾಂತಳು, ಮಧುರಸ್ವರಳು ಆದ ನನ್ನ ಕಾಂತೆಯು ಬಾರದಿದ್ದರೆ, ಇನ್ನು ನಾನೇಕೆ ಬದುಕಿರಬೇಕು? ಉಂಡ ಮೇಲುಣ್ಣುತ್ತಿದ್ದಳು; ಮಿಂದರೆ ಮಿಂದು, ನಿಂತಲ್ಲಿ ನಿಂತು, ಮಲಗಿಸಿ ಮಲಗಿ, ನಕ್ಕರೆ ನಕ್ಕು, ಅತ್ತರೆ ಆಶ್ವಾಸಿಸಿ, ಮೆರೆದರೆ ಹಿಗ್ಗಿ, ನರಳಿದರೆ ಕುಗ್ಗಿ, ದೂರ ಹೋದರೆ ವಿರಹದಿಂದ ಮಗ್ಗಿ, ನನ್ನನ್ನೇ ನಂಬಿದ್ದಳು. ಅಂತಹ ಹೆಂಡತಿಯು ಸಿಕ್ಕಬೇಕಾದರೆ ಬಲು ಪುಣ್ಯವನ್ನು ಮಾಡಿರಬೇಕು. ಪತಿವ್ರತೆಯನ್ನು ಕೈ ಪಿಡಿದ ಪತಿಯೇ ಧನ್ಯನು! ಹಸಿವೆಯನ್ನರಿತು ತಿನ್ನಿಸಿ, ರೋಗವನ್ನರಿತು ಉಪಚರಿಸಿ, ದಣಿವನ್ನರಿತು ತಣಿಸಿ, ಅನುರಕ್ತಳು, ಭಕ್ತಳು ಆದ ಭಾರ್ಯೆಯನ್ನು ಮರಳಿ ಎಂತು ಪಡೆಯಲಿ? ಹಾ ದೈವವೇ! ವೃಕ್ಷಮೂಲವು ಕೂಡ ಸತೀ ಸಹಿತನಾದೆನಗೆ ಪ್ರಾಸಾದವಾಗಿತ್ತು. ಈಗ ತದ್ವಿರಹಿತವಾದ ಗೃಹವು ಶ್ಮಶಾನದಂತಿದೆ. ಧರ್ಮವು ಅವಳಿಂದ; ಕಾಮವು ಅವಳಿಂದ; ಅರ್ಥವೂ ಅವಳಿಂದ; ಬಂಧುವರೆಯು, ಲೋಕಯಾತ್ರಾ ಸಹಾಯಕಳು, ಪತಿವ್ರತೆಯು ಆದ ಪತ್ನಿಯನ್ನು ತೊರೆದಿರುವುದೆಂತು?' ಎಂದು ಚಿಂತಿಸಿದನು.

ಈ ವಚನಗಳನ್ನು ಆಲಿಸುತ್ತಿದ್ದ ಕಪೋತಿಯು, ಬುಟ್ಟಿಯೊಳಗಿದ್ದು ಇಂತು ಚಿಂತಿಸಿದಳು. 'ಇಂತಹ ಸತ್ಪತಿಯನ್ನು ಕಂಡ ನಾನೇ ಧನ್ಯಳು. ನನ್ನ ಮರೆಯಲ್ಲಿ ನನ್ನ ಗುಣಗಳನ್ನು ಪ್ರಶಂಸಿಸುವ ಪತಿಯ ಮೆಚ್ಚುಗೆಯನ್ನು ಪಡೆದು ಧನ್ಯಳಾದೆನು. ಇನ್ನು

ನಾನು ಸತ್ತರೂ ಚಿಂತೆಯಿಲ್ಲ. ಸರ್ವದೇವತಾಪ್ರತಿನಿಧಿಯಾದ ಪತಿದೇವನು ಪ್ರೀತನಾದನು. ನನ್ನ ಹೆಣ್ಣು ಜನ್ಮವು ಫಲವಂತವಾಯಿತು. ಪತಿಯ ಪ್ರೀತಿಯನ್ನು ಕಾಣದವಳು ಕಾಳ್ಗಿಚ್ಚಿಗೆ ಸಿಕ್ಕ ಪಾರಿಜಾತಲತೆಯಂತೆ ಸುಕ್ಕಿ ಸುರುಗಬೇಕಾಗುವುದು. ಒಳ್ಳೆಯದಾಯಿತು. ನನ್ನ ಪತಿಯಿಂದಲು ಒಳ್ಳೆಯ ಕೆಲಸವನ್ನು ಮಾಡಿಸುವೆನು, ಇಂತು ಚಿಂತಿಸಿ, 'ಪತಿದೇವ! ಈ ಬೇಡನ ಬುಟ್ಟಿಯಲ್ಲಿ ಸಿಕ್ಕಿರುವೆನು. ಕೇಳು! ನನ್ನ ಆಶೆ ಬಿಡು! ಆಶೆಗೆ ದೇವತೆ ಭಾರತಿಯಂತೆ! ಆಶೆಯನ್ನು ಗೆದ್ದವನು ಅವಳ ಪತಿ ಮುಖ್ಯ ಪ್ರಾಣನೊಬ್ಬನೇ ಅಂತೆ! ನನ್ನ ಆಶೆಗಾಗಿ ಪ್ರಾಣವನ್ನು ಬಿಡದಿರು. ನೀನು ಈ ನಮ್ಮ ಮನೆಗೆ ಶ್ರಾಂತನಾಗಿ ಬಂದಿರುವ ಬೇಡನಿಗೆ ಶತ್ರುವೆಂದು ನಿಂದಿಸದೆ ಅತಿಥಿ ಸತ್ಕಾರವನ್ನು ಮಾಡು! ಶೀತಾರ್ತನಾಗಿ ಕ್ಷುಧಾರ್ತನಾಗಿ ವ್ಯಾಧನು ಶರಣಾಗತನಾಗಿರುವನು. ಗೋಹತ್ಯೆ, ಮಾತೃಹತ್ಯೆಗಳಿಗೆ ಸಮಪಾತಕವಾಗಿದೆ ಶರಣಾಗತಪರಿತ್ಯಾಗವು. ಗೃಹಸ್ಥನಾಗಿದ್ದು ಗೃಹಧರ್ಮವನ್ನು ಕೈಲಾದಷ್ಟು ಆಚರಿಸಿದವನು ಅಕ್ಷಯ ಲೋಕಗಳನ್ನು ಪೊಂದುವನು' ಎಂದು ಉಸಿರಿದಳು.

ಕಪೋತನು ಪತ್ನೀವಚನವನ್ನಾಲಿಸಿ, ಒಂದೇ ಸಲ ಹರ್ಷದುಃಖಗಳನ್ನು ಪೊಂದಿದನು. ಕೆಳಗಿಳಿದು, 'ವ್ಯಾಧ! ನಿನಗೆ ಸ್ವಾಗತವು! ನಮ್ಮ ಮನೆಯಲ್ಲ, ಇದು ನಿನ್ನ ಮನೆಯೆಂದು ತಿಳಿ! ನನ್ನಿಂದ ಏನಾಗಬೇಕು? ಹೇಳು! ಶರಣಾಗತನಾಗಿ ಬಂದ ಶತ್ರುವಿಗೂ ಆತಿಥ್ಯವನ್ನು ಕೊಡಬೇಕಂತೆ! ದೇವ, ಋಷಿ, ಪಿತೃ, ಭೂತ, ನರ ಪೂಜನವೆಂಬ ಪಂಚಯಜ್ಞಗಳನ್ನು ಮಾಡದ ಗೃಹಸ್ಥನು ಉಭಯ ಲೋಕ ಸುಖಕ್ಕೂ ಕೆಡುವನು' ಎಂದ ಪಕ್ಷಿಗೆ ವ್ಯಾಧನು 'ಶೀತಬಾಧೆಯನ್ನು ನಿವಾರಿಸು' ಎಂದು ಬೇಡಿದನು. ಕಪೋತನು ಹತ್ತಿರದ ಹಳ್ಳಿಗೆ ಹಾರಿ ಹೋಗಿ, ಕಮ್ಮಾರನ ಮನೆಯಿಂದ ಕೊಳ್ಳಿಯನ್ನು ತಂದನು. ಒಣತರಗೆಲೆಗಳಿಗೆ ಅದನ್ನಿಟ್ಟು ಹೊತ್ತಿಸಿ, ಸಣ್ಣ ಕಟ್ಟಿಗೆಯ ತುಂಡುಗಳನ್ನು ಹಾಕಿ ಅಗ್ನಿಯನ್ನು ಉದ್ದೀಪಿಸಿದನು. ವ್ಯಾಧನು ಶೀತಭಾಧೆಯನ್ನು ತೀರಿಸಿಕೊಂಡು, ದೈವಪ್ರೇರಿತನಾಗಿ, 'ಕಪೋತರಾಜ! ಚಳಿಬಾಧೆ ತೀರಿತು. ಹಸಿವಿಗೇನು ಮಾಡಲಿ?' ಎಂದನು. ಕಪೋತನು, 'ಅಯ್ಯೋ ಪಾಪ! ನಿನ್ನ ಹಸಿವೆಯನ್ನು ಹಿಂಗಿಸುವಷ್ಟು ವೈಭವವೆನಗಿಲ್ಲ. ಮನುಜರಂತೆ ಕೂಡಿಡುವ ಅಭ್ಯಾಸವಿಲ್ಲ. ಎಂದೇನು ಸಿಕ್ಕರೆ ಅದನ್ನುಂಡು ಬದುಕುವ ದ್ವಿಜರು ನಾವು. ಒಬ್ಬ ಅತಿಥಿಯನ್ನು ತೃಪ್ತಿಪಡಿಸಲಾರದಿರುವ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ!' ಎಂದು ಚಿಂತಿಸಿ, ಧೈರ್ಯವನ್ನು ವಹಿಸಿ, ನಗುನಗುತ್ತಾ ಆ ಪಕ್ಷಿರಾಜನು, ಅಗ್ನಿಗೆ ಪ್ರದಕ್ಷಿಣಿಸಿ, ಅದರಲ್ಲಿ ಬಿದ್ದುಬಿಟ್ಟನು. ಅದನ್ನು ನೋಡುತ್ತಿದ್ದ ಕಪೋತಿಯು 'ಹಾ! ಹತವಿಧೀ! ಇನ್ನು ನಾನೇಕೆ ಬದುಕಿರಲಿ! ಒಂದು ದಿನವಾದರೂ ಕೆಡುನುಡಿಯನ್ನಾಡದ ಪತಿಯೊಡನೆ ಪೋಗದೆ ಏಕೆ ಉಳಿಯಲಿ? ಬಹು ಪುತ್ರಳಾದರೂ ವಿಧವೆಯು ಶೋಚನೀಯಳೇ ಸರಿ! ಸುಂದರ ಕಂದರಗಳಲ್ಲಿ ಸುಮಧುರ ಫಲದಾನದಿಂದ ಸಂತೈಸಿ ಲಾಲಿಸಿ, ಮುದ್ದಿಸಿ, ರಮಿಸಿದ ಪತಿಯನ್ನು ನಾನೆಂದು ಬಿಟ್ಟಿಲ್ಲ. ಇಂದೂ ನಿನ್ನನ್ನು ಅನುಗಮಿಸಿ ಬರುವೆನು, ತಡೆ!' ಎಂದು ಚಿಂತಿಸಿ, ಮೆಲ್ಲನೆ ಸರಿದು ಬಂದು ತಾನೂ ಪತಿದೇವನ ಚಿತೆಯಲ್ಲಿ ಬಿದ್ದಳು.

ವ್ಯಾಧನು ದಂಪತಿಗಳ ತ್ಯಾಗವನ್ನು ಕಂಡು ಬೆರಗಾದನು. ಅವನ ಕಣ್ಣುಗಳಿಂದ ಕಂಬನಿಗಳು ಸುರಿದವು. ಅವನ ಮನವು ಪಶ್ಚಾತ್ತಾಪದಿಂದ ಬೆಂದಿತು. 'ಹಾ! ಎಂತಹ ಪಾಪಿ ನಾನು! ಸದಾ ಕ್ರೂರನು. ಹಿಂಸಾಮಯ ಜೀವನನು, ಧರ್ಮಬಾಹ್ಯನು ಆದ ನನ್ನ ಜೀವನಕ್ಕೆ ಧಿಕ್ಕಾರವಿರಲಿ! ಪಾಪ, ಈ ಪಕ್ಷಿಗಳು ನನಗಾಗಿ ಸತ್ತವು. ಪಕ್ಷಿಗಳಿಗಿರುವ ದಯಾ ಧರ್ಮಗಳಲ್ಲಿ ಲೇಶಾಂಶವೂ ಮನುಜನೆನಿಸಿದ ನನಗೆ ದೊರಕಲಿಲ್ಲ! ಛೀ! ಸಾಕೀ ಪಾಪೀಜೀವನ! ಇಂದು ಇಂತು ಧರ್ಮವನ್ನುಪದೇಶಿಸಿ ಪೊರೆದ ಪಾರಿವಾಳವೇ ನನ್ನ ಗುರುವು! ನಾನಿನ್ನು ಬದುಕಿರಲಾರೆನು. ನನಗೆ ಪುತ್ರದಾರಾದಿ ಜನರಿಂದೇನು? ನನ್ನ ಹಾಳು ಶರೀರದಿಂದೇನು! ಧರ್ಮವನ್ನು ಆರ್ಜಿಸುವೆನು. ಭೋಗಗಳನ್ನು ವರ್ಜಿಸುವೆನು. ಧರ್ಮವೇ ಪರಮಗತಿಪ್ರದವಾಗಿದೆ!'

ಇಂತು ಚಿಂತಿಸಿ ಆ ವ್ಯಾಧನು ಪಶ್ಚಾತ್ತಾಪದಿಂದ ಪುನೀತನಾದನು. ಅವನ ಕಣ್ಣೀರಿನಲ್ಲಿ ಅವನ ಪಾದ ಪಂಕವು ತೊಳೆದು ಹೋಯಿತು. ಅವನು ತನ್ನ ಹಿಂಸಾ ಸಾಧನಗಳನ್ನಂತೆ, ಕ್ರೂರತೆಯನ್ನೂ ಅಲ್ಲೇ ಬಿಟ್ಟು, ವನವನ್ನು ಪ್ರವೇಶಿಸಿದನು. ಆಗ ಅವನಿಗೆ ವಿಮಾನದಲ್ಲಿ ಕೂತು ದಿವ್ಯವಸ್ತ್ರಾಲಂಕಾರ ಭೂಷಿತರಾಗಿ, ಸ್ವರ್ಗವನ್ನು ಸೇರಿ ಪೋಗುವ ಪಕ್ಷಿ ದಂಪತಿಗಳು ಗೋಚರರಾದರು. ವ್ಯಾಧನು ವಿರಕ್ತನಾಗಿ ಮಹಾಪ್ರಸ್ಥಾನವನ್ನಾಶ್ರಯಿಸಿದನು. ವಾಯುಮಾತ್ರಾಹಾರನು, ನಿರ್ಮಮನು, ಆದ ವ್ಯಾಧನು ವನದಲ್ಲಿ ಕಂಟಕಶರ್ಕರಾವಿದ್ಧಪಾದನಾಗಿ ಸಂಚರಿಸಿದನು. ಒಂದು ದಿನ ಕಾಳ್ಗಿಚ್ಚು ಉರಿದೆದ್ದು ಬರುತ್ತಿರಲು ನೋಡಿ, ಅವನು ಹಿಂಜರಿಯದೆ, ನಗುತ್ತಾ, ಅದರಲ್ಲಿ ಪ್ರವೇಶಿಸಿ, ದಗ್ಧನಾದನು. ಅವನ ಪಾಪರಾಶಿಯೂ ದಗ್ಧವಾಯಿತು. ಅವನೂ ದಿವ್ಯ ವಿಮಾನವನ್ನೇರಿ, ಸ್ವರ್ಗಲೋಕವನ್ನು ಸೇರಪೋದನು.

ಧರ್ಮರಾಜ! ಶರಣಾಗತರಕ್ಷಕನಾದ ಕಪೋತನು, ಪತಿವ್ರತೆಯಾದ ಕಪೋತಿಯು, ಪಶ್ಚಾತ್ತಾಪ ಶುದ್ಧನಾದ ವ್ಯಾಧನು ಉತ್ತಮ ಗತಿಯನ್ನು ಪೊಂದಿದ ಈ ಪಾವನ ಗಾಥೆಯನ್ನು ಕೇಳಿ, ಪೇಳಿದವರು ಕೂಡ ಪಾಪಮುಕ್ತರಾಗಿ ಪುಣ್ಯಲೋಕವನ್ನು ಹೊಂದುವರು.'

ಪಾಪವನ್ನು ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಮನುಜನು ಶುದ್ಧ ವಿಪ್ರರಿಗೆ ಶರಣಾಗತನಾಗಬೇಕು. ಅವನ ಪಶ್ಚಾತ್ತಾಪವನ್ನು ಕಂಡು, ಅವರು ಕನಿಕರಿಸಿದರೆ, ಮನುಜನು ಪಾಪಮುಕ್ತನಾಗುವನು. ಹಿಂದೆ ಪಾರೀಕ್ಷಿತನಾದ ಜನಮೇಜಯನೆಂಬ ರಾಜನು ಅಬುದ್ಧಿಪೂರ್ವಕವಾಗಿ ನಡೆದ ಬ್ರಹ್ಮಹತ್ಯೆಗೆ ಗುರಿಯಾದನು. ಪುರೋಹಿತರಾದಿ ಎಲ್ಲ ಸುಜನರು ಅವನನ್ನು ಪರಿತ್ಯಜಿಸಿದರು. ಅವನ ಮುಖವು ನಿಸ್ತೇಜವಾಯಿತು. ಅವನು ಪಶ್ಚಾತ್ತಾಪದಿಂದ ಬೆಂದು, ಕೃಚ್ಛ್ರಚಾಂದ್ರಾಯಣಾದಿ ತಪದಿಂದ ದೇಹವನ್ನು ದಂಡಿಸಿದನು. ಕಂಡ ವಿಪ್ರರನ್ನು ತನಗೆ ಹತ್ತಿದ ಬ್ರಹ್ಮಹತ್ಯೆಯನ್ನು ಕಳೆಯಲು ಬೇಡಿದನು. ಯಾರೂ ಅವನನ್ನು ಶುದ್ಧ ಮಾಡಲಾರದಾದರು. ಕೊನೆಗೆ ಇಂದ್ರೋತನೆಂಬ ಶೌನಕಮುನಿಗೆ ಶರಣಾದನು.

ಶೌನಕನು ಅವನನ್ನು ಕಂಡು, ಜುಗುಪ್ಸೆಪಟ್ಟು ಇಂತೆಂದನು: 'ಪಾಪಿರಾಜನೇ,

ಇಲ್ಲಿಗೇಕೆ ಬಂದೆ? ಏನು ಪ್ರಯೋಜನವಾದೀತು ನಮ್ಮಿಂದ ನಡೆ ಇಲ್ಲಿಂದ! ಶವಸದೃಶ ಮುಖವು ನಿಸ್ತೇಜವಾಗಿದೆ. ಮಾಡಿದ ಮಹಾ ಪಾಪದಿಂದ ಜೀವನ್ಮೃತನಾಗಿರುವೆ! ಬ್ರಾಹ್ಮಣದ್ರೋಹವನ್ನು ಮಾಡಿ, ನನ್ನಲ್ಲಿಗೆ ಯಾವ ಮುಖವನ್ನಿಟ್ಟು ಬಂದೆ! ನಿನ್ನಿಂದ ನಿನ್ನ ಪಿತೃಗಳೂ ನರಕಪತಿತರಾಗುವ ಸ್ಥಿತಿ ಬಂತು. ಯಾರನ್ನು ಪೂಜಿಸಿ, ಜ್ಞಾನ ಸ್ವರ್ಗಸಂಪತ್ಸಂತಾನ ಮೋಕ್ಷಗಳನ್ನು ಸಾಧಿಸಲಾಗುವುದೋ, ಅಂತಹ ಬ್ರಾಹ್ಮಣರನ್ನು ದ್ವೇಷಿಸಿ, ದ್ರೋಹವೆಸಗಿರುವೆ! ಇಹಲೋಕವಿಲ್ಲ; ಪರಲೋಕವಿಲ್ಲ! ಎಂದು ತಿಳಿದ ನಾಸ್ತಿಕನಂತೆ ವರ್ತಿಸಿದ ನಿನಗೆ, ಎರಡೂ ಇವೆ ಎಂದು ಯಮದೂತರು ತೋರಿಸುವರು! ನಡೆ ನಡೆ!'

ಇಂತು ನಿಂದಿಸಿದ ಮುನಿಯಲ್ಲಿ ಕೋಪಿಸದೆ, ಜನಮೇಜಯನು (ಭಾರತವನ್ನು ಕೇಳಿದ ಜನಮೇಜಯನ ಪೂರ್ವಜನು) ವಿನಯದಿಂದ ಬಾಗಿ, ಪಶ್ಚಾತ್ತಾಪದಿಂದ ಕಣ್ಣೀರಿಡುತ್ತಾ, ಇಂದ್ರೋತ! ನಿಂದ್ಯನನ್ನು ನಿಂದಿಸಿದೆ! ನಾನು ಮಾಡಿದ ಪಾಪವೆನಗೆ ಗೊತ್ತಿದೆ. ಪಶ್ಚತ್ತಾಪಾಗ್ನಿಯಲ್ಲಿ ಬೆಂದಿರುವೆನು. ಯಮರಾಜನು ಪಡಿಸುವ ಯಾತನೆಗಳಿಗೆ ಹೆದರಿ, ನಿನಗೆ ಶರಣಾಗತನಾಗಿ ಬೆಂದಿರುವೆನು. ನನ್ನ ಪಾಪದಿಂದ ಕುಲವೆಲ್ಲ ಹಾಳಾಗದೆ ಉಳಿಯಲಿ! ನಾನು ಬ್ರಾಹ್ಮಣ ಭಕ್ತನಾಗಿದ್ದೆನು. ಅವರನ್ನು ಪೂಜಿಸಿದವನಲ್ಲ. ಅವರ ಮಹಿಮೆಯನ್ನು ತಿಳಿಯದಿಲ್ಲ. ಪ್ರಮಾದದಿಂದ ಪಾಪವಾಗಿದೆ! ತಂದೆಯು ಮಗ ನನ್ನಂತೆ, ನನ್ನನ್ನು ಪಾಪದಿಂದ ಉದ್ಧರಿಸು! ಯೋಗಿಜನರು ತಾವು ನಿರ್ಧನರಾದರೂ, ದೀನದರಿದ್ರರನ್ನು ಸಲಹುವರು. ನನಗೆ ಪ್ರಾಯಶ್ಚಿತ್ತವನ್ನು ಮಾಡಿಸಿ ಸಲುಹು!' ಎಂದು ಬೇಡಿದನು.

ಇಂದ್ರೋತನು, 'ರಾಜನ್! ಆಶ್ಚರ್ಯವಾಗಿದೆ. ನಿನ್ನಂತಹ ಪ್ರಾಜ್ಞನೂ ಮೈಮರೆತು ಬ್ರಹ್ಮಹತ್ಯೆಯನ್ನು ಮಾಡಿರುವುದು ಕಂಡು! ಇನ್ನು ಪಾಮರ ಜನರ ಪಾಡೇನು! ಸಾಧು ಜನರನ್ನು ಸೇರದೆ, ಅವರ ಹಿತಮಿತ ನುಡಿಗಳಿಗೆ ಕಿವಿಗೊಡದೆ, ಮನುಜನು ವಿವೇಕಿಯಾಗಲಾರನು. ನಿನ್ನ ಪಶ್ಚಾತ್ತಾಪವು ನಿರ್ಮಲವಾಗಿದೆ. ಬ್ರಾಹ್ಮಣರಿಗೆ ಶರಣು ಹೋಗು!' ಎಂದನು.

ಜನಮೇಜಯನು 'ಮುನಿವರ! ನಿನ್ನ ಹೊರತಿನ್ನಾರೆನಗೆ ಗತಿ? ಧರ್ಮಲೋಪವನ್ನು ಮಾಡುವ ನಾಸ್ತಿಕನಿಲ್ಲ. ನಿನ್ನನ್ನು ನಂಬಿ ಬಂದ ನನ್ನಲ್ಲಿ ಕರುಣಿಸು!' ಎಂದನು. ಶೌನಕನಿಂತೆಂದನು: 'ಒಳ್ಳೆಯದು ರಾಜನ್! ದಂಭ ಮಾನಗಳನ್ನು ಬಿಟ್ಟು, ಕೇವಲ ಕರುಣೆಯಿಂದ ನಿನ್ನನ್ನು ಶಿಷ್ಯನಾಗಿ ಸ್ವೀಕರಿಸುವೆನು. ನನಗೆ ಧನಾಶೆಯಿಲ್ಲ ತಿಳಿ! ಬೇಕಾದವರು 'ಇವನು ಧನಾಶೆಯಿಂದ ರಾಜನಿಗೆ ಪ್ರಾಯಶ್ಚಿತ್ತವನ್ನು ಮಾಡಿಸಿದ' ನೆಂದು ಇತ್ಯಾದಿ ಕಟುವಚನಗಳಿಂದ ಬೇಕಾದಂತೆ ಆಡಲಿ! ಆದರೆ ಅಂತಹ ನೀಚಬುದ್ಧಿಗಳಿಗೆ ನಾನು ಹೆದರಿ, ಪರೋಪಕಾರ ವಿಮುಖನಾಗುವುದಿಲ್ಲ. ನಾನು ಜ್ಞಾನಿಜನರಿಗೆ ಹೆದರುವೆನು. ಅವರಿಂದ ನಿಂದಿತನಾಗದಂತೆ ನನ್ನನ್ನು- ನಿನ್ನ ಸದ್ವರ್ತನದಿಂದ ಉಳಿಸು! ನಿನಗೆ ಧರ್ಮವೇನೆಂದು ಗೊತ್ತಿದೆ. ಹಿಂದೆ ಮಾಡಿದ ದಾರುಣ ಕೃತ್ಯಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಂಡು,

ಮುಂದೆ ಅಂತಹ ಯಾವ ಪಾಪವನ್ನೂ ಮಾಡದಿರು! ಧನವಿದ್ದವರೆಲ್ಲ ದಾತೃಗಳಾಗರು. ದರಿದ್ರರೆಲ್ಲ ತಪಸ್ವಿಗಳಾಗರು. ನೀನು ಧನದಿಂದ ದಾತನಾಗು! ಪಶ್ಚಾತ್ತಾಪದಿಂದ ತಪವನ್ನು ಮಾಡು!

ತಪಸ್ಸೆಂದರೆ ಯಜ್ಞದಾನ, ದಯಾ, ವೇದಾಧ್ಯಯನ, ಸತ್ಯವಚನಗಳೆಂದು ತಿಳಿ! ಅದಕ್ಕಿಂತಲು ಪಾಪಕ್ಷಾಳನ ಸಮರ್ಥವಿನ್ನೊಂದಿಲ್ಲ. ಯಯಾತಿಯು ರಾಜಮಾತ್ರನಿಗೆ ಯಜ್ಞದಾನಗಳು ಪರಮ ಶ್ರೇಯಸ್ಕರವೆಂದು ನುಡಿದಿರುವನು. ಕುರುಕ್ಷೇತ್ರ, ಪೃಥೂದಕ, ಪುಷ್ಕರ, ಪ್ರಭಾಸ, ಪ್ರಯಾಗ, ಬದರೀ, ಮಾನಸ ಸರೋವರ, ಶ್ರೀರಂಗ, ವೆಂಕಟಗಿರಿ ಮುಂತಾದ ಪುಣ್ಯಕ್ಷೇತ್ರಗಳಲ್ಲಿ, ಪುಣ್ಯತೀರ್ಥಗಳನ್ನು ಸೇವಿಸು! ಪವಿತ್ರ ವಿಷ್ಣು ಮೂರ್ತಿಗಳನ್ನು ಪೂಜಿಸು! ಸುಖ ದುಃಖಗಳು ಮಾನಸಿಕಾಭಿಮಾನದಿಂದ ಉಂಟಾಗುತ್ತಿವೆ. ಬಾಹ್ಯವಿಕಾರಗಳಾಗದಂತೆ ಮನವನ್ನು ನಿಗ್ರಹಿಸು! ಬ್ರಾಹ್ಮಣಾದಿ ಸುಜನರ ಕ್ಷೇಮಕ್ಕಾಗಿ ರಾಜ್ಯವನ್ನಾಳು! ನಿನ್ನ ವಿಷಯಭೋಗವನ್ನು ಕಡೆಗಣಿಸು! ಹಿಮದಂತೆ ಶೀತಲನು, ಅಗ್ನಿಯಂತೆ ದುರ್ಧರ್ಷನು, ಯಮನಂತೆ ದುಷ್ಟ ಶಾಸಕನು ಆಗು! ನೇಗಿಲಂತೆ ದುಷ್ಟರನ್ನು ಉನ್ಮೂಲಿಸು! ಸಿಡಿಲಂತೆ ಕೆಡುಜನರ ತಲೆಬಡಿ! ಗುಣವಿಲ್ಲದವರನ್ನು ಸೇರಬೇಡ! ಸುಜನ ಸಂಗ ಬಿಡಬೇಡ! ಗಂಧವನ್ನು ಹಚ್ಚಿ ಬಂದವನು ಗಮಗಮಿಸುವನು. ಮಲದ ಗೊಜ್ಜಲಾಡಿ ಬಂದವನು ಗಬ್ಬು ಬಡಿಯುವನು. ನೀರಿನಲ್ಲಿದ್ದು "ಋತಂ ಚ ಸತ್ಯಂ ಚ" ಎಂಬ ಅಘುಮರ್ಷಣವನ್ನು ಜಪಿಸಿದವನು, ಅಶ್ವಮೇಧಾವಭೃಥದ ಪುಣ್ಯವನ್ನು ಪಡೆದು, ಪಾಪಮುಕ್ತನಾಗುವನು. ಬೃಹಸ್ಪತಿಯ ಮಾತನ್ನು ಕೇಳು! ಅಬುದ್ಧಿಪೂರ್ವಕವಾಗಿ ಪಾಪವನ್ನು ಮಾಡಿದವನಿಗೆ ಬುದ್ಧಿಪೂರ್ವಕ ಪುಣ್ಯ ಕಾರ್ಯವೇ ಪ್ರಾಯಶ್ಚಿತ್ತವು. ಪಾಪದಿಂದ ಪಶ್ಚಾತ್ತಾಪಪಟ್ಟು, ಮತ್ತೆ ಮಾಡದಿದ್ದರೆ, ಮತ್ತು ಸುಜನರ ಪ್ರಮಾದಗಳನ್ನೆಣಿಸದೆ ಅವರಿಗೆ ಕಲ್ಯಾಣವನ್ನು ಬಯಸಿದರೆ ಮನುಜನು ಸರ್ವಪಾಪ ಮುಕ್ತನಾಗುವನು.'

ಇಂತು ಸಾಂತ್ವನಗೊಳಿಸಿ ಇಂದ್ರೋತಶೌನಕನು ಜನಮೇಜಯನಿಂದ ವಾಜಿಮೇಧವನ್ನು ಮಾಡಿಸಿದನು. ಅವನು ರಾಹುಮುಕ್ತ ಚಂದ್ರನಂತೆ ಪಾಪಮುಕ್ತನು ಆದುದಲ್ಲದೆ, ಪ್ರಜಾಪ್ರೀತಿಯನ್ನೂ, ವಿಪ್ರಾಶೀರ್ವಾದವನ್ನೂ ಹೊಂದಿ, ಕೊನೆಗೆ ಮುಕ್ತನಾದನು."

## ೪. ಗೃಧ್ರಜಂಬುಕ ಸಂವಾದ

ಧರ್ಮರಾಜನು 'ತಾತ, ಮರಣವೆಂಬ ಆಪತ್ತಿಗೆ ತುತ್ತಾಗಿ, ಬದುಕಿ ಬಂದವರನ್ನು ಕಂಡಿರುವೆಯಾ?' ಎಂದು ಕೇಳಿದನು. ಭೀಷ್ಮನಿಂತೆಂದನು: 'ಈಶ್ವರಾನುಗ್ರಹದಿಂದ ಶಿಶುವು ಅಕಾಲ ಮೃತ್ಯುವಿನ ದವಡೆಯಿಂದ ಉಳಿದು ಬರಲು ಕಾರಣವಾದ ಗೃಧ್ರ ಜಂಬುಕ ಸಂವಾದವನ್ನು ನಿನಗೆ ತಿಳಿಸುವೆನು ಕೇಳು!'

ಒಬ್ಬ ವಿಪ್ರನಿಗೆ ವೃದ್ಧಾಪ್ಯದಲ್ಲಿ ಒಬ್ಬ ಮಗನಾದನು. ಅವನು ಬಾಲಗ್ರಹ

ಪೀಡಿತನಾಗಿ ಮೃತನಾದನು. ಕುಲದೀಪಕನಾದ ಏಕೈಕ ಪುತ್ರನ ಮೃತಿಗೆ ದುಃಖಿಸುತ್ತಾ ಬಂಧು-ಮಿತ್ರರು ಶ್ಮಶಾನದಲ್ಲಿ ಬಾಲನ ಶವವನ್ನು ಸುತ್ತುವರಿಸಿ ಕೂತು, ಅಳುತ್ತಿದ್ದರು. ಆಗ ಹದ್ದು ಒಂದು ಅಲ್ಲಿಗೆ ಬಂದು, 'ಎಲವೊ ಹುಚ್ಚಪ್ಪಗಳಿರಾ! ನೀವು ಅಳುತ್ತಾ ಕೂತರೆ, ಕೂಸು ಬದುಕುವುದೇ? ಎಷ್ಟೋ ಜನ ಸತ್ತು ಇಲ್ಲಿಗೆ ಬಂದರು. ಅವರ ಹಿಂದೆ ಬಂಧುಗಳೂ ಬಂದರು. ಸುಟ್ಟು ಹೂತಿಟ್ಟು ಹೋದರಾಗಲಿ, ನಿಮ್ಮಂತೆ ಯಾರೂ ಅಳುತ್ತಾ ಕೂಡಲಿಲ್ಲ! ಆಯುವು ಮುಗಿದರೆ ಎಲ್ಲರೂ ಸಾಯುವವರೆ! ಅದಕ್ಕೇಕೆ ಶೋಕ? ರಾತ್ರಿಯಾಗುತ್ತಿದೆ. ಭಾನುಮಂಡಲವು ಪಶ್ಚಿಮಾಂಬುಧಿಯಲ್ಲಿ ಮುಳುಗುತ್ತಿದೆ. ಕಂಕಾಲ, ಗೃಧ್ರ, ಗೋಮಾಯು ಸಂಕುಲವಾದ ಮಸಣದಲ್ಲಿ, ಕತ್ತಲು ಕವಿದಾಗ, ನಿಮಗೆ ಹೆದರಿಕೆಯಾಗುವುದಿಲ್ಲವೇ? ಕೃತಾಂತನ ಕೃತಿಯು ನಿತಾಂತ ದುಸ್ತರವೆಂದು, ದಿನಾಂತದಿ, ಮುಳುಗುತ್ತಿರುವ ದಿನಕಾಂತನನ್ನು ನೋಡಿ ತಿಳಿಯಿರಿ! ಸುತ ಶೋಕವನ್ನು ಕಳೆಯಿರಿ! ಮನೆಗೆ ತೆರಳಿರಿ!' ಎಂದಿತು.

ಹದ್ದಿನ ಬುದ್ಧಿಯನ್ನಾಲಿಸಿ, ಬಂಧುಗಳು ಮುದ್ದು ಕೂಸನ್ನು ಬಿಟ್ಟು ಹೋಗಲಾರದೆ, ಅಳಲಾರಂಭಿಸಿದರು; ಅವರು ಅವನ ಆಶೆಯನ್ನೂ ಬಿಟ್ಟು ಎದ್ದು ನಿಂತರು. ಆಗ ಬಿಲದಿಂದ ಹೊರಬಂದ ನರಿಯೊಂದು ಅವರಿಗೆ ಇಂತೆಂದಿತು: 'ಆಹಾ! ಮನುಜರಷ್ಟು ನಿರ್ದಯರಿನ್ನಿಲ್ಲ! ಕೂಸೆಷ್ಟು ಮುದ್ದಾಗಿದೆ. ಅಂತಹ ಕರುಳಿನ ತಿರುಳನ್ನು ಇಲ್ಲಿ ಮಣ್ಣಿನಲ್ಲಿಟ್ಟು, ಹೋಗಲು ಹವಣಿಸುವುದು ಬಂಧುಗಳಿಗೆ ತರವಲ್ಲ. ಕೂಡಿರಿ! ಅಳಿರಿ ಕೂಸಿಗಾಗಿ! ಜೀವವನ್ನು ಕೊಡಲಾಗದು ನಿಜ! ಆದರೆ ಅಳಲಾಗದೇ? ಏನೋ ದೈವ ವಿಲಾಸದಿಂದ ಕೂಸು ಬದುಕಿದರೂ ಬದುಕಬಹುದು! ಇನ್ನೂ ಸೂರ್ಯನು ಮುಣಗಿಲ್ಲ. ಪಶುಪಕ್ಷಿಗಳು ಕೂಡ ಮಕ್ಕಳಿಗಾಗಿ ಮರುಗುವವು. ಮಕ್ಕಳಿಗಿತ್ತು ತಾವು ತಿನ್ನುವವು. ಪುತ್ರಮುಖವನ್ನು ನೋಡುತ್ತಾ ಕೂತರೆ ಸಾಕು, ಎಲ್ಲ ದುಃಖಗಳೂ ದೂರವಾಗುವವು, ಕುಲವರ್ಧನನಾದ ಪುತ್ರನಿಗೆ ನೀವು ಬಂಧುಗಳಾಗಿ-ಅಳುತ್ತಾ ನಿಲ್ಲದಿದ್ದರೆ, ಮತ್ತಾರು ನಿಲ್ಲುವರು? ಎಷ್ಟು ಸೊಗಸಾಗಿದೆ ಈ ಕೂಸು!' ಆ ಮಾತನ್ನಾಲಿಸಿ ಬಂಧುಗಳು ಕೂತು ಅಳತೊಡಗಿದರು.

ಆ ಮಾತಿಗೆ ಹದ್ದು ಇಂತೆಂದಿತು: 'ಈ ನರಿಯ ಮಾತು ನಂಬಬೇಡಿ! ಇದು ಕ್ಷುದ್ರ ಬುದ್ಧಿಯು. ಪಂಚಭೂತಗಳಿಂದ ಮಾಡಿದ ಶಿಶುದೇಹವು ಪ್ರಾಣವಿಲ್ಲದೆ, ಕಾಷ್ಠ ಸಮವಾಗಿ ಬಿದ್ದಿದೆ; ಅತ್ತರೆ ಬದಕಲಾರದು. ತಪಸ್ಸನ್ನು ಮಾಡಿ, ಆ ಪುಣ್ಯದಿಂದ ಮತ್ತೊಬ್ಬ ಸುತನನ್ನು ಪಡೆಯಬಹುದು. ಧನ, ಗೋಧನ, ಸಂತಾನ, ಸುವರ್ಣ, ರತ್ನ, ಬಂಧುಜನರನ್ನು ತಪಃ ಪುಣ್ಯದಿಂದ ಪೊಂದುವರು. ಕರ್ಮಾನುರೂಪವಾಗಿ ಸುಖಗಳು, ದುಃಖಗಳು ಬರುವವು. ಪಾಪಕರ್ಮದಿಂದ ಈ ದುಃಖವು ಒದಗಿಬಂದಿದೆ. ನಿಮ್ಮ ಕರ್ಮಫಲವನ್ನು ಮತ್ತಾರೂ ಉಣ್ಣಲಾಗದು. ಶಿಶುವಿನ ಮೃತಿಯನ್ನೂ ನೀವು ತಡೆಯಲಾರಿರಿ! ದೇವದ್ವಿಜಸೇವೆ ಮಾಡಿರಿ! ಶೋಕವನ್ನು ಬಿಡಿರಿ, ನಡೆಯಿರಿ ಇಲ್ಲಿಂದ! ಎಲ್ಲರೂ ಸತ್ತವರನ್ನು ಸುಟ್ಟು, ಬಿಟ್ಟು, ಹೋದರೆ ಆಗಲಿ ಸತ್ತವರೊಡನೆ

ಹೋದವರನ್ನು ನಾನು ಕಂಡಿಲ್ಲ. ಕರ್ಮದಂತೆ ಆಯುವು ಮುಗಿದಾಗ, ಪಂಡಿತರು ಪಾಮರರು, ಶಿಶು ವೃದ್ಧರು, ದರಿದ್ರ ಧನಿಕರು, ಸ್ತ್ರೀ - ಪುರುಷರು ಎಂಬ ಪಕ್ಷಪಾತ ವಿಲ್ಲದೆ ಎಲ್ಲರೂ ಸಾಯುವರು. ಕಾಲವು ಅತ್ಯಂತ ಬಲವತ್ತರವಾಗಿದೆ. ಅದನ್ನು ಮೀರಲಾಗದು.'

ಆ ಮಾತಿಗೆ ಜಂಬುಕವಿಂತೆಂದಿತು: 'ಆಹಾ! ಅಲ್ಪಬುದ್ಧಿಯಾದ ಹದ್ದಿನ ಮಾತು ಕೇಳಿ, ಹೊರಡಬೇಡಿ! ಕೂಡಿರಿ! ಪುತ್ರನಿಗಾಗಿ ಅಳುವುದನ್ನೂ ಮಾಡಲಾರಿರೇ? ಕರುವು ಸತ್ತರೆ ಅಳುವ ಆಕಳನ್ನು ನೋಡಿ, ನಾಚಿಕೆ ಪಡಬಾರದೆ? ಇಂದು ಮನುಜರು ಸತ್ತವರನ್ನು ಕರುಣೆ ಇಲ್ಲದೆ ಬಿಸಾಟಿ ಹೋಗುವ ಕಟುಕರಂತೆ ನಾನು ಕಂಡು ಬೆರಗಾಗಿರುವೆನು. ಪಶುವಾದ ನನ್ನ ಕಣ್ಣಿಗೇ ನೀರು ಬರುತ್ತಿದೆ. ಈ ಸುಂದರ ನಂದನನನ್ನು ಕಂಡು! ನಿಮಗೆ ಅವನನ್ನು ಬಿಟ್ಟು ಹೋಗಲು ಕಾಲೆಂತು ಬಂತು? ದೈವಕೃಪೆಯಿದ್ದರೆ, ನಿಮ್ಮ ಶೋಕ ಫಲವಾಗಿ, ಬಾಲಕನು ಬದುಕಬಹುದು. ಅನಿರ್ವೇದವೇ ಸರ್ವಶ್ರೇಯೋ ಮೂಲವಾಗಿದೆ. ಆಶೆ ಬಿಡಬೇಡಿ! ಕುಮಾರನಲ್ಲಿ ಪ್ರೀತಿಯನ್ನು ಬಿಡುವುದು ಅಷ್ಟು ಸುಲಭವಲ್ಲ. ನಿರ್ದಯರಾಗಬೇಡಿ! ಕೂಡಿ! ಸೂರ್ಯನು ಮುಣಗಿದರೇನು? ಕೂಸನ್ನು ಬಿಟ್ಟು ಹೋಗಬೇಡಿ!

ಆಗ ಹದ್ದು 'ಮನುಜರೇ! ನನಗೀಗ ಸಾವಿರ ವರ್ಷಗಳಾಗಿವೆ. ನಾನೂ ಸಾವಿರಾರು ಜನರನ್ನು ಸತ್ತು, ಇಲ್ಲಿಗೆ ಬಂದವರನ್ನು ಕಂಡಿರುವೆನು. ಆಗಲಿ, ಬದುಕಿ ಹಿಂದಿರುಗಿ ಹೋದ ಜೀವವನ್ನು ಒಬ್ಬನನ್ನಾದರೂ ಕಂಡಿಲ್ಲ. ಎಲ್ಲ ಶರೀರಗಳೂ ಅನಿತ್ಯಗಳೇ! ಮಕ್ಕಳನ್ನು ಮಡದಿಯನ್ನು ಸುಟ್ಟು ಮಮತೆಯನ್ನು ಬಿಟ್ಟು ಹೋದವರಿರುವರಾಗಲಿ, ನಿಮ್ಮಂತೆ ಅಳುತ್ತಾ ಕೂಡುವ ಬುದ್ಧಿಹೀನರಿನ್ನಿಲ್ಲ. ಅನಿಷ್ಟರನ್ನು ಸುಟ್ಟು ನಗುತ್ತಾ ಹೋದವರೂ ಉಂಟು. ಈ ಕುಮಾರ ಶವದಲ್ಲಿ ಜೀವನಿಲ್ಲ. ಜೀವನು ಮುಂದಿನ ದೇಹವನ್ನು ಅರಸಿ ಹೋಗಿರುವನು. ಇಷ್ಟು ಮಾತ್ರ ತಿಳಿಯದ ನಿಮ್ಮನ್ನು ಮನುಜರೆನ್ನಬಹುದೇ? ನಾನು ಮೋಕ್ಷ ಧರ್ಮವನ್ನು ಹೇಳಿರುವೆನು. ಈ ಜಂಬುಕನ ಜ್ಞಾನರ ಹಿತವಚನಗಳಿಗೆ ಮೋಸಹೋಗಬೇಡಿ! ಹೊರಡಿರಿ! ನೋಡಿದಂತೆ, ಸ್ಮರಿಸಿದಂತೆ ದುಃಖವು ಹೆಚ್ಚಾಗುವುದು. ದುಃಖದಿಂದ ಫಲವಿಲ್ಲ' ಎಂದಿತು.

ಜಂಬುಕವು 'ಅಯ್ಯೋ! ಎಷ್ಟು ಸುಂದರ ಕುಮಾರನಿವನು! ಏನು ಬಣ್ಣ! ಇಂತಹ ಬಂಗಾರದ ಕೂಸನ್ನು ಹಾಳು ಮುದಿ ಹದ್ದಿನ ಮಾತಿಗೆ ಮರುಳಾಗಿ ಬಿಟ್ಟು ಹೋಗಬಹುದೇ? ಅಳುತ್ತಾ ಕೂತವರು ಸ್ನೇಹಯುಕ್ತರಾಗಲಿ, ಬಿಟ್ಟು ಹೋಗುವ ನಿಷ್ಠುರರೇ? ರಾಮಚಂದ್ರನು ಶಂಬುಕ ದೈತ್ಯನನ್ನು ವಧಿಸಿ, ವಿಪ್ರಬಾಲಕನನ್ನು ಬದುಕಿಸಿದನಲ್ಲವೇ? ಶ್ವೇತನೆಂಬ ರಾಜನ್ಯನು ತನ್ನ ಧರ್ಮಬಲದಿಂದ ಮೃತಸುತನನ್ನು ಬದುಕಿಸಿಕೊಳ್ಳಲಿಲ್ಲವೇ? ಹಾಗೆಯೇ ಶೋಕಿಸುವ ನಿಮ್ಮನ್ನು ಕಂಡು, ದಯೆದೋರಿ, ನಿಮ್ಮ ಕೂಸನ್ನು ಬದುಕಿಸಿ ಕೊಡುವ ಸಿದ್ಧನೊ, ದೇವನೋ, ಬರಬಹುದು. ಆದುದರಿಂದ ಕೂತು, ಶೋಕಿಸಿರಿ!' ಎಂದ ನುಡಿಗೆ, ಬಂಧುಗಳು ಕೂತು, ರೋದಿಸುತ್ತಿದ್ದರು.

ಹದ್ದು ಅವರನ್ನು ನೋಡಿ, 'ಯಮರಾಜನ ಪ್ರಹಾರದಿಂದ ದೀರ್ಘನಿದ್ರೆಯಲ್ಲಿ ಬಿದ್ದಿರುವ ಕೂಸು ಮತ್ತೆ ಬದುಕಲಾರದು. ಪ್ರೇತಪತ್ತನದಿಂದ ಬದುಕಿ ಬಂದವರಿಲ್ಲ. ಸುಮ್ಮನೆ ಅತ್ತು ಫಲವಿಲ್ಲ. ಜಂಬುಕನಂತಹ ದಾಂಭಿಕನ ಮಾತಿಗೆ ಮರುಳಾಗಿ ಕೂಡ ಬೇಡಿ! ಅದೃಷ್ಟವಶದಿಂದ ತ್ರಿಮೂರ್ತಿಗಳಲ್ಲಿ ಯಾರಾದರೂ ಕಂಡು, ಕರುಣಿಸಿದರೆ ಮಾತ್ರ, ಬಾಲಕನು ಯಮಮಂದಿರದಿಂದ ಹಿಂದಿರುಗಿ ಬರಬಹುದು. ನಾನು, ನರಿ, ನೀವು - ಎಲ್ಲರೂ ಸಂಸಾರ ಮಾರ್ಗದಲ್ಲಿ ಹೋಗುತ್ತಾ, ಧರ್ಮಾಧರ್ಮಗಳನ್ನು ಮಾತ್ರ ಹೊತ್ತು ನಡೆಯುತ್ತಿರುವೆವು. ಪರದ್ರೋಹ, ಪರದಾರಾಗಮನ, ಪರದ್ರವ್ಯಾಪಹಾರ, ಅಸತ್ಯ, ವೇದನಿಂದನ, ಮುಂತಾದ ಪಾಪಗಳನ್ನು ಮಾಡಬಾರದು. ಧರ್ಮಸತ್ಯ, ವೇದಾಧ್ಯಯನ, ಪ್ರಾಣಿದಯ, ನಿಷ್ಕಾಪಟ್ಯ, ದಂಭವರ್ಜನ, ಮುಂತಾದ ಪುಣ್ಯ-ಕಾರ್ಯಗಳನ್ನು ಬಿಡಬಾರದು. ಸತ್ತವರನ್ನು ನೋಡಿ ಅಳುವುದು ಅಜ್ಞಾನವಾಗಿದೆ. ಏಳಿ! ಹೊರಡಿ!' ಎಂದಿತು.

ಬಂಧು ಜನರು ಎದ್ದು ಹೊರಟದ್ದನ್ನು, ನೋಡಿ, ನರಿಯು ಇಂತೆಂದಿತು: 'ಅಬ್ಬ ; ಮನುಜರಂತಹ ಕಪಟಿಗಳಿಲ್ಲ. ಇಷ್ಟಬಂಧು ವಿಯೋಗ, ರೋಗ ರುಜಿನ, ಏನಾದರೂ ಸಾಯಲೊಲ್ಲರು. ಸುಳ್ಳೇ ಅಳುವರು. ಇವರ ಮನದಲ್ಲಿ ಮಮತೆ ಎಳ್ಳಷ್ಟೂ ಇಲ್ಲ. ಧಿಕ್ಕಾರವಿರಲಿ ಮನುಜ ಜಾತಿಗೆ! ಹಾಳು ಹದ್ದಿನ ಮಾತಿಗೆ ಮೋಸ ಹೋಗಿ, ಪ್ರಿಯಸುತನಲ್ಲಿಯ ಪ್ರೇಮ ಪಾಶವನ್ನು ಕಡಿದು ಬಿಸುಟಬಹುದೇ? ನನಗೆ ಈ ಸುಂದರ ಕುಮಾರನು ಸತ್ತಿಲ್ಲ; ಮಲಗಿರುವನೆಂದೇ ತೋರುತ್ತಿದೆ. ಕುಲಶೋಭಾಕರನಾದ ಕುಮಾರನನ್ನು ಬಿಟ್ಟು ಎಲ್ಲಿಗೆ ಹೋಗುವಿರಿ? ಒಂದು ದಿನವಾದರೂ ಅವನೊಡನೆ ಇರಬಾರದೇ?' ಬಂಧುಗಳು ಕೂತರು.

ಆಗ ಹದ್ದು 'ಎಲವೋ ಬುದ್ಧಿಹೀನರೇ! ಮತ್ತೆ ಕೂತಿರೇತಕ್ಕೆ? ಏಳಿ! ರಾತ್ರಿಯಾಗುತ್ತಿದೆ. ಯಕ್ಷರಾಕ್ಷಸ ಪಿಶಾಚರು ಸಂಚರಿಪ ವೇಳೆಯಲ್ಲಿ ಮನುಜರಿಲ್ಲಿ ನಿಲ್ಲಬಾರದು. ಹೋಗಿ ಪ್ರೇತ ಕಾರ್ಯಗಳನ್ನು ಮಾಡಿ! ಆ ಗೂಬೆಯ ಕೂಗು ಕೇಳಬರದೇ? ಸೂರ್ಯನು ಮುಣಿಗಿದನು. ಚಿತಾಧೂಮವು ಅಂಬರದಿ ವ್ಯಾಪಿಸಿ, ಅಂಧಕಾರಕ್ಕೆ ಸ್ವಾಗತವನ್ನು ಕೊಡುತ್ತಿದೆ. ದಾರುಣ ಸ್ಮಶಾನವಿದು. ಕಟ್ಟಿಗೆಯಂತಿರುವ ಈ ದೇಹವನ್ನು ಬಿಟ್ಟು ಹೋಗಿ! ನರಿಯ ಮಾತು ಕೇಳಿ, ಕೂತರೆ, ನೀವೂ ಸಾಯಬೇಕಾದೀತು!' ಎಂದಿತು.

ಇಂತು ಗೃಧ್ರ ಜಂಬುಕಗಳು ತಮ್ಮ ಸ್ವಾರ್ಥಕ್ಕಾಗಿ 'ಸೂರ್ಯನಿರುವನು ನಿಲ್ಲಿರಿ!' ಎಂತಲು 'ಸೂರ್ಯ ಮಣುಗಿದನು, ಹೊರಡಿರಿ!' ಎಂತಲು ಹೇಳುತ್ತಿದ್ದುದನ್ನು ಕೇಳಿ, ಬಂಧುಗಳು ಕರ್ತವ್ಯಮೂಢರಾದರು. ಸೂರ್ಯನಿದ್ದಾಗ ಹದ್ದಿನ ಸಂಚಾರ; ಮುಣುಗಿದ ಮೇಲೆ ಹದ್ದು ಹೋಗುವದಾಗ ಕೂಸನ್ನು ಕಿತ್ತಿ ತಿನ್ನುವ ಆಶೆ ನರಿಗೆ; ಬಂಧುಗಳನ್ನು ಹೊರಡಿಸಿ ತಿನ್ನುವ ಚಪಲವು ಹದ್ದಿಗೆ; ಅವರೀರ್ವರ ಮಾತೂ ಶಾಸ್ತ್ರಸಮ್ಮತವಾಗಿದ್ದುದರಿಂದ, ಬಂಧುಗಳಿಗೆ ಇರಲಾಗದೆ, ಹೋಗಲಾರದೆ, ಸಂದೇಹ! ಇಂತಿರಲು ಅವರ ಅದೃಷ್ಟದಿಂದ ಶ್ರೀಶಂಕರನು, ದೇವಿಯಿಂದ ಪ್ರೇರಿತನಾಗಿ ಅಲ್ಲಿಗೆ ಬಂದನು. 'ಏಕಪುತ್ರ

ನಿವನು; ದಯೆದೋರಿ ಬದುಕಿಸು!' ಎಂದು ಬೇಡಿದ ಬಂಧು ಜನರ ಪ್ರಾರ್ಥನೆಯನ್ನು ಮನ್ನಿಸಿ, ಶರಣ ಜನಮಂದಾರನಾದ ಇಂದುಧರನು, ಆ ಕುಮಾರನನ್ನು ಪುನರುಜ್ಜೀವಿಸಿ ಕೊಟ್ಟನು. ಅಂತೆಯೇ ಗೋಮಾಯು ಗೃಧ್ರಗಳಲ್ಲಿಯೂ ಕರುಣಿಸಿ, ದೇವದೇವನು, ಅವರೀರ್ವರಿಗೂ ಹಸಿವೆಯಾಗದಿರುವಂತೆ ಕರುಣಿಸಿ, ಹೊರಟುಹೋದನು.

ದೇವವರನ ವರದಿಂದ ಶತಾಯುವಾದ ಕುಮಾರನನ್ನು ಕರೆದುಕೊಂಡು, ಹರ್ಷಭರಿತರಾದ ಬಂಧುಗಳು ನಿಜಮಂದಿರವನ್ನು ಸೇರಿದರು. ದೈವಸಂಯೋಗವು ವಿಚಿತ್ರವಾಗಿದೆ, ಅದಿರುವಲ್ಲಿ ಮೃತಕಲ್ಪರೂ ಬದುಕುವುದುಂಟು!'

ಧರ್ಮರಾಜನು, 'ತಾತ ! ಬಲವದ್ವಿರೋಧವನ್ನು ಕಟ್ಟಿಕೊಂಡವನು ಹೇಗೆ ಬದುಕಿರಬಹುದು?' ಎಂದು ಕೇಳಿದನು. ಭೀಷ್ಮನಿಂತೆಂದನು: 'ಶಾಲ್ಮಲೀಪವನ ಸಂವಾದವನ್ನು ಹೇಳುವೆನು, ಕೇಳು! ಹಿಮವತ್ಪರ್ವತ ಕಂದರದಲ್ಲಿ ಒಂದು ಶಲ್ಮಲೀತರುವಿತ್ತು. ಅದು ನಾನ್ನೂರು ಹಸ್ತಗಳ ಪರಿಮಿತವಾಗಿ, ಶಾಖೋಪ ಶಾಖೆಗಳಿಂದ ಗುಬುರಾಗಿತ್ತು. ಅದರ ನೆರಳಿನಲ್ಲಿ; ಮತ್ತ ಮಾತಂಗಗಳು ವಿಶ್ರಮಿಸುತ್ತಿದ್ದವು. ಸಾರಿಕಾಶುಕಬಕಾದಿ ಪಕ್ಷಿಗಳು ಅದರ ಶಾಖೆಗಳಲ್ಲಿ ಗೂಡು ಕಟ್ಟಿ ಸುಖವಾಗಿದ್ದವು. ಸಾರ್ಥವಾಹರು, ಪಾಂಥರು, ವನವಾಸಿಗಳು, ಹಾದಿ ನಡೆಯುತ್ತಾ ಅದರಡಿಯಲ್ಲಿ ವಿಶ್ರಮಿಸಿ ಹೋಗುತ್ತಿದ್ದರು.

ಒಂದು ದಿನ ನಾರದನು ಆ ಮರವನ್ನು ಕಂಡು ಆಶ್ಚರ್ಯಪಟ್ಟು ಇಂತೆಂದನು: 'ಅಹೋ! ಎಷ್ಟು ರಮಣೀಯವಾಗಿರುವೆ! ತರುಪ್ರವರ! ನಿನ್ನನ್ನು ಕಂಡು ಆನಂದವಾಗಿದೆ. ಮೃಗಪಕ್ಷಿಗಳಿಗೆ ಆಶ್ರಯವಾಗಿ ಪೋಷಿಸುವ ನಿನ್ನ ಜನ್ಮವು ಧನ್ಯವಾಯಿತು. ನಿನ್ನ ಶಾಖೋಪಶಾಖೆಗಳು ಎಷ್ಟು ದೂರವಾಗಿ ವ್ಯಾಪಿಸುವೆ! ಒಂದೂ ಮುರಿದು ಬಿದ್ದಿಲ್ಲ! ವಾಯುದೇವನು ನಿನ್ನ ಸ್ನೇಹಿತನಿರಬೇಕೆಂದು ತೋರುತ್ತಿದೆ. ಭಗವಾನ್ ಪವನನು ಎಷ್ಟೋ ಮಹಾವೃಕ್ಷಗಳನ್ನು ಬೇರು ಸಹಿತ ಕಿತ್ತೊಗೆದಿರುವನು. ಪರ್ವತದ ಕೋಡುಗಳನ್ನು ಉರುಳಿಸಿರುವನು. ಬೂರುಗನಾದ ನೀನು ಇತರ ವೃಕ್ಷಗಳಷ್ಟು ದೃಢಬಲನಲ್ಲ. ಆದರೂ ಮುಕ್ಕು ಮುರಿಯದೆ, ಚಕ್ಕೆ ಚೆದರದೆ, ಸಂಪೂರ್ಣ ವರಗಾತ್ರನಾಗಿರುವೆ ಎಂದ ಮೇಲೆ ಪವನನು ನಿನ್ನಲ್ಲಿ ಕರುಣೆಯಿಂದ ಮುಟ್ಟಿ ಕೆಡಹದೆ ಬಿಟ್ಟಿರುವನೆಂದು ಕಾಣುತ್ತಿದೆ.'

ನಾರದನ ಮಾತಿಗೆ ನಕ್ಕು ಶಾಲ್ಮಲಿಯು ಗರ್ವದಿಂದ ಇಂತೆಂದಿತು: 'ನಾರದ! ವಾಯುದೇವನು ನನ್ನ ಸ್ನೇಹಿತನಲ್ಲ, ಬಂಧುವೂ ಅಲ್ಲ. ನನ್ನ ಬಲವನ್ನು ಕಂಡು ಏನೂ ಮಾಡಲಾರದೆ ವಾಯುವು ಸುಮ್ಮನೆ ಹೋಗಿರುವನು. ಎಷ್ಟೋ ಸಲ ಬಂದ ಬಿರುಗಾಳಿಯನ್ನು ನಾನು ನಿರಾಯಾಸವಾಗಿ ತಡೆದು, ನಿರಾಕರಿಸಿರುವೆನು. ನನ್ನ ಬಲವು ನಿನಗೆ ಗೊತ್ತಿಲ್ಲ. ನನ್ನನ್ನು ಮುರಿಯಬಂದ ವಾಯುವು ತಾನೇ ಮುರಿದು ಹೋಗಿರುವನು' ಆ ಮಾತನ್ನಾಲಿಸಿ ನಾರದನು ನಗುತ್ತಾ 'ಶಾಲ್ಮಲೇ ವಿಪರೀತ ವಚನಗಳನ್ನು ಕೇಳುತ್ತಿರುವೆನು. ಭೂತಜಾತದಲ್ಲಿ ವಾತಪೋತನಿಗಿರುವ ಬಲವು ಮತ್ತಾರಿಗೂ ಇಲ್ಲ. ರುದ್ರೇಂದ್ರಯಮ ವರುಣರು ಕೂಡ ಪ್ರಾಣದೇವನಿಗೆ ಆಳವಲ್ಲ. ಪ್ರಾಣಪುತ್ರನಾದ

ಪವನನೂ ಸಾಮಾನ್ಯನಲ್ಲ. ಆ ಮಹಾಬಲನನ್ನು ಎದುರಿಸಿ ಬದುಕುವ ಮಹಾಬಲರಿಲ್ಲ. ಸರ್ವಭೂತಗಳು ವಾಯುದೇವನಿಂದ ಪ್ರೇರಿತವಾಗಿ, ಚೇಷ್ಟಾಯುಕ್ತವಾಗಿವೆ. ಇಂತಹ ಪ್ರಾಣನಿಗೆ ಹೆದರದೆ ನುಡಿವ ನಿನ್ನನ್ನು ಕಂಡು ಆಶ್ಚರ್ಯ ಕೋಪಗಳು ಮೂಡಿಬರುತ್ತಿವೆ! ದುರ್ಬಲನಾದ ನಿನಗೆ ಇಷ್ಟು ಗರ್ವವಿರಬಾರದು. ಪೂಜನೀಯರನ್ನು ಪೂಜಿಸದ ನಿನ್ನ ಮಂದ ಬುದ್ಧಿಗೆ ತಕ್ಕ ಶಾಸ್ತಿ ಆಗಲೇಬೇಕು. ಬರಿಮಾತಿನ ಜಂಬಗಾರನಾದ ನಿನ್ನ ವಚನಗಳನ್ನು ವಾಯುವಿಗೆ ಹೇಳುವೆನು. ಚಂದನಸ್ಯಂದನ ಸಾಲತಾಲ ಸರಲತಮಾಲದೇವದಾರುಗಳಿಗಿಲ್ಲದ ಜಂಬ, ಶಾಲ್ಮಲಿಗೆ ಆಗದು. ಬಲವಂತರೂ ಶಿರಬಾಗಿ ನಮಿಸುವ ಪವನನಿಗೆ ಒಂದು ಬೂರುಗು ಮರವು ನಮಿಸದೇ ನಿಲ್ಲುವುದೇನೋ ನೋಡಿಬಿಡುವೆನು' ಎಂದು ನುಡಿದು, ವಾಯುದೇವನಿಗೆ ಎಲ್ಲವನ್ನೂ ಅರುಹಿದನು. 'ಸರ್ವಪ್ರಾಣಧಾರಿಗಳಲ್ಲಿ ಶ್ರೇಷ್ಠನು, ಗರಿಷ್ಠನು, ಬಲಿಷ್ಠನೂ ಆದ ನಿನ್ನನ್ನು ನಿಂದಿಸಿದ ಶಾಲ್ಮಲಿಯನ್ನು ದಂಡಿಸಿ ಬಂದಿರುವೆನು. ಆ ಬೂರುಗು ಮರವು ಅಂದ ಮಾತುಗಳನ್ನು ನಿನ್ನ ಮುಂದೆ ಹೇಳಬಾರದು. ನೀನು ಶಾಲ್ಮಲಿಯ ಮುಂದೆ ನಿಲ್ಲಲಾರದೆ ಓಡುವೆ ಯಂತೆ!' ಇಂತು ನುಡಿದ ನಾರದನ ವಚನವನ್ನಾಲಿಸಿ ವಾಯುದೇವನು ಪ್ರಭಂಜನನಾದನು, ಶಾಲ್ಮಲಿಯನ್ನು ಸೇರಿ ವಾಯುವಿಂತೆಂದನು: 'ಶಾಲ್ಮಲೀ! ಏನೆಂದೆ ನಾರದನ ಮುಂದೆ? ಎಲವೋ ನಿಸ್ಸಾರನೇ! ನಾನಾರು ಗೊತ್ತೇ? ನಿನ್ನನ್ನು ಉನ್ಮೂಲಿಸದೆ ಬಿಟ್ಟುದೇಕೆ ಗೊತ್ತೇ? ಪೂಜ್ಯನಾದ ಬ್ರಹ್ಮದೇವನು ಹಿಂದೆ ಪ್ರಜಾಸರ್ಗಕಾಲದಲ್ಲಿ ಒಂದು ದಿನ ಇಲ್ಲಿ ಹಾದು ಹೋಗುತ್ತಾ, ನಿನ್ನ ನೆರಳಲ್ಲಿ ಸ್ವಲ್ಪ ವಿಶ್ರಮಿಸಿದನು. ಆ ಕಾರಣದಿಂದ ನಿನ್ನಲ್ಲಿ ಕರುಣಿಸಿ ಬಿಟ್ಟ ನನ್ನನ್ನು ತಿರಸ್ಕರಿಸುವಷ್ಟು ದುರ್ಬುದ್ಧಿಯಾದೆಯಾ? ಒಳ್ಳೆಯದು. ನಿನಗೆ ಬುದ್ಧಿ ಕಲಿಸದೆ ಬಿಡೆನು' ಆ ಮಾತಿಗೆ ಶಾಲ್ಮಲಿಯು 'ಏನು ಮಾಡುವೆಯೋ ಮಾಡು! ಬಲಾಧಿಕನಾದ ನನ್ನ ಮುಂದೆ ನಿನ್ನ ಆಟ ಸಾಗದು. ನಿನ್ನ ಭಯವೆನಗಿಲ್ಲ. ದೇಹಬಲದಿಂದ ನೀನಧಿಕನಾದರೆ, ಬುದ್ಧಿಬಲದಿಂದ ನಾನಧಿಕನಾಗಿರುವೆನು' ಎಂದಿತು. 'ಸಾಕು! ನಾಳೆ ಬರುವೆನು' ಎಂದು ವಾಯುದೇವನೂ ತೆರಳಿದನು.

ಅಂದಿನ ರಾತ್ರಿ ಶಾಲ್ಮಲಿಯು ತನ್ನ ಮನದಿ ಇಂತು ಚಿಂತಿಸಿತು! 'ನಾರದನ ನುಡಿಯು ಶತಶಃ ಸತ್ಯವಾಗಿದೆ. ನಾನು ವಾಯುವಿನ ಮುಂದೆ ನಿಲ್ಲಲಾರೆನು, ಬುದ್ಧಿ ಬಲದಿಂದ ನಾನು ಉಳಿಯಬೇಕಾಗಿದೆ. ಬದುಕಿದ್ದರೆ ಮತ್ತೆ ಚಿಗುರಿ, ಹೂ ಬಿಟ್ಟು ಫಲಿಸಬಹುದು' ಇಂತು ಚಿಂತಿಸಿ, ಶಾಲ್ಮಲಿಯು, ತನ್ನ ಕೊಂಬೆರೆಂಬೆಗಳನ್ನು ತಾನೇ ಮುರಿದು ಕೆಡವಿಕೊಂಡು, ಬೊಡ್ಡಿ ಮಾತ್ರವಾಗಿ ನಿಂತಿತು. ಬೆಳಗಾಯಿತು ಶ್ವಸನನು ಸರಸರನೆ ಬಂದು, ಶಾಲ್ಮಲಿಯ ದೀನಾವಸ್ಥೆಯನ್ನು ಕಂಡನು. ಆತನಿಗೆ ನಗು ಬಂತು; 'ನಾನೇ ಇಂತು ಮಾಡಿ ನಿನ್ನ ಗರ್ವವನ್ನು ಮುರಿಯಲು ಬಂದಿದ್ದೆನು. ನೀನಾಗಿ ಕೈಕಾಲು ಕಡಿದುಕೊಂಡು, ಪುಷ್ಪಪರ್ಣಶಾಖಾರಹಿತನಾಗಿ ಬಿದ್ದಿರುವೆ! ಇದು ನಿನ್ನ ದುರ್ಗರ್ವದ ಫಲವೆಂದು ತಿಳಿ!' ಎಂದು ನುಡಿದು ವಾಯುವು ಹೊರಟುಹೋದನು.

ರಾಜನ್ ಬಲವಂತರಿಂದ ವೈರವನ್ನು ಬೆಳಿಸಿದ ಮೂಢನು, ಶಾಲ್ಮಲಿಯಂತೆ

ದುಃಖಪಡುವನು. ಬಲವಂತನಿಂದ ಬಲಹೀನನು, ಬುದ್ಧಿವಂತನಿಂದ ಬುದ್ಧಿಹೀನನು ವೈರಮಾಡಬಾರದು. ಮಹಾತ್ಮರು ವೈರಫಲವನ್ನು ನಿಧಾನವಾಗಿ ಕೊಟ್ಟು ಉಣಿಸುವರು. ಬುದ್ಧಿ ಬಲವು ಹುಲ್ಲುಗಾವಲಿನಲ್ಲಿ ಅಗ್ನಿಯಂತೆ, ಸುಡುತ್ತಾ ಸಾಗುವುದು. ಹನ್ನೊಂದಕ್ಷೌಹಿಣಿಯ ಸೈನ್ಯವಿದ್ದ ದುರ್ಯೋಧನನು ಏಳಕ್ಷೌಹಿಣಿಯ ಧರ್ಮನಿಗೆ (ನಿನಗೆ) ಸೋತನೆಂದರೆ, ಬುದ್ಧಿವಂತರು, ಬಲವಂತರು, ಆದ ಭೀಮಾರ್ಜುನರ ವೈರದಿಂದ ಎಂದು ತಿಳಿ! ಇಂತು ನಿನಗೆ ಸಕಲರಾಜಧರ್ಮಗಳನ್ನು ಆಪದ್ಧರ್ಮಗಳನ್ನು ತಿಳಿಸಿದುದಾಯಿತು. ಇನ್ನೇನು ಕೇಳಲಿಚ್ಛಿಸುವೆ?' ಎಂದನು.

## ೫. ಆಪನ್ಮೂಲ ದೋಷವರ್ಣನ

ಧರ್ಮರಾಜನು 'ತಾತ! ಪಾಪಕ್ಕೆ ಮೂಲ ಕಾರಣವಾವುದು? ಅದನ್ನು ಕಿತ್ತೊಗೆಯುವುದೆಂತು?' ಎಂದು ಕೇಳಿದನು. ಭೀಷ್ಮನು 'ಪಾಪಕ್ಕೆ ಲೋಭವೇ ಕಾರಣವು. ಲೋಭವೆಂದರೆ ದುರಾಶೆ, ಮೋಹ, ಮಾನ, ಸ್ತಂಭ, ಪರಾಧೀನತೆ, ದೀನತೆ, ಚಿಂತೆ, ಅಪಕೀರ್ತಿ- ಇವೇ ಮುಂತಾದ ದುರ್ಗುಣಗಳ ಗಂಟೆಂದು ತಿಳಿ! ಲೋಭಿಯು ಪಾತ್ರರಿಗೆ ಕೊಡನು. ಎಷ್ಟಿದ್ದರೂ ಸಾಕೆನ್ನದಿರುವನು. ಕೊಡದವರಲ್ಲಿ ಕೋಪಿಸುವನು. ಯಾರನ್ನೂ ನಂಬನು. ಪರವಿತ್ತವನ್ನು ಹರಿಸಲು ಹೆದರನು. ನೀಚಕಾರ್ಯಕ್ಕೆ ನಾಚನು. ವಾಕ್, ಮನೋ, ಕ್ರಿಯಾವೇಗಗಳಿಗೆ ಎಡೆಯಾಗುವನು. ಪರರ ಸಿರಿಗೆ ಉರಿಯುವನು, ತನ್ನವರನ್ನೂ ಪೋಷಿಸನು, ತಾನೂ ಉಣ್ಣನು, ಯಾವ ಅಕಾರ್ಯಕೂ ಸಿದ್ಧನಾಗುವನು.

ನಿತ್ಯವೂ ನದೀಜಲಗಳಿಂದ ತುಂಬುತ್ತಿದ್ದರೂ ಸಾಕೆನ್ನದೆ, ಬೇಕು – ಬೇಕೆಂದು ಒದರುವ ಲವಣಸಾಗರದಂತೆ ಲೋಭಿಯು ತೃಪ್ತನಾಗನು. ಇಂತಹ ಲೋಭಗುಣವು ಸರ್ವಾನರ್ಥಕಾರಣವಾಗಿದೆ. ಅದನ್ನು ಗೆದ್ದವನೇ ಧನ್ಯನು. ಶಾಸ್ತ್ರಗಳನ್ನು ಓದಿ, ಕಂಠತಃ ಒಪ್ಪಿಸುವವರಿದ್ದಾರೆ. ಆದರೆ ಮನಸ್ಸಿನಲ್ಲಿ ಮನೆಮಾಡಿರುವ ಕಾಮಲೋಭಗಳನ್ನೂ, ಕಾಮಪೂರ್ತಿಯಾಗದಿದ್ದರೆ ಬರುವ ಕ್ರೋಧವನ್ನೂ ಹತ್ತಿಕ್ಕಿದವರು ಬಹು ವಿರಲ. ಇಂತಹ ಲೋಭವು ಸರ್ವಾಪತ್ತುಗಳಿಗೆ ನೆಲೆಯಾಗಿದೆ.

ಇನ್ನು ಶಿಷ್ಟರನ್ನು ವರ್ಣಿಸುವೆನು ಕೇಳು! ಪರಲೋಕಕ್ಕೆ ಕರೆದರೆ ಅಂಜದ ನಿಷ್ಪಾಪಿಗಳು; ಜೀವನಕ್ಕಾಗಿ ದೀನರಾಗದ ಧೀರರು; ಆಶೆಗಾಗಿ ಪರದಾಡದ ಸಂತುಷ್ಟರು; ಉಪಕಾರವನ್ನು ಪ್ರತ್ಯುಪಕಾರಾಪೇಕ್ಷೆಯಿಲ್ಲದೆ ಮಾಡುವ ನಿಸ್ವಾರ್ಥಿಗಳು; ಪಿತೃದೇವಾ ತಿಥಿ ಪೂಜೆಯನ್ನು ಬಿಡದೆ ಮಾಡುವ ಧರ್ಮಿಷ್ಠರು; ಸರ್ವಭೂತ ಹಿತರತರಾದ ಮಹಾತ್ಮರು ಇಂತಹವರು ಶಿಷ್ಟರು. ಶಿಷ್ಟರ ಸಂಗವನ್ನು ಸರ್ವಪ್ರಯತ್ನದಿಂದ ಸಂಪಾದಿಸ ಬೇಕು. ದುಷ್ಟ ಸಂಗವನ್ನು ದುಡ್ಡಿತ್ತು ಬಿಡಬೇಕು.

ಈಗ ಅಜ್ಞಾನದ ಅನರ್ಥಫಲವನ್ನು ವರ್ಣಿಸುವೆನು ಕೇಳು! ರಾಗ, ದ್ವೇಷ, ಮೋಹ, ತೃಷೆ, ಶೋಕ, ಅಭಿಮಾನ, ಕಾಮ, ಕ್ರೋಧ, ದರ್ಪ, ಆಲಸ್ಯ, ತಾಪ, ಅಸೂಯೆ

ಮೊದಲಾದವು ಅಜ್ಞಾನ ಮೂಲವಾದ ದೋಷಗಳು. ಅವನ್ನು ಬಿಟ್ಟರೆ, ಅಜ್ಞಾನವು ನಿರ್ಮೂಲವಾಗುವುದು. ಲೋಭದಿಂದ ಅಜ್ಞಾನವು ಹೆಚ್ಚುವುದು; ಅಜ್ಞಾನದಿಂದ ಲೋಭವು ಬೆಳೆಯುವುದು; ಇಂತಹ ಲೋಭಜ್ಞಾನಗಳಿಗೆ ಎಡೆಕೊಡಬಾರದು.

ದಮವೆಂಬ ಶ್ರೇಯಸ್ಸಾಧನವನ್ನು ಚನ್ನಾಗಿ ನಡೆಸಿದರೆ ಅಜ್ಞಾನ ಲೋಭಗಳು ದೂರವಾಗುವವು. ದಮದಕಿಂತಲು ಧರ್ಮವಿಲ್ಲ. ದಮದ ಲಕ್ಷಣಗಳನ್ನು ಹೇಳುವೆನು. ಕ್ಷಮೆ, ಧೃತಿ, ಅಹಿಂಸಾ, ಸಮತೆ, ಆರ್ಜವ, ಇಂದ್ರಿಯಜಯ, ದಯೆ, ಅಲೋಭ, ನಿಂದಾವರ್ಜನ, ಮೃಷಾವಾದವರ್ಜನ, ಮುಂತಾದ ಗುಣ ಸಮುದಾಯವನ್ನು ದಮವೆಂಬುವರು. ಅನಿತ್ಯ ಸುಖಿಕ್ಕಾಶೆಪಡದೆ, ಶಿಷ್ಟರನ್ನು ನಿಂದಿಸದೆ, ಕುಲವಿದ್ಯಾವಯೋಧನ ರೂಪಗಳಿಗೆ ದರ್ಪಿತನಾಗದೆ, ನಿಂದಿಸಬೇಕಾದವರನ್ನು ಸ್ತುತಿಸದೆ, ಶ್ರೀಹರಿ ಭಕ್ತನಾಗಿ ತೃಪ್ತನಾಗಿರುವವನೇ ದಮವಂತನು. ಮೋಕ್ಷಾವಲಂಬಿಯಾಗಿ, ಮನೆ ಮಾರನ್ನು ಬಿಟ್ಟು, ಶ್ರೀಗುರುಚರಣಾರವಿಂದ ಸೇವೆಯಿಂದ ದಿವ್ಯಜ್ಞಾನವನ್ನು ಪಡೆದು, ದಮವಂತನು ಶ್ರೀಪ್ರಾಣವಲ್ಲಭನ ಪರಮಪ್ರಸಾದದಿಂದ ಮೋಕ್ಷವನ್ನು ಹೊಂದಿ, ತೇಜೋಮಯ ಲೋಕಗಳಲ್ಲಿ ಸುಖಿಸುವನು. ದಾಂತನು ಶಾಂತನು ಆದವನನ್ನು ನೋಡಿ, ನೀಚರು ನಿರ್ಬಲನೆಂದು ನಿಂದಿಸಬಹುದು ; ಆದರೆ ಅವನು ನೀರಜಾಕ್ಷನ ದಯಾಪಾತ್ರನಾಗಿ ನಿಶ್ಚಿಂತನಾಗಿರುವನು. ಅವನ ಮನೆಯೇ ಒಂದು ಪಾವನಾಶ್ರಮವಾಗುವುದು.

ತಪಸ್ಸನ್ನು ವರ್ಣಿಸುವೆನು ಕೇಳು! ತಪವೆಂದರೆ ಆಲೋಚನೆ. ಅದು ಸ್ವಾಧ್ಯಾಯ ಪ್ರವಚನ ರೂಪವಾಗಿದೆ. ಬ್ರಹ್ಮನು ತಪೋಬಲದಿಂದಲೇ ಜಗವನ್ನು ಸೃಜಿಸಿದನು. ರುದ್ರನು ತಪೋಬಲದಿಂದಲೇ ಜಗವನ್ನು ಸಂಹರಿಸುವನು. ತಪಸ್ಸಿನಿಂದಲೇ ಋಷಿಗಳು ಸಿದ್ಧಿಯನ್ನು ಪೊಂದಿದರು. ತಪಸ್ಸಿಗೆ ದುರ್ಲಭವಾದುದಿಲ್ಲ. ಚನ್ನಾಗಿ ತಪಗೈದು ಪಾಪಮುಕ್ತರೂ, ಭಕ್ತರೂ ಆಗಿ ಶ್ರೀಹರಿ ದಯಾಪಾತ್ರರಾದವರು ಧನ್ಯರು. ತಪಸ್ಸೆಂದರೆ ಕೃಚ್ಛ್ರ,ಚಾಂದ್ರಾಯಣ ಏಕದಶ್ಯಾದಿ ನಿರಶನ ವ್ರತಗಳೂ ಅಹುದು. ಅದು ದೈಹಿಕ ತಪಸ್ಸು, ಅದರಿಂದ ವೈರಾಗ್ಯವು, ವಾಚಿಕ ತಪಸ್ಸಾದ ವೇದಾಧ್ಯಯನದಿಂದ ಜ್ಞಾನವೂ, ಮಾನಸಿಕ ತಪವಾದ ಮನನಧ್ಯಾನಗಳಿಂದ ಭಕ್ತಿಪ್ರೀತನಾದ ಶ್ರೀಹರಿ ಪ್ರಸಾದವೂ ಲಭ್ಯವಾಗುವುದು. ಭಕ್ತಿರಹಿತವಾದ ತಪಸ್ಸಿಗೆ ಫಲವಿಲ್ಲ.

ಈಗ ಸತ್ಯವನ್ನು ವರ್ಣಿಸುವೆನು. ಚಾತುರ್ವರ್ಣದವರು ವೇದ ವಿರುದ್ಧವಾಗಿ ನಡೆಯದೆ, ಸ್ವಧರ್ಮರತರಾಗಿರುವುದೇ ಸತ್ಯವು; ಸಂಕರಕಾರಕರಾಗಿ ವರ್ಣಾಶ್ರಮ ಧರ್ಮಗಳನ್ನು ಕೆಡಿಸುವುದೇ ಅಸತ್ಯವು. ಸತ್ಯದಂತಹ ಧರ್ಮವಿಲ್ಲ. ಸತ್ಯವು ಧರ್ಮ, ತಪಸ್ಸು, ಯೋಗ, ಯಜ್ಞ, ಆಚಾರ, ನಿಯಮ, ಯಮ ವೆಂಬ ಪಾತ್ರೆಗಳಲ್ಲಿ ತುಂಬಿರುವ ಅಮೃತವಾಗಿದೆ. ಸಮತೆ, ದಮ, ಅಸಂಶಯ, ಅಮಾತ್ಸರ್ಯ, ಲಜ್ಜೆ ಕ್ಷಮೆ, ತಿತಿಕ್ಷೆ, ತ್ಯಾಗ, ಧ್ಯಾನ ಋಜುತ್ವ, ಧೃತಿ, ದಯೆ, ಅಹಿಂಸೆ, ಎಂಬ ಹದಿಮೂರು ರೂಪಗಳಿಂದ ಸತ್ಯವು ತೋರಿ ಬರುವುದು. ಸತ್ಯಕ್ಕೆ ನಾಶವಿಲ್ಲ; ಧರ್ಮಕ್ಕೆ ನಾಶವಿಲ್ಲ; ಸತ್ಯ, ಧರ್ಮಗಳನ್ನು ಕೆಡಿಸುವ ಕೇಡಿಗಳಿಗೆ ನಾಶ ಉಂಟು.

ಸಮತೆ ಎಂದರೆ ಯಾವ ಜೀವರಿಗೆ ಎಂತು ನಡೆಯಬೇಕೋ ಅಂತೇ ನಡೆಯುವುದು. ದಮವೆಂದರೆ ಇಂದ್ರಿಯನಿಗ್ರಹವು; ಅಸಂಶಯವೆಂದರೆ ಜ್ಞಾನದಲ್ಲಿ ಆಸಕ್ತಿಯಿಂದ ಮನನವು; ಅಮಾತ್ಸರ್ಯವೆಂದರೆ ಪರರ ಶ್ರೇಯಸ್ಸಿಗೆ ಕುದಿಯದಿರುವುದು, ಅಪ್ರಿಯರಿಂದ ಆದ ದುಃಖಕ್ಕೆ ಅವರು ಸ್ವತಂತ್ರಕಾರಣರಲ್ಲವೆಂದು ತಿಳಿದು ಪ್ರತೀಕಾರಮಾಡದಿರುವದು ಕ್ಷಮೆ; ಸುಖದುಃಖಗಳಲ್ಲಿ ಮನಸ್ಸಿನ ವಿಕಾರವಾಗದಂತೆ ಶಾಂತನಾಗಿರುವುದು ತಿತಿಕ್ಷೆ; ನ್ಯಾಯಾರ್ಜಿತ ಧನಾದಿ ದ್ರವ್ಯವನ್ನು ಪಾತ್ರರಿಗಿತ್ತು ಶ್ರೀಹರಿ ಪ್ರೀತಿ ಪಡೆಯುವುದು ತ್ಯಾಗ; ಶ್ರೀಗುರ್ವಂತರ್ಗತ ಹರಿಗುಣ ಸ್ಮರಣವೇ ಧ್ಯಾನವು. ಕಾಯೇನ ಮನಸಾ ವಾಚಾ ವಕ್ರನಾಗದಿರುವುದು. ಋಜುತ್ವ; ಧೃತಿ ಎಂದರೆ ನ್ಯಾಯವಾದ ಕಾರ್ಯದಲ್ಲಿ ಸ್ಥಿರನಾಗಿರುವುದು। ದಯೆ ಎಂದರೆ ಭೂತಗಳಿಗೆ ದುಃಖವನ್ನು ಕೊಡದೆ ಸಹಾಯಮಾಡುವುದು. ಅಹಿಂಸೆ ಎಂದರೆ ಶಾಸ್ತ್ರನಿಷಿದ್ಧವಾದ ಹಿಂಸೆಯನ್ನು ಬಿಡುವುದು. ಇಂತು ಹದಿಮೂರಂಶಗಳಿಂದ ಕೂಡಿದ ಸತ್ಯವು ಪರಮಶ್ರೇಷ್ಠ ಧರ್ಮವಾಗಿದೆ. ರಾಜನ್! ಸತ್ಯಕ್ಕೆ ಸಮಧರ್ಮವಿಲ್ಲ. ಅನೃತಕ್ಕೆ ಸಮಪಾಪವಿಲ್ಲ. ದಾನ - ಯಜ್ಞಗಳಿಂದಲೂ, ಅಗ್ನಿಹೋತ್ರಗಳಿಂದಲು, ವೇದಾಧ್ಯಯನದಿಂದಲು ಬರುವ ಪುಣ್ಯದಕಿಂತಲು, ಸತ್ಯವು ಹಿರಿದಾಗಿದೆ. ಅಶ್ವಮೇಧ ಸಹಸ್ರಫಲವನ್ನು ಸತ್ಯದಿಂದ ತೂಗಿ ನೋಡಿ, ಜ್ಞಾನಿಮುನಿವರರು ಸತ್ಯವೇ ಜಗ್ಗುರುತರವೆಂದೂ, ಪುಣ್ಯತರವೆಂದೂ ನಿಶ್ಚಯಿಸಿ ಪೇಳಿರುವರು.

ಈಗ ಹದಿಮೂರು ಶತ್ರುಗುಣಗಳನ್ನು ಕೇಳು! ಕಾಮ, ಕ್ರೋಧ, ಶೋಕ, ಮೋಹ, ವಿಧಿತ್ಸಾ ಪರಾಸುತಾ, ಲೋಭ, ಮಾತ್ಸರ್ಯ, ಈರ್ಷ್ಯಾ, ಕುತ್ಸಾ ಕೃಪಾ, ಭಯ, ಅಸೂಯಾ ಎಂಬ ಹದಿಮೂರು ಶತ್ರುಗಳನ್ನು ಜಯಿಸಬೇಕು. ಇವರೇ ನಮ್ಮ ಸರ್ವದುಃಖ ಕಾರಣರು. ಇವರಿಂದ ಪ್ರೇರಿತರಾಗಿ ಜನರು ಪಾಪಮಾಡುವರು. ಇವರು ಹುಟ್ಟುವುದೆಂತು! ಇವರನ್ನು ಗೆಲ್ಲುವುದೆಂತು? ಎಂಬ ಎರಡು ವಿಷಯಗಳನ್ನು ಹೇಳುವೆನು. ಮನವಿತ್ತು ಕೇಳು!

ಕ್ರೋಧವು ಲೋಭದಿಂದ ಹುಟ್ಟಿ, ಪರದೋಷದಿಂದ ಹೆಚ್ಚಾಗಿ ಕ್ಷಮೆಯಿಂದ ಸಾಯುವುದು. ಕಾಮವು ಸಂಕಲ್ಪದಿಂದ ಹುಟ್ಟಿ ಸೇವಿಸಿದಂತೆ ಹೆಚ್ಚಾಗಿ ವೈರಾಗ್ಯದಿಂದ ಸಾಯುವುದು; ಪರಾಸುತೆ(ಪರದೋಷ ಮಾತ್ರದರ್ಶನ)ಯು ಕ್ರೋಧದಿಂದ ಹುಟ್ಟಿ, ಲೋಭದಿಂದ ಬೆಳೆದು, ದಯೆಯಿಂದ ಸಾಯುವುದು. ಅಸೂಯೆಯು ಪರದೋಷ ದರ್ಶನದಿಂದ ಹುಟ್ಟಿ, ಅಜ್ಞಾನದಿಂದ ಬೆಳೆದು, ತತ್ವಜ್ಞಾನದಿಂದ ನಾಶವಾಗುವುದು. ಮೋಹವು ಅಜ್ಞಾನದಿಂದ ಹುಟ್ಟಿ ಪಾಪಾಭ್ಯಾಸದಿಂದ ನಾಶವಾಗುವುದು. ಮೋಹವು ಅಜ್ಞಾನದಿಂದ ಹುಟ್ಟಿ ಪಾಪಾಭ್ಯಾಸದಿಂದ ಬೆಳೆದು, ಪ್ರಾಜ್ಞ ಸಂಗದಿಂದ ಸಾಯುವುದು; ವಿಧಿತ್ಸಾ (ಆರಂಭಶೂರತೆ) ಗುಣವು ವಿರುದ್ಧ ಶಾಸ್ತ್ರಗಳಿಂದ ಹುಟ್ಟಿ, ಸಂಶಯದಿಂದ ಬೆಳೆದು, ಸಚ್ಛಾಸ್ತ್ರ ಜ್ಞಾನದಿಂದ ನಾಶವಾಗುವದು. ಶೋಕವು ಪ್ರೀತಿ (ಅಭಿಮಾನ)ಯಿಂದ ಹುಟ್ಟಿ ವಿಯೋಗದಲ್ಲಿ ಬೆಳೆದು, ನಿರರ್ಥಕವೆಂದರಿತಾಗ ಸಾಯುವುದು. ಪರಾಸುತೆ (ಅಕಾರ್ಯವೇಗ) ಕ್ರೋಧ ಲೋಭಗಳಿಂದ ಹುಟ್ಟಿ ಅಕಾರ್ಯದ ಅಭ್ಯಾಸದಿಂದ ಬೆಳೆದು

ವೈರಾಗ್ಯದಿಂದ ನಿಲ್ಲುವುದು. ಮಾತ್ಸರ್ಯವು ಸತ್ಯ ತ್ಯಾಗಗಳಿಂದ ಹುಟ್ಟಿ, ದುಷ್ಟ ಸೇವನದಿಂದ ಬೆಳೆದು ಸಾಧು ಸೇವೆಯಿಂದ ಸಾಯುವದು. ಮದವು ಕುಲವಿದ್ಯಾವಯೋರೂಪ ಧನ ಬಲಗಳಿಂದ ಹುಟ್ಟಿ ಕಾಣದೆ ಬೆಳೆದು, ವಿನಯದಿಂದ ಸಾಯುವುದು. ಈರ್ಷ್ಯೆಯು ಕಾಮದಿಂದ ಹುಟ್ಟಿ ಸೇಡಿನಿಂದ ಬೆಳೆದು, ದುಃಖಿತರ ಜೀವನರನ್ನು ಕಂಡು ಸಾಯುವುವು. ಕುತ್ಸೆ(ನಿಂದೆ)ಯು ಕೆಟ್ಟ ವಾಕ್ಯಗಳಿಂದ ಆರಂಭವಾಗಿ, ಅವಿಚಾರದಿಂದ ಬೆಳೆದು, ಸತ್ಯಶ್ರವಣದಿಂದ ಶಾಂತವಾಗುವುದು, ಅಸೂಯೆಯು ಸಾಮರ್ಥ್ಯರಾಹಿತ್ಯದಿಂದ ಹುಟ್ಟಿ ಅಜ್ಞಾನದಿಂದ ಬೆಳೆದು, ನಯಕಾರುಣ್ಯಗಳಿಂದ ಕೊನೆಗಾಣುವುದು. ಕೆಟ್ಟ ಕೃಪೆಯು ಕೃಪಣದರ್ಶನದಿಂದ ಹುಟ್ಟಿ ಅಪಾತ್ರದಾನದಿಂದ ಬೆಳೆದು, ಧರ್ಮನಿಷ್ಠೆಯಿಂದ ಸರಿಹೋಗುವುದು. ಲೋಭವು ಅಜ್ಞಾನದಿಂದ ಹುಟ್ಟಿ ಅದಾನದಿಂದ ಬೆಳೆದು ಭೋಗನಾಶದಿಂದ ನಿವರ್ತಿಸುವುದು. ಇಲ್ಲಿ ಅಸೂಯೆ ಪರಾಸುತೆಗಳು ಎರಡು ವಿಧವಾಗಿ, ಒಟ್ಟು ಹದಿನೈದು ದೋಷಗಳು ವರ್ಣಿತವಾಗಿವೆ. ಈ ಹದಿನೈದು ದೋಷಗಳನ್ನು ಗೆಲ್ಲಲು ಮುಖ್ಯಸಾಧನವೆಂದರೆ ಭಗವತ್ ಪ್ರಸಾದವೇ. ಅಂತಹ ಶ್ರೀಕೃಷ್ಣಪ್ರಸಾದವು ನಿನ್ನಲ್ಲಿದೆ; ಅಂತೆಯೇ ದೋಷರಹಿತನಾಗಿ ನೀನು – ಈ ಎಲ್ಲ ದೋಷಗಳಿಗೆ ನೆಲೆಯಾಗಿದ್ದ ದುರ್ಯೋಧನಾದಿ ಶತ್ರುಗಳನ್ನು ನಿಗ್ರಹಿಸಿ, ಶ್ರೀಶಾನುಗ್ರಹಪಾತ್ರನಾಗಿ, ರಾಜ್ಯಕೀರ್ತಿಗಳನ್ನು ಗಳಿಸಿರುವೆ!'

ಮುಂದಾದರೂ ನೃಶಂಸರನ್ನು ವರ್ಜಿಸು! ಕಂಟಕದಂತೆ ನೋಯಿಸುವ, ಕೂಪದಂತೆ ಪತಿತನನ್ನಾಗಿಸುವ, ವ್ಯಾಘ್ರಸರ್ಪಗಳಂತೆ ಭಯವನ್ನು ಪುಟ್ಟಿಸುವ, ಅಗ್ನಿಯಂತೆ ಉರಿದು ನೃಶಂಸರನ್ನು ಶ್ರೇಯೋರ್ಥಿಯು ದೂರವಿಡಬೇಕು. ನೃಶಂಸರು ಗರ್ಹಿತವಾದುದನ್ನು ಮಾಡುವರು. ಸುಜನರನ್ನು ಕಂಡು ಉರಿಯುವರು. ಕುಕರ್ಮಗಳನ್ನು ಮಾಡಲು ಹಿಂಜರಿಯರು. ನೃಶಂಸನು ನಿಂದ್ಯಕರ್ಮವನ್ನು ಮಾಡುತ್ತಿರುವುದನ್ನು ಅರಿತಿದ್ದರೂ, ದೈವವಂಚಿತನಾಗಿ ಮಾಡುತ್ತಿರುವುದಾಗಿ ಸಮಾಧಾನ ತಂದುಕೊಂಡು, ಬಿಡದೆ ಪರಪೀಡೆಯನ್ನು ಕೊಡುವನು; ಅವನು ಕೊಟ್ಟು, ಹೇಳಿಕೊಳ್ಳುವನು; ಸ್ನೇಹವನ್ನಿಟ್ಟು ವಂಚಿಸುವನು; ಧನಿಕನಾದರೂ ದರಿದ್ರನಂತೆ ತೋರಿಕೊಳ್ಳುವನು; ಆಶ್ರಮ ಧರ್ಮಗಳನ್ನು ಕೆಡಿಸಿ ಹೊಲೆಗೆಲಸುವನು. ಗುಣಾಗುಣಗಳನ್ನು ನೋಡಿ ಪ್ರಶಂಸಿಸದೆ, ನಿಂದಿಸದೆ ಉಪೇಕ್ಷಿಸುವನು. ತನ್ನ ಮನಸ್ಸಿಗೆ ಬಂದಂತೆ ವರ್ತಿಸುವನು. ಪರದೋಷವನ್ನು ಗುಹ್ಯವಾಗಿಡದೆ, ಸಾರುವನು. ಜೀವಿಕೆಗಾಗಿ ಸುಜೀವರನ್ನು ಹಿಂಸಿಸುವನು. ತನ್ನಂತೆ, ಎಲ್ಲರೂ ಕೆಟ್ಟವರೆಂದು ತಿಳಿದು, ಯಾರನ್ನೂ ನಂಬದಿರುವನು. ಉಪಕಾರಿಯನ್ನೂ ವಂಚಕನೆಂದು ತಿಳಿವನು. ಭಕ್ಷ್ಯಭೋಜ್ಯಪಾನೀಯಗಳನ್ನು ಕಂಡಂತೆ ತಿಂದು ಕುಡಿಯುತ್ತಿರುವನು. ಇಂತಹ ನೃಶಂಸರ ಸಂಗ ಮಾಡಬಾರದು.

ಒಂದು ವೇಳೆ ವಿಪ್ರನು ದರಿದ್ರನಾದುದರಿಂದ ಯಜ್ಞಯಾಗಾದಿಗಳನ್ನು ಮಾಡಲಾಗದೆ, ಪರಸಹಾಯವನ್ನು ಬೇಡಿದರೆ ತಪ್ಪಲ್ಲ. ಅಂತಹ ವಿಪ್ರನಿಗೆ – ಶ್ರೋತ್ರಿಯನೆಂದು ಪರೀಕ್ಷಿಸಿ, ಬೇಕಾದುದನ್ನು ಕೊಡಬೇಕು. ಧರ್ಮಭಿಕ್ಷುಕರನ್ನು ಬರಿಗೈಲಿ ಕಳಿಸಬಾರದು. ವಿದ್ಯಾವಂತನಾಗಿ,

ಬಡವನಾದವನು ಉತ್ತಮ ಪಾತ್ರನೆಂದು ತಿಳಿ! ಬರಿ ಬಡವನಿಗೆ ಅನ್ನಾದಿ ಆಮದ್ರವ್ಯವನ್ನು ಕೊಡಬಹುದು, ಧನವನ್ನಲ್ಲ. ಜ್ಞಾನಿವಿಪ್ರನು ರತ್ನಪೂರ್ಣವಾದ ವಸುಧೆಯನ್ನು ಪ್ರತಿಗ್ರಹಿಸಲು ಅರ್ಹನಾಗಿರುವನು. ಮೂರು ವರ್ಷದ ಧಾನ್ಯವನ್ನು ಸಂಗ್ರಹಿಸಿಟ್ಟ ವಿಪ್ರನಿಗೆ ಸೋಮ ಯಾಜಿಯಾಗಲು ಅಧಿಕಾರವಿದೆ. ಅಂತು ಧನಿಕನಾದವನು ಮಾತ್ರ ಯಜ್ಞವನ್ನು ಮಾಡಬಹುದು.

ರಾಜನು ಯಜ್ಞ ಮಾಡುವ ಸಲುವಾಗಿ ವೈಶ್ಯರಿಂದ ದಶಮಾಂಶ ಧನವನ್ನು ಸ್ವೀಕರಿಸಬಹುದು. ನೂರಾಕಳುಗಳಿದ್ದ ವೈಶ್ಯನಿಂದ ಒಂದಾಕಳನ್ನು ಪಡೆಯಬಹುದು. ದಾನವನ್ನು ಕೊಡದ ಲೋಭಿಜನರಿಂದ ಚತುರ್ಥಾಂಶವನ್ನು ಹರಿಸಿದರೂ ರಾಜನಿಗೆ ಪಾಪವಿಲ್ಲ. ಕ್ಷೇತ್ರಾರಾಮಗಳಿಂದಲು, ರೇವು ಬಾವಿಗಳಿಂದಲು, ಸುಂಕ ಕಪ್ಪದಂಡಗಳಿಂದಲು, ಧನವನ್ನು ಸಂಗ್ರಹಿಸಿ, ರಾಜನು ಯಜ್ಞದಾನ ಪ್ರಜಾ ರಕ್ಷಣೆಗಳಿಗಾಗಿ ಉಪಯೋಗಿಸಬೇಕು. ವಿಪ್ರನಿಂದ ಮಾತ್ರ ದಂಡಧನವನ್ನು ಸ್ವೀಕರಿಸಬಾರದು. ವಿಪ್ರ ಧನಾಕಾಂಕ್ಷಿಯಾದ ರಾಜನ ತೇಜವು ಕ್ಷೀಣವಾಗುವುದು. ಆಪತ್ತನ್ನು ಬಾಹುವೀರ್ಯದಿಂದ ಕಳೆಯುವುದು ಕ್ಷತ್ರಿಯನಿಗೆ ತಕ್ಕುದಾಗಿದೆ. ವಿಪ್ರನು ಮಂತ್ರ ಹೋಮಗಳಿಂದಲು, ವೈಶ್ಯನು ಧನವ್ಯಯದಿಂದಲು, ಶೂದ್ರನು ದೇವಸೇವೆ ದಾನಗಳಿಂದಲು ಆಪತ್ಕಾಲವನ್ನು ದಾಟಬಹುದು.

ಈಗ ಪಾಪಗಳಿಗೆ ಪ್ರಾಯಶ್ಚಿತ್ತಗಳನ್ನು ಸಂಗ್ರಹವಾಗಿ ನಿರೂಪಿಸುವೆನು. ದಕ್ಷಿಣೆಯನ್ನೀಯದೆ ಯಜ್ಞಗಳನ್ನು ಮಾಡಬಾರದು. ದಕ್ಷಿಣಾ ಸಾಮಾರ್ಥ್ಯವಿಲ್ಲದವನು ಯಜ್ಞವನ್ನು ಪ್ರಾರಂಭಿಸಬಾರದು. ಆಗ ಕೂಡಿಟ್ಟ ಧಾನ್ಯಾದಿಗಳನ್ನು ಯಜ್ಞಶೀಲನಾದ ರಾಜನಿಗೆ ಒಪ್ಪಿಸಿಕೊಡಬೇಕು.

ರಜಸ್ವಲೆಯಿಂದ ಸಂಗ ಮಾಡಿದ ದ್ವಿಜರು, ಒಂದೇ ಬಾವಿಯಿದ್ದ ಊರಿನಲ್ಲಿ ಆರು ತಿಂಗಳಿದ್ದ ವಿಪ್ರರು, ವರ್ಷ ಪ್ರಾಯಶ್ಚಿತ್ತ (ಕೃಚ್ಛ್ರ)ವನ್ನು ಮಾಡಿ ಶುದ್ಧರಾಗುವರು. ನಿಕೃಷ್ಟವರ್ಣದಿಂದ ಕೂಡಿ, ಉಂಡು, ಕಲೆತ ವಿಪ್ರನು ನಿಕೃಷ್ಟನೇ ಆಗುವನು. ಅಂತಹವನು ನಿಷ್ಠೆಯಿಂದ ಮೂರು ವರ್ಷಕಾಲ ಯಾತ್ರೆಯನ್ನಾಚರಿಸಿ, ಶುದ್ಧನಾಗುವನು. ನರ್ಮ ವಿವಾಹ, ವಿಪ್ರ ಗೋರಕ್ಷೆಗಳಲ್ಲಿ ಸುಳ್ಳಾಡಿದರೂ ಪಾಪವಿಲ್ಲ.

ಧರ್ಮರಾಜ ! ಪಾಪವನ್ನು ಸೂಚಿಸಿದವನಿಗೂ ಪಾಪಿಯ ಸಮಭಾಗ ಪಾಪ ಬರುವುದು. ಅಸ್ತೇನನನ್ನು ಪಾಪಿ ಎಂದವನಿಗೆ ದ್ವಿಗುಣ ಪಾಪವು ಬರುವುದು. ಕನ್ಯೆಯು ವರನು ಸಿಗದ ಮುನ್ನ ಮೈಥುನೇಚ್ಛೆಯಿಂದ ಕೆಟ್ಟರೆ ಬ್ರಹ್ಮಹತ್ಯೆಯ ತ್ರಿಭಾಗ ಪಾಪವನ್ನೂ ದೂಷಕನು ಮಿಕ್ಕ ಪಾದ ಪಾಪವನ್ನೂ ಹೊಂದುವರು. ವಿಪ್ರನ ಶೋಣಿತ ಬಿಂದುಗಳಿಂದ ತೊಯ್ಯುವ ಮಣ್ಣಿನ ಕಣಗಳಷ್ಟೇ ವರ್ಷಗಳು ಅವರನ್ನು ಕೊಂದವನಿಗೆ ನರಕವಾಗುವುದು. ಭ್ರೂಣಹತ್ಯೆ ಮಾಡಿದವನೂ, ವಿಪ್ರಹಂತಕನೂ, ದೇವಾಲಯ ಬ್ರಾಹ್ಮಣ ರಕ್ಷೆಗಾಗಿ, ಕಡಿದಾಡಿ ಸತ್ತರೆ, ಆಗ ಶುದ್ಧರಾಗುವರು. ಗುರುತಲ್ಪಗಮನನಿಗೆ ಕಾದ ತರುಣೀ ಪ್ರತಿಮೆಯನ್ನಪ್ಪಿ ಸತ್ತರೆ ಶುದ್ಧನಾಗುವನು. ಸುರಾಪಾನ ಪಾಪವು ಮೂರು ವರ್ಷಗಳ ಕಾಲ ಬ್ರಹ್ಮಚಾರಿಯಾಗಿದ್ದು ಅಗ್ನಿಷ್ಟೋಮ

ಮಾಡುವುದರಿಂದ ನಿವೃತ್ತವಾಗುವುದು. ವೈಶ್ಯಹತ್ಯೆಯು ಒಂದೆತ್ತಿನಿಂದ ಕೂಡಿದ ನೂರಾಕಳದಾನದಿಂದ ನಿವೃತ್ತವಾಗುವುದು. ಶೂದ್ರಹತ್ಯೆಗೆ ಒಂದು ವರ್ಷದ ಕೃಚ್ಛ್ರ ಗೋದಾನಗಳೇ ಪ್ರಾಯಶ್ಚಿತ್ತವಾಗಿದೆ.

ಮಾತಾಪಿತೃಗಳನ್ನು ಪೋಷಿಸದೆ ಬಿಟ್ಟವನು, ಪತಿವ್ರತೆಯನ್ನು ಬಿಟ್ಟು, ದಾಸೀ ಸಂಗಮಾಡಿದವನು - ಪತಿತರೆನಿಸುವರು. ಅವರು ಒಂದು ವರ್ಷ ಕೃಚ್ಛ್ರ ಮಾಡಿ ಗೋದಾನದಿಂದ ಶುದ್ಧರಾಗುವರು. ಯಾವುದೇ ಪ್ರಾಯಶ್ಚಿತ್ತವಾಗಲಿ, ಪಶ್ಚಾತ್ತಾಪ ವಿಷ್ಣು ಭಕ್ತಿಯುತವಾಗಿದ್ದರೇನೇ ಶುದ್ಧಿಪ್ರದವಾಗುವುದು. ವಿಷ್ಣು ಭಕ್ತಿವಿಹೀನನ ಪ್ರಾಯಶ್ಚಿತ್ತಗಳು ಪಾಪಪರಿಹಾರಕವಾಗಲಾರವು. ಪಾಪವನ್ನು ಮತ್ತೆ ಮಾಡಿದರೆ ಪ್ರಾಯಶ್ಚಿತ್ತವು ಕುಂಜರ ಸ್ನಾನದಂತೆ ವ್ಯರ್ಥವೇ ಸರಿ! ಪರದಾರಾಗಮನವನ್ನು ಮಾಡಿದವನಿಗೆ ಒಂದು ವರ್ಷ ಬ್ರಹ್ಮಚರ್ಯವೂ, ಕಾದ ಕಬ್ಬಿಣದ ಹಾಸಿಗೆಯಲ್ಲಿ ಮಲಗುವುದೇ ಪ್ರಾಯಶ್ಚಿತ್ತವು. ಭರ್ತನನ್ನು ಅತಿಕ್ರಮಿಸಿದ ನಾರಿಯರಿಗೂ ಇದೇ ಶಿಕ್ಷೆ. ಪರಿವೇತ್ತನು ಪರಿವಿತ್ತ(ಅಣ್ಣ)ನಿಗೆ ತನ್ನ ಹೆಂಡತಿಯನ್ನು 'ನಿನ್ನ ಸೊಸೆ' ಎಂದೊಪ್ಪಿಸಿ, ಅನಂತರ ಅವಳನ್ನು ಸ್ವೀಕರಿಸಬೇಕು. ಇವರೆಲ್ಲರೂ ಚಾಂದ್ರಾಯಣ ವ್ರತದಿಂದ ಪಾವನರಾಗುವರು. ನಾಸ್ತಿಕರಿಗೂ, ವಿಷ್ಣುದ್ವೇಷಿಗಳಿಗೂ ಪ್ರಾಯಶ್ಚಿತ್ತವಿಲ್ಲ. ಅಂತಹವರಿಗೆ ಉದಕ ಕ್ರಿಯೆಯೂ ವ್ಯರ್ಥವಾಗುವುದು.' ಇಂತು ಭೀಷ್ಮನು ಆಪದ್ಧರ್ಮಗಳನ್ನು ನಿರೂಪಿಸಿದನು. ಆಗ ನಕುಲನು 'ತಾತ! ಆಪದ್ಧರ್ಮಗಳನ್ನು ಕೇಳಿದೆನು. ಪರರನ್ನು ಆಪತ್ತಿನಿಂದ ರಕ್ಷಿಸುವಾಗ ಮುಖ್ಯ ಸಾಧನವಾದ ಖಡ್ಗದ ಚರಿತವನ್ನು ನನಗೆ ನಿರೂಪಿಸು!' ಎಂದನು.

ಭೀಷ್ಮನಿಂತೆಂದನು: 'ರಾಜನ್! ಪ್ರಳಯಕಾಲದಲ್ಲಿ ಜೀವಜಡಾತ್ಮಕವಾದ ಜಗತ್ತೆಲ್ಲವು ನಾರಾಯಣ ಕುಕ್ಷಿಗತವಾಗಿತ್ತು. ಮುಂದೆ ಸೃಷ್ಟಿ ಕಾಲವು ಬಂದಾಗ ಶ್ರೀಹರಿಯು ಬ್ರಹ್ಮನನ್ನು ಸೃಜಿಸಿದನು. ಬ್ರಹ್ಮನು ಶ್ರೀಹರಿಯ ದಯದಿಂದ ಸಮರ್ಥನಾಗಿ ಬ್ರಹ್ಮಾಂಡದಲ್ಲಿ ನಾನಾವಿಧ ಪ್ರಜರನ್ನು ಸೃಜಿಸಿ, ಅವರಿಗೆ ತಕ್ಕ ಸ್ಥಾನಗಳಿತ್ತು ನಿಲ್ಲಿಸಿದನು. ಧರ್ಮವಿಜ್ಞಾನಕ್ಕಾಗಿ ವೇದಾದಿ ಸಚ್ಛಾಸ್ತ್ರಗಳನ್ನು ಆತನು ಉಚ್ಚರಿಸಿ, ಮರೀಚ್ಯಾದಿ ಪ್ರಜೇಶರಿಗೂ, ಮನ್ವಾದಿ ನರೇಶರಿಗೂ ಉಪದೇಶಿಸಿದನು. ಎಲ್ಲ ಪ್ರಜರೂಪಾ ಬ್ರಹ್ಮನು ಶಾಸನದಲ್ಲಿ ನಿಂತು ಧರ್ಮಮಾರ್ಗವನ್ನು ಬಿಡದೆ ವರ್ತಿಸುತ್ತಿದ್ದರು.

ಆಗ ರಾಕ್ಷಸರು ಪ್ರಬಲರಾಗಿ ಸುಜನರನ್ನು ಪೀಡಿಸಿ, ಧರ್ಮವನ್ನು ಕೆಡಿಸಿದರು. ಧರ್ಮಸೇತುವು ಮುರಿಯುತ್ತಿತ್ತು. ಬ್ರಹ್ಮನು ದಂಡಶಾಸ್ತ್ರವನ್ನು ರಚಿಸಿ ಪೇಳಿದನು. ಆದರೂ ಅಸುರರು ಧರ್ಮವನ್ನು ಕೆಡಿಸುವುದನ್ನು ಬಿಡಲಿಲ್ಲ. ಅದನ್ನು ಕಂಡು ಬ್ರಹ್ಮದೇವನು ಮೇರು ಶೃಂಗವನ್ನು ಸೇರಿ, ಒಂದು ಮಹಾ ಯಜ್ಞವನ್ನಾರಂಭಿಸಿದನು. ಅಲ್ಲಿಗೆ ದೇವರ್ಷಿ ಭೂತಪಿತೃಸಿದ್ಧಸಾಧ್ಯರು ಬಂದು ನಿಂತರು. ಆ ಯಜ್ಞಾಗ್ನಿಕುಂಡದಿಂದ ಖಡ್ಗದೇವತೆ ಹುಟ್ಟಿದನು. ದುಷ್ಟರನ್ನು ಖಂಡಿಸುವ ಕಾರಣದಿಂದ ಖಡ್ಗನೆನಿಸಿದ ಶ್ರೀಹರಿಯೇ ಖಡ್ಗರೂಪನಾಗಿ ಪ್ರಾದುರ್ಭವಿಸಿದನು. ನೀಲೋತ್ಪಲದಳಶ್ಯಾಮನು, ತೀಕ್ಷ್ಣ ದಂಡಧರನು, ಖಡ್ಗಪಾಣಿಯು

ಮಹಾದಂಷ್ಟ್ರಾಕರಾಳನು, ಪ್ರಾಂಶುದೇಹನು, ಅಮಿತ ತೇಜೋವಿರಾಜಮಾನನು ಆದ ಖಡ್ಗರೂಪೀಹರಿಗೆ ಬ್ರಹ್ಮಾದಿಗಳು ವಂದಿಸಿ ನಿಂತರು. ಶ್ರೀಹರಿಯು ತನ್ನ ಖಡ್ಗವನ್ನು ಝಳಪಿಸಿದಾಗ, ಭೂಮಿಯು ಕಂಪಿಸಿತು. ಸಮುದ್ರಗಳು ಉಕ್ಕೇರಿದವು. ಆಕಾಶದಿಂದ ಉಲ್ಕೆಗಳು ಉದರಿದವು. ದಿಕ್ಕುಗಳು ಅಪ್ರಸನ್ನವಾದವು. ಸಕಲ ಭೂತಗಳು ಭಯಾಕುಲವಾದವು. ಶ್ರೀಹರಿಯು ಸಕಲಾಯುಧರಾಜವಾದ ಖಡ್ಗವನ್ನು ಬ್ರಹ್ಮದೇವನಿಗಿತ್ತು ಅಂತರ್ಧಿತನಾದನು. ಚತುರ್ಮುಖನು ರುದ್ರನಿಗದನ್ನು ಕೊಟ್ಟು, ದುಷ್ಟ ಸಂಹಾರವನ್ನು ಮಾಡೆಂದು ಆಜ್ಞಾಪಿಸಿದನು. ಭಗವಾನ್ ರುದ್ರನು ಕಾಲರುದ್ರನಂತೆ ವಿಜೃಂಭಿಸಿ, ಅಧರ್ಮವನ್ನು ಖಂಡಿಸಿ, ಧರ್ಮಸೇತುವನ್ನು ಉಳಿಸಿದನು.

ಖಡ್ಗಹಸ್ತನಾದ ರುದ್ರದೇವನು ಚತುರ್ಭುಜನು, ಸೂರ್ಯ ಮಂಡಲ ವ್ಯಾಪ್ತಕಾಯನು, ಮಹಾಲಿಂಗನು, ಅಗ್ನಿಮುಖನು, ಆಗಿ ಬಹು ವಿಚಿತ್ರ ರೂಪದಿಂದ ವಿರಾಜಿಸಿದನು. ಆತನ ನೇತ್ರದ್ವಯವು ಕೃಷ್ಣಪಿಂಗಳವಾಗಿದ್ದು ತೃತೀಯ ನೇತ್ರವು ಕಿಡಿ ಕಾರುತ್ತಿತ್ತು. ಕೃಷ್ಣಾಜಿನವನ್ನು ಹೊತ್ತು, ತಾರಕೆಗಳ ಹೂ ಮಾಲೆ ಮುಡಿದು, ಚಂದ್ರಬಿಂಬ ಚೂಡನಾಗಿ, ಭಯಂಕರನಾಗಿದ್ದ ರುದ್ರನು ಖಡ್ಗವನ್ನೆತ್ತಿ ಬೀಸಿ – ಬೀಸಿ ಕೇಕೆ ಹಾಕಿ ನಗುತ್ತಾ ಮೇಲೇರಿ ಬರುವ ದೈತ್ಯದಾನವರನ್ನು ಖಂಡಿಸಿದನು. ಇಂತು ರುದ್ರರೂಪನಾಗಿ ದಾನವರನ್ನು ಸಿಗಿದು, ಶಿವರೂಪನಾಗಿ ದೇವತೆಗಳನ್ನು ಪೊರೆದು, ಧರ್ಮವನ್ನು ಸ್ಥಾಪಿಸಿದ ಮಹಾದೇವನು ಮತ್ತೆ ಸಕಲಕರ್ಮ ಭೋಕ್ತನಾದ ಶ್ರೀವಿಷ್ಣುವಿಗೆ ಆ ಖಡ್ಗವನ್ನು ಸಮರ್ಪಿಸಿ, ನಮಸ್ಕರಿಸಿದನು. ವಿಷ್ಣುವು ಬ್ರಹ್ಮನಿಂದ ಅದನ್ನು ಮರೀಚಿಗೆ ಕೊಡಿಸಿದನು. ಮರೀಚಿಯು ಋಷಿಗಳಿಗಿತ್ತನು. ಅವರು ದೇವೇಂದ್ರನಿಗಿತ್ತರು. ಆತನು ಲೋಕಪಾಲಕರಿಗೆ ಕೊಟ್ಟನು. ಅವರು ವೈವಸ್ವತಮನು ರಾಜನಿಗಿತ್ತರು. ಧರ್ಮದಿಂದ ಪ್ರಜರನ್ನು ಪಾಲಿಸಲು ಸಾಧನವಾಗಿ ಬಹುರೂಪದಿಂದ ನಿಂತ ಖಡ್ಗವನ್ನು ಮನುರಾಜನು, ರಾಜಾದಿ ಪಾಲಕರಿಗಿತ್ತನು. ದುಷ್ಟರನ್ನು ಹೆದರಿಸಿ ದುಷ್ಟಕಾರ್ಯದಿಂದ ನಿಲ್ಲಿಸಬೇಕು. ದುಷ್ಟತರರನ್ನು ಬಹು ಧನದಂಡದಿಂದ ಶಿಕ್ಷಿಸಬೇಕು. ದುಷ್ಟತಮರನ್ನು ಖಡ್ಗದಿಂದ ಕತ್ತರಿಸಿ, ವ್ಯಂಗರನ್ನಾಗಿಸಿ ಕಳಿಸಬೇಕು. ಅತ್ಯಂತ ದುಷ್ಟರನ್ನು ಖಂಡಿಸಿ ಕೊಲ್ಲಬೇಕು. ಅಲ್ಪಾಪರಾಧಕ್ಕೆ ಖಡ್ಗ ಪ್ರಹಾರವನ್ನು ಮಾಡಬಾರದು. ಇಂತು ಖಡ್ಗವು ಅಧರ್ಮವನ್ನು ದಂಡಿಸಿ, ಧರ್ಮವನ್ನು ನಿಲ್ಲಿಸುವ ರಾಜರಿಗೆ ಉತ್ತಮ ಸಾಧನವಾಗಿದೆ. ಇಕ್ಷ್ವಾಕು, ಪುರೂರವ, ಆಯು, ನಹುಷ, ಯಯಾತಿ, ಪುರು, ಅಮೂರ್ತರಯ, ಭೂಮಿಂಜಯ, ಭರತ, ಧುಂಧುಮಾರ, ಮುಚುಕುಂದ, ಮರುತ್ತ, ರೈವತ, ಮಾಂಧಾತ, ಹರ್ಯಶ್ವ, ಉಶೀನರ, ಭೋಜ, ಪ್ರದರ್ದನ, ಅಷ್ಟಕ, ಭರದ್ವಾಜ, ದ್ರೋಣ, ಕೃಪ, ಎಂಬ ಕ್ರಮದಿಂದ ಬಂದ ಖಡ್ಗವನ್ನು ಧರ್ಮರಕ್ಷಣೆಗಾಗಿ ಪಾಂಡವರಾದ ನೀವು ಪಡೆದಿರುವಿರಿ! ಖಡ್ಗದನ ನಕ್ಷತ್ರವು ಕೃತಿಕೆ. ದೇವತೆ ಅಗ್ನಿಯು. ರುದ್ರನೇ ಖಡ್ಗ ಮಂತ್ರದ ಋಷಿಯು; ಶ್ರೀಖಡ್ಗನಾಮಕ ಶ್ರೀಹರಿಯೇ ಪ್ರಧಾನ ದೇವತೆಯು, ಅಸಿ, ವಿಶಸನ, ಖಡ್ಗ ತೀಕ್ಷ್ಣಧಾರ, ದುರಾಸದ, ಶ್ರೀಗರ್ಭ, ವಿಜಯ,

ಧರ್ಮಪಾಲ ಎಂಬ ಎಂಟು ನಾಮಗಳಿಂದ ಖ್ಯಾತವಾದ ಖಡ್ಗದ ಮಹಿಮೆಯನ್ನು ಕೇಳಿ ತಿಳಿದವರು ಕೀರ್ತಿ ವಿಜಯಗಳನ್ನು ಗಳಿಸುವರು.'

ಇಂತು ಭೀಷ್ಮನು ನುಡಿಯಲು ಕೇಳಿ, ಧರ್ಮರಾಜಾದಿ ಪಾಂಡವರು ಸಂತೋಷಿತರಾದರು. ಆಗ ಅವರವರಲ್ಲಿ ನಡೆದ ಧರ್ಮಾರ್ಥ ಕಾಮಮೋಕ್ಷಗಳ ಪ್ರಶಂಸೆಯ ಚರಿತೆಯನ್ನು ಮೊದಲೇ ನಿರೂಪಿಸಿರುವೆನು, ಈಗ ಮತ್ತೆ ಅದರ ಸಂಗ್ರಹವನ್ನು ಕೇಳು' ಎಂದು ವೈಶಂಪಾಯನರ್ಷಿಯು ಜನಮೇಜಯನಿಗೆ ನಿರೂಪಿಸತೊಡಗಿದನು. (ನೋಡಿ ಶಾಂತಿ ಪರ್ವ- ರಾಜಧರ್ಮ ಮೂರನೇ ಅಧ್ಯಾಯ) ವಿದುರನಿಂದ ಕೂಡಿ ಪಾಂಡವರು ನಡೆಸಿದ ಪುರುಷಾರ್ಥ ವಿಚಾರವಿಂತಿದೆ.

ಧರ್ಮರಾಜನು ಧರ್ಮಾದಿ ಪುರುಷಾರ್ಥತ್ರಯದಲ್ಲಿ ಯಾವುದು ಮುಖ್ಯವೆಂದು ಕೇಳಿದನು. ವಿದುರನು ಧರ್ಮವೇ ಮುಖ್ಯವೆಂದು, ಅರ್ಥವನ್ನು ಮಧ್ಯಮ, ಕಾಮವನ್ನು ನೀಚವೆಂದನು. ಅರ್ಜುನನು ಅರ್ಥವೇ ಮುಖ್ಯವೆಂದನು. ದೈವಾರ್ಥವು ವಿದ್ಯೆಯು; ಅದು ಮೋಕ್ಷ ಸಾಧನವಾಗಿದೆ. ವಿದ್ಯಾ(ಜ್ಞಾನ) ಪೂರ್ವಕವಾದ ಕರ್ಮದಿಂದ ಧರ್ಮವು ಹುಟ್ಟುವುದು; ಧರ್ಮವನ್ನು ಶುದ್ಧಾಂತಃಕರಣದಿಂದ ಮಾಡಿದವನಿಗೇ ವಿದ್ಯೆ ಲಭಿಸುವುದು. ಮಾನುಷಾರ್ಥವು ಕೂಡಾ ಸುಪ್ರಯೋಜಿತವಾದರೆ, ಗುರುಪ್ರಸಾದವನ್ನು ಸಂಪಾದಿಸಿ ಕೊಡುವುದು. ಅದರಿಂದ ಶ್ರೀಹರಿ ಪ್ರಸಾದವು ಲಭ್ಯವಾಗುವುದು. ಕಾಮಕ್ಕೆ ಅಲ್ಲದೇ, ಶ್ರೀಹರಿ ಪ್ರೀತಿಗಾಗಿ ಧರ್ಮವನ್ನು ಮಾಡಲು ಅರ್ಥವು ಸಾಧನವಾಗಿದೆ. ಅದು ಧರ್ಮವನ್ನು, ಶ್ರೀಹರಿ ಪ್ರೀತಿಯನ್ನು ಹುಟ್ಟಿಸಲು ಸಮರ್ಥವಾಗಿದೆ. ಆದುದರಿಂದ ಅರ್ಥವೇ ಶ್ರೇಷ್ಠವೆಂದು ಅರ್ಜುನನು ನುಡಿದನು. ನಕುಲ ಸಹದೇವರೂ ಅರ್ಜುನನ ಮಾತನ್ನು ಅನುಮೋದಿಸಿದರು.

ಭೀಮಸೇನನು ಕಾಮವು ನೀಚವೆಂಬುದನ್ನು ಸಮ್ಮತಿಸದೆ 'ಕಾಮವೇ ಉತ್ತಮವು' ಎಂದನು. ಕಾಮ ಎಂದರೆ ಕಾಮ್ಯ ಎಂದರ್ಥ; ಧರ್ಮಾದಿ ಪುರುಷಾರ್ಥಗಳೆಲ್ಲವೂ ಉಚಿತ ರೀತಿಯಿಂದ ಕಾಮ್ಯಗಳಾಗಿವೆ; ಪುರುಷರಿಂದ ಬೇಡಲ್ಪಡುವುದೆಲ್ಲವೂ ಪುರುಷಾರ್ಥವೇ; ಅಂದರೆ ಕಾಮ್ಯವೇ! ಪುರುಷಾರ್ಥವಾಗದಿರುವ ದುಃಖವು ಅಕಾಮವು. ಹಾಗೆಯೇ ಮುಕ್ತಿಯು ಕೂಡ ಕಾಮಿತವಾಗಿದೆ. ಮೋಕ್ಷಸಾಧನಗಳಾದ ಜ್ಞಾನಭಕ್ತಿ ವಿರಕ್ತ್ಯಾದಿಗಳೂ, ಶ್ರವಣ ಮನನ ನಿದಿಧ್ಯಾಸನಗಳೂ ಬೇಡತಕ್ಕವೇ ಆಗಿ ಕಾಮ್ಯಗಳೆನಿಸಿವೆ. ಅವನ್ನು ಬೇಡಬಾರದೆಂದು ಎಲ್ಲಿಯೂ ಹೇಳಿಲ್ಲ. ಅವನ್ನು ಯಾವನ ಪ್ರೀತಿಗಾಗಿ ಬೇಡುವೆವೋ, ಅಂತಹ ಶ್ರೀಹರಿಯೇ ಮುಖ್ಯಕಾಮ್ಯನು ಅವನನ್ನು ಕಾಮಿಸದವರಿಗೆ ಅಧಮಗತಿಯಾಗುವುದು. ಅವನೇ ಅಖಿಲ ಸಂಪೂರ್ಣ ಪುರಾಷಾರ್ಥ ಸ್ವರೂಪನು. ಶಾಕಗತಲವಣದಂತೆ ಸರ್ವ ಪುರುಷಾರ್ಥಗಳಲ್ಲಿ ಅಡಕವಾಗಿರುವ ಕಾಮವನ್ನು ನೀಚವೆನ್ನಲಾಗದು. ಏಕಾದಶ್ಯುಪವಾಸಾದಿ ವ್ರತಗಳು ಧರ್ಮಾರ್ಥಯುಕ್ತವಾಗಿ, ಉತ್ತಮ ಕಾಮವೆನಿಸಿವೆ. ತನ್ನ ಸುಬುದ್ಧಿ ಎಂಬುವ ಪ್ರಮದೆಗಳಿಂದ (ವೈರಾಗ್ಯ, ಉಪಾಸನಾ) ಕೂಡಿ ಸುಖಪಡುವ, ಮೋಕ್ಷಾಖ್ಯ ಸ್ವರೂಪಾನಂದಕ್ಕಾಗಿ ಮಾಡುವ, ಪ್ರಯತ್ನವೆಲ್ಲವೂ

ಸತ್ಕಾಮವೇ ಆಗಿದೆ; ಶ್ರೀಹರಿಯ ಚರಣಾರವಿಂದ ಸಮರ್ಪಿತವಾದ ಮಾಲೆಯನ್ನು ಹಾಕಿ, ವಸನವನ್ನುಟ್ಟು, ಗಂಧವನ್ನು ಹಚ್ಚಿ ಆಭರಣಗಳನ್ನಿಟ್ಟು, ತುಲಸಿಯನ್ನು ಮುಡಿದು, ನೈವೇದ್ಯಶೇಷವನ್ನುಂಡು ಸುಖವಾಗಿರುವ ಭಕ್ತರೆಲ್ಲರೂ ಅವನ ಬಂಧಕ ಶಕ್ತಿಯನ್ನು ಜಯಿಸಬಲ್ಲವರಾಗುತ್ತಾರೆ. ಇಂತಹ ಕಾಮವು ನಿಷಿದ್ಧವಲ್ಲ' ಎಂದ ಭೀಮನ ವಚನಗಳನ್ನು ಕೇಳಿ, ಧರ್ಮರಾಜನು ಆ ಮಾತು ತನಗೆ ಸಮ್ಮತವಾದುದರಿಂದ, ಪ್ರಶಂಸಿಸಿ, ಮೋಕ್ಷವೇ ಶ್ರೇಷ್ಠವೆಂದು ಮತ್ತೆ ಪ್ರತಿಪಾದಿಸಿದನು. ಭೀಮಸೇನನು ಮೋಕ್ಷವು ಮಹಾ ಪುರುಷಾರ್ಥವಾಗಿರುವುದರಿಂದ ಆ ಮಾತನ್ನು ನಿರಾಕರಿಸಲಿಲ್ಲ.

## ೬. ಪಾಪಿಜನಸಂಗ ವರ್ಜನ

ಆಗ ಧರ್ಮರಾಜನು ಮತ್ತೆ ಪಿತಾಮಹನನ್ನು ನೋಡಿ, 'ತಾತ! ಮಾನವರಲ್ಲಿ ಸೌಮ್ಯ ಸ್ವಭಾವರೆಂತಿರುವರು? ಯಾರೊಡನೆ ಮಾಡಿದ ಸ್ನೇಹವು ಕೆಡದಿರುವುದು! ಯಾರು ವಕ್ರಬುದ್ಧಿಗಳು? ಅವರೊಡನೆ ಸ್ನೇಹವು ಅಪಾಯಕರವೆಂಬರು. ಆಪತ್ತಿಗೂ, ಸಂಪತ್ತಿಗೂ ಕಾರಣರಾದ ದುಷ್ಟಜನ ಸಜ್ಜನರನ್ನು ನನಗೆ ತಿಳಿಸಿ ಕೊಡು!' ಎಂದನು.

ಭೀಷ್ಮನಿಂತೆಂದನು: 'ರಾಜನ್! ಲೋಭಿಗಳು, ಕ್ರೂರರು, ಧರ್ಮನಿಂದಕರು, ಮೋಸಕರು, ಪಶ್ಚಾತ್ತಾಪವಿಲ್ಲದವರು. ದಾಂಭಿಕರು, ಮೋಸಗಾರರು, ಆಲಸರು, ದೀರ್ಘಸೂತ್ರರು, ಕೃತಘ್ನರು, ಸರ್ವಶಂಕಿಗಳು, ಲಜ್ಜಾರಹಿತರು, ವೇದಬಾಹಿರರು, ಸಂಕರಜನ್ಮರು, ದುಶ್ಶೀಲರು, ಅತೃಪ್ತರು, ಕ್ರೋಧವಶರು, ಹಠನಿಷ್ಠುರರು, ಮಿತ್ರ ಮುಖ ಶತ್ರುಗಳು, ನರಹಿಂಸಕರು, ಪುರುಷವಚನರು, ಪ್ರಾಣಹಿಂಸಕರು, ಮುಂತಾದವರೊಡನೆ ಸ್ನೇಹವು ಕೂಡದು; ಮಾಡಿದರೂ ನಿಲ್ಲದು; ನಿಂತರೂ ಅನರ್ಥ ಫಲಪ್ರದವಾಗುವುದು.

ಮಧುರಗುಣರು, ಕುಲೀನರು, ವಿಜ್ಞಾನಶೀಲರು, ದಯಾಳುಗಳು, ಕೃತಜ್ಞರು, ಸತ್ಯಸಂಧರು, ಜಿತೇಂದ್ರಿಯರು, ಹಿಂಸಾವಿಮುಖರು, ವೇದಾಧ್ಯಯನತತ್ಪರರು, ಶ್ರೀಹರಿಭಕ್ತರು ಮುಂತಾದವರೊಡನೆ ಸ್ನೇಹವನ್ನು ಮಾಡಬೇಕು. ಕೃತಘ್ನರಿಂದ ಮಾತ್ರ ಸರ್ವಥಾ ಕಲೆತಿರಬಾರದು. ಈ ವಿಷಯದಲ್ಲಿ ಒಂದು ಕಥೆಯಿದೆ, ಕೇಳು!

ಹಿಂದೆ ಗೌತಮನೆಂಬ ಬ್ರಾಹ್ಮಣನು (ಗೋತ್ರಜನು) ಮ್ಲೇಂಛ ದೇಶವನ್ನು ಸೇರಿ, ಧನಸಮೃದ್ಧವಾದ ಒಂದು ಗ್ರಾಮವನ್ನು ಕಂಡು, ಅಲ್ಲಿ ಭಿಕ್ಷೆ ಬೇಡುತ್ತಾ ನಿಂತನು. ಅವನು ವೇದೋಕ್ತ ಕರ್ಮಗಳನ್ನು ಬಿಟ್ಟು, ಭ್ರಷ್ಟನಾಗಿ, ಕೇವಲ ಕುಕ್ಷಿಂಭರಣಕ್ಕಾಗಿ, ಜೀವಿಸುತ್ತಿದ್ದನು. ಅಲ್ಲಿ ದಸ್ಯುರಾಜನು ಧನಾಢ್ಯನಾಗಿ ಪರಿಪಾಲಿಸುತ್ತಿದ್ದನು. ಅವನು ಬ್ರಾಹ್ಮಣ ವತ್ಸಲನು, ಸತ್ಯಸಂಧನು, ಧರ್ಮವಿವೇಕಯುತನು ಆಗಿದ್ದನು. ಗೌತಮನು ಆ ರಾಜನ ಮನೆ ಸೇರಿ, ವಾರ್ಷಿಕ ವೃತ್ತಿಗಾಗಿ ವಸನ ನಿವಸನ ಸುಖಾಶನಗಳನ್ನು ಬೇಡಿದನು.

ದಸ್ಯುನಾಯಕನು ಅವನಿಗೆ ಧನಧಾನ್ಯವಸನ ಸದನಗಳನ್ನೂ, ತರುಣೀ ದಾಸಿಯನ್ನೂ ಕೊಟ್ಟನು. ಗೌತಮನು ಅವಳಿಂದ ಕೂಡಿ, ಶಬರಾಲಯದಲ್ಲಿಯೇ ಕೆಲ ಕಾಲ ಕಳೆದನು.

ಶಬರ ಸಹವಾಸದಿಂದ, ಸ್ವತಃ ದುಶ್ಶೀಲನಾದ ಗೌತಮನು ಮತ್ತಿಷ್ಟು ಕೆಟ್ಟನು. ಬೇಟೆಯಾಡಿ ತಂದ ಪಕ್ಷಿಗಳನ್ನು ತಿನ್ನುತ್ತಾ ಮದ್ಯವನ್ನು ಕುಡಿಯುತ್ತಾ ಜೀವಿಸುತ್ತಿದ್ದ ಆ ಇಂದ್ರಿಯಾರಾಮನ ಮನೆಗೆ ಒಂದು ದಿನ ಅವನ ಸ್ನೇಹಿತನು ಬಂದನು. ಆ ಹಳ್ಳಿಯಲ್ಲಿದ್ದ ಏಕೈಕ ವಿಪ್ರನು ಗೌತಮನೆಂದು ತಿಳಿದ ಆ ನೂತನನಿಗೆ ಸಂತೋಷವಾಯಿತು. ವೇದನಿಷ್ಠನು, ಶುಚಿವ್ರತನು ಆದ ಬ್ರಾಹ್ಮಣನಿಗೆ ಹೆಗಲ ಮೇಲೆ ಹಂಸಾದಿಪಕ್ಷಿ ಶವ ಗಳನ್ನಿಟ್ಟು, ರಕ್ತಸಿಕ್ತಗಾತ್ರನಾಗಿ ಮನೆ ಸೇರಬರುವ ಗೌತಮನು ದೃಷ್ಟಿಗೋಚರನಾದನು. ಅವನನ್ನು ಗುರ್ತಿಸಿ ವಿಪ್ರೋತ್ತಮನು, 'ಏನಿದು ನಿನ್ನ ಅಜ್ಞಾನ? ಎಂತಹ ಕುಲದಲ್ಲಿ ಹುಟ್ಟಿರುವೆ! ನಿನ್ನ ಹಿರಿಯರು ಎಂತಹ ಸದಾಚಾರವಂತರು! ಅವರ ವಂಶದಲ್ಲಿ ಕುಲಪಾಂಸನನಾಗಿ ಜನಿಸಿದ ನಿನ್ನಿಂದ, ಪಿತೃಪರಂಪರೆಯು ನರಕದಲ್ಲಿ ಬಿದ್ದಿತು. ಛೀ! ನಿನ್ನ ಮುಖ ನೋಡಬಾರದು!' ಎಂದು ನಿಂದಿಸಿ, ಅಲ್ಲಿಂದ ಹಾಗೆಯೇ ಹೊರಡಲನುವಾದನು.

ಗೌತಮನು 'ಮಿತ್ರ! ಏನು ಮಾಡಲಿ? ಆಪತ್ತಿಗೆ ಸಿಕ್ಕಿರುವೆನು. ಧನ ಧಾನ್ಯಗಳಿಲ್ಲ, ನನಗೆ ವೇದಾದಿ ಶಾಸ್ತ್ರವೂ ಗೊತ್ತಿಲ್ಲ. ದರಿದ್ರನಾಗಿ ಬೇರೆ ಜೀವಿಕೆಯನ್ನು ಕಾಣದೇ ಇಲ್ಲಿರುವೆನು. ನಾಳೆ ನಿನ್ನೊಡನೆ ಬರುವೆನು. ನನ್ನನ್ನು ಉದ್ಧರಿಸು!' ಎಂದು ಪಶ್ಚಾತ್ತಾಪ ಪಟ್ಟವನಂತೆ ಕಣ್ಣೀರಿಟ್ಟನು. ವಿಪ್ರನು ವಿಧಿಯಿಲ್ಲದೆ, ಆ ರಾತ್ರಿ ಅಲ್ಲಿ ನಿರಾಹಾರನಾಗಿ ಉಳಿದು, ಬೆಳಗು ಮುಂಜಾವದಲ್ಲಿ ಗೌತಮನಿಗೆ ಹೇಳದೆ, ಕೇಳದೆ ಎದ್ದೂ ಹೊರಟನು. ಗೌತಮನೂ ಸಮುದ್ರ ತೀರದಲ್ಲಿ ಅವನನ್ನು ಹುಡುಕುತ್ತಾ ಸಂಚರಿಸುತ್ತಿದ್ದನು. ಕೆಲವರ್ತಕರು ಸಾರ್ಥರಾಗಿ ಹೋಗುತ್ತಿದ್ದುದನ್ನು ಕಂಡು ಅವರೊಡನೆ ಕೂಡಿ ಪ್ರಯಾಣಿಸುತ್ತಿದ್ದನು. ಒಂದು ದಿನ ಸಾಯಂಕಾಲದಲ್ಲಿ ಸಾರ್ಥವಾಹರು ಒಂದರಣ್ಯ ಮಧ್ಯದಲ್ಲಿ ತಂಗಿದರು. ಅಂದು ರಾತ್ರಿ ಜಲಪಾನಕ್ಕಾಗಿ ಬಂದ ಮದ್ದಾನೆಗಳು ಅವರನ್ನು ತುಳಿದು ನಾಶ ಮಾಡಿದವು. ಗೌತಮನು ದೈವವಶದಿಂದ ಉಳಿದು, ಓಡಿ ಓಡಿ ಪ್ರಾತಃಕಾಲವಾಗುತ್ತಿರಲು, ಒಂದು ಆಲದ ಮರವನ್ನು ಸೇರಿ ಅಲ್ಲಿ ವಿಶ್ರಮಿಸಿದನು.

ಆಲದ ಮರದ ಸುತ್ತಲು ಮಾವಿನ ಮರಗಳು ಚಿಗುರಿಸಿ, ಹೂಬಿಟ್ಟು ನಿಂತಿದ್ದವು. ಶಾಲ, ತಾಲ, ತಮಾಲ, ಕಾಲಾಗರು, ಚಂದನತರು ಜಾಲವು ಆ ತೋಟಕ್ಕೆ ಕಾವಲಾಗಿ ಸುತ್ತು ಬೆಳೆದು ಕಾದಿದ್ದವು. ಆ ತರು ಶಾಖೆಗಳಲ್ಲಿ ಕೂತ ಪಿಕ, ಶುಕ, ಶಾರಿಕಾದಿ ಪಕ್ಷಿ ನಿಕರವು ಕಲಕಲನಾದದಿಂದ ಗೌತಮನಿಗೆ ಸ್ವಾಗತವನ್ನಿತ್ತವು. ನಂದನೋದ್ಯಾನದಂತಿರುವ ಆ ತೋಟದ ಮಧ್ಯ ಸಮಭೂತಲದಲ್ಲಿ ನಿಂತ ನ್ಯಗ್ರೋಧ ವೃಕ್ಷವು, ನಾಡೀ ಜಂಘನೆಂಬ ಬಕಕುಲಾವತಂಸನ ಮನೆಯಾಗಿತ್ತು. ಗೌತಮನು ಅಲ್ಲಿ ವಿಶ್ರಮಿಸಿ, ಆ ದಿನವನ್ನು ಕಳೆದನು. ತಂಗಾಳಿಯು ತಂದ ಹೂಗಳ ಗಂಧದಿಂದಲು, ಸುತ್ತು ಕಾಣುವ ಸೊಬಗಿನ ಪರಿಸರದಿಂದಲು ಪಕ್ಷಿ ಗಣಮಧುರರುತಗಳಿಂದಲು ಮೈಮರೆತಿದ್ದ ಗೌತಮನ ಹಸಿವೆಯು ಸಾಯಂಕಾಲವಾದಂತೆ ಹೆಚ್ಚಾಯಿತು.

ಆಗ ನಾಡೀಜಂಘನು, ನಿತ್ಯ ನಿಯಮಾನುಸಾರವಾಗಿ ಬ್ರಹ್ಮದೇವನ ದರ್ಶನವನ್ನು

ಪಡೆದು ತನ್ನ ಮನೆ ಸೇರಬಂದನು. ಕಶ್ಯಪ ದಾಕ್ಷಾಯಣಿಯರ ಸುತನಾದ ನಾಡೀಜಂಘನು, ವಿದ್ವಾಂಸನು, ದೇವಪ್ರಭನು, ಅಲಂಕೃತನು ಆಗಿದ್ದನು. ಅಂತೆಯೇ ಬ್ರಹ್ಮದೇವನಿಗೆ ಪ್ರೀತಿಪಾತ್ರನಾಗಿದ್ದನು. ರಾಜಧರ್ಮನೆಂಬ ಬಿರುದನ್ನಿತ್ತು ಚತುರ್ಮುಖನು ಅವನನ್ನು ಅನುಗ್ರಹಿಸಿದ್ದನು. ರಾಜಧರ್ಮನು ತನ್ನನ್ನು ನೋಡಿ ವಿಸ್ಮಯಪಡುವ ಗೌತಮನಿಗೆ ಸ್ವಾಗತವನ್ನಿತ್ತು, ಹಣ್ಣು ಹಂಪಲವಿತ್ತು ಸತ್ಕರಿಸಿದನು. ಶಾಲ ಪುಷ್ಪಗಳಿಂದ ಸಜ್ಜೆಯನ್ನು ಮಾಡಿಕೊಟ್ಟನು! ತರಗೆಲೆಕಟ್ಟಿಗೆಗಳಿಂದ ಅಗ್ನಿಯನ್ನು ಉದ್ದೀಪಿಸಿ, ಗಂಗಾನದಿಯಿಂದ ಮೀನುಗಳನ್ನು ತಂದಿತ್ತನು. ಗೌತಮನು ನಾಚದೆ, ಹೇಸದೆ, ಆ ಮೀನುಗಳನ್ನು ಬೇಯಿಸಿ ತಿಂದು, ಅಲ್ಲೇ ಮಲಗಿದನು.

ಆಗ ನಾಡೀಜಂಘನು 'ಯಾರು ನೀನು? ಇಲ್ಲಿಗೇಕೆ ಬಂದೆ?' ಎಂದನು. ಗೌತಮನು 'ದರಿದ್ರ ವಿಪ್ರನಿರುವೆ. ಗೌತಮ ಗೋತ್ರ ಜಾತನು, ನನಗೆ ದ್ರವ್ಯರಾಶಿಯನ್ನು ಕೊಡಿಸು!' ಎಂದನು. ನಾಡೀಜಂಘನು, 'ಚಿಂತಿಸಬೇಡ! ನಾಲ್ಕು ಕಾರಣಗಳಿಂದ ಅರ್ಥಸಿದ್ಧಿಯಾಗುವುದೆಂದು ಬೃಹಸ್ಪತಿಯು ಹೇಳಿರುವನು. ಪರಂಪರೆಯಾಗಿ ಬಂದುದು, ದೇವಾನುಗ್ರಹಲಬ್ಧ, ಕಾಮಿಸಿ ಪಡೆದದ್ದು, ಮಿತ್ರನು ಕೊಟ್ಟದ್ದು! ಇವುಗಳಲ್ಲಿ ಮಿತ್ರಸಂಪತ್ತಿಯು ನಿನಗೆ ಸಿದ್ಧವಿದೆ. ನಿನಗೆ ಮಿತ್ರನಾದ ನಾನು, ನಿನ್ನನ್ನು ಬಹುಧನವಂತನನ್ನಾಗಿಸುವೆನು. ಬೆಳಗಾಗಲಿ!' ಎಂದು ಸಂತೈಸಿದನು.

ಬೆಳಗಾಯಿತು. ನಾಡೀಜಂಘನು, ಗೌತಮನನ್ನೆಬ್ಬಿಸಿ, 'ಮಿತ್ರ! ದಕ್ಷಿಣ ಮಾರ್ಗದಿಂದ, ಮೂರು ಯೋಜನ ದೂರ ಪಯಣಿಸು! ಅಲ್ಲಿ ನನ್ನ ಸ್ನೇಹಿತನಾದ, ವಿರೂಪಾಕ್ಷನೆಂಬ ರಾಕ್ಷಸ ರಾಜನ ನಗರವಿದೆ. ಹೆದರಬೇಡ! ಅವನು ವಿಪ್ರವತ್ಸಲನು. ನನ್ನ ಸ್ನೇಹಿತನೆಂದು ತಿಳಿಸು! ನಿನಗೆ ಬೇಕಾದಷ್ಟು ಧನವನ್ನು ಕೊಡುವನು. ಹೋಗಿ ಬಾ!' ಎಂದು ಕಳಿಸಿಕೊಟ್ಟನು. ಗೌತಮನು, ನಾಡೀಜಂಘನಿತ್ತ ಫಲಾದಿಗಳನ್ನು ಕಟ್ಟಿಕೊಂಡು, ನಡೆದು ವಿರೂಪಾಕ್ಷಪುರಿಯಾದ ಮೇರುವ್ರ-ಜವನ್ನು ಸೇರಿದನು. 'ನಾಡಿಜಂಘನ ಮಿತ್ರ'ನೆಂದು ಹೇಳಿ ಕಳಿಸಿದ ಕೂಡಲೇ ವಿರೂಪಾಕ್ಷನು, ತನ್ನ ಸೇವಕರಿಂದ ಗೌತಮನನ್ನು ತನ್ನ ಮನೆಗೆ ಕರೆತರಿಸಿದನು.

ಆ ಮನೆಯ ವೈಭವವನ್ನು ನೋಡಿ ಬೆರಗಾಗಿ ನಿಂತಿದ್ದ ಗೌತಮನಿಗೆ ವಂದಿಸಿ, ವಿರೂಪಾಕ್ಷನು ಕೂಡಿಸಿ, 'ನೀನಾರು? ಏಕೆ ಬಂದೆ? ಯಾವ ಗೋತ್ರ? ಯಾವ ವೇದವನ್ನೋದಿರುವೆ?' ಎಂದು ಕೇಳಿದನು. ಗೌತಮನು, ನನ್ನನ್ನು ಗೌತಮ ಗೋತ್ರಜನೆಂದು ತಿಳಿ! ಧನಕ್ಕಾಗಿ ಬಂದಿರುವನು ಎಂದು ಮಾತ್ರ ಉತ್ತರಿಸಿದನು. ಬ್ರಹ್ಮವರ್ಚಸಹೀನನಾಗಿದ್ದ ಗೌತಮನನ್ನು ಕಂಡು, ಮನಸ್ಸಿನಲ್ಲಿ ಹೇಸಿ, ವಿರೂಪಾಕ್ಷನು, 'ಎಲ್ಲಿ ನಿನ್ನ ಮನೆ? ನಿನ್ನ ಸತಿಯು ಯಾವ ಗೋತ್ರದವಳು? ನಿಜವನ್ನು ಹೇಳು!' ಎಂದು ಮತ್ತೆ ಕೇಳಿದನು. ಆ ರಾಕ್ಷಸನ ಮಾತಿಗೆ ಹೆದರಿ ಗೌತಮನು, 'ರಾಜನ್! ಮಧ್ಯದೇಶದಲ್ಲಿ ಹುಟ್ಟಿದೆನು. ಇರುವುದೀಗ ಶಬರಾಲಯದಲ್ಲಿ, ದಾಸಿಯು ನನ್ನ ಪತ್ನಿಯು. ಅವಳು ಪುನರ್ಭುವು (ಉಡಿಕೆಯಾದವಳು). ಇದು ಸತ್ಯವು' ಎಂದನು.

ವಿರೂಪಾಕ್ಷನಿಗೆ ಹಿಂದೆ ಮುಂದೆ ತೋಚದಂತಾಯಿತು. 'ಇಂತಹ ಪತಿತನಿಗೆ ಧನವೆಂತು ದಾನವಾಗಿ ಕೊಡಲಾದೀತು ? ಕೊಡದಿದ್ದರೆ ನಾಡೀಜಂಘನಿಗೆ ಅಸಮಾಧಾನವಾಗುವುದು ! ಏನು ಮಾಡಲಿ ? ಇಂದು ಕಾರ್ತಿಕ ಪೂರ್ಣಿಮೆಯಾಗಿದೆ. ಇಂದು ನನ್ನ ಮನೆಗೆ ಬರುವ ಸಾವಿರ ವಿಪ್ರರ ಜೊತೆಗೆ ಇವನನ್ನೂ ಸೇರಿಸಿ, ಉಣಿಸಿ, ಅವರನ್ನಂತೆ ಇವನನ್ನು ಸತ್ಕರಿಸುವೆನು. ಪುಣ್ಯದಿವಸವಿಂದು! ಅತಿಥಿಯಾಗಿ ಬಂದವನಿವನು ಧನವನ್ನೂ ತೆಗೆದಿಟ್ಟಿರುವೆನು. ಇನ್ನೂ ಪಾತ್ರಾಪಾತ್ರವಿಚಾರವೇಕೆ ?' ಎಂದು ಚಿಂತಿಸಿ ರಾಕ್ಷಸರಾಜನು ಗೌತಮನನ್ನು ಬಂದ ವಿಪ್ರರೊಡನೆ ಕೂಡಿಸಿದನು.

ಸಾವಿರ ವಿಪ್ರರು ಮೃಷ್ಟಾನ್ನಗಳನ್ನುಂಡು ತಾವು ಉಂಡ ಬಂಗಾರದ ತಟ್ಟೆ ಬಟ್ಟಲುಗಳನ್ನೂ, ದಕ್ಷಿಣೆಯನ್ನೂ ದಾನವಾಗಿತ್ತ ವಿರೂಪಾಕ್ಷನ ಅಪ್ಪಣೆ ಪಡೆದು ಹೊರಟು ಹೋದರು. ಮಾಘ, ಆಷಾಢ, ಕಾರ್ತಿಕ, ವೈಶಾಖಗಳ ಹುಣ್ಣಿಮೆಯಂದು ಮಾತ್ರ ವಿಪ್ರರು ಬಂದು ಅಲ್ಲಿ ರಾಕ್ಷಸನ ಭಯವಿಲ್ಲದೆ ಒಂದೆರಡು ದಿನವಿದ್ದು, ವಿರೂಪಾಕ್ಷ ಪೂಜಿತರಾಗಿ ಹೋಗುತ್ತಿದ್ದರು. ಮತ್ತೆ ನಿಂತರೆ ಮತ್ತರಾದ ರಕ್ಕಸರು ಅವರನ್ನು ಮೆಕ್ಕುವರೆಂಬ ಭಯದಿಂದ ಯಾರೂ ಮರುದಿನವೂ ಅಲ್ಲಿ ಉಳಿಯುತ್ತಿದ್ದಿಲ್ಲ. ಗೌತಮನೂ ತನ್ನ ಪಾಲಿಗೆ ಬಂದ ದಕ್ಷಿಣಾವಸ್ತ್ರ ಪಾತ್ರೆಗಳನ್ನು ಕಟ್ಟಿಕೊಂಡು, ವಿರೂಪಾಕ್ಷನಿಂದ ವಿಶೇಷ ಸತ್ಕಾರವಾಗಿ ಬಂದ ಧನರಾಶಿಯನ್ನು ತಲೆಯ ಮೇಲೆ ಹೊತ್ತುಕೊಂಡು ನ್ಯಗ್ರೋಧ ಮೂಲವನ್ನು ಸೇರಿದನು. ಅವನಿಗೆ ಶ್ರಮವಾಗಿತ್ತು. ಉಸ್ಸೆಂದು ಕೂತು ಭಾರಗಳನ್ನು ಕೆಳಗಿಟ್ಟ ಗೌತಮನು ನಾಡೀಜಂಘನು ಬರುವುದನ್ನು ಕಂಡನು. ಮಿತ್ರವತ್ಸಲನಾದ ಬಕರಾಜನು ಚನ್ನಾಗಿ ಸತ್ಕಾರವನ್ನು ಹೊಂದಿ ಬಂದ ಬ್ರಾಹ್ಮಣನನ್ನು ನೋಡಿ, ಆನಂದಿಸಿದನು. ಅವನಿಗೆ ಆಹಾರವನ್ನಿತ್ತು, ನಾಡೀಜಂಘನು ತಾನು ಮಲಗಿದನು. ರಾತ್ರಿಯ ಕತ್ತಲಿನಂತೆ ಗೌತಮನ ಮನವೂ ದುರಾಲೋಚನೆಗಳಿಂದ ದುರ್ಭೇದ್ಯವಾಯಿತು.

'ಧನಕನಕರತ್ನಗಳನ್ನು ಸಂಪಾದಿಸಿದೆನು. ಇನ್ನೂ ಮನೆ ದೂರವಾಗಿದೆ. ಬೆಳಗಾಗುತ್ತಲೆ ನಡೆದು ಊರು ಸೇರಬೇಕಾದ ನನಗೆ ಹಾದಿಯಲ್ಲಿ ಆಹಾರವೇನೂ ಸಿದ್ಧವಾಗಿಲ್ಲ. ಈ ಬಕವು ಕೊಬ್ಬಿದೆ. ಇದನ್ನು ಕೊಂದು, ಬರುವ ಪುಷ್ಕಲ ಮಾಂಸವು ನನಗೆ ಸಾಕಷ್ಟು ಪಾಥೇಯವಾಗುವುದು!' ಎಂದು ಚಿಂತಿಸಿ, ಕೃತಘ್ನನಾದ ಪಾಪಿ ಗೌತಮನು, ಉರಿವ ಕೊಳ್ಳಿಯಿಂದ ತಿವಿದು ಬಕರಾಜನನ್ನು ಕೊಂದುಬಿಟ್ಟನು. ಪುಕ್ಕ ರೆಕ್ಕೆ, ಎಲುಬು, ಕಾಲುಗಳನ್ನು ಕಿತ್ತು ಬಿಸುಟು, ಮಾಂಸವನ್ನು ಬೇಯಿಸಿ, ಕಟ್ಟಿಕೊಂಡು, ವಿಪ್ರಾಧಮನು ಬೆಳಗಾಗುತ್ತಲೇ ಅಲ್ಲಿಂದ ತೆರಳಿ, ತನ್ನ ಶಿಬಿರಾಲಯದ ಕಡೆಗೆ ನಡೆಯುತ್ತಿದ್ದನು.

ಅಲ್ಲಿ ವಿರೂಪಾಕ್ಷನಿಗೆ ದುರ್ನಿಮಿತ್ತಗಳು ಕಂಡವು. 'ನಿತ್ಯವೂ ದರ್ಶನವೀಯುತ್ತಿದ್ದ ರಾಜ ಧರ್ಮನೇಕೆ ಬರಲಿಲ್ಲ?' ವೆಂದು ತಪಿಸಿ, ಎರಡನೆಯ ದಿನ ಆತನು ತನ್ನ ಮಗನನ್ನು 'ನೋಡಿ ಬಾ! ಗೌತಮನನ್ನು ಕಂಡಾಗಲೇ ಅವನ ಹಾಳು ಮುಖವು ಅವನ ದುಷ್ಟ ಗುಣವನ್ನು ಸಾರುತ್ತಿದೆ ಎಂದೆನಿಸಿತು. ನಾಡೀಜಂಘನನ್ನು ಆ ಪಾಪಿಯು ಕೊಂದು ಬಿಟ್ಟನೋ ಏನೋ? ಇಲ್ಲದಿರೆ ಆ ಮಹಾತ್ಮನು ಏಕೆ ಬಾರದಿರುವನು?' ಎಂದು ಕಳಿಸಿದನು.

ಪಡೆದು ತನ್ನ ಮನೆ ಸೇರಬಂದನು. ಕಶ್ಯಪ ದಾಕ್ಷಾಯಣಿಯರ ಸುತನಾದ ನಾಡೀಜಂಘನು, ವಿದ್ವಾಂಸನು, ದೇವಪ್ರಭನು, ಅಲಂಕೃತನು ಆಗಿದ್ದನು. ಅಂತೆಯೇ ಬ್ರಹ್ಮದೇವನಿಗೆ ಪ್ರೀತಿಪಾತ್ರನಾಗಿದ್ದನು. ರಾಜಧರ್ಮನೆಂಬ ಬಿರುದನ್ನಿತ್ತು ಚತುರ್ಮುಖನು ಅವನನ್ನು ಅನುಗ್ರಹಿಸಿದ್ದನು. ರಾಜಧರ್ಮನು ತನ್ನನ್ನು ನೋಡಿ ವಿಸ್ಮಯಪಡುವ ಗೌತಮನಿಗೆ ಸ್ವಾಗತವನ್ನಿತ್ತು, ಹಣ್ಣು ಹಂಪಲವಿತ್ತು ಸತ್ಕರಿಸಿದನು. ಶಾಲ ಪುಷ್ಪಗಳಿಂದ ಸಜ್ಜೆಯನ್ನು ಮಾಡಿಕೊಟ್ಟನು ! ತರಗೆಲೆಕಟ್ಟಿಗೆಗಳಿಂದ ಅಗ್ನಿಯನ್ನು ಉದ್ದೀಪಿಸಿ, ಗಂಗಾನದಿಯಿಂದ ಮೀನುಗಳನ್ನು ತಂದಿತ್ತನು. ಗೌತಮನು ನಾಚದೆ, ಹೇಸದೆ, ಆ ಮೀನುಗಳನ್ನು ಬೇಯಿಸಿ ತಿಂದು, ಅಲ್ಲೇ ಮಲಗಿದನು.

ಆಗ ನಾಡೀಜಂಘನು 'ಯಾರು ನೀನು ? ಇಲ್ಲಿಗೇಕೆ ಬಂದೆ ? ' ಎಂದನು. ಗೌತಮನು 'ದರಿದ್ರ ವಿಪ್ರನಿರುವೆ. ಗೌತಮ ಗೋತ್ರ ಜಾತನು, ನನಗೆ ದ್ರವ್ಯರಾಶಿಯನ್ನು ಕೊಡಿಸು ! ' ಎಂದನು. ನಾಡೀಜಂಘನು, 'ಚಿಂತಿಸಬೇಡ ! ನಾಲ್ಕು ಕಾರಣಗಳಿಂದ ಅರ್ಥಸಿದ್ಧಿಯಾಗುವುದೆಂದು ಬೃಹಸ್ಪತಿಯು ಹೇಳಿರುವನು. ಪರಂಪರೆಯಾಗಿ ಬಂದುದು, ದೇವಾನುಗ್ರಹಲಬ್ಧ, ಕಾಮಿಸಿ ಪಡೆದದ್ದು, ಮಿತ್ರನು ಕೊಟ್ಟದ್ದು! ಇವುಗಳಲ್ಲಿ ಮಿತ್ರಸಂಪತ್ತಿಯು ನಿನಗೆ ಸಿದ್ಧವಿದೆ. ನಿನಗೆ ಮಿತ್ರನಾದ ನಾನು, ನಿನ್ನನ್ನು ಬಹುಧನವಂತನನ್ನಾಗಿಸುವೆನು. ಬೆಳಗಾಗಲಿ ! ' ಎಂದು ಸಂತೈಸಿದನು.

ಬೆಳಗಾಯಿತು. ನಾಡೀಜಂಘನು, ಗೌತಮನನ್ನೆಬ್ಬಿಸಿ, 'ಮಿತ್ರ! ದಕ್ಷಿಣ ಮಾರ್ಗದಿಂದ, ಮೂರು ಯೋಜನ ದೂರ ಪಯಣಿಸು ! ಅಲ್ಲಿ ನನ್ನ ಸ್ನೇಹಿತನಾದ, ವಿರೂಪಾಕ್ಷನೆಂಬ ರಾಕ್ಷಸ ರಾಜನ ನಗರವಿದೆ. ಹೆದರಬೇಡ! ಅವನು ವಿಪ್ರವತ್ಸಲನು. ನನ್ನ ಸ್ನೇಹಿತನೆಂದು ತಿಳಿಸು ! ನಿನಗೆ ಬೇಕಾದಷ್ಟು ಧನವನ್ನು ಕೊಡುವನು. ಹೋಗಿ ಬಾ !' ಎಂದು ಕಳಿಸಿಕೊಟ್ಟನು. ಗೌತಮನು, ನಾಡೀಜಂಘನಿತ್ತ ಫಲಾದಿಗಳನ್ನು ಕಟ್ಟಿಕೊಂಡು, ನಡೆದು ವಿರೂಪಾಕ್ಷಪುರಿಯಾದ ಮೇರುವ್ರ-ಜವನ್ನು ಸೇರಿದನು. 'ನಾಡಿಜಂಘನ ಮಿತ್ರ 'ನೆಂದು ಹೇಳಿ ಕಳಿಸಿದ ಕೂಡಲೇ ವಿರೂಪಾಕ್ಷನು, ತನ್ನ ಸೇವಕರಿಂದ ಗೌತಮನನ್ನು ತನ್ನ ಮನೆಗೆ ಕರೆತರಿಸಿದನು.

ಆ ಮನೆಯ ವೈಭವವನ್ನು ನೋಡಿ ಬೆರಗಾಗಿ ನಿಂತಿದ್ದ ಗೌತಮನಿಗೆ ವಂದಿಸಿ, ವಿರೂಪಾಕ್ಷನು ಕೂಡಿಸಿ, 'ನೀನಾರು ? ಏಕೆ ಬಂದೆ ? ಯಾವ ಗೋತ್ರ ? ಯಾವ ವೇದವನ್ನೋದಿರುವೆ ? ' ಎಂದು ಕೇಳಿದನು. ಗೌತಮನು, ನನ್ನನ್ನು ಗೌತಮ ಗೋತ್ರಜನೆಂದು ತಿಳಿ ! ಧನಕ್ಕಾಗಿ ಬಂದಿರುವನು ಎಂದು ಮಾತ್ರ ಉತ್ತರಿಸಿದನು. ಬ್ರಹ್ಮವರ್ಚಸಹೀನನಾಗಿದ್ದ ಗೌತಮನನ್ನು ಕಂಡು, ಮನಸ್ಸಿನಲ್ಲಿ ಹೇಸಿ, ವಿರೂಪಾಕ್ಷನು, 'ಎಲ್ಲಿ ನಿನ್ನ ಮನೆ? ನಿನ್ನ ಸತಿಯು ಯಾವ ಗೋತ್ರದವಳು? ನಿಜವನ್ನು ಹೇಳು! ' ಎಂದು ಮತ್ತೆ ಕೇಳಿದನು. ಆ ರಾಕ್ಷಸನ ಮಾತಿಗೆ ಹೆದರಿ ಗೌತಮನು, 'ರಾಜನ್! ಮಧ್ಯದೇಶದಲ್ಲಿ ಹುಟ್ಟಿದೆನು. ಇರುವುದೀಗ ಶಬರಾಲಯದಲ್ಲಿ, ದಾಸಿಯು ನನ್ನ ಪತ್ನಿಯು. ಅವಳು ಪುನರ್ಭುವು ( ಉಡಿಕೆಯಾದವಳು). ಇದು ಸತ್ಯವು' ಎಂದನು.

ವಿರೂಪಾಕ್ಷನಿಗೆ ಹಿಂದೆ ಮುಂದೆ ತೋಚದಂತಾಯಿತು. 'ಇಂತಹ ಪತಿತನಿಗೆ ಧನವೆಂತು ದಾನವಾಗಿ ಕೊಡಲಾದೀತು ? ಕೊಡದಿದ್ದರೆ ನಾಡೀಜಂಘನಿಗೆ ಅಸಮಾಧಾನವಾಗುವುದು! ಏನು ಮಾಡಲಿ ? ಇಂದು ಕಾರ್ತೀಕ ಪೂರ್ಣಿಮೆಯಾಗಿದೆ. ಇಂದು ನನ್ನ ಮನೆಗೆ ಬರುವ ಸಾವಿರ ವಿಪ್ರರ ಜೊತೆಗೆ ಇವನನ್ನೂ ಸೇರಿಸಿ, ಉಣಿಸಿ, ಅವರನ್ನಂತೆ ಇವನನ್ನು ಸತ್ಕರಿಸುವೆನು. ಪುಣ್ಯದಿವಸವಿಂದು! ಅತಿಥಿಯಾಗಿ ಬಂದವನಿವನು ಧನವನ್ನೂ ತೆಗೆದಿಟ್ಟಿರುವೆನು. ಇನ್ನೂ ಪಾತ್ರಾಪಾತ್ರವಿಚಾರವೇಕೆ ?' ಎಂದು ಚಿಂತಿಸಿ ರಾಕ್ಷಸರಾಜನು ಗೌತಮನನ್ನು ಬಂದ ವಿಪ್ರರೊಡನೆ ಕೂಡಿಸಿದನು.

ಸಾವಿರ ವಿಪ್ರರು ಮೃಷ್ಟಾನ್ನಗಳನ್ನುಂಡು ತಾವು ಉಂಡ ಬಂಗಾರದ ತಟ್ಟೆ ಬಟ್ಟಲುಗಳನ್ನೂ, ದಕ್ಷಿಣೆಯನ್ನೂ ದಾನವಾಗಿತ್ತ ವಿರೂಪಾಕ್ಷನ ಅಪ್ಪಣೆ ಪಡೆದು ಹೊರಟು ಹೋದರು. ಮಾಘ, ಆಷಾಢ, ಕಾರ್ತಿಕ, ವೈಶಾಖಗಳ ಹುಣ್ಣಿಮೆಯಂದು ಮಾತ್ರ ವಿಪ್ರರು ಬಂದು ಅಲ್ಲಿ ರಾಕ್ಷಸನ ಭಯವಿಲ್ಲದೆ ಒಂದೆರಡು ದಿನವಿದ್ದು, ವಿರೂಪಾಕ್ಷ ಪೂಜಿತರಾಗಿ ಹೋಗುತ್ತಿದ್ದರು. ಮತ್ತೆ ನಿಂತರೆ ಮತ್ತರಾದ ರಕ್ಕಸರು ಅವರನ್ನು ಮೆಕ್ಕುವರೆಂಬ ಭಯದಿಂದ ಯಾರೂ ಮರುದಿನವೂ ಅಲ್ಲಿ ಉಳಿಯುತ್ತಿದ್ದಿಲ್ಲ. ಗೌತಮನೂ ತನ್ನ ಪಾಲಿಗೆ ಬಂದ ದಕ್ಷಿಣಾವಸ್ತ್ರ ಪಾತ್ರೆಗಳನ್ನು ಕಟ್ಟಿಕೊಂಡು, ವಿರೂಪಾಕ್ಷನಿಂದ ವಿಶೇಷ ಸತ್ಕಾರವಾಗಿ ಬಂದ ಧನರಾಶಿಯನ್ನು ತಲೆಯ ಮೇಲೆ ಹೊತ್ತುಕೊಂಡು ನ್ಯಗ್ರೋಧ ಮೂಲವನ್ನು ಸೇರಿದನು. ಅವನಿಗೆ ಶ್ರಮವಾಗಿತ್ತು. ಉಸ್ಸೆಂದು ಕೂತು ಭಾರಗಳನ್ನು ಕೆಳಗಿಟ್ಟ ಗೌತಮನು ನಾಡೀಜಂಘನು ಬರುವುದನ್ನು ಕಂಡನು. ಮಿತ್ರವತ್ಸಲನಾದ ಬಕರಾಜನು ಚನ್ನಾಗಿ ಸತ್ಕಾರವನ್ನು ಹೊಂದಿ ಬಂದ ಬ್ರಾಹ್ಮಣನನ್ನು ನೋಡಿ, ಆನಂದಿಸಿದನು. ಅವನಿಗೆ ಆಹಾರವನ್ನಿತ್ತು, ನಾಡೀಜಂಘನು ತಾನು ಮಲಗಿದನು. ರಾತ್ರಿಯ ಕತ್ತಲಿನಂತೆ ಗೌತಮನ ಮನವೂ ದುರಾಲೋಚನೆಗಳಿಂದ ದುರ್ಭೇದ್ಯವಾಯಿತು.

'ಧನಕನಕರತ್ನಗಳನ್ನು ಸಂಪಾದಿಸಿದೆನು. ಇನ್ನೂ ಮನೆ ದೂರವಾಗಿದೆ. ಬೆಳಗಾಗುತ್ತಲೆ ನಡೆದು ಊರು ಸೇರಬೇಕಾದ ನನಗೆ ಹಾದಿಯಲ್ಲಿ ಆಹಾರವೇನೂ ಸಿದ್ಧವಾಗಿಲ್ಲ. ಈ ಬಕವು ಕೊಬ್ಬಿದೆ. ಇದನ್ನು ಕೊಂದು, ಬರುವ ಪುಷ್ಕಲ ಮಾಂಸವು ನನಗೆ ಸಾಕಷ್ಟು ಪಾಥೇಯವಾಗುವುದು!' ಎಂದು ಚಿಂತಿಸಿ, ಕೃತಘ್ನನಾದ ಪಾಪಿ ಗೌತಮನು, ಉರಿವ ಕೊಳ್ಳಿಯಿಂದ ತಿವಿದು ಬಕರಾಜನನ್ನು ಕೊಂದುಬಿಟ್ಟನು. ಪುಕ್ಕ ರೆಕ್ಕೆ, ಎಲುಬು, ಕಾಲುಗಳನ್ನು ಕಿತ್ತು ಬಿಸುಟು, ಮಾಂಸವನ್ನು ಬೇಯಿಸಿ, ಕಟ್ಟಿಕೊಂಡು, ವಿಪ್ರಾಧಮನು ಬೆಳಗಾಗುತ್ತಲೇ ಅಲ್ಲಿಂದ ತೆರಳಿ, ತನ್ನ ಶಿಬಿರಾಲಯದ ಕಡೆಗೆ ನಡೆಯುತ್ತಿದ್ದನು.

ಅಲ್ಲಿ ವಿರೂಪಾಕ್ಷನಿಗೆ ದುರ್ನಿಮಿತ್ತಗಳು ಕಂಡವು. 'ನಿತ್ಯವೂ ದರ್ಶನವೀಯುತ್ತಿದ್ದ ರಾಜ ಧರ್ಮನೇಕೆ ಬರಲಿಲ್ಲ?' ವೆಂದು ತಪಿಸಿ, ಎರಡನೆಯ ದಿನ ಆತನು ತನ್ನ ಮಗನನ್ನು 'ನೋಡಿ ಬಾ! ಗೌತಮನನ್ನು ಕಂಡಾಗಲೇ ಅವನ ಹಾಳು ಮುಖವು ಅವನ ದುಷ್ಟ ಗುಣವನ್ನು ಸಾರುತ್ತಿದೆ ಎಂದೆನಿಸಿತು. ನಾಡೀಜಂಘನನ್ನು ಆ ಪಾಪಿಯು ಕೊಂದು ಬಿಟ್ಟನೋ ಏನೋ? ಇಲ್ಲದಿರೆ ಆ ಮಹಾತ್ಮನು ಏಕೆ ಬಾರದಿರುವನು ?' ಎಂದು ಕಳಿಸಿದನು.

ವಿರುಪಾಕ್ಷ ಸುತನು ಆಲದ ಮರವನ್ನು ಸೇರಿ, ಅಲ್ಲಿ ಬಿದ್ದಿದ್ದ ಪಕ್ಕ ಪುಕ್ಕಗಳನ್ನು ನೋಡಿ, ಅವನ್ನೆಲ್ಲಾ ತಂದು, ತಂದೆಗೆ ತೋರಿಸಿದನು. ಮೇರುವ್ರಜದ ರಾಕ್ಷಸರು ನಾಡೀಜಂಘನ ಮೃತಿಗೆ ಶೋಕಿಸಿ, ಗೌತಮನ ಕೃತಘ್ನತೆಗೆ ಕುಪಿತರಾದರು. ವಿರೂಪಾಕ್ಷನ ಅಪ್ಪಣೆಯಂತೆ, ಅವರು ಎಲ್ಲ ಕಡೆಗೂ ಓಡಿ, ಶಬರಾಲಯವನ್ನು ಸೇರ ಪೋಗುವ ಗೌತಮನನ್ನು ಹಾಗೇ ಹಿಡಿದು ತಂದರು. ನಾಡೀಜಂಘನ ಮಾಂಸ ರಾಶಿಯನ್ನು ಕಂಡ ವಿರೂಪಾಕ್ಷನ ಶೋಕವಹ್ನಿಯು ಉದ್ದೀಪಿತವಾಯಿತು. ರಾಜಾಂತಃಪುರವೆಲ್ಲವೂ ಆರ್ತನಾದಗಳಿಂದ ತುಂಬಿ, ಹೃದಯ ವಿದ್ರಾವಕವಾಯಿತು. ಗೌತಮನ ಮುಖವನ್ನು ನೋಡಲು ಹೇಸಿ, ವಿರೂಪಾಕ್ಷನು, ರಕ್ಕಸರಿಗೆ, 'ಆ ಪಾಪಿ ವಿಪ್ರನನ್ನು ಕೊಂದು, ತುಂಡಾಗಿಸಿ, ತಿನ್ನಿರಿ!' ಎಂದು ಆಜ್ಞಾಪಿಸಿದನು.

'ಮಹಾರಾಜ! ನಾವು ನರಾಶನರಹುದು. ಆದರೆ ಇಂತಹ ಕೃತಘ್ನನ ಮಾಂಸವನ್ನು ತಿನ್ನುವಷ್ಟು ಪಾಪಿಗಳಲ್ಲ. ಅವನನ್ನು ಕೊಂದು ತಿಂದು, ಅವನ ಪಾಪವನ್ನು ತಿನ್ನಲಾರೆವು ' ಎಂದ ರಕ್ಕಸರಿಗೆ ರಾಜನು, "ಏನಾದರೂ ಮಾಡಿರಿ! ನಾಯಿಗಳಿಗೆ ಹಾಕಿರಿ! " ಎಂದಾಜ್ಞಾಪಿಸಿದನು. ಅವರು ಗೌತಮನನ್ನು ತುಂಡಾಗಿ ಕಡಿದು ಕೆನ್ನಾಯಿಗಳಿಗೆ ಹಾಕಿದರು. ಅವು ಬಾಯ್ತೆಗೆದು ಓಡಿಬಂದವು. ಮಾಂಸವನ್ನು ಮೂಸಿ, ಹೇಸಿ, ನಾಯಿಗಳೂ ತಿನ್ನದೆ ದೂರ ಸರಿದವು. ಕೃತಘ್ನನನ್ನು ನಾಯಿಗಳೂ ತಿನ್ನಲೊಲ್ಲವು!

ವಿರೂಪಾಕ್ಷನು ಶೋಕ ವ್ಯಾಕುಲನಾಗಿ, ನಾಡೀಜಂಘನನ್ನು ಚಿತಿಯ ಮೇಲಿಟ್ಟು ವಹ್ನಿಯನ್ನಿಡುತ್ತಿದ್ದನು. ಆ ಹೊತ್ತಿಗೆ ಸರಿಯಾಗಿ, ಬ್ರಹ್ಮದೇವನ ಆಜ್ಞೆಯಂತೆ, ಕಾಮಧೇನುವು ತನ್ನ ಮಗಳಾದ ನಂದಿನಿಗೆ ಹಾಲನ್ನು ಕುಡಿಸುತ್ತಾ, ನೊರೆಯನ್ನು ಕೆಳಗೆ ಬೀಳಿಸಿತು. ಆಗ ಅಮೃತ ಸ್ಪರ್ಶವಾಗಿ ನಾಡೀಜಂಘನು ಸಂಪೂರ್ಣ ವರಶರೀರನಾಗಿ ಬದುಕಿ ಬಂದನು. ಅದನ್ನು ಕಂಡು ವಿರೂಪಾಕ್ಷಾದಿಗಳಿಗಾದ ಆನಂದವು ಹೇಳತೀರದು. ಅದೇ ಸಮಯದಲ್ಲಿ ದೇವೇಂದ್ರನು ಧರೆಗಿಳಿದು ಬಂದು ಮೇರುವ್ರಜದಲ್ಲಿ ವಿರೂಪಾಕ್ಷಾದಿಗಳಿಗೆ ಪ್ರತ್ಯಕ್ಷನಾದನು. "ಹಿಂದೆ ಬ್ರಹ್ಮದೇವನು ತನ್ನನ್ನು ನೋಡಲು ಬರದಿದ್ದ ಬಕಪತಿಗೆ, ಆಕಸ್ಮಾನ್ಮರಣವಾಗುವಂತೆ ಶಾಪವಿತ್ತಿದ್ದು. ಅಂತೆಯೇ ರಾಜ ಧರ್ಮನು ಗೌತಮನಿಂದ ಕೊಲ್ಲಲ್ಪಟ್ಟನು; ಬ್ರಹ್ಮದೇವನು ಕರುಣಿಸಿ ಕಳಿಸಿದ ಕಾಮಧೇನುವಿನ ಕ್ಷೀರ ಫೇನಸ್ಪರ್ಶದಿಂದ ಮತ್ತೆ ಬದುಕಿರುವನು. ವಿರೂಪಾಕ್ಷ! ನೀನು ತೋರಿದ ಮಿತ್ರಪ್ರೇಮಕ್ಕೆ ಪ್ರೀತನಾಗಿರುವೆನು. ರಾಜಧರ್ಮ! ನಿನ್ನ ಆಶ್ರಿತರಕ್ಷಣೆ, ಅತಿಥಿ ಪೂಜೆಗಳಿಗೆ ಮೆಚ್ಚಿರುವೆನು. ಬೇಕಾದವರವನ್ನು ಬೇಡು!' ಎಂದ ಇಂದ್ರದೇವನಿಗೆ ವಂದಿಸಿ, ರಾಜಧರ್ಮನು 'ದೇವೇಶ! ನನ್ನ ಮಿತ್ರನೆನಿಸಿದ ಗೌತಮನನ್ನೂ ಬದುಕಿಸಿ ಕೊಡು!' ಎಂದು ಪ್ರಾರ್ಥಿಸಿದನು. ಆ ಮಹಾನುಭಾವನ ಉದಾರ ಗುಣಕ್ಕೆ ಮೆಚ್ಚಿ ಇಂದ್ರನು, ಗೌತಮನನ್ನೂ ಅಮೃತ ಸೇಚನದಿಂದ ಪುನರುಜ್ಜೀವಿಸಿ, ತಾನು ಅಂತರ್ಹಿತನಾದನು.

ರಾಜಧರ್ಮನು ಗೌತಮನನ್ನು ಕರೆದಪ್ಪಿ, ಕ್ಷಮಿಸಿದನು. ಅವನು ತನಗೆ ರಾಕ್ಷಸ

ರಾಜನಿತ್ತ ಧನವಸ್ತ್ರಕನಕ ರತ್ನಗಳ ಮೂಟೆಯನ್ನು ಹೊತ್ತು, ತೆರಳಿ, ಶಬರಾಲಯವನ್ನು ಸೇರಿದನು. ರಾಜಧರ್ಮನನ್ನು ಕರೆಯಿಸಿ, ಬ್ರಹ್ಮದೇವನು ಸತ್ಕರಿಸಿ, ಪ್ರಶಂಸಿಸಿದನು.

ಗೌತಮನು ಶಬರಾಲಯವನ್ನು ಸೇರಿ, ತಂದ ಧನಾದಿಗಳನ್ನು ದಾಸೀಭಾರ್ಯಳಿಗಿತ್ತು ಬಹುಕಾಲ ಬಾಳಿದನು. ಅವನಿಗೆ ಅವಳಲ್ಲಿ ದಶಪುತ್ರರಾದರು. ಅವನು ಆಪತ್ತಿಲ್ಲದಾಗಲೂ ನಿಷಿದ್ಧವನ್ನೇ ಮಾಡುವ, ವಿಹಿತಸ್ವಕರ್ಮವನ್ನು ಬಿಟ್ಟ ಪಾಪಿಯಾದುದರಿಂದ ದೇವತಾನಿಗ್ರಹಕ್ಕೆ ಗುರಿಯಾದನು. ಆ ಕೃತಘ್ನನಿಗೆ ಕೊನೆಗೆ ಮಹಾನರಕ ಪ್ರಾಪ್ತಿಯಾಯಿತು.

ಧರ್ಮರಾಜ! ಈ ಕಥೆಯನ್ನು ನಾನು ಹಿಂದೆ ನಾರದರ ಮುಖದಿಂದ ಕೇಳಿದ್ದೆನು. ಇಂದು ನಿನಗೆ ಹೇಳಿರುವೆನು. ಆಪತ್ತು ಅನಾಪತ್ತು ಎಂದು ವಿವೇಚಿಸದೆ ದುರಾತ್ಮರು ಸದಾ ನಿಷಿದ್ಧ ಕರ್ಮಗಳನ್ನು ಮಾಡಿ ನರಕಭಾಜನರಾಗುವರು. ಕೊಂದವರನ್ನು ಕೂಡಾ ದ್ವೇಷಿಸದೇ ಸುಜನರು ಉಪಕಾರವನ್ನೇ ಮಾಡುವರು. ಕೃತಘ್ನ, ಮಿತ್ರದ್ರೋಹಿ, ಇವರಂತಹ ಪಾಪಿಗಳಿಲ್ಲ. ಮಿತ್ರರಿಗಿತ್ತು, ಮಿತ್ರರಿಂದ ಕೂಡಿ, ಭುಜಿಸಿ, ಕ್ರೀಡಿಸಿ, ಮಿತ್ರನಿಂದ ಮಿತವಾಗಿ ಸ್ವೀಕರಿಸಿ, ಮಿತ್ರಪ್ರಿಯರಾದವರು ಬಹು ವಿಪತ್ತಿನಲ್ಲಿಯೂ ದುಃಖಪಡದಿರುವರು. ಶ್ರೀಕೃಷ್ಣನಂತಹ ಮಿತ್ರನು ನಿನಗಿರುವನು. ನೀವೂ ಕೃತಜ್ಞರಾಗಿರುವಿರಿ! ನಿಮಗೆ ಸರ್ವಸುಖಗಳು ಕೈಗೂಡುವವು. ಶ್ರೀಕೃಷ್ಣಾಯ ನಮಃ!

ಇಂತು ನುಡಿದ ಭೀಷ್ಮನ ರಾಜಧರ್ಮ ಆಪದ್ಧರ್ಮಗಳ ನಿರೂಪಣೆಯನ್ನು ಜನಮೇಜಯ ರಾಜನಿಗೆ ವೈಶಂಪಾಯನನು ನಿರೂಪಿಸಿ ಶ್ರೀವೇದವ್ಯಾಸದೇವನ ದಿವ್ಯ ಚರಣಾರವಿಂದ ಸನ್ನಿಧಿಗೆ ಸಮರ್ಪಿಸಿದನು.

**ಆಪದ್ಧರ್ಮ ಮುಗಿದುದು**



# ಮೋಕ್ಷಧರ್ಮ

## ೧. ವೈರಾಗ್ಯ ಸಾಧನ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು :

'ಧರ್ಮರಾಜನು ರಾಜಧರ್ಮ, ಆಪದ್ಧರ್ಮಗಳನ್ನು ಕೇಳಿ, ಆನಂದಿಸಿ, ಭೀಷ್ಮ ಪಿತಾಮಹನಿಗೆ ವಂದಿಸಿ, ಮತ್ತೆ ಮೋಕ್ಷ ಧರ್ಮಗಳನ್ನು ಕೇಳಬಯಸಿ, ಇಂತು ಪ್ರಶ್ನಿಸಿದನು: 'ಮನುಜಮಾತ್ರನು ಸುಖವನ್ನು ಬಯಸುವನು. ದುಃಖವನ್ನು ಬಯಸನು. ಆತ್ಯಂತಿಕ ದುಃಖನಿವೃತ್ತಿವಿಶಿಷ್ಟ ಪರಮಾನಂದಾವಾಪ್ತಿ ರೂಪವಾದ ಮೋಕ್ಷವಾಗುವವರೆಗೂ ಸಂಸಾರದಲ್ಲಿ ಸುಖ ದುಃಖಗಳು ಚಕ್ರಾಕಾರವಾಗಿ ಬರುತ್ತಲೇ ಇರುವವು. ಹಿಂದಿನ ಜನ್ಮದಲ್ಲಿ ಸ್ತನಪಾನದಿಂದ ಕಂಡ ಇಷ್ಟಸಾಧನತಾಜ್ಞಾನವು ಸಂಸ್ಕಾರ ಬಲದಿಂದ ಈ ಜನ್ಮದಲ್ಲಿಯೂ ಪುಟ್ಟುವದರಿಂದಲೇ ವತ್ಸತರರು ಹಾಲು ಕುಡಿಯಲು ಹಾತೊರೆವರು. ಹಿಂದಿನ ಜನ್ಮದ ಮರಣಕಾಲದ ದುಃಖಾನುಭವದ ಸಂಸ್ಕಾರವಿರುವುದರಿಂದಲೇ ಪ್ರತ್ಯಕ್ಷಾನುಭೂತವಾಗದಿದ್ದರೂ ಈ ಜನ್ಮದಲ್ಲಿ ಮರಣಕ್ಕಾಗಿ ಅಂಜುವರು. ಮುಳ್ಳು ಮುರಿದಾಗ ನೋವಾಗಿ, ಕಿತ್ತೆಸೆವಾಗ ಕಂಟಕದ್ವಾರವು ಪ್ರತ್ಯಕ್ಷವಾಗಿ ಕಾಣುವುದು ; ಆದರೆ ಶತ್ರುಕೃತ ಸ್ವಪ್ರತಿಮಾ ಕಂಟಕವೇಧದಲ್ಲಿ, ನೋವಾಗುವುದು, ರಂಧ್ರ ಕಾಣಿಸದು. ಅಂತೆಯೇ ಅದೃಷ್ಟವಾದ ದೈವೇಚ್ಛೆಯಂತೆ, ಕಾಲಕರ್ಮ ಸಂಯೋಗವಾದಾಗ, ಜನರಿಗೆ ಸುಖ ದುಃಖಗಳು ಬರುವವು. ಬಂದ ಸುಖ ದುಃಖಾದಿ ದ್ವಂದ್ವಗಳನ್ನು ಜಯಿಸಿ, ಆಗುವ ವಿಕಾರದಿಂದ ಕೆಡದೆ ಇರಲು ಅಭಿಮಾನ ಪರಿತ್ಯಾಗವೇ ಮುಖ್ಯ ಕಾರಣವು. ಅಭಿಮಾನವು ಅಹಂಮಮಕಾರ ರೂಪವಾಗಿದೆ. ಅವನ್ನು ನಿರ್ಜಿಸಲು, ಜ್ಞಾನ, ಭಕ್ತಿ ವಿರಕ್ತಿಗಳು ಬೇಕು. ಜ್ಞಾನಕ್ಕೆ ಶ್ರವಣ ಮನನ ನಿಧಿಧ್ಯಾಸನಗಳೇ ಸಾಧನಗಳು. ಅವೂ ಭಕ್ತಿಯುಕ್ತವಾಗಿದ್ದರೇನೇ ಅಪರೋಕ್ಷ ಜ್ಞಾನವನ್ನು ಹುಟ್ಟಿಸಲು ಸಮರ್ಥವಾಗುವವು. ಭಕ್ತಿಜ್ಞಾನಗಳಿಂದ ಪ್ರಸನ್ನನಾದ ಶ್ರೀಶನಿಂದಲೇ ಮೋಕ್ಷ ಸುಖವು ಪ್ರಾಪ್ತವಾಗುವುದು. ಅಂತಹ ಜ್ಞಾನವು ವೇದಪುರಾಣೇತಿಹಾಸ ಪಂಚರಾತ್ರಾಗಮ ಮೂಲರಾಮಾಯಣಾದಿ ಸಚ್ಛಾಸ್ತ್ರ ಪ್ರವಚನ ಚಿಂತನಗಳಿಂದ ಬರುವುದು. ಆದುದರಿಂದ ನನಗೆ ಮೋಕ್ಷಧರ್ಮವನ್ನು ವಿಸ್ತಾರವಾಗಿ ನಿರೂಪಿಸು' ಎಂದು ಪ್ರಾರ್ಥಿಸಿದನು.

ಭೀಷ್ಮನಿಂತು ನುಡಿದನು: 'ಧರ್ಮರಾಜ! ಮನುಜ ಜನ್ಮವು ಜ್ಞಾನಸಾಧನಕ್ಕಾಗಿ ಬಂದುದಾಗಿದೆ. ಅದರಲ್ಲಿ ವಿಪ್ರದೇಹವು ಇಲ್ಲಿ ತಪಸ್ಸಿಗೂ, ಅಲ್ಲಿ ಮೋಕ್ಷಾನಂದಕ್ಕೂ ಬಂದುದಾಗಿದೆ. ಇತರ ಶರೀರಗಳು ಮಾನವ ದೇಹಗಳಂತೆ ಸಾಧನ ಶರೀರಗಳಲ್ಲ. ಅರ್ಥಕಾಮಗಳು ಐಹಿಕ ಫಲಕವಾಗಿವೆ. ಧರ್ಮವು ಪ್ರವೃತ್ತವಾದರೆ ಸ್ವರ್ಗಾದಿ ನಶ್ವರ ಫಲವನ್ನೀಯುವುದು. ವಿಹಿತ ಧರ್ಮವು ವಿಷ್ಣುಪ್ರೀತಿಕರವಾದರೆ ಮೋಕ್ಷಾಖ್ಯ ಶಾಶ್ವತ ಫಲವನ್ನಿತ್ತು ಕಾಪಾಡುವುದು. ಮೋಕ್ಷವೇ ಅಂದರೆ ಸ್ವರೂಪಾನಂದ ವ್ಯಕ್ತಿಯೇ ಮಹಾ ಪುರುಷಾರ್ಥವಾಗಿದೆ.

ಆಬ್ರಹ್ಮಸ್ತಂಬಪರ್ಯಂತವಾದ ಲೋಕಗಳು (ಶರೀರಗಳು) ನಶ್ವರವೂ, ಅಸಾರವೂ ಆಗಿವೆ. ಇದನ್ನು ಸಂಸಾರಿಕ ದುಃಖದರ್ಶನದಿಂದ ವಿರಕ್ತನಾದವನು ಕಾಣಬಹುದಾಗಿದೆ. 'ಅತೋನ್ಯದಾರ್ತಂ' ಎಂಬ ಶ್ರುತಿಯು ಜೀವನಿಗೇ ಬಂಧವೆಂದೂ, ಈಶನಿಗಿಲ್ಲವೆಂದೂ ಸಾರುತ್ತದೆ. ಜಡವು ಅಚೇತನವಾದುದರಿಂದ ಅದಕ್ಕೆ ಜ್ಞಾನವೇ ಇಲ್ಲ. ಬಂಧವು ಸತ್ಯವಾಗಿದೆ. ಆದರೂ ರಾಜಪ್ರಸಾದದಿಂದ ಕಾರಾಗಾರ ಮೋಚನವಾಗುವಂತೆ- ಶ್ರೀಹರಿಯ ಅತ್ಯರ್ಥ ಪ್ರಸಾದದಿಂದ ನಾಶವಾಗುವುದು. ಅವನ ಪ್ರಸಾದವು ಜ್ಞಾನಮಾತ್ರ ಲಭ್ಯವಾಗಿದೆ, ಎಂದು 'ತರತಿಶೋಕಂ ಆತ್ಮವಿತ್'! ಎಂಬ ವೇದವು ಸಾರುತ್ತಿದೆ. ಧರ್ಮರಾಜ! ಅಂತಹ ಶ್ರೀನಾರಾಯಣನನ್ನು ತಿಳಿಯಲು ಯತ್ನಿಸು! ಅವನ ಪ್ರಸಾದದಿಂದ ತರಿಸು!' ಎಂದನು.

ಧರ್ಮರಾಜನು 'ತಾತ! ದಾರಾಪುತ್ರರು ನಷ್ಟರಾದರೆ, ಧನವು ಹರಿಸಿಹೋದರೆ ಆಗುವ ಶೋಕವನ್ನೆಂತು ನೀಗುವುದು?' ಎಂದು ಕೇಳಿದನು. ಭೀಷ್ಮನಿಂತೆಂದನು:

'ಧರ್ಮಜ! ಹಿಂದೆ ಸೇನಜಿತನೆಂಬ ರಾಜನಿದ್ದನು. ಅವನ ಪುತ್ರನು ರಣನಿಹತನಾದನು. ಸೇನಜಿತನು ದುಃಖಾಕುಲನಾಗಿರಲು, ವಿಪ್ರನೋರ್ವನು ಅವನಿಗಿಂತು ಉಪದೇಶಿಸಿದನು: 'ರಾಜನ್! ಏಕೆ ಶೋಕಿಸುವೆ? ಶೋಕಿಸಿ ಫಲವಿಲ್ಲ. ಇಂದು ಸುತನಿಗಾಗಿ ಶೋಕಿಸುವೆ! ಮುಂದೆ ನಿನಗಾಗಿ ಇತರರು ಶೋಕಿಸುವ ದಿನವೂ ಬರುವುದು. ನೀನು, ನಾನು, ಮುಂತಾದ ಜೀವರೆಲ್ಲರೂ ಎಂದಾದರೊಂದು ದಿನ ಸಾಯದೆ ತಪ್ಪದು. ಎಲ್ಲಿಂದ ಬಂದಿರುವರೋ ಅಲ್ಲಿಗೆ ಹೋಗುವ ಜೀವರಿಗೇಕೆ ಶೋಕ?' ಎಂದ ವಿಪ್ರನಿಗೆ ರಾಜನು ನಮಿಸಿ, 'ಜ್ಞಾನಿವರ! ಅಂತಹ ಮನಸ್ಸಮಾಧಾನವೆಂತು ಬರುವದು?' ಎಂದು ಕೇಳಿದನು. ವಿಪ್ರನು, 'ರಾಜನ್! ದಾನವ ಮಾನವ ದೇವರೂಪ ಸಮಸ್ತ ಜೀವರೂ ದುಃಖಾಕ್ರಾಂತರಾಗಿರುವರು. ಅವರವರ ಕರ್ಮಫಲವನ್ನು ಅವರು ಉಣ್ಣಲೇಬೇಕು. ತಿಳಿ! ದುಃಖವನ್ನು ನಿರ್ಮೂಲಿಸುವುದೆಂದರೆ ಜ್ಞಾನವೇ! ದೇಹವೇ ನಾನೆಂಬ ಅಹಂಕಾವೂ, ದಾರಾಸುತ ಧನಗಳೆನ್ನವೆಂಬ ಮಮಕಾರವೂ ದುಃಖ ಕಾರಣಗಳಾಗಿವೆ. ಅಭಿಮಾನವನ್ನು - ಅಹಂ ಮಮತಾರೂಪವಾದುದನ್ನು ಬಿಟ್ಟವನು ಸುಖಿಸುವನು. ನದಿಯ ಪ್ರವಾಹ ವೇಗದಲ್ಲಿ ಕಾಷ್ಠಗಳು ಕಲೆತಿರುವವು ಮತ್ತೆ ಬೇರಾಗುವವು. ಅಂತೆಯೇ ಭೂತಗಳು ಕಲೆತಿದ್ದು, ಬೇರಾಗುವವು. ಪುತ್ರಪೌತ್ರಾದಿ ಸರ್ವ ದೇಹಬಾಂಧವರು ಅನಿತ್ಯರು. ಜೀವಬಾಂಧವನಾದ ಶ್ರೀಹರಿಯು ನಿತ್ಯನು. ಅಶಾಶ್ವತವು, ಹೇಯವು ಆದ ವೈಷಯಿಕ ಸುಖವನ್ನು ದುಃಖವನ್ನಂತೆ ಹೇಯವೆಂದು ತಿಳಿದು ಬಿಟ್ಟ ನರನು ಧೀರನೆನಿಸಿ ಶ್ರೀಹರಿ ಪ್ರೀತಿಯನ್ನು ಗಳಿಸುವನು. ಈ ಸಂಸಾರದಲ್ಲಿ ಸುಖಾನಂತರದಲ್ಲಿ ದುಃಖವೂ, ದುಃಖಾನಂತರದಲ್ಲಿ ಸುಖವೂ ತಪ್ಪದೇ ಬರುವವು. ಅವೆರಡೂ ನಿತ್ಯಗಳಲ್ಲ. ಅವೆರಡಕ್ಕೂ ಪುಣ್ಯಪಾಪಗಳೇ ಕಾರಣಗಳು. ಆ ಉಭಯ ಕರ್ಮಗಳನ್ನು ದೇಹವಿಲ್ಲದ ಜೀವನು ಮಾಡಲಾರನು. ಶರೀರವೇ ಜೀವ ಸಹಿತವಾಗಿ ಕರ್ಮವನ್ನು ಮಾಡಿದಾಗ, ಅಭಿಮಾನವಶನಾದ ಜೀವನು ನಾನೇ

ಮಾಡಿದೆನೆಂದು ತಿಳಿದು, ತತ್ಫಲವನ್ನು ಅನುಭವಿಸುವನು. ಅಹಂ ಕರ್ತೃತ್ವಭ್ರಾಂತಿಯಿಂದ ಯಂತ್ರದಲ್ಲಿ ಹಾಕಿದ ತಿಲಗಳಂತೆ- ಜೀವರು ಪೀಡಿತರಾಗುವರು. ದಾರಾಪುತ್ರಧನಾದಿಗಳಿಗೆ ಒಡೆಯನೆಂಬ ಸ್ವಾಮಿತ್ವಭ್ರಾಂತಿಯಿಂದ ಅಜ್ಞಾನಿ ಜೀವನು, ಅವರ ಪೋಷಣೆಗಾಗಿ, ಪಾಪಗಳನ್ನು ಮಾಡಿ, ನರಕ ತಿರ್ಯಗ್ಯೋನಿಗಳಲ್ಲಿ ಬೀಳುವನು.

ಪುತ್ರನಾಶ, ವಿತ್ತನಾಶ, ಜ್ಞಾತಿನಾಶವಾದಾಗ ದಾವಾಗ್ನಿಗೆ ಸಿಲುಕಿದ ಲತೆಯಂತೆ ಬೆಂದು ಹಾಳಾಗುವನು. ನಿಜವನ್ನು ವಿಚಾರಿಸಿ ನೋಡಲು ಜೀವನು ತನ್ನ ಅಜ್ಞಾನದಿಂದ ದುಃಖಪಡುತ್ತಿರುವನು. ಸ್ನೇಹಿತರು ಸುಖವನ್ನು ಕೊಡಲಾಗಲಿ, ಅಹಿತರು ದುಃಖವನ್ನು ಕೊಡಲಾಗಲಿ ಸ್ವತಂತ್ರರಲ್ಲ, ಕರ್ಮವಾಗಲಿ, ದೇವಾದಿಗಳಾಗಲಿ ಸ್ವತಂತ್ರರಲ್ಲ, ಶ್ರೀಹರಿಯೇ ಸ್ವತಂತ್ರನು. ಲೋಕದಲ್ಲಿ ಬುದ್ಧಿವಂತರೆಲ್ಲರೂ ಶ್ರೀಮಂತರಲ್ಲ; ದಡ್ಡರೆಲ್ಲರೂ ಬಡವರಲ್ಲ. ಇದಕ್ಕೆಲ್ಲವೂ ಅದೃಷ್ಟವೇ ಕಾರಣವು. ಅದೃಷ್ಟನಿಯಾಮಕನಾದ ಶ್ರೀಹರಿಯು ಕರ್ಮಾನುರೂಪ ಫಲವನ್ನು ಕಾಲಕ್ರಮದಿಂದ ಕೊಡುತ್ತಿರುವನು. ಶೂರ, ಭೀರು, ಬುದ್ಧಿವಂತ, ಜಡ, ದುರ್ಬಲ, ಬಲವಂತ ಮುಂತಾದ ಸರ್ವರೂ ಸುಖದುಃಖಾದಿಗಳನ್ನು ತಾವು ಬೇಡದಿದ್ದರೂ ಹೊಂದುತ್ತಿರಲು ಶ್ರೀಹರಿ ಪ್ರೇರಿತ ಕರ್ಮಗಳೇ ಕಾರಣವು.

ಆಕಳು ಯಾರದು? ಕರುವಿನದೇ? ಅಲ್ಲ, ಗೋಪನದಲ್ಲ, ಯಜಮಾನನದೂ ಅಲ್ಲ. ಅದರ ಹಾಲನ್ನು ಯಾರು ಕುಡಿವರೋ ಅವರದು. ಅಂತೆಯೇ ಶ್ರೀಹರಿಯು ಸರ್ವಫಲಭೋಕ್ತನಾದುದರಿಂದ ಸರ್ವಸ್ವಾಮಿಯಾಗಿರುವನು. ಮತ್ತಾರೂ ಪ್ರಭುಗಳಿಲ್ಲ. ನೂರಾಕಳಿದ್ದರೂ ತನಗೆ ಬರುವುದು ಒಂದು ಥಾಲಿ; ಧಾನ್ಯರಾಶಿಗಳಿದ್ದರೂ ತಾನು ಉಣ್ಣುವುದು ಬೊಗಸೆ; ಮಹಾ ಪ್ರಾಸಾದಗಳಿದ್ದರೂ ಮಲಗುವುದು ಮೊಳ ನಾಲ್ಕರ ಮಂಚ; ಇನ್ನುಳಿದವೆಲ್ಲವೂ ಇತರರ ಸೊತ್ತಾಗಿಬಿಡುವುದು. ಇಂತು ತಿಳಿದು ವಿವೇಕಿಯು ವಿರಕ್ತನಾಗಬೇಕು. ಲೋಕದಲ್ಲಿ ಮೂಢರು ಮತ್ತು ಬಹು ಬುದ್ಧಿವಂತರು ಎಂಬಿಬ್ಬರು ಸುಖಿಸುವರು; ಮಧ್ಯದಿರುವ ಅವಿವೇಕಿ ದಾಂಭಿಕನು ದುಃಖಪಡುವನು. ಅಂತೆಯೇ ಪರದಲ್ಲಿ ಸುಷುಪ್ತಿಯ ಶ್ರೀಹರಿ ಸನ್ನಿಧಾನದಲ್ಲಿದ್ದ ಬಾಹ್ಯೇಂದ್ರಿಯ ವ್ಯಾಪಾರರಹಿತನೂ, ಅಸಂಪ್ರಜ್ಞಾತ ಸಮಾಧಿಗತನೂ ಸುಖಿಸುವರು; ಮಧ್ಯದಲ್ಲಿ ಎಚ್ಚರವಿರುವಾಗ 'ನಾನೇ ಕರ್ತನೆಂಬ' ದುರಭಿಮಾನಿಯು ದುಃಖಿಸುವನು. ಧೀರರು ಅಂತ್ಯದಲ್ಲಿರುವ ಧರ್ಮಮೋಕ್ಷಗಳನ್ನು ಬಯಸಿ ಸುಖಿಸುವರು; ಮಧ್ಯದ ಅರ್ಥಕಾಮಗಳನ್ನು ದುಃಖಕಾರಣವೆಂದು ತಿಳಿದು ಅವರು ತ್ಯಜಿಸುವರು. ಅವರು ಸುಖ ದುಃಖಾದಿ ದ್ವಂದ್ವಗಳಿಂದ ಉತ್ಸೇಕೋದ್ವೇಗಗಳನ್ನು ಹೊಂದದೆ ನಿರ್ವಿಕಾರರಾಗಿರುವರು. ಆದುದರಿಂದ ಜ್ಞಾನವನ್ನು ಸಂಪಾದಿಸಿ, ಬಂದ ಸುಖ ದುಃಖಾದಿ ಕೃತವಿಕಾರಕ್ಕೊಳಗಾಗದೇ ಶೋಕಮೋಹದೂರನಾಗಿ, ಶ್ರೀಹರಿಯನ್ನು ಭಜಿಸುವುದೇ ಸರಿಯಾದ ಮಾರ್ಗವು. ಸಂಸಾರದಲ್ಲಿ ಅನಿವಾರ್ಯವಾಗಿ ನೂರಾರು ಶೋಕ ಕಾರಣಗಳು, ಸಾವಿರಾರು ಭಯಕಾರಣಗಳು ಉಂಟಾಗುವವು. ಆದರೆ ಅವನ್ನು ಲೆಕ್ಕಿಸದೆ ಇರುವನು ಧೀರನೆನಿಸುವನು. ಮನವನ್ನು ನಿಗ್ರಹಿಸಿ, ಅಸೂಯೆಯನ್ನು ತ್ಯಜಿಸಿ, ಇಂದ್ರಿಯಗಳನ್ನು ವಶೀಕರಿಸಿ, ಶ್ರೀಹರಿ

ಭಕ್ತನಾದವನಿಗೆ ಶೋಕವಿಲ್ಲ. ಉದಯಾಸ್ತಮಯಗಳನರಿತು, ಅಂತೆಯೇ ಜಗತ್ತಿನ ಉತ್ಪತ್ತಿ ಲಯಾದಿಗಳನ್ನು ನೀಡುವ ಶ್ರೀನಾರಾಯಣನ ಜ್ಞಾನವನ್ನು ಸಂಪಾದಿಸಿದವನಿಗೆ ಶೋಕವಿಲ್ಲ. ತರತಿಶೋಕಂ ಆತ್ಮವಿತ್ !

ನನ್ನದೆಂಬುದೇ ಶೋಕ ಕಾರಣವು. ಅದನ್ನು ಜ್ಞಾನಿಯು ಬೇಕೆಂಬ ಕಾಮಗಳು ಬಂದರೂ, ಕಾಮಿತವನ್ನು ಬಯಸಿದ ತಾನು ಹೋಗಿಬಿಡಬಹುದು ಅಥವಾ ಕಾಮವು ಸಫಲವಾಗದಿರಬಹುದು. ಕರ್ಮಕ್ಕೆ ತಕ್ಕಂತೆ ಫಲವು ಒಂದೇ ಬರುವದು. ಅಂತೆಯೇ ಕರ್ಮಗಳನ್ನು ನಮ್ಮಿಂದ ಶ್ರೀಹರಿಯು ಮಾಡಿಸಿ, ಕರ್ಮಫಲವನ್ನು ಉಣಿಸುವನು. ಕಾಮಕ್ರೋಧಗಳೇ ನಮ್ಮ ಮುಖ್ಯ ಶತ್ರುಗಳು. ಅವನ್ನು ಗೆದ್ದವನೇ ಪಂಡಿತನು. ಕಾಮದ ಪಾಶಗಳೆರಡು ; ಅಹಂಕಾರ ಮಮಕಾರಗಳೆಂಬ ಆ ಪಾಶಗಳು ಜೀವವನ್ನು ಬಗಿದಿಟ್ಟು, ಮೃತ್ಯುವಿನ ಕೈಯಲ್ಲಿ ಒಪ್ಪಿಸುವವು. ಆದುದರಿಂದ ಸ್ಥೂಲ ಭೋಗಗಳನ್ನು ಪೂರಾ ಬಿಟ್ಟು, ವಾಸನಾಮಯ ಭೋಗಗಳನ್ನು ವೈರಾಗ್ಯದಿಂದ ಮಟ್ಟಕ್ಕಿ, ಜೀವಗತ ಕಾಮದುರ್ವಾಸನೆಯನ್ನು ಬ್ರಹ್ಮ ಜ್ಞಾನ ಭಕ್ತಿಗಳಿಂದ ಗೆದ್ದ ಸುಜೀವನು ಮೋಕ್ಷಾಖ್ಯ ಮಹಾ ಸುಖಕ್ಕೆ ಪಾತ್ರನಾಗುವನು.

ಬ್ರಹ್ಮನಾಮಕ ನಾರಾಯಣ ಲೋಕವನ್ನು ಸೇರಿದವನಿಗೆ ಸರ್ವಕಾಮಗಳು ಸಂಪನ್ನವಾಗುವವು. ಐಹಿಕವಾದ ಸುಖಗಳನ್ನು ಬಿಡದವನಿಗೆ ಮೋಕ್ಷ ಸುಖವಿಲ್ಲ. ಸ್ವರ್ಗವೂ ಮೋಕ್ಷಕ್ಕೆ ಎಣೆ ಅಲ್ಲ. 'ಕಮನೀಯವಾಗಿದೆ ಈ ಸ್ವರ್ಗಭೂಮಿಯು. ಅತುಲ ಸೌಂದರ್ಯಸಾರ ಭೂತಳಿರುವಳು ಈ ಕನ್ಯಾಮಣಿಯು. ಜರಾಮೃತ್ಯು ಬಾಧಕವಾಗಿದೆ ಈ ಅಮೃತರಸಾಯನವು. ವಿಹಾಯ ಸಗಮನವಾಗಿದೆ ಈ ವಿಮಾನವು. ಬೇಡಿದ ಭೋಗಗಳನ್ನೀಯುತ್ತಿವೆ ಈ ಕಲ್ಪತರುಗಳು. ಮಂದ ಶೀತಲ ಮಧುರಳಾಗಿ ಹರಿಯುವಳೀ ಪುಣ್ಯಮಂದಾಕಿನಿ. ಅನುಕೂಲವಾಗಿರುವರು ಉತ್ತಮಾಪ್ಸರೋಜನರು. ದೇವಲೋಕದ ಶರೀರಗಳು ಬಂದಿವೆ ನಿಮಗೆ. ವಜ್ರಸದೃಶವಾದ ಕಾಯವು ಒದಗಿದೆ. ನಿಮ್ಮ ಪುಣ್ಯಪ್ರಭಾವದಿಂದ ಇದೆಲ್ಲವೂ ಸಿದ್ಧವಾಗಿದೆ' ಎಂದು ನಿವೇದಿಸುವ ದೇವವಚನಗಳನ್ನು ಕೇಳಿ, ಮನುಜನು ಮೋಸಹೋಗಬಾರದು. ಸ್ವರ್ಗಸುಖಗಳೂ ಐಹಿಕಗಳಂತೆಯೇ ಅನಿತ್ಯಹೇಯಗಳೆಂದು ತಿಳಿದವನೇ ಜ್ಞಾನಿಯು.

ಘೋರಸಂಸಾರ ಕರ್ಮಾಗಾರದಲ್ಲಿ ಬೆಂದು, ಜನನ ಮರಣಾಂಧಕಾರದಲ್ಲಿ ಭ್ರಮಿಸುತ್ತಾ, ಶ್ರೀದೇವನ ದಯದಿಂದ ಬಂದ ಕ್ಲೇಶತಿಮಿರವಿನಾಶಕರವಾದ ವಾಸುದೇವ ಜ್ಞಾನದೀಪವನ್ನು ಹೊಂದಿ, ತೃಷ್ಣಾಜನಿತ ವಿಷಯ ವಾಯುಗಳಿಗೆ ಸಿಕ್ಕು ನಂದಿ ಹೋಗದಂತೆ ಕಾಪಾಡಿಕೊಂಡು ಎಚ್ಚತ್ತು ನಡೆಯುವನೇ ಜ್ಞಾನಿಯು. ಸ್ವಪ್ನಸಮ್ಮಿತವಾದ ಕಾಮಿತಗಳನ್ನು ತುಚ್ಛಗಳೆಂದು ತಿಳಿದು, ಕೂರ್ಮವು ತನ್ನ ಕೈ ಕಾಲುಗಳನ್ನು ಒಳಗೆ ಸೆಳೆಯುವಂತೆ, ಅಪ್ರಯತ್ನದಿಂದ ಇಂದ್ರಿಯಗಳನ್ನು ನಿಗ್ರಹಿಸಬಲ್ಲವನಿಗೆ ಮನೋಮಂದಿರದಲ್ಲಿ ಆತ್ಮಜ್ಯೋತಿಯು ಬೆಳಗುತ್ತಿರುವುದು ಗೋಚರಿಸುವುದು. ಎಲ್ಲಿಯವರೆವಿಗೂ ಅಹಂಮಮಕಾರಗಳ ನೆಲೆವೀಡಾಗಿರುವುದೋ ಅಲ್ಲಿಯವರೆವಿಗೂ

ಮನವು ಮಾಧವನನ್ನು ಕಾಣಲಾಗದೆ ಇರುವುದು. ತನ್ನ ಅವಿವೇಕ ವರ್ತನದಿಂದ ಮತ್ತೊಬ್ಬರನ್ನು ಹೆದರಿಸದೆ, ತಾನು ಶ್ರೀಹರಿಯ ನಿರಂತರ ಧ್ಯಾನಬಲದಿಂದ ಮತ್ತೊಬ್ಬರಿಗೆ ಹೆದರದೆ, ಬುದ್ಧಿಮನೋದಶೇಂದ್ರಿಯಗಳನ್ನು ನಿಗ್ರಹಿಸಿ, ಶ್ರೀಕಾಂತ ಚಿಂತಾ ಶಾಂತನಾದವನು ಜೀವನ್ಮುಕ್ತನೆಂದು ತಿಳಿ!

ಐಹಿಕವಾದ ಸುಖ ದುಃಖಾದಿ ವಿಕಾರಗಳಿಂದ ಅಂತಹ ಬ್ರಹ್ಮಜ್ಞಾನಿಯ ಮಾನಸವು ಕ್ಷುಬ್ಧವಾಗದು. ಸರ್ವ ಭೂತಗಳಲ್ಲಿ ಅಂತರ್ಯಾಮಿಯಾದ ಸ್ವಾಮಿಯನ್ನು ಕಂಡ ಧೀರನು, ಯಾರಿಗೂ ದ್ರೋಹವನ್ನೆಸಗನು, ಅವನು ದುರಾಶೆಯನ್ನು ಪೂರಾ ಬಿಟ್ಟಿರುವನು. ದುರ್ಜೀವರಿಂದ ದುಸ್ತ್ಯಜವೂ, ಮುಪ್ಪು ಬಂದರೂ ತಾನು ದುರ್ಜರವೂ ಆದ ದುಷ್ಟತೃಷ್ಣೆಯನ್ನು ಪ್ರಾಣಾಂತಿಕ ರೋಗವೆಂದು ತಿಳಿದು, ಪಿಂಗಳೆಯಂತೆ ಬಿಟ್ಟುಬಿಡಬೇಕು. ಪಿಂಗಳೆ ಎಂಬ ವೇಶ್ಯೆಯು ವಿದೇಹ ನಗರದಲ್ಲಿದ್ದಳು. ವಿಟರು ಬಂದು ವಿತ್ತವೀವರೆಂದು ವಿನಿದ್ರಳಾಗಿ ಕಾದ ಅವಳ ಆಶೆಯು ವಿಫಲವಾಯಿತು. ಅವಳಿಗೆ ವಿಪತ್ತಿನಲ್ಲಿ ವಿರಾಗವು ಜನಿಸಿತು.

ಅವಳಿಂತು ಚಿಂತಿಸಿದಳು: 'ಅಹಾ! ಧಿಕ್ಕಾರವಿರಲಿ ನನ್ನ ಅವಿವೇಕವರ್ತನಕ್ಕೆ! ಧಿಕ್ಕಾರವಿರಲಿ ನನ್ನ ಕಾಮಾರ್ಥಲಾಲಸತೆಗೆ! ಮೈಮರೆತು, ಉನ್ಮತ್ತ ಮನುಜರಿಗೆ ಮಾನವನ್ನರ್ಪಿಸಿ ಮತಿಗೆಟ್ಟೆನು. ನನ್ನ ಕಾಂತನಾದ ಶ್ರೀಕಾಂತನು ಅತಿಸಮೀಪವರ್ತಿಯಾಗಿ ನನ್ನನ್ನು ನಿತಾಂತಸಂತೋಷವನ್ನಿತ್ತು ಲಾಲಿಸುತ್ತಿರಲು, ಅವನನ್ನು ಮರೆತು, ಮತ್ತೋರ್ವ ತುಚ್ಛವಿಟನನ್ನು ಬೇಡಿ ದೇಹವನ್ನು ಮಾರಿಕೊಂಡೆನು. ಒಂದು ದೂಲ, ಹತ್ತಾರು ಜಂತಿಗಳು, ಅವಕ್ಕೆ ಕಟ್ಟಿದ ನರಗಳು; ಮೇಲೆ ಹಾಸಿದ ಹುಲ್ಲು; ಬಿಗಿದ ಚಾಪೆ; ಸದಾ ನಾರುವ ನವದ್ವಾರಗಳು; ಉಳ್ಳ ನಾನು ಅಂತಹುದೇ ಹೊಲಸು ದೇಹದಿಂದ ನನ್ನನ್ನು ಕೂಡ ಬರುವ ಕೇಡಿಗರ ಕೈಗೊಂಬೆಯಾದೆನು. ಇನ್ನು ಸಾಕೀ ನರಕಕೂಪದಿಂದ ಹೊರ ಬಂದು, ಗೋವಿಂದ ಸುಂದರ ಚರಣಾರವಿಂದ ದಾಸಿಯಾಗುವೆನು' ಇಂತು ಚಿಂತಿಸಿ, ದುರಾಶಾಲತೆಯನ್ನು ಕಡಿದು, ಪಿಂಗಳೆಯು (ಕುಬ್ಜೆ) ಮನಸ್ಸುಖವನ್ನೂ, ಶಾಂತಿಯನ್ನೂ ಹೊಂದಿದಳು. ಆಶೆಯೇ ದುಃಖವು; ನೈರಾಶ್ಯವೇ ಸುಖವು.

ಧರ್ಮರಾಜ! ವಿಪ್ರನಿಂತು ಪೇಳಲು, ಕೇಳಿ ತಿಳಿದು ಶ್ಯೇನಜಿತನು ದುಃಖವನ್ನು ಬಿಟ್ಟು, ನಿಶ್ಚಿಂತನಾದನು.

ಭೀಷ್ಮನ ಮೋಕ್ಷಸಾಧನ ಧರ್ಮವನ್ನು ಕೇಳಿ, ಧರ್ಮರಾಜನು, 'ತಾತ! ಕಾಲವು ಸರ್ವಭೂತಗಳನ್ನು ನುಂಗುತ್ತಾ, ಹೋಗುತ್ತದೆ. ನಾವೆಲ್ಲರೂ ಮೃತ್ಯು ವದನಗುಹೆಯನ್ನು ಸೇರ ಪೋಗುತ್ತಿರುವೆವು. ಇಂತಿರಲು ಶ್ರೇಯಸ್ಸಾಧನವೆಂತಾಗುವುದೋ ನಿರೂಪಿಸು!' ಎಂದು ಕೇಳಲು, ಭೀಷ್ಮನಿಂತೆಂದನು:

'ಸ್ವಾಧ್ಯಾಯನಿರತನಾದ ವಿಪ್ರನೋರ್ವನಿಗೆ, ಮೋಕ್ಷ ಧರ್ಮ ನಿರತನಾದ ಮೇಧಾವಿ ಎಂಬ ಪುತ್ರನಿದ್ದನು. ಅವನು, 'ತಂದೇ! ಧೀರನ ಪ್ರಥಮ ಕರ್ತವ್ಯವೇನು? ಆಯುವು ಕ್ಷಣ ಕ್ಷಣಕ್ಕೂ ಸರಿದು ಹೋಗುತ್ತಿದೆ. ಬೇಗ ಹೇಳು! ನಾನೇನು

ಮಾಡಿದರೆ ಕ್ಷೇಮವಾದೀತು ?' ಎಂದು ಕೇಳಿದನು. 'ಪುತ್ರ ! ಬ್ರಹ್ಮಚಾರಿಯಾಗಿ ವೇದವನ್ನೋದು! ಮುಂದೆ ಗೃಹಸ್ಥನಾಗಿ ಮಕ್ಕಳನ್ನು ಪಡೆ! ಪಿತೃ ಋಣವನ್ನು ತೀರಿಸು! ಯಜ್ಞಗಳಿಂದ ದೇವತೆಗಳನ್ನು, ಅನ್ನಾದಿಗಳಿಂದ ಭೂತಗಳನ್ನು ಸಂತೋಷಪಡಿಸು! ಆಮೇಲೆ ವಾನಪ್ರಸ್ಥನಾಗಿ, ಆಶ್ರಮದಲ್ಲಿದ್ದು, ಬ್ರಹ್ಮಜ್ಞಾನವನ್ನು ಸಂಪಾದಿಸು!' ಎಂದು ನುಡಿದ ತಂದೆಗೆ ಮಗನು 'ತುಂಡರಿಸುವುದೊಂದಿದೆ! ಸುತ್ತುಗಟ್ಟಿ ಪೀಡಿಸುವುದೊಂದಿದೆ! ಬಿಡದೆ ಮೇಲೆರಗುವುದೊಂದಿದೆ! ಇಂತು ಶತ್ರು ಕರಗತನಾಗಿದ್ದೂ, ಧೈರ್ಯದಿಂದ ನೂರು ವರ್ಷವೂ ಮುಗಿಯುವವರೆಗೂ ಬಾಳುವನೆಂಬಂತೆ ಮಾತಾಡುವ ನಿನ್ನನ್ನು ಕಂಡು ಆಶ್ಚರ್ಯಖೇದಗಳು ಮೂಡುತ್ತಿವೆ !' ಎಂದನು. 'ಹಾಗಂದರೇನು ?' ಎಂದ ತಂದೆಗೆ ಮಗನು ಮತ್ತೆ, 'ಮೃತ್ಯುವು ಆಯುಃಖಂಡಗಳನ್ನು ತುಂಡರಿಸುತ್ತಿದೆ. ಜರೆಯು ಸುತ್ತುಗಟ್ಟಿ ಪೀಡಿಸುತ್ತಿದೆ. ಅಹೋರಾತ್ರಗಳು ಬಿಡದೆ ಮೇಲೆರಗುತ್ತಿವೆ. ಇದನ್ನು ತಿಳಿಯದೆ ಮೈಮರೆತಿರುವುದು ಉಚಿತವೇ? ಎಂದು ಗೋವಿಂದನನ್ನು ನೆನೆಯದೆ ಕಳೆದವೋ, ಆ ದಿನ ವ್ಯರ್ಥವಾಯಿತೆಂದು ತಿಳಿ!'

ಜಾನುದಘ್ನವಾದ ಜಲದಲ್ಲಿದ್ದು, ಜಲಧಿ ಎಂದು ತಿಳಿವ ಜಲಚರವು ಜಾಲಕ್ಕೆ ಬಿದ್ದು ಸಾಯುವುದನ್ನು ನೋಡು! ನಿನ್ನ ಕಾಮಿತಗಳೆಲ್ಲವೂ ಈಡೇರಲೆಂದು ಮೃತ್ಯುವು ಕಾಯುವುದಿಲ್ಲ. ಹೂವಿನಂತೆ ಬಾಡಿಹೋಗುವ ಕಾಮ್ಯ ಕರ್ಮಫಲಗಳನ್ನು ಬೇಡುತ್ತಾ ಕುರಿಯ ಬೆನ್ನತ್ತಿ ತಿರುಗುವ ಟಗರನ್ನು ತೋಳವು ನುಂಗುವುದಂತೆಯೇ ಯಮರಾಜನೂ ನುಂಗುವನು. ನಾಳೆ ಮಾಡುವ ಶ್ರೇಯಸ್ಸನ್ನಿಂದೇ ಮಾಡು! ನೀನು ಮಾಡುವವರೆಗೂ ಯಮನು ಕೃತಾಂತನಾದುದರಿಂದ ಕಾದಿರನು. ಸಾಯಂಕಾಲದ ಶ್ರೇಯಸ್ಸನ್ನು ಬೆಳಿಗ್ಗೆ ಮಾಡಿಬಿಡು! ಯಾರಿಗೂ ಮೃತ್ಯುವಿನ ಆಗಮನ ಸಮಯವು ತಿಳಿಯಬಾರದು. ಜೀವಿತವು ಜಲಬುದ್ಬುದದಂತೆ ಅನಿತ್ಯವಾಗಿದೆ. ಪೂರ್ವವಯಸ್ಸಿನಲ್ಲೇ ಮುಪ್ಪಿನ ಕಾಲದಲ್ಲಿ ಮಾಡಬೇಕೆಂದಿರುವ ಪುಣ್ಯಕಾರ್ಯಗಳನ್ನು ಮಾಡಿಬಿಡು! ತನುವು ನಿತ್ಯವೆಂದು ನೆಚ್ಚಿ ಕೂಡಲಿಬೇಡ! ಪುತ್ರದಾರಾದಿ ಜನರ ಪೋಷಿಸುವಾಗ ಮಾಡಿದ ಪಾಪದ ವಿಷಫಲವನ್ನು ಕರ್ತನೇ ಉಣ್ಣಬೇಕಾಗುವುದು. ಮನಸ್ಸಿನ ಮಂಡಿಗೆ ತಿನ್ನುತ್ತಾ, ಮೈಮರೆತು ಬಿದ್ದಿರುವ ಮನುಜ ಮೃಗವನ್ನು ಕಾಲವ್ಯಾಘ್ರನು ಹೊತ್ತುಕೊಂಡು ಹೋಗುವನು. ಕಾಮತೃಪ್ತನಾಗದೆ, ಕಾರ್ಯಗಳ ಕೊನೆಗಾಣದೆ, ಮನೋರಥದಲ್ಲಿ ತಿರುಗುತ್ತಾ, ಕ್ಷೇತ್ರಾದಿಪರಿವೀಕ್ಷಕನಾಗಿ, ಮೈಮರೆತಿರುವ ಮನುಜ ಪಶುವು ಕಾಲವ್ಯಾಘ್ರಕ್ಕೆ ತುತ್ತಾಗುವನು.

ನಿನ್ನ ದೇಹದಲ್ಲಿ ನೆಲೆಮಾಡಿ ನಿಂತಿರುವ, ವ್ಯಾಧಿ, ಚಿಂತೆ, ಜರೆ, ಮೃತ್ಯುಗಳೆಂಬ ಶತ್ರುಗಳು ಪ್ರಬಲರಾಗುತ್ತಿರಲು ತಿಳಿಯದೆ, ಮೈಮರೆತು ಮಲಗಿ, ನಿಶ್ಚಿಂತನಾಗುವುದು ಸರಿಯಲ್ಲ. ಗ್ರಾಮ್ಯ ಸುಖಾರಾಮವೇ ಮೃತ್ಯುವಿನ ವಿಹಾರ ಭೂಮಿಯು; ಸಜ್ಜನ ಸಂಗ, ಬ್ರಹ್ಮಜ್ಞಾನಗಳು ದೊರೆವ ಆಶ್ರಮಗಳೇ ದೇವತೆಗಳ ಆನಂದ ಸಭೆ. ಗ್ರಾಮ್ಯಸುಖಪಾಶಗಳನ್ನು ಕಡಿದು, ಜಂತುಜಾತವನ್ನು ಹಿಂಸಿಸದೆ, ತ್ರಿಕರಣ

ಶುದ್ಧನಾಗಿ, ದೇವನಿತ್ತುದರಿಂದ ಸಂತುಷ್ಟನಾದವನು ಸಾರ್ಥಕಜನ್ಮನಾಗಿ, ಮುಕ್ತಿಯನ್ನು ಹೊಂದುವನು.

ಮೃತ್ಯುವಿಗೆ ಪ್ರತೀಕಾರವಿಲ್ಲ. ಅದನ್ನು ಜಯಿಸಿ ಮತ್ತೆ ಅದಕ್ಕೆ ತುತ್ತಾಗದಿರಲು, ನಿತ್ಯನಿರತಿಶಯನಿರ್ದುಃಖಜ್ಞಾನಾನಂದಾನುಭವಸ್ವರೂಪನಾದ ಶ್ರೀಹರಿಯನ್ನು ಭಕ್ತಿಯಿಂದ ಸೇವಿಸುವುದೇ ಕಾರಣವಾಗಿದೆ. ಅಹಿಂಸನಾಗಿ, ಕಾಮಕ್ರೋಧಗಳನ್ನು ಗೆದ್ದು, ಸಮದುಃಖಸುಖಿನಾಗಿ, ಶಾಂತಿಯಜ್ಞವನ್ನು ಮಾಡುವೆನಾಗಲಿ, ಪಶುಯಜ್ಞಗಳನ್ನು ನಾನೆಂದಿಗೂ ಮಾಡಲಾರೆನು. ಪಿಶಾಚಿಯಂತೆ ಕ್ರೂರನಾಗಿ ದೇಹಿ ಹಿಂಸೆಯನ್ನು ಮಾಡದೆ, ಬ್ರಹ್ಮಚಾರಿಯಾಗಿ ಶ್ರೀಹರಿಯನ್ನು ಭಜಿಸುವೆನು. ಪುತ್ರರು ತಾರಕರಲ್ಲ, ಧನವು ಧರ್ಮೋಪಯೋಗಿಯಾಗದು. ಎಲ್ಲ ದುಷ್ಟಕಾಮಗಳನ್ನು ಬಿಡುವೆನು. ಏಕಾಕಿಯಾಗಿ, ವಾಙ್ಮನಃಕಾಯಗಳನ್ನು ದಂಡಿಸಿಡುವೆನು. ಗುಹಾವಾಸಿ ವಾಸುದೇವನನ್ನು ಭಜಿಸಿ, ಮುಕ್ತನಾಗುವೆನು' ಎಂದನು. ಮೇಧಾವಿಯ ಮಾತನ್ನಾಲಿಸಿ, ಅವನ ತಂದೆಯೂ ವಿರಕ್ತನಾಗಿ, ಶ್ರೀಹರಿಭಜನೆಗೈದು, ಮುಕ್ತನಾದನು.

ಹಿಂದೆ ಹಸ್ತಿನಾಪುರದಲ್ಲಿ ಶಂಪಾಕನೆಂಬ ಪಾರ್ವನೋರ್ವನಿದ್ದನು. ಅವನು ಸರ್ವವನ್ನು ತ್ಯಜಿಸಿ, ವಿರಕ್ತನಾಗಿ ಇಂತು ನುಡಿದನು: 'ಸುಖವು ಬಂತೆಂದು ಹಿಗ್ಗಬಾರದು. ದುಃಖವು ಬಂತೆಂದು ಕುಗ್ಗಬಾರದು. ಅಕಿಂಚನನಿಗೆ ಯಾವ ಚಿಂತೆಯೂ ಇಲ್ಲ, ಯಾವ ಗೊಡವೆಯೂ ಇಲ್ಲ. ದಾರಿದ್ರ್ಯವು ರಾಜ್ಯದಕಿಂತಲು ಸುಖತರವು. ಧನವಂತನು ಮೃತ್ಯುವದನದಲ್ಲಿದ್ದವನಂತೆ ನಿತ್ಯೋದ್ವಿಗ್ನನಾಗಿರುವನು. ಧನವಂತನಿಗಿರುವ ಅಗ್ನಿ, ಚೋರ, ವಂಚಕ ಭಯಗಳು ದರಿದ್ರನಿಗಿಲ್ಲ. ಬೇಕಾದಲ್ಲಿ ತಿರುಗಿ, ಕೈತಲೆದಿಂಬಾಗಿ ನೆಲದಲ್ಲಿ ಮಲಗಿ ನಿಶ್ಚಿಂತನಾಗಿರುವ ದರಿದ್ರನನ್ನು ಕಂಡು, ಅವನ ವೈರಾಗ್ಯಕ್ಕೆ ಮೆಚ್ಚಿ ದೇವತೆಗಳು ಪ್ರಶಂಸಿಸುವರು. ಧನವಂತನ ಮನಸ್ಸು ಕ್ರೋಧ ಲೋಭಗಳ ನೆಲೆವೀಡು; ಅವನ ದೃಷ್ಟಿಪಾತವು ವಕ್ರವು ಅವನ ಮುಖವು ನೀರಸವು; ಅವನ ಹುಬ್ಬು ಗಂಟು; ಕೆಳತುಟಿಯನ್ನು ಕಚ್ಚಿ ಕೆಡುನುಡಿಗಳನ್ನಾಡುವ ಧನಿಕನು, ಭೂಮಂಡಲದಾತನಾದರೂ, ಭುಜಗನಂತೆ, ದೂರವರ್ಜಿತನಾಗುವನು. ರೂಪಮಾನ, ಕುಲಮಾನ, ವಿದ್ಯಾಮಾನ, ವಯೋಮಾನ, ಬಲಮಾನಗಳು ಎಲ್ಲವೂ ಧನಮಾನದ ಮುಂದೆ ತಲೆಬಾಗುವವು. 'ನಾನು ಸಿದ್ಧನು; ನಾನು ಮಾನವ ಮಾತ್ರನಲ್ಲ; ದೇವತೆಯು, ನಾನು ಈಶ್ವರನು' ಎಂದಿತ್ಯಾದಿ ದಂಭವಚನಗಳು ಧನವಂತನಲ್ಲದವನ ಬಾಯಲ್ಲಿ ಬರಲಾರವು.

ಧನವಂತನು ಪರರನ್ನು ಪೀಡಿಸಿ, ಅವರಿಂದ ಪೀಡಿತನಾಗುವನು. ಧನಕ್ಕಾಗಿ ಅಕಾರ್ಯಗಳನ್ನು ಮಾಡಿದಾಗ ರಾಜನಿಂದ ಶಿಕ್ಷಿತನಾಗುವನು. ಆದುದರಿಂದ ಮದವೀವ ಸಂಪತ್ತಿನಕಿಂತಲೂ, ವಿನಯವೀವ ದಾರಿದ್ರ್ಯವೇ ಲೇಸು, ಎಂದು ತಿಳಿದು, ನಾನು ಧನಾಶಾವಶನಾಗದೆ ನಿಶ್ಚಿಂತನಾಗಿರುವೆನು' ಇಂತು ನುಡಿದ ಶಂಪಾಕನನ್ನು ಸತ್ಕರಿಸಿ ನಾನು ಕಳಿಸಿದೆನು.

## ೨. ಧನಾರ್ಥಿ : ಭೃಗುಭರದ್ವಾಜ ಸಂವಾದ

ಭೀಷ್ಮನವಚನಗಳನ್ನಾಲಿಸಿ, ಧರ್ಮರಾಜನು 'ತಾತ! ಜನರು ಧನಕ್ಕಾಗಿ ಬಲು ಕಷ್ಟಪಡುತ್ತಿರುವರು. ಧನವು ಬಂದಂತೆ, ತೃಷ್ಣೆಯೂ ಹೆಚ್ಚುವುದು. ತೃಷ್ಣೆಯನ್ನು ಗೆದ್ದು ನರನೂ ಸುಖಪಡುವುದೆಂತು?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ಧರ್ಮಜ ! ಸುಖ ಕಾರಣವು ಧನವಲ್ಲ ; ಸರ್ವ ಭೂತ ಸಮತೆ, ಅತ್ಯಂತಾಯಾಸವರ್ಜನ, ಸತ್ಯವಚನ, ವೈರಾಗ್ಯ, ಕರ್ಮಫಲೇಚ್ಛಾಭಾವ ಶ್ರವಣಮನನ ಧ್ಯಾನಗಳು, ಮುಂತಾದ ಸುಗುಣಗಳೇ ಸುಖಸಾಧನವೆಂದು ತಿಳಿ! ಪೂರ್ವದಲ್ಲಿ ಮಂಕಿ ಎಂಬ ಮುನಿವರನಾಡಿದ ಮಾತನ್ನರುಹುವೆನು ಕೇಳು!

ಮಂಕಿ ಎಂಬ ಮುನಿಯು ಧನಾಶೆಯಿಂದ ವ್ಯವಸಾಯವನ್ನು ಪ್ರಾರಂಭಿಸಲು ನಿಶ್ಚಯಿಸಿ, ಎರಡೆತ್ತುಗಳನ್ನು ಕೊಂಡು ತಂದನು. ಅದಕ್ಕೆ ನೊಗ ಏರಿಸಿ ಹೊಡೆದಾಗ, ಅವು ಓಡತೊಡಗಿದವು. ಮಧ್ಯೆಯಿದ್ದ ಒಂಟೆಯನ್ನು ಹಾದು ಹೋಗುವ ಆ ಎತ್ತುಗಳನ್ನು, ಉಷ್ಟ್ರವು ಹೆದರಿ, ಮೇಲೆದ್ದು, ಹೊತ್ತುಕೊಂಡು ಓಡಿಹೋಯಿತು. ಎತ್ತರವಾದ ಒಂಟೆಯ ಹೆಗಲಿಗೆ ಜೋತುಬಿದ್ದು, ಉಸಿರಾಡದೆ ಸಾಯಲಿರುವ ಎತ್ತುಗಳನ್ನು ನೋಡಿ, ದುಃಖದಿಂದ ಮಂಕಿಯು ಇಂತೆಂದನು:

'ಆಹಾ! ದೈವವಿಧಿಗೆದುರಿಲ್ಲ. ಬೇಕಾದ ಉಪಾಯಗಳನ್ನೆಷ್ಟು ಮಾಡಿದರೂ, ಅದೃಷ್ಟಹೀನನಿಗೆ ಧನಲಾಭವಾಗಲಾರದು. ನನ್ನ ದುರ್ವಿಧಿಯಿಂದ, ನಾನು ಧನವನ್ನೆಲ್ಲ ಚೆಲ್ಲಿ ತಂದ ಎತ್ತುಗಳು ಸತ್ತುಹೋದವು. ಎರಡು ಟಗರುಗಳ ಮಧ್ಯ ಸಿಕ್ಕ ನರಿಯಂತೆ, ತಾಳೆಯ ಗಿಡದ ನೆರಳಿನಲ್ಲಿ ನಿಂತಾಗ ಕಾಗೆಕೆಡಹಿದ ಹಣ್ಣಿನಿಂದ ಗಾಯಗೊಂಡವನಂತೆ, ನನ್ನ ಎತ್ತುಗಳು ಒಂಟೆಯ ಹೆಗಲಿಗೆ ಸಿಕ್ಕು ಸಾಯುತ್ತಿವೆ! ಕೇವಲ ದೈವಿಕವಾದ ಈ ವಿಪತ್ತಿಗೆ ಏನೂ ಮಾಡಲಾರದೆ ಪೌರುಷವು ನಿಂತು ನೋಡುತ್ತಿದೆ. ಸಾಕು ಸಾಕು! ಅರ್ಥಸಾಧನವೆನ್ನ ಹಣೆಯಲ್ಲಿ ಬರೆದಿಲ್ಲ.

ಜನಕರಾಜನ ಮಂದಿರದಿಂದ ಹೊರಬಿದ್ದು ಹೋಗುವ ಶುಕಮಹಾಮುನಿಯ ಮಾತು ಸರ್ವಥಾ ಸತ್ಯವಾಗಿದೆ. 'ಕಾಮಪ್ರಾಪ್ತಿಯಲ್ಲಿಯಕಿಂತಲು, ಕಾಮತ್ಯಾಗದಲ್ಲೇ ಹೆಚ್ಚು ಸುಖವಿದೆ. ಕರ್ತವ್ಯಕಾರ್ಯಗಳನ್ನೆಲ್ಲ ಮಾಡಿ ಮುಗಿಸಿದೆನು- ಎಂಬ ಮನುಜನನ್ನು ಇನ್ನೂ ಯಾರೂ ಕಂಡಿಲ್ಲ. ತೃಷ್ಣಾಲತೆಗೆ ಕೊನೆಯಿಲ್ಲ; ಅದು ಮೃತ್ಯುಪಾಶದಲ್ಲಿ ಮಿಳಿತವಾಗಿದೆ. ಯಾರೆಷ್ಟು ಬೈದರೂ, ಹೊಡೆದರೂ, ಧನಾಶಾಪರನು ನಾಚದೆ ಮತ್ತೆ ಕೈಚಾಚಿ ಬೇಡುವನು. ಸಂಚಿತವು ನಷ್ಟವಾದರೆ, ಎದೆಗುಂದದೆ, ಮತ್ತೆ ಸಂಪಾದಿಸುವೆನೆಂಬನು. ಧನೇಚ್ಛೆಯಿಂದ ಪರರದಾಸನಾಗುವನು. ಕಾಮಾಶೆಯು ಮನುಜನನ್ನು ಶತಸಹಸ್ರ ವಿಪತ್ಪರಂಪರೆಯಲ್ಲಿಯೂ, ಸಾಯಗೊಡದೆ ನಿಲ್ಲಿಸಿಕೊಂಡು ಹೋಗುತ್ತಿರುವುದು. ಕಾಮನಿಗೆ ಬೇಕಾದುದನ್ನಿತ್ತು ಹೋಗೆಂದರೆ, ಹೋಗನು. ಮತ್ತೆ ಮತ್ತೆ ಕಾಡಿ ಪೀಡಿಸಿ, ಕೊನೆಗೆ ತೃಪ್ತನಾಗದೇನೇ ಜೋತುಬಿದ್ದು, ಗೋಳಾಡಿಸುವನು. ಕಾಮನ ಬೇರು ಸಂಕಲ್ಪ ;

ಅಂತಹ 'ಸಂಕಲ್ಪ ಅಂದರೆ ಕರ್ಮಫಲದ ಇಚ್ಛೆ, ಅಭಿಮಾನಗಳು. ಅವನ್ನು ಬಿಟ್ಟವನೇ ಸುಖಿಯು. ಕಾಮದಾಸನಿಗೆ ಉದ್ಧಾರವಿಲ್ಲ. ದೇಹವು ಭೂತಕೃತವಾಗಿ ಬಂದಿದೆ. ಅದು ಇದ್ದರೇನು ? ಹೋದರೇನು ? ಕಾಮಲೋಭದಿಂದ ತುಂಬಿ ತುಳುಕುವ ಪಾಳು ದೇಹದಕಿಂತಲು, ಬಾಧಕವಿಲ್ಲ. ಸರ್ವಭೂತಗಳಲ್ಲಿ, ಮರಣಾದಿ ದೋಷರಹಿತನಾಗಿ ಬಿಂಬರೂಪದಿಂದಿರುವ ಪರಮಾತ್ಮನಲ್ಲಿ ಮನವಿಟ್ಟು, ಸತ್ಯವನ್ನು ನುಡಿಯುತ್ತಾ, ವೇದವನ್ನು ಅರ್ಥರೂಪ ಪರಮಾತ್ಮನ ಪ್ರತಿಪಾದಕವಾಗುವಂತೆ ವಿಚಾರಿಸುತ್ತಾ, ಫಲಾಸಕ್ತಿಯನ್ನು ಬಿಟ್ಟು ವಿಹಿತಕರ್ಮಗಳನ್ನು ಶ್ರೀಹರಿ ಪ್ರೀತಿಗಾಗಿ ಮಾಡುತ್ತಾ, ಮುಕ್ತನಾಗುವೆನು' ಇಂತು ನುಡಿದ ಶುಕಮಹರ್ಷಿಯ ಮಾತು ನನಗೆ ಸರ್ವಥಾ ಮಾನ್ಯವಾಗಿದೆ.

ಇಂತು ಚಿಂತಿಸಿ ಮಂಕಿಯು ಧನಾಶೆಯನ್ನು ಬಿಟ್ಟನು. ಶ್ರೀಹರಿಯಲ್ಲಿ ಮನಸ್ಸಿಟ್ಟನು. ತನ್ನನ್ನು ನಿಂದಿಸಿದವರನ್ನು ಕ್ಷಮಿಸಿದನು. ದ್ವೇಷಿಗಳನ್ನು ಪ್ರೇಮಿಸಿದನು. ವೈರಾಗ್ಯ, ತೃಪ್ತಿ ಶಾಂತಿ, ಸತ್ಯ, ದಮ, ಶಮ, ದಯಾ ಮುಂತಾದ ಸುಗುಣಗಳನ್ನು ಅಳವಡಿಸಿಕೊಂಡನು. ಗ್ರೀಷ್ಮದ ತಾಪಕ್ಕಂಜಿ, ಮಡುವಿನಲ್ಲಿ ಸೇರಿ ಮಹಾನಂದವಾಗಿದ್ದ ಮದ್ದಾನೆಯಂತೆ, ಮಂಕಿಯು ಶ್ರೀಹರಿಚರಣಾರವಿಂದ ಮಧುಪಾನಮತ್ತ ಚಿತ್ತನಾಗಿ, ಕಾಮಪಿಶಾಚವನ್ನು ದೂರ ಓಡಿಸಿ, ಸುಖಿಸಿದನು.

ಧರ್ಮರಾಜ ! ವಿದೇಹ ರಾಜನು, 'ರಾಜ್ಯಕೋಶ ಸೈನ್ಯ ಪುತ್ರ ಕಳತ್ರ ಮಿತ್ರ ಮಂದಿರಾರಾಮಗಳೆಲ್ಲವೂ ಇವೆ; ನನ್ನವಲ್ಲ. ಮಿಥಿಲೆಯೇ ಸುಡುತ್ತಿದೆ. ಆದರೆ ನನ್ನದೇನೂ ಇಲ್ಲ' ಎಂದ ವಚನದ ಮರ್ಮವನ್ನು ತಿಳಿ! ನನ್ನದು ಎಂಬುವುದೇ ದುಃಖ! ನನ್ನದಲ್ಲ ಎಂಬುವುದೇ ಸುಖ!

ಯಯಾತಿಯು 'ಶಮವನ್ನು ಉಪದೇಶಿಸು!' ಎಂದು ಕೇಳಲು ಬೋಧ್ಯನೆಂಬ ಋಷಿಯು ನುಡಿದುದನ್ನು ಹೇಳುವೆನು. ಕೇಳು! 'ರಾಜನ್! ನನಗೆ ಆರು ಜನ ಗುರುಗಳು. ಅವರನ್ನು ನೋಡಿ, ಕಲಿತ ಬುದ್ಧಿಯೇ ನನಗೆ. ಶಮವನ್ನಿತ್ತಿದೆ. ಆಶೆಯಿಂದ ದುಃಖಪಡುತ್ತಿದ್ದ ಪಿಂಗಳೆ, ಆಶೆಯನ್ನು ಬಿಟ್ಟು ಸುಖಿಸುವಳು; ನಿರಾಶೆಯೇ ಸುಖಸಾಧನವೆಂದು ಆಕೆಯಿಂದ ಕಲಿತೆನು. ಕುರರಪಕ್ಷಿಯ ಹತ್ತಿರ ಮಾಂಸವಿದ್ದಾಗ ಪಕ್ಷಿಗಳು ಪೀಡಿಸಿದವು. ಮಾಂಸವನ್ನು ಬಿಟ್ಟು ಕೆಡಹಲು ಪಕ್ಷಿಗಳು ಕುರರವನ್ನು ಬಿಟ್ಟು ಮಾಂಸದ ಕಡೆಗೆ ಸಾಗಿದವು. ಧನವಿದ್ದಾಗ ಬಂಧು ಪೀಡೆ ಎಂದು ತಿಳಿದು ಧನಾರ್ಜನವನ್ನು ಮಾಡದಿರುವೆನು. ಗೆದ್ದಲು ಮಾಡಿದ ಹುತ್ತಿನಲ್ಲಿ ಹಾವು ಸೇರಿ ಸುಖವಿತ್ತು. ಗೃಹಾರಂಭವನ್ನೇ ಮಾಡಬಾರದೆಂದು ತಿಳಿದು, ಏಕಾಕಿಯಾಗಿರುವೆನು. ಇಷುಕಾರನು ತಾನು ಮಾಡಿದ ಬಾಣಗಳ ಲಕ್ಷ್ಯವೇಧನಶಕ್ತಿಯನ್ನು ಪರೀಕ್ಷಿಸುತ್ತಾ ಹತ್ತಿರ ಹಾದು ಹೋದ ರಾಜನನ್ನೂ, ಅವನ ವೇಶ್ಯಾದಿ ಪರಿವಾರವನ್ನೂ ನೋಡಲಿಲ್ಲ. ಅದನ್ನು ಕಂಡು, ಏಕಾಗ್ರಚಿತ್ತನಾಗಿ ವಿಷಯಗಳಿಂದ ಸೆಳೆದ ಮನವನ್ನು ಶ್ರೀಹರಿಯಲ್ಲಿಡಲು ಪ್ರಯತ್ನಿಸಿ ಸಫಲವಾಗಿರುವೆನು. ಮನೆಗೆ ಬಂದ

ಅಸಹ್ಯವೆನಿಸಿತು. ಅವಳು ಎರಡೆರಡು ಕಂಕಣಗಳನ್ನು ಉಳಿಸಿ, ಮಿಕ್ಕವನ್ನು ಒಡೆದು ಹಾಕಿದಳು. ಅವೂ ಶಬ್ದಿಸಲು ಒಂದೊಂದನ್ನು ಉಳಿಸಿದಳು. ಆಗ ಶಬ್ದವಾಗಲಿಲ್ಲ. ಅದನ್ನು ಕಂಡು ನಾನು, 'ಬಹು ಜನರಿದ್ದಲ್ಲಿ ಜಗಳವಿದೆ; ಇಬ್ಬರಿದ್ದಲ್ಲಿ ಲೋಕವಾರ್ತೆ ಇದೆ!' ಎಂದು ಚಿಂತಿಸಿ, ಏಕಾಕಿಯಾಗಿ ಸಂಚರಿಸುತ್ತಿರುವೆನು' ಬೋಧ್ಯನ ವಚನದಿಂದ ಯಯಾತಿಯು ಕಾಮದೂರನಾಗಿ ತರಿಸಿದನು.

ಹಿಂದೆ ಪ್ರಹ್ಲಾದನು ಅಜಗರ ವ್ರತನಿಷ್ಠನಾದ ಮುನಿಯನ್ನು ಕಂಡು 'ಮಹಾನುಭಾವ! ಶಕ್ತನು, ದಾಂತನು, ಮಧುರವಚನನು, ಮೇಧಾವಿಯು ಆದರೂ ಬಾಲನಂತೆ ತೋರುತ್ತಿರುವೆ! ಧರ್ಮಾರ್ಥಕಾಮಗಳ ಹೊಳೆಯಲ್ಲಿ ಹೊಡೆದುಕೊಂಡು ಹೋಗುವ ಪ್ರಜರಂತೆ ಅಲ್ಲದೆ, ನಿಶ್ಚಿಂತನಾಗಿ ಏನನ್ನೂ ಬೇಡದೆ, ನಿರ್ವಿಕಾರನಾಗಿರುವೆ! ಇಂತಹ ಪರಿಶಾಂತ ಸ್ಥಿತಿಯು ನಿನಗೆಂತು ಲಭಿಸಿತು?' ಎಂದು ಕೇಳಿದ ಪ್ರಹ್ಲಾದನಿಗೆ, ಅವಧೂತನಿಂತೆಂದನು:

'ರಾಜನ್! ನೀನು ಸಂಭಾಷಣೀಯನಿರುವೆ! ಶ್ರೀಲಕ್ಷ್ಮೀನೃಸಿಂಹನ ಪರಮಾನುಗ್ರಹ ಪಾತ್ರನಿರುವೆ! ಕೇಳು! ಭೂತಗಳು ಹುಟ್ಟಿ ಸಾಯುತ್ತಿರುವವು. ಜನನ ಮರಣಗಳ ಮಧ್ಯದಲ್ಲಿ ಬರುವ ಹಸಿವೆ, ನೀರಡಿಕೆ, ರಾಗದ್ವೇಷ, ಕಾಮಕ್ರೋಧ, ಶೀತೋಷ್ಣ, ವಾತವರ್ಷ, ಕಲಹನಿಂದೆಗಳನ್ನು ಕಂಡು ಅವುಗಳಿಗೆ ಸಿಕ್ಕು ನರಳುವ ಜನರಂತೆ ಇರಬಾರದೆಂದು ಮನಗಂಡೆನು. ದೇವನಿತ್ತುದರಿಂದ ತೃಪ್ತನಾಗಿರುವೆನು. ಪ್ರಿಯವಿಯೋಗ, ಅಪ್ರಿಯ ಸಂಯೋಗಗಳಿಂದ ಬೆಂದ ಮನವನ್ನು ಶ್ರೀಹರಿಚರಣಾರವಿಂದ ಸ್ಮರಣಮಂದಾಕಿನಿಯಲ್ಲಿ ತಣಿಸಿ, ಆನಂದದಿಂದಿರುವೆನು. ಇರುವೆ ಮೊದಲ್ಗೊಂಡು ಆನೆಯವರೆಗಿನ ಸಕಲ ಯೋನಿಗಳಲ್ಲಿ ಜನಿಸಿ ಬಂದು, ಮನುಜ ಶರೀರದಲ್ಲಿಯೂ ನಿಂದು, ಎಲ್ಲ ಕಡೆಗೂ ದುಃಖವೇ ತಾಂಡವವಾಡುವುದೆಂದು ಮನಗಂಡೆನು. ದೇವದಾನವ ಮಾನವರಿಗೂ ಸಾವಿದೆ ಎಂದು ತಿಳಿದು ಎಚ್ಚತ್ತೆನು. ಏನು ಸಿಕ್ಕರೆ, ಎಷ್ಟು ಸಿಕ್ಕರೆ, ಅಷ್ಟೇ ಅದನ್ನೇ ತಂದು ಜೀವಿಸಿರುವೆನು. ಕಣಪಿಣಾಕ್ಯ ಸ್ಥಾಲೀಪುರೀಷಾಧಿಗಳನ್ನೂ ಮೃಷ್ಟಾನ್ನದಂತೆ ಸ್ವೀಕರಿಸಿದೆನು. ಪ್ರಾಸಾದ ಶಯ್ಯಾತಲದಿ ಮಲಗಿದಂತೆ, ತಿಪ್ಪೆಯ ಮೇಲೂ ಮಲಗಿದೆನು. ದುಕೂಲಗಳನ್ನಂತೆ ಚೀರಗಳನ್ನೂ ಧರಿಸಿದೆನು. ಧರ್ಮವನ್ನು ಬಿಡಲಿಲ್ಲ; ಅಧರ್ಮವನ್ನು ಮಾಡಲಿಲ್ಲ. ಏನು ಬಂದರೂ ಮಾನಸಿಕ ಶಾಂತಿ ನಿರ್ವಿಕಾರತೆಗಳನ್ನು ಕಳೆದು ಕೊಳ್ಳಲಿಲ್ಲ.

ಅಜಗರವ್ರತವನ್ನು ಅವಲಂಬಿಸಿ, ಸ್ಥಿರನಾಗಿರುವೆನು. ಅಭಿಮಾನವನ್ನು ನೀಗಿದೆನು. ದುಷ್ಟಸಂಗವನ್ನು ದೂರಮಾಡಿ, ಸುಜನರನ್ನು ಸೇರಿದೆನು. ದೇಶಕಾಲಗಳಿಗೆ ತಕ್ಕಂತೆ ಯುಕ್ತಾಹಾರಪಾನವಿಹಾರನಾದೆನು. ತೃಷ್ಣೆಯನ್ನು ತಿರಸ್ಕರಿಸಿ, ಅರ್ಥವನ್ನು ಅನರ್ಥವೆಂದು ಸರಿಸಿ, ವಿಮಲತತ್ವಜ್ಞಾನವನ್ನುವರಿಸಿ, ಮನವನ್ನು ಮಾಧವಪಾದ ಪದ್ಮಯುಗದಲ್ಲಿಟ್ಟು, ಮುಕ್ತಪ್ರಾಯನಾಗಿರುವೆನು.'

ಧರ್ಮರಾಜನು 'ತಾತ! ಮನುಜಗೆ ಆಧಾರವಾಗಿ ನಿಂತು ಸಲಹುವರು ಯಾರು? ಬಂಧುಗಳೇ? ಕರ್ಮವೇ? ಧನವೇ? ಬುದ್ಧಿಬಲವೇ?' ಎಂದು ಕೇಳಿದನು. ಧರ್ಮರಾಜನನ್ನು ಅಭಿನಂದಿಸಿ, ಭೀಷ್ಮನಿಂತೆಂದನು: 'ಪ್ರಜ್ಞಾಬಲವೇ ನಿಜವಾದ ಬಲವು. ಬುದ್ಧಿ ಬಲದಿಂದ ಜನರು ಬೇಕಾದುದೆಲ್ಲವನ್ನೂ ಸಂಪಾದಿಸಬಲ್ಲರು. ಹಿಂದೆ ಕಾಶ್ಯಪನೆಂಬ ಮುನಿಯು, ವೈಶ್ಯನೋರ್ವನ ರಥಕ್ಕೆ ಸಿಕ್ಕು, ಕುಂಟನಾದನು. ಅವನು ವೇದನಾರ್ತವಾಗಿ ಸಾಯಲೆಣಿಸಿ, 'ಹಾ! ಇನ್ನೇನು ಗತಿ? ನಾನು ಸಾಯಲಿರುವೆನು. ಆಗಲಿ! ಧನರಹಿತನಾದ ನನಗೆ ಬದುಕಿ ಏನು ಪ್ರಯೋಜನ?' ಎಂದು ರೋದಿಸುತ್ತಿದ್ದನು. ಆಗ ಇಂದ್ರನು ಸೃಗಾಲರೂಪದಿಂದ ಅವನನ್ನು ಕಂಡು, ಇಂತು ಸಂತೈಸಿದನು:

'ವಿಪ್ರೋತ್ತಮ! ಮನುಜಯೋನಿಯನ್ನು ಎಲ್ಲರೂ ಬಯಸುವರು. ದೇವತೆಗಳು ಕೂಡ ಮನುಜ ಜನ್ಮವನ್ನು ಪುಣ್ಯ ಸಾಧನವೆಂದು ಅಭಿನಂದಿಸುವರು. ಮನುಜರಲ್ಲಿ ಬ್ರಾಹ್ಮಣ ಜನ್ಮವು ಬಲು ದುರ್ಲಭವಾಗಿದೆ. ಅದರಲ್ಲಿ ಶ್ರೋತ್ರಿಯನಾಗಿರುವೆ! ದಾರಿದ್ರ್ಯ ಬಂತೆಂದು ಸಾಯಲು ಉಚಿತವಲ್ಲ. ಅಭಿಮಾನವೇ ಸರ್ವಾನರ್ಥ ಕಾರಣವಾಗಿದೆ. ಅದನ್ನು ಬಿಡು! ಇತರ ಜೀವರಿಗಿಲ್ಲದ ಸೌಲಭ್ಯವು ಮನುಜರಿಗಿದೆ. ಕೈಗಳಾರಿಗಿವೆ ಮನುಜರಿಗೆ ಬಿಟ್ಟು? ನಿನಗೆ ಧನಾಶೆಯಂತೆ, ನಮಗೆ ಕೈಗಳಿರಲೆಂಬಾಶೆ ಪ್ರಬಲವಾಗಿದೆ. ಹತ್ತು ಬೆರಳಿನಿಂದ ಬೇಕಾದುದನ್ನು ಹಿಡಿದು, ಎಣಿಸಿ, ತೆಗೆದು, ಬೇರ್ಪಡಿಸಿ, ಮುಟ್ಟಿ ತಿಂದು, ಕುಡಿದು, ಮುಳ್ಳುಕಿತ್ತಿ, ಕತ್ತಿಹಿಡಿದು, ಕಡಿದಾಡಿ, ದಾನವಿತ್ತು, ಹೋಮಮಾಡಿ, ಧನ್ಯರಾಗುವ ಮನುಜರ ಭಾಗ್ಯವಾರಿಗೂ ಇಲ್ಲ. ಕೈಯಿಲ್ಲದ ಪಶ್ವಾದಿಗಳು ಕಂಟಕವನ್ನೆಂತು ತೆಗೆವವು? ಮಶಕ ಕೀಟಾದಿಗಳು ಕಚ್ಚಿ ಪೀಡಿಸಲು ಎಂತು ನಿವಾರಿಸುವವು?

ಪಶ್ವಾದಿಗಳಿಗೆ ವರ್ಷ, ಹಿಮ, ಆತಪಾದಿಗಳಿಂದ ರಕ್ಷಣೆ ಏನಿದೆ? ಮನುಜರಿಗೆ ಅನ್ನವಿದೆ, ವಸ್ತ್ರ ಕಂಬಳಗಳಿವೆ, ಮನೆಗಳಿವೆ, ಛತ್ರಚಾಮರ ವ್ಯಜನಗಳಿವೆ. ಗಂಧ ಪುಷ್ಪಗಳಿವೆ. ಭಕ್ಷ್ಯಭೋಜ್ಯಗಳಿವೆ. ಎಲ್ಲವೂ ಇದ್ದು, ಇನ್ನೂ ಸಾಲದೆಂದು ಅಳುತ್ತಿರುವ ಮನುಜರಕಿಂತಲು, ಏನೂ ಇಲ್ಲದೆ ನಿಶ್ಚಿಂತರಾಗಿರುವ ಸೃಗಾಲಾದಿಗಳು ಮೇಲಲ್ಲವೇ?

ಭಾರ ಹೊರೆಯುವ ಎತ್ತಿದೆ ; ದೂರ ಹೋಗುವ ಕುದುರೆ ಇದೆ. ಮಾಂಸಾದಿಗಳನ್ನೀವ ಮೇಕೆ ಕುರಿಗಳಿವೆ. ಎಲ್ಲವೂ ಮನುಜನಿಗಾಗಿ ಇವೆ. ಪಶುಗಳಿಗೆ ನನ್ನದು ಎನ್ನಲು ಏನೂ ಇಲ್ಲ. ಆದರೂ ಮನುಜನು ಇಷ್ಟನಿತ್ತ ದೇವನನ್ನು ಮರೆತು, ಕೃತಘ್ನನಾಗುವನು. ಮಾತಿಲ್ಲ; ಬಲವಿಲ್ಲ; ಹೇಳಿಕೊಳ್ಳುವ ಅವಕಾಶವಿಲ್ಲ. ಹೇಳಿಕೊಂಡರೂ ಕೇಳುವವರಿಲ್ಲ ; ಇಂತಹ ದುಃಖವಿದೆ ಮನುಜೇತರ ಪ್ರಾಣಿಗಳಿಗೆ. ಆದರೂ ಮನುಜನಿಗೆ ತೃಪ್ತಿ ಇಲ್ಲ; ಸಾಯಬೇಕೆನ್ನುವ ನಿನ್ನನ್ನು ಕಂಡು, ನಿನಗೇನಾಗಿದೆ ಸಾಯುವಷ್ಟು ಕಷ್ಟ ಎಂದು ಆಶ್ಚರ್ಯಪಡುತ್ತಿರುವೆನು. ಏನೂ ಸುಖಗಳಿಲ್ಲದಿದ್ದರೂ ಪಶುಗಳು ಸಾಯಲೆಣಿಸುವದಿಲ್ಲ. ಯಾವ ಪಾಪದಿಂದಲೋ ನರಿ ಜನ್ಮವು ಬಂದಿದೆ. ಇದನ್ನು ಕೊಂದು, ಆತ್ಮ ಹತ್ಯೆಗೈದರೆ, ಇನ್ನಾವ ನೀಚ ಯೋನಿಯಲ್ಲಿ ಹುಟ್ಟ

ಬೇಕಾಗುವುದೋ ಎಂದು ಹೆದರಿ ನಾನು ಅಸಹ್ಯವು, ಅಲ್ಪಸುಖವು, ವಚನ ಬುದ್ಧಿವಿಹೀನವು ಆದ ಸೃಗಾಲ ಶರೀರದಲ್ಲೇ ನಿಂತಿರುವೆನು.

ದೇವತೆಗಳು ಜಾತಿಯಿಂದಲೇ ಸುಖಿಗಳು; ಪಶುಪಕ್ಷಿ ಕ್ರಿಮಿಕೀಟಾದಿಗಳು ಜಾತಿಯಿಂದಲೇ ದುಃಖಿಗಳು. ಯಾರಿಗೂ ಯಾವಾಗಲೂ ಸುಖವಿರಲಾರದು; ದುಃಖವೂ ನೆಲೆಮಾಡಿ ನಿಂತಿರಲಾರದು. ಸುಖವೆಷ್ಟು ಬಂದರೂ ತೃಪ್ತಿ ಬರದು; ನೀರಿನಿಂದ ಪಿಪಾಸೆ ಹೋಗದು, ಅಡಗಿದ್ದು ಮತ್ತೆ ಕಾಣುವುದು. ಆದುದರಿಂದ ದುರಾಶೆಯನ್ನು ಬಿಡು! ಮನವನ್ನು ಶ್ರೀಹರಿಯಲ್ಲಿಡು! ಸುಖದುಃಖಗಳು ಹೊರಗಿನಿಂದ ಬರುವವಲ್ಲ. ಮನಸ್ಸಿನಲ್ಲಿ ಅವುಗಳ ಉತ್ಸೇಕ ಉದ್ವೇಗಗಳಾಗದಂತೆ, ನಿರ್ವಿಕಾರನಾಗು; ಇಂದ್ರಿಯಗಳನ್ನು ಜಯಿಸು! ಎರಡನೇ ತಲೆ ಇಲ್ಲ; ಮೂರನೇ ಕೈಯೂ ಇಲ್ಲ. ಇಲ್ಲದುದು ಬಿದ್ದುಹೋಯಿತೆಂದು ರೋದಿಸುವವನಾಗಬೇಡ! ಇಲ್ಲದುದು ಇಲ್ಲವೇ ಇಲ್ಲ. ಹೋದುದು ಬರುವದಿಲ್ಲ. ನಿನ್ನದಾದುದು ಮತ್ತಾರಿಗೂ ಹೋಗದು. ತಿಳಿ! ಲಟ್ವಪಕ್ಷಿ ಮಾಂಸದ ರುಚಿ ಬಲು ಚಂದ! ವಾರುಣೀ ರಸಪಾನ ಬಲು ಸೊಗಸು! ಅದು ನಿನಗೆ ಬ್ರಾಹ್ಮಣನಾದುದರಿಂದ ಗೊತ್ತೇ ಇಲ್ಲ. ತಿಳಿಯದ ವಸ್ತು ಹೋಯಿತೆಂದು ಯಾರೂ ಅಳುವದಿಲ್ಲ. ಆದುದರಿಂದ ವಿಷಯಗಳಲ್ಲಿ ಪರದಾಡುವ ಮನವನ್ನು ನಿಗ್ರಹಿಸಿ, ಮಾಧವನನ್ನು ಸ್ಮರಿಸು!

ಕರ್ಮಫಲವು ದುರ್ನಿವಾರವಾಗಿದೆ. ದುಷ್ಕರ್ಮದ ಫಲವಾಗಿ ದರಿದ್ರನಾದರೆ ಸಾಯಲೆಣಿಸಬಹುದೇ? ಕೇಳು! ಕುಂಟರಿರುವರು, ಮೂಕರಿರುವರು, ಪಾರ್ಶ್ವವಾಯುಪೀಡಿತರಿರುವರು, ಕುಷ್ಠಿಗಳಿರುವರು, ರೋಗಿಗಳಿರುವರು; ಅವರಾರೂ ಎಂದೂ ಸಾಯಬೇಕೆಂದು ಬಯಸುವುದಿಲ್ಲ. ನಿನ್ನ ದೇಹವು ನಿರೋಗವಾಗಿ, ಸಾಂಗವಾಗಿದೆ: ಅಂತಹ ದೇಹವನ್ನಿತ್ತ ದೇವನಿಗೆ, ನಮ್ಮ(ಪಶು)ಗಳಕಿಂತಲೂ ಹೆಚ್ಚು ಕೃತಜ್ಞನಾಗಿರು! ನಾಸ್ತಿಕನಾಗಬೇಡ! ಧರ್ಮವನ್ನನುಸರಿಸಿ ನಡೆ! ವೇದವನ್ನೋದು! ಪಂಚಯಜ್ಞಗಳನ್ನು ಮಾಡು! ಸತ್ಯದಮ ತಪೋದಾನಗಳನ್ನು ನಡೆಸು!

ನಾನು ಹಿಂದೆ ಪಂಡಿತವಿಪ್ರನಾಗಿದ್ದೆನು. ವೇದಗಳನ್ನು ನಿಂದಿಸಿ, ಹೇತುವಾದರತನಾದೆನು. ನಿರರ್ಥಕವಾದ ಕುತರ್ಕವಿದ್ಯೆಯನ್ನು ಅವಲಂಬಿಸಿ, ವಾದಮಾಡಿ ವಿದ್ವಜ್ಜನರನ್ನು ಅವಮಾನಿಸಿದೆನು. ಅದು ಕಾರಣವಾಗಿ ನರಿಯಾದೆನು. ನಾಸ್ತಿಕರು, ವಂಚಕರು, ಮೂರ್ಖರು, ಶಠರು, ಪಂಡಿತಮಾನಿಗಳು ಮುಂತಾದವರಿಗೂ ಸೃಗಾಲಾದಿ ದುರ್ಯೋನಿಯು ಬರುವುದು, ಕಾಶ್ಯಪ! ಏಳು! ಕುಶಲನಿರುವೆ. ವಿಹಿತ ಕರ್ಮವನ್ನು ಮಾಡು! ತಿಳಿಯಬೇಕಾದುದನ್ನು (ವೇದ, ಬ್ರಹ್ಮ) ತಿಳಿ! ಬಿಡಬೇಕಾದುದುದನ್ನು ಬಿಡು!'

ಆಗ ಕಾಶ್ಯಪನು ತಿಳಿದು, 'ಮಹಾತ್ಮ! ನೀನು ಬರಿಯ ನರಿಯಲ್ಲ. ನನ್ನ ಅಜ್ಞಾನವನ್ನು ಕಳೆದು ಉದ್ಧರಿಸಿದೆ!' ವಂದಿಸಿದನು. ಇಂದ್ರನು ಅವನಿಗೆ ತನ್ನ ರೂಪವನ್ನು ತೋರಿ, ಅನುಗ್ರಹಿಸಿದನು. ಕಶ್ಯಪನು ದೇವೇಶನನ್ನು ಪೂಜಿಸಿ, ತನ್ನ ಮನೆ ಸೇರಿದನು.

ಧರ್ಮರಾಜ! ಕರ್ಮಕ್ಕೆ ತಕ್ಕಫಲವು ಬರುವುದು. ದಾರಿದ್ರ್ಯದಿಂದ ಪಾಪವನ್ನು ಮಾಡಿ, ಮತ್ತೆ ದರಿದ್ರರಾಗುವರು ದುರ್ಜನರು. ಆದರೆ ಸುಜನರು ದಾರಿದ್ರ್ಯದಿಂದ ತಪವನ್ನು ಮಾಡಿ, ಮುಂದೆ ಧನಜ್ಞಾನವಂತರಾಗುವರು. ನಾಸ್ತಿಕರು ವ್ಯಾಘ್ರ, ಕುಂಜರ ದುರ್ಗಗಳಲ್ಲಿಯು, ಸರ್ಪಚೋರಗಿರಿ ಕಂದರಗಳಲ್ಲಿಯೂ ಕೈಕಟ್ಟಿಬಿಡಲ್ಪಡುವರು. ಅವರಿಗೆ ಉತ್ಥಾನವೇ ಇಲ್ಲ. ದೇವತಾತಿಥಿ ಪೂಜಕರು ಸುಕ್ಷೇಮವನ್ನು ಹೊಂದುವರು. ಇವರಿಗೆ ನಾಶವಿಲ್ಲ. ಧಾನ್ಯಗಳಲ್ಲಿ ಪುಲಾಕ (ಹಗೆವಿನಲ್ಲಿಟ್ಟ ಧಾನ್ಯ)ದಂತೆ ನಾಸ್ತಿಕರು; ಪಕ್ಷಿಗಳಲ್ಲಿ ಸೊಳ್ಳೆಗಳಂತೆ ದಾಂಭಿಕರು. ಅವರೀರ್ವರು ತಮ್ಮ ದುಷ್ಕರ್ಮ ಫಲಕ್ಕೆ ಸಿಕ್ಕು ಅನಂತಕಾಲ ದುಃಖಿಸುವರು. ಕರ್ಮವು ಕರ್ತೃಜೀವನ ಹಿಂದೆ, ಎಡೆಬಿಡದೆ ಬರುತ್ತಾ, ಈಶ್ವರೇಚ್ಛೆಯಿಂದ ಕಾಲ ಸಂಯೋಗವನ್ನು ಹೊಂದಿ, ಫಲವನ್ನು ಕೊಡುವುದು. ಬಾಲ್ಯಯೌವನ ವಾರ್ಧಕ್ಯಗಳಲ್ಲಿ ಮಾಡಿದ ಕರ್ಮದ ಫಲವನ್ನು ಆಯಾ ಅವಸ್ಥೆಯಲ್ಲಿ ಉಣ್ಣಬೇಕಾಗುವುದು. ಆದುದರಿಂದ ಜ್ಞಾನವನ್ನು ಆರ್ಜಿಸಿ, ಪುಣವನ್ನು ಮಾಡಬೇಕು. ಪರರನ್ನು ನಿಂದಿಸುವುದಕ್ಕಿಂತಲೂ ಮೊದಲು ತನ್ನ ದೋಷವನ್ನು ತಿಳಿಯಬೇಕು. ಪರಾಪರಾಧವನ್ನು ಪೇಳುವ ಮೊದಲು, ತಾನು ತಪ್ಪು ತಿದ್ದಿಕೊಳ್ಳಬೇಕು. ಆಕಾಶದಲ್ಲಿ ಹಾರುವ ಪಕ್ಷಿಗಳ ಕಾಲು ಕಾಣದು; ಜಲದಲ್ಲಿ ಸಾಗುವ ಮೀನಿನ ಕಾಲು ಕಾಣದು; ಅಂತೆಯೇ ಜ್ಞಾನಿಯ ಪರಲೋಕಗಮನದ ಮಹಿಮೆಯೂ ಕಾಣದು.'

ಧರ್ಮರಾಜನು, 'ತಾತ! ಈ ಜಗವನ್ನು ಸೃಜಿಸಿದರಾರು? ಜಂಗಮಸ್ಥಾವರಾತ್ಮಕವಾದ ಜಗವು ಪ್ರಳಯದಲ್ಲಿ ಎಲ್ಲಿ, ಎಂತು ಯಾರ ಆಧಾರದಿಂದ ಇರುವುದು? ಸೃಷ್ಟವಾದ ಜಗವು ಮತ್ತೆ ಯಾರಲ್ಲಿ ಲಯವನ್ನು ಹೊಂದುವದು? ಜೀವನೆಂತಹನು? ಮುಕ್ತಜೀವರಿಗೆ ಆಧಾರನಾರು?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ಧರ್ಮಜ! ಕೇಳು! ಹಿಂದೆ ಭಾರದ್ವಾಜನು ಇವೇ ಪ್ರಶ್ನೆಗಳನ್ನು ಕೇಳಲು, (ವಾರುಣಿ) ಭೃಗು ಮಹರ್ಷಿಯು ನುಡಿದಿದ್ದನ್ನು ನಿನಗೆ ಹೇಳುವೆನು. 'ಸರ್ವಜ್ಞನು, ಸರ್ವಕರ್ತನು ಆದ ಶ್ರೀಹರಿಯು ಇದನ್ನು ಸೃಜಿಸಿದನು. ಜಗವು ಪ್ರಳಯದಲ್ಲಿ ಅವನ ಉದರದಲ್ಲಿತ್ತು. ಸೃಷ್ಟಿಕಾಲದಲ್ಲಿ ಶ್ರೀಹರಿಯು ಶ್ರೀದೇವಿಯ ಪ್ರಕೃತಿಯಿಂದ ಕೂಡಿ ಬ್ರಹ್ಮಾಂಡವನ್ನು ಸೃಜಿಸಿದನು. ಅದರಲ್ಲಿ ಜಂಗಮಸ್ಥಾವರ ಜೀವರು ಬಂದು, ಸ್ವಯೋಗ್ಯ ಶರೀರಗಳನ್ನು ಹೊಂದಿದರು. ಶ್ರೀಶನು ಲಕ್ಷ್ಮಿಬ್ರಹ್ಮ ರುದ್ರಾದಿ ಸರ್ವಜೀವರಿಂದಲು, ತ್ರಿಗುಣಾತ್ಮಕವಾದ ಜಡದಿಂದಲು ಭಿನ್ನನಾಗಿರುವನು; ಮತ್ತು ಪ್ರಭುವು, ಅಂತರ್ಯಾಮಿಯೂ ಆಗಿರುವನು. ಎಲ್ಲ ಜಗವೂ ಪ್ರಳಯವಾಗಲು, ಶ್ರೀಹರಿಯಲ್ಲೇ ಲಯವನ್ನು ಹೊಂದುವುದು. ಜೀವನು ಶ್ರೀಹರಿ ಭಿನ್ನನು. ಅಸ್ವತಂತ್ರನು. ಸ್ವಭಾವತಃ ನಿತ್ಯನಾದರೂ ಜೀವನಿಗೆ ದೇಹದಿಂದ ಜನನ ಮರಣಗಳಿವೆ. ಹಸಿವೆ, ನೀರಡಿಕೆ, ರೋಗ, ಮುಪ್ಪು, ಮರಣಗಳಿವೆ. ರಾಗದ್ವೇಷಗಳಿವೆ; ಎಲ್ಲವೂ ದೇಹಾಭಿಮಾನದ ಮೂಲಕವೇ ಎಂದು ತಿಳಿ! ಶ್ರೀಹರಿಗೆ ಯಾವ ದೋಷವೂ ಇಲ್ಲ; ಎಂದಿಗೂ ಇಲ್ಲ. ಮುಕ್ತರು ಶ್ರೀಹರಿಪ್ರಸಾದದಿಂದ ಮೋಕ್ಷವನ್ನು ಹೊಂದಿ ಆಗ ನಿರ್ದೋಷರಾಗುವರು;

ಸ್ವರೂಪಾನಂದಾವಿರ್ಭಾವವನ್ನು ಹೊಂದಿದ ಮುಕ್ತರು ಸ್ವತಂತ್ರರಲ್ಲ, ಶ್ರೀಹರಿಯ ಅಧೀನರಾಗಿರುವರು.

ಶ್ರೀಶನು ಪದ್ಮದಲ್ಲಿ ಬ್ರಹ್ಮನನ್ನು ಸೃಜಿಸಿದನು. ಆತನು ಮಹತ್ತತ್ವಕ್ಕೆ ಅಭಿಮಾನಿ ಎನಿಸಿದನು. ಮಹತ್ತತ್ವದಿಂದ ಅಂಹಕಾರತತ್ವವು ಉದಿಸಿತು. ಅದು ಮೂರು ವಿಧವಾಯಿತು. ವೈಕೃತಾಹಂಕಾರದಿಂದ ದೇವತಾ ದೇಹಗಳು, ಮನಸ್ತತ್ವಗಳು ಉದಿಸಿದವು. ರಾಜಸಾಹಂಕಾರದಿಂದ ಇಂದ್ರಿಯಗಳು ಪುಟ್ಟಿದವು; ತಾಮಸಾಹಂಕಾರದಿಂದ ಶಬ್ದಗುಣವಾದ ಆಕಾಶವು ಬಂದಿತು. ಅದರಿಂದ ಶಬ್ದಸ್ಪರ್ಶಯುತ ವಾಯುತತ್ತ್ವವು ಬಂತು; ಅದರಿಂದ ರೂಪಸ್ಪರ್ಶಯುತವಾದ ಅಗ್ನಿತತ್ವವೂ, ಅದರಿಂದ ಶಬ್ದ, ಸ್ಪರ್ಶ, ರೂಪ, ರಸಯುತವಾದ ಜಲತತ್ವವೂ, ಅದರಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಯುತವಾದ ಭೂತತ್ವವೂ ಜನಿಸಿದವು.

ಶ್ರೀಲಕ್ಷ್ಮೀಶನ ದೆಶೆಯಿಂದ ಸೃಷ್ಟನಾದ ಮುಖ್ಯಪ್ರಾಣನು ಸರ್ವಪ್ರಾಣಚೇಷ್ಟಕನಾಗಿರುವನು. ಅವನನ್ನೇ ಸೂತ್ರನೆಂಬರು. ಆ ಭಾರತೀಪತಿಯ ಪ್ರೇರಣೆಯಿಂದಲೇ ಸರ್ವವ್ಯಾಪಾರವೂ ನಡೆಯುವುದು. ಅವನು ತಾನು ಸಕಲಜೀವೋತ್ತಮನೆನಿಸಿ, ಶ್ರೀಹರಿಗೆ ಅಧೀನನಾಗಿರುವನು. ಮುಂದಿನ ಸೃಷ್ಟಿಯಲ್ಲಿ ಬ್ರಹ್ಮಪದವಿಯನ್ನು ಪೊಂದಿ, ಈಗಿನ ಬ್ರಹ್ಮನಂತೆ ಸೇವೆಗೈದು, ಮುಕ್ತನಾಗುವನು.

ಜೀವರು ಎಲ್ಲರೂ ವಿಷಯ ಸ್ವೀಕರಣಕ್ಕಾಗಿ ಐದು ಜ್ಞಾನೇಂದ್ರಿಯಗಳನ್ನೂ, ಐದು ಕರ್ಮೇಂದ್ರಿಯಗಳನ್ನೂ, ಒಂದು ಮನಸ್ಸನ್ನೂ ಪೊಂದಿರುವರು. ವೃಕ್ಷಗಳು ಕೂಡ ಒಣಗುತ್ತಿವೆ. ಮತ್ತೆ ಚಿಗಿಯುತ್ತಿವೆ; ಪುಷ್ಪಗಳನ್ನು ಫಲಗಳನ್ನು ಬಿಡುತ್ತಿವೆ. ಗಾಳಿಗೆ ಆಡುತ್ತಿವೆ; ಮಳೆಗೆ ಬೆಳೆಯುತ್ತಿವೆ. ಕಡಿದರೆ ರಸವನ್ನು ಕಾರಿ ಅಳುತ್ತಿವೆ. ನೀರು ಕುಡಿಯುತ್ತಿವೆ. ರೋಗದಿಂದ ಸಾಯುತ್ತಿವೆ. ಆದುದರಿಂದ ವೃಕ್ಷ ಜೀವರಿಗೂ ಇಂದ್ರಿಯ ಮನೋ ವ್ಯಾಪಾರಗಳಿವೆ. ಚೇಷ್ಟೆಯನ್ನು ಮಾಡಿಸುವ ಪ್ರಾಣಾಪಾನಾದಿ ಪಂಚಪ್ರಾಣರ ವ್ಯಾಪಾರವು ಎಲ್ಲ ಜೀವರಲ್ಲಿಯೂ ನಡೆಯುತ್ತಿದೆ.

ಪಾರ್ಥಿವ (ಭೂಸಂಬಂಧಿ) ಗಂಧವು – ಮಧುರ, ಕಟು, ನಿರ್ಹಾರಿ, ಸಂಹತ, ಸ್ನಿಗ್ಧ, ರೂಕ್ಷ, ವಿಶದ, ಇಷ್ಟ, ಅನಿಷ್ಟ ಎಂದು ಒಂಬತ್ತು ವಿಧವಾಗಿದೆ. ಜಲ ಗುಣವಾಗದೆ ರಸವು – ಮಧುರ ಲವಣ, ತಿಕ್ತ, ಕಷಾಯ, ಆಮ್ಲ, ಕಟು ಎಂಬ ಆರು ವಿಧವಾಗಿದೆ. ಅಗ್ನಿ ಗುಣವಾದ ರೂಪವು ಹ್ರಸ್ವ, ದೀರ್ಘ, ಸ್ಥೂಲ, ಸೂಕ್ಷ್ಮ, ವಕ್ರ, ಋಜು, ಅಣು, ವೃತ್ತ, ಚತುರಸ್ರ, ಶುಕ್ಲ, ಕೃಷ್ಣ, ರಕ್ತ, ನೀಲ, ಪೀತ, ಅರುಣ, ದಾರುಣ, ಕಠಿನ, ಶ್ಲಕ್ಷ್ಣ ಇತ್ಯಾದಿ ೧೬, ೧೮ ವಿಧವಾಗಿದೆ. ವಾಯುಗುಣವಾದ ಸ್ಪರ್ಶವು – ಉಷ್ಣ, ಶೀತ, ಸುಖ, ದುಃಖ, ಸ್ನಿಗ್ಧ, ವಿಶದ, ಖರ, ಮೃದು ಲಘು, ಗುರು, ಶ್ಲಕ್ಷ್ಣ ಇತ್ಯಾದಿ ಹನ್ನೊಂದು ವಿಧವಾಗಿದೆ. ಆಕಾಶ ಗುಣವಾದ, ಶಬ್ದವು ಷಡ್ಜ, ಋಷಭ, ಗಾಂಧಾರ, ಮಧ್ಯಮ, ಧೈವತ, ಪಂಚಮ, ನಿಷಾದ ಎಂದು ಸಪ್ತವಿಧವಾಗಿದೆ' ಎಂದು ನಿರೂಪಿಸಿದನು.

ಭರದ್ವಾಜನು, 'ಸ್ವಾಮೀ! ವಿಜ್ಞಾನ ಪ್ರಾಣರು ಈ ಶರೀರದಲ್ಲಿ ಎಂತು ಪ್ರವರ್ತಕರಾಗಿರುವರು!' ಎಂದು ಕೇಳಿದನು. ಭೃಗುವಿಂತೆಂದನು: 'ಮುಖ್ಯಪ್ರಾಣನು ವಿಜ್ಞಾನಾತ್ಮಕನಾಗಿ ಸಹಸ್ರಾರದಲ್ಲಿ ಬೆಳಗುತ್ತಿರುವನು. ಆತನಿಂದಲೇ ಮನೋಬುದ್ಧೀಂದ್ರಿಯಾದಿಗಳು, ತದ್ದೇವತೆಗಳು ಪ್ರೇರಿತರಾಗಿ, ಶರೀರ ಕಾರ್ಯವನ್ನು ನಡೆಸಿ ಕೊಡುವರು. ಪ್ರಾಣನು ಪಂಚರೂಪನಾಗಿ ವಿವಿಧ ವ್ಯಾಪಾರವನ್ನು ಮಾಡಿ, ಮಾಡಿಸುವನು. ಅಪಾನರೂಪನಾಗಿ ಗುದಸ್ಥಾನದಲ್ಲಿದ್ದು, ಅಪಾನನಿಂದ ವಿಸರ್ಜನವನ್ನು, ಕಂಠದಲ್ಲಿ ಉದಾನರೂಪನಾಗಿದ್ದು ಉದಾನನಿಂದ ಪ್ರಯತ್ನ, ಬಲ, ಉತ್ಕ್ರಾಂತಿಗಳನ್ನು, ಸರ್ವಶರೀರದ ವ್ಯಾನನಲ್ಲಿದ್ದು ವ್ಯಾನನಿಂದ ಸಂಧಿ ವಿಸಂಧಿ ಚಾಲನ, ರಕ್ತ ಪ್ರಸರಣಾದಿಗಳನ್ನು ಮಾಡಿಸುವನು. ಸಮಾನನಲ್ಲಿ ಸಮಾನರೂಪನಾಗಿ, ಅವನಿಂದ ನಾಭಿಯಲ್ಲಿ ನಿಂತು, ರಸಧಾತು ದೋಷನಿವಾರಣವನ್ನು ಮಾಡುತ್ತಾ, ಪ್ರಾಣಾಪಾನರನ್ನು ಸಮವಾಗಿ ನಿಲ್ಲಿಸುತ್ತಿರುವನು; ಮತ್ತು ಜಠರಾಗ್ನಿಯನ್ನು ಉದ್ದೀಪಿಸಿ, ವೈಶ್ವಾನರ ನಾಮಕ ಶ್ರೀಹರಿಯ ಪ್ರೇರಣೆಯಂತೆ, ಅನ್ನಾದಿ ಪಚನ ಕಾರ್ಯವನ್ನು ನಡೆಸುವನು. ಪ್ರಾಣನು ಮುಖದಲ್ಲಿರುವನು. ಆಸ್ಯ (ವದನ) ದಿಂದ ಪಾಯು (ಗುದ) ಪರ್ಯಂತವು ಒಂದು ನಾಡೀದ್ವಾರವಿದೆ. ಅದು ಆಹಾರ ಮಾರ್ಗವಾಗಿದೆ. ಅಂತೆಯೇ ಅನ್ನರಸವಾಹಿಕೆಗಳಾದ ನಾಡಿಕೆಗಳು ಶರೀರದಲ್ಲೆಲ್ಲ ವ್ಯಾಪ್ತವಾಗಿವೆ. ಪ್ರಾಣೋತ್ಕ್ರಮಣವಾಗುವಾಗ ಪ್ರಾಣಾಪಾನರು ನಾಭಿಯಲ್ಲಿರುವ ಸಮಾನನಿಂದ ಸೇರಿ, ಮೇಲಕ್ಕೆ ಬರುವರು. ಉದಾನನಿಂದ ಪ್ರಾಣೋತ್ಕ್ರಮಣವಾಗುವುದು. ಮುಖ್ಯಪ್ರಾಣನು ಬಿಟ್ಟರೆ ದೇಹವೇ ನಿಲ್ಲಲಾರದು. ಅವನಿದ್ದರೆ ಜೀವನು ಶರೀರವ್ಯಾಪಾರಗಳಾದ ಶ್ವಾಸ, ವಚನ, ದರ್ಶನ, ಆಹಾರಭೋಜನ, ಪಾನಾದಿಗಳನ್ನು ಮಾಡಲು ಶಕ್ತನಾಗುವನು. ಮುಖ್ಯಪ್ರಾಣನಿಂದಲೇ ಶರೀರವು ಬೆಚ್ಚಗಿರುವುದು.

ಈಗ ಜೀವನ ವಿಷಯವನ್ನು ಹೇಳುವೆನು. ಜೀವನು ನಿತ್ಯನು. ಅವನಿಗೆ ಅನಿತ್ಯತ್ವವಿಲ್ಲ; ಆದರೂ ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆಗಳೆಂಬ ತ್ರಿವಿಧ ನಾಶಗಳಿವೆ. ಶರೀರವನ್ನು ಬಿಟ್ಟ ಜೀವನು ದೇಹಾಂತರವನ್ನು ಹೊಂದಿ, ಅಲ್ಲಿ ಹಿಂದಿನ ಪುಣ್ಯ ಪಾಪಕರ್ಮಗಳ ಫಲವನ್ನು ಉಣ್ಣುವನು. ಶರೀರನಾಶದಿಂದ ಜೀವಸ್ವರೂಪ ನಾಶವಾಗುವುದಿಲ್ಲ. ಮುಖ್ಯಪ್ರಾಣನು ಅಸ್ವತಂತ್ರ ಜೀವನನ್ನು ಅವನ ಕರ್ಮಲಬ್ಧವಾದ ಶರೀರದಲ್ಲಿ ಸೇರಿಸುವನು; ಮತ್ತು ಶರೀರದಿಂದ ಬಿಡಿಸುವನು. ಅವನ ಇಂದ್ರಿಯಗಳು ಮನೋವಶವಾಗಿ ಲಿಂಗಶರೀರದಲ್ಲಿ ಸೂಕ್ಷ್ಮರೂಪದಿಂದಿದ್ದು, ಮತ್ತೆ ಸ್ಥೂಲ ದೇಹವು ಬಂದಾಗ, ಸ್ಥೂಲವಾಗುವವು. ಪ್ರಾಣಾಗ್ನಿಗಳು ಹೊರಬಿದ್ದಾಗ ದೇಹದ ಉಷ್ಣತೆಯೂ, ಚೇಷ್ಟಾದಿಗಳೂ ನಿಂತು, ಪ್ರಾಣನು ಒಳಬಂದಾಗ ಮತ್ತೆ ಪ್ರವರ್ತಿಸುವವು. ಮುಖ್ಯಪ್ರಾಣನಿಗೂ ಪ್ರೇರಕನಾದ ಶ್ರೀಹರಿಯು ಆತ್ಮಾ, ಅಂತರಾತ್ಮ ಎಂಬ ರೂಪಗಳಿಂದ ಶರೀರವ್ಯಾಪಾರವನ್ನು ನಡೆಸುತ್ತಿರುವನು. ಜೀವನಿಂದ ಕೂಡಿ ದೇಹದಲ್ಲಿದ್ದರೂ, ಶ್ರೀಶನಿಗೆ ಯಾವ ಲೇಪವೂ ಇಲ್ಲ; ಜೀವಭಿನ್ನನು, ಸ್ವತಂತ್ರನು ಆದ ಶ್ರೀಹರಿಗೆ ಜೀವಧರ್ಮಗಳಾದ

ಜನನ, ಮರಣ, ಕರ್ಮಲೇಪ, ಚಿಂತಾ, ಸಂತಾಪ, ಜರಾ, ವ್ಯಾಧಿಗಳಿಲ್ಲ. ಜೀವನು ವೈರಾಗ್ಯದಿಂದ, ಎಲ್ಲವೂ ಅಸಾರವು ಅನಿತ್ಯವೆಂದರಿತು, ಶ್ರೀಹರಿಯ ಮಹಿಮೆಯನ್ನು ಶ್ರವಣಮಾಡಿ, ಶುಭಾಶುಭ ಕರ್ಮಫಲಗಳನ್ನು ಕೋರದೆ, ಭಕ್ತನಾಗಿದ್ದರೆ, ಶ್ರೀಹರಿಯ ಪ್ರಸಾದಕ್ಕೆ ಪಾತ್ರನಾಗುವನು. ಮತ್ತು ಅಪರೋಕ್ಷವನ್ನು ಹೊಂದಿ, ಮುಕ್ತನಾಗುವನು.

ಶ್ರೀಹರಿಯು ತನ್ನ ಜ್ಞಾನಪ್ರಕಾಶವನ್ನು ಹೊಂದಲರ್ಹರೆಂದು ವಿಪ್ರಾದಿ ನಾಲ್ಕು ವರ್ಣದವರನ್ನು ಸೃಜಿಸಿದನು. ಅವರಲ್ಲಿ ವಿಪ್ರನು ಸತ್ಯಧರ್ಮ ತಪೋ ವೇದಾಧ್ಯಯನ, ಆಚಾರಗಳಿಂದ ಅಧಿಕನೆನಿಸಿರುವನು. ಬ್ರಾಹ್ಮಣ ವರ್ಣವು ಧವಳವು; ಕ್ಷತ್ರ ವರ್ಣವು ಲೋಹಿತವು; ವೈಶ್ಯವರ್ಣವು ಪೀತವು; ಶೂದ್ರವರ್ಣವು ನೀಲವು; ಬ್ರಹ್ಮದೇವನು ಸೃಜಿಸಿದ ಜೀವರಲ್ಲಿ ವರ್ಣಶಃ ನಾಲ್ಕು ವಿಧರಾದವರು ಉಂಟು; ಅವರ ಕರ್ಮಗಳೂ ವಿಭಿನ್ನವಾಗಿವೆ; ಕಾಮಭೋಗ ಪ್ರಿಯರು, ತೀಕ್ಷ್ಣರು, ಕ್ರೋಧನರು, ಪ್ರಿಯ ಸಾಹಸರು, ಆದವರು ಕ್ಷತ್ರಿಯರೆನಿಸಿದರು; ಗೋರಕ್ಷೆ, ಕೃಷಿ ವಾಣಿಜ್ಯ, ಕುಸೀದಗಳನ್ನು ಅವಲಂಬಿಸಿದವರು ವೈಶ್ಯರೆನಿಸಿದರು. ಸರ್ವಕರ್ಮೋಪಜೀವಿಗಳು ಶೂದ್ರರೆನಿಸಿದರು. ಬ್ರಾಹ್ಮಣರು ಸತ್ಯ, ಧರ್ಮಗಳಿಂದ ಪೂಜಿತರಾಗಿ, ಅವನ್ನು ಬಿಟ್ಟರೆಂದರೆ ಅವಮಾನಿತರಾಗುವರು. ಬ್ರಹ್ಮಜ್ಞಾನದಿಂದ ಬ್ರಾಹ್ಮಣನೆನಿಸುವನಾಗಲಿ, ಬರಿಯ ಜನ್ಮದಿಂದಲ್ಲ.

ಬ್ರಾಹ್ಮಣನು ಶೌಚಾಚಾರನಿರತನಾಗಿರಬೇಕು. ಅತಿಥಿಗಳಿಗಿತ್ತು ಉಣ್ಣಬೇಕು. ಗುರುಸೇವೆ ಮಾಡಿ, ವೇದವನ್ನೋದಬೇಕು. ಸತ್ಯವನ್ನು ನುಡಿಯಬೇಕು. ಅಹಿಂಸಾ ನಿರತನಾಗಿರಬೇಕು. ಕ್ಷತ್ರಿಯನು ವೇದವನ್ನೋದಿ, ಯಜ್ಞ ಮಾಡಿ, ದಕ್ಷಿಣೆಯನ್ನಿತ್ತು, ಪ್ರಜಾರಂಜಕನಾಗಿ ಪಾಲಿಸಬೇಕು. ದುಷ್ಟಶಿಕ್ಷಣವನ್ನು ಮಾಡದ ರಾಜನು ರಾಜನೇ ಅಲ್ಲ. ವೈಶ್ಯನು ಪಶುವೃದ್ಧಿಯನ್ನು, ಧನವೃದ್ಧಿಯನ್ನು ಪಡೆಯಬೇಕು. ದಾನವನ್ನು ಮಾಡದಿರೆ ವೈಶ್ಯನೇ ಅಲ್ಲ. ಶೂದ್ರನು ಸರ್ವಭೂತಹಿತಕರನಾಗಿರಬೇಕು. ಜನಶುಶ್ರೂಷೆಗೈಯದವನು ಶೂದ್ರನೇ ಅಲ್ಲ.

ಶೂದ್ರನು ಬ್ರಾಹ್ಮಣನಂತೆ ವಿನಯ, ವಿದ್ಯಾ, ಸತ್ಯ, ಧರ್ಮರತನಾಗಿದ್ದರೆ ಅವನು ಸಚ್ಛೂದ್ರನೆನಿಸಿ, ಪೂಜಾರ್ಹನಾಗುವನು. ವಿಪ್ರನಾಗಿ ವಿಪ್ರಗುಣರಹಿತನಾದರೆ ಅಂತಹ ಶೂದ್ರನಕಿಂತಲೂ, ಅಧಮನೆನಿಸುವನು. ಎಲ್ಲ ವರ್ಣದವರೂ ಸತ್ಯ, ಧರ್ಮ, ದಯಾ, ಶೌಚ, ಇಂದ್ರಿಯಜಯ, ಹರಿಭಕ್ತಿ, ವೈರಾಗ್ಯ, ಸ್ವಧರ್ಮಾಚರಣೆ ಮುಂತಾದ ಸುಗುಣಗಳಿಗೆ ಅಧಿಕಾರಿಗಳಾಗಿರುವರು.

ಪಾಪವೇ ದುಃಖವು; ಪುಣ್ಯವೇ ಸುಖವು. ದುಃಖದಿಂದ ಮತಿಗೆಟ್ಟು, ಪಾಪವನ್ನು ಮಾಡಿ, ಅದರ ಫಲವಾಗಿ ಮತ್ತೆ ದುಃಖವನ್ನು ಹೊಂದುವವರನ್ನು ನೋಡಿ, ಪಾಪದೂರನಾಗಬೇಕು. ಪುಣ್ಯದಿಂದ ಸ್ವರ್ಗವನ್ನು ಸೇರಿ, ಅಲ್ಲಿಂದ ಹಿಂದಿರುಗುವವರನ್ನು ನೋಡಿ, ಫಲಾಪೇಕ್ಷೆಯನ್ನು ಬಿಟ್ಟು, ಸತ್ಕರ್ಮವನ್ನು ಮಾಡಿ, ಶ್ರೀಹರಿಗರ್ಪಿಸಬೇಕು. ನಿವೃತ್ತಿ ಕರ್ಮವನ್ನು ಮಾಡಿ, ಶ್ರೀಹರಿಯ ಅನುಗ್ರಹದಿಂದ ದೊರೆತ ಗುರುಗಳನ್ನು ಸೇವಿಸಿ,

ಅವರ ಉಪದೇಶದಿಂದ ಜ್ಞಾನವನ್ನು ಪಡೆಯಬೇಕು. ಶ್ರೀಹರಿಭಕ್ತನಾಗಿ ಮೋಕ್ಷವನ್ನು ಪಡೆಯಬೇಕು. ದಾನದಿಂದ ಭೋಗವು, ಹೋಮದಿಂದ ಪಾಪನಾಶವು, ವೇದಾಧ್ಯಯನದಿಂದ ಶಾಂತಿಯು, ತಪಸ್ಸಿನಿಂದ ಸ್ವರ್ಗವು ಲಭಿಸುವವು. ಸತ್ಪಾತ್ರರಿಗಿತ್ತ ದಾನವು ಪರಲೋಕ ಸುಖಕ್ಕೂ, ಇತರರಿಗಿತ್ತ ದಾನವು ಇಹ ಸುಖಕ್ಕೂ ಕಾರಣಗಳಾಗುವವು. ದಾನವೆಂತಹದೋ, ಅಂತಹ ಫಲವೇ ಸಿಗುವುದು.

ಈಗ ಆಶ್ರಮ ಧರ್ಮಗಳನ್ನು ತಿಳಿಸುವೆನು. ಕೇಳು! ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬವು ನಾಲ್ಕು ಆಶ್ರಮಗಳು. ಬ್ರಹ್ಮಚಾರಿಯು ಗುರುಕುಲದಲ್ಲಿ ವಾಸ ಮಾಡಿ, ವೇದಾದಿ ವಿದ್ಯೆಗಳನ್ನು ಕಲಿಯಬೇಕು. ಸಂಧ್ಯೆಗಳಲ್ಲಿ ಸೂರ್ಯ, ಅಗ್ನಿದೇವ, ಅತಿಥಿ, ಗುರು ವಂದನ ಸತ್ಕಾರಗಳನ್ನು ಮಾಡಬೇಕು. ಭಿಕ್ಷೆ ಬೇಡಿ, ತಂದುದನ್ನು ಗುರುವಿಗರ್ಪಿಸಿ, ಅನುಜ್ಞೆ ಪಡೆದು, ಸ್ವೀಕರಿಸಬೇಕು. ಗುರುವಿಧೇಯನಾಗಿರಬೇಕು. ಗುರುದಕ್ಷಿಣೆಯನ್ನಿತ್ತು, ಗೃಹಸ್ಥನಾಗಬಹುದು. ವಿರಕ್ತನಾಗಿದ್ದರೆ ಯತಿಯೂ ಆಗಬಹುದು. ಗೃಹಸ್ಥನು ಸಂತಾನಾರ್ಥಿಯಾಗಿ ಸ್ವವರ್ಣದ ಕನ್ಯೆಯನ್ನು ಮದುವೆ ಆಗಿ, ಧರ್ಮಸಂತಾನವನ್ನು ಪಡೆಯಬೇಕು. ವೇದವನ್ನೋದಿಸಿ, ಯಜ್ಞವನ್ನು ಮಾಡಬೇಕು. ಧರ್ಮಾರ್ಥಕಾಮಗಳನ್ನು ಸೇವಿಸುತ್ತಾ, ಮೋಕ್ಷಮಾರ್ಗದಲ್ಲಿ ಎಚ್ಚರದಿಂದ ನಡೆಯಬೇಕು. ಗೃಹಸ್ಥನೇ ಮಿಕ್ಕ ಆಶ್ರಮದವರಿಗೆ ಪೋಷಕನಾಗಿರುವನು. ಅವನು ಆಹುತಿಗಳಿಂದ ದೇವಯಜ್ಞವನ್ನೂ, ವೇದಾಧ್ಯಯನದಿಂದ ಋಷಿಯಜ್ಞವನ್ನೂ, ಶ್ರಾದ್ಧತರ್ಪಣಗಳಿಂದ ದೇವಯಜ್ಞವನ್ನೂ, ಅನ್ನಾದಿ ದಾನದಿಂದ ಅತಿಥಿ (ನರ) ಯಜ್ಞವನ್ನೂ, ಬಲಿಹರಣದಾನಗಳಿಂದ ಭೂತಯಜ್ಞವನ್ನೂ ಮಾಡಬೇಕು. ಯಾವ ಗೃಹಸ್ಥನ ಮನೆಯಿಂದ, ಅತಿಥಿಯು ಉಪವಾಸವಾಗಿ ನಿರಾಶೆಯಿಂದ ಹೋಗುವನೋ, ಅವನು ಆ ಗೃಹಸ್ಥನ ಪುಣ್ಯವನ್ನು ಕೊಂಡು, ತನ್ನ ಪಾಪವನ್ನು ಅವನಿಗಿತ್ತು ಹೋಗುತ್ತಿರುವನು. ಗೃಹಸ್ಥನು ಅನಿಷಿದ್ಧವಾದ ವಸ್ತ್ರಾಭರಣಗಂಧ ಮಾಲಾ ಭೋಜನ ಗಾನಗಳಿಂದ ಕಾಮ ಸುಖಾವಾಪ್ತಿಯನ್ನು ಹೊಂದಬಹುದಾಗಿದೆ. ಆದರೂ ಅವನ್ನೆಲ್ಲವನ್ನೂ ಶ್ರೀಶನಿಗರ್ಪಿಸಿ ಸ್ವೀಕರಿಸುವುದರಿಂದ, ಅವನು ನಿರ್ದೋಷನಾಗಿ, ಶ್ರವಣಾದಿಗಳಿಂದ ಜ್ಞಾನಿಯಾಗಿ, ಅದರಿಂದಾಗುವ ಶ್ರೀಹರಿ ಪ್ರಸಾದದಿಂದ ಮುಕ್ತನಾಗುವನು.

ವಾನಪ್ರಸ್ಥನು ಆಶ್ರಮದಲ್ಲಿ ನಿಸ್ಸಂಗನಾಗಿರಬೇಕು. ತೀರ್ಥಸೇವನ, ಸಜ್ಜನರಿಂದ ಶ್ರವಣ, ವೇದಾಧ್ಯಯನ, ವನ್ಯಾಹಾರ ಭೋಜನಗಳಿಂದ ಅವನು ಪಾವನನಾಗುವನು. ಶೀತೋಷ್ಣ ವಾತವರ್ಷಗಳನ್ನು ಸಹಿಸಿ ತಪಗೈದು ಶುದ್ಧವಾಗುವನು. ಸಕಲ ಜೀವರಿಗೆ ಕಾಯೇನವಾಚಾಮನಸಾ ದ್ರೋಹ ಮಾಡದೆ, ಭಿಕ್ಷೆಗಾಗಿ ಮಾತ್ರ ಗ್ರಾಮವನ್ನು ಪ್ರವೇಶಿಸಿ ಮತ್ತೆ ಕುಟೀರವನ್ನು ಸೇರಬೇಕು. ನಿಷಿದ್ಧ ಕರ್ಮವನ್ನೆಂದಿಗೂ ಮಾಡಬಾರದು. ದರ್ಪ, ಮೋಹ, ದಂಭ, ಕಾರ್ಪಣ್ಯ, ನಿಂದಾ ಸ್ತುತಿ, ಹಿಂಸೆಗಳನ್ನು ಬಿಡಬೇಕು.

ಸನ್ಯಾಸಿಯು ಸರ್ವಭೂತಗಳಿಗೆ ಅಭಯವನ್ನಿತ್ತು, ಶ್ರೀಹರಿಸರ್ವೋತ್ತಮತ್ವವನ್ನು ಸದಾ ಪ್ರತಿಪಾದಿಸಬೇಕು. ಭಿಕ್ಷೆಯಿಂದ ಜೀವಿಸಬೇಕು. ಧನವನ್ನು ಮುಟ್ಟಬಾರದು.

ಅಂತಹವು ನಿರಿಂಧನ ಜ್ಯೋತಿಯಂತೆ, ಕರ್ಮಫಲವನ್ನು ಕಳೆದು ಕೊಂಡು, ಪ್ರಶಾಂತನಾಗಿ, ಶ್ರೀಹರಿಪ್ರಸಾದದಿಂದ ಮುಕ್ತನಾಗುವನು.

ಭರತಖಂಡದಲ್ಲಿ ಪುಟ್ಟಿದವರಿಗೆ ಸಾಧನ ಸೌಲಭ್ಯವು ಹೆಚ್ಚಾಗಿದೆ. ವೇದ, ಸತ್ಯ, ಅಹಿಂಸೆ, ದಯೆ, ದಾನ, ತಪಸ್ಸು, ಯಜ್ಞ, ಏಕಪತ್ನೀವ್ರತ, ಪಾತಿವ್ರತ್ಯ, ಪರನಿಂದಾ ವರ್ಜನ ಮುಂತಾದ ಗುಣಗಳಿಗೆ ಭರತಭೂಮಿ ತೌರೂರಾಗಿದೆ. ಇದು ಸ್ವರ್ಗ ಸದೃಶ ಭೂಮಿಯು; ಇಲ್ಲಿ ಹುಟ್ಟಿ ಸಾಧನ ಮಾಡಿಕೊಳ್ಳಬೇಕೆಂದು ದೇವತೆಗಳೂ ಕೋರುವರು. ಇಲ್ಲಿ ದುರ್ಮಾರ್ಗರೂ ಹುಟ್ಟಿ, ನಿಷಿದ್ಧ ಕರ್ಮಾಚರಣದಿಂದ ನರಕಾದ್ಯನರ್ಥವನ್ನು ಹೊಂದುವುದೂ ಉಂಟು. ಅಂತಹ ದುಷ್ಟನಿಗ್ರಹವನ್ನೂ ಶಿಷ್ಟ ಪಾಲನವನ್ನೂ, ಮಾಡಿ, ಧರ್ಮವನ್ನು ನಿಲ್ಲಿಸಬೇಕೆಂದು ತ್ರಿಯುಗಹೂತಿಯಾದ ಶ್ರೀಹರಿಯು ಅವತರಿಸುತ್ತಿರುವನು. ಅವನ ಆಜ್ಞೆಯಂತೆ, ಮುಖ್ಯಪ್ರಾಣ, ಶೇಷ, ರುದ್ರ, ದೇವೇಂದ್ರ, ಯಮ, ಸೂರ್ಯ, ಚಂದ್ರಾದಿ ದೇವತೆಗಳೂ ಅವತರಿಸಿ, ಶ್ರೀಹರಿಯ ಭೂಭಾರಹರಣಕಾರ್ಯದಲ್ಲಿ ತದಂಗರಾಗಿ ಸೇವೆ ಸಲ್ಲಿಸಿ, ಸುಜನರನ್ನು ಉದ್ಧರಿಸುತ್ತಿರುವರು. ಭೂಗೋಳ, ಖಗೋಳ ವಿಚಾರವನ್ನು ಶ್ರೀಭಾಗವತ ಪಂಚಮಸ್ಕಂಧದಲ್ಲಿ ನಿರೂಪಿತವಾದಂತೆ ತಿಳಿಸಿ, ಭೃಗುಮುನಿಯು ಇಂತು ಶ್ರೀಶನ ಅಪಾರ ಮಹಿಮೆಯನ್ನರಿತು, ಭಕ್ತಿಯಿಂದ ಸೇವಿಸುವರು ಮುಕ್ತರಾಗುವರೆಂದು ಭರದ್ವಾಜನಿಗೆ ನಿರೂಪಿಸಿದನು. ಅದನ್ನೇ ನಿನಗೆ ನಾನು ಪೇಳಿರುವೆನು' ಎಂದು ಭೀಷ್ಮನು ನುಡಿದನು.

## ೩. ಆತುರ ವಿಚಾರ, ಸೃಷ್ಟಿ ವಿವರ ಜಾಪಕಾಖ್ಯಾನ

ಧರ್ಮರಾಜನು, 'ತಾತ ! ಆಚಾರವಿಧಿಯನ್ನು ನನಗೆ ತಿಳಿಸಿಕೊಡು!' ಎಂದು ಕೇಳಲು, ಭೀಷ್ಮನಿಂತೆಂದನು: 'ಆಚಾರವೇ ಪ್ರಥಮ ಧರ್ಮವು, ಧರ್ಮದ ಪ್ರಭುವೇ ಅಚ್ಯುತನು. ಅಚ್ಯುತನನ್ನು ತಿಳಿಸಿ ಕೊಡುವುದು ವೇದವು; ಆ ವೇದವನ್ನರಿತ ಬ್ರಾಹ್ಮಣರಿಂದ ಆಚಾರವೇನೆಂದು ತಿಳಿದು, ನಿನಗೆ ಹೇಳುತ್ತಿರುವೆನು.

ರಾಜಮಾರ್ಗ, ಗೋಷ್ಠ, ಧಾನ್ಯಾಗಾರ, ಸಸ್ಯಕ್ಷೇತ್ರ, ದೇವಾಲಯಾವರಣ, ತೀರ್ಥಗಳಲ್ಲಿ ಮಲಮೂತ್ರಗಳನ್ನು ಮಾಡಬಾರದು. ವಿಸರ್ಜನಾನಂತರದಲ್ಲಿ ಸ್ನಾನದಿಂದ ಶುಚಿಯಾಗಿ ನಿತ್ಯ ಕರ್ಮಗಳನ್ನು ಮಾಡಬೇಕು. ನಿಂತು ಉಪಸ್ಥಾನದಲ್ಲಿ ದೇವಗುರುಗಳಿಗೆ ವಂದಿಸಬೇಕು. ಕಾಲುಗಳು, ಕೈಗಳು, ಬಾಯಿ ಎಂಬ ಐದನ್ನು ತೊಳೆದು, ಭೋಜನಮಾಡಬೇಕು. ಉತ್ತಾರಾಪೋಶನವನ್ನು ಬಿಡಬಾರದು. ಭುಜಿಸುವ ಅನ್ನವು ಭಗವತ್ ಸ್ವರೂಪವೆಂದರಿತು, ನಿಂದಿಸಬಾರದು. ಮಧುರಾಹಾರವು ಸಾತ್ವಿಕವಾಗಿದೆ. ಕಾಲು ತೊಳೆದು, ವರೆಸದೆ ಇರಬಾರದು. ಕ್ಷೇತ್ರ, ಗೋ, ವಿಪ್ರ, ಸುಜನರಿಗೆ ಪ್ರದಕ್ಷಿಣವಾಗಿ ಬಂದು ವಂದಿಸಬೇಕು. ಅತಿಥಿ, ಭೃತ್ಯ, ದೀನ ಸ್ವಜನರಿಗಿತ್ತುದನ್ನೇ ತಾನು ಉಣ್ಣಬೇಕು. ಗೃಹಸ್ಥನಿಗೆ ಎರಡು ಹೊತ್ತು ಭೋಜನವು ನಿಷಿದ್ಧವಲ್ಲ.

ಭೋಜನದ್ವಯದ ಮಧ್ಯದಲ್ಲಿ ಏನೂ ತಿನ್ನಬಾರದು (ಮುಸುರೆ). ಕಾಲಕಾಲಕ್ಕೆ ಹೋಮ, ಶ್ರಾದ್ಧ, ತರ್ಪಣಗಳನ್ನು ಜರುಗಿಸಬೇಕು. ತಾಯಿ ಬಡಿಸುವ ಅನ್ನದಂತೆ ಅಮೃತಸಮಾನವಾಗಿದೆ ಅತಿಥಿಗಿತ್ತು ಮಿಕ್ಕದ್ದು. ವೇದಿಕೆಗಾಗಿ ಮಣ್ಣನ್ನಗಿದು, ಇಟ್ಟಿಗೆಯನ್ನು ಜೋಡಿಸಿ, ದರ್ಭೆಗಳನ್ನು ಹರವಿ, ಪಶುವಿನನ್ನು ಕೊಂದು, ಮಾಡುವ ಹಿಂಸಾಮಯ ಯಜ್ಞವು ಬಲು ಪಾಪಸಾಧನವಾಗಿ, ವರ್ಜ್ಯವೆನಿಸಿದೆ.

ಕಾಮ್ಯಕರ್ಮವನ್ನು ಮಾಡಬಾರದು. ನಿಷಿದ್ಧ ಪದಾರ್ಥಗಳನ್ನು ತಿನ್ನಬಾರದು. ಗುರುಗಳಿಗೆ ಆಸನವಿತ್ತು, ಕಾಲಿಗೆರಗಬೇಕು. ಅದರಿಂದ ಆಯುವು ಹೆಚ್ಚುವುದು. ಹುಟ್ಟುತ್ತಿರುವ ಸೂರ್ಯಬಿಂಬವನ್ನು, ನಗ್ನ ತರುಣಿಯನ್ನು, ಪಶು ಸಂಗಮವನ್ನು ನೋಡಬಾರದು. ಶಾಸ್ತ್ರದ ರಹಸ್ಯವು ಗುರುವಿನಲ್ಲಿದೆ. ಯಜ್ಞ ರಹಸ್ಯವು ಅಗ್ನಿಯಲ್ಲಿದೆ. ಕರ್ಮ ರಹಸ್ಯವು ಶಿಷ್ಟಜನರಲ್ಲಿದೆ. ವೇದಶಾಸ್ತ್ರ ಮೂಲವಾದ ಮಂತ್ರ ರಹಸ್ಯವು ಓಂಕಾರದಲ್ಲಿದೆ. ಸುಜನರನ್ನು ನೋಡಿ ಸುಖಪ್ರಶ್ನೆಯನ್ನು ಮಾಡು! ದುರ್ಜನ ಸಂಗವನ್ನು ದೂರಮಾಡು! ದೇವಾಲಯ, ವಿಪ್ರಸಮೂಹ, ವೇದಾಧ್ಯಯನ, ವಿಪ್ರಭೋಜನ ಸ್ಥಲಗಳಲ್ಲಿ ಕೊಡುಗೈಯವನಾಗು! ಅಲ್ಲಿರುವ ಪಾತ್ರರು ಮತ್ತೆಲ್ಲಿಯೂ ಸಿಗರು. ವಿಪ್ರರಿಗಿತ್ತುದೇ ನಿನ್ನ ಧನಕ್ಕೆ ಸಾರ್ಥಕತೆ. ಕ್ಷುರಕರ್ಮ, ಸೀನು, ಕೆಮ್ಮು, ಸ್ನಾನ, ಭೋಜನ, ವ್ಯಾಧಿಶಮನಗಳಲ್ಲಿ ವಿಪ್ರಾಭಿವಂದನವೂ ಶ್ರೀಹರಯೇ ನಮಃ, ರಾಮ! ರಾಮ! ಕೃಷ್ಣ! ಕೃಷ್ಣ ಎಂಬ ಭಗವನ್ನಾಮೋಚ್ಚಾರಣವೂ ಆಯುರ್ವೃದ್ಧಿಕರಗಳಾಗಿವೆ.

ಸೂರ್ಯಾಭಿಮುಖವಾಗಿ ವಿಸರ್ಜನ ಮಾಡಬಾರದು. ತನ್ನ ಮಲವನ್ನು ತಾನು ನೋಡಬಾರದು. ಗುರುಹಿರಿಯರನ್ನು ಧಿಕ್ಕರಿಸಬಾರದು. ಪಾಪಿಗಳ ಹೃದಯವು ಅವರ ಪಾಪವನ್ನು ಹೇಳುತ್ತಿರುವುದು. ಅದನ್ನು ಒತ್ತಿಟ್ಟು, ದುಷ್ಟರು ಪಾಪವನ್ನು ಮಾಡಿ, ನರಕಾದ್ಯನರ್ಥ ಭಾಗಿಗಳಾಗುವರು. ಅವನ ಪಾಪವನ್ನು ಮನುಜರು ನೋಡದಿದ್ದರೂ, ದೇವತೆಗಳು ನೋಡೇ ಇರುವರು. ಪಾಪವನ್ನು ಬಚ್ಚಿಡ ಪೋಗಿ ನರನು ಮತ್ತೊಂದು ಪಾಪವನ್ನೇ ಕಟ್ಟಿಕೊಳ್ಳುತ್ತಿರುವನು. ಒಂದು ಸುಳ್ಳಿಗೆ ಮತ್ತೊಂದು ಸುಳ್ಳನಾಡಿದಂತೆ, ಅವನ ಪಾಪರಾಶಿಯು ಹೆಚ್ಚುತ್ತಾ ಹೋಗುವುದು. ಪ್ರತಿ ಮನುಜನಿಗೂ ಅವನ ಮನಸ್ಸೇ ಮೊದಲು ಪಾಪಪುಣ್ಯಗಳನ್ನು ತಿಳಿಸಿ ಹೇಳುವುದು. ಅದನ್ನು ಕಡೆಗಣಿಸಿದವನು ಪಾಪವನ್ನೆಸಗಿ ಕೆಡುವನು. ಅದನ್ನು ಮನ್ನಿಸಿ, ಧರ್ಮವನ್ನು ಸ್ಮರಿಸಿ, ಪಾಪವನ್ನು ದೂರ ಸರಿಸಿದವನು. ಇಹಪರಗಳೆರಡರಲ್ಲಿಯ ಸುಖಿಸುವನು.'

ಧರ್ಮರಾಜನು ಸೃಷ್ಟಿಪ್ರಳಯವಿಚಾರವನ್ನು ಕೇಳಲು, ಭೀಷ್ಮನು ಇಂತೆಂದನು: 'ಕೇಳು! ಪೂರ್ವದ ಜ್ಞಾನಿಗಳು ಪೇಳಿರುವ ಸೃಷ್ಟಿ ಪ್ರಳಯ ವಿವರವನ್ನು ಹೇಳುವೆನು. ಸೃಷ್ಟಿಪ್ರಳಯಗಳನ್ನರಿಯದವನಿಗೆ ಶ್ರೀಹರಿಸರ್ವೋತ್ತಮತ್ವ ಜ್ಞಾನವಾಗುವುದಿಲ್ಲ. ಶ್ರೀಹರಿ ಸರ್ವೋತ್ತಮನೆಂದರಿಯದವನಿಗೆ ಮೋಕ್ಷವಿಲ್ಲ. ಎಲ್ಲ ಶರೀರಗಳೂ ಪಂಚಭೂತಗಳಿಂದ ರಚಿತವಾಗಿವೆ. ಅವು ಸತ್ತಾಗ ಮತ್ತೆ ಶರೀರವು ಪಂಚಭೂತಗಳಲ್ಲಿ ಸೇರಿಹೋಗುವುದು.

ಕೂರ್ಮವು ತನ್ನ ಅಂಗಗಳನ್ನು ಸೆಳೆಯುವಂತೆ ಅನಾಯಾಸವಾಗಿಯು, ಜೇಡರ ಹುಳುವು ಗೂಡನ್ನು ಕಟ್ಟುವಂತೆ ತದ್ಭಿನ್ನನಾಗಿಯು, ಪೃಥಿವಿಯಲ್ಲಿ ನಾನಾವಿಧ ವೃಕ್ಷಲತಾದಿಗಳಂತೆ ಸ್ವಭಾವಾನತಿರಿಕ್ತವಾಗಿಯು ಆಗುವ ಸೃಷ್ಟಿಯನ್ನು ಶ್ರೀಹರಿಯು, ಮಾಡಿ, ತಾನು ಜೀವ ಜಡಭಿನ್ನನಾಗಿರುವನು. ಮಣ್ಣುಗಡಿಗೆಯಂತೆ ಉಪಾದಾನ ಕಾರಣವಾದ ಜಡಪ್ರಕೃತಿಯಿಂದ, ಶ್ರೀದೇವೀರಮಣನು ಸ್ವತಂತ್ರ ನಿಮಿತ್ತಕಾರಣನಾಗಿ ಸತ್ವರಜಸ್ತೋಗುಣಮಯವಾದ ಜಗವನ್ನು ನಿರ್ಮಿಸುವನು.

ತ್ರಿಗುಣಮಯವಾದ ಅವ್ಯಕ್ತತತ್ವದಿಂದ ಮಹತ್ತತ್ವವು (ಬ್ರಹ್ಮದೇವ) ಉದಿಸುವುದು. ಮಹತ್ತತ್ವದಿಂದ ತ್ರಿವಿಧಾಹಂಕಾರತತ್ವವು ಜನಿಸಿತು. ವೈಕಾರಿಕಾಹಂಕಾರದಿಂದ ದೇವತಾದೇಹಗಳನ್ನು ಮನಸ್ತತ್ವವನ್ನು, ತೈಜಸಾಹಂಕಾರದಿಂದ ಇಂದ್ರಿಯಗಳನ್ನೂ, ತಾಮಸಾಹಂಕಾರದಿಂದ ಆಕಾಶಾದಿಪಂಚಭೂತಗಳನ್ನು ಸೃಜಿಸಿ, ಶ್ರೀರಮಣನು, ಆತತ್ವ ದೇವತೆಗಳನ್ನು, ತದಂತರ್ಗತವಾದ ತನ್ನ ರೂಪಗಳನ್ನೂ ಸೃಜಿಸಿದನು. ಪಂಚಭೂತಗಳು, ಪಂಚವಿಷಯಗಳು, ದಶೇಂದ್ರಿಯಗಳು. ಮನಸ್ಸು, ಅಹಂಕಾರ, ಬುದ್ಧಿ, ಮಹತ್ತು, ಅವ್ಯಕ್ತ ಇಂತು ಇಪ್ಪತ್ತೈದು ತತ್ವಗಳಿಗೆ ಒಡೆಯನಾದ ಶ್ರೀಹರಿಯು ಅವುಗಳ ನಿಯಾಮಕನಾಗಿ ಒಳಗಿದ್ದು, ನಡೆಸುವನು. ಅಂತರ್ಯಾಮಿ ಶ್ರೀಹರಿಯೇ ಸ್ವತಂತ್ರನೆಂದು ಜ್ಞಾನಿಗಳು ತಿಳಿವರು; ಮೂಢರರಿಯರು.

ಇಂದ್ರಿಯದೇವತೆಗಳು ಯಾರೆಂದರೆ ಕಣ್ಣು (ಸೂರ್ಯ) ; ಕಿವಿ (ಚಂದ್ರಾದಿ ದಿಗ್ದೇವತೆಗಳು); ಮೂಗು (ಅಶ್ವಿನೀ ದೇವದ್ವಯ) ; ನಾಲಿಗೆ (ವರುಣ) ; ಚರ್ಮ (ಅಹಂಕಾರಿಕಪ್ರಾಣ) ; ವಾಕ್ (ವಹ್ನಿ) ; ಪಾಣಿ (ದಕ್ಷ) ಪಾದ (ಜಯಂತ); ಪಾಯು (ಮಿತ್ರ) ; ಮನಸ್ಸು (ಇಂದ್ರ ಕಾಮ) ; ಶಬ್ದಸ್ಪರ್ಶಗಳು (ಸೌಪರ್ಣಿ) ; ರೂಪರಸಗಳು (ವಾರುಣಿ) ; ಗಂಧ (ಪಾರ್ವತಿ) ; ಅಹಂಕಾರ (ಗರುಡ ಶೇಷರುದ್ರರು) ; ಪೃಥಿವಿ (ಶನಿರಾಜ, ಧರಾದೇವಿ) ; ಅಪ್ -ವರುಣ ; ತೇಜ (ಅಗ್ನಿ) ; ವಾಯು (ಭೂತ ವಾಯು) ; ಆಕಾಶ (ಗಣಪತಿ) ; ಬುದ್ಧಿ (ಸರಸ್ವತಿ) ; ಮಹತ್ (ಬ್ರಹ್ಮದೇವ) ; ಅವ್ಯಕ್ತ (ಮಹಾಲಕ್ಷ್ಮೀದೇವಿ) ; ಇಂತು ದೇವತೆಗಳಿವರೆಲ್ಲರೂ, ಸದಾ ಮುಕ್ತಿಯಲ್ಲಿಯೂ ಶ್ರೀಹರಿಯ ಅಧೀನರು. ಶ್ರೀಹರಿಯ ಪ್ರೇರಣೆಯತೆ ಬ್ರಹ್ಮಾಂಡವನ್ನೂ ನಿಖಿಲಜೀವ ಶರೀರಗಳನ್ನೂ ನಡೆಸುತ್ತಿರುವರು. ಶ್ರೀಹರಿಯಿಂದ ಹೊರಬಂದ ಬ್ರಹ್ಮಾಂಡವು ಶ್ರೀಶನಲ್ಲೇ ಸೇರಿ, ಲಯವಾಗುವುದು. ಜೀವನು ಕರ್ಮಾನುಸಾರವಾಗಿಬಂದ ಶರೀರದಲ್ಲಿದ್ದು - ನಾನು - ನನ್ನದು ಎಂಬ ಎರಡು ವಿಧವಾದ ಭ್ರಮೆಯಿಂದ, ಸಂಸಾರದಲ್ಲಿ ಬಿದ್ದಿರುವನು. ಕರ್ತೃತ್ವ ಭ್ರಾಂತಿಯಿಂದ ಕರ್ಮಗಳನ್ನು ಫಲಾಶೆಯಿಂದ ಮಾಡಿ, ಸುಖದುಃಖಗಳನ್ನು ಹೊಂದುತ್ತಾ, ಜನನಮರಣ ರೂಪವಾದ ಸಂಸಾರ ಚಕ್ರದಲ್ಲಿ ಸುತ್ತುತ್ತಿರುವನು; ಮತ್ತು ಸ್ವಾಮಿತ್ವ ಭ್ರಾಂತಿಯಿಂದ ಫಲವನ್ನು ಉಣ್ಣುವನು. ಶ್ರೀಹರಿಭಕ್ತರನ್ನು ಸೇವಿಸಿ, ಅವರಿಂದ ಶ್ರೀಶನ ಸರ್ವೋತ್ತಮತ್ವ , ಜಗಜ್ಜನ್ಮಾದಿಕರ್ತೃತ್ವ , ಜೀವಜಡವಿಲಕ್ಷಣತ್ವ , ಸ್ವತಂತ್ರತ್ವ , ಸರ್ವಪುಣ್ಯಕರ್ಮಫಲಭೋಕ್ತೃತ್ವ, ನಿರ್ಲಿಪ್ತತ್ವ , ಸರ್ವಪ್ರೇರಕತ್ವ ರೂಪ ಮಹಿಮೆಯನ್ನು

ತಿಳಿದವನು, ದುರಭಿಮಾನವನ್ನು ತ್ಯಜಿಸಿ, ಜ್ಞಾನವನ್ನಾರ್ಜಿಸಿ, ಶ್ರೀಹರಿಭಕ್ತವರನಾದ ಶ್ರೀಮುಖ್ಯಪ್ರಾಣನ ದ್ವಾರಾ, ಶ್ರೀಹರಿಪ್ರಸಾದಪಾತ್ರನಾಗಿ, ಮುಕ್ತನಾಗುವನು.

ಕ್ರಮವಾಗಿ ಸೃಷ್ಟಿಯಾದ ಜಗವು ವ್ಯುತ್ಕ್ರಮದಿಂದ ಲಯವಾಗಿ, ಶ್ರೀಶನ ಉದರದಲ್ಲಿ ಸೇರುವದು. ಬ್ರಹ್ಮರುದ್ರಾದಿ ಸರ್ವದೇವತೆಗಳೂ ಶ್ರೀಶಾಧೀನರಾಗಿದ್ದು, ಸ್ವಯೋಗ್ಯ ಮುಕ್ತಿಸುಖವನ್ನು ಅನುಭವಿಸುತ್ತಿರುವರು. ಜೀವರು ಸ್ವಭಾವದಿಂದಲೇ ತ್ರಿವಿಧರಾಗಿರುವರು. ತಾಮಸರು ಶ್ರೀಹರಿತದ್ಭಕ್ತರನ್ನು ದ್ವೇಷಿಸಿ, ತತ್ಫಲವಾದ ಅಂಧತಮಸ್ಸನ್ನು ಹೊಂದಿ, ನಿತ್ಯ ದುಃಖಿಗಳಾಗುವರು. ರಾಜಸರು ಮಿಶ್ರಜ್ಞಾನದಿಂದ, ನಿರಯ ಭೂಸ್ವರ್ಗಗಳಲ್ಲಿ ತಿರುಗುತ್ತಿರುವರು. ಸಾತ್ವಿಕರು ಶ್ರೀಹರಿತದ್ಭಕ್ತರಲ್ಲಿ ತತ್ತದ್ಯೋಗ್ಯಭಕ್ತಿಯನ್ನು ಮಾಡಿ, ಶ್ರವಣಮನನಧ್ಯಾನಗಳಿಂದ, ಅಪರೋಕ್ಷಜ್ಞಾನವನ್ನು ಪಡೆದು, ಸ್ವರೂಪಾನಂದಾವಿರ್ಭಾವ ಲಕ್ಷಣವಾದ ಮೋಕ್ಷವನ್ನು ಪಡೆದು, ನಿತ್ಯಸುಖಿಗಳಾಗುವರು. ಸಾತ್ವಿಕರು ತಾಮಸರಾಗುವುದಿಲ್ಲ; ತಾಮಸರು ಸಾತ್ವಿಕರಾಗುವದಿಲ್ಲ; ಸ್ವಭಾವವು ಅನಿವಾರ್ಯವೂ, ಅಪ್ರತಿಹತವೂ ಆಗಿದೆ.

ಸಾತ್ವಿಕ ಜೀವರು ಶ್ರೀಮುಖ್ಯಪ್ರಾಣನ ಮತದಂತೆ ನಡೆವರು; ಸತ್‌ಚಿತ್ ಆನಂದ ಆತ್ಮ ಎಂದು ಉಪಾಸಿಸುವರು. ಶಬ್ದ ಸ್ಪರ್ಶರೂಪರಸಗಂಧಗಳನ್ನು ತರುವ ಇಂದ್ರಿಯಗಳನ್ನು ನಿಗ್ರಹಿಸಿ, ಮನವನ್ನು ಚಂಚಲವಾಗಿಸದೆ, ಬುದ್ಧಿವಶದಲ್ಲಿಟ್ಟು, ದಿವ್ಯಮಂಗಳ ಮೂರ್ತಿಯಾದ ಶ್ರೀರಮಣನನ್ನು ಚಿಂತಿಸಿ, ನಿರ್ದೋಷ ಜ್ಞಾನಾನಂದ ಸ್ವರೂಪನಾದ ಶ್ರೀಶನನ್ನು ಸ್ವಾಮಿ ಎಂದು ಭಾವಿಸಿ ಮುಕ್ತರಾಗುವರು. ಸಾರಾಸಾರಾಗಳನ್ನರಿತು, ಹೇಯ ಸಾಂಸಾರಿಕ ವಿಷಯಗಳಿಗೆ ಪರದಾಡದೆ, ಅತ್ಯಂತೋಪಾದೇಯನಾದ ಶ್ರೀಹರಿಯನ್ನು ಏಕಾಗ್ರಮನಸ್ಕರಾಗಿ ಭಜಿಸುವರು. ಶ್ರೀಗೋವಿಂದ ಸುಂದರ ಪಾದಾರವಿಂದ ಸಕ್ತ ಚಿತ್ತನಾದ ಭಕ್ತನಿಗೆ ಮತ್ತಾವುದೂ ಗೋಚರಿಸದು. ಶ್ರೀಹರಿನಾಮಾಮೃತಪಾನದಿಂದ ಆನಂದಿತನಾದವನಿಗೆ, ವಿಷಯ ವಿಷಸಮ ಸುಖಗಳಲ್ಲಿ ಚಿತ್ತವು ತತ್ತರಿಸದು.

ಶ್ರೀಹರಿನಾಮ ಜಪದಿಂದ ಸರ್ವಪಾಪಗಳೂ ನಾಶವಾಗಿ, ಮನಸ್ಸು ನಿರ್ಮಲವಾಗುವುದು. ಅರ್ಥಗ್ರಹಣವಿಲ್ಲದ ಬರಿಯ ಜಪವು ಅಷ್ಟು ಫಲದಾಯಕವಲ್ಲ. ಗಿಳಿಯಂತೆ ವೇದವನ್ನುಚ್ಚರಿಸಿದವನಕಿಂತಲೂ, ಅರ್ಥವನ್ನರಿತು, ಶ್ರೀಹರಿಯೇ ಸರ್ವವೇದ ಮುಖ್ಯ ಪ್ರತಿಪಾದ್ಯನೆಂದು ಉಪಾಸಿಸುವವನು ಉತ್ತಮ ಜ್ಞಾನಿಯು, ಅಹಂಕಾರದಿಂದ ಲಾಗಲಿ, ದರ್ಪದಿಂದಾಗಲಿ, ಮಾಡಿದ ಜಪವು ನಿಷ್ಫಲವಾಗುವುದು. ಫಲಾಪೇಕ್ಷೆಯಿಂದ ಮಾಡಿದ ಜಪವು ಸ್ವರ್ಗಾದಿಫಲವನ್ನಿತ್ತು, ಮತ್ತೆ ಜನನಮರಣರೂಪ ಚಕ್ರದಲ್ಲಿ ಕೆಡಹುವದು. ಶ್ರೀಹರಿಪ್ರೀತಿಗಾಗಿ, ಜ್ಞಾನಪೂರ್ವಕವಾಗಿ ಮಾಡಿದ ಜಪವು ಮೋಕ್ಷಸಾಧನವಾಗುವುದು. ಶ್ರೀಹರಿ ಲೋಕವನ್ನು ಬಿಟ್ಟು ಇತರ ಸರ್ವಲೋಕಗಳು ಕೂಡಾ ಉಪಾದೇಯಗಳಲ್ಲ. ಜನನ ಮರಣ, ತೃಷ್ಣಾ ಬುಭುಕ್ಷ, ರಾಗ, ದ್ವೇಷಗಳೇ ಮುಂತಾದ ದೋಷಗಳಿಲ್ಲದ ಶ್ರೀಹರಿಯ ವೈಕುಂಠ, ಅನಂತಾಸನ, ಶ್ವೇತದ್ವೀಪಗಳೆಂಬ ಮುಕ್ತ ಸ್ಥಾನಗಳು ಅತ್ಯಂತೋಪಾದೇಯವಾಗಿವೆ.

ಹಿಂದೆ ಕೌಶಿಕನೆಂಬ ವಿಪ್ರನು ನಿಯಮದಿಂದ ವಿಪ್ರಕರ್ಮಾನುಷ್ಠಾನತತ್ಪರನಾಗಿ, ಸಂಹಿತಾಪಾಠವನ್ನು ಮಾಡುತ್ತಿದ್ದನು. ಅವನಲ್ಲಿ ದಯೆದೋರಿ ಸಾವಿತ್ರೀದೇವಿಯು ಪ್ರತ್ಯಕ್ಷಳಾಗಿ ವರವನ್ನು ಬೇಡು! ಎಂದಳು. ಆ ವಿಪ್ರನು ತಾನು ಜಾಪಕನೆಂಬ ನಿಷ್ಠೆಯಿಂದ, 'ದೇವಿ! ನನಗೆ ಜಪರೂಪ ವೇದಾಧ್ಯನಕಿಂತಲು, ಬೇರೆ ವರವು ಬೇಕಿಲ್ಲ' ಎಂದನು. ಅದೇ ವರವನ್ನಿತ್ತು ದೇವಿಯು ಕನಿಕರಿಸಿ, 'ಮುಂದೆ ನಿನಗೆ ಜ್ಞಾನೋದಯವಾಗಿ, ಸತ್ಯಲೋಕವನ್ನು ಸೇರುವೆ! ಮುಕ್ತನೂ ಆಗುವಂತೆ ಸಾಧನ ಸಂಪತ್ತಿಯನ್ನು ಅನುಗ್ರಹಿಸುವೆನು' ಎಂದು ಹೇಳಿ ಅಂತರ್ಧಿತಳಾದಳು.

ಕೌಶಿಕನು ಮತ್ತೆ ನೂರು ವರ್ಷಗಳ ಕಾಲ ಜಪತತ್ಪರನಾಗಿದ್ದನು. ಧರ್ಮನು ಪ್ರತ್ಯಕ್ಷನಾಗಿ 'ಜಾಪಕ! ನಾನು ಧರ್ಮನು. ಸಂಹಿತಾಜಪವನ್ನು ಮಾಡಿ, ಬಹು ಪುಣ್ಯಲೋಕವನ್ನು ಗಳಿಸಿರುವೆ! ಏಳು! ಶರೀರವನ್ನು ಬಿಟ್ಟು, ಆ ದಿವ್ಯ ಲೋಕವನ್ನು ಸೇರು!' ಎಂದನು. ಕೌಶಿಕನು ಸಂಹಿತೆಯ ಸಂತತ ಜಪದಿಂದ ವಿಜ್ಞಾನಿಯಾಗಿ, ಆ ಪುಣ್ಯಲೋಕಗಳೂ, ಮನುಜಲೋಕದಂತೆ ನಶ್ವರಹೇಯಗಳೆಂದು ತಿಳಿದಿದ್ದನು. ಕೈವಲ್ಯಾಕಾಂಕ್ಷಿಯಾದ ತನಗೆ, ಕರ್ಮಫಲರೂಪವಾದ ಸ್ವರ್ಗಾದಿಗಳು ಬೇಡವೆಂದನು. ಆಗ ಕಾಲ ಮೃತ್ಯು ಯಮರೂ ಆ ಬ್ರಾಹ್ಮಣನನ್ನು ಕಂಡರು. "ನಿನಗೆ ಕಾಲವನ್ನು ಸೂಚಿಸಲು ಬಂದಿರುವೆನು" ಎಂದನು. ಯಮನು 'ಜಾಪಕ! ನಿನ್ನ ಸುಕೃತಲೋಕಗಳನ್ನು ಹೊಂದಿಸುವೆನು. ಬಾ!' ಎಂದನು. ವಿಪ್ರನು ಅವರಿಗೆ ಸ್ವಾಗತವನ್ನಿತ್ತು, ಪೂಜಿಸಿದನು.

ಆ ಸಮಯದಲ್ಲಿ ಇಕ್ಷ್ವಾಕುರಾಜನು ತೀರ್ಥಯಾತ್ರಾಪರಾಯಣನಾಗಿ, ಅಲ್ಲಿಗೆ ಬಂದನು. ಜಾಪಕನು ಆ ಮಹಾರಾಜನಿಗೆ ಆತಿಥ್ಯವನ್ನಿತ್ತು 'ನನ್ನಿಂದ ಏನಾಗಬೇಕು? ಬೇಡು!' ಎಂದನು. ರಾಜನು 'ವಿಪ್ರವರ! ನಾನು ರಾಜನು; ನೀನು ವಿಪ್ರನು; ನನ್ನಿಂದ ನೀನು ಸ್ವೀಕರಿಸಬೇಕು. ನಾನು ಕ್ಷತ್ರಿಯನಾದ ಕಾರಣ ಪ್ರತಿಗ್ರಹವನ್ನು ಮಾಡಲಾಗದು. ನಿನಗೆ ಬೇಕಾದ ಕನಕವಸನ ರತ್ನಾದಿಗಳನ್ನು ಬೇಡು! ಕೊಡುವೆನು' ಎಂದನು. ವಿಪ್ರನು 'ರಾಜನ್! ನಿವೃತ್ತ ಕರ್ಮತತ್ಪರನಾಗಿರುವೆನು. ನನ್ನ ಮನೆಗೆ ಬಂದು, ಅತಿಥಿಯಾಗಿ, ಬೇಡದೆ ಹೋಗಬಾರದು. ಬೇಡಲಾರದ ನನ್ನಿಂದ ನೀನೇ ಬೇಡು!' ಎಂದನು. ರಾಜನು 'ನಿನ್ನ ವರ್ಷಶತದ ಜಪಫಲವನ್ನು ಕೊಡುವೆಯಾ? ಅದರ ಫಲವೇನು?' ಎಂದು ಕೇಳಿದನು. ವಿಪ್ರನು, 'ಫಲವಿಚಾರವೆನಗೆ ಗೊತ್ತಿಲ್ಲ. ಏನು ಬಂದಿದೆಯೋ ಅದೆಲ್ಲ ಪುಣ್ಯವನ್ನು ಕೊಡುವೆನು. ನನ್ನ ದಾನಕ್ಕೆ ಧರ್ಮ ಕಾಲ, ಮೃತ್ಯು, ಯಮರೇ ಸಾಕ್ಷಿ' ಎಂದನು. ರಾಜನು, 'ಫಲವಿಷ್ಟೆಂದು ಗೊತ್ತಿಲ್ಲದ ಜಪ ಪುಣ್ಯವೆನಗೆ ಬೇಡ!' ಎಂದನು. 'ರಾಜೇಂದ್ರ! ನಾನು ಫಲಾಭಿಸಂಧಿಯಿಂದ ಜಪವನ್ನು ಮಾಡಿಲ್ಲ. ಮೊದಲು ಕೊಡು! ಎಂದು ಬೇಡಿ, ಮತ್ತೆ ಬೇಡವೆಂದು, ನನ್ನ ಮಾತನ್ನು ಸುಳ್ಳಾಗಿಸಬೇಡ! ನಿನ್ನಂತಹ ಮಹಾರಾಜನಿಗೆ ಅನೃತಭಾಷಣವು ಉಚಿತವಲ್ಲ. ನನ್ನನ್ನೂ ಮಿಥ್ಯಾವಚನನನ್ನಾಗಿಸಬೇಡ! ಮೃಷಾವಾದಿಗೆ ಇಹ ಪರ ಸುಖವಿಲ್ಲ. ಅವನ ಪಿತೃಗಳು ನರಕಪತಿತರಾಗುವರು. ಸತ್ಯವೇ ಜಗನ್ಮೂಲವಾಗಿದೆ. ಸತ್ಯಕ್ಕೆ

ಸಮವಾದ ಧರ್ಮವಿಲ್ಲ. ಸತ್ಯವು ಭಗವದ್ರೂಪವಾಗಿದೆ. ಸತ್, ತಿಯ, ಎಂಬ ಅಕ್ಷರಗಳಿಗೆ ನಿರ್ದುಃಖಜ್ಞಾನಾನಂದ ಸ್ವರೂಪನೆಂದು ಅರ್ಥ. ಅಂತಹ ಸತ್ಯವನ್ನು ಬಿಡಬಾರದು.

ಕೊಡುವೆನೆಂದು ಕೊಡದವನೂ, ಕೊಡು! ಎಂದು ಬೇಡಿಕೊಳ್ಳದವನೂ ಮೃಷಾವಾದಿಗಳೆನಿಸಿ; ಅಪಕೀರ್ತಿ ನರಕಗಳನ್ನು ಹೊಂದುವರು. ನಾನು ನಿನ್ನ ಮನೆಗೆ ಬಂದವನಲ್ಲ. ನೀನಾಗಿ ಬಂದೆ! ಬೇಡಿದ ಜಪಫಲವನ್ನು! ಸ್ವೀಕರಿಸದೆ ಹೋಗುವುದು ನಿನಗೆ ಉಚಿತವಲ್ಲ' ಎಂದನು. ಇಂತು ರಾಜನು ಪ್ರತಿಗ್ರಹವನ್ನು ಮಾಡಲಾರದೆ, ವಿಪ್ರನು ಮೃಷಾವಚನನಾಗಲಾರದೆ ವಿವದಿಸುತ್ತಿದ್ದರು.

ಆಗ ವಿಕೃತವೇಷರಾದ ಇಬ್ಬರು ಅಲ್ಲಿಗೆ ಬಂದರು. 'ನನಗೆ ನೀನೇನೂ ಕೊಡಬೇಕಾಗಿಲ್ಲ' ಎಂದು ಒಬ್ಬನೆಂದರೆ, ಮತ್ತೊಬ್ಬನು, 'ಇಲ್ಲ. ನಾನು ನಿನಗೆ ಕೊಡಬೇಕಾದದ್ದಿದೆ' ಎಂದು ನುಡಿಯುತ್ತಿದ್ದನು. ವಿರೂಪನೆಂಬ ಪ್ರಥಮನು 'ರಾಜನ್! ಈ ವಿಕೃತನಿಗೆ ನಾನು ಗೋಫಲವನ್ನು ಕೊಡಬೇಕಾಗಿದೆ. ಸಾಲವನ್ನು ತೀರಿಸಲು ಕೊಡುವ ನನ್ನ ಗೋಫಲವನ್ನು ವಿಕೃತನು ಸ್ವೀಕರಿಸುತ್ತಿಲ್ಲ' ಎಂದನು. ವಿಕೃತನು 'ಇಲ್ಲ ಅವನು ನನಗೆ ಏನೂ ಕೊಡಬೇಕಾಗಿಲ್ಲ' ಎಂದನು. ಹಿಂದೆ ವಿಕೃತನು ಧರ್ಮಫಲಾರ್ಥಿಯಾಗಿ ಗೋವನ್ನಿತ್ತನು. ಆ ಗೋದಾನದ ಫಲವನ್ನು ನಾನು ಬೇಡಲು ಅವನು ಕೊಟ್ಟನು. ಆಮೇಲೆ ನಾನು ಅತಿ ಪವಿತ್ರ ಕರ್ಮಗಳನ್ನು ಮಾಡಿ, ಶುದ್ಧಾಂತಃಕರಣನಾದೆನು. ಅನಂತರ ನಾನು ಎರಡು ಆಕಳುಗಳನ್ನು ಕರುಗಳಿಂದ ಕೂಡಿಸಿ, ಪಾತ್ರವಿಪ್ರನಿಗಿತ್ತೆನು. ಅಂತಹ ದ್ವಿಗುಣ ಫಲವನ್ನು ಈಗ ಇವನಿಗೆ ಕೊಡಲುಳ್ಳವನಾಗಿ, ಬಂದು ಸ್ವೀಕರಿಸೆಂದರೆ, ವಿಕೃತನು 'ಒಲ್ಲೆ' ನೆಂದು ತಿರಸ್ಕರಿಸುತ್ತಿರುವನು. ರಾಜೋತ್ತಮನಾದ ನೀನು ನಮ್ಮ ವಿವಾದವನ್ನು ಬಗೆಹರಿಸು!' ಎಂದನು. 'ಅವನೇ ಕೊಡುವೆನೆಂದ ಮಾತ್ರಕ್ಕೆ, ನಾನು ದಾನವನ್ನೇಕೆ ಸ್ವೀಕರಿಸಲಿ?' ಎಂದು ವಿಕೃತನು ನುಡಿದನು. ವಿಪ್ರಧರ್ಮವು ಸ್ವೀಕಾರವಾಗಿದೆ. ಕ್ಷತ್ರಿಯ ಧರ್ಮವು ದಾನವಾಗಿದೆ. ಹಿಂದೆಂದೂ ಕೈಯೊಡ್ಡದ ರಾಜನಿಗೆ ಜಪಫಲವನ್ನು ದಾನವಾಗಿ ಎಂತು ಸ್ವೀಕರಿಸಬೇಕೆಂಬ ಚಿಂತೆಯನ್ನೂ, ಕೊಡುವೆನೆಂದು ಹೇಳಿ, ಕೊಡದಿದ್ದರೆ ಪಾಪವೆಂಬ ವಿಪ್ರನ ಚಿಂತೆಯನ್ನೂ ಕಂಡು, ಧರ್ಮನು ಅವರೀರ್ವರಿಗೂ ಸಮಾನ ಪುಣ್ಯವನ್ನಿತ್ತು, ಅನುಗ್ರಹಿಸಿದನು.

ಸಂಹಿತಾಧ್ಯಾಯಿಯು ನಿಷ್ಕಾಮಕರ್ಮರತನಾದರೆ ಅರ್ಚಿರಾದಿಮಾರ್ಗದಿಂದ ಮೋಕ್ಷವನ್ನೂ, ಸಕಾಮನಾಗಿದ್ದರೆ ಧೂಮಾದಿ ಮಾರ್ಗದಿಂದ ಚಂದ್ರಲೋಕ, ಸ್ವರ್ಗಗಳನ್ನೂ ಹೊಂದುವನು. ಶಾಂತನು, ವಿಜ್ಞಾನಿಯು ಆದವನಿಗೆ ಮೋಕ್ಷವಾಗುವುದು. ಅವನು ಮತ್ತೆ ಜನನಮರಣ ರೂಪ ಸಂಸಾರ ಚಕ್ರದಲ್ಲಿ ಬೀಳನು. ಪ್ರವೃತ್ತಿ ಕರ್ಮರತನು ಪುಣ್ಯಫಲವನ್ನುಂಡು, ಮತ್ತೆ ಜನಿಸುವನು. ಮೋಕ್ಷಸ್ಥಾನವಾದ ವೈಕುಂಠದಕಿಂತಲು ಉತ್ತಮ ಲೋಕವಿಲ್ಲ. ಅದರ ಮುಂದೆ ಮತ್ತೆಲ್ಲ ಲೋಕಗಳು ಪುನರಾವೃತ್ತಿ ಸಹಿತವಾಗಿರುವುದರಿಂದ ಹೇಯಗಳೇ ಆಗುವವು. ಸ್ವಧರ್ಮರತರಾಗಿ, ಧರ್ಮಯಮಕಾಲ ಮೃತ್ಯುದೇವತೆಗಳ ಮೆಚ್ಚುಗೆಯನ್ನು ಗಳಿಸಿದ, ಕೌಶೀಕೇಕ್ಷ್ವಾಕುಗಳು ದಿವ್ಯಲೋಕಗಳನ್ನು

ಹೊಂದಿದರು. ಅವರು ಮೋಕ್ಷವನ್ನು ಹೊಂದಲು ತೆರಳಿದಾಗ, ಆಕಾಶದಲ್ಲಿ ದೇವತೆಗಳು ನಿಂತು ಅಭಿನಂದಿಸಿದರು. ಪೂಮಳೆಗೆರೆಯಿತು. ದೇವದುಂದುಭಿಗಳು ಮೊಳಗಿದವು. ಗಂಧರ್ವರು ಪಾಡಿದರು. ಅಪ್ಸರೆಯರಾಡಿದರು. ಅವರೀರ್ವರು ಬ್ರಹ್ಮಲೋಕವನ್ನು ಸೇರಿ, ಮುಕ್ತಪ್ರಾಯರಾಗಿ, ಸುಖಿಸಿದರು.

ಶ್ರೀಹರಿಭಕ್ತರಾದ ಜಾಪಕರಿಗೆ ಆಗುವ ಪುಣ್ಯಲೋಕ ಮೋಕ್ಷಗಳು, ಮನ್ವಾದಿ ಸ್ಮೃತಿಗಳನ್ನು ಪಠಿಸಿ ಸುಕರ್ಮಗಳನ್ನು ಮಾಡಿ, ಶ್ರೀಹರಿಗರ್ಪಿಸಿ, ಜ್ಞಾನಪಕ್ವರಾದವರೆಲ್ಲರಿಗೂ ಆಗುವವು. ಇಂತು ಜಾಪಕಾಖ್ಯಾನವನ್ನು ನಿನಗೆ ಪೇಳಿದೆನು. ಇದನ್ನು ಕೇಳಿ, ಶ್ರೀಹರಿಯೇ ಸರ್ವವೇದಾರ್ಥನೆಂದು ತಿಳಿದವರೂ ಕ್ರಮವಾಗಿ ಜ್ಞಾನವನ್ನು ಹೊಂದಿ, ಮುಕ್ತರಾಗುವರು.'

## ೪. ಮನು ಬೃಹಸ್ಪತಿ ಸಂವಾದ

ಧರ್ಮರಾಜನು 'ಜ್ಞಾನಯೋಗವನ್ನು ನನಗೆ ನಿರೂಪಿಸು. ಸರ್ವ ಭೂತಾಂತರ್ಯಾಮಿಯಾದ ಶ್ರೀಹರಿಯನ್ನು ತಿಳಿವ ಬಗೆ ಎಂತು?' ಎಂದು ಕೇಳಿದನು. ಭೀಷ್ಮನಿಂತು ನುಡಿದನು : 'ಹಿಂದೆ ಪ್ರಜಾಪತಿಗಳಲ್ಲಿ ಶ್ರೇಷ್ಠನಾದ ಮನುರಾಜನು ಬೃಹಸ್ಪತಿಗೆ ನಿರೂಪಿಸಿದ ಜ್ಞಾನಯೋಗವನ್ನು ನಿನಗೆ ಹೇಳುವೆನು. 'ಮನುರಾಜ ! ಜಗತ್ಕಾರಣನಾರು ? ವಿಧಿನಿಷೇಧಗಳೇಕೆ ಪ್ರವೃತ್ತವಾಗಿವೆ ? ಜ್ಞಾನದ ಫಲವೇನು ? ವೇದವಚನಗಳಿಗೂ ಹೇಳಲು ಮುಗಿಯದ ಮಹಾಮಹಿಮೆಯನ್ನು ಉಳ್ಳವನಾರು ? ಅರ್ಥಶಾಸ್ತ್ರ, ವೇದ ಮಂತ್ರಗಳು, ಯಜ್ಞಯಾಗಗಳು, ಗೋದಾನ ಮುಂತಾದುವನ್ನು ಓದಿ, ಮಾಡಿ ಪಡೆಯುವ ಸುಖವೆಂತಹದು ? ಅದು ಹೇಗೆ ಸಿಗುವುದು ? ವೇದ, ಪುರಾಣ, ಜ್ಯೋತಿಷ ವ್ಯಾಕರಣ, ನಿರುಕ್ತ, ಕಲ್ಪ, ಮೀಮಾಂಸೆಗಳನ್ನು ನಾನು ಚೆನ್ನಾಗಿ ಅರಿಯೆನು. ದೇವನಿರುವನೆಂದು ತಿಳಿದಲ್ಲವೇ, ಆಮೇಲೆ ಅವನ ಸತ್ಯಜ್ಞಾನಾನಂದಾದಿ ಕಲ್ಯಾಣಗುಣಗಳನ್ನು ವಿಚಾರಿಸಿ ತಿಳಿಯಬೇಕು ? ಶರೀರವನ್ನು ಬಿಟ್ಟು ಹೋಗುವ ಜೀವನು ಮತ್ತೊಂದು ಶರೀರವನ್ನು ಹೊಂದುವುದೆಂತು ? ' ಎಂದು ಕೇಳಿದನು.

ಭೀಷ್ಮನಿಂತೆಂದನು : 'ಆ ಮಾತನ್ನಾಲಿಸಿ, ಮನುರಾಜನು, 'ಜೀವ ಮಾತ್ರನಿಗೆ ಸುಖವು ಇಷ್ಟವಾಗಿ, ದುಃಖವು ಅನಿಷ್ಟವಾಗಿದೆ. ಸುಖವನ್ನೇ ಬಯಸಿ, ದುಃಖವನ್ನು ಬೇಡವೆಂಬ ಜೀವರು ಸ್ವತಂತ್ರರಲ್ಲ; ಸುಖವು ದೂರವಾಗಿ, ದುಃಖವು ಪ್ರಾಪ್ತವಾದಾಗ, ಸುಜೀವರಾಗಿದ್ದವರಿಗೆ ಮಾತ್ರ ವೈರಾಗ್ಯವು ಹುಟ್ಟುವುದು. ಕರ್ಮಗಳನ್ನು ಮಾಡುತ್ತಾ ಫಲವನ್ನು ಬೇಡಿದವನಿಗೆ ಮುಕ್ತಿಯಾಗುವದಿಲ್ಲ. ಕರ್ಮಫಲವನ್ನು ಬೇಡದವನು, ಶುದ್ಧಾಂತಃಕರಣನಾಗುವನು. ಅವನು ನಿತ್ಯಸುಖವಾದ ಮೋಕ್ಷವನ್ನು ಬಯಸಿ, ವೇದಾದಿ ವಿಚಾರದಿಂದ ಜ್ಞಾನಿಯಾದಾಗ, ಶ್ರೀಶಪ್ರಸಾದಪಾತ್ರನಾಗುವನು. ಮುಖ್ಯಪ್ರಾಣನ ಪ್ರಸಾದದಿಂದ, ಕಣ್ಣಿಗೆ ಕವಿದ ಅಜ್ಞಾನವೆಂಬ ಕತ್ತಲನ್ನು ಕಳೆದುಕೊಂಡು, ಅಶುಭಕರ್ಮವನ್ನೇ

ಪೂರ್ತಿಬಿಟ್ಟು. ಪ್ರವೃತ್ತಿಕರ್ಮವನ್ನು ಮಾಡದೆ, ನಿವೃತ್ತಿ ಕರ್ಮವನ್ನೇ ಮಾಡುವನು. ಅವನು ಜ್ಞಾನಫಲವಾದ ಶಾಂತಿ ಸುಖಗಳಿಂದ ತೃಪ್ತನಾಗಿ, ಅಜ್ಞಾನಿಗಳು ಬೀಳುವ ಸಂಸಾರ ಕೂಪದಲ್ಲಿ ಬೀಳದಿರುವನು. ಸರ್ಪ, ಕಂಟಕ, ಕೂಪಗಳನ್ನು ಅರಿತವನು ಅವನ್ನು ಪರಿವರ್ಜಿಸುವನು. ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಸಫಲವಾಗುವುದು. ಅಂತಹ ಕರ್ಮವು ಮಂತ್ರ, ಏಕಾಗ್ರತೆ, ಹೋಮ, ಅನ್ನದಾನ, ದಕ್ಷಿಣೆ ಎಂಬ ಐದು ತಂತ್ರಗಳಿಂದ ಊರ್ಜಿತವಾಗುವುದು.

ಶರೀರವಂತನಿಂದ ಮಾಡಲ್ಪಡುವ ಕರ್ಮದ ಫಲವು ಶರೀರವಂತನಿಂದಲೇ ಉಣ್ಣಲ್ಪಡಬೇಕು. ಏಕೆಂದರೆ ಅಶರೀರನಾದವನಿಗೆ ಕರ್ಮಫಲರೂಪವಾದ ಸುಖ ದುಃಖಗಳನ್ನು ಅನುಭವಿಸಲು ಬರುವುದಿಲ್ಲ. ವಾಚಿಕವಾದ ಜಪಾದಿಗಳು ಮತ್ತು ಮಾನಸಿಕವಾದ ಧ್ಯಾನಾದಿಗಳು ಕೂಡ ವಾಚಿಕ ಮಾನಸಿಕ ಫಲವನ್ನು ಶರೀರವಂತನಿಗೆ ಕೊಡುವವು. ಆದುದರಿಂದ ತ್ರಿವಿಧ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡಿದಾಗಲೇ ಮೋಕ್ಷ ಸಾಧನವೆನಿಸುವವು. ಫಲಾಪೇಕ್ಷೆಯಿಂದ ಮಾಡಿದವು ಇತರ ದೇಹ ಕಾರಣವಾಗುವವು. ಇಂತು ಪ್ರವೃತ್ತಿ ಕರ್ಮವು ಮೋಕ್ಷಸಾಧನವಲ್ಲವೆಂದರಿತು, ನಿವೃತ್ತಿ ಕರ್ಮವನ್ನೇ ಮಾಡಬೇಕು. ಪೂರ್ವಕೃತ ಕರ್ಮಫಲವು ಬಿಡದೆ ಪ್ರವಾಹಕ್ಕೆ ಸಿಕ್ಕ ಮೀನಿನಂತೆ ಮನುಜರನ್ನು ಕಟ್ಟಿ ಉಣಿಸುವುದು. ಯಾವ ವಸ್ತುವು ವೇದ ಭಾರತ ಪಂಚರಾತ್ರಾಗಮ ಮೂಲ ರಾಮಾಯಣಗಳಿಂದಲೂ, ತದನುಕೂಲ ಭಗವತಾದಿ ಸಚ್ಛಾಸ್ತ್ರದಿಂದಲು, ಜಗಜ್ಜನ್ಮಾದಿ ಕಾರಣವೆಂದು ಪ್ರತಿಪಾದಿತವಾಗಿದೆಯೋ ಯಾವ ವಸ್ತುವನ್ನು ವರ್ಣಿಸಲು ಬ್ರಹ್ಮರುದ್ರೇಂದ್ರಾದಿಗಳಿಗಳವಲ್ಲವೋ ಅಂತಹ ಲಕ್ಷ್ಮೀರಮಣನನ್ನು ತಿಳಿ! ಆ ಪರಬ್ರಹ್ಮನನ್ನು ಚಕ್ಷುರಾದೀಂದ್ರಿಯಗಳಿಂದ ತಿಳಿಯಲಾಗದು. ಅವನನ್ನು ಪರಮಾಕ್ಷರನೆಂಬರು. ಅವನು ಜಲದಲ್ಲಿ ಶಯನಿಸಿ, ಜಲವನ್ನು ಸೃಜಿಸಿ, ಜಲದಿಂದ ಎಲ್ಲವನ್ನೂ ನಿರ್ಮಿಸಿದನಾದುದರಿಂದ ನಾರಾಯಣನೆಂದು ಖ್ಯಾತನಾಗಿರುವನು.

ಶ್ರೀಹರಿಯಿಂದ ಸೃಷ್ಟವಾಗಿ, ಆತನ ಅಧೀನದಲ್ಲಿರುವ ಜಗವು ಅಸ್ವತಂತ್ರವು, ಅಲ್ಪಜ್ಞವು ಆಗಿದೆ. ಯಾವ ಇಂದ್ರಿಯದಿಂದಲೂ ಗೋಚರನಾಗದ ಹೃಷಿಕೇಶನು ಜಗದ್ವಿಲಕ್ಷಣನು, ಅಪ್ರಮೇಯಮಹಿಮನು ಆಗಿರುವನು. ವೃಕ್ಷಾಗ್ರದಲ್ಲಿರುವ ಪ್ರದೀಪವು ಸುತ್ತೂ ಪ್ರಕಾಶವನ್ನು ಬೀರುವಂತೆ, ಜೀವನು ಹೃದಯದಲ್ಲಿದ್ದು, ಜ್ಞಾನ ಕರ್ಮೇಂದ್ರಿಯಗಳ ದ್ವಾರಾ ಪ್ರಕಾಶವನ್ನು ಬೀರಿ, ತಿಳಿಯುತ್ತಿರುವನು. ಅವನ ಅಂತರ್ಯಾಮಿಯು ಸರ್ವಾಂತರ್ಯಾಮಿಯೇ ಆಗಿ ಸ್ವಗತಭೇದವಿವರ್ಜಿತನಾಗಿರುವನು. ಜೀವ ಪರಮಾತ್ಮರು ಒಂದೇ ದೇಹದಲ್ಲಿದ್ದರೂ ಜೀವನು ಅಹಂ ಎಂದು ವೇದ್ಯನಾಗಿರುವಂತೆ ಪರಮಾತ್ಮನು ತಿಳಿಯಲ್ಪಡದಿರುವನು. ಪರಶುವನ್ನು ಹಿಡಿದು, ದೇಹವನ್ನು ಸೀಳಿ, ನೋಡುವಂತಹ ಭೌತಿಕ ವಸ್ತುವಲ್ಲ ಶ್ರೀಶನು. ಕಾಷ್ಠಗಳನ್ನು ಮಥಿಸಿ, ಅಗ್ನಿಯನ್ನು ಕಾಣುವಂತೆ, ಶಾಸ್ತ್ರವಿಚಾರದಿಂದ ಮಾತ್ರ ಶ್ರೀಹರಿಯನ್ನು ತಿಳಿಯಲು ಬರುವುದು. ಶ್ರೀಹರಿಯಿಂದ ಪ್ರೇರಿತನಾಗಿ ಜೀವನು ಶರೀರದಿಂದ ಶರೀರಕ್ಕೆ ಸಾರುತ್ತಾ ಲಿಂಗಶರೀರವಿರುವವರೆಗೂ

ಸಂಸಾರ ಪತಿತನಾಗಿರುವನು. ಶ್ರೀಸಮೀರಾನುಗ್ರಹೀತ ಜೀವನು ಜ್ಞಾನಭಕ್ತಿ ವೈರಾಗ್ಯಭರಿತನಾಗಿ, ತನ್ನ ಅಂತರ್ಯಾಮಿಯನ್ನು ಕಂಡಾಗ ಅವನ ಲಿಂಗ ಶರೀರವು ಪತಿತವಾಗುವುದು. ಅವನ ಭೌತಿಕೇಂದ್ರಿಯಗಳು ಭೂತಗಳಲ್ಲಿ ಸೇರಿಹೋಗುವವು. ಆಗ ಅವನ ಸ್ವರೂಪಾನಂದದ ಆವಿರ್ಭಾವವಾಗುವುದು.

ಅಂತಹ ಪರಮಾತ್ಮನು ಅವ್ಯಕ್ತ ಸ್ವಭಾವನಾದುದರಿಂದ ಜೀವನು ಸ್ವಪ್ರಯತ್ನ ಅಂದರೆ ವೇದಾಧ್ಯಯನ ವ್ರತದಾನ ತಪೋಯಜ್ಞಾದಿಗಳಿಂದ ಮಾತ್ರ ನೋಡಲಾರನು. ದೇವದೇವನ ಪ್ರಸಾದವಾವನಲ್ಲಿ ಪ್ರಸರಿಸುವುದೊ, ಅಂತಹಸಿದ್ಧ ಜೀವನಿಗೆ ಮಾತ್ರ ಯಥಾಯೋಗ್ಯವಾದ ಅಪರೋಕ್ಷವಾಗಿ ಸ್ವಯೋಗ್ಯ ಬಿಂಬದರ್ಶನವಾಗುವುದು. ಹಿಮವತ್ಪಾರ್ಶ್ವವು ನಮಗೆ ಕಾಣದೆಂದು ಇಲ್ಲವೆನ್ನಬಹುದೇ? ಚಂದ್ರಮನ ಹಿಂಭಾಗವು ಎಂದೂ ಕಾಣದೆಂದು ಇಲ್ಲವೆನ್ನಲಾದೀತೇ? ಅಂತೆಯೇ ಶ್ರೀದೇವನು ಬಿಂಬನಾಗಿ ಮುಖ್ಯಪ್ರಾಣಸಮೇತನಾಗಿ ಜೀವನವನ್ನು ನಡೆಸುತ್ತಿರುವನೆಂದು ತಿಳಿದು ಕಾಣುವುದಿಲ್ಲವಾದ ಕಾರಣ ಇಲ್ಲವೇ ಇಲ್ಲ ಎನ್ನಲಾಗದು.

ಸೂತ್ರ ಜಾಲದಲ್ಲಿ ಮೀನುಗಳನ್ನು ಪಿಡಿವ ಜಾಲರಂತೆ ಬ್ರಹ್ಮಸೂತ್ರಗಳಿಂದ ಜಲಶಯನನ್ನು ತಿಳಿದು, ಹೃದಯದಲ್ಲಿ ಬಂಧಿಸಬೇಕು. ಗಜಗಳನ್ನು ಗಜಗಳ ಸಹಾಯದಿಂದ ಹಿಡಿವಂತೆ, ಶ್ರೀಹರಿಜ್ಞಾನವನ್ನು ವಿಚಾರ ಶಕ್ತಿಯಿಂದ ಸಂಪಾದಿಸಬೇಕು. ಕಣ್ಣಿಂದ ಕಿವಿಯನ್ನು ನೋಡಲಾಗದು; ಅಂದ ಮೇಲೆ ಇಂದ್ರಿಯಗಳಿಂದ ಜ್ಞಾನವನ್ನು ಪಡೆದ ಜೀವನು ಶ್ರೀಹರಿಯನ್ನೆಂತು ಕಾಣಲಾದೀತು? ಇಂದ್ರಿಯಗಳಿಗೂ ಮಿತವಾದ ಶಕ್ತಿ ಇದೆ; ಕಣ್ಣಿಂದ ನಡೆಯಲಾಗದು; ಕಾಲಿನಿಂದ ಮೂಸಲಾಗದು; ಇಂತಹ ಇಂದ್ರಿಯಗಳಿಗೆ ವಶನಾಗಿ ಮಿತಜ್ಞಾನಿಯಾದ ಜೀವನೆಲ್ಲಿ? ಎಲ್ಲ ಇಂದ್ರಿಯಗಳೂ ಸ್ವರೂಪವೇ ಆಗಿ, ಆನಂದಮಯಗಳೇ ಆಗಿ, ಎಲ್ಲ ಇಂದ್ರಿಯಗಳಿಂದ ಎಲ್ಲ ಕಾರ್ಯವನ್ನು ಮಾಡಲು ಸಮರ್ಥನಾದ ಸರ್ವಜ್ಞ ಶ್ರೀಹರಿ ಎಲ್ಲಿ?

ಜೀವನು ಶರೀರವಲ್ಲ. ಶರೀರವು ಪಾಂಚಭೌತಿಕವು. ಚೇತನನಾದ ಜೀವನಿಂದ ವಿಲಕ್ಷಣವಾಗಿದೆ. ಜಡವಾದುದೆಲ್ಲವು ಇಂತು ಜೀವ, ಜೀವ ಭೇದ, ಜೀವೇಶಭೇದ, ಜಡೇಶಭೇದ, ಜಡಜೀವಭೇದ, ಜಡಜಡಭೇದಗಳೆಂಬ ಪಂಚ ಭೇದಗಳು ಶಾಸ್ತ್ರ ಸಿದ್ಧವಾಗಿವೆ. ಚಂದ್ರಮನಿಗೆ ಕಳೆಗಳು ಹೆಚ್ಚಾಗುವವು, ಕಡಿಮೆಯಾಗುವವು, ಕೊನೆಗೆ ಅಮಾವಾಸ್ಯೆಯ ದಿನ ಚಂದ್ರಬಿಂಬವು ಕಾಣಿಸದಾಗುವುದು. ಆಗ ಚಂದ್ರನೇ ಇಲ್ಲವೆಂಬರೇ? ಸೂರ್ಯಚಂದ್ರ ಸಮಾಗಮವಲ್ಲವೆ ಅಮಾವಾಸ್ಯೆ! ಆದುದರಿಂದ ಜೀವನು ದೇಹವಲ್ಲ. ದೇಹಕ್ಕೆ ಬರುವ ವೃದ್ಧಿಹ್ರಾಸ, ಜರಾಮರಣಾದಿಗಳೆಲ್ಲವೂ ಜೀವನಿಗಿಲ್ಲ. ಸ್ವಪ್ನದಲ್ಲಿ ಪಶುಪಕ್ಷಿ ಮನುಜಾದಿ ಶರೀರಾಂತರಗಳನ್ನು ಹೊಂದುವಂತೆ ಕರ್ಮವಾಸನಾಬಲದಿಂದ ಒಬ್ಬ ಜೀವನಿಗೆ ಅನೇಕ ದೇಹಾಂತರಗಳು ಬರುವವು.

ಕದಲುವ ನೀರಿನಲ್ಲಿ ಮುಖವು ಕಾಣದಿದ್ದರೂ, ನಿಂತ ನೀರಿನಲ್ಲಿ ಕಾಣುವುದು, ಕೆಸರು ಮೆತ್ತಿದ ಕನ್ನಡಿಯಲ್ಲಿ ಪ್ರತಿಬಿಂಬವು ಕಾಣದಿದ್ದರೂ ತೊಳೆದು ಒರಸಿದ ಕನ್ನಡಿಯಲ್ಲಿ

ಕಾಣುವುದು. ಅಂತೆಯೇ ಜೀವನು ತಾನು ನಿರ್ಮಲನಾಗಿ ನಿಶ್ಚಲನಾಗಿ ಭಕ್ತಿಯಿಂದ ಭಜಿಸಿದರೆ, ಶ್ರೀಹರಿಯನ್ನು ಕಾಣಲು ಅರ್ಹನಾಗುವನು.

ಅನಾದ್ಯವಿದ್ಯೆಯಿಂದ ಅಜ್ಞಾನಿಯಾದ ಜೀವನು ಅಹಂಮಮಕಾರಗಳಿಗೆ ಸಿಗುವನು. ಆಗ ಕಾಮಾಪೇಕ್ಷೆಯು ಹುಟ್ಟುವುದು. ಕಾಮವು ಕೆಟ್ಟರೆ ಕ್ರೋಧವು ಏರಿ ಬರುವುದು. ಅದರಿಂದ ಅದನ ಶ್ರೇಯಸ್ಸು ಕೆಡುವುದು. ಆದುದರಿಂದ ಬುದ್ಧಿವಂತನು ಸತ್ಸಂಗದಲ್ಲಿದ್ದು ವಿರಕ್ತನಾಗಿ, ಜ್ಞಾನವನ್ನು ಸಂಪಾದಿಸಬೇಕು. ಪಾಪವು ಪ್ರತಿಬಂಧಕವಾಗಿರುವಾಗ ಜ್ಞಾನಲಹರಿಯು ನಿಂತುಹೋಗುವುದು. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿ ಕೊಂಡು, ಶುದ್ಧಮನಸ್ಕನಾಗಿ, ಮತ್ತೆ ಪಾಪ ಮಾಡದವನ ಜ್ಞಾನಗಂಗೆಯು, ಶ್ರೀಹರಿಪ್ರಸಾದಕವಾಗುವುದು. ನಿರಾಹಾರನಾದವನಿಗೆ ವಿಷಯ ನಿವೃತ್ತಿ ಸಿಗಬಹುದು; ಆದರೆ ರಸನಿವೃತ್ತಿ ಹೊಂದಿದವನೇ ಇಂದ್ರಿಯ ಜಯವಂತನೆನಿಸುವನು. ರಸವೆಂದರೆ ವಿಷಯಾಭಿಲಾಷೆ. ವಿಷಯವನ್ನು ಬಿಡಬಹುದು; ವಿಷಯಸಂಗವನ್ನು ಬಿಡುವುದು ಕಷ್ಟ ರಸವರ್ಜನವನ್ನು ಮಾಡಲು ಶಕ್ತನೆಂದರೆ, ಶ್ರೀಹರಿದರ್ಶನ ಜನಿತಾನಂದ ತುಂದಿಲನಾದ ಅಪರೋಕ್ಷಜ್ಞಾನಿಯೇ? ಬೇರೆಯವರಲ್ಲ.

ಶ್ರೀಹರಿಯು ಇಂದ್ರಿಯಾಗೋಚರನು; ಪ್ರತ್ಯಕ್ಷ ಪ್ರಮಾಣದಿಂದ ಅವನನ್ನು ನೋಡಲಾಗದು. ಅನುಮಾನವು ಸ್ವತಃ ಪ್ರಮಾಣವೇ ಅಲ್ಲ, ಆದುದರಿಂದ ಊಹಿಸಿ, ಅವನನ್ನು ತಿಳಿಯಲಾಗದು. ಇಂತಾಗಿ ಅವನು ವೇದೈಕವೇದ್ಯನಾಗಿರುವನು. ಅವನ ವಿಚಾರದಲ್ಲಿ ಮನವನ್ನಿಟ್ಟು, ಗುರುಮುಖದಿಂದ ಶಾಸ್ತ್ರವನ್ನು ಅಭ್ಯಸಿಸಿದವನಿಗೆ; ಶ್ರೀಹರಿಯ ಜ್ಞಾನವಾಗುವುದು. ಮನಸ್ಸು ಬುದ್ಧಿಯ ಅಧೀನವಾಗಿ, ಬುದ್ಧಿಯ ಧ್ಯಾನವು ವಿಷ್ಣು ವಿಷಯಕವಾದಾಗ, ಶ್ರೀಹರಿಯ ಅಪರೋಕ್ಷ ಜ್ಞಾನವಾಗುವುದು.

ಪರಮಾತ್ಮನನ್ನು ಕಾಣುವ ಯೋಗಾಭ್ಯಾಸಕ್ಕೆ ಶರೀರೋಪಘಾತವಾದ ವ್ಯಾಧಿಯಿಂದಲು, ಮಾನಸೋಪಘಾತವಾದ ಶೋಕದಿಂದಲು ವಿಘ್ನವು ಒದಗಬಹುದು. ಅಂತಹ ಉಪಘಾತವನ್ನು ಅನುಚಿಂತಿಸಿದಂತೆಲ್ಲ, ಅದು ಹೆಚ್ಚು ಭಯಪ್ರದವಾಗುವುದು. ಆದುದರಿಂದ ಪ್ರಜ್ಞಾಬಲದಿಂದ ಮಾನಸೋಪಘಾತವನ್ನೂ, ಔಷಧಾದಿಗಳಿಂದ ಶಾರೀರೋಪಘಾತವನ್ನೂ ಜಯಿಸಿ, ಶ್ರೀಹರಿಚಿಂತನದಲ್ಲಿ ನಿರತನಾದವನೇ ಯೋಗಾರೂಢನೆನಿಸುವನು. ಯೌವನ ಸೌಂದರ್ಯಗಳು ಅನಿತ್ಯವಾಗಿವೆ; ಜೀವಿತವು ಬುದ್ಬುದಪ್ರಾಯವಾಗಿದೆ; ದ್ರವ್ಯವು ಚಂಚಲವಾಗಿದೆ; ಆರೋಗ್ಯವು ಸ್ಥಿರವಲ್ಲ; ಪ್ರಿಯ ಜನರ ಸಂಯೋಗವು ನಿತ್ಯವಲ್ಲ. ಇದನ್ನರಿತು ಅಶಾಶ್ವತ ವಸ್ತುಗಳಿಗೆ ಆಶೆಪಡದೆ, ಸ್ಥಿರವಾದ ಮೋಕ್ಷವನ್ನು ಬಯಸಿ, ಶ್ರೀಹರಿಧ್ಯಾನರತನಾದವನೇ ಪಂಡಿತನು. ಜೀವನದಿಯಲ್ಲಿ ಸುಖತರಂಗಗಳ ಹಿಂದೆಯೇ ದುಃಖಭಂಗಗಳೂ ಬರುತ್ತಿವೆ. ಇಂದ್ರಿಯಾರ್ಥಗಳಿಗೆ ಕಾತರನಾಗಿ ಪರದಾಡುವ ಅಜ್ಞಾನಿಯು ಮರಣಕ್ಕೆ ಹೆದರಿದಂತೆ, ಪಂಡಿತನು ಹೆದರನು. ಅವನು ಸುಖದುಃಖಗಳೆರಡೂ ಶ್ರೀಸಖನ ಅಧೀನವೆಂದು ತಿಳಿದು, ಅದರಿಂದ ಕುಗ್ಗದೆ, ನಿರ್ವಿಕಾರನಾಗುವನು.

ಪ್ರತೀಕಾರವಿಲ್ಲದ ಮರಣಾದಿ ದುಃಖಕ್ಕಾಗಿ ಶೋಕಿಸಲಾಗದು. ಪ್ರತೀಕಾರವಿರುವ ರೋಗಾದಿಗಳಿಗೆ ಪ್ರತೀಕಾರ ಮಾಡಬೇಕಾಗಲಿ, ಶೋಕಿಸಲಾಗದು. ಇಂತು ಅಜ್ಞಾನ ಮೂಲವಾದ ಶೋಕವನ್ನು ತ್ಯಜಿಸಿ, ಬುದ್ಧಿಬಲದಿಂದ ಶ್ರೀಹರಿಯ ಪ್ರಸಾದ ಪಾತ್ರನಾಗುವುದು ಬುದ್ಧಿವಂತನ ಲಕ್ಷಣವು. ಕರ್ಮಫಲವನ್ನಾಶಿಸದೆ, ಮನಶ್ಶುದ್ಧಿಯನ್ನು ಸಂಪಾದಿಸಿ, ಶ್ರವಣಮನನಗಳಿಂದ ಅಜ್ಞಾನಾನ್ಯಥಾಜ್ಞಾನಗಳನ್ನು ಕಳೆದುಕೊಂಡು, ಧ್ಯಾನಪೂತವಾದ ಬುದ್ಧಿಯಿಂದ ಶ್ರೀಹರಿದರ್ಶನವನ್ನು ಪಡೆಯಬಹುದಾಗಿದೆ. ವಿಷಯಾಸಕ್ತವಾದ ಮನಸ್ಸು ಗಿರಿಶೃಂಗದಿಂದ ಬೀಳುವ ಜಲಪಾತದಂತೆ, ಅಧೋಮುಖವಾಗಿ, ಪರಬ್ರಹ್ಮನನ್ನು ನೋಡಲಾರದು. ವಿಷಯವಿಕಾರರಹಿತವಾಗಿ, ಮಾಡಲ್ಪಟ್ಟ ಮನಸ್ಸು, ಶುದ್ಧದರ್ಪಣದಂತೆ, ಪರಬ್ರಹ್ಮದರ್ಶಕವಾಗುವುದು.

ಸಾತ್ವಿಕರಾದ ಜೀವರಿಗೆ ಪ್ರಕೃತಿ ಗುಣವಿಕಾರ ಲೇಪವಿಲ್ಲದಂತಾಗುವುದು. ಅಹಂಕಾರಮಮಕಾರವರ್ಜನದಿಂದಲೇ; ಮತ್ತೊಂದರಿಂದಲ್ಲ. ರಾಜಸತಾಮಸವಿಕಾರಗಳಾದ ಅಜ್ಞಾನ ಅನ್ಯಥಾಜ್ಞಾನಗಳಿಂದ ಬಂದ ಅನಾದ್ಯವಿದ್ಯಾ ಕಾಮ್ಯಕರ್ಮ ರೂಪಬಂಧವು ನಾಶವಾಗಬೇಕಾದರೆ, ಸಾತ್ವಿಕ ಮನದಿಂದ ಗೈವ ಶ್ರವಣಾದಿಗಳೇ ಕಾರಣವಾಗಿವೆ. ಮನಸ್ಸು ಶುದ್ಧವಾಗಿ, ಸರ್ವನಿಷಿದ್ಧೇಚ್ಛಾಸಂಗಾದಿವರ್ಜಿತವಾದರೇನೇ ಸಾತ್ವಿಕವೆನಿಸುವುದು. ಅಂತಹ ಸಾತ್ವಿಕ ಮನಸ್ಸು ವೃತ್ತಿಜ್ಞಾನದಿಂದ ಬಲವಂತವಾದಾಗ, ಉರಿವ ಕಟ್ಟಿಗೆಯು ಉಷ್ಣತೆಯನ್ನು ಪುಟ್ಟಿಸಿ, ತಾನೂ ನಾಶವಾಗುವಂತೆ- ಅಪರೋಕ್ಷ ಜ್ಞಾನವನ್ನು ಪುಟ್ಟಿಸಿ, ತಾನೂ ನಷ್ಟವಾಗುವುದು. ಆಗ ಮನುಜನು ತ್ರಿಗುಣಾತೀತನಾದ ಯೋಗಿ ಎನಿಸಿ, ಮೋಕ್ಷಾರ್ಹನಾಗುವನು. ಗುಣಾತೀತನಾದವನಿಗೆ ಇನ್ನು ವಿಷಯಕೃತವಿಕಾರವೆಂತು ಬಂದೀತು ? ಅಂತಹವನು ತಪೋಬಲದಿಂದಲು, ಶ್ರವಣಾದಿ ಸಾಧನಗಳಿಂದಲು, ಶಮದಮಾದಿ ಗುಣಗಳಿಂದಲು, ಜಾತ್ಯುಚಿತ ಸ್ವಧರ್ಮಾನುಷ್ಠಾನದಿಂದಲು, ವೇದಾಂತ ಶ್ರವಣಜನ್ಯ ನಿಶ್ಚಯಜ್ಞಾನದಿಂದಲು, ಬ್ರಹ್ಮ ಶಬ್ದವಾಚ್ಯನಾದ ಶ್ರೀಹರಿಯನ್ನು ಬೇಗನೆ ತಿಳಿದು, ಮುಕ್ತನಾಗುವನು.

ಪ್ರಕೃತಿ ಗುಣಸಂಬದ್ಧವಾಗಿ ಬುದ್ಧಿಯು ವಿಷಯಗಳ ಕಡೆಗೆ ಧಾವಿಸಿ ಹೊರಮುಖವಾದಾಗ, ಇನ್ನು ಅಂತರಾತ್ಮನನ್ನು ಅದೆಂತು ಕಾಣಲು ಸಮರ್ಥ ವಾಗುವುದು ? ಇಂಧನಪೂರಿತವಾದ ಅಗ್ನಿಯಂತೆ ಉರಿದೆದ್ದು ವೈಷಯಿಕ ಬುದ್ಧಿಯು ಜೀವನನ್ನು ನಾನಾ ತಾಪಗಳಿಗೊಳಪಡಿಸುವುದು. ಅದೇ ಬುದ್ಧಿಯನ್ನು ಅಂತರ್ಮುಖವಾಗಿಸಿ, ಶ್ರೀಹರಿಧ್ಯಾನರತನಾದ ಜೀವನು ಪ್ರಕೃತಿಬಂಧವಿಮುಕ್ತನಾಗಿ, ಶ್ರೀಹರಿ ಪ್ರಸಾದದಿಂದ ಸ್ವಸ್ವರೂಪಾನಂದಾಭಿವ್ಯಕ್ತಿರೂಪವಾದ ಮೋಕ್ಷವನ್ನು ಹೊಂದುವನು. ಪ್ರಕೃತಿ, ಬುದ್ಧಿ, ಮನಸ್ಸು, ಇಂದ್ರಿಯಗಳು, ಇವುಗಳಿಂದ ಮಾಡಲ್ಪಟ್ಟ ದೇಹದಲ್ಲಿ ತರಲ್ಪಟ್ಟು, ಪರರಿತ್ತ ದೇಹವನ್ನು ತಾನೆಂದು ಭ್ರಮಿಸಿ, ಜೀವನು ಸ್ವತಂತ್ರನಲ್ಲದಿದ್ದರೂ, ಸ್ವತಂತ್ರಕರ್ತನೆಂದು ತಿಳಿದು, ಸಂಸಾರವರ್ತದಲ್ಲಿ ಬಿದ್ದಿರುವನು. ಬಂಧವು ಸತ್ಯವಾಗಿದ್ದರೂ, ಶ್ರೀಹರಿದಯದಿಂದ ಅದು ನಿವೃತ್ತವಾಗುವುದು. ರಾಜಾನುಗ್ರಹಪಾತ್ರನು ಕಾರಾಗಾರ ವಿಮುಕ್ತಿಯನ್ನು ಪಡೆದಂತೆ

ಸೇತುದರ್ಶನದಿಂದ ಬ್ರಹ್ಮಹತ್ಯೆಯು ಹೋದಂತೆ, ಶ್ರೀಶದಯದಿಂದ ಸಂಸಾರಬಂಧವು ನಿವೃತ್ತವಾಗುವುದು. ಆತ್ಮಾನಾತ್ಮವಿವೇಕವನ್ನು ಮಣಿಸೂತ್ರ ದೃಷ್ಟಾಂತದಿಂದ ತಿಳಿದು, ಸಲ್ಲದ ದುರಭಿಮಾನನ್ನು ಬಿಟ್ಟು, ಪಂಚೇಂದ್ರಿಯ ಮನೋಬುದ್ಧಿಗಳನ್ನು ನಿಗ್ರಹಿಸಿ, ಶ್ರೀಶಚರಣಾರವಿಂದ ಗುಣಚಿಂತನಪರನಾದ ಸುಜೀವನು ಅಂತಹ ಶ್ರೀಶಾನುಗ್ರಹ ಪಾತ್ರನಾಗುವನು.

ಸುವರ್ಣ, ರಜತ, ಮುಕ್ತಾ, ಮಾಣಿಕ್ಯ ಪ್ರವಾಲ, ತುಲಸೀ, ಮಣಿಗಳಲ್ಲಿ ಪೋಣಿಸಲ್ಪಟ್ಟ ಸೂತ್ರದಂತೆ ಜೀವನು ತನ್ನ ಕರ್ಮಾನುರೂಪವಾಗಿ ಬಂದು ಹೋಗುವ ಶರೀರಗಳಲ್ಲಿ ತಾನೇತಾನಾಗಿ - ಅಂದರೆ - ಶರೀರದಂತೆ ಹುಟ್ಟಿ ಸಾಯದೆ ಇರುವನು. ದೇವ ಮನುಜ ಪಶುಪಕ್ಷಿ ಕೀಟಾದಿ ದೇಹಗಳಲ್ಲಿ ಆಯಾ ಕರ್ಮಫಲಗಳನ್ನು ಉಣ್ಣುವನು. ಪೃಥಿವಿಯು ಒಂದೇ ಆದರೂ ಬೀಜಾನುಸಾರವಾಗಿ ವೃಕ್ಷರಸಗಳನ್ನು ಬೆಳೆಸುವಂತೆ, ಶ್ರೀಶನು ತ್ರಿವಿಧ ಜೀವರಿಗೆ ತತ್ತತ್ಕರ್ಮಾನುರೂಪ ಫಲಗಳನ್ನಿತ್ತೇ ನಿಷ್ಪಕ್ಷಪಾತಿ ಎನಿಸುವನು. ಅಭಿಮಾನವಿಲ್ಲದ ಶ್ರೀಹರಿಗೆ ಕರ್ಮಫಲಲೇಪವಿಲ್ಲ; ಜೀವನು ಕರ್ಮಫಲವನ್ನು ಉಣ್ಣುತ್ತಿರುವನೆಂದರೆ, ಅಭಿಮಾನದಿಂದಲೇ ಎಂದು ತಿಳಿ!

ಅಭಿಮಾನದಿಂದ ಕರ್ಮವನ್ನು ಮಾಡಿದವನು ಫಲವನ್ನು ಉಣ್ಣಬೇಕಾಗುವುದಲ್ಲವೇ? ಕರ್ಮವು ಸ್ವಯಂ ಮೋಕ್ಷಾಪಾದಕವಲ್ಲ; ಜ್ಞಾನವೇ ಮೋಕ್ಷ ಕಾರಣವು; ಕರ್ಮವನ್ನು ಫಲಾಪೇಕ್ಷಾರಹಿತನಾಗಿ ಮಾಡಿ, ಅಂತಹ ಸತ್ಕರ್ಮಫಲವನ್ನು ಶ್ರೀಶನಿಗರ್ಪಿಸಿ, ಮನಃ ಶ್ಶುದ್ಧಿಯನ್ನು ಸಂಪಾದಿಸದ ಹೊರತು, ಜ್ಞಾನವು ತಿರವಾಗದು! ಜ್ಞಾನವು ಶ್ರೀಹರಿಯ ಅಪರೋಕ್ಷವನ್ನು ಪುಟ್ಟಿಸಿ, ತಾನು ಕೃತಕೃತ್ಯವಾಗುವುದು. ಶ್ರೀಹರಿಯು ಹೃದಯ ಗುಹಾಗತನಾಗಿದ್ದರೂ, ಮೂಢರು ವಿಷಯದತ್ತಚಿತ್ತರಾಗಿ ಅವನನ್ನು ಕಾಣಲಾರರು. ಪಂಚಭೂತಗಳ ದೇವತೆಗಳಿಗೂ ಪಂಚೇಂದ್ರಿಯ ದೇವತೆಗಳು ಶ್ರೇಷ್ಠರು. ಅವರಿಗೂ ಶಬ್ದಸ್ಪರ್ಶರೂಪರಸ ಗಂಧದೇವತೆಗಳಾದ ಸೌಪರ್ಣೀ ವಾರುಣೀ ಪಾರ್ವತೀದೇವಿಯರು ದೊಡ್ಡವರು. ಅವರಿಗೂ ಮನೋಭಿಮಾನಿಗಳಾದ ಗರುಡ ಶೇಷ ರುದ್ರರು ಶ್ರೇಷ್ಠರು. ಅವರಕಿಂತಲು ಬುದ್ಧಿಮಾನಿಗಳಾದ ಭಾರತೀ ಸರಸ್ವತಿಯರು ಶ್ರೇಷ್ಠರು. ಅವರಕಿಂತಲೂ ಮಹತ್ತತ್ವಾಭಿಮಾನಿಗಳಾದ ವಾಯು ಬ್ರಹ್ಮರು ಹಿರಿಯರು. ಅವರಿಗೂ ಅವ್ಯಕ್ತಮಾನಿ ಮಹಾಲಕ್ಷ್ಮೀದೇವಿಯು ಶ್ರೇಷ್ಠಳು. ಆಕೆಗೂ ಶ್ರೀಹರಿಯು ಶ್ರೇಷ್ಠನು. ಶ್ರೀಶನಿಕಿಂತಲು ಶ್ರೇಷ್ಠವಸ್ತುವಿಲ್ಲ. ಭಗವಾನ್ ವಿಷ್ಣುವೇ ಸರ್ವೋತ್ತಮನು. ಅವನು ಕಾಲದೇಶಗುಣಗಳಿಂದ ಅಪರಿಚ್ಛಿನ್ನನು. ಅನಂತ ಕಲ್ಯಾಣಗುಣಪೂರ್ಣನು. ಅವನಿಗೆ ಆದಿಮಧ್ಯಾಂತಗಳಿಲ್ಲ. ಜರಾ ಮರಣ ಕರ್ಮಲೇಪಜನನ ಚಿಂತಾದಿ ದೋಷಗಳ ಸೋಕಿಲ್ಲ; ಅವನನ್ನೇ ವೇದಾಂತಗಳು ಬ್ರಹ್ಮನೆಂದು ಕರೆಯುತ್ತಿವೆ. ಅವನ ಲೋಕವಾದ ವೈಕುಂಠವು ನಿತ್ಯಪ್ರಕಾಶವಾದುದು. ಆದಂದಮಯನ ಆನಂದಮಯವಾದ ಲೋಕದಲ್ಲಿರುವ ಮುಕ್ತರಿಗೆ ಕಾಲ ಕೃತವಿಕಾರಗಳಿಲ್ಲ. ಜ್ಞಾನ ಭಕ್ತಿ ವೈರಾಗ್ಯಭರಿತರಿಗೆ ಮಾತ್ರ ಅದು ಲಭ್ಯವಾಗಿದೆ.

ಲಿಂಗಶರೀರರಹಿತರಾಗಿ, ಸ್ವರೂಪಾನಂದವನ್ನು ಪೊಂದಿ ಸುಖಿಸುತ್ತಿರುವ ಮುಕ್ತರಿಗೆ ಇಚ್ಛಾಮಾತ್ರದಿಂದ ಸಕಲ ಸ್ವಯೋಗ್ಯಸುಖಗಳು ಲಭ್ಯವಾಗುತ್ತಿವೆ. ಅವರು ತಮಗೂ ಉತ್ತಮರಾದವರನ್ನು ಕಂಡು ಅಸೂಯೆಪಡುವದಿಲ್ಲ. ಅಸೂಯಾದಿ ದೋಷಗಳಿಗೆ ಕಾರಣವಾದ ಭೌತಿಕ ಶರೀರವಿಲ್ಲದಿರುವುದೇ ಅದಕ್ಕೆ ಕಾರಣವು. ಅವರು ವೇದವೇದ್ಯನು, ರಮಾವಲ್ಲಭನು, ಸ್ವಬಿಂಬಾಭಿನ್ನನು ಆದ ಶ್ರೀಹರಿಯ ದರ್ಶನದಿಂದ ನಿತ್ಯಾನಂದರಾಗಿರುವರು.

ವಿಷಯಭೋಗಾನುಸಂಧಾನದಿಂದ ಜೀವರು ಅಂತರ್ಮುಖರಾಗಲಾರದೆ, ವಿಷಯಗಳತ್ತ ಧಾವಿಸುತ್ತಾ, ತೃಪ್ತರಾಗದೆ, ಶ್ರೀಹರಿವಿಮುಖರಾಗಿರುವರು. ಪೂರ್ವದಿಂದ ಬೆನ್ನಟ್ಟಿ ಬಂದ ಪಾಪಪರಿಪಾಕದಿಂದ, ಶ್ರೀಶನನ್ನು ಹೃದಯದಲ್ಲಿದ್ದರೂ ಕಾಣಲಾರದೆ, ಅವನ ಸ್ವಾತಂತ್ರ್ಯವನ್ನು ತಿಳಿಯದೆ, ಮತ್ತೆ ಪಾಪಗಳನ್ನು ಮಾಡಿ, ಅಂತಹ ಜೀವರು ಸಂಸಾರ ಕೂಪದಿಂದ ಉದ್ಧೃತರಾಗದೆ, ಹುಟ್ಟುತ್ತಾ, ಸಾಯುತ್ತಾ, ನರಳುವರು. ವಿಷಯಗಳು ಪ್ರಾಕೃತವಾಗಿರುವಾಗ, ಅವುಗಳಲ್ಲಿ ಮನವಿಟ್ಟವರು ಪ್ರಕೃತಿಬಂಧದಿಂದ ಮುಕ್ತರಾಗುವುದಾದರೂ ಎಂತು? ಆದುದರಿಂದ ವಿವೇಕಿಗಳು ಪ್ರಕೃತಿಬಂಧಲೇಪಾದಿ ರಹಿತನಾದ ಶ್ರೀಹರಿಯಲ್ಲಿ ಮನವಿಟ್ಟು ಮುಕ್ತರಾಗುವರು. ಮುಕ್ತರಾದವರು ಪ್ರಳಯದಲ್ಲಿ ಪ್ರಾಕೃತಗುಣಸಾಮ್ಯವಾದಾಗ, ಬ್ರಹ್ಮಲೋಕವನ್ನು ಹೊಂದಿದ್ದು ಶ್ರೀಹರಿಯನ್ನು ಪ್ರವೇಶಿಸಿ, ಮತ್ತೆ, ಸೃಷ್ಟ್ಯಾರಂಭದಲ್ಲಿ ಹೊರಬಂದು, ಬ್ರಹ್ಮಾಂತರ್ಯಾಮಿ ವಾಸುದೇವನ ಉಪದೇಶದಿಂದ, ತಮ್ಮ ಸ್ವರೂಪವನ್ನು ತಿಳಿದು, ಬಿಂಬಾಪರೋಕ್ಷ ಜನಿತಾನಂದತುಂದಿಲರಾಗಿ ವಿಮುಕ್ತರಾಗುವರು'' ಇಂತು ನುಡಿದ ಮನುರಾಜನ ಉಪದೇಶದಿಂದ ಸಂಶಯಗಳನ್ನು ಕಳೆದುಕೊಂಡು, ಬೃಹಸ್ಪತಿಯು ಕೃತಾರ್ಥನಾದನು.

## ೫. ಶ್ರೀವಿಷ್ಣು ವಿಚಾರ

ಧರ್ಮರಾಜನು 'ತಾತ ! ಪುಂಡರೀಕಾಕ್ಷನು, ನಾಶರಹಿತನು, ಸರ್ವಕರ್ತನು, ಕರ್ಮಫಲಲೇಪರಹಿತನು, ಜಗಜ್ಜನ್ಮಲಯಪಾಲನಾದಿ ಸ್ವತಂತ್ರಕಾರಣನು, ಸರ್ವೇಂದ್ರಿಯ ಪ್ರೇರಕನು, ಸರ್ವನಿಯಾಮಕನು, ಬ್ರಹ್ಮರುದ್ರಾದಿ ವಂದಿತನು ಆದ ಗೋವಿಂದನ ಮಹಿಮೆಯನ್ನು ತಿಳಿಸಿಕೊಡು!' ಎಂದನು.

ಭೀಷ್ಮನಿಂತು ನುಡಿದನು : 'ರಾಜನ್ ! ಈ ವಿಷಯವನ್ನು ಪರಶುರಾಮ ವೇದವ್ಯಾಸರು ಚೆನ್ನಾಗಿ ಅರಿತಿರುವರು. ನಾರದ, ಅಸಿತದೇವಲ, ವಾಲ್ಮೀಕಿ, ಮಾರ್ಕಂಡೇಯರಾದಿ ವಿಜ್ಞಾನಿಗಳೂ ಯಥಾ ಯೋಗ್ಯವಾಗಿ ಅರಿತಿಹರು. ಅವನ ಮಹಿಮೆ ಅಪಾರವಾಗಿದೆ; ಅದ್ಭುತವಾಗಿದೆ; ಅದನ್ನು ಸಾಕಲ್ಯೇನ ತಿಳಿಯಲು ಯಾರಿಂದಲೂ ಆಗದು. ಭಗವಂತನಾದ ಕೇಶವನು ಸರ್ವಸಮರ್ಥನು, ಸರ್ವೋತ್ತಮನು, ಪೂರ್ಣಗುಣನು ಆಗಿರುವನು. ವೇದವಿದರಾದ ವಿಪ್ರವರರಿಂದ ನಾನು ತಿಳಿದಿರುವ ಶ್ರೀಗೋವಿಂದನ ಮಹಿಮೆಯನ್ನು ನಿನಗೆ ಹೇಳುವೆನು ಕೇಳು!'

ಶ್ರೀರಮಣನು ಮಹದಾದಿತತ್ವಗಳನ್ನು ತದ್ದೇವತೆಗಳನ್ನು ಸೃಜಿಸಿ, ಆಮೇಲೆ ಅವುಗಳಿಂದ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ ತತ್ವಗಳನ್ನೂ ತನ್ಮಾತ್ರೆಗಳನ್ನೂ, ತದ್ದೇವತೆಗಳನ್ನೂ ಸೃಜಿಸಿದನು. ತಾನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳನ್ನು ಸ್ವೀಕರಿಸಿ, ಪ್ರಾದುರ್ಭೂತನಾದನು. ಆಗ ಶ್ರೀದೇವಿಯೂ, ಮಾಯಾ, ಜಯಾ, ಕೃತಿ, ಶಾಂತಿ, ಎಂಬ ಸ್ವರೂಪಗಳಿಂದ ಆ ಚತುರೂಪನ ಪತ್ನಿಯಾದಳು. ಅವರಿಂದ ಬ್ರಹ್ಮ, ವಾಯು, ಭಾರತೀ, ಸರಸ್ವತಿಯರು ಉದಿಸಿದರು. ಸರ್ವಭೂತ ಪಿತಾಮಹನಾದ ಬ್ರಹ್ಮದೇವನು ವಾಸುದೇವನ ನಾಭಿ ಕಮಲದಿಂದ ಜನಿಸಿ ಇತರ ಜೀವರನ್ನು ಶ್ರೀಹರಿಯ ಆಜ್ಞೆಯಂತೆ ಸೃಜಿಸಿದನು.

ಬ್ರಹ್ಮನಿಂದ ಪ್ರಜಾಸೃಷ್ಟಿಯಾಗದಂತೆ ವಿಘ್ನಕಾರಿಯು, ಅಜ್ಞಾನರೂಪನು ಆದ ಮಧುವೆಂಬ ಆದಿದೈತ್ಯನನ್ನು ಶ್ರೀಹರಿಯು ಸಂಹರಿಸಿ, ಮಧುಸೂಧನನೆನಿಸಿದನ್ನು ಅಂತು ಮಧುಸೂಧನನಿಂದ ಅನುಗೃಹೀತನಾದ ಬ್ರಹ್ಮನು ಸೃಷ್ಟಿ ಕಾರ್ಯದಲ್ಲಿ ತೊಡಗಿ, ದಕ್ಷಾದಿ ದಶಪುತ್ರರನ್ನು ಪಡೆದನು. ಪೂರ್ವದಕ್ಷನು ಮರೀಚಿ ಪುತ್ರನಾದ ಕಶ್ಯಪನಿಗೆ ತನ್ನ ಹದಿಮೂರು ಜನ ಕುವರಿಯರನ್ನಿತ್ತು ವಿವಾಹ ಮಾಡಿದನು. ಇಪ್ಪತ್ತೇಳು ಕನ್ಯೆಯರನ್ನು ಚಂದ್ರನಿಗೆ ಕೊಟ್ಟನು. ಹತ್ತು ಜನ ದುಹಿತೆಯರನ್ನು ಧರ್ಮಪ್ರಜೇಶನಿಗಿತ್ತನು.

ಕಶ್ಯಪ ಪತ್ನಿಯಾದ ಆದಿತಿಯು ದ್ವಾದಶಾದಿತ್ಯರನ್ನು ಪಡೆದಳು. ಆಕೆಯ ಕೊನೆಯ ಮಗನೇ ವಿಷ್ಣುವು, ಆತನೇ ವಾಮನರೂಪನಾಗಿ ಅವತರಿಸಿ, ಬಲಿರಾಜನನ್ನು ಬೇಡಿ, ತ್ರಿವಿಕ್ರಮನಾಗಿ ವಿಕ್ರಮಿಸಿ ಅವನ ರಾಜ್ಯವನ್ನು ಕಸಿದು, ಇಂದ್ರನಿಗಿತ್ತನು. ಕಶ್ಯಪ ಪತ್ನಿಯಾದ ದಿತಿಯು ದೈತ್ಯರನ್ನೂ, ದನುವೆಂಬ ಸತಿಯು ವಿಪ್ರಚಿತ್ತಿ ಮುಂತಾದ ದಾನವರನ್ನೂ ಪಡೆದರು.

ಶ್ರೀಹರಿಯು ಜೀವರ ಆಯುರ್ಗಣನೆಗೆಂದು, ದಿನರಾತ್ರ, ಪಕ್ಷಮಾಸ, ವತ್ಸರಾದಿ ಕಾಲವನ್ನು ವಿಂಗಡಿಸಿದನು. ಮೇಘಗಳನ್ನು ಸೃಜಿಸಿ, ಮಳೆಗರಿಸಿ, ಬೆಳೆಗಳನ್ನು ನಿರ್ಮಿಸಿ, ಜೀವರಿಗೆ ಅನ್ನವನ್ನು ಕಲ್ಪಿಸಿದನು. ಜೀವರಲ್ಲಿ ಸ್ವಭಾವದಿಂದಲೇ ಭಿನ್ನರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವರ್ಣದವರನ್ನು ಸೃಜಿಸಿ, ಅವರ ಜ್ಞಾನ ಕರ್ಮಸಿದ್ಧಿಗಾಗಿ, ಶಾಸ್ತ್ರಗಳನ್ನೂ ರಚಿಸಿ, ಬ್ರಹ್ಮಾದಿ ದೇವತೆಗಳಿಗುಪದೇಶಿಸದನು. ಮೊತ್ತ ಮೊದಲು ಶ್ರೀಶನ ಮುಖದಿಂದ ವಿಪ್ರಶತವೂ, ಬಾಹುಗಳಿಂದ ಕ್ಷತ್ರಿಯಶತವೂ, ತೊಡೆಗಳಿಂದ ವೈಶ್ಯಶತವೂ, ಪಾದಗಳಿಂದ ಶೂದ್ರಶತವೂ ಉತ್ಪನ್ನವಾಯಿತು. ಅವರಿಗೆಲ್ಲ ವಿಧಾತನೇ ಒಡೆಯನಾಗಿ ನಿಯಮಿಸಲ್ಪಟ್ಟು ಶ್ರೀಹರಿಯಾಜ್ಞೆಯಂತೆ ಇತರ ಜೀವರಿಗೆ ತದ್ಯೋಗ್ಯಗಳಾದ ಅಧಿಕಾರಾಭಿಮಾನಗಳನ್ನು ಕಲ್ಪಿಸಿದನು.

ವೇದವಿದ್ಯೆಗಳಿಗೆ ಚತುರ್ಮುಖನು, ಭೂತಮಾತೃ ಪ್ರಮಥರಿಗೆ ವಿರೂಪಾಕ್ಷನು ಪಾಪಪುಣ್ಯವಿಚಾರಕ್ಕು, ಪಿತೃಗಳಿಗೂ ಯಮರಾಜನು, ನಿಧಿಗಳಿಗೆ ಕುಬೇರನು, ಜಲತಂತುಗಳಿಗೆ ವರುಣನು, ಸರ್ವದೇವತೆಗಳಿಗೆ ಇಂದ್ರನು ನಿಯಾಮಕರಾಗಿ, ನಿಯಮಿಸಲ್ಪಟ್ಟರು. ಶುದ್ಧದೇಹರಾದ ಅಕ್ಷ್ಯಕ್ಷದೇವತೆಗಳು ಯಮಭಯರಹಿತರಾಗಿ,

ಅಮರರೆನಿಸಿದರು. ಅವರು ಮೈಥುನ ಧರ್ಮವನ್ನು ಅನುಸರಿಸದೆ, ಕೇವಲ ಸಂಕಲ್ಪದಿಂದಲೇ ಅಪತ್ಯವನ್ನು ಪಡೆಯುತ್ತಿದ್ದರು. ಕೃತಯುಗದಲ್ಲಿ ಸಂಕಲ್ಪದಿಂದ ಆಗುತ್ತಿದ್ದ ಸಂತಾನವು, ತ್ರೇತೆಯಲ್ಲಿ ಸ್ಪರ್ಶಮಾತ್ರದಿಂದ ಸಂಭವಿಸುತ್ತಿತ್ತು. ದ್ವಾಪರದಲ್ಲಿ ಮೈಥುನ ಧರ್ಮದಿಂದಲೇ ಪುತ್ರೋತ್ಪತ್ತಿಯು ನಡೆಯಿತು. ಕಲಿಯಲ್ಲಿಯೂ ದ್ವಂದ್ವ ಧರ್ಮವೇ ಸಂತಾನಕಾರಣವಾಗಿದೆ. ದ್ವಾಪರದಿಂದ ಮೊದಲು ಮಾಡಿ, ದಕ್ಷಿಣಾಪಥದಲ್ಲಿ ಆಂಧ್ರ! ಗುಹ, ಪುಲಿಂದ, ಶಬರ, ಚೂಚಕ, ಮದ್ರಕರು, ಉತ್ತರಾಪಥದಲ್ಲಿ ಕಾಂಬೋಜ, ಗಾಂಧಾರ, ಕಿರಾತ, ಶಬರ, ಹೂಣರು ಪ್ರಬಲಿಸುವರು. ಪಾಪವೂ ಹೆಚ್ಚುತ್ತಾ ಹೋಗುವುದು. ದ್ವಾಪರಾಂತ್ಯದಲ್ಲಿ ದುಷ್ಟರಾಜರ ದುಷ್ಕೃತ್ಯಗಳಿಂದ ಪ್ರಜರು ರೋಸುವರು. ಭೂಭಾರವು ದುರ್ಭರವಾಗುವುದು. ಆಗ ಸುಜನ ದೇವ ಗೋವೇದಗಳನ್ನು ರಕ್ಷಿಸಲು ಶ್ರೀಶನು ಅವತರಿಸುವನು. ಅಂತಹ ಶ್ರೀಕೃಷ್ಣನ ಮಹಾಮಹಿಮೆಯು ಅದ್ಭುತವೂ, ಅನಂತವೂ ಆಗಿದೆ. ಸತ್ಯವಿಕ್ರಮನಾದ ಶ್ರೀಕೃಷ್ಣನೂ ಕೇವಲ ಮಾನುಷನಲ್ಲ; ಸಾಕ್ಷಾತ್ ಪುಂಡರೀಕಾಕ್ಷನೆಂದು ನಾರದಾದಿಗಳಿಂದ ತಿಳಿದಿದ್ದನ್ನು ನಿನಗರುಹಿದೆನು.

ಬ್ರಹ್ಮಪುತ್ರರಾದ ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬ ಸಪ್ತರ್ಷಿಗಳು ಬ್ರಹ್ಮಸದೃಶರೆಂದು ಖ್ಯಾತರಾಗಿರುವರು. ಬ್ರಹ್ಮಪುತ್ರನೂ, ಆದಿರಾಜನೂ ಆದ ಸ್ವಾಯಂಭುವ ಮನುರಾಜನ ವಂಶದಲ್ಲಿ ಪ್ರಾಚೀನ ಬರ್ಹಿಯು ಜನಿಸಿದನು. ಬಹು ಯಜ್ಞಶೀಲನಾದ ಪ್ರಾಚೀನಬರ್ಹಿಗೆ ಶತದ್ರುತೀದೇವಿಯಲ್ಲಿ ಪ್ರಾಚೇತಸರು ಹತ್ತು ಜನ ಮಕ್ಕಳಾದರು. ಅವರಿಗೆ ಮಾರಿಷೆಯಲ್ಲಿ (ದ್ವಿತೀಯ) ದಕ್ಷನು ಜನಿಸಿದನು. ಆತನು ಜಗತ್ತಿನ ಪ್ರಜಾ ಸಂತತಿವೃದ್ಧಿ ಕಾರಣನಾದನು.

ಭಗ, ಅಂಶ, ಅರ್ಯಮಾ, ಮಿತ್ರ, ವರುಣ, ಸವಿತಾ, ಧಾತ, ವಿವಸ್ವಾನ್, ತ್ವಷ್ಟಾ, ಪೂಷಾ, ಇಂದ್ರ, ವಿಷ್ಣುಗಳೆಂಬ ದ್ವಾದಶಾದಿತ್ಯರು ಅದಿತಿಕಶ್ಯಪಜಾತರೆಂದು ತಿಳಿ! ವಿವಸ್ವಂತನಿಗೆ ವಡವೆಯಲ್ಲಿ ನಾಸತ್ಯದಸ್ರರೆಂಬ ಅಶ್ವಿನೀ ದೇವದ್ವಯವು ಜನಿಸಿತು. ತ್ವಷ್ಟನ ಪುತ್ರನೇ ವಿಶ್ವರೂಪಾಚಾರ್ಯನು. ಅಜ, ಏಕಪಾತ್, ಅಹಿರ್ಬುಧ್ನ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಜಯಂತ, ಪಿನಾಕೀ ಅಪರಾಜಿತ ಎಂಬ ಏಕಾದಶ ರುದ್ರರು ಬ್ರಹ್ಮದೇವನ ಭ್ರೂಭಂಗಜಾತರು. ದ್ರೋಣ, ಧ್ರುವ ಮುಂತಾದ ಎಂಟು ಜನ ವಸುಗಳು - ಸಿದ್ಧಸಾಧ್ಯರು - ಋಷಭ ಮರುತ್ತರು, ಪಿತೃಗಳು ಮೊದಲಾದವರೆಲ್ಲರು ಕಲೆತು ವಿಶ್ವೇದೇವತೆಗಳೆನಿಸುವರು. ಅಂಗಿರಸರ, ವಿಪ್ರವರ್ಣದವರೆಂತಲು, ಆದಿತ್ಯರು ಕ್ಷತ್ರಿಯರೆಂದೂ, ಮರುತ್ತುಗಳು ವೈಶ್ಯರೆಂದೂ ಅಶ್ವಿನಿಗಳು ಶೂದ್ರರೆಂದೂ ಶಾಸ್ತ್ರದಲ್ಲಿ ಕಥಿತರಾಗಿರುವರು.

ಯವಕ್ರೀತ, ರೈಭ್ಯ, ಅರ್ವಾವಸು, ಪರಾವಸು, ಕಕ್ಷೀವಾನ್, ಬಲ, ಬರ್ಹಿಷದರೆಂಬ ಋಷಿಗಳು ಪ್ರಾಚೀದಿಕ್ಕಿನಲ್ಲಿಯು, ಉನ್ಮುಚ, ವಿಮುಚ, ಪ್ರಮುಚ, ಇಧ್ಮವಾಹ, ದೃಢವ್ರತ, ಆತ್ರೇಯ, ಅಗಸ್ತ್ಯರೆಂಬ ಸಪ್ತರ್ಷಿಗಳು ದಕ್ಷಿಣದಲ್ಲಿಯು, ಉಷಂಗ (ಕವಷ), ಧೌಮ್ಯ (ಪರಿವ್ಯಾಧ), ಏಕತ, ದ್ವಿತ, ತ್ರಿತ, ಆತ್ರೇಯ (ದತ್ತ), ಸಾರಸ್ವತರೆಂಬುವರು.

ಪಶ್ಚಿಮದಲ್ಲಿಯು, ವಸಿಷ್ಠ, ಕಶ್ಯಪ, ಅತ್ರಿ, ಭಾರದ್ವಾಜ, ಗೌತಮ, ವಿಶ್ವಾಮಿತ್ರ, ಜಮದಗ್ನಿಗಳು ಉತ್ತರದಿಕ್ಕಿನಲ್ಲಿಯು ನಕ್ಷತ್ರರೂಪರಾಗಿ ಬೆಳಗುತ್ತಿರುವರು. ಈ ಮಹಾತ್ಮರು ಲೋಕದ ಜನರ ಕರ್ಮಗಳನ್ನು ಸಾಕ್ಷಿಗಳಾಗಿ ವೀಕ್ಷಿಸುತ್ತಿರುವರು. ಶ್ರೀಶಾಜ್ಞಾಪಾಲಕರಾದ ಸಪ್ತರ್ಷಿಗಣಮಹಿಮೆಯನ್ನು ಕೇಳಿದವರು ಸರ್ವಪಾಪ ಮುಕ್ತರಾಗುವರು.

ಶ್ರೀಕೃಷ್ಣನು ಸರ್ವಲೋಕಧಾರಕನಾಗಿರುವನು. ಹಿಂದೆ ಕಶ್ಯಪನು ಮುನಿಗಣ ಮಧ್ಯದಲ್ಲಿ ನಿರೂಪಿಸಿದ ಪುಣ್ಯಕಥೆಯನ್ನು ನಿನಗೆ ಹೇಳುವೆನು. ಪೂರ್ವದಲ್ಲಿ ದೈತ್ಯದಾನವರು ಸಲೆರೇಗಿ ಪ್ರಪಂಚದ ಸುಜನರನ್ನು ಪೀಡಿಸತೊಡಗಿದರು. ದೇವತೆಗಳ ಸಮೃದ್ಧಿಯನ್ನು ಕಂಡು ಸಹಿಸಲಾರದೆ ಅವರು ನರಕ, ಪಾಕಾದಿದಾನವಪತಿಗಳನ್ನು ಹುರಿದುಂಬಿಸಿ, ದೇವತೈಶ್ವರ್ಯವನ್ನು ಹರಿಸಿದರು. ಸುಜನರನ್ನು, ಗೋಗಳನ್ನು ಪೀಡಿಸಿದರು. ಭಾರವು ಹೆಚ್ಚಾಗಿ ತಡೆಯಲಾರದೆ, ಭೂದೇವಿಯು ಬ್ರಹ್ಮದೇವನಿಗೆ ಶರಣಾಗತಳಾದಳು. ದೇವತೆಗಳೂ ಮೊರೆಯಿಟ್ಟರು. ಚತುರ್ಮುಖನು ಅವರಿಗೆ ಅಭಯವನ್ನಿತ್ತು, 'ಶ್ರೀಹರಿಯು ವರಾಹರೂಪನಾಗಿ ಭೂಮಿಯನ್ನುದ್ಧರಿಸಿ, ಭಾರಭೂತರಾದ ರಾಕ್ಷಸರನ್ನು ಸಂಹರಿಸಿ, ಸುಜನರನ್ನು ಪೊರೆವನು' ಎಂದು ಸಮಾಧಾನಪಡಿಸಿದನು.

ಶ್ರೀನಾರಾಯಣನು ಬ್ರಹ್ಮದೇವನ ಪ್ರಾರ್ಥನೆಯಂತೆ, ವರಾಹರೂಪನಾಗಿ, ಭೂವಿವರಗಳಲ್ಲಿದ್ದ ದಾನವೇಂದ್ರರನ್ನು ಸದೆಬಡಿದನು. ಆ ಸ್ವಾಮಿಯ ಘರ್ಘರಾ ರಾವವನ್ನು ಕೇಳಿ, ಸರ್ವಲೋಕಗಳ ಭೂತಜಾಲವು ಗದಗದ ನಡುಗಿತು. ಮಹನ್ನಾದದಿಂದ ಕೂಡಿ, ಸನಾತನನೆನಿಸಿದ ಶ್ರೀವರಾಹನು ಹಿರಣ್ಯಾಕ್ಷಾದಿ ಸರ್ವ ದಾನವರನ್ನು ಸಂಹರಿಸಿ, ಭೂಮಿಯನ್ನು ಉದ್ಧರಿಸಿ, ಸ್ಥಿರವಾಗಿ ಧರಿಸಿ ಕಾಪಾಡಿದನು. ಭೂತ ಭಾವನನು, ಮಹಾಸಮರ್ಥನು, ಸುಜನನಿಧಿಯು, ಲೋಕಾಧಾರನು ಆದ ವರಾಹನೇ ಇಂದು ಶ್ರೀಕೃಷ್ಣನಾಗಿ ಅವತರಿಸಿರುವನು ಧರ್ಮರಾಜ!

## ೬. ಶ್ರೀ ಗುರು ಶಿಷ್ಯ ಸಂವಾದ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ರಾಜನ್! ಭೀಷ್ಮನು ಧರ್ಮರಾಜನಿಗೆ ಪೇಳಿದ ಮೋಕ್ಷಾದಿ ಪುರುಷಾರ್ಥಪ್ರದವಾದ ಸಚ್ಛಾಸ್ತ್ರವನ್ನು ನಿನಗೆ ವಿವರಿಸುವೆನು' ಕೇಳು.

ಭೀಷ್ಮನ ವಚನತತಿಯಿಂದ ಸಂತಸಗೊಂಡು, ಧರ್ಮರಾಜನು ಇಂತು ಕೇಳಿದನು: 'ತಾತ! ನನಗೆ ಮೋಕ್ಷಯೋಗವನ್ನು ತಿಳಿಸಿಕೊಡು! ಮೋಕ್ಷವೇ ಮಹಾ ಪುರುಷಾರ್ಥವಲ್ಲವೇ?' ಎಂದನು. ಭೀಷ್ಮನಿಂತು ನುಡಿದನು: 'ರಾಜನ್! ಗುರು ಶಿಷ್ಯರ ಸಂವಾದವನ್ನು ನಿನಗೆ ಪೇಳುವೆನು. ಅದರಿಂದ ಮೋಕ್ಷಯೋಗವು ವಿಸ್ತಾರವಾಗಿ ನಿರೂಪಿತವಾಗುವುದು. ಹಿಂದೆ ಮಹಾತ್ಮನು, ಸತ್ಯಸಂಧನು, ಜಿತೇಂದ್ರಿಯನು, ವೇದ ವಿದಗ್ರಣಿಯು, ವಿಷ್ಣುಭಕ್ತನು ಆದ ಬ್ರಾಹ್ಮಣೋತ್ತಮನಿದ್ದನು. ಮೇಧಾವಿ ಎಂಬ

ಮುನಿಕುಮಾರನು ತನ್ನ ಶ್ರೇಯಸ್ಸನ್ನು ತಿಳಿಯಲಪೇಕ್ಷಿಸಿ, ಶ್ರದ್ಧೆಯಿಂದ ಆ ವಿಪ್ರನನ್ನು ಬಹುಕಾಲ ಸೇವಿಸಿದನು. ಪ್ರೀತನಾದ ಗುರುವರನನ್ನು ನೋಡಿ, ಶಿಷ್ಯನು, 'ಪೂಜ್ಯನೇ! ನಾನಾರು? ಎಲ್ಲಿಂದ ಬಂದಿರುವೆನು? ನೀನಾರು? ನೀನೆಲ್ಲಿಂದ ಬಂದೆ? ನಮ್ಮಂತಹ ಜೀವರು ನಾವಾಗಿ ಬಂದಿಲ್ಲ. ಜನನ ಮರಣಾದಿಗಳು ನಮ್ಮ ಅಧೀನವಲ್ಲ. ಅಂದ ಮೇಲೆ ಅಸ್ವತಂತ್ರರಾದ ಜೀವರನ್ನು ನಿಯಮಿಸಿ ನಡೆಸುವ ಸ್ವತಂತ್ರ ಪ್ರಭುನಿರಬೇಕು! ಅವನಾರು? ಅವನ ಗುಣಗಳಾವುವು. ಜೀವರೆಲ್ಲರೂ ಒಂದೇ ವಿಧವಾಗಿಲ್ಲ. ಅವರ ಕರ್ಮಫಲಭೋಗವು ವಿವಿಧ ವಿಲಕ್ಷಣವಾಗಿದೆ! ವೇದಗಳಲ್ಲಿಯೂ ವಿವಿಧ ವರ್ಣಾಶ್ರಮದವರಿಗೆ ವಿವಿಧ ಕರ್ಮಗಳನ್ನು ವಿಧಿಸಲಾಗಿದೆ. ಆದುದರಿಂದ ಅನಂತಗುಣಾಕರನು, ನಿರ್ದೋಷನು ಆದ ಮಹಾಶಕ್ತ ಪರಮೇಶನು ಈ ಜಗದ ಸೃಷ್ಟ್ಯಾದಿಗಳನ್ನು ನಡೆಸುತ್ತಿರುವನೆಂದು ತಿಳಿಯಬರುತ್ತದೆ. ಅದರಿಂದ ಅವನಿಗೆ ಪೂರ್ಣನಾದುದರಿಂದ ಪ್ರಯೋಜನವಿಲ್ಲ. ಆದರೂ ಜನ್ಮಾದಿಗಳನ್ನು ಅವನೇಕೆ ಮಾಡುವನು? ಅವನನ್ನು ತಿಳಿದು, ಜೀವರು ಮುಕ್ತರಾಗುವ ಬಗೆ ಹೇಗೆ?' ಎಂದು ಕೇಳಿದನು.

ವೇದಶಿರನೆಂಬ ಗುರುವರನು ಶಿಷ್ಯನಿಗಿಂತು ನಿರೂಪಿಸಿದನು: 'ಮಹಾಪ್ರಾಜ್ಞನಿರುವೆ! ಪರಮರಹಸ್ಯವಾದ ಬ್ರಹ್ಮವಿದ್ಯೆಯನ್ನು ನಿನಗೆ ಹೇಳಿಕೊಡುವೆನು. ವೇದಗಳಲ್ಲಿ ಅಡಗಿರುವ ಅಧ್ಯಾತ್ಮವಿದ್ಯೆ ಎಂಬ ನಿಧಿಯನ್ನು ನಿನಗೆ ಕೊಡುವೆನು. ವಾಸುದೇವನೇ ಸರ್ವೋತ್ತಮನು. ಅವನು ಜೀವಜಡರೂಪವಾದ ಸರ್ವ ಜಗತ್ತಿನಿಂದಲು ಅತ್ಯಂತ ವಿಲಕ್ಷಣನಿರುವನು. ಅವನೇ ಜನನ, ಸ್ಥಿತಿ, ಪ್ರಳಯ, ನಿಯಮನೆಗಳನ್ನು ಮಾಡುವನು. ಅವನಿಂದಲೇ ಜೀವರಿಗೆ ಜ್ಞಾನಾಜ್ಞಾನಗಳೂ, ಬಂಧಮೋಕ್ಷಗಳೂ ಲಭಿಸುತ್ತವೆ. ಅವನು ಸರ್ವತಂತ್ರ ಸ್ವತಂತ್ರನು; ಆನಂದಮಯನು. ಅವನನ್ನು ಪ್ರತ್ಯಕ್ಷಾನುಮಾನಗಳಿಂದ ತಿಳಿಯಲಾಗದು. ಕೇವಲ ವೇದಾದಿ ಸಚ್ಛಾಸ್ತ್ರದಿಂದ ಮಾತ್ರ ಅವನನ್ನು ತಿಳಿಯಬಹುದಾಗಿದೆ. ವೇದವಿದಗ್ರಣಿಗಳಾದ ಬ್ರಹ್ಮರುದ್ರೇದ್ರಾಂದಿ ದೇವತೆಗಳು, ಋಷಿಗಳು ಕೂಡ ಶ್ರೀಶನ ಮಹಿಮೆಯನ್ನು ಸಾಕಲ್ಯೇನ ತಿಳಿಯಲಾರರು. ತಂತಮ್ಮ ಯೋಗ್ಯತೆಯಂತೆ ಸುಜೀವರು ಮಾತ್ರ ಶ್ರೀಹರಿಯನ್ನು ತಿಳಿದು ಭಕ್ತಿಯಿಂದ ಭಜಿಸಿ, ಕೊನೆಗೆ ಮುಕ್ತರಾಗುವರು. ತಾಮಸರಿಗೆ ಅವನು ಸಿಗನು. ಸ್ವವರ್ಣದ ಅಥವಾ ಉತ್ತಮ ವರ್ಣದ ಗುಣದ ಗುರುಗಳಿಂದ ಕೇಳಿ, ಅವನನ್ನು ತಿಳಿಯಬೇಕು. ಶ್ರೀಹರಿಯೇ ದ್ವಾಪರದಲ್ಲಿ ವೃಷ್ಣಿವಂಶದಲ್ಲಿ ಅವತರಿಸಿರುವನು. ಕಾಲಚಕ್ರಾಯುಧನಾದ ಶ್ರೀಕೃಷ್ಣನಿಗೆ ನಾನು ನಮಸ್ಕರಿಸಿ, ಅವನ ಕರುಣೆಯಿಂದ, ಅವನ ಮಹಿಮೆಯನ್ನು ನನ್ನ ಕೈಲಾದಮಟ್ಟಿಗೆ, ನಿನಗೆ ಅರುಹುವೆನು.

ಸಂವತ್ಸರದಲ್ಲಿ ಕ್ರಮವಾಗಿ ಬಂದುಹೋಗುವ ಋತುಗಳಂತೆ, ಶ್ರೀಶನಿಂದ ಜಗತ್ತಿನ ಪ್ರಳಯ, ಸೃಷ್ಟಿ, ವರ್ಧನಗಳು ನಡೆದು ಬರುತ್ತಿವೆ. ಸೃಜಿಸಿದ ಪರಮಾತ್ಮನು ಪರಮೇಷ್ಠಿಯ ದ್ವಾರಾ ಜೀವರಿಗೆ ಬೇಕಾಗುವ ಜ್ಞಾನವನ್ನೂ ಉಪದೇಶಿಸುವನು. ಅಪೌರುಷೇಯವೂ, ನಿತ್ಯವೂ, ಅಜ್ಞಾನಾದಿ ದೋಷವಿದೂರವೂ, ಆದ ವೇದ ಚತುಷ್ಟಯವನ್ನು ಉಚ್ಚರಿಸಿ, ಇತರ ಸ್ಮೃತಿ ಪುರಾಣೇತಿಹಾಸಗಳನ್ನು ರಚಿಸಿ, ಶ್ರೀಹರಿಯು

ಸುಜೀವರಿಗೆ ಜ್ಞಾನಪ್ರದನಾಗುವನು. ಶಾಸ್ತ್ರಗಳಿಗೆಲ್ಲ ಮೂಲ ಭೂಮಿಯಾದ ಶ್ರೀರಮಣನಿಂದ ವೇದಾಂಗಗಳನ್ನು ಪ್ರಜಾಪತಿಗಳು ಕಲಿತರು. ನೀತಿಶಾಸ್ತ್ರವನ್ನು ಕವಿಕಾವ್ಯರು ಕಲಿತರು. ನಾರದ ತುಂಬುರರು ಗಾಂಧರ್ವವನ್ನೂ, ಭಾರದ್ವಾಜರು ಧನುರ್ವೇದವನ್ನೂ, ಗಾರ್ಗ್ಯನು ಜ್ಯೋತಿಶ್ಶಾಸ್ತ್ರವನ್ನೂ, ಆತ್ರೇಯ ಕೃಷ್ಣನು ವೈದ್ಯವನ್ನೂ, ನ್ಯಾಯಶಾಸ್ತ್ರವನ್ನು ಬೃಹಸ್ಪತಿಯು, ಎಲ್ಲರೂ ಬ್ರಹ್ಮದೇವನ ದ್ವಾರಾ ಕಲಿತರು. ಇವರಿಂದ ಮಿಕ್ಕ ಬ್ರಹ್ಮರ್ಷಿಗಳು ತಿಳಿದು ಮಾನವರಿಗೆ ತಿಳಿಸಿಕೊಟ್ಟರು. ಎಲ್ಲ ಶಾಸ್ತ್ರಗಳನ್ನು ರಚಿಸಿ, ಉಪದೇಶಿಸಿದ ಶ್ರೀನಾರಾಯಣನ ಉದ್ದೇಶವೇನೆಂದರೆ, ಸಜ್ಜೀವರು ಸಂಸಾರಬಂಧದಿಂದ ಬಿಡಲ್ಪಟ್ಟು, ಸ್ವಯೋಗ್ಯ ಬಿಂಬಾ ಪರೋಕ್ಷವನ್ನು ಹೊಂದಿ, ಸ್ವರೂಪಾನಂದಾವಿರ್ಭಾವದಿಂದ ನಿರ್ದುಃಖರಾಗಿ, ವೈಕುಂಠಾದಿ ಮುಕ್ತ ಲೋಕಗಳಲ್ಲಿ ಇರಲಿ! ಎಂಬುದೇ ಆಗಿದೆ.

ಪ್ರಕೃತಿನಾಮಕಳಾದ ಶ್ರೀದೇವಿಯೊಡನೆ ಕ್ರೀಡಿಸಿ, ಶ್ರೀಶನು ಸೃಷ್ಟಿಕಾಲದಲ್ಲಿ ತ್ರಿಗುಣಮಯ ಜಡಪ್ರಕೃತಿಯಿಂದ ಮಹತತ್ತ್ವವನ್ನು ಸೃಜಿಸಿದನು. ಅದನ್ನು ಬ್ರಹ್ಮದೇವನ ಶರೀರವೆಂದೆನಿಸಿಟ್ಟು, ಶ್ರೀಶನು ಅದರಿಂದ ಮತ್ತೆ ಅಹಂಕಾರ ತತ್ವವನ್ನು ನಿರ್ಮಿಸಿದನು. ಅದು ಮೂರು ವಿಧವಾಗಿದೆ. ಸಾತ್ವಿಕಾಹಂಕಾರದಿಂದ ಮನಸ್ತತ್ತ್ವವೂ, ಸಾಹಂಕಾರದಿಂದ ಆಕಾಶ, ವಾಯು, ಅಗ್ನಿ, ಜಲ, ಭೂಮಿಗಳೂ ಸೃಷ್ಟವಾದವು. ಎಲ್ಲ ತತ್ವಗಳಿಗೂ ಅಭಿಮಾನ ದೇವತೆಗಳಿದ್ದು, ಆಯಾ ಅಧಿಕಾರವನ್ನು ತಮ್ಮ ಅಂತರ್ಗತನಾದ ಶ್ರೀಶನಿಂದ ಹೊಂದಿ ಜಗದ್ವ್ಯಾಪಾರ ಕಾರಣರಾಗಿರುವರು.

ಪಂಚಭೂತಗುಣಗಳಾದ ಶಬ್ದ ಸ್ಪರ್ಶ ರೂಪರಸಗಂಧಗಳು ಮೇಲಿನ ತತ್ವಗಳು ಕಲೆತು ಇಪ್ಪತ್ತೈದು ತತ್ವಗಳಾಗಿ ಅವುಗಳಿಂದ ಭೂತ ದೇಹಗಳ ಸೃಷ್ಟಿಯು ಆಗುತ್ತಿದೆ. ಭೂತಗಳು ಅಂಡಜ, ಸ್ವೇದಜ, ಉದ್ಭಿಜ್ಜ, ಜರಾಯುಜ ಎಂದು ನಾಲ್ಕು ವಿಧವಾಗಿವೆ. ಎಲ್ಲ ಭೂತಶರೀರಗಳು ಪ್ರಕೃತಿಯಿಂದ ಬಂದಿವೆ, ಪ್ರಕೃತಿಯಲ್ಲಿ ನಿಂತು ಜೀವಿಸಿವೆ, ಪ್ರಕೃತಿಯಲ್ಲೇ ನಾಶವಾಗಿ ಸೇರುತ್ತಿವೆ. ಆದರೆ ಜೀವರು ಮಾತ್ರ ನಿತ್ಯರಾಗಿರುವರು. ಅವರು ಈಶನ ಪ್ರತಿಬಿಂಬಾಂಶರಾಗಿರುವುದರಿಂದ ಅವರಿಗೆ ಅನಿತ್ಯತ್ವವೆಂಬ ನಾಶವಿಲ್ಲ; ಆದರೂ ಅಸ್ವತಂತ್ರರಾದುದರಿಂದ ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ತ್ರಿವಿಧ ನಾಶವನ್ನು ಹೊಂದಿರುವರು. ಚತುರ್ವಿಧ ಅಂದರೆ ಸರ್ವನಾಶರಹಿತನಾದ

ಸೂಕ್ಷ್ಮ ಜಗತ್ತನ್ನು ವಿಸ್ತಾರಗೊಳಿಸಿ, ಸೃಜಿಸಿ, ಮತ್ತೆ ಪ್ರಳಯದಲ್ಲಿ ನುಂಗಿಬಿಡುವನು. ಆಗ ಜೀವರಿದ್ದೂ, ನಿಷ್ಕ್ರಿಯರಾಗಿರುವುದರಿಂದ ಇಲ್ಲವೆಂದೇ ಹೇಳಲ್ಪಡುವರು. ಸ್ವತಂತ್ರನಾಗಿ ಶ್ರೀಹರಿಯು ಮಾತ್ರ ಯೋಗನಿದ್ರಾ ಮುದ್ರಿತನಯನನಾಗಿರುವನು. ಸೃಷ್ಟಿಕಾಲದಲ್ಲಿ ನಿತ್ಯಮುಕ್ತಳಾಗಿ ತನ್ನ ಸಾಮೀಪ್ಯಾತಿಶಯ ಭಾಗ್ಯಭರಿತಳಾದ ರಮಾದೇವಿಯಿಂದ ಕ್ರೀಡಿಸಿ ಶ್ರೀಶನು ಜೀವರನ್ನು ಸೃಜಿಸುವನು. ಅನಾದಿ ಕರ್ಮ ಸ್ವಭಾವಗಳಿಗೆ ತಕ್ಕಂತೆ ವಿವಿಧ ಯೋನಿಗಳಲ್ಲಿ ಜನಿಸಿದ ಜೀವರು ಅಹಂ ಮಮಕಾರಗಳಿಂದ ಅಭಿಮಾನವನ್ನು ಹೊಂದಿ ಸುಖದುಃಖಗಳನ್ನು ಅನುಭವಿಸುವರು.

ಅನಾದ್ಯವಿದ್ಯೆ ಕಾಮ್ಯಕರ್ಮಗಳಿಂದ ಸಂಸಾರದಲ್ಲಿ ಬಿದ್ದು ನೊಂದ ಜೀವರಿಗೆ ಶ್ರೀಹರಿದಯದಿಂದ ಸುಜನಸಂಗವಾದಾಗ, ಅವರು ಮುಮುಕ್ಷುಗಳಾಗುವರು. ಜಿಜ್ಞಾಸಾದಿಂದ ಬಂದ ಜ್ಞಾನವೇ ಅವರಿಗೆ ಶ್ರೀಹರಿಪ್ರಸಾದ ದ್ವಾರಾ ಮೋಚಕವಾಗುವುದು. ಆಗ ತಮ್ಮಲ್ಲೇ ಅಂತರ್ಯಾಮಿಯಾಗಿ ನಡೆಸುವ ಕ್ಷೇತ್ರಜ್ಞನನ್ನು ತಿಳಿದು ಅವರು ಮುಕ್ತರಾಗುವರು. ಪ್ರಕೃತಿಯ ವಿಷಯಗಳಲ್ಲಿ ರತನಾದವನು ಸಂಸಾರಬದ್ಧನಾಗುವುದು ನಿಶ್ಚಯವು. ಅಂತೆಯೇ ಶ್ರೀಹರಿಯಲ್ಲಿ ಭಕ್ತಿಯಿಂದ ಮನವಿಟ್ಟವನು ಮುಕ್ತನಾಗುವುದೂ ನಿಶ್ಚಯವು.

ವೇದಗಳನ್ನು ಓದಿದವರು ಸಿಗಬಹುದು; ಆದರೆ ವೇದಗಳಲ್ಲಿ ತುಂಬಿರುವ ಶ್ರೀಶನ ಮಹಿಮೆಯನ್ನು ಅರಿತು, ಭಕ್ತಿಯಿಂದ ತಿಳಿಸಿಕೊಡುವ ಸದ್ಗುರುಗಳು ಸಿಗುವುದು ದುರ್ಲಭವಾಗಿದೆ. ಪ್ರವೃತ್ತಿ ಕರ್ಮಗಳಲ್ಲಿ ತೊಳಲಿಸಿ, ಬಳಲಿಸುವ ಉಪದೇಶಕರನ್ನು ನಂಬಬೇಡ! ನಾನೇ ಬ್ರಹ್ಮನೆಂದು ತಿಳಿದ ದುರಹಂಕಾರಿಯನ್ನು ಸೇರಬೇಡ! ಜಗವೆಲ್ಲವೂ ಮಿಥ್ಯೆ ಎಂದು ಶ್ರೀಶನ ಸೃಷ್ಟಿ ವೈಭವವನ್ನು ಅಲ್ಲಗಳೆವ ಕುವಾದಿಗಳ ಮಾತಿಗೆ ಕಿವಿಗೊಡ ಬೇಡ! ಮಣ್ಣಿನ ಮನೆಯಂತೆಯೇ ತಿಳಿ ಮನುಜಾದಿ ದೇಹವನ್ನು! ದೇಹಪೋಷಕವಾಗಿ ಒಳಸೇರುವ ಧಾನ್ಯ, ಮಧು, ತೈಲ, ಕ್ಷೀರ, ಘೃತ, ಮಾಂಸ, ಲವಣ, ಗುಡ, ಫಲ ಮೂಲಾದಿಗಳೆಲ್ಲವೂ ಮೃದ್ವಿವಿಕಾರಗಳೇ! ಬದುಕಿರಲು ಸಾಕಷ್ಟು ಉಣ್ಣು! ಶ್ರೀಹರಿಯನ್ನು ತಿಳಿಯಲು ಬದುಕು! ಸತ್ಯ, ಶೌಚ, ಆರ್ಜವ, ತ್ಯಾಗ, ದಯಾ, ವಿಕ್ರಮ, ಕ್ಷಾಂತಿ, ಧೃತಿ, ತಪಸ್ಸು ಮುಂತಾದ ಗುಣರತ್ನಗಳನ್ನು ಸಂಪಾದಿಸು!

ಇಂದ್ರಿಯದಾಸನಾದವನಿಗೆ ಮನಸ್ಸು ವಶವಾಗದು. ಮನೋವಶವಾಗದೆ ಶ್ರವಣ ಮನನ ಧ್ಯಾನಗಳು ಕೈಗೂಡವು. ಧ್ಯಾನವಿಲ್ಲದೆ ಅಪರೋಕ್ಷಜ್ಞಾನವಿಲ್ಲ; ಅವಿಲ್ಲದೆ ಶ್ರೀಹರಿಪ್ರಸಾದವಿಲ್ಲ; ಶ್ರೀಶಪ್ರಸಾದವಿಲ್ಲದವನಿಗೆ ಮೋಕ್ಷವಿಲ್ಲ. ಆದುದರಿಂದ ಮೊದಲು ದುಷ್ಟೇಂದ್ರಿಯಗಳನ್ನು ನಿಗ್ರಹಿಸು! ದುಃಖವಾಗುತ್ತಿದೆ ಎಂದರೆ ಅಜ್ಞಾನದಿಂದ ತಿಳಿ! ಜ್ಞಾನವನ್ನು ಸರ್ವಪ್ರಯತ್ನದಿಂದ ಸಂಪಾದಿಸು!

ಸಾತ್ವಿಕಗುಣದಿಂದ ಮನಃಪ್ರಸಾದ, ಜ್ಞಾನ, ಪ್ರೀತಿ, ಧೃತಿ, ಸ್ಮೃತಿಗಳು ಉಂಟಾಗುವು, ರಜೋಗುಣದಿಂದ ಕಾಮ, ಅಜ್ಞಾನ, ದರ್ಪ, ದಂಬ, ಲೋಭ, ಭಯಗಳೂ, ತಮೋಗುಣದಿಂದ ಅನ್ಯಥಾಜ್ಞಾನ, ಕ್ರೋಧ, ಮೋಹ, ಕ್ಲಮ, ವಿಷಾದ, ದುಃಖಗಳು ಸಂಭವಿಸುವವು. ಆದುದರಿಂದ ಸತ್ವಗುಣವನ್ನು ಸಾತ್ವಿಕವಾದ ಜನಸಂಗ, ಆಹಾರ, ಶಾಸ್ತ್ರಶ್ರವಣಗಳಿಂದ ವೃದ್ಧಿಪಡಿಸಿಕೊಂಡು, ಇತರ ದುಷ್ಟಗುಣಗಳ ಕಾರ್ಯವಾಗದಂತೆ ಮಾಡಿಕೋ!

ನಿಗಡವು ಕಾಲನ್ನಂತೆ, ಕಾಮವು ಮನುಜನನ್ನು ಸಂಸಾರಗರ್ತದಲ್ಲಿ ಬಂಧಿಸಿಡುವುದು. ಅದನ್ನು ಜ್ಞಾನವೆಂಬಶಾಣದಿಂದ ಕಡಿದು, ಪರಿಶುದ್ಧಮನದಿಂದ ಶ್ರೀಹರಿಯನ್ನು ತಿಳಿದು, ಭಕ್ತಿಯಿಂದ ಭಜಿಸುವ ಸಾತ್ವಿಕ ಜೀವನು ರಜಸ್ತಮೋಗುಣ ಕಾರ್ಯಗಳಾದ ಅಜ್ಞಾನ ವಿಪರೀತ ಜ್ಞಾನಗಳಿಂದ ರಹಿತನಾಗಿ, ಶ್ರೀಹರಿಪ್ರಸಾದದಿಂದ ಮುಕ್ತನಾಗುವನು.

ಶ್ರೀಕ್ರೀಡಾದಿಗುಣವಿಶಿಷ್ಟನು, ಜೀವನಿಯಾಮಕನು, ನಾಶರಹಿತನು, ವ್ಯಾಪ್ತನು, ಸರ್ವೋತ್ತಮನು, ಸರ್ವಜ್ಞನು, ಸ್ವತಂತ್ರನು ಆದ ಶ್ರೀನಾರಾಯಣನ ಪ್ರಸಾದವು ಮೋಚಕವಾಗಿರುವಂತೆ, ಅವನ ಮಾಯಾಶಕ್ತಿಯು ಬಂಧಕವಾಗಿದೆ. ಅವನನ್ನು ನಂಬಿ ಭಜಿಸಿದವರು ಮಾತ್ರ ಬಂಧಕವಾಗಿರುವ ಅವನ ಮಾಯೆಯನ್ನು ಅವನ ದಯದಿಂದ ದಾಟುವರು. ಅವನನ್ನು ನಂಬದ ರಾಜಸತಾಮಸರು ನಿತ್ಯ ಸಂಸಾರ, ನಿತ್ಯನರಕಗಳನ್ನು ಪೊಂದಿ ದುಃಖಪಡುವರು.

ಕಾಮದಿಂದ ಕ್ರೋಧವು, ಅದರಿಂದ ಲೋಭಮೋಹಗಳು, ಅವುಗಳಿಂದ ಮದ ಮತ್ಸರಗಳು ಜನಿಸಿ ಮನುಜರನ್ನು ಕೆಡಿಸುವವು. ಮಾನ, ದರ್ಪ, ಅಹಂಕಾರ, ಶೋಕ, ಮೋಹಗಳೆಲ್ಲವೂ ಜ್ಞಾನನಾಶಕವೆಂದು ಪರಿಶೀಲಿಸಿ, ಪರಿವರ್ಜಿಸು! ಶುಕ್ಲ ಶೋಣಿತ ಸಂಬಂಧದಿಂದ ಜನಿಸಿ, ಪುರೀಷಮೂತ್ರ ಕ್ಲೇದಪೂಯ ಶೋಣಿತಗಳಿಂದ ತುಂಬಿ, ತೃಷ್ಣಾದರ್ಪಗಳಿಂದ ಬೆಳೆದು, ಕೊನೆಗೆ ಜೀರ್ಣವಾಗಿ, ಮತ್ತೆ ಮಣ್ಣಲ್ಲಿ ಕಲೆತುಹೋಗುವ ಶರೀರವನ್ನು ನಾನೆಂದು ತಿಳಿವದೇ ಅಹಂಕಾರವು. ತಲೆಯಲ್ಲಿ ಹುಟ್ಟುವ ಹೇನಿನಂತೆ, ಮಲದಲ್ಲಿ ಬರುವ ಕ್ರಿಮಿಯಂತೆ, ದೇಹದಿಂದ ಹೊರಬಂದ ಮಾತ್ರಕ್ಕೆ ಪುತ್ರ ಪೌತ್ರ ಜನರನ್ನು ನನ್ನದು ಎಂಬುವುದೇ ಮಮಕಾರವು. ಅಹಂಕಾರದಿಂದ ಕರ್ತೃತ್ವಾಭಿಮಾನವೂ, ಮಮಕಾರದಿಂದ ಸ್ವಾಮಿತ್ವಾಭಿಮಾನವೂ ಪುಟ್ಟಿ, ಇಲ್ಲದ ಸ್ವಾತಂತ್ರ್ಯವನ್ನು ವಹಿಸಿ, ಜೀವನು ಕೆಡುವನು. ಶಬ್ದರಾಗದಿಂದ ಶ್ರೋತ್ರವನ್ನು, ಸ್ಪರ್ಶರಾಗದಿಂದ ಚರ್ಮವನ್ನು, ರೂಪರಾಗದಿಂದ ಚಕ್ಷುಸ್ಸನ್ನೂ, ವಶದಲ್ಲಿ ತರಲಾರದೆ, ವಿಷಯಲಾಲಸನಾಗಿ ಜೀವನು ಮಹಾಪ್ರಯತ್ನದಿಂದಲೂ ಸಿಗದ ವಿಷಯಗಳಿಂದ ವಿರಕ್ತನೂ ಆಗಲಾರದೆ, ಸಂತತ ದುಃಖಭಾಜನನಾಗಿರುವನು. ಯೋಷಿತ್ಕಥಾಲಾಪ ಚತುರರಿಂದ ಕಲೆತು ಸಂಚರಿಸಿ, ಸ್ತ್ರೀಜಿತನಾದವನಿಗೆ, ಇಂದ್ರಿಯ ಜಯವೇ ಆಗದು; ಇನ್ನು ಪರೋಕ್ಷಜ್ಞಾನವೆಲ್ಲಿ? ಅಪರೋಕ್ಷವಂತೂ ಬಲು ದೂರವೇ ಸರಿ!

ಮನಸ್ಸಿನಲ್ಲಿ ಜನಿಸಿದ ಕಾಮರಾಗವನ್ನು ಕೃಚ್ಛ್ರವ್ರತದಿಂದಲು, ಅಘಮರ್ಷಣ ಸೂಕ್ತ (ಓಂ ಋತಂಚ ಸತ್ಯಂಚ ಎಂಬ ಮೂರು ಋಕ್ಕುಗಳ) ಪಠನದಿಂದಲು, ಕಳೆದು ಜಿತೇಂದ್ರಿಯನು, ಜಿತಮನಸ್ಕನು ಆಗಬೇಕು. ವಾತ, ಪಿತ್ತ, ಕಫ, ರಕ್ತ, ತ್ವಕ್, ಮಾಂಸ, ಸ್ನಾಯು, ಅಸ್ಥಿ, ಮಜ್ಜಾ, ನಾಡಿ ಎಂಬ ಹತ್ತು ಧಾತುಗಳಿಂದ ಹತ್ತು ಮುಖ್ಯ ಧಮನಿಗಳಿಂದ, ಸಾವಿರಾರು ಸಣ್ಣ ನಾಡಿಗಳಿಂದ ಕೂಡಿದೆ ಈ ಮನುಜ ದೇಹ. ಹೃದಯದಿಂದ ಹೊರಸೂಸಿ ಬರುವ ಒಂದು ನಾಡಿಯಲ್ಲಿ ಸಂಕಲ್ಪದರ್ಶನ ಸ್ಪರ್ಶನಾದಿಗಳಿಂದ ರೇತವು ಜನಿಸುವುದು. ಅನ್ನ ವಿಕಾರವಾದ ರೇತಸ್ಸು ಮನೋವಹಾ ಎಂಬ ಆ ನಾಡಿಯ ದ್ವಾರಾ ಉಪಸ್ಥೇಂದ್ರಿಯದ ಕಡೆಗೆ ಹರಿಯುವುದು. ಅದೇ ಪುರುಷ ದೇಹಕ್ಕೆ ಬೀಜಭೂತವಾಗಿದೆ. ಅದನ್ನು ನಿಗ್ರಹಿಸಿ, ಸಂಕರಕಾರಿಯಾಗದಂತೆ, ಸ್ವಪತ್ನೀ ಮಾತ್ರರತನಾದವನು ಬ್ರಹ್ಮಚಾರಿ ಎನಿಸುವನು. ಮನೋಬಲದಿಂದಲು, ಜ್ಞಾನಬಲದಿಂದಲು ಮನೋವಹೆಯನ್ನು, ಊರ್ಧ್ವಮುಖವನ್ನಾಗಿ ಮಾಡಿ, ಸುಷುಮ್ನೆಯಲ್ಲಿ ಧ್ಯಾನ

ಗೋಚರನಾದ ಶ್ರೀಹರಿಯನ್ನು ಕಂಡವನು ಸಂಸಾರದ ಸುಳಿಗೆ ಬೀಳದೆ, ಸತ್ಯಲೋಕವನ್ನು ಸೇರುವನು. ದೇಹಬಂಧನವನ್ನು ಬಿಡಲು ಯೋಗ ಮಾರ್ಗದಂತೆ, ಜೀವನ್ಮುಕ್ತನಾಗಿರಲು ಉಪಕರಿಸುವ ಜ್ಞಾನಮಾರ್ಗವನ್ನು ಕೇಳು!

ಮಾನಸಾಭಿಮಾನದಿಂದ ಅನುಭೂತವಾಗುತ್ತಿರುವ ಜನ್ಮಮೃತ್ಯು ಜರಾವ್ಯಾಧಿ ದೋಷಮಯವಾದ ಸಂಸಾರಿಕ ಬಂಧವು. ಪೂರ್ವಕರ್ಮಫಲರೂಪವು, ಸ್ವತಂತ್ರ ಶ್ರೀಹರಿನಿರ್ಮಿತವು ಆದ ಸತ್ಯವಾಗಿದೆ. ಆದರೂ ಸತ್ಯವಾದ ಬ್ರಹ್ಮಹತ್ಯೆಯು ಸೇತು ದರ್ಶನದಿಂದ ನಾಶವಾಗುವಂತೆ, ಶ್ರೀಹರಿ ದರ್ಶನಪ್ರಸಾದಗಳಿಂದ ಸತ್ಯವಾದ ಸಂಸಾರಿಕ ಬಂಧವು ಬಿಟ್ಟುಹೋಗುವುದು. ಜ್ಞಾನಭಕ್ತಿಗಳೇ ದರ್ಶನ ಪ್ರಸಾದ ಸಂಪಾದಕವಾಗಿವೆ.

ಜ್ಞಾನಭಕ್ತಿಗಳನ್ನು ದೃಢೀಕರಿಸುವುದು ವೈರಾಗ್ಯವು. ವೈರಾಗ್ಯವೆಂದರೆ ಹರಿಯನ್ನು ಬಿಟ್ಟು, ಇತರ ವಿಷಯಗಳೆಲ್ಲವು ಹೇಯ ನಶ್ವರವೆಂಬ ಜ್ಞಾನವೇ. ಅಹಿಂಸಾ, ಸತ್ಯವಚನ, ಆರ್ಜವ, ಕ್ಷಮಾ, ಪ್ರಸಾದ, ಸ್ವಧರ್ಮಾಚರಣಗಳಿಂದ ಜೀವನು ಮನಸ್ಸಮಾಧಾನವನ್ನು ಹೊಂದಿ ಸುಖಿಸುವನು. ಅಮೋಘವಾದ ವಚನ, ಅಮಾಯಿಕವಾದ ಮನಸ್ಸು, ಅಹಿಂಸ್ರವಾದ ಕಾಯ ಇವು ಶುದ್ಧತ್ರಿಕರಣಗಳು. ಜೀವನು ಧೀರನಾಗಿ ತ್ರಿಕರಣ ಶುದ್ಧಿಯನ್ನು ಸಂಪಾದಿಸಬೇಕು. ಸಂಶಯವನ್ನು ಶ್ರವಣದಿಂದಲು, ಅನ್ಯಥಾ ಜ್ಞಾನವನ್ನು ಮನನದಿಂದಲು ಕಳೆದುಕೊಂಡು, ಜೀವನು ಧ್ಯಾನಪಥ ಪ್ರವೇಶಕ್ಕೆ ಅರ್ಹನಾಗುವನು. ಇಂದ್ರಿಯ ಜಯವಂತನಿಗೆ ದೇವತೆಗಳು ಪ್ರಸನ್ನರಾಗಿ, ಜ್ಞಾನಸಹಾಯಕರಾಗುವರು.

ದೇಶಕಾಲಗಳನ್ನರಿತು ಆಹಾರ ನಿಯಮವನ್ನು ಪಾಲಿಸುವ ಮನುಜನು ನಿಷ್ಪಾಪನಾಗಿ, ಇಂದ್ರಿಯ ಜಯವನ್ನು ಪೊಂದುವನು. ಪ್ರವೃತ್ತ ಕರ್ಮವನ್ನು ಬಿಟ್ಟು, ಶ್ರೀಹರಿ ಪ್ರೀತ್ಯರ್ಥವಾದ ವಿಹಿತಕರ್ಮವನ್ನು ಮಾಡುವವನು. ಜ್ಞಾನಾರ್ಹನಾಗುವನು. ಶ್ರೀಹರಿಯೇ ಸ್ವತಂತ್ರನು. ಜೀವರೆಲ್ಲರು ಅವನ ಭೀನ್ನಾಂಶರು; ಅಸ್ವತಂತ್ರರು ಎಂಬುದೇ ಜ್ಞಾನವು.

ಸ್ವಪ್ನವು ಶ್ರೀಹರೀಚ್ಛೆಯಿಂದ ಬರುವದು. ಮಾನಸಿಕ ವಾಸನೆಗಳೇ ಉಪಾದಾನವಾಗಿ, ಶ್ರೀಹರಿಯು ನೋಡಿಸಿದಾಗ, ನೋಡಿಸಿದಷ್ಟು, ನೋಡಿಸಿದ್ದನ್ನು ಮಾತ್ರ ನೋಡುವ ಜೀವನು ಅಸ್ವತಂತ್ರನೇ ಸರಿ! ನೋಡಿದ್ದನ್ನು ನೆನೆದು ಪೇಳಲು ಬರುವುದರಿಂದ ಸ್ವಪ್ನವು ಸತ್ಯವೆಂದು ತಿಳಿ! ನಿದ್ರೆ ಬರುವುದು ಜೀವಾಧೀನವಲ್ಲ; ಅಂತೆಯೇ ಎಚ್ಚರವೂ ಜೀವಾಧೀನವಲ್ಲ. ನೋಡುವ ಪರತಂತ್ರ ಜೀವನಿಗೆ ತೋರುವ ಶ್ರೀಹರಿಯು ಸ್ವತಂತ್ರನೆಂದು ಯಾರಾದರೂ ತಿಳಿಯಬಹುದಾಗಿದೆ. ಇನ್ನು ಜಾಗ್ರದವಸ್ಥೆಯಲ್ಲಿ ಮಾತ್ರ ತಾನು ಸ್ವತಂತ್ರನೆಂದು ತಿಳಿವ ಜೀವನು ಮೂಢನಲ್ಲವೇ?

ಬ್ರಹ್ಮಾದಿ ಜೀವರನ್ನು ಕ್ಷರ ಪುರುಷರೆಂಬುವರು; ಅವರ ಶರೀರಗಳು ನಾಶಸಹಿತವಾಗಿವೆ; ನಾಶರಹಿತವು ಅಪ್ರಾಕೃತವು ಆದ ದಿವ್ಯದೇಹ ಉಳ್ಳ ಶ್ರೀದೇವಿಯು ಅಕ್ಷರಪುರುಷಳೆನಿಸುವಳು. ಈ ಪುರುಷರಿಬ್ಬರಿಗೂ ಭಿನ್ನನು, ಉತ್ತಮನು ಆದವನು ಶ್ರೀಹರಿಯು; ಅವನನ್ನು ಪುರುಷೋತ್ತಮನೆಂದು ವೇದಗಳು ಸಾರುತ್ತಿವೆ. ನಿವೃತ್ತಿಕರ್ಮದಿಂದ

ಮನಃಶುದ್ಧಿಯನ್ನು ಸಂಪಾದಿಸಿ, ಶ್ರವಣಾದಿಗಳಿಂದ ಜ್ಞಾನವನ್ನಾರ್ಜಿಸಿ, ಶ್ರೀಹರಿಪ್ರಸಾದವನ್ನು ಗಳಿಸಿದವನು ಜೀವಮುಕ್ತನಾಗುವನು. ಅಪರೋಕ್ಷ ಜ್ಞಾನವನ್ನು ಶ್ರೀಶನು ಕರುಣಿಸಿದ ಕೂಡಲೇ, ಜೀವನ್ಮುಕ್ತನ ಸಂಚಿತಕರ್ಮಗಳು ನಾಶವಾಗುವುವು; ಆಗಾಮಿ ಕರ್ಮಗಳ ಲೇಪ ತಪ್ಪಿ ಹೋಗುವುದು. ಪ್ರಾರಬ್ಧ ಮಾತ್ರವನುಭವಿಸಿ, ಅದು ಮುಗಿದ ಕೂಡಲೇ ಜೀವನು ಅರ್ಚಿರಾದಿ ಮಾರ್ಗದಿಂದ ಸತ್ಯಲೋಕವನ್ನು ಸೇರುವನು. ಅವನಿಗೆ ಮತ್ತೆ ಜನನವಿಲ್ಲ. ಅರ್ಚಿ ಅಹಸ್ಸು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ಸೂರ್ಯ, ದಕ್ಷ ಇಂದ್ರ, ರುದ್ರ (ಗರುಡ ಅಥವಾ ಶೇಷ), ಮುಖ್ಯಪ್ರಾಣರ (ಬ್ರಹ್ಮದೇವ) ದ್ವಾರಾ ಲಕ್ಷ್ಮೀಪತಿಯನ್ನು ಸೇರುವರು ಅಪ್ರತೀಕಾಲಂಬನರು. ಪ್ರತೀಕಾ (ದೇಹ) ಲಂಬನರು ಸತ್ಯಲೋಕದಲ್ಲಿ ಚತುರ್ಮುಖನ ವಶರಾಗಿದ್ದು, ಪ್ರಳಯದಲ್ಲಿ ಬ್ರಹ್ಮದೇವರಿಂದ ಕೂಡಿ, ಶ್ರೀಹರಿಯ ಉದರವನ್ನು ಪೊಕ್ಕು, ಮುಂದೆ ಪ್ರಳಯಾವಸಾನದಲ್ಲಿ ಹೊರಬಂದಾಗ, ಸ್ವಸ್ವಯೋಗ್ಯ ಮುಕ್ತಿಯನ್ನು ಪೊಂದಿ ಆನಂದದಿಂದಿರುವರು. ಅಪ್ರತಿಕಾಲಂಬನರು ಕೂಡ ಚತುರ್ಮುಖನ ದ್ವಾರಾನೇ ಮುಕ್ತರಾಗುವರು. ಅರ್ಚಿರಾದಿ ಮಾರ್ಗವಿದು. ಇದರ ಗಮ್ಯವಾದ ಅಮೃತ ಲೋಕಗಳು ಶ್ವೇತದ್ವೀಪ, ಅನಂತಾಸನ, ವೈಕುಂಠಗಳು.

ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಪಿತೃಲೋಕಗಳನ್ನು ಸೇರಿಸುವ ಧೂಮಾದಿ ಮಾರ್ಗವು ಪುನರ್ಜನನ ಕಾರಣವಾಗಿದೆ. ಆದುದರಿಂದ ಬುದ್ಧಿವಂತರು ಪ್ರವೃತ್ತಿ ಕರ್ಮವನ್ನು ಮಾಡದೆ, ನಿವೃತ್ತವನ್ನೇ ಮಾಡಿ ಅರ್ಚಿರಾದಿ ಪಥದಿಂದ ಶ್ರೀಶನನ್ನು ಕಂಡು ಸುಖಿಸುವರು. ಗೃಹಸ್ಥರಾದರೇನು ? ಯಜ್ಞದಾನತಪೋನಿರತರಾಗಿ, ನಿವೃತ್ತದಿಂದ ಕರ್ಮಫಲವನ್ನು ಶ್ರೀಶನಿಗರ್ಪಿಸಿ, ಅನಿಷಿದ್ಧ ಸುಖರಾಗಿ, ಶ್ರೀಹರಿಯನ್ನು ಗುರುಗಳ ಉಪದೇಶದಿಂದ ತಿಳಿದು, ಭಕ್ತಿಯಿಂದ ಭಜಿಸಿದರೆ, ಅವರೂ ಸನ್ಯಸನ ಶೀಲರಂತೇ ಮುಕ್ತರಾಗುವರು.

## ೭. ಜನಕರಾಜ ಚರಿತೆ

### ತತ್ವವಿಚಾರ

ಭೀಷ್ಮನು ಉಪದೇಶಿಸಿದನು : 'ರಾಜನ್ ! ಹಿಂದೆ ಜನದೇವನೆಂಬ ಜನಕ ರಾಜನಿದ್ದನು. ಗೃಹಸ್ಥನಾಗಿದ್ದರೂ ಆ ಮಹಾನುಭಾವನು ಪರಬ್ರಹ್ಮವಿಚಾರದಲ್ಲಿ ನಿರತನಾಗಿ ಸತತವೂ ಆಚಾರ್ಯ ಶತಮಧ್ಯದಲ್ಲಿರುತ್ತಿದ್ದನು. ಅವರಲ್ಲಿ ಕೆಲವರು ಚಾರ್ವಾಕರು, ಕೆಲವರು ಸಾಂಖ್ಯರು, ಕೆಲರು ತಾರ್ಕಿಕರು, ಕೆಲವರು ಬೌದ್ಧರು, ಕೆಲವರು ವೇದಾಂತಿಗಳು ಇದ್ದರು. ಜೀವನೇ ಇಲ್ಲ, ಪ್ರತ್ಯಕ್ಷ ಮಾತ್ರ ಪ್ರಮಾಣವೆಂಬ ಲೋಕಾಯತರು; ದೇಹೇಂದ್ರಿಯ ಯೋಗವಿಯೋಗಗಳಿಂದ ಜನನಮರಣಗಳಾಗುವವೆಂಬ ಸಾಂಖ್ಯರು; ಶೂನ್ಯವಾದಿಗಳೂ, ಕ್ಷಣಿಕ ವಿಜ್ಞಾನವಾದಿಗಳೂ ಆದ ಬೌದ್ಧರು; ಜಗವೆಲ್ಲ ಮಿಥ್ಯೆ ಎಂಬ ಮಾಯಾವಾದಿಗಳೂ; ಬ್ರಹ್ಮನೇ ತಾನೆಂಬ ಐಕ್ಯವಾದಿಗಳು; ಇವರೇ ಆದಿಯಾಗಿ ಹೇಳುವ ವಾದಗಳು

ಜನದೇವನಿಗೆ ವೇದ ವಿರೋಧವಾಗಿ ಕಂಡವು. ಆದುದರಿಂದ ಆತನ ಪಂಚಶಿಖನೆಂಬ ಋಷಿವರನಿಗೆ ಶರಣಾಗಿ ನಿಜವಾದ ತತ್ವಜ್ಞಾನವನ್ನು ಬೇಡಿದನು. ಶ್ರೀಕಪಿಲನಾಮಕ ಶ್ರೀಹರಿಯ ಶಿಷ್ಯನಾಗಿದ್ದ ಆಸುರಿಗೆ ಆತನು ಶಿಷ್ಯನಾಗಿದ್ದನು. ಎರಡನೇ ಕಪಿಲನಂತೆ ಕಂಗೊಳಿಪ ಪಂಚಶಿಖನು ಪಂಚಸ್ರೋತವೆಂಬ ತೀರ್ಥದಲ್ಲಿ ಒಂದು ಸಾವಿರ ವರ್ಷದ ಸತ್ರಯಾಗವನ್ನು ಮಾಡಿದ್ದನು. ಪಂಚರಾತ್ರಾಗಮವನ್ನು ಓದಿ, ಪಂಚಮೂರ್ತಿ (ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ) ಗಳನ್ನು ಪಂಚಕೋಶನಿಯಾಮಕರೆಂದು ತಿಳಿದು, ಶಾಂತ, ದಾಂತ, ಉಪರತ, ತಿತಿಕ್ಷು, ಸಮಾಹಿತ ಎಂಬ ಪಂಚಗುಣವಂತನಾಗಿ, ಪಂಚಕಾಲಗಳಲ್ಲಿ ಪ್ರಪಂಚನಿರ್ಮಾಣ ಪವಿತ್ರಕರ್ತನಾದ ಶ್ರೀಹರಿಯನ್ನು ಭಜಿಸುತ್ತಿದ್ದನು. ಅವನ ಗುರುವಾದ ಆಸುರಿಯೂ ಅಕ್ಷರನಾಮಕ ಪರಬ್ರಹ್ಮನನ್ನು ಚನ್ನಾಗಿ ತಿಳಿದು ವಿಪ್ರಸಭೆಗಳಲ್ಲಿ ಶ್ರೀಹರಿಯ ಸರ್ವೋತ್ತಮತ್ವ ತತ್ವವನ್ನು ಉಪದೇಶಿಸಿದನು. ಕಪಿಲೆ ಎಂಬ ವಿಪ್ರಕುಟುಂಬಿನಿಯ ಸ್ತನ್ಯಪಾನಮಾಡಿ ಬೆಳೆದ ಪಂಚಶಿಖನು, ಕಾಪಿಲೇಯನೆನಿಸಿ ಆಸುರಿಯನ್ನು ಭಜಿಸಿ ಸಾಂಖ್ಯವೆಂದರೆ ಯಥಾರ್ಥ ಜ್ಞಾನಮಾರ್ಗವನ್ನು ಕಲಿತನು. ಅವನನ್ನು ನೋಡಿ, ಎಲ್ಲ ಆಚಾರ್ಯರಂತೆ ತಿಳಿದು ಜನದೇವನು ಉದಾಸೀನನಾಗಿದ್ದನು.

ಆಚಾರ್ಯ ಸಮೂಹದಲ್ಲಿ ಕೂತು, ಹೇತು ಸಮ್ಮಿತವಾದ ವಾದದಲ್ಲಿ - ಮಿಕ್ಕವರನ್ನು ನಿರುತ್ತರರನ್ನಾಗಿ ಮಾಡಿದ ಪಂಚಶಿಖನನ್ನು ಕಂಡ ಜನದೇವನು ವಿಸ್ಮಯಭರಿತನಾದನು. ಅವನು ಪಂಚಶಿಖನಿಗೆ ಶರಣಾಗಿ, ಮೋಕ್ಷಧರ್ಮವನ್ನು ಅವನಿಂದ ತಿಳಿದನು. ಮೊತ್ತಮೊದಲು ಪಂಚಶಿಖನು ಚಾರ್ವಾಕಾದಿಗಳನ್ನು ಎಂತು ಸೋಲಿಸಿದನೋ, ಆ ವಾದವೈಖರಿಯನ್ನು ನಿರೂಪಿಸುವೆನು ಕೇಳು!

ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ಒಪ್ಪುತ್ತಾರೆ. ಅತೀಂದ್ರಿಯವಾದ ಧರ್ಮಾದಿಗಳನ್ನೂ, ಅವುಗಳನ್ನು ಸಾಧಿಸುವ ಶ್ರುತಿ, ಅನುಮಾನಗಳನ್ನು ಕೂಡ ಅಂಗೀಕರಿಸುವುದಿಲ್ಲ. ಅವರ ಮತದಲ್ಲಿ ಈಶ್ವರನೇ ಇಲ್ಲ. ಏಕೆಂದರೆ ಅವನು ಪ್ರಮಾಣ (ಪ್ರತ್ಯಕ್ಷ) ಗೋಚರನಲ್ಲ. ಇಂತಹ ಚಾರ್ವಾಕಮತದಿಂದ ಯಾರಿಗೂ ಏನೂ ಪ್ರಯೋಜನವಿಲ್ಲ. ಆ ಮತಕ್ಕೆ ವಿಷಯ (ಧರ್ಮಾಧರ್ಮಗಳು), ಅವುಗಳಿಂದ ಬರುವ ಸ್ವರ್ಗನರಕಗಳು, ಅವನ್ನು ಕೊಡುವ ದೇವನು ಇಲ್ಲವಾದುದರಿಂದ ಆ ಮತವು ಅಪ್ರಮಾಣವಾಗಿದೆ. ವಿಷಯ ಅಧಿಕಾರಿ ಪ್ರಯೋಜನಗಳಿಲ್ಲದ್ದು ಸಿದ್ಧಾಂತವೇ ಅಲ್ಲ. ಪರಲೋಕ ಪ್ರಯೋಜನವಿಲ್ಲದಿದ್ದರೂ, ಇಹಲೋಕದ ಸುಖವಿದೆ ಎಂದರೆ - ಎಲ್ಲರೂ, ಎಲ್ಲ ಸುಖಕ್ಕೆ ಪ್ರಯತ್ನಿಸುವರು. ಪರಸ್ತ್ರೀಗಮನ, ಪರಧನಾಪಹಾರಗಳು ಎಲ್ಲರೂ ಮಾಡಲು ಯೋಗ್ಯವೇ ಆಗುವವು. ಆಗ ಪರಸ್ಪರ ಹಿಂಸೆಯಾಗಿ, ಲೋಕವೇ ನಷ್ಟವಾದೀತು! ಪರಾಪಹಾರವನ್ನು ಮಾಡಕೂಡದೆಂದು ಹೇಳಲು ಚಾರ್ವಾಕನಿಗೆ ಮುಖವಿಲ್ಲ. ಏಕೆಂದರೆ ಅವನಿಗೆ ಧರ್ಮಾಧರ್ಮಗಳಿಲ್ಲ. ಆದುದರಿಂದ ಲೋಕನಾಶಕವು, ವಾಙ್ಮಾತ್ರಮಧುರವೂ ಆದ ಚಾರ್ವಾಕಮತವು ಅತ್ಯಂತ ಹೇಯವಾಗಿದೆ. ಕಣ್ಣಿಗೆ ಕಾಣದ

(ಅದೃಷ್ಟವಾದ) ದೇವ, ಅದೃಷ್ಟ, ಜೀವ, ಧರ್ಮಾಧರ್ಮಗಳು ಮುಂತಾದ ಎಲ್ಲ ವಿಧಿ ದೃಷ್ಟವಸ್ತುಗಳನ್ನು ಚಾರ್ವಾಕನು ಕೂಡ ಒಪ್ಪಬೇಕಾಗುವುದು.

ರೇತಸ್ಸು ಶರೀರಕ್ಕೆ ಕಾರಣವಾಗಿದೆ. ಅಲ್ಲವೆಂದರೆ ಸಂತಾನಕ್ಕಾಗಿ ಭಾರ್ಯಾದಿಗಳಲ್ಲಿ ರೇತಸ್ಸೇಚನೆ ಮಾಡುವ ಪ್ರವೃತ್ತಿಯೇ ಹುಟ್ಟದೇ ಹೋದೀತು! ಈ ಕಾರ್ಯಕಾರಣ ಭಾವವು ಪ್ರತ್ಯಕ್ಷ ಪ್ರಮಾಣದಿಂದ ತಿಳಿಯಲ್ಪಡದು. ರೇತಸ್ಸೇಕದಿಂದ ಸಂತಾನವಾಗುವುದು. ರೇತಸ್ಸೇಕವಿಲ್ಲದಿರೆ ಸಂತಾನವಿಲ್ಲ ಎಂಬ ಅನ್ವಯವ್ಯತಿರೇಕ ರೂಪ ಅನುಮಾನ (ತರ್ಕ) ದಿಂದಲೇ, ಅದು ತಿಳಿದುಬರುತ್ತಿದೆ ಅಂದ ಮೇಲೆ ಪ್ರತ್ಯಕ್ಷವನ್ನೊಂದನ್ನೇ ಅಲ್ಲದೆ ಅನುಮಾನ ವನ್ನೂ ಪ್ರಮಾಣವೆಂದು ಅವನು ಒಪ್ಪಲೇಬೇಕಾಗುವುದು.

ಪುರುಷಶರೀರದಲ್ಲಿ ರೇತಸ್ಸೇಕವು ಸಂತಾನಕಾರಣವಲ್ಲ. ಸ್ತ್ರೀಶರೀರವೇ ಆದರೂ ಮೃತಶರೀರದಲ್ಲಿ ರೇತಸ್ಸೇಕವಾದರೂ ಸಂತಾನ ಕಾರಣವಾಗುವುದಿಲ್ಲ ಅಂದ ಮೇಲೆ ಜೀವವಿರಬೇಕೆಂದು, ಅದೃಷ್ಟನಾದ ಜೀವನನ್ನು ಒಪ್ಪಬೇಕಾಯಿತು. ಬಂಜೆಯಲ್ಲಿ ರೇತಸ್ಸೇಕವು ಸಂತಾನಕಾರಣವಾಗಲಾರದು. ಇತರ ಸ್ತ್ರೀಯರಲ್ಲಿ ರೇತಸ್ಸೇಕವಾದಾಗಲೆಲ್ಲ ಸಂತಾನವಾಗಲಾರದು ಅಂದ ಮೇಲೆ ಅದೃಷ್ಟ (ಪುಣ್ಯ, ಪಾಪಕರ್ಮಗಳು) ಅವುಗಳಿಗೆ ಫಲವನ್ನೀವ ಸ್ವತಂತ್ರ ದೇವನು ಸಿದ್ಧವಾಗಿ, ಆ ವಸ್ತುಗಳನ್ನು ಪ್ರತಿಪಾದಿಸುವ ವೇದಾದ್ಯಾಗಮವೂ ಸಿದ್ಧಿಸುವುದು. ಆದುದರಿಂದ ಚಾರ್ವಾಕನ ನಾಸ್ತಿಕ್ಯವಾದವು ಸರ್ವಥಾ ಯುಕ್ತವಲ್ಲ.

(2) ವಾತಪಿತ್ತಶ್ಲೇಷ್ಮ ಮೊದಲಾದ ಧಾತುಗಳು ಮೃತ ಶರೀರದಲ್ಲಿ (ಅಪಥ್ಯಾದಿ)ಗಳಿಂದ ವಿಕಾರವನ್ನು ಹೊಂದುವುದಿಲ್ಲ. ಜೀವಚ್ಛರೀರಗಳಲ್ಲಿಯೂ, ಎಲ್ಲರಲ್ಲಿಯೂ ವಿಕಾರವಾಗುವುದಿಲ್ಲ. (3) ವಟ ಬೀಜದಿಂದ ವಟವು ಹುಟ್ಟುತ್ತದೆ ಆದರೆ ಭರ್ಜಿತ ಬೀಜದಿಂದ ಹುಟ್ಟುವುದಿಲ್ಲ. ಅಭರ್ಜಿತವೇ ಆಗಲಿ ಎಲ್ಲಾ ಬೀಜಗಳಿಂದ ಹುಟ್ಟುವುದಿಲ್ಲ. (4) ತುಪ್ಪದಿಂದ ದಪ್ಪವಾಗುವರು. ಸತ್ತವರು ಆಗುವುದಿಲ್ಲ. ಬದುಕಿರುವವರೆಲ್ಲರೂ ಆಗುವುದಿಲ್ಲ. (5) ಪುಷ್ಪಾದಿ ಸಮೃದ್ಧಿಗಾಗಿ ಗಿಡಬಳ್ಳಿಗಳಿಗೆ ಹೊಗೆ ಹಾಕುವುದು ಪ್ರಸಿದ್ಧವಾಗಿದೆ. ಒಣಗಿದ ಗಿಡ ಧೂಮಾಧಿ ವಾಸನದಿಂದ ಚಿಗುರಿ ಹೂಬಿಡುವುದಿಲ್ಲ. ಹೋಗಲಿ! ಬದುಕಿರುವ ಎಲ್ಲ ಗಿಡಗಳೂ (ಯಾವಾಗಲೂ) ಹೂಬಿಡುವುದಿಲ್ಲ. (6) ಸಾಧನ ವಿಶೇಷದಿಂದ ಕೆಲವರಿಗೆ ಜಾತಿ ಸ್ಮರಣೆಯು ಬರುತ್ತೆ, ಎಲ್ಲರಿಗೂ ಇಲ್ಲ. ಯಾವಾಗಲೂ ಬರುತ್ತಾ ಇರುವುದಿಲ್ಲ. ಅಂದ ಮೇಲೆ ದೇಹಾತಿರಿಕ್ತ ಜೀವನಿರಬೇಕು. ಅವನ ಸ್ಮರಣೆಯು ಅದೃಷ್ಟದಿಂದ ಅದೃಷ್ಟವನ್ನು ಪ್ರೇರಿಸುವ ಪರಮಾತ್ಮನೂ ಇರುವನು ಎಂದು ಜೀವ, ಅದೃಷ್ಟ, ದೇವ ಮತ್ತು ಇವನ್ನು ತಿಳಿಸಿಕೊಡುವ ಆಗಮವೂ ಸಿದ್ಧವಾಯಿತು. (7) ಅಯಸ್ಕಾಂತದಿಂದ ಕಬ್ಬಿಣ ಮಾತ್ರ ಆಕರ್ಷಿತವಾಗುವುದು. ಎಲ್ಲ ಲೋಹಗಳೂ ಆಗುವುದಿಲ್ಲ. (8) ಸೂರ್ಯಕಾಂತ ಎಂಬುವ ಶಿಲಾ ವಿಶೇಷದಿಂದ ಅಗ್ನಿಯು ಹುಟ್ಟುತ್ತದೆ. ಅಚೇತನಕ್ಕೆ ಅಂತಹ ಶಕ್ತಿಯು ಕೂಡುವುದಿಲ್ಲ. ಅಂದ ಮೇಲೆ ತತ್ಪ್ರೇರಕನಾದ ಈಶ್ವರನು, ಅಲ್ಲಿ ಮಾತ್ರ ಆ ಶಕ್ತಿ ಇರುವ ಅದೃಷ್ಟವು - ಇವನ್ನು

ನಿರೂಪಿಸುವ ಆಗಮಾದಿಗಳೂ ಪ್ರಮಾಣಗಳೆಂದು ಸಿದ್ಧವಾಯಿತು. (9) ಕುಡಿದ ನೀರು ತೃಷೆಯನ್ನು ಕಳೆಯುವುದು. ಮೃತ ಶರೀರದಲ್ಲಿ ನೀರು ಪರಿಣಾಮವನ್ನು ಹೊಂದುವುದಿಲ್ಲ. ಪಾತ್ರಾಂತರದಲ್ಲಿಟ್ಟರು ಕೂಡ ಪರಿಣಾಮವಿರುವುದಿಲ್ಲ. ಜೀವವಿರುವ ಎಲ್ಲಾ ಶರೀರಗಳಲ್ಲಿಯೂ ಒಂದೇ ರೀತಿಯ ಪರಿಣಾಮವಾಗುವುದಿಲ್ಲ. (10) ಮರಣವಾದಾಗ ದೇಹವು ತನ್ನ ಕಾರಣವಾದ ಪೃಥಿ ವ್ಯಾದಿ ಪಂಚಭೂತಗಳಲ್ಲಿ ಸೇರಿಹೋಗುವುದು, ಜೀವವಿರುವಾಗ ಸೇರುವುದಿಲ್ಲ. ಸ್ವೇಚ್ಛೆಯಿಂದಲೂ ಸೇರುವುದಿಲ್ಲ. (11) ದೇವತಾ ಪ್ರಾರ್ಥನೆಯಿಂದ ಸಂಪತ್ತು ಬರುತ್ತದೆ - ಎಲ್ಲರಿಗೂ ಯಾವಾಗಲೂ ಬರುವುದಿಲ್ಲ. (12) ಜೀವಚ್ಛರೀರದಲ್ಲಿ ಮಾತ್ರ ಚೇಷ್ಟೆ ಇರುವುದು. ಜೀವವಿರುವಾಗ ಚೇಷ್ಟಾ ನಿವೃತ್ತಿಯಾಗುವುದಿಲ್ಲ. ಸ್ವೇಚ್ಛೆಯಿಂದಲೂ ಅಲ್ಲ. ಇಂತು ಅನೇಕ ಕಾರಣಗಳಿಂದ ಜೀವ, ಅದೃಷ್ಟ, ಈಶ್ವರ, ಆಗಮ ಇತ್ಯಾದಿಗಳು ಸಿದ್ಧವಾಗುವುದರಿಂದ ಚಾರ್ವಾಕ ಮತವು ಅಪ್ರಮಾಣವೂ, ಅತ್ಯಂತ ಹೇಯವೂ ಎಂದು ತಿಳಿದು ಪರಿವರ್ಜಿಸಬೇಕು.

ಈಗ ನಿರೀಶ್ವರ ಸಾಂಖ್ಯಮತವನ್ನು ನಿರಾಕರಿಸುವೆವು. ಅವರು ಅಚೇತನ ಪ್ರಕೃತಿಯಿಂದಲೇ ಜಗತ್ತು ನಿರ್ಮಿತವೆಂಬುವರು. ಅಚೇತನವಾದದ್ದು ತಾನಾಗಿ ಪ್ರವೃತ್ತಿಯುಳ್ಳದ್ದಾಗಲಾರದು. ಹಾಲು ತಾನಾಗಿ ಮೊಸರಾಗುತ್ತೆ; ಜಲವು ತಾನಾಗಿ ಹರಿಯುತ್ತಿದೆ; ಎಂದರೆ ಅಲ್ಲಿಯೂ ಚೇತನಾಪೇಕ್ಷೆಯು ಇದ್ದೇ ಇದೆ. ಎಲ್ಲ ನದಿಗಳೂ ಹರಿಯುವುದು ಅವನ ಆಜ್ಞೆಯಿಂದ; ಕುಲಾಲಾದಿಗಳು ತಂತಮ್ಮ ವ್ಯಾಪಾರವನ್ನು ಮಾಡಲು ಸ್ವತಂತ್ರರಲ್ಲ. ಶ್ರೀಶನಿತ್ತ ದ್ರವ್ಯದಿಂದ, ಶ್ರೀಶನು ಪ್ರೇರಿಸಿದಾಗ ಮಾತ್ರ. ಚೇತನರು ಕೂಡ ಸ್ವತಂತ್ರ ಪ್ರವೃತ್ತಿ ಉಳ್ಳವರಲ್ಲ ಅಂದ ಮೇಲೆ, ಇನ್ನು ಅಚೇತನರು ಪ್ರವೃತ್ತಿ ರಹಿತರು ಎಂದು ಹೇಳಬೇಕೆ? ಈ ಮತವು ಶ್ರುತ್ಯಾದಿ ಪ್ರಮಾಣವಿರುದ್ಧವೂ, ಮತ್ತು ಅಪ್ರಾಮಾಣಿಕವೂ ಆಗಿದೆ.

ಸೇಶ್ವರಸಾಂಖ್ಯಮತವನ್ನೂ ಖಂಡಿಸುವೆವು. ಈಶ್ವರನು ಅಮುಖ್ಯನು (ಗುಣಭೂತನು), ಪ್ರಧಾನವೇ ಜಗತ್ಕರ್ತೃ. ಪರ್ಜನ್ಯನಿಂದ ಅನುಗೃಹೀತವಾಗಿ ಪೃಥಿವಿಯಿಂದ ಅಂಕುರಾದಿಗಳು ಹುಟ್ಟುವಂತೆ, ಈಶ್ವರನಿಂದ ಅನುಗೃಹೀತವಾದ ಪ್ರಧಾನದಿಂದ ಜಗತ್ತು ಹುಟ್ಟುತ್ತೆ. ಈಶ್ವರನು ಬಿಜಾವಾಪಕನಲ್ಲ; ಪ್ರೇರಕನೂ ಅಲ್ಲ. ಕೇವಲ ಸನ್ನಿಧಿ ಮಾತ್ರದಿಂದ ಅನುಗ್ರಹಮಾಡುವನು ಎಂದು ಪತಂಜಲಮತ. ಈಶ್ವರನು ಅನುಗ್ರಾಹಕಮಾತ್ರನಲ್ಲ. ಸ್ವತಂತ್ರವಾಗಿ ಜಗದುತ್ಪಾದಕನಾಗಿರುವನು. ಎಲ್ಲ ಪದಾರ್ಥಗಳಿಗೂ ಕಾರ್ಯಕಾರಣಾದಿ ಭಾವವನ್ನು ಕೊಟ್ಟು, ಪ್ರೇರಿಸಿ, ಸರ್ವತ್ರ ದೇಶ ಕಾಲಗುಣಶಕ್ತಿಗಳಿಗೆ ಸ್ವಾಮಿಯಾಗಿರುವ ಶ್ರೀನಾರಾಯಣನು ಪ್ರಕೃತಿಯನ್ನೂ ತಾನೇ ವಿಸ್ತಾರಗೊಳಿಸಿ, ಜಗತ್ತನ್ನು ಸ್ವತಂತ್ರವಾಗಿ ನಿರ್ಮಿಸುವನು. ಶ್ರೀಲಕ್ಷ್ಮೀದೇವಿಯಿಂದ ಕೂಡಿ, ಕ್ರೀಡಿಸಿ, ಆಕೆಯನ್ನು ಸೃಷ್ಟಿಸುವಮುಖನನ್ನಾಗಿ ಮಾಡಿದ ಶ್ರೀಹರಿಯು ಸ್ವತಂತ್ರಕರ್ತನಾಗಿರುವನು. ಇತ್ಯಾದಿ ವೇದಾದಿ ಪ್ರಮಾಣವಿರುದ್ಧವಾದ ಪತಂಜಲಿ ಮತವು ಹೇಯವೇ ಸರಿ!

ಶರೀರವು ಕಲ್ಲನ್ನು ಹೊತ್ತುಹೋಗುವಂತೆ ಪ್ರಕೃತಿಯೇ ಪ್ರವೃತ್ತಿಯನ್ನು ಮಾಡುವುದು. ಎಂದರೆ ಜೀವರಹಿತ ಶರೀರಕ್ಕೆ ಪ್ರವೃತ್ತಿ ಇಲ್ಲ ; ಇಲ್ಲಿ ಜೀವನು ಮುಖ್ಯನೋ ? ಶರೀರವೇ ಮುಖ್ಯವೋ ? ಎಂದು ಕೇಳಬೇಕು. ಶರೀರವೇ ಮುಖ್ಯವೆಂಬುವರು. ಪುರುಷೋಪಸರ್ಜನ ಪ್ರಧಾನಕರ್ತೃತ್ವವಾದಿಗಳು. ಜೀವನು ಮುಖ್ಯವೆಂಬುವರು ಪ್ರಕೃತ್ಯುಪರ್ಜನ ಪುರುಷಕರ್ತೃತ್ವವಾದಿಗಳು. ಈ ಎರಡು ವಿಧವಾದ ಸೇಶ್ವರ ಸಾಂಖ್ಯಮತವು ದೋಷಯುಕ್ತವೇ ಸರಿ! ಜೀವನಿಗೆ ಶರೀರ ಸಂಬಂಧದಲ್ಲಿ ಸ್ವಾತಂತ್ರ್ಯವಿಲ್ಲ. ಇದ್ದಾಗಲೂ ಪುರುಷನೇ ಕರ್ತನು- ಶರೀರವಲ್ಲ. ಶರೀರವೇ ಕರ್ತೃವೆಂದರೆ ಪುರುಷನು ಅಮುಖ್ಯನಾದನು. ಆದರೆ ಶರೀರಮುಖ್ಯವು ಜೀವನಲ್ಲ ಎಂಬುವ ಮಾತು ಲೋಕವ್ಯವಹಾರ ವಿರುದ್ಧವಾಗಿದೆ. ಇನ್ನು ಜೀವನೇ ಮುಖ್ಯನೆಂದರೆ, ಜೀವನಿಗೆ ಶರೀರ ಸಂಬಂಧವನ್ನು ಕೊಡುವ ಈಶ್ವರನ ಅನಂತ ಶಕ್ತಿ ಸ್ವಾತಂತ್ರ್ಯಗಳನ್ನು ಒಪ್ಪಲೇಬೇಕಾಗುವುದು.

ವೈಶೇಷಿಕರು ಶ್ರೀಹರಿಯ ಅನಂತ ಕಲ್ಯಾಣ ಗುಣತತ್ವವನ್ನು ಹೇಳುವುದಿಲ್ಲ. ದ್ರವ್ಯವಾದುದರಿಂದ ಜೀವನಂತೆ ಈಶನಿಗೂ ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ ಎನ್ನುವ ಐದು ಸಾಮಾನ್ಯ ಗುಣಗಳಿವೆ ಮತ್ತು ಕರ್ತನಾದುದರಿಂದ ಅವನಿಗೆ ಜ್ಞಾನ, ಇಚ್ಛಾ, ಪ್ರಯತ್ನ ಎಂಬ ಮೂರು ವಿಶೇಷ ಗುಣಗಳಿವೆ. ಅಂತು ಈಶ್ವರನಿಗೆ ಎಂಟೇ ಗುಣಗಳಿವೆ ಎಂಬುವರು. ಇದು ತಪ್ಪು. ಸೃಷ್ಟಿಗೆ ಈಶ್ವರೇಚ್ಛೆ ನಿಮಿತ್ತ ಕಾರಣವೆಂಬ ಅವರ ಮಾತು ದುಷ್ಟವಾಗಿದೆ. ಹೇಗೆಂದರೆ ಈಶ್ವರೇಚ್ಛೆ ನಿತ್ಯವೋ ಎಂದು ಕೇಳಿದಾಗ ನಿತ್ಯವೆಂದರೆ ಪರಮಾಣು ಚೇಷ್ಟೆಯೇ ಇಲ್ಲದಾಗ ಈಶ್ವರೇಚ್ಛೆ ಇದ್ದರೂ ದ್ವ್ಯಣುಕಾದಿ ಕಾರ್ಯಗಳು (ಸೃಷ್ಟಿ) ಆಗದೇ ಹೋದಿತು. ಈಶ್ವರೇಚ್ಛೆಯು ಅನಿತ್ಯವೆಂದರೆ, ಇಚ್ಛೆ ಹುಟ್ಟಬೇಕಾದರೆ ಮತ್ತೊಂದು ಇಚ್ಛೆ, ಅದಕ್ಕೆ ಇನ್ನೊಂದು ಇಚ್ಛೆ- ಹೀಗೆ ಅನವಸ್ಥೆಯು ಬರುವುದು. ಇದೇ ರೀತಿಯಾಗಿ ಸಮವಾಯವೇ ಕೂಡದೆ ಇರುವುದರಿಂದ ಅವರ ಮತದಲ್ಲಿ ಜಗತ್ತಿನ ಸೃಷ್ಟಿ, ಪ್ರಳಯಗಳೂ ಕೂಡದೇ ಹೋಗುವವು. ಪರಮಾಣುಗಳು (ಸಮವಾಯಿ ಕಾರಣ) ನಿತ್ಯವೆನ್ನುವುದೂ ಅನುಮಾನ ವಿರುದ್ಧವಾಗಿದೆ. ಪರಮಾಣುಗಳು ನಿತ್ಯವೆಂದೊಪ್ಪಿದರೆ ಘಟಾದಿಗಳೂ ನಿತ್ಯಗಳಾಗಬೇಕಾದೀತು! ಇಂತಹ ನಿರರ್ಥಕ ತರ್ಕ ವಿದ್ಯೆಯನ್ನು ಆಶ್ರಯಿಸಿ, ಹೇತುವಾದವನ್ನು ಮಾಡುವುದು, ಸೃಗಾಲ ಜನ್ಮಕ್ಕೆ ಕಾರಣವೆಂದು ನಾವು ಹಿಂದೆ ನಿರೂಪಿಸಿರುವೆವು.

ಪಾಷಂಡಿಗಳಾದ ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರರು (ಎಲ್ಲರೂ ಬೌದ್ಧರೇ) ಹೇಳುವಂತೆ- ಎಲ್ಲ ವಸ್ತುವೂ ಕ್ಷಣಿಕವು. ಕಾರ್ಯವೆಲ್ಲವೂ ಕಾಲ ಕರ್ಮಾದಿ ನಿಮಿತ್ತದಿಂದಲೇ ಆಗುವುದು. ಈಶ್ವರನಿಲ್ಲ. ಪರಮಾಣು ಸಮುದಾಯವೇ ಜಗತ್ತು. ಪರಮಾಣು ಪರಿಣಾಮವಲ್ಲ- ಎಂಬ ವಾದವು ದುಷ್ಟವಾಗಿದೆ. ಮೊದಲು ವಿರಲ ಪರಮಾಣುಗಳು ಮಿಲಿತ ಪರಮಾಣುಗಳನ್ನು ಹುಟ್ಟಿಸುವವು. ಆಗ ಮಿಲಿತ ಪರಮಾಣುಗಳಿಗೆ ದರ್ಶನವಾಗುವುದು. ಅದಾದ ಮೇಲೆ ಇದು ಮತ್ತು ಇದು ಎಂದು

ಪರಸ್ಪರಾಪೇಕ್ಷಾ ಪ್ರತ್ಯಯವು. ಅನಂತರ ವ್ಯವಹಾರಾದಿಗಳು ನಡೆಯಬೇಕು. ಇವರ ಮತದಲ್ಲಿ ದ್ರಷ್ಟಾರನು ಮತ್ತು ಪರಮಾಣುಗಳು ಎಲ್ಲವೂ ಕ್ಷಣಕಗಳು, ಅಂದ ಮೇಲೆ ಮೊದಲು ಒಬ್ಬನಿಗೆ ಪರಮಾಣು ದರ್ಶನವು, ಅವನಿಗೇನೇ ಅಪೇಕ್ಷಾ ಬುದ್ಧಿ, ಅವನಿಗೆ ವ್ಯವಹಾರಾದಿಗಳು ಎಂದು ಕೂಡುವುದಿಲ್ಲ. ಕ್ಷಣಕ್ಷಣಕ್ಕು ಉತ್ತರ ಕಾರ್ಯವನ್ನು ಹುಟ್ಟಿಸಿ ಎಲ್ಲವೂ ನಷ್ಟವಾಗುವುದರಿಂದ, ದರ್ಶನ, ಬುದ್ಧಿ, ವ್ಯವಹಾರಗಳು ಒಬ್ಬನಿಗೆ, ಒಂದು ವಿಷಯದಲ್ಲಿಯೂ ಆಗಲಾರದು. ಕಾರಣವಿದ್ದರೆ ಕಾರ್ಯವು ಆಗೇ ತೀರುವುದು ಎಂಬ ಅವರ ನಿಯಮದಿಂದ ಅನಂತ ಕಾರ್ಯೋತ್ಪತ್ತಿಯಾಗಬೇಕಾಗುವುದು ಆ ನಿಯಮವಿಲ್ಲ-(ಕ್ಷಣಿಕ) ವೆಂದರೆ ಕಾರ್ಯವೇ ಹುಟ್ಟದೇ ಹೋಗಬೇಕಾಗುವುದು. ಪ್ರತಿ ಕ್ಷಣದಲ್ಲಿ ಉತ್ಪತ್ತಿಯೂ ವಿನಾಶವೂ ಕೂಡದೆ ಇರುವುದರಿಂದ ಕ್ಷಣಿಕತ್ವವೂ ಕೂಡ ಸಿದ್ಧಿಸದು. ಕ್ಷಣಿಕತ್ವವು ಅಪ್ರಾಮಾಣಿಕವಾಗಿದೆ. ಇಂತು ವೈಭಾಷಿಕಸ್ ತ್ರಾಂತಿಕರ ಪರಮಾಣು ಪುಂಜವಾದಿ ಮತವು ಅತ್ಯಂತವು ಅಪ್ರಾಮಾಣಿಕವೂ, ಅಯುಕ್ತವೂ ಆಗಿದೆ.

ಮಾಧ್ಯಮಿಕರು ಶೂನ್ಯದಿಂದಲೇ ಜಗತ್ತು ಹುಟ್ಟಿತೆಂಬುವರು, ಶೂನ್ಯ ಅಂದರೆ ಅಸತ್ಪದಾರ್ಥದಿಂದ ಏನೂ ಹುಟ್ಟಲಾಗದು; ಹಾಗಾದರೆ ಗಗನ ಕುಸುಮದಿಂದಲೂ ಗಂಧಾದಿ ಕಾರ್ಯಗಳು ಹುಟ್ಟಬೇಕಾದೀತು! ಅಸತ್ತಾದ ಶುಕ್ತಿಯೇ ರಜತಾಕಾರವಾಗಿ ತೋರುವುದೆಂಬ ವಿವರ್ತವಾದವೂ ಸರಿಯಲ್ಲ; ಶುಕ್ತಿ ಅಸತ್ತಲ್ಲ; ಸತ್ತೇ ಆಗಿದೆ. ಸನ್ ಘಟಃ ಎಂಬ ಪ್ರತ್ಯಕ್ಷವೂ ಎಂದಿಗೂ ಅಬಾಧಿತವಾಗಿದೆ. ಆದುದರಿಂದ ಜಗತ್ತು ಮಿಥ್ಯೆ ಎಂಬುವುದೂ ಸರಿಯಲ್ಲ.

ಜಗತ್ತು ವಿಜ್ಞಾನ ರೂಪವು. ವಿಜ್ಞಾನದಿಂದಲೇ ಹುಟ್ಟುತ್ತಿದೆ. ಇದೆ ಎಂದರೆ ಇದೆ; ಇಲ್ಲ ಎಂದರೆ ಇಲ್ಲ. ಈಶ್ವರನಿಂದ ಕೃತ್ಯವಿಲ್ಲ ಎಂದು ಯೋಗಾಚಾರರು ಹೇಳುವರು. ಅದೂ ಸರಿಯಲ್ಲ. ಜಗತ್ತು ವಿಜ್ಞಾನದಿಂದ ಭಿನ್ನವಾಗಿಯೇ ಅನುಭೂತವಾಗುತ್ತಿದೆ. ಇಲ್ಲ ಅಂದ ಮಾತ್ರಕ್ಕೆ ಇಲ್ಲದೇ ಹೋಗುವುದಿಲ್ಲ. ಜ್ಞಾನವು ಕ್ಷಣಿಕವೆಂತಲೂ ಘಟಾದಿಗಳು ಸ್ಥಾಯಿ ಎಂತಲೂ ಒಡಂಬಡುವ ಯೋಗಾಚಾರರಿಗೆ ಜ್ಞಾನ ಜಗತ್ತುಗಳು ವಿರುದ್ಧ ಧರ್ಮಾಧಿಕರಣಗಳಾಗಿರುವುದರಿಂದ ಐಕ್ಯವು ಕೂಡುವುದಿಲ್ಲ. ಈ ಎಲ್ಲ ಬೌದ್ಧ ಮತಗಳು ಶ್ರುತಿ ಸ್ಮೃತಿಗಳಿಗೂ ಯುಕ್ತಿಗೂ, ಪ್ರತ್ಯಕ್ಷಕ್ಕೂ ವಿರುದ್ಧವಾಗಿವೆ. ಅಂತೆಯೇ ಅವೆಲ್ಲವೂ ಹೇಯಗಳಾಗಿವೆ.

ಕಾಯ ಪರಿಮಾಣವುಳ್ಳ ಜೀವನಿಂದಲು ದೃಷ್ಟಾದೃಷ್ಟ ಸಾಧನಗಳಿಂದಲು ಜಗತ್ತು ಹುಟ್ಟುವುದು. ಈಶ್ವರನಿಂದ ಕೃತ್ಯವಿಲ್ಲ ಎಂದು ಜಿನ ಮತವು ಹೇಳುವುದು- ಇದೂ ಅಯುಕ್ತವು. ಜಗತ್ತಿಗಿರುವ ಸಪ್ತ ಭಂಗಿತ್ವವು ಒಂದು ವಸ್ತುವಿನಲ್ಲಿ ಸರ್ವಥಾ ಯುಕ್ತವಲ್ಲ, ಮತ್ತು ಜೀವನು ಮಶಕ ಜನ್ಮದಿಂದ ಗಜ ಶರೀರವನ್ನು ಹೊಂದಿದಾಗ ಅಪೂರ್ಣತೆಯೂ ಗಜ ಜನ್ಮದಿಂದ ಅಜ ಶರೀರವನ್ನು ಹೊಂದಿದಾಗ ಆಧಿಕ್ಯ (ಶರೀರದ ಹೊರಗೂ ಇರಬೇಕಾಗಿ)ವು ಬಂದೀತು. ಅವಿಕಾರಿಯಾದ ಜೀವನಿಗೆ ಶರೀರ ಪರಿಣಾಮವನ್ನು ಹೇಳಿದರೆ ಅನಿತ್ಯತ್ವವು ಬರಬೇಕಾಗುವುದು. ಸತ್ವ, ಅಸತ್ವ, ಸದಸತ್ವ, ಸದಸದ್ವಿಲಕ್ಷಣತ್ವ,

ಸತ್ತ್ವಾಸತಿಸದಸದ್ವಿಲಕ್ಷಣತ್ವ, ಅಸತ್ತ್ವೇಸತಿಸದಸದ್ವಿಲಕ್ಷಣತ್ವ, ಸದಸತ್ತ್ವೇಸತಿಸದಸದ್ವಿಲಕ್ಷಣತ್ವ ಎಂಬ ಏಳು ಪ್ರಕಾರವುಳ್ಳ ಜಗತ್ತು - ಎಂದು ಹೇಳುವುದೂ ಅಪ್ರಾಮಾಣಿಕವಾಗಿದೆ. ಪ್ರಮಾಣಸಿದ್ಧವಾದವು ಸತ್ತ್ವ, ಅಸತ್ತ್ವ ಎಂಬ ಎರಡೇ ವಿಧ ಪದಾರ್ಥಗಳಿವೆ. ಇಂತು ಜೈನಮತವು ದುಷ್ಟವಾಗಿದೆ.

ಪಾಶುಪತರಿಗೆ ಪಶುಪತಿ ಸದಾಶಿವನೇ ಜಗತ್ಕರ್ತನು. ಮಾಯೆಯೇ ಜಗತ್ಕಾರಣವು ಆದರೆ ಇದೂ ಸರಿಯಲ್ಲ. ಪಶುಪತಿರುದ್ರನಿಗೆ ಜನನ, ಮರಣ, ಪಾರತಂತ್ರ್ಯ ಮೊದಲಾದ ದೋಷಗಳಿವೆ. ಮತ್ತು ಶ್ರೀದೇವಿಯು ಅಂತಹ ರುದ್ರರನ್ನು ತಾನು ಆರಿಸಿ, ರುದ್ರಪದವಿಯಿತ್ತು, ಕಾಪಾಡುವುದಾಗಿ (ಋ. 10-125-5) ವೇದದಲ್ಲಿ ಹೇಳಲ್ಪಟ್ಟಿದೆ. ಇಂತು ಪಾಶುಪತವು ನಿರಸ್ತವಾಯಿತು.

ಇಂತು ದುರ್ವಾದಿಗಳೆಲ್ಲರ ಮತವನ್ನು ನಿರಾಕರಿಸಿ ಪಂಚಶಿಖನು ಜಯದೇವನಿಗೆ ಸನ್ಮತವನ್ನೂ ನಿರೂಪಿಸ ಹೊರಟು ಮಾಯಾವಾದವನ್ನೂ ಖಂಡಿಸಿದ ಬಗೆ ಕೇಳು! ಜಗತ್ತು ಮಿಥ್ಯೆ - ದೇವರೇ ನಾನು ಎಂಬುವ ಮಾಯಾವಾದಿಗಳೂ ಬೌದ್ಧರಂತೆಯೇ ಎಂದು ತಿಳಿ! ಅಸತ್ತೆಂದು ಅವರೆಂದರೆ, ಸದಸ್ವದ್ವಿಲಕ್ಷಣ ಎಂದು ಇವರೆಂಬರು. ಸಂವೃತಿ ಎಂದು ಅವರೆಂದುದನ್ನು ಮಾಯೆ ಎಂದು ಇವರೆಂದರು. ಶೂನ್ಯವೆಂದು ಅವರು ನುಡಿದುದನ್ನು ಅಖಂಡಬ್ರಹ್ಮನೆಂದು ಇವರೆಂದರು. ಅಂದ ಮೇಲೆ ಮಾಯವಾದಿಗಳು ಪ್ರಚ್ಛನ್ನ ಬೌದ್ಧರೇ ಸರಿ! ಜಗತ್ತು ಪ್ರತ್ಯಕ್ಷ ಸಿದ್ಧವೆಂಬುವ ಚಾರ್ವಾಕರಿಗೂ ಹೇಯರಾಗಿರುವರು. ಮಿಥ್ಯಾ ಜಗದ್ವಾದಿಗಳು ಅಷ್ಟಗುಣನೆಂದೊಡಂಬಡುವ ತಾರ್ಕಿಕರಿಗೂ ಹೇಯರು ನಿರ್ಗುಣ ಬ್ರಹ್ಮವಾದಿಗಳು. ಪರಬ್ರಹ್ಮನಿಗೇ ಅಜ್ಞಾನವನ್ನು ಹೊರಿಸುವ ಮಾಯಾವಾದಿಗಳು ಬೌದ್ಧರಿಗೂ ಹೇಯರು. ಆದುದರಿಂದ ಮಾಯಾವಾದಿ ಮತವು ಬಲು ದೋಷದುಷ್ಟವಾಗಿ, ಪರಿವರ್ಜನೀಯವಾಗಿದೆ.

ಈಗ ವೇದಸಮ್ಮತ ಸನ್ಮತವನ್ನು ಅರುಹುವೆನು ಕೇಳು. ಶ್ರೀಹರಿಯೇ ಸರ್ವೋತ್ತಮನು, ಸ್ವತಂತ್ರನು, ಸರ್ವಕರ್ತನು. ಜಗಜ್ಜನ್ಮ, ಪಾಲನ, ಪ್ರಳಯ, ನಿಯಮಗಳನ್ನು ಮಾಡಿ, ಜ್ಞಾನಮೋಕ್ಷಗಳನ್ನು ಸಾತ್ವಿಕರಿಗೂ, ಅಜ್ಞಾನಬಂಧಗಳನ್ನು ರಾಜಸತಾಮಸರಿಗೂ, ಕೊಡುವನು. ಯಾರ ಸಹಾಯವನ್ನೂ ಬೇಡದ ಸ್ವತಂತ್ರಕರ್ತನು ಅವನಿಂದ ಪ್ರೇರಿತರಾಗಿ ವಿಧಿಹರ ವಿಹಗೇಂದ್ರ ನಾಗೇಂದ್ರ ಸುರೇಂದ್ರಾದಿ ದೇವತೆಗಳು, ಅವನಿತ್ತ ಶಕ್ತಿಯಿಂದ ಇತರ ಜಗನ್ನಿರ್ಮಾಣ, ಸಂಹಾರಗಳನ್ನು ಮಾಡಿ, ಅವನ ಸೇವೆ ಎಂದರ್ಪಿಸಿ, ಮುಕ್ತರಾಗುವರು. ಶ್ರೀಹರಿ ಪತ್ನಿ ರಮಾದೇವಿಯು ನಿತ್ಯಮುಕ್ತಳು, ಅಪ್ರಾಕೃತ ದಿವ್ಯದೇಹಳು, ಪ್ರಕೃತಿನಿಯಾಮಿಕೆಯು. ದೇವಮನುಜಾದಿಗಳಲ್ಲಿ ತಾರತಮ್ಯವಿದೆ. ಮುಕ್ತಿಯಲ್ಲಿಯೂ ತಾರತಮ್ಯವಿದೆ. ಸ್ವರೂಪಾನಂದಾವಿರ್ಭಾವವೇ ಮುಕ್ತಿಯು. ಅದಕ್ಕೆ ಸಾಧನವೆಂದರೆ ಭಕ್ತಿಯೇ. ಭಕ್ತಿಯೆಂದರೆ ಶ್ರೀಹರಿಯಲ್ಲಿ ಸರ್ವೋತ್ತಮತ್ವ ಜ್ಞಾನಪೂರ್ವಕ ಸುದೃಢ ಸ್ನೇಹವೇ. ಜ್ಞಾನವು ಶ್ರವಣಮನನ ನಿಯಮಿತ ಧ್ಯಾನಗಳಿಂದ ಜನಿಸುವುದು. ಅಪರೋಕ್ಷಜ್ಞಾನವು ಸುಜನರಿಗೆ ಮಾತ್ರ ಸಿಗುವುದು. ರಾಜಸ ತಾಮಸರಿಗೆ ಸರಿಯಾದ

ಜ್ಞಾನವೇ ಆಗುವುದಿಲ್ಲ. ಅಚಿಂತ್ಯಾದ್ಭುತ ಶಕ್ತಿಸಂಪನ್ನನಾದ ಶ್ರೀಪತಿಯು ನಿರ್ಮಿಸಿದ ಜಗತ್ತು ಸತ್ಯವಾಗಿದೆ - ಪಾರಮಾರ್ಥಿಕ ಸತ್ಯವಾಗಿದೆ. ಜೀವರು ಪರಸ್ಪರ ಭಿನ್ನರೂ, ಶ್ರೀಹರಿಯ ಕಿಂಕರರೂ ಆಗಿರುವರು. ಇವೆಲ್ಲ ತತ್ತ್ವಗಳನ್ನು ತಿಳಿಸಿಕೊಡುವ ಪ್ರಮಾಣಗಳು ಆಗಮ, ಅನುಮಾನ, ಪ್ರತ್ಯಕ್ಷಗಳೆಂದು ಪ್ರಸಿದ್ಧವಾಗಿವೆ. ನಾಲ್ಕುವೇದಗಳು, ಮೂಲರಾಮಾಯಣ, ಭಾರತ, ಪಂಚರಾತ್ರಾಗಮ ಮತ್ತು ಇವಕ್ಕೆ ಅವಿರುದ್ಧಾರ್ಥ ಪ್ರತಿಪಾದಕವಾದ ಭಾಗವತಾದಿ ಗ್ರಂಥಗಳು ಸಚ್ಛಾಸ್ತ್ರವೆನಿಸಿ, ಪ್ರಮಾಣಭೂತಗಳಾಗಿವೆ. ದೇವತೆಗಳಲ್ಲಿ ಶ್ರೀದೇವೀ ಶ್ರೀರಮಣರ ಅನಂತರ ಬ್ರಹ್ಮವಾಯುಗಳು ಮುಖ್ಯರಾಗಿ ಜೀವೋತ್ತಮರೆನಿಸಿ, ಲೋಕ ಗುರುಗಳಾಗಿರುವರು. ಅವರಿಂದಲೇ ಜ್ಞಾನಭಕ್ತಿಗಳು ಸಿಗುವವು. ಅವರ ದ್ವಾರಾನೇ ಶ್ರೀಹರಿ ಸನ್ನಿಧಾನ ಪ್ರಾಪ್ತಿ. ಇಂತು ಸನ್ಮತವನ್ನು ನಿರೂಪಿಸಿದ ಪಂಚಶಿಖನನ್ನು ಪೂಜಿಸಿ, ಕೃತಜ್ಞನಾದ ಜನದೇವನು, ಎಲ್ಲ ದುರ್ಮತಗಳನ್ನೂ ತರಿದು, ಸನ್ಮತವನ್ನನುಷ್ಠಿಸಿ, ಮುಕ್ತನಾದನು.

## ೮. ಪ್ರಹ್ಲಾದ ಬಲಿಸುರೇಂದ್ರ ಸಂವಾದ

ಧರ್ಮರಾಜನು ಪ್ರಶ್ನಿಸಿದನು: 'ತಾತ! ಏನು ಮಾಡಿದವನು ಸುಖವನ್ನು ಪೊಂದುವನು? ಏನು ಮಾಡಿ ದುಃಖವನ್ನು ಪೊಂದುವನು? ನಿರ್ಭಯನಾಗಿ ಚರಿಸುವುದೆಂತು? ಜ್ಞಾನವನ್ನು ಎಂತು ಹೊಂದಲಹುದು?'

ಭೀಷ್ಮನಿಂತೆಂದನು: 'ಸುಖಕ್ಕೆ ಕಾರಣವಾದುದು ಹೊರಗಿಲ್ಲ; ದಮ ಅಂದರೆ ಇಂದ್ರಿಯನಿಗ್ರಹವೇ ಸುಖ ಕಾರಣವಾಗಿದೆ, ದಮರಹಿತನು ದುಃಖವನ್ನೂ ಭಯವನ್ನೂ ಹೊಂದುವನು. ದಮವೇ ಮನಶ್ಶುದ್ಧಿ ದ್ವಾರಾ ಜ್ಞಾನಸಾಧನವಾಗಿದೆ. ಅದಾಂತರು ಸಲೆ ರೇಗಿ ಲೋಕಪೀಡಕರಾಗುವರು. ಅವರಿಂದ ಲೋಕವನ್ನು ರಕ್ಷಿಸಲು ರಾಜನು ಸೃಷ್ಟನಾಗಿರುವನು. ದೀನನಾಗದೆ ದುರಭಿಮಾನವನ್ನು ಬಿಟ್ಟು, ತೃಪ್ತಿ, ಶ್ರದ್ಧೆ, ಅಕ್ರೋಧ, ಆರ್ಜವ, ಗುರುಪೂಜೆ, ಅನಸೂಯೆ, ದಮ, ಅಲೋಭ ಇವೆಲ್ಲ ಗುಣಗಳ ಸಮೂಹಕ್ಕೆ ದಮವೆಂಬುವರು. ದಮವಂತನು ಇನ್ನೊಬ್ಬರಿಗೆ ಭಯಪ್ರದನಾಗನು. ಇನ್ನೊಬ್ಬರಿಂದ ತಾನೂ ಭಯಪಡನು; ಮಹಾಲಾಭದಿಂದ ಉದ್ರೇಕವನ್ನಾಗಲಿ, ವ್ಯಸನದಿಂದ ಉದ್ವೇಗವನ್ನಾಗಲಿ ಹೊಂದದೆ ಶಾಂತಚಿತ್ತನಾಗಿರುವನು.

ವೇದದಲ್ಲಿಲ್ಲದ ಚಂಡಿಕಾ ಹೋಮಾದಿಗಳನ್ನು ಮಾಡಿ, ಪಶುಮಾಂಸ ರಕ್ತಗಳನ್ನು ಅರ್ಪಿಸಿ ತಾವೂ ತಿಂದು, ಕುಣಿದಾಡುವ ನರಪಶುಗಳು ಪತಿತರೆಂದು ತಿಳಿ! ಅವರು ನರಕಾದ್ಯನರ್ಥವನ್ನು ಹೊಂದುವರು. ತಮ್ಮ ದೇಹವನ್ನು ಪೀಡಿಸಿ, ಬರಿಯ ಉಪವಾಸಾದಿ ಗಳನ್ನು ಮಾಡಿದರೆ ಫಲವಿಲ್ಲ; ಅದು ನಿಜವಾದ ತಪವಲ್ಲ, ತ್ಯಾಗ, ಜನೋಪಕಾರ, ಇಂದ್ರಿಯ ಜಯ, ಬ್ರಹ್ಮವಿಚಾರಗಳಿಗೆ ತಪವೆಂದು ಹೆಸರು. ಅತಿಥಿ ದೇವತಾ ಪೂಜಕನು ಅಮೃತಾಶಿ, ವಿಘಸಾಶಿ ಎನಿಸಿ, ನಿಷ್ಪಾಪನಾಗುವನು. ಪ್ರಾತಃ ಸಾಯಂಕಾಲ ಭೋಜನ ದ್ವಯ ಮಧ್ಯದಲ್ಲಿ ಏನೂ ತಿನ್ನದವನು ಸದೋಪವಾಸಿ ಎನಿಸುವನು. ಇಂತು

ಕಾಲವನ್ನರಿತು ಸ್ವಪತ್ನೀರತನಾದವನು ಬ್ರಹ್ಮಚಾರಿ ಎನಿಸುವನು. ಹಗಲು ಮಲಗದವನು ಅನಿದ್ರನೆನಿಸುವನು. ದೇವ ಪಿತೃ ಭೂತಾತಿಥಿ ಪರಿವಾರಗಳಿಗಿತ್ತು ಭುಜಿಸುವವನು ವಿಘಸಾಶಿ ಎನಿಸುವನು, ಇವರೆಲ್ಲರು ಉತ್ತಮ ಗತಿಯನ್ನು ಹೊಂದುವರು.

ದಮಾದಿ ಗುಣವಂತರಿಗೆ ದೃಷ್ಟಾಂತನಾದ ಪ್ರಹ್ಲಾದನ ಚರಿತೆಯನ್ನು ವರ್ಣಿಸುವೆನು ಕೇಳು! ಅಸಕ್ತನು, ಪಾಪರಹಿತನು, ಬಹುಶ್ರುತನು, ಅನಹಂಕಾರಿಯು, ಸಮಚಿತ್ತನು, ಧೀರನು, ಮಹಾಭಕ್ತನು ಆದ ಪ್ರಹ್ಲಾದನನ್ನು ಸೇರಿ ಇಂದ್ರನು, 'ಪ್ರಹ್ಲಾದ! ಲೋಕದಲ್ಲಿರುವ ದಮಾದಿ ಗುಣಗಳಿಗೆ ನೆಲೆಯಾಗಿ ಶೋಭಿಸುವೆ! ಬಾಲರಂತೆ ನಿರ್ವಿಕಾರನಿರುವೆ! ಆತ್ಮಜ್ಞಾನಕ್ಕೆ ಇದು ಫಲವೆಂದು ತಿಳಿದಿರುವೆನು. ಅಂತಹ ಬ್ರಹ್ಮಜ್ಞಾನವು ಎಂತು ಲಭಿಸುವುದು?' ಎಂದು ಕೇಳಿದನು.

ಪ್ರಹ್ಲಾದನಿಂತೆಂದನು : 'ಭೂತಜಾಲವು ಹುಟ್ಟಿ ಸಾಯುತ್ತಿದೆ. ಜೀವಜಾತವು ಸ್ವತಂತ್ರವಾಗಿ ತನ್ನ ಮರಣ ಜನನಾದಿಗಳನ್ನು ಸಾಧಿಸಲು ಶಕ್ತವಾಗಿಲ್ಲ ಅಂದ ಮೇಲೆ ಸ್ವತಂತ್ರನಾದ ಶ್ರೀಹರಿಯು ಸುಖ ದುಃಖ ಜನನ ಮರಣಪ್ರದನಾಗಿರುವನೆಂದು ವಿಚಾರಿಸಿ, ತಿಳಿದು ನಾನು ಅಹಂಕಾರವನ್ನು ತ್ಯಜಿಸಿರುವೆನು. ಆದರೆ ಪುರುಷಾರ್ಥಗಳ ಪ್ರಾಪ್ತಿ ಜೀವರಿಗೇ; ಪರಮಾತ್ಮನಿಗೆ ಯಾವ ಪ್ರಯೋಜನವೂ ಇಲ್ಲ. ವಿಧಿನಿಷೇಧ ರೂಪ ಶಾಸ್ತ್ರವು ಕೂಡ ಜೀವರಿಗೇ; ಆದುದರಿಂದ ಜೀವರಿಗೂ ಕರ್ತೃತ್ವವಿದೆ; ತನ್ನ ಶ್ರೇಯಸ್ಸಿಗೆ ತಾನು ಕರ್ತನೆಂದ ಮೇಲೆ ಜೀವನೇಕೆ ಶ್ರೇಯಸ್ಸನ್ನು ಪಡೆದಿಲ್ಲ? ಜೀವರಿಗೆ ಇಷ್ಟಹಾನಿಯು ಅನಿಷ್ಟ ಪ್ರಾಪ್ತಿಯು ಆಗುತ್ತಿದೆ. ಒಂದೊಂದು ಸಲ ಅಪ್ರಯತ್ನವಾಗಿ ಇಷ್ಟು ಪ್ರಾಪ್ತಿ, ಅನಿಷ್ಟ ಪರಿಹಾರಗಳೂ ಆಗುತ್ತಿವೆ; ವಿಕಾರರೂಪರು ಬುದ್ಧಿವಂತರಾಗಿರುವರು. ಕುರೂಪಿಗಳಿಗೆ ಸುರೂಪಿಗಳು ಪುಟ್ಟುವರು. ಅಂದಮೇಲೆ ಜೀವರು ಕರ್ತೃತ್ವವನ್ನು ಹೊಂದಿದ್ದರೂ ಸ್ವಾತಂತ್ರ್ಯವನ್ನು ಹೊಂದಿಲ್ಲ, ಅವರ ಕರ್ಮಗಳಿಗೆ ತಕ್ಕ ಫಲವೀವ ಸ್ವತಂತ್ರಕರ್ತನಾದ ಶ್ರೀಹರಿಯೇ ಸರ್ವೋತ್ತಮನೆಂದು ನಾನು ತಿಳಿದು ಅವನಿತ್ತುದನ್ನು ಸ್ವೀಕರಿಸಿ, ಈಯುದ್ದನ್ನು ಬೇಡದೆ, ಶಾಂತನಾಗಿರುವೆನು.

ಆರ್ಜವ, ವೃದ್ಧಸೇವೆ, ಅಪ್ರಮಾದ, ಮನೋನಿಗ್ರಹಗಳಿಂದ ಬ್ರಹ್ಮಜ್ಞಾನವು ಶ್ರವಣಾದಿಗಳ ದ್ವಾರಾ ಲಭಿಸುವದು. ಶಕ್ರ! ನಿನಗೆ ಗೊತ್ತಿಲ್ಲದನ್ನು ನಾನು ತಿಳಿಸಿಲ್ಲ, ತಿಳಿಸಲಾರೆನು. ಆದರೆ ನೀನು ಕೇಳಿದೆ ಎಂದು ಹೇಳಿರುವೆನು' ಇಂತು ನುಡಿದು, ವಂದಿಸಿದ ಪ್ರಹ್ಲಾದನನ್ನು ಮೆಚ್ಚಿ, ಇಂದ್ರನು ಸ್ವಲೋಕವನ್ನು ಸೇರಿದನು.

ಯುಧಿಷ್ಠಿರನು 'ಪಿತಾಮಹ ! ಕಾಲ ಕರಾಳ ಹಸ್ತಕ್ಕೆ ಸಿಕ್ಕು, ಸಂಪತ್ತನ್ನು ಕಳೆದುಕೊಂಡು, ವಿಪದ್‌ಗ್ರಸ್ತನಾದವನು ಎಂತು ಬಾಳಬೇಕು' ಎಂದು ಕೇಳಿದನು. ಭೀಷ್ಮನು ಬಲಿವಾಸವ ಸಂವಾದವನ್ನು ಪೇಳಿದನು.

'ಇಂದ್ರನು ಸಕಲ ದೈತ್ಯರನ್ನು ಗೆದ್ದು, ಹರ್ಷಭರಿತನಾದನು. ಒಂದು ದಿನ ಆತನು ಬ್ರಹ್ಮದೇವನನ್ನು ನೋಡಿ, 'ಪಿತಾಮಹ! ಹಿಂದೆ ಉರಿದೆದ್ದ ಬಲಿರಾಜನು ಈಗ

ಎಲ್ಲಿರುವನು ? ಎಷ್ಟು ಕೊಟ್ಟರೂ ಹಿಂಗದ ಕೋಶವವನದು. ವಾಯುವಾಗಿ ಬೀಸಿ, ವರುಣನಾಗಿ ಹರಿದು, ರವಿಯಾಗಿ ಬೆಳಗಿ, ಚಂದ್ರನಾಗಿ ಸಂತೋಷಪಡಿಸಿ, ಅಗ್ನಿಯಾಗಿ ಉರಿದು, ಮಹಾಪ್ರಭಾವನಾಗಿದ್ದ ಬಲಿಯು ಎಲ್ಲಿರುವನು ?' ಎಂದು ಕೇಳಿದನು. ಬ್ರಹ್ಮದೇವನು 'ಇಂದ್ರ! ಆಪತ್ತಿಗೆ ಸಿಕ್ಕವರನ್ನು ಹೀಯಾಳಿಸುವುದು ನಿನಗುಚಿತವಲ್ಲ ಕೇಳಿದೆ ! ಸುಳ್ಳಾಡಲಾಗದು ಕೇಳು! ಬಲಿರಾಜನು ಈಗ ಶೂನ್ಯಗೃಹದಲ್ಲಿರುವನು. ಒಂಟೆಯೋ, ಕತ್ತೆಯೋ, ಎತ್ತೋ ಆಗಿರುವನು. ಆದರೆ ಆ ರೂಪದಿಂದಿರುವ ದಾನವ ರಾಜನನ್ನು ಹಿಂಸಿಸಬೇಡ! ಅವನನ್ನು ಕೇಳಿ ನ್ಯಾಯವನ್ನು ತಿಳಿ! ' ಎಂದನು.

ಆಗ ಇಂದ್ರನು ಪೃಥ್ವಿಯಲ್ಲಿ ಚರಿಸಿ, ಒಂದು ಪಾಳು ಮನೆಯ ಗೋಡೆಗಾತು ನಿಂತಿದ್ದ ಕತ್ತೆಯನ್ನು ನೋಡಿ, ಅವನೇ ಬಲಿ ಎಂದರಿತು ಇಂತೆಂದನು: 'ದಾನವೇಂದ್ರ; ಎಂತಹ ನೀಚಯೋನಿಯಲ್ಲಿ ಪುಟ್ಟಿದೆ! ನಿನಗೆ ದುಃಖವಾಗುವುದಿಲ್ಲವೇ ?' ಎಂದನು. ಸುಮ್ಮನಿದ್ದ ಬಲಿಗೆ ಮತ್ತೆ 'ಬಲಿರಾಜ! ಮಾನ ಸಹಸ್ರವಿತ್ತು, ಜ್ಞಾತಿ ಪರಿವಾರವಿತ್ತು. ಸಿರಿ ಸಂಪತ್ತುಗಳು ಅತುಲವಾಗಿದ್ದವು. ಲೋಕಗಳನ್ನೆಲ್ಲ ವಶದಲ್ಲಿ ತಂದು ಮೆರೆದೆ! ಎಲ್ಲಿ ಹೋಯಿತು ಅದೆಲ್ಲವು? ಏನು ಶ್ವೇತಚ್ಛತ್ರ! ಏನು ಗಂಧರ್ವಗಾನ! ಎಂತಹ ಸುಂದರೀ ನರ್ತಕಿಯರು! ಕಾಂಚನಮಯ ಯೂಪಗಳನ್ನು ನಿಲ್ಲಿಸಿ ಮಾಡಿದ ಹಯ ಮೇಧಾದಿ ಯಜ್ಞಗಳೆಷ್ಟು! ಗೋಡೆಯ ನೆರಳಿಗೆ, ನೊಣಗಳ ಗುಂಕಾರವನ್ನು ಕೇಳುತ್ತಾ, ಶೂನ್ಯಾಗಾರದಲ್ಲಿ ಸುಮ್ಮನೆ ನಿಂತಿರುವ ನಿನ್ನನ್ನು ನೋಡಿ ನನಗೆ ವ್ಯಸನವಾಗಿದೆ! '

ಬಲಿರಾಜನಿಂತೆಂದನು : 'ದೇವೇಂದ್ರ ! ನನ್ನ ಛತ್ರ ಚಾಮರಗಳನ್ನು, ರತ್ನ ಮಂಡನಗಳನ್ನು, ಬ್ರಹ್ಮದತ್ತ ದಿವ್ಯ ಮಾಲೆಯನ್ನು ನೋಡಲಾರೆ! ಅವು ಪ್ರಕೃತಿ ಯಿಂದ ಬಂದಿದ್ದವು. ಅಲ್ಲೇ ಕಲೆತುಹೋದವು. ಕಾಲವು ಅನುಕೂಲವಾದರೆ ಮತ್ತೆ ಬಂದಾವು! ಆದರೆ ಇಂದ್ರನಾದ ನೀನಾಡಿದ ಹೀನ ವಚನಗಳು ನಿನ್ನ ಕುಲಗುಣಗಳಿಗೆ ಯೋಗ್ಯವಾಗಿಲ್ಲ. ದುಃಖದಲ್ಲಿ ಕುಗ್ಗದೆ, ಸುಖದಲ್ಲಿ ಉಬ್ಬದೆ ಇರುವ ಜ್ಞಾನಿಗಳ ಲಕ್ಷಣವನ್ನರಿಯದೆ, ಪ್ರಾಕೃತನಂತೆ ಮಾತಾಡಿದೆ! ನನ್ನಂತೆ ನೀನಾದಾಗ ಮತ್ತೆ ಹೀಗೆ ಮಾತಾಡಲಾರೆ! ಆದರೂ ಕೇಳು!

ಕಾಲಕ್ರಮದಿಂದ ಕರ್ಮಾನುರೂಪವಾಗಿ, ಸುಖ ದುಃಖಗಳು ಬರುವವು. ನನಗೆ ಅದರ ವಿಕಾರವಿಲ್ಲ. ಭೂತಗಳಿಗೆ ಕರ್ಮಾನುಗುಣ ಶರೀರಗಳು ಬರುವವು. ಆದರೆ ಅವೆಲ್ಲವೂ ಅನಿತ್ಯಗಳು. ಶರೀರವೇ ಜೀವನಲ್ಲ. ಶರೀರವನ್ನು ನಾನೆಂಬ ಅಹಂಕಾರವೆನಗಿಲ್ಲ, ಅದರಿಂದ ಬರುವ ಉಚ್ಚನೀಚಗಳು ನನಗಿಲ್ಲ. ಭೂತಶರೀರಗಳು ಎಂದಾದರೊಂದು ದಿನ ಸಾಯುವವು. ಅವು ನಿತ್ಯವೆಂದು ತಿಳಿದು ಬಡಿದಾಡುವುದು ಬುದ್ಧಿವಂತರ ಲಕ್ಷಣವಲ್ಲ. ವಿವೇಕಿಗಳು ಪಾಪ ದೂರರಾಗುವರು. ಆದರಿಂದ ಮನಶ್ಶುದ್ಧಿಯನ್ನು ಸಂಪಾದಿಸಿ, ಶ್ರೀಶನನ್ನು ತಿಳಿದು ನೋಡಿ ಧನ್ಯರಾಗುವುದನ್ನು ಬಿಟ್ಟು, ದೇಹಾಭಿಮಾನದಿಂದ ಪಾಪಗಳನ್ನು ಮಾಡಿ ನರಕ ಕೂಪದಲ್ಲಿ ಬೀಳರು. ಜೀವರು ಸುಖ ದುಃಖ ಕಾರಣರಲ್ಲ, ಶ್ರೀಹರಿಯೇ ಸ್ವತಂತ್ರ ಕರ್ತನು. ನಮ್ಮ

ಕರ್ಮಾನುರೂಪವಾಗಿ ಬರುವ ಸುಖ ದುಃಖಗಳಿಗೆ ಹಾತೊರೆಯದೆ, ಹಿಂಜರಿಯದೆ, ಅನುಭವಿಸಲೇ ಬೇಕು.

ವಿಧಿಯ ಅಪಾರ ಭವಸಾಗರದಲ್ಲಿ ಜಂತುಗಳು ತೇಲಿ ಹೋಗುತ್ತಿರುವರು. ಯಾವಾಗ ಮುಳುಗುವರೋ ಅವರಿಗೆ ಗೊತ್ತಿಲ್ಲ. ಅಲ್ಲಿ ದ್ವೀಪವೊಂದಾದರೂ ಇಲ್ಲ. ಪಾರವು ಅಪಾರವಾಗಿದೆ. ಅಂತಹ ಕಾಲ ವಾಹಿನಿಯಲ್ಲಿ ಎಲ್ಲರೂ ಕೊಚ್ಚಿಕೊಂಡು ಹೋಗುತ್ತಿರುವೆವು. ಹಾಳು ಮನೆಯಲ್ಲಿ ಕತ್ತೆಯಾಗಿ ನಿಂತ ನನ್ನನ್ನು ನೋಡಿ ನಗುತ್ತಿರುವೆ! ಆದರೆ ನನ್ನ ಯೋಗ ಬಲದಿಂದ ಬೇಕಾದ ಭಯಂಕರ ರೂಪಗಳನ್ನು ನಾನು ಧರಿಸಿ ನಿಂತೆನೆಂದರೆ ಓಡಿ ಹೋಗುವೆ!

ಸರ್ವೋತ್ತಮ ಹರಿ ವಶದಲ್ಲಿರುವ ನನಗೆ ಗಾರ್ಧಬಾದಿ ಯೋನಿಗಳಿಂದ ದುಃಖವಿಲ್ಲ. ರಾಜಾದಿ ಶರೀರಗಳಿಂದ ಹಿಗ್ಗಿಲ್ಲ. ವೃದ್ಧಿ ಹಾನಿಗಳು ಚಕ್ರದಂತೆ ಎಲ್ಲ ಜೀವರಿಗೂ ಪರಿವರ್ತಿತವಾಗುವವು. ವಿವಿಧ ಜೀವರು ವಿವಿಧ ಲಕ್ಷಣರಾಗಿರುವರು. ಸುಂದರರು ದರಿದ್ರರಾಗಿರುವರು. ಕುಜಾತರು ಶ್ರೀಮಂತರಾಗಿರುವರು. ಎಲ್ಲವೂ ಕರ್ಮ ಪ್ರೇರಕ ಶ್ರೀಶವಶವಾಗಿದೆ. ಕಾಲದಿಂದ ಗಾರ್ಧಭಜನ್ಮದಲ್ಲಿರುವೆನಿಲ್ಲದಿರೆ ಒಂದೇ ಮುಷ್ಟಿಯ ಪೆಟ್ಟಿನಿಂದ ವಜ್ರಪಾಣಿಯನ್ನೂ ಕೆಳಗುರುಳಿಸಬಲ್ಲೆನು ತಿಳಿ! ನಾನು ಸ್ವತಂತ್ರ ಕರ್ತನಲ್ಲ. ನೀನೂ ಅಲ್ಲ. ಶ್ರೀಹರಿಯೇ ಸ್ವತಂತ್ರನು.

ಶ್ರೀಶನು ಕಾಲನಾಮಕನಾಗಿ ಸರ್ವವನ್ನು ತನ್ನ ವಶದಲ್ಲಿಟ್ಟಿರುವನು. ದಿನ, ರಾತ್ರಿ, ಪಕ್ಷ, ಮಾಸ, ಋುತು, ಅಯನ, ವತ್ಸರ, ಯುಗ, ಮಹಾಯುಗ, ಪರವೆಂಬ ಕಾಲಾವಯವಗಳನ್ನು ಶ್ರೀಶನೇ ವಿಭಜಿಸಿ, ಬ್ರಹ್ಮಾದಿ ಜೀವರ ಜೀವಿತ ಮಾನವನ್ನು ಅಳೆಯುತ್ತಿರುವನು. ನಿನ್ನಂತಹ ಇಂದ್ರರು ಎಷ್ಟೋ ಜನ ಆಗಿ ಹೋಗಿರುವರು. ಈಗ ದೊರಕಿರುವ ರಾಜ್ಯಾದಿ ಸಂಪತ್ತು ಸ್ಥಿರವೆಂದು ನಂಬಬೇಡ! ಸಂಪತ್ತು ಸ್ಥಿರವಲ್ಲವೆಂದು ನನ್ನನ್ನು ಬಿಟ್ಟು ನಿನ್ನಲ್ಲಿಗೆ ಬಂದ ಶ್ರೀದೇವಿಯ ಮಹಿಮೆಯನ್ನಾದರೂ ನೋಡಿ ತಿಳಿ! ಶ್ರೀರಮಣನಲ್ಲಿ ಸ್ಥಿರವಾಗಿರುವ ಶ್ರೀದೇವಿಯು ಆತನ ಆಜ್ಞೆಯಿಂದ ಇತರರನ್ನು ಅನುಗ್ರಹಿಸಿ ಅವರ ಮನೆಯಲ್ಲಿ ನಿಂತರೂ ಚಂಚಲಳೆಂದು ತಿಳಿ! ಶಾಂತನಾಗು!'

ಇಂತು ಮಾತಾಡುತ್ತಿರಲು, ಬಲಿದೇಹದಿಂದ ಪ್ರಭಾವಶಾಲಿನಿಯಾದ ಶ್ರೀದೇವಿಯು ಹೊರಬಂದಳು. ಪ್ರಭಾ ಪ್ರಭಾವ ಮುಖಗುಣ ನಿಧಿಯು, ಸರ್ವಾಲಂಕಾರ ಭೂಷಿತೆಯು ಆದ ಶ್ರೀದೇವಿಯನ್ನು ನೋಡಿ, ಶಕ್ರನು ವಿಸ್ಮಯಚಕಿತನಾದನು. ಆಕೆ ಯಾರೆಂದು ಬಲಿಯೂ ಪೇಳದಿರಲು, ಶಕ್ರನು, 'ಅಮ್ಮಾ! ನೀನಾರು? ಏಕೆ ದೈತ್ಯವರನನ್ನು ಬಿಟ್ಟು ಬಂದೆ.' ಎಂದು ಕೇಳಿದನು. ಶ್ರೀದೇವಿಯು 'ಇಂದ್ರ! ನನ್ನನ್ನು ದುಸ್ಸಹೆ ಎಂಬುವರು. ಅದೃಷ್ಟವೆಂಬುವರು. ಭೂತಿ, ಲಕ್ಷ್ಮಿ, ಶ್ರೀ ಎಂದೂ ನನ್ನ ನಾಮ ಧೇಯಗಳು, ನೀನೆನ್ನನರಿಯೆ! ಬಲಿಯೂ ಅರಿಯನು. ಯಾರಿಗೂ ನನ್ನ ಮಹಿಮೆ ತಿಳಿಯದು' ಎಂದಳು.

ಇಂದ್ರನು 'ತಾಯೇ! ಇಷ್ಟು ಕಾಲದಿಂದಿದ್ದು, ಈಗ ಬಲಿರಾಜನನ್ನು ಏಕೆ ಬಿಟ್ಟೆ?' ಎಂದು ಕೇಳಿದನು. ಶ್ರೀದೇವಿಯು, 'ಇಂದ್ರ! ನಾನು ಧಾತೃ ವಿಧಾತೃಗಳಿಗಧೀನಳಾಗಿ, ಅವರ ಮಾತಿನಂತೆ ಬರುವವಳಲ್ಲ; ಹೋಗುವವಳಲ್ಲ. ಕಾಲನಾಮಕ ಶ್ರೀಹರಿಯೇ ನನ್ನ ಸ್ವಾಮಿಯು. ಅವನ ಅಪ್ಪಣೆಯಂತೆ, ಬಲಿಯನ್ನು ಬಿಟ್ಟು, ನಿನ್ನ ಮನೆಗೆ ಬರಲಿರುವೆನು. ವೃಥಾ ದರ್ಪದಿಂದ ಬಲಿಯನ್ನು ಹೀಯಾಳಿಸಬೇಡ!' ಎಂದಳು. ಇಂದ್ರನು: 'ಬಲಿಯನ್ನೇಕೆ ಬಿಟ್ಟೆ? ನನ್ನ ಮನೆಯಲ್ಲಿ ತಿರವಾಗಿರಲು ನಾನು ಏನು ಮಾಡಬೇಕು?' ಎಂದನು. ಶ್ರೀದೇವಿಯು 'ನಾನು ಸತ್ಯ, ದಾನ, ವ್ರತ, ತಪಸ್ಸು, ಪರಾಕ್ರಮ, ಧರ್ಮ, ಮುಂತಾದ ಸುಗುಣಗಳಿದ್ದಲ್ಲಿರುವೆನು. ಈ ಗುಣಗಳಿಗೆ ಎರವಾದಾಗ ಬಲಿಯನ್ನು ನಾನು ಬಿಟ್ಟೆನು. ಹಿಂದೆ ಬ್ರಾಹ್ಮಣರನ್ನು ನೋಡಿ ಸಹಿಸದೆ, ಅವರನ್ನು (ವಸ್ತ್ರಾದಿಗಳನ್ನು) ಅಶುಚಿಯಾಗಿ ಮುಟ್ಟಿದನು. ನಾನು ಮಹಾದಾನಿ ಎಂಬ ದರ್ಪದಿಂದ ಮೆರೆದನು. ಆದುದರಿಂದ ಅವನನ್ನು ಬಿಟ್ಟು, ನಿನ್ನಲ್ಲಿರಲು ಬಂದಿರುವೆನು. ಶಕ್ರ! ಬಲು ಜೋಕೆಯಿಂದ ನನ್ನನ್ನು ಕಾಪಾಡು! ದೇವಮಾನವ ದಾನವರಲ್ಲಿ ಸದಾ ನನ್ನನ್ನು ಹಿಡಿದಿಡಬಲ್ಲ ಶಕ್ತನು ಯಾರೂ ಇಲ್ಲ. ವೇದ ದೃಷ್ಟವಾದ ವಿಧಿಯಿಂದ ನನ್ನನ್ನು ಧರಿಸಿ ನಿಲ್ಲಿಸುವ ಉಪಾಯವನ್ನು ಹೇಳುವೆನು, ಕೇಳು! ನನ್ನನ್ನು ನಾಲ್ಕು ಪಾದಗಳಲ್ಲಿ ಸುಸ್ಥಿರವಾಗಿ ನಿಲ್ಲಿಸಲಾಗುವುದು. ವಿತ್ತ, ತೀರ್ಥಾದಿ ಪುಣ್ಯ, ಯಜ್ಞಾದಿ ಧರ್ಮ, ವಿದ್ಯಾ ಎಂಬ ನಾಲ್ಕು ಪಾದಗಳನ್ನು ತಿಳಿದು ನಿಲ್ಲಿಸು!' ಎಂದಳು.

ಬುದ್ಧಿವಂತನಾದ ಇಂದ್ರನು ಕ್ರಮವಾಗಿ ವಿತ್ತ ಪಾದವನ್ನು ಲೋಕಧಾರಿಣಿಯಾದ ಭೂಮಿಯಲ್ಲಿಯೂ, ತೀರ್ಥಪುಣ್ಯವನ್ನು ಪವಿತ್ರವಾದ ಜಲದಲ್ಲಿಯೂ, ಯಜ್ಞಪಾದವನ್ನು ದೇವಹವ್ಯವಹನಾದ ಅಗ್ನಿಯಲ್ಲಿಯೂ, ವಿದ್ಯಾಪಾದವನ್ನು ಸತ್ಯವಾದಿ ಸುಜನರಲ್ಲಿಯೂ ಪ್ರತಿಷ್ಠಿಸಿದನು. ಅಂದಿನಿಂದ ಭೂ, ತೀರ್ಥ, ಅಗ್ನಿ, ಸುಜನರಿಗೆ ದ್ರೋಹ ಬಗೆವರು ನಿಶ್ರೀಕರಾಗಲೆಂದು ಇಂದ್ರನು ಶಾಪವಿತ್ತು, ಬಲಿಯನ್ನು ಬೀಳ್ಕೊಂಡನು.

ಇಂದ್ರನು ನಮುಚಿಯನ್ನೂ ಇಂತೆಯೇ, ನಿಂದಿಸಿ, 'ಶ್ರಿಯಾಹೀನನಾಗಿರುವೆ ನಿನಗೆ ದುಃಖವಿಲ್ಲವೇ?' ಎಂದು ಕೇಳಿದನು. ಆಗ ನಮುಚಿಯು ಇಂತೆಂದನು: 'ಇಂದ್ರ! ಶೋಕಿಸಿ ಫಲವಿಲ್ಲ. ಶೋಕದಿಂದ ಶರೀರವು ತಪಿಸಿ ಕೆಡುವುದು. ಶತ್ರುಗಳು ಹರ್ಷಿತರಾಗುವರು. ಶೋಕವು ರೂಪವನ್ನೂ, ತೇಜಸ್ಸನ್ನೂ, ಸಂಪತ್ತನ್ನೂ ಕೆಡಿಸುವುದು. ಆದುದರಿಂದ ಆಗಿಹೋದುದಕ್ಕೆ ನಾನು ಶೋಕಿಸದಿರುವೆನು. ಈ ಲೋಕದಲ್ಲಿ ಸ್ವತಂತ್ರ ಶಾಸಕನೊಬ್ಬನೇ ಇಬ್ಬರಲ್ಲ. ದೇವದಾನವ ಮಾನವರಿಗೆಲ್ಲಾ ಶಾಸಕನಾದ ಶ್ರೀಶನಿಚ್ಛೆಯಂತೆ ನಾನಿರುವೆನು. ಭವಿತವ್ಯವು ತಪ್ಪದೆ ನಡೆಯುವುದು. ಪ್ರಾಪ್ತವ್ಯವು ತಪ್ಪದೆ ಸಿಗುವುದು. ಮಂತ್ರ ಬಲದಿಂದಲು, ವೀರ್ಯದಿಂದಲು, ಪ್ರಜ್ಞೆಯಿಂದಲು, ಪೌರುಷದಿಂದಲು, ಶೀಲವೃತ್ತಗುಣಗಳಿಂದಲು, ಅರ್ಥಸಂಪತ್ತಿಯಿಂದಲು- ಯಾವುದರಿಂದಲಾಗಲಿ ಅಲಭ್ಯವಾದುದು ಎಂದಿಗೂ ಸಿಗಲಾರದು. ಇಂತು ನಿಶ್ಚಯಿಸಿ, ನಾನು ಮೃತ್ಯುವಿಗೂ ಹೆದರದೆ, ನಿಶ್ಚಿಂತನಾಗಿರುವೆನು.'

ಆ ಮಾತಿಗೆ ಇಂದ್ರನಿಂತೆಂದನು : 'ದಾನವೇಂದ್ರ ! ನಾನೂ ಕಾಲದ ಮಹಿಮೆಯನ್ನು ಅರಿತಿರುವೆನು. ದೇಹಧಾರಿ ಜೀವರು ಪ್ರಮತ್ತರಾಗಿ ಮೈಮರೆತಿದ್ದರೂ, ಕಾಲನು ಎಚ್ಚತ್ತಿದ್ದು ಅವರ ಆಯುಸ್ಸನ್ನು ಹರಿಸುವನು. ನನ್ನಂತಹ ಇಂದ್ರರು ಎಷ್ಟೋ ಜನ ಆಗಿಹೋಗಿರುವರು. ನಾನೊಬ್ಬನೇ ಶತಕ್ರತುವೆಂದು ನಾನು ತಿಳಿದಿಲ್ಲ, ಕೇಳು! ಪಾಪಿ ದಾನವರಿಗೆ ಕಾಲವು ಅನುಕೂಲವಾದಾಗ ನಾವೂ ಏನೂ ಮಾಡಲಾರೆವು. ಅಂತಹ ಕಾಲವು ಬಂದೀತು ! ಬರಲಿ ! ಆಗ ನಿಮ್ಮ ವಾರುಣ ಪಾಶಗಳು ಒಂದೊಂದಾಗಿ ಸಡಲಿಬೀಳುವವು. ಸೊಸೆಯು ಮುದುಕಿ ಅತ್ತೆಯಿಂದ ಸೇವೆ ಮಾಡಿಸಿಕೊಂಡಾಗ, ಅಜ್ಞಾನಿ ಪುತ್ರನು ತಂದೆಯನ್ನು ಕೆಲಸಗಳಿಗಾಗಿ ಓಡಿಸಿದಾಗ, ವೃಷಲರು ಬ್ರಾಹ್ಮಣರ ಸೇವೆಯನ್ನು ಮಾಡಿಸಿಕೊಂಡಾಗ, ಪುರುಷಾಧಮರು ವಿರುದ್ಧ ಯೋನಿಗಳಲ್ಲಿ ವೀರ್ಯವನ್ನಿಟ್ಟಾಗ, ಕಬ್ಬಿಣದ ಪಾತ್ರೆಗಳಿಂದ ತಾಮ್ರ ಹಿತ್ತಲ ಪಾತ್ರೆಗಳಿಗೆ ಹಾನಿ ಬಂದಾಗ, ಚಾತುವರ್ಣ್ಯದವರು ಮರ್ಯಾದಾರಹಿತರಾಗಿ, ಸಂಕರವನ್ನು ಬೆಳೆಸಿದಾಗ, ಕನ್ಯೆಯರು ಮದುವೆಯಿಲ್ಲದೆ ವ್ಯಭಿಚರಿಸಿದಾಗ, ವಿಧರ್ಮರು ರಾಜ್ಯವಾಳಿದಾಗ, ವೇದ ವಿದ್ವಾಂಸರು ಅನ್ನಾತುರರಾಗಿ ವಿದ್ಯೆಯನ್ನು ಮಾರಿದಾಗ, ನಿಮಗೆ ಅನುಕೂಲಕಾಲವೆಂದು ತಿಳಿ ! ಆಗ ನಿಮ್ಮ ಉಪಟಳವನ್ನಡಗಿಸಲು, ಶ್ರೀಹರಿಯು ಮತ್ತೆ ಮತ್ತೆ ಅವತರಿಸುವನು. ಅಲ್ಲಿಯವರೆಗೂ ನಿಶ್ಚಿಂತನಾಗಿರು !' ಇಂತು ನುಡಿದು ದೇವೇಂದ್ರನು, ಸರ್ವಚರಾಚರೇಶನಾದ ಶ್ರೀಶನ ದಯದಿಂದ ನಿರ್ಬಾಧನಾಗಿ, ತನ್ನ ಲೋಕವನ್ನು ಸೇರಿ ಸುಖವಾಗಿದ್ದನು.

ಧರ್ಮರಾಜ ! ಶಕ್ರ ಶ್ರೀದೇವೀಸಂವಾದವನ್ನು ನಿನಗರುಹುವೆನು: ಶ್ರದ್ಧೆಯಿಂದ ಕೇಳು ! ಬ್ರಹ್ಮಪುತ್ರನಾದ ನಾರದನು ಒಂದು ದಿನ ಪ್ರಾತಃಕಾಲದಲ್ಲಿ ದೇವ ಮಂದಾಕಿನಿಯಲ್ಲಿ ಮೀಯಲೆಂದು ಬಂದನು. ಅದೇ ವೇಳೆಗೆ ದೇವೇಂದ್ರನೂ ಬಂದನು. ದೇವೇಂದ್ರಮುನೀಂದ್ರರು ಮಂದಾಕಿನಿಯಲ್ಲಿ ಮಿಂದು, ಉದಿತನಾಗುವ ಆದಿತ್ಯ ನನ್ನೀಕ್ಷಿಸುತ್ತಾ, ಧ್ಯಾನನಿಮೀಲಿತಲೋಚನರು, ಬದ್ಧಾಂಜಲಿಪುಟರು ಆಗಿ ನಿಂತರು. ಆಗ ಸೂರ್ಯಮಂಡಲದಿಂದ ದಿವ್ಯತೇಜೋಮೂರ್ತಿಯಾದೋರ್ವ ದೇವಿಯು ಇಳಿದು ಬಂದು, ಇಂದ್ರನ ಮುಂದೆ ಸನ್ನಿಧಿಗೈದಳು. ದೇವೇಂದ್ರನು ಸಂಭ್ರಮದಿಂದ ಎದ್ದು, ಸಾಷ್ಟಾಂಗವಾಗಿ ಬಾಗಿ, ನಿಂತು ಕೈ ಜೋಡಿಸಿ, "ಅಂಬ! ನೀನಾರು?. ಏಕೆ ಬಂದೆ? ಎಲ್ಲಿಗೆ ತೆರಳುವೆ?" ಎಂದು ಕೇಳಿದನು.

ಶ್ರೀದೇವಿಯು ಪ್ರಸನ್ನಳಾಗಿ ಇಂದ್ರನಿಗಿಂತೆಂದಳು: 'ಶಕ್ರ ! ನಾನು ಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವಿಯು. ಪಂಕಜದಿಂದ ಪ್ರಾದುರ್ಭವಿಸಿ ಬಂದೆನು. ನನ್ನ ಕಟಾಕ್ಷಪಾತ ಭಾಗ್ಯವನ್ನು ಬಯಸಿ, ಬ್ರಹ್ಮರುದ್ರಾದಿ ದೇವತೆಗಳೂ, ಬಲ್ಯಾದಿ ದಾನವರೂ ಕಾದು ಸೇವಿಸುವರು. ಭೂತಿ, ಶ್ರೀ, ಶ್ರದ್ಧೆ, ಮೇಧಾ, ವಿನಯ, ವಿದ್ಯೆ, ಸ್ಥೈರ್ಯ, ಧೃತಿ, ಸಿದ್ಧಿ ಸ್ವಾಹಾ, ಸ್ವಧಾ, ನಿಯತಿ, ಸ್ಮೃತಿ ಮುಂತಾದ ನಾಮಗಳಿಂದ ಖ್ಯಾತಳಾಗಿ, ಭಕ್ತ ಜನರಿಗೆ ಆ ಗುಣಗಳನ್ನಿತ್ತು ಸಲಹುವೆನು. ಧರ್ಮಬುದ್ಧಿ, ಬ್ರಾಹ್ಮಣ ಭಕ್ತಿ, ಹರಿಭಕ್ತಿ, ಸತ್ಯ, ವಿನಯ, ಇಂದ್ರಿಯನಿಗ್ರಹ, ಶೀಲ ಮುಂತಾದ

ಗುಣಗಳುಳ್ಳ ಸುಜನರಲ್ಲಿ ನಾನು ನಿತ್ಯವೂ ವಾಸಿಸುವೆನು. ಗುಣಲುಬ್ಧಳಾದ ನನಗೆ ಸುಜೀವರಾದರೆ ಸಾಕು! ಅಸುರ ಸುರನರರೆಂಬ ಪಕ್ಷಪಾತವಿಲ್ಲದೇ ವಾಸಿಸುವ ಇಚ್ಛೆಯುಂಟು.

ಇಂದ್ರ! ದಾನಾಧ್ಯಯನ ಶೀಲರು, ದೇವಪಿತೃಪೂಜಕರು, ಅತಿಥಿಗುರು ಭಕ್ತರು, ಅಗ್ನಿಹೋತ್ರಿಗಳು, ಸ್ತ್ರೀಜಿತರಾಗದವರು, ಇಂದ್ರಿಯಜಯವಂತರು, ಸತ್ಯವಾದಿಗಳು, ಜಿತಕ್ರೋಧರು, ದಾರಾಪುತ್ರ ಭೃತ್ಯ ಪೋಷಣ ತತ್ಪರರು, ಅಸೂಯಾರಹಿತರು, ಕೃತಜ್ಞರು, ಪ್ರಿಯವಾದಿಗಳು, ಯತವ್ರತರು, ಪರ್ವಕಾಲಾನುಸಾಷ್ಟಾತೃಗಳು, ಏಕಪತ್ನೀವ್ರತರು, ವೇದಾಧ್ಯಯನಶೀಲರು, ದುಷ್ಪ್ರತಿಗ್ರಹರಹಿತರು, ಕೃಪಣದೀನ ವೃದ್ಧಾತುರಸೇವಾರತರು ಆದವರು ದಾನವರಾದರೇನು ಮಾನವರಾದರೇನು? ಅಲ್ಲಿ ವಸಿಸಿರುವೆನು.

ಪತಿವ್ರತೆಯರು 'ಅಲಂಕಾರಯುಕ್ತರು, ಗೃಹಶುದ್ಧೀಕರಣ ಶೀಲರು, ಪಿತೃದೇವ ವೃದ್ಧ ಬ್ರಾಹ್ಮಣ ಸೇವಾರತರು, ಪಾತ್ರಶುದ್ಧಿ ವಿಚಕ್ಷಣರು, ಅಸೂಯಾದ್ವೇಷಕಲಹ ಮಾಯಾತಂದ್ರಾದಿ ದೋಷವರ್ಜಿತರು, ಪ್ರಿಯಮಧುರವಚನರು, ಪ್ರಸನ್ನವದನರು, ದಿವಾಸ್ವಾಪವರ್ಜಿತರು ಆದ ಸ್ತ್ರೀಜನರಲ್ಲಿಯೂ ನಾನು ತಿರವಾಗಿ ನೆಲೆಸಿರುವೆನು.

ಸೂರ್ಯನು ಹುಟ್ಟುವಾಗ; ಮುಣುಗುವಾಗ ಮಲಗಿರುವ ಮನೆಯನ್ನು ತೊಳೆಯದೆ, ಸಾರಿಸದೆ, ರಂಗವಲ್ಲಿಗಳಿಡದೆ ಕೊಳಕಾಗಿಟ್ಟಿರುವ, ಅನಲಂಕೃತರಾಗಿ, ಕೇಶರಾಶಿಯನ್ನು ಬಿರಿಬಿಟ್ಟಿರುವ ಉಪವಾಸವ್ರತದೀಕ್ಷಾ ದೇವಗುರುಸೇವಾದಿಗಳಿಗೆ ವಿಮುಖರಾದ, ರಾತ್ರಿದಧಿಸಕ್ತುಗಳನ್ನು ಮೆಲ್ಲುವ, ಪರಿವಾರ ಭೃತ್ಯರಿಗೆ ಹಂಚದೆ ವಂಚಿಸಿ ತಿನ್ನುವ ಸದಾ ಕಲಹವನ್ನಾಡುವ, ಅತ್ತೆ ಮಾವಂದಿರ ಸೇವೆಗೈಯದ, ಮಕ್ಕಳನ್ನು ಅಳಿಸುವ, ಹಳಸನ್ನವನ್ನು ಉಣ್ಣುವ, ಅಶುಚಿವ್ರತೆಯರಾದ ಸ್ತ್ರೀಜನರಲ್ಲಿ ನಾನಿರೆನು. ಅಂತಹ ವಿಗುಣವಂತರಾದ ಪುರುಷರಲ್ಲಿಯೂ ನನ್ನ ದಯಾಪ್ರಸಾದವು ಹರಿಯದು.

ಮಾಡಿದ ಅಡಿಗೆಯನ್ನು ಮುಚ್ಚಿಡದ, ದೇವನಿವೇದನದಕಿಂತಲು ಮೊದಲು ತಿನ್ನುವ, ಹಾಲು ಮೊಸರು ತುಪ್ಪಗಳನ್ನು ಬೆಕ್ಕು ಕಾಗೆ ನಾಯಿಗಳಿಂದ ಎಂಜಲಾಗದಂತೆ ರಕ್ಷಿಸದ, ಹುಡುಗರು ನೋಡುತ್ತಿರಲು ಕೊಡದೆ ತಿನ್ನುವ ಮನೆಯಲ್ಲಿ ಪಾತ್ರೆ, ಜರಡಿ, ಮರ, ಕುದ್ದಾಲಿ, ಹಾರಿ, ಪರಕೆ, ಹಾಸಿಗೆ, ಆಸನಗಳನ್ನು ತಿದ್ದಿಡದ, ಸೇವಕ ಜನರಿಗೀಯದೆ ವಂಚಿಸುವ, ರಾತ್ರಿಂ ದಿವಸಗಳೂ ನಿಷ್ಠುರವಚನಳಾಗಿ ಜಗಳಾಡುವ, ಪುರುಷ ವೇಷವನ್ನು ಧರಿಸಿ ತಿರುಗುವ, ನಾರಿಯರಲ್ಲಿ ನಾನಿರಲಾರೆನು.

ಶೌಚವಿಲ್ಲದ, ಸ್ತ್ರೀವೇಷ ಧರಿಸುವ, ವಿದ್ವಜ್ಜನರನ್ನು ಹೀಯಾಳಿಸುವ, ಬಹುಮಾನಾಪಮಾನಗಳಿಗೆ ಹಿಗ್ಗಿ. ಕುಗ್ಗುವ, ದಾಸೀ ಸಂಗ ಮಾಡುವ, ದಾಯವನ್ನಪಹರಿಸುವ, ಸಾಲವನ್ನು ಸರಿಯಾಗಿ ತೀರಿಸದ, ಮಿತ್ರ ದ್ರೋಹವನ್ನು ಗೈವ, ಕೃತಘ್ನರಾದ, ಶಿಷ್ಟರನ್ನು ಪೊಗಳಿ ಧನಾಶೆಯಿಂದ ಸೇವಿಸುವ, ಶ್ರಾದ್ಧಾನ್ನ ಪ್ರೀತಿಯುಕ್ತರಾದ,

ಪರರ ಸಂಕಟಕ್ಕೆ ಸಂತೋಷಪಡುವ, ಪರರನ್ನು ಕೆಡಿಸಲು ಚಾಡಿ ಹೇಳುವ ಮನೆ ವಾಮೆ ಗುಡಿಗಳಿಗೆ ಬೆಂಕಿಯಿಡುವ, ವೃದ್ಧ, ಗುರು, ವಿಪ್ರರನ್ನು ನೋಡಿ ಅಪಹಸಿಸುವ, ಅಭಕ್ಷ್ಯ ಭಕ್ಷಣರತರಾದ ಪುರುಷರಲ್ಲಿಯೂ ನಾನಿರುವುದಿಲ್ಲ.

ದೇವೇಂದ್ರ! ನಿನ್ನಲ್ಲಿರುವ ಸುಗುಣಗಳಿಗೆ ಒಲಿದು ಬಂದಿರುವೆನು. ನನ್ನ ಹಿಂದೆ ಆಶಾ, ಶ್ರದ್ಧೆ, ಧೃತಿ, ಕ್ಷಾಂತಿ, ವಿಜಯಾ, ಸನ್ನತಿ, ಜಯಾ ಕ್ಷಮಾ ಎಂಬ ನನ್ನ ಸಖಿಯರೂ ಬರುವರು. ಇಂತು ನುಡಿದ ಶ್ರೀದೇವಿಯ ಕರುಣೆಗೆ ಪಾತ್ರರಾಗಿ ಇಂದ್ರಾದಿ ವೃಂದಾರಕರು ಸಕಲ ಸಂಪದ್ಭರಿತರು, ಸರ್ವಶಸ್ತಚರಿತರು ಆಗಿ ಸುಖವಾಗಿದ್ದರು. ನಾರದನು ಶ್ರೀದೇವಿಯ ಆಗಮನವನ್ನು ದೇವ ಮಾನವ ಲೋಕಗಳಲ್ಲಿ ಸಾರಿ, ಶ್ರೀ ಶ್ರೀ ರಮಣರನ್ನು ಪಾಡಿ ಪೊಗಳಿ, ಧನ್ಯನಾದನು. ಆಕಾಶದಿಂದ ಅಮೃತ ವೃಷ್ಟಿಗರೆಯಿತು. ದೇವ ದುಂದುಭಿಗಳು ಮೊಳಗಿದವು. ಅಪ್ಸರೆಯರಾಡಿದರು. ಗಂಧರ್ವರು ಪಾಡಿದರು. ದಿಕ್ಕುಗಳು ಪ್ರಸನ್ನವಾದವು. ಮಂದ ಮಾರುತವು ಶಿವಗಂಧವಾಗಿ ಬೀಸಿತು. ಋತುಗಳಿಗೆ ತಕ್ಕ ಸಸ್ಯ ಸಮೃದ್ಧಿಯು ತಲೆದೋರಿತು. ಜನರು ತಂತಮ್ಮ ಧರ್ಮವನ್ನು ಬಿಡದೆ ಪಾಲಿಸಿದರು. ದಾರುಣವಾಗ್ವ್ಯವಹಾರವನ್ನು ದೂರ ಸರಿಸಿ, ಅಮೃತ ಭಾಷಣರಾದರು. ಇಂತು ಶ್ರೀದೇವಿಯ ಅನುಗ್ರಹದಿಂದ ಸಕಲ ಸುಜನವೃಂದವು ಅಮಂದಾನಂದ ಕಂದಳಿತ ಹೃದಯಾರವಿಂದವಾಗಿ, ಅರವಿಂದವಾಸಿನೀ ವಾಸುದೇವರನ್ನು ಭಜಿಸಿ, ಸುಖ ಸಮೃದ್ಧಿಯಲ್ಲೋಲಲಾಡಿತು.

## ೯. ಶ್ರೀವ್ಯಾಸಶುಕ ಸಂವಾದ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ಧರ್ಮರಾಜನು ಶ್ರೀಪ್ರಸನ್ನತೆಯ ಕಾರಣಗಳನ್ನು ತಿಳಿದು ಮತ್ತೆ ಶೀಲವನ್ನು ಕುರಿತು ಪ್ರಶ್ನಿಸಿದನು. ಭೀಷ್ಮನು ಅವನಿಗೆ ದೇವಲಜೈಗಿಷವ್ಯರ ಸಂವಾದವನ್ನು ನಿರೂಪಿಸಿದನು:

'ರಾಜನ್! ಹಿಂದೆ ದೇವಲನು ರುದ್ರಾಂಶಸಂಭೂತನಾದ ಜೈಗೀಷವ್ಯ ಮುನಿಯನ್ನು ಕಂಡು, 'ಮಹಾನುಭಾವ! ನಿಂದನಕ್ಕೆ ಕೋಪಿಸದೆ, ವಂದನಕ್ಕೆ ತೋಷಿಸದೆ ಇರುವ ನಿನ್ನ ಪ್ರಜ್ಞೆಯನ್ನು ಕಂಡು ಆಚ್ಚರಿಯಾಗಿದೆ. ಈ ಪ್ರಜ್ಞಾಬಲವನ್ನೆಂತು ಸಾಧಿಸಿದೆ!' ಎಂದು ಕೇಳಿದನು. ಜೈಗೀಷವ್ಯನಿಂತೆಂದನು: 'ದೇವಲ! ನಿಂದಾಸ್ತುತಿಗಳನ್ನು ವಿಕಾರವಿಲ್ಲದೆ ಸ್ವೀಕರಿಸುವುದು ಮೋಕ್ಷಸಾಧನವಾಗಿದೆ. ಹಿಗ್ಗಿ ಕುಗ್ಗುವುದು ಮೋಕ್ಷ ಪ್ರತಿಬಂಧಕವಾಗಿದೆ. ನಾನು ಬಾರದುದಕ್ಕಾಗಿ ವ್ಯಥೆಪಡೆನು. ಬಂದುದಕ್ಕಾಗಿ ಹಿಗ್ಗದಿರುವೆನು. ವಿದ್ಯಾವಂತರು ಕ್ರೋಧವನ್ನು ಬಿಟ್ಟು ಜಿತೇಂದ್ರಿಯರಾಗಿ ಎಲ್ಲರಿಗೂ ಹಿತವನ್ನೇ ಮಾಡುವರು. ಹೃದಯ ಸಂಶಯಗಳನ್ನು ಶಾಸ್ತ್ರ ಶ್ರವಣದಿಂದ ಕಳೆದುಕೊಂಡು ಜ್ಞಾನದೃಢರಾಗಿರುವರು. ಉನ್ಮಾರ್ಗ ವರ್ತಿಗಳು ಕೋಪಿಸಿದರೇನು? ಪೊಗಳಿದರೇನು? ಅವರು ಅದನ್ನು ಲೆಕ್ಕಿಸರು. ಅಪಮಾನಕ್ಕೆ ಅಂಜರು. ಮಾನಕ್ಕೆ

ಆಶೆಪಡರು. ಅವಮಾನದಿಂದ ತಪೋವೃದ್ಧಿಯೂ, ಸನ್ಮಾನದಿಂದ ತಪೋಹಾನಿಯು ಆಗುವುವೆಂದರಿತು, ಅವರು ಶಾಂತರಾಗಿರುವರು.

ಹಿಂದೆ ಉಗ್ರಸೇನನು ಶ್ರೀವಾಸುದೇವನನ್ನು, 'ಕೃಷ್ಣ! ನಾರದನನ್ನು ಎಲ್ಲರೂ ಪೂಜಿಸುವರು ಅದೇಕೆ?' ಎಂದು ಕೇಳಿದನು. ಕೃಷ್ಣನಿಂತೆಂದನು: 'ಶೀಲವೆಂಬ ದೊಡ್ಡ ಗುಣದಿಂದ ನಾರದನು ಪೂಜಿತನಾಗಿರುವನು. ತನ್ನ ಸೌಶೀಲ್ಯ, ಕ್ರೋಧವರ್ಜ್ಜನ, ಅಚಾಪಲ್ಯ ಮುಂತಾದ ಗುಣಗಳಿಂದ ಆತನು ಪೂಜಿತನಾಗಿರುವನು. ಅಧ್ಯಾತ್ಮಗಳನ್ನರಿತು, ಜಿತೇಂದ್ರಿಯನಾಗಿ, ಸತ್ಯಹಿತವನ್ನಾಡುವುದರಿಂದ ನರನು ಪೂಜಿತನಾಗುವನು. ತೇಜ, ಯಶಸ್ಸು, ಬುದ್ಧಿ, ಜ್ಞಾನ, ವಿನಯ, ವಂಶ ವಯಸ್ಸುಗಳಿಂದ ನರರು ಪೂಜಿತರಾಗುವರು. ಪಾಪವನ್ನು ಬಿಟ್ಟು, ಪರರ ಹಾನಿಗೆ ಹಿಗ್ಗದೆ, ಪುಣ್ಯಕಾರ್ಯಗಳನ್ನು ಮಾಡುವ ನಾರದನು ಸರ್ವಲೋಕದಿಂದಲು ಪೂಜಿತನಾಗಿರುವನು. ವಾಙ್ಮಿಯು, ಪಂಡಿತನು, ಸಂಶಯ ನಿವಾರಣ ಸಮರ್ಥನು, ವ್ಯರ್ಥ ಕಾಲಹರಣಹೀನನು, ಕಾಲ ದೇಶ ಸಮುಚಿತ ಧರ್ಮಕರ್ಮಾಸಕ್ತನು, ಆಗಿರುವ ನಾರದನು ಪೂಜಿತನಾಗಿರುವನು. ಇವೆಲ್ಲ ಗುಣಗಳಿಗೆ ಶೀಲವೆಂಬುವರು. ದೇವಲ! ಇಂತಹ ಶೀಲವನ್ನು ಪಡೆಯಲು ಯತ್ನಿಸು!' ಜೈಗೀಷವ್ಯನ ಉಪದೇಶವನ್ನು ಕೇಳಿ, ದೇವಲನು ಕೃತಜ್ಞನಾಗಿ, ಆತನನ್ನು ಪೂಜಿಸಿ, ಕೃತಾರ್ಥನಾದನು.

ಧರ್ಮರಾಜನು 'ತಾತ! ಯುಗಮಾನ ಲಕ್ಷಣಗಳನ್ನು ಕೇಳಿಲಿಚ್ಛಿಸುವೆನು' ಎಂದನು. ಭೀಷ್ಮನಿಂತು ನುಡಿದನು: 'ಧರ್ಮರಾಜ! ಹಿಂದೆ ಶುಕಮುನಿಯು ತನ್ನ ತಂದೆಯು, ಲೋಕೈಕ ಗುರುವು ಆದ ಶ್ರೀವೇದವ್ಯಾಸನನ್ನು ಇದೇ ವಿಷಯವನ್ನು ಪ್ರಶ್ನಿಸಿದನು. ಆಗ ಪಾರಾಶರ್ಯನು ನುಡಿದ ಅಮೋಘ ತತ್ವವನ್ನು ನಾರದಾದಿ ಮುಖದಿಂದಲು, ಭಾರದ್ವಾಜ ಭೃಗು ಮುನಿಗಳಿಂದಲು, ಕೇಳಿ, ನಿನಗೆ ವಿವರಿಸುವೆನು ಕೇಳು!

ಅನಾದ್ಯನಂತನು, ಜನನ ಮರಣರಹಿತನು, ಅಪ್ರಾಕೃತ ದಿವ್ಯಾನಂತ ಕಲ್ಯಾಣಗುಣ ಪೂರ್ಣ ದೇಹನು, ಅಪ್ರಮೇಯ ಮಹಿಮನೂ ಆದ ಶ್ರೀನಾರಾಯಣನೊಬ್ಬನೇ ಈ ಜಗತ್ತಿನ ಸೃಷ್ಟಿಗೆ ಮೊದಲು (ಸ್ವತಂತ್ರನಾಗಿಯೇ) ಇದ್ದನು. ಮಿಕ್ಕೆಲ್ಲ ಜಗವು ನಿರ್ವ್ಯಾಪಾರವಾಗಿ, ಇಲ್ಲವೆನಿಸಿತ್ತು. ಶ್ರೀದೇವಿಯು ಮಾತ್ರ - ನಿತ್ಯಮುಕ್ತಳು, ಅಪ್ರಾಕೃತ ಮಂಗಳವಿಗ್ರಹಳು. ಆದುದರಿಂದ ಶ್ರೀನಾರಾಯಣನ ಬಿಗಿ ಅಪ್ಪುಗೆಯಲ್ಲಿದ್ದಳು. ಆಗ ಪ್ರಳಯಕಾಲವೆನಿಸಿತ್ತು. ಕಾಲವು ನಿತ್ಯವಲ್ಲವೇ? ಆದರೂ ಶ್ರೀಶನು ಸೃಷ್ಟಿಕಾಲದಲ್ಲಿ ಜೀವರ ವಿವಿಧಾಯುರ್ಮಾನಗಳನ್ನು ಅಳೆಯಲು, ಕಾಲಾವಯವಗಳನ್ನು ನಿರ್ಮಿಸಿದನು.

ನಿಮೇಷಗಳು ಹದಿನೈದಾದರೆ ಒಂದು ಕಾಷ್ಠ. ಕಾಷ್ಠಗಳು ಮೂವತ್ತಾದರೆ ಕಲೆ ಮೂವತ್ತು ಕಲೆಗಳಾದರೆ ಒಂದು ಮುಹೂರ್ತ. ಮುಹೂರ್ತಗಳು ಮೂವತ್ತಾದರೆ ಒಂದು ದಿನ. ಅವು ಮೂವತ್ತಾದರೆ ಒಂದು ತಿಂಗಳು. ಹನ್ನೆರಡು ತಿಂಗಳಾದರೆ ಒಂದು ವತ್ಸರ. ಸಂವತ್ಸರದ ಉತ್ತರಾಯಣವೇ ದೇವತೆಗಳ ದಿನ. ದಕ್ಷಿಣಾಯನವೇ ರಾತ್ರಿ. ಅಂತಹ ಮುನ್ನೂರ ಅರವತ್ತು ಮಾನುಷ ವತ್ಸರಗಳಿಗೆ ಒಂದು ದೇವ ವತ್ಸರ. ಮಾಸದ ಶುಕ್ಲ

ಪಕ್ಷವೇ ಪಿತೃ ಲೋಕದ ದಿನ, ಕೃಷ್ಣ ಪಕ್ಷವೇ ರಾತ್ರಿ. ಇಂತು ದೇವತಾ ವರ್ಷಗಳು ನಾಲ್ಕು ಸಾವಿರವಾದರೆ ಕೃತಯುಗವು; ಮೂರು ಸಾವಿರವಾದರೆ ತ್ರೇತಾಯುಗವು; ಎರಡು ಸಾವಿರ ವತ್ಸರಗಳು ದ್ವಾಪರಯುಗವು; ಕಲಿಯುಗವು ಒಂದು ಸಾವಿರ ವರ್ಷಗಳು; ಇವಕ್ಕೆಲ್ಲಾ ಕ್ರಮವಾಗಿ ನನ್ನೂರು, ಮುನ್ನೂರು, ಇನ್ನೂರು. ಒಂದು ನೂರು ವರ್ಷಗಳ ಸಂಧಿಕಾಲವು ಎರಡೂ ಕೊನೆಗಳಲ್ಲಿ (ಆದಿ ಅಂತ್ಯ) ನಾಲ್ಕು ಯುಗಕ್ಕೂ ಉಂಟು. ಅಂತು ಒಟ್ಟು ಹನ್ನೆರಡು ಸಾವಿರ ವರ್ಷ(ದೇವ) ಗಳಾದರೆ ಒಂದು ಮಹಾಯುಗವು. ಅಂತಹ ಮಹಾಯುಗಗಳು ಒಂದು ಸಾವಿರವಾದರೆ ಬ್ರಹ್ಮದೇವನ ಪರವೆಂಬ ಆಯುರ್ಮಾನದ ಒಂದು ದಿನ. ಅಷ್ಟೇ ಆದರೆ ರಾತ್ರಿ. ಅಂತಹ ದಿನಗಳು ಮುನ್ನೂರ ಅರವತ್ತಾದರೆ ಬ್ರಹ್ಮವರ್ಷವು. ಅಂತಹ ವರ್ಷಗಳು ನೂರಾದರೆ ಬ್ರಹ್ಮಾಯುವು. ಅದನ್ನೇ ಪರವೆಂಬುವರು. ಆದರಲ್ಲಿ ಪೂರ್ವಾರ್ಧ ( ೫೦ ವರ್ಷ) ಕಳೆದುಹೋಗಿವೆ. ಶ್ವೇತವರಾಹ ಕಲ್ಪವೆಂಬ ಉತ್ತರಪರಾರ್ಧದ ಪ್ರಥಮ ದಿನವು ನಡೆಯುತ್ತಿದೆ. ಒಂದು ಬ್ರಹ್ಮದಿನದಲ್ಲಿ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು ಆಗಿಹೋಗುವರು. ಒಂದು ಮನ್ವಂತರವು ಎಪ್ಪತ್ತೊಂದು ಮಹಾಯುಗಗಳ ಕಾಲವೆಂದು ತಿಳಿ!

ಕಾಲಸೃಷ್ಟಿಯಾದ ನಂತರ ತತ್ವಸೃಷ್ಟಿಯನ್ನು ಪೇಳುವೆನು. ಶ್ರೀದೇವಿರಮಣನಿಂದ ಸೃಷ್ಟ್ಯಾರಂಭದಲ್ಲಿ ಅವ್ಯಕ್ತ ತತ್ವದ ಕ್ಷೋಭೆ ಉಂಟಾಯಿತು. ಆಗ ಮಹತ್ತತ್ವ (ಬ್ರಹ್ಮ ಶರೀರ)ವು ಉದಿಸಿತು. ಅದು ವಿಕಾರಗೊಳಿಸಿದಾಗ ಮೂರು ವಿಧ ಅಹಂಕಾರ ತತ್ವವಾಗಿ ಪರಿಣಮಿಸಿತು. ಸಾತ್ವಿಕಾಹಂಕಾರದಿಂದ ದೇವ ದೇಹಗಳು– ಮನಸ್ತತ್ವವು (ಸ್ಕಂದೇಂದ್ರರು) ಉದಿಸಿದವು. ರಾಜಸಾಹಂಕಾರದಿಂದ ಹತ್ತು ಇಂದ್ರಿಯಗಳೂ, ತಾಮಸಾಹಂಕಾರದಿಂದ ಆಕಾಶ (ಗಣಪತಿ), ವಾಯು (ಮರುತ್ತು), ತೇಜ (ಅಗ್ನಿ), ಆಪ್ (ವರುಣ), ಪೃಥ್ವೀ (ಶನೈಶ್ಚರ ಧರೆಯರು) ಜನಿಸಿದರು. ಅಹಂಕಾರ ತತ್ವಕ್ಕೆ ನಿಯಾಮಕರಾದ ಗರುಡ ಶೇಷರುದ್ರರು ಬುದ್ಧಿ ತತ್ವಮಾನಿಯಾದ ಭಾರತೀ ಸರಸ್ವತಿಯರ ಪುತ್ರರು ಮತ್ತು ಅವರರು, ಶಬ್ದ ಸ್ಪರ್ಶಗಳಿಗೆ ಸೌಪರ್ಣಿಯು, ರೂಪರಸಗಳಿಗೆ ವಾರುಣಿಯು, ಗಂಧಕ್ಕೆ ಪಾರ್ವತಿಯು ನಿಯಾಮಿಕೆಯರು. ಕಣ್ಣು (ಸೂರ್ಯ), ಕಿವಿ (ದಿಗ್ದೇವತೆಗಳು), ಮೂಗು (ಅಶ್ವಿನೀದ್ವಯ), ನಾಲಿಗೆ (ವರುಣ), ಚರ್ಮ (ಅಹಂಕಾರಿಕ ಪ್ರಾಣ), ವಾಕ್ (ವಹ್ನಿ), ಪಾಣಿ (ದಕ್ಷ), ಪಾದ (ಜಯಂತ), ಪಾಯು (ಮಿತ್ರ), ಉಪಸ್ಥ (ಮನು) - ಇವರು ಇಂದ್ರಿಯ ದೇವತೆಗಳು. ಈ ಎಲ್ಲ ತತ್ವಗಳಿಗೂ, ತತ್ವ ದೇವತೆಗಳಿಗೂ ಪ್ರಭುನಾದ ಶ್ರೀರಮಣನು ಸರ್ವತಂತ್ರ ಸ್ವತಂತ್ರನು. ಆದರೂ ಜೀವರಿಗೆ ಸಾಧನ ಶರೀರಗಳನ್ನೀಯಲೆಂದು ಈ ತತ್ವಗಳ ದ್ವಾರಾ ಬ್ರಹ್ಮಾಂಡ ಮೊದಲ್ಗೊಂಡು ಜೀವಶರೀರದವರೆಗೂ ಇರುವ ಎಲ್ಲ ಸೃಷ್ಟಿಯನ್ನು ಮಾಡಿದನು, ಜೀವರಿಗೆ ಭೌತ ದೇಹಗಳನ್ನಿತ್ತನು.

ಸೃಷ್ಟರಾದ ಜೀವರಿಗೆ ಜ್ಞಾನವಾಗುವುದಕ್ಕಾಗಿ ನಿತ್ಯವೇದಗಳನ್ನು ಅಭಿವ್ಯಕ್ತೀಕರಿಸಿ, ಬ್ರಹ್ಮದೇವನಿಗೆ ಉಪದೇಶಿಸಿದನು. ಸೃಷ್ಟರಾದ ಜೀವರಿಗೆ ಬ್ರಹ್ಮಾದಿ ಸರ್ವರಿಗೂ ನಾಮಧೇಯಗಳನ್ನು ವೇದದಿಂದಲೇ ಸಂಗ್ರಹಿಸಿ ಕೊಟ್ಟನು. ವೇದವೆಲ್ಲವೂ ಶ್ರೀಹರಿ

ನಾಮವಲ್ಲವೇ ಅದನ್ನೇ ಸಮಾಕರ್ಷಿಸಿ ಬ್ರಹ್ಮರುದ್ರಾದಿಗಳು ತಾವು ಸೃಜಿಸಿದ ಜಗತ್ತಿನ ಜೀವ ಜಡ ಜಾತವನ್ನು ವ್ಯವಹರಿಸಿದರು. ವೇದಾರ್ಥವು ಶ್ರೀಶನೇ ಮತ್ತೊಂದರ್ಥವೆಂದರೆ ಅಮುಖ್ಯಾರ್ಥವು ಪರಮ ಮುಖ್ಯಾರ್ಥನಾದ ಶ್ರೀಹರಿಯನ್ನು ತಿಳಿಯುವುದೇ ಜ್ಞಾನವು. ಕರ್ಮದೇವತಾದಿ ಜ್ಞಾನವು ವಿವಿಧ ವಿಷಯ ವಿರಾಗಕ್ಕೆ ಸಹಾಯಕವಹುದು. ಶ್ರೀಹರಿ ಜ್ಞಾನವೇ ಮೋಕ್ಷಸಂಪಾದಕವಾಗಿದೆ.

ವೇದದಲ್ಲಿ ಪೇಳಿರುವ ಯಜ್ಞಗಳು ಶ್ರೀಹರಿಪೂಜೆ ಆಯಾದೇವತೆಗಳಿಗೀವ ಹವಿರ್ದಾನವನ್ನು ತದಂತರ್ಯಾಮಿಯಾಗಿ ಸ್ವೀಕರಿಸಿ, ತದ್ವಾರಾ ಫಲವನ್ನೀವ ಶ್ರೀಶನೇ ಸರ್ವೋತ್ತಮನು. ಶಬ್ದವೆಂದರೆ ವೇದ. ಪರಬ್ರಹ್ಮನೆಂದರೆ ಶ್ರೀಹರಿಯು. ಶ್ರೀಹರಿಭಕ್ತನಾದ ವೇದ ವಿದ್ವಾಂಸನೇ ಸರಿಯಾದ ಗುರುವು. ಸಾವಿರ ವೇದಗಳನ್ನೋದಿ, ಶ್ರೀಶನನ್ನರಿಯದ ಬರಡು ಪಂಡಿತನಿಂದ ಸರಿಯಾದ ಜ್ಞಾನವು ದೊರೆಯದು.

ವಿವಿಧ ಜೀವರಿಗೆ ತತ್ತದ್ಯೋಗ್ಯವಾದ ಗತಿಯಾಗುವುದು. ಪ್ರಳಯವು ಬಂದಾಗ ತತ್ವಗಳು ವ್ಯುತ್ಕ್ರಮದಿಂದ ತಂತಮ್ಮ ಯೋನಿಗಳಲ್ಲಿ ಲಯವನ್ನು ಹೊಂದುವವು. ಎಲ್ಲ ಮಹದಾದಿ ತತ್ವಗಳು ಅವ್ಯಕ್ತದಲ್ಲಿ ಲಯವಾಗಿ, ಸೂಕ್ಷ್ಮವಾಗಿ ಶ್ರೀಹರಿಯ ಉದರವನ್ನು ಹೋಗುವವು. ಅವ್ಯಕ್ತ ಮಾನಿ ಶ್ರೀದೇವಿಯು ಶ್ರೀಶನೊಡಗೂಡಿ, ಯೋಗನಿದ್ರಾಮುದ್ರಿತನಾದ ಶ್ರೀಶನ ಗಾಢಾಲಿಂಗನವನ್ನು ಪೊಂದಿರುವಳು. ಆಕೆಗೆ ಲಯವಿಲ್ಲ; ಇಂತು ಸೃಷ್ಟಿ ಪ್ರಳಯ ಕರ್ತನಾದ ಶ್ರೀನಾರಾಯಣನ ಮಹಿಮೆಯನ್ನು ತಿಳಿದವನು ಸಂಸಾರ ಬಂಧದಿಂದ ಬಿಡಿಸಿಕೊಂಡು; ಮುಕ್ತನಾಗುವನು.

ವಿಪ್ರಾದಿ ಸುಜೀವರಿಗೆ ಶ್ರೀಶನ ಮಹಿಮಾಜ್ಞಾನವು ಗುರೂಪದೇಶದಿಂದ ಸಿಗುವುದು. ವಿಪ್ರನಿಗೆ ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನಗಳು ವಿಹಿತವಾಗಿವೆ. ಕ್ಷತ್ರಿಯರಿಗೆ ಯಜನ, ಅಧ್ಯಯನ, ದಾನಗಳೂ; ವೈಶ್ಯನಿಗೆ ಯಜನ ದಾನ, ಗೋರಕ್ಷಾ, ಕೃಷಿಗಳೂ; ಶೂದ್ರನಿಗೆ ದಾನ ಪರಿಚರಣಗಳೂ ವಿಹಿತವಾಗಿವೆ. ಹಿಂದೆ ಬಹುರಾಜರು, ವಿಪ್ರರು, ವೈಶ್ಯರು, ಶೂದ್ರರು ದಾನದಿಂದ ಪುಣ್ಯಲೋಕ ಗಳನ್ನು ಗಳಿಸಿರುವರು. ಪಾತ್ರನಿಗಿತ್ತ ದಾನವು ಅನಂತ ಪುಣ್ಯಕಾರಣವಾದಂತೆ ಅಪಾತ್ರನಿಗಿತ್ತ ದಾನವು ದಾತೃ ಪ್ರತಿಗೃಹೀತೃಗಳ ಅಧಃಪತನಕ್ಕೆ ಕಾರಣವಾಗಿದೆ. ಪಾತ್ರರಿಗೆ ಈಯಲಾಗದ್ದಿಲ್ಲ.

ರಂತಿ ದೇವನು ನೀರನ್ನು, ಇಂದ್ರದ ಮನನು ಧನವನ್ನು, ಶಿಬಿಯು ಸ್ವಸುತ ನನ್ನು, ಪ್ರತರ್ದನನು ತನ್ನ ಕಣ್ಣನ್ನು, ದೇವಾವೃಧನು ಸುವರ್ಣನನ್ನು, ಸಾಂಕೃತಿಯು ಬ್ರಹ್ಮ ಜ್ಞಾನವನ್ನು, ಅಂಬರೀಷನು ಗೋಲಕ್ಷವನ್ನು, ಸಾವಿತ್ರಿಯು ಕುಂಡಲಗಳನ್ನು, ಜನಮೇಜಯನು ಶರೀರವನ್ನು, ಯುವನಾಶ್ವನು ಪ್ರಿಯವನಿತೆಯರನ್ನು, ಪರಶುರಾಮ ದೇವನು ಭೂಮಿಯನ್ನು, ವಸಿಷ್ಠನು ಮಳೆಯನ್ನು, ಮರುತ್ತ ರಾಜನು ಕನ್ಯೆಯನ್ನು, ಬ್ರಹ್ಮದತ್ತನು ನಿಧಿಯನ್ನು, ಮಿತ್ರಸಹನು ಪತ್ನಿಯನ್ನು, ಶತದ್ಯುಮ್ನನು ಮನೆಯನ್ನು,

ಪಕ್ಷವೇ ಪಿತೃ ಲೋಕದ ದಿನ, ಕೃಷ್ಣ ಪಕ್ಷವೇ ರಾತ್ರಿ. ಇಂತು ದೇವತಾ ವರ್ಷಗಳು ನಾಲ್ಕು ಸಾವಿರವಾದರೆ ಕೃತಯುಗವು; ಮೂರು ಸಾವಿರವಾದರೆ ತ್ರೇತಾಯುಗವು; ಎರಡು ಸಾವಿರ ವತ್ಸರಗಳು ದ್ವಾಪರಯುಗವು; ಕಲಿಯುಗವು ಒಂದು ಸಾವಿರ ವರ್ಷಗಳು; ಇವಕ್ಕೆಲ್ಲಾ ಕ್ರಮವಾಗಿ ನನ್ನೂರು, ಮುನ್ನೂರು, ಇನ್ನೂರು. ಒಂದು ನೂರು ವರ್ಷಗಳ ಸಂಧಿಕಾಲವು ಎರಡೂ ಕೊನೆಗಳಲ್ಲಿ (ಆದಿ ಅಂತ್ಯ) ನಾಲ್ಕು ಯುಗಕ್ಕೂ ಉಂಟು. ಅಂತು ಒಟ್ಟು ಹನ್ನೆರಡು ಸಾವಿರ ವರ್ಷ (ದೇವ) ಗಳಾದರೆ ಒಂದು ಮಹಾಯುಗವು. ಅಂತಹ ಮಹಾಯುಗಗಳು ಒಂದು ಸಾವಿರವಾದರೆ ಬ್ರಹ್ಮದೇವನ ಪರವೆಂಬ ಆಯುರ್ಮಾನದ ಒಂದು ದಿನ. ಅಷ್ಟೇ ಆದರೆ ರಾತ್ರಿ. ಅಂತಹ ದಿನಗಳು ಮುನ್ನೂರ ಅರವತ್ತಾದರೆ ಬ್ರಹ್ಮವರ್ಷವು. ಅಂತಹ ವರ್ಷಗಳು ನೂರಾದರೆ ಬ್ರಹ್ಮಾಯುವು. ಅದನ್ನೇ ಪರವೆಂಬುವರು. ಅದರಲ್ಲಿ ಪೂರ್ವಾರ್ಧ ( ೫೦ ವರ್ಷ) ಕಳೆದುಹೋಗಿವೆ. ಶ್ವೇತವರಾಹ ಕಲ್ಪವೆಂಬ ಉತ್ತರಪರಾರ್ಧದ ಪ್ರಥಮ ದಿನವು ನಡೆಯುತ್ತಿದೆ. ಒಂದು ಬ್ರಹ್ಮದಿನದಲ್ಲಿ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು ಆಗಿಹೋಗುವರು. ಒಂದು ಮನ್ವಂತರವು ಎಪ್ಪತ್ತೊಂದು ಮಹಾಯುಗಗಳ ಕಾಲವೆಂದು ತಿಳಿ!

ಕಾಲಸೃಷ್ಟಿಯಾದ ನಂತರ ತತ್ವಸೃಷ್ಟಿಯನ್ನು ಪೇಳುವೆನು. ಶ್ರೀದೇವಿರಮಣನಿಂದ ಸೃಷ್ಟ್ಯಾರಂಭದಲ್ಲಿ ಅವ್ಯಕ್ತ ತತ್ವದ ಕ್ಷೋಭೆ ಉಂಟಾಯಿತು. ಆಗ ಮಹತ್ತತ್ವ (ಬ್ರಹ್ಮ ಶರೀರ)ವು ಉದಿಸಿತು. ಅದು ವಿಕಾರಗೊಳಿಸಿದಾಗ ಮೂರು ವಿಧ ಅಹಂಕಾರ ತತ್ವವಾಗಿ ಪರಿಣಮಿಸಿತು. ಸಾತ್ವಿಕಾಹಂಕಾರದಿಂದ ದೇವ ದೇಹಗಳು – ಮನಸ್ತತ್ವವು (ಸ್ಕಂದೇಂದ್ರರು) ಉದಿಸಿದವು. ರಾಜಸಾಹಂಕಾರದಿಂದ ಹತ್ತು ಇಂದ್ರಿಯಗಳೂ, ತಾಮಸಾಹಂಕಾರದಿಂದ ಆಕಾಶ (ಗಣಪತಿ), ವಾಯು (ಮರುತ್ತು), ತೇಜ (ಅಗ್ನಿ), ಆಪ್ (ವರುಣ), ಪೃಥ್ವೀ (ಶನೈಶ್ಚರ ಧರೆಯರು) ಜನಿಸಿದರು. ಅಹಂಕಾರ ತತ್ವಕ್ಕೆ ನಿಯಾಮಕರಾದ ಗರುಡ ಶೇಷರುದ್ರರು ಬುದ್ಧಿ ತತ್ವಮಾನಿಯಾದ ಭಾರತೀ ಸರಸ್ವತಿಯರ ಪುತ್ರರು ಮತ್ತು ಅವರರು, ಶಬ್ದ ಸ್ಪರ್ಶಗಳಿಗೆ ಸೌಪರ್ಣಿಯು, ರೂಪರಸಗಳಿಗೆ ವಾರುಣಿಯು, ಗಂಧಕ್ಕೆ ಪಾರ್ವತಿಯು ನಿಯಾಮಿಕೆಯರು. ಕಣ್ಣು (ಸೂರ್ಯ), ಕಿವಿ (ದಿಗ್ದೇವತೆಗಳು), ಮೂಗು (ಅಶ್ವಿನೀದ್ವಯ), ನಾಲಿಗೆ (ವರುಣ), ಚರ್ಮ (ಅಹಂಕಾರಿಕ ಪ್ರಾಣ), ವಾಕ್ (ವಹ್ನಿ), ಪಾಣಿ (ದಕ್ಷ), ಪಾದ (ಜಯಂತ), ಪಾಯು (ಮಿತ್ರ), ಉಪಸ್ಥ (ಮನು) - ಇವರು ಇಂದ್ರಿಯ ದೇವತೆಗಳು. ಈ ಎಲ್ಲ ತತ್ವಗಳಿಗೂ, ತತ್ವ ದೇವತೆಗಳಿಗೂ ಪ್ರಭುನಾದ ಶ್ರೀರಮಣನು ಸರ್ವತಂತ್ರ ಸ್ವತಂತ್ರನು. ಆದರೂ ಜೀವರಿಗೆ ಸಾಧನ ಶರೀರಗಳನ್ನೀಯಲೆಂದು ಈ ತತ್ವಗಳ ದ್ವಾರಾ ಬ್ರಹ್ಮಾಂಡ ಮೊದಲ್ಗೊಂಡು ಜೀವಶರೀರದವರೆಗೂ ಇರುವ ಎಲ್ಲ ಸೃಷ್ಟಿಯನ್ನು ಮಾಡಿದನು, ಜೀವರಿಗೆ ಭೌತ ದೇಹಗಳನ್ನಿತ್ತನು.

ಸೃಷ್ಟರಾದ ಜೀವರಿಗೆ ಜ್ಞಾನವಾಗುವುದಕ್ಕಾಗಿ ನಿತ್ಯವೇದಗಳನ್ನು ಅಭಿವ್ಯಕ್ತೀಕರಿಸಿ, ಬ್ರಹ್ಮದೇವನಿಗೆ ಉಪದೇಶಿಸಿದನು. ಸೃಷ್ಟರಾದ ಜೀವರಿಗೆ ಬ್ರಹ್ಮಾದಿ ಸರ್ವರಿಗೂ ನಾಮಧೇಯಗಳನ್ನು ವೇದದಿಂದಲೇ ಸಂಗ್ರಹಿಸಿ ಕೊಟ್ಟನು. ವೇದವೆಲ್ಲವೂ ಶ್ರೀಹರಿ

ನಾಮವಲ್ಲವೇ ಅದನ್ನೇ ಸಮಾಕರ್ಷಿಸಿ ಬ್ರಹ್ಮರುದ್ರಾದಿಗಳು ತಾವು ಸೃಜಿಸಿದ ಜಗತ್ತಿನ ಜೀವ ಜಡ ಜಾತವನ್ನು ವ್ಯವಹರಿಸಿದರು. ವೇದಾರ್ಥವು ಶ್ರೀಶನೇ ಮತ್ತೊಂದರ್ಥವೆಂದರೆ ಅಮುಖ್ಯಾರ್ಥವು ಪರಮ ಮುಖ್ಯಾರ್ಥನಾದ ಶ್ರೀಹರಿಯನ್ನು ತಿಳಿಯುವುದೇ ಜ್ಞಾನವು. ಕರ್ಮದೇವತಾದಿ ಜ್ಞಾನವು ವಿವಿಧ ವಿಷಯ ವಿರಾಗಕ್ಕೆ ಸಹಾಯಕವಹುದು. ಶ್ರೀಹರಿ ಜ್ಞಾನವೇ ಮೋಕ್ಷಸಂಪಾದಕವಾಗಿದೆ.

ವೇದದಲ್ಲಿ ಪೇಳಿರುವ ಯಜ್ಞಗ್ಗಳು ಶ್ರೀಹರಿಪೂಜೆ ಆಯಾದೇವತೆಗಳಿಗೀವ ಹವಿರ್ದಾನವನ್ನು ತದಂತರ್ಯಾಮಿಯಾಗಿ ಸ್ವೀಕರಿಸಿ, ತದ್ವಾರಾ ಫಲವನ್ನೀವ ಶ್ರೀಶನೇ ಸರ್ವೋತ್ತಮನು. ಶಬ್ದವೆಂದರೆ ವೇದ. ಪರಬ್ರಹ್ಮನೆಂದರೆ ಶ್ರೀಹರಿಯು. ಶ್ರೀಹರಿಭಕ್ತನಾದ ವೇದ ವಿದ್ವಾಂಸನೇ ಸರಿಯಾದ ಗುರುವು. ಸಾವಿರ ವೇದಗಳನ್ನೋದಿ, ಶ್ರೀಶನನ್ನರಿಯದ ಬರಡು ಪಂಡಿತನಿಂದ ಸರಿಯಾದ ಜ್ಞಾನವು ದೊರೆಯದು.

ವಿವಿಧ ಜೀವರಿಗೆ ತತ್ತದ್ಯೋಗ್ಯವಾದ ಗತಿಯಾಗುವುದು. ಪ್ರಳಯವು ಬಂದಾಗ ತತ್ವಗಳು ವ್ಯತ್ಕ್ರಮದಿಂದ ತಂತಮ್ಮ ಯೋನಿಗಳಲ್ಲಿ ಲಯವನ್ನು ಹೊಂದುವವು. ಎಲ್ಲ ಮಹದಾದಿ ತತ್ವಗಳು ಅವ್ಯಕ್ತದಲ್ಲಿ ಲಯವಾಗಿ, ಸೂಕ್ಷ್ಮವಾಗಿ ಶ್ರೀಹರಿಯ ಉದರವನ್ನು ಹೋಗುವವು. ಅವ್ಯಕ್ತ ಮಾನಿ ಶ್ರೀದೇವಿಯು ಶ್ರೀಶನೊಡಗೂಡಿ, ಯೋಗನಿದ್ರಾಮುದ್ರಿತನಾದ ಶ್ರೀಶನ ಗಾಢಾಲಿಂಗನವನ್ನು ಪೊಂದಿರುವಳು. ಆಕೆಗೆ ಲಯವಿಲ್ಲ; ಇಂತು ಸೃಷ್ಟಿ ಪ್ರಳಯ ಕರ್ತನಾದ ಶ್ರೀನಾರಾಯಣನ ಮಹಿಮೆಯನ್ನು ತಿಳಿದವನು ಸಂಸಾರ ಬಂಧದಿಂದ ಬಿಡಿಸಿಕೊಂಡು ; ಮುಕ್ತನಾಗುವನು.

ವಿಪ್ರಾದಿ ಸುಜೀವರಿಗೆ ಶ್ರೀಶನ ಮಹಿಮಾಜ್ಞಾನವು ಗುರೂಪದೇಶದಿಂದ ಸಿಗುವುದು. ವಿಪ್ರನಿಗೆ ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನಗಳು ವಿಹಿತವಾಗಿವೆ. ಕ್ಷತ್ರಿಯರಿಗೆ ಯಜನ, ಅಧ್ಯಯನ, ದಾನಗಳೂ; ವೈಶ್ಯನಿಗೆ ಯಜನ ದಾನ, ಗೋರಕ್ಷಾ, ಕೃಷಿಗಳೂ; ಶೂದ್ರನಿಗೆ ದಾನ ಪರಿಚರಣಗಳೂ ವಿಹಿತವಾಗಿವೆ. ಹಿಂದೆ ಬಹುರಾಜರು, ವಿಪ್ರರು, ವೈಶ್ಯರು, ಶೂದ್ರರು ದಾನದಿಂದ ಪುಣ್ಯಲೋಕ ಗಳನ್ನು ಗಳಿಸಿರುವರು. ಪಾತ್ರನಿಗಿತ್ತ ದಾನವು ಅನಂತ ಪುಣ್ಯಕಾರಣವಾದಂತೆ ಅಪಾತ್ರನಿಗಿತ್ತ ದಾನವು ದಾತೃ ಪ್ರತಿಗೃಹೀತೃಗಳ ಅಧಃಪತನಕ್ಕೆ ಕಾರಣವಾಗಿದೆ. ಪಾತ್ರರಿಗೆ ಈಯಲಾಗದ್ದಿಲ್ಲ.

ರಂತಿ ದೇವನು ನೀರನ್ನು, ಇಂದ್ರದ ಮನನು ಧನವನ್ನು, ಶಿಬಿಯು ಸ್ವಸುತ ನನ್ನು, ಪ್ರತರ್ದನನು ತನ್ನ ಕಣ್ಣನ್ನು, ದೇವಾವೃಧನು ಸುವರ್ಣನನ್ನು, ಸಾಂಕೃತಿಯು ಬ್ರಹ್ಮ ಜ್ಞಾನವನ್ನು, ಅಂಬರೀಷನು ಗೋಲಕ್ಷವನ್ನು, ಸಾವಿತ್ರಿಯು ಕುಂಡಲಗಳನ್ನು, ಜನಮೇಜಯನು ಶರೀರವನ್ನು, ಯುವನಾಶ್ವನು ಪ್ರಿಯವನಿತೆಯರನ್ನು, ಪರಶುರಾಮ ದೇವನು ಭೂಮಿಯನ್ನು, ವಸಿಷ್ಠನು ಮಳೆಯನ್ನು, ಮರುತ್ತ ರಾಜನು ಕನ್ಯೆಯನ್ನು, ಬ್ರಹ್ಮದತ್ತನು ನಿಧಿಯನ್ನು, ಮಿತ್ರಸಹನು ಪತ್ನಿಯನ್ನು, ಶತದ್ಯುಮ್ನನು ಮನೆಯನ್ನು,

ನೃಗನು ಗೋ ಸಮೂಹವನ್ನು, ದಧೀಚನು ಪ್ರಾಣಗಳನ್ನು ಪಾತ್ರರಿಗಿತ್ತು ಪುಣ್ಯ ಲೋಕಗಳನ್ನು ಹೊಂದಿದರು. ಅವರ ಭೌತ ದೇಹಗಳೀಗಿಲ್ಲ; ಆದರೂ ಅವರ ಕೀರ್ತಿಯು ಆಚಂದ್ರಾರ್ಕವಾಗಿದೆ.

ವಿಪ್ರನು ಸದ್ಗತಿಯನ್ನು ಪೊಂದಬೇಕಾದರೆ, ವಿಹಿತ ಧರ್ಮವನ್ನು ಶ್ರೀವಿಷ್ಣು ಪ್ರೀತಿಗಾಗಿ ಅನುಷ್ಠಿಸಬೇಕು. ಸಕಲ ಭೂತಗಳಿಗೆ ಹಿತವನ್ನೇ ಬಯಸಬೇಕು. ಸುಜನ ಸಂಗವನ್ನು ಮಾಡಿ, ಜ್ಞಾನವನ್ನಾರ್ಜಿಸಬೇಕು. ಲಘ್ವಾಹಾರನು, ಜಿತೇಂದ್ರಿಯನು, ಕಾಮ ಕ್ರೋಧದೂರನು ಆಗಿರಬೇಕು. ದೇವ, ಪಿತೃ, ಭೂತ, ಋಷಿ ಅತಿಥಿ ಯಜ್ಞಗಳನ್ನು ಮಾಡಬೇಕು. ಚಕ್ಷುರಾದಿಂದ್ರಿಯಗಳನ್ನು ವಿಷಯಗಳಿಂದ ಸೆಳೆದು, ಅವನ್ನು ಮನಸ್ಸಿನಲ್ಲಿ ಕೇಂದ್ರೀಕರಿಸಿ, ಅಂತರ್ಮುಖವಾಗಿಡಬೇಕು. ಮನವನ್ನು ಬುದ್ಧಿಯ ಅಧೀನವಾಗಿಸಿ, ಚಂಚಲವಾಗದಂತೆ ನಿಲ್ಲಿಸಿ, ಶ್ರೀಹರಿಯನ್ನು ಧ್ಯಾನಿಸಬೇಕು. ಶ್ರೀಹರಿ ಪ್ರಸಾದದಿಂದಲೇ ಮೋಕ್ಷವೆಂದರಿತು, ಅಂತಹ ಪ್ರಸಾದ ಸಿದ್ಧಿಗಾಗಿ ಭಕ್ತಿಯನ್ನು ಮಾಡಬೇಕು.

ದೇಹವೇ ರಥವು! ಇಂದ್ರಿಯಗಳೇ ಕುದುರೆಗಳು; ಮನಸ್ಸೇ ಪ್ರಗ್ರಹವು! ಬುದ್ಧಿಯೇ ಸಾರಥಿಯು; ಜೀವನೇ ರಥಿಕನು; ಇಂದ್ರಿಯಗಳು ಸದಶ್ವಗಳಂತೆ ವಶವಾಗಿದ್ದರೆ, ರಥಿಕನು ಶ್ರೀಹರಿಲೋಕವೆಂಬ ಗಮ್ಯ ಸ್ಥಾನವನ್ನು ಸುರಕ್ಷಿತವಾಗಿ ಸೇರುವನು. ದುಷ್ಟಾಶ್ವಗಳಂತೆ ಇಂದ್ರಿಯಗಳು ಸಾರಥಿ ವಶನಾಗದೆ, ಹರಿದು ಓಡಿದರೆ, ರಥವು ಸಂಸಾರಗರ್ತದಲ್ಲಿ ಬಿದ್ದು, ರಥಿಕನು ದುಃಖಿಪಡುವನು.

ಜೀವ ದೇಹಗಳು ಇಪ್ಪತ್ತೈದು ತತ್ವ ದೇವತೆಗಳ ಅಧೀನವಾಗಿ, ಜಡ ತತ್ವಗಳಿಂದ ರಚಿತವಾಗಿವೆ. ಭೂತಮಯ ದೇಹಗಳು ಆದಿ ಅಂತ್ಯಗಳು ಉಳ್ಳದ್ದಾಗಿವೆ. ಆದರೂ ಜೀವರು ಹಾಗಲ್ಲ. ಅವರೆಲ್ಲರು ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ಪ್ರತಿಬಿಂಬರಾದುದರಿಂದ ಅನಾದಿ ನಿತ್ಯರಾಗಿರುವರು. ದೇಹ ನಾಶ, ದುಃಖ ಪ್ರಾಪ್ತಿ, ಅಪೂರ್ಣತೆ, ಎಂಬ ತ್ರಿವಿಧ ನಾಶಗಳಿದ್ದರೂ, ಅನಿತ್ಯತ್ವವೆಂಬ ನಾಲ್ಕನೇ ವಿಧದ ನಾಶವಿಲ್ಲದವರಾಗಿದ್ದಾರೆ. ಪ್ರತಿಬಿಂಬರೆಂದರೆ, ಶ್ರೀಹರಿಯ ಅಧೀನರು, ಭಿನ್ನರು ಮತ್ತು ಯತ್ಕಿಂಚಿತ್ ಸಾದೃಶ್ಯ ಉಳ್ಳವರೂ ಆಗಿರುವರೆಂದರ್ಥ, ಶ್ರೀಹರಿಯು ಸ್ವತಂತ್ರನು. ಸರ್ವಜ್ಞನು, ವ್ಯಾಪ್ತನು, ಸರ್ವಕರ್ತನು, ಪ್ರಕೃತಿ ಪ್ರಾಕೃತಲೇಪರಹಿತನು, ನಿರ್ದೋಷನು, ಜೀವ ಜಡಾತ್ಯಂತ ವಿಲಕ್ಷಣನು ಆಗಿರುವನು. ಜೀವನು ಅಸ್ವತಂತ್ರನು, ಅಲ್ಪಜ್ಞನು, ಅಣು ಸ್ವರೂಪನು, ಅಲ್ಪಕರ್ತನು, ಪ್ರಾಕೃತ ಲೇಪಯುಕ್ತನು, ಸದೋಷನು, ಜಡ ಹರಿ ವಿಲಕ್ಷಣನು ಆಗಿರುವನು. ಜಡವು ಶ್ರೀಹರಿ ಜೀವ ವಿಲಕ್ಷಣವಾಗಿದ್ದು, ತ್ರಿಗುಣಮಯವಾಗಿದೆ. ಜಡಕ್ಕೆ ಜ್ಞಾನ, ಇಚ್ಛೆಗಳಿಲ್ಲ; ಆದರೂ ಅಸ್ವತಂತ್ರ ಕರ್ತೃತ್ವವು ಇದೆ.

ಇಂತಹ ಶ್ರೀಹರಿಯನ್ನು ತಿಳಿಯದವನು ಸಂಸಾರ ಬದ್ಧನಾಗುವನು. ಶ್ರೀಹರಿಜ್ಞಾನಿಯು ಮುಕ್ತನಾಗುವನು. ಕ್ಷೇತ್ರವೆನಿಸುವ ಇಪ್ಪತ್ತೈದು ತತ್ವಗಳೂ ಇಚ್ಛಾ (ಶ್ರೀದೇವಿ ಭಾರತಿ) - ದ್ವೇಷ (ಕಲಿ), ದುಃಖ (ದ್ವಾಪರ) - ಸುಖ (ಮುಖ್ಯಪ್ರಾಣ)

- ಧೈರ್ಯ (ಸರಸ್ವತೀ ಭಾರತಿಯರು), ಚೇತನೆ (ಶ್ರೀದೇವಿ) - ದೇಹ (ತತ್ತಜ್ಜೀವರು) - ಇಂತು ವಿಕಾರಗಳು ಏಳು - ಎಲ್ಲವೂ ಕಲೆತು ಮೂವತ್ತೆರಡು ತತ್ವಗಳಿಗೆ ಕ್ಷೇತ್ರವೆಂಬರು. ಆದನ್ನೆಲ್ಲ ಚನ್ನಾಗಿ ಅರಿತು ನಡೆಸುವ ಕ್ಷೇತ್ರಜ್ಞನೆಂದರೆ ಶ್ರೀಹರಿಯು.

ಪ್ರವೃತ್ತಿ ಕರ್ಮ ನಿರತರಾದವರಿಗೆ ಸಂಸಾರದ ಜನನ ಮರಣಗಳು ತಪ್ಪುವುದಿಲ್ಲ. ನಿವೃತ್ತಿ ಕರ್ತದಿಂದ ಮನಶ್ಶುದ್ಧಿಯನ್ನೂ, ಅಂತಹ ಮನಸ್ಸಿನಿಂದ ಶ್ರವಣ ಮನನಗಳನ್ನು ಮಾಡಿ ಅಜ್ಞಾನಾನ್ಯಥಾಜ್ಞಾನರಾಹಿತ್ಯವನ್ನು ಪಡೆದು, ಧ್ಯಾನದಲ್ಲಿ ಶ್ರೀಹರಿಯನ್ನು ಕಂಡ ಜೀವನು ಅಪರೋಕ್ಷ ಜ್ಞಾನಿ ಎನಿಸುವನು. ಅವನನ್ನೇ ಜೀವನ್ಮುಕ್ತನೆಂಬುವರು.

ಜೀವನು ತನ್ನ ಉದ್ಧಾರವನ್ನು ತನ್ನ ಮನಸ್ಸಿನಿಂದಲೇ ಮಾಡಿಕೊಳ್ಳಬೇಕು. ಶಾಸ್ತ್ರ ವಿಧಿನಿಷೇಧಗಳಿಗೆ ಜೀವನೇ ವಿಷಯನಾಗಲಿ, ಈಶನಲ್ಲ. ಆದುದರಿಂದ ಕರ್ತೃತ್ವವಿದೆ. ಆದರೆ ಅದು ಸ್ವತಂತ್ರ ಕರ್ತೃತ್ವವಲ್ಲ. ಸ್ವಾತಂತ್ರ್ಯವು ಹರ್ಯೇಕಾಯತ್ತವಾಗಿ, ಮತ್ತೆಲ್ಲಿಯೂ ಇಲ್ಲ. ಹಾಗೆಂದು ಜೀವನಿಗೆ ಕರ್ತೃತ್ವವಿಲ್ಲವೆನ್ನಲಾಗದು. ಇಚ್ಛಾ, ಜ್ಞಾನಕ್ರಿಯೆಗಳು ಚೇತನ ಧರ್ಮಗಳು ಸ್ವತಂತ್ರನಾದ ಪರಮ ಚೇತನನಲ್ಲಿ (ಹರಿ) ಅವು ಸ್ವಾಯತ್ತವಾಗಿ, ಅಸ್ವತಂತ್ರ ಜೀವರಲ್ಲಿ ಪರಾಯತ್ತವಾಗಿವೆ. ಆದುದರಿಂದ ಸುಜೀವರು ವಿಹಿತ ಕರ್ಮಗಳನ್ನೂ, ವೇದಾಧ್ಯಯನ, ಯಜ್ಞದಾನ ತಪೋ ವ್ರತಗಳನ್ನೂ ಬಿಡದೆ ಮಾಡಿ, ತತ್ಫಲವನ್ನು ಶ್ರೀಹರಿಗರ್ಪಿಸಬೇಕು. ಏನು ಮಾಡಲಿ, ಏನು ಬಿಡಲಿ, ತ್ರಿಕಾಲ ಸಂಧ್ಯಾವಂದನವನ್ನು ಮಾತ್ರ ಬಿಡದೆ ಮಾಡಬೇಕು. ಹಾಗೆ ಮಾಡದವನು ಬ್ರಾಹ್ಮಣ್ಯದಿಂದಲೇ ಪತಿತನಾಗಿ, ಕೆಟ್ಟುಹೋಗುವನು. ಇಂದ್ರಿಯ ನಿಗ್ರಹ, ವಿದ್ಯಾರ್ಜನೆ, ತಪಸ್ಸು, ಕರ್ಮಫಲತ್ಯಾಗ, ಗುರುಸೇವೆ, ಸಚ್ಛಾಸ್ತ್ರಾಭ್ಯಾಸ - ಇವುಗಳನ್ನು ಬಿಟ್ಟು, ವಿಪ್ರನಿಗೆ ಬೇರೆ ಉದ್ಧಾರೋಪಾಯಗಳಿಲ್ಲ.

ಜ್ಞಾನಿಯಾದವನು ವಿದ್ಯಾವಿನಯ ಸಂಪನ್ನ ವಿಪ್ರನಲ್ಲಿಯೂ ಚಂಡಾಲನಲ್ಲಿಯೂ, ಆಕಳು ನಾಯಿಗಳಲ್ಲಿಯೂ, ಆನೆ ಸೊಣಗಳಲ್ಲಿಯೂ ಶ್ರೀಹರಿಯನ್ನು ನೋಡುವನು. ಎಲ್ಲಿದ್ದರೂ ಶ್ರೀಹರಿಗೆ ಭೌತ ದೇಹ ಕೃತವಾದ ಉಚ್ಚತ್ವ ನೀಚತ್ವಗಳಿಲ್ಲ. ಎಲ್ಲೆಲ್ಲಿಯಿದ್ದರೂ ಶ್ರೀಹರಿಯು ಅನಂತ ಕಲ್ಯಾಣಗುಣಪೂರ್ಣನು, ನಿರ್ದೋಷನು, ಸ್ವಸಮನು, ಲಕ್ಷ್ಮೀಸಹಿತನು ಆಗಿರುವನೆಂದು ತಿಳಿವದೇ ಸಮದರ್ಶನವು. ಅಂತು ಸಮನಾಗಿರುವ ಶ್ರೀಶನನ್ನು ತಿಳಿದು, ಅಧಿಷ್ಠಾನತಾರತಮ್ಯವನ್ನರಿತು ಪೂಜಿಸುವವನೇ ಪಂಡಿತನು. ಎಲ್ಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ಶ್ರೀಹರಿಯನ್ನು ತಿಳಿದ ಜ್ಞಾನಿಯು ಎಂದೂ, ಯಾವ ಸುಜೀವರಿಗೂ, ಎಂತಹ ದ್ರೋಹವನ್ನೂ ಬಗೆಯದಿರುವನು.

ಶ್ರೀಹರಿಯು ಸರ್ವೇಂದ್ರಿಯ ನಿಯಾಮಕನು. ಅಂಚಿತ್ಯಾದ್ಭುತ ಮಹಿಮನು. ಅನಂತಬಾಹೂರುಪಾದ ನೇತ್ರ ಶ್ರೋತ್ರಮುಖಾದಿ ಸುಂದರ ದಿವ್ಯ ಶರೀರನು. ಎಲ್ಲ ಇಂದ್ರಿಯಗಳಿಂದ ಎಲ್ಲ ಕಾರ್ಯಗಳನ್ನು ಲೀಲಾಜಾಲವಾಗಿ ಮಾಡುವನು. ಸುಜನೋದ್ಧಾರವೇ ಅವನ ಸೃಷ್ಟಿಯ ಉದ್ದೇಶ. ಸ್ವಪ್ರಯೋಜನವಿಲ್ಲದುದರಿಂದ ಸ್ವಯಂ ಪೂರ್ಣನು, ಬ್ರಹ್ಮಾದಿ ಸರ್ವದೇವೋಪಾಸ್ಯನಾದುದರಿಂದ ಸರ್ವೋತ್ತಮನು, ಭಾರತಾದಿ

ಸಚ್ಛಾಸ್ತ್ರ ಪ್ರಣೀತನಾದುದರಿಂದ ಸರ್ವಜ್ಞನು, ಭಕ್ತಪಾಪಕ್ಷಾಳನ ಸಮರ್ಥನಾದುದರಿಂದ ಕರುಣಾಸಮುದ್ರನು, ಮುಕ್ತಿಪ್ರದನಾದುದರಿಂದ ಅತ್ಯಂತೋಪಕಾರಿಯು ಆದ ಶ್ರೀಹರಿಯನ್ನು ತಿಳಿಯುವ ಜೀವನು ಮುಕ್ತನಾಗುವನು.

ಶುಚಿಕರ್ಮನಾಗಿ, ವಿರಕ್ತನಾಗಿ, ಮೋಕ್ಷವನ್ನು ಬಯಸುವ ಜೀವನು ಮೊದಲು ಕಾಮಾದ್ಯರಿಷಡ್ವರ್ಗವನ್ನು ಜಯಿಸಬೇಕು. ಕಾಮವನ್ನು ಫಲ ಸಂಕಲ್ಪವರ್ಜನದಿಂದಲು, ಕ್ರೋಧವನ್ನು ಶಮ (ಭಗವನ್ನಿಷ್ಠಾಬುದ್ಧಿ) ದಿಂದಲು, ಲೋಭವನ್ನು ದಾನದಿಂದಲು, ಮೋಹವನ್ನು ಶ್ರವಣ ಮನನಗಳಿಂದಲು, ಮದವನ್ನು ಗುರುವೃದ್ಧ ಸೇವೆಯಿಂದಲು, ಮತ್ಸರವನ್ನು ತುಷ್ಟಿಯಿಂದಲು ಗೆಲ್ಲಬೇಕು. ಬುದ್ಧಿ ಬಲದಿಂದ ಆಲಸ್ಯ ನಿದ್ರೆಗಳನ್ನು, ಧೈರ್ಯದಿಂದ ಶಿಶ್ನೋದರ ಲಾಲಸತೆಯನ್ನು, ಕಣ್ಣಿಂದ, ಮಾರ್ಗವನ್ನು, ಮನಸ್ಸಿನಿಂದ ಕಣ್ಣು ಕಿವಿಗಳನ್ನು, ಯಜ್ಞಾದಿಗಳಿಂದ ಮನಸ್ಸನ್ನು, ಅಪ್ರಮಾದದಿಂದ ಭಯವನ್ನು, ಪ್ರಾಜ್ಞ ಸಂಗದಿಂದ ಪಾಪವನ್ನು ಗೆದ್ದು, ವಶದಲ್ಲಿಡಬೇಕು.

ಇಂದ್ರಿಯಗಳನ್ನು ಮಾತ್ರ ಬಿಗಿಹಿಡಿದು, ಮನಸ್ಸನ್ನು ಹರಿಯ ಬಿಟ್ಟವನಲ್ಲಿ, ತೂಬುಗಳುಳ್ಳ ಗಡಿಗೆಯಲ್ಲಿ ನೀರಿನಂತೆ - ಜ್ಞಾನವು ನಿಲ್ಲಲಾರದು. ಆದುದರಿಂದ ಇಂದ್ರಿಯಗಳನ್ನು ಪ್ರತ್ಯಾಹಾರದಿಂದ ಮನಸ್ಸಿನಲ್ಲಿಟ್ಟು, ಮನಸ್ಸನ್ನು ಬುದ್ಧಿ ಸಹಾಯದಿಂದ ನಿಶ್ಚಲವನ್ನಾಗಿಸಿ, ಶ್ರೀಹರಿಯನ್ನು ಧ್ಯಾನಿಸಿದವನಿಗೆ ಜ್ಞಾನಯೋಗವು ಕೈಗೂಡುವುದು. ಜ್ಞಾನವಿಲ್ಲದೆ ಧ್ಯಾನವು ಸಾಧ್ಯವಾಗದು. ಏಕಾಂತದಲ್ಲಿ, ಶುಚಿ ಸ್ಥಲದಲ್ಲಿ, ಕುಶ, ಅಜಿನ, ವಸ್ತ್ರಗಳ ಮೇಲೆ ಆಸೀನನಾಗಿ, ಓಂಕಾರವಾಚ್ಯನಾದ ಶ್ರೀಶನನ್ನು ಧ್ಯಾನಿಸಬೇಕು.

ಶ್ರವಣಮನನ ಧ್ಯಾನಗಳಲ್ಲಿ ಭಕ್ತಿಯು ಅನುಸ್ಯೂತವಾಗಿರಬೇಕು. ಭಕ್ತಿರಹಿತ ಶ್ರವಣಾದಿಗಳಿಂದ ಜ್ಞಾನವು ಹುಟ್ಟುವುದಿಲ್ಲ. ಭಕ್ತಿ ಎಂದರೆ ಶ್ರೀಹರಿಯಲ್ಲಿ ಸರ್ವೋತ್ತಮತ್ವ ಜ್ಞಾನದಿಂದ ಕೂಡಿದ, ತಾನು ತನ್ನದೆಂಬ ಎಲ್ಲ ವಸ್ತುಗಳಲ್ಲಿರುವ ಪ್ರೀತಿಗೆ ಅನಂತ ಗುಣಿತವಾದ, ಅಂತರಾಯಗಳಿಂದ ಕೆಡದ, ಪ್ರೇಮ ಪ್ರವಾಹವೇ ಆಗಿದೆ. ಪ್ರವೃತ್ತಿ ಕರ್ಮರತನಿಗೆ ಫಲಾಪೇಕ್ಷೆ ಇದೆ. ಆದುದರಿಂದ ಭಕ್ತಿಯು ಸರಿಯಾಗಿಲ್ಲ. ಅಂತೆಯೇ ಪಾರದರ್ಶಿಗಳಾದ ಯತಿಗಳೂ, ಪ್ರಯತ್ನಶೀಲರಾದ ಗೃಹಸ್ಥಾದಿ ಸುಜೀವರೂ ಪ್ರವೃತ್ತಿ ಕರ್ಮವನ್ನು ಬಿಟ್ಟು, ನಿವೃತ್ತಿ ಕರ್ಮವನ್ನೇ ಮಾಡುವರು. ನಿವೃತ್ತ ಕರ್ಮರತನಿಗೆ ಕರ್ಮಲೇಪವಿಲ್ಲ, ಮತ್ತೆ ಜನನ ಮರಣಗಳಿಲ್ಲ. ಶ್ರವಣಾದಿಗಳಿಂದ ಅಪರೋಕ್ಷಿಯಾದವನಿಗೆ ಸಂಚಿತಗಾಮಿ ಕರ್ಮಗಳು ನಷ್ಟವಾಗಿ, ಪ್ರಾರಬ್ಧ ಮಾತ್ರ ಉಳಿಯುವುದು. ಅದೂ ಶ್ರೀಹರಿದಯದಿಂದ ಉಪಮರ್ದಿತವಾಗಿ, ಬೇಗ ಮುಗಿಯುವುದು. ಆಗ ಅವನು ಮುಕ್ತನಾಗಿ, ಶ್ರೀಶನ ವೈಕುಂಠಾದಿ ಲೋಕವನ್ನು ಸೇರಿ, ನಿರ್ದುಃಖಿನು, ಸ್ವಯೋಗ್ಯ ಪೂರ್ಣಸುಖಿನು ಆಗಿರುವನು. ಅವನಿಗೆ ಮತ್ತೆ ಜನನ ಮರಣಗಳ ಸಂಸಾರವರ್ತದ ಪತನವಿಲ್ಲ."

## ೧೦. ವರ್ಣಾಶ್ರಮ ಧರ್ಮವರ್ಣನೆ — ತುಲಾಧಾರಕಥಾ

ಶ್ರೀಶುಕನು 'ದೇವ! ಕರ್ಮವನ್ನು ಅವಶ್ಯಮಾಡಬೇಕೆಂದೆ! ಜ್ಞಾನವನ್ನೂ ಸಂಪಾದಿಸಬೇಕೆಂದೆ! ಅವರೆಡನ್ನೂ ಪರಸ್ಪರ ಸಹಾಯವಾಗಿರುವಂತೆ ನಡೆಸುವ ಬಗೆ ಹೇಗೆ?' ಎಂದು ಕೇಳಿದನು.

ಶ್ರೀವ್ಯಾಸನಿಂತು ನುಡಿದನು: 'ಕರ್ಮಜ್ಞಾನಗಳು ಪರಸ್ಪರ ಪೂರಕಗಳು. ಕರ್ಮ ಯೋಗಿಗಳಿಗೆ ಕರ್ಮವೂ ಇದೆ. ಇರುವ ನಾಲ್ಕು ವರ್ಣದವರೂ, ನಾಲ್ಕು ಆಶ್ರಮದವರೂ ಕೂಡ, ವಿಹಿತ ಕರ್ಮವನ್ನು ಮಾಡಿ, ಪರಿಶುದ್ಧ ಮನಸ್ಕರಾಗಬೇಕು. ಆಗ ಶ್ರವಣಾದಿಗಳಿಂದ ಜ್ಞಾನಸಿದ್ಧಿಯಾಗುವುದು. ಜ್ಞಾನದಿಂದ ಮುಕ್ತಿಯೂ ಲಭ್ಯವಾಗುವುದು. ಪರಬ್ರಹ್ಮಲೋಕವನ್ನು ಸೇರಿಸುವ ನಾಲ್ಕು ಶ್ರೇಣಿಗಳಂತಿವೆ ನಾಲ್ಕು ವರ್ಣಗಳು. ಶ್ರೇಣಿಗಳ ಮೆಟ್ಟಿಲುಗಳಿಂತಿವೆ ನಾಲ್ಕು ಆಶ್ರಮಗಳು.

ಬ್ರಹ್ಮಚಾರಿಯು ಎಂಟು ವರ್ಷದವನಿದ್ದಾಗ ಉಪನೀತನಾಗಿ, ವೇದಾಭ್ಯಾಸಕ್ಕಾಗಿ, ಗುರುಕುಲವನ್ನು ಸೇರಬೇಕು. ಹನ್ನೆರಡು ವರ್ಷಕಾಲವಲ್ಲಿದ್ದು, ಗುರುಸೇವೆಯನ್ನು ನಿಷ್ಕಪಟನಾಗಿ ಮಾಡಬೇಕು. ಗುರುಪುತ್ರನನ್ನೂ ಗುರುಗಳಂತೆ ಕಾಣಬೇಕು. ಕೂಡುವಾಗ, ಮಲಗುವಾಗ, ಗುರುಗಳಿಗೆ ಸಮಪ್ರದೇಶದಲ್ಲಿ ಮಲಗಬಾರದು, ಕೂಡಬಾರದು. ದಾಸನಂತೆ ಪರಿಚರ್ಯೆಗೈಯ್ಯಬೇಕು. ದಕ್ಷನಾಗಿರಬೇಕು. ಕರೆದಾಗ ಒದಗಬೇಕು. ಮರೆಯಲ್ಲಿಯೂ ಅನ್ಯಥಾ ಮಾತಾಡಬಾರದು. ಉಂಡಮೇಲೆ, ಉಂಡು ಮಲಗಿದ ಮೇಲೆ ಮಲಗಿ ಏಳುವಾಗ ಮುಂಚಿತವಾಗಿ ಎಚ್ಚರಗೊಂಡಿರಬೇಕು. ಪಾದಸೇವೆ ಸಿಕ್ಕರೆ ಭಾಗ್ಯವೆಂದು ತಿಳಿಯಬೇಕು. ಬಲಪಾದವನ್ನು ಬಲಕೈಯಿಂದಲೇ, ಎಡಪಾದವನ್ನು ಎಡಗೈಯಿಂದಲೇ ಒತ್ತಬೇಕು. ಅಧ್ಯಯನಾರಂಭ ಸಮಾಪ್ತಿಗಳಲ್ಲಿ ನಮಿಸಬೇಕು. ಮಾಡಿದ್ದನ್ನು, ಮಾಡುತ್ತಿರುವುದನ್ನು, ಮಾಡಲು ಉಳ್ಳದ್ದನ್ನು, ನಿವೇದಿಸಿ, ಆಜ್ಞೆಯಂತೆ ಪ್ರವರ್ತಿಸಬೇಕು. ಗುರುನಾರಿಯರಿಂದ ಹೆಚ್ಚು ವ್ಯವಹರಿಸಬಾರದು. ವ್ರತೋಪವಾಸ ವೇದಾಧ್ಯಯನಗಳಲ್ಲಿ ದೀಕ್ಷಿತನಾಗಿ, ಗುರುಪ್ರೀತಿಯನ್ನು ಗಳಿಸಬೇಕು.

ಬ್ರಹ್ಮಚಾರಿಯು ಸಮಾವರ್ತನವನ್ನು ಮಾಡಿಕೊಂಡು, ಗೃಹಸ್ಥನಾಗಬಹುದು. ಅಥವಾ ವಾನಪ್ರಸ್ಥನೋ ಸನ್ಯಾಸಿಯೋ ಆಗಬಹುದು. ಆಯುಸ್ಸಿನ ದ್ವಿತೀಯ ಭಾಗವನ್ನು ಗೃಹಸ್ಥಾಶ್ರಮಿಯಾಗಿ ಕಳೆಯಲಿಚ್ಛಿಸಿದವನು, ಅನುಕೂಲಳಾದ ಸ್ವವರ್ಣದ ಕನ್ಯೆಯನ್ನು ಪತ್ನಿಯಾಗಿ ಸ್ವೀಕರಿಸಬೇಕು. ಅಗ್ನಿಹೋತ್ರವನ್ನು - ಅನುಕೂಲವಿದ್ದರೆ ಇಟ್ಟು ಕಾಪಾಡಬೇಕು. ಉಂಛವೃತ್ತಿಯು ಉತ್ತಮವಾಗಿದೆ. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನಪ್ರತಿಗ್ರಹಗಳೆಂಬ ಆರು ವೃತ್ತಿಗಳು ಗ್ರಹಸ್ಥನಿಗೆ ಉಂಟು; ಯಜನದಾನಾಧ್ಯಯನಗಳೆಂಬ ಮೂರು ಮಾತ್ರ ವಾನಪ್ರಸ್ಥನಿಗೆ; ಸನ್ಯಾಸಿಗೆ ದಾನಾಧ್ಯಯನಗಳೆರಡೇ ಯುಕ್ತವಾಗಿವೆ.

ಗೃಹಸ್ಥನೆ ತನಗಾಗಿ ಅಡಿಗೆ ಮಾಡಿಕೊಳ್ಳಲಾಗದು; ದೇವ, ಭೂತ, ಪಿತೃ,

ಪರಿವಾರಗಳೆಂಬ ಐದು ಭಾಗವಿತ್ತು, ಅನಂತರ ತಾನು ಉಂಡರೆ, ಅವನು ವಿಘಸಾಶಿ ಎನಿಸಿ ಸರ್ವಪಾಪಮುಕ್ತನಾಗುವನು. ಮಂತ್ರದಿಂದಲ್ಲದೆ ಬಂದ ಯಾವ ಆಹಾರವನ್ನೂ ಅಂದರೆ ವೈಶ್ವದೇವ, ದೇವನಿವೇದನ, ಯಜ್ಞ, ಅತಿಥಿ ಪೂಜೆಗಳಿಲ್ಲದ ಅನ್ನವನ್ನು ಉಂಡವನು ಪಾಪವನ್ನೇ ಉಣ್ಣುತ್ತಿರುವನು. ಪೂರ್ವಾಪರ ಸಂಧ್ಯೆಗಳಲ್ಲಿ ಮಲಗಿರಬಾರದು. ಎರಡು ಭೋಜನಗಳ ಮಧ್ಯದಲ್ಲಿ ಮತ್ತೇನನ್ನೂ ತಿನ್ನಬಾರದು. ಋತುವಲ್ಲದಾಗ ಸ್ವರಮಣಿಯಲ್ಲಿ ರಮಿಸಬಾರದು. ಪರದಾರೆಯರನ್ನು ಭಗಿನೀ ಮಾತೃ ಸಮರಂತೆ ಕಾಣಬೇಕು. ಸುಳ್ಳನ್ನು ಹೇಳಬಾರದು. ವೇದಾಧ್ಯಯನಶಾಸ್ತ್ರ ವಿಚಾರಗಳನ್ನು ಬಿಡದೆ ಮಾಡುತ್ತಿರಬೇಕು. ಮನೆಗೆ ಬಂದವರಿಗೆ ಅನ್ನಾದರಶಯನ ಮಧುರ ವಚನಗಳಿಂದ ಸತ್ಕಾರವನ್ನು ಕೊಡಬೇಕು. ವಿದ್ವಾಂಸರನ್ನು ಗೌರವಿಸಿ, ಅವರಿಂದ ಬ್ರಹ್ಮ ಜ್ಞಾನವನ್ನು ಸಂಪಾದಿಸಬೇಕು. ಅನ್ನವನ್ನು ಕೊಡುವಾಗ ಪಾತ್ರಾಪಾತ್ರ ವಿಚಾರವಿಲ್ಲ. ದ್ರವ್ಯಕನಕರತ್ನ ಭೂಗೋತಿಲಾದಿಗಳನ್ನೀವಾಗ ಅಪಾತ್ರರಿಗೀಯಬಾರದು. ಪಿತಾ, ಮಾತಾ, ಮಾತುಲ, ಶ್ವಸುರ, ಅತ್ತೆ, ಅಣ್ಣ, ಅತ್ತಿಗೆ, ಭಾವ, ಅಕ್ಕ ಇವರೆಲ್ಲರೂ ಕ್ರಮವಾಗಿ ಪೂಜ್ಯರು. ಆಚಾರ್ಯರು ಸರ್ವರಿಗೂ ಮಿಗಿಲಾಗಿ ಪೂಜ್ಯರೆನಿಸುವರು. ಅವರಿಗೂ ಯತಿವರರು ಪೂಜ್ಯರು. ಅಳಿಯ, ಮಗಳು, ಮಗ, ಸೊಸೆ, ತಂಗಿ, ನಾದಿನಿ, ತಮ್ಮ ಇತ್ಯಾದಿಗಳು ಯಥಾಯೋಗ್ಯವಾಗಿ ಆದರಣೀಯರು. ಅವರಿಗೀಯದೆ ಉಣ್ಣಬಾರದು. ಸಂವಿಭಾಗವು ಸ್ವರ್ಗ ಸಂಪಾದಕವಾಗಿದೆ.

ಆಚಾರ್ಯನು ಪರಬ್ರಹ್ಮನ ಮೂರ್ತಿಯು ; ತಂದೆಯು ಪ್ರಜಾಪತಿಯ ಮೂರ್ತಿಯು ; ಅತಿಥಿಯು ಅಗ್ನಿಯ ಮೂರ್ತಿಯು ; ತಾಯಿಯು ಪೃಥ್ವಿಯ ಮೂರ್ತಿಯು; ಭಗಿನಿಯು ದಯಾ ಮೂರ್ತಿಯು; ಆದುದರಿಂದ ಅವರನ್ನು ಆದರದಿಂದ ನೋಡಬೇಕು. ಗೃಹಸ್ಥನು ಪತ್ನೀಪುತ್ರ ಪರಿವಾರವನ್ನು ದೇವನಿತ್ತುದೆಂದು ತಿಳಿದು ಸ್ವಾಮಿತ್ವ ಭ್ರಾಂತಿಯನ್ನೂ, ಯಜ್ಞದಾನ ತಪೋಶರೀರಯಾತ್ರಾದಿಗಳನ್ನು ಶ್ರೀಹರಿಯು ತತ್ವದೇವರಿಂದ ಮಾಡಿಸುವನೆಂದು ತಿಳಿದು, ಕರ್ತೃತ್ವಭ್ರಾಂತಿಯನ್ನೂ ಬಿಡಬೇಕು. ಶ್ರೀಶನ ಮಹಿಮೆಯನ್ನು ಶ್ರೀಹರಿಗುರು ಭಕ್ತರಾದ ಗುರುಗಳಿಂದ ಕೇಳಿ, ಸಚ್ಛಾಸ್ತ್ರವನ್ನೋದಿ ತಿಳಿಯಬೇಕು. ಅಂತಹವನು ಶ್ರೀಹರಿಯ ಜ್ಞಾನವನ್ನು ಪೊಂದಿ, ಕೊನೆಗೆ ಶ್ರೀಮುಖ್ಯಪ್ರಾಣನಿಂದ ಶ್ರೀಹರಿಲೋಕದಲ್ಲಿ ಸೇರಿಸಲ್ಪಟ್ಟು, ಮುಕ್ತನಾಗುವನು.

ಇನ್ನು ವಾನಪ್ರಸ್ಥವನ್ನು ವರ್ಣಿಸುವೆನು ಕೇಳು! ಮಗನಿಗೆ ಮಗನಾದುದನ್ನು ಕಂಡು ಗೃಹಸ್ಥನು ವಾನಪ್ರಸ್ಥನಾಗಬೇಕು. ಪತ್ನಿಯನ್ನು ಪುತ್ರರಿಗೊಪ್ಪಿಸಿ ಅಥವಾ ಕೂಡಿ, ವನದಲ್ಲಿ ವಾಸಿಸಬೇಕು. ಅಲ್ಲಿಯು ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶು, ಸೋಮ (ಅಗ್ನಿ ಹೋತ್ರ) ಎಂಬ ಪಂಚಯಜ್ಞಗಳನ್ನು ಮಾಡಬೇಕು. ನೀವಾರ, ಕಂದ, ಪರ್ಣಗಳಿಂದ ಮಿತಾಹಾರನಾಗಿ ಜೀವಿಸಬೇಕು. ಅತಿಥಿ ಪೂಜೆಗಾಗಿ ಧಾನ್ಯಾದಿ ಸಂಗ್ರಹವನ್ನು ಮಾಡಿರಬಹುದು. ಶಾಂತನಾಗಿ, ದಾಂತನಾಗಿ, ಪರಬ್ರಹ್ಮವಿಚಾರವನ್ನು ಮಾಡಬೇಕು. ಹನ್ನೆರಡು ವರ್ಷವಿಂತು ವಸಿಸಿ, ದಾನವನ್ನು ಗ್ರಹಿಸದೆ ಇರಬೇಕು. ಪುತ್ರಾದಿಗಳಿತ್ತರೆ

ಸ್ವೀಕರಿಸಬಹುದು. ಅತ್ಯಶಕ್ತನಾದರೆ ದಾವಾಗ್ನಿಯಲ್ಲಿ ಶರೀರವನ್ನು ಬಿಡಬಹುದು. ಅಗಸ್ತ್ಯ, ಮಧುಚ್ಛಂದ, ಅಘಮರ್ಷಣ, ವೈಖಾನಸ, ವಾಲಖಿಲ್ಯರಾದಿಯಾದ ಮಹಾತ್ಮರು ವಾನಪ್ರಸ್ಥ ಧರ್ಮಾಚರಣೆಯನ್ನು ಮಾಡಿ, ಮುಕ್ತರಾದರು.

ವಿರಕ್ತನಾದವನು ಸನ್ಯಾಸಿಯೂ ಆಗಬಹುದು. ಸರ್ವಭೂತಗಳಿಗೆ ಅಭಯ ವನ್ನಿತ್ತು, ಐಹಿಕ ಬಂಧಗಳನ್ನು ಕಡಿದುಕೊಂಡು, ಪರಿವ್ರಾಜಕನಾದವನು ಏಕಾಕಿಯಾಗಿ ಸಂಚರಿಸಬೇಕು. ಮನೆಯಲ್ಲಿ ವಸಿಸಬಾರದು. ಅನ್ನಕ್ಕಾಗಿ ಮಾತ್ರ ಗ್ರಾಮವನ್ನು ಪ್ರವೇಶಿಸಬೇಕು. ನಾಳೆಗೇನೆಂಬ ಚಿಂತೆ ಇರಬಾರದು. ಒಪ್ಪೊತ್ತು ಮಾತ್ರ ಮಿತವಾಗಿ ಉಣ್ಣಬೇಕು. ನಿಷಿದ್ಧವನ್ನು ನೋಡಬಾರದು, ಆಡಬಾರದು. ವಿಪ್ರಾದಿ ಸುಜನರಿಗೆ ಅಹಿತವಾಗಿ ನುಡಿಯಬಾರದು. ಪರನಿಂದೆಗೆ ಸುಮ್ಮನಿರಬೇಕು. ಏನು ಸಿಕ್ಕರೆ ಅದನ್ನೇ ಉಂಡು, ಏನು ದೊರೆತರೆ ಅದನ್ನೇ ಉಟ್ಟು, ಎಲ್ಲಾದರೆ ಅಲ್ಲೇ ಮಲಗಿ, ಸರ್ಪದಿಂದಲೆಂಬಂತೆ ಜನರ ಗುಂಪಿಗೆ ಹೆದರಿ, ಜೀವನ ಮರಣಗಳು ಶ್ರೀಹರ್ಯಧೀನವೆಂದರಿತ ಸನ್ಯಾಸಿಯು ಮೋಕ್ಷವನ್ನು ಹೊಂದುವನು. ಅಹಿಂಸಾ, ಸತ್ಯ, ಧೃತಿ, ದಮ, ಶಮಗಳನ್ನು ಅನುಷ್ಠಿಸುವ ಯತಿಯು ಮುಕ್ತನಾಗುವನು. ಜೀವಿತವನ್ನು ಧರ್ಮಕ್ಕಾಗಿಯು, ಧರ್ಮವನ್ನು ಶ್ರೀಹರಿ ಪ್ರೀತಿಗಾಗಿಯು ಮಾಡುವ ಮಹಾನುಭಾವನು ಮತ್ತೆ ಜನನ ಮರಣಗಳ ಸುಳಿಯಲ್ಲಿ ಬೀಳನು. ಪ್ರಾದೇಶ ಮಾತ್ರ ಹೃದಯ ಕುಂಡದಲ್ಲಿ ಬೆಳಗುವ ಪರಮಾತ್ಮಾಗ್ನಿಹೋತ್ರದ ಪ್ರೀತಿಗಾಗಿ, ಅನ್ನಾದ್ಯಾಹುತಿಯನ್ನೀವ ಜ್ಞಾನಿಯು ಆತ್ಮಯಾಜಿ ಎನಿಸುವನು. ಅವನು ಭೂತಗಳಿಗೆ ಭಯವನ್ನೀಯದೆ, ಭೂತಗಳಿಂದ ತಾನೂ ಭಯಪಡದೆ ಅಹಿಂಸಾರತನು, ಹರಿಗುರು ಪ್ರಿಯನು ಆಗಿರುವನು.

ಅಂತಹ ಯೋಗಿಯು ಶ್ರೀಹರಿಯೇ ಸರ್ವೋತ್ತಮನೆಂದರಿತು, ಇತರ ದೇವಾದಿಗಳನ್ನು ತಾರತಮ್ಯಕ್ಕೆ ಅನುಸರಿಸಿ ಭಜಿಸುವನು. ಇಂದ್ರಿಯ ದೇವತೆಗಳಿಗೂ, ಅರ್ಧ ದೇವತೆಗಳಿಗೂ, ಅವರಿಗೂ ಮನೋಭಿಮಾನಿ ದೇವರು, ಅವರಕಿಂತಲು ಬುದ್ಧ್ಯಭಿಮಾನಿಯರು, ಅವರಿಗೂ ಮಹತತ್ತ್ವನಿಯಾಮಕರು, ಅವರಿಗೂ ಅವ್ಯಕ್ತ ತತ್ವಮಾನಿನಿ, ಆಕೆಗೂ ಶ್ರೀಹರಿಯು ಅಧಿಕನೆಂದು ಅವರು ಉಪಾಸಿಸುವರು. ಅಂತಹ ಜಿತೇಂದ್ರಿಯರು ಶುದ್ಧ ಮನಸ್ಕರಾಗಿ, ಶ್ರವಣ ಮನನಗಳಿಂದ ಸಂಶಯ ವಿಪರ್ಯಯಗಳನ್ನು ಕಳೆದುಕೊಂಡು, ಧ್ಯಾನದಿಂದ ಜ್ಞಾನವನ್ನು ಸಂಪಾದಿಸಿ, ಶ್ರೀಹರಿ ಪ್ರಸಾದ ಪಾತ್ರರಾಗುವರು. ಶ್ರೀಶಪ್ರಸಾದವೇ ಮೋಕ್ಷ ಕಾರಣವಾಗಿದೆ.

ಭೂತಗಳಿಗೆ ವಿಷಯ, ಕರಣ – ತದುಭಯಾಶ್ರಗಳನ್ನು ತಿಳಿಸುವೆನು. ಆಕಾಶಕ್ಕೆ ಶಬ್ದ ವಿಷಯ; ಶ್ರೋತ್ರಕರಣ – ದೇಹಚ್ಛಿದ್ರಗಳು ಆಶ್ರಯ; ವಾಯುವಿಗೆ ಸ್ಪರ್ಶ ವಿಷಯ; ತ್ವಗಿಂದ್ರಿಯವೇ ಕರಣ; ಪ್ರಾಣಾದಿಗಳು ಆಶ್ರಯ, ಜ್ಯೋತಿಸ್ಸಿಗೆ ರೂಪವೇ ವಿಷಯ; ಚಕ್ಷುಸ್ಸುಕರಣ; ವಿಪಾಕ (ಜಾಠರ)ವೇ ಆಶ್ರಯ ! ನೀರಿಗೆ ರಸವೇ ವಿಷಯ; ರಸನವೇ ಕರಣ; ಸ್ನೇಹವೇ ಆಶ್ರಯ; ಭೂಮಿಗೆ ಗಂಧವೇ ವಿಷಯ; ಘ್ರಾಣವೇ ಕರಣ ; ಶರೀರವೇ ಆಶ್ರಯ ; ಮನಸ್ಸು ಸಂಶಯಾತ್ಮಕವಾಗಿದೆ. ಬುದ್ಧಿಯು

ನಿಶ್ಚಯಾತ್ಮಕವಾಗಿದೆ. ಇವೆಲ್ಲದರಿಂದ ಅನುಭವವನ್ನು ಹೊಂದುವ ಜೀವನು ಪರಾಧೀನನಾಗಿ, ಕ್ಷೇತ್ರಜ್ಞನಾದ ಶ್ರೀಹರಿ ವಶನಾಗಿರುವನು. ಸತ್ವಗುಣವು ಜ್ಞಾನಪ್ರಕಾಶ ಶಾಂತಿಗಳನ್ನೂ; ರಜೋಗುಣವು ಕಾಮ, ಸಂತಾಪ, ದರ್ಪಗಳನ್ನೂ; ತಮೋಗುಣವು ಮೋಹ, ಕ್ರೋಧ, ಹಿಂಸೆಗಳನ್ನೂ ಪುಟ್ಟಿಸುವವು. ಪ್ರಕೃತಿಯು ತ್ರಿಗುಣಾತ್ಮಕವಾಗಿರುವಂತೆ, ಜೀವರು ತ್ರಿವಿಧ ಸ್ವಭಾವರಾಗಿರುವರು. ಸಾತ್ವಿಕರು ಮಾತ್ರ ಪರಮಾತ್ಮನ ಜ್ಞಾನವನ್ನು ಹೊಂದಿ, ಆನಂದರೂಪ ಮುಕ್ತಿಯನ್ನು ಹೊಂದುವರು. ರಾಜಸರು ನಿತ್ಯ ಸಂಸಾರಿಗಳಾಗಿ, ಸುಖ ದುಃಖಗಳನ್ನು ಹೊಂದುತ್ತಿರುವರು. ತಾಮಸರು ಶ್ರೀಹರಿಗುರು ದ್ವೇಷಿಗಳಾಗಿ ದುಃಖರೂಪವಾದ ಮೋಕ್ಷವನ್ನು (ಅಂಧಂತಮ) ಪೊಂದುವರು. ರಾಜಸವಾದ ಇಂದ್ರಿಯಗಳಿಂದ ಶ್ರೀಹರಿಯ ಜ್ಞಾನವಾಗದು. ಅವು ವಿಷಯಗಳತ್ತ ಧಾವಿಸುವವು. ತಾಮಸವಾದ ಪಂಚ ಭೂತಗಳು ಶರೀರ ರೂಪದಿಂದ ಜೀವನನ್ನು ಬಂಧಿಸುವವು. ಸಾತ್ವಿಕವಾದ ಮನಸ್ಸು ಶ್ರೀರುದ್ರದೇವನ ದಯದಿಂದ ವೈರಾಗ್ಯಭರಿತವಾಗಿ, ಶ್ರೀಪ್ರಾಣದೇವನ ಅನುಗ್ರಹದಿಂದ ಜ್ಞಾನಭಕ್ತಿ ಭರಿತವಾಗಿ, ಶ್ರೀಹರಿ ದಯದಿಂದ ಮೋಕ್ಷವನ್ನು ಕೊಡಿಸುವುದು.

ಶ್ರೀಹರಿಯು ಊರ್ಣನಾಭಿಯಂತೆ ತನ್ನಿಂದ ಭಿನ್ನವಾಗಿ, ತನ್ನಲ್ಲಿದ್ದ ಜಗವನ್ನು ಹೊರಹಾಕಿ, ಮತ್ತೆ ನುಂಗುವನು. ಆತನು ಪೃಥಿವಿಯು ಬೀಜಗಳನ್ನಂತೆ ತತ್ತದ್ಯೋಗ್ಯ ಗುಣಪೋಷಕನಾಗಿ ಜೀವರನ್ನು ಸೃಜಿಸುವನು. ಜೀವಚ್ಛರೀರದಿಂದ ಕೂದಲು ಬರುವಂತೆ, ಶ್ರೀಶನು ಅನಾಯಾಸವಾಗಿ ಸೃಜಿಸುವನು. ಇಂತು ಭೂತಭಾವನನಾದ ಶ್ರೀಹರಿಯ ಅದ್ಭುತ ಮಹಿಮೆಯನ್ನು ಭಕ್ತಿಯಿಂದ ಕೇಳಿ, ಮನನ ಮಾಡಿ, ಧ್ಯಾನಿಸಿದವನು ಅಪರೋಕ್ಷ ಜ್ಞಾನವನ್ನು ಹೊಂದುವನು. ಸಾಂಸಾರಿಕ ನಾನಾ ಚಿಂತೆಗಳನ್ನು ಬಿಟ್ಟು, ಮನಸ್ಸಿನಿಂದ ಶ್ರೀಹರಿಯನ್ನು ಧ್ಯಾನಿಸಿ, ಶ್ರೀಶಗುಣಚಿಂತನಾಮೃತ ಪಾನಮತ್ತಚಿತ್ತನಾದವನು ಆತ್ಮತೃಪ್ತನೆನಿಸುವನು. ಮುಂಜಿ ಹುಲ್ಲಿನ ಹೊದರಲ್ಲಡಗಿದ್ದ ಇಷೀಕಾತೂಲದಂತೆ - ಶ್ರೀಹರಿಯು ಜೀವನಲ್ಲಿ ಅಂತರ್ಯಾಮಿಯಾಗಿದ್ದೂ ತದ್ಭಿನ್ನನಾಗಿರುವನೆಂದು ಅವನು ತಿಳಿವನು. ಆವನು ಸರ್ವತಃ ಸ್ರೋತವು, ಲೋಕ ಪ್ರವಾಹಿನಿಯು, ಇಂದ್ರಿಯ ಮಕರವು, ಮನೋನುಕೂಲವು, ಲೋಭ ಮೋಹ ತೃಣಚ್ಛನ್ನವು, ಕಾಮ ಕ್ರೋಧ ಸರ್ಪಾಭೀಲವು, ಯೋನಿಪಾತಾಲಗಭೀರವು, ನರಕಸಾಗರಗಾಮಿಯು, ಜಿಹ್ವಾವರ್ತವು ಆದ ಸಂಸಾರ ನದಿಯನ್ನು ದಾಟಿ, ಪುನರಾವೃತ್ತಿರಹಿತವಾದ ಮೋಕ್ಷವನ್ನು ಪೊಂದುವನು.

ಜ್ಞಾನಿ ಎಂದರೆ ವೇದಗಳನ್ನೋದಿದವನಲ್ಲ ; ವೇದದಲ್ಲಿ ಪ್ರತಿಪಾದಿತನಾದ ಶ್ರೀಹರಿಯನ್ನು ಅರಿತವನು ; ಯಜ್ಞ ಮಾಡಿದವನಲ್ಲ, ಯಜ್ಞ ಫಲವನ್ನು ಶ್ರೀಹರಿಗಿತ್ತವನು ಸೋಮಾಯಾಜಿಯು. ಸರ್ವಭೂತಗಳಿಗೆ ದ್ರೋಹ ಬಗೆಯದವನು ಮಾತ್ರವಲ್ಲ, ತತ್ತದಂತರ್ಯಾಮಿಯಾದ ಶ್ರೀಶನನ್ನರಿತು, ಅಧಿಷ್ಠಾನಕ್ಕೆ ತಕ್ಕಂತೆ ನಡೆದುಕೊಳ್ಳುವವನು ಅಹಿಂಸಾವ್ರತನು. ಉಪವಾಸವಿದ್ದವನು ತಪಸ್ವಿಯಲ್ಲ, ರಸಾದಿ ದುಷ್ಟಾಭಿಲಾಷೆಯನ್ನು

ಬಿಟ್ಟವನು ಮತ್ತು ಪರಬ್ರಹ್ಮವಿಚಾರವನ್ನು ಬಿಡದೆ ಮಾಡುವವನೇ ತಪಸ್ವಿಯು ಸಮುದ್ರದಂತೆ, ಕಾಮಿತಗಳನ್ನು, ಬೇಡದೆ, ಬಂದರೆ ಉಬ್ಬದೇ ಬಾರದಿದ್ದರೆ ತಗ್ಗದೆ ತನ್ನ ಹೃದಯದಲ್ಲಿ ಶ್ರೀಶನನ್ನಿಟ್ಟು, ಪ್ರಶಾಂತ ಗಂಭೀರನಾದವನೆ ಅಪರೋಕ್ಷ ಜ್ಞಾನಿಯು. ಅವನಿಗೆ ಊಟವಿಲ್ಲದೆಯೂ ತೃಪ್ತಿಯಾಗುವುದು; ಧನವಿಲ್ಲದಿದ್ದರೂ ಸಂತೋಷವಾಗುತ್ತಿರುವುದು; ಶ್ರೀಶನ ಅಪರೋಕ್ಷ ಜ್ಞಾನ ನಿಧಿಯು ಸಿಕ್ಕಾಗ, ಮಿಕ್ಕ ಸಾಂಸಾರಿಕ ಸುಖಗಳೆಲ್ಲವೂ ಅವನಿಗೆ ತೃಣದಂತಾಗುವುದು.

ಶ್ರೀಹರಿ ಭಕ್ತನು ಕಾಮ ದ್ರುಮದ ನೆರಳನ್ನು ಆಶ್ರಯಿಸನು. ಮೋಹದಿಂದ ಹುಟ್ಟಿ, ಕ್ರೋಧವೆಂಬ ಬುಡವು ಬಲಿತು, ಅಜ್ಞಾನವೆಂಬ ನೀರಿನಿಂದ ರಸವತ್ತಾಗಿ ಅಸೂಯೆ ಎಂಬ ಚಿಗುರಿಟ್ಟು, ಭಯಾಂಕುರವು, ಶೋಕ ಶಾಖವು, ವಿಷಫಲವು ಆದ ಕಾಮವೃಕ್ಷವನ್ನು ಆಶ್ರಯಿಸಿದವನು ಶ್ರೀಹರಿ ಗುರು ವಿಮುಖನಾಗುವನು. ಅವನು ಮತ್ತೆ ಮತ್ತೆ ಮೃತ್ಯುವದನ ಗಹ್ವರವನ್ನು ಹೋಗುತ್ತಿರುವನು.

ಹಿಂದೆ ಕೃತಯುಗದಲ್ಲಿ ಅಕಂಪನನೆಂಬ ರಾಜನಿದ್ದನು. ಅವನ ಪುತ್ರ ಹರಿ, ನಾಮಕನು. ಅವನು ರಣನಿಹತನಾಗಲು, ಅಕಂಪನನು ಶೋಕಕಂಪಿತನಾದನು. ಅವನಲ್ಲಿಗೆ ನಾರದನು ಯದೃಚ್ಛೆಯಿಂದ ಬಂದನು. ಪುತ್ರಶೋಕಾತುರನಾದ ಅಕಂಪನನಲ್ಲಿ ದಯೆಗೊಂಡು ನಾರದನು ಅವನ ಶೋಕವನ್ನು ಕಳೆಯಲಿಚ್ಛಿಸಿ, ಮೃತ್ಯು ಚರಿತವನ್ನು ಅವನಿಗೆ ನಿರೂಪಿಸಿದನು:

ಪ್ರಜಾಪತಿಯು ಪ್ರಜರನ್ನು ಸೃಜಿಸಿದನು; ಆದರೆ ಅವರ ಮೃತ್ಯುವನ್ನು ಸೃಜಿಸಿರಲಿಲ್ಲ. ಪ್ರಜರು ಅತೀವ ವೃದ್ಧರಾಗುತ್ತಾ ಬೆಳೆದರು. ಭೂಭಾರವು ಹೆಚ್ಚಾಯಿತು. ಅವರ ಸಂಹಾರವನ್ನು ಸಾಧಿಸದಿದ್ದರೆ, ಜಗವು ಉಸಿರಾಡದಂತೆ ನಿಬಿಡವಾಗಿ, ಸರ್ವ ನಾಶವಾದೀತೆಂದು ಮನಗಂಡು ಬ್ರಹ್ಮದೇವನು ತನ್ನ ಭ್ರುಕುಟಿಯಿಂದ ರೋಷಾಗ್ನಿಯನ್ನು ಪುಟ್ಟಿಸಿದನು. ಅದು ದಶ ದಿಕ್ಕುಗಳಲ್ಲಿಯೂ ಹರಡಿ ಚರಾಚರ ಜಗವನ್ನು ಸುಡತೊಡಗಿತು. ಆಗ ರುದ್ರದೇವನು ಪ್ರಜಾಹಿತಕಾಯನಾಗಿ, ತಂದೆಯಾದ ಬ್ರಹ್ಮದೇವನಿಗೆ ಶರಣಾಗಿ, ಪ್ರಜರನ್ನು ಕೋಪಾಗ್ನಿದಗ್ಧರಾಗದಂತೆ ಉಳಿಸೆಂದು ಬೇಡಿದನು; ಜೀವರು ಸತ್ತವರು ಮತ್ತೆ ಹುಟ್ಟುವಂತಾಗಲಿ ಎಂದೂ ವರವನ್ನು ಬೇಡಿದನು.

ಆಗ ಲೋಕಭಾವನನಾದ ಪರಮೇಷ್ಠಿಯು ಕ್ರೋಧಾಗ್ನಿಯನ್ನು ಉಪಸಂಹರಿಸಿ, ಅದರಿಂದ ಮೃತ್ಯುದೇವಿಯನ್ನು ಸೃಜಿಸಿದನು. ರಕ್ತಾಂಬರ ಧರೆಯು, ಕೃಷ್ಣ ವಿಶಾಲನಯನೆಯು, ದಿವ್ಯ ಕುಂಡಲಾದ್ಯಾಭರಣ ಭೂಷಿತೆಯು ಆದ ಮೃತ್ಯುದೇವಿಯು ಬ್ರಹ್ಮದೇವನ ಇಂದ್ರಿಯಗಳಿಂದ ಹೊರಬಂದು, ಆತನ ದಕ್ಷಿಣ ದಿಕ್ಕನ್ನು ಆಶ್ರಯಿಸಿ ನಿಂತಳು. 'ಮೃತ್ಯೋ!' ಎಂದಾಕೆಯನ್ನು ಕರೆದು, ಬ್ರಹ್ಮದೇವನು 'ಕೊಲ್ಲು ಪ್ರಜರನ್ನು!' ಎಂದು ಆಜ್ಞಾಪಿಸಿದನು. ಅಂತಹ ಹಿಂಸಾಕಾರ್ಯವನ್ನು ಮಾಡಲಾರದೆ, ಮೃತ್ಯುದೇವಿಯು ಧೇನುಕಾಶ್ರಮದಲ್ಲಿ ಸೇರಿ, ತಪಸ್ಸು ಮಾಡಿದಳು. ಹತ್ತು ಪದ್ಮಗಳ ಕಾಲ ತಪವನ್ನಾಚರಿಸಿದರೂ, ಆಕೆಗೆ ಬೇಡವಾಗಿದ್ದ ಸಂಹಾರ ಕಾರ್ಯವು ಕರ್ತವ್ಯ ಧರ್ಮವೇ ಆಯಿತು. 'ನಿನಗೆ ಲೋಕ

ಹಿತವನ್ನು ಉಪಲಕ್ಷಿಸಿ ಆಜ್ಞಾಪಿಸುತ್ತಿರುವೆನು. ಭೂಭಾರವನ್ನು ಇಳುಹಲು ಸಂಹಾರವಲ್ಲದೆ ಮತ್ತೊಂದುಪಾಯವಿಲ್ಲ. ಸತ್ತವರು ಬೇರೆ ಶರೀರಗಳಿಂದ ಮತ್ತೆ ಹುಟ್ಟುವುದರಿಂದ, ಜೀವರಿಗೆ ನೂತನ ದೇಹ ಪ್ರಾಪ್ತಿರೂಪ ಲಾಭವೇ ಆಗುವುದು. ಮತ್ತು ವೃದ್ಧ ಶರೀರದಿಂದ ಆಗದಿದ್ದ ಅವರ ಸಾಧನವು ಮುಂದೆ ಸಾಗುವುದು. ಜನರು ರೋಗಾದಿಗಳಿಂದ ಸತ್ತರೆಂದು ತಿಳಿವರಾಗಲಿ, ನಿನ್ನನ್ನು ಹಂತಕಳೆಂದು ನಿಂದಿಸದಿರುವರು. ಆದುದರಿಂದ ಸಂಹಾರ ಕಾರ್ಯವನ್ನು ನೀನು ಮಾಡಲೇಬೇಕು. ಇದು ಶ್ರೀಹರಿ ಸೇವೆ! ಶ್ರೀ ವಾಯುದೇವನು ಕೂಡ ಆಯುವು ಮುಗಿವವರೆಗೂ ಜೀವ ಶರೀರಗಳಲ್ಲಿ ಚೇಷ್ಟಕನಾಗಿದ್ದು, ಮೃತ್ಯುವು ಶರೀರವನ್ನು ಕೊಂದಾಗ, ಜೀವನನ್ನು ಹೊರತೆಗೆದು ಕೊಂಡು ಹೋಗುವನು. ಶ್ರೀಶೇಚ್ಛೆಯಂತೆ ಜೀವರಿಗೆ ಶರೀರಯೋಗ ವಿಯೋಗ ಗಳನ್ನೀವ ಮುಖ್ಯಪ್ರಾಣನು ದೇವೋತ್ತಮನೆಂದು ತಿಳಿ! ಆತನು ಸರ್ವ ಪ್ರಾಣಿಗಳಿಗೆ ಪ್ರಾಣ ಭೂತನಾಗಿರುವನು. ಆತನು ಬಿಟ್ಟೊಡನೆ ಶರೀರವನ್ನು ಪೆಣನೆಂದು ಕರೆವರು - ಆದುದರಿಂದ ನೀನು ಕೂಡ ಶ್ರೀಶಸೇವೆ ಎಂದು ತಿಳಿದು ಜೀವ ಶರೀರಗಳನ್ನು ಸಂಹರಿಸು! ನಿನಗೆ ಪಾಪ ಲೇಪವಾಗದಂತೆ ವರವಿತ್ತಿರುವೆನು.

ಇಂತು ನುಡಿದ ಬ್ರಹ್ಮದೇವನ ಮಾತಿನಂತೆ ಮೃತ್ಯುದೇವಿಯು ಭೂತಜಾತವನ್ನು ಸಂಹರಿಸುತ್ತಾ ಸಂಚರಿಸುತ್ತಿರುವಳು, ಆದುದರಿಂದ ಅಕಂಪನ! ದೈವ ಸಂಕಲ್ಪದಿಂದ ಆಯುವು ಮುಗಿದು, ಹೋದ ನಿನ್ನ ಪುತ್ರನಿಗಾಗಿ ರೋದಿಸಬೇಡ! ಎಂದು ನಾರದನು ಪೇಳಿದನು.

ಪುತ್ರ! ಮೃತ್ಯುವಿನ ಕೈಗೆ ಸಿಗದಂತೆ ಇರಲು ಶ್ರೀಹರಿದಯವನ್ನು ಸಂಪಾದಿಸಿ, ಮುಕ್ತನಾಗುವುದೊಂದೇ ದಾರಿ. ಸದಾಚಾರ, ಸ್ಮೃತಿ, (ಸಂಪ್ರಾದಾಯ) ವೇದಗಳು ಇವು ಮೂರರಿಂದ ಧರ್ಮವನ್ನು ತಿಳಿ ! ಪರರ ಸೊತ್ತನ್ನು ಕದಿಯಬಾರದು . ಸತ್ಯವನ್ನು ನುಡಿಯಬೇಕು. ಕೆಟ್ಟವರ ಸಂಗ ಬಿಡು! ದಾನ ಮಾಡು! ಶ್ರೀಹರಿ ಚರಣಾರವಿಂದದಲ್ಲಿ ಚಿತ್ತವನ್ನಿಡು ! ನಿನಗೆ ಅಹಿತವೆಂದೆನಿಸಿದುದನ್ನು ಪರರಿಗೆ ಬಗೆಯಬೇಡ ! ಜನ್ಮಮೃತ್ಯುಜರಾವ್ಯಾಧಿ ದುಃಖ ದೋಷಾನುದರ್ಶನದಿಂದ ವಿರಕ್ತನಾಗು!

ಹಿಂದೆ ಜಾಜಲಿ ಎಂಬ ಬ್ರಾಹ್ಮಣನಿದ್ದನು. ಅವನು ಸಾಗರ ತೀರದಲ್ಲಿ ನಿಂತು ಕಠಿನತಪವನ್ನು ಮಾಡತೊಡಗಿದನು. ಸಾಯಂ ಪ್ರಾತಃ ಸ್ನಾನ, ಅಗ್ನಿ ಪರಿಚರಣ, ವೇದಾಧ್ಯಯನ, ಶ್ರೀಹರಿ ಧ್ಯಾನಗಳಲ್ಲಿ ನಿರತನಾಗಿ, ನಿರಹಂಕಾರಿಯೂ ಆಗಿದ್ದನು. ಮಳೆಯಲ್ಲಿ ತೊಯ್ದು, ಬಿಸಿಲಲ್ಲಿ ಸುಟ್ಟು, ಗಾಳಿಯಲ್ಲಿ ಒಣಗಿ, ನೆಲದಲ್ಲಿ ಮಲಗಿ, ನದಿಯಲ್ಲಿ ಕುಡಿದು, ವನದಲ್ಲಿ ಕಂದ ಮೂಲ ಫಲಗಳನ್ನು ತಿಂದು ಜಾಜಲಿಯು ತೀವ್ರ ತಪವನ್ನು ಮಾಡಿದನು.

ಒಂದು ಸಲ ಜಾಜಲಿಯು ತಪೋನಿರತನಾಗಿ ಬಲು ದಿನಗಳವರೆವಿಗೂ ಕದಲದೆ ನಿಂತಿದ್ದನು. ಅವನ ಜಟೆಯಲ್ಲಿ ಗಿಡವೆಂದು ಭ್ರಮಿಸಿದ ಕುಲಿಂಗ ಮಿಥುನವು ಗೂಡನ್ನು ಕಟ್ಟಿಕೊಂಡಿತು. ಶರತ್ಕಾಲವು ಬಂತು. ಪ್ರಾಜಾಪತ್ಯವಿಧಾನದಿಂದ ಕುಲಿಂಗ ಮಿಥುನವು

ಕೂಡಿದವು. ಕಾಲಾಂತರದಲ್ಲಿ ಗರ್ಭವತಿಯಾಗಿದ್ದ ಕುಲಿಂಗಿಯು ತತ್ತಿಗಳನ್ನಿಟ್ಟಿತು. ದಯಾವಶನಾದ ಜಾಜಲಿಯು ಹಾಗೇ ನಿಂತಿದ್ದನು. ಗುಡ್ಡುಗಳು ಒಡೆದು ಮರಿಗಳಾದವು. ಅವು ದೊಡ್ಡವಾಗಿ, ರೆಕ್ಕೆಗಳು ಬಲಿತು, ಹಾರಿ ಹೋಗುವವರೆಗೂ ಕದಲದೆ ನಿಂತಿದ್ದು, ಜಾಜಲಿಯು, ಅನಂತರ ನದಿಯನ್ನು ಸೇರಿ, ಸ್ನಾನಮಾಡುತ್ತಾ, ತಾನು ಸಿದ್ಧನಾಗಿರುವನೆಂದು ಚಿಂತಿಸಿದನು. ಜಟೆಗಳನ್ನು ಬಿಚ್ಚಿ ಕೊಡವಿ, ತನಗೆ ತಪಸ್ಸಿನ ಸಿದ್ಧಿ ಆಯಿತೆಂದು ಗರ್ವಿತನಾದ ಮುನಿಗೆ, ಅಂತರಿಕ್ಷವಾಣಿಯು ಇಂತೆಂದಿತು:

'ಜಾಜಲೇ ! ಧರ್ಮಬಲದಿಂದ ನೀನು ವಾರಾಣಸಿಯಲ್ಲಿರುವ ತುಲಾಧಾರನಿಗೆ ಸಮನಲ್ಲ. ಅವನು ಕೂಡ ತಾನು ಸಿದ್ಧನೆಂದು ಗರ್ವಿಸಿಲ್ಲ.' ಇಂತು ನುಡಿದ ಆಕಾಶ ವಾಣಿಯ ಮಾತಿಗೆ ತಪಿಸಿ, ಜಾಜಲಿಯು ತನ್ನ ಆಶ್ರಮದಿಂದ ತೆರಳಿ, ಬಹು ಕಾಲವಾದ ಮೇಲೆ, ವಾರಾಣಸಿಯನ್ನು ಮುಟ್ಟಿದನು. ವಿಚಾರಿಸಿ, ತುಲಾಧಾರನನ್ನು ಕಂಡನು. ತುಲಾಧಾರನು ದ್ವಿಜನನ್ನು ಕಂಡು, ಎದ್ದು ಬಂದು, ವಂದಿಸಿ, ಕರೆದುಕೊಂಡು ಹೋದನು. ಆಸನದಿ ಕೂಡಿಸಿ, ಸತ್ಕರಿಸಿ, ತುಲಾಧಾರನು 'ವಿಪ್ರೋತ್ತಮ ! ನೀನು ತಪಗೈದು, ಕುಳಿಂಗ ಮಿಥುನಗಳಿಗೆ ಆಶ್ರಯನಾದೆ. ಅವು ನಿನ್ನ ಜಟೆಯಲ್ಲಿ ಮಕ್ಕಳನ್ನು ಬೆಳೆಸಿದವು. ಅಂತು, ನಿಶ್ಚಲನಿರ್ವಿಕಾರನಾದ ನಿನಗೆ ತಪಸ್ಸಿದ್ಧನಾದೆನೆಂಬ ಆಲೋಚನೆ ಬಂತು. ಆ ನಿನ್ನ ಗರ್ವವನ್ನು ಸಹಿಸದೆ ಅಂತರಿಕ್ಷ ದೇವತೆಯು, ನಿನ್ನನ್ನು ನನ್ನ ಕಡೆ ಕಳಿಸಿರುವಳು. ಅಲ್ಲವೇ ?' ಎಂದು ಕೇಳಿದನು.

ಜಾಜಲಿಯು ಆ ಮಾತನ್ನು ಕೇಳಿ, 'ವರ್ತಕ ! ಆಶ್ಚರ್ಯವಾಗಿದೆ ನಿನ್ನ ಜ್ಞಾನವನ್ನು ಕಂಡು ! ರಸಗಂಧ ವನಸ್ಪತಿ ಮೂಲ ಫಲಗಳನ್ನು ಮಾರುವ ನಿನಗೆ ಇಂತಹ ದಿವ್ಯಜ್ಞಾನವೆಂತು ಬಂತು ?' ಎಂದು ಕೇಳಿದನು. ತುಲಾಧಾರನು ಇಂತೆಂದನು: 'ಜಾಜಲೇ! ನನ್ನ ಸ್ವಧರ್ಮವನ್ನು ನಾನು ಬಿಟ್ಟಿಲ್ಲ. ಮಾಡುವೆನೆಂಬ ಗರ್ವವೆನಗಿಲ್ಲ. ಅದು ನನ್ನ ಕರ್ತವ್ಯವೆಂದು ತಿಳಿದಿರುವೆನು. ನೀ ಕೇಳಿದೆ ಎಂದು ಪೇಳುತ್ತಿರುವೆನಾಗಲಿ, ಹೇಳಿಕೊಳ್ಳುವಂತಹ ದೊಡ್ಡ ಗುಣವಾವುದೂ ನನ್ನಲ್ಲಿಲ್ಲ. ಯಾವ ಭೂತಗಳಿಗೂ ನಾನು ದ್ರೋಹವನ್ನು ಬಗೆಯದಿರುವೆನು. ಕಾಷ್ಠ ತೃಣಗಳಿಂದ ಮನೆಯನ್ನು ಕಟ್ಟಿಕೊಂಡು ವಸಿಸುತ್ತಿರುವೆನು. ಕಸ್ತೂರಿ, ಲಾಕ್ಷಾರಸ, ತುಂಗ, ಪದ್ಮಕ, ಗಂಧ, ಕಾಷ್ಠಗಳು, ಲವಣಾದಿ ರಸಗಳನ್ನು ನ್ಯಾಯವಾದ ಬೆಲೆಗೆ ಮಾರುವೆನು. ಮದ್ಯ ಮಾಂಸಾದಿ ದುಷ್ಟ ಪದಾರ್ಥಗಳನ್ನು ಸ್ವೀಕರಿಸದಿರುವೆನು, ಮತ್ತು ಮಾರುವುದಂತೂ ಇಲ್ಲವೇ ಇಲ್ಲ. ಸರ್ವ ಭೂತಗಳನ್ನು ಸಮವಾಗಿ ತೂಕ ಮಾಡಿದಂತೆ ತಿಳಿದು, ತತ್ತದ್ಯೋಗ್ಯ ರೀತಿಯಿಂದ ನಡೆದುಕೊಂಬುವೆನು. ಆಕಾಶವು ನಿಂತು ನೋಡುತ್ತಿರುವಂತೆ, ನಾನು ಎಲ್ಲ ಜನರ ವರ್ತನವನ್ನು ವೀಕ್ಷಿಸಿ, ನಿಂದಿಸದೆ, ಸ್ತುತಿಸದೆ, ನಿರ್ಲಿಪ್ತನಾಗಿರುವೆನು. ಮೂಕ ಬಧಿರೋನ್ಮತ್ತರಂತೆ ಕೇಳಿ ಕೇಳದೆ, ನೋಡಿ ನೋಡದೆ, ತಿಳಿದೂ ತಿಳಿಯದೆ, ನಿಸ್ಪೃಹನಾಗಿರುವೆನು. ವೃದ್ಧಾತುರರಂತೆ ಕಾಮೋಪಭೋಗ ವಿಮುಖನಾಗಿರುವೆನು.

ಮೃತ್ಯುವಿನಂತೆ ಪರರನ್ನು ಅಂಜಿಸದೆ, ಹೇಡಿಯಂತೆ ಪರರಿಗಂಜದೆ ಅಹಿಂಸಾರತನು,

ಪಾಪದೂರನು ಆಗಿರುವೆನು. ಭೂತ ಸಂಯೋಗವು ನದೀ ಜಲದಲ್ಲಿ ಕೊಚ್ಚಿ ಹೋಗುವ ಕಾಷ್ಠಗಳಂತೆ, ಕಲೆತು ಮತ್ತು ಬೇರಾಗಲು, ಕರ್ಮ ಪ್ರೇರಕ ಶ್ರೀಹರಿಯೇ ಕಾರಣನೆಂದರಿತು, ದುರಭಿಮಾನವನ್ನು ಬಿಟ್ಟು, ಪುತ್ರ ಮಿತ್ರ ಕಳತ್ರಾದಿಗಳನ್ನು ದೇವನಿತ್ತ ಪರಿವಾರವೆಂದು ತಿಳಿದಿರುವೆನು. ಅಭಯದಾನಕ್ಕೆ ಸಮಾನವಾದ ದಾನವಿನ್ನಿಲ್ಲವೆಂದರಿತು, ಯಾರಿಗೂ ದ್ರೋಹವನ್ನು ಮಾಡೆನು.

ಕೆಲವರು ಮನುಜರನ್ನು ದಾಸಭಾವದಿಂದ ಮಾರುವರು. ಮನುಜಾದಿ ಸರ್ವ ಜೀವ ಶರೀರಗಳಲ್ಲಿ ಆದಿತ್ಯ , ಚಂದ್ರ, ವಾಯು, ಪ್ರಾಣ, ಯಮ, ಸುರೇಂದ್ರಾದಿ ದೇವತೆಗಳಿರುವರಲ್ಲವೇ? ಅವರನ್ನು ಮಾರುವುದು ಪಾಪವಲ್ಲವೇ? ಅಜವೇ ಅಗ್ನಿ; ವರುಣನು ಮೇಷ ದೇವತೆ; ಅಶ್ವನಿಯಾಮಕನು ಸೂರ್ಯನು; ಧೇನುವತ್ಸಗಳು ಚಂದ್ರ; ಇವುಗಳನ್ನು ಮಾರುವುದು ತಪ್ಪು; ಯಜ್ಞದಲ್ಲಿ, ಯೂಪಕ್ಕೆ ಕಟ್ಟಿ ಕೊಲ್ಲುವುದಂತೂ ಬಹು ಪಾಪವು. ಎತ್ತು, ಕುದುರೆ, ಕತ್ತೆಗಳನ್ನು ಬಂಧಿಸಿ, ಭಾಗ ವಾಹನ ಕರ್ಮದಲ್ಲಿ ತೊಡಗಿಸುವುದೂ ಹಿಂಸೆಯೇ! ಅವನ್ನು ಪೋಷಿಸದೆ ಹಿಂಸಿಸುವುದು ಬಲು ಪಾಪವಾಗಿದೆ. ಅಘಾ ಎಂದರೆ ಕೊಲ್ಲಬಾರದ (ಆಕಳು) ವಸ್ತುವೆಂದರ್ಥ ; ಅಂತಹ ಗೋವಧೆಯನ್ನು ಮಾಡಿ, ಗೋಸವರೂಪ ಯಜ್ಞ ಕರ್ತೃಗಳು ನಾವೆಂದು ಹೇಳಿಕೊಳ್ಳುವ ವಿಪ್ರರು ನರಕಾದ್ಯನರ್ಥ ಭಾಜನರಾಗುವರು. ವಿಪ್ರ ವೈಶ್ಯರಿಗೆ ಹಿಂಸಾಮಯ ಯಜ್ಞಗಳಿಲ್ಲ; ಅವು ಕ್ಷತ್ರಿಯರಿಗೆ; ಪಶುಯಜ್ಞ ಯುದ್ಧಗಳಲ್ಲಿ ಆಗುವ ಹಿಂಸೆಯಿಂದ ಕ್ಷತ್ರಿಯರಿಗೆ, ಅವರ ಸೈನಿಕರಿಗೆ ಪಾಪವಿಲ್ಲ. ಯಜ್ಞಕ್ಕಾಗಿ ಅಲ್ಲದ ಹಿಂಸೆಯು ಅವರಿಗೂ ಪಾಪ ಸಾಧನವಾಗಿದೆ.

ಜಾಜಲೇ! ನಾನು ನಾಸ್ತಿಕನಲ್ಲ. ನಿಜವಾದ ಧರ್ಮವನ್ನು ಹೇಳುತ್ತಿರುವೆನು. ಅಜ್ಞಾನಾವೃತರಾಗಿ, ವೇದಗಳನ್ನು ವಿಚಾರಿಸಿ ತಿಳಿಯದೆ, ಮಾಂಸ ಲುಬ್ಧರಾಗಿ, ಪಶು ಹಿಂಸಾಮಯ ಯಾಗಗಳನ್ನು ಮಾಡುವ ಬ್ರಾಹ್ಮಣಾಧಮರನ್ನು ಮುಖ್ಯಪ್ರಾಣನು ನರಕದಲ್ಲಿಟ್ಟು, ದುಃಖಪಡಿಸುವನೆಂದು ವೇದವೇ ಸಾರುತ್ತಿದೆ. ವೇದಪಠನ, ಓಷಧೀ ಹೋಮ, ನಮಸ್ಕಾರಗಳಿಂದ ದೇವತೆಗಳು ಪ್ರೀತರಾಗುವರು. ಕಾಮಾಭಿಲಾಷೆಗಳನ್ನು ಬಿಟ್ಟು, ಶ್ರೀಹರಿ ಪ್ರೀತಿಗಾಗಿ, ದಧಿ, ಘೃತ, ಚರು, ಪಾಯಸ, ತಿಲ, ಸಮಿತ್ತುಗಳಿಂದ ಆಜ್ಯಾಹುತಿಗಳನ್ನಿತ್ತು ಯಜ್ಞವನ್ನು ಮಾಡುವುದರಿಂದ, ಆದಿತ್ಯನು (ಪರ್ಜನ್ಯನು) ಪುಷ್ಟನಾಗಿ, ಪ್ರೀತಿಯಿಂದ ಮಳೆಗರೆಯುವನು. ಅದರಿಂದ ಅನ್ನಾದಿ ಸುಸಮೃದ್ಧಿಯಾಗುವುದು. ಕರ್ತವ್ಯವೆಂದರಿತು ವಿಹಿತ ಕರ್ಮವನ್ನು ಮಾಡಿದವನು ಉತ್ತಮ ಬ್ರಾಹ್ಮಣನೆಂದು ತಿಳಿ! ಲೋಭದಿಂದ, ಫಲಾಪೇಕ್ಷನಾಗಿ ಚರಿಸುವನು ಕರ್ತವ್ಯಾಕರ್ತವ್ಯಗಳ ವಿಚಾರವಿಲ್ಲದೆ, ಪಾಪ ಕರ್ಮರತನಾಗಿ ಕೆಡುವನು.

ಸತ್ಯವೇ ಒಂದು ಯಜ್ಞ; ಇಂದ್ರಿಯ ನಿಗ್ರಹವೇ ಇನ್ನೊಂದು ಯಾಗ; ಅವಿಲ್ಲದ ಸಾವಿರ ಯಜ್ಞಗಳು ದಂಭಾಚಾರಗಳು. ಯಜ್ಞನೆಂದರೆ ಶ್ರೀವಿಷ್ಣುವು. ಆ ಪ್ರಭುವೀಮೋಕ್ಷವೇ ಯಜ್ಞ ಫಲವು. ಬ್ರಹ್ಮ (ವೇದ)ವನ್ನು ಬ್ರಹ್ಮ (ಬ್ರಾಹ್ಮಣ)ನಿಂದ

ಕಲಿತು, ಪ್ರಚಾರ ಮಾಡಿ, ಅದರಲ್ಲಿ ಪೇಳಿರುವ ಬ್ರಹ್ಮ (ಶ್ರೀಹರಿ) ಮಹಿಮೆಯನ್ನು ತಿಳಿದ ಬ್ರಹ್ಮನು (ಜೀವನು), ಬ್ರಹ್ಮನೇ (ಸ್ವಯೋಗ್ಯ ಗುಣಭರಿತನು) ಆಗುವನು. ಪರಬ್ರಹ್ಮನ ಲೋಕದಲ್ಲಿ ವ್ಯಥೆಯಿಲ್ಲ; ಶೋಕವಿಲ್ಲ; ಜನನ ಮರಣಗಳಿಲ್ಲ; ಯಾವ ದುಃಖವೂ ಇಲ್ಲದ ಶ್ರೀಶಲೋಕವು ಸಿಗುವುದು ಸಾತ್ವಿಕರಿಗೇ; ರಾಜಸರಿಗಲ್ಲ; ತಾಮಸರಿಗಂತೂ ಇಲ್ಲವೇ ಇಲ್ಲ. ಶ್ರದ್ಧಾವಂತನಿಗೆ ಈ ಜ್ಞಾನವಾಗುವುದು. ಶ್ರದ್ಧೆಗೆ ದೇವತೆಯು ಶ್ರೀ ಭಾರತೀದೇವಿಯು! ಆಕೆಯ ದಯದಿಂದ ಶ್ರದ್ಧಾವಂತರು ಯಥಾರ್ಥ ಜ್ಞಾನವನ್ನು ಪೊಂದಿ, ಶ್ರೀಹರಿ, ಪ್ರಸಾದದಿಂದ ಮುಕ್ತರಾಗುವರು. ಶ್ರೀಹರಯೇ ನಮಃ.'

ಇಂತು ನುಡಿದ ತುಲಾಧಾರನ ವಚನತತಿಯಿಂದ ಗತಗರ್ವನಾದ ಜಾಜಲಿಯು, ಅವನನ್ನು ಪೊಗಳಿ, ಹಿಂದಿರುಗಿ ಬಂದು, ತನ್ನ ಆಶ್ರಮವನ್ನು ಸೇರಿದನು. ಮುಂದೆ ಆತನು, ಬ್ರಹ್ಮವಿಚಾರಗೈದು, ಮುಕ್ತನಾದನು.

## ೧೧. ಚಿರಕಾರಿ ಕಥೆ — ಗೋಕಾಪಿಲೇಯ

ಧರ್ಮರಾಜನು 'ಕಾರ್ಯ ಪರೀಕ್ಷೆ ಎಂತು? ಕಾರ್ಯವನ್ನು ಆಲೋಚಿಸಿ ನಿಧಾನವಾಗಿ ಮಾಡುವುದೊಳಿತೆಂದು ಕೆಲರೆಂಬರು; ಅವಸರಪಟ್ಟು ಮಾಡುವುದು ಒಳಿತೆಂದು ಮತ್ತೆ ಕೆಲವರೆಂಬರು. ಕಾರ್ಯ ರೀತಿಯನ್ನು ನನಗೆ ತಿಳಿಸಿ ಕೊಡು!' ಎಂದನು.

ಭೀಷ್ಮನಿಂತೆಂದನು: 'ಗೌತಮನಿಗೆ ಚಿರಕಾರಿ ಎಂಬ ಮಗನಿದ್ದನು. ಅವನು ಯಾವಾಗಲೂ ನಿಧಾನವಾಗಿ ಆಲೋಚಿಸಿ, ಕಾರ್ಯಗಳನ್ನು ಮಾಡುತ್ತಿದ್ದನು. ಅವನ ದೂರಾಲೋಚನೆಯನ್ನು ಕಂಡು, ಜನರು ಅವನನ್ನು ಅಲಸ್, ದಡ್ಡ- ಎಂದು ತಿಳಿದರು. ಒಂದು ಸಲ ಅವನ ತಾಯೆಯಾದ ಅಹಲ್ಯೆಯು ಇಂದ್ರಧರ್ಷಿತಳಾದಳು. ಗೌತಮನು ಕುಪಿತನಾಗಿ 'ಚಿರಕಾರೀ! ಇವಳನ್ನು ಕೊಲ್ಲು!' ಎಂದು ಆಜ್ಞಾಪಿಸಿ, ವನವನ್ನು ಸೇರಿದನು. ಚಿರಕಾರಿಯು ಸಾರ್ಥಕ ನಾಮಧೇಯನಾದುದರಿಂದ ನಿಧಾನಿಸಿದನು.

''ತಂದೆಯ ಆಜ್ಞೆಯನ್ನು ಮೀರಬಾರದು; ಹಾಗೆಂದು ತಾಯಿಯನ್ನು ಕೊಲ್ಲಲಾಗದು. ಈ ಧರ್ಮ ಸಂಕಟದಿಂದ ಪಾರಾಗುವ ಬಗೆ ಹೇಗೆ? ಮಾತೃ ಹತ್ಯೆಯಂತೆಯೇ ಪಿತ್ರಾಜ್ಞೋಲ್ಲಂಘನವೂ ಪಾಪವಾಗಿದೆ. ಸ್ತ್ರೀಹತ್ಯೆಯೇ ಕಡುಪಾಪವು; ಅದರಲ್ಲಿ ಮಾತೃ ಹತ್ಯೆ ಮತ್ತಿಷ್ಟು ಪಾತಕವಾಗಿದೆ. ಮಾತೃ ಹಂತಕನಿಗೆ ಮನಶ್ಶಾಂತಿಯಿಲ್ಲ, ಪಿತೃದ್ರೋಹಿಗೆ ಕೀರ್ತಿ ಸ್ವರ್ಗಗಳಿಲ್ಲ.

ಭಾರ್ಯೆಯಲ್ಲಿ ತಾನೇ ಒಂದಂಶದಿಂದ ಹುಟ್ಟುವುದರಿಂದ, ಆಕೆಗೆ ಜಾಯೆ ಎಂದು ಹೆಸರು. ಶೀಲಚಾರಿತ್ರ ಗೋತ್ರವಿನಯಗಳನ್ನಿತ್ತು ಪಾಲಿಸುವುದರಿಂದ ತಂದೆಗೆ ಪಿತನೆಂಬರು. ತಂದೆಗೆ ಜಾಯೆಯಾಗಿ, ಮಗನ್ನಿತ್ತ ಮಡದಿ, ತಂದೆಕಿಂತಲೂ, ನೂರು ಪಾಲು ಹೆಚ್ಚೆಂಬರು.

ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲೋಪನಯನಾದಿ ಸಂಸ್ಕಾರಗಳನ್ನಿತ್ತು

ದ್ವಿಜನನ್ನು ಮಾಡಿ, ವೇದಶಾಸ್ತ್ರಾದಿಗಳನ್ನು ಕಲಿಸಿ, ಸಲಹುವ ತಂದೆಯ ಮಾತನ್ನು ಸರ್ವಥಾ ಮೀರಲಾಗದು. ಅಂತಹ ತಂದೆಯು ಪ್ರೀತನಾದರೆ, ಸರ್ವ ದೇವತೆಗಳೂ ಪ್ರೀತರಾಗುವರು. ಪಿತೃ ಭಜಕನ ಪಾಪಗಳೆಲ್ಲವು ನಷ್ಟವಾಗುವವು. ಫಲವನ್ನು ವೃಕ್ಷವು ಬಿಡುವುದು; ಕರುವನ್ನು ಆಕಳು ಬಿಡುವುದು; ಆದರೆ ಪುತ್ರನನ್ನು ತಂದೆಯು ಎಂತಹ ಕಷ್ಟದಲ್ಲಿದ್ದರೂ ಕೈಬಿಡನು. ಇಂತಹ ತಂದೆಯು ಗೌರವನೀಯನೇ ಸರಿ!

ಇನ್ನು ತಾಯಿಯ ವಿಷಯವೇ? ಆಕೆಯೇ ಅಲ್ಲವೇ ದೇಹವನ್ನಿತ್ತವಳು. ಕಟ್ಟಿಗೆಯಿಂದ ಅಗ್ನಿಯಂತೆ, ಮಾತೃದೇಹದಿಂದ ಪುತ್ರದೇಹವು ಬೆಳೆದು ಬಂದಿದೆ. ತಾಯಿಯಿಲ್ಲದವನನ್ನು ತಬ್ಬಲಿ ಎಂಬುವರು. ಮಾತೃಸಹಿತನು ಮಹಾರಾಜನು. ದರಿದ್ರನಾದರೇನು, ಮುದುಕನಾದರೇನು, ವಿಕಾರಿಯಾದರೇನು, ಅಂಗಹೀನನಾದರೇನು, ಮಗನನ್ನು ಕಡೆಗಣಿಸಿ ಪ್ರೀತಿಸದ ತಾಯಿ ಎಂಬ ವಸ್ತುವು ಇನ್ನೂ ಹುಟ್ಟಿಲ್ಲ. ಅಂಬ ಅಮ್ಮ ಎಂದು ಕರೆದಾಗ ಬಂದು ಓಗೊಟ್ಟು, ಹೊಟ್ಟೆ ನೋಡಿ (ಉಣಿಸಿ) ಸಲಹುವ ತಾಯಿಗಿಂತ ಪ್ರೇಮ ನಿಧಿಗಳಿಲ್ಲ. ಮಕ್ಕಳು ಮೊಮ್ಮಕ್ಕಳು ಆಗಿ ಮುದುಕನಾದ ಮಗನನ್ನು ತಾಯಿಯು ಎರಡು ವರ್ಷದವನನ್ನಂತೆ ಅಕ್ಕರತೆ ಪಡುವಳು. ತರಲಿ, ಬಿಡಲಿ, ಬಂದನಂದನನನ್ನು ಮುಂದೆ ಕೂಡಿಸಿಕೊಂಡು ಆನಂದಪಡುವ ತಾಯಿಗೆ, ತನ್ನ ಮಗನ ದೋಷಗಳು ಸುತರಾಂ ಕಾಣಿಸದಾಗುವವು. ಅವನ ಗುಣಗಳು ಆಕೆಗೆ ಸತತ ವಾಗ್ವಿಲಾಸಗಳಾಗುವವು. ತಾಯಿಯನ್ನು ಕಳೆದುಕೊಂಡವನು – ಅಂದು – ಮುದುಕನಾದನು – ಅಂದು ಅನಾಥನಾದನು = ಅಂದು ಅವನ ಮನೆಯು ಶೂನ್ಯವಾಯಿತು. ನೆರಳಂತೆ ಪಾಪ ಕಳೆದು, ಗುರುವಿನಂತೆ ಹಿತ ಕಲಿಸಿ, ಮಿತ್ರನಂತೆ ರಕ್ಷಿಸಿ, ಪ್ರಿಯಬಂಧುವಾಗಿ ಪ್ರೀತಿಸಿ ಪೊರೆವ ತಾಯಿಯ ಋಣವೆಂದಿಗೂ ತೀರದು.

ಧರಿಸುವುದರಿಂದ ಧಾತ್ರಿಯು, ಜನನವಿತ್ತು ಜನನಿಯು, ಅಂಗವರ್ಧನದಿಂದ ಅಂಬೆಯು, ಜ್ಞಾನದಾನದಿಂದ ಮಾತೆಯು ಆದ ತಾಯಿಯನ್ನು ಕೊಲ್ಲಲಾರೆನು. ಮಗನಾವ ಗೋತ್ರಜನು, ಆವನವನು ಎಂಬುದು ಮಾತೆಗೆ ಮಾತ್ರಗೊತ್ತು. ಅಂತಹ ತಾಯಿಯನ್ನು ಕೊಲ್ಲುವುದು ನನ್ನ ಕೈಲಾಗದು. ಧರ್ಮಾರ್ಥ ಕಾಮಗಳಿಂದ ಅನ್ಯಾಯ ಮಾಡನೆಂದು ವಿಪ್ರಾಗ್ನಿ ಮುಖದಲ್ಲಿ, ಮಾತು ಕೊಟ್ಟು ಅನ್ಯ ನಾರಿಯರನ್ನು ಸೇರುವ ಪುರುಷನು ಎಂದಿಗೂ ಪೂಜ್ಯನಾಗನು. ಭರಿಸಲಾಗದವನು ಭರ್ತನಲ್ಲ ; ಪಾಲಿಸದವನು ಪತಿಯೂ ಅಲ್ಲ. ಆದುದರಿಂದ ಅಂತಹ ಪತಿಯನ್ನು ಬಿಟ್ಟು, ವ್ಯಭಿಚರಿಸಿದ ನಾರಿಯ ತಪ್ಪು ಇಲ್ಲವೆಂದಲ್ಲ. ಅಂತಹವಳನ್ನು ಬೇಡಿ, ಬಲಾತ್ಕರಿಸಿದ ಪುರುಷನದೇ ಮುಖ್ಯಾಪರಾಧವು. ಸ್ವಪತಿವೇಷದಿಂದ ಬಂದ ಪರನನ್ನು ಪತಿ ಎಂದು ತಿಳಿದು, ತನ್ನನ್ನಿತ್ತ ನನ್ನ ತಾಯಿಯ ಅಪರಾಧವೇನೂ ಇಲ್ಲ.

ಅಲ್ಪಬಲವತಿಯು, ಸರ್ವಥಾ ಪುರುಷಾಧೀನಳು ಆಗಿರುವ ನಾರಿಯನ್ನು ಬಲಾತ್ಕರಿಸಿ ಕೆಡಿಸುವ ಪುರುಷನನ್ನು ಶಾಸಿಸಬೇಕಾಗಲಿ, ನಿರಪರಾಧಿನಿಯಾದ ನಾರಿಯನ್ನಲ್ಲ. ಇಂತು ಗೌರವನೀಯಳಾಗಿರುವ ನನ್ನ ಮಾತೆಯು ಅವಧ್ಯಳೇ ಸರಿ! ದೇವತಾ ಸಮೂಹ ಪ್ರತಿನಿಧಿಯಾದ ತಂದೆಯ ಆಜ್ಞೋಲ್ಲಂಘವನ್ನು ಮಾಡಿದರೂ ಚಿಂತೆಯಿಲ್ಲ! ದೇವ

ಮಾನವ ಪ್ರತಿನಿಧಿಯಾದ ತಾಯಿಯನ್ನು ಉಳಿಸಿಕೊಳ್ಳುವೆವನು" ಇಂತು ಚಿಂತಿಸುತ್ತಾ, ಚಿರಕಾರಿಯು ಹೊಯ್ದಾಡುತ್ತಿರುವಾಗ, ವನದಲ್ಲಿ ತಪೋನಿರತನಾಗಿದ್ದ ಮೇಧಾತಿಥಿ ಗೌತಮನು, ತನ್ನ ಅವಿಚಾರಿತ ಕೃತ್ಯಕ್ಕಾಗಿ, ನೊಂದು ಇಂತು ಆಲೋಚಿಸಿದನು.

'ಎಂತಹ ಅವಿವೇಕಿಯಾದೆನು! ಎಷ್ಟು ಓದಿದರೇನು? ಓದಿದ ಜ್ಞಾನದಿಂದ ಬರಬೇಕಾದ ಯುಕ್ತಾಯುಕ್ತ ವಿಚಾರವೆನಗೆ ಪುಟ್ಟಲಿಲ್ಲ. ಬ್ರಾಹ್ಮಣ ವೇಷದಿಂದ ಬಂದು ನನ್ನಂತೆ ತೋರಿ, ವಂಚಿಸಿದ ಇಂದ್ರನಿಗೆ ವಶಳಾಗಿ ವರ್ತಿಸಿದ ವನಿತೆಯ ಅಪರಾಧವೇನೂ ಇಲ್ಲ. ಪ್ರಮಾದದಿಂದ ಆದ ತಪ್ಪಿಗಾಗಿ, ತಲೆ ಹೊಡೆಯಲು ಆಜ್ಞಾಪಿಸಿ ಬಂದುದು ಬಹ್ವನುಚಿತವಾಗಿದೆ. ಪಾಪಿ ಕ್ರೋಧನಿಗೆ ವಶನಾಗಿ ಮತಿಗೆಟ್ಟೆ! ಸ್ತ್ರೀಹತ್ಯೆ, ಪತ್ನೀಹತ್ಯೆಗಳಿಗೆ ಉಡಿ ಒಡ್ಡಿದೆ! ಏನು ಮಾಡಲಿ?

ಚಿರಕಾರೀ! ನೀನು ಚಿರಕಾರಿಯೇ ಆಗಿ, ನಿನ್ನ ತಾಯಿಯನ್ನು ಕೊಲ್ಲದೆ, ತಡಮಾಡಿದರೆ ಮಾತ್ರ, ನಾನು ಈ ಘೋರಪಾಪ ಪಂಕದಲ್ಲಿ ಬೀಳದಂತಾದೀತು! ನನ್ನನ್ನೂ, ನನ್ನ ತಪವನ್ನೂ, ನಿನ್ನ ತಾಯಿಯನ್ನೂ, ನಿನ್ನನ್ನೂ ಕಾಪಾಡಿ ಉಳಿಸುವ ಭಾರ ವೀಗ ನಿನ್ನ ಚಿರಕಾರಿತ್ವದಲ್ಲಿದೆ! ಎಲ್ಲ ಕಾರ್ಯಗಳನ್ನೂ ವಿಮರ್ಶಿಸಿ ಮಾಡುವ ನೀನಿಂದು, ಈ ಕಾರ್ಯವನ್ನೂ - ಅಕಾರ್ಯವೆಂದು ತಿಳಿದು - ವರ್ಜಿಸುವಂತಾಗಲಿ!'

ಇಂತು ಚಿಂತಿಸಿ ಗೌತಮನು ತನ್ನ ಆಶ್ರಮವನ್ನು ಸೇರಿ, ಚಿರಕಾರಿಯನ್ನು ಕಂಡನು. ಶಸ್ತ್ರವನ್ನು ಪಾದದಲ್ಲಿಟ್ಟು, ತಲೆ ಬಾಗಿ ನಮಿಸಿ, ತಾಯಿಯನ್ನು ಕ್ಷಮಿಸೆಂದು ಬೇಡುವ ಚಿರಕಾರಿಯನ್ನು ಕಂಡ ಗೌತಮನು ಆನಂದದಿಂದ ಅವನನ್ನು ಕರೆದಪ್ಪಿ, ಮೂರ್ಧವನ್ನು ಮೂಸಿ, ಆನಂದ ಬಾಷ್ಪಗಳಿಂದ ಅವನ ತಲೆಯನ್ನು ತೊಯಿಸಿದನು. ಕಲ್ಲಿನಂತೆ ನಿಂತಿದ್ದ ಅಹಲ್ಯೆಯನ್ನು ಕಲ್ಲಾಗೆಂದು ಶಪಿಸಿ, ಶ್ರೀರಾಮ ಪಾದರವಿಂದರಜಃ ಸ್ಪರ್ಶದಿಂದ ಪಾವನಳಾದ ಮೇಲೆ, ಪುನಃ ಸ್ವೀಕರಿಸುವುದಾಗಿ ಅಭಯವನ್ನಿತ್ತನು. ಮಗನನ್ನು ಚಿರಂಜೀವ! ಎಂದಾಶೀರ್ವದಿಸಿ, "ಚಿರಕಾರಿತ್ವವು ಬಲು ಶ್ರೇಯಸ್ಕರವಾಗಿದೆ! ಮಿತ್ರನನ್ನು ಚಿರಪರೀಕ್ಷೆ ಮಾಡಿ ಸ್ವೀಕರಿಸಬೇಕು; ಚಿರಪರೀಕ್ಷೆಮಾಡಿ ಸ್ವೀಕರಿಸಬೇಕು; ಚಿರಪರೀಕ್ಷಿಸಿ ದಂಡವನ್ನು ಪ್ರಯೋಗಿಸಬೇಕು. ರಾಗದ್ವೇಷಗಳಿಂದಲು, ಅಭಿಮಾನದಿಂದಲು, ದ್ರೋಹ ಪಾಪ ಬುದ್ಧಿಯಿಂದಲು, ಅಪ್ರಿಯವಾಗಿಯು ಮಾಡುವ ಕಾರ್ಯಗಳಲ್ಲಿ ನಿದಾನಿಸಿ ನಡೆಯುವವನು ಶ್ರೇಯಸ್ಸನ್ನು ಹೊಂದುವನು. ವಧೂ ಮಿತ್ರ ಭೃತ್ಯ ಸ್ತ್ರೀಜನರ ಅನಿಶ್ಚಿತಾಪರಾಧ ದಂಡನದಲ್ಲಿ ಚಿರಕಾರಿಯಾದವನು ಪುಣ್ಯ ಕೀರ್ತಿಗಳನ್ನು ಪೊಂದುವನು. ವೃದ್ಧ ಸೇವೆಯನ್ನು, ಬ್ರಹ್ಮ ವಿಚಾರವನ್ನು, ಯಜ್ಞಾದಿ ಧರ್ಮಕಾರ್ಯಗಳನ್ನು ಚಿರಕಾಲ ಮಾಡಿದವನು ಇಹಪರ ಸುಖಭಾಜನನಾಗುವನು' ಎಂದು ಅಭಿನಂದಿಸಿದನು.

ಇಂತು ನುಡಿದ ತಾತನನ್ನು ನೋಡಿ, ಧರ್ಮರಾಜನು 'ಹಿಂಸಾದೂರನಾಗಿ ಪ್ರಜರನ್ನು ಪಾಲಿಸುವುದು ಸಾಧ್ಯವೇ?' ಎಂದು ಕೇಳಿದನು. ಆಗ ಕುರುಪಿತಾಮಹನು ಅವನಿಗೆ ಅಹಿಂಸಾಸ್ವರೂಪವನ್ನು ನಿರೂಪಿಸಿದನು. 'ಅಹಿಂಸೆಯೇ ಪರಮ ಧರ್ಮವು! ಹಿಂಸೆಯೇ ಮಹಾ ಪಾಪವು; ಆದರೆ ದಂಡ್ಯರನ್ನು ದಂಡಿಸದ ರಾಜನಿಂದ

ಪ್ರಜಾಸಂರಕ್ಷಣವು ನಡೆಯಲಾರದು. ದಂಡಿಸಿದರೆ ಅಹಿಂಸೆಯು ಉಳಿಯಲಾರದು. ದುಷ್ಟವಧೆಯು ಧರ್ಮವೆಂಬುದು ಕೆಲವರು ಅಂಗೀಕರಿಸರು. ಏಕೆಂದರೆ ವಧೆ ಎಂದರೆ ಹಿಂಸೆ ! ಹಿಂಸೆಯು ಧರ್ಮಸ್ವರೂಪವಾಗಲಾರದೆಂದು ಅವರವಾದ, ಅಂತು ದುಷ್ಟ ಹಿಂಸೆಯನ್ನು ಅಧರ್ಮವೆಂದು ತಿಳಿದುಬಿಟ್ಟರೆ, ಯಾಗ, ತೀರ್ಥ ಗಮನ, ವಾಣಿಜ್ಯ, ತಪೋ, ದಾನ, ಪರ್ವ ಮಹೋತ್ಸವಾದಿಗಳೆಂಬ ಲೋಕವ್ಯವಹಾರವೇ ನಿಂತುಹೋದೀತು. ಆದುದರಿಂದ ಸತ್ಯವಂತನು ದ್ಯುಮತ್ಸೇನನಿಗೆ ಪೇಳಿದಾ ಅಹಿಂಸಾ ಧರ್ಮರಹಸ್ಯವನ್ನು ನಿನಗರುಹುವೆನು. ಕೇಳು !

ಸಕಲ ವರ್ಣದವರೂ ನಿರ್ವೈರನು, ಸಮಚಿತ್ತನು, ದಾಂತನು, ವಿಷ್ಣುಭಕ್ತನು ಆದ ವಿಪ್ರನ ಶಾಸನದಲ್ಲಿರಬೇಕು. ವಿಪ್ರನಿಗೆ ಸಹಾಯಕರಾದ ಚಾತುರ್ವರ್ಣ್ಯದ ಪ್ರಧಾನರು ವಿಚಾರಿಸಿ, ನಿಶ್ಚಯಿಸಿದ ಮೇಲೆ, ದಂಡ್ಯರನ್ನು ಅಪರಾಧಾನುಸಾರಿಯಾಗಿ ಶಿಕ್ಷಿಸಬೇಕು. ಅದಂಡ್ಯರನ್ನು ದಂಡಿಸುವ ರಾಜನಿಗೆ ಮಹಾಪಾಪವು ಒದಗುವುದು. ವಧರೂಪವಾದ ದಂಡವು ಪ್ರಾಯಃ ವರ್ಜನೀಯವಾಗಿದೆ. ಒಬ್ಬ ದುಷ್ಟನನ್ನು ಕೊಂದರೆ, ಅವನ ಪರಿವಾರವೂ ಪೋಷಕರಿಲ್ಲದೆ ನರಳುವುದರಿಂದ, ಅವರನ್ನೂ ಕೊಂದಂತಾಗುವುದು. ಒಂದೊಂದು ಸಲ ಮಹಾದುಷ್ಟನು ಸಾಧು ಜನರನ್ನು ಕಂಡು, ಪಶ್ಚಾತ್ತಾಪಗೊಂಡು, ಸಚ್ಛೀಲನಾದುದುಂಟು. ಆದುದರಿಂದ ಮೂಲಘಾತವನ್ನೆಂದಿಗೂ ಮಾಡಬಾರದು. ಸರ್ವಸ್ವಾಪಹಾರ, ಬಂಧನ, ಅಂಗವೈಕಲ್ಯಗಳನ್ನು ಮಾಡಬಹುದು. ಆಗಲು ವೃತ್ತಿಹಾನಿಯಾಗದಂತೆ ಮಾತ್ರ ದಂಡಿಸಬೇಕು. ಪ್ರಥಮಾಪರಾಧದಿಂದ ದಂಡಿತರಾಗಿ, ಪಶ್ಚಾತ್ತಾಪರಾಗದೆ ಮತ್ತೆ, ಮಹಾಪರಾಧವನ್ನು ಮಾಡಿದವರನ್ನು ಪೂರ್ಣ ಶಿಕ್ಷೆ ದೇಹಾಂತ ಶಿಕ್ಷೆಗಳಿಂದ ಶಾಸಿಸಬಹುದು. ರಾಜದಂಡದಿಂದ ಮನುಜರು ಪಾಪರಹಿತರಾಗಿ, ನರಕಾದಿ ಪರಲೋಕಾನರ್ಥ ಭಾಜನರಾಗದಿರುವರು. ಎಲ್ಲಿ ಪಾಪಿಗಳು, ನೀಚರು ದಂಡಿತರಾಗದಿರುವರೋ, ಆ ದೇಶವು ಪಾಪ ಬಹುಲವಾಗಿ, ನಾಶವಾಗುವುದು. ಆದುದರಿಂದಲೇ ಶಾಂತ ದಾಂತಕರುಣಾನ್ವಿತರಾದ ವಿಪ್ರರಿಂದ ತಿಳಿದು, ಧರ್ಮಶಾಸನವನ್ನು ಮಾಡಬೇಕೆಂದು ನಿನಗರುಹಿದೆನು.'

ಧರ್ಮರಾಜನು, 'ತಾತ ! ಗೃಹಸ್ಥನಿಗೆ ಪಂಚಸೂನಾರೂಪ ಹಿಂಸೆಯು ಅನಿವಾರ್ಯವಾಗಿದೆ. ಸನ್ಯಾಸಿಗಳಿಗೆ ಹಿಂಸೆಯು ಸರ್ವಥಾ ತ್ಯಾಜ್ಯವಾಗಿದೆ. ಹಿಂಸೆಯು ಅಧರ್ಮವೆಂದು ನೀನರುಹಿದೆ ! ಅಂದ ಮೇಲೆ ಹಿಂಸಾರತನಾದ ಗೃಹಸ್ಥನಿಗೆ ಮೋಕ್ಷವಿಲ್ಲವೆಂದು ನಿನ್ನ ಅಭಿಪ್ರಾಯವೇ ? ಅಥವಾ ನ್ಯಾಯಾಗತ ಧನದಿಂದ ಜೀವಿಸಿ, ಅತಿಥಿ ಪರಿವಾರಗಳಿಗೆ ಯಥಾರ್ಥವಾಗಿ ಅನ್ನಾದಿಗಳನ್ನು ಸಂವಿಭಜಿಸಿ, ಶ್ರಾದ್ಧಾದಿಗಳಿಂದ ಪಿತೃ ಭೂತಾದಿಗಳನ್ನು ತೃಪ್ತಿಪಡಿಸಿ, ಸತ್ಯವಾದಿಯಾಗಿರುವ ಗೃಹಸ್ಥನೂ ಸ್ವಾಧ್ಯಾಯಾದಿ ಬ್ರಹ್ಮ ವಿಚಾರದಿಂದ ಜ್ಞಾನಿಯಾಗಿ, ಮುಕ್ತನಾಗಬಹುದೆಂಬ ಶ್ರುತಿ ಸ್ಮೃತಿ ವಚನಗಳಂತೆ ಮೋಕ್ಷವಿದೆ ಎಂಬ ಅಭಿಪ್ರಾಯವೋ ? ತಿಳಿಸಿಕೊಡು !' ಎಂದು ಕೇಳಿದನು.

ಭೀಷ್ಮನು ಗೋಕಪಿಲ ಸಂವಾದವನ್ನು ನಿರೂಪಿಸಿ, ಗೃಹಸ್ಥನು ಕೂಡ ವಿಹಿತ ಕರ್ಮವನ್ನು ಶ್ರೀಹರಿ ಪ್ರೀತಿಗಾಗಿ ಮಾಡಿ, ಫಲವನ್ನು ಶ್ರೀಶನಿಗರ್ಪಿಸಿ, ವೇದ ಶಾಸ್ತ್ರಾದಿ ಬ್ರಹ್ಮ ವಿಚಾರದಿಂದ ಜ್ಞಾನವನ್ನಾರ್ಜಿಸಿ, ಮುಕ್ತನಾಗುವನೆಂದು ತಿಳಿಯಪಡಿಸಿದನು.

ಹಿಂದೆ ನಹುಷನು ತ್ವಷ್ಟನ ಪೂಜೆಗೆಂದು ಒಂದು (ಬಂಜೆ) ಆಕಳನ್ನು ಕಟ್ಟಿ ಯಜ್ಞವನ್ನು ಮಾಡಲು ಉದ್ಯುಕ್ತನಾದನು. ಕೊಲ್ಲಲ್ಪಡುವ ಆಕಳನ್ನು ಕಂಡು, ಸಂಯಮಿವರನು, ಸಂಶಯಹರನು, ಭೀತಿರಹಿತನು, ಸುಜನ ಸಂಭಾವಿತನು, ಆದ ಕಪಿಲನು 'ಓಹೋ! ವೇದ ಸ್ವರೂಪವಲ್ಲವೇ ಗೋವು!' ಎಂದು ಸಾಕ್ಷೇಪವಾಗಿ ನುಡಿದನು. ಆಗ ಸ್ಯೂಮರಶ್ಮಿ ಎಂಬ ಕರ್ಮನಿಷ್ಣಾತ ಮುನಿಯು, ತನ್ನ ಯೋಗ ಬಲದಿಂದ ಆ ಗೋವಿನಲ್ಲಿ ಪ್ರವೇಶಿಸಿ, ಕಪಿಲನ ಕರ್ಮಕಾಂಡಾಕ್ಷೇಪವನ್ನು ಸಹಿಸದೆ ಇಂತು ಉತ್ತರಿಸಿದನು:

'ವೇದಗಳಲ್ಲಿ ಕರ್ಮಕಾಂಡವು ಗೃಹಸ್ಥರನ್ನೂ, ಜ್ಞಾನಕಾಂಡವು ಯತಿಗಳನ್ನೂ ಉದ್ದೇಶಿಸಿ ಪರಮಾತ್ಮನಿಂದ ಉಚ್ಚರಿತವಾಗಿವೆ. ವೇದಗಳಲ್ಲಿ ಹಿಂಸೆಯನ್ನು ನುಡಿವ ವಚನಗಳಲ್ಲಿ ನಿನಗೆ ಆದರವಿಲ್ಲದಿರುವುದರಿಂದ, ಆ ವೇದೈಕ ದೇಶವು ಅಪ್ರಾಮಾಣಿಕವೆಂದು ಆಕ್ಷೇಪಿಸಿದೆ! ಹಾಗಾದರೆ ಹಿಂಸಾರಹಿತ ವಚನಗಳ ನಿರೂಪಣೆಗೈವ ವೇದಗಳು ಮಾತ್ರ ಪ್ರಮಾಣವೆನ್ನಬಹುದೇ? ಸರ್ವಾದರಣೀಯವಾದ ವೇದದ ಸರ್ವ ವಚನಗಳು ಪರಮ ಪ್ರಮಾಣಗಳಾಗಿವೆ!'

ಆ ಮಾತಿಗೆ ಕಪಿಲನು, 'ನನ್ನನ್ನು ನೀನು ಸರಿಯಾಗಿ ತಿಳಿಯದೆ ನುಡಿಯುತ್ತಿರುವೆ. ವೇದಗಳು ಪರಮ ಪ್ರಮಾಣವೆಂದು ನಾನರಿಯದಿಲ್ಲ. ಎಲ್ಲರಿಗೆ ವರ್ಣಾಶ್ರಮ ಧರ್ಮಗಳನ್ನರುಹಿ ಉದ್ಧರಿಸುವ, ವೇದವು ಪರಮ ಮಾನ್ಯವಾಗಿದೆ. ಬ್ರಹ್ಮಚಾರಿಯು ಗುರುಕುಲವಾಸ ವೇದಾಭ್ಯಸನಗಳಿಂದ ಋಷಿ ಲೋಕವನ್ನೂ, ಗೃಹಸ್ಥನು ಪಂಚಯಜ್ಞದಾನ ಪ್ರಜಾ ಪೋಷಣಗಳಿಂದ ಸ್ವರಲೋಕವನ್ನೂ, ವಾನಪ್ರಸ್ಥನು ತಪೋನಿಯಮ ವ್ರತಗಳಿಂದ ಜನೋಲೋಕವನ್ನೂ, ಸನ್ಯಾಸಿಯು ಅಭಯದಾನ, ವಿದ್ಯಾದಾನ, ಬ್ರಹ್ಮ ವಿಚಾರಗಳಿಂದ ವಿಷ್ಣುಲೋಕವನ್ನೂ ಹೊಂದಬಹುದೆಂದು ಸಾರಿ, ವೇದವು ತತ್ತದ್ಯೋಗ್ಯ ಕರ್ಮಾನುಷ್ಠಾನವನ್ನು ವಿಧಿಸಿದೆ. ಅಭಯದಾನವನ್ನಿತ್ತ ಯತಿಗೆ ಅಹಿಂಸೆಯು ಸುಲಭಾನುಷ್ಠೇಯವಾದಂತೆ, ಗೃಹಸ್ಥನಿಗಾಗಿಲ್ಲ, ಪಂಚಯಜ್ಞರತನಾದ ಗೃಹಸ್ಥನು ಪಂಚಸೂನ (ಹಿಂಸೆಗಳನ್ನು) ಮಾಡಲೇಬೇಕಾಗುವುದು. ಆ ಹಿಂಸೆಯಿಂದ ಬಂದ ಪಾಪವನ್ನು ಅವನು ವೈಶ್ವದೇವಾದಿ ಯಜ್ಞಗಳಿಂದ ಕಳೆದುಕೊಳ್ಳಬಹುದಾಗಿದೆ. ಹಾಗೆಂದು ಗೋಹಿಂಸೆ ಮಾಡಿ, ಮಾಂಸಾಶನನಾಗಿ, ಸ್ವರ್ಗವನ್ನು ಬೇಡುವ ಸೋಮಾಯಾಜಿಯು ಪ್ರವೃತ್ತಿ ಕರ್ಮರತನಾಗುವನು; ಆದುದರಿಂದ ಅಂತಹ ಹಿಂಸಾಯಜ್ಞವು ಮೋಕ್ಷಾಪಾದಕವಲ್ಲ, ಮತ್ತು ವಿಪ್ರನಿಗೆ ಸರ್ವಥಾ ಕರಣೀಯವಲ್ಲವೆಂದು ತಿಳಿಸಲು, ನಾನು ಆಕ್ಷೇಪಿಸಿದೆನು. ನಿಜ!' ಎಂದನು.

ಸ್ಯೂಮರಶ್ಮಿಯು, 'ಹಾಗಲ್ಲ! ಪ್ರಜಾಪತಿಯು ಪ್ರಜರನ್ನು ಸೃಜಿಸಿ, ಅವರು

ಮಾಡುವ ಯಜ್ಞಗಳಿಗಾಗಿ ಪಶುವುಗಳನ್ನೂ, ಧಾನ್ಯಗಳನ್ನೂ, ಅಜ್ಯಕುಶಪಯೋದಧಿಗಳನ್ನೂ ಸೃಜಿಸಿಕೊಟ್ಟನು. ಅಜ್ಞನಾಗಲಿ, ಪ್ರಾಜ್ಞನಾಗಲಿ ಸುಖವನ್ನು ಬಯಸುವುದು ಸಹಜವಾಗಿದೆ. ಸುಖವು ಯಜ್ಞದಿಂದಲೇ ಲಭ್ಯವಾಗುತ್ತಿದೆ. ಬ್ರಹ್ಮದೇವನು ಕೂಡ ಯಜ್ಞ (ನಾರಾಯಣ) ನಿತ್ತ ಹವಿರಾದಿಗಳಿಂದ ಯಜ್ಞ (ಪೂಜೆ) ಮಾಡಿ, ಶ್ರೀಶನಿಗರ್ಪಿಸಲಿಲ್ಲವೇ? ಗೃಹಸ್ಥನಿಗೆ ಯಜ್ಞಗಳಿಂದ ಪಾಪನಾಶವು, ಪುಣ್ಯಲೋಕ ಸಿದ್ಧಿಯು ವಿಹಿತವಾಗಿವೆ. ಅಂತಹ ಯಜ್ಞವನ್ನು ಹಿಂಸಾಮಯವೆಂದು ನಿಷೇಧಿಸಬಹುದೇ?' ಎಂದನು.

ಕಪಿಲನು, 'ಅಯ್ಯಾ! ಆತ್ಮಸಾಕ್ಷಾತ್ಕಾರದಿಂದ ಆಗುವ ಸುಖವನ್ನು ಕಂಡ ಮಹಾನುಭಾವನಿಗೆ ಯಜ್ಞಾದಿಗಳಿಂದ ಬರುವ ಸ್ವರ್ಗಾದಿ ಸುಖಗಳು ಇಂಪಾಗುವವೇ? ಗೃಹಸ್ಥ ಧರ್ಮಗಳು ಸಕಾಮಗಳು, ಹಿಂಸಾಮಯಗಳು, ಪ್ರವೃತ್ತಿ ರೂಪಗಳು; ಆದುದರಿಂದ ಅವನ್ನು ಬಿಡುವುದೇ ಒಳಿತೆಂದೆನು' ಎಂದನು.

ಸ್ಯೂಮರಶ್ಮಿಯು, 'ಸಿದ್ಧಪ್ರವರ! ಮಿಕ್ಕೆಲ್ಲ ಆಶ್ರಮಿಗಳು ಗೃಹಸ್ಥನಿಂದ ಜೀವಿಸುವರು. ಗೃಹಸ್ಥನು ಓಷಧೀರಸಗಳಿಗೆ ಒಡೆಯನೆನಿಸಿ, ಸರ್ವಭೂತ ಜೀವಾತುವಾಗಿರುವನು. ಇಂತಹ ಗೃಹಸ್ಥನಿಗೆ ಮೋಕ್ಷವಿಲ್ಲವೆಂದು ಎಲ್ಲಾದರೂ ಪ್ರಮಾಣವಿದೆಯೇ? ಹಾಗೆ ತಿಳಿದು ಧರ್ಮಕರ್ಮಗಳನ್ನು ಬಿಟ್ಟುಕೂಡುವರೇ? ಕೂತು ಆಲಸರಾಗಿ, ಧನಹೀನರಾಗರೇ? ಧನಹೀನರಿಗೆ ಯಜ್ಞಾದಿಗಳು ನಡೆಯುವವೇ? ಯಜ್ಞರಹಿತರಿಗೆ ಮೋಕ್ಷವಿದೆಯೇ? ಕೇಳು! ಗರ್ಭಾದಾನದಿಂದ ಮೊದಲ್ಗೊಂಡು ವಿವಾಹಾಂತ ಸಂಸ್ಕಾರಗಳನ್ನು ನಡೆಸುವ ವಿಧಾನವನ್ನು ತಿಳಿಸಿಕೊಡುವ ವೇದಗಳು ಬ್ರಹ್ಮ ವಿಷಯಕವಲ್ಲವೆಂದು, ಅಪ್ರಮಾಣವೆನಿಸುವವೇ? ಸಂಸ್ಕಾರ ಸಿದ್ಧಿಯಿಲ್ಲದೇ ವಿಪ್ರನು ಶುದ್ಧನಾಗುವನೇ?' ಎಂದನು.

ಕಪಿಲನು 'ಯಜ್ಞಾದಿಗಳು ದೇವತಾ ಪ್ರೀತಿಗಾಗಿ; ದಂಭಕ್ಕಲ್ಲ. ಪಾಣಿ, ಉಪಸ್ಥ, ಉದರ, ವಾಣಿ ಎಂಬ ನಾಲ್ಕು ಚೌಕಟ್ಟುಗಳಿಗೆ ಬಾಗಿಲೇ ಇಲ್ಲ. ಅವನ್ನು ಶ್ರೀಹರಿ ಪ್ರೀತಿಗಾಗಿ ಮುಚ್ಚುವವನು ನೈಷ್ಠಿಕನೆನಿಸುವನು. ಕನಕರಾಶಿಯು ಕಣ್ಣ ಮುಂದಿದ್ದರೂ, ಕೈಚಾಚದಿರುವನು, ಸಿಟ್ಟು ಬರುವಂತೆ ಮಾಡಿದರೂ ಕೈ ಎತ್ತದವನು ತನ್ನ ಪಾಣಿದ್ವಾರವನ್ನು ಭದ್ರವಾಗಿ ಮುಚ್ಚಿರುವನು. ಎಂತಹ ಸುಂದರಿಯಾದರೇನು? ಅನ್ಯಕಾಂತೆಯನ್ನು ಆಶಿಸದ ಸ್ವಭಾರ್ಯಾನಿಷ್ಠನು ಉಪಸ್ಥದ್ವಾರವನ್ನು ಮುಚ್ಚಿರುವನು. ಜೀವಿಸಿರಲು ಸಾಕಷ್ಟು ಮಾತ್ರ ಉಂಡು, ಚಾಪಲ್ಯವನ್ನು ಬಿಟ್ಟವನು ಉದರ ದ್ವಾರವನ್ನು ಮುಚ್ಚಿರುವನು. ಅಸತ್ಯವನ್ನು ನುಡಿಯದೇ, ಪರುಷವನ್ನಾಡದೆ, ಚಾಡಿಗಳನ್ನು ಹೇಳದೆ, ದುರ್ವಾದಕ್ಕಿಳಿಯದೆ, ಮಿತಹಿತ ಪ್ರಿಯಭಾಷನಾದವನು ವಾಣಿ ದ್ವಾರವನ್ನು ಮುಚ್ಚಿರುವನು. ಇಂತು ಚತುರ್ದ್ವಾರಗಳನ್ನು ಮುಚ್ಚಿಡಬಲ್ಲವನು ಬ್ರಾಹ್ಮಣನು; ಅಂತಹ ಅಂತುರ್ಮುಖನಿಗಿನ್ನೇಕೆ ಯಜನ ಯಾಗಗಳು? ಇನ್ನೇಕೆ ದಾನ ವ್ರತಗಳು? ಇನ್ನೇಕೆ ವೇದವಾದ ಹಠ?

ದ್ವಂದ್ವಗಳನ್ನು ಬಿಟ್ಟು, ಕೀರ್ತಿ ಪ್ರತಿಷ್ಠಾವೃದ್ಧಿಗಳಿಗೆ ಹಾತೊರೆಯದೆ, ವಿಷ್ಣು

ಭಕ್ತನಾದ ಬ್ರಾಹ್ಮಣನೇ ಸದ್ವಿಪ್ರನು. ಅಂತು ಸದಾಚಾರವನ್ನು ನಡೆಸಲಾರದವನು ಛಾಂದಸನಾಗಿ, ಪ್ರವೃತ್ತಿ ಕರ್ಮಗಳನ್ನು ಮಾಡುತ್ತಾ, ಜನನ ಮರಣಾವರ್ತದಲ್ಲಿ ಬಿದ್ದಿರುವನು.''

ಇಂತು ನುಡಿದ ಕಪಿಲನ ವಚನ ತತಿಯ ಸಾರವನ್ನರಿತು ಸ್ಯೂಮರಶ್ಮಿಯು 'ಮಹಾತ್ಮಾ ! ನನ್ನನ್ನು ಸ್ಯೂಮರಶ್ಮಿ ಎಂಬರು. ಧರ್ಮ ನಿರ್ಣಯವನ್ನು ನಿನ್ನಿಂದ ತಿಳಿಯಬೇಕೆಂದು ಮಾತಾಡಿದೆನಾಗಲಿ, ಅನ್ಯಥಾ ಇಲ್ಲ. ನಿನ್ನನ್ನು ಆಶ್ರಯಿಸಿದೆನು. ಶಿಷ್ಯನೆಂದು ಸ್ವೀಕರಿಸಿ, ನನಗೆ 'ವೇದಪ್ರಮಾಣ ವಿಷಯವನ್ನು, ವರ್ಣಾಶ್ರಮಾಚಾರ ವಿಧಾನವನ್ನು ಸುವ್ಯಕ್ತವಾಗಿ ತಿಳಿಸಿಕೊಡು ! ನನ್ನನ್ನು ರಕ್ಷಿಸು!' ಎಂದು ಬೇಡಿದನು.

ಆಗ ಕಪಿಲನು ಪ್ರೀತನಾಗಿ, 'ಮುನೇ! ಕೇಳು. ಜ್ಞಾನವನ್ನಾಶ್ರಯಿಸಿದವನಿಗೆ ಎಂದಿಗೂ ಹಾನಿಯಿಲ್ಲ. ಜ್ಞಾನರಹಿತನು ಕಾಮಾಧೀನನಾಗಿ, ಕೆಡುವನು. ಅಹಂಮಮಕಾರಗಳಿಂದ ಕ್ರೋಧ ಮೋಹಗಳು ಅವುಗಳಿಂದ ಹಿಂಸಾ ದ್ವೇಷಗಳು ಪುಟ್ಟುವವು. ಆದುದರಿಂದ ಅಜ್ಞಾನವನ್ನು ಕಳೆದುಕೊಂಡು, ಜ್ಞಾನವನ್ನಾರ್ಜಿಸಬೇಕು. ಜ್ಞಾನವು ಗುರುಮುಖದಿಂದ ನಡೆದ ವೇದ ವಿಚಾರದಿಂದಲೇ ಪುಟ್ಟುವುದು. ಅನಿಷ್ಟ ಪರಿಹಾರಕ್ಕಾಗಿ ವಿಪಕ್ಷವನ್ನು ಅಂದರೆ .ಕರ್ಮ ದೇವತಾದಿಗಳನ್ನೂ ಅಮುಖ್ಯವಾಗಿ ನಿರೂಪಿಸಿ, ವೇದಗಳು ಇಷ್ಟಪ್ರಾಪ್ತಿಗಾಗಿ ಶ್ರೀಹರಿಯನ್ನು ಮುಖ್ಯ ವೃತ್ತಿಯಿಂದ ಪ್ರತಿಪಾದಿಸುತ್ತಿವೆ. ಈ ಮರ್ಮವನ್ನರಿಯದ ಮೂಢನು ತ್ರಿಗುಣವಿಕಾರ ಸ್ವರ್ಗಾದಿಗಳನ್ನು ಬಯಸಿ ಪ್ರವೃತ್ತಿ ಕರ್ಮರತನಾಗಿ, ಇತರ ದೇವತಾಕ ಯಜ್ಞಗಳನ್ನು ಮಾಡುವನು. ಸಮ ಸುಖ ದುಃಖನು, ಹರಿಸರ್ವೋತ್ತಮತ್ವಜ್ಞಾನಿಯು ಆದ ವಿದ್ವಾಂಸನು ಸಕಲ ಕರ್ಮ ಫಲವನ್ನು ಶ್ರೀಹರಿ ಪ್ರೀತಿಗಾಗಿ ಸಮರ್ಪಿಸಿ, ನಿವೃತ್ತ ಕರ್ಮರತನಾಗಿ, ಸಂಸಾರ ಬಂಧದಿಂದ ಮುಕ್ತನಾಗುವನು.

ಶಬ್ದವೆಂದರೆ ವೇದಗಳು; ಪರಬ್ರಹ್ಮವೆಂದರೆ ಶ್ರೀನಾರಾಯಣನು. ಸಕಲ ಕಲ್ಯಾಣ ಗುಣಪೂರ್ಣನಾದ ಪರಬ್ರಹ್ಮನನ್ನು ತಿಳಿಸಿ ಕೊಡುವ ಶಬ್ದ ಬ್ರಹ್ಮವನ್ನು ಅಪ್ರಮಾಣವೆನ್ನಲಾದೀತೇ ? ಎಂದಿಗೂ ಇಲ್ಲ. ಆದರೆ ವೇದ ಮುಖ್ಯ ಸಚ್ಛಾಸ್ತ್ರವು ''ಶ್ರೀಹರಿಯೇ ಸರ್ವೋತ್ತಮನು ; ಸರ್ವ ಶಬ್ದದಿಂದ ಕ್ಷರಾಕ್ಷರ ಪುರುಷರು, ಜಡ ಪ್ರಕೃತಿಯು ಗೃಹೀತವಾಗಿದೆ. ಶ್ರೀಹರಿಯ ಯಥಾರ್ಥ ಜ್ಞಾನವೇ ತತ್ ಪ್ರಸಾದ ಸಂಪಾದಕವು. ಪ್ರಸಾದದಿಂದಲೇ ಮೋಕ್ಷ. ಶ್ರೀಹರಿಯ ಲೋಕವಲ್ಲದ ಇತರ ಸರ್ವಲೋಕಗಳು ಕರ್ಮ ಫಲಾಪಾದಿತಗಳಾದುದರಿಂದ, ಕರ್ಮಫಲದೊಂದಿಗೆ ಮುಗಿಯುವವು. ಶ್ರೀಹರಿಯ ಜ್ಞಾನವು ಶ್ರವಣಾದಿಗಳಿಂದ ಬರುವುದು. ಶ್ರವಣವು ವೀರ್ಯವಂತವಾಗಬೇಕಾದರೆ ಮನಶ್ಶುದ್ಧಿಯುಳ್ಳವನಿಗೆ ಮಾತ್ರ! ಮನಶ್ಶುದ್ಧಿಯು ವಿಹಿತಕರ್ಮಾನುಷ್ಠಾನದಿಂದ - ಇಂತು ಕರ್ಮದೇವತಾದಿಗಳನ್ನು ತಿಳಿಸುವ ವೇದವು ಕೂಡ ಮುಖ್ಯವಾಗಿ ಶ್ರೀಹರಿ ಪ್ರೀತಿಯನ್ನೇ ಮುಕ್ತಿ ಸಂಪಾದಕವೆಂದು ಪ್ರತಿಪಾದಿಸುತ್ತಿದೆ. ಇಂತು ಶಾಂತಾತ್ಮನು, ಅಹಂಕಾರವರ್ಜಿತನು, ನಿವೃತ್ತಿ ಕರ್ಮನಿರತನು, ವೇದಮುಖ್ಯಾರ್ಥ ವಿಚಾರ

ನಿಷ್ಠನು ಆದವನು ಸನ್ಯಾಸಿಯೇ ಆಗಬೇಕೆಂದಿಲ್ಲ. ಗೃಹಸ್ಥನಾದರೂ ವಿಮುಕ್ತನಾಗಿ ಜ್ಞಾನ ಸುಖ ಸ್ವರೂಪನಾಗಿ ಶ್ರೀಶ ಸಾನ್ನಿಧ್ಯವನ್ನು ಸೇರುವನು. ಧರ್ಮದ ನಾಲ್ಕು ಪಾದಗಳಾಗಿರುವ ನಾಲ್ಕು ಆಶ್ರಮದ ನಾಲ್ಕು ವರ್ಣದವರೇ ಆಗಲಿ, ಸಕಲ ಸ್ವಕರ್ಮವಿಹಿತ ಫಲವಾದ ಸ್ವಯೋಗ್ಯ ಜ್ಞಾನವನ್ನು ಪೊಂದಿ, ಅದರಿಂದ ಶ್ರೀಹರಿಯ ಪ್ರಸಾದ ಪಾತ್ರನೂ ಆಗಿ, ಸ್ವಯೋಗ್ಯ ಸ್ವರೂಪಾನಂದ ಭಾಜನನಾಗುವನು.

ಸಂತುಷ್ಟಿ ಎಂಬ ಅಮೃತವನ್ನು ಕುಡಿದು ತೃಪ್ತನಾದವನಿಗೆ ಗೃಹವೇನು? ಕಾಂತಾರವೇನು? ಅಕ್ಷೋಭ್ಯಮನಃ ಪ್ರವೃತ್ತಿಯಾದವನು ಎಲ್ಲಿದ್ದರೂ, ಎಂತಿದ್ದರೂ ಶ್ರೀಶೇಚ್ಛೆಯ ಸ್ವಾತಂತ್ರ್ಯವನ್ನರಿತು, ನಿಶ್ಚಿಂತನಾಗಿರುವನು. ತೃಷ್ಣಾರಾಹಿತ್ಯವು ಚತುರ್ಥಾಶ್ರಮದಲ್ಲಿ ಅನಾಯಾಸ ಸಾಧ್ಯವಾಗಿದೆ; ಗೃಹಸ್ಥನಿಗೆ ಅದು ಕಷ್ಟಸಾಧ್ಯವಾಗಿದೆ. ಯಾವ ಆಶ್ರಮದವನೇ ಆಗಲಿ ಶಾಂತ, ದಾಂತ, ಉಪರತ, ತಿತಿಕ್ಷುನಾದರೆ ಸಾಕು, ಜ್ಞಾನವನ್ನಾರ್ಜಿಸಿ, ಮುಕ್ತನಾಗಬಹುದು. ವಿಪ್ರನಿಗೆ ವಿಹಿತವಾದ ಜ್ಞಾನ ಯಜ್ಞದ ಮುಂದೆ ಹಿಂಸಾಮಯ ಯಜ್ಞವು ಹೇಯವೆಂದೆನಾಗಲಿ, ಯಜ್ಞಮಾತ್ರವನ್ನು ನಾನು ನಿಷೇಧಿಸಿದವನಲ್ಲ.

ತ್ಯಾಗವೆಂದರೆ ವಿಹಿತ ಕರ್ಮಫಲತ್ಯಾಗ; ಶಮವೆಂದರೆ ಭಗವದ್ಭಕ್ತಿ, ದಮವೆಂದರೆ ಇಂದ್ರಿಯನಿಗ್ರಹ; ಉತ್ತರವೆಂದರೆ ಸರ್ವೋತ್ತಮ ಶ್ರೀಹರಿಯನ್ನು ತಿಳಿವ ಜ್ಞಾನ; ಸಂತೋಷವೆಂದರೆ ಸ್ವರೂಪ ಪ್ರಾದುರ್ಭಾವ; ಮೋಕ್ಷವೆಂದರೆ ಸಂಸಾರ ಬಂಧ ನಿವೃತ್ತಿ; ವೇದವೆಂದರೆ ಶ್ರೀಹರಿಯು ಸರ್ವನೆಂದರೆ ಸರ್ವತ್ರವ್ಯಾಪಿಸಿ ಸ್ವಾಮಿಯಾಗಿರುವ ಶ್ರೀಶನು; ಶಿವ, ಅವ್ಯಕ್ತ, ಶುಭ ಪ್ರಭವ, ಪ್ರಳಯ, ಶಾಂತಿ, ಧ್ರುವ ಎಂಬ ನಾಮಗಳುಳ್ಳ ಶ್ರೀಶನು; ಮಂಗಳನು; ಸ್ವತಃ ಅವ್ಯಕ್ತ ಸ್ವರೂಪನು, ಅನುಗ್ರಹದಿಂದ ದರ್ಶನೀಯನು, ಜಗಜ್ಜನ್ಮ ಸಂಹಾರ ಪೋಷಣ ನಿಮಿತ್ತ ಸ್ವತಂತ್ರಕಾರಣನು, ನಿರ್ವಿಕಾರನು ಆಗಿರುವನು. ಇಂತು ವೇದತಾತ್ಪರ್ಯವನ್ನು ನಿನಗರುಹಿದೆನು. ವೇದವಿದ ವಿಪ್ರೋತ್ತಮರಿಗೆ ವಂದನವು!' ಎಂದು ಕಪಿಲನು ಉಪದೇಶಿಸಲು, ಕೇಳಿ, ಸ್ಯೂಮರಶ್ಮಿಯು ಆ ಮಹಾತ್ಮನಿಗೆ ನಮಿಸಿ, ಕೃತಾರ್ಥನಾದನು.

## ೧೨. ಕುಂಡಧಾರ ಕಥೆ — ಉಂಛವೃತ್ತಿ

ಧರ್ಮನಂದನು 'ತಾತ! ಧರ್ಮಾರ್ಥಕಾಮಗಳು ತ್ರಿವರ್ಗವೆನಿಸಿಗೃಹಿಗಳಿಗೆ, ಸಂಪಾದ್ಯ ವಾಗಿವೆ! ಈ ಮೂರರಲ್ಲಿ ಯಾವ ಪುರುಷಾರ್ಥವು ಶ್ರೇಷ್ಠವಾಗಿದೆ?' ಎಂದು ಕೇಳಲು ಗಂಗಾನಂದನನಿಂತೆಂದನು:

'ರಾಜನ್! ವಿಪ್ರನೋರ್ವನು ಧನಾರ್ಥಿಯಾಗಿ ವಿವಿಧವ್ರತ ತಪೋನಿಯಮಗಳನ್ನು ನಡೆಸಿಯೂ ವ್ಯರ್ಥಪ್ರಯತ್ನನಾದನು. ಒಂದು ದಿನ ಅವನು ಕುಂಡಧಾರನೆಂಬ ಯಕ್ಷನು ಶೀಘ್ರಧನಪ್ರದನೆಂದು ಕೇಳಿ ಬಲು ಭಕ್ತಿಯಿಂದ ಆ ಯಕ್ಷವರನನ್ನು ಭಜಿಸಿದನು.

ಕುಂಡಧಾರನು ಪ್ರೀತನಾಗಿ, ಕಾಣಿಸಿಕೊಂಡು, 'ವರವನ್ನು ಬೇಡು! ಕೊಡುವೆ'ನೆಂದನು. ವಿಪ್ರನು, 'ನನಗೇ ಸಮೃದ್ಧ ಧನಲಾಭವಾಗಬೇಕೆ'ಂದು ಯಾಚಿಸಿದನು. ಕುಂಡಧಾರನು 'ಸರೇ' ಎಂದು ತನ್ನ ಸ್ವಾಮಿಯಾದ ಮಾಣಿಭದ್ರನನ್ನು ಧ್ಯಾನಿಸಿದನು.

ಧನದ ಭೃತ್ಯವರನು, ಸಕಲಸಂಪನ್ನಿಧಿಯು, ಕಾಂಚನಾಸೀನನು, ವಿವಿಧ ಯಕ್ಷಸೇವಿತನು ಆದ ಮಾಣಿಭದ್ರನು ಕುಂಡಧಾರನಿಗೆ ಕಾಣಿಸಿ, 'ಏನು ಬೇಕೆಂ'ದನು. 'ನನ್ನ ಭಕ್ತನಾದ ಈ ವಿಪ್ರನಿಗೆ ಧನಸಮೃದ್ಧಿಯನ್ನೀಯಬೇ'ಕೆಂದ ಕುಂಡಧಾರನನ್ನು ನೋಡಿ, ಮಾಣಿಭದ್ರನು, ಬೇಕಾದಷ್ಟು ಧನವನ್ನೀವೆನು. ಕೊಂಡು ಹೋಗಿ, ನಿನ್ನ ಭಕ್ತನಿಗೆ ಕೊಡು! ಆದರೆ ಧನವಿದ್ದು ಅವನಿಗೆ ಆಯುವಿಲ್ಲದಿರೆ ಧನದಿಂದ ಏನು ಪ್ರಯೋಜನವೋ ಸ್ವಲ್ಪ ಆಲೋಚಿಸು! ಎಂಬ ಸತ್ಯವನ್ನು ವಿಪ್ರನಿಗೆ ತಿಳಿಸು' ಎಂದನು.

ಆ ಮಾತನ್ನಾಲಿಸಿ ವಿಪ್ರನು ವಿವಿಧ ಸಂಸಾರಿಕ ಸುಖವು ಹೇಯ ನಶ್ವರವೆಂದು ತಿಳಿದು, ವಿರಕ್ತನಾಗಿ, 'ದೇವ! ನನಗೆ ಧನವು ಬೇಕಿಲ್ಲ! ನನ್ನ ಮನವು ಧರ್ಮರತವಾಗಿರಲಿ! ಇದೇ ನಾ ಬೇಡುವ ವರ'ವೆಂದನು. ಧರ್ಮಮಾರ್ಗದಿ ನಡೆವನಿಗೆ ಸರ್ವ ಸಂಪತ್ತೂ ಕೈಗೂಡುವುದೆಂದು ತಿಳಿದ ಕುಂಡಧಾರನೂ, 'ಮಾಣಿಭದ್ರ ! ನನ್ನ ಭಕ್ತನ ಮನವನ್ನು ಧರ್ಮದಲ್ಲಿಡು! ಧನವನ್ನು ಕೊಡುವುದನ್ನು ಬಿಡು! ' ಎಂದು ವಿನಯದಿಂದ ಬೇಡಿದನು. ಮಾಣಿಭದ್ರನು ಪ್ರೀತನಾಗಿ, ಉತ್ತಮ ದೇವತೆಗಳನ್ನು ಪ್ರಾರ್ಥಿಸಿ, ಅವರ ಅಪ್ಪಣೆಯಂತೆ, ವಿಪ್ರವರನಿಗೆ ಧರ್ಮಮತಿಯನ್ನು ಕೊಟ್ಟು ಕರುಣಿಸಿದನು.

ಅಂದಿನಿಂದ ಅವನೀಸುರನು ಅತ್ಯಂತ ತೃಪ್ತನು, ಮೂಲಫಲಾಹಾರನು, ವಿಷ್ಣು ಗುಣವಿಚಾರನು ಆಗಿ ತಪವನ್ನು ಮಾಡಿದನು. ಕ್ರಮವಾಗಿ ಅವನು ಸಲಿಲಾಶನನು, ಮುಂದೆ ಸಮೀರ ಜೀವನನು, ಆಗಿ ತೀವ್ರತಪೋನಿರತಿಯಿಂದ ಬಹುಕಾಲ ಕಳೆದನು. ಅವನ ಕಾಯ, ಇಂದ್ರಿಯ, ಮಾನಸಗಳು ಮಾನುಷೋತ್ತರವು, ದೇವ ಪ್ರಸಾದ ವಿಸ್ತರವು, ಮಹಿಮಾತಿಶಯವು, ಶ್ರೀಶ ಗುಣಚಿಂತನಾಶಯವು ಆದವು. ಆಗ ವಿಪ್ರನಿಗೆ "ನನಗೇಕೆ ಧನ ? ನನ್ನನ್ನು ಆಶ್ರಯಿಸಿದವರಿಗೆ ಬೇಕಾದ ಧನರಾಜ್ಯ ಸಂಪತ್ತುಗಳನ್ನು ನಾನೇ ಕೊಡಬಲ್ಲವನಾಗಿರುವೆನು. ಅವರ ಪಾಪಗಳನ್ನು ಕಳೆಯಬಲ್ಲವನಾಗಿರುವೆನು. ಇದೆಲ್ಲವು ದೈವಾನುಗ್ರಹವೇ ಸರಿ! " ಎಂಬ ಮಾನಸಿಕ ತೃಪ್ತಿ ಸಂತೋಷಗಳು ತಲೆದೋರಿದವು.

ಕುಂಡಧಾರನು ವಿಪ್ರನು ಸಿದ್ಧನಾದನೆಂದು ತಿಳಿದು, ಸಂತಸದಿಂದ ಅವನಿಗೆ ಪ್ರತ್ಯಕ್ಷನಾದನು. ವಿಪ್ರನು ಭಕ್ತಿಭರಿತನಾಗಿ, ಜಲಕಮಲಗಂಧ ಫಲಗಳಿಂದ ಯಕ್ಷರಾಜನನ್ನು ಪೂಜಿಸಿ, ಬಾಗಿ ನಮಿಸಿದನು. ಕುಂಡಧಾರನು ಆ ವಿಪ್ರನನ್ನು ಕೈಪಿಡಿದೆತ್ತಿ ಅಪ್ಪಿ, ಮೈಸವರಿ, 'ಬ್ರಾಹ್ಮಣೋತ್ತಮ! ಧನಕಾಮಗಳು ಧರ್ಮದ ಕಲೆಗೂ ಸಮವಲ್ಲವೆಂಬ ಸತ್ಯವು ನಿನಗೆ ಗೋಚರವಾಯಿತೇ ? ಸಿದ್ಧನಾದೆ! ಪಾಪಗಳೆಲ್ಲವು ತಪೋವಹ್ನಿಯಲ್ಲಿ ಸುಟ್ಟುಹೋದವು. ಇನ್ನು ಪುಣ್ಯಗಳನ್ನೂ, ಶ್ರೀಹರಿಗರ್ಪಿಸಿ, ಭಕ್ತಿಯಿಂದ ನಾರಾಯಣ ಚರಣವನ್ನು ಭಜಿಸು! ಅನಾಮಯನಾಗುವೆ! ಮುಕ್ತನೂ ಆಗುವೆ!' ಎಂದು ಅಭಿನಂದಿಸಿ, ಅಂತರ್ಹಿತನಾದನು. ವಿಪ್ರನು ಮುನಿಸಿದ್ಧ ಪೂಜಿತನಾಗಿ ವಿಹರಿಸಿದನು.'

ಧರ್ಮರಾಜನು 'ತಾತ! ಯಜ್ಞದಾನ ತಪಸ್ಸುಗಳು ಮೋಕ್ಷಸಾಧನವಾಗಿ, ಕರ್ತವ್ಯವೆನಿಸಿವೆ. ಧರ್ಮಫಲವಾದ ಸ್ವರ್ಗಾದಿಗಳನ್ನೂ, ಐಹಿಕ ಸಂಪದ್ರೂಪವಾದ ಕರ್ಮಫಲ ವನ್ನೂ ಬೇಡದೆ ಮಾಡುವ ಯಜ್ಞವೆಂತಹುದು?' ಎಂದು ಕೇಳಿದನು. ಭೀಷ್ಮ ನಿಂತೆಂದನು:

'ರಾಜನ್, ವಿಹಿತ ಕರ್ಮವನ್ನು ಫಲಾಪೇಕ್ಷೆಯಿಲ್ಲದೆ ಮಾಡಿ, ಶ್ರೀಹರಿಗರ್ಪಿಸುವುದರಿಂದ ಮೋಕ್ಷವು ಸಿಗುವುದು. ವಿದರ್ಭ ದೇಶದಲ್ಲಿ ಸತ್ಯನೆಂಬ ದ್ವಿಜನಿದ್ದನು. ಅವನು ಉಂಛವೃತ್ತಿಯಿಂದ ಜೀವಿಸುತ್ತಿದ್ದನು. ಶಾಮಕಾನ್ನದೊಡನೆ, ಸೂರ್ಯಪರ್ಣಿ, ಸುವರ್ಚಲೆಗಳೆಂಬ ಶಾಕಗಳನ್ನು, ತಿಕ್ತಾದಿವಿರಸವಾಗಿದ್ದರೂ ಉಂಡು, ಉಂಡು ಅವನಿಗೆ ಅವು ಅಮೃತಸಮವಾಗಿದ್ದವು. ಆದರೆ ಅವನ ಮನದಲ್ಲಿ ಸ್ವರ್ಗಭೋಗಗಳ ಆಶೆಯು ಮನೆ ಮಾಡಿತ್ತು. ಅವನು ಪಶ್ವಾದಿಗಳ ಆಲಂಭವನ್ನು ಸಾಧಿಸಲು ಅಸಮರ್ಥನಾಗಿದ್ದೂ, ಪಶುಹಿಂಸಾಯಜ್ಞವನ್ನು ಆಚರಿಸಬೇಕೆಂಬ ಲವಲವಿಕೆಯಿಂದ ಪಶುಸ್ಥಾನದಲ್ಲಿ ಯವಾದಿಗಳನ್ನಿಟ್ಟು ಶ್ರೀವಿಷ್ಣು ದೇವತಾಕವಾದ ಯಜ್ಞವನ್ನು ಮಾಡತೊಡಗಿದನು.

ಅವನ ಪತ್ನಿಯು ಪುಷ್ಕರಧಾರಿಣಿಯು. ಅವಳು ವ್ರತಕೃಶಳು, ಶುಚಿಯು, ಹಿಂಸಾವಿಮುಖಿಳೂ ಆಗಿದ್ದಳು. ಮಯೂರಬರ್ಹರಚಿತವಾದ ಅವಳ ಸೀರೆಯು ಜೀರ್ಣವಾಗಿತ್ತು. ಹೋತೃಸ್ಥಾನದಲ್ಲಿ ಕೂತು ಕರೆದ ಗಂಡನ ಶಾಪಭಯದಿಂದ ಅವಳು ತನ್ನ ಪತ್ನೀ ಸ್ಥಾನದಿ ಬಂದು ಕೂತಳು. ಅವನ ಹಿಂಸಾಭಿಲಾಷೆಯನ್ನು ತಿಳಿದು, ಅವಳು ಆ ಯಜ್ಞದ ಫಲವನ್ನು ಅಭಿಲಕ್ಷಿಸದಿದ್ದಳು. ಆ ವನದಲ್ಲಿ ಪರ್ಣಾದನೆಂಬ ಹೆಸರಿನಿಂದ ಧರ್ಮನು ಸಂಚರಿಸುತ್ತಿದ್ದನು. ಮೃಗರೂಪನಾದ ಪರ್ಣಾದ ಮುನಿಯು ಶುಕ್ರವಂಶಜನೂ ಆಗಿದ್ದನು. ಅವನು ಜಿಂಕೆಯ ರೂಪದಿಂದ ಬಂದು, ಸತ್ಯನನ್ನು ನೋಡಿ, 'ಮುನಿವರ! ನಿನ್ನಾಶೆಯನ್ನು ಈಡೇರಿಸಿಕೋ! ಈ ನಿನ್ನ ಯಜ್ಞವು ಸಂಕಲ್ಪಿತವಾದ ಪಶುವೆಂಬ ಅಂಗದಿಂದ ಹೀನವಾಗಿದೆ. ಅಂತಹ ಯಜ್ಞದಿಂದ ನಿನಗೆ ಫಲವಾಗದು. ನನ್ನನ್ನು ಕಡಿದು, ಹೋಮಿಸು! ನಿನ್ನ ಯಜ್ಞವನ್ನು ಸಾಂಗಗೊಳಿಸು! ನಿನಗೆ ಸ್ವರ್ಗ ಸುಖಗಳು ಕರಗತವಾಗುವವು' ಎಂದನು. ಅದೇ ಸಮಯದಲ್ಲಿ ಸವಿತೃ ದೇವತೆಯಾದ ಸಾವಿತ್ರಿಯು ಸತ್ಯನ ಮುಂದೆ ಮೈದೋರಿ ನಿಂತು, 'ಜಿಂಕೆಯ ಪ್ರಾರ್ಥನೆಯಂತೆ, ಅದನ್ನು ಹೋಮಿಸಿ, ಸ್ವರ್ಗವನ್ನು ಪಡೆ!' ಎಂದು ನಿಮಂತ್ರಿಸಿದಳು. ಸತ್ಯನು ಪರ್ಣಾದ ಮುನಿ ಎಂದರಿತು ಜಿಂಕೆಯನ್ನು ಕೊಲ್ಲಲು ನಿರಾಕರಿಸಿದನು. ಆಗ ಸಾವಿತ್ರಿಯು ಯಜ್ಞಲೋಪವೇನೆಂದು ನೋಡುವವಳಂತೆ ಅಗ್ನಿಯನ್ನು ಪ್ರವೇಶಿಸಿ ರಸಾತಲವನ್ನು ಸೇರಿದಳು.

ಮುಂದೆ ನಿಂತು, ಹೋಮಿಸೆಂದು ಬೇಡುವ ಜಿಂಕೆಯ ಮೈಸವರಿ, ಸತ್ಯನು, 'ನಾನು ನಿನ್ನನ್ನು ಕೊಲ್ಲಲಾರೆನು' ಎಂದನು. ಆ ಜಿಂಕೆ ಎಂಟು ಅಡಿ ದೂರ ಸಾಗಿ ಹಿಂದಿರುಗಿ ಬಂದು, 'ವಿಪ್ರೋತ್ತಮ! ನನ್ನನ್ನು ಕೊಂದು, ಹೋಮಿಸು! ಅದರಿಂದ ನನಗೆ ಸದ್ಗತಿಯೂ, ನಿನಗೆ ಸ್ವರ್ಗ ಸುಖಗಳೂ ಸಿಗುವವು. ನೋಡಿ ತಿಳಿ, ನಿನ್ನ

ಸ್ವರ್ಗಭೋಗಗಳನ್ನು! ದಿವ್ಯದೃಷ್ಟಿಯನ್ನಿತ್ತಿರುವೆನು' ಎಂದು, ಆ ವಿಪ್ರನಿಗೂ ದಿವ್ಯದೃಷ್ಟಿಯನ್ನು ಕೊಡಲು, ಅವನು ಅಪ್ಸರೆಯರನ್ನೂ ವಿಮಾನಗಳನ್ನೂ ಕಂಡನು. ಅವನ ಮನದಲ್ಲಿದ್ದ ಆಶಾಲತೆಗಳು ಅಂಕುರಿಸಿ ಚಿಗುರಿದವು. ಮೃಗವನ್ನು ಹಿಂಸಿಸಿ, ಸೇರಲಹುದಾದ ಭೋಗಮಯ ಲೋಕವನ್ನು ಚಿಂತಿಸುತ್ತಿರುವ ಸತ್ಯನಿಗೆ, ಜಿಂಕೆಯು ಧರ್ಮರೂಪದಿಂದ ಗೋಚರಿಸಿ ಇಂತೆಂದಿತು: 'ವಿಪ್ರ! ನಿನ್ನನ್ನು ಪರೀಕ್ಷಿಸಿ, ಶುದ್ಧೀಕರಿಸಬೇಕೆಂದು ಬಂದೆನು. ನಿನಗೆ ಕಾಣಿಸಿದ ಸ್ವರ್ಗಕಾಮಿತಗಳೂ ಅಶಾಶ್ವತ ಹೇಯಗಳೆಂದು ನಿನಗೆ ಈಗಲಾದರೂ ತಿಳಿಯಿತೇ? ಹಿಂಸೆಯು ಸರ್ವಥಾ ಧರ್ಮವಲ್ಲ. ಅದರಿಂದ ಪುಣ್ಯವಿಲ್ಲ. ಪ್ರವೃತ್ತಿ ಕರ್ಮರತನು ಪಾಪಪಂಕಲಿಪ್ತನಾಗುವನು.

ಧರ್ಮನ ಹಿತವಚನಗಳಿಂದ ಸತ್ಯನಿಗೆ ಜ್ಞಾನೋದಯವಾಯಿತು. ಅವನು ಮಿತ್ರಹತ್ಯೆ, ವಿಪ್ರಹತ್ಯೆಗಳಿಗೂ ಅಂಜದೆ, ಸ್ವರ್ಗಸುಖಕ್ಕಾಗಿ ಹಿಂಸಾಮಯ ಯಜ್ಞವನ್ನು ಹವಣಿಸಿದ ತನ್ನ ಕೇಡುಬುದ್ಧಿಗೆ ತಾನೇ ನಾಚಿದನು. ಹಿಂಸಾಲೋಚನೆಯಿಂದಲೇ ತನ್ನ ತಪಸ್ಸು ಬಹುಭಾಗ ನಾಶವಾದದ್ದನ್ನು ತಿಳಿದು ಸತ್ಯನು ಪಶ್ಚಾತ್ತಾಪಪಟ್ಟನು. ಧರ್ಮಸಾವಿತ್ರ್ಯಾದಿ ದೇವತೆಗಳೂ ಅವನ ಅಹಿಂಸಾ ಬುದ್ಧಿಗೆ ಪ್ರಸನ್ನನಾದರು. ಅವನ ಪತ್ನಿಯೂ ಬಲು ಸಮಾಧಾನ ಹೊಂದಿದಳು. ಧರ್ಮರಾಜ! ಹಿಂಸಾಮಯ ಯಜ್ಞವನ್ನು ವಿಪ್ರನು ಮಾಡಲಾಗದೆಂದು 'ಪರ್ಯಗ್ನಿಕೃತಾನಾರಣ್ಯಾನ್ ಉತ್ಸೃಜಂತಿ' ಎಂಬ ವೇದವಚನವೂ, 'ಅಥಶ್ವೋಭೂತೇಷ್ಟಕಾಃ ಪಶುನಾ ಸ್ಥಾಲೀ ಪಾಕೇನವಾ' ಎಂಬ ಗೃಹಸೂತ್ರವೂ ಸಾರುತ್ತಿವೆ. ಅಹಿಂಸಾಮಯವೂ, ಶ್ರೀವಿಷ್ಣು ಪ್ರೀತಿಕರವೂ ಆದುದೇ ಸರಿಯಾದ ಯಜ್ಞವೆಂದು ತಿಳಿ!

ಧರ್ಮರಾಜನು, 'ತಾತ! ಪುರುಷನು ಪಾಪಾಚರಣೆಗೆ ಸಿದ್ಧನಾಗಲು ಕಾರಣ ವೇನು? ಧರ್ಮಾಚರಣೆಗೆ ಕಾರಣವಾವುದು? ಅವನು ಪಾಪಪುಣ್ಯಗಳ ಬಂಧದಿಂದ ಬಿಡಲ್ಪಡುವುದೆಂತು? ಮುಕ್ತಿಯನ್ನು ಪಡೆವ ಬಗೆ ಹೇಗೆ?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ಗಂಧರಸರೂಪಾದಿ ವಿಷಯಗಳ ಧ್ಯಾನವು ಕಾಮವನ್ನು ಪುಟ್ಟಿಸುವುದು. ಕಾಮವು ಕೆಟ್ಟಾಗ ಅಂದರೆ ಕೈಗೂಡಿ ಬರದಾಗ ಕ್ರೋಧವೂ, ಬಂದರೆ ಲೋಭವೂ ಪುಟ್ಟುವವು. ಅದರಿಂದ ಮೋಹ, ಮದ, ಮತ್ಸರಗಳು ತಲೆದೋರುವವು. ತನ್ನಲ್ಲಿಯೇ ಇದೆ ಎಂಬುದು ಮದ; ಇನ್ನೊಬ್ಬರಿಗೆ ಸಿಗಬಾರದೆಂಬುದು ಮತ್ಸರ; ಭೋಗಲಾಲಸತೆಯಿಂದ ಮೋಹ; ಇಂತು ಶತ್ರುಷಟ್ಕದಿಂದ ಪ್ರೇರಿತನಾಗಿ ಮನುಜನು ಪಾಪಾಚರಣೆಗೆ ಸಿದ್ಧನಾಗುವನು. ಅವನಿಗೆ ಧರ್ಮಾಧರ್ಮ ಜ್ಞಾನವಾಗದಿರುವುದು ಮೋಹದಿಂದಲೇ! ಆದುದರಿಂದ ಶತ್ರುಮುಖ್ಯನಾದ ಕಾಮನನ್ನು ಹತ್ತಿಕ್ಕಿ, ಸಜ್ಜನ ಸಂಗದಲ್ಲಿ, ಶಾಸ್ತ್ರವಿಚಾರರತನಾದವನು ಮಾತ್ರ ಪಾಪದೂರನಾಗಬಹುದು. ಶೀತೋಷ್ಣ ಸುಖದುಃಖಾದಿ ದ್ವಂದ್ವಗಳ ವಿಕಾರಗಳಿಗೆ ಮನದಲ್ಲಿ ಆಸ್ಪದವೀಯದೆ, ಹರಿಭಕ್ತ ನಾದವನು ಪುಣ್ಯಕಾರ್ಯನಿರತನಾಗುವನು. ಪುಣ್ಯವನ್ನು ಶ್ರೀಹರಿಗರ್ಪಿಸಿ, ಪಾಪವನ್ನು ಪಶ್ಚಾತ್ತಾಪ, ಪ್ರಾಯಶ್ಚಿತ್ತ, ಹರಿಚಿಂತನಗಳಿಂದ ಕಳೆದುಕೊಂಡು ಮನುಜನು ಮುಕ್ತನಾಗುವನು. ಪೂರ್ವಾಂಬುಧಿಗೆ ಪೋಗುವ ಮಾರ್ಗವು ಪಶ್ಚಿಮ ಸಮುದ್ರವನ್ನು

ಸೇರುವುದೇ? ಇಲ್ಲ. ಅಂತೆಯೇ ಮೋಕ್ಷಮಾರ್ಗವು ಯಥಾರ್ಥ ಜ್ಞಾನವೇ ಆಗಲಿ, ಅನೇಕ ಚಿತ್ತವಿಭ್ರಾಂತರು ಹೇಳುವಂತೆ ಐಕ್ಯಜ್ಞಾನ, ಮಿಥ್ಯಾಜ್ಞಾನ, ಶೂನ್ಯಸಂಪಾದನ, ಸಂತತೋರ್ಧ್ವಗಮನಾದಿಗಳಲ್ಲ. ಘಟವನ್ನು ಮಾಡಲು ಮಣ್ಣಿಲ್ಲದಿರೆ ಸಾಧ್ಯವೇ? ಮತ್ತು ಕುಲಾಲಾದಿ ಚೇತನರು, ಚಕ್ರದಂಡಶಸ್ತ್ರಾದಿ ಅಚೇತನಗಳೂ ಘಟಸಿದ್ಧಿಗೆ ಕಾರಣವೆನಿಸಿವೆ. ಅಂತೆಯೇ ಜಗತ್ತು ಪ್ರಕೃತಿಯ ತ್ರಿಗುಣಗಳಿಂದ ರಚಿತವಾಗಿದೆ. ಶ್ರೀಹರಿಯೇ ಸ್ವತಂತ್ರ ಕುಲಾಲನು; ಕಾಲವೇ ಚಕ್ರವು; ದಂಡವೇ ಕರ್ಮಾದಿಗಳು. ಇಂತು ಸತ್ಯಜಗನ್ನಿರ್ಮಾಣ ಧುರೀಣನಾದ ಶ್ರೀಹರಿಯನ್ನು ಭಕ್ತಿಯಿಂದ ಭಜಿಸಿದವನಿಗೇ ಮುಕ್ತಿಯು ಲಭಿಸುವುದು. ಭಕ್ತಿಯು ಜ್ಞಾನಸಾಧ್ಯವಾಗಿದೆ.

ಸಂಕಲ್ಪವನ್ನು ಬಿಟ್ಟು ಕಾಮವನ್ನು, ಕ್ಷಮೆಯಿಂದ ಕ್ರೋಧವನ್ನು, ಸತ್ತ್ವೋತ್ಸಾಹದಿಂದ ನಿದ್ರಾಲಸ್ಯಗಳನ್ನು, ಧೈರ್ಯದಿಂದ ರಾಗದ್ವೇಷಗಳನ್ನು, ಹಿತಮಿತ ಸಕಾಲ ಭೋಜನದಿಂದ ರೋಗವನ್ನು, ಸಾಂತತ್ವಹೇಯತ್ವ ಜ್ಞಾನದಿಂದ ದುಷ್ಟವಿಷಯರತಿಯನ್ನು, ತೃಪ್ತಿಯಿಂದ ಲೋಭವನ್ನು, ಕೃಪೆಯಿಂದ ಮದಮತ್ಸರಗಳನ್ನು ಗೆದ್ದು ಸುಜನೋಪಾಸನೆಗೈದು ಜ್ಞಾನವನ್ನಾರ್ಜಿಸುವುದೇ ಮುಕ್ತಿಗೆ ಅಪಾಯವಿಲ್ಲದ ಉಪಾಯವಾಗಿದೆ.

ಧರ್ಮರಾಜನು 'ತೃಷ್ಣೆಗೆ ದಾಸನಾಗಿ ಬಂಧುಜನರನ್ನು ಕೊಂದೆನು. ಪಾಪಿ ತೃಷ್ಣೆಯನ್ನು ಗೆಲ್ಲುವ ಬಗೆ ಹೇಗೆ?' ಎಂದು ಕೇಳಲು, ಭೀಷ್ಮನಿಂತೆಂದನು: 'ಮಾಂಡವ್ಯನು ಜನಕರಾಜನನ್ನು ವಿತೃಷ್ಣಾ ರೀತಿಯನ್ನು ತಿಳಿಸೆಂದು ಪ್ರಾರ್ಥಿಸಲು, ಆ ಮಹಾರಾಜನು ಆದರದಿಂದ ಇಂತೆಂದನು: 'ಮುನಿನಾಥ! ಅರ್ಥದಷ್ಟು ಅನರ್ಥವಿನ್ನಿಲ್ಲ. ಅರ್ಥ ತೃಷ್ಣೆಯೇ ಪಾಪಮೂಲವಾಗಿದೆ. ಅರ್ಥತೃಷ್ಣೆಯನ್ನು ಬಿಟ್ಟವನಿಗೆ ಆಗುವ ಸುಖವು ಭೋಗಗಳಿಂದ ಬರಲಾರದು; ಸ್ವರ್ಗ ಪ್ರಾಪ್ತಿಯಿಂದಲೂ ಬರಲಾರದು. ನಾನು ಅರ್ಥಾಶೆಯನ್ನು ಬಿಟ್ಟು ನಿಶ್ಚಿಂತನಾಗಿರುವುದು ಶ್ರೀಶಾನುಗ್ರಹದಿಂದ ಎಂದು ತಿಳಿದಿರುವೆನು. ಮಿಥಿಲೆಯೇ ಸುಟ್ಟು ಹೋಯಿತು! ಆದರೂ ನನ್ನದೇನೂ ಸುಡಲಿಲ್ಲ; ಇಂತು ತಿಳಿದ ನನ್ನ ಮಹಿಮೆಯೂ ಏನೂ ಇಲ್ಲ. ಅಂತಹ ಜ್ಞಾನವನ್ನಿತ್ತ ಶ್ರೀವ್ಯಾಸರದಾ ಮಹಿಮೆ!

ಗೋವು ಬೆಳೆದಂತೆ ಅದರ ಕೋಡುಗಳೂ ಬೆಳೆದವು. ಅಂತೆಯೇ ಮಮತೆಗೆ ಸರಿಯಾಗಿ ತೃಷ್ಣೆಯೂ ಬೆಳೆವುದು. ಮಮತೆ ಎಂಬ ಕಟ್ಟೆ ಒಡೆದುಹಾಕಿದರೆ ಮನವೆಂಬ ಕೆರೆಯಲ್ಲಿ ತೃಷ್ಣಾಜಲವು ನಿಲ್ಲಲಾರದೆ ಹರಿದುಹೋಗುವುದು. ತೃಷ್ಣೆಯು ಶರೀರದಂತೆ ಮುದಿಯಾಗದು; ಸಾಯದು; ರೋಗದಿಂದ ಅದು ಶಿಥಿಲವಾಗದು. ಅಂತಹ ತೃಷ್ಣಾರೋಗವು ಮರಣಾಂತಿಕವಾಗಿ ಪೀಡಿಸುವುದು. ಶೋಕ ಪ್ರಮೋದಗಳಿಗೆ ವಶನಾಗಿ, ಕುಗ್ಗಬೇಡ! ಹಿಗ್ಗಬೇಡ! ಮನಸ್ಸರೋವರದಲ್ಲಿ ಹೆಪ್ಪುಗಟ್ಟಿರುವ ತೃಷ್ಣಾಪಂಕವನ್ನು ಎತ್ತಿ ಒಗೆದು, ಜ್ಞಾನ ಜಲವನ್ನು ತುಂಬು! ಆಗ ನಿನಗೆ ವಿತೃಷ್ಣಾ ಸೌಖ್ಯವು ತಾನಾಗಿ ಸಿಗುವುದು ಧರ್ಮಜ! ಜನಕನ ನುಡಿಯನ್ನಾಲಿಸಿ, ಅಂತೇ ನಡೆದು ಮಾಂಡವ್ಯನು ಸುಖಿಸಿದನು.

ಧರ್ಮಜನು 'ತಾತ! ಸರ್ವಭಯಂಕರವಾದ ಕಾಲವನ್ನು ತಿಳಿದ ಮನುಜನು

ಬೇಗನೇ ಮಾಡಲು ತಕ್ಕ ಕರ್ತವ್ಯವಾವುದು?' ಎಂದು ಕೇಳಿದನು. ಭೀಷ್ಮನು, ಧರ್ಮರಾಜ! ನಿನಗೆ ಪಿತಾಪುತ್ರಸಂವಾದವನ್ನು ತಿಳಿಸಿ ಕೊಡುವೆನು. ಅದೇ ನಿನ್ನ ಪ್ರಶ್ನೆಗೆ ಉತ್ತರವಾಗಿದೆ. ಹಿಂದೆ ಮೇಧಾವಿ ಎಂಬ ವಿಪ್ರಕುಮಾರನಿದ್ದನು. ಅವನು ಅಧ್ಯಯನ ಪರನಾಗಿ, ಸಾರ್ಥಕನಾಮನೆನಿಸಿದನು. ಅವನೊಂದು ದಿನ ತನ್ನ ತಂದೆಯನ್ನು ಕಂಡು, 'ಗುರೋ! ದಿನದಿನಕ್ಕೆ, ಆಯುವು ಕ್ಷಯಿಸುತ್ತಿದೆ. ಹೋದ ಆಯಸ್ಸು ಮತ್ತೆ ಬಾರದಾಗಿದೆ. ಹೀಗಿರಲು ಬುದ್ಧಿವಂತನು ಏನು ಮಾಡಲು ಹಿತವಾಗುವುದು?' ಎಂದು ಕೇಳಿದನು. ತಂದೆಯು ಇಂತೆಂದನು:

'ವಿಪ್ರನು ಬ್ರಹ್ಮಚಾರಿಯಾಗಿ ಗುರುಕುಲದಿ ವೇದವನ್ನೋದಬೇಕು. ಆಮೇಲೆ ವಿವಾಹವಾಗಿ ಸಂತಾನವನ್ನು ಸಂಪಾದಿಸಬೇಕು. ಯಜ್ಞಗಳನ್ನು, ದಾನವ್ರತಯಾತ್ರೆಗಳನ್ನೂ ಮಾಡಬೇಕು. ಗೃಹಸ್ಥನು ವಿರಕ್ತನಾಗಿ, ವಾನಪ್ರಸ್ಥನಾಗಿ ವನದಲ್ಲಿರಬೇಕು. ಅಥವಾ ಸನ್ಯಾಸವನ್ನು ಕೈಕೊಂಡು ಬ್ರಹ್ಮವಿಚಾರಪರನಾಗಬೇಕು. ಇದೇ ಹಿತವು' ಎಂದ ತಂದೆಗೆ ಮಗನು, ಜನನದಿಂದಲೇ ಬೆನ್ನತ್ತಿ ಬರುವ ಮೃತ್ಯುವಿಗೆ ಹೆದರದಿರಲಾದೀತೆ? ಬಲೆಯಲ್ಲಿ ಸಿಕ್ಕುಬೀಳುವ ಮೀನಿನಂತೆ, ಹಾವಿನ ದವಡೆಯ ನೆರಳಲ್ಲಿದ್ದ ಕಪ್ಪೆಯಂತೆ, ಜೀವನು ತನ್ನ ಮರಣಕಾಲವನ್ನರಿಯದೇ ಎಲ್ಲವೂ ಸ್ಥಿರವೆಂಧು ನಂಬಿ, ವಿಹರಿಸುತ್ತಿರುವಾಗ, ಅವನಿಗೆ ಜ್ಞಾನವಿರಾಗಭಕ್ತಿಮಾರ್ಗಗಳು ಸಿಗುವುದಾದರೂ ಉಂಟೇ? ಆದುದರಿಂದ ನಾಳೆ ಮಾಡಲುಳ್ಳ ಶ್ರೇಯಃ ಕಾರ್ಯವನ್ನು ಇಂದೇ ಮಾಡಬೇಕು. ಕಿಂಕರ್ತವ್ಯತಾಮೂಢನಾಗಿ ಸುಮ್ಮನಿರುವವನು ಯಮವದನಗಹ್ವರವನ್ನು ತಿಳಿಯದೆ ಸೇರಪೋಗುತ್ತಿರುವನು.

ತಂದೇ ! ಮೃತ್ಯುವು, ಅಮೃತವೆಂಬೆರಡು ವಸ್ತುಗಳೂ ನಮ್ಮ ದೇಹದಲ್ಲೇ ವಸಿಸುತ್ತಿವೆ. ಅಜ್ಞಾನವೇ ಮೃತ್ಯುವು; ಯಥಾರ್ಥ ಜ್ಞಾನವೇ ಅಮೃತವು. ಯಜ್ಞಗಳನ್ನು ಮಾಡೆಂದೆ! ನನಗೇಕೆ ಹಿಂಸಾರೂಪ ಯಜ್ಞಗಳು? ಶಾಂತಿಯಜನವೇ ನನ್ನ ಸಾಧನ. ಪರಬ್ರಹ್ಮನೇ ನನಗೆ ಗಮ್ಯನು. ಅನಂತ ಕಲ್ಯಾಣ ಗುಣನಿಧಿಯಾದ ಶ್ರೀಶನೇ ನನ್ನ ಸ್ವಾಮಿಯು; ಅವನು ಮೆಚ್ಚಬೇಕಾದರೆ ಭಕ್ತಿಯಿಂದ; ಭಕ್ತಿಯು ಜ್ಞಾನದಿಂದ ; ಜ್ಞಾನವು ಶ್ರವಣಾದಿಗಳಿಂದ ಶ್ರವಣಾದಿಗಳು ವೀರ್ಯವಂತವಾಗಬೇಕಾದರೆ ವಿರಾಗದಿಂದ ವಿರಾಗವು ಪ್ರವೃತ್ತಿಕರ್ಮ ತ್ಯಾಗದಿಂದ ; ತ್ಯಾಗವೇ ಸುಖವು; ರಾಗವೇ ದುಃಖವು. ನನಗೆ ವಿವಾಹವೇಕೆ? ಪ್ರಜೆ ಏಕೆ? ನಾನೇ ಪ್ರಜಾರೂಪನಾಗಿ ಜನಿಸಬೇಕಲ್ಲವೇ? ಆದುದರಿಂದ ನಾನೇ ನನಗೆ ಪುತ್ರನಾಗಿ, ಪುನ್ನಾಮನರಕದಿಂದ ಉದ್ಧರಿಸಿಕೊಳ್ಳಲು ಪ್ರಯತ್ನಿಸುವೆನು. ನನ್ನನ್ನು ನಾನೇ ನರಕ ಕೂಪದಿಂದ ರಕ್ಷಿಸಿಕೊಳ್ಳುವೆನು. ನನಗೆ ನನ್ನ ಬಿಂಬರೂಪೀ ಶ್ರೀಹರಿಯೇ ಸತ್ಪುತ್ರನು; ಅವನೇ ನನ್ನ ತಂದೆ; ತಾಯೇ; ಬಂಧುವು; ಧನ; ಮಿತ್ರ; ಎಲ್ಲವೂ ಅವನಿಂದ. ಅವನಿತ್ತರೆ ಎಲ್ಲವಿದೆ, ಇಲ್ಲದಿರೆ ಇಲ್ಲ.

ಇಷ್ಟನ್ನರಿತು ನಾನು ಮಮತೆಯನ್ನು ಬಿಡುವೆನು. ಲೋಕದ ನಿತ್ಯಪ್ರಳಯವನ್ನು ಕಂಡು ಯಾವುದೂ ತರವಲ್ಲವೆಂದರಿತಿರುವೆನು. ಗುರುವಿತ್ತ ಜ್ಞಾನದಿಂದ ಅನಿಮಿತ್ತ ಬಂಧುವಾದ ಗೋವಿಂದನ ಪಾದಾರವಿಂದವನ್ನು ನಂಬಿ, ಶಾಂತನಾಗಿರುವೆನು.

ಗುಹಾಗತನಾದ ಶ್ರೀಶನನ್ನು ಕಾಣಲು ಇಂದಿನಿಂದಲೇ ಈ ಕ್ಷಣದಿಂದಲೇ ಶ್ರವಣ ಮನನ ಧ್ಯಾನಾದಿ ತೀವ್ರ ಪ್ರಯತ್ನವನ್ನು ಮಾಡುವೆನು. ತಂದೆ! ನೀನೂ ಅಂತೆಯೇ ನಡೆ!' ಮಗನ ಮಾತನ್ನಾಲಿಸಿ, ತಂದೆಯು ಶೀಘ್ರಸಾಧಕನಾಗಿ ಮುಕ್ತನಾದನು.

ಧರ್ಮರಾಜ ! ಇಂದ್ರಿಯ ಜಯ, ಲಘುವಿಹಿತ ಮಿತಭೋಜನ, ಶ್ರವಣಾದಿ ಸಾಧನನಿರತಿ, ಗುರುಭಕ್ತಿ, ಶ್ರೀಶಚರಣಾರವಿಂದಾಸಕ್ತಿಗಳೇ ಮೋಕ್ಷಸಾಧನಗಳಾಗಿವೆ. ಅವನ್ನು ಬೇಗ ಅನುಷ್ಠಿಸು! ನಿತ್ಯವೂ ಅನುಸಂಧಾನಶೀಲನಾಗು! ಸರ್ವವೂ ಶ್ರೀಹರಿ ಪೂಜೆ ಎಂದು ತಿಳಿ ! ನಿಷಿದ್ಧ ದೂರನಾಗು ! ವಿಹಿತವನ್ನಾಚರಿಸಿ ವಿಹಗಪತಿವಾಹನ ಚರಣಗಳಲ್ಲಿ ಭಕ್ತಿಯಿಂದ ಸಮರ್ಪಿಸು!"

ಇಂತು ನುಡಿದ ತಾತನ ವಚನವನ್ನಾಲಿಸಿ, ಧರ್ಮರಾಜನು ಅಮಂದಾನಂದ ಕಂದಳಿತ ಹೃದಯಾರವಿಂದನಾಗಿ, ಮತ್ತೆ ಪ್ರಶ್ನಿಸಿದನು.

## ೧೩. ಹಾರೀತಗೀತೆ — ವೃತ್ರಕಥೆ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು : 'ಶ್ರೀಭೀಷ್ಮನು ಧರ್ಮರಾಜನಿಗೆ ವಿತೃಷ್ಣಾಲಾಭವನ್ನು ಉಪದೇಶಿಸಲು ಕೇಳಿ, ಪ್ರೀತನಾಗಿ ಧರ್ಮರಾಜನು ಮೋಕ್ಷಸಾಧನಗಳನ್ನು ತಿಳಿಯಲು ಅಪೇಕ್ಷಿಸಿ, ಇಂತು ಪ್ರಶ್ನಿಸಿದನು: 'ತಾತ! ಪ್ರಕೃತಿಭಿನ್ನನಾದ ಪರಮಾತ್ಮನ ಸ್ಥಾನವನ್ನು ಸೇರಲು ಮನುಜನು ಎಂತಹ ಶೀಲವನ್ನು ಸಂಪಾದಿಸಬೇಕು? ಯಾವ ಆಚಾರವನ್ನು ಅನುಸರಿಸಬೇಕು? ಯಾವ ವಿದ್ಯೆಯನ್ನಾರ್ಜಿಸಬೇಕು? ಯಾವ ದೇವನನ್ನು ನಂಬಿ ಭಜಿಸಬೇಕು?' ಆ ಮಾತಿಗೆ ಭೀಷ್ಮನಿಂತು ಉತ್ತರಿಸಿದನು:

"ಮನುಜನು ಸಂಸಾರಿಕ ದುಃಖದರ್ಶನದಿಂದ ವಿರಕ್ತನಾಗಬೇಕು. ಲಘುಹಿತಾಹಾರನು, ಜಿತೇಂದ್ರಿಯನು ಆಗಿರಬೇಕು. ವೇದಾದಿ ಸಚ್ಛಾಸ್ತ್ರವನ್ನು ಗುರುಮುಖದಿಂದ ಅಭ್ಯಸಿಸಬೇಕು. ಚಕ್ಷುರ್ವಾಕ್ ಚಿತ್ತಗಳನ್ನು ದುಷ್ಟರೂಪ ·ವಚನ ಚಿಂತನಗಳಿಂದ ರಕ್ಷಿಸಿ, ಯಾರನ್ನೂ ಹಿಂಸಿಸದೆ, ದುರ್ವಾದಿಗಳ ಕೂಡ ಸೇರದೆ, ನಿರ್ವಿಕಾರನಾಗಿರಬೇಕು. ಜನರು ನೋಡುತ್ತಿರುವರೆಂದು ಮಾಡದೆ, ಯುಕ್ತಾಯುಕ್ತಗಳನ್ನು ಸ್ವಾಭಾವಿಕವಾಗಿ ಆಚರಿಸಬೇಕು. ಭೈಕ್ಷಚರ್ಯೆಯಿಂದ ಪೀಡಿಸದೆ- ಜೀವಿಸಬೇಕು. ಅತ್ಯಾದರಗೌರವಗಳನ್ನು ಅಭಿಲಕ್ಷಿಸಬಾರದು. ಅನ್ನದೋಷಗಳನ್ನು ಎತ್ತಿ ತೋರಿಸದೆ, ಶ್ರೀಹರಿ ಗುರು ನಿವೇದಿತಾಮೃತಾನ್ನವೆಂದು, ಜೀವಿಸಿರಲು ಮಾತ್ರ ಉಣ್ಣಬೇಕು. ಶಯನಾಸನವಸನಗಳ ಸೌಷ್ಠವವನ್ನು ಅಪೇಕ್ಷಿಸಬಾರದು. ಸುಕೃತ ದುಷ್ಕೃತಗಳನ್ನು ಶ್ರೀಹರಿಯೇ ಸ್ವತಂತ್ರಕರ್ತನಾಗಿ ಮಾಡಿಸುವನೆಂದು ಕರ್ತೃತ್ವಭ್ರಾಂತಿಯನ್ನು ಬಿಡಬೇಕು. ನಿತ್ಯತೃಪ್ತನು, ಪ್ರಸನ್ನವದನನು, ಭಯರಹಿತನು, ಜಪನಿರತನು, ಆದ ಸಮದರ್ಶನನಿಗೆ ಶ್ರೀಹರಿಯು ಒಲಿದು ಮೋಕ್ಷವನ್ನು ಕೊಡುವನು. ವಾಕ್, ಮನೋ, ಜಠರೋಪಸ್ಥ ಕ್ರೋಧ ಹಿಂಸಾವೇಗಗಳನ್ನು ನಿಗ್ರಹಿಸಿದ ಪರಿವ್ರಾಜಕನಿಗೆ ಮೋಕ್ಷವು ಕರತಲಾಮಲಕವೆಂದು ತಿಳಿ!"

ಧರ್ಮಜನು 'ತಾತ! ನಮ್ಮನ್ನು ನೋಡಿ ಜನರೇನೋ ಧನ್ಯಧನ್ಯರೆಂದು ಪ್ರಶಂಸಿಸುವರು. ಆದರೆ ನಮ್ಮ ದುಃಖವನ್ನವರರಿಯರು. ನೀ ಪೇಳಿದ ಶೀಲಾಚಾರ ವಿದ್ಯೆಗಳಿಗೆ ದೂರರಾಗಿ, ಸಂಸಾರವಾಹಿನಿಯಲ್ಲಿ ಕೊಚ್ಚಿಹೋಗುತ್ತಿರುವ ನಮಗೆ ಉದ್ಧಾರವೆಂತು? ಮುಕ್ತಿವಿರೋಧಿಗಳಾದ ಶತ್ರುಗಳ ಕೈಗೆ ಸಿಕ್ಕಿರುವೆವು. ಪಂಚಪ್ರಾಣ, ದಶೇಂದ್ರಿಯ, ಮನೋಬುದ್ಧಿಗಳೆಂಬ ಕರಣಗಳಿಂದ, ಕಾಮಕ್ರೋಧ, ಲೋಭ, ಭಯ, ಮೋಹವೆಂಬ ಐದು ಜನ ವೈರಿಗಳಿಂದ ಪ್ರೇರಿತರಾಗಿ, ಪಂಚಭೂತಶರೀರದಲ್ಲಿ ನಿಂತು ಮಾಡುವ ಕರ್ಮಫಲವು ನಮ್ಮನ್ನು ಬಿಡದೆ ಹಿಂಬರುವಾಗ, ಇನ್ನು ಮುಕ್ತಿ ಎಂತಹುದು?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ರಾಜನ್! ಸಂಸಾರಬಂಧವು ಅನಾದಿಯಾಗಿದೆ ನಿಜ! ಆದರೆ ಅದು ಅನಂತವಲ್ಲ. ಸತ್ಯವಾದರೂ ಬಂಧವು ಶ್ರೀಹರಿಪ್ರಸಾದದಿಂದ ಬಿಟ್ಟು ಹೋಗುವುದು. ರಾಜ್ಯದ ಐಶ್ವರ್ಯಾದಿಗಳು, ಬಂಧುಗಳು, ಇಂದ್ರಿಯಗಳು ಇವೇ ಬಂಧಕಗಳಲ್ಲ. ಅಭಿಮಾನವಂತನನ್ನು ಮಾತ್ರ ಅವು ಬಂಧಿಸಿಡುವವು. ವಿರಾಗದಿಂದ ಪ್ರಯತ್ನಿಸಿ, ಜ್ಞಾನವನ್ನು ಸಂಪಾದಿಸಿದವನಿಗೆ ಬಂಧಧ್ವಂಸವಾಗುವುದು. ಧೂಮದಿಂದ ಕೂಡಿದ ಗಾಳಿಯು ಕಪ್ಪಾಗಿ, ತಾನು ವ್ಯಾಪಿಸಿದ ಆಕಾಶವನ್ನೂ ಕಪ್ಪಾಗಿ ತೋರಿಸುವಂತೆ, ಅಭಿಮಾನಯುಕ್ತ ಮನವು ತಾನು ಕೆಟ್ಟು ಜೀವನನ್ನು ಕೆಡಿಸುತ್ತಿದೆ. ವಾಸ್ತವವಾಗಿ ಆಕಾಶಕ್ಕೆ ಲೇಪವಿಲ್ಲ; ಅಂತೆಯೇ ಜೀವನೂ ಸ್ವರೂಪದಿಂದ ಜ್ಞಾನಾನಂದ ಯುಕ್ತನೇ ಆಗಿರುವನು, ಆದರೂ ಅವಿದ್ಯಾಕಾಮ್ಯಕರ್ಮಗಳಿಂದ ಅವನು ಅಜ್ಞಾನಾವೃತನಾಗಿ, ಸಂಸಾರದ ಸುಳಿಯಲ್ಲಿ ಬಿದ್ದು ನರಳುತ್ತಿರುವನು. ಶ್ರೀಹರಿ ದಯವೇ ಅವನಿಗೆ ಮೋಚಕವಾಗಿದೆ. ಶ್ರೀಹರಿ ಪ್ರಸಾದವು ಭಕ್ತಿ ಮಾತ್ರ ಲಭ್ಯವಾಗಿದೆ. ಹಾರೀತನೆಂಬ ಋಷಿಯು ಪಾಡಿದ ಈ ಹಾರೀತಗೀತೆಯನ್ನು ನಿನಗರುಹಿದೆನು.

ಈಗ ಇದೇ ವಿಷಯದಲ್ಲಿ ವೃತ್ರಗೀತೆಯನ್ನು ನಿನಗೆ ಹೇಳುವೆನು. ಬುದ್ಧಿವಂತನು ಕಾಲಕೃತವಾದ ಸುಖದುಃಖಗಳಿಗೆ ಅಗ್ಗವಾಗದೆ ನಿರ್ವಿಕಾರನಾಗಿರುವನು. ಹಿಂದೆ ದೇವಾಸುರ ಯುದ್ಧದಲ್ಲಿ ಇಂದ್ರನಿಗೆ ಸೋತು ವೃತ್ರನು ಕ್ಷತಗಾತ್ರನಾಗಿ ಬಿದ್ದಿದ್ದನು. ಅವನಿಗೆ ಅಪಜಯದಿಂದಾದ ವಿಷಾದವಿದ್ದಿಲ್ಲ. ಇಂತು ನಿರ್ವಿಕಾರನಾಗಿರುವ ದೈತ್ಯರಾಜನನ್ನು ಕಂಡು ದೈತ್ಯಾಚಾರ್ಯನಾದ ಶುಕ್ರನು 'ನೀನಿಂತು ಶತ್ರುಜಿತನಾದರೂ ನಿಶ್ಚಿಂತನಾಗಿರುವುದೆಂತು?' ಎಂದು ಕೇಳಿದನು. ವೃತ್ರನು ಇಂತೆಂದನು:

'ಗುರುವರ! ಕಾಲಕೃತವಾಗಿ ಬರುವ ಸುಖ ದುಃಖಾದಿಗಳಿಗೆ ನಾನು ಚಲಿಸೆನು. ಅರ್ಥಗಳು ಅನಿತ್ಯವೆಂದು ತಿಳಿದಿರುವೆನು. ಅರ್ಥಸಿದ್ಧಿಯು ಕರ್ಮವಶವಾಗಿದೆ. ಕರ್ಮದಿಂದ ಬರುವ ದೇವ ಮಾನವ ದಾನವ ತಿರ್ಯಗಾದಿಯೋನಿಗಳಲ್ಲಿ ಪ್ರಾಪ್ತವ್ಯವಾದ ಅರ್ಥವು ಬಂದೇ ಬರುವುದು. ಅಪ್ರಾಪ್ತವ್ಯವೆಂದಿಗೂ ಬಾರದು. ಅದಕ್ಕೇಕೆ ನಾನು ಶೋಕಪಡಲಿ? ಹಿಂದೆ ತಪವನ್ನು ಮಾಡಿ, ಮೂರು ಲೋಕಗಳನ್ನು ಜಯಿಸಲಿಲ್ಲವೇ? ಇಂದು ಎಲ್ಲವನ್ನು ಕಳೆದುಕೊಂಡಿರಲು, ಹಿಂದಿನ ದುಷ್ಕೃತವಾವುದೋ ಒದಗಿರಬೇಕಲ್ಲವೇ? ಇನ್ನು ನಾನು ಪುಣ್ಯಕಾರ್ಯಗಳನ್ನು ಕೂಡಾ ಫಲಾಪೇಕ್ಷೆಯಿಂದ ಮಾಡದಿರುವೆನು. ಅಚ್ಯುತನು,

ಅನಾಮಯನು ಆದ ಶ್ರೀವಿಷ್ಣುವನ್ನು ಭಜಿಸಿ ಮುಕ್ತನಾಗುವೆನು. ಆತನ ಮಹಿಮೆಯನ್ನು ನನಗೆ ತಿಳಿಸಿ ಉದ್ಧರಿಸು!'

ಶುಕ್ರನು, 'ವೃತ್ರ! ನೀನೇ ಧನ್ಯನು. ಹಿರಣ್ಮಯಕೇಶನು ಸರ್ವಭೂತಪಿತಾಮಹನು ಆದ ಶ್ರೀನಾರಾಯಣನನ್ನು ತಿಳಿಯಬೇಕೆಂಬೆ! ನಿನ್ನ ತಪಃಪ್ರಾಪ್ತವಾದ ಪುಣ್ಯಶೇಷದ ಮಹಿಮೆಯಿಂದ ನಿನಗಂತಹ ಸದ್ವಿಚಾರವು ಉದಿಸಿದೆ. ಐಶ್ವರ್ಯದ ಗಮನಾಗಮನಗಳಾ ದೇವನಿಂದ! ಆವನಿಂದ ಜಗತ್ತಿನ ಸೃಜನ ರಕ್ಷಣ ಸಂಹರಣ ನಿಯಮನಗಳು. ಅವನಿಂದ ಜೀವನಿಗೆ ಬಂಧ ಮುಕ್ತಿಗಳು. ಅಂತಹ ಸ್ವಾಮಿಯನ್ನು ನಿನಗೆ ತಿಳಿಸಿಕೊಡಲು ಸನತ್ಕುಮಾರನೇ ಬರುತ್ತಿರುವನು ನೋಡು!' ಎಂದನು. ಆಗ ಬಂದ ಬ್ರಹ್ಮನಂದನವರನಿಗೆ ವಂದಿಸಿ, ದಾನವೇಂದ್ರನು ವಿಷ್ಣುಮಹಿಮೆಯನ್ನು ಕೇಳಲು ಇಚ್ಛಿಸಿದನು. ಸನತ್ಕುಮಾರನು ಬ್ರಹ್ಮವಿಷ್ಣುಗಳಿಗೆ ವಂದಿಸಿ ಇಂತು ನುಡಿದನು:

'ದಾನವೇಂದ್ರ! ಶ್ರೀಹರಿಯ ಮಹಿಮೆಯು ಅಚಿಂತ್ಯವು ಅದ್ಭುತವು ಆಗಿದೆ. ಆತನೇ ಸೃಜನರಕ್ಷಣಸಂಹರಣಗಳನ್ನು ಸ್ವತಂತ್ರನಾಗಿ ಮಾಡುವನು. ಬ್ರಹ್ಮರುದ್ರರು ಆ ಸ್ವಾಮಿಯ ಪ್ರಸಾದ ಕ್ರೋಧಶಕ್ತಿಗಳಿಂದ ಪುಟ್ಟಿ, ಆತನಿಂದ ಆಜ್ಞಪ್ತರಾಗಿ ಸೃಜನಸಂಹರಣಗಳನ್ನು ನಡೆಸಿ, ಆತನನ್ನು ಅರಿತು ಪೂಜಿಸುತ್ತಿರುವರು. ಅವನೇ ಸರ್ವೇಂದ್ರಿಯ ಪ್ರೇರಕನಾಗಿರುವನು. ಹೊರಗೆ ಕಾಲರೂಪನು, ಒಳಗೆ ಪುರುಷರೂಪನು ಆಗಿ ಸರ್ವಭೂತಗಳನ್ನು ಕಾಲಕರ್ಮಸಂಯೋಗದಿಂದ ಸುಖದುಃಖಾದಿ ಕರ್ಮಫಲಗಳನ್ನಿತ್ತು ನಿಯಮಿಸುವನು. ಶಾಂತದಾಂತರು, ಉಪರತರು ಅವನನ್ನು ಶ್ರವಣಾದಿಗಳನ್ನು ಮಾಡಿ ಭಕ್ತಿಯಿಂದ ಪ್ರಸನ್ನೀಕರಿಸಿ ಕೊಂಬುವರು. ಹಿರಣ್ಮಯವು ಅಶುದ್ಧವಾಗಿದ್ದು, ಅಗ್ನಿತಾಪಿತವಾಗಿ ಇತರ ಮಲಿನವನ್ನು ಬಿಟ್ಟು ಶುದ್ಧವಾಗುವಂತೆ ಜೀವನು ಅಜ್ಞಾನಾನ್ಯಥಾಜ್ಞಾನಗಳಿಂದ ಗುರೂಪದೇಶಾಗ್ನಿಯಲ್ಲಿ ಶುದ್ಧನಾಗಿ, ಶ್ರೀಹರಿ ಲೋಕವನ್ನು ಜ್ಞಾನಭಕ್ತಿಗಳಿಂದ ಸೇರುವನು. ಶ್ರೀವಾಸುದೇವನ ಪ್ರಸಾದವು ಸುಲಭವಲ್ಲ. ಬಹು ಜನ್ಮಗಳಲ್ಲಿ ಮಹಾಪ್ರಯತ್ನ ಸಾಧ್ಯವಾಗಿದೆ.

ಸರ್ವಜೀವರಲ್ಲಿ ಹನ್ನೊಂದಿಂದ್ರಿಯಗಳ ನಿಯಾಮಕನಾಗಿದ್ದು, ತತ್ತದ್ವಿಷಯಗಳ ನಿಯಾಮಕನಾಗಿದ್ದು, ತತ್ತದ್ವಿಷಯ ಸುಖವನ್ನು ಮಾತ್ರ ಸ್ವೀಕರಿಸಿ, ನಿರ್ಲಿಪ್ತನು, ತಜ್ಜೀವಭಿನ್ನನು ಆದ ಪರಮಾತ್ಮನು ಸ್ವತಂತ್ರನು, ಆನಂದಮಯನು, ದೋಷಗಂಧರಹಿತನು ಆಗಿರುವನು. ಎಲ್ಲ ಜೀವಜಡವು ಅವನಿಂದ ವ್ಯಾಪ್ತವಾಗಿ, ತದ್ಭಿನ್ನವಾಗಿದೆ. ಶ್ರೀಹರಿಯು ಆಕಾಶದಂತೆ ಎಲ್ಲೆಡೆಯೂ ಎಲ್ಲರಲ್ಲಿಯೂ ಇದ್ದರೂ, ತತ್ಕೃತ ಲೇಪವಿಲ್ಲದೆ ಇರುವನು. ಅವನ ಪಾದಗಳಿಂದ ಇಂದ್ರಾದಿ ದಿಕ್ಪಾಲರು, ಚಕ್ಷುಸ್ಸಿನಿಂದ ಸೂರ್ಯ, ಮನದಿಂದ ಚಂದ್ರ, ಬುದ್ಧಿಯಿಂದ ಬೃಹಸ್ಪತಿ, ರಸನೆಯಿಂದ ಜಲ ವರುಣರು, ಜನಿಸಿ ಬಂದು, ಅವನನ್ನಾಶ್ರಯಿಸಿ ನಿಂತಿರುವರು. ಆಶ್ರಮ ವರ್ಣಗಳ ಧರ್ಮದ ಫಲವನ್ನೀವ ಸ್ವಾಮಿಯು ಅವನೇ! ಶ್ರುತಿ, ಮಂತ್ರ, ಶಾಸ್ತ್ರ, ಷೋಡಶಋತ್ವಿಗ್ಜನರಿಂದ ಕೂಡಿ ಮಾಡಲ್ಪಡುವ ಯಜ್ಞವು ಅವನ ಪ್ರೀತಿಗಾಗಿ. ಅವೆಲ್ಲದರಲ್ಲಿಯೂ ಅವನು ನಿಯಾಮಕನಾಗಿರುವನು.

ಬ್ರಹ್ಮ, ಬ್ರಾಹ್ಮಣ, ಅಗ್ನೀಧ್ರ, ಪೋತಾ (ಸರ್ವವೇದೀಯರು) - ಹೋತಾ, ಮೈತ್ರಾವರಣ, ಆ ಶ್ರಾವಕ, ಗ್ರಾವಸ್ತೋತಾ(ಋಗ್ವೇದೀಯರು), ಅಧ್ವರ್ಯು, ಪ್ರತಿಪ್ರಸ್ಥಾತಾ, ನೇಷ್ಟಾ, ನೇತಾ(ಯಜುರ್ವೇದೀಯರು), ಉದ್ಗಾತಾ ಪ್ರಸ್ತೋತಾ ಪ್ರತಿಹರ್ತಾ ಸುಬ್ರಹ್ಮಣ್ಯ (ಸಾಮವೇದೀಯರು) ಇಂತು ಷೋಡಶ (16) ಋತ್ವಿಕ್ ಜನರಲ್ಲಿ ತನ್ನಾಮಕನು, ತತ್ಕರ್ಮಪ್ರೇರಕನು, ಫಲಪ್ರದನು ಆಗಿ ಶ್ರೀಶನಿರುವನು. ಯಮ, ವಾಯು, ಕುಬೇರ, ನಿರ್ಋತಿ, ಮಿತ್ರ, ಅಶ್ವಿನೀದ್ವಯ, ಬ್ರಹ್ಮರುದ್ರ, ಇಂದ್ರ, ಚಂದ್ರ, ವರುಣ, ಅಗ್ನಿ, ಇತ್ಯಾದಿ ಸರ್ವದೇವತೆಗಳ ಅಂತರ್ಯಾಮಿಯು ಅವನೇ! ಶ್ರೀಹರಿಯ ನಾನಾವತಾರಗಳಿಗೆ ಸ್ವಗತ ಭೇದವಿಲ್ಲ. ತತ್ತದ್ಗತನಾಗಿ, ತನ್ನಾಮಕನಾಗಿ ಭಿನ್ನನಂತೆ ತೋರುವ ಶ್ರೀಶನಿಗೆ ಭೇದವಿಲ್ಲ. ಆದರೆ ತದಧಿಷ್ಠಾನ ಭೂತರಾದ ದೇವಾದಿ ಸರ್ವಜೀವರೂ ಪರಸ್ಪರ ಭಿನ್ನರೂ, ತಾರತಮ್ಯ ಯುಕ್ತರೂ ಆಗಿರುವರು.

ಪರಮಾಣು ಪ್ರದೇಶದಲ್ಲಿಯೂ ಅನಂತ ಜೀವರಾಶಿಗಳಿರುವರು. ಪ್ರಳಯವಾದಂತೆ ಜೀವಸಂಖ್ಯೆ ಮುಗಿಯುವುದೆಂದು ತಿಳಿಯಬೇಡ! ಅನೇಕ ಕೋಟಿವಾಪಿಗಳಲ್ಲಿ ತುಂಬಿರುವ ಜಲಬಿಂದುಗಳಂತೆ ಅವರು ಮುಗಿಯದಿರುವರು. ಅಂತೆಯೇ ಜೀವರು ಮುಕ್ತರಾದಂತೆ, ಅಸೃಜ್ಯಾವಸ್ಥೆಯಲ್ಲಿರುವ ಜೀವರು ಸೃಷ್ಟರಾಗಿ ಸ್ವಯೋಗ್ಯ ಸಾಧನವನ್ನು ಮಾಡಿಕೊಂಡು, ತ್ರಿವಿಧ ಮುಕ್ತಿಯನ್ನು ಪಡೆವರು. ಅಂತೆಯೇ ಜಗತ್ತು ಪ್ರವಾಹತಃ ನಿತ್ಯವಾಗಿದೆ. ಜೀವರು ಸಾತ್ವಿಕ ರಾಜಸ ತಾಮಸರೆಂದು ಮೂರು ವಿಧರಾಗಿರುವರು. ಅವರಲ್ಲಿ ಬಹುಪ್ರಭೇದಗಳಿವೆ. ಇರಲಿ; ಸಾತ್ವಿಕರಾದ ದೇವಋಷಿ ಪಿತೃ ಚಕ್ರವರ್ತಿ ನರೋತ್ತಮರಿಗೆ ಮಾತ್ರ ಸ್ವರೂಪಾನಂದಾವಿರ್ಭಾವರೂಪವೆಂಬ ಮೋಕ್ಷವಾಗುವುದು. ರಾಜಸರು ನಿತ್ಯಸಂಸಾರಿಗಳು; ಅವರಿಗೆ (ಮಿಶ್ರ) ಸುಖದುಃಖಗಳೆರಡೂ ಆಗುತ್ತಿರುವವು. ತಾಮಸರು ದೈತ್ಯರಾದಿನ ರಾಧಮಪರ್ಯಂತವಿರುವ ದುಷ್ಟಜೀವರು. ಅವರು ವಿಷ್ಣುತದ್ಭಕ್ತ ದ್ವೇಷದಿಂದ ಸಾಧನಮಾಡಿಕೊಂಡು, ನಿತ್ಯದುಃಖರೂಪರಿಗೆಂದಿಗೂ ಸಿಗದು. ತಾಮಸರದುಃಖವೆಂದಿಗೂ ಸಾತ್ವಿಕರಿಗಿಲ್ಲ; ಸಾತ್ವಿಕ ಜೀವರು ಸಾಧನ ಸಂಪೂರ್ತಿಯಾದೊಡನೆ ಬ್ರಹ್ಮಲೋಕದಲ್ಲಿದ್ದು, ಆತನೊಡನೆ ಶ್ರೀಹರಿಯನ್ನು ಸೇರಿ, ಸ್ವರೂಪೋಪದೇಶದಿಂದ ಮುಕ್ತರಾಗಿ ಆನಂದದಿಂದ ವೈಕುಂಠಾದಿ ಮುಕ್ತಲೋಕಗಳಲ್ಲಿರುವರು. ಅವರಿಗೆ ಪುನರ್ಜನನವಿಲ್ಲ. ಅಂತಹ ಶ್ರೀಶನನ್ನು ವೃತ್ರ! ನೀನು ಭಜಿಸು!'

ಇಂತು ನುಡಿದ ಸನತ್ಕುಮಾರನ ಉಪದೇಶದಂತೆ ಶ್ರೀಶನನ್ನು ಸ್ಮರಿಸುತ್ತಾ, ದೇಹವನ್ನು ತೊರೆದು ವೃತ್ರನು ತನ್ನ ಮೂಲ (ಚಿತ್ರಕೇತು) ರೂಪವನ್ನು ಸೇರಿ, ಮುಕ್ತನಾದನು. ಇಂತು ಸನತ್ಕುಮಾರನಿಂದ ವರ್ಣಿತನಾದ ನಾರಾಯಣನೇ ಈ ದ್ವಾಪರಯುಗದಲ್ಲಿ ಶ್ರೀಕೃಷ್ಣನಾಗಿ ಅವತರಿಸಿರುವನು.

ಧರ್ಮರಾಜ! ಅಂತಹ ಜಗತ್ಪತಿಯು ಸೃಷ್ಟಿಕಾಲದಲ್ಲಿ ಮುಕ್ತಿಸ್ಥಾನವನ್ನು ಕೊಡುವ ವಾಸುದೇವ, ಸಂಹಾರ ಕಾರಣನಾದ ಸಂಕರ್ಷಣ, ಸೃಷ್ಟಿಕಾರಣ ಪ್ರದ್ಯುಮ್ನ, ಸ್ಥಿತಿಕಾರಣ ಅನಿರುದ್ಧ - ಇಂತು ನಾಲ್ಕು ರೂಪಗಳನ್ನು ಸ್ವೀಕರಿಸುವನು. ಆಗ ನಾರಾಯಣನಂತೆ

ಜಗಜ್ಜನನಿಯಾದ ಲಕ್ಷ್ಮೀದೇವಿಯು, ಮಾಯಾ, ಜಯಾ, ಕೃತಿ, ಶಾಂತಿ ಎಂಬ ರೂಪಗಳನ್ನು ಸ್ವೀಕರಿಸುವಳು. ಶ್ರೀಹರಿಯ ಅವತಾರಗಳಿಗೆ ಸ್ವಗತಭೇದವಿಲ್ಲ, ರಮೆಗೂ ಅಂತೆಯೇ ಎಂದು ತಿಳಿ! ಧರ್ಮರಾಜ! ಇಂತಹ ಶ್ರೀಶನ ಭಕ್ತನಾದ ವೃತ್ರಾಸುರನ ಕಥೆಯನ್ನು ನಿನಗರುಹಿದೆನು.

ಹಿಂದೆ ವೃತ್ರನಾಯಕರಾದ ದಾನವರಿಗೂ ಇಂದ್ರನೀತರಾದ ದೇವತೆಗಳಿಗೂ ಪ್ರಚಂಡ ಯುದ್ಧವಾಯಿತು. ವೃತ್ರನ ಭಯಂಕರ ರೂಪವನ್ನು ಕಂಡು ದೇವಾನೀಕವು ಭಯಕಂಪಿತವಾಯಿತು. ವೃತ್ರನ ಮಾಯಾಯುದ್ಧದಲ್ಲಿ ಇಂದ್ರನು ಮೂರ್ಛಿತನಾದನು. ಆಗ ವಸಿಷ್ಠನು ರಥಂತರ ಸಾಮಗಾನದಿಂದ ಆತನನ್ನು ಎಚ್ಚರಗೊಳಿಸಿದನು. ವಿಷ್ಣು, ಬ್ರಹ್ಮ ಶಿವರು ವೃತ್ರೇಂದ್ರರ ಯುದ್ಧವನ್ನು ನೋಡಬಂದರು. ಬೃಹಸ್ಪತಿಯು ವಿಕ್ರಮ ದುಸ್ಸಹನಾಗುತ್ತಿರುವ ವೃತ್ರನನ್ನು ಸಂಹರಿಸುವ ಶಕ್ತಿಯನ್ನು ಇಂದ್ರನಿಗಿತ್ತು ಸಲಹಿರೆಂದು ದೇವತ್ರಯವನ್ನು ಬೇಡಿದನು. ಲೋಕಕ್ಷೇಮವನ್ನನುಪಲಕ್ಷಿಸಿ ಬ್ರಹ್ಮದೇವನು ವೃತ್ರನ ಬ್ರಾಹ್ಮಣ ತೇಜವನ್ನು ಹಿಂಗಿಸಿದನು. ರುದ್ರದೇವನು ಜ್ವರರೂಪನಾಗಿ ವೃತ್ರನನ್ನಾವಹಿಸಿದನು. ಅದರಿಂದ ವೃತ್ರನು ಕಂಪಿಸಿ, ಆಕಳಿಸತೊಡಗಿದನು. ಶ್ರೀವಿಷ್ಣುವು ಇಂದ್ರನ ವಜ್ರಾಯುಧದಲ್ಲಿ ವಜ್ರನೆಂಬ ನಾಮದಿಂದ ಅವಹಿಸಿದ್ದನು. ಅಸುರ ಸೈನ್ಯಕ್ಕೆ ಬುದ್ಧಿನಾಶವಾಗಿ ಅವರ ಮಾಯೆಗಳು ನಷ್ಟವಾದವು. ಆಗ ದೇವೇಂದ್ರನು ವಜ್ರದಿಂದ ವೃತ್ರಾಸುರನನ್ನು ಸಂಹರಿಸಿದನು. ವೃತ್ರಹಂತಕನಾದ ಮಹೇಂದ್ರನು ಲೋಕಹಿತಸಾಧಕನಾಗಿ ಮಹಾಕೀರ್ತಿಯನ್ನು ಪೊಂದಿದನು.

ಆದರೆ ಬ್ರಹ್ಮಹತ್ಯೆಯು ಇಂದ್ರನನ್ನು ಕಾಡತೊಡಗಿತು. ಬಹುಕಾಲವಾತನು ಮಾನಸ ಸರೋವರದ ನಲಿನೀನಾಲದಲ್ಲಿ ಅಡಗಿದ್ದು, ಅನಂತರ ಋಷ್ಯಾದಿಗಳು ಮಾಡಿಸಿದ ಅಶ್ವಮೇಧಾದಿ ಯಾಗಗಳಿಂದ ಶ್ರೀಶನನ್ನು ಸಮರ್ಚಿಸಿ, ಬ್ರಹ್ಮಹತ್ಯಾವಿನಿರ್ಮುಕ್ತನಾದನು. ಆತನ ಬ್ರಹ್ಮಹತ್ಯೆಗೆ ಸ್ಥಾನಗಳನ್ನು ತೋರಿಸಬೇಕಾಗಿ ಬ್ರಹ್ಮದೇವನು ಅದನ್ನು ನಾಲ್ಕು ಭಾಗವನ್ನಾಗಿಸಿ ಅಗ್ನಿ, ವೃಕ್ಷ, ಜಲ, ಸ್ತ್ರೀಜನರಲ್ಲಿ ಅದನ್ನು ನಿಲ್ಲಿಸಿದನು. ನೀಲಧೂಮ, ಅಂಟು, ನೊರೆ, ರಜೋರೂಪದಿಂದ ಅದು ಅವರಲ್ಲಿ ಕಾಣಿಸುವುದು. ತಮ್ಮ ಬ್ರಹ್ಮಹತ್ಯೆಯ ಭಾಗದಿಂದ ತಾವು ಮುಕ್ತರಾಗುವುದೆಂತೆಂದು ಅವರು ಕೇಳಲು ಬ್ರಹ್ಮದೇವನು 'ಜ್ವಲದ್ವಹ್ನಿಯಲ್ಲಿ ಚರುಪಾಯಸಾದಿ ಹವ್ಯಗಳನ್ನೀಯದ ಮಾನವನನ್ನು ಅಗ್ನಿಗತ ಬ್ರಹ್ಮಹತ್ಯಾ ಪಾಪವು ಸೇರುವುದು. ಪರ್ವಕಾಲದಲ್ಲಿ ಛೇದನ ಭೇದನಗಳನ್ನು ಮಾಡುವವನನ್ನು ವೃಕ್ಷಗತ ಪಾಪವು ಸೇರುವುದು. ರಜಸ್ವಲಾಗಮನವನ್ನು ಆಚರಿಸಿದವನನ್ನು ಸ್ತ್ರೀಗತ ಪಾಪವು ಸೇರುವುದು. ಅಲ್ಪವೇ ಆಗಲಿ ನೀರಿನಲ್ಲಿ ಶ್ಲೇಷ್ಮಮೂತ್ರ ಪುರಿಷಸರ್ಜನೆ ಮಾಡುವವನನ್ನು ಜಲಗತ ಬ್ರಹ್ಮಹತ್ಯೆಯು ಸೇರುವುದು'' ಎಂದು ಬ್ರಹ್ಮದೇವನಿಂದ ನುಡಿಯಲ್ಪಟ್ಟಂತೆ ಇಂದ್ರಾದಿ ದೇವತೆಗಳು ವೃತ್ರವಧಾನುಗತ ಪಾಪದಿಂದ ನಿರ್ಮುಕ್ತರಾಗಿ ಶೋಭಿಸಿದರು.

ಧರ್ಮರಾಜ! ವೃತ್ರವಧೆಯಲ್ಲಿ ಇಂದ್ರನಿಗೆ ಸಹಾಯಕರಾದ ಹರಿಹರರು ನಿನಗೆ

ಕೌರವವಧೆಯಲ್ಲಿ ಸಹಾಯಕರಾಗಿರುವರು. ಶ್ರೀಕೃಷ್ಣನ ದಯದಿಂದ ವಿಜಯಿಯಾದೆ! ಪ್ರಜಾರಂಜಕನಾಗಿ ರಾಜ್ಯವನ್ನಾಳಿ, ಇಂದ್ರನಂತೆ ಸುಖಿಸು!" ಎಂದು ಭೀಷ್ಮನು ನುಡಿದನು.

ಧರ್ಮರಾಜನು ರುದ್ರಜ್ವರವೃತ್ತಾಂತವನ್ನು ತಿಳಿಯಲಿಚ್ಛಿಸಿ ಕೇಳಲು ಭೀಷ್ಮ ನಿಂತೆಂದನು: 'ಹಿಂದೆ ದಕ್ಷನು ಹರಿದ್ವಾರದಲ್ಲಿ ಬೃಹಸ್ಪತಿ (ವಿಷ್ಣು) ಸವನವನ್ನು ಮಾಡತೊಡಗಿದನು. ದೇವತೆಗಳು, ಮುನಿಗಳು, ಗಂಧರ್ವರು ಮುಂತಾಗಿ ಸರ್ವರು ಆ ಯಜ್ಞವನ್ನು ನೋಡಲು ಬರುತ್ತಿದ್ದರು. ಹಿಂದೆ ಪಿತಾಮಹಲೋಕದಲ್ಲಿ ನಡೆದ ವಿಶ್ವಸೃಡ್ಯಾಗ ಸಂದರ್ಭದಲ್ಲಿ ಮಾವನಾದ ದಕ್ಷನಿಗೂ ಅಳಿಯನಾದ ಮಹಾದೇವನಿಗೂ ಅಭ್ಯುತ್ಥಾನ ವಿಷಯವಾದ ಕಲಹವು ಉಂಟಾಗಿತ್ತು. ಅದು ನೆಪಮಾಡಿ ದಕ್ಷನು ರುದ್ರ ಭಾಗವನ್ನೀಯದೆ ಯಜ್ಞವನ್ನು ನಡೆಸುತ್ತಿದ್ದನು. ಅದನ್ನರಿತು ಮಹಾದೇವನು ಆ ಯಜ್ಞವಾಟಕ್ಕೆ ಬರಲಿಚ್ಛಿಸದೆ ಕೈಲಾಸದಲ್ಲಿ ನಿಂತನು.

ತಂದೆ ಎಂಬ ಅಭಿಮಾನದಿಂದ ಯಜ್ಞವನ್ನು ನೋಡಬಂದ ಸತಿದೇವಿಯು ಅರುದ್ರಭಾಗವಾದ ಕ್ರತುವನ್ನು ಕಂಡು, ರೋಷಶೋಕಪರೀತಳಾಗಿ, ಯೋಗಾಗ್ನಿಯಲ್ಲಿ ತನ್ನ ಶರೀರವನ್ನು ಬಿಟ್ಟಳು. ಅದರಿಂದ ಕುಪಿತನಾದ ರುದ್ರನು ವೀರಭದ್ರನಾಗಿ ದಕ್ಷಯಜ್ಞವನ್ನು ಧ್ವಂಸಗೊಳಿಸಿದನು. ಆಗ ಯಜ್ಞಾಗ್ನಿಯು ಹರಿಣರೂಪದಿಂದ ತಪ್ಪಿಸಿಕೊಂಡು ಗಗನಕ್ಕೆ ಹಾರಿದನು. ಅದನ್ನು ಕಂಡು ಮಹೇಶನು ತನ್ನ ಫಾಲತಲದ ಘರ್ಮಜಲದಿಂದ ಜ್ವರದೇವನನ್ನು ಸೃಜಿಸಿ ಜಗಗಳನ್ನು ಸುಡಲಾರಂಭಿಸಿದನು. ಜ್ವರತಪ್ತರಾದ ಭೂತಗಳಲ್ಲಿ ಕರುಣೆಯಿಂದ ಮುನಿಗಳು, ದೇವತೆಗಳು ಕಲೆತು ಬಂದು 'ಮಹೇಶ! ಶಾಂತನಾಗೆಂ'ದು ಬೇಡಿದರು. ಬ್ರಹ್ಮದೇವನು ಯಜ್ಞಶಿಷ್ಟವೆಲ್ಲವು ರುದ್ರಭಾಗವೆಂದು ಪರಿಕಲ್ಪಿಸಿ, ಮಗನಾದ ರುದ್ರನನ್ನು ನೋಡಿ, 'ಶಾಂತನಾಗು! ಪ್ರಜರಂತೆ ಇರುವ ದಕ್ಷಾದಿಗಳ ತಪ್ಪಿಗೆ ನೀ ಕುಪಿತನಾಗಬಹುದೇ? ಯಜ್ಞವನ್ನು ಪರಿರಕ್ಷಿಸು! ನಿನ್ನ ಹಣೆಯಿಂದ ಬಂದ ಜ್ವರವನ್ನು ಬಹುವಿಧವಾಗಿ ವಿಭಜಿಸಿಡು! ಏಕಮುಖವಾಗಿ ಜ್ವರವೆರಗಿದರೆ ಸಹಿಸುವರುಂಟೇ? ಶ್ರೀಹರಿ ಸೇವೆ ಎಂದು ತಿಳಿದು ಕ್ಷಮೆಯನ್ನು ತೋರು! ಬೃಹಸ್ಪತಿ ನಾಮಕ ಶ್ರೀಶನೇ ಯಜ್ಞಪ್ರಧಾನ ದೇವನಾಗಿರುವನು. ಅವನ ಕೋಪದಿಂದಲೇ ದಕ್ಷನು ಬಸ್ತಮುಖನಾಗಿರುವನು. ಅವನ ದಯೆಯಿಂದ ಯಜ್ಞವು ಸಾಂಗವಾಗಲಿ!' ಎಂದಾಜ್ಞಾಪಿಸಿದನು.

ದಕ್ಷನು ಮಹದವಜ್ಞಾಕರಣದಿಂದ ಪಶ್ಚಾತ್ತಾಪನಾಗಿ ಶ್ರೀಶಿವನನ್ನು ಸಹಸ್ರ(೧೦೦೮) ನಾಮಗಳಿಂದ ಸುತ್ತಿಸಿದನು. ಶ್ರೀಹರಿಯು ಪ್ರತ್ಯಕ್ಷನಾಗಿ ದಕ್ಷನನ್ನು ಅನುಗ್ರಹಿಸಿ, ಅವನಿತ್ತ ಸತ್ಕಾರವನ್ನು ಸ್ವೀಕರಿಸಿ ಇಂತು ನುಡಿದನು: 'ದಕ್ಷ! ರುದ್ರನು ನನ್ನ ಮೊಮ್ಮಗನು; ನನ್ನ ಪರಮಭಕ್ತನು; ಆತನ ದ್ರೋಹವೆಂದಿಗೂ ಒಳಿತಲ್ಲ. ಅಂತು ಇತರ ದೇವತೆಗಳನ್ನು ತಾರತಮ್ಯವನ್ನರಿತು ಪೂಜಿಸದೆ, ತಿರಸ್ಕರಿಸಿದವರು ನನ್ನ ಪ್ರೀತಿಗೆ

ಪಾತ್ರರಾಗರು! ವೇದಸಿದ್ಧವಾದ ರುದ್ರಭಾಗವನ್ನು ಬಿಟ್ಟೆ! ಕೆಟ್ಟೆ! ಈಗಲಾದರೂ ಮಹಾದೇವನನ್ನು ಪೂಜಿಸು! ಕೃತಕೃತ್ಯನಾಗು!'

ದಕ್ಷನು ಶ್ರೀ ಶಿವನನ್ನು ಮನಸಾರ ಪೂಜಿಸಿದನು. ಶಿವನು ಪ್ರೀತನಾಗಿ 'ದಕ್ಷ! ನಾವು ಮೂವರು ಲೋಕಸೃಜನರಕ್ಷಣ ಸಂಹರಣ ತತ್ಪರರು. ಸ್ವತಂತ್ರನಾದ ಶ್ರೀಹರಿಯ ಆಜ್ಞೆಯಂತೆ ನಾನು ಸಂಹರಿಸುವೆನು. ನನ್ನ ತಂದೆ ಬ್ರಹ್ಮದೇವನು ಸೃಜಿಸುವನು. ಶ್ರೀಹರಿಯ ಆಜ್ಞೆಯನ್ನು ಶಿರದಿ ಧರಿಸಿ, ನಾನು ಪಾಶುಪತಾದ್ಯಾಗಮಗಳನ್ನು ರಚಿಸಿ, ದುಷ್ಟ ಜನರು ಮೋಹಪಡುವಂತೆ ಮಾಡಿರುವೆನು. ಅದೇ ಶ್ರೀಶ ಸೇವೆ! ಇಂದು ನೀ ಮಾಡಿದ ಅಪರಾಧವನ್ನೂ ಕ್ಷಮಿಸಿರುವೆನು. ಇದೂ ಶ್ರೀಶ ಸೇವೆಯೇ' ಎಂದು ಅನುಗ್ರಹಿಸಿದನು. ದಕ್ಷನು ಮತ್ತೆ ಪ್ರಚೇತಸರಲ್ಲಿ ಜನಿಸಿ, ಮತ್ತೆ ಪ್ರಜಾ ಸಂತತಿಯನ್ನು ಬೆಳೆಸಿದನು. ಸತೀದೇವಿಯು ಹಿಮವತ್ಪರ್ವತರಾಜನ ಪುತ್ರಿಯಾಗಿ ಪರಮೇಶ್ವರನನ್ನೇ ಕೈಪಿಡಿದು, ಆತನ ಅರ್ಧಾಂಗಿಯಾದಳು. ಆಗ ಪುಟ್ಟಿದ ಕುಮಾರನೇ ದೇವಸೇನಾಪತಿಯಾಗಿ ಮೆರೆದನು.

ರುದ್ರಜ್ವರವು ಅನೇಕ ಭೂತಗಳಲ್ಲಿ ಅನೇಕ ವಿಧವಾಗಿ ಕಾಣುವುದು. ಆನೆಗಳಿಗೆ ಕುಂಭಸ್ಥಲತಾಪ; ಪರ್ವತಗಳಿಗೆ ಶಿಲಾಜಿತು; ನೀರಿಗೆ ಪಾಚಿ; ಹಾವಿಗೆ ಪೊರೆ; ಗೋಮುಖ್ಯ ಪಶುಗಳಿಗೆ ಕಾಲುನೋವು; ಭೂಮಿಗೆ ಸೌಳು; ಅಶ್ವಗಳಿಗೆ ಗಲಖಂಡ; ನವಿಲಿಗೆ ಗರೆ ಬೀಳುವುದು; ಕೋಗಿಲೆಗೆ ಕಣ್ಣು ನೋವು; ಗಿಳಿಗೆ ಬಿಕ್ಕು; ಕುರಿಗೆ ಪಿತ್ತ ಭೇದ; ಹುಲಿಗೆ ಶ್ರಮೆ; ಮನುಜರಿಗೆ ಮೈಕಾವು; ಇಂತು ಮಾಹೇಶ್ವರ ಜ್ವರವು ಬಹು ವಿಧವಾಗಿದೆ. ಇದನ್ನು ಪಠಿಸಿದವರು ಜ್ವರ ಪೀಡಿತರಾಗದಿರುವರು. ವೃತ್ರ ಕಥಾ ಪ್ರಸಂಗದಿಂದ ನಿನಗೆ ಜ್ವರಕಥಾ, ದಕ್ಷ ಚರಿತ್ರೆಗಳನ್ನು ನಿರೂಪಿಸಿದೆನು."

## ೧೪. ಶ್ರೇಯಸ್ಸಾಧನ — ಪರಾಶರ ಗೀತೆ

ಭೀಷ್ಮನಿಂತೆಂದನು: 'ಧರ್ಮರಾಜ! ಸಮಂಗನೆಂಬ ಮುನಿಯು ನಿರುದ್ವೇಗನಾಗಿ, ನಿತ್ಯತೃಪ್ತನಾಗಿರಲು ನೋಡಿ, ನಾರದನು ನಿನ್ನ ಪ್ರಶಾಂತತೆಗೆ ಕಾರಣವೇನೆಂದು ಕೇಳಿದನು. ಆಗ ಸಮಂಗನಿಂತೆಂದನು: 'ಮಹಾನುಭಾವ! ಹಿಂದಿನದೀಗಿಲ್ಲ. ಇಂದಿನದು ಮುಂದಿರುವುದಿಲ್ಲ. ಲೋಕವು ಅದರ ಭೋಗಗಳು ಅಧ್ರುವಗಳಾಗಿವೆ. ಇಂತರಿತು ನಾನು ಆಶೆಯನ್ನು ತೊರೆದಿರುವೆನು. ಅಂಧರು, ಜಡರು, ಮುಂತಾದವರು ನಿರಾರಂಭರಾಗಿಯೂ ಜೀವಿಸಿರುವರು. ಅದನ್ನು ಕಂಡು ಜೀವನಕ್ಕಾಗಿ ಮಹಾಪ್ರಯತ್ನವನ್ನು ನಾನು ಬಿಟ್ಟಿರುವೆನು. ಸಾವಿರ ವರ್ಷದಲ್ಲಿ ಹುಟ್ಟಿ ಸಾಯುವವರಿರುವರು. ಇದನ್ನು ಕಂಡು ಕಾಲನಿಯತವಾಗಿ ಬರುವ ಮೃತಿಗೆ ನಾನು ಹೆದರದಿರುವೆನು. ಶೋಕವು ಅಜ್ಞಾನ ಮೂಲವಾಗಿದೆ; ಅಜ್ಞಾನವನ್ನು ಶ್ರೀಹರಿ ಗುರುದಯದಿಂದ ಕಳೆದುಕೊಂಡ ನನ್ನಂತಹವನಿಗೆ ಲೌಕಿಕ ಫಲೋದ್ದೇಶಕಗಳಾದ ಯಾಜನಾಧ್ಯಾಪನೆಗಳಿಂದ ಏನು ಪ್ರಯೋಜನ? ಸುಖ

ದುಃಖಾದಿಗಳು - ಪುರಾಕೃತ ಪುಣ್ಯ ಪಾಪ ಫಲಗಳೆಂದು ತಿಳಿದವನಿಗೆ- ಉಗ್ಗು ಕುಗ್ಗುಗಳೆಂಬ ಮನೋವಿಕಾರವನ್ನು ಹುಟ್ಟಿಸಲಾರವು. ದುಃಖವನ್ನು ನಿರ್ವಿಕಾರನಾಗಿ ಸ್ವೀಕರಿಸಿ ಅನುಭವಿಸುವವನಿಗೆ ಅದು ಕೂಡ ಸುಖಸದೃಶವೇ ಆಗುವುದು. ಸುಖವನ್ನು ಪೊಂದಿ ಕುಣಿದಾಡುವ ನರನು ಅದನ್ನು ಕಳೆದುಕೊಂಡು ತತ್‌ಕ್ಷಣವೇ ದುಃಖವನ್ನೇ ಪೊಂದುವನು; ಆಗ ಸುಖವೇ ದುಃಖ ಸದೃಶವಾಯಿತಲ್ಲವೇ ? ಸುಖ ದುಃಖಗಳು ಮನೋಭೂಗತ ಭಾವನಾ ಬೀಜಗಳು ಆ ಬೀಜಗಳನ್ನು ಅಂಕುರಿಸದಂತೆ ಮಾಡಿ ನಾನು ನಿರ್ವಿಕಾರನೂ ಪ್ರಶಾಂತನೂ ಆಗಿರುವೆನು.'

ಧರ್ಮರಾಜನು, 'ತಾತ ! ತತ್ವಜ್ಞಾನವಿಲ್ಲದೆ ಸಂಶಯಕ್ಕೊಳಗಾಗಿ ತಲ್ಲಣಿಸುವ ಮನುಜನಿಗೆ ಶ್ರೇಯಸ್ಸಾಗುವದೆಂತು ?' ಎಂದು ಕೇಳಿದನು. ಭೀಷ್ಮನು ನಾರದಗಾಲವ ಸಂವಾದವನ್ನು ಉತ್ತರವಾಗಿ ನಿರೂಪಿಸಿದನು : ನಾರದನು 'ಗಾಲವ ! ಮಾನವನು ಗುರುಪೂಜನ, ವೃದ್ಧೋಪಸೇವನವನ್ನು ಮಾಡಿ ಜ್ಞಾನವನ್ನು ಸಂಪಾದಿಸಬೇಕು. ಅನೇಕ ಶಾಸ್ತ್ರಗಳಿವೆ; ಅವು ಪರಸ್ಪರ ವಿರುದ್ಧವಾಗಿವೆ. ಆದುದರಿಂದ ವಿಷ್ಣುಭಕ್ತನಾದ ವೇದ ವಿದ್ವಿಪ್ರನನ್ನು ಆಶ್ರಯಿಸಿ, ಶ್ರವಣದಿಂದ ಅಜ್ಞಾನವನ್ನು ಕಳೆದುಕೊಳ್ಳಬೇಕು. ದುಷ್ಟ ಶಾಸ್ತ್ರಗಳನ್ನು ಪರೀಕ್ಷಿಸಿ ಬಿಡಬೇಕು. ಮನನದಿಂದ ಅನ್ಯಥಾ ಜ್ಞಾನವನ್ನು ಕಳೆದುಕೊಂಡು, ಕೈಗೂಡಿಬಂದ ನಿಶ್ಚಯ ಜ್ಞಾನದಿಂದ, ಗುಣಪೂರ್ಣನು ಸರ್ವೋತ್ತಮನು ಆದ ಶ್ರೀಶನನ್ನು ಯಥಾಶಕ್ತಿ ಧ್ಯಾನಿಸಬೇಕು.

ಮನುಜನು ಮೊದಲು ಪಾಪದಿಂದ ವಿಮುಖನಾಗಬೇಕು. ಪಾಪಪುಣ್ಯಗಳನ್ನು ಶಾಸ್ತ್ರದಿಂದಲು, ಅದನ್ನರಿತ ನಿರ್ಮತ್ಸರ ಸುಜನರಿಂದಲು ತಿಳಿದು, ಪುಣ್ಯಕರ್ಮಗಳನ್ನೇ ಮಾಡಬೇಕು. ಆ ಪುಣ್ಯಫಲವನ್ನು ಶ್ರೀಶನಿಗರ್ಪಿಸಬೇಕು. ಸುಜನಸಂಗದಿಂದ ಶ್ರೀಹರಿ ವೀರ್ಯ ಸಂಪತ್ತಿಯ ಜ್ಞಾನವಾಗುವುದು. ಸರ್ವಭೂತಗಳಲ್ಲಿಯು ಮೃದುವರ್ತನನಾಗಿರಬೇಕು. ಮಧುರವಾಗಿ ಮಾತನಾಡಬೇಕು. ದೇವಪಿತೃ ವಿಪ್ರಾತಿಥಿ ಪೂಜನವನ್ನು ಪ್ರಮತ್ತನಾಗದೆ ಮಾಡಬೇಕು. ಅಹಂಕಾರವನ್ನು ಬಿಡಬೇಕು. ಪರನಿಂದೆಯು ಬ್ರಹ್ಮಹತ್ಯೆಗೆ ಸಮಪಾಪ ವಾಗಿದೆ; ಆತ್ಮಸ್ತುತಿಯು ಆತ್ಮಹತ್ಯೆಗೆ ಸಮಪಾಪವಾಗಿದೆ. ಆದುದರಿಂದ ಅವೆರಡನ್ನು ಶ್ರೇಯಃಕಾಮನು ಸರ್ವಥಾ ಬಿಡಬೇಕು. ಅನರ್ಥವು ವ್ಯರ್ಥವು ಆದ ಮಾತನ್ನಾಡಬಾರದು. ಕ್ರೋಧವೆಂಬ ಪ್ರವಾಹಕ್ಕೆ ಸಿಗಬಾರದು.

ವೇದಾಧ್ಯಯನವು, ವಿಹಿತಾಚಾರವು ಇರುವ ದೇಶದಲ್ಲಿರಬೇಕು. ವಿಪ್ರರಿಲ್ಲದ, ಪಾತಿವ್ರತ್ಯವಿಲ್ಲದ, ನಾಸ್ತಿಕರಿರುವ, ದೇವಾಲಯ ನದಿಗಳಿಲ್ಲದ ದೇಶಗಳಲ್ಲಿ ನಿಲ್ಲಬಾರದು. ಇಂತು ತಿಳಿದು ನಡೆವ ಮನುಜನು ಚಿತ್ತ ಶುದ್ಧಿಯನ್ನು, ಜ್ಞಾನಸಿದ್ಧಿಯನ್ನೂ ಪೊಂದುವನು.

ದುಷ್ಟ ಸಂಗವನ್ನು ಬಿಡುವ ಬಗೆ ಎಂತೆಂದು ನಿರೂಪಿಸುವೆನು ಕೇಳು! ಹಿಂದೆ ಸಗರ ಚಕ್ರವರ್ತಿಯು ಅರಿಷ್ಟನೇಮಿ ಎಂಬ ಮುನಿಯನ್ನು ನೋಡಿ ಸಂಗಫಲವನ್ನು ಕೇಳಲು ಆತನಿಂತು ಶ್ರೇಯಸ್ಸಾಧನವನ್ನು ನಿರೂಪಿಸಿದನು: "ಮನುಜನೆಲ್ಲಿಯವರೆವಿಗೂ

ಕಳತ್ರಪುತ್ರ ಧನ ಧಾನ್ಯ ಮಿತ್ರ ಗೃಹಾರಾಮಾದಿ ಐಹಿಕ ಭೋಗಗಳಿಗೆ ಮನಸೋತು, ತಲ್ಲೀನನಾಗಿರುವನೋ, ಅಲ್ಲಿಯವರೆಗೂ ಅವನು ಮುಕ್ತಿ ಮಾರ್ಗಕ್ಕೆ ಸುದೂರನೆಂದು ತಿಳಿ! ಬುದ್ಧಿವಂತನು ಸಂಸಾರವಸಾರವೆಂದರಿತು ವಿರಕ್ತನಾಗಬೇಕು. ವೃದ್ಧಕಳತ್ರವನ್ನು ಪ್ರಬುದ್ಧ ಪುತ್ರರಿಗೊಪ್ಪಿಸಿ ತಾನು ಸಕಲಬಂಧವನ್ನು ಜ್ಞಾನಧೈರ್ಯದಿಂದ ಕಡಿದುಕೊಳ್ಳಬೇಕು. ವಿವಿಕ್ತ ದೇಶದಲ್ಲಿರಬೇಕು. ಪುತ್ರವಂತನಾದರೇನು, ಅಪುತ್ರನಾದರೇನು? ಶ್ರೀಹರಿಯೇ ನಿಜವಾದ ಪುತ್ರನಾಗಿ ನರಕದಿಂದ ಉದ್ಧರಿಸುವನೆಂದು ತಿಳಿದ ಜ್ಞಾನಿಯು ಶ್ರೀಹರಿಧ್ಯಾನರತನಾಗಿ ಸರ್ವವನ್ನು ಮರೆತುಬಿಡಬೇಕು. ನಾನಿಲ್ಲದೆ ನನ್ನವರೆಂತು ಬದುಕುತ್ತಿರುವರೆಂಬ ಚಿಂತೆ ದಡ್ಡನಿಗೆ ತಾನು ಮೃತನಾದಾಗ ಅವರನ್ನು ಪೊರೆವ, ಶ್ರೀಹರಿಯೇ ಸರ್ವದಾ ಸರ್ವರಕ್ಷಕನಾಗಿರುವನೆಂಬ ಜ್ಞಾನ ಸುಜನನಿಗೆ! ಇಂತು ತಿಳಿದು, ನಿರಂತರಾನಿಮಿತ್ತ ಬಂಧುವಾದ ಗೋವಿಂದನನ್ನು ನಂಬಿ ನೆನೆಯುತ್ತಿರುವ ಮನುಜನು ಶ್ರೀಶಪ್ರಸಾದದಿಂದ ಮುಕ್ತನಾಗುವನು. ತಾನಾರೋ? ತನ್ನವರೆಂದು ಪೇಳಿಕೊಂಬುವರು ತನಗಾರೋ? ಎಲ್ಲವೂ ಎರವಿನ ಸಂಸಾರ; ನೀರ ಮೇಲಿನ ಗುಳ್ಳೆ! ಭೂತಗಳಿಗೆ ಜನನ ಮರಣಗಳು ಅವ್ಯಾಹತವಾಗಿ ಬರುತ್ತಿವೆ. ಆವ ಜನ್ಮದಲ್ಲಿ ಆರು ಬಂಧುಗಳು? ಯಾರು ಹಿತವರು? ಯಾರು ಶತ್ರುಗಳು? ಏನೂ ಗೊತ್ತಿಲ್ಲದೆ, ಒಂದು ಜನ್ಮದ ಬಂಧುಗಳನ್ನು ತಿರವೆಂದು ನಂಬಬಾರದು.

ದುರನ್ನವಾಗಲಿ, ಶಾಲ್ಯೋದನವಾಗಲಿ! ಸಮವಾಗಿ ಉಂಡು; ಬರಿನೆಲವಾಗಲಿ, ಮೃದು ತಲ್ಪವಾಗಲಿ! ಸಮವಾಗಿ ಮಲಗಿ; ಅಜಿನವಲ್ಕಲಗಳಾಗಲಿ ದುಕೂಲವಾಗಲಿ, ಸಮವಾಗಿ ಉಟ್ಟು; ನಿರ್ವಿಕಾರನಾಗಿರುವ ಶ್ರೀಶ ಭಕ್ತನು ಬೇಗನೆ ಮುಕ್ತನಾಗುವನು. ಜಲಧಿ ಪರೀತ ಜಗತೀತಲವನ್ನಾಳಿದ ಚಕ್ರವರ್ತಿಗಳು ಕೂಡ ದರಿದ್ರರಂತೆಯೇ ಸತ್ತರು. ಅವರೂ ಮುದುಕರಾದರು; ಅವರೂ ಪೋಗುವಾಗ ಏನೂ ಕೊಂಡು ಹೋಗಲಿಲ್ಲ. ಇಂತು ತಿಳಿದು ನಿಶ್ಚಿಂತನಾಗಿರುವವನು ಬೇಗ ಮುಕ್ತನಾಗುವನು. ಧನವನ್ನು ಸಂಪಾದಿಸುವುದು ಕಷ್ಟ; ರಕ್ಷಿಸುವುದಿನ್ನೂ ಕಷ್ಟ; ನಷ್ಟವಾದರೆ ಮತ್ತಷ್ಟು ಕಷ್ಟ! ಇಂತು ತಿಳಿದು ಶ್ರೀಹರಿ ಕೊಟ್ಟದ್ದರಿಂದ ತೃಪ್ತನು ಬೇಗ ಮುಕ್ತನಾಗುವನು" ಇಂತು ನುಡಿದ ಅರಿಷ್ಟನೇಮಿಯನ್ನು ಪೂಜಿಸಿ, ಸಗರನು ಆತನ ಮಾತಿನಂತೆ ನಡೆದು ಶ್ರೇಯೋಭಾಜನನಾದನು. ಧರ್ಮರಾಜ! ನೀನೂ-ಗೃಹಸ್ಥನಾದರೇನು? ರಾಜಾಧಿರಾಜನಾದರೇನು? ದುಷ್ಟಸಂಗ ಬಿಟ್ಟು, ಸತ್ಸಂಗವನ್ನು ಮಾಡು! ಶ್ರೀಶನನ್ನು ಸರ್ವ ಕರ್ಮ ಸಮರ್ಪಣದಿಂದ ಭಜಿಸು!'

ಆಗ ಧರ್ಮರಾಜನು 'ತಾತ! ಶುಕ್ರನಂತಹ ಮಹಾನುಭಾವನು ದೈತ್ಯಗುರುವೆನಿಸಿ, ದೇವತೆಗಳಿಗೆ ವಿರೋಧವನ್ನು ಮಾಡಿದನು. ಇದಕ್ಕೆ ಕಾರಣವೇನು? ಆತನಿಗೆ ಶುಕ್ರನೆಂಬ ಹೆಸರೇಕೆ ಬಂತು?' ಎಂದು ಕೇಳಿದನು.

ಭೀಷ್ಮನಿಂತೆಂದನು: "ಹಿಂದೆ ಭೃಗು ಪತ್ನಿಯ ಶರಣು ಹೊಂದಿ, ಆಕೆಯ ಆಶ್ರಮದಲ್ಲಿ ಅಡಗಿ, ದೇವತೆಗಳಿಗೆ ಸಿಗದಿದ್ದ ದುಷ್ಟ ದೈತ್ಯರನ್ನು ವಧಿಸಲಾರದೆ ಬೃಂದಾರಕರು ವಿಷ್ಣುವಿಗೆ ಮೊರೆಯಿಟ್ಟರು. ಆತನು ಭೃಗುಪತ್ನಿಯಾದ ಪುಲೋಮೆಯನ್ನು

ಸಂಹರಿಸಿದನು. ದೈತ್ಯರಿಗೆ ದಿಕ್ಕಿಲ್ಲದಾಯಿತು. ಆಗ ದೇವತೆಗಳು ಅವರನ್ನು ಕೊಂದು, ಲೋಕಪೀಡೆಯನ್ನು ನಿವಾರಿಸಿದರು. ಹತಶೇಷರಾದ ದಾನವರು ಪುಲೋಮಾ ಭೃಗು ಸುತನಾದ ಶುಕ್ರನನ್ನು ಆಶ್ರಯಿಸಿ, ಅವನನ್ನು ತಮ್ಮ ಆಚಾರ್ಯನನ್ನಾಗಿ ವರಿಸಿದರು. ತನ್ನ ತಾಯಿಯನ್ನು ಕೊಲ್ಲಿಸಿದರೆಂಬ ಸಿಟ್ಟಿನಿಂದ, ಶುಕ್ರನು ದೈತ್ಯಗುರುವಾಗಿ, ಬೃಹಸ್ಪತಿಯೊಡನೆ ಸ್ಪರ್ಧಿಸುತ್ತಿದ್ದನು.

ಒಂದು ಸಲ ಶುಕ್ರನು ತನ್ನ ಯೋಗಬಲದಿಂದ ಕುಬೇರನನ್ನು ವಂಚಿಸಿ, ಆತನ ಧನರಾಶಿಯನ್ನು ಅಪಹರಿಸಿದನು. ಕುಬೇರನು ಖಿನ್ನನಾಗಿ ತನ್ನ ಮಿತ್ರನಾದ ಮಹಾದೇವನಿಗ ಶರಣಾದನು. ರುದ್ರನು ಶುಕ್ರನನ್ನು ದಹಿಸಿಬಿಡುವೆನೆಂದು ಕೆಂಗಣ್ಣನಾಗಿ 'ಎಲ್ಲಿ ಶುಕ್ರ! ಎಲ್ಲಿರುವನವನು?' ಎಂದು ಹುಡುಕತೊಡಗಿದನು. ತನಗೆ ದೂರನಾಗಿ ನಿಂತಿರುವ ಶುಕ್ರನನ್ನು ಕಂಡು ಮಹಾದೇವನು ಶೂಲವನ್ನೆತ್ತಿ ಬಂದನು. ಶುಕ್ರನು ಅತಿ ವೇಗದಿಂದ ಬಂದು ಶೂಲಾಗ್ರದಲ್ಲಿ ಸೂಕ್ಷ್ಮರೂಪನಾಗಿ ನಿಂತನು. ಶೂಲಾಗ್ರದಲ್ಲಿರುವವನನ್ನು ಶೂಲದಿಂದ ತಿವಿಯಲು ಬಾರದಾದಾಗ, ರುದ್ರನು ತನ್ನ ಪಾಣಿಯಿಂದ ಶೂಲವನ್ನು ಬಾಗಿಸಿ, ಅದನ್ನು ಪಿನಾಕ(ಬಿಲ್ಲು)ವೆನಿಸಿದನು. ಆಗ ಬಿಲ್ಲಿನಿಂದ ಜಾರಿ ಶುಕ್ರನು ರುದ್ರನ ಪಾಣಿಯಲ್ಲಿ ನಿಂತನು. ಪಾಣಿತಲದಲ್ಲಿರುವವನನ್ನು ಪಾಣಿಯಿಂದ ಹೊಡೆಯಲಾಗದೆ, ಶಿವನು ತಟ್ಟನೆ ಅವನನ್ನು ನುಂಗಿಬಿಟ್ಟನು, ಹೊಟ್ಟೆಯೊಳಗಿದ್ದ ಶುಕ್ರನು ತಪೋನಿರತನಾಗಿ ಯೋಗಬಲದಿಂದ ಸಾಯದೆ ಉಳಿದನು. ಅವನ ತೇಜವು ರುದ್ರತೇಜದಿಂದ ಬೆರೆತು ದುರ್ನಿರೀಕ್ಷ್ಯವಾಯಿತು. ಬ್ರಹ್ಮದೇವನು ಲೋಕಕ್ಷೇಮಕ್ಕಾಗಿ ಶುಕ್ರನನ್ನು ಹೊರಹಾಕಿಬಿಡೆಂದು ರುದ್ರನಿಗಾಜ್ಞಾಪಿಸಿದನು.

ಶಿವನು ತನ್ನೆಲ್ಲ ಇಂದ್ರಿಯ ದ್ವಾರಗಳನ್ನು ಮುಚ್ಚಿ, ಶಿಶ್ನ ದ್ವಾರವನ್ನು ಮಾತ್ರ ಮುಚ್ಚದಿರಲು ನೋಡಿ, ಹೊರಹೊರಡೆಂಬ ಆತನ ಅಪ್ಪಣೆಯಂತೆ ಶುಕ್ರನು ಶಿಶ್ನ ದಿಂದಲೇ ಹೊರಬಂದನು. ಆತನನ್ನು ಕೊಲ್ಲಲು ಹವಣಿಸುವ ಶಿವನನ್ನು ಶಿವೆಯು ವಾರಿಸಿ, 'ದೇವ! ನಿನ್ನ ಹೊಟ್ಟೆಯಲ್ಲಿದ್ದು ಹೊರಬಂದ ಶುಕ್ರನು ನನಗೂ ಮಗನಂತಾದನು. ಇವನನ್ನು ಕೊಲ್ಲಬೇಡ!' ಎಂದು ಪ್ರಾರ್ಥಿಸಿದಳು. ಮಹಾದೇವನು ದೇವಿಯ ಮಾತನ್ನು ಮನ್ನಿಸಿ, ಶುಕ್ರನನ್ನು ಅತಿತೇಜೋವಂತನಾಗೆಂದು ವರವಿತ್ತು ಕಳಿಸಿದನು. ಶಿಶ್ನದ್ವಾರದಿಂದ ಬಂದನಾದುದರಿಂದ ಭಾರ್ಗವನಿಗೆ ಶುಕ್ರನೆಂಬ ಹೆಸರು ಬಂತು.

ಧರ್ಮರಾಜ! ನಿನಗೆ ಜನಕಪರಾಶರ ಸಂವಾದವನ್ನು ಹೇಳುವೆನು. ಕೇಳು! ಜನಕರಾಜನಿಗೆ ಪರಾಶರ ಮುನಿಯು ಇಹಪರ ಶ್ರೇಯಸ್ಸಾಧನವನ್ನು ನಿರೂಪಿಸಿದನು:

'ರಾಜನ್! ಮನುಜನು ಬೀಜವನ್ನು ಬಿತ್ತಿ, ಅದಕ್ಕೆ ತಕ್ಕ ಫಲವನ್ನು ಪಡೆವಂತೆ, ಕರ್ಮಬೀಜದಿಂದ ಬರುವ ಸುಖ ದುಃಖ ರೂಪ ಫಲವನ್ನು ಉಣ್ಣುತ್ತಿರುವನು, ಎಂದಿಗಾದರೂ ಮಾಡಿದ ಕರ್ಮದ ಫಲವನ್ನು ಉಣ್ಣದಿರಲಾಗದು. ಮನಸ್ಸು, ವಾಕ್, ಕಾಯಗಳೆಂಬ ತ್ರಿಕರಣಗಳಿಂದ ಅನ್ಯಾಯವನ್ನು ಮಾಡಬಾರದು. ಸತ್ಯ ಶಮದಮಾಹಿಂಸೆಗಳೇ

ಸನ್ಮಾರ್ಗವೆನಿಸುವವು. ಇಂದ್ರಿಯಗಳು ಕುದುರೆಗಳು ಮನಸ್ಸುರಜ್ಜುವು ; ಬುದ್ಧಿಯೇ ಸಾರಥಿ ; ದೇಹವೇ ರಥವು ! ಇಂತಹ ರಥದಲ್ಲಿರುವ ಜೀವನೆಂಬ ರಥಿಕನು ಬುದ್ಧಿ ಸಾರಥಿಯಂತೆ, ಸದಿಂದ್ರಿಯ ತುರಗನಾದರೆ ಆಗ ಅವನು ಮುಕ್ತಿ ಎಂಬ ಗಮ್ಯಸ್ಥಾನವನ್ನು ಸುಖವಾಗಿ ಸೇರುವನು. ಅದೇ ಜೀವನು ದುಷ್ಟೇಂದ್ರಿಯವಶನಾದನೆಂದರೆ, ಅವನು ಸಂಸಾರಗರ್ತದಲ್ಲಿ ಬಿದ್ದು ದುಃಖಪಡುವನು. ಜ್ಞಾನವನ್ನಾರ್ಜಿಸಿ, ಇಂದ್ರಿಯಗಳಿಗೆ ವಶನಾಗದೆ, ದುರ್ವಿಷಯಗಳನ್ನು ಪರಿವರ್ಜಿಸಿ, ಪಾಪಮಾರ್ಗವನ್ನು ಬಿಟ್ಟವನು ಮುಕ್ತನಾಗುವನು.

ಮನುಜ ಶರೀರವು ಅತಿ ದುರ್ಲಭವಾಗಿದೆ. ಅದು ಜಲಬುದ್ಬುದದಂತೆ ಅತಿ ಚಂಚಲವೂ ಆಗಿದೆ. ಮಹಾಪುರುಷಾರ್ಥವಾದ ಮೋಕ್ಷವು ಮನುಜ ಶರೀರಮಾತ್ರ ಸಾಧ್ಯವಾಗಿದೆ. ಕೊಳಕು ನೀರಿನಲ್ಲಿ ಸ್ನಾನ ಮಾಡಿದರೆ ಮೈಯೆಲ್ಲ ಕೊಳಕಾಗುವಂತೆ, ಪಾಪಾಚರಣದಿಂದ ಶ್ರೇಯಸ್ಸೆಂದಿಗೂ ಆಗದು. ಪುಣ್ಯಾ ಚರಣವು ಗಂಗಾಸ್ನಾನದಂತೆ ಸಕಲ ಪಾಪನಾಶಕವೂ, ಮನಃ ಶರೀರಶುದ್ಧಿ ಸಂಪಾದಕವೂ ಆಗಿದೆ. ಎಲ್ಲ ಜೀವರನ್ನು ತನ್ನಂತೆ ಕಂಡು, ಯಾರಿಗೂ ದ್ರೋಹವನ್ನೆಸಗದಿರುವವನು ದೇವತೆಗಳಿಗೂ ವಂದನೀಯನೆನಿಸುವನು.

ಧನವೆಂಬ ವೃಕ್ಷಕ್ಕೆ ಧರ್ಮವೇ ಫಲವು ! ಕಾಮಗಳು ಅದರ ಹೂಚಿಗುರೆಲೆಗಳು, ದುರಂತ ವೀರ್ಯವಾದ ಮೃತ್ಯುವು ಕರಾಳವದನವನ್ನು ತೆರೆದು ನುಂಗಲು ಬರುತ್ತಿರುವುದನ್ನು ಕಾಣದೆ, ಕೇವಲ ವಿಷಯ ಸುಖಗಳಿಗೆ ಪರದಾಡುವದು ಬುದ್ಧಿವಂತರ ಲಕ್ಷಣವಲ್ಲ. ಧರ್ಮ ಫಲವನ್ನು ಬೇಗ ಸಂಪಾದಿಸಿದರೆ, ಅದರಿಂದ ಜ್ಞಾನವಿಜ್ಞಾನಗಳು, ಅದರಿಂದ ಪ್ರಶಾಂತಿರೂಪ ಮೋಕ್ಷವು ಸಿಗುವುದು. ಧರ್ಮದಿಂದ ಸಂಪಾದಿಸಿದ ಧನವು ಸ್ವಲ್ಪವಾದರೂ, ಪಾತ್ರನಿಗೀಯಲ್ಪಟ್ಟಾಗ, ಮಹತ್ಫಲವನ್ನು ಸಂಪಾದಿಸಿಕೊಡುವದು.

ಮನುಜನು ಮುನಿಋಣವನ್ನು ಅಧ್ಯಯನದಿಂದಲು, ದೇವಋಣವನ್ನು ಯಜ್ಞದಿಂದಲು ಅತಿಥಿ ಋಣವನ್ನು ಅನ್ನದಿಂದಲು ಪಿತೃ ಋಣವನ್ನು ಶ್ರಾದ್ಧ ತರ್ಪಣಗಳಿಂದಲು, ಭೂತ ಋಣವನ್ನು ರಂಜನದಿಂದಲು ತೀರಿಸಿ, ಋಣಪಂಚಕ ನಿರ್ಮುಕ್ತನಾಗುವನು. ಸ್ವಧರ್ಮವನ್ನು ಬಿಡದೆ ಮಾಡಿದುದರಿಂದ ನಾರದ, ಪರ್ವತ, ದೇವಲ, ಭಾರದ್ವಾಜಾದಿ ಪರಮ ಮುನಿಗಳು ಸರ್ವಲೋಕ ಮಾನ್ಯರಾಗಿರುವರು. ವಿಷ್ಣುಭಕ್ತನು ಮೊದಲು ಅನರ್ಹನಾಗಿದ್ದರೂ, ತಪಸ್ಸಿನಿಂದ, ಶ್ರವಣದಿಂದ, ಪಾಪವರ್ಜನದಿಂದ ಜ್ಞಾನವನ್ನಾರ್ಜಿಸಿ ಅರ್ಹನಾಗುವನು.

ಜನನಿ, ಜನಕ, ಗುರುವು, ಇವರು ಪೂಜ್ಯರು. ಅವರ ಸೇವನೆಯಿಂದಲು, ಸುಜನಸಂಗದಿಂದಲು ಎಂತಹ ಕುಜನನೂ ಶುದ್ಧನಾಗುವನು. ನಾಲ್ಕನೆಯ ವರ್ಣದವರಾದರೂ ಶೂದ್ರರು ಕೂಡ ಸುಜನ ಶುಶ್ರೂಷೆಯಿಂದ ಪರಿಶುದ್ಧರಾಗಿ, ಸದ್ಗತಿಯನ್ನು ಹೊಂದುವರು. ಮನುಜ ಜೀವನವು ಅನಿತ್ಯವೆಂದರಿತವನು ಸುಖದುಃಖಾದಿ ಸರ್ವಾವಸ್ಥೆಗಳಲ್ಲಿಯೂ ಧರ್ಮಾಚರಣವನ್ನು ಬಿಡದೆ ಪಾಲಿಸುವನು. ಯಜ್ಞರಕ್ಷಕನಾಗದ

ಕ್ಷತ್ರಿಯನೂ, ದಾನಶೀಲನಾಗದ ವೈಶ್ಯನೂ, ವಿಪ್ರಶುಶ್ರೂಷೆಗೈಯದ ಶೂದ್ರನೂ ಮಿಕ್ಕೆಲ್ಲ ಧರ್ಮಗಳನ್ನು ಮಾಡಿದರೂ ಅಧರ್ಮಪರನಂತೆಯೇ ಧರ್ಮಫಲಭಾಜನನಾಗಲಾರನು. ಧರ್ಮದಿಂದ ಬಂದ ಧನವು ಪಾದಮಾತ್ರವಾದರೂ, ಬಹು ಫಲವನ್ನೀಯುವದು; ಅಧರ್ಮದಿಂದ ಬಂದ ಧನವು ಕೋಟಿಯಾದರೂ ನಿಷ್ಫಲವೆಂದು ದಾನಶಾಸ್ತ್ರವಿದರು ಹೇಳುವರು.

ಎಂತಹ ಆಪತ್ತಿನಲ್ಲಿಯೂ ವಿಪ್ರನು ನೀಚಸೇವನವನ್ನು ಮಾಡಲಾಗದು. ರಾಜಧರ್ಮ ವೈಶ್ಯಧರ್ಮಗಳಿಂದ ಆಪತ್ತಿನಲ್ಲಿ ಬದುಕಿ, ಪಾರಾದ ಮೇಲೆ ಸ್ವಧರ್ಮದಿಂದಲೇ ಜೀವಿಸುವುದರಿಂದ ಬ್ರಾಹ್ಮಣನು ನಿಷ್ಪಾಪನೆನಿಸುವನು. ರಾಜನಿಗೆ ವಿಪ್ರವೃತ್ತಿ ವೈಶ್ಯ ವೃತ್ತಿಗಳಿಂದ ಜೀವಿಸುವುದು ಆಪದ್ಧರ್ಮವಾಗಿದೆ. ಶಸ್ತ್ರಾಜೀವಿಕೆಯೇ ಅವನ ಧರ್ಮ ; ವೈಶ್ಯನು ಎಂತಹ ಆಪತ್ತಿನಲ್ಲಿಯೂ ಮದ್ಯ, ಮಾಂಸ, ವಿಷಾದಿ ಪದಾರ್ಥಗಳನ್ನು ಮಾರಬಾರದು. ಅವನು ಕೃಷಿಯಿಂದ ಜೀವಿಸಬಹುದು. ಶೂದ್ರನು ಶಿಲ್ಪವೃತ್ತಿಗಳಿಂದ ಇತರ ವರ್ಣಾನುಕೂಲನಾಗಿ ಜೀವಿಸಬೇಕು.

ಎಲ್ಲ ನರರು ಸ್ವವೃತ್ತಿಯಿಂದ ಜೀವಿಸುತ್ತಿರುವುದನ್ನು ನೋಡಿ ಧರ್ಮವಿರೋಧಿಗಳಾದ ದೈತ್ಯರು ದುರಾಗ್ರಹದಲ್ಲಿ ನರರಲ್ಲಿ ಆವಹಿಸಿದರು. ಅದರಿಂದ ಮಾನವರ ಮಾನಸಗಳು ಮಾನದರ್ಪರೋಷಾಸೂಯಾದೂಷಿತಳಾದವು. ಅವರು ಧರ್ಮವನ್ನು ದೂಷಿಸಿ, ವೃತ್ತಿಗಳನ್ನು ಕೆಡಿಸಿದರು. ಆಗ ವೇದ ದೇವ ಋಷಿಗಳು ಮಹಾದೇವನಿಗೆ ಶರಣಾಗತರಾದರು. ಮಹಾದೇವನು ಮನೋನಿಯಾಮಕನು, ವೇದಪ್ರತಿಪಾದ್ಯನೂ ಆದುದರಿಂದ ನರರ ಮನಸ್ಸಿನಲ್ಲಿದ್ದ ದುಷ್ಟದಾನವರನ್ನು ಜ್ಞಾನಭಕ್ತಿ ವಿರಕ್ತಿಗಳೆಂಬ ಅಗ್ರಗಳುಳ್ಳ ತ್ರಿಶೂಲದಿಂದ ತಿವಿದು, ಹೊರದೂಡಿದನು. ಆಗ ಮಾನವರ ಮಾನಸಗಳು ಪರಿಶುದ್ಧವಾದವು. ವೇದಾಧ್ಯಯನ, ಯಜ್ಞಕರಣ, ಪ್ರಜಾರಕ್ಷಣ, ಶಿಲ್ಪಚಾತುರ್ಯಗಳೆಂಬ ವೃತ್ತಿಗಳು ಮೊದಲಿನಂತೆ ಚನ್ನಾಗಿ ನಡೆದವು. ದೇವಮುನಿಗಳಿಗೆ ಸಂತೋಷವಾಯಿತು. ಅವರು ತಮ್ಮ ತಪಸ್ಸನ್ನು ನಿರ್ವಿಘ್ನವಾಗಿ ಮುಂದುವರಿಸಿದರು.

ಬ್ರಹ್ಮವಿಚಾರವೇ ನಿಜವಾದ ತಪಸ್ಸು. ಅಂತಹ ತಪಸ್ಸಿನಿಂದಲೇ ಕಮಲಭವನು ಸಕಲಭುವನ ನಿರ್ಮಾಣವಿಚಕ್ಷಣನಾದನು. ರುದ್ರನು ಗುಣಪೂರ್ಣನಾದ ಶ್ರೀಹರಿ ಧ್ಯಾನರೂಪತಪೋಮಹಿಮೆಯಿಂದ ಸಕಲ ಮಾನಸವಿನಿಯಾಮಕನಾದುದಲ್ಲದೆ, ಸಂಹಾರ ಕಾರ್ಯದಕ್ಷನೂ ಆದನು. ಇಂದ್ರಾದಿ ದೇವತೆಗಳು, ನಾರಾದಾದಿ ಮುನಿಗಳು, ಸನತ್ಕುಮಾರಾದಿ ಯೋಗಿಗಳು, ಚಿತ್ರರಥಾದಿ ಗಂಧರ್ವರು, ಮನ್ವಾದಿ ಚಕ್ರವರ್ತಿಗಳು, ಎಲ್ಲ ಸುಜನರು ತಂತಮ್ಮ ಯೋಗ್ಯತೆಗೆ ತಕ್ಕ ಸುಖವೃದ್ಧಿಯನ್ನು ಪಡೆದುದು ಅವರವರ ತಪಃಪ್ರಭಾವದಿಂದಲಲ್ಲವೇ? ಭೋಜ್ಯಗಳು, ಗಂಧಮಾಲ್ಯಗಳು, ಶಯನಾಸನಗಳು ಕೊನೆಗೆ ದಾರಧನಪುತ್ರಮಿತ್ರಾದಿಗಳು ಸಮೃದ್ಧವಾಗಿದ್ದರೂ, ಅವೆಲ್ಲವೂ ಹೇಯಗಳು, ಅನಿತ್ಯಗಳೆಂದರಿತು, ದುಷ್ಟಸಂಗ ದೂರರಾಗಿ ಸತ್ಸಂಗದಲ್ಲಿ ನಿರ್ಮಲರಾಗಿ, ತಪವನ್ನು ಮಾಡಿದ ಮಹಾನುಭಾವರೆಲ್ಲರೂ ದಿವ್ಯಸುಖರೂಪ ಮುಕ್ತಿಯನ್ನು ಪಡೆದಿರುವರು.

ಕೇಳು ! ತೃಪ್ತಿಯೇ ಸುಖವೆನಿಸಿದೆ; ದಂಡಿಯಾದ ಭೋಗಗಳಲ್ಲ ; ಲೋಭವೇ

ದುಃಖವೆನಿಸಿದೆ; ದಾರಿದ್ರ್ಯವಲ್ಲ; ತಪೋನಿರತಿಯಿಂದ ಬರುವ ತೃಪ್ತಿ ಇಲ್ಲದವನಿಗೆ ಸಂಪತ್ತೂ ದಾರಿದ್ರ್ಯದಂತೆ ದುಃಖಪ್ರದವೇ ಆಗುವುದು. ಸುಖದುಃಖಗಳೊದಗಿದಾಗ ಹರ್ಷವಿಷಾದಗಳಿಗೆಡೆಗೊಡದೆ ಸಮಚಿತ್ತತೆಯೇ ತಪಸ್ಸು; ದೇವನಿತ್ತುದರಿಂದ ಅನಿಷಿದ್ಧ ಭೋಗಗಳನ್ನು ಅನುಭವಿಸುತ್ತಾ, ಅಪ್ರಾಪ್ತವಾದುದನ್ನು ಅಭಿಲಕ್ಷಿಸದೆ ಇರುವುದೇ ತಪಸ್ಸು. ಆಯಾ ವಿಧವನ್ನರಿತು ಬಳಸುವ ತಪಸ್ಸೇ ಧರ್ಮಕಾಮಾರ್ಥಗಳನ್ನೂ, ಸ್ವರ್ಗಸದ್ಗತಿಯನ್ನೂ ಕೊಡಲು ಸಮರ್ಥವಾಗಿದೆ. ಪ್ರವೃತ್ತಿಮಾರ್ಗರತನು ಅನಿತ್ಯ ಫಲಗಳನ್ನು ಬೇಡಿ, ತದಂತ್ಯವಾದಾಗ ಮತ್ತೆ ಹುಟ್ಟುವನು. ಅಂತಹವನಿಗೆ ಜನನ ಮರಣರೂಪ ಸಂಸಾರ ಚಕ್ರದಿಂದ ಬಿಡುಗಡೆ ಇಲ್ಲ. ನಿವೃತ್ತಿ ಕರ್ಮರತನು ಶಾಶ್ವತ ಫಲವನ್ನು ಅಶಾಶ್ವತ ಪದಾರ್ಥಗಳನ್ನಿತ್ತು ಪೊಂದುವನು. ಆದುದರಿಂದ ಮನುಜನು ತನ್ನ ವರ್ಣ, ತನ್ನ ಆಶ್ರಮಗಳಿಗೆ ತಕ್ಕ ವಿಹಿತ ಕರ್ಮವನ್ನು ಮಾಡಿ, ಶ್ರೀಹರಿಗೆ ಪುಣ್ಯ ಫಲವನ್ನರ್ಪಿಸಬೇಕು.

ಶ್ರೀ ಪುರುಷನಾಮಕ ನಾರಾಯಣನ ಮುಖ ಬಾಹೂರುಪಾದಗಳಿಂದ ಬಂದ ನಾಲ್ಕು ವರ್ಣಗಳೂ ತಮ್ಮ ಉತ್ಪತ್ತಿ ಸ್ಥಾನದಂತೆ ಉನ್ನತವಾಗಿವೆ. ಅಂತಹ ವರ್ಣಗಳಲ್ಲಿ ತಾರತಮ್ಯವಿದೆ. ಆದರೆ ಅವರವರ ಸಾಧನವನ್ನು ಅವರು ಮಾಡಿಕೊಂಡು, ಶ್ರೀಹರಿ ಪ್ರಸಾದ ಪಾತ್ರರಾದರೆ, ಯಾವ ವರ್ಣದವರೇ ಆಗಲಿ, ಮುಕ್ತಿಯನ್ನು ಹೊಂದಬಹುದಾಗಿದೆ. ವರ್ಣ ವಿಶೇಷ ಧರ್ಮಗಳಲ್ಲದೆ ಸಾಮಾನ್ಯ ಧರ್ಮಗಳಿವೆ. ಅವು ಸರ್ವ ವರ್ಣದವರಿಗೂ ವಿಹಿತವಾಗಿವೆ. ಸತ್ಯ, ಶೌಚ, ಅಹಿಂಸೆ, ಅನಸೂಯೆ, ಶ್ರಾದ್ಧ, ಅತಿಥಿಪೂಜನ, ಶ್ರೀಶಾರಾಧನೆ, ಗುರುಭಕ್ತಿ, ಆರ್ಜವ ಎಂಬ ಧರ್ಮಗಳು ಎಲ್ಲರಿಗೂ ಸಮಾನ ಕರ್ತವ್ಯವೆನಿಸಿವೆ. ಇಂತು ಧರ್ಮಗಳನ್ನರಿತು ನಡೆದವನಾರೇ ಆಗಲಿ, ಸಾಂಸಾರಿಕ ಬಂಧದಿಂದ ಮುಕ್ತನಾಗಿ, ಸ್ವರೂಪಾನಂದಾವಿರ್ಭಾವರೂಪ ಮುಕ್ತಿಯನ್ನು ಪಡೆಯುವನು. ಭೂವರ! ನನ್ನ ಅಭಿಪ್ರಾಯವನ್ನು ಹೇಳುವೆನು ಕೇಳು! ಪರಬ್ರಹ್ಮನಾದ ವಿಷ್ಣುವಿಗೆ ಮಿಗಿಲಾದ ದೈವವಿಲ್ಲ, ವೇದಗಳಿಗೆ ಮಿಗಿಲಾದ ಶಾಸ್ತ್ರವಿಲ್ಲ. ವಿಷ್ಣುಭಕ್ತಿಗೆ ಮಿಗಿಲಾದ ಸಾಧನವಿಲ್ಲ. ವಿಷ್ಣೋತ್ತಮ ಬೋಧಕನಿಗೆ ಸಮನಾದ ಗುರುವಿಲ್ಲ.

ಅಂತಹ ಶ್ರೀಹರಿಯಲ್ಲಿ ನಿಷ್ಠೆಯನ್ನಿಟ್ಟು ಭಜಿಸುವುದನ್ನು ಶಮವೆಂಬರು. ಶಮವೆಂಬ ರತ್ನವನ್ನು ದಮವೆಂಬ (ಇಂದ್ರಿಯ ನಿಗ್ರಹ) ಬಂಗಾರದಲ್ಲಿ ಹುದುಗಿ ಧರಿಸುವುದೇ ಮನುಜನಿಗೆ ಶ್ರೇಷ್ಠ ಭೂಷಣವು. ಶಮದಮಗಳನ್ನು ಕಡೆಗಣಿಸಿದವನು ಹಿಂಸಾಪರನಾಗುವನು. ಅಹಿಂಸೆಗೆ ಸಮಾನವಾದ ಧರ್ಮವಿಲ್ಲ. ಆದರೂ ಕ್ಷತ್ರಿಯರಿಗೆ ರಣರಂಗದಲ್ಲಿ ನಿಂತಾಗ ಎಂತಹ ಬಂಧು ಗುರು ಮಿತ್ರರನ್ನಾಗಲಿ ಹಿಂಸಿಸಬೇಕೆಂಬ ನಿಯಮವಿದೆ. ಅವರಿಗೂ ಅಹಿಂಸಾಫಲವು ಬರಬೇಕೆಂದರೆ, ಅವರು ನಡೆಯಬೇಕಾದ ರೀತಿಯನ್ನು ತಿಳಿಸುವೆನು.

ಶತ್ರುವು ಬಿದ್ದಾಗ, ಓಡುವಾಗ, ನಿರಾಯುಧನಾಗಿರುವಾಗ, ವಾಹನದಿಂದರ ರಹಿತನಾದಾಗ, ಶರಣು ಬಂದಾಗ, ಮಲಮೂತ್ರಾದಿ ವೇಗಯುತನಾದಾಗ, ನಿದ್ರಿಸುವಾಗ

ಕೊಲ್ಲದಿದ್ದವನು ಅಹಿಂಸಾ ಫಲವನ್ನು ಹೊಂದುವನು. ಶಸ್ತ್ರಹತನಾಗಿ ಸತ್ತವನು ಸ್ವರ್ಗವನ್ನು ಸೇರುವನು. ಧರ್ಮಕ್ಕಾಗಿ ಕಡಿದಾಡಿದವರಿಗೆ ಮಾತ್ರ ವೀರಸ್ವರ್ಗವು ಸಿಗುವುದು. ಅಧರ್ಮಕ್ಕಾಗಿ ಕಾದಿದವರಿಗಲ್ಲ. ತನಗೆ ಸಮಾನನನ್ನು ಅಥವಾ ಅಧಿಕ ಬಲನನ್ನು ಸಂಹರಿಸಿದ ರಣವೀರನು ಪುಣ್ಯಲೋಕವನ್ನು ಹೊಂದುವನು.

ಜನಕರಾಜ! ಭೂತಗಳು, ಇಂದ್ರಿಯಗಳು, ಸತ್ವಾದಿ ಗುಣಗಳು ಕಲೆತು ಆದ ಶರೀರವು ನನ್ನದಲ್ಲವೆಂದು ತಿಳಿದವನು ಪಾಪರೂಪವಾದ ಹಿಂಸೆಯನ್ನೆಂದಿಗೂ ಮಾಡನು. ಹುಟ್ಟಿನಂತೆ ಮೃತಿಯೂ ತಪ್ಪದು. ಭೂತವಿಕಾರವಾದ ಶರೀರವು ಪಂಚ ಭೂತಗಳಲ್ಲೇ ಸೇರಿಹೋಗುವುದು. ಅವೆಲ್ಲ ಅನಿತ್ಯಗಳು ಎಂದರಿತವನು ಧರ್ಮಪಥವನ್ನು ಎಂದಿಗೂ ಬಿಡದಿರುವನು. ಅಂತಹ ಪುಣ್ಯವಂತನಿಗೆ ಉತ್ತರಾಯಣ, ಸಂಗ್ರಾಮ, ಉತ್ಸವ, ಮೊದಲಾದ ಪುಣ್ಯಕಾಲದಲ್ಲಿ ಮರಣವು ಒದಗುವುದು. ಯಾವ ಕಾಲವಾದರೇನು ಓಂ ಎಂಬ ಹರಿಯ ಸ್ಮೃತಿಯಿಂದ ಬಂದ ಮೃತಿಯು ಬಲು ಪುಣ್ಯವೂ, ಮುಕ್ತಿಪ್ರದವೂ ಆಗಿದೆ. ಗರಳ, ರಜ್ಜು ಜಲ, ವಹ್ನಿಗಳಿಂದ ಬರುವ ಬಲವನ್ಮರಣವು ಅತ್ಯಂತ ಪಾಪವು. ನರಕ ಸಮದುರ್ಗತಿಪ್ರದವೂ ಆಗಿದೆ. ಮಾನವನು ಜ್ಞಾನವನ್ನಾರ್ಜಿಸಿದರೆ ಧರ್ಮ ಸ್ವರೂಪವು ಗೊತ್ತಾಗುವುದು. ಅಜ್ಞಾನಿಗೆ ಧರ್ಮಾಧರ್ಮ ವಿಚಾರವೇ ಇಲ್ಲದೆ ಅವನು ಇಹಪರಗಳಲ್ಲಿ ಕೆಡುವನು; ಇಲ್ಲಿ ಪಾಪವನ್ನೂ, ಅಲ್ಲಿ ನರಕವನ್ನೂ ಹೊಂದುವನು. ಆದುದರಿಂದ ಅಜ್ಞಾನದಂತಹ ಶತ್ರುವಿಲ್ಲ. ಅಜ್ಞಾನಮಯವಾದ ಇತರ ಜನ್ಮಗಳಕಿಂತಲೂ, ಮಾನವ ಜನ್ಮ ದೊಡ್ಡದೆಂಬರು. ಏಕೆಂದರೆ ಮಾನವನಿಗೆ ಅಜ್ಞಾನವನ್ನು ಕಳೆದುಕೊಂಬುವ ಅವಕಾಶವಿರುವುದಿಲ್ಲಿಯೇ! ಗುರು ಸೇವೆಯಿಂದ ಜ್ಞಾನವನ್ನು, ಶ್ರೀಹರಿ ಸೇವೆಯಿಂದ ಮುಕ್ತಿಯನ್ನು ಪಡೆಯಲು ಸಾಧನವಾಗಿರುವ ಮಾನವ ದೇಹವನ್ನು ವ್ಯರ್ಥಗೊಳಿಸಿಕೊಳ್ಳಬಾರದು. ದಾನದಿಂದ ವಿರಾಗವನ್ನೂ, ಪುಣ್ಯತೀರ್ಥ ಸ್ನಾನದಿಂದ ಪಾಪ ನಾಶವನ್ನೂ, ವಿಹಿತ ಕರ್ಮಫಲ ಸಮರ್ಪಣದಿಂದ ಮನಃಶುದ್ಧಿಯನ್ನೂ ಶ್ರವಣ ಮನನಗಳಿಂದ ಜ್ಞಾನವನ್ನೂ, ಧ್ಯಾನದಿಂದ ಶ್ರೀಹರಿಯ ಅಪರೋಕ್ಷವನ್ನೂ ಭಕ್ತಿಯಿಂದ ಶ್ರೀಹರಿ ಪ್ರಸಾದವನ್ನೂ ಪಡೆದು ಮುಕ್ತನಾಗಲು ಅನುಕೂಲವಾದ ಮಾನವ ದೇಹವು ಬಲು ಪುಣ್ಯದಿಂದ ಬಂದುದಾಗಿದೆ.

ಜ್ಞಾನಕ್ಕೆ ಸಮಾನವಾದ ಲಾಭವಿಲ್ಲ; ವಿರಾಗಕ್ಕೆ ಸಮನಾದ ಭಾಗ್ಯವಿಲ್ಲ. ದುಷ್ಟಸಂಗವರ್ಜನಕ್ಕೆ ಸಮವಾದ ತಪಸ್ಸಿಲ್ಲ; ಭಕ್ತಿಗೆ ಸಮನಾದ ಶ್ರೀಹರಿ ಪ್ರಸಾದ ಕಾರಣವಿಲ್ಲ. ಬ್ರಹ್ಮವಿಚಾರಕ್ಕೆ ಸಮನಾದ ಪಾಂಡಿತ್ಯವಿಲ್ಲ. ಬುದ್ಧಿವಂತನು ವಿಷಯ ರತನಾದರೇನು? ಗೃಹಸ್ಥನಾದರೇನು? ದುಷ್ಟಭಿಮಾನವನ್ನು ಅಂದರೆ ಅಹಂಕರ್ತೃತ್ವ ಭ್ರಾಂತಿಯನ್ನು ಮತ್ತು ಸ್ವಾಮಿತ್ವಭ್ರಾಂತಿಯನ್ನು ಬಿಟ್ಟನೆಂದರೆ, ಅವನಿಗೆ, ನೀರಿನಲ್ಲಿದ್ದರೂ ತಾವರೆ ಎಲೆಗೆ ನೀರಂಟದಿರುವಂತೆ ಪಾಪಲೇಪವಿಲ್ಲ. ಅರಗು ಕಾಷ್ಟವನ್ನು ಹಿಡಿದು ಬಿಡದಂತೆ ದುರಭಿಮಾನಿಯ ಮನಸ್ಸು ವಿಷಯಾಸಕ್ತವಾಗುವದು. ಸೂರ್ಯಕಿರಣವು ಸೋಕಿದ ಮಾತ್ರಕ್ಕೆ, ಸೂರ್ಯಕಾಂತ ಶಿಲೆಯು ಉರಿದೇಳುವಂತೆ, ಗುರೂಪದೇಶದಿಂದ

ಮೂಢನೂ ಮತಿವಂತನಾಗುವನು. ಕದಳಿಕಾಂಡದಂತೆ ಸಂಸಾರವು ಅಸಾರವೆಂದರಿತ ವಿವೇಕಿಯು ಜನನ ಮರಣಗಳಿಗೆ ಹೆದರನು.

ಮನುಜನು ಲೋಕದಲ್ಲಿ ಇತರರ ಹಿತವನ್ನು ಸಾಧಿಸಲೋಸುಗ ಪಡುವ ಶ್ರಮದಲ್ಲಿ ಶತಾಂಶ ಶ್ರಮವನ್ನಾದರೂ ಆತ್ಮಹಿತಕ್ಕೆಂದು ಪಡದೆ, ಸಂಸಾರಬದ್ಧನಾಗುವನು. ಧನವನ್ನು ತನ್ನಿಂದ ಪಡೆದವರೆಷ್ಟೋ ಜನರಿರುವರು. ಅದನ್ನು ಅವರ ಪುರೋಭಿವೃದ್ಧಿಗಾಗಿ ಮೀಸಲಿಟ್ಟು, ತಾನು ಉಣ್ಣದೆ, ದಾನವೀಯದೆ, ಶ್ರೀಹರಿ ಪೂಜೆಗಾಗಿ ತೆಗೆಯದೆ ಇರುವ ಲೋಭಿಗೆ, ಆ ಧನವು ನಿರರ್ಥಕವೇ ಸರಿ ! ತನ್ನಿಂದ ಪಡೆದ ಪತ್ನೀಪುತ್ರ, ಮಿತ್ರ, ಬಾಂಧವರು, ತನಗೆ ಕೊಡುವಾಗ ವಿಮುಖರಾಗುವದನ್ನು ಕಂಡವನು ಕೂಡ ವಿರಕ್ತನಾಗದಿರುವನು. ಅವನು ಅಭ್ಯಾಸಬದಿಂದ ತಿರುಗಾಡುವ ಕುರುಡನಂತೆ ನನ್ನ ಮನೆಯನ್ನೇ ನಂಬಿ, ಗೃಹಕೃತ್ಯವಿಚಕ್ಷಣನೆನೆಸಿ ಮೆರೆಯಲು ಹವಣಿಸುತ್ತಿರುವನು. ಮನೆ ಹೊರಗಿದ್ದು ಸೂರ್ಯದರ್ಶನವಾಗದಿರುವ ಅಂಧನಂತೆ ಅವನು ಜ್ಞಾನದರ್ಶನವನ್ನು ಪಡೆಯದಿರುವನು. ಶುದ್ಧ ಧವಳವಾದ ಮೃಣಾಳನಾಳಕ್ಕೆ ಹತ್ತಿರುವ ಕೆಸರನ್ನು ವಿಮಲ ಜಲದಿಂದ ತೊಳೆದು ಕಳೆವಂತೆ, ಮನುಜನ ಅಜ್ಞಾನವನ್ನು ಸದ್ಗುರುವರರ ಉಪದೇಶವು ಕಳೆಯುವುದು. ಅಂತಹ ಜ್ಞಾನವನ್ನು ಪಡೆಯಲು ಯತ್ನಿಸದ ನರನು, ಜರಾಗ್ರಸ್ತನಾಗಿ, ಇಲಿಯು ಹೊಂಚು ಹಾಕಿದ್ದ ಬೆಕ್ಕಿಗೆ ಸಿಕ್ಕಂತೆ ಮೃತ್ಯುಮುಖದಲ್ಲಿ ಬೀಳುವನು.

ಮಿಥಿಲೇಶ ! ಎಲ್ಲ ಸಂಸಾರಬಂಧಕ್ಕೂ ಅಭಿಮಾನವೇ ಮೂಲಕಾರಣವಾಗಿದೆ. ಅದರಿಂದ ಕಾಮಕ್ರೋಧಗಳು ಜನಿಸಿ ಮನುಜನನ್ನು ವಿವೇಕರಹಿತನನ್ನಾಗಿರಿಸುವವು. ಸಮುದ್ರದಲ್ಲಿ ಅಲೆಗಳು ಉಲ್ಬಣಿಸಿದರೆ, ಹಡಗು ಪಾರವನ್ನು ಸೇರಲಾರದಂತೆ, ಸಂಸಾರದಲ್ಲಿ ಅಭಿಮಾನವು ಹೆಚ್ಚಾದರೆ, ಜೀವನು ಮುರವೈರಿಯ ಲೋಕವನ್ನು ಸೇರಲಾರನು. ಸುಖಾಲ್ಪವು, ದುಃಖಬಹುಲವು ಆದ ಸಂಸಾರದಿಂದ ವಿರಕ್ತನಾಗಿ, ಸುಖಮಾತ್ರವಾದ ಮುಕ್ತಿಗಾಗಿ ಜ್ಞಾನವನ್ನಾರ್ಜಿಸಬೇಕು. ಮಿತ್ರ ಪುತ್ರ ಕಳತ್ರ ಬಂಧುಗಳೆಲ್ಲರು ತಂತಮ್ಮ ಹಿತಸಾಧಕರಾಗಲಿ, ತನ್ನ ಪರಲೋಕ ಹಿತವನ್ನು ವಿಚಾರಿಸರು ಎಂದರಿತ ಧೀರನು, ಅವರಲ್ಲಿ ಮಾಡುವ ಸ್ನೇಹವನ್ನು ಶ್ರೀಹರಿಯಲ್ಲಿ ಅನಂತಗುಣಿತವಾಗಿ ಮಾಡಿ, ಮುಕ್ತನಾಗುವನು.''

ಇಂತು ನುಡಿದ ಪರಾಶರನನ್ನು ಪೂಜಿಸಿ, ಜನಕರಾಜನು ಅಂತೆಯೇ ನಡೆದು ಮುಕ್ತನಾದನು.

## ೧೫. ಹಂಸಗೀತೆ — ಸಾಂಖ್ಯಯೋಗಗಳು

ಭೀಷ್ಮನ ಉಪದೇಶದಿಂದ ಸಂತಸಗೊಂಡು ಧರ್ಮರಾಜನು ಸತ್ಯ, ದಮ, ತಪಸ್ಸು ಗಳನ್ನು ವಿವರವಾಗಿ ತಿಳಿಸೆಂದನು: ಭೀಷ್ಮನು ಹಂಸಸಾಧ್ಯ ಸಂವಾದ ಮುಖವಾಗಿ ಉತ್ತರಿಸಿದನು.

ಸಾಧ್ಯರೆಂಬ ದೇವತೆಗಳು ಹಂಸರೂಪಿಯಾಗಿ ಸಂಚರಿಪ ಬ್ರಹ್ಮದೇವನನ್ನು ಕಂಡು ಸತ್ಯ, ಧರ್ಮ, ತಪಸ್ಸುಗಳನ್ನು ವಿವರಿಸಿ ಉದ್ಧರಿಸೆಂದರು. ಹಂಸನು ಇಂತೆಂದನು: 'ಸಂಶಯವನ್ನು ಬಿಡಬೇಕು. ಪ್ರಿಯಾ ಪ್ರಿಯಗಳನ್ನು ನಿರ್ವಿಕಾರನಾಗಿ ಸ್ವೀಕರಿಸಬೇಕು. ಪರಮರ್ಮಭೇದಕವು, ನೀತಿರಹಿತವು, ಧರ್ಮಕಾರ್ಯ ಬಾಧಕವು ನಿಷ್ಠುರವು ಆದ ಮಾತು ಯಥಾರ್ಥವಾದರೂ ಅಸತ್ಯವೆನಿಸುವದು. ಅಂತಹ ಮಾತನ್ನು ಆಡಬಾರದು. ಜನರು ನಿಂದಿಸಿದರೆ, ಅವಮಾನಿಸಿದರೆ, ಸಹಿಸಿ, ಪ್ರತೀಕಾರಗೈಯ್ಯದ ಪುರುಷನು ಅಂತಹ ನಿಂದಕರ ಪುಣ್ಯವನ್ನೆಲ್ಲ ಪಡೆಯುವನು. ವೇದಸಾರವೇ ಸತ್ಯವು; ಸತ್ಯಸಾರವು ದಮವು; ದಮಸಾರವೇ ತಪಸ್ಸು; ಈ ಮೂರು ಗುಣಗಳಿಂದ ಮನುಜನು ಮುಕ್ತನಾಗುವನು.

ದಮವೆಂದರೆ ಇಂದ್ರಿಯಜಯವು. ಅದು ಸ್ವಾಭಾವಿಕ ಗುಣವಾಗಿಬಿಟ್ಟರೆ, ಅಂತಹವನೆಂದಿಗೂ ಪಾಪವನ್ನು ಮಾಡನು. ಅವನಿಗೆ ಮೋಕ್ಷವು ಕರತಲಾಮಲಕವಾಗುವದು. ದಮರಾಹಿತ್ಯದಿಂದ ಕ್ರೋಧವು ಹುಟ್ಟುವದು. ಕುಪಿತನ ವ್ರತಜಪ ಹೋಮ ಸುರಾರ್ಚನ ದಾನ ಶ್ರಾದ್ಧಾದಿ ಸರ್ವ ಪುಣ್ಯ ಕಾರ್ಯಗಳು ನಿಷ್ಫಲವಾಗುವವು.

ಸತ್ಯವೆಂದರೆ ಯಥಾರ್ಥ ವಚನವಾದರೆ, ಸತ್ಯವು ಧರ್ಮವಿರೋಧಿ ಯಾಗುವಂತಿದ್ದರೆ, ಅಂತಹ ಸತ್ಯವನ್ನು ಹೇಳಬಾರದು. ಸತ್ಯವನ್ನು ಧರ್ಮಸಮ್ಮತ ವಾಗಿಯು, ಸುಜನಹಿತವಾಗಿಯು ಇರುವಂತೆ ನುಡಿಯುವವನನ್ನು ದೇವತೆಗಳು ಮೆಚ್ಚುವರು.

ತಪವೆಂದರೆ ಕ್ಷಮೆ, ಬ್ರಹ್ಮವಿಚಾರಗಳು. ಪರಬ್ರಹ್ಮನ ಗುಣ ವಿಚಾರವನ್ನು ಶಾಸ್ತ್ರಾಧಾರದಿಂದ ಗುರುಮುಖವಾಗಿ ಮಾಡುವುದೇ ನಿಜವಾದ ತಪವು. ಏಕಾದಶಾದಿ ಉಪವಾಸಗಳು ದೈಹಿಕ ತಪಸ್ಸು; ಕ್ಷಮಾರೂಪ ಮಾನಸಿಕ ತಪಸ್ಸು, ವ್ರತಾದಿ ರೂಪ ಕಾಯಕ ತಪಸ್ಸು ಎಂಬ ತ್ರಿವಿಧ ತಪವನ್ನು ಶ್ರೀಹರಿ ಪ್ರೀತಿಗಾಗಿ ಮಾಡುವದು ಮೋಕ್ಷ ಸಾಧನವಾಗಿದೆ.'

ಸಾಧ್ಯರು, 'ಪಕ್ಷಿವರ! ಲೋಕವನ್ನು ಆವರಿಸಿರುವುದಾವುದು? ಮನುಜನು ಪ್ರಕಾಶಿಸದಿರಲು ಕಾರಣವೇನು? ಮಿತ್ರರು ಬಿಟ್ಟು ಹೋಗುವುದಾವಾಗ? ಮೋಕ್ಷವು ಯಾವುದರಿಂದ?' ಎಂದು ಕೇಳಿದರು.

ಹಂಸವು 'ಲೋಕವು ಅಜ್ಞಾನದಿಂದ ಆವೃತವಾಗಿದೆ! ಮನುಜನು ಮತ್ಸರದಿಂದ ಪ್ರಕಾಶಿಸನು. ಲೋಭದಿಂದ ಮಿತ್ರರು ರೋಸಿ ದೂರಾಗುವರು. ದುಸ್ಸಂಗ ವರ್ಜನದಿಂದ ಮೋಕ್ಷವಾಗುವದು' ಎಂದಿತು. ಸಾಧ್ಯರು "ಒಂಟಿಯಾಗಿ ರಮಿಸುವನಾರು? ಬಹುಜನರನ್ನು ಪ್ರೀತಿಪಡಿಸುವನಾರು? ಅತಿಬಲವಂತನಾರು? ಕಲಹದಿಂದ ದೂರವಿರುವವನಾರು!" ಎಂದು ಕೇಳಲು, ಹಂಸವು "ಪ್ರಾಜ್ಞನಲ್ಲಿ ಆ ನಾಲ್ಕು ಲಕ್ಷಣಗಳಿವೆ" ಎಂದು ಉತ್ತರಿಸಿತು.

ಸಾಧ್ಯರು "ವಿಪ್ರನು ದೇವಭಾವವನ್ನು ಹೊಂದುವುದೆಂತು? ಎಂತು ಸಾಧು, ವೆನಿಸುವನು? ಯಾವ ಗುಣದಿಂದ ಅಸಾಧುನೆನಿಸುವನು? ಮನುಜಮಾತ್ರನಾಗಿ ಬಿಡಲು ಕಾರಣವಾವುದು?" ಎಂದು ಕೇಳಿದರು. ಹಂಸವು, "ವಿಪ್ರನಿಗೆ ಅಧ್ಯಯನದಿಂದ ದೇವಭಾವವು ಬರುವದು. ವ್ರತಶೀಲನಾಗಿ ಸಾಧುವೆನಿಸುವನು. ದುಶ್ಶೀಲನಾಗಿ ಅಸಾಧುವೆನಿಸುವನು, ಶೌಚಹೀನನಾಗಿ ಮನುಜ ಮಾತ್ರನಾಗುವನು" ಎಂದು ಉಪದೇಶಿಸಿ, ತನ್ನ ದಿವ್ಯಸ್ವರೂಪವನ್ನು ತೋರಿ ಕರುಣಿಸಿದಾಗ, ಸಾಧ್ಯರು ಕೃತಾರ್ಥರಾದರು.

ಧರ್ಮರಾಜನು "ಯೋಗ ಸಾಂಖ್ಯಗಳ ಸ್ವರೂಪಗಳನ್ನು, ತಾರತಮ್ಯವನ್ನು ತಿಳಿಸಿಕೊಡು!" ಎಂದನು. ಭೀಷ್ಮನಿಂತೆಂದನು: 'ಸಾಂಖ್ಯರು, ಯೋಗಿಗಳು, ಕೂಡ ತಂತಮ್ಮ ಮಾರ್ಗವೇ ಶ್ರೇಷ್ಠವೆಂಬರು. ಆದರೆ ಸಾಂಖ್ಯ ಯೋಗಗಳೆರಡೂ ಸಮ ಫಲಗಳೆಂದು ನಾನು ತಿಳಿದಿರುವೆನು. ಭೂತಹಿತವನ್ನು, ಸದ್ವ್ರತಾಚ್ಚರಣವನ್ನು, ಸತ್ಯ ಶೌಚಗಳನ್ನು ಉಭಯರು ಒಪ್ಪಿರುವರು. ಆದರೆ ಯೋಗಿಗಳು ಯೋಗಬಲದಿಂದ ರಾಗದ್ವೇಷಗಳನ್ನು ಬಿಟ್ಟು ಪ್ರಕೃತಿ ಬಂಧ ಮುಕ್ತರಾಗಬೇಕೆಂದು ತಿಳಿದಿರುವರು. ಪ್ರಾಣಾಯಾಮ ರೂಪಯೋಗಗಳು ಚಿತ್ತ ಶುದ್ಧಿ ಸಂಪಾದಕವಾಗಲಿ, ತಾವಾಗಿ ಮೋಕ್ಷ ಸಂಪಾದಕವಲ್ಲ. ಶ್ರೀಹರಿಯಲ್ಲಿ ಸರ್ವಕರ್ಮ ಫಲಸಮರ್ಪಣ ರೂಪವಾದ ಯೋಗವೇ ಯೋಗಬಲವು. ಹರಿಭಕ್ತನಲ್ಲದ ಯೋಗಿಯು ದಾಂಭಿಕನೇ ಸರಿ! ಬಲವಿಲ್ಲದ ಯೋಗವು ಅಕಿಂಚಿತ್ಕರವು.

ದೊಡ್ಡ ಮೀನನ್ನು ಕೂಡ ಜಾಲದಲ್ಲಿ ಸಿಕ್ಕಿಸಿ ಸೆಳೆವಂತೆ, ದೊಡ್ಡ ಮೃಗವನ್ನು ಕೂಡ ಮೂಗುದಾಣೆಯಿಂದ ಬಿಗಿದು, ಪಾಶಗಳಿಂದ ಕಟ್ಟಿ ತರುವಂತೆ, ದುಷ್ಟ ಮನವನ್ನು ಯೋಗತಂತ್ರದಿಂದ ಸೆಳೆದು ಶ್ರೀಹರಿಯಲ್ಲಿ ಸುಸ್ಥಿರವಾಗಿ ನಿಲ್ಲಿಸಲು ಬರುವುದು. ಯೋಗಬಲವಿಲ್ಲದವನ ಇಂದ್ರಿಯಗಳು - ದುಷ್ಟ ಮೃಗಗಳು ಕಟ್ಟು ಕಡಿದು ಕೊಂಡು ಹೋಗುವಂತೆ - ವಿಷಯಗಳತ್ತ ಧಾವಿಸುವವು. ಅಲ್ಪವಹ್ನಿಯು ಇಂಧನ ಬಾಹುಲ್ಯದಿಂದ ಆರಿಹೋಗುವುದು. ಪ್ರಜ್ವಲ ಅಗ್ನಿಯು ಮತ್ತಿಷ್ಟು ಉರಿದೇಳುವುದು. ಅಂತೆಯೇ ಯೋಗಬಲವಿಲ್ಲದ, ಇಂದ್ರಿಯ ದಾಸನಾದವನ ಜ್ಞಾನಾಗ್ನಿಯು ವಿಷಯ ಬಾಹುಲ್ಯದಿಂದ ಆರಿಹೋಗುವುದು. ಪ್ರತ್ಯಾಹೃತೇಂದ್ರಿಯನಿಗೆ, ಜಿತಮನಸ್ಕನಿಗೆ ವಿಷಯಗಳ ಗಣನೆಯೇ ಇಲ್ಲ.

ಬಲವಂತನು ನದೀ ವೇಗವನ್ನು ಉತ್ತರಿಸುವನು; ಬಲಹೀನನು ಕೊಚ್ಚಿ ಹೋಗುವನು. ಅಂತೆಯೇ ಯೋಗರಹಿತನು ಸಾಂಸಾರಿಕ ವಿಷಯವಾಹಿನಿಯಲ್ಲಿ ಮುಳುಗಿ ತೇಲುತ್ತಿರುವನು. ಯೋಗಸಿದ್ಧನು ನದಿಯ ವೇಗವನ್ನು ಲೆಕ್ಕಿಸದೆ ಮಲಗಿರುವ ಮದ ವಾರಣದಂತೆ, ಸಂಸಾರದಲ್ಲಿ ನಿರ್ಲಿಪ್ತನಾಗಿರುವನು. ಯೋಗಸಿದ್ಧನನ್ನು ಮೃತ್ಯುವು ಕೂಡ ಕೆಣಕಲಾರದು. ಇದು ಯೋಗದ ಸ್ಥೂಲಗತಿಯು. ಈಗ ಸೂಕ್ಷ್ಮ ವಿಧವನ್ನು ತಿಳಿಸುವೆನು. ಯೋಗವೆಂದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೆಂಬ ಅಷ್ಟಾಂಗಯುಕ್ತವಾದ ಮೋಕ್ಷ

ಸಾಧನವು. ಮೋಕ್ಷವಿಲ್ಲದ ಬರಿಯ ಯೋಗ ಶಕ್ತಿಯು ಅಹಂಕಾರವನ್ನು ತಂದೊಡ್ಡುವುದು. ತಲೆಯಲ್ಲಿಟ್ಟ ತುಪ್ಪದ ಗಡಿಗೆ ಬೀಳದಂತೆ, ತುಪ್ಪವು ಚಲ್ಲದಂತೆ, ಸೋಪಾನವನ್ನೇರುವವಳಂತೆ, ಯೋಗ ನಿಪುಣನು ತನ್ನೆಲ್ಲ ಲಕ್ಷ್ಯವನ್ನು ಮೋಕ್ಷದಲ್ಲಿಟ್ಟು, ಮತ್ತಿತರ ಕಾರ್ಯಗಳನ್ನೂ ಅಪ್ರಮತ್ತನಾಗಿ ನಡೆಸುತ್ತಿರಬೇಕು. ಸಾರಥಿಯು ರಥವನ್ನಂತೆ, ಕರ್ಣಧಾರನು ಹಡಗನ್ನಂತೆ - ಯೋಗಬಲವು ಜೀವನನ್ನು ಸುರಕ್ಷಿತವಾಗಿ ನಡೆಸಿಕೊಂಡು ಧಾರಣವೆಂಬ ಗಮ್ಯವನ್ನು ಸೇರಿಸುವುದು. ಧಾರಣಾ, ಧ್ಯಾನ, ಸಮಾಧಿಗಳು ಸಾಂಖ್ಯಸಾಪೇಕ್ಷಗಳು. ಯಥಾರ್ಥ ಜ್ಞಾನವಿಲ್ಲದವನು ಧಾರಣವೆಂದರೆ ಖಂಡಸ್ಮೃತಿಯಲ್ಲಿ ಚಿಂತಿಸಲು ಇರಬೇಕಾದ ಪರಮಾತ್ಮಗುಣ ಪರಿಚಯವಿಲ್ಲದೆ ಯೋಗಚಲಿತನಾಗುವನು. ಆದುದರಿಂದ ಶ್ರೀಹರಿ ಗುಣ ಜ್ಞಾನವಿರಬೇಕು. ಶ್ರೀಹರಿಯ ಸರ್ವೋತ್ತಮತ್ವ, ಸ್ವತಂತ್ರತ್ವ, ತತ್ತ್ವ ದೇವತಾ ನಿಯಾಮಕತ್ವ, ಜೀವ ಜಡಾತ್ಯಂತ ವಿಲಕ್ಷಣತ್ವ, ಮೋಕ್ಷದಾತೃತ್ವ ಮುಖ್ಯಗುಣಗಳ ಜ್ಞಾನವಿದ್ದವನಿಗೆ ಧಾರಣವು ಧ್ಯಾನವೆನಿಸುವುದು. ಧ್ಯಾನವು ಅಪ್ರಯತ್ನವಾಗಿ ಒದಗಿದರೆ ಸಮಾಧಿಯಾಗುವುದು. ಚಿರಕಾಲೀನವಾದ ಸಮಾಧಿಯಿಂದ ಭಗವದ್ದರ್ಶನವಾಗುವುದು. ಆದುದರಿಂದಲೇ ಸಾಂಖ್ಯ (ಯಥಾರ್ಥಜ್ಞಾನ) ಯುಕ್ತವಾದ ಯೋಗವೇ ಮೋಕ್ಷಸಾಧನವೆಂದು ನಿನಗೆ ನಾನು ತಿಳಿಸಿದೆನು.

ಯೋಗವಿಲ್ಲದಿರೆ ಮನುಶ್ಶುದ್ಧಿಯಿಲ್ಲ ; ಸಾಂಖ್ಯವಿಲ್ಲದಿರೆ ಜ್ಞಾನವಿಲ್ಲ ; ಅಂತೆಯೇ ಯೋಗಸಾಂಖ್ಯಗಳ ಮೇಲನದಿಂದ ಮೋಕ್ಷವಾಗುವುದೆಂದು ಹೇಳಿದೆನು. ಯೋಗಿಯು ಸಿದ್ಧನಾಗಬೇಕಾದರೆ ಸ್ನಿಗ್ಧರಾಜಸಾಹಾರಗಳನ್ನು ಬಿಟ್ಟು, ದೇಹಧಾರಕ ಮಾತ್ರವಾದ ಸಾತ್ವಿಕಾಹಾರವನ್ನು ಸ್ವೀಕರಿಸಬೇಕು. ಕ್ರಮವಾಗಿ ಕಾಮಕ್ರೋಧಾದಿಗಳನ್ನು ಪೂರ್ತಿಯಾಗಿ ಗೆದ್ದವನು, ಪವನಾನುಗ್ರಹದಿಂದ ಕುಂಭಕದಲ್ಲಿ ನಿಶ್ಚಲನಾಗಿ, ಧಾರಣಾ ಸ್ಥಿರತೆಯನ್ನು ಪಡೆಯುವನು. ರಾಜೇಂದ್ರ ! ಧಾರಣಾ ಧ್ಯಾನಗಳು ಅಸಿಧಾರಾವ್ರತದಂತೆ ದುಷ್ಕರಗಳೆಂದು ತಿಳಿ! ಧ್ಯಾನ ಸಮಾಧಿಗಳನ್ನು ಮುಟ್ಟಿದವನು ಯೋಗ ನಿರೂಢನೆಂದು ತಿಳಿ! ಅಂತಹ ಯೋಗಾರೂಢನು ತನ್ನ ಮನದಿ ತನ್ನ ಸ್ವಾಮಿಯಾದ ಶ್ರೀಶನನ್ನು ಕಂಡು ಸುಖಿಸುವನು. ಅವನಿಗೆ ಮತ್ತೆ ಮೃತಿದೈನ್ಯವಿಲ್ಲ. ಭೋಗಾಭೋಗಗಳಿಂದಾಗುವ ಸುಖ ದುಃಖಗಳಿಲ್ಲ. ಅವನಿಗೆ ವನವೇನು, ಮನೆಯೇನು, ಎಲ್ಲಾದರೂ ಮನಶ್ಶಾಂತಿಯು ಸಿಕ್ಕಿರುವುದು. ಇಂತಹ ಶುದ್ಧಯೋಗವನ್ನು ಶ್ರೀನಾರಾಯಣರ್ಷಿಯು ಮುನಿ ಜನರಿಗೆ ತಿಳಿಸಿದನು.

ಈಗ ಕಪಿಲಾದಿ ಮಹಾಮುನಿ ಪ್ರದರ್ಶಿತವಾದ ಸಾಂಖ್ಯ ತತ್ತ್ವವನ್ನು ನಿರೂಪಿಸುವೆನು. ಸಂ ಅಂದರೆ ಚನ್ನಾಗಿ, ಖ್ಯಾ ಅಂದರೆ ಹೇಳಲ್ಪಡುವುದು ; ಸಾಂಖ್ಯವೆಂದರೆ ಯಥಾರ್ಥ ಜ್ಞಾನವೆಂದರ್ಥವು. ಜ್ಞಾನದಿಂದ ಪರಾಪರ ವಸ್ತುಗಳ ಸಾರಾಸಾರತೆಗಳು ಗೋಚರಿಸುವವು. ತಿರ್ಯಕ್ ಮನುಷ್ಯದೇವ. ಪಿತೃ ಸಿದ್ಧ ಗರುಡ ಗಂಧರ್ವ ದಾನವಾದಿಗಳಲ್ಲಿ ವಿಷಯಗಳು ಭಿನ್ನರುಚಿಯಾಗಿರುವವು. ಯುಕ್ತಾಯುಕ್ತ ಜ್ಞಾನದಿಂದ ಹಿತಕರಣವು, ಅಹಿತವರ್ಜನವು ಸಿದ್ಧಿಸುವವು. ಆಯುಃಪರಿಮಿತಿ, ಸುಖ ದುಃಖ ಸಾಧನಗಳು,

ಕಾಲಮಹಿಮೆ, ಕರ್ಮಪ್ರಕಾರ, ವೇದವಿಧಿ ನಿಷೇಧಗಳು, ಸತ್ವರಜಸ್ತಮೋಗುಣ ವೃತ್ತಿಗಳು, ಜೀವೇಶ ಜಡಗಳು ಮುಂತಾದ ವಿಷಯಗಳನ್ನು ಸರಿಯಾಗಿ ತಿಳಿದವನು ಅಜ್ಞಾನಪಾಶದಿಂದ ಬಿಡಲ್ಪಡುವನು.

ಜಡ ಪ್ರಕೃತಿಯ ಹದಿನಾರು ವಿಕಾರಗಳನ್ನು ಕೇಳು! ಚಕ್ಷು (ಸೂರ್ಯ), ಶ್ರೋತ್ರ (ಚಂದ್ರಾದಿಗಳು), ತ್ವಕ್ (ಅಹಂಕಾರಿಕ ಪ್ರಾಣ), ಘ್ರಾಣ (ಅಶ್ವಿನೀದ್ವಯ), ರಸನ (ವರುಣ), ಇವೈದು ಜ್ಞಾನೇಂದ್ರಿಯಗಳು. ವಾಕ್ (ವಹ್ನಿ), ಪಾಣಿ (ದಕ್ಷ), ಪಾದ (ಜಯಂತ), ಪಾಯು (ಮಿತ್ರ), ಉಪಸ್ಥ (ಮನು), ಇವೈದು ಕರ್ಮೇಂದ್ರಿಯಗಳು. ಶಬ್ದ (ಪ್ರಾಣ), ಸ್ಪರ್ಶ (ಅಪಾನ), ರೂಪ (ವ್ಯಾನ), ರಸ (ಉದಾನ), ಗಂಧ (ಸಮಾನ) ಇವೈದು ವಿಷಯಗಳು. ಮನಸ್ಸು (ಇಂದ್ರಕಾಮರು - ಶಿವ) - ಎಲ್ಲವೂ ಕಲೆತು ಹದಿನಾರು ಕಲೆಗಳು. ಇವಲ್ಲದೆ ಪೃಥಿವಿ (ಧರಾಶನಿಗಳು), ಅಪ್ (ವರುಣ), ತೇಜ (ಪಾವಕ), ವಾಯು (ಭೂತವಾಯು), ಆಕಾಶ (ಮಹಾಗಣಪತಿ) ಎಲ್ಲವೂ ಇಪ್ಪತ್ತೊಂದು ತತ್ವಗಳು. ಶಬ್ದ ಸ್ಪರ್ಶಗಳಿಗೆ ಸೌಪರ್ಣಿಯು, ರೂಪರಸಗಳಿಗೆ ವಾರುಣಿಯು, ಗಂಧಕ್ಕೆ ಉಮೆಯು ಅಧಿದೇವತೆಯಾಗಿರುವರು. ಅಹಂಕಾರಕ್ಕೆ ಗರುಡ ಶೇಷರುದ್ರರು ನಿಯಾಮಕರು; ಬುದ್ಧಿಗೆ ಸರಸ್ವತಿ, ಮಹತ್ತಿಗೆ ಬ್ರಹ್ಮದೇವನು ದೇವತೆಗಳು; ಭಾರತೀ ಸರಸ್ವತಿಯರಿಗೂ, ಬ್ರಹ್ಮವಾಯುಗಳಿಗೂ ಯೋಗ್ಯತೆಯಲ್ಲಿ ಭೇದವಿಲ್ಲ. ಸಾಧನದಲ್ಲುಂಟು. ಸಾಧನ ಪೂರ್ತಿಯಾದಂತೆ ಭಾರತೀ ವಾಯುಗಳೇ ಸರಸ್ವತೀ ಬ್ರಹ್ಮಪದವಿಯನ್ನು ಪೊಂದಿ, ಮುಂದೆ ಮುಕ್ತರಾಗುವರು. ಅವ್ಯಕ್ತ ಮಾನಿಯಾದ ಮಹಾಲಕ್ಷ್ಮಿಯು ನಿತ್ಯಮುಕ್ತಳಾಗಿರುವಳು. ಶ್ರೀನಾರಾಯಣನು ತತ್ವವನ್ನು ತದಧಿದೇವನನು ತದ್ದೇಹವನ್ನು ಸೃಜಿಸಿ, ತನ್ನಾಮಕನಾಗಿ ಅವರಲ್ಲಿದ್ದು, ತತ್ತತ್ಕಾರ್ಯವನ್ನು ಸ್ವತಂತ್ರವಾಗಿ ಪ್ರೇರಿಸಿ ನಡೆಸುವನು.

ಪುರುಷರು ಎರಡು ವಿಧವೆಂದು ತಿಳಿ! ಜೀವರಿಗೆ, ಶರೀರಗಳಲ್ಲಿ ಬಂದು ಹೋಗುವುದರಿಂದ ಪುರುಷನೆಂದು ಹೆಸರು. ಶ್ರೀಹರಿಯೂ ಪೂರ್ಣ ಷಡ್ಗುಣ (ಐಶ್ವರ್ಯ, ವೀರ್ಯ, ಯಶಃ, ಶ್ರೀ, ಜ್ಞಾನ, ವಿಜ್ಞಾನ) ನಾಗಿರುವದರಿಂದ ಪುರುಷನೆನಿಸುವನು. ಸ್ವತಂತ್ರನು, ಸರ್ವಜ್ಞನು, ಸರ್ವಕರ್ತನು, ಸರ್ವೇಶನು, ಸರ್ವತ್ರವ್ಯಾಪ್ತನು ಆದ ಶ್ರೀಶನು ಭಿನ್ನಧರ್ಮನಾದ ಜೀವನಿಂದ ಸರ್ವದಾ ಅತ್ಯಂತ ವಿಲಕ್ಷಣನಾಗಿರುವನು. ಅಸ್ವತಂತ್ರನು, ಅಲ್ಪಜ್ಞನು, ಅಣುವು ಆದ ಜೀವನು ಸರ್ವದಾ, ಮುಕ್ತಿಯಲ್ಲಿಯೂ ಶ್ರೀಶಾಧೀನನಾಗಿರುವನು. ಕರ್ಮಫಲವನ್ನುಂಡು ನರಳುವ ಜೀವನು ಕರ್ಮಲೇಪವಿಲ್ಲದ ಶ್ರೀಶನಿಂದ ಭಿನ್ನವೆಂದು ಶ್ರುತಿಸ್ಮೃಗಳು ಸಾರಿ ಹೇಳುತ್ತಿವೆ.

ಪ್ರಾಣಾಪಾನವ್ಯಾನೋದಾನ ಸಮಾನರೆನಿಪ ವಾಯುಗಳಿಗೆ ಒಡೆಯನಾಗಿ, ನಿದ್ರೆಯಲ್ಲಿಯು ಶ್ವಾಸಾದಿ ಚೇಷ್ಟಾಪ್ರದನಾಗಿರುವ ಮುಖ್ಯಪ್ರಾಣನು ಸಾತ್ವಿಕ ಜೀವರಿಗೆಲ್ಲ ಉತ್ತಮನಾಗಿರುವನು. ಆತನ ಪ್ರಸಾದವು ಶ್ರೀಹರಿದರ್ಶನ ಕಾರಣವಾಗಿದೆ. ಗರ್ಭವಾಸ, ಜನನ, ಬಾಲ್ಯ, ಮೂಢಯವ್ವನ, ವೃದ್ಧಾಪ್ಯ, ಮರಣ ಎಂಬ ಜೀವನದೆಶೆಗಳಲ್ಲಿ ಎಲ್ಲಿಯೂ ಸುಖವಿಲ್ಲವೆಂದು ವಿಚಾರಿಸಿ ಕಂಡವನು ವಿರಕ್ತನಾಗುವನು. ಅವನು

ಜ್ಞಾನಾರ್ಥಿಯಾಗುವನು. ಪುಣ್ಯದಿಂದ ದೇವಲೋಕವು, ಪಾಪದಿಂದ ನರಕವು, ಸಮಪಾಪ ಪುಣ್ಯಗಳಿಂದ ಮನುಜ ಜನ್ಮವು ಬರುವುದೆಂದು ತಿಳಿದು ನರನು ಅವೆಲ್ಲವೂ ಅಶಾಶ್ವತವಾದುದರಿಂದ ಹೇಯವೆಂದು ನಂಬಿ ನಿವೃತ್ತಿ ಕರ್ಮರತನಾಗಿ ಮೋಕ್ಷವನ್ನು ಹೊಂದುವನು.

ಬಂಧು ಲಾಭಕ್ಷಯಗಳು ದಿವಾರಾತ್ರಗಳಂತೆ ನಿವಾರಿಸಲಾಗದವು. ತನ್ನ ದೇಹವೇ ಜೀರ್ಣವಾಗುತ್ತಿದೆ, ರೋಗಪೀಡಿತವಾಗಿದೆ ಎಂದರಿತು ವಿರಕ್ತನಾಗಬೇಕು. ಕಾಮ, ಕ್ರೋಧ, ಭಯ, ನಿದ್ರೆ, ನಿಶ್ವಸನ ಎಂಬ ದೋಷಗಳೂ ಐದೂ. ದೇಹವಿರುವವರೆವಿಗೂ ಮನುಜನನ್ನು ಪೀಡಿಸುವವು. ಅವನ್ನು ಗೆಲ್ಲುವ ರೀತಿಯನ್ನು ಕೇಳು. ಸಂಕಲ್ಪ ವರ್ಜನದಿಂದ ಕಾಮವನ್ನು, ಕ್ಷಮೆಯಿಂದ ಕ್ರೋಧವನ್ನೂ, ಅಪ್ರಮಾದದಿಂದ ಭಯವನ್ನೂ, ಸತ್ವರತಿಯಿಂದ ನಿದ್ರೆ (ಅಜ್ಞಾನ)ಯನ್ನೂ, ಲಘುಭೋಜನದಿಂದ ನಿಶ್ವಾಸ(ಆಯುಃ ಪರಿಣಾಮ) ವನ್ನೂ ಗೆಲ್ಲಬಹುದು. ಇನ್ನು ದೇಹಗತ ದೋಷಗಳೆಷ್ಟೋ ಇವೆ. ಅವನ್ನು ಗೆಲ್ಲುವ ಉಪಾಯಗಳೂ ಇವೆ. ಅವನ್ನು ಸುಜ್ಞ ಜನರಿಂದ ಕೇಳಿ ತಿಳಿಯಬಹುದು.

ಇಂತು ಯಥಾರ್ಥ ಜ್ಞಾನವನ್ನು ಸಂಪಾದಿಸಿ ಬುದ್ಧಿವಂತನು ವಿರಕ್ತನಾಗುವನು. ಜ್ಞಾನದಿಂದ ಅವನ ಭಕ್ತಿಯು ಪರಿಪಕ್ವವಾಗುವುದು. ಅಂತಹ ಭಕ್ತಿಯಿಂದ ಶ್ರೀಹರಿಯು ಪ್ರಸನ್ನನಾಗುವನು. ಶ್ರೀಹರಿಮಾಯೆ ಅಂದರೆ ಬಂಧಕ ಶಕ್ತಿಯು; ಅದು ಶ್ರೀಹರಿದಯದಿಂದ ದೂರ ಸರಿದಾಗ, ಮಾನವನು ಸಕಲ ಜಗಗಳು ವಿಷ್ಣ್ವಧೀನಗಳೆಂತಲು, ಅಶಾಶ್ವತಗಳೆಂತಲು ತಿಳಿದು, ಶಾಶ್ವತವಾದ ಶ್ರೀಹರಿಲೋಕವನ್ನು ಸೇರಲು ಸ್ವಯೋಗ್ಯಸಾಧನೆ ಮಾಡುವನು. ಇದು ಸಾಂಖ್ಯ ಪ್ರಕಾರವು.

ಇನ್ನು ಜೀವಾತ್ಮನು ಪರಮಾತ್ಮ ಪ್ರಸಾದವನ್ನು ಪಡೆವ ವಿಧವನ್ನು ವಿವರಿಸುವೆನು ಕೇಳು! ಬಹಿರ್ವಿಷಯಗಳನ್ನು ತಪೋಜ್ಞಾನಬಲದಿಂದ ಹೊರಗೇ ಇಟ್ಟು, ಶ್ರೀಹರಿದಯದಿಂದ ಬಂದ ಜ್ಞಾನನೌಕೆಯಲ್ಲಿ ಕೂತು, ಭಕ್ತಿ ಎಂಬ ಹುಟ್ಟನ್ನು ಹಾಕಿ ಕರೆದೊಯ್ಯುವ ಮುಖ್ಯಪ್ರಾಣ ಗುರುರಾಜನೆಂಬ ಕರ್ಣಧಾರನ ವಶನಾಗಿ ಸುಜೀವನು ದುಃಖಜಲವು, ವ್ಯಾಧಿಮೃತ್ಯು ಮಹಾಮಕರವು, ಭಯಸರ್ಪವು ಹಿಂಸಾವೇಗವು, ರಾಗಪಂಕವು ತೃಷ್ಣಾವರ್ತವು, ನಾನಾವಿಧ ಸುಖರತ್ನವು, ಸತ್ಯತೀರವು ಆದ ಸಂಸಾರಸಾಗರವನ್ನು ದಾಟಿ, ಮೋಕ್ಷಪುರವನ್ನು ಸೇರುವನು. ಅಂತಹ ಸಜ್ಜೀವನು ಅರ್ಚಿರಾದಿಮಾರ್ಗದಿಂದ ತೆರಳಿ, ಅಹಃಶುಕ್ಲಪಕ್ಷ, ಮಾಸ, ಉತ್ತರಾಯಣ, ವತ್ಸರ, ಸೂರ್ಯ, ದಕ್ಷ, ಇಂದ್ರ, ರುದ್ರ, (ಗರುಡ-ಶೇಷ), ಸರಸ್ವತಿಯರ ದ್ವಾರಾ ಮುಖ್ಯಪ್ರಾಣನು ಕೊಂಡು ಹೋದಂತೆ ಶ್ರೀಹರಿಲೋಕವನ್ನು ಅಥವಾ ಸತ್ಯಲೋಕವನ್ನು ಸೇರುವನು. ಸೂಕ್ಷ್ಮನು, ಶೀತಲನು, ಸುಗಂಧಿಯು, ಸುಖಸ್ಪರ್ಶನು, ಸಕಲ ಮಾರುತ ಶ್ರೇಷ್ಠನೂ ಆದ ಮುಖ್ಯಪ್ರಾಣನಿಂದ ಅವನಿಗೆ ಶ್ರೀಹರಿದರ್ಶನವಾಗುವುದು. ಆಗ ಅವನು ಸ್ವರೂಪಾನಂದಾವಿರ್ಭೂತಿಯನ್ನು ಪಡೆದು, ನಿತ್ಯಾಮೃತನಾಗುವನು. ಅವನಿಗೆ ಪುನರ್ಜನನ ಮರಣಗಳಿಲ್ಲ; ದುಃಖವಿಲ್ಲ.

ಮುಕ್ತನಿಗೆ ಇಂದ್ರಿಯಗಳಿಲ್ಲವೆಂದಿಲ್ಲ, ನಿಯಾಮಕರಿಲ್ಲವೆಂದಿಲ್ಲ. ಅವನು ತನ್ನ ಸ್ವರೂಪೇಂದ್ರಿಯ ಯುಕ್ತನೇ ಆಗಿರುವನು. ಅಲ್ಲಿ ಇತರ ದೇವತಾ ವ್ಯಾಪಾರವಿಲ್ಲ. ಬಿಂಬರೂಪೀ ಶ್ರೀಹರಿಯು ಮುಖ್ಯಪ್ರಾಣನು ಅವನಿಗೆ ಅಂತಃಪ್ರೇರಕನಾಗಿರುವರು. ಶ್ರೀಹರಿಬಿಂಬವಿಲ್ಲದಿರೆ ಜೀವನೇ ಇಲ್ಲ; ಪ್ರಾಣದೇವನಿಲ್ಲದಿರೆ ಚೇಷ್ಟೆಯೇ ಇಲ್ಲ, ಮತ್ತು ಮುಕ್ತನು ತನ್ನ ಯೋಗ್ಯತೆಗೆ ತಕ್ಕ ಸುಖಗಳನ್ನು ಸಂಕಲ್ಪ ಮಾತ್ರದಿಂದ ಹೊಂದುವನು. ಅವನು ತನಗೂ ಉತ್ತಮರಾದವರೆಲ್ಲರಿಗೂ ವಿಧೇಯನೇ ಆಗಿರುವನು. ಮುಕ್ತಿಯಲ್ಲಿಯೂ ತಾರತಮ್ಯವಿದೆ. ಭೂತವಿಕಾರವಿಲ್ಲದ, ನಿಷಿದ್ಧಾಪೇಕ್ಷೆಯಿಲ್ಲದ, ದುಃಖಸ್ಮೃತಿಗಳಿಲ್ಲದ ಅವಸ್ಥೆಯಲ್ಲಿ ಸ್ವರೂಪಾನಂದ ವಿರ್ಭೂತಿಯನ್ನು ಹೊಂದಿ ಮುಕ್ತನೆನಿಸಿದ ಸುಜೀವನು ಸಂತತ ರಮಾಕಾಂತಚಿಂತನಾನಂದ ಮಗ್ನನಾಗಿರುವನು.

ಧರ್ಮರಾಜ ! ಇಂತು ಸಾಂಖ್ಯಯೋಗಗಳನ್ನು ನಿನಗೆ ನಿರೂಪಿಸಿದೆನು: ಗುರುಕರುಣೆಯಿಂದ ಯಥಾರ್ಥಜ್ಞಾನವಾಗುವುದು. ಜ್ಞಾನದಿಂದ ಅಪರೋಕ್ಷವಾಗಿ, ಶ್ರೀಹರಿಯು ಪ್ರಸನ್ನವಾದಾಗ, ಮೋಕ್ಷವಾಗುವುದು. ಕರ್ಮಜ್ಞಾನಭಕ್ತಿಗಳೇ ಮೋಕ್ಷಸಾಧನವದನ್ನು ಸಾತ್ವಿಕ ಜೀವರು ಸಕಲೇತರ ವಸ್ತುಗಳಲ್ಲಿ ವಿರಕ್ತರಾಗಿ ಸಾಧಿಸಬೇಕು. ಕರ್ಮಕರಣವು ಜೀವನದಾಗಿದ್ದರೂ, ಫಲದಾನವು ಶ್ರೀಶನ ಕೈಲಿದೆ. ವೇದಶಾಸ್ತ್ರ ಪುರಾಣಗಳ ಸಾರವನ್ನು ನಿನಗುಪದೇಶಿಸಿದೆನು. ಎಲ್ಲ ನದಿಗಳೂ ಸಾಗರವನ್ನು ಸೇರುವಂತೆ, ಎಲ್ಲ ಶಾಸ್ತ್ರಗಳೂ ಮೋಕ್ಷಶಾಸ್ತ್ರದಲ್ಲಿ ಮಿಲಿತವಾಗುವವು. ಎಲ್ಲ ದೇವತೆಗಳ ಪೂಜಾಪುಣ್ಯವು ಶ್ರೀಕೇಶವನಿಗರ್ಪಿತವಾದಾಗ, ಶ್ರೀಶನು ಪೂಜಿತನಾಗಿ ಪ್ರಸನ್ನನಾಗುವನು. ಶ್ರೀನಿಕೇತನನು ಪ್ರಸನ್ನನಾದನೆಂದರೆ, ನರನಿಗೆ ದುರ್ಲಭವಿನ್ನುಂಟೇ? ಯೋಗವು ವಿರಾಗಕ್ಕೂ, ಸಾಂಖ್ಯವು ಜ್ಞಾನಭಕ್ತಿಗಳಿಗೂ ಕಾರಣವಾಗಿರುವುದರಿಂದ, ಅವೆರಡೂ ಮುಮುಕ್ಷುಗಳಿಗೆ ಅವಶ್ಯವಾಗಿವೆ. ಇಂತಹ ಸುಜ್ಞಾನವನ್ನು ತಿಳಿಸಿ, ಸುಜೀವರನ್ನು ಉದ್ಧರಿಸಲು ತೊಡಗಿರುವ ಶ್ರೀಬ್ರಹ್ಮರುದ್ರೇಂದ್ರಾದಿ ಬೃಂದಾರಕವಂದಿತನಾದ ಗೋವಿಂದನಿಗೆ ವಂದನವು" ಎಂದು ನಿರೂಪಿಸಿದ ಭೀಷ್ಮನನ್ನು ಅಭಿನಂದಿಸಿ, ಧರ್ಮರಾಜನು ಮತ್ತೆ ಸತ್ತತ್ವಗಳನ್ನು ತಿಳಿಯಲಿಚ್ಛಿಸಿ ಪ್ರಶ್ನಿಸಿದನು.

## ೧೬. ವಸಿಷ್ಠ ಜನಕ ಸಂವಾದವು

ಧರ್ಮರಾಜನು 'ಪಿತಾಮಹ! ನೀನು ಪರಮಜ್ಞಾನ ನಿಧಿ ಎಂದು ವೇದವಿದರಾದ ವಿಪ್ರರು ನುಡಿವರು. ಶ್ರೀಕೃಷ್ಣನೂ ನಿನ್ನ ಜ್ಞಾನ ಮಹಿಮೆಯನ್ನರಿತು, ನನಗುಪದೇಶಿಸೆಂದು ಆಜ್ಞಾಪಿಸಿರುವನು. ದಕ್ಷಿಣಾಯನವಿನ್ನು ಸ್ವಲ್ಪವೇ ಉಳಿದಿದೆ! ಆಮೇಲೆ ಉತ್ತರಾಯಣ ಬಂದಾಗ ಸ್ವಚ್ಛಂದ ಮರಣನಾದ ನೀನು ನಿನ್ನ ಶರೀರವನ್ನು ಬಿಡುವೆ! ಅನಂತರ ನಮ್ಮನ್ನು ಅನುಶಾಸಿಸಿ, ಹಿತವನ್ನು ಹೇಳುವವರಾರು? ಕುರುವಂಶವನ್ನು ಮೆರೆಸಿ, ಪ್ರಜ್ಞಾಪ್ಲುತ ಪ್ರಜ್ವಾಲಿತವಾಗುವ ಜ್ಞಾನದೀಪದಂತಿರುವೆ! ನೀನು ನಮಗೆ ಕ್ಷರಾಕ್ಷರ ಪುರುಷರ

ಸ್ವರೂಪವನ್ನು ತಿಳಿಸಿಕೊಡು!' ಎಂದು ಕೇಳಿದನು. ಭೀಷ್ಮನು ಜನಕ ವಸಿಷ್ಠ ಸಂವಾದವನ್ನು ನಿರೂಪಿಸಿ, ಉತ್ತರಿಸಿದನು:

ವಸಿಷ್ಠನ ಆಶ್ರಮವನ್ನು ಸೇರಿ, ಜನಕರಾಜನು ಆತನ ಪಾದಗಳಿಗೆರಗಿ, 'ಅಕ್ಷರಕ್ಷರ ಪುರುಷರನ್ನು ಅದರ ವೈಲಕ್ಷಣ್ಯವನ್ನು ನನಗೆ ತಿಳಿಸಿ ಕೊಡು!' ಎಂದು ಪ್ರಾರ್ಥಿಸಿದನು. ವಸಿಷ್ಠನಿಂತೆಂದನು: 'ರಾಜನ್'! ಅಕ್ಷರನೆಂದರೆ ಸರ್ವವಿಧ ನಾಶರಹಿತನು. ಅಕ್ಷರನೆಂಬರು ಶ್ರೀಹರಿಯನ್ನು. ಅವನಿಗೆ ದೇಹ ನಾಶ, ಅನಿತ್ಯತ್ವ, ದುಃಖಪ್ರಾಪ್ತಿ, ಅಪೂರ್ಣತೆ, ಎಂಬ ನಾಲ್ಕು ವಿಧ ನಾಶಗಳಿಲ್ಲ. ಜೀವನು ಅನಿತ್ಯನಲ್ಲ ; ಆದರೂ ಮಿಕ್ಕ ಮೂರು ನಾಶಗಳುಳ್ಳವನಾಗಿರುವನು. ಶ್ರೀದೇವಿಯೂ ಅಕ್ಷರಳೇ ನಿಜ! ಆದರೆ ಆಕೆ ಸ್ವತಂತ್ರಳಲ್ಲ. ಶ್ರೀರಮಣ ಶ್ರೀದೇವಿಯರನ್ನು ಬಿಟ್ಟು ಮಿಕ್ಕ ಜೀವರು ಸರ್ವರೂ ಕ್ಷರರೆನಿಸುವರು. ಶರೀರನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ಮೂರು ವಿಧ ನಾಶಗಳುಳ್ಳ ಜೀವರು ನಿತ್ಯರಾದರೂ ಅಸ್ವಂತ್ರರು. ಜೀವರು ಜಡೇಶಭಿನ್ನರು ಮತ್ತು ಅವರಲ್ಲಿ ಪರಸ್ಪರ ಭೇದವೂ ಇದೆ. ಅನಂತ ಜೀವರಿಗೆ ತತ್ತದ್ಯೋಗ್ಯಗತಿಯನ್ನು ಕಾಣಿಸುವ ಶ್ರೀಹರಿಯು ಅಕ್ಷರೋತ್ತಮನಾಗಿರುವನು.

ಶ್ರೀನಾರಾಯಣನು ಸರ್ವತೋಮುಖನು; ಸರ್ವತಃಪಾದನು; ಆತನ ಸರ್ವೇಂದ್ರಿಯ ಗಳಿಗೂ ಆತನಿಗೂ ಭೇದವಿಲ್ಲ. ಒಂದಿಂದ್ರಿಯದಿಂದ ಎಲ್ಲ ಇಂದ್ರಿಯ ವ್ಯಾಪಾರ ಗಳನ್ನೂ ಆತನು ಮಾಡಬಲ್ಲನು. ಅನಂತಬಾಹೂರುಪಾದನಯನ ಶ್ರವಣನು, ಅನಂತಶಕ್ತಿ ಸಂಪನ್ನನು ಆದ ಶ್ರೀಹರಿಗೆ ವೃದ್ಧಿಕ್ಷಯಗಳಿಲ್ಲ. ಆತನಿಗೆ ಸಮರೇ ಇಲ್ಲವೆಂದ ಮೇಲೆ ಇನ್ನು ಅಧಿಕರೆಲ್ಲಿಹರು? ಪ್ರಕೃತಿಯ ತತ್ವಗಳು ಇಪ್ಪತ್ತುನಾಲ್ಕು ಆತನ ಅಧೀನವಾಗಿ, ಆತನಿಂದ ಪ್ರೇರಿತವಾಗಿವೆ.

ಅವ್ಯಕ್ತ, ಮಹತ್ತು, ಬುದ್ಧಿ, ಅಹಂಕಾರ, ಮನಸ್ಸು, ಭೂತಪಂಚಕ, ಇಂದ್ರಿಯದಶಕ, ವಿಷಯ ಪಂಚಕ ಇವೇ ತತ್ವಗಳು. ಅವ್ಯಕ್ತಮಾನಿಯಾದ ರಮೆಯು ಅಕ್ಷರಳು. ಆದುದರಿಂದ ಮಿಕ್ಕ ಮಹದಾದಿ ತತ್ವ ದೇವತೆಗಳು ಕ್ಷರರೆನಿಸುವರು. ಕ್ಷರರಾದ ಬ್ರಹ್ಮಾದಿ ಸರ್ವಜೀವರಿಗೂ, ಅಕ್ಷರಳಾದ ರಮಾದೇವಿಗೂ ಭಿನ್ನನೂ, ಉತ್ತಮನೂ ಆದ ಶ್ರೀಹರಿಯು ಪುರುಷೋತ್ತಮನೆಂದು ಖ್ಯಾತನಾಗಿರುವನು. ಆತನು ಅನಾಮಯನು, ಅವ್ಯಯನು, ಅಕಲಂಕನು, ಅನಾದಿನಿತ್ಯನು, ಅಪ್ರಮೇಯ ಮಹಿಮನು ಆಗಿರುವನು.

ಸ್ವಪ್ರಯೋಜನರಹಿತನಾದ ಶೀಶನು ಕ್ರೀಡೆಗೋಸುಗ ಜೀವಜಡಾತ್ಮಕವಾದ ಪ್ರಪಂಚವನ್ನು ಸೃಜಿಸಿ, ಪಾಲಿಸಿ, ಪ್ರೇರಿಸಿ, ಸಂಹರಿಸುವನು. ಸೃಜನದಲ್ಲಿ ರಜೋಗುಣವನ್ನು ಪಾಲನದಲ್ಲಿ ಸತ್ವಗುಣವನ್ನು, ಸಂಹಾರದಲ್ಲಿ ತಮೋಗುಣವನ್ನು ಸ್ವೀಕರಿಸಿ, ರಮೆಯಿಂದ ಕೂಡಿ ಆಡುವ ಶ್ರೀಶನಿಗೆ ಪ್ರಕೃತಿ ಪ್ರಾಕೃತ ಗುಣಗಳ ಲೇಪವಿಲ್ಲ. ಸತ್ವವು ಧವಳವಾಗಿದ್ದು ಧರ್ಮ ಜ್ಞಾನ ವಿರಕ್ತಿ ಭಕ್ತಿ ದಯಾದಿ ಕಾರಣವಾಗಿದೆ. ರಜಸ್ಸು ಕೆಂಪಗಿದ್ದು ದರ್ಪ, ಕಾಮ್ಯ ಕರ್ಮ, ಅಜ್ಞಾನಾದಿ ಕಾರಣವಾಗಿದೆ. ತಮಸ್ಸು ಕಪ್ಪಗಿದ್ದು, ಕ್ರೋಧ, ಅನ್ಯಥಾಜ್ಞಾನ, ಮಾನ, ಮದ, ಹಿಂಸಾದಿ ಕಾರಣವಾಗಿದೆ.

ಕ್ರತುಗಳು, ದಾನಗಳು, ತೀರ್ಥಯಾತ್ರೆ, ಉಪವಾಸ ವ್ರತಗಳು, ಶಾಸ್ತ್ರಾಭ್ಯಸನಗಳು ಮೊದಲಾದವು ಸತ್ವಗುಣ ವೃದ್ಧಿಯಾದಾಗ ನಡೆವ ಕಾರ್ಯಗಳು. ಅಹಂಕಾರ, ದರ್ಪ, ಮಾನ, ಮದಗಳು ರಜೋಗುಣ ಕಾರ್ಯಗಳು, ಪರಪೀಡೆ, ಅನ್ಯಥಾಜ್ಞಾನಗಳು ತಮೋಗುಣ ಕಾರ್ಯಗಳು. ರಾಹುಮುಕ್ತ ಚಂದ್ರನಂತೆ, ಈ ಗುಣ ಕಾರ್ಯವಾದ ಶರೀರ ಬಂಧದಿಂದ ಬಿಡಲ್ಪಟ್ಟ ಜೀವನು ತನ್ನ ಸ್ವರೂಪವನ್ನು ಹೊಂದಬೇಕಾದರೆ, ಗುಣಮಾನಿ ರಮೆಯ ಒಡೆಯನಾದ ಶ್ರೀಹರಿಯ ಪರಮ ಪ್ರಸಾದವು ಅವಶ್ಯಕವಾಗಿದೆ.

ತಿರ್ಯಙ್ಮನುಜಾದಿ ಸರ್ವ ಭೂತಶರೀರಗಳು ಪ್ರಕೃತಿಯ ಸಪ್ತಧಾತು ವಿನಿರ್ಮಿತವಾಗಿವೆ. ಅವುಗಳಲ್ಲಿ ಚರ್ಮಮಾಂಸ ಶೋಣಿತಗಳು ವನಿತಾಗುಣಗಳು; ಮೇದೋಮಜ್ಜಾಸ್ಥಿ ಸ್ನಾಯುಗಳು ಪುರುಷಗುಣಗಳು. ನರನಾರೀ ಸಂಬಂಧವಾದಾಗ ಪ್ರಕೃತಿ ಪುರುಷ ಸಂಮಿಲನವಾಗಿ, ಶ್ರೀಹರೀಚ್ಛೆಯೂ ಒದಗಿದರೆ, ಭೂತಶರೀರ ಸಂಜನನವಾಗುವುದು. ಶರೀರಗಳಿಗೆ ಪ್ರಕೃತಿಯು ಉಪಾದಾನಕಾರಣವಾಗಿ, ಪುರುಷನು ನಿಮಿತ್ತ ಕಾರಣನಾಗಿರುವನು. ಸ್ವತಂತ್ರ ಪುರುಷನಾದ ಶ್ರೀಹರಿ ದಯದಿಂದ ಜೀವ ಪುರುಷನಿಗೆ ಅನಾದಿಕಾಲದ ಸಾಂಸಾರಿಕ ಬಂಧದ ದೆಶೆಯಿಂದ ಮುಕ್ತಿ ದೊರೆಯುವದು.

ಶ್ರೀಹರಿದಯೆಗೆ ಜ್ಞಾನವೇ ಕಾರಣವಾಗಿದೆ. ಬರಿಯ ವೇದಪಾಠದಿಂದ ಜ್ಞಾನವಾಗಲಾರದು. ವೇದಾರ್ಥ ನಿಶ್ಚಯದಿಂದಲೇ ಸರಿಯಾದ ಜ್ಞಾನವು ಸಿದ್ಧಿಸುವುದು. ಅಂತಹ ನಿಶ್ಚಿತ ಜ್ಞಾನವು ದೇವನೇ ನಾನೆಂಬ ಮಿಥ್ಯಾಜ್ಞಾನಿ ಗುರುವಿನಿಂದ ಎಂದಿಗೂ ದೊರೆಯದು. ದೇವನ ಭಕ್ತನು ನಾನೆಂಬ ತತ್ವಜ್ಞಾನಿ ಗುರುವೇ ಸಮಾಶ್ರಯಣೀಯನಾಗಿ ಸಮ್ಯಗ್ ಜ್ಞಾನವನ್ನು ದಯಪಾಲಿಸುವನು. ಜೀವನೂ ಅನಾದಿ ನಿತ್ಯನೇ. ಆದರೂ ಅವನಿಗೆ ಅಜ್ಞಾನಾವರಣವಿದೆ. ಅದು ಲಿಂಗ ಶರೀರವೆಂದು ಖ್ಯಾತವಾಗಿದೆ. ಷೋಡಶ ಕಲವು, ಪ್ರಾಕೃತಿಕವು ಆದ ಲಿಂಗದೇಹವು ಅನಾದಿಯಾದರೂ ಸಾಂತವಾಗಿದೆ. ಲಿಂಗ ಶರೀರವು ಪ್ರಕೃತಿಗೂ ನಿಯಾಮಕನಾದ ಶ್ರೀಹರಿಗಿಲ್ಲ. ಸಮತೀತಕ್ಷರಾಕ್ಷರನು, ನಿರ್ದೋಷಾಶೇಷಸದ್ಗುಣನು ಆದ ಶ್ರೀಶನ ಅನುಗ್ರಹದಿಂದ ಜೀವರಿಗೆ ಲಿಂಗಾದಿ ಪ್ರಾಕೃತ ಬಂಧವಿಧ್ವಂಸವಾಗುವುದು. ಶ್ರೀಹರಿಯ ಪ್ರಸಾದಕ್ಕೆ ಮುಖ್ಯಪಾತ್ರನಾದ ಮುಖ್ಯಪ್ರಾಣನೇ ಅಮೃತನು, ಅಜರನು, ಅಲಿಂಗನು ಆಗಿರುವನು; ಅಂದ ಮೇಲೆ ಇನ್ನು ಶ್ರೀದೇವೀ ಶ್ರೀರಮಣರಿಗೆ ಜರಾಮರಣಾದಿ ಪ್ರಾಕೃತ ವಿಕಾರಗಳಿಲ್ಲವೆಂದು ಹೇಳಬೇಕೆ? ಇಂತು ಸಕಲ ಜೀವಜಡಾತ್ಮಕ ಪ್ರಪಂಚದಿಂದ ಅತ್ಯಂತ ವಿಲಕ್ಷಣನು ಸರ್ವಜ್ಞತ್ವ, ಸರ್ವೇಶತ್ವ, ಸರ್ವಗತತ್ವ, ಸರ್ವಕರ್ತೃತ್ವಾದಿ ಅನಂತ ಕಲ್ಯಾಣಗುಣನು ಆದ ಶ್ರೀಹರಿಯನ್ನು ತಿಳಿಸುವ ಸಾಂಖ್ಯಶಾಸ್ತ್ರವು, ಅವನನ್ನು ಸೇರಿಸುವ ಯೋಗಶಾಸ್ತ್ರಕ್ಕೆ ಪೂರಕವಾಗಿದೆ.

ಯೋಗದಲ್ಲಿ ಯಮ, ನಿಯಮಗಳಿಂದ ಶುದ್ಧ ಮನಸ್ಕನಾದವನಿಗೆ ಪ್ರತ್ಯಾಹಾರವು ಕೈಗೂಡುವದು. ಆಸನದಲ್ಲಿ ಸ್ಥಿರನಾಗಿ ಕೂತು ಶ್ರೀಹರಿ ಗುಣಗಳನ್ನು ಚಿಂತಿಸುವಾಗ ಪ್ರಾಣಾಯಾಮದ ಕುಂಭಕ ಸ್ಥಿತಿಯು ಅತ್ಯಂತ ಸಮುಚಿತವಾಗಿದೆ. ಒಂದೊಂದವಯವವನ್ನು ಚಿಂತಿಸುವುದನ್ನು ಧಾರಣವೆಂಬರು; ಸಮಗ್ರಾಂಗ ಚಿಂತನವನ್ನು ಧ್ಯಾನವೆಂಬರು.

ಅಪ್ರಯತ್ನವಾಗಿ ಒದಗಿಬರುವ ವಿಷ್ಣುಗುಣ ಚಿಂತನವನ್ನು ಧ್ಯಾನದ ಕೊನೆಯಾದ ಸಮಾಧಿ ಎಂಬರು. ಅದು ಬಹುಕಾಲೀನವಾದಾಗ ಅಸಂಪ್ರಜ್ಞಾತವೆನಿಸಿ, ಶ್ರೀಹರಿ ದಿವ್ಯಮಂಗಳತಮ ರೂಪದರ್ಶನಕ್ಕೆ ಕಾರಣವಾಗುವದು.

ಇಂತು ಯೋಗವೂ ಅವಶ್ಯಕವಾಗಿದೆ. ಅದರಿಂದ ಸಿದ್ಧಿಸುವ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಮುಂತಾದ ಸಿದ್ಧಿಗಳು ಮೋಕ್ಷಮಾರ್ಗದಲ್ಲಿ ಬರುವ ಅಂತರಾಯಗಳೆಂದು ತಿಳಿದು, ಬುದ್ಧಿವಂತರು ಅವನ್ನು ತಿರಸ್ಕರಿಸಿ, ಶುದ್ಧ ಭಕ್ತಿಯಿಂದ ಭಜಿಸಿ, ಶ್ರೀಹರಿ ಸಾನಿಧ್ಯವನ್ನು ಸೇರಿ ಮುಕ್ತರಾಗುವರು.

ಮಲಮೂತ್ರಾದಿ ವೇಗಕಾಲವು, ಭೋಜನೋತ್ತರ ಕಾಲವು ಯೋಗಾಭ್ಯಾಸಕ್ಕೆ ವಿಹಿತವಲ್ಲ. ಯೋಗಿಯು ಹಿತಮಿತಾಹಾರಿಯಾಗಿರಬೇಕು. ದುಷ್ಟಸಂಗವನ್ನು ಬಿಡಬೇಕು. ಇಂದ್ರಿಯಗಳನ್ನು ವಿಷಯಗಳತ್ತ ಹರಿಬಿಡಬಾರದು. ಬುದ್ಧಿಬಲದಿಂದ ನಿಗ್ರಹಿಸಿದ ಮನದಿಂದ ಶ್ರೀಶನ ಗುಣಚಿಂತನವನ್ನು ಎಡೆಬಿಡದೆ ಮಾಡಬೇಕು. ಇಂತು ಯೋಗದಿಂದ ಸಿದ್ಧನಾದ ಮಹಾನುಭಾವನ ಮನಸ್ಸು ನಿರ್ವಾತಸ್ಥಲದಲ್ಲಿದ್ದ ದೀಪದಂತೆ, ವಿಷಯಗಳಿಂದ ಹೊಯ್ದಾಡದೆ, ತನ್ನ ಅಂತರ್ಯಾಮಿಯ ಪಾದಾರವಿಂದದಿ ನಿಶ್ಚಲವಾಗಿ ನಿಲ್ಲುವದು.

ಯೋಗಿಯು ಸೃಷ್ಟಿಯನ್ನು ಅನುಲೋಮದಿಂದಲು, ಪ್ರಳಯವನ್ನು ಪ್ರತಿಲೋಮದಿಂದಲು ಚಿಂತಿಸಿ, ಸರ್ವವು, ಸರ್ವದಾ, ಶ್ರೀಹರ್ಯೇಕಾಯತ್ತವೆಂದು ಚಿಂತಿಸಬೇಕು. ಚತುರ್ವಿಂಶತಿ ತತ್ವಗಳಿಗೂ ಒಡೆಯನಾದ ಶ್ರೀಹರಿಯ ಪಂಚವಿಂಶನೆನಿಸಿ, ತನ್ನನ್ನು ಭಜಿಪ ಭಕ್ತರ ಭವಬಂಧವನ್ನು ಬೇಗನೆ ಬಿಡಿಸಿ, ಕಾಪಾಡುವನು.

ಅಂತಹ ಶ್ರೀಹರಿಯನ್ನು ತಿಳಿಸಿಕೊಡುವ ವೇದಾದಿಗಳನ್ನು ಪರವಿದ್ಯೆ ಎಂಬರು. ಶ್ರೀಹರಿಯನ್ನು ಮುಚ್ಚಿಟ್ಟು, ಇತರ ಆಪಾತಾರ್ಥವನ್ನು ತೋರುವ ವೇದಾದಿಗಳಿಗೇ ಅಪರವಿದ್ಯೆ ಎಂಬರು. ಏತದ್ಭಿನ್ನವಾಗಿ, ಅನ್ಯಥಾಜ್ಞಾನವನ್ನು ಉತ್ಪಾದಿಸುವ ಪಾಶುಪತಾದಿ ದುಶ್ಶಾಸ್ತ್ರಗಳಿಗೆ ಅವಿದ್ಯೆ ಎಂದು ಹೆಸರಿದೆ. ಅವಿದ್ಯಾ ವರ್ಜನದಿಂದ ಇಷ್ಟ ಪ್ರಾಪ್ತಿಯಾಗುವುದು.

ಜೀವನು ಸ್ವತಃ ಜ್ಞಾನಾನಂದರೂಪನಾಗಿದ್ದರೂ, ಅನಾದಿ ಪ್ರಕೃತಿ ಬಂಧದಿಂದ ಅಜ್ಞಾನವನ್ನು ಹೊಂದಿ, ನಾನು, ನನ್ನದು ಎಂಬ ಎರಡು ವಿಧ ಅಭಿಮಾನವನ್ನು ಪಡೆಯುವನು. ಶರೀರವೇ ನಾನು ಎಂಬ ಅಹಂಕಾರವೂ, ಧನದಾರಾ ಪುತ್ರಾದಿಗಳು ನನ್ನದೆಂಬ ಮಮಕಾರವೂ, ಸೇರಿ ದುರಭಿಮಾನ ಬೀಜವಾಗಿ, ಜೀವನಿಗೆ ಬಲು ಜನ್ಮಗಳನ್ನು ಕೊಡುತ್ತಿದೆ. ನಾನು ಕರ್ತನಲ್ಲ- ಶ್ರೀಹರಿಯೇ ಸ್ವತಂತ್ರಕರ್ತನು; ನನ್ನದಲ್ಲ; ಧನಾದಿ ಸರ್ವವೂ ಶ್ರೀಹರಿ ಕೊಟ್ಟದ್ದು ಎಂದು ಅಭಿಮಾನವನ್ನು ಬಿಟ್ಟವನು ಪ್ರಕೃತಿ ಬಂಧದಿಂದ ಮುಕ್ತನಾಗುವನು.

ಬ್ರಹ್ಮನೆಂದರೆ ಗುಣಪೂರ್ಣನಾದ ನಾರಾಯಣನು; ಬ್ರಹ್ಮನೆಂದು ಶ್ರೀಹರಿ ಪ್ರತಿಬಿಂಬನಾದ ಜೀವನನ್ನೂ ವೇದಗಳು ಹೆಸರಿಸಿವೆ. ಬದ್ಧನಾದ ಬ್ರಹ್ಮನು, ನಿತ್ಯ ಮುಕ್ತನಾದ ಬ್ರಹ್ಮನ ವೈಕುಂಠಮುಖ ಸುಖ ಸ್ಥಾನಗಳನ್ನು ಸೇರಬೇಕಾದರೆ ಬ್ರಹ್ಮ ಎಂದರೆ ವೇದಗಳನ್ನು, ಬ್ರಹ್ಮ ಎಂದರೆ ವೇದ ವಿದ್ವಿಪ್ರರಿಂದಲೇ ತಿಳಿಯಬೇಕು. ಆಗ ಜೀವನು ಬ್ರಹ್ಮ ಭಾವವನ್ನು ಅಂದರೆ ಸ್ವಯೋಗ್ಯ ಗುಣಪೂರ್ತಿಯನ್ನು ಪಡೆದು, ನಿರ್ದುಃಖನಾಗುವನು. ಮುಕ್ತಿಯಲ್ಲಿಯೂ ತಾರತಮ್ಯವಿದ್ದೇ ಇದೆ. ಆದರೆ ಅಲ್ಲಿ ಜೀವರಿಗೆ ಮತ್ಸರ ಕಾಪಟ್ಯಾದಿ ದೋಷಗಳಿರುವುದಿಲ್ಲ. ಆದುದರಿಂದ ಸ್ವೋತ್ತಮರಲ್ಲಿ ತದ್ಯೋಗ್ಯ ಭಕ್ತಿಯು, ಸ್ವಾವರರಲ್ಲಿ ದಯೆಯು ಅವರಿಗೆ ಸ್ವಭಾವಸಿದ್ಧವಾಗೇ ಇರುವವು. ಅಸ್ವತಂತ್ರ್ಯವಿದ್ದರೂ ಜೀವರಿಗೆ ದುಃಖ ಏರುವುದಿಲ್ಲ. ಸಂಕಲ್ಪ ಮಾತ್ರದಿಂದ ಸ್ವಯೋಗ್ಯ ಭೋಗಗಳು ಸಿಗುವುದರಿಂದ ಅವರು ನಿಜಾನಂದ ತುಂದಿಲರಾಗಿರುವರು. ಇಂತು ಮುಕ್ತಿಪ್ರದನಾದ ಶ್ರೀಶನ ಮಹಿಮೆಯನ್ನು ನಿನಗೆ ನಿರೂಪಿಸಿದೆನು. ಈ ವಿಷಯವನ್ನು ಬ್ರಹ್ಮದೇವನು ನನಗೆ ತಿಳಿಸಿಕೊಟ್ಟನು.

ಇಂತು ವಸಿಷ್ಠ ಜನಕ ಸಂವಾದವನ್ನು ನಿರೂಪಿಸಿ, ಭೀಷ್ಮನು 'ಧರ್ಮರಾಜ! ಹಿಂದೆ ವಸುಮಂತನೆಂಬ ರಾಜನು ಬೇಟೆಗೆಂದು ಪೋಗಿ, ಒಂದಾಶ್ರಮದಲ್ಲಿ, ಭೃಗುವಂಶ ಜಾತನಾದ ಮುನಿನಾಥನನ್ನೊಬ್ಬನನ್ನು ಕಂಡನು. 'ಇಹಪರಗಳಲ್ಲಿ ಹಿತಸಾಧಕವಾವುದು ?' ಎಂದು ಕೇಳಿದ ವಸುಮಂತನಿಗೆ ಭಾರ್ಗವನಿಂತೆಂದನು: 'ರಾಜನ್! ಭೂತ ಹಿತಾಚರಣೆಗೆ ಮೀರಿದ ಶುಭ ಸಾಧನವಿಲ್ಲ. ಪರದ್ರೋಹಕ್ಕೆ ಮಿಗಿಲಾದ ಪಾಪವಿಲ್ಲ. ಎಲ್ಲ ಪಾಪಗಳಿಗೆ ಮೂಲವಾಗಿರುವ ದುರಾಶೆಯನ್ನು ಬಿಡು! ಜೇನಿನಾಶೆಯಿಂದ ಕೆಳಗಿರುವ ಪ್ರಪಾತದಲ್ಲಿ ಬೀಳುವ ದಡ್ಡನಂತೆ, ಕ್ಷಣಿಕವಾದ ಐಹಿಕ ಸುಖಕ್ಕಾಗಿ, ನರಕ ಕೂಪದಲ್ಲಿ ಬೀಳಬಹುದೇ ? ಶಾಶ್ವತವಾದ ಮೋಕ್ಷಾ ನಂದವನ್ನು ಸಂಪಾದಿಸು! ಅದಕ್ಕಾಗಿ ಧರ್ಮವನ್ನಾಚರಿಸು! ಅರ್ಥವನ್ನು ಕಾಯಕ್ಕಾಗಿ ಅಲ್ಲದೆ ಧರ್ಮಕ್ಕಾಗಿ ವಿನಿಯೋಗಿಸು! ಸುಜನ ಸಂಗವನ್ನು ಮಾಡು! ಪಾತ್ರರಾದ ವಿಪ್ರರಿಗೆ ಚನ್ನಾಗಿ ನೀಡು! ವೇದ ವಿದ್ವರರಾದ ವಿಪ್ರರ ಮಾತಿನಂತೆ ಧರ್ಮದಿಂದ ರಾಜ್ಯವನ್ನಾಳು! ಪ್ರಜಾರಂಜಕನೆನಿಸು! ಧರ್ಮವನ್ನು ನಿರ್ವಹಿಸುವಲ್ಲಿ ಯಾರಿಗೂ ಅಂಜಬೇಡ! ಧೃತಿಗೆ ಸಮನಾದ ದೊಡ್ಡ ಗುಣವಿಲ್ಲ. ಧೃತಿ ಎಂದರೆ ಧರ್ಮ ಸ್ಥಿರತೆ! ಅದಿಲ್ಲದೆ ಅಲ್ಲವೆ ಮಹಾಭಿಷನು ತ್ರಿವಿಷ್ಟಪದಿಂದ ವಿಭ್ರಷ್ಟನಾದುದು! ಅದಿದ್ದಲ್ಲವೆ ಯಯಾತಿಯು ಆಪತ್ತನ್ನು ಕಳೆದುಕೊಂಡು, ಮತ್ತೆ ಸ್ವರ್ಗತಿಯನ್ನು ಹೊಂದಿದ್ದು! ಶ್ರೀಹರಿ ಗುರುಭಕ್ತಿಯಿಂದ ಎಲ್ಲ ಇಹಪರಹಿತವೂ ಸಾಧಿತವಾಗುವುದು' ಎಂದು ನುಡಿದ ಭಾರ್ಗವನಂದನನ ಮಾತಿನಂತೆ, ಜನಕನಂದನನಾದ ವಸುಮಂತನು ನಡೆದು, ಇಹಪರ ಸುಖ ಭಾಜನನಾದನು.

ಧರ್ಮರಾಜ! ಈಗ ನಿನಗೆ ಯಾಜ್ಞವಲ್ಕ್ಯ ಜನಕರಾಜನ ಸಂವಾದವನ್ನು ನಿರೂಪಿಸುವೆನು. ಕೇಳು! ಮಿಥಿಲೇಶನು ಮುನೀಶನಾದ ಯಾಜ್ಞವಲ್ಕ್ಯನನ್ನು ಕಂಡು

'ಮುನೀಂದ್ರ ! ಇಂದ್ರಿಯ ವಿವಿಧ ವೃತ್ತಿಗಳನ್ನು, ಭೂತಸರ್ಗಪ್ರಳಯಗಳನ್ನು ಅವ್ಯಕ್ತ ಪರತತ್ತ್ವಗಳನ್ನು ನನಗೆ ದಯಮಾಡಿ ತಿಳಿಸಿಕೊಡು!' ಎಂದು ಕೇಳಿದನು. ಯಜ್ಞವಲ್ಕ್ಯನಿಂತು ನಿರೂಪಿಸಿದನು :

'ರಾಜನ್! ಸರ್ಗಪ್ರಳಯಗಳನ್ನು ಶ್ರೀನಾರಾಯಣನು ಮಾಡುವುದು ಜೀವರಿಗೆ ತತ್ತದ್ಯೋಗ್ಯಗತಿಯನ್ನೀಯಲೆಂದು ತಿಳಿ. ಸ್ವಯಂಪೂರ್ಣನಾದ ಶ್ರೀಹರಿಗೆ ಪ್ರಾಪ್ತವ್ಯವಾದುದೊಂದೂ ಇಲ್ಲ. ಪ್ರಕೃತಿಯಿಂದ ಬಂದ ಭೂತಶರೀರಗಳು ಮತ್ತೆ ಪ್ರಕೃತಿಯಲ್ಲೇ ಸೇರಿಪೋಗುವವು. ಜೀವರಿಗಿರುವ ಅನಾದಿಯಾದ ಪ್ರಕೃತಿ ಬಂಧವು ಶ್ರೀಹರಿಪ್ರಸಾದದಿಂದ ಮುಕ್ತಿಕಾಲದಲ್ಲಿ ನಾಶವಾಗುವುದು. ಮುಕ್ತಿಯೋಗ್ಯ ಜೀವರೆಲ್ಲರೂ ಜ್ಞಾನಾನಂದ ಸ್ವರೂಪರೇ, ಆದರೆ ಅವರಿಗೆ ಬಂದ ಅಜ್ಞಾನವು ನಾಶವಾಗಿ, ಸ್ವರೂಪಾವಿರ್ಭೂತಿಯನ್ನು ಅವರು ಹೊಂದಲು ಶ್ರೀಶದಯವೇ ಮುಖ್ಯ ಕಾರಣವಾಗಿದೆ.

ಶ್ರೀಶನು ಬ್ರಹ್ಮನನ್ನು ನಾಭಿಕಮಲದಿಂದ ಪುಟ್ಟಿಸಿ ಆತನ ಆಯುಃಪರಿಮಿತಿಯಾದ ಕಾಲ ಪರಮಾವಧಿಯನ್ನು ನಿತ್ಯಾನಂತಕಾಲದಿಂದ ವಿಂಗಡಿಸಿದನು. ನಾಲ್ಕು ಯುಗಗಳ ಸಾವಿರವಾದರೆ ಬ್ರಹ್ಮನ ದಿನವು. ಅಂತಹ ದಿನಗಳು ಮೂರನೂರ ಅರವತ್ತಾದರೆ ಆತನಿಗೆ ಒಂದು ವರ್ಷ ; ಅಂತಹ ವರ್ಷಗಳು ನೂರಾದರೆ ಬ್ರಹ್ಮಾಯುವಾದ ಪರವಾಗುವುದು. ಶ್ರೀಹರಿಯು ಬ್ರಹ್ಮನಲ್ಲಿ ನಿಂತು ಭೂತಜಾತವನ್ನು ಪುಟ್ಟಿಸುವನು. ಮತ್ತು ಪುಟ್ಟಿದ ಜೀವರಿಗೆ ಅಲ್ಲಲ್ಲೇ ಆಯಾ ಯೋನಿಗಳಿಗೆ ತಕ್ಕ ಆಹಾರವಾದ ಓಷಧ್ಯಾದಿಗಳನ್ನೂ ಕಲ್ಪಿಸಿ, ಪಾಲಿಸುವನು. ಅವರು ನೋಡಲು, ಕೇಳಲು, ಮೂಸಲು, ರುಚಿಸಲು, ಮುಟ್ಟಲು ಬೇಕಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳೆಂಬ ಜ್ಞಾನೇಂದ್ರಿಯಗಳನ್ನೂ ಮತ್ತು ಮಾತಾಡಲು, ಹಿಡಿಯಲು, ಓಡಲು, ಮಲಾದಿಗಳನ್ನು ಹೊರಚೆಲ್ಲಲು, ಆನಂದಪಡಲು ಬೇಕಾದ ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳನ್ನೂ ದಯಪಾಲಿಸಿದನು. ಭೂತಗಳಲ್ಲಿ ಅಂದರೆ ಪೃಥಿವಿ, ಅಪ್, ತೇಜಸ್, ವಾಯು, ಆಕಾಶಗಳಲ್ಲಿ ಆಧಿಭೌತಿಕ ರೂಪದಿಂದ ನಿಂತು, ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ವಿಷಯಗಳನ್ನು ನೀಡಿ, ಜೀವರನ್ನು ಶರೀರದಲ್ಲಿರುವ ಆಧ್ಯಾತ್ಮರೂಪದಿಂದ ಪೋಷಿಸುವನು. ತತ್ತದಿಂದ್ರಿಯಾದಿ ದೇವತೆಗಳಲ್ಲಿ ಶ್ರೀಹರಿಯು, ಆಧಿದೈವರೂಪದಿಂದಿದ್ದು, ಅವರಿಗೆ ಆಯಾ ಶಕ್ತಿಗಳನ್ನೀಯುವನು. ಎಲ್ಲ ಇಂದ್ರಿಯಗಳೂ ಮನೋವಶವಾಗಿವೆ. ಮನಸ್ಸಿಗೆ ನಿಯಾಮಕನಾದ ರುದ್ರನು ಮಹಾಬಲವಂತನಾಗಿರುವನು. ಮನಸ್ಸು, ಬುದ್ಧಿವಶವಾಗಿದೆ ; ಅದಕ್ಕೆ ಸರಸ್ವತಿಯು ನಿಯಾಮಕಳು. ಆಕೆಯು ಮಹತ್ತತ್ತ್ವ ನಿಯಾಮಕನಾದ ಬ್ರಹ್ಮದೇವನ ಅಧೀನಳಾಗಿರುವಳು. ಆತನು ಅವ್ಯಕ್ತಮಾನಿ ಶ್ರೀದೇವಿಯ ಅಧೀನನು; ಆಕೆಯು ಶ್ರೀನಾರಾಯಣಾಧೀನಳು, ಇಂತು ಕ್ರಮದಿಂದ ಆಗುವ ಸೃಷ್ಟಿಯು ಜಗತ್ತನ್ನು ಭೂತಗಳಿಂದ ತುಂಬುವುದು. ಅಂತೆಯೇ ವ್ಯುತ್ಕ್ರಮದಿಂದಾಗುವ ಪ್ರಳಯವು ಜಗವನ್ನು ನಾಶಗೊಳಿಸುವುದು. ಸರ್ವದೇವತೆಗಳು ಆಗ ರುದ್ರಾಧೀನರಾಗುವರು. ರುದ್ರನು ಪ್ರಾಣಾ (ಬ್ರಹ್ಮ)

ಅಧೀನನಾಗುವನು. ಬ್ರಹ್ಮನು ಶ್ರೀರಮಣನಲ್ಲಿ ಸರ್ವಾಂಗ ಸಾಯುಜ್ಯರೂಪಲಯವನ್ನು ಹೊಂದಿದಾಗ, ಜಡ ಪ್ರಪಂಚವೆಲ್ಲವು ಸೂಕ್ಷ್ಮತಮರೂಪದಿಂದ ಅವ್ಯಕ್ತದಲ್ಲಿ ಅಡಗಿರುವುದು.

ಇಂತು ಸೃಷ್ಟಿಪ್ರಳಯ ಕಾರಣನಾದ ಶ್ರೀನಾರಾಯಣನ ಮಹಿಮೆಯನ್ನು ತಿಳಿದವನು ಸಂಸಾರ ಬಂಧದಿಂದ ಮುಕ್ತನಾಗುವನು. ಅಚೇತನವಾದ ಪ್ರಕೃತಿಯು, ಚೇತನರಾದ ಬ್ರಹ್ಮಾದಿ ಜೀವರು ಸರ್ವದಾ ಶ್ರೀರಮಾನಾರಾಯಣರ ಅಧೀನರು, ಅಸ್ವತಂತ್ರರೂ ಆಗಿರುವರು. ಶ್ರೀಶನು ಅವುಗಳಲ್ಲಿ ನಿಂತು ಪ್ರೇರಕನಾಗಿದ್ದರೂ, ನೀರಂಟದಿರುವ ತಾವರೆಯಂತೆ, ನಿರ್ಲಿಪ್ತನಾಗಿರುವನು. ಜೀವನು ಸ್ವಯಂ ಜಡನಲ್ಲದಿದ್ದರೂ, ಜಡಪ್ರಕೃತಿ ದೇಹದಲ್ಲಿ ಬಂದು ತಾನೇ ದೇಹವೆಂದು ಭ್ರಮಿಸಿ, ಅಹಂಕಾರದಿಂದ ಕರ್ತೃತ್ವ ಭ್ರಾಂತಿಯನ್ನೂ, ಜಡದೇಹಗತರಾದ ಪತ್ನೀಪುತ್ರಾದಿಗಳನ್ನು ತನ್ನ ಅಧೀನವೆಂದು ಭ್ರಮಿಸಿ, ಮಮಕಾರವೆಂಬ ಸ್ವಾಮಿತ್ವಭ್ರಾಂತಿಯನ್ನೂ ಹೊಂದಿ ಸಂಸರಿಸುವನು. ಅವನು ತನ್ನನ್ನು, ಬಂಧಿಸಿಟ್ಟ ಶ್ರೀಹರಿಯ ಮಹಾಮಹಿಮೆಯನ್ನರಿತು, ಅಹಂ ಮಮಕಾರಗಳನ್ನು ಬಿಟ್ಟನೆಂದರೆ, ಆಗ ಅವನು ಜೀವನ್ಮುಕ್ತನಾಗುವನು. ಆಗ ಮೇಘಾಡಂಬರವಿಲ್ಲದ ಅಂಬರದಿ ಪೊಳೆವ ಸೂರ್ಯಪ್ರಕಾಶದಂತೆ ಜ್ಞಾನೋದಯವಾಗುವುದು. ಶ್ರೀಹರಿಚಿಂತನಾಪರವಶನಾಗಿ, ಅವನು ಶತಭೇರಿ ತಾಡನಗಳ ಶಬ್ದದಿಂದಲೂ ಚಲಿತ ನಾಗದೆ, ತಿರವಾದ ಧ್ಯಾನದಲ್ಲಿ ನಿಲ್ಲುವನು. ಕ್ರಮವಾಗಿ ಅವನಿಗೆ ಶ್ರೀಶಾಪರೋಕ್ಷವಾಗುವುದು. ಪ್ರಾರಬ್ಧವು ಒಂದು ಮಾತ್ರ ಉಳಿದು, ಅವನ ಸಂಚಿತ ಆಗಾಮಿ ಕರ್ಮಗಳು ನಷ್ಟವಾಗುವವು. ಚರಮಶರೀರವು ಬಂದಾಗ ಅವನು ಅರ್ಚಿರಾದಿ ಪಥದಿಂದ ಹೊರಬಂದು, ಮುಕ್ತಪ್ರಾಯನಾಗಿ, ಬ್ರಹ್ಮಲೋಕದಲ್ಲಿ ವಸಿಸುವನು. ಪಾದ (ಜಯಂತ), ಜಂಘಾ (ವಸು), ಜಾನು (ಸಾಧ್ಯ), ಪಾಯು (ಮಿತ್ರ), ಗುಹ್ಯ (ಮನು), ಊರು (ಪ್ರಜೇಶ)ಧ ಪಾರ್ಶ್ವ (ಮರುತ್), ನಾಭಿ (ಚಂದ್ರ), ಬಾಹು (ಇಂದ್ರ), ವಕ್ಷಸ್ಸು (ದಕ್ಷ), ಗಳ (ಶೇಷ), ಆನನ (ವಿಶ್ವೇದೇವ), ಶ್ರೋತ್ರ (ದಿಕ್ಪಾಲ), ನಾಸ (ಅಶ್ವಿನಿದ್ವಯ), ನೇತ್ರ (ಸೂರ್ಯ), ಭ್ರೂ (ರುದ್ರ), ಫಾಲ (ಭಾರತಿ), ಶಿರ (ಬ್ರಹ್ಮ) ಈ ದೇವತೆಗಳ ದ್ವಾರಾ ಕ್ರಮೋತ್ತಮರಲ್ಲಿ ಸೇರಿ, ಕೊನೆಗೆ ಬ್ರಹ್ಮದೇವನ ದ್ವಾರಾ ಮುಕ್ತಿಯಲ್ಲಿ, ಶ್ರೀಹರಿಲೋಕವನ್ನು ಸೇರುವ ಸಾತ್ವಿಕ ಜೀವರು ಮತ್ತೆ ಜನನಮರಣರೂಪ ಸಂಸಾರ ವರ್ತದಲ್ಲಿ ಸಿಕ್ಕಿಬೀಳರು.

ಜನಕರಾಜ! ಮನುಜ ಶರೀರವು ಅಸ್ಥಿರವಾದರೂ ಸಾಧಕವಾಗಿದೆ. ಅದಿರುವಾಗ, ಗಟ್ಟಿಮುಟ್ಟಾಗಿರುವಾಗ ಸಾಧನವನ್ನು ಮಾಡಿ, ಜ್ಞಾನಭಕ್ತಿಗಳನ್ನು ಅರ್ಜಿಸದವನು, ಮೃತ್ಯುಗಹ್ವರನಿವಿಷ್ಟನಾಗುತ್ತಲೇ ಇರುವನು. ಕೆಲಜ್ಞಾನಿಗಳು ಮೃತ್ಯುಕಾಲವನ್ನು ಸೂಚಿಸುವ ಲಕ್ಷಣಗಳನ್ನು ನುಡಿದಿರುವರು.

ಅರುಂಧತೀ ನಕ್ಷತ್ರವನ್ನು ಕಾಣಲಾರದವನು, ಮೂಗಿನ ಬಲಹೊಳ್ಳೆ ಒಣಗಿದಂತಾದವನು, ಪೂರ್ಣಚಂದ್ರನನ್ನು ನೋಡಿ ಮಲಿನನಾದಂತೆ ತಿಳಿಯುವವನು ಇವರು

ಮೂರು ಜನರು ಒಂದು ವರ್ಷದಲ್ಲಿ ಸಾಯುವರು. ಇಂದು, ರವಿ ಮಂಡಲಗಳಲ್ಲಿ ರಂಧ್ರವನ್ನು ಕಂಡವನು ಆರು ತಿಂಗಳೊಳಗೆ ಮೃತನಾಗುವನು. ದೇವಾಲಯದಲ್ಲಿ ಸುಗಂಧವನ್ನು ಕಾಣದೆ, ಪೂತಿಗಂಧವನ್ನು ಮೂಸಿದಂತಾದವನು ಒಂದು ವಾರದಲ್ಲಿ ಸಾಯುವನು. ಮೂಗು ಬಾಗಿದರೆ, ಕಿವಿಗಳು ಜೋತುಬಿದ್ದರೆ, ಕಣ್ಣು ಕೆಟ್ಟರೆ, ದೇಹವು ಅತಿಶುಷ್ಕವಾದರೆ, ಅಂತಹವನು ಸದ್ಯೋಮೃತ್ಯುವಿಗೆ ಸಿಕ್ಕಿರುವನೆಂದು ತಿಳಿ ! ತಲೆಯ ಮೇಲೆ ಹೊಗೆ ಬಂದಂತಾದರೆ, ಎಡಗಣ್ಣು ಮಾತ್ರ ಸುಮ್ಮನೆ ನೀರಾಡಿದರೆ, ಅಂತಹವನು ಶೀಘ್ರವೇ ಸಾಯುವನೆಂದು ತಿಳಿ; ಇಂತು ಅರಿಷ್ಟಗಳನ್ನು ತಿಳಿದು, ತನ್ನ ಜಾತಕದಿಂದಲೂ ತಿಳಿದು ಮೃತಿಕಾಲವು ಉಪಸ್ಥಿತವಾದಾಗ, ಮನುಜನು ಮತಿಯ ಧೃತಿಗೆಡದೆ, ಮಮತೆ ಕಡಿದು, ಮಾಧವನಲ್ಲಿ ಮನವಿಟ್ಟು, ಯಥಾಶ್ರುತವಾದ ಶ್ರೀಶ ಚಿಂತನವನ್ನು ಮಾಡಬೇಕು. ಅಂತಹ ಯೋಗಿಯು ಮೃತ್ಯುವಿನ ನೆತ್ತಿಯಲ್ಲಿ ತುಳಿದು, ಶಾಶ್ವತ ಬ್ರಹ್ಮಲೋಕವನ್ನು ಸೇರಿ, ಸ್ವಯೋಗ್ಯ ನಿತ್ಯಾನಂದ ಭಾಜನನಾಗುವನು.

ಹಿಂದೆ ನಾನು ಸೂರ್ಯಾಂತರ್ಯಾಮಿಯಾದ ಶ್ರೀಶನನ್ನು ಉಪಾಸಿಸಿ, ಆತನ ದಯದಿಂದ (ಶುಕ್ಲ) ಯಜುರ್ವೇದವನ್ನು ಹೊಂದಿದೆನು. ನನಗೆ ಆ ವೇದವೇದ್ಯನ ಪ್ರತ್ಯಕ್ಷವಾಗಿ, ಅಮೃತವೃಷ್ಟಿಯಲ್ಲಿ ನಿಂತಂತೆ ಪರಮಾನಂದವಾಯಿತು. ಸ್ವರವ್ಯಂಜನ ಭೂಷಿತವಾದ ಓಂಕಾರನಾದದಿಂದ ತುಂಬಿದ ನನ್ನ ಹೃದಯಾಂಬರವು ಪೀತಾಂಬರನ ದಿವ್ಯಪ್ರಕಾಶದಿಂದ ತುಂಬಿತು. ಆ ಯಜುರ್ವೇದರಹಸ್ಯವನ್ನು ನಾನು ವಿಶ್ವಾವಸುವೆಂಬ ಗಂಧರ್ವರಾಜನಿಗೆ ನಿರೂಪಿಸಿದೆನು. ಇಂದು ಮತ್ತೆ ನಿನಗೆ ಪೇಳಿರುವೆನು. ವೇದವೇದ್ಯನು, ಯಜ್ಞಾದಿ ಸರ್ವಕರ್ಮಫಲಪ್ರದನೂ ಆದ ಶ್ರೀಮನ್ನಾರಾಯಣನನ್ನು ಅರಿತು ಭಜಿಸದ ವೇದಾಭ್ಯಾಸವು ನಿರರ್ಥಕವಾಗಿದೆ. ಕ್ಷರಾಕ್ಷರಪುರುಷರಿಗೆ ಭಿನ್ನನು, ಉತ್ತಮನು ಆದುದರಿಂದ ಪುರುಷೋತ್ತಮನೆನಿಸಿ ಮೆರೆವ ಮುರವೈರಿಯ ಸರ್ವೋತ್ತಮತ್ವ , ಸ್ವತಂತ್ರತ್ವ , ಜಗಜ್ಜನ್ಮಾದಿ ನಿಮಿತ್ತ ಕಾರಣತತ್ವಗಳನ್ನು ತಿಳಿದವನೇ ನಿಜವಾದ ವೇದ ವಿದ್ವಾಂಸನು. ಜ್ಞಾನದಿಂದಲಲ್ಲದೆ ಜನನ ಮರಣಾದಿ ದುಃಖದರ್ಶನವು ದೂರವಾಗದು. ಇಂತು ನಿಜವಾದ ಜ್ಞಾನವನ್ನು ಉಪದೇಶಿಸುವ ಗುರುವೇ ಆಶ್ರಯಿಸಿದರೆ ಸಂಸಾರಸಾಧನವು ಆಗುವುದಾಗಲಿ, ಮೋಕ್ಷಸಾಧನವಾಗುವುದಿಲ್ಲ. ಜನಕರಾಜ ! ನೀನು ಸ್ವತಃ ಜ್ಞಾನಿಯಾಗಿರುವೆ ! ನಾ ಪೇಳಿದಂತೆ ನಡೆದು ಜ್ಞಾನಪರಿಪಾಕವನ್ನು ಪಡೆ ! ಬೇಗ ಮುಕ್ತನಾಗುವೆ !'

ಎಂದು ಉಪದೇಶಿಸಿದ ಯಾಜ್ಞವಲ್ಕ್ಯನನ್ನು ಪೂಜಿಸಿ, ಜನಕರಾಜನು ಅಂತೆಯೇ ನಡೆದನು. ಗೃಹಸ್ಥನಾದರೂ ಜನಕನಿಗೆ ಮೋಕ್ಷ ಮಾರ್ಗವು ಪ್ರತಿಬಂಧಿತ ವಾಗಲಿಲ್ಲ. ಧರ್ಮರಾಜ ! ನೀನೂ ಅಂತೆಯೇ ನಡೆ ! ಮೋಕ್ಷಾದಿ ಸರ್ವಶ್ರೇಯೋ ಭಾಜನನಾಗುವೆ !'

## ೧೭. ಜನಕ ಸುಲಭಾ ಸಂವಾದ— ಶುಕಮಹಿಮೆ

ಧರ್ಮರಾಜನು 'ಗೃಹಸ್ಥನಾದರೂ ಜನಕರಾಜನು ಮುಕ್ತನಾದ ಬಗೆ ಹೇಗೆ? ಮತ್ತು ಶ್ರೀವ್ಯಾಸಪುತ್ರನು ಪರಮ ವೈರಾಗ್ಯ ನಿಧಿ ಎಂಬರು. ಆತನ ಚರಿತೆಯನ್ನೂ ನನಗೆ ಪೇಳು!' ಎಂದು ಕೇಳಿದನು.

ಭೀಷ್ಮನಿಂತೆಂದನು: 'ಸುಲಭೆ ಎಂಬ ಲಲನೆಯು, ವಿಮಲಯೋಗನಿಷ್ಠನಾದ ಜನಕನನ್ನು ಪರೀಕ್ಷಿಸಲೆಣಿಸಿ, ನಿಯಮಪಾಲನದಿಂದ ಕೃಶವಾದ ತನ್ನ ಶರೀರವನ್ನು ಯೋಗ ಪ್ರಭಾವದಿಂದ ಮರೆ ಮಾಡಿ, ಸುಕುಮಾರ ಸುಂದರಾಕಾರವನ್ನು ಧರಿಸಿ, ವಿದೇಹ ರಾಜನ ಸಭೆಗೆ ಬಂದಳು. ಆತನು ಆಕೆಯನ್ನು ಯಥಾರ್ಹ ಪಾದ್ಯಾಸನಾದಿಗಳಿಂದ ಪೂಜಿಸಿದನು. ಸುಲಭೆಯು, ಮೆಲ್ಲನೆ ಆತನ ಸಮೀಪಕ್ಕೆ ಸರಿದು ಕೂತಳು ಮತ್ತು ಯೋಗ ಬಲದಿಂದ ಆತನ ಚಿತ್ತವನ್ನು ಹೊಕ್ಕು, ಮಾರವಿಕಾರವನ್ನು ಪುಟ್ಟಿಸಲು ಯತ್ನಿಸಿದಳು. ಜನಕರಾಜನು ನಸುನಕ್ಕು ಆಕೆಗಿಂತೆಂದನು:

'ಸುದತಿ! ನೀನಾರು? ಇಲ್ಲಿಗೇಕೆ ಬಂದೆ? ನಾನು ಪಂಚಶಿಖನೆಂಬ ಮುನಿ ರಾಜನ ಶಿಷ್ಯನು. ಸಾಂಖ್ಯ ಯೋಗಗಳನ್ನು, ಮೋಕ್ಷ ಧರ್ಮವನ್ನು ಆತನಿಂದ ತಿಳಿದು, ವಿರಕ್ತನಾಗಿರುವೆನು. ಗೃಹಸ್ಥನಾದರೂ, ನನ್ನ ಮನವನ್ನು ದುಷ್ಟವಿಷಯದಿಂದ ನಿವರ್ತಿಸಿ, ಕನಕ ಕಾಷ್ಟಗಳನ್ನು ಸಮನಾಗಿ ಕಾಣುತ್ತಿರುವೆನು. ಜ್ಞಾನವು ಸತ್ಕರ್ಮದಿಂದಲು ಗುರುಮುಖ ಶ್ರವಣದಿಂದಲು ಬರುವುದು. ನಾನು ಭಕ್ತಿಪಥವನ್ನು ನಂಬಿ, ಜ್ಞಾನ ಕರ್ಮಗಳನ್ನು ಶ್ರೀಶನಿಗರ್ಪಿಸಿರುವೆನು. ದಂಡಕಾಷಾಯಗಳು, ಮುಂಡಿತ ಶಿರವು, ಕಮಂಡಲು ಚರ್ಮಗಳು ಮೋಕ್ಷವನ್ನು ಕೊಡಿಸುವವೇ? ಜ್ಞಾನವಿಲ್ಲದ ಆಶ್ರಮಲಿಂಗ ಧಾರಣವು ವ್ಯರ್ಥವಾಗಿದೆ. ನಾನು ಜ್ಞಾನಖಡ್ಗದಿಂದ ರಾಗಬಂಧ ಭೋಗ ಬಂಧುಗಳನ್ನು ಕಡಿದುಕೊಂಡು, ಮುಕ್ತಪ್ರಾಯನಾಗಿರುವೆನು. ಬ್ರಾಹ್ಮಣೆಯಾಗಿಯೂ ಕ್ಷತ್ರಿಯನನ್ನು ಕಾಮಿಸಿ ಕೆಟ್ಟೆ! ನನ್ನನ್ನು ಪರೀಕ್ಷಿಸಲು ಬಂದು, ನನ್ನ ಮುಂದೆ ಅಂದಗಾರ್ತಿಯಾಗಿ ನಿಂದು, ಚಿತ್ತದಲ್ಲಿ ಪೊಕ್ಕು, ನನ್ನ ರತಿ ಪೊಂದಲು ಹವಣಿಸುವುದು ನಿನಗೆ ಚಂದವಲ್ಲ. ಸ್ವತಂತ್ರಳಾಗಿ ನೀ ಮಾಡಿದ ಅವಿನಯ ನಿಂದೆ, ನಿನಗೇ ಸೇರಿದ್ದು ತಿಳಿ! ಇದು ಯೋಗಿನಿಯರ ರೀತಿಯಲ್ಲ. ಇಂತಹ ಸಾಹಸದಿಂದ ವಿರಮಿಸು!' ಎಂದ ನರಪತಿಯನ್ನು ಲೆಕ್ಕಿಸದೆ, ಚತುರಮತಿಯಾದ ಸುಲಭೆಯು 'ರಾಜನ್! ನಿನ್ನಲ್ಲಿ ಇಲ್ಲದ ಜ್ಞಾನತನವನ್ನು ತೋರಬೇಡ! ಮೊದಲು ನೀನಾರೆಂದೆ? ಏಕೆ ಬಂದೆ ಇಲ್ಲಿಗೆ ಎಂದೆ? ಆ ಮಾತಾಡುವ ನಿನ್ನ ಮನವು ಇನ್ನೂ ರಾಗದ್ವೇಷ ದೂಷಿತವಾಗಿಯೇ ಇದೆ ಎಂದು ತೋರುತ್ತಿದೆ! ಕೇಳು! ಪಂಚಭೂತಗಳಿಂದಲು, ದಶೇಂದ್ರಿಯಗಳಿಂದಲು, ಒಂದು ಮನಸ್ಸಿನಿಂದಲು ಮಾಡಿದ ಶರೀರವನ್ನು ನೀನಾರೆಂಬುದು ತಪ್ಪಲ್ಲವೇ? ಸರ್ವ ಲೋಕಗಳಲ್ಲಿ ವ್ಯಾಪ್ತನಾದ ಶ್ರೀಹರಿಯ ಪ್ರತಿಬಿಂಬರಾಗಿ ತದಧೀನರಾಗಿ ಅನೇಕ ಯೋನಿಗಳಲ್ಲಿ ತಿರುಗುತ್ತಿರುವ ಜೀವರನ್ನು ನೀನೆಲ್ಲಿಂದ ಬಂದೆ? ಎಂಬುವುದು ಉಚಿತವೇ? ನಿನ್ನಲ್ಲಿಯು,

ನನ್ನಲ್ಲಿಯು ಇರುವ ಪರಮಾತ್ಮನ ಇರವನ್ನು ತಿಳಿದವನು ನಾನು ಇಂತಹ ಘನಮಹಿಮನೆಂದು ಜಂಬಕೊಚ್ಚುವನೇ ರಾಗದ್ವೇಷಗಳಿಗಾಕರನಾದ ನೀನು ಮುಕ್ತನಾಗಿಲ್ಲ. ಏಕೆಂದರೆ ರಾಜರಿಗೆ ಮುಕ್ತಿಸಾಮ್ರಾಜ್ಯವು ಅತಿದೂರವಾಗಿರುವುದು.

ರಾಜರು ಸಪ್ತಾಂಗಗಳಲ್ಲಿ ಮನವಿಟ್ಟು ರಕ್ಷಿಸುತ್ತಿರುವರು. ಮಜ್ಜನ ಭೋಜನ ನಿದ್ರಾದಿಗಳ ಸಮಯಗಳನ್ನು ಬಿಟ್ಟು ಮಿಕ್ಕ ಕಾಲದಲ್ಲಿ ಪ್ರಜರ ವಿಜ್ಞಾಪನವನ್ನಾಲಿಸಿ ಆಜ್ಞಾಪಿಸುವರು. ಮಂತ್ರಿ ಮಿತ್ರರನ್ನು ಕಾಪಾಡಿ, ಶತ್ರುಗಳನ್ನು ಹಿಂಸಿಸುವರು. ಪ್ರೇಮಪಾತ್ರರಾದ ತರುಣಿಯರ ವಶರಾಗಿ ಕೈಗೊಂಬೆಗಳಂತೆ ಆಡುವರು. ಸಿರಿಸಂಪತ್ತಿನ ಮದದಲ್ಲಿ ಧರ್ಮಾಧರ್ಮಗಳನ್ನು ವಿಚಾರಿಸರು. ಇಂತಹ ರಾಜರೆಲ್ಲಿ ? ಮುಕ್ತಿ ಸಾಮ್ರಾಜ್ಯವೆಲ್ಲಿ?

ನಾನು ನಿನ್ನ ಮನದಿ ಹೊಕ್ಕರೆ, ನಿನಗೇಕೆ ವಿಕಾರವಾಗಬೇಕು? ವಿಕಾರವಾಗದಿದ್ದರೆ ನನ್ನನ್ನೇಕೆ ದಂಡಿಸಿದೆ? ನಿರಪೇಕ್ಷನು, ಪ್ರಶಾಂತನೂ ಆದ ಜೀವನ್ಮುಕ್ತನ ಸೊಬಗು ನಿನ್ನಲ್ಲಿಲ್ಲ. ನೀನು ಮುಕ್ತನು, ನಿನ್ನ ಮನಸ್ಸು ನಿರ್ಮಲವು– ಇಂತು ಚಿಂತಿಸಿ, ಅಲ್ಲಿ ಸೇರಿದ ನನ್ನ ಅವಿವೇಕಕ್ಕೆ ನಾನೇ ವ್ಯಥೆಪಡುವಂತಾಯಿತು. ಅಮಾತ್ಯ ಬುಧ ಜನರ ಸಮುಖದಲ್ಲಿ ನಿರ್ದೋಷಳಾದ ನನ್ನನ್ನು ನಿಂದಿಸಿ, ನಿನ್ನ ಗೃಹಸ್ಥಧರ್ಮವಾದ ಸ್ವದಾರರತಿ ನೀತಿಯನ್ನೂ ವಚನ ವ್ಯಾಪಾರದಿಂದ ಕಳೆದುಕೊಂಡೆ! ನಾನು ಕ್ಷತ್ರಿಯ ಕನ್ಯೆ ತಿಳಿ! ಸುಚರಿತರಾದ ನೃಪಾಲರ ವಂಶವನ್ನು ಅಲಂಕರಿಸಿ, ಅನುಕೂಲಗುಣನಾದ ಪತಿಯನ್ನು ಕಾಣದೆ, ಬ್ರಹ್ಮಚಾರಿಣಿಯಾಗಿ, ಮೋಕ್ಷಾಮಾರ್ಗಾನುವರ್ತಿನಿಯಾಗಿರುವೆನು. ನನ್ನನ್ನು ನೀನು ಕೈಪಿಡಿದರೂ ವರ್ಣಸಾಂಕರ್ಯವಾಗದು."

ಅವಳ ಮಾತಿಗೆ ಬದುಲೀಯದೆ, ಸುಮ್ಮನಿದ್ದ ಜನಕನ ನಿರ್ವಿಕಾರಭಾವವನ್ನು ಅಳೆದು ತಿಳಿದು, ಸುಲಭೆಯು ಬಲು ಪ್ರೀತಳಾದಳು. 'ಮಹಾನುಭಾವ! ನಿನ್ನ ಮಾತೆಲ್ಲವೂ ನಿಜ! ಪಂಚಶಿಖನಿಗೆ ತಕ್ಕ ಶಿಷ್ಯನಾಗಿರುವೆ! ನಿನ್ನನ್ನು ಪರೀಕ್ಷಿಸಲು ಬಂದು ನಾನಾಡಿದ ಕಟುವಚನಗಳನ್ನು ಮರೆತು ಕ್ಷಮಿಸು! ನಾನೂ ನಿನ್ನಂತೆಯೇ ನಿರ್ವಿಕಾರಚಿತ್ತಳಾಗೇ ಇರುವೆನು' ಎಂದ ಸುಲಭಾಯೋಗಿನಿಯನ್ನು ಕೊಂಡಾಡಿ ಜನಕರಾಜನು ಪೂಜಿಸಿ ಕಳಿಸಿದನು. ಆದುದರಿಂದ ಗೃಹಸ್ಥನಾದರೂ, ನಿರ್ವಿಕಾರ ಚಿತ್ತನಾದರೆ, ಮುಕ್ತನಾಗುವನೆಂದು ತಿಳಿ!

ಧರ್ಮರಾಜ! ಈಗ ನಿನಗೆ ಶುಕಮುನಿಯ ಪಾವನ ಚರಿತವನ್ನು ನಿರೂಪಿಸುವೆನು: ಶ್ರೀಶಂಕರನು ಬಲುತಪ ಮಾಡಿ ಅಚ್ಯುತನನ್ನು ಮೆಚ್ಚಿಸಿ, ಆತನಿಗೆ ಮಗನಾಗುವಂತೆ ವರ ಪಡೆದನು. ವೇದವ್ಯಾಸದೇವನಿಗೆ ಅರಣೀಮಥನಕಾಲದಲ್ಲಿ, ಶುಕರೂಪಿಣೀ ಘೃತಾಚೀದರ್ಶನ ವ್ಯಾಜದಿಂದ ಅವತರಿಸಿದ ಶುಕನು, "ತಂದೆ! ನನಗೆ ಶ್ರೇಯಸ್ಸನ್ನು ಪೇಳು!" ಎಂದು ಪ್ರಾರ್ಥಿಸಿದನು. ಶ್ರೀವ್ಯಾಸನಿಂತೆಂದನು: "ಮಗನೇ! ಇಂದ್ರಿಯಗಳನ್ನು ಮನವನ್ನು ನಿಗ್ರಹಿಸು! ದುಷ್ಟವಿಷಯಗಳತ್ತ ಅವು ಓಡದಂತೆ ಮಾಡು! ಅಕ್ರೋಧ, ಸತ್ಯ, ಶಮ, ಆರ್ಜವ, ತಪಸ್ಸು, ದಮ, ಅಹಿಂಸೆ– ಇವು ಧರ್ಮದ ವಿವಿಧ ರೂಪಗಳು. ಅದನ್ನು

ಪಾಲಿಸು ! ಹಸಿವೆ ತೃಷೆಗಳಿಗೆ ದಾಸನಾಗಬೇಡ ! ಮಿತಹಿತ ವನ್ಯಾಹಾರನಾಗು ! ದಿನದಿನವೂ ಜೀವನಧಾರೆಯು ಹರಿದು, ಶರೀರ ಪಾತ್ರೆಯು ಶೀರ್ಣವು ಜೀರ್ಣವು ಆಗುತ್ತಿದೆ. ಕಣ್ತೆರೆದು ನೋಡು ! ಕಾಲಕ್ಕೆ ಎದುರಿಲ್ಲ ! ಮೃತ್ಯುವಿಗೆ ಔಷಧವಿಲ್ಲ ! ಮಾಂಸರಕ್ತಾದಿ ಧಾತು ನಿರ್ಮಿತ ಶರೀರವನ್ನು ರಸಾಯನಾದಿಗಳಿಂದ ಸಾಯದಂತೆ ನಿಲ್ಲಿಸಬೇಕೆಂಬುವರು ಅವಿವೇಕಿಗಳು, ನಾಸ್ತಿಕರು, ರಾಕ್ಷಸರು ಎಂದು ತಿಳಿ ! ಧರ್ಮಮಾರ್ಗವನ್ನು ಬಿಟ್ಟು, ಅನ್ಯಾಯ ಮಾರ್ಗದಿ ಪೋಗುವದು ಆಗ್ಗೆ ಹಿತ ವೆನಿಸುವುದು; ಆದರೆ ಕೊನೆಗೆ ಆಪತ್ತಿಗೆ, ಮೃತ್ಯುವಿಗೆ, ತುತ್ತಾಗಬೇಕಾಗುವುದು. ಕಂಡ ಕಾಮಿತಗಳನ್ನು ಬೇಡಿ, ಕಾಮಿನಿಯರ ಹಿಂದೆ ತಿರುಗುವ ಮನುಜಕುರಿಯನ್ನು ಮೃತ್ಯುವ್ಯಾಘ್ರವು ನುಂಗಿಬಿಡುವುದು. ಶುಕ ! ಮನುಜ ಜನ್ಮವು ಅತಿದುರ್ಲಭವು. ವಿಪ್ರತ್ವವು ದುರ್ಲಭತರವು ; ವಿಷ್ಣು ಭಕ್ತಿಯು ದುರ್ಲಭತಮವು. ವಿಪ್ರಶರೀರವು ಕ್ಷುದ್ರಕಾಮ ಸುಖಗಳಿಗಾಗಿ ಬಂದುದಲ್ಲ ! ತಪಸ್ಸನ್ನಾಚರಿಸಿ, ಇಂದ್ರಿಯಗಳನ್ನು ಜಯಿಸಿ, ಬ್ರಹ್ಮವಿಚಾರವನ್ನು ಮಾಡಿ, ಮುಕ್ತಿಯ ಅನಂತ ಸುಖವನ್ನು ಪಡೆಯಲು ಬಂದುದಾಗಿದೆ. ದಾರಾಪುತ್ರಾದಿ ಬಂಧುಗಳು ಶರೀರದಿಂದ, ಅರ್ಥದಿಂದ ಬಂಧುಗಳಾಗಲಿ ಶ್ರೀಶನಂತೆ ಅನಿಮಿತ್ತ ಬಂಧುಗಳಲ್ಲ. ತಾನು ಸತ್ತರೆ ಯಾರೂ ಹಿಂದೆ ಬಾರರು; ಧನಾದಿಗಳೂ ಬಾರವು. ಜನನದಾದಿಯಾಗಿ ಮೃತ್ಯವು ಬೆನ್ನಹಿಂದೆಯೇ ಕಾದು ಬರುತ್ತಿದೆ. ಆದುದರಿಂದ ಬೇಗ ಪರಲೋಕಹಿತಕ್ಕಾಗಿ, ಧರ್ಮವನ್ನು ಆಚರಿಸಬೇಕು.

ತಪೋವನದಲ್ಲಿ ಹುಟ್ಟಿ, ಬೆಳೆದು, ಅಲ್ಲೇ ಸತ್ತರೆ ಅದರಿಂದ ಮುಕ್ತಿ ಯಾಗದು ; ಅಹಂ ಮಮಕಾರಗಳಿಂದ ಪುಟ್ಟುವ ರಾಗದ್ವೇಷಗಳನ್ನು ಪರಿತ್ಯಜಿಸಿದ ಗೃಹಸ್ಥನೂ ಮುಕ್ತನಾಗುವನು. ಒಂದು ಜನುಮದ ದಾರಾಪುತ್ರ ಸಂಬಂಧವು ಅಶಾಶ್ವತವಾಗಿದೆ ; ಶಾಶ್ವತವಾಗಿದೆ ಶ್ರೀಶನ ದಾಸಭಾವವು ; ಜೀವನು ಶ್ರೀಶನವನು ಮತ್ತೊಬ್ಬರವನಲ್ಲ. ದಾನ ಭೋಗಗಳಿಗಲ್ಲದ ಧನವೇಕೆ ? ಶಿಷ್ಟಪಾಲನ ದುಷ್ಟ ಶಾಸನಗಳಿಗಲ್ಲದ ಬಲ ಶೌರ್‍ಯಗಳೇಕೆ? ಧರ್‍ಮಜ್ಞಾನಗಳಿಗಲ್ಲದ ಜೀವನವೇಕೆ? ಆದುದರಿಂದ ಶುಕ! ಶ್ರೀಹರಿಯನ್ನು ಸರಿಯಾಗಿ ತಿಳಿದು ಭಜಿಸು! ಮಿಕ್ಕೆಲ್ಲವನ್ನೂ ಅಸಾರವೆಂದು ತಿಳಿದು ಪರಿವರ್ಜಿಸು.

ಶುಕನು ಆ ಮಾತಿನಂತೆ ನಡೆದು ಶ್ರೀಶಾಪರೋಕ್ಷವನ್ನು ಪೊಂದಿದನು. ಆತನ ಜನನ ಪ್ರಕಾರವನ್ನು ವರ್ಣಿಸುವೆನು, ಕೇಳು! ಪಶುಪತಿಯು ಪಾರ್ವತಿಯೊಡಗೂಡಿ ಮೇರುತಟದ ಕರ್ಣಿಕಾರವನದಲ್ಲಿ ವಾಸವಾಗಿದ್ದನು. ಆತನು ಒಂದು ಸಲ ಗೋವಿಂದನ ನಂದನನಾಗಬೇಕೆಂದು ಕೋರಿ ತೀವ್ರ ತಪವನ್ನಾಚರಿಸಿದನು. ಶ್ರೀನಾರಾಯಣನು ಮೊಮ್ಮಗನು ಮಗನಾಗಬೇಕೆಂದು ಮಾಡುವ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ, "ಶ್ರೀವೇದವ್ಯಾಸರೂಪದಿಂದಲಿರುವ ನನಗೆ ಮಗನಾಗುವೆ! ಶುಕನೆಂದು ಲೋಕಗಳಲ್ಲಿ ಖ್ಯಾತನಾಗುವೆ! " ಎಂದು ವರವಿತ್ತನು.

ಶ್ರೀವೇದವ್ಯಾಸನೊಂದು ದಿನ ಅರಣೀ ಮಥನವನ್ನು ಮಾಡುತ್ತಿದ್ದನು. ಆಗ

ಘೃತಾಚಿಯು ಆತನ ಲೋಚನಗೋಚರಳಾದಳು. ಆಕೆಗೆ ಬ್ರಹ್ಮದೇವನಿತ್ತ ವರವನ್ನು ಸತ್ಯಮಾಡಲು ಶ್ರೀವ್ಯಾಸನು, ಆಕೆಯನ್ನು ಮೋಹಿಸಿದಂತೆ ನಟಿಸಿದನು. ಘೃತಾಚಿಯು ಶುಕೀರೂಪದಿಂದ ಶ್ರೀವ್ಯಾಸದೇವನ ಕರುಣೆಗೆ ಪಾತ್ರಳಾದಳು. ನಿರ್ವಿಕಾರನಾದ ಶ್ರೀದೇವನ ಅರಣಿಗತವಾದ ವಹ್ನಿಯಿಂದ, ಅಗ್ನಿಸಮತೇಜನೂ, ಮುನಿರಾಜನೂ ಆದ ಶುಕನು ರುದ್ರಾಂಶದಿಂದ ಪುಟ್ಟಿಬಂದನು.

ಮಂದಾಕಿನಿಯು ಸದ್ಯೋಜಾತನಿಗೆ ಮಂಗಳ ಸ್ನಾನಮಾಡಿ ಹರಿದಳು. ಆಕಾಶದಿಂದ ಕೃಷ್ಣಾಜಿನದಂಡಕಾಷ್ಠಗಳು ಶುಕನ ಸಮೀಪದಿ ಬಂದು ಬಿದ್ದವು. ದೇವತೆಗಳು ದುಂದುಭಿಗಳನ್ನು ಬಾರಿಸಿ, ಪುಷ್ಪವೃಷ್ಟಿಯನ್ನು ಸುರಿದರು. ಗಂಧರ್ವರು ಪಾಡಿದರು. ಅಪ್ಸರೆಯರಾಡಿದರು. ಇಂದ್ರನು ಕಮಂಡಲುವನ್ನಿತ್ತನು, ಶಿವನು ಭಿಕ್ಷಾಪಾತ್ರೆಯನ್ನು ಕೊಟ್ಟನು. ಶ್ರೀವೇದವ್ಯಾಸದಿಂದ ಉಪನೀತನಾದ ಶುಕನು, ಸಕಲ ವೇದಾದಿ ಶಾಸ್ತ್ರಗಳನ್ನು ತಂದೆಯಿಂದ ಪಠಿಸಿದನು. ಲೋಕಸಂಗ್ರಹಕ್ಕೆಂದು ಬೃಹಸ್ಪತಿಯಲ್ಲಿ ವೇದಾಂಗ ನೀತಿಧರ್ಮ ಶಾಸ್ತ್ರಗಳನ್ನು ಕಲಿತನು. ಶ್ರೀವ್ಯಾಸನು ವಿಶುದ್ಧವರ್ತನನಾದ ಪುತ್ರನನ್ನು ಸಾಂಖ್ಯಯೋಗ ಬ್ರಹ್ಮವಿದ್ಯೆಗಳಲ್ಲಿ ನಿಷ್ಣಾತನನ್ನು ಮಾಡಿದನು. ಮೋಕ್ಷವನ್ನು ಪಡೆಯುವುದೆಂತೆಂದು ಕೇಳಿದ ವೈರಾಗ್ಯ ನಿಧಿಗೆ ಶ್ರೀವ್ಯಾಸನು 'ಜನಕ ರಾಜನನ್ನು ಕೇಳಿ ತಿಳಿ!' ಎಂದಾಜ್ಞಾಪಿಸಿ, ಕಳಿಸಿದನು.

ಶ್ರೀಶುಕನು ಪಾದಚಾರಿಯಾಗಿ ಜನಕನನ್ನು ಕಾಣಬಂದನು. ಆಕಾಶಮಾರ್ಗದಿ ಬರುವ ಶಕ್ತಿಯಿದ್ದರೂ, ನಿರಹಂಭಾವದಿಂದ ನಡೆದು ಬಂದ ಮುನಿನಂದನನನ್ನು ದ್ವಾರಪಾಲರು ತಡೆದು ನಿಲ್ಲಿಸಿದರು. ಶುಕನು ಸುಮ್ಮನೆ ನಿರ್ವಿಕಾರನಾಗಿದ್ದನು. ಆಗ ಅವರು ಆತನನ್ನು ಒಳಗೆ ಬಿಟ್ಟರು. ಮುಂದೆ ವೇತ್ರಧರರಾದ ಪ್ರತಿಹಾರಿಗಳು ತಡೆದರು. ಶುಕನು ಸಿಟ್ಟಾಗಲಿಲ್ಲ. ಆಗ ರಾಜನು ಶುಕನ ಭಾವಶುದ್ಧಿಯನ್ನು ಮೆಚ್ಚಿ, ಪುರೋಹಿತಾಮಾತ್ಯರಿಂದ ಕೂಡಿ ಬಂದು, ಯಥಾರ್ಹವಾಗಿ ಪೂಜಿಸಿದನು. ಕಂಚನಾಸನದಿ ಕೂಡಿಸಿ, ಅರ್ಘ್ಯಪಾದ್ಯಗಳನ್ನಿತ್ತನು. ಬಂದ ಕಾರಣವನ್ನು ಕೇಳಿದ ರಾಜವರನಿಗೆ ಮುನಿವರನು "ಜನಕರಾಜನನ್ನು ಕಂಡು, ಮೋಕ್ಷಸಾಧನವನ್ನು ತಿಳಿಯಲು ಬಂದೆ"ನೆಂದನು.

ಜನಕನು ಶುಕನಿಗೆ ನಮಿಸಿ, ಆದರದಿಂದ ಇಂತು ವಿಜ್ಞಾಪಿಸಿದನು: 'ಮಹಾನುಭಾವ! ನಿನಗೆ ಪೇಳುವ ಯೋಗ್ಯತೆ ಎನಗಿಲ್ಲ. ಆದರೆ ಆಜ್ಞೆಯನ್ನು ಪಾಲಿಸಬೇಕಲ್ಲವೇ? ನನಗೆ ತಿಳಿದುದನ್ನು ಅರಿಕೆ ಮಾಡುವೆನು. 'ವಿಪ್ರನು ಉಪನೀತನಾಗಿ ವೇದವನ್ನು ಓದಬೇಕು. ಮುಂದೆ ಗೃಹಸ್ಥನಾಗಿ ಸತ್ಸಂತಾನವನ್ನು ಪಡೆಯಬೇಕು. ಯಜ್ಞಗಳನ್ನೂ ಮಾಡಬೇಕು. ಆಮೇಲೆ ವಾನಪ್ರಸ್ಥನಾಗಿ ವನದಲ್ಲಿ ರಾಗದ್ವೇಷ ವಿರಹಿತನಾಗಿರಬೇಕು. ಅನಂತರದಲ್ಲಿ ಸರ್ವಭಯದಾನವನ್ನಿತ್ತು ಸನ್ಯಾಸಿಯಾಗಿ, ನಿರಂತರ ವಿಷ್ಣು ಕಲ್ಯಾಣಗುಣ ಚಿಂತನ ತತ್ಪರನಾಗಿರಬೇಕು. ಇಂತು ನಡೆದ ಧೀರನು ಮುಕ್ತನಾಗುವನು.' ಆ ಮಾತಿಗೆ ಶುಕನು 'ರಾಜನ್! ಬ್ರಹ್ಮಚಾರಿಗೆ ಜ್ಞಾನ

ವೈರಾಗ್ಯಗಳು ಪರಿಪಕ್ವವಾದರೆ, ಮಧ್ಯಾಶ್ರಮಗಳನ್ನು ಕ್ರಮವಾಗಿ ನಡೆಸಲೇಬೇಕೆಂದು ವೇದಗಳು ಹೇಳುವವೇ ?' ಎಂದು ಕೇಳಿದನು.

ಜನಕನು, 'ಮುನೀಂದ್ರ ! ಸಾಮಾನ್ಯವಾಗಿ ಮಾನವರು ನಡೆಸಬೇಕಾದ ಆಶ್ರಮ ಕ್ರಮವನ್ನು ನಾನು ತಿಳಿಸಿದೆನು. ಜ್ಞಾನನಿರೂಢಚಿತ್ತನಿಗೆ ಗೃಹಸ್ಥನಾಗದೆ, ವಾನಪ್ರಸ್ಥನಾಗದೆ, ಸನ್ಯಾಸಿಯಾಗಲು ಬರುವುದು. ಎಂದು ವಿರಕ್ತನೋ ಅಂದೇ ಸನ್ಯಸಿಸಬಹುದೆಂದು ವೇದಗಳು ಹೇಳುತ್ತಿವೆ. ಶ್ರೀಶನು ಹೃದಯದಲ್ಲೇ ಇರುವನು. ಅವನನ್ನು ತನ್ನಲ್ಲಿಯೂ, ಸರ್ವಭೂತಗಳಲ್ಲಿಯೂ ಕಂಡವನು ಆಶ್ರಮವಾವುದಾದರೇನು, ಮುಕ್ತನೆನಿಸುವನು. ಅವನಿಗೆ ಶ್ರೀಹರಿಪ್ರೀತಿಯ ಹೊರತನ್ಯ ಕಾಮಿತಗಳು ಇರುವುದಿಲ್ಲ. ಅವನು ಯಾರಿಗೂ ಅಂಜದೆ, ಯಾರನ್ನೂ ಅಂಜಿಸದೆ, ಶಾಂತನಿರ್ವಿಕಾರನಾಗಿರುವನು. ಸುಖದುಃಖಾದಿ ದ್ವಂದ್ವಗಳಿಂದ ಆಗುವ ಉದ್ವೇಗೋದ್ರೇಕಗಳವನಿಗಿಲ್ಲ. ಕೂರ್ಮವು ತನ್ನ ಅಂಗಗಳನ್ನಂತೆ, ಅವನು ತನ್ನ ಇಂದ್ರಿಯಗಳನ್ನು ದುಷ್ಟವಿಷಯಗಳಿಂದ, ಅನಾಯಾಸವಾಗಿ, ಸೆಳೆದು, ಒಳಗಿಡುವನು. ಅಂತಹ ಮಹಾನುಭಾವರಲ್ಲಿ ನೀನೂ ಒಬ್ಬನಿರುವೆ ! ಜ್ಞಾನವಿಜ್ಞಾನಖನಿಯಾದ ನಿನ್ನ ದರ್ಶನದಿಂದ ನಾನು ಪುನೀತನಾದೆನು' ಎಂದು ನಿರೂಪಿಸಿ, ಆತನನ್ನು ಪೂಜಿಸಿ ಕಳಿಸಿದನು.

ಅಲ್ಲಿಂದ ತೆರಳಿ ಶುಕಾಚಾರ್ಯನು ತಿಶಿರಶೈಲವನ್ನು ಸೇರಿ, ತಂದೆಯನ್ನು ಕಂಡನು. ಪೈಲ ವೈಶಂಪಾಯನ ಜೈಮಿನಿ ಸುಮಂತು ಪ್ರಮುಖ ಶಿಷ್ಯವರರಿಂದ ಕೂಡಿ ಮೆರೆವ ವೇದಪತಿಯನ್ನು ಕಂಡು, ಸಾಷ್ಟಾಂಗವೆರಗಿ, ಜನಕನ ಮಾತನ್ನು ಅನುವದಿಸಿದನು. ಶ್ರೀವ್ಯಾಸನು ಅನುಗ್ರಹದಿಂದ ಕೊಟ್ಟ ವೇದಾದಿ ದಿವ್ಯಜ್ಞಾನದಿಂದ ಬೆಳಗುವ ಪೈಲಾದಿ ಶಿಷ್ಯರು ಶ್ರೀಶನನುಜ್ಞೆ ಪಡೆದು, ತಮ್ಮ ವೇದಗಳನ್ನು ತಂತಮ್ಮ ಶಿಷ್ಯರಿಗೆ ಉಪದೇಶಿಸಿ, ಧನ್ಯರಾದರು. ಒಂದು ದಿನ ನಾರದನ ಪ್ರಾರ್ಥನೆಯಂತೆ ಶುಕವ್ಯಾಸರು ಘನಗಂಭೀರ ಘೋಷದಿಂದ ವೇದಾಧ್ಯಯನವನ್ನು ಮಾಡುತ್ತಾ, ಗಾಳಿಯು ಬೀಸುವುದನ್ನು ಕಂಡು, ಅನಧ್ಯಯನವೆಂದು ನಿಲ್ಲಿಸಿದರು. ಆ ಝುಂಝಾವಾತವೆಂತು ಬಂತೆಂದು ಕೇಳಿದ ಪುತ್ರನಿಗೆ ಶ್ರೀವ್ಯಾಸನು 'ದೇವಯಾನಾಧಿಪನಾದ ಸೂರ್ಯನು, ಪಿತೃಯಾನಾಧಿಪನಾದ ಚಂದ್ರನು ಪರ್ಯಾಯದಿಂದ ಊರ್ಧ್ವಾಧೋಗಮನರಾಗಿ ವರ್ತಿಸುವಾಗ ಪವನಾಲಂಬರಾಗಿ ಅಂತು ಚಲಿಸುವರು. ಪವನ ಪರಾಕ್ರಮವನ್ನು ಕೇಳು! ಸಮಾನನು ದೇವಸಂಭವನು. ಅವನಿಂದ ಕ್ರಮವಾಗಿ ಉದಾನ, ವ್ಯಾನ, ಅಪಾನ, ಪ್ರಾಣರು ಜನಿಸುವರು. ಪವನಮುಖ್ಯನ ಆಜ್ಞೆಯಿಂದ ಇವರೈದು ಪ್ರಾಣರು ಜಗದಲ್ಲಿ ವ್ಯಾಪ್ತರಾಗಿ, ಜಗಚ್ಚೇಷ್ಟಕರಾಗಿರುವರು. ಮುಖ್ಯಪ್ರಾಣನ ಅಂತರ್ಯಾಮಿಯಾದ ಶ್ರೀಹರಿಯಿಂದ ಎಲ್ಲ ಜಗದ್ವ್ಯಾಪಾರವೂ ನಡೆಯುವುದು. ಜಗವೆಲ್ಲವೂ ಮುಖ್ಯಪ್ರಾಣಾಧೀನವಾಗಿದೆ. ಮುಖ್ಯಪ್ರಾಣನು ಶ್ರೀಪತಿಯ ವಶನಾಗಿರುವನು. ಶ್ರೀಶನು ಅನ್ಯವಶನಲ್ಲ. ಅಂತಹ ಮುಖ್ಯಪ್ರಾಣನಲ್ಲಿರುವ ಭಗವಂತನನ್ನು ನೀನು ಉಪಾಸಿಸು! ನಿನಗೆ ಶ್ರೇಯಸ್ಸಾಗುವುದು. ಮುಖ್ಯಪ್ರಾಣನ ದಾಸರಾದ ಮತ್ತೇಳು ಪ್ರಾಣರು- ಪ್ರವಹ, ಆವಹ, ಉದ್ವಹ, ಸಂವಹ, ವಿವಹ, ಉಪವಹ, ಪರಾವಹರೆಂಬವರು

ಅಖಿಲ ಭುವನಗಳಲ್ಲಿ ಅವ್ಯಾಹತಗತಿಯಿಂದ ಸಂಚರಿಸುವರು. ಒಂದೊಂದು ಸಲ ಶ್ರೀವಿಷ್ಣುವಿನ ನಿಶ್ವಾಸವೇಗವು ಹೆಚ್ಚಾಗುವುದು. ಆಗ ಪವನಗಳ ಗತಿಯಲ್ಲಿ ಪ್ರವರ್ತನ ನಿವರ್ತನಗಳಾಗುವವು ; ಝುಂಝಾ ಮಾರುತಕ್ಕೂ ಅದೇ ಕಾರಣವಾಗಿದೆ. ಆಗ ವೇದಾಧ್ಯಯನವು ಸಲ್ಲದು' ಎಂದನು.

ಇಂತು ನುಡಿದು ಶ್ರೀವ್ಯಾಸನು ದೇವನದೀ ಸ್ನಾನಕ್ಕೆಂದು ತೆರಳಿದನು. ಝುಂಝಾಮಾರುತವು ನಿಂತಿತು. ಶ್ರೀಶುಕನು ಮತ್ತೆ ಅಧ್ಯಯನರತನಾದನು. ಅದನ್ನು ಕೇಳಿ, ಮನದಿ ಮೆಚ್ಚಿ ನಾರದನು, 'ಮುನೀಂದ್ರ ! ಲೋಕಹಿತವೆಂತಾಗುವುದೆಂದು ಸನತ್ಕುಮಾರನಾಡಿದ ಮಾತುಗಳು ನಿನ್ನನ್ನು ನೋಡಿ, ನನ್ನ ಮನಃಪಟಲದಲ್ಲಿ ಮೂಡುತ್ತಿವೆ ಕೇಳು! ಸತ್ಯ ತಪಗಳೇ ಕಣ್ಣುಗಳು; ವಿದ್ಯೆಯೇ ಸುಖವು; ರಾಗದ್ವೇಷಗಳೇ ದುಃಖವು, ಮುಕ್ತಿಕಾಂಕ್ಷಾರಾಹಿತ್ಯವೇ ಪುನರ್ಜನ್ಮವು. ಕಾಮಕ್ರೋಧಗಳೇ ಶತ್ರುಗಳು, ಅಪರಿಗ್ರಹವನ್ನು ಸರ್ವ ದುಷ್ಟ ಕಾರ್ಯಾನಾರಂಭವನ್ನು ಅಭ್ಯಸಿಸಿದ ನರನು ಮೋಕ್ಷ ಮಾರ್ಗದಲ್ಲಿರುವನು. ಭೂತಗಳ ವಿಷಯಾಸಕ್ತಿಯನ್ನು ಕಂಡು, ಅಂತಹ ಹೇಯ ವಿಷಯಗಳಲ್ಲಿ ವಿರಕ್ತನಾದವನು. ಗುರು ಸೇವೆಯಿಂದ ಜ್ಞಾನವನ್ನು ಪಡೆದು, ಜನನ ಮರಣ ಚಕ್ರದಿಂದ ತಪ್ಪಿಸಿಕೊಂಡು, ಮುಕ್ತನಾಗುವನು. ಅಹಿಂಸೆ, ಅಚಾಪಲ್ಯ, ಇಂದ್ರಿಯ ಜಯ, ನೈರಾಶ್ಯವೆಂಬ ನಾಲ್ಕು ಗುಣಗಳು ಮುಕ್ತಿಸೋಪಾನಗಳು.

ಕೆಸರಲ್ಲಿ ಸಿಕ್ಕಿಬಿದ್ದ ಆನೆಯಂತೆ, ಬಲೆಯಲ್ಲಿ ಬಿದ್ದ ಜಿಂಕೆಯಂತೆ, ವಿಷಯ ಜಾಲದಲ್ಲಿ ಮನಮಾಡಿದ ಮಾನವನು ಮುಕ್ತಿಮಾರ್ಗ ದೂರನಾಗುವನು. ಧರ್ಮಫಲವು ಬಾಧಕವು. ಸಂಕಲ್ಪವರ್ಜನದಿಂದ ಅದನ್ನು ಬಿಡಬೇಕು. ಅಧರ್ಮವನ್ನು ಅಹಿಂಸಾರತಿಯಿಂದ ಬಿಡಬೇಕು. ಇಂತು ಧರ್ಮಾಧರ್ಮಗಳ ಬಂಧದಿಂದ ರಹಿತನಾದ ಜ್ಞಾನಿಯು ಜನ್ಮಾಂತರ ಕಾರಣವನ್ನು ನಾಶಗೊಳಿಸಿ, ಮುಕ್ತನಾಗುವನು. ನಗರದಲ್ಲಿರುವ ನರರ ದುಃಖಗಳನ್ನೆಲ್ಲ ನಿವಾರಿಸಲು ಹೆಣಗುವ ದಡ್ಡನಂತೆ, ದೇಹದ ಎಲ್ಲ ಇಂದ್ರಿಯಗಳನ್ನು ಸುಖಪಡಿಸಲು ಹೆಣಗುವನು. ನಿತ್ಯದುಃಖ ಭಾಜನನಾಗುವನು. ಶುಕಮುನೀ! ನೀನು ಸನತ್ಕುಮಾರನು ನುಡಿದಿರುವ ಲಕ್ಷಣಗಳಿಗೆ ಲಕ್ಷ್ಯನಾಗಿರುವೆ! ನಿನ್ನನ್ನು ನೋಡಿ ಸಂತಸವಾಯಿತು" ಇಂತು ನುಡಿದು, ನಾರದನು ತೆರಳಿದ ಮೇಲೆ, ಶುಕನು ತನ್ನ ತಂದೆಯು ಬರುತ್ತಿರುವುದನ್ನು ನೋಡಿ, ಎದ್ದು ನಿಂತು, ದಂಡಾಕಾರವಾಗಿ ನಮಿಸಿದನು.

'ದೇವ ! ವಿಶೇಷಾನುಗ್ರಹವನ್ನು ತೋರಿ, ಉದ್ಧರಿಸಿದೆ ! ವಿಗತ ಸಂಗನಾದೆನು. ವಿಮಲಯೋಗ ಫಲವು ಕರಗತವಾಯಿತು. ಇನ್ನು ಅವಧೂತನಾಗಿ, ನಿನ್ನ ಚರಣ ಕಮಲಧ್ಯಾನೈಕತತ್ಪರನಾಗಿ, ಮಿಕ್ಕೆಲ್ಲ ವ್ಯಾಪಾರವನ್ನು ಬಿಟ್ಟು ವಾಸಿಸುವೆನು. ಪ್ರಭೋ! ನನಗೆ ಅಪ್ಪಣೆ ಕೊಡು!' ಎಂದು ಪೇಳಿ, ತಂದೆಯನ್ನು ಬೀಳ್ಕೊಂಡ ಶುಕನು ಗರುತ್ಮಂತನಂತೆ ಹಾರಿ ಹೋದನು. ಅಲ್ಲಿದ್ದ ಮೃಗ, ಪಕ್ಷಿ, ನದೀ ಸರೋವರ ತರುಗುಲ್ಮಲತಾದಿ ಭೂತ ಜಾಲವನ್ನು 'ನಮ್ಮ ತಂದೆಯು ನನ್ನನ್ನು ಹುಡುಕುತ್ತಾ ಬರುವನು. ಪುತ್ರವಿರಹ ಕಾತರನಂತೆ "ಪುತ್ರಾ!" ಎಂದು ಕೂಗಿದಾಗ, ಆತನ

ವೈರಾಗ್ಯಗಳು ಪರಿಪಕ್ವವಾದರೆ, ಮಧ್ಯಾಶ್ರಮಗಳನ್ನು ಕ್ರಮವಾಗಿ ನಡೆಸಲೇಬೇಕೆಂದು ವೇದಗಳು ಪೇಳುವವೇ?' ಎಂದು ಕೇಳಿದನು.

ಜನಕನು, 'ಮುನೀಂದ್ರ! ಸಾಮಾನ್ಯವಾಗಿ ಮಾನವರು ನಡೆಸಬೇಕಾದ ಆಶ್ರಮ ಕ್ರಮವನ್ನು ನಾನು ತಿಳಿಸಿದೆನು. ಜ್ಞಾನನಿರೂಢಚಿತ್ತನಿಗೆ ಗೃಹಸ್ಥನಾಗದೆ, ವಾನಪ್ರಸ್ಥನಾಗದೆ, ಸನ್ಯಾಸಿಯಾಗಲು ಬರುವುದು. ಎಂದು ವಿರಕ್ತನೋ ಅಂದೇ ಸನ್ಯಸಿಸಬಹುದೆಂದು ವೇದಗಳು ಪೇಳುತ್ತಿವೆ. ಶ್ರೀಶನು ಹೃದಯದಲ್ಲೇ ಇರುವನು. ಅವನನ್ನು ತನ್ನಲ್ಲಿಯೂ, ಸರ್ವಭೂತಗಳಲ್ಲಿಯೂ ಕಂಡವನು ಆಶ್ರಮವಾವುದಾದರೇನು, ಮುಕ್ತನೆನಿಸುವನು. ಅವನಿಗೆ ಶ್ರೀಹರಿಪ್ರೀತಿಯ ಹೊರತನ್ಯ ಕಾಮಿತಗಳು ಇರುವುದಿಲ್ಲ. ಅವನು ಯಾರಿಗೂ ಅಂಜದೆ, ಯಾರನ್ನೂ ಅಂಜಿಸದೆ, ಶಾಂತನಿರ್ವಿಕಾರನಾಗಿರುವನು. ಸುಖದುಃಖಾದಿ ದ್ವಂದ್ವಗಳಿಂದ ಆಗುವ ಉದ್ವೇಗೋದ್ರೇಕಗಳವನಿಗಿಲ್ಲ. ಕೂರ್ಮವು ತನ್ನ ಅಂಗಗಳನ್ನಂತೆ, ಅವನು ತನ್ನ ಇಂದ್ರಿಯಗಳನ್ನು ದುಷ್ಟವಿಷಯಗಳಿಂದ, ಅನಾಯಾಸವಾಗಿ, ಸೆಳೆದು, ಒಳಗಿಡುವನು. ಅಂತಹ ಮಹಾನುಭಾವರಲ್ಲಿ ನೀನೂ ಒಬ್ಬನಿರುವೆ! ಜ್ಞಾನವಿಜ್ಞಾನಖನಿಯಾದ ನಿನ್ನ ದರ್ಶನದಿಂದ ನಾನು ಪುನೀತನಾದೆನು' ಎಂದು ನಿರೂಪಿಸಿ, ಆತನನ್ನು ಪೂಜಿಸಿ ಕಳಿಸಿದನು.

ಅಲ್ಲಿಂದ ತೆರಳಿ ಶುಕಾಚಾರ್ಯನು ತ್ರಿಶಿರಶೈಲವನ್ನು ಸೇರಿ, ತಂದೆಯನ್ನು ಕಂಡನು. ಪೈಲ ವೈಶಂಪಾಯನ ಜೈಮಿನಿ ಸುಮಂತು ಪ್ರಮುಖ ಶಿಷ್ಯವರರಿಂದ ಕೂಡಿ ಮೆರೆವ ವೇದಪತಿಯನ್ನು ಕಂಡು, ಸಾಷ್ಟಾಂಗವೆರಗಿ, ಜನಕನ ಮಾತನ್ನು ಅನುವದಿಸಿದನು. ಶ್ರೀವ್ಯಾಸನು ಅನುಗ್ರಹದಿಂದ ಕೊಟ್ಟ ವೇದಾದಿ ದಿವ್ಯಜ್ಞಾನದಿಂದ ಬೆಳಗುವ ಪೈಲಾದಿ ಶಿಷ್ಯರು ಶ್ರೀಶನನುಜ್ಞೆ ಪಡೆದು, ತಮ್ಮ ವೇದಗಳನ್ನು ತಂತಮ್ಮ ಶಿಷ್ಯರಿಗೆ ಉಪದೇಶಿಸಿ, ಧನ್ಯರಾದರು. ಒಂದು ದಿನ ನಾರದನ ಪ್ರಾರ್ಥನೆಯಂತೆ ಶುಕವ್ಯಾಸರು ಘನಗಂಭೀರ ಘೋಷದಿಂದ ವೇದಾಧ್ಯಯನವನ್ನು ಮಾಡುತ್ತಾ, ಗಾಳಿಯು ಬೀಸುವುದನ್ನು ಕಂಡು, ಅನಧ್ಯಯನವೆಂದು ನಿಲ್ಲಿಸಿದರು. ಆ ಝಂಝಾವಾತವೆಂತು ಬಂತೆಂದು ಕೇಳಿದ ಪುತ್ರನಿಗೆ ಶ್ರೀವ್ಯಾಸನು 'ದೇವಯಾನಾಧಿಪನಾದ ಸೂರ್ಯನು, ಪಿತೃಯಾನಾಧಿಪನಾದ ಚಂದ್ರನು ಪರ್ಯಾಯದಿಂದ ಊರ್ಧ್ವಾಧೋಗಮನರಾಗಿ ವರ್ತಿಸುವಾಗ ಪವನಾಲಂಬರಾಗಿ ಅಂತು ಚಲಿಸುವರು. ಪವನ ಪರಾಕ್ರಮವನ್ನು ಕೇಳು! ಸಮಾನನು ದೇವಸಂಭವನು. ಅವನಿಂದ ಕ್ರಮವಾಗಿ ಉದಾನ, ವ್ಯಾನ, ಅಪಾನ, ಪ್ರಾಣರು ಜನಿಸುವರು. ಪವನಮುಖ್ಯನ ಆಜ್ಞೆಯಿಂದ ಇವರೈದು ಪ್ರಾಣರು ಜಗದಲ್ಲಿ ವ್ಯಾಪ್ತರಾಗಿ, ಜಗಚ್ಚೇಷ್ಟಕರಾಗಿರುವರು. ಮುಖ್ಯಪ್ರಾಣನ ಅಂತರ್ಯಾಮಿಯಾದ ಶ್ರೀಹರಿಯಿಂದ ಎಲ್ಲ ಜಗದ್ವ್ಯಾಪಾರವೂ ನಡೆಯುವುದು. ಜಗವೆಲ್ಲವೂ ಮುಖ್ಯಪ್ರಾಣಾಧೀನವಾಗಿದೆ. ಮುಖ್ಯಪ್ರಾಣನು ಶ್ರೀಪತಿಯ ವಶನಾಗಿರುವನು. ಶ್ರೀಶನು ಅನ್ಯವಶನಲ್ಲ. ಅಂತಹ ಮುಖ್ಯಪ್ರಾಣನಲ್ಲಿರುವ ಭಗವಂತನನ್ನು ನೀನು ಉಪಾಸಿಸು! ನಿನಗೆ ಶ್ರೇಯಸ್ಸಾಗುವುದು. ಮುಖ್ಯಪ್ರಾಣನ ದಾಸರಾದ ಮತ್ತೇಳು ಪ್ರಾಣರು- ಪ್ರವಹ, ಆವಹ, ಉದ್ವಹ, ಸಂವಹ, ವಿವಹ, ಉಪವಹ, ಪರಾವಹರೆಂಬವರು

ಅಖಿಲ ಭುವನಗಳಲ್ಲಿ ಅವ್ಯಾಹತಗತಿಯಿಂದ ಸಂಚರಿಸುವರು. ಒಂದೊಂದು ಸಲ ಶ್ರೀವಿಷ್ಣುವಿನ ನಿಶ್ವಾಸವೇಗವು ಹೆಚ್ಚಾಗುವುದು. ಆಗ ಪವನಗಳ ಗತಿಯಲ್ಲಿ ಪ್ರವರ್ತನ ನಿವರ್ತನಗಳಾಗುವವು ; ಝುಂಝಾ ಮಾರುತಕ್ಕೂ ಅದೇ ಕಾರಣವಾಗಿದೆ. ಆಗ ವೇದಾಧ್ಯಯನವು ಸಲ್ಲದು' ಎಂದನು.

ಇಂತು ನುಡಿದು ಶ್ರೀವ್ಯಾಸನು ದೇವನದೀ ಸ್ನಾನಕ್ಕೆಂದು ತೆರಳಿದನು. ಝುಂಝಾಮಾರುತವು ನಿಂತಿತು. ಶ್ರೀಶುಕನು ಮತ್ತೆ ಅಧ್ಯಯನರತನಾದನು. ಅದನ್ನು ಕೇಳಿ, ಮನದಿ ಮೆಚ್ಚಿ ನಾರದನು, 'ಮುನೀಂದ್ರ ! ಲೋಕಹಿತವೆಂತಾಗುವುದೆಂದು ಸನತ್ಕುಮಾರನಾಡಿದ ಮಾತುಗಳು ನಿನ್ನನ್ನು ನೋಡಿ, ನನ್ನ ಮನಃಪಟಲದಲ್ಲಿ ಮೂಡುತ್ತಿವೆ ಕೇಳು! ಸತ್ಯ ತಪಗಳೇ ಕಣ್ಣುಗಳು; ವಿದ್ಯೆಯೇ ಸುಖವು; ರಾಗದ್ವೇಷಗಳೇ ದುಃಖವು, ಮುಕ್ತಿಕಾಂಕ್ಷಾರಾಹಿತ್ಯವೇ ಪುನರ್ಜನ್ಮವು. ಕಾಮಕ್ರೋಧಗಳೇ ಶತ್ರುಗಳು, ಅಪರಿಗ್ರಹವನ್ನು ಸರ್ವ ದುಷ್ಟ ಕಾರ್ಯಾನಾರಂಭವನ್ನು ಅಭ್ಯಸಿಸಿದ ನರನು ಮೋಕ್ಷ ಮಾರ್ಗದಲ್ಲಿರುವನು. ಭೂತಗಳ ವಿಷಯಾಸಕ್ತಿಯನ್ನು ಕಂಡು, ಅಂತಹ ಹೇಯ ವಿಷಯಗಳಲ್ಲಿ ವಿರಕ್ತನಾದವನು. ಗುರು ಸೇವೆಯಿಂದ ಜ್ಞಾನವನ್ನು ಪಡೆದು, ಜನನ ಮರಣ ಚಕ್ರದಿಂದ ತಪ್ಪಿಸಿಕೊಂಡು, ಮುಕ್ತನಾಗುವನು. ಅಹಿಂಸೆ, ಅಚಾಪಲ್ಯ, ಇಂದ್ರಿಯ ಜಯ, ನೈರಾಶ್ಯವೆಂಬ ನಾಲ್ಕು ಗುಣಗಳು ಮುಕ್ತಿಸೋಪಾನಗಳು.

ಕೆಸರಲ್ಲಿ ಸಿಕ್ಕಿಬಿದ್ದ ಆನೆಯಂತೆ, ಬಲೆಯಲ್ಲಿ ಬಿದ್ದ ಜಿಂಕೆಯಂತೆ, ವಿಷಯ ಜಾಲದಲ್ಲಿ ಮನಮಾಡಿದ ಮಾನವನು ಮುಕ್ತಿಮಾರ್ಗ ದೂರನಾಗುವನು. ಧರ್ಮಫಲವು ಬಾಧಕವು. ಸಂಕಲ್ಪವರ್ಜನದಿಂದ ಅದನ್ನು ಬಿಡಬೇಕು. ಅಧರ್ಮವನ್ನು ಅಹಿಂಸಾರತಿಯಿಂದ ಬಿಡಬೇಕು. ಇಂತು ಧರ್ಮಾಧರ್ಮಗಳ ಬಂಧದಿಂದ ರಹಿತನಾದ ಜ್ಞಾನಿಯು ಜನ್ಮಾಂತರ ಕಾರಣವನ್ನು ನಾಶಗೊಳಿಸಿ, ಮುಕ್ತನಾಗುವನು. ನಗರದಲ್ಲಿರುವ ನರರ ದುಃಖಗಳನ್ನೆಲ್ಲ ನಿವಾರಿಸಲು ಹೆಣಗುವ ದಡ್ಡನಂತೆ, ದೇಹದ ಎಲ್ಲ ಇಂದ್ರಿಯಗಳನ್ನು ಸುಖಪಡಿಸಲು ಹೆಣಗುವನು. ನಿತ್ಯದುಃಖ ಭಾಜನನಾಗುವನು. ಶುಕಮುನೀ! ನೀನು ಸನತ್ಕುಮಾರನು ನುಡಿದಿರುವ ಲಕ್ಷಣಗಳಿಗೆ ಲಕ್ಷ್ಯನಾಗಿರುವೆ! ನಿನ್ನನ್ನು ನೋಡಿ ಸಂತಸವಾಯಿತು" ಇಂತು ನುಡಿದು, ನಾರದನು ತೆರಳಿದ ಮೇಲೆ, ಶುಕನು ತನ್ನ ತಂದೆಯು ಬರುತ್ತಿರುವುದನ್ನು ನೋಡಿ, ಎದ್ದು ನಿಂತು, ದಂಡಾಕಾರವಾಗಿ ನಮಿಸಿದನು.

'ದೇವ ! ವಿಶೇಷಾನುಗ್ರಹವನ್ನು ತೋರಿ, ಉದ್ಧರಿಸಿದೆ ! ವಿಗತ ಸಂಗನಾದೆನು. ವಿಮಲಯೋಗ ಫಲವು ಕರಗತವಾಯಿತು. ಇನ್ನು ಅವಧೂತನಾಗಿ, ನಿನ್ನ ಚರಣ ಕಮಲಧ್ಯಾನೈಕತತ್ಪರನಾಗಿ, ಮಿಕ್ಕೆಲ್ಲ ವ್ಯಾಪಾರವನ್ನು ಬಿಟ್ಟು ವಾಸಿಸುವೆನು. ಪ್ರಭೋ! ನನಗೆ ಅಪ್ಪಣೆ ಕೊಡು!' ಎಂದು ಪೇಳಿ, ತಂದೆಯನ್ನು ಬೀಳ್ಕೊಂಡ ಶುಕನು ಗರುತ್ಮಂತನಂತೆ ಹಾರಿ ಹೋದನು. ಅಲ್ಲಿದ್ದ ಮೃಗ, ಪಕ್ಷಿ, ನದೀ ಸರೋವರ ತರುಗುಲ್ಮಲತಾದಿ ಭೂತ ಜಾಲವನ್ನು 'ನಮ್ಮ ತಂದೆಯು ನನ್ನನ್ನು ಹುಡುಕುತ್ತಾ ಬರುವನು. ಪುತ್ರವಿರಹ ಕಾತರನಂತೆ "ಪುತ್ರಾ !" ಎಂದು ಕೂಗಿದಾಗ, ಆತನ

ಧ್ವನಿಗೆ ನೀವೆಲ್ಲರೊಮ್ಮೆಗೇ ಪ್ರತಿಧ್ವನಿಯನ್ನಿತ್ತು 'ಓ' ಎಂದು ಉತ್ತರವನ್ನು ಕೊಡಿರಿ!' ಎಂದಾಜ್ಞಾಪಿಸಿ, ಶುಕನು ತ್ರಿಗುಣಾತೀತನು, ವೀತಶೋಕನು ಆಗಿ ಉತ್ತರ ದಿಕ್ಕಿಗೆ ತೆರಳಿ ಪೋದನು. ಆತನ ಯೋಗಸಿದ್ಧ ದೇಹವು ಪರ್ವತ ತರುಗುಲ್ಮಾದಿಗಳಲ್ಲಿಯು ಅಪ್ರತಿಹತವಾಗಿ ಹೋಗುತ್ತಿತ್ತು.

ಶ್ರೀಶುಕನು ಶಿಶಿರಗಿರಿಯ ಮಂದಾಕಿನಿಯ ತೀರದಲ್ಲಿ ಪೋಗುವಾಗ, ಅಲ್ಲಿ ಸಲಿಲಕೇಲೀಲೋಲರಾದ ಅಪ್ಸರೋನಾರಿಯರು- ತಾವು ನಗ್ನರಾಗಿದ್ದೂ- ಶುಕನ ದರ್ಶನದಿಂದ ನಿಶ್ಶಂಕರಾಗಿಯೇ ಯಥಾಪೂರ್ವವಾಗಿ ಕ್ರೀಡೆ ಮಾಡುತ್ತಿದ್ದರು. ಅಹಂಕಾರ ತತ್ವನಿಯಾಮಕನಾದ ರುದ್ರನ ಅಂಶಜನಾದುದರಿಂದ ಶುಕನು, ತನ್ನನ್ನು ಪುತ್ರಾ! ಎಂದು ಕರೆಯುತ್ತಾ, ಹಿಂದೆ ಬರುವ ತಂದೆಗೆ, ಮೃಗತರುಲತಾದಿಗಳಲ್ಲಿದ್ದು, 'ಓ' ಎಂದುತ್ತರವಿತ್ತನು. ಅಂತು ನಿರ್ವಿಕಾರನು, ಪಿತೃಪುತ್ರ ರೂಪವಾದ ಐಹಿಕ ಬಂಧದಿಂದ ದೂರನು, ಯೋಗಸಿದ್ಧನು ಆದ ಶುಕನ ವೈರಾಗ್ಯ ಜ್ಞಾನ ಭಕ್ತಿಗಳನ್ನು ಕಂಡು, ಶ್ರೀವೇದ ಮೂರ್ತಿಯು ಪರಮ ಪ್ರೀತನಾದನು.

ಶ್ರೀವೇದವ್ಯಾಸನನ್ನು ಕಂಡು ಮಂದಾಕಿನೀಜಲಾವಗಾಹಮಗ್ನ ಸುರಸುಂದರಿಯರು, ನಾಚಿಕೆಯಿಂದ ಮೇಲೆದ್ದು ಬಂದು, ಬೇಗ ಬೇಗ ತಂತಮ್ಮ ವಸ್ತ್ರಗಳನ್ನು ಧರಿಸಿ ನಿಂತರು. ಶ್ರೀಶುಕನ ಅನಾಸಕ್ತಿಯನ್ನು, ಶ್ರೀವ್ಯಾಸನ ಕಂಡು ಭ್ರಮೆಯಿಂದ ನಿಶ್ಶಂಕಸಶಂಕರಾಗಿ ವರ್ತಿಸಿದ ದೇವನಾರಿಯರ ಮನವನ್ನರಿತು, ನಿಷ್ಕಳಂಕನಿರಂಜನ ನಿರ್ವಿಕಾರ ಶುದ್ಧ ದೇವ ಏಕೋ ನಾರಾಯಣನ ಮಹಿಮೆಯನ್ನು ಅವರಿಗೆ ತಿಳಿಸಲೆಂದು, ಗಂಗಾಧರನು ಅಲ್ಲಿಗೆ ಬಂದನು. ಶ್ರೀಶಿವನು ಶ್ರೀವ್ಯಾಸನಿಗೆ ವಂದಿಸಿ, ಅಪ್ಸರೆಯರನ್ನು ಕಂಡು, 'ದೇವವನಿತೆಯರೇ! ಕೇಳಿ! ಗೃಹಸ್ಥನಾದ ಮಾತ್ರಕ್ಕೆ ಸವಿಕಾರನೆಂದೂ, ಸನ್ಯಾಸಿಯಾದ ಮಾತ್ರಕ್ಕೆ ನಿರ್ವಿಕಾರನೆಂದೂ ತಿಳಿದು, ನೀವು ವರ್ತಿಸಿದುದು ಸರಿಯಲ್ಲ. ಶ್ರೀಶಾವತಾರವಾದ ಶ್ರೀವೇದವ್ಯಾಸ ದೇವನ ದಯೆಯಿಂದ ಸುಜನರು ವಿಷಯ ವಿರಕ್ತಿ ಭಕ್ತಿ ಜ್ಞಾನಭಾಗ್ಯಗಳನ್ನು ಪಡೆಯುವರೆಂದ ಮೇಲೆ, ಅಂತಹ ಕಲ್ಯಾಣಗುಣನಿಧಿಗೆ ಸುರ ಸುಂದರೀ ದರ್ಶನದಿಂದ ವಿಕಾರವೇ? ಕೈವಲ್ಯಪ್ರದನಿಗೆ ವಿಷಯಲಾಲಸತೆಯೇ? ಆ ತಂದೆಯ ದಯದಿಂದ ನಾನು ಆತನ ಪುತ್ರನಾಗಿ, ಶುಕನೆನಿಸಿ, ಉದ್ಧೃತನಾದೆನು' ಎಂದು ಉಪದೇಶಿಸಿದನು. ದೇವನಾರಿಯರು ವಿಗತಭ್ರಮೆಯರಾಗಿ ವಿಷ್ಣುಸ್ವರೂಪ ವ್ಯಾಸನಿಗೆ ನಮಸ್ಕರಿಸಿದರು.

ಶ್ರೀವ್ಯಾಸನು, 'ಶುಕ! ನಿನ್ನ ಕೀರ್ತಿಯು ಆಚಂದ್ರಾರ್ಕವಾಗಲಿ! ನಿನ್ನ ಮುಖದಿಂದ ಬಂದ ಭಾಗವತಾಮೃತವು ಸುಜನಸಮುದ್ಧಾರಕವಾಗಲಿ!' ಎಂದು ವರವಿತ್ತು ಅನುಗ್ರಹಿಸಿದನು. ಇಂತು ಧರ್ಮರಾಜ! ಶುಕಚರಿತವನ್ನು ನಿನಗೆ ನಿರೂಪಿಸಿದೆನು. ಇದನ್ನು ಶ್ರದ್ಧೆಯಿಂದ ಹೇಳಿ, ಕೇಳಿದವರು ಆಯುರಾರೋಗ್ಯ ಸಂಪತ್ಕೀರ್ತಿವಿಜಯ ಕಲ್ಯಾಣಗಳನ್ನು ಹೊಂದಿ ಸುಖಿಸುವರು. ಆಗಮವ್ಯಾಸಕರ್ತನು, ಲಕ್ಷ್ಮೀಭರ್ತನು, ಷಡ್ಗುಣೈಶ್ವರ್ಯಧುರ್ಯನು, ಪರಮಾಶ್ಚರ್ಯ ಮಂಗಳಚರ್ಯನು, ಅಮಿತತೇಜನು, ಬ್ರಹ್ಮರುದ್ರೇಂದ್ರಾದಿ ವೃಂದಾರಕ

ವಂದಿತ ಪಾದಸರೋಜನು, ಆದ ಶ್ರೀಸಾತ್ಯವತೇಯನ ದಿವ್ಯಶ್ರೀಪಾದ ಪದ್ಮಗಳಿಗೆ ಅಭಿನಮಿಸಿ, ತದಭಿನ್ನನಾದ ಶ್ರೀಕೃಷ್ಣನ ದಯದಿಂದ ನಿನಗೆ ಮೋಕ್ಷಧರ್ಮಾದಿಗಳನ್ನು ನಿರೂಪಿಸಿದೆನು.'' ಎಂದು ಭೀಷ್ಮನು ನುಡಿದನು.

## ೧೮. ಶ್ರೀವಿಷ್ಣು ಮಹಿಮೆ

ಧರ್ಮರಾಜನು ಶಾಂತನವನನ್ನು ನೋಡಿ, 'ತಾತ! ಮೋಕ್ಷಧರ್ಮವನ್ನು ಕೇಳಿ ಧನ್ಯನಾದೆನು. ಮೋಕ್ಷಪ್ರದನಾದ ಶ್ರೀನಾರಾಯಣನ ಮಹಿಮೆಯನ್ನು ನನಗೆ ವರ್ಣಿಸು' ಎಂದು ಕೇಳಿದನು. ಭೀಷ್ಮನು ಶ್ರೀಕೃಷ್ಣನಿಗೆ ನಮಿಸಿ ಇಂತು ನುಡಿದನು:

'ರಾಜನ್, ಶ್ರೋತವ್ಯನು, ಮಂತವ್ಯನು, ಕೀರ್ತನೀಯನು, ಧ್ಯಾತವ್ಯನು ಆದ ಶ್ರೀನಾರಾಯಣನಿಗೆ ಸಮರಿಲ್ಲ. ಅವನು ಶಾಶ್ವತನು, ನಿರ್ವಿಕಾರನು, ಇಂದ್ರಿಯಾ ಗೋಚರನು, ಅನುಪಮನು, ಸರ್ವಾಂತರ್ಯಾಮಿಯು ಆಗಿರುವನು. ಬ್ರಹ್ಮರುದ್ರೇಂದ್ರಾದಿ ಸರ್ವದೇವ ವಂದ್ಯನು, ಸರ್ವವೇದ ಮುಖ್ಯ ಪ್ರತಿಪಾದ್ಯನು, ಮುಕ್ತಾಮುಕ್ತ ನಿಯಾಮಕನು, ಆದ ಶ್ರೀವಿಷ್ಣುವು ಸರ್ವೋತ್ತಮ ದೇವನಾಗಿರುವನು. ಶ್ರುತಿಸ್ಮೃತಿಗಳನ್ನು ಅಧ್ಯಯನ ಮಾಡಿ ತಿಳಿದವರಿಗೆ ಅವನ ಲೋಕವಾಗುವದು. ಅಲ್ಲಿ ಆಶಾಕ್ಷುತ್ಪಿ ಪಾಸಾರಹಿತರು, ಇಂದ್ರಿಯವೃತ್ತಿ ರಹಿತರು, ಸ್ವೇದಾದಿ ಮಲರಹಿತರು, ಸುಗಂಧ ಸದಾ ಯೌವನದೇಹರು ಆದ ದಿವ್ಯಪುರುಷರಿರುವರು.

ಹಿಂದೆ ಉಪರಿಚರನೆಂಬ ರಾಜನಿದ್ದನು. ಸತ್ಯ, ದಯಾ, ದಮ, ವಿಷ್ಣು ಭಕ್ತಿ ವಿನಯನು, ನಯ, ಬಲ, ಕ್ರತುದೀಕ್ಷೆ, ಬ್ರಾಹ್ಮಣ ಭಕ್ತಿ ಮುಂತಾದ ಸುಗುಣಗಳಿಗೆ ನೆಲೆಯಾದ ಆ ಮಹಾರಾಜನು ಮಾಡಿದ ತಪಸ್ಸಿಗೆ ಮೆಚ್ಚಿ ದೇವೇಂದ್ರನು ಆತನಿಗೆ ಸಖನಾಗಿ, ಒಂದು ದಿವ್ಯ ವಿಮಾನವನ್ನು ಕೊಟ್ಟನು. ಆ ವಿಮಾನದಿ ಕೂತು ವಸುರಾಜನು ಅಂತರಿಕ್ಷ ಸ್ವರ್ಗಗಳಲ್ಲಿ ಅವ್ಯಾಹತಗತಿಯಿಂದ ಸಂಚರಿಸುತ್ತಿದ್ದನು. ಅಂತೆಯೇ ಅವನಿಗೆ ಉಪರಿಚರನೆಂಬ ಬಿರುದು ಬಂತು.

ಒಂದು ಸಲ ವಸುರಾಜನು ಅಶ್ವಮೇಧಯಾಗವನ್ನು ಮಾಡುತ್ತಿದ್ದನು. ಅದರಲ್ಲಿ ಬ್ರಹ್ಮಪುತ್ರರಾದ ಮರೀಚಿ, ಅತ್ರಿ, ಅಂಗಿರಸ, ಪುಲಹ, ಪುಲಸ್ತ್ಯ, ಕ್ರತು, ವಸಿಷ್ಠರೆಂಬ ಮಹರ್ಷಿಗಳು ಋತ್ವಿಕ್ಜನರಾಗಿದ್ದರು. ಅವರು ಶ್ರೀವಿಷ್ಣುವಿನನ್ನು ಮೆಚ್ಚಿಸಿ, ಶ್ರೀಭಾರತೀದೇವಿಯ ಕಟಾಕ್ಷ ಪಾತ್ರರಾಗಿ ಸ್ಮೃತಿಶಾಸ್ತ್ರಗಳನ್ನು ರಚಿಸಿ, ಪ್ರಚಾರಪಡಿಸಿದ್ದರು. ಅವರಲ್ಲಿ ಮಹಾಮತಿಯಾದ ಅಂಗಿರಸನ ಮಗನಾದ ಬೃಹಸ್ಪತಿಯು ಲೋಕಮರ್ಯಾದಾ ಪ್ರವರ್ತಕವು, ಜಗದ್ಧಿತವೂ ಆದ ಶಾಸ್ತ್ರಗಳನ್ನೆಲ್ಲ ಅಧ್ಯಯನ ಮಾಡಿ, ದಿವ್ಯಜ್ಞಾನಿ ಎನಿಸಿ ಸುರಗುರುನಾಗಿ ಮೆರೆದನು. ಅಂತಹ ಬೃಹಸ್ಪತಿಯು ವಸುರಾಜ ಯಜ್ಞದಲ್ಲಿ ಉಪದರ್ಶನವನ್ನು ಮಾಡಿದನು. ಪ್ರಜಾಪತಿಯ ವಂಶಜರಾದ ಏಕತ, ದ್ವಿತ, ತ್ರಿತರೆಂಬ ಮುನಿಸತ್ತಮರು ಸದಸ್ಯರಾಗಿದ್ದರು.

ಉಪರಿಚರನು ಅಹಿಂಸಾಪರನಾದುದರಿಂದ ಪಶುವಿಶಸನವನ್ನು ಮಾಡದೆ, ತತ್ಪ್ರತಿನಿಧಿಯಾದ ಅರಣ್ಯಕೋದ್ಗೀಥ ವಾಕ್ಯಗಳನ್ನು ಪಠಿಸಿ, ಶ್ರೀಹರಿಯನ್ನು ಮೆಚ್ಚಿಸಿದನು. ಕರುಣಾವರುಣಾಲಯನು, ವರುಣಾಲಯಜಾತಾರಮಣನು ಆದ ಶ್ರೀಹರಿಯು ವಸುರಾಜನಿಗೆ ಮಾತ್ರ ಗೋಚರನಾಗಿ, ಪ್ರಧಾನ ಹವಿರ್ಭಾಗವನ್ನು ಹರಿಸಿ, ಅಂತರ್ಹಿತನಾದನು. ಅದನ್ನು ಸಹಿಸದೆ ದಿವ್ಯಧಿಷಣನಾದ ಧಿಷಣನು 'ರಾಜನ್! ಎಲ್ಲ ದೇವತೆಗಳೂ ನನ್ನ ಕೈಯ ಪುರೋಡಾಶವನ್ನು ದರ್ಶನವಿತ್ತು ಕೊಂಡು ಪೋದರು. ಆದರೂ ಶ್ರೀಶನು ಅದೃಶ್ಯನಾಗಿ ಕೊಂಡುಪೋದನಲ್ಲ! ನಾ ಮಾಡಿದಪರಾಧವೇನೆಂ'ದು ಹಂಬಲಿಸಿದನು.

ಆಗ ಸದಸ್ಯರಾಗಿದ್ದ ಏಕತ, ದ್ವಿತ, ತ್ರಿತರು ಆ ದೇವಗುರುವಿನನ್ನು ಅನುನಯಿಸುತ್ತಿಂತೆಂದರು : 'ಬೃಹಸ್ಪತೇ ! ಚಿಂತಿಸಬೇಡ ! ಅಪ್ರಮೇಯಮಹಿಮನಾದ ಶ್ರೀವಿಷ್ಣುದೇವನು ಸರ್ವಥಾ ಅವ್ಯಕ್ತ ಸ್ವಭಾವನಾಗಿರುವನು. ಆದರೂ ಅವನು ತನ್ನ ಅನುಗ್ರಹಪಾತ್ರರಿಗೆ ತನ್ನ ದಿವ್ಯರೂಪವನ್ನು ತೋರಿಸುವನು. ಅವನ ಪ್ರಸಾದವಿಲ್ಲದಿರೆ ಯಾರಿಗೂ ಆ ಮಹಾಪ್ರಭುವಿನ ದರ್ಶನವಾಗದು. ನಾವು ಹಿಂದೆ ಶ್ರೀಹರಿ ದರ್ಶನವನ್ನು ಕೋರಿ, ತೀವ್ರ ತಪವನ್ನು ಮಾಡಿದೆವು. ಆಗ ಅಂತರಿಕ್ಷವಾಣಿಯು ನಮ್ಮನ್ನು ಉದ್ದೇಶಿಸಿ 'ಮುನಿವರರೇ ! ಶ್ವೇತದ್ವೀಪಕ್ಕೆ ಹೋಗಿರಿ ! ಅಲ್ಲಿ ಮುಕ್ತರೂ ಮುಕ್ತಪ್ರಾಯರೂ ಇರುವರು. ಅವರಿಗೆ ಆಗಾಗ ಶ್ರೀದರ್ಶನವಾಗುವುದು. ಆಗ ನಿಮಗೂ ಆದೀತು!' ಎಂದು ಆದೇಶವನ್ನಿತ್ತಿತು. ನಾವು ಆನಂದದಿಂದ ಗೋವಿಂದ ಪಾದಾರವಿಂದ ಸಂದರ್ಶನ ಕುತುಕಸ್ವಾಂತರಾಗಿ, ಶ್ವೇತದ್ವೀಪಕ್ಕೆ ಹೋದೆವು. ಅಲ್ಲಿ ಅತಿಸಿತ ಗಾತ್ರರು, ಪರಮಪವಿತ್ರರು, ಅಸ್ವೇದರರು, ಸುಗಂಧರು, ಅಪೀಚ್ಯವಯಸ್ಕರು, ಸದಾ ಹರಿಸಕ್ತಮನಸ್ಕರು, ಅಶನಾಯಾ ಪಿಪಾಸಾವರ್ಜಿತರು, ಭರ್ಜಿತ ಸಕಲಪಾಪರು ಆದ ದಿವ್ಯ ಪುರುಷರನ್ನು ನೋಡಿದೆವು. ಶ್ವೇತದ್ವೀಪವು ದಿವ್ಯಪ್ರಭಾಭಾಸಮಾನವು, ಅಸಮಾನವು ಆಗಿತ್ತು. ಏಕಾಂತ ಭಕ್ತರಾದ ಅಲ್ಲಿಯ ಮುನಿವರರ ಸಂಗಡ ಕೂಡಿ, ಶ್ರೀಹರಿಗುಣಚಿಂತನರತರಾದ ನಮ್ಮ ಕಣ್ಣ ಮುಂದೆ, ಕೋಟಿ ಸೂರ್ಯ ಪ್ರಭಾಭಾಸಮಾನವಾದ ಒಂದು ದಿವ್ಯತೇಜವು ಹೊಳೆದು ನಿಂತಿತು. ಅದನ್ನು ನೋಡಲಾರದೆ, ನಾವು ಆ ಮುನಿಜನರಂತೆ 'ಜಿತಂತೇ ಪುಂಡರೀಕಾಕ್ಷ ! ಜಿತಂತೇ ವಿಶ್ವಭಾವನ ! ನಮಸ್ತೇಸ್ತು ಹೃಷಿಕೇಶ ! ಮಹಾಪುರುಷ ! ಪೂರ್ವಜ ! ನಮಸ್ತೇ ನಮಸ್ತೇ ನಮಃ' ಎಂದು ಉಚ್ಚ ಸ್ವರದಿಂದ ನುತಿಸಿ, ನಮಿಸಿದೆವು. ನಮ್ಮ ಕಣ್ಣುಗಳಿಗೆ ಕಾಣಬರದಿದ್ದರೂ, ಶೀಶನ ದಿವ್ಯತೇಜಸ್ಸು ನಮ್ಮ ಹೃದಯ ಗುಹೆಯಲ್ಲಿ ಈಗಲೂ ನೆಲೆಸಿ, ಪ್ರಕಾಶಗೊಳಿಸುತ್ತಾ, ನಮ್ಮ ಅಜ್ಞಾನಾಂಧಾಕಾರವನ್ನು ಕಳೆದಿದೆ. ನಮ್ಮ ನಯನಗಳಿಂದ ಬಾಷ್ಪಗಳುದುರಿದವು. ಧೀಷಣ ! ನಮ್ಮ ಗಾತ್ರಗಳು ಪುಲಕಾಂಚಿತಗಳಾದವು.

ಆಗ ಆಕಾಶವಾಣಿಯು ಇಂತೆಂದಿತು: 'ಮುನಿವರರೇ! ಶ್ರೀಶನನ್ನು ಕಾಣುವುದು ಸುಲಭವಲ್ಲ. ಜ್ಞಾನಭಕ್ತಿವಿರಕ್ತಿ ವಿರಹಿತರಿಗೆ ಆ ದೇವನ ದರ್ಶನವಾಗುವುದಿಲ್ಲ. ಅನೇಕ ಜನ್ಮ ಸಂಸಿದ್ಧನಿಗಲ್ಲದೆ, ಭರ್ಜಿತಸಕಲಪಾಪನಿಗಲ್ಲದೆ, ಸೇವಿತ ಗುರುವರ ಚರಣನಿಗಲ್ಲದೆ,

ಜ್ಞಾನಭಕ್ತಿಭರಿತನಿಗಲ್ಲದೆ – ಇತರರಿಗೆ ದುರಿತಹರಮುರಹರ ಚರಣರಜ ಸ್ಪರ್ಶನಭಾಗ್ಯವು ಸಿಗಲಾರದು. ಅವಸರಪಡಬೇಡಿ! ಮುಂದೆ ನಿಮ್ಮನ್ನೂ ಅನುಗ್ರಹಿಸಿ, ದರ್ಶನವಿತ್ತು, ಕಾಪಾಡುವನು.' ಆ ಮಾತನ್ನಾಲಿಸಿ ನಾವು ಶ್ರೀಶಭಕ್ತರ ದರ್ಶನದಿಂದಲೇ ಪುನೀತರಾಗಿ, ಹಿಂದಿರುಗಿ ಬಂದೆವು. ಅಂತಹ ಶ್ರೀಶನು ನಿನಗೆ ಕಂಡಂತೆ ಬಂದು ಕೈಯ ಹವಿರ್ಭಾಗವನ್ನು ಕೊಳ್ಳಲಿಲ್ಲವೆಂಬ ಚಿಂತೆಯನ್ನು ಬಿಡು! ಅಧ್ವರ ಕಾರ್ಯಗಳನ್ನು ಸಾಂಗವಾಗಿ ಮಾಡು!' ಎಂದರು. ಆಗ ಬೃಹಸ್ಪತಿಯು ವಿಗತಶೋಕನಾಗಿ, ಅಶ್ವಮೇಧವನ್ನು ಸಂಪೂರ್ಣಗೊಳಿಸಿದನು. ಉಪರಿಚರವಸುರಾಜನೂ ಕೃತಾರ್ಥನಾದನು.

ಒಂದು ಸಲ ವಸುರಾಜನು ಸುರಲೋಕದಲ್ಲಿ ನಡೆದ ಸತ್ರಯಾಗಕ್ಕೆ ಹೋಗಿದ್ದನು. ಅಲ್ಲಿ ಸುರಮುನಿಗಳು ನೆಲೆಸಿ ತತ್ವವಿಚಾರವನ್ನು ಮಾಡುತ್ತಿದ್ದರು. ದೇವತೆಗಳು ಅಜಶಬ್ದವು ಛಾಗವಾಚಕವೆಂತಲು, ಎಲ್ಲ ಯುಗಗಳಲ್ಲಿಯೂ ಛಾಗಗಳನ್ನು ಪಶುಸ್ಥಾನದಿ ಬಂಧಿಸಿ ವಿಶಸನವನ್ನು ಮಾಡಬೇಕೆಂದರು. ಮುನಿಗಳು ಅಜಶಬ್ದವು, ಓಷಧೀಪರವೆಂದರು. 'ಅಜಾ ಷಾಣ್ಮಾಸಿಕಾವ್ರೀಹಯಃ' ಎಂದು ವೇದವನ್ನು ನುಡಿದರು. ಅವರು ವಸುರಾಜನನ್ನು ನೋಡಿ, ವಿಚಾರ ನಿರ್ಣಯವನ್ನು ಮಾಡು ಎಂದು ಬೇಡಿದರು. ವಸುರಾಜನು ದೇವತೆಗಳ ಮಾತು ಸರಿ ಎಂದನು. ತಾನು ಅಹಿಂಸಾಯುತ ಯಜ್ಞವನ್ನು ಮಾಡಿ ಕೂಡ ಹಿಂಸೆಯೇ ಸರಿ ಎಂದು ನುಡಿದ ವಸುರಾಜನನ್ನು ಮುನಿಗಳು ಶಾಪವಿತ್ತು, ಭೂವಿವರಪತಿತನನ್ನಾಗಿ ಮಾಡಿದರು. ದೇವತೆಗಳಾತನಿಗೆ ಶ್ರಮತೃಷ್ಣಾ ಬುಭುಕ್ಷಾದಿಗಳಿಲ್ಲದಾಗುವಂತೆ ವರವಿತ್ತರು. ಆ ನರಪರನು ಶ್ರೀಹರಿಧ್ಯಾನನಿರತನಾದನು. ಆಗ ಶ್ರೀಶನು ದಯಮಾಡಿ ಗರುಡನಿಂದ ಅವನನ್ನು ಮೇಲಕ್ಕೆ ಬ್ರಹ್ಮಲೋಕಕ್ಕೆ ಕರೆತರಿಸಿ, ಸಂಭಾವಿಸಿದನು.

ಇಂತಹ ವಸುರಾಜನ ಸುತೆಯಾದ ಸತ್ಯವತೀದೇವಿಯಲ್ಲಿ ಪ್ರಾದುರ್ಭವಿಸಿದ ಶ್ರೀವೇದವ್ಯಾಸನು ಸಾಕ್ಷಾದ್ವಿಷ್ಣುವೆಂದು ತಿಳಿ! ಆತನೇ ಶ್ರೋತವ್ಯನು, ಮಂತವ್ಯನು ಧ್ಯಾತವ್ಯನೂ ಅಹುದು. ಧರ್ಮರಾಜ! ಒಂದು ದಿನ ನಾರದನು ಶ್ವೇತದ್ವೀಪದ ಪರಮೈಕಾಂತ ಭಕ್ತರನ್ನು ನೋಡಿ, ತಾನೂ ಶ್ರೀಹರಿಪಾದಾರವಿಂದವನ್ನು ನೆನೆಯುತ್ತಾ ತೀವ್ರ ತಪವನ್ನು ಮಾಡಿದನು. ಶ್ವೇತದ್ವೀಪಾಧಿಪನಾದ ನಾರಾಯಣನು ಆ ದೇವಮುನಿಗೆ ಪ್ರತ್ಯಕ್ಷನಾದನು. ವೇದಿಕಮಂಡಲ ಸ್ರುಕ್ ಸ್ರುವ ವಹ್ನಿಗಳನ್ನು, ಧರಿಸಿ, ಬಹುಪಾದೋರು ಹಸ್ತನೇತ್ರ ಪ್ರವಣಾದಿ ಮಂಗಳಗಾತ್ರನಾಗಿ, ಓಂಕಾರಗಾಯತ್ರೀವೇದ ಚತುಷ್ಟಯಗಳನ್ನು ಉಚ್ಚರಿಸುತ್ತಾ, ದಿವ್ಯರೂಪದಿಂದ ತನ್ನ ಮುಂದೆ ನಿಂದ ಗೋವಿಂದನ ಸಂದರ್ಶನದಿಂದ ಶತಾನಂದನಂದನನು ಆನಂದ ಕಂದಳಿತ ಹೃದಯಾರವಿಂದನಾದನು. ನಿರಂಹಕಾರಿಗಳಿಗೆ ನಿಗಮ ವಿಚಾರದಿಂದ ಸಿಗುವ ನೀರಜಾಕ್ಷನನ್ನು ನೋಡಿ, ನಮಿಸಿ, ವರವನ್ನು ಬೇಡೆಂದ ವಾರಿಜಾಸನವಂದ್ಯನಿಗೆ ನಾರದನಿಂತೆಂದನು:

''ದೇವ! ನಿನ್ನ ಮಂಗಳತಮ ರೂಪದರ್ಶನವಾದ ನನಗೆ ಇನ್ನಾವ ವರಗಳೂ ಬೇಡ! ನಿನ್ನ ಜ್ಞಾನವನ್ನು ನನಗೆ ನೀಡು!' ಎಂದ ದೇವರ್ಷಿಗೆ ಶ್ರೀವಾಸುದೇವನಿಂತೆಂದನು:

"ಇಂದ್ರಿಯಗಳಿಗೆ ಸಿಗದ, ಪ್ರಳಯಜನ್ಮಗಳಿಲ್ಲದ, ತ್ರಿಗುಣವಿಕಾರಗಳಿಗೊಳಗಾಗದ, ಜೀವಜಡವಿಲಕ್ಷಣನಾದ ಪರವಸ್ತುವೇ ನಾನು. ನಾರಾಯಣನಾದ ನಾನು ಸೃಷ್ಟಿಕಾಲದಲ್ಲಿ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ರೂಪಗಳನ್ನು ಸ್ವೀಕರಿಸಿ ಪಾಲನ ಸೃಜನ ಸಂಹರಣಾದಿಗಳನ್ನು ಮಾಡುವೆನು. ನನ್ನ ರೂಪಗಳನಂತಗಳು. ಅವುಗಳಿಗೆ ಸ್ವಗತ ಭೇದವಿಲ್ಲ. ಇಪ್ಪತ್ತುನಾಲ್ಕು ತತ್ವಗಳಿಗೆ ಮತ್ತು ತದಧಿದೇವತೆಗಳಿಗೆ ಒಡೆಯನಾಗಿ, ನಾನು ಪರಮಪುರುಷನೆನಿಸಿರುವೆನು. ನಾನು ಜೀವ ಜಡಾತ್ಮಕ ಸರ್ವ ಪ್ರಪಂಚದಿ ವ್ಯಾಪ್ತನಾಗಿ, ಪ್ರೇರಿಸುವೆನು. ನನ್ನ ಹೊರತೇನೂ ನಡೆಯದು. ಋವರು ಮದಧೀನರು, ನನ್ನಂತೆ ಇರುವರು ಮತ್ತು ನನ್ನಿಂದ ಭಿನ್ನರು. ಭಕ್ತಿಯಿಂದ ಸುಜೀವರು ನನ್ನನ್ನು ಭಜಿಸಿ, ನನ್ನ ಪ್ರಸಾದದಿಂದ ಮುಕ್ತರಾಗುವರು. ನನ್ನ ಭಕ್ತರಲ್ಲಿ ದೇವತೆಗಳು ಶ್ರೇಷ್ಠರು. ಅವರಲ್ಲಿ ರುದ್ರನು ಶ್ರೇಷ್ಠನು. ರುದ್ರನಿಗೂ ಬ್ರಹ್ಮನು ಶ್ರೇಷ್ಠನು. ಬ್ರಹ್ಮನಿಗೂ ಶ್ರೇಷ್ಠಳು ನಿತ್ಯಮುಕ್ತಳಾದ ರಮಾದೇವಿಯು. ಆಕೆಗೂ ನಾನು ಶ್ರೇಷ್ಠನು, ನನ್ನಕಿಂತಲು ಶ್ರೇಷ್ಠರಿಲ್ಲ. ನಾನೇ ಬ್ರಹ್ಮನಲ್ಲಿ ನಿಂತು ಸೃಜಿಸುವೆನು; ರುದ್ರನಾಮದಿಂದ ರುದ್ರನಲ್ಲಿ ನಿಂತು ಸಂಹರಿಸುವೆನು. ನಾನು ಲೋಕದಲ್ಲಿ ಸುಜನರಕ್ಷಾ ದುರ್ಜನ ಶಿಕ್ಷೆಗಳನ್ನು ಮಾಡಲು ಆಗಾಗ ಅವತರಿಸುವೆನು. ಮತ್ಸ್ಯಕೂರ್ಮವರಾಹ ನಾರಸಿಂಹ, ವಾಮನ, ಭಾರ್ಗವರಾಮ, ರಾಮಚಂದ್ರ, ಕೃಷ್ಣ, ಬುದ್ಧ, ಕಲ್ಕಿ, ಮಹಿದಾಸ, ದತ್ತಾತ್ರೇಯ, ಕಪಿಲ, ಹಂಸ, ಹಯಗ್ರೀವಾದಿ ರೂಪಗಳಿಂದ ಜ್ಞಾನಬಲ ಕಾರ್ಯಗಳನ್ನು ನಿರ್ವಹಿಸಿ, ಧರ್ಮವನ್ನು ಸ್ಥಾಪಿಸುವೆನು. ನರನಲ್ಲಿ ಶುಕ್ಲ ಕೇಶಾವೇಶದಿಂದ ಆವಹಿಸಿ, ಸ್ವಯಂ ನಾರಾಯಣನಾಗಿ ಭರತಖಂಡ ಕ್ಷೇಮಕ್ಕಾಗಿ ತಪವನ್ನು ಮಾಡುತ್ತಿರುವೆನು. ಕಂಸ, ಕಾಲಯವನ, ಏಕಲವ್ಯ, ಮುರ, ನರಕ, ಬಾಣ, ಜರಸಂಧಾದಿ ದುಷ್ಟದಾನವರನ್ನು ನಾಶಪಡಿಸುವೆನು. ಬಾಣನ ಪಕ್ಷವನ್ನು ವಹಿಸಿ ಸಕಲ ಸೇನಾಯುತನಾಗಿ ಬಂದ ಮಹಾದೇವನನ್ನು ಜಯಿಸಿ, ಬಾಣಪರಾಭವವನ್ನು ಸಾಧಿಸುವೆನು. ಇನ್ನು ನಾ ಮಾಡಿದ, ಮಾಡುವ ಅದ್ಭುತ ಕಾರ್ಯಗಳು ಸಾವಿರಗಟ್ಟಲೆಯಾಗಿವೆ. ಅವನ್ನು ಎಣಿಸಿ ಮುಗಿಸಲು ಬ್ರಹ್ಮರುದ್ರರಿಗೆ ಕೂಡ ಶಕ್ಯವಿಲ್ಲ. ನನ್ನ ಭಕ್ತನೆಂದು ನಿನಗೆ ಉಪದೇಶಿಸಿದ ನನ್ನ ಮಹಿಮೆಯನ್ನು ಸುಜನಸಭೆಗಳಲ್ಲಿ ಪಾಡು! ಸಾಂಸಾರಿಕ ಬಂಧವನ್ನೀಡಾಡು!"

ಇಂತು ನಾರದನು ಶ್ರೀಶನ ಕರುಣೆಯಿಂದ ಪಡೆದ ದಿವ್ಯಜ್ಞಾನಸುಧೆಯನ್ನು ಲೋಕದ ಸುಜ್ಜೀವರಿಗೆ ಹಂಚಿ ತಾನು ಕೃತಾರ್ಥನಾದುದಲ್ಲದೇ, ಅವರನ್ನೂ ಉದ್ಧರಿಸಿದನು. ಧರ್ಮರಾಜ! ಶ್ರೀವಿಷ್ಣುಮಹಿಮೆಯು ಅತ್ಯದ್ಭುತವಾಗಿದೆ. ಕೇಳು! ಹಿಂದೆ ಬ್ರಹ್ಮಾದಿ ದೇವತೆಗಳು ಕ್ಷೀರನೀರಧೀ ತೀರವನ್ನು ಸೇರಿ, ನೀರಜನಯನನನ್ನು ಮೆಚ್ಚಿಸಬೇಕೆಂದು ಸಾವಿರಾರು ವರ್ಷಗಳ ತಪವನ್ನು ಮಾಡಿದರು. ಆಗ ಅವರಿಗೆ ಆಕಾಶದಿಂದ ಅತಿ ಗಂಭೀರ ಮಧುರವಾಣಿಯೊಂದಿಂತು ಕೇಳಬಂತು.

'ದೇವತೆಗಳಿರಾ! ಜೀವರಲ್ಲಿ ನೀವು ಉತ್ತಮರಾಗಿರುವಿರಿ! ಸಕಲ ಔಷಧಿಗಳಿಂದ ನನ್ನನ್ನು ಪೂಜಿಸಿ ಯಜ್ಞಾದಿಗಳನ್ನು ಮಾಡಿ ನನಗೆ ಸರ್ವ ಕರ್ಮ ಫಲವನ್ನು ಸಮರ್ಪಿಸಿ!

'ಯಜ್ಞೇನ ಯಜ್ಞಮಯ ಜಂತದೇವಾಃ' ಎಂದಿರುವ ವೇದ ವಚನವನ್ನು ಪಾಲಿಸುವುದದರಿಂದಲೇ ನೀವು ಉತ್ತಮ ಜ್ಞಾನಿಗಳಾಗಿರುವಿರಿ! ಭೌತಿಕ ಪದಾರ್ಥಗಳಲ್ಲಿ ಅಧಿಭೌತಿಕನಾಗಿ, ನಿಮ್ಮಲ್ಲಿದ್ದು ನಿಯಮಿಸುವ ನನ್ನನ್ನು ಅಧಿದೈವಿಕನಾಗಿ, ಇತರೆಲ್ಲ ಜೀವರಲ್ಲಿಯು ಆಧ್ಯಾತ್ಮಿಕನಾಗಿ ಇರುವ ನಾನು ಯಜ್ಞದ ಪ್ರಧಾನ ಫಲ ಭೋಕ್ತನಾಗಿರುವುದರಿಂದ ಅಧಿಯಜ್ಞನೂ ಆಗಿರುವೆನು. ಇಂತು ಸರ್ವಕರ್ತನಾದ ನನ್ನನ್ನರಿತು ಒಂದು ಯಜ್ಞವನ್ನು ಮಾಡಿರಿ!' ಎಂದು ಆಜ್ಞಾಪಿಸಿದನು.

ಬ್ರಹ್ಮದೇವನು ರುದ್ರಾದಿ ಸುರರಿಂದ ಕೂಡಿ ವಿಷ್ಣುಪ್ರಧಾನ ದೈವತಕವೆಲ್ಲ ಯಜ್ಞಗಳೆಂದರಿತು, ಒಂದು ದಿವ್ಯಯಾಗವನ್ನು ಮಾಡಿದನು. ಅದರಿಂದ ಪ್ರೀತನಾಗಿ ಶ್ರೀದೇವನು ದೇವತೆಗಳಿಗೆ ಅವರವರ ಅಧಿಕಾರವನ್ನಿತ್ತು, ಮನುಜರಿಂದ ಯಜ್ಞಾದಿ ಗಳಲ್ಲಿ ಹವಿರ್ದಾನದಿಂದ ಮಾನನೀಯರಾಗೆಂದನು. ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ ಪುಲಹ, ಕ್ರತು, ವಸಿಷ್ಠರೆಂಬ ಬ್ರಹ್ಮಪುತ್ರರನ್ನು ವೇದಾಚಾರ್ಯರೆನಿಸಿದನು. ಸನಕಸನಂದನ ಸನಾತನ ಸನತ್ಕುಮಾರರು ಸಾಂಖ್ಯಯೋಗ ಪ್ರವರ್ತಕರಾಗುವಂತೆ ಮಾಡಿದನು. ಸಕಲ ದೇವತೆಗಳಿಗೆ ಸರ್ವಾನುಶಾಸಕನು ಸಕಲ ಜೀವಗುರುವು, ನಿಸ್ಸಂಶಯ ಜ್ಞಾನಮಹಿಮನು ಆಗೆಂದು ಬ್ರಹ್ಮನಿಗೆ ಅನುಗ್ರಹಿಸಿದನು. ಫಾಲಪ್ರಭವನಾದ ರುದ್ರನು ಅಸುರವರಪ್ರದನು, ಅಧರ್ಮನಿಯಾಮಕನು, ಲೋಕಸಂಹಾರಕನು ಆಗುವಂತೆ ನಿಯಮಿಸಿದನು. ಕೃತಯುಗದಲ್ಲಿ ಪಶುಹಿಂಸೆ ಮಾಡದಂತೆ ಯಜ್ಞಗಳನ್ನು ಮಾಡಿರೆಂದು ಆಜ್ಞಾಪಿಸಿ ಕಳಿಸಿ, ಮುನಿಗಳನ್ನು ಮಾನವ ಲೋಕೋಪದೇಶಕ ಸ್ಥಾನದಲ್ಲಿ ನಿಲ್ಲಿಸಿದನು.

ಎಲ್ಲ ದೇವತೆಗಳು ಶ್ರೀಶನಾಜ್ಞೆಯನ್ನು ಶಿರದಿ ಧರಿಸಿ, ತೆರಳಿದ ಮೇಲೆ, ಅಲ್ಲಿ ನಿಂತಿದ್ದ ಬ್ರಹ್ಮದೇವನಿಗೆ ದಿವ್ಯಹಯಗ್ರೀವ ರೂಪದಿಂದ ದರ್ಶನವಿತ್ತನು. ತುರಂಗ ವದನನು, ಚಂದ್ರಾವತಾತನು, ಅಮೃತಕಿರಣನು, ಶಂಖ, ಕಮಲಾಕ್ಷ, ಜ್ಞಾನ, ಪುಸ್ತಕಾಂಕಿತಬಾಹುಚತುಷ್ಟಯನು ನಿರಂತರೋಚ್ಚರಿತವೇದ ಚತುಷ್ಟಯನು, ಲಕ್ಷ್ಮೀ ವಿಶಿಷ್ಟನೂ ಆದ ಪರಮಮಂಗಳ ಮೂರ್ತಿಯನ್ನು ಕಂಡು ಬ್ರಹ್ಮನು ಆನಂದದಿಂದ ಸಾಷ್ಟಾಂಗವೆರಗಿ, ಕೈಜೋಡಿಸಿ ನಿಂತನು. "ಜೀವೋತ್ತಮನೆ! ನಡೆಸು ಜಗನ್ನಿರ್ಮಾಣ ಕಾರ್ಯವನ್ನು ; ಪಾಲಿಸು ಹದಿನಾಲ್ಕು ಲೋಕಗಳನ್ನು! ಸ್ವೀಕರಿಸು ರುದ್ರಾದಿಗಳಿಂದ ಪೂಜೆಯನ್ನು! ನಿನ್ನನ್ನು ಎಡಬಿಡದೆ ನಿಂತು, ತತ್ತತ್ಕಾರ್ಯಗಳಲ್ಲಿ ನಿನಗೆ ಪ್ರೇರಕನಾಗಿ, ನಿನ್ನ ಸರ್ವಕಷ್ಟಗಳನ್ನು ದೂರಮಾಡುತ್ತಿರುವೆನು" ಎಂದು ಅನುಗ್ರಹಿಸಿದನು.

ಧರ್ಮರಾಜ! ಜಗಗಳನ್ನು ನಿರ್ಮಿಸಿ, ಸಲಹಿ, ನಿಯಮಿಸಿ, ಸಂಹರಿಸುವ ಸರ್ವೋತ್ತಮ ನಾರಾಯಣ ಪರಬ್ರಹ್ಮನಿಗೆ ವಂದಿಸುತ್ತಿರುವೆನು. ಅಜನು, ವಿಶ್ವರೂಪನು, ಆದ್ಯನು, ಅನಂತನು, ಸರ್ವಾಮರಾಧಿನಾಥನು, ಸಾಂಗವೇದಪರಮ ಮುಖ್ಯ ಪ್ರತಿಪಾದ್ಯನು, ಈಶಾನನು, ಸಕಲ ತಪಃಫಲಪ್ರದನು ಆದ ಶ್ರೀಶನಿಗೆ ನಮಸ್ಕಾರವು! ಈ ವಿಷ್ಣು ಮಹಿಮೆಯನ್ನು ಪಠಿಸಿ, ಕೇಳಿ ಸುಜನರು, ವಿಷ್ಣುಭಕ್ತರಾಗಿ, ಸರ್ವಾರ್ಥಸಿದ್ಧಿಯನ್ನು ಹೊಂದುವರು.

ಶ್ರೀಹರಿಯ ನಾಮೋಚ್ಚಾರಣವು ಕೂಡ ಸರ್ವಪಾಪಹರವಾಗಿದೆ. ಅರ್ಥಜ್ಞಾನದಿಂದ ಉಚ್ಚರಿಸಿದ ಶ್ರೀಹರಿನಾಮಗಳಿಂದ ಅಳಿಸಿ ಹೋಗದ ಪಾಪವಿಲ್ಲ. ಶ್ರೀಹರಿ ನಾಮಗಳನಂತಗಳು. ಎಲ್ಲವೂ ಅವನ ನಾಮಗಳೇ. ಅವುಗಳಲ್ಲಿ ಕೆಲವು ನಾಮಗಳ ನಿರ್ವಚನವನ್ನು ನಿರೂಪಿಸುವೆನು. ನಾರಗಳೆಂದರೆ ಜಲಗಳು; ಅಲ್ಲಿ ಆಯನವೆಂದರೆ ಆಶ್ರಯವನ್ನು ಪಡೆದು ಇರುವವನಾದುದರಿಂದ ನಾರಾಯಣನೆಂಬರು. ಜಗಗಳಲ್ಲಿ ವಾಸಿಸುವವನು ಮತ್ತು ಜಗಗಳು ಅವನಲ್ಲಿ ವಸಿಸಿವೆ; ಕ್ರೀಡಾದಿ ಗುಣವಿಶಿಷ್ಟನೂ ಆಗಿರುವದರಿಂದ ವಾಸುದೇವನೆಂಬರು. ಜಗವೆಲ್ಲ ವ್ಯಾಪಿಸಿರುವುದರಿಂದ ವಿಷ್ಣುನೆಂಬರು. ದಮವೇ ರೂಪವಾಗಿ, ಎಲ್ಲ ಲೋಕಗಳನ್ನು ಉದರದಲ್ಲಿಟ್ಟಿರುವುದರಿಂದ ದಾಮೋದರನೆಂಬರು. ಪೃಶ್ನಿ ಎಂದರೆ ಅನ್ನ, ಜಲ, ಅಮೃತ, ವೇದಗಳು ಅವನ್ನು ಗರ್ಭದಿ ಧರಿಸಿ ಕಾಪಾಡುವುದರಿಂದ ಪ್ರಶ್ನಿಗರ್ಭನೆಂಬರು. ಕ ಎಂದರೆ ಬ್ರಹ್ಮ; ಈಶ ಎಂದರೆ ಶಿವ; ಅವರಾದಿ ಸರ್ವಜೀವರನ್ನು ನಡೆಸುವುದರಿಂದ ಕೇಶವನೆಂಬರು. ಇಂದ್ರಿಯ ಪ್ರೇರಕನಾದುದರಿಂದ ಹೃಷಿಕೇಶನೆಂಬರು. ಯಾಗಭಾಗಗಳನ್ನು ಹರಿಸುವನಾದುದರಿಂದ ಹರಿನೆಂಬರು. ಗೋವೆಂದರೆ ಭೂಮಿ, ಅದನ್ನು ಉದ್ಧರಿಸುವನಾದುದರಿಂದ ಗೋವಿಂದನೆಂಬರು. ಶಿಪಿ ಎಂದರೆ ಗರುಡನು. ಅವನಲ್ಲಿ ಕೂತು ಪೋಗುವುದರಿಂದ ಶಿಪಿವಿಷ್ಟನೆಂಬರು. ಪಾಪವನ್ನು ಸೆಳೆಯುವದರಿಂದಲು, ಪೂರ್ಣಸುಖರೂಪನಾದುದರಿಂದಲು ಕೃಷ್ಣನೆಂಬರು. ಜನನವಿಲ್ಲದುದರಿಂದ ಅಜನೆಂದೂ, ಮರಣವಿಲ್ಲದುದರಿಂದ ಅನಂತನೆಂದೂ, ಇಂದ್ರಿಯಾತೀತನಾದುದರಿಂದ ಅಧೋಕ್ಷಜನೆಂದೂ, ಶುದ್ಧಸತ್ವಸ್ವರೂಪನಾದುದರಿಂದ ಸಾತ್ವತನೆಂದೂ, ಚ್ಯುತಿಯಿಲ್ಲದುದರಿಂದ ಅಚ್ಯುತನೆಂದೂ, ಶ್ರೀಶನಿಗೆ ನಾಮಗಳಿವೆ. ವೃಷವೆಂದರೆ ಧರ್ಮವು; ಅದರ ಪೂರ್ಣಸುಖರೂಪ ಫಲವನ್ನು ಉಣ್ಣುವುದರಿಂದ ಆತನಿಗೆ ವೃಷಾಕಪಿ ಎಂದು ಹೆಸರು. ಕರ್ಣಮನೋಹರ ನಾಮಧೇಯನಾದುದರಿಂದ ಶುಚಿಶ್ರವನೆಂಬರು. ಲೋಕಗಳನ್ನು ಹೊಟ್ಟೆಯಿಂದ ಹೊರಹಾಕುವುದರಿಂದ ವಿರಿಂಚನೆಂಬರು. ಸಂಸಾರವೆಂಬ ರೋಗವನ್ನು ಕಳೆಯುವುದರಿಂದ ಶ್ರೀಹರಿಯನ್ನು ರುದ್ರನೆಂಬರು. ಹಿರಣ್ಯವೆಂದರ ಪರಮಸುಖವು, ಅದನ್ನು ಧರಿಸಿ ಹಿರಣ್ಯ ಗರ್ಭನೆನಿಸುವನು. ಹಿಂದೆ ದಕ್ಷಾಧ್ವರಧ್ವಂಸ ಕಾಲದಲ್ಲಿ ರುದ್ರನಿಗಂಜಿ, ಓಡಿ ಬಂದ ಯಜ್ಞ (ದೇವತೆ)ವು ಶ್ರೀಶನ ಉರಸ್ಥಲದಲ್ಲಿ ನಿಂತು ರಕ್ಷಿತವಾಯಿತು. ಅದರ ಕಾಂತಿಗೆ ಆತನ ಕೇಶಗಳು ಮುಂಜಸಮಪ್ರಕಾಶವಾದುದರಿಂದ ಶ್ರೀಶನಿಗೆ ಮುಂಜುಕೇಶನೆಂದು ಹೆಸರು. ರುದ್ರನೆತ್ತಿ ಒಗೆದ ಪರಶುವನ್ನು ತುಂಡರಿಸಿ, ಶ್ರೀಶನು ಆತನಿಗೆ ಖಂಡಪರಶುವೆಂಬ ನಾಮವನ್ನಿತ್ತನು.''

ಧರ್ಮರಾಜನು 'ತಾತ! ವಿಷ್ಣು ಮಹೇಶರ ಯುದ್ಧವನ್ನು ನನಗೆ ವಿವರಿಸು!' ಎಂದನು. ಭೀಷ್ಮನಿಂತೆಂದನು: 'ರಾಜನ್! ಯಜ್ಞರಕ್ಷಕನಾದ ವಿಷ್ಣುವಿಗೂ, ಯಜ್ಞಧ್ವಂಸಕನಾದ ಶಿವನಿಗೂ, ಆಗ ಮಹಾಯುದ್ಧವಾಯಿತು ಆಶ್ಚರ್ಯಪಡಬೇಡ! ಬ್ರಹ್ಮಮುಖ್ಯಪ್ರಾಣ, ಸರಸ್ವತೀ ಭಾರತೀದೇವಿಯರೆಂಬ ನಾಲ್ಕು ದೇವತೆಗಳಿಗೆ ಅಸು

ರಾವೇಶವಿಲ್ಲ; ತತ್ಕೃತ ವಿಷ್ಣುದ್ವೇಷವೂ ಇಲ್ಲ; ಮಿಕ್ಕವರಿಗೆ ಅಸುರಾವೇಶವು ಬಂದಾಗ, ಅವರು ಶ್ರೀಹರಿಯ ಸರ್ವೋತ್ತಮತ್ವವನ್ನು ಮರೆತು ತಾವೇ ಸರ್ವಪ್ರಭುಗಳೆಂದು ತಿಳಿದು, ವಿಷ್ಣು ವೈಷ್ಣವರಿಗೆ ಅಹಿತವನ್ನು ಮಾಡುವದುಂಟು! ರುದ್ರನು ಇಂತು ಅಸುರಾವೇಶವಶನಾಗಿ, ತನ್ನ ತಾತನಾದ ಶ್ರೀಪತಿಯನ್ನೇ ಎದುರಿಸಿದನು. ಆತನಿಗೆ ರಣದಲ್ಲಿ ಕೈ ಮೇಲೇಳದೆ ಹೋಯಿತು. ಶರೀರವು ಕಲ್ಲಿನ ವಿಗ್ರಹದಂತೆ ಸ್ತಂಭಿತವಾಯಿತು. ಪರಶುವು ಖಂಡಿತವಾಗಿ ಬಿತ್ತು. ಪಾಶುಪತವು ವ್ಯರ್ಥವಾಯಿತು. ಆಗ ಬ್ರಹ್ಮದೇವನು ಬಂದು, ತಿಳಿಯ ಹೇಳಿದ ಮೇಲೆ, ಗುರೂಪದೇಶದಿಂದ ಅಸುರಾವೇಶವು ದೂರವಾಯಿತು. ಶ್ರೀಹರಿ ಪಾದಪಂಕಜ ಪತಿತನಾಗಿ, ಕ್ಷಮಿಸೆಂದು ಬೇಡಿದನು. ಶ್ರೀಶನು ವೈಷ್ಣವಸತ್ತಮನಾದ ರುದ್ರನಲ್ಲಿ ಕರುಣಿಸಿ, "ರುದ್ರ ! ಶೂಲಪಾಣಿಯಾಗಿ ದುಷ್ಟರನ್ನು ಸಂಹರಿಸು ! ನಿರುಪಮ ತೇಜೋವಿರಾಜಮಾನನಾಗು!" ಎಂದು ವರವಿತ್ತನು.

ಧರ್ಮರಾಜ! ಈ ವಿಷ್ಣುಮಹಿಮೆಯನ್ನು ಹಿಂದೆ ನಾರದನು ಶ್ವೇತದ್ವೀಪವಾಸಿ ಮುನಿಜನರಿಂದ ಕೇಳಿ ತಿಳಿದನು. ಆತನು ನನಗೆ ಪೇಳಿದುದನ್ನೇ ನಿನಗಿಂದು ವರ್ಣಿಸಿರುವೆನು. ಶ್ರೀಶನ ದಯಾಪಾತ್ರರಾದ ಶ್ವೇತದ್ವೀಪ ನಿವಾಸಿ ಜನರ ಅನಾಮಯತೆ, ಆನಂದಪೂರ್ಣತೆ, ಏಕಾಂತ ಹರಿಭಕ್ತತ್ವಗಳನ್ನು ತಿಳಿದು ನಾರದನು, ಒಂದು ಸಾವಿರ ವರ್ಷಗಳ ಕಾಲವು ನರನಾರಾಯಣರಿರುವ ಬದರಿಕಾಶ್ರಮದಲ್ಲಿ ನಿಂತು, ದಿವ್ಯತಪಸ್ಸನ್ನು ಮಾಡಿದನು. ಇಂತು ತಪವನ್ನು ಗೈದು ನಾರದನು ನಾರಾಯಣದೇವನ ಏಕಾಂತ ಭಕ್ತನಾಗಿ ಧನ್ಯನಾದನು. ಆ ದೇವನೇ ಶ್ರೀವೇದವ್ಯಾಸನಾಗಿ ಭಾರತವನ್ನೂ ರಚಿಸಿದನು.

ಜನಮೇಜಯ! ಪುಂಡರೀಕಾಕ್ಷನಿಗಲ್ಲದೆ ಮತ್ತೊಬ್ಬರಿಗೆ ಮಹಾಭಾರತದಂತಹ ಗ್ರಂಥವನ್ನು ರಚಿಸಲು ಶಕ್ಯವೇ? ಇಂತು ಭೀಷ್ಮನ ಮುಖದಿಂದ ಮೋಕ್ಷಧರ್ಮವನ್ನು ಕೇಳಿ, ಧರ್ಮರಾಜನು ವಿಗತಸಂಶಯನಾದನು.

## ೧೯. ನಾರಾಯಣ ಮಹಿಮೆ

ಜನಮೇಜಯನು "ವೈಶಂಪಾಯನ ಮುನೀಂದ್ರ! ಶ್ರೀಹಯಗ್ರೀವಾವತಾರವನ್ನು ಧರಿಸಿ ಲೋಕೇಶನು ಮಾಡಿದ ಕಾರ್ಯವಾವುದು? ಸುಜನರಕ್ಷಣ, ದುರ್ಜನ ಶಿಕ್ಷಣಗಳೇ ಆತನ ಅವತಾರ ಪ್ರಯೋಜನವಲ್ಲವೇ?" ಎಂದು ಕೇಳಿದನು.

ವೈಶಂಪಾಯನನಿಂತೆಂದನು: "ಪ್ರಳಯ ಕಾಲವು ಬಂದಾಗ ಬ್ರಹ್ಮದೇವನು ನಿದ್ರಿಸಿರಲು, ನೋಡಿ, ಮಧುಕೈಟಭರೆಂಬ ಆದಿದೈತ್ಯರು. ವಿಧಾತನ ಸಮೀಪದಲ್ಲಿದ್ದ ವೇದಗಳನ್ನು ಕದ್ದು, ರಸಾತಲದಲ್ಲಿ ಬಚ್ಚಿಟ್ಟರು. ವೇದಸಹಾಯವನ್ನು ಮತ್ತೆ ಪಡೆದು ಸೃಷ್ಟಿ ಮಾಡಲೆಣಿಸಿದ ಚತುರ್ಮುಖನು ವಿಷ್ಣುದೇವನಿಗೆ ಶರಣಾಗತನಾದನು. ಶ್ರೀಪತಿಯು ಪರಮಾದ್ಭುತವಾದ ಹಯವದನರೂಪವನ್ನು ಧರಿಸಿ, ಪಾತಾಳವನ್ನು ಸೇರಿ, ಓಂ ಎಂಬ ಪ್ರಣವನಾದವನ್ನು ಉಚ್ಚರಿಸಿದನು. ವೇದಮೂಲಭೂತವಾದ ಪ್ರಣವನಾದವನ್ನು ಕೇಳಿ,

ದೈತ್ಯರಲ್ಲಿಗೆ ಧಾವಿಸಿ ಬಂದರು. ಆ ಸಮಯವನ್ನು ಸಾಧಿಸಿ, ದೇವ ಹಯಗ್ರೀವನು ಅವರು ಬಚ್ಚಿಟ್ಟ ವೇದಗಳನ್ನು ತಂದು, ಶತಾನಂದನಿಗಿತ್ತನು. ಪ್ರಣವನಾದವನ್ನು ಅರಸುತ್ತಾ ಹೋದ ದುಷ್ಟರು ಅಲ್ಲಿ ಯಾರನ್ನೂ ಕಾಣದೆ, ಹಿಂದಿರುಗಿ ಬಂದು, ಅಲ್ಲಿ ವೇದಗಳನ್ನೂ ಕಾಣಲಾರದೆ, ಕುಪಿತರಾಗಿ, ಶ್ರೀಹಯಗ್ರೀವನನ್ನು ನೋಡಿ, ಮೇಲೇರಿ ಬಂದರು. ಶ್ರೀಶನು ಅವರನ್ನು ಕೊಂದು, ವೇದಾದಿ ಸಚ್ಛಾಸ್ತ್ರಗಳ ಪರಮಾರ್ಥವನ್ನು ಬ್ರಹ್ಮಾದಿಗಳಿಗೆ ಉಪದೇಶಿಸಿದನು. ವೇದಾಶ್ರಯನು ವೇದೋಪದೇಶಕನು, ವೇದಪ್ರತಿಪಾದ್ಯನೂ ಆದ ಶ್ರೀಹಯಗ್ರೀವನಿಗೆ ನಮಸ್ಕಾರವು.

ಜನಮೇಜಯ! ಅಂತಹ ಸ್ವಾಮಿಯನ್ನು ನಿಷ್ಕಾಮಕರ್ಮದಿಂದಲು, ಯಥಾರ್ಥ ಜ್ಞಾನದಿಂದಲು ಭಜಿಸಿ, ಜನರು ಮುಕ್ತರಾಗುವರು. ಇಂತಹ ಸಾಂಖ್ಯಯೋಗಗಳನ್ನು ಶ್ರೀನಾರಾಯಣನು ಬ್ರಹ್ಮನಿಗೆ, ಬ್ರಹ್ಮನು ರುದ್ರನಿಗೆ, ರುದ್ರನು ದಕ್ಷಾದಿ ಪ್ರಜೇಶರಿಗೆ, ಆತನು (ದಕ್ಷನು) ತನ್ನ ದೌಹಿತ್ರನಾದ ಸೂರ್ಯನಿಗೆ, ಸೂರ್ಯನು ವೈವಸ್ವತಮನು ರಾಜನಿಗೆ, ಮನುವು ಇಕ್ಷ್ವಾಕುನಿಗೆ, ಇಕ್ಷ್ವಾಕುವು ಇತರ ಸುಜನರಿಗೆ ನಿರೂಪಿಸಿರುವರು. ಶ್ರೀಹರಿ ಪ್ರೀತಿಕರವಾದುದೇ ಕರ್ಮವು; ಶ್ರೀಹರಿಯನ್ನು ತಿಳಿಸಿಕೊಡುವುದೇ ವಿದ್ಯೆಯು; ತಪಸ್ಸು, ಶಮ, ದಮ, ಅಹಿಂಸೆ, ಭಕ್ತಿ ಇವು ಏಕಾಂತ ಧರ್ಮಗಳು. ಇವನ್ನು ಚೆನ್ನಾಗಿ ನಡೆಸಿದವನು ಮುಕ್ತನಾಗುವನು.

ಸಾತ್ವಿಕ ಜೀವರು ಮಾತ್ರ ಶ್ರೀಹರಿ ಜ್ಞಾನ ಭಕ್ತಿ ವಿರಕ್ತಿಗಳಿಗೆ ಯೋಗ್ಯರಾಗಿರುವರು. ಅವರು ದೇವಋಷಿ, ಪಿತೃ, ಚಕ್ರವರ್ತಿ, ನರೋತ್ತಮರೆಂದು ಐದು ವಿಧವಾಗಿರುವರು. ನರಮಧ್ಯಮರು ರಾಜಸರು. ಅವರಿಗೆ ಮಿಶ್ರಜ್ಞಾನವಿರುವದು. ನಿತ್ಯ ಸಂಸಾರವೇ ಅವರಿಗೆ ಗತಿ. ಇನ್ನು ತಾಮಸರಾದ ನರಾಧಮ ದೈತ್ಯದಾನವರು ಏನು ಮಾಡಿದರೂ ಅದೆಲ್ಲವೂ ವ್ಯರ್ಥವಾಗಿ ಕೊನೆಗೆ ಅಂಧಂತಮಸ್ಸಿನ ನಿತ್ಯ ದುಃಖವನ್ನೇ ಅವರು ಹೊಂದುವರು. ಸುಜೀವರು ಮಾತ್ರ ಸ್ವರೂಪಾನಂದಾವಿರ್ಭಾವರೂಪ ಮೋಕ್ಷವನ್ನು ಪೊಂದುವರು. ಶ್ರೀಹರಿ ಜ್ಞಾನ ಸಾಧನವಾದ ವೇದಚತುಷ್ಟಯ, ಮೂಲರಾಮಾಯಣ ಭಾರತ ಪಂಚರಾತ್ರಾಗಮಗಳೂ ತದವಿರುದ್ಧವಾದ ಭಾಗವತಾದಿ ಪುರಾಣಗಳೂ ಸಚ್ಛಾಸ್ತ್ರವೆನಿಸಿವೆ.

ಎಲ್ಲ ಶಾಸ್ತ್ರಪುರಾಣಗಳಿಗೂ ಶ್ರೀನಾರಾಯಣನೇ ಮೊದಲ ಉಪದೇಶಕನು. ಅವನು ಬ್ರಹ್ಮಾದಿ ಲೋಕ ಗುರುಗಳಿಗೂ ಗುರುವಾಗಿರುವನು. ವೇದಾಂತಾದಿ ಶಾಸ್ತ್ರಗಳೆಲ್ಲವೂ ಪರಮ ಮುಖ್ಯವೃತ್ತಿಯಿಂದ ವಿಚಾರ ಮಾಡಿದವರಿಗೆ ಶ್ರೀಹರಿ ಸರ್ವೋತ್ತಮತ್ವಜ್ಞಾನವನ್ನೇ ಪುಟ್ಟಿಸುವವು. ಮನುಜ ಬುದ್ಧಿಗತ ದೋಷದಿಂದ ತತ್ತದ್ದೇವಾರಾಧಕರು, ತಂತಮ್ಮ ಆರಾಧಿತ ದೇವತೆಗಳೇ ಸರ್ವೋತ್ತಮರೆಂದು, ದುಷ್ಟಹಠದಿಂದ ಪಾಶುಪತ, ಗಾಣಾಪತ್ಯ, ಶೈವಸೌರ, ಶಾಕ್ತಾದಿ ಆಗಮಗಳನ್ನು ಕಲ್ಪಿಸಿರುವರು. ಅವು ಅಸಚ್ಛಾಸ್ತ್ರವಾದುದರಿಂದ ಪ್ರಮಾಣವಲ್ಲ; ಪಂಚರಾತ್ರಾಗಮವು ಮಾತ್ರ ವೇದಾರಣ್ಯಕವೆನಿಸಿ ಪರಮ ಪ್ರಮಾಣವಾಗಿದೆ. ವೇದಾಂತ ಸೂತ್ರಗಳನ್ನು ವೇದವ್ಯಾಸರೂಪದಿಂದಲು, ಸಾಂಖ್ಯಶಾಸ್ತ್ರವನ್ನು ಕಪಿಲರೂಪದಿಂದಲು,

ಪಂಚರಾತ್ರಾಗಮವನ್ನು ಮಹಿದಾಸರೂಪದಿಂದಲು, ಶ್ರೀಶನೇ ರಚಿಸಿರುವನು. ಅಂತೆಯೇ ಅವು ಪ್ರಮಾಣತಮವಾಗಿವೆ.

ವ್ಯಾಸರೆಂದರೆ ವೇದ ವಿಭಾಗವನ್ನು ಮಾಡುವ ಋಷಿವರರು. ಹಿಂದೆ ಹರಿಪುತ್ರನಾದ ಅಪಾಂತರತಮನೆಂಬ ಋಷಿಯು ಪ್ರಥಮವ್ಯಾಸನಾಗಿದ್ದನು. ಈ ಇಪ್ಪತ್ತೆಂಟನೆಯ ಮಹಾಯುಗದ ದ್ವಾಪರಾಂತ್ಯ ಕಾಲದಲ್ಲಿ ಶ್ರೀನಾರಾಯಣನೇ ಪರಾಶರರಿಂದ ಸತ್ಯವತೀ ದೇವಿಯಲ್ಲಿ ಅವತರಿಸಿ, ಕೃಷ್ಣನೆನಿಸಿ, ವೇದವಿಭಾಗವನ್ನು ಮಾಡಿದನು. ಮುಂದೆ ಅಶ್ವತ್ಥಾಮನು ವೇದಗಳನ್ನು ವಿಭಜಿಸಿ ದ್ರೌಣಿವ್ಯಾಸನೆನಿಸುವನು. ಅಸ್ತವ್ಯಸ್ತವಾಗಿದ್ದ ವೇದಗಳನ್ನು ವಿಂಗಡಿಸಿ, ಶ್ರೀಕೃಷ್ಣದ್ವೈಪಾಯನನು ತನ್ನ ನಾಲ್ಕು ಜನ ಶಿಷ್ಯರಿಗೆ ಉಪದೇಶಿಸಿದನು. ಅದರ ಅರ್ಥವನ್ನು ನಿರ್ಣಯಿಸಿ ಪೇಳಲು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿದನು. ಮತ್ತು ಸ್ತ್ರೀಶೂದ್ರ ಬ್ರಹ್ಮಬಂಧು ಜನರ ಉದ್ಧಾರಕ್ಕಾಗಿ ಪಂಚಮವೇದವೆನಿಸಿದ ಮಹಾಭಾರತವನ್ನೂ, ಇತರ ಪುರಾಣಗಳನ್ನೂ ರಚಿಸಿದನು. ರಾಜನ್! ನಾನು ಋಗ್ವೇದವನ್ನೂ, ಭಾರತವನ್ನೂ ಆ ಮಾಹಾನುಭಾವನಿಂದ ಕಲಿತಿರುವೆನು. ವೇದಾದಿ ಸರ್ವಸಚ್ಛಾಸ್ತ್ರಗಳು ಜೀವೇಶ್ವರ ಭೇದವನ್ನೇ ನಿರೂಪಿಸುತ್ತಿವೆ. ಇಂತಹ ಧರ್ಮಗಳನ್ನು, ತಾತ! ಉತ್ತಮವಾದ ಧರ್ಮವನ್ನು ನನಗೆ ತಿಳಿಸಿಕೊಡು!' ಎಂದು ಕೇಳಿದನು.

ಭೀಷ್ಮನಿಂತೆಂದನು: 'ರಾಜನ್! ಒಂದು ದಿನ ನಾರದನು ಇಂದ್ರನ ಸಭೆಯನ್ನು ಸೇರಿ ಅಲ್ಲಿ ಪೂಜಿತನಾಗಿ, ಸುಖಾಸನದಿ ಕೂತನು. ಇಂದ್ರನು 'ಮುನಿವರ! ನೀನು ಕಂಡ ಆಶ್ಚರ್ಯವನ್ನು ನನಗೆ ತಿಳಿಸಿಕೊಡು!' ಎಂದನು. ನಾರದನು ಭೃಗುನಾಮಕ ವಿಪ್ರನ ಕಥೆಯನ್ನು ಪೇಳಿದನು. ಅದೇ ನಿನ್ನ ಪ್ರಶ್ನೆಗೂ ಉತ್ತರವಾಗುವುದು. ಕೇಳು!

ಭಾಗೀರಥೀ ದಕ್ಷಿಣ ತೀರದಲ್ಲಿ ಮಹಾಪದ್ಮವೆಂಬ ನಗರವಿತ್ತು. ಅಲ್ಲಿ ಭೃಗುವೆಂಬ ವಿಪ್ರವರನಿದ್ದನು. ಅವನು ಧರ್ಮನಿತ್ಯನು. ಸತ್ಯಪರನು, ಅಹಿಂಸಾದಿ ಸುಗುಣನು, ಇಂದ್ರಿಯ ಜಯವಂತನು ಆಗಿದ್ದನು. ವಿಹಿತಕರ್ಮಗಳನ್ನು ಬಿಡದೆ ಮಾಡುವನು. ಕ್ರೋಧವನ್ನು ಬಿಟ್ಟನು. ನ್ಯಾಯದಿಂದ ಬಂದ ಧನದಿಂದ ದೇವಪಿತೃ ಅತಿಥಿಜ್ಞಾತಿ ಮಿತ್ರರನ್ನು ಸಂಭಾವಿಸಿದನು. ಅವನಿಗೆ ವಿನಯನಯಧುರೀಣರಾದ ಪುತ್ರರಿದ್ದರು. ಅವನನ್ನು ಅವರ ಗುಣಗಳನ್ನು ಕಂಡು, ಜನರೆಲ್ಲರು ಪ್ರಶಂಸಿಸುತ್ತಿದ್ದರು. ಆದರೆ ಆ ವಿಪ್ರನಿಗೆ ಒಂದು ಚಿಂತೆಯಿತ್ತು: 'ನಾನೇನು ಮಾಡಿದರೆ, ಕೃತಕೃತ್ಯನೆನಿಸುವೆನು? ನನ್ನ ಜನ್ಮದ ಸಾಫಲ್ಯವೆಂತು?' ಎಂದು ಚಿಂತಿಸುವ ಭೃಗು ಮುನಿಯ ಮನೆಗೆ ಒಂದು ದಿನ ಒಬ್ಬ ಬ್ರಾಹ್ಮಣೋತ್ತಮನು ಬಂದನು. ಭೃಗುವು ತನ್ನ ಚಿಂತೆಯನ್ನಾತನಿಗೆ ತಿಳಿಸಿ, ಪರಿಹಾರವನ್ನು ಪ್ರಾರ್ಥಿಸಿದನು.

ಆಗ ವಿಪ್ರನು ಇಂತೆಂದನು: 'ಅಯ್ಯ! ನಾನು ಕೂಡ ನಿನ್ನಂತೆಯೆ ಶ್ರೇಯಸ್ಸಾಧನವನ್ನು ಅರಸುತ್ತಿರುವೆನು. ಕೆಲವರು ಬ್ರಹ್ಮಚರ್ಯದಿಂದ ಶ್ರೇಯಃಪ್ರಾಪ್ತಿ ಎಂಬರು. ಕೆಲರು ಗೃಹಸ್ಥಧರ್ಮಕ್ಕೆ ಸಮಾನವಿಲ್ಲೆಂದು ನುಡಿಯುವರು. ಮತ್ತೆ ಕೆಲವು ವಾನಪ್ರಸ್ಥನಾಗುವುದು ಒಳಿತೆಂದರೆ, ಇನ್ನು ಕೆಲರು ಸನ್ಯಾಸಿಯಾಗದೆ ಮೋಕ್ಷವಿಲ್ಲವೆಂಬರು. ದಾನ, ಯಜ್ಞ, ಯಾತ್ರಾ, ಸತ್ಯವಚನ, ದೇವಾಲಯ ನಿರ್ಮಾಣಾದಿ ಸಾಧನಗಳನ್ನೂ ಇತರರು ಪೇಳಿರುವರು. ನಿಜವಾದ ಧರ್ಮಸಾಧನವನ್ನು ತಿಳಿಯಪೇಳುವರು ದುರ್ಲಭರು.

ಗೋಮತೀ ತೀರದ ನೈಮಿಶಾರಣ್ಯದಲ್ಲಿ ಒಂದು ಪುಣ್ಯಹ್ರದವಿದೆ. ಅದರಲ್ಲಿ ಪದ್ಮನೆಂಬುವ ನಾಗರಾಜನಿರುವನು. ಅವನು ಉದಾತ್ತಚರಿತನು, ದಯಾಭರಿತನು, ಸುಜನ ಸಂಭಾವಿತನು, ದಿವ್ಯಜ್ಞಾನಾನ್ವಿತನು ಆಗಿರುವನು. ನೀನು ಅವನನ್ನು ಕಂಡು, ನಿನ್ನ ಸಂಶಯವನ್ನು ಕಳೆದುಕೊಳ್ಳಬಹುದಾಗಿದೆ' ಎಂದನು.

ಭೃಗುವು ಆ ಗುಣನಿಧಿವಿಪ್ರನನ್ನು ಚನ್ನಾಗಿ ಪೂಜಿಸಿ, ಮೂರು ದಿನಗಳಿಟ್ಟುಕೊಂಡ ಕಳಿಸಿದನು. ಆಮೇಲೆ ತನ್ನವರನ್ನು ಬೀಳ್ಕೊಂಡು ಭೃಗುವು ದಾರಿಯಲ್ಲಿ ಬರುವ ಪುಣ್ಯಕ್ಷೇತ್ರಗಳನ್ನು ನೋಡುತ್ತಾ, ಪುಣ್ಯನದಿಗಳಲ್ಲಿ ಮಿಾಯುತ್ತಾ, ಕೊನೆಗೆ ನೈಮಿಶಾರಣ್ಯವನ್ನು ಸೇರಿದನು. ಮಹಾಪದ್ಮವೆಂಬ ದಿವ್ಯಹ್ರದವನ್ನು ಕಂಡನು ಅಲ್ಲಿದ್ದ ಪದ್ಮನೆಂಬ ನಾಗರಾಜನ ಮನೆಯನ್ನು ಪ್ರವೇಶಿಸಿದನು. ಅತಿಥಿಪೂಜನಶೀಲಳಾದ ನಾಗೇಂದ್ರನ ಮಡದಿಯು ಭೃಗುವಿನನ್ನೆದುರ್ಗೊಂಡು, ಕರೆದುಕೊಂಡು ಪೋಗಿ ಪೂಜಿಸಿದಳು. 'ನಿನ್ನ ಪತಿಯನ್ನು ಕಾಣಬಂದಿರುವೆನೆಂದ ಭೂಸುರನಿಗೆ ನಾಗಪತ್ನಿಯು 'ಬ್ರಾಹ್ಮಣೋತ್ತಮ! ಸೂರ್ಯರಥ ವಹನಕ್ಕಾಗಿ, ನನ್ನ ಪತಿಯು ಹೋಗಿರುವನು. ತನ್ನ ತಿಂಗಳ ಸೇವೆ-ಇನ್ನೆಂಟು ದಿನಗಳವರೆಗೂ ಸಲ್ಲಿಸಿ, ಆತನು ಬರುವನು. ಮತ್ತೇನು ಬೇಕು ಕೇಳು!' ಎಂದಳು. ಭೃಗುವು 'ನಿನ್ನ ಪತಿದರ್ಶನವಲ್ಲದೆ ನಾನೇನೂ ಬೇಡೆನು. ಆತನು ಬರುವವರೆಗೂ ಉಲ್ಲವನದಲ್ಲಿ, ನಿರೀಕ್ಷಿಸುತ್ತಾ, ನಿರಾಹಾರನಾಗಿರುವೆನು. ಆತನಿಗೆ ಬಂದ ಕೂಡಲೇ, ಈ ವಿಷಯವನ್ನು ತಿಳಿಸು!' ಎಂದು ಉಲ್ಲವನದಲ್ಲಿ ತೀವ್ರಜಪನಿರತನಾಗಿ ನಿಂತನು.

ಆಗ ಪದ್ಮನ ಬಾಂಧವರು ಅವನನ್ನು ಕಂಡು 'ನಾವು ಅತಿಥಿಪೂಜಾಪರರಾಗಿರುವೆವು. ನಮ್ಮ ಮನೆಗೆ ಬಂದು, ಆಹಾರವನ್ನು ಕೊಳ್ಳದೆ ನಿಂತಿರುವೆ! ಆರು ದಿನಗಳಾದವು. ವಿಪ್ರನು ಉಣ್ಣದಿರುವಾಗ, ನಾವೆಂತು ಉಣ್ಣಲಾಗುವುದು? ದಯವಿಟ್ಟು ಮೂಲಫಲಗಳನ್ನಾದರೂ ಸ್ವೀಕರಿಸು!' ಎಂದು ಬೇಡಿದರು. ನಿಯಮಶೀಲನಾದ ವಿಪ್ರನು, 'ಆ ಮಾತಾಗದು. ಬರಲಿ ಭುಜಗರಾಜ! ಇನ್ನೆರಡು ದಿನಗಳಿಗೆ ಅವನು ಬರಲಿರುವನು. ನನಗೆ ಹಸಿವೆಯ ಬಾಧೆಯಾಗಲಿ, ಬಾಯಾರಿಕೆಯಾಗಲಿ, ಇಲ್ಲ. ನೀವು ಚಿಂತಿಸಬೇಡಿ! ನಿಮಗೆ ಧರ್ಮಲೋಪವಾಗದು' ಎಂದು ಅವರನ್ನು ಅನುನಯಿಸಿ ಕಳಿಸಿದನು.

ಸೂರ್ಯದೇವನ ಸೇವೆಯನ್ನು ಮುಗಿಸಿಕೊಂಡು, ಪದ್ಮನು ತನ್ನ ಮನೆಗೆ ಬಂದನು. ನಾಗಪತ್ನಿಯು ಪ್ರೀತಿಯಿಂದ ಕರೆತಂದು, ಅರ್ಘ್ಯಪಾದ್ಯಗಳನ್ನಿತ್ತು, ದಿವ್ಯಾಸನದಲ್ಲಿ ಕೂಡಿಸಿದಳು. ಯೋಗಕ್ಷೇಮಗಳನ್ನೂ ಅತಿಥಿ ಪೂಜಾದಿ ಕರ್ತವ್ಯಗಳನ್ನೂ ವಿಚಾರಿಸಿದ ಕಾಕೋದರವಲ್ಲಭನಿಗೆ ವಲ್ಲಭೆ ಇಂತೆಂದಳು: 'ದೇವ! ದೇವತಾ ತಿಥಿಪೂಜನಗಳು ಇಂದಿನವರೆಗೂ ಸಮಗ್ರವಾಗಿವೆ. ನಿನ್ನ ಶಿಕ್ಷೆಯಲ್ಲಿ ಬೆಳೆದ ಪತ್ನೀಮುಖಪರಿವಾರಿವು ಅಧರ್ಮದ ನೆರಳನ್ನೂ ತುಳಿಯದೆಂದು ತಿಳಿ!

ವಿಪ್ರರಿಗೆ ವೇದಾಧ್ಯಯನವು, ಭೂಪರಿಗೆ ಸುಜನರಕ್ಷಣವು, ಶಿಷ್ಯರಿಗೆ ಗುರುಭಕ್ತಿಯು, ವೈಶ್ಯರಿಗೆ ನ್ಯಾಯಾರ್ಜನದಾನಗಳು, ಶೂದ್ರರಿಗೆ ತ್ರಿವರ್ಣ ಶುಶ್ರೂಷೆಯು, ಗೃಹಸ್ಥನಿಗೆ ಇಂದ್ರಿಯನಿಗ್ರಹವು, ಸ್ತ್ರೀಯರಿಗೆ ಪತಿವ್ರತಾತ್ವವು ಪರಮಧರ್ಮಗಳಾಗಿವೆ. ನಿನ್ನ ಮನಸ್ಸಿಗೆ

ಖೇದವನ್ನುಂಟುಮಾಡುವಂತಹ ಯಾವ ಕಾರ್ಯವನ್ನು ನಾವಾರೂ, ಎಂದಿಗೂ ಮಾಡುವುದಿಲ್ಲ. ಒಂದು ವಿಷಯವನ್ನು ನಿನಗೆ ತಿಳಿಸಬೇಕಾಗಿದೆ, ಕೇಳು!

ಪರಮಪಾವನಾಕಾರನಾದ ಭೂಸುರನೋರ್ವನು ನಿನ್ನನ್ನು ಕಾಣಲು ಬಂದು, ಉಲ್ಲವನದಲ್ಲಿ ನಿರಾಹಾರನಾಗಿ ನಿನಗಾಗಿ ಕಾದು ನಿಂತಿರುವನು. ನಾವಿತ್ತ ಆಹಾರಾದಿಗಳನ್ನು ಸ್ವೀಕರಿಸದೆ, ನಿನ್ನನ್ನು ಬಂದು ಕೂಡಲೇ ತನ್ನನ್ನು ನೋಡಲು ಕಳಿಸಬೇಕೆಂದು ಹೇಳಿರುವನು. ನೀನಲ್ಲಿಗೆ ಹೋಗಿ, ಅತಿಥಿವರನನ್ನು ಸಂಭಾವಿಸು!' ಇಂತು ನುಡಿಗೆ ಸತಿಯ ಮಾತಿಗೆ ಕುಪಿತನಾಗಿ, 'ಏನಂದೆ ? ದೇವದನುಜಗಳದಿಂದ ಮಾನಿತನಾಗಿರುವ ಪದ್ಮನಂತೆ ! ಒಬ್ಬ ಸಾಮಾನ್ಯ ವಿಪ್ರನನ್ನು ಕಾಣಲು ತಾನಾಗಿ ಹೋಗಬೇಕಂತೆ! ಎಂದಿಗೂ ಆಗದು' ಎಂದನು. ಆ ಮಾತನ್ನೊಪ್ಪದೆ ಭುಜಗ ಸತಿಯು ಇಂತೆಂದಳು: 'ಸ್ವಾಮಿ, ತಮ್ಮಂತಹ ಅತಿಥಿವಿಪ್ರಭಕ್ತರು ಹೀಗೆ ವರ್ತಿಸುವರೇ ? ಕೇಳು ! ನಿನಗಾಗಿ ಉಪವಾಸದಿಂದ ಕಾದಿದ್ದ ಭೂಸುರನಾಶೆಯನ್ನು ಕೆಡಿಸಬೇಡ ! ಆಶಾಚ್ಛೇದವಾದಗ ಉದಯಿಸುವ ವಿಪ್ರಕೋಪಾಗ್ನಿಯು ನಿನ್ನ ಸರ್ವಪುರುಷಾರ್ಥಗಳನ್ನೂ ನಾಶಮಾಡೀತು ! ಧೀರಶಾಂತನಾಗು ! ಆಶಾನಿರ್ವ್ವಣಹಕ್ಕೆ ಮೌನ, ಜ್ಞಾನ, ದಾನ, ಸ್ನಾನ, ಯಜನಗಳು ಸಮಪುಣ್ಯಗಳಲ್ಲ. ಆಶಾವಿಚ್ಛೇದವಾದೊಡೆ ಆ ವಿಪ್ರನು ಪ್ರಾಣಬಿಡುವನು. ಆಗ ಬ್ರಹ್ಮಹತ್ಯೆಯು ಬಂದೀತು ! ಚಾತಕವು ಮಳೆಗೆ ಕಾದಂತೆ, ನಿನ್ನ ಸಮಾಗಮವನ್ನು ನಿರೀಕ್ಷಿಸುವ ಬ್ರಾಹ್ಮಣನನ್ನು ಕಂಡು, ಅವನ ಆಶೆಯನ್ನು ಪೂರೈಸು!'

ಆಗ ಪದ್ಮನು ನಿರ್ಮಲಮನಸ್ಕನಾಗಿ, ವಿನಯಸಂಭ್ರಮಭರಿತನಾಗಿ, ವಿಪ್ರನನ್ನು ಉಲ್ಲವನದಲ್ಲಿ ಕಂಡು ವಂದಿಸಿದನು. 'ಅನಘ ! ನನಗಾಗಿ ಕಾದು ಎಂಟು ದಿನಗಳಿಂದ ಉಪವಾಸವಿರುವೆ ! ಮೊದಲು ನಾನೀವ ಅತಿಥಿ ಪೂಜೆಯನ್ನು ಸ್ವೀಕರಿಸು ! ನಿನ್ನ ಮನೋಭೀಷ್ಟವನ್ನು ತಿಳಿಸು ! ನನ್ನ ಕೈಲಾದುದಾದರೆ ನೇರವೇರಿಸಿಕೊಡುವೆನು' ಎಂದನು.

ವಿಪ್ರನು 'ನಾಗರಾಜ! ಧರ್ಮಾರಣ್ಯದಿಂದ ಬಂದಿರುವೆನು. ನನ್ನನು ಭೃಗುವಂಶಜನೆಂದು ತಿಳಿ ! ಮಾಹಾಪದ್ಮನಗರದಿ ನಿವಸಿಸಿರುವೆನು. ವಿಪ್ರನೋರ್ವನೆಂದನು: ನೀನು ಧರ್ಮಸ್ವರೂಪವನ್ನು ಅರಿತಿರುವೆಯಂತೆ! ಅದನ್ನು ನಿನ್ನಿಂದ ತಿಳಿಯಲು ಬಂದಿರುವೆನು. ನೀನು ಸೂರ್ಯಕುಟುಂಬದಲ್ಲಿ ಸೇವೆಸಲ್ಲಿಸಲು ಪೋಗಿರುವಾಗ, ಕಂಡ ಆಶ್ಚರ್ಯಗಳನ್ನೂ ನನಗೆ ತಿಳಿಸಿಕೊಡು!' ಎಂದು ಕೇಳಿದನು.

ಪದ್ಮನಿಂತೆಂದನು: 'ಅಯ್ಯಾ! ಆಶ್ಚರ್ಯಗಳಿಗೆಲ್ಲ ಆಶ್ಚರ್ಯನೆಂದರೆ ಆದಿತ್ಯನಾಮಕ ಶ್ರೀಹರಿಯೇ! ಆತನ ಕಿರಣ ಜಾಲದಲ್ಲಿ ಭೂತ ಜನನ ಶಕ್ತಿಯು ಇದೆ. ಬ್ರಹ್ಮಾದಿ ದೇವತೆಗಳು, ವಾಲಖಿಲ್ಯಾದಿ ಮುನೀಂದ್ರರು, ಸಿದ್ಧರು ಆ ಶ್ರೀಹರಿಯನ್ನು ಆಶ್ರಯಿಸಿ, ಆತನಿತ್ತ ಶಕ್ತಿಯಿಂದ ತಂತಮ್ಮ ಕಾರ್ಯಗಳಲ್ಲಿ ನಿಂತು ಲೋಕಹಿತವನ್ನು ಸಾಧಿಸುತ್ತಿರುವರು. ಆದಿತ್ಯನಿಂದಲೇ ಗಾಳಿಯು ಹೊರಹೊಮ್ಮಿ ಬೀಸುವುದು. ಆದಿತ್ಯನ ಕಿರಣಗಳಿಂದ ಸಮುದ್ರದ ನೀರು ಆವಿಯಾಗಿ ಮೇಘ ರೂಪದಿಂದ ಮಳೆಗರೆಯುವುದು. ಸೂರ್ಯನು ಸತ್ತಂತೆ ಬಿದ್ದಿರುವ ಜಗವನ್ನು ಎಬ್ಬಿಸಿ, ಜೀವಂತವನ್ನಾಗಿ ಮಾಡುವನು. ಇವೆಲ್ಲ ಆಶ್ಚರ್ಯಗಳಲ್ಲವೇ ? ಓಷಧಿಗಳ ಮೊಳಕೆಯಾಗುವುದು

ಸೂರ್ಯನಿಂದಲಲ್ಲವೇ ? ನಿರಂಜನನು, ಅಕ್ಷರನು, ಸಮಾಧಿಕರಹಿತನು, ಶಾಶ್ವತನು ಆದ ಶ್ರೀಹರಿಯು ಸೂರ್ಯಮಂಡಲ ಮಧ್ಯವರ್ತಿಯಾಗಿರುವನು.

ಇನ್ನೊಂದಾಶ್ಚರ್ಯವನ್ನು ಕೇಳು! ಅದೇ ಉತ್ತಮ ಧರ್ಮವೂ ಆಗಿದೆ. ಒಂದು ದಿನ ಸಪ್ತಾಶ್ವನ ಕುದುರೆಗೆ ರಶ್ಮಿಯಾಗಿ ನಾನು ಮುಂದೆ ಸಾಗುತ್ತಿದ್ದೆನು. ಒಬ್ಬ ವಿಪ್ರನು ಮಧ್ಯಾಹ್ನ ಕಾಲದಲ್ಲಿ ಸೂರ್ಯ ಮಂಡಲವನ್ನು ಪ್ರವೇಶಿಸಿದನು. ಅಲ್ಲಿ ಇಬ್ಬರು ಸೂರ್ಯರಿರುವರೆಂಬಂತೆ ಬೆಳಗುತ್ತಿರುವ ವಿಪ್ರನನ್ನು ಕಂಡು ನಾನು ಆಶ್ಚರ್ಯಚಕಿತನಾದೆನು. ಅವನಾರೆಂದು ಕೇಳಲು ದಿನಪತಿಯು ಕರುಣಿಸಿ ತಿಳಿಸಿದ ಬಗೆಯನ್ನು ಕೇಳು!

ಸುರಯಕ್ಷ ಗಂಧರ್ವ ಗರುಡೋರಗರಲ್ಲಿ ಇವನಾರೂ ಅಲ್ಲ. ಇವನು ಇಂದ್ರಿಯ ಚಾಪಲ್ಯರಹಿತನಾದ ಉಂಛವೃತ್ತಿಯ ಮಹೀಸುರನು. ಫಲ ಮೂಲ ನೀರಗಳನ್ನು ಆಹಾರವಾಗಿಟ್ಟು, ಸರ್ವಕಾಮಗಳನ್ನು ಬಿಟ್ಟು, ಸರ್ವಭೂತ ಹಿತನು, ಶ್ರೀಹರಿ ಪಾದಾರವಿಂದರತನು ಆಗಿದ್ದನು. ಆದುದರಿಂದ ಇವನಿಗೆ ಇಂತು ಉತ್ತಮ ಸಿದ್ಧಿಯು ಪ್ರಾಪ್ತವಾಯಿತು.

ಕೇಳು ! ವಿಪ್ರೋತ್ತಮ ! ಧರ್ಮಗಳಲ್ಲಿ ಉತ್ತಮವಾದುದೆಂದರೆ ಶ್ರೀಹರಿಭಕ್ತಿಯೇ ! ಇನ್ನೊಂದಿಲ್ಲ. ಅದಕ್ಕಾಗಿ ದಾನ, ವ್ರತ, ನಿಯಮೋಪವಾಸ, ಯಾತ್ರಾ, ಯಜ್ಞ, ಜಪ, ತಪಗಳು. ಭಕ್ತರಹಿತನ ದಾನಾದಿಗಳು ನಿರರ್ಥಕವಾಗುವವು. ಮಾಡಿದ ವಿಹಿತ ಕರ್ಮವನ್ನು ಶ್ರೀಶನಿಗರ್ಪಿಸು! ಅವನ ಸರ್ವೋತ್ತಮತ್ವವನ್ನು ತಿಳಿಸುವ ಗುರುಗಳನ್ನಾಶ್ರಯಿಸಿ, ಸಚ್ಛಾಸ್ತ್ರಗಳನ್ನು ಶ್ರವಣಮಾಡು! ಮನನದಿಂದ ಸಂಶಯ ವಿಪರ್ಯಯಗಳನ್ನು ಕಳೆದು, ಯಥಾಯೋಗ್ಯ ಧ್ಯಾನವನ್ನು ಮಾಡು! ಶ್ರೀಶನು ಮುಖ್ಯಪ್ರಾಣನ ದ್ವಾರಾ ನಿನಗೆ ಕಾಣಿಸಿ, ನಿನ್ನ ಹೃದಯ ಪದ್ಮದಲ್ಲಿ ನಿಂತು, ಸಂಸಾರ ಸಾಗರದಿಂದ ಉದ್ಧರಿಸಿ, ಮುಕ್ತಿಯನ್ನಿತ್ತು ಸಲಹುವನು.

ಇಂತು ನುಡಿದ ಪದ್ಮನು ಭೃಗುನನ್ನು ಪೂಜಿಸಿ ಕಳಿಸಿದನು. ಭೃಗುವು ಕೂಡ ತನ್ನ ಪೂರ್ವಜನಾದ ಚ್ಯವನರ್ಷಿಯನ್ನು ಸೇರಿ, ಶ್ರವಣಾದಿಗಳನ್ನು ಮಾಡಿ, ಕೃತಕೃತ್ಯನಾದನು. ಈ ಕಥೆಯನ್ನು ಧರ್ಮರಾಜ! ಪರಶುರಾಮ ದೇವನುಶಿಷ್ಯನಾದ ನನಗೆ ತಿಳಿಸಿದನು. ಇಂತು ನಾರಾಯಣ ದೇವನ ಅನಂತ ಮಹಿಮೆಯನ್ನು ಯಥಾಶಕ್ತಿ ನಿನಗೆ ನಿರೂಪಿಸಿದೆನು. ಮೋಕ್ಷ ಧರ್ಮವನ್ನು ಶ್ರೀಭಾರತೀಶನ ಅಂತರ್ಯಾಮಿ ಶ್ರೀಗೋಪಾಲ ಕೃಷ್ಣನ ಅಡಿದಾವರೆಗಳಲ್ಲಿ ಭಕ್ತಿಯಿಂದ ಸಮರ್ಪಿಸುತ್ತಿರುವೆನು.'

ಇಂತು ಭೀಷ್ಮನ ಹಿತವಚನಗಳನ್ನಾಲಿಸಿ ಧರ್ಮರಾಜನು ಶಾಂತನಾದನು. ಅವನ ಶಂಕೆಗಳು ದೂರವಾದವು. ಮತ್ತೆ ಕೆಲ ವಿಷಯಗಳನ್ನು, ಶ್ರೀವಿಷ್ಣು ಮಹಿಮೆಯನ್ನೂ ಆತನು ಕೇಳಿ, ಭೀಷ್ಮನಿಂದ ತಿಳಿದ ಬಗೆಯನ್ನು ಮುಂದೆ ವರ್ಣಿಸುವೆನು.

**ಶಾಂತಿಪರ್ವ ಮುಗಿಯಿತು**



# ೧೩. ಆನುಶಾಸನಿಕ ಪರ್ವ

## ೧. ಗೌತಮೀಸುತ ಕಥಾ ಬ್ರಾಹ್ಮಣ್ಯಮಹಿಮಾ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಇಂತು ಗಂಗಾನಂದನನು ನುಡಿದ ಧರ್ಮತತ್ತ್ವವನ್ನು ಸಾಂಗವಾಗಿ ಕೇಳಿ ಅಜಾತಶತ್ರುವು ಆತನಿಗೆ ವಂದಿಸಿ, ಮತ್ತೆ ವಿನಯಭಕ್ತಿಭರಿತವಾಗಿ ಪ್ರಶ್ನಿಸಿದನು: 'ತಾತ! ನನ್ನ ಮನಶ್ಶಾಂತಿಗೋಸುಗ ನೀನು ವಿವಿಧ ಧರ್ಮಗಳನ್ನು ಉಪದೇಶಿಸಿದೆ! ಆದರೂ ನನಗೆ ಸಮಾಧಾನವಾಗಲಿಲ್ಲ. ದಾರುಣಯುದ್ಧದಲ್ಲಿ ಮಾರಣಕರ್ಮವನ್ನು ಅವಾರಣವಾಗಿ ಮಾಡಿ, ಈಗ ಪಶ್ಚಾತ್ತಾಪತಪ್ತನಾಗಿರುವೆನು. ಅತಿ ಲೋಭದಿಂದ ದುರ್ಯೋಧನನು ನಮ್ಮ ರಾಜ್ಯಭಾಗವನ್ನು ನಮಗೆ ಕೊಡದಾದನು. ನಾನಾದರೂ ಹೋಗಲಿ! ಎಂದು ವನದಲ್ಲೇ ನಿಲ್ಲಲಿಲ್ಲ, ಎಂತು ನನಗೆ ಶಾಂತಿ?'

ಭೀಷ್ಮನಿಂತೆಂದನು : 'ರಾಜನ್ ! ಎಲ್ಲವೂ ಶ್ರೀಶೇಚ್ಛೆಯಂತೆ ನಡೆಯುವುದು. ಮನುಜನು ವಧಿಸಲು ಸ್ವತಂತ್ರನಲ್ಲ. ಕೇಳೊಂದು ಇತಿಹಾಸವನ್ನು !

ಗೌತಮಿ ಎಂಬ ಬ್ರಾಹ್ಮಣೆಯ ಸುತನು ಹಾವು ಕಡಿದು ಸತ್ತನು. ಪುತ್ರನ ಮೃತಿಗೆ ರೋದಿಸುವ ಗೌತಮಿಯ ದುಃಖವನ್ನು ನೋಡಲಾರದೆ, ಒಬ್ಬ ಕಿರಾತನು ಆ ಹಾವನ್ನು ಹಿಡಿದು, ನೆಲಕ್ಕೆ ಒತ್ತಿಹಿಡಿದು, 'ಅಮ್ಮಾ! ಈ ದುಷ್ಟಪ್ರಾಣಿಯನ್ನು ಕತ್ತಿಯಿಂದ ತುಂಡರಿಸುವೆನು. ನಿನ್ನ ದುಃಖವನ್ನು ನೋಡಲಾರೆನು. ಹಗೆತೀರಿಸುವೆನು' ಎಂದು ಕತ್ತಿಯನ್ನೆತ್ತಿ ನಿಂತನು. ಆಗ ವಿಪ್ರವನಿತೆಯು ಅವನನ್ನು ವಾರಿಸಿ, 'ಅಣ್ಣ ! ವಿಧಿವಶದಿಂದ ಬಂದ ದುಃಖಾದಿಗಳಿಗೆ ಬುದ್ಧಿವಂತರು ಪರರನ್ನು ಗುರಿಮಾಡಿ, ನಿಂದಿಸರು. ಸಮಾಧಾನವೇ ದುಃಖಕ್ಕೆ ಮದ್ದು. ಈ ಹಾವನ್ನು ಕೊಂದಮಾತ್ರಕ್ಕೆ ನನ್ನ ಮಗನು ಬದುಕಿಬರುವನೇ ? ಅದನ್ನು ಬಿಟ್ಟುಬಿಡು ! ' ಎಂದಳು. ಕಿರಾತನು 'ಹಾಗಲ್ಲ! ಜನಪೀಡಾಕರವಾದ ಜಂತುಗಳನ್ನು ಕೊಂದರೆ ಪಾಪವಿಲ್ಲ. ಇದು ಉಳಿದರೆ, ಬಹುಜನರಿಗೆ ಮತ್ತೆ ಪ್ರಾಣವಿಯೋಗವನ್ನು ತಂದೊಡ್ಡುವುದು. ಹಿಂದೆ ವೃತ್ರಾಸುರನನ್ನು ಕೊಂದು ಲೋಕಹಿತವನ್ನು ಸಾಧಿಸಿದ ಇಂದ್ರನನ್ನು, ಬ್ರಾಹ್ಮಣೆಯಾದ ನೀನು ತಿಳಿದಿರುವೆ ಅಲ್ಲವೇ ? ದರ್ಪದಿಂದ ಕೆಡುವ ದಕ್ಷಾದಿಗಳನ್ನು ಶಿವನು ಶಿಕ್ಷಿಸಲಿಲ್ಲವೇ ? ನನ್ನನ್ನು ತಡೆಯಬೇಡ! ಈ ಹಾವನ್ನು ಕೊಂದುಬಿಡುವೆನು ' ಎಂದು ಖಡ್ಗವನ್ನೆತ್ತಿದನು.

ಆಗ ಸರ್ಪವಾ ಅರ್ಜುನಕ ನಾಮಕ ಕಿರಾತನಿಗೆ ಮನುಜ ಭಾಷಣದಿಂದ ಇಂತೆಂದಿತು: 'ಅರ್ಜುನಕ ! ನಾನೇನು ತಪ್ಪು ಮಾಡಿರುವೆನು ? ತಿಳಿದು ನೋಡು ! ಮೃತ್ಯುಪರಾಧೀನನಾಗಿ ನಾನೀ ಬಾಲನನ್ನು ಕಚ್ಚಿದೆನು' ಎಂದ ಹಾವಿಗೆ ಕಿರಾತನು, 'ಸರಿ ! ಮೃತ್ಯುಸಾಧನವಂತೂ

ಆದೆಯಲ್ಲವೇ? ಅಂತೆಯೇ ನಿನ್ನನ್ನು ಕೊಲ್ಲಬೇಕು' ಎಂದನು. ಸರ್ಪವು 'ಅಯ್ಯಾ! ಕುಂಬಾರನ ಗಡಿಗೆಯು ಒಡೆಯಿತೆಂದು, ದಂಡವನ್ನು ಮುರಿವರೇ?' ಎಂದಿತು. ಅರ್ಜುನಕನು, 'ಬಾಣವನ್ನು ಪ್ರಯೋಗಿಸುವಾಗ, ಬಾಣವೇ ಭೇದಿಸುವುದು, ಬಿಲ್ಗಾರನಲ್ಲ. ಅಂತೆಯೇ ಯಾರಿಂದ ಪ್ರೇರಿತನಾದರೇನಾ ಗೊಡವೆ ನಮಗೆ? ಕಚ್ಚಿದ ನಿನ್ನನ್ನು ಕೊಂದರೆ ನಿಂದೆ ಬಾರದು. ಬಾಣದಂತೆ ಜಡವಲ್ಲ ನೀನು ಕಚ್ಚಿದರೆ ಸಾಯುವರೆಂಬ ಜ್ಞಾನವು ನಿನಗಿಲ್ಲದಿಲ್ಲ. ನಿನ್ನನ್ನು ಕೊಲ್ಲದೆ ಬಿಡೆನು' ಎಂದನು. ಹಾವು 'ಬುದ್ಧಿಯುಳ್ಳ ಚೇತನರಲ್ಲವೇ ಋತ್ವಿಗ್ಜನರು. ಅವರು ಹೋಮಿಸಿದ ಫಲವು ಯಜಮಾನನಿಗೆ ಸೇರುವುದನ್ನು ನೋಡು! ನನ್ನನ್ನು ಬಿಡು!' ಎಂದಿತು.

ಆಗ ಮೃತ್ಯುವಲ್ಲಿಗೆ ಬಂದು 'ಸರ್ಪರಾಜ! ನಿನ್ನನ್ನು ಬಾಲಮೃತಿಗೆಂದು ಆರಿಸಿ, ನಾನು ಕಳಿಸಿದೆನು. ನನ್ನನ್ನು ಕಾಲನು ಕಳಿಸಿದನು. ಈ ಬಾಲನ ಸಾವಿಗೆ ನೀನೂ ಕಾರಣನಲ್ಲ, ನಾನೂ ಅಲ್ಲ. ಇನಶಶಿ ವಹ್ನಿ ಗಗನ ಧರಣೀವಾಯು ಸಲಿಲಾದಿ ಸರ್ವಜಗವು ಕಾಲನ ಅಧೀನವಾಗಿದೆ! ನನ್ನ ನಿನ್ನ ಪಾಡೇನು? ಈ ಬಾಲಮೃತಿಯ ಅಪರಾಧವನ್ನು ನನ್ನ ಮೇಲೆ ಹೊರಿಸಬೇಡ! ನಾನು ಕಾಲಾಧೀನನಾಗಿ ಬಾಲನನ್ನು ಕೊಲ್ಲಲು ನಿನ್ನನ್ನು ಕಳಿಸಿದೆನು' ಎಂದನು. ಆ ಮಾತಿಗೆ ಕಿರಾತನು 'ಸರ್ಪವೇ! ಮೃತ್ಯುವೇ! ನೀವಿಬ್ಬರೂ ಪಾಪಚಿತ್ತರೇ ಸರಿ! ಕಾಲನಲ್ಲಿ ದೋಷವನ್ನು ಹೊರಿಸುವ ಮಾತ್ರದಿಂದ ನೀವು ನಿರ್ದೋಷಿಗಳೆನ್ನಲಾಗದು' ಎಂದನು.

ಆಗ ಕಾಲನು ಅಲ್ಲಿಗೆ ಬಂದು, 'ಅರ್ಜುನಕ! ಕೇಳು! ಈ ಬಾಲನ ಮೃತಿಗೆ ಹಾವು ಕಾರಣವಲ್ಲ, ಮೃತ್ಯುವೂ ಅಲ್ಲ, ಕಾಲನಿಯಾಮಕನಾದ ನಾನೂ ಅಲ್ಲ. ಅವರ ಮೃತಿಗೆ ಕಾರಣವು ಅವನ ಕರ್ಮವೇ ಆಗಿದೆ. ಅವಶ್ಯ ಮನುಭೋಕ್ತವ್ಯವಾಗಿದೆ. ಕೃತವಾದ ಶುಭಾಶುಭರೂಪ ಕರ್ಮವು ಜನರು ತಾವು ಮಾಡಿದ ಕರ್ಮದಿಂದ ಜನನ ಮರಣ, ಸುಖ, ದುಃಖ, ಮಾನಾವಮಾನಾದಿಗಳನ್ನು ಆಯಾ ಕಾಲದಲ್ಲಿ ಅನುಭವಿಸುವರು. ಮಾಡಿದ ಕರ್ಮಫಲವನ್ನು ಉಣ್ಣದಿರಲು ಮಹಾದೇವನಿಗೂ ಶಕ್ಯವಲ್ಲ' ಎಂದನು.

ಕಾಲನ ಮಾತನ್ನು ಅನುಮೋದಿಸಿ ಗೌತಮಿಯು, 'ಕಿರಾತ! ಕೇಳಿದೆಯಾ ಕರ್ಮಮಹಿಮೆಯನ್ನು! ಯಾವ ಜನುಮದ ಪಾಪಫಲವೋ ಬಾಲನು ಮೃತನಾದನು; ಯಾವ ಪಾಪಫಲವೋ ನನಗಿಂದು ಪುತ್ರಸಂತಾಪವು ಒದಗಿ ಬಂತು. ನಾವು ಮಾಡಿದುದನ್ನು ನಾವು ಉಣ್ಣಲಾರದೆ, ಪರರ ನಿಂದಿಸಿ ಪ್ರಯೋಜನವಿಲ್ಲ. ರೋಷವನ್ನು ಬಿಡು! ಬಿಡು ಹಾವನ್ನು!' ಎಂದು ಅನುನಯಿಸಿದಳು. ಆಗ ಕಿರಾತನು ವಿಗತರೋಷನಾಗಿ, ವಿಷಧರನನ್ನು ವಿಸರ್ಜಿಸಿ, ತನ್ನ ಮನೆಗೆ ತೆರಳಿದನು. ಧರ್ಮರಾಜ! ನೀನು ರಣ ವಿಚಿತ್ರವಧೆಗೆ ಕಾರಣನಲ್ಲ. ದುರ್ಯೋಧನನೂ ಅಲ್ಲ. ಯಾರಾರ ಕರ್ಮಗಳು ಅವರವರಿಗೆ ಅಂತಂತಹ ಫಲವನ್ನಿತ್ತಿವೆ. ಕರ್ಮವು ಸ್ವತಂತ್ರವಲ್ಲ, ಅದನ್ನು ಪ್ರೇರಿಸಿ, ಈ ಮಹಾಯುದ್ಧವನ್ನು ನಡೆಸಿ, ಭೂಭಾರವನ್ನಿಳುಹಿದ, ದೇವಕಾರ್ಯ ತತ್ಪರನಾದ ಮುರವೈರಿಗೆ ನಮಿಸು! ಅವನ ನುಡಿಯಂತೆ ನಿಶ್ಶಂಕನಾಗು! ಸುಖವಾಗಿರು!'

ಇಂತು ಭೀಷ್ಮನು ನುಡಿಯಲು, ಧರ್ಮರಾಜನು 'ಮಹಾನುಭಾವ! ಗೃಹಸ್ಥನಾಗಿರುವ ಮನುಜನು ಸಾವಿನ ದವಡೆಯಲ್ಲಿ ಮತ್ತೆ ಸಿಗದಂತೆ, ಮಾಡಿಕೊಳ್ಳಲು ಬರುವುದೇ?' ಎಂದು ಕೇಳಿದನು. ಪಿತಾಮಹನಿಂತೆಂದನು:

'ಮನುವಂಶದಲ್ಲಿ ದುರ್ಯೋಧನನೆಂಬ ರಾಜನ್ಯನಿದ್ದನು. ಅವನ ಸೌಂದರ್ಯಕ್ಕೆ ಮನಸೋತು ನರ್ಮದಾದೇವಿಯು ಮನುಜ ವನಿತಾ ರೂಪದಿಂದ ಅವನನ್ನು ವರಿಸಿದಳು. ಆ ದಂಪತಿಗಳಿಗೆ ಸುದರ್ಶನೆ ಮಗಳಾದಳು. ಸಾರ್ಥಕನಾಮಳಾದ ಆ ಸುಂದರಿಯು ಸುರತರುಣೀ ಗಣವು ತನ್ನನ್ನು ನೋಡಿ, ಅಸೂಯೆಪಡುವಂತೆ, ಲಾವಣ್ಯ ಹಾವಭಾವ ವಿಲಾಸನಿಧಿಯಾಗಿ ಬೆಳೆದಳು. ತಂದೆಯು ಅವಳನ್ನು ತನ್ನ ಅಗ್ನಿಹೋತ್ರದ ಪರಿಚರ್ಯೆಯಲ್ಲಿ ನಿಯಮಿಸಿದ್ದನು. ಆಕೆಯು ಶ್ರದ್ಧೆಯಿಂದ ಅಗ್ನಿದೇವನನ್ನು ಉಪಚರಿಸುತ್ತಿದ್ದಳು. ಸಮಿಧಾದಾನವನ್ನು ಮಾಡುವಾಗ ಅವಳ ಕೈ ಕೆಂದಾವರೆಯು ಸ್ಪರ್ಶದಿಂದ ಅಗ್ನಿದೇವನ ಮೈ ಜುಮ್ಮೆಂದಿತು. ನೋಡುತ್ತ ನಿಂತಾಗ ಆ ವಿಶಾಲಾಕ್ಷಿಯು ಕಟಾಕ್ಷಪಾತದಿಂದ ವಹ್ನಿದೇವನ ವಾಂಛೆ ಮಿತಿಮೀರಿತು. ಸಖಿಯರಿಂದ ಮಾತಾಡುವ ಕಲಕಂಠಿಯ ಸಲ್ಲಾಪದಿಂದ ಪಾವಕನ ಕಿವಿಗಳು ಏಕಾಗ್ರವಾದವು. ಧಮನಿಯಿಂದೂದುವ ಧವಳರದನೆಯ ಮುಖಾಮೋದದಿಂದ ಧನಂಜಯನ ಧೈರ್ಯವು ನೀರಾಯಿತು. ಮನ್ಮಥನ ಪಂಚಬಾಣಗಳ ಮುಂದೆ ಜ್ವಲನನೂ ಕೃಶಾನುವಾದನು. ಆ ಸುಂದರಿಯಲ್ಲಿ ಆಶ್ರಯಾಶನಾಗಿ, ಆಶಾಶತದಿಂದ ಅನಲನಾಗಿ, ವಿರಹಾಗ್ನಿಯಲ್ಲಿ ಬೆಂದು, ಪಾವಕನು ಏಕದೇಹನಾದರೂ ಎರಡು ತಲೆಗಳಿಂದ ಪ್ರಸನ್ನವದನನಾಗಿ ಆಕೆಯನ್ನು ದಿಟ್ಟಿಸಿ ನೋಡಿದನು. ಅವಳನ್ನು ಅಪ್ಪುವ ಯೋಚನೆಯಿಂದ ಅವನಿಗೆ ಏಳು ಕೈಗಳಾದವು. ಅಪ್ಪಿದರೂ ಸುಡುವವನಲ್ಲವೆಂದು ತೋರಲು ಶಶಾಂಕ ಶಕಲಾನ್ವಿತನಾಗಿ, ಸುಜಾತೆಯರಿಗೆ ಜಾತರೂಪದಾಶೆಯು ವಿಪರೀತವೆಂದು ತಿಳಿದು ಸ್ವರ್ಣಶರೀರನಾ ರಾಗವೆಲ್ಲವು ಉಕ್ಕಿಬಂದಂತೆ ಸುತಾಮ್ರೋಷ್ಟನಾಗಿ, ಸರ್ವಕಾಮದನಾದ ಅಗ್ನಿದೇವನು ಅವಳ ಮುಂದೆ ಸಾಕಾರ ದೇವ ದೇಹನಾಗಿ ನಿಂತು 'ಕಾಂತೇ! ಎಂತಹ ಸೊಬಗೇ ನಿನ್ನದು! ಇವು ಚಿಗುರೆಲೆಗಳೋ? ಪಾದತಲಗಳೋ? ಇವು ಕುಚಗಳೋ? ಲಿಕುಚಗಳೋ? ಇದು ನಿನ್ನ ದೇಹವೋ? ನಡೆವ ಸುವರ್ಣ ವಿಗ್ರಹವೋ? ಇದು ನಿನ್ನ ವದನವೋ? ಪೂರ್ಣಿಮೆಯ ಶಶಿಸದನವೊ? ಮನಸೋತು ವರಿಸಿ ಬಂದ ನನ್ನನ್ನು ಕೈಹಿಡಿದು ಕರುಣಿಸು!' ಎಂದು ಬೇಡಿದನು. ಸುದರ್ಶನೆಯು ನಾಚಿ ತಲೆತಗ್ಗಿಸಿ, 'ದೇವ! ಕುಲಕನ್ಯೆಯರನ್ನಿಂತು ಕೇಳಬಹುದೇ? ಗುರುಜನರನ್ನು ಕೇಳಿ, ನನ್ನನ್ನು ಪಡೆ!' ಎಂದಳು. 'ಸರಿ' ಎಂದು ಅಂತರ್ಹಿತನಾದನು ಅಗ್ನಿಯು.

ದುರ್ಯೋಧನನೊಂದು ದಿನ ಮಹಾಯಜ್ಞವನ್ನು ಮಾಡುತ್ತಿದ್ದನು. ಯಜ್ಞಕಾಲದ ವಿಪ್ರಪೂಜೆ ನಡೆಯುತ್ತಿತ್ತು. ಅಗ್ನಿಯು ವಿಪ್ರರೂಪದಿಂದ ರಾಜನನ್ನು ಕಂಡು 'ನನಗೆ ದಾನವೀವುದಾದರೆ, ನಿನ್ನ ಮಗಳನ್ನು ಕೊಡು! ಬೇರೆ ದಾನಗಳನ್ನು ನಾನೊಲ್ಲೆ' ನೆಂದನು. ರಾಜನು 'ದರಿದ್ರಬ್ರಾಹ್ಮಣನಿಗೆಂತು ಸುತೆಯನ್ನೀವುದೆ'ಂದು ಚಿಂತಿಸಿ, ನಿರಾಕರಿಸಿದನು. ವಿಪ್ರನು ಹೊರಟು ಹೋದನು. ಅಂತೆಯೇ ಯಜ್ಞಾಗ್ನಿಯು ಉರಿಯದಾಯಿತು. ವೀತಿ ಹೋತ್ರನು ತನ್ನ ಮೂರ್ತಿಯನ್ನು ಉಪಸಂಹರಿಸಿದನೆಂದು ಮಂತ್ರವಿದರಾದ ವಿಪ್ರವರರು ತಿಳಿದು, ವಹ್ನಿಯ ಅಭಿಪ್ರಾಯವನ್ನು ಆತನಿಂದಲೇ ತಿಳಿದು, ರಾಜನಿಗರುಹಿದರು. ದುರ್ಯೋಧನನು ಸಂತೋಷದಿಂದ ತನ್ನ ಕುವರಿಯನ್ನು ವಿಪ್ರರೂಪನಾಗಿ ಬಂದ ಅಗ್ನಿದೇವನಿಗಿತ್ತು ವಿವಾಹಮಾಡಿದನು. ಆಗ ರಾಜನ ಯಾಗವು ಸುಹುತವಾಗಿ ನೆರವೇರಿತು.

ಸುದರ್ಶನಾಗ್ನಿದೇವರಿಗೆ ಸುದರ್ಶನನೆಂಬ ಮಗನಾದನು. ದುರ್ಯೋಧನ ಸುತನಾದ ಓಘವಂತನಿಗೆ ಓಘವತಿ, ಓಘರಥರೆಂಬ ಸುತಾಸುತರಿದ್ದರು. ಓಘವಂತನು ತನ್ನ ಮಗಳಾದ ಓಘವತಿಯನ್ನು ಭಗಿನೀಪುತ್ರನಾದ ಸುದರ್ಶನನಿಗೆ ಕೊಟ್ಟು ಮದುವೆ ಮಾಡಿದನು.

ಸುದರ್ಶನನು ವಿಮಲಚಿತ್ತನಾಗಿ, ಓಘವತಿಯಿಂದ ಕೂಡಿ, ಕುರುಕ್ಷೇತ್ರವನ್ನು ಸೇರಿ, ಪರ್ಣಶಾಲೆಯಲ್ಲಿ ವಾಸಿಸಿದನು. ಗೃಹಸ್ಥಧರ್ಮದಿಂದಲೇ ಮೃತ್ಯುವಿನನ್ನು ಜಯಿಸಿ, ಮುಕ್ತಿಯನ್ನು ಪಡೆಯುವ ದೃಢಸಂಕಲ್ಪದಿಂದ ಆತನು ಅವಳಿಗೆ ಇಂತೆಂದನು: 'ಸುದತಿ! ಅತಿಥಿಪೂಜೆಗೆ ಮಿಗಿಲಾದ ಗೃಹಸ್ಥಧರ್ಮವಿಲ್ಲ. ನೀನೂ ನನ್ನ ಈ ಮೋಕ್ಷಸಾಧನ ಮಾರ್ಗದಲ್ಲಿ ಅನುಕೂಲಳಾಗಿರು! ಅತಿಥಿಗಳು ಏನು ಬೇಡಿದರೂ ಕೊಡದಿರಬೇಡ! ಕೊನೆಗೆ ನಿನ್ನನ್ನು ಬೇಡಿದರೂ ಹಿಂಜರಿಯಬೇಡ! ಇದು ನನಗೂ ಹಿತವಾಗುವುದು' ಎಂದು ನುಡಿದ ಪತಿಯ ಮಾತಿಗೆ ಓಘವತಿ 'ಸರಿ!' ಎಂದಳು.

ಒಂದು ದಿನ ಸುದರ್ಶನನು ಸಮಿತ್ತನ್ನು ತರಲು ವನಾಂತರಕ್ಕೆ ತೆರಳಿದನು. ಆಗ ಒಬ್ಬ ವಿಪ್ರನು ಅತಿಥಿಯಾಗಿ ಬಂದು, ಆಕೆಯು ವಿನಯದಿಂದ ಸಮರ್ಪಿಸಿದ ಅರ್ಘ್ಯಪಾದ್ಯಾಸನಾದಿಗಳನ್ನು ಸ್ವೀಕರಿಸಿ, ಆಕೆಯ ಮುಖವನ್ನೇ ದಿಟ್ಟಿಸಿ ನೋಡುತ್ತಾ ಕೊನೆಗಿಂತೆಂದನು: 'ಲತಾಂಗಿ! ನಿನ್ನನ್ನೇ ಕೋರಿರುವೆನು. ನನ್ನಿಚ್ಛೆಯನ್ನು ಪೂರ್ಣಮಾಡು!' ಎಂದನು. ಆ ಪರಮಪತಿವ್ರತೆಯು ಬೇರಾವ ಅಭ್ಯರ್ಥನೀಯ ವಸ್ತುಗಳನ್ನು ಪೆಸರಿಸಿಕೊಡುವೆನೆಂದರೂ, ಕೇಳದೆ, ಅವನು ಆಕೆಯ ಸಂಗವನ್ನೇ ಬೇಡಿದನು.

ಓಘವತಿಯು ತನ್ನ ಪತಿಯ ನುಡಿಯನ್ನು ನೆನೆದಳು. ಆದರೆ ಅಂತಹ ಅಕಾರ್ಯವನ್ನೆಂತು ಮಾಡುವುದೆಂದು ಅವಳ ಚಿತ್ತವು ತತ್ತರಿಸಿತು. ಕೊನೆಗೆ ಆಕೆಯ ಮನಸ್ಸು ಮಾನನೀಯಾತಿಥಿ ಧರ್ಮದ ಕಡೆ ನಿಶ್ಚಲವಾಗಿ ನಿಂತಿತು. ಗದ್ಗದಿತಕಂಠದಿಂದ ತನ್ನ ಸಮ್ಮತಿಯನ್ನು ಸೂಚಿಸಿದಳು. ವಿಪ್ರನು ಅವಳೊಡನೆ ಏಕಾಂತದಲ್ಲಿ ವಾಸಿಸಿರುವಾಗ, ಸುದರ್ಶನನು ಬಂದು, 'ಓಘವತಿ!' ಎಂದು ಕರೆದನು. ವಿಪ್ರಶಾಪಭೀತಿಯಿಂದ ಅವಳು ಬದಲುಕೊಡದೆ ಸುಮ್ಮನಿದ್ದಳು. ವಿಪ್ರನು ಹೊರಬಂದು 'ಅಯ್ಯಾ ಅನಲನಂದನ! ಸಿಟ್ಟಾಗಬೇಡ! ನೀನು ಗೃಹಸ್ಥಧರ್ಮವನ್ನರಿತವನಾಗಿ ಅತಿಥಿಗಳಿಗೆ ಬೇಡಿದ್ದನ್ನು ಕೊಡುವ ಪ್ರತಿಜ್ಞೆ ಮಾಡಿದೆಯಲ್ಲವೇ?' ಎಂದನು. ಸುದರ್ಶನನು ಸ್ವಲ್ಪವಾದರೂ ಮನೋವಿಕಾರವಿಲ್ಲದೇ, 'ಅಯ್ಯಾ! ಅತಿಥಿಗಳನ್ನು ನಾನು ದೇವತಾಸ್ವರೂಪವೆಂದು ತಿಳಿದಿರುವೆನು. ನೀನು ತೃಪ್ತನಾದರೆ ಸಾಕು! ನನ್ನ ಗೃಹಸ್ಥಧರ್ಮವು ಚೆನ್ನಾಗಿ ಪಾಲಿತವಾಯಿತು. ಈ ವಿಷಯದಲ್ಲಿ ನನ್ನ ಮನಃಶುದ್ಧಿಗೆ ಇನಸಮೀರ ಚಂದ್ರ ಪಾವಕರೇ ಸಾಕ್ಷಿ! ಧರಣೀ ಗಗನಗಳೇ ಸಾಕ್ಷಿ!' ಎಂದು ಅಭಿನಂದಿಸಿದನು. ಆಗ ಅಂಬರದಿಂದ 'ನಿಜ! ಸುದರ್ಶನನು ಸಂಭಾವಿತನಿರುವನು; ಇವನ ಮಾತು ಸತ್ಯವಾದುದು!' ಎಂದು ದಿವ್ಯವಾಣಿಯು ಕೇಳಬಂತು.

ಧರ್ಮರಾಜ! ಆಗ ಅತಿಥಿವಿಪ್ರನು ಇದ್ದಕ್ಕಿದ್ದಂತೆ, ತನ್ನ ದಿವ್ಯತೇಜೋಮೂರ್ತಿಯಿಂದ ಸುದರ್ಶನ ದಂಪತಿಗಳಿಗೆ ಪ್ರತ್ಯಕ್ಷನಾಗಿ: 'ರಾಜನ್! ಧರ್ಮದೇವತೆ ಎಂದು ತಿಳಿ ನನ್ನನ್ನು! ನಿನ್ನ ಧರ್ಮದೀಕ್ಷೆಯನ್ನು ಪರೀಕ್ಷಿಸಲು ಬಂದೆನು. ನಿನ್ನ ಪ್ರತಿಜ್ಞೆಗೆ ತಕ್ಕಂತೆ ನೀನು ನಡೆಯದಿದ್ದರೆ,

ನಿನ್ನನ್ನು ನುಂಗಬೇಕೆಂದು, ಹಿಂಬಾಲಿಸಿ ಎಡೆಬಿಡದಿದ್ದ ಮೃತ್ಯುವಿನನ್ನು ಇಂದು ನೀನು ಗೆದ್ದೆ! ಅದಕಿಂತ ಮುನ್ನ ಕಾಮರೋಷಾದಿ ವಿಕಾರಗಳ ಗಣೆಯಾದ ದುಷ್ಟಮನಸ್ಸನ್ನು ಗೆದ್ದಿರುವೆ! ನಿನ್ನ ಸತೀಮಣಿಯು ಪವಿತ್ರಳಾಗಿರುವಳು. ನನ್ನಿಂದ ಯಾವ ಅಪರಾಧವೂ ಆಗಿಲ್ಲ. ನೀವಿಬ್ಬರೂ ಶಾಶ್ವತಪುಣ್ಯಲೋಕಗಳನ್ನು ಹೊಂದುವಿರಿ! ನಿಮ್ಮ ಪವಿತ್ರಗೃಹಸ್ಥಧರ್ಮರತಿಗೆ ನಾನು ಮೆಚ್ಚಿರುವೆನು. ಈ ನಿನ್ನ ಸತಿಯು ಅರ್ಧಭಾಗದಿಂದ ಓಘವತಿ ಎಂಬ ನದಿಯಾಗಿ, ಸರ್ವಜನ ಪಾಪಕ್ಷಾಳನಶೀಲಳಾಗಿ ಹರಿಯುವಳು. ಇನ್ನುಳಿದ ಅರ್ಧಾಂಶದಿಂದ ನಿನ್ನನ್ನು ಬಿಡದೆ ಸೇವಿಸುತ್ತಿರುವಳು' ಎಂದು ವರವಿತ್ತು, ದಿವ್ಯಧವಳ ಹಯಸಹಸ್ರ ರಥದಲ್ಲಿ ಕೂತು, ತೆರಳಿದನು.

ರಾಜನ್! ಅತಿಥಿಪೂಜನಕ್ಕೆ ಸಮಾನ ಧರ್ಮವಿಲ್ಲ. ಅದು ಗೃಹಸ್ಥನನ್ನು ಮೃತ್ಯುಮುಖದಿಂದ ತಪ್ಪಿಸಿ, ಮುಕ್ತಿಸೌಧದಲ್ಲಿ ಸೇರಿಸುವುದು.

ಧರ್ಮರಾಜನು, 'ತಾತ! ಬ್ರಾಹ್ಮಣ್ಯವು ಬಲು ಶ್ರೇಷ್ಠವಾದುದು! ಅದು ಜಾತಿಯಿಂದ ಬರುವುದೋ? ಅಥವಾ ತಪೋವ್ರತ ದಾನಾದಿಗಳಿಂದ ಹೊಂದಲಹುದೋ?' ಎಂದು ಕೇಳಿದನು. ಭೀಷ್ಮನಿಂತೆಂದನು: 'ರಾಜನ್! ಇಂದ್ರಮತಂಗ ಸಂವಾದವನ್ನು ಪೇಳುವೆನು. ಅದೇ ನಿನ್ನ ಪ್ರಶ್ನೆಗೆ ಉತ್ತರವಾಗುವುದು. ಒಂದಾಶ್ರಮದಲ್ಲಿ ಮತಂಗನೆಂಬ ವಿಪ್ರಕುಮಾರನಿದ್ದನು. ಅವನು ತನ್ನ ತಂದೆಯ ಮಾತಿನಂತೆ ಯಜ ಪದಾರ್ಥಗಳನ್ನು ತರಲು ಪೋಗಿ, ಬರುತ್ತಾ ಅಲ್ಲಿ ನಿಂತಿದ್ದ ಕತ್ತೆ ಮರಿಯನ್ನು ಕೋಲಿನಿಂದ ಹೊಡೆದನು. ಅದು ನೊಂದು, ತನ್ನ ತಾಯಿಯನ್ನು ಸೇರಿ, ವಿಷಯವನ್ನು ತಿಳಿಸಿ, ಅತ್ತಿತು. ಗಾರ್ದಭಿಯು, 'ಇವನು ಬ್ರಾಹ್ಮಣನಲ್ಲ, ಚಂಡಾಲನಾದುದರಿಂದ ಪ್ರಚಂಡ ಸ್ವಭಾವನಾಗಿರುವನು' ಎಂದು ಅದನ್ನು ಸಂತೈಸಿತು. ಪೂರ್ವಜನ್ಮ ಪುಣ್ಯಪರಿಪಾಕದಿಂದ ಮನುಜೇತರ ಭಾಷೆಗಳನ್ನೂ ತಿಳಿಯ ಬಲ್ಲನಾಗಿದ್ದ ಮತಂಗನ ಮನಸ್ಸು ಝುಲ್ಲೆಂದಿತು. 'ಇದು ಕೇವಲ ದೂಷಣ ಭಾಷಣವಲ್ಲ. ವಿದ್ಯಮಾನನಿರೂಪಣ ವಚನವಾಗಿದೆ' ಎಂದು, ಜ್ಞಾನಿಯಾದ ಗಾರ್ದಭಿಯನ್ನೇ ಕೇಳಿದನು: 'ಅಯ್ಯಾ! ನಿನ್ನ ತಾಯಿಗೆ ನಾಪಿತನಲ್ಲಿ ಜನಿಸಿರುವ ನೀನು ಜಾತ್ಯಾಚಂಡಾಲನೇ ಆಗಿರುವೆ! ಇದಕ್ಕೇಕೆ ಸಂಶಯ?' ಎಂದ ಗಾರ್ದಭಿಯು ಪೂರ್ವಪಾಪದಿಂದ ಕತ್ತೆಯಾಗಿ ಬಂದ ಜ್ಞಾನವತಿ ಎಂದು ನಿಶ್ಚಯಿಸಿ, ಮನೆಗೆ ಬಂದನು. ತಂದೆಗೆ ವಿಷಯವನ್ನು ತಿಳಿಸಿ, ವಿಷಾದದಿಂದ ತಪಿಸಿ ತಪಿಸಿ, ಕೊನೆಗೆ ತಪವನ್ನು ಮಾಡಿ, ಬ್ರಾಹ್ಮಣ್ಯವನ್ನು ಸಂಪಾದಿಸುವ ಹಠ ತೊಟ್ಟು ವನವನ್ನು ಸೇರಿದನು.

ಬಹುಕಾಲವಾದ ಮೇಲೆ ಸುರಪತಿಯು ಮತಂಗನಿಗೆ ಕಾಣಿಸಿ, ವರವನ್ನು ಬೇಡೆಂದನು. ಮತಂಗನು 'ಬ್ರಾಹ್ಮಣನಾಗುವಂತೆ ಅನುಗ್ರಹಿಸು!' ಎಂದು ಬೇಡಿದನು. 'ಮತಂಗ! ಬ್ರಾಹ್ಮಣತ್ವವು ಸುಲಭವಲ್ಲ. ಅನ್ಯಜಾತಿಯರಿಗೆ ಅದು ಸಿಗಲಾರದು. ಬೇರೊಂದು ಬೇಡು!' ಎಂದ ಇಂದ್ರನನ್ನು ನೋಡಿ, ಮತಂಗನು 'ನನಗೆ ವಿಪ್ರತ್ವವು ಸಿದ್ಧಿಸುವವರೆಗೂ ತೀವ್ರ ತಪವನ್ನು ಮಾಡುತ್ತಿರುವೆನು!' ಎಂದು ಕಳಿಸಿದನು. ಮತಂಗನು ಮತ್ತೆ ನೂರು ವರ್ಷಕಾಲವು ಒಂದು ಪಾದದ ಮೇಲೆ ನಿಂತು, ತಪವನ್ನು ಮಾಡಿದನು. ಇಂದ್ರನು ಮತ್ತೆ ಬಂದು 'ಚಂಡಾಲಮುನೇ! ನಿನಗೆ ವಿಪ್ರತ್ವವು ಸಿಗಲಾರದು. ಇಂತಹ ತಪಕ್ಕೆ ದಶಗುಣಿತ ತಪದಿಂದ

ಚಂಡಾಲನು ಶೂದ್ರನಾಗುವನು. ಅದಕ್ಕೆ ಶತಗುಣತಪದಿಂದ ಶೂದ್ರನು ವೈಶ್ಯನಾಗುವನು. ಅದಕ್ಕೆ ಸಾವಿರ ಗುಣತಪದಿಂದ ವೈಶ್ಯನು ಕ್ಷತ್ರಿಯನಾಗಿ ಜನಿಸುವನು. ಕ್ಷತ್ರಿಯನು ದಶ ಸಹಸ್ರಗುಣಿತ ವೈಶ್ಯತಪದಿಂದ ಸಾಮಾನ್ಯ ಬ್ರಾಹ್ಮಣನಾಗಿ ಪುಟ್ಟುವನು. ಅವನು ಲಕ್ಷಗುಣಿತ ತಪದಿಂದ ಸದ್ವಿಪ್ರನಾಗುವನು. ಶಮದಮ ಸತ್ಯಹಿಂಸಾವಿನಯ: ನಿರ್ಮತ್ಸರ ಗುಣಗಳಿಂದ ಆರ್ಯರ ಮತ್ತು ವಿಪ್ರರನ್ನು ಮೆಚ್ಚಿಸಿದವನಿಗೆ ವಿಪ್ರತ್ವವು ಸಿದ್ಧಿಸಿ ಜ್ಞಾನಫಲವನ್ನೀಯುವುದು. ಇಂತಹ ಬಲುದುರ್ಲಭ ವಿಪ್ರಜನ್ಮವನ್ನು ಹೊಂದಿಯೂ, ಕೆಲ ಮೂರ್ಖರು ಧನ ಕನಕ ವನಿತಾದಿ ವಿಷಯಲೋಲರಾಗಿ, ಸದಾಚಾರವನ್ನು ಬಿಟ್ಟು, ಕೆಟ್ಟು, ನರಕಪತಿತರಾಗುವರು. ಮತಂಗ! ಇಂತು ಬಲುಕಷ್ಟಸಾಧ್ಯವಾದ ಬ್ರಾಹ್ಮಣ್ಯಕ್ಕೆ ಆಶೆಪಡಬೇಡ! ಬೇರೊಂದು ವರವನ್ನು ಬೇಡು!' ಎಂದನು.

ಆ ಮಾತನ್ನು ಲೆಕ್ಕಿಸದೇ ಮತಂಗ ಮುನಿಯು ಪಾದಾಂಗುಷ್ಠವನ್ನಾಶ್ರಯಿಸಿ ಊರ್ಧ್ವಬಾಹುನಾಗಿ ಮತ್ತೆ ನೂರು ವರ್ಷದ ತಪಸ್ಸನ್ನು ಮಾಡಿದನು. ಅವನ ಶರೀರವು ಅಸ್ಥಿಚರ್ಮಾವಶಿಷ್ಟವಾಯಿತು. ಅವನ ಶಕ್ತಿ ಕುಂಠಿತವಾಯಿತು. ಅವಶನಾಗಿ ಕೆಳಗೆ ಬಿದ್ದ ಮತಂಗನನ್ನು ಹಿಡಿದೆತ್ತಿ ಇಂದ್ರನು 'ಅಯ್ಯಾ! ಬ್ರಾಹ್ಮಣ್ಯವೆಂಬ ಶಾರ್ದೂಲವಿದರಿಂದ ಚೆಲ್ಲಾಟ ಸಲ್ಲದು. ಇಲ್ಲದ ಹಠಮಾಡಿ ಕೆಡಬೇಡ! ಬ್ರಾಹ್ಮಣ್ಯವನ್ನು ಬಿಟ್ಟು, ಬೇಕಾದ ವರವನ್ನು ಬೇಡು!' ಎಂದನು. ಮತಂಗನು ಅದಕ್ಕೆ ಸಮ್ಮತಿಸಿ, 'ಸುರೇಂದ್ರ! ವಿಪ್ರಕ್ಷತ್ರಿಯರಿಗೆ ಅನುಕೂಲನಾಗಿರುವ ಬುದ್ಧಿಯನ್ನೂ, ಶ್ರೀಶಭಕ್ತಿಯನ್ನು ದಯಪಾಲಿಸು!' ಎಂದು ಬೇಡಿದನು.

ಧರ್ಮರಾಜನು 'ತಾತ! ಬ್ರಾಹ್ಮಣ್ಯವು ಸುದುರ್ಲಭವಾದುದೆಂದೆ! ಆದರೂ ವಿಶ್ವಾಮಿತ್ರನು ಕ್ಷತ್ರಿಯನಾಗಿ ಜನಿಸಿದರೂ, ವಿಪ್ರನಾದನಲ್ಲ! ಅದೆಂತು?' ಎಂದು ಕೇಳಿದನು. ಭೀಷ್ಮ ನಿಂತೆಂದನು: "ಇಂದ್ರಾಂಶನಾದ ಗಾಧಿ ಎಂಬ ರಾಜನ್ಯನಿಗೆ ಸತ್ಯವತಿ ಎಂಬ ಸುಂದರ ಕುಮಾರಿಯು ಇದ್ದಳು. ಅವಳನ್ನು ತನಗೆ ಕೊಡೆಂದು ಋಚೀಕನು ಬೇಡಿದನು. ಗಾಧಿಯು ದರಿದ್ರ ವಿಪ್ರನಿಗೆ ರಾಜಕುಮಾರಿಯನ್ನೀಯಲೊಲ್ಲದೆ, 'ಒಂದು ಕಿವಿಮಾತ್ರ ಕಪ್ಪಾಗಿ, ಮೈಯೆಲ್ಲ ಬಿಳುಪಾಗಿರುವ ಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಡು!' ಎಂದನು. ಭಾರ್ಗವ ಕುಲಲಲಾಮನು ವರುಣನನ್ನು ಬೇಡಿ, ಕನ್ಯಾಕುಬ್ಜದ ಸಮೀಪದಲ್ಲಿ ಅವನ್ನು ಪಡೆದು ತಂದು, ಗಾಧಿಗಿತ್ತನು. ಅಲ್ಲಿಯ ಗಂಗಾ ನದಿಯಲ್ಲಿ ಅಶ್ವತೀರ್ಥವಿಂದಿಗೂ ಉಂಟು! ಗಾಧಿಯು ಶಾಪಭೀತನಾಗಿ ಮಾತಿನಂತೆ ತನ್ನ ಸುತೆಯನ್ನಾತನಿಗೆ ಕೊಟ್ಟನು.

ಒಂದು ಸಲ ಋಚೀಕನು ತನ್ನನ್ನು ಪುತ್ರಸಂತಾನಕ್ಕಾಗಿ ಪ್ರಾರ್ಥಿಸಿದ ಪತ್ನಿಗೆಂತಲು, ಅತ್ತೆಗೆಂತಲು, ಎರಡು ಚರುಗಳನ್ನು ಅಭಿಮಂತ್ರಿಸಿ, ಯಜ್ಞವನ್ನಾಚರಿಸಿದನು. ತನಗೆ ಸದ್ಬ್ರಾಹ್ಮಣ ಸುತನಾಗಬೇಕೆಂತಲು, ತನ್ನ ಮಾವನಿಗೆ ವೀರಕ್ಷತ್ರಿಯ ಸುತನಾಗಬೇಕೆಂತಲು, ಅಭಿಮಂತ್ರಿಸಿ ಇಟ್ಟ ಚರುಪಾತ್ರೆಗಳನ್ನು ಮಾತಾಸುತೆಯರು ವ್ಯತ್ಯಾಸಗೊಳಿಸಿ, ಸ್ವೀಕರಿಸಿದರು. ಗಾಧಿ ಸುತಾಸತಿಯರು ಅಶ್ವತ್ಥವನ್ನೂ ಉದುಂಬರವನ್ನೂ ವಿಕ್ರಮವಾಗಿ ಆಲಿಂಗಿಸಿ, ಭಕ್ತಿಯಿಂದ ಸೇವಿಸಿದರು. ಇಬ್ಬರೂ ಗರ್ಭಧಾರಣಮಾಡಿದರು.

ಋಚೀಕನು ಸತ್ಯವತೀ ಗರ್ಭತೇಜವನ್ನು ಲಕ್ಷಿಸಿ, 'ಸತೀ, ಚರುವ್ಯತ್ಯಾಸವಾಯಿತು! ನಿನ್ನ ತಪ್ಪಿನಿಂದ ಅನರ್ಥವಾಗುವುದು. ನಿನಗೆ ಘೋರದಂಡಧರನಂತಹ ಪುತ್ರನಾಗುವನು. ನಿನ್ನ ತಾಯಿಗೆ ಸಾಧುವಿಪ್ರ ಸುತನಾಗುವನು' ಎಂದನು. ಆಕೆಯು ಹಾಗಾಗಬಾರದೆಂದು ಬೇಡಿದಳು. ಮುನಿಯು ಕರುಣಿಸಿ, 'ನಿನ್ನ ಮಗನು ಸದ್ವಿಪ್ರನೇ ಆಗುವನು. ಆದರೆ ಅವನ ಮಗನು ಮಾತ್ರ ಕ್ರೂರನಾಗದಿರನು' ಎಂದು ವಿಶಾಪವಿತ್ತನು. ಆ ಮುನಿಯ ತಪಃಪ್ರಭಾವದಿಂದ ಗಾಧಿರಾಜ ಪುತ್ರನಾದ ವಿಶ್ವಾಮಿತ್ರನು, ಚರುತರು ವ್ಯತ್ಯಾಸದಿಂದ ಸದ್ಬ್ರಾಹ್ಮಣನಾದನು. ಅದೂ ಬಹುತಪದಿಂದ ಗಳಿಸಿದ ವಿಪ್ರತ್ವವೆಂದು ತಿಳಿ! ಸತ್ಯವತೀ ಪೌತ್ರನು, ಜಮದಗ್ನಿನಂದನನು ಆದ ಶ್ರೀ ಪರಶುರಾಮನು ವೀರಧೀರವಾಗಿ, ದುಷ್ಟ ಕ್ಷತ್ರಿಯ ವನಕುಠಾರನಾದನು.

ಹಿಂದೆ ವೀತಹವ್ಯನೆಂಬ ರಾಜರ್ಷಿಯೂ ಭಾರ್ಗವನ ವಚನಪ್ರಭಾವದಿಂದ ವಿಪ್ರನಾದುದುಂಟು! ವೀತಹವ್ಯನಿಗೆ ಹೈಹಯನೆಂದೂ ಹೆಸರಿದೆ. ಅವನಿಗೆ ದಶ ಪತ್ನಿಯರಲ್ಲಿ ನೂರು ಪುತ್ರರಾದರು. ಅವರು ವಿಕ್ರಮದಿಂದ ಕಾಶೀರಾಜ್ಯದ ಮೇಲೇರಿ ಹೋಗಿ, ಕಾಶೀಶನಾದ ಹರ್ಯಶ್ವರನ್ನು ರಣದಲ್ಲಿ ಸೋಲಿಸಿ, ಕೊಂದರು. ಅವನ ಪುತ್ರನಾದ ಸುದೇವನು ಬೆಳೆದು ರಾಜನಾಗಲು, ಹೈಹಯರು ಅವನನ್ನೂ ಕೊಂದರು. ಅವನ ಮಗನು ದಿವೋದಾಸನು. ಹೈಹಯರ ದಾಳಿಗೆ ನಿಲ್ಲಲಾರದೆ ದಿವೋದಾಸನು ಪ್ರಾಣಭಯದಿಂದ ಓಡಿ, ಭರದ್ವಾಜ ಮುನೀಂದ್ರನಿಗೆ ಶರಣಾದನು. ಆ ಮುನಿವರನು ಅವನಿಗೆ ಅಭಯವನ್ನಿತ್ತು, ಶತ್ರುಸಂಹರಣ ನಿಪುಣನಾದ ಪುತ್ರನನ್ನು ಕಲ್ಪಿಸಿಕೊಡುವೆನೆಂದು, ದಿವೋದಾಸನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸಿದನು. ಆಗ ಹುಟ್ಟಿದ ಪ್ರತರ್ದನನು ಹದಿಮೂರು ವರ್ಷದವನಂತೆ ಬೆಳೆದು ನಿಂತು, ಭರದ್ವಾಜನಿಂದ, ವೇದಗಳನ್ನೂ ಧನುರ್ವೇದವನ್ನೂ ಕಲಿತನು.

ಮುನಿಕೃಪಾ ಪಾತ್ರನಾದ ಪ್ರತರ್ದನನು ತನ್ನ ತಂದೆಯಿಂದ ಯುವರಾಜನಾಗಿ ಅಭಿಷಿಕ್ತನಾಗಿ, ಅಪಾರ ಸೇನೆಯಿಂದ ದಂಡೆತ್ತಿ ಹೋಗಿ, ಹೈಹಯರನ್ನೆಲ್ಲ ಸಂಹರಿಸಿದನು. ಅವನ ಧಾಟಿಗೆ ತಾಳಲಾರದೆ, ಮುದುಕನಾಗಿದ್ದ ವೀತಹವ್ಯನು ಓಡಿ, ಓಡಿ ಭೃಗುಮುನಿಯ ಆಶ್ರಮವನ್ನು ಸೇರಿ, ಆತನಿಗೆ ಶರಣಾದನು. ಪ್ರತರ್ದನನು ಬಿಡದೆ ಬೆನ್ನತ್ತಿ, ಭೃಗುಮುನ್ಯಾಶ್ರಮವನ್ನು ಹೊಕ್ಕು, ಆ ಮುನಿಚಂದ್ರನಿಗೆ ವಂದಿಸಿ ನಿಂತನು. ಭೃಗುವು 'ಏಕೆ ಬಂದೆ?' ಎಂದನು. ಪ್ರತರ್ದನನು 'ಮಹಾತ್ಮ! ಪಕ್ಷಪಾತವನ್ನು ಬಿಟ್ಟು, ಮಧ್ಯಸ್ಥನಾಗಿ ನನ್ನ ಮಾತನ್ನಾಲಿಸು! ವೀತಹವ್ಯಸುತರು ನಿಷ್ಕಾರಣ ವೈರವನ್ನು ಬೆಳೆಸಿ, ನನ್ನ ತಾತನನ್ನು, ಮುತ್ತಾತನನ್ನು ಕೊಂದರು. ಇಂದು ಅವರನ್ನು ನೂರು ಜನರನ್ನು ಕೊಂದು, ಪಿತೃಋಣವನ್ನು ತೀರಿಸಿದೆನು. ಶತ್ರುಶೇಷವಿದೆ! ತಮ್ಮ ಆಶ್ರಮದಲ್ಲಿ ಅಡಗಿರುವ ವೀತಹವ್ಯನನ್ನು ಕೊಂದು ಕೃತಾರ್ಥನಾಗುವೆನು' ಎಂದನು. ಭಾರ್ಗವನು 'ಕೇಳು! ಇಲ್ಲಿ ನೃಪನಾರೂ ಇಲ್ಲ. ಇಲ್ಲಿರುವರೆಲ್ಲರೂ ಪ್ರಶಸ್ತ ಮಹೀಸುರರೇ!' ಎಂದು, ತನ್ನ ಶಿಷ್ಯರನ್ನು ನೋಡಿಸಿದನು.

ಪ್ರತರ್ದನನು ನಸುನಕ್ಕು, ಮಹಾತ್ಮನಾದ ಭೃಗುವಿನ ಚರಣಗಳಿಗೆರಗಿ, 'ಸ್ವಾಮಿ! ನಿನ್ನ ಮಾತು ಸುಳ್ಳಾಗದು. ನಾನು ಬಂದ ಕಾರ್ಯವಾಯಿತು. ನನ್ನ ಶತ್ರುವು ಶುದ್ಧ ಕ್ಷತ್ರಿಯ

ಜಾತಿಗೆ ಕೆಟ್ಟು, ಸಾಮಾನ್ಯ ವಿಪ್ರನಾದುದರಿಂದ, ನನ್ನ ಹಗೆ ತೀರಿತು. ಹಲ್ಲಿಲ್ಲದ ಹಾವನ್ನು ಮತ್ತೇಕೆ ಹೊಡೆಯಲಿ? ನಿನ್ನ ಕೃಪೆಯು ಸದಾ ನಮ್ಮ ಮೇಲಿರಲಿ! ಹೋಗಿ ಬರುವೆನು' ಎಂದು ಬೀಳ್ಕೊಂಡನು. ಧರ್ಮರಾಜ! ಇಂತು ಮಹಾನುಭಾವನಾದ ಭಾರ್ಗವನ ವಚನದಿಂದ ವಿಪ್ರನಾಗಿ ವೀತಹವ್ಯನು, ಗೃತ್ಸಮದನೆಂಬ ಸುತನನ್ನು ಪಡೆದನು. ಆತನ ವಂಶದಲ್ಲಿ ಸುತ್ತೇಜ, ವರ್ಚಸ, ನಿಹವ್ಯ, ವಿತತ್ಯ, ಸತ್ಯ, ವಾಗೀಂದ್ರ, ಪ್ರಮತಿ, ರುರು, ಚ್ಯವನ, ಶುನಕ, ಶೌನಕರಾದಿಯಾದ ಮಹಾದ್ವಿಜರು ಪುಟ್ಟಿ ವಿದ್ಯಾಮೌಕ್ತಿಕ ಮಾಲಾಲಂಕೃತರಾಗಿ ಮೆರೆದರು.'

## ೨. ಸೌಪರ್ಣಾಖ್ಯಾನ

ಧರ್ಮರಾಜನು 'ತಾತ! ದೈವಪುರುಷಕಾರಗಳಲ್ಲಿ ಯಾವುದು ಅಧಿಕ' ವೆಂದು ಕೇಳಿದನು. ಭೀಷ್ಮನಿಂತೆಂದನು: 'ದೈವವೇ ಬಲವತ್ತರವೆಂದು ತಿಳಿ! ಆದರೆ ಪುರುಷಕಾರವೇ ಇಲ್ಲದಿರೆ, ದೈವವು ತಾನಾಗಿ, ಫಲವನ್ನು ಕೊಡಲಾರದು. ದೈವವು ಬೀಜವಾದರೆ, ಪುರುಷಕಾರವು ಕ್ಷೇತ್ರವೆನಿಸುವುದು. ದೈವಪುರುಷಕಾರಗಳ ಸಮ್ಮಿಳನದಿಂದ ಕರ್ಮವು ಫಲಿಸುವುದು. ಬೀಜವೇ ಇಲ್ಲದಿರೆ ಎಂತಹ ಉರ್ವರೆಯು ಫಲವಂತವಾಗದು. ದೈವಾನುಕೂಲ್ಯವು ಶೀಲದಿಂದಲು, ಪೂರ್ವಕೃತ ಪುಣ್ಯದಿಂದಲು ಲಭಿಸುವುದು. ಆದುದರಿಂದ ಮನುಜನ ಸದಾ ಸತ್ಕರ್ಮಾನುಷ್ಠಾನ ತತ್ಪರನೂ ಹರಿಭಕ್ತನೂ ಆಗಿರಬೇಕು.

ಧರ್ಮರಾಜನು 'ಪೂಜ್ಯನೇ! ಸತ್ಕರ್ಮಗಳಿಂದ ಆಗುವ ಫಲವೇನೆ 'ಂದು ಕೇಳಿದನು. ಭೀಷ್ಮನಿಂತೆಂನು:

'ಎಲ್ಲ ಪುಣ್ಯಗಳಿಗೂ ಮಿಗಿಲಾದ ಪುಣ್ಯವೆಂದರೆ ಹಾದಿ ನಡೆದು ಬಂದ ಅತಿಥಿಗೆ ನೀಡುವ ಅನ್ನದಾನವು. ಅಗ್ನಿಹೋತ್ರವನ್ನಿಟ್ಟವನು ಪುರುಷಶ್ರೇಷ್ಠನಾಗುವನು. ಮೌನಕ್ಕೆ ಫಲವಾಗಿದೆ ಪರಮಜ್ಞಾನ; ತಪಸ್ಸಿಗೆ ಫಲವು ತೇಜಸ್ಸು; ಯಾವ ವಸ್ತು ದಾನದಿಂದ ಆಯಾ ವಸ್ತುಗಳ ಭೋಗಸಿದ್ಧಿ; ಅಹಿಂಸೆಗೆ ರೂಪಬಲಗಳು. ಬ್ರಹ್ಮಚರ್ಯದ ಫಲವು ದೀರ್ಘಾಯುವು; ಉಪವಾಸಫಲವು ಚಿತ್ತಶುದ್ಧಿಯು; ವೇದಪಠನಕ್ಕೆ ಸುಗತಿ ಸುಕೀರ್ತಿಗಳು, ವೇದಾರ್ಥವಿಚಾರಕ್ಕೆ ಸದ್ಗತಿ ಮೋಕ್ಷಗಳು; ತೃಷ್ಣೆ ಬಿಡುವುದು ಶ್ರೀಹರಿ ಪ್ರೀತಿಫಲಕವಾಗಿದೆ. ಕೇಳು! ಜರೆಯು ಮೈಕವಿದು, ಕೂದಲು ಬೆಳ್ಳಗಾಗುವುದು; ಹಲ್ಲು ಬೀಳುವುದು; ಕಿವಿ ಕೇಳಸದು; ಕಣ್ಣು ಮಂಜಾಗುವುದು; ಇಂದ್ರಿಯ ಶಕ್ತಿಗಳು ಕುಂಠಿತವಾಗುವವು; ಆದರೂ ತೃಷ್ಣೆಮಾತ್ರ ಕಡಿಮೆಯಾಗದು. ಪ್ರಾಣಗಳಿಂದ ಕೂಡಿ ಹೋಗುವ ರೋಗವದು. ಅಲ್ಪರು ತೃಷ್ಣಾ ಪಾಶವನ್ನು ಕಡಿದು ಕೊಳ್ಳಲಾರದೆ, ನಿರಂತರ ದುಃಖಿಗಳಾಗಿರುವರು. ತೃಷ್ಣೆಯನ್ನು ಬಿಟ್ಟವನು ಕರ್ಮಲೇಪವನ್ನು ಹೊಂದನು.'

ಧರ್ಮರಾಜನು ಆಶ್ರಿತರು ಆಶ್ರಯದಾತನನ್ನು ಎಂತು ನೋಡಬೇಕೆ 'ಂದು ಕೇಳಿದನು. ಭೀಷ್ಮನು ಆಶ್ರಿತ ಕರ್ತವ್ಯವನ್ನು ನಿರೂಪಿಸಲು ಶುಕಮಹೀಜ ಚರಿತೆಯನ್ನು ನಿರೂಪಿಸಿದನು.

'ಕಾಶೀದೇಶದಲ್ಲಿ ಒಬ್ಬ ಕಿರಾತನಿದ್ದನು. ಅವನೊಂದು ದಿನ ಬೇಟೆಗೆಂದು ಹೋದಾಗ, ಅರಣ್ಯದಲ್ಲಿದ್ದ ಮೃಗಕ್ಕೆಂದು ಬಿಟ್ಟ ವಿಷಬಾಣವು ಒಂದು ಮಾವಿನ ಗಿಡಕ್ಕೆ ತಾಕಿತು. ಆ

ವಿಷವೇರಿದ ಮಹಾವೃಕ್ಷವು ಕೆಲದಿನಗಳಲ್ಲಿ ಒಣಗಿ ನಿಂತಿತು. ಫಲಪುಷ್ಪಭರಿತವಾಗಿದ್ದ ಮಾವಿನ ಮರವು ಬೆಂಡಾಯಿತು. ಆ ಮರದ ಕೋಟರದಲ್ಲಿ ಒಂದು ಗಿಳಿ ಬಿಡದೆ ವಾಸಮಾಡಿತ್ತು. ಮರವು ಒಣಗಿದರೂ ಆಶ್ರಯ ಭಕ್ತಿಯಿಂದ ಗಾಳಿ, ಮಳೆಗಳಲ್ಲಿಯೂ ಬಿಡದೆ ಇದ್ದ ಗಿಳಿಯನ್ನು ನೋಡಿ, ದೇವೇಂದ್ರನು ಮೆಚ್ಚಿದನು. ಮನುಜರೂಪದಿಂದ ಬಂದು, 'ಶುಕರಾಜ! ಈ ಗಿಡವು ಸತ್ತು ಬೆಂಡಾಗಿದೆ. ಹೂವಿಲ್ಲ; ಹಣ್ಣಿಲ್ಲ; ಚಿಗುರೆಲೆಗಳಾದರೂ ಇಲ್ಲ. ಇದನ್ನು ಆಶ್ರಯಿಸಿ ನಿಂತ ನಿನಗೇನು ಪ್ರಯೋಜನ? ಅರಣ್ಯದಲ್ಲಿ ಬೇಕಾದಷ್ಟು ಶ್ರೇಷ್ಠ ಫಲ ತರುಗಳಿವೆ. ಅಲ್ಲಿಗೆ ಹೋಗಬಾರದೇ?' ಎಂದು ಕೇಳಿದ ಶಕ್ರನಿಗೆ. ಶುಕ ವಿಂತೆಂದಿತು: 'ದೇವೇಂದ್ರ! ನೀನಾರೆಂದು ಪುರಾಕೃತ ಸುಕೃತದಿಂದ ಅರಿತಿರುವೆನು. ಈ ಮರವು ಫಲಸಮೃದ್ಧವಾಗಿದ್ದಾಗ ಆಶ್ರಯವನ್ನು ಕೊಟ್ಟು, ನೆರಳು, ಚಿಗುರೆಲೆ, ಹೂವು, ಹಣ್ಣುಗಳನಿತ್ತಿತು. ಕರ್ಮವಶವಾಗಿ ಅದು ಇಂದು ಬಾಡಿತೆಂದು, ನಾನು ಅದನ್ನು ಬಿಡಬಹುದೇ? ಬಿಟ್ಟರೆ ಕೃತಘ್ನನಾಗನೇ? ಕೃತಘ್ನನಿಗೆ ಸದ್ಗತಿಯುಂಟೇ? ನಾನು ಇಲ್ಲಿಯೇ ನೆಲೆಸಿ, ಇದರೊಡನೆ ಸಾಯುವೆನು.'

ಗಿಳಿಯ ಮಾತಿಗೆ ಮೆಚ್ಚಿ ಮಹೇಂದ್ರನು 'ಕೀರರಾಜ! ಬೇಕಾದ ವರವನ್ನು ಬೇಡು! ನಿನ್ನ ಕೃತಜ್ಞತೆಗೆ ಸಂತಸಪಟ್ಟಿರುವೆನು' ಎಂದನು. ಗಿಳಿಯು 'ಮಹೇಂದ್ರ! ಈ ಮರವು ಮತ್ತೆ ಬದುಕಲಿ!' ಎಂದು ಬೇಡಿತು. ಅಮರೇಶನು ಅಮೃತ ಸೇಚನದಿಂದ ಆ ಮರವನ್ನು ಉಜ್ಜೀವಿಸಿ, ಗಿಳಿಗೆ ಆನಂದವನ್ನುಂಟುಮಾಡಿದನು. ನೋಡಿದೆಯಾ ಧರ್ಮರಾಜ! ಸದಾಶ್ರಿತರು ಗಿಳಿಯಂತೆ ಆಶ್ರಯದಾತನನ್ನು ಮರೆಯದೆ ಸಮಸುಖ ದುಃಖರಾಗಿದ್ದು, ಆತನನ್ನು ಕಾಪಾಡುವರು.'

ಧರ್ಮರಾಜನು 'ಗಂಗಾತನಯ! ಭೂಪತಿಗೆ ಯಾರು ಪೂಜ್ಯರು? ಎಂತು?' ಎಂದು ಕೇಳಲು, ಭೀಷ್ಮನಿಂತೆಂದನು: 'ರಾಜನ್! ವಿಪ್ರರಕಿಂತ ಪೂಜ್ಯರಿಲ್ಲ. ಅವರಲ್ಲಿ ತಪಸ್ಸು, ವೇದಾಧ್ಯಯನ, ಶಮ, ದಮಾದಿ ಗುಣವಂತರಾದ ಬ್ರಾಹ್ಮಣರು ತಮ್ಮ ತಪೋಬಲದಿಂದ ಉಭಯಲೋಕ ಸುಖಗಳನ್ನೂ ಸಂಪಾದಿಸಿಕೊಡಬಲ್ಲರು. ಅವರು ಉತ್ತಮಪಾತ್ರರೆಂದು ತಿಳಿದು, ಸಮ್ಮಾನಿಸು! ಕೌಂತೇಯ! ಬ್ರಾಹ್ಮಣರನ್ನು ಭರಿಸು! ಮತ್ತೆ ಭರಿಸು! ರಾಜನು ವಿಪ್ರನ ವಿಷಯದಲ್ಲಿ ಮಗನಾಗಿ, ಸೇವಕನಾಗಿ, ಶಿಷ್ಯನಾಗಿ ವರ್ತಿಸಿ, ಅಗ್ನಿಯನ್ನಂತೆ ವಿಪ್ರನನ್ನು ಗೌರವಿಸಬೇಕು.

ವಿಪ್ರರನ್ನು ಅವಮಾನಿಸಿದವನ ಪೂರ್ವಪುಣ್ಯವೆಲ್ಲವು ನಾಶವಾಗುವುದು. ವಿಪ್ರಮುಖದಲ್ಲಿ ಹಾಕಿದ ಅನ್ನಾಹುತಿಯು ಅಗ್ನಿಹೋತ್ರದಲ್ಲಿ ಮಾಡಿದ ಯಜ್ಞದಕಿಂತಲು ಪುಣ್ಯತರವಾಗಿವೆ. ವಿಪ್ರರು ಪೂಜ್ಯತಮರೆಂದು ಹೇಳಲು ಅವರಲ್ಲಿರುವ ವಿಷ್ಣುಭಕ್ತಿಯೇ ಕಾರಣ. ವಿಷ್ಣುಭಕ್ತನಲ್ಲದವನು ವಿಪ್ರನೇ ಅಲ್ಲ. ವಿಷ್ಣುಸರ್ವೋತ್ತಮತ್ವವನ್ನು ಹೇಳದ ವಿದ್ಯೆಯು ವಿದ್ಯೆಯೇ ಅಲ್ಲ.

ಹಿಂದೆ ಮದ್ರೇಶನು ಸಾತ್ಯವತೇಯನನ್ನು ನೋಡಿ, 'ಮುನಿನಾಥ! ಉತ್ತಮ ಜ್ಞಾನವಾವುದು' ಎಂದು ಕೇಳಿದನು. ಶ್ರೀವ್ಯಾಸದೇವನು 'ಶಲ್ಯರಾಜ! ವಿಷ್ಣು ಸರ್ವೋತ್ತಮತ್ವಜ್ಞಾನವೇ ನಿಜವಾದ ಜ್ಞಾನವು. ಆತನು ಯಜ್ಞಮೂರ್ತಿಯು, ಯಜ್ಞಫಲಪ್ರದನು,

ಜಾತಿಗೆ ಕೆಟ್ಟು, ಸಾಮಾನ್ಯ ವಿಪ್ರನಾದುದರಿಂದ, ನನ್ನ ಹಗೆ ತೀರಿತು. ಹಲ್ಲಿಲ್ಲದ ಹಾವನ್ನು ಮತ್ತೇಕೆ ಹೊಡೆಯಲಿ? ನಿನ್ನ ಕೃಪೆಯು ಸದಾ ನಮ್ಮ ಮೇಲಿರಲಿ! ಹೋಗಿ ಬರುವೆನು' ಎಂದು ಬೀಳ್ಕೊಂಡನು. ಧರ್ಮರಾಜ! ಇಂತು ಮಹಾನುಭಾವನಾದ ಭಾರ್ಗವನ ವಚನದಿಂದ ವಿಪ್ರನಾಗಿ ವೀತಹವ್ಯನು, ಗೃತ್ಸಮದನೆಂಬ ಸುತನನ್ನು ಪಡೆದನು. ಆತನ ವಂಶದಲ್ಲಿ ಸುತ್ತೇಜ, ವರ್ಚ್ಚ, ನಿಹವ್ಯ, ವಿತತ್ಯ, ಸತ್ಯ, ವಾಗೀಂದ್ರ, ಪ್ರಮತಿ, ರುರು, ಚ್ಯವನ, ಶುನಕ, ಶೌನಕರಾದಿಯಾದ ಮಹಾದ್ವಿಜರು ಪುಟ್ಟಿ ವಿದ್ಯಾಮೌಕ್ತಿಕ ಮಾಲಾಲಂಕೃತರಾಗಿ ಮೆರೆದರು.'

## ೨. ಸೌಪರ್ಣಾಖ್ಯಾನ

ಧರ್ಮರಾಜನು 'ತಾತ! ದೈವಪುರುಷಕಾರಗಳಲ್ಲಿ ಯಾವುದು ಅಧಿಕ' ವೆಂದು ಕೇಳಿದನು. ಭೀಷ್ಮನಿಂತೆಂದನು: 'ದೈವವೇ ಬಲವತ್ತರವೆಂದು ತಿಳಿ! ಆದರೆ ಪುರುಷಕಾರವೇ ಇಲ್ಲದಿರೆ, ದೈವವು ತಾನಾಗಿ, ಫಲವನ್ನು ಕೊಡಲಾರದು. ದೈವವು ಬೀಜವಾದರೆ, ಪುರುಷಕಾರವು ಕ್ಷೇತ್ರವೆನಿಸುವುದು. ದೈವಪುರುಷಕಾರಗಳ ಸಮ್ಮಿಳನದಿಂದ ಕರ್ಮವು ಫಲಿಸುವುದು. ಬೀಜವೇ ಇಲ್ಲದಿರೆ ಎಂತಹ ಉರ್ವರೆಯು ಫಲವಂತವಾಗದು. ದೈವಾನುಕೂಲ್ಯವು ಶೀಲದಿಂದಲು, ಪೂರ್ವಕೃತ ಪುಣ್ಯದಿಂದಲು ಲಭಿಸುವುದು. ಆದುದರಿಂದ ಮನುಜನ ಸದಾ ಸತ್ಕರ್ಮಾನುಷ್ಠಾನ ತತ್ಪರನೂ ಹರಿಭಕ್ತನೂ ಆಗಿರಬೇಕು.

ಧರ್ಮರಾಜನು 'ಪೂಜ್ಯನೇ! ಸತ್ಕರ್ಮಗಳಿಂದ ಆಗುವ ಫಲವೇನೆ 'ಂದು ಕೇಳಿದನು. ಭೀಷ್ಮನಿಂತೆಂನು:

'ಎಲ್ಲ ಪುಣ್ಯಗಳಿಗೂ ಮಿಗಿಲಾದ ಪುಣ್ಯವೆಂದರೆ ಹಾದಿ ನಡೆದು ಬಂದ ಅತಿಥಿಗೆ ನೀಡುವ ಅನ್ನದಾನವು. ಅಗ್ನಿಹೋತ್ರವನ್ನಿಟ್ಟವನು ಪುರುಷಶ್ರೇಷ್ಠನಾಗುವನು. ಮೌನಕ್ಕೆ ಫಲವಾಗಿದೆ ಪರಮಜ್ಞಾನ; ತಪಸ್ಸಿಗೆ ಫಲವು ತೇಜಸ್ಸು; ಯಾವ ವಸ್ತು ದಾನದಿಂದ ಆಯಾ ವಸ್ತುಗಳ ಭೋಗಸಿದ್ಧಿ; ಅಹಿಂಸೆಗೆ ರೂಪಬಲಗಳು. ಬ್ರಹ್ಮಚರ್ಯದ ಫಲವು ದೀರ್ಘಾಯುವು; ಉಪವಾಸಫಲವು ಚಿತ್ತಶುದ್ಧಿಯು; ವೇದಪಠನಕ್ಕೆ ಸುಗತಿ ಸುಕೀರ್ತಿಗಳು, ವೇದಾರ್ಥವಿಚಾರಕ್ಕೆ ಸದ್ಗತಿ ಮೋಕ್ಷಗಳು; ತೃಷ್ಣೆ ಬಿಡುವುದು ಶ್ರೀಹರಿ ಪ್ರೀತಿಫಲಕವಾಗಿದೆ. ಕೇಳು! ಜರೆಯು ಮೈಕವಿದು, ಕೂದಲು ಬೆಳ್ಳಗಾಗುವುದು; ಹಲ್ಲು ಬೀಳುವುದು; ಕಿವಿ ಕೇಳಸದು; ಕಣ್ಣು ಮಂಜಾಗುವುದು; ಇಂದ್ರಿಯ ಶಕ್ತಿಗಳು ಕುಂಠಿತವಾಗುವವು; ಆದರೂ ತೃಷ್ಣೆಮಾತ್ರ ಕಡಿಮೆಯಾಗದು. ಪ್ರಾಣಗಳಿಂದ ಕೂಡಿ ಹೋಗುವ ರೋಗವದು. ಅಲ್ಪರು ತೃಷ್ಣಾ ಪಾಶವನ್ನು ಕಡಿದು ಕೊಳ್ಳಲಾರದೆ, ನಿರಂತರ ದುಃಖಿಗಳಾಗಿರುವರು. ತೃಷ್ಣೆಯನ್ನು ಬಿಟ್ಟವನು ಕರ್ಮಲೇಪವನ್ನು ಹೊಂದನು.'

ಧರ್ಮರಾಜನು ಆಶ್ರಿತರು ಆಶ್ರಯದಾತನನ್ನು ಎಂತು ನೋಡಬೇಕೆ 'ಂದು ಕೇಳಿದನು. ಭೀಷ್ಮನು ಆಶ್ರಿತ ಕರ್ತವ್ಯವನ್ನು ನಿರೂಪಿಸಲು ಶುಕಮಹೀಜ ಚರಿತೆಯನ್ನು ನಿರೂಪಿಸಿದನು.

'ಕಾಶೀದೇಶದಲ್ಲಿ ಒಬ್ಬ ಕಿರಾತನಿದ್ದನು. ಅವನೊಂದು ದಿನ ಬೇಟೆಗೆಂದು ಹೋದಾಗ, ಅರಣ್ಯದಲ್ಲಿದ್ದ ಮೃಗಕ್ಕೆಂದು ಬಿಟ್ಟ ವಿಷಬಾಣವು ಒಂದು ಮಾವಿನ ಗಿಡಕ್ಕೆ ತಾಕಿತು. ಆ

ವಿಷವೇರಿದ ಮಹಾವೃಕ್ಷವು ಕೆಲದಿನಗಳಲ್ಲಿ ಒಣಗಿ ನಿಂತಿತು. ಫಲಪುಷ್ಪಭರಿತವಾಗಿದ್ದ ಮಾವಿನ ಮರವು ಬೆಂಡಾಯಿತು. ಆ ಮರದ ಕೋಟರದಲ್ಲಿ ಒಂದು ಗಿಳಿ ಬಿಡದೆ ವಾಸಮಾಡಿತ್ತು. ಮರವು ಒಣಗಿದರೂ ಆಶ್ರಯ ಭಕ್ತಿಯಿಂದ ಗಾಳಿ, ಮಳೆಗಳಲ್ಲಿಯೂ ಬಿಡದೆ ಇದ್ದ ಗಿಳಿಯನ್ನು ನೋಡಿ, ದೇವೇಂದ್ರನು ಮೆಚ್ಚಿದನು. ಮನುಜರೂಪದಿಂದ ಬಂದು, 'ಶುಕರಾಜ! ಈ ಗಿಡವು ಸತ್ತು ಬೆಂಡಾಗಿದೆ. ಹೂವಿಲ್ಲ; ಹಣ್ಣಿಲ್ಲ; ಚಿಗುರೆಲೆಗಳಾದರೂ ಇಲ್ಲ. ಇದನ್ನು ಆಶ್ರಯಿಸಿ ನಿಂತ ನಿನಗೇನು ಪ್ರಯೋಜನ? ಅರಣ್ಯದಲ್ಲಿ ಬೇಕಾದಷ್ಟು ಶ್ರೇಷ್ಠ ಫಲ ತರುಗಳಿವೆ. ಅಲ್ಲಿಗೆ ಹೋಗಬಾರದೇ?' ಎಂದು ಕೇಳಿದ ಶಕ್ರನಿಗೆ. ಶುಕ ವಿಂತೆಂದಿತು: 'ದೇವೇಂದ್ರ! ನೀನಾರೆಂದು ಪುರಾಕೃತ ಸುಕೃತದಿಂದ ಅರಿತಿರುವೆನು. ಈ ಮರವು ಫಲಸಮೃದ್ಧವಾಗಿದ್ದಾಗ ಆಶ್ರಯವನ್ನು ಕೊಟ್ಟು, ನೆರಳು, ಚಿಗುರೆಲೆ, ಹೂವು, ಹಣ್ಣುಗಳನಿತ್ತಿತ್ತು. ಕರ್ಮವಶವಾಗಿ ಅದು ಇಂದು ಬಾಡಿತೆಂದು, ನಾನು ಅದನ್ನು ಬಿಡಬಹುದೇ? ಬಿಟ್ಟರೆ ಕೃತಘ್ನನಾಗೆನೇ? ಕೃತಘ್ನನಿಗೆ ಸದ್ಗತಿಯುಂಟೇ? ನಾನು ಇಲ್ಲಿಯೇ ನೆಲೆಸಿ, ಇದರೊಡನೆ ಸಾಯುವೆನು.'

ಗಿಳಿಯ ಮಾತಿಗೆ ಮೆಚ್ಚಿ ಮಹೇಂದ್ರನು 'ಕೀರರಾಜ! ಬೇಕಾದ ವರವನ್ನು ಬೇಡು! ನಿನ್ನ ಕೃತಜ್ಞತೆಗೆ ಸಂತಸಪಟ್ಟಿರುವೆನು' ಎಂದನು. ಗಿಳಿಯು 'ಮಹೇಂದ್ರ! ಈ ಮರವು ಮತ್ತೆ ಬದುಕಲಿ!' ಎಂದು ಬೇಡಿತು. ಅಮರೇಶನು ಅಮೃತ ಸೇಚನದಿಂದ ಆ ಮರವನ್ನು ಉಜ್ಜೀವಿಸಿ, ಗಿಳಿಗೆ ಆನಂದವನ್ನುಂಟುಮಾಡಿದನು. ನೋಡಿದೆಯಾ ಧರ್ಮರಾಜ! ಸದಾಶ್ರಿತರು ಗಿಳಿಯಂತೆ ಆಶ್ರಯದಾತನನ್ನು ಮರೆಯದೆ ಸಮಸುಖ ದುಃಖರಾಗಿದ್ದು, ಆತನನ್ನು ಕಾಪಾಡುವರು.'

ಧರ್ಮರಾಜನು 'ಗಂಗಾತನಯ! ಭೂಪತಿಗೆ ಯಾರು ಪೂಜ್ಯರು? ಎಂತು?' ಎಂದು ಕೇಳಲು, ಭೀಷ್ಮನಿಂತೆಂದನು: 'ರಾಜನ್! ವಿಪ್ರರಕಿಂತ ಪೂಜ್ಯರಿಲ್ಲ. ಅವರಲ್ಲಿ ತಪಸ್ಸು, ವೇದಾಧ್ಯಯನ, ಶಮ, ದಮಾದಿ ಗುಣವಂತರಾದ ಬ್ರಾಹ್ಮಣರು ತಮ್ಮ ತಪೋಬಲದಿಂದ ಉಭಯಲೋಕ ಸುಖಗಳನ್ನೂ ಸಂಪಾದಿಸಿಕೊಡಬಲ್ಲರು. ಅವರು ಉತ್ತಮಪಾತ್ರರೆಂದು ತಿಳಿದು, ಸಮ್ಮಾನಿಸು! ಕೌಂತೇಯ! ಬ್ರಾಹ್ಮಣರನ್ನು ಭರಿಸು! ಮತ್ತೆ ಭರಿಸು! ರಾಜನು ವಿಪ್ರನ ವಿಷಯದಲ್ಲಿ ಮಗನಾಗಿ, ಸೇವಕನಾಗಿ, ಶಿಷ್ಯನಾಗಿ ವರ್ತಿಸಿ, ಅಗ್ನಿಯನ್ನಂತೆ ವಿಪ್ರನನ್ನು ಗೌರವಿಸಬೇಕು.

ವಿಪ್ರರನ್ನು ಅವಮಾನಿಸಿದವನ ಪೂರ್ವಪುಣ್ಯವೆಲ್ಲವು ನಾಶವಾಗುವುದು. ವಿಪ್ರಮುಖದಲ್ಲಿ ಹಾಕಿದ ಅನ್ನಾಹುತಿಯು ಅಗ್ನಿಹೋತ್ರದಲ್ಲಿ ಮಾಡಿದ ಯಜ್ಞದಕಿಂತಲು ಪುಣ್ಯತರವಾಗಿವೆ. ವಿಪ್ರರು ಪೂಜ್ಯತಮರೆಂದು ಹೇಳಲು ಅವರಲ್ಲಿರುವ ವಿಷ್ಣುಭಕ್ತಿಯೇ ಕಾರಣ. ವಿಷ್ಣುಭಕ್ತನಲ್ಲದವನು ವಿಪ್ರನೇ ಅಲ್ಲ. ವಿಷ್ಣುಸರ್ವೋತ್ತಮತ್ವವನ್ನು ಹೇಳದ ವಿದ್ಯೆಯು ವಿದ್ಯೆಯೇ ಅಲ್ಲ.

ಹಿಂದೆ ಮದ್ರೇಶನು ಸಾತ್ಯವತೇಯನನ್ನು ನೋಡಿ, 'ಮುನಿನಾಥ! ಉತ್ತಮ ಜ್ಞಾನವಾವುದು' ಎಂದು ಕೇಳಿದನು. ಶ್ರೀವ್ಯಾಸದೇವನು 'ಶಲ್ಯರಾಜ! ವಿಷ್ಣು ಸರ್ವೋತ್ತಮತ್ವಜ್ಞಾನವೇ ನಿಜವಾದ ಜ್ಞಾನವು. ಆತನು ಯಜ್ಞಮೂರ್ತಿಯು, ಯಜ್ಞಫಲಪ್ರದನು,

ಯಜ್ಞಪ್ರಧಾನ ದೇವತೆಯು ಆಗಿರುವನು. ಆತನೇ ವಸುದೇವ ದೇವಕಿಯರ ಮಗನಾಗಿ ಕೃಷ್ಣನಾಮದಿಂದವತರಿಸಿರುವನು. ಶ್ರೀಕೃಷ್ಣನನ್ನು ಸಾಮಾನ್ಯ ಮನುಜನೆಂದು ತಿಳಿಯಬೇಡ! ವೇದಮಯನು, ವೇದವೇದ್ಯನು, ವೇದಾರ್ಥವಿಜ್ಞಾನಿಯು. ವೇದಪ್ರಿಯನು ಆದ ವಿಷ್ಣುವೇ ಶ್ರೀಕೃಷ್ಣನು' ಎಂದು ಹೇಳಿದನು. ಶಲ್ಯನು ಅಂತೆಯೇ ತಿಳಿದು, ಶ್ರೀಹರಿಯ ಸಂಕಲ್ಪದಂತೆ ಕೌರವರ ಕಡೆ ಸೇರಿ, ಶ್ರೀಕೃಷ್ಣಸೂಚನೆಯಂತೆ ಕರ್ಣಸಾರಥಿಯಾಗಿ, ತನ್ನ ಸೇವೆ ಸಲ್ಲಿಸಿ, ಕೃತಾರ್ಥನಾದನು.

ಧರ್ಮರಾಜ! ಶ್ರೀಕೃಷ್ಣನ ಮಹಿಮೆಯು ನಿನಗೆ ತಿಳಿಯದಿಲ್ಲ. ಆದರೂ ನನ್ನ ಮನೋವಚನ ಶುದ್ಧಿಗಾಗಿ ಮತ್ತೆ ನಿನಗರುಹಿದೆನು. ಗರುಡಗಮನನಾದ ಪುರುಷೋತ್ತಮನಿಗೆ ನಮಸ್ಕಾರವು!

ಧರ್ಮರಾಜನು, 'ತಾತ! ಗರುಡನು ಮಹಾವಿಷ್ಣುಭಕ್ತನೆಂಬರು. ಅಂತಹನ ಮಹಾ ಮಹಿಮೆಯನ್ನು ನನಗೆ ತಿಳಿಸಿಕೊಡು!' ಎಂದನು. ಭೀಷ್ಮನಿಂತೆಂದನು:

'ಕಶ್ಯಪನಿಗೆ ಕದ್ರೂವಿನತೆಯರು ಸತಿಯರು. ಆತನು ಅವರಿಗೆ ವರವನ್ನು ಬೇಡಿರೆಂದನು. ಸತಿಯರು ಸಂತಾನವನ್ನು ಬೇಡಿದರು. 'ಸರಿ' ಎಂದು ವರವಿತ್ತು ಕಶ್ಯಪನು ತೆರಳಿದನು. ಗರ್ಭವತಿಯರಾದ ಸತಿಯರು ಕಾಲದಲ್ಲಿ ಪ್ರಸವಿಸಿದರು. ಕದ್ರುವು ಸಾವಿರ ತತ್ತಿಗಳನ್ನೂ, ವಿನತೆ ಎರಡು ತತ್ತಿಗಳನ್ನೂ ಇಟ್ಟು, ಕುಂಡಗಳಲ್ಲಿ ಭದ್ರವಾಗಿ ಕಾಪಾಡುತ್ತಿದ್ದರು. ಐದುನೂರು ವರ್ಷಗಳಾದವು. ಕದ್ರುವಿನ ತತ್ತಿಗಳಿಂದ ಸಾವಿರ ಸರ್ಪಗಳು ಹೊರಬಂದವು. ವಿನತೆಯ ತತ್ತಿಗಳು ಕಲ್ಲಿನಂತಿದ್ದವು. ವಿನತೆಯು ಅಸೂಯೆಯಿಂದ ಒಂದು ಗುಡ್ಡನ್ನು ಒಡೆದಳು. ಅದರಲ್ಲಿಂದ ಪೂರ್ವಾಂಗಮಾತ್ರಯುತನಾದ ಪಕ್ಷಿರಾಜನು ಹೊರಬಂದನು. ಅವನ ಅಂಗವೈಕಲ್ಯವನ್ನು ಕಂಡು ರೋದಿಸುವ ವಿನತೆಯನ್ನು ಕಂಡು, ಅನೂರನು 'ಅಮ್ಮ! ಅನ್ಯಾಯಮಾಡಿದೆ! ಮಹಾಬಲಶಾಲಿಗಳಾದ ಇಬ್ಬರು ಸುತರು ನಿನಗಾಗುತ್ತಿದ್ದರು. ಒಂದು ಸಾವಿರ ವರ್ಷ ತಾಳದೆ, ಸವತಿಮತ್ಸರದಿಂದ ನನ್ನನ್ನು ತಿವಿದು, ವಿಕಲಾಂಗನನ್ನಾಗಿ ಮಾಡಿದೆ! ಯಾವ ಸವತಿಯಲ್ಲಿ ಅಸೂಯೆಯಿಂದ ಇಂತಹ ಅವಿವೇಕವನ್ನು ಮಾಡಿದೆಯೋ ಅದೇ ಸವತಿಯ ದಾಸಿಯಾಗು! ಇನ್ನು ಐದು ನೂರು ವರ್ಷ ತಾಳು! ಇನ್ನೊಂದು ಗುಡ್ಡಿನಿಂದ ಹೊರಬರುವ ನನ್ನ ತಮ್ಮನಿಂದ ನಿನ್ನ ದಾಸ್ಯ ನಿವೃತ್ತಿಯಾಗುವುದು. ಎಂದು ಶಾಪ ವಿಶಾಪಗಳನ್ನಿತ್ತು, ಅನೂರನು ಸೂರ್ಯಸಾರಥಿಯಾಗಪೋದನು.

ವಿಧಿಸಂಕಲ್ಪಕ್ಕೆ ತಲೆಬಾಗಿ, ವಿನತೆಯು ತನ್ನ ಸವತಿಯಾದ ಕದ್ರುವಿಗೆ ದಾಸಿಯಾಗಿ ಸೇವಿಸುತ್ತಿದ್ದಳು.

ಒಂದು ದಿನ ಕದ್ರುವಿನತೆಯರು ಕಡಲ ದಡದಲ್ಲಿ ವಿಹರಿಸುತ್ತಿದ್ದರು. ಅಲ್ಲಿ ಉಚ್ಚೈಶ್ರವವೆಂಬ ಸುರವರನ ತುರಗವನ್ನವರು ಕಂಡರು. ವಿನತೆಯು 'ತಂಗಿ! ನೋಡಲ್ಲಿ! ಎಷ್ಟು ಬೆಳ್ಳಗಿದೆ ಆ ಕುದುರೆ! ಚಂದ್ರನ ಬೆಳ್ದಿಂಗಳಿನಿಂದ ಮಾಡಿಹರೋ? ಅಥವಾ ಕ್ಷೀರವಾರಿಧಿಯ ನೊರೆಯನ್ನು ಕಾಶಿಮಾಡಿದ ಗಟ್ಟಿಯಿಂದ ಅಚ್ಚುಹೊಯ್ದಿರುವರೋ? ಇಲ್ಲವೆ ಹರಜಟಾಜಾಲದಿಂದಿಳಿದುಬರುವ ಗಂಗೆಯ ಧಾವಳ್ಯವನ್ನಾರಿಸಿ ತಂದು ನಿರ್ಮಿಸಿರುವರೋ?

ಎಂಬಂತಿದೆ' ಎಂದಳು. ಕದ್ರುವು 'ಅಲ್ಲ' ಬಾಲವು ಕಪ್ಪಾಗಿದೆ ಎಂದಳು. ಸವತಿ ಯಾಡಿದುದನೆಲ್ಲ ಅಲ್ಲವೆಂಬುವದೇ ಸತೀಲಕ್ಷಣವಲ್ಲವೇ? ಇಂತು ಅವರು ವಾದಮಾಡಿ, ಕೊನೆಗೆ ಯಾರಮಾತು ಸುಳ್ಳೋ ಅವಳು ಇನ್ನೊಬ್ಬಳಿಗೆ ದಾಸಿಯಾಗಬೇಕೆಂದು ಪಣವಿಟ್ಟು, 'ನಾಳೆ ಬಂದು ನೋಡುವು' ದೆಂದ ಕದ್ರುವಿನ ವಚನದಂತೆ ಮನೆಗೆ ನಡೆದರು.

ಅಂದು ರಾತ್ರಿ ಕದ್ರುವು ತನ್ನ ಸುತರನ್ನು ಕರೆದು ನಡೆದುದೆಲ್ಲವನ್ನೂ ವಿವರಿಸಿ, ತಾನು ದಾಸಿಯಾಗುವುದನ್ನು ತಪ್ಪಿಸಲು ಅವರೆಲ್ಲರೂ ಕರಿಯ ಕೂದಲಿನಂತಾಗಿ, ಕುದುರೆಯ ಬಾಲಕ್ಕೆ ಜೋತಾಡುತ್ತಿರಬೇಕೆಂದು ಆಜ್ಞಾಪಿಸಿದಳು. ಆಗ ವಾಸುಕಿ ಪ್ರಮುಖ ನಾಗರಾಜರು ಅನ್ಯಾಯವನ್ನು ಮಾಡಲಾರೆವೆಂದರು. ಕೆಲರು ಜನನಿಯನ್ನು ಪರಿತ್ಯಜಿಸಿದರು. ಕೆಲವರು ಸುಮ್ಮನಿದ್ದರು. ತನ್ನ ಮಾತನ್ನು ನಡೆಸದೆ, ತನ್ನನ್ನು ಸವತಿಗೆ ದಾಸಿಯಾಗಗೊಡುವ ತನುಜರನ್ನು ನೋಡಿ, ಕದ್ರುವು ಸಿಟ್ಟಿನಿಂದ 'ಮುಂದೆ ಜನಮೇಜಯನೆಂಬ ರಾಜನ್ಯನು ಮಾಡುವ ಸರ್ಪ ಯಾಗದಲ್ಲಿ ನೀವು ಅಗ್ನಿಕುಂಡದಲ್ಲಿ ಬಿದ್ದು ಸಾಯಿರಿ' ಎಂದು ಶಾಪವಿತ್ತಳು. ಆ ಶಾಪಕ್ಕೆ ಹೆದರಿ ಕೆಲನಾಗರು ಕುದುರೆಯ ಬಾಲದಲ್ಲಿ ಕರಿದಾರಗಳಂತಾಗಿ ಜೋತಾಡುತ್ತಿದ್ದರು. ಕದ್ರೂ-ವಿನತೆಯರು ಬಂದು ನೋಡಿದರು. ಬಾಲವು ಕಪ್ಪಾಗಿತ್ತು. ಮಾತಿನಂತೆ ವಿನತೆಯು ಕದ್ರುವಿಗೆ ದಾಸಿಯಾದಳು.

ಐನೂರು ವರ್ಷಗಳು ಕಳೆದವು. ಇನ್ನೊಂದು ಗುಡ್ಡಿನಿಂದ ಮಹಾತೇಜಸ್ವಂತನಾದ ಪುತ್ರನು ಉದಿಸಿಬಂದನು. ಅವನನ್ನೇ ಗರುಡನೆಂಬರು. ಅದ್ಭುತತೇಜನಾದ ಕಶ್ಯಪತನೂಜರು ನಾರದರಿಂದ ತನ್ನ ತಾಯಿಯ ದಾಸ್ಯವೃತ್ತಾಂತವನ್ನರಿತನು. ತಾಯಿಯಂತೆ ತಾನೂ ದಾಸನಾಗಿ ನಾಗರನ್ನು ಹೊತ್ತು ತಿರುಗುವುದವನಿಗೆ ಸಾಕಾಯಿತು. ದಾಸ್ಯಮೋಚನವೆಂತೆಂದು ಕೇಳಿದ ವಿಹಗರಾಜನಿಗೆ ಕದ್ರುವು 'ಅಮೃತವನ್ನು ತಂದು ಕೊಡು' ಎಂದಳು. 'ಸರಿ' ಎಂದು ಗರುಡನು ತನ್ನ ತಾಯಿಗೆ ವಂದಿಸಿ, 'ಅಮ್ಮ! ನಿನ್ನ ದಾಸ್ಯವನ್ನು ನೀಗುವೆನು. ಅಮೃತವನ್ನು ತಂದು ನಿನ್ನ ಸವತಿಗೆ ಕೊಡುವೆನು' ಎಂದನು. ವಿನತೆಯು ವಿನತನಾದ ಗರುಡನನ್ನಾಶೀರ್ವದಿಸಿ ಕಳಿಸಿದಳು.

ದುರ್ಭರ ಕಾರ್ಯಭಾರವನ್ನು ಹೊತ್ತ ಪಕ್ಷಿರಾಜನಿಗೆ ತಂದೆಯ ಆಶೀರ್ಬಲವೂ ದೊರೆಯಿತು. ಆತನ ಅಪ್ಪಣೆಯಂತೆ ಗರುಡನು ತನ್ನ ಹಸಿವೆಯನ್ನು ಗಜಕಚ್ಛಪ ಭಕ್ಷಣದಿಂದ ಹಿಂಗಿಸಿಕೊಂಡನು. ಅವನ್ನಿಟ್ಟು ತಿನ್ನುತ್ತಿದ್ದ ಕಾಲದಲ್ಲಿ ಕೂತ ವೃಕ್ಷಶಾಖೆಯು ಮುರಿಯಿತು. ಆ ಶಾಖೆಗೆ ಜೋತುಬಿದ್ದು, ತಪಗೈಯುತ್ತಿದ್ದ ವಾಲಖಿಲ್ಯರು ಕಾರ್ಯವಿಜಯವಾಗುವಂತೆ ಆಶೀರ್ವದಿಸಿದರು. ಮುಂದೆ ನಿಷಾದರನ್ನೂ ಭಕ್ಷಿಸಿ, ಅವರಲ್ಲಿದ್ದ ಬ್ರಹ್ಮಬಂಧುವು ಕಂಠದಲ್ಲಿ ಕೆಂಡದಂತಾಗಲು, ಅವನನ್ನು ಬಿಟ್ಟು, ಮಿಕ್ಕ ಚೋರರನ್ನು ತಿಂದು, ಅತ್ಯಂತ ಬಲವೀರ್ಯತೇಜಸ್ಸ ಮುತ್ಸಾಹಭರಿತನಾದ ಗರುಡನು ದೇವಲೋಕವನ್ನು ಸೇರಿದನು.

ಅಮೃತಕುಂಭವನ್ನು ಕಾಯುತ್ತಿದ್ದ ದೈತ್ಯ ಯಕ್ಷೋನಾಗರನ್ನು ಲೀಲಾಜಾಲವಾಗಿ ಜಯಿಸಿ, ಸುತ್ತು ಉರಿದೇಳುವ ಅಗ್ನಿಜ್ವಾಲೆಗಳನ್ನು ಉದಧಿಜಲದಿಂದಾರಿಸಿ ಗರುಡನು ಅಮೃತಕಲಶವನ್ನು ಅಪಹರಿಸಿ, ಅಲ್ಲಿಂದ ಹೊರಟನು. ಇಂತು ವಿಕ್ರಮವನ್ನು ಮೆರೆಸಿ,

ಬ್ರಹ್ಮದೇವನ ದಯದಿಂದ ಅಮೃತವನ್ನು ತಾನು ಕುಡಿಯಲಿಕ್ಕಲ್ಲದೆ, ತನ್ನ ತಾಯಿಯ ದಾಸ್ಯವನ್ನು ನೀಗಲೋಸುಗ ಅಪಹರಿಸಿ ಹೋಗುವ ಖಗರಾಜನ ಸಮುದ್ಧತಿಯನ್ನು ಸಹಿಸದೆ ಸುರರಾಜನು, ವಜ್ರಾಯುಧವನ್ನು ಪ್ರಯೋಗಿಸಿದನು. ವಜ್ರಾಯುಧವು ಗರುಡನಲ್ಲಿ ನಿರರ್ಥಕವಾಯಿತು. ಬ್ರಹ್ಮತೇಜಸ್ಸಂಪನ್ನವಾದುದರಿಂದ ಅದನ್ನು ಗೌರವಿಸಲೆಂದು, ಗರುಡನು ತಾನಾಗಿ ತನ್ನ ರೆಕ್ಕೆಯ ಪುಕ್ಕವನ್ನೊಂದನ್ನು ಅದಕ್ಕಿತ್ತು ಕಳಿಸಿದನು. ಆ ಪುಕ್ಕವು ಸುವರ್ಣಮಯವಾಗಿತ್ತು. ಅದನ್ನು ಕಂಡು ದೇವೇಂದ್ರನು ಗರುಡನಿಂದ ಸಖ್ಯವನ್ನು ಮಾಡಿಕೊಂಡು, ಸನ್ಮಾನಿಸಿ, 'ಅಮೃತವನ್ನು ದುಷ್ಟನಾಗರು ಕುಡಿಯದಂತೆ ಮಾಡುವೆನು. ಅದನ್ನು ಅನುಮೋದಿಸು!' ಎಂದು ಒಪ್ಪಿಸಿ ಕಳಿಸಿದನು.

ಅಂದಿನಿಂದ ಸುಪರ್ಣನೆಂದು ಖ್ಯಾತನಾದ ಗರುಡನು ಅಮೃತವನ್ನಿತ್ತು ತನ್ನ ತಾಯಿದು ದಾಸ್ಯವನ್ನು ಬಿಡಿಸಿದನು. ಆಗ ಶ್ರೀವಿಷ್ಣುವು ಪ್ರತ್ಯಕ್ಷನಾಗಿ 'ಗರುಡ! ನಿನ್ನ ಮಾತೃಭಕ್ತಿಗೆ, ನಿನ್ನ ಸ್ವಾರ್ಥತ್ಯಾಗಕ್ಕೆ, ನಿನ್ನ ಸಾಹಸ ವಿಕ್ರಮಗಳಿಗೆ ಮೆಚ್ಚಿದೆನು. ವರವನ್ನು ಬೇಡು!' ಎಂದನು. ಗರುಡನು ಶ್ರೀಶನಿಗೆ ಭಕ್ತಿಯಿಂದ ನಮಿಸಿ, 'ನಿನ್ನನ್ನು ಕಂಡೆನು! ಇದಕ್ಕಿಂತ ವರವಾವುದಿದೆ? ನಿನ್ನ ವಾಹನನಾಗಿರುವಂತೆ ಅನುಗ್ರಹಿಸು! ಪ್ರಭೋ, ನಿನಗೆ ನಮಸ್ಕಾರವು' ಎಂದನು. ಶ್ರೀಹರಿಯು ಅಂತೆಯೇ ಕರುಣಿಸಿ, 'ನಾನು ನೆನೆದಾಗ ತಿಳಿದು ಬಾ! ನನ್ನ ಅನುಗ್ರಹವು ನಿನ್ನಲ್ಲಿ ಸದಾ ಇದೆ ಎಂದು ತಿಳಿ!' ಎಂದಪ್ಪಣೆ ಮಾಡಿ ಕಳಿಸಿದನು.

ಕದ್ರೂಪುತ್ರರು ಅಮೃತಭಾಂಡವನ್ನು ಕುಶಕುಂಜದಲ್ಲಿಟ್ಟು, ಅಮೃತವನ್ನು ಪಾನಮಾಡುವ ಮುನ್ನ ಸ್ನಾನಕ್ಕೆಂದು ತೆರಳಿದರು. ಸಮಯವನ್ನು ಸಾಧಿಸಿ ಸಹಸ್ರಾಕ್ಷನು ಸರಸರನೆ ಬಂದು, ಅಮೃತಕಲಶವನ್ನು ಕೊಂಡು ಅಂತರ್ಹಿತನಾದನು. ನಾಗರು ಬಂದು ಅಮೃತಕಲಶವನ್ನು ಕಾಣದೆ, ಕುಶಕಾಶಗಳನ್ನು ನೆಕ್ಕಿ, ಅಂದಿನಿಂದ ದ್ವಿಜಿಹ್ವರಾದರು. ರಾಜನ್! ಮೋಸದಿಂದ ವಿನತೆಯನ್ನು ದಾಸಿಯನ್ನಾಗಿಸಿದ ಕದ್ರುವಿಗೆ ಪ್ರತಿಮೋಸವಾಸವಾಯಿತು! ಗರುಡನು ದೇವತಾಸಭೆಯಲ್ಲಿ ತಾನು ಮಾಡಿದ ಸಾಹಸವು ತಾಯಿಗಾಗಿ ಎಂದು ನಿರೂಪಿಸಿ, ದೇವಜನರ ಸಖನಾಗಿ, ಸುಖವಾಗಿದ್ದನು. ವಿಷ್ಣುವರಪ್ರಭಾವದಿಂದ ತೃಷ್ಣಾಶನಾಯಾ ಜರಾದಿ ದೋಷರಹಿತನಾಗಿ ಗರುಡನು ವೃಂದಾರಕೇಂದ್ರರಿಂದ ಪೂಜಿತನಾದನು. ಈ ಸೌಪರ್ಣಾಖ್ಯಾನವನ್ನು ಪಠಿಸಿ, ಕೇಳಿದವರು ಸಕಲಪಾಪಮುಕ್ತರೂ, ಜ್ಞಾನಭಕ್ತಿವಿರಕ್ತಿಯುಕ್ತರಾಗುವರು.'

ಧರ್ಮರಾಜನು 'ವಿಪ್ರನಿಗೆ ಕೊಡುವೆನೆಂದು ಕೊಡದವನ ಗತಿ ಏನು?' ಎಂದು ಕೇಳಿದನು. ಭೀಷ್ಮನಿಂತೆಂದನು: ಒಂದು ವನದಲ್ಲಿ ಸೃಗಾಲವಾನರಗಳು ವಾಸಿಸುತ್ತಿದ್ದವು. ಅವು ಪೂರ್ವಜನ್ಮಸ್ಮೃತಿಯುಳ್ಳವಾಗಿದ್ದವು. ಒಂದು ದಿನ ಕೋತಿಯು ನರಿಯನ್ನು 'ಮಿತ್ರಾ! ನಿನಗೀ ಹಾಳು ಜನ್ಮವು ಬರಲು ಕಾರಣವೇನು?' ಹೆಣಗಳನ್ನು ಕಿತ್ತು ತಿನ್ನುತ್ತಾ ಮಸಣದಲ್ಲಿ ಜೀವಿಸುವದು ಹೇಯವಲ್ಲವೇ?' ಎಂದು ಕೇಳಿತು. ನರಿಯು 'ಅಹುದು! ಹಿಂದೆ ಒಬ್ಬ ವಿಪ್ರನಿಗೆ ಕೊಡುವೆನೆಂದು ಹೇಳಿ, ಆ ದಾನವನ್ನು ಕೊಡದೆ ಉಳಿದೆನು. ಆ ಪಾಪದಿಂದ ನನಗೆ ಈ ಜನ್ಮವು ಬಂದಿತು. ನಿನಗೇಕೆ ಹಾಳು ವಾನರಜನ್ಮ ಬಂದಿತು?' ಎಂದಿತು ಕೋತಿಯು ತಾನು ವಿಪ್ರನಿಗೆ ಕೊಟ್ಟಿದ್ದ ಧನವನ್ನು ಮತ್ತೆ ಕಸಿದು, ಈ ಹಾಳುಜನ್ಮವನ್ನು ತಂದುಕೊಂಡೆನು' ಎಂದಿತು.

ಧರ್ಮರಾಜನು ! 'ತಾತ ! ವಿಪ್ರನು ಗುಣವಂತನಾದ ಶೂದ್ರನಿಗೆ ಮಂತ್ರ ತಂತ್ರಾದಿಗಳನ್ನು ಉಪದೇಶಿಸಬಹುದೇ ?' ಎಂದು ಕೇಳಿದನು. ಭೀಷ್ಮನಿಂತೆಂದನು:

'ಹಿಮಗಿರಿಯ ಒಂದಾಶ್ರಮದಲ್ಲಿ ಅನೇಕ ದ್ವಿಜರು ತಪಸ್ಸನ್ನು ಮಾಡುತ್ತಿದ್ದರು. ಅಲ್ಲಿಗೆ ಒಬ್ಬ ಶೂದ್ರನು ಬಂದು ಮುನಿನಾಥನನ್ನು ಕಂಡು 'ಅನಘಾ ! ನನಗೆ ಮಂತ್ರಾದಿಗಳನ್ನು ಉಪದೇಶಿಸು' ಎಂದು ಕೇಳಿದನು. ಮುನೀಶನು ಅದಕ್ಕೊಪ್ಪದೇ 'ನೀನು ಶುಶ್ರೂಷೆಯಿಂದಲೇ ಮುಕ್ತನಾಗುವೆ' ಎಂದು ಕೇಳಿಸಿದನು. ಶೂದ್ರನು ಶುಶ್ರೂಷೆಯನ್ನೇ ಮಾಡಿಕೊಂಡಿದ್ದನು. ಅಲ್ಲಿ ವನ ಸಮೀಪದಲ್ಲಿ ಅವನೊಂದು ಪರ್ಣಶಾಲೆಯನ್ನು ನಿರ್ಮಿಸಿಕೊಂಡು ಶೂದ್ರಮುನಿಯಾಗಿ ವಸಿಸುತ್ತಾ, ಸಂತತ ವಿಪ್ರಸೇವಾರತನಾದನು. ಕ್ರಮವಾಗಿ ಅವನು ಅವರ ಆಚಾರ ವಿಚಾರಗಳನ್ನು ನೋಡಿ, ಕಲಿತು, ಅದರಂತೆ ನಡೆಯತೊಡಗಿದನು. ಮುನಿನಾಥನು ಆಗಾಗ ಅವರ ಕುಟೀರವನ್ನು ಸೇರಿ, ಅವನ ಪೂಜಾದಿಗಳಲ್ಲಿ ಜರುಗುವ ಲೋಪಾದಿಗಳನ್ನು ತೋರಿಸಿ, ತಿದ್ದಿ, ಕೃಪೆಯಿಂದ ಅವನಿಗೆ ಕೆಲ ಮಂತ್ರಗಳನ್ನು ತಿಳಿಸಿದನು.

ಕೆಲದಿನವಾದ ಮೇಲೆ ಆ ಶೂದ್ರವಿಪ್ರರು ಕಾಲಧರ್ಮವನ್ನು ಹೊಂದಿದರು. ಶೂದ್ರತಪಸ್ವಿಯು ಆ ದೇಶದ ರಾಜನಿಗೆ ಮಗನಾದನು. ವಿಪ್ರೋತ್ತಮನು ರಾಜಪುರೋಹಿತನ ಮಗನಾದನು. ವೃದ್ಧರಾಜ ಪುರೋಹಿತರು ಮೃತರಾದರು. ಪಟ್ಟಾಭಿಷಿಕ್ತನಾದ ರಾಜಕುಮಾರನು ಪುರೋಹಿತ ಕುಮಾರನನ್ನು ಪೌರೋಹಿತ್ಯದಲ್ಲಿ ನಿಯಮಿಸಿದನು.

ಪ್ರತಿ ನಿತ್ಯ ಪೌರೋಹಿತ್ಯ ಕೃತ್ಯವನ್ನು ಮಾಡಲು ಬರುವ ಮುನಿಯನ್ನು ನೋಡಿ ರಾಜನು ನಸುನಗುತ್ತಿದ್ದನು. ಅವನ ನಗುವಿಗೆ ಕಾರಣವನ್ನರಿಯದೆ ವಿಪ್ರನೊಂದುದಿನ ಧೈರ್ಯವನ್ನು ತಾಳಿ, 'ರಾಜನ್ ಏಕೆ ನಗುವೆ ?' ಎಂದು ಕೇಳಿದನು. ರಾಜನಿಂತೆಂದನು: 'ಪೂರ್ವಜನ್ಮದ ಸ್ಮೃತಿಯಿಂದ ನಾನು ತಿಳಿದು ಹೇಳುತ್ತಿರುವೆನು ಕೇಳು ! ಹಿಂದೆ ನಾನು ಶೂದ್ರಮುನಿಯಾಗಿ ನಿನ್ನ ಆಶ್ರಮದಲ್ಲಿದ್ದೆನು. ಆಗ ನನಗೆ ಪ್ರೇಮಾತಿರೇಕದಿಂದ ಕೆಲಮಂತ್ರಗಳನ್ನು ಕಲಿಸಿದ ದುಷ್ಕೃತದಿಂದ ಮುನಿರಾಜನಾಗಿದ್ದವನು ಈಗ ಪುರೋಹಿತನಾಗಿರುವೆ. ನಿನ್ನಲ್ಲಿ ಬೇರೆ ಪಾಪವಿಲ್ಲ. ನನಗೆ ಗುರುವು, ಹಿತಚಿಂತಕನು ಆದ ನಿನ್ನನ್ನು ನಾನು ಹಾಸ್ಯಮಾಡುವೆನೇ ? ಆ ಸ್ವಲ್ಪ ಪಾಪವಿದೆ. ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಪುನೀತನಾಗು' ಎಂದು ಅವನಿಗೆ ಗೋಕನಕಧಾನ್ಯಗಳನ್ನಿತ್ತು ಕಳಿಸಿದನು. ಆ ವಿಪ್ರನು ಪುಣ್ಯಾಧಿಕನಾದುದರಿಂದ ಅನಧಿಕಾರೋಪದೇಶಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶುದ್ಧನಾದನು. ಆದುದರಿಂದ ಮಂತ್ರೋಪದೇಶವು ತ್ರಿವರ್ಣದವರಿಗೇ ವಿಹಿತವಾಗಿದೆ. ಇತರರು ನಾಮಮಂತ್ರಗಳಿಗೆ ಅಧಿಕಾರಿಗಳಾಗಿ ಅದರಿಂದಲೇ ಅವರು ಉದ್ಧೃತರಾಗಬಹುದಾಗಿದೆ.'

ಧರ್ಮರಾಜನು 'ತಾತ ಲಕ್ಷ್ಮೀನಿವಾಸಸ್ಥಾನಗಳಾವುವು ?' ಎಂದು ಕೇಳಿದನು. ಭೀಷ್ಮನಿಂತೆಂದನು: 'ಶ್ರೀನಾರಾಯಣಾಂಕತಲದಿ ವಿರಾಜಿಸುವ ಶ್ರೀದೇವಿಯನ್ನು ಉಮಾದೇವಿಯು ಕಂಡು ನಮಸ್ಕರಿಸಿ, 'ತಾಯೇ, ನೀನೆಂತಹ ಪುರುಷರಲ್ಲಿ ತಿರವಾಗಿ ನಿಂತಿರುವೆ ? ಯಾವ ಸ್ತ್ರೀಯರಲ್ಲಿ ನಿನ್ನ ಕುರುಣೆಯು ತಿರವಾಗಿರುವುದು ?' ಎಂದು ಕೇಳಿದಳು. ಶ್ರೀದೇವಿಯು 'ವತ್ಸೇ ! ಕೇಳು ! ನಿತ್ಯಸತ್ಯವ್ರತರು, ಶೌಚನಿರತರು ಹರಿಗುರುಭಕ್ತರು, ಪ್ರಮಾದರಹಿತರು,

ದಕ್ಷರು, ಅಮಲಬುದ್ಧಿವಂತರು, ಸತ್ಕರ್ಮಪರರು, ವಿಜ್ಞಾನನಿಷ್ಠರು, ತಪೋದಾನಯಜ್ಞತತ್ಪರರು, ಶಮದಮವಂತರು, ಮಾತಾಪಿತೃಭಕ್ತರು ಇಂತಹ ಪುರುಷರಲ್ಲಿ ನನ್ನ ಕರುಣೆಯು ಸ್ಥಿರವಾಗಿರುವುದು.

ನಾಸ್ತಿಕರು, ಕ್ರೂರರು, ಕೃತಘ್ನರು, ಕುಬುದ್ಧಿಗಳು, ವಿಪ್ರದೇವದ್ರೋಹಿಗಳು, ಇವರಲ್ಲಿ ನನ್ನ ದಯೆ ಪಸರಿಸಿ ನಿಲ್ಲದು. ಗೃಹಶುದ್ಧಿ, ಭಾಂಡಶುದ್ಧಿ, ಶೌಚ, ಪತಿವ್ರತಾತ್ವ, ಇಂತಹ ಗುಣಗಳುಳ್ಳ ನಾರಿಯರಲಿಲ ನನ್ನ ವಾಸವು ತಿರವಾಗಿರುವುದು. ನಿಷ್ಠುರವಚನ, ಅಶುದ್ಧಿ, ಪತಿಪ್ರತಿಕೂಲತೆ, ಅನ್ಯಮಂದಿರಗಾಮಿತೆ, ಅಧಿಕನಿದ್ರಾಪರತೆ ಮುಂತಾದ ದುರ್ಗುಣವುಳ್ಳ ನಾರಿಯರೆನ್ನ ಸ್ಥಿರದಯೆಗೆ ಪಾತ್ರರಾಗರು. ಅಬ್ಜಷಂಡ, ಪುಷ್ಪವಾಟಿಕಾ, ತುಲಸೀವನ, ಉದ್ಯಾನಗಳಲ್ಲಿ ನಾನು ಸದಾ ನೆಲಸಿರುವೆನು' ಎಂದಳು.

ಧರ್ಮರಾಜನು 'ಪುರುಷಪುರಂಧ್ರಿಯರಲ್ಲಿ ಯಾರು ಹೆಚ್ಚು ಕಾಮವಂತರು?' ಎಂದು ಕೇಳಲು, ಭೀಷ್ಮನಿಂತೆಂದನು: 'ರಾಜನ್! ಹಿಂದೆ ಭಂಗಾಸ್ವನನೆಂಬ ರಾಜನಿದ್ದನು. ಅವನು ಪುತ್ರಾರ್ಥಿಯಾಗಿ ಒಂದು ಮಖವನ್ನು ಮಾಡುತ್ತಿದ್ದನು. ಆಗ ಅವನಿಂದ ಇಂದ್ರಾಪರಾಧವು ನಡೆಯಿತು. ಆದರಿಂದ ದೇವೇಂದ್ರನು ಕುಪಿತನಾದನು. ಅವನೀಪತಿಗೆ ನೂರು ಸುತರಾದರು. ಒಂದುದಿನ ಭಂಗಾಸ್ವನನು ಬೇಟೆಗೆ ಹೋಗಿ, ಇಂದ್ರಮಾಯೆಯಿಂದ ಹಾದಿ ತಪ್ಪಿ, ಒಂದು ಕಾಡನ್ನು ಪ್ರವೇಶಿಸಿದನು. ಒಂಟಿಯಾಗಿ ಅಲೆಯುತ್ತಾ ಅಲಸಿ, ರಾಜನು ಅಲ್ಲಿದ್ದ ಅಮಲಜಲ ತಟಾಕವನ್ನು ಕಂಡನು. ಸಾಶ್ವನಾಗಿ ನೀರಿಗಿಳಿದು, ನೀರು ಕುಡಿದು, ಮೇಲೆದ್ದು ಬಂದಾಗ ಭಂಗಾಸ್ವನನು ತಾನು ಹೆಣ್ಣಾಗಿರುವದನ್ನು ಕಂಡು, ವಿಷಾದಾಶ್ಚರ್ಯಭರಿತನಾದನು.

ಚಿಂತಾಕ್ರಾಂತನಾದ ರಾಜನು ತನ್ನ ಪುರಿಯನ್ನು ಸೇರಿ, ನಡೆದ ವಿಷಯವನ್ನು ಮಂತ್ರಿಪುರೋಹಿತರಿಗೆ ತಿಳಿಸಿದನು. ತನ್ನ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ, ವಿರಕ್ತನಾದ ಭಂಗಾಸ್ವನನು ಒಂದು ತಾಪಸಾಶ್ರಮವನ್ನು ಸೇರಿ, ತಪವನ್ನು ಮಾಡುತ್ತಿದ್ದನು. ಅವನನ್ನು ಅವಳೆಂದು ತಿಳಿದು ಒಬ್ಬ ತಾಪಸನು ಆ ವ್ಯಕ್ತಿಯನ್ನು ಮದುವೆಯಾದನು ಅವರಿಗೆ ನೂರು ಮಕ್ಕಳಾದರು. ಭಂಗಾಸ್ವನೆಯು ಆ ಮಕ್ಕಳನ್ನು ತನ್ನೂರಿಗೆ ಕೊಂಡು ಹೋಗಿ, 'ರಾಜಪುತ್ರರೇ! ನೀವು ನನಗೆ ಪುರುಷರೂಪದ ಮಕ್ಕಳು. ಇವರು ಸ್ತ್ರೀರೂಪದ ಮಕ್ಕಳು. . ಅಂತು ಇವರು ನಿಮ್ಮ ಸೋದರರಾದರಲ್ಲವೇ? ಇವರಿಗೂ ರಾಜ್ಯಭಾಗವನ್ನು ಕೊಡಿರಿ!' ಎಂದಳು. ಅವರಿವರು ಕಲೆತು ರಾಜ್ಯವಾಳುತ್ತಾ ಇನ್ನೂರು ಜನ ರಾಜಪುತ್ರರು ಶತ್ರುಂಜಯರಾಗಿ ತಮ್ಮ ರಾಜ್ಯವನ್ನು ವೃದ್ಧಿಗೊಳಿಸಿಕೊಂಡರು.

ಇಂದ್ರನದನ್ನು ಕಂಡು 'ಆಹಾ! ಇವನಿಗೆ ಕೇಡು ಮಾಡಲು ಪೋಗಿ, ಒಳಿತನ್ನೇ ಮಾಡಿದೆನಲ್ಲ! ಅಧಿಕಪುತ್ರಸಂಪತ್ತು ರಾಜ್ಯಸಂಪತ್ತು, ನಾನಾಗೆ ಕೊಟ್ಟಂತಾಯಿತು. ಏನು ಮಾಡಲಿ? ಎಂತಿವನನ್ನು ಶಿಕ್ಷಿಸಲಿ?' ಎಂದು ಚಿಂತಿಸಿ, ರಾಜಪುತ್ರರಿಗೆ ತಾಪಸೀಪುತ್ರರಲ್ಲಿ ದಾಯಾದಮತ್ಸರವನ್ನು ಉಪದೇಶಿಸಿದನು. ಅವರು ತಮ್ಮತಮ್ಮೊಳಗೆ ಜಗಳವಾಡಿ, ಯುದ್ಧಕ್ಕಿಳಿದು, ಇನ್ನೂರು ಸುತರೂ ಮೃತರಾದರು. ಅವರನ್ನು ಕಂಡು ರೋದಿಸುವ ಭಂಗಾಸ್ವನಿಗೆ ಇಂದ್ರನು ಪ್ರತ್ಯಕ್ಷನಾಗಿ, 'ರಾಜನ್! ಈ ಎಲ್ಲ ಕಷ್ಟಗಳು ನನ್ನ ಅವಜ್ಞೆಯಿಂದ

ನಿನಗೆ ಬಂದಿವೆ ತಿಳಿ!' ಎಂದನು. ಭಂಗಾಸ್ವನೆಯು 'ಅಮರೇಶ! ನೀ ಮುನಿದರೆಮ್ಮನ್ನು ಕಾಪಾಡುವವರ್ಯಾರು? ತಿಳಿಯದೆ ಮಾಡಿದ ತಪ್ಪನ್ನು ಕ್ಷಮಿಸು!' ಎಂದಳು.

ಇಂದ್ರನು 'ಕೆಲ ಸುತರನ್ನು ಮಾತ್ರ ಉಜ್ಜೀವಿಸಿ ಕೊಡುವೆನು. ನಿನಗೆ ರಾಜಸುತರು ಬೇಕೋ?' ಎಂದು ಕೇಳಿದನು. ಭಂಗಾಸ್ವನೆಯು ಆಲೋಚಿಸಿ, 'ಇಂದ್ರ! ನನಗೆ ನನ್ನ ಸ್ತ್ರೀರೂಪದ ಮಕ್ಕಳನ್ನು ಬದುಕಿಸಿ ಕೊಡು!' ಎಂದಳು. 'ನಿಜವಾದ ಕಾರಣವನ್ನು ಹೇಳು!' ಎಂದ ಇಂದ್ರನಿಗೆ ಆಕೆಯು ಇಂತೆಂದಳು: 'ಇಂದ್ರ! ಮಕ್ಕಳೆಂದರೆ ತಂದೆಗಿಂತಲು ತಾಯಿಗೇ ಹೆಚ್ಚುಪ್ರೀತಿ. ಆದುದರಿಂದ ಪೂರ್ವಪುತ್ರರನ್ನು ಬಿಟ್ಟು, ನನ್ನ ಸ್ತ್ರೀರೂಪ ಪುತ್ರರನ್ನೇ ಬೇಡಿದೆನು' ಎಂದು ನಿಜವನ್ನಾಡಿದ ಭಂಗಾಸ್ವನೆಯಲ್ಲಿ ಪ್ರೀತನಾಗಿ, ಇಂದ್ರನು ಉಭಯ ಪುತ್ರಶತವನ್ನೂ ಬದುಕಿಸಿಕೊಟ್ಟು, 'ಭಂಗಾಸ್ವನ! ಬೇಕಾದರೆ ನಿನಗೆ ಯಥಾಪೂರ್ವವಾಗಿ ಪುಂಸ್ತ್ವವನ್ನು ಕೊಡುವೆ' ನೆಂದನು. ಆಕೆಯು 'ನಾನು ಪುರುಷನಾಗಲೊಲ್ಲೆನು, ಸ್ತ್ರೀಯಾಗೇ ಇರುವೆನು' ಎಂದಳು. ಇಂದ್ರನದಕ್ಕೆ ಆಶ್ಚರ್ಯಪಟ್ಟು, 'ಅದೇಕೆ?' ಎಂದನು. ಭಂಗಾಸ್ವನೆಯು, 'ದೇವೇಂದ್ರ! ಇದು ಸ್ತ್ರೀಜನರ ರಹಸ್ಯವು ಸಂಭೋಗದ ಸ್ಪರ್ಶಸುಖವಾಗುವುದು ಸ್ತ್ರೀಯರಿಗೆ ಹೆಚ್ಚಾಗಿ, ಪುರುಷರಿಗಲ್ಲ! ನನಗೆ ಸ್ತ್ರೀತ್ವವೇ ಇರಲಿ!' ಎಂದು ಬೇಡಿದಳು. ರಾಜನ್! ನೀನು ಕೇಳಿದ ಪ್ರಶ್ನೆಗೆ ಉತ್ತರವು ಬಂತು ತಾನೆ? ಕಾಮ ಸುಖಗಳು ತರುಣೀ ಜನಕ್ಕೆ ಪುರುಷರಕ್ಕಿಂತಲು ಅಷ್ಟಗುಣಿತವೆಂಬರು.'

## ೩. ವಿಷ್ಣು ಮಹಿಮೆ

ಧರ್ಮರಾಜನು 'ಉತ್ತಮ ಧರ್ಮವಾವುದು? ಯಾವ ದೇವನ ಸರ್ವೋತ್ತಮತ್ವವು ವೇದಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ? ಅವನನ್ನೆಂತು ತಿಳಿಯಬೇಕು?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ಅನೇಕ ಧರ್ಮಗಳನ್ನು ನಿನಗೆ ನಿರೂಪಿಸಿದೆನು. ಜನ್ಮಮರಣಾದಿ ದುಃಖಗಳನ್ನು ವಿಷ್ಣುಧರ್ಮವಲ್ಲದೆ, ಮತ್ತಿತರ ಧರ್ಮಗಳು ನಿವಾರಿಸಲಾರವು. ಚರಾಚರಾತ್ಮಕವಾದ ಜಗವು ಅಸ್ಥಿರವಾಗಿದೆ, ಅಸಾರವಾಗಿದೆ, ವಿಷಾನ್ನದಂತೆ ಬಲು ದುಃಖ ಪ್ರದವಾದ ವಿಷಯಗಳನ್ನು ಬಿಟ್ಟು, ಮೋಕ್ಷಪ್ರದನಾದ ಶ್ರೀನಾರಾಯಣನನ್ನು ಪರಮಭಕ್ತಿಯಿಂದ ಭಜಿಸುವುದು ಉತ್ತಮ ಧರ್ಮವಾಗಿದೆ.

ಪುರುಷರನ್ನು ಜನನಮರಣ ಪ್ರವಾಹದಲ್ಲಿ ಬಂಧಿಸಿಡುವುದು ಪ್ರಕೃತಿಯು. ಪ್ರಕೃತಿಬಂಧದಿಂದ ಬಿಡುಗಡೆ ಹೊಂದುವುದೇ ಮೋಕ್ಷವು. ಎಲ್ಲ ಪ್ರಕೃತಿಬಂಧಗಳ ಬೀಜವು ಕಾಮದಲ್ಲಿದೆ. ಕಾಮದಿಂದ ಕ್ರೋಧಾದಿಗಳು ಪುಟ್ಟುವವು. ಮನುಜನು ಕಾಮಕ್ರೋಧಗಳೆಂಬ ಶತ್ರುಗಳನ್ನು ಗೆದ್ದು, ಅವರಿಗೆ ವಶವಾಗದೆ ಇರುವುದು ಮುಖ್ಯ ಕರ್ತವ್ಯವಾಗಿದೆ.

ಪ್ರಕೃತಿಸ್ವರೂಪವನ್ನು ನಿನಗೆ ವರ್ಣಿಸುವೆನು. ಅಚಿತ್ ಪ್ರಕೃತಿಯಿಂದ ಜಗತ್ತು ಸೃಜಿಸಲ್ಪಡುವುದು. ಸೃಷ್ಟಿಪ್ರಳಯಗಳನ್ನು ಶ್ರೀನಾರಾಯಣನು ಸ್ವತಂತ್ರನಾಗಿ ಮಾಡುವನು. ನಿತ್ಯಮುಕ್ತಳಾದ ರಮಾದೇವಿಯು, ಆತನಂತೆ ಸದಾವಶಳಾಗಿದ್ದು ನಡೆಯುವಳು. ವಿಷ್ಣುದೇವನ ಯೋಗನಿದ್ರಾವಸಾನದಲ್ಲಿ, ಆಕೆಯು ಆತನಿಂದ ಕ್ರೀಡಿಸಿ, ಹಿರಣ್ಮಯ ಬ್ರಹ್ಮಾಂಡವನ್ನು

ಪಡೆಯುವಳು. ಶ್ರೀ, ಭೂ, ದುರ್ಗಾರೂಪಳಾಗಿ ಶ್ರೀಲಕ್ಷ್ಮೀದೇವಿಯು ವಿಷ್ಣು, ಬ್ರಹ್ಮ, ಶಿವರೂಪನಾದ ಶ್ರೀಹರಿಯಿಂದ ಕೂಡಿ ಮಹತತ್ತ್ವವನ್ನು ಪಡೆಯುವಳು. ಅದಕ್ಕೆ ಅಭಿಮಾನಿಯಾದ ಬ್ರಹ್ಮದೇವನೂ ಪುಟ್ಟಿ, ಬ್ರಹ್ಮನಾಮಕ ವಿಷ್ಣುವಿನಿಂದ ಪ್ರೇರಿತನಾಗಿ, ಸೃಜಿಸುವನು. ದೇಹ, ತತ್ವ, ಭೂತಗಳಲ್ಲಿ ನೆಲಸಿರುವ ಶ್ರೀಶನಿಗೆ ಅಧ್ಯಾತ್ಮ, ಅಧಿದೈವ, ಅಧಿಭೂತ ಎಂಬ ಮೂರು ರೂಪಗಳುಂಟು. ಮಹತ್ತತ್ವದಿಂದಲು ಬುದ್ಧಿಯಿಂದಲು ತ್ರಿವಿಧವಾದ ಅಹಂಕಾರ ತತ್ವವು ಪುಟ್ಟುವುದು. ಅದಕ್ಕೆ ನಿಯಾಮಕರು ಗರುಡ ಶೇಷರುದ್ರರು ಅಹಂಕಾರ ತತ್ವವು ಬುದ್ಧಿ ತತ್ವಾಧೀನವಾಗಿದೆ. ಬುದ್ಧಿಯು ಮಹತ್ತಿನಿಂದ ಹುಟ್ಟಿದೆ ಮತ್ತು ಅಹಂಕಾರಕ್ಕೆ ಜನನಿಯಾಗಿದೆ. ಬುದ್ಧಿತತ್ವಕ್ಕೆ ಸರಸ್ವತಿಯು ನಿಯಾಮಕಳು. ಬ್ರಹ್ಮ ಸರಸ್ವತಿಯರೇ ವಾಯುಭಾರತಿಯರು.

ಅಹಂಕಾರದ ವೈಕಾರಿಕ ತತ್ವದಿಂದ ಗರುಡನು, ತೈಜಸತತ್ವದಿಂದ ಶೇಷನು, ತಾಮಸ ತತ್ವದಿಂದ ರುದ್ರನು ದೇಹಗಳನ್ನು ಪೊಂದಿ, ಪ್ರಾಣಾಧೀನರಾಗಿರುವರು. ಮನಸ್ಸು, ಇಂದ್ರಿಯಗಳು, ಭೂತಗಳು ಕ್ರಮವಾಗಿ ಅಹಂಕಾರದ ಸಾತ್ವಿಕ, ರಾಜಸ, ತಾಮಸ ಭಾಗಗಳಿಂದ ಜನಿಸಿರುವವು. ಶಬ್ದಸ್ಪರ್ಶಗಳು ಗರುಡಪತ್ನಿ ಸೌಪರ್ಣಿಯ ಅಧೀನವಾಗಿವೆ. ರೂಪರಸಗಳು ಶೇಷಪತ್ನಿ ವಾರುಣಿಯ ಅಧೀನವಾಗಿವೆ. ಗಂಧವು ಪಾರ್ವತಿಯ ಅಧೀನವಾಗಿದೆ. ಇವರು ತಮ್ಮ ಪತಿಗಳ ಅಧೀನರು ಮತ್ತು ಮನಸ್ಸಿಗೆ ನಿಯಾಮಕರಾದ ಸ್ಕಂದೇಂದ್ರ ಕಾಮರಿಗೆ ಪ್ರೇರಕ ಪ್ರಭ್ವಿಯರೂ ಆಗಿರುವರು. ಕಣ್ಣಿಗೆ ಸೂರ್ಯ ; ಕಿವಿಗೆ ಚಂದ್ರಾದಿ ದಿಕ್ಪಾಲರು ; ಮೂಗಿಗೆ ನಾಸತ್ಯದಸ್ರರೆಂಬ ಅಶ್ವಿನೀ ದೇವದ್ವಯ; ನಾಲಿಗೆಗೆ ವರುಣ; ಚರ್ಮಕ್ಕೆ ಅಹಂಕಾರಿಕ ಪ್ರಾಣ; ವಾಕ್ಕಿಗೆ ವಹ್ನಿ, ಪಾಣಿಗೆ ದಕ್ಷ ; ಪಾದಕ್ಕೆ ಜಯಂತ ; ಪಾಯುವಿಗೆ ಮಿತ್ರ ; ಉಪಸ್ಥಕ್ಕೆ ಮನುರಾಜ ; ಇವರು ಇಂದ್ರಿಯ ನಿಯಾಮಕರು ! ಪೃಥ್ವಿಗೆ ಶನೈಶ್ಚರ ಧರಾದೇವಿಯರು; ಜಲಕ್ಕೆ ವರುಣ ; ವಹ್ನಿಗೆ ಪಾವಕ ; ವಾಯುವಿಗೆ ಭೂತವಾಯು (ಪ್ರವಾಹ); ಆಕಾಶಕ್ಕೆ ಮಹಾಗಣಪತಿ; ಇವರು ಭೂತಾಧಿಪರು. ಇಂತು ಇಪ್ಪತ್ತುನಾಲ್ಕು ತತ್ವಗಳನ್ನು, ತದ್ದೇವತೆಗಳನ್ನು ಸೃಜಿಸಿ, ಅವರಲ್ಲಿದ್ದು, ತನ್ನ ನಾಮ ರೂಪ ಶಕ್ತಿಗಳನ್ನು ಅವರಿಗೆ ಕೊಟ್ಟು, ಪಾಲಿಸುವ ಸಕಲತತ್ವೇಶನಾದ ಶ್ರೀನಾರಾಯಣನು ಸರ್ವೋತ್ತಮನಾಗಿರುವನು. ತತ್ವಜ್ಞಾನ ವಿಲ್ಲದವರು ಬ್ರಹ್ಮರುದ್ರಾದಿಗಳನ್ನು ಸರ್ವೋತ್ತಮರೆಂದು ತಿಳಿದು ಕೆಡುವರು.

ಧರ್ಮರಾಜ! ಬಂಧಿಸಿದ ಪ್ರಭುವು ಬಿಡಿಸಲು ಶಕ್ತನೇ ಆಗಲಿ, ಸ್ವಯಂ ಬದ್ಧರಾಗಿರುವ ಬ್ರಹ್ಮ ರುದ್ರೇಂದ್ರಾದಿಗಳು ಮುಕ್ತಿಯನ್ನು ಕೊಡಲಾರರು. ಅಂತಹ ನಿತ್ಯಮುಕ್ತ ರಮಾದೇವಿಗೂ ಪತಿಯಾಗಿ, ಪ್ರಕೃತಿಯ ಸೋಂಕಿಲ್ಲದ, ನಿರ್ವಿಕಾರನಾದ, ಸರ್ವಭೂತಾಂತರ್ಯಾಮಿ ಶ್ರೀನಾರಾಯಣನ ಮಹಿಮೆಯು ಅನಂತವಾಗಿದೆ. ಆತನು ಇಪ್ಪತ್ತೈದನೆಯ ತತ್ವನೆನಿಸಿರುವನು. ಅವನನ್ನು ತಿಳಿದವರೇ ಇಂತು ಸರ್ವೋತ್ತಮನೆಂದು ತಿಳಿದವರೇ, ಅವನ ಪ್ರಸಾದಕ್ಕೆ ಪಾತ್ರರಾಗಿ ಮುಕ್ತರಾಗುವರು. ಸರ್ವಜೀವನಿಯಾಮಕನು, ಅಸಮಾಧಿಕನು, ಅಸಂಗನು ಆಗಿರುವನೆಂದು ವೇದಗಳು ಸಾರುತ್ತಿವೆ. ಧರ್ಮರಾಜ! ಈ ದಿವ್ಯ ತತ್ವಜ್ಞಾನವನ್ನು ಸನತ್‌ಕುಮಾರನಿಂದ ಕಲಿತ ನಾರದನು ನನಗೆ ಪೇಳಿದನು.

ಶ್ರೀಹರಿಯು ತಾಮಸರಾದ ದೈತ್ಯರನ್ನು ಹತ್ತಿಕ್ಕಿ ಅಧರ್ಮವನ್ನು ನಾಶಪಡಿಸುವನು; ಸಾತ್ವಿಕರಾದ ದೇವತೆಗಳಿಗಾಗಿ ಅವತರಿಸಿ, ಅವರಿಗೆ ಜಯವನ್ನು ಕೊಟ್ಟು, ಧರ್ಮವನ್ನು ಸ್ಥಾಪಿಸುವನು. ಇಂತು ಮಾಡುವ ಧರ್ಮಪಾಲಕನಿಗೆ ವೈಷಮ್ಯವಿಲ್ಲ; ಅವನು ನಿಷ್ಕರುಣನಲ್ಲ. ಆತನ ಮಹಿಮೆಯನ್ನು ಬಹ್ಮರುದ್ರೇಂದ್ರಾದಿ ಬೃಂದಾರಕರು ಸಾಕಲ್ಯೇನ ತಿಳಿದಿಲ್ಲ; ಅಂದಮೇಲೆ ನಮ್ಮಂತಹ ಪಾಮರರ ಪಾಡೇನು? ಏನೋ ವರ್ಣಿಸುವುದೆಂದರೆ, ಸ್ವಯೋಗ್ಯತಾನುಸಾರವಾಗಿ ಶ್ರೀಶನನ್ನು ಪೊಗಳಿ, ವಚನವಪುಶ್ಶುದ್ಧಿಯನ್ನು ಸಂಪಾದಿಸಬೇಕೆಂತಲೇ ಎಂದು ತಿಳಿ!

ಹಿಂದೆ ಹಿಮಗಿರಿಯ ಒಂದಾಶ್ರಮದಲ್ಲಿ ಸಿದ್ಧರು, ಸಾಧ್ಯರು, ಮುನಿಜನರು ಸಭೆಗೂಡಿ, ಆತ್ಮಾನಾತ್ಮ ವಿಚಾರವನ್ನು ಮಾಡುತ್ತಿದ್ದರು. ಅಲ್ಲಿಗೆ ಗರುಡನು ಬಂದನು. ಬಂದ ವಿನತಾನಂದನನಿಗೆ ವಂದಿಸಿ, ಮುನಿಗಳು 'ಅಯ್ಯಾ! ಗರುಡ! ಸದಾ ವಿಷ್ಣುಸೇವೆ ಮಾಡಿ, ಪಾವನನಾಗಿರುವೆ! ಶ್ರೀದೇವನೂ ನಿನ್ನಲ್ಲಿ ಪ್ರೀತನಾಗಿರುವನು. ಆ ಸ್ವಾಮಿಯ ಮಹಿಮೆಯನ್ನು ನಮಗೆ ಪೇಳು!' ಎಂದು ಕೇಳಿದರು.

ಗರುಡನಿಂತೆಂದನು: 'ಶ್ರೀವಿಷ್ಣುದೇವನು ಎಂತು ಜಗಗಳನ್ನು ಸೃಜಿಸುವನೆಂತು, ಪಾಲಿಸುವನೆಂತು, ಸಂಹರಿಸುವನೆಂತು ತಿಳಿಯಲು ಬರುವುದೇ? ಆ ದೇವನ ಮಹಿಮೆ ಅಪಾರವಾಗಿದೆ. ಬ್ರಹ್ಮರುದ್ರಾದಿಗಳೂ ಅವನನ್ನು ಸಾಕಲ್ಯೇನ ತಿಳಿಯುಲಾರರು. ಆತನಾಗಿ ಪ್ರಸನ್ನನಾಗಿ ನನಗೆ ತನ್ನ ಮಹಿಮೆಯನ್ನರುಹಿದನು. ಅದನ್ನು ಯಥಾಯೋಗ್ಯವಾಗಿ ತಿಳಿದ ನಾನು ನಿಮಗೆ ಯಥಾಮತಿ ತಿಳಿಸುವೆನು, ಕೇಳಿ!

ಅಮರೇಂದ್ರನನ್ನು ನಿರ್ಜಿಸಿ, ಅಮೃತವನ್ನು ಕೊಂಡು ಪೋಗುವಾಗ ಆ ಮಹಾದೇವನು ನನಗೆ ದಯೆದೋರಿ 'ವಿಹಗರಾಜ! ಮೆಚ್ಚಿದೆನು ನಿನ್ನ ಮಾತೃಭಕ್ತಿಯನ್ನು! ಮೆಚ್ಚಿದೆನು ನಿನ್ನ ಪರಾಕ್ರಮವನ್ನು! ಕೇಳು ವರವನ್ನು!' ಎಂದನು. 'ನೀಕಾರಂ' ದ ನನಗೆ ಆ ಸ್ವಾಮಿಯು, 'ಕಾಲದಿಂದ ನನ್ನನ್ನು ತಿಳಿಯುವೆ! ನನಗೆ ವಾಹನನಾಗಿರು! ಉಜ್ಜ್ವಲ ತೇಜೋವಂತನಾಗು! ನಿನಗೆ ಜರಾಮರಣ ಕ್ಷುತ್ಪಿಪಾಸೆಗಳಿಲ್ಲದಂತೆ ವರವಿತ್ತಿರುವೆನು. ಸುರಾಸುರರನ್ನು ಬಲವಿಕ್ರಮ ಜ್ಞಾನಗಳಿಂದ ಮೀರಿದವನಾಗು!' ಎಂದು ಕರುಣಿಸಿದನು. ನಾನು ಶ್ರೀಹರಿಯನ್ನು ಆತನ ದಿವ್ಯಲಕ್ಷಣಗಳಿಂದ ಅರಿತು, ವಂದಿಸಿ, ಕೈಮುಗಿದು ನಿಂತು, 'ಶ್ರೀಕಾಂತ! ಆಗಲಿ ನಿನಗೆ ವಾಹನನಾಗುವೆನು. ನನ್ನಿಂದ ಅಂಕಿತವಾಗಿ ನಿನ್ನ ಧ್ವಜವು ಬೆಳಗಲಿ! ನೀನು ಗರುಡಧ್ವಜನೆನಿಸು! ಕರುಣಿಸು!' ಎಂದೆನು. ಅಂತೆಯೇ ವರವಿತ್ತು ಅನಂತನು ಅಂತರ್ಹಿತನಾದನು.

ನಾನು ನಡೆದ ವೃತ್ತಾಂತವನ್ನು ನನ್ನ ತಂದೆಯಾದ ಕಶ್ಯಪರ್ಷಿಗೆ ಹೇಳಿದೆನು. ಆತನು ಆನಂದವಿಕಸಿತವದನನಾಗಿ ವತ್ಸ! ಧನ್ಯನಾದೆ! ಶ್ರೀನಾರಾಯಣಾನುಗ್ರಹಕ್ಕೆ ಪಾತ್ರನಾದೆ! ಹಿಂದೆ ನಾನು ತೀವ್ರಸಮಾಧಿಯೋಗದಿಂದ ಆ ದೇವನನ್ನು ಧ್ಯಾನಿಸುತ್ತಿದ್ದೆನು. ಶ್ರೀದೇವನು ನೀಲಧವಳಪಿಂಗಳ ವರ್ಣಚಿತ್ರವು, ಬಹುಪಾದೋದರಪಾಣಿ ಶಿರೋ ನೇತ್ರ ದಿವ್ಯಗಾತ್ರವು, ಪರಮ ಪವಿತ್ರವು, ಪಾಪಲತಾಲವಿತ್ರವು ಆದ ದಿವ್ಯರೂಪದಿಂದ ಪ್ರತ್ಯಕ್ಷನಾಗಿ, 'ಮುನೀಂದ್ರ! ಸಕಲ ದುಸ್ಸಂಗವನ್ನು ಬಿಟ್ಟು, ಸತ್ಸಂಗದಲ್ಲಿ ನಿರೂಢಚಿತ್ತನಾಗಿ, ಶ್ರವಣಮನನಧ್ಯಾನಾದಿ ಪ್ರವಣನು, ಭಕ್ತಿಯುಕ್ತನು ಆದವನಿಗಲ್ಲದೆ ನನ್ನ ದರ್ಶನವಾಗದು. ಪ್ರಸನ್ನನಾಗಿರುವೆನು'

ಎಂದು ಕರುಣಿಸಿದನು. ಅಂತಹ ಶ್ರೀಮನ್ನಾರಾಯಣನ ಶಾಶ್ವತ ಪರಿಚರಣ ಭಾಗ್ಯವು ನಿನಗೆ ಲಭಿಸಿತು. ಕೃತಾರ್ಥನಾದೆ! ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ನೆಲೆಸಿರುವ ರಮಾವರನನ್ನು ಸೇವಿಸು!' ಎಂದು ನನ್ನನ್ನು ಕಳಿಸಿದನು.

ನಾನು ಬದರಿಕಾಶ್ರಮವನ್ನು ಸೇರಿ, 'ಗೋವಿಂದ! ನಾರಾಯಣ! ಅಚ್ಯುತ! ಹರಿ! ಪುಂಡರೀಕಾಕ್ಷ! ಜಗಜ್ಜನಕ! ಶ್ರೀನಾಥ! ಕೃಷ್ಣ! ಕೃಷ್ಣ!' ಎಂದು ಶ್ರೀಹರಿಯ ಮಂಗಳ ನಾಮಗಳನ್ನು ಪಠಿಸುತ್ತಾ ಆ ಸ್ವಾಮಿಯನ್ನು ಕಂಡೆನು. ಆತನು 'ವೈನತೇಯ! ನಿನಗೆ ನನ್ನ ಮಹಿಮೆಯನ್ನು ತೋರುವೆನು, ಬಾ!' ಎಂದು ಉತ್ತರದ ಕಡೆಗೆ ಹೋಗತೊಡಗಿದನು. ನಾನು ನನ್ನ ಸ್ವಾಮಿಯ ವೇಗದಿಂದ ನಡೆಯಲಾರದೆ ಹಾರಿ ಹೋದೆನು. ಅಲ್ಲಿ ಒಂದೆಡೆ ಬಲು ದೂರ ಹೋದ ಮೇಲೆ, ಅನಿಂಧನವಾದ ಅಗ್ನಿಮಂಡಲವು ಕಂಡಿತು. ಶ್ರೀಹರಿಯು ಆ ಪಾವಕನಲ್ಲಿ ಪ್ರವೇಶಿಸಿ, ಅಲ್ಲಿದ್ದ ಶಿವಾಶಿವರಿಂದ ಪೂಜಿತನಾದನು. ಆಮೇಲೆ ವಹ್ನಿಮಂಡಲದಿಂದ ಮುಂದೆ ಪೋಗುವ ದೇವನನ್ನು ನಾನು ಅನುಸರಿಸಲಾರದೆ ಬಹುಶ್ರಮದಿಂದ ಅನುಸರಿಸಿದೆನು. ಬಲುಸಾವಿರ ಯೋಜನಗಳಾದವು. ಅಲ್ಲಿದ್ದ ಮಹಾ ತಮಶ್ಚಕ್ರದಲ್ಲಿ ಪೊಕ್ಕಸ್ವಾಮಿಯನ್ನು ನಾನು ಕಾಣಲಾರದೆ, 'ದೇವ! ಆದಿಪುರುಷ! ಕಣ್ಣುಕಾಣದಾಗಿದೆ. ಸೂರ್ಯಕಿರಣ ಪ್ರವೇಶವೂ ಇಲ್ಲದ ಈ ತಮಸ್ಸಿನಲ್ಲಿ ಅಡಗಿದ ನಿನ್ನನ್ನು ಎಂತು ಕಾಣುವೆಸು? ನನ್ನ ಗತಿ ಏನು?' ಎಂದು ಪ್ರಾರ್ಥಿಸಿದೆನು. 'ಗರುಡ! ಹೆದರಬೇಡ! ಇಲ್ಲಿ ಬಾ! ಹೀಗೆ ಬಾ!' ಎಂಬ ಶಬ್ದವು ಗೋಚರವಾಯಿತು. ನಾನು ಆ ಶಬ್ದವನ್ನು ಹಿಡಿದು ನಡೆದು, ಮುಂದೆ ದಿವ್ಯಪ್ರಕಾಶವನ್ನು ಕಂಡೆನು. ನಾನು ತಮಃಪಾರವಾದ ಅನಂತಾಸನವನ್ನು ಸೇರಿರುವೆನೆಂದು, ಮನಗಂಡು, ಶ್ರೀಹರಿಯ ಕರುಣೆಯಿಂದ ಶ್ರಮ, ಖೇದಗಳನ್ನು ಕಳೆದುಕೊಂಡು, ಆ ಲೋಕದಲ್ಲಿ ಲೋಕನಾಥನನ್ನರಸಿದೆನು.

ಅಲ್ಲಿ ಸೂರ್ಯ ಚಂದ್ರ ತಾರಕೆಗಳ ಪ್ರಕಾಶವಿಲ್ಲ. ಆ ಲೋಕವೇ ಭಾಸ್ವಂತವಾದುದು, ಅಲ್ಲಿ ಕತ್ತಲಿಲ್ಲ. ಶ್ರೀಹರಿಯ ಅನುಗ್ರಹರಹಿತರಿಗೆ ಅಲ್ಲಿ ಪ್ರವೇಶವಿಲ್ಲ. ನಾನು ಮಧುರ ದುಂಧುಭಿಧ್ವಾನಗಳನ್ನು ಕೇಳುತ್ತಾ, ದಿವ್ಯಸುಂದರೀ ಮಂದ್ರಗೀತ ನಿನಾದಗಳನ್ನು ಮೇಳವಿಸಿ ಬರುವ ದಿವ್ಯಸುಮಪರಿಮಳವನ್ನು ಮೂಸುತ್ತಾ, ಪುಷ್ಪಮಕರಂದ ಬಿಂದುಸ್ಯಂದಿಸುಧಾ ನದಿಗಳನ್ನು ನೋಡುತ್ತಾ, ಮುಂದೆ ಸಾಗಿ ಅದ್ಭುತ ದಿವ್ಯರೂಪರಾದ ತರುಣೀ ತರುಣರನ್ನು ಕಂಡೆನು. ಅವರಿಂದ ಪೂಜಿತನಾಗಿ, ಕರುಣಾಕಟಾಕ್ಷದಿಂದ ಅವರನ್ನು ಸಂತೈಸಿ, ಮುಂದೆ ಸಾಗುವ ಶ್ರೀದೇವನನ್ನು ಮತ್ತೆ ನಾನು ಕಂಡೆನು. 'ಶರಣು ದೇವ! ಮಹಾನುಭಾವ! ಅಷ್ಟಭುಜ! ಅಮಿತತೇಜ! ಚಕ್ರಧರ! ಪಾಪಹರ!' ಎಂದು ಸ್ತುತಿಸಿ ವಂದಿಸಿದ ನನ್ನ ಬೆನ್ನು ತಟ್ಟಿ, ಆ ದೇವದೇವನು ಕಮಲಾಕರ ರಾಜೀವಗಂಧಿತ ಜಲಾವಗಾಹನ ಪರವಾದ ತನ್ನ ರೂಪವನ್ನು ತೋರಿ, ಮುಂದೆ ವಿತತಾಗ್ನಿ ಕುಂಡಗಳ ವೀತಿಹೋತ್ರನಲ್ಲಿದ್ದ ತನ್ನ ವೈಶ್ವಾನರ ರೂಪವನ್ನು ಪ್ರದರ್ಶಿಸಿ, ಆಮೇಲೆ ಯಥಾಪೂರ್ವವಾದ ದಿವ್ಯಾಷ್ಟ ಭುಜರೂಪದಿಂದ ಮುಂದೆ ನಿಂತನು.

ನಾನು 'ಅಚ್ಯುತ! ಶಿವ! ಸಹಸ್ರಾಕ್ಷ! ವೇದವೇದ್ಯ! ಅನಾದಿನಿಧನ! ಸಕಲ ಜಗದೇಕ ನಾಥ! ತ್ರಿನಯನ ನರಸಿಂಹ! ಗೋವಿಂದ! ಪದ್ಮನಾಭ! ಹರ! ಪಾಪಹರ!

ಕೃಪಾಸಮುದ್ರ! ಕಾಪಾಡು! ನಿನ್ನ ಅತ್ಯದ್ಭುತ ಮಹಿಮೆಯನ್ನು ನನಗೆ ತಿಳಿಸಿಕೊಡು!' ಎಂದು ಕೇಳಿದನು. ಸರ್ವಲೋಕ ಶರಣ್ಯನಾದ ನಾರಾಯಣನು ಇಂತೆಂದನು. ಆ ರಮಾರಮಣನ ಕಾರಣ್ಯಾಮೃತ ಪೂರ್ಣಕಟಾಕ್ಷಗಳೆನ್ನನ್ನು ಪಾವನಗೊಳಿಸಿದವು. ನನ್ನ ಮೈ ಪುಲಕಿಸಿತು. ಆ ಜಗದೇಕಸುಂದರನ ಮಂದಹಾಸ ಚಂದ್ರಿಕೆಯಿಂದ ನನಗೆ ಅಮೃತಪ್ಲಾವನವಾಯಿತು. ಆ ವೇದಾಂತ ವೇದ್ಯನ ವಚನಮಾಧುರಿಯು ನನ್ನ ಕರ್ಣರಸಾಯನವಾಯಿತು. ನನ್ನ ಕಣ್ಣಲ್ಲಿ ಆನಂದ ಬಿಂದುಗಳು ತುಂಬಿಬಂದವು. 'ದೇವ!' ಎಂದು ಮುಂದೆ ಮಾತಾಡಲು ಬಾರದೆ ನಿಂತ ನನ್ನನ್ನುದ್ದೇಶಿಸಿ ಶ್ರೀರಮಣನಿಂತೆಂದನು:

'ಸುಪರ್ಣ! ಧನ್ಯನಾದೆ! ಅನಿಲಾನಲ ಜಲಗಗನ ಧರಾತಲಗಳಿಗೆ ಸ್ವಾಮಿಯು ಅಂತರ್ಯಾಮಿಯು ಆದ ನನ್ನ ಅದ್ಭುತ ಮಹಿಮೆಯನ್ನಿಂದು ನಿನಗೆ ತೋರುವೆನು. ಸಕಲ ಚರಾಚರ ಜಗವು ನನ್ನಿಂದ ಹೊರಬರುವುದು! ನನ್ನಿಂದ ರಕ್ಷಿತವಾಗುವುದು! ನನ್ನಿಂದ ಸಂಹೃತವಾಗಿ ಕೊನೆಗೆ ನನ್ನಲ್ಲೆ ಸೇರುವುದು. ಭೂತಗಳು ನನ್ನಲ್ಲಿವೆ! ಆದರೆ ಭೂತಕೃತ ವಿಕಾರವೆನಗಿಲ್ಲ. ಸಕಲ ಭೂತಗಳಲ್ಲಿಯು ನಾನಿರುವೆನು! ಆದರೆ ಅವುಗಳಿಗೆ ಆಗುವ ಜನನಮರಣ ಜರಾದುಃಖಗಳು ನನಗಿಲ್ಲ. ನಾನು ಸರ್ವೋತ್ತಮನೆಂದು ತಿಳಿ!

ನನ್ನ ಹೊರತಿನ್ನೆಲ್ಲವೂ ಅಸ್ವತಂತ್ರವು. ನನ್ನಿಂದ ಜೀವರಿಗೆ ಯಥಾಯೋಗ್ಯವಾದ ಜ್ಞಾನವಾಗುವುದು. ತಾಮಸ ಜೀವರಿಗೆ ನನ್ನ ಜ್ಞಾನವಾಗದು. ಬಹಿರ್ವಿಷಯಗಳಲ್ಲಿ ಆಸಕ್ತರಿಗೆ ನಾನು ಬೇಕಾಗಿಲ್ಲ; ನಾನು ನೀಡುವ ಸ್ವರ್ಗಭೌಮಾದಿ ಸುಖಗಳನ್ನು ಬೇಡಿ, ಅವರು ಅವನ್ನೇ ಪಡೆಯುವರು. ಇವರಿಬ್ಬರಿಗೆ ಆನಂದರೂಪ ಮೋಕ್ಷವಿಲ್ಲ. ಕೇವಲ ಸಾತ್ವಿಕರಾದ ದೇವಾದಿ ಜೀವರಿಗೆ ಮಾತ್ರ ನನ್ನ ಯಥಾರ್ಥಜ್ಞಾನವಾಗುವುದು. ಅವರು ಭಕ್ತಿಯಿಂದ ನನ್ನನ್ನೇ ಭಜಿಸುವರು. ತುಚ್ಛವಾದ ವಿಷಯ ಸುಖಗಳಿಗೆ ಅವರಾಶೆಪಡರು. ರಾಜಸ ತಾಮಸರಿಗೆ ಸಿಗದ ವೈಕುಂಠಾದಿ ನನ್ನ ಲೋಕಪ್ರಾಪ್ತಿಯು ಸಾತ್ವಿಕಜೀವರಿಗೆ ಆಗುವುದು.

ನಾನು ನಾರಾಯಣನೆನಿಸಿದ್ದು, ಸೃಷ್ಟಿಕಾಲದಲ್ಲಿ ಸೃಷ್ಟಿಸಂಹಾರ, ನಿಯಮನ, ಜ್ಞಾನಾದಿಗಳನ್ನು ನಡೆಸಲು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳನ್ನು ಧರಿಸುವೆನು. ಜೀವರಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ, ಸಮಾಧಿಗಳೆಂಬ ಅವಸ್ಥೆಗಳಲ್ಲಿ ನಾನು ವಿಶ್ವ, ತೈಜಸ, ಪ್ರಾಜ್ಞ, ತುರ್ಯನೆಂಬ ನಾಲ್ಕು ರೂಪದಿಂದಿದ್ದು, ಶರೀರ ವ್ಯಾಪಾರವನ್ನು ನಿಯಮಿಸುವೆನು. ಧರ್ಮರಕ್ಷಾ, ಅಧರ್ಮ ಶಿಕ್ಷಾದಿಗಳನ್ನು ಮಾಡಲು ಮತ್ಸ್ಯಕೂರ್ಮಾದಿ ದಶಾವತಾರಗಳನ್ನು ಧರಿಸುವೆನು. ಮಹಿದಾಸ, ಕಪಿಲ, ದತ್ತಾತ್ರೇಯ, ವೇದವ್ಯಾಸ ರೂಪಗಳಿಂದ ಜ್ಞಾನವನ್ನು ಹರಡಿ, ಸುಜನರಿಗೆ ಸನ್ಮಾರ್ಗೋಪದೇಶನಾಗುವೆನು. ಬುದ್ಧಾದಿ ಕಲ್ಕಿರೂಪಗಳಿಂದ ಅಜ್ಞಾನವನ್ನಿತ್ತು ಅಸುರ ದುರ್ಜನರನ್ನು ಮೋಹಪಡಿಸುವೆನು. ನನ್ನನ್ನು ಮರೆತು ಪ್ರಕೃತಿಸುಖಗಳಲ್ಲಿ ಲೀನರಾದವರಿಗೆ ಬಂಧವು ತಪ್ಪಿದ್ದಲ್ಲ. ಅವರು ಜನನ ಮರಣ ಸುಳಿಯಲ್ಲಿ ಸಿಕ್ಕು ನರಳುವರು. ನನ್ನನ್ನೇ ಸ್ಮರಿಸುವ ಭಕ್ತರಿಗೆ ನಾನು ಸ್ವಯೋಗ್ಯ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನಿತ್ತು, ಈ ಅನಂತಾಸನಾದಿ ಲೋಕಗಳಲ್ಲಿಟ್ಟು, ಸಲಹುವೆನು. ನನ್ನ ಮಹಿಮೆಯನ್ನು ಗುರುಮುಖವಾಗಿ ಶ್ರವಣ

ಮನನಾದಿಗಳನ್ನು ಮಾಡಿ ತಿಳಿಯಬೇಕು. ವೇದ ಭಾರತ ಮೂಲರಾಮಾಯಣ ಪಂಚರಾತ್ರಾಗಮ ಭಾಗವತಾದಿ ಸಚ್ಛಾಸ್ತ್ರದಿಂದ ನಾನು ಮುಖ್ಯಾರ್ಥವಾಗಿ ಪ್ರತಿಪಾದಿಸಲ್ಪಟ್ಟಿರುವೆನು.

ನನ್ನ ಸ್ಥೂಲರೂಪವೀಬ್ರಹ್ಮಾಂಡವು. ನನ್ನ ಸೂಕ್ಷ್ಮರೂಪವು ಜೀವಹೃದಯ ಗುಹೆಯಲ್ಲಿರುವ ಅಂತರಾತ್ಮನೆಂದು ತಿಳಿ! ಬ್ರಹ್ಮರುದ್ರಾದಿ ಜೀವರು ಇಂತು ತಿಳಿದು ಅನೇಕ ಜನ್ಮಸಂಸಿದ್ಧರಾಗಿ, ನನ್ನ ಅನುಗ್ರಹದಿಂದ ಆಯಾ ಪದವಿಗಳನ್ನು ಪಡೆದಿರುವರು. ಗರುಡ! ಇಂತು ತಿಳಿದು ನೀನೂ ಮುಕ್ತನಾಗುವೆ!'

ಮುನಿವರರೇ! ಶ್ರೀಹರಿಯು ಉಪದೇಶಿಸಿದ ಪರಮಾರ್ಥವನ್ನು ನಿಮಗೆ ನಿರೂಪಿಸಿದೆನು. ನಿರೂಪಿಸಿ ನಾನೂ ಧನ್ಯನಾದೆನು' ಎಂದ ಗರುಡನನ್ನು ಸತ್ಕರಿಸಿ, ಬದರಿಕಾಶ್ರಮದ ಮುನಿವರರು ಶ್ರೀಹರಿಯನ್ನು ಕೊಂಡಾಡಿದರು.

ಧರ್ಮರಾಜ! ಶ್ರೀಶನ ಮಹಿಮೆಯನ್ನು ಯಥಾಮತಿ ವರ್ಣಿಸಿದೆನು. ಇದನ್ನು ಹೇಳಿ-ಕೇಳಿದವರು ಸರ್ವಪಾಪಮುಕ್ತರೂ, ಭಕ್ತಿಯುಕ್ತರೂ ಆಗಿ ಮುಕ್ತರಾಗುವರು.'

## ೪. ಅಷ್ಟಾವಕ್ರ ಚರಿತೆ - ತೀರ್ಥವಿಪ್ರ ವಿಚಾರ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ಧರ್ಮರಾಜನು ವಿಷ್ಣು ಮಹಿಮೆಯನ್ನು ಕೇಳಿ, ಸುಪ್ರೀತನಾದನು. 'ಕನ್ಯಾದಾನಕ್ಕೆ ಎಂತಹ ವರನು ಯೋಗ್ಯನು?' ಎಂದು ಕೇಳಿದ ಪಾಂಡವೇಯಾಗ್ರಜನಿಗೆ ಗಂಗಾತನುಜನಿಂತೆಂದನು:

'ಹಿಂದೆ ಅಷ್ಟಾವಕ್ರನೆಂಬ ಬ್ರಹ್ಮಚಾರಿಯು ವದಾನ್ಯನೆಂಬ ಮುನಿಯ ಕುಮಾರಿಯಾದ ಸುಪ್ರಭೆ ಎಂಬ ಕನ್ಯಾಮಣಿಯನ್ನು ಕೋರಿ, ಕೇಳಿಕೊಂಡಾಗ 'ಒಳ್ಳೇದು, ಯೋಗ್ಯನಾದ ನಿನಗೆ ನಾನು ಕನ್ಯೆಯನ್ನೀಯುವೆನು. ಆದರೆ ಕೆಲವು ದಿನ ಉತ್ತರದೇಶದ ಯಾತ್ರೆಯನ್ನು ಮಾಡಿ ಬಾ! ಅಲ್ಲಿ ಕುಬೇರಪುರಿಯನ್ನು ನೋಡು! ಮುಂದೆ ಗಿರಿಜೆ ಗಿರಿಶನನ್ನು ಕೋರಿ ತಪವನ್ನು ಮಾಡಿದ ಪಾವನ ಸ್ಥಲವಿದೆ. ಅಲ್ಲಿ ಗಿರಿಜಾರಮಣನು ಕ್ರೀಡಾಪರನಾಗಿರುವನು. ಅಲ್ಲಿಂದ ಮುಂದೆ ಸಾಗು. ಅಲ್ಲಿ ನೀಪವನವಿರುವುದು. ಆ ವನದಲ್ಲಿ ಪ್ರೌಢವನಿತೆ ಯೋರ್ವಳಿರುವಳು. ಅವಳು ಪುಣ್ಯಮೂರ್ತಿಯು, ನಿರ್ಮಲಚಿತ್ತಳು ಆಗಿರುವಳು. ಅವಳನ್ನು ಕಂಡು, ಬಂದ ತತ್‌ಕ್ಷಣವೇ ನಿನಗೆ ನನ್ನ ಮಗಳನ್ನಿತ್ತು, ಮದುವೆ ಮಾಡುವೆನು' ಎಂದನು. ಅಷ್ಟಾವಕ್ರನು ಅದಕ್ಕೊಪ್ಪಿ ವದಾನ್ಯನಿಗೆ ನಮಸ್ಕರಿಸಿ, ಬೀಳ್ಕೊಂಡನು.

ಅಲ್ಲಿಂದ ತೆರಳಿದ ಅಷ್ಟಾವಕ್ರನು ಬಾಹುದಾದಿ ಬಹುಪುಣ್ಯನದಿಗಳನ್ನು ದಾಟಿ, ಅಲಕಾಪುರಿಯನ್ನು ಸೇರಿದನು. ಕುಬೇರನು ಮಹಾತ್ಮನು ಬಂದಿರುವನೆಂದು ಎದುರು ಬಂದು ಪೂಜಿಸಿ, ದಿವ್ಯಸಭೆಗೆ ಕರೆದೊಯ್ದನು. ಅಲ್ಲಿ ರಂಭೋರ್ವಶೀತಿಲೋತ್ತಮರಾದಿಯಾದ ಅಪ್ಸರೆಯರ ನರ್ತನವು ನಡೆದಿತ್ತು. ಅವರ ಆಟಪಾಟಗಳು ಅವಿಚ್ಛಿನ್ನವಾಗಿ ಬಹುದಿನಗಳ ವರೆವಿಗೂ ಸಾಗಿದವು. ಅಷ್ಟಾವಕ್ರನು ಮನೋವಿಕಾರವಿಲ್ಲದೆ ಅಲ್ಲಿದ್ದು, ಕುಬೇರನು ಮೆಚ್ಚಿ ವರವನ್ನು ಬೇಡೆಂದರೆ 'ಮಹಾತ್ಮ! ನೀನು ಸಂಪನ್ನನು, ಬೇಕಾದುದನ್ನು ಕೊಡಬಲ್ಲೆ! ಆದರೂ

ನನಗೆ ಏನೂ ಬೇಡ! ಧರ್ಮಬುದ್ಧಿಯನ್ನು ಮಾತ್ರ ಕೊಡು. ನಾನು ಪೋಗುತ್ತಿರುವ ಕಾರ್ಯವು ನೆರವೇರುವಂತೆ ಅನುಗ್ರಹಿಸು' ಎಂದು ಬೇಡಿ, ಅಲ್ಲಿಂದ ತೆರಳಿದನು.

ಹಿಮಶೈಲಾಗ್ರದ ಈಶ್ವರಕ್ರೀಡಾವನವನ್ನು ಕಂಡು, ಅದಕ್ಕೆ ಪ್ರದಕ್ಷಿಣಿಸಿ, ಈಶನಿಗೆ ವಂದಿಸಿ, ಮುಂದೆ ನೀಪಕಾನನವನ್ನು ಹೊಕ್ಕನು. ಅಲ್ಲಿ ವರವಜ್ರವೈಡೂರ್ಯಾದಿ ಮಣಿಗಳಿಂದ ನಿರ್ಮಿತವಾದ ದಿವ್ಯಸೌಧವನ್ನು ಸೇರಿ, ದ್ವಾರಪಾಲರಿಂದ ಹೇಳಿಕಳಿಸಿದನು. ಕೆಲಹೊತ್ತಿಗೆ ಲಲನಾರತ್ನಸಮೂಹವು ಬಂದು ಆತನನ್ನು ಪರಮಾದರದಿಂದ ಒಳಗೆ ಕೊಂಡು ಹೋದರು. ಮನೋಹರ ರೂಪವತಿಯರು ತನ್ನ ಕಣ್ಣಿಗೆ ಬಿದ್ದರೂ ಅಷ್ಟಾವಕ್ರನು ವಿಕಾರವನ್ನು ಹೊಂದಲಿಲ್ಲ. ಅಭ್ಯಂತರ ಮಂದಿರದಲ್ಲಿ ಮಣಿಮಯ ಪರ್ಯಂಕದಲ್ಲಿ ಕೂಡಿಸಿ ತಾನು ಕೂಡ ಸಮೀಪದ ರತ್ನಪರ್ಯಂಕದಲ್ಲಿ ಕೂತನು. ಅವರ ರಾಣಿಯು ಆತನಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು, ಸ್ವಾಗತವನ್ನು ಪೇಳಿ, ತಾನು ಕೂಡ ಸಮೀಪದ ರತ್ನಪರ್ಯಂಕದಲ್ಲಿ ಆಸೀನಳಾದಳು. ಧವಳವಸನೆಯು, ವಿವಿಧರತ್ನಾಭರಣಭೂಷಿತೆಯು, ಪ್ರೌಢವಯಸ್ಕಳು, ಗೌರವನೀಯಳು ಆದ ಆ ತರುಣಿಯು ಅತಿ ಸುಂದರಿಯಾಗಿದ್ದಳು.

ಅಷ್ಟಾವಕ್ರನು ತನ್ನ ಸುತ್ತುಗಟ್ಟಿ ನಿಂತ ಕಾಂತೆಯರ ಹಾವಭಾವ ವಿಲಾಸಗಳನ್ನು ನೋಡಲಿಚ್ಛಿಸದೆ, ಹುಬ್ಬು ಮುರಿದನು. ಆಗ ತರುಣೀಮಣಿಯು ಅವರನ್ನು ಅಲ್ಲಿಂದ ಹೊರಕ್ಕೆ ಕಳಿಸಿದಳು. ರಾತ್ರಿಯಾಯಿತು, ಆಕೆಯು ಚಳಿಯೆಂದು ಎದ್ದು ಬಂದು, ಅಷ್ಟಾವಕ್ರನ ಮಂಚವನ್ನೇರಿ ಮಲಗಿದಳು. ಸ್ವಲ್ಪ ಹೊತ್ತಾದ ಮೇಲೆ ಆ ಸುದತಿಯು ಅವನ ಮೈ ಸವರಿ, ಮೆಲ್ಲಗೆ ಸಾರಿ, ಅವನನ್ನು ಬಿಗಿದಪ್ಪಿ ಮಲಗಿದಳು. ಇಂತಾದರೂ ಅಷ್ಟಾವಕ್ರನು ಮನೋವಿಕಾರವಿಲ್ಲದೆ ಕಟ್ಟಿಗೆಯ ಗೊಂಬೆಯಂತಿದ್ದನು.

ಆಕೆಯು 'ಮುನಿವರ! ಪುರುಷರು ಭೋಗಪರರು. ತರುಣಿಯರಿಗಿರುವ ತಾಳುವಿಕೆ ಅವರಿಗಿಲ್ಲ. ಅಂತಿರಲು ನಾವಾಗಿ ಸೇರಿದರೂ ನನ್ನನ್ನು ಸ್ವೀಕರಿಸದಿರುವುದು ನಿನಗೆ ಸರಿಯಲ್ಲ. ನನ್ನನ್ನು ವರಿಸು. ನನ್ನದಾದ ಸಿರಿಸಂಪತ್ತೆಲ್ಲವೂ ನಿನ್ನದಾಗುವುದು. ನನ್ನ ದಾಸೀಸಹಸ್ರವು ನಿನ್ನ ಊಳಿಗದಲ್ಲಿ ನಿಲ್ಲುವುದು' ಎಂದಳು. ಅಷ್ಟಾವಕ್ರನು ಪರದಾರಾಭಿಗಮನವು ಬಲು ನಿಂದನೀಯವಾಗಿದೆ. ನಾನು ಅಸ್ಖಲಿ ಬ್ರಹ್ಮಚಾರಿಯಾಗಿರುವೆನು. ಸ್ನಾತಕವ್ರತವನ್ನು ಮುಗಿಸಿ, ವಿಹಿತರೀತಿಯಲ್ಲಿ ಸತಿಯನ್ನು ಮದುವೆಯಾಗಲಿರುವೆನು, ದೂರಸರಿ!' ಎಂದನು. ಆಕೆಯು 'ಕೇಳೆನ್ನ ಮಾತನ್ನು, ವನಿತೆಯರು ಕಾಮಾರ್ತರಾದರೆ ಅವರನ್ನು ತಡೆಯಲಾಗದು, ಕಾಮಾಂಧರಾಗಿ (ದುಷ್ಟ) ವನಿತೆಯರು ಮಾಡದ ಅಕಾರ್ಯವಿಲ್ಲ. ವಂಶಹಾನಿಗೆ ಅವರು ಹೆದರರು; ಗಂಡನಿಗೆ ಅಂಜರು; ಪುತ್ರಸೋದರದೇವರಾದಿ ಜನರನ್ನು ಲಕ್ಷ್ಯಮಾಡರು. ಪುರುಷ ಶತಸಂಗದಿಂದಲು ತೃಪ್ತಿಹೊಂದರು' ಎಂದಳು. ಮುನಿವರನು 'ಎಂತಹ ಮಾತಾಡಿದೆ! ನಿನ್ನ ನುಡಿಗಳನ್ನು ನಾನು ಕೇಳಲಾರೆನು. ದುಷ್ಟವನಿತೆಯರಿಂತಾಗಬಹುದು, ದಿವ್ಯಾಂಗನೆಯಂತಿರುವ ನಿನಗಿದು ಉಚಿತವಲ್ಲ. ಧರ್ಮವೃತ್ತಿಯನ್ನು ಬಿಡಬೇಡ!' ಎಂದನು.

ಮರುದಿನ ಬೆಳಗಾಯಿತು. ಕಾಲ್ಯಕೃತ್ಯಗಳನ್ನು ತೀರಿಸಿ ಬಂದ ಮುನಿಕುಮಾರನನ್ನು ಮಣಿಪೀಠದಿ ಕೂಡಿಸಿ, ಆ ತರುಣಿಯು ಎಣ್ಣೆಯೊತ್ತಿ, ಮೃದುಕರಕಮಲಗಳಿಂದ

ಮಜ್ಜನೋದ್ವರ್ತನಗಳನ್ನು ಮಾಡಿ, ಮೈ ಒರೆಸಿದಳು. ದಿವ್ಯ ಮೃಷ್ಟಾನ್ನವನ್ನುಣಿಸಿ, ಸಾಯಂಕಾಲ ವಾಗುವವರೆಗೂ ನಮ್ರಭಾಷಣಗಳಿಂದ ಕಾಲ ಕಳೆದಳು. ಅಂದು ರಾತ್ರಿಯಾಗಲು ಶಯನ ವನ್ನಾರೋಹಿಸೆಂದು ಕರೆದು ಇಂದುವದನೆಯ ವಿವಿಧಸುಧಾಸಮಾಲಾಪಗಳಿಗೆ ಕಿವಿಗೊಡದೆ, ಕಲ್ಲಗೊಂಬೆಯಂತೆ ನಿರ್ವಿಕಾರನಾಗಿದ್ದ ಮುನಿಯನ್ನು ನೋಡಿ ಆಕೆಯು 'ಸುಂದರ! ನಾನು ಪರದಾರೆಯಲ್ಲ, ಕನ್ಯೆಯಾಗಿರುವೆನು. ಪಾಣಿಗ್ರಹಣಮಹೋತ್ಸವವನ್ನು ಅನುಭವಿಸು! ನನ್ನನ್ನು ನಾನಾಗಿ ನಿನಗೆ ಸಮರ್ಪಿಸಲು ನಾನು ಸ್ವತಂತ್ರಳಿರುವೆನು!' ಎಂದಳು.

ಅಷ್ಟಾವಕ್ರನು 'ತಪ್ಪುತಿಳಿದಿರುವೆ! ಕೇಳು! ನಾರಿಗೆ ಸ್ವಾತಂತ್ರ್ಯವಿಲ್ಲ! ಬಾಲ್ಯದಲ್ಲಿ ತಂದೆಯು, ಯೌವನದಲ್ಲಿ ಗಂಡನು, ವಾರ್ಧಕ್ಯದಲ್ಲಿ ಮಗನು ನಾರಿಗೆ ರಕ್ಷಕರೆಂದು ಮನುವಚನವಿದೆ. ನಾರೀಜನವು ಸ್ವತಂತ್ರವಲ್ಲ; ತನಗೆ ತೋಚಿದಂತೆ ಮಾಡುವ ಅಧಿಕಾರವಿಲ್ಲ. ನೀನು ನೀನಾಗಿ ನಿನ್ನನ್ನು ಕೊಡುವೆಯೆಂದು ನಾನು ಸ್ವೀಕರಿಸಲಾಗದು' ಎಂದನು. ಆಗ ಅವನ ಭಾವಶುದ್ಧಿಗೆ ಮೆಚ್ಚಿ ಆ ಸುಂದರಿಯು 'ಅಯ್ಯಾ! ಮುನಿವರ! ನಿನ್ನನ್ನು ಪರೀಕ್ಷಿಸಲು ನಾನಿಂತು ವರ್ತಿಸಿದೆನು, ವದಾನ್ಯ ಮುನಿಯ ಅಪ್ಪಣೆಯಂತೆ. ಎಷ್ಟು ಮೋಹಪಡಿಸಿದರೂ ನೀನು ಸ್ಥಿರಚಿತ್ತನಾಗಿರುವೆ. ನಾನು ಉತ್ತರದಿಗಭಿಮಾನಿ ದೇವತೆಯೆಂದು ತಿಳಿ! ಮೆಚ್ಚಿದೆನು ನಿನ್ನ ಅಸ್ಖಲಿತಬ್ರಹ್ಮಚರ್ಯದೀಕ್ಷೆಯನ್ನು. ಹೋಗು! ಸುಪ್ರಭಾಪಾಣಿಗ್ರಹಣಕ್ಕೆ ಅರ್ಹನಾಗಿರುವೆ' ಎಂದು ಅವನನ್ನು ಸತ್ಕರಿಸಿ ಕಳಿಸಿದಳು.

ಅಷ್ಟಾವಕ್ರನು ಹಿಂದಿರುಗಿ ಬಂದು ಸುಪ್ರಭೆಯನ್ನಿತ್ತ ವದಾನ್ಯನಿಂದ ಸತ್ಕೃತನಾಗಿ, ಚಿರಕಾಲವಾ ವನಿತಾಮಣಿಯಿಂದ ಕೂಡಿ, ಅತುಲಭೋಗ, ಧರ್ಮ, ಕೀರ್ತಿಗಳನ್ನು ಗಳಿಸಿ, ಮೆರೆದನು. ಇಂತಹ ಮಹಾತ್ಮರಾದ ವಿಪ್ರರಿಗೆ ಅಶಕ್ಯವಿಲ್ಲ. ವಿಪ್ರರಿಗೆ ವಿಪ್ರೇತರ ಯೋನಿಯಲ್ಲಿ ಜನಿಸಿದವರು ವಿಪ್ರರೇ ಆದುದುಂಟು. ಧರ್ಮಶಾಸ್ತ್ರದಲ್ಲಿ ಅನುಲೋಮ ವಿವಾಹವು ದೂಷ್ಯವೆಂದಿಲ್ಲ, ಆದರೆ ಕ್ಷೇತ್ರವಾವುದೋ ಆ ಜಾತಿಯು ತಜ್ಜಾತನಿಗೆ ಬರುವುದು ಪ್ರತಿಲೋಮವೇ ನಿಷಿದ್ಧವು. ಅದು ವರ್ಣಸಂಕರಕಾರಣವಾಗಿ, ಧರ್ಮವಿರುದ್ಧವೆನಿಸಿದೆ.

ವಿಪ್ರನಾದ ಗರ್ಗನಿಗೆ ದೈತ್ಯಳಲ್ಲಿ ಜನಿಸಿದ ಕಾಲಯವನನು ದೈತ್ಯನಾದನು. ವಿಪ್ರನಾದ ವಸಿಷ್ಠನಿಗೆ ಕ್ಷತ್ರಿಯಾಣಿಯಲ್ಲಿ ಜನಿಸಿದ ಸೌದಾಸಪುತ್ರನು ಕ್ಷತ್ರಿಯನಾದನು. ಕ್ಷತ್ರಿಯನಾದ ಸೂರಸೇನನಿಗೆ ವೈಶ್ಯಳಲ್ಲಿ ಜನಿಸಿದ ನಂದನು ವೈಶ್ಯನಾದನು. ಅದೇ ಶೂರನಿಗೆ ಶೂದ್ರೆಯಲ್ಲಿ ಜನಿಸಿದ ಆರುಣಿ (ವಿದುರ ಭಾರ್ಯೆ) ಯು ಶೂದ್ರಳಾದಳು. ವೇದವ್ಯಾಸ ವರದಿಂದ ವಿಚಿತ್ರವೀರ್ಯನ ಶೂದ್ರಪತ್ನಿಯಲ್ಲಿ ಜನಿಸಿದ ವಿದುರನು ಕ್ಷತ್ತ (ಶೂದ್ರಪ್ರಭೇದ) ನೆನಿಸಿದನು. ವಿಲೋಮವಾದರೆ ನೀಚ ಸಂಕರವಾಗುವುದು. ವಿಪ್ರಳಿಗೆ ನಾಪಿತನಿಂದ ಜನಿಸಿದ ಮತಂಗನು ಚಂಡಾಲನಾದನು.

ಕೆಲಕಡೆ ಬೀಜದಾತನ ಮಹಿಮೆಯಿಂದ ಬೀಜದಾತನ ಜಾತಿಯು ಬಂದುದೂ ಉಂಟು. ಅಯೋನಿಯಲ್ಲಿಯು, ಮನುಜೇತರ ಯೋನಿಯಲ್ಲಿಯು ಹುಟ್ಟಿದ ವಿಪ್ರರು ಮಹಾನುಭಾವರಾದುದು, ಅವರ ತಂದೆಯ ತಪಃಪ್ರಭಾವದಿಂದಲೇ ಎಂದು ತಿಳಿ! ದ್ರೋಣ, ದ್ರುಪದ, ಕೃಪ, ವಸಿಷ್ಠ ಋಶ್ಯಶೃಂಗ, ಶುಕ, ಅಗಸ್ತ್ಯ, ವ್ಯಾಸರು ಇಂತಹ

ಮಹಾಮಹಿಮರು. ಮಹಾತ್ಮರ ಜಾತಿಗೆ ಅವರ ಯೋನಿಯು ಕಾರಣವಲ್ಲ. ಅವರ ತಾಯಿಯು ನಿಮಿತ್ತಮಾತ್ರಳೆಂದು ಅಲ್ಲಿ ನಾನು ನಿನಗೆ ನಿರೂಪಿಸಿರುವೆನು. ಅಂತೆಯೇ ನದೀಮೂಲ, ಋಷಿಮೂಲಗಳನ್ನು ಬಹುಶಂಕೆಯಿಂದ ವಿಚಾರಿಸಲಾಗದೆಂದು ಪ್ರಾಜ್ಞರು ಹೇಳುವರು.

ಇಂತು ವಿಪ್ರಮಹಿಮೆಯನ್ನು ನಿನಗರುಹಿದೆನು. ಅಂತಹ ಸದ್ವಿಪ್ರರೇ ದಾನಪಾತ್ರರು. ಯಾರಿಗೆ ಕೊಟ್ಟ ದಾನವು ದಾತೃಪ್ರತಿಗ್ರಹೀತರನ್ನು ಪಾವನಗೊಳಿಸುವದೋ ಅನಂತ ಫಲಪ್ರದ ವಾಗುವುದೋ, ಅಂತಹ ವಿಪ್ರರನ್ನು ಪಾತ್ರರೆಂದು ತಿಳಿದು ಅವರಿಗೇ ದಾನವನ್ನು ನೀಡು! ಅಪಾತ್ರರಿಗಿತ್ತ ದಾನವು ಕೊಟ್ಟವನನ್ನೂ, ಕೊಂಡವನನ್ನೂ ನರಕದಲ್ಲಿ ಬೀಳಿಸುವುದು. ಶ್ರದ್ಧೆಯಿಂದ ಕೊಟ್ಟ ದಾನವು ದುರಿತಹರವಾಗುವುದು. ಶ್ರದ್ಧೆಯಿಲ್ಲದೆ ಮಾಡಿದ ದಾನವು ವ್ಯರ್ಥವೇ ಸರಿ!

ದೈವಕಾರ್ಯದಕಿಂತಲು, ಪಿತೃಕಾರ್ಯದಲ್ಲಿ ಉತ್ತಮ ವಿಪ್ರರು ನಿಮಂತ್ರಿತರಾಗಬೇಕು. ಪೂರ್ವಸಂಬಂಧರಹಿತ, ಪಂಡಿತ, ಯಜ್ಞಪರ, ತಪೋರತ ಇವರು ದೈವಪಿತೃ ಕಾರ್ಯಗಳಿಗೆ ಆಹೂತರಾಗಲರ್ಹರು. ಧರ್ಮಭಾಷಣವೇ ಆಗಲಿ ಧರ್ಮಾಚರಣವಿಲ್ಲದವನಿಗೆ ಕೊಟ್ಟ ದಾನವು ಹತ್ತು ವರ್ಷ ನರಕಾನುಭವವನ್ನು ತಂದು ಕೊಡುವುದು. ಹಿಂದೆ ಕಾಶ್ಯಪ, ವಹ್ನಿ, ಮಾರ್ಕಂಡೇಯರು ಒಂದು ಸಭೆಯಲ್ಲಿ ನುಡಿದ ದಾನಧರ್ಮವನ್ನು ನಿರೂಪಿಸುವೆನು, ಕೇಳು!

ದಾನವನ್ನು ಕೊಟ್ಟು ಹೇಳಿಕೊಂಡವನ ಪುಣ್ಯವು ಸಮುದ್ರದಿ ಬಿದ್ದ ಬಂಡೆಯಂತೆ ನಾಶವಾಯಿತು. ಸತ್ಕುಲದಲ್ಲಿ ಪುಟ್ಟಿ, ಸಕಲ ವೇದ ಪುರಾಣಶಾಸ್ತ್ರಗಳನ್ನು ಓದಿದ ಮಾತ್ರಕ್ಕೆ ಸತ್ಪಾತ್ರನಾಗಲಾರನು. ಓದಿದರೇನು, ವಾದದಲ್ಲಿ ಸುಜನರನ್ನು ಅವಮಾನಿಸುವ ದುಷ್ಪಾತ್ರನು ಬ್ರಹ್ಮಹಂತಕನಂತೆ ವರ್ಜನೀಯನೇ ಸರಿ!

ಸತ್ಯಕ್ಕೆ ಸಮಾನ ಧರ್ಮವಿಲ್ಲ. ಸಾವಿರ ಅಶ್ವಮೇಧ ಪುಣ್ಯವನ್ನು ಒಂದು ಸತ್ಯ ಫಲದಿಂದ ತೂಗಿ ನೋಡಿದರೆ ಸತ್ಯವೇ ಗುರುತರವಾಗುವುದು. ಸತ್ಯವಚನನಿಗೆ ಶೌಚ, ಬ್ರಹ್ಮಚರ್ಯ (ಸ್ವಪತ್ನೀ ಮಾತ್ರ ರತಿ), ಮದ್ಯ ಮಾಂಸವರ್ಜನ, ಅಚಾಪಲ್ಯ, ಲೋಕಸಂಗ್ರಹ ಚಾತುರ್ಯ ಎಂಬ ಐದು ಗುಣಗಳು ಜೋಡಾದರೆ, ಬಂಗಾರದಲ್ಲಿ ವಜ್ರ ವೈಡೂರ್ಯ ಮಾಣಿಕ್ಯ ಮೌಕ್ತಿಕ ನೀಲಗಳಿಟ್ಟಂತಾಗಿ, ಅವನು ಉತ್ತಮ ಪಾತ್ರನೆನಿಸುವನು.

ಪ್ರಾತಃಕಾಲದಲ್ಲಿ ಧರ್ಮವನ್ನೂ, ಮಧ್ಯಾಹ್ನದಲ್ಲಿ ಅರ್ಥವನ್ನೂ, ರಾತ್ರಿಯಲ್ಲಿ ಕಾಮವನ್ನೂ ಅನಾಸಕ್ತನಾಗಿ ಸಂಪಾದಿಸುವ ನರನು ಪುಣ್ಯವಂತನಾಗುವನು. ಗುರು ವಿಪ್ರ ಪೂಜನಗಳಿಗಿಂತಲು ಹೆಚ್ಚು ಪುಣ್ಯವಿಲ್ಲ! ವಿಪ್ರನಿಂದೆ, ಅಗ್ನಿವರ್ಜನ, ವೇದ ವಿಸ್ಮರಣಗಳಿಗೆ ಮಿಾರಿದ ಪಾಪವಿಲ್ಲ. ವೇದವನ್ನೋದಿ, ತತ್ವವನ್ನರಿತ ಬ್ರಾಹ್ಮಣೋತ್ತಮನಿಗಿತ್ತ ದಾನವು ಸಹಸ್ರಗುಣಿತವಾಗುವುದು. ಪ್ರಜ್ಞಾಶೀಲವಂತರಿಗೆ ಕೊಟ್ಟದಾನವು ವಂಶವಿಸ್ತಾರಣ ಕಾರಣ ವಾಗುವುದು. ಸುವಿಪ್ರನೋರ್ವನು ತೃಪ್ತನಾದರೆ, ದೇವಮುನಿ ಪಿತೃಸಮೂಹವೆಲ್ಲವು ತೃಪ್ತ ವಾಗುವುದು. ಆದುದರಿಂದ ಶಿಷ್ಟವಿಪ್ರರನ್ನು ಹುಡುಕಿ ತಂದು ದಾನಮಾಡು! ಕೌಂತೇಯ! ಮತ್ತೆ ಮತ್ತೆ ಅಂತಹ ಸತ್ಪಾತ್ರರಿಗೆ ನೀಡು!

ಪ್ರಾತಃಕಾಲವು ದೇವಾರ್ಚನಾ ಸಮಯವು; ಮಧ್ಯಾಹ್ನವು ಮನುಜಪೂಜಾಕಾಲವು; ಅಪರಾಹ್ನವು ಪಿತೃತರ್ಪಣ ಸಮಯವಾಗಿದೆ! ಕಾಲವನ್ನರಿತು ಮಾಡಿದ ಪೂಜೆಯು ಅನಂತ ಫಲಪ್ರದವಾಗಿದೆ. ಕಾಲಹೀನವು, ಅಶುಚಿಯು, ಭುಕ್ತಶೇಷವು, ಅಮಂತ್ರಕವು, ಕೀಟಕೇಶಾದಿದೂಷಿತವು, ಅದಕ್ಷಿಣವು ಆದ ದಾನ (ಅನ್ನ) ವನ್ನು ರಾಕ್ಷಸರು ಅಪಹರಿಸುವರು. ಅಪಾತ್ರರಿಗಿತ್ತ ದಾನವೂ ದೈತ್ಯರ ಪಾಲಾಗುವುದು. ಮತ್ತ, ಜಡ, ಉನ್ಮತ್ತ, ಪತಿತ, ಕ್ಲೀಬ, ಕುಷ್ಠರೋಗಿ, ದೇವಲಕ, ಚಿಕಿತ್ಸಕ, ಅಪಸ್ಮಾರಿ, ತೊನ್ನುಬಡಕ, ಕ್ಷಯರೋಗಿ, ನರ್ತಕ, ಗಾಯಕ, ಸೋಮವಿಕ್ರಯಕ, ವೇದವಿಕ್ರಯಕ ಇವರೆಲ್ಲರೂ ದೇವ ಪಿತೃ ಕಾರ್ಯಗಳಲ್ಲಿ ಅಪಾತ್ರರೆನಿಸುವರು. ಸಂಧ್ಯಾವಂದನರಹಿತ, ಬಡ್ಡಿಜೀವಿ, ಅನಗ್ನಿ ಜಂತುವ್ಯಾಪಾರಿ, ಇವರೂ ಅಪಾತ್ರರೇ ಸರಿ!

ಈಗ ಪಾತ್ರರನ್ನು ತಿಳಿಸುವೆನು. ಭೋಜನಾರ್ಥಿಗಳಿಗಾಗಿ ಉತ್ತಮ ಕ್ಷೇತ್ರಗಳಲ್ಲಿ ಸತ್ರವಿಟ್ಟವನು; ಕಳ್ಳರ ಕೈಗೆ ಸಿಕ್ಕು ಬಡವನಾಗಿ ಬೇಡುವವನು; ವ್ರತೋದ್ಯಾಪನರತನು, ಗುರುದಾರಾಪುತ್ರಾದಿ ಪರಿವಾರ ರಕ್ಷಣಕ್ಕಾಗಿ ಬೇಡುವ ನಿರ್ಧನನು, ವ್ಯಾಧಿಯಲ್ಲಿ ನರಳುವ ಯಾಚಕನು ಇವರು ಉತ್ತಮ ದಾನಪಾತ್ರರು.

ಸಭಾ ಸತ್ರ ದೇವಾಲಯ ಧ್ವಂಸಕ, ಗುರುನಿಂದಕ, ವೇದಶಾಸ್ತ್ರನಿಂದಕ, ಚಾಡಿಕೋರ, ಪರವೃತ್ತಿ ನಿರೋಧಕ, ಅಕೃತಜ್ಞ, ಪರದಾರಾದೂಷಕ, ಬಾಲವೃದ್ಧ ಕುಮಾರೀವಂಚಕ, ಅತಿಥಿ ಬಾಲರಿಗೀಯದೆ ಮೆಲ್ಲುವ ತಿಂಡಿಬಾಕ, ವಿಷಶಸ್ತ್ರಕೇಶಗಳನ್ನು ಮಾರುವವನು, ಗೋಪೀಡಕ, ವೃದ್ಧಭೃತ್ಯನನ್ನು ಪೋಷಿಸದವನು, ಮಾರ್ಗದಲ್ಲಿ ಕಂಟಕಶರ್ಕರಗಳನ್ನು ಹರಡುವವನು, ಅಪರಾಧವಿಲ್ಲದೆ ದಂಡಿಸುವ ಅಧಿಕಾರಿ ಪ್ರಜರ ಗೋಳು ತಿಳಿದೂ ನಿವಾರಿಸದ ರಾಜ, ಇವರೆಲ್ಲರು ಶಾಶ್ವತ ನರಕವನ್ನು ಹೊಂದುವರು.

ತಪಸ್ಸು, ಗುರುಶುಶ್ರೂಷೆ, ವೇದಾಧ್ಯಯನ, ದುಷ್ಟದಾನವರ್ಜನ, ಮದ್ಯಮಾಂಸ ಪರದಾರಾ ದ್ರವ್ಯವಿಮುಖತೆ, ಸನ್ಯಾಸಿಜನಭರಣ, ದೀನಾನುಕಂಪಾಯುತಚಿತ್ತ, ಅಹಿಂಸೆ, ಸಭಾ ದೇವಾಲಯ ನಿರ್ಮಾಣ, ಪ್ರಜಾಪಾಲನ, ಅಭಯದಾನ, ಗೋರಕ್ಷಣ, ಸುಜನಾಪರಾಧ ಸಹನ, ಪರಿವಾರ ಪೋಷಣ, ಈ ಗುಣಗಳು ಸ್ವರ್ಗಸೋಪಾನಗಳೆಂದು ಜ್ಞಾನಿಗಳು ಪೇಳುವರು. ಯಾವ ಕುಲದವನಾದರೇನು ಸದ್ಗುಣಖಣಿಯಾದವನು, ಸಾವಿರ ಪೂರ್ಣಚಂದ್ರರನ್ನು ಕಂಡವನು, ಅತಿದಯಾಪರನು ಆದವರು ದೇವಲೋಕವನ್ನು ಸೇರಿ, ಸುಖದಿಂದಿರುವರು.

ದರಿದ್ರವಿಪ್ರರನ್ನು ಕರೆದು, ಕೊಡದೆ ಕಳಿಸುವುದು; ವಿದ್ಯಾವಂತನಾದ ವಿಪ್ರನ ವೃತ್ತಿಕೆಡಿಸುವುದು; ನೀರು ಕುಡಿಯುವ ಗೋವನ್ನು ಹೊಡೆದೋಡಿಸುವುದು; ಬಧಿರ, ಪಂಗು, ನೇತ್ರಹೀನರ ಧನವನ್ನು ಕದಿಯುವುದು; ವೇದಶಾಸ್ತ್ರನಿಂದೆ; ಮನೆ, ಗುಡಿ, ಬಣವೆ, ವನಗಳಿಗೆ ಬೆಂಕಿಯಿಡುವುದು; ಸುಳ್ಳುನಿಂದೆ ಹೊರಿಸಿ ವಿಪ್ರವರನನ್ನು ಅವಮಾನಿಸುವುದು; ಯುಕ್ತವರನಿಗೆ ಕೊಡದೆ, ವೃದ್ಧ, ಪಾಪಿ, ನೀಚ ವರನಿಗೆ ಕನ್ಯಾದಾನ ಇವೆಲ್ಲವು ಬ್ರಹ್ಮಹತ್ಯೆಗೆ ಸಮವಾದ ಮಹಾಪಾಪಗಳು.

ಸುಜೀವರು ದುಷ್ಟಸಂಗದಿಂದ ಪಾಪಗಳನ್ನು ಮಾಡಿದರೆ, ಅವರು ಮಿಂದು,

ಭಕ್ತಿಯಿಂದ ಅರ್ಚಿಸಿ, ತಮ್ಮ ಪಾಪಗಳನ್ನು ಕಳೆದುಕೊಳ್ಳಬಹುದಾದ ಪುಣ್ಯತೀರ್ಥ ಕ್ಷೇತ್ರಗಳನ್ನು ವರ್ಣಿಸುವೆನು.

ಚಂದ್ರಭಾಗ, ವಿತಸ್ತ, ಊರ್ಮಿಮಾಲಿನಿಯೆಂಬ ಪುಣ್ಯನದಿಗಳಲ್ಲಿ ಮಿಾಯುತ್ತಾ, ಅಲ್ಲಿ ತೀರದಲ್ಲಿ ವಿರಾಜಿಸುವ ನೀರಜಾಕ್ಷ ವಿರೂಪಾಕ್ಷಾದಿ ದೇವತೆಗಳನ್ನು ಪೂಜಿಸುತ್ತಾ, ಏಳು ದಿನ ವಾಸಿಸಿದ ಭಕ್ತನು ಮುನಿಸಮಾನನೆನಿಸುವನು. ಕಾಶ್ಮೀರದಲ್ಲಿರುವ ಮಹಾನದಿಗಳು ಕೆಲವು ಒಂದೇ ದಿನದ ಸ್ನಾನದಿಂದ ಸಕಲ ಪಾಪಕ್ಷಾಳನಸಮರ್ಥವಾಗಿವೆ. ಪುಷ್ಕರ, ನೈಮಿಷ, ಇಂದ್ರಮಾರ್ಗ, ದೇವಿಕಾ, ಸ್ವರ್ಗಬಿಂದುಗಳಲ್ಲಿ ಮಾಡಿದ ಸ್ನಾನ ಪೂಜನಗಳಿಂದ ಅಪ್ಸರೋವನಿತಾಸಮೇತ ವಿಮಾನ ವಿಹಾರವು ಲಭಿಸುವುದು.

ಗಂಧಮಾದನದಿಂದ ಹರಿದು ಬರುವ ಇಂದ್ರತೋಯಾ, ಕುರಂಗದೇಶದ ಕರತೋಯಾ ಎಂಬ ನದಿಗಳ ತೀರದಲ್ಲಿ ಮೂರು ದಿನವಿದ್ದವರು ಅಶ್ವಮೇಧ ಫಲವನ್ನು ಹೊಂದುವರು. ಕನಖಲ, ಗಂಗಾದ್ವಾರ, ನೀಲಗಿರಿ, ಕುಶಾವರ್ತ, ಬಿಲ್ವಕಗಳಲ್ಲಿ ತೀರ್ಥ ಸೇವನದಿಂದ ನಾಕಲೋಕ ಸುಖವು ಲಭಿಸುವುದು. ಭಾಗೀರಥಿಯಲ್ಲಿ ಮೇಧ್ಯಾಹಾರನಾಗಿ ತಿಂಗಳಿದ್ದವನು ದೇವತಾ ದರ್ಶನವನ್ನು ಪಡೆಯುವನು. ಬಿಂಬಾಶ್ರಮದಲ್ಲಿ ಒಂದು ತಿಂಗಳಿದ್ದವನು ಸರ್ವಸಿದ್ಧಿಗಳನ್ನು ಪಡೆಯುವನು. ಭೃಗುತುಂಗದ ಹ್ರದದಲ್ಲಿ ಮೂರು ವಾರಗಳಿದ್ದು, ಉಪವಸಿಸಿದರೆ, ಬ್ರಹ್ಮಹತ್ಯಾದಿ ಮಹಾಪಾಪಗಳು ನಾಶವಾಗುವವು. ಕನ್ಯಾಸರೆ, ಸುಂದರಿಕಾ ಹ್ರದಗಳಲ್ಲಿ ಒಂದು ಸಲ ಮಾಡಿದ ಸ್ನಾನವು ಸುರೂಪಕಾರಣವಾಗಿದೆ. ವಿಪಾಶೆಯು ತ್ರಿದಿನ ಸೇವೆಯಿಂದ ಭವಪಾಶವನ್ನು ಕಡಿಯುವುದು. ಕಾಲಿಕಾಶ್ರಯೆಯನ್ನು ಸೇವಿಸಿ, ಮೋಕ್ಷವನ್ನು ಪಡೆಯುವರು.

ಕೃತ್ತಿಕಾಶ್ರಮದಲ್ಲಿ ಸ್ನಾನ, ತರ್ಪಣ, ದಾನಗಳನ್ನು ಮಾಡಿ, ಶಿವಕೈಲಾಸವನ್ನು ಸೇರುವರು. ದ್ರೋಣಸರ, ದೇವದಾರುವನ, ಚಿತ್ರಕೂಟ, ಜನಸ್ಥಾನ, ಶ್ಯಾಮಾಶ್ರಮ, ಕೌಶಿಕವಾಲ ಮೊದಲಾದ ಕ್ಷೇತ್ರಗಳ ಇಪ್ಪತ್ತೊಂದು ದಿನಗಳ ಸೇವೆಯಿಂದ ಪರಮಗತಿ ಪ್ರಾಪ್ತಿಯಾಗುವುದು.

ಒಂದು ದಿನ ಮಾತ್ರ ವಸಿಸಿದರೂ ಸಾಕು ಪಾವನಕರವಾಗಿವೆ. ಮತಂಗವಾಪಿಕೆ, ಉತ್ಪಲಾವನ, ಗಂಗಾ ಯಮುನಾ ಸಂಗಮ, ವೈವಸ್ವತತೀರ್ಥ, ಬ್ರಹ್ಮಸರವೆಂದ ತೀರ್ಥ ಕ್ಷೇತ್ರಗಳು ದೇವಹ್ರದ, ಲೌಹಿತ್ಯ, ಪುಂಡರೀಕಾಧ್ವರ, ರಾಮಹ್ರದ, ವಿಂಧ್ಯವನ, ನರ್ಮದ, ಜಂಬುಮಾರ್ಗ, ಕೋಕಾಮುಖ, ತಂಡುಲಿಕಾಶ್ರಮ, ಆರ್ಷ್ಟಿಷೇಣಾಶ್ರಮ, ಪಿಂಡಾರಕ, ಧರ್ಮಾರಣ್ಯ, ಪಂಪಾಹಿಮಾಲಯ ಮುಂತಾದ ತೀರ್ಥಕ್ಷೇತ್ರಗಳು ಸಕಲ ಪಾಪ ವಿನಾಶಕವಾಗಿವೆ.

ತೀರ್ಥಯಾತ್ರಾಪರರು ಕಾಮ ಕ್ರೋಧ ಲೋಭಗಳಿಗೆ ಎಡೆಗೊಡದೆ, ನಿರ್ಮಲ ಮನಸ್ಕರಾಗಿರಬೇಕು. ಬರಿನೀರಿನಲ್ಲಿ ಮುಣುಗಿದರೆ ಸಾಲದು; ಭಕ್ತಿಯಿಂದ ತೀರ್ಥಮಾನಿ ದೇವತೆಗಳನ್ನೂ, ತದಂತರ್ಯಾಮಿ ಶ್ರೀಹರಿಯನ್ನೂ ಸ್ಮರಿಸಿ, ಮನುಜರು ತೀರ್ಥಸ್ನಾನ ಪುಣ್ಯವನ್ನು ಪೂರ್ಣವಾಗಿ ಹೊಂದುವರು. ದೇವನಿತ್ತುದರಿಂದ ಸಂತುಷ್ಟರಾಗಿ, ಸಿಗದುದಕ್ಕೆ ಪೇಚಾಡದೆ,

ಸಕಲಭೂತ ನಿಯಾಮಕನಾದ ಶ್ರೀಹರಿಯನ್ನು ಭಕ್ತಿಯಿಂದ ಭಜಿಸುವ ನರನಿಗೆ ತೀರ್ಥಯಾತ್ರೆ ಏಕೆ? ದಾನವೇಕೆ? ಹಾಗೆಂದು ಬಿಡದೆ ಅಲ್ಲಲ್ಲಿ ನೆಲೆಸಿರುವ ಭಗವನ್ಮೂರ್ತಿಗಳನ್ನೂ, ಅಲ್ಲಿಗೆ ಬರುವ ಸುಜನರನ್ನೂ ನೋಡಬೇಕೆಂದು ವಾಂಛಿಸಿ, ಸುಜನರು ಕೂಡ ಯಾತ್ರಾಪರರಾಗಿರುವರು. ಅಂಗಿರಸ, ಗೌತಮರ ಸಂವಾದ ರೂಪವಾದ ತೀರ್ಥಮಹಿಮೆಯನ್ನು ನಿನಗೆ ಪೇಳಿದೆನು. ಇದನ್ನು ಕೇಳಿದವರು ಕೂಡ ಪಾಪರಹಿತರಾಗುವರು' ಎಂದು ಭೀಷ್ಮನು ನುಡಿದನು.

ಆಗ ಅಲ್ಲಿಗೆ ಅತ್ರಿ, ವಶಿಷ್ಠ, ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಕಣ್ವ ಮುಂತಾದ ಮಹರ್ಷಿಗಳು ತಂತಮ್ಮ ಶಿಷ್ಯರಿಂದ ಕೂಡಿ ಬಂದರು. ಗಾಂಡೀವಿಯ ಕಾಂಡಗಳೇ ವೀರಶಯನವಾಗಿ ಮಲಗಿದ್ದ ಭೀಷ್ಮನನ್ನು ನೋಡಿ, ಅವರು ಆತನನ್ನು ಪ್ರಶಂಸಿದರು. ಅನಂತರ ಅವರು ಪಾಂಡವಾದಿಗಳಿತ್ತ ಸತ್ಕಾರಗಳನ್ನು ಸ್ವೀಕರಿಸಿ, ತೆರಳಿದರು. ಆಗ ಧರ್ಮರಾಜನು ಮುನಿಜನಸುತ್ತ್ಯನಾದ ತಾತನಿಗೆ ಅಭಿನಮಿಸಿ, 'ತಾತ! ತೀರ್ಥಗಳಲ್ಲಿ ಉತ್ತಮವಾವುದು? ದೇಶಗಳಲ್ಲಿ ಶ್ರೇಷ್ಠವಾವುದು?' ಎಂದು ಪ್ರಶ್ನಿಸಿದನು.

ಭೀಷ್ಮನಿಂತೆಂದನು: 'ರಾಜನ್, ಹಿಂದೆ ಗಂಗಾತೀರದಲ್ಲಿ ಒಬ್ಬ ವಿಪ್ರನಿದ್ದನು. ಅವನ ಮನೆಗೆ ಒಬ್ಬ ಅತಿಥಿಯಾಗಿ ಬಂದನು. ಪೂಜಾಸತ್ಕಾರಗಳಾದ ಮೇಲೆ ವಿಪ್ರನು ನೀನು ಕೇಳಿದಂತೆ ಕೇಳಲು, ಸಿದ್ಧನು ನುಡಿದುದನ್ನು ಹೇಳುವೆನು ಕೇಳು!

ಗಂಗಾನದಿಯು ಹರಿಯುವ ಭೂ ಭೂಧರ ವನಾದಿ ದೇಶಗಳತಿ ಪವಿತ್ರಗಳು. ತ್ರಿಪಥಗಾಮಿನಿಯ ಸೇವೆಯಿಂದ ಬರುವ ಪಣ್ಯವು ಯಜ್ಞದಾನ, ತಪಸ್ಸುಗಳಿಂದ ಬರಲಾರದು. ಗಂಗಾಶೀಕರವು ಸೋಕಿದರೆ ಸಾಕು ನಾಕಲೋಕವು ಕರಗತವೆಂದು ತಿಳಿ! ಎಂತಹ ಪಾಪಿಯಾದರೂ ಗಂಗಾಸ್ನಾನದಿಂದ ಪಾವನನಾಗಿ, ದೇವಲೋಕವನ್ನು ಸೇರುವನು. ಮನುಜನ ಅಸ್ಥಿಯು ಗಂಗೆಯಲ್ಲಿರುವಷ್ಟು ವತ್ಸರಗಳಿಗೆ ಸಾವಿರ ಪಟ್ಟು ಕಾಲವು ಅವನಿಗೆ ಸ್ವರ್ಗವಾಗುವುದು. ಸೋಮವಿಲ್ಲದ ಯಜ್ಞದಂತೆ, ಚಂದ್ರನಿಲ್ಲದ ರಾತ್ರಿಯಂತೆ, ಹೂ ಕಾಯಿಗಳಿಲ್ಲದ ಗಿಡದಂತೆ, ಗಂಗಾನದಿ ಇಲ್ಲದ ದೇಶವು ಹೀನವೆನಿಸುವುದು. ಚಾಂದ್ರಾಯಣ ಶತದಿಂದಲೂ ಗಂಗಾ ಬಿಂದುಪಾನದಿಂದ ಬರುವ ಪುಣ್ಯವೇ ಹೆಚ್ಚು ಎಂದು ಜ್ಞಾನಿಗಳು ಪೇಳುವರು. ಅಗ್ನಿಯಲ್ಲಿ ಬಿದ್ದ ತೂಲದಂತೆ, ರವಿಯ ಕಂಡ ಕತ್ತಲಿನಂತೆ ಗಂಗಾಸ್ನಾನಪಾನಗಳಿಂದ ಸಕಲ ಪಾಪಗಳು ನಾಶವಾಗುವವು. ದೇವತೆಗಳಿಗೆ ಅಮೃತದಂತೆ ಮನುಜರಿಗೆ ಗಂಗಾತೀರ್ಥವು ಶರಣ್ಯವಾಗಿದೆ. ಗಂಗೆಯು ಸರ್ವದುಃಖಪ್ರಣಾಶಿನಿಯಾಗಿರುವಳು. ಜಾಹ್ನವಿಯ ಮರಳಿನ ಕಣವನ್ನು ಶಿರದಿ ಧರಿಸಿದವನ ಮತ್ತು ಗಂಗಾಮೃತ್ತಿಕೆಯನ್ನು ಫಾಲಾದಿ ತಿಲಕವಾಗಿಟ್ಟಿರುವವನ ಸಮಸ್ತ ಪಾಪಗಳು ಗರುಡನನ್ನು ಕಂಡ ಹಾವಿನಂತೆ ಹರಿದು ಹೋಗುವವು. ಗಂಗಾಮಂಗಳತರಂಗ ಶೀಕರಸಂಗತವಾದ ಮಾರುತನು ಮೈ ಸೋಕಿದರೆ ಸಾಕು, ಅವನ ಪಾಪ ಭಂಗವಾಗುವುದು. ಕಣ್ಣಿಂದ ನೋಡಿದರೆ ಸಾಕು, ಭಾಗೀರಥಿಯು ಹಿಂದೇಳು, ಮುಂದೇಳು ಪಿತೃವರ್ಗಕುಲಗಳನ್ನು ಉದ್ಧರಿಸಿ, ವಚನ ಚಿತ್ತ ಕಾಯಗಳಿಂದ ಮಾಡಿದ ಪಾಪಗಳನ್ನು ಕಳೆದುಬಿಡುವಳು. ಗಂಗೆ ಎಂದು ನುಡಿದರೆ, ಕೇಳಿದರೆ, ಮುಟ್ಟಿದರೆ ಕೂಡ ಉಭಯಕುಲಗಳು ಪಾವನವಾಗುವವು. ಇನ್ನು ಅವಗಾಹನದಿಂದ ಎಂತಹ ಪುಣ್ಯಪ್ರದಳೋ ಎಂದು ಗಂಗೆಯನ್ನು ವರ್ಣಿಸಲಳವಲ್ಲ.

ಗಂಗೇ! ಗಂಗೇ! ಎಂದುಚ್ಚರಿಸುತ್ತಾ, ಬೇರೆ ನೀರಿನಲ್ಲಿ ಮಿಂದರೂ ಅಂತಹ ಸುಜನರಿಗೆ ಗಂಗಾಸ್ನಾನ ಫಲವು ಸಿಗುವುದು. ಮೈಲಿ ಬಲವಿದ್ದು, ಕೈಲಿ ಧನವಿದ್ದು, ಗಂಗೆಯಲ್ಲಿ ಸೇವಿಸ ಪೋಗದವನು ಮನುಜನಲ್ಲ! ಅವನು ಪಶುಸಮಾನನೆನಿಸುವನು. ಇಂದ್ರಾದಿ ಸುರರು ಸೇವಿಸಲು ಕೋರುವ ಗಂಗೆಯನ್ನು ನರರು ಬೇಡದಿರಬಹುದೇ? ಉತ್ಕ್ರಮಣ ಕಾಲದಿ 'ಗಂಗಾ' ಎಂದು ಸ್ಮರಿಸಿದವನಿಗೆ ಮುಕ್ತಿಯು ಕರತಲಾಮಲಕವಾಗುವುದು. ಗಂಗಾಸ್ಮರಣದಿಂದ ರಾಜ ಚೋರ ಪಾಪ ಭೂತ ನಕ್ರಾದಿ ಭಯಗಳು ಹಿಂಗುವವು.

ಶ್ರೀಹರಿ ಪಾದೋದಕೆ ಗಂಗೆಯನ್ನು ಶಿರದಿ ಭಕ್ತಿಯಿಂದ ಧರಿಸಿ ಶಿವನು, ಶಿವ (ಮಂಗಳಕರ) ನಾದನು. ಸ್ವರ್ಗದಿ ಮಂದಾಕಿನಿಯಾಗಿ ದೇವತೆಗಳನ್ನೂ, ಭೂಮಿಯಲ್ಲಿ ಗಂಗೆಯಾಗಿ ಮಾನವರನ್ನೂ, ರಸಾತಲದಿ ಅಲಕನಂದೆಯಾಗಿ ನಾಗಾದಿಗಳನ್ನೂ ಪಾವನ ಗೊಳಿಸುವ ಭಾಗೀರಥಿಯನ್ನು ಬಣ್ಣಿಸಲಳವೆ? ಭಾಗೀರಥಿಯನ್ನು ಸೇವಿಸದವನ ಜನ್ಮವು ವ್ಯರ್ಥವೆಂದು ತಿಳಿ! ಮುನ್ನೂರು ಯೋಜನ ದೂರದಿಂದ 'ಗಂಗೇ' ಯೆಂದರೂ, ಅವನನ್ನು ಶ್ರೀಗಂಗೆ ಸರ್ವಪಾಪಗಳಿಂದ ಬಿಡಿಸಿ, ವಿಷ್ಣುಲೋಕವನ್ನು ಸೇರಿಸುವಳು. ಸಾಗರ ನೃಪತಿಗಳು ತಮ್ಮ ವಂಶಜನಾದ ಭಗೀರಥನು ತಂದ ಗಂಗೆಯಲ್ಲಿ ತಮ್ಮ ಭಸ್ಮರಾಶಿಗಳಿಂದ ಸಂಬದ್ಧರಾಗಿ, ಸಕಲ ಪಾಪಮುಕ್ತರಾಗಲಿಲ್ಲವೇ? ಇನ್ನು ಸಾಕ್ಷಾತ್ತಾಗಿ ಹೋಗಿ, ಸೇವಿಸಿದ ಮನುಜೋತ್ತಮರು ನಿಷ್ಪಾಪರಾಗುವರೆಂದು ಹೇಳಬೇಕೇ?

ವಿಷ್ಣುಪಾದದಿಂದ ಬ್ರಹ್ಮದೇವನ ಕಮಂಡಲವಿಗಿಳಿದು, ಅಲ್ಲಿಂದ ಶಿವಜಟೆಯಲ್ಲಿ ನಿಂದು, ಅಲ್ಲಿಂದಿಳಿದು ಶತಕೋಟಿ ಎಂಬ ಬ್ರಹ್ಮದೇವನ ಮಂದಿರಾಂಗಣದಿ ಅವತರಿಸಿ, ಹಾದಿಯಲ್ಲಿ ಧ್ರುವ, ಸಪ್ತರ್ಷಿ, ಇಂದ್ರಾದಿ ತಾರರೂಪ ದೇವತೆಗಳನ್ನು ಪವಿತ್ರೀಕರಿಸಿ, ಹಿಮಾಲಯದಿ ಹರಿವ ಭಾಗೀರಥಿಯು ಬಂದ ಕ್ರಮವನ್ನು ಭಾವಬಂಧುರರಾಗಿ ಸ್ಮರಿಸಿದ ಭಾವುಕರ ಭವವು ಹಿಂಗಿಹೋಗುವುದು. ಅನಂತ ಚರಣಾಂಭೋಜ ಪ್ರಸೂತೆಯಾದ ಗಂಗಾದೇವಿಯ ಮಹಿಮೆಯು ಅನಂತವಾಗಿದೆ. ಮೇರುವಿನ ಮಣಗಳನ್ನು, ವಾರಿಧಿಯ ಜಲಕಣಗಳನ್ನು ಎಣಿಸಿ ಮುಗಿಸಲಹುದಾಗಲಿ, ಗಂಗಾಗುಣಗಳನ್ನು ಹೇಳಿ ಮುಗಿಸಲಾಗದು. ಇಂತು ಗಂಗಾಗುಣಗಳನ್ನರಿತು, ನಿಜಧರ್ಮವನ್ನು ನಿರ್ಮಲಚಿತ್ತನಾಗಿ ಆಚರಿಸಿ, ಶ್ರೀಹರಿ ಯನ್ನು ಭಜಿಸಿದ ಭಕ್ತನು ಇಲ್ಲಿ ಭವ್ಯವೈಭವಯುತನಾಗಿ, ಅಲ್ಲಿ ವಿಷ್ಣುಲೋಕ ಸುಖನಿವಾಸಿಯೂ ಆಗುವನು.

## ೫. ಚ್ಯವನಮುಖ ವಿಪ್ರಮಹಿಮೆ

ಭೀಷ್ಮನು, 'ಧರ್ಮರಾಜ! ವಿಶಿಷ್ಟ ವಿಪ್ರರ ಮಹಿಮೆಯನ್ನು ವರ್ಣಿಸುವೆನು. ಅಂತಹವರನ್ನ ತಿಳಿದು ಸನ್ಮಾನಿಸು!

ಹಿಂದೆ ವಸುದೇವನು ಭೂದೇವಿಯನ್ನು ನೋಡಿ, 'ಧರಣಿ! ಪಾಪಗಳಿಂದ ರಹಿತರಾಗಲು ಜನರೇನು ಮಾಡಬೇಕು?' ಎಂದು ಕೇಳಿದನು. ಪೃಥ್ವಿಯು ಇಂತೆಂದಳು: 'ಪಾಪ ಪರಿಹಾರವನ್ನು ಬೇಡಿ, ಜನರು ವಿಪ್ರರನ್ನು ಸೇವಿಸಿ, ಪೂಜಿಸಿ, ತಣಿಸಿ, ಅವರಿಗೆ

ವಿರೋಧವನ್ನು ಮಾಡದಿರಬೇಕು. ವಿಪ್ರನ ಕೋಪ ಪ್ರಸಾದಗಳು ಇಂದ್ರನು ಸಹಸ್ರ ಭಗಚಿಹ್ನಿತನಾಗಲು ಕಾರಣವಾದವು. ವಿಪ್ರನು ಜನನದಿಂದಲೇ ಅಧಿಕನಾಗಿರುವನು. ಪರಬ್ರಹ್ಮನನ್ನು ತಿಳಿಸಿಕೊಡಲು ವೇದಾದಿ ಶಾಸ್ತ್ರೋಪದೇಶವನ್ನು ಮಾಡುವ ವಿಪ್ರನು ಶ್ರೇಷ್ಠನಲ್ಲವೇ?

ಬ್ರಾಹ್ಮಣರನ್ನು ಸೃಜಿಸಿ ವಿಧಾತನು ಅವರಿಗೆ "ನಿಮಗೆ ವೇದಾಧ್ಯಯನ, ಧರ್ಮ ಪಾಲನಗಳನ್ನು ಬಿಟ್ಟು ಕರ್ತವ್ಯವಿನ್ನೊಂದಿಲ್ಲ. ಬ್ರಾಹ್ಮಣನು ಎಲ್ಲ ಇತರ ವರ್ಣದವರಿಗೆ ಗುರುವೆನಿಸಿ, ತಪೋಯಜ್ಞಗಳಿಂದ ಬೆಳಗುವನು" ಎಂದು ಅವರ ಕರ್ತವ್ಯವನ್ನು ಉಪದೇಶಿಸಿದನು. ಬ್ರಾಹ್ಮಣ ತೇಜಸ್ಸು ಅಪ್ರತಿಹತವಾಗಿದೆ. ಅಗ್ನಿಯನ್ನು ಮುಟ್ಟಲುಹುದು; ಗಂಗೆಯನ್ನು ಕಟ್ಟಬಹುದು; ಹಿಮಾಚಲವನ್ನು ಪುಡಿಕುಟ್ಟಬಹುದು; ಆದರೆ ವಿಪ್ರರನ್ನು ಪರಿಭವಿಸಲಾಗದು. ಸೇವಿಸಿದರೆ ಕಲ್ಪವೃಕ್ಷವೂ, ಪರಿಭವಿಸಿದರೆ ಪ್ರಳಯಾಗ್ನಿಯೂ, ಕೊಟ್ಟರೆ ಚಿಂತಾಮಣಿಯೂ ಆದ ವಿಪ್ರರನ್ನು ಧರ್ಮರಾಜ! ಸಂತತವೂ ಗೌರವಿಸು!

ಶಂಬರನು ಅತ್ಯುನ್ನತ ವೈಭವೋಪೇತನಾಗಿರಲು ನೋಡಿ, ಇಂದ್ರನು ವಿಪ್ರವೇಷದಿಂದ ಅವನನ್ನು ಕಂಡು, ನಿನ್ನ ವೈಭವಕ್ಕೆ ಕಾರಣವೇನೆಂದು ಕೇಳಿದನು. ಜಟಾಸುರ ನಂದನನು, 'ಅಯ್ಯಾ! ನನಗೆ ವಿಪ್ರರಲ್ಲಿ ಅಸೂಯೆ ಇಲ್ಲ. ನಾನು ಎಂದಿಗೂ ವಿಪ್ರಾವಮಾನವನ್ನು ಮಾಡಿಲ್ಲ. ನಿತ್ಯವೂ ಬೇಡಿದ್ದನ್ನಿತ್ತು, ಬ್ರಾಹ್ಮಣರನ್ನು ಗೌರವಿಸುವೆನು. ದೇವಾಸುರ ಯುದ್ಧ ಗಳಲ್ಲಿ ಯಾರಲ್ಲಿ ವಿಪ್ರಾನುಗ್ರಹವಿತ್ತೋ ಅವರು ಗೆದ್ದಿರುವರೆಂದು ನಾನು ಪರಿಕ್ಷಿಸಿ, ತಿಳಿದಿರುವೆನು. ತಪಸ್ಸ್ವಾಧ್ಯಾಯನಿರತರಾದ ವಿಪ್ರಾಳಿಯ ಆಶೀರ್ವಾದವೇ ನನಗೆ ಸಂಪತ್ಕಾರವೆಂ' ದನು.

ಪ್ರವಾಸಿಯಾಗದ ವಿಪ್ರನನ್ನೂ, ಯುದ್ಧಸುಮುಖನಾಗದ ಕ್ಷತ್ರಿಯನನ್ನೂ ಭೂದೇವಿಯು ಬಾಯ್ತೆರೆದು, ನುಂಗಿಬಿಡುವಳು. ಅಂತೆಯೇ ವಿಪ್ರನು ಬೇರೆಡೆಗೆ ಹೋಗಿ, 'ಗುರುಗಳಲ್ಲಿದ್ದು ಓದಿ, ಪಂಡಿತರಾಗಿ ಬರುವರು. ಅಂತಹ ವಿಪ್ರರ ಸತ್ಕಾರ ತಿರಸ್ಕಾರಗಳು ಸಂಪದ್ವಿಪತ್ಕಾರಣ ವಾಗುವವು' ಇಂತು ನುಡಿದ ಶಂಬರನ ಮಾತಿಗೆ ಮನದಿ ಮೆಚ್ಚಿ, ಮಹೇದ್ರನು, ಬೃಹಸ್ಪತ್ಯಾದಿ ವಿಪ್ರರನ್ನು ಗೌರವಾತಿಶಯದಿಂದ ಕಂಡು ವರ್ತಿಸಿದನು. ಇಂತಹ ವಿಪ್ರರು ಚಿರಸಮಾಶ್ರಿತರಾದರೆ ಅವರು ಉತ್ತಮ ಪಾತ್ರರೆನಿಸುವರು. ಅವರಕಿಂತಲೂ ಅಪೂರ್ವರು, ದೂರಾಗತರು ಪಾತ್ರತರರು. ಅವರಿಗೂ ಪಾತ್ರತಮರು ಪಂಡಿತರಾದ ವಿಷ್ಣುಭಕ್ತರಾದ ಬ್ರಾಹ್ಮಣರು ಅವರಿಗಿತ್ತಂತೆ ಗೃಹಸ್ಥನು ತನ್ನ ಮಿತ್ರ ಪುತ್ರ ಕಳತ್ರ ಗುರುಜನರಿಗೂ ಕೊಟ್ಟು ಸತ್ಕರಿಸಬೇಕು. ಹಿಂಸಾಕ್ರೋಧೇರ್ಷ್ಯಾದಿಗಳಿಲ್ಲದ ಪರಿವಾರವೂ ಪಾತ್ರವೇ ಸರಿ!

ವನಿತೆಯರು ಗೃಹಸ್ಥಾಶ್ರಮ ಧರ್ಮಗಳಿಗೆ ಮೂಲಕಂದವಾಗಿರುವರು. ಅಂತಹ ಸ್ತ್ರೀಯರು ಧರ್ಮವಿಮುಖರಾದರೆ, ಎಲ್ಲ ವರ್ಣಾಶ್ರಮ ಧರ್ಮಗಳೂ ಕೆಡುವವು. ಒಂದು ಸಲ ನಾರದನು ಪಂಚಚೂಡೆ ಎಂಬ ಅಪ್ಸರೆಯನ್ನು ಕಂಡು, 'ವನಿತಾಸ್ವಭಾವವನ್ನು ತಿಳಿಸಿಕೊಡೆಂ'ದು ಕೇಳಿದನು. ಆತನ ಇಂಗಿತವನ್ನರಿತು ಪಂಚಚೂಡೆಯು ದುಷ್ಟವನಿತೆಯರ ಸ್ವಭಾವವನ್ನು ವರ್ಣಿಸುತ್ತಾ, ಇಂತೆಂದಳು:

'ದೇವಮುನೀ! ವನಿತೆಯರ ಸ್ವಭಾವವನ್ನು ವನಿತೆಯಾದ ನಾನು ಹೇಳಬಹುದೇ? ನಿನಗದು ಗೊತ್ತಿಲ್ಲವೇ ? ಆದರೂ ನಿಜವನ್ನು ನನ್ನ ಬಾಯಿಂದ ಆಡಿಸಬೇಕೆಂದು ಕೇಳು ತ್ತಿರುವೆ ! ಕೇಳು ! ದುಷ್ಟಮಾನಿನಿಯರು ಕುಲವನ್ನು, ಗೌರವವನ್ನು ಲೆಕ್ಕಿಸರು. ಬೇರೆ ಪುರುಷರಿಂದ ನಿರ್ಲಜ್ಜರಾಗಿ ವಿಹರಿಸುವರು. ಕುಲನಾರಿಯು ತಾನೆಂಬ ಲಜ್ಜಾವಿವೇಕ ಗಳಿಂದ ಅವರು ತಮ್ಮ ಪತಿಗಳಿಂದೆಂಬಂತೆ ದೂರರಾಗಿರುವರು. ಅವರಿಗೆ ಉತ್ತಮ ಗುಣವಂತರಲ್ಲಿ ಅನುರಕ್ತಿ ಇರದೆ, ಕುತ್ಸಿತರು, ನೀಚರು, ವಿಟರು, ನಟರು, ಗಾಯಕರು, ಜೂಜುಗಾರರು ಮುಂತಾದವರಲ್ಲಿ ಪ್ರೀತ್ಯಾದರಗಳಿರುವವು. ಕೂಡಿ ಕಾಡುವರು ; ಬೇಡಿ ಕೊಡದಿದ್ದರೆ ಕದಿಯುವರು. ನಡುಕಡಲಿನಲ್ಲಿ ದೂಡುವರು. ವನಜಮುಖಿಯರಿಗೆ ಪುರುಷ ತೃಪ್ತಿಯಾಗದು, ಎಂದು ಕೋವಿದರು ಪೇಳುವರು. ಕಾಷ್ಠಗಳಿಂದ ಅಗ್ನಿಯು, ನದಿಗಳಿಂದ ಸಮುದ್ರನು, ಭೂತಘಾತದಿಂದ ಯಮರಾಜನು ತೃಪ್ತಿಯನ್ನು ಪೊಂದರು; ಅಂತೆಯೇ ದುಷ್ಟ ವನಿತೆಯರು ಪುರುಷ ಶತದಿಂದಲೂ ತೃಪ್ತರಾಗರು. ಅವರ ಮನೋಭವ ವಿಕಾರವು ಅಸಹ್ಯವಾಗಿದೆ.'

ಆ ಮಾತನ್ನಾಲಿಸಿ ನಾರದನು ಸದ್ವನಿತೆಯರೆಂತಹವರೆಂದು ಕೇಳಲು, ಪಂಚಚೂಡೆಯು 'ನಾನು ಅಪ್ಸರೆಯು ! ನನ್ನಿಂದ ಅದನ್ನು ಕೇಳಲಾಗದು ! ಆದರೂ ಕೇಳು! ಸದ್ವನಿತೆಯರು ಪತಿವ್ರತೆಯರೂ, ಧರ್ಮಾಚರಣರತೆಯರೂ ಆಗಿರುವರು. ಅವರಿಗೆ ಕುಲ, ವಯಸ್ಸು, ಬಂಧುಜನ, ಗೌರವ, ವಿದ್ಯೆ, ಧರ್ಮನಿಷ್ಠೆ, ವಿಷ್ಣುಭಕ್ತಿ ಎಂಬ ವಿವಿಧ ವಸ್ತುಗಳಲ್ಲಿ ಪ್ರೀತಿ. ಕಾಮವೃತ್ತಿಗಳು ಅವರಿಗೆ ಪತಿಯ ಸಂತಾನ ಸಂಪತ್ಪ್ರಾಪ್ತಿಗೆ ಮಾತ್ರ ಸಾಧಕಗಳು. ಅಂತಹ ಸದ್ವನಿತೆಯರಲ್ಲಿ ಶ್ರೀದೇವಿಯು ಸನ್ನಿಹಿತಳಾಗಿ, ಅವರು ಪುಟ್ಟಿದ ಮೆಟ್ಟಿದ ಮನೆ ಗಳಿಗೆ ಶ್ರೇಯಃಪ್ರದಳಾಗುವಳು' ಎಂದಳು. ನಾರದನು ಅವಳ ಯಥಾರ್ಥವಚನಗಳಿಗೆ ಮೆಚ್ಚಿ ಸಂಭಾವಿಸಿ ಕಳಿಸಿದನು. ಹಿಂದೆ ಎಲ್ಲ ಜನರು ನಿರ್ದೋಷಚಿತ್ತರಾಗಿ ಎಲ್ಲರೂ ದೇವತ್ವವನ್ನು ಹೊಂದುತ್ತಿದ್ದರು. ಆಗ ದಿವಿಜರು ವಿಧಾತಗೆ ಬಿನ್ನವಿಸಿದರು. ವಿಧಾತನು ದುಷ್ಟವನಿತೆಯರನ್ನು ನಿರ್ಮಿಸಿದನು. ಅವರ ಹಾವಭಾವ ವಿಲಾಸಗಳಿಗೆ ಸಿಕ್ಕು, ಕಾಮಪೀಡಿತರಾದ ಪುರುಷರು ರೋಷ ಕ್ರೋಧ ಕಾಪಟ್ಯ ಹಿಂಸಾಸೂಯಾದಿ ದುರ್ಗುಣಗಳಿಗೆ ನೆಲೆಯಾದರು. ಆದರಿಂದ ಅಯೋಗ್ಯರು ಸ್ವರ್ಗದೂರವಾಗಿ, ದೇವತೆಗಳ ಇಷ್ಟಾರ್ಥವು ಸಿದ್ಧಿಸಿತು. ಆದುದರಿಂದಲೇ ಸ್ತ್ರೀಯರನ್ನು ಸದ್‌ವೃತ್ತಿಯಲ್ಲಿಟ್ಟು ರಕ್ಷಿಸುವುದು ದುಷ್ಕರವೆಂಬರು.

ಹಿಂದೆ ದೇವಶರ್ಮನೆಂಬ ಮುನಿವರನಿದ್ದನು. ಅವನ ಸತಿಯಾದ ರುಚಿಯು ಸರ್ವಾಂಗ ಸುಂದರಿಯಾಗಿದ್ದಳು. ದೇವಗಂಧರ್ವಾದಿಗಳಿಗೂ ಅವಳ ರೂಪವು ಲೋಭನೀಯವಾಗಿತ್ತು. ಅವಳನ್ನು ಪೊಂದಲು ಶಕ್ರನು ಹೊಂಚುಹಾಕಿ ಕಾಯುತ್ತಿದ್ದನು. ಅದನ್ನರಿತು, ದೇವಶರ್ಮನು ಎಚ್ಚತ್ತಿದ್ದು, ಅವಳನ್ನು ರಕ್ಷಿಸುತ್ತಿದ್ದನು. ಒಂದು ದಿನ ದೇವಶರ್ಮನಿಗೆ ಉಪದರ್ಶಕನಾಗಿ ಕ್ರತುವನ್ನು ನಡೆಸುವ ಆಹ್ವಾನವು ಬಂತು. ಅಲ್ಲಿಗೆ ಹೋಗುತ್ತಾ, ದೇವಶರ್ಮನು, ತನ್ನ ಶಿಷ್ಯನಾದ ವಿಪುಲನೆಂಬ ಬ್ರಹ್ಮಚಾರಿಯನ್ನು ಕರೆದು, 'ವಿಪುಲ ! ನಾನು ಕ್ರತುನಿರ್ವಹಣಕ್ಕೆ ಹೋಗುತ್ತಿರುವೆನು. ನನ್ನ ಸತಿಯನ್ನು ಶಕ್ರನಿಂದ ರಕ್ಷಿಸುವ ಹೊಣೆಯನ್ನು ನಿನಗೆ

ಒಪ್ಪಿಸುತ್ತಿರುವೆನು ಜೋಕೆ! ಅಮರವಿಭುವು ಬಹುಮಾಯನು! ಪಕ್ಷಿ ಮೃಗಾದಿ ರೂಪನಾಗಿ ಬರಬಹುದು, ಎಚ್ಚರವಾಗಿರು!' ಎಂದು ಹೇಳಿ, ಹೊರಟುಹೋದನು.

ವಿಪುಲನು ಬಹುಮಾಯನಾದ ಇಂದ್ರನಿಂದ ಮೃಗಲೋಚನೆಯನ್ನು ಉಳಿಸಿ ಕೊಂಬುವ ಯೋಚನೆಗೀಡಾಗಿ, ತನ್ನ ಯೋಗಶಕ್ತಿಯಿಂದ, ಅವಳಲ್ಲಿ ಆವೇಶಿಸಿ, ನಡೆಸುತ್ತಿದ್ದನು. ಪವನನಂತೆ ಪವನ ಕೃಪೆಯಿಂದ ವಿಪುಲನು ಅವಳಿಗೆ ತಿಳಿಯಬರದಂತೆ, ಅವಳಲ್ಲಿ ಆವಹಿಸಿ, ಅವಳ ಚಿತ್ತವನ್ನು ಜಡಪ್ರಾಯವನ್ನಾಗಿರಿಸಿದನು. ಆಗ ಪುರಂದರನು, ಅತಿ ಸುಂದರ ಪುರುಷಾಕಾರದಿಂದ ಅಲ್ಲಿಗೆ ಬಂದನು. ವಿಪುಲನ ಶರೀರವು ಕದಲದೆ ಬಿದ್ದಿರಲು ನೋಡಿ, ಅವನು ನಿದ್ರಿಸುತ್ತಿರುವನೆಂದು ಭ್ರಮಿಸಿ, ದೇವೇಂದ್ರನು ಅವಳನ್ನು ಸಮೀಪಿಸಿ, 'ವಿಲಾಸಿನಿ! ನಿನ್ನಲ್ಲಿ ಮೋಹಗೊಂಡು ಬಂದಿರುವೆನು. ನನ್ನನ್ನು ಪೊಂದಿ ಆನಂದಿಸು!' ಎಂದನು. ರುಚಿಯು ವಿಮೂಢಚಿತ್ತಳಾಗಿದ್ದುದರಿಂದ, ಇಂದ್ರನನ್ನು ಕಂಡು ಸ್ವಾಗತಿಸದೆ, ಮಾತಾಡದೆ, ಸುಮ್ಮನಿದ್ದಳು. ಇಂದ್ರನು 'ರುಚಿ! ನಾನು ದೇವೇಂದ್ರನು! ನಿನ್ನ ಸಂಗದಾಶೆಯಿಂದ ಬಂದಿರುವೆನು. ನಾಚಿಕೆ ಬಿಡು! ಕೂಡು ನನ್ನನ್ನು!' ಎಂದನು. ರುಚಿಯು ವಿಪುಲವಶಳಾಗಿ 'ನಡೆಯಿಲ್ಲಿಂದ! ಇಲ್ಲಿಗೆ ಬಂದೆ ಏಕೆ?' ಎಂದು ಮತ್ತೆ ಸುಮ್ಮನಾದಳು. ಅದನ್ನು ಕೇಳಿ ಇಂದ್ರನು ಭಯಲಜ್ಜಾಸಂಭ್ರಮ ಭರಿತನಾದನು.

ಆಗ ವಿಪುಲನು ಅವಳನ್ನು ಬಿಟ್ಟು, ತನ್ನ ಶರೀರದಲ್ಲಿ ಸೇರಿ, 'ದೇವೇಂದ್ರ! ಹಿಂದೆ ಮಾಡಿದ್ದ ತಪ್ಪಿಗಾಗಿ, ಮೈಯೆಲ್ಲಾ ಯೋನಿಯಾಗಿ, ಮುನಿಕರುಣೆಯಿಂದ ಮೈಯೆಲ್ಲ ಕಣ್ಣಾಗಿರುವುದನ್ನು ಮರೆತೆಯಾ? ನನ್ನ ಗುರುವು ಸಿಟ್ಟಾದನೆಂದರೆ, ನಿನ್ನ ಪದವಿಯೂ ಹಾಳಾದೀತು! ತಿಳಿ! ಅವರೇಕೆ ನಾನೇ ಸಾಕು ನಿನ್ನನ್ನು ಸುಟ್ಟುಬಿಡುವೆನು, ನೋಡು!' ಎಂದು ನಿಂದಿಸುವ ವಿಪುಲನಿಗೆ ಹೆದರಿ ಬಲಾರಿಯು ಕಣ್ಮರೆಯಾಗಿ ಪೋದನು. ಆಗ ವಿಪುಲನು ರುಚಿಯನ್ನು ಯಥಾಪೂರ್ವವಾಗಿ ಪ್ರಬುದ್ಧಳನ್ನಾಗಿಸಿದನು.

ದೇವಶರ್ಮನು ಯಜ್ಞವನ್ನು ಮುಗಿಸಿಕೊಂಡು ಬಂದು, ನಡೆದ ವೃತ್ತಾಂತವನ್ನರಿತು, ವಿಪುಲನಿಗೆ ಬೇಕಾದ ವರವಿತ್ತು, ಮುದದಿಂದಿದ್ದನು. ದೇವಶರ್ಮನು ದೇವೇಂದ್ರನಿಂದ ಭಯವಿಲ್ಲದೆ, ರುಚೀಸಹಿತನಾಗದ್ದನು. ಅಲ್ಲಿ ರುಚಿಗೆ ಒಂದು ದಿವ್ಯಪುಷ್ಪಧಾಮವು ಲಭಿಸಿತು. ಅದು ಆಕಾಶದಲ್ಲಿ ವಿಮಾನಗತಳಾದ ದೇವಾಂಗನೆಯ ಕೈಯಿಂದ ಜಾರಿಬಿದ್ದಿತ್ತು. ರುಚಿಯ ತಂಗಿಯು ಅಂಗದೇಶಾಧೀಶನಾದ ಚಿತ್ರರಥನ ಮಡದಿಯಾಗಿದ್ದಳು. ಒಂದು ದಿನ ಚಿತ್ರರಥನು ಪತ್ನೀಸಹಿತನಾದ ದೇವಶರ್ಮನನ್ನು ತನ್ನ ಮನೆಯಲ್ಲಿ ನಡೆಯುವ ಉತ್ಸವಕ್ಕೆಂದು ಚಂಪಾನಗರಕ್ಕೆ ಕರೆದುಕೊಂಡು ಹೋದನು. ರುಚಿಯು ಮುಡಿದಿದ್ದ ದಿವ್ಯಸುಮಾಲೆಯ ಪರಿಮಳಕ್ಕೆ ಮನಸೋತು, ಅವಳ ಭಗಿನಿಯು ಅಂತಹ ಮಾಲೆಯನ್ನು ತನಗೂ ತರಿಸಿ ಕೊಡುವಂತೆ ರುಚಿಯನ್ನು ಪ್ರಾರ್ಥಿಸಿದಳು. ಅವಳು ತನ್ನ ಪತಿಗೆ ತಿಳಿಸಿದಳು. ಅವನು ವಿಪುಲ ನಿಗಾಜ್ಞಾಪಿಸಿದನು.

ವಿಪುಲನು ಗುರ್ವಾಜ್ಞಾಧೂರ್ವಹನಾಗಿ, ಗಹನದಲ್ಲಿ ಪೋಗುತ್ತಾ, ದೈವಿಕವಾಗಿ ಸಿಕ್ಕ ಮತ್ತೊಂದು ದಿವ್ಯಸುಮಾಲೆಯನ್ನು ಕೊಂಡು, ಸಂತಸದಿಂದ ಬರುತ್ತಿದ್ದನು. ಅಲ್ಲಿ

ಅರಣ್ಯ ಮಧ್ಯದಲ್ಲಿ ಮಿಥುನವು ಭ್ರಮಣಕ್ರೀಡಾರತವಾಗಿತ್ತು. ಅವರಿಗೆ ಕ್ರೀಡಾವಿವಾದವು ಬಂತು. 'ನೀನು ನನ್ನ ಕಾಲು ತುಳಿದೆ!' ಎಂತಲು, 'ನೀನು ಬಲುವೇಗದಿಂದ ತಿರುಗುತ್ತಿರುವೆ!' ಎಂತಲು ಜಗಳವಾಡುತ್ತಾ ಪುರುಷನು 'ನಾನು ಅಪರಾಧಿಯಾಗಿದ್ದರೆ, ಪರಲೋಕದಲ್ಲಿ ವಿಪುಲನ ಗತಿಯು ನನಗಾಗಲಿ!' ಎಂದು ಶಪಥವಾಡಿದನು. ಆ ಮಾತು ಕೇಳಿದ ವಿಪುಲನು ವಿಷಣ್ಣನಾದನು. ಸ್ವಲ್ಪ ದೂರ ಬಂದ ಮೇಲೆ, ಅಲ್ಲಿ ಆರ್ವರು ಪುರುಷರು ಜೂಜಾಡುತ್ತಾ ವಾದವಾಡಿದರು. ಒಬ್ಬನು 'ನಾನು ತಪ್ಪಾಡಿದ್ದರೆ, ಪರಲೋಕದಲ್ಲಿ ವಿಪುಲನ ದುರ್ಗತಿಯು ನನಗಾಗಲಿ!' ಎಂದು ಶಪಥವಾಡಿದನು. ಆ ಮಾತನ್ನು ಕೇಳಿದ ವಿಪುಲನ ಎದೆ ಝಲ್ಲೆಂದಿತು. 'ಆಹಾ! ಏನು ಪಾಪವನ್ನು ಮಾಡಿರುವೆನೋ ಗೊತ್ತಿಲ್ಲವಲ್ಲ! ನಾನು ರುಚಿ ಶರೀರದಲ್ಲಿ ಹೊಕ್ಕಾಡಿಸಿದ ವಿಷಯವನ್ನು ಗುರುವಿಗೆ ತಿಳಿಸಲಿಲ್ಲ! ಇದೇ ಅಪರಾಧವಾಗಿದೆ. ನಿಜ! ಎಂತು ತಿಳಿಸಲಿ?' ಎಂದು ಚಿಂತಿಸುತ್ತಾ ವಿಪುಲನು ಪೂಮಾಲೆಯನ್ನು ತಂದು, ಗುರುವಿಗಿತ್ತು, ಯಥಾಪೂರ್ವನಾಗಿದ್ದನು. ರುಚಿಯು ಮಾಲೆಯನ್ನು ತನ್ನ ತಂಗಿಗಿತ್ತು, ಸಂತೋಷ ಪಡಿಸಿದಳು.

ಕೆಲದಿನಗಳಾದವು. ವಿಪುಲನ ಚಿಂತೆ ಹೆಚ್ಚಾಯಿತು. ದೇವಶರ್ಮನು ಶಿಷ್ಯನನ್ನು ಕರೆದು, 'ವಿಪುಲ! ಪೂಮಾಲೆಯನ್ನು ತರುತ್ತಾ, ಮಿಥುನವನ್ನೂ, ಆರ್ವರು ಜೂಜುಗಾರರನ್ನು ಕಂಡೆಯಲ್ಲವೆ? ಅವರಾಡಿದ ಮಾತಿನಿಂದ ನೊಂದಿರುವೆ! ಅದು ನಿಜ! ಅವರೀರ್ವರು ಅಹೋರಾತ್ರಿಗಳು; ಅವರಾರ್ವರು ಋತುದೇವತೆಗಳು. ಅವರೆಲ್ಲರು ಮನುಜರ ಪುಣ್ಯ ಪಾಪಗಳನ್ನೀಕ್ಷಿಸುವ ಸಾಕ್ಷಿಗಳಾಗಿರುವರು. ಅವರಿಂದ ನಮ್ಮ ಸುಕೃತ ದುಷ್ಕೃತಗಳನ್ನು ಬಚ್ಚಿಡಲಾಗದು. ನೀನು ವಾಸ್ತವವಾಗಿ ನಿರ್ದೋಷನಿರುವೆ! ಆದರೆ ನಿನ್ನ ರಕ್ಷಣ ರೀತಿಯನ್ನು ನನಗರುಹದೆ ಅಪರಾಧಿ ಎನಿಸಿದೆ! ನೀನು ನಿಷ್ಕಲ್ಮಷನೆಂದೇ ನಾನು ನಿನಗೆ ಶಾಪವನ್ನಿತ್ತಿಲ್ಲ! ತಿಳಿ! ನಿನಗೆ ಆ ಪಾಪವೂ ಬರದಂತೆ ವರವಿತ್ತಿರುವೆನು ಹೋಗು!' ಎಂದು ಕಳಿಸಿದನು.

ಧರ್ಮರಾಜ! ಸ್ತ್ರೀರಕ್ಷಣವು ಬಲು ದುಷ್ಕರವಾಗಿದೆ. ಸತ್ತರುಣಿಯರು ತಾವಾಗಿ ತಮ್ಮನ್ನು ಪ್ರಾಣಹಾನಿಯಾದರೂ ಸಹಿಸಿ ಮಾನಹಾನಿಯಾಗದಂತೆ ರಕ್ಷಿಸಿಕೊಳ್ಳಬಲ್ಲರು. ವಿಪುಲನು ರಕ್ಷಿಸದಿದ್ದರೆ, ರುಚಿಯು ಕೆಟ್ಟು, ವಂಶಹಾನಿಯು ಸಂಭವಿಸಬಹುದಾಗಿತ್ತು, ಅದನ್ನರಿತೇ, ದೇವಶರ್ಮನು ಅವನನ್ನು ಕ್ಷಮಿಸಿದನು. ರಕ್ಷಿತಳಾದ ರುಚಿಯೂ ಮತ್ತೆ ಮನಸೋಲದೆ ಮಾನವತಿಯಾಗಿ ಉಳಿದಳು.

ಧರ್ಮರಾಜ! ಸತ್ಕುಲಪ್ರಸೂತೆಯಾದ ಕನ್ಯಾಮಣಿಯು ಪ್ರಾಯಃ ಗುಣವತಿಯಾಗಿ, ಉಭಯಕುಲಗಳನ್ನು ಉದ್ಧರಿಸುವಳು. ಕನ್ಯಾವರಣ ಪ್ರಕಾರವು ಬಹುವಿದ್ಯೆ, ವಯಸ್ಸುಗಳಿಂದ ಯೋಗ್ಯನಾದ ವರನಿಗೆ ಉದಕಧಾರಾಪೂರ್ವಕವಾಗಿ ಕನ್ಯೆಯನ್ನು ಕೊಡುವುದು ಬ್ರಾಹ್ಮಣ ವಿವಾಹವು. ಕ್ಷತ್ರಿಯ ತರುಣೀ ತರುಣರು ಪರಸ್ಪರಾನುರಾಗದಿಂದ ವರಿಸಿ, ಮಾಡಿಕೊಂಬುವ ಮದುವೆಗೆ ಗಾಂಧರ್ವವೆಂದು ಹೆಸರು. ಬೆಲೆಗಾಗಿ ಕನ್ಯೆಯನ್ನು ಕೊಡುವುದು ಅಸುರವು. ವರನು ಬಲಾತ್ಕಾರದಿಂದ ವಧೂ ಬಂಧುಜನರನ್ನು ಗೆದ್ದು, ಅನುರಕ್ತಳಾದ ವಧುವಿನನ್ನು ಅಪಹರಿಸಿ, ಮದುವೆಯಾದರೆ ರಾಕ್ಷಸವು. ಧರ್ಮಕ್ಕಾಗಿ ಆಕಳನ್ನು ಕೊಂಡು, ಕನ್ಯೆಯನ್ನೂ

ಕೊಡುವುದು ಆರ್ಷವು. ಯಜ್ಞದಲ್ಲಿ ಋತ್ವಿಜನಿಗೆ ಕೊಡುವ ಕನ್ಯಾದಾನವು ದೈವವು. ಧರ್ಮಸಂತಾನಕ್ಕಾಗಿ ಪರಿಭಾವಿಸಿ ಕೊಡುವ ಕನ್ಯಾದಾನವು ಪ್ರಜಾಪತ್ಯವು. ನಿದ್ರಾದಿಗಳಲ್ಲಿ ಮೈಮರೆತಿದ್ದವಳನ್ನು ಸ್ವೀಕರಿಸುವುದು ಪೈಶಾಚವು. ಈ ವಿವಾಹಗಳಲ್ಲಿ ಅಸುರವು ಅಧಮವು, ರಾಕ್ಷಸವು ಅಧಮತರವು. ಪೈಶಾಚವು ಅಧಮಾಧಮವು.

ವಿಪ್ರನಿಗೆ ರಾಜ, ವೈಶ್ಯ, ಶೂದ್ರ, ವನಿತೆಯರನ್ನು ವಿವಾಹ ಮಾಡುವ ಅಧಿಕಾರವಿದೆ. ಅದು ಅವರ ಸಂತಾನವಂಶವೃದ್ಧಿಗಳಿಗಾಗಿ, ಅವರ ತಂದೆತಾಯಂದಿರು ಬೇಡಿಕೊಟ್ಟಾಗ ಮಾತ್ರ. ವಿಪ್ರನಿಗೆ ವಿಪ್ರವನಿತೆಯಲ್ಲಿ ಜನಿಸಿದವನು ವಿಪ್ರನೆನಿಸಿ, ಶ್ರಾದ್ಧದಾನಾದಿಗಳಲ್ಲಿ ಅಧಿಕೃತನಾಗಿರುವನು. ಇತರ ಸುತರು ತಂತಮ್ಮ ಮಾತೃಜಾತಿಯನ್ನು ಪೊಂದಿ, ಮಾತಾಮಹ ವಂಶವನ್ನು ಬೆಳೆಸುವರು. ಕ್ಷತ್ರಿಯನು ವೈಶ್ಯ ಶೂದ್ರ ತರುಣಿಯರಲ್ಲಿ ಅನುಲೋಮ ಧರ್ಮ ಸಂತಾನವನ್ನು ಪಡೆಯಬಹುದು. ವೈಶ್ಯನು ಶೂದ್ರಳಲ್ಲಿ ಸಂತಾನಪ್ರದನಾಗಬಹುದು. ಉತ್ತಮ ವರ್ಣದ ಸ್ತ್ರೀಯರಲ್ಲಿ ಅಧಮವರ್ಣದ ಪುರುಷರಿಂದ ಆದ ಸಂತಾನವು ಪ್ರತಿಲೋಮವೆನಿಸಿ, ವರ್ಣ ಸಂಕರವಾಗುವುದು.

ತಂದೆಯ ಧನದಲ್ಲಿ ಸುತರಿಗೆ ಸಮಭಾಗವಿದೆ. ಆದರೆ ವಿಲೋಮಜರಿಗಾ ಅಧಿಕಾರವಿಲ್ಲ. ಅನುಲೋಮಜರು ಕ್ರಮವಾಗಿ ನಾಲ್ಕು ಭಾಗ, ಮೂರು ಭಾಗ, ಎರಡು ಭಾಗ, ಒಂದು ಭಾಗಗಳಿಗೆ ಅಧಿಕೃತರಾಗಿರುವರು. ಇದು ವಿಪ್ರಧನ ವಿಷಯವು. ಕ್ಷತ್ರಿಯ ಧನದಲ್ಲಿ ಕ್ಷತ್ರಿಯ ಸುತನು ನಾಲ್ಕು ಭಾಗಗಳನ್ನು, ವೈಶ್ಯಾಸುತನು ಮೂರು ಭಾಗಗಳನ್ನು, ಶೂದ್ರಾಸುತನು ಒಂದು ಭಾಗವನ್ನು ಇಂತು ಎಂಟಂಶಗಳನ್ನು ಹೊಂದುವರು. ಶೂದ್ರಾಸುತನಿಗೆ

ಮಾಡುವಾಗ ಸಮವರ್ಣಜರಾದ ಸುತರೇ ಅಧಿಕೃತವಾಗಲಿ, ಹೀನತರುಣೀಸುತರಲ್ಲ.

ಸುತರು ಹತ್ತು ವಿಧರಾಗಿರುವರು. ಅಗ್ನಿಸಾಕ್ಷಿಕವಾಗಿ ಸ್ವೀಕರಿಸಿದ ತರುಣಿಯಲ್ಲಿ ಜನಿಸಿದವನು ಔರಸನೆನಿಸಿ, ಉತ್ತಮ ಸುತನಾಗಿರುವನು. ತನ್ನ ಮಗಳನ್ನು ಕೊಡುವಾಗ ಮಾತು ಮಾಡಿಕೊಂಡು, ಅವಳ ಮಗನನ್ನು ತನ್ನ ಮನೆಗೆ ತಂದುಕೊಂಡರೆ, ಅಂತಹ ಸುತನು ಪುತ್ರಿಕಾಪುತ್ರನು(ದೌಹಿತ್ರನು). ತನ್ನ ಸಮ್ಮತಿಯಿಂದ ತನ್ನ ಸತಿಯು ಅರ್ಹಪುರುಷನಿಂದ ಪಡೆದ ಮಗನಿಗೆ ಕ್ಷೇತ್ರಜನೆಂಬರು. ಜನನೀಜನಕರು ದಾನ ಕೊಟ್ಟರೆ ಪಡೆದ ಮಗನು ದತ್ತಕನಾಗುವನು. ತಂದೆತಾಯಂದಿರಿಂದ ಪರಿತ್ಯಕ್ತನಾಗಿ ಅನಾಥನಂತೆ ತಿರುಗುವ ಬಾಲನನ್ನು ಸಾಕಿ, ಮಗನನ್ನಾಗಿ ಮಾಡಿಕೊಂಡರೆ, ಅವನಿಗೆ ಕೃತ್ರಿಮನೆಂದು ಹೆಸರು. ತಂದೆಯ ಹೆಸರು ಗೊತ್ತಿಲ್ಲದಿರೆ, ಅವನಿಗೆ ಗೂಢಜನೆಂದು ಹೆಸರು. ಅಪವಿದ್ಧನೆಂದರೆ ಬಂಧುವರ್ಜಿತನಾಗಿ, ಹೆರರಲ್ಲಿ ಬೆಳೆಯುವವನು. ಕನ್ಯಾವಸ್ಥೆಯಲ್ಲಿ ಪಡೆದ ಸುತನು, ಕನ್ಯಾಪತಿಗೆ ಮಗನಾಗಿ, ಕಾನೀನನೆನಿಸುವನು. ಮದುವೆಯಲ್ಲಿ ಗರ್ಭಿಣಿಯಾಗಿದ್ದು ಆಮೇಲೆ ಜನಿಸಿದ ಮಗನಿಗೆ ಸಹೋಢನೆಂದು ಹೆಸರು. ಪತಿಯು ತ್ಯಜಿಸಿದ ಮೇಲೆ ಪುಟ್ಟಿದ ಮಗನಿಗೆ ಪೌನರ್ಭವನೆಂಬರು. ತಾನಾಗಿ ಹೋಗಿ ಬೇರೆಯವರನ್ನು ತಂದೆತಾಯಂದಿರೆಂದು ಸೇರಿದರೆ, ಅವನಿಗೆ ಸ್ವಯಂದತ್ತನೆಂಬರು. ಬಡವರು ಮಾರಿದರೆ ಕೊಂಡತನಯನು ಕ್ರೀತನೆನಿಸುವನು.

ಇವರೆಲ್ಲರೂ ಸುತರೇ! ಆದರೆ ಔರಸನಿವರಲ್ಲಿ ಉತ್ತಮನೆಂದು ತಿಳಿ! ಕುಲಸಮರಾದರೆ ಇತರರು ಕೂಡ ಯೋಗ್ಯಕ್ರಮದಲ್ಲಿ ಅಧಿಕೃತರಾಗಿರುವರು.

ಧರ್ಮಜ! ವಿಪ್ರಮಹಿಮೆಯನ್ನು ಮತ್ತೆ ಹೇಳುವೆನು ಕೇಳು! ಭಾರ್ಗವ ಕುಲತಿಲಕನಾದ ಚ್ಯವನನು ಗಂಗಾಯಮುನಾ ಸಂಗಮದಲ್ಲಿ ಜಲಾಂತರ್ಗತನಾಗಿ ಚಿರಸಮಾಧಿಸ್ಥನಾಗಿದ್ದನು. ಆತನ ಸುತ್ತಲು ಮತ್ಸ್ಯಸಮೂಹವು ತಿರುಗುತ್ತಿತ್ತು ಚಿರಸಂವಾಸ ದಿಂದ ಚ್ಯವನನಿಗೆ ಮೀನರಾಜಿಯಲ್ಲಿ ಅಭಿಮಾನವು ಪುಟ್ಟಿ ಬೆಳೆಯಿತು. ಇಂತು ಹನ್ನೆರಡು ವರ್ಷಗಳು ಉರುಳಿದವು. ಒಂದು ದಿನ ಜಾಲರು ಬಲೆ ಬೀಸಿ ಮೀನುಗಳನ್ನು ಹಿಡಿಯುವಾಗ, ಮುನಿಯು ಜಾಲದಿ ಸಿಕ್ಕು, ಬಂದುದನ್ನು ನೋಡಿ, ಹೆದರಿ, ಪಾದಕ್ಕೆ ಬಿದ್ದು, ಕ್ಷಮಿಸೆಂದು ಬೇಡಿದರು. ಆಗ ಚ್ಯವನನಿಂತೆಂದನು: 'ಈ ಮೀನಗಳಿಗೆ ಬಂದ ಗತಿಯು ಎನಗೂ ಬರಲಿ! ಅವನ್ನು ಮಾರಿದಂತೆ, ನನ್ನನ್ನೂ ಮಾರಿಬಿಡಿ!' ಆ ಮಾತನ್ನಾಲಿಸಿ ಜಾಲರು ಭಯಸಂಭ್ರಾಂತ ಚಿತ್ತರಾಗಿ, ಬೇಗಬೇಗ ರಾಜನಾದ ನಹುಷನನ್ನು ಸೇರಿ ಆ ವೃತ್ತಾಂತವನ್ನರುಹಿದರು.

ನಹುಷನು ಭಯಭಕ್ತಿ ಬಂಧುರಭಾವದಿಂದ ಆ ಮುನಿರಾಜನಲ್ಲಿಗೆ ಮಂತ್ರಿ, ಪುರೋಹಿತಜನರೊಡಗೂಡಿ ಬಂದನು. ಸಾಷ್ಟಾಂಗವಾಗಿ ಬಾಗಿ, ನಹುಷನು ಕೈಜೋಡಿಸಿ ನಿಂತು, 'ಮಹಾತ್ಮ! ಜಾಲರು ಮಾಡಿದ ಅಪರಾಧವಿದು. ಅದಕ್ಕೇನು-ಪರಿಹಾರ?' ಎಂದು ಕೇಳಿದನು. ಭಾರ್ಗವನು 'ರಾಜನ್! ಅವರ ಕುಲಧರ್ಮವನ್ನು ನಡೆಸಿದ ಜಾಲರಲ್ಲಿ ತಪ್ಪಿಲ್ಲ. ಆದುದರಿಂದ ನನ್ನನ್ನು ಕೊಂಡು, ನನಗೆ ಬಂದಿರುವ ಬಂಧವನ್ನು ಬಿಡಿಸು!' ಎಂದನು.

ನಹುಷನು ಸ್ವಲ್ಪವಾದರೂ ಸಿಟ್ಟಾಗದಿದ್ದ ಭಾರ್ಗವನನ್ನು ಮನದಿ ಮೆಚ್ಚಿ, 'ಸಾವಿರ ದೀನಾರಗಳನ್ನು ಇವರಿಗೆ ಕೊಡಿರಿ!' ಎಂದು ಮಂತ್ರಿಗಳಿಗಾಜ್ಞಾಪಿಸಿದನು. ಅದನ್ನು ಕೇಳಿ, ಚ್ಯವನನು 'ನ್ಯಾಯವರಿತು ಬೆಲೆ ಕೊಡು!' ಎಂದನು. ನಹುಷನು ಹತ್ತುಸಾವಿರವೆಂದನು. ಮತ್ತೆ ಒಪ್ಪದಿದ್ದ ಮುನಿಗಾಗಿ ಲಕ್ಷದೀನಾರಗಳನ್ನು ಕೊಡಲಣಿಯಾದನು. ಅದು ಕೋಟಿಯಾದರೂ, ಒಪ್ಪದೆ ತಲೆಯನ್ನಾಡಿಸಿದ ಭಾರ್ಗವನನ್ನು ಕೊಳ್ಳಲು, ತನ್ನ ಅರ್ಧರಾಜ್ಯವನ್ನೂ, ಕೊನೆಗೆ ಸಕಲ ರಾಜ್ಯವನ್ನೂ ಕೊಡಲು ಸಿದ್ಧನಾದನು. 'ಅದು ಸರಿಯಾದ ಬೆಲೆಯಲ್ಲ' ವೆಂದ ಮುನಿವರನ ಮಾತಿನಿಂದ ರಾಜ ಮಂತ್ರಿ ಪುರೋಹಿತರು ಕರ್ತವ್ಯವನ್ನು ತಿಳಿಯಲಾರದೆ ದಿಗ್ಭ್ರಾಂತರಾದರು.

ಆಗ ಅಲ್ಲಿಗೆ ಗವಿಜಾತನೆಂಬ ಮುನಿಯು ಬಂದು, 'ಇದಕ್ಕೇಕಿಷ್ಟು ಚಿಂತೆ ಗೋವನ್ನಿತ್ತರೆ ಉತ್ತಮ ಬ್ರಾಹ್ಮಣನಿಗೆ ಬೆಲೆ ಎನಿಸುವುದು. ವಿಪ್ರಮೌಲ್ಯವನ್ನೂ, ಗೋಮೌಲ್ಯವನ್ನೂ ನಿಶ್ಚಯಿಸಲು ನೀರೇಜಭವನಿಗಾಗದು, ನೀಲಕಂಠನಿಗಾಗದು. ಕೊಡು ಗೋವನ್ನು!' ಎಂದು ಸಮಾಧಾನಪಡಿಸಿದನು. ಆಗ ನಹುಷನು ಬದ್ಧಾಂಜಲಿಪುಟನಾಗಿ ಭಾರ್ಗವನನ್ನು ಸಮೀಪಿಸಿ, 'ಮಹಾನುಭಾವ! ನಿನ್ನಂತಹ ವಿಪ್ರೋತ್ತಮನಿಗೆ ಬೆಲೆ ಕಟ್ಟಲು ಹೋದ ನನ್ನ ತಪ್ಪನ್ನು ಕ್ಷಮಿಸು! ವಿಪ್ರವರಿಗೆ ಬೆಲೆಯುಂಟೇ? ಗೋವನ್ನು ಪ್ರತಿನಿಧಿಯಾಗಿತ್ತು ನಿನ್ನನ್ನು ಬಿಡಿಸುವೆನು' ಎಂದನು. ಚ್ಯವನನು ಪ್ರೀತನಾಗಿ 'ರಾಜನ್! ಗೋವು ಅಗ್ನಿಮಯವು;

ಅಮೃತಮಯವು, ಹೋಮ ವಿಧಾನ ಸಹಾಯಕವೂ ಆಗಿದೆ. ಗೋದಾನವು ಸ್ವರ್ಗ ಸೋಪಾನವೆನಿಸಿದೆ. ಹಾಗೇ ಮಾಡು!' ಎಂದನು. ನಹುಷನು ಗೋವನ್ನಿತ್ತು ಮುನಿಯನ್ನು ಬಿಡಿಸಿದನು.

ಜಾಲರು 'ಸ್ವಾಮಿ! ನಮ್ಮ ತಪ್ಪನ್ನು ಕ್ಷಮಿಸಿರುವೆ! ಅತ್ಯಂತ ಕರುಣೆ ತೋರಿಸುವೆ! ಬೇಡ ಎನ್ನದೆ ನಾವೀವ ಗೋವನ್ನು ಸ್ವೀಕರಿಸು!' ಎಂದರು. ಚ್ಯವನನಿಗಿತ್ತ ಗೋದಾನ ಪುಣ್ಯದಿಂದ ಜಾಲರೂ ಚ್ಯವನರ್ಷಿಯ ಸಹವಾಸ ಪುಣ್ಯದಿಂದ ಮೀನುಗಳೂ ಪುನೀತರಾಗಿ, ಸ್ವರ್ಗವನ್ನು ಸೇರಿದರು. ಮತ್ತು ಚ್ಯವನನು ನಹುಷನಲ್ಲಿ ಪ್ರೀತನಾಗಿ 'ರಾಜನ್! ಇಂದ್ರಸಮ ವಿಭವನಾಗು! ನಿನ್ನ ಬುದ್ಧಿಯು ಧರ್ಮತರವಾಗಿರಲಿ!' ಎಂದು ವರವಿತ್ತು, ಗವಿಜಾತ ನೊಡಗೂಡಿ, ಅಂತರ್ಧಿತನಾದನು. ವಿಪ್ರರ ಸಂದರ್ಶನ, ಸಂವಾಸ, ಸಂಭಾಷಣಗಳಿಂದಲು ಮನುಜರು ಉದ್ಧೃತರಾಗುವರು. ಗೋವು ಬ್ರಾಹ್ಮಣನಂತೆ ಪಾವನವು ಎಂದು ಈ ಇತಿಹಾಸ ಮುಖೇನ ನಿನಗೆ ಉತ್ತರಿಸಿದೆನು.

ಅದೇ ಚ್ಯವನನು ಕುಶಿಕರಾಜನನ್ನು ಪರೀಕ್ಷಿಸಿ, ಕೊನೆಗೆ ಒಲಿದು ಮಾಡಿದ ಪ್ರಸಾದಾತಿಶಯವನ್ನು ನಿರೂಪಿಸುವೆನು. ಆ ಪ್ರಸಾದದಾನವು ಉತ್ತಮ ಬ್ರಾಹ್ಮಣರಾದ ಭಾರ್ಗವರ ಕುಲದಲ್ಲಿ ಕ್ರೂರ ಕ್ಷತ್ರ ಚರಿತ್ರ ಪುತ್ರನನ್ನು, ಅಸಮಾನ ಕ್ಷತ್ರಿಯರಾದ ಕುಶಿಕರ ಕುಲದಲ್ಲಿ ಪರಮಬ್ರಾಹ್ಮಣ್ಯ ವಿಶ್ರುತ ಪುತ್ರನನ್ನು ಉತ್ಪಾದಿಸುವಂತಾಯಿತು.

ಚ್ಯವನನೊಂದು ಸಲ ದೇವಸಭೆಯಲ್ಲಿ, ತನ್ನ ವಂಶಕ್ಕೆ ಕುಶಿಕರಾಜ ಕುಲದಿಂದ ಸಂಕರವಾಗುವದೆಂದು ಕೇಳಿ, ಕುಶಿಕಕುಲವನ್ನೇ ನಾಶಪಡಿಸಲು ನಿಶ್ಚಯಿಸಿದನು. ಅಪರಾಧವಿಲ್ಲದೆ ಶಿಕ್ಷಿಸಲು ಬಾರದೆಂದು ತಿಳಿದಿದ್ದ ಮಹರ್ಷಿಯು ಕುಶಿಕನಿಂದ ತಪ್ಪನ್ನು ಮಾಡಿಸಬೇಕೆಂದು, ಸಂಕಲ್ಪಿಸಿ, ಅವನ ಮನೆಗೆ ಬಂದನು. ಬಂದ ಭೃಗ ನಂದನನಿಗೆ ವಂದಿಸಿ ಕುಶಿಕರಾಜರ್ಷಿಯು ಭಾರ್ಯಾಸಹಿತನಾಗಿ ಭಕ್ತಿಯಿಂದ ಪೂಜಿಸಿ, 'ಮುನೀಂದ್ರ! ರಾಜ್ಯವು ನಿನ್ನದು. ಸಪರಿವಾರವಾದ ನಾನು ನಿನ್ನ ದಾಸದೆಂದು ತಿಳಿ! ನನ್ನಿಂದ ಏನಾಗಬೇಕು?' ಎಂದನು.

ಚ್ಯವನನು 'ರಾಜನ್! ನನಗೇಕೆ ರಾಜ್ಯ? ಒಂದು ಸದ್ವ್ರತವನ್ನು ನಿರ್ವಹಿಸಲೆಂದು ಬಂದಿರುವೆನು. ನೀನು ಭಾರ್ಯಾಸಹಿತವಾಗಿ, ನನ್ನನ್ನುಪರಿಚರಿಸುತ್ತಿರು!' ಎಂದನು. ಆ ದಂಪತಿಗಳು ಶ್ರದ್ಧಾಭಕ್ತಿಯುಕ್ತರಾಗಿ ಮುನಿರಾಜನನ್ನು ಸೇವಿಸುತ್ತಿದ್ದರು. ಒಂದು ಸುಂದರ ಮಂದಿರದಲ್ಲಿ, ಮೃದುತಲ್ಪ, ಹೃದ್ಯಸಿಂಹಾಸನ, ಪೀಠ ಕೃಷ್ಣಾಜಿನಗಳನ್ನಿಟ್ಟು ಸಮರ್ಪಿಸಿದನು. ಸಾಯಂಕಾಲವಾಯಿತು! ಕಾಲೋಚಿತ ಕೃತ್ಯಗಳನ್ನು ಮಾಡಿಬಂದ ಮಹಾಮುನಿಯು, ಅವರಿತ್ತ ಮೃಷ್ಟಾನ್ನವನ್ನುಂಡು, 'ರಾಜನ್! ನನಗೆ ನಿದ್ರೆ ಬರುತ್ತಿದೆ. ನಿದ್ರೆ ಮಾಡುವಾಗ ನನ್ನನ್ನು ಎಬ್ಬಿಸಬೇಡ! ನನ್ನ ಚರಣಗಳನ್ನು ನೀವಿಬ್ಬರು ಒತ್ತುತ್ತಿರಿ! ನೀವು ನಿದ್ರೆಮಾಡದೆ ಸೇವಿಸುತ್ತಿರಬೇಕು!' ಎಂದಾಜ್ಞಾಪಿಸಿ, ಮಲಗಿಬಿಟ್ಟನು. ನಿಶ್ಚಲಗಾತ್ರನಾಗಿ ಬಲಗಡೆ ತಿರುಗಿ ಮಲಗಿದ್ದ ಋಷಿಯನ್ನು ರಾಜದಂಪತಿಗಳು ನಿದ್ರಾಹಾರಗಳಿಲ್ಲದೆ ಸೇವಿಸುತ್ತಿರಲು, ಇಪ್ಪತ್ತೊಂದು ದಿನಗಳು ಕಳೆದವು.

ಆಗ ಎಚ್ಚತ್ತ ಮುನಿರಾಜನು ಮನೆ ಬಿಟ್ಟು ಹೋಗುತ್ತಿದ್ದುದನ್ನು ನೋಡಿ, ರಾಜದಂಪತಿಗಳು ಆತನನ್ನು ಹಿಂಬಾಲಿಸಿ, ಪ್ರಾರ್ಥಿಸುತ್ತಿದ್ದರು. ಅವರ ಕರೆಗೆ ಓಗೊಡದೆ ಚ್ಯವನನು ದೂರಸಾಗಿ ಅಂತರ್ಧಿತನಾದನು. ಅವರೀರ್ವರು, ಶ್ರಾಂತರಾಗಿ ಮೂರ್ಛೆ ಬಂದು ಬಿದ್ದರು. ಆಮೇಲೆ ಎಚ್ಚತ್ತು, ಕುಶಿಕದಂಪತಿಗಳು ಮುನಿಯನ್ನು ಕಾಣಲಾರದೆ ವಿಷಾದದಿಂದ, ಮನೆಗೆ ಹಿಂದಿರುಗಿ ಬಂದರು. ಆಗ ಶಯ್ಯೆಯಲ್ಲಿ ಎಡಗಡೆ ಹೊರಳಿ ಮಲಗಿದ್ದ ಚ್ಯವನನನ್ನು ನೋಡಿ, ಅವರು, ಮತ್ತೆ ಪಾದಸೇವನವನ್ನು ಮಾಡುತ್ತಿದ್ದರು. ಮತ್ತೆ ಇಪ್ಪತ್ತೊಂದು ದಿನಗಳು ಕಳೆದವು. ಆಗ ಎಚ್ಚತ್ತ ಮುನಿವರನು 'ಅಭ್ಯಂಗವನ್ನು ಮಾಡಿಸಿ' ಎಂದಾಜ್ಞಾಪಿಸಿದನು.

ಪತ್ನೀಸಹಿತನಾದ ಕುಶಿಕನು ಸ್ವಲ್ಪವಾದರೂ ಬೇಸರದೆ, ಮನದಲ್ಲಿ ವಿಕಾರಗೊಳ್ಳದೆ, ಭಾರ್ಗವನಿಗೆ ಅಭ್ಯಂಗಸ್ನಾನವನ್ನು ಮಾಡಿಸಿ, ಮತ್ತೆ ಮೃಷ್ಟಾನ್ನವನ್ನು ಉಣಿಸಿದನು. ಚ್ಯವನನು ಅಂತರ್ಧಿತನಾಗಿ, ಮರುದಿನ ಪ್ರಾತಃಕಾಲದಲ್ಲಿ ಬಂದನು. ತನಗಾಗಿ ಕಾದಿದ್ದ ರಾಜದಂಪತಿಗಳ ಶ್ರದ್ಧೆಯನ್ನು, ನಿರ್ವಿಕಾರತೆಯನ್ನು ಕಂಡು, ಪ್ರೀತನಾದನು. ಆದರೂ ಇನ್ನೂ ಪರೀಕ್ಷಿಸಲೆಣಿಸಿ, ಭಾರ್ಗವನು 'ರಾಜನ್ ! ರಥವನ್ನು ತರಿಸು ! ನೀನೊಂದೆಡೆ, ನಿನ್ನ ಪತ್ನಿಯು ಬೇರೆಡೆ ಕುದುರೆಗಳಂತೆ ವಹಿಸಿ ನಡೆಯಿರಿ. ರಾಜಮಾರ್ಗದಲ್ಲಿ ಎದುರಾಗುವ ಯಾಚಕ ದೀನ ಜನರಿಗೆ ಕೊಡಲು ರತ್ನ ಕನಕರಾಶಿಗಳನ್ನು ರಥದಲ್ಲಿ ಇರಿಸು!' ಎಂದನು. ಅಂತೆಯೇ ಅವರು ರಥವನ್ನು ರಾಜಮಾರ್ಗದಲ್ಲಿ ಎಳೆದೊಯ್ಯುತ್ತಿರಲು, ಒಂದು ಕೈಯಿಂದ ದಾನವೀವ ಚ್ಯವನನು ಮತ್ತೊಂದು ಕೈಯಲ್ಲಿ ಪ್ರತೋದವನ್ನು ಪಿಡಿದು, ಅವರನ್ನು ಹೊಡೆಯುತ್ತಿದ್ದನು. ಅವರೀರ್ವರ ಶರೀರಗಳಲ್ಲಿ ಬರೆಗಳು ಮೂಡಿದವು ; ರಕ್ತಸಿಕ್ತಗಾತ್ರರಾದರೂ ಕಿಂಚಿತ್ತಾದರೂ ಬೇಸರದೆ ಪೋಗುತ್ತಿದ್ದ ರಾಣೀರಾಜರನ್ನು ನೋಡಿ, ಚ್ಯವನನು ಮೆಚ್ಚಿ, ಮಹಾಜನರು ತನ್ನನ್ನು ಕಟುಕನೆಂದು ನಿಂದಿಸುತ್ತಾ, ಹಿಂಬರುವುದನ್ನು ತಿಳಿದು, ರಥದಿಂದಿಳಿದನು. ಆ ಮಹಾನುಭಾವನು ರಾಜದಂಪತಿಗಳನ್ನು ಕರೆದು, ಬಂದು ವಂದಿಸಿದ. ಅವರ ಶರೀರಗಳನ್ನು ತನ್ನ ಅಮೃತಕರದಿಂದ ತಡವಿದನು.

ನೋಡನೋಡುತ್ತಿರಲು ಪರಮಾಶ್ಚರ್ಯವಾದ ಘಟನೆಯು ನಡೆಯಿತು. ರಾಜದಂಪತಿಗಳ ಶರೀರಗಳು ನೂತನಸುಂದರವಾದವು. ಅವರ ಶ್ರಮ ತಾಪ ಗ್ಲಾನಿಗಳು ಮಾಯವಾದವು. ಅವರು ಋಷಿವರನಿಗೆರಗಿ ನಿಂತರು. 'ವ್ರತಚರ್ಯೆಯನ್ನು ನಾನು ಗಂಗಾತೀರದಲ್ಲಿ ಮುಗಿಸಲಿರುವೆನು. ನಾಳೆ ನೀನು ಅಲ್ಲಿಗೆ ಬಾ!' ಎಂದ ಚ್ಯವನನ ಮಾತಿಗೆ ಶಿರಬಾಗಿ, ಅವರು ಸಪ್ರಜರಾಗಿ, ರಾಜಧಾನಿಯನ್ನು ಸೇರಿದರು.

ಮರುದಿನ ತನ್ನನ್ನು ಕಾಣಲು ಬಂದ ಕುಶಿಕ ದಂಪತಿಗಳನ್ನು ಆಶೀರ್ವದಿಸಿ, ಚ್ಯವನನು ತನ್ನ ಯೋಗಪ್ರಭಾವದಿಂದ ಅವರಿಗೆ ನಾಕಲೋಕವನ್ನು ನೋಡಿಸಿ ಕೊಟ್ಟನು. ದಿವ್ಯಪ್ರಾಸಾದಗಳಲ್ಲಿ ಸ್ವಾಧ್ಯಾಯ, ಸಂಗೀತ, ಸಾಹಿತ್ಯ ವಿಚಾರಗಳು ನಡೆಯುತ್ತಿದ್ದವು. ಪ್ರಾಸಾದ ಪ್ರತೋಲಿಕೆಗಳಲ್ಲಿ ಶುಕ ಪಿಕ ಶಾರಿಕಾದಿ ವಿಹಗಗಳು ಕಲಕಲ ನಾದವನ್ನು ಮಾಡುತ್ತಿದ್ದವು. ಸರೋವರಗಳಲ್ಲಿ ಅಮೃತಜಲವು ತುಂಬಿತ್ತು. ಸರೋಜವದನೆಯರು

ಜಲಕ್ರೀಡಾಸಕ್ತರಾಗಿದ್ದರು. ಕಮಲಗಳು ವಿಕಸಿಸಿ ನಿಂತಿದ್ದವು. ಕಮಲಾದಿ ಸುಮಪರಿಮಳವನ್ನು ಹೊತ್ತು ಮಂದಮಾರುತನು ಬೀಸುತ್ತಿದ್ದನು. ಕ್ರೀಡಾಪರ್ವತಗಳಿಂದ ಮಯೂರ ಕ್ರೇಕಾರಗಳು ಕೇಳಬರುತ್ತಿದ್ದವು. ಸುರರು, ಗಂಧರ್ವರು, ಅಪ್ಸರೋವನಿತೆಯರಿಂದ ಕೂಡಿ, ಸರಸ ಕೇಲೀಲೋಲರಾಗಿದ್ದರು. ನಿತಾಂತಸಂಮೋದಭರಿತವಾದ ನಾಕಲೋಕವನ್ನು ಕಂಡು, ಕುಶಿಕ ದಂಪತಿಗಳು, ಅಲ್ಲಿ ದಿವ್ಯಮಂದಿರ ಪ್ರಾಂಗಣದಲ್ಲಿ, ಹಂಸತೂಲಿಕಾತಲ್ಪದಲ್ಲಿ ಮಲಗಿದ್ದ ಮಹರ್ಷಿಯನ್ನೂ ಕಂಡರು. ಅವರು ನವಯೌವ್ವನಭರಿತರು, ದುಃಖಶೋಕರಹಿತರು ಆಗಿ, 'ಮುನೀಂದ್ರ ! ನಿನ್ನ ಪಾವನ ಮಹಿಮೆಯನ್ನು ನೋಡಿ, ಧನ್ಯರಾದೆವು. ಪ್ರಸಾದಮೇದುರ ಕಟಾಕ್ಷಗಳಿಂದ ನೋಡಿ, ನಮ್ಮನ್ನು ಉದ್ಧರಿಸು!' ಎಂದು ಬೇಡಿದರು. ಆಗ ಹಠಾತ್ತಾಗಿ ಅದೆಲ್ಲವೂ ಮಾಯವಾಯಿತು. ಕುಶಿಕನು ಪತ್ನಿಯಿಂದ ಚ್ಯವನಾಶ್ರಮದಲ್ಲಿ ನಿಂತಿದ್ದನು. ಪ್ರಜರು ಇದೆಲ್ಲವನ್ನೂ ಕಂಡು ಬೆರಗಾಗಿ ಮುನಿತಲ್ಲಜನನ್ನು ಪ್ರಶಂಸಿಸಿದರು.

ಚ್ಯವನನು, 'ರಾಜನ್! ಮೆಚ್ಚಿದೆನು ನಿಮ್ಮ ಶಾಂತಚಿತ್ತತೆಗೆ! ಮನಸ್ಸನ್ನೂ ಇಂದ್ರಿಯಗಳನ್ನೂ ವಶದಲ್ಲಿಟ್ಟು, ಕ್ಷತ್ರಿಯರಾದರೂ, ಬ್ರಾಹ್ಮಣಸಮರಾಗಿರುವಿರಿ! ನಿನ್ನನ್ನು ಪರೀಕ್ಷಿಸಲು ಬಂದೆನು. ಭೃಗು ಕುಶಿಕವಂಶಗಳಿಗೆ ಸಂಕರವಾಗುವುದೆಂದು ಬ್ರಹ್ಮದೇವನು ದೇವಸಭೆಯಲ್ಲಿ ಪೇಳಿದ್ದನ್ನು ಕೇಳಿ, ಬ್ರಹ್ಮಕ್ಷತ್ರ ಸಂಕರವಾಗದಂತೆ ಮಾಡಬೇಕೆಂದು ನಿಶ್ಚಯಿಸಿದೆನು. ಅಂತೆಯೇ ನಿನ್ನನ್ನು ಪರೀಕ್ಷಿಸಿ, ಅಪರಾಧವಾದ ಕ್ಷಣವೇ, ನಿನ್ನ ವಂಶನಾಶವಾಗಲೆಂದು ಶಪಿಸಲು ಬಂದೆನು. ದೈವಸಂಕಲ್ಪವೇ ಬೇರಾಗಿದೆ. ಬ್ರಹ್ಮದೇವನ ಮಾತು ಸುಳ್ಳಾಗುವುದೇ? ನೀನು ಕಾಮ ಕ್ರೋಧಗಳನ್ನೇ ಅಲ್ಲದೆ ನನ್ನನ್ನೂ ಜಯಿಸಿದೆ! ಅನುಲೋಮವಾಗುವುದರಿಂದ ನಮ್ಮ ನಿಮ್ಮ ಬಾಂಧವ್ಯವು ನಿಷಿದ್ಧವಾಗದಿರುವುದು. ನೀನು ನಾಕಲೋಕ ದರ್ಶನದಿಂದ ಇಹಸುಖ ವಿರಕ್ತನಾಗುವಂತೆ ಸಂಘಟಿಸಿದೆನು. ಈಗ ನಿನ್ನ ಬುದ್ಧಿಯ ಬ್ರಾಹ್ಮಣ್ಯಸಂಪಾದನೆಯಲ್ಲಿ ಕುತುಕವಾಗಿದೆ. ಒಳ್ಳೆಯದಾಯಿತು! ನಿನ್ನ ಮೊಮ್ಮಗನು ವಿಶೇಷ ತಪೋಬಲದಿಂದ ಬ್ರಾಹ್ಮಣನೇ ಆಗುವನು. ನೀನೂ ವಿಪ್ರಸಮಗತಿಯನ್ನು ಹೊಂದುವೆ! ನಿನ್ನ ಸತಿಯೂ ಚಂದ್ರಮನನ್ನು ಚಂದ್ರಿಕೆಯಂತೆ, ನಿನ್ನನ್ನು ಅನುಗಮಿಸಿ, ಮುಕ್ತಳಾಗುವಳು. ಚರತರು ವ್ಯತ್ಯಾಸದಿಂದ ನನ್ನ ಮೊಮ್ಮಗನು ಕ್ಷತ್ರಿಯರಂತೆ ಕ್ರೂರಕರ್ಮನಾಗುವನು. ಶ್ರೀಹರಿಯೇ ಪರಶುರಾಮನಾಗಿ, ದುಷ್ಟಕ್ಷತ್ರವನ್ನು ನಾಶಮಾಡಲು ಬಂದಾಗ ಅದನ್ನು ನಿವಾರಿಸಲಾಗುವುದೇ ? ದೈವೇಚ್ಛೆಗೆದುರಿಲ್ಲ!' ಎಂದು ಅವರನ್ನು ಕಳಿಸಿದನು.

## ೬. ದಾನವಿಶೇಷ ವರ್ಣನೆ

ಭೀಷ್ಮನು ಪಾತ್ರರೆನಿಸುವ ವಿಪ್ರರನ್ನು ವರ್ಣಿಸಿ, ಅಂತಹ ಪಾತ್ರರಿಗಿಡಲ್ಪಡುವ ದಾನ ವಿಶೇಶಗಳನ್ನು ವಿವರಿಸುತ್ತಿಂತೆಂದನು:

'ಕಾಂಸ್ಯದೋಹನಪಾತ್ರೆ , ಕಾಂಚನಶೃಂಗ, ರಜತಖುರ, ಧವಳಾಂಬರಯುಗ, ಕರುವುಗಳಿಂದ ಕೂಡಿಸಿ, ಗೋವನ್ನು ಸದ್ವಿಪ್ರನಿಗೆ ಸದಕ್ಷಿಣವಾಗಿ ಕೊಟ್ಟರೆ, ಅದರ ಮೈರೋಮಗಳೆಷ್ಟೋ, ಅಷ್ಟು ಸಾವಿರ ವರ್ಷಗಳು ಸ್ವರ್ಗಲೋಕದಲ್ಲಿರುವನು. ದಾನಗಳಲ್ಲಿ

ಕನ್ಯಾ, ಭೂ, ಗೃಹ, ಕನಕ, ಅನ್ನ, ಜಲ, ವಸ್ತ್ರ, ಶಯನ, ಆಸನ, ವಾಹನ, ಗೋದಾನಗಳು ಉಭಯಲೋಕ ಸುಖಕಾರಣವಾಗಿ, ಶ್ರೇಷ್ಠವೆನಿಸಿವೆ.

ಎಲ್ಲ ದಾನಗಳಕಿಂತಲು, ಅರ್ಥಿವಿಪ್ರನು ಬೇಡಿದುದನ್ನು ಕೊಡುವುದುತ್ತಮ ದಾನವು. ಅಭಯ(ಪ್ರಾಣರಕ್ಷಣ-ಬ್ರಹ್ಮಜ್ಞಾನ) ದಾನದಕಿಂತಲು ಶ್ರೇಷ್ಠತರವಾದುದಿಲ್ಲ. ರಣಮರಣವು ಸಮಸ್ತದಾನ ಪುಣ್ಯಸಮವಾಗಿದೆ. ಅಂತು ವೀರಶಯನವನ್ನಲಂಕರಿಸಿದ ಪುಣ್ಯವಂತರಿಗಾಗಿ, ನೀನು ಶೋಕಿಸುವುದು ತರವಲ್ಲ. ಶತ್ರುವಾದರೂ ದೀನನಾಗಿ, ಶರಣು ಬಂದರೆ, ಅವನಿಗೆ ಅಭಯವನ್ನಿತ್ತವನು ಬಲುಪುಣ್ಯಶಾಲಿಯಾಗುವನು. ದಾರಾಪುತ್ರರನ್ನು ಪೋಷಿಸಲಾರದ ಕಡುದರಿದ್ರ ವಿಪ್ರನಿಗೆ ಪ್ರಸನ್ನನಾಗಿ ಅವನ ಕ್ಷುನ್ನಿವರ್ತಕವಾದ ದ್ರವ್ಯವನ್ನಿತ್ತು ಸತ್ಕರಿಸುವವನು ಅಶ್ವಮೇಧ ಫಲವನ್ನು ಹೊಂದುವನು. ವಿಪ್ರರಲ್ಲಿ ಸ್ವದಾರರತರು, ಯಜನಯಾಜನತತ್ಪರರು, ವೇದವಿದುಷರು, ಕಾಮಾದಿ ದೋಷದೂರರು ಆದವರು ಪಾತ್ರೋತ್ತಮರು.

ಯಾಚಕನಿಗೆ ಕೊಡುವ ದಾನಕ್ಕೆ ಎರಡರಷ್ಟು ಫಲಪ್ರದವಾಗಿದೆ, ಅಯಾಚಕನಿಗೀವ ದಾನವು. ಬೇಡುವುದನ್ನು ಮರಣಸಮಾನವೆಂದು ಸದ್ವಿಪ್ರರು ಗಣಿಸಿ, ದೇವನಿತ್ತುದರಿಂದ ಸಂತುಷ್ಟರಾಗಿರುವರು. ಯಾಚಕನಿಗೆ ಇಲ್ಲ ಎಂಬುವುದು ಮರಣಾಧಿಕ ದುಃಖವು. ಆದುದರಿಂದ ಯೋಗ್ಯತೆಯನ್ನರಿತು, ಆವಶ್ಯಕ ವಸ್ತುವನ್ನು, ಕೊಡುವುದು ಉತ್ತಮ ದಾನವಾಗುವುದು.

ಭೂಸುರರನ್ನು ಕರೆದು, ಆದರದಿಂದ ಪೂಜಿಸಿ, ಧನಧಾನ್ಯಗೋಮಣಿ ಧರಣೀ ನೀರಾನ್ನಗಳನ್ನು ಕೊಡುವ ಮನುಜನಿಗೆ ಯಜ್ಞ ತಪೋ ವಿಹಿತ ಪುಣ್ಯಗಳು ಲಭಿಸುವವು. ಭೂದಾನವನ್ನು ಬಹುಪ್ರಶಂಸಿಸಿರುವರು ಪೂರ್ವಜರು. ಧನ, ಧಾನ್ಯ, ರತ್ನ, ಅನ್ನ, ಜಲ, ವಸ್ತ್ರಾದಿ ಸರ್ವಪದಾರ್ಥಗಳೂ ಭೂಮಿಯಲ್ಲೇ ಜನಿಸಿ ಬರುವುದರಿಂದ, ಭೂದಾನವನ್ನಿತ್ತರೆ, ಅವೆಲ್ಲವನ್ನಿತ್ತಷ್ಟು ಪುಣ್ಯವು ಸಿಗುವುದು. ಭೂಮಿಯು ನಿಂತಿರುವರೆವಿಗೂ, ಭೂದಾನಕರ್ತನು ಸ್ವರ್ಗದಲ್ಲಿ ಸುಖವಾಗಿರುವನು. ಆ ಪುಣ್ಯದಿಂದ ಅವನು ಮುಂದೆ ರಾಜಸಮನಾಗಿ ಹುಟ್ಟುವನು. ರಾಜರು ರಣಮರಣವನ್ನೋ, ಧರಣೀದಾನ ಪುಣ್ಯವನ್ನೋ ಪಡೆಯುವುದತ್ಯಂತಾವಶ್ಯಕವಾಗಿದೆ. ಭೂಮಿಯನ್ನೂ, ಗೋವನ್ನೂ ಯಾರಿಂದಲಾದರೂ ಎಂತಹ ಪಾಪಾತ್ಮನಿಂದಾದರೂ ಪಡೆಯಬಹುದು. ದರಿದ್ರನು, ಬಹುಕುಟುಂಬಿಯು, ವಿದ್ವಾಂಸನು ಆದ ವಿಪ್ರನಿಗೆ ಕೊಟ್ಟ ಭೂದಾನದ ಫಲವನ್ನು ವರ್ಣಿಸಿ ಮುಗಿಸಲಾಗದು.

ರಾಜನು ಯಾಗವನ್ನು ಮಾಡಿ, ಅಲ್ಲಿ ಋತ್ವಿಜರಾದಿಯಾದ ವಿಪ್ರರಿಗೆ ಭೂದಾನವನ್ನು ಕೊಡುವುದು ಆವಶ್ಯಕವಾಗಿದೆ. ಒಲ್ಲೆ ಎಂಬುವ ವಿದ್ವಜ್ಜನರಿಗೆ ಕಾಡಿಬೇಡಿ ಒಪ್ಪಿಸಿ, ಭೂಮಿಯನ್ನು ದಾನವಾಗಿತ್ತ ನರನು ಆಚಂದ್ರಾರ್ಕವಾದ ಸ್ವರ್ಗವಾಸಕ್ಕೆ ಯೋಗ್ಯನಾಗುವನು. ಗೋಚರ್ಮವೆಂದರೆ, ನೂರಾಕಳು ನಿಂತು ಮೇಯುವಷ್ಟು ಸ್ಥಳ - ಅದನ್ನು ಕೊಟ್ಟರೆ ಹೋಗದ ಪಾಪವಿಲ್ಲ; ಸೂರ್ಯನು ಪುಟ್ಟಿದರೆ ಹೋಗದ ಕತ್ತಲಿಲ್ಲ.

ಈಗ ಭೂದೇವಿಯೇ ಅಪ್ಪಣೆ ಕೊಡಿಸಿದ ಅನರ್ಘ್ಯವಚನಗಳನ್ನು ಅರುಹುವೆನು ಕೇಳು! 'ಜನರೇ! ಭೂದಾನವನ್ನು ಮಾಡಿರಿ! ಯಶಸ್ಸುಖಗಳು ಉಭಯ ಲೋಕಗಳಲ್ಲಿಯೂ ಬೇಕಾಗಿದ್ದರೆ, ಭೂದಾನವನ್ನು ಮಾಡಿ! ಇತರರು ಕೊಟ್ಟುದೆಂದು ಭೂಮಿಯನ್ನು

ವಿಪ್ರರಿಂದ ಕಸಿವ ದುರಾತ್ಮರು ಶಾಶ್ವತ ನರಕವನ್ನು ಹೊಂದುವರು. ಭೂದಾನವೆಂದರೆ ಅನ್ನದಾನವೇ ಸರಿ! ಭೂಮಿಯನ್ನು ಕುಪಾತ್ರನಿಗಿತ್ತರೂ ಚಿಂತೆಯಿಲ್ಲ; ದಾತನಿಗೆ ಪುಣ್ಯವಿದೆ. ಇನ್ನು ಸತ್ಪಾತ್ರನಿಗಿತ್ತರೆ ಅನಂತ ಪುಣ್ಯವಿದೆ ಎಂದು ಹೇಳಬೇಕೇ? ಭೂಮಿಯಲ್ಲಿ ರತ್ನಗಳಿವೆ. ಅದನ್ನಿತ್ತವನು ನವರತ್ನ ದಾನವನ್ನಿತ್ತಂತೆ; ಅಥವಾ ಅಶ್ವಗಜ ವನಿತಾದಿ ರತ್ನಸಮ ವಸ್ತುಗಳನ್ನಿತ್ತಂತೆ ಬಲುಪುಣ್ಯವನ್ನು ಪೊಂದುವನು. ಭೂದಾನವು ಅಸಮಾನವಾಗಿದೆ. ರಾಜನಾಗಿ ಭೂದಾನವನ್ನು ಮಾಡದವನ ಜನ್ಮವು ವ್ಯರ್ಥವೇ ಸರಿ! ಒಬ್ಬನಿಗೆ ಕೊಟ್ಟು ತಾನೇ ಕಸಿದವನು, ಮತ್ತು ಇತರನಿತ್ತ ಭೂಮಿಯನ್ನು ಅಪಹರಿಸಿದವನು ಕೂಡ ತನ್ನ ಇಪ್ಪತ್ತೊಂದು ತಲೆಗಳಿಂದ ನರಕದಲ್ಲಿ ಬೀಳುವನು. ಕೊಡುವೆನೆಂದು ಆಶೆ ತೋರಿಸಿ, ಕೊಡದ ಪಾಪಿಗೆ ಮತ್ತು ಕೇಳಿಸಿಕೊಳ್ಳದೆ ಕರೆದು ಭೂದಾನವನ್ನೀವ ಪುಣ್ಯವಂತನಿಗೂ ಸದೃಶರಿಲ್ಲ.

ಅನ್ನದಾನವು ಅತ್ಯುತ್ತಮ ದಾನವಾಗಿದೆ. ಲೋಕತಂತ್ರವೆಲ್ಲವೂ ಅನ್ನದಿಂದಲೇ ನಡೆಯುವುದು. ಯಜ್ಞಯಾಗಾದಿಗಳೂ ಅನ್ನದಿಂದಲೇ ನಡೆಯುವವು. ಇತರ ದಾನಗಳನ್ನು ಕೊಡುವಾಗ ಮೊದಲು ಅನ್ನವನ್ನಿತ್ತು, ಆಮೇಲೆ ಅವನ್ನು ಕೊಡುವರು. ಅನ್ನವಿಲ್ಲದ ದಾನವು ಅನರ್ಥಕವಾಗಿದೆ. ಆದುದರಿಂದ ಪ್ರಯತ್ನಿಸಿ ಅನ್ನದಾನವನ್ನು ಮಾಡಬೇಕು. ಮನೆಜನರಿಗೆ ಕಡಿಮೆಯಾಗುವದಿದ್ದರೂ ಸೈರಿಸಿ, ಬಂದ ಅತಿಥಿಗೆ ಅನ್ನವನ್ನಿಡುವುದು ಬಲುಪುಣ್ಯವು. ಅದು ಪ್ರಾಣಪೂಜೆಯೆನಿಸಿ, ಪರಮಪಾವನವಾಗಿದೆ. ಶ್ರಾಂತರು, ವೃದ್ಧರು, ಬಾಲಕರು, ವಿಕಲರು, ರೋಗಿಗಳು. ವನಿತೆಯರು ಇವರಿಗೆ ಕೊಡದೆ ಅನ್ನವನ್ನುಂಬುವದು ಅಮೇಧ್ಯಭಕ್ಷಣವೆನಿಸುವುದು. ಅಂತಹವರು ಹಸಿವೆಯೆಂದು ಕೇಳಿದಾಗ ಅವರನ್ನು ಜಬರಿಸಬಾರದು. ಅನ್ನಕಾಲದಲ್ಲಿ ಬಂದ ನಾಯಿ ಚಂಡಾಲರಿಗೂ, ಅನ್ನಗ್ರಾಸವನ್ನು ಕೊಡಬೇಕು. ದೇವ, ಋಷಿ, ಪಿತೃ, ಭೂತ, ನರರು ಕ್ರಮವಾಗಿ ಅನ್ನವಿಭಜನ ಯೋಗ್ಯರಾಗಿರುವರು.

ಅನ್ನವಿಡುವಾಗ ಕುಲ, ವಿದ್ಯಾ, ವೃತ್ತಗಳ ವಿಚಾರವಿಲ್ಲ. ಅನ್ನಕ್ಕೆ ಪಾತ್ರನೆಂದರೆ ಹಸಿವೆಗೊಂಡವನೇ! ಅನ್ನವನ್ನು ಸೃಜಿಸಿದ ಪ್ರಜಾಪತಿಯು ವಿವಿಧ ಭೂತಗಳಿಗೆ ಅವರವರ ಯೋಗ್ಯವಾದ ಅನ್ನವನ್ನಿತ್ತು, 'ಅಮೃತಮಸ್ತು!' ಎಂದನು. ಅಮೃತಸಮಾನವಾದ ಅನ್ನವನ್ನುಂಡು ಜೀವರು ಶರೀರವನ್ನು ಧರಿಸುವರು. ಅನ್ನವಿಲ್ಲದಿರೆ ಎಂತಹ ಬಲವಂತನೂ ದುರ್ಬಲನಾಗುವನು. ಎಂತಹ ರಾಜನೂ ಬಾಯಿಬಾಯಿ ಬಿಡುವನು. ಆದುದರಿಂದ ಧರ್ಮರಾಜ! ಯಥೇಚ್ಛವಾದ ಅನ್ನದಾನವನ್ನು ಮಾಡು! ಹಿಂದೆ ವನವಾಸದಲ್ಲಿ ಬಲುವಿಧಾನ್ನಗಳನ್ನು ಕೊಟ್ಟಿರುವೆ! ಮುಂದೆ ಕೂಡ ಮಾಡು! ಅನ್ನವಿಲ್ಲದವನಿಗೆ ಮಂದಿರಗಳೇಕೆ? ಸುಂದರೀಜನವೇಕೆ? ಮಹಿತಮಾಲ್ಯಾಭರಣಗಳೇಕೆ? ಮೃದುತಲ್ಪಗಳೇಕೆ? ಅನ್ನವಿದ್ದವನಿಗೆ ಅವೆಲ್ಲವೂ ಸುಖಾಪಾದಕವಾಗುವವು.

ಈಗ ವಿವಿಧ ನಕ್ಷತ್ರಗಳಲ್ಲಿ ಕೊಡುವ ದಾನವಿಶೇಷಗಳನ್ನು ಹೇಳುವೆನು. ಕೇಳು! ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಲ್ಲಿ ಕೊಡುವ ದಾನವಿಶೇಷಗಳಿಂತಿವೆ. ಅಶ್ವಿನಿ-ಕುದುರೆ ಪಾಯಸ; ಭರಣಿತಿಲ - ಧೇನುವು; ಕೃತ್ತಿಕಾ - ಪಾಯಸ; ರೋಹಿಣಿ - ಅನ್ನ; ಮೃಗಶಿರ - ಮಾಷ; ಆರ್ದ್ರ - ಗೋವು; ಪುನರ್ವಸು - ಹುಗ್ಗಿ; ಪುಷ್ಯ - ಪೊಂಗಲಿ; ಆಶ್ಲೇಷ - ಬೆಳ್ಳಿ;

ಮಘ - ಉಪ್ಪು; ಪುಬ್ಬ - ತಿಲ; ಉತ್ತರ - ಜೇನು; ಹಸ್ತ - ಹಾಲು; ಅನ್ನ, ಚಿತ್ತಾ - ಆನೆ ರಥ; ಸ್ವಾತಿ - ಶ್ರೀಗಂಧ; ವಿಶಾಖ - ಎತ್ತು; ಅನೂರಾಧಾ - ಹೊದಿಕೆ; ಜ್ಯೇಷ್ಠ - ಕರಿಬೇವು; ಮೂಲ - ಗೆಣಸು; ಪೂರ್ವಾಷಾಢ - ಮೊಸರು; ಉತ್ತರಾಷಾಢ - ಜೇನುಅನ್ನ; ಶ್ರವಣ - ಕಂಬಳಿ; ಧನಿಷ್ಠಾ - ಶಕಟ; ಶತಭಿಷ - ಅಕ್ಕಿ; ಪೂರ್ವಾಭಾದ್ರ - ಕಂಚುಪಾತ್ರೆ; ಉತ್ತರಾಭಾದ್ರ - ಆಕಳು; ರೇವತಿ - ತುಪ್ಪ; ಇಂತು ಆಯಾ ನಕ್ಷತ್ರಗಳಿರುವ ದಿನಗಳಲ್ಲಿ ಆಯಾ ದಾನಗಳನ್ನು ಕೊಟ್ಟವನು ಸ್ವರ್ಗಸುಖಯೋಗ್ಯನಾಗುವನು.

ಕನಕದಾನದಿಂದ ಸಕಲಪುಣ್ಯಗಳೂ ಸಿದ್ಧಿಸುವವೆಂದು ಅತ್ರಿಮುನಿಯು ಹೇಳಿರುವನು. ಕನಕದಾನದಿಂದ ಆಯುವು ಹೆಚ್ಚುವುದು; ಕಾಂತಿ, ಕೀರ್ತಿ, ಭಾವಶುದ್ಧಿಗಳಾಗುವವೆಂದು ಹರಿಶ್ಚಂದ್ರನು ನುಡಿದಿರುವನು. ಪಾನೀಯವು ಸಕಲತಾಪ ಪರಿಹರವಾಗಿ, ಉತ್ತಮದಾನವಾಗಿದೆ ಎಂದು ಮನುರಾಜನು ಹೇಳಿರುವನು. ನೀರು ಸಿಗುವ ಬಾವಿ, ಕೆರೆ, ಹೊಂಡಗಳನ್ನು ನಿರ್ಮಿಸುವುದು ಆವಶ್ಯಕವೆಂದು ಆತನ ಅಭಿಪ್ರಾಯವು. ಯಾವ ನರನು ನಿರ್ಮಿಸಿದ ಜಲಾಶಯದ ನೀರನ್ನು ಆಕಳು ಕರುಗಳು ಕುಡಿಯುವವೋ, ಅವನ ವಂಶವೆಲ್ಲವೂ ಉದ್ಧೃತ ವಾಯಿತೆಂದು ತಿಳಿ! ಮನುಜರು ಸ್ನಾನಪಾನಗಳಿಗೆ ಆಕರವಾದ ಕೆರೆಬಾವಿಗಳನ್ನು ಮಾಡಿಸಿದವನ ಪಾಪಗಳೆಲ್ಲವೂ ತೊಳೆದುಹೋಗುವವು.

ಯಾಗಾದಿ ಕರ್ಮಗಳಿಗೆ ವಿನಿಯೋಗಿಸಲ್ಪಡುವ ತುಪ್ಪವನ್ನು ದಾನಮಾಡಿದವನು ಅಗ್ನಿಮುಖ ದೇವತೆಗಳ ಪ್ರೀತಿಯನ್ನು ಗಳಿಸುವನು. ಕರಗವನ್ನು ಕೊಟ್ಟವನಿಗೆ ವಿಪ್ರಾಚಮನದ ಆರನೇ ಭಾಗ ಪುಣ್ಯವು ಲಭಿಸುವುದು. ಕಟ್ಟಿಗೆ (ಅಡಿಗೆಕಬ್ಬು) ಕೊಟ್ಟವನು ಧನಿಕನಾಗುವನು, ಛತ್ರದಾನವು ಪುತ್ರಪ್ರಾಪ್ತಿಗೆ ಕಾರಣವಾಗಿದೆ. ಶಕಟದಾನದಿಂದ ರಾಜನಾಗುವನು. ಪಾದ ರಕ್ಷೆಯನ್ನಿತ್ತು ಶತ್ರುನಾಶವನ್ನು ಪೊಂದುವನು, ತಿಲದಾನದಿಂದ ಪಿತೃಪ್ರೀತಿಯು, ವಂಶವೃದ್ಧಿಯು ಆಗುವುದು. ಅದರಿಂದ ಪರ್ವಸುರತಾದಿ ದೋಷವು ಹರಿಸುವುದು. ತಿಲಯಜನದಿಂದ ಸರ್ವಯಜ್ಞ ಫಲವನ್ನು ಹೊಂದುವನು.

ದಾನವನ್ನು ಮಾಡಲು ದೇಶಕಾಲ ಪಾತ್ರಗಳೆಂಬ ಮೂರು ಅಂಶಗಳಿರಬೇಕು. ಕಾನನ, ಗಿರಿ, ನದಿ, ಕ್ಷೇತ್ರ, ದೇವಾಲಯ, ಸ್ವಗೃಹ, ಇವು ಸಾಧಾರಣವಾಗಿ ಯೋಗ್ಯ ದೇಶಗಳು. ಅಮಾವಾಸ್ಯೆ, ಪೂರ್ಣಿಮಾ, ಏಕಾದಶಿ, ಭಾನುವಾರ, ಸಂಕ್ರಾಂತಿ, ಯುಗಾದಿ, ಇತ್ಯಾದಿಗಳು ಯೋಗ್ಯ ಕಾಲಗಳು.

ಎಲ್ಲ ದಾನಗಳಲ್ಲಿಯೂ ಗೋದಾನವೇ ಹೆಚ್ಚೆಂದು ಹೇಳಲು ಕಾರಣವಿದೆ ಕೇಳು! ಸರ್ವಪೂಜ್ಯರಾದ ವಿಪ್ರೋತ್ತಮರಿಗೂ ಗೋವು ಪೂಜ್ಯವಾಗಿದೆ. ಚಂದ್ರನು ಗೋವುಗಳಿಗೆ, ವಿಪ್ರರಿಗೆ, ಓಷಧಿಗಳಿಗೆ, ಅಮೃತಕ್ಕೆ ಒಡೆಯನಾಗಿರುವನು. ಗೋವಿನಿಂದ ಯಾಗೋಪ ಯೋಗಿಯಾದ ಹಾಲು, ಮೊಸರು, ತುಪ್ಪಗಳು ಸಿಗುತ್ತಿವೆ. ಗೋಚರ್ಮ, ಶೃಂಗವಾಲ, ಶಕೃನ್ಮೂತ್ರಗಳು ಮೊದಲಾದ ಎಲ್ಲ ವಸ್ತುಗಳೂ ಅತ್ಯವಶ್ಯಕವಾಗಿವೆ. ಗೋವನ್ನಿತ್ತರೆ ಅಮೃತವನ್ನಿತ್ತಂತೆ. ಗೋವನ್ನು ವಿಪ್ರನಿಗೆ ಕೊಟ್ಟರೆ, ಸರ್ವಭೂದಾನ ಮಾಡಿದ ಪುಣ್ಯವು ಲಭಿಸುವುದು. ಗೋವನ್ನು ನಾಸ್ತಿಕನಿಗೆ, ಕ್ರೂರನಿಗೆ ಕೊಡಬಾರದು. ಕೊಟ್ಟ ದಾತನು

ನರಕವನ್ನು ಹೊಂದುವನು. ಗೊಡ್ಡು, ಕುಂಟು, ಕರುವಿಲ್ಲದುದು, ದುಷ್ಟ, ಅಂಗಹೀನ ಮೊದಲಾದ ಆಕಳುಗಳನ್ನೀಯಬಾರದು.

ಅನ್ನದಾನವು ಬಲುಪುಣ್ಯವೆಂದೆನು. ಏಕೆಂದರೆ ಅನ್ನದಿಂದ ಪ್ರಾಣವು ನಿಲ್ಲುವುದು. ಅನ್ನವನ್ನೀಯುವುದು ಪ್ರಾಣವನ್ನಿತ್ತಂತೆ! ಅನ್ನಪಚನವಾಗಬೇಕಾದರೆ ಜಲವು ಅವಶ್ಯಕವು; ಆದುದರಿಂದ ಜಲದಾನವು ಅನ್ನದಾನಕಿಂತಲೂ ಶ್ರೇಷ್ಠವಾಗಿದೆ.

ತಿಲದಾನ ವಿಷಯಕವಾದ ಒಂದು ಇತಿಹಾಸವಿದೆ, ಕೇಳು! ಮಧ್ಯದೇಶದಲ್ಲಿ ವರ್ಣಶಾಲೆಯೆಂಬ ಗ್ರಾಮವಿತ್ತು. ಅಲ್ಲಿ ದೇವಶರ್ಮ ಎಂಬ ವಿಪ್ರನಿದ್ದನು. ಅವನು ಅಕಾಲಮೃತ್ಯುವಿಗೆ ಸಿಕ್ಕು ಯಮಸಭೆ ಸೇರಿದನು. ಯಮನು ಅವನನ್ನು ಹಿಂದಿರುಗಿ ಕಳಿಸುತ್ತಾ 'ಶರ್ಮ! ಸಕಲ ಪುಣ್ಯಕರ್ಮಗಳ ಫಲವನ್ನು ಹೊಂದಬೇಕಾಗಿದ್ದರೆ ತಿಲದಾನವನ್ನು ಮಾಡು! ಅದರಿಂದ ನಾನಾದಿಯಾಗಿ ಎಲ್ಲ ಪಿತೃಗಳೂ ತೃಪ್ತರಾಗುವವು. ವಸ್ತ್ರ ದೀಪ ದಾನಗಳೂ ಬಲುಪುಣ್ಯಗಳು; ಅವನ್ನೂ ಮಾಡು!' ಎಂದು ಉಪದೇಶಿಸಿದನು.

ವಿದ್ಯಾದಾನವು ಎಲ್ಲ ದಾನಗಳಿಗೂ ಮಿಗಿಲಾಗಿದೆ. ಅದರಿಂದ ಮನುಜನು ತನ್ನ ಅಜ್ಞಾನವನ್ನೂ ಅನ್ಯಥಾಜ್ಞಾನವನ್ನೂ ಕಳೆದುಕೊಂಡು, ಯಥಾರ್ಥಜ್ಞಾನಿಯಾಗುವನು. ಇಂತು ಜ್ಞಾನವನ್ನೀವ ವಿದ್ಯಾದಾನವು ಅತ್ಯಂತ ಪುಣ್ಯಪ್ರದವಾಗಿದೆ.

ಗೋದಾನ ವಿಷಯಕವಾದ ಒಂದು ಇತಿಹಾಸವನ್ನು ಕೇಳು! ಹಿಂದೆ ದ್ವಾರವತೀ ಸಮೀಪ ಕಾನನದಲ್ಲಿದ್ದ ಬಾವಿಯಲ್ಲಿ ಒಂದು ಓತಿಕಾಟವಿತ್ತು. ಅದನ್ನು ಅಲ್ಲಿ ಆಡುತ್ತಿದ್ದ ಬಾಲಕರು ನೋಡಿ, ಮೇಲಕ್ಕೆತ್ತಿ ಹಾಕಲು ಪ್ರಯತ್ನಿಸಿದರು. ಅವರ ಕೈಲಾಗಲಿಲ್ಲ. ಆಗ ಅವರು ಶ್ರೀಕೃಷ್ಣನಿಗೆ ವೃತ್ತಾಂತವನ್ನರುಹಿದರು. ಆ ವಿಚಿತ್ರ ಪ್ರಾಣಿಯನ್ನು ನೋಡಬೇಕೆಂದು ಪುರಜನರು ವನಕ್ಕೆ ಬಂದರು. ಶ್ರೀಕೃಷ್ಣನು ಅದನ್ನು ಸಣ್ಣ ಹಲ್ಲಿಯನ್ನಂತೆ, ಅನಾಯಾಸವಾಗಿ ಎತ್ತೊಗೆದನು. ಭಗವಂತನ ಕರಸ್ಪರ್ಶದಿಂದ ಓತಿಕಾಟದ ಜನ್ಮವನ್ನು ನೀಗಿ, ಪಾವನನಾದ ರಾಜ ಪುರುಷನೋರ್ವನು, ಶ್ರೀಶನಿಗೆ ವಂದಿಸಿ, ನಿಂತನು. ಸರ್ವಜ್ಞನಾದ ಶ್ರೀಕೃಷ್ಣನು ಎಲ್ಲವನ್ನರಿತಿದ್ದೂ, ಅಲ್ಲಿ ನೆರೆದಿದ್ದ ಜನರಿಗೆ ಗೋದಾನ ವಿಧಿಯನ್ನೂ ವಿಪ್ರಮಹಿಮೆಯನ್ನೂ ತಿಳಿಸಲೆಣಿಸಿ, ತಿಳಿಯುದವನಂತೆ: 'ರಾಜನ್! ನೀನಾರು? ನಿನಗೇಕೆ ಈ ಪಾಳು ಜನ್ಮವು ಬಂದಿತ್ತು?' ಎಂದು ಕೇಳಿದನು.

ಆ ರಾಜನಿಂತೆಂದನು: 'ಭಗವನ್! ಕೇಳು! ನೀನರಿಯದುದಿಲ್ಲ, ಕೇಳಿದೆ ಯಾದುದರಿಂದ ವಿಜ್ಞಾಪಿಸುವೆನು. ನನ್ನನ್ನು ನೃಗನೆಂಬರು. ಇಕ್ಷ್ವಾಕುಸುತನೆನಿಸಿ ಮೆರೆದೆನು. ಗೋದಾನವನ್ನು ಕೊಟ್ಟವರಲ್ಲಿ ನಾನೂ ಒಬ್ಬನೆಂದು ನೀನು ಕೇಳಿರಬಹುದು. ಒಂದು ದಿನ ಒಂದು ಗೋವನ್ನು ಒಬ್ಬ ವಿಪ್ರನಿಗೆ ಕೊಟ್ಟೆನು. ಅದು ಅವನ ಮಂದೆಯಿಂದ ತಪ್ಪಿಸಿಕೊಂಡು ನನ್ನ ಮಂದೆ ಸೇರಿತು. ಮರುದಿನ ಲಕ್ಷಾಂತರ ಗೋವುಗಳೊಡನೆ ಅದನ್ನು ಮತ್ತೊಬ್ಬ ವಿಪ್ರನಿಗೆ ಕೊಟ್ಟೆನು. ಇವನ್ನು ಕೊಂಡು ಪೋಗುವಾಗ ಕಂಡ ಅವನು 'ಇದು ನನ್ನ ಗೋವೆಂ'ದನು. ಇಬ್ಬರಿಗೂ ವಿವಾದವಾಯಿತು. ಅವರೀರ್ವರು ಗೋವನ್ನು ತಂದು, 'ರಾಜನ್! ಒಂದು ಸಲ ಕೊಟ್ಟ ಗೋವನ್ನು ಮತ್ತೆ ಕೊಡಬಹುದೇ? ನಿನ್ನಿಂದ ನಮಗೆ

ಕಲಹವಾಯಿತು' ಎಂದು ನಿಂದಿಸಿದರು. 'ಯಾರಾದರೂ ಅದನ್ನು ಬಿಟ್ಟರೆ, ಅಂತಹ ಗೋವುಗಳನ್ನು ಸಾವಿರ ಕೊಡುವೆ' ನೆಂದ ನನ್ನ ಮಾತಿಗೊಪ್ಪದೆ, ಅವರೀರ್ವರೂ ಆ ಗೋವನ್ನಲ್ಲೆ ಬಿಟ್ಟು, ಹೊರಟುಹೋದರು.

ನನಗೆ ದತ್ತಾಪಹಾರ ದೋಷವು ಬಂತು. ಕಾಲವು ಬರಲು ಮೃತನಾಗಿ, ನಾನು ಯಮಸಭೆ ಸೇರಿದೆನು. ಯಮರಾಜನು ನನ್ನನ್ನು ಪ್ರೀತಿಯಿಂದ ನೋಡಿ 'ರಾಜನ್! ನಿನ್ನ ಪುಣ್ಯವು ಮೇರುವಿನಂತಿದೆ! ಆದರೆ ಗೋದಾನ ವಿಷಯಕವಾದ ಸಣ್ಣಪಾಪವೂ ಒಂದಿದೆ. ಮೊದಲು ಪುಣ್ಯಫಲವನ್ನು ಅನುಭವಿಸುವೆಯೋ, ಪಾಪ ಫಲವನ್ನೋ ? ಹೇಳು !' ಎಂದನು. ನಾನು 'ಪಾಪವನ್ನು' ಎಂದಾಕ್ಷಣವೇ, ಓತಿಕಾಟ ಯೋನಿಯಲ್ಲಿ ಬಿದ್ದೆನು. ಯಮಸಭೆಯನ್ನು ಬಿಟ್ಟು, ಬೀಳುವಾಗ, 'ರಾಜನ್! ಮುಂದೆ ಶ್ರೀವಾಸುದೇವನ ಕರಸ್ಪರ್ಶದಿಂದ ಪಾಪ ಮುಕ್ತನಾಗಿ, ದುಷ್ಟಯೋನಿಯನ್ನು ಬಿಡುವೆ!' ಎಂಬ ಯಮರಾಜನ ನುಡಿಯಿಂದ ಸ್ವಲ್ಪಸಮಾಧಾನವನ್ನು ಹೊಂದಿದೆನು. 'ಶ್ರೀಕೃಷ್ಣ! ನಿನ್ನ ಭವ್ಯಸನ್ನಿಧಿಯಿಂದ ಉದ್ಧೃತನಾದೆನು. ನಿನ್ನ ಪ್ರಶಸ್ತಹಸ್ತ ಸ್ಪರ್ಶದಿಂದ ಪಾವನನಾದೆನು. ಹೋಗಿ ಬರುವೆನು. ಕೃಪೆಯಿರಲಿ!' ಇಂತು ನುಡಿದು, ನೃಗರಾಜನು ಅಂತರ್ಧಿತನಾಗಿ, ಪುಣ್ಯಲೋಕಗಳನ್ನು ಸೇರಿದನು.

ಆಗ ಶ್ರೀಕೃಷ್ಣನು ಲೋಕಹಿತವನ್ನುಪಲಕ್ಷಿಸಿ ತನ್ನವರಿಗಿಂತು ಬೋಧಿಸಿದನು. 'ಯದು ಕುಮಾರರೇ ! ಧರಣೀ ಸುರ ವಸ್ತು ಹರಣದಿಂದ ನೃಗನಿಗಾದಗತಿಯನ್ನು ಕಂಡಿರೇ ? ಎಂದಿಗೂ ಭೂಸುರರ ಧನದ್ರವ್ಯಗಳನ್ನು ಅಪಹರಿಸಬೇಡಿ! ಅವರನ್ನು ಅವಮಾನಿಸಬೇಡಿ!' ಆದುದರಿಂದ ಧರ್ಮರಾಜ! ಗೋದಾನವನ್ನು ಕೊಡುವಾಗ ಬಲು ಜಾಗರೂಕನಾಗಿರಬೇಕು. ಗೋವಿಗೆ ವಿರುದ್ಧವನ್ನು ಮಾಡಿದರೆ ಅನರ್ಥವಾಗುವುದು. ಗೋದಾನದಲ್ಲಿ ಇನ್ನೊಂದು ಇತಿಹಾಸ ವಿದೆ!

ಹಿಂದೆ ಉದ್ದಾಲಕನೆಂಬ ಮುನಿಯು ತನ್ನ ಮಗನಾದ ನಚಿಕೇತನನ್ನು ಕರೆದು, 'ವತ್ಸ! ನದೀತೀರದಲ್ಲಿ ಜಲಕಲಶ, ಸಮಿತ್, ಕುಶಗಳನ್ನು ಮರೆತು ಬಂದಿರುವೆನು. ತೆಗೆದುಕೊಂಡು ಬಾ!' ಎಂದು ಕಳಿಸಿದನು. ನಚಿಕೇತನು ಹೋಗಿ ನೋಡಿದಾಗ, ಅವು ನದೀಪೂರದಲ್ಲಿ ಕೊಚ್ಚಿಕೊಂಡು ಹೋಗಿದ್ದವು. ಆ ಮಾತನ್ನು ತಂದೆಗೆ ತಿಳಿಸಿದಾಗ, ಉದ್ದಾಲಕನು ಸಿಟ್ಟಾದನು.

ಒಂದು ದಿನ ಉದ್ದಾಲಕನು ಸರ್ವಸ್ವದಾನವನ್ನು ಮಾಡುತ್ತಿದ್ದು, ಕೆಲ ಆಕಳುಗಳನ್ನು ಕೊಡಲಿದ್ದನು. ಅವು ಮುದಿಯಾಗಿ, ಅಂಗಹೀನವಾಗಿದ್ದವು. ಅಂತಹ ಗೋವುಗಳನ್ನು ಕೊಡಬಾರದೆಂದು ಮಗನೆಂದನು. ತಂದೆಯು ಅವನ ಮಾತನ್ನು ಲೆಕ್ಕಿಸದಿದ್ದನು. ಎಲ್ಲವನ್ನೂ ಕೊಡುವಾಗ ಆಕಳುಗಳನ್ನೂ ಕೊಡಬೇಕೆಂಬ ಹಠವನ್ನು ತೊಟ್ಟ ತಂದೆಗೆ ಮಗನು, 'ಹಾಗಾದರೆ ನನ್ನನ್ನಾರಿಗೆ ಕೊಡುವೆ ?' ಎಂದು ಕೇಳಿದನು.

ಮೊದಲೇ ಕುಪಿತನಾಗಿದ್ದ ತಂದೆಯು ಮತ್ತಷ್ಟು ಸಿಟ್ಟಾಗಿ, 'ನಿನ್ನನು, ಯಮರಾಜನಿಗೆ ಕೊಟ್ಟರುವೇನೆಂದನು. ಸತ್ಯವಚನರಾದ ಮುನಿಗಳ ಮಾತು ಸುಳ್ಳಾದೀತೇ? ನಚಿಕೇತನು ಅಕಾಲ ಮೃತ್ಯುವಿಗೆ ಸಿಕ್ಕು ಶವದಂತೆ ಕೆಳಗೆ ಬಿದ್ದಿದ್ದನು. ಅವನ ಜೀವವು ಯಮಮಂದಿರವನ್ನು

ಸೇರಿತು. ಅಲ್ಲಿ ಯಮರಾಜನು ನಚೀಕೇತನನ್ನೆದುರ್ಗೊಂಡು ಪೂಜಿಸಿದನು. 'ನೀನು ಸತ್ತಿಲ್ಲ, ನಿನ್ನ ತಂದೆಯ ಮಾತಿನಂತೆ ನನ್ನನ್ನು ಪೊಂದಲೆ ಬಂದಿರುವೆ! ಇನ್ನು ನನ್ನಿಂದ ಹಿಂದಿರುಗಿಸಲ್ಪಟ್ಟು, ನಿನ್ನ ತಂದೆಯನ್ನು ಸೇರಿ, ಆತನ ದುಃಖವನ್ನು ಕಳೆ!' ಎಂದು ನಚಿಕೇತನು ಬೇಡಿದ ಪಿತೃ ಸಮಾಧಾನ, ಇಷ್ಟಕಾಚಿತಿ ಸ್ವರ್ಗ್ಯಾಗ್ನಿಗಳು, ಮತ್ತು ಪರಬ್ರಹ್ಮಜ್ಞಾನಗಳನ್ನು ದಯಪಾಲಿಸಿದನು.

ಯಮನು ನಚಿಕೇತನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು, ಪುಣ್ಯಸ್ಥಾನಗಳನ್ನು ನೋಡಿಸಿದನು. ಮನೋನಯನಾನಂದಕರವಾದ ಆ ಸ್ಥಾನಗಳನ್ನು ನೋಡಿ, ನಚಿಕೇತನು ಆನಂದದಿಂದ 'ಇವು ಯಾವ ಪುಣ್ಯವಂತರಿಗೆ ಸಿಗುವವು' ಎಂದು ಕೇಳಿದನು. ಯಮರಾಜನು 'ಅಯ್ಯಾ! ಮಣಿಮಯ ಮಂದಿರಗಳಿವು! ಅವನ್ನು ಸುತ್ತಿರುವ ಅಮೃತ ನದಿಗಳಿವು. ಅಲ್ಲಿ ಉದ್ಯಾನಗಳಿವೆ. ಅವು ಭೋಜ್ಯಭಕ್ಷ್ಯಾತ್ಮಕ ಗಿರಿಗಳು ದುಗ್ಧ ದಧಿ ಘೃತಮಯ ನದಿಗಳಲ್ಲಿವೆ. ಗಂಧಮಾಲ್ಯಾಂಬರ ಭೂಷಿತರಾಗಿ, ದಿವ್ಯಭೋಗಗಳನ್ನು ಅನುಭವಿಸುತ್ತಾ ಪುಣ್ಯವಂತರು ಈ ನನ್ನ ಲೋಕದಲ್ಲಿ ಸುಖವಾಗಿರುವರು. ಗೋದಾನವನ್ನಿತ್ತವರಿಗೆ ಇಲ್ಲಿ ಪ್ರಥಮ ಪ್ರವೇಶವಿದೆ. ಬಲ, ತಾರುಣ್ಯ ರೂಪಾದಿ ಲಕ್ಷಣ ಸಮನ್ವಿತವಾದ ವೃಷಭವನ್ನು ಸದ್ವಿಪ್ರನಿಗೆ ದಾನ ಕೊಟ್ಟವನು ಇಲ್ಲಿ ನಿರಂತರ ಸುಖವನ್ನು ಪಡೆಯುವನು' ಎಂದು ಹೇಳಿ, ಅವನನ್ನು ಕಳಿಸಿದನು.

ಉದ್ದಾಲಕನು ಅಂದ ಮಾತಿಗೆ ಮೃತನಾದ ನಂದನನ ಶವವನ್ನು ಕಣ್ಣೀರಿಂದ ತೋಯಿಸಿ, ವಿಲಪಿಸುತ್ತಿರುವಾಗ, ಮೂರು ರಾತ್ರಿಗಳು ಕಳೆದವು. ಆಗ ನಚಿಕೇತನ ಶರೀರವು ಸಚೇತನವಾಗಿ, ಎದ್ದು ನಿಂತಿತು ಬದುಕಿ ಬಂದ ಮಗನನ್ನಪ್ಪಿ, ಉದ್ದಾಲಕನು ಅವನಿಂದ ಯಮರಾಜನ ವೃತ್ತಾಂತವನ್ನೂ, ಗೋದಾನ ಮಹಿಮೆಯನ್ನೂ ಅರಿತು, ಆಶ್ಚರ್ಯಾನಂದ ಭರಿತನಾದನು.

ಬ್ರಹ್ಮದೇವರು ಇಂದ್ರನಿಗೆ ತಿಳಿಸಿದ ಗೋದಾತೃ ಮಹಿಮೆಯನ್ನು ತಿಳಿಸುವೆನು. ಗೋದಾನವನ್ನಿತ್ತ ಸುವ್ರತರು ಬಲು ಪುಣ್ಯವನ್ನು ಪೊಂದಿ, ಗೋಲೋಕವನ್ನು ಸೇರುವರು. ಅಲ್ಲಿ ಕಾಲಾವಯವಗಳಾದ ದಿನರಾತ್ರಿಗಳಿಲ್ಲ, ರೋಗಜರಾ ಮೃತ್ಯು ಕ್ಷುತ್ಪಿಪಾಸಗಳಿಲ್ಲ, ಕೇವಲಾನಂದಸಾಂದ್ರವಾದ ಆ ಲೋಕವನ್ನು ಗುರುಶುಶ್ರೂಷಾರತರು, ಸತ್ಯವ್ರತರು, ಶಮದಮಾನ್ವಿತರು, ದುಷ್ಟಾಚಾರರಹಿತರು, ಆದ ಸುಜನರು ಸೇರಿ, ಮುಕ್ತಪ್ರಾಯರಾಗುವರು. ಅಂತಹ ಗೋಲೋಕವನ್ನು ಸೇರಬೇಕಾದರೆ, ಭಕ್ತಿಯಿಂದ ಸದ್ವಿಪ್ರನಿಗೆ ಒಳ್ಳೆಯ ಆಕಳನ್ನು ಕರುವಿನೊಡಗೂಡಿಸಿ, ಶ್ರೀಶಪ್ರೀತಿಗಾಗಿ, ದಾನಮಾಡು!

ದಾನಕ್ಕಾಗಿ ಗೋವನ್ನು ಕೊಳ್ಳಬೇಕಾದಾಗ, ದಾಯಧನ, ಯುದ್ಧಾರ್ಜಿತ ದ್ರವ್ಯ, ಮುಂತಾದ ನ್ಯಾಯಾರ್ಜಿತ ವಿತ್ತವಿರಬೇಕು. ಅನ್ಯಾಯಾರ್ಜಿತ ವಿತ್ತವಿತ್ತು ಕೊಂಡ ಗೋವನ್ನು ದಾನಮಾಡುವುದು ನಿಷ್ಫಲವೆಂದು ತಿಳಿ! ವೇದಾಧ್ಯಯನ, ಪ್ರತಿನಿಷ್ಠೆ, ವಿಹಿತಕರ್ಮಾನುಷ್ಠಾನ, ಶೀಲ, ಗುರುಪೂಜೆ, ಮಾತಾಪಿತೃಸೇವೆ, ಮೊದಲಾದ ಸುಕೃತಗಳಿಗೆ ಮೇಲಾಗಿದೆ ಗೋದಾನವು. ಸಾವಿರ ಪುಣ್ಯಕಾರ್ಯಗಳನ್ನು ಮಾಡಿ, ಗೋದಾನವನ್ನು ಮಾಡದಿದ್ದರೆ, ಅವೆಲ್ಲ ವ್ಯರ್ಥ ವಾಗುವವು. ಗೋದಾನದಿಂದಲೇ ಅವೆಲ್ಲವೂ ಪೂರ್ಣಫಲವಂತವಾಗುವವು.'

## ೭. ಗೋ ಮಹಿಮೆ

ಭೀಷ್ಮನು ಧರ್ಮರಾಜನಿಗೆ ಗೋಮಹಿಮೆಯನ್ನು ನಿರೂಪಿಸಿದನು:

'ಧರ್ಮರಾಜ! ಶ್ರದ್ಧಾಭಕ್ತಿಗಳಿಂದ ಧರ್ಮವನ್ನು ನಡೆಸಬೇಕು. ಕೆಲಧರ್ಮಗಳಿವೆ. ಅವನ್ನು ಎಂದಿಗೂ ಬಿಡಬಾರದು. ವೇದಪಠನ, ವೇದಾರ್ಥವಿಚಾರ, ಇಂದ್ರಿಯನಿಗ್ರಹ, ಪ್ರವಚನ, ಅಪ್ರತಿಗ್ರಹ, ವಿಹಿತ ಕರ್ಮಾನುಷ್ಠಾನ, ಸತ್ಯವಚನ, ದಾನನಿಷ್ಠೆ, ಮಾತೃಪಿತೃಸೇವೆ, ಗುರುಪೂಜೆ, ಭೂತದಯೆ, ಗೋಪಾಲನೆ ಇವು ಅವಶ್ಯವಾಗಿ ಮಾಡಬೇಕಾದ ಧರ್ಮಗಳು.

ಗೋಪ್ರದಾನ ವಿಧಿಯನ್ನು ಮಾಂಧಾತೃ ಚಕ್ರವರ್ತಿಗೆ ಬೃಹಸ್ಪತಿಯು ಉಪದೇಶಿಸಿದನು. ಅದನ್ನು ನಿನಗೆ ಹೇಳುವೆನು. ಪುಣ್ಯದಿನದಲ್ಲಿ ಬ್ರಾಹ್ಮಣಾನುಜ್ಞೆಯನ್ನು ಪೊಂದಿ ಗೋದಾನವನ್ನು ಮಾಡಬೇಕು. ಹಿಂದಿನ ದಿನವು ಉಪವಾಸವಿದ್ದು, ಅಂದಿನ ರಾತ್ರಿ ಗೋಷ್ಠದಲ್ಲಿ ಜಾಗರದಿಂದಿರಬೇಕು. ಮರುದಿನ ಸಂಗವಕಾಲದಲ್ಲಿ ತಾನು ದಾನವಾಗಿ ಕೊಡಲಿರುವ ಗೋವನ್ನು ಸವತ್ಸವಾಗಿ ಅಲಂಕರಿಸಿ ಪೂಜಿಸಬೇಕು. 'ಆಕಳು - ತಾಯಿ; ತಂದೆ - ಎತ್ತು; ಆಕಳ ಗರ್ಭದೇಶವು - ದ್ಯುಲೋಕವು ; ಅದರ ಕಾಲೇ - ಧರಣಿ ; ಆಕಳಲ್ಲಿ ಸರ್ವದೇವತಾ ಸನ್ನಿಧಾನವಿದೆ' ಎಂಬ ಮಂತ್ರವನ್ನು ಪಠಿಸಬೇಕು. 'ಸಾರತರವಾದ ಗೋವುಗಳು, ದಾನದಿಂದ ನನ್ನ ಸಕಲ ಪಾಪಗಳನ್ನು ಕಳೆಯುವವು. ಚಂದ್ರ ಸೂರ್ಯರ ಸನ್ನಿಧಾನವಿರುವ ಗೋವು ಉದಾರ ಪದವಿತ್ತು, ನನ್ನನ್ನು ಕಾಪಾಡಲಿ!' ಎಂದು ಮಂತ್ರವನ್ನು ಹೇಳಿ, ವಿಪ್ರಹಸ್ತದಲ್ಲಿ ಧಾರಾಪುರಸ್ಸರವಾಗಿ, ವಾಲಾಗ್ರದಿಂದ ಬಿಟ್ಟು, ದಾನ ಕೊಡಬೇಕು. ಗೋದಾನಕ್ಕೆ ಶಿಷ್ಯ, ವ್ರತಶೀಲ, ಶಾಂತ, ದಾಂತ, ವಿದ್ವಾಂಸರೆಂಬ ವಿಪ್ರರು ಪಾತ್ರರೆನಿಸುವರು. ಇಂತು ಗೋದಾನ ವನ್ನಿತ್ತವನಿಗೆ ಚಂದ್ರಲೋಕ ಪ್ರಾಪ್ತಿಯಾಗುವುದು.

ಅಶ್ವಯುಜಮಾಸದ ಕೃಷ್ಣಾಷ್ಟಮಿಯಲ್ಲಿ ಗೋದಾನವು ಶ್ರೇಷ್ಠ ಫಲಪ್ರದವಾಗಿದೆ. ದಿನತ್ರಯವು ಗೋಷ್ಠದಲ್ಲಿದ್ದು, ಗೋಮಯ ಮೂತ್ರ ಕ್ಷೀರ ಮಿಶ್ರಿತವಾದ ಅನ್ನವನ್ನುಂಡು, ನಿಯಮದಿಂದಿದ್ದು, ಅಷ್ಟಮಿಯ ದಿನ ಗೋದಾನ ಮಾಡಲು ಎಲ್ಲ ಕಾಮಿತಗಳೂ ಸಿದ್ಧಿಸುವವು. ಮಾಂಧಾತನು ಅಂತೇ ಗೋದಾನವನ್ನು ಮಾಡಿರುವನು. ಅವನಂತೆ ಭರತ, ದಿಲೀಪ, ಭಗೀರಥ, ದಶರಥರಾದಿ ಭೂಪಾಲರೂ ಮಾಡಿ ಅಕ್ಷಯ ಪುಣ್ಯಲೋಕಗಳನ್ನು ಸೇರಿರುವರು.

ಗೋವುಗಳಲ್ಲಿ ಕಪಿಲೆ ಅತ್ಯುತ್ತಮವೆಂಬರು. ಅದಕ್ಕೆ ಕಾರಣವಿದೆ. ಹಿಂದೆ ಆದಿಯುಗದಲ್ಲಿ ದೇವತೆಗಳು ಹಸಿವೆಯನ್ನು ಪೂರ್ತಿಯಾಗಿ ಹಿಂಗಿಸಲು ಕೋರಿ, ಬ್ರಹ್ಮದೇವನಿಗೆ ಶರಣರಾದರು. ಕಮಲಭವನು ಅವರಿಗೆ ಜರಾ ಮರಣಗಳನ್ನೂ, ಅಶನಾಯಾಪಿಪಾಸೆ ಗಳನ್ನೂ ಕಳೆವ ಅಮೃತವನ್ನಿತ್ತು, ಕೃತಾರ್ಥರನ್ನು ಮಾಡಿದನು. ಅಮೃತಸುರಭಿತ್ವದಿಂದ ಸುರಭಿಯು ಜನಿಸಿ, ಸೌರಭೇಯಗಳನ್ನು ಪಡೆಯಿತು. ಒಂದು ಸಲ ಕಾಮಧೇನು ಸಂತಾನವಾದ ದಿವ್ಯಧೇನುಶತವು ಹಿಮಗಿರಿಯ ಉಪರಿತಲದಲ್ಲಿ ವಿಹರಿಸುತ್ತಿತ್ತು. ಅಲ್ಲಿ ಒಂದು ದೇವಧೇನುವಿನ ಹಾಲನ್ನು ಕುಡಿಯುತ್ತಿದ್ದ ಕರುವಿನ ಬಾಯ ನೊರೆ ಜಾರಿ, ಗಾಳಿಗೆ ಹಾರಿಬಂದು, ಶೂಲಿಯ ಮೌಳಿಯಲ್ಲಿ ಬಿತ್ತು.

ಈಶಾನನು ಸಿಟ್ಟಿನಿಂದ ತ್ರಿನೇತ್ರನಾಗಿ, ಮೇಲೆತ್ತಿ ನೋಡಿದಾಗ, ಆತನ ಮೂರನೇ

ಕಣ್ಣಿನ ವಹ್ನಿಜ್ವಾಲೆಯು ಸೋಕಿ, ಕೆಲಧೇನುಗಳು ಪಾಂಡುವರ್ಣದಿಂದ ಕೃಷ್ಣವರ್ಣಕ್ಕೆ ಮಾರ್ಪಟ್ಟವು. ಅಂದಿನಿಂದ ಕಪ್ಪುಗೋವುಗಳು ಕಪಿಲೆಗಳೆನಿಸಿ, ಪ್ರಖ್ಯಾತವಾದವು. ವಿಚಿತ್ರ ಕೃಷ್ಣಧೇನುಗಳನ್ನು ಕಂಡು, ಮಿಕ್ಕ ಧವಳ ಗೋವುಗಳು ಬೆದರಿ ಓಡಿಹೋಗಿ, ತಮ್ಮ ದೊರೆಯಾದ ಚಂದ್ರನಿಗೆ ದೂರಿಕೊಂಡವು. ಆಗ ಚತುರ್ಮುಖನಿಗೆ ಚಂದ್ರನು ಶರಣನಾದನು. ಬ್ರಹ್ಮನು ಈಶಾನನಲ್ಲಿಗೆ ಬಂದನು. ಶಿವನು ತಂದೆಯ ಪಾದಗಳಿಗೆ ವಂದಿಸಿ, ಪೂಜಿಸಿ, ಬಂದ ಕಾರಣವೇನೆಂದನು. ಬ್ರಹ್ಮನು, 'ಪುತ್ರ ! ಕರುವಿನ ನೊರೆ ಎಂದರೆ ಅಮೃತವಲ್ಲವೇ ? ಗೋವುಗಳಿಗೆ ಎಂಜಲೆಂಬುದಿದೆಯೇ? ಅಮೃತವನ್ನೀವ ಗೋವುಗಳಿಗೆ ಸಿಟ್ಟಾಗಿ, ನೀ ಮಾಡಿದ ವಿಕಾರವನ್ನು ನೋಡು!' ಎಂದು ಎಚ್ಚರಿಸಿದನು. ಶಿವನು ತಿಳಿದು, 'ತಂದೇ! ಸರಿ! ಇನ್ನು ಮುಂದೆ ಗೋವುಗಳಿಗೆ ಸಂಚಾರವು ಸ್ವೇಚ್ಛವಾಗಿರಲಿ! ನನ್ನ ನೋಟದಿಂದ ಕಪ್ಪಾದ ಧೇನುಗಳು ಇತರ ವರ್ಣದ ಗೋವುಗಳಿಕಿಂತ ಶ್ರೇಷ್ಠವಾಗುವಂತೆ ನನ್ನಲ್ಲಿ ಅನುಗ್ರಹಿಸು! ಗೋವುಗಳಲ್ಲಿ ನಾನು ಪ್ರೇಮದಿಂದಿರುವೆನೆಂಬುವುದನ್ನು ವೃಷಭಧ್ವಜನಾಗಿ ಪ್ರಕಟಿಸುವೆನು. ಇನ್ನು ನನಗೆ ವೃಷಭವೇ ವಾಹನವಾಗಿರುವುದು' ಎಂದು ಪ್ರಾರ್ಥಿಸಿದನು. ವಿರಿಂಚನು ಶರ್ವನಿ ಗಾವರವನ್ನಿತ್ತು ಅಂತರ್ಧಿತನಾದನು. ಇಂತು ಕಪಿಲಾ ಗೋವುಗಳು ಶ್ರೇಷ್ಠವೆನಿಸಿದವು.

ಇಕ್ಷ್ವಾಕು ಕುಲಜಾತನಾದ ಸೌದಾಸನು ತನ್ನ ಕುಲಪುರೋಹಿತನಾದ ವಸಿಷ್ಠನನ್ನು ಕೇಳಿಕೊಂಡನು. ಆಗ ವಶಿಷ್ಠನು ನುಡಿದ ಗೋಮಹಿಮೆಯನ್ನು ಹೇಳುವೆನು. 'ಎಲ್ಲ ವಸ್ತುಗಳಲ್ಲಿಯೂ ಪವಿತ್ರವಾದುದೆಂದರೆ ಗೋವೇ! ಗೋವು ಹವಿರ್ಯೋಗ್ಯವಾದ ಘೃತ ಕ್ಷೀರಾದಿಗಳಿಗೆ ಜನ್ಮಭೂಮಿಯಾಗಿದೆ. ಗೋವಿನಲ್ಲಿ ಲಕ್ಷ್ಮೀಸಾನ್ನಿಧ್ಯವಿದೆ. ದುರಿತ ಸಾಗರವನ್ನು ದಾಟಿಸುವ ನಾವೆ ಗೋವು. ಅದು ಸ್ವರ್ಗಕ್ಕೆ ಸೋಪಾನ. ಅದರಲ್ಲಿ ಸರ್ವಭುವನಗಳಿವೆ ; ಸರ್ವ ದೇವತೆಗಳಿರುವರು. ತಮ್ಮಲ್ಲಿರುವ ಗೋವುಗಳಲ್ಲಿ ದಶಾಂಶವನ್ನು ದಾನವಾಗಿತ್ತವರು ಬಲು ಪುಣ್ಯಲೋಕಗಳನ್ನು ಪೊಂದುವರು.

ಗೋದರ್ಶನ, ಸ್ಪರ್ಶನ, ಗ್ರಾಸ ಜಲದಾನ, ತದ್ಗುಣಚಿಂತನ, ವಂದನಗಳನ್ನು ಮಾಡುವ ನರರು ಸರ್ವಪಾಪ ದೂರರಾಗುವರು. ಇತರ ಮಾಂಸಭಕ್ಷಿಯು ಕೂಡ ಗೋಮಾಂಸವನ್ನು ತಿನ್ನಬಾರದು. ಗೋಮಯ ಗೋಮೂತ್ರಗಳನ್ನು ಕಂಡು ಸೇವಿಸದೆ, ಅಸಹ್ಯಪಡುವ ನರನು ನರಕ ಕೂಪದಲ್ಲಿ ಬೀಳುವನು. ಗಂಜಲಬೆರೆತ ನೀರಿನಲ್ಲಿ ಸ್ನಾನಮಾಡಿದವರು ಸರ್ವರೋಗ ಮುಕ್ತರಾಗುವರು. ಭಯವಾದೆಡೆ 'ಗೋವುಗಳನ್ನು ಧ್ಯಾನಿಸುವೆನು! ನನಗೆ ಹಿಂದೆ, ಮುಂದೆ, ಪಕ್ಕೆಗಳಲ್ಲಿ ಎಲ್ಲ ಕಡೆ ನಿಂತು ಗೋವುಗಳೆನ್ನನ್ನು ರಕ್ಷಿಸಲಿ! ಗೋಸೇವೆ ಮಾಡಿದ್ದರೆ, ಆ ಪುಣ್ಯದಿಂದ ನನ್ನ ಭಯವು ಪರಿಹೃತವಾಗಲಿ!' ಎಂದು ಸ್ಮರಿಸಿದವರು ಸರ್ವಭಯ ಮುಕ್ತರಾಗುವರು.

ಕೆಂಪು, ಬಿಳಿಪು, ಕಪ್ಪು, ಧೂಸರ ವರ್ಣದ ಗೋವುಗಳನ್ನು ದಾನವಾಗಿತ್ತರೆ ಸೂರ್ಯ, ಚಂದ್ರ , ರುದ್ರ, ಇಂದ್ರಲೋಕಗಳನ್ನು ಸೇರಿ ಸುಖವಾಗಿರುವರು. ಇತರ ವರ್ಣದ ಆಕಳುಗಳನ್ನಿತ್ತವರು ಗಂಧರ್ವಲೋಕ ನಿವಾಸದ ನಿತಾಂತ ಸೌಖ್ಯವನ್ನು ಪಡೆಯುವರು.

ತಿಲಧೇನು, ಘೃತಧೇನು, ಯವಧೇನು ದಾನಗಳು ಅಶಕ್ತರಿಗಾಗಿ ಹೇಳಲ್ಪಟ್ಟು, ಗೋದಾನ ಸಮ ಪುಣ್ಯಪ್ರದವಾಗಿದೆ.

ಶ್ರೀವ್ಯಾಸದೇವನು ತನ್ನ ನಂದನನಾದ ಶುಕಮುನಿಗೆ ನಿರೂಪಿಸಿದ ಗೋಪ್ರಭಾವವನ್ನು ಕೇಳು ! ಗೋವುಗಳಿಲ್ಲದೆ ಯಾಗೋಪಯೋಗಿ ದ್ರವ್ಯಗಳಾದ ಘೃತದಧಿ, ದುಗ್ಧಗಳನ್ನು ಉತ್ಪಾದಿಸುವ ಶಕ್ತಿಯು ಯಾವ ಪಶುಗಳಿಗೂ ಇಲ್ಲ. ಅವನ್ನು ದಾನವಾಗಿತ್ತವನಿಗೆ ಪುಣ್ಯ ಲೋಕಗಳನು ಮಿಾಸಲಾಗಿವೆ. ಧರ್ಮರಾಜ! ಮೂರು ದಿನಗಳು ಗೋಮೂತ್ರ ದಧಿ ದುಗ್ಧಗಳನ್ನು ಮಾತ್ರ ಸೇವಿಸಿ, ಆಮೇಲೆ ಮೂರುದಿನ ವಾಯು ಭೋಜನನಾಗಿ, ಮುಂದೆ ಮೂರು ತಿಂಗಳು ಗೋಮಯದಲ್ಲಿ ಹೊರಬಂದ ಯವಾದಿ ಧಾನ್ಯವನ್ನು ತೊಳೆದು, ಅನ್ನಮಾಡಿ, ಅದನ್ನು ಸೀಕರಿಸುತ್ತಾ, ವಿಷ್ಣುಧ್ಯಾನಪರನಾದವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುವನು. ಇಂತು ಗೋವ್ರತವನ್ನು ಮಾಡಿ, ಸುರರು ಪಾವನರಾಗಿ ದೈತ್ಯರನ್ನು ತಮ್ಮ ದಿವ್ಯತೇಜದಿಂದ ಸೋಲಿಸಿದರು. ಗೋಘೃತವನ್ನು ದಾನವಿತ್ತರೆ, ಹೋಮಿಸಿದರೆ, ತಾನು ಉಂಡರೆ ಬಲು ಶ್ರೇಯಸ್ಕರವಾಗುವುದು. ಅಗ್ನಿಸನ್ನಿಧಿಯಂತೆ, ವಿಪ್ರಸಭೆಯಂತೆ, ಗೋಷ್ಠವು ಅತ್ಯಂತ ಪವಿತ್ರವಾಗಿದೆ. ಗೋಮತೀಸ್ನಾನ, ಗೋವಿಂದಭಜನ, ಗೋಘೃತಹವನಗಳಿಂದ ಅಳಿಯಲಾರದ ಪಾಪವೇ ಇಲ್ಲ.

ಬ್ರಹ್ಮಲೋಕಕ್ಕೂ ಉಪರಿತನವಾಗಿದೆ ಗೋಲೋಕ. ಅದು ವೈಕುಂಠದ ಒಂದು ಭಾಗವೆಂದು ತಿಳಿದವರು ಹೇಳುವರು. ಅಂತಹ ಲೋಕವು ಗೋಸೇವಾ ನಿರತರಾದ ಶ್ರೀಹರಿ ಭಕ್ತರಿಗೆ ಸಿಗುವುದು. ಬ್ರಹ್ಮದೇವನು ತನ್ನ ಮನೋವೃತ್ತಿಯಿಂದ ಅಮೃತಮಯಿ ಮೂರ್ತಿಯು, ಕಾಮರೂಪಿಣಿಯು ಆದ ಸುರಭಿ ಎಂಬ ಕನ್ಯೆಯನ್ನು ಸೃಜಿಸಿ, ಅಂತೆಯೇ ಮಹತ್ತೇಜೋಮಯ ಸುಂದರನು ಆದ ಪುರುಷನನ್ನು ಸೃಜಿಸಿದನು. ಅವನು ಅವಳಲ್ಲಿ ಅನುರಕ್ತಿಯಿಂದ ಆರ್ತನಾಗಿರಲು ನೋಡಿ, ಬ್ರಹ್ಮದೇವನು ಕರುಣಿಸಿ ಬಂದು 'ಮಾರ್ತೋ ಭವ!' ಎಂದು ಅಭಯವನ್ನೂ ಸುರಭಿಯನ್ನೂ ಕೊಟ್ಟು ಸಂತೈಸಿದನು. ಅವನು ಮಾರ್ತಾಂಡನೆನಿಸಿ ಸುರಭಿಯಲ್ಲಿ ಸೌರಭೇಯೀ ಕುಲವನ್ನು ಉತ್ಪಾದಿಸಿದನು. ಬ್ರಹ್ಮವರ ಪ್ರಭಾವದಿಂದ, ಸೌರಭೇಯರು ಅಂದರೆ ಗೋಸಮೂಹವು ಗೋಲೋಕದಲ್ಲಿ ವಾಸವಾಗಿ, ಸರ್ವಲೋಕ ನಮಸ್ಕಾರಾರ್ಹವು, ಪೂಜಾಭಾಜನವೂ ಆಗಿದೆ. ಅವುಗಳ ಸಂತಾನವೇ ಭೂಮಿಯಲ್ಲಿಯು ಗೋಕುಲವಾಗಿ ಬೆಳೆದಿದೆ. ಗೋವುಗಳು ಅಮೃತಮಯವಾದುದರಿಂದಲೇ ಅವನ್ನು ಗೌರವಿಸಿ, ಅದರ ಹಾಲುತುಪ್ಪಗಳನ್ನು ದೇವತೆಗಳಿಗಿತ್ತು, ಮನುಜರು ತಾವೂ ಸ್ವೀಕರಿಸುತ್ತಿರುವರು.

ಸುರಭೀಮಾರ್ತಾಂಡರಿಂದ ಹನ್ನೊಂದು ಪುತ್ರರುದಿಸಿದರು. ತಪೋಮಹಿಮಾನ್ವಿತರಾಗಿ ಅವರು ಬ್ರಾಹ್ಮಣ್ಯಕ್ಕೆ ಅಧಿಪತಿಗಳಾದರು. ಅವರನ್ನೇ ಏಕಾದಶ ರುದ್ರರೆಂಬರು. ಅಜ, ಏಕಪಾದ, ಅಹಿರ್ಬುಧ್ನ, ತ್ರ್ಯಂಬಕ, ವೃಷಾಕಪಿ, ಶಂಭು, ಕಪಾಲಿ, ರೈವತ, ಉಗ್ರ, ವಿಶ್ವರೂಪ, ಹರ ಎಂಬ ನಾಮಗಳಿಂದ ಖ್ಯಾತರಾದ ಏಕಾದಶ ರುದ್ರರು ಗೋ ನಿಚಯಕ್ಕೆ ಅಣ್ಣಂದಿರಾಗಿ, ಗೋಬ್ರಾಹ್ಮಣ ಕುಲಾಭಿಮಾನಿಗಳೆನಿಸಿರುವರು.

ಗೋವಿನ ಪ್ರತ್ಯಂಗವೂ ದೇವತಾ ಸನ್ನಿದಾನ ವಿಶಿಷ್ಟವಾಗಿದೆ. ಆನನದಲ್ಲಿ ವಹ್ನಿ;

ಜಿಹ್ವೆಯಲ್ಲಿ ವರುಣ; ಶೃಂಗಗಳಲ್ಲಿ ಇಂದ್ರ; ರಂಧ್ರಗಳಲ್ಲಿ ಮಾರುತ; ಕಕುದದಲ್ಲಿ(ಹಿಣಿಲು) ರುದ್ರ; ಪದಗಳಲ್ಲಿ ಮರುದ್ಗಣ; ಕುಕ್ಷಿಯಲ್ಲಿ ಸಾಗರ; ಸ್ತನಗಳಲ್ಲಿ ಸರಸ್ವತಿ; ಸೆಗಣಿಯಲ್ಲಿ ಲಕ್ಷ್ಮೀದೇವಿ; ಮೂತ್ರದಲ್ಲಿ ಕೀರ್ತಿ; ರಕ್ತದಲ್ಲಿ ಚಂದ್ರ; ಹೃದಯದಲ್ಲಿ ಭಗ; ಹಾಲಿನಲ್ಲಿ ವಿಧಾತ; ರೋಮಗಳಲ್ಲಿ ಪುಣ್ಯಕರ್ಮ ರಾಶಿ; ಬಾಲದಲ್ಲಿ ಧರ್ಮ; ಕಣ್ಣುಗಳಲ್ಲಿ ಸೂರ್ಯ; ಚರ್ಮದಲ್ಲಿ ತಪಸ್ಸು; ಸಂಧಿಗಳಲ್ಲಿ ಸಿದ್ಧರು; ಇಂತು ದೇವಸರ್ವಸ್ವ ನಿಧಿಯಾದ ಗೋವಿಗೆ ಸಮವಾದ ಪುಣ್ಯಜಂತುವಿಲ್ಲ.

ತ್ರಿಶಿಖರವೆಂಬ ಪರ್ವತಪ್ರಾಂತದಲ್ಲಿ ಕುಲಹಾರಿಣಿ ಎಂಬ ನದಿಯು ಹರಿಯುವುದು. ಅದರ ತೀರದ ಆಶ್ರಮಗಳಲ್ಲಿ ಭೃಗುವಂಶ ಸಂಜಾತರಾದ ಮುನಿಪುಂಗವರು ತಪೋರತ ರಾಗಿದ್ದರು. ಅವರಲ್ಲಿ ಸುಮಿತ್ರನೆಂಬ ಭಾರ್ಗವನು ತನ್ನ ಆಕಳಿಗೆ ಭಾರಧ್ವಾಜನೆಂಬ ವಿಪ್ರನಿತ್ತ ಗೋಶರ್ಕರೆಯನ್ನು ತಿನಿಸಿದನು. ಅದು ಪುಷ್ಟವಾಗಿ ಬೆಳೆದು, ವೃಷಸಂಗದಿಂದ ಗರ್ಭಧರಿಸಿ, ಮಿಥುನವನ್ನು ಪಡೆಯಿತು. ಇಂತೂ ಗೋಸಂತಾನವು ಬೆಳೆದು ಸಾವಿರಾರು ಗೋವುಗಳಾದವು. ಅವನ್ನು ಮೇಯಿಸುತ್ತಾ ಸುಮಿತ್ರನು ಪ್ರಮೋದಭರಿತನಾಗಿ, ತಾನು ಗೋಸ್ತನ ಫೇನವನ್ನುಂಡು ಜೀವಿಸುತ್ತಿದ್ದನು. ಆದುದರಿಂದ ಅವನಿಗೆ ಫೇನಪನೆಂಬ ಹೆಸರನ್ನು ಗೌತಮರ್ಷಿ ಪ್ರೀತನಾಗಿ ಕೊಟ್ಟನು.

ಒಂದು ಸಲ ಪುಣ್ಯವಿಷಯುಕ್ತರಾದ ಕೆಲ ಗೋವನಿತೆಯರು ಮಾನುಷತರುಣೀ ರೂಪದಿಂದ ಜಲಕ್ರೀಡೆಯಾಡುತ್ತಿದ್ದರು. ಮಿಕ್ಕ ಧೇನುಗಳು ಅವರನ್ನು ನೋಡಿ 'ನೀವಾರೆಂ'ದು ಕೇಳಿದವು. ಆಗ ಅವರು ನಾವೂ ನಿಮ್ಮಂತೆಯೇ ಗೋವುಗಳೇ! ಆದರೆ ಹವ್ಯಕವ್ಯಗಳಿಗೆ, ಅತಿಥಿಪೂಜೆಗಳಿಗೆ, ಮುನಿಜನಾಹಾರಗಳಿಗೆ ಹಾಲು, ಮೊಸರು, ತುಪ್ಪ ಮುಂತಾದ ದ್ರವ್ಯ ಗಳನ್ನು ನೀಡಿದೆವು; ಮತ್ತು ನಮ್ಮ ಸುತರನ್ನು ಜನರ ಕೃಷಿ ಕ್ರಿಯಾನಿರ್ವರ್ತನಕ್ಕೆಂದು ಸಮರ್ಪಿಸಿದೆನವು. ನಮ್ಮ ಪುಣ್ಯ ವಿಶೇಷದಿಂದ ಈ ರೂಪಸಂಪತ್ತು ನಮಗೆ ಲಭಿಸಿದೆ. ನೀವು ಅಸೂಯೆಯಿಂದ ದುಷ್ಪಾತ್ರರಾಗಿರುವಿರಿ! ನಿಮಗೆ ನಿಮ್ಮ ದೋಷದಿಂದ ನರಕಪ್ರಾಪ್ತಿ ಯಾಗುವುದು. ನಮ್ಮಲ್ಲಿರುವ ವಿಪ್ರದೈವ ಕೃಪೆಯಿಂದ, ಮುಂದಾಗಿ ನಿಮ್ಮ ಗತಿಯನ್ನರಿತು ನಿಮ್ಮನ್ನು ಎಚ್ಚರಿಸಿರುವೆವು' ಎಂದವು.

ಆಕಳುಗಳು 'ಗೋವುಗಳಿಗೆ ಗೋವುಗಳೇ ಗತಿಯಲ್ಲವೇ? ನಮ್ಮನ್ನು ದುರ್ಗತಿ ಯಿಂದ ಉದ್ಧರಿಸಿರಿ! ನಮಗೂ ನಿಮಗಾದಂತೆ ಗೋಲೋಕ ಪ್ರಾಪ್ತಿಯಾಗಲು ಸಾಧನವನ್ನು ತಿಳಿಸಿ, ಸಲಹಿರಿ!' ಎಂದು ದೀನಾತಿದೀನವಾಗಿ ಬೇಡಿದವು. 'ಸರಿ! ಮುಂದೆ ರಂತಿದೇವನೆಂಬ ಮಾಹಾನುಭಾವನು ಸಾವಿರ ವರ್ಷದ ಗೋಸವವನ್ನು ಮಾಡುವನು. ಅಲ್ಲಿಗೆ ಪಶುಗಳಾಗಿ ಹೋಗಿ, ಶರೀರಗಳನ್ನು ನೀಗಿ, ಗೋಲೋಕವನ್ನು ಸೇರುವಿರಿ!' ಎಂದ ಗೋತರುಣಿಯರ ಮಾತಿನಂತೆ ನಡೆಯಲು, ಅವು ನಿಶ್ಚಯಿಸಿದವು.

ಒಂದು ಗೋವು ಮಿಕ್ಕ ಆಕಳುಗಳನ್ನು ನೋಡಿ, 'ನಾವು ಸುಮಿತ್ರನ ಧನವಾಗಿರುವೆವು. ಅವನ ಅನುಮತಿಯಿಲ್ಲದೆ, ರಂತಿದೇವನಲ್ಲಿಗೆ ಹೋಗುವುದೆಂತು?' ಎಂದು ಕೇಳಿತು. ಸುಮಿತ್ರನನ್ನು ಕೊಂದುಬಿಡೋಣ! ಅವನೂ ನಮ್ಮಿಂದ ಕೂಡಿ, ಗೋಲೋಕಕ್ಕೆ

ಬರುವಂತಾಗುವುದು!' ಎಂದು ಆಕಳುಗಳು ನಿಶ್ಚಯಿಸಿ, ಅವನನ್ನು ಸಮೀಪಿಸಿದವು. ದುರ್ನಿರೀಕ್ಷ್ಯತೇಜನಾದ ಮುನಿರಾಜನನ್ನು ಕಣ್ಣೆತ್ತಿ ನೋಡಲಾಗದೆ ಅವು ಹಿಂಜರಿದವು. ಆಗ ಕೆಲ ಕಪಿಲೆಗಳು ಕ್ರೂರಚಿತ್ತದಿಂದ 'ನಾವು ಅವನನ್ನು ಕೊಲ್ಲುವೆವು. ಪ್ರತಿನಿಧಿಯಾಗಿ ನಮಗೇನು ಕೊಡುವಿರಿ?' ಎಂದು ಕೇಳಿದವು. 'ಕಪಿಲೆಗಳು ಆಕಳ ಜಾತಿಯಲ್ಲೇ ಶ್ರೇಷ್ಠವೆನಿಸಲಿ! ಒಂದು ಕಪಿಲಾದಾರದಿಂದ ನೂರುಗೋ ದಾನಗಳ ಪುಣ್ಯ ಬರುವಂತಾಗಲಿ!' ಎಂದು ಗೊವುಗಳು ವರವಿತ್ತವು. ಆಗ ಕಪಿಲೆಗಳು ಕೆಲವು ಸುಮಿತ್ರನಲ್ಲಿಗೆ ರೂಪಾಂತರದಿಂದ ಹೋಗಿ, 'ಸುಮಿತ್ರ! ನಾವು ಗೋಮಾತೆಯರು. ನಿನ್ನ ಗೋಸೇವೆಗೆ ಮೆಚ್ಚಿ ವರವೀಯಲು ಬಂದಿರುವೆವು. ನಿನಗೆ ಗೋಲೋಕವಾಗುವಂತೆ ಅನುಗ್ರಹಿಸಿರುವೆವು!' ಎಂದು ಹೇಳಿ, ಆತನನ್ನು ಯೋಗಬಲದಿಂದ ಆಕಾಶಕ್ಕೆ ಎತ್ತಿ ಒಗೆದವು. ಸುಮಿತ್ರನಿಗೆ ಗೋಲೋಕವು ಸಿಕ್ಕಿತು. ಅಲ್ಲಿ ಗೋಮಾತೆಯರವನನ್ನು ಸ್ವಾಗತಿಸಿ, ಪೂಜಿಸಿದರು. ಅವನನ್ನು ಸಂಹರಿಸಿದ ದುಷ್ಟ ಗೋವುಗಳಿಗೆ, 'ನಿಮ್ಮ ಮುಖವು ಬ್ರಹ್ಮಹತ್ಯಾ ನಿವಾಸವಾಗಲಿ!' ಎಂದು ಶಾಪವಿತ್ತು, ಗೋದೇವಿಯರು ಮತ್ತೆ ಕರುಣಿಸಿ, 'ರಂತಿದೇವನ ಯಜ್ಞದಲ್ಲಿ ವಿನಿಯುಕ್ತರಾದರೆ ಮಾತ್ರ ನಿಮಗೆ ಸದ್ಗತಿಯಾಗುವು'ದೆಂದು ವಿಶಾಪವಿತ್ತರು. ಅಂದಿನಿಂದ ಕಪಿಲಾ ಗೋಮುಖವು ಪ್ರಥಮದರ್ಶನ ಯೋಗ್ಯವಾಗದೆ, ಪೃಷ್ಠವು ಪವಿತ್ರವಾಗಿ ದರ್ಶನಯೋಗ್ಯವಾಗಿದೆ.

ಆಕಳುಗಳು ರಂತಿದೇವನನ್ನು ಸೇರಿ, ಯಜ್ಞದಲ್ಲಿ ತಮ್ಮನ್ನು ವಿಶಸಿಸಿ, ತಮಗೆ ಸುಗತಿಪ್ರದನಾಗೆಂದು ಬೇಡಿದವು. ಅಹಿಂಸಾರತನಾದ ರಂತಿದೇವನು ಹಿಂಸಾಯಜ್ಞವನ್ನೊಪ್ಪದೆ, 'ನೀವೆಲ್ಲರೂ ಏಕಗ್ರೀವರಾಗಿರುವುದನ್ನು ಪರೀಕ್ಷಿಸುವೆನು' ಎಂದನು. ಒಂದಾಕಳು ಕರುವಿಗೆ ಹಾಲುಣಿಸುತ್ತಾ, 'ಕಂದ! ಇನ್ನು ಮುಂದೆ ಯಾರ ಹಾಲನ್ನು ಕುಡಿವೆ! ಕಟುಕರಂತೆ ಹಿಂಸಿಸುವ ರಂತಿದೇವನ ಯಜ್ಞಪಶುವಾಗಲು ಪೋಗುತ್ತಿರುವೆನು' ಎಂದು ಕಣ್ಣೀರಿಟ್ಟಿತು. ಅದನ್ನು ಕಂಡು ರಂತಿದೇವನು ಹಿಂಸಾಯಜ್ಞವನ್ನು ಮಾಡಲು ಸಮ್ಮತಿಸದೆ ಇಂತೆಂದನು. 'ಗೋಹತ್ಯೆಗೆ ಮೀರಿದ ಪಾಪವಿಲ್ಲ. ಅಂತಹ ಪಾಪವನ್ನು ಯಜ್ಞದ ನೆವದಿಂದ ನಾನು ಮಾಡಲಾರೆನು. ನಿಮಗೆ ವಿಪ್ರಹತ್ಯೆಯಿಂದ ಬಂದ ಪಾಪವನ್ನು ಕಳೆದುಕೊಳ್ಳುವ ಉಪಾಯವನ್ನು ಮಾಡುವೆನು. ನಿಮ್ಮನ್ನು ತೊಳೆದು, ಅಲಂಕರಿಸಿ, ವಿಪ್ರರಿಗೆ ದಾನ ಕೊಡುವೆನು. ವಿಪ್ರಸೇವೆಯಿಂದ ಪಾಪಮುಕ್ತರಾಗಿ, ಗೋಲೋಕವನ್ನು ಸೇರುವಿರಿ!' ಎಂದು ರಂತಿದೇವನು, ಅವನ್ನೆಲ್ಲ ಯೋಗ್ಯ ವಿಪ್ರರಿಗೆ ದಾನ ಮಾಡಿದನು. ಆಗ ಅವರನ್ನು ತೊಳೆದ ನೀರು ಚರ್ಮಣ್ವತಿ ಎಂಬ ನದಿಯಾಗಿ ಹರಿಯಿತು. ರಂತಿದೇವನು ತನ್ನ ಸ್ನೇಹಿತನಾದ ವೃದ್ಧಶ್ರವನೊಡನೆ ಅನೇಕ ಯಜ್ಞಗಳನ್ನು ದಾನಗಳನ್ನು ಮಾಡಿ, ಅಕ್ಷಯನಾಕ ಲೋಕವನ್ನು ಹೊಂದಿದನು. ಫೇನಪಸುಮಿತ್ರನೂ ಗೋ ಲೋಕದಲ್ಲಿ ಶಾಶ್ವತ ಸುಖಿಯಾದನು. ಈ ಫೇನಪಾಖ್ಯಾನವನ್ನು ಹೇಳಿ, ಕೇಳಿದವರು ಗೋಲೋಕ ನಿವಾಸಯೋಗ್ಯರಾಗುವರು. ಇದನ್ನು ಶ್ರೀವ್ಯಾಸನು ಶುಕನಿಗೆ ಹೇಳಿದನು.

ಯಜ್ಞಯಾಗಾದಿ ಉತ್ತಮವರ್ಣದ ಕರ್ಮಗಳಿಗೆ ಅಧಿಕಾರವಿಲ್ಲದಿರುವ ಇತರ ವರ್ಣದ ಜನರು ಕಪಿಲಾ ದಾನದಿಂದ ಅಂತಹ ಪುಣ್ಯವನ್ನು ಹೊಂದಬಹುದಾಗಿದೆ.

ಒಂದು ಸಲ ಪಾವಕನು ಕಿಂಚಿತ್ಕಾರಣದಿಂದ ಗೋವುಗಳಲ್ಲಿ ಗುಪ್ತನಾಗಿದ್ದನು. ಆಗ ಜಗದ್ಧಿತ ಕಾರ್ಯಗಳು ನಿಂತುಹೋದವು. ದೇವತೆಗಳು ಆಕಳುಗಳನ್ನು ಪ್ರಾರ್ಥಿಸಿದರು. ಗೋವೃಂದವು ತಮ್ಮಲ್ಲಡಗಿದ್ದ ಅಗ್ನಿದೇವನನ್ನು ತೋರಿಸಿದವು. ಅಗ್ನಿಯು ಕೋಪವನ್ನು ಬಿಟ್ಟು, ಯಥಾಪೂರ್ವವಾಗಿ ಜ್ವಲಿಸಿದನು. ದೇವತೆಗಳು ಗೋವುಗಳಿಗೆ ಪ್ರೀತರಾಗಿ, 'ಅಗ್ನಿಧಾರಣದಿಂದ ಕಪ್ಪಾಗಿರುವ ಗೋವುಗಳು ಕಪಿಲೆಗಳೆನಿಸಿ, ಸರ್ವಗೋವುಗಳಲ್ಲಿ ಶ್ರೇಷ್ಠವಾಗಲಿ. ಕಪಿಲಾರಾಧನ, ಪಯಃಪಾನ, ದಾನಗಳಿಂದ ಅತಿಶಯ ಪುಣ್ಯವು ಬರಲಿ!' ಎಂದು ವರವಿತ್ತರು. ಅಂದಿನಿಂದ ಅಗ್ನಿಸನ್ನಿಧಾನಯುಕ್ತವಾದ ಕಪಿಲೆಯ ಕ್ಷೀರವು ದೇವ ವಿಪ್ರರಿಗೆ ಮಾತ್ರ ಮಿಾಸಲಾಗಿದೆ.

ಕರ್ಣ, ನೇತ್ರಾಂಚಲ, ನಾಸಿಕಾಪುಟ, ಸಾಸ್ನ, ಮುಷ್ಕ ಮೊದಲಾದ ಯಾವುದೇ ಒಂದಂಗವು ಸಾಕು, ಆ ವೃಷಧೇನ್ವಾದಿಗಳನ್ನು ಕಪಿಲ ಎಂಬರು. ಮೆಯೆಲ್ಲ ಕಪ್ಪಾಗಿದ್ದರೆ ಇನ್ನು ಕೇಳಬೇಕೇ ? ಕಪಿಲೆಯನ್ನು ಕೈಲಿ, ಕೋಲಿನಿಂದ, ಕಾಲಿನಿಂದ ದಂಡಿಸಿದರೆ ನರಕವಾಸವಾಗುವುದು; ತಪ್ಪದು. ಹುಲ್ಲು ನೀರು ಚನ್ನಾಗಿತ್ತು ಪೋಷಿಸಿದರೆ ಸ್ವರ್ಗಾವಾಸವಾಗುವುದು ತಪ್ಪದು. ಕಪಿಲಾದಾನ ಪುಣ್ಯವನ್ನು ಕಮಲಾಸನನೂ ಹೇಳಿ, ಮುಗಿಸಲಾರನು. ವಿಪ್ರ, ಗೋವು, ಗಾಯತ್ರಿ, ಸತ್ಯ, ಸುವರ್ಣ, ವಜ್ರ, ಭೂಮಿ ಇವೆಲ್ಲವೂ ಅಗ್ರವರ್ಣವೆಂದು ತಾಪಸರು ನುಡಿವರು. ಗೋ, ಭೂ, ಹಿರಣ್ಯ ದಾನಗಳಂತೆಯೇ ಸರ್ವಶ್ರೇಷ್ಠವಾಗಿವೆ.

ಗೋಮಯದಲ್ಲಿ ಶ್ರೀ ಸನ್ನಿಧಾನವಿದೆ ಎಂಬ ಇತಿಹಾಸವಿದೆ ಕೇಳು! ಶ್ರೀದೇವಿಯು ಪವಿತ್ರ ಪದಾರ್ಥಗಳೆಂದರಿತು ಗೋವುಗಳಲ್ಲಿ ವಸಿಸಲು ಅಪೇಕ್ಷಿಸಿದಳು. ಗೋವುಗಳು 'ನೀನು ಅತಿ ಚಂಚಲೆ! ನಿನ್ನನ್ನು ನಾವು ಒಲ್ಲೆವು' ಎಂದವು. ಶೀಯು 'ಹೇಯ ಜನರಲ್ಲಿ ನಾನು ಸಂಪದ್ರೂಪಳಾಗಿರುವಾಗ ಚಂಚಲಳು ನಿಜ! ಆದರೆ ಸುಜರಲ್ಲಿ ಸುಗುಣ ರೂಪಳಾಗಿರುವಾಗ ಸ್ಥಿರಳಾಗಿರುವೆನು. ನನ್ನನ್ನು ತಿರಸ್ಕರಿಸಬೇಡಿ! ನನ್ನ ತಿರಸ್ಕಾರದಿಂದ ದೈತ್ಯರು ನಿರ್ಭಾಗ್ಯರು, ಆಲಸರು, ದುರಾತ್ಮರು ಆದರು. ನನ್ನ ದಯಾಪಾತ್ರರಾದ ದೇವತೆಗಳು ಸಂಪದ್ಭರಿತರು, ಸುಶೀಲರೂ ಆಗಿರುವರು' ಎಂದಳು.

ಆಗ ಗೋವುಗಳು 'ನಮ್ಮೆಲ್ಲ ಅಂಗಗಳನ್ನು ಇತರ ದೇವತೆಗಳಿಗೆ ಆಶ್ರಯವಿತ್ತುದಾಗಿದೆ. ಲೋಕಮಾತೆಯಾದ ನಿನಗೆ, ಉಳಿದಿರುವವೆಂದರೆ ನಮ್ಮ ಸೆಗಣಿ ಗಂಜಲಗಳೇ! ಅಲ್ಲಿರು! ಎಂದು ಹೇಗೆ ಹೋಳೋಣ?' ಎಂದವು. ಶ್ರೀದೇವಿಯು 'ಚಿಂತೆಯಿಲ್ಲ! ಅಲ್ಲೇ ಇರುವೆನು. ಅವು ಸಕಲಲೋಕ ಪಾವನವಾಗಲಿ!' ಎಂದು ವರವಿತ್ತಳು. ಆಗ ಬ್ರಹ್ಮದೇವನು ತನ್ನ ತಾಯಿಯಾದ ಲೋಕಜನನಿಗೆ ಆಶ್ರಯವಿತ್ತ ಸುರಭಿಗಳಿಗೆ ಪ್ರೀತನಾಗಿ, 'ನಿಮ್ಮ ಗೋಲೋಕವು ನನ್ನ ಲೋಕಕ್ಕೂ ಮೇಲಿನದಾಗಿ ಶೋಭಿಸಲಿ!' ಎಂದು ವರವಿತ್ತು, ಗೋಲೋಕವನ್ನು ಮಹಿಮಾನ್ವಿತವಾಗಿ ಮಾರ್ಪಡಿಸಿದನು. ಇಂತು ಗೋಪ್ರಭಾವವನ್ನು ನಿನಗರುಹಿದೆನು. ಧರ್ಮರಾಜ! ವೇದವ್ಯಾಸಾದಿ ಮುನಿವರರು ಕೀರ್ತಿಸಿದ ಈ ಗೋಪ್ರಭಾವವನ್ನು ಪಠಿಸಿ, ಹೇಳಿ, ಕೇಳಿದವರು, ಸರ್ವಪಾಪಮುಕ್ತರಾಗಿ, ಗೋಲೋಕವನ್ನು ಹೊಂದುವರು.'

## ೮. ಸುವರ್ಣದಾನ, ಪಿತೃಪೂಜೆ

ಭೀಷ್ಮನು ಧರ್ಮರಾಜನಿಗೆ ನಿರೂಪಿಸಿದನು:

'ನಮ್ಮ ತಂದೆಗೆ ಶ್ರಾದ್ಧವನ್ನಾಚರಿಸಬೇಕೆಂದು ಒಂದು ವರ್ಷ ಗಂಗಾದ್ವಾರಕ್ಕೆ ಹೋದೆನು. ಅಲ್ಲಿ ಗಂಗಾದೇವಿಯ ಸಹಾಯದಿಂದ ಪಿತೃಕಾರ್ಯವು ನಡೆಯಿತು. ಪಿಂಡಪ್ರದಾನ ಸಮಯದಲ್ಲಿ ಹಾಸಿದ್ದ ದರ್ಭೆಗಳ ಮೇಲೆ ಅಂಗುಳೀಯಕ ಕಂಕಣ ಭೂಷಿತವಾದ ಕಮಲಕೋಮಲ ಹಸ್ತವೊಂದು ಕಾಣಿಸಿತು. ಅದೇ ನನ್ನ ತಂದೆಯ ಕೈ ಎಂದು ನನಗೆ ಗೊತ್ತಾಯಿತು. ಆದರೆ ಆತನ ಕೈಯಲ್ಲಿ ಪಿಂಡವಿಡುವುದು ಶಾಸ್ತ್ರ ಸಮ್ಮತವಲ್ಲವೆಂದು ತಿಳಿದ ನಾನು ಸುಮ್ಮನಿದ್ದೆನು. ಆ ಹಸ್ತವು ಅಂತರ್ಧಿತವಾಯಿತು! ಆಗ ನಾನು ಕುಶಾಸ್ತರಣದಲ್ಲಿ ಪಿಂಡಪ್ರದಾನವನ್ನು ಮಾಡಿ, ಯಥಾವಿಧಿಯಾಗಿ ಶ್ರಾದ್ಧವನ್ನು ಮುಗಿಸಿದೆನು. ಪಿತೃದೇವತೆಗಳು ನನ್ನ ಶಾಸ್ತ್ರನಿಷ್ಠೆ, ಧರ್ಮಜ್ಞಾನಗಳಿಗೆ ಪ್ರೀತರಾಗಿ ಪ್ರತ್ಯಕ್ಷರಾದರು. 'ವತ್ಸ ! ನಿನ್ನನ್ನು ಪರೀಕ್ಷಿಸಿದೆವು. ನೀನು ಧರ್ಮವನ್ನು ಬಿಡಲಿಲ್ಲ. ಚಿರಜೀವನಾಗು! ಶ್ರಾದ್ಧಮಾಡಿರುವೆ! ತದಂಗವಾಗಿ ಸುವರ್ಣದಾನವನ್ನು ಮಾಡು! ಎಲ್ಲ ಯಾಗಾದಿ ದೇವ ಕಾರ್ಯಗಳಲ್ಲಿಯೂ ಸುವರ್ಣದಾನವು ಅವಶ್ಯ ಕರ್ತವ್ಯವಾಗಿದೆ. ಸುವರ್ಣದಾನದಿಂದ ಇತರರಿಗೆ ಬ್ರಾಹ್ಮಣ ವರ್ಣದಿ ಜನ್ಮವು ಸಿಗುವುದು. ಸುವರ್ಣದಾನವು ಕೀರ್ತಿ, ಸಂಪತ್, ಸ್ವರ್ಗ ಸಂಪಾದಕವಾಗಿದೆ.

ನನ್ನ ಗುರುವರನಾದ ಶ್ರೀಪರಶುರಾಮನು ಕ್ಷತ್ರವಧೆಯಿಂದ ಬಂದ ಪಾಪವನ್ನು ಅಶ್ವಮೇಧದಿಂದ ನೀಗಬಹುದೆಂದು, ಲೋಕಸಂಗ್ರಹಕ್ಕಾಗಿ ಪ್ರಕಟಿಸಿ, ಯಜ್ಞಾವಸಾನದಲ್ಲಿ 'ಪಾಪವನ್ನು ಕಳೆಯಲು ಯಾವ ದಾನವನ್ನು ಮಾಡಬೇಕೆಂ'ದು, ವಶಿಷ್ಠನನ್ನು ಕೇಳಿದನು. ವಶಿಷ್ಠನು, 'ರಾಮ ! ರಾಮ ! ಸುವರ್ಣವು ಅಗ್ನಿಮಯವಾಗಿದೆ. ದೇವತೆಗಳು ಸುವರ್ಣವರ್ಣರು. ಆದುದರಿಂದ ಸುವರ್ಣವನ್ನು ದಾನ ಮಾಡು ! ' ಎಂದನು. ಪರಶುರಾಮನು ಬಂಗಾರವನ್ನಿತ್ತನು. ವಶಿಷ್ಠನು, 'ದೇವ ! ಹಿಂದೆ ತಾರಕಾಸುರನ ಕಾಟವನ್ನು ತಡೆಯಲಾರದೆ, ದೇವತೆಗಳು, ಮುನಿಗಳು ಬ್ರಹ್ಮದೇವನಿಗೆ ಶರಣಾಗತ ರಾದರು. ಬ್ರಹ್ಮದೇವನು, 'ನಿಮ್ಮ ದುಃಖನಿವಾರಣೋಪಾಯವನ್ನು ಸಿದ್ಧಪಡಿಸಿರುವೆನು. ಪಾರ್ವತೀ ಪರಮೇಶ್ವರರು ಕ್ರೀಡಿಸಿ, ಪ್ರಸ್ಕನ್ನವಾದ ರೇತಸ್ಸನ್ನು ಅಗ್ನಿಯಲ್ಲಿಟ್ಟಿರುವರು. ಆ ವಹ್ನಿಯಲ್ಲಿರುವ ರುದ್ರ ವೀರ್ಯವು ಸುವರ್ಣಮಯವೂ, ಶಕ್ತಿಸಂಪನ್ನವೂ ಆಗಿದೆ. ಅಗ್ನಿಯು ಅದನ್ನು ಗಂಗೆಯಲ್ಲಿ ಬಿಡುವಂತೆ ನೀವು ಪ್ರಾರ್ಥಿಸಿರಿ! ನಿಮ್ಮ ಕಾರ್ಯವು ನೆರವೇರುವುದು' ಎಂದು ಅವರನ್ನು ಸಮಾಧಾನಪಡಿಸಿ ಕಳಿಸಿದನು. ದೇವ ಋಷಿಗಳು ಅಗ್ನಿಯನ್ನು ನೋಡಲು ಬಂದರು.

ಅಗ್ನಿಯು ನಿರ್ವಿಣ್ಣನಾಗಿ ನಿದ್ರಾವಶನಾಗಿ ಪಾತಾಳತಲದಲ್ಲಡಗಿದ್ದನು. ಅವನನ್ನು ಅರಸುತ್ತಾ ಬರುವ ಮುನಿದೇವರಿಗೆ ಒಂದು ಕಪ್ಪೆಯು ಅಗ್ನಿಯ ಇರವನ್ನು ತಿಳಿಸಿತು. ನಿದ್ರಾಭಂಗವನ್ನು ಮಾಡಿದ ಕಪ್ಪೆಗೆ ನಾಲಿಗೆ ಹಿಂದುಮುಂದಾಗುವಂತೆ ಶಾಪವಿತ್ತು,

ಅಗ್ನಿದೇವನು ಪಿಪ್ಪಲವೃಕ್ಷದಲ್ಲಡಿಗಿಕೊಂಡನು. ನೀರಿಲ್ಲದಾಗ ಸತ್ತಂತಿದ್ದರೂ, ನೀರು ಬಂದಾಗ ಮತ್ತೆ ಬದುಕಿ, ಗಟ್ಟಿಯಾಗಿ ಮಾತಾಡಿಕೊಳ್ಳುವಂತೆ ವರವನ್ನಿತ್ತು ಮುನಿದೇವತೆಗಳು, ಮುಂದೆ ಮತ್ತೆ ಅಗ್ನಿಯನ್ನು ಹುಡುಕುತ್ತಾ ನಡೆದರು.

ಆನೆಯೊಂದವರಿಗೆ ಕಣ್ಣ ಸನ್ನೆಯಿಂದ ಅಗ್ನಿಯ ಇರವನ್ನು ತಿಳಿಸಿತು. ಅಗ್ನಿಯು ಸಿಟ್ಟಿನಿಂದ 'ಆನೆಗಳ ಕಣ್ಣು ಸಣ್ಣದಾಗಲಿ! ಜಿಹ್ವೆಯು ವಿವರ್ತಿತವಾಗಲಿ!' ಎಂದು ಶಾಪವಿತ್ತು, ಶಮೀಗರ್ಭದಲ್ಲಡಗಿದನು. 'ಸರ್ವರಸ ಜ್ಞಾನವನ್ನು, ಸರ್ವ ಗೌರವವನ್ನು ಪೊಂದಿರಿ!' ಎಂದು ವಿಶಾಪವಿತ್ತು ಮುನಿದೇವರು ಮುಂದೆ ನಡೆದರು. ಶುಕವು ಅವರಿಗೆ ಶಮೀಗರ್ಭದಿ ಅಡಗಿದ್ದ ಅಗ್ನಿಯನ್ನು ತಿಳಿಸಿತು. ಅಗ್ನಿ ಸಿಟ್ಟಿನಿಂದ 'ನಿಮ್ಮ ಸ್ವರವು ಕಿವಿಗಿಂಪಾಗಲಿ!' ಎಂದು ವಿಶಾಪವಿತ್ತು ದೇವತೆಗಳು, ಅಗ್ನಿಯನ್ನು ಕಂಡು ತಮ್ಮ ಬಂದ ಕಾರ್ಯವನ್ನು ನಿವೇದಿಸಿದರು. ಅಗ್ನಿಯು ಲೋಕಹಿತವನ್ನು ಉಪಲಕ್ಷಿಸಿ, ತನ್ನಲ್ಲಿದ್ದ ರುದ್ರವೀರ್ಯವನ್ನು ಗಂಗೆಯಲ್ಲಿಟ್ಟನು. ಆಕೆಯು ಆ ದುಸ್ಸಹ ವೀರ್ಯವನ್ನು ಹಿಮಾಲಯದ ಶರವಣದಲ್ಲಿಟ್ಟಳು. ಅಲ್ಲಿ ಪುಟ್ಟಿದ ಕುಮಾರನು ಕೃತ್ತಿಕಾಷಟ್ಕದ ಸ್ತನ್ಯಪಾನವನ್ನು ಮಾಡಲೋಸುಗ ಷಣ್ಮುಖನಾದನು. ಆತನು ಮುಂದೆ ಸೇನಾಪತಿಯಾಗಿ, ವೀರ್ಯದಿಂದ ವಿಜೃಂಭಿಸಿ, ತಾರಕಾಸುರನನ್ನು ಸಸೈನ್ಯವಾಗಿ ನಾಶಮಾಡಿದನು. ರುದ್ರನ ವೀರ್ಯವು ಹಿರಣ್ಮಯವಾಗಿದೆ. ಅದನ್ನು ಧರಿಸಿ ಅಗ್ನಿಯು ಹಿರಣ್ಯರೇತನೆಂದು ಖ್ಯಾತನಾದನು.

ರೂಪವಂತನಾದ ಸುವರ್ಣವನ್ನು ಜಾತರೂಪವೆಂಬರು. ಸುವರ್ಣ ದಾನದಿಂದ ರುದ್ರ ಮಹೇಂದ್ರ ವಹ್ನಿಮುಖ ದೇವತೆಗಳು ಪ್ರೀತರಾಗುವರು.

ಇಂತು ನುಡಿದ ವಶಿಷ್ಠನ ವಚನವನ್ನು ಮನ್ನಿಸಿ, ಪರಶುರಾಮನು ಸುವರ್ಣವನ್ನು ದಾನವಾಗಿತ್ತನು.

ಈಗ ಪಿತೃಪೂಜಾ ವಿಧಾನವನ್ನು ವಿವರಿಸುವೆನು. ಪ್ರತಿ ಅಮಾವಾಸ್ಯೆಯಲ್ಲಿ ಪಿತೃಯಜ್ಞವನ್ನು ಮಾಡುವವನಿಗೆ ನಿತ್ಯಶ್ರಾದ್ಧಪುಣ್ಯವು ಲಭಿಸುವುದು. ಶ್ರಾದ್ಧವನ್ನು ಆಯಾ ತಿಥಿಗಳಲ್ಲಿ ಮಾಡಿದರೆ ಬರುವ ಪುಣ್ಯಫಲವನ್ನು ಕೇಳು! ಪಾಡ್ಯದಿಂದ ಸುಂದರಪತ್ನಿ; ಬಿದಿಗೆಯಿಂದ ಸುಂದರೀ ಪಿತೃತ್ವ; ತದಿಗೆಯಿಂದ ಅಶ್ವಗಳು; ಚವತಿಯಿಂದ ಪಶುಭಾಗ್ಯ; ಪಂಚಮಿಯಿಂದ ಪುತ್ರಲಾಭ; ಷಷ್ಠಿಯಿಂದ ಪ್ರಕಾಶ; ಸಪ್ತಮಿಯಿಂದ ಕೃಷಿಭಾಗ್ಯ; ಅಷ್ಟಮಿಯಿಂದ ವಾಣಿಜ್ಯಲಾಭ; ನವಮಿಯಿಂದ ಜಂತುಸಮೃದ್ಧಿ; ದಶಮಿಯಿಂದ ಗೋಚಯ ಲಾಭ; ಏಕಾದಶಿ ದ್ವಾದಶಿ (ದ್ವಾದಶಿಯ ದಿನವೇ) ಯಿಂದ ಜ್ಞಾನವು; ತ್ರಯೋದಶಿಯಿಂದ ಸತ್ಪುತ್ರರು; ಚತುರ್ದಶಿಯಿಂದ ವೀರಪುತ್ರ; ಹುಣ್ಣಿಮೆಯಿಂದ ಧನಸಮೃದ್ಧಿ; ಅಮಾವಾಸ್ಯೆಯಿಂದ ಸರ್ವ ಕಾಮ್ಯಸಿದ್ಧಿ ಇಂತು ಶ್ರಾದ್ಧಫಲಗಳನ್ನು ವಿವರಿಸಿದೆನು.

ಅಪರಪಕ್ಷದಲ್ಲಿ, ಅಪರಾಹ್ಣದಲ್ಲಿ ಪಿತೃಸಮರ್ಚನವು ಶ್ರೇಷ್ಠವಾಗಿದೆ. ಆದರೂ ಏಕಾದಶಿಯ ಶ್ರಾದ್ಧವು ನಿಷಿದ್ಧವಾಗಿದೆ. ಚತುರ್ದಶಿಯೂ ಕೂಡದು. ತಿಲ ಪಾಯಸ ಘೃತಗಳು ಶ್ರಾದ್ಧದಲ್ಲಿ ಅವಶ್ಯಕಗಳೆಂದು ತಿಳಿ! ಕ್ಷತ್ರಿಯಾದಿ ಮಾಂಸ ಭೋಜಿಗಳಿಗೆ

ಕುರಿ, ಮೇಕೆ, ಶಶ ಮುಂತಾದ ಮಾಂಸ ವಿನಿಯೋಗವು ಉಕ್ತವಾಗಿದೆ. ನಕ್ಷತ್ರ ವಿಶೇಷಗಳಲ್ಲಿ ಶ್ರಾದ್ಧವಿಧಿಯ ಆಚರಣವು ವಿವಿಧ ದಿವ್ಯಫಲಪ್ರದವೆಂದು ತಿಳಿದವರು ಹೇಳುವರು.

ದೇವಕಾರ್ಯಗಳಿಗೆ ಪಾತ್ರಶೋಧೆಯನ್ನಷ್ಟಾಗಿ ಮಾಡುವ ಅವಶ್ಯಕತೆಯಿಲ್ಲ; ಆದರೆ ಪಿತೃಕಾರ್ಯಗಳಿಗೆ ತಪ್ಪದೆ ಸತ್ಪಾತ್ರವೇ ಆಗಬೇಕು. ಕುಲ, ವಯಸ್ಸು, ಶೀಲ, ವಿದ್ಯೆ ಇವು ಕ್ರಮವಾಗಿ ಅಧಿಕ ಪಾತ್ರತಾ ಸಂಪಾದಕಗಳು. ಅವೆಲ್ಲವಿದ್ದವರಿಗೆ ಪಂಕ್ತಿಪಾವನರೆಂದು ಹೆಸರು. ಶೀಲ, ವಿದ್ಯೆಯಿಲ್ಲದವರು ಪಂಕ್ತಿದೂಷಕರು. ಶೀಲವಾದರೂ ಇಲ್ಲದಿರೆ ಅಂತಹ ವಿಪ್ರನು ಚಂಡಾಲನೇ ಸರಿ! ಪಂಕ್ತಿದೂಷಕರು ಹತ್ತು ಜನರಕಿಂತಲು, ಪಂಕ್ತಿ ಪಾವನನೊಬ್ಬನೇ ಸಾಕು, ಶ್ರಾದ್ಧವನ್ನು ಅವನು ಸಫಲವೆನಿಸುವನು.

ಜೂಜುಗಾರ, ಕುಡುಕ, ವಿಷದಾತ, ವೇದಹೀನ, ಬಡ್ಡಿವ್ಯಾಪಾರಿ, ಗಾಯಕ, ನಟ, ಗ್ರಾಮಸೇವಕ, ಕುಷ್ಠಿ, ಗೃಹದಾಹಿ, ಸೋಮವಿಕ್ರಯಕ, ಕಪಟಿ ಚೋರ, ಶಿಲ್ಪಿ! ಇವರೆಲ್ಲರು ಶ್ರಾದ್ಧಾನರ್ಹರು. ಪಾದರಕ್ಷೆಗಳನ್ನು ಬಿಡದೆ, ನಿಂತು, ತಲೆ ಸುತ್ತಿ, ಮಾಡಿದ ಭೋಜನದ ಪುಣ್ಯಫಲವು ಅಸುರರನ್ನು ಸೇರುವುದು. ಅಶುಚಿಯಾದ ಭೋಜ್ಯಗಳ ಫಲವೂ ಅಸುರರ ಪಾಲಾಗುವುದು. ದಾಂತನು, ವ್ರತಶೀಲನು, ಶಾಂತನು, ಅಧ್ಯಾಪಕನು, ದಯಾನ್ವಿತನು, ಜ್ಞಾನಿಯು ಆದ ವಿಪ್ರನು ಪಂಕ್ತಿಪಾವನನೆನಿಸುವನು. ವ್ಯಾಕರಣತರ್ಕ ಧರ್ಮವೇದಾಂತಗಳನ್ನು ಓದಿದವರು, ಪುರಾಣ ತತ್ವಜ್ಞರು, ಜೀವಬ್ರಹ್ಮ ಭೇದವನ್ನರಿತವರು ಇವರು ಪಂಕ್ತಿಪಾವನರು. ಜೀವಬ್ರಹ್ಮೈಕ್ಯವಾದವು ಅಸುರವೆಂದು ತಿಳಿ!

ಮೇಲ್ಗುಣದವರಾದರೇನು, ಅಮಿತ್ರರು ಶ್ರಾದ್ಧಾರ್ಹರಾಗುವುದಿಲ್ಲ. ಅತ್ರಿ ವಂಶದಲ್ಲಿ ನಿಮಿ ಎಂಬ ಮುನಿಯು ಪ್ರಖ್ಯಾತನಾಗಿದ್ದನು. ಅವನ ಸುತನಾದ ಶ್ರೀಮಂತನು ದುರದೃಷ್ಟದಿಂದ ಕಾಲಾಧೀನನಾದನು. ನಿಮಿಯು ಶ್ರಾದ್ಧವನ್ನು ಮಾಡುವಾಗ, ಅತ್ರಿಮುನಿಯು ಸಮೀಕ್ಷಣ ಕಾರ್ಯವನ್ನು ನಡೆಸುತ್ತಿದ್ದನು. ಪರಿಗೃಹೀತರಾದ ಬ್ರಾಹ್ಮಣರು ಪಾವನರಾಗಿದ್ದರು. ಆದುದರಿಂದ ಅವರಿಗೆ ಕೊಟ್ಟ ದರ್ಭಾಸನಗಳು ದಕ್ಷಿಣಾವರ್ತವಾಗಿದ್ದವು. ಕ್ರಿಯಾಕಲಾಪವು ತಿಲಸಮಗ್ರವಾಯಿತು. ದರ್ಭನ್ಯಾಸವು ದಕ್ಷಿಣಾಗ್ರವಾಗಿತ್ತು. ಮಂತ್ರಗಳು ವಿಧಿಯಂತೆ ತಂತ್ರಸಹಿತವಾಗಿ ನಡೆದವು.

ಅತ್ರಿ ಮುನಿಯು 'ಬೆಳ್ಳುಳ್ಳಿ, ನುಗ್ಗಿಕಾಯಿ, ಈರುಳ್ಳಿ, ಮಲಿನಲವಣ, ಕರೀ ಜೀರಿಗಿ, ಇಂಗು ಇವು ನಿಷಿದ್ಧಗಳು. ಶುನಕ, ರಸಜ್ವಲೆ, ಪತಿತ, ಅಂತ್ಯಜ ಇವರು ಹತ್ತಿರವಿರಬಾರದು. ಶ್ರಾದ್ಧವನ್ನು ಶ್ರದ್ಧೆಯಿಂದ ಮಾಡಬೇಕು. ಅದರಲ್ಲಿ ಅರ್ಯಮ, ವರುಣ, ಸೋಮ, ಅಗ್ನಿಗಳಿಗೆ ಭಾಗವನ್ನು ಬ್ರಹ್ಮದೇವನೇ ಕಲ್ಪಿಸಿ ಕೊಟ್ಟಿರುವರು. ವಿಶ್ವೇದೇವತೆಗಳಿಗೂ ಭವ್ಯಭಾಗವಿದೆ. ಊಷ್ಮಪರೆಂಬ ಪಿತೃಗಳಿಗೂ ಭಾಗವಿದೆ. ಬಲ, ಧೃತಿ, ವಿಪಾಪ್ಮಾ, ಪುಣ್ಯಕೃತ್, ಪಾವನ, ಪಾರ್ಷ್ಣಿ, ಕ್ಷೇಮ, ಸಮೂಹ, ದಿವ್ಯಸಾನುವು, ವಿವಸ್ವಂತ, ವೀರ್ಯವಂತ, ಹ್ರೀಮಂತ, ಕೀರ್ತಿಮಂತ, ಕೃತ, ವಿದ್ಯುದ್ವರ್ಚಸ,

ಸೋಮವರ್ಚಸ, ಸೂರ್ಯಶ್ರೀ, ಸೋಮಪ, ಸೂರ್ಯ, ಸಾವಿತ್ರ, ದತ್ತಾತ್ಮ, ಪುಂಡರೀಯಕ ಉಷ್ಣಿನಾಭ, ನಭೋದ, ವಿಶ್ವಾಯುವು, ದೀಪ್ತಿ, ಚಮೂಹರ, ಸುರೇಶ, ವ್ಯೋಮಾರಿ ಶಂಕರ, ಭವ, ಈಶ, ಕರ್ತ, ಕೃತಿ, ದಕ್ಷ, ಭುವನ, ದಿವ್ಯಕರ್ಮಕೃತ್, ಗಣಿತ, ಪಂಚವೀರ್ಯ, ಆದಿತ್ಯ, ರಶ್ಮಿಮಂತ, ಸಪ್ತಕೃತು, ಸೋಮಪೂರ್ವ, ವಿಶ್ವಕೃತ್, ಕವಿ, ಗೋಪ್ತ, ಅನುಗೋಪ್ತ, ಸುಗೋಪ್ತ, ನಪ್ತ, ಈಶ್ವರ, ಜಿತಾತ್ಮ, ಮುನಿವೀರ್ಯ, ದೀಪ್ತರೋಮ, ಭಯಂಕರ, ಅನುಕರ್ಮ, ಪ್ರತೀತ, ಪ್ರದಾತ, ಅಂಶುಮಂತ, ಶೈಲಾಭ, ಪರಮಕ್ರೋಧಿ, ಧೀರೋಷ್ಣಿ, ಭೂಪತಿ, ಸ್ರಜ, ವಜ್ರಿ, ವರಿ ಇವರು ಭಾಗವನ್ನು ಗ್ರಹಿಸುವ ಪಿತೃದೇವತೆಗಳು. ಇವರದ್ವಾರಾ ಶ್ರಾದ್ಧ ಭಾಗಗಳು ಜನರ ಪೂರ್ವಜರಿಗೆ ಸೇರುವವು.

ಶ್ರಾದ್ಧಕಾಲದಲ್ಲಿ ಶೀನಬಾರದು, ಅಳಬಾರದು, ಪ್ರಶಾಂತ ಮನಸ್ಕನಾಗಿರಬೇಕು. ಪಿತೃದೇವತೆಗಳಿಗೆ ಅಜೀರ್ಣವಾದಾಗ, ಅವರು ಚತುರ್ಮುಖನನ್ನು ಸೋಮನದ್ವಾರಾ ಕಂಡು, ಅಜೀರ್ಣವಾಗದಂತೆಯೂ, ಶ್ರಾದ್ಧಗಳು ಸಾಗುವಂತೆಯೂ, ಉಪಾಯವನ್ನು ಹೇಳೆಂದು ಬೇಡಿದರು. ಆಗ ಬ್ರಹ್ಮದೇವನು ತನ್ನಲ್ಲಿದ್ದ ಅಗ್ನಿಯನ್ನು ಕೊಟ್ಟು, 'ಇವನನ್ನು ಕೂಡಿ ಸ್ವೀಕರಿಸಿರಿ ! ನಿಮಗೆ ಅಜೀರ್ಣವಾಗದು' ಎಂದನು. ಆದುದರಿಂದ ವೈಶ್ವದೇವಾದಿ ಅಗ್ನಿಕಾರ್ಯವನ್ನು ಮುಗಿಸಿ, ಆಮೇಲೆ ಪಿತೃಸಮರ್ಚನರೂಪ ಶ್ರಾದ್ಧವನ್ನು ಮಾಡುವವರು ಪೂರ್ಣಫಲ ಭಾಗಿಗಳಾಗುವರು.

ಶ್ರಾದ್ಧದಲ್ಲಿ ಪಿತೃಮಾತ್ರ ಪೂಜೆ ಕೂಡದು. ಪಿತೃ, ಪಿತಾಮಹ, ಪ್ರಪಿತಾಮಹರನ್ನು ಪೂಜಿಸಬೇಕು. ಅಪಸವ್ಯದಿಂದ ಅವರಿಗೆ ಪಿಂಡತ್ರಯವನ್ನು ಕೊಂಡು, ಸವ್ಯದಿಂದ ನೀಡಬೇಕು. ತರ್ಪಣಾದಿ ಶ್ರಾದ್ಧ ಕಾರ್ಯಗಳನ್ನು ಅಪಸವ್ಯದಿಂದಲೇ ಮಾಡಬೇಕು. ಗಯಾಕ್ಷೇತ್ರದಲ್ಲಿ ವಿಷ್ಣುಪಾದವಿದೆ; ಅಕ್ಷಯಾಶ್ವತ್ಥವಿದೆ; ಫಲ್ಗು ನದಿಯಿದೆ. ಅಲ್ಲಿ ಮೂರು ಕಡೆ [ ಕನಿಷ್ಠ ] ಶ್ರಾದ್ಧವನ್ನು ಮಾಡಬೇಕು. ಅಂತಹ ಮಗನೊಬ್ಬನಾದರೂ ಆಗುವನೇನೋ ಎಂದಲ್ಲವೇ ಮನುಜರು ಬಹುಪುತ್ರರನ್ನು ಬೇಡುವುದು ? ಗೌರಿಕನ್ಯಾದಾನ, ಗಯಾಶ್ರಾದ್ಧ, ನೀಲವೃಷೋತ್ಸರ್ಜನಗಳನ್ನು ಮಾಡಿದ ಪುತ್ರರು ಬಹುಸುಕೃತಿಯಾಗಿ ಪಿತೃಗಳನ್ನು ತಾರಿಸಿ ಸದ್ಗತಿಗೆ ಸೇರಿಸುವುದು.'

ಇಂತು ಅತ್ರಿಯು ನಿರೂಪಿಸಿದ ಶ್ರಾದ್ಧ ನಿಯಮಗಳನ್ನು ನಿನಗೆ ಹೇಳಿದೆನು. ತಪಸ್ವಿಯು, ಅಪ್ರತಿಗ್ರಾಹಕನು ಉತ್ತಮ ಪಾತ್ರರೆಂದನು. ತಪಸ್ವಿ ಎಂದರೆ ಬಲು ಉಪವಾಸವಿರುವವನಲ್ಲ. ಬರಿಯ ಉಪವಾಸದಿಂದ ಆತ್ಮಹತ್ಯಾ ಪಾಪವೇ ಬರುವುದು. ಸತ್ಯವಚನ, ಶುಚಿತ್ವ, ಬ್ರಹ್ಮವಿಚಾರ, ಜಪ, ದಯೆ, ತ್ಯಾಗಗಳಿಗೆ ತಪಸ್ಸೆಂದು ಹೆಸರು. ಅಪ್ರತಿಗ್ರಾಹಕನೆಂದರೇನೆಂಬ ವಿಷಯದಲ್ಲಿ ಒಂದು ಇತಿಹಾಸವನ್ನು ವರ್ಣಿಸುವೆನು. ಕೇಳು !

ಸಪ್ತರ್ಷಿಗಳಾದ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಠರು ಎಡೆಬಿಡದೆ ಧರಣಿಯಲ್ಲಿ ತೀರ್ಥಸೇವೆಗಾಗಿ ತಿರುಗುತ್ತಿದ್ದರು. ಅವರೊಡನೆ

ಅರುಂಧತಿಯೂ ಇದ್ದಳು. ಈ ಎಂಟು ಜನರಿಗೆ ಪರಿಚಾರಿಕೆಯಾಗಿ ಚಂಡೆ ಎಂಬ ತರುಣಿಯು, ಪರಿಚಾರಕನಾಗಿ ಪಶುಸಖನೆಂಬ ಚಂಡಾಪತಿ ತರುಣನು ಇದ್ದರು.

ಒಂದು ಸಲ ಘೋರವಾದ ಅನಾವೃಷ್ಟಿಯು ತಲೆದೋರಿ, ಜೀವನಸಾಧನ ವಸ್ತುಗಳು ದುರ್ಲಭವಾದವು. ಜನರು ಪ್ರಾಣರಕ್ಷಣದಲ್ಲಿಯೂ ಅಸಮರ್ಥರಾಗಿ, ಅಸುಗಳನ್ನು ನೀಗತೊಡಗಿದರು. ಮುನಿಜನರೂ ಕ್ಷುದಾರ್ತರಾಗಿ, ಏನು ದೊರೆತರೂ ಸಾಕು, ಪ್ರಾಣಧಾರಣವನ್ನು ಮಾಡಬೇಕೆಂದು ಹುಡುಕುತ್ತಾ ಬಂದರು. ಒಂದಾಶ್ರಮದಲ್ಲಿ ಮುನಿಜನರು ಬಿಟ್ಟುಹೋಗಿರುವಾಗ, ಅಲ್ಲಿದ್ದ ನೀಲನೆಂಬ ಶಿಬಿ ಪೌತ್ರನು ಮೃತನಾಗಿ ಬಿದ್ದಿದ್ದನು. ಅದನ್ನು ನೋಡಿ ಮುನಿಜನರು ಆ ಶವವನ್ನೇ ತಿನ್ನಬೇಕೆಂದಿದ್ದರು.

ಅಲ್ಲಿ ಬೇಟೆಗಾಗಿ ಬಂದಿದ್ದ ವೃಷಾದರ್ಭಿ ಎಂಬ ರಾಜನು ಅವರನ್ನು ಕಂಡು, ಅನುತಾಪಗೊಂಡು, 'ಕರೆದುಕೊಂಡು ಹೋಗಿ, ಬೇಕಾದ ಧಾನ್ಯಕ್ಷೀರಾದಿಗಳನ್ನು ಕೊಡುವೆನು. ಹಾಳು ಶವವನ್ನೇಕೆ ತಿನ್ನ ಪೋಗುವಿರಿ? ಗ್ರಾಮಧನಗಳನ್ನೂ ಕೊಡುವೆನು. ಬನ್ನಿ!' ಎಂದನು. ಸಪ್ತರ್ಷಿಗಳವನಿಗಿಂತೆಂದರು: 'ರಾಜನ್! ನಾವು ಅಪ್ರತಿಗ್ರಾಹಕ ವ್ರತನಿಷ್ಠರು! ತಿಳಿಯದೆ ಮಾತಾಡಿದೆ! ಸರಿ! ನಿನ್ನ ಹಾದಿ ಹಿಡಿದು ಹೋಗು! ನೀನೀವ ಯಾವ ವಸ್ತುವೂ ನಮಗೆ ಬೇಕಿಲ್ಲ!'

ವೃಷಾದರ್ಭಿಯು ಅಲ್ಲಿಂದ ಹೋಗಿ, ಕೆಲಫಲಗಳಲ್ಲಿ ಸುವರ್ಣವನ್ನು ತುಂಬಿ, ಮಂತ್ರಿಗಳ ದ್ವಾರಾ ಅವರಿಗೆ ಕಳಿಸಿದನು. ಭಕ್ತಿಯಿಂದ ಅವರಿತ್ತ ಫಲಗಳನ್ನು ಹಿಡಿಯುತ್ತಲೇ, ಅವು ಭಾರವಾಗಿ ಕಂಡುದರಿಂದ, ಸಪ್ತರ್ಷಿಗಳು, ರಾಜನ ಕೃತಿಮ ಕಾರ್ಯವನ್ನರಿತು, ಫಲಗಳನ್ನು ಹಿಂದಿರುಗಿಸಿದರು. ವೃಷಾದರ್ಭಿಯು ಋಷಿಗಳು ಅಹಂಕಾರದಿಂದ ತನ್ನನ್ನು ತಿರಸ್ಕರಿಸಿದರೆಂದು ತಿಳಿದು, ಕೃತ್ಯೆಯನ್ನು ಪುಟ್ಟಿಸಿ, ಅವರನ್ನೆಲ್ಲ ಕೊಂದು ಬರುವಂತೆ, ಆಜ್ಞಾಪಿಸಿದನು.

ವನದಲ್ಲಿ ಸಪ್ತರ್ಷಿಗಳು ಕೆಲಫಲಗಳನ್ನು ಕಂಡು, ಶವವನ್ನು ಪರಿತ್ಯಜಿಸಿ, ಪೋಗುವಾಗ ಶುನಸ್ಸಖನೆಂಬ ಯತಿಯನ್ನು ಕಂಡರು. ಅವನಿಗೂ ಕೊಟ್ಟು, ಮಿಕ್ಕ ಫಲಗಳನ್ನುಂಡು, ಇಂತು ನಿತ್ಯವೂ ಅರಣ್ಯದಲ್ಲಿ ಆಹಾರಕ್ಕಾಗಿ ಹುಡುಕುತ್ತಾ ತಿರುಗುತ್ತಿದ್ದರು. ಅವರಿಗೆ ನಲಿನಾಕರವು ಗೋಚರವಾಯಿತು. ಅಲ್ಲಿ ಬೆಳೆದಿದ್ದ ತಾವರೆಯ ನಾಳಗಳನ್ನು ಕಿತ್ತಿ ತಿನ್ನಬೇಕೆಂದು, ಅವರು ಶುನಸ್ಸಖನಿಂದ ಕೂಡಿ, ಸರೋವರವನ್ನು ಸಮೀಪಿಸಿದರು. ಆಗ ವೃಷಾದರ್ಭಿಯ ಕೃತ್ತಿ ಅಲ್ಲಿ ಅವರಿಗೆ ಅಡ್ಡವಾಗಿ ನಿಂತು 'ನಾನೀ ಸರೋವರದ ಒಡತಿಯಾಗಿರುವೆನು. ನಿಮ್ಮ ನಿಮ್ಮ ನಾಮಗಳನ್ನು ಹೇಳಿ, ಅನಂತರ ಬಿಸಗಳನ್ನು ಕೊಳ್ಳಿರಿ!' ಎಂದಳು. ಅವಳ ರಾಕ್ಷಸ ಸ್ವರೂಪವನ್ನರಿತು, ತಮ್ಮನ್ನು ವಧಿಸಲು ಬಂದಿರುವ ಪಾತಕಿ ಎಂದು ತಿಳಿದು, ಮುನಿಗಳು ಅವಳಿಗೆ ಅರ್ಥವಾಗದಂತೆ ತಂತಮ್ಮ ನಾಮಗಳನ್ನು ಹೇಳಿದರು. ನಾಮವನ್ನು ತಿಳಿಯದೆ ಕೃತ್ತಿಗೆ ಕೊಲ್ಲಲು ಬಾರದೆಂಬುವರು. ಮತ್ತು ಋಷಿಗಳು ಸುಳ್ಳು ಹೇಳಬಾರದೆಂದು, ಪರ್ಯಾಯದಿಂದ ತಮ್ಮ ಹೆಸರುಗಳನ್ನು ಹೇಳಿದರು.

ಮಾರೀಚ [ ಮರೀಚಿ ಪುತ್ರ - ಕಶ್ಯಪ ], ಮೂರು ದೇವತೆಗಳ ತಂದೆ [ ಅತ್ರಿ ], ಇಬ್ಬರ ಮಗ [ ಭರದ್ವಾಜ ], ಪ್ರಪಂಚ ಶತ್ರು [ ವಿಶ್ವಾಮಿತ್ರ - ಶತ್ರುವಲ್ಲ ], ಆಕಳ ಕೊಂದವ [ ಗೌತಮ ], ಚರುವ್ಯತ್ಯಾಸಜನಿತ [ ಜಮದಗ್ನಿ ], ಬಲುಬದುಕಬೇಕೆಂಬವ [ ವಶಿಷ್ಠ ], ಎಂದು ಹೇಳಿದಾಗ, ಅವರನ್ನು ಕೊಲ್ಲಲು ಬಾರದೆ, ಕೃತ್ತಿಯು ನಿರ್ವಿಣ್ಣಳಾಗಿ, 'ನೀನಾರೆಂ' ದು ಶುನಸ್ಸಖನನ್ನು ಕೇಳಿದಳು. ಯತಿಯನ್ನು ಕೃತ್ತಿಗಳು ಏನೂ ಮಾಡಲಾರವೆಂದರಿತ ಶುನಸ್ಸಖನು ತನ್ನ ನಿಜವಾದ ಹೆಸರನ್ನೇ ಹೇಳಿದನು. ಕೃತ್ತಿಯು 'ಸುಳ್ಳು ಹೇಳಿದೆ!' ಎಂದು ನಿಂದಿಸಿದಳು. 'ನಿಜವನ್ನೇ ಹೇಳಿದರೂ ನಿಂದಿಸುವೆ! ನಿನ್ನದು ತಪ್ಪಾಯಿತು' ಎಂದು ನಿರೂಪಿಸಿ ಶುನಸ್ಸಖನು ತನ್ನ ತ್ರಿದಂಡದಿಂದ ಅದರ ತಲೆಯ ಮೇಲೆ ಹೊಡೆದನು. ತತ್‌ಕ್ಷಣವೇ ಕೃತ್ತಿಯು ಬ್ರಹ್ಮದಂಡ ಹತಳಾಗಿ, ಭಸ್ಮೀಭೂತಳಾದಳು.

ಆಗ ಅವರು ಹನ್ನೊಂದು ಜನರು ಕೆರೆಯಲ್ಲಿಳಿದು, ಬಿಸನಾಳಗಳನ್ನು ಕಿತ್ತಿ ಕೆಸರಿಲ್ಲದಂತೆ, ತೊಳೆದು, ಒಂದು ಮೂಟೆಯಾಗಿ ಕಟ್ಟಿಟ್ಟು, ನಿತ್ಯಕೃತ್ಯಗಳನ್ನು ನಿರ್ವಹಿಸ ಪೋದರು. ಆಹ್ನಿಕಗಳನ್ನು ಮುಗಿಸಿಕೊಂಡು ಬಂದು ಬಿಸಗಳಿಗಾಗಿ ಹುಡುಕಿ ಕಾಣದೆ, ಅವರು ಪರಸ್ಪರ ಶಂಕಾಲಂಕಿತಸ್ವಾಂತರಾದರು. ಶುನಸ್ಸಖನನ್ನು ಅಧ್ಯಕ್ಷನನ್ನಾಗಿಟ್ಟುಕೊಂಡು ಅವರು ಶಪಥಗಳನ್ನು ಮಾಡಿ, ತಾವು ಬಿಸಹರ್ತರಲ್ಲವೆಂದರು.

ಕಶ್ಯಪನು, 'ತಾವರೆ ನಾಳವನ್ನು ಅಪಹರಿಸಿದ್ದರೆ, ನನಗೆ ದಿವಾಸಂಗ , ಮಾಂಸಭೋಜನ, ಸಭಾದೂಷಣ, ಪಕ್ಷಪಾತ, ದುಷ್ಟದಾನ, ವಿಪ್ರಾಶಾಭಂಗ, ಇತ್ಯಾದಿ ಪಾಪಗಳ ಫಲವಾಗಲಿ ! ' ಎಂದನು.

ಅತ್ರಿಯು, 'ಆಕಳನ್ನು ಒದೆದವನು, ಸೂರ್ಯಾಭಿಮುಖನಾಗಿ ಮಲಾದಿ ವಿಸರ್ಜಕನು, ಅನಧ್ಯಯನದ ಪಾಠಕನು ಇವರಿಗೆ ಆಗುವ ನರಕವು ಬಿಸಗಳನ್ನು ಕದ್ದಿದ್ದರೆ ನನಗಾಗಲಿ! ' ಎಂದನು.

ಭರದ್ವಾಜನು, 'ಜ್ಞಾತಿದ್ರೋಹಿ, ಗೋ ವಾನರ ಹಿಂಸಕ, ಆಪದ್ಗತ ವಿಪ್ರೋಪೇಕ್ಷಕ, ಗುರುನಿಂದಕ ಇವರಿಗಾಗುವ ಗತಿಯು, ಬಿಸಹಾರಿಯಾಗಿದ್ದರೆ ನನಗಾಗಲಿ!' ಎಂದನು.

ವಿಶ್ವಾಮಿತ್ರನು, 'ಯೋಗ್ಯಭೃತ್ಯರನ್ನು ಕಾಪಾಡದೆ, ಅಯೋಗ್ಯರಿಗೆ ಬೇಕಾದನ್ನೀವ ಕಪಟರಾಜನಿಗೆ ಆಗುವ ನರಕವು ಬಿಸಾಪಹಾರಿಯಾಗಿದ್ದರೆ ನನಗಾಗಲಿ!' ಎಂದನು.

ಗೌತಮನು, 'ವೇದತ್ಯಾಗ , ಅಗ್ನಿಹೋತ್ರ ತ್ಯಾಗ, ಸೋಮವಿಕ್ರಯ, ವೃಷಲೀರತಿಗಳಿಂದಾಗುವ ದುರ್ಗತಿಯು ಬಿಸಗಳನ್ನು ಕದ್ದಿದ್ದರೆ ನನಗಾಗಲಿ! ' ಎಂದನು.

ಜಮದಗ್ನಿಯು, 'ಮುಟ್ಟಾದ ಸತಿಯ ರತಿ, ನೀರಲ್ಲಿ ಮಲಮೂತ್ರ ವಿಸರ್ಜನ, ಕನ್ಯಾವಿಕ್ರಯ, ನಿಷ್ಕಾರಣ ವೈರ, ಪರಸ್ಪರ ಪೂಜೆ ಈ ಪಾಪಗಳಿಂದಾಗುವ ನರಕಗಳು ಬಿಸಹಾರಿಯಾಗಿದ್ದರೆ ನನಗಾಗಲಿ! ' ಎಂದನು.

ವಶಿಷ್ಠನು, 'ಸನ್ಯಾಸಿಯಾಗಿ ಸ್ತ್ರೀರತನು, ವೇದವಿಹೀನನು, ನಾಯಿಯನ್ನು

ಸಾಕಿದವನು, ಅಸಹ್ಯ ಕಾರ್ಯರತನು ಇವರಿಗಾಗುವ ನರಕವೆನಗಾಗಲಿ, ಬಿಸಗಳನ್ನು ಕದ್ದಿದ್ದರೆ!' ಎಂದನು.

ಅರುಂಧತಿಯು ನಸುನಗುತ್ತಾ, 'ಅತ್ತೆಯನ್ನು ಸದಾ ನಿಂದಿಸುವ, ಪತಿಯನ್ನು ವಂಚಿಸುವ, ಪರಮಾನ್ನಗಳನ್ನು ಬಚ್ಚಿಟ್ಟು ತಿನ್ನುವ, ಪಾಪಿನಿಗಾಗುವ ನರಕವು ಬಿಸಗಳನ್ನು ಕದ್ದಿದ್ದರೆ ನನಗಾಗಲಿ!' ಎಂದಳು.

ಚಂಡೆಯು, 'ಅಡಿಗೆ ಮಾಡುತ್ತಾ ತಿನ್ನುವವಳು, ಕೆಲಸಕ್ಕೆ ಸೋಮಾರಿ, ಸುಳ್ಳು ಮಾತಿನವಳು, ಕನ್ಯಾವಿಕ್ರಯವನ್ನು ಮಾಡಿದವಳು, ಸುಜನ ದ್ರೋಹಿನಿ ಇವರಿಗೆ ಆಗುವ ನರಕವು ಮತ್ತು ನಿರಂತರ ದಾಸ್ಯವು ನನಗಾಗಲಿ, ಬಿಸಗಳನ್ನು ಕದ್ದಿದ್ದರೆ' ಎಂದಳು.

ಅವಳ ಗಂಡ ಪಶುಸಖನು, 'ನಾನು ಬಿಸಗಳನ್ನು ಕದ್ದಿದ್ದರೆ ಅಸಂತಾನ, ಗರ್ಭದಾಸ್ಯ, ನಿತ್ಯದಾರಿದ್ರ್ಯದ ದುಃಖಗಳೆನಗಾಗಲಿ!' ಎಂದನು.

ಇಂತು ಅವರೆಲ್ಲರು ಶಪಥಗಳನ್ನು ಮಾಡಲು, ಕೇಳುತ್ತಿದ್ದ ಶುನಸ್ಸಖನು, 'ವೇದವಿದ್ವಾಂಸನಿಗೆ ಅಥವಾ ಯಜ್ಞದಕ್ಷನಿಗೆ ಆನಂದದಿಂದ ಕನ್ಯಾಮಣಿಯನ್ನಿತ್ತವನ ಲೋಕಗಳು ನನಗಾಗಲಿ ಬಿಸಗಳನ್ನು ಕದ್ದಿಟ್ಟಿದ್ದರೆ!' ಎಂದನು.

ಆ ಮಾತನ್ನಾಲಿಸಿ ಮುನಿಗಳು, 'ಅನಘ! ಪುಣ್ಯಫಲವನ್ನು ನುಡಿದ ನೀನೇ ಬಿಸಹರ್ತನಲ್ಲವೇ?' ಎಂದರು. 'ಅಹುದು! ನಿಮ್ಮನ್ನು ಪರೀಕ್ಷಿಸಲು ಇಂತು ಮಾಡಿದೆನು!' ಎಂದು ಶುನಸ್ಸಖನು ಬಿಸಗಳನ್ನು ಅವರಿಗಿತ್ತು, 'ಮುನಿವರರೇ! ನಿಮ್ಮ ಶಾಂತಿದಾಂತಿಗಳಿಗೆ ಮೆಚ್ಚಿದೆನು. ವೃಷಾದರ್ಭಿಯ ಕೃತ್ತಿಯಿಂದ ನಿಮ್ಮನ್ನು ಕಾಪಾಡಲು ಬಂದ ಇಂದ್ರನೆಂದು ತಿಳಿಯಿರಿ! ಒಳ್ಳೆಯದಾಯಿತು! ಬನ್ನಿ! ಸ್ವರ್ಗದ್ವಾರಗಳು ನಿಮಗೆ ಮುಕ್ತವಾಗಿವೆ!' ಎಂದನು. ಅಂತೆಯೇ ಮುನಿವರರು ಅರುಂಧತ್ಯಾದಿ ಮುನಿಸತಿಯರು, ಚಂಡಾಪಶುಸುಖರು ಕೂಡ ಸ್ವರ್ಗವನ್ನು ಸೇರಿ ಸುಖದಿಂದಿರುವರು. 'ರಾಜನ್! ಅಪರಿಗ್ರಹವೆಂದರೆ ದುಷ್ಪದಾನವರ್ಜನವೆಂದು ನಿರೂಪಿಸಲು ಈ ಇತಿಹಾಸ ವನ್ನರುಹಿದೆನು. ಈ ಕಥಾಶ್ರವಣವು ಶ್ರೀಕೀರ್ತಿ ದೀರ್ಘಾಯುಸ್ಸಂಪದಾದಿ ಸರ್ವಶ್ರೇಯಃ ಕಾರಣವಾಗಿದೆ' ಎಂದನು.

ಭೀಷ್ಮನು 'ಧರ್ಮರಾಜ! ಪಿತೃಕಾರ್ಯಗಳಲ್ಲಿ ಛತ್ರವನ್ನೂ ಪಾದರಕ್ಷೆಗಳನ್ನೂ ದಾನವಾಗಿ ಕೊಡಬೇಕು ಕೇಳು! ಹಿಂದೆ ಜಮದಗ್ನಿ ಮಹಾಮುನಿಯು ಚರು ವ್ಯತ್ಯಾಸದಿಂದ ಬಂದ ಕ್ಷಾತ್ರತೇಜವು ಪ್ರೇರಿಸಲು ಕ್ರೀಡಾರ್ಥವಾಗಿ ಅರಣ್ಯದಲ್ಲಿ ಬಾಣಶರಾಸನಗಳನ್ನು ಧರಿಸಿ ಆಡುತ್ತಿದ್ದನು. ರೇಣುಕಾದೇವಿಯು ಆತನು ಬಿಟ್ಟ ಬಾಣಗಳನ್ನು ಓಡಿಹೋಗಿ ತಂದುಕೊಡುತ್ತಿದ್ದಳು. ಸೂರ್ಯನು ಮಧ್ಯಂಗತನಾಗಿ ಚಂಡಕಿರಣನಾದನು. ಒಂದು ಸಲ ಬಾಣವನ್ನು ತರುವ ತರುಣಿ ಸ್ವಲ್ಪ ಆಲಸ್ಯವಾಗಿ ಬಂದಳು. ಜಮದಗ್ನಿಯು ಆಲಸ್ಯ ಕಾರಣವನ್ನು ಕೇಳಿದನು. ರೇಣುಕೆಯು, 'ಸೂರ್ಯನ ಬಿಸಿಲಿಗೆ ಸಿಕ್ಕು ತಡೆಯಲಾಗದೆ, ತರುಮೂಲದಲ್ಲಿ ನಿಂತು ಬಂದೆನು!' ಎಂದಳು. 'ಅಹಾ! ನಿನ್ನನ್ನು ನೋಯಿಸಿದ

ಭಾಸ್ಕರನನ್ನು ಶಿಕ್ಷಿಸದೆ ಬಿಡೆನು!' ಎಂದು ಶರಾಸನದಿ ಅಸ್ತ್ರವನ್ನಿಟ್ಟು ಅಭಿಮಂತ್ರಿಸಲಿರುವ ಜಮದಗ್ನಿಗೆ ಹೆದರಿ ದಿವಾಕರನು ಭೂಸುರರೂಪದಿಂದ ಬಂದು, 'ಬಿಡು ರೋಷವನ್ನು! ನಾನೇ ಸೂರ್ಯನು. ನನ್ನ ಕಿರಣಗಳಿಂದ ಜಲಸಮೃದ್ಧಿಯು, ಪ್ರಕಾಶವು, ಸಸ್ಯವೃದ್ಧಿಯು ಆಗುತ್ತಿದೆ. ನನ್ನದಾದ ಅಹಸ್ಸೇ ಪುಣ್ಯಗಳಿಗಾಸ್ಪದವಾಗಿದೆ. ಅಂತಹ ನನ್ನನ್ನು ಹಿಂಸಿಸಿ, ಲೋಕಕ್ಷೇಮವನ್ನೂ ನಾಶಮಾಡುವುದು ನಿನ್ನಂತಹ ಮುನಿವರನಿಗೆ ಉಚಿತವಲ್ಲ ! ಬಿಡು ಕ್ಷಾತ್ರಭಾವವನ್ನು! ಬೇಡೊಂದು ವರವನ್ನು! ' ಎಂದನು.

ಜಮದಗ್ನಿಯು 'ಹಾಗಾದರೆ ನಿನ್ನ ತಾಪದಿಂದ ಪಾರಾಗುವ ಉಪಾಯವನ್ನು ಸೂಚಿಸು!' ಎಂದನು. ಸೂರ್ಯನು ಛತ್ರ ಪಾದರಕ್ಷೆಗಳನ್ನು ಕಲ್ಪಿಸಿ, ಜಮದಗ್ನಿಗಿತ್ತು ಇವನ್ನು ಧರಿಸಿದವರಿಗೆ ಆ ತಪಬಾಧೆಯಾಗದಿರುವುದು. ಇವು ಅಪೂರ್ವ ವಸ್ತುಗಳು. 'ಇವನ್ನು ವಿಪ್ರನಿಗೆ ದಾನವಿತ್ತವನಿಗೆ ಅಕ್ಷಯ ಪುಣ್ಯಲೋಕವಾಗುವುದು ! ' ಎಂದು ಅಂತರ್ಧಿತನಾದನು. ಜಮದಗ್ನಿಯು ಅಂತಹ ವಸ್ತುಗಳನ್ನು ಅನೇಕವಾಗಿ ಮಾಡಿಸಿ, ವಿಪ್ರರಿಗೆ ದಾನಮಾಡಿದನು.

## ೯. ಸಾಮಾನ್ಯ ಧರ್ಮ

ಸರ್ವಸಾಮಾನ್ಯ ಧರ್ಮಗಳನ್ನು ನಿರೂಪಿಸುತ್ತಾ, ಭೀಷ್ಮನಿಂತೆಂದನು:

ವೇದವ್ಯಾಸ ಜನಕನಾದ ಪೂಜ್ಯ ಪರಾಶರನು ಲೋಕಹಿತಕ್ಕೆಂದು ನಿರೂಪಿಸಿದ ಧರ್ಮಗಳನ್ನು ನನಗೆ ತೋಚಿದಷ್ಟು ವರ್ಣಿಸುವೆನು ಕೇಳು ! ಇಂದ್ರಿಯಗಳನ್ನು ವಿಷಯಗಳತ್ತ ಹರಿದು ಕಾಮ ಕ್ರೋಧಗಳನ್ನು ಪುಟ್ಟಿಸದಂತೆ ಮಾನವನು ಎಚ್ಚತ್ತು ಮನೋನಿಗ್ರಹವನ್ನು ಸಂಪಾದಿಸಬೇಕು. ಅವನೀಸುರರಿಗೆ ವೇದಾಧ್ಯಯನ ಪ್ರವಚನಗಳೂ, ಕ್ಷತ್ರಿಯರಿಗೆ ದುಷ್ಟಶಾಸನ ಪ್ರಜಾಪಾಲನಗಳೂ, ವೈಶ್ಯರಿಗೆ ವ್ಯಾಪಾರ ಕುಸೀದಗಳೂ, ಶೂದ್ರರಿಗೆ ಅನುಕೂಲ್ಯಕೃಷಿಗಳೂ ವಿಹಿತ ಧರ್ಮಗಳಾಗಿವೆ. ಸ್ವಧರ್ಮವನ್ನು ಬಿಡಬಾರದು! ಬಿಟ್ಟವನು ತಪ್ಪದೆ ನರಕವನ್ನು ಹೊಂದುವನು.

ಶೌಚವು ಅತ್ಯಂತಾವಶ್ಯಕವಾಗಿದೆ. ಮೂತ್ರ ಪುರೀಷೋತ್ಸರ್ಜನಗಳಲ್ಲಿ ಮೃತ್ತಿಕಾ ಶೌಚವನ್ನು ತ್ರಿವಾರವಾದರೂ ಎಲ್ಲರೂ ಮಾಡಬೇಕು. ಮಲಮೂತ್ರಗಳನ್ನು ನೋಡುತ್ತಿರಬಾರದು. ಆಮೇಲೆ ಕರಶುದ್ಧಿಯನ್ನೂ ಪಾದಪ್ರಕ್ಷಾಳನವನ್ನೂ, ಮಾಡಿ, ಮೂರು ಸಲ ಮುಕ್ಕಳಿಸಿ, ಕಣ್ಣು ಮೂಗುಗಳನ್ನು ಒರೆಸಿಕೊಳ್ಳಬೇಕು. ಮುಖವನ್ನು ತೊಳೆದು, ತುಲಸೀವಂದನ, ಗೋ ನಮನಗಳನ್ನು ಮಾಡಿ, ಅನಂತರ ಸ್ನಾನವನ್ನೂ ಪೂಜಾದಿಗಳನ್ನೂ ನಿರ್ವಹಿಸಬೇಕು. ಯತಿಗಳನ್ನು ಎಲ್ಲ ಧರ್ಮದವರೂ ಪೂಜಿಸಿ, ಭಿಕ್ಷೆ ನೀಡಬೇಕು. ಪ್ರಿಯವಾದಿತ್ವ, ಶಾಂತಿ, ವಿಷ್ಣುಪೂಜೆ, ಅತಿಥಿಪೂಜೆ, ಅನಾಲಸ್ಯ, ಶೀಲ, ಪುರಾಣ ಶ್ರವಣ ಇವು ಎಲ್ಲರಿಗೂ ಆವಶ್ಯಕವಾದ ಧರ್ಮಗಳು.

ಪರದಾರಾಧನಗಳಿಗಾಶೆಪಡಬಾರದು. ಪರರಿಗೆ ಅಹಿತವಾದುದನ್ನು ತಿಳಿದು ಮಾಡಬಾರದು. ಅಹಿಂಸೆಗೆ ಸಮವಾದ ಧರ್ಮವಿಲ್ಲ. ಪಾಪವು ದುಷ್ಟಸಂಗದಿಂದ

ಘಟಿಸಿದರೆ ಪ್ರಾಯಶ್ಚಿತ್ತದಿಂದ ಕಳೆದುಕೊಳ್ಳಬೇಕು. ಪಶ್ಚಾತ್ತಾಪ, ವಿಷ್ಣು ಭಕ್ತಿಗಳಿಲ್ಲದ ಸಾವಿರ ಪ್ರಾಯಶ್ಚಿತ್ತಗಳೂ ವ್ಯರ್ಥವಾಗುವವು. ಹೆಂಡವನ್ನು ಕುಡಿಯುವುದು, ಗುರುತಲ್ಪಗಮನ, ಬ್ರಹ್ಮಹತ್ಯೆ, ಸ್ವರ್ಣಚೌರ್ಯ, ತತ್ಸಂಯೋಗವೆಂಬ ಪಂಚಮಹಾಪಾತಕಗಳಿಗೆ ಪ್ರಾಣತ್ಯಾಗವೇ ಪ್ರಾಯಶ್ಚಿತ್ತವಾಗಿದೆ. ಪರಲೋಕ ಭೀತಿಯನ್ನುಳ್ಳ ಮನುಜನು ಎಂದಿಗೂ ಇಂತಹ ಪಾಪವನ್ನು ಮಾಡಬಾರದು. ಈ ಪಾಪಗಳನ್ನು ಮಾಡದ ಶೂದ್ರನೂ ಮುಕ್ತಿಯನ್ನು ಹೊಂದಬಹುದು ; ಇವನ್ನು ಮಾಡಿದ ವಿಪ್ರನು ಕೂಡ ನರಕಭಾಜನನಾಗುವನು.

ಹಿರಣ್ಮಯ ಪುರುಷನನ್ನು ಉತ್ತರದಿಂದ ದಕ್ಷಿಣಕ್ಕೆ ಹೋಗುವ ತೆರನಾಗಿ ಕಂಡವನು ಮೂರು ವರ್ಷಗಳವಳಗೆ ಮೃತನಾಗುವನು. ರವಿಮಂಡಲವನ್ನು ಕಾಂತಿಹೀನವನ್ನಾಗಿ ಕಂಡವನಿಗೆ ಎರಡು ವರ್ಷಗಳ ಆಯುವಿದೆ. ಬೆಳದಿಂಗಳಲ್ಲಿ ಬಿದ್ದ ನೆರಳಿನಲ್ಲಿ ತೂತುಗಳನ್ನು ಕಂಡರೆ, ಅವನಿಗೆ ವರ್ಷಮಾತ್ರ ಆಯುವಿದೆ. ಆ ನೆರಳಿಗೆ ತಲೆಯೇ ಕಾಣದಿರೆ ಆರು ತಿಂಗಳಿಗೆ ಸಾಯುವನು. ಕಿವಿಗಳನ್ನು ಬೆರಳಿಂದ ಮುಚ್ಚಿದಾಗ ಪ್ರಾಣಘೋಷವು ಕೇಳಬರದಿರೆ, ತಿಂಗಳಿಗೆ ಸಾಯುವನು. ಕಿವಿಗಳು ವಕ್ರವಾಗಿ ತಿರುಗಿದರೆ, ಮೂಗು ವಕ್ರವಾದರೆ, ನಾಲಿಗೆ ಒಣಗಿದರೆ, ಕಣ್ಣು ಬಣ್ಣ ಕೆಟ್ಟರೆ ಒಂದು ದಿನ ಮಾತ್ರ ಆಯುವಿದೆ ಎಂದು ಹೇಳುವರು. ಗ್ರಹಗತಿಯನ್ನೂ, ಶಕುನಗಳನ್ನೂ, ತನ್ನ ವಯೋಭಾರವನ್ನೂ ಗಮನಿಸಿ, ಮನುಜನು ಮುಂಜಾಗ್ರತೆ ವಹಿಸಬೇಕು. ರೋಗಕ್ಕೆ ಮದ್ದಿದೆ; ಮೃತಿಗೆ ಔಷಧವಿಲ್ಲ; ಇದನ್ನು ತಿಳಿದು ಬುದ್ಧಿವಂತನು ಪರಲೋಕ ಶ್ರೇಯಸ್ಸಿಗಾಗಿ ಬೇಗ ಬಾಲ್ಯದಿಂದಲೇ ಪ್ರಯತ್ನಿಸಬೇಕು.

ಜ್ಞಾನಭಕ್ತಿಗಳಿಗೆ ಮೀರಿದ ಶ್ರೇಯಸ್ಸಾಧನವಿಲ್ಲ, ಭಕ್ತಿಯು ವೈರಾಗ್ಯ ಸಹ ಕೃತವಾಗಿರಬೇಕು. ಶ್ರವಣಮನನಾದಿಗಳಿಂದ ಜ್ಞಾನವು ಹುಟ್ಟುವುದು. ಅದರಿಂದ ಧ್ಯಾನವು ಕೈಗೂಡುವುದು. ಧ್ಯಾನವು ಪಕ್ವವಾದಾಗ ಸಮಾಧಿಯು ಸಿದ್ಧಿಸುವುದು. ಸಮಾಧಿಯು ಅಸಂಪ್ರಜ್ಞಾತವಾದರೆ, ಆಗ ಶ್ರೀಭಗವತ್ಸಾಕ್ಷಾತ್ಕಾರವಾಗುವುದು. ನಿವೃತ್ತಿ ಕರ್ಮದಿಂದ ಮನಶುದ್ಧಿಯಾದವನಿಗೇ ಇವೆಲ್ಲವೂ ಸಾಧ್ಯವಾಗುವುದು.

ಪ್ರವೃತ್ತಿ ಕರ್ಮದಿಂದ ಮಾನವರು ತಮ್ಮ ಕರ್ಮಫಲವನ್ನು ಉಣ್ಣಬೇಕಾಗಿ ಬಂದು, ಹುಟ್ಟಿ ಸಾಯುತ್ತಾ, ಸದಾ ಸಂಸಾರಗಹ್ವರ ಪತಿತರಾಗುವರು. ನಿವೃತ್ತಿ ಕರ್ಮಾನುಷ್ಠಾನದಿಂದ ಕರ್ಮಫಲ ಲೇಪವಾಗುವುದಿಲ್ಲ. ಒಂದು ವೇಳೆ ಅಂತಹ ಸುಜನನು ಯೋಗದಿಂದ ಭ್ರಂಶಿತನಾದರೆ, ಸ್ವರ್ಗದಲ್ಲಿ ಬಲುಸುಖವಾಗಿದ್ದು, ಆಮೇಲೆ ಮತ್ತೆ ಶುಚಿ ಶ್ರೀಮಂತರ ಮನೆಯಲ್ಲಿ ಹುಟ್ಟುವನು. ಅಲ್ಲಿ ಮತ್ತೆ ಸಾಧನ ವಿಶೇಷವನ್ನು ಮಾಡಿಕೊಂಡು ಸಾಂಖ್ಯಯೋಗಗಳನ್ನರಿತು, ಅವನು ಶ್ರೀಹರಿಗುರು ಭಕ್ತನಾಗಿ, ಕೊನೆಗೆ ಮುಕ್ತನಾಗುವನು. ಶ್ರೀಶನನ್ನು ನಂಬಿ ಭಜಿಸಿದವರು ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ.

ಎಲ್ಲ ಸಾಧನಗಳಿಗೂ ಮೂಲವಾಗಿದೆ ಇಂದ್ರಿಯ ಜಯವು. ದೇವನಿತ್ತುದರಿಂದ ತೃಪ್ತರಾಗಿ, ಪಾಪಗಳನ್ನು ಮಾಡದೆ, ಯೋಗ್ಯವಾದ ಜ್ಞಾನವನ್ನು ಗುರುಗಳಿಂದ

ಸಂಪಾದಿಸಿ ಶೂದ್ರ ವೈಶ್ಯ ವಿಪ್ರಾಧಮರೂ ಕೊನೆಗೆ ಮುಕ್ತಿಸುಖಕ್ಕೆ ಯೋಗ್ಯರಾಗುವರೆಂದ ಮೇಲೆ, ಇನ್ನು ವಿಪ್ರೋತ್ತಮ ರಾಜನ್ಯ ಶ್ರೇಷ್ಠರು ಅಂತು ಮಾಡಿ ಮುಕ್ತರಾಗುವರೆಂದು ಹೇಳಬೇಕೇ ?

ಜ್ಞಾನವು ಫಲಕಾರಿಯಾಗಬೇಕಾದರೆ, ಪಾಪವಿರಬಾರದು. ಗರ್ವವನ್ನು ತೊರೆದು ಗುರುಸೇವೆ ಮಾಡದವನಿಗೆ ಜ್ಞಾನವಾಗುವುದಿಲ್ಲ. ಇಂದ್ರಿಯಗಳನ್ನು ದುಷ್ಟವಿಷಯಗಳಿಂದ ಬಿಡಿಸಿ, ಮನಸ್ಸಿನಿಂದ ಶ್ರೀಹರಿಯ ಕಲ್ಯಾಣಗುಣಗಳನ್ನು ಚಿಂತಿಸುವ ನರನು ಪ್ರಕೃತಿ ಬಂಧ ಮುಕ್ತನಾಗುವನು. ಜ್ಞಾನಿಸಹವಾಸದಿಂದ ಅಜ್ಞಾನಿಯೂ ವಿವೇಕಿಯಾಗುವನು. ಸ್ಪರ್ಶವೇದಿಯಿಂದ ಲೋಹವೂ ಬಂಗಾರವಾಗುವುದಿಲ್ಲವೇ ?

ನಿಜದಾರತೃಪ್ತರು, ಮೋಕ್ಷೇತರ ಸಕಲ ಕಾಮರಹಿತರು, ಪರದ್ರವ್ಯ ಪರಾಙ್ಮುಖರು, ಹಿಂಸಾದೂರರು, ವೇದಶಾಸ್ತ್ರ ವಿಚಕ್ಷಣರು, ಯೋಗ್ಯ ವಿಹಿತ ಕರ್ಮಾಚರಣನಿಷ್ಠರು, ವೇದಾಧ್ಯಯನವಂತರು ; ಜಿತೇಂದ್ರಿಯರು, ಆದ ಶ್ರೀಹರಿಗುರು ಭಕ್ತರನ್ನು ನೋಡಿ, ದೇವತೆಗಳು ಮುನಿಗಳು ಕೂಡ ಯಥಾಯೋಗ್ಯವಾಗಿ, ಗೌರವಿಸುವರು.

ಜನಹಿತ ಕಾರ್ಯಗಳನ್ನು ಮಾಡುವುದು ಸರ್ವಮಾನವ ಧರ್ಮವಾಗಿದೆ. ದೇವಾಲಯ ನಿರ್ಮಾಣ, ತಟಾಕ ನಿರ್ಮಾಣ, ಯಜ್ಞಕರಣ, ಅನ್ನದಾನ, ದೀನ ಸಹಾಯ, ಭೂತದಯೆ ಇವು ಜನಹಿತ ಕಾರ್ಯಗಳು. ಅವುಗಳಲ್ಲಿ ತಟಾಕ ನಿರ್ಮಾಣವು ಬಲು ಶ್ರೇಷ್ಠವಾಗಿದೆ. ಕೆರೆ ಮಾಡಿಸಿದವನು ಅಗ್ನಿಷ್ಟೋಮಾದಿ ಯಾಗಫಲವನ್ನು ಹೊಂದುವನು. ಗಿಡಗಳನ್ನು ನಾಟಿಸಿ, ಬೆಳೆಸಿದವನು ಸ್ವರ್ಗದಲ್ಲಿ ಚಿರಕಾಲವಿರುವನು. ಮೃಗ, ಪಕ್ಷಿ, ಮಂಡೂಕ, ಮತ್ಸ್ಯಾದಿ ವಿವಿಧ ಪ್ರಾಣಿಕೋಟಿಗೆ ಉಪಯೋಗ ಪಡುವ ತಟಾಕವನ್ನು ಕಟ್ಟಿಸಿದನ ಪಿತೃವರ್ಗವು ಅಕ್ಷಯ ಪುಣ್ಯ ಲೋಕಗಳನ್ನು ಹೊಂದುವುದು.

ನೆರಳಿಂದ ನರರನ್ನು, ಹೂಗಳಿಂದ ಸುರರನ್ನು, ಫಲಗಳಿಂದ ಋಷಿ ಪಿತೃಜನರನ್ನು ತೃಪ್ತಿಪಡಿಸುವ ಫಲವೃಕ್ಷಗಳನ್ನು ನಾಟಿಸಿದವನ ವಂಶವು ಆಕಲ್ಪಾಂತವಾಗುವುದು.

ಈಗ ಗೃಹಸ್ಥ ಧರ್ಮವನ್ನು ನಿರೂಪಿಸುವೆನು, ಕೇಳು ! ಗೃಹಸ್ಥನು ನ್ಯಾಯಾರ್ತಧನನು, ಜಿತೇಂದ್ರಿಯನು, ಸ್ವದಾರರತನು, ಬ್ರಹ್ಮವಿಚಾರತತ್ಪರನು, ಸುಜನ ಹಿತಚಿಂತಕನು ಆಗಿರಬೇಕು. ಅಗ್ನಿಯಲ್ಲಿ ಆಹುತಿಗಳಿಂದ ದೇವತೆಗಳನ್ನೂ, ವೇದಶಾಸ್ತ್ರಧ್ಯಯನದಿಂದ ಋಷಿಗಳನ್ನೂ, ಶ್ರಾದ್ಧತರ್ಪಣಗಳಿಂದ ಪಿತೃಗಳನ್ನೂ ಅನ್ನ ಜಲಾದಿ ದಾನದಿಂದ ಮನುಜರನ್ನೂ, ಬಲಿಗ್ರಾಸಾದಿಗಳಿಂದ ಭೂತಗಳನ್ನೂ, ಯಥಾ ಯೋಗ್ಯವಾಗಿ, ಸತ್ಕರಿಸಬೇಕು. ವೈಶ್ವದೇವವನ್ನೆಂದಿಗೂ ಬಿಡಬಾರದು. ಬಂಧು ಪರಿವಾರ, ಸಖಿಗುರುಗಳು, ಅತಿಥಿಗಳನ್ನು ತೃಪ್ತಿಪಡಿಸಿ ತಾನು ಸ್ವೀಕರಿಸಬೇಕು. ಇಂತಹ ಗೃಹಸ್ಥನು ಇಹಪರ ಸೌಖ್ಯಗಳನ್ನು ಹೊಂದುವನು.

ಸುಮನೋ ಜನರನ್ನು ಸುಮನಸ್ಸಿನಿಂದ ಸುಮನೋ ಗಂಧ ಧೂಪ ದೀಪ ನೈವೇದ್ಯಗಳಿಂದ ಪೂಜಿಸಬೇಕು. ಓಷಧಿಗಳು ( ಗಿಡಬಳ್ಳಿಗಳು) ಅಮೃತಮಯವಾಗಿವೆ.

ಅವುಗಳಲ್ಲಿ ಪುಷ್ಪಫಲವಂತಗಳು ಶ್ರೇಷ್ಠಗಳು. ದೇವತೆಗಳನ್ನು ಪುಷ್ಪಗಳಿಂದ ಪೂಜಿಸಿದವರು ಒಳ್ಳೆಯ ಮನಸ್ಸುಳ್ಳವರಾಗುವರು. ಅಂತೆಯೇ ಪುಷ್ಪಗಳಿಂದ ಸುಮನೋ ನಾಮವಿದೆ. ಅದರ ಪೂಜೆಗೊಂಡ ಅಮರರು ಪ್ರೀತರಾಗುವುದರಿಂದ, ಅವರಿಗೂ ಸುಮನೋ ನಾಮಧೇಯವಿದೆ. ಸುಗಂಧ, ಸುರೂಪ, ಮೃದುಗಳಾದ ಧವಳ ಸುಮಗಳನ್ನು ದೇವತೆಗಳು ಇಷ್ಟಪಡುವರು. ಕಮಲ, ಜಾಜಿ, ತುಲಸಿ, ಮಲ್ಲಿಗೆ, ಸಂಪಿಗೆಗಳು ದೇವತಾಪ್ರೀತಿ ಸಂಪಾದಕವಾಗಿವೆ. ಯಕ್ಷಪೂಜೆಗೆ ಜಲಸಂಭವ ಸುಮಗಳನ್ನೂ, ಶಾತ್ರವಾಭಿಚಾರಿಕ ಕಾರ್ಯದಲ್ಲಿ ರಕ್ತವರ್ಣ ಸುಗಮಗಳನ್ನೂ ಬಳಸುವರು.

ದೇವಾಲಯಾಂಗಣದ ಸುಮಗಳನ್ನೂ, ಶ್ಮಶಾನ ದೇಶದ ಹೂಗಳನ್ನೂ ಶಾಂತಿಕ ಪೌಷ್ಟಿಕ ಕಾರ್ಯಗಳಾದ ವಿವಾಹಾದಿಗಳಲ್ಲಿ ಉಪಯೋಗಿಸಬಾರದು. ದೇವ ಪ್ರೀತಿಯಿಂದ ಸಂಪತ್ತು, ಪಿತೃಪ್ರೀತಿಯಿಂದ ಸಂತಾನ, ಋಷಿಪ್ರೀತಿಯಿಂದ ಜ್ಞಾನ, ನರಪ್ರೀತಿಯಿಂದ ಕೀರ್ತಿ, ಭೂತಪ್ರೀತಿಯಿಂದ ಆಯುಸ್ಸನ್ನು ಮನುಜರು ಹೊಂದುವರು. ಅಗರು, ಗುಗ್ಗಿಲ, ಕರ್ಪೂರ, ಸಾಂಬ್ರಾಣಿ, ತುಲಸಿ, ಕಚೋಲ, ಕೋಷ್ಟ, ಶ್ರೀಗಂಧ, ತುಪ್ಪ, ತುಂಗಿಗೆಡ್ಡೆ ಈ ಹತ್ತು ವಸ್ತುಗಳಿಂದ ತಯಾರಿಸಿದ ಧೂಪವು ದೇವತಾಪ್ರಿಯವಾಗಿದೆ. ದೀಪವನ್ನಿಡುವುದರಿಂದ ತಾಮಸ ಭೂತ ರಕ್ಷೋ ಯಕ್ಷ ಪಿಶಾಚಾದಿಗಳು ದೂರವಾಗಿ, ಶ್ರೀವಿಭವ ಕಾಂತಿಗಳು ತುಂಬಿಬರುವವು. ದೀಪಕ್ಕೆ ಘೃತ ತೈಲಗಳು ಪ್ರಶಸ್ತಗಳು. ದೀಪವು ನಂದಿಹೋಗದಂತೆ ಎಣ್ಣೆಯನ್ನಿಡುವುದೂ, ಬತ್ತಿಯನ್ನು ಚಾಚುವುದೂ ಕೂಡ ದೀಪದಾನ ಸಮಪುಣ್ಯವಾಗಿದೆ. ಗುಡಿ ದೀಪವನ್ನು ಆರಿಸಿದನು ಅಂಧನಾಗುವನು. ಗುಡಿಗೆ, ರಥ್ಯಾಮಧ್ಯದಲ್ಲಿ ದೀಪವನ್ನಿಡಿಸಿದವನಿಗೆ ಜ್ಞಾನಸಂಪತ್ತುಗಳು ಸಿದ್ಧಿಸುವವು. ದೀಪಕ್ಕೆ ಮೇದೋಮಜ್ಜಾದಿಗಳು ನಿಷಿದ್ಧಗಳು.

ಗೃಹಸ್ಥನು ದೇವತೆಗಳಿಗೆ ನಿವೇದಿತವಾಗದ ಅನ್ನವನ್ನು ಉಣ್ಣಬಾರದು. ಅದು ಅಮೇಧ್ಯವೆನಿಸುವುದು. ದಧಿ, ದುಗ್ಧ, ಘೃತ, ಮಧು, ಶರ್ಕರಾ ಭಕ್ಷ್ಯ, ಲೇಹ್ಯ, ಚೋಷ್ಯ, ಪಾನೀಯಗಳನ್ನು ದೇವದೇವನಿಗಿತ್ತು, ಅನಂತರ ಬ್ರಹ್ಮರುದ್ರಾದಿಗಳಿಗೂ ಸಮರ್ಪಿಸಿ, ವೈಶ್ವದೇವವನ್ನು ಮಾಡಿ ಸ್ವೀಕರಿಸಿದ ನರನು ಚಾಂದ್ರಾಯಣ ಶತದಷ್ಟು ಪಾಪನಾಶನವನ್ನೂ ಅಶ್ವಮೇಧ ಶತದಷ್ಟು ಪುಣ್ಯಲಾಭವನ್ನೂ ಹೊಂದುವನು. ಹಿಂದೆ ನಹುಷನು ಸಾತ್ವಿಕ ಧರ್ಮಗಳನ್ನು ಅನುಷ್ಠಿಸಿ, ಪ್ರಜಾರಂಜಕನಾಗಿದ್ದನು. ದಿನದಿನವೂ ಬಿಡದೆ ಗೃಹದಲ್ಲಿ ಶ್ರೀರಮಣನಾದಿ ದೇವತೆಗಳ ಪೂಜೆಯನ್ನು ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಸ್ನಾನ, ವಸ್ತ್ರ ಸುಮಂಗಲದ್ರವ್ಯ, ಗಂಧ, ಅಕ್ಷತಾ, ಪುಷ್ಪ, ತುಲಸಿ, ದೂರ್ವಾ, ಬಿಲ್ವ, ಧೂಪ ದೀಪ, ನೈವೇದ್ಯ, ಮಂಗಳಾರಾರ್ತಿಕಾ, ಮಂತ್ರಪುಷ್ಪ, ಪ್ರದಕ್ಷಿಣ ನಮಸ್ಕಾರ, ಸರ್ವ ಸಮರ್ಪಣಗಳಿಂದ ಕ್ರಮವಾಗಿ ಮಾಡಿ, ಆ ಪುಣ್ಯದಿಂದ ದೇವೇಂದ್ರ ಪದವಿಯನ್ನು ಹೊಂದಿದನು.

ಅದೇ ನಹುಷನು ದೇವೇಂದ್ರಾದಿ ದೇವತೆಗಳಿಗೂ, ಅಗಸ್ತ್ಯಾದಿ ಋಷಿಗಳಿಗೂ ಅಪರಾಧವನ್ನೆಸಗಿ, ನಾಕೇಶಪದವಿಯಿಂದ ಭ್ರಷ್ಟನಾಗಿ, ಅಜಗರನಾಗಿ ಬಿದ್ದನು. ಅವನನ್ನು

ಆ ಯೋನಿಯಿಂದ ಬಿಡಿಸಲು ನೀವು ಭೀಮಧರ್ಮರು ಕಾರಣರಾದದ್ದೂ ಕೂಡ, ಅವನು ಹಿಂದೆ ಮಾಡಿದ ಪುಣ್ಯವಿಶೇಷದಿಂದಲೇ ಎಂದು ತಿಳಿ!

ಗೃಹಸ್ಥನಿಗೆ ಬ್ರಹ್ಮಸ್ವಾಪಹಾರವು ಸಲ್ಲದು. ಬ್ರಹ್ಮಸ್ವವನ್ನಪಹರಿಸಿದವನ ಕುಲವು ನಿರ್ಮೂಲವಾಗುವುದು. ಅವನು ಚಂಡಾಲಾದಿ ಯೋನಿಯಲ್ಲಿ ಬೀಳುವನು.

ಪುಣ್ಯದಿಂದ ಸ್ವರ್ಗವನ್ನು ಪೊಂದುವ ಗೃಹಸ್ಥನು ಅಲ್ಲಿ ತನ್ನ ಪುಣ್ಯಕ್ಕೆ ಸಮವಾದ ಭೋಗಗಳನ್ನು ಮಾತ್ರ ಹೊಂದುವನು. ಸ್ವರ್ಗದಲ್ಲಿ ಶೋಕವಿಲ್ಲ! ಗೌತಮನೆಂಬ ಮುನಿವರನು ವನದಲ್ಲಿ ಒಂದಾಶ್ರಮವನ್ನು ನಿರ್ಮಿಸಿ, ಅಲ್ಲಿದ್ದನು. ಅವನೊಂದು ದಿನ ಮಾತೃರಹಿತವಾದ ಶುಂಡಾಲಶಿಶುವನ್ನೊಂದನ್ನು ನೋಡಿ, ಕೃಪೆಗೊಂಡು, ಅದನ್ನು ಸಾಕಿ, ಸಲಹಿದನು. ಕಾಲಕ್ರಮದಿ ಅದು ದೊಡ್ಡದಾಗಿ ಬೆಳೆಯಿತು. ಆ ದೇಶವನ್ನು ಆಗ ಧೃತರಾಷ್ಟ್ರನೆಂಬ ರಾಜನು ಆಳುತ್ತಿದ್ದನು. ಇಂದ್ರನು ಆ ರಾಜನ ರೂಪದಿಂದ ಗೌತಮ ಕುಲಜಾತವಿಪ್ರನಿಗೆ ಕಾಣಿಸಿ, ಆ ಗಜರಾಜನನ್ನು ತನಗೆ ಕೊಡುವಂತೆ ಪ್ರಾರ್ಥಿಸಿದನು.

ಗೌತಮನು, 'ರಾಜನ್! ಇದು ಮನುಜರಂತೆ ತಿಳಿದು ವರ್ತಿಸುತ್ತಿದೆ! ಸಮಿತ್ತನ್ನು ತಂದುಕೊಟ್ಟು, ಆಶ್ರಮವನ್ನು ಕಾದಿರುವುದು. ಇಂತಹ ಜಂತುವನ್ನು ನಾನು ಕೊಡಲಾರೆ' ಎಂದನು. ಆಗ ಕಪಟರಾಜನು, 'ಮುನಿಗಳಿಗೇಕೆ ಆನೆ? ಸಾವಿರ ಆಕಳುಗಳನ್ನು ಕೊಡುವೆನು' ಎಂದನು. 'ಚಿಕ್ಕಮರಿಯಾಗಿ, ತಾಯಿಯನ್ನು ಕಳೆದು ಕೊಂಡು ನನ್ನ ಪಾಲಿಗೆ ಬಂದ ಆನೆಯನ್ನು ಕೊಡುವುದಿಲ್ಲ. ಪುಣ್ಯಕರ್ಮಿಗಳಿಗೆ ಸುಖವೂ, ಪಾಪಿಗಳಿಗೆ ದುಃಖವೂ ಆಗುವುದಂತೆ ಯಮಸಭೆಯಲ್ಲಿ. ಅಲ್ಲಿಗೆ ಬಾ! ಅಲ್ಲಿ ಕೊಡುವೆನೀ ಆನೆಯನ್ನು! ಇಲ್ಲಲ್ಲ!' ಎಂದ ಮುನಿಗೆ ರಾಜನು, 'ಪಾಪಿಯು ನಾನಲ್ಲ; ಮಾತೃಪಿತೃ ಭಕ್ತರು ಅಲ್ಲಿ ಹೋಗುವುದೇನೋ ಸರಿ! ಅಷ್ಟು ಮಾತ್ರವಲ್ಲ ನನ್ನ ಪುಣ್ಯ'ವೆಂದನು. ಗೌತಮನು 'ಮಂದಾಕಿನಿ ತಟದಲ್ಲಿ ಕೊಡುವೆ'ನೆನಲು, ರಾಜನು 'ಅತಿಥಿಪೂಜಕರು, ಅಪ್ರಿತಗ್ರಹರಲ್ಲಿ ಪೋಗುವರು. ಅದನ್ನೂ ನಾನೊಲ್ಲೆನು' ಎಂದನು. 'ಮೇರುವನಕ್ಕೆ ಬರುವೆಯಾ?' ಎಂದ ಮುನಿಗೆ ರಾಜನು 'ಸತ್ಯದಯಾವಂತರು ಅಲ್ಲಿ ಸೇರುವರು - ನನಗದು ಸಾಲದು' ಎಂದನು. ಮುನಿಯು 'ಉತ್ತರ ಕುರುಭೂಮಿಗೆ ಬಾ' ರೆಂದನು. ರಾಜನು, 'ಕಾಮ ಹಿಂಸಾದಿ ದೋಷರಹಿತರಿಗಾ ಪುಣ್ಯದೇಶವಹುದು; ನನ್ನ ಪುಣ್ಯಕ್ಕೆ ಅದು ಸರಿಯಲ್ಲ'ವೆಂದನು. ಇಂದು ಲೋಕಕ್ಕೆಂದರೆ, ರಾಜನು 'ದಾನರತರು, ಆದಾನವಿಮುಖರು ಸೇರುವ ಅದೂ ಸಾಲದು' ಎಂದನು. 'ಸೂರ್ಯಲೋಕದಲ್ಲಿ ಆನೆಯನ್ನು ಕೊಡುವೆ' ನೆಂದ ಮುನಿವರನಿಗೆ ರಾಜನು 'ತಪಸ್ಸ್ವಾಧ್ಯಾಯ ಪರರದಾಲೋಕದಲ್ಲಿ ನನಗೇನು ಮಹಾಪ್ರಯೋಜನ?' ಎಂದನು. ವರುಣಪುರಿಯನ್ನು ಅಗ್ನಿಹೋತ್ರಿಗತಿ ಎಂತಲೂ, ಇಂದ್ರಪುರಿಯನ್ನು ಯಜ್ಞರತರ ಲೋಕವೆಂತಲೂ, ರುದ್ರಲೋಕವನ್ನು ಅಶ್ವಮೇಧಿಗಳ ಲೋಕವೆಂತಲೂ, ಗೋಲೋಕವನ್ನು ಬ್ರಹ್ಮಚಾರಿ, ಗೋದಾನರತರ ಗತಿ ಎಂತಲೂ, ಬ್ರಹ್ಮ

ಲೋಕವನ್ನು ಆಧ್ಯಾತ್ಮನಿರತರ ಲೋಕವೆಂತಲೂ ವರ್ಣಿಸಿದ ರಾಜನು ದಿಟ್ಟಿಸಿ ನೋಡಿ, ತಿಳಿದು ಗೌತಮನಿಂತೆಂದನು:

'ಮಹಾನುಭಾವ! ಎಲ್ಲ ಲೋಕಗಳನ್ನು ಪ್ರಾಪ್ತಿಕಾರಣ ಸಮೇತವಾಗಿ ಕಂಡು ವರ್ಣಿಸುವ ನೀನು ಸಾಮಾನ್ಯ ರಾಜನಲ್ಲ. ನೀನು ದೇವೇಂದ್ರನೇ ಸರಿ! ಈ ಆನೆ ನನಗೆ ಮಗನಂತಿದೆ. ಇದನ್ನು ನನ್ನಿಂದ ಬೇರ್ಪಡಿಸಬೇಡ!' ಎಂದ ಮುನಿರಾಜನ ಜ್ಞಾನವಿಶೇಷಕ್ಕೆ ತಲೆದೂಗಿ, ದೇವೇಂದ್ರನು 'ಈ ಆನೆಯು ನಿನ್ನನ್ನು ತಂದೆಯಂತೆ ಮುಟ್ಟಿ, ಸವರಿ, ಕಾಲಿಗೆರಗಿ ಲಾಲಿಸುತ್ತಿದೆ. ಅಂತಹ ನಿಮ್ಮನ್ನು ನಾನೇಕೆ ಬೇರ್ಪಡಿಸಲಿ? ಮುನಿವರ! ನೀನೂ ನಿನ್ನಾನೆ ಇಬ್ಬರೂ ನನ್ನ ಸುರಲೋಕದಲ್ಲಿ ಸುಖವಾಗಿರಲು ಬನ್ನಿ!' ಎಂದು ಅನುಗ್ರಹಿಸಿದನು. ಗೌತಮನು ಗಜರಾಜನಿಂದ ಕೂಡಿ, ನಾಕ ಲೋಕವನ್ನು ಸೇರಿ ಸುಖವಾಗಿದ್ದನು. ಅಲ್ಲಿ ಗೌತಮನಿಗೆ ತನ್ನ ಪುಣ್ಯಸಮ ಸುಖವು ದೊರಕುತ್ತಿತ್ತು.

ಧರ್ಮಗಳಲ್ಲಿ ತಪಸ್ಸು ಬಲು ದೊಡ್ಡದಾಗಿದೆ. ತಪವೆಂದರೆ ನಿಯತಾಹಾರಿಯಾಗಿರುವುದು! ತಪಸ್ಸೆಂದರೆ ಸ್ವಾಧ್ಯಾಯ ಪ್ರವಚನಗಳು. ತಪಸ್ಸೆಂದರೆ ಬ್ರಹ್ಮಧ್ಯಾನವೂ ಅಹುದು. ಇವು ಕ್ರಮವಾಗಿ ಕಾಯಕ, ವಾಚನಿಕ, ಮಾನಸಿಕ ತಪಸ್ಸುಗಳಾಗಿವೆ. ಹಿಂದೆ ಭಗೀರಥನು ಪುಣ್ಯವಿಶೇಷದಿಂದ ಬ್ರಹ್ಮಸಭೆಗೆ ಹೋದನು. 'ಏನು ಪುಣ್ಯ ಮಾಡಿ ಇಲ್ಲಿಗೆ ಬಂದೆ?' ಎಂದು ಅಲ್ಲಿಯ ಜನರು ಕೇಳಿದರು. 'ಗೋದಾನ, ಭೂದಾನ, ಕನ್ಯಾದಾನ, ತೀರ್ಥಯಾತ್ರೆ, ಪಿತೃಸಮರ್ಚನೆ, ಅಶ್ವಮೇಧಾದಿ ಯಜ್ಞಗಳು ಎಲ್ಲವನ್ನೂ ಮಾಡಿರುವೆನು. ಆದರೆ ಅವುಗಳ ಪುಣ್ಯವಲ್ಲ ನನ್ನನ್ನಿಲ್ಲಿಗೆ ಕರೆತಂದುದು! ಯಜ್ಞವನ್ನು ಮಾಡುತ್ತಿದ್ದ ಬ್ರಾಹ್ಮಣರ ಯಜ್ಞಗಳಿಗೆ ಬಂದ ವಿಘ್ನಗಳನ್ನು ನಿದ್ರಾಹಾರಾದಿಗಳನ್ನು ತೊರೆದು ಎಚ್ಚರವಹಿಸಿ ನಾನು ನಿವಾರಿಸಿದೆನು. ಯಜ್ಞಗಳು ಮುಗಿದವು. ವಿಪ್ರರು ಪ್ರೀತರಾಗಿ 'ನಿಯತಾಹಾರನಾಗಿ ನಮ್ಮ ಯಜ್ಞವನ್ನು ರಕ್ಷಿಸಿದ ಪುಣ್ಯದಿಂದ ಬ್ರಹ್ಮಲೋಕವನ್ನು ಸೇರುವೆ!' ಎಂದು ವರವಿತ್ತರು. ಅಂತೆಯೇ ನಾನು ಸತ್ಯಲೋಕಕ್ಕೆ ಬಂದಿರುವೆನು' ಎಂದನು.

ನಿಯತಾಹಾರನಾಗದೆ ವಿರಕ್ತನಾಗನು; ವಿರಕ್ತನಾಗದೆ ಶ್ರೀಹರಿಭಕ್ತನಾಗನು; ಭಕ್ತನಾಗದೆ ಜಿಜ್ಞಾಸುನಾಗನು; ಜಿಜ್ಞಾಸುನಾಗದೆ ಜ್ಞಾನಿಯಾಗನು; ಜ್ಞಾನಿಯಾಗದೆ ಸತ್ಯಲೋಕವನ್ನು ಸೇರನು. ಆದುದರಿಂದ ಪ್ರಥಮ ಸಾಧನವಾದ ನಿಯತಾಹಾರತ್ವವನ್ನು ತಪವೆಂದು ನಿನಗೆ ವರ್ಣಿಸಿದೆನು.

ಇಂತು ಭೀಷ್ಮನು ನುಡಿಯಲು ಕೇಳಿ, ಧರ್ಮರಾಜಾದಿ ಪಾಂಡವರು ಪ್ರೀತರಾಗಿ, ತಾತನನ್ನೂ, ಜಗತ್ರಾತ್ರನಾದ ಶ್ರೀಕೃಷ್ಣನನ್ನೂ ಪೂಜಿಸಿದರು.

## ೧೦. ಆಚಾರ ಉಪವಾಸ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

ಭೀಷ್ಮನ ಉಪದೇಶವನ್ನು ಕೇಳಿ, ಧರ್ಮರಾಜನು ಇನ್ನೂ ತಿಳಿಯಲೆಣಿಸಿ, 'ತಾತ! ಶತಾಯುರ್ವೈ ಪುರುಷಃ ಎಂದು ವೇದವಚನವಿದೆ. ಆದರೆ ಲೋಕದಲ್ಲಿ ಬಾಲರೂ ಮೃತರಾಗುವುದನ್ನು ನೋಡುತ್ತಿರುವೆವು ! ಅದೆಂತು ? ಆಯುವು ವೃದ್ಧಿಯಾಗುವುದೆಂತು ? ಕ್ಷೀಣವಾಗುವುದೇತಕ್ಕೆ ? ' ಎಂದು ಕೇಳಿದನು.

ಆ ಮಾತಿಗೆ ಅಖಿಲಧರ್ಮವೇದಿಯಾದ ಶಾಂತನವನು ಇಂತೆಂದನು: 'ಆಚಾರವು ಪ್ರಥಮ ಧರ್ಮವಾಗಿದೆ. ಆಚಾರದಿಂದ ಆಯುವು ಹೆಚ್ಚುವುದಲ್ಲದೆ, ಶ್ರೀಕೀರ್ತಿಗಳೂ ಸಿದ್ಧಿಸುವವು. ದುರಾಚಾರದಿಂದ ಆಯುವು ಕಡಿಮೆಯಾಗುವುದು. ದುರಾಚಾರಿಯನ್ನು ಸರ್ವಭೂತಗಳು ಪರಿಭವಿಸುವವು. ಸಾಧುಜನರು ಸದಾಚಾರವನ್ನೆಂದಿಗೂ ಬಿಡರು. ವರ್ಣಾಶ್ರಮಗಳಿಗೆ ತಕ್ಕಂತೆ ಆಚಾರವನ್ನು ಭಾವಿಸುವ ನರನು ದೀರ್ಘಾಯುರಾರೋಗ್ಯವಂತನಾಗುವನು.

ಗುರುವಚನವನ್ನು ಮೀರುವುದು, ದುಶ್ಶೀಲನಾಗಿರುವುದು, ಉದಯಾಸ್ತಮಯ ಕಾಲಗಳಲ್ಲಿ ಸೂರ್ಯನನ್ನು ನೋಡುವುದು, ಕ್ರೋಧ, ಹಿಂಸೆ, ಅಸತ್ಯ, ಪರದಾರ ಗಮನ, ಇವು ಆಯುಃಕ್ಷೀಣ ಕಾರಣಗಳಾಗಿವೆ. ಪರದಾರೆ ಅದರಲ್ಲಿ ಗುರು, ವೃದ್ಧ, ರಾಜ, ಬಾಲ, ಬಾಂಧವ, ಭೂಸುರ, ವೈದ್ಯ, ಭೃತ್ಯ ಮುಂತಾದವರ ಸತಿಯರನ್ನು ಕಲೆಯುವುದು. ಶೀಘ್ರಾಯುಃಕ್ಷಯ ಕಾರಣಗಳು. ಪುಣ್ಯ ಕಾರ್ಯಗಳನ್ನು ತಿಳಿದು ಮಾಡು ! ಆಯುರ್ವೃದ್ಧಿಯಾಗುವುದು. ಪಾಪಕಾರ್ಯಗಳಿಂದ ಆಯುಃಕ್ಷೀಣವಾಗುವುದೆಂದು ತಿಳಿದು ಅವನ್ನು ಬಿಡು!

ದೇವಗೃಹ, ವೀಥಿ, ಗೋಶಾಲೆ, ಸಭೆ, ಸಸ್ಯಕ್ಷೇತ್ರ, ಉದ್ಯಾನಗಳಲ್ಲಿ ಮಲ ಮೂತ್ರ ವಿಸರ್ಜನವನ್ನು ಮಾಡಬಾರದು. ಕೂತು ಉಣ್ಣಬೇಕಾಗಲಿ ನಿಂತಲ್ಲ, ಪೂರ್ವಾಭಿಮುಖವಾಗಿ ಉಣ್ಣುವುದೊಳಿತು. ನಿಂತು ಮೂತ್ರ ವಿಸರ್ಜನವು ನಿಂದನೀಯವಾಗಿದೆ. ಅಗ್ನಿ, ಗೋವು, ವಿಪ್ರ ಇವರನ್ನು ಎಂಜಲ ಕೈಯಿಂದ ಮುಟ್ಟಬಾರದು. ಕಂಚಿನ ಆಸನದಲ್ಲಿ, ಒಡೆದ ಮಣೆಯಲ್ಲಿ ಕೂಡಬಾರದು. ವೃದ್ಧನು ಬಂದಾಗ ಯುವಕನ ಪ್ರಾಣಶಕ್ತಿಗಳು ಮೇಲೆಕ್ಕೇಳುವವು ! ಅವನು ಎದ್ದುನಿಂತರೆ, ಅವು ಸಮಸ್ಥಾನದಲ್ಲಿ ಬಂದು ಮೊದಲಿನಂತೆ ಸುಸ್ಥಿರವಾಗುವವು. ಗುರುಹಿರಿಯರಿಗೆ ಮತ್ತು ಜ್ಞಾನಿಗಳಿಗೆ ನಮಸ್ಕರಿಸುವುದು ಕರ್ತವ್ಯವಾಗಿದೆ. ಅಧ್ಯಯನ ಕಾಲದಲ್ಲಿ ತಲೆ ಮುಟ್ಟಕೋಬಾರದು. ತಲೆಯನ್ನು ಕೆರೆದುಕೊಳ್ಳಬಾರದು. ಅಶುಚಿಯಾಗಿರಬಾರದು.

ಗುರುವಿನಿಂದ ವೈರವು ಮಹಾಪಾಪವು! ಒಂದು ವೇಳೆ ಆತನು ಕೋಪಿಸಿದರೆ, ಸಮಾಧಾನಪಡಿಸಬೇಕಾಗಲಿ, ನಿಂದಿಸಬಾರದು. ಗುರುನಿಂದೆ, ಅಸತ್ಯಗಳಿಂದ ಆಯುಃಕ್ಷೀಣವಾಗುವುದು. ವಿಪ್ರ, ಗೋ, ರಾಜ, ವೃದ್ಧ ದುರ್ಬಲ, ಭಾರವಹ, ಗರ್ಭಿಣಿ, ಗುರುಗಳಿಗೆ ಹಾದಿ ಬಿಟ್ಟು ನಿಲ್ಲಬೇಕು. ವಿಪ್ರ, ಪುಷ್ಪ, ಸುಮಂಗಲಿಯರನ್ನು ಬಲಕ್ಕೆ ಹಾಕಿ, ಹೋಗಬೇಕು. ಒಂದು ಕಾಲಿನಿಂದ ಇನ್ನೊಂದನ್ನು ತಿಕ್ಕಬಾರದು. ಒದ್ದೆ ಕಾಲನ್ನು ಒರೆಸದಿರಬಾರದು. ಪೂರ್ಣಿಮಾ, ಅಮಾವಾಸ್ಯಾ, ಏಕಾದಶಿ, ಭಾನುವಾರ,

ದಶಮೀ, ದ್ವಾದಶಿಗಳಲ್ಲಿ ಬ್ರಹ್ಮಚರ್ಯವನ್ನು ಪಾಲಿಸಿರಬೇಕು. ಚಾಡಿಮಾತು, ಕಠಿನ ವಚನಗಳು ಕೂಡದು.

ಅಂಗಹೀನ, ರೂಪಹೀನ, ದರಿದ್ರ, ವಿದ್ಯಾಹೀನ, ದೀನರನ್ನು ನೋಡಿ ನಗಬಾರದು. ವೇದನಿಂದೆ, ದೇವತಾನಿಂದೆ, ಸಂಬಳಕ್ಕಾಗಿ ದೇವಪೂಜೆ, ದುಡ್ಡಿಗೆ ಜ್ಯೋತಿಷ್ಯ, ಇವೆಲ್ಲವೂ ನಿಂದ್ಯಕರ್ಮಗಳು. ಸಂಧ್ಯಾಕಾಲದಲ್ಲಿ ನಿದ್ರಿಸಬಾರದು. ಮಲಾದಿ ವಿಸರ್ಜನ ಕಾಲದಿ ಮಾತಾಡಬಾರದು. ಬೆಳಗಾಗಿ ಎದ್ದು, ತಂದೆ ತಾಯಿಗಳಿಗೆ ನಮಸ್ಕರಿಸಬೇಕು. ದೇವತಾರ್ಚನಕ್ಕೆ ಮುಂಚೆ ಇವರಿಗೆ ಬಿಟ್ಟು ಅನ್ಯರಿಗೆ ವಂದಿಸಬಾರದು. ಗರ್ಭಿಣೀ ಸಂಯೋಗವು ಆಯುಕ್ಷೀಣವಾಗಿದೆ. ಉತ್ತರಕ್ಕೆ ತಲೆ ಮಾಡಿ ಮಲಗಬಾರದು. ಉತ್ತರಮುಖನಾಗಿ ಉಣ್ಣಬಾರದು. ಬಿಳಿ, ಹಸರು, ಪಾಟಲವರ್ಣದ ಪುಷ್ಪಗಳು ಧರಿಸಲಹುದು; ಅತಿ ರಕ್ತಗಳಲ್ಲ. ಇನ್ನೊಬ್ಬರು ಉಟ್ಟು ಬಿಟ್ಟ ಬಟ್ಟೆಯನ್ನು ಉಡಬಾರದು.

ವಟಫಲ, ಅಶ್ವತ್ಥಫಲ, ಅತ್ತಿಹಣ್ಣುಗಳನ್ನು ತಿನ್ನಬಾರದು. ಇನ್ನೊಬ್ಬರು ಮೂಸಿದ, ರುಚಿ ನೋಡಿದ ಅನ್ನವನ್ನು ಉಣ್ಣಬಾರದು. ಒಂದು ಪಾತ್ರೆಯಲ್ಲಿ ಇಬ್ಬರು ಮೂವರು ಕಲೆತು ಉಣ್ಣಬಾರದು. ತಿನ್ನುತ್ತಿರುವ ಅನ್ನಾದಿಗಳನ್ನು ಉಪ್ಪು-ಕಾರ-ಹುಳಿ-ಕಹಿ ಎಂದು ನಿಂದಿಸಬಾರದು. ರಾತ್ರಿಯಲ್ಲಿ ಮೊಸರು, ಜೇನು ಸೇವಿಸಬಾರದು. ರಾತ್ರಿ ಹಿಟ್ಟು ಕೂಡ ನಿಷಿದ್ಧವಾಗಿದೆ. ಪಂಕ್ತಿಯಲ್ಲಿ ಭೇದ ಮಾಡಿ ಬಡಿಸುವುದು ವಿಷಭೋಜನ ಸಮವೆನಿಸುವುದು. ತಾನುಂಡು ಮಿಕ್ಕ ತುಪ್ಪ, ಜೇನು, ಹಿಟ್ಟು, ಮೊಸರು, ಪಾಯಸ, ನೀರುಗಳನ್ನು ಇತರರಿಗೆ ಕೊಡಬಾರದು.

ಅಂಗುಳ್ಯಗ್ರಗಳು ದೇವತೀರ್ಥವು; ಕಿರುಬೆರಳ ಸಂಧಿಯು ಋಷಿತೀರ್ಥವು; ಬಲಕೈಯ ಬಲಭಾಗವು ಪಿತೃತೀರ್ಥವು; ಆಯಾ ಭಾಗಗಳಿಂದ ಅವರಿಗೆ ತರ್ಪಣಾದಿಗಳನ್ನು ಕೊಡಬೇಕು. ಆಚಮನದಿಂದ ಎಲ್ಲ ಕಾರ್ಯಗಳನ್ನು ಪ್ರಾರಂಭಿಸಬೇಕು. ದೇವಪೂಜಾ, ಪಾಠ, ಜಪ, ತರ್ಪಣಾದಿಗಳಲ್ಲಿ ಸಿಟ್ಟಾಗುವುದು ಕೂಡದು. ಕಠಿನ ಭಾಷಣವು ಸರ್ವದಾ ವರ್ಜ್ಯವಾಗಿದೆ. ಕೆಟ್ಟುಹೋದ ಕನ್ಯೆಯನ್ನು ಸ್ವೀಕರಿಸಬಾರದು. ಪತಿತೆ, ಮುಟ್ಟಾದವಳು, ನಗ್ನಾಂಗಿಯರನ್ನು ದಿಟ್ಟಿಸಿ ನೋಡಬಾರದು. ಆಚಮನದಿಂದ ಶುದ್ಧನಾಗುವನೆಂಬ ವಿಧಿಯು ಇದೆ. ಆಚಮನಕ್ಕೆ ಜಲವಿರದಿರೆ, ಸೂರ್ಯನನ್ನೋ, ಅಗ್ನಿಯನ್ನೋ, ನೋಡಿ, ಬಲಕಿವಿಯನ್ನು ಮುಟ್ಟಿ ಆಚಮಿಸುವ ಭಗವನ್ನಾಮಗಳನ್ನು ಉಚ್ಚರಿಸಬೇಕು.

ತಂ//, ಗುರು, ಮಿತ್ರ, ಪಂಡಿತ, ಸದ್ವಂಶಜ, ಬಡವ, ವಿಪ್ರ ಮುಂತಾದವರಿಗೆ ಸಹಾಯ ಮಾಡುವುದರಿಂದ ಆಯಸ್ಸು ಹೆಚ್ಚುವುದು. ಪಾರಾವತಗಳು, ಗಿಳಿಗಳು, ಶಾರಿಕಾಪಕ್ಷಿ, ಹೂಬಳ್ಳಿಗಳು, ಜರೀವಸ್ತ್ರಗಳು ಇವು ಗೃಹಮಂಗಳಗಳೆನಿಸಿವೆ. ಕನಡಿಯೂ ಶೋಭಾಕರವೆನಿಸಿದೆ.

ಗೂಬೆ, ಹದ್ದು, ಕಾಗೆ, ಮೊದಲಾದವು ಮನೆಹೊಕ್ಕರೆ ಶಾಂತಿಯನ್ನು ಮಾಡಿಸಬೇಕು. ಸಾಯಂಕಾಲದಲ್ಲಿ ಊಟ, ನಿದ್ರೆ, ಭೋಗ, ಪಿತೃಕಾರ್ಯಗಳು ಮಾಡಬಾರದು. ದೇವಕಾರ್ಯಗಳನ್ನು ಪ್ರಾಙ್ಮುಖನಾಗಿ ಅಥವಾ ಉದಙ್ಮುಖನಾಗಿಯು, ಪಿತೃಕಾರ್ಯವನ್ನು ದಕ್ಷಿಣಾಮುಖನಾಗಿಯು ಮಾಡಬೇಕು. ನಕ್ಷತ್ರ, ಯೋಗ, ವಾರ, ತಿಥಿ, ಕರಣಗಳನ್ನು ತಿಳಿದ ಜ್ಯೋತಿಷ್ಕರಿಂದ ಅರಿತು ಹಬ್ಬ, ವ್ರತ, ವಿವಾಹ, ಉಪನಯನ, ಕ್ಷೌರ ಮುಂತಾದುವನ್ನು ಆಚರಿಸಬೇಕು.

ಸಪಿಂಡೀಕರಣದಲ್ಲಿಯು, ಏಕೋದ್ದಿಷ್ಟದಲ್ಲಿಯು ಊಟವನ್ನು ಮಾಡಬಾರದು. ಮಾಡಿದವನು ಮನೆಗೆ ಬರದೆ, ಒಂದು ವರ್ಷದ ತೀರ್ಥಯಾತ್ರೆಯನ್ನು ಮಾಡಿ ಬರಬೇಕು. ಅಥವಾ ಹತ್ತುಸಾವಿರ ಗಾಯತ್ರೀ ಜಪ ಮಾಡಬೇಕು. ಕೆರವನ್ನು ಧರಿಸಿ ಯಾತ್ರೆ ಮಾಡಬಾರದು. ಕರೆಯದೆ ಊಟಕ್ಕೆ ಹೋಗಬಾರದು. ತಂದೆತಾಯಂದಿರು ಮಕ್ಕಳಿಗೆ ಹಿತವನ್ನು ಉಪದೇಶಿಸದೆ ಬಿಡಬಾರದು.

ರಾಜನು ಅಶ್ವಾದಿ ವಾಹನ ಚತುರನು, ನಾನಾವಿಧಾಯುಧ ನಿಪುಣನು, ಆಗಿ ದಂಡನೀತಿ, ಅರ್ಥಶಾಸ್ತ್ರಗಳನ್ನು ಚನ್ನಾಗಿ ಕಲಿತಿರಬೇಕು. ತರುಣಿಯು ರಜಸ್ವಲೆಯಾದಾಗ ಮುಟ್ಟಬಾರದು. ನಾಲ್ಕನೆಯ ದಿನ ರಾತ್ರಿಯು ಆಕೆ ಸ್ವೀಕಾರ ಯೋಗ್ಯಳಾಗುವಳು. ಐದು, ಏಳು, ಇಂತು ಬೆಸದಿನಗಳಲ್ಲಿ ಗರ್ಭಧಾರಣವಾದರೆ ಹೆಣ್ಣು ಕೂಸು; ನಾಲ್ಕು, ಆರು, ಎಂಟು ಇಂತು ಸರಿದಿವಸಗಳಲ್ಲಾದರೆ ಗಂಡು ಕೂಸು ಜನಿಸುವುದೆಂದು ಕಾಮಶಾಸ್ತ್ರವಿದರು ಹೇಳುವರು. ಹದಿನಾರು ದಿನಗಳವರೆಗೂ ಆರ್ತವಕಾಲವೆಂದು ತಿಳಿ! ಆರ್ತವದಲ್ಲಿ ತನ್ನ ಸತಿಯಲ್ಲಿ ಸೇರದಿರಬಾರದು. ನಿಷಿದ್ಧವಾದ ಏಕಾದಶಿ, ಅಮಾವಾಸ್ಯ, ಮುಂತಾದ ತಿಥಿಗಳಲ್ಲಿ ಬಿಟ್ಟು, ನಡೆಸುವ ಸ್ವಸ್ತ್ರೀಸಂಗವು ಆಯುರ್ವೃದ್ಧಿ ಕಾರಣವಾಗಿದೆ.

ಎಲ್ಲ ಆಚಾರಗಳಲ್ಲಿಯು ಭೂತದಯೆಯು, ವಿಷ್ಣುಭಕ್ತಿಯು ದೊಡ್ಡವಾಗಿವೆ. ಎಲ್ಲ ವರ್ಣದವರಿಗೆ ತಕ್ಕ ಜ್ಞಾನವನ್ನು ಕೊಡುವುದರಿಂದ ಸದಯರೂ, ಶ್ರೀಹರಿಯನ್ನು ಭಜಿಸಿ ಸಭಕ್ತರೂ ಆಗಿ ಮುನಿಗಳು ತಾವು ಉದ್ಧೃತರಾಗುವುದಲ್ಲದೆ, ಇತರರನ್ನೂ ಉದ್ಧರಿಸುವರು.

ಧರ್ಮರಾಜನು 'ತಾತ! ಅಣ್ಣತಮ್ಮಂದಿರು ತಮ್ಮಲ್ಲಿ ತಾವು ಪ್ರವರ್ತಿಸುವ ಬಗೆ ಹೇಗೆ?' ಎಂದು ಕೇಳಲು, ಭೀಷ್ಮನಿಂತೆಂದನು:

"ಕೇಳು! ಅಣ್ಣನೆಂದರೆ ತಂದೆಗೆ ಸಮಾನನೆನಿಸಿರುವವನು. ತಮ್ಮಂದಿರು ಅವನನ್ನು ಗೌರವಿಸಬೇಕು. ಅಣ್ಣನೂ ತನ್ನ ಮಕ್ಕಳಂತೆ ಅವರನ್ನು ಪ್ರೀತಿಸಬೇಕು. ಅಣ್ಣನಾದವನೇ ದುಷ್ಟನಾದರೆ, ಸೋದರರು ತಮ್ಮ ಕೀರ್ತಿಗೆ ಕಳಂಕ ಬರದಂತೆ ಅವನನ್ನು ವರ್ಜಿಸಬೇಕು. ವಿಭೀಷಣನು ರಾವಣನನ್ನು ವರ್ಜಿಸಿ, ಸುಖಿಸಿದನು. ಅಣ್ಣ ತಮ್ಮಂದಿರು ಪರಸ್ಪರ ಸೌಹಾರ್ದದಿಂದಿದ್ದರೆ, ಅವರನ್ನು ಶ್ರೀಕೀರ್ತಿ ಸಂಪತ್ ಪ್ರಜಾ ಪ್ರೀತಿಗಳು ತಾವಾಗಿ ವರಿಸಿ ಬರುವವು. ಅವರು ಸೌಹಾರ್ದರಹಿತರಾದರೆ ಶ್ರೀಕೀರ್ತ್ಯಾದಿಗಳು ದೂರ ಸರಿವವು. ಕೌರವರು ಸೋದರಪ್ರೇಮರಹಿತರಾಗಿ ಕೆಟ್ಟರಲ್ಲವೇ? ಅಕ್ಕನನ್ನೂ ಅಮ್ಮನಂತೆ

ಕಾಣಬೇಕು. ಅಣ್ಣನ ಸತಿಯೂ ತಾಯಿಗೆ ಸಮಳಾಗಿ ಗೌರವಿಸಲ್ಪಡಬೇಕು. ಅಂತಹ ಅತ್ತಿಗೆಯನು ಅವಮಾನಿಸಿಯಲ್ಲವೇ ದುಶ್ಶಾಸನಾದಿ ಕೌರವರು ನಾಶವಾದರು?

ಜನಕನಿಗೆ ದಶಗುಣಿತ ಗೌರವನೀಯಳಾಗಿರುವಳು ಜನನಿಯು. ಜನನಿಗೆ ದಶಗುಣಿತ ಗೌರವನೀಯನಾಗಿರುವನು ಗುರುವು. ಬ್ರಹ್ಮವಿದ್ಯೋಪದೇಶಕನಾದ ಗುರುವು ಜನನೀ ಜನಕರಿಗಿಂತಲು ಪೂಜ್ಯನು. ಏತಕ್ಕೆಂದರೆ ಅವನೀವ ವಿದ್ಯಾಜನ್ಮವು ಜರಾಮರಣಹಾರಿಯಾಗಿದೆ.'

ಧರ್ಮರಾಜನು, 'ತಾತ! ಉಪವಾಸವೆಂದರೇನು? ಅದು ಯಾರಿಂದ ಎಂತು ಅನುಷ್ಠಿಸಲ್ಪಡಲಹುದು?' ಎಂದು ಕೇಳಿದನು. ಭೀಷ್ಮನಿಂತೆಂದನು:

'ಅಂಗಿರಸ ಮುನಿಯು ನನಗುಪದೇಶಿಸಿದ ಉಪವಾಸವಿಧಿಯನ್ನರುಹುವೆನು, ಕೇಳು. ಬ್ರಹ್ಮಕ್ಷತ್ರಿಯರು ಮೂರು ದಿನಗಳು ಉಪವಸಿಸಲಹುದು. ವೈಶ್ಯಶೂದ್ರರು ಒಂದು ದಿನ ಅಥವಾ ಎರಡು ಒಪ್ಪತ್ತುಗಳು ಉಪವಸಿಸಬಹುದು. ಪೂರ್ಣಿಮಾ, ಶುಕ್ಲಪಕ್ಷದ ಅಷ್ಟಮೀ, ಚತುರ್ದಶಿ, ಎರಡೂ ಪಕ್ಷಗಳ ಷಷ್ಠಿ, ಪಂಚಮೀ, ಏಕಾದಶೀ ದಿನತ್ರಯಗಳು ಉಪವಾಸ ಮಾಡಲಹುದು. ದಶಮೀ, ಏಕಾದಶಿ, ದ್ವಾದಶಿಯ ಉಪವಾಸವನ್ನು ಎಲ್ಲ ವರ್ಣದವರೂ ಅವಶ್ಯವಾಗಿ ಮಾಡಬೇಕು. ಒಂದು ತಿಂಗಳು ಏಕಭುಕ್ತವನ್ನಾಚರಿಸಿದವರು ಸುಂದರ ಪತ್ನಿಯನ್ನು, ಸತ್ಪುತ್ರರನ್ನು, ಧನಧಾನ್ಯಗಳನ್ನು ಬಹು ಕೀರ್ತಿಯನ್ನು ಪೊಂದುವರು. ಧಾರಣವನ್ನು ಮರುದಿನ ಪಾರಣವನ್ನು ಮಾಡುತ್ತಾ ಒಂದು ವರ್ಷ, ಅಥವಾ ಚಾತುರ್ಮಾಸ್ಯ ಅಥವಾ ಒಂದು ತಿಂಗಳು ಕಳೆದವರು ಶ್ರೀಹರಿಲೋಕವನ್ನು ಸೇರುವರು. ವ್ರತೋತಪವಾಸಾದಿಗಳೆಲ್ಲವೂ, ಕೇವಲ ದೇಹದಂಡಕ್ಕಲ್ಲದೆ, ಮನಃಶುದ್ಧಿ ವಿಷ್ಣುಪ್ರೀತಿಗಳಿಗಾಗಿಯೇ ಮಾಡಲ್ಪಡಬೇಕು. ಪಕ್ಷೋಪವಾಸ [ಪಾಡ್ಯ], ಮಾಸೋಪವಾಸ [ಹುಣ್ಣಿಮೆ] ಮಾಡಿದವರು ಬ್ರಹ್ಮಲೋಕವನ್ನು ಹೊಂದುವರು. ಯುಗಾನುಸಾರಿಯಾಗಿ, ದೇಶಕಾಲಗಳಿಗೆ ಮೀರದಂತೆ ಮಾಡುವ ಉಪವಾಸಾದಿಗಳು ಕೀರ್ತಿ ಪುಣ್ಯಗಳಿಗೆ ಕಾರಣವಾಗಿವೆ. ದಂಬಾರ್ಥವಾಗಿ ಮಾಡುವ ಉಪವಾಸಾದಿಗಳು ವ್ಯರ್ಥವೆಂದು ತಿಳಿ!

ಮಾತಿಗೆ ಮೀರಿದ ನಿಧಿಯಿಲ್ಲ ; ವೇದಗಳಿಗೆ ಹೆಚ್ಚಾದ ಶಾಸ್ತ್ರವಿಲ್ಲ, ಗುರುವಿಗೆ ಮಿಗಿಲಾದ ಬಂಧುವಿಲ್ಲ. ಶ್ರೀಹರಿಗೆ ಮೀರಿದ ದೈವವಿಲ್ಲ. ಇದು ತ್ರಿಧಾಸತ್ಯವು! ಪಾವನಗಳಲ್ಲಿ ವಿಪ್ರನು ಪಾವನತರನು; ಪಾವನತರಗಳಲ್ಲಿ ವೇದಗಳು ಪಾವನತಮಗಳು. ಅಲ್ಲಿ ಪ್ರತಿಪಾದಿತನಾಗಿರುವ ಶ್ರೀಮನ್ನಾರಾಯಣನು ಅತ್ಯಂತ ಪಾವನನಾಗಿರುವನು. ಒಂದು ಯುಗದ ಉಪವಾಸ ಮತ್ತು ಸಂತತ ಶ್ರೀಹರಿ ಸ್ಮರಣೆಯಿಂದ ದೇವತೆಗಳು ತಂತಮ್ಮ ಪದವಿಗಳನ್ನೂ, ಒಂದು ಸಾವಿರ ವರ್ಷದ ಉಪವಾಸದಿಂದ ಸನಕಾದಿ ಮುನಿಗಳು ಬ್ರಹ್ಮಪರೋಕ್ಷವನ್ನೂ, ಒಂದು ಸಾವಿರ ವರ್ಷದ ಏಕಭುಕ್ತ ನಿಯಮದಿಂದ ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನೂ ಹೊಂದಿದರು. ಮಹೋಪವಾಸ ವಿಧಿಯಿಂದ ಹೊಂದಲಾಗದ ಪುಣ್ಯಫಲವಿಲ್ಲ. ಉಪವಾಸದಿಂದ ಚಿತ್ತಶುದ್ಧಿಯು, ಇಂದ್ರಿಯ ಜಯವು ಲಭಿಸುವವು. ಅವೇ ಮುಂದೆ ಶ್ರವಣಾದಿ ಜನಿತ ಜ್ಞಾನಕ್ಕೆ ಅವಶ್ಯಸಾಧನಗಳೆನಿಸಿವೆ.'

ಧರ್ಮರಾಜನು 'ಗೃಹಸ್ಥನಿಗೆ ಯಜ್ಞದಾನ ತಪಸ್ಸುಗಳು ಅವಶ್ಯಾನುಷ್ಠೇಯವೆಂದು ತಿಳಿಸಿರುವೆ! ಧನಧಾನ್ಯ ಸಮೃದ್ಧಿಯು ಇಲ್ಲದಿರೆ ಯಜ್ಞವು ಸಂಪನ್ನವಾಗಲಾರದು. ಎಲ್ಲರೂ ಮಾಡಲನುವಾದ ಪುಣ್ಯಕರ್ಮವನ್ನು ನನಗೆ ತಿಳಿಸಿಕೊಡು!' ಎಂದು ಕೇಳಿದನು.

ಭೀಷ್ಮನಿಂತೆಂದನು: 'ರಾಜನ್! ಅಂತೆಯೇ ಅಂಗಿರಸನು ಉಪವಾಸ ವಿಧಿಯನ್ನು ಯಜ್ಞಪ್ರತಿನಿಧಿ ಎಂದು ಉಪದೇಶಿಸಿರುವನು. ಉಪವಾಸವೆಂದರೆ ಶರೀರಾಯಾಸವಿದೆ ನಿಜ! ಆದರೆ ಅದಕ್ಕಂಜಿ, ಉಪವಾಸವನ್ನು ಬಿಡಬಾರದು. ಎರಡು ಊಟಗಳಿಂದ ಮಾತ್ರ ತೃಪ್ತನಾಗಿ, ಮಧ್ಯದಲ್ಲಿ ಜಲಪಾನವನ್ನೂ ಬಿಟ್ಟು, ಪಾಪದೂರನು, ಶ್ರೀಹರಿಭಕ್ತನು ಆದ ಮನುಜನು ವೈಶ್ವದೇವಾದಿ ಹೋಮಗಳಿಂದಲೇ ಯಜ್ಞಫಲವನ್ನು ಹೊಂದುವನು.' ಆ ಮಾತನ್ನಾಲಿಸಿ ಧರ್ಮರಾಜನು 'ತಾತ! ಎಲ್ಲ ವ್ರತಯಾಗೋಪವಾಸಾದಿಗಳಿಗೆ ಫಲಪ್ರದನಾದ ಶ್ರೀಕೃಷ್ಣನ ಮಹಿಮೆಯನ್ನು ನನಗೆ ತಿಳಿಸಿಕೊಡು! ಶ್ರೀಹರಿಯು ಎಲ್ಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವನೆಂದು ಎಷ್ಟೋ ಸಲ ನನಗೆ ತಿಳಿಸಿರುವೆ! ಆದರೆ ಅಧ್ಯಾತ್ಮ ವಿದ್ಯಾ ವಿಷಯನಾದ ಶ್ರೀನಾರಾಯಣನ ಮಹಿಮೆಯನ್ನು ಕೇಳಿ, ಕೇಳಿ, ತೃಪ್ತನಾಗದಿರುವೆನು. ಯಾವ ಸರ್ವೋತ್ತಮನನ್ನು ತಿಳಿಯುವುದರಿಂದ ಸರ್ವ ಚರಾಚರ ಜಗತ್ತಿನ ಜ್ಞಾನಫಲವು ಕೈಗೂಡುವುದೋ, ಅಂತಹ ಶ್ರೀಹರಿಯ ಮಹಿಮೆಯನ್ನು ನನಗೆ ತಿಳಿಸಿ ಕೊಡು!' ಎಂದು ಕೇಳಿದನು. ಭೀಷ್ಮನು ಆತನಿಗೆ ಹರ ಸನತ್ಕುಮಾರ ಸಂವಾದವನ್ನು ನಿರೂಪಿಸಿ, ಉತ್ತರಿಸಿದನು.

## ೧೧. ಶ್ರೀಹರ ಸನತ್ಕುಮಾರ ಸಂವಾದ

ಶ್ರೀಶಿವನೊಂದು ಸಲ ತನ್ನ ತಮ್ಮನಾದ ಸನತ್ಕುಮಾರನನ್ನು ಕಾಣಹೋದನು. ಸನತ್ಕುಮಾರನು ಹರನಿಗೆ ಉಚಿತ ಪೂಜೆಗಳನ್ನು ಸಲ್ಲಿಸಿ, ಬಂದ ಕಾರಣವೇನೆಂದನು. ಶಿವನು 'ನಿನ್ನೊಡಗೂಡಿ ಶ್ರೀಹರಿ ಕಥಾಸಲ್ಲಾಪ ಸುಖವನ್ನು ಅನುಭವಿಸಲು ಬಂದೆನು. ಸಂಖ್ಯೆಗೆ ಬಂದ ತತ್ತ್ವಗಳಾವುವು? ಅಲ್ಲಿದ್ದು ನಡೆಸುವ ತತ್ತ್ವೇಶನ ಮಹಿಮೆ ಎಂತಹುದು? ಅವನನ್ನು ಹೇಗೆ ಧ್ಯಾನಿಸಲಹುದು?' ಎಂದು ಕೇಳಿದನು. ಆ ಮಾತನ್ನಾಲಿಸಿ ಸನತ್ಕುಮಾರ ಮುನಿಯಲ್ಲಿ ಆವಿಷ್ಟನಾಗಿದ್ದ ಸನತ್ಕುಮಾರ ಭಗವಂತನು, ರುದ್ರನಲ್ಲಿ ಕರುಣೆಸಿ, ಅಧ್ಯಾತ್ಮ ವಿಷಯಗಳನ್ನು ಉಪದೇಶಿಸಿದನು.

"ಹರ! ಕೇಳು! ಇಪ್ಪತ್ತುನಾಲ್ಕು ತತ್ತ್ವಗಳಿವೆ. ತತ್ತ್ವೇಶನು ಸರ್ವೋತ್ತಮನು ಆದ ಶ್ರೀಹರಿಯನ್ನು ಪಂಚವಿಂಶನೆಂಬರು. ಶ್ರೀನಾರಾಯಣನು ಸೃಷ್ಟಿಕಾಲದಲ್ಲಿ ಮೂಲಪ್ರಕೃತಿಯಿಂದ ಇಪ್ಪತ್ತುಮೂರು ತತ್ತ್ವಗಳನ್ನು ವಿಸ್ತರಗೊಳಿಸಿ, ಸೃಜಿಸಿದನು. ಆತನು ಅವುಗಳಲ್ಲಿ ಪ್ರವೇಶಿಸಿದನು. ಶ್ರೀಶ್ರೀರಮಣನ ಪ್ರವೇಶದಿಂದ ಆ ತತ್ತ್ವಗಳು ತಂತಮ್ಮ ಶಕ್ತಿಗಳನ್ನು ಹೊಂದಿ, ಕಾರ್ಯಸಮರ್ಥವಾದವು. ತತ್ತ್ವ, ತತ್ತ್ವೇಶದೇವತೆ ಅವನ ದೇಹಗಳಲ್ಲಿ ಪ್ರವೇಶ ಮಾಡಿದ ಶ್ರೀಶನಿಗೆ ಅಧ್ಯಾತ್ಮ, ಅಧಿಭೌತಿಕ, ಅಧಿದೈವಿಕವೆಂಬರು. ಎಲ್ಲ ಬ್ರಹ್ಮಾದಿದೇವತೆಗಳಿಗೆ ತತ್ತ್ವಾಧಿಪತ್ಯವನ್ನಿತ್ತು, ತನ್ನ ನಾಮರೂಪಗಳಂತೆ ನಾಮರೂಪಗಳನ್ನಿತ್ತು,

ತದಂತರ್ಯಾಮಿಯೂ ಆಗಿ ನಡೆಸುವ ಶ್ರೀಹರಿಯ ಜಗಜ್ಜನನ ಪಾಲನ ಸಂಹರಣ ನಿಯಮನಾದಿ ಲೀಲೆಯು ದುರೂಹ್ಯವು, ಅದ್ಭುತವು ಆಗಿದೆ. ಆತನಿಗೆ ಅಮೃತ, ಅಭಯನೆಂದು ಹೆಸರು. ಶ್ರುತಿಗಳಿಗೆಲ್ಲ ಮುಖ್ಯ ವಿಷಯನು ಶ್ರೀಶನೇ! ಆತನಿಂದ ಸೃಷ್ಟಿಯಲ್ಲಿ ಕ್ರಮವಾಗಿ ಹೊರಬಂದು, ಆತನಲ್ಲೇ ಮತ್ತೆ ಪ್ರಳಯದಲ್ಲಿ ಎಲ್ಲ ಜೀವಜಡಾತ್ಮಕ ಜಗವು ಲಯವನ್ನು ಹೊಂದಿ, ಆತನಿಂದ ಭಿನ್ನವೂ, ಅಸ್ವತಂತ್ರವೂ ಆಗಿರುತ್ತದೆ. [ ಹಿಂದೆ ನಿನಗೆ ತತ್ವ ರಹಸ್ಯಗಳನ್ನು ಪೂರ್ಣವಾಗಿ ಹೇಳಿರುವೆನು ಮೋಕ್ಷಧರ್ಮ ].

ಎಲ್ಲ ಜಂತುಗಳಲ್ಲಿರುವ ದೇವನು ಸಮನಾಗಿರುವನು. ಅಂದರೆ ಸ್ವಗತಭೇದವಿಲ್ಲ. ಎಲ್ಲ ರೂಪಗಳೂ ಪೂರ್ಣಜ್ಞಾನಾನಂದಾದಿ ಕಲ್ಯಾಣ ಗುಣಭರಿತಗಳೇ. ಆದರೆ ಅಧಿಷ್ಠಾನ ಯೋಗ್ಯತೆಗೆ ತಕ್ಕಂತೆ ಅಲ್ಲಿ ಅವು ಅಭಿವ್ಯಕ್ತವಾಗಿರುವವು. ಅವನನ್ನು ಓಂ ಎಂದು ಕರೆವರು. ಅಹಂ ಮಮಕಾರರಹಿತರಿಗೆ ಅದು ಗೋಚರವಾಗುವುದು. ಶೀತೋಷ್ಣ ಪ್ರಮುಖ ದ್ವಂದ್ವಗಳಿಗೆ ಅದು ನೆಲೆಯಾಗದು. ಅಪ್ರಮೇಯನು, ಸಾಕಲ್ಯೇನ, ಅವಿಜ್ಞೇಯನು, ಅಚಂಚಲನು, ನಿರ್ವಿಕಾರನು, ಅನಾದಿಮಧ್ಯಾಂತನು, ಅವ್ಯಯನು, ಅತೀಂದ್ರಿಯನು, ಸದಸದ್ಭಿನ್ನನು ಆದ ಪುಂಡರೀಕಾಕ್ಷನು ಸರ್ವ ಚರಾಚರ ಜಗದೇಕವಲ್ಲಭನಾಗಿ ವಿರಾಜಿಸುತ್ತಿರುವನು. ಸರ್ವಜ್ಞನಾದ ಶ್ರೀನಾರಾಯಣನಿಂದ ಬ್ರಹ್ಮಾದಿ ಸರ್ವಸುರರಿಗೆ, ನನಗೆ, ನಿನಗೆ ಜ್ಞಾನಲಾಭವು ಆಗುತ್ತಿದೆ. ಇಂದ್ರಿಯಾಗೋಚರನಾದುದರಿಂದ ಶ್ರೀಶನನ್ನು ಕಾಣಲಾಗದು. ಮನನಕ್ಕೆ ನಿಲುಕದ ಮಹಾಮಹಿಮನಾದುದರಿಂದ ಶ್ರೀಹರಿಯನ್ನು ಪೂರ್ಣವಾಗಿ ಮನನ ಮಾಡಲಾಗದು. ಆದರೂ, ಶ್ರೀಹರಿಪ್ರಸಾದ ಪಾತ್ರರಾದವರು ತಂತಮ್ಮ ಯೋಗ್ಯತೆ ಗನುಸಾರವಾಗಿ, ಅವನನ್ನು ಕೇಳಿ, ಮನನ ಮಾಡಿ, ಧ್ಯಾನಿಸಿ ಮನೋಗೋಚರನಾದಾಗ ನೋಡಿ, ಕೊನೆಗೆ ಮುಕ್ತರಾಗುವರು.

ಪೃಥಿವಿ (ಶನಿ ಧರಾದೇವಿಯರು), ಅಪ್ (ವರುಣ), ತೇಜ (ವಹ್ನಿ), ವಾಯು (ವಾಯು), ಆಕಾಶ (ಗಣಪತಿ), ಶ್ರೋತ್ರ (ದಿಗ್ದೇವತೆಗಳು), ತ್ವಕ್ (ಪ್ರಾಣ), ಚಕ್ಷುಸ್ಸು (ಸೂರ್ಯ), ಜಿಹ್ವಾ (ವರುಣ), ಘ್ರಾಣ (ಅಶ್ವಿನೀದ್ವಯ), ವಾಕ್ (ವಹ್ನಿ), ಪಾಣಿ (ದಕ್ಷ), ಪಾದ (ಜಯಂತ), ಪಾಯು (ಮಿತ್ರ), ಉಪಸ್ಥ (ಮನು), ಶಬ್ದ (ಬೃಹಸ್ಪತಿ ಪ್ರಾಣರು), ಸ್ಪರ್ಶ (ಅಪಾನ), ರೂಪ (ವ್ಯಾನ), ರಸ (ಉದಾನ), ಗಂಧ (ಸಮಾನ), ಮನಸ್ಸು (ಸ್ಕಂದೇಂದ್ರರು), ಅಹಂಕಾರ (ಗರುಡ ಶೇಷ ರುದ್ರ ದಂಪತಿಗಳು), ಮಹತ್ತು (ಬ್ರಹ್ಮ ವಾಯು ದಂಪತಿಗಳು), ಅವ್ಯಕ್ತ (ಶ್ರೀ ಭೂ, ದುರ್ಗಾರೂಪಿಣೀ ಮಹಾಲಕ್ಷ್ಮೀದೇವಿ) ಇಂತು ಇಪ್ಪತ್ತುನಾಲ್ಕು ತತ್ವ, ತತ್ವಾಭಿಮಾನಿಗಳನ್ನು ತಿಳಿ! ಅವರಿಗೆ ಆಯಾ ನಾಮ ರೂಪ ಕ್ರಿಯೆಗಳು ಶ್ರೀಹರಿಯಿಂದ ಬಂದುದಾಗಿವೆ. ಅವರಾರೂ ಸ್ವತಂತ್ರರಲ್ಲ. ಶ್ರೀಹರಿಯೇ ಸ್ವತಂತ್ರನು, ಸರ್ವೋತ್ತಮನು, ಸರ್ವಜ್ಞನು, ಸರ್ವಕರ್ತನು, ಸರ್ವತ್ರ ವ್ಯಾಪ್ತನು, ಸರ್ವಜಡಜೀವಾತ್ಮಕ ಜಗದ್ವಿಲಕ್ಷಣನು ಎಂದು ತಿಳಿಯುವುದೇ ಯಥಾರ್ಥಜ್ಞಾನವು. ಇದಕ್ಕೆ ವಿರುದ್ಧವಾದುದೆಲ್ಲವೂ ಅನ್ಯಥಾ ಜ್ಞಾನವೆಂದು ತಿಳಿದು, ಪರಿವರ್ಜಿಸು!

ಮುನಿಯಾಗಿ ಮಾಧವನಲ್ಲಿ ಮನವಿಟ್ಟು, ಗುಹೆಗಳಲ್ಲಿ ಅಥವಾ ಶೂನ್ಯಾಲಯಗಳಲ್ಲಿ

ವಸಿಸಿರುವನು ಅವಧೂತನೆನಿಸುವನು. ಇಂದ್ರಿಯಗಳನ್ನು ವಿಷಯಗಳಿಂದ ಕೆಡದಂತೆ ನಿಗ್ರಹಿಸಿ, ಮನದಲ್ಲಿ ಕೇಳಿದ ಕೇಶವನ ಗುಣಗಳನ್ನು ಚಿಂತಿಸಿ, ಶುದ್ಧನಾದ ಮನುಜನು ಶ್ರೀಹರಿಯ ಅಪರೋಕ್ಷವನ್ನು ಹೊಂದುವನು. ಯೋಗವೆಂದರೆ ವಿಹಿತಕರ್ಮಗಳನ್ನು ಮಾಡಿ, ಬಂದ ಪುಣ್ಯಫಲವನ್ನು ಶ್ರೀಶನಿಗರ್ಪಿಸುವುದು ಯೋಗವೆಂದರೆ ಪ್ರಣಾಯಾಮದಿಂದ ಶುದ್ಧವಾದ ಮನವನ್ನು ಶ್ರೀಹರಿ ಧ್ಯಾನರತವನ್ನಾಗಿಡುವುದು. ಇವೆರಡು ಜ್ಞಾನೋಪಾಯಗಳುಳ್ಳವನೇ ಯೋಗಿಯು. ಯೋಗವು ಸಾಂಖ್ಯಸಹಿತವಾದರೆ ಮುಕ್ತಿಕಾರಣವಾಗುವುದು.

ಸಾಂಖ್ಯಾವೆಂದರೆ ಯಥಾರ್ಥಜ್ಞಾನವು. ಇಂದ್ರಿಯಗಳಿಗೆ ಹೆಚ್ಚಾದವು ಶಬ್ದಾದಿಗಳು! ಅವುಗಳಿಗೆ ಮಿಗಿಲಾದುದು ಮನಸ್ಸು(ರುದ್ರ) ; ಮನಸ್ಸಿಗೆ ಹೆಚ್ಚಾದುದು ಬುದ್ಧಿ(ಸರಸ್ವತಿ) ; ಬುದ್ಧಿಗೆ ನಿಯಾಮಕವಾದುದು ಮಹತ್ತು(ಬ್ರಹ್ಮ) ; ಮಹತ್ತಿಗೆ ದೊಡ್ಡದು ಅವ್ಯಕ್ತ(ಶ್ರೀದೇವಿ); ಆಕೆಗೆ ಒಡೆಯನಾದ ಶ್ರೀಹರಿಕಿಂತಲು ದೊಡ್ಡವರಿಲ್ಲ. ಅವನೇ ಸರ್ವೋತ್ತಮನೆಂಬ ಜ್ಞಾನವೇ ಸಾಂಖ್ಯವು.

ಪ್ರಕೃತಿಯ ವಿಕಾರವಾದ ಜಡದೇಹದಲ್ಲಿ ಬಂದ ಜೀವನು ಅನಾದ್ಯವಿದ್ಯೆಯಿಂದ ಆವೃತ್ತನಾಗಿ, ತನ್ನನ್ನು ತಿಳಿಯನು. ತನ್ನ ಅಂತರ್ಯಾಮಿಯನ್ನೂ ತಿಳಿಯದಿರುವನು. ಅಹಂಕಾರ ಮಮಕಾರಗಳಿಂದ ಅವನು ಕಾಮ್ಯಕರ್ಮಗಳನ್ನು ಮಾಡಿ, ತತ್ಫಲವನ್ನು ಉಣ್ಣಲು, ವಿವಿಧಯೋನಿಗಳಲ್ಲಿ ಹುಟ್ಟಿ, ಸಾಯುತ್ತಿರುವನು. ದೇಹವೇ ನಾನೆಂಬ ಅಹಂಕಾರವನ್ನು 'ಶ್ರೀಹರಿಯೇ ಸ್ವತಂತ್ರಕರ್ತ' ನೆಂಬ ಜ್ಞಾನದಿಂದಲು, ದಾರಾಗಾರ ಸುತಾಪ್ತ ಧನಗಳೆನ್ನದೆಂಬ ಮಮಕಾರವನ್ನು 'ಶ್ರೀಹರಿಯೇ ಸ್ವಾಮಿ' ಎಂಬ ಜ್ಞಾನದಿಂದಲು, ತಿಳಿದ ವಿವೇಕಿಯು ಬೇಗನೆ ಸಂಸಾರಬಂಧದಿಂದ ಬಿಡುಗಡೆ ಹೊಂದುವನು. ಆದ್ಯನು, ಅನಂತನು, ಅಚ್ಯುತನು, ಅಪ್ರಮೇಯನು, ಅಖಿಲಾಂತರ್ಯಾಮಿಯು ಆದ ಶ್ರೀಹರಿಯ ಜ್ಞಾನವೇ ಮೋಕ್ಷಸಾಧನವಾಗಿದೆ. ಅನ್ಯಥಾಜ್ಞಾನದಿಂದ ಅಂಧತಮವೋ, ನರಕವೋ, ಆಗುವುದು. ಆದುದರಿಂದ ಅವಿದ್ಯೆಯನ್ನು ಪರಿವರ್ಜಿಸಿ, ವಿದ್ಯೆಯನ್ನು ಅರ್ಜಿಸುವುದು ಸುಜನರ ಕರ್ತವ್ಯವಾಗಿದೆ. ವಿದ್ಯೆ ಎಂದರೆ ಶ್ರೀಹರಿಯು ಸರ್ವೋತ್ತಮನು! ಶ್ರೀವಾಯುವು ಜೀವೋತ್ತಮನು! ಜಗತ್ತು ನಿತ್ಯವಾಗಿದೆ. ಜೀವಜಡಭೇದ, ಜೀವೇಶ ಭೇದ, ಜೀವ ಜೀವಭೇದ, ಜಡೇಶ ಭೇದ, ಜಡ ಜಡಭೇದವೆಂಬ ಪಂಚಭೇದಗಳು ಪಾರಮಾರ್ಥಿಕ ಸತ್ಯವಾಗಿವೆ. ಜೀವರಲ್ಲಿ ತಾರತಮ್ಯವಿದೆ. ಅದು ಮುಕ್ತಿಯಲ್ಲಿಯೂ ಇರುವುದು. ಜೀವರು ಸದಾ ಅಸ್ವತಂತ್ರರು! ಸಕಲವೂ ಸದಾ ಶ್ರೀಹರಿಯ ಅಧೀನದಲ್ಲಿರುವುದು. ಶ್ರೀಹರಿ ಪ್ರಸಾದದಿಂದ ಮೋಕ್ಷವು! ಮೋಕ್ಷಕ್ಕೆ ಮುಖ್ಯಕಾರಣವು ಜ್ಞಾನಪೂರ್ವಕವಾದ ಭಕ್ತಿ! ಮೋಕ್ಷವೆಂದರೆ ಜೀವರು ಸಂಸಾರಬಂಧದಿಂದ ಬಿಡಿಸಲ್ಪಟ್ಟು, ತಂತಮ್ಮ ಯೋಗ್ಯತೆಗೆ ತಕ್ಕ ಸ್ವರೂಪ ಸುಖವನ್ನು ಹೊಂದಿ, ವೈಕುಂಠಾದಿ ಲೋಕಗಳಲ್ಲಿ ಶ್ರೀಹರಿ ಗುರು ಭಕ್ತರಾಗಿ ಇರುವುದು! ಇಂತು ಮುಕ್ತರಾದವರಿಗೆ ಮತ್ತೆ ಜನನ ಮರಣಗಳಿಲ್ಲ. ಇಷ್ಟು ತತ್ವಗಳನ್ನು ತಿಳಿಸುವ ಗುರುವೇ ನಿಜವಾದ ಗುರುವು. ಇದಕ್ಕೆ ಅನ್ಯಥಾ ಆಗಿರುವುದೆಲ್ಲವೂ ತಮೋದ್ವಾರ ಪ್ರವೇಶ ಸೋಪಾನವಾಗಿದೆ.

ಜಲದಲ್ಲಿ ಮೀನುಗಳಿವೆ; ಉದುಂಬರ ಫಲದಿ ಮಶಕಗಳಿವೆ! ಅಂತೆಯೇ ಶ್ರೀಹರಿಯಲ್ಲಿ

ಬ್ರಹ್ಮಾಂಡಗತ ಸರ್ವಜಗತ್ತೂ ಇದೆ. ಇದು ಬೇರೆಯಾಗಿದೆ! ಎಂಬ ವಿವೇಕವನ್ನು ಸಂಪಾದಿಸು! ಮಹಾದೇವ ! ಕಮಲದಳವು ನೀರಿನಲ್ಲಿದ್ದೂ ಅಂಟದಿರುವಂತೆ, ಸಂಸಾರದಲ್ಲಿದ್ದೂ ನಿರ್ಲಿಪ್ತನಾಗಿರು! ನಿರ್ಲಿಪ್ತನಾದ ಜೀವನಿಗೆ ದುಃಖವಿಲ್ಲ. ಅವನೇ ಕೊನೆಗೆ ಮುಕ್ತನಾಗುವನು. ಈ ಸಾಂಖ್ಯತತ್ತ್ವವನ್ನು ಕಪಿಲಾದಿ ರೂಪದಿಂದ ಭಗವಂತನೇ ಆಸುರ್ಯಾದಿ ಶಿಷ್ಯರಿಗೆ ಉಪದೇಶಿಸಿದನು. ಅದನ್ನೇ ನಾನು ನನ್ನ ತಂದೆಯಿಂದ ತಿಳಿದು ನಿನಗೆ ಪೇಳಿರುವೆನು. ಕಾತ್ಯಾಯನ, ಗಾರ್ಗ್ಯ, ಗೌತಮಾದಿ ಮುನಿವರರು ಈ ದಿವ್ಯಜ್ಞಾನದಿಂದಲೇ ವೀತಾತಂಕರು, ನಿಶ್ಶಂಕರು ನಿರ್ಭರಾನಂದರು ಆದರು. ದುಷ್ಪಂಗವೇ ಬಂಧಕವು! ಸತ್ಸಂಗತಿಯೇ ಮೋಚಕವು. ಅದನ್ನು ಬಿಡು! ಇದನ್ನು ಮಾಡು!'

ಎಂದು ಉಪದೇಶಿಸಿ ಸತತ್ಕುಮಾರನು ಅಂತರ್ಹಿತನಾದನು. ಶಿವನು ಆ ಭಗವಂತನ ಉಪದೇಶದಂತೆ ವಹ್ನಿನೇತ್ರನಾದರೂ, ಗಂಗಾಬಾಲೇಂದು ಶೀತಲನು, ವೈರಾಗ್ಯಭರಿತನಾದರೂ ಗೌರೀಸಹಿತನೂ ಆಗಿ ತನ್ನ ದ್ವಂದ್ವಜಯವನ್ನು ಭಕ್ತ ಜನರಿಗೆ ತೋರಿ, ಸಕಲಜನ ಪೂಜಿತನಾದನು. ಆತನ ದಿವ್ಯ ಚಿತ್ತಪಥವಿಹಾರಿಯಾಗಿ ಶ್ರೀಹರಿಯು ಅನುಗ್ರಹಿಸಿದನು.

ಧರ್ಮರಾಜ! ತೀರ್ಥಗಳಲ್ಲಿ ಮಿಂದರೆ ಸಾಲದು! ಮಾನಸತೀರ್ಥದಲ್ಲಿ ಮಿಂದವನು ಎಲ್ಲ ತೀರ್ಥಗಳನ್ನು ಸೇವಿಸಿದನೆಂದು ತಿಳಿ! ಸತ್ಯವೇ ಅದರ ಬುಡ; ಶೌಚವೇ ಅದರ ದಡ! ಜ್ಞಾನವೇ ಅಲ್ಲಿರುವ ಜಲ; ಧೃತಿಯೇ ಆಳ; ಅಲ್ಲಿ ಧ್ಯಾನಸ್ನಾನವನ್ನು ಮಾಡಿದವನ ರಜಸ್ತಮಸ್ಸುಗಳು ತೊಳೆದುಹೋಗುವವು. ತೀರ್ಥಸ್ನಾನಫಲವೆಂದರೆ ಸತ್ಸಂಗ, ಸಚ್ಛಾಸ್ತ್ರಲಾಭ, ವಿವೇಕ, ಭಕ್ತಿ, ಜ್ಞಾನಗಳು. ಇಂತಹ ಸ್ನಾನವನ್ನು ನಿತ್ಯವೂ ಮಾಡಬೇಕು.

ಸರ್ವೇಶನಿತ್ತುದರಿಂದ ತುಷ್ಟನಾಗಬೇಕು. ಅವನೀಯದ್ದನ್ನು ಬೇಡಬಾರದು. ನಿಸ್ಪೃಹನಾಗಿ, ಶ್ರೀಹರಿಯ ಅಧೀನವೆಲ್ಲವೆಂದರಿತ ಮಹಾತ್ಮನಿಗೆ ತೀರ್ಥಗಳೇಕೆ? ದಾನಗಳೇಕೆ?

ಧರ್ಮರಾಜ! ಬೃಹಸ್ಪತಿಯು ನುಡಿದ ಪಾರಲೌಕಿಕ ವಿಷಯವನ್ನು ಕೇಳು! ಜೀವನಿಗೆ ಬಂಧುವು ಜೀವನೇ! ಶ್ರೀಹರಿಯೇ! ಇನ್ನು ಅನ್ಯರಲ್ಲ. ತಂದೆ, ತಾಯಿ, ಗಂಡ, ಹೆಂಡತಿ, ಸುತರು, ಮಿತ್ರರು ಮೊದಲಾದವರೆಲ್ಲರೂ ನಿಮಿತ್ತದಿಂದ ಬಂಧುಗಳು. ಅವರು ಜೀವನನ್ನು ಅನುಸರಿಸಿ ಬರುವುದು ಮಸಣದವರೆಗೆ ಮಾತ್ರ! ಆಮೇಲೆ ಜೀವನನ್ನು ಬಿಡದೆ ಬರುವುದು ಅವನ ಕರ್ಮಫಲವು ಒಂದೇ! ಪಾಪದಿಂದ ನರಕವೂ, ಪುಣ್ಯದಿಂದ ಸ್ವರ್ಗವೂ ಆಗುವುದು. ಕರ್ಮಫಲವನ್ನುಣ್ಣುವ ಜೀವನು ಪುಣ್ಯಪಾಪಗಳ ಫಲವಾಗಿ ಬಂದ ಸ್ವರ್ಗನರಕಗಳನ್ನು ಅನುಭವಿಸಿ, ಅಲ್ಲಿಂದ ಕರ್ಮಶೇಷಸಹಿತನಾಗಿ, ಕೆಳಗಿಳಿವನು ಪರ್ಜನ್ಯ, ಮೇಘ, ಓಷಧೀ ದೇವತೆಗಳ ದ್ವಾರಾ, ತಂದೆಯಲ್ಲಿ ಬಂದು, ಆತನ ರೇತಸ್ಸಿನ ದ್ವಾರಾ ತಾಯಿಯ ಉದರವನ್ನು ಪ್ರವೇಶಿಸಿ, ಕಾಲಕ್ರಮದಲ್ಲಿ, ಯೋನಿದ್ವಾರಾ ಹೊರಬೀಳುವನು. ದೇಹವನ್ನು ಬಿಟ್ಟಾಗಲೂ ಲಿಂಗದೇಹಾದಿ ಸೂಕ್ಷ್ಮದೇಹಗಳು ಇದ್ದೇ ಇರುವವು. ಆದುದರಿಂದ ಕರ್ಮಾನುಭೂತಿಯು, ಸಂಸ್ಕಾರವು ಕೂಡುವುದು. ಮಾನಸಿಕವಾದ ಸಂಸ್ಕಾರ, ಕರ್ಮವಾಸನೆಗಳು ಬೆನ್ನತ್ತಿ ಬರುತಿರಲು, ಅದರಂತೆ ಪ್ರೇರಿತನಾಗಿ ಜೀವನು ಮುಂದಿನ ಕರ್ಮಗಳನ್ನು ಮಾಡಿ, ಇಂತು, ಜನನ ಮರಣಗಳನ್ನು ಹೊಂದುತ್ತಿರುವನು.

ಪುಣ್ಯಪಾಪಗಳಿಗೆ ತಕ್ಕಂತೆ ಯೋನಿಗಳನ್ನು ಜೀವನು ಹೊಂದುವನು. ನರಕವು ತಿರ್ಯಗ್ಯೋನಿ, ಯಾತನೆ, ತಮಸ್ಸು ಎಂದು ಮೂರುವಿಧವಾಗಿದೆ. ಯೋಗ್ಯ ಸಾತ್ವಿಕರು ಪಾಪದಿಂದ ತಿರ್ಯಗ್ಯೋನಿಯನ್ನು, ರಾಜಸರು ನರಕಯಾತನೆಯನ್ನೂ, ತಾಮಸರು ತಮಸ್ಸನ್ನು ಹೊಂದುವರು. ಧಾನ್ಯವನ್ನಳಿಯುವಾಗ ಕದಿಯುವ ನರನು ಇಲಿ, ಹೆಗ್ಗಣವಾಗಿ ಹುಟ್ಟುವನು. ಪರದಾರಾಗಾಮಿಯು ವೃಕ, ಗೃಧ್ರ , ಕೃಮಿ ಜನ್ಮಗಳನ್ನು ಧರಿಸುವನು. ದೇವಕಾರ್ಯವನ್ನು ಬಿಟ್ಟವನು ಕೋತಿಯಾಗುವನು. ಪಿತೃಕಾರ್ಯವನ್ನು ಬಿಟ್ಟವನು ಕಾಗೆಯಾಗಿ ಹುಟ್ಟುವನು. ಬ್ರಾಹ್ಮಣೀ ಸ್ಪರ್ಶಮಾಡಿದ ಶೂದ್ರನು ಅಮೇಧ್ಯದಲ್ಲಿಯ ಹುಳನಾಗುವನು. ಶೂದ್ರಿಯನ್ನು ಮುಟ್ಟಿದ ವಿಪ್ರನು, ಇಲ್ಲಿ ಪಂಕ್ತಿದೂಷಕನೆನಿಸಿ, ಅಲ್ಲಿ ಶಾಲ್ಮಲೀ ನರಕವನ್ನು ಅನುಭವಿಸುವನು. ಕೃತಘ್ನನನ್ನು ಯಮಭಟರು ಗರಗಸಗಳಿಂದ ಸೀಳಿ, ಅಗ್ನಿಕುಂಡದಲ್ಲಿ ಹಾಕುವರು. ಧನದಾಶೆಗಾಗಿ ಹೆರರನ್ನು ಕೊಂದವನು ಕತ್ತೆಯಾಗುವನು. ಸ್ತ್ರೀ ಹತ್ಯೆಗೈದವನಿಗೆ ಇಪ್ಪತ್ತೊಂದು ನರಕಗಳಾಗುವವು. ಅನ್ನ ದಧಿ, ಕ್ಷೀರ, ಘೃತಗಳನ್ನು ಕದ್ದವನು ಮಕ್ಷಿಕನಾಗುವನು. ಹಣ್ಣು ಕದ್ದರೆ ಕೋತಿ, ಕಬ್ಬಿಣ ಕದ್ದರೆ ಕಾಗೆ, ಬೆಳ್ಳಿ ಕದ್ದರೆ ಗುಬ್ಬಿ, ಬಂಗಾರ ಕದ್ದರೆ ಕೀಟವಾಗುವರು. ಬಟ್ಟೆ ಕದ್ದವನು ಮೊಲವಾಗುವನು. ಇಟ್ಟ ಧನಾದಿಗಳನ್ನು ಇಲ್ಲವೆಂದ ನ್ಯಾಸಾಪಹಾರಿಯು ಮೀನಾಗುವನು. ವನಿತೆಯರಿಂತಹ ಪಾಪಗಳನ್ನು ಮಾಡಿದರೆ, ಅಂತಹವನ ಪತ್ನಿಯರಾಗಿ ಸಯೋನಿಯಲ್ಲಿ ಹುಟ್ಟುವರು. ಗಂಧವನ್ನು ಕದ್ದರೆ ಜೇನುಹುಳವಾಗುವನು. ವಿಷವಿಟ್ಟವನು ಚೇಳಾಗುವನು. ಸಾವಿರ ಮಾತೇಕೆ? ಎಲ್ಲ ಪಾಪಗಳನ್ನು ವರ್ಣಿಸಿ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೂ ವರ್ಣಿಸುವ ಶಾಸ್ತ್ರಾಂತರಗಳಿವೆ. ಅವನ್ನು ತಿಳಿದವರಿಂದ ಕೇಳಿ, ಪಾಪವನ್ನು ಬಿಡಬೇಕು. ದುಷ್ಟಸಂಗದಿಂದ ಪಾಪವಾಗಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಪಾಪಗಳನ್ನು ಕಳೆದುಕೊಳ್ಳಲು ದಾನಗಳಿಗಿಂತ ಶ್ರೇಷ್ಠ ಸಾಧನವಿಲ್ಲ. ದಾನಗಳಲ್ಲಿ ಅನ್ನದಾನವು ಮಿಗಿಲಾಗಿದೆ. ಸಾವಿರ ವಿಪ್ರರಿಗೆ ಮಾಡಿದ ಅನ್ನದಾನದಿಂದ ಹೋಗದ ಪಾತಕವೀ ಜಗತ್ತಿನಲ್ಲೇ ಇಲ್ಲ. ನಾಲ್ಕು ಸುಜನರನ್ನು ಬೇಡಿದರೂ ತಂದು, ಹಸಿವೆಗೊಂಡ ವಿಪ್ರರಿಗೆ ದಾನವಾಗಿ ಅನ್ನ ಜಲಗಳನ್ನೀವ ಮನುಜನಿಗೆ ಊರ್ಧ್ವಲೋಕಗಳು ಮುಕ್ತದ್ವಾರವಾಗುವವು. ವೇದಶಾಸ್ತ್ರ ವಿಚಾರದಿಂದ ವಿಪ್ರನೂ, ಭೂದಾನದಿಂದ ಕ್ಷತ್ರಿಯನೂ, ಕನಕಧಾನ್ಯ ದಾನಗಳಿಂದ ವೈಶ್ಯನೂ, ಗೋದಾನದಿಂದ ಶೂದ್ರನೂ ಸಕಲಪಾಪ ನಿರ್ಮುಕ್ತರಾಗುವರು. ಇವರೆಲ್ಲರಿಗೂ ಅನ್ನದಾನದಿಂದ ಅವೆಲ್ಲ ಫಲಗಳೂ ಲಭಿಸುವವು ಎಂದು ತನ್ನ ಕೈಯಿಂದ, ಒಂದು ಗ್ರಾಸ ಮಾತ್ರವಾಗಲಿ ಸಾಕು, ಅನ್ನವನ್ನು ಹಸಿದವರಿಗೆ ಕೊಡಲಿಲ್ಲವೋ, ಅಂದು ಅವನ ಧರ್ಮವು ಅಸಂಪೂರ್ಣವೆಂದು ಜ್ಞಾನಿಗಳು ಹೇಳುವರು.

ಅಹಿಂಸೆ, ಇಂದ್ರಿಯಜಯ, ಗುರುಪೂಜೆ, ನಿತ್ಯದೇವಾರ್ಚನೆ, ಜಪ, ಧ್ಯಾನಗಳೆಂಬ ಆರು ಸಾಧನಗಳಿಂದ ಮೋಕ್ಷಫಲವು ಲಭ್ಯವಾಗಿದೆ. ಅಹಿಂಸೆಯೇ ಎಲ್ಲ ಧರ್ಮಗಳಿಗೂ ಮೊದಲಾಗಿದೆ. ಆನೆಯ ಹೆಜ್ಜೆಯಲ್ಲಿ ಇತರ ಸರ್ವಮೃಗಪಾದ ಚಿಹ್ನೆಗಳಡಗಿರುವಂತೆ, ಅಹಿಂಸೆಯಲ್ಲಿ ಎಲ್ಲ ಧರ್ಮಗಳೂ ಅಡಕವಾಗಿವೆ. ಸತ್ಯ, ಶೌಚ, ದಯಾ,

ತಪಸ್ಸುಗಳೆಂಬ ಧರ್ಮ ಗೋಪಾದಗಳಲ್ಲಿ ಮುಖ್ಯವಾದ ದಯೆಯು ಲುಪ್ತವಾದರೆ, ಧರ್ಮವು ಕುಂಟಾಗುವುದಿಲ್ಲವೆ? ಆದುದರಿಂದ ದಯಾಗುಣಕಾರ್ಯವಾದ ಅಹಿಂಸೆಯನ್ನು ಕಾಯೇನ, ಮನಸಾ, ವಾಚಾ ನಡೆಸಿಕೊಂಡು ಬರಬೇಕು.

ಮಾಂಸಭಕ್ಷಣವು ಹಿಂಸೆಯೇ ಸರಿ! ಆದರೆ ಒಂದು ಸಲ ಮಾಂಸದ ರುಚಿಯನ್ನು ನೋಡಿದವನು ನರಭಕ್ಷಕ ವ್ಯಾಘ್ರದಂತೆ, ಅದನ್ನು ಬಿಡಲಾರದಿರುವನು. ಕೊಲ್ಲದಿರಲು ಅಹಿಂಸೆಯಾಗದು ; ಕೊಲ್ಲಿಸದಿರಲು ಆಗ ಅಹಿಂಸೆಯಾಗುವುದು. ಮಾಂಸವನ್ನು ತಿನ್ನುವವರಿಗಲ್ಲವೇ ಕಟುಕರು ಅಜಾದಿಗಳನ್ನು ಕೊಲ್ಲುವುದು ? ಮಾಂಸವರ್ಜನವು ಅಶ್ವಮೇಧಾದಿ ಯಜ್ಞಫಲದಕಿಂತಲು ಶ್ರೇಷ್ಠವಾಗಿದೆ. ತನ್ನನ್ನು ತಿನ್ನುವನನ್ನು ತಾನು ತಿನ್ನುವುದು ಎಂಬ ವ್ಯುತ್ಪತ್ತಿಯಿಂದ ಮಾಂಸವೆಷ್ಟು ಹೀನ ಕಾರಣವೆಂಬುದನ್ನು ತಿಳಿ! ಇಂತು ತಿಳಿದು ಮಾಂಸವನ್ನು ಬಿಟ್ಟವನು ಕ್ಷತ್ರಿಯ ಶೂದ್ರರು ದೇವಸಮನೆನಿಸುವನು. ವಿಪ್ರ ವೈಶ್ಯರಿಗೆ ಮಾಂಸವು ನಿಷಿದ್ಧವೇ ಸರಿ ! ಕ್ಷತ್ರಿಯರಿಗೂ ಯಾಗಾದಿಗಳಲ್ಲಿ ವಿಹಿತವಾಗಿದ್ದರೂ, ಭಕ್ಷಣ ವ್ಯಸನವಾದರೆ ನಿಷಿದ್ಧವೇ ಆಗಿದೆ.

ಮಾಂಸವನ್ನು ಕಲ್ಲಿನಿಂದ, ಗಿಡದಿಂದ ಪಡೆಯಲಾಗುವುದೇ ? ಪಶುಪಕ್ಷಿಗಳೇ ಮಾಂಸಮೂಲಗಳು. ತನ್ನ ದೇಹಕ್ಕೆ ಸೂಜಿಯು ತಗುಲಿದಾಗ ಆಗುವ ನೋವನ್ನು ತಿಳಿದ ಮಾನವನು ಪಶುಪಕ್ಷಿಗಳ ಕುತ್ತಿಗೆಗೆ ಕತ್ತಿಯನ್ನೆತ್ತಿ ಹಾಕುವ ಪಾಪವನ್ನು ಮಾಡುವನೇ ? ಮಾಡಬಹುದೇ ? ತನ್ನಂತೆ ಪರಜೀವರೆಂದು ತಿಳಿಯದವನು ಮಾನವನೇ ? ಎಲ್ಲ ಭೂತಗಳಿಗೆ ಅಭಯವನ್ನಿತ್ತು, ಮಾಂಸಮೂಲ ಹಿಂಸಾಪರ ಪರಾಙ್ಮುಖರಾದ ಮಾನವರನ್ನು, ಯಾವ ಪಾಪವೂ ಅಂಟಲಾರದು. ಮಾಂಸವನ್ನು ತಿಂದರಿಯದ ಮಾರ್ಕಂಡೇಯಾದಿಗಳು ಚಿರ ಜೀವರೆನಿಸಿದರು. ಮಾಂಸವನ್ನು ತಿನ್ನಲು ಕೋರುವವನು ರಾಕ್ಷಸನೇ ಸರಿ! ಇದಕ್ಕೆ ಸಂಶಯವಿಲ್ಲ. ದೇವತೆಗಳು ಮಾಂಸವರ್ಜನದಿಂದ ಪುಣ್ಯಶ್ರೀತೇಜೋವರ್ಧಿತರಾಗಿ, ಮಾಂಸರತರಾದ ದೈತ್ಯರನ್ನು ಸದೆಬಡಿದರು. ದಾನವು ಅಹಿಂಸೆಗಾಗಿ; ತಪಸ್ಸೂ ಅಹಿಂಸೆಗಾಗಿ; ಮಾಂಸವರ್ಜನ ಪುಣ್ಯವು ನೂರು ವರ್ಷದ ಕಠಿನ ತಪಃಫಲಕ್ಕೆ ಸಮಾನವಾಗಿದೆ. ಹಿಂಸಾರಹಿತನಿಗೆ ಬ್ರಹ್ಮಪುರಿಯಲ್ಲಿ ಉತ್ತಮ ಸ್ಥಾನವಿದೆ. ಸಗರ, ದಿಲೀಪ, ನಲ, ಭಗೀರಥ, ನೃಗಾದಿ, ನೃಪಮುಖ್ಯರು ಮಾಂಸವನ್ನು ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜಗಳೆಂಬ ಚಾತುರ್ಮಾಸ್ಯ ಕಾಲದಲ್ಲಿ ಪರಿವರ್ಜಿಸಿ, ಸಂಪೂರ್ಣ ವರ್ಷದ ಅಹಿಂಸಾಫಲವನ್ನು ಹೊಂದಿದರು.

ಮಾಂಸರುಚಿಯನ್ನು ಕಂಡವನು ಅದನ್ನು ಬಿಡಲಾರನು. ಮಾಂಸದಿಂದ ಶಕ್ತಿಯು ಹೆಚ್ಚುವುದು. ಮಾಂಸದಿಂದ ಸುರತಾಸಕ್ತಿಯು ಉಕ್ಕುವುದು. ಮಾಂಸದಿಂದ ಶ್ರಮವು ತಗ್ಗುವುದು. ಮಾಂಸದಿಂದ ಗಾಯವು ಬೇಗ ಮಾಯುವುದು. ಮಾಂಸವನ್ನು ದೇವ ಪಿತೃಕಾರ್ಯಗಳಲ್ಲಿ ಉಪಯೋಗಿಸಬೇಕೆಂದು, ಅಗಸ್ತ್ಯನು ಕ್ಷತ್ರಿಯರಿಗೆ ಅಪ್ಪಣೆ ಕೊಟ್ಟಿರುವನು. ಬೇಟೆಯು ಹಿಂಸಾಮಯವೆಂದು ಬಿಡಲಾಗುವುದೇ? ಕೊಂದ ಪಶುಗಳ ಮಾಂಸವನ್ನು ಯಜ್ಞಾದಿಗಳಲ್ಲಿ ವಿನಿಯೋಗಿಸಿ ಭಕ್ಷಿಸುವುದು ಕ್ಷತ್ರಿಯ ಶೂದ್ರಾದಿಗಳಿಗೆ ಪಾಪವಲ್ಲ.

ಆದರೆ ಲೋಕಪೀಡಾಕಾರವಾದ ಕ್ರೂರಮೃಗಗಳನ್ನು ಸಂಹರಿಸುವುದು ಯುಕ್ತವೆಂದು ಋಷಿಗಳ ಮತವು. ಆದುದರಿಂದ ಸ್ವೇಚ್ಛಾವೃತ್ತಿಯಿಂದ ಹಿಂಸಾಚರಣವು ಕ್ಷತ್ರಿಯಾದಿಗಳಿಗೂ ಪಾಪಸಾಧನವೇ ಎಂದು ತಿಳಿ! ಅಂತಹ ನಿಷಿದ್ಧವಲ್ಲದ ಹಿಂಸೆಗೆ ಅನ್ನ ಕನಕ ಭೂ ವಸ್ತ್ರ ದಾನಾದಿಗಳೂ ರಾಜಾದಿಗಳಿಗೆ ವಿಹಿತ ಪ್ರಾಯಶ್ಚಿತ್ತವಾಗಿ ಹೇಳಲ್ಪಟ್ಟಿವೆ.

ಪರಮಾಂಸದಿಂದ ತನ್ನ ಮಾಂಸವನ್ನು ಬೆಳೆಸಿಕೊಂಬುವಷ್ಟು ಪಾಪವಿಲ್ಲ. ಮಾಂಸಭಕ್ಷಣವನ್ನು ಬಿಟ್ಟು ದಯಾಪರನಾಗುವಷ್ಟು ಪುಣ್ಯವಿಲ್ಲ. ತಾನು ಚಿರಕಾಲವು ಬಾಳಬೇಕೆಂಬವನು ಮಾಂಸಕ್ಕಾಗಿ ಪಶುಪಕ್ಷಿಗಳ ಜೀವನವನ್ನು ನಾಶಗೊಳಿಸಲು ಯತ್ನಿಸಬಹುದೇ ? ಭೂತದ್ರೋಹಿಗೆ ಭೂತಗಳು ಹೆದರಿ, ಸಿಟ್ಟಾಗುವವು. ಭೂತ ದಯಾವಂತನಿಗೆ ಭೂತಗಳು ಹಿತಕರವಾಗುವವು. ಅಹಿಂಸಾ ಗುಣವನ್ನು ಪೂರ್ಣವಾಗಿ ಬಣ್ಣಿಸಲು ನನ್ನಿಂದಾಗದು. ಅಷ್ಟು ದೊಡ್ಡ ಧರ್ಮವಾಗಿದೆ ಅಹಿಂಸೆಯು!' ಎಂದು ಭೀಷ್ಮನು ನಿರೂಪಿಸಿದನು.

## ೧೨. ಕೀಟೋದ್ಧಾರಕ ವ್ಯಾಸದೇವ

ಧರ್ಮರಾಜನು 'ತಾತ! ಜಂತುಗಳಿಗೆ ಜನನವೆಂದರೆ ಸಂತಸವೂ, ಮರಣವೆಂದರೆ ದುಃಖವೂ ಆಗುವುದು! ಪ್ರಾಣವನ್ನು ಬಿಡುವುದೆಂದರೆ ಬಲು ದುಷ್ಕರವು ಆದರೂ ಬಿಡದೇ, ಇರಲಾಗದು. ಜನನ ಮರಣಗಳಿಂದ ತಪ್ಪಿಸಿಕೊಳ್ಳುವ ಬಗೆ ಹೇಗೆ?' ಎಂದು ಕೇಳಿದನು.

ಭೀಷ್ಮನಿಂತೆಂದನು: 'ರಥ ಮಾರ್ಗದಲ್ಲಿ ಓಡಿಹೋಗುತ್ತಿರುವ ಕೀಟವನ್ನೊಂದನ್ನು ಶ್ರೀವ್ಯಾಸದೇವನು ನೋಡಿ, ಸರ್ವಜ್ಞನಾದುದರಿಂದ, ಅದರ ಸ್ವರೂಪ ಯೋಗ್ಯತೆಯನ್ನರಿತು, ದಯದಿಂದ, 'ಇಷ್ಟು ಭಯಪಟ್ಟು ಓಡಲು ಕಾರಣವೇನು?' ಎಂದು ಕೇಳಿದನು. 'ಹಿಂದೆ ಬಂಡಿಗಳು ಬರುತ್ತಲಿವೆ. ಅವನ್ನೆಳೆವ ಗೋತುರಗಗಳ ಕಾಲಸಪ್ಪಳದೊಂದಿಗೆ, ಅವನ್ನು ಹೊಡೆವ ನರರ ಕೂಗಾಟವು ಕೇಳಬರುತ್ತಿದೆ. ನೇಮಿಗೆ ಸಿಕ್ಕು ಸಾಯುವೆನೇನೋ ಎಂಬ ಭಯದಿಂದ ಓಡುತ್ತಿರುವೆನು. ಮುನಿಚಂದ್ರ! ಸಾವೆಂದರೆ ಪರಮದುಃಖವಲ್ಲವೇ?' ಎಂದ ಕೀಟದಲ್ಲಿ ಕರುಣೆ ಪುಟ್ಟಿ, ಮಹಾಪ್ರಭುವಿಂತೆಂದನು: 'ಕೀಟ ಶರೀರವು ಬಲು ನಿಕೃಷ್ಟವಾಗಿದೆ. ಏನು ಸುಖವಿದೆ ಇದರಲ್ಲಿ? ಬಿಡು ಈ ಶರೀರವನ್ನು! ರಾಜನಾಗು!' ಎಂದ ದೇವನಿಗೆ ಕೀಟವು, 'ಸ್ವಾಮೀ ! ಕೀಟವಾದ ಮಾತ್ರಕ್ಕೆ ವಿಷಯಜನ್ಯ ಸುಖವಾಗುವುದಿಲ್ಲವೇ? ಆಯಾ ಯೋನಿಯವರಿಗೆ ಅಲ್ಲಲ್ಲಿಯ ಸ್ವರ್ಗಾದಿ ಸುಖಗಳು ಇದ್ದೇ ಇರುವುವು; ಮರಣಾದಿ ದುಃಖಗಳೂ ಇರುವವು. ನೀನು ಸರ್ವವನ್ನು ಅರಿತಿರುವೆ! ನಿನಗೆ ನಾನು ವಿಜ್ಞಾಪಿಸಬೇಕೇ?

ಹಿಂದಿನ ಜನ್ಮದಲ್ಲಿ ನಾನು ಶೂದ್ರನಾಗಿದ್ದೆನು. ಧನವಿತ್ತು ನನಗೆ ; ಅದರ

ಹತ್ತರಷ್ಟು ಲೋಭವೂ ಇತ್ತು. ಅನ್ಯರ ಧನವನ್ನಾಶಿಸಿ, ಕ್ರೂರನಾಗಿದ್ದೆನು. ಆದರೆ ನನ್ನ ಮಾತೆಗೆ ಬಿಡದೆ ಸೇವೆ ಮಾಡುತ್ತಿದ್ದೆನು. ಒಂದು ದಿನ ಓರ್ವ ವಿಪ್ರೋತ್ತಮನು ನನ್ನ ಮನೆಗೆ ಬಂದನು. ಆತನನ್ನು ಯೋಗ್ಯ ಪದಾರ್ಥಗಳಿತ್ತು ಸತ್ಕರಿಸಿದೆನು. ಲೋಭದ ಫಲವಾಗಿ ಕೀಟಜನ್ಮವೂ, ವಿಪ್ರ ಮಾತೃ ಪೂಜೆಯಿಂದ ಪೂರ್ವಜನ್ಮಸ್ಮರಣವೂ ನನಗೆ ಲಭಿಸಿದೆ. ನನ್ನಲ್ಲಿ ದಯೆದೋರಿ, ಉದ್ಧರಿಸು!' ಎಂದಿತು.

ಶ್ರೀವ್ಯಾಸನು, 'ನಿನ್ನ ಸುಕೃತವಿಶೇಷವಿತ್ತೆಂದೇ ನನ್ನ ದರ್ಶನವಾಯಿತು. ನಿನ್ನ ಕೀಟತ್ವವನ್ನು ಕಳೆವೆನು. ಮನುಜ ಜನ್ಮದ ಸತ್ಕರ್ಮಗಳಿಂದ ದೇವಾದಿ ಉತ್ತಮ ಜನ್ಮವೂ, ದುಷ್ಕರ್ಮದಿಂದ ಕೀಟಾದಿ ಪಾಪಿಯೋನಿಯೂ ಬರುವುದು. ನೀನೂ ಮನುಜನಾಗು! ರಾಜನೇ ಆಗಿ ರಾಜ್ಯವನ್ನಾಳುವಂತೆ ಅನುಗ್ರಹಿಸಿರುವೆನು. ನಿನಗೆ ಮೋಕ್ಷವನ್ನೂ ಕೊಡಬಲ್ಲೆನು' ಎಂದನು. ಕೀಟವು ಪ್ರಾಣವನ್ನು ಬಿಡಲಿಷ್ಟಪಡದಿರುವುದನ್ನರಿತು, ಕೀಟಶರೀರದಿಂದಲೇ ರಾಜನಾಗುವಂತೆ ವರವಿತ್ತನು. ಕೀಟವೇ ರಾಜನಾದನು. ಎಲ್ಲ ರಾಜರೂ ಕೀಟರಾಜನಿಗೆ ನಮಸ್ಕರಿಸಿ, ವೈಶ್ಯರು ಕೊಟ್ಟಂತೆ, ಕಪ್ಪಕಾಣಿಕೆಗಳನ್ನು ಸಮರ್ಪಿಸಿದರು. ಶ್ರೀವ್ಯಾಸನು ಮುಕ್ತಿಯನ್ನೂ ಕೊಡಲು ಸಮರ್ಥನೇ ಆದರೂ, ಆ ಜೀವನು ಸ್ವರೂಪದಿಂದ ವಿಪ್ರನಾದುದರಿಂದ, ವಿಪ್ರಜನ್ಮದಿಂದಲೇ ಮುಕ್ತಿ ಪಡೆಯಲು ಅರ್ಹನೆಂದರಿತವನಾದುದರಿಂದ, ಅವನಿಗೆ ಜ್ಞಾನವನ್ನು ದಯಪಾಲಿಸಿದನು. ಕೀಟವು ಚಕ್ರವರ್ತಿಯಾಗಿ ಪರಿಪಾಲಿಸಿತು. ಭಕ್ತಿಯಿಂದ ಭಗವಂತನನ್ನು ಭಜಿಸಿ ಮುಂದೆ ಕ್ರಮವಾಗಿ ಶೂದ್ರ ವೈಶ್ಯ ನೃಪ ಜನ್ಮಗಳನ್ನು ಹೊಂದಿತು.

ರಾಜನಾದ ಕೀಟವು ಮಹಾವೈಭವದಿಂದ ಕರುಣಾಧುರೀಣನಾದ ಬಾದಾರಾಯಣನ ಆಶ್ರಮಕ್ಕೆ ಬಂದನು. ಆನೆಯ ಮೇಲೆ ಕೂತು, ಹಿಂದೆ ಗಜ ತುರಗ ರಥಗಳು ಬರುತ್ತಿರಲು, ಶ್ವೇತಚ್ಛತ್ರದ ನೆರಳಿನಲ್ಲಿ ಬರುವ ರಾಜನನ್ನು ವಂದಿಮಾಗಧರು ಸ್ತುತಿಸುತ್ತಿದ್ದರು. ತನ್ನ ಶಿರಃಕಿರೀಟದ ವಿವಿಧ ರತ್ನಕಾಂತಿಗಳಿಂದ ವ್ಯಾಸದೇವನ ಪಾದಾರವಿಂದಗಳಿಗೆ ನೀರಾಜನವಾಗುವಂತೆ ವಂದಿಸಿ, ಕೈಜೋಡಿಸಿ, ನಿಂತ ಕೀಟರಾಜನ ಮಸ್ತಕದಲ್ಲಿ ಸಾತ್ಯವತೇಯನ ಪ್ರಶಸ್ತಹಸ್ತವು ನ್ಯಸ್ತವಾಯಿತು. ರಾಜನ ಭಕ್ತಿಭರಿತ ಪೂಜೆಯನ್ನು ಜಗದೇಕರಾಜನು ಸ್ವೀಕರಿಸಿ, ಪ್ರೀತನಾದನು.

'ಗೋರಕ್ಷಾರ್ಥವಾಗಿಯೂ, ವಿಪ್ರರಕ್ಷಾರ್ಥವಾಗಿಯೂ, ಅಥವಾ ಸಂಗರ ರಂಗದಲ್ಲಾದರೂ ಪ್ರಾಣಗಳನ್ನು ಕೊಟ್ಟ ವೀರರಾಜನಿಗೆ ಸ್ವರ್ಗವು ಕರಗತವಾಗುವುದು' ಎಂದು ಉಪದೇಶಿಸಿದ ದೇವ ದೇವನ ಮಾತನ್ನು ತು, ಚ, ತಪ್ಪದಂತೆ ನಡೆಸಿ, ಆ ರಾಜನು, ಮರುಜನ್ಮದಲ್ಲಿ ವಿಪ್ರನಾದನು. ಆಗಲೂ ಶ್ರೀಮದರವಿಂದನಾಭ ಪಾದಾರವಿಂದ ನಿರತನಾಗಿ ಪುಣ್ಯತೀರ್ಥಗಳನ್ನು ಸೇವಿಸಿದನು. ಯಜ್ಞಯಾಗಾದಿಗಳನ್ನು ಮಾಡಿದನು. ವಿವಿಧ ರತ್ನ ಹಿರಣ್ಯ ರಜತ ಗೋ ತಿಲ ವಸ್ತ್ರಾದಿಗಳನ್ನು ಸತ್ಪಾತ್ರರಿಗಿತ್ತನು ! ಎಲ್ಲವೂ ಶ್ರೀಹರಿ ಸಮರ್ಪಿತವೆಂದನು. ಶ್ರೀಬಾದಾರಾಯಣ ದರ್ಶನವನ್ನೂ ಪೊಂದಿ, ಸಿದ್ಧನಾದನು. ಮುಂದೆ ಆ ಶರೀರವನ್ನು ಬಿಟ್ಟು, ಇಂದ್ರಸಖನಾಗಿ ಸುರಲೋಕದಲ್ಲಿದ್ದು, ಕೊನೆಗೆ

ಮುಕ್ತನಾಗುವನು. ಧರ್ಮರಾಜ ! ನಿನ್ನ ವಿಜಯಕ್ಕಾಗಿ ನಡೆದ ಧರ್ಮಯುದ್ಧದಲ್ಲಿ ಮೃತರಾದವರಿಗೆ ಉತ್ತಮ ಲೋಕಗಳಾಗಿವೆ ಎಂಬ ವಿಷಯದಲ್ಲಿ ಸಂಶಯಪಡಬೇಡ! ಶ್ರೀಶ ಭಕ್ತನಾಗು ! ಚಿರಕಾಲ ಬಾಳು ! ಸಕಲ ಮಂಡಲವನ್ನಾಳು!' ಎಂದನು.

ಧರ್ಮರಾಜನು, 'ಪಿತಾಮಹ ! ವಿದ್ಯಾ ತಪೋ ದಾನಗಳಲ್ಲಿ ಶ್ರೇಷ್ಠವಾವುದು ?' ಎಂದು ಕೇಳಿದನು. ಭೀಷ್ಮನಿಂತೆಂದನು: 'ಒಂದು ಸಲ ವ್ಯಾಸಮುನಿವರನು ವಾರಣಾಸಿಗೆ ಹೋಗಿದ್ದನು. ಆತನನ್ನು ತಿಳಿದು, ಬಂದು ವಂದಿಸಿ, ಮೈತ್ರೇಯನು, ವಿವಿಧೋಪಚಾರಗಳಿಂದ ಪೂಜಿಸಿದನು. ಆಗ ಅತ್ಯಂತ ಪ್ರಮೋದಮೇದುರನಾದ ಸಾತ್ಯವತೇಯನು ಮೈತ್ರೇಯನಿಗೆ ದಾನದ ಮಹಿಮೆಯನ್ನು ತಿಳಿಸುತ್ತಿಂತೆಂದನು:

'ವಿದ್ಯಾ, ತಪೋ, ದಾನ, ಯಜ್ಞಗಳು ಶ್ರೇಯಸ್ಸಾಧನಗಳು ನಿಜ! ಆದರೆ ಅವುಗಳಲ್ಲಿ ದಾನವು ಶ್ರೇಷ್ಠವಾಗಿದೆ. ದಾನಗಳಲ್ಲಿ ಅನ್ನದಾನಕ್ಕೆ ಸರಿಯಾದುದಿಲ್ಲ. ಅನ್ನವಿದ್ದರಲ್ಲವೇ ವಿದ್ಯಾ, ತಪೋ, ಯಜ್ಞಗಳು ನಡೆಯುವವು. ಅನ್ನವು ಭಗವಂತನ ಅನ್ನಮಯ ರೂಪದ ಸನ್ನಿಧಾನದಿಂದ ಪಾವನವಾಗಿದೆ. ಅನ್ನವು ಸರ್ವ ಜೀವರಿಗೆ ಉಪಜೀವ್ಯವಾಗಿದೆ. ದಾನದಿಂದ ವಿದ್ಯೆಯು ಹೆಚ್ಚುವುದು! ತಪಸ್ಸು ವರ್ಧಿತವಾಗುವುದು. ಇಂತು ದಾನವು ತಪೋ ಯಜ್ಞಗಳಿಗೆ ಪೋಷಕವಾಗಿದೆ.'

ಧರ್ಮರಾಜನು 'ದಾನವು ನಡೆಯಬೇಕಾದರೆ ಮನೆಯಲ್ಲಿ ಮಡದಿಯು ಪ್ರತಿಕೂಲಳಾಗಿರಬಾರದಲ್ಲವೇ ? ಅಂತಹ ಮಾನಿನಿಯರ ಮಹಿತ ವರ್ತನವೆಂತಿರ ಬೇಕು!' ಎಂದು ಕೇಳಲು, ಭೀಷ್ಮನಿಂತೆಂದನು: 'ಕೈಕಯಿಯಾದ ಸುಮನಾ ದೇವಿಯು, ಅಮರಪುರದಲ್ಲಿದ್ದ ಶಾಂಡಿಲಿ ಎಂಬ ಮುನಿಪತ್ನಿಯನ್ನು ನೋಡಿ, 'ಇಂತಹ ದಿವ್ಯಪದವಿಯು ನಿನಗೆಂತು ಬಂತು ?' ಎಂದು ಕೇಳಿದಳು. ಆಗ ಶಾಂಡಿಲಿಯು ಇಂತೆಂದಳು:

'ಅಂಗನೆಯು ಮಂಗಳಶೀಲಳಾಗಿರಬೇಕು. ಪತಿವ್ರತೆಯಾಗಿರಬೇಕು. ಅಷ್ಟು ಸಾಲದು! ಅತ್ತೆ ಮಾವಂದಿರಿಗೆ ಅನುವ್ರತಳಾಗಿರಬೇಕು. ದೇವ, ಪಿತೃ, ವಿಪ್ರ, ಗೋ ಪೂಜನ ಸಮಯಗಳಲ್ಲಿ ಪತಿಯಿಂದ ಸಹಕರಿಸಬೇಕು. ತಲೆಬಾಗಿಲ ಮುಂದೆ ನಿಂತಿರಬಾರದು. ಸುಮ್ಮನೆ ನಗಬಾರದು. ಬಂದ ವಿಪ್ರರಿಗೆ ಸಿಡಿಮಿಡಿಗೊಳ್ಳದೆ ಕೈಲಾದಷ್ಟು ನೀಡಬೇಕು. ಮಕ್ಕಳಿಗಿತ್ತು ತಾನು ಉಣ್ಣಬೇಕು. ಮನಶ್ಶುದ್ಧಿಯೊಡನೆ ಮನೆಯೂ ಶುದ್ಧವಾಗಿರಬೇಕು. ಪತಿಯು ಬಂದಾಗ ಅಲಂಕರಿಸಿಕೊಂಡು, ಎದುರ್ಗೊಂಡು ಕರೆತಂದು, ಉಪಚರಿಸಬೇಕು. ಪತಿಸೇವೆಯು ಭಾವ ಬಂಧುರವಾಗಿರಬೇಕು. ಮಕ್ಕಳನ್ನು ಬಡಿಯಬಾರದು, ಬೈಯಬಾರದು! ಪತಿಗೆ ರುಚಿಸದ್ದನ್ನು ತಾನೂ ಬಿಡಬೇಕು. ಪತಿಯು ಪ್ರವಾಸದಲ್ಲಿದ್ದರೆ, ಅಲಂಕಾರಗಳನ್ನು ಅತಿಯಾಗಿ ಮಾಡಿಕೊಳ್ಳಲಾಗದು. ಹೂವು, ಗಂಧ, ಸೀರೆ, ಆಭರಣಗಳನ್ನು, ರುಚಿಕರ ಭಕ್ಷ್ಯಗಳನ್ನು ಸೇವಿಸಬಾರದು. ಸೌಮಾಂಗಲ್ಯ ರಕ್ಷಣೆಗಾಗಿ ಅಲ್ಪವಾಗಿ ಸ್ವೀಕರಿಸುವುದು ತಪ್ಪಲ್ಲ. ಬಂಧು ಜನರಿಗೆ ಹಿತವಾಗಿರಬೇಕು. ಮನೆಯಲ್ಲಿರುವ ಮನುಜ ಬಂಧುಗಳನ್ನಂತೆ, ಗೋವು ಮೊದಲಾದ ಚತುಷ್ಪದಗಳಿಗೂ ಸುಖವೃತ್ತಿಯನ್ನು ಕಲ್ಪಿಸಿಕೊಡಬೇಕು. ಪತಿಗೆ ಮನನೋಯುವಂತೆ ಮಾತಾಡಬಾರದು.

ಅಗ್ನಿಹೋತ್ರ , ಇಲ್ಲದಿರೆ ನಂದಾದೀಪವನ್ನು ಸಂರಕ್ಷಿಸುತ್ತಿರಬೇಕು. ಮನೆಯ ಗುಟ್ಟನ್ನು ಹೊರಗೆಡಹಬಾರದು. ಗರ್ಭವತಿಯಾದಾಗ ಬಾಯ ರುಚಿಗೆ ಮನಸೋತು ಅಪಥ್ಯವನ್ನು ಮಾಡಬಾರದು. ಶ್ರೀಹರಿ ಗುರುಗಳಲ್ಲಿ ಅನವರತ ಭಕ್ತಳಾಗಿರಬೇಕು. ಪುರಾಣಶ್ರವಣದಿಂದ ನಿರ್ಮಲಚಿತ್ತಳಾಗಿ, ಸಾಂಸಾರಿಕ ಸುಖದುಃಖಾದಿಗಳನ್ನು ಸಮವಾಗಿ ಸ್ವೀಕರಿಸಬೇಕು. ದಾನಾದಿಗಳಲ್ಲಿ ಅತಿಲೋಭಿಯಾಗಿರಬಾರದು. ಇಂತಹ ಸುದತಿಯು ಅರುಂಧತೀ ಸಮಳೆಂದು ತಿಳಿ.

ಈಗ ಸರ್ವಶಾಸ್ತ್ರವನ್ನು ನಿರೂಪಿಸಲು ನಾರದ ಪುಂಡರೀಕ ಸಂವಾದವನ್ನು ನಿನಗರುಹುವೆನು. ನಾರದನು ಪುಂಡರೀಕನೆಂಬ ಮುನಿಗೆ ಇಂತೆಂದನು: 'ನನ್ನ ತಂದೆಯಾದ ಪರಮೇಷ್ಠಿಯು ಇಷ್ಟಪುತ್ರನಾದ ನನಗೆ ಪರಮ ರಹಸ್ಯತತ್ವವನ್ನು ಉಪದೇಶಿಸಿದನು. ಅದನ್ನು ಕೇಳು! ಶ್ರೋತವ್ಯನು, ಮಂತವ್ಯನು, ಧ್ಯಾತವ್ಯನು ಆದ ಪರತತ್ವ ಸ್ವರೂಪನೆಂದರೆ ಶ್ರೀಮನ್ನಾರಾಯಣನೇ ! ಆತನನ್ನೇ ಗುಣಪೂರ್ಣನಾಗಿರುವುದರಿಂದ ಬ್ರಹ್ಮನೆಂಬರು. ಜೀವಜಡಾತ್ಮಕ ಜಗತ್ತಿಗೆ ಪಾಲಕನಾಗಿರುವುದರಿಂದಲು, ಭಿನ್ನನಾಗಿರುವುದರಿಂದಲು ಪರಂಬ್ರಹ್ಮನೆಂಬರು. ಜೀವನು ಸರ್ವಭೂತಾಂತರ್ಯಾಮಿಯಾದ ಶ್ರೀಹರಿಯನ್ನು ಕಾಣುವುದೇ ಜೀವನ ಪರಮ ಪ್ರಯೋಜನವು. ಅದಕ್ಕಾಗಿ ಅವನು ಗುರುಮುಖದಿಂದ ವೇದಾದಿ ಸಚ್ಛಾಸ್ತ್ರಗಳನ್ನು ಚೆನ್ನಾಗಿ ಬಹುಸಲ ಅಭ್ಯಸಿಸಿ ತಿಳಿಯಬೇಕು.

ನಾರಗಳೆಂದರೆ ವೇದಗಳು, ನೀರು, ಜೀವರು, ಗುಣಗಳು ಎಂದರ್ಥ! ಅವಕ್ಕೆ ವಿಷಯನು, ಆಶ್ರಯನು, ಆಧಾರನು, ಸ್ವರೂಪನು ಆಗಿರುವುದರಿಂದ ದೇವನಿಗೆ ನಾರಾಯಣನೆಂಬ ಹೆಸರಿದೆ. ಎಲ್ಲ ವಿಶ್ವದಲ್ಲಿ ತುಂಬಿ ಶ್ರೀಶನು ವಿಭು, ವಿಷ್ಣು, ವಿಶ್ವ ಎಂಬಿತ್ಯಾದಿ ಶಬ್ದಗಳಿಗೆ ಪರಮ ಮುಖ್ಯಾರ್ಥನಾಗಿರುವನು. ಇತರರಲ್ಲಿರುವ ಸಮಸ್ತ ಶಬ್ದಗಳಿಗೂ ಅವನು ಮುಖ್ಯಾರ್ಥನೂ, ಇತರರು ಅಮುಖ್ಯಾರ್ಥರೂ ಆಗಿರುವರು. ಶಬ್ದಗಳಿಗಿರುವ ಅರ್ಥ ಭೂತ ಸುಗುಣಗಳೆಲ್ಲವೂ, ಸಂಪೂರ್ಣವಾಗಿ ಶ್ರೀಹರಿಯಲ್ಲಿವೆ ; ಅನ್ಯರಲ್ಲಿಲ್ಲ. ಶಿವ, ರುದ್ರ, ಬ್ರಹ್ಮ, ವಿರಿಂಚ, ಜೀವ, ಪ್ರಕೃತಿ ಶಬ್ದಗಳಿಗೆ ನಾರಾಯಣನೇ ಮುಖ್ಯ ವಾಚ್ಯನು. ಇಂತು ವೇದಾದಿ ಶಾಸ್ತ್ರಗಳನ್ನು ಉಪಕ್ರಮಾದಿ ತಾತ್ಪರ್ಯನಿರ್ಣಾಯಕ ಲಿಂಗಗಳಿಂದ ಪರಿಶೋಧಿಸಿ, ವಿಚಾರ ಮಾಡಿದರೆ, ಜಗಜ್ಜನ್ಮಾದಿ ಕಾರಣನು, ಶ್ರೀನಾರಾಯಣನೇ ಎಂದು ತಿಳಿಯುವುದು. ಶ್ರೀಹರಿಯು ಸತ್ ಎಂದರೆ ನಿರ್ದೋಷನು, ಚಿತ್ ಎಂದರೆ ಜ್ಞಾನಸ್ವರೂಪನು, ಆನಂದ ಎಂದರೆ ಸುಖರೂಪನು, ಆತ್ಮ ಎಂದರೆ ಅಂತರ್ಯಾಮಿ ಸರ್ವಾಧಿಪನು ಎಂದು ತಿಳಿಯುವುದೇ ನಿಜವಾದ ಜ್ಞಾನವು. ಅಂತಹ ಜ್ಞಾನವನ್ನು ತಿಳಿಸಿಕೊಡಲೆಂದೇ ಸರ್ವಸಚ್ಛಾಸ್ತ್ರಗಳ ಪ್ರವೃತ್ತಿಯು. ಇಂತು ತಿಳಿ! ಇಂತು ಅನುಷ್ಠಿಸು ! ಇದಕ್ಕೆ ಭಿನ್ನವಾದುದು ಅನ್ಯಥಾ ಜ್ಞಾನವು ! ಅನ್ಯಥಾಜ್ಞಾನವನ್ನು ನರಕದ್ವಾರವೆಂದು ತಿಳಿದು ಪರಿವರ್ಜಿಸು!

ಓಂ ನಮೋ ನಾರಾಯಣಾಯ ಓಂ ಎಂಬ ಎಂಟಕ್ಷರದ ಮಂತ್ರವನ್ನು ಜಪಿಸು! ಅಂತ್ಯಕಾಲದಲ್ಲಿ ನಾರಾಯಣ ಎಂಬ ಚತುರಕ್ಷರದ ಮಂಗಳನಾಮವು ಮುಕ್ತಿ

ಕಾರಣವಾಗುವುದು. ಅದು ಪ್ರಣವವೆನಿಸುವ ಓಂಕಾರದ ಅರ್ಥವಾಗಿದೆ. ಶ್ರೀನಾರಾಯಣನನ್ನು ಕೇಳು! ಶ್ರೀಹರಿಯನ್ನು ಸ್ಮರಿಸು! ಶ್ರೀಕೇಶವನಿಗೆ ನಮಸ್ಕರಿಸು! ಶ್ರೀಮುಖ್ಯ ಪ್ರಾಣವಲ್ಲಭನನ್ನು ಧ್ಯಾನಿಸು! ಶ್ರೀಧರನನ್ನು ಪಾಡು! ಶ್ರೀ ಹೃಷಿಕೇಶನಿಗಾಗಿ ಮಿಕ್ಕೆಲ್ಲವನ್ನು ಬಿಡು! ಶ್ರೀಕೃಷ್ಣನ ಪ್ರೀತಿಗಾಗಿ ಕೊಡು! ನಾರಾಯಣನನ್ನು ನಂಬಿದವರಾರೇ ಆಗಲಿ ಕೆಟ್ಟಿಲ್ಲ ನೋಡು! ನಾರಾಯಣ ಪರಾಯಣರನ್ನು ನಂಬಿದರೂ ಕೆಡುವುದಿಲ್ಲ. ವರ್ಣಾಶ್ರಮ ಧರ್ಮಕರ್ಮಗಳಿಗೆ ಫಲಪ್ರದನಾದ ಶ್ರೀರಮಣನ ಭಕ್ತನಾಗು! ಅವನೇ ಸರ್ವೋತ್ತಮನೆಂದು ತಿಳಿದು ಮಾಡುವ ಭಕ್ತಿಯು ಅನಂತ ಪುಣ್ಯಲಭ್ಯವಾಗಿದೆ.'

ಇಂತು ನಾರದನು, 'ಶಂಖ ಚಕ್ರಧರ! ಲಕ್ಷ್ಮೀ ವರ ! ಪುಂಡರೀಕಾಕ್ಷ ಲೋಕಾಧ್ಯಕ್ಷ! ಕಿರೀಟ ಕುಂಡಲ ವನಮಾಲಾ ಕೌಸ್ತುಭ ಶ್ರೀವತ್ಸವಿಭೂಷಣ ! ಸಂಸಾರ ಶೋಷಣ ! ನಾರಾಯಣ! ಸಕಲ ಸುಜನ ಸಂತ್ರಾಣ ಕಾರಣ!' ಎಂದು ಪಾಡುತ್ತಾ, ಶ್ರೀಹರಿ ಭಕ್ತಾಗ್ರೇಸರನೆನಿಸಿದನು, ಧರ್ಮಜ! ನೀನೂ ಶ್ರೀಕೃಷ್ಣನನ್ನು ಭಕ್ತಿಯಿಂದ ಭಜಿಸು! ನಿಮ್ಮ ಪುಣ್ಯವಿಶೇಷದಿಂದ ವಾಸುದೇವನು ನಿಮಗೆ ನಿತ್ಯಸುಲಭನಾಗಿರುವನು' ಎಂದು ನುಡಿದ ತಾತನ ಮಾತಿಗೆ ಪ್ರೀತನಾಗಿ ಧರ್ಮರಾಜನು ಹರ್ಷಭರಿತ ಚಿತ್ತದಿಂದ ಶ್ರೀಕೃಷ್ಣನಿಗೆ ವಂದಿಸಿದನು.

ಧರ್ಮಜನು 'ಪಿತಾಮಹ! ದಾನ ಸಾಮಗಳಲ್ಲಿ ಯಾವುದು ಅಧಿಕ ರಂಜಕವಾಗಿದೆ?' ಎಂದು ಕೇಳಿದನು. ಭೀಷ್ಮನು, 'ಎರಡೂ ಪ್ರೀತಿ ಸಂಜನಕವೇ. ಆದರೆ ಅವೆರಡರಲ್ಲಿ ಸಾಮವು ಬೇಗ ರಂಜಕವಾಗುವುದೆಂದು ತಿಳಿಸಲು ಒಂದು ಇತಿಹಾಸವನ್ನು ವರ್ಣಿಸುವೆನು ಕೇಳು!

ಗುಣಸಂಪನ್ನನಾದ ಒಬ್ಬ ಬ್ರಾಹ್ಮಣನು ಕಾರ್ಯಾಂತರವಶನಾಗಿ ಅರಣ್ಯದಲ್ಲಿ ಹೋಗುವಾಗ, ಒಬ್ಬ ರಾಕ್ಷಸನು ಅವನನ್ನು ಹಿಡಿದುಕೊಂಡನು. ವಿಪ್ರನು ನಿರ್ವಿಕಾರನಾಗಿ, ನಗುನಗುತ್ತಿರಲು ನೋಡಿ, ಬೆರಗಾಗಿ, ರಾಕ್ಷಸನು 'ವಿಪ್ರೋತ್ತಮ! ಮೆಚ್ಚಿದೆನು ನಿನ್ನ ಧೈರ್ಯಧುರ್ಯತೆಯನ್ನು! ನನ್ನ ಪ್ರಶ್ನೆಗೆ ಸರಿಯಾದ ಉತ್ತರವಿತ್ತರೆ ನಿನ್ನನ್ನು ಬಿಟ್ಟುಬಿಡುವೆನು. ಕೇಳು! ನನ್ನ ಶರೀರವು ಕೃಶವಾಗುತ್ತಿದೆ. ನನ್ನ ಮುಖವು ಬಿಳುಚಾಗಿದೆ. ಹೀಗಾಗಲು ಕಾರಣಗಳೇನು?' ಎಂದನು.

ವಿಪ್ರನಿಂತೆಂದನು: 'ರಾಕ್ಷಸನಾದರೂ ಕೃಪಾವಶನಾಗಿರುವೆ! ನಿನಗೆ ಉತ್ತರ ಕೊಡದೆ ಇರಬಾರದು. ಕೇಳು! ಬಂಧುಗಳಿಗೆ ಅಹಿತವನ್ನಾಚರಿಸಿ ಬಿಟ್ಟು ಬಂದು ಪಶ್ಚಾತ್ತಾಪ ಪೊಂದಿರುವವನು; ದರಿದ್ರನಾಗಿದ್ದು ಹೇರಳ ವಿತ್ತವನ್ನು ಬೇಡುವವನು; ದಾಕ್ಷಿಣ್ಯದಿಂದ ಇತರ ವಶನಾಗುವವನು; ಉಪಕಾರವನ್ನು ಪೊಂದಿದವನ ತಿರಸ್ಕಾರವನ್ನು ಪಡೆದವನು; ದಡ್ಡರು ಪೊಗಳುತ್ತಿದ್ದು, ಪಂಡಿತರಿಂದ ತೆಗಳಿಸಿಕೊಂಡವನು ; ಅಂದ ಮಾತನ್ನು ಸಭೆಯಲ್ಲಿ ಒಪ್ಪಿಕೊಳ್ಳದವನು ; ಅಪರಾಧವೆಸಗಿದಾಗ ಸಿಟ್ಟಾದ ಅರ್ಧಾಂಗಿಯನ್ನು ಸಮಾಧಾನ ಪಡಿಸಲಾರದವನು; ದುಷ್ಟರಿಂದ ಧನಾಡಿಗಳನ್ನು ರಕ್ಷಿಸುವುದೆಂತೆಂದು ಚಿಂತಿಸುವವನು;

ದುಷ್ಟಜನರು ದೂಷಿಸಿದ ಮಾತುಗಳನ್ನು ಸುಜನರೂ ನಿಜವೆಂದು ನಂಬಿದಾಗ ವ್ಯಸನ ಪಡುವವನು ; ಅತಿಮಾನುಷ ಕಾರ್ಯಗಳನ್ನು ಮಾಡಿದರೂ ಮಾಯಗಾರನೆನಿಸಿ ಕೊಂಡವನು ; ದುಃಖದ ಬೇಗೆಯಲ್ಲಿದ್ದು ಹೇಳಿಕೊಳ್ಳಲಾರದೆ ಕುದಿಯುವವನು ; ಹೆಂಡತಿ, ಮಗಳು, ಅಳಿಯ, ಮಗ, ಸೊಸೆ ಇವರ ದುರ್ವ್ಯತ್ತವನ್ನು ಕಂಡು ತಿದ್ದಲಾರದವನು ; ಗೋ, ವಾನರ, ಪಲ್ಲೀ, ಮಾರ್ಜಾಲಗಳನ್ನು ಕೊಂದವನು ; ದೇವ ಬ್ರಾಹ್ಮಣರ ಸೊತ್ತನ್ನು ಹರಿಸಿದವನು ; ಧನನಾಶಕ್ಕೆ, ಬಂಧುನಾಶಕ್ಕೆ ಗುರಿಯಾದವನು ; ಯಶೋ ಹಾನಿ ಯಾದವನು; ಒಳ್ಳೆಯ ಕೆಲಸವನ್ನು ಮಾಡಿ, ನೀಚನಿಂದ ನಿಂದಿಸಲ್ಪಟ್ಟವನು ; ಇವರೆಲ್ಲರು ಕೃಶರಾಗುವರು ; ಪಾಂಡುರರೂ ಆಗುವರು.'

ವಿಪ್ರನ ಮಾತಿಗೆ ಮೆಚ್ಚಿ, ರಾಕ್ಷಸನು ಅವನನ್ನು ಬಿಟ್ಟು ಹೋದನು. ಸಾಮವಚನಕವು ರಂಜಕತರವೆಂದು ನಿಮಗೀ ಕಥೆಯನ್ನು ನಿರೂಪಿಸಿದೆನು' ಎನ್ನಲು ಧರ್ಮರಾಜನು, ಶ್ರೀಕೃಷ್ಣನ ಮಹಿಮೆಯನ್ನು ಕೇಳಲಿಚ್ಛಿಸಿದನು.

## ೧೩. ಶ್ರೀಕೃಷ್ಣ ಮಹಿಮೆ, ಶಿವ ಪಾರ್ವತೀ ಸಂವಾದ

ಭೀಷ್ಮನು ಶ್ರೀಕೃಷ್ಣನ ಅದ್ಭುತ ಪವಿತ್ರ ಚರಿತ್ರವನ್ನು ನಿರೂಪಿಸಿದನು:

'ಶ್ರೀಕೃಷ್ಣನ ಮಹಿಮೆಯನ್ನು ಇಂತೆಂದು ತಿಳಿಯಲು ಬ್ರಹ್ಮರುದ್ರೇಂದ್ರಾದಿ ಸುರರಿಗೆ, ನಾರದಾದಿ ಮುನಿಗಳಿಗೆ ಸಾಧ್ಯವಲ್ಲ. ಆ ಮಹಾಸ್ವಾಮಿಯು ಒಂದು ಸಲ ಮಗನಿಗಾಗಿ ತಪಸ್ಸು ಮಾಡುವೆನೆಂದು ಹಿಮಾಲಯಕ್ಕೆ ಹೆಂಡತಿಯಿಂದ ಕೂಡಿ ತೆರಳಿದನು. ಅಲ್ಲಿ ರುಕ್ಮಿಣೀಕೃಷ್ಣರು ದ್ವಾದಶವಾರ್ಷಿಕ ತಪಶ್ಚರಣವನ್ನು ಕೈಕೊಂಡಿದ್ದರು. ಅವರನ್ನು ನೋಡಿ, ಧನ್ಯರಾಗಬೇಕೆಂದು, ನಾರದ ಪರ್ವತ ವಾಲ್ಮೀಕಿ ದೇವಲ ಕಾಶ್ಯಪ ಭಾರದ್ವಾಜಾದಿ ಮುನಿಗಳು ಬಂದರು. ಅವರನ್ನನುಸರಿಸಿ ಶಿಷ್ಯರು, ಅನೇಕೇತರ ಜನರೂ ಬಂದರು. ಅವರಿಗೆ ತಕ್ಕ ಸತ್ಕಾರವನ್ನಿತ್ತು, ಶ್ರೀಕೃಷ್ಣನು ಪುಣ್ಯಕಥಾ ಗೋಷ್ಠಿಯಲ್ಲಿದ್ದನು.

ನೋಡು ನೋಡುತ್ತಿರಲು ಶ್ರೀಕೃಷ್ಣನ ಮುಖದಿಂದ ಅಗ್ನಿಜ್ವಾಲೆಗಳು ಹೊರಬಂದು, ಹಿಮಾಲಯದ ಕಂದರ ದರೀ ಶಿಖರಗಳಲ್ಲಿ ವ್ಯಾಪಿಸಿದವು. ಪ್ರಳಯ ಕಾಲಾಭೀಲ ವಹ್ನಿ ಜ್ವಾಲೆಯಂತೆ ಆ ವಹ್ನಿಯು ವ್ಯಾಪಿಸುತ್ತಾ ಹರಡಿದಾಗ, ಆ ಪರ್ವತದಲ್ಲಿದ್ದ ಮೃಗಪಕ್ಷಿ ಗಣವೇ ಅಲ್ಲದೆ, ಸಿದ್ಧಸಾಧ್ಯರೂ ಸಮಾಕುಲಚಿತ್ತರಾದರು. ಒಂದು ಸಲ ಸೌಮ್ಯಾಲೋಕನನಾಗಿ ನೋಡಿದ ಶ್ರೀಕೃಷ್ಣನ ಮುಖದಲ್ಲಿ ಸೇರಿ, ಅಗ್ನಿಯು ಶಾಂತವಾಯಿತು. ವನವೆಲ್ಲವೂ ನಿರಾಕುಲವಾದುದನ್ನೂ ಕಂಡು ಮುನಿಗಳು ವಿಸ್ಮಯ ಭಯಭಕ್ತಿಭರಿತರಾಗಿ, ಕದಲದೆ ನಿಂತರು. 'ಏಕೆ ಆಶ್ಚರ್ಯಪಡುವಿರಿ? ನಿಜವನ್ನು ಹೇಳಿರಿ!' ಎಂದ ಜಗನ್ನಾಥನಿಗೆ, ಮುನಿಗಳು, 'ದೇವಾ! ವಿಶ್ವವೆಲ್ಲವು ನಿನ್ನಿಂದ ಜನಿಸಿ, ಪೋಷಿತವಾಗಿ ಜೀವಿಸಿ, ಪ್ರೇರಿತವಾಗಿ ನಡೆದು, ಕೊನೆಗೆ ನಿನ್ನಲ್ಲಿ ಲಯವನ್ನು ಹೊಂದುವುದು. ಸಕಲ ಸ್ಥಾವರ ಜಂಗಮಾತ್ಮಕವಾದ ಜಗವು ಸದಾ ನಿನ್ನ ಅಧೀನವಾಗಿದೆ.

ಇಂತು ಮಹಾಮಹಿಮನಾದ ನಿನ್ನಿಂದ ಹೊರ ಬಂದ ಅಗ್ನಿಯ ವಿಷಯವನ್ನು ನೀನೇ ತಿಳಿಸಬೇಕಾಗಲಿ, ನಮ್ಮಿಂದ ನಾವಾಗಿ ಏನೂ ತಿಳಿಯಲಾರೆವು' ಎಂದರು.

ಶ್ರೀಕೃಷ್ಣನಿಂತೆಂದನು: 'ಇದು ಪರಮರಹಸ್ಯವು. ಶಂಕಿಸದೆ ಕೇಳಿರಿ! ಮಗನನ್ನು ಶಿವನಿಂದ ವರವಾಗಿ ಪಡೆಯಲು ಬಂದಂತೆ ನಟಿಸಿದುದು ಲೋಕಸಂಗ್ರಹಕ್ಕಾಗಿ ಹೊರತು, ನನಗೆ ರುಕ್ಮಿಣೀರಮಣನಿಗೆ ಇನ್ನೊಬ್ಬರಿಂದ ವರವನ್ನು ಪಡೆಯಬೇಕಾಗಿಲ್ಲ! ಇಲ್ಲಿ ಒಬ್ಬ ದಾನವನು ಜಗತ್ತೆಲ್ಲವು ನಾಶವಾಗಬೇಕೆಂದು ಕಠಿನ ತಪವನ್ನು ಮಾಡುತ್ತಿದ್ದನು. ಅವನು ನನ್ನಿಂದ ಅವಧ್ಯತ್ವವನ್ನು ಪಡೆದಿದ್ದನು. ಈಗ ದ್ವಾದಶವಾರ್ಷಿಕ ತಪಶ್ಶಕ್ತಿಯಿಂದ ಅವನ ಸಾವೆಂದು ತಿಳಿದು, ಅಂತೇ ತಪವನ್ನು ಮಾಡಿ, ನನ್ನ ದಿವ್ಯತೇಜದಿಂದ ಪ್ರದ್ಯುಮ್ನನನ್ನು ಉತ್ಪಾದಿಸಿದೆನು. ಅವನು ಅಗ್ನಿರೂಪನಾಗಿ ನನ್ನಿಂದ ಹೊರಬಂದು, ಆ ದಾನವನನ್ನು ಕೊಂದು, ಮತ್ತೆ ನನ್ನಲ್ಲಿ ಸೇರಿರುವನು. ಮುಂದೆ ಶಂಕರಾನುಮತನಾಗಿ ಅವನು ರುಕ್ಮಿಣೀ ದೇವಿಯಲ್ಲಿ ಜನಿಸುವನು.

ತ್ರಿಕಾಲ ಸಂವೇದಿಗಳಾದ ನಿಮಗೆ ತಿಳಿಯದುದಿಲ್ಲ. ಶ್ರೀರಮಣನಾದೆನ್ನನ್ನು ನೋಡಿ, ತಾನು ಹಿಂದೆ ಸುಟ್ಟ ಕಾಮನನ್ನು ಮತ್ತೆ ನನಗೊಪ್ಪಿಸಬೇಕೆಂದು ಶಿವನು ಬೇಡಿದುದರಿಂದ ಇಲ್ಲಿಗೆ ಸತೀಸಹಿತನಾಗಿ ಬಂದಿರುವೆನು. ನಿಮ್ಮಂತಹ ಮಹಾನುಭಾವರನ್ನು ಕಂಡಾಗ ಕೇಳಿ ತಿಳಿಯದಿರಬಾರದು. ಒಂದು ಅಪೂರ್ವ ವೃತ್ತವನ್ನು ನಮಗೆ ಹೇಳಿರಿ!'

ಮುನಿಗಳು, 'ಶ್ರೀಶ! ನೀನು ತಿಳಿಯದ ಇತಿಹಾಸವಾವುದಿದೆ? ಸರ್ವಜ್ಞನಾದ ನಿನಗೆ ತಿಳಿಸಿಕೊಡುವುದಾದರೂ ಏನು?' ಎಂದರು. ಶ್ರೀಕೃಷ್ಣನು, 'ಹಾಗಲ್ಲ! ಮಾನುಷರಲ್ಲಿ ಅವತರಿಸಿದಾಗ ಮನುಜರಂತೆ ನಾನು ನಟಿಸುವೆನು. ಇಲ್ಲದಿರೆ ಲೋಕಸಂಗ್ರಹವೆಂತಾಗುವುದು? ಅವತಾರ ರೂಪಗಳಲ್ಲಿ ನಾನು ಮಾಡುವ ತಪಸ್ಸು, ಯಜ್ಞ, ದಾನಗಳೆಲ್ಲವೂ, ವಿಪ್ರಪೂಜನ ನಮನಗಳೆಲ್ಲವೂ, ಜನರ ಶಿಕ್ಷೆಗಾಗಿ ಎಂದು ತಿಳಿಯಿರಿ!' ಎಂದನು. ಆಗ ಮುನಿಗಳೆಲ್ಲರು ಪ್ರಾರ್ಥಿಸಲು, ನಾರದನು ಹೇಳತೊಡಗಿದನು.

'ಒಂದು ಸಲ ನಾನು ಶೀತನಗರದಲ್ಲಿರುವ ಕೈಲಾಸದ ಕದಳಿಕಾ ವನಕ್ಕೆ ಬಂದೆನು. ಸಕಲ ತರುಗುಲ್ಮವಲ್ಲರೀ ಸಲ್ಲಲಿತವಾದ ಆ ವನವು ಪಿಕ ಶಾರಿಕಾ ಶುಕಾದಿ ಪಕ್ಷಿಗಳ ಕಲಕಲರವದಿಂದ ಪ್ರತಿಧ್ವನಿಸುತ್ತಿತ್ತು. ಅಲ್ಲೊಂದೆಡೆ ವಟತರು ಮೂಲದಲ್ಲಿ ಕನಕ ಸಿಂಹಾಸನಾಸೀನನಾಗಿದ್ದ ಈಶಾನನನ್ನು ಸುರಸಿದ್ಧಸಾಧ್ಯ ವಿಧ್ಯಾಧರ ಮುನಿಜನರು ದೂರ ನಿಂತು ನುತಿಸುತ್ತಿದ್ದರು. ಪ್ರಮಥಗಣವು ಭಕ್ತಿಯಿಂದ ಸೇವಿಸುತ್ತಿತ್ತು.

ಆಗ ಪಾರ್ವತಿದೇವಿಯು ಅಲ್ಲಿಗೆ ಬಂದಳು. ಗಂಗಾದಿ ಪುಣ್ಯನದೀ ದೇವತೆಗಳು ಆಕೆಯನ್ನು ಸೇವಿಸುತ್ತ ಹಿಂದೆ ಬಂದರು. ಗೌರಿಯು ಮೆಲ್ಲನೆ ಸಾಗಿ, ಮಹೇಶನ ಹಿಂದೆ ನಿಂತು, ನಗುತ್ತಾ, ಆತನ ನೇತ್ರದ್ವಯವನ್ನು ತನ್ನ ಕರದ್ವಯದಿಂದ ಮುಚ್ಚಿದಳು. ತತ್‌ಕ್ಷಣವೇ ಲೋಕವೆಲ್ಲವೂ ಚಂದ್ರ ಸೂರ್ಯರಹಿತವಾದಂತಾಯಿತು. ಈಶಾನನು ತನ್ನ

ಮೂರನೆಯ ಕಣ್ಣನ್ನು ತೆರೆದನು. ಅದರಿಂದ ಹೊರಬಂದ ಅಗ್ನಿ ಜ್ವಾಲೆಗಳು ಆಕಾಶಕ್ಕೆ ಹಾರಿ, ಹಿಮವನ್ನಗರವನ್ನು ಸುಡುವುದನ್ನು ಕಂಡು, ಗೌರಿಯು ಶಿವನ ಪಾದಗಳಿಗೆ ಬಾಗಿ, 'ಕರುಣಿಸು' ಎಂದಳು. ಈಶಾನನು ಕಣ್ಣು ಮುಚ್ಚಿದನು. ಮಿಕ್ಕ ನೇತ್ರದ್ವಯವನ್ನು ತೆರೆದು, ಸರ್ವಲೋಕವನ್ನೂ ವಿಜ್ವರವನ್ನಾಗಿ ಮಾಡಿದನು.

ಶಿವನು, 'ಶಿವೇ! ಕೇಳು! ಇಂತು ಮಾಡಿದುದೇಕೆ ಎಂದು ವಿವರಿಸುವೆನು. ಶಶಿ ಸೂರ್ಯ ವಹ್ನಿನೇತ್ರನಾದ ನನ್ನ ಕಣ್ಣ ಜತೆಯನ್ನು ಮುಚ್ಚಿದೆ. ಅದರಿಂದ ಲೋಕವು ಅಂಧಕಾರ ಬಂಧುರವಾಯಿತು. ಆಗ ಮೂರನೇ ಕಣ್ಣನ್ನು ಬಿಚ್ಚಿ, ಲೋಕಗಳನ್ನು ಬೆಳಗಬೇಕಾಯಿತು. ಈಗ ಸರಿಹೋಯಿತು. ಅಂಧಕಾರ ಸದೃಶನಾಗಿ ಲೋಕವನ್ನು ಹಾಳುಮಾಡಲಿದ್ದ ದೈತ್ಯನನ್ನು ಸುಡಲೆಂದು ಶ್ರೀಕೃಷ್ಣನು ಮುಖದಿಂದ ಅಗ್ನಿಯನ್ನು ಸೃಜಿಸಿದನು. ವಹ್ನಿಮುಖನಾದ ಶ್ರೀಶನ ಅಪ್ಪಣೆಯಂತೆ ವಹ್ನಿನೇತ್ರನಾದ ನಾನೂ ವಹ್ನಿಯನ್ನು ಸೃಜಿಸಿದೆನು. ಆಗ ವಹ್ನಿಮಂಡಲದಲ್ಲಿ ವ್ಯಾಪ್ತನಾಗಿ ಹೋಗಿ ಶ್ರೀಕೃಷ್ಣ ಸುತನಾದ ಪ್ರದ್ಯುಮ್ನನು ನನ್ನಲ್ಲಿದ್ದ ಕಾಮನೇ ತಾನಾದುದರಿಂದ ಆ ದಾನವನನ್ನು ಕೊಂದು, ಶ್ರೀಕೃಷ್ಣನಲ್ಲಿ ಸೇರಿರುವನು. ಶ್ರೀರುಕ್ಮಿಣೀಕೃಷ್ಣರು ಸುತನಿಗಾಗಿ ತಪಸ್ಸನ್ನು ಮಾಡಿ, ಶಿವನು ಶಿವೆಯು ದಾಂಪತ್ಯ ಪ್ರೀತಿ ಸಂತಾನವನ್ನು ಕೊಡುವ ದೈವತವೆಂದು ನಮ್ಮ ಕೀರ್ತಿಯನ್ನು ಇತರ ಜನರಿಗೆ ತಿಳಿಸಲು ಬರುವರು. ಆ ಸ್ವಾಮಿಯ ಮಹಿಮೆ ಅಪಾರವಾಗಿದೆ. ಆ ನಮ್ಮ ಕುಲದೇವೀ ದೇವರನ್ನು ಪೂಜಿಸಿ ಧನ್ಯರಾಗೋಣ!' ಎಂದನು.

ಶಿವೆಯು, 'ರಮಣ! ನಿನಗೆಂತು ಐದು ಮುಖಗಳಾದವು? ನೀಲಕಂಠ ನಾದುದೇಕೆ? ನಿನ್ನ ಬಿಲ್ಲಿಗೆ ಪಿನಾಕವೆಂಬರು. ಅದು ನಿನಗೆಂತು ಬಂತು? ವೃಷ ವಾಹನನಾದುದೇಕೆ? ಶ್ಮಶಾನದಲ್ಲಿರಲು ಕಾರಣವೇನು?' ಎಂದು ಕೇಳಿದಳು. ಮಹಾದೇವನು, 'ರಮಣೀಮಣೀ! ಕೇಳು! ವಾಸುದೇವನ ಆಜ್ಞೆಯಂತೆ ನಡೆಯುವುದೆಮ್ಮಯ ಸ್ವಭಾವ! ಏಕೆ! ಎಂತು? ಎಂಬ ವಿತಂಡವಾದವಿಲ್ಲ ನಮ್ಮಲ್ಲಿ! ಆ ಜಗದೇಕ ವಲ್ಲಭನ ಆಜ್ಞಾಪಾಲನವು ಲೋಕಹಿತಕ್ಕೆಂದು ನಮಗೆ ನನಗೆ ; ನನ್ನ ತಂದೆಗೆ ಗೊತ್ತು.

ಹಿಂದೆ ಸುಂದೋಪ ಸುಂದರರೆಂಬ ದೈತ್ಯಸೋದರರು ವರಬಲದಿಂದ ಇತರಾವಧ್ಯರಾಗಿ, ಕೊಬ್ಬಿ, ಲೋಕಗಳನ್ನು ಪೀಡಿಸಿದರು. ಆಗ ಬ್ರಹ್ಮಾಜ್ಞೆಯಂತೆ ಮಯನು ಎಲ್ಲ ಲೋಕಗಳ ಉತ್ತಮ ಪದಾರ್ಥಗಳಲ್ಲಿರುವ ತಿಲಮಾತ್ರ ಸಾರವನ್ನು ಗ್ರಹಿಸಿ, ಅದರಿಂದ ಕಾಮಿನೀಮಣಿಯನ್ನು ನಿರ್ಮಿಸಿದನು. ಅವಳನ್ನು ತಂದು ಮಯನು ನನಗೆ ತೋರಿದನು! ಅವರಾ ರೋಹೆಯು ನನಗೆ ಪ್ರದಕ್ಷಿಣವಾಗಿ ಬರುವಾಗ, ನಾನು ಅವಳಿದ್ದಲ್ಲಿ ಒಂದೊಂದು ದಿಕ್ಕಿಗೆ ಒಂದು ಮುಖವನ್ನೇ ಮಾಡಿಕೊಂಡು, ಊರ್ಧ್ವಮುಖದಿಂದ ಕೂಡಿ, ಪಂಚಮುಖನಾದೆನು. ಅವಳಿಗೆ ತಿಲೋತ್ತಮೆ ಎಂಬ ಹೆಸರನ್ನಿತ್ತೆನು. ಅವಳಿಗಾಗಿ ಕಡಿದಾಡಿ, ಸುಂದೋಪಸುಂದರರು ಪರಸ್ಪರ ನಿಹತರಾದರು.

ಸುರಾಸುರರು ಕ್ಷೀರೋದಧಿಯನ್ನು ಮಥಿಸುವಾಗ ಪುಟ್ಟಿದ ಹಾಲಹಲವನ್ನು, ಸುರರಾದಿ ಲೋಕಕ್ಷೇಮಕ್ಕೆಂದು, ಶ್ರೀಹರಿ ಮುಖ್ಯಪ್ರಾಣಾನುಗ್ರಹ ಬಲದಿಂದ ಕುಡಿದು, ಅದು ಕಂಠದಲ್ಲಿ ನಿಂತಾಗ, ನೀಲಕಂಠನೆನಿಸಿದೆನು.

ಕೃತಯುಗದಲ್ಲಿ ಕಣ್ವನೆಂಬ ಮುನಿವರನು ತೀವ್ರತಪೋನಿರತನಾಗಿದ್ದನು. ಅವನ ಮೇಲೆ ಬಿದಿರಪೊಳೆ ಬೆಳೆಯಿತು. ಅಷ್ಟು ದಪ್ಪವಲ್ಲದಿದ್ದರೂ ದೃಢವೂ, ಬಲು ದೀರ್ಘವೂ ಆದ ಆ ಬಿದಿರಿನಿಂದ ಜಗದ್ಧಾತನು ತನಗೊಂದೂ, ನನಗೊಂದೂ, ತನ್ನ ತಂದೆಗೊಂದೂ ಬಿಲ್ಲುಗಳನ್ನು ನಿರ್ಮಿಸಿದನು. ಬ್ರಹ್ಮಧನುವಾದ ಗಾಂಡೀವವು ಅಗ್ನಿದ್ವಾರಾ ಅರ್ಜುನನಲ್ಲಿದ್ದು, ಮತ್ತೆ ತನ್ನ ಒಡೆಯ ವರುಣನನ್ನೇ ಸೇರುವುದು. ಶಾರ್ಙ್ಗವು ಶ್ರೀಶನಲ್ಲಿದೆ. ಪಿನಾಕವೆನ್ನಲ್ಲಿದೆ. ಪಿನಾಕಪಾಣಿಯಾದ ನಾನು ಶ್ರೀಶಾರ್ಙ್ಗಪಾಣಿಯನ್ನೆದುರಿಸಿ, ನಿಲ್ಲಲಾರದೆ ನಿಶ್ಚಲನೂ ಆಗಿ ಶರಣಾದಾಗ, ಶ್ರೀಹರಿಯು ಕರುಣೆಯಿಂದ ನನ್ನನ್ನು ಕ್ಷಮಿಸಿ, ಪಿನಾಕೀ ಎಂಬ ತನ್ನ ನಾಮವನ್ನೆಗಿತ್ತನು.

ಗೋಲೋಕದ ಸುರಭಿಗಳ ನೊರೆಯಿಂದ ತೊಯ್ದು ಸಿಟ್ಟಾಗಿ, ನಾನು ಕಣ್ಣು ಬಿಟ್ಟಾಗ, ಕೆಲ ಗೋವುಗಳು ಅಗ್ನಿತಾಪಿತವಾಗಿ ಕಪ್ಪಾದವು. ಆಗ ಬ್ರಹ್ಮದೇವನು ನನ್ನನ್ನು ಸಮಾಧಾನಪಡಿಸಿ, ಗೋವಿನ ನೊರೆಯು ಅಮೃತಧಾರೆಯಲ್ಲವೇ? ಎಂದು ತಿಳಿಸಿದನು. ನಾನು ಶಾಂತನಾಗಿ, ಗೋವುಗಳಿಗೆ 'ನಿಮ್ಮ ವೃಷವೇ ಎನಗೆ ವಾಹನವಾಗಲಿ! ವೃಷಧ್ವಜನೂ ಆಗುವೆನು!' ಎಂದು ವರವಿತ್ತೆನು.

ಗರ್ಭಿಣೀ ವಧಾಪನೋದಿಯಾಗಿ ಶ್ರೀಶಾಜ್ಞೆಯಂತೆ ನಾನು ಶ್ಮಶಾನದಲ್ಲಿರುವೆನು. ಅದು ವಿಜನವಾಗಿದೆ. ವಿರಾಗ ರಸ ಸಮುದ್ಬೋಧಕವೂ ಆಗಿದೆ. ಸುಖವನ್ನು ಸಹಿಸಬೇಕೆಂದು ಚಂದ್ರನಿಂದಲೂ, ದುಃಖವನ್ನು ನುಂಗಬೇಕೆಂದು ವಿಷದಿಂದಲು ಕ್ರೋಧವನ್ನು ಬಿಡಬಾರದೆಂದು ಫಾಲನೇತ್ರದಿಂದಲು, ತೋರಿಸಿ, ಧರಿಸಿ, ವೈರಾಗ್ಯಾಧಿಪನಾಗಿ, ಇಂತು ಶ್ರೀಶ ಸೇವೆಯನ್ನು ಗೈಯುತ್ತಿರುವೆನು.

ಗೌರಿಯು ಕೇಳಲು ಶಿವನು ವರ್ಣಾಶ್ರಮ ಧರ್ಮಗಳನ್ನೂ, ಆಚಾರ ವಿಚಾರವನ್ನೂ ತಿಳಿಸಿಕೊಟ್ಟನು. ಈ ವಿಷಯವನ್ನು ನಿನಗೆ ಹಿಂದೆ ಎಷ್ಟೋ ಸಲ ಹೇಳಿರುವೆನಲ್ಲವೇ? "ಗೃಹಸ್ಥನಿಗೆ ಅತಿಥಿಪೂಜೆಗಿಂತ ಹೆಚ್ಚು ಧರ್ಮವಿಲ್ಲ. ಪಂಚಯಜ್ಞಗಳನ್ನು ಮಾಡುತ್ತಾ, ಪಂಚಪರ್ವಗಳಲ್ಲಿ ಸುರತವನ್ನು ಬಿಟ್ಟು, ನಿಜದಾರ ತೃಪ್ತನಾಗಿ, ಮನೆಯಲ್ಲಿರುವ ಮಕ್ಕಳನ್ನಂತೆ ಮಾರ್ಜಾಲ ಮೂಷಿಕಾದಿಗಳನ್ನೂ ತಕ್ಕಂತೆ ಪೋಷಿಸುವ ಗೃಹಸ್ಥನಿಗೆ ಅಶ್ವಮೇಧ ಯಜ್ಞಫಲವು ಸಿಗುವುದು. ದುಸ್ಸಂಗವನ್ನು ಬಿಟ್ಟ ಯತಿ, ಅತಿಥಿಪೂಜಕನಾದ ಗೃಹಸ್ಥ, ದುಷ್ಟಶಾಸಕನಾದ ರಾಜ, ದಾನತತ್ಪರನಾದ ವೈಶ್ಯ, ಅನುಕೂಲವ್ರತನಾದ ಶೂದ್ರ ಇವರೆಲ್ಲರೂ ಶ್ರೇಯೋಭಾಜನರಾಗುವರು. ಅಹಿಂಸೆಯು ಪರಮಧರ್ಮವಾಗಿದೆ. ಆದರೆ ಹಿಂಸೆಯೇ ಆಗದಂತೆ ಬದುಕಿರಲಾಗದು. ನೆಲದಲ್ಲಿ ತುಳಿವ ಪಿಪೀಲಿಕಾದಿಗಳು, ಮೈಮೇಲೇರಿ ಬರುವ ತಗಣೆ, ನೊಣ, ದೋಮಾರಿ, ಕಚ್ಚಿ ಸಾಯಿಸುವ ಚೇಳು, ಹಾವು, ಹುಲಿ, ಇತ್ಯಾದಿ ಜಂತುಗಳನ್ನು ಕೊಲ್ಲದಿರಲಾಗದು. ಫಲವನ್ನು [ ಉದುರಿದ ಮೇಲೆ],

ಹಾಲನ್ನು [ ಕರುವುಂಡ ಮೇಲೆ ], ಮಾತ್ರ ಉಂಡು ಬದುಕಿರುವ ಶಮಂತರನ್ನು ಅಹಿಂಸಾಪೂರ್ಣರೆಂದು ತಿಳಿ! ಆದರೆ ಅಂತಹವರಿಗೂ ಹಿಂಸೆಯ ಬಾಧೆ ಇದೆ. ಎಂತೆಂದರೆ ಜಲ, ಗಾಳಿ, ಭೂತಲಗಳಲ್ಲಿ ಅನೇಕ ಸೂಕ್ಷ್ಮಜಂತುಗಳಿವೆ. ಅವರೂ ನೀರು ಕುಡಿವರು; ಓಡಾಡುವರು; ಉಸಿರಾಡಿಸುವರು. ದೀಪದಲ್ಲಿ ಬಿದ್ದು ಸತ್ತ ಹುಳವನ್ನು ಕಂಡು, ದೀಪವಿಡದಿರಲಾಗುವುದೇ? ಉಳುವಾಗ ಕ್ರಿಮಿನಾಶವಾಗುವುದೆಂದು ಕೃಷಿಯನ್ನೇ ಬಿಡಬಹುದೇ? ವಿಧಾತೃವಶವಾಗಿ ಸಾಯುವದರಿತ ನಾವು ಕೊಂದೆವೆಂದು ಭ್ರಮಿಸಿ ತಪಿಸಬಾರದು. ಅಹಂಕಾರದಿಂದ ಮಾಡಿದ ಹಿಂಸಾದಿಗಳು ಬಂಧಕವಾಗಲಿ, ಶ್ರೀಶ ಪ್ರೇರಣೆಯಿಂದ ಶ್ರೀಹರಿಪೂಜೆ ಎಂದು ತಿಳಿದು ಮಾಡುವ ಕಾರ್ಯಗಳು ಬಂಧಕವಲ್ಲ. ಮೂರು ಲೋಕವನ್ನು ಸಂಹರಿಸುವ ಮುಕ್ಕಣ್ಣನಾದೆನಗೆ ಪಾಪವಿಲ್ಲ. ಏಕೆಂದರೆ ಅದು ಶ್ರೀಹರಿಪೂಜೆ.

ಕ್ರೂರಮೃಗಗಳನ್ನು ಕೊಲ್ಲುವುದರಿಂದ ಸಸ್ಯರಕ್ಷಣ, ಜಂತುಕ್ಷೇಮಗಳು ಸಾಧಿತವಾಗುತ್ತಿದೆ. ದುಷ್ಟದಂಡನದಿಂದ ಸುಜನಕ್ಷೇಮವಾಗುತ್ತಿದೆ. ಹಿಂಸೆ ಎಂದು ಅವನ್ನು ರಾಜನಾದವನು ಬಿಡಬಾರದು. ಕಳೆ ಕಿತ್ತುವುದು ಹಿಂಸೆ ಎಂದು ಬಿಟ್ಟರೆ ಬೆಳೆಯೇ ಹಾಳಾಗುವುದು. ಸುಜನರಲ್ಲಿ ಭೂಸುರರಾದರೆ ಮತಿವಂತರಿಂದ ಅತ್ಯಂತ ಪೂಜ್ಯರಾಗುವರು. ವಿಪ್ರಾವಮಾನದಿಂದ ನಹುಷನು ಅಜಗರನಾಗಿ ಬಿದ್ದನು. ವಿಪ್ರರಿಂದ ಧರ್ಮವನ್ನು ತಿಳಿದು, ಅವರು ಆಚರಿಸಿದಂತೆ ಆಚರಿಸಿ, ಎಲ್ಲ ವರ್ಣದವರೂ ತಂತಮ್ಮ ಯೋಗ್ಯ ಸುಗತಿಯನ್ನು ಹೊಂದುವರು.

ದೇವಾಂಶದ ಮಾನವರ ಲಕ್ಷಣವನ್ನು ಹೇಳುವೆನು.

ಸಂಪತ್ತಿಗೆ ಉರಿದೇಳದೆ, ವಿಪತ್ತಿಗೆ ಮಿಡುಕದೆ, ಪಾಪಗಳನ್ನು ಪರಿವರ್ಜಿಸಿ, ಬಂಧುಗಳಿಗೆ ಹಿತಕರರಾಗಿ, ಹಿರಿಯರು, ಗುರುಗಳಿಗೆ ವಿಧೇಯರಾಗಿ, ದೀನಜನರನ್ನು ಸಲಹುತ್ತಾ, ಕ್ರೋಧವನ್ನು ಬಿಟ್ಟು, ಶ್ರೀಹರಿಭಕ್ತರಾಗಿರುವವರು ದೇವಾಂಶರೆಂದು ತಿಳಿ!

ಸತಿ! ಹಿಂದಿನ ಜನ್ಮದಲ್ಲಿ ಬಲಿ ಭಿಕ್ಷೆಗಳನ್ನು ನೀಡದೆ, ಮಿತ್ರಬಂಧುಗಳಿಗೆ ಕಷ್ಟಗಳಲ್ಲಿ ನೆರವಾಗದೆ, ದಾನಧರ್ಮಗಳನ್ನು ಬಿಟ್ಟು ಕ್ರೂರಾತ್ಮರು, ಈಗ ದರಿದ್ರರಾಗಿ ಹುಟ್ಟುವರು. ಇತರರ ಉಪದೇಶದಿಂದ ದಾನ ಮಾಡಿದವರು ಈ ಜನ್ಮದಲ್ಲಿ ಧನವಂತರಾಗಿಯೂ ಭೋಗರಹಿತರಾಗಿರುವರು. ತಮಗಿಲ್ಲದೆ ದಾನಮಾಡಿಲ್ಲವೆಂದು ಪಶ್ಚಾತ್ತಾಪಪಡುತ್ತಿದ್ದವರು. ಈಗ ತಮ್ಮಲ್ಲಿ ಧನವಿಲ್ಲದಿದ್ದರೂ, ಪರಸಹಾಯದಿಂದ ಸುಖವಾಗಿರುವರು. ತಾವಾಗಿ ಕರೆದು ಪಾತ್ರರಿಗೆ ದಾನವಿತ್ತವರಿಗೆ ಈಗ ಅನಾಯಾಸ ಧನಪ್ರಾಪ್ತಿಯಾಗುವುದು. ಬೇಡಿದ ಮೇಲೆ ಕೊಟ್ಟವರೀಗ ಆಯಾಸದಿಂದ ಧನವನ್ನು ಪಡೆದರೂ, ಅದನ್ನು ಬೇಗ ಕಳೆದುಕೊಂಬುವರು. ಯಾಚಕರನ್ನು ಕೊಡದೆ ತಿರುಗಿಸಿದವರು ಈಗ ಧನಹೀನರಲ್ಲದೆ, ರೋಗಿಗಳೂ ಆಗಿರುವರು.

ಮಾಂಸಭೋಜನವನ್ನು ಬಿಟ್ಟವರು ಅಧಿಕ ಸೌಂದರ್ಯರಾಗಿ ಹುಟ್ಟುವರು. ರೂಪವಂತ

ರಾಗಿದ್ದು ಪರರನ್ನು ನಗೆಯಾಡಿದವರು ಕುರೂಪಿಗಳಾಗುವರು. ನಿಜದಾರತತ್ಪರರು ಸುಂದರೀಪತಿಗಳಾಗುವರು. ಸುಭಾರ್ಯಾ ದ್ವೇಷಿಗಳಿಗೆ ಸೌಭಾಗ್ಯವಿರುವದಿಲ್ಲ. ಪರೋಪದೇಶ ಮಾತ್ರ ಪಂಡಿತರು ನಿತ್ಯದರಿದ್ರರಾಗುವರು. ಗುರುಭಕ್ತರು ವಿಮಲ ವಿಜ್ಞಾನಿಗಳಾಗಿ ಹುಟ್ಟುವರು. ಪಂಡಿತನಾಗಿಯೂ ಉಪದೇಶಚತುರನಾಗದಿರುವವನು ಹಿಂದೆ ಗುರು ಧಿಕ್ಕಾರವನ್ನು ಮಾಡಿದವನು. ನಿರ್ಮಲಾಚಾರ, ಸತ್ಪಾತ್ರದಾನ, ಸತ್ಯ, ದಯಾಪೂರ್ತಿಗಳಿಗೆ ನೆಲೆಯಾಗಿದ್ದವರು. ಈಗ ಸತ್ಪುತ್ರ ಕಳತ್ರ ಮಿತ್ರಯುತರಾಗಿ, ಸಕಲಭೋಗ ಸಮೃದ್ಧಿಯಿಂದ ಸುಖವಾಗಿರುವರು. ನಾಸ್ತಿಕರಿಗೆ, ಪರಪೀಡಕರಿಗೆ ಚಂಡಿಪತ್ನಿ, ದುಷ್ಟಪುತ್ರರು, ರೋಗರುಜಿನಗಳು ಪ್ರಾಪ್ತವಾಗುವವು.

ಪರನಾರೀ ಲಾವಣ್ಯಲೋಚನನು ವಿಗತಲೋಚನನು ಪರನಿಂದಾಪರನು ಬಧಿರನಾಗುವನು. ಶಿಷ್ಟಜನ ಪೀಡಕನಿಗೆ ಪರಿಣಾಮ ಶೂಲೆಯು ಬರುವುದು. ವಿಷವಿತ್ತವನು ಶರ್ಕರಾರೋಗ ಪೀಡಿತನಾಗುವನು. ಕನ್ಯೆ, ಗೋವು, ಮಹಿಷಿ, ಮುಂತಾದ ವಿಯೋನಿಯಲ್ಲಿ ರಮಿಸಿದವನು ಶೋಷರೋಗಿಯಾಗುವನು. ಪರರನ್ನು ಬಂಧಿಸಿಟ್ಟವನು ಕುಂಟನಾಗುವನು. ಕಾಲುಕೈಗಳನ್ನು ಮುರಿದು, ಚರ್ಮರಜ್ಜುಗಳಿಂದ ಹೊಡೆದವನು, ಮರುಜನ್ಮದಲ್ಲಿ ವಿಹಸ್ತನಾಗುವನು. ಅಶುಚಿಯಾಗಿ ದೇವಮಂದಿರವನ್ನು ಮೆಟ್ಟಿದವನು ಪಾದರೋಗಿಯಾಗುವನು. ವಿನೋದಕ್ಕಾಗಿ ಪಕ್ಷಿ, ಕೀಟ, ಮೃಗಾದಿಗಳನ್ನು ಕೊಂದವರು, ಅತಿಸಾರ ಗುಲ್ಮ, ಕಫಾಧಿಕ್ಯ ಮುಂತಾದ ರೋಗಗಳಿಂದ ಪೀಡಿತರಾಗುವರು. ಧಾನ್ಯಾದಿಗಳನ್ನು ಮಾರುವಾಗ ತೂಕ ಅಳತೆಗಳಲ್ಲಿ ಮೋಸಮಾಡಿದವರು, ಗೂನಿ, ಕುಬ್ಜರಾಗುವರು. ಸಾಧು ಜನರನ್ನು ಮೋಸಮಾಡಿದವರು, ಹುಚ್ಚರಾಗುವರು. ಪಿತೃ ಕಾರ್ಯವನ್ನು ಬಿಟ್ಟವರು ಅನಪತ್ಯರಾಗುವರು. ಎತ್ತಿನ ಬೀಜವನ್ನು ಒಡೆದವರು ನಪುಂಸಕರಾಗುವರು. ಭರ್ತೃ ವಂಚಕಳು ವಿಧವೆಯಾಗುವಳು. ಧನಮದದಿಂದ ಮಾನ್ಯರನ್ನು ಗೌರವಿಸದವರು ಚಂಡಾಲಾದಿ ಯೋನಿಯಲ್ಲಿ ಜನಿಸಿ, ಹೇಯಕಾರ್ಯನಿಯುಕ್ತರಾಗುವರು. ತಪ್ಪಿಲ್ಲದೆ ದಂಡಿಸಿದ ಅಧಿಕಾರಿಗಳು ದಾಸರಾಗುವರು. ತಮ್ಮಲ್ಲಿಟ್ಟ ನ್ಯಾಸವನ್ನು ಅಪಹರಿಸಿದ ವಿಶ್ವಾಸಘಾತುಕರು ಕಡು ದರಿದ್ರರಾಗುವರು. ನರವಧವನ್ನು ಗೈದವರು, ಸಕುಟುಂಬ ಮರಣವನ್ನು ಹೊಂದುವರು. ಮನುಜಜೀವರು ತಾವು ಮಾಡಿದ ಕರ್ಮ ಫಲವಾದ ಸುಖ ದುಃಖಗಳನ್ನು ಅದೇ ಜನ್ಮದಲ್ಲಿ ಅನುಭವಿಸುವುದಿಲ್ಲ. ದೇವತೆಗಳು, ಮುನಿಗಳು ಅದೇ ಜನ್ಮದಲ್ಲಿ ಉಭಯ ವಿಧ ಕರ್ಮ ಫಲವನ್ನು ಅನುಭವಿಸುವರು.

ಪಾರ್ವತಿ! ರಾಜಾದಿಗಳಿಂದ ದಂಡಿತರಾದ ಮನುಜರಿಗೆ ಪಾಪಫಲವು ಆಗಲೇ ಭುಕ್ತವಾಗುವುದು ; ನಿಜ ! ಆದರೆ ಪಾಪಕ್ಕೆ ತಕ್ಕ ಶಿಕ್ಷೆ ಆಗಿರದೆ, ಅದು ಉಳಿದು, ನರಕಾದಿಗಳನ್ನೂ, ಮುಂದೆ ಜನ್ಮಾಂತರ ದುಃಖವನ್ನೂ ತರಲು ಸಮರ್ಥವಾಗಿರುವುದು. ರಾಜದಂಡದಿಂದ ಯಮಬಾಧೆಯು ತಪ್ಪುವುದುಂಟು! ಆದರೆ ಆ ದಂಡವು ಅಪರಾಧ

ಸಮವಾಗಿರಬೇಕು. ದೇವಾಸುರ ಮುನಿಗಳಾದರೂ ಬುದ್ಧಿಪೂರ್ವಕವಾಗಿ ಮಾಡಿದ ಕರ್ಮದ ಫಲವು ಅವಶ್ಯ ಅನುಭೋಕ್ತವ್ಯವಾಗಿದೆ.

ಜೀವನಿಗೆ ಪುಣ್ಯವು ಆಯುರ್ವೃದ್ಧಿ ಕಾರಣವಾಗಿದೆ ; ಪಾಪವು ಆಯುಃ ಕ್ಷಯ ಕಾರಣವಾಗಿದೆ. ತಪಸ್ಸು, ಸತ್ಯವಚನ, ದಯೆ, ಶೌಚ, ಗುರುಭಕ್ತಿ, ಹಿತಮಿತ ಭೋಜನ, ಇಂದ್ರಿಯ ನಿಗ್ರಹ, ಪ್ರಾಣಾಯಾಮ, ಶ್ರೀಹರಿ ಚಿಂತನಗಳು ಆಯುಸ್ಸನ್ನು ಹೆಚ್ಚಿಸುವವು. ಪುಣ್ಯವಂತರು ಸ್ವರ್ಗವನ್ನು ಸೇರಿ, ಪುಣ್ಯಕ್ಷಯವಾದಾಗ, ಸ್ವಲ್ಪ ಪುಣ್ಯಶೇಷದಿಂದ ಬಂದು, ಶ್ರೀಮಂತ ಗೃಹದಲ್ಲಿ ಜನಿಸಿ, ಸುಖಚಿರಾಯುಗಳಾಗುವರು. ಪಾಪಾಧಿಕರು ನರಕಾನುಭುಕ್ತಿಯಾದ ಮೇಲೆ, ಪಾಪಶೇಷದಿಂದ ನೀಚಯೋನಿಗಳಲ್ಲಿ ಹುಟ್ಟಿ ದುಃಖಪಡುವರು. ಪುರುಷರು ಸ್ತ್ರೀಯರಾಗರು. ಎಂದೆಂದಿಗೂ ಸ್ತ್ರೀಯರು ಪುರುಷರಾಗರು. ಇದು ಪ್ರಕೃತಿಯ ಅನಾದಿ ನಿಯಮವಾಗಿದೆ. ಜೀವರು ಸಾತ್ತ್ವಿಕಾದಿ ಗುಣಗಳಿಂದ ಕೂಡಿ, ತತ್ತದ್ವಿಕಾರವನ್ನು ಹೊಂದಿ, ತಮ್ಮ ಅನಾದಿ ಯೋಗ್ಯತೆಗೆ ತಕ್ಕ ಕರ್ಮಗಳನ್ನು ಮಾಡುವರು. ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಅನಂತ ಸುಖಪ್ರದವಾಗುವುದು.

ಕರ್ಮಗಳನ್ನು ಮಾಡುವಲ್ಲಿ ಜೀವನು ಸ್ವತಂತ್ರನಲ್ಲ! ಆದರೂ ಅವನು ಜಡನೂ ಅಲ್ಲ. ಅವನಿಗಿರುವ ಕರ್ತೃತ್ವವು ಶ್ರೀಶಾಯತ್ತವಾಗಿದೆ. ಕರ್ಮಫಲದಲ್ಲಿ ಅವನಿಗೆ ಸ್ವಾತಂತ್ರ್ಯವಿಲ್ಲ. ಕರ್ಮಫಲದಾತನು ಶ್ರೀಹರಿಯೇ. ಉದ್ಯೋಗ ದೈವಗಳೆರಡೂ ಸೇರಿದಾಗಲೇ ಕರ್ಮಫಲವು ಕೈಗೂಡುವುದು. ಖನನದಂತೆ ಪೌರುಷವಾದರೆ, ಜಲದಂತೆ ದೈವವೆಂದು ತಿಳಿ! ಕೃತಿಯು ಜೀವಾಯತ್ತವಾಗಿ, ಫಲವು ದೈವಾಯತ್ತವಾಗಿದೆ.

ಹಿಂದಿನ ಜನ್ಮಗಳ ಜ್ಞಾನವಿತ್ತರೆ, ಮನುಜರು ಸರ್ವರು ಪುಣ್ಯಗಳನ್ನೇ ಮಾಡಿ, ಸ್ವರ್ಗವನ್ನು ಸೇರಬರುವರು. ಆಗ ಅಯೋಗ್ಯರಿಗೂ ಸುಗತಿಯನ್ನೀಯಬೇಕಾಗಿ ಬರುತ್ತಿತ್ತು. ಇಂತು ವಿಚಾರಿಸಿ, ಪ್ರಜಾಪತಿಯು ಜೀವರಿಗೆ ಜನನ ಸ್ಮೃತಿ ಇಲ್ಲದಂತಾಗುವಂತೆ ಮಾಡಿದನು. ಆಗ ಜೀವರು ಅಜ್ಞಾನಾವೃತರಾದರು. ಆದರಿಂದ ಅಹಂ ಮಮಕಾರಗಳು ಮೂಡಿಬಂದವು. ಅವರು ರಾಗ ದ್ವೇಷವಶರಾಗಿ ತಂತಮ್ಮ ಸ್ವರೂಪ ಯೋಗ್ಯತೆಗೆ ತಕ್ಕಂತೆ ತ್ರಿವಿಧ ಕರ್ಮಗಳನ್ನು ಮಾಡಿದರು. ಇಂತು ಸಾತ್ವಿಕರು ಪುಣ್ಯಕರ್ಮದಿಂದ ಸ್ವರ್ಗವನ್ನು, ರಾಜಸರು ಮಿಶ್ರಕರ್ಮದಿಂದ ಭೂಮಿಯನ್ನು, ದಾನವರು ತಾಮಸರು ಪಾಪಕರ್ಮದಿಂದ ತಮಸ್ಸನ್ನು ಹೊಂದಿದರು. ಪಾಪಪುಣ್ಯಗಳ ವಿವೇಕಕ್ಕಾಗಿ ಬ್ರಹ್ಮದೇವನು ಶಾಸ್ತ್ರಗಳನ್ನು ರಚಿಸಿ, ಸುಜನರಿಗುಪದೇಶಿಸಿದನು. ಶ್ರುತ್ಯಾದಿ ಶಾಸ್ತ್ರಗಳಿಂದ ಕಾರ್ಯಾಕಾರ್ಯಗಳನ್ನು ತಿಳಿಯಬೇಕಾಗಲಿ, ಸ್ವಬುದ್ಧಿಯಿಂದ ಅಲ್ಲ.

ಪಾಪಕರ್ಮರತರಿಗೆ ಯಾತನಾಮಯ ನರಕಗಳಲ್ಲದೆ, ಇಲ್ಲಿಯೇ ರೋಗ, ದಾರಿದ್ರ್ಯ, ಭಯ, ಚಿಂತಾದಿ ಪಾಪ ಫಲಗಳು ಅನುಭವಕ್ಕೆ ಬರುತ್ತಿವೆ. ಮಾನಸಿಕ, ವಾಚನಿಕ, ಕಾಯಿಕಗಳೆಂಬ ತ್ರಿವಿಧ ಪಾಪಗಳಿಗೂ ತತ್ತದ್ಯೋಗ್ಯ ಶಿಕ್ಷೆಗಳನ್ನೂ, ತತ್ಪರಿಹಾರಕ ಪ್ರಾಯಶ್ಚಿತ್ತಗಳನ್ನೂ ಪೇಳುವ ಕರ್ಮವಿಪಾಕಾದಿ ಶಾಸ್ತ್ರಗಳೆಷ್ಟೋ ಇವೆ. ಪರದಾರ ರತಿಯು ಬಲು ಪಾಪವು. ಅದಕ್ಕು ಹೆಚ್ಚಾದ ಪಾಪವೆಂದರೆ ಸುರಾಪಾನವು; ಅದಕ್ಕು

ಮಿಗಿಲಾಗಿದೆ ಬ್ರಹ್ಮಹತ್ಯೆ. ನಾನೇ ಬ್ರಹ್ಮನು ಎಂದು ಜೀವನು ತಿಳಿಯುವುದೇ ದೊಡ್ಡ ಬ್ರಹ್ಮಹತ್ಯೆ. ಅದಕ್ಕು ಮಿಗಿಲಾದ ಪಾಪವಿಲ್ಲ. ಆದುದರಿಂದ ಸುಜೀವರು ಅಹಂ ಬ್ರಹ್ಮಾಸ್ಮಿ ಅಂದರೆ ಜೀವನೇ ದೇವನೆಂದು ತಿಳಿಯದೆ, ದೇವನು ಅಹೇಯನು, ಅನಂತನು, ನಿರ್ವಿಕಾರನು ಆಗಿರುವನು ಎಂದೇ ತಿಳಿದು, ಗುರುಮುಖದಿಂದ ಶಾಸ್ತ್ರಗಳನ್ನು ವಿಚಾರಿಸಿ, ಶ್ರೀಹರಿ ಭಕ್ತರಾಗಬೇಕು.

ಕಾಂಚನ, ಕಪಿಲಾ, ಗೋ, ಭೂಮಿ, ವಸ್ತ್ರ, ಜಲ, ಅನ್ನದಾನಗಳಿಂದಲು ಪಾಪಕ್ಷಯವಾಗುವುದು. ಗಯಾ, ಗಂಗಾತೀರ, ಕುರುಕ್ಷೇತ್ರ, ಕಾಂಚಿ, ದ್ವಾರಾವತಿ, ಅಯೋಧ್ಯ, ಮಥುರಾ, ಮಾಯಾ, ಶ್ರೀಶೈಲ, ವೇಂಕಟಾಚಲ, ಶ್ರೀರಂಗಾದಿಗಳು ಪುಣ್ಯಭೂಮಿಗಳು. ಮಾಘ ಭಾದ್ರಪದ ವೈಶಾಖಗಳು, ಬಹುಳ ಪಕ್ಷದ ಅಮಾವಾಸ್ಯಾ ನವಮಿ ತ್ರಯೋದಶೀ ತಿಥಿಗಳು, ಸರ್ವದ್ವಾದಶಿಗಳು, ಭಾನುವಾರಗಳು ಪವಿತ್ರಕಾಲಗಳು. ಪಿತೃಕಾರ್ಯಗಳಿಗೆ ಬಹುಳ ಪಕ್ಷವಂತೆ, ದೇವಕಾರ್ಯಗಳಿಗೆ ಶುಕ್ಲಪಕ್ಷವು ಪ್ರಶಸ್ತವಾಗಿವೆ. ಶ್ರೋತ್ರಿಯರು, ನಿರೋಗರು, ಅವಿಕಲಗಾತ್ರರು, ಜ್ಞಾನಿಗಳು ಪಾತ್ರರು. ದೇಶ ಕಾಲ ಪಾತ್ರಗಳನ್ನರಿತು ಮಾಡಿದ ದಾನವು ಅನಂತ ಪುಣ್ಯಪ್ರದವೂ, ಸರ್ವಪಾಪ ಕ್ಷಾಲಕವೂ ಆಗುವುದು.

ದೇವತೆಗಳು ಉತ್ತರದಲ್ಲಿಯೂ, ಪಿತೃದೇವತೆಗಳು ದಕ್ಷಿಣದಲ್ಲಿಯೂ ಇದ್ದು, ಅವರೀವ ಹವ್ಯಕವ್ಯಗಳನ್ನು ಸ್ವೀಕರಿಸಿ, ಅದರ ಒಂದಂಶವನ್ನು ಅವರವರ ಪಿತೃಗಳಿಗೆ ಮುಟ್ಟಿಸಿ, ನರರನ್ನು ವರ್ಷ ಧನ ಧಾನ್ಯದಿಂದಲೂ, ಸಂತಾನಾರೋಗ್ಯಗಳಿಂದಲೂ ತಣಿಸಿ, ಸಲಹುತ್ತಿರುವರು.

ದೇಶಧರ್ಮ, ಕುಲಧರ್ಮ, ಜಾತಿಧರ್ಮ, ಗುಣಧರ್ಮ, ಆಪದ್ಧರ್ಮ ಎಂದು ಐದು ವಿಧವಾದ ಧರ್ಮವನ್ನು ತಿಳಿದು, ಆದರದಿಂದ ಅನುಷ್ಠಿಸುವುದರಿಂದ ಮನುಜನು ನಿಷ್ಪಾಪನಾಗುವನು. ಎಲ್ಲ ಧರ್ಮಗಳನ್ನು ಮೋಕ್ಷಧರ್ಮಕ್ಕೆ ಅವಿರುದ್ಧವಾಗಿರುವಂತೆ ನಡೆಸಬೇಕು. ಮೋಕ್ಷವನ್ನು ಶ್ರೀಹರಿ ಪ್ರಸಾದವೇ ದಯಪಾಲಿಸುವುದು. ಶ್ರೀಶ ಪ್ರಸಾದಕ್ಕೆ ಕಾರಣವಾದುದು ಜ್ಞಾನವೇ! ಮತ್ತೊಂದಲ್ಲ.

ಪ್ರಿಯೆ! ಆ ಬ್ರಹ್ಮಸ್ತಂಬಪರ್ಯಂತವಾದುದೆಲ್ಲವೂ ಅಸಾರವೂ ಅನಿತ್ಯವೂ ಆಗಿದೆ. ಸಾಂಸಾರಿಕ ಸುಖದ ಬೆನ್ನತ್ತಿ ಪೋಗುವುದು ಮೃಗ ತೃಷ್ಣಿಕಾಜಲಪಾನದಂತೆ ನಿರರ್ಥಕವಾಗಿದೆ. ಇಂತು ವಿಚಾರಿಸಿ, ವಿರಕ್ತನಾದವನು ಬ್ರಹ್ಮಜ್ಞಾನಾಧಿಕಾರಿಯಾಗುವನು. ಅವನು ವಿಷ್ಣು ಪಾದೈಕ ಸಂಶ್ರಯನಾಗಿ, ಶ್ರೀಹರಿಯ ಸರ್ವೋತ್ತಮತ್ವ, ಜಗಜ್ಜನ್ಮಾದಿ ಸ್ವತಂತ್ರ ಕರ್ತೃತ್ವ, ಜೀವಜಡವಿಲಕ್ಷಣತ್ವ, ಸರ್ವೇಶತ್ವ, ಸರ್ವತ್ರ ವ್ಯಾಪ್ತತ್ವ, ಸರ್ವಜ್ಞತ್ವ, ಲಕ್ಷ್ಮೀಪತಿತ್ವ, ಮುಖ್ಯಪ್ರಾಣವಲ್ಲಭತ್ವ, ವೇದಾದಿ ಸಚ್ಛಾಸ್ತ್ರ ಮುಖ್ಯಪ್ರತಿಪಾದಿತ್ವ, ಮೋಕ್ಷದಾತೃತ್ವ, ಮುಕ್ತಾಮುಕ್ತ ನಿಯಾಮಕತ್ವ ಮುಂತಾದ ಸುಗುಣಗಳನ್ನು ಗುರುಮುಖದಿಂದ ತಿಳಿದು ಜ್ಞಾನಿ ಎನಿಸುವನು.

ಶೌಚ, ಬ್ರಹ್ಮಚರ್ಯ, ಶಾಂತಿ, ದಾಂತಿ, ಧೃತಿ, ವಿರಕ್ತಿ, ಭಕ್ತಿಗಳೆಂಬ ಗುಣಗಳಿಂದ ಅವನು ಶ್ರೀಹರಿ ಪ್ರೀತಿವಿಷಯನಾಗುವನು. ತೃಷ್ಣಾಸಮ ದುಃಖವಿಲ್ಲ ; ಪರಿತ್ಯಾಗ ಸಮಾನಸುಖವಿಲ್ಲ. ಆಯಸ್ಸು ಆಮಘಟ್ಟದಲ್ಲಿಟ್ಟ ನೀರಿನಂತೆ ಹರಿದುಹೋಗುತ್ತಿದೆ. ಮೃತ್ಯುವು ಹಾದುಬರುತ್ತಿದೆ. ನಾಳೆ ಎನ್ನದೆ ಇಂದೇ ಎಂಬು ಪುಣ್ಯಕಾರ್ಯಗಳನ್ನು ಮಾಡಿದವನು ಮುಕ್ತನಾಗುವನು. ವಿರಕ್ತಿ, ಜ್ಞಾನ, ಭಕ್ತಿಗಳೆಂಬ ಮೂರು ಸೋಪಾನಗಳು ಮುಕ್ತಿಮಂಟಪಕ್ಕೆ ! ಕಾಮ ಕ್ರೋಧ ಲೋಭಗಳೆಂಬ ಮೂರು ಸುಳಿಗಳಿವೆ ನರಕ ಕುಂಡದಲ್ಲಿ ! ಆದುದರಿಂದ ಬುದ್ಧಿವಂತ ಜೀವರು ಪ್ರಕೃತಿನಾಮಕ ಲಕ್ಷ್ಮೀದೇವಿಗೆ ಪತಿಯು, ನಿಯಾಮಕನು ಆದ ಶ್ರೀಹರಿಯನ್ನು ಸಕಲತತ್ವ ಪ್ರಭುವೆಂದು ತಿಳಿದು, ಉಪಾಸಿಸಬೇಕು. ಪಂಚಭೂತಗಳು, ದಶೇಂದ್ರಿಯಗಳು, ಪಂಚತನ್ಮಾತ್ರಗಳು, ಮನಸ್ಸು, ಅಹಂಕಾರ, ಬುದ್ಧಿ, ಮಹತ್ತು ಇವು ಇಪ್ಪತ್ತುನಾಲ್ಕು ತತ್ವಗಳು. ಈ ಎಲ್ಲ ತತ್ವಗಳಿಗೆ ನಿಯಾಮಕರಾಗಿರುವ ವಿರಿಂಚ, ಸರಸ್ವತೀ, ರುದ್ರ (ನಾನು) ಮುಂತಾದ ಎಲ್ಲ ದೇವತೆಗಳೂ ಸದಾ ಸಂಸಾರಾವಸ್ಥೆ ಮತ್ತು ಮುಕ್ತಾವಸ್ಥೆಯಲ್ಲಿಯು ಕೂಡ ಶ್ರೀರಮಣನ ಅಧೀನರಾಗಿರುವೆವು. ಅವನ ಸೇವೆ ಎಂದೇ ನಾವು ಇತರ ಜೀವರ ಸೃಷ್ಟಿ ಸಂಹಾರಾದಿ ಕಾರ್ಯಗಳನ್ನು ಮಾಡಿ, ಶ್ರೀಶನಿಗೇ ಸಮರ್ಪಿಸಿ ಧನ್ಯರಾಗುತ್ತಿರುವೆವು.

ಇಂತು ತಿಳಿದು ನನ್ನನ್ನು ಶ್ರೀಹರಿಭಕ್ತವರನೆಂದು ಕೆಲರು ಯಥಾರ್ಥ ಜ್ಞಾನಿಗಳು ಸೇವಿಸುವರು. ಶ್ರೀವಿಷ್ಣು ಮಾಯಾವಶರಾಗಿ ಕೆಲವರು (ದಾನವರು) ನನ್ನನ್ನೇ ಸರ್ವೋತ್ತಮನೆಂದು ತಿಳಿದು, ಅಂತೆಯೇ ಉಪಾಸಿಸಿ, ಅನ್ಯಥಾಜ್ಞಾನದಿಂದ ಅಂಧಂತಮವನ್ನು ಹೊಂದುವರು. ಅದು ಅವರಿಗೆ ಸ್ವರೂಪಯೋಗ್ಯತಾ ಸಮವೆಂದು ತಿಳಿದು, ಶ್ರೀಹರಿ ಸಂಕಲ್ಪಾನುಸಾರವಾಗಿ, ನಾನು ಕೂಡ, ಅವರಿಗೆ ಅಂತಹ ಅನ್ಯಥಾಜ್ಞಾನವನ್ನೇ ಉಪದೇಶಿಸುವೆನು.'

ಇಂತು ನುಡಿದ ಶಿವನನ್ನು ಬಿಲ್ವ ಮಂಜರೀ ಮಂದಾರಾದಿ ಸುಮಗಳಿಂದ ಪೂಜಿಸಿ, ಪಾರ್ವತಿಯು, ಆ ಮಹಾನುಭಾವನ ಉಪದೇಶಾಮೃತ ಪಾನದಿಂದ ಆನಂದಭರಿತಳಾದಳು. ಆ ಪುಣ್ಯದಂಪತಿಗಳ ಸಂಭಾಷಣವನ್ನಾಲಿಸಿ ಮುನಿಗಳೆಲ್ಲರೂ ಕೃತಾರ್ಥರಾಗಿ, ಅವರಿಗೆ ಸಾಷ್ಟಾಂಗವೆರಗಿದರು.

## ೧೪. ಶಿವಸಹಸ್ರನಾಮ

ಭೀಷ್ಮನಿಂತೆಂದನು : ' ಇಂತು ನುಡಿದ ನಾರದನ ವಚನದಿಂದ ಮುನಿಜನರು ಸಂತಸಗೊಂಡು, ಶ್ರೀಕೃಷ್ಣನನ್ನು ಸ್ತುತಿಸಿ, ತಂತಮ್ಮ ಆಶ್ರಮಗಳಿಗೆ ತೆರಳಿದರು. ಧರ್ಮರಾಜ ! ಈಗ ನಿನಗೆ ಶಿವನ ಮಹಿಮೆಯನ್ನು ನಿರೂಪಿಸುವೆನು. ಶಿವನಲ್ಲಿ ಶಿವನಾಗಿದ್ದು, ಶಿವತ್ವವನ್ನು ಅವನಿಗೀವ ಶ್ರೀನಾರಾಯಣನ ಭಕ್ತರಲ್ಲಿ ಬ್ರಹ್ಮನಾದ ನಂತರ ಶಿವನು ಶ್ರೇಷ್ಠನಾಗಿರುವನು. ಸೃಷ್ಟಿಯ ಆದಿಕಾಲದಲ್ಲಿ ಶಿವನಿದ್ದಿಲ್ಲ ; ಬ್ರಹ್ಮನಿದ್ದಿಲ್ಲ. ಶ್ರೀಲಕ್ಷ್ಮೀಪತಿಯು ದೇವನಾಂ ಪ್ರಥಮನಾದ ಬ್ರಹ್ಮನನ್ನು ಸೃಜಿಸಿ, ಅವನಿಂದ ರುದ್ರನನ್ನು

ಸೃಷ್ಟಿ ಮಾಡಿಸಿದನು. ರುದ್ರ, ಬ್ರಹ್ಮ, ಇಂದ್ರ, ಚಂದ್ರಾದಿ ಸರ್ವಶಬ್ದಗಳೂ ಶ್ರೀನಾರಾಯಣನಲ್ಲಿ ಪರಮ ಮುಖ್ಯವೃತ್ತಿಯಿಂದ ಪ್ರವರ್ತಿಸಿ, ಸಮಾಕರ್ಷದಿಂದ ಇತರರಲ್ಲಿ ಅಮುಖ್ಯವೃತ್ತಿಯಿಂದ ಪ್ರವರ್ತಿಸುತ್ತಿವೆ. ವಿಷ್ಣುಮಾಯಾ ಮೋಹಿತರಾದ ಮಾನವರು ಈ ಮರ್ಮವನ್ನರಿಯದೆ, ವಿವಿಧ ಶಬ್ದಗಳಿಂದ ವಿವಿಧ ದೇವಾದಿಗಳನ್ನು ಮುಖ್ಯವಾಚ್ಯರೆಂದು ತಿಳಿದು, ಅವರನ್ನು ಭಜಿಸಿ, ಅವರಿಂದ ಸಂಪೂರ್ಣ ಫಲವಾದ ಮೋಕ್ಷವನ್ನು ಪಡೆಯಲಾರದೆ, ಸಂಸಾರಾವರ್ತದಲ್ಲಿ ಪರಿಭ್ರಮಿಸುತ್ತಿರುವರು.

ಆದುದರಿಂದ ಇತರ ದೇವತಾ ಭಜನೆಯಲ್ಲಿಯೂ ಅಂತರ್ಯಾಮಿಯಾದ ಶ್ರೀಹರಿಯನ್ನು ನೆನೆದು, ಫಲವನ್ನು ಅವರವರ ದ್ವಾರಾ ಶ್ರೀಶನಿಗರ್ಪಿಸುವುದು ಅತ್ಯಂತ ಶ್ರೇಯಃಕಾರಣವಾಗಿದೆ. ಅದರಿಂದ ರುದ್ರಾದಿಗಳೂ ಪ್ರೀತರಾಗಿ, ಜ್ಞಾನಾದಿ ಫಲಪ್ರದರಾಗುವರು. ಮಹಾಯೋಗ, ವಿದ್ವದ್ರೂಢಿಗಳಿಂದ ಶ್ರೀಹರಿಯನ್ನೇ ಪೇಳುತ್ತಾ, ಲೋಕಸಾಮಾನ್ಯ ರೂಢಿಯಿಂದ ಇತರತ್ರ ಪ್ರವರ್ತಿಸುವ ದೇವನಾಮ ಶತಸಹಸ್ರ ಸುತ್ತಿಗಳಿವೆ. ಅಂಥವುಗಳಲ್ಲಿ ತಂಡಿನಾಮಕ ಋಷಿಯು ಗಾನಮಾಡಿದ ಶಿವಸಹಸ್ರ ನಾಮಗಳನ್ನು ನಿನಗರುಹುವೆನು ಕೇಳು!

ಹಿಂದೆ ಹಿಮಶೈಲ ಪ್ರಾಂತ ವನಗಳಲ್ಲಿ ಉಪಮನ್ಯುವೆಂಬ ಋಷಿವರನಿದ್ದನು. ಅವನು ವ್ಯಾಘ್ರಪಾದ ಪುತ್ರನು, ಧೌಮ್ಯ (ಅಗ್ನಿವೇಶ್ಯ) ಭ್ರಾತನು ಆಗಿದ್ದನು. ಉಪಮನ್ಯುವು ಶಂಕರ ಪ್ರೀತಿಯನ್ನು ಬಯಸಿ, ನೂರು ವರ್ಷ ತೀವ್ರತಪವನ್ನು ಮಾಡಿದನು. ಇಂದ್ರನು ಅವನಿಗೆ ಪ್ರತ್ಯಕ್ಷನಾಗಿ, ಸ್ವರ್ಗಭೋಗಗಳನ್ನು ಕೊಡುವೆನೆಂದರೂ, ಉಪಮನ್ಯುವು ಆತನಿಂದ ಏನನ್ನೂ ಬೇಡದೆ ಶಿವಪ್ರೀತಿಯನ್ನೇ ಕೋರಿ, ಮತ್ತೆ ನೂರು ವರ್ಷ ತಪಸ್ಸನ್ನು ಆಚರಿಸಿದನು. ಆಗ ಮತ್ತೆ ಐರಾವತಾರೂಢನಾದ ಸುರರಾಜನು ಬಂದು ವಿವಿಧ ಭೋಗಾಶೆಯನ್ನು ತೋರಿಸಿದನು. ಉಪಮನ್ಯುವು 'ನನಗೇನೂ ಬೇಡ! ಶಿವನು ಪ್ರೀತನಾದರೆ ಸಾಕು!' ಎಂದನು. ತತ್‌ಕ್ಷಣವೇ ಐರಾವತವು ನಂದಿಯಾಯಿತು. ದೇವೇಂದ್ರ ಶಿವನಾದನು. ಇಂತು ಮೈದೋರಿ ನಿಂತ ಶಿವನನ್ನು ಮನಸಾರ ಸ್ತುತಿಸಿ, ಉಪಮನ್ಯುವು ವಂದಿಸಿದನು.

'ದೇವಾಧಿ ದೇವ! ಮಹಾದೇವ! ಶೂಲಧರ! ಪಾಪಹರ! ಶ್ರೀಕೃಷ್ಣ ಭಕ್ತವರ! ಕರುಣಾಸಾಗರ! ಭಕ್ತಬಂಧೋ!' ಎಂದು ನುತಿಸುವ ಉಪಮನ್ಯುವಿನಲ್ಲಿ ಪ್ರೀತನಾಗಿ, ಶರ್ವನು, 'ಉಪಮನ್ಯೋ! ಕೇಳು! ಹಿಂದೆ ತಂಡಿ ಎಂಬ ಮುನಿವರನಿಗೆ ಪ್ರೀತನಾಗಿ ನಾನು ಅದೇ ರೂಪವನ್ನು ತೋರಿದೆನು. ತಂಡಿಗೆ ಚಿರಾಯುವನ್ನು, ಪರಮೈಶ್ವರ್ಯವನ್ನು, ಇಂದ್ರಿಯ ಪಾಟವವನ್ನು ದಯಪಾಲಿಸಿ, ಅಂತರ್ಧಿತನಾದೆನು. ತಂಡಿಯು ನಿನ್ನ ಆಶ್ರಮಕ್ಕೆ ಬರುವನು. ಅವನಿಂದ ನನ್ನ ಸಹಸ್ರನಾಮ ಸ್ತುತಿಯನ್ನು ಕೇಳು! ಉದ್ಧೃತನಾಗುವೆ!' ಎಂದು ಕರುಣಿಸಿ, ಮರೆಯಾದನು.

ಉಪಮನ್ಯುವಿನ ಆಶ್ರಮಕ್ಕೆ ಬಂದ ತಂಡಿಯು, ಆತನಿಂದ ಪೂಜಿತನಾಗಿ, ಅವನಿಗೆ ಶಿವನಾಮ ಸಹಸ್ರವನ್ನು ನಿರೂಪಿಸಿದನು:

'ಓಂ ಹರಯೇ ನಮಃ ಓಂ. ಸ್ಥಿರ, ಸ್ಥಾಣು, ಪ್ರಭು, ಭೀಮ, ಪ್ರವರ, ವರದ, ವರ, ಸರ್ವಾತ್ಮ, ಸರ್ವವಿಖ್ಯಾತ, ಸರ್ವ, ಸರ್ವಕರ, ಭವ, ಜಟೀ, ಚರ್ಮಿ, ಶಿಖಂಡೀ, ಸರ್ವಾಂಗ, ಸರ್ವಭಾವನ, ಹರ, ಹರಿಣಾಕ್ಷ, ಸರ್ವಭೂತಹರ, ಪ್ರಭು, ಪ್ರವೃತ್ತಿ, ನಿವೃತ್ತಿ, ನಿಯತ, ಶಾಶ್ವತ, ಧ್ರುವ, ಶ್ಮಶಾನವಾಸೀ, ಭಗವಾನ್, ಖಚರ, ಗೋಚರ, ಅರ್ದನ, ಅಭಿವಾದ್ಯ, ಮಹಾಕರ್ಮಾ, ತಪಸ್ವೀ, ಭೂತಭಾವನ, ಉನ್ಮತ್ತವೇಷ, ಪ್ರಚ್ಛನ್ನ, ಸರ್ವಲೋಕ ಪ್ರಜಾಪತಿಃ, ಮಹಾರೂಪ, ಮಹಾಕಾಯ, ವೃಷರೂಪ, ಮಹಾಯಶ, ಮಹಾತ್ಮ, ಸರ್ವಭೂತಾತ್ಮ, ವಿಶ್ವರೂಪ, ಮಹಾಹನು, ಲೋಕಪಾಲ, ಅಂತರ್ಹಿತಾತ್ಮ, ಪ್ರಸಾದ, ಹಯಗರ್ದಭಿ, ಪವಿತ್ರ, ಮಹಾನ್, ನಿಯಮ, ನಿಯಮಾಶ್ರಿತ, ಸರ್ವಕರ್ಮಾ, ಸ್ವಯಂಭೂತ, ಆದಿ, ಆದಿಕರ, ನಿಧಿ, ಸಹಸ್ರಾಕ್ಷ, ವಿಶಾಲಾಕ್ಷ, ಸೋಮ, ನಕ್ಷತ್ರಸಾಧಕ, ಚಂದ್ರ, ಸೂರ್ಯ, ಶನಿ, ಕೇತು, ಗ್ರಹ, ಗ್ರಹಪತಿ, ವರ, ಅತ್ರಿ ಅತ್ರ್ಯಾ ನಮಸ್ಕರ್ತಾ, ಮೃಗಬಾಣಾರ್ಪಣ, ಅನಘ, ಮಹಾತಪ, ಘೋರತಪ, ಅದೀನ, ದೀನಸಾಧಕ, ಸಂವತ್ಸರಕರ, ಮಂತ್ರ, ಪ್ರಮಾಣ, ಪರಮಂತಪ, ಯೋಗೀ, ಯೋಜ್ಯ, ಮಹಾಬೀಜ, ಮಹಾರೇತಾ, ಮಹಾಬಲ, ಸುವರ್ಣರೇತಾ, ಸರ್ವಜ್ಞ, ಸುಬೀಜ, ಬೀಜವಾಹನ, ದಶಬಾಹು, ಅನಿಮಿಷ, ನೀಲಕಂಠ, ಉಮಾಪತಿ, ವಿಶ್ವರೂಪ, ಸ್ವಯಂಶ್ರೇಷ್ಠ, ಬಲವೀರ, ಅಬಲ ಗಣ, ಗಣಕರ್ತಾ, ಗಣಪತಿ, ದಿಗ್ವಾಸಾ, ಕಾಮ, ಮಂತ್ರವಿತ್, ಪರಮ, ಮಂತ್ರ, ಸರ್ವಭಾವಕರ, ಹರ, (೧೦೮).

ಕಮಂಡಲುಧರ, ಧನ್ವೀ, ಬಾಣಹಸ್ತ, ಕಪಾಲವಾನ್, ಅಶನೀ, ಶತಘ್ನೀ, ಖಡ್ಗೀ, ಪಟ್ಟಿಶೀ, ಆಯುಧೀ, ಮಹಾನ್, ಸ್ರುವಹಸ್ತ, ಸುರೂಪ, ತೇಜ, ತೇಜಸ್ಕರ ನಿಧಿ, ಉಷ್ಣೀಷೀ, ಸುವಕ್ತ್ರ, ಉದಗ್ರ, ವಿನತ, ದೀರ್ಘ, ಹರಿಕೇಶ, ಸುತೀರ್ಥ, ಕೃಷ್ಣ, ಶೃಗಾಲರೂಪ, ಸಿದ್ಧಾರ್ಥ, ಮುಂಡ, ಸರ್ವಶುಭಂಕರ, ಅಜ, ಬಹುರೂಪ, ಗಂಧಧಾರೀ, ಕಪರ್ದಿ, ಊರ್ಧ್ವರೇತಾ, ಊರ್ಧ್ವಲಿಂಗ, ಊರ್ಧ್ವಶಾಯಿ, ನಭಸ್ಥಲ, ತ್ರಿಜಟ, ಚೀರವಾಸಾ, ರುದ್ರ, ಸೇನಾಪತಿ, ವಿಭು, ಅಹಶ್ಚರ, ನಕ್ತಚರ, ತಿಗ್ಮಮನ್ಯು, ಸುವರ್ಚಸ, ಗಜಹಾ, ದೈತ್ಯಹಾ, ಕಾಲ, ಲೋಕದಾತಾ, ಗುಣಾಕರ, ಸಿಂಹ ಶಾರ್ದೂಲ ರೂಪ, ಆರ್ದ್ರಚರ್ಮಾಂಬರಾವೃತ, ಕಾಲಯೋಗ, ಮಹಾನಾದ, ಸರ್ವಕಾಮ, ಚತುಷ್ಪಥ, ನಿಶಾಚರ, ಪ್ರೇತಚಾರೀ, ಭೂತಚಾರೀ, ಮಹೇಶ್ವರ, ಬಹು ಭೂತ, ಬಹುಧರ, ಸ್ವರ್ಭಾನು, ಅಮಿತ, ಗತಿ, ನೃತ್ಯಪ್ರಿಯ, ನಿತ್ಯನರ್ತ, ನರ್ತಕ, ಸರ್ವಲಾಲಸ, ಘೋರ, ಮಹಾತಪ, ಪಾಶ, ನಿತ್ಯ, ಗಿರಿರುಹ, ನಭ, ಸಹಸ್ರಹಸ್ತ, ವಿಜಯ, ವ್ಯವಸಾಯ, ಅತಂದ್ರಿತ, ಅಧರ್ಷಣ, ಧರ್ಷಣಾತ್ಮಾ, ಯಜ್ಞಹಾ, ಕಾಮನಾಶಕ, ದಕ್ಷಯಾಗಾಪಹಾರೀ, ಸುಸಹ, ಮಧ್ಯಮ, ತೇಜೋಪಹಾರೀ, ಬಲಹಾ, ಮುದಿತ, ಅರ್ಥ ಜಿತ, ವರ, ಗಂಭೀರಘೋಷ (೨೦೦), ಗಂಭೀರ, ಗಂಭೀರ ಬಲವಾಹನ, ನ್ಯಗ್ರೋಧ, ವೃಕ್ಷಕರ್ಣಸ್ಥಿತಿ, ವಿಭು, ಸುತೀಕ್ಷ್ಣದರ್ಶನ, ಮಹಾಕಾಯ, ಮಹಾನನ, ವಿಷ್ವಕ್ಸೇನ, ಹರಿ, ಯಜ್ಞ, ಸಂಯುಗ್ಯಾಪೀಡವಾಹನಃ, ತೀಕ್ಷ್ಣತಾಪ, ಹರ್ಯಶ್ವ, ಸಹಾಯ, ಕರ್ಮಕಾಲವಿತ್,

ಸೃಷ್ಟಿ ಮಾಡಿಸಿದನು. ರುದ್ರ, ಬ್ರಹ್ಮ, ಇಂದ್ರ, ಚಂದ್ರಾದಿ ಸರ್ವಶಬ್ದಗಳೂ ಶ್ರೀನಾರಾಯಣನಲ್ಲಿ ಪರಮ ಮುಖ್ಯವೃತ್ತಿಯಿಂದ ಪ್ರವರ್ತಿಸಿ, ಸಮಾಕರ್ಷದಿಂದ ಇತರರಲ್ಲಿ ಅಮುಖ್ಯವೃತ್ತಿಯಿಂದ ಪ್ರವರ್ತಿಸುತ್ತಿವೆ. ವಿಷ್ಣುಮಾಯಾ ಮೋಹಿತರಾದ ಮಾನವರು ಈ ಮರ್ಮವನ್ನರಿಯದೆ, ವಿವಿಧ ಶಬ್ದಗಳಿಂದ ವಿವಿಧ ದೇವಾದಿಗಳನ್ನು ಮುಖ್ಯವಾಚ್ಯರೆಂದು ತಿಳಿದು, ಅವರನ್ನು ಭಜಿಸಿ, ಅವರಿಂದ ಸಂಪೂರ್ಣ ಫಲವಾದ ಮೋಕ್ಷವನ್ನು ಪಡೆಯಲಾರದೆ, ಸಂಸಾರಾವರ್ತದಲ್ಲಿ ಪರಿಭ್ರಮಿಸುತ್ತಿರುವರು.

ಆದುದರಿಂದ ಇತರ ದೇವತಾ ಭಜನೆಯಲ್ಲಿಯೂ ಅಂತರ್ಯಾಮಿಯಾದ ಶ್ರೀಹರಿಯನ್ನು ನೆನೆದು, ಫಲವನ್ನು ಅವರವರ ದ್ವಾರಾ ಶ್ರೀಶನಿಗರ್ಪಿಸುವುದು ಅತ್ಯಂತ ಶ್ರೇಯಃಕಾರಣವಾಗಿದೆ. ಅದರಿಂದ ರುದ್ರಾದಿಗಳೂ ಪ್ರೀತರಾಗಿ, ಜ್ಞಾನಾದಿ ಫಲಪ್ರದರಾಗುವರು. ಮಹಾಯೋಗ, ವಿದ್ವದ್ರೂಢಿಗಳಿಂದ ಶ್ರೀಹರಿಯನ್ನೇ ಪೇಳುತ್ತಾ, ಲೋಕಸಾಮಾನ್ಯ ರೂಢಿಯಿಂದ ಇತರತ್ರ ಪ್ರವರ್ತಿಸುವ ದೇವನಾಮ ಶತಸಹಸ್ರ ಸ್ತುತಿಗಳಿವೆ. ಅಂಥವುಗಳಲ್ಲಿ ತಂಡಿನಾಮಕ ಋಷಿಯು ಗಾನಮಾಡಿದ ಶಿವಸಹಸ್ರ ನಾಮಗಳನ್ನು ನಿನಗರುಹುವೆನು ಕೇಳು!

ಹಿಂದೆ ಹಿಮಶೈಲ ಪ್ರಾಂತ ವನಗಳಲ್ಲಿ ಉಪಮನ್ಯುವೆಂಬ ಋಷಿವರನಿದ್ದನು. ಅವನು ವ್ಯಾಘ್ರಪಾದ ಪುತ್ರನು, ಧೌಮ್ಯ (ಅಗ್ನಿವೇಶ್ಯ) ಭ್ರಾತನು ಆಗಿದ್ದನು. ಉಪಮನ್ಯುವು ಶಂಕರ ಪ್ರೀತಿಯನ್ನು ಬಯಸಿ, ನೂರು ವರ್ಷ ತೀವ್ರತಪವನ್ನು ಮಾಡಿದನು. ಇಂದ್ರನು ಅವನಿಗೆ ಪ್ರತ್ಯಕ್ಷನಾಗಿ, ಸ್ವರ್ಗಭೋಗಗಳನ್ನು ಕೊಡುವೆನೆಂದರೂ, ಉಪಮನ್ಯುವು ಆತನಿಂದ ಏನನ್ನೂ ಬೇಡದೆ ಶಿವಪ್ರೀತಿಯನ್ನೇ ಕೋರಿ, ಮತ್ತೆ ನೂರು ವರ್ಷ ತಪಸ್ಸನ್ನು ಆಚರಿಸಿದನು. ಆಗ ಮತ್ತೆ ಐರಾವತಾರೂಢನಾದ ಸುರರಾಜನು ಬಂದು ವಿವಿಧ ಭೋಗಾಶೆಯನ್ನು ತೋರಿಸಿದನು. ಉಪಮನ್ಯುವು 'ನನಗೇನೂ ಬೇಡ! ಶಿವನು ಪ್ರೀತನಾದರೆ ಸಾಕು!' ಎಂದನು. ತತ್‌ಕ್ಷಣವೇ ಐರಾವತವು ನಂದಿಯಾಯಿತು. ದೇವೇಂದ್ರ ಶಿವನಾದನು. ಇಂತು ಮೈದೋರಿ ನಿಂತ ಶಿವನನ್ನು ಮನಸಾರ ಸ್ತುತಿಸಿ, ಉಪಮನ್ಯುವು ವಂದಿಸಿದನು.

'ದೇವಾಧಿ ದೇವ! ಮಹಾದೇವ! ಶೂಲಧರ! ಪಾಪಹರ! ಶ್ರೀಕೃಷ್ಣ ಭಕ್ತವರ! ಕರುಣಾಸಾಗರ! ಭಕ್ತಬಂಧೋ!' ಎಂದು ನುತಿಸುವ ಉಪಮನ್ಯುವಿನಲ್ಲಿ ಪ್ರೀತನಾಗಿ, ಶರ್ವನು, 'ಉಪಮನ್ಯೋ! ಕೇಳು! ಹಿಂದೆ ತಂಡಿ ಎಂಬ ಮುನಿವರನಿಗೆ ಪ್ರೀತನಾಗಿ ನಾನು ಇದೇ ರೂಪವನ್ನು ತೋರಿದೆನು. ತಂಡಿಗೆ ಚಿರಾಯುವನ್ನು, ಪರಮೈಶ್ವರ್ಯವನ್ನು, ಇಂದ್ರಿಯ ಪಾಟವವನ್ನು ದಯಪಾಲಿಸಿ, ಅಂತರ್ಧಿತನಾದೆನು. ತಂಡಿಯು ನಿನ್ನ ಆಶ್ರಮಕ್ಕೆ ಬರುವನು. ಅವನಿಂದ ನನ್ನ ಸಹಸ್ರನಾಮ ಸ್ತುತಿಯನ್ನು ಕೇಳು! ಉದ್ಧೃತನಾಗುವೆ!' ಎಂದು ಕರುಣಿಸಿ, ಮರೆಯಾದನು.

ಉಪಮನ್ಯುವಿನ ಆಶ್ರಮಕ್ಕೆ ಬಂದ ತಂಡಿಯು, ಆತನಿಂದ ಪೂಜಿತನಾಗಿ, ಅವನಿಗೆ ಶಿವನಾಮ ಸಹಸ್ರವನ್ನು ನಿರೂಪಿಸಿದನು:

'ಓಂ ಹರಯೇ ನಮಃ ಓಂ. ಸ್ಥಿರ, ಸ್ಥಾಣು, ಪ್ರಭು, ಭೀಮ, ಪ್ರವರ, ವರದ, ವರ, ಸರ್ವಾತ್ಮ, ಸರ್ವವಿಖ್ಯಾತ, ಸರ್ವ, ಸರ್ವಕರ, ಭವ, ಜಟೀ, ಚರ್ಮಿ, ಶಿಖಂಡೀ, ಸರ್ವಾಂಗ, ಸರ್ವಭಾವನ, ಹರ, ಹರಿಣಾಕ್ಷ, ಸರ್ವಭೂತಹರ, ಪ್ರಭು, ಪ್ರವೃತ್ತಿ, ನಿವೃತ್ತಿ, ನಿಯತ, ಶಾಶ್ವತ, ಧ್ರುವ, ಶ್ಮಶಾನವಾಸೀ, ಭಗವಾನ್, ಖಚರ, ಗೋಚರ, ಅರ್ದನ, ಅಭಿವಾದ್ಯ, ಮಹಾಕರ್ಮಾ, ತಪಸ್ವೀ, ಭೂತಭಾವನ, ಉನ್ಮತ್ತವೇಷ, ಪ್ರಚ್ಛನ್ನ, ಸರ್ವಲೋಕ ಪ್ರಜಾಪತಿಃ, ಮಹಾರೂಪ, ಮಹಾಕಾಯ, ವೃಷರೂಪ, ಮಹಾಯಶ, ಮಹಾತ್ಮ, ಸರ್ವಭೂತಾತ್ಮ, ವಿಶ್ವರೂಪ, ಮಹಾಹನು, ಲೋಕಪಾಲ, ಅಂತರ್ಹಿತಾತ್ಮ, ಪ್ರಸಾದ, ಹಯಗರ್ದಭಿ, ಪವಿತ್ರ, ಮಹಾನ್, ನಿಯಮ, ನಿಯಮಾಶ್ರಿತ, ಸರ್ವಕರ್ಮಾ, ಸ್ವಯಂಭೂತ, ಆದಿ, ಆದಿಕರ, ನಿಧಿ, ಸಹಸ್ರಾಕ್ಷ, ವಿಶಾಲಾಕ್ಷ, ಸೋಮ, ನಕ್ಷತ್ರಸಾಧಕ, ಚಂದ್ರ, ಸೂರ್ಯ, ಶನಿ, ಕೇತು, ಗ್ರಹ, ಗ್ರಹಪತಿ, ವರ, ಅತ್ರಿ ಅತ್ರ್ಯಾ ನಮಸ್ಕರ್ತಾ, ಮೃಗಬಾಣಾರ್ಪಣ, ಅನಘ, ಮಹಾತಪ, ಘೋರತಪ, ಅದೀನ, ದೀನಸಾಧಕ, ಸಂವತ್ಸರಕರ, ಮಂತ್ರ, ಪ್ರಮಾಣ, ಪರಮಂತಪ, ಯೋಗೀ, ಯೋಜ್ಯ, ಮಹಾಬೀಜ, ಮಹಾರೇತಾ, ಮಹಾಬಲ, ಸುವರ್ಣರೇತಾ, ಸರ್ವಜ್ಞ, ಸುಬೀಜ, ಬೀಜವಾಹನ, ದಶಬಾಹು, ಅನಿಮಿಷ, ನೀಲಕಂಠ, ಉಮಾಪತಿ, ವಿಶ್ವರೂಪ, ಸ್ವಯಂಶ್ರೇಷ್ಠ, ಬಲವೀರ, ಅಬಲ ಗಣ, ಗಣಕರ್ತಾ, ಗಣಪತಿ, ದಿಗ್ವಾಸಾ, ಕಾಮ, ಮಂತ್ರವಿತ್, ಪರಮ, ಮಂತ್ರ, ಸರ್ವಭಾವಕರ, ಹರ, (೧೦೮).

ಕಮಂಡಲುಧರ, ಧನ್ವೀ, ಬಾಣಹಸ್ತ, ಕಪಾಲವಾನ್, ಅಶನೀ, ಶತಘ್ನೀ, ಖಡ್ಗೀ, ಪಟ್ಟಿಶೀ, ಆಯುಧೀ, ಮಹಾನ್, ಸ್ರುವಹಸ್ತ, ಸುರೂಪ, ತೇಜ, ತೇಜಸ್ಕರ ನಿಧಿ, ಉಷ್ಣೀಷೀ, ಸುವಕ್ತ್ರ, ಉದಗ್ರ, ವಿನತ, ದೀರ್ಘ, ಹರಿಕೇಶ, ಸುತೀರ್ಥ, ಕೃಷ್ಣ, ಶೃಗಾಲರೂಪ, ಸಿದ್ಧಾರ್ಥ, ಮುಂಡ, ಸರ್ವಶುಭಂಕರ, ಅಜ, ಬಹುರೂಪ, ಗಂಧಧಾರೀ, ಕಪರ್ದಿ, ಊರ್ಧ್ವರೇತಾ, ಊರ್ಧ್ವಲಿಂಗ, ಊರ್ಧ್ವಶಾಯಿ, ನಭಸ್ಥಲ, ತ್ರಿಜಟ, ಚೀರವಾಸಾ, ರುದ್ರ, ಸೇನಾಪತಿ, ವಿಭು, ಅಹಶ್ಚರ, ನಕ್ತಚರ, ತಿಗ್ಮಮನ್ಯು, ಸುವರ್ಚಸ, ಗಜಹಾ, ದೈತ್ಯಹಾ, ಕಾಲ, ಲೋಕದಾತಾ, ಗುಣಾಕರ, ಸಿಂಹ ಶಾರ್ದೂಲ ರೂಪ, ಆರ್ದ್ರಚರ್ಮಾಂಬರಾವೃತ, ಕಾಲಯೋಗ, ಮಹಾನಾದ, ಸರ್ವಕಾಮ, ಚತುಷ್ಪಥ, ನಿಶಾಚರ, ಪ್ರೇತಚಾರೀ, ಭೂತಚಾರೀ, ಮಹೇಶ್ವರ, ಬಹು ಭೂತ, ಬಹುಧರ, ಸ್ವರ್ಭಾನು, ಅಮಿತ, ಗತಿ, ನೃತ್ಯಪ್ರಿಯ, ನಿತ್ಯನರ್ತ, ನರ್ತಕ, ಸರ್ವಲಾಲಸ, ಘೋರ, ಮಹಾತಪ, ಪಾಶ, ನಿತ್ಯ, ಗಿರಿರುಹ, ನಭ, ಸಹಸ್ರಹಸ್ತ, ವಿಜಯ, ವ್ಯವಸಾಯ, ಅತಂದ್ರಿತ, ಅಧರ್ಷಣ, ಧರ್ಷಣಾತ್ಮಾ, ಯಜ್ಞಹಾ, ಕಾಮನಾಶಕ, ದಕ್ಷಯಾಗಾಪಹಾರೀ, ಸುಸಹ, ಮಧ್ಯಮ, ತೇಜೋಪಹಾರೀ, ಬಲಹಾ, ಮುದಿತ, ಅರ್ಥ ಜಿತ, ವರ, ಗಂಭೀರಘೋಷ (೨೦೦), ಗಂಭೀರ, ಗಂಭೀರ ಬಲವಾಹನ, ನ್ಯಗ್ರೋಧ, ವೃಕ್ಷಕರ್ಣಸ್ಥಿತಿ, ವಿಭು, ಸುತೀಕ್ಷ್ಣದರ್ಶನ, ಮಹಾಕಾಯ, ಮಹಾನನ, ವಿಷ್ವಕ್ಸೇನ, ಹರಿ, ಯಜ್ಞ, ಸಂಯುಗ್ಯಾಪೀಡವಾಹನಃ, ತೀಕ್ಷ್ಣತಾಪ, ಹರ್ಯಶ್ವ, ಸಹಾಯ, ಕರ್ಮಕಾಲವಿತ್,

ವಿಷ್ಣು ಪ್ರಸಾದಿತ, ಯಜ್ಞ, ಸಮುದ್ರ, ವಡವಾಮುಖ, ಹುತಾಶನ ಸಹಾಯ, ಪ್ರಶಾಂತಾತ್ಮಾ ಹುತಾಶನ, ಉಗ್ರತೇಜಾ, ಮಹಾತೇಜಾ, ಜನ್ಯ, ವಿಜಯ ಕಾಲವಿತ್, ಜ್ಯೋತಿಷಾಮಯನಂ, ಸಿದ್ಧಿ, ಸರ್ವವಿಗ್ರಹ, ಶಿಖೀ, ಮುಂಡೀ, ಜಟೀ, ಜ್ವಾಲೀ, ಮೂರ್ತಿಜ, ಮೂರ್ಧಗ, ಬಲೀ, ವೇಣವೀ, ಪಣವೀ, ತಾಲೀ, ಖಲೀ, ಕಾಲಕಟಂಕಟ, ನಕ್ಷತ್ರ ವಿಗ್ರಹಮತಿ, ಗುಣಬುದ್ಧಿ, ಲಯ, ಆಗಮ, ಪ್ರಜಾಪತಿ, ವಿಶ್ವಬಾಹು, ವಿಭಾಗ, ಸರ್ವಗಃ ಅಮುಖ, ವಿಮೋಚನ, ಸುಸರಣ, ಹಿರಣ್ಯಕವಚೋದ್ಭವಃ ಮೇಢ್ರಜ, ಬಲಚಾರೀ, ಮಹೀಚಾರೀ, ಸ್ರುತ, ಸರ್ವತೂರ್ಯನಿನಾದೀ, ಸರ್ವತೋದ್ಯಪರಿಗ್ರಹ, ವ್ಯಾಲರೂಪ, ಗುಹಾವಾಸೀ, ಗುಹ, ಮಾಲೀ, ತರಂಗವಿತ್, ತ್ರಿದಶ, ತ್ರಿಕಾಲಧೃಕ್, ಕರ್ಮ, ಸರ್ವಬಂಧವಿಮೋಚನ, ಅಸುರೇಂದ್ರಾಣಾಂಬಂಧನ, ಯುಧಿಶತ್ರುವಿನಾಶನ, ಹೈಮ, ಹೇಮಕರ, ಯಜ್ಞ, ಸಾಂಖ್ಯಪ್ರಸಾದ, ದುರ್ವಾಸಾ, ಸರ್ವಸಾಧುನಿಷೇವಿತ, ಪ್ರಸ್ಕಂದನ, ವಿಭಾಗಜ್ಞ, ಅತುಲ್ಯ, ಯಜ್ಞಭಾಗವಿತ್, ಸರ್ವವಾಸಾ, ಸರ್ವಚಾರೀ, ದುರ್ವಾಸಾ, ವಾಸವ, ಅಮರ, ಸರ್ವಧಾರೀ, ಧರೋತ್ತಮ, ಲೋಹಿತಾಕ್ಷ, ಮಹಾಕ್ಷ, ವಿಜಯಾಕ್ಷ, ವಿಶಾರದ, ಸಂಗ್ರಹ, ನಿಗ್ರಹ, ಕರ್ತಾ, ಸರ್ಪಚೀರನಿವಾಸನ, ಮುಖ್ಯ, ಅಮುಖ್ಯ, ದೇಹ, ಕಾಹಲಿ, ಸರ್ವಸಾಮದ, ಸರ್ವಕಾಲಪ್ರಸಾದ, ಸುಬಲ, ಬಲರೂಪಧೃಕ್ (೩೦೦).

ಸರ್ವಕಾಮವರ, ಸರ್ವದ, ಸರ್ವತೋಮುಖ, ಆಕಾಶನಿರಿ ರೂಪ, ನಿಪಾತಿ, ಅವಶ, ಖಗ, ರೌದ್ರರೂಪ, ಅಂಶು, ಆದಿತ್ಯ, ಬಹುರಶ್ಮಿ, ಸುವರ್ಚಸೀ, ವಸುವೇಗ, ಮಹಾವೇಗ, ಮನೋವೇಗ, ನಿಶಾಚರ, ಸರ್ವವಾಸೀ, ಶ್ರಿಯಾವಾಸೀ, ಉಪದೇಶಕರ, ಅಕರ, ಮುನಿ, ಆತ್ಮನಿರಾಲೋಕ, ಸಂಭಗ್ನ, ಸಹಸ್ರದ, ಪಕ್ಷೀ, ಪಕ್ಷರೂಪ, ಅತಿದೀಪ್ತ, ವಿಶಾಂಪತಿ, ಉನ್ಮಾದ, ಮದನ, ಕಾಮ, ಅಶ್ವತ್ಥ, ಅರ್ಥಕರ, ಯಶ, ವಾಮ ದೇವ, ನಾಮ, ಪ್ರಾಕ್, ದಕ್ಷಿಣ, ವಾಮನ, ಸಿದ್ಧಯೋಗೀ, ಮಹರ್ಷಿ, ಸಿದ್ಧಾರ್ಥ, ಸಿದ್ಧಸಾಧಕ, ಭಿಕ್ಷು, ಭಿಕ್ಷುರೂಪ, ವಿಪಣ, ಮೃದು, ಅವ್ಯಯ, ಮಹಾಸೇನ, ವಿಶಾಖ, ಷಷ್ಟಿಭಾಗ, ಗವಾಂಪತಿ, ವಜ್ರಹಸ್ತ, ವಿಷ್ಕಂಭೀ, ಚಮೂಸ್ತಂಭನ, ವೃತ್ತಾವೃತ್ತಕರ, ತಾಲ, ಮಧು, ಮಧುಕಲೋಚನ, ವಾಚಸ್ಪತ್ಯ, ವಾಜಸನ, ನಿತ್ಯಮಾಶ್ರಮಪೂಜಿತ, ಬ್ರಹ್ಮಚಾರೀ, ಲೋಕಚಾರೀ, ಸರ್ವಚಾರೀ, ವಿಚಾರವಿತ್, ಈಶಾನ, ಈಶ್ವರ, ಕಾಲ, ನಿಶಾಚಾರೀ, ಪಿನಾಕಧೃತ್, ನಿಮಿತ್ತಸ್ಥ, ನಿಮಿತ್ತ, ನಂದಿ, ನಂದಿಕರ, ಹರಿ, ನಂದೀಶ್ವರ, ನಂದೀನಂದನ, ನಂದಿವರ್ಧನ, ಭಗಹಾರೀ, ನಿಹಂತಾ, ಕಾಲ, ಬ್ರಹ್ಮಾ, ಪಿತಾಮಹ, ಚತುರ್ಮುಖ, ಮಹಾಲಿಂಗ, ಚಾರುಲಿಂಗ, ಲಿಂಗಾಧ್ಯಕ್ಷ, ಸುರಾಧ್ಯಕ್ಷ, ಯೋಗಾಧ್ಯಕ್ಷ ಯುಗಾವಹ ಬೀಜಾಧ್ಯಕ್ಷ, ಬೀಜಕರ್ತಾ, ಅಧ್ಯಾತ್ಮಾನುಗತ, ಬಲ ಇತಿಹಾಸ, ಸಕಲ್ಪ ಗೌತಮ, ನಿಶಾಕರ, ದಂಭ (೪೦೦), ಅದಂಭ, ವೈದಂಭ, ವಶ್ಯ, ವಶಕರ, ಕಲಿ, ಲೋಕಕರ್ತಾ, ಪಶುಪತಿ, ಮಹಾಕರ್ತಾ, ಅನೌಷಧ, ಅಕ್ಷರ, ಪರಮಂಬ್ರಹ್ಮ, ಬಲವತ್, ಶಕ್ರ, ನೀತಿ, ಅನೀತಿ, ಶುದ್ಧಾತ್ಮಾ, ಶುದ್ಧ, ಮಾನ್ಯ, ಗತಾಗತ, ಬಹುಪ್ರಸಾದ, ಸುಸ್ವಪ್ನ, ದರ್ಪಣ, ಅಮಿತ್ರಜಿತ್, ವೇದಕಾರ, ಮಂತ್ರಕಾರ, ವಿದ್ವಾನ್,

ಸಮರಮರ್ದನ, ಮಹಾಮೇಘನಿವಾಸೀ, ಮಹಾಘೋರ, ವಶೀಕರ, ಅಗ್ನಿಜ್ವಾಲ, ಮಹಾಜ್ವಾಲ, ಅತಿಧೂಮ್ರ, ಹುತ, ಹವಿ, ವೃಷಣ, ಶಂಕರ, ನಿತ್ಯವರ್ಚಸ್ವೀ, ಧೂಮಕೇತನ, ನೀಲ, ಅಂಗಲುಬ್ಧ, ಶೋಭನ, ನೀರವಗ್ರಹ, ಸ್ವಸ್ತಿದ, ಸ್ವಸ್ತಿಭಾವ, ಭಾಗೀ, ಭಾಗಕರ, ಲಘು, ಉತ್ಸಂಗ, ಮಹಾಂಗ, ಮಹಾಗರ್ಭಪರಾಯಣ, ಕೃಷ್ಣವರ್ಣ, ಸುವರ್ಣ, ಸರ್ವ ದೇಹಿನಾಂ ಇಂದ್ರಿಯ, ಮಹಾಪಾದ, ಮಹಾಹಸ್ತ, ಮಹಾಕಾಯ, ಮಹಾಯಶ, ಮಹಾಮೂರ್ಧಾ, ಮಹಾಮಾತ್ರ, ಮಹಾನೇತ್ರ, ನಿಶಾಲಯ, ಮಹಾಂತಕ, ಮಹಾಕರ್ಣ, ಮಹೋಷ್ಠ, ಮಹಾಹನು, ಮಹಾನಾಸ, ಮಹಾಕಂಬು, ಮಹಾಗ್ರೀವ, ಶ್ಮಶಾನಭಾಕ್, ಮಹಾವಕ್ಷ, ಮಹೋರಸ್ಕ, ಅಂತರಾತ್ಮಾ, ಮೃಗಾಲಯ, ಲಂಬನ, ಲಂಬಿತೋಷ್ಠ, ಮಹಾಮಾಯ, ಪಯೋನಿಧಿ, ಮಹಾದಂತ, ಮಹಾದಂಷ್ಟ್ರ, ಮಹಾಜಿಹ್ವೋ, ಮಹಾಮುಖ, ಮಹಾನಖ, ಮಹಾರೋಮಾ, ಮಹಾಕೇಶ, ಮಹಾಜಟ, ಪ್ರಸನ್ನ, ಪ್ರತ್ಯಯ, ಗಿರಿಸಾಧನ, ಸ್ನೇಹನ, ಅಸ್ನೇಹನ, ಪ್ರಸಾದ, ಅಜಿತ, ಮಹಾಮುನಿ, ವೃಕ್ಷಾಕಾ, ವೃಕ್ಷಕೇತು, ಅನಲ, ವಾಯುವಾಹನ, ಗಂಡಲೀ, ಮೇರುಧಾಮಾ (೫೦೦), ದೇವಾಧಿಪತಿ, ಅಥರ್ವಶೀರ್ಷ, ಸಾಮಾಸ್ಯ, ಋಕ್‌ಸಹಸ್ರಾಮಿತೇಕ್ಷಣ, ಯಜುಃಪಾದಭುಜ, ಗುಹ್ಯ, ಪ್ರಕಾಶ, ಜಂಗಮ, ಅಮೋಘಾರ್ಥ, ಪ್ರಸಾದ, ಅಭಿಗಮ್ಯ, ಸುದರ್ಶನ, ಉಪಕಾರ, ಪ್ರಿಯ, ಸರ್ವ, ಕನಕ, ಕಾಂಚನಚ್ಛವಿ, ನಾಭಿ, ನಂದಿಕರ, ಭಾವ, ಪುಷ್ಕರ, ಸ್ಥಪತಿ, ಸ್ಥಿರ, ದ್ವಾದಶ, ತ್ರಾಸನ, ಆದ್ಯ, ಯಜ್ಞ, ಯಜ್ಞಸಮಾಹಿತ, ನಕ್ತ ಕಲಿ, ಕಾಮ, ಮಕರ, ಪೂಜಿತ, ಸಗಣ, ಗಣಕಾರ, ಭೂತವಾಹನ ಸಾರಥಿ, ಭಸ್ಮಶಯ, ಭಸ್ಮಗೋಪ್ತಾ, ಭಸ್ಮಭೂತ, ತರು, ಗಣ, ಲೋಕಪಾಲ, ಲೋಕ ಮಹಾತ್ಮಾ, ಸರ್ವಪೂಜಿತ, ಶುಕ್ಲ, ತ್ರಿಶುಕ್ಲ, ಸಂಪನ್ನ, ಶುಚಿ, ಭೂತನಿಷೇವಿತ, ಆಶ್ರಮಸ್ಥ, ಕ್ರಿಯಾವಸ್ಥ, ವಿಶ್ವಕರ್ಮಮತಿ, ವರ, ವಿಶಾಲಶಾಖ, ತಾಮ್ರೋಷ್ಠ, ಅಂಬುಜಾಲ, ಸುನಿಶ್ಚಲ, ಕಪಿಲ, ಕಪಿಶ, ಶುಕ್ಲ, ಆಯು, ಪರ, ಅಪರ, ಗಂಧರ್ವ, ಅದಿತಿ, ತಾರ್ಕ್ಷ್ಯ, ಸುವಿಜ್ಞೇಯ, ಸುಶಾರದ, ಪರಶ್ವಧಾಯುಧ, ದೇವ, ಅನುಕಾರೀ, ಸುಬಾಂಧವ, ತುಂಬವೀಣ, ಮಹಾಕ್ರೋಧ, ಊರ್ಧ್ವರೇತಾ, ಜಲೇಶಯ, ಉಗ್ರ, ವಂಶಕರ, ವಂಶ, ವಂಶನಾದ, ಅನಿಂದಿತ, ಸರ್ವಾಂಗರೂಪ, ಮಾಯಾವೀ, ಸುಹೃದ, ಅನಿಲ, ಅನಲ, ಬಂಧನ, ಬಂಧಕರ್ತಾ, ಸುಬಂಧನ, ವಿಮೋಚನ, ಸಯಜ್ಞಾರಿ, ಸಕಾಮಾರಿ, ಮಹಾದಂಷ್ಟ್ರ, ಮಹಾಯುಧ, ಬಹುಧಾನಿಂದಿತ, ಶರ್ವ, ಶಂಕರ, ಶಂಕರೋಧನ, ಅಮರೇಶ, ಅಧನ (೬೦೦).

ಮಹಾದೇವ, ವಿಶ್ವದೇವ, ಸುರಾರಿಹಾ, ಅಹಿರ್ಬುಧ್ನ, ಅನಿಲಾಭ, ಚೇಕಿತಾನ, ಹವಿ, ಅಜೈಕಪಾತ್, ಕಾಪಾಲೀ, ತ್ರಿಶಂಕು, ಅಜಿತ, ಶಿವ, ಧನ್ವಂತರಿ, ಧೂಮಕೇತು, ಸ್ಕಂದ, ವೈಶ್ರವಣ, ಧಾತಾ, ಶಕ್ರ, ವಿಷ್ಣು, ಮಿತ್ರ, ತ್ವಷ್ಟಾ, ಧ್ರುವ, ಧರ, ಪ್ರಭಾವ, ಸರ್ವಗ, ವಾಯು, ಅರ್ಯಮಾ, ಸವಿತಾ, ರವಿ, ಉಷಂಗು, ವಿಧಾತಾ, ಮಾಂಧಾತ, ಭೂತಭಾವನ, ವಿಭು, ವರ್ಣವಿಭಾವೀ, ಸರ್ವಕಾಮ, ಗುಣಾವಹ, ಪದ್ಮನಾಭ,

ಮಹಾಗರ್ಭ, ಚಂದ್ರವಕ್ತ್ರ, ಅನಿಲ, ಅನಲ, ಬಲವಾನ್, ಉಪಶಾಂತ, ಪುರಾಣ, ಪುಣ್ಯಚಂಚು, ಈ, ಕುರುಕರ್ತಾ, ಕುರುವಾಸೀ, ಕುರುಭೂತ, ಗುಣೌಷಧ, ಸರ್ವಾಶಯ, ದರ್ಭಚಾರೀ, ಸರ್ವೇಷಾಂ ಪ್ರಾಣಿನಾಂ ಪತಿ, ದೇವದೇವ, ಸುಖಾಸಕ್ತ, ಸದಸತ್, ಸರ್ವರತ್ನವಿತ್, ಕೈಲಾಸಗಿರಿವಾಸೀ, ಹಿಮವದ್ಗಿರಿ ಸಂಶ್ರಯ, ಕೂಲಹಾರೀ, ಕೂಲಕರ್ತಾ, ಬಹುವಿದ್ಯೋ, ಬಹುಪ್ರದ, ವಣಿಜ, ವರ್ಧಕೀ, ವೃಕ್ಷ, ಬಕುಲ, ಚಂದನಚ್ಛದ, ಸಾರಗ್ರೀವ, ಮಹಾಜತ್ರು, ಅಲೋಲ, ಮಹೌಷಧ, ಸಿದ್ಧಾರ್ಥಕಾರೀ, ಸಿದ್ಧಾರ್ಥ, ಛಂದೋವ್ಯಾಕರಣೋತ್ತರ, ಸಿಂಹನಾದ, ಸಿಂಹದಂಷ್ಟ್ರ, ಸಿಂಹಗ, ಸಿಂಹವಾಹನ, ಪ್ರಭಾವಾತ್ಮಾ ಜಗತ್ಕಾಲಸ್ಥಾನ, ಲೋಕಹಿತ, ತರು, ಸಾರಂಗ, ನವಚಕ್ರಾಂಗ, ಕೇತುಮಾಲೀ, ಸಭಾವನ, ಭೂತಾಲಯ, ಭೂತಪತಿ, ಅಹೋರಾತ್ರ, ಅನಿಂದಿತ, ಸರ್ವಭೂತಾನಾಂವಾಹಿತಾ, ನಿಲಯ, ವಿಭು, ಭವ, ಅಮೋಘ, ಸಂಯತ, ಅಶ್ವ, ಭೋಜನ, ಪ್ರಾಣಧಾರಣ, ಧೃತಿಮಾನ್, ಮತಿಮಾನ್, ದಕ್ಷ, ಸತ್ಕೃತ, ಯುಗಾಧಿಪ, ಗೋಪಾಲಿ, ಗೋಪತಿ, ಗ್ರಾಮ, ಗೋಚರ್ಮವಸನ, ಹರಿ, ಹಿರಣ್ಯಬಾಹು, ಪ್ರವೇಶಿನಾಂಗುಹಾಪಾಲ, ಪ್ರಕೃಷ್ಟಾರಿ, ಮಹಾಹರ್ಷ, ಜಿತಕಾಮ, ಜಿತೇಂದ್ರಿಯ (೭೧೪).

ಗಾಂಧಾರ, ಸುವಾಸ, ತಪಸ್ಸಕ್ತ, ರತಿ, ನರ, ಮಹಾಗೀತ, ಮಹಾನೃತ್ಯ, ಅಪ್ಸರೋಗಣಸೇವಿತ, ಮಹಾಕೇತು, ಮಹಾಧಾತು, ನೈಕಸಾನುಚರ, ಚಲ, ಆವೇದನೀಯ, ಆದೇಶ, ಸರ್ವಗಂಧ, ಸುಖಾವಹ, ತೋರಣ, ತಾರಣ, ವಾತ, ಪರಿಧೀ, ಪತಿಖೇಚರ, ಸಂಯೋಗ, ವರ್ಧನ, ಅಧಿವೃದ್ಧೋ, ಗುಣಾಧಿಕ, ನಿತ್ಯ ಆತ್ಮಸಹಾಯ, ದೇವಾಸುರಪತಿ, ಪತಿ, ಯುಕ್ತ, ಯುಕ್ತಬಾಹು, ದೇವೋದಿವಿಸುಪರ್ವಣ, ಆಷಾಢ, ಸುಷಾಢ, ಧ್ರುವ, ಹರಿಣ, ಹರ, ಆವರ್ತಮಾನೇಭ್ಯವಸು, ವಸುಶ್ರೇಷ್ಠ, ಮಹಾಪಥ, ಶಿರೋಹಾರೀ, ವಿಮರ್ಷ, ಸರ್ವಲಕ್ಷಣ ಲಕ್ಷಿತ, ಅಕ್ಷ, ರಥಯೋಗೀ, ಮಹಾಬಲ, ಸಮಾಮ್ನಾಯ, ಅಸಮಾಮ್ನಾಯ, ತೀರ್ಥದೇವ, ಮಹಾರಥ, ನಿರ್ಜೀವ, ಜೀವನ, ಮಂತ್ರ, ಶುಭಾಕ್ಷ, ಬಹುಕರ್ಕಶ, ರತ್ನಪ್ರಭೂತ, ರತ್ನಾಂಗ, ಮಹಾರ್ಣವನಿಪಾನವಿತ್ ಮೂಲ, ವಿಶಾಲ, ಅಮೃತ, ವ್ಯಕ್ತಾವ್ಯಕ್ತ, ತಪೋನಿಧಿ, ಆರೋಹಣ, ಅಧಿರೋಹ, ಶಿಲಧಾರೀ, ಮಹಾಯಶಾ, ಸೇನಾಕಲ್ಪ, ಮಹಾಕಲ್ಪ, ಯೋಗ, ಯುಗಕರ, ಹರಿ, ಯುಗರೂಪ, ಮಹಾರೂಪ, ಮಹಾನಾಗಹನ, ವಧ, ನ್ಯಾಯನಿರ್ವಪಣ, ಪಾದ, ಪಂಡಿತ, ಅಚಲೋಪಮ, ಬಹುಮಾಲ, ಮಹಾಮಾಲ, ಶಶೀಹರಸುಲೋಚನ, ವಿಸ್ತಾರಲವಣಕೂಪ, ತ್ರಿಯುಗ, ಸಫಲೋದಯ, ತ್ರಿನೇತ್ರ, ವಿಷಣ್ಣಾಂಗ, ಮಣಿವಿದ್ಧ, ಜಟಾಧರ, ಬಿಂದು, ವಿಸರ್ಗ, ಸುಮುಖ (೮೦೦).

ಶರ, ಸರ್ವಾಯುಧ, ಸಹ, ನಿವೇದನ, ಸುಖಾಜಾತ, ಸುಗಂಧಾರ, ಮಹಾಧನು, ಗಂಧಪಾಲೀ, ಭಗವಾನ್, ಉತ್ಥಾನಸ್ಸರ್ವಕರ್ಮಣಾಂ, ಮಂಥಾನ, ಬಹುಲ, ವಾಯು, ಸಕಲ, ಸರ್ವಲೋಚನ, ತಲ, ತಾಲ, ಕರಸ್ಥಾಲೀ, ಊರ್ಧ್ವಸಂಹನನ, ಮಹಾನ್, ಛತ್ರಂ, ಸುಚ್ಛತ್ರ, ವಿಖ್ಯಾತಲೋಕ, ಸರ್ವಾಶ್ರಯಕ್ರಮ, ಮುಂಡ, ವಿರೂಪ, ವಿಕೃತ,

ದಂಡೀ, ಕುಂಡೀ, ವಿಕುರ್ವಣ, ಹರ್ಯಕ್ಷ, ಕಕುಭ, ವಜ್ರೀ, ಶತಜಿಹ್ವ, ಸಹಸ್ರಪಾತ್, ಸಹಸ್ರಮೂರ್ಧಾ, ದೇವೇಂದ್ರ, ಸರ್ವದೇವಮಯ, ಗುರು, ಸಹಸ್ರಬಾಹು, ಸರ್ವಾಂಗ, ಶರಣ್ಯ, ಸರ್ವಲೋಕ ಕೃತ್, ಪವಿತ್ರ, ತ್ರಿಕಕುನ್ಮಂತ್ರ, ಕನಿಷ್ಠ, ಕೃಷ್ಣಪಿಂಗಳ, ಬ್ರಹ್ಮದಂಡವಿನಿರ್ಮಾತಾ, ಶತಘ್ನೀಪಾಶಶಕ್ತಿಮಾನ್, ಪದ್ಮಗರ್ಭ, ಮಹಾಗರ್ಭ, ಬ್ರಹ್ಮಗರ್ಭ, ಜಲೋದ್ಭವ, ಗಭಸ್ತಿ, ಬ್ರಹ್ಮಕೃತ್, ಬ್ರಹ್ಮೀ, ಬ್ರಹ್ಮವಿತ್, ಬ್ರಾಹ್ಮಣ ಗತಿ, ಅನಂತರೂಪ, ನೈಕಾತ್ಮಾ, ತಿಗ್ಮತೇಜಾ, ಸ್ವಯಂಭುವ, ಊರ್ಧ್ವಗಾತ್ಮಾ, ಪಶುಪತಿ, ವಾತರಂಹಾ, ಮನೋಜವ, ಚಂದನೀ, ಪದ್ಮನಾಲಾಗ್ರ, ಸುರಭ್ಯುತ್ತರಣ, ನರ, ಕರ್ಣಿಕಾರ ಮಹಾಸ್ರಗ್ವೀ, ನೀಲಮೌಲಿ, ಪಿನಾಕಧೃಕ್, ಉಮಾಪತಿ, ಉಮಾಕಾಂತ, ಜಾಹ್ನವಿಧೃಕ್, ಉಮಾಧವ, ವರ, ವರಾಹ, ವರದ, ವರೇಣ್ಯ, ಸುಮಹಾಸ್ವನ, ಮಹಾಪ್ರಸಾದ, ದಮನ, ಶತ್ರುಹಾ, ಶ್ವೇತಪಿಂಗಲ, ಪೀತಾತ್ಮಾ, ಪರಮಾತ್ಮ, ಪ್ರಯತಾತ್ಮಾ, ಪ್ರಧಾನಧೃಕ್, ಸರ್ವಪಾರ್ಶ್ವ ಮುಖ, ತ್ರ್ಯಕ್ಷ, ಧರ್ಮಸಾಧಾರಣವರ, ಚರಾಚರಾತ್ಮಾ, ಸೂಕ್ಷ್ಮಾತ್ಮಾ, ಅಮೃತ, ಗೋವೃಷೇಶ್ವರ, ಸಾಧ್ಯರ್ಷಿ, ವಸು, ಆದಿತ್ಯ, ವಿವಸ್ವಾನ್, ಸವಿತಾ, ಅಮೃತ, ವ್ಯಾಸ, ಸರ್ಗ, ಸುಸಂಕ್ಷೇಪ, ವಿಸ್ತರ, ಪರ್ಯಾಯನರ, ಋತು, ಸಂವತ್ಸರ, ಪಕ್ಷ(೯೦೦).

ಸಾಂಖ್ಯಾಸಮಾಪನ, ಕಲಾ, ಕಾಷ್ಠಾ, ಲವಾ, ಮಾತ್ರಾ, ಮುಹೂರ್ತಾಹಪಕ್ಷಾ, ಕ್ಷಣ, ವಿಶ್ವಕ್ಷೇತ್ರ, ಪ್ರಜಾಬೀಜ, ಲಿಂಗ, ಆದ್ಯಸುತ್ತಿ, ಸತ್, ಅಸತ್, ವ್ಯಕ್ತ, ಅವ್ಯಕ್ತ, ಪಿತಾ, ಮಾತಾ, ಪಿತಾಮಹ, ಸ್ವರ್ಗದ್ವಾರ, ಪ್ರಜಾದ್ವಾರ, ಮೋಕ್ಷದ್ವಾರ, ತ್ರಿವಿಷ್ಟಪ, ನಿರ್ವಾಣ, ಹ್ಲಾದನ, ಬ್ರಹ್ಮಲೋಕ, ದೇವಾಸುರವಿನಿರ್ಮಾತ, ದೇವಾಸುರಪರಾಯಣ, ದೇವಾಸುರಗುರು, ದೇವ, ದೇವಾಸುರನಮಸ್ಕೃತ, ದೇವಾಸುರ ಮಹಾಮಾತ್ರ, ದೇವಾಸುರ ಗಣಾಶ್ರಯ, ದೇವಾಸುರ ಗಣಾಧ್ಯಕ್ಷ, ದೇವಾಸುರ ಗಣಾಗ್ರಣೀ, ದೇವಾತಿದೇವ, ದೇವರ್ಷಿ, ದೇವಾಸುರ ವರಪ್ರದ, ದೇವಾಸುರೇಶ್ವರ, ವಿಶ್ವ, ದೇವಾಸುರ ಮಹೇಶ್ವರ, ಸರ್ವದೇವಮಯ, ಅಚಿಂತ್ಯ, ದೇವತಾತ್ಮಾ, ಆತ್ಮಸಂಭವ, ಉದ್ಭಿತ್, ತ್ರಿವಿಕ್ರಮ, ವೈದ್ಯ, ವಿರಜ, ನೀರಜ, ಅಮರ, ಈಡ್ಯ, ಹಸ್ತೀಶ್ವರ, ವ್ಯಾಘ್ರ, ದೇವಸಿಂಹ, ನರರ್ಷಭ, ವಿಬುಧ, ಅಗ್ರಸರ, ಸೂಕ್ಷ್ಮ, ಸರ್ವದೇವ, ತಪೋಮಯ, ಸುಯುಕ್ತ, ಶೋಭನ, ವಜ್ರೀ ಪ್ರಾಸಪ್ರಭವ, ಅವ್ಯಯ, ಗುಹ, ಕಾಂತ, ನಿಜಸರ್ಗ, ಪವಿತ್ರ, ಸರ್ವಪಾವನ, ಶೃಂಗೀ, ಶೃಂಗಪ್ರಿಯ, ಬಭ್ರು, ರಾಜರಾಜ, ನಿರಾಮಯ, ಅಭಿರಾಮ, ಸುರಗಣ, ವಿರಾಮ, ಸರ್ವಸಾಧನ, ಲಲಾಟಾಕ್ಷ, ವಿಶ್ವದೇವ, ಹರಿಣ, ಬ್ರಹ್ಮವರ್ಚಸ, ಸ್ಥಾವರಾಣಾಂಪತಿ, ನಿಯಮೇಂದ್ರಿಯ ವರ್ಧನ, ಸಿದ್ಧಾರ್ಥ, ಸಿದ್ಧ ಭೂತಾರ್ಥ, ಅಚಿಂತ್ಯ, ಸತ್ಯವ್ರತ, ಶುಚಿ, ವ್ರತಾಧಿಪ, ಪರಂಬ್ರಹ್ಮ, ಭಕ್ತಾನಾಂಪರಮಾಗತಿ, ವಿಮುಕ್ತ, ಮುಕ್ತತೇಜಾ, ಶ್ರೀಮಾನ್, ಶ್ರೀವರ್ಧನ, ಜಗತ್ (೧೦೦೦). ಇಂತು ನಾಮ ಸಹಸ್ರದಿಂದ ನುತಿಸಿ, ತಂಡಿಮುನಿಯು ಮತ್ತೆ ಉಪಮನ್ಯುವಿಗಿಂತೆಂದನು: 'ಮುನೇ! ಶಿವನಾಮ ಸಹ್ರವನ್ನು ಪಠಿಸಿದವರು ತುಷ್ಟಿ, ಪುಷ್ಟಿ, ಸಂಪದಾರೋಗ್ಯ, ಚಿರಾಯುಗಳನ್ನು

ಪೊಂದುವರು. ಆಸಿಕ್ತರಾದ ಮನುಜರು ಶ್ರದ್ಧೆಯಿಂದ ಶಿವನನ್ನು ಪೂಜಿಸಿ, ವಂದಿಸಿ, ಸ್ಮರಿಸಿ, ಜಪಿಸಿ, ಪಾವನರಾಗುವರು. ನಾನಾಸಂಸಾರ ಯೋನಿಗಳಲ್ಲಿ ಅನೇಕ ತಾಪ ದುಃಖಿತರಾದವರಿಗೆ ಭವಭಜನೆಯು ಭವತಾಪ ಮೋಚಕವಾಗಿದೆ. ಪಾಪರಹಿತರಿಗಲ್ಲದೆ, ಅನೇಕ ಜನ್ಮಗಳ ಪುಣ್ಯಫಲಿಸಿದವರಿಗಲ್ಲದೆ ಭವನಲ್ಲಿ ಭಕ್ತಿಯು ಪುಟ್ಟದು. ಶಿವಶಕ್ತಿಯಿಂದ ಮನಶ್ಶುದ್ಧಿ ಲಭಿಸಿ, ತದ್ವಾರಾ ಶ್ರೀಹರಿಯ ಜ್ಞಾನವು ಸುಲಭವಾಗುವುದು.

ಶಿವಸಹಸ್ರ ನಾಮಗಳ ಮುಖ್ಯಾರ್ಥನಾದ ಶ್ರೀಹರಿಯನ್ನು ಶಿವಸಹಸ್ರದಿಂದ ನುತಿಸಿ ಬ್ರಹ್ಮದೇವನು, ಆತನ ಉಪದೇಶದಿಂದ ರುದ್ರನು ಧನ್ಯರಾದರು. ಶಿವೋಪದೇಶದಿಂದ ಸನತ್ಕುಮಾರ, ತಂಡಿಮುಖಮುನಿಗಳು ಅದನ್ನು ಕಲಿತು, ದಿವ್ಯಜ್ಞಾನಿಗಳಾದರು. ಇಂತಹ ರಹಸ್ಯ ವಿದ್ಯೆಯನ್ನು ನನಗೆ ಉಪದೇಶಿಸಿ, ತಂಡಿಯು, ಅಂತರ್ಧಿತನಾದನು.

ಜೈಗೀಷವ್ಯ , ಗೃತ್ಸಮದ, ವಿಶ್ವಾಮಿತ್ರ, ಗರ್ಗ, ಪರಾಶರ, ಮಾಂಡವ್ಯ, ಗಾಲವ, ಮುಂತಾದ ಮಹಾನುಭಾವರು ನಿತ್ಯವೂ ಶಿವಸಹಸ್ರ ನಾಮಜಪ ಪರಾಯಣರಾಗಿರುವರು. ಶ್ರೀಶಿವಾಯ ನಮಃ ಓಂ ಶಿವನನ್ನೂ ಶಿವೆಯೂ ನಾಮಸಹಸ್ರದಿಂದ ನುತಿಸುತ್ತಿರುವಳು.

ಒಂದು ದಿನ ಗಂಗಾದಿ ನದೀ ದೇವತೆಗಳು ಸರ್ವಮಂಗಳೆಯನ್ನು ಕಂಡು, ಪಾತಿವ್ರತ್ಯವನ್ನು ಕುರಿತು ಉಪದೇಶಿಸೆಂದರು. ಆಗ ಪಾರ್ವತಿಯು ಅವರಿಗಿಂತೆಂದಳು:

'ಕನ್ಯೆಯು ತಾನಾಗಿ ದುಡುಕದೆ, ತನ್ನ ತಂದೆ, ಅಣ್ಣ, ಮಾವ ಮೊದಲಾದವರು, ಕುಲ ಶೀಲ ವಯೋ ರೂಪಗಳನ್ನು ಪರೀಕ್ಷಿಸಿ, ಪ್ರದಾನ ಮಾಡಿದ ವರನನ್ನು ಮದುವೆಯಾಗಬೇಕು. ಪತಿಯೇ ದೈವವೆಂದು ಭಕ್ತಿಯಿಂದ ಸೇವಿಸಬೇಕು. ಪತಿಗೆ ಹಿತವನ್ನೇ ಮಾಡಬೇಕು. ಅಹಿತವಾದುದನ್ನು ಬಿಡಬೇಕು. ದೇವತಾ ಪಿತೃ ಸಮರ್ಚನಗಳಲ್ಲಿಯು, ಅತಿಥಿಸತ್ಕಾರದಲ್ಲಿಯು ಸದಾ ಜಾಗರೂಕಳಾಗಿ, ಪತಿಗೆ ಇಹಪರ ಸುಖಸಾಧಕಳಾಗಬೇಕು. ಧರ್ಮಪತ್ನಿಯಾಗಬೇಕಾಗಲಿ, ಕೇವಲ ಭೋಗ ಪತ್ನಿಯಾಗಿರಬಾರದು.

ಪತಿಗೆ ಸಮ್ಮತವಲ್ಲದಿರೆ, ಎಂತಹ ಧರ್ಮವನ್ನಾದರೂ ಬಿಟ್ಟುಬಿಡಬೇಕು. ಅವನ ಅಪ್ಪಣೆ ಪಡೆದು ಮಾಡಿದ ವ್ರತ, ದಾನೋಪವಾಸಾದಿಗಳಿಗೆ ಫಲವಿದೆ; ಹಾಗಲ್ಲದಿದ್ದರೆ ಫಲವಿಲ್ಲ. ಹಾಗೆಂದು ಪತಿಯು ನಾಸ್ತಿಕನಾಗಿ ವಿಷ್ಣುಭಕ್ತಿ, ಏಕಾದಶ್ಯುಪವಾಸಾದಿಗಳನ್ನು ತಡೆದರೆ, ಆಗ ಪತಿವ್ರತೆಯು ಅವನ ಮಾತನ್ನು ಮೀರೀ ನಡೆಯಬೇಕು. ವಿಷ್ಣುಧರ್ಮವನ್ನೆಂದಿಗೂ ಬಿಡಬಾರದು. ಅಂತಹವಳಿಗೆ ಪತಿವಚನೋಲ್ಲಂಘನ ಪಾಪವಿಲ್ಲ.

ಪತಿಯ ಮತಿಯನ್ನರಿತು ಸತಿಯು ರತಿಯಲ್ಲಿ ರಂಭೆಯಂತೆ ಅಲಂಕರಿಸಿ ಕೊಂಡಿರಬೇಕು. ಸುಮನೋ, ವಸ್ತ್ರ, ಭೂಷಣ, ಗಂಧ, ತಲ್ಪಗಳೆಲ್ಲವೂ ಪತಿಯ ಪ್ರೀತಿಗೆಂದು ತಿಳಿಯಬೇಕು. ಪತಿಪ್ರವಾಸದಲ್ಲಿ ವಿಶೇಷಾಲಂಕರಣವೂ, ರುಚ್ಯ ಭೋಜನ

ವಿಶೇಷವೂ ಪತಿವ್ರತೆಗೆ ಹಿತವೆನಿಸದಿರುವುದು. ಪತಿಯು ತನಗಿತ್ತ ದ್ರವ್ಯಾದಿಗಳನ್ನು ಚನ್ನಾಗಿ ರಕ್ಷಿಸಿ, ದಕ್ಷತೆಯಿಂದ ಮನೆಯ ವ್ಯವಹಾರವನ್ನು ನಡೆಸಬೇಕು. ಅವಶ್ಯಕವೆಂದು ತೋರಿದಾಗ ತನ್ನಲ್ಲಿರುವ ದ್ರವ್ಯಾದಿಗಳನ್ನು ವಂಚಿಸದೆ ಪತಿಗೆ ಕೊಡಬೇಕು. ಮನೆಮಕ್ಕಳಲ್ಲಿ ಶ್ರೀಗೋಪಾಲಕೃಷ್ಣನ ಸನ್ನಿಧಾನವೆಂದು ತಿಳಿದು ಲಾಲಿಸಬೇಕು. ಆಣೆ, ಒಟ್ಟುಗಳನ್ನು ಇಡಬಾರದು. ಕೆಡುನುಡಿಗಳನಾಡಬಾರದು. ಪುರಾಣಶ್ರವಣವನ್ನು ಮಾಡುತ್ತಿರಬೇಕು. ಹಿರಿಯರಿಗೆ ಗೌರವಯುತ ಸೇವೆಯನ್ನು ಸಲ್ಲಿಸಬೇಕು. ದರಿದ್ರನೆಂದು ಪತಿಯನ್ನು ನಿಂದಿಸಬಾರದು.

ಅಧರ್ಮರತರಾದ ಅಂಗನೆಯರನ್ನು ಆಸುರಿ, ಪೈಶಾಚಿ, ದಾನವಿ ಎಂದು ತಿಳಿಯಿರಿ! ವ್ಯಭಿಚಾರಿಣಿಯು ದೈತ್ಯಳೇ ಸರಿ! ಭೋಗ ಮಾತ್ರಪರಳಾದವಳಿಗೆ ಲಜ್ಜಾಭಯ ಗಳಿರುವುದಿಲ್ಲ. ಅಂತಹವರು ಪತಿ ಪುತ್ರ ಬಂಧುಜನರನ್ನು ದ್ವೇಷಿಸಿ, ಪರಿತ್ಯಜಿಸಿ, ಕುಲಕಲಂಕಿನಿಯರೆನಿಸುವರು. ಜಗಳವಾಡುವುದು, ನಿಂದಿಸುವುದು ಉತ್ತಮ ಸ್ತ್ರೀ ಲಕ್ಷಣವಲ್ಲ. ರೂಪ, ಮದ, ಧನಮದ, ಕುಲಮದಗಳಿಂದ ಕೊಬ್ಬಿದ ಮಡದಿಯರು ನಾಗಸರ್ಪಿಣಿಯಂತೆ ಪರಿವರ್ಜನೀಯರು.

ಅನುವ್ರತಳಾಗಿದ್ದು, ಪತಿಮರಣದಲ್ಲಿ ಅನುಗಮನವನ್ನೋ, ವಿಧವಾ ಧರ್ಮ ಪರಿಪಾಲನವನ್ನೋ ನಡೆಸುವ ಪುಣ್ಯವತಿಯು ತನ್ನ ಪತಿಯಿಂದ ಕೂಡಿ, ಸ್ವರ್ಗದಲ್ಲಿ ಚಿರಕಾಲ ಬಾಳುವಳು.'

ಇಂತು ಶಿವದಂಪತಿಗಳ ಮಹಿಮೆಯನ್ನು ನಾರದನು ಮುನಿಸಭೆಯಲ್ಲಿ ನುಡಿದುದನ್ನು ನಿನಗೆ ನಾನು ಶ್ರೀಕೃಷ್ಣನ ಸನ್ನಿಧಾನದಲ್ಲಿ, ಅವನ ಪ್ರೇರಣೆಯಂತೆ ಪೇಳಿರುವೆನು. ಧರ್ಮರಾಜ ! ಮತ್ತೇನು ಕೇಳಲಿಚ್ಛಿಸುವೆ ? ' ಎಂದ ಭೀಷ್ಮನನ್ನು ನೋಡಿ, ಧರ್ಮರಾಜನು ಧರ್ಮವಿಶೇಷತೆಗಳನ್ನು, ವಿಷ್ಣುಮಂತ್ರ ಜಪಕ್ರಮವನ್ನು ಕುರಿತು ಪ್ರಶ್ನಿಸಲು ತೊಡಗಿದನು.

## ೧೫. ಶ್ರೀವಿಷ್ಣುಸಹಸ್ರನಾಮ ಸ್ತುತಿ

ಧರ್ಮರಾಜನು ಶಿವಮಹಿಮೆಯನ್ನು ಕೇಳಿ, ಪ್ರೀತನಾದನು. ಶ್ರೀವಿಷ್ಣು ಧರ್ಮಗಳನ್ನು ಶ್ರೀವಿಷ್ಣುಮಹಿಮೆಯನ್ನು ಕೇಳಲಿಚ್ಛಿಸಿ ಪ್ರಶ್ನಿಸಿದ ಧರ್ಮರಾಜನಿಗೆ ಭೀಷ್ಮನಿಂತೆಂದನು:

'ಧರ್ಮರಾಜ ! ಶಿವಜನಕನಾದ ಬ್ರಹ್ಮದೇವನಿಗೂ ಜನಕನಾಗಿ, ಲೋಕಗಳಿಗೆಲ್ಲಾ ಪ್ರಪಿತಾಮಹನೆನಿಸಿ, ವಿರಿಂಚಿ ಶಂಭು ಶಕ್ರ ಮುಖದೇವತೆಗಳಿಗೆ ಜ್ಞಾನಪ್ರದನಾದ ಶ್ರೀವಿಷ್ಣುವಿನ ಮಹಿಮೆಯು ಅತ್ಯದ್ಭುತವು, ಅನಂತವು ಆಗಿದೆ. ಪರಮಪದವೆನಿಸಿರುವ ವೈಕುಂಠದ ಪ್ರಾಪ್ತಿಯು ವಿಕುಂಠನಾಥನ ಪರಮಪ್ರಸಾದವಿಲ್ಲದಿರೆ ಲಭ್ಯವಾಗದು. ಪ್ರಸಾದವು ಜೀವಕೃತ ಶ್ರವಣ, ಮನನ, ನಿಯತ ಧ್ಯಾನಗಳನ್ನು ಅವಲಂಬಿಸಿದೆ. ಶ್ರವಣಾದಿಗಳು ವಿಪ್ರಾಗ್ರೇಸರರ ಸಂಗದಿಂದ ಲಭಿಸುವವು.

ಹಿಂದೆ ವೇಶ್ಯೆಯೋರ್ವಳು, ಕಳ್ಳರ ಕೈಗೆ ಸಿಕ್ಕು ಒದ್ದಾಡುವ ವಿಪ್ರನನ್ನು ತನ್ನ ಜಾಣತನದಿಂದ ಬಿಡಿಸಿದಳು. ಮುಂದೆ ಅವನ ಮುಖದಿಂದ ಪುರಾಣಗಳನ್ನು ಕೇಳಿ ತಿಳಿದು, ಮರುಜನ್ಮದಲ್ಲಿ ಬ್ರಾಹ್ಮಣಿಯಾದಳು.

ಮನುಜನು ದಾರಿದ್ರ್ಯ ವ್ಯಾಧಿ ಶೋಕಗಳಿಂದ ಪೀಡಿತನಾದಾಗ ದೇವ ಋಷಿ ತೀರ್ಥ ಕ್ಷೇತ್ರಾದಿಗಳನ್ನು ಸ್ಮರಿಸಿ, ಭಯಮುಕ್ತನಾಗುವನು. ವಿಷ್ಣು ವಿರಿಂಚ ರುದ್ರರನ್ನು, ಇಂದ್ರ ವಿನಾಯಕ ವಿಶಾಖ ವಹ್ನಿ ವಾಯು ಕುಬೇರ ವರುಣ ಯಮರನ್ನು, ಸೂರ್ಯ ಚಂದ್ರ, ಬುಧ ಕುಜ ಗುರು ಶುಕ್ರ ಶನಿ ರಾಹು ಕೇತುಗಳನ್ನು, ಸುರಭಿ ಉಚ್ಚೈಶ್ರವ ಐರಾವತಗಳನ್ನು, ಸಮುದ್ರಗಳನ್ನು, ಗಂಗಾ ಯಮುನಾ ಗೋದಾ ಕೃಷ್ಣ ವೇಣೀ ತುಂಗಭದ್ರಾ ಕಾವೇರೀ ನದಿಗಳನ್ನು, ವಸು ರುದ್ರಾದಿತ್ಯರನ್ನು, ಪಿತೃದೇವತೆಗಳನ್ನು, ವಾಲಖಿಲ್ಯ ವ್ಯಾಸ ವಾಲ್ಮೀಕಿ ನಾರದಾಗಸ್ತ್ಯ ಗೌತಮ ಕಶ್ಯಪಾತ್ರಿ ಕಣ್ವ ವಿಶ್ವಾಮಿತ್ರ ಭರದ್ವಾಜ ವಸಿಷ್ಠ ಜಮದಗ್ನಿಗಳನ್ನು, ಧರ್ಮತಪಸ್ಸತ್ಯಗಳನ್ನು, ಅಹೋರಾತ್ರಗಳನ್ನು, ತಾರಾಗ್ರಹಗಳನ್ನು, ಮಾಸ ವತ್ಸರ ಋತು ದೇವರನ್ನು, ಶೇಷಾದಿ ನಾಗರನ್ನು, ಗರುಡಾದಿ ಪಕ್ಷಿವರರನ್ನು, ಕಾಶಿ ಬದರೀ, ಕುರುಕ್ಷೇತ್ರ, ನೈಮಿಶಾರಣ್ಯ, ಅಯೋಧ್ಯಾ, ಮಧುರಾ, ಕಾಂಚೀ, ಮಾಯಾ, ಅವಂತೀ, ದ್ವಾರಾವತೀ, ಪುಷ್ಕರ, ಸಿದ್ಧಾಶ್ರಮ, ಪಂಪಾ ಶ್ರೀಶೈಲ, ವೆಂಕಟಾಚಲಾದಿ ಕ್ಷೇತ್ರಗಳನ್ನು, ಮೇರು ಮಂದರ ಮಲಯ ಗಂಧಮಾದನ ಸಹ್ಯ ನೀಲ ಶ್ವೇತ ವಿಂಧ್ಯಾದಿ ಪರ್ವತಗಳನ್ನು, ಪುಣ್ಯಪುರುಷರನ್ನು, ಭೂಸುರ ಚಕ್ರವರ್ತಿಗಳನ್ನು, ಪರಮಭಕ್ತಿಯಿಂದ ಸ್ಮರಿಸಿ, ನಮಿಸಿ 'ಸರ್ವದೇವತೆಗಳಿರಾ ! ನನಗೆ ಆಯುರಾರೋಗ್ಯೈಶ್ವರ್ಯಾಭಿ ವೃದ್ಧಿಯನ್ನು ಕೊಡಿರಿ! ಪರಮಾನಂದದಿಂದ ಸಲಹಿರಿ!' ಎಂದು ಪ್ರಾರ್ಥಿಸಿ, ಸರ್ವರೋಗ ಚಿಂತಾದಿ ನಿರ್ಮುಕ್ತನಾಗುವನು.

''ಓಂ ನಮೋ ಭಗವತೇ ವಾಸುದೇವಾಯ; ನಮಃ ಪುರುಷೋತ್ತಮಾಯ ; ನಮಸ್ಸರ್ವಲೋಕಗುರವೇ ; ನಮಸ್ಸರ್ವಲೋಕ ಪಿತ್ರೇ; ನಮಸ್ಸರ್ವಲೋಕಪಿತಾಮಹಾಯ; ನಮಸ್ಸರ್ವಲೋಕ ಪ್ರಪಿತಾಮಹಾಯ; ನಮಸ್ಸರ್ವಲೋಕ ಪ್ರಧಾನಾಯ; ನಮಸ್ಸರ್ವ ಲೋಕೇಶ್ವರಾಯ; ನಮಸ್ಸರ್ವಲೋಕ ವಿಶಿಷ್ಟಾಯ; ನಮಸ್ಸರ್ವಲೋಕ ಸುಖಪ್ರದಾಯ;

ನಿಧಯೇ; ನಮಸ್ಸರ್ವಲೋಕ ನಿಧಾನಾಯ; ನಮಸ್ಸರ್ವಲೋಕ ಹಿತಾಯ; ನಮಸ್ಸರ್ವಲೋಕ ಹಿತಕರಾಯ ; ನಮಸ್ಸರ್ವಲೋಕೋದ್ಭವಾಯ ; ನಮಸ್ಸರ್ವಲೋಕೋದ್ಭವಕರಾಯ ; ನಮೋ ವಿಷ್ಣವೇ ! ಪ್ರಭವಿಷ್ಣವೇ ! '' ಎಂಬೀ ಮಹಾಮಂತ್ರವನ್ನು ಪಠಿಸಿದವರ ಸರ್ವಪಾಪಗಳು ನಾಶವಾಗುವವು. ಸರ್ವಭಯ ದುಃಖ ರೋಗ ಚಿಂತಾದಿಗಳು ನಿರ್ಮೂಲವಾಗುವವು. ಅವರಿಗೆ ಸರ್ವಶುಭಗಳು ಸಿದ್ಧಿಸುವವು. '

ಇಂತು ನುಡಿದು ಭೀಷ್ಮನು ಶ್ರೀಹರಿಯನ್ನು ನೆನೆದು ಮನಸಾ ವಂದಿಸಿದನು.

ಮಾನವನು ಯಾರ ಸ್ಮರಣೆಮಾತ್ರದಿಂದಲೇ ಜನನ ಮರಣ ರೂಪ ಸಂಸಾರದ ಬಂಧದಿಂದ ಮುಕ್ತಿಯನ್ನು ಹೊಂದುವನೋ, ಅಂತಹ ಸರ್ವಪ್ರಭು ಮಹಾ ಪ್ರಭಾವಶಾಲಿ

ಭಗವಾನ್ ಶ್ರೀವಿಷ್ಣುವಿಗೆ ನಮಸ್ಕಾರವು! ಸಮಸ್ತ ಭೂತಗಳಿಗೆ ಜನ್ಮಾದಿಪ್ರದನು, ಭೂಮಿಯನ್ನೆತ್ತಿ ಧರಿಸಿರುವವನು ಒಬ್ಬನಾದರೂ ಅನೇಕ ರೂಪಗಳಿಂದ ಅವತರಿಸಿ, ಭಕ್ತರನ್ನು ಪೊರೆವ ಮಹಾಪ್ರಭುವಾದ ವಿಷ್ಣುವಿಗೆ ನಮಸ್ಕಾರವು!

ಇಂತು ವಂದಿಸಿ ವೈಶಂಪಾಯನನು ಮತ್ತೆ ಜನಮೇಜಯನಿಗೆ ನಿರೂಪಿಸಿದನು:

ಎಲ್ಲ ಪಾವನಧರ್ಮ ವಿಚಾರವನ್ನೂ ಕೇಳಿ, ಧರ್ಮರಾಜನು ಮತ್ತೆ ಶಾಂತನವನನ್ನಿಂತು ಪ್ರಶ್ನಿಸಿದನು.

'ತಾತ ! ದೇವತೆಗಳಲ್ಲಿ ಶ್ರೇಷ್ಠರಾರು ? ಯಾರನ್ನು ನಂಬಿ ಆಶ್ರಯಿಸುವುದರಿಂದ ನಮ್ಮ ವಿಪತ್ತುಗಳು ನಾಶವಾಗುವವು ? ಯಾರನ್ನು ಸ್ತುತಿಸಿ, ಯಾರನ್ನು ಪೂಜಿಸಿ, ಮಾನವರು ಸರ್ವಶುಭಗಳನ್ನು ಪೊಂದಲಾಗುವುದು ? ಸರ್ವಧರ್ಮಗಳಲ್ಲಿಯೂ ಶ್ರೇಷ್ಠವಾದುದನ್ನು ನನಗೆ ತಿಳಿಸು! ಯಾವ ಮಂತ್ರದ ಜಪದಿಂದ ಮನುಜನು ಜನ್ಮಸಂಸಾರ ಬಂಧದಿಂದ ಬಿಡುಗಡೆ ಹೊಂದಿ ಮುಕ್ತನಾಗುವನು ?'

ಭೀಷ್ಮನಿಂತೆಂದನು: 'ಧರ್ಮರಾಜ! ಕೇಳು! ಸರ್ವಲೋಕ ಪ್ರಭುವು, ಬ್ರಹ್ಮ ರುದ್ರಾದಿ ವಂದ್ಯನು, ದೇಶ ಕಾಲ ವಸ್ತುಗಳಿಂದ ಅಪರಿಚ್ಛಿನ್ನನು, ಪುರುಷೋತ್ತಮನು ಆದ ಶ್ರೀನಾರಾಯಣನ ದಿವ್ಯಸಹಸ್ರನಾಮವನ್ನು ಜಪಿಸಿ, ಮನುಜನು ಸರ್ವದುಃಖದಿಂದ ಮುಕ್ತನಾಗಿ ಸುಖಿಸುವನು. ನಾಶರಹಿತನಾದ ಅಚ್ಯುತನನ್ನು ನಿತ್ಯವೂ ಭಕ್ತಿಯಿಂದ ಪೂಜಿಸು ! ಶ್ರೀಹರಿಯನ್ನೇ ಧ್ಯಾನಿಸು! ಅವನನ್ನು ಸ್ತುತಿಸು! ಅವನಿಗೆ ನಮಸ್ಕರಿಸು!

ಶ್ರೀವಿಷ್ಣುವು ಅನಾದಿಮಧ್ಯಾಂತನಾಗಿರುವನು. ಸರ್ವಲೋಕ ಮಹೇಶ್ವರನು, ಸರ್ವಲೋಕವ್ಯಾಪಿಯು, ಸರ್ವಪ್ರಭುವೂ ಆಗಿರುವನು. ಅವನನ್ನು ಸ್ತುತಿಸಿ, ನರನು ದುಃಖದೂರನಾಗುವನು. ವೇದವೇದ್ಯನು, ಬ್ರಾಹ್ಮಣವತ್ಸಲನು, ಸರ್ವಧರ್ಮ ವಿಶಾರದನು, ಸುಜೀವರಿಗೆ ಕೀರ್ತಿಯನ್ನು ಕೊಟ್ಟು ಸಲುಹುವವನು, ಅತ್ಯಂತ ಮಹನೀಯನು, ಸರ್ವಭೂತಗಳಿಗೆ ಜನ್ಮಸ್ಥಿತಿ ನಾಶಗಳನ್ನೀವ ಲೋಕನಾಥನು ಆದ ಶ್ರೀಹರಿಯನ್ನು ನುತಿಸಿದವನು ದುಃಖದೂರನಾಗುವನು.

ಸರ್ವಧರ್ಮಗಳಿಗೆ ಉತ್ತಮ ಧರ್ಮವಾವುದೆಂದೆ ! ಕೇಳು! ನನ್ನ ಅಭಿಪ್ರಾಯವನ್ನು! ಭಕ್ತಿಯಿಂದ ಪುಂಡರೀಕಾಕ್ಷನನ್ನು ಸ್ತುತಿಸಿ, ನುತಿಸುವುದೇ ನರನ ಅವಶ್ಯಕರ್ತವ್ಯ ಧರ್ಮ ಶ್ರೇಷ್ಠವಾಗಿದೆ. ತೇಜಃಪದಾರ್ಥಗಳಿಗೆ ತೇಜಃಪ್ರದನು, ಸ್ವಯಂತೇಜಃಪೂರ್ಣನು ಆದ ಶ್ರೀಹರಿಯನ್ನು ಪರಂಬ್ರಹ್ಮನೆಂದು ವೇದಗಳು ಸಾರುತ್ತಿವೆ. ಶ್ರೀಹರಿಯೇ ತಪಃಫಲಪ್ರದನು. ಶ್ರೀಹರಿಯೇ ಪರಮಪವಿತ್ರನು. ಲಕ್ಷ್ಮೀಶನೇ ಮಂಗಳಗಳಿಗೆ ಮಾಂಗಲ್ಯಪ್ರದನು. ಎಲ್ಲ ದೇವತೆಗಳಿಗೆ ಶ್ರೀಶನು ದೇವನೆನಿಸಿ, ಪೂಜಿತನಾಗಿರುವನು. ಸಕಲಭೂತಗಳಿಗೆ ನಾರಾಯಣನೇ ಜನಕನು. ಶ್ರೀಹರಿಗೆ ಜನನಮರಣಗಳಿಲ್ಲ. ಆನಂದಮಯನಾದ ಶ್ರೀಹರಿಯು ಶಶ್ವದೇಕ ಪ್ರಕಾರನಾಗಿ ವಿಕಾರವಿಲ್ಲದೆ ವಿರಾಜಿಸುವನು. ಸೃಷ್ಟಿಕಾಲದಲ್ಲಿ ಅವನಿಂದ ಹೊರ ಬಂದ ಭೂತಗಳು ಪ್ರಳಯಕಾಲದಲ್ಲಿ ಅವನಲ್ಲೇ ಲಯವನ್ನು

ಹೊಂದಿರುವವು. ಇಂತಹ ಲೋಕೇಶ್ವರನಾದ ಜಗನ್ನಾಥನ ದಿವ್ಯನಾಮ ಸಹಸ್ರವನ್ನು ನಿನಗೆ ನಿರೂಪಿಸುವೆನು: ಕೇಳು ! ಸರ್ವಪಾಪ ಭಯಾದಿ ಪರಿಹಾರಕವಾದ ಶ್ರೀವಿಷ್ಣುನಾಮ ಸಹಸ್ರಗಳಲ್ಲಿ ಶ್ರೀಹರಿಯ ಕಲ್ಯಾಣಗುಣಗಳು ಕೀರ್ತಿತವಾಗಿವೆ. ಮಹರ್ಷಿಗಳು ಸರ್ವಶಬ್ದ ಪರಮಮುಖ್ಯ ವಾಚ್ಯನೆಂದು ಶ್ರೀಹರಿಯನ್ನು ತಿಳಿದು, ನಾಮಸಹಸ್ರದಿಂದ ಕೀರ್ತಿಸಿ ಧನ್ಯರಾಗಿರುವರು. ಅಂತಹ ಪ್ರಸಿದ್ಧ ದಿವ್ಯನಾಮ ಸಹಸ್ರವನ್ನು ಸಕಲ ಸುಜನರ ಉದ್ಧಾರಕ್ಕಾಗಿ, ನಿನಗೆ ಕೀರ್ತಿಸುವೆನು. ಶ್ರದ್ಧೆಯಿಂದ ಕೇಳು !

ವಿಷ್ಣುನಾಮ ಸಹಸ್ರಕ್ಕೆ ವೇದವ್ಯಾಸರೇ ಋಷಿಯು ; ಅನುಷ್ಟುಪ್ ಛಂದಸ್ಸು ; ದೇವಕೀಸುತ ಶ್ರೀಕೃಷ್ಣನೇ ಮಂತ್ರದೇವತೆಯು ; ಅಮೃತಾಂಶೂದ್ಭವನೆಂಬುದೇ ಮಂತ್ರಬೀಜವು ; ದೇವಕೀನಂದನನೆಂಬುದೇ ಶಕ್ತಿಯು ; ತ್ರಿಸಾಮಾಸಾಮಗನೆಂಬುದೇ ಮಂತ್ರಹೃದಯವು ; ಮಂತ್ರದ ಪ್ರಯೋಜನವೆಂದರೆ, ಮನಶ್ಶಾಂತಿ, ಶ್ರೀಹರಿ ಪ್ರಸಾದ ಮೋಕ್ಷಗಳು !

ಓಂಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ, ಸೌಂದರ್ಯಸಾರಮರಿಶಂಖ ವರಾಭಯಾನಿ। ದೋರ್ಭಿರ್ದಧಾನಂ, ಅಜಿತಂ ಸರಸಂಚ, ಭೈಷ್ಮೀಸತ್ಯಾ ಸಮೇತಮಖಿಲಪ್ರದಮಿಂದಿರೇಶಂ॥

ಎಂದು ಶ್ರೀಕೃಷ್ಣಾದಿ ಭಗವದ್ರೂಪಗಳನ್ನು ಧ್ಯಾನಿಸಿ, ಶ್ರೀವಿಷ್ಣುನಾಮ ಸಹಸ್ರವನ್ನು ಜಪಿಸಬೇಕು. ಅರ್ಥವನ್ನರಿತು ಮಾಡುವ ಜಪವು ಮಹಾಫಲಪ್ರದವಾಗಿದೆ.

ಓಂ ವಿಶ್ವ ಎಂದಿತ್ಯಾದಿ ರೀತಿಯಾಗಿ ಜಪವನ್ನು, ಓಂ ವಿಶ್ವಾಯ ನಮಃ ಎಂದಿತ್ಯಾದಿ ರೀತಿಯಾಗಿ ನಮನ, ತರ್ಪಣ, ಹೋಮಗಳನ್ನು ಮಾಡಬೇಕು. ಹೋಮದಲ್ಲಿ ಸ್ವಾಹಾಕಾರವಿಡಬೇಕು. ಹರಿಃ ಓಂ ವಿಶ್ವಂ = ಜಗತ್ಕಾರಣ, ಜಗತ್ಪ್ರಭು, ಜಗದಂತರ್ಯಾಮಿ ; ವಿಷ್ಣುಃ = ಸರ್ವವ್ಯಾಪೀ, ಕಾಂತಿಬಲರೂಪಿ ; ವಷಟ್ಕಾರ = ಜ್ಞಾನ, ವಿಜ್ಞಾನ, ವೀರ್ಯ , ಐಶ್ವರ್ಯ, ಶ್ರೀ, ಯಶಸ್ಸುಗಳೆಂಬ ಆರು ಗುಣಗಳಿಗೆ ನಿಧಿ ; ಭೂತಭವ್ಯಭವತ್ಪ್ರಭುಃ = ತ್ರಿಕಾಲಗಳಲ್ಲಿಯು ಐಶ್ವರ್ಯವಂತ ; ಭೂತಕೃತ್ = ಸಮಸ್ತ ಭೂತಗಳನ್ನು ಸೃಜಿಸಿದವನು; ಭೂತಭೃತ್ = ಭೂತಗಳನ್ನು ಧರಿಸಿ, ಪೋಷಿಸುವನು; ಭಾವಃ = ತನ್ನವರಿಗೆ ಕಾಂತಿಸುಖಗಳನ್ನೀವನು ; ಭೂತಾತ್ಮಾ = ಸಮಸ್ತ ಭೂತಗಳಿಗೆ ಅಂತರ್ಯಾಮೀ; ಭೂತ ಭಾವನಃ = ಪ್ರಾಣಿಗಳಿಗೆ ಉತ್ಪತ್ತಿ, ಸ್ಥಿತಿಗಳನ್ನು ಕೊಡುವನು; ಪೂತಾತ್ಮಾ = ಪವಿತ್ರ ಸ್ವರೂಪನು; ಪರಮಾತ್ಮಾ = ಜೀವರ ಒಡೆಯ; ಮುಕ್ತಾನಾಂ ಪರಮಾಗತಿಃ = ಮುಕ್ತರಿಗೂ ಆಶ್ರಯದಾತನು; ಅವ್ಯಯಃ = ಅವಿನಾಶಿಯು ; ಪುರುಷಃ= ಶರೀರದಲ್ಲಿ ನಿಂತು ನಡೆಸುವ ಷಡ್ಗುಣೈಶ್ವರ್ಯನಿಧಿ ; ಸಾಕ್ಷೀ - ಪ್ರತ್ಯಕ್ಷವಾಗಿ ನಿಂತು ಎಲ್ಲವನ್ನೂ ನೋಡುವವನು; ಕ್ಷೇತ್ರಜ್ಞಃ = ಜೀವ ಜೀವದೇಹಾದಿಗಳನ್ನು ಚನ್ನಾಗಿ ಅರಿತವನು ; ಅಕ್ಷರಃ = ಚತುರ್ವಿಧನಾಶರಹಿತ ; ಯೋಗಃ = ಜ್ಞಾನಭಕ್ತಿಗಳಿಗೆ ಸಿಗುವನು; ಯೋಗವಿದಾಂ ನೇತಾ = ಕರ್ಮ ಜ್ಞಾನ ಭಕ್ತಿ ಯೋಗಗಳನ್ನರಿತವರನ್ನು

ಮೋಕ್ಷಕ್ಕೆ ಕರೆದೊಯ್ಯುವವನು; ಪ್ರಧಾನ ಪುರುಷೇಶ್ವರಃ = ಜಡಪ್ರಕೃತಿ ಶ್ರೀದೇವಿ ಬ್ರಹ್ಮಾದಿ ಜೀವರುಗಳಿಗೆ ಪ್ರಭುವು; ನಾರಸಿಂಹವಪುಃ = ನರನೂ ಸಿಂಹನೂ ಆದ ಶರೀರದಿಂದ ಅವತರಿಸಿದವನು; ಶ್ರೀಮಾನ್ = ರಮಾಪತಿ, ಕಾಂತಿಯುಕ್ತ; ಕೇಶವಃ = ಬ್ರಹ್ಮರುದ್ರರಿಗೆ ಪ್ರವರ್ತಕ; ಪುರುಷೋತ್ತಮಃ = ಕ್ಷರಜೀವರಿಗೂ, ಅಕ್ಷರ ಶ್ರೀದೇವಿಗೂ ಭಿನ್ನನೂ ಉತ್ತಮನಾದವನು; ಸರ್ವಃ = ಸರ್ವರಲ್ಲಿ ವ್ಯಾಪ್ತನು; ಶರ್ವಃ = ಸುಖಪ್ರದನು; ಶಿವಃ = ಮಂಗಳರೂಪೀ; ಸ್ಥಾಣುಃ = ವಿಕಾರರಹಿತನು; ಭೂತಾದಿಃ = ಪ್ರಾಣಿಗಳಿಗೆ ಸೃಷ್ಟಿಕಾರಣನು; ನಿಧಿರವ್ಯಯಃ = ಅಕ್ಷಯ ಗುಣನಿಧಿ; ಸಂಭವಃ = ತಾನಾಗಿ ಅವತರಿಸುವವನು; ಭಾವನಃ = ಕರ್ಮಫಲಪ್ರದನು; ಭರ್ತಾ = ಜಗತ್ಪೋಷಕ; ಪ್ರಭವಃ = ಸೃಷ್ಟಿಕರ್ತ; ಪ್ರಭುಃ = ದಿವ್ಯ ಶಕ್ತಿ ಸಂಪನ್ನ; ಈಶ್ವರಃ = ಅವ್ಯಾಹತ ಪರಮೈಶ್ವರ್ಯ ಪೂರ್ಣ; ಸ್ವಯಂಭೂಃ = ಇಚ್ಛಾಮಾತ್ರದಿಂದ ಅವತರಿಸುವವನು; ಶಂಭುಃ = ಸುಖವನ್ನು ಸ್ವೀಕರಿಸುವವನು; ಆದಿತ್ಯಃ = ಆದಿಕಾಲದಿಂದಲು ಜ್ಞಾನಾದಿಗಳನ್ನು ಉಪದೇಶಿಸುವವನು; ಪುಷ್ಕರಾಕ್ಷಃ = ಕಮಲನೇತ್ರನು; ಮಹಾಸ್ವನಃ = ಗಂಭೀರಧ್ವನಿಯುಕ್ತನು; ಅನಾದಿ ನಿಧನಃ = ಜನನಮರಣರಹಿತನು; ಧಾತಾ = ಜಗದ್ಧಾರಕನು; ವಿಧಾತಾ = ಕರ್ಮಫಲಪ್ರದ; ಧಾತುರುತ್ತಮಃ = ಬ್ರಹ್ಮಾದಿಗಳಿಗೂ ಶ್ರೇಷ್ಠನು; ಅಪ್ರಮೇಯಃ = ಸಾಕಲ್ಯೇನ ತಿಳಿಯಲಾಗದ ಮಹಿಮನು; ಹೃಷಿಕೇಶಃ = ಇಂದ್ರಿಯಪ್ರೇರಕಸ್ವಾಮಿ; ಪದ್ಮನಾಭಃ = ಜಗತ್ಕಾರಣಕಮಲವನ್ನು ನಾಭಿಯಿಂದ ಹೊರಗೆಡಹಿದವನು; ಅಮರ ಪ್ರಭುಃ = ದೇವತೆಗಳಗೊಡೆಯ; ವಿಶ್ವಕರ್ಮಾ = ಜಗತ್ತನ್ನು ನಿರ್ಮಿಸಿದವನು; ಮನುಃ = ಜ್ಞಾನರೂಪನು; ತ್ವಷ್ಟಾ = ಪ್ರಕಾಶಕನು; ಸ್ಥವಿಷ್ಠಃ = ಸ್ಥೂಲತಮನು; ಸ್ಥವಿರೋ ಧ್ರುವಃ = ಸದಾ ಸ್ಥಿರನಾಗಿರುವನು; (೫೪).

ಅಗ್ರಾಹ್ಯಃ = ಇಂದ್ರಿಯಗಳಿಗೆ ಸಿಗದವನು; ಶಾಶ್ವತಃ = ಸರ್ವದೇಶ ಕಾಲಗಳಲ್ಲಿಯು ಏಕಪ್ರಕಾರನಾಗಿರುವನು; ಕೃಷ್ಣಃ = ಪೂರ್ಣಸುಖನು ಮನೋ ಹಾರಿಯು; ಲೋಹಿತಾಕ್ಷಃ = ಕೆಂಪು ಕೊನೆಯುಳ್ಳ ಕಣ್ಣುಳ್ಳವನು; ಪ್ರತರ್ದನಃ = ಸರ್ವನಾಶಕ; ಪ್ರಭೂತಃ = ಸದ್ಗುಣಪರಿಪೂರ್ಣನು; ತ್ರಿಕಕುಬ್ಧಾಮಾ = ಶ್ವೇತದ್ವೀಪ, ಅನಂತಶಾಸನ, ವೈಕುಂಠಗಳೆಂಬ ಮೂರು ಸ್ಥಾನಗಳಲ್ಲಿರುವನು; ಪವಿತ್ರಃ = ಪಾಪವಿನಾಶಕನು; ಮಂಗಲಂ ಪರಂ = ನಿತ್ಯಮಂಗಲ ರೂಪನು; ಈಶಾನಃ = ಸರ್ವನಿಯಾಮಕನು; ಪ್ರಾಣದಃ = ಸರ್ವಚೇಷ್ಟಕ; ಪ್ರಾಣಃ = ಭೂತಾಂತರ್ಯಾಮೀ; ಜ್ಯೇಷ್ಠಃ = ಸರ್ವೋತ್ತಮನು; ಶ್ರೇಷ್ಠಃ = ಸರ್ವಪ್ರಭುವು; ಪ್ರಜಾಪತಿಃ = ಬ್ರಹ್ಮವಂದ್ಯನು; ಹಿರಣ್ಯಗರ್ಭಃ = ಸುಖಮಯಶರೀರನು, ಬ್ರಹ್ಮಜನಕನು; ಭೂಗರ್ಭಃ = ಜಗತ್ತನ್ನು ಉದರದಲ್ಲಿ ಧರಿಸಿದವನು; ಮಾಧವಃ = ರಮಾಪತಿಯು; ಮಧುಸೂಧನಃ = ಮಧುನಾಮಕ ದೈತ್ಯ ಸಂಹಾರಕನು; ಈಶ್ವರಃ = ಲಕ್ಷ್ಮೀವಾಯುಗಳಿಗೆ ಪ್ರಭುವು; ವಿಕ್ರಮೀ = ಅತ್ಯಂತ ಪರಾಕ್ರಮಿ; ವಿಕ್ರಮಃ = ಗರುಡಗಮನನು; ಕ್ರಮಃ = ಹೆಜ್ಜೆ ಮೂರರಿಂದ ಭೂಮಿಯನ್ನು ಅಳೆದವನು; ಅನುತ್ತಮಃ = ಸರ್ವೋತ್ತಮನು;

ದುರಾಧರ್ಷಃ = ಇತರರಿಂದ ಜಯಿಸಲ್ಪಡುವವನು; ಕೃತಜ್ಞಃ = ಅಲ್ಪಸೇವೆಗೂ ಅಧಿಕ ಫಲವನ್ನು ಕೊಡುವವನು; ಕೃತಿಃ = ಒಳ್ಳೆಯ ಕೆಲಸವನ್ನು ಮಾಡುವವನು; ಆತ್ಮವಾನ್= ಸ್ವರೂಪ ಭೂತಮಹಿಮಾವಂತನು; ಸುರೇಶಃ = ದೇವಪ್ರಭುವು; ಶರಣಂ = ಪರಮಾಶ್ರಯನು; ಶರ್ಮ = ಪರಮಾನಂದರೂಪೀ; ವಿಶ್ವರೇತಾಃ = ಜಗತ್ಕಾರಣನು; ಪ್ರಜಾಭವಃ = ಜನರನ್ನು ಸೃಜಿಸಿದವನು; ಅಹಃ = ಅಹೇಯನು; ಸಂವತ್ಸರಃ = ಬ್ರಹ್ಮಜನಕನು; ವ್ಯಾಲಃ = ಬಂಧನರಹಿತನು; ಪ್ರತ್ಯಯಃ = ಜ್ಞಾನರೂಪೀ; ಸರ್ವದರ್ಶನಃ = ಎಲ್ಲ ಶಾಸ್ತ್ರಗಳಿಗೂ ವಿಷಯನು; ಅಜಃ = ಜನ್ಮರಹಿತನು; ಸರ್ವೇಶ್ವರಃ = ಸರ್ವರಿಗೂ ಪ್ರಭುವು; ಸಿದ್ಧಃ = ನಿತ್ಯಪ್ರಸಿದ್ಧನು; ಸಿದ್ಧಿಃ = ಮೋಕ್ಷ ಪ್ರದನು; ಸರ್ವಾದಿಃ = ಎಲ್ಲರಿಗೂ ಆದಿ; ಅಚ್ಯುತಃ = ನಾಶರಹಿತನು; ವೃಷಾಕಪಿಃ = ಧರ್ಮಫಲಭೋಕ್ತನು; ಅಮೇಯಾತ್ಮಾ = ಅದ್ಭುತಮಹಿಮನು; ಸರ್ವಯೋಗವಿನಿಸ್ಸೃತಃ = ಸರ್ವಶಾಸ್ತ್ರಗಳಿಂದ ಸಾಕಲ್ಯೇನ ತಿಳಿಯಲಾಗದವನು; ವಸುಃ = ಭೂತಗಳಿಗೆ ವಾಸವಾದವನು; ವಸುಮನಾಃ = ದಿವ್ಯಮನಸ್ಸುಳ್ಳವನು; ಸತ್ಯಃ = ಜ್ಞಾನಾನಂದ ರೂಪನು; ಸಮಾತ್ಮಾ = ಪ್ರಾಣಿಗಳಿಗೆ ವಿಷಮನಾಗದಿರುವನು; ಸಮ್ಮಿತಃ = ಅತ್ಯಂತ ಸೂಕ್ಷ್ಮನು; ಸಮಃ = ಯೋಗ್ಯತೆಗೆ ತಕ್ಕಂತೆ ಫಲವನ್ನೀವನು ೧೧೦.

ಅಮೋಘಃ = ವ್ಯರ್ಥವಾಗದ ಪ್ರಸಾದ ಉಳ್ಳವನು; ಪುಂಡರೀಕಾಕ್ಷಃ = ಕಮಲನೇತ್ರನು; ವೃಷಕರ್ಮಾ = ಧರ್ಮಕ್ಕಾಗಿ ಕರ್ಮಮಾಡುವವನು; ವೃಷಾಕೃತಿಃ = ಧರ್ಮಸ್ವರೂಪನು; ರುದ್ರಃ = ಸಂಸಾರ ರೋಗ ನಿವಾರಕನು; ಬಹುಶಿರಾಃ = ಅನೇಕ ಶಿರಸ್ಸುಗಳುಳ್ಳವನು; ಬಭ್ರುಃ = ಪಾಲನಭರಣಕರ್ತಾ; ವಿಶ್ವಯೋನಿಃ = ಜಗಜ್ಜನಕ; ಶುಚಿಶ್ರವಾಃ = ಪವಿತ್ರಕೀರ್ತಿ; ಅಮೃತಃ = ನಾಶರಹಿತನು; ಶಾಶ್ವತಸ್ಥಾಣುಃ = ನಿರ್ವಿಕಾರನು; ವರಾರೋಹಃ = ಶ್ರೇಷ್ಠವಾದ ಜಘನ ಉಳ್ಳವನು; ಮಹಾತಪಾಃ = ಅಗಾಧವಾದ ಶಕ್ತಿ ಉಳ್ಳವನು; ಸರ್ವಗಃ = ಎಲ್ಲ ಕಡೆಯು ವ್ಯಾಪ್ತನು; ಸರ್ವ ವಿದ್ಭಾನುಃ = ಸರ್ವಪ್ರಕಾಶಕನು; ವಿಷ್ವಕ್ಸೇನಃ = ವ್ಯಾಪಿಸಿದ ಸೈನ್ಯ ಉಳ್ಳವನು; ಜನಾರ್ದನಃ = ದುಷ್ಟಜನ ಮರ್ದನನು; ವೇದಃ = ವೇದವೇದ್ಯನು; ವೇದವಿತ್ = ವೇದಾರ್ಥಜ್ಞಾನೀ; ಅವ್ಯಂಗಃ = ಸರ್ವಾಂಗಸುಂದರನು; ವೇದಾಂಗಃ = ವೇದಗಳನ್ನು ಅಂಗಗಳಲ್ಲಿ ಧರಿಸಿದವನು; ವೇದವಿತ್ = ವೇದಗಳಿಂದ ಹೊಂದಲ್ಪಡುವವನು; ಕವಿಃ = ಜ್ಞಾನಿಯು; ಲೋಕಾಧ್ಯಕ್ಷಃ = ಲೋಕಗಳಿಗೆ ಪತಿ; ಸುರಾಧ್ಯಕ್ಷಃ = ಸುರರಿಗೆ ಅಧಿಪತಿ; ಧರ್ಮಾಧ್ಯಕ್ಷಃ = ಧರ್ಮಫಲವನ್ನೀವ ಪ್ರಭುವು; ಕೃತಾಕೃತಃ = ಕಾರ್ಯಕಾರಣ ನಿಯಾಮಕನು; ಚತುರಾತ್ಮಾ = ವಿಶ್ವತೈಜಸ ಪ್ರಾಜ್ಞತುರ್ಯರೆಂಬ ನಾಲ್ಕು ರೂಪದವನು; ಚತುರ್ವ್ಯೂಹಃ = ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಂದ ಪ್ರೇರಕನು; ಚತುರ್ದಂಷ್ಟ್ರಃ = ನಾಲ್ಕು ಕೋರೆಗಳುಳ್ಳ ನಾರಸಿಂಹನು; ಚತುರ್ಭುಜಃ = ನಾಲ್ಕು ಭುಜದವನು (೧೪೦).

ಭ್ರಾಜಿಷ್ಣುಃ = ಪ್ರಕಾಶಮಾನನು; ಭೋಜನಂ = ಅನ್ನಾಂತರ್ಯಾಮಿಯಾಗಿ

ಜೀವಧಾರಕನು ; ಭೋಕ್ತಾ = ಉಂಬುವನಲ್ಲಿದ್ದು ಅನ್ನಪಾಚಕನು ; ಸಹಿಷ್ಣುಃ = ಸಹನಶೀಲನು ; ಜಗದಾದಿಜಃ = ಜಗತ್ತಿಗೆ ಮೊದಲು ಪ್ರಾದುರ್ಭೂತನು ; ಅನಘಃ = ಪಾಪರಹಿತನು ; ವಿಜಯಃ = ವಿಶೇಷ ಜಯಶಾಲಿಯು ; ಜೇತಾ = ಜಯಶೀಲನು ; ವಿಶ್ವಯೋನಿಃ = ಜಗತ್ಕಾರಣನು ; ಪುನರ್ವಸುಃ = ಮತ್ತೆ ಮತ್ತೆ ಧನಪ್ರದನು ; ಉಪೇಂದ್ರಃ = ಇಂದ್ರನ ತಮ್ಮನು ; ವಾಮನಃ = ಅತ್ಯಂತ ಸುಂದರನು ; ಪ್ರಾಂಶುಃ = ಬೆಳೆದು ನಿಂತವನು ; ಅಮೋಘಃ = ಅಕ್ಷಯ ಫಲದಾತನು; ಶುಚಿಃ = ಅತ್ಯಂತ ಪಾವನನು ; ಊರ್ಜಿತಃ = ಬಲಿಶಾಲಿಯು ; ಅತೀಂದ್ರಃ = ಇಂದ್ರನಿಕಿಂತಲೂ ಜ್ಞಾನೈಶ್ವರ್ಯವಂತ ; ಸಂಗ್ರಹಃ = ಪ್ರಳಯದಲ್ಲಿ ಎಲ್ಲವನ್ನೂ ಒಳಗಿಟ್ಟು ಕೊಂಬುವನು ; ಸರ್ಗಃ = ಸೃಷ್ಟಿಕಾರಣನು ; ಧೃತಾತ್ಮಾ = ಮನೋಜಯವಂತನು ; ನಿಯಮಃ = ಸ್ವತಂತ್ರನಿಯಾಮಕನು ; ಯಮಃ = ಪಾಪಿದಂಡನಕರ್ತಾ ; (೧೬೭).

ವೇದ್ಯಃ = ತಿಳಿಯಲು ಯೋಗ್ಯನು ; ಯಮಃ = ಭವರೋಗನಾಶಕನು ; ಸದಾಯೋಗೀ = ಕಪಿಲಾದಿ ರೂಪನು ; ವೀರಹಾ = ವೀರದೈತ್ಯರನ್ನು ಸಂಹರಿಸುವನು; ಮಾಧವಃ = ವಿದ್ಯಾಪತಿಯು ; ಮಧುಃ = ಸುಖರೂಪನು ; ಅತೀಂದ್ರಿಯಃ = ಇಂದ್ರಿಯಗಳಿಗೆ ಗೋಚರನಾಗದವನು ; ಮಹಾಮಾಯಃ = ದಿವ್ಯಸ್ವೇಚ್ಛೆಯುಳ್ಳವನು ; ಮಹೋತ್ಸಾಹಃ = ಪರಮೋತ್ಸಾಹನು ; ಮಹಾಬಲಃ = ದಿವ್ಯಬಲಶಾಲೀ ; ಮಹಾಬುದ್ಧಿಃ = ಬುದ್ಧಿವಂತ ; ಮಹಾವೀರ್ಯಃ = ಸಾಮರ್ಥ್ಯಶಾಲೀ ; ಮಹಾಶಕ್ತಿಃ = ಶಕ್ತಿವಂತ ; ಮಹಾದ್ಯುತಿಃ = ಕಾಂತಿವಂತ ; ಅನಿರ್ದೇಶ್ಯವಪುಃ = ಅಪರಿಮಿತದೇಹ ; ಶ್ರೀಮಾನ್ = ಐಶ್ವರ್ಯವಂತನು ; ಅಮೇಯಾತ್ಮಾ = ಅಪರಿಮಿತ ಸ್ವರೂಪನು ; ಮಹಾದ್ರಿಧೃಕ್ = ಮಂದರಪರ್ವತಧರನು (೧೮೦).

ಮಹೇಷ್ವಾಸಃ = ಶ್ರೇಷ್ಠಧನುರ್ಧರನು ; ಮಹೀಭರ್ತಾ = ಭೂದೇವೀರಮಣನು ; ಶ್ರೀನಿವಾಸಃ = ಲಕ್ಷ್ಮೀದೇವಿಗೆ ಆಶ್ರಯನು ; ಸತಾಂಗತಿಃ = ಸಜ್ಜನಗತಿಪ್ರದನು ; ಅನಿರುದ್ಧಃ = ನಿರೋಧಾದಿಗಳಿಲ್ಲದ ಅವ್ಯಾಹತಗತಿಯು; ಸುರಾನಂದಃ = ದೇವತೆಗಳಿಗೆ ಸುಖಪ್ರದನು ; ಗೋವಿಂದಃ = ವೇದವಾಣೀ ಗೋಚರನು ; ಗೋವಿದಾಂಪತಿಃ = ವೇದವಿದರಿಗೆ ಸ್ವಾಮಿ ; ಮರೀಚಿಃ = ತೇಜೋರೂಪನು ; ಸುಪರ್ಣಃ = ಪೂರ್ಣಾನಂದನು; ಭುಜಗೋತ್ತಮಃ = ಶೇಷನಿಯಾಮಕನು ; ಹಿರಣ್ಯನಾಭಃ = ಸುಖಮಯನಾಭಿ ದೇಶ ಉಳ್ಳವನು ; ಸುತಪಾಃ = ನರನಾರಾಯಣ ರೂಪಿಯಾಗಿ ತಪಗೈಯುವನು ; ಪದ್ಮನಾಭಃ = ಕಮಲನಾಭನು ; ಪ್ರಜಾಪತಿಃ = ಜನರಪತಿ ; ಅಮೃತ್ಯುಃ = ಮರಣರಹಿತನು ; ಸರ್ವದೃಕ್ = ಸರ್ವಜ್ಞನು ; ಸಿಂಹಃ = ದುಷ್ಟಸಿಂಹಕನು; ಸಂಧಾತಾ = ಕರ್ಮಫಲಪ್ರದ ; ಸಂಧಿಮಾನ್ = ಯಜ್ಞಫಲವನ್ನು ಕಾಲದಲ್ಲಿ ಕೊಡುವವನು ; ಸ್ಥಿರಃ = ಏಕಪ್ರಕಾರನು ; ಅಜಃ = ಜನ್ಮರಹಿತನು ; ದುರ್ಮರ್ಷಣಃ = ಸಹಿಸಲಶಕ್ಯವಾದ ಪರಾಕ್ರಮ ಉಳ್ಳವನು ; ಶಾಸ್ತಾ = ಶಾಸಕನು ; ವಿಶ್ರುತಾತ್ಮಾ = ಪ್ರಖ್ಯಾತನು ; ಸುರಾರಿಹಾ = ದೈತ್ಯನಾಶಕನು (೨೦೮).

ದುರಾಧರ್ಷಃ = ಇತರರಿಂದ ಜಯಿಸಲ್ಪಡುವವನು; ಕೃತಜ್ಞಃ = ಅಲ್ಪಸೇವೆಗೂ ಅಧಿಕ ಫಲವನ್ನು ಕೊಡುವವನು; ಕೃತಿಃ = ಒಳ್ಳೆಯ ಕೆಲಸವನ್ನು ಮಾಡುವವನು; ಆತ್ಮವಾನ್= ಸ್ವರೂಪ ಭೂತಮಹಿಮಾವಂತನು; ಸುರೇಶಃ = ದೇವಪ್ರಭುವು; ಶರಣಂ = ಪರಮಾಶ್ರಯನು; ಶರ್ಮ = ಪರಮಾನಂದರೂಪೀ; ವಿಶ್ವರೇತಾಃ = ಜಗತ್ಕಾರಣನು; ಪ್ರಜಾಭವಃ = ಜನರನ್ನು ಸೃಜಿಸಿದವನು; ಅಹಃ = ಅಹೇಯನು; ಸಂವತ್ಸರಃ = ಬ್ರಹ್ಮಜನಕನು; ವ್ಯಾಲಃ = ಬಂಧನರಹಿತನು; ಪ್ರತ್ಯಯಃ = ಜ್ಞಾನರೂಪೀ; ಸರ್ವದರ್ಶನಃ = ಎಲ್ಲ ಶಾಸ್ತ್ರಗಳಿಗೂ ವಿಷಯನು; ಅಜಃ = ಜನ್ಮರಹಿತನು; ಸರ್ವೇಶ್ವರಃ = ಸರ್ವರಿಗೂ ಪ್ರಭುವು; ಸಿದ್ಧಃ = ನಿತ್ಯಪ್ರಸಿದ್ಧನು; ಸಿದ್ಧಿಃ = ಮೋಕ್ಷ ಪ್ರದನು; ಸರ್ವಾದಿಃ = ಎಲ್ಲರಿಗೂ ಆದಿ; ಅಚ್ಯುತಃ = ನಾಶರಹಿತನು; ವೃಷಾಕಪಿಃ = ಧರ್ಮಫಲಭೋಕ್ತನು; ಅಮೇಯಾತ್ಮಾ = ಅದ್ಭುತಮಹಿಮನು; ಸರ್ವಯೋಗವಿನಿಸ್ಸೃತಃ = ಸರ್ವಶಾಸ್ತ್ರಗಳಿಂದ ಸಾಕಲ್ಯೇನ ತಿಳಿಯಲಾಗದವನು; ವಸುಃ = ಭೂತಗಳಿಗೆ ವಾಸವಾದವನು; ವಸುಮನಾಃ = ದಿವ್ಯಮನಸ್ಸುಳ್ಳವನು; ಸತ್ಯಃ = ಜ್ಞಾನಾನಂದ ರೂಪನು; ಸಮಾತ್ಮಾ = ಪ್ರಾಣಿಗಳಿಗೆ ವಿಷಮನಾಗದಿರುವನು; ಸಮ್ಮಿತಃ = ಅತ್ಯಂತ ಸೂಕ್ಷ್ಮನು; ಸಮಃ = ಯೋಗ್ಯತೆಗೆ ತಕ್ಕಂತೆ ಫಲವನ್ನೀವನು ೧೧೦.

ಅಮೋಘಃ = ವ್ಯರ್ಥವಾಗದ ಪ್ರಸಾದ ಉಳ್ಳವನು; ಪುಂಡರೀಕಾಕ್ಷಃ = ಕಮಲನೇತ್ರನು; ವೃಷಕರ್ಮಾ = ಧರ್ಮಕ್ಕಾಗಿ ಕರ್ಮಮಾಡುವವನು; ವೃಷಾಕೃತಿಃ = ಧರ್ಮಸ್ವರೂಪನು; ರುದ್ರಃ = ಸಂಸಾರ ರೋಗ ನಿವಾರಕನು; ಬಹುಶಿರಾಃ = ಅನೇಕ ಶಿರಸ್ಸುಗಳುಳ್ಳವನು; ಬಭ್ರುಃ = ಪಾಲನಭರಣಕರ್ತಾ; ವಿಶ್ವಯೋನಿಃ = ಜಗಜ್ಜನಕ; ಶುಚಿಶ್ರವಾಃ = ಪವಿತ್ರಕೀರ್ತಿ; ಅಮೃತಃ = ನಾಶರಹಿತನು; ಶಾಶ್ವತಸ್ಥಾಣುಃ = ನಿರ್ವಿಕಾರನು; ವರಾರೋಹಃ = ಶ್ರೇಷ್ಠವಾದ ಜಘನ ಉಳ್ಳವನು; ಮಹಾತಪಾಃ = ಅಗಾಧವಾದ ಶಕ್ತಿ ಉಳ್ಳವನು; ಸರ್ವಗಃ = ಎಲ್ಲ ಕಡೆಯು ವ್ಯಾಪ್ತನು; ಸರ್ವ ವಿದ್ಭಾನುಃ = ಸರ್ವಪ್ರಕಾಶಕನು; ವಿಷ್ವಕ್ಸೇನಃ = ವ್ಯಾಪಿಸಿದ ಸೈನ್ಯ ಉಳ್ಳವನು; ಜನಾರ್ದನಃ = ದುಷ್ಟಜನ ಮರ್ದನನು; ವೇದಃ = ವೇದವೇದ್ಯನು; ವೇದವಿತ್ = ವೇದಾರ್ಥಜ್ಞಾನೀ; ಅವ್ಯಂಗಃ = ಸರ್ವಾಂಗಸುಂದರನು; ವೇದಾಂಗಃ = ವೇದಗಳನ್ನು ಅಂಗಗಳಲ್ಲಿ ಧರಿಸಿದವನು; ವೇದವಿತ್ = ವೇದಗಳಿಂದ ಹೊಂದಲ್ಪಡುವವನು; ಕವಿಃ = ಜ್ಞಾನಿಯು; ಲೋಕಾಧ್ಯಕ್ಷಃ = ಲೋಕಗಳಿಗೆ ಪತಿ; ಸುರಾಧ್ಯಕ್ಷಃ = ಸುರರಿಗೆ ಅಧಿಪತಿ; ಧರ್ಮಾಧ್ಯಕ್ಷಃ = ಧರ್ಮಫಲವನ್ನೀವ ಪ್ರಭುವು; ಕೃತಾಕೃತಃ = ಕಾರ್ಯಕಾರಣ ನಿಯಾಮಕನು; ಚತುರಾತ್ಮಾ = ವಿಶ್ವತೈಜಸ ಪ್ರಾಜ್ಞತುರ್ಯರೆಂಬ ನಾಲ್ಕು ರೂಪದವನು; ಚತುರ್ವ್ಯೂಹಃ = ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಂದ ಪ್ರೇರಕನು; ಚತುರ್ದಂಷ್ಟ್ರಃ = ನಾಲ್ಕು ಕೋರೆಗಳುಳ್ಳ ನಾರಸಿಂಹನು; ಚತುರ್ಭುಜಃ = ನಾಲ್ಕು ಭುಜದವನು (೧೪೦).

ಭ್ರಾಜಿಷ್ಣುಃ = ಪ್ರಕಾಶಮಾನನು; ಭೋಜನಂ = ಅನ್ನಾಂತರ್ಯಾಮಿಯಾಗಿ

ಜೀವಧಾರಕನು ; ಭೋಕ್ತಾ = ಉಂಬುವನಲ್ಲಿದ್ದು ಅನ್ನಪಾಚಕನು ; ಸಹಿಷ್ಣುಃ = ಸಹನಶೀಲನು ; ಜಗದಾದಿಜಃ = ಜಗತ್ತಿಗೆ ಮೊದಲು ಪ್ರಾದುರ್ಭೂತನು ; ಅನಘಃ = ಪಾಪರಹಿತನು ; ವಿಜಯಃ = ವಿಶೇಷ ಜಯಶಾಲಿಯು ; ಜೇತಾ = ಜಯಶೀಲನು ; ವಿಶ್ವಯೋನಿಃ = ಜಗತ್ಕಾರಣನು ; ಪುನರ್ವಸುಃ = ಮತ್ತೆ ಮತ್ತೆ ಧನಪ್ರದನು ; ಉಪೇಂದ್ರಃ = ಇಂದ್ರನ ತಮ್ಮನು ; ವಾಮನಃ = ಅತ್ಯಂತ ಸುಂದರನು ; ಪ್ರಾಂಶುಃ = ಬೆಳೆದು ನಿಂತವನು ; ಅಮೋಘಃ = ಅಕ್ಷಯ ಫಲದಾತನು; ಶುಚಿಃ = ಅತ್ಯಂತ ಪಾವನನು ; ಊರ್ಜಿತಃ = ಬಲಿಶಾಲಿಯು ; ಅತೀಂದ್ರಃ = ಇಂದ್ರನಿಕಿಂತಲೂ ಜ್ಞಾನೈಶ್ವರ್ಯವಂತ ; ಸಂಗ್ರಹಃ = ಪ್ರಳಯದಲ್ಲಿ ಎಲ್ಲವನ್ನೂ ಒಳಗಿಟ್ಟು ಕೊಂಬುವನು ; ಸರ್ಗಃ = ಸೃಷ್ಟಿಕಾರಣನು ; ಧೃತಾತ್ಮಾ = ಮನೋಜಯವಂತನು ; ನಿಯಮಃ = ಸ್ವತಂತ್ರನಿಯಾಮಕನು ; ಯಮಃ = ಪಾಪಿದಂಡನಕರ್ತಾ ; (೧೬೭).

ವೇದ್ಯಃ = ತಿಳಿಯಲು ಯೋಗ್ಯನು ; ಯಮಃ = ಭವರೋಗನಾಶಕನು ; ಸದಾಯೋಗೀ = ಕಪಿಲಾದಿ ರೂಪನು ; ವೀರಹಾ = ವೀರದೈತ್ಯರನ್ನು ಸಂಹರಿಸುವನು; ಮಾಧವಃ = ವಿದ್ಯಾಪತಿಯು ; ಮಧುಃ = ಸುಖರೂಪನು ; ಅತೀಂದ್ರಿಯಃ = ಇಂದ್ರಿಯಗಳಿಗೆ ಗೋಚರನಾಗದವನು ; ಮಹಾಮಾಯಃ = ದಿವ್ಯಸ್ವೇಚ್ಛೆಯುಳ್ಳವನು ; ಮಹೋತ್ಸಾಹಃ = ಪರಮೋತ್ಸಾಹನು ; ಮಹಾಬಲಃ = ದಿವ್ಯಬಲಶಾಲೀ ; ಮಹಾಬುದ್ಧಿಃ = ಬುದ್ಧಿವಂತ ; ಮಹಾವೀರ್ಯಃ = ಸಾಮರ್ಥ್ಯಶಾಲೀ ; ಮಹಾಶಕ್ತಿಃ = ಶಕ್ತಿವಂತ ; ಮಹಾದ್ಯುತಿಃ = ಕಾಂತಿವಂತ ; ಅನಿರ್ದೇಶ್ಯವಪುಃ = ಅಪರಿಮಿತದೇಹ ; ಶ್ರೀಮಾನ್ = ಐಶ್ವರ್ಯವಂತನು ; ಅಮೇಯಾತ್ಮಾ = ಅಪರಿಮಿತ ಸ್ವರೂಪನು ; ಮಹಾದ್ರಿಧೃಕ್ = ಮಂದರಪರ್ವತಧರನು (೧೮೦).

ಮಹೇಷ್ವಾಸಃ = ಶ್ರೇಷ್ಠಧನುರ್ಧನನು ; ಮಹೀಭರ್ತಾ = ಭೂದೇವೀರಮಣನು ; ಶ್ರೀನಿವಾಸಃ = ಲಕ್ಷ್ಮೀದೇವಿಗೆ ಆಶ್ರಯನು ; ಸತಾಂಗತಿಃ = ಸಜ್ಜನಗತಿಪ್ರದನು ; ಅನಿರುದ್ಧಃ = ನಿರೋಧಾದಿಗಳಿಲ್ಲದ ಅವ್ಯಾಹತಗತಿಯು; ಸುರಾನಂದಃ = ದೇವತೆಗಳಿಗೆ ಸುಖಪ್ರದನು ; ಗೋವಿಂದಃ = ವೇದವಾಣೀ ಗೋಚರನು ; ಗೋವಿದಾಂಪತಿಃ = ವೇದವಿದರಿಗೆ ಸ್ವಾಮಿ ; ಮರೀಚಿಃ = ತೇಜೋರೂಪನು ; ಸುಪರ್ಣಃ = ಪೂರ್ಣಾನಂದನು; ಭುಜಗೋತ್ತಮಃ = ಶೇಷನಿಯಾಮಕನು ; ಹಿರಣ್ಯನಾಭಃ = ಸುಖಮಯನಾಭಿ ದೇಶ ಉಳ್ಳವನು ; ಸುತಪಾಃ = ನರನಾರಾಯಣ ರೂಪಿಯಾಗಿ ತಪಗೈಯುವನು ; ಪದ್ಮನಾಭಃ = ಕಮಲನಾಭನು ; ಪ್ರಜಾಪತಿಃ = ಜನರಪತಿ ; ಅಮೃತ್ಯುಃ = ಮರಣರಹಿತನು ; ಸರ್ವದೃಕ್ = ಸರ್ವಜ್ಞನು ; ಸಿಂಹಃ = ದುಷ್ಟಸಿಂಹಕನು; ಸಂಧಾತಾ = ಕರ್ಮಫಲಪ್ರದ ; ಸಂಧಿಮಾನ್ = ಯಜ್ಞಫಲವನ್ನು ಕಾಲದಲ್ಲಿ ಕೊಡುವವನು ; ಸ್ಥಿರಃ = ಶಶ್ವದೇಕಪ್ರಕಾರನು ; ಅಜಃ = ಜನ್ಮರಹಿತನು ; ದುರ್ಮರ್ಷಣಃ = ಸಹಿಸಲಶಕ್ಯವಾದ ಪರಾಕ್ರಮ ಉಳ್ಳವನು ; ಶಾಸ್ತಾ = ಶಾಸಕನು ; ವಿಶ್ರುತಾತ್ಮಾ = ಪ್ರಖ್ಯಾತನು ; ಸುರಾರಿಹಾ = ದೈತ್ಯನಾಶಕನು (೨೦೮).

ಗುರುಃ = ಜ್ಞಾನಪ್ರದನು ; ಗುರುತಮಃ = ಬ್ರಹ್ಮಾದಿ ಲೋಕಗುರುಗಳಿಗೂ ಗುರುವು ; ಧಾಮಾ = ಸರ್ವಾಶ್ರಯನು ; ಸತ್ಯಃ = ಜಗತ್ಸತ್ಯತ್ವಪ್ರದನು ; ಸತ್ಯಪರಾಕ್ರಮಃ = ಮಹಾವೀರನು ; ನಿಮಿಷಃ = ಯೋಗನಿದ್ರಾಸಕ್ತನು ; ಅನಿಮಿಷಃ = ಅಜ್ಞಾನರೂಪ ನಿದ್ರಾರಹಿತನು ; ಸ್ರಗ್ವೀ = ವೈಜಯಂತೀಮಾಲಾಧಾರಿ ; ವಾಚಸ್ಪತಿರುದಾರಧೀಃ = ವಿದ್ಯಾಧಿಪ ಮಹೋದಾರನು ; ಅಗ್ರಣೀಃ = ಮುಮುಕ್ಷುಗಳನ್ನು ಕರೆದೊಯ್ಯುವವನು ; ಗ್ರಾಮಣೀಃ = ಭೂತಗಳಿಗೆ ಒಡೆಯನು ; ಶ್ರೀಮಾನ್ = ಶ್ರೀಮಂತನು ; ನ್ಯಾಯಃ = ನಿಷ್ಪಕ್ಷಪಾತಿಯು ; ನೇತಾ = ನಡೆಸುವವನು ; ಸಮೀರಣಃ = ಮುಖ್ಯಪ್ರಾಣನಿಗೂ ಪ್ರೇರಕನು ; ಸಹಸ್ರಮೂರ್ಧಾ = ಅನಂತ ಶಿರಸ್ಸುಗಳುಳ್ಳವನು ; ವಿಶ್ವಾತ್ಮಾ = ಜಗದಂತರ್ಯಾಮೀ ; ಸಹಸ್ರಾಕ್ಷಃ = ಅನಂತ ನೇತ್ರನು ; ಸಹಸ್ರಪಾತ್ = ಅನಂತಪಾದನು ; ಆವರ್ತನಃ = ಸಂಸಾರಚಕ್ರಪ್ರವರ್ತಕನು ; ನಿವೃತ್ತಾತ್ಮಾ = ಸ್ವಯಂ ಸಂಸಾರ ಬಂಧ ರಹಿತನು ; ಸಂವೃತಃ = ದುಷ್ಟರಿಗೆ ಕಾಣಬರದವನು ; ಸಂಪ್ರಮರ್ದನಃ = ದುಷ್ಟಮರ್ದಕನು ; ಅಹಃ ಸಂವರ್ತಕಃ = ದಿನವೇ ಮೊದಲಾದ ಕಾಲವನ್ನು ನಡೆಸುವವನು ; ವಹ್ನಿಃ = ಅಗ್ನಿನಿಯಾಮಕನು, ಹವಿಸ್ಸನ್ನು ವಹಿಸಿಕೊಡುವವನು ; ಅನಿಲಃ = ಮುಖ್ಯಪ್ರಾಣಾಶ್ರಯನು ; ಧರಣೀಧರಃ = ಕೂರ್ಮನು ; ಸುಪ್ರಸಾದಃ = ಪರಮಾನುಗ್ರಹಕರ್ತನು ; ಪ್ರಸನ್ನಾತ್ಮಾ = ಪ್ರಸನ್ನಚಿತ್ತನು ; ವಿಶ್ವಧೃಕ್ = ಜಗತ್ತನ್ನು ಧರಿಸಿರುವವನು ; ವಿಶ್ವಭುಕ್ = ಜಗತ್ತನ್ನು ನುಂಗುವವನು ; ವಿಭುಃ = ವಿವಿಧ ರೂಪನು ; (೨೪೦).

ಸತ್ಕರ್ತ್ತಾ = ನಿರ್ವಿಕಾರನಾಗಿರುವ ಜಗತ್ಕರ್ತನು ; ಸತ್ಕೃತಃ = ಪೂಜಾರ್ಹನು ; ಸಾಧುಃ = ನಿರ್ದೋಷನು ; ಜಹ್ನುಃ = ಇತರರ ದೋಷಗಳನ್ನು ನಾಶಮಾಡುವವನು ; ನಾರಾಯಣಃ = ಗುಣಪೂರ್ಣನು ; ನರಃ = ನಾಶರಹಿತನು ; ಅಸಂಖ್ಯೇಯಃ = ಎಣಿಸಲಾಗದ ಗುಣರೂಪಗಳುಳ್ಳವನು ; ಅಪ್ರಮೇಯಾತ್ಮಾ = ತಿಳಿಯಲಾಗದ ಮಹಾಮಹಿಮನು ; ವಿಶಿಷ್ಟಃ = ಶ್ರೇಷ್ಠನು ; ಶಿಷ್ಟಕೃತ್ = ಶತ್ರುಗಳನ್ನು ಶಾಸಿಸುವವನು ; ಶುಚಿಃ = ಪವಿತ್ರಮನು ; ಸಿದ್ಧಾರ್ಥಃ = ಪ್ರಾಪ್ತಸಕಲಕಾಮನು ; ಸಿದ್ಧಸಂಕಲ್ಪಃ = ಇಚ್ಛಾಮಾತ್ರದಿಂದ ಬೇಕಾದುದನ್ನು ನೀಡುವವನು ; ಸಿದ್ಧಿದಃ = ಮೋಕ್ಷಪ್ರದನು ; ಸಿದ್ಧಿಸಾಧನಃ = ಮೋಕ್ಷಸಾಧನ ಜ್ಞಾನದಾತನು ; ವೃಷಾಹೀ ಧರ್ಮರಕ್ಷಕನು ; ವೃಷಭಃ = ಜ್ಞಾನಾದಿಕಾಮಿತಪ್ರದ ; ವಿಷ್ಣುಃ = ವ್ಯಾಪ್ತನು ; ವೃಷಪರ್ವಾ = ಧರ್ಮಿಷ್ಠರಿಗೆ ಶುಭಪ್ರದ ; ವೃಷೋದರಃ = ಧರ್ಮಕ್ಕೆ ಆಶ್ರಯನು ; ವರ್ಧನಃ = ಭಕ್ತರ ಇಷ್ಟವೃದ್ಧಿ ಕಾರಣನು ; ವರ್ಧಮಾನಃ = ಸದಾವರ್ಧನ ಶೀಲನು ; ವಿವಿಕ್ತಃ = ಒಳಗಿದ್ದೂ, ಪ್ರಕೃತಿಲೇಪವಿಲ್ಲದವನು ; ಶ್ರುತಿಸಾಗರಃ = ಅನಂತವೇದವೇದ್ಯನು ; ಸುಭುಜಃ = ಸುಂದರಬಾಹುಯುಕ್ತನು ; ದುರ್ಧರಃ = ಇತರರಿಂದ ಧರಿಸಲು ಬಾರದವನು ; ವಾಗ್ಮೀ = ವೇದವಾಣಿಯ ಉಚ್ಚಾರಕನು ; ಮಹೇಂದ್ರಃ = ಪರಮೈಶ್ವರ್ಯವಂತನು ; ವಸುದಃ = ಐಶ್ವರ್ಯವನ್ನು ಕೊಡುವವನು ; ವಸುಃ = ಐಶ್ವರ್ಯಸ್ವರೂಪನು ; ನೈಕರೂಪಃ = ಬಹುರೂಪಿಯು ;

ಬೃಹದ್ರೂಪಃ = ಬಹುದೊಡ್ಡರೂಪಗಳುಳ್ಳವನು; ಶಿಪಿವಿಷ್ಟಃ = ಕಿರಣಗಳಲ್ಲಿ ವ್ಯಾಪ್ತನು; ಪ್ರಕಾಶನಃ = ಪ್ರಕಾಶಪ್ರದನು; (೨೭೪).

ಓಜಸ್ತೇಜೋದ್ಯುತಿಧರಃ = ಸಹನ, ಪ್ರಕಾಶ, ವೀರ್ಯಗಳುಳ್ಳವನು; ಪ್ರಕಾಶಾತ್ಮಾ = ಪ್ರಕಾಶ ಸ್ವರೂಪನು; ಪ್ರತಾಪನಃ = ಉಷ್ಣಗುಣಪ್ರದನು; ಋದ್ಧಃ = ಅತಿವೃದ್ಧವಾದ ಜ್ಞಾನ ಸುಖಗಳುಳ್ಳವನು; ಸ್ಪಷ್ಟಾಕ್ಷರಃ = ಶಬ್ದಗಳಿಗೆ ಪರಮ ಮುಖ್ಯಾರ್ಥನು; ಮಂತ್ರಃ = ವೇದ ಮಂತ್ರವೇದ್ಯನು; ಚಂದ್ರಾಂಶುಃ = ಆಹ್ಲಾದಕರ ಕಿರಣಗಳುಳ್ಳವನು; ಭಾಸ್ಕರದ್ಯುತಿಃ = ಸೂರ್ಯಕಾಂತಿ ಮೂಲಕಾರಣನು; ಅಮೃತಾಂಶೂದ್ಭವಃ = ಚಂದ್ರಮಂಡಲಗತನು; ಭಾನುಃ = ಪ್ರಕಾಶಕನು; ಶಶಿಬಿಂದುಃ = ಕೋಟಿಚಂದ್ರಸಮನು; ಸುರೇಶ್ವರಃ = ದೇವಾಧಿಪತಿಯು; ಔಷಧಂ = ಜೀವಧಾರಕನು; ಜಗತಃಸೇತುಃ = ಸಂಸಾರ ಸಾಗರವನ್ನು ದಾಟಿಸುವವನು; ಸತ್ಯಧರ್ಮ ಪರಾಕ್ರಮಃ = ಅನಂತ ಗುಣ ಪರಾಕ್ರಮನು; ಭೂತಭವ್ಯನಾಥಃ = ತ್ರಿಕಾಲದ ಜಗತ್ತಿಗೆ ಒಡೆಯನು; ಪವನಃ = ಪಾವನ ಪಾಲಕನು; ಪಾವನಃ = ಪವಿತ್ರನು; ಅನಲಃ = ಭಕ್ತರಲ್ಲಿ ಕರುಣೆ ತೋರುವಾಗ ಅಲಂಬುದ್ಧಿ ಇಲ್ಲದವನು; ಕಾಮಹಾ = ದುಷ್ಟಕಾಮನಾಶಕನು; ಕಾಮಕೃತ್ = ಅವರವರ ಯೋಗ್ಯತೆಯಂತೆ ಕಾಮಿತಗಳನ್ನು ಕೊಡುವವನು; ಕಾಂತಃ = ಮನೋಹರನು; ಕಾಮಃ = ಬೇಡಲ್ಪಡಲು ಯೋಗ್ಯನು; ಕಾಮಪ್ರದಃ = ಸುಜನರ ಅಭೀಷ್ಟಪೂರಕನು; ಪ್ರಭುಃ = ಸುಖಮಾತ್ರ ಭೋಕ್ತನು; ಯುಗಾದಿಕೃತ್ = ಕಾಲಾವಯವಗಳನ್ನು ಮಾಡಿದವನು; ಯುಗಾವರ್ತಃ = ಯುಗ ಪ್ರವರ್ತಕನು (೩೦೧).

ನೈಕಮಾಯಃ = ವಿಚಿತ್ರ ಶಕ್ತಿವಂತನು; ಮಹಾಶನಃ = ಜಗತ್ತನ್ನು ತಿಂದು ಬಿಡುವನು; ಅದೃಶ್ಯಃ = ಇಂದ್ರಿಯಾಗಮ್ಯನು; ವ್ಯಕ್ತರೂಪಃ = ಜ್ಞಾನಿಗಳಿಗೆ ಸ್ವೇಚ್ಛೆಯಿಂದ ಗೋಚರನು; ಸಹಸ್ರಜಿತ್ = ಸಾವಿರಾರು ಶತ್ರುಗಳನ್ನು ಗೆದ್ದವನು; ಅನಂತಜಿತ್ = ಅನಂತಶತ್ರು ಸಂಹಾರಕನೂ; ಇಷ್ಟಃ = ಸರ್ವಪ್ರಿಯನು; ವಿಶಿಷ್ಟಃ = ಶ್ರೇಷ್ಠನು; ಶಿಷ್ಟೇಷ್ಟಃ = ಸುಜನರಿಗೆ ಇಷ್ಟಪ್ರದನು; ಶಿಖಂಡೀ = ನವಿಲು ಗರಿಯಿಂದ' ಅಲಂಕೃತನು; ನಹುಷಃ = ಬಂಧನಕರ್ತಾ; ವೃಷಃ = ಧರ್ಮ ಪಾಲಕನು; ಕ್ರೋಧಹಾ = ಕೋಪನಾಶಕ; ಕ್ರೋಧಕೃತ್ ಕರ್ತಾ = ಸಿಟ್ಟಾಗುವವರನ್ನು ಸೀಳುವವನು; ವಿಶ್ವಬಾಹುಃ = ಜಗತ್ತನ್ನು ಬಾಹುಗಳಲ್ಲಿ ನಿಲ್ಲಿಸಿರುವವನು; ಮಹೀ ಧರಃ = ವರಾಹನು; ಅಚ್ಯುತಃ = ನಾಶರಹಿತನು; ಪ್ರಥಿತಃ = ಪ್ರಸಿದ್ಧನು; ಪ್ರಾಣಃ = ಚೇಷ್ಟಕನು; ಪ್ರಾಣದಃ = ಪ್ರಾಣವನ್ನೀಯುವವನು; ವಾಸವಾನುಜಃ = ಇಂದ್ರನ ತಮ್ಮನು; ಅಪಾಂನಿಧಿಃ = ಸಮುದ್ರದಲ್ಲಿಯ ನಿಧಿಯು; ಅಧಿಷ್ಠಾನಂ = ಸರ್ವಾಶ್ರಯನು; ಅಪ್ರಮತ್ತಃ = ಸದಾ ಜಾಗ್ರತನು; ಪ್ರತಿಷ್ಠಿತಃ = ಬಹು ಕೀರ್ತಿ ಶಾಲಿಯು; ಸ್ಕಂದಃ = ಜಲವನ್ನು ಹರಿಸುವವನು; ಸ್ಕಂದಧರಃ = ಧರ್ಮಧಾರಕನು; ಧುರ್ಯಃ = ಬಲು ಭಾರಸಹನು; ವರದಃ = ವರಪ್ರದನು; ವಾಯುವಾಹನಃ = ವಾಯುದೇವನ ದ್ವಾರ ಸಂಚರಿಸುವವನು; ವಾಸುದೇವಃ = ಸರ್ವಭೂತ ನಿವಾಸಿ

ಕ್ರೀಡಾದಿ ಗುಣವಿಶಿಷ್ಟನು ; ಬೃಹದ್ಭಾನುಃ = ಪ್ರಕಾಶಬಹುಳನು ; ಆದಿದೇವಃ = ದೇವತೆಗಳಿಗೆ ಆದಿಕಾರಣನು; ಪುರಂದರಃ = ಶತ್ರುಪುರನಾಶಕನು (೩೩೫).

ಅಶೋಕಃ = ಶೋಕರಹಿತನು; ತಾರಣಃ = ಸಂಸಾರ ತಾರಕನು; ತಾರಃ = ಓಂ ಎಂಬ ಪ್ರಣವವೇದ್ಯನು; ಶೂರಃ = ಪರಾಕ್ರಮವಂತನು; ಶೌರಿಃ = ಶೂರ ಸೇನನ ವಂಶದಲ್ಲಿ ಜನಿಸಿದವನು ; ಜನೇಶ್ವರಃ = ಜೀವಪ್ರಭುವು ; ಅನುಕೂಲಃ = ಹಿತಂಕರನು; ಶತಾವರ್ತಃ = ನೂರಾರು ಸಲ ಅವತರಿಸಿದವನು; ಪದ್ಮೀ = ಪದ್ಮವನ್ನು ಧರಿಸಿದವನು ; ಪದ್ಮನಿಭೇಕ್ಷಣಃ = ಕಮಲನೇತ್ರನು ; ಪದ್ಮನಾಭಃ = ಪದ್ಮವನ್ನು ನಾಭಿಯಿಂದ ಪಡೆದವನು; ಅರವಿಂದಾಕ್ಷಃ = ಅಜ್ಞಾನನಾಶಕನು; ಪದ್ಮಗರ್ಭಃ = ಬ್ರಹ್ಮ ಜನಕನು ; ಶರೀರಭೃತ್ = ಶರೀರಪೋಷಕ ಅನ್ನರೂಪಿಯು ; ಮಹರ್ದ್ಧಿಃ = ಪರಮೈಶ್ವರ್ಯವಂತನು ; ಋದ್ಧಃ = ವ್ಯಾಪಿಸಿ ತುಂಬಿದವನು ; ವೃದ್ಧಾತ್ಮಾ = ಬ್ರಹ್ಮಾಂತರ್ಯಾಮಿಯು; ಮಹಾಕ್ಷಃ = ದಿವ್ಯ ಸ್ವರೂಪೇಂದ್ರಿಯವಂತನು; ಗರುಡಧ್ವಜಃ = ಗರುಡನಿಗೆ ಧ್ವಜಸ್ಥಾನವನ್ನಿತ್ತವನು; ಅತುಲಃ = ಸಮಾನರಹಿತನು; ಶರಭಃ = ಪ್ರಳಯ ಸಮುದ್ರದಲ್ಲಿ ಪ್ರಕಾಶಿಸುವವನು; ಭೀಮಃ = ಪಾಪಿಭಯಂಕರನು; ಸಮಯಜ್ಞಃ = ತಾನಿತ್ತ ವರದಂತೆ ನಡೆಯುವವನು; ಹವಿರ್ಹರಿಃ = ಹವಿಸ್ಸನ್ನು ಕೊಂಡೊಯ್ಯುವವನು; ಸರ್ವಲಕ್ಷಣ ಲಕ್ಷಣ್ಯಃ = ಎಲ್ಲ ಶುಭ ಲಕ್ಷಣಗಳಿಗೆ ಲಕ್ಷ್ಯನು; ಲಕ್ಷ್ಮೀವಾನ್ = ಸಂಪದ್ಭರಿತನು; ಸಮಿತಿಂಜಯಃ = ಯುದ್ಧದಲ್ಲಿ ಸೋಲಿಲ್ಲದವನು (೩೬೨).

ವಿಕ್ಷರಃ = ಚನ್ನಾಗಿ ಇಷ್ಟಪ್ರದನು; ರೋಹಿತಃ = ಇಚ್ಛಾಮಾತ್ರದಿಂದ ಹಿತ ವನ್ನೀವವನು; ಮಾರ್ಗಃ = ಜ್ಞಾನಿಗಳಿಗೆ ಗಮ್ಯನು; ಹೇತುಃ = ಕಾರಣಗಳಿಗೆ ಕಾರಣನು ; ದಾಮೋದಃ = ಹಗ್ಗದಿಂದ ನಡುವಿನಲ್ಲಿ ಕಟ್ಟಲ್ಪಟ್ಟವನು ; ಸಹಃ = ಸಹನಶೀಲನು ; ಮಹೀಧರಃ = ಭೂಮಿಯನ್ನು ಧರಿಸಿದವನು ; ಮಹಾಭಾಗಃ = ಭಾಗ್ಯವಂತನು; ವೇಗವಾನ್ = ಅತ್ಯದ್ಭುತ ವೇಗವಂತನು; ಅಮಿತಾಶನಃ = ಪ್ರಪಂಚವನ್ನೇ ನುಂಗಿಬಿಡುವವನು ; ಉದ್ಭವಃ = ಸೃಷ್ಟಿಕರ್ತನು; ಕ್ಷೋಭಣಃ = ಕ್ಲೇಶನಿವಾರಕನು ; ದೇವಃ = ಕ್ರೀಡಾದಿಗುಣ ವಿಶಿಷ್ಟನು; ಶ್ರೀಗರ್ಭಃ = ಶ್ರೀದೇವಿಯಲ್ಲಿ ಜಗತ್ತನ್ನಿಡು ವವನು; ಪರಮೇಶ್ವರಃ = ರಮಾರಮಣನು; ಕರಣಂ = ಸಾಧನಗಳಿಗೆ ಶಕ್ತಿಪ್ರದನು; ಕಾರಣಂ = ಕಾರಣ ಶಕ್ತಿಪ್ರದನು; ಕರ್ತಾ = ಕರ್ತೃ ಶಕ್ತಿಪ್ರದನು; ವಿಕರ್ತಾ = ತನಗೆ ಇನ್ನೊಬ್ಬ ಕರ್ತೃ ಇಲ್ಲದವನು; ಗಹನಃ = ಅತಿರಹಸ್ಯ ಸಾಮರ್ಥ್ಯನು; ಗುಹಃ = ಹೃದಯ ಗುಹೆಯಲ್ಲಿರುವವನು; ವ್ಯವಸಾಯಃ = ನಿಶ್ಚಯಜ್ಞಾನ ರೂಪಿಯು; ವ್ಯವಸ್ಥಾನಃ= ವರ್ಣಾಶ್ರಮವನ್ನು ವಿಂಗಡಿಸಿ ನಿಲ್ಲಿಸಿದವನು; ಸಂಸ್ಥಾನಃ = ಎಲ್ಲರಿಗೂ ಆಶ್ರಯನು; ಸ್ಥಾನದಃ = ವೈಕುಂಠಾದಿ ಸ್ಥಾನಗಳನ್ನು ಕೊಡುವವನು; ಧ್ರುವಃ = ಶಾಶ್ವತನು; ಪರರ್ಧಿಃ = ಅತ್ಯಂತ ವಿಭವನು; ಪರಮ ಸ್ಪಷ್ಟಃ = ಸರ್ವತ್ರ ಭಕ್ತಗೋಚರನು; ತುಷ್ಟಃ = ತೃಪ್ತಿರೂಪನು; ಪುಷ್ಟಃ = ಪುಷ್ಟಿಪ್ರದನು; ಶುಭೇಕ್ಷಣಃ = ದರ್ಶನ ಮಾತ್ರದಿಂದ ಮಂಗಳಪ್ರದನು ; ರಾಮಃ = ಆನಂದಮಯನು ; ವಿರಾಮಃ = ವಿಶ್ರಾಂತಿ

ಪ್ರದನು; ವಿರಜಃ = ಪಾಪರಹಿತನು; ಮಾರ್ಗ್ಗಃ = ಮುಕ್ತಿಮಾರ್ಗದರ್ಶಕನು; ನೇಯಃ = ಪ್ರೇರಕನು; ನಯಃ = ನಡೆಸುವವನು; ಅನಯಃ = ಮುಖ್ಯ ಪ್ರಾಣ ಸ್ವಾಮಿಯು; ವೀರಃ = ಸಮರ್ಥನು; ಶಕ್ತಿಮತಾಂ ಶ್ರೇಷ್ಠಃ = ಬ್ರಹ್ಮಾದಿ ಸಮರ್ಥರಿಗೆ ಶಕ್ತಿಪ್ರದನು; ಧರ್ಮಃ = ಅಧಃಪತನದಿಂದ ಉದ್ಧರಿಸುವವನು; ಧರ್ಮವಿದುತ್ತಮಃ = ಧರ್ಮವನ್ನರಿತ ಸರ್ವಜ್ಞನು; (೪೦೪).

ವೈಕುಂಠಃ = ಕುಂಠಿತವಾಗದ ಗತಿ ಉಳ್ಳವನು; ಪುರುಷಃ = ಪೂರ್ಣ ಷಡ್ಗುಣನು; ಪ್ರಾಣಃ = ಚೇಷ್ಟಕನು; ಪ್ರಾಣದಃ = ಆಪದ್ರಕ್ಷಕನು; ಪ್ರಣವಃ = ನಮಿಸಿದವರನ್ನು ಕಾಪಾಡುವವನು; ಪೃಥುಃ = ಅತ್ಯಂತ ವಿಶಾಲನು; ಹಿರಣ್ಯ ಗರ್ಭಃ = ಬ್ರಹ್ಮಾಂತರ್ಯಾಮಿಯು; ಶತ್ರುಘ್ನಃ = ಶತ್ರುನಾಶಕನು; ವ್ಯಾಪ್ತಃ = ಸುಜನರಿಗೆ ಆಪ್ತನು; ವಾಯುಃ = ಜ್ಞಾನಾಯುಃಪ್ರದನು; ಅಧೋಕ್ಷಜಃ = ಇಂದ್ರಿಯ ಜಯವಂತರಿಗೆ ಕಾಣುವನು; ಋತುಃ = ಜ್ಞಾನ ಮಾತ್ರ ಲಭ್ಯನು; ಸುದರ್ಶನಃ = ಸುಂದರರೂಪನು; ಕಾಲಃ = ದುಷ್ಟಚ್ಛೇದಕನು; ಪರಮೇಷ್ಠೀ = ಪರಮಪ್ರಿಯನು; ಪರಿಗ್ರಹಃ = ಭಕ್ತರನ್ನು ಕೈಬಿಡದವನು; ಉಗ್ರಃ = ರುದ್ರನನ್ನೂ ನುಂಗಿಬಿಡುವ ನೃಸಿಂಹನು; ಸಂವತ್ಸರಃ = ಸುಜನರನ್ನು ಕರುವಿನಂತೆ ಕಾಪಾಡುವವನು; ದಕ್ಷಃ = ಸಮರ್ಥನು; ವಿಶ್ರಾಮಃ = ಶ್ರಮರಹಿತನು; ವಿಶ್ವದಕ್ಷಿಣಃ = ಜಗತ್ತನ್ನೇ ದಕ್ಷಿಣೆಯಾಗಿ ಪೊಂದಿದವನು; ವಿಸ್ತಾರಃ = ವಿಶಾಲರೂಪನು; ಸ್ಥಾವರ ಸ್ಥಾಣುಃ = ಸ್ಥಿತಿಯಲ್ಲಿ ಅಚಂಚಲನು; ಪ್ರಮಾಣಂ = ಪ್ರಮಾಣರೂಪೀ; ಬೀಜಮವ್ಯಯಂ = ನಾಶರಹಿತ ನಿಮಿತ್ತ ಕಾರಣನು; ಅರ್ಥಃ = ಬೇಡಲ್ಪಡುವವನು; ಅನರ್ಥಃ = ಪ್ರಯೋಜನರಹಿತನು; ಮಹಾಕೋಶಃ = ಪಂಚಕೋಶ ನಿಯಾಮಕನು; ಮಹಾಭೋಗಃ = ಪೂರ್ಣಸುಖನು; ಮಹಾಧನಃ = ಶ್ರೀಮಂತನು; ಅನಿರ್ವಿಣ್ಣಃ = ಸಾಕಲ್ಯೇನ ತಿಳಿಯಲಾಗದವನು; ಸ್ಥವಿಷ್ಠಃ = ಅತಿ ಸ್ಥೂಲರೂಪನು; ಭೂಃ = ಪೂರ್ಣನು; ಧರ್ಮಯೂಪಃ = ಧರ್ಮವನ್ನು ನಿಲ್ಲಿಸುವವನು; ಮಹಾ ಮಖಃ = ಯಜ್ಞಫಲಪ್ರದನು; ನಕ್ಷತ್ರನೇಮಿಃ = ಕಾಲಚಕ್ರಪ್ರವರ್ತಕನು; ನಕ್ಷತ್ರೀ = ಪರಶುರಾಮನು, ಶಿಂಶುಮಾರನು; ಕ್ಷಮಃ = ದಕ್ಷನು; ಕ್ಷಾಮಃ = ಸಹಿಸುವವನು; ಸಮೀಹನಃ = ಉತ್ಕೃಷ್ಟವಾದ ಚೇಷ್ಟೆಗಳುಳ್ಳವನು (೪೪೪).

ಯಜ್ಞಃ = ಯಜ್ಞಸಾರ ಭೋಕ್ತನು; ಈಜ್ಯಃ = ಪೂಜಾರ್ಹನು; ಮಹೇಜ್ಯಃ = ಬ್ರಹ್ಮಪೂಜಿತನು; ಕ್ರತುಃ = ಜ್ಞಾನರೂಪನು; ಸತ್ರಂ = ಸುಜನಪಾಲಕನು; ಸತಾಂಗತಿಃ = ಸಜ್ಜನರಿಗೆ ಗತಿಪ್ರದನು; ಸರ್ವದರ್ಶೀ = ಸರ್ವಜ್ಞನು; ವಿಮುಕ್ತಾತ್ಮಾ = ನಿತ್ಯಮುಕ್ತಳಿಗೆ ರಮೆಗೆ ಒಡೆಯನು; ಸರ್ವಜ್ಞಃ = ಜೀವರನ್ನೂ ತನ್ನನ್ನೂ ಚನ್ನಾಗಿ ಅರಿತಿರುವವನು; ಜ್ಞಾನಮುತ್ತಮಂ = ಉತ್ತಮ ಜ್ಞಾನಸ್ವರೂಪನು; ಸುವ್ರತಃ = ಸಜ್ಜನ ರಕ್ಷೆಯೇ ವ್ರತವಾಗಿ ಉಳ್ಳವನು; ಸುಮುಖಃ = ಭಜಪರಿಗೆ ಪ್ರಸನ್ನನು; ಸೂಕ್ಷ್ಮಃ = ಅತ್ಯಂತ ಅಣುರೂಪನು; ಸುಘೋಷಃ = ಪಾಂಚಜನ್ಯದ ಇಂಪಾದ ಶಬ್ದವನ್ನು ಮಾಡುವವನು; ಸುಖದಃ = ಸುಖಪ್ರದನು; ಸುಹೃತ್ = ಅನಿಮಿತ್ತ ಬಂಧುವು;

ಮನೋಹರಃ = ಸುಂದರತಮನು; ಜಿತಕ್ರೋಧಃ = ಕ್ರೋಧಾದಿ ದೋಷರಹಿತನು; ವೀರಬಾಹುಃ = ಕ್ಷತ್ರಿಯರಿಗೆ ಉತ್ಪತ್ತಿಯನ್ನಿತ್ತ ಬಾಹುಗಳುಳ್ಳವನು; ವಿದಾರಣಃ = ದುಷ್ಟನಾಶಕನು; (೪೬೪).

ಸ್ವಾಪನಃ = ಪ್ರಳಯೋದಕಶಯನನು; ಸ್ವವಶಃ = ಅನ್ಯರಧೀನನಾಗದವನು; ನೈಕಾತ್ಮಾ = ಬಹುರೂಪನು; ನೈಕಕರ್ಮಕೃತಃ = ಅನೇಕ ಸತ್ಕಾರ್ಯ ಕರ್ತಾ; ವತ್ಸರಃ = ಕರುಗಳಲ್ಲಿ ಪ್ರೀತಿಯುಕ್ತನು; ವತ್ಸಲಃ = ಭಕ್ತರಲ್ಲಿ ಪ್ರೀತಿಯುಕ್ತನು; ವತ್ಸೀ = ಗೋರಕ್ಷಕನು; ರತ್ನಗರ್ಭಃ = ಅನಂತ ಗುಣನಿಧಿಯು; ಧನೇಶ್ವರಃ = ಧನಸ್ವಾಮೀ; ಧರ್ಮಗುಪ್ = ಧರ್ಮರಕ್ಷಕನು; ಧರ್ಮಕೃತ್ = ಧರ್ಮವನ್ನು ಮಾಡಿ ತೋರಿಸುವವನು; ಧರ್ಮೀ = ಯಮಧರ್ಮ ನಿಯಾಮಕನು; ಸತ್ = ಕಾರ್ಯ ಸ್ವಾಮಿಯು; ಅಸತ್ = ಕಾರಣಸ್ವಾಮಿಯು; ಕ್ಷರಂ = ನಿತ್ಯದಾನ ಶೀಲನು; ಅಕ್ಷರಂ = ಅವಿನಾಶಿಯು; ಅವಿಜ್ಞಾತಾ = ಸಾಕಲ್ಯೇನ ತಿಳಿಯಲಾಗದವನು; ಸಹಸ್ರಾಂಶುಃ = ಸೂರ್ಯ ಪ್ರಕಾಶಕನು; ವಿಧಾತಾ = ವಿಶೇಷ ಧಾರಕನು; ಕೃತಲಕ್ಷಣಃ = ಪೂರ್ಣ ಶುಭಲಕ್ಷಣಯುಕ್ತನು (೪೮೫).

ಗಭಸ್ತಿನೇಮಿಃ = ಕಿರಣಗಳಿಂದ ವ್ಯಾಪಿಸುವವನು; ಸತ್ವಸ್ಥಃ = ಜೀವ ನಿಯಾಮಕನು; ಸಿಂಹಃ = ದುಷ್ಟ ಹಿಂಸಕನು; ಭೂತ ಮಹೇಶ್ವರಃ = ಸಕಲಜೀವರ ಏಕೈಕ ಪ್ರಭುವು; ಆದಿದೇವಃ = ದೇವತೆಗಳಿಗೆ ಆದಿಯು; ಮಹಾದೇವಃ = ದೇವಶ್ರೇಷ್ಠನು; ದೇವೇಶಃ = ದೇವ ಸುಖಪ್ರದನು; ದೇವಭೃದ್ಗುರುಃ = ದೇವ ಗುರುವಾದ ಬ್ರಹ್ಮನಿಗೆ ಗುರುವು; ಉತ್ತರಃ = ಉದ್ಧಾರಕರ್ತನು; ಗೋಪತಿಃ = ಇಂದ್ರಿಯ ಸ್ವಾಮಿಯು; ಗೋಪ್ತಾ ರಕ್ಷಕನು; ಜ್ಞಾನಗಮ್ಯಃ = ಜ್ಞಾನದಿಂದ ಹೊಂದಲ್ಪಡುವವನು; ಪುರಾತನಃ = ಶರೀರಗಳಿಂದ ಶರೀರಕ್ಕೆ ಜೀವನೊಡಗೂಡಿ ಹೋಗುವ ಪ್ರಭುವು; ಶರೀರ ಭೂತ ಭೃತ್ = ಶರೀರಗಳನ್ನು ಧರಿಸಿರುವವನು; ಭೋಕ್ತಾ = ಪರಮಾನಂದ ಭೋಜನನು; ಕಪೀಂದ್ರಃ= ಶ್ರೀರಾಮನು; ಭೂರಿದಕ್ಷಿಣಃ = ಯಜ್ಞವನ್ನು ಮಾಡಿ, ಸರ್ವಸ್ವದಾನ ವಿತ್ತವನು (೫೦೨).

ಸೋಮಪಃ = ರುದ್ರ ಚಂದ್ರ ಪರಿಪಾಲಕನು; ಅಮೃತಪಃ = ದೇವತೆಗಳಿಗೆ ಅಮೃತಪಾನ ಮಾಡಿಸಿದವನು; ಸೋಮಃ = ಚಂದ್ರನಿಯಾಮಕನು; ಪುರುಜಿತ್ = ಮಹಾಜಯಶಾಲಿ; ಪುರುಸತ್ತಮಃ = ಅತ್ಯಂತ ಗುಣವಂತನು; ವಿನಯಃ = ವಿನಯವಂತರಿಗೆ ಹಿತನು; ಜಯಃ = ಜಯಶೀಲನು; ಸತ್ಯಸಂಧಃ = ಸತ್ಯದಲ್ಲಿ ನಿಂತವನು; ದಾಶಾರ್ಹಃ = ಸೇವಿಸಲು ಅರ್ಹನು; ಸಾತ್ವತಾಂ ಪತಿಃ = ಭಕ್ತ ಪಾಲಕನು. (೫೧೨).

ಜೀವಃ = ಜೀವನದಾತಾ; ವಿನಯಿತಾಸಾಕ್ಷೀ = ವಿನಯಿಯನ್ನು ನೋಡಿ ಬಹುಮಾನಿಸುವವನು; ಮುಕುಂದಃ = ಮೋಕ್ಷಪ್ರದ; ಅಮಿತ ವಿಕ್ರಮಃ = ಅತ್ಯಂತ ಶೂರನು; ಅಂಭೋನಿಧಿಃ = ಗಂಭೀರನು; ಅನಂತಾತ್ಮಾ = ಶೇಷನಿಯಾಮಕನು;

ಮಹೋದಧಿಶಯಃ = ಸಮುದ್ರಶಯನನು; ಅಂತಕಃ = ಪ್ರಳಯಕರ್ತಾ; ಅಜಃ = ಜನ್ಮರಹಿತನು; ಮಹಾರ್ಹಃ = ಅತಿ ಪೂಜನೀಯನು; ಸ್ವಾಭಾವ್ಯಃ = ಸ್ವಭಾವಕ್ಕೆ ತಕ್ಕ ಫಲವನ್ನೀವನು; ಜಿತಾಮಿತ್ರಃ = ಶತ್ರುಮರ್ದನನು; ಪ್ರಮೋದನಃ = ಆನಂದಪ್ರದನು; ಆನಂದಃ = ಆನಂದರೂಪನು; ನಂದನಃ = ಸುಖವನ್ನೀವವನು; ನಂದಃ = ಸಂತಸ ಪಡುವವನು; ಸತ್ಯಧರ್ಮಾ = ಅವಿನಾಶಿ ಧರ್ಮಪಾಲಕನು; ತ್ರಿವಿಕ್ರಮಃ = ಮೂರು ಪಾದಗಳನ್ನೆತ್ತಿ ಅಳೆದವನು; ಮಹರ್ಷಿ ಕಪಿಲಾಚಾರ್ಯಃ = ಕಪಿಲಾವತಾರನು; ಕೃತಜ್ಞಃ= ಭಕ್ತರ ಸೇವೆಯನ್ನು ಮರೆಯದವನು; ಮೇದಿನೀಪತಿಃ = ಭೂರಮಣನು; ತ್ರಿಪದಃ = ಮೂರು ಸ್ಥಾನಗಳಲ್ಲಿರುವವನು; ತ್ರಿದಶಾಧ್ಯಕ್ಷಃ = ಮೂರು ಅವಸ್ಥೆಗಳಿಗೆ ಪ್ರೇರಕನು; ಮಹಾಶೃಂಗಃ = ದೊಡ್ಡ ಕೋಡಿನ ಮತ್ಸ್ಯನು; ಕೃತಾಂತಕೃತ್ = ಮೃತ್ಯುವಿಗೂ ಮೃತ್ಯುವು; ಮಹಾ ವರಾಹಃ = ಯಜ್ಞವರಾಹನು; ಗೋವಿಂದಃ = ವೇದವೇದ್ಯನು; ಸುಷೇಣಃ = ದೊಡ್ಡಸೇನೆಯುಳ್ಳವನು; ಕನಕಾಂಗದೀ = ಸುವರ್ಣ ಬಾಹುಪುರಿಯನ್ನು ಧರಿಸಿದವನು; ಗುಹ್ಯಃ = ವೇದದಲ್ಲಿ ಅಡಗಿರುವ ಮಹಾಮಹಿಮನು; ಗಭೀರಃ = ತನ್ನ ಜ್ಞಾನಬಲಗಳ ಆಳತೆ ತೋರದವನು; ಗಹನಃ = ಹೃದಯ ಗುಹಾಸ್ಥಿತನು; ಗುಪ್ತಃ = ಸರ್ವತ್ರ ಇದ್ದೂ ಕಾಣಬರದವನು; ಚಕ್ರಗದಾಧರಃ = ಚಕ್ರ ಗದೆಗಳನ್ನು ಧರಿಸಿದವನು (೫೪೬).

ವೇಧಾಃ = ಧಾರಣಕರ್ತಾ; ಸ್ವಾಂಗಃ = ಸುಂದರಾಂಗನು; ಅಜಿತಃ = ಪರಾಜಯರಹಿತನು; ಕೃಷ್ಣಃ = ನೀಲವರ್ಣನು; ದೃಢಃ = ಅಚಂಚಲನು; ಸಂಕರ್ಷಣಃ = ಪ್ರಜಾತತಿಯನ್ನು ತನ್ನ ಕಡೆಗೆ ಸೆಳೆಯುವವನು; ಅಚ್ಯುತಃ = ನಾಶರಹಿತನು; ವರುಣಃ = ಶ್ರೇಷ್ಠ ಸುಖರೂಪನು; ವಾರುಣಃ = ವರುಣಾಂತರ್ಯಾಮಿ; ವೃಕ್ಷಃ = ಬೆಳೆದು ನಿಂತಿರುವವನು; ಪುಷ್ಕರಾಕ್ಷಃ = ಕಮಲ ನಯನನು; ಮಹಾ ಮನಾಃ = ಉದಾರ ಮನಸ್ಕನು; ಭಗವಾನ್ = ಐಶ್ವರ್ಯ, ವೀರ್ಯ ಯಶಃ, ಶ್ರೀ ಜ್ಞಾನ, ವಿಜ್ಞಾನಗಳೆಂಬ ಆರು ಗುಣಗಳಿಂದ ಪೂರ್ಣನು; ಭಗಹಾ = ದಾನವರ ಸಂಪತ್ತನ್ನು ಕಸಿಯುವವನು; ನಂದೀ= ಆನಂದರೂಪನು; ವನಮಾಲೀ = ವೈಜಯಂತೀಧರನು; ಹಲಾಯುಧಃ = ನೇಗಿಲನ್ನು ಧರಿಸಿದವನು; ಆದಿತ್ಯಃ = ಅನಾದಿಯಿಂದಲು ಸುಖಿಯು; ಜ್ಯೋತಿರಾದಿತ್ಯಃ = ಸೂರ್ಯಪ್ರಕಾಶಕನು; ಸಹಿಷ್ಣುಃ = ಸಹನಶೀಲನು; ಗತಿಸತ್ತಮಃ = ಉತ್ತಮ ಗತಿಪ್ರದನು (೫೬೬).

ಸುಧನ್ವಾ = ಶಾರ್ಙ್ಗಧನುರ್ಧರನು; ಖಂಡಪರಶುಃ = ಪರಶುರಾಮನು; ದಾರುಣಃ = ದುಷ್ಟಭಯಂಕರನು; ದ್ರವಿಣಪ್ರದಃ = ಭಕ್ತರಿಗೆ ಧನಪ್ರದನು; ದಿವಸ್ಪೃಕ್ = ಎಲ್ಲೆಡೆ ವ್ಯಾಪ್ತನು; ಸರ್ವದೃಗ್ ವ್ಯಾಸಃ = ಸರ್ವಜ್ಞ ವೇದವ್ಯಾಸನು; ವಾಚಸ್ಪತಿರಯೋನಿಜಃ = ಜನನವಿಲ್ಲದ ವೇದಾದಿ ವಿದ್ಯಾಪತಿಯು; ತ್ರಿಸಾಮಾ = ರಥಂತರ, ಬೃಹತ್, ಉಕ್ಥಗಳೆಂಬ ಮೂರು ಸಾಮಗಳಿಂದ ಸುತ್ತನು; ಸಾಮಗಃ = ಸಾಮವೇದದಿಂದ ತಿಳಿಯಲ್ಪಡುವನು; ಸಾಮ = ಸರ್ವತ್ರ ಸ್ವಗತ ಭೇದವಿಲ್ಲ

ದಿರುವವನು; ನಿರ್ವಾಣಂ = ಮೋಕ್ಷಪ್ರದನು; ಭೇಷಜಂ = ಸಂಸಾರ ರೋಗ ನಿವಾರಕನು; ಭಿಷಕ್ = ಅಶ್ವಿನೀದ್ವಯನಿಯಾಮಕನು; ಸನ್ಯಾಸಕೃತ್ = ಕಾಮಾದಿ ವರ್ಜಿತನು; ಶಮಃ = ಆನಂದರೂಪನು; ಶಾಂತಃ = ಸುಖವನ್ನೀವನು; ನಿಷ್ಠಾ = ಆಶ್ರಯದಾತನು; ಶಾಂತಿಃ = ಪ್ರಸನ್ನನು; ಪರಾಯಣಃ = ಜೀವರಿಗೆ ಮುಖ್ಯಾಶ್ರಯನು; ಶುಭಾಂಗಃ = ದಿವ್ಯ ಶರೀರನು; ಶಾಂತಿದಃ = ಮನಶ್ಶುದ್ಧಿಯನ್ನೀವವನು; ಸ್ರಷ್ಟಾ = ಸೃಜನಕರ್ತಾ; ಕುಮುದಃ = ಜಗತ್ತಿಗೆ ಆನಂದಪ್ರದನು; ಕುವಲೇಶಯಃ = ಭೂವಲಯದಲ್ಲಿ ವ್ಯಾಪ್ತನು; ಗೋಹಿತಃ = ಭೂದೇವೀ ರಕ್ಷಕನು; ಗೋಪತಿಃ = ಗೋವುಗಳ ಪಾಲಕನು; ಗೋಪ್ತಾ = ಭಕ್ತರಕ್ಷಕನು; ವೃಷಭಾಕ್ಷಃ = ಧರ್ಮಪ್ರಕಾಶಕನು; ವೃಷಪ್ರಿಯಃ = ಧರ್ಮಪ್ರಿಯನು (೫೯).

ಅನಿವರ್ತೀ = ಧರ್ಮಪಾಲನೆಯಿಂದ ವಿಮುಖನಾಗದವನು; ನಿವೃತಾತ್ಮಾ = ಆನಂದ ದೇಹನು; ಸಂಕ್ಷೇಪ್ತಾ = ಸೂಕ್ಷ್ಮವನ್ನಾಗಿಸಿ ಒಳಗಿಡುವವನು; ಕ್ಷೇಮಕೃತ್ = ಪಾಪ ಪರಿರಕ್ಷಕನು; ಶಿವಃ = ಮಂಗಳನು; ಶ್ರೀವತ್ಸವಕ್ಷಾಃ = ಶ್ರೀವತ್ಸವುಳ್ಳ ಎದೆಯುಳ್ಳವನು; ಶ್ರೀವಾಸಃ = ಲಕ್ಷ್ಮೀನಿಲಯನು; ಶ್ರೀಪತಿಃ = ಲಕ್ಷ್ಮೀಪತಿ; ಶ್ರೀಮತಾಂವರಃ = ಐಶ್ವರ್ಯವಂತರಲ್ಲಿ ಶ್ರೇಷ್ಠನು; ಶ್ರೀದಃ = ಭಾಗ್ಯಪ್ರದನು; ಶ್ರೀಶಃ = ರಮಾವಲ್ಲಭನು; ಶ್ರೀನಿವಾಸಃ = ಕಾಂತಿಪುಂಜನು; ಶ್ರೀನಿಧಿಃ = ತೇಜೋವಂತನು; ಶ್ರೀವಿಭಾವನಃ = ಭಾಗ್ಯಪ್ರದನು; ಶ್ರೀಧರಃ = ಯಶೋವಂತನು; ಶ್ರೀಕರಃ = ಭಕ್ತರಿಗೆ ಸಂಪತ್‌ಪ್ರದನು; ಶ್ರೇಯಃ = ಪರಲೋಕ ಸುಖದನು; ಶ್ರೀಮಾನ್ = ಲಕ್ಷ್ಮೀವಿಯೋಗವಿಲ್ಲದವನು; ಲೋಕತ್ರಯಾಶ್ರಯಃ = ಮೂರು ಲೋಕದವರಿಗೆ ಆಧಾರನು; ಸ್ವಕ್ಷಃ = ಅಪ್ರಾಕೃತ ದಿವ್ಯೇಂದ್ರಿಯನು; ಸ್ವಂಗಃ = ದಿವ್ಯದೇಹನು; ಶತಾನಂದಃ = ಅನಂತಸುಖನು; ನಂದಿಃ = ಆನಂದಪ್ರದನು; ಜ್ಯೋತಿರ್ಗಣೇಶ್ವರಃ = ಸೂರ್ಯಾದಿಗಳಿಗೆ ಪ್ರಭುವು; ವಿಜಿತಾತ್ಮಾ = ಜೀವರನ್ನು ವಶದಲ್ಲಿಟ್ಟವನು; ವಿಧೇಯಾತ್ಮಾ = ಲೋಕಸಂಗ್ರಹಕ್ಕಾಗಿ ವಿಧಿಯಂತೆ ನಡೆಯುವವನು; ಸತ್ಕೀರ್ತಿಃ = ಯಶೋವಿಶಾಲನು; ಛಿನ್ನಸಂಶಯಃ = ಸುಜನ ಸಂಶಯ ನಿವಾರಕ; ಉದೀರ್ಣಃ = ಗುಣಪೂರ್ಣನು; ಸರ್ವತಶ್ಚಕ್ಷುಃ = ಎಲ್ಲ ಕಡೆ ನೋಡುವ ಅನಂತನೇತ್ರನು; ಅನೀಶಃ = ಅನ್ಯ ಪ್ರಭುವಿಲ್ಲದವನು; ಶಾಶ್ವತಃ ಸ್ಥಿರಃ = ನಿರ್ವಿಕಾರ ನಿತ್ಯನು; ಭೂಶಯಃ = ಭೂದೇವೀ ರಮಣನು; ಭೂಷಣಃ = ಲೋಕಾಲಂಕಾರನು; ಭೂತಿಃ = ಐಶ್ವರ್ಯರೂಪನು; ವಿಶೋಕಃ = ಶೋಕರಹಿತನು; ಶೋಕನಾಶನಃ = ಭಕ್ತ ದುಃಖಪರಿಹಾರಕನು;

ಅರ್ಚಿಷ್ಮಾನ್ = ತೇಜೋಮಯನು; ಅರ್ಚಿತಃ = ಸಕಲಪೂಜಿತನು; ಕುಂಭಃ = ಭೂಲೋಕ ಭರ್ತಾ; ವಿಶುದ್ಧಾತ್ಮಾ = ಪರಿಶುದ್ಧಸ್ವಭಾವನು; ವಿಶೋಧನಃ = ಶುದ್ಧಿಪ್ರದನು; ಅನಿರುದ್ಧಃ = ಸಂಸಾರಬಂಧವನ್ನು ಬಿಡಿಸುವವನು; ಅಪ್ರತಿರಥಃ = ಸರಿವೀರರಿಲ್ಲದವನು; ಪ್ರದ್ಯುಮ್ನಃ = ಅತಿಪ್ರಕಾಶವಂತನು; ಅಮಿತವಿಕ್ರಮಃ = ಪರಾಕ್ರಮ ಬಹುಲನು; ಕಾಲನೇಮಿನಿಹಾ = ಕಾಲನೇಮಿ ಸಂಹಾರಕನು; ವೀರಃ = ಗರುಡ

ಗಮನನು; ಶೌರಿಃ = ಶೂರವಂಶಜಾತನು; ಶೂರಜನೇಶ್ವರಃ = ಶೂರರಲ್ಲಿ ಶ್ರೇಷ್ಠನು; ತ್ರಿಲೋಕಾತ್ಮಾ = ಮೂರು ಲೋಕಗಳ ಒಡೆಯನು; ತ್ರಿಲೋಕೇಶಃ = ಮೂರು ಲೋಕದವರನ್ನು ನಿಯಮಿಸುವನು; ಕೇಶವಃ = ಉತ್ತಮ ಕೇಶವಂತನು; ಕೇಶಿಹಾ = ಕೇಶಿದೈತ್ಯ ಸಂಹಾರಕನು; ಹರಿಃ = ಪಾಪಹರಣನು; ಕಾಮದೇವಃ = ಮನ್ಮಥಪ್ರಭುವು; ಕಾಮಪಾಲಃ = ಕಾಮಿತಪ್ರದನು; ಕಾಮೀ = ಸತ್ಯಕಾಮನು; ಕಾಂತಃ = ಭುವನಮೋಹನ; ಕೃತಾಗಮಃ = ಸಚ್ಛಾಸ್ತ್ರ ಪ್ರವರ್ತಕನು; ಅನಿರ್ದೇಶ್ಯ ವಪುಃ = ಅಪರಿಚ್ಛಿನ್ನ ಶರೀರನು; ವಿಷ್ಣುಃ = ವ್ಯಾಪ್ತನು; ವೀರಃ = ಸರ್ವಪ್ರೇರಕನು; ಅನಂತಃ = ಗುಣಪರಿಪೂರ್ಣನು; ಧನಂಜಯಃ = ಧನವನ್ನು ತಂದು ಕೊಡುವವನು (೬೬೦).

ಬ್ರಹ್ಮಣ್ಯಃ = ಬ್ರಾಹ್ಮಣರಕ್ಷಕನು; ಬ್ರಹ್ಮಕೃತ್ = ಬ್ರಹ್ಮನನ್ನು ಸೃಜಿಸಿದವನು; ಬ್ರಹ್ಮಾ = ಭಕ್ತರ ಆನಂದವೃದ್ಧಿ ಕಾರಣನು; ಬ್ರಹ್ಮ = ಗುಣಪೂರ್ಣನು; ಬ್ರಹ್ಮವಿವರ್ಧನಃ = ವೇದವಿಭಾಗ ಮಾಡಿದ ಶ್ರೀವ್ಯಾಸನು; ಬ್ರಹ್ಮವಿತ್ = ವೇದಾರ್ಥವನ್ನರಿತವನು; ಬ್ರಾಹ್ಮಣಃ = ವೇದಗಮ್ಯನು; ಬ್ರಹ್ಮೀ = ತಪೋಮಯನು; ಬ್ರಹ್ಮಜ್ಞಃ = ತನ್ನನ್ನು ತಾನು ಅರಿತವನು; ಬ್ರಾಹ್ಮಣಪ್ರಿಯಃ = ವಿಪ್ರಪ್ರಿಯನು; ಮಹಾಕ್ರಮಃ = ಪಾದವಿಕ್ಷೇಪದಿಂದ ಲೋಕಗಳನ್ನು ಅಳೆದವನು; ಮಹಾಕರ್ಮಾ = ಶ್ರೇಷ್ಠಕರ್ಮನು; ಮಹಾತೇಜಾ = ಅತಿತೇಜಸ್ವಿಯು; ಮಹೋರಗಃ = ಶೇಷ ಸ್ವಾಮಿಯು; ಮಹಾಕ್ರತುಃ = ದಿವ್ಯಜ್ಞಾನಿ; ಮಹಾಯಜ್ವಾ = ಸಕಲ ಯಜ್ಞ ಫಲಪ್ರದನು; ಮಹಾಯಜ್ಞಃ = ಯಜ್ಞಫಲಭೋಕ್ತನು; ಮಹಾಹವಿಃ = ಹವಿರಾದಿ ಗತನು; ಸ್ತವ್ಯಃ = ಸ್ತುತಿಗೆ ಯೋಗ್ಯನು; ಸ್ತವಪ್ರಿಯಃ = ಭಕ್ತರ ಸ್ತುತಿಗೆ ಮೆಚ್ಚುವವನು; ಸ್ತೋತ್ರಂ = ಸ್ತುತಿಪ್ರತಿಪಾದ್ಯನು; ಸ್ತುತಿಃ = ನುತಿರೂಪನು; ಸ್ತೋತಾ =ಸ್ತುತಿಸುವರಲ್ಲಿ ನಿಯಮಕನು; ರಣಪ್ರಿಯಃ = ಭೂಭಾರವನ್ನಿಳುಹಲು ಯುದ್ಧವನ್ನು ನಡೆಸುವವನು; ಪೂರ್ಣಃ = ಗುಣಪೂರ್ಣನು; ಪೂರಯಿತಾ = ಭಕ್ತರಿಗೆ ಬೇಕಾದುದನ್ನು ಕೊಡುವವನು; ಪುಣ್ಯಃ = ಪಾವನದೇಹನು; ಪುಣ್ಯಕೀರ್ತಿಃ = ಉತ್ತಮ ಕೀರ್ತಿ ಯುಕ್ತನು; ಅನಾಮಯಃ = ಸರ್ವರೋಗ ನಿವಾರಕನು; ಮನೋಜವಃ = ಬಹುವೇಗಗಮನನು; (೬೯೦).

ತೀರ್ಥಕರಃ = ಶಾಸ್ತ್ರಕರ್ತನು; ವಸುರೇತಾಃ = ಬಂಗಾರವೇ ವೀರ್ಯವಾಗಿ ಉಳ್ಳವನು; ವಸುಪ್ರದಃ = ಸುಖಪ್ರದನು; ವಸುಪ್ರದಃ = ಐಶ್ವರ್ಯದಾತ; ವಾಸುದೇವಃ = ವಸುದೇವನಲ್ಲಿ ಅವತರಿಸಿದವನು; ವಸುಃ = ಎಲ್ಲರನ್ನೂ ಧರಿಸಿದವನು; ವಸುಮನಾಃ = ಭೀಷ್ಮನನ್ನು ಉದ್ಧರಿಸುವ ಮನಸ್ಸುಳ್ಳವನು; ಹವಿಃ = ಆಜ್ಯಾದಿ ರಸ ಪ್ರೇರಕನು; ಸದ್ಗತಿಃ = ಸುಜನ ಗತಿಪ್ರದನು; ಸತ್ಕೃತಿಃ = ಸಮೀಚೀನ ಕರ್ಮ ಮಾಡುವವನು; ಸತ್ತಾ = ಶಶ್ವದೇಕಪ್ರಕಾರನು; ಸದ್ಭೂತಿಃ = ಸುಜನರಿಗೆ ಸಂಪತ್ಪ್ರದನು; ಸತ್ಪರಾಯಣಃ = ಮುಖ್ಯಪ್ರಾಣನಿಗೆ ಆಶ್ರಯನು; ಶೂರಸೇನಃ = ಶೂರವರರ ಸೇನೆ

ಉಳ್ಳವನು; ಯದುಶ್ರೇಷ್ಠಃ = ಪ್ರಯತ್ನಶೀಲರಿಗೆ ಸದ್ಗತಿಪ್ರದ; ಸನ್ನಿವಾಸಃ = ಸುಜನ ಸನ್ನಿಧಿ; ಸುಯಾಮುನಃ = ಯಮುನಾವಿಹಾರೀ; ವಿಶ್ವಮೂರ್ತಿಃ = ಜಗತ್ತೇ ಪ್ರತಿಮೆಯಾಗಿ ಉಳ್ಳವನು; ಮಹಾಮೂರ್ತಿಃ = ಅಪರಿಚ್ಛಿನ್ನ ಮಂಗಳ ವಿಗ್ರಹನು; ದೀಪ್ತಮೂರ್ತಿಃ = ಪ್ರಕಾಶಮಾನನು; ಅಮೂರ್ತಿಮಾನ್ = ಪ್ರಾಕೃತ ಶರೀರರಹಿತನು; ಅನೇಕ ಮೂರ್ತಿ = ಅನೇಕ ರೂಪಗಳಿಂದ ಅವತರಿಸಿದವನು; ಅವ್ಯಕ್ತಃ = ಇಂದ್ರಿಯಾದಿಗಳಿಗೆ ಸಿಗದವನು; ಶತಮೂರ್ತಿ = ಅನಂತರೂಪಿ; ಶತಾನನಃ = ಅನಂತಮುಖನು (೭೨೪).

ಏಕಃ = ಪ್ರಧಾನ ದೇವನು; ನೈಕಃ = ಅನಂತ ಅವತಾರಗಳಲ್ಲಿ ಭೇದವಿಲ್ಲದವನು; ಸವಃ = ಜ್ಞಾನರೂಪನು; ಕಃ = ಸುಖರೂಪನು; ಕಿಂ = ವಿಚಾರ ವಿಷಯನು; ಯತ್ = ನಿಯಮನ ಕರ್ತನು; ತತ್ = ವ್ಯಾಪ್ತನು; ಪದಮನುತ್ತಮಂ = ಪ್ರಾಪ್ಯತಮನು; ಲೋಕಬಂಧುಃ = ಸುಜನೋಪಕಾರೀ; ಲೋಕನಾಥಃ = ಸರ್ವಲೋಕ ಪ್ರಭುವು; ಮಾಧವಃ = ಜ್ಞಾನಗಮ್ಯನು; ಭಕ್ತವತ್ಸಲಃ = ಭಕ್ತಪ್ರಿಯ; ಸುವರ್ಣವರ್ಣಃ = ಬಂಗಾರದಂತೆ ಹೊಳೆವ ಅಂಗಗಳುಳ್ಳವನು; ವರಾಂಗಃ = ಶ್ರೇಷ್ಠ ದಿವ್ಯಶರೀರನು; ಚಂದನಾಂಗದೀ = ಆಹ್ಲಾದಕರ ಭುಜಕೀರ್ತಿ ಉಳ್ಳವನು; ವೀರಹಾ = ದೈತ್ಯವೀರನಾಶಕನು; ವಿಷಮಃ = ಸಮಾನಾಧಿಕ ರಹಿತನು; ಶೂನ್ಯಃ = ಇತರ ಸುಖವನ್ನು ಕಡಿಮೆಯಾಗಿಯೇ ಇಟ್ಟಿರುವವನು; ಧೃತಾಶೀಃ = ಇತರರ ಆಶೀಸ್ಸುಗಳನ್ನು ಬಯಸುವವನು; ಅಚಲಃ = ಸ್ಥಿರಪ್ರಜ್ಞನು; ಚಲಃ = ಸದಾಸಂಚಾರ ಶೀಲನು; (೭೪೬)

ಅಮಾನೀ = ದುರಭಿಮಾನವರ್ಜಿತನು; ಮಾನದಃ = ಇತರರ ಯೋಗ್ಯತೆಯನ್ನರಿತವನು; ಮಾನ್ಯಃ = ಶ್ರೀ ಬ್ರಹ್ಮರುದ್ರಾದಿ ಪೂಜ್ಯನು; ಲೋಕಸ್ವಾಮೀ = ಸರ್ವಲೋಕೇಶನು; ತ್ರಿಲೋಕಧೃಕ್ = ತ್ರಿಲೋಕಗಳನ್ನು ಧರಿಸಿರುವವನು; ಸುಮೇಧಾಃ = ದಿವ್ಯ ಬುದ್ಧಿವಂತನು; ಮೇಧಜಃ = ಯಜ್ಞಗಳಲ್ಲಿ ಪ್ರಕಟನಾಗುವನು; ಧನ್ಯಃ = ಸ್ವಯಂಪೂರ್ಣನು; ಸತ್ಯಮೇಧಾಃ = ಸತ್ಯವನ್ನು ಹೆಚ್ಚಿಸುವವನು; ಧರಾಧರಃ = ಪರ್ವತಗಳಿಗೆ ಧಾರಣಶಕ್ತಿಪ್ರದನು; ತೇಜೋವೃಷಃ = ಕಾಂತಿಯನ್ನು ವರ್ಷಿಸುವವನು; ದ್ಯುತಿಧರಃ = ಕಾಂತಿಯನ್ನು ಧರಿಸಿರುವವನು; ಸರ್ವಶಸ್ತ್ರಭೃತಾಂವರಃ = ಶಸ್ತ್ರಧಾರಿಗಳಲ್ಲಿ ಶ್ರೇಷ್ಠನು; ಪ್ರಗ್ರಹಃ = ನಿಯಮನಕರ್ತಾ; ನಿಗ್ರಹಃ= ಇಂದ್ರಿಯ ಜಯಶೀಲನು; ವ್ಯಗ್ರಃ = ಅತ್ಯಂತ ಸೂಕ್ಷ್ಮನು; ನೈಕಶೃಂಗಃ = ಅತಿತೀಕ್ಷ್ಣನು; ಗದಾಗ್ರಜಃ = ಗದನ ಅಣ್ಣನು; ಚತುರ್ಮೂರ್ತಿಃ = ವಿಶ್ವ, ತೈಜಸ, ಪ್ರಾಜ್ಞ, ತುರ್ಯರೆಂಬ ನಾಲ್ಕು ರೂಪದವನು; ಚತುರ್ಬಾಹುಃ = ನಾಲ್ಕು ಭುಜದವನು; ಚತುರ್ವ್ಯೂಹಃ = ಅನಿರುದ್ಧ ಪ್ರದ್ಯುಮ್ನ, ಸಂಕರ್ಷಣ, ವಾಸುದೇವರೆಂಬ ರೂಪಗಳ ವ್ಯೂಹದವನು; ಚತುರ್ಗತಿಃ = ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ನಾಲ್ಕು ವಿಧ ಮೋಕ್ಷದಾತನು; ಚತುರಾತ್ಮಾ = ನಾಲ್ಕು ವೇದಗಳಲ್ಲಿ ಆತ್ಮನೆಂದು ಹೊಗಳಲ್ಪಟ್ಟವನು ಆತ್ಮನೆಂದರೆ ಸ್ವಾಮೀ; ಚತುರ್ಭಾವಃ = ಧರ್ಮಾದಿ ನಾಲ್ಕು

ಪುರುಷಾರ್ಥಪ್ರದನು; ಚತುರ್ವೇದವಿತ್ = ನಾಲ್ಕುವೇದದ ಅರ್ಥವನ್ನು ಪೂರ್ಣ ತಿಳಿದವನು; ಏಕಪಾತ್ = ಒಂದು ಅಂಶದಿಂದ ಜಗದ್ಧಾರಕನು (೭೭೨).

ಸಮಾವರ್ತಃ = ಸಂಸಾರ ಚಕ್ರಪ್ರವರ್ತಕನು; ನಿವೃತ್ತಾತ್ಮಾ = ಸರ್ವಜಗತ್ತಿಗೂ ವಿಲಕ್ಷಣನು; ದುರ್ಜಯಃ = ಇತರರಿಂದ ಜಯಿಸಲ್ಪಡಲಾಗದವನು; ದುರತಿಕ್ರಮಃ = ಮೀರಲಾಗದವನು; ದುರ್ಲಭಃ = ಭಕ್ತಿಗೆ ಬಿಟ್ಟು ಇತರ ಯಾವ ಸಾಧನಗಳಿಂದಲೂ ಸಿಗದವನು; ದುರ್ಗಮಃ = ತಿಳಿಯಲಾಗದವನು; ದುರ್ಗಃ = ಶತ್ರುಗಳಿಗೆ ಸಿಗದವನು; ದುರಾವಾಸಃ = ದುರ್ಜನರಿಗೆ ತಮಃ ಪ್ರಾಪ್ತಿಯನ್ನು ಕೊಡುವವನು; ದುರಾರಿಹಾ = ದೈತ್ಯ ಸಂಹಾರಕನು; ಶುಭಾಂಗಃ = ಮಂಗಳದೇಹನು; ಲೋಕಸಾರಂಗಃ = ಲೋಕದಲ್ಲಿ ಸಾರವನ್ನು ಮಾತ್ರ ಸ್ವೀಕರಿಸುವವನು; ಸುತಂತುಃ = ಬ್ರಹ್ಮಾದಿ ಪ್ರಜಾವರ್ಧಕನು; ತಂತು ವರ್ಧನಃ = ಸುಜನ ಸಂತಾನ ವರ್ಧಕನು; ಇಂದ್ರಕರ್ಮಾ = ಶ್ರೇಷ್ಠಕರ್ಮನು ಮಹಾಕರ್ಮಾ = ಜಗಜ್ಜನ್ಮಾದಿ ಕರ್ಮನಿಪುಣನು; ಕೃತಕರ್ಮಾ = ಕರ್ಮಗಳನ್ನು ಪೂರ್ಣವಾಗಿಸುವನು; ಕೃತಾಗಮಃ = ವೇದಪ್ರಕಾಶಕನು; ಉದ್ಭವಃ = ಸಂಸಾರದಿಂದ ಉದ್ಧರಿಸುವವನು; ಸುಂದರಃ = ಮನೋಹರನು; ಸುಂದಃ = ಒಳ್ಳೆಯದನ್ನು ಕೊಡು ವವನು; ರತ್ನನಾಭಃ = ಬ್ರಹ್ಮನೆಂಬ ರತ್ನವನ್ನು ನಾಭಿಯಲ್ಲಿ ಪಡೆದವನು; ಸುಲೋಚನಃ = ಮಾರ್ಗಪ್ರದರ್ಶಕನು; ಅರ್ಕಃ = ಪೂರ್ಣಸುಖನು; ವಾಜಸನಃ = ಅನ್ನಾದಿಪ್ರದನು; ಶೃಂಗೀ = ಉನ್ನತನು; ಜಯಂತಃ = ಜಯಶೀಲನು; ಸರ್ವವಿಜ್ಜಯೀ = ಎಲ್ಲವನ್ನೂ ತಿಳಿದು ವಶವಲ್ಲಿಟ್ಟಿರುವನು; ಸುವರ್ಣಬಿಂದುಃ = ಓಂ ಎಂಬ ಉತ್ತಮಾಕ್ಷರವೇದ್ಯನು; ಅಕ್ಷೋಭ್ಯಃ = ಜಯಿಸಲಾಗದವನು; ಸರ್ವವಾಗೀಶ್ವ ರೇಶ್ವರಃ = ಬ್ರಹ್ಮ ರುದ್ರ ಬೃಹಸ್ಪತ್ಯಾದಿಗಳಿಗೆ ಪ್ರಭುವು; ಮಹಾಹ್ರದಃ = ಕರುಣಾ ಸಮುದ್ರನು; ಮಹಾಗರ್ತಃ = ಅತ್ಯಂತ ಗಂಭೀರನು; ಮಹಾಭೂತಃ = ಅನಂತಾತಿಶಯ ರೂಪನು; ಮಹಾನಿಧಿಃ = ಶ್ರೇಷ್ಠನಿಧಿಪ್ರಾಯನು (೮೦೬).

ಕುಮುದಃ = ಭೂದೇವಿ ಸುಖಪ್ರದನು; ಕುಂದರಃ = ಮಲ್ಲಿಕಾದಿ ಪುಷ್ಪಗಳಿಂದ ಅರ್ಚಿತನು; ಕುಂದಃ = ಕೆಡುಜನರನ್ನು ಕೊಡಲಿಯಿಂದ ಕಡಿದವನು; ಪರ್ಜನ್ಯಃ = ಪೂರ್ಣನಾಗಿ ಅವತರಿಸುವನು; ಪಾವನಃ = ಪಾವನಾಮನು; ಅನಿಲಃ = ಇತರಾಶ್ರಯದಲ್ಲಿ ಇರದವನು; ಅಮೃತಾಂಶ = ಅಮೃತಮಯ ಕಿರಣನು; ಅಮೃತವಪುಃ = ಅಮೃತದಿಂದ ಅಭಿಷಿಕ್ತ ಶರೀರನು; ಸರ್ವಜ್ಞಃ = ಎಲ್ಲವನ್ನರಿತವನು; ಸರ್ವತೋಮುಖಃ = ಎಲ್ಲ ಕಡೆಯೂ ನೋಡಬಲ್ಲವನು; ಸುಲಭಃ = ಜ್ಞಾನಭಕ್ತಿ ಸುಲಭನು; ಸುವ್ರತಃ = ಭಕ್ತರಕ್ಷಣವ್ರತನು; ಸಿದ್ಧಃ = ಎಲ್ಲವನ್ನೂ ಪಡೆದಿರುವನು; ಶತ್ರುಜಿತ್ = ದೈತ್ಯರನ್ನು ಜಯಿಸಿದವನು; ಶತ್ರುತಾಪನಃ = ಕಲ್ಯಾದಿಗಳಿಗೆ ತಾಪವನ್ನೇ ಕೊಡುವವನು; ನ್ಯಗ್ರೋಧಃ = ವಿರೋಧಿಗಳನ್ನು ತಡೆದಿಡುವನು; ಉದುಂಬರಃ = ಅತಿಶ್ರೇಷ್ಠರಲ್ಲಿ ಶ್ರೇಷ್ಠನು; ಅಶ್ವತ್ಥಃ = ಚಂಚಲ ಜಗತ್ತಿನಲ್ಲಿ ಸ್ಥಿರನಾಗಿರುವನು; ಚಾಣೂರಾಂಧ್ರ ನಿಷೂದನಃ = ಮುಷ್ಟಿಕರನ್ನು ಕುಟ್ಟಿ ಕೆಡಹಿದವನು (೮೨೫).

ಸಹಸ್ರಾರ್ಚಿಃ = ಅನಂತ ಪ್ರಕಾಶನು ; ಸಪ್ತಜಿಹ್ವಃ = ಕಾಲೀಕರಾಲೀ ಮನೋಜವಾಧೂಮ್ರವರ್ಣಾ, ಲೋಹಿತಾ, ವಿಸ್ಫುಲಿಂಗಿನೀ, ವಿಶ್ವರುಚೀ ಎಂಬ ಏಳು ಜಿಹ್ವೆಗಳಿಂದ ಉರಿಯುವ ಅಗ್ನಿಗೆ ಅಂತರ್ಯಾಮಿಯು ; ಸಪ್ತೈದಾಃ = ಸಪ್ತ ಋಷಿಗಳಿಗೆ ಜ್ಞಾನವನ್ನಿತ್ತವನು ; ಸಪ್ತವಾಹನಃ = ಏಳು ಕುದುರೆಗಳ ಸೂರ್ಯಾಂತರ್ಯಾಮೀ; ಅಮೂರ್ತಿಃ = ಪ್ರಾಕೃತ ದೇಹರಹಿತನು ; ಅನಘಃ = ಪಾಪರಹಿತನು ; ಅಚಿಂತ್ಯಃ = ಅಪಾರ ಮಹಿಮಾನ್ವಿತನು ; ಭಯಕೃತ್ = ದುರ್ಜನ ಭಯಪ್ರದನು ; ಭಯನಾಶನಃ = ಸುಜನರಿಗೆ ಭಯನಾಶಕನು ; ಅಣುಃ = ಅಣುರೂಪೀ ಜೀವಂತರ್ಯಾಮೀ ; ಬೃಹತ್ = ದೊಡ್ಡ ಬ್ರಹ್ಮಾಂಡದಲ್ಲಿ ವ್ಯಾಪ್ತನು ; ಕೃಶಃ = ದೈತ್ಯಪೀಡಾಕರನು ; ಸ್ಥೂಲಃ = ವಿಶ್ವ ರೂಪಿಯು ; ಗುಣಭೃತ್ = ಕಲ್ಯಾಣಗುಣನು ; ನಿರ್ಗುಣಃ = ಪ್ರಾಕೃತ ಗುಣ ರಹಿತನು ; ಮಹಾನ್ = ಬ್ರಹ್ಮಪ್ರಭುವು ; ಅಧೃತಃ = ಇತರರಿಂದ ಧರಿಸಲ್ಪಡಲಾಗದವನು; ಸ್ವಧೃತಃ = ತನ್ನಿಂದ ಧರಿಸಲ್ಪಟ್ಟ ಎಲ್ಲ ಜಗತ್ತು ಉಳ್ಳವನು ; ಸ್ವಾಸ್ಥ್ಯಃ = ಸುಂದರಮುಖನು ; ಪ್ರಾಗ್ವಂಶಃ = ಆದಿಪುರುಷನು ; ವಂಶವರ್ಧನಃ = ಭಕ್ತ ವಂಶವರ್ಧನನು ; (೮೪೬).

ಭಾರಭೃತ್ = ವಿಶ್ವಧಾರಕನು ; ಕಥಿತಃ = ವೇದಾದಿ ಪ್ರತಿಪಾದಿತನು ; ಯೋಗೀ = ಭಕ್ತಿಪ್ರಾಪ್ಯನು ; ಯೋಗೀಶಃ = ಯೋಗಿಪ್ರಭುವು ; ಸರ್ವಕಾಮದಃ = ಎಲ್ಲರ ಕೋರಿಕೆಗಳನ್ನು ಈಡೇರಿಸುವವನು ; ಆಶ್ರಮಃ = ಶ್ರಮ ನಿವಾರಕನು ; ಶ್ರಮಣಃ = ಶ್ರಮವಿಲ್ಲದವನು ; ಕ್ಷಾಮಃ = ಸರ್ವಭೂತಸಂಹಾರಕನು ; ಸುಪರ್ಣಃ = ಗರುಡ ನಿಯಾಮಕನು ; ವಾಯುವಾಹನಃ = ಹನುಮಂತನನ್ನೇರಿ ಬರುವ ಸ್ವಾಮೀ ; ಧನುರ್ಧರಃ = ಶಾರ್ಙ್ಗಧನುಸ್ಸನ್ನು ಧರಿಸಿದವನು ; ಧನುರ್ವೇದಃ = ಧನುರ್ವಿದ್ಯಾ ಪ್ರವರ್ತಕನು ; ದಂಡಃ = ದುಷ್ಟ ಶಾಸಕನು ; ದಮಯಿತಾ = ದುಷ್ಟದಮನಕರ್ತಾ ; ದಮಃ = ಇಂದ್ರಿಯ ನಿಗ್ರಹರೂಪನು ; ಅಪರಾಜಿತಃ = ಸೋಲಿಲ್ಲದ ಮಹಾವೀರನು ; ಸರ್ವಸಹಃ = ಎಲ್ಲವನ್ನೂ ಭರಿಸಲು ಶಕ್ತನು ; ನಿಯಂತಾ = ನಿಯಮನಶೀಲನು ; ನಿಯಮಃ = ಲೋಕಶಿಕ್ಷೆಗಾಗಿ ನಿಯಮಗಳನ್ನು ಪಾಲಿಸುವವನು ; ಯಮಃ = ಎಲ್ಲವನ್ನೂ ವಶದಲ್ಲಿಟ್ಟವನು ; ಸತ್ವವಾನ್ = ಸತ್ವಪಾಲಕನು ; ಸಾತ್ವಿಕಃ = ಶುದ್ಧ ಸತ್ವಗುಣ ಸ್ವಾಮಿ ; ಸತ್ಯಃ = ನಿರ್ದುಷ್ಟ ಸುಖಜ್ಞಾನಸ್ವರೂಪನು ; ಸತ್ಯಧರ್ಮಪರಾಯಣಃ = ಸತ್ಯಧರ್ಮಗಳಿಗೆ ಆಶ್ರಯನು ; ಅಭಿಪ್ರಾಯಃ = ಎಲ್ಲರ ಮನವನ್ನರಿತವನು ; ಪ್ರಿಯಾರ್ಹಃ = ಲಕ್ಷ್ಮೀಪ್ರಿಯನು ; ಅರ್ಹಃ = ಪೂಜನೀಯನು ; ಪ್ರಿಯಕೃತ್ = ಶ್ರೀದೇವೀ ಪ್ರಿಯಕಾರಿಯು ; ಪ್ರೀತಿವರ್ಧನಃ = ಭಕ್ತಿಯನ್ನು ವರ್ಧಿಸುವ ಕರುಣಿಯು (೮೭೫).

ವಿಹಾಯಸಗತಿಃ = ಆಕಾಶ ಸಂಚಾರಿಯು ; ಜ್ಯೋತಿಃ = ಪ್ರಕಾಶರೂಪನು ; ಸುರುಚಿಃ = ಬಹುಕಾಂತಿಯುಕ್ತನು ; ಹುತಭುಕ್ = ಅನ್ನಾದಿ ಆಹುತಿಗಳನ್ನು ಸ್ವೀಕರಿಸುವವನು ; ವಿಭುಃ = ವಿಶೇಷ ಸುಖಭೋಜನನು ; ರವಿಃ = ಆನಂದ ಪೂರ್ಣನು ; ವಿರೋಚನಃ = ವಿಶೇಷ ಪ್ರಕಾಶನು ; ಸೂರ್ಯಃ = ಪಂಡಿತರಿಂದ ಸ್ತುತನು ;

ಸವಿತಾ = ಪ್ರಜಾಸೃಜನಕರ್ತಾ ; ರವಿಲೋಚನಃ = ಸೂರ್ಯನನ್ನು ಕಣ್ಣಿನಿಂದ ಪಡೆದವನು; ಅನಂತಃ = ಅಪರಿಚ್ಛಿನ್ನರೂಪನು; ಹುತಭುಕ್ = ಅಗ್ನಿಯ ಸ್ವಾಮಿಯು; ಭೋಕ್ತಾ = ಸಾರಭೋಕ್ತನು; ಸುಖದಃ = ಭಕ್ತರಿಗೆ ಸುಖವನ್ನೀವನು; ನೈಕದಃ = ವಿವಿಧ ಸುಖವನ್ನೀಯುವವನು; ಅಗ್ರಜಃ = ಆದಿಯಲ್ಲಿದ್ದವನು; ಅನಿರ್ವಿಣ್ಣಃ = ಭಕ್ತರ ಸದಾಶಾಪೂರಕನು; ಸದಾಮರ್ಷೀ = ಸುಜನ ಪಕ್ಷಪಾತಿಯು; ಲೋಕಾಧಿಷ್ಠಾನಂ = ಲೋಕಾಶ್ರಯನು; ಅದ್ಭುತಂ = ಭೂತಸಂಹಾರಕನು; ಸನಾತ್ = ಅನಾದಿಕಾಲ ನಿಯಾಮಕನು; ಸನಾತನತಮಃ = ವೇದಮುಖ್ಯ ಪ್ರತಿಪಾದ್ಯನು; ಕಪಿಲಃ= ಬ್ರಹ್ಮರುದ್ರ ಪರಿಪಾಲಕನು; ಕಪಿಃ = ಸುಖಾನುಭೋಕ್ತನು; ಅವ್ಯಯಃ = ನಾಶ ರಹಿತನು; ಸ್ವಸ್ತಿದಃ = ಮಂಗಳಪ್ರದನು; ಸ್ವಸ್ತಿಕೃತ್ = ಕಲ್ಯಾಣಕಾರನು; ಸ್ವಸ್ತಿ = ನಿತ್ಯವೂ ನಿರ್ದೋಷನು; ಸ್ವಸ್ತಿಭುಕ್ = ಸುಖಮಾತ್ರ ಭೋಜನನು; ಸ್ವಸ್ತಿದಕ್ಷಿಣಃ = ಕಲ್ಯಾಣಪ್ರದರಲ್ಲಿ ಶ್ರೇಷ್ಠನು (೯೦೫).

ಅರೌದ್ರಃ = ಶಾಂತಸ್ವರೂಪನು; ಕುಂಡಲೀ = ಕುಂಡಲದ್ವಯ ಶೋಭಿತನು; ಚಕ್ರೀ = ಸುದರ್ಶನ ಚಕ್ರವನ್ನು ಧರಿಸಿದವನು; ವಿಕ್ರಮೀ = ಶೂರನು; ಊರ್ಜಿತ ಶಾಸನಃ = ವ್ಯರ್ಥವಾಗದ ಶಾಸನ ಉಳ್ಳವನು; ಶಬ್ದಾತಿಗಃ = ಸಾಕಲ್ಯೇನ ವರ್ಣಿಸಲಾಗದವನು; ಶಬ್ದಸಹಃ = ವೇದಧಾರಣಕರ್ತಾ ; ಶಿಶಿರಃ = ಅತ್ಯಂತ ಸುಖೋದ್ರೇಕದಿಂದ ಕ್ರೀಡಿಸುವವನು; ಶರ್ವರೀಕರಃ = ರಾತ್ರಿನಿಯಾಮಕನು; ಅಕ್ರೂರಃ = ಕ್ರೂರನಂತೆ ತೋರುವ ನೃಸಿಂಹನು; ಪೇಶಲಃ = ಅತಿ ಮೃದುಚಿತ್ತನು; ದಕ್ಷಃ = ಸಮರ್ಥನು; ದಕ್ಷಿಣಃ = ಬೇಕಾದ್ದನ್ನೀವ ಉದಾರಿಯು; ಕ್ಷಮಿಣಾಂವರಃ = ಕ್ಷಮಿಸುವವರಲ್ಲಿ ಶ್ರೇಷ್ಠನು; ವಿದ್ವತ್ತಮಃ = ಅತ್ಯಂತಜ್ಞಾನಿ; ವೀತಭಯಃ = ಭಯರಹಿತನು; ಪುಣ್ಯಶ್ರವಣ ಕೀರ್ತನಃ = ನಾಮಶ್ರವಣ ಕೀರ್ತನ ಮಾತ್ರದಿಂದ ಪುಣ್ಯಪ್ರದನು; ಉತ್ತಾರಣಃ = ಸಂಸಾರಸಾಗರದ ದಡ ಸೇರಿಸುವನು; ದುಷ್ಕೃತಿಹಾ = ದುಷ್ಕರ್ಮ ನಾಶಕನು; ಪುಣ್ಯಃ = ಪಾವನನು; ದುಸ್ಸ್ವಪ್ನನಾಶನಃ = ಮಿಥ್ಯಾ ಜ್ಞಾನನಾಶಕನು, ಕೆಟ್ಟ ಸ್ವಪ್ನದ ಫಲವನ್ನು ನಿವಾರಿಸುವವನು; ವೀರಹಾ = ಶತ್ರುನಾಶಕನು; ರಕ್ಷಣಃ = ರಕ್ಷಕನು; ಸಂತಃ = ಸಾಧುಜನ ಪೋಷಕನು; ಜೀವನಃ = ಜೀವರಿಗೆ ಅಂತರ್ಯಾಮಿಯು; ಪರ್ಯವಸ್ಥಿತಃ = ಧರ್ಮದಲ್ಲಿ ನಿಂತಿರುವನು; ಅನಂತರೂಪಃ = ಅನಂತ ರೂಪಗಳಿಂದ ಅವತರಿಸುವವನು; ಅನಂತಶ್ರೀಃ = ಅಪರಿಮಿತೈಶ್ವರ್ಯನು; ಜಿತಮನ್ಯುಃ = ಕ್ರೋಧಾದಿ ದೂರನು; ಭಯಾಪಹಃ = ಭಕ್ತರ ಭಯನಿವಾರಕನು; ಚತುರಸ್ರಃ = ನಾಲ್ಕು ಪುರುಷಾರ್ಥಗಳನ್ನು ಕೊಡುವವನು; ಗಭೀರಾತ್ಮಾ = ಅವನ ಸ್ವರೂಪವನ್ನು ಯಾರೂ ಅರಿಯರು; ವಿದಶಃ = ಜ್ಞಾನಿಜನೋಪದೇಶಕನು; ವ್ಯಾದಿಶಃ = ವಿಶೇಷ ವಿಧಿಯನ್ನು ತಿಳಿಸಿಕೊಡುವನು; ದಿಶಃ = ಫಲವನ್ನೀವ ಸ್ವಾಮಿ (೯೪೦).

ಅನಾದಿಃ = ಜನನರಹಿತನು; ಭೂಃ = ಪೂರ್ಣನು; ಭುವೋಲಕ್ಷ್ಮೀಃ = ಭೂ

ಜನರ ಸಂಪತ್ಕಾರಣನು; ಸುವೀರಃ = ಅತ್ಯಂತ ಶೂರನು; ರುಚಿರಾಂಗದಃ = ಮನೋಹರ ಭೂಷಣಯುತನು; ಜನನಃ = ಸೃಷ್ಟಿಕಾರಣನು; ಜನಜನ್ಮಾದಿಃ = ಜನರ ಜನನಕ್ಕೆ ನಿಮಿತ್ತಕಾರಣನು; ಭೀಮಃ = ಅತಿ ದುಷ್ಟರಿಗೆ ಭಯಂಕರನು; ಭೀಮಪರಾಕ್ರಮಃ = ಶತ್ರುಭಯಂಕರ ಭೀಮಸೇನ ಸ್ವಾಮೀ; ಆಧಾರನಿಲಯಃ = ಸರ್ವಾಧಾರಭೂತನು; ಧಾತಾ = ಧಾರಣ ಪೋಷಣಕರ್ತಾ; ಪುಷ್ಪಹಾಸಃ = ಸುಮದಂತೆ ಮನೋಹರ ಮಂದಹಾಸಯುಕ್ತನು; ಪ್ರಜಾಗರಃ = ನಿದ್ರಾಲಸ್ಯಗಳಿಲ್ಲದವನು; ಊರ್ಧ್ವಗಃ = ಉನ್ನತ ವೈಕುಂಠದಲ್ಲಿ ಇರುವವನು; ಸತ್ಪಥಾಚಾರಃ = ಸುಜನರಿಗೆ ಮಾರ್ಗದರ್ಶಕನು; ಪ್ರಾಣದಃ = ಪ್ರಾಣರಕ್ಷಕನು; ಪ್ರಣವಃ = ಓಂಕಾರ ನಾಮಕನು; ಪಣಃ = ಧನದಲ್ಲಿದ್ದು ಬೆಲೆ ಕೊಡುವವನು; ಪ್ರಮಾಣಂ = ತನ್ನ ಮಾತೇ ಪ್ರಮಾಣವಾಗಿ ಉಳ್ಳವನು; ಪ್ರಾಣನಿಲಯಃ = ಮುಖ್ಯಪ್ರಾಣನಿಗೆ ಆಶ್ರಯನು; ಪ್ರಾಣಭೃತ್ = ಪ್ರಾಣಗಳಿಗೆ ಜೀವನಪ್ರದನು; ಪ್ರಾಣಜೀವನಃ = ಪ್ರಾಣನಿಗೂ ಜೀವಪ್ರದನು; ತತ್ತ್ವಂ = ಅನಾರೋಪಿತ ಸುಸ್ವರೂಪನು; ತತ್ತ್ವವಿತ್ = ಯಥಾರ್ಥಜ್ಞಾನಿಯು; ಏಕಾತ್ಮಾ = ಮುಖ್ಯಪ್ರಭುವು; ಜನ್ಮಮೃತ್ಯುಜರಾತಿಗಃ = ಜನನ ಮರಣ ಜರಾವರ್ಜಿತನು (೯೬೬).

ಭೂರ್ಭುವಃ ಸ್ವಸ್ತರುಃ = ಮೂರು ಲೋಕಗಳೆಂಬ ಗಿಡದ ಮೂಲಾಧಾರನು; ತಾರಃ = ಓಂ ಎಂಬ ಹೆಸರಿನವನು; ಸಪಿತಾ = ಪಿತಾಮಹನು; ಪ್ರಪಿತಾಮಹಃ = ಪಿತಾರುದ್ರನಿಗೆ ಪಿತನಾದ ಪಿತಾಮಹ ಬ್ರಹ್ಮನಿಗೆ ಪಿತಾ ಆದ ಶ್ರೀಶನು; ಯಜ್ಞಃ = ಯಜ್ಞ ರಕ್ಷಕ ವರಾಹನು; ಯಜ್ಞಪತಿಃ = ಯಜ್ಞ ನಿಯಾಮಕನು; ಯಜ್ವಾ = ಯಜಮಾನಾಂತರ್ಯಾಮೀ; ಯಜ್ಞಾಂಗಃ = ಯಜ್ಞ ಸಾಧನದಾತನಾದ ವರಾಹನು; ಯಜ್ಞವಾಹನಃ = ಯಜ್ಞಗತ ಹವಿಸ್ಸನ್ನು ಸ್ವೀಕರಿಸಿ ಆಯಾ ದೇವತೆಗಳಿಗೀಯುವವನು; ಯಜ್ಞಭೃತ್ = ಯಜ್ಞವಿಘ್ನ ನಿವಾರಕನು; ಯಜ್ಞಕೃತ್ = ಅಶ್ವಮೇಧಾದಿ ಯಜ್ಞಗಳನ್ನು ಮಾಡಿದವನು; ಯಜ್ಞೀ = ಯಜ್ಞಕರ್ತೃಗಳಿಗೆ ಲಭ್ಯನು; ಯಜ್ಞಭುಕ್ = ಯಜ್ಞ ಪೂರ್ಣ ಫಲಪ್ರದನು; ಯಜ್ಞಸಾಧನಃ = ಯಜ್ಞವನ್ನು ನಡೆಸಿಕೊಡುವ ಸಮರ್ಥನು; ಯಜ್ಞಾಂತಕೃತ್ = ಯಜ್ಞಸಮಾಪ್ತಿ ಕಾರಣನು; ಯಜ್ಞ ಗುಹ್ಯಃ = ಯಜ್ಞನಾಮಕ ಶ್ರೀನಾಥನು; ಅನ್ನಂ = ಅನ್ನಾಂತರ್ಗತ ಜೀವಧಾರಕ ಅನಿರುದ್ಧನು; ಅನ್ನಾದಃ = ಎಲ್ಲರಲ್ಲಿ ಇದ್ದು ಅನ್ನದ ಸ್ವಾಖ್ಯರಸವನ್ನು ಭುಜಿಸು ವವನು (೯೮೪).

ಆತ್ಮಯೋನಿಃ = ತನಗೆ ತಾನೇ ಸೃಷ್ಟಿಕಾರಣನು; ಸ್ವಯಂಜಾತಃ = ಸ್ವೇಚ್ಛೆಯಿಂದ ಅವತರಿಸುವ ಸ್ವತಂತ್ರನು; ವೈಖಾನಃ = ದುಃಖರಹಿತ ಮುಕ್ತರಿಗೆ ಒಡೆಯನು; ಸಾಮಗಾಯನಃ = ಸಾಮಗಾನಲೋಲನು; ದೇವಕೀನಂದನಃ = ಲಕ್ಷ್ಮೀಸುಖ ವರ್ಧಕನು, ದೇವಕೀಪುತ್ರನು; ಸ್ರಷ್ಟಾ = ಸೃಷ್ಟಿ ಕಾರಣನು; ಕ್ಷಿತೀಶಃ = ಭೂ ರಮಣನು; ಪಾಪನಾಶನಃ = ಪಾಪನಾಶಕನು; ಶಂಖಭೃತ್ = ಪಾಂಚಜನ್ಯ ಎಂಬ

ಶಂಖವನ್ನು ಧರಿಸಿದವನು; ನಂದಕೀ = ನಂದಕವೆಂಬ ಖಡ್ಗ ಉಳ್ಳವನು; ಚಕ್ರೀ = ಚಕ್ರವನ್ನು ಧರಿಸಿದವನು; ಶಾರ್ಙ್ಗಧನ್ವಾ = ಶಾರ್ಙ್ಗವೆಂಬ ಧನುಸ್ಸುಳ್ಳವನು; ಗದಾಧರಃ = ಕೌಮೋದಕೀ ನಾಮಕ ಗದೆ ಉಳ್ಳವನು; ರಥಾಂಗಪಾಣಿಃ = ಸುದರ್ಶನ ಚಕ್ರವನ್ನು ಧರಿಸಿದವನು; ಅಕ್ಷೋಭ್ಯಃ = ಶತ್ರುಗಳಿಂದ ಕ್ಷೋಭೆ ಹೊಂದದ ಮಹಾ ವಿಕ್ರಮನು; ಸರ್ವಪ್ರಹರಣಾಯುಧಃ = ಸರ್ವಾಯುಧಧಾರಿಯಾಗಿ ದುಷ್ಟ ದಮನ ಶಿಷ್ಟರಕ್ಷಣಗಳನ್ನು ಮಾಡುವ ಶ್ರೀಹರಿಯು; ಓಂ ಸರ್ವಪ್ರಹರಣಾಯುಧಾಯ ನಮಃ ಓಂ; ನಮ ಇತಿ (೧೦೦೦).

ಇಂತು ವರ್ಣನೀಯ ಮಹಾಮಹಿಮನಾದ, ಬ್ರಹ್ಮರುದ್ರೇಂದಾದಿ ನಿಯಾಮಕನಾದ ಶ್ರೀಕೃಷ್ಣನ ದಿವ್ಯಸಹಸ್ರ ನಾಮಗಳನ್ನು ನಿನಗೆ ನಿರೂಪಿಸಿದೆನು. ಇದನ್ನು ಕೇಳಿ, ಪಠಿಸಿ, ಕೀರ್ತಿಸಿದವರ ಸರ್ವಪಾಪಗಳು, ಅಶುಭಗಳು ನಷ್ಟವಾಗಿಹೋಗುವವು. ಅವರು ಇಹಪರ ಲೋಕಗಳಲ್ಲಿಯೂ ಸುಖಿಸುವರು.

ವಿಪ್ರನು ವಿಷ್ಣುನಾಮ ಸಹಸ್ರವನ್ನು ಪಠಿಸಿ ಅಥವಾ ಕೇಳಿದರೆ ವೇದಾಂತ ವಿಚಾರ ನಿಪುಣನಾಗುವನು. ಕ್ಷತ್ರಿಯನು ವಿಜಯವನ್ನು ಹೊಂದುವನು. ವೈಶ್ಯನು ಧನಸಮೃದ್ಧಿಯನ್ನು ಹೊಂದುವನು. ಶೂದ್ರನು ಪಾಪದಿಂದ ಬಿಡುಗಡೆ ಹೊಂದುವನು. ಧರ್ಮ, ಅರ್ಥ, ಕಾಮ, ಸಂತಾನ ಮುಂತಾದುವನ್ನು ಬೇಡಿದವರಿಗೆ ನಾಮಸಹಸ್ರ ಜಪದಿಂದ ಅವೆಲ್ಲವೂ ಕೈಗೂಡುವವು.

ಪ್ರಾತಃಕಾಲದಲ್ಲಿ ಎದ್ದು ಶುಚಿಯಾಗಿ, ಶ್ರೀಹರಿಯಲ್ಲಿ ಮನವಿಟ್ಟು, ವಿಷ್ಣು ಸಹಸ್ರನಾಮಗಳನ್ನು ಪಠಿಸಿದವರು ಕೀರ್ತಿಯನ್ನೂ, ಜ್ಞಾತಿಪ್ರಾಧಾನ್ಯವನ್ನೂ, ನಿರಂತರ ಸಂಪತ್ತನ್ನೂ ಹೊಂದಿ ಶ್ರೇಯೋಭಾಜನರಾಗುವರು. ಅವರ ಭಯಗಳೆಲ್ಲವೂ ಪರಿಹೃತವಾಗುವವು. ವೀರ್ಯವನ್ನೂ, ತೇಜಸ್ಸನ್ನೂ, ಬಲರೂಪಗಳನ್ನೂ, ಸದ್ಗುಣಗಳನ್ನೂ ಹೊಂದಿ, ಅವರು ಆರೋಗಿಗಳಾಗಿ ಬಾಳುವರು.

ಇದನ್ನು ಪಠಿಸಿದರೆ ರೋಗಿಗಳು ಆರೋಗ್ಯವನ್ನೂ, ಬಂಧನದಲ್ಲಿರುವವರು ಬಿಡುಗಡೆಯನ್ನೂ, ಭಯಾರ್ತರು ಅಭಯವನ್ನೂ, ಆಪದ್‌ಗ್ರಸ್ತರು ಸುಕ್ಷೇಮ ಸಂಪತ್ತುಗಳನ್ನೂ ಹೊಂದಿ ಸುಖಿಸುವರು. ನಿತ್ಯವೂ ನಾಮಸಹಸ್ರ ಜಪಪರನಿಗೆ ದಾಟಲಾಗದ ಆಪತ್ತಿಲ್ಲ. ಭಕ್ತಿಯಿಂದ ನಾಮಸಹಸ್ರವನ್ನು ಜಪಿಸಿದವರು, ವಾಸುದೇವನನ್ನೇ ಭಕ್ತಿಯಿಂದ ನಂಬಿ ಭಜಿಸುವವರು, ಆ ಸುಜನರು ಸರ್ವಪಾಪದಿಂದ ಮುಕ್ತರಾಗಿ, ಶ್ರೀಹರಿ ಲೋಕವನ್ನು ಸೇರುವರು.

ವಾಸುದೇವ ಭಕ್ತರಿಗೆ ಅಶುಭವು ಕಿಂಚಿತ್ತೂ ಇಲ್ಲ! ಇಲ್ಲ! ಅವರಿಗೆ ಜನ್ಮಮೃತ್ಯು ಭಯವಿಲ್ಲ! ಜರಾಭಯವಿಲ್ಲ! ಅವರು ಸರ್ವದಾ ಶ್ರೀನಾಧೀನರಾಗಿ ತೃಪ್ತಿ ಸಂತೋಷಗಳಿಗೆ ನೆಲೆಯಾಗಿರುವರು. ಶ್ರದ್ಧಾಭಕ್ತಿಯುಕ್ತರಾಗಿ ಈ ಸ್ತುತಿಯನ್ನು ಅರ್ಥಸಹಿತವಾಗಿ ಪಠಿಸಿದವರು ಸುಖ, ಶಾಂತಿ, ಕ್ಷಮಾ, ಸಂಪತ್ತು, ಕಾಂತಿ, ಪುಣ್ಯಸ್ಥಿರತೆ, ಸ್ಮರಣಶಕ್ತಿ, ಕೀರ್ತಿ ಮುಂತಾದ

ಸುಗುಣಗಳನ್ನು ಪೊಂದಿ ಶ್ರೀಹರಿಭಕ್ತರಾಗಿ, ಇಹಪರಗಳಲ್ಲಿ ಸುಖಿಸುವರು. ಪುರುಷೋತ್ತಮನ ನಿಜವಾದ ಭಕ್ತರಿಗೆ ಸುಜನರಲ್ಲಿ ಕ್ರೋಧ ಅಸೂಯೆಗಳಿರುವುದಿಲ್ಲ. ಅವರಲ್ಲಿ ಲೋಭವಿಲ್ಲ! ಅವರು ದುಷ್ಟಬುದ್ಧಿಗಳಾಗುವುದಿಲ್ಲ.

ದ್ಯುಲೋಕ, ಚಂದ್ರಾರ್ಕರು, ನಕ್ಷತ್ರಗಳು, ಆಕಾಶ, ದಿಕ್ಕುಗಳು, ಭೂಮಿ, ಸಮುದ್ರಗಳು, ಇವೆಲ್ಲವೂ ವಾಸುದೇವನ ಪರಾಕ್ರಮದಿಂದ ಅಲ್ಲಲ್ಲೇ ನಿಂತಿರುವವು. ಸುರಾಸುರ ಗಂಧರ್ವರು, ಯಕ್ಷೋರಗ ರಾಕ್ಷಸರು, ಮೊದಲಾದ ಸರ್ವಭೂತಗಳಿಂದ ಕೂಡಿದ ಜಗತ್ತೆಲ್ಲವೂ ಶ್ರೀಕೃಷ್ಣಪರಮಾತ್ಮನ ವಶದಲ್ಲಿದೆ.

ಹತ್ತಿಂದ್ರಿಯಗಳು, ಮನೋಬುದ್ಧಿಗಳು, ತೇಜೋ ಬಲ ಧೈರ್ಯ ವೀರ್ಯಾದಿ ಗುಣಗಳು, ಇಪ್ಪತ್ತೈದು ತತ್ವಗಳ ಕ್ಷೇತ್ರವೆನಿಸಿದ ಶರೀರವು, ಅಲ್ಲಿ ನಿಯಾಮಕರಾಗಿರುವ ಬ್ರಹ್ಮಾದಿ ದೇವತೆಗಳು ಎಲ್ಲವೂ ವಾಸುದೇವನ ಅಧೀನವಾಗಿವೆ. ಇದು ವೇದ ವಚನವು॥ ಸತ್ಯಂ ಸತ್ಯಂ ಸತ್ಯಂ ॥

ಸರ್ವಶಾಸ್ತ್ರಗಳಲ್ಲಿಯು ಸದಾಚಾರವೇ ಪ್ರಥಮಧರ್ಮವೆಂದು ಸಾರಲ್ಪಟ್ಟಿದೆ. ಅಂತಹ ಆಚಾರದಿಂದ ಧರ್ಮವು ಲಭಿಸುವುದು. ಆ ಧರ್ಮಕ್ಕೆ ಫಲಪ್ರದನಾದ ಪ್ರಭುವೆಂದರೆ ಶ್ರೀನಾರಾಯಣನೇ! ಅನ್ಯರಲ್ಲ! ಎಲ್ಲ ಜಗವೂ ಅದರಲ್ಲಿರುವ ಋಷಿಗಳು, ಪಿತೃಗಳು, ದೇವತೆಗಳು, ಇತರ ಪೃಥಿವ್ಯಾದಿ ಭೂತಗಳು, ಸುವರ್ಣ ರಜತಾದಿ ಧಾತುಗಳು, ಚರಾಚರ ಸರ್ವ ಪ್ರಾಣಿಗಳು ಸಮಸ್ತವೂ ಶ್ರೀನಾರಾಯಣನಿಂದ ಸೃಷ್ಟವಾಗಿ, ಆತನ ಅಧೀನ ವಾಗಿವೆ ॥

ಯೋಗಶಾಸ್ತ್ರ, ಜ್ಞಾನವನ್ನೀವ ಮೀಮಾಂಸೆ, ಸಾಂಖ್ಯಶಾಸ್ತ್ರ, ಶಿಲ್ಪಾದಿ ಕರ್ಮ ಕೌಶಲ್ಯ, ಕರ್ಮವಿಧಾನ, ವೇದಗಳು, ಇತರ ಶಾಸ್ತ್ರಗಳು ಎಲ್ಲವೂ ಜನಾರ್ದನನಿಂದಲೇ ಉಪದಿಷ್ಟವಾಗಿವೆ. ಆತನೇ ಸರ್ವಜ್ಞನು. ವಿಷ್ಣುವೇ ಸರ್ವೋತ್ತಮನು, ವ್ಯಾಪ್ತನು, ಸರ್ವಸ್ವಾಮಿಯು, ನಾನಾವತಾರನು ಆಗಿರುವನು. ಶ್ರೀಹರಿಯಿಂದ ಭಿನ್ನರಾದ ಜೀವರಲ್ಲಿಯು, ಲೋಕಗಳಲ್ಲಿಯೂ, ಶ್ರೀಶನು ಅಂತರ್ಯಾಮಿಯಾಗಿದ್ದು, ಅವರು ಉಂಡು ಸುಖಿಸುವಂತೆ ಮಾಡಲು, ತಾನು ಮೊದಲು ಉಂಡು, ಅತಿ ಚಿತ್ರಮಹಿಮ ನಾಗಿರುವವರನು.

ಇಂತಹ ವಿಷ್ಣು ಸಹಸ್ರನಾಮ ಸ್ತೋತ್ರವು ಶ್ರೀವ್ಯಾಸರಿಂದ ರಚಿತವಾಗಿದೆ. ಇದನ್ನು ಶ್ರೇಯಃಕಾಮರು ನಿತ್ಯವೂ ಪಠಿಸುವುದು ಒಳಿತು. ಅಂತಹವರಿಗೆ ನಿತ್ಯ ಸುಖವಾಗುವುದು. ವಿಶ್ವೇಶ್ವರನೂ, ಜನ್ಮಾದಿ ದೋಷರಹಿತನೂ, ಕ್ರೀಡಾದಿ ಗುಣವಿಶಿಷ್ಟನೂ, ಜಗತ್ಪ್ರಭುವರನೂ, ಚತುರ್ವಿಧ ನಾಶರಹಿತನೂ, ಆದ ಪುಂಡರೀಕಾಕ್ಷನನ್ನು ಭಕ್ತಿಯಿಂದ ಭಜಿಸಿದವರಿಗೆ ಎಂದಿಗೂ ಪರಾಭವವಿಲ್ಲ! ಎಂದಿಗೂ ಅಪಜಯವಿಲ್ಲ. ಓಂ ವಿಷ್ಣವೇ ನಮಃ ॥

ಅರ್ಜುನನು ' ಪದ್ಮಪತ್ರ ವಿಶಾಲಾಕ್ಷ ! ಪದ್ಮನಾಭ ! ಸರ್ವೋತ್ತಮ ! ನಿನ್ನಲ್ಲಿ

ಅನುರಕ್ತನಾದ ಭಕ್ತರಿಗೆ ನೀನೇ ರಕ್ಷಕನು ಜನಾರ್ಧನ ! ನಿನಗೆ ನಮಸ್ಕಾರವು !' ಎಂದನು.

ಶ್ರೀಕೃಷ್ಣನು 'ಅರ್ಜುನ! ನನ್ನನ್ನು ನಾಮಸಹಸ್ರದಿಂದ ಸ್ತುತಿಸುವುದು ಸರಿ! ಆದರೂ ಅಂತು ಸ್ತುತಿಸಲಾಗದಿರೆ ಒಂದೇ ಶ್ಲೋಕದಲ್ಲಿ, ನಾಮಸಹಸ್ರ ಪಠನದ ಪುಣ್ಯವು ಅಡಗಿದೆ. ಅಂತಹ ಶ್ಲೋಕವನ್ನು ಕೇಳು ! ವ್ಯಾಸರೇ ಅದನ್ನು ಹೇಳಿರುವರು. 'ವಾಸುದೇವ ! ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸ್ವಾಮಿಯಾಗಿ ವಾಸಿಸಿರುವುದರಿಂದ ನಿನ್ನನ್ನು ವಾಸುದೇವನೆಂಬರು. ಕೃಷ್ಣ! ನಿನಗೆ ನಮಸ್ಕಾರವು. ಮತ್ತೆ ನಮಸ್ಕಾರವು !'

ಪಾರ್ವತಿಯು 'ಸ್ವಾಮೀ ಈಶ್ವರ! ಶ್ರೀವಿಷ್ಣು ಸಹಸ್ರನಾಮದ ಪುಣ್ಯವನ್ನು ಹೊಂದುವ ಸುಲಭೋಪಾಯವಿದ್ದರೆ ತಿಳಿಸಿಕೊಡು!' ಎಂದು ಕೇಳಿದಳು.

ಈಶ್ವರನಿಂತೆಂದನು: 'ಶ್ರೀರಾಮ! ರಾಮ! ರಾಮ! ಎಂದು ನಾನು ಜಪಿಸುತ್ತಾ ಆನಂದಪಡುತ್ತಿರುವೆನು. ಅದೇ ಸಹಸ್ರನಾಮ ಪುಣ್ಯಸದೃಶ ಪುಣ್ಯಪ್ರದವೆಂದು ತಿಳಿ! ಪ್ರಿಯೇ!'

ಬ್ರಹ್ಮದೇವನೂ ಇಂತು ನುಡಿದಿರುವನು: "ಅಪರಿಚ್ಛಿನ್ನ, ಅನಂತಕಲ್ಯಾಣ ಗುಣನಿಧೇ! ನಾರಾಯಣ! ಸಹಸ್ರಾರು ರೂಪಗಳು ನಿನ್ನವು! ಅನಂತಪಾದನು, ಅನಂತನೇತ್ರನು, ಅನಂತಬಾಹುವು, ಅನಂತಶೀರ್ಷನು, ಅನಂತ ನಾಮಧಾರಕನು, ಪೂರ್ಣಷಡ್ಗುಣನು, ಶಶ್ವದೇಕ ಪ್ರಕಾರನು, ಸಾವಿರಾರು ಕೋಟಿ ಯುಗಗಳಿಂದ ಪ್ರವಾಹರೂಪಿಯಾಗಿರುವ ಜಗತ್ತಿನಲ್ಲಿ, ನಿರಂತರ ವ್ಯಾಪ್ತ ವಿರಾಡ್ರೂಪನು, ರಮಾ ಮುಖ್ಯ ಪ್ರಾಣವಲ್ಲಭನು ಆದ ಶ್ರೀಹರೇ! ನಿನಗೆ ಅನಂತ ನಮಸ್ಕಾರಗಳು!"

ಸಂಜಯನನು 'ಎಲ್ಲಿ ಸಕಲ ಜ್ಞಾನಿಜನ ವಲ್ಲಭನಾದ ಶ್ರೀಕೃಷ್ಣನೋ, ಎಲ್ಲಿ ಶ್ರೀಭೀಮಸೇನನೋ, ಎಲ್ಲಿ ಗಾಂಡೀವ ಧನುರ್ಧಾರಿ ಅರ್ಜುನನೋ, ಅಲ್ಲಿ ವಿಜಯವಿದೆ! ಅಲ್ಲಿ ಐಶ್ವರ್ಯವಿದೆ! ಅಲ್ಲಿಯೇ ಶಾಶ್ವತ ನೀತಿ ಇದೆ! ಇಂತೆಂದು ನಾನು ದೃಢವಾಗಿ ನಂಬಿರುವೆನು,' ಎಂದಿರುವನು.

ಶ್ರೀಭಗವಂತನೇ, 'ನನ್ನನ್ನು ಅನನ್ಯ ಭಕ್ತಿಯಿಂದ ಯಾರು ಭಜಿಸುವರೋ, ಅಂತಹ ನಿತ್ಯಭಕ್ತರ ಯೋಗಕ್ಷೇಮಗಳನ್ನು ನಾನು ವಹಿಸಿಕೊಂಡು, ಅವರನ್ನು ಸದಾ ಕಾಪಾಡುತ್ತಿರುವೆನು' ಎಂದು ಅಭಯವಿತ್ತು, 'ನಾನು ಅವತರಿಸುವುದೇ ಭಕ್ತರಕ್ಷೆಗೆಂದು! ಅಂತಹ ಭಕ್ತರಕ್ಷೆಗಾಗಿ ನಾನು ದುಷ್ಟಶಿಕ್ಷೆಯನ್ನೂ ಮಾಡುವೆನು. ಆಗ ನನ್ನಿಂದ ಧರ್ಮವು ಸಂಸ್ಥಾಪಿತವಾಗುವುದು' ಎಂದು ನುಡಿದಿರುವನು.

ಶ್ರೀವ್ಯಾಸರು 'ಆರ್ತರಾಗಲಿ, ಖಿನ್ನರಾಗಲಿ, ಜೀರ್ಣದೇಹಿಗಳಾಗಲಿ, ವ್ಯಾಧಿ ಪೀಡಿತರಾಗಲಿ, ಯಾರೇ ಸುಜೀವರಾಗಲಿ, ಒಂದು ಸಲ ಭಕ್ತಿಯಿಂದ 'ನಾರಾಯಣ'

ಎಂದು ಉಚ್ಚರಿಸಿದ ಮಾತ್ರದಿಂದ, ಸಕಲ ದುಃಖದಿಂದ ಬಿಡಲ್ಪಟ್ಟು, ಸಕಲ ಸುಖಗಳನ್ನೂ ಹೊಂದುವರು' ಎಂದು ಅಪ್ಪಣೆ ಕೊಟ್ಟಿರುವರು.

ಜನಮೇಜಯ! ಶ್ರೀಭೀಷ್ಮನು ಧರ್ಮರಾಜನಿಗೆ ಪೇಳಿದ ವಿಷ್ಣುನಾಮ ಸಹಸ್ರ ಸ್ತುತಿಯನ್ನು ನಿನಗೆ ಪೇಳಿ, ನಾನು ಧನ್ಯನಾದೆನು. ನೀನೂ ಕೇಳಿ ಧನ್ಯನಾದೆ!

## ೧೬. ವಿಪ್ರ ಮಹಿಮೆ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ಇಂತು ಶ್ರೀಶ ಸಹಸ್ರನಾಮಗಳನ್ನು ಕೇಳಿ, ಬಹು ಸಂತೋಷಪಟ್ಟು, ಧರ್ಮರಾಜನು ಪುನಃ ಬ್ರಾಹ್ಮಣ ಮಹಿಮೆಯನ್ನು ಪ್ರಶ್ನಿಸಲು, ಭೀಷ್ಮನಿಂತೆಂದನು:

"ಶ್ರೀಹರಿಯು ಸರ್ವದೇವತೆಗಳಲ್ಲಿಯೂ ಉತ್ತಮನು. ಆತನೇ ಶ್ರವಣೀಯನು! ಅವನೇ ಸ್ಮರಣೀಯನು! ಶ್ರೀಶನೇ ಧ್ಯಾತವಯನು॥ ಶ್ರೀಶನ ಹೊರತು ಅನ್ಯ ರಕ್ಷಕರಿಲ್ಲ, ಅವನೇ ಅಂತ್ಯಕಾಲದಲ್ಲಿ ತಾನಾಗಿ ಬಂದು ನನಗೆ ದರ್ಶನವಿತ್ತು, ನನ್ನಿಂದ ಧರ್ಮತತ್ವ ಗಳನ್ನು ಹೇಳಿಸಿರುವನು. ಅಂತಹ ಸರ್ವಜ್ಞ ಸರ್ವೋತ್ತಮ ಶ್ರೀಶನ ಮಹಿಮೆಯನ್ನು ತಿಳಿಸಿ, ಸಲಹುವರೆಂದರೆ ಬ್ರಾಹ್ಮಣೋತ್ತಮರೇ! ಮತ್ತೂಬ್ಬರಲ್ಲ. ವಿಪ್ರರ ಮುಖದಿಂದ ಕೇಳಿ, ತಿಳಿದಿದ್ದನ್ನೇ ನಾನು ನಿಮಗೆ ತಿಳಿಸಿರುವೆನು.

ವಿಪ್ರರನ್ನು ಸಾಮಾನ್ಯ ಮನುಜರೆಂದು ಅವಗಣಿಸಬೇಡ! ಅವರನ್ನು ಶ್ರೀಶನ ಉತ್ತಮಾಧಿಷ್ಠಾನವೆಂದು ತಿಳಿದು ಗೌರವಿಸು! ಅವರನ್ನು ಪೂಜಿಸು! ಅವರಿಗೆ ನಮಸ್ಕರಿಸು! ಅವರಿಗೆ ಕೇಡೆಣಿಸಿ ವಾಸವಾದಿ ಸುರರೂ ಕಷ್ಟಪಟ್ಟಿರುವರು. ಅವರನ್ನು ಸಂತೋಷಪಡಿಸಿ, ಸಕಲ ಸುಜನರು ಸುಖಪಡುವರು. ಧರಾಮರರು ಲೋಕಾಧಾರಕರು. ವಿಪ್ರಶ್ರೇಷ್ಠರು ಶಾಸ್ತ್ರಪ್ರವರ್ತಕರು. ತಪೋನಿಧಿಗಳಿಗೆ ಸರ್ವವೂ ಸುಸಾಧ್ಯವಾಗಿದೆ. ಅವನೀ ಸುರರೆಂದಿಗೂ ಅನ್ಯಾಯಮಾರ್ಗಕ್ಕಿಳಿಯರು. ಬಾಲರಾಗಲಿ, ಯುವಕರಾಗಲಿ, ವೃದ್ಧರಾಗಲಿ, ಬ್ರಾಹ್ಮಣರಿಗೆ ನಮಸ್ಕರಿಸುವುದರಿಂದ ಸಕಲ ಶ್ರೇಯಸ್ಸುಗಳು ಸಿದ್ಧಿಸುವವು. ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮಃ॥

ಹಿಂದೆ ಕಾರ್ತವೀರ್ಯಾರ್ಜುನನು ಸಪ್ತದ್ವೀಪಗಳನ್ನು ಗೆದ್ದು ಚಕ್ರವರ್ತಿ ಎನಿಸಿದನು. ಅದ್ಭುತ ಬಲ ತೇಜಃ ಪರಾಕ್ರಮಗಳಿಂದ ವಿರಾಜಿಸುವ ಆ ರಾಜವರನು ತನಗೆ ಸಮರಿಲ್ಲವೆಂದು ತಿಳಿದು, ಯಾರನ್ನೂ ಲೆಕ್ಕಿಸದಿದ್ದನು. ಒಂದು ದಿನ ಆಕಾಶದಿಂದ ಒಂದು ಭೂತವು, 'ರಾಜನ್! ಸುಮ್ಮನೆ ಗರ್ವಪಡಬೇಡ! ಧರಾಮರರು ನಿನಗೂ ಗೌರವನೀಯರೆಂದು ತಿಳಿ!' ಎಂದು ನುಡಿಯಿತು. ಆ ಮಾತಿಗೆ ನಕ್ಕ ರಾಜನು 'ಬ್ರಾಹ್ಮಣರು ನನಗೂ ಹೆಚ್ಚಲ್ಲ. ನನ್ನ ಮನೆಬಾಗಿಲ ಕಾದು, ನನ್ನ ದಾನಗಳಿಂದ ಜೀವಿಸುವ ವಿಪ್ರರೆಲ್ಲಿ? ಸಕಲ ಧರಾವಲಯ ಧುರಂಧರನಾದ ಚಕ್ರವರ್ತಿ ಕಾರ್ತವೀರ್ಯ ನೆಲ್ಲಿ? ನಾನು ಒಲಿದರೆ ಜನರಿಗೆ ಉಳಿವು! ನಾನು ಮುನಿದರೆ ಸಕಲರೂ ಸತ್ತರೆಂದು ತಿಳಿ!' ಎಂದು ಆ ಭೂತವನ್ನು ಹೆದರಿಸಿ, ಕಳಿಸಿದನು.

ಆಗ ವಾಯುದೇವನು ಅವನ ಗರ್ವೋದ್ರೇಕವನ್ನಡಗಿಸಿ, ಅವನನ್ನು ಉಳಿಸಲೆಣಿಸಿ, ಆಕಾಶದಿಂದ ಇಂತೆಂದನು: 'ಅರ್ಜುನ! ನಾನು ವಾಯುದೇವನು. ನಿನ್ನ ಹಿತಕ್ಕಾಗಿ ನುಡಿಯುತ್ತಿರುವೆನು. ಬರಿಗರ್ವವು ಒಳಿತಲ್ಲ. ಬಿಡು, ನಿನ್ನ ಬಿರುನುಡಿ ನಡೆಗಳನ್ನು! ಬ್ರಾಹ್ಮಣರ ತಪಶ್ಶಕ್ತಿಯಿಂದಲಲ್ಲವೇ ರಾಜರು ಬಲವಂತರಾಗಿ, ಪ್ರಜಾರಕ್ಷಾತತ್ಪರ ರಾಗಿರುವುದು? ವಿಪ್ರರನ್ನವಗಣಿಸಬೇಡ! ಅಹಲ್ಯೆಯನ್ನು ಕೆಣಕಿ, ಗೌತಮನ ಶಾಪದಿಂದ ಮೈಯೆಲ್ಲ ಯೋನಿಗಳಾದ ಇಂದ್ರನನ್ನು ನೀನರಿಯದಿಲ್ಲ. ಅಗ್ನಿಯು ಭೃಗುಪತ್ನೀ ಹರಣದಲ್ಲಿ ಸಂದಿಗ್ಧವಾಗಿ ಮಾತಾಡಿ, ಭೃಗುವಿನ ಶಾಪಕ್ಕೆ ಗುರಿಯಾಗಲಿಲ್ಲವೇ? ಅಗಸ್ತ್ಯನು ಸಮುದ್ರವನ್ನು ಆಪೋಶನಗೈದುದು ನಿನಗೆ ತಿಳಿಯದೇ?

ಹಿಂದೆ ಸೋಮನ ಪುತ್ರಿಯನ್ನು ಉಚಥ್ಯನು ಮದುವೆಯಾದನು. ಅವರೀರ್ವರು ವನದ ಆಶ್ರಮದಲ್ಲಿದ್ದರು. ಒಂದು ದಿನ ಯಮುನಾ ನದೀ ಸ್ನಾನಕ್ಕೆಂದು, ಮುನಿವರನು ಹೋದಾಗ, ಕಾದಿದ್ದ ವರುಣನು, ಕಾಂತಾಮಣಿಯನ್ನು ಕದ್ದು, ತನ್ನ ಪುರಿಯಲ್ಲಿ ಬಂಧಿಸಿಟ್ಟನು. ಈ ವೃತ್ತಾಂತವನ್ನು ನಾರದನಿಂದ ತಿಳಿದು, ಉಚಥ್ಯನು, 'ದಿಕ್ಪತಿಯಾಗಿ, ಅನ್ಯಸತಿಯನ್ನು ಕಾಮಿಸುವುದು ಒಳಿತಲ್ಲ. ಕಳಿಸು ನನ್ನ ಪತ್ನಿಯನ್ನು!' ಎಂದು ನಾರದನಿಂದ ಸಂದೇಶ ಕಳಿಸಿದನು. ಆ ಮಾತಿಗೆ ಮಿಸುಕದ ಜಲರಾಜನ ದುಡುಕುತನವನ್ನು ನಾರದ ವರ್ಣಿಸಲು ಕೇಳಿ, ಉಚಥ್ಯನು ಸಿಟ್ಟಾಗಿ, ಎಲ್ಲ ಜಲವನ್ನೂ ಕುಡಿದುಬಿಟ್ಟನು. ವರುಣಪುರಿಯು ಬರಿದಾಯಿತು! ಆಗ ವರುಣನು ದಿಗಿಲುಪಟ್ಟು, ದಿವ್ಯಸುಂದರಿಯನ್ನು ತಿರುಗಿಸಿ ಕೊಟ್ಟು, ಕ್ಷಮೆಯಾಚಿಸಿದನು. ಧರಣೀಶ! ಇಂತಹ ವಿಪ್ರವರರು ಹೆಚ್ಚೋ? ನೀನು ಹೆಚ್ಚೊ? ವಿಚಾರಿಸಿ ತಿಳಿ! ದುಡುಕಬೇಡ!

ಅಸುರರಿಗೆ ಸೋತು ಅಮರರು ಗಂಗಾತೀರದಲ್ಲಿ ಅಗಸ್ತ್ಯನಿಗೆ ಶರಣಾದರು. ಆತನು ಅಸುರರನ್ನು ನೇತ್ರಾಗ್ನಿಯಿಂದ ದಹಿಸಿ, ದೇವತೆಗಳಿಗೆ ವಿಜಯವನ್ನು ತಂದಿತ್ತನು. ಮತ್ತೊಂದು ಸಲ ವಸಿಷ್ಠನು ದೇವತೆಗಳನ್ನು ರಾಕ್ಷಸರ ಕೈಯಿಂದ ಸೋಲದಂತೆ ಉಳಿಸಿದನು. ಆತನ ರೋಷಜ್ವಾಲೆಗಳಿಂದ ಅಸುರರು ಭಸ್ಮೀಭೂತರಾದರು. ಪ್ರಪಂಚದಲ್ಲಿ ದುಷ್ಟರು ಪ್ರಬಲಿಸಿ, ಸಕಲ ಜನರನ್ನು ಪೀಡಿಸುವಾಗ ವಿಪ್ರರಲ್ಲದೆ, ಮತ್ತಾರೂ ಅವರ ಉಪದ್ರವವನ್ನು ತಪ್ಪಿಸಿ, ಜಗತ್ತನ್ನು ನಾಶವಾಗದಂತೆ, ಕಾಪಾಡಲು ಸಮರ್ಥ ರಿಲ್ಲ. ತಿಳಿ! ವಿಪ್ರಶಿಖಿವಿನಲ್ಲಿ ವಿಶ್ವಾಮಿತ್ರ, ವಸಿಷ್ಠ, ವಾಮದೇವ, ಗೌತಮ, ಭಾರದ್ವಾಜ, ಅತ್ರಿ, ಜಮದಗ್ನಿ, ಕಶ್ಯಪ ಪ್ರಮುಖರ ತಪಸ್ತೇಜೋ ಧರ್ಮಶಕ್ತಿಗಳು ರಕ್ತರೂಪವಾಗಿ ಹರಿಯುತ್ತಿವೆ. ಎಂದಿನವರೆಗೂ ಅವನು ಸಂಧ್ಯಾವಂದನವನ್ನು ಆಚರಿಸಿ, ಆಯಾ ಗೋತ್ರನಾಮಕ ಋಷಿಗಳನ್ನು ಸ್ಮರಿಸುವರೋ, ಅಂದಿನವರೆಗೂ ವಿಪ್ರರಿಗೆ ಬಾಧಕವಾಗಲಾರರು. ಕ್ಷತ್ರಿಯಾಪಸದರು ಎಂದು ಬ್ರಾಹ್ಮಣರು ಸಂಧ್ಯಾವಂದನ ದೂರರಾಗುವರೋ, ಅಂದು ಅವರೇ ಏಕೆ? ಸರ್ವಲೋಕಗಳೂ ಹಾಳಾದವೆಂದು ತಿಳಿ!

ಅತ್ರಿಮಹಾಮುನಿಯು ತನ್ನ ತೇಜಸ್ಸನ್ನು ಧಾರೆ ಎರೆದು ಚಂದ್ರ ಸೂರ್ಯರ

ತೇಜೋಭಂಗವನ್ನು ನಿವಾರಿಸಿ, ರಾಹುಕೇತುಗಳನ್ನು ದೂರ ಸರಿಸಿದನು. ರಾಜನ್! ಅಶ್ವಿನರು ಚ್ಯವನನಿಗೆ ನವಯೌವನವನ್ನಿತ್ತರು. ಅದಕ್ಕೆ ಪ್ರತಿಫಲವಾಗಿ ಭಾರ್ಗವನು ಅವರಿಗೆ ಸೋಮ ಹವಿರ್ಭಾಗವನ್ನು ಕೊಟ್ಟನು. ಅಂತಾಗಬಾರದೆಂದು, ಇಂದ್ರನು ವಜ್ರವನ್ನೆತ್ತಿ, ಚ್ಯವನನ ಮೇಲೇರಿ ಬಂದಾಗ ಚ್ಯವನನು ಇಂದ್ರನ ವಜ್ರಯುತ ಹಸ್ತವನ್ನು ಸಂಸ್ತಂಭಿಸಿ, ಅಶ್ವಿನಿಗಳಿಗೆ ಅಧ್ವರ ಹವಿರ್ಭಾಗವನ್ನು ಕೊಟ್ಟನು. ಆಗ ಬ್ರಹ್ಮನ ಆಜ್ಞೆಯಂತೆ ಚ್ಯವನನು ಇಂದ್ರನ ಹಸ್ತವನ್ನು ಕೆಳಗಿಳಿದು ಬರುವಂತೆ ಮಾಡಿದನು. ಅಂತಹ ವಿಪ್ರವರರನ್ನು ಅವಗಣಿಸುವುದು ನಿನಗೆ ತರವಲ್ಲ.

ಅರ್ಜುನ! ನಿನ್ನ ವಿಷಯವನ್ನೇ ಕೇಳು! ನೀನು ದತ್ತಾತ್ರೇಯ ಮುನಿವರನಿಗೆ ಶಿಷ್ಯನಾಗಿ, ಅತುಲಬಲಪರಾಕ್ರಮತೇಜೋವೀರ್ಯಗಳನ್ನು ಆ ಭಗವಂತನ ದಯದಿಂದ ಪಡೆದಿರುವೆ! ಕೃತಘ್ನನಾಗಬೇಡ! ಅನಿಮಿಷರಾದಿ ಅಖಿಲ ಜನರು ವಿಪ್ರಾಶೀರ್ವಾದವನ್ನು ಆಧಾರಿಸಿ ಜೀವಿಸಿ, ಸುಖದಿಂದಿರುವರು. ವಿಪ್ರರು ವಿಷ್ಣುಸನ್ನಿಧಿ ಪಾತ್ರರು! ಅವರನ್ನು ಆಶ್ರಯಿಸು! ಇಲ್ಲದಿರೆ ನಿನಗೆ ಕ್ಷೇಮವಿಲ್ಲ! ತಿಳಿ!'

ಇಂತು ನುಡಿದ ಭಗವದ್ವಾಯುವಿನ ವಚನದಿಂದ ಎಚ್ಚತ್ತು, ಕಾರ್ತವೀರ್ಯಾರ್ಜುನನು ವಿಪ್ರ ಶ್ರೀಪಾದಂಗಳನ್ನು ಆಶ್ರಯಿಸಿ, ಬಹುಕಾಲ ಬಾಳಿ ಕೊನೆಗೆ ಅದೇ ಕಾರ್ತವೀರ್ಯನು ಜಮದಗ್ನಿಮುನಿಗೆ ದ್ರೋಹ ಬಗೆದು, ಸರ್ವನಾಶವಾದನು. ಶ್ರೀಕೃಷ್ಣನು ಭಗವಂತನಾದರೂ ಅವತರಿಸಿರುವಾಗ ಲೋಕಶಿಕ್ಷೆಗಾಗಿ, ಬ್ರಾಹ್ಮಣರನ್ನು ಗೌರವಿಸಿ, ದಾನವಿತ್ತು, ಪೂಜಿಸಿ, ಅವರ ರೋಷ ಕೋಪಾದಿಗಳನ್ನು ಸಹಿಸಿ, ವಿಪ್ರರು ಸರ್ವಥಾ ಪೂಜ್ಯರೆಂದು ಪ್ರಕಟಿಸಿರುವನು. ಜಗಜ್ಜನ್ಮಾದಿ ಕಾರಣನು, ಬ್ರಹ್ಮಜನಕನು, ಲಕ್ಷ್ಮೀರಮಣನು, ಬ್ರಹ್ಮರುದ್ರೇಂದ್ರ ಚಂದ್ರಾದಿ ಸರ್ವದೇವವಂದ್ಯನು ಆಗಿದ್ದು, ಶ್ರೀಕೃಷ್ಣನು, ಯಜ್ಞಯಾಗಾದಿಗಳನ್ನು ಮಾಡಿ, ಋತ್ವಿಜ ಸದಸ್ಯಾದಿ ವಿಪ್ರರಿಗೆ ಬೇಕಾದುದನ್ನಿತ್ತು ಪೂಜಿಸಿರುವನು. ಋಗ್ವೇದದಲ್ಲಿಯು ಇತರ ವೇದತ್ರಯದಲ್ಲಿಯು ಶ್ರೀಕೃಷ್ಣನ ಮಹಿಮೆ ಅಗಾಧವಾಗಿ ವರ್ಣಿಸಲ್ಪಟ್ಟಿದೆ. ಅಗ್ನಿ, ಯಜಮಾನ, ಆಜ್ಯಾದಿ ಹವಿಃಪದಾರ್ಥಗಳು, ಸ್ರುಕ್ ಸ್ರುವಾದಿ ಸಾಧನಗಳು ಎಲ್ಲವೂ ಶ್ರೀಕೃಷ್ಣಮಯವಾಗಿವೆ. ಆತನೇ ಅವರವರ ಅಂತರ್ಯಾಮಿಯು, ಸ್ವಾಮಿಯೂ ಆಗಿ ಯಜ್ಞಫಲಪ್ರದನೂ ಆಗಿರುವನು. ಪರಂಬ್ರಹ್ಮನಾದ ಶ್ರೀಕೃಷ್ಣನನ್ನು ವೇದಗಳು ಬ್ರಹ್ಮ, ಭಗವಾನ್, ಆತ್ಮಾ, ಪರಂ, ವಾಸುದೇವ ಎಂಬ ಅನನ್ಯ ಸಿದ್ಧನಾಮಗಳಿಂದ ಪೊಗಳುತ್ತಿವೆ.

ಧರ್ಮಾರ್ಥ ಕಾಮ ಮೋಕ್ಷಗಳಿಗೆ ವಿಪ್ರ ಪ್ರಸಾದವು ಸಾಧಕವಾಗಿದೆ. ವಿಪ್ರ ಪೂಜೆಯಿಂದ ದೇವಪಿತೃಗಳು ಪ್ರೀತರಾಗುವರು. ವಿಪ್ರಾಶೀರ್ವಾದದಿಂದ ಆಯುಃ ಶ್ರೀ ಕೀರ್ತಿ ವಿಭವಾರೋಗ್ಯಗಳು ಸಂಭವಿಸುತ್ತಿವೆ. ವಿಪ್ರಾವಮಾನದಿಂದ ಅವೆಲ್ಲವೂ ನಾಶವಾಗುವವು.

ಒಂದು ದಿನ ಕೋಪ ಸ್ವಭಾವನಾದ ದುರ್ವಾಸ ಋಷಿಯು ಶ್ರೀಕೃಷ್ಣನ ಮಂದಿರಕ್ಕೆ ಬಂದನು. ಆತನು ಶಿವಾವತಾರವಲ್ಲವೇ? ವಿಪ್ರನೆಂದು ಬಂದ ಮುನಿಯನ್ನು

ಶ್ರೀಕೃಷ್ಣನು ಸತ್ಕರಿಸಿದನು. ಕೆಲದಿನವಲ್ಲಿ ನೆಲೆಸಿದ್ದ ದುರ್ವಾಸನ ವರ್ತನವು ವಿಚಿತ್ರ ವಾಗಿತ್ತು. ನಗುತ್ತಾ, ಅಳುತ್ತಾ, ಬರುತ್ತಾ, ಹೋಗುತ್ತಾ, ನಿಂದಿಸಿ, ವಂದಿಸಿ, ಮನಬಂದಂತೆ ವರ್ತಿಸುವ ಮುನಿಯನ್ನು ಕೃಷ್ಣರುಕ್ಮಿಣಿಯರು ಸಂತೈಸುತ್ತಿದ್ದರು. ಎಲ್ಲರಿಗೆಂದು ಮಾಡಿದ ಅಡುಗೆ ಎಲ್ಲವನ್ನು ತಾನೇ ಉಣ್ಣುವುದು, ಅಡುಗೆ ಸಿದ್ಧವಾಗಿರಲು ಬಿಟ್ಟು ನಿದ್ರಿಸುವುದು, ತಲ್ಪವನ್ನು ಬಿಟ್ಟು ನೆಲದಿ ಮಲಗುವುದು, ಸ್ನಾನಕ್ಕೆಂದು ಕಾಯಿಸಿಟ್ಟ ನೀರನ್ನು ಚೆಲ್ಲಿಬಿಡುವುದು, ಉಪಚರಿಸುವವರನ್ನು ಬೈದುದೂಡುವುದು; ಇಂತು ವಿಚಿತ್ರ ರೀತಿಯಿಂದ ದುರ್ವಾಸನು ನರ್ತಿಸಲು ನೋಡಿ, ಯದು ವೀರರು ಬೇಸತ್ತು, ಸಿಟ್ಟಾಗಿ, ಏನೂ ಮಾಡಲಾರದೆ ಭಯಪಟ್ಟು, ಸುಮ್ಮನಿರುತ್ತಿದ್ದರು.

ಒಂದು ದಿನ ದುರ್ವಾಸನು ಪಾಯಸವನ್ನು ಮಾಡಿಸಿ, ಸ್ವಲ್ಪ ಉಂಡು, ಸ್ವಲ್ಪವನ್ನು ತನ್ನ ಮೈಗೆ ಪೂಸೆಂದನು. ಶ್ರೀಕೃಷ್ಣನು ಪೂಸುತ್ತಿರಲು, ಮುನಿಯು ಪಾಯಸವನ್ನೆತ್ತಿ, ರುಕ್ಮಿಣೀ ಕೃಷ್ಣರ ಮೈಗೆ ಪೂಸಿದನು. ಆಗ ರಥವನ್ನು ತರಿಸಿ, ಅದರಲ್ಲಿ ತಾನು ಕೂತನು. ಶ್ರೀಕೃಷ್ಣರು ಅದನ್ನು ಕುದುರೆಗಳಂತೆ ಎಳೆದು, ದ್ವಾರಕಾವೀಧಿಗಳಲ್ಲಿ ನಡೆತಂದರು. ದುರ್ವಾಸನು ಅವರನ್ನು ತೋತ್ರ (ಚಾಟಿ) ದಿಂದ ಹೊಡೆಯುತ್ತಿದ್ದನು. ಆ ದಂಪತಿಗಳೀರ್ವರ ಮನದಲ್ಲಿ ಕೋಪ, ವಿಕಾರಗಳಿಲ್ಲದಿರುವುದನ್ನರಿತು, ದುರ್ವಾಸನು ಪ್ರೀತನಾಗಿ, ಮಂದಿರವನ್ನು ಸೇರಿ, ಶ್ರೀಶನಿಗಿಂತೆಂದನು:

'ದೇವ ದೇವ! ನಿನ್ನ ಮಹಿಮೆಯು ಅದ್ಭುತವಾಗಿದೆ. ಇಷ್ಟು ಅಪಚಾರಗೈದರೂ ನೀನು ಸಿಟ್ಟಾಗಲಿಲ್ಲ. ಇದು ನಿನ್ನ ಸರ್ವೋತ್ತಮತ್ವ ದ್ಯೋತಕವಾಗಿದೆ. ಎಲ್ಲ ದೇವಾದಿ ಜೀವರ ಪ್ರೀತಿಗೆ ವಿಷಯನಾಗು! ನನ್ನ ಮೈಯೆಲ್ಲ ಪಾಯಸವನ್ನೂ ಪೂಸಿ, ಅಂಗಾಲಿಗೆ ಪೂಸದೆ ಬಿಟ್ಟೆ! ಆದುದರಿಂದ ಜರಾವ್ಯಾಧನ ಬಾಣವು ನಿನ್ನ ಅಂಗಾಲಿಗೆ ಸೋಕಲಿ! ನೀನು ಪರಂಧಾಮವನ್ನು ಪೊಂದುವುದಕ್ಕೆ ಅದು ಸೂಚಕವಾಗಲಿ! ಅಮ್ಮಾ ಲೋಕ ಜನನೀ! ನೀನು ಸೌಂದರ್ಯ ಸೌಭಾಗ್ಯ ಸೌಶೀಲ್ಯಾದಿ ಗುಣಮಣಿಗಳಿಂದ ಅಸಮಾನಳೆನಿಸಿ ವಿರಾಜಿತಳಾಗು! ಶ್ರೀಕೃಷ್ಣನ ಷೋಡಶ ಸಾಹಸ್ರಯುತ ಅಷ್ಟೋತ್ತರ ರಮಣಿಯರಲ್ಲಿ ನೀನು ಆತನ ಪ್ರಿಯತಮಳೆನಿಸು!' ಇಂತು ವರವಿತ್ತು, ದುರ್ವಾಸನು ಅಂತರ್ಹಿತನಾದನು. ಶ್ರೀಕೃಷ್ಣನೂ ಬ್ರಾಹ್ಮಣಾಶೀರ್ವಾದವೆಂದು, ಸತ್ಯಸಂಕಲ್ಪನಾದ ತನ್ನ ಇಚ್ಛಾನುಸಾರವಾಗಿ ಬಂದ ವರವನ್ನು ಅನುಮೋದಿಸಿದನು.

ಶ್ರೀಕೃಷ್ಣನು ತನ್ನನ್ನು ಸುತ್ತಿನಿಂತ ಯದು ಕುಮಾರರಿಗೆ ಶಿವಮಹಿಮೆಯನ್ನು ತಿಳಿಸಲೋಸುಗ ಇಂತೆಂದನು: 'ದುರ್ವಾಸನೆಂದರೆ ಶಿವನೇ! ಅಂತಹ ಮಹಾದೇವನ ಪ್ರಸಾದವು ನಿಮಗೆ ಅವಶ್ಯ ಸಂಪಾದ್ಯವಾಗಿದೆ. ಆತನ ಕೋಪದಿಂದ ಅಧರ್ಮವರ್ತನರು ನಾಶವಾಗುವರು. ಹಿಂದೆ ರುದ್ರ ಭಾಗವನ್ನು ಬಿಟ್ಟು ಮಾಡಿದ ಯಜ್ಞವೂ, ತತ್ಕರ್ತನಾದ ದಕ್ಷನೂ ರುದ್ರ ಕೋಪದಿಂದ ನಷ್ಟವಾಗಲು, ಈಶಾನುಗ್ರಹವೇ ಮತ್ತೆ ದಕ್ಷನನು ಉಜ್ಜೀವಿಸಿ, ಯಜ್ಞವನ್ನು ಉದ್ಧರಿಸಿತು. ತ್ರಿಪುರಾಸುರರು ಲೋಕಪೀಡಕರಾಗಿರುವಾಗ,

ಅವರನ್ನು ಸಂಹರಿಸಿ, ಲೋಕಗಳನ್ನು ರಕ್ಷಿಸಿದವನು ಶಂಭುವಲ್ಲವೇ? ಕುಮಾರಸ್ವಾಮಿಯನ್ನು ಪಡೆದು, ದೇವ ಸೇನಾಪತಿಯನ್ನಾಗಿ ಕೊಟ್ಟು, ಆತನಿಂದ ತಾರಕಾಸುರರಾದಿ ದೈತ್ಯಪೀಡೆಯನ್ನು ನಿವಾರಿಸಿದವನು ರುದ್ರನಲ್ಲವೇ?

ಶಿವ ಎಂದರೆ ಮಂಗಳವೆಂದರ್ಥವು. ಆತನು ಅಗ್ನಿ, ಭೂತವಾಯು, ಆದಿತ್ಯ, ಚಂದ್ರ, ದಕ್ಷ, ಇಂದ್ರ ಮುಂತಾದ ದೇವತೆಗಳಿಗೆ ಒಡೆಯನಾಗಿ ಮಹಾದೇವನೆನಿಸಿರುವನು. ಮಹಾನ್ ಎಂದರೆ ಬ್ರಹ್ಮನು ಮತ್ತು ವಿಷ್ಣುವು! ಅವರೀರ್ವರನ್ನೂ ಒಡೆಯರಾಗಿ ಪಡೆದು ರುದ್ರನು ಮಹಾದೇವನೆನಿಸಿದನು. ರುದ್ರನಿಗೆ ತಂದೆಯೇ ಅಲ್ಲದೆ ಜ್ಞಾನೋಪದೇಶಕ ಗುರುವೂ ಆದ ಬ್ರಹ್ಮದೇವನು, ಅವನ ತಂದೆ ಮತ್ತು ಗುರುವೂ ಆದ ನಾನು ಇವರನ್ನು ಬಿಟ್ಟು ಮಹಾದೇವನಿಗೆ ಉತ್ತಮರಿಲ್ಲ. ಪ್ರತಾಪಾತಿಶಯದಿಂದ ಉಗ್ರನು, ಪ್ರಳಯ ಕೋಪಾಟೋಪದಿಂದ ರುದ್ರನು, ಧೂಮ್ರ ಕೇಶನಾದುದರಿಂದ ಧೂರ್ಜಟಿಯು, ಪಶುಗಳಂತಿರುವ ಜೀವರಿಗೆ ಪತಿಯಾದುದರಿಂದ ಪಶುಪತಿಯು. ಇಂತು ಬಹುನಾಮನಾಗಿ ಮೆರೆವ ವಿಪ್ರರನ್ನಂತೆ ನಾನೂ ಆತನನ್ನು ಸತ್ಕರಿಸಿ, ನಿಮಗೆ ಆತನಿಂದ ಶ್ರೇಯಸನ್ನು ತಂದಿತ್ತಿರುವೆನು. ನೀವೂ ಶಿವನನ್ನು ಲೋಕಗುರುವೆಂದು ಭಜಿಸಿ, ಸುಖಿಸಿರಿ!

ಇಂತು ವಿಪ್ರಮಹಿಮೆಯನ್ನು ವರ್ಣಿಸಿದ ತಾತನನ್ನು ಕೌಂತೇಯಾಗ್ರಜನು 'ಪರಮಾನುಷ್ಠೇಯ ಧರ್ಮವಾವುದು?' ಎಂದು ಪ್ರಶ್ನಿಸಿದನು. ಆಗ ಭೀಷ್ಮನು 'ಧರ್ಮರಾಜ! ಸಕಲ ಧರ್ಮಗಳನ್ನು ನಿನಗರುಹಿದೆನು. ಉತ್ತರಾಯಣವು ಬಂದಿದೆ. ನನಗೆ ಈ ಲೋಕವನ್ನು ಬಿಟ್ಟು ಹೋಗುವ ಸಮಯವೂ ಬಂದಿದೆ ಎಂದು ನನಗೆ ಗೊತ್ತಾಗುತ್ತಿದೆ. ಮತ್ತೆ ಮತ್ತೆ ಸಂದೇಹಪಟ್ಟು ಕೇಳಬೇಡ! ಧರ್ಮಗಳಲ್ಲಿ ಅತ್ಯುತ್ತಮ ಧರ್ಮವೆಂದರೆ ಶ್ರೀಹರಿಭಕ್ತಿಯೇ. ವಿಷ್ಣುಧರ್ಮಗಳಿಗೆ ವಿರುದ್ಧವಾದುದೆಲ್ಲವೂ ಅಧರ್ಮವೆಂದು ತಿಳಿ! ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಧರ್ಮವೇ ಶ್ರೇಷ್ಠತಮವು. ಮಿಕ್ಕೆಲ್ಲ ಧರ್ಮವಚನಗಳನ್ನು ಅದಕ್ಕೆ ವಿಧೇಯಕಗಳೆಂದು ತಿಳಿದು, ವಿಷ್ಣುಧರ್ಮದಲ್ಲಿ ಸ್ಥಿರವಾಗಿ ನಡೆ!

ಧರ್ಮವನ್ನು ತಿಳಿಸುವವರೇ ವಿರಲ! ಅದರಲ್ಲಿ ಯಥಾರ್ಥ ಧರ್ಮವನ್ನು ತಿಳಿಸುವರು ವಿರಲತರ! ಅದರಲ್ಲಿಯೂ ವಿಷ್ಣು ಸರ್ವೋತ್ತಮತ್ವ, ವಾಯು ಜೀವೋತ್ತಮತ್ವ ವಿಶಿಷ್ಟ ಧರ್ಮವನ್ನು ತಿಳಿಸುವರು ವಿರಲತಮ. ಅಂತಹ ಉತ್ತಮ ಧರ್ಮವನ್ನು ಉತ್ತಮ ಋಷಿಸಭೆಯಲ್ಲಿ, ಉತ್ತಮ ದೇವನೆದುರಿಗೆ, ಉತ್ತಮ ಶ್ರೋತನಾದ ನಿನಗೆ ತಿಳಿಸಿರುವೆನು.

ಕಾಮ ಕ್ರೋಧವರ್ಜನ, ಸಜ್ಜನಸಂಗ, ಸಚ್ಛಾಸ್ತ್ರ ಶ್ರವಣಮನನಗಳು, ನಿಷ್ಕಾಮ ಕರ್ಮಾನುಷ್ಠಾನ, ಪಾತ್ರವನ್ನರಿತು, ದಾನ, ನಿಯತಧ್ಯಾನ, ಇವನ್ನು ಶ್ರೀಶಭಕ್ತಿಯುಕ್ತನಾಗಿ ಮಾಡುವುದೇ ಅತ್ಯಂತೋತ್ತಮ ಧರ್ಮವು. ಧರ್ಮ ಸ್ವರೂಪವನ್ನು ಶಾಸ್ತ್ರದಿಂದ ತಿಳಿ! ಸ್ವಬುದ್ಧಿಯಿಂದಲ್ಲ. ಸುಜನರನ್ನು ನಡತೆಯಿಂದ ತಿಳಿ! ಬರಿಮಾತಿನಿಂದಲ್ಲ. ಆಗಮ,

ಪ್ರತ್ಯಕ್ಷ, ಅನುಮಾನಗಳೆಂಬ ಪ್ರಮಾಣಗಳು ಅವುಗಳ ಸಹಾಯದಿಂದ ಯಥಾರ್ಥಜ್ಞಾನವನ್ನಾರ್ಜಿಸು!' ಇಂತು ಭೀಷ್ಮನು ನಿರೂಪಿಸಿ, ಮತ್ತೇನನ್ನಾದರೂ ಬೇಗ ಕೇಳೆಂದನು.

## ೧೭. ಭೀಷ್ಮ ಹಿತವಚನ

ಧರ್ಮರಾಜನು 'ಪಿತಾಮಹ! ಮಹಾಪ್ರಾಜ್ಞನಾದ ನಿನ್ನಿಂದ ಸಕಲಧರ್ಮ ರಹಸ್ಯವನ್ನರಿತು, ಧನ್ಯನಾದೆನು. ನನ್ನ ಸಂಶಯಗಳೆಲ್ಲವೂ ದೂರವಾದವು. ಆದರೆ ಮುಂದೆ ನಾನು ರಾಜಕಾರ್ಯಗಳಲ್ಲಿ ಆಸಕ್ತನಾಗದಂತೆ ನನಗೆ ಕೆಲವು ಹಿತವಚನವನ್ನು ತಿಳಿಸು!' ಎಂದು ಕೇಳಿದನು.

ಬೀಷ್ಮನಿಂತೆಂದನು: 'ಧರ್ಮರಹಸ್ಯವನ್ನು ಜ್ಞಾನಿ ಜನರಿಂದ ತಿಳಿ! ಧರ್ಮವು ಒಂದೊಂದು ಕಾಲದಲ್ಲಿ ಅಧರ್ಮದಂತೆ ವರ್ಜನೀಯವೆನಿಸುವುದು. ಕಾಲದೇಶಗಳನ್ನರಿತು ಧರ್ಮವನ್ನು ನಡೆಸು! ಒಂದೊಂದು ಸಲ ಅಧರ್ಮವೇ ಧರ್ಮದಂತೆ ತೋರಿ ಬರುವುದು. ತೃಣಾವೃತಕೂಪದಂತೆ ಅದನ್ನು ಪರಿವರ್ಜಿಸು! ಸೂಕ್ಷ್ಮ ಚಿತ್ತದಿಂದ ಧರ್ಮಾಧರ್ಮಗಳನ್ನು ವಿಚಾರಿಸಿ ತಿಳಿದು ನಡೆ!

ಧರ್ಮೋಪದೇಶಕರಿಲ್ಲದೆ ಧರ್ಮವು ಕೆಡುವುದು. ಧರ್ಮೋಪದೇಶಕರನ್ನು ಪೋಷಿಸು! ಅಧರ್ಮವನ್ನು ಧರ್ಮವೆಂದು ಹೇಳುವ ದುರಾಶಾಪರರನ್ನು ಶಿಕ್ಷಿಸು! ವೇದವನ್ನೋದಿ, ಅರ್ಥವನ್ನು ತಿಳಿದು, ಆಚಾರವಂತರಾದ ವಿಪ್ರರನ್ನು ಬೇಕಾದುದನ್ನಿತ್ತು ಪೋಷಿಸು! ಧರ್ಮಾಧಿಕಾರದಲ್ಲಿ ಅಂತಹವರನ್ನು ನಿಯಮಿಸು! ಲೋಭ, ಮೋಹ, ಹಠ, ಮದಗಳಿಂದ ಕೆಟ್ಟ ಬುದ್ಧಿ ಉಳ್ಳವರನ್ನು ಹತ್ತಿರ ಸೇರಿಸಬೇಡ! ಕಾಮಾರ್ಥಗಳನ್ನು ಮೋಕ್ಷಧರ್ಮಗಳಿಗೆ ವಿಧೇಯವಾಗಿರುವಂತೆ ನಡೆಸು!

ವೇದಾಧ್ಯಯನ, ಯಜ್ಞಯಾಗಗಳು, ದಾನ ಧರ್ಮಗಳು, ವರ್ಣಾಶ್ರಮ ವಿಹಿತಾಚಾರಗಳು ಇವು ಸಂತತವಾಗಿ ನಡೆಯುವಂತೆ ಅವುಗಳು, ಕೆಡದಂತೆ ನೋಡು! ಆಗಮ, ಪ್ರತ್ಯಕ್ಷ, ಅನುಮಾನಗಳೆಂಬ ಪ್ರಮಾಣಗಳನ್ನು ತಿಳಿದಜ್ಞಾನಿಜನರ ಕೈಲಿ ರಾಜ್ಯಸೂತ್ರಗಳನ್ನು ಕೊಡು! ನಾನು ಜಡನಂತೆ, ಅಂಧನಂತೆ, ಮಾತನಾಡುತ್ತಿಲ್ಲ. ನಿಶ್ಶಂಕವಾಗಿ ನಿನಗೆ ಉಪದೇಶಿಸಿರುವ ಧರ್ಮತತ್ವಗಳನ್ನು ನಿಜವೆಂದು ನಂಬು!

ಅಹಿಂಸೆ, ದಾನ, ಸತ್ಯವಚನ, ಕ್ರೋಧವರ್ಜನಗಳೇ ಧರ್ಮದ ನಾಲ್ಕು ಸೋಪಾನಗಳು. ಅವನ್ನು ಕೆಡಂದತೆ ಕಾಪಾಡು! ಬ್ರಾಹ್ಮಣರಿಂದ ಧರ್ಮರಹಸ್ಯವನ್ನು ತಿಳಿ! ಕ್ಷತ್ರಿಯರು ಅಸೂಯಾಮದ ಮೋಹವಶರಾಗುವುದುಂಟು. ವೈಶ್ಯರು ವಣಿಜಧರ್ಮದಲ್ಲಿ ಧನಕ್ಕಾಗಿ ಅನ್ಯತಪರರಾಗುವುದುಂಟು. ಶೂದ್ರರು ವೃತ್ತಿವ್ಯಾಕುಲರಾಗಿ ಉದಾಸೀನರಾಗುವುದುಂಟು. ಆದರೆ ವಿಪ್ರರು ಅನ್ನದಿಂದಲ್ಲದೆ ಬೇರಾವುದರಿಂದಲೂ ಕೆಡರು. ಅವರಿಗೆ ಅನ್ನವನ್ನಿಡು! ಅದರಿಂದ ಅವರು ತೃಪ್ತರಾಗಿ, ಸ್ವಧರ್ಮಶೀಲರಾಗುವರು. ಅಂತಹ ವಿಪ್ರರಿಂದ ಇತರರು ಧರ್ಮವನ್ನರಿತು, ಯಥಾಯೋಗ್ಯವಾಗಿ, ಅನುಷ್ಠಿಸಿ, ಅವರೂ ಧರ್ಮಶೀಲರಾಗಿ ಮುಕ್ತರಾಗುವರು. ಇದನ್ನರಿತು ವರ್ಣಾಶ್ರಮ ಧರ್ಮಗಳನ್ನು ಕೆಡದಂತೆ ಕಾಪಾಡು! ವೃತ್ತಿಹೀನರಾದ ವಿಪ್ರಾದಿಗಳಿಂದ ಲೋಕವೇ ಕೆಟ್ಟು ಧರ್ಮಹೀನವಾಗುವುದು. ರಜಸ್ತಮೋಮಯಚಿತ್ತರಾದವರು ಧರ್ಮ

ದ್ವೇಷಿಗಳಾಗಿ, ಲೋಕಮರ್ಯಾದೆಯನ್ನು ಕೆಡಿಸುವರು. ಸಾತ್ವಿಕರು ಹಾಗಲ್ಲ. ಅವರು ಧರ್ಮನಿರತರಾಗಿರುವರು. ಸಾತ್ವಿಕರಿಗೆ ಯಾರೇ ಆಗಲಿ ಊರ್ಧ್ವಲೋಕಗಳು, ರಾಜಸರಿಗೆ ಮಧ್ಯಲೋಕಗಳು, ತಾಮಸರಿಗೆ ಅಧೋಲೋಕಗಳು ಆಗುವವು.

ಅಸಾಧು ಜನರು ತಾವಾಗಿ ತಿಳಿಯರು-ಪರರನ್ನು ಕೇಳರು-ಸಾಧುಜನರು ಹೇಳಿದಂತೆ ನಡೆಯರು. ಸಾಧುಗಳು ತಾವು ತಿಳಿದು-ಇತರ ಸುಜನರಿಂದ ಕೇಳಿ, ಉಚಿತವಾಗಿ ನಡೆಯುವರು. ಸಾಧುಗಳು ಅತಿಥಿ ಬಂಧು ಬಾಲರಿಗಿತ್ತು, ಆಮೇಲೆ ತಾವು ಉಣ್ಣುವರು. ಮಲಮೂತ್ರಾದಿ ವಿಸರ್ಜನ ವ್ಯಾಪಾರಗಳನ್ನು ವಿವಿಕ್ತಸ್ಥಳಗಳಲ್ಲಿ ಮಾತ್ರ ಮಾಡುವರು. ಪರರ ಮನಸ್ಸಿಗೆ ಹೇಯವೆನಿಸುವಂತೆ ಸುಜನರು ವರ್ತಿಸುವರು. ಸುರತಾದಿಗಳನ್ನು ಗುಪ್ತವಾಗಿಡುವರು. ಹಿರಿಯರು, ಗುರುಗಳು, ಮೊದಲಾದ ಗೌರವನೀಯರಿಗೆ ಹಾದಿ ಕೊಟ್ಟು ನಡೆವರು. ನಿಜದಾರರಲ್ಲಿ ತೃಪ್ತರಾಗಿರುವರು. ಮನಸ್ಸಿನಲ್ಲಿ ಕಲ್ಮಷವಿಲ್ಲದೆ ಮಾತಾಡುವರು. ಇಂದ್ರಿಯಗಳಿಗೆ ವಶರಾಗಿ ಅಕಾರ್ಯಕ್ಕಿಳಿಯರು. ಪಾಪವನ್ನರಿತು, ಪ್ರಾಯಶ್ಚಿತ್ತವನ್ನು ಮಾಡಿಕೊಂಬುವರು. ದಾನಾದಿಗಳನ್ನಿತ್ತು, ಹೇಳಿಕೊಳ್ಳರು. ಅಖಿಲಭೂತಗಳಲ್ಲಿ ದಯೆ ತೋರುವರು.

ಧರ್ಮರಾಜ ! ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳ ಫಲುವ ತಪ್ಪದೇ ಅನುಭವಿಸಬೇಕು. ಕರ್ಮಫಲವು ವಿಚಿತ್ರವಾಗಿದೆ. ಪ್ರಯತ್ನವಿಲ್ಲದೆ ಕೆಲವರಿಗೆ ಅರ್ಥಸಿದ್ಧಿಯಾಗುತ್ತದೆ-ಎಷ್ಟು ಪ್ರಯತ್ನಿಸಿದರೂ ಅರ್ಥಸಿದ್ಧಿಯಾಗದಿರುವುದು ಕೆಲವರಿಗೆ. ನೀತಿವಂತರು ದರಿದ್ರರಾಗಿರುವರು. ಅಧರ್ಮಿಷ್ಠರು ಧನವಂತರಾಗಿರುವರು. ಬಲಹೀನರು ಹಾಗೇ ನೂರು ವರ್ಷ ಬಾಳುವರು. ಬಲವಂತರು ಇದ್ದಕ್ಕಿದ್ದಂತೆ ಸಾಯುವರು. ಧನವಂತರಿಗೆ ಭೋಗವಿಲ್ಲ; ದರಿದ್ರರಿಗೆ ಧನವಿಲ್ಲ. ಇಂತೆಲ್ಲವೂ ಪೂರ್ವಾರ್ಜಿತ ಕರ್ಮಫಲವಲ್ಲದೇ ಮತ್ತಾವುದೂ ಅಲ್ಲ.

ತಪೋವಂತರು ಭಾಗ್ಯವಂತರಾಗುವರು. ದಾನರಹಿತರು, ಧನವಿದ್ದೂ ರೋಗಾದಿ ಪೀಡಿತರಾಗಿ ಭೋಗರಹಿತರಾಗಿರುವರು. ಹಿಂದೆ ಕೊಡದಿರುವುದು ಇಂದು ಬರುವುದಾದರೂ ಎಂತು ? ಆದುದರಿಂದ ದೇವನಿತ್ತಾಗ, ದಾನವನ್ನು ಮಾಡು! ನೀನೂ ಭ್ರಾತೃ ಪತ್ನೀ ಪುತ್ರಾದಿ ಸಮೇತನಾಗಿ ಭೋಗಗಳನ್ನು ಅನುಭವಿಸು ! ಧರ್ಮಾದರವಂತನಿಗೆ ಕಾಲದಲ್ಲಿ ಅದರ ಫಲವು ತಪ್ಪದೇ ಸಿಗುವದು. ತಪಸ್ಸು, ವೇದವಿಚಾರ, ದಾನ, ಉಪವಾಸ, ಸ್ನಾನ, ದೇವಪೂಜಾ, ತೀರ್ಥಯಾತ್ರಾ, ಜಪ, ಅಹಿಂತೆ, ಸತ್ಯ, ಪ್ರಜಾರಂಜನಗಳಿಂದ ಪುಣ್ಯರಾಶಿಯನ್ನು ಸಂಪಾದಿಸು! ಅದನ್ನು ಶ್ರೀಕೃಷ್ಣನಿಗರ್ಪಿಸು ! ಸಾಂಸಾರಿಕ ತಾಪವಾರಾಶಿಗೆ ತಾರಕನೌಕೆಯಾದ ಶ್ರೀಹರಿ ಪಾದಾರವಿಂದವನ್ನಾಶ್ರಯಿಸು ! ಶ್ರೀಕೃಷ್ಣ-ವೇದವ್ಯಾಸರು ನಿನಗೆ ನೇತ್ರದ್ವಯದಂತಿರುವರು. ಅವರನ್ನು ಆಶ್ರಯಿಸು. ನಿನಗೆ ಪಾಪವಿಲ್ಲ. ಭಾರತರಣದಲ್ಲಿ ಮಾಡಿದ ಶತ್ರುಸಂಹಾರದಿಂದ ಧರ್ಮವಿಜಯವಾಗಿದೆ. ಚಿಂತಿಸಬೇಡ ! ಶಾಂತನಾಗಿ, ಪ್ರಜರನ್ನು ಚನ್ನಾಗಿ ಪಾಲಿಸು ! ವಿಜಯಿಯಾಗು! ಪಾಂಡವರೇ! ನೀವೆಲ್ಲರೂ ಚಿರಜೀವರು, ಧರ್ಮರಕ್ಷಕರು ಆಗಿ ಬಾಳಿರಿ! ನಿಮ್ಮಿಕಥೆಯು ಆಚಂದ್ರಾರ್ಕವಾಗಿ ಬೆಳಗಲಿ ! ನಿಮ್ಮಿಂದ ಧರ್ಮವರ್ತನವನ್ನರಿತು ಜನರು ಉದ್ಧೃತರಾಗಲಿ !"

ಇಂತು ನುಡಿದು ಭೀಷ್ಮನು ಧರ್ಮಜಾದಿಗಳನ್ನು ಆಶೀರ್ವದಿಸಿ, ಅವರನ್ನು ಕರಿಪುರಕ್ಕೆ ಕಳಿಸಿಕೊಟ್ಟನು. ಧರ್ಮಜನೂ ವೀತಸಂಶಯನಾಗಿ, ಆತನ ಅಪ್ಪಣೆಯನ್ನು ಪಡೆದು ಹಸ್ತಿನಾವತಿಗೆ ತೆರಳಿದನು. ಶ್ರೀಕೃಷ್ಣನು ಪಾಂಡವರ ಹಿಂದೆಯೇ ಗಜಪುರಿಯನ್ನು ಸೇರಿದನು. ಧೃತರಾಷ್ಟ್ರವಿದುರರೂ ತಂತಮ್ಮ ಮನೆಗಳನ್ನು ಸೇರಿದರು. ಶ್ರೀಕೃಷ್ಣದ್ವೈಪಾಯನನಾಗಿ ಮುನಿಗಳು ಅಂತರ್ಹಿತರಾದರು. ಮತ್ತೆ ಉತ್ತರಾಯಣ ಮಾಘ ಶು.ಅಷ್ಟಮಿಯಂದು ಎಲ್ಲರೂ ಭೀಷ್ಮನನ್ನು ನೋಡಲು ನಿಶ್ಚಯಿಸಿ, ಎಲ್ಲರೂ ತೆರಳಿದರು.

ಧರ್ಮರಾಜನು ಸೋದರಚತುಷ್ಟಯ ಸಹಿತನಾಗಿ, ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು ಗಜಪುರಿಯನ್ನು ಪ್ರವೇಶಿಸಿದನು. ಪುರನಾರಿಯರು ಸೌಧಾಗ್ರಗಳಲ್ಲಿ ನಿಂತು, ಲಾಜಾಕ್ಷತೆಗಳನ್ನು, ಪುಷ್ಪಗಳನ್ನು ಮಳೆಗರೆದು, ನೀರಾಜನಗಳನ್ನಿತ್ತು, ಅವರನ್ನು ಸ್ವಗತಿಸಿದರು. ಧರ್ಮರಾಜನು ಕುಂತೀದೇವಿಗೆ ವಂದಿಸಿ, ತಮ್ಮಂದಿರನ್ನು ಅವರವರ ಮಂದಿರಗಳಿಗೆ ಕಳಿಸಿ, ವಿಪ್ರಾದಿಗಳನ್ನು ಸತ್ಕರಿಸಿ ಕಳಿಸಿದನು. ಇಂತು ಪ್ರಮೋದದಿಂದ ಕೆಲಕಾಲ ಕಳೆಯಿತು.

## ೧೮. ಭೀಷ್ಮ ನಿರ್ಯಾಣ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಮಾಘ ಶುದ್ಧ ಅಷ್ಟಮಿಯಂದು ಧರ್ಮರಾಜಾದಿಗಳು ಮತ್ತೆ ಶಾಂತನವನಿದ್ದ ರಣಭೂಮಿಗೆ ಬಂದರು. ಶ್ರೀಕೃಷ್ಣನೂ ಗಾಂಗೇಯನಿಗೆ ಅಂತ್ಯಕಾಲ ದರ್ಶನವನ್ನೀಯಬೇಕೆಂದು ದಯಪಾಲಿಸಿದನು. ಕೃಪ, ಧೌಮ್ಯರೂ ಬಂದರು. ಮಂತ್ರವಿದರಾದ ಯಾಜಕರು ಧೌಮ್ಯನನ್ನು ಅನುಸರಿಸಿ ಬಂದರು. ಧರ್ಮರಾಜನು ರತ್ನ, ವಸ್ತ್ರ, ಚಂದನಾಗರು, ಪುಷ್ಪ ಫಲಘೃತ ಕುಂಭ ಕುಶದ್ರವ್ಯಗಳನ್ನು ಸೇವಕರಿಂದ ಹೊರಿಸಿಕೊಂಡು ತಂದನು.

ಎಲ್ಲರೂ ಭೀಷ್ಮನ ಶಯನಸ್ಥಲಕ್ಕೆ ಸ್ವಲ್ಪ ದೂರದಲ್ಲೇ ರಥದಿಂದಿಳಿದು, ನಡೆತಂದರು. ಶ್ರೀವ್ಯಾಸ ನಾರದ ದೇವಲ ಪ್ರಭೃತಿ ಸಂಯಮೀಂದ್ರರು ಭೀಷ್ಮನಿರ್ಯಾಣವನ್ನವಲೋಕಿಸ ಬೇಕೆಂದು ಬಂದರು. ಧರ್ಮರಾಜನು ವಿನಯನತಕಂಧರನಾಗಿ ಧ್ಯಾನಮಗ್ನ ಮಾನಸನಾಗಿದ್ದ ದೇವವ್ರತನನ್ನು ಸಮೀಪಿಸಿ 'ತಾತ! ಧರ್ಮನಂದನನು ಬಂದಿರುವೆನು. ನಮಸ್ಕರಿಸಿ ನಿನ್ನ ಆಶೀರ್ವಾದವನ್ನು ಬೇಡುತ್ತಿರುವೆನು. ಕಣ್ತೆರೆದು ನೋಡು! ಸಮಸ್ತ ಧೃತರಾಷ್ಟ್ರಾದಿ ಬಂಧುಜನರೂ ಬಂದಿರುವರು. ಪುರಜನರು ಬಂದಿರುವರು. ಸದಯಹೃದಯನಾಗಿ ನಮ್ಮೆಲ್ಲರನ್ನು ನೋಡು, ಹಿತವನ್ನು ಉಪದೇಶಿಸು!' ಎಂದು ಪ್ರಾರ್ಥಿಸಿದನು.

ಭೀಷ್ಮನು ಕಣ್ತೆರೆದು ಶ್ರೀಕೃಷ್ಣವ್ಯಾಸರಿಗೆ ಕೈಮುಗಿದು, ತನ್ನ ಕೈಯಿಂದ ಧರ್ಮರಾಜನ ಕೈಪಿಡಿದು 'ಒಳ್ಳೆಯದಾಯಿತು! ಸಮಯಕ್ಕೆ ಬಂದೆ! ರಾಜನ್! ನನಿಂದ ಅಭಿವಾಂಛಿತವಾದ ಮಾಘ ಶುದ್ಧ ಅಷ್ಟಮಿಯ ಪುಣ್ಯದಿನವು ಪ್ರಾಪ್ತವಾಗಿದೆ. ಶ್ರೀಶನ ರೂಪದ್ವಯದ ಸನ್ನಿಧಾವಿದೆ. ಇನ್ನು ಹೆಚ್ಚಾದ ಪುಣ್ಯಕಾಲವೆನಗೆ ಸಿಗಲಾರದು. ನನಗೆ ಪರಲೋಕಗಮನಕ್ಕಾಗಿ ಅಪ್ಪಣೆ ಕೊಡಿರಿ!

ಧೃತರಾಷ್ಟ್ರ! ಚಿಂತಿಸಬೇಡ! ಶ್ರೀವ್ಯಾಸಮುನಿವರನ ವರದಿಂದ ಜನಿಸಿದೆ! ವೇದಶಾಸ್ತ್ರ ಪರಿಜ್ಞಾನವನ್ನು ಆರ್ಜಿಸಿದೆ! ಎಲ್ಲ ಧರ್ಮಗಳನ್ನರಿತಿರುವೆ! ದೇವರ ಹಸ್ಯವನ್ನು ನಿನಗೆ ತಿಳಿಸಿದ ಶ್ರೀವ್ಯಾಸರ ವಚನವನ್ನು ನೆನೆ! ಶೋಕವನ್ನು ಬಿಡು! ಭವಿತವ್ಯವನ್ನು ಬದಲಿಸುಲು ಯಾರಿಗೂ ಶಕ್ಯವಿಲ್ಲ. ಸದ್ಭಾವದಿಂದ ನೋಡು! ವಿಚಾರಿಸಿ ತಿಳಿದರೆ ಪಾಂಡುಪುತ್ರರು ನಿನ್ನ ಪುತ್ರರಲ್ಲವೇ ? ಅವರನ್ನು ಪರಿಪಾಲಿಸು! ಅವರು ಶ್ರದ್ಧೆಯಿಂದ ನಿನ್ನನ್ನು ಸೇವಿಸಲಿರುವರು. ಅವರ ಸೇವೆ ಸ್ವೀಕರಿಸು! ನಡೆದುಹೋದ ಅನರ್ಥಕ್ಕಾಗಿ ಕುದಿಯುತ್ತಿರಬೇಡ! ಮುದದಿಂದ ಮುದಿತನವನ್ನು ಕಳೆ! ಪಾಂಡವರಲ್ಲಿ ಸಿಟ್ಟಾಗಬೇಡ! ಅವರಿಗೂ ನಿನ್ನ ಹೊರತು ಹಿತಚಿಂತಕರಿಲ್ಲ. ರಾಜಕಾರ್ಯಗಳಲ್ಲಿ ಧರ್ಮರಾಜನನ್ನು ಚೆನ್ನಾಗಿ ನಡೆಸು!

ಧರ್ಮಜನು ನಿನ್ನಲ್ಲಿ ಭಕ್ತಿ ಶ್ರದ್ಧೆಗಳುಳ್ಳವನಾಗಿರುವನೆಂದು ನಿನಗೂ ಗೊತ್ತಿದೆ. ಅವನಲ್ಲಿ ವಾತ್ಸಲ್ಯವನ್ನು ತೋರು! ನಿನ್ನ ಮಕ್ಕಳು ನಿನಗೆ ಶತ್ರುಗಳಾದರು. ದುಃಖಾಗ್ನಿಯನ್ನು ನಿನ್ನ ಉಡಿಯಲ್ಲಿ ಹಾಕಿ, ತಾವೂ ದುರ್ಗತಿಯನ್ನು ಸೇರಿದರು. ಅನೀತಿಪರರು, ಮೂರ್ಖರು, ಕ್ರೋಧವಶರು, ಅತಿಲೋಭಿಗಳಾಗಿ ತಮ್ಮ ಅಪರಾಧಶತದಿಂದ ತಾವಾಗಿ ನಾಶವಾದ ದುರ್ಯೋಧನಾದಿಗಳಿಗಾಗಿ ಅಳಬೇಡ!

ಶ್ರೀಕೃಷ್ಣ! ದೇವಕಿನಂದನ! ಜೀವೇಶ! ಶಂಖ ಚಕ್ರ ಗದಾಪದ್ಮ ಪ್ರಶಸ್ತ ಹಸ್ತ! ಶ್ರೀಶ! ತ್ರಿವಿಕ್ರಮ! ವಾಸುದೇವ! ವರದರಾಜ! ಪರಮಪುರುಷ! ಜಗಜ್ಜನ್ಮಾದಿ ಕಾರಣ! ನಾರಾಯಣ! ಕರುಣೆಯಿಂದೆನ್ನ ನೋಡಿ, ನಿನ್ನ ಭಕ್ತನೆಂದು ಸ್ವೀಕರಿಸು! ಶ್ರೀಹರೇ! ನಿನಗೆ ಅನಂತ ನಮಸ್ಕಾರಗಳು.

ದೇವ! ನನಗಿನ್ನಾರು ದಿಕ್ಕು! ತಂದೆಯಿಲ್ಲ. ತಾಯಿಯು ನೀರಾಗಿರುವಳು. ಸತೀಸುತರಿಲ್ಲವೇ ಇಲ್ಲ. ಎಲ್ಲವೂ ನೀನಾಗಿ ಕರುಣಿಸು! ಕಮಲಾಕ್ಷ! ನನಗೆ ಅಪ್ಪಣೆ ಕೊಡು!

ಶ್ರೀಕೃಷ್ಣ! ಪಾಂಡವರಿಗೆ ರಕ್ಷಕನಾಗಿ ಮೊದಲಿನಿಂದಲು ಕಾಪಾಡುತ್ತಿರುವೆ! ಮುಂದೂ ಕಾಪಾಡುತ್ತಿರು! ಮೊಮ್ಮಕ್ಕಳೆಂಬ ಅಭಿಮಾನ, ಶ್ರೀಹರಿಭಕ್ತರೆಂಬ ಸ್ನೇಹ, ಬಹುಕಷ್ಟಗಳಿಂದ ಪಾರಾಗಿ ಬಂದಿರುವರೆಂಬ ಕರುಣೆ ಮೂರು ಬೆರೆತು ಮುರಾರೇ! ನನ್ನಿಂದ ಈ ಮಾತನ್ನಾಡಿಸುತ್ತಿವೆ. ದುರ್ಯೋಧನನ ಕುತಂತ್ರಗಳಿಂದ ಅವರು ಪಡಬಾರದ ಕಷ್ಟಗಳನ್ನು ಪಟ್ಟರು. ನಾನು ದುರ್ಯೋಧನನಿಗೆ 'ಶ್ರೀಕೃಷ್ಣನಿದ್ದಲ್ಲಿ ಜಯವಿದೆ! ಶ್ರೀಕೃಷ್ಣನು ಧರ್ಮವನ್ನು ಬಿಟ್ಟರನು. ಪಾಂಡವರು ಧರ್ಮವಂತರಾಗಿರುವುದರಿಂದಲೇ ಶ್ರೀಶನ ರಕ್ಷಾಕವಚವನ್ನು ಪಡೆದು ಅಜೇಯರಾಗಿರುವರು. ಅವರಿಂದ ವೈರವು ಒಳಿತಲ್ಲ' ಎಂದು ಎಷ್ಟೋ ಸಲ ಹೇಳಿದೆನು. ಆ ಮೂರ್ಖನು ನನ್ನ ಮಾತನ್ನು ಕೇಳಲಿಲ್ಲ. ತಾನು ಸಾಯುವುದಲ್ಲದೆ, ಅನಂತ ಸೈನಿಕರನ್ನೂ ನಾಶಪಡಿಸಿದನು.

ನರನಾರಾಯಣರೇ ಅರ್ಜುನ ವಾಸುದೇವರೆಂದು, ಜೀವೋತ್ತಮ ಮುಖ್ಯ ಪ್ರಾಣನೇ ಭೀಮಸೇನನೆಂದು, ಭಾರತೀದೇವಿಯೇ ಪಾರ್ಷತಿ ಎಂದು, ನಾರದವ್ಯಾಸಾದಿ ಮಹಾನುಭಾವರು ನನಗೆ ತಿಳಿಸಿರುವರು. ನನಗೆ ಧರ್ಮರಾಜಾದಿಗಳಲ್ಲಿ ಸಿಟ್ಟಿಲ್ಲ. ಅವರು ಧರ್ಮದಿಂದ ಕಾದಿ ಗೆದ್ದಿರುವರು. ಶ್ರೀಶ! ಇನ್ನು ನನಗೆ ಅಪ್ಪಣೆ ಕೊಡು! ನಿನ್ನ ದಿವ್ಯ

ಶ್ರೀಚರಣಾರವಿಂದದಲ್ಲಿ ಮನವಿಟ್ಟು, ಶಂತನು ರಾಜನಿತ್ತ ವರಪ್ರಭಾವದಿಂದ ಸ್ವಚ್ಛಂದ ಮರಣನಾಗಿರುವುದರಿಂದ, ಈಗಾಗಲೇ ಮಾನವ ಶರೀರವನ್ನು ಬಿಟ್ಟುಬಿಡುವೆನು.'

ಇಂತು ಪ್ರಾರ್ಥಿಸಿದ ದೇವವ್ರತನನ್ನು ಕರುಣಾಪಾಂಗಮಂಗಲವೀಕ್ಷಣವಾಗಿ ಈಕ್ಷಿಸಿ ಶ್ರೀಲಕ್ಷ್ಮೀಪತಿಯು ಇಂತೆಂದನು: 'ದೇವವ್ರತ! ನಿನ್ನಲ್ಲಿ ಕಿಂಚಿತ್ತೂ ಪಾಪವಿಲ್ಲ. ಬಲುಪುಣ್ಯಗಳನ್ನು ಆಚರಿಸಿ, ಮಹಾತ್ಮನೆಂದು ಖ್ಯಾತನಾಗಿರುವೆ! ಪಿತೃಭಕ್ತಿಯಿಂದ ಮೃತ್ಯುವನ್ನು ವಶದಲ್ಲಿಟ್ಟು ಮೆರೆದೆ! ಗುರುಭಕ್ತಿಯಿಂದ ಶಸ್ತ್ರಾಸ್ತ್ರವೀರ ಸತ್ತಮನೆನಿಸಿದೆ! ತಂದೆಗಾಗಿ ರಾಜ್ಯವನ್ನೂ, ವಿವಾಹವನ್ನೂ ಬಿಟ್ಟೆ! ದೇವ ಮನುಜರಾದಿ ಸರ್ವರ ಪ್ರಶಂಸೆಗಳಿಸಿದೆ! ಧರ್ಮದಿಂದ ಕಾದೆ! ನಿನಗೆ ನಾನು ಶರೀದ ತ್ಯಾಗವನ್ನು ಮಾಡಲು ಅನುಜ್ಞೆಯನ್ನಿತ್ತಿರುವೆನು. ಚಿಂತಿಸು ನೀನಾರೆಂದು!'

ಆಗ ಭೀಷ್ಮನು ಧೃತರಾಷ್ಟ್ರ ಧರ್ಮರಾಜಾದಿಗಳ ಕಡೆಗೆ ನೋಡಿ ಅವರ ಅಪ್ಪಣೆಯನ್ನು ಪಡೆದು, ತಾನು ಹಿಂದೆ ರಾಜರನ್ನು ಗೆದ್ದುತಂದ ಧನರಾಶಿಗಳನ್ನು ವಿಪ್ರವರರಿಗೆ ದಾನವಾಗಿತ್ತನು. ಆಮೇಲೆ ಧಾರಣಾಧ್ಯಾನ ಸಮಾಧಿ ಕ್ರಮದಿಂದ ಸಮಾಹಿತಚಿತ್ತನಾದ ಭೀಷ್ಮನು, ಶರೀರಾಂತರ್ಗತ ಪ್ರಾಣಾದಿ ವಾಯುಮಾರ್ಗಗಳನ್ನು ಸಂಶೋಧಿಸಿ, ಉದಾನ ಗತಿಯಿಂದ ಮೆಲ್ಲನೆ ಮೇಲೆ ಸರಿಯತೊಡಗಿದನು. ಆತನು ಪ್ರಾಣದೇವವಶನಾಗಿ ಶರೀರವನ್ನು ಬಿಟ್ಟಂತೆ, ಅಲ್ಲಲ್ಲಿ ನಟ್ಟಿದ ಶರಜಾಲಗಳು ತಾವಾಗಿ ಬೇರಾಗಿ ಬಿದ್ದವು. ಇಂತಹ ಆಶ್ಚರ್ಯವನ್ನು ಕಂಡು ನೆರೆದ ಜನರು ಬೆರಗಾಗಿ ದೇವವ್ರತನನ್ನು ಪ್ರಶಂಸಿಸಿದರು.

ಆಗ ಭೀಷ್ಮನು ದ್ಯುನಾಮಕ ವಸುರೂಪವನ್ನು ಧ್ಯಾನಿಸಿ, ತನ್ನ ಮೂಲ ರೂಪವನ್ನು ಸೇರಿದನು. ಒಂದು ದಿವ್ಯತೇಜವು ಭೀಷ್ಮಶರೀರದಿಂದ ಹೊರಬಂದು ಅಂಬರಕ್ಕೆ ಹಾರಿ, ಅದೃಶ್ಯವಾಯಿತು. ಆಕಾಶದಿಂದ ಪುಷ್ಪವೃಷ್ಟಿಯೊಡನೆ ದೇವದುಂದುಭಿ ಧ್ವಾನಗಳು ಕೇಳಬಂದವು. ಸಿದ್ಧಸಾಧ್ಯಚಾರಣರು ದೇವವ್ರತನ ಮಹಿಮೆಯನ್ನು ಪ್ರಶಂಸಿಸಿದರು.

ಧರ್ಮರಾಜನು ಸೋದರ ವಿದುರಾದಿಗಳಿಂದ ಕೂಡಿ, ಭೀಷ್ಮಶರೀರಕ್ಕೆ ಸಮುಚಿತ ಸಂಸ್ಕಾರವನ್ನು ನಡೆಸಿದನು. ಕನಕ ರತ್ನ ವಸ್ತ್ರ ಧನ ಗೋ ತಿಲಾದಿ ದ್ರವ್ಯಗಳನ್ನು ಹೇರಳವಾಗಿ ಧರಣೀ ಸುರರಿಗೆ ದಾನಮಾಡಿದನು. ಧೌಮ್ಯನು ಯಾಜಕರಿಂದ ಕೂಡಿ ಕೃತ್ಯಂಗಳನ್ನು ಸಾಂಗವಾಗಿ ನಡೆಸಿದ ಮೇಲೆ ಧರ್ಮಜಾದಿಗಳು ಭಾಗೀರಥಿಯನ್ನು ಸೇರಿ, ಅಲ್ಲಿ ದೇವವ್ರತನಿಗೆ ತಿಲೋದಕಾನ್ನ ಪ್ರದಾನಗಳನ್ನು ಶ್ರದ್ಧೆಯಿಂದ ಆಚರಿಸಿದರು.

ಆ ಸಮಯದಲ್ಲಿ ನದೀತಲದಿಂದ ಎದ್ದು ಬಂದ ಗಂಗಾ ದೇವಿಯು ಪುತ್ರಶೋಕದಿಂದ ಮನುಜರಂತೆ ರೋದಿಸಿ ವಿಲಪಿಸಿದಳು. 'ಎಂತಹ ಮಗನನ್ನು ಪಡೆದೆನು! ಅವರ ಅದ್ಭುತ ಚರಿತೆಯನ್ನು ನೀವರಿಯದಿಲ್ಲ. ಪಿತೃಭಕ್ತಿ, ಗುರುಸೇವೆ, ವಿದ್ಯಾಪಾಟನ, ರಣಪರಾಕ್ರಮಗಳಿಂದ ಅಸಮಾನನಾಗಿ ಮೆರೆದ ಭೀಷ್ಮನಿಂದು ಅಸ್ತಂಗತನಾದನಲ್ಲ! ಹಾ! ಕಾಶಿರಾಜ ಕನ್ಯೆಯರನ್ನು ಪರಾಕ್ರಮದಿಂದ ಹರಿಸಿ ತಂದವನಿಗೆ ಪಾಳುಶಿಖಂಡಿಯ ಕೈ ಬಾಣಗಳಿಗೆ ಸಿಕ್ಕುಬೀಳುವಂತಾಯಿತೇ? ಪರಶುರಾಮ ದೇವನ ಶಿಷ್ಯನಿಗೆ ಪರಾಜಯವೇ? ಇಂತಹ ಪುತ್ರರತ್ನನನ್ನು ಕಳೆದುಕೊಂಡೂ ನನ್ನ ಹೃದಯವು ಚೂರಾಗದಿದೆ ಎಂದರೆ ಅದೇನು ಕಲ್ಲೋ? ಕಬ್ಬಿಣವೋ? ಇಂತು ರೋದಿಸುವ ಗಂಗೆಯನ್ನು ಸಮಾಧಾನಪಡಿಸಲೆಣಿಸಿ, ದೇವಕೀನಂದನನಿಂತೆಂದನು:

'ಗಂಗಾದೇವಿ! ಬಿಡು ಶೋಕವನ್ನು! ನಿನ್ನ ಸುತನು ಪರಮಸದ್ಗತಿಯನ್ನು ಪೊಂದಿರುವನು. ದ್ಯುನಾಮಕ ವಸುವೇ ಭೀಷ್ಮನಾಗಿ ಜನಿಸಿನೆಂಬುದನ್ನು ಮರೆತೆಯಾ ? ಅಮರರ್ಶಿಗೆ ಹೇಯವಾಗಿರುವ ಮರ್ತ್ಯದೇಹವು ಅನಿಷ್ಟವೆಂದು ನಿನಗೆ ತಿಳಿಯದೇ! ಮರ್ತ್ಯನಿಂದು ಅಮರ್ತ್ಯನಾಗಿರುವನು. ಶೋಕಿಸಬೇಡ! ಇನ್ನು ಶಿಖಂಡಿಯು ಆ ಮಾಹಾವೀರನನ್ನು ಗೆದ್ದನೆಂದು ತಿಳಿಯುವುದು ನಿನಗೆ ಸರಿಯಲ್ಲ. ಸುರಾಸುರರೆತ್ತಿ ಬಂದರೂ ಆ ಮಹಾವೀರನ ಮುಂದೆ ನಿಂತು, ಕಾದಿ, ಗೆಲ್ಲಲಾರರು ತಿಳಿ! ಇನ್ನು ಗಾಂಡೀವಿಯು ಕೊಂದನೆಂದು ತಿಳಿಯಬೇಡ! ಕೇಳು! ತಾನಾಗಿ ಧರ್ಮವಿಜಯವನ್ನು ಬಯಸಿ, ಅರ್ಜುನ ನಿರ್ಮಿತ ಶರಶಯನದಲ್ಲಿ ಮಲಗಿದ್ದು, ಈಗ ತನಗೆ ಸರಿಯಾದ ಮೃತಿಕಾಲವೆಂದರಿತು, ತನುತ್ಯಾಗವನ್ನು ಮಾಡಿರುವನು. ಅಂತಹ ಮಹಾತ್ಮನಿಗೆ ಶೋಕಪಡಬೇಡ! ಪಾಂಡವರು ಆ ಮಹಾನುಭಾವನ ಪ್ರೀತಿಗೆ ಪಾತ್ರರು. ಅವರನ್ನು ಕೃಪೆಯಿಂದ ನೋಡು!'

ಶ್ರೀದ್ವೈಪಾಯನ ಮುನಿವರನೂ ಸಂತೈಸಲು ತಿಳಿದು, ಗಂಗಾದೇವಿಯು, ಧರ್ಮಜಾದಿಗಳನ್ನು, ಆಶೀರ್ವದಿಸಿ, ಶ್ರೀಕೃಷ್ಣ ವ್ಯಾಸರಿಗೆ ನಮಿಸಿ, ಗಂಗಾ ತರಂಗ ಸಂಗತಳಾಗಿ, ಅಂತರ್ಹಿತಳಾದಳು.

ಧರ್ಮರಾಜನು ತಾತನಿಗೆ ಮಾಡಲು ತಕ್ಕ ಸಕಲ ಕೃತ್ಯಗಳನ್ನು ಮಾಡಿ, ಗಂಗಾಶೀರ್ವಾದದಿಂದ ಪರಮಾನಂದವನ್ನು, ಭೀಷ್ಮೋಪದೇಶದಿಂದ ನಿಸ್ಸಂದೇಹ ಮನಃಸ್ಥಿತಿಯನ್ನು ಪೊಂದಿ, ಸಕಲ ಸೋದರ ಯಾದವ ಪರಿವಾರದೊಡನೆ ಹಸ್ತಿನಾನಗರವನ್ನು ಸೇರಿ, ಭೀಷ್ಮೋಪದೇಶದಂತೆ ರಾಜ್ಯಪಾಲನ ಕಾರ್ಯ ಧುರಂಧರನಾದನು.

ಜನಮೇಜಯ! ಅನುಶಾಸನಿಕ ಪರ್ವವನ್ನು ಶ್ರೀಶಾನುಗ್ರಹದಿಂದ ನಿನಗರುಹಿ, ಧನ್ಯನಾದೆನು. ಇದನ್ನು ಪಠಿಸಿದವರು, ಮತ್ತು ಕೇಳಿದವರು ಸಕಲಪಾಪಮುಕ್ತರು, ಸಕಲೈಶ್ವರ್ಯಯುಕ್ತರು, ಶ್ರೀಹರಿಭಕ್ತರೂ ಆಗಿ ಚಿರಕಾಲ ಸುಖಿಸುವರು. ಓಂ ತತ್ ಸತ್॥

**ಅನುಶಾಸನಿಕ ಪರ್ವ ಮುಗಿಯಿತು**



# ೧೪. ಅಶ್ವಮೇಧಿಕ ಪರ್ವ

## ೧. ಸಂವರ್ತ ಕಥಾ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಧರ್ಮರಾಜನು ಭೀಷ್ಮನಿಗೆ ತಿಲೋಕದಗಳನ್ನಿತ್ತು, ಗಂಗೆಯಿಂದ ತೀರಕ್ಕೆ ಬರುವ ಧೃತರಾಷ್ಟ್ರನನ್ನು ಕೈಹಿಡಿದು ತಂದು ಕೂಡಿಸಿದನು. ಆತನು ತಾತನನ್ನು ನೆನೆದು ಶೋಕ ವ್ಯಾಕುಲನಾದನು. ಅವನ ಕಣ್ಣಿಂದ ಬಾಷ್ಪಪೂರವು ಸಂತತವಾಗಿ ಹರಿಯಿತು. ವ್ಯಾಧನಿಂದ ಬಾಣವಿದ್ಧವಾದ ಗಜರಾಜನಂತೆ, ಧರ್ಮರಾಜನು ನೆಲಕ್ಕೆ ಕುಸಿದು ಬಿದ್ದನು. ಶ್ರೀಕೃಷ್ಣನಿಂದ ಪ್ರೇರಿತನಾಗಿ, ಭೀಮಸೇನನು 'ಹೀಗೆಲ್ಲ ಶೋಕಿಸಲು ತರವಲ್ಲ!' ಎಂದು ಹೇಳುತ್ತಾ ಅಣ್ಣನನ್ನು ಬೀಳದಂತೆ, ಹಿಡಿದು ಕೂಡಿಸಿದನು. ಇಂತು ದುಃಖಾರ್ತನಾಗಿ ವಿಲಪಿಸುವ ಧರ್ಮರಾಜನನ್ನು ಇತರ ರಾಜರು ನೋಡಿ, ನಿಟ್ಟುಸಿರಿಟ್ಟು ಅನುತಾಪಪಟ್ಟರು.

ಪುತ್ರಶೋಕಪೀಡಿತನಾದ ಧೃತರಾಷ್ಟ್ರನು, ಧರ್ಮರಾಜನನ್ನು ನೋಡಿ 'ಏಳೇಳು! ಅಳಬೇಡ ! ಮುಂದಿನ ಕಾರ್ಯಗಳನ್ನು ನಡೆಸು! ಕ್ಷಾತ್ರ ಧರ್ಮದಿಂದ ಅವನೀ ಮಂಡಲವನ್ನು ಗೆದ್ದಿರುವೆ ! ತಮ್ಮಂದಿರು, ತನ್ನಿಯರು, ಮಿತ್ರರಿಂದೊಡಗೂಡಿ ರಾಜ್ಯ ಭೋಗಗಳನ್ನು ಅನುಭವಿಸು! ನೀನು ಅಳುವುದು ಸರಿಯಲ್ಲ. ನನಗೆ ಮತ್ತು ಗಾಂಧಾರಿಗೆ ಮಿಾಸಲಾಗಿದೆ ಶೋಕಸಾಗರವು! ಸ್ವಪ್ನದ ಧನರಾಶಿಯಂತೆ, ನಷ್ಟರಾದ ನೂರು ಮಕ್ಕಳನ್ನು ನೆನೆದು ನಾವು ಶೋಕಿಸಬೇಕು! ನಮ್ಮ ಅಪರಾಧ ಫಲವನ್ನು ನಾವು ಉಣ್ಣುವಂತಾಗಿದೆ. ಮಹಾತ್ಮನಾದ ವಿದುರನ ವಾಕ್ಯವನ್ನು ಕೇಳದೆ ಇಷ್ಟನರ್ಥವಾಯಿತು. 'ದುರ್ಯೋಧನಾಪರಾಧದಿಂದ ನಿನ್ನ ಕುಲವು ಹಾಳಾಗುವುದು. ಕುಲಕ್ಷೇಮವನ್ನು ಬಯಸುವುದಾದರೆ, ಕೇಳೆನ್ನ ಮಾತನ್ನು! ಮಂದ ಬುದ್ಧಿಯು, ದುಷ್ಟಸ್ವಭಾವನು ಆದ ದುರ್ಯೋಧನನ್ನು ಪರಿತ್ಯಜಿಸು! ಕರ್ಣ ಶಕುನಿಗಳೀರ್ವರ ಸಹವಾಸ ಪಕ್ಷಿಯಿಂದ ನಿನ್ನ ಮಗನನ್ನು ದೂರ ಮಾಡು! ಈ ದುಷ್ಟದ್ಯೂತವನ್ನಾದರೂ ನಿಲ್ಲಿಸಿಬಿಡು! ಧರ್ಮಾತ್ಮನಾದ ಯುಧಿಷ್ಠಿರನನ್ನು ರಾಜ್ಯ ಸಿಂಹಾಸನದಲ್ಲಿಟ್ಟು ಅಭಿಷೇಕಿಸು! ಅಂತಹ ಮಹಾನುಭಾವನ ಪಾಲನೆಯಲ್ಲಿ ಧರ್ಮವು ಉಳಿಯುವಂತೆ ಮಾಡು! ಧರ್ಮವನ್ನು ಕೆಡಿಸಪೋಗಿ, ನೀನೇ ಕೆಡುವಂತಾದೀತು! ಅಥವಾ ನೀನೇ ಮಹಾರಾಜನಾಗಿ, ಶಾಸನ ಸೂತ್ರಗಳನ್ನು ಕೈಲಿ ಹಿಡಿದು ನಡೆಸು! ನಿನ್ನ ಆಡಳಿತದಲ್ಲಿ ಸರ್ವಜ್ಞಾತಿ ಬಾಂಧವರು, ಕೌರವ ಪಾಂಡವರು– ಎಲ್ಲರೂ ಸುಖವಾಗಿರುವಂತೆ ಮಾಡು!' ಇಂತು ನಾನಾವಿಧ ಹಿತವಚನಗಳನ್ನು ಹೇಳಿದ ವಿದುರನನ್ನು ಲೆಕ್ಕಿಸದೆ. ಪಾಪಿ ದುರ್ಯೋಧನನಿಗೆ ಅನುಕೂಲನಾಗಿ ನಡೆದೆನು. ಧೀರ ವಿದುರನ ವಚನಸುಧೆಯನ್ನು ಸವಿಯದೆ, ದುಷ್ಟ ಚತುಷ್ಟಯವಿತ್ತ ವಿಷವನ್ನು ಕುಡಿದು, ಇಂದು ಶೋಕಸಾಗರ ನಿಮಗ್ನನಾಗಿರುವೆನು' ಎಂದು ಸಮಾಧಾನಪಡಿಸಿದನು.

ಆ ಮಾತನ್ನಾಲಿಸಿ, ಪಾಂಡವಾಗ್ರಜನು ಸುಮ್ಮನಿರಲು ನೋಡಿ, ಕೇಶವನಿಂತೆಂದನು. 'ರಾಜನ್! ಬಲು ಶೋಕಪಡುವೆ! ಇದರಿಂದ ನಿನ್ನ ಪೂರ್ವ ಪಿತೃಗಳಿಗೂ ಸಂತಾಪವಾಗುವುದು

ತಿಳಿ! ಮಗನು ಇಟ್ಟ ಕಣ್ಣೀರು ಮೊದಲಾದ ಕಶ್ಮಲಗಳನ್ನು ಅವನ ಪಿತೃಗಳು ಉಣ್ಣಬೇಕಾಗುವುದೆಂದು ಶಾಸ್ತ್ರ ವಚನಗಳಿವೆ. ವ್ಯರ್ಥವಾಗಿ ಶೋಕಿಸಿ ಫಲವಿಲ್ಲ. ಪಾಪ ಪರಿಹಾರಕ್ಕಾಗಿ, ಬೇಕಾದರೆ ಯಜ್ಞಗಳನ್ನು ಮಾಡು! ಭೂರಿ ದಕ್ಷಿಣೆಗಳನ್ನು ಕೊಡು! ಸ್ವಾಹಾಕಾರದಿಂದ ದೇವತೆಗಳೂ, ಸ್ವಧಾಕಾರದಿಂದ ಪಿತೃಗಳೂ ಪ್ರೀತರಾಗುವಂತೆ, ದೇವಪಿತೃ ಕಾರ್ಯಗಳನ್ನು ನಡೆಸು! ಅನ್ನಪಾನಗಳಿಂದ ಅತಿಥಿ ಮೊದಲ್ಗೊಂಡು, ಅಂತ್ಯಜಪರ್ಯಂತವಾಗಿರುವ ಜನರನ್ನು ಸಂತಸಪಡಿಸು! ಭಾಗೀರಥೀ ಸುತನಿಂದ ರಾಜಧರ್ಮಗಳನ್ನು, ಮೋಕ್ಷಧರ್ಮ, ಆಪದ್ಧರ್ಮ, ದಾನವ್ರತರೂಪ ಪ್ರಾಯಶ್ಚಿತ್ತ ವಿಧಾನಗಳನ್ನು ಕೇಳಿ ತಿಳಿದಿರುವೆ! ಶ್ರೀವೇದವ್ಯಾಸರೂ ಉಪದೇಶಿಸಿರುವರು! ನಾರದ, ದೇವಲ, ವಿದುರರಿಂದಲು ಅನೇಕ ಧರ್ಮ ತತ್ವಗಳನ್ನರಿತಿರುವೆ! ಮತ್ತೆ ಮೂಢನಂತೆ ಸುಮ್ಮನೆ ಶೋಕಿಸುವುದು ನಿನಗುಚಿತವಲ್ಲ. ಪಿತೃ ಪೈತಾಮಹವಾದ ಸಿರಿ ಪ್ರಾಪ್ತವಾಗಿದೆ. ಅದನ್ನು ನಿಶ್ಚಿಂತನಾಗಿ ಅನುಭವಿಸು! ಬಿಡು ಶೋಕವನ್ನು! ಏನಾಗಬೇಕಿತ್ತೋ ಅದಾಯಿತು! ರಣ ನಿಹತರಾದವರನ್ನು ಮತ್ತೆ ಪಡೆಯಲು ಯಾರಿಂದಲೂ ಆಗದು ತಿಳಿ!'

ಧರ್ಮರಾಜನು 'ಶ್ರೀಕೃಷ್ಣ! ನಿಜ! ನೀನು ನನ್ನಲ್ಲಿರುವ ಪ್ರೀತಿಯಿಂದ ಮಾತನಾಡುತ್ತಿರುವೆ! ನನಗೆ ಪ್ರಿಯವಾದುದೆಂದರೆ, ತಪೋವನ ಗಮನವೇ ಮತ್ತೊಂದಿಲ್ಲ. ಪ್ರಿಯನಾದ ಪಿತಾಮಹನನ್ನೂ ಅಣ್ಣನಾದ ಕರ್ಣನನ್ನೂ ಕೊಂದ ನನಗೆ ಯಾವುದು ಪ್ರಾಯಶ್ಚಿತ್ತ?' ಎಂದನು. ಅವನನ್ನು ಸಂತೈಸುತ್ತಾ ಶ್ರೀವ್ಯಾಸರಿಂತೆಂದರು: 'ರಾಜನ್, ನಿನಗೆ ಸರಿಯಾದ ತಿಳುವಳಿಕೆ ಬರಲಿಲ್ಲ. ಮತ್ತೆ ಮತ್ತೆ ಪಾಪ! ಪಾಪ! ಎಂದು ಶೋಕಿಸುತ್ತಿರುವೆ! ನಾವು ನಿನಗೆ ಏನು ಹೇಳಿ ಏನು ಪ್ರಯೋಜನ? ನಮ್ಮ ಹಿತವಚನಗಳು ನಿನ್ನಲ್ಲಿ ವ್ಯರ್ಥವಾಗುತ್ತಿವೆ. ಯುದ್ಧ ಜೀವಿಗಳಾದ ಕ್ಷತ್ರಿಯರ ಜಾತಿಯಲ್ಲಿ ಜನಿಸಿರುವೆ! ರಾಜಧರ್ಮಗಳನ್ನು ಅರಿತಿರುವೆ! ಆದರೂ ಮನಸ್ತಾಪದಿಂದ ಕುಗ್ಗುತ್ತಿರುವೆ! ನಿನ್ನ ಸಂದೇಹಗಳನ್ನು ನಾನೆಷ್ಟೋ ಸಲ ಬಗೆಹರಿಸಿರುವೆನು. ನಿನಗೆ ಶ್ರದ್ಧೆಯಿಲ್ಲ ನಮ್ಮ ಹಿತವಚನದಲ್ಲಿ! ಓದಿ, ಕೇಳಿ, ತಿಳಿಯದ ಮೂಢನಂತಿರುವೆ! ಹೀಗಾಗಬೇಡ! ನಿನಗೆ ಪಾಪವಿಲ್ಲ. ಇದೆ ಎಂದು ತಿಳಿದಿದ್ದರೆ ಪ್ರಾಯಶ್ಚಿತ್ತಗಳನ್ನು ಮಾಡಿಕೋ! ದಾನಗಳನ್ನು ಕೊಡು! ಯಜ್ಞಗಳನ್ನು ಮಾಡು! ನಿನ್ನ ಬುದ್ಧಿ ಸರಿಯಾಗಿಲ್ಲ. ತಾನೆಲ್ಲವನ್ನು ತಿಳಿದವನೆಂದು ಪರರ ಮಾತಿಗೆ ಬೆಲೆ ಕೊಡದವನಿಗೆ ಯಾರೂ ಹೇಳಲಾರರು. ಅವರು ಮಾಡುವ ಪಾಪಗಳಿಗಾಗಲಿ, ಪುಣ್ಯಗಳಿಗಾಗಲಿ ಅವರು ಸ್ವತಂತ್ರರಲ್ಲ. ಜೀವರ ಪೂರ್ವ ಕರ್ಮಾನುರೋಧವಾಗಿ, ಸ್ವಭಾವಕ್ಕನುಗುಣವಾಗಿ, ಕಾಲ ದೇಶಗಳಿಗೆ ತಕ್ಕ ಕರ್ಮಗಳನ್ನು ಅವರಿಂದ ಮಾಡಿಸಿ, ದೇವನು ಅವರಿಗೆ ತತ್ಫಲಗಳನ್ನು ಕೊಡುತ್ತಿರುವನು. ನೀನು ನಾನೇ ಮಾಡಿದವನೆಂದು ಇಲ್ಲದ ಕರ್ತೃತ್ವವನ್ನಾರೋಪಿಸಿಕೊಂಡು, ದುಃಖಪಡುತ್ತಿರುವೆ! ಇದು ಸರಿಯಲ್ಲ. ನಿನಗೆ ಪಾಪವಿಲ್ಲ; ನಿಜವಾಗಿಯೂ ಇಲ್ಲ. ಇದೆ ಎಂದು ತಿಳಿದಿದ್ದರೆ, ಅಶ್ವಮೇಧ ಯಾಗವನ್ನು ಮಾಡಿ, ಅದನ್ನು ಕಳೆದುಕೊಳ್ಳಬಹುದಾಗಿದೆ. ಶ್ರೀರಾಮನೂ, ದೌಷ್ಯಂತಿ ಭರತನೂ, ಅಶ್ವಮೇಧವನ್ನು ಮಾಡಿ, ಬಹುಲಾನ್ನರತ್ನ ಸುವರ್ಣದಾನಗಳನ್ನಿತ್ತು ಖ್ಯಾತರಾಗಿರುವರು.'

ಧರ್ಮರಾಜನು, 'ನಿಜ! ತಾವು ಹೇಳಿದಂತೆ, ವಾಜಿಮೇಧದಿಂದ ರಾಜನು ನಿಷ್ಪಾಪನಾಗುವನು. ನನ್ನಿಂದ ಜ್ಞಾತಿವಧೆಯಾಗಿದೆ; ಗುರುವಧೆಯಾಗಿದೆ. ಮಹತ್ಪಾಪಕ್ಕೆ

ಮಹತ್ತಾದ ಪ್ರಾಯಶ್ಚಿತ್ತವಿರಬೇಕಲ್ಲವೇ? ಅಲ್ಪದಾನಗಳನ್ನಿತ್ತು ಅಶ್ವಮೇಧವನ್ನು ಮಾಡಲಾಗದು. ಬಹುದಾನಗಳನ್ನು ಕೊಡಲು ನನ್ನಲ್ಲಿ ಧನವಿಲ್ಲ. ದೀನರಾಗಿರುವ ಹತಶೇಷರಾಜರಿಂದ ನಾನು ಧನವನ್ನು ಕೋರುವುದಿಲ್ಲ. ನಾನಾಗಿ ಸರ್ವನಾಶಕ ಸಮರವನ್ನು ಮಾಡಿ, ಮತ್ತೆ ಯಜ್ಞಕ್ಕೆಂದು ಧನಾಹರಣವನ್ನು ಎಂತು ಮಾಡಲಿ? ಯಾರಿಂದ ಮಾಡಲಿ? ಮಾಡುವ ಧೈರ್ಯವೆನಗಂತೂ ಇಲ್ಲ. ದುರ್ಯೋಧನಾಪರಾಧರಿಂದ ವಸುಧೆಯು ವಸುಹೀನವಾಗಿದೆ. ವಸುಧೇಶರು ಸರ್ವರು ಸುದೀನರಾಗಿರುವರು. ಸಮರದಲ್ಲಿ ನಮಗೆ ಸಿಕ್ಕಿದುದೆಂದರೆ ಅಪಕೀರ್ತಿ ಒಂದೇ! ಕೋಶವು ಬರಿದಾಗಿದೆ. ದುರ್ಮತಿಯಾದ ದುರ್ಯೋಧನನಿಂದ ಕರಪೀಡಿತರಾದ ಪ್ರಜರಿನ್ನೇನು ಕೊಡಬಲ್ಲರು? ಸರ್ವ ಪೃಥಿವೀ ದಕ್ಷಿಣೆಯಾದುದು ಅಶ್ವಮೇಧವೆಂದು ನಿಮ್ಮಂತಹ ಶಿಷ್ಟರೇ ಹೇಳಿರುವರು. ಅಂದ ಮೇಲೆ ನಾನು ಅಶ್ವಮೇಧವನ್ನು ಮಾಡುವುದೆಂತು? ಪಾಪ ಪ್ರಾಯಶ್ಚಿತ್ತವಾಗುವುದೆಂತು?' ಎಂದು ಪ್ರಾರ್ಥಿಸಿದನು.

ಶ್ರೀವ್ಯಾಸರಿಂತೆಂದರು: 'ಧರ್ಮರಾಜ! ಚಿಂತಿಸಬೇಡ! ನಿನ್ನ ಕೋಶವು ತುಂಬುವುದು. ಹಿಮವದ್ಗಿರಿಯಲ್ಲಿ ಬೇಕಾದಷ್ಟು ಸುವರ್ಣವಿದೆ. ಹಿಂದೆ ಮರುತ್ತನೆಂಬ ಚಕ್ರವರ್ತಿಯ ಯಾಗದಲ್ಲಿ ವಿಪ್ರರು ಹೊರಲಾರದೆ ಬಿಟ್ಟು ಹೋದ ಧನರಾಶಿಗಳು ಹೇರಳವಾಗಿವೆ. ಅದನ್ನು ತರಿಸು! ಹಿಮವತ್ಪರ್ವತದ ಕೆಲ ಶಿಖರಗಳು ಮೇರುವಿನಿಂದ ಮಿಳಿತವಾಗಿ, ಸುವರ್ಣಮಯವಾಗಿವೆ ಅಲ್ಲಿ ಶ್ರೀಹರಿಯು ಭಕ್ತಜನರ ರಕ್ಷೆ ಮತ್ತು ಲೋಕ ಶಿಕ್ಷೆಗಳಿಗಾಗಿ ಯಾಗ ಮಾಡಿರುವನು. ಕರ್ಮ ಬಂಧರಹಿತನಾದರೂ ಅನ್ಯ ಪ್ರೀತಿಯನ್ನು ಬಯಸದ ಸರ್ವೋತ್ತಮನಾದರೂ ಶ್ರೀಶನು ಸರ್ವಾಂತರ್ಯಾಮಿಯು ಯಜ್ಞ ಫಲಪ್ರದನು ತಾನೇ ಎಂದು ತಿಳಿಸಿಕೊಡಲು ತನ್ನನ್ನು ತಾನೇ ಆಹುತಿಗಳಿಂದ ಪೂಜಿಸಿಕೊಂಡಿರುವನು. ಅಲ್ಲಿಯೇ ರುದ್ರನೂ ವೃಷಪರ್ವ ದಾನವನೂ ಯಾಗಗಳನ್ನು ಮಾಡಿರುವರು. ರುದ್ರಾಂತರ್ಗತನಾದ ಶ್ರೀಪರಶುರಾಮನದೇ ಎಲ್ಲ ದ್ರವ್ಯವಾಗಿದೆ. ಅಂತಹ ಪರುಶುರಾಮನನ್ನು ಪೂಜಿಸಿ. ಆತನ ಅನುಜ್ಞೆಯಿಂದ ಆ ಧನರಾಶಿಗಳನ್ನು ಪಡೆದು ಯಜ್ಞಮಾಡು!'

ಆಗ ಭೀಮಸೇನನಿಂತೆಂದನು: ರಾಜನ್! ಶ್ರೀವ್ಯಾಸರ ವಚನದಂತೆ ನಡೆ! ಧನಕ್ಕೆ ಮುಖ್ಯ ದೇವನು ವಿಷ್ಣುವೆ! ವಿಷ್ಣುವು ಪರಶುರಾಮರೂಪದಿಂದ ಧನನಿಯಾಮಕನಾಗಿರುವನು. ಯಜ್ಞೋಚ್ಛಿಷ್ಟವೆಲ್ಲವೂ ಶಂಕರನಿಗೆ ಸೇರಿದೆ. ರುದ್ರಾಂತರ್ಯಾಮಿಯಾದ ಪರಶುರಾಮನೇ ನಮ್ಮ ಅರ್ಜುನನಿಗೆ ವಿಜಯವಂತವನಾಗ್ನಿ ಕರುಣಿಸಿರುವನು. ಬ್ರಹ್ಮರುದ್ರೇಂದ್ರಾದಿ ಪದವೀದಾತನು, ಸ್ವತಂತ್ರನು ಆದ ಪರಶುರಾಮ ದೇವನ ಅಧೀನದಲ್ಲಿ ಸರ್ವಜೀವರು ಸದಾ ನಿಂತಿರುವರು. ಅವನು ನಮಗೆ ಪ್ರಿಯತಮನು. ಅವನಿಗೆ ನಾವು ಪ್ರಿಯತಮರು. ಆದುದರಿಂದ ಆತನ ಅಪ್ಪಣೆಪಡೆದು ದ್ರವ್ಯರಾಶಿಯನ್ನು ತಂದು, ಯಜ್ಞವನ್ನು ಮಾಡೋಣ. ನಮ್ಮ ತಾತನೇ ಆಗಿರುವ ಶ್ರೀ ಬಾದರಾಯಣ ದೇವನು ಆ ದ್ರವ್ಯವನ್ನೆತ್ತಿ ತನ್ನ ಕೈಯಿಂದ ನಮಗೆ ಕೊಡುವನು.'

ಧರ್ಮರಾಜನು 'ತಾತ! ಮರುತ್ತನಾರು? ಆತನು ಮಾಡಿದ ಯಜ್ಞವು ಎಂತಹದು?' ಎಂದು ಕೇಳಿದನು. ಶ್ರೀ ವ್ಯಾಸರಿಂತೆಂದರು: 'ರಾಜನ್! ಮರುತ್ತನ ಕಥೆಯು ಬಹು ವಿಚಿತ್ರವಾಗಿದೆ ಕೇಳು! ಕೃತಯುಗದಲ್ಲಿ ನೀತಿಪ್ರವರ್ತಕನಾದ ವೈವಸ್ವತಮನು ರಾಜನಿಗೆ

ಪ್ರಸಂಧಿ ಎಂಬ ಮಗನಿದ್ದನು. ಅವನಿಗೆ ಕ್ಷುತನು, ಕ್ಷುತನಿಗೆ ಇಕ್ಷ್ವಾಕುವು, ಅವನಿಗೆ ವಿಂಶ, ಅವನಿಗೆ ವಿವಿಂಶನು ಸುತರಾದರು. ಅವನಿಗೆ ಇದ್ದ ಹದಿನೈದು ಜನ ಸುತರಲ್ಲಿ ಖನೀನೇತ್ರನೆಂಬುವ ಜ್ಯೇಷ್ಠನು ಅಧಿಕ ಬಲಪರಾಕ್ರಮವಂತನಾಗಿದ್ದನು. ಅವನು ಸೌಭ್ರಾತ್ರವನ್ನು ತೊರೆದು, ಮಿಕ್ಕ ತನ್ನ ತಮ್ಮಂದಿರ ರಾಜ್ಯವನ್ನು ಕಸಿದನು. ಮಂತ್ರಿಗಳನ್ನು ದ್ವೇಷಿಸಿದನು. ಮಾನ್ಯರನ್ನು ಪರಾಭವಿಸಿದನು. ಪ್ರಜರನ್ನು ಪೀಡಿಸಿದನು. ಮಂತ್ರಿ ಪುರೋಹಿತರು ಅವನನ್ನು ರಾಜ್ಯದಿಂದ ತೊಲಗಿಸಿ ಅವನ ಮಗನಿಗೆ ಪಟ್ಟಗಟ್ಟಿದರು.

ಆ ರಾಜಪುತ್ರನು ತನ್ನ ತಂದೆಗಾದ ಪಾಡನ್ನು ತಿಳಿದು, ಸಚಿವಾದಿ ಸಾಮಾನ್ಯ ಪ್ರಜಾಂತವಾದ ಪರಿವಾರದಲ್ಲಿ ಅನುರಾಗದಿಂದ ವರ್ತಿಸಿದನು. ಸತ್ಯ ಧರ್ಮಗಳನ್ನು ಚನ್ನಾಗಿ ಪಾಲಿಸಿದನು. ದಾನಶೀಲನಾಗಿ ಬೇಕಾದ ದಾನಗಳನ್ನಿತ್ತು, ದರಿದ್ರನಾದನು. ಅವನ ಕೋಶವು ಬರಿದಾಯಿತು. ಇದನ್ನರಿತು ಅವನ ಶತ್ರುಗಳು ದಂಡೆತ್ತಿ ಮುತ್ತಿ, ರಾಜ್ಯವನ್ನು ಕಸಿದರು. ಅವನು ವನವನ್ನು ಸೇರಿ, ನಿಯತ ಪರಿವಾರದಿಂದ ಅಲ್ಲೇ ಆಶ್ರಮವನ್ನು ಕಟ್ಟಿಕೊಂಡು, ತಪೋ ನಿರತನಾಗಿ ವಾಸಿಸಿದನು. ತಪೋ ಮಹಿಮೆಯಿಂದ ಅವನು ತನ್ನ ಕೈಗಳನ್ನು ಗೊಟ್ಟದಂತೆ ಮಾಡಿ ಊದುವ ಮಾತ್ರದಿಂದ, ರಥಗಜತುರಗಭಟಾದಿ ಬಹುಸೇನೆಯು ಹೊರಬಂತು. ಆ ಸೇನೆಯಿಂದ ಕೂಡಿ, ರಾಜನು ತನ್ನ ಶತ್ರುಗಳ ಮೇಲೇರಿ ಹೋಗಿ, ಅವರನ್ನು ಗೆದ್ದು, ರಾಜ್ಯವನ್ನು ಮತ್ತೆ ಸಂಪಾದಿಸಿ, ಸುಖದಿಂದಿದ್ದನು. ಕೈಯಲ್ಲಿ ಧಮನವನ್ನು ಮಾಡಿ, ಸೇನೆ ಪಡೆದ ಆ ಮಹಾರಾಜನು ಕರಂಧಮನೆಂದು ಖ್ಯಾತನಾದನು. ಅವನು ಅಂಗಿರಸಮುನಿಯು ಉಪದರ್ಶಕನಾಗಿರುತ್ತಿರಲು ಅನೇಕ ತುರಗ ಮೇಧಗಳನ್ನು ಮಾಡಿದನು.

ಕರಂಧಮನ ಮಗನೇ ಅವಿಕ್ಷಿತನು, ತ್ರೇತಾಯುಗದ ಆದಿಯಲ್ಲಿದ್ದನು. ಅವನು ಇಂದ್ರಸಮತೇಜನಾಗಿ, ದೇವತೆಗಳಿಗೂ ದುರ್ಧರ್ಷನಾದನು. ಇಂದ್ರಿಯ ಜಯವಂತನು, ಬಲು ಪರಾಕ್ರಮಿಯು ಆದ ಆವಿಕ್ಷಿತನು ಅನೇಕ ಯಜ್ಞಗಳನ್ನು ಮಾಡಿ, ಪ್ರಜಾರಂಜಕನಾದನು. ಅವನ ಮಗನಾದ ಮರುತ್ತನು ತನ್ನ ಗುಣರಾಜಿಯಿಂದ ತಂದೆಯನ್ನು ಮೀರಿದನು. ಅವನಿಗೆ ಹತ್ತುಸಾವಿರ ಆನೆಗಳ ಬಲವಿತ್ತು. ಧರ್ಮತತ್ತ್ವವನ್ನರಿತು, ಅತಿ ತೇಜೋವಿರಾಜಮಾನನಾಗಿ ಮರುತ್ತನು ಶ್ರೀವಿಷ್ಣುವಿನನ್ನು ನೆನಪಿಗೆ ತರುತ್ತಿದ್ದನು. ಅವನು ಮಹಾವೈಭವದಿಂದ ಅಶ್ವಮೇಧ ಯಜ್ಞವನ್ನು ಮಾಡಿದನು. ಕಟ್ಟಿದ್ದ ಶಾಲೆಗಳು, ದೀಪಸ್ತಂಭಗಳು, ಭಾಂಡಗಳು, ಪಾತ್ರೆಗಳು, ಸ್ರುಕ್‌ಸ್ರುವ ಚಮಸಾದಿಗಳು, ಕೂಡುವ ಮಣೆಗಳು, ಎಲ್ಲವೂ ಸುವರ್ಣಮಯವಾಗಿದ್ದವು. ಹಿಮಗಿರಿಸಾನು ದೇಶದಲ್ಲಿ ನಡೆದ ಆ ಯಜ್ಞದಲ್ಲಿ ಇಂದ್ರಾದಿ ದೇವತೆಗಳು ಪ್ರತ್ಯಕ್ಷವಾಗಿ ನಿಂತು, ಪೂಜಾದಿಗಳನ್ನು ಸ್ವೀಕರಿಸಿದರು. ಭೂಮಿ ಸುರರು ಹೊರಲಾರದೆ ಸುವರ್ಣ ರಾಶಿಗಳನ್ನು ಕೊಂಡು ಹೋದರು. ಮರುತ್ತನಿಗೆ ಇಂತಹ ಸಂಪತ್ತೆಂತು ಬಂತು ಎಂಬುದನ್ನು ಹೇಳುವೆನು ಕೇಳು !

ಕರಂಧಮನಿಗೆ ಅಂಗಿರಸ ಮಹಾಮುನಿಯು ಉಪದ್ರಷ್ಟನಾಗಿ ಅನೇಕ ತುರಗ ಮೇಧಗಳನ್ನು ಮಾಡಿಸಿದನು. ಕರಂಧಮನು ತನ್ನ ತಪೋಬಲದಿಂದ ಪ್ರಾಜ್ಯಸಾಮ್ರಾಜ್ಯವನ್ನು ಸಂಪಾದಿಸಿ, ಪ್ರಜಾರಂಜಕನಾಗಿ ಆಳಿ, ಚಿರಕಾಲ ಬಾಳಿ, ಸುರಲೋಕವನ್ನು ಸೇರಿದನು. ಅವನ

ಮೊಮ್ಮಗನಾದ ಮರುತ್ತನು ಸುರರಾಜನಿಗೆ ಅಸೂಯಾಪ್ರದವಾಗುವ ಅತುಲ ವೈಭವದಿಂದ ವಿರಾಜಿಸಿದನು. ಅವನು ಅಶ್ವಮೇಧವನ್ನು ಮಾಡಬೇಕೆಂದು ಸಂಕಲ್ಪಿಸಿ, ತನ್ನ ತಾತನ ಉಪದ್ರಷ್ಟನಾಗಿದ್ದ ಆಂಗಿರಸನ ಮಗನಾದ ಬೃಹಸ್ಪತಿಯನ್ನು ತನಗೆ ಉಪದ್ರಷ್ಟನಾಗಿದ್ದು, ಯಜ್ಞವನ್ನು ಸಾಂಗಮಾಡಿಸಲು ಬೇಡಿದನು. ಬೃಹಸ್ಪತಿಯೂ ತನ್ನ ಸಮ್ಮತಿಯನ್ನು ತಿಳಿಸಬೇಕೆಂದಿದ್ದನು. ಇಷ್ಟರಲ್ಲೆ ಇಂದ್ರನೀವೃತ್ತಾಂತವನ್ನರಿತು, ಸರಸರನೆ ಸುರಗುರುವಿನ ಮನೆ ಸೇರಿ ಇಂತೆಂದನು:

'ಅನಘ! ಮರುತ್ತರಾಜನು ನಿನ್ನನ್ನು ಉಪದರ್ಶಕನ ಕಾರ್ಯದಲ್ಲಿ ವರಿಸಲು ಬರುತ್ತಿರುವನು. ಅಮರಾಧಿಪನಾದ ನನಗೆ ಉಪದ್ರಷ್ಟನಾಗಿದ್ದು, ಮತ್ತೊಬ್ಬನಿಗೆ - ಅದರಲ್ಲಿ ಮರ್ತ್ಯನಿಗೆ - ಉಪದ್ರಷ್ಟನಾಗಿ ಪೋಗುವುದು ನಿನಗೆ ಸರಿಯಲ್ಲ. ಆ ಮಾತಿಗೆ ಬೃಹಸ್ಪತಿಯು ನಕ್ಕು 'ಮಹೇಂದ್ರ! ನಿನ್ನ ಮಹಿಮೆಯನ್ನು ನಾನರಿಯೆನೇ? ಇಷ್ಟೇಕೆ ಹೇಳುವೆ! ಸರ್ವಲೋಕೇಶನಾದ ನಿನಗೆ ಗುರುವೆನಿಸಿ, ಮನುಜ ಮಾತ್ರನ ಯಜ್ಞದ ದಕ್ಷಿಣೆಗಳಿಗೆ ಈ ಸುರಗುರುವು ಆಶಿಸುವನೇ? ಶಂಕೆಬಿಡು! ಅಗ್ನಿಯು ಶೀತಲನಾಗಬಹುದು; ಸೂರ್ಯನು ಕಪ್ಪಾಗಬಹುದು; ಪೃಥ್ವಿಯು ಚೂರಾಗಬಹುದು; ಮೇರುವು ಚಲಿಸಬಹುದು; ಆದರೆ ಈ ಬೃಹಸ್ಪತಿಯು ಎಂದಿಗೂ ಮರುತ್ತನ ಯಜ್ಞಕ್ಕೆ ಉಪದರ್ಶಕನಾಗಿ ಹೋಗುವುದಿಲ್ಲ! ತಿಳಿ!' ಎಂದನು.

ಆ ಮಾತನ್ನು ಕೇಳಿ ಇಂದ್ರನು ಪ್ರಮೋದ ಮೇದುರ ಮಾನಸನಾಗಿ ತನ್ನ ಮಂದಿರವನ್ನು ಸೇರಿದನು. ಸುರರೂ ಸಂತವಿಸಿದರು. ಇದೆಲ್ಲವನ್ನು ಕೇಳಿ ಮರುತ್ತನು ದೇವಾಚಾರ್ಯನನ್ನು ಸೇರಿ, ವಂದಿಸಿ, ಇಂತೆಂದನು 'ಮಹಾನುಭಾವ, ನಿನಗೆ ತಿಳಿಸಿದಂತೆ ಅಶ್ವಮೇಧವನ್ನು ಮಾಡಲೆಣಿಸಿ, ತಕ್ಕ ಸಂಭಾರಗಳನ್ನು ಸಂಪಾದಿಸಿರುವೆನು. ಸಕಲ ರಾಜನ್ಯರೂ ವಶರಾಗಿರುವರು. ನೀನು ಉಪದರ್ಶಕನಾಗಿ ಬಂದರೆ ಸಾಕು! ನನ್ನ ಯಜ್ಞವು ಸಾಂಗವಾಯಿತೆಂದೇ ತಿಳಿವೆನು.' ಆ ಮಾತಿಗೆ ವಾಚಸ್ಪತಿಯು 'ಇಂದ್ರನಿಂದ ಮೊದಲೇ ಆಹ್ವಾನವು ಬಂದಿದೆ. ಆದುದರಿಂದ ಬರಲಾರೆನು' ಎಂದನು. ಮರುತ್ತನು 'ವಿಪ್ರೋತ್ತಮ! ಹಾಗೆನ್ನಲಾಗದು. ನಮ್ಮ ತಾತನಾದ ಕರಂಧಮನಿಗೆ ನಿಮ್ಮ ತಂದೆ ಉಪದರ್ಶಕರಾಗಿ ಅನೇಕ ಯಜ್ಞಗಳನ್ನು ನಡೆಸಿಕೊಟ್ಟರು. ನೀನೀಗ ಉಪದ್ರಷ್ಟನಾಗಿ ನನ್ನ ಯಜ್ಞವನ್ನು ನಡೆಸಿಕೊಡುವುದು ನ್ಯಾಯವಲ್ಲವೇ?' ಎಂದು ಕೇಳಿದನು. ಗುರುವು 'ಹಾಗಲ್ಲ! ನಾನೀಗ ಅಮರ್ತ್ಯರಿಗೆ ಗುರುವಾಗಿ ಕ್ರತುಶತಗಳನ್ನು ಮಾಡಿಸಿರುವೆನು. ಮತ್ತೆ ಮನುಜ ಮಾತ್ರನಿಗೆ ಉಪದರ್ಶಕನಾಗಲಾರೆನು. ಇದು ನಿಜ! ಸುಮ್ಮನೆ ಮಾತಾಡದೆ ಹೋಗಿಲ್ಲಿಂದ! ನಿನಗೆ ಬೇಕಾದ ಇನ್ನೊಬ್ಬ ಉಪದರ್ಶಕನಿಂದ ನಿನ್ನ ಯಜ್ಞವು ನಡೆದೀತು!' ಎಂದನು.

ಮರುತ್ತನು ಲಜ್ಜಿತನಾಗಿ ಮನೆಗೆ ಬಂದು, ಚಿಂತಾಕ್ರಾಂತನಾಗಿದ್ದನು. ನಾರದನು ಅವನಲ್ಲಿಗೆ ಬಂದು ಆತನ ಚಿಂತಾಕಾರಣವನ್ನು ಕೇಳಿದನು. ಮರುತ್ತನು ನಡೆದುದೆಲ್ಲವನ್ನೂ ತಿಳಿಸಿ, 'ನನ್ನ ಯಜ್ಞವು ಸರಿಯಾದ ಉಪದರ್ಶಕನಿಲ್ಲದೆ ನಿಂತುಹೋಗುತ್ತಿದೆ!' ಎಂದನು. ನಾರದನು, 'ಚಿಂತೆ ಬಿಡು! ಆಂಗಿರಸನ ದ್ವಿತೀಯ ಪುತ್ರನಾದ ಸಂವರ್ತನಿರುವನು. ಅವನು ಅಣ್ಣನಿಂದ ತಿರಸ್ಕೃತನಾಗಿ, ಎಲ್ಲವನ್ನೂ ಬಿಟ್ಟು, ಕಾಶಿಯಲ್ಲಿ ದಿಗಂಬರನಾಗಿ ಸಂಚರಿಸುತ್ತಿರುವನು. ಆ ಮಹಾತ್ಮನು ನಿನಗೆ ಉಪದ್ರಷ್ಟನಾಗಿರಲು ಅರ್ಹನಾಗಿರುವನು' ಎಂದನು.

ಮರುತ್ತನು 'ಬದುಕಿದೆನು ಮಹರ್ಷೇ! ಕಾಶಿಯಲ್ಲಿ ಉನ್ಮತ್ತರು, ದಿಂಗಂಬರರು ನೂರಾರು ಜನರಿರುವರು. ಅವರಲ್ಲಿ ಸಂವರ್ತನನ್ನು ತಿಳಿವ ಬಗೆ ಹೇಗೆ?' ಎಂದನು. ನಾರದನು 'ಪುರದ್ವಾರದಲ್ಲಿ ಶವವನ್ನಿಟ್ಟು ಕಾದಿರು! ದಿಗಂಬರರು ನೋಡುತ್ತಾ ಹೋಗುವರು. ಸಂವರ್ತನಂತಲ್ಲ. ಶವವನ್ನು ನೋಡಿದ ಕೂಡಲೇ ಅಲ್ಲಿಯೇ ಅವನಿಗೆ ಶಿವದರ್ಶನವೂ ಆಗುವುದು. ಕಾಶೀಮೃತರ ದಕ್ಷಿಣ ಕರ್ಣದಲ್ಲಿ ತಾರಕ (ರಾಮ) ಮಂತ್ರವನ್ನುಪದೇಶಿಸಲು ಬರುವನಲ್ಲವೇ ವಿಶ್ವನಾಥನು! ಅಂತು ಶಿವನನ್ನು ನೋಡಿ, ಬಂದ ಕೆಲಸವಾಯಿತೆಂದು ಹಿಂದಿರುಗುವ ಉನ್ಮತ್ತನನ್ನು ಸಂವರ್ತನೆಂದು ತಿಳಿ! ಬಿಡದೆ ಹಿಂಬಾಲಿಸು! ಏಕಾಂತ ಪ್ರದೇಶದಲ್ಲಿ ಶರಣಾಗು! ನನ್ನನ್ನು ನಿನಗೆ ತಿಳಿಯ ಹೇಳಿದವರಾರೆಂದರೆ - ನಾರದನೆನ್ನು! ಅವನೆಲ್ಲಿರುವನೆಂದರೆ - ನಿನ್ನನ್ನು ತಿಳಿಸಿ, ಅಗ್ನಿಪ್ರವೇಶವನ್ನು ಮಾಡಿದನೆನ್ನು! ಶಂಕಿಸಬೇಡ!' ಎಂದನು. ಮರುತ್ತನು ಅಂತೇಮಾಡಿ, ಏಕಾಂತ ದೇಶದಲ್ಲಿ ಸಂವರ್ತನನ್ನು ಸಮೀಪಿಸಿದನು. ಅವನು ಉಗುಳಿ, ಮಣ್ಣೆರಚಿ, ಬೈದು, ಓಡಿದರೂ ಬಿಡದೆ ಮರುತ್ತನು ಹಿಂಬಾಲಿಸಿದನು. ಸಂವರ್ತನು ಒಂದು ಆಲದ ಮರದ ಅಡಿಯಲ್ಲಿ ಆಲಸಿದವನಂತೆ ಕೂತನು. ಮರುತ್ತನು ಸಮೀಪಿಸಿ, ಕೈಮುಗಿದು ನಿಂತನು.

ಸಂವರ್ತನು 'ನನ್ನನ್ನು ತಿಳಿಸಿಕೊಟ್ಟವರಾರು? ನಿಜವನ್ನು ನುಡಿ! ನಿನ್ನ ಮನೋರಥವು ಈಡೇರುವುದು. ಸುಳ್ಳು ಹೇಳಿದೆ ಎಂದರೆ ತಲೆ ಸಾವಿರ ಹೋಳಾಗಿ ಸಾಯುವೆ!' ಎಂದನು. ಮರುತ್ತನು 'ನಾರದನು ತಿಳಿಸಿ, ಅಗ್ನಿಲೋಕವನ್ನು ಸೇರಿದನೆಂದನು. ಸಂವರ್ತನು 'ಸರಿ! ನನ್ನಿಂದೇನಾಗಬೇಕಾಗಿದೆ? ಹೇಳು!' ಎಂದನು. ಮರುತ್ತನು ತನ್ನೆಲ್ಲ ವಿಷಯವನ್ನು ತಿಳಿಸಿ, 'ಉಪದ್ರಷ್ಟನಾಗಿ ಅಶ್ವಮೇಧವನ್ನು ನಡೆಸಿಕೊಡು!' ಎಂದು ಬೇಡಿದನು. ಸಂವರ್ತನು 'ನನ್ನ ಅಣ್ಣನಾದ ಬೃಹಸ್ಪತಿಯು ತನ್ನ ತಪೋಬಲದಿಂದ ದೇವಗುರುವಾಗಿ ನನ್ನನ್ನು ತಿರಸ್ಕರಿಸಿದನು. ನಾನು ನನ್ನದೆಲ್ಲವನ್ನೂ ಬಿಟ್ಟು, ಇಲ್ಲಿ ಬಂದು, ಹೀಗಿರುವೆನು. ನನ್ನಂತಹ ಕೃಶದರಿದ್ರ ವಿಪ್ರನಿಂದ ನಿನಗೆ ಕೀರ್ತಿ ಹೆಚ್ಚಾಗದು. ಹೋಗಿ ಬೃಹಸ್ಪತಿಯನ್ನೇ ವರಿಸು! ಒಂದು ವೇಳೆ ನಾನೇ ಉಪದ್ರಷ್ಟನಾಗಬೇಕೆಂದಿದ್ದರೆ ಕೇಳು! ಬೃಹಸ್ಪತಿಯು ನನಗೆ ಅಣ್ಣನು; ಪೂಜ್ಯನು. ಆತನ ಅಪ್ಪಣೆಯನ್ನು ಪಡೆದು ಬಂದರೆ ನನ್ನ ಉಪದರ್ಶಕತ್ವವು ನಿನಗೆ ದೊರೆತೀತು!' ಎಂದನು. ಮರುತ್ತನು, ಅಮರ್ತ್ಯ ಗುರುವಾಗಿ ಮರ್ತ್ಯನನ್ನೊಲ್ಲೆನೆಂದ ದೇವಗುರುವಿನನ್ನು ನಾನು ಮತ್ತೆ ನೋಡಲಾರೆನು. ಬೇಕಾದವರನ್ನು ವರಿಸೆಂದು ಆತನು ಆಗಲೇ ಅಪ್ಪಣೆ ಇತ್ತಿರುವನು. ಮಹಾತ್ಮ! ದಯಮಾಡಿ ನನ್ನ ಯಜ್ಞವನ್ನು ನಡೆಸಿಕೊಡು! ನೀನು ಉಪದ್ರಷ್ಟನಾಗಿರಲು ಯಜ್ಞಮಾಡಿ ನಾನು ಇಂದ್ರಸಮನಾಗುವೆನು' ಎಂದನು.

ಸಂವರ್ತನು 'ಸರೇ! ಹಾಗೇ ಆಗಲಿ! ಆದರೆ ನಾನು ಯಜ್ಞವನ್ನು ಮಾಡಿಸುವಾಗ ದಿವಸ್ಪತಿ ಬೃಹಸ್ಪತಿಗಳಿಗೆ ಅಸೂಯೆ ಪುಟ್ಟಿ; ಅದನ್ನು ಕೆಡಿಸಲೆಣಿಸುವರು. ನನ್ನನ್ನು ಬಿಡಬೇಕೆಂದು ನಿನ್ನನ್ನು ಹೆದರಿಸುವರು. ಆಗ ನೀನು ಚಂಚಲನಾಗಿ, ನನ್ನನ್ನು ತಿರಸ್ಕರಿಸಿದರೆ, ನನ್ನ ಶಾಪದಿಂದ ನಾಶವಾಗುವೆ! ತಿಳಿ!' ಎಂದನು ಮರುತ್ತನು. 'ದಿವಸ್ಪತಿ ಬೃಹಸ್ಪತಿಗಳೇ ಏಕೆ? ಪಶುಪತಿ ಪ್ರಜಾಪತಿಗಳ ಮಾತಿಗೂ ನಿನ್ನನ್ನು ಬಿಡೆನು ಬಾ!' ಎಂದು ಆ ಮಹಾತ್ಮನನ್ನು ಕರೆತಂದನು.

'ಮಹೇಂದ್ರನಕಿಂತಲು ನಿನ್ನನ್ನು ಹೆಚ್ಚು ಧನವಂತನನ್ನಾಗಿಸುವೆನು! ನಿನ್ನ ಯಜ್ಞವನ್ನು ಸಾಂಗವಾಗಿ ನಡೆಸುವೆನು !' ಎಂದಭಯವಿತ್ತು ಸಂವರ್ತನಿಂತೆಂದನು: 'ರಾಜನ್ ! ಹಿಮವತ್ಪರ್ವತದ ಉತ್ತರದಲ್ಲಿ ಮುಂಜವನವಿದೆ. ಮುಂಜವಂತವೆಂಬ ಗಿರಿಯೂ ಇದೆ. ಅಲ್ಲಿ ಶಿವನು ಶಿವೆಯಿಂದ ಕೂಡಿ ಕ್ರೀಡಿಸುವನು. ಅಲ್ಲಿರುವ ಸುರಸಿದ್ಧ ಗರುಡ ಗಂಧರ್ವಾದಿಗಳಿಗೆ ಜರಾಮರಣಗಳಿಲ್ಲ. ನಾವು ಅಲ್ಲಿಗೆ ಹೋಗಿ, ಶಿವನನ್ನು ಬೇಡಿ, ಅಲ್ಲಿರುವ ಶುದ್ಧಕಾಂಚನ ಶಿಲೆಗಳನ್ನು ಪಡೆದು ಯಜ್ಞವನ್ನು ಮಾಡೋಣ!' ವೆಂದನು.

ಆಗ ಅವಿಕ್ಷಿತ ಮರುತ್ತನು ಮುಂಜಪರ್ವತವನ್ನು ಸೇರಿ, ಸಂವರ್ತನ ಸಹಾಯದಿಂದ ಬೇಕಾದಷ್ಟು ಸುವರ್ಣವನ್ನು ಪಡೆದನು. ಸಂವರ್ತನು ಶಿವನನ್ನಿಂತು ನುತಿಸಿ ನಮಿಸಿದನು:

'ಶರ್ವ! ವೇಧಸನೇ! ರುದ್ರ! ಶಿವ! ಶಿತಿಕಂಠ! ಪುರುಷ! ಸುವರ್ಚಸ! ಕಪರ್ದಿನ್! ಕರಾಲ! ಹರ್ಯಕ್ಷ! ವರದ! ತ್ರ್ಯಕ್ಷ! ಪೂಷ್ಣದಂತಭಿತ್! ವಾಮನ! ಯಾಮ್ಯ! ನ್ಯಸ್ತರೂಪ! ಸದ್ವೃತ್ತ! ಶಂಕರ! ಕ್ಷೇಮ್ಯ! ಹರಿಕೇಶ! ಸ್ಥಾಣು! ಹರಿಕೇಶ! ಮುಂಡ! ಕೃಶ! ಉತ್ತಾರಣ! ಭಾಸ್ಕರ! ಸುತೀರ್ಥ! ದೇವದೇವ! ರಂಹಸ! ಉಷ್ಣೀಷಿನ್! ಸುವಕ್ತ್ರ! ಸಹಸ್ರಾಕ್ಷ! ಮೀಢುಷ! ಗಿರಿಶ! ಪ್ರಶಾಂತಯತೇ! ಚೀರವಾಸ! ಬಿಲ್ವದಂಡ! ಸಿದ್ಧ! ಸರ್ವದಂಡಧರ! ಮೃಗವ್ಯಾಧ! ಮಹತ್! ಧನ್ವಿನ್! ಭವ! ವರ! ಸೋಮವಕ್ತ್ರ! ಸಿದ್ಧಮಂತ್ರ! ಚಕ್ಷುಸ್! ಹಿರಣ್ಯಬಾಹೋ! ಉಗ್ರ! ದಿಶಾಂಪತೇ! ಲೇಲಿಹಾನ! ಗೋಷ್ಠ ಸಿದ್ಧಮಂತ್ರ! ವೃಷ್ಣೇ! ಪಶೂನಾಂಪತೇ! ಭೂತಾನಾಂಪತೇ! ವೃಷ! ಮಾತೃಭಕ್ತ! ಸೇನಾನಿನ್! ಮಧ್ಯಮ! ಸ್ರುವಹಸ್ತ! ಪತೇ! ಧನ್ವಿನ್! ಭಾರ್ಗವ! ಅಜ! ಕೃಷ್ಣನೇತ್ರ! ವಿರೂಪಾಕ್ಷ! ತೀಕ್ಷ್ಣದಂಷ್ಟ್ರ ತೀಕ್ಷ್ಣ! ವೈಶ್ವಾನರಮುಖ! ಮಹಾದ್ಯುತೇ! ಅನಂಗ! ಶರ್ವ! ದಿಕ್ಪತೇ! ವಿಲೋಹಿತ! ದೀಪ್ತ! ದೀಪ್ತಾಕ್ಷ! ಮಹೌಜಸ! ವಸುರೇತ! ಸುವಪುಷ! ಪೃಥೋ! ಕೃತ್ತಿವಾಸ! ಕಪಾಲ ಮಾಲಿನ್! ಸುವರ್ಣ ಮುಕುಟ! ಮಹಾದೇವ! ಕೃಷ್ಣ! ತ್ರ್ಯಂಬಕ! ಅನಘ! ಕ್ರೋಧನ! ಅನೃಶಂಸ! ಮೃದೋ! ಬಾಹುಶಾಲಿನ್! ದಂಡಿನ್! ತಪ್ತತಪಸ! ಅಕ್ರೂರಕರ್ಮ! ಸಹಸ್ರಶಿರ! ಸ್ವಧಾಸ್ವರೂಪ! ಬಹುರೂಪ!' ಇಂತು ನೂರು ರೂಪದ ಶಿವನಿಗೆ ನಮಿಸಿ ಮತ್ತೆ ಪಿನಾಕಿಯು, ಮಹಾಯೋಗಿಯು, ಅವ್ಯಯನು, ತ್ರಿಶೂಲಹಸ್ತನು, ವರದನು ಆದ ವಿಶ್ವೇಶನನ್ನು ಬೇಡಿ, ಸಂವರ್ತನು ಮರುತ್ತನಿಗೆ ಸುವರ್ಣ ರಾಶಿಗಳನ್ನು ಕೊಡಿಸಿದನು. ಆಗ ಮರುತ್ತನು ಆ ಸುವರ್ಣದಿಂದ ಸ್ರುವಾದಿ ಸಕಲ ಸಂಭಾರಗಳನ್ನು ಮಾಡಿಸಿ, ಅಶ್ವಮೇಧವನ್ನು ಉಪಕ್ರಮಿಸಿದನು. ಸಂವರ್ತನು ಉಪದ್ರಷ್ಟನಾಗಿದ್ದನು.

ಈ ವೃತ್ತಾಂತವನ್ನು ಕೇಳಿ ಇಂದ್ರನ ಗುರುವು ಅಸೂಯೆಗೊಂಡನು. ದೇವೇಂದ್ರನಿಗೆ ಮೀರಿದ ಸುವರ್ಣಾದಿ ಸಮೃದ್ಧಿಯಿಂದ ನಡೆದಿರುವ ಮರುತ್ತನ ಯಜ್ಞದ ಧೂಮರಾಜಿಯಿಂದ ಬೃಹಸ್ಪತಿಯ ಕಣ್ಣುಗಳಲ್ಲಿ ನೀರು ಹರಿಯಿತು. ಯಜ್ಞವಾಟ, ಭಾಂಡಗಳು, ಪಾತ್ರೆಗಳು, ಸ್ರುಕ್‌ಸ್ರುವಾದಿಗಳು, ಮನೆಗಳು ಎಲ್ಲವೂ ಬಂಗಾರದಿಂದ ರಚಿತವಾಗಿ, ಇಂದ್ರನಿಗೂ ಆಶ್ಚರ್ಯವನ್ನು ತಂದಿತು. ಬೃಹಹಸ್ಪತಿಯು ಸಂವರ್ತನ ಮಹಿಮೆಯನ್ನು ಕಂಡು, ಚಿಂತೆಯಿಂದ

ಕೃಶನಾದನು. ಇಂದ್ರನು ಗುರುವಿನಿಂದ ತಿಳಿದು, ಸಂವರ್ತನ ಯಾಜಕತ್ವವನ್ನು ಬಿಡಿಸಲು ನಿಶ್ಚಯಿಸಿ, ಅಗ್ನಿಯನ್ನು ಮರುತ್ತನಲ್ಲಿಗೆ ಕಳಿಸಿದನು.

ಮರುತ್ತನು ಅಗ್ನಿಯೇ ಸಾಕ್ಷಾತ್ತಾಗಿ ಬಂದನೆಂದು ಆನಂದದಿಂದ ಆತನನ್ನು ಪೂಜಿಸಿ, 'ಇಂದ್ರನು ಸುಖವಾಗಿರುವನೇ? ವಾಸವನಿಗೆ ನಮ್ಮಲ್ಲಿ ಪ್ರೀತಿಯು ಕುಗ್ಗ ದಿದೆಯೇ?' ಎಂದು ಪ್ರಶ್ನಿಸಿದನು. ಅಗ್ನಿಯು, 'ರಾಜನ್! ಸುರನಾಥನು ಪ್ರೀತಿಯಿಂದ ನಿನಗೆ ಕಳಿಸಿದ ಸಂದೇಶವನ್ನು ಕೇಳು! ಮರ್ತ್ಯನಾದ ನಿನ್ನ ಯಜ್ಞವನ್ನು ನಡೆಸಿ ಕೊಟ್ಟು ನಿನ್ನನ್ನು ಅಮರ್ತ್ಯ ವಿಭವನನ್ನಾಗಿಸಲು ಬೃಹಸ್ಪತಿಯು ಸಮ್ಮತಿಸಿರುವನು. ಬಿಡು ಸಂವರ್ತನನ್ನು!' ಎಂದನು. ಮರುತ್ತನು, 'ವಹ್ನೇ! ನಿನ್ನ ದೇವೇಂದ್ರನಿಗೆ ಸಾವಿರ ನಮಸ್ಕಾರ! ಬೃಹಸ್ಪತಿಗೆ ನೂರು ನಮಸ್ಕಾರ! ಹಿಂದೆ ಯಾಚಿಸಿದ ನನ್ನನ್ನು ಮನುಜ ಮಾತ್ರನೆಂದು ತಿರಸ್ಕರಿಸಿದ ಬೃಹಸ್ಪತಿಯನ್ನು ಮತ್ತೆ ಎಂತು ಸ್ವೀಕರಿಸಲಿ? ಆತನ ಅನುಜನಾದ ಈ ಸಂವರ್ತನೇ ನನಗೆ ಸಾಕು!' ಎಂದನು. ಅಗ್ನಿಯು 'ಬೃಹಸ್ಪತಿಯು ಯಾಜಕನಾದರೆ ನಿನಗೆ ಪುಣ್ಯಲೋಕಗಳಾಗುವವು. ಇಲ್ಲದಿದ್ದರೆ ಇಂದ್ರನ ವಜ್ರಾಯುಧದಿಂದ ಸಾಯುವೆ! ತಿಳಿ' ಎಂದನು. ಆ ಮಾತನ್ನಾಲಿಸಿ ಸಂವರ್ತನು ಕುಪಿತನಾಗಿ, 'ಅಗ್ನೇ! ಮತ್ತೆ ಇಂತಾಡಬೇಡ! ನಡೆಯಿಲ್ಲಿಂದ! ಇಲ್ಲದಿರೆ ನನ್ನ ದಾರುಣ ದೃಷ್ಟಿಪಾತದಿಂದ ನಿನ್ನ ಸುಟ್ಟುಬಿಡುವೆನು!' ಎಂದನು. ಅಗ್ನಿಯು ಭೀತನಾಗಿ ಸುರಲೋಕೇಶನಿಗೆ ವೃತ್ತಾಂತವನ್ನರುಹಿದನು.

ದೇವೇಂದ್ರನು ನಕ್ಕು, 'ಅಗ್ನೇ! ಆಶ್ಚರ್ಯವಾಗಿದೆ! ಎಲ್ಲವನ್ನೂ ಸುಡುವ ನಿನ್ನನ್ನು ಒಬ್ಬ ಮುನಿಯು ಸುಡಬಲ್ಲನೇ? ಇಂತೇಕೆ ಹೆದರಿ ಬಂದೆ?' ಎಂದನು. ಅಗ್ನಿಯು, 'ದೇವರಾಜ! ಅರಿತರಿತೂ ಮಾತಾಡುವೆ! ವಿಪ್ರರ ಮಹಿಮೆಯನ್ನು ನೀನೂ ತಿಳಿ ದಿರುವೆ? ವೃತ್ರನೆಂಬ ನೀಚ ದಾನವನು ನಿನ್ನನ್ನೆಂತು ಗೆದ್ದನು? ಭಾರ್ಗವ ಚ್ಯವನನು ಒಗೆಯಲೆಂದು ಎತ್ತಿದ ವಜ್ರವನ್ನೂ ನಿನ್ನ ಕೈಯನ್ನೂ ಸಂಸ್ತಂಭಿಸಿದಾಗ ನೀನೇನು ಮಾಡಿದೆ? ಅಶ್ವಿನೀ ದೇವತೆಗಳಿಗೆ ಸೋಮಭಾಗವನ್ನಿತ್ತು ಕ್ಷಮೆ ಬೇಡಲಿಲ್ಲವೇ? ಬ್ರಾಹ್ಮಣ ಬಲದ ಮುಂದೆ ಯಾವ ಬಲವೂ ನಿಲ್ಲಲಾರದು, ತಿಳಿ!' ಎಂದನು. ದೇವೇಂದ್ರನು ಆ ಮಾತನ್ನು ಒಪ್ಪಿ, ಮತ್ತೆ ಧೃತರಾಷ್ಟ್ರನೆಂಬ ಗಂಧರ್ವ ರಾಜನನ್ನು ಮರುತ್ತನನ್ನು ಹೆದರಿಸಲು ಕಳಿಸಿದನು. ಧೃತರಾಷ್ಟ್ರನು ಮರುತ್ತನನ್ನು ಕಂಡು, ಇಂದ್ರ ಸಂದೇಶವನ್ನು ತಿಳಿಸಿ, ಸಂವರ್ತನನ್ನು ಬಿಡದಿರೆ, ವಜ್ರಾಯುಧಕ್ಕೆ ಸಿಕ್ಕು ಸಾಯುವಂತಾಗುವುದೆಂದು ಹೆದರಿಸಿದನು. ಮರುತ್ತನು ಭಯಪಟ್ಟು, ಸಂವರ್ತನಿಗೆ ಶರಣಾದನು. ಸಭಾಸದರೂ ಕುಲಿಶ ಭಯಂಕರ ನಿನಾದವನ್ನು ಕೇಳಿ, ಭಯಾಕುಲಿತರಾದರು.

ಸಂವರ್ತನೆಲ್ಲವನ್ನೂ ತಿಳಿದು, 'ಭಯವಿಲ್ಲ! ಸಂಸ್ತಂಭ ವಿದ್ಯಾವೈಭವಯುತನಾದೆನಗೆ ಇಂದ್ರನೇನೂ ಮಾಡಲಾರನು. ನನ್ನ ತಪೋಬಲದಿಂದ ಎಲ್ಲ ದೇವತೆಗಳ ಆಯುಧಗಳನ್ನು ವ್ಯರ್ಥಗೊಳಿಸುವೆನು' ಎಂದನು. ಮರುತ್ತನು ಮಹಾನುಭಾವ! ಯಾವ ದೇವತೆಗಳಿಗೆ ಹವ್ಯವನ್ನಿತ್ತು, ಯಾಗ ಮಾಡಲಿರುವೆವೋ, ಅಂತಹ ಇಂದ್ರಾದಿಗಳಿಂದ ವಿರೋಧವು

ಸಲ್ಲದು. ದಯಮಾಡಿ ಶಾಂತನಾಗು! ಯಾಗವು ಸಾಗುವಂತೆ ಕರುಣಿಸು!' ಎಂದು ಸಂವರ್ತನನ್ನು ಶಾಂತಪಡಿಸಿದನು. ಸಂವರ್ತನ ಆಹ್ವಾನವನ್ನು ತಿರಸ್ಕರಿಸಲಾರದೆ, ಇಂದ್ರಾದಿ ದೇವತೆಗಳು, ಮರುತ್ತನ ಯಜ್ಞವಾಟಕ್ಕೆ ಪ್ರತ್ಯಕ್ಷವಾಗಿ ಬಂದರು. ಮುನಿಚಂದ್ರ ರಾಜಚಂದ್ರರು, ಪರಮಾದರದಿಂದ ಎದುರು ಪೋಗಿ ಕರೆ ತಂದು, ಬಂದ ಬೃಂದಾರಕರಿಗೆ ಹವಿಸ್ಸುಗಳನ್ನು, ಅರ್ಘ್ಯಪಾದ್ಯಾದಿ ಸಕಲೋಪಚಾರಗಳನ್ನೂ ಸಮರ್ಪಿಸಿದರು.

ಮರುತ್ತನು ದೇವೇಂದ್ರನಿಗೆ ವಂದಿಸಿ 'ನೀನು ಬಂದುದರಿಂದ ನನ್ನ ಯಜ್ಞವು ಸಾಂಗವಾಯಿತು. ನನ್ನಲ್ಲಿ ಕೃಪೆದೋರು! ನನ್ನನ್ನು ಕರುಣಾಶೀತಲ ದೃಷ್ಟಿಯಿಂದ ನೋಡು! ಬಿಡು ಸಿಟ್ಟನ್ನು! ಸಂವರ್ತನೆಂದರೆ ಬೃಹಸ್ಪತಿಯ ತಮ್ಮನೇ! ಬೇರಲ್ಲ! ಆತನಲ್ಲಿಯು ದಯೆದೋರು!'' ಎಂದು ಪ್ರಾರ್ಥಿಸಿದನು. ಇಂದ್ರನು ಸುಪ್ರೀತನಾಗಿ ಸಂವರ್ತನ ಕಡೆ ನೋಡಲು, ಆ ಮುನಿವರನಿಂತೆಂದನು: 'ದೇವೇಂದ್ರ! ಧನ್ಯನಾದೆನು. ನನ್ನ ತಪಸ್ಸಿಂದು ಫಲಿಸಿತು. ಸಾಕ್ಷಾತ್ತಾಗಿ ದೇವತೆಗಳು ಬಂದು ಪೂಜಾದಿಗಳನ್ನು ಸ್ವೀಕರಿಸಿದರೆಂದರೆ ಮರುತ್ತನ ಪುಣ್ಯರಾಶಿಗೆ ಎಣೆಯಿಲ್ಲ. ನೀನು ಸಕಲ ವಿಧಾನ ದಕ್ಷನಾಗಿರುವೆ! ಶತಕ್ರತುವಿಗೆ ತಿಳಿಯದುದಿಲ್ಲ. ಕೃಪಾಭರಿತನಾಗಿ, ಈ ಕ್ರತುವನ್ನು ಮಂತ್ರ, ತಂತ್ರ, ದಾನ ದಕ್ಷಿಣೆಗಳಿಂದ ಲೋಪವಿಲ್ಲದಂತೆ ಸಾಂಗವನ್ನಾಗಿಸಿ, ನಮ್ಮನ್ನು ಕೃತಾರ್ಥರೆನಿಸು! ಈ ರಾಜನು ನಿನ್ನ ದಯದಿಂದ ಬಲು ಪುಣ್ಯಲೋಕಗಳನ್ನು ಹೊಂದುವಂತಾಗಲಿ!' ಎಂದು ಪ್ರಾರ್ಥಿಸಿದನು.

ವೃಂದಾರಕೇಂದ್ರನು ಸುಪ್ರೀತನಾದನು. ಆತನ ಅಪ್ಪಣೆಯಂತೆ ಯಜ್ಞವು ಪ್ರಾರಂಭವಾಯಿತು. ಗಂಧರ್ವರು ಪಾಡಿದರು. ಅಪ್ಸರೆಯರು ಆಡಿ ಪಾಡಿದರು. ಯಜ್ಞದ ಪೂಜಾ ದ್ರವ್ಯಗಳನ್ನು ಕರೆದಂತೆ ಬಂದು ದೇವತೆಗಳು ಸ್ವೀಕರಿಸಿ, ಮರುತ್ತನನ್ನಾಶೀರ್ವದಿಸಿದರು. ದೇವೇಂದ್ರಾದಿಗಳು ಪ್ರೀತರಾಗಿ ಸ್ವರ್ಗವನ್ನು ಸೇರಿದ ಮೇಲೆ, ಮರುತ್ತನು ಯಜ್ಞವನ್ನು ಮುಗಿಸಿ, ವಿಪ್ರಾದಿಗಳಿಗೆ ಭೂರಿದಕ್ಷಿಣೆಗಳನ್ನಿತ್ತು ಸತ್ಕರಿಸಿದನು. ಯಜ್ಞವಾಟದಲ್ಲಿದ್ದ ಸಕಲ ಸುವರ್ಣ ಪಾತ್ರಾದಿಗಳನ್ನು ಅವನೀ ಸುರರಿಗಿತ್ತನು. ಅವರು ಎಲ್ಲವನ್ನೂ ಕೊಂಡು ಪೋಗಲಾರದೆ, ಬಹು ಸುವರ್ಣ ರಾಶಿಗಳನ್ನು ಅಲ್ಲಿಯೇ ಹಿಮಗಿರಿ ಪ್ರಾಂತದಲ್ಲಿ ಹೂತಿಟ್ಟು ಹೋದರು. ಸಂವರ್ತನು ದೇವಲೋಕವನ್ನು ಸೇರಿದನು. ಮರುತ್ತನು ತನ್ನ ಪುರವನ್ನು ಸೇರಿ ಬಹುಕಾಲ ರಾಜ್ಯವಾಳಿ, ದಿವ್ಯ ಲೋಕಗಳನ್ನು ಹೊಂದಿದನು.

ಧರ್ಮರಾಜ! ವಿಪ್ರರು ಧನರಾಶಿಗಳನ್ನಿಡುವಾಗ 'ಯಾರಿಗೆ ಸಿಕ್ಕರೆ ಅವರದೇ ಈ ಧನವೆ'ಂದು ನುಡಿದಿರುವುದರಿಂದ ನಿನಗೆ ಬ್ರಾಹ್ಮಣ ಸ್ವಾಪಹಾರದ ದೋಷವು ಬರುವುದಿಲ್ಲ. ಆ ಧನವನ್ನೂ, ಶಂಕರಸ್ವಾಮಿಪರಶುರಾಮನೀವ ಧನವನ್ನೂ, ನಾನಾಗಿ ನಿನಗೆ ಕೊಡಿಸುವೆನು. ಅಂತಹ ಸಂಪತ್ತಿನಿಂದ ಸಮರ್ಥನಾಗಿ, ಅಶ್ವಮೇಧವನ್ನು ಮಾಡು!' ಎಂದು ಶ್ರೀವ್ಯಾಸರು ನುಡಿದರು.

# ೨. ಧರ್ಮಜ ರಾಜ್ಯಪಾಲನ

ಶ್ರೀವೈಶಂಪಾಯನನಿಂತೆಂದನು: 'ರಾಜನ್! ಧರ್ಮಜನು ಶ್ರೀವ್ಯಾಸರ ನುಡಿಯಿಂದ ಸ್ವಲ್ಪ ಸಮಾಧಾನಗೊಂಡಂತಾದುದನ್ನರಿತು, ಶ್ರೀಕೃಷ್ಣನು ಅವನನ್ನು ಸಂತೈಸುತ್ತಿಂತೆಂದನು: 'ರಾಜನ್! ಧೂಮಾವೃತವಾದ ಅನಲದಂತೆ ಪ್ರಕಾಶಿಸದಿರುವೆ! ನಿನ್ನ ಆಲೋಚನಾ ಪ್ರಕಾರವು ಸರಿಯಾಗಿಲ್ಲ. ಕೇಳು! ವಕ್ರವಾದ ಬುದ್ಧಿಯು ಮೃತ್ಯುಪದವೆನಿಸಿ, ಸಂಸಾರದಲ್ಲಿ ಕೆಡಹುವುದು. ಆರ್ಜವದಿಂದ ನಡೆ! ಪರಂಬ್ರಹ್ಮನೊಬ್ಬನೇ ಸ್ವತಂತ್ರನು; ಜೀವರಲ್ಲ. ನಿನ್ನಿಂದ ಕರ್ಮಮಾರ್ಗವೂ ಸರಿಯಾಗಿ ನಡೆಲ್ಪಡಲಾರದು. ನಿನಗೆ ನಿಶ್ಚಯ ಜ್ಞಾನವೇಕೆ ಉದಿಸಲಿಲ್ಲವೋ ಆಶ್ಚರ್ಯವಾಗಿದೆ. ಶೋಕವು ಅಜ್ಞಾನ ಮೂಲವಾಗಿದೆ. ಅಂತಹ ಶೋಕವನ್ನು ಬಿಡುವವರೆಗೂ ಜೀವನು ಯಥಾರ್ಥ ಜ್ಞಾನಿಯಾಗಲಾರನು. ಭೀಷ್ಮನ ಉಪದೇಶವನ್ನು ಭಸ್ಮಹೋಮವನ್ನಾಗಿಸಿದೆ! ನಿನಗೆ ಅಂತಃಶತ್ರುಗಳನ್ನು ಗೆಲ್ಲಲಾಗಿಲ್ಲ.

ಹಿಂದೆ ವೃತ್ರನು ಭೂಮಿಯನ್ನಾಕ್ರಮಿಸಿ ಅದರ ಗಂಧ ಗುಣವನ್ನು ಅಪಹರಿಸಿದನು. ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಎಸೆದನು. ಅದು ನಿರರ್ಥಕವಾಯಿತು. ವೃತ್ರಾಸುರನು ವಿಜೃಂಭಿಸಿ ಅಂಬುವಹ್ನಿಪವನ ಗಗನಗಳಲ್ಲಿ ವ್ಯಾಪಿಸಿ, ಆ ಭೂತಗಳಲ್ಲಿರುವ ರಸರೂಪಸ್ಪರ್ಶ ಶಬ್ದಗಳನ್ನು ಹರಿಸಿದನು. ಮತ್ತೆ ವಜ್ರದಿಂದ ಹೊಡೆದ ಇಂದ್ರನಲ್ಲಿಯು ಅವನು ಪ್ರವೇಶಿಸಿದನು. ಅಸುರ ಪೀಡೆಯಿಂದ ದೇವೇಂದ್ರನು ಮೂರ್ಛೆಹೋದನು. ಆಗ ವಸಿಷ್ಠನು ಮಂತ್ರಪ್ರಭಾವದಿಂದ ಸುರೇಂದ್ರನನ್ನು ಎಚ್ಚರಗೊಳಿಸಿ, ವೃತ್ರನನ್ನು ಸಂಹರಿಸುವಂತೆ ಪ್ರಬೋಧಿಸಿದನು. ಇಂದ್ರನು ತಿಳಿದು ಅಂತರ್ಗತನಾದ ಶತ್ರುವನ್ನು ಮಂತ್ರರೂಪ ವಜ್ರದಿಂದ ಸಂಹರಿಸಿದನು. ಆಮೇಲೆ ಬಹಿರ್ಗತವೃತ್ರನನ್ನೂ ಅವನು ಸಂಹರಿಸಲು ಸಮರ್ಥನಾದನು. ನೀನು ರಾಗ ದ್ವೇಷಗಳಿಂದ ಕುದಿಯುತ್ತಿರುವೆ!

ವ್ಯಾಧಿಯು ಶಾರೀರ, ಮಾನಸ ಎಂದು ಎರಡು ವಿಧವಾಗಿದೆ; ವಾತಪಿತ್ತ ಶ್ಲೇಷ್ಮಗಳೆಂಬ ಧಾತುತ್ರಯವು ಸಮನಾಗಿರುವಾಗ ಮನುಜನು ಸ್ವಸ್ಥನಾಗಿರುವನು. ಅವುಗಳಲ್ಲಿ ಯಾವುದು ವಿಕಾರ ಹೊಂದಿದರೂ ಶಾರೀರ ವ್ಯಾಧಿಯು ಸಂಭವಿಸುವುದು. ಅಂತೆಯೇ ಸತ್ವರಜಸ್ತಮೋ ಗುಣಗಳ ವಿಕಾರದಿಂದ ಮನೋವ್ಯಾಧಿಯು ಜನಿಸುವುದು. ತ್ರಿಗುಣ ಧಾತುಗಳ ಪರಸ್ಪರ ಸಂಬಂಧವಿರುವ ಶರೀರದಲ್ಲಿ ಜೀವನು ತನ್ನ ಕರ್ಮಾನುರೂಪವಾಗಿ ಆಯಾ ಕಾಲದಲ್ಲಿ ಆದಿವ್ಯಾಧಿಗಳನ್ನು ದುಃಖಪಡುವನು. ಗುಣಗಳು ಜನಕವು, ಧಾತುಗಳು ಜನ್ಯವೂ ಆಗಿವೆ. ಗುಣಗಳಲ್ಲಿ ಸತ್ವಗುಣವು ಪ್ರಕಾರಕವಾಗಿದೆ. ನೀನು ರಜಸ್ತಮೋ ಗುಣಜನ್ಯವಾದ ರಾಗದ್ವೇಷಗಳಿಗೆ ಎಡೆಕೊಟ್ಟು ದುಃಖಪಡುತ್ತಿರುವೆ! ಆದುದರಿಂದ ಜ್ಞಾನರಹಿತವಾದ ವ್ಯರ್ಥಕರ್ಮವನ್ನು ಮಾಡಲು ನಿಶ್ಚಯಿಸಿರುವೆ!

ಇನ್ನೊಂದು ಮಾತಿದೆ! ಕೇಳು! ಸತಿಯನ್ನು ಸಭೆಗೆ ಸೆಳೆದರೆಂಬುದನ್ನು ಮರೆತಿರುವೆಯಾ? ವನವಾಸ ಕ್ಲೇಶಗಳನ್ನು ಮರೆತಿರುವೆಯಾ? ಜಟಾಸುರ ಸೈಂಧವ ಕೀಚಕಾದಿಗಳ ಅಪಚಾರಗಳನ್ನು ಮರೆತಿರುವೆಯಾ? ವಿರಾಟನಗರದಲ್ಲಿ ಪಟ್ಟ ದೈನ್ಯ

ಪರಾಭವಗಳನ್ನು ಮರೆತಿರುವೆಯಾ? ಇಲ್ಲ. ಏಕೆ? ನಿನ್ನ ಮನದಲ್ಲಿ ದ್ವೇಷವು ನಿಂತಿದೆ. ಯುದ್ಧರಂಗದಲ್ಲಿ ಭೀಷ್ಮ ದ್ರೋಣ ಕರ್ಣ ಭೂರಿಶ್ರವಾದಿಗಳನ್ನು ಕೊಂದುದನ್ನು ಮರೆತಿರುವೆಯಾ? ಇಲ್ಲ; ಏಕೆ? ನಿನ್ನ ಮನದಲ್ಲಿ ರಾಗವು ಮೂಡಿ ನಿಂತಿದೆ. ಅವರಲ್ಲಿ ದ್ವೇಷದಿಂದ ಅವರು ಮಾಡಿದ ಅಪಚಾರಗಳನ್ನು ನೆನೆದು ದುಃಖಪಡುತ್ತಿರುವೆ. ಇವರಲ್ಲಿ ರಾಗದಿಂದ – ನನ್ನ ಬಂಧುಗಳನ್ನು ನಾನೇ ಕೊಂದೆನಲ್ಲ – ಎಂದು ದುಃಖಪಡುತ್ತಿರುವೆ ! ಅಂತೂ ಎರಡೂ ವಿಧವಾಗಿ ಸದಾ ದುಃಖಪಡುತ್ತಿರಲು ಕಾರಣವಾದ ರಾಗದ್ವೇಷಗಳನ್ನು ಕಿತ್ತೊಗೆಯುವುದನ್ನು ಬಿಟ್ಟು, ರಾಜ್ಯವನ್ನು ಬಿಡುವುದು, ಕ್ಷತ್ರಧರ್ಮ ದೂರನಾಗುವುದು – ಧರ್ಮರಾಜನಾದ ನಿನಗೆ – ಉಚಿತವಲ್ಲ.

ಧರ್ಮಯುದ್ಧದಂತೆ, ನಿಜವಾದ ಯುದ್ಧವು ಮತ್ತೊಂದಿದೆ! ಅದನ್ನು ಮಾಡು! ಮನಸ್ಸೇ ಬಾಣವು. ಪರಮಾತ್ಮನೇ ಮಿತ್ರನು. ಬುದ್ಧಿಯೇ ಸಾರಥಿಯು. ಜ್ಞಾನವೇ ಆಯುಧವು; ಇಂದ್ರಿಯಗಳೇ ಕುದುರೆಗಳು. ಅಜ್ಞಾನ, ಅನ್ಯಥಾ ಜ್ಞಾನಗಳಿಗೆ ಕಾರಣವಾದ ರಾಗದ್ವೇಷಗಳೇ ಶತ್ರುಗಳು. ಜೀವನೇ ರಥಿಕನು. ಇಂತಹ ಅಂತರಂಗ ಯುದ್ಧವನ್ನು ಮಾಡಿ, ಜಯಿಸು! ರಾಗದ್ವೇಷಗಳನ್ನು ಬಿಡದೆ ಎಂತು ಜಯಿಸುವೆ? ಸದ್ಬುದ್ಧಿವಂತ ನಾಗು! ಮಮ – ಎಂಬ ಎರಡಕ್ಷರವೇ ಮೃತ್ಯುವು; ನಮಮ – ಎಂಬ ಮೂರಕ್ಷರವೇ ಅಮೃತವು. ಜೀವರಿಗೆ ಸ್ವರೂಪದಿಂದ ಮೃತಿಯಿಲ್ಲ. ಶರೀರವೇ ತಾನೆಂದು ತಿಳಿದು, ಶರೀರ ನಾಶವಾದರೆ ತಾನು ಸತ್ತನೆಂದು ದುಃಖಪಡುವುದು ಅಜ್ಞಾನವೇ ಅಲ್ಲವೇ? ಚತುಸ್ಸಮುದ್ರ ಮುದ್ರಿತ ಧರಾವಲಯವನ್ನು ಆಳಿ, ತನ್ನದೇನೂ ಇಲ್ಲ ಎಂದು ಮಮತಾಪರಿತ್ಯಾಗ ಮಾಡಿದ ಮಹಾತ್ಮನೇ ನಿಜವಾದ ಜ್ಞಾನಿಯು. ಅವನಿಗೆ ಯುದ್ಧಾದಿಗಳಲ್ಲಿ ಆಗುವ ಶತ್ರುವಧೆಯಿಂದ ಪಾಪವಿಲ್ಲ. ವನದಲ್ಲಿ ವನ್ಯಾಹಾರದಿಂದ ಜೀವಿಸುತ್ತಿದ್ದರೂ, ಭೀಷ್ಮ ದುರ್ಯೋಧನಾದಿಗಳನ್ನು ಮರೆಯಲಾರದೆ, ರಾಗದ್ವೇಷಗಳಿಂದ ಕೂಡಿ ದುಃಖಪಡುವುದರಿಂದ, ನಿನಗೆ ವಾನಪ್ರಸ್ಥಧರ್ಮವೂ ಸರಿಯಾಗಿ ನಡೆಯಲಾರದು. ಬಹಿಶ್ಶತ್ರುಗಳನ್ನು ಗೆದ್ದರೆ ಸಾಲದು; ಅಂತಶ್ಶತ್ರುಗಳನ್ನು – ಅವರಲ್ಲಿ ದುಷ್ಟತಮವಾದ ದುಷ್ಟಕಾಮನನ್ನು ಗೆಲ್ಲಬೇಕು. ಕಾಮಜಯವು ಅಧ್ಯಯನ ದಾನ, ಜಪ, ಯಜ್ಞಗಳನ್ನು ಶ್ರೀಹರಿ ಪ್ರೀತಿಗಾಗಿ ಮಾಡುವುದರಿಂದ ಸುಸಾಧ್ಯವಾಗಿದೆ.

ಕಾಮನು ಹೇಳಿದನಂತೆ ಕೇಳು! 'ಪ್ರಯತ್ನದಿಂದ ನನ್ನನ್ನು ಗೆಲ್ಲಲಾಗದು! ಧೈರ್ಯದಿಂದ ನನ್ನನ್ನು ಗೆಲ್ಲಲಾಗದು. ಪ್ರಯತ್ನ ಧೃತಿಗಳನ್ನು ನಾನು ಕೆಡಿಸಿಬಿಡುವೆನು. ತಪಸ್ಸಿನಿಂದ ನನ್ನನ್ನು ಗೆಲ್ಲಲಾಗದು. ಅವನ ತಪಸ್ಸು ಫಲಾಶೆಯಿಂದ ಕೆಡುವಂತೆ ಮಾಡುವೆನು. ಮೋಕ್ಷಕಾಮಿಯೂ ಮೋಕ್ಷಾಶೆಯುಳ್ಳವನೇ ಆಗಿ ನನ್ನ ವಶನಾಗಿರುವನು. ಮೋಕ್ಷವನ್ನು ಶ್ರೀಹರಿ ಪ್ರೀತಿಕಿಂತಲು ಹೆಚ್ಚಲ್ಲವೆಂದು ತಿಳಿದು ಶ್ರೀಹರಿ ಸೇವೆಗಾಗಿ ಮೋಕ್ಷವನ್ನು ಬೇಡುವನೊಬ್ಬನು ಮಾತ್ರ ನನ್ನನ್ನು ಗೆದ್ದಿರುವನು. ಮಿಕ್ಕೆಲ್ಲರು ನನ್ನ ದಾಸರು. ನಾನಾಡಿಸಿದಂತೆ ಆಡುವರು. ಇದು ಕಾಮಗೀತೆ!'

ಆದುದರಿಂದ ಧರ್ಮರಾಜ ! ನಿಷ್ಕಾಮನಾಗಿ ರಾಜ್ಯವನ್ನಾಳು ! (ಹರಿ) ಪ್ರೀತಿಗಾಗಿ

ಅಶ್ವಮೇಧವನ್ನು ಮಾಡು! ಯುದ್ಧವು ಧರ್ಮಯುದ್ಧವಾಗಿರುವಾಗ - ನಾನಾಗಿ ನಿಂತು ಮಾಡಿಸಿದಾಗ - ಅದನ್ನು ಅಧರ್ಮವೆಂದು ತಿಳಿಯುವುದು ಮೊದಲ ತಪ್ಪು. ಅಂತಹ ಯುದ್ಧದಿಂದ ಬಂದಿದೆ ಪಾಪ ಎಂದು ತಿಳಿಯುವುದು ಎರಡನೆಯ ತಪ್ಪು. ಅದಕ್ಕೆ ಪ್ರಾಯಶ್ಚಿತ್ತರೂಪ ಯಜ್ಞವನ್ನು ಮಾಡಲೆಣಿಸುವುದು ಮೂರನೆಯ ತಪ್ಪು. ಆದುದರಿಂದ ಮಾಡು ಅಶ್ವಮೇಧವನ್ನು ಕೇವಲ ನನ್ನ ಪ್ರೀತಿಗಾಗಿ! ಸತ್ತ ಬಂಧುಗಳು ಬದುಕಿ ಬರುವರೇ? ಯಜ್ಞಗಳನ್ನು ಮಾಡಿ, ದಾನಗಳಿಂದ ವಿಪ್ರಾದಿ ಪ್ರಜರನ್ನು ಸಂತೋಷ ಪಡಿಸು! ನಿನಗೆ ಪುಣ್ಯಲೋಕಗಳಾಗುವವು.'

ಆಮೇಲೆ ಅದೇ ಮಾತನ್ನು ನಾರದ, ದೇವಲ, ದೇವಸ್ಥಾನ, ಭೀಮಸೇನಾದಿ ಸೋದರರು, ದ್ರೌಪದೀದೇವಿಯು ಹೇಳಿದರು. ಆಗ ಧರ್ಮರಾಜನು ಶೋಕವನ್ನು ಬಿಟ್ಟು, ಧರಣೀಪಾಲನ ಸುಮುಖನಾದನು. 'ಮುನಿಗಳೇ! ನಿಮ್ಮ ಹಿತವಚನಗಳಿಂದ ನನ್ನ ಶೋಕವು ನಿವೃತ್ತವಾಯಿತು. ನಿಮಗೆ ನಮಸ್ಕಾರ!' ವೆಂದು ಧರ್ಮರಾಜನು ಮುನಿಜನರನ್ನು ಪೂಜಿಸಿ, ಕಳಿಸಿದನು. ವೇದವ್ಯಾಸ ದೇವನನ್ನು ಹಿಮಾಲಯದ ನಿಧಿ ಸಂಗ್ರಹಣದಲ್ಲಿ ಸಹಾಯವಾಗಿ ದಯಮಾಡಿಸಬೇಕೆಂದು ಬೇಡಿ, ಬೀಳ್ಕೊಟ್ಟನು. ಶ್ರೀವ್ಯಾಸಾದಿ ಮುನಿವರರು ಕೃಷ್ಣಪಾರ್ಥರ ಅಪ್ಪಣೆ ಪಡೆದು ಅಂತರ್ಹಿತರಾದರು. ಧೃತರಾಷ್ಟ್ರನು ಭೀಷ್ಮನಿಗೆ ಮಾಡತಕ್ಕ ಪರಲೋಕ ಕ್ರಿಯಾಕಲಾಪವನ್ನು ಮುಗಿಸಿ, ನಾನಾವಿಧ ದಾನಗಳನ್ನಿತ್ತು, ಧರ್ಮರಾಜನಿಂದ ಕೂಡಿ ಹಸ್ತಿನಗರವನ್ನು ಸೇರಿದನು. ಅಲ್ಲಿ ಶ್ರೀಕೃಷ್ಣ ಧೃತರಾಷ್ಟ್ರರ ಅನುಜ್ಞೆಯಿಂದ ರಾಜ್ಯಭಾರ ವಹನ ಕಾರ್ಯದಲ್ಲಿ ನಿರತನಾಗಿದ್ದ ಧರ್ಮರಾಜನನ್ನು ಭೀಮಾದಿ ಸೋದರರು ಸೇವಿಸುತ್ತಾ, ಸುಖದಿಂದಿದ್ದರು.

ಧರ್ಮರಾಜನು ಪ್ರಜಾಪಾಲನಕ್ಕಾಗಿ ರಾಜನಾಗಿದ್ದನು. ವನಿತಾದಿ ವಿಷಯ ಭೋಗಗಳನ್ನು ಬಿಟ್ಟು, ಗೋವ್ರತಾದಿಗಳಿಂದ; ವಿಷ್ಣು ಪಂಚಕೋಪವಾಸಾದಿಗಳಿಂದ, ಶರೀರವನ್ನು ದಂಡಿಸಿ, ವಿರಕ್ತನಾಗಿದ್ದನು. ಬೇಕಾದ ದಾನಗಳನ್ನೀವ ಧರ್ಮರಾಜನಿಂದ ಯಾವ ಯಾಚಕನೂ ನಿರಾಶನಾಗಿ ಹೋದುದಿಲ್ಲ. ಅಪಾತ್ರರಿಗೆ ಆತನು ಕೊಡಲಿಲ್ಲ. ತುಲಾಪುರುಷಾದಿ ಮಹಾ ದಾನಗಳನ್ನೂ ಕೊಟ್ಟು, ಧರ್ಮರಾಜನು ಮಹಾದಾತನೆನಿಸಿದನು. ಆತನು ಪಾಂಡುರಾಜನ ಮನೆಯಲ್ಲಿ ವಾಸ ಮಾಡುತ್ತಿದ್ದನು.

ಭೀಮಸೇನನು ಯುವರಾಜನಾಗಿ, ದುರ್ಯೋಧನ ಪ್ರಾಸಾದದಲ್ಲಿ ದ್ರೌಪದೀ ಸಹಿತನಾಗಿ ಸುಖವಾಗಿದ್ದನು. ದ್ರೌಪದಿಯು ಧೂಮರಹಿತವಾದ ಅಗ್ನಿಜ್ವಾಲೆಯಂತೆ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರ ಸಂಬಂಧವಿಲ್ಲದೆ, ಕೇವಲ ಭಾರತೀ ರೂಪದಿಂದ ಭೀಮನಿಂದ ಶೋಭಿಸಿದಳು. ಧರ್ಮಜಾರ್ಜುನ ನಕುಲ ಸಹದೇವರು ಪ್ರೀತಿಯಿಂದಲೇ - ಅಸಮಾನದಿಂದಲ್ಲ ದ್ರೌಪದೀ ದೇವಿಯಲ್ಲಿ ಪ್ರತಿವಿಂಧ್ಯಾದಿ ಸುತರನ್ನು ಪಡೆದ ಮೇಲೆ - ವನವಾಸ ಕಾಲದಿಂದಲು - ಆಕೆಯನ್ನು ಭೀಮಪತ್ನಿ ಎಂದು ತಿಳಿದು - ಬಿಟ್ಟು - ತಂತಮ್ಮ ಪತ್ನಿಯರಿಂದ ಮಾತ್ರ ವಾಸ ಮಾಡಿದರು. ಕಾಶಿರಾಜ ದುಹಿತೆಯಾದ ಕಾಲೀದೇವಿಯೂ ಭಾರತೀದೇವಿಯ ಅವತಾರವೇ ಆದುದರಿಂದ, ಭೀಮಸೇನನು

ಕಾಲೀದ್ರೌಪದಿಯರಿಂದ ಮಾತ್ರ ಕ್ರೀಡಿಸುತ್ತಾ, ಇತರ ಇಪ್ಪತ್ತೊಂದು ಪತ್ನಿಯರ ಸೇವೆಯನ್ನೂ ಸ್ವೀಕರಿಸುತ್ತಾ, ಇಂದ್ರಸಮ ವಿಭವನಾಗಿ ವಿರಾಜಿಸಿದನು. ಆತನಿಗೆ ರೋಹಿಣೀ ಸುತೆಯಾದ ದೇವೀ ಎಂಬ ಪತ್ನಿಯೂ, ವಸುದೇವ ಸುತೆಯರಾದ ಇಪ್ಪತ್ತು ಸತಿಯರೂ ಪರಿಚರ್ಯಾರತರಾಗಿದ್ದರು. ದೇವೀಸುತನಾದ ಸರ್ವೋತ್ತುಂಗನು (ಅಹಂಕಾರಿಕ ಪ್ರಾಣಾಂಶ, ಅಶ್ವತ್ಥಾಮನಿಂದ ಸಂಹರಿಸಲ್ಪಟ್ಟಿದ್ದನು. ದೇವಿಯು ರಾಕಾವತಾರಳು ಮತ್ತು ವಾಯುಪತ್ನಿಯೇ ಆಗಿ, ಅವತಾರದಲ್ಲಿಯೂ ಭೀಮಪತ್ನಿಯಾಗಿದ್ದಳು. ಅಪ್‌ದೇವತೆಗಳು ಹತ್ತು, ದಿಗ್ದೇವತೆಗಳು ಹತ್ತು - ಇಂತು ಇಪ್ಪತ್ತು ಜನ ಪತ್ನಿಯರು ಭೀಮಸೇನನನ್ನು ಸೇವಿಸುತ್ತಿದ್ದರು.

ಭೀಮಸೇನನು ಪ್ರತಿ ಗ್ರಾಮದಲ್ಲಿಯು ಐದೈದು ಜನ - ಉತ್ತಮ ಬ್ರಾಹ್ಮಣರನ್ನು ನಿಯಮಿಸಿ, ವಿಷ್ಣುಧರ್ಮಗಳು ನಡೆಯುವಂತೆ ಮಾಡಿದನು. ಅವರನ್ನು ಪರೀಕ್ಷಿಸುವ ಬ್ರಾಹ್ಮಣ ಶ್ರೇಷ್ಠರನ್ನೂ ನಿಯಮಿಸಿ, ಗ್ರಾಮಪ್ರಜರ ವರ್ತನ ಕ್ಷೇಮಗಳನ್ನು ಚನ್ನಾಗಿ ನೋಡಿಕೊಂಡನು. ಅಧರ್ಮ ಪ್ರವೃತ್ತರನ್ನು ತೀವ್ರವಾಗಿ ದಂಡಿಸಿದನು. ಆಗ ಏಕಾದಶ್ಯಾದಿ ವಿಷ್ಣುವ್ರತ ತತ್ಪರರಾಗಿ ಪ್ರಜರು ಧರ್ಮದಲ್ಲಿ ನಡೆಯುತ್ತಿದ್ದರು. ವರ್ಣಾಶ್ರಮ ಧರ್ಮಗಳನ್ನು ಮೀರಿ ನಡೆಯುವವರೂ ಇದ್ದಿಲ್ಲ. ಶ್ರೀ ಯಾದವವಾಸಿಷ್ಠ ಕೃಷ್ಣರನ್ನು ನೋಡುತ್ತಾ, ಅವರಿಂದ ಶಿಕ್ಷಿಸಲ್ಪಟ್ಟ ಪ್ರಜರು ಧರ್ಮವರ್ತನರಾಗಿರಲು ಕಲಿಯುಗವು ಕೂಡ ಕೃತಯುಗದಂತೆ ಆಯಿತು.

ಕೃತಯುಗದಲ್ಲಿ ಸ್ವಲ್ಪ ಪಾಪಕ್ಕೆ ಬಹು ಅನರ್ಥ ಫಲವಿದೆ ಮತ್ತು ಬಹು ಪುಣ್ಯಕ್ಕೆ ಸ್ವಲ್ಪ ಫಲವಾಗಿದೆ. ಆಗ ಪುಣ್ಯವಂತರೇ ಹೆಚ್ಚಾದುದರಿಂದ ಪುಣ್ಯವನ್ನು ಮಾಡುವುದು ಅಪೂರ್ವವೇನಲ್ಲ. ಕಲಿಯುಗದಲ್ಲಿ ಹಾಗಲ್ಲ. ಅಲ್ಪ ಪಾಪವು ಅಲ್ಪ ಫಲವನ್ನೇ ಕೊಡುವುದು; ಅಲ್ಪ ಪುಣ್ಯವಾದರು ಬಹು ಫಲಪ್ರದವಾಗುವುದು. ಇಂತು ಕಲಿಯುಗದ ಪ್ರಜರು ಶ್ರೀಕೃಷ್ಣರ ದರ್ಶನಾದಿಗಳಿಂದ ಬಲು ಪುಣ್ಯಫಲಗಳನ್ನು ವಿಶೇಷ ಹೊಂದಿದರು. ಭೀಮಸೇನನ ಆಜ್ಞಾಪ್ರಭಾವದಿಂದ ಜನರು ಪಾಪವಿಮುಖರೂ, ಪುಣ್ಯವರ್ತನರೂ ಆಗಿದ್ದರು.

ಅರ್ಜುನನು ದಂಡಯಾತ್ರಾರತನಾಗಿ ಶತ್ರುಜಯ, ಮಿತ್ರಪ್ರೀತಿ, ಧನವೃದ್ಧಿಗಳನ್ನು ಸಂಪಾದಿಸುತ್ತಿದ್ದನು. ಶ್ರೀಕೃಷ್ಣನ ಉಪದೇಶಾಮೃತಪಾನದಿಂದ ಆತನು ಅಭಿಮನ್ಯು ಪ್ರಮುಖಸುತ ದುಃಖವನ್ನು ಮರೆತು, ತತ್ವಜ್ಞಾನ ಸುಮುಖನಾದನು. ಆತನು ದುಶ್ಶಾಸನನ ಮನೆಯಲ್ಲಿ, ಸುಭದ್ರಾ ಚಿತ್ರಾಂಗದೆಯರಿಂದ ಕೂಡಿ, ಸುಖವಾಗಿದ್ದನು.

ನಕುಲನು ಸಮಸ್ತ ಭೃತ್ಯಾಶ್ರಿತಾದಿಗಳಿಗೆ ವೇತನವನ್ನೀವ ಕೋಶಾಧಿಕಾರಿ ಯಾಗಿದ್ದನು. ಅವನು ದುರ್ಮುಖ ಮಂದಿರದಲ್ಲಿ ತನ್ನ ಪತ್ನಿಯಾದ ಶಲ್ಯಪುತ್ರೀ ಸಹಿತನಾಗಿ ಸುಖವಾಗಿದ್ದನು. ಸಹದೇವನು ಸಂಧಾನ, ದ್ವೈಧೀಕರಣಾದಿ ಕಾರ್ಯಗಳಲ್ಲಿ ಅಧಿಕೃತನಾಗಿ, ದುರ್ಮರ್ಷಣನ ಪ್ರಾಸಾದದಲ್ಲಿ, ಮಾಗಧ ರಾಜಪುತ್ರಿಯೊಡನೆ ಸುಖವಾಗಿದ್ದನು. ಸಹದೇವನು ಸದಾ ಖಡ್ಗಪಾಣಿಯಾಗಿ ಧರ್ಮರಾಜನಿಗೆ ಪ್ರಧಾನಾಂಗ ರಕ್ಷಕನೂ ಆಗಿದ್ದನು.

ಕೃಪಾಚಾರ್ಯನು ಸೇನಾಪತ್ಯದಲ್ಲಿದ್ದನು. ಯುಯುತ್ಸು, ಸಂಜಯ, ವಿದುರರು ಧರ್ಮರಾಜನ ಶಾಸನದಂತೆ, ಧೃತರಾಷ್ಟ್ರನ ಸೇವೋಪಚಾರಾದಿಗಳಲ್ಲಿ ತೊಡಗಿದ್ದರು. ಧರ್ಮರಾಜನು ಉಭಯ ಕೃಷ್ಣರ ಶಾಸನದಂತೆ ರಾಜ್ಯವಾಳುತ್ತಿರಲು, ಅವನ ದೇಶವು ಸುಭಿಕ್ಷವೂ, ನಿರೋಗವೂ, ಸಂಪದ್ಭರಿತವೂ ಆಗಿತ್ತು. ಬಾಲಮೃತಿಗಳಿರಲಿಲ್ಲ. ಸ್ತ್ರೀಯರು ಸುಮಂಗಲಿಯರಾಗೇ ಜೀವಿಸುತ್ತಿದ್ದರು. ಅವರ ಪತಿಗಳಿಗೆ ಅಕಾಲ ಮರಣವಿದ್ದಿಲ್ಲ. ವಿಧುರರೂ ಇಲ್ಲ, ಶಬ್ದಾದಿ ವಿಷಯ ಪೂರಕ ಪದಾರ್ಥಗಳು ಮನೋಹರವಾಗಿಯೂ, ಯಥೇಚ್ಛವಾಗಿಯೂ ದೊರೆಯುತ್ತಿದ್ದವು. ಮಳೆ ಬೆಳೆಗಳು ಚನ್ನಾಗಿದ್ದವು. ಪ್ರಜರು ತ್ರಿವಿಧ ತಾಪರಹಿತರಾಗಿ ಆನಂದದಿಂದಿದ್ದರು. ಎಲ್ಲರೂ ಶ್ರೀಹರಿಯನ್ನು ಅನನ್ಯ ಭಕ್ತಿಯಿಂದ ಸೇವಿಸುತ್ತಿದ್ದರು.

ಧನಧಾನ್ಯಗಳು, ಕ್ಷೀರಘೃತಗಳು, ಸಮೃದ್ಧವಾಗಿದ್ದವು. ವಿಪ್ರರ ವೇದಪಠನ ವಿಚಾರ ಪ್ರವಚನಗಳು ಅವ್ಯಾಹತವಾಗಿ ನಡೆದವು. ಮುತ್ತುಗಳಿಂದ ಸಮುದ್ರಗಳು, ನದಿಗಳೂ ಮತ್ತು ಧಾತುರತ್ನಗಳಿಂದ ಪರ್ವತಗಳೂ, ವಿವಿಧ ವಸ್ತುಗಳಿಂದ ಗಿರಿ ವೃಕ್ಷಗಳೂ ಪ್ರಜರನ್ನು ತಣಿಸಿದವು. ಪಾಂಡವರು ಶ್ರೀಕೃಷ್ಣವ್ಯಾಸರ ಆಶ್ರಯ ಪ್ರಭಾವದಿಂದ ಸಮಸ್ತ ವೈಭವಪೂರ್ಣರಾಗಿ ಮುನಿಗಂಧರ್ವ ಸಾಮಂತ ಪ್ರಜರಿಂದ ಕೂಡಿ, ಸುಖವಾಗಿದ್ದರು.

ಪಾಂಡವ ಕೀರ್ತಿಶ್ರೀಯು ಪದ್ಮದ್ವಯಾಭಯ ವರೋದ್ಯತಹಸ್ತಪದ್ಮಳಾಗಿ, ದಿಗಂತಗಳಲ್ಲಿ ವ್ಯಾಪಿಸಿ, ಅಸುರ ಪಕ್ಷೀಯರ ತಲೆ ಮೆಟ್ಟಿ ನಿಂತಳು. ಪಾಂಡವರ ಚರಿತ ವನ್ನಾಲಿಸಿ, ಸರ್ವಲೋಕದ ಸುಜನರು ಆನಂದಪಟ್ಟು, ಪುಣ್ಯ ಭಾಜನರಾದರು. ಭಾರತೀಶ್ರೀಯು ಕೂಡ ಪಾತಾಲಪದಳು, ಪೃಥಿವೀನಿತಂಬಳು, ಗಗನ ಮಧ್ಯಳು, ಕರವ್ಯಾಪ್ತ ದಿಗಂತಳು, ಗ್ರಹನಕ್ಷತ್ರ ತಾರಾಹಾರಳು, ದ್ಯುಲೋಕವಕ್ಷಸ್ಕಳು, ಸತ್ಯಲೋಕ ಮುಖಾಂಬುಜಳು ಆಗಿ ತನ್ನ ಶಿರದಲ್ಲಿ ವಿಕುಂಠನಾಥನ ಅಭಯ ಕರಾಂಬುಜವನ್ನು ಧರಿಸಿ, ಸಕಲ ಲೋಕಗಳನ್ನು ಪವಿತ್ರೀಕರಿಸಿದಳು.

ಇಂತಿರಲು ಬಲಿ, ಕಲಿ ಎಂಬ ಇಬ್ಬರು ದೈತ್ಯರು ಕೆಲಕಡೆ ರಾಜ್ಯಧರ್ಮಗಳನ್ನು ಕೆಡಿಸುತ್ತಾ ಸಂಚರಿಸುವುದನ್ನು ತಿಳಿದು, ಶ್ರೀಕೃಷ್ಣನು ಪ್ರೇರಿಸಲು, ಭೀಮಸೇನನು ಕಲಿದೈತ್ಯನನ್ನು ಗೆದ್ದು, ಹೆಡೆಮುಡಿ ಕಟ್ಟಿ, ಕೃಷ್ಣ ಧರ್ಮರ ಮುಂದೆ ನಿಲ್ಲಿಸಿದನು. ಬಲಿಯಲ್ಲಿದ್ದ ಬಲಿದೈತ್ಯನು ಭೀಮನಿಗೆ ಸೋತು, ಓಡಿಹೋದನು. ಧರ್ಮರಾಜನು, 'ಎಲವೋ ಕಲಿಯೇ! ನನ್ನ ರಾಜ್ಯದಲ್ಲಿ ನಿನ್ನ ಉಪದ್ರವವೇಕೆ?' ಎಂದು ಕೇಳಿದನು.

ಕಲಿಯು 'ರಾಜನ್! ಇದು ನನ್ನ ಕಾಲವು. ದುರ್ಯೋಧನ ಮರಣದಿಂದ ಆರಂಭವಾಗಿದೆ ಕಲಿಕಾಲ ತಿಳಿ! ನನ್ನ ಕಾಲವನ್ನು ಆಕ್ರಮಿಸಿ ನಿಂತು, ನನ್ನನ್ನು ತೊಲಗು ಎಂದು ಹೇಳುವುದು ಸರಿಯೇ' ಎಂದನು.

ಧರ್ಮರಾಜನು 'ಕೇಳು! ರಾಜರ ಬಲದಿಂದ ರಾಜ್ಯವು ಪ್ರವೃತ್ತವಾಗುವುದು. ನಿನ್ನ ಕಲಿಕಾಲವಾದುದು ನಿಜ! ಆದರೂ ನಿನ್ನ ಕಾಲದಲ್ಲಿಯೂ ಬಲವಂತರಾದ ಧರ್ಮನಿಷ್ಠ ರಾಜರನ್ನು ನೀನು ಕೆಡಿಸಲಾರೆ! ಅವರ ರಾಜ್ಯದಲ್ಲಿಯೂ ನಿನ್ನಾಟ ನಡೆಯದು. ರಾಜನಿಗೆ

ಕಾಲವು ಪ್ರಭುವೋ? ಅಥವಾ ಕಾಲಕ್ಕೆ ರಾಜನೇ ಪ್ರಭುವೋ ಎಂಬ ಸಂಶಯಬಿಡು! ರಾಜನೇ ಕಾಲ ಕಾರಣನಾಗಿರುವನು' ಎಂದನು.

ಕಲಿಯು 'ಹಾಗಲ್ಲ! ಕಲಿಕಾಲವಿದು. ನಾನು ಮೊದಲು ರಾಜನಲ್ಲಿಯೇ ಪ್ರವೇಶಿಸಿ, ಧರ್ಮಭ್ರಷ್ಟನನ್ನಾಗಿಸುವೆನು. ಆಗ ವಿಪ್ರರಲ್ಲಿಯೂ ಹೊಕ್ಕು ಅವರನ್ನೂ ಕೆಡಿಸುವೆನು. ಆದರೆ ಶ್ರೀಕೃಷ್ಣ ಸಹಾಯನಾಗಿರುವೆ! ನಿನ್ನಲ್ಲಿ ಭೀಮನ ಬಲವೂ ಇದೆ. ಆದುದರಿಂದ ನಿನ್ನನ್ನು ಮಾತ್ರ ಕೆಡಿಸಲಾರದಿರುವೆನು. ದೇವ ಬ್ರಾಹ್ಮಣ ದ್ವೇಷಿಗಳ ಕಾಲವಾದ ಕಲಿಯುಗ ದಲ್ಲಿ, ನಿಮ್ಮಿಂದ ಹೊರತಾಗಿ, ಕೆಡದವರೇ ಇಲ್ಲ. ನನ್ನ ದೃಷ್ಟಿಯು ಬಿತ್ತೆಂದರೆ ಸಾಕು! ವೇದಗಳೆಲ್ಲಿ? ಸುಗುಣಗಳೆಲ್ಲಿ? ಸುಯುಕ್ತಿಗಳೂ ವ್ಯರ್ಥವಾಗುವವು!' ಎಂದನು.

ಆ ಮಾತನ್ನಾಲಿಸಿ ಧರ್ಮರಾಜನು 'ಕಲೇ! ಬಲು ಸುಳ್ಳನಾದರೂ ಈ ಒಂದು ಮಾತು ಸತ್ಯವಾಗಿ ನುಡಿದೆ! ಆದ್ದರಿಂದ ನಿನ್ನನ್ನು ಬಿಟ್ಟಿರುವೆನು. ತೊಲಗಿಲ್ಲಿಂದ! ನಮ್ಮ ಸಂತತಿಯಲ್ಲಿ ಸಾವಿರ ವರ್ಷಗಳ ಮೇಲೆ ಕ್ಷೇಮಕನೆಂಬ ರಾಜನು ಬರುವನು. ಅಲ್ಲಿಯವರೆಗೂ ನಮ್ಮ ರಾಜ್ಯದಲ್ಲಿ ನಿನ್ನಾಟ ಸಾಗದಿರಲಿ! ಎಂತಹ ಧರ್ಮನಾಶಕನಾದರೂ ಕ್ಷೇತ್ರಮರ್ಯಾದೆ, ಋಣಪ್ರತಿನಿಧಿ(ಒತ್ತೆ), ಗ್ರಾಮ ಭೂಸೀಮೆ, ತುಲಾ(ತೂಕ) ಮರ್ಯಾದೆಗಳನ್ನು ಕೆಡಿಸದಿರು!' ಎಂದನು. ಶ್ರೀಕೃಷ್ಣನೂ ಧರ್ಮರಾಜನಂತೆ ಅಪ್ಪಣೆ ಮಾಡಿದನು. 'ಪಾಂಡವರ ಸಂತತಿ ಇರುವವರೆಗೂ ನಿನ್ನ ಶಕ್ತಿಯು ಕುಂಠಿತವಾಗಿರುವುದು. ಕ್ಷೇಮಕಾನಂತರದಲ್ಲಿ ಕ್ರಮವಾಗಿ ನಿನ್ನ ಅಧರ್ಮ ಶಕ್ತಿಯು ಹೆಚ್ಚುವುದು. ಆಮೇಲೆ ಇನ್ನೂ ಹೆಚ್ಚಿ, ಯುಗ ಪ್ರಕಾರ ನಡೆಯಲಿ! ನಾನು ಪಾಂಡವರಿರುವವರೆಗೂ ಭೂತಲದಿ ಕಾಲಿಡಬೇಡ!' ಎಂದು ಆಜ್ಞಾಪಿಸಿದ ಶ್ರೀಹರಿವಚನದಂತೆ ಕಲಿಯು ಭೀಮ ಕೃಷ್ಣ ಧರ್ಮಜರಿಗೆ ನಮಸ್ಕರಿಸಿ, ಅಲ್ಲಿಂದ ತೆರಳಿ ಸಮುದ್ರಾಂತದ ಪ್ಲಕ್ಷದ್ವೀಪದಲ್ಲಿದ್ದ ಗುಹೆಯನ್ನು ಹೊಕ್ಕು ಅಡಗಿದ್ದನು.

ಇಂತು ಶ್ರೀಕೃಷ್ಣ ರಕ್ಷಿತರಾದ ಪಾಂಡವರು ಧರ್ಮ ಪರಿಪಾಲಕರಾಗಿ ಮುದದಿಂದ ಬಹುಕಾಲ ಕಳೆದರು. ಶ್ರೀಕೃಷ್ಣನು ಅರ್ಜುನನ ಶೋಕವನ್ನು ಕಳೆಯಲು ಅನೇಕ ಕಥೆಗಳನ್ನು ಹೇಳುತ್ತಾ, ಇಂದ್ರಪ್ರಸ್ಥದಲ್ಲಿ ಪಾರ್ಥನೊಡಗೂಡಿ ಕ್ರೀಡಿಸುತ್ತಿದ್ದನು. ಪಾಂಡವರು ನಾಲ್ವರು ಹಸ್ತಿಪುರದಲ್ಲಿ ಸಂತಸವಾಗಿದ್ದರು.

## ೩. ಸಿದ್ಧಬ್ರಾಹ್ಮಣ ಗೀತೆ (೧)

ಶ್ರೀವೈಶಂಪಾಯನನು ನಿರೂಪಿಸಿದನು:

'ಶ್ರೀಕೃಷ್ಣಾರ್ಜುನರು ಇಂದ್ರಪ್ರಸ್ಥದಲ್ಲಿದ್ದು, ಆಗಾಗ ತತ್ಪ್ರಾಂತ ಪರ್ವತ ಸಾನುವನಗಳಲ್ಲಿ ವಿಹರಿಸುತ್ತಿದ್ದರು. ಪುಣ್ಯಕಥಾಶ್ರವಣದಲ್ಲಿ ಅರ್ಜುನನು ಸುತಲೋಕವನ್ನು ಮರೆಯಲು ಯತ್ನಿಸುತ್ತಿದ್ದನು.

ಒಂದು ದಿನ ಶ್ರೀಕೃಷ್ಣನು, 'ಅರ್ಜುನ! ರಾಜ್ಯವು ನಿಷ್ಕಂಟಕವಾಯಿತು. ಧರ್ಮಜನು ಭೀಮಬಲಸಹಾಯನಾಗಿ ನಿನ್ನ ವೀರ್ಯ ಧೈರ್ಯಗಳನ್ನವಲಂಬಿಸಿ, ಶತ್ರುಗಳನ್ನು ಗೆದ್ದು,

ಸಿಂಹಾಸನಸುಪ್ರತಿಷ್ಠಿತನಾಗಿ, ಸುಖವಾಗಿರುವನು. ನಾನು ದ್ವಾರಕೆಗೆ ತೆರಳಬೇಕೆಂದಿರುವೆನು. ನಮ್ಮ ಜನನೀಜನಕರನ್ನು, ಬಲರಾಮಾದಿ ಬಂಧು ಜನರನ್ನು ನೋಡಬೇಕೆನಿಸಿದೆ. ಧರ್ಮರಾಜನನ್ನು ನಾನಾಗಿ ಕೇಳಲಾರೆನು. ಅವನೆಂದರೆ ನನಗೆ ಪ್ರಾಣದಕಿಂತಲೂ ಹೆಚ್ಚು, ಅವನು ಅಪ್ಪಣೆ ಕೊಡದಿರೆ ನಾನು ಹೋಗಲಾರೆನು. ಆದುದರಿಂದ ನೀನು ಅವನಿಗೆ ತಿಳಿಯ ಹೇಳಿ, ನನಗೆ ಅಪ್ಪಣೆ ಕೊಡಿಸು! ನಡೆ ಕರಿಪುರಕ್ಕೆ!' ಎಂದನು. ಮತ್ತೆ 'ಶ್ರೀಕೃಷ್ಣ! ಹಿಂದೆ ಯುದ್ಧಾರಂಭದಲ್ಲಿ ಅಜ್ಞಾನಕಾತರನಾಗಿದ್ದ ನನಗೆ ದಿವ್ಯ ತತ್ವಗಳನ್ನು ತಿಳಿಸಿ, ನನ್ನ ಅಜ್ಞಾನವನ್ನು ಕಳೆದೆ! ಆದರೆ ಆ ತತ್ವಗಳೆನ್ನ ಮನಃಪಟಲದಲ್ಲಿ ನಿಲ್ಲದೆ ಮಾಸಿದಂತಾಗಿವೆ. ಇನ್ನೊಂದು ಸಲ ಜ್ಞಾನೋಪದೇಶವನ್ನು ಮಾಡಿ ಕರುಣಿಸು!' ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣನು ನಸುನಕ್ಕು ಇಂತೆಂದನು: 'ಅರ್ಜುನ ! ಶ್ರದ್ಧಾರಹಿತನಾದೆ! ಇರಲಿ ಕೇಳು! ಅಂತೆಯೇ ಹೇಳಲಾಗದು. ಆದರೆ ಕಾಶ್ಯಪ ಸಿದ್ಧ ಸಂವಾದ ರೂಪವಾದ ಇತಿಹಾಸವನ್ನು ನಿರೂಪಿಸುವುದರಿಂದ ನಿನಗೆ ತತ್ವನಿಶ್ಚಯವನ್ನು ತರುವೆನು. ಒಬ್ಬ ಬ್ರಾಹ್ಮಣೋತ್ತಮನೊಂದು ದಿನ ನನ್ನಲ್ಲಿಗೆ ಬಂದಿದ್ದನು. ತತ್ವಜ್ಞಾನವನ್ನು ನಿರೂಪಿಸೆಂದು ನಾನು ಕೇಳಿದೆನು. ಆಗ ಅವನು ಕಾಶ್ಯಪ ಸಿದ್ಧ ಸಂವಾದವನ್ನು ಪೇಳಿದನು:

''ಕಾಶ್ಯಪನು ವಿಜಿತೇಂದ್ರಿಯನು, ಜ್ಞಾನವಿಜ್ಞಾನವಂತನು, ವಿರಕ್ತಚಿತ್ತನು ಆಗಿರುವ ಸಿದ್ಧನನ್ನು ನೋಡಿ, ವಿನಯಭರನಾಗಿ ಬಾಗಿ ತತ್ವಜ್ಞಾನವನ್ನು ಬೇಡಿದನು. ಸಿದ್ಧನಿಂತೆಂದನು:

''ಕಾಶ್ಯಪ! ಬಲು ಪುಣ್ಯ ಕರ್ಮಗಳನ್ನು ಮಾಡಿ, ಇಲ್ಲಿ ಐಹಿಕ ಸುಖವನ್ನೂ, ಸ್ವರ್ಗದಲ್ಲಿ ದಿವ್ಯ ಭೋಗಗಳನ್ನೂ ಪಡೆದೆನು. ಪುಣ್ಯ ನಾಶವಾದೊಡನೆ ಸ್ವರ್ಗದಿಂದಿಳಿದು ಬರಬೇಕಾಯಿತು. ಕಾಮ ಕ್ರೋಧಗಳಿಗೆ ಸಿಕ್ಕು ಅನೇಕ ಯೋನಿಗಳನ್ನು ಪೊಂದಿದೆನು. ನನಗಾದ ತಂದೆ ತಾಯಂದಿರನ್ನು ಎಣಿಸಲಾಗದು. ಜಾತಿಗಳನೇಕಗಳಲ್ಲಿ ಜನಿಸಿ ಕುಡಿದ ಹಾಲು ಕೆರೆಯಾದೀತು! ಪುತ್ರ ಮಿತ್ರಾದಿಗಳು ಅನಂತ! ಶತ್ರುಜನರು ಸಾವಿರ! ನಾನಾವಿಧ ಕರ್ಮಗಳಿಂದ ಪಟ್ಟ ನರಕ ದುಃಖಗಳು ನೆನೆಯಲಾಗದು. ಬಂಧ, ಅವಮಾನ, ಧನನಾಶ, ಸುಹೃದ್ವಿಯೋಗಗಳಿಂದ ಹಣ್ಣಾಗ್ಗಿ ನೊಂದೆನು. ಕೊನೆಗೆ ಎಲ್ಲವೂ ನಶ್ವರವೆಂದು ತಿಳಿದು ವಿರಕ್ತನಾದೆನು. ಲೋಕತಂತ್ರ ದೂರನಾಗಿ ಯತ್ಯಾಶ್ರಮವನ್ನು ಸ್ವೀಕರಿಸಿದೆನು. ನೀನೂ ವಿಷಯವಿರಕ್ತನಾಗಿ ಪರತತ್ವಜ್ಞಾನವನ್ನು ಬೇಡುತ್ತಿರುವೆ! ಕೇಳು!

ಶರೀರವನ್ನು ಚೆನ್ನಾಗಿ ಕಾಪಾಡಬೇಕು! ಹಾಗೆಂದು ವಿಷಯಲೋಲುಪನಾಗಬಾರದು. ಶರೀರವು ಧರ್ಮ ಸಾಧನವಾಗಿದೆ. ಧರ್ಮಜ್ಞಾನ ಮೋಕ್ಷಗಳಿಗಾಗಿ ಶರೀರವನ್ನು ಉಳಿಸಿಕೊಳ್ಳಬೇಕು. ತನ್ನ ಬಲಸತ್ವಗಳಿಗೆ ಮೀರಿದ ಕೆಲಸ ಮಾಡುವುದು, ಕಾಲವನ್ನು ಮೀರಿ ಆಹಾರಾದಿಗಳನ್ನು ಕೊಳ್ಳುವುದು, ಬಹುಭೋಜನನಾಗುವುದು, ಮಲಮೂತ್ರಾದಿ ವೇಗಗಳನ್ನು ತಡೆಯುವುದು, ಹಠದಿಂದ ಉಪವಸಿಸುವುದು, ಅಪಕ್ವ ಗುರು ದುಷ್ಟ

ತಾಮಸ ವಿರುದ್ಧ ಪದಾರ್ಥಗಳನ್ನು ತಿನ್ನುವುದು, ದಿನ ನಿದ್ರೆಗೈಯುವುದು, ಅತಿಶಯ ಸುರತಪರನಾಗುವುದು. ಆಯಾಸಪಡುವುದು, ಬಲು ನಿದ್ದೆ ಕೆಡುವುದು - ಇದರಿಂದ ಶರೀರವು ಬೇಗನೆ ಜೀರ್ಣವೂ ನಿಶ್ಶಕ್ತವೂ ಆಗಿ ಕೆಡುವುದು.

ಅರ್ಹಕರ್ಮ ಪರಿವರ್ಜನ, ದುಷ್ಟಕರ್ಮ ಕರಣಗಳಿಂದಲೂ ಆಯುವು ಕ್ಷೀಣಿಸುವುದು. ಪೈತ್ಯ, ಶ್ಲೇಷ್ಮ, ವಾತಗಳೆಂಬ ಧಾತುಗಳು ಮೂರು ಸಮವಾಗಿದ್ದರೆ ಆರೋಗ್ಯವಿರುವುದು. ಪಿತ್ತವು ಹೆಚ್ಚಾದರೆ ಉಷ್ಣವಾಗಿ, ಆ ವಿಕಾರದಿಂದ ಮರ್ಮ ಸ್ಥಾನಗಳು ಕೆಡುವವು. ಹೃದಯ ಬುದ್ಧಿ, ಮೊದಲಾದವು ಕೆಟ್ಟಾಗ ಮರಣವೇ ಪ್ರಾಪ್ತವಾಗುವುದು. ಶ್ಲೇಷ್ಮವಿಕಾರದಿಂದ ಕಫ ಶೀತಗಳು ಹೆಚ್ಚಾಗುವವು. ಕುತ್ತಿಗೆ, ಮೂಗು, ಸಂಧಿಗಳಲ್ಲಿ ಕಫವೇರ್ಪಟ್ಟು, ಪ್ರಾಣ ರೋಧಕವಾಗಲು ಮರಣವು ಪ್ರಾಪ್ತವಾಗುವುದು. ವಾತವಿಕಾರದಿಂದ ಅಂಗಗಳ ಸಂಧಿ ಗಳಲ್ಲಿ ಕೊಬ್ಬು ಹೆಚ್ಚಿ, ಚಲನವಲನಗಳು ಕಷ್ಟವಾಗುವವು. ನಾಲಿಗೆ ಬಿದ್ದು, ಕೈಕಾಲು ವಶವಾಗದೆ, ಶರೀರವು ಕಟ್ಟಿಗೆಯಂತಾದಾಗ ಮರಣವು ಪ್ರಾಪ್ತವಾಗುವುದು. ತ್ರಿಧಾತುಗಳು ಒಂದರಿಂದ ಒಂದು ಕಲೆತರೆ ಸನ್ನಿಪಾತವೆಂಬರು. ಅದರಿಂದ ಜೀವನು ಶರೀರದಿಂದ ತೊಲಗುವಂತಾಗುವುದು.

ಜನನ ಮರಣಗಳು ಪ್ರಾಕ್ತನ ಕರ್ಮವಶವಾಗಿಯೂ ಬರುತ್ತಿವೆ. ಕರ್ಮಫಲವನ್ನೆಂತಹವರೂ ಉಣ್ಣದಿರಲಾಗದು. ಪಾಪವನ್ನು ಮಾಡಿ ನರಕವನ್ನೂ, ಪುಣ್ಯವನ್ನು ಮಾಡಿ ಸ್ವರ್ಗವನ್ನೂ ಅನುಭವಿಸಿ ಹಿಂದಿರುಗಿ ಬಂದ ಜೀವರು ಮತ್ತೆ ಮಾಡಿದ ಕರ್ಮಫಲಗಳನ್ನು ಹೊಂದಲು ಅಂತೆಯೆ ಹುಟ್ಟುತ್ತಾ, ಸಾಯುತ್ತಾ, ಇರುವರು. ಪುಣ್ಯವಂತರು ಸೋಮ ಸೂರ್ಯ ನಕ್ಷತ್ರಾದಿ ಲೋಕಗಳನ್ನು ಸೇರುವರು. ಪಾಪಿಗಳು ನರಕಯಾತನೆಗಳನ್ನು ಅನುಭವಿಸುವರು. ಕರ್ಮವು ಪೂರಾ ಸವಿಯದೆ, ಶೇಷವಿರುವುದು. ಅಂತಹ ಕರ್ಮಶೇಷದಿಂದ ಕೂಡಿ, ಜೀವರು, ಕರ್ಮಫಲ ರೂಪವಾಗಿ ಬಂದ ಯೋನಿಯಲ್ಲಿ ಪುಟ್ಟುವರು.

ಶುಕ್ಲಶೋಣಿತ ಸಂಪರ್ಕದಿಂದ ಗರ್ಭವು ನಿಂತಾಗ ಶ್ರೀಶೇಚ್ಛೆಯಂತೆ ಜೀವನು ಅಲ್ಲಿ ಸೇರಿರುವನು. ಕ್ರಮವಾಗಿ ಮಾತೃಗರ್ಭದಲ್ಲಿ ಬೆಳೆದು, ದಶಮಾಸ್ಯನಾದಾಗ ಅತಿ ಕಷ್ಟದಿಂದ ಹೊರಬರುವನು. ತತ್‌ಕ್ಷಣವೇ ಅಜ್ಞಾನವು ಮುಚ್ಚುವುದರಿಂದ ಎಲ್ಲವನ್ನೂ ಮರೆತು, ಆ ಶರೀರದಲ್ಲಿ ಬೆಳೆಯುವನು. ಅಲ್ಲಿ ಕರ್ಮಗಳನ್ನು ಮಾಡಿ, ಮತ್ತೆ ಸಾಯುವನು. ಇಂತಹ ಗತಾಗತನಿಗೆ ಮುಕ್ತಿಯಾಗುವುದಿಲ್ಲ.

ನಿಷ್ಕಾಮ ಕರ್ಮಗತನಿಗೆ ಮನಶ್ಶುದ್ಧಿಯಾಗುವುದು. ಶುದ್ಧಮನದಲ್ಲಿ ಶ್ರವಣ ಮನನಗಳಿಂದ ಅಜ್ಞಾನ ಅನ್ಯಥಾ ಜ್ಞಾನಗಳ ನಾಶವಾಗಿ, ಯಥಾರ್ಥ ಜ್ಞಾನವಾಗುವುದು. ಜ್ಞಾನದಿಂದ ಭಕ್ತಿಯು ಹೆಚ್ಚುವುದು. ಭಕ್ತಿಪೂರ್ವಕ ಹರಿಸ್ಮರಣವೇ ಧ್ಯಾನವು. ಅದು ಅಪ್ರಯತ್ನವಾಗಿ ಸಿದ್ಧಿಸಿದರೆ ಸಮಾಧಿ ಎನಿಸುವುದು. ಸಮಾಧಿಯು ಚಿರಕಾಲೀನವಾಗಬೇಕು. ಆಗ ಶ್ರೀಶಾಪರೋಕ್ಷವಾಗುವುದು. ಇಂತಾಗಬೇಕಾದರೆ ಮನುಜನು ದಾನ, ಶಮ, ದಮ, ಬ್ರಹ್ಮಚರ್ಯ, ವ್ರತಪರಿರಕ್ಷಣ, ದಯ, ಪರದಾರವರ್ಜನ, ನಿಯಮ, ಯಮ,

ನಿಗ್ರಹ, ಜನನೀ ಜನಕಪೂಜೆ, ಗುರುಸೇವೆ, ದೇವತಾ ತಿಥಿಪಿತೃ ಸಮರ್ಚನ, ಸತ್ಯ, ಆರ್ಜವ, ಅಹಿಂಸೆ, ಶೌಚ, ಮುಂತಾದುವನ್ನು ಅವಲಂಬಿಸಬೇಕು.

ಬುಧ ಜನರನ್ನು ನೋಡಿ, ಅದರಂತೆ ನಡೆದು, ಅವರ ನುಡಿಯಲ್ಲಿ ಶ್ರದ್ಧೆವಹಿಸಿ ಮನುಜನು ಧರ್ಮತತ್ಪರನಾಗುವನು. ಪರಬ್ರಹ್ಮನನ್ನು ಪ್ರೀತಿಯಿಂದ ಭಜಿಸುವವನು. ಎಲ್ಲ ಕಡೆಯೂ ಶ್ರೀಹರಿಯೇ ವ್ಯಾಪಿಸಿ, ತತ್ತದ್ವಸ್ತುಗತ ಗುಣಧರ್ಮ ಪ್ರೇರಕನಾಗಿರುವನೆಂದು ತಿಳಿಯಬೇಕು. ಯಜ್ಞವನ್ನು ಮಾಡುವಾಗ, ಯಜ್ಞದ ಸ್ರುಕ್ ಸ್ರುವಾದಿಗಳಲ್ಲಿಯು, ಅಗ್ನಿಹೋತ್ರದಲ್ಲಿಯು, ಅನ್ನಾದಿ ಹವಿಸ್ಸುಗಳಲ್ಲಿಯು, ಯಜಮಾನನಲ್ಲಿಯು, ಋತ್ವಿಕ್ಪುರೋಹಿತರಲ್ಲಿಯು, ಶ್ರೀಹರಿಯು ನೆಲಸಿರುವನು. ಶ್ರೀಹರಿಯು ತನ್ನ ನಾಮರೂಪ ಕ್ರಿಯಾಶಕ್ತಿಗಳನ್ನಿತ್ತು, ಆಯಾ ಕಾರ್ಯಗಳನ್ನು ನಡೆಸುತ್ತಿರುವನು. ಅವನು ಅವಾಪ್ತಸಕಲ ಕಾಮನೂ, ಸ್ವಯಂ ಪರಿಪೂರ್ಣನೂ ಆದುದರಿಂದ ಫಲಾಪೇಕ್ಷಾರಹಿತನಾಗಿರುವನು. ಸರ್ವೋತ್ತಮನಾಗಿರುವುದರಿಂದ ಶ್ರೀಶನೇ ಮೋಕ್ಷಪ್ರದನಾಗಿರುವನು. ಇಂತು ತಿಳಿದವನು ಮುಕ್ತಪ್ರಾಯನೆನಿಸುವನು.

ಜ್ಞಾನಸಿದ್ಧನಿಗೆ ಲೋಕದ ದ್ವಂದ್ವಗಳಿಂದ ಆಗುವ ವಿಕಾರಗಳಿಲ್ಲ. ಅವನು ಮಾನಾಪಮಾನ, ಲಾಭಾಲಾಭ, ಶೀತೋಷ್ಣಾದಿ ದ್ವಂದ್ವಗಳು ಬಂದಾಗ ಹಿಗ್ಗದೆ, ಕುಗ್ಗದೆ, ಸಮನಾಗಿ ಅಂದರೆ ನಿರ್ವಿಕಾರನಾಗಿರುವನು. ತತ್ವಜ್ಞಾನದ ಪ್ರಕಾರವನ್ನು ನಿರೂಪಿಸುವೆನು. ಕೇಳು!

ಸೃಷ್ಟಿಗೆ ಮೊದಲು ಯಾವ ಜೀವರೂ ಇದ್ದಿಲ್ಲ. ಅವರೆಲ್ಲರೂ ಶ್ರೀಶನ ಉದರ ಗತರಾಗಿದ್ದರು. ಮೊದಲು ಶ್ರೀರಮಣನು ಪಂಕಜಾಸನನನ್ನು ಸೃಜಿಸಿದನು. ಆಮೇಲೆ ವಾಯುದೇವನನ್ನು ಸೃಜಿಸಿದನು. ಅನಂತರದಲ್ಲಿಯೂ ಸರಸ್ವತೀ ಭಾರತಿಯರು ಸೃಷ್ಟರಾದರು. ಅವರು ನಾಲ್ವರು ಕಲೆತು ಶ್ರೀ ಶ್ರೀರಮಣರ ಆಜ್ಞಾಪ್ರೇರಣೆಗಳಿಂದ ಪ್ರವೃತ್ತರಾಗಿ ಮಿಕ್ಕೆಲ್ಲ ಜೀವಜಡ ಪ್ರಪಂಚವನ್ನು ಸೃಜಿಸಿದರು. ಇಂತು ಶ್ರೀಶನ ಸರ್ವೋತ್ತಮತ್ವವನ್ನರಿತ ಜೀವನು 'ಎಲ್ಲ ವಿಷಯಗಳೂ ವಿಷಸಮಗಳು; ಪ್ರಪಂಚವು ನಶ್ವರವು; ಶರೀರವು ಅನುಕ್ಷಣವೂ ಜೀರ್ಣವಾಗುತ್ತಿದೆ; ದಾರಾ ಸುತಾದಿಗಳು ಕರ್ಮಾನುಬಂಧುಗಳು; ಒಂದು ಜನ್ಮದವರು. ಶಾಶ್ವತ ಬಂಧುವಾದ ಶ್ರೀಹರಿಯೇ ಶರಣ್ಯನು. ಅವನನ್ನು ತಿಳಿಸಿಕೊಡುವವರು ವಾಯುದೇವರೇ! ಶ್ರೀಶನು ಸಕಲ ದೋಷಗಂಧರಹಿತನು, ಅನಂತ ಕಲ್ಯಾಣಗುಣ ಭರಿತ ದಿವ್ಯಮಂಗಳ ದೇಹನು, ಸಕಲಸಚ್ಛಾಸ್ತ್ರ ಸಮಧಿಗಮ್ಯನು, ಮುಕ್ತಾಮುಕ್ತ ಪ್ರಪಂಚ ನಿಯಾಮಕನು, ಅತ್ಯಂತ ಕರುಣಾನಿಧಿಯು' ಇತ್ಯಾದಿ ಶಾಸ್ತ್ರಸಿದ್ಧ ತತ್ವಗಳನ್ನು ಚಿಂತಿಸಿ, ಮುಕ್ತನಾಗುವನು.

ಏಕಾಂತದಲ್ಲಿ ನಿಶ್ಚಲನಾಗಿ, ಕುಶಾಸನ, ಕೃಷ್ಣಾಜಿನ ವಸ್ತ್ರಾಸನದಲ್ಲಿ ಕೂತು, ವಿಷಯಗಳಿಂದ ಮನವನ್ನು ಸೆಳೆದು, ಶ್ರೀಶನನ್ನು ಚಿಂತಿಸಬೇಕು. ಶ್ರೀಶನು ಅನಂತ ರೂಪನು. ಅವನಿಗೆ ಸ್ವಗತ ಭೇದವಿಲ್ಲ. ಜೀವಜಡರಿಂದ ಭಿನ್ನನೂ ಸರ್ವಸ್ವಾಮಿಯೂ

ಆದ ಶ್ರೀಹರಿಯನ್ನು ಇಂದ್ರಿಯಗಳಿಂದ ತಿಳಿಯಲಾಗದು. ಅವನು ಪ್ರಾಕೃತ ರಸಗಂಧ ಸ್ಪರ್ಶರೂಪ ಶಬ್ದಗಳಿಗೆ ಸಿಗನು. ಸತ್ವರಜಸ್ತಮೋ ಗುಣಗಳಿಗೆ ಸಿಗದೆ, ಅಪ್ರಾಕೃತ ದಿವ್ಯದೇಹನು, ಸತ್ಯಸಂಕಲ್ಪನು, ಅತಿಸುಂದರನು, ಅನಂತ ಬಾಹೂರು ಪಾದಾದಿ ದಿವ್ಯ ರೂಪನು ಆದ ಸ್ವಾಮಿಯನ್ನು ಅಂತೇ ಚಿಂತಿಸಬೇಕು. ಮುಂಜಗಳಲ್ಲಿ ಅಡಗಿದ್ದ ಇಷೀಕ(ಗಲುಗು)ವನ್ನು ಎಚ್ಚರವಾಗಿ ವಿವೇಚಿಸಿ ಬೇರೆ ಮಾಡಿ ತೆಗೆದಂತೆ, ಜೀವನ ದಲ್ಲಿ ಅಂತರ್ಯಾಮಿಯಾಗಿರುವ ಶ್ರೀರಮಣನನ್ನು ಜೀವಭಿನ್ನನೆಂದು ತಿಳಿದು, ನರನು ಉದ್ಧೃತನಾಗುವನು. ಇತರ ಫಲಾಪೇಕ್ಷೆಯಿಂದ ಕೂಡಿದವನಿಗೆ ಶ್ರೀಶನು ಸಿಗಲಾರನು. ಫಲವನ್ನು ಬಿಟ್ಟರೆ ಸಾಲದು; ಫಲದಲ್ಲಿರುವ ಆಶೆಯನ್ನು ಬಿಡಬೇಕು. ಇಂತಹ ಸಂಕಲ್ಪವನ್ನು ಬಿಟ್ಟವನು ಶ್ರೀಶನ ಪ್ರೀತಿಗೆ ಪಾತ್ರನಾಗುವನು. ಅವನ ಯೋಗಕ್ಷೇಮಗಳನ್ನು ಶ್ರೀಶನೇ ವಹಿಸಿ, ಅವನನ್ನು ಮುಕ್ತಿಯವರೆಗೂ ಕರೆದೊಯ್ಯುವನು.

ಪಂಚಭೂತಾತ್ಮಕವಾದ ಶರೀರವೇ ಬೇರೆ; ಅಲ್ಲಿರುವ ಜೀವನೇ ಬೇರೆ. ಶರೀರವೇ ತಾನೆಂಬುವನು ಪಶುತುಲ್ಯನೇ ಸರಿ! ಅಂತೆಯೇ ಅಸ್ವತಂತ್ರನಾದ ಜೀವನನ್ನು ಆಯಾ ಶರೀರಗಳಲ್ಲಿ ತರುವ ಪರಮಾತ್ಮನು ಜೀವನಿಂದ ಬೇರೆ ಮತ್ತು ಸ್ವತಂತ್ರನು ಎಂದು ತಿಳಿಯಬಹುದಾಗಿದೆ. ಶ್ರೀಹರಿಯ ಪರಮಪ್ರಸಾದವೇ ಮೋಚಕವು. ಭಕ್ತಿಯೇ ಪ್ರಸಾದ ಸಂಪಾದಕವು. ಭಕ್ತಿಗೆ ಮಾಹಾತ್ಮ್ಯ ಜ್ಞಾನವೇ ಸಾಧನವು. ಆದುದರಿಂದ ಮುಮುಕ್ಷು ಜೀವನು ಗುರುದ್ವಾರಾ ಶ್ರವಣಾದಿಗಳನ್ನು ಮಾಡಿ, ಯಥಾರ್ಥ ಜ್ಞಾನವನ್ನು ಸಂಪಾದಿಸಬೇಕು.

ಶರೀರವು ಸ್ಥಿರವಲ್ಲ. ಹರ್ಷಶೋಕಗಳ ತೆರೆಗಳು ಜೀವನನ್ನು ಎತ್ತಿ ಒಗೆಯುವವು. ಆದುದರಿಂದ ಶರೀರವು ದೃಢವಾಗಿರುವಾಗಲೇ, ಗುರುಗಳು ಸಿಕ್ಕಾಗಲೇ ಬೇಗ ಜ್ಞಾನನಿಧಿ ಯನ್ನು ಕೂಡಿಡಬೇಕು. ವೃದ್ಧಾಪ್ಯಕ್ಕೆಂದು ಧನವಿಟ್ಟಂತೆ ಮುಕ್ತಿ ಸುಖಕ್ಕೆಂದು ಈಗಲೇ ಜ್ಞಾನವನ್ನು ಸಂಗ್ರಹಿಸಬೇಕು. ಹಾಗೆ ಮಾಡದವನು ಮಹದ್ವಿನಷ್ಟಕ್ಕೆ ಗುರಿಯಾಗುವನು. ಜೀವನು ನಿತ್ಯನು, ಶರೀರವು ನಿತ್ಯವಲ್ಲ. ಜೀವನು ಶ್ರೀಹರಿಯ ಪ್ರತಿಬಿಂಬವು ಅಂದರೆ ಶ್ರೀಹರಿಯ ಅಧೀನನು; ಕಿಂಚಿತ್ಸದೃಶನೂ ಆಗಿರುವನೆಂದರ್ಥ. ಸ್ವರೂಪದಿಂದ ಜೀವನಿಗೆ ಜನನ, ಮರಣ, ಶೋಕದಾಹಗಳಿಲ್ಲ. ಆದರೆ ದೇಹದಲ್ಲಿ ಮಮಕಾರದಿಂದ ಅವನ್ನು ಹೊಂದುತ್ತಿರುವನು. ದುರಭಿಮಾನವೇ ದುಃಖಮೂಲವು ಅಭಿಮಾನವರ್ಜಿತನಿಗೆ ದುಃಖವಿಲ್ಲ.

ಮನಸ್ಸು ಚಂಚಲವು, ಅದು ಯಾವಾಗಲೂ ಇಂದ್ರಿಯ ದ್ವಾರಗಳಿಂದ ಹೊರಗಿರುವ ವಿಷಯಗಳ ಕಡೆಗೆ ಧಾವಿಸುತ್ತಿರುವುದು. ಅದನ್ನು ನಿಗ್ರಹಿಸಿ, ಅಂತರ್ಮುಖವನ್ನಾಗಿಸಬೇಕು. ವೈರಾಗ್ಯದಿಂದಲು, ಅಭ್ಯಾಸದಿಂದಲು ಮನಸ್ಸು ಶ್ರೀಹರಿಚಿಂತನ ಸಮರ್ಥವಾಗುವುದು. ಶ್ರೀಹರಿಚಿಂತನವೇ ಸಂಸಾರ ನಿವರ್ತಕವಾಗಿದೆ. ವತ್ಸ! ಇಂತು ತತ್ವಗಳನ್ನು ನಿನಗೆ ತಿಳಿಸಿದೆನು. ಇದನ್ನು ಅಯೋಗ್ಯರಿಗೆ, ಅಭಕ್ತರಿಗೆ ತಿಳಿಸಬೇಡ! ಶ್ರದ್ಧೆಯಿಂದ ನಾನು ನುಡಿದ ಜ್ಞಾನಭಕ್ತಿ ವಿರಕ್ತಿ ಮಾರ್ಗಗಳಲ್ಲಿ ನಡೆ! ನೀನೂ ಮುಕ್ತನಾಗುವೆ!"

ಇಂತು ಸಿದ್ಧನು ಕಾಶ್ಯಪನಿಗೆ ತಿಳಿಸಿದ ತತ್ವಗಳನ್ನು ನಿನಗೆ ನಿರೂಪಿಸಿದೆನು. ಸಿದ್ಧನಲ್ಲಿ ನಾನಿದ್ದು ಕಾಶ್ಯಪನಿಗೆ ಜ್ಞಾನವಾಗುವಂತೆ ನುಡಿದೆನು. ನಾನು ಲೋಕ ಗುರುಗಳಿಗೆಲ್ಲ ಗುರುವಾಗಿರುವೆನು. ಮತ್ತೇನು ಕೇಳಲಿಚ್ಛಿಸುವೆ ? " ಅರ್ಜುನನ್ನು ತತ್ವಜ್ಞಾನವನ್ನು ಕೇಳಿದನು.

## ೪. ಬ್ರಾಹ್ಮಣಗೀತೆ (೨)

ಶ್ರೀಕೃಷ್ಣನು ಸಿದ್ಧಗೀತೆಯನ್ನರುಹಿ, ಬ್ರಾಹ್ಮಣ ಗೀತೆಯನ್ನು ಹೇಳತೊಡಗಿದನು. 'ಅರ್ಜುನ! ಬ್ರಾಹ್ಮಣ ದಂಪತೀ ಸಂವಾದ ಮುಖವಾಗಿ ತತ್ವವನ್ನು ಉಪದೇಶಿಸುವೆನು ಕೇಳು!'

ಹಿಂದೆ ವಿಪ್ರಪತ್ನಿಯೋರ್ವಳು ಜ್ಞಾನ ವಿಜ್ಞಾನ ಪಾರಗನಾದ ತನ್ನ ಪತ್ನಿಯನ್ನು ಕಂಡು 'ಸ್ವಾಮೀ! ಭಾರ್ಯೆಗೆ ಪತಿಲೋಕವಾಗುವುದೆಂಬರು. ನಿನ್ನಂತಹ ಜ್ಞಾನಿಯನ್ನು ಪತಿಯಾಗಿ ಪಡೆದು, ನಾನೂ ಪತಿವ್ರತೆಯಾಗಿರುವೆನು. ನನಗೆ ಜ್ಞಾನವನ್ನು ಉಪದೇಶಿಸು' ಎಂದು ಪ್ರಾರ್ಥಿಸಿದಳು. ಬ್ರಾಹ್ಮಣನಿಂತೆಂದನು:

'ಸುದತಿ! ನರನು ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡುವನು. ಕರ್ಮಫಲವು ಅವನಿಗೆ ಉಣ್ಣಬೇಕಾಗಿ ಅವನು ಮತ್ತೆ ಜನನ ಮರಣಗಳನ್ನು ಹೊಂದುವನು. ಇಂತು ಜ್ಞಾನವಿಲ್ಲದ ಕರ್ಮರತನಾದವನಿಗೆ ಎಂದಿಗೂ ಮುಕ್ತಿಯು ಸಿಗದು. ಕರ್ಮವನ್ನು ಮಾಡದಿರಲಾಗದು. ಜನನ ಮೊದಲ್ಗೊಂಡು ಮರಣಪರ್ಯಂತವಾಗಿ ಕರ್ಮವು ನಡೆದೇ ಇದೆ. ಆದುದರಿಂದ ಕರ್ಮವನ್ನು ಮಾಡಿದರೂ, ಅದರ ಫಲವನ್ನು ಶ್ರೀಹರಿ ಪ್ರೀತಿಗಾಗಿ ಬಿಡುವುದು ಕರ್ಮಮೋಚಕವಾಗಿದೆ. ಅಕರ್ಮವೆಂದರೆ ಕರ್ಮವರ್ಜನ; ಅದನ್ನು ಮಾಡಲಾಗದು; ಮತ್ತು ಮಾಡಬಾರದು. ವಿಹಿತ ಕರ್ಮವನ್ನೇ ಮಾಡಬೇಕು. ವಿಕರ್ಮವೆಂದರೆ ವಿರುದ್ಧ ಕರ್ಮವು ಅದು ಪಾಪ ಸಾಧಕವಾಗಿದೆ.

ಕರ್ಮಫಲವನ್ನು ಬಿಡುವುದು ಸಾಲದು. ಶ್ರೀಹರಿಧ್ಯಾನವೂ ಮೋಕ್ಷ ಮುಖ್ಯಸಾಧನವಾಗಿದೆ; ಅದನ್ನೂ ಮಾಡಬೇಕು. ವಾರಾಣಸೀ ಕ್ಷೇತ್ರವೀ ಶರೀರವು. ಇದರಲ್ಲಿ ಮುಖ್ಯಪ್ರಾಣನು ಧಾರಕನಾಗಿ ಜೀವನನ್ನು ನಿಲ್ಲಿಸಿರುವನು. ಎಡಮೂಗೇ ಇಡಾನಾಡೀಸ್ಥಾನ; ಬಲಮೂಗು ಪಿಂಗಳಾಸ್ಥಾನ. ಇವು ಸೋಮಾಗ್ನಿಗಳಿಗೆ ಅಧೀನ ಮತ್ತು ಮಾರ್ಗ. ಅಸಿವರಣಾ ನದಿಗಳ ಮಧ್ಯದಲ್ಲಿರುವ ಗಂಗಾ ಸ್ರೋತದಂತೆ ಸುಷುಮ್ನಾ ನಾಡಿಯು. ಅಲ್ಲಿ ಉದಾನ ನಾಡಿಯಿಂದ ಮುಖ್ಯಪ್ರಾಣನು ಸಂಚರಿಸುತ್ತ, ಜೀವರನ್ನು ಸಾಧನ ಸಂಪೂರ್ತಿಯಾದಾಗ, ಉತ್ ಅನ=ಶ್ರೇಷ್ಠಗತಿಗೆ ಮೇಲೆ ಕರೆದೊಯ್ಯುವನು. ಅವಿಮುಕ್ತ ಕ್ಷೇತ್ರದಂತೆ ಭ್ರೂಮಧ್ಯ ಪ್ರದೇಶವು. ಅಲ್ಲಿರುವ ಆಜ್ಞಾಚಕ್ರದ ಎರಡಕ್ಷರಗಳ ದೇವತೆಯಾದ ಹಂಸರೂಪೀ ನಾರಾಯಣನಿರುವನು. ಹಂಸನೆಂದರೆ ನಿರ್ದೋಷ ಜ್ಞಾನಸಾರನೆಂದರ್ಥ. ಅಂತಹ ಹಂಸನಿಂದ ಕೂಡಿ ಮುಖ್ಯಪ್ರಾಣನು ಜೀವನಿಗೆ ಉತ್ಕ್ರಾಂತಿಯನ್ನಿತ್ತು, ಮುಕ್ತಿಮಾರ್ಗವನ್ನು ಸೇರಿಸುವನು.

ಮುಖ್ಯಪ್ರಾಣನ ಅಧೀನದಲ್ಲಿರುವ ದಾಸಪ್ರಾಣರು ಐದು ಜನ. ಪ್ರಾಣನು ಒಳಕ್ಕೆ ಸೆಳೆದರೆ, ಅಪಾನನು ಮೇಲಕ್ಕೆ ಸೆಳೆವನು. ಪ್ರಾಣನು ಉಸಿರನ್ನು ಹೊರಗೆ ಹಾಕಿದರೆ ಅಪಾನನು ಒಳಗೆ ಸೆಳೆವನು. ನಾಭಿಯಲ್ಲಿರುವ ಸಮಾನನು ಆ ವ್ಯಾಪಾರ ವನ್ನು ಸಮಾನವಾಗಿರಿಸುವನು. ವ್ಯಾನನು ಸರ್ವ ಶರೀರವ್ಯಾಪಿಯಾಗಿರುವನು. ಅಪಾನ ಪ್ರಾಣರನ್ನು ಸಮಾನನಿಂದ ಸಮ ಮಾಡಿ, ಸುಷುಮ್ನೆಯಿಂದ ಕಂಠ ದೇಶದಲ್ಲಿ ಉದಾನನಿಂದ ಕೂಡಿ, ಉದಾನಗತಿಯಿಂದ ಮೇಲಕ್ಕೆ ಬಂದು, ಜೀವನು ಮುಖ್ಯ ಪ್ರಾಣನ ವಶವಾಗಿ, ದೇಹವನ್ನು ಬಿಡುವನು. ಮುಖ್ಯಪ್ರಾಣನು ಅಕ್ಷರನಾಮಕ ಶ್ರೀಹರಿಯ ಅಧೀನನಾಗಿ ಜೀವನಿಗೆ ಶರೀರದಿಂದ ಉತ್ಕ್ರಾಂತಿಯನ್ನೂ, ಶರೀರ ಪ್ರವೇಶವನ್ನೂ ಕರ್ಮಾನುರೂಪವಾಗಿ ಕೊಡುತ್ತಿರುವನು. ಶ್ರೀಹರಿಯು ಯಾವ ಇಂದ್ರಿಯದಿಂದಲೂ ತಿಳಿಯಲ್ಪಡನು. ಪ್ರಾಜ್ಞರು ಜ್ಞಾನವಿಚಾರದಿಂದ ಇದನ್ನು ತಿಳಿದು ಶ್ರೀಹರಿಯನ್ನು ಮನಸಾ ತಂತಮ್ಮ ಯೋಗ್ಯತೆಗೆ ತಕ್ಕಂತೆ ಚಿಂತಿಸಿ ಮುಕ್ತರಾಗುವರು. ಶ್ರೀಹರಿಯು ವೈಶ್ವಾನರಾಗ್ನಿ ರೂಪದಿಂದ ಜೀವರಲ್ಲಿದ್ದು, ಅವರುಂಡ ಅನ್ನಾದಿಗಳನ್ನು ಪಚನಮಾಡಿ, ಪಂಚಪ್ರಾಣರ ದ್ವಾರಾ ಶರೀರದಲ್ಲಿ ಅನ್ನರಸವು ವ್ಯಾಪ್ತವಾಗುವಂತೆ ಮಾಡುತ್ತಿರುವನು.

ವೈಶ್ವಾನರನಾಮಕ ಶ್ರೀಹರಿಯ ಜ್ವಾಲೆಗಳು ಏಳು. ಘ್ರಾಣ, ಜಿಹ್ವಾ, ಚಕ್ಷು, ತ್ವಕ್, ಶ್ರೋತ್ರ, ಮನೋ, ಬುದ್ಧಿಗಳಿಂದ ಸ್ವೀಕರಿಸುವ ಸಮಿಧಗಳು ಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಮಂತವ್ಯ, ಬೋದ್ಧವ್ಯಗಳು, ಅಲ್ಲಿರುವ ಅಶ್ವಿನೀ ದ್ವಯ, ವರುಣ, ಸೂರ್ಯ, ಆಹಂಕಾರಿಕ ಪ್ರಾಣ, ದಿಗ್ದೇವರು, ರುದ್ರ, ಸರಸ್ವತಿಯರು, ಋತ್ವಿಜರು. ಪೃಥಿವೀ, ಜಲ, ತೇಜೋ, ವಾಯು, ಆಕಾಶ, ಮನೋಬುದ್ಧಿಗಳು. ಏಳು ಅಗ್ನಿಯ ಚೈತನ್ಯಾಭಿವ್ಯಕ್ತ ಸ್ಥಾನಗಳು. ಎಲ್ಲ ತತ್ವ ದೇವತೆಗಳು ಪ್ರಳಯದಲ್ಲಿ ಮುಖ್ಯ ಪ್ರಾಣನ ದ್ವಾರಾ ಶ್ರೀಹರಿಯಲ್ಲಿ ಸೇರಿಬಿಡುವುದೇ ಈ ವೈಶ್ವಾನರ ಯಜ್ಞದ ಪೂರ್ಣಾಹುತಿಯು. ಇಂತುಲಯಚಿಂತನೆಗೈದವರು ಮುಕ್ತರಾಗುವರು. ಇದನ್ನು ಅಂತರ್ಯಾಗವೆಂಬುವರು.

ಶ್ರೀಹರಿಯು ಈ ಜಗತ್ತನ್ನು ಇಪ್ಪತ್ತೈದು ತತ್ವಗಳಿಂದ ಸೃಜಿಸಿರುವನು. ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ಕೈಗಳು, ಕಾಲುಗಳು, ವಚನ, ಉಪಸ್ಥ, ಪಾಯುಗಳೆಂಬ ದಶಹೋತೃಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳನ್ನೂ, ಆದಾನ, ಗಮನ, ವಾಕ್ಯ, ಆನಂದ, ವಿಸರ್ಜನಗಳನ್ನೂ ಹವಿಸ್ಸಿನಂತೆ ಹೋಮಿಸಿದಾಗ, ಇಂದ್ರಿಯ ದೇವತೆಗಳಾದ ದಿಕ್, ಪ್ರಾಣ, ಸೂರ್ಯ, ವರುಣ, ಅಶ್ವಿದ್ವಯ, ದಕ್ಷ, ಜಯಂತ, ಅಗ್ನಿ, ಮನು, ಮಿತ್ರರು ಸೃಜನಯಜ್ಞವನ್ನು ಮಾಡಿ, ಶ್ರೀಮುಖ್ಯಪ್ರಾಣಪತಿಗೆ ಅರ್ಪಿಸುತ್ತಿರುವರು. ಇಲ್ಲಿ ಹೃದಯವೇ ಗಾರ್ಹಪತ್ಯಾಗ್ನಿಯು; ಅಲ್ಲಿ ಗೃಹಪತಿಯಾಗಿ ಜೀವನಿರುವನಲ್ಲವೇ ? ಮುಖವೇ ಆಹವನೀಯಾಗ್ನಿಯು ; ಮನವೇ ದಕ್ಷಿಣಾಗ್ನಿಯು ಮುಖದಲ್ಲಿರುವ ಮುಖ್ಯಪ್ರಾಣನಲ್ಲಿ ಸ್ವಾಹಾಕಾರದಿಂದ ಹೋಮಿಸಿದ ಆಹಾರವು ಅನ್ನಮಯಂ ಮನಃ ಎಂಬ ನುಡಿಯಂತೆ ಮನಆದಿ ಸರ್ವ ಶರೀರದಲ್ಲಿ ರಸರೂಪವಾಗಿ ವ್ಯಾಪಿಸುವುದು.

ಮನಸ್ಸಿನಿಂದ ಹವಿಸ್ಸಿನ ತೇಜೋಂಶವು ಜಾಠರ ತೇಜದಿಂದ ಕೂಡಿ ವಾಗ್ರೂಪವಾಗಿ ಹೊರಬರುವುದು.

ಮನಸ್ಸಿಗೆ ಮುಖ್ಯಪ್ರಾಣನು, ವಾಕ್ಕಿಗೆ ಭಾರತಿಯು ನಿಯಾಮಕರು. ಅವರೀರ್ವರಿಗೂ ಒಡೆಯನು ಶ್ರೀರಮಣನು. ಈ ಮೂವರಿಂದ ಎಲ್ಲ ಜಗವೂ ವ್ಯಾಪ್ತವಾಗಿ ಅವರು ಮೂವರೂ ಸರ್ವೋತ್ತಮರೇ. ಶ್ರೀಶನು ನಿರವಧಿಕ ಸರ್ವೋತ್ತಮನು. ಅವರ ವಶದಲ್ಲಿದೆ. ಅವರು ಮೂವರೂ ಮುಖ್ಯಪ್ರಾಣನು ಅಧಿಕಾರಿಕ ಮಂಡಲಸ್ಥ ರಾದ ಎಲ್ಲ ಜೀವರಿಗೆ ಸರ್ವೋತ್ತಮನು. ಆ ಮುಖ್ಯಪ್ರಾಣನು (ಚತುರ್ಮುಖ) ಸದಾ ವಿಷ್ಣ್ವಧೀನನು. ಭಾರತಿಯು ಅವರೀರ್ವರ ಅಧೀನಳು ಮತ್ತು ಗರುಡ ಶೇಷ ರುದ್ರ ಮಹೇಂದ್ರ ಚಂದ್ರಾದಿ ಎಲ್ಲ ಜೀವರಿಗೆ ಒಡೆಯಳು. ಆಕೆಗೆ ಸರ್ವೋತ್ತಮತ್ವವೆಂದರೆ ಅಧಿಕಾರಿಕ ಜೀವಮಂಡಲಸ್ಥ ದೇವಿಯರಕಿಂತ ಎಂದು ತಿಳಿಯಬೇಕು. ಶ್ರೀದೇವಿಯು ಮುಖ್ಯಪ್ರಾಣನಕಿಂತ ಉತ್ತಮಳು ಆದರೂ ಶ್ರೀಹರಿಕಿಂತಲು ಅವರಳು.

ಶ್ರೀಹರಿಯೇ ವೈಶ್ವಾನರ ರೂಪದಿಂದ ಎಲ್ಲ ಶರೀರಗಳಲ್ಲಿದ್ದು ಹೋಮಿಸಿದ ಅನ್ನಾದಿಗಳನ್ನು ಸ್ವೀಕರಿಸುವುದರಿಂದ ಹುತಾಶನನೆಸಿರುವನು. ಅವನೇ ಸರ್ವಸ್ವಾಮಿಯು. ಪ್ರಾಣಭಾರತೀ ರುದ್ರ ಇಂದ್ರಾದಿ ಸರ್ವ ಶಬ್ದಗಳೂ ಶ್ರೀಹರಿಯ ನಾಮಗಳು. ಅಂದರೆ ಎಲ್ಲ ನಾಮಗಳ ಪ್ರವೃತ್ತಿ ನಿಮಿತ್ತಗಳೂ ಶ್ರೀಹರಿಯಲ್ಲಿವೆ. ಶ್ರೀಹರಿಯು ಸರ್ವಶಬ್ದ ಮುಖ್ಯಾರ್ಥನು. ಪ್ರಾಣೀ ಪ್ರಾಣರಲ್ಲಿದ್ದು ಜಗವನ್ನು ಧರಿಸಿ, ಪೋಷಿಸುವುದರಿಂದ ಶ್ರೀಹರಿಗೆ ಧಾತಾ ಎಂದು ಹೆಸರು. ಬ್ರಹ್ಮಾದಿ ಜೀವರು ಸದಾ ಶ್ರೀಹರಿಯ ಅಧೀನರು. ಮತ್ತು ಇತರ ಜೀವರಿಗೆ ಸ್ವಾಮಿಗಳು; ಬ್ರಹ್ಮಾದಿಗಳು ಉತ್ತಮ ಭಕ್ತರು. ಮುಕ್ತಿ ಯೋಗ್ಯ ಜೀವರೆಲ್ಲರೂ ಶ್ರೀಹರಿಭಕ್ತರಾಗಿ, ತಂತಮ್ಮ ಯೋಗ್ಯತೆಗೆ ತಕ್ಕಂಗೆ ಆತ್ಯಂತಿಕ ದುಃಖನಿವೃತ್ತಿ ವಿಶಿಷ್ಟ ಸ್ವರೂಪಾನಂದಾವಿರ್ಭೂತಿ ರೂಪವಾದ ಮುಕ್ತಿಯನ್ನು ಪಡೆಯುವರು.

ಅನಾದಿ ಕಾಲದಿಂದ ಶ್ರೀಹರಿತದ್ಭಕ್ತ ದ್ವೇಷಿಗಳಿಗೆ ತಮೋಯೋಗ್ಯರೆಂದು ಹೆಸರು. ಅವರು ಕೊನೆಗೆ ನಿತ್ಯ ದುಃಖರೂಪವಾದ ತಮಸ್ಸನ್ನೇ ಹೊಂದುವರು. ಸ್ವಲ್ಪ ದ್ವೇಷ ಮತ್ತು ಸ್ವಲ್ಪ ಭಕ್ತಿಗಳುಳ್ಳ ಜೀವರು ನಿತ್ಯ ಸಂಸಾರಿಗಳೆನಿಸುವರು. ತ್ರಿವಿಧ ಜೀವರೂ ನಿತ್ಯರು – ಅವರ ಯೋಗ್ಯತೆ ಬದಲಾಗದು. ಯೋಗ್ಯ ಜೀವರಲ್ಲಿಯೂ ದೇಹದಲ್ಲಿ ಧರಿಸಿರುವ ಚಕ್ರ ಶಂಖಾದಿ ಮುದ್ರೆಗಳು, ವಿಷ್ಣು ಪ್ರದಕ್ಷಿಣ ನಮಸ್ಕಾರಾದಿಗಳು ಉಳ್ಳವರು ಉತ್ತಮರು. ಅವರಲ್ಲಿಯೂ ಜ್ಞಾನಭಕ್ತಿಗಳಿಂದ ತಾರತಮ್ಯವಿದೆ. ಶ್ರೀವಿಷ್ಣು ಪ್ರೀತಿಕರವೇ ಧರ್ಮವು. ಧರ್ಮದ ಉದ್ದೇಶವೇ ವಿಷ್ಣು ಪ್ರೀತಿಯಲ್ಲವೇ ? ವಿಷ್ಣುಭಕ್ತರಿಗೆ ಪ್ರೀತಿಕರವಾದುದೂ ಧರ್ಮವೇ! ಪ್ರೀತಿಕರವೆಂದರೆ ಅವರಿಗೆ ಲಾಭಕರವೆಂದಲ್ಲ ; ಅವರು ಯಾವ ಕೆಲಸವನ್ನು ನೋಡಿ, ಮಾಡಿದವನನ್ನು ವಿಷ್ಣುಭಕ್ತನೆಂದು ಪ್ರಶಂಸಿಸಿ ಆಶೀರ್ವದಿಸುವರೋ, ಅಂತಹ ಕರ್ಮವು ಧರ್ಮವೆನಿಸುವುದು. ವಿಷ್ಣು ಪ್ರೀತಿಕರವಾಗದುದೆಲ್ಲವೂ ಪಾಪವೇ ಸರಿ!

ವಾಣಿಯು ಜಂಗಮ ಮನಸ್ಸು ; ಪ್ರಾಣನು ಸ್ಥಾವರ ಮನಸ್ಸು. ಜಂಗಮ

ಮನದಿಂದ ವರ್ಣ ಮಂತ್ರಾದಿ ಶಬ್ದ ಸಂಚಾರವಾಗುವುದು. ಋಕ್‌ಸಾಮಗಳೆಂಬ ಎರಡು ರೂಪದ ವಾಣಿಗೆ, ಪ್ರಾಣನು ಒಡೆಯನಾಗಿ, ವಾಣಿಯನ್ನು ಅಂತರ್ಮುಖವಾಗಿ ಪ್ರೇರಿಸಿದಾಗ, ಮನಸ್ಸು ಅಂತರ್ಮುಖವಾಗಿ, ಪರಬ್ರಹ್ಮನನ್ನು ಧ್ಯಾನಿಸಲು ಸಮರ್ಥವಾಗುವುದು. ಆಗ ಇಂದ್ರಿಯ ಜಯವೂ ಸಿದ್ಧಿಸುವುದು.

ಘ್ರಾಣವು ಗಂಧವನ್ನು ಮಾತ್ರ ತಿಳಿಯಬಲ್ಲದು; ಅದು ರೂಪ, ರಸ, ಸ್ಪರ್ಶ, ಶಬ್ದಗಳನ್ನು ತಿಳಿಯಲಾರದು. ಅಂತೆಯೇ ನೇತ್ರವು ರೂಪವನ್ನು, ಜಿಹ್ವೆಯು ರಸವನ್ನು ತ್ವಕ್ಕು ಸ್ಪರ್ಶವನ್ನು, ಶ್ರೋತ್ರವು ಶಬ್ದವನ್ನು ಮಾತ್ರ ತಿಳಿಯಬಲ್ಲವು; ಇತರಗಳನ್ನಲ್ಲ. ಶಬ್ದ ಸ್ಪರ್ಶ ರೂಪ ರಸಗಂಧವನ್ನು ಮನಸ್ಸು ತಿಳಿಯಬಲ್ಲದು; ಆದರೆ ಅದು ಕೂಡ ಸುಷುಪ್ತಿಯಲ್ಲಿದ್ದಾಗ, ಯಾವ ವಿಷಯವನ್ನೂ ತಿಳಿಯಲಾರದು. ಇಂತು ಇಂದ್ರಿಯ ಗಳು ಮನಸ್ಸಿಗೆ ಅಧೀನವೆಂತಲು, ಮನಸ್ಸು ಮತ್ತೊಬ್ಬರ ಅಧೀನವೆಂತಲು ತಿಳಿಯಬಹುದಲ್ಲವೇ? ಕೇಳು! ಮನಸ್ಸು ಮುಖ್ಯಪ್ರಾಣಾಧೀನವಾಗಿರುವುದು. ಸುಷುಪ್ತಿಯಲ್ಲಿ ಮನಸ್ಸು ವ್ಯಾಪಾರರಹಿತವಾಗಿದ್ದರೂ, ಮುಖ್ಯಪ್ರಾಣನು ಪ್ರಾಣಾಗ್ನಿ ಹೋತ್ರ ವ್ಯಾಪಾರವನ್ನೂ ಹಂಸ ಮಂತ್ರ ಜಪವನ್ನೂ ಮಾಡುತ್ತಾ, ಎಚ್ಚತ್ತಿರುವುದರಿಂದ, ಜೀವನಿಗೆ ಶರೀರವಿಯೋಗವಾಗದಿರುವುದು. ಯಾವನು ಬಿಟ್ಟರೆ ಜೀವ ಶರೀರ ವಿಯೋಗವಾಗುವುದೋ, ಯಾವನಿದ್ದರೆ ಜೀವಜೀವನವು ನಡೆಯುವದೋ ಅಂತಹ ದೇಹ ಧಾರಕ ದೇವನು ಮುಖ್ಯಪ್ರಾಣನೇ! ಅಂತೆಯೇ ಆತನು ಜೀವೋತ್ತಮನೆಸಿರುವನು.

ಹಿಂದೊಂದು ಸಲ ಇಂದ್ರಿಯ ದೇವತೆಗಳಿಗೆ ಪರಸ್ಪರ ವಿವಾದವಾಯಿತು. ಆಗ ಪ್ರಾಣನು 'ನೀವೇಕೆ ಜಗಳವಾಡುವಿರಿ! ನಾನು ಧಾರಕನು! ತಿಳಿಯಿರಿ!' ಎಂದನು. ಅವರಾಮಾತಿನಲ್ಲಿ ಶ್ರದ್ಧೆ ತೋರಲಿಲ್ಲ. ಆಗ ಬ್ರಹ್ಮದೇವನು 'ನಿಮ್ಮಲ್ಲಿ ಯಾರಿದ್ದರೆ ಶರೀರವು ನಿಂತಿರುವುದೋ ಅವರು ಶ್ರೇಷ್ಠರು. ಯಾರು ಬಿಟ್ಟರೆ ಶರೀರವು ಬೀಳುವುದೋ ಅವರು ಶ್ರೇಷ್ಠರು' ಎಂದನು. ವಾಕ್ಕಿನಿಂದ ವಹ್ನಿಯು ಬಿಡಲು ಮೂಕನಾದನಾಗಲಿ ಜೀವನಿಗೆ ಶರೀರವಿಯೋಗವಾಗಲಿಲ್ಲ. ಸೂರ್ಯನು ಕಣ್ಣನ್ನು ಬಿಡಲು ಕುರುಡನಾದನಾಗಲಿ ಸಾಯಲಿಲ್ಲ. ದಿಗ್ದೇವರು ಕಿವಿಯನ್ನು ಬಿಡಲು ಕಿವುಡನಾದನಾಗಲಿ ಸಾಯಲಿಲ್ಲ. ಅಶ್ವಿಗಳು ಮೂಗನ್ನು ಬಿಡಲು ಗಂಧರಹಿತನಾದನಾಗಲಿ ಸಾಯಲಿಲ್ಲ. ಅಹಂಕಾರಿಕ ಪ್ರಾಣನು ಚರ್ಮವನ್ನು ಬಿಡಲು ಸ್ಪರ್ಶ ರಹಿತನಾದನಾಗಲಿ ಸಾಯಲಿಲ್ಲ. ವರುಣನು ಜಿಹ್ವೆಯನ್ನು ಬಿಡಲು ರುಚಿ ರಹಿತನಾದನಾಗಲಿ ಸಾಯಲಿಲ್ಲ. ದಕ್ಷನು ಹಸ್ತವನ್ನು ಬಿಡಲು ಆ ದಾನರಹಿತನಾದನಾಗಲಿ ಸಾಯಲಿಲ್ಲ. ಜಯಂತನು ಪಾದವನ್ನು ಬಿಡಲು ಕುಂಟನಾದನಾಗಲೀ ಸಾಯಲಿಲ್ಲ. ನಿರೃತಿ ಮಿತ್ರರು ಪಾಯುವನ್ನು ಬಿಡಲು ವಿಸರ್ಜನರಹಿತನಾದನಾಗಲಿ ಸಾಯಲಿಲ್ಲ. ಮನುವು ಉಪಸ್ಥೆಯನ್ನು ಬಿಡಲು ರತಿರಹಿತನಾದನಾಗಲಿ ಸಾಯಲಿಲ್ಲ. ಎಲ್ಲ ಹತ್ತು ಇಂದ್ರಿಯಗಳಿಗೆ ಒಡೆಯನಾದ ರುದ್ರನು ಮನಸ್ಸನ್ನು ಬಿಡಲು ಹುಚ್ಚನಾದನಾಗಲಿ ಸಾಯಲಿಲ್ಲ. ಆಗ ಮುಖ್ಯಪ್ರಾಣನು ಶರೀರವನ್ನು ಬಿಡಲು ತೊಡಗುತ್ತಲೇ ಎಲ್ಲ ಇಂದ್ರಿಯಗಳೂ ಕೆಟ್ಟು ಅವರೂ ಶರೀರವನ್ನು ಬಿಡುವಂತಾಯಿತು. ಆಗ ಅವರು ಕಲೆತು ಯಾರು ಹೊಕ್ಕರೆ

ಶರೀರವು ಎದ್ದು ನಿಲ್ಲುವುದೋ ಎಂದು ಪರೀಕ್ಷಿಸಿದರು. ರುದ್ರಾದಿಗಳು ಪ್ರವೇಶಿಸಿದರೂ ಏಳದಿದ್ದ ಶರೀರವು ಮುಖ್ಯಪ್ರಾಣನ ಪ್ರವೇಶದಿಂದ ಎದ್ದು ನಿಂತಿತು. ಇದರಿಂದ ಲೋಕದ ಸುಜನರೆಲ್ಲರು ಮುಖ್ಯಪ್ರಾಣನೇ ಜೀವಧಾರಕನು, ಆತನೇ ಜೀವೋತ್ತಮನು ಎಂದು ತಿಳಿಯುವಂತೆ ಮಾಡಿ ರುದ್ರಾದಿ ದೇವತೆಗಳು ಮುಖ್ಯಪ್ರಾಣನನ್ನು ಭಕ್ತಿಯಿಂದ ನುತಿಸಿದರು.

ನಾರದನು ದೇವಮತನೆಂಬ ಮುನಿಗೆ ಮುಖ್ಯಪ್ರಾಣನೇ ಜೀವಧಾರಕನು. ಶ್ರೀಹರಿಯನ್ನು ಎಡೆಬಿಡದಿರುವ ಮುಖ್ಯಪ್ರಾಣನು ಕರ್ಮಾನುರೂಪವಾಗಿ ಬಂದ ಶರೀರದಲ್ಲಿ ಅವಶನಾದ ಜೀವನನ್ನು ಹೊಗಿಸುವನು. ಪುರುಷನಲ್ಲಿ ಸಮಾನ ಗತಿಯಿಂದ ಶುಕ್ಲವು, ಸ್ತ್ರೀಯಲ್ಲಿ ವ್ಯಾನಗತಿಯಿಂದ ಶೋಣಿತವು ಪುಟ್ಟಿ ಸಂಧಿಸಿದಾಗ ಗರ್ಭಸಂಭವವಾಗುವುದು. ವಿಧಿವಿಲಾಸವು ಅತ್ಯದ್ಭುತವಾಗಿದೆ. ಪಾವನ ಪವನನು ಸರ್ವದೇವ ಸ್ವಾಮಿಯು; ಆತನಿಗೆ ಸ್ವಾಮಿ ಎಂದರೆ ಶ್ರೀಲಕ್ಷ್ಮೀಪತಿಯೇ; ಅನ್ಯರಿಲ್ಲ. ಅಹೋರಾತ್ರಗಳಲ್ಲಿಯು, ಶುಕ್ಲ ಕೃಷ್ಣಪಕ್ಷಗಳಲ್ಲಿಯು, ಉತ್ತರ ದಕ್ಷಿಣಾಯನಗಳಲ್ಲಿಯು, ಸೂರ್ಯ-ಚಂದ್ರರಲ್ಲಿಯು, ಪತಿಪತ್ನಿಯರಲ್ಲಿಯು ಪ್ರಾಣಭಾರತಿಯರು ನಿಯಾಮಕರಾಗಿದ್ದು, ಜಗದ್ರಕ್ಷಣವನ್ನು ಶ್ರೀಹರಿಸೇವೆ ಎಂದು ಮಾಡುತ್ತಿರುವರು.

ಜೀವನು ಕರ್ತನೆನಿಸುವಾಗ ಶರೀರವೇ ಅಧಿಷ್ಠಾನವು; ಇಂದ್ರಿಯಗಳೇ ಕರಣಗಳು; ವಿಷಯ ಸ್ವೀಕರಣವೇ ವ್ಯಾಪಾರವು. ಇಂತು ಜೀವನು ಶರೀರ ವ್ಯಾಪಾರವನ್ನು ಶ್ರೀಹರಿ, ಮುಖ್ಯಪ್ರಾಣ, ರುದ್ರಾದಿ, ತತ್ತ್ವದೇವತೆಗಳ ಅಧೀನನಾಗಿ ಮಾಡುತ್ತಾ, ಅವರು ನಿರ್ಲಿಪ್ತರು, ತಾನು ಅಭಿಮಾನ ಲೇಪಯುತನು ಆದುದರಿಂದ, ಕರ್ಮ ಫಲವನ್ನು ಉಣ್ಣುತ್ತಿರುವನು. ವಿಷಯಾಭಿಮಾನವನ್ನು ಬಿಟ್ಟರೆ ಜೀವನು ಮುಮುಕ್ಷುನೆನಿಸುವನು. ಬಂಧ ಮೋಕ್ಷಗಳಿಗೆ ಪ್ರಭುವು ಜೀವರೊಡೆಯನಾದ ಶ್ರೀಹರಿಯೇ. ಈ ಪ್ರಪಂಚದಲ್ಲಿ ವಕ್ತಾ, ಶಾಸ್ತಾ ಆದೇಷ್ಟಾ, ಮಂತಾ, ಬೋದ್ಧಾ, ಭೋಕ್ತಾ ಆದವನು ಶ್ರೀಹರಿಯೇ ಇತರರು ಅಸ್ವಂತಂತ್ರ ಬೋದ್ಧಾದಿಗಳು. ಜೀವೇಶನಾದ ಬ್ರಹ್ಮದೇವನಿಗೂ ಶಾಸಕನಾದ ಶ್ರೀಹರಿಕಿಂತ ಶಾಸಕರಿಲ್ಲ. ಸಂಸಾರದ ದುರ್ಗವನ್ನು ದಾಟಿ ಶ್ರೀಹರಿಯ ಮುಕ್ತಿ ವನವನ್ನು ಸೇರಿದವರಿಗೆ ಮತ್ತೆ ಜನನ ಮರಣಗಳಿಲ್ಲ, ದುಃಖವಿಲ್ಲ. ಅಂತಹ ಮುಕ್ತಿಯು ನಿಷ್ಕಾಮಕರ್ಮರತನಿಗೆ ಸಿಗುವುದು; ಪ್ರವೃತ್ತನಿಗಲ್ಲ.

ಹಿಂದೆ ಅಧ್ವರ್ಯುವು ಓರ್ವನು ಭಾಗವೊಂದನ್ನು ಯೂಪಸ್ತಂಭಕ್ಕೆ ಕಟ್ಟಿ, ಪ್ರೋಕ್ಷಿಸುತ್ತಿರಲು, ಒಬ್ಬ ಯತಿಯು ನೋಡಿ, 'ಅಯ್ಯಾ! ಹಿಂಸೆ ಮಾಡಬಹುದೇ?' ಎಂದನು. ಅಧ್ವರ್ಯುವು 'ಭೌಗವೀ(ಮೇಕೆ) ಯಜ್ಞದಲ್ಲಿ ದೇಹವನ್ನೊಪ್ಪಿಸಿ, ಪುಣ್ಯಲೋಕಗಳನ್ನು ಸೇರುವುದು' ಮತ್ತು ಶ್ರುತಿ ವಿಹಿತವಾದ ಹಿಂಸೆಯು ಪಾಪವೆನ್ನಬಹುದೇ? ನೀನೇ ಹೇಳು!' ಎಂದನು. ಯತಿಯು 'ಭಾಗವು ಪುಣ್ಯಗತಿಗೆ ಹೋಗೀತು! ನಿನಗಾವ ಗತಿ?' ಎಂದನು. ಅಧ್ವರ್ಯುವು ನಕ್ಕು 'ಅಯ್ಯಾ! ಪಶುಯಾಗದಿಂದ ಪುಣ್ಯವೂ ಅದರಿಂದ ಸ್ವರ್ಗ ಭೋಗಗಳು ಸಿಗುವವು ಎಂದು ವೇದದಲ್ಲಿದೆ!' ಎಂದನು. ಯತಿಯು, 'ಅಹಿಂಸೆಯು

ಪರಮ ಧರ್ಮವೆಂದು ಕೂಡ ವೇದದಲ್ಲೇ ಇದೆ. ಆದುದರಿಂದ ವೇದ ವಚನಗಳಿಗೆ ಪರಸ್ಪರ ವಿರೋಧವಿಲ್ಲದಂತೆ ತಿಳಿಯಬೇಕು. ಕೇಳು! ಹಿಂಸೆಯು ಕ್ಷತ್ರಿಯಾದಿಗಳಿಗೆ ವಿಹಿತವಾಗಿದೆ- ವಿಪ್ರರಿಗಲ್ಲ. ವಿಪ್ರರು ತಪೋ(ಜ್ಞಾನ) ಯಜ್ಞವನ್ನು ಮಾಡಬೇಕು ಮತ್ತು ಸ್ವರ್ಗ ಭೋಗಗಳಿಗೆ ಆಶಿಸಿ, ಯಾರೂ ಯಜ್ಞಗಳನ್ನು ಮಾಡಬಾರದು. ಅದು ಪ್ರವೃತ್ತಿ ಕರ್ಮವು. ಪ್ರವೃತ್ತಿ ಕರ್ಮವು ಬಂಧಕವಾಗಿ, ಅನೇಕ ಜನ್ಮಾಂತರಗಳನ್ನು ತಂದು ಕೊಡುವುದು. ನಿವೃತ್ತಿ ಕರ್ಮವೇ ಮೋಚಕವು; ಅದು ಮನಶ್ಶುದ್ಧಿಯನ್ನು ತಂದಿತ್ತು, ಆಮೇಲೆ ಜ್ಞಾನದ್ವಾರಾ ಮೋಕ್ಷ ಕಾರಣವಾಗುವುದು. ಆದುದರಿಂದ ನೀನು ಹಿಂಸಾ ಯಜ್ಞದಿಂದ ವಿರತನಾಗು, ಜ್ಞಾನಯಜ್ಞ ನಿರತನಾಗು!' ಎಂದನು.

ಭಗವಾನ್ ಪರಶುರಾಮ ದೇವನಂತಹನೇ ತಾನು ಮಾಡಿದ ರಾಜವಧೆಗಳಿಗಾಗಿ ವಿಪ್ರರು ವಿಧಿಸಿದ ತೀರ್ಥಯಾತ್ರಾದಿಗಳನ್ನು ಮಾಡಿ ಲೋಕದ ಸುಜನರಿಗೆ ಅಹಿಂಸೆಯ ಮಹಿಮೆಯನ್ನು ತಿಳಿಸಿದನು.

ಅಲರ್ಕನೆಂಬ ರಾಜನು ಮನಸ್ಸನ್ನು ಕೆಡಿಸುವ ಇಂದ್ರಿಯಗಳಲ್ಲಿ ಸಿಟ್ಟಾಗಿ, ಅವನ್ನು ದಿವ್ಯಾಸ್ತ್ರಗಳಿಂದ ಬಾಧಿಸಲು ಯತ್ನಿಸಿದನು. ಇಂದ್ರಿಯ ದೇವತೆಗಳಿಂತೆಂದರು: 'ರಾಜನ್! ನಮ್ಮನ್ನು ಬಾಧಿಸ ಪೋಗಿ ನೀನೇ ಕುರುಡನಾಗಿ ಕಿವುಡನಾಗಿ ಕೆಡುವೆ! ಯೋಗ ತಪೋ ಜ್ಞಾನಗಳಿಂದ ಇಂದ್ರಿಯಗಳನ್ನು ಗೆಲ್ಲಲಾಗುವುದಾಗಲಿ, ಬಾಹುಬಲ ದಿಂದಲ್ಲ! ತಿಳಿ!' ಎಂದು ಉಪದೇಶಿಸಲು, ಅಲರ್ಕನು ಅಂತೆಯೇ ಶಾಂತನಾದನು.

ಮನಸ್ಸನ್ನು ಮುಚ್ಚಿರುವ ಪ್ರಕೃತಿಯು ಸತ್ವರಜಸ್ತಮೋಗುಣಮಯವಾಗಿದೆ. ಹರ್ಷಮಾನ ಜ್ಞಾನಗಳು ಸಾತ್ವಿಕ ಕ್ರೋಧ ಪ್ರವೃತ್ತಿ ಶೋಕಗಳು ರಾಜಸ ವಿಕಾರಗಳು; ಮೋಹ ಆಲಸ್ಯ ನಿದ್ರಾದಿಗಳು ತಾಮಸಗಳು. ಇವರೇ ಮುಖ್ಯ ವೈರಿಗಳು. ಇವರನ್ನು ಗೆಲ್ಲಬೇಕಾದರೆ ನಿಷ್ಕಾಮನಾಗಬೇಕು. ಕಾಮನು ಪ್ರಬಲ ಶತ್ರುವು; ಅವನಿಂದ ಜನಿಸುವ ಕ್ರೋಧನು, ಕಾಮಾತಿಶಯರೂಪನಾದ ಲೋಭನು ದ್ವಿತೀಯ ತೃತೀಯ ಶತ್ರುಗಳು. ಅಂಬರೀಷನು ಈ ಮರ್ಮವನ್ನರಿತು ಮೊದಲು ಲೋಭವನ್ನು ಬಿಟ್ಟು, ಕಾಮಕ್ರೋಧಗಳನ್ನೂ ಜಯಿಸಿದನು.

ಹಿಂದೆ ಜನಕನು ಒಬ್ಬ ವಿಪ್ರನ ಮೇಲಿನ ಸಿಟ್ಟಿನಿಂದ 'ನೀನು ಅಕಾರ್ಯವನ್ನು ಮಾಡಿರುವೆ! ನನ್ನ ರಾಜ್ಯದಲ್ಲಿ ಇರಬೇಡ!' ಎಂದನು. ವಿಪ್ರರೂಪದಿಂದ ಬಂದಿದ್ದ ಯಮರಾಜನು ನಕ್ಕು 'ರಾಜನ್! ಏನಂದೆ ? ನಿನ್ನ ರಾಜ್ಯದಲ್ಲಿರಬಾರದೇ? ಹಾಗಾದರೆ ನಿನ್ನದೆಂಬುವ ರಾಜ್ಯವು ಎಲ್ಲಿಯವರೆಗೂ ಇದೆಯೋ ತಿಳಿಸಿಕೊಡು!' ಎಂದನು. ಜನಕನು ತತ್‌ಕ್ಷಣವೇ ತಲೆತಗ್ಗಿಸಿ, 'ಮಹಾತ್ಮ! ತಿಳಿದೆನು. ನನ್ನದೆಂಬುವುದೇನೂ ಇಲ್ಲ. ಮಿಥಿಲೆಯೇ ನನ್ನದಲ್ಲ. ಅಂತಃಪುರವೆನ್ನದಲ್ಲ. ಕೊನೆಗೆ ಈ ನನ್ನ ಶರೀರವೆನ್ನದಲ್ಲ! ಇವೆಲ್ಲವೂ ನಶ್ವರಗಳು. ನಾನು ಎಂಬ ಜೀವನಿಗೆ ಅವುಗಳ ಸಂಬಂಧವಿಲ್ಲ. ಭೂಮ್ಯಾದಿಗಳಲ್ಲಿರುವ ಗಂಧರಸ ಸ್ಪರ್ಶರೂಪ ಶಬ್ದಾದಿಗಳಿಗೆ ಜೀವನಿಗೆ ಅಭಿಮಾನದಿಂದಲೇ ಸಂಬಂಧವಾಗಲಿ; ಇಲ್ಲದಿದ್ದರಿಲ್ಲ' ಎಂದು ಆ ಯಮರಾಜನನ್ನು ಪೂಜಿಸಿ ಕಳಿಸಿದನು.

ಸರ್ವ ಜೀವಜಡ ಜಾತಕ್ಕೆ ಅಂತರ್ಯಾಮಿಯು ಸ್ವಾಮಿಯು ಆದ ಶ್ರೀನಾರಾಯಣನದೀ ಜನವೆಲ್ಲವು. ಮತ್ತಾರದೂ ಅಲ್ಲ. ಅವನೇ ನಮ್ಮ ರಕ್ಷಕನು; ಮೋಚಕನು; ಶ್ರೀಶನನ್ನು ಮುಖ್ಯಪ್ರಾಣನಲ್ಲಿ ಕಂಡು ತಿಳಿದ ನನಗೆ ಪತ್ನೀ-ಪುತ್ರಾದಿ ಮಮಕಾರವಿಲ್ಲ. ದೇಹವೇ ನಾನೆಂಬ ಅಹಂಕಾರವಿಲ್ಲ.

ಬ್ರಾಹ್ಮಣೀ ! ಕೇಳು ! ಗುರುವು ಅಧರಾರಣಿಯು, ಶಿಷ್ಯನು ಉತ್ತರಾರಣಿಯು! ಪ್ರವಚನವೇ ಮಥನ ಕ್ರಿಯೆಯು! ಪುಟ್ಟುವ ಜ್ಞಾನವೇ ಅಗ್ನಿಪ್ರಕಾಶವು ಅಂತಹ ಜ್ಞಾನವನ್ನು ನಿನಗೆ ಪೇಳಿರುವೆನು. ಶಾಂತಳಾಗು; ಸಾಂಸಾರಿಕ ವಿಷಯ ವಿರಕ್ತಳಾಗು. ಸ್ತ್ರೀಯರಾದರೇನು ? ವೈಶ್ಯಶೂದ್ರರಾದರೇನು ? ಶ್ರೀಹರಿಯನ್ನು ಭಕ್ತಿಯಿಂದ ಭಜಿಸಿ ಮುಕ್ತರಾಗಬಹುದಾಗಿದೆ' ಇಂತು ಬ್ರಾಹ್ಮಣನು ನಿರೂಪಿಸಿದನು.

ಅರ್ಜುನ! ಕ್ಷೇತ್ರವೆಂದರೆ ಶರೀರಗತವಾದ ತತ್ವಸಮೂಹವು. ಅದನ್ನರಿತು ನಡೆಸುವ ನನ್ನನ್ನು ಕ್ಷೇತ್ರಜ್ಞನೆಂಬರು.

ಪಾರ್ಥ! ಗುರು-ಶಿಷ್ಯ ಸಂವಾದ ವ್ಯಾಜದಿಂದ ಮತ್ತು ತತ್ತ್ವೋಪದೇಶವನ್ನು ಮಾಡುವೆನು ಕೇಳು! ಪರಮತಪೋನಿಧಿಗಳಾದ ಭಾರದ್ವಾಜ, ಭಾರ್ಗವ, ಗೌತಮ, ಕಾಶ್ಯಪ, ವಸಿಷ್ಠ, ಅತ್ರಿ, ವಿಶ್ವಾಮಿತ್ರರು ಅಂಗಿರಸನನ್ನು ಮುಂದಿಟ್ಟುಕೊಂಡು ಚತುರ್ಮುಖನನ್ನು ಸೇರಿ, ವಂದಿಸಿ, ಶ್ರೇಯಃಪ್ರಾಪ್ತಿಗೆ ಸಾಧನವನ್ನು ಉಪದೇಶಿಸಲು ಪ್ರಾರ್ಥಿಸಿದರು. ಕಮಲಾಸನನು ವಿಕಸಿತಮುಖನಾಗಿ ಇಂತೆಂದನು:

'ಸತ್ ಎಂಬ ವಸ್ತುವಿದೆ; ಸತ್ ಎಂದರೆ ಸದಾ ಸರ್ವವಿಕಾರರಹಿತನು, ನಿರ್ದೋಷನು, ಗುಣಪೂರ್ಣನು ಎಂದರ್ಥ. ಸತ್ ಎಂದು ಶ್ರೀಮನ್ನಾರಾಯಣನ ಹೆಸರು. ಸತ್ತಿನಿಂದ ಸರ್ವಭೂತಗಳು-ನಾನು ಕೂಡ, ಜನಿಸುವವು. ಶ್ರೀಶನಿಂದ ಜೀವಿಸಿರುವವು. ಶ್ರೀಶನಲ್ಲಿ ಲಯವನ್ನು ಹೊಂದುವವು. ಶ್ರೀಶನನ್ನು ವೇದವಿದರಾದ ಜ್ಞಾನಿಗಳು ಸತ್ಯ, ಓಂ, ಭಗವಾನ್, ಆತ್ಮಾ, ಬ್ರಹ್ಮ ಇತ್ಯಾದಿ ನಾಮಗಳಿಂದ ಕರೆಯುವರು. ವರ್ಣಾಶ್ರಮವಿಹಿತ ಕರ್ಮಾನುಷ್ಠಾನವೇ ಶ್ರೀಹರಿಯನ್ನು ಸೇರುವ ರಾಜಮಾರ್ಗ. ಎಲ್ಲ ವರ್ಣದ, ಎಲ್ಲ ಆಶ್ರಮದವರಿಗೂ ಸ್ಮರ್ತವ್ಯವಾಗಿದೆ. ಶ್ರೀಹರಿಯ ಸರ್ವೋತ್ತಮತ್ವಜ್ಞಾನ, ಶ್ರೀಹರಿಯು ಜೀವ ಶರೀರಗಳಲ್ಲಿ ಹೃದಯಗುಹಾಗತನಾಗಿರುವನು. ಅವನನ್ನು ತಿಳಿಸುವ ಅಧ್ಯಾತ್ಮ ತತ್ವವು ಬಲು ದುರ್ಗಮವಾಗಿದೆ. ಅದನ್ನು ಸಾಕಲ್ಯೇನ ತಿಳಿಯಲು ಮಾರುತ ರುದ್ರಶಕ್ರ ಚಂದ್ರಾದಿ ದೇವತೆಗಳಿಗೆ ಶಕ್ಯವಲ್ಲ. ಶ್ರೀಹರಿ ದಯದಿಂದ ನಾವೆಲ್ಲರೂ ಅವನನ್ನು ನಮ್ಮ ನಮ್ಮ ಯೋಗ್ಯತೆಯಂತೆ ಅರಿತಿರುವೆವು.

ಶ್ರೀಶನು ಲಕ್ಷ್ಮೀದೇವಿಯಿಂದ ಕ್ರೀಡಿಸಿ, ಬ್ರಹ್ಮಾಂಡವನ್ನು ಸೃಜಿಸಿದನು. ಅದು ಸತ್ವರಜಸ್ತಮೋಗುಣಗಳ ಪ್ರಕೃತಿಯಿಂದ ರಚಿತವಾಗಿದೆ. ಅದರಲ್ಲಿ ಇಪ್ಪತ್ತೈದು ತತ್ವಗಳಿವೆ. ಮಹತ್ತ್ವವು ಬ್ರಹ್ಮನಾದ ನಾರಾಯಣನ ಪುತ್ರನಾದ ನನ್ನ ತತ್ವವಾಗಿದೆ. ಆ ತತ್ವವನ್ನು ಸೃಜಿಸಿ ಅದರ ಅಧಿಪತ್ಯವನ್ನು ನಾಮ ರೂಪ ಶಕ್ತಿಗಳನ್ನು ಶ್ರೀಶನೇ ನನಗೆ ಕೊಟ್ಟಿರುವನು. ಅಂತೆಯೇ ಆತನ ಆಜ್ಞಾ ಪ್ರಸಾದಗಳಿಂದ ನಾನು ತಿಳಿದು ಮಿಕ್ಕೆಲ್ಲ

ತತ್ವಗಳನ್ನು ಸೃಜಿಸಿದೆನು. ಅವು ಯಾವುವೆಂದರೆ ಕೇಳಿ! ಅವ್ಯಕ್ತ (ಶ್ರೀದೇವಿ), ಮಹತ್ತು (ಬ್ರಹ್ಮ), ಬುದ್ಧಿ (ಸರಸ್ವತಿ), ಅಹಂಕಾರ (ಗರುಡ ಶೇಷ ರುದ್ರರು - ತತ್ಪತ್ನಿಯರು), ಮನಸ್ಸು (ಸ್ಕಂದೇಂದ್ರ) ಶಬ್ದ ಸ್ಪರ್ಶಗಳು (ಸೌಪರ್ಣಿ), ರೂಪರಸಗಳು (ವಾರುಣಿ), ಗಂಧ (ಪಾರ್ವತಿ), ಶಬ್ದ (ಬೃಹಸ್ಪತಿ ಪ್ರಾಣರು), ಸ್ಪರ್ಶ (ಅಪಾನ), ರೂಪ (ವ್ಯಾನ), ರಸ (ಉದಾನ), ಗಂಧ (ಸಮಾನ), ಪೃಥಿವಿ (ಶನಿ ಧರಾದೇವಿಯರು), ಅಪ್ (ವರುಣ), ತೇಜ (ವಹ್ನಿ), ವಾಯು (ಭೂತವಾಯು), ಆಕಾಶ (ಗಣಪತಿ), ಶ್ರೋತ್ರ (ಚಂದ್ರಾದಿ ದಿಗ್ದೇವತೆಗಳು), ತ್ವಕ್ (ಅಹಂಕಾರಿಕ ಪ್ರಾಣ, ಚಕ್ಷುಸ್ಸು ಸೂರ್ಯ), ಜಿಹ್ವಾ (ವರುಣ), ಘ್ರಾಣ (ಅಶ್ವಿನೀದ್ವಯ), ವಾಕ್ (ಅಗ್ನಿ), ಪಾಣಿ (ದಕ್ಷ), ಪಾದ (ಜಯಂತ), ಪಾಯು (ಮಿತ್ರ), ಉಪಸ್ಥಾ (ಮನು) ಇಂತು ಇಪ್ಪತ್ತೈದು ತತ್ವದೇವತೆಗಳು ಎಲ್ಲರೂ ಶ್ರೀಹರಿಯೇ ತಮ್ಮಲ್ಲಿದ್ದು, ತತ್ತಚ್ಛಕ್ತಿಗಳನ್ನಿತ್ತು ನಡೆಸುತ್ತಿರಲು, ಜಗತ್ತಿನ ಜೀವರಿಗೆ ಐಹಿಕ ಭೋಗಜ್ಞಾನಕ್ರಿಯಾದಿ ವ್ಯಾಪಾರಗಳನ್ನು ಮಾಡಿಸಿ, ತಾವು ಶ್ರೀಹರಿಗೆ ತತ್ಫಲವನ್ನು ಅರ್ಪಿಸಿ ನಿರ್ಲಿಪ್ತರಾಗಿರುವರು.

ಸೃಷ್ಟಿಯು ಎಂತಾಗುವುದೋ, ಪ್ರಳಯವೂ ಅಂತೆಯೇ ಅಂದರೆ ವ್ಯುತ್ಕ್ರಮವಾಗಿ ಆಗುವುದು. ಅವ್ಯಕ್ತತ್ವದ ದೇಹಗುಣಗಳಂತೆ, ಸ್ವರೂಪದಿಂದಲೂ ಜೀವರು ತ್ರಿವಿಧರಾಗಿರುವರು. ಸಾತ್ವಿಕರು ಮುಕ್ತಿಯೋಗ್ಯರು, ತಾಮಸರು ಅಂಧಂತಮೋ ಯೋಗ್ಯರು. ರಾಜಸರು ನಿತ್ಯ ಸಂಸಾರಿಗಳು, ಪ್ರಾಕೃತ ಗುಣ ವಿಕಾರಗಳನ್ನು ಹೊಂದಿ ತ್ರಿವಿಧ ಜೀವರು ಆಗಾಗ ವಿವಿಧ ಕರ್ಮಗಳನ್ನು ಮಾಡುವುದುಂಟು. ಸತ್ವಾದಿ ಗುಣಗಳಲ್ಲಿ ಒಂದು ಉಲ್ಬಣಿಸಿ, ಇತರವೆರಡೂ ಅಡಗುವವು. ಸತ್ವಗುಣದಲ್ಲಿ ಜ್ಞಾನ ಪ್ರಕಾಶಗಳೂ, ರಜೋಗುಣದಲ್ಲಿ ಕಾಮ ಅಜ್ಞಾನ ಪ್ರವೃತ್ತಿಗಳೂ, ತಮೋಗುಣದಲ್ಲಿ ಅನ್ಯಥಾ ಜ್ಞಾನ ಕ್ರೋಧ ಮೋಹಗಳೂ ಸಂಭವಿಸುವವು. ಸಾತ್ವಿಕರು ಊರ್ಧ್ವಲೋಕಗಳನ್ನೂ, ರಾಜಸರು, ಮಧ್ಯ ಭೂಲೋಕವನ್ನೂ, ತಾಮಸರು ಅಧೋಲೋಕಗಳನ್ನೂ ಹೊಂದುವರು. ಜೀವರ ಸಾತ್ವಿಕಾದಿ ಸ್ವಭಾವವು ಸ್ವರೂಪದಲ್ಲೇ ಇರುವುದರಿಂದ ಬದಲಾಗದು.

ಸಂತೋಷ, ಪ್ರಕಾಶ, ಪ್ರಿಯ, ಕರುಣೆ, ಕ್ಷಮೆ, ಸತ್ಯ, ಶೌಚ, ಧೃತಿ, ಶ್ರದ್ಧೆ, ತಿತಿಕ್ಷೆ ಅಹಿಂಸೆ, ಆರ್ಜವ, ಅನಸೂಯ ಇವು ಸಾತ್ವಿಕ ಗುಣಗಳು. ಗುಣತ್ರಯದಿಂದ ಅತೀತನಾಗಲಿಚ್ಛಿಸುವನು, ಮೊದಲು ಸಾತ್ವಿಕ ಗುಣಗಳನ್ನು ಅವಲಂಬಿಸಿ, ರಜಸ್ತಮೋ ಗುಣಗಳಾದ ರಾಗದ್ವೇಷಾದಿಗಳನ್ನು ಬಿಡಬೇಕು. ಕ್ರಮವಾಗಿ ಅವನು ಫಲಾಪೇಕ್ಷಾರಹಿತನಾಗಿ, ತ್ರಿಗುಣವಿಕಾರಗಳನ್ನು ಮೀರಿ, ಮೇಲೆ ಹೇಳಿದ ಸತ್ವಾದಿ ಗುಣಗಳ ಸ್ವರೂಪದ ಅಭಿವ್ಯಕ್ತಿಯನ್ನು ಶ್ರೀಹರಿ ದಯದಿಂದ ಹೊಂದುವನು.

ಧರ್ಮಾರ್ಥ ಕಾಮಗಳನ್ನು ತ್ರಿವರ್ಗವೆಂಬರು. ಅವನ್ನು ಮಾತ್ರ ಕೋರುವವರು ರಾಜಸರು. ಫಲಾಪೇಕ್ಷೆಯಿಲ್ಲದ ಧರ್ಮವನ್ನಾಚರಿಸುವವರು ಸಾತ್ವಿಕರು. ಗುರುಸೇವೆಯಿಂದ ಜ್ಞಾನವನ್ನು ಸಂಪಾದಿಸಿ, ಯಥಾಯೋಗ್ಯವಾದ ಧ್ಯಾನದಿಂದ ಶ್ರೀಹರಿಯ ಅಪರೋಕ್ಷವನ್ನು

ಪಡೆದು, ಕೊನೆಗೆ ನನ್ನಿಂದ ಕೂಡಿ, ಮುಕ್ತರಾಗುವರು. ಜಪ, ದಾನ, ಯಜ್ಞ, ತಪಸ್ಸು, ಎಲ್ಲವೂ ಶ್ರೀಹರಿ ಭಕ್ತಿಯಿಂದ ಕೂಡಿದಾಗಲೇ ಮೋಕ್ಷಸಾಧನವಾಗುವವು. ಇಲ್ಲದಿರೆ ದಾಂಭಿಕವೆನಿಸಿ ಅಲ್ಪಫಲಕವೋ, ಅಥವಾ ತಾಮಸರಿಂದ ಮಾಡಲ್ಪಟ್ಟಿದ್ದರೆ ನಿಷ್ಫಲವೋ ಆಗುವವು.

ಜ್ಞಾನವು ತಾರತಮ್ಯಯುಕ್ತವಾಗಿರಬೇಕು. ಇತರ ಜೀವರಿಕಿಂತಲೂ ಸಾತ್ವಿಕರು ಉತ್ತಮರು. ಅವರಲ್ಲಿ ಶ್ರೀಹರಿಭಕ್ತರು ಉತ್ತಮರು. ಅವರಿಕಿಂತಲೂ ಕ್ರಮವಾಗಿ, ಮನುಜಗಂಧರ್ವರು, ದೇವ ಗಂಧರ್ವರು, ಪಿತೃಗಳು, ಕರ್ಮಜದೇವತೆಗಳು, ದೇವತೆಗಳು ಉತ್ತಮರು. ದೇವತೆಗಳಲ್ಲಿ ಇಂದ್ರನು ಉತ್ತಮನು, ಇಂದ್ರನಕಿಂತಲು ರುದ್ರನು ಉತ್ತಮನು. ರುದ್ರನಕಿಂತಲು ಭಾರತೀಪ್ರಾಣರು ಉತ್ತಮರು. ಭಾರತೀ ಪ್ರಾಣರೇ ಮುಂದೆ ಸರಸ್ವತೀ ಬ್ರಹ್ಮರಾಗುವರು. ಬ್ರಹ್ಮನಾದನನಕಿಂತಲೂ ಉತ್ತಮಳು ಅವ್ಯಕ್ತಮಾನಿ ಶ್ರೀಲಕ್ಷ್ಮೀದೇವಿಯು, ಶ್ರೀದೇವಿಕಿಂತಲು ಶ್ರೀಹರಿಯು ಉತ್ತಮನು. ಶ್ರೀಶನಿಕಿಂತಲು ಉತ್ತಮರಿಲ್ಲವೇ ಇಲ್ಲ. ಶ್ರೀಹರಿಯೇ ಸರ್ವೋತ್ತಮನು.

ಶ್ರೀಶನು ಎಲ್ಲ ದೇವತೆಗಳನ್ನೂ ಸೃಜಿಸಿ, ಅವರಿಗೆ ತನ್ನ ಹೆಸರನ್ನಿಟ್ಟನು. ಬ್ರಹ್ಮನೆಂದರೆ ಗುಣಪೂರ್ಣ ಶ್ರೀಶನು. ರುದ್ರನೆಂದರೆ ಸಂಸಾರ ರೋಗನಾಶಕ ಶ್ರೀಶನು, ಇಂದ್ರನೆಂದರೆ ಐಶ್ವರ್ಯನಿಧಿ ಶ್ರೀಶನು. ವರುಣನೆಂದರೆ ಶ್ರೇಷ್ಠ ಸುಖರೂಪಿ ಶ್ರೀಶನು. ಅಗ್ನಿ ಎಂದರೆ ಅಂಗನೇತಾ ಶ್ರೀಶನು. ಇಂತು ಎಲ್ಲ ದೇವತೆಗಳಲ್ಲಿಯೂ ಶ್ರೀರಮಣನು ನೆಲೆಸಿ, ಅಂತರ್ಯಾಮಿಯಾಗಿ, ಅವರಿಗೆ ನಾಮರೂಪ ಶಕ್ತಿಗಳನ್ನು ಕೊಟ್ಟಿರುವನು. ಶ್ರೀಹರಿಯು ಇಲ್ಲದಿರೆ ಯಾವ ಬ್ರಹ್ಮ ರುದ್ರಾದಿಗಳೂ ಏನೂ ಮಾಡಲಾರರು.

ಶ್ರೀಶನು ಅಂತರ್ಯಾಮಿಯಾಗಿರುವುದಲ್ಲದೆ, ಕೆಲವರಲ್ಲಿ ವಿಶೇಷ ಸನ್ನಿಧಾನದಿಂದ ಇದ್ದು, ಆಯಾ ಜಾತಿಯಲ್ಲಿ ಅವರನ್ನು ಉತ್ತಮರೆನಿಸಿಸಿರುವನು. ಅಂತು ಉತ್ತಮ ರಾಗಿ ಆ ಜೀವರಿರಲು, ಅವರಲ್ಲಿರುವ ಶ್ರೀಹರಿಯೇ ಕಾರಣನು. ಪ್ರಪಂಚದಲ್ಲಿರುವ ಶ್ರೀ, ಕೀರ್ತಿ, ಐಶ್ವರ್ಯ, ತೇಜ, ಕ್ಷಮಾ, ವೀರ್ಯ, ಜ್ಞಾನ, ತಪಸ್ಸು, ಐಶ್ವರ್ಯ ಮುಂತಾದ ಸುಗುಣಗಳೆಲ್ಲವೂ ಶ್ರೀಹರಿಯ ಆಯಾ ಗುಣಗಳ ಭಿನ್ನಾಂಶಗಳಾಗಿದ್ದು, ಆ ಜೀವರನ್ನು ಸ್ವಜಾತಿಯಲ್ಲಿ ಉತ್ತಮರೆನಿಸಲು ಕಾರಣವಾಗಿವೆ. ಅಂತಹ ಶ್ರೀಹರಿ ರೂಪಗಳಿಗೆ ವಿಭೂತಿರೂಪಗಳೆಂದು ಹೆಸರು. ವಿಭೂತಿ ರೂಪಗಳನ್ನು ವರ್ಣಾಶ್ರಮ ಧರ್ಮಗಳನ್ನು ಎಷ್ಟೋ ಸಲ ನಾನು (ವೈಶಂಪಾಯನನು) ವರ್ಣಿಸಿರುವೆನು. (ಭೀಷ್ಮಪರ್ವ- ಶಾಂತಿಪರ್ವ).

ಅವ್ಯಕ್ತಪ್ರಭವವು, ಬುದ್ಧಿಸ್ಕಂಧವು, ಅಹಂಕಾರ ಶಾಖಾವಿಸ್ತಾರವು, ಇಂದ್ರಿಯ ಕೋಟರದಶಕವು, ಆಶಾಪಲ್ಲವವು, ಶುಭಾಶುಭ ಮಧುರ ವಿಷಫಲವು ಆದ ಸಂಸಾರ ವೃಕ್ಷವನ್ನು, ಜ್ಞಾನ ಖಡ್ಗದಿಂದ ಕಡಿದು, ಸುಜೀವನು ದೇವೇಶನಾದ ಶ್ರೀಹರಿಲೋಕ ವನ್ನು ಸೇರುವನು, ಅದಕ್ಕೆ ಸಾಧನವಾದುದು- ಸತ್ಯ, ಅಹಿಂಸೆ, ಧೃತಿ, ವೇದ ವಿಚಾರ, ಗುರುಸೇವೆ, ಪರಿಭಕ್ತಿ, ಕ್ಷಮಾ, ಆರ್ಜವ, ಕಾಮ್ಯ ಕರ್ಮತ್ಯಾಗ, ನಿಷ್ಕಾಮ

ಕರ್ಮಾಚರಣ, ಕರ್ಮಶುಭ ಫಲ ಸಮರ್ಪಣ, ವಿಜ್ಞಾನ, ಜ್ಞಾನ, ವಿರಾಗ, ಮುಂತಾದ ಗುಣಸಮೂಹವೇ.

ಶ್ರವಣ, ಮನನ, ನಿಧಿಧ್ಯಾಸನಗಳಿಂದ ಗುರುದ್ವಾರಾ ಬಂದ ಸಚ್ಛಾಸ್ತ್ರ ಜ್ಞಾನವು ಜೀವನ ಬಂಧವನ್ನು ಬಿಡಿಸುವುದು. ಸುಜೀವರ ಸ್ವರೂಪವಾದ ಬಲಜ್ಞಾನಾನಂದಾದಿಗಳು ಶ್ರೀಹರಿ ದಯದಿಂದ ಅಭಿವ್ಯಕ್ತವಾಗುವವು. ಅದೇ ಮುಕ್ತಿಯು. ಇಂತು ನಾನು ಉಪದೇಶಿಸಿದ ಮಾರ್ಗದಿಂದ ನಡೆಯಿರಿ! ನಿಮಗೆ ಶ್ರೇಯಸ್ಸಾಗುವುದು!"

ಬ್ರಹ್ಮದೇವನ ಉಪದೇಶದಂತೆ ಆ ಮುನಿಗಳು ನಡೆದು, ಲೋಕ ಪೂಜ್ಯರೂ, ಗೋತ್ರ ಪ್ರವರ್ತಕರೂ ಆಗಿರುವರು. 'ಅರ್ಜುನ! ನೀನೂ ನಾನು ನುಡಿದಂತೆ ನಡೆ! ಗೀತಾ ತತ್ವಗಳನ್ನು ಚನ್ನಾಗಿ ಜ್ಞಾಪಿಸಿಕೊಂಡರೆ ನಿನಗೆ ಸರ್ವದುಃಖ ನಿವೃತ್ತಿಯೂ ಸರ್ವಸುಖಾವಾಪ್ತಿಯೂ ಆಗುವುದು.'

## ೫. ಉದಂಕ ಕಥಾ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಇಂತು ಶ್ರೀಕೃಷ್ಣನು ತೃಷ್ಣಾದಿ ದೋಷ ನಿವಾರಕವಾದ ಅನುಗೀತೆಯನ್ನು ಅರ್ಜುನನಿಗೆ ನಿರೂಪಿಸಿ, 'ಫಲ್ಗುನ! ನನ್ನ ಬಂಧುಗಳನ್ನು ನೋಡಬೇಕೆನಿಸಿದೆ ಧರ್ಮರಾಜನಿಗೆ ಹೇಳಿ, ನನಗೆ ಅಪ್ಪಣೆ ಕೊಡಿಸು!' ಎಂದನು. ಅರ್ಜುನನು ಅದಕ್ಕೆ ಸಮ್ಮತಿಸಿ ಇಂದ್ರಪ್ರಸ್ಥದಿಂದ ಸಪರಿವಾರನಾಗಿ ತೆರಳಿದನು. ದಾರುಕನು ಸಾರಥಿಯಾಗಿ ನಡೆಸುತ್ತಿರಲು ದಿವ್ಯರಥಾರೂಢರಾದ ಧನಂಜಯ ವಾಸುದೇವರು ಕರಿಪುರವನ್ನು ಸಮೀಪಿಸಿದರು.

ಅರ್ಜುನನು 'ಶ್ರೀಶ! ನೀನು ಸಾಕ್ಷಾನ್ನಾರಾಯಣನು. ಜಂಗಮ ಸ್ಥಾವರಾತ್ಮಕವಾದ ಸರ್ವಜಗವು ನಿನ್ನಿಂದ ಬೆಳೆದು, ನಿನ್ನಲ್ಲಿ ಲಯವನ್ನು ಹೊಂದುವುದು. ನಿನ್ನ ಲೀಲೆಯು ಬ್ರಹ್ಮ ರುದ್ರಾದಿಗಳಿಗೂ ಅಮೇಯವಾಗಿದೆ. ನಿನ್ನ ದಯೆಯಿಂದ ಮತ್ತೆ ಗೀತಾಸಾರವಾದ ಅನುಗೀತೆಯನ್ನು ಕೇಳಿದೆನು. ನನ್ನ ಅಜ್ಞಾನವು ನಿವೃತ್ತವಾಯಿತು. ಕೌರವ ಸೇನಾಸಾಗರವನ್ನು ದಾಟಿದೆವು. ಗುರು ಭೀಷ್ಮ ಕರ್ಣಾದಿ ದುರ್ಜಯ ವೀರರನ್ನು ನಿರ್ಜಿಸಿದೆವು. ಜಯಶ್ರೀಯು ನಮ್ಮ ಕೈಸೇರಿದಳು. ಭವದೀಯ ಸುಪ್ರಸಾದವು ಧರ್ಮಜನನ್ನು ಅಪ್ರತಿಹತ ಮಹಾಸಾಮ್ರಾಜ್ಯ ಸಂಪೂಜ್ಯನನ್ನಾಗಿಸಿತು. ಆಶ್ರಿತ ಜನರಕ್ಷ! ಲಕ್ಷ್ಮೀವಕ್ಷ! ನಿನ್ನ ವಿಜಯವೇ ಅಶ್ವಮೇಧಯಾಗವು. ನಿನ್ನ ತೇಜವೇ ಅಗ್ನಿಷ್ಟೋಮವು! ನಿನ್ನ ಭೂಭಾರಹರಣ ಲೀಲೆಯೇ ರಾಜಸೂಯವು! ಯಜ್ಞಮಯ! ಯಜ್ಞಫಲಪ್ರದ! ನಾರದ ದೇವಲ ವಿಶ್ವಾಮಿತ್ರ ಭಾರದ್ವಾಜ ಪರಾಶರ ಕಾಶ್ಯಪ ಭಾರ್ಗವಾದಿ ಮುನಿವರರು ನಿನ್ನ ಮಹಿಮೆಯನ್ನು ತಮಗೆ ತಿಳಿದಂತೆ ತಿಳಿದಷ್ಟು ವರ್ಣಿಸಿ ಲೋಕೋದ್ಧಾರವನ್ನು ಮಾಡುತ್ತಿರುವರು. ನಮೋನಮಃ ನಿನ್ನ ಅಡಿದಾವರೆಗೆ!' ಎಂದು ಸಲ್ಲಾಪಿಸುತ್ತಾ, ಹಸ್ತಿಪುರವನ್ನು ಪ್ರವೇಶಿಸಿದನು.

ಶ್ರೀಕೃಷ್ಣಾರ್ಜುನರು ಧೃತರಾಷ್ಟ್ರ ಗಾಂಧಾರಿಯರನ್ನೂ, ಕುಂತೀದೇವಿಯನ್ನೂ, ವಿದುರ,

ಸಂಜಯ, ಯುಯುತ್ಸುಗಳನ್ನೂ, ಕೃಪಧೌಮ್ಯರನ್ನೂ ಕಂಡು, ಸಮುಚಿತ ರೀತಿಯಿಂದ ಸಂಭಾವಿಸಿ, ಅನಂತರ ಅರ್ಜುನ ಸದನವನ್ನು ಪೊಕ್ಕು ಅಂದಿನ ರಾತ್ರಿಯನ್ನು ಅಲ್ಲೇ ಕಳೆದರು. ಮರುದಿನ ಬೆಳಗಾಗಲು ಅವರು ಅವನೀಪತಿಯು ಮಂಡಿಸಿದ್ದ ರಾಜಾಸ್ಥಾನವನ್ನು ಪ್ರವೇಶಿಸಿ, ಉಚಿತಾಸನಗಳಲ್ಲಿ ವಿರಾಜಿಸಿದರು. ಆಗ ಅರ್ಜುನನು ಸಮಯವನ್ನರಿತು, ಮಹಾರಾಜನಿಗಿಂತೆಂದನು:

'ಅಣ್ಣಾ! ಕಮಲನಾಭನಿಲ್ಲಿಗೆ ಬಂದು ಬಹುಕಾಲವಾಯಿತು. ದ್ವಾರಕೆಗೆ ತೆರಳಬೇಕೆಂಬ ಅಭಿಲಾಷೆಯು ವಾಸುದೇವನನ್ನು ಪ್ರಯಾಣೋನ್ಮುಖನನ್ನಾಗಿ ಪ್ರೇರೇಪಿಸಿದೆ. ನಿನ್ನ ಅನುಮತಿಗಾಗಿ ಶ್ರೀಕೃಷ್ಣನು ಕಾದಿರುವನು. ಮತ್ತೆ ಬೇಗನೆ ಬರುವದಾಗಿ ಅಭಯವನ್ನೂ ಇತ್ತಿರುವನು.' ಆ ಮಾತಿಗೆ ಧರ್ಮಜನು, 'ಸರಿ: ದೇವನ ಚಿತ್ತಕ್ಕೆ ಬಂದಂತಾಗಲಿ! ಶ್ರೀಕೃಷ್ಣ! ಹೋಗಿ, ಬೇಗ ಬಾ! ಅಲ್ಲಿರುವ ನಮ್ಮ ಪ್ರಿಯಮಾತುಲನಿಗೆ ಮಾತುಲಾನಿಗೆ ಬಲಭದ್ರನಿಗೆ ನಮ್ಮ ಪರವಾಗಿ ಆಲಿಂಗಿಸಿ, ನಮಸ್ಕೃತಿಗಳನ್ನು ತಿಳಿಸು! ಅಲ್ಲಿರುವರೆಲ್ಲರ ಕುಶಲವನ್ನು ಕೇಳಿದೆವೆಂದು ಅವರವರಿಗೆ ತಕ್ಕಂತೆ ತಿಳಿಸಿ, ಸತ್ಕರಿಸು! ಅಲ್ಲಿರಬೇಕಾಗಿರುವಷ್ಟು ದಿನಗಳಿದ್ದು, ಮತ್ತೆ ಬಂದು, ಅಶ್ವಮೇಧ ಯಜ್ಞವನ್ನು ಮಾಡಲಿರುವ ನಮ್ಮ ನೇತನಾಗಿ, ತ್ರಾತನಾಗಿ, ನಮ್ಮ ಯಜ್ಞಫಲವನ್ನು ಸ್ವೀಕರಿಸಿ, ಪ್ರೀತನಾಗು!' ಎಂದನು.

ಶ್ರೀಕೃಷ್ಣನು ಕುಂತೀ ಧರ್ಮಜರಿಗೆ ವಂದಿಸಿ, ಭೀಮಸೇನನನ್ನಪ್ಪಿ, ಅರ್ಜುನಾದಿಗಳಿಂದ ವಂದನವನ್ನು ಸ್ವೀಕರಿಸಿ, ದ್ರೌಪದೀ ಪ್ರಮುಖ ರಾಜನಾರಿಯರನ್ನು ಸಮಾಶ್ವಸಿಸಿ, ಸುಭದ್ರಾ ದೇವಿಯನ್ನು ಪುರಸ್ಕರಿಸಿ, ದ್ವಾರಕೆಗೆ ಹೊರಟನು. ಸಾತ್ಯಕಿಯು ಹಿಂದೆ ಅಂಗರಕ್ಷಕನಾಗಿ ಬರುತ್ತಿರಲು ಮೆಲ್ಲನೆ ಸಾಗಿದ ರಮಾವಲ್ಲಭನು ಧರ್ಮರಾಜನು ಪ್ರೇಮಾತಿಶಯದಿಂದ ಕಳಿಸಿದ ಅಂಗರಕ್ಷಕ ಚತುರಂಗ ಸೇನಾಮಧ್ಯದಿ ತಾರಕಾಮಧ್ಯಗತನಾದ ತಾರಾನಾಥನಂತೆ ಕಂಗೊಳಿಸಿದನು.

ಪವನನು ಅನುಕೂಲನಾಗಿ ಬೀಸಿದನು. ಅಂಬರದಿ ನಿಂತು ಸ್ವರ್ಗನಾರಿಯರು ಇಂದ್ರಾನುಜನ ಶಿರದಿ ಸುಮವೃಷ್ಟಿಯನ್ನು ಸುರಿಸಿದರು. ಗಂಧರ್ವರ ಗಾನ ಸರಣಿಯಂತೆ ಅಪ್ಸರೋ ರಮಣಿಯರು ಕುಣಿದರು. ಇಂತು ಶುಭ ಶಕುನಗಳು ತೋರುತ್ತಿರಲು, ವಾರಿಜಾಕ್ಷನು ತಂಗಿಯನ್ನೂ ಕರೆದುಕೊಂಡು, ದ್ವಾರಕಾ ಮಾರ್ಗವನ್ನು ಪಿಡಿದು ಪಯಣಿಸಿದನು.

ಹಾದಿಯಲ್ಲಿದ್ದ ಉದಂಕಾಶ್ರಮವನ್ನು ಪೊಕ್ಕು, ಕಮಲಾಕ್ಷನು ಆ ಮುನಿವರನು ಪ್ರೀತಿಯಿಂದ ಕೊಟ್ಟ ಅತಿಥಿ ಸತ್ಕಾರಗಳನ್ನು ಸ್ವೀಕರಿಸಿ, ದಿವ್ಯಪೀಠದಿ ಸುಖಾಸೀನನಾದನು. ಉದಂಕನು ಚಿರಕಾಲೀನ ಸಮಾಧಿಯಿಂದ ಆಗಲೇ ಎಚ್ಚುತ್ತವನಾದುದರಿಂದ 'ಶ್ರೀಕೃಷ್ಣ! ನೀನೀಗ ಎಲ್ಲಿಂದ ಬಂದೆ? ಎಲ್ಲಿಗೆ ಹೊರಟಿರುವೆ? ಭಾರತರಾಜ ಪುತ್ರರಾದ ಕೌರವ ಪಂಡವರಿಗೆ ಕ್ಷೇಮಂಕರವಾಗುವಂತೆ ಸಂಧಿಯು ಸಾಧಿತವಾಯಿತೇ?' ಎಂದು ಕೇಳಿದನು.

ಶ್ರೀಕೃಷ್ಣನು 'ಮಹರ್ಷೆ! ಸಂಧಿಯಾಗಲೆಂದು ನಾನು ಮಾಡದ ಪ್ರಯತ್ನವಿಲ್ಲ, ಉಚಿತ

ರೀತಿಯಿಂದ ಹೇಳಿದೆನು. ದರ್ಪವನ್ನು ತೋರಿ, ಹೆದರಿಸಿದನು. ನ್ಯಾಯ ಪಥವನ್ನು ತಿಳಿಯಪಡಿಸಿದೆನು. ದೀನನಂತೆ ಯಾಚಿಸಿದೆನು. ಏನೆಂದರೂ ಸಂಧಿಗೆ ಒಡಂಬಡದೆ, ಕುರುಪತಿಯು ಯುದ್ಧವೇ ಆಗಲೆಂದು. ಭೀಷ್ಮ ದ್ರೋಣರು, ಅನೇಕ ಮುನಿಗಳು ಬೇಡವೆಂದು ಬೋಧಿಸಿದರೂ ಅತಿ ಲೋಭಿಯಾದ ದುರ್ಯೋಧನನು ಪಾಂಡವರಿಂದ ಭಂಡನವನ್ನು ಮಾಡಿ, ಸಬಂಧು ಸೋದರ ಸೇನಾಪರಿವಾರನಾಗಿ ಮರಣವನ್ನಪ್ಪಿದನು. ಪಾಂಡವರೈವರನ್ನು ಬಿಟ್ಟು ಇಲ್ಲಿಯೂ ಮತ್ತಾರೂ ಉಳಿಯಲಿಲ್ಲ. ಕಾಲನಿಯತಿಯನ್ನು ದಾಟಲಾಗುವದೇ ?' ಎಂದನು.

ಉದಂಕನು, ಶ್ರೀಶನ ವಚನವನ್ನಾಲಿಸಿ, ಶಿಷ್ಯನೆಂಬ ಕಾರಣದಿಂದ ದುರ್ಯೋಧನ ನಾಶವನ್ನು ಸಹಿಸದೆ ರೋಷಕಷಾಯಿತಲೋಚನನಾಗಿ, ಹಿಂದು ಮುಂದಾಲೋಚಿಸದೆ ಶ್ರೀಕೃಷ್ಣನಿಗೆ ಶಾಪವನ್ನು ಕೊಡಲು ಸಿದ್ಧನಾಗಿ, 'ಕೃಷ್ಣ! ಶಕ್ತನಾಗಿದ್ದು ಯುದ್ಧವನ್ನು ನಿವಾರಿಸದೆ, ಸಕಲ ಕುರುಕುಲ ನಾಶವನ್ನು ಸಾಧಿಸಿದೆ ! ಇದು ನಿನಗೆ ಸರಿಯಲ್ಲ ! ನಿನಗೆ ನಾನು ಶಾಪವೀಯುವೆನು. ಸ್ವೀಕರಿಸು !' ಎಂದನು.

ಶ್ರೀಕೃಷ್ಣನು ತನ್ನ ಭಕ್ತನಾದ ಉದಂಕನು ವಿಷ್ಣು ದ್ರೋಹವನ್ನೆಸಗಿ ಅಂಧಂತಮಸ್ಸನ್ನು ಹೊಂದಬಾರದು ಎಂದು ದಯಾರ್ದ್ರಚಿತ್ತನಾಗಿ, 'ಮುನೇ! ಸಾವಧಾನನಾಗು! ಮುನಿವರನಿಗೆ ಅನುಚಿತ ಕೋಪವು ಸಲ್ಲದು ! ಕೇಳು ಎನ್ನ ಮಾತನ್ನು. ನಿನ್ನ ಶಾಪವು ನನ್ನಲ್ಲಿ ವ್ಯರ್ಥವೇ ಆಗುವುದು ತಿಳಿ ! ನಿನ್ನ ತಪಸ್ಸು ಸರ್ವನಾಶವಾದೀತು. ತ್ರಿಗುಣಾತ್ಮಕವಾದ ಜಗದಲ್ಲಿ ಗುಣಗಳ ಉನ್ನಾಹದಂತೆ ತ್ರಿವಿಧಜೀವರು. ಅಂದರೆ ಸಾತ್ವಿಕರಾಜ ಸತಾಮಸರು ವೃದ್ಧಿಯನ್ನು ಹೊಂದುವರು. ಬ್ರಹ್ಮರುದ್ರೇಂದ್ರಾದಿ ಜೀವ ಜಾತವೆಲ್ಲವೂ ನನ್ನ ವಶವಾಗಿದೆ. ಎಲ್ಲ ಜಡಜೀವರಿಗೂ ಭಿನ್ನನಾದರೂ ನಾನೂ ಸರ್ವಾಂತರ್ಯಾಮಿಯಾಗಿ ಎಲ್ಲರಲ್ಲಿದ್ದು ಅವರವರ ಕರ್ಮಫಲವನ್ನವರಿಗೆ ಉಣಿಸುತ್ತಿರುವೆನು. ವೇದಗಳು ನನ್ನನ್ನೇ ಪೊಗಳುತ್ತಿವೆ. ವರ್ಣಾಶ್ರಮ ಧರ್ಮಕರ್ಮಗಳಿಗೆ ಫಲದಾತನಾದುದರಿಂದ ನಾನು ಸ್ವಾಮಿಯೆನಿಸಿರುವೆನು. ಸ್ವರ್ಗ ಮೋಕ್ಷಗಳನ್ನು ಸಾತ್ವಿಕರಿಗೆ, ಅಂಧತಮಸ್ಸನ್ನು ತಾಮಸರಿಗೆ, ಮಧ್ಯಲೋಕಗಳನ್ನು ರಾಜಸರಿಗೆ ಕೊಡುವ ನಾನು ನಿಷ್ಪಕ್ಷಪಾತಿ ಎಂದು ತಿಳಿಸಿ ! ನನ್ನಿಂದ ತಿಳಿಸಲ್ಪಟ್ಟ ಧರ್ಮವನ್ನು ದುರ್ಯೋಧನನಂತಹ ದುಷ್ಟರಿಂದ ರಕ್ಷಿಸಲು, ನಾನು ಯುಗತ್ರಯದಲ್ಲಿ ನನಗೆ ಬೇಕಾದಂತೆ, ಬೇಕಾದೆಡೆ ಅವತರಿಸುವೆನು. ನಾನೇ ಬ್ರಹ್ಮನಲ್ಲಿದ್ದು ಸೃಜಿಸುವೆನು. ನಾನೇ ರುದ್ರನಲ್ಲಿದ್ದು ಸಂಹರಿಸುವೆನು. ಬ್ರಹ್ಮರುದ್ರ ಮುಂತಾದ ಜೀವರಾರೂ ಸ್ವತಂತ್ರರಲ್ಲ. ಹೀಗಿದ್ದೂ ಸಂಧಿಗಾಗಿ ಯತ್ನಿಸಿದೆನೆಂದರೆ ನಿಮ್ಮಂತಹವರ ನಿಂದೆ ಬರಬಾರದೆಂದು! ಆದರೂ ಸುಜನರ ಮಾತಿಗೆ ಕಿವಿಗೊಡದೆ, ಪಾಂಡವರ ಬಾಣಗಳಿಗೆ ಸೇನಾನಿಗಳನ್ನೂ, ಭೀಮಗದೆಗೆ ತನ್ನ ತೊಡೆಗಳನ್ನೂ ಕೊಟ್ಟು, ಸತ್ತ ಧುರ್ಯೋಧನನಿಗೆ ಶೋಕಿಸಿ, ನನ್ನಲ್ಲಿ ಸಿಟ್ಟಾಗುವುದು ನಿನ್ನಂತಹ ಭಕ್ತರಿಗೆ ಸರಿ ಅಲ್ಲ ; ವಿಚಾರಿಸಿ ತಿಳಿ !' ಎಂದನು.

ಉದಂಕನು 'ದೇವದೇವ! ದುಷ್ಟಪಕ್ಷಪಾತದಿಂದ ದುಷ್ಟಮತಿಯಾದೆನ್ನನ್ನು ಕ್ಷಮಿಸು ! ನೀನು ಸರ್ವತ್ರ ವ್ಯಾಪಿಸಿರುವೆ ಎಂದು ನೀನೇ ತಿಸಿಸಿರುವೆ! ಅಂತಹ ನಿನ್ನ ದಿವ್ಯ ರೂಪವನ್ನು ನನಗೆ ತೋರಿಸು ! ನಿನ್ನ ಭಕ್ತನಾದೆನ್ನನ್ನು ಉದ್ಧರಿಸು !' ಎಂದು ಬೇಡಿದನು. ಶ್ರೀಕೃಷ್ಣನು ದಯಾನ್ವಿತನಾಗಿ ಉದಂಕನಿಗೆ – ಅವನ ಯೋಗ್ಯತೆಗೆ ತಕ್ಕ ವಿಶ್ವರೂಪವನ್ನು ತೋರಿಸಿದನು.

ಶ್ರೀಶನಿತ್ತ ದಿವ್ಯ ನೇತ್ರದಿಂದ ಶ್ರೀಶನ ವಿಶ್ವರೂಪವನ್ನು ಕಂಡು, ಬೆರಗುಗೊಂಡು, ಉದಂಕನು ಎದ್ದು ಕೈಜೋಡಿಸಿ, 'ನಮಃ ಪುರುಷೋತ್ತಮಾಯತೇ!' ಎಂದು ನಮಿಸಿದನು. ಪುಂಡರೀಕಾಕ್ಷ ಭೂಮಿತಲವೆಲ್ಲವೂ ನಿನ್ನ ಪಾದ ತಲದಲ್ಲಿ ಆಶ್ರಯಿಸಿ ನಿಂತಿದೆ! ನಿನ್ನ ಶಿರದಿ ಅಂಬರವು ಆಧರಿಸಿದೆ. ನಿನ್ನ ಕುಕ್ಷಿಯಲ್ಲಿ ಅಂತರಿಕ್ಷವಿದೆ. ಏನು ಅದ್ಭುತವೀರೂಪ! ಸಾವಿರಾರು ತಲೆಗಳು! ಸಾವಿರಾರು ಕೈಗಳು! ಸಾವಿರಾರು ಪಾದಗಳು! ಅಬ್ಬ! ಅನಂತವಾಗಿದೆ ಈ ನಿನ್ನ ದಿವ್ಯರೂಪ! ನಿನ್ನ ಈ ದಿವ್ಯರೂಪವನ್ನು ಕಂಡು ಧನ್ಯನಾದೆನು! ಪ್ರಭೋ! ವಾಸುದೇವ! ನಮೋನಮಃ' ಎಂದು ನುತಿಸಿ, ಮೊದಲಿನಂತೆ ನೋಡಲಿಚ್ಛಿಸಿದ ಉದಂಕನಿಗೆ ವಿಶ್ವಮೂರ್ತಿಯು, ಶ್ರೀಕೃಷ್ಣಮೂರ್ತಿಯೇ ಆದನು. 'ವರವನ್ನು ಬೆಂಡೆಂ' ದ ಹರಿಗೆ ಮುನಿವರನು 'ಶ್ರೀಶ! ನಿನ್ನ ದಿವ್ಯ ದರ್ಶನವೇ ವರವಿನ್ನು ವರಗಳೇಕೆ?' ಎಂದನು. 'ಹಾಗಲ್ಲ! ಬೇಡೆಂ'ದ ಸ್ವಾಮಿಯನ್ನು ಉದಂಕನು 'ಶ್ರೀಕೃಷ್ಣ! ನನಗೆ ಜರಾಮರಣ ವರ್ಜಕವಾದ ಅಮೃತವನ್ನು ಕೊಡಿಸು!' ಎಂದು ಬೇಡಿದನು. ಶ್ರೀಕೃಷ್ಣನು 'ಸರೆ! ನಾನು ನಿನಗೆ ಅಮೃತವನ್ನು ಕಳಿಸುವೆನು. ಸ್ವೀಕರಿಸದೆ ಬಿಟ್ಟರೆ ನನ್ನ ತಪ್ಪಿಲ್ಲ! ತಿಳಿ!' ಎಂದು ದ್ವಾರಕೆಯನ್ನು ಸೇರಿದನು.

ಶ್ರೀ ವಾಸುದೇವನು ಉದಂಕನಿಗೆ ಕೊಟ್ಟ ಮಾತಿನಂತೆ, ಇಂದ್ರನ ದ್ವಾರಾ ಅಮೃತ್ವನ್ನು ಕಳಿಸಿದನು. ಅಮೃತವು ದೇವತೆಗಳಿಗೆ ಅಸಾಧಾರಾಣಾನ್ನವಾದುದರಿಂದ ದೇವೇತರರು ಅದನ್ನು ಕುಡಿಯುವುದೂ, ತಮ್ಮಂತೆ ಜರಾಮರಣ ದೂರರಾಗುವುದೂ, ದೇವತೆಗಳಿಗೆ ಇಷ್ಟವಲ್ಲ. ಆದುದರಿಂದ ದೇವೇಂದ್ರನು 'ಕೃಷ್ಣ! ನಿನ್ನ ವರವನ್ನು ಸುಳ್ಳು ಮಾಡೆನು. ಮನುಜಮಾತ್ರನಾದ ಮುನಿಗೆ ದೇವಸುಧೆಯನ್ನು ಕೊಡಲಾರೆನು. ಎರಡೂ ನಿಯಮಗಳನ್ನು ಪಾಲಿಸಬೇಕಾಗಿ, ನಾನು ಒಂದು ಉಪಧಿಯನ್ನಿಟ್ಟು ಅಮೃತವನ್ನು ಕೊಡುವೆನು. ಸ್ವೀಕರಿಸದಿದ್ದರೆ ಮುನಿವರನದೇ ತಪ್ಪು; ಇಷ್ಟು ಮಾತ್ರ ವಂಚಿಸಲು ನನಗೆ ಅಪ್ಪಣೆ ಕೊಡು' ಎಂದು ಬೇಡಿದನು. ದೇವಾಹಾರವನ್ನು ಮನುಜರಿಗೆ ಕೊಡಲಾಗದೆಂಬ ನಿಯಮವು ತನಗೆ ಸಮ್ಮತವೇ ಆಗಿರುವುದರಿಂದ ಅಮೃತವೆಂದರೆ ಜಲವನ್ನು ಕೊಡಲೆಣಿಸಿ ಶ್ರೀಕೃಷ್ಣನು, ದೇವೇಂದ್ರನ ಪ್ರಾರ್ಥನೆಯನ್ನು ಮನ್ನಿಸಿದನು.

ದೇವೇಂದ್ರನು ಆಗ ತಾನು ಚಂಡಾಲ ವೇಷವನ್ನು ಧರಿಸಿ, ಉದಂಕಮುನಿಯ ಆಶ್ರಮವನ್ನು ಸೇರಿದನು. ಅವನ ಮೂತ್ರ ದ್ವಾರದಿಂದ ಉದಕಾಂತರವು ಹರಿಯುತ್ತಿತ್ತು. ಅಮೃತಕಲಶವನ್ನು ಅಲ್ಲೇ ಸಮೀಪದಲ್ಲಿ ಕಟ್ಟಿಕೊಂಡು, ಇಂದ್ರಿಯನಿಗ್ರಹ ಸಮರ್ಥನಾದ ದೇವೇಂದ್ರನು, ಆ ನೀರನ್ನು ನೋಡಿಸಿ 'ಮುನಿಯೇ! ಶ್ರೀಕೃಷ್ಣನು ಅಮೃತವನ್ನು ನಿನಗಾಗಿ ಕಳಿಸಿರುವನು, ಪಾನಮಾಡು!' ಎಂದು ಹೇಳಿದನು. ಉದಂಕನು ಅದನ್ನು ಮೂತ್ರವೆಂದು ತಿಳಿದು, ನಿರಾಕರಿಸಿದನು. ಮೂತ್ರ ಸ್ಪರ್ಶದಿಂದ ಅಮೃತವು ಅಪವಿತ್ರವಾಗದಂತೆ, ಮೂತ್ರ ನಿಗ್ರಹವನ್ನು ಮಾಡಿ, ಉದಕಾಂತರವನ್ನು ಹರಿಸಿ 'ಅಮೃತವಿದು! ಕುಡಿ!' ಎಂದು ಒತ್ತಿ ಹೇಳಿದರೂ, ಉದಂಕನು ಅಸಹ್ಯಪಟ್ಟು 'ನನಗೆ ಬೇಡ! ನಡೆಯಿಲ್ಲಿಂದ!' ಎಂದು ಆ ಚಂಡಾಲನನ್ನು ಜಬರಿಸಿ ಕಳಿಸಿದನು. ಪವಿತ್ರವಾದ ಅಮೃತವನ್ನು ಅಜ್ಞಾನದಿಂದ ತುಚ್ಛಮಾತ್ರ

ವೆಂದರಿತು ತಿರಸ್ಕರಿಸಿ ಮತ್ತು ಎಷ್ಟು ಹೇಳಿದರೂ ಶ್ರೀಕೃಷ್ಣನು ಕಳಿಸಿದ ಅಮೃತವೆಂದು ತಿಳಿಯಲಾರದೆ ತಿರಸ್ಕರಿಸಿ ಉದಂಕನು ವಂಚಿತನಾದನು.

ಇತ್ತ ಶ್ರೀಕೃಷ್ಣನು ದ್ವಾರಕೆಯನ್ನು ಸೇರಿ, ಅಲ್ಲಿ ತನ್ನ ದರ್ಶನದಿಂದ ಆನಂದಿತರಾದ ಯಾದವರನ್ನು ಪ್ರೀತಿವಾತ್ಸಲ್ಯ ಸಂಭಾವನಾ ಬಹುಮಾನ ವಂದನಾದಿಗಳಿಂದ ಅನುಜತನುಜ ಮಂತ್ರಿ ಭೃತ್ಯ ಪಿತೃಮಾತೃಜನರನ್ನು ಸತ್ಕರಿಸಿದನು. ವಸುದೇವನು ಕೇಳಲು, ಭಾರತರಣವೃತ್ತಾಂತವನ್ನು ಸಾಂತನಾಗಿ ನಿರೂಪಿಸಿದನು. ಗುರುಸುತನ ಬಾಲವಧೆಯನ್ನೂ ಅಭಿಮನ್ಯುವಧೆಯನ್ನೂ ಕೇಳಿ ವಸುದೇವಾದಿ ಯಾದವರು ಬಲುದುಃಖಿಸಿದರು. ಶ್ರೀಕೃಷ್ಣನು ಅವರನ್ನು ಸಮಾಧಾನಪಡಿಸಿ, ಪಾಂಡವರು ಅವರಿಗೆಂದು ಕಳಿಸಿದ ಉಡುಗೊರೆಗಳನ್ನು ಸಮರ್ಪಿಸಿದನು.

ಅಲ್ಲಿ ಹಸ್ತಿನಾವತಿಯಲ್ಲಿ ಪಾಂಡವರು ಉತ್ತರಾದೇವಿಯ ಪತಿವಿಯೋಗ ದುಃಖವನ್ನು ನೋಡಿ, ತಾವು ಅಭಿಮನ್ಯು ಗುಣಗಣಗಳನ್ನು ನೆನೆದು ಶೋಕಪರೀತ ಸ್ವಾಂತರಾಗಿದ್ದರು. ಅವರ ದುಃಖವನ್ನು ಕಳೆಯಲೋಸುಗ ಕಾರುಣ್ಯಮೂರ್ತಿಯಾದ ಬಾದರಾಯಣದೇವನು ಅಲ್ಲಿಗೆ ಬಂದನು. ಅಶ್ವಮೇಧವನ್ನು ಮಾಡುವಂತೆ ಪ್ರೇರಿಸಿ, ತಾನಾಗಿ ಬಂದು ಹಿಮಾಲಯದ ಧನಸಂಚಯ ಕನಕಾದಿಗಳನ್ನು ಅವರಿಗೆ ಕೊಡುವಂತೆ ಮಾತಿತ್ತು, ಶ್ರೀ ವೇದವ್ಯಾಸನು ಅಂತರ್ಹಿತನಾದನು.

ಧರ್ಮರಾಜನು 'ಶ್ರೀ ವ್ಯಾಸದೇವನ ದಯದಿಂದ ಧನರಾಶಿಯು ಲಭ್ಯವಾಗಿದೆ. ಅದನ್ನು ತರಲು ಹಿಮಾಚಲ ಕಂದರವನ್ನು ಕುರಿತು ಪಯಣಿಸುವುದು ಅವಶ್ಯಕವಲ್ಲವೇ' ಎನ್ನಲು ಭೀಮಸೇನನು 'ರುದ್ರಾಂತರ್ಗತನಾದ ಶ್ರೀ ಪರಶುರಾಮನದಾಗಿದೆ ಯಜ್ಞಶಿಷ್ಟವಾದ ಧನಕನಕಾದಿಗಳು. ಪರಶುರಾಮಾಭಿನ್ನನಾದ ವೇದವ್ಯಾಸನು ಕೊಡುವಾಗ, ಆ ಧನವನ್ನು ಸ್ವೀಕರಿಸುವ ನಮಗೆ ವಿಪ್ರವಸ್ತುಹರಣ ದೋಷದ ಪ್ರಸಕ್ತಿಯೇ ಇಲ್ಲ. ನಡೆಯಿರಿ!' ಎಂದನು. ಅರ್ಜುನಯಮಳರು ಆ ಮಾತನ್ನು ಅನುಮೋದಿಸಿ, 'ಚತುರಂಗಬಲವು ಹಿಂಬಾಲಿಸಲು ಹೋಗಿ, ಧನರಾಶಿಗಳನ್ನು ತರುವುದು ಸರಿ' ಎಂದರು. ಧರ್ಮರಾಜನು ಗಾಂಧಾರೀ ಧೃತರಾಷ್ಟ್ರರಿಗೂ, ಕುಂತಿಗೂ ವಂದಿಸಿ, ಯಜ್ಞಕ್ಕಾಗಿ ಅವರಿಂದ ಅನುಜ್ಞೆ ಪಡೆದನು. ಪುಣ್ಯಾಹವಾಚನ, ಸುರಪಿತೃಪೂಜನ, ವಿಪ್ರದಾನಗಳನ್ನು ನಡೆಸಿ, ಯುಯುತ್ಸುವನನ್ನು ನಗರ ಸಂರಕ್ಷೆಗೆಂದು ಕರಿಪುರಿಯಲ್ಲಿಟ್ಟು ತಾನು ಭೀಮ ಧನಂಜಯ ಯಮಳರಿಂದ ಕೂಡಿ, ಪಯಣಿಸಿದನು. ಭೂಸುರರ ಆಶೀರ್ನಿನಾದಗಳೊಂದಿಗೆ, ಮಂಗಳ ತೂರ್ಯ ನಿನಾದಗಳು ರೋದಸೀಕುಹರವನ್ನು ವ್ಯಾಪಿಸಿ, ಹರ್ಷಪ್ರದವಾಗಿರಲು ಧರ್ಮರಾಜನು ಷೋಡಶಶ್ವೇತತುರಗರಥದಲ್ಲಿ ಮುಕ್ತಾಜಾಲ ಸಮಲಂಕೃತ ಶ್ವೇತಚ್ಛತ್ರದಡಿಯಲ್ಲಿ ಕೂತು, ಸೋದರರು ನಾಲ್ವರೂ ಹಿಂಬಾಲಿಸುತ್ತಿರಲು ಪಯಣಿಸಿ, ಗಿರಿ, ಸರಿತ್ಕಾನನ ದೇಶಗಳನ್ನು ದಾಟಿ, ಹಿಮವನ್ನಗದ ಉತ್ತರ ಪ್ರಾಂತವನ್ನು ಸೇರಿದನು. ಧೌಮ್ಯಾದಿ ಪುರೋಹಿತರೂ ಬಂದರು. ಅಲ್ಲಿ ಸಮತಲದಲ್ಲಿ ಅವರೆಲ್ಲರೂ ಬಿಡಾರವನ್ನು ಹೂಡಿದರು. ಶ್ರೀ ವೇದವ್ಯಾಸದೇವನ ಆಗಮನವನ್ನು ನಿರೀಕ್ಷಿಸಿ ಧರ್ಮಜಾದಿಗಳು ಆ ದೇವನನ್ನು ಸ್ಮರಿಸುತ್ತಿದ್ದರು.

ಬಾಲ ಸೂರ್ಯ ಸಹಸ್ರ ಪ್ರಭಾ ಸಮಾನನು, ಅಸಮಾನನು, ನೀಲನೀರದ ದಿವ್ಯದೇಹನು, ವೀತಮೋಹನು, ತರ್ಕ್ಕಾಭಯ ಕರಾಚಿಂತನು, ಕಲ್ಯಾಣಗುಣ ಸಮಂಚಿತನು, ನಿರ್ವಾಣದಾನ ಶೌಂಡನು, ನಿರ್ಮಿತ ಬ್ರಹ್ಮಾಂಡನು, ಜಗಜ್ಜನ್ಮಸ್ಥಿತಿಲಯಾದಿ ಕಾರಣನು, ಬಾದರಾಯಣನು, ವಿಧಿಶರ್ವಪೂರ್ವ ಗೀರ್ವಾಣನುತಿ ಗಾನಲೋಲನು, ಕೃಪಾಶೀಲನು ಆದ ಶ್ರೀ ವೇದವ್ಯಾಸ ಮುನಿಚಂದ್ರನು ಅವರಲ್ಲಿಗೆ ಬಂದನು. ಧರ್ಮರಾಜಾದಿಗಳು ಆ ಮುನಿ ಸಾರ್ವಭೌಮನಿಗೆ ನಮಿಸಿ, ಕರೆತಂದು ಪೂಜಿಸಿ, ಕರ್ತವ್ಯವೇನೆಂದು ಪ್ರಾರ್ಥಿಸಿದರು.

ಶ್ರೀಶನನುಜ್ಞೆಯಂತೆ, ಅವರು ಒಂದು ದಿನ ಉಪವಾಸವಿದ್ದು, ಮರುದಿನ ಮಹಾದೇವನನ್ನೂ ತದಂತರ್ಗತನಾದ ಪರಶುರಾಮದೇವವನ್ನೂ ಶ್ರದ್ಧೆಯಿಂದ ಪೂಜಿಸಿದರು. ಆ ಮರುದಿನದಲ್ಲಿ ಸರ್ವಕ್ರಿಯಾಕಲಾಪ ಧುರ್ಯನಾದ ಪಾರಾಶರ್ಯನು ಪಾಂಡವರಿಂದ ಮತ್ತೆ ಶ್ರೀ ಮಹಾದೇವ, ಭೂತಗಣ, ಪ್ರಮಥರಿಗೂ, ಕುಬೇರ ಯಕ್ಷರಕ್ಷೋ ಭೂತಗಳಿಗೂ ಪೂಜೆಯನ್ನು ಮಾಡಿಸಿ, ಬಲಿಗಳನ್ನು ಕೊಡಿಸಿ, ನಿಧಿಗಳಿರುವ ಸ್ಥಲವನ್ನು ಕುರಿತು ಅವರಿಂದ ಕೂಡಿ ತೆರಳಿದನು. ಅರುಣಗಂಧ ಕುಸುಮಗಳಿಂದಲು, ಮಾಂಸಾಪೂಪಗಳಿಂದಲು ನಿಧಿಯನ್ನು ಪೂಜಿಸಿ, ಬಲಾಢ್ಯರಾದ ಪರಿಜನರು ವೇದದೇವನ ಸೂಚನೆಯಂತೆ, ತೋಡಿದರು. ನಿಧಿಯು ಹೊರಬಿದ್ದಾಗ ಕೋಟಿ ಸೂರ್ಯರು ಉದಯಿಸಿದಂತಾಯತು. ಶ್ರೀ ವ್ಯಾಸದೇವನು ಮತ್ತೆ ಪೂಜಾದಿಗಳನ್ನು ಅವರಿಂದ ಮಾಡಿಸಿ, ತಾನು ಸುಪ್ರೀತನಾಗಿ, ಶತಯೋಜನ ಪರಿಮಿತವಾದ ಆ ನಿಧಿಯನ್ನು ತನ್ನ ಕೈಗಳಿಂದ ಧರ್ಮರಾಜನಿಗರ್ಪಿಸಿದನು. ಧರ್ಮಜನು ಸಂತುಷ್ಟಿತನಾಗಿ, ಶ್ರೀಶನಿಗೆ ವಂದಿಸಿ, ಆತನ ಅಪ್ಪಣೆಯನ್ನು ಪಡೆದು ನಿಧಿಯನ್ನು ತೋಡಿಸಲು ತೊಡಗಿದನು. ಆಗ ಶ್ರೀ ವೇದವ್ಯಾಸದೇವನು ಅಂತರ್ಧಿತನಾದನು.

ಶಕಟಗಳಲ್ಲಿ ಖರ, ಮಹಾಂಗ, ಮಾತಂಗ, ತುರಂಗಗಳ ಮೇಲೆಯು ಎತ್ತಿರಿಸಿದ ಮಹಾ ಸುವರ್ಣನಿಧಿಯನ್ನು ಧರ್ಮರಾಜನು ಹಸ್ತಿಪುರಿಗೆ ಸಾಗಿಸಿದನು. ಭಾರವಹನ ದಕ್ಷರಾದ ಪರಿಜನರು ಲಕ್ಷಾರುಜನರು ಪ್ರೀತಿಯಿಂದ ಪೀಠಗಳನ್ನೂ, ಶಯ್ಯಾತಲ್ಪ ಕಲಶಗಳನ್ನು, ಸ್ರುಕ್ ಸ್ರುವಗಳನ್ನು, ದಂಡಕಮಂಡಲು ಚಮಸ ದಾತ್ರವೇತ್ರಗಳನ್ನು, ಆಜ್ಯಪೂರ್ಣ ಪಾತ್ರೆಗಳನ್ನು, ಹೊತ್ತು ತಂದರು. ಅವೆಲ್ಲವೂ ಸುವರ್ಣಮಯವಾಗಿದ್ದವು. ಬಂಡೆಗಳಂತಿದ್ದ ಕಾಂಚನವನ್ನು ಹೆಕ್ಕಿ ತೆಗೆದು, ಮೂಟೆಕಟ್ಟಿ, ಕೆಲಭಟರು ಹೊರಲಾರದೆ ಹೊತ್ತು ನಡೆದರು. ಇಂತು ಧರ್ಮರಾಜನು ಅಸಂಖ್ಯ ಧನಕನಕರಾಶಿಗಳಿಂದ ಕೂಡಿ, ಕರಿನಗರಕ್ಕೆ ಬರುತ್ತಿದ್ದನು.

ಶ್ರೀಕೃಷ್ಣನು ಅಶ್ವಮೇಧ ಯಾಗಕ್ಕೆಂದು ನಡೆದಿರುವ ಮಹಾಪ್ರಯತ್ನವನ್ನೂ, ಶ್ರೀವ್ಯಾಸದೇವನ ಪರಮ ದಯಾಪೂರ್ವಕ ಸಹಾಯವನ್ನೂ, ಧನರಾಶಿಪ್ರಾಪ್ತಿಯನ್ನೂ ತನ್ನವರಿಗೆ ತಿಳಿಸಿ, ತಾನು ಧರ್ಮರಾಜನು ಕಳಿಸಿದ ಆದರದ ಸಮಾಹ್ವಾನವನ್ನು ಮನ್ನಿಸಿ, ದ್ವಾರಕೆಯಿಂದ ಹಸ್ತಿಪುರಕ್ಕೆಂದು ತೆರಳಿದನು. ಸುಭದ್ರೆಯೂ ಅನುಸರಿಸಿದಳು. ದೇವಕೀ ವಸುದೇವರ ಅನುಜ್ಞೆಪಡೆದು ಪಯಣಿಸುವ ಮುರಾರಿಯನ್ನನುಗಮಿಸಿ ಬಲಭದ್ರ ಸಾತ್ಯಕಿ ಕೃತವರ್ಮ ಪ್ರದ್ಯುಮ್ನ ಚಾರದೇಷ್ಣ ಸಾಂಬಗದಾದಿ ಯಾದವರು ನಡೆದರು.

ಬರುತ್ತಾ ಹಾದಿಯಲ್ಲಿ ಶ್ರೀಕೃಷ್ಣನು ಮತ್ತೆ ಉದಂಕನನ್ನು ಕಂಡು, ಆತನ ಪೂಜೆಯನ್ನು

ಸ್ವೀಕರಿಸಿದನು. ಅಮೃತವನ್ನು ಕಳಿಸಿದರೂ ಸ್ವೀಕರಿಸದೆ, ಇಂದ್ರವಂಚಿತನಾದ ಮುನಿಗೆ ಅಮೃತವನ್ನು ಕೊಟ್ಟನು. ಮರ್ತ್ಯನಾದ ಮುನಿವರನಿಗೆ ನೀರೇ ಅಮೃತವಲ್ಲವೇ? 'ಉದಂಕ! ನಿನಗೆ ಬೇಕಾದಾಗ, ಮರುಭೂಮಿಯಾದರೂ ಚಿಂತೆಯಿಲ್ಲ, ನಿನ್ನ ಆಶ್ರಮದಲ್ಲಿ ಬೇಕಾದಷ್ಟು ಮಳೆಯಾಗಲಿ!' ಎಂದು ವರವನ್ನಿತ್ತು, ಮುಂದೆ ನಿಜವಾದ ಅಮೃತವನ್ನೂ ಸ್ವರ್ಗದಲ್ಲಿ ಕೊಡಿಸುವಂತೆ, ಅಭಯವನ್ನೂ ಕೊಟ್ಟು, ಸತ್ಯಸಂಕಲ್ಪನಾದ ಶ್ರೀಕೃಷ್ಣನು ಉದಂಕನನ್ನು ಸಂತೋಷಪಡಿಸಿ, ಅಲ್ಲಿಂದ ತೆರಳಿ ಹಸ್ತಿನಾವತಿಯನ್ನು ಸಮೀಪಿಸಿದನು.

ಜನಮೇಜಯ; ಉದಂಕನು ಉಪೇಂದ್ರನನ್ನು ಕೂಡ ಶಪಿಸುವಷ್ಟು ತಪಶ್ಶಕ್ತಿ ಪಡೆದಿದ್ದನು. ಶಾಪಸಂಕಲ್ಪಮಾತ್ರದಿಂದಲೇ, ಆತನ ಅಧಿಕ ಪುಣ್ಯವು ನಷ್ಟವಾಯಿತು. ಉದಂಕನ ಗುರುಭಕ್ತಿಯು ಅಂತಹ ಪ್ರತಿಭಾಪ್ರಭಾವ ಸಮನ್ವಿತವಾದ್ದೆಂದು ತಿಳಿ! ಗೌತಮಶಿಷ್ಯನಾದ ಉದಂಕನು ಭಕ್ತಿಯಿಂದ ಗುರುಸೇವೆಯನ್ನು ಬಹುಕಾಲ ಮಾಡುತ್ತಿದ್ದನು. ಒಂದು ದಿನ ಬಲುಭಾರವಾದ ಕಾಷ್ಠರಾಶಿಯನ್ನು ಹೊತ್ತುತಂದು, ಉದಂಕನು ಕೆಳಗೆ ಬಗೆದಾಗ, ಅದರಲ್ಲಿ ಸಿಕ್ಕಿಬಿದ್ದ ಒಂದು ಜಟೆಯು ಅವನಿಗೆ ಗೋಚರಿಸಿತು. ಅದು ಜರಾಧವಳವಾಗಿರುವುದನ್ನು ಕಂಡು, ಉದಂಕನು ತನ್ನ ವಯಃಪಾಕವನ್ನರಿತು ಅಳತೊಡಗಿದನು.

ಗೌತಮನ ಆಜ್ಞೆಯಂತೆ ತತ್ಪುತ್ರಿಯು ಉದಂಕನ ಕಣ್ಣೀರು ಕೆಳಗೇ ಬೀಳದಂತೆ ಕೈಯಲ್ಲಿ ಹಿಡಿದಳು. 'ಏಕೆ ರೋದಿಸುವೆ?' ಎಂದ ಗುರುವಿಗೆ ಉದಂಕನು 'ಮಹಾನುಭಾವ! ಶಿಷ್ಯರೆಲ್ಲರಲ್ಲಿ ಕರುಣಾವಾರಾಶಿಯ ಶೀಕರವಾದರೂ ನನ್ನಲ್ಲಿಲ್ಲವಲ್ಲ! ನಾನು ಮುದುಕನಾದರೂ ವಿದ್ಯಾವಂತನಾಗಲಿಲ್ಲ!' ಎಂದನು. ಗೌತಮನ ಕರುಣೆಯು ಉದಂಕನಿಗೆ ಯೌವನವನ್ನೂ, ವಿದ್ಯೆಯನ್ನೂ, ಗೌತಮ ಪುತ್ರಿಯನ್ನೂ ತಂದಿತ್ತಿತು. ಗುರುಪುತ್ರೀ ಸ್ವೀಕಾರಕ್ಕೆ ಹೆದರಿದ ಉದಂಕನ ಶಂಕೆಯನ್ನು ಗೌತಮನು ಅವಳಿಗೆ ಬೇರೆ ತನುವಿತ್ತು ಪರಿಹರಿಸಿದನು. ಇಂತು ಉದಂಕನು ಲಬ್ಧವಿದ್ಯನೂ ಆಗಿ, ಗುರುದಕ್ಷಿಣೆಯನ್ನು ಕೊಡಬೇಕೆಂದು ಚಿಂತಿಸಿ, ಗೌತಮನನ್ನು 'ಏನು ಕೊಡಲಿ? ಎಂತು ಗುರುನಿಷ್ಕೃತಿ?' ಎಂದು ಕೇಳಿದನು. 'ನಿನ್ನ ಸೇವೆಯೇ ಸಾಕು' ಎಂದ ಗೌತಮನ ಮಾತಿಗೊಪ್ಪದೆ, ಬಲಾತ್ಕರಿಸಿದ ಉದಂಕನನ್ನು ನೋಡಿ, ಅಹಲ್ಯೆಯು 'ಹಾಗಾದರೆ ಮಿತ್ರ ಸಹರಾಜನ ಪತ್ನಿಯ ಕುಂಡಲಗಳನ್ನು ಬೇಡಿ, ನನಗೆ ತಂದು ಕೊಡು!' ಎಂದಳು.

ಉದಂಕನು ಮಿತ್ರಸಹನಾಗ ಗುರುಶಾಪದಿಂದ ರಾಕ್ಷಸನಾಗಿರುವುದನ್ನು ತಿಳಿದು, ವನದಲ್ಲಿದ್ದ ಆ ರಾಕ್ಷಸನನ್ನೇ ಸೇರಿದನು. ಮಿತ್ರಸಹ (ಸೌದಾಸ)ನು ಚಿರಕಾಲಕ್ಕೆ ನರಮಾಂಸವು ಲಭಿಸಿತೆಂದು ಉದಂಕನನ್ನು ಕೊಲ್ಲಲು ಮೇಲೇರಿ ಬಂದನು. ಮುನಿಯು 'ರಾಜನ್! ನೀನು ರಾಕ್ಷಸನಲ್ಲ, ಕೇಳೆನ್ನ ಮಾತನ್ನು. ಬೇಡಲು ಬಂದಿರುವೆನು ಅವನ್ನು ಕೊಡಿಸು! ಗುರುದಕ್ಷಿಣೆ ಕೊಟ್ಟು ಮತ್ತೆ ನಿನಗಾಹಾರವಾಗಲು ಬರುವೆನು' ಎಂದನು. ಸೌದಾಸನು 'ಸರಿ! ನನ್ನ ಪತ್ನಿಯನ್ನು ಕೇಳು! ನಾನು ಕಳಿಸಿದೆನೆಂದು ಹೇಳು!' ಎಂದು ಕಳಿಸಿದನು. ಉದಂಕನ ಮಾತನ್ನಾಲಿಸಿ ಮದಯಂತಿಯು 'ಅಯ್ಯಾ! ಅಭಿಜ್ಞಾನವನ್ನು ಪಡೆದು ಬಾ! ಆಗ ನೀನು ನನ್ನ ಗಂಡನ ಅಪ್ಪಣೆ ಪಡೆದಿರುವೆ! ಎಂದು ತಿಳಿಯುವೆನು' ಎಂದಳು.

ಅಭಿಜ್ಞಾನವನ್ನು ಬೇಡಿದ ಮುನಿಗೆ ಸೌದಾಸನು 'ಲೋಕದಲ್ಲಿ ಸುಗತೆ ಸಾಧನವಾವುದೆಂದು ಹೇಳಲಾಗದು. ಈಗ ಸಿಕ್ಕಿರುವ ಗತಿಯನ್ನು ಬಿಡಲಾಗದು. ಬೇರೆ ಶರಣ್ಯವಿಲ್ಲ' ಎಂದು ವಚನರೂಪಾಭಿಜ್ಞಾನವನ್ನಿತ್ತನು. ಆ ಮಾತಿಗೆ ಸಮ್ಮತಿಸಿ, ಮದಯಂತಿಯು ಕುಂಡಲಗಳನ್ನಿತ್ತು, 'ಮುನಿವರ! ಇದಕ್ಕಾಗಿ ಸುರನರೋರಗಾಸುರರು ಆಶೆಪಡುತ್ತಿರುವರು. ಜಾಗ್ರತನಾಗಿ ಕೊಂಡು ಹೋಗು!' ಎಂದು ಎಚ್ಚರಿಸಿ ಕಳಿಸಿದಳು. ಆ ಪರಮ ಪತಿವ್ರತೆಯನ್ನು ಬೀಳ್ಕೊಂಡು ಉದಂಕನು ಮತ್ತೆ ಸೌದಾಸನನ್ನು ಸೇರಿ, ಕುಂಡಲಗಳನ್ನು ತೋರಿಸಿ, 'ರಾಜನ್! ಮಹೋದಾರನಾದ ನಿನ್ನ ದಯೆಯಿಂದ ಕೃತಾರ್ಥನಾದೆನು ಹೋಗಿ ಮತ್ತೆ ಬರುವೆನು' ಎಂದು ಸಂದೇಶದ ಅರ್ಥವೇನೆಂದು ಕೇಳಿದನು.

ಸೌದಾಸನು 'ರಾಜರಿಗೆ ಬ್ರಾಹ್ಮಣಪೂಜನವು ಶ್ರೇಯಸ್ಸಾಧನವಾಗಿದೆ. ನಾನೂ ವಿಪ್ರಭಕ್ತನೇ! ಆದರೂ ವಿಧಿವಿಲಾಸದಿಂದ ವಿಪ್ರದ್ರೋಹವನ್ನು ಮಾಡಿ ಈ ದುರ್ಗತಿ ಹೊಂದಿರುವೆನು. ಈಗ ವಿಪ್ರನೋರ್ವನನ್ನು ತೃಪ್ತಿಪಡಿಸುವ ಅವಕಾಶವು ಒದಗಿದೆ. ಇದನ್ನು ಬಿಟ್ಟರೆ ಮತ್ತಾವ ಗತಿಯೂ ಸಿಗಲಾರದು' ಎಂದು ಸಂದೇಶದ ಅರ್ಥವನ್ನು ವಿವರಿಸಿ 'ಮುನೇ! ನಿನ್ನ ಸತ್ಯನಿಷ್ಠೆ, ಗುರುಭಕ್ತಿಗಳಿಗೆ ಮೆಚ್ಚಿದೆನು. ನೀನು ಮತ್ತೆ ಬರಬೇಡ! ಚಿರಕಾಲ ಬಾಳು!' ಎಂದು ಕಳಿಸಿದನು. ಗೌತಮ ಕರುಣಾಪೂರದ ಪ್ರಭಾವದಿಂದ ಸಮಾಧಾನ ಮಾನಸಿಕ ಶಾಂತನಾದ ಸೌದಾಸನನ್ನು ಬೀಳ್ಕೊಂಡು, ಉದಂಕನು 'ಬೇಗ ನಿನ್ನ ರಾಜತ್ವವು ಸಿದ್ಧಿಸಲಿ!' ಎಂದು ವರವಿತ್ತು, ಅಲ್ಲಿಂದ ಗೌತಮಾಶ್ರಮಕ್ಕೆ ತೆರಳಿದನು.

ಮಾರ್ಗಮಧ್ಯದಲ್ಲಿ ಪಕ್ವಫಲವಾದ ಬಿಲ್ವವನ್ನು ಕಂಡು, ಫಲಾಶೆಯಿಂದ ಮರವನ್ನೇರಿದ ಮುನಿವರನ ಕೃಷ್ಣಾಜಿನವು ಜಾರಿ ಕೆಳಗೆ ಬಿತ್ತು. ಅದರಲ್ಲಿದ್ದ ಕುಂಡಲಗಳನ್ನು ಐರಾವತನಾಗ ರಾಜಪುತ್ರನು ಅಪಹರಿಸಿ ಪಾತಾಳವನ್ನು ಹೊಕ್ಕನು. ಉದಂಕನು ನಾಗರಾಜನು ಹೊಕ್ಕ ಬಿಲವನ್ನು ತೋಡಿ ತೋಡಿ ಆಯಾಸಪಡುತ್ತಿರಲು, ದೇವೇಂದ್ರನು ಕರುಣಿಸಿ ವಜ್ರವನ್ನು ಅವನ ಕೋಲಿನಲ್ಲಿ ಆವಹಿಸಿದನು.

ಗೌತಮ ಶಿಷ್ಯನು ಪಾತಾಳವನ್ನು ಸೇರಿ, ಅಲ್ಲಿ ತುರಗಾರೂಢನಾದ ಮಹಾಪುರುಷನ ಮಾತಿನಂತೆ ತುರಗಾಪಾನವನ್ನು ಊದಿದನು. ತತ್‌ಕ್ಷಣವೇ ಅಲ್ಲಿಂದ ಅಗ್ನಿಜ್ವಾಲೆಗಳು ಹೊರಬಂದು ಪಾತಾಳವನ್ನು ಸುಡತೊಡಗಿದವು. ಆಗ ನಾಗಸಮೂಹವು ಭೀತವಾಗಿ ಐರಾವತ ಸುತನಿಂದ ತಂದ ಕುಂಡಲ ಯುಗವನ್ನು ಉದಂಕನಿಗಿತ್ತು, ಕ್ಷಮಿಸೆಂದು ಬೇಡಿತು. ಗುರುಭಕ್ತಿಗೆ ಮೆಚ್ಚಿ ತುರಗಾರೂಢನಾಗಿ ಬಂದ ಅಗ್ನಿದೇವನ ಸಹಾಯದಿಂದ, ಉದಂಕನು ಕುಂಡಲಗಳನ್ನು ಪಡೆದು ತಂದು, ತನ್ನ ಗುರುಪತ್ನಿಗೆ ಸಮರ್ಪಿಸಿದನು. ಅಹಲ್ಯಾಗೌತಮರು ಉದಂಕನಲ್ಲಿ ಪ್ರೀತರಾಗಿ, ಆಶೀರ್ವದಿಸಿದರು. 'ಇದೆಲ್ಲವೂ ನಿಮ್ಮ ಕರುಣಾಪ್ರಭಾವವು. ನನ್ನಂತಹ ಪಾಮರನನ್ನು ಕೃತಕೃತ್ಯನನ್ನಾಗಿಸಿ ಉದ್ಧರಿಸಿದಿರಿ!' ಎಂದು ವಂದಿಸಿ, ವಿನಯ ಧುರಂಧರನಾದ ಉದಂಕನು, ಮರುಭೂಮಿಯನ್ನು ಸೇರಿ, ಅಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ತಪಗೈದು ಕೊನೆಗೆ ಶ್ರೀಕೃಷ್ಣಾನುಗ್ರಹದಿಂದ, ವಿಶ್ವರೂಪವನ್ನು ನೋಡಿ ಜೀವನ್ಮುಕ್ತನಾದನು.'

## ೬. ಪರೀಕ್ಷಿದ್ರಕ್ಷಣ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ಕೇಳು ಶ್ರೀಕೃಷ್ಣ ಮಹಿಮೆಯನ್ನು! ಶ್ರೀಕೃಷ್ಣನು ಉದಂಕನಿಗೆ ನೀರನ್ನಿತ್ತು ಹಸ್ತಿನಗರವನ್ನು ಸೇರಹೋದನು. ಶ್ರೀ ವ್ಯಾಸದೇವ ಶ್ರೀಕೃಷ್ಣರು ಪ್ರವೇಶಿಸಿದ ಮೇಲೆ ಧನರಾಶಿಗಳಿಂದ ಪಾಂಡವರು ಕರಿಪುರವನ್ನು ಸೇರಿದರು. ಅಷ್ಟರಲ್ಲೇ ಅಲ್ಲಿ ಉತ್ತರಾದೇವಿಯು ಗಂಡು ಮಗುವನ್ನು ಪ್ರಸವಿಸಿದಳು.

ಶ್ರೀಕೃಷ್ಣನು ಬರುತ್ತಿರುವನೆಂದು ತಿಳಿದು ಯುಯುತ್ಸುವು ವಿದುರನಿಂದ ಕೂಡಿ, ಎದುರ್ಗೊಂಡು ಕರೆತಂದು, ಪೂಜಿಸಿದನು. ಬಲರಾಮ ಸಾತ್ಯಕಿ ಪ್ರಮುಖರನ್ನು ಸತ್ಕರಿಸಿ, ಬೇರೆ ಬೇರೆ ದಿವ್ಯ ಪ್ರಾಸಾದಗಳಲ್ಲಿ ಅವರಿಗೆ ಬಿಡದಿ ಕಲ್ಪಿಸಿದನು.

ಗಾಂಧಾರೀ ಧೃತರಾಷ್ಟ್ರರು, ಕುಂತೀ ದ್ರೌಪದಿಯರು ಶ್ರೀಕೃಷ್ಣ ದರ್ಶನದಿಂದ ಪುಲಕಾಂಚಿತ ಗಾತ್ರರು, ಬಾಷ್ಪಾಕುಲನೇತ್ರರು ಆಗಿ, ಆನಂದದಿಂದ ಯದುಬಂಧುಗಳನ್ನು ಸಂಭಾವಿಸಿದರು. ವೇದವ್ಯಾಸದೇವನೂ ದಯಮಾಡಿಸಿದ್ದನು.

ಜನಮೇಜಯ! ದಿವ್ಯ ಮುಹೂರ್ತದಲ್ಲಿ ಉತ್ತರಾದೇವಿಯು ನಿನ್ನ ಜನಕನನ್ನು ಪೆತ್ತಳು. ಆ ವಾರ್ತೆಯನ್ನಾಲಿಸಿ ಅಂತಃಪುರವೆಲ್ಲವೂ ಆನಂದದೋಲೆಯಲ್ಲಲ್ಲಾಡಿತು. ಇದ್ದಕ್ಕಿದ್ದಂತೆ ಪುಟ್ಟಿದ ಬಾಲಕನು ಮೃತನಾದನು. ಆ ವಾರ್ತೆಯನ್ನಾಲಿಸಿ ಅಂತಃಪುರವೆಲ್ಲವೂ ಶೋಕಸಾಗರದಲ್ಲಿ ಮುಳುಗಿತು. ಸುಖದುಃಖಗಳು ದೈವಾಯತ್ತವಾಗಿ ಬರುವವಲ್ಲವೇ? ಶೌರಿಯು ಅವರ ದುಃಖವನ್ನು ಅಪನಯಿಸಲು ನಿಶ್ಚಯಿಸಿ, ವಿಷಾದಭರದಿಂದ ದಿಕ್ಕುತೋಚದಿದ್ದ ಕುಂತೀ ದ್ರೌಪದೀ ಸುಭದ್ರೆಯರಿದ್ದಲ್ಲಿಗೆ ಬಂದನು.

ಕುಂತೀದೇವಿಯು ಗದ್ಗದಿತ ಕಂಠದಿಂದ ಶ್ರೀಕೃಷ್ಣನಿಗಿಂತೆಂದಳು: 'ಶ್ರೀಕೃಷ್ಣ! ನನ್ನ ಸಂತತಿಗೆ ನೀನೇ ಗತಿ! ಹಿಂದೆ ಗರ್ಭಗತನಾದ ಅರ್ಭಕನನ್ನು ಗುರುಸುತನ ಬ್ರಹ್ಮಾಸ್ತ್ರದಿಂದ ರಕ್ಷಿಸಿದೆ! ಬಾಲನು ಗರ್ಭದಲ್ಲಿ ನಮ್ಮ ವಂಶಾಂಕುರನಾಗಿ ಬೆಳೆದು, ಇಂದು ಜನಿಸಿದವನೇ ಮತ್ತೆ ಅಶ್ವತ್ಥಾಮನ ಇಷೀಕಾಸ್ತ್ರದಿಂದ ಮೃತನಾಗಿರುವನು. ದೇವಕೀನಂದನ! ಉತ್ತರೆಯ ಮೊರೆ ಕೇಳು! ಅವಳ ಕಣ್ಣೀರನ್ನೊರಸು! ಅವಳ ನಂದನನನ್ನು ಪುನರುಜ್ಜೀವಿಸು! ನಮ್ಮ ವಂಶದ ಕುಡಿಯನ್ನುಳಿಸು! ನೀನಲ್ಲದಿನ್ನಾರೆಮಗೆ ಗತಿ! ಬಾಲನು ಬದುಕದಿದ್ದರೆ, ಇನ್ನು ದ್ರೌಪದೀ ಸುಭದ್ರಾ ವಿರಾಟನಂದನೆಯರಾರೂ ಬದುಕಿರಲಾರರು. ನಾನೂ ವ್ಯರ್ಥ ಜೀವಿಸಿರಲಾರೆನು. ನಮ್ಮ ವ್ಯಸನವನ್ನು ದೂರಮಾಡು! ಕರುಣಿಸು!' ಎಂದು ನೆಲದಿ ಬಿದ್ದು, ರೋದಿಸತೊಡಗಿದಳು.

ಸುಭದ್ರೆಯು, 'ಕೃಷ್ಣ! ಅಭಿಮನ್ಯುಕುಮಾರನನ್ನು ಅಷ್ಟು ಜನ ದುಷ್ಟರು ಕಲೆತು ಅನ್ಯಾಯದಿಂದ ಕೊಂದರು. ಅವನ ಮಗನನ್ನೀಗ ಅಶ್ವತ್ಥಾಮನು ಪುನಃ ಸಂಹರಿಸಿದನು. ಇನ್ನು ನಾನಾರನ್ನು ನೋಡಿಕೊಂಡು ಬದುಕಿರಲಿ? ಉತ್ತರೆಯನ್ನೆಂತು ಸಂತೈಸಲಿ? ಅವಳ ಮಗನ ಮೇಲಿಟ್ಟ ನಮ್ಮ ಆಶೆಗಳೆಲ್ಲವೂ ವ್ಯರ್ಥವಾದವು. ನೀನಲ್ಲದೆ ನಮ್ಮನ್ನು ಆಪತ್ಸಮುದ್ರದಿಂದ

ದಾಟಿಸಿ, ಪಾರುಗಾಣಿಸುವರಿಲ್ಲ. ನೀನೆನ್ನ ಅಣ್ಣನಷ್ಟೇ ಅಲ್ಲ. ನಮ್ಮ ಕುಲದೈವವಾಗಿರುವೆ ಗೋವಿಂದಾ!' ಎಂದು ಅಳುತ್ತಾ ಕೂತಳು.

ದ್ರೌಪದಿಯು 'ಶ್ರೀಶ! ನಿನ್ನ ಮೈದುನನ ಮೊಮ್ಮಗನನ್ನು ಅಶ್ವತ್ಥಾಮನ ಅಸ್ತ್ರದಿಂದ ಬದುಕಿಸಿಕೊಡುವೆನೆಂದು ಸಾರಿದೆ! ಆ ಮಾತನ್ನು ಸತ್ಯವನ್ನಾಗಿಸು! ನಿನ್ನ ಮಹಿಮೆಯು ನಮಗೆ ಗೊತ್ತಿದ್ದುದರಿಂದ, ನಿನಗೇ ಶರಣಾಗಿರುವೆನು. ಆಶ್ರಿತಜನ ರಕ್ಷಣವು ನಿನ್ನ ವ್ರತವಾಗಿದೆ! ಭುವನಭಾಂಡದ ಜೀವರನ್ನೆಲ್ಲ ಒಂದೇ ಕ್ಷಣದಲ್ಲಿ ಸಂಹರಿಸಿ, ಉತ್ತರಕ್ಷಣದಲ್ಲಿ ಅಂತೆಯೇ ಪುನರುಜ್ಜೀವಿಸಲು ಸಮರ್ಥನಾದ ದೇವದೇವನಿಗೆ ಬಾಲನ ಪ್ರಾಣದಾನವು ಅಸದಳವೇ?' ಎಂದು ಬೇಡಿದಳು.

ಶ್ರೀಕೃಷ್ಣನು, 'ಚಿಂತೆ ಬಿಡಿರಿ! ಅಂತಕನಿಗಿಲ್ಲಿ ಪ್ರವೇಶವಿಲ್ಲ! ಅಶ್ವತ್ಥಾಮನ ಆಟವಿಲ್ಲಿ ಸಾಗದು. ನಡೆಯಿರಿ! ಬಾಲನನ್ನು ನೋಡೋಣ!' ಎಂದು ಅವರೆಲ್ಲರಿಂದ ಕೂಡಿ, ಪ್ರಸೂತಿಕಾಗೃಹವನ್ನು ಪ್ರವೇಶಿಸಿದನು. ಧವಳ ಕುಸುಮಗಳಿಂದಲು, ಧವಳ ಸರ್ಷಪ, ಲಾಜಾ, ಪೂರ್ಣಕುಂಭ, ಪಲ್ಲವ, ತೋರಣಗಳಿಂದಲು, ದೀಪ ಪಂಕ್ತಿಗಳಿಂದಲು, ದುಷ್ಟಭೂತ ನಿಸ್ಸಾರಕ ಬಲಿ ಪದಾರ್ಥಗಳಿಂದಲು, ಚತುರ ವೃದ್ಧಾಂಗನೆಯರಿಂದಲು, ಚಿಕಿತ್ಸಕ ಚಣಪರಿಚಾರಿಕಾಹಿತ ಪರಿವಾರ ಜನರಿಂದಲು ಪರಿಶೋಭಿತವಾದ ಪ್ರಸೂತಿ ಗೃಹವನ್ನು ಶ್ರೀಹರಿಯು ಪ್ರವೇಶಿಸಿದನು.

ದ್ರೌಪದೀ ದೇವಿಯು ಮುಂದಾಗಿ ಹೋಗಿ 'ಬಂದ ಗೋವಿಂದ! ನೊಂದ ನಿನಗಾನಂದವನ್ನು ತರುವನು ಮುಕುಂದ! ವಿನಯಾದರಗಳಿಂದ ನೋಡು!' ಎಂದು ಉತ್ತರೆಯನ್ನು ಹಿಡಿದೆತ್ತಿ ಕೂಡಿಸಿದ್ದಳು. ಉತ್ತರೆಯು ಶಿರಬಾಗಿ ಕೈಮುಗಿದು 'ಶ್ರೀಕೃಷ್ಣ! ಭಕ್ತಾರ್ತಿನಾಶನ ವಾಸುದೇವ! ನನ್ನ ಶಿಶುವನ್ನು ಸಂಜೀವಿತನನ್ನಾಗಿಸಿ ಕರುಣಿಸು ತಂದೇ! ಪತಿಹೀನಳಾಗಿ ಗತಿಗೆಟ್ಟ ನನಗೆ ಸುತನಾದರೂ ಗತಿಯಾಗಿರಲು ಉಳಿಸಿಕೊಡು! ಬಾಲನನ್ನೆತ್ತಿಕೊಂಡು ನಿನ್ನ ಪಾದಾರವಿಂದಗಳಿಗೆ ವಂದಿಸಿ, ಅವನನ್ನು ನಿನ್ನ ಉಡಿಯಲ್ಲಿಟ್ಟು, ಒಪ್ಪಿಸಿ ನಿಶ್ಚಿಂತಳಾಗಿರಬೇಕೆಂಬ ನನ್ನ ಆಶಾಸೌಧವನ್ನು ಅಶ್ವತ್ಥಾಮನಿಂದು ಕೆಡವಿ ಹಾಕಿದನು! ಅನ್ಯಾಯವಾಗಿದೆ!' ಎಂದು ಪ್ರಾರ್ಥಿಸಿ, ಶಿಶುವನ್ನು ನೋಡಿ ಇಂತೆಂದಳು:

'ಪುತ್ರ! ಲೋಕೈಕವಲ್ಲಭನಾದ ದೇವಕೀನಂದನನು ಬಂದಿರುವನು. ಆತನ ಪ್ರೀತಿಯ ಅಳಿಯನ ಮಗನಾಗಿ, ಧರ್ಮರಾಜನ ಮೊಮ್ಮಗನಾಗಿ, ಶ್ರೀವಾಸುದೇವನಿಗೆ ಎದ್ದು ನಮಿಸದಿರುವುದು ಅಧರ್ಮವಾದೀತು! ಏಳೇಳು! ನನ್ನ ಕಡೆ ನೋಡಿ ಕಿರುನಗೆ ಬೀರು! ನನ್ನ ದುಃಖಸಾಗರವನ್ನು ಹಿಂಗಿಸು! ಕುಂತೀ ದ್ರೌಪದೀದೇವಿಯರ ಕಣ್ಣೀರನ್ನೊರೆಸು! ಸುಭದ್ರಾದೇವಿಯ ತೊಡೆಯನ್ನಲಂಕರಿಸು!' ಎಂದು ಅತ್ತು ಮೂರ್ಛೆಹೊಂದಿದ ಉತ್ತರೆಯನ್ನು ಕಂಡು, ಅಂತಃಪುರವು ಶೋಕಾಕುಲವಾಯಿತು.

ಅದನ್ನು ಕಂಡು ಪರಮ ಕೃಪಾನಿಧಿಯಾದ ಶ್ರೀಕೃಷ್ಣನು ಆಚಮಿಸಿ, ಅಶ್ವತ್ಥಾಮ ಪ್ರಯುಕ್ತವಾಗಿದ್ದ ಬ್ರಹ್ಮಶಿರೋನಾಮಕಾಸ್ತ್ರವನ್ನು ಉಪಸಂಹರಿಸಿ, ಬಾಲಶವವನ್ನು ಶಯನದಲ್ಲೆತ್ತಿಡಿಸಿ ಅಮೃತ ಕಟಾಕ್ಷದಿಂದ ವೀಕ್ಷಿಸಿ ಇಂತೆಂದನು: 'ನಾನು ಸಮರಮುಖದಿಂದ

ವಿಮುಖನಾಗದವನಾಗಿದ್ದರೆ, ಶತ್ರುಗಳಲ್ಲಿಯೂ ಯೋಗ್ಯತಾತಿರೇಕ ಶತ್ರುತ್ವವನ್ನು ಮಾಡದವನಾಗಿದ್ದರೆ, ಈ ಶಿಶುವು ಉಜ್ಜೀವಿತವಾಗಲಿ! ಧರಣೀಸುರರೆನ್ನ ಕುಲದೈವವೆಂದು ತಿಳಿದು, ಧರ್ಮದಲ್ಲಿ ನಡೆಯುವವನು ನಾನಾಗಿದ್ದರೆ, ಪಂಚಪಾಂಡವರೆನ್ನ ಪ್ರಾಣಸಮರಾಗಿದ್ದರೆ ಕಂಸಾದಿ ದುಷ್ಟರನ್ನು ನಾನು ಸಂಹರಿಸಿದುದು ನಿಜವಾದ ಧರ್ಮವಾಗಿದ್ದರೆ, ಈ ಬಾಲನು ಉಜ್ಜೀವಿತನಾಗಲಿ! ಮಹಿತ ಸತ್ಯ, ನಿಯತಧರ್ಮ, ದೃಢ ಬ್ರಹ್ಮಚರ್ಯ, ದುಷ್ಟದಮನಗಳೆನ್ನ ವ್ರತಗಳಾಗಿದ್ದರೆ ಅಭಿಮನ್ಯುಕುಮಾರನು ಉಜ್ಜೀವಿತನಾಗಲಿ!' ಇಂತು ಲೋಕದಲ್ಲಿ - ತಾನು ಹಿಂದೆ ರಕ್ಷಿಸಿದ ಕುಮಾರನನ್ನು ಸರ್ವಪ್ರತ್ಯಕ್ಷವಾಗಿ ಉಜ್ಜೀವಿಸಲು ಸಮರ್ಥನೆಂದು - ಪ್ರಕಟಿಸಲು ಸಾರಿ, ಶ್ರೀಶನು ಬಾಲನನ್ನು ಬದುಕಿಸಿದನು.

ಶಿಶುವು ಕಣ್ಣುಬಿಟ್ಟು ಕೈಕಾಲಲ್ಲಾಡಿಸಿ, ಬದುಕಿದುದನ್ನು ಕಂಡು ಕುಂತೀ ಮುಖ ಕೌರವ ಕಾಂತೆಯರು ಪರಮಾನಂದ ಕಂದಳಿತ ಹೃದಯಾರವಿಂದರಾಗಿ, ಅರವಿಂದ ನಯನನನ್ನು ಕೊಂಡಾಡಿ ನಮಿಸಿದರು. ಆಗ ಅಂಬರದಿಂದ ದಿವ್ಯವಾಣಿಯು ಇಂತು ಕೇಳಬಂತು:

'ಪಾಂಡವ ವಂಶವು ಪರೀಕ್ಷೀಣವಾಗಿರಲು, ಜನಿಸಿ ಅದನ್ನು ಉಳಿಸಿದುದರಿಂದ ಬಾಲನು ಪರೀಕ್ಷಿತನೆಂದು ಖ್ಯಾತನಾಗುವನು. ಅಮಂದ ದಯಾಸಮುದ್ರನಾದ ಗೋವಿಂದನ ರಕ್ಷೆಯನ್ನು ಪಡೆದು ಬಂದ ಅಭಿಮನ್ಯು ಸುತನು ಪರೀಕ್ಷಿತನೆನಿಸಿ, ಪರಮ ಭಾಗವತನೆನಿಸುವನು' ಆ ಮಾತನ್ನು ಶ್ರೀಕೃಷ್ಣನು ಅನುಮೋದಿಸಿದನು.

ಇಂತು ಪುಂಡರೀಕಾಕ್ಷನ ಪ್ರಭಾವದಿಂದ ಪುನರುಜ್ಜೀವಿತನಾದ ಪರೀಕ್ಷಿತನನ್ನು ಕಂಡು ಕರಿಪುರಿಯ ರಾಜಪರಿವಾರವೇ ಅಲ್ಲದೆ ಪೌರಜನರು ಕೂಡ ಸಂತೋಷಭರಿತರಾದರು. ಗರ್ಭದಲ್ಲಿ ತಾನೇ ರಕ್ಷಿಸಿ, ಮತ್ತೆ ಮೃತಜಾತನನ್ನೂ ಉಜ್ಜೀವಿಸಿದ ತನ್ನ ಮಹಿಮೆ ಸಜ್ಜನರಿಗೆ ತಿಳಿಯಲಿ! ಎಂದು ಶ್ರೀಕೃಷ್ಣನು ಪ್ರಸವಕಾಲದಲ್ಲಿ ಅಶ್ವತ್ಥಾಮನ ಅಸ್ತ್ರಕ್ಕೆ ಅವಕಾಶವನ್ನಿತ್ತು, ಮತ್ತೆ ಅಸ್ತ್ರಸಂಹೃತನಾದ ಬಾಲನನ್ನು ಬದುಕಿಸಿದನು. ಹಾಗೆ ಮಾಡದಿದ್ದರೆ ಗರ್ಭರಕ್ಷಣೆಯನ್ನು ಮಾಡಿದ ಅಚ್ಯುತನ ಮಹಿಮೆಯನ್ನು ಸುಜನರೂ ತಿಳಿಯದೆ ಹೋಗುವಂತಾಗುತ್ತಿತ್ತು.

ಆಗ ಶ್ರೀ ವೇದವ್ಯಾಸರು ಅಲ್ಲಿಗೆ ದಯಮಾಡಿಸಿದರು. ಕೆಲ ದಿನಗಳಲ್ಲಿಯೇ ವೇದವ್ಯಾಸಾನುಗೃಹೀತವಾದ ಧನಕನಕ ರತ್ನಭಾರಸಹಿತರಾದ ಪಾಂಡವರು ಹಸ್ತಿನಗರವನ್ನು ಪ್ರವೇಶಿಸಿದರು. ಮಹಾ ವೈಭವೋಪೇತವಾದ ಸ್ವಾಗತದೊಡನೆ ಪೌತ್ರಜನನ ವಾರ್ತೆಯು ಶ್ರೀಕೃಷ್ಣ ಪರಮಾನುಗ್ರಹ ವಿಶೇಷವೂ ಅವರ ಕರ್ಣ ನೇತ್ರಗಳಿಗೆ ಆನಂದ ಸಂಧಾಯಕವಾದವು. ವಿದುರ ಯುಯುತ್ಸುಗಳ ಆಜ್ಞೆಯಂತೆ ಪುರವು ಅಲಂಕೃತವಾಗಿತ್ತು.

ರಥ್ಯಗಳಲ್ಲಿ ಕಸ್ತೂರಿ ಪನ್ನೀರುಗಳನ್ನು ತಳಿಲು ಚಲ್ಲಿ, ಕರ್ಪೂರದ ರಂಗವಲ್ಲಿಗಳನಿಟ್ಟು, ರತ್ನತೋರಣಗಳನ್ನು ಕಟ್ಟಿದ್ದರು. ಮನೆಮನೆಯೂ ತೋರಣ ಪಲ್ಲವಗಳಿಂದಲೂ, ಪೂರ್ಣ ಕುಂಭಗಳಿಂದಲೂ ಅಲಂಕೃತವಾಗಿತ್ತು. ಪುರಜನರು ಸರ್ವರು ನೂತನ ದುಕೂಲವಸ್ತ್ರಭೂಷಣ ಭೂಷಿತರಾಗಿ, ಬೀದಿಯ ಇಕ್ಕೆಲಗಳಲ್ಲಿ ನಿಂತು, ಸ್ವಾಗತಗೀತೆಗಳನ್ನು ಪಾಡಿದರು. ಮುತ್ತಿನಾರತಿಗಳನ್ನೆತ್ತಿ ಮುತ್ತೈದೆಯರು ಮಂಗಳಗೀತೆಗಳನ್ನು ಪಾಡಿದರು. ವಿಪ್ರರು ವೇದ

ಮಂತ್ರಗಳಿಂದ ಆಶೀರ್ವದಿಸಿದರು ಚಂದ್ರೋದಯವಾಗಲು ಉಕ್ಕೇರುವ ಸಮುದ್ರದಂತೆ, ಕರಿಪುರಿಯು ಆನಂದ ಡೋಲಿಕೆಯಲ್ಲಿ ತೇಲಿಬಂತು.

ಶ್ರೀಕೃಷ್ಣ ಬಲರಾಮ ಸಾತ್ಯಕಿ ಪ್ರಮುಖರು ಶ್ರೀವೇದವ್ಯಾಸರನ್ನು ಮುಂದಿಟ್ಟು ನಗರ ದ್ವಾರದೇಶದಲ್ಲಿ ಪಾಂಡವರನ್ನೆದುರ್ಗೊಂಡು ಕರೆತಂದರು. ಪರಸ್ಪರಾಲಿಂಗನ, ವಂದನ, ಕ್ಷೇಮ ವಿಚಾರಣಗಳಿಂದ ಹರ್ಷಭರಿತ ಮಾನಸರಾಗಿ ಯಾದವ ಕೌರವ ರಾಜನ್ಯರು ಪುರವೀಥಿಗಳಲ್ಲಿ ಮೆರೆದುಬಂದು, ಅಂತಃಪುರವನ್ನು ಪ್ರವೇಶಿಸಿದರು. ಧೃತರಾಷ್ಟ್ರಾದಿ ವೃದ್ಧಜನರಿಗೆ ವಂದಿಸಿ, ಧರ್ಮಜಾದಿಗಳು ವಿದುರಯುಯುತ್ಸುಗಳನ್ನು ಸಂಭಾವಿಸಿ, ಶ್ರೀಕೃಷ್ಣನ ಬಾಲರಕ್ಷಣ ವಿಧಾನವನ್ನರಿತು, ಪದ್ಮನಾಭನ ಪಾದಪದ್ಮಗಳಿಗೆ ಅಭಿನಮಿಸಿ, ಕೃತಜ್ಞತಾಪೂರವು ಕಣ್ಣಲ್ಲಿ ಆನಂದ ಬಿಂದು ರೂಪವಾಗಿ ಉದುರುತ್ತಿರಲು, ಇಂತೆಂದರು:

'ಶ್ರೀಕೃಷ್ಣ! ಇದು ನಿನಗೆ ಹೊಸತೇ? ಅನಾದಿ ಕಾಲದಿಂದ ನಮ್ಮ ಅನಿಮಿತ್ತ ಬಂಧುವಾಗಿರುವೆ! ಸ್ವಾಮಿ! ಇಂತು ನಿನ್ನ ಕರುಣಾಚಂದ್ರಿಕಾಪೂರವು ಎಮ್ಮ ಮೇಲೆ ಸದಾ ಹರಿಯಲ್ಲಿ!' ಎಂದು ನುತಿಸಿ, ಮತ್ತೆ ವಂದಿಸಿದ ಪಾಂಡವರನ್ನೆತ್ತಿ, ಆಲಿಂಗಿಸಿ ರಂಗನಾಥನು, ಅವರಿಂದ ಶ್ರೀವ್ಯಾಸದೇವಕೃತ ಮಹೋಪಕಾರವನ್ನರಿತು, ತಾನು ನಿತ್ಯಾನಂದ ಮಹೋದಧಿಯು, ಸ್ವಗತಭೇದ ವಿವರ್ಜಿತನು ಆಗಿದ್ದೂ ಆನಂದ ಬಿಂದುಗಳಿಂದ ಅವರ ಆನಂದವನ್ನು ವೃದ್ಧಿಪಡಿಸಿದನು. ಇಂತು ಶ್ರೀ ವ್ಯಾಸನಾಗಿ ಧನವಿತ್ತು, ಶ್ರೀಕೃಷ್ಣನಾಗಿ ಬಾಲನನ್ನಿತ್ತು, ಮುಂದೆ ಅಶ್ವಮೇಧಯಾಗದ ಪುಣ್ಯವನ್ನೀಯಲು ಸಿದ್ಧನಾಗಿರುವ ಶ್ರೀಹರಿಯ ಅಪಾರ ಕರುಣೆಯನ್ನೂ ಭಕ್ತವಾತ್ಸಲ್ಯವನ್ನು ಕಂಡು ದೇವಗಂಧರ್ವಮುನಿಚಾರಣರು ಆನಂದ ತರಂಗಿತಾಂತರಂಗರಾಗಿ, ಸುಮವೃಷ್ಟಿಯನ್ನು ಸುರಿಸಿ, ಸುರಪ್ರಿಯನನ್ನು ಸ್ತುತಿಸಿದರು.

## ೭. ಅಶ್ವಮೇಧ - ಅಶ್ವರಕ್ಷಣ

ಶ್ರೀ ವೈಶಂಪಾಯನನು ಜನಮೇಜಯನಿಗೆ ಪೇಳಿದನು:

'ರಾಜನ್! ಆಗ ಶ್ರೀ ವ್ಯಾಸದೇವನಿಂತೆದನು: 'ಧರ್ಮರಾಜ! ತುರಗಮೇಧವು ಅಖಿಲ ದುರಿತಹರವಾಗಿದೆ. ಅದನ್ನು ಭೂರಿದಕ್ಷಿಣೆಗಳಿಂದಲು, ಬಹ್ವನ್ನದಾನದಿಂದಲು ನೀನು ಮಾಡು!' ಎಂದನು. ಧರ್ಮರಾಜನು 'ಶ್ರೀಕೃಷ್ಣ! ಅಶ್ವಮೇಧವನ್ನು ಮಾಡು! ನಿಷ್ಪಾಪನಾಗು!' ಎಂದು ಶ್ರೀ ವ್ಯಾಸರು ಅಪ್ಪಣೆಯನ್ನಿತ್ತಿರುವರು. ಅದಕ್ಕೆ ಸಾಕಾಗುವಷ್ಟು ಧನರಾಶಿಯನ್ನೂ ಅನುಗ್ರಹಿಸಿರುವರು. ಅದನ್ನು ಸಾಂಗವಾಗಿಸುವುದು ನಿನ್ನ ಕೈಲಿದೆ! ಇಂತಹ ಕೆಲಸವನ್ನು ಇಂತು ಮಾಡೆಂದು ನಮ್ಮನ್ನು ನಿಯಮಿಸಿ, ಯಜ್ಞ ಪೂರ್ಣಫಲವನ್ನು ಸ್ವೀಕರಿಸಿ, ನಮ್ಮನ್ನು ಧನ್ಯರನ್ನು ಮಾಡು! ನಮಗೆ ನೀನೇ ತಂದೆ; ನೀನೇ ತಾಯಿ; ನೀನೇ ಗುರುವು! ಸಚಿವ, ಸಖಿ, ಸ್ವಾಮಿಯೂ ನೀನೇ! ನಮಗೇಕೆ? ಸಮಸ್ತ ಜಗತ್ತಿಗೂ ಪ್ರಭುವಾಗಿರುವೆ! ಸತ್ಯಸಂಕಲ್ಪ! ನಿನ್ನವರಾದ ನಮ್ಮೀ ಯಜ್ಞವು ಎಂತು ನಡೆಯಬೇಕೆಂಬುದನ್ನು ನೀನೇ ತಿಳಿಸು!' ಎಂದು ಬೇಡಿದನು.

ಶ್ರೀಕೃಷ್ಣನು 'ಧರ್ಮರಾಜ ! ಶ್ರೀ ವ್ಯಾಸರ ಅನುಗ್ರಹದಿಂದ ಎಲ್ಲವೂ ಚನ್ನಾಗಿ ನೆರವೇರುವುದು. ಹೆದರಬೇಡ ! ನಿನ್ನ ಯಜ್ಞವನ್ನು ನ ಭೂತೋ ನ ಭವಿಷ್ಯತಿ ಎನಿಸಿ ಬಿಡುವೆನು. ನಾನು ಬದ್ಧಕಟಿಯಾಗಿ ನಿಂತು ನಡೆಸುವೆನು. ನಿನ್ನ ಸೋದರರು ಬದ್ಧಾದರರಾಗಿ ನಿನ್ನ ಕಾರ್ಯಕರಣದಲ್ಲಿ ತೊಡಗಿರುವರು' ಎಂದನು. ಧರ್ಮಜನು 'ಪಾರಾಶರ್ಯ ! ದೀಕ್ಷಾದಿ ವಿಧಾನ ಸ್ವೀಕರಣವನ್ನು ಮಾಡಲು ಶುಭಮುಹೂರ್ತವನ್ನು ನಿಶ್ಚಯಿಸು !' ಎಂದು ಪ್ರಾರ್ಥಿಸಿದನು. ಚೈತ್ರಪೂರ್ಣಿಮೆಯಂದು ಮೇಧಾಶ್ವವನ್ನು ಬಿಟ್ಟು, ಅದರ ಹಿಂದೆ ಅರ್ಜುನನು ಹೋಗಬೇಕೆಂದು ನಿಶ್ಚಯಿಸಿ, ವ್ಯಾಸರು ಪೈಲ ಯಾಜ್ಞವಲ್ಕ್ಯ ಜೈಮಿನಿ ಸುಮಂತುಗಳಿಂದಲು, ನನ್ನಿಂದಲೂ (ವೈಶಂಪಾಯನ) ಯಜ್ಞಶಾಲಾ ಕಾರ್ಯಗಳನ್ನು ನಡೆಸಲು ಪ್ರಾರಂಭಿಸಿದರು.

ಸರ್ವ ಸಂಭಾರಗಳು ಸಜ್ಜಾಗಿರಿಸಲ್ಪಟ್ಟವು. ಸ್ರುಕ್‌ಸ್ರುವಾದಿ ಸಾಧನ ಜಾತದಿಂದ ಯಜ್ಞವಾಟವು ಪೂರ್ಣವಾಯಿತು. ಉತ್ತಮ ಲಕ್ಷಣಸಂಪನ್ನವಾದ ತುರಗರಾಜವನ್ನು ಆರಿಸಿ ತಂದು, ಪೂಜಿಸಿದ ಮೇಲೆ ಅದರ ಫಾಲದಲ್ಲಿ 'ಧರ್ಮಜನ ಅಶ್ವಮೇಧನ ತುರಗವಿದನ್ನು ತಡೆಯದೆ ಕಪ್ಪವನ್ನು ಸಲ್ಲಿಸಿದವರಿಗೆ ಧರ್ಮಜನು ಯಜ್ಞಕ್ಕಾಗಿ ಬರಬೇಕೆಂಬ ಆದರದ ಸಂದೇಶ ವನ್ನಿಡುತ್ತಿರುವನು. ಅಶ್ವವನ್ನು ಕಟ್ಟಿದವರು ಧನಂಜಯನನ್ನೆದುರಿಸಿ ಕಡಿದಾಡಬೇಕಾಗುವುದು' ಎಂಬಿತ್ಯಾದಿ ನಿಬಂಧನಾನುಬಂಧವಾದ ಸ್ವರ್ಣಫಲಕವನ್ನು ಕಟ್ಟಿದ್ದರು.

ದಿವ್ಯಾಸ್ತ್ರಶಸ್ತ್ರನಿಪುಣನಾದ ಫಲ್ಗುಣನು ತುರಗರಕ್ಷೆಗೈಯುತ್ತಾ, ಅದನ್ನು ಚತುರಂಗಬಲ ಸಮನ್ವಿತನಾಗಿ, ಹಿಂಬಾಲಿಸಿದನು. ಭೀಮಸೇನ ನಕುಲಸಹದೇವರು ರಾಷ್ಟ್ರರಕ್ಷಕರಾಗಿ ರುವುದಲ್ಲದೆ, ಯಾಗಶಾಲಾ ನಿರ್ಮಾಣಾದಿ ಕಾರ್ಯಗಳಲ್ಲಿ ಧರ್ಮರಾಜನು ಧನಂಜಯನನ್ನು ನೋಡಿ 'ಅರ್ಜುನ ! ಈ ಮಹತ್ಕಾರ್ಯಭಾರವನ್ನು ನಿನ್ನ ವಿಶಾಲ ಭುಜಪೀಠದಲ್ಲಿ ವಹಿಸಲಿಡುತ್ತಿರುವೆನು. ನಿನ್ನ ಹೊರತಿನ್ನಾರೂ ಅಶ್ವರಕ್ಷಣ ದಕ್ಷರಾಗಿ, ಜಯಲಕ್ಷ್ಮಿಯೊಡನೆ ಹಿಂದಿರುಗಿ ಬರಲಾರರು. ರಾಜರೊಡನೆ ಮೃದು ಯುದ್ಧವನ್ನು ಮಾಡು ! ಹಿಂದಾದ ದಾರುಣ ಯುದ್ಧದಲ್ಲಿ ಆದ ಭೀಕರ ಮಾರಣ ಹೋಮವು ಮತ್ತೆ ಪುನಶ್ಚರ್ಚಿತವಾಗದಿರಲಿ ! ಜಯಶಾಲಿಯಾಗಿ ಬಾ !' ಎಂದು ಹರಸಿ ಅರ್ಜುನನ್ನು ದಿಗ್ವಿಜಯಕ್ಕಾಗಿ ಕಳಿಸಿದನು.

ಅಶ್ವಮೇಧಯಾಗ ಪ್ರಯತ್ನಗಳು ಮುಗಿಯುತ್ತ ಬರಲು, ಪಾಂಡವಾಗ್ರಜನೊಂದು ಶುಭದಿನದಿ ದೀಕ್ಷಿತನಾದನು. ಶ್ರಿಕೃಷ್ಣನಾಜ್ಞೆಯಂತೆ ಎಲ್ಲ ಯಾಗಕಾರ್ಯಗಳು ಪ್ರಾರಂಭವಾದವು. ಧರ್ಮಜನು ಕ್ಷಾಮವಸನವನ್ನುಟ್ಟು ದೀಕ್ಷಾದಂಡವನ್ನು ಪಿಡಿದು, ಕೃಷ್ಣಾಜಿನವನ್ನು ಹೊದ್ದು, ಪರಮಮುನಿ ಗಣಮಧ್ಯದಲ್ಲಿ ಪ್ರಜಾಪತಿಯೋ ವೈಶ್ವಾನರನೋ ಎಂಬಂತೆ ಕಂಗೊಳಿಸಿದನು. ಕಾಂಚನ ರತ್ನಾಭರಣಭೂಷಿತನಾಗಿದ್ದ ಧರ್ಮರಾಜನು ಭೂಷಿತವಾದ ಹಯಶ್ರೇಷ್ಠವನ್ನು ಪೂಜಿಸಿ, ವಿಸರ್ಜಿಸಿದರು.

ಭೀಮಸೇನನು ಯಜ್ಞಶಾಲೆಯನ್ನು ವೇದಿಕೆಯನ್ನು, ಸ್ರುಕ್‌ಸ್ರುವಾದಿ ಸಾಧನಗಳನ್ನು ಕನಕಮಯವನ್ನಾಗಿ ಮಾಡಿಸಿ, ಪರ್ಯವೇಕ್ಷಿಸುತ್ತಿದ್ದನು. ನಕುಲ ಸಹದೇವರು ರಾಷ್ಟ್ರರಕ್ಷಣ,

ರಾಜಕುಟುಂಬ ಪೋಷಣ, ಯಜ್ಞಸಂಭಾರಾಹರಣವೇ ಮುಂತಾದ ಕಾರ್ಯಗಳಲ್ಲಿ ಅಪ್ರಮತ್ತರಾಗಿದ್ದರು.

ಅರ್ಜುನನು ಆಗಮ ವಿಧಾನದಿಂದ ಅಶ್ವರಾಜನನ್ನು ಪೂಜಿಸಿದನು. ಶ್ರೀಕೃಷ್ಣ ಭೀಮ ಧರ್ಮಜರಿಗೆ ನಮಿಸಿದನು. ಗಾಂಡೀವ ತೂಣೀರ ದ್ವಯಗಳನ್ನು ಧರಿಸಿದನು. ದಿವ್ಯ ರಥವನ್ನಾರೋಹಿಸಿ ಶ್ವೇತವಾಹನು ವಿಪ್ರಸುಮಂಗಲಿಯರ ನೀರಾಜನಗಳನ್ನು, ವಿಪ್ರಾಶೀರ್ವಾದ ಗಳನ್ನು ಸ್ವೀಕರಿಸಿದನು. ಶ್ವೇತಸರ್ಷಪ, ಸುಮ, ಲಾಜಾಕ್ಷತೆಗಳನ್ನು ಚಲ್ಲಿ ನಗರ ನಾರಿಯರು ಅರ್ಜುನನನ್ನು ಹರಸಿದರು. ಪ್ರಮೋದಮೇದುರ ಮಾನಸನಾಗಿ ಧನಂಜಯನು ದೇವದತ್ತವನ್ನೆತ್ತಿ ಊದಿದನು. ಅವನ ಕುದುರೆಗಳು ಹರ್ಷಾತಿರೇಕದಿಂದ ಕೆನೆದವು. ಗೌತಮ ಯಾಜ್ಞವಲ್ಕ್ಯ ಶಿಷ್ಯರಾದಿ ಮುನಿಜನರು ಮಂತ್ರಸೂಕ್ತ ವಾಕ್ಯಗಳನ್ನು ಪಠಿಸುತ್ತಾ, ಅನುಸರಿಸಿದರು.

ತುರಗ ರಾಜವು ಪ್ರದಕ್ಷಿಣಾಕಾರವಾಗಿ ಭಾರತ ಭೂವಲಯವನ್ನು ಸುತ್ತಿ ನಡೆಯುತ್ತಿರಲು, ಅರ್ಜುನನು ಅಪ್ರಮತ್ತನಾಗಿ ಅದನ್ನು ರಕ್ಷಿಸುತ್ತಾ ಹಿಂದೆ ನಡೆದನು. ಅಶ್ವವು ತ್ರಿಗರ್ತದೇಶವನ್ನು ಸೇರಿತು ತ್ರಿಗರ್ತರಾಜನ ಪುತ್ರಪೌತ್ರರು ಅಶ್ವವನ್ನು ಹಿಡಿಯ ಬಂದರು. ಧರ್ಮಜನ ಮಾತನ್ನು ನೆನೆದು, ಶಾಂತವಿಕ್ರಮಾನದ ಅರ್ಜುನನು 'ಸೂರ್ಯವರ್ಮ! ಶೂರವರ! ತ್ರಿಗರ್ತವೀರರೇ! ಧರ್ಮರಾಜನ ಅಶ್ವಮೇಧಯಾಗದ ಕುದುರೆಯನ್ನು ತಡೆಯಬೇಡಿ! ಯಾಗವಿಘ್ನವನ್ನಾಚರಿಸುವುದು ಪಾಪವಲ್ಲವೇ? ನಾವು ಬಾಂಧವರಾಗಿರಲು ಹಗೆ ಏಕೆ? ಭಾರತ ರಣದಲ್ಲಿ ಉಭಯ ಪಕ್ಷದ ರಾಜವರರು ದುರ್ಯೋಧನಾಪರಾಧದಿಂದ ಮೃತರಾದರು. ಇನ್ನುಳಿದ ಅವರ ಬಾಲರನ್ನು ವಧಿಸಬಾರದೆಂಬ ನಮ್ಮ ಮಹಾರಾಜನು, ಜ್ಯೇಷ್ಠ ಸೋದರನು ಆದ ಧರ್ಮಜನ ಆಜ್ಞೆ! ಆದುದರಿಂದ ನಿಮ್ಮನ್ನು ಅನುನಯಿಸಿ, ವಶಪಡಿಸಿ, ಯಜ್ಞವನ್ನು ಸಾಂಗಗೊಳಿಸಲೆಣಿಸಿರುವ ನಮ್ಮ ಅಭಿಪ್ರಾಯವನ್ನರಿಯದೆ, ಹಠದಿಂದ, ಕಡಿದಾಡ ಬಂದರೆ ನಿಮಗೆ ಶ್ರೇಯಸ್ಸಾಗದು ತಿಳಿಯಿರಿ!' ಎಂದು ಅವರನ್ನು ವಾರಿಸಿದನು. ಆದರೂ ಅವರು ಅವನ ಮಾತಿಗೆ ಕಿವಿಗೊಡದೆ ಮೇಲೇರಿ ಬಂದರು.

ಸೂರ್ಯವರ್ಮನು ವಿಶಿಖಪಂಚಕದಿಂದ ವಿಜಯನನ್ನು ಪೀಡಿಸಿದನು. ಅವನ್ನು ಖಂಡಿಸಿ, ಗಾಂಡೀವಿಯು ಅವನೊಡನೆ ಮೃದುಯುದ್ಧವನ್ನೇ ಮಾಡುತ್ತಿದ್ದನು. ಆಗ ಸೂರ್ಯವರ್ಮನ ತಮ್ಮನಾದ ಕೇತುವರ್ಮನು ನೂರುಬಾಣಗಳಿಂದ ಅರ್ಜುನನನ್ನು ಪೀಡಿಸಿ, ಆರ್ಭಟಿಸಿದನು. ಅವನ ತಮ್ಮನಾದ ಧೃತವರ್ಮನೂ ನಿಶಾತಶರತತಿಯಿಂದ ತಾಟಿಸಿದಾಗ, ಮೇರುಧೀರನಾದ ಪೃಥಾಕುಮಾರನು ಅವರೀರ್ವರ ಬಾಣಗಳನ್ನು ಮಧ್ಯದಲ್ಲೇ ಖಂಡಿಸಿ, ಹತ್ತು ಬಾಣಗಳಿಂದ ಅವರ ವಕ್ಷಸ್ಥಲವನ್ನು ಹೊಡೆದನು. ಧೃತವರ್ಮನು ಬಾಣದಿಂದ ಪಾರ್ಥನ ಮುಷ್ಟಿಯನ್ನು ಪೀಡಿಸಿದಾಗ, ಗಾಂಡೀವವು ಜಾರಿ ಕೆಳಗೆ ಬಿತ್ತು. ಅದನ್ನು ಕಂಡು, ತಿಗರ್ತವೀರರು ಸಿಂಹಗರ್ಜನೆ ಮಾಡುತ್ತಾ ಒಮ್ಮೆಗೆ ಅರ್ಜುನನನ್ನು ಮುತ್ತಿ ವಿವಿಧಾಸ್ತ್ರ ಶಸ್ತ್ರಗಳನ್ನು ಪ್ರಯೋಗಿಸಿದರು.

ಅರ್ಜುನನ ನೇತ್ರದ್ವಯವು ರಕ್ತಾಂತವಾಗಿ ಕಿಡಿಗಾರಿತು. ಉತ್ಕಟ ವೇಗದಿಂದ ಗಾಂಡೀವವನ್ನೆತ್ತಿ ಆ ಮಹಾವೀರನು ಬಾಣ ಸಹಸ್ರದಿಂದ ಅವರನ್ನು ಪೀಡಿಸಿದನು. ಸಿಡಿಲಂತೆ ಬಡಿವ ಪಾರ್ಥ ಬಾಣಗಳಿಗೆ ಸೋದರತ್ರಯವು ಮೂರ್ಛಿತವಾಯಿತು. ತ್ರಿಗರ್ತ ಸೈನಿಕರು

ದಿಕ್ಕೆಟ್ಟು ಓಡತೊಡಗಿದರು. ಆಗ ಅರ್ಜುನನು ಅವರಿಗೆ ಅಭಯವನ್ನಿತ್ತು, ತನ್ನ ಸೈನಿಕರು ಅವರನ್ನು ಹಿಂಬಾಲಿಸಿ ಕೊಲ್ಲದಂತೆ ನಿವಾರಿಸಿ, ಅಶ್ವವನ್ನು ಅನುಸರಿಸಿ ಹೊರಟನು. ಸೂರ್ಯವರ್ಮಾದಿಗಳು ಎಚ್ಚತ್ತು, ತಮ್ಮ ಪುರವನ್ನು ಸೇರಿದರು.

ಕುದುರೆಯು ಪ್ರಾಗ್ಜ್ಯೋತಿಷಪುರವನ್ನು ಸಮೀಪಿಸಿದಾಗ, ಭಗದತ್ತನ ತನಯನಾದ ವಜ್ರದತ್ತನು ಪೂರ್ವವೈರದಿಂದಲು, ಬಾಹುಗರ್ವದಿಂದಲು, ಬಾಲ್ಯ ಚಾಪಲ್ಯದಿಂದಲು ಪ್ರೇರಿತನಾಗಿ, ಕುದುರೆಯನ್ನು ಕಟ್ಟಿಹಾಕಿಸಿ, ಅರ್ಜುನನೊಡನೆ ಕಾದಲು ಬಂದನು. ಅರ್ಜುನನ ನಿಶಿತಬಾಣ ಪರಂಪರೆಯಿಂದ ನೊಂದ ವಜ್ರದತ್ತನು, ಪುರಿಯನ್ನು ಪ್ರವೇಶಿಸಿ, ಮತ್ತೆ ಗಜರಾಜ ವನ್ನೇರಿ ಬಲವನ್ನು ಕೈಕೊಂಡು, ಪಾರ್ಥನನ್ನೆದುರಿಸಿದನು. ತೋಮರ ಶತದಿಂದ ಘಾತಿಸಿದ ಭಗದತ್ತಕುಮಾರನನ್ನು ಅರ್ಜುನನು ಅನಲಶಿಖಾಭೀಲವಾದ ಶರಜಾಲದಿಂದ ಹೊಡೆದು ಮೂರ್ಛೆಗೆಡವಿದನು. ವಜ್ರದತ್ತನು ಎಚ್ಚತ್ತು ಉಚ್ಚ ಮಾತಂಗವನ್ನೇರಿ ಶರಜಾಲವನ್ನು ಪ್ರಯೋಗಿಸಿದನು. ಅವನ ಬಾಣಗಳನ್ನು ಖಂಡಿಸಿ ಗಾಂಡೀವಿಯು ಚಂಡಕೋಪನಾಗಿ, ಬಾಣಸಹಸ್ರದಿಂದ ಅವನ ದಂತಿಯನ್ನೂ, ಶರಶತದಿಂದ ಅವನನ್ನೂ ಪೀಡಿಸಿದನು. ಇಂತು ಮೂರು ದಿವಸಗಳವರೆಗೂ ಕಾದಿ, ವಜ್ರದತ್ತನು, 'ಅರ್ಜುನ! ನನ್ನನ್ನು ಗೆಲ್ಲಲಾರೆ! ತಿಳಿ! ವೃದ್ಧನಾದುದರಿಂದ ನಮ್ಮ ಜನಕನು ನಿನ್ನ ಬಾಣಾಹತಿಗೆ ಸಿಕ್ಕು ರಣನಿಹತನಾದನು. ಅಂತೆಯೇ ನನ್ನನ್ನೂ ಕೊಲ್ಲಬಲ್ಲವನೆಂದು ಗರ್ವಿಸಬೇಡ! ಈ ನನ್ನ ಭಲ್ಲದಿಂದ ಕಾದುಕೋ!' ಎಂದು ಗರ್ಜಿಸಿ, ಭಲ್ಲದಿಂದ ಅರ್ಜುನನ ಫಾಲವನ್ನು ತಾಟಿಸಿದನು ಮತ್ತು ಗಜವನ್ನು ಪಾರ್ಥನ ಮೇಲೇರಿ ಬರುವಂತೆ ಪ್ರೇರಿಸಿದನು. ಘೀಂಕಾರವನ್ನು ಮಾಡಿ, ಗಿರಿಯಂತೆ ಅಡರುವ ಗಜರಾಜನನ್ನು ಶತಧಾರನಿಭವಾದ ಶರದಿಂದ ಹೊಡೆದು, ಕೆಡಹಿ, ಫಲ್ಗುಣನು ಪಟುಬಾಣ ನಿವಹದಿಂದ ವಜ್ರದತ್ತನನ್ನು ಪೀಡಿಸಿದನು. ದಯಾಲೋಲನಾಗಿ ಮೃದುರಣನಿರತನಾಗಿದ್ದ ಅರ್ಜುನನು ಮಧುರ ವಚನಗಳಿಂದ ಅವನಿಗಿಂತೆಂದನು:

'ವಜ್ರದತ್ತ! ಸುಮ್ಮನೆ ಕಾದಿ ಕೆಡಬೇಡ! ಅಶ್ವಮೇಧವನ್ನು ಸಂಕಲ್ಪಿಸಿದ ಧರ್ಮರಾಜನ ಅಪ್ಪಣೆಯಂತೆ ಅಶ್ವರಕ್ಷಕನಾಗಿ ಬಂದಿರುವೆನು. ಅನುಕಂಪಾವಶನಾಗಿ ರಾಜಪುತ್ರರನ್ನು ಸಂಹರಿಸಬಾರದೆಂದು ಆಜ್ಞಾಪಿಸಿದ ಅಣ್ಣನ ಆಣತಿಯು ನನ್ನಿಂದ ಮೃದುಯುದ್ಧವನ್ನು ಮಾಡಿಸುತ್ತಿದೆ ತಿಳಿ! ಬಿಡು ವೈರವನ್ನು! ನಾಳೆ ಬರುವ ಚೈತ್ರ ಪೂರ್ಣಿಮೆಗೆ ಹಸ್ತಿಪುರಕ್ಕೆ ಬಂದು, ಅಶ್ವಮೇಧಯಾಗದಲ್ಲಿ ನೆರವಾಗಿ ನಿಂದು, ಮುನಿವೃದ್ಧ ಸುಜನತತಿಯ ಪ್ರಶಂಸೆಗೆ ಪಾತ್ರನಾಗು!' ಇಂತು ನುಡಿದ ಕುಂತೀ ನಂದನನ ಮಾತಿಗೆ ಸಮ್ಮತಿಸಿ ವಜ್ರದತ್ತನು ಅರ್ಜುನನನ್ನು ಪೂಜಿಸಿ ಕಳಿಸಿದನು.

ಅಶ್ವರಾಜವು ಸಿಂಧು ದೇಶವನ್ನು ಅತಿಕ್ರಮಿಸುತ್ತಿರಲು, ನೋಡಿ ಸೈಂಧವ ರಾಜಪುತ್ರ ಪೌತ್ರರು ವೈರವನ್ನು ಸ್ಮರಿಸಿ, ಅನೇಕ ಭಟಾನೀಕದಿಂದ ಕೂಡಿ, ಪಾಂಡುನಂದನನನ್ನು ತಾಕಿದರು. ಉದ್ದಂಡ ವಿಕ್ರಮನಾದ ಗಾಂಡೀವಿಯು ಅವರ ಉದ್ಧತಧಾಟಿಗೆ ಸ್ವಲ್ಪ ಹಿಂಜರಿದರೂ, ಮತ್ತೆ ವಿಜೃಂಭಿಸಿ, ತೀಕ್ಷ್ಣನಾರಾಚಗಳಿಂದ ಅವರನ್ನು ಶರಸಹಸ್ರದಿಂದ ಪೀಡಿಸಿ, ಹಿಮ್ಮೆಟ್ಟಿಸಿದನು. ರಣರಂಗವೆಲ್ಲವೂ ಸಿಂಧು ವೀರಶವಾವೃತವಾಯಿತು. ರಕ್ತವು ಕಾಲುವೆಗಳಾಗಿ

ಹರಿಯಿತು. ಹತಶೇಷರಾದ ಸಿಂಧುವೀರರು ಮತ್ತೆ ಮೇಲೇರಿ ಬರುವುದನ್ನು ನೋಡಿ, ಅರ್ಜುನನು ಧರ್ಮಜನ ಹಿತಸಂದೇಶವನ್ನು ಅವರಿಗೆ ತಿಳಿಸಿ, ಶಾಂತಿಸಲು ಆಜ್ಞಾಪಿಸಿದನು. ಆದರೂ ಅವರು ಹಿಂಜರಿಯದೆ ಬಲು ಶರವ್ರಾತದಿಂದ ಅರ್ಜುನ ಭಟರನ್ನು ಪೀಡಿಸಿ ಕಾದತೊಡಗಿದರು. ಸಿಂಧು ಸೈನ್ಯವು ಅರ್ಜುನನ ಬಾಣಹತಿಯಿಂದ ಪೀಡಿತವಾಗಿ ದೈನ್ಯದಿಂದ ಓಡತೊಡಗಿತು.

ಆ ವಾರ್ತೆಯನ್ನು ಕೇಳಿ, ದುಶ್ಶಲೆಯು ಆರ್ತಳಾಗಿ ಪೌತ್ರನನ್ನು ಕರೆತಂದು, ಅರ್ಜುನನ ಚರಣಗಳಲ್ಲಿ ಸಮರ್ಪಿಸಿ, ದುಃಖಾವೇಗದಿಂದ ರೋದಿಸಿದಳು. 'ಅರ್ಜುನ! ಇವನು ನಿನ್ನ ಅಳಿಯನ ಮಗನು; ತನ್ನ ಜನಕನು ನಿನ್ನಿಂದ ಸಂಹೃತನಾದಂದಿನಿಂದ ಮರುಗಿ, ಮರುಗಿ, ಸುಕ್ಕಾಗಿ, ಮತ್ತೆ ದಂಡೆತ್ತಿ ಬಂದ ನಿನ್ನ ವಿಕ್ರಮ ವಿದ್ವೇಷಗಳಿಗೆ ಹೆದರಿ, ಅಸುಗಳನ್ನು ನೀಗಿದ ತನ್ನ ಪುತ್ರನ ಪುತ್ರನು ಧಾರ್ತರಾಷ್ಟ್ರನು ಮಾಡಿದ ಅಪರಾಧಗಳನ್ನು ನನ್ನ ಭಕ್ತನ ಅವಿವೇಕವನ್ನು ಮರೆತು ತಂದೆಯನ್ನು ಕಳೆದುಕೊಂಡಿರುವ ಈ ಬಾಲನಿಗೆ ಪಾಲನಾಗಿ, ಕರುಣೆದೋರಿ ಕಾಪಾಡು!' ಎಂದು ಹೇಳಿದ ತಂಗಿಯ ಮಾತಿಗೆ ಮನಸ್ಸು ಕರಗಿ, ಕಣ್ಣೀರಿಟ್ಟು ಅರ್ಜುನ ನಿಂತೆಂದನು: "ಕ್ಷತ್ರಿಯ ಧರ್ಮವು ಅತಿನಿಷ್ಠುರವಾಗಿದೆ ತಂಗಿ! ಅಧಮವರ್ತನನಾದ ಸುಯೋಧನನಿಂದ ಇಷ್ಟನರ್ಥವಾಯಿತು! ನಾವೂ ಕ್ರೂರರಾಗಿ ಬಂಧು ಗುರುಗಳನ್ನು ಕೊಂದೆವು. ಚಿಂತಿಸಿ ಫಲವಿಲ್ಲ. ಬಾಲನಿಗಭಯವಿತ್ತಿರುವೆನು" ಎಂದು ಸಂತೈಸಿ ಅರ್ಜುನನು ಅವಳನ್ನು ಕಳಿಸಿ, ತಾನು ಮುಂದೆ ಸಾಗಿದನು.

ಕ್ರಮವಾಗಿ ಅಶ್ವವು ಮಣಿಪುರ ಪ್ರಾಂತವನ್ನು ಸೇರಿತು. ಆ ವೃತ್ತಾಂತವನ್ನಾಲಿಸಿ ಮಣಿಪುರ ಕಾಂತನಾದ ಬಭ್ರುವಾಹನನು ತನ್ನ ತಂದೆಯನ್ನೆದುರ್ಗೊಂಡು ಕರೆದುಕೊಂಡು ಪೋಗಲೆಂದು, ಆರ್ಯಜನಯುತನಾಗಿ, ನಗರ ಬಹಿಃಪ್ರದೇಶದಲ್ಲಿ ಕಾದಿದ್ದನು. ಅರ್ಜುನನಲ್ಲಿಗೆ ಬರಲು, ನೋಡಿ, ಆನಂದ ಭಕ್ತಿ ಸಂಭ್ರಮಗಳಿಂದ ಕೂಡಿ, ಬಭ್ರುವಾಹನನು ಅರ್ಜುನನ ಅಡಿಗಳಿಗೆರಗಿ, ಕೈಜೋಡಿಸಿ ನಿಂತನು. ಅರ್ಜುನನು ತನಗೆ ಬಾಗಿ ನಿಂತ ಸುತನನ್ನಾದರಿಸದೆ, ಉದಾಸೀನನಾಗಿದ್ದನು. ತಂದೆಯು ಅನಾದರಕ್ಕೆ ಕಾರಣವನ್ನು ತಿಳಿಯದೆ ಬಭ್ರುವಾಹನನು ತತ್ತರಿಸಿದನು. ಆಗ ಪಾರ್ಥನವನಿಗಿಂತೆಂದನು:

'ಯಾಗಮುಕ್ತವಾಗಿ ತಿರುಗುವ ತುರಗವನ್ನು ವೀರನಾಗಿ ಕಟ್ಟಿ, ನನ್ನಿಂದ ಕಾದದೆ, ಭೀರುವಿನಂತೆ ಕಾಲಿಗೆರಗಿ ಕ್ಷತ್ರಿಯ ಕುಮಾರ ಧರ್ಮಕ್ಕೆ ದೂರನಾದೆ! ಗುಣಹೀನ! ನಡೆಯಿಲ್ಲಿಂದ!' ಇಂತು ನಿಂದಿಸಿದ ತಂದೆಯ ಮಾತಿಗೆ ನೊಂದು ಬಭ್ರುವಾಹನನು ಹಿಂದಿರುಗಿ ರಾಜಮಾರ್ಗದಲ್ಲಿ ಮಂದಗಮನದಿಂದ ಪೋಗುತ್ತಿದ್ದನು. ಅರ್ಜುನನ ಮಾತಿನ ರೀತಿಯನ್ನು ತಿಳಿದು ಉಲೂಪಿಯು ಪಾತಾಳದಿಂದ ಎದ್ದು ಬಂದು, ಬಭ್ರುವಾಹನನ ಮುಂದೆ ನಿಂದು, ಇಂತೆಂದಳು: 'ವತ್ಸ! ನಾನು ನಿನ್ನ ತಾಯಿ ಎಂದು ತಿಳಿ! ನಾಗೇಂದ್ರ ಸುತೆಯಾದೆನ್ನನ್ನು ಉಲೂಪಿ ಎಂಬರು. ತಿಳಿಯಿತೇ! ನಿನಗೆ ಹಿತವನ್ನರುಹಲು ಬಂದಿರುವೆನು. ಚಿಂತೆಯನ್ನು ಬಿಡು! ಮಾಡು ಯುದ್ಧವನ್ನು! ನಿಮ್ಮ ತಂದೆಯೇ ನಿನ್ನ ವೀರ್ಯಶೌರ್ಯಗಳನ್ನು ಪರೀಕ್ಷಿಸಲು ಅಂತಾಡಿರುವನು. ಆತನ ಅಪ್ಪಣೆಯಂತೆ ಕಾದುವ ನಿನಗೆ ಪಾಪವಿಲ್ಲ. ರಾಜರಿಗೆ ಅರ್ಥಧರ್ಮವೇ

ಆಗಿರುವುದರಿಂದ ಆಹವದ ಆಹ್ವಾನವನ್ನು ಸ್ವೀಕರಿಸು!' ಆ ನಾಗಸತಿಯ ಮಾತನ್ನಾಲಿಸಿ, ಬಭ್ರುವಾಹನನು ಆಕೆಗೂ, ಅರ್ಜುನನಿಗೂ ಕಾಯೇನ ಮನಸಾ ನಮಿಸಿ, 'ತಾಯೇ! ತಂದೆಯೊಡನೆ ಕಾದಬಾರದೆಂದು ಹಿಂದಿರುಗಿ ಬಂದೆನಾಗಲಿ, ಭಯದಿಂದಲ್ಲ. ನೀನಿಂತು ತಿಳಿಯ ಹೇಳಿದ ಮೇಲೆ, ತಂದೆಯೂ ಅನುಮತಿಯನ್ನಿತ್ತ ಮೇಲೆ ಕಾದಿ ವೀರಪುತ್ರನೆಂದು ಪ್ರಕಟಿಸುವೆನು. ಆ ಖಂಡಲ ಸುತನಿಗೆ ಅಖಂಡ ಪ್ರೀತಿಯನ್ನು ತರುವೆನು' ಎಂದನು.

ದಿವ್ಯ ಸ್ಯಂದನವನ್ನೇರಿ, ನರತುರಗವಾರಣ ರಥಪೂರ್ಣ ಸೇನೆಯನ್ನು ಕೂಡಿ, ಅರ್ಜುನನೊಡನೆ ಕಾದಲು ನಿಶ್ಚಯಿಸಿ ಬಭ್ರುವಾಹನನು ಆಹವಭೂಮಿಯನ್ನು ಸೇರಿದನು. ಹಂಸಧ್ವಜನು, ದಿವ್ಯ ಭೂಷಣಾಂಬರನು, ದಿವ್ಯಗಂಧಾನುಲಿಪ್ತಾಂಗನು ರಣೋತ್ತುಂಗ ವಿಕ್ರಮನು, ದುರ್ವಾರ ವೀರಪರಿವಾರನು ಆದ ತನ್ನ ಕುಮಾರನನ್ನು ನೋಡಿ, ಅರ್ಜುನನು ಮನದಿ ಮೆಚ್ಚಿ ಅವವನ್ನು ಶರಶತದಿಂದ ಮುಚ್ಚಿದನು.

ಅಶ್ವವನ್ನು ಕಟ್ಟಿಹಾಕಿಸಿ, ಬಭ್ರುವಾಹನನೂ ಸಿಟ್ಟಿನಿಂದ ಐದು ಶರಗಳನ್ನು ಅರ್ಜುನನ ಎದೆಯಲ್ಲಿ ನಾಟಿಸಿ, ಸಿಂಹನಾದ ಮಾಡಿದನು. ರಿಪುಮರ್ದನನಾದ ಜನಾರ್ದನ ಸಖನು ಅವನ ಶರಜಾಲವನ್ನು ಖಂಡಿಸುತ್ತಾ, ಹಂಸಧ್ವಜವನ್ನೊಂದು ಭಲ್ಲದಿಂದ ಕೆಡಹಿ, ಆರು ಶರಗಳಿಂದ ಮಗನ ಮೈಯನ್ನು ಪೀಡಿಸಿದನು. 'ಈಗ ಸರಿಯಾಗಿದೆ! ನನ್ನ ಸುತನೆನಿಸಲರ್ಹ ನಿರುವೆ! ಬಿಡಬೇಡ! ಕಡಿದಾಡು!' ಎಂದು ಬಲು ಬಾಣಗಳಿಂದ ತನ್ನನ್ನು ಪಿಡಿಸಿದ ತಂದೆಯಲ್ಲಿ ಕುಪಿತನಾಗಲಾರದೆ ಬಭ್ರುವಾಹನನು ಉದಗ್ರಪರಾಕ್ರಮವನ್ನು ತೋರಬೇಕೆಂಬ ಅರ್ರುನಾಜ್ಞೆಯಂತೆ ವಜ್ರಕಠಿಣವು ವಹ್ನಿಕೀಲಾಭೀಲವು ಮಂತ್ರಪೂತವು ಆದ ಒಂದು ನಿಶಿತಶರದಿಂದ ಅರ್ರುನನ ಎದೆಗೆ ತಾಡಿಸಿದನು. ಬಲು ವೇಗದಿಂದ ಬಂದ ನಾರಸವು ಪಾರ್ಥನ ಎದೆಯನ್ನು ತೂರಿ, ಬೆನ್ನನ್ನು ಸೀಳಿ ಹೊರಬಂತು. ಅರ್ರುನನು ಅದೇ ಸಮಯದಲ್ಲಿ ಬಿಟ್ಟ ನಿಶಾತಶರವು ಬಭ್ರುವಾಹನನ ಎದೆಯಲ್ಲಿ ನಾಟಿ ನಿಂತಿತು. ಪರಸ್ಪರ ಶರಾಘಾತದಿಂದ ತಂದೆ ಮಕ್ಕಳು ಮೂರ್ಛಿತರಾಗಿ, ಮೃತಪ್ರಾಯರಾದುದನ್ನು ಕಂಡು ಉಭಯ ಸೇನೆಗಳು ಹಾಹಾಕಾರಗೈದವು.

ಈ ವಾರ್ತೆ ಕಾಳ್ಗಿಚ್ಚಿನಂತೆ ಮಣಿಪುರದಲ್ಲಿಯೂ ಅಂತಃಪುರದಲ್ಲಿಯೂ ವ್ಯಾಪಿಸಿತು. ತತ್‌ಕ್ಷಣವೇ ಆರ್ತಿ ಮೂರ್ತಿಯಾದ ಚಿತ್ರಾಂಗದೆಯು ಸಂಗರ ರಂಗವನ್ನು ಸೇರಬಂದಳು. ಅವಳನ್ನನುಸರಿಸಿ ಉಲೂಪಿಯೂ ಬಂದಳು. ಚಿತ್ರಾಂಗದೆಯು ಸತ್ತಂತೆ ಬಿದ್ದಿದ್ದ ಪತಿಸುತರನ್ನು ನೋಡಿ ದುಃಖಭರದಿಂದ ನೆಲದಿ ಬಿದ್ದು ಮೂರ್ಛಿತಳಾದಳು. ಸ್ವಲ್ಪ ವೇಳೆಗೆ ಎಚ್ಚತ್ತು ಆಕೆಯು ದುಃಖರೋಷಪೂರಿತ ವಚನಗಳಿಂದ ನಾಗನಂದಿನಿಗಿಂತೆದಳು: 'ಆಹಾ! ನಿನ್ನ ದೆಶೆಯಿಂದ ಬಂದ ಆಪತ್ತನ್ನು ತಿಳಿದೆಯಾ? ಸಂತಸವಾಯಿತೇ ನಿನಗೆ ನನ್ನ ಮುದ್ದುಕಂದನ ಮೃತಿಯಿಂದ? ಪತಿವ್ರತೆಯಾಗಿ, ಧರ್ಮಜ್ಞಳೆನಿಸಿ ಸಮ್ರಾರ್ವರ ಪತಿಯಾದ ಪಾರ್ಥನ ಮೃತಿಯನ್ನೂ ಸಾಧಿಸಿದ ನಿನ್ನ ಆಶ್ಚರ್ಯಕರ ಚರ್ಯೆಗೆ ಕಾರಣವನ್ನು ತಿಳಿಯಲಾರದೆ, ತತ್ತರಿಸುತ್ತಿರುವೆನು. ಮಗನಂತಿರಲಿ! ಗಂಡನು ನಿನಗೂ ಆಹುದೆಂದು ತಿಳಿದೂ, ಕಣ್ಣೀರಿಡದೆ ಕಲ್ಲಾಗಿರುವುದನ್ನು ಕಂಡು ಅಚ್ಚರಿಯಾಗಿದೆ! ಮಾಡಿದ ತಪ್ಪನ್ನೆಣಿಸುವ ಸಮಯವಲ್ಲ! ದಿವ್ಯ

ಮಾನಿನೀಮಣಿಯಾದ ನಿನಗೆ ಅಸದಳವಿಲ್ಲ. ಆಲಸ್ಯವಿಲ್ಲದೆ ಸಂಜೀವಿನಿಯನ್ನ ತಂದು ನಾಥನನ್ನು ಬದುಕಿಸಿಕೊಡು! ನಿನ್ನನ್ನು ಪತಿಸುತ ಪ್ರಾಣಭಿಕ್ಷೆಗಾಗಿ ಸೆರಗೊಡ್ಡಿ ಬೇಡುವ ನನ್ನನ್ನು ಕೃಪೆಯಿಂದ ನೋಡು!'

ಇಂತು ನಾಗವನಿತೆಯನ್ನು ಬೇಡಿ, ಚಿತ್ರಾಂಗದೆಯು ನಾಥನ ಕಡೆ ತಿರುಗಿ, 'ಪ್ರಾಣನಾಥ! ಅತುಲ ಪರಾಕ್ರಮನೆನಿಸಿ ಮೆರೆದೆ! ಶರಣಿಂದ ಸೈನಿಕರ ಪ್ರಾಣಗಳನ್ನು ಪರಿಹರಿಸದೆ ಪೊರೆದೆ! ಇಂತಹ ಶೂರ ವರನಿಗೆ ಕುಮಾರನಿಂದ ಮರಣವೆಂದು ವಿಧಿಯು ಲಿಖಿಸಿದನೇ? ಹಾ! ಏನು ಮಾಡಲಿ? ಇನ್ನೆಂತು ಜೀವಿಸಲಿ? ಏಕೆ ಎನಗಿನ್ನು ಬದುಕಿನಾಶೆ! ಎಂದೆಂದೂ ಬಿಡದೆ ಪ್ರೀತಿಸಿದ ನಿನ್ನ ಕರುಣೆಯದೆಲ್ಲಿ ಪೋಯಿತೆ? ಧರ್ಮರಾಜನು ನಿನ್ನ ಬರುವಿಕೆಗಾಗಿ ಕಾದಿರುವನು. ಏಳು! ಏಳು! ಅಶ್ವಮೇಧದ ಕುದುರೆಯನ್ನು ಕೊಂಡು ಪೋಗು! ಯಜ್ಞವು ಸಾಂಗವಾಗಲಿ! ಅಯ್ಯೋ! ಏಕೆ ಮಾತನಾಡದಿರುವೆ? ಸ್ವಾಮಿನ್! ನಿನ್ನ ಅರ್ಧಾಂಗಿಯಾದ ನನ್ನನ್ನೇಕೆ ಬಿಟ್ಟುಪೋದೆ? ನನ್ನನ್ನೂ ಕರೆದುಕೊಂಡು ಪೋಗು!' ಎಂದು ವಿಲಪಿಸಿದಳು. 'ಉಲೂಪೀ! ಮಗನಿಂದ ಮಡಿದು ಬಿದ್ದಿರುವ ಮಹಾನುಭಾವನನ್ನು ಮತ್ತೆ ಬದುಕಿಸಿದರೆ ಸರಿ! ಇಲ್ಲದಿರೆ ಪ್ರಾಯೋಪವೇಶವನ್ನು ಗೈದು, ಆತನೊಡನೆ ನಂದನವನ ವಿಹಾರಕ್ಕೆಂದು ಹೋಗಿಬಿಡುವೆನು' ಎಂದು ಚಿತ್ರಾಂಗದೆಯು ಪಾರ್ಥನ ಚರಣಯುಗದಿ ಶಿರವಿಟ್ಟು ಚಿಂತಾಕ್ರಾಂತಳಾಗಿದ್ದಳು. ಆಗ ಬಭ್ರುವಾಹನನು ಎಚ್ಚತ್ತು ತನ್ನ ಮಾತೆಯ ದುಃಖವನ್ನೂ ತಂದೆಯ ಗತಿಯನ್ನೂ ನೋಡಿ, ವಿಷಾದಭರದಿಂದ ತಲೆಬಾಗಿಸಿ ಹೃದಯ ಕುಹರವು ಶೋಕಾಗ್ನಿಯಿಂದ ಕುದಿಯುತ್ತಿರಲು ಇಂತು ವಿಲಪಿಸಿದನು:

'ಹಾ! ಎಂತಹ ಪಾಪಿಯಾದೆನು? ಎಂದೆಂದೂ ನೊಂದರಿಯದ ಮಾತೆಗೆ ಬಲು ದುಃಖವನ್ನು ತಂದಿತ್ತೆನು. ನನ್ನ ವೀರ್ಯ ಶೌರ್ಯಗಳನ್ನಳೆದು ಹರ್ಷಿಸಬೇಕೆಂದ ತಂದೆಯ ಪ್ರಾಣರತ್ನಗಳನ್ನು ಅಪಹರಿಸಿ, ಅಪರಿಹಾರ್ಯವಾದ ಅಪರಾಧವನ್ನೆಸಗಿದೆನು. ಇಂತಹ ದುಷ್ಟನಂದನನು ನ ಭೂತೋ ನ ಭವಿಷ್ಯತಿ! ನನಗೆ ಪ್ರಾಯಶ್ಚಿತ್ತವಿಲ್ಲ. ಆಂಗಿರಸ ಗೌತಮ ಯಜ್ಞ್ಯವಲ್ಕ್ಯ ಶಿಷ್ಯರೇ! ನೀವಾದರೂ ನಿಮ್ಮ ತಪಃಪ್ರಭಾವದಿಂದ ನನ್ನ ತಂದೆಯನ್ನು ಬದುಕಿಸಿರಿ! ಅಥವಾ ತಂದೆಯ ಕಪಾಲವನ್ನು ಕೈಯಲ್ಲಿ ಪಿಡಿದು, 'ಪಿತೃಹಂತಕನಿಗೆ ಭಿಕ್ಷೆ!' ಎಂದು ಸಾರುತ್ತಾ, ಪ್ರಶ್ಚಾತ್ತಾಪತಪ್ತನಾಗಿ, ಭಿಕ್ಷೆ ಬೇಡುತ್ತಾ ಹನ್ನೆರಡು ವರ್ಷಗಳನ್ನು ಕಳೆದರೆ ಪ್ರಾಯಶ್ಚಿತ್ತವಾಗುವುದೇ ತಿಳಿಸಿರಿ! ಭುಜಗಸುತೆಯು ಯಾವ ಅಭಿಪ್ರಾಯದಿಂದ ನನ್ನನ್ನು ತಂದೆಯೊಡನೆ ಕಡಿದಾಡಲು ಪ್ರೇರಿಸಿದಳೋ ನಾ ಕಾಣೆನು. ನನ್ನಂತಹ ಪಾತಕಿಗೆ ಪ್ರಾಯೋಪವೇಶವೇ ಗತಿಯಾಗಿದೆ. ಆಗಲಿ, ಬೇರೆ ಪ್ರಾಯಶ್ಚಿತ್ತವಿಲ್ಲ! ವೀರಹತ್ಯೆಕಿಂತಲು ರಾಜವಧೆಯು ದಶಗುಣಿತ ಪಾಪವಾಗಿದೆ. ರಾಜವಧೆಕಿಂತಲು ಬ್ರಹ್ಮಹತ್ಯೆ ಶತಗುಣಿತ ಪಾಪವೆನಿಸಿದೆ. ಅದಕಿಂತಲು ಅನಂತಗುಣಿತಪಾಪವಾದ ಪಿತೃವಧವನ್ನು ಮಾಡಿ, ಉಭಯಲೋಕ ದೂರನಾದೆನು. ಇನ್ನೇನು ಗತಿ?'

ಇಂತು ವಿಲಪಿಸಿ, ಪ್ರಾಯೋಪವೇಶಕ್ಕೆಂದು ಸಂಕಲ್ಪಿಸುವ ಜನನೀಸುತರನ್ನು ಕಂಡು, ಉಲೂಪಿಯು ನಗನಗುತ್ತಾ, ವಿಶಲ್ಯ ಕರಣಿಯನ್ನು ನೆನೆದಳು. ಭುಜಗಕುಲ

ಪರಾಯಣವಾದ ಮಹಾಮಣಿಯು ಆಕೆಯ ಪದ್ಮಸುಂದರ ಪಾಣಿತಲದಲ್ಲಿ ಬಂದು ನಿಂತಿತು. ಅದನ್ನು ಸೋಕಿಸಿ, ಮೂರ್ಛಿತನಾಗಿದ್ದ ಪಾರ್ಥನನ್ನು ಪುನರುಜ್ಜೀವಿಸಿ, ನಾಗವನಿತೆಯು ಅಲ್ಲಿ ನೆರೆದಿದ್ದ ಸರ್ವ ಜನರಿಗೂ ಅಪೂರ್ವಹರ್ಷವನ್ನು ತಂದಿತ್ತು, ಬಭ್ರುವಾಹನನ್ನವಲೋಕಿಸಿ ಇಂತೆಂದಳು:

'ವತ್ಸ! ಅರ್ಜುನನನ್ನು ಸಂಹರಿಸಲು ಸುರಾಸುರರಿಗೆ ಶಕ್ಯವಲ್ಲ. ಆತನು ನರನೆಂತಲು, ನಾರಾಯಣಸಖನೆಂತಲು ತಿಳಿ! ಆ ವೀರ ವರನಿಗೆ ತಕ್ಕ ಕುಮಾರನಿರುವ ಎಂದು ಲೋಕವು ತಿಳಿಯುವಂತಾಯಿತು. ಪಾರ್ಥನ ಮನೋಭಿಲಾಷೆಯನ್ನರಿತು ನಾನೇ ನಿನ್ನನ್ನು ಯುದ್ಧಕ್ಕಾಗಿ ಪ್ರೇರಿಸಿದನು. ನಿನ್ನ ತಂದೆಯು ಪುನರುಜ್ಜೀವಿತನಾಗಿರುವನು, ನೋಡು!' ಆ ಮಾತಿಗೆ ಸಂತಸಪಟ್ಟು ಬಭ್ರುವಾಹನನು, ಮಲಗಿದ್ದು ಎಚ್ಚತ್ತವನಂತೆ ಕೂತಿದ್ದ ಕುಂತೀಸುತನಿಗೆ ವಂದಿಸಿ, ವಿನಯಾನತನಾಗಿ ನಿಂತನು. ಚಿತ್ರಾಂಗದೆಯೂ ಪತಿಪಾದಗಳಲ್ಲಿ ಬಿದ್ದು ಆನಂದಬಾಷ್ಪಗಳಿಂದ ಅವನ್ನು ತೋಯಿಸಿದಳು.

ಅರ್ಜುನನು ಎಚ್ಚತ್ತು ಕೂತು, ತನ್ನ ಸತೀ ಸುತರನ್ನು ಸಮುದಾಯಿಸಿದನು. 'ಪುತ್ರ ! ನಿನ್ನಲ್ಲಿ ಪ್ರಸನ್ನನಾಗಿರುವೆನು. ನಿನ್ನ ಅಪರಾಧವಿಲ್ಲ' ಎಂದು ಆಲಿಂಗಿಸಿ, ಉಲೂಪಿಯನ್ನು ನೋಡಿ ಅರ್ಜುನನು 'ನೀನೇಕೆ ಇಲ್ಲಿಗೆ ಬಂದೆ?' ಎಂದು ಕೇಳಿದನು. ಉಲೂಪಿಯು, 'ನಾಥ ! ಅಹಿರಾಜ ಕುಮಾರಿಯನ್ನು ನೋಡಿ ಅನಾಹುತವೆಂದು ಶಂಕಿಸಬೇಡ! ನಿಮ್ಮಲ್ಲಿ ಯಾರಿಗೂ ಅಪರಾಧವನ್ನೆಣಿಸುವವಳಲ್ಲ, ಕೇಳು! ಚಿತ್ರಾಂಗದೆಯೂ ಕೇಳಿ ನಾನು ಪವಿತ್ರಾತ್ಮಳೆಂದು ತಿಳಿಯಲಿ ! ನೀನು ಭಾರತರಣದಲ್ಲಿ ಭೀಷ್ಮನನ್ನು ವ್ಯಾಜದಿಂದ ಕೆಡಹಿದೆ ಅಲ್ಲವೆ? ಶಿಖಂಡಿಯನ್ನು ಮುಂದಿಟ್ಟುಕೊಂಡು, ಬಾಣತತಿಯಿಂದ ಪಿತಾಮಹನನ್ನು ಕೊಂದ ಪಾತಕವು ನಿನ್ನನ್ನು ಪೀಡಿಸುತ್ತಿತ್ತು. ಒಂದು ದಿನ ಸುರನದೀ ಸ್ನಾನಕ್ಕೆಂದು ನಾನು ಹೋಗಿದ್ದೆನು. ಅಲ್ಲಿ ವಸ್ವಾದಿ ದೇವತೆಗಳೂ ಮೀಯಲು ಬಂದಿದ್ದರು. ಸುರಗಂಗೆಯು ನಿಜರೂಪದಿಂದ ಸನ್ನಿಹಿತಳಾಗಿ, ಅವರೊಡನೆ ಮಾತನಾಡುತ್ತಿದ್ದನ್ನು ನಾನು ಕೇಳಿಕೊಂಡೆನು. ದೇವತೆಗಳು ನಿನ್ನನ್ನು ಶಪಿಸಿ, ನಿನ್ನ ಅಧರ್ಮ ನಿಷ್ಕೃತಿಯನ್ನು ಸಾಧಿಸಿ, ಪೂತನನ್ನಾಗಿ ಮಾಡಬೇಕೆಂದರು. ಗಂಗೆಯೂ ಅದನ್ನು ಅನುಮೋದಿಸಿದಳು. ಆಗ ನಾನು ಬೇಗ ಪೋಗಿ ನನ್ನ ತಂದೆಯನ್ನು ಕರೆತಂದೆನು. ಆತನ ಪ್ರಾರ್ಥನೆಯನ್ನು ಮನ್ನಿಸಿ, ದೇವತೆಗಳಿಂತೆಂದು ಸಮಯ ಬಂಧವಿಟ್ಟು ಶಪಿಸಿದರು. 'ಭೀಷ್ಮಾದಿಗಳನ್ನು ವ್ಯಾಜದಿಂದ ಸಂಹರಿಸಿದುದರಿಂದ ಅರ್ಜುನನು ಅತಿಧರ್ಮವಂತನೆನಿಸದ ಇರುವನು. ಆ ದೋಷಪರಿಹಾರಕ್ಕಾಗಿ ಆತನು ಅತಿವೇದನೆಯನ್ನು ಹೊಂದಲಿ! ಮರಣ ತುಲ್ಯವಾದ ವೇದನೆಯನ್ನು ಮಗನಿಂದಲೇ ಹೊಂದಲಿ- ಎಂದೂ ಇತರರಿಂದಲ್ಲ. ಇಂತು ಶಪಿಸಿ ದೇವತೆಗಳು ಹೊರಟುಹೋದರು. ಆ ಮಾತು ಸುಳ್ಳಾಗದೆಂದು ತಿಳಿದು, ನಾನು ಬೇಕಾಗಿ, ಬಭ್ರುವಾಹನನನ್ನು ತಂದೆಯೊಡನೆ ಕಾದುವಂತೆ ಮಾಡಿದೆನು. ವೀರನಾದ ಕಂದನಿಂದ ತಂದೆಯ ಯಶಕ್ಕೆ ಕುಂದು ಬಾರದಲ್ಲವೇ? 'ಪುತ್ರಾದಿಚ್ಛೇತ್ ಪರಾಜಯಂ' ಎಂಬ ನುಡಿಯಂತೆ ಅರ್ಜುನನು ಬಭ್ರುವಾಹನನಿಗೆ ಸೋತು, ದೇವಶಾಪವನ್ನು ಸಾರ್ಥಕ

ಗೊಳಿಸಲು - ಮೂರ್ಛಿತನಾದವನು. ಇದರಿಂದ ಆತನ ದೋಷವೂ ಪರಿಹೃತವಾಗಿ, ತ್ರಿಲೋಕವ್ಯಾಪ್ತವಾದಯ ಶಶ್ಚಂದ್ರಿಕೆಗೂ ಕಳಂಕವು ಬಾರದಂತಾಯಿತು. ಇನ್ನೊಬ್ಬ ವೀರನಿಂದ ಪಾತಿತನಾದರೆ ಅರ್ಜುನನಿಗೆ ಯಶೋಹಾನಿಯಾಗುತ್ತಿತ್ತು ! ಹಾಗಾಗಬಾರದೆಂದು, ದೇವತಾ ಸಂಕಲ್ಪಾನುಸಾರವಾಗಿ ನಾನು ಮಾಡಿದ ಅಪರಾಧವಿದು. ಕ್ಷಮಿಸು!' ಇಂತು ಬೇಡುವ ಉಲೂಪಿಯನ್ನು ಸಂಭಾವಿಸಿ, ಪಾರ್ಥನು ಚಿತ್ರಾಂಗದಾ ಬಭ್ರುವಾಹನರನ್ನು ಪ್ರೀತಿಯುಕ್ತ ಕಟಾಕ್ಷಪಾತದಿಂದ ಸಂತೈಸಿದನು.

ಬರುವ ಚೈತ್ರದ ಹುಣ್ಣಿಮೆಗೆ ಹಸ್ತಿಪುರಕ್ಕೆ ಬಾ! ಯಾಗ ಕಾರ್ಯಗಳಲ್ಲಿ ಭಾಗವಹಿಸಿ, ಧನ್ಯನಾಗು!' ಎಂದು ಆಮಂತ್ರಿಸಿ, ಹೊರಡಲನುವಾದ ಅರ್ಜುನನನ್ನು, ದಿವ್ಯ ವಸನ ಭೂಷಣಗಳಿಂದ ಸತ್ಕರಿಸಿ, ಬಭ್ರುವಾಹನನು, ಯಜ್ಞದೀಕ್ಷಿತನಾಗಿರುವುದರಿಂದ ಪುರ ಪ್ರವೇಶವನ್ನೊಲ್ಲದ ಪಾರ್ಥನನ್ನು ಅಲ್ಲೇ ಬೀಳ್ಕೊಂಡು, ತಾನು ತಾಯಿಯೊಡಗೂಡಿ ಮಣಿಪುರವನ್ನು ಸೇರಿದನು. ಉಲೂಪಿಯು ಕೃತಕೃತ್ಯಳಾಗಿ ನಾಗಲೋಕವನ್ನು ಸೇರಿದಳು.

## ೮. ಯಾಗಾಶ್ವ ರಕ್ಷಣ (೨)

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಅರ್ಜುನನು ಅಶ್ವವನ್ನನುಸರಿಸಿ, ರಾಜಗೃಹವನ್ನು ಸಮೀಪಿಸಿದನು. ಮಗಧಪತಿಯು, ಜರಾಸಂಧಪೌತ್ರನು ಆದ ಮೇಘಸಂಧಿಯು, ಅರ್ಜುನನ್ನೆದುರಿಸಿ, 'ಎದುರಿಲ್ಲದೆ ಕುದುರೆಯನ್ನು ಕೊಂಡುಪೋಗಲು, ನಾವೇನು ವನಿತೆಯರೆಂದು ತಿಳಿದೆಯಾ? ಅರ್ಜುನ! ನಿಂತು ಕಡಿದಾಡು!' ಎಂದನು. ಅರ್ಜುನನು ಸಾಮದಿಂದ ಕಾರ್ಯವನ್ನು ಸಾಧಿಸಲೆಣಿಸಿ, 'ಅಯ್ಯಾ! ಮಗಧೇಶ! ವಿಘ್ನಕಾರಿಗಳನ್ನು ಬಿಡುವನಲ್ಲ. ಈ ಬಿಡೌಜನಂದನನು. ಕೇಳು! ನಮ್ಮಣ್ಣನಾದ ಧರ್ಮರಾಜನ ಆಜ್ಞೆಯಂತೆ, ಸಾಮ ವಚನವನ್ನಾಡಿ, ಅಶ್ವವನ್ನು ಕೊಂಡು ಪೋಗಲೆಣಿಸಿರುವೆನು; ಅಸಮರ್ಥತೆ ಎಂದು ತಿಳಿದು ದುಡುಕಿದರೆ, ಆಗುವ ನಷ್ಟಕಷ್ಟಗಳಿಗೆ ನೀನೇ ಉತ್ತರವಾದಿಯಾಗುವೆ ತಿಳಿ!' ಎಂದು ಎಚ್ಚರಿಸಿದನು.

ಆ ಮಾತಿಗೆ ಪ್ರತ್ಯುತ್ತರವಾಗಿ ಪ್ರಖರವಿಶಿಖಗಳಿಂದ ಪೀಡಿಸಿದ ಮೇಘಸಂಧಿಯ ಬಾಣಗಳನ್ನು ಖಂಡಿಸಿ, ಪಾರ್ಥನು ಅವನ ಸಾರಥಿಯನ್ನು ಸಂಹರಿಸಿ, ಕುದುರೆಗಳನ್ನು ಕೊಂದು, ಧ್ವಜವನ್ನು ಕೆಡಹಿ, ಧನುವನ್ನು ಮುರಿದನು. ಸಹದೇವಸುತನು ಉದಾತ್ತ ಧೈರ್ಯದಿಂದ ರಥದಿಂದಿಳಿದು ಗದಾಪಾಣಿಯಾಗಿ, ಅರ್ಜುನನ ಮೇಲೇರಿ ಬಂದನು. ಧನಂಜಯನು ನಿಶಿಶರಗಳಿಂದ ಅವನ ಗದೆಯನ್ನು ಚೂರಾಗಿಸಿ, ನಿಬ್ಬೆರಗಾಗಿ ನಿಂತಿದ್ದ ಮಾಗಧನಿಗಿಂತೆಂದನು:

'ನಮ್ಮ ಮಹಾರಾಜನ ಆಜ್ಞೆಯಿಂದ ಮೃದು ಯುದ್ಧವನ್ನೇ ಮಾಡುತ್ತಿರುವೆನು. ಯಾರ ಪ್ರಾಣಗಳನ್ನೂ ಹರಿಸಲಾಗದೆಂದ ಅಣ್ಣನ ಮಾತಿನಂತೆ ಸಾಧ್ಯವಾದಷ್ಟು ಸೈನಿಕ ಹತ್ಯೆಯನ್ನೂ ಮಾಡದಿರುವೆನು. ರಾಜಾರ್ಹ ಧರ್ಮದಂತೆ ವೀರನಾಗಿ ಹೋರಾಡಿದೆ! ಇನ್ನು

ಬಂಧುತ್ವವನ್ನು ನೆನೆದು ಶಾಂತನಾಗು! ಅಶ್ವಮೇಧವನ್ನು ನಿರ್ವಿಘ್ನವಾಗುವಂತೆ ಅನುಮೋದಿಸು! ಚೈತ್ರಪೂರ್ಣಿಮೆಗೆ ಬಂದು ಯಜ್ಞದಲ್ಲಿ ಪಾಲ್ಗೊಂಡು, ಬಂಧು ಕೃತ್ಯವನ್ನು ನಡೆಸಿ, ಧನ್ಯನಾಗು!' ಎಂದು ನುಡಿಯಲು, ಮೇಘಸಂಧಿಯು ಸಮ್ಮತಿಯಿತ್ತು, ಸವ್ಯಸಾಚಿಯನ್ನು ಪ್ರೀತಿಯಿಂದ ಪೂಜಿಸಿ ಕಳಿಸಿದನು.

ಅನಂತರ ಆ ಅಶ್ವರಾಜವು ವಂಗ, ಪುಂಡ್ರ, ಮ್ಲೇಚ್ಛ ದೇಶಗಳನ್ನು ದಾಟಿ ಪೋಗುತ್ತಿರಲು, ಅರ್ಜುನನು ಆಯಾ ರಾಜರನ್ನು ಗೆದ್ದು, ಕಪ್ಪ ಕಾಣಿಕೆಗಳನ್ನು ಸ್ವೀಕರಿಸಿ, ಮುಂದೆ ಚೇದಿ ದೇಶವನ್ನು ಸಮೀಪಿಸಿದನು.

ಶಿಶುಪಾಲನಂದನನಾದ ಶರಭನು ತನ್ನ ವೀರ್ಯ ಪ್ರದರ್ಶನೆಗೆಂದು ಹೋರಾಡಿ, ಸೋತು, ಬಂಧುವಾದ ಪುರಂದರನಂದನನನ್ನು ಪ್ರೀತಿಗೌರವಗಳಿಂದ ಪೂಜಿಸಿ, ಕಳಿಸಿದನು. ಡೇಂಕಣ, ಕಿರಾತ, ಕೋಸಲ, ಕಾಶೀ, ದಶಾರ್ಣ ದೇಶದರಾಜರು ಅರ್ಜುನನಿಗೆ ಸೋತು, ಕಪ್ಪಗಳನ್ನು ಅರ್ಪಿಸಿ ಅಶ್ವಮೇಧಯಾಗದ ಆಹ್ವಾನವನ್ನು ಶಿರದಿ ಧರಿಸಿದರು. ಅಶ್ವವು ನಿಷಾಧ ದೇಶವನ್ನು ದಾಟಿ ಪೋಗುವಾಗ, ಏಕಲವ್ಯ ನಂದನನು ನೈಷಾಧಯೋಧ ಸಹಿತ ನಾಗಿ, ಅರ್ಜುನನನ್ನು ಮುತ್ತಿ, ಪೂರ್ವವೈರವಿಷವನ್ನು ಕಾರುವ ನಾರಾಚಗಳಿಂದ ಪೀಡಿಸಿದನು. ಅವನ ಬಾಣಗಳನ್ನು ಖಂಡಿಸಿ, ಅರ್ಜುನನು ಅವನ ಸಹಾಯಕರನ್ನು ವಧಿಸಿ, ಶರವಿಮದನಾಗಿ ಶರಣಾಗತನಾದ ಅವನನ್ನು ಕ್ಷಮಿಸಿ, ಮುಂದೆ ಪಯಣಿಸಿದನು.

ಅಶ್ವವು ಪೌಂಡ್ರಾಂಧ್ರ, ದ್ರವಿಳ, ಕರ್ಣಾಟ, ಕೇರಳ, ಮಹಾರಾಷ್ಟ್ರ ದೇಶಗಳನ್ನು ದಾಟಿ, ಆನರ್ತ ದೇಶವನ್ನು ಸಮೀಪಿಸಿತು. ದ್ವಾರಕಾನಗರವು ದೃಗ್ಗೋಚರವಾದಾಗ ಅರ್ಜುನನು ದ್ವಾರಕಾಧೀಶನನ್ನು ನೆನೆದು, ಮನಸಾ ವಂದಿಸಿದನು. ಅಶ್ವವನ್ನು ಕಂಡ ಪ್ರದ್ಯುಮ್ನ ಸಾಂಬಾದಿ ಯದುಕುಮಾರರು ಯೌವನದರ್ಪದಿಂದ ಧರ್ಮಜನ ಅಶ್ವವನ್ನು ಕಟ್ಟಿ ಕಿರೀಟಿಯೊಡನೆ ಕಾದಲು ಬಂದರು. ಬಂಧು ಯುದ್ಧವನ್ನೊಲ್ಲದೆ ಅರ್ಜುನನು ಸುಮ್ಮನಿರಲು, ಯಾದವರು ಸುಭದ್ರಾಹರಣ ಕಾಲದ ಪರಾಭವದ ಸೇಡನ್ನು ತೀರಿಸಿ, ತಮಗೆ ಬಂದ ಅಪಕೀರ್ತಿಯನ್ನು ಅಳಿಸಲೆಣಿಸುತ್ತಿದ್ದರು. ಆಗ ಅರ್ಜುನನು, ತನ್ನ ಮಾವನಾದ ವಸುದೇವನಿಗೆ ಮೊರೆಯಿಟ್ಟನು. ವಸುದೇವನು ಯದುಕುಮಾರರನ್ನು ಕರೆಯಿಸಿ, 'ಶತ್ರುಗಳಂತೆ ಅಶ್ವವನ್ನು ಕಟ್ಟಿಹಾಕಿರುವುದು ನಿಮಗೆ ಸರಿಯಲ್ಲ. ತತ್ಕ್ಷಣವೇ ಕುದುರೆಯನ್ನು ಬಿಟ್ಟುಕೊಡಿ! ಬಂಧುವರನಾದ ಅರ್ಜುನನನ್ನು ಸತ್ಕರಿಸಿ, ಕಳಿಸಿ!' ಎಂದು ಜಬರಿಸಿದನು. ಅವರೂ ಆ ಮಾತಿಗೆ ಶಿರಬಾಗಿ, ಪಾರ್ಥನಿಗೆ ಅಶ್ವವನ್ನೊಪ್ಪಿಸಿ, ಪೂಜಿಸಿದರು. ಅರ್ಜುನನು ಮಾವನಿಗೆ ವಂದಿಸಿ, ಯದುಬಂಧುಗಳಿಗೆ, ಯಜ್ಞಾಮಂತ್ರಣವಿತ್ತು, ಅಲ್ಲಿಂದ ತೆರಳಿದನು.

ಗಾಂಧಾರ ರಾಜನಾದ ಶಕುನಿನಂದನನು ಮುತ್ತಲು, ಧರ್ಮಜನ ಸಾಂತ್ವನ ವಚನಗಳನ್ನು ತಿಳಿಸಿ, ಧನಂಜಯನು ಎಚ್ಚರಿಸಿದನು. ಆದರೂ ಬಿಡದೆ ಕಡಿದಾಡುವ ಶಾಕುನೇಯನನ್ನು ಅರ್ಜುನನು ಸೋಲಿಸಿ ಅವನ ಸೈನಿಕರನ್ನು ದೂರ ಸಾರುವಂತೆ, ಬಾಣಶತದಿಂದ ಪೀಡಿಸಿದನು. ಮಂತ್ರಿಗಳು ಮತ್ತು ಬಾಲರಾಜನ ಮಾತೆಯು

ಆ ವಾರ್ತೆಯನ್ನಾಲಿಸಿ, ಧಾವಿಸಿ ಬಂದು, ರಕ್ಷಿಸಬೇಕೆಂದು ಬೇಡಿದರು. ಪಾರ್ಥನು ಮಾನನೀಯ ಮಹಿಮನಾದುದರಿಂದ, 'ಧರ್ಮಜನಾಜ್ಞೆಯಂತೆ, ಶಕುನಿ ಸುತನನ್ನು ಸಂಹರಿಸಲೊಲ್ಲದೆ ಮೃದುಯುದ್ಧವನ್ನು ಮಾಡಿದನು. ಗಾಂಧಾರೀ ಧೃತರಾಷ್ಟ್ರರಂತೆ ನೀವೂ ನನಗೆ ಪೂಜನೀಯರೇ ಸರಿ! ನಾಳೆ ಚೈತ್ರ ಪೂರ್ಣಿಮೆಯ ವೇಳೆಗೆ ಯಾಗ ನಡೆಯುವುದಿದೆ! ಬಂಧು-ಮಿತ್ರರಾಗಿ ಬನ್ನಿ!' ಎಂದು ಅವರಿತ್ತ ಸತ್ಕಾರವನ್ನು ಸ್ವೀಕರಿಸಿ, ಕರಿಪುರವನ್ನು ಸೇರಿ ಹೊರಡುತ್ತಾ, ದೂತನನ್ನೊಬ್ಬನನ್ನು ಧರ್ಮಜನಲ್ಲಿಗೆ ಕಳಿಸಿದನು.

ಈ ಎಲ್ಲ ವೃತ್ತಾಂತವನ್ನು ಚಾರರು ಧರ್ಮರಾಜಾದಿಗಳಿಗೆ ತಿಳಿಸುತ್ತಿದ್ದರು. ದೂತನೂ ಬಂದು ಅರ್ಜುನನ ಶುಭಾಗಮನವನ್ನು ಶ್ರೀಕೃಷ್ಣನಿಂದಲು ಸೋದರರಿಂದಲು ಕೂಡಿ, ಸಿಂಹಾಸೀನನಾಗಿದ್ದ ಧರ್ಮಜನಿಗೆ ನಿವೇದಿಸಿದನು. ಆ ಸಮಾಚಾರವನ್ನು ಕೇಳಿ ಧರ್ಮಜಾದಿಗಳು ಅಮಂದಾನಂದ ಕಂದಳಿತ ಹೃದಯಾರವಿಂದರಾದರು.

ಆ ಹೊತ್ತಿಗೆ ಶ್ರೀಕೃಷ್ಣಾದೇಶದಂತೆ ಭೀಮಸೇನನು ಯಜ್ಞಾಂಗ ಕಾರ್ಯಗಳನ್ನು ಆಶ್ಚರ್ಯಕರವಾಗಿರುವಂತೆ ನೆರವೇರಿಸಿದ್ದನು. ಮಾಘ ಶುದ್ಧ ಪೌರ್ಣಮಿಯಂದು ಅರ್ಜುನನ ದಿಗ್ವಿಜಯ ಯಾತ್ರೆಯು ಪೂರ್ಣವಾಯಿತು. ಯಜ್ಞಪ್ರಯತ್ನವೂ ಪೂರ್ಣವಾಯಿತು. ಯಾಗಶಾಲೆಯ ಸುತ್ತಲು ವಸತಿ ಗೃಹಗಳು ನಿರ್ಮಿತವಾದವು. ಎಲ್ಲವೂ ಕನಕಮಣಿಮಯವಾಗಿತ್ತು. ಭೀಮಸೇನ ದೇವನ ಪರ್ಯವೇಕ್ಷಣದಲ್ಲಿ ಯಾವ ಲೋಪಕ್ಕು ಎಡೆಯಿದ್ದಿಲ್ಲ.

ಧರಣೀಸುರರು, ಧಾತ್ರೀಶರೂ ಬಂದರು. ಯಜ್ಞವನ್ನು ನೋಡಿ ಧನ್ಯರಾಗಬೇಕೆಂದು ಬಂದ ವಿವಿಧ ದೇಶದ ವಿಪ್ರಾದಿ ಜನರಿಗೆ ಭೀಮಾದಿಗಳು ಸ್ವಾಗತವನ್ನಿತ್ತು, ಅವರವರಿಗೆ ತಕ್ಕ ಬಿಡದಿ ಮನೆಗಳನ್ನು ಕೊಟ್ಟು, ವಿವಿಧೋಪಚಾರಗಳನ್ನು ನಡೆಸಿ ಕೊಟ್ಟರು. ಭೋಜನ, ಶಯನ, ಸ್ನಾನ, ಆಸನ, ವಸನಗಳಿಗೆ ಬೇಕಾಗುವ ಸಂಭಾರಗಳು, ಸಲಕರಣೆಗಳು ಹೇರಳವಾಗಿ, ಶೇಕರಿಸಲ್ಪಟ್ಟಿದ್ದವು. ಮುನಿಜನರಿಗೆ ಬೇಕಾಗುವ ಕಂದಮೂಲ ಫಲರಾಶಿಗಳು ಪರ್ವತಗಳಂತೆ ಕಂಗೊಳಿಸಿದವು. ಇತರ ಜನರಿಗೆ ನೀಡುವ ಭಕ್ಷ್ಯ ಭೋಜ್ಯಲೇಹ್ಯಪೇಯ ದ್ರವ್ಯಗಳು ಅಮಿತವಾಗಿ ಸಂಚಿತವಾದವು. ಅವರವರಿಗೆ ಅವನ್ನು ನೀಡುವ ಪರಿವಾರವು ಮಧುರಾಲಾಪ ಮನೋಹರವಾಗಿತ್ತು. ಯಜ್ಞವಾಟವೇ ಮುಂತಾದವು ಲಲಿತ ರಮ್ಯವಾಗಿದ್ದವು. ಸಭಾಗೃಹ, ವೇದಶಾಲೆ, ಅಗ್ನಿಹೋತ್ರಗೃಹ, ಪರ್ಣಶಾಲಾಶತ, ಪಟಗೃಹ ಸಹಸ್ರ, ಸ್ನಾನಶಾಲಾಶತ-ಮುಂತಾದ ಮಂದಿರಗಳು ದೀಪಕೋಟಿ ಪ್ರಕಾಶ ಭಾಸುರವಾಗಿರಲು, ಧರ್ಮಜನ ಯಜ್ಞಪ್ರದೇಶವು ದ್ವಿತೀಯ ಹಸ್ತಿನಗರದಂತೆ ಪ್ರಶಸ್ತವಾಗಿತ್ತು. ಶಿಲ್ಪಿಜನರನ್ನು ಸತ್ಕರಿಸಿ, ಸಮೀರನಂದನನು, ನಂದ ನಂದನನೊಡಗೂಡಿ ಬಂದು ನೋಡಿದ ಧರ್ಮನಂದನನ ಮೆಚ್ಚುಗೆಗೆ ಪಾತ್ರನಾದನು. ಬಂದ ಮುನಿಗಳು, ರಾಜರು, ಇತರ ಜನರು ಕೂಡ ಯಜ್ಞಸಮಾರಂಭವನ್ನು ವೀಕ್ಷಿಸಿ, ಆಶ್ಚರ್ಯ ಸಂಭ್ರಮಾನಂದಭರಿತರಾದರು.

ದ್ವಾರಕೆಯಿಂದ ಬಂದ ದೂತನ ಸಂದೇಶವನ್ನಾಲಿಸಿ, ಆನಂದತುಂದಿಲನಾದ ಧರ್ಮರಾಜನಿಗೆ ಶ್ರೀಕೃಷ್ಣನಿಂತೆಂದನು: 'ಧರ್ಮರಾಜ ! ಬಲು ಕಷ್ಟಪಟ್ಟು ಗಾಂಡೀವಿಯು

ಅಖಂಡಧರಾವಲಯವನ್ನು ಸುತ್ತಿ ಮುತ್ತಿದ ರಾಜರನ್ನು ಗೆದ್ದು ಅಶ್ವವನ್ನು ಸುರಕ್ಷಿತವಾಗಿ ತರುತ್ತಿರುವನು. ಆ ಮಹಾವೀರನನ್ನು ಮಹಾವಿಭವದಿಂದ ಸ್ವಾಗತವಿತ್ತು ಕರೆ ತರೋಣ! ಅವನ ಸಂದೇಶದಂತೆ, ನಿನ್ನ ಯಜ್ಞವನ್ನೀಕ್ಷಿಸಲು ಬರುವ ರಾಜರನ್ನೂ ಯಥೋಚಿತ ಸತ್ಕಾರವಿತ್ತು ಪೂಜಿಸು! ಮಣಿಪುರಾಧೀಶನಾದ ಬಭ್ರುವಾಹನನು ನಿನ್ನ ಚರಣಾರವಿಂದ ಸಂದರ್ಶನಾಭಿಲಾಷಿಯಾಗಿ ಬರುತ್ತಿರುವನು. ಅವನನ್ನು ಗೌರವಿಸಿ ಕರೆತರಲು ತಕ್ಕವರನ್ನು ಕಳಿಸು!' ಎಂದ ಗೋವಿಂದನನ್ನು ನೋಡಿ, ಕಿಂಚಿದವನತಮುಖನಾಗಿ ಧರ್ಮರಾಜನು ಇಂತು ಪ್ರಶ್ನಿಸಿದನು. ಅರ್ಜುನನಲ್ಲಿಯ ಸ್ನೇಹವಿಶೇಷದಿಂದ ಧರ್ಮರಾಜನ ವದನವು ಬಾಷ್ಪಸದನವಾಯಿತು.

'ಶ್ರೀಕೃಷ್ಣ! ಅರ್ಜುನನು ಪ್ರವಾಸದಲ್ಲಿ ಅತಿವೇದನಾ ಪ್ರಯಾಸಗಳಿಗೊಳಗಾದನಲ್ಲ! ಯಾವ ಅರ್ಜುನನ ಶರೀರವು ಸಕಲ ಶುಭ ಲಕ್ಷಣಭರಿತವೋ ಅಂತಹ ಪಾರ್ಥನಿಗಿಂತಹ ಕಷ್ಟಗಳೇ? ಅಥವಾ ಯಾವ ದುರ್ಲಕ್ಷಣವಿದ್ದುದರಿಂದ ನನ್ನ ತಮ್ಮನಿಂತು ಪ್ರವಾಸಾದಿ ವೇದನೆಗಳಿಗೊಳಗಾದನು? ತಿಳಿಸಬಹುದಾದರೆ ತಿಳಿಸಿಕೊಡು!' ಇಂತು ಕೇಳಿದ ಧರ್ಮಜನಿಗೆ ಶ್ರೀಕೃಷ್ಣನು ಪರಮರಹಸ್ಯವಾದ ಪುರುಷಲಕ್ಷಣವನ್ನು ನಿರೂಪಿಸುತ್ತಾ ಇಂತೆಂದನು:

'ಧರ್ಮರಾಜ! ನಿನ್ನ ತಮ್ಮನಾದ ಧನಂಜಯನು ದೀರ್ಘಪಿಂಡಿಕನಾಗಿರುವನು. ಶರೀರವೂ ಸ್ವಲ್ಪ ದೀರ್ಘವೇ ಆಗಿದೆ; ಆದುದರಿಂದಲೇ ಅವನು ಇಂತಹ ದುಃಖಗಳಿಗೆ ಆಶ್ರಯನಾಗುವಂತಾಯಿತು. ಮತ್ತು----------'

ಇಂತು ನುಡಿಯುವ ಕೃಷ್ಣನನ್ನು ದ್ರೌಪದಿಯು ಕಣ್ಣ ಸನ್ನೆಯಿಂದ ವಾರಿಸಿದಳು. 'ಮತ್ತೇನು ಕೃಷ್ಣಾ!' ಎಂದು ಕೇಳಿದ ಧರ್ಮರಾಜನಿಗೆ 'ಮತ್ತೇನೂ ಇಲ್ಲ. ಅರ್ಜುನನು ಅಶ್ವರಕ್ಷೆಗೈದು ಸುಖವಾಗಿ ಬರುತ್ತಿರುವನು' ಎಂದು ಹೇಳಿ, ಶ್ರೀಕೃಷ್ಣನು, ಕಥಾಂತರ ಪ್ರಸಕ್ತಿಯಿಂದ ಲಕ್ಷಣಕಥನ ಪ್ರಸಂಗವನ್ನು ಮರೆಸಿದನು. ಪುರುಷಲಕ್ಷಣ ಶಾಸ್ತ್ರವು ಬಲುಗೋಪ್ಯವಾಗಿಡತಕ್ಕುದುದಾಗಿದೆ. ಅದನ್ನು ಅರಿತವರೆಂದರೆ ಶ್ರೀಕೃಷ್ಣ, ಸತ್ಯಭಾಮೆ, ಭೀಮಸೇನ ಮತ್ತು ದ್ರೌಪದೀದೇವಿಯರು. ಇತರರು ಎಲ್ಲಾ ಲಕ್ಷಣಗಳನ್ನೂ ತಿಳಿಯಲು ಅರ್ಹರಲ್ಲ. ವಿದ್ಯಾಗ್ರಹಣಶೀಲನಾದ ಧರ್ಮರಾಜನು ಆ ವಿದ್ಯೆಯನ್ನು ಹೊಂದಬಾರದೆಂಬ ವಿದ್ಯಾಲೋಭದಿಂದ ಶ್ರೀಕೃಷ್ಣನನ್ನು- ಅರ್ಜುನ ಲಕ್ಷಣಗಳ ಉಪದೇಶವನ್ನು ಮಾಡದಂತೆ ವಾರಿಸಲು ದ್ರೌಪದೀದೇವಿಯು ಕಣ್ಣಿಂದ ಸೂಚಿಸಿದಳು.

ದೀರ್ಘಪಿಂಡಿಕನೇ ಅಲ್ಲದೆ ಅರ್ಜುನನು ಸ್ವಲ್ಪ ಉದರಾಧಿಕ್ಯವನ್ನು, ವೃಷಣಾಧಿಕ್ಯವನ್ನು ಹೊಂದಿದ್ದನು. ಆತನ ಎಡಗೈಯು ಸ್ವಲ್ಪ ದೀರ್ಘತರವಾಗಿತ್ತು. ಇವೆಲ್ಲ ದುರ್ಲಕ್ಷಣಗಳನ್ನು ಹೇಳದೆ, ಶ್ರೀಕೃಷ್ಣನು, ಪ್ರಸಂಗಾಂತರವನ್ನು ತಂದು ಅದನ್ನು ಮರೆಸಿದನು.

ಈ ದೋಷಗಳು ಜೀವರಲ್ಲಿ - ಕೆಲರಲ್ಲಿ ಕೆಲವು - ನಿತ್ಯವಾಗಿದ್ದು, ಮುಕ್ತಿಯಲ್ಲಿಯೂ ಜ್ಞಾನಾನಂದಾದಿಗಳಿಗೆ ಆಚ್ಛಾದಕವಾಗಿ ಕೆಲಸಮಯವಿರುವವು. ಎಲ್ಲ ಜೀವರಲ್ಲಿ ಸಕಲ ದುರ್ಲಕ್ಷಣ ವಿವರ್ಜಿತರೆಂದರೆ ಶ್ರೀಭಾರತೀ ಮುಖ್ಯಪ್ರಾಣರೀರ್ವರೇ ;

ಆದುದರಿಂದಲೇ ಅವರೀರ್ವರು ಜ್ಞಾನಾನಂದಬಲ ಭಕ್ತ್ಯಾದಿ ಸದ್ಗುಣ ಸಮುದಾಯಕ್ಕೆ ಮುಖ್ಯ ಯೋಗ್ಯರಾಗಿರುವರು.

ಅವರೀರ್ವರಕಿಂತಲು ವಿಶೇಷವಾದ ಸುಖಾಧಿಕ್ಯವನ್ನು ಅನಾದಿಯಾದ ದುಃಖಾಭಾವವನ್ನು ಪಡೆದು, ರುಕ್ಮಿಣೀ ಸತ್ಯಭಾಮೆಯರು (ಸೀತಾದಿ ಸಕಲ ಶ್ರೀದೇವೀ ರೂಪರು) ಹೆಚ್ಚು ಲಕ್ಷಣವತಿಯರಾಗಿರುವರು. ನಿತ್ಯ ಸ್ವಾತಂತ್ರ್ಯಾದಿ ಅನಂತಗುಣನು, ಸರ್ವೋತ್ಕೃಷ್ಟನು, ಪರಿಪೂರ್ಣನು, ನಿತ್ಯ ನಿರ್ದುಃಖನು, ಮುಕ್ತಾಮುಕ್ತ ನಿಯಾಮಕನು ಆಗಿ, ವ್ಯಾಸ, ಭಾರ್ಗವ ಕೃಷ್ಣಾದಿ ರೂಪಗಳಿಂದ ಮೆರೆವ ಶ್ರೀನಾರಾಯಣನು ಅನಂತ ಶುಭ ಲಕ್ಷಣಯುಕ್ತನು, ರಮಾವಲ್ಲಭನು ಎಂದು ವೇದಾದಿ ಸಚ್ಛಾಸ್ತ್ರಗಳಿಂದ ಪ್ರಸಿದ್ಧನಾಗಿರುವನು. ಅಂತಹ ಶ್ರೀಹರಿಯು ಶ್ರೀಕೃಷ್ಣ ವೇದವ್ಯಾಸ ಪರಶುರಾಮ ನಾಮಕರೂಪ ತ್ರಯದಿಂದ ನಿಂತು ನಿಯೋಜಿಸುತ್ತಿರಲು, ಧರ್ಮರಾಜನ ಅಶ್ವಮೇಧಯಾಗವು ನಿಯಮಿತ ಮುಹೂರ್ತದಲ್ಲಿ ಪ್ರಾರಂಭವಾಗಿ ನಿರ್ವಿಘ್ನವು ಸಕಲ ಯಜ್ಞಾತ್ಮಕವು ಶ್ರೀಹರಿ ಪ್ರೀತಿಕರವು ಆಗಿ ನೆರವೇರಿತು.

## ೯. ಅಶ್ವಮೇಧ ಯಾಗವು

ಶ್ರೀವೈಶಂಪಾಯನನು ನಿರೂಪಿಸಿದನು:

'ಜನಮೇಜಯ! ಕೇಳು! ಇಂತು ಪಾಂಡವರು ಶ್ರೀಕೃಷ್ಣ ಸಮೇತರಾಗಿ ಸಭೆಯಲ್ಲಿ ಸಂತಸವಾಗಿ ಮಾತಾಡುತ್ತಿರಲು, ಪಾರ್ಥನು ಹಸ್ತಿಪುರವನ್ನು ಸೇರಬಂದನು. ಇಂದ್ರ ತುರಗದಂತೆ ವಿಲಾಸ ಗತಿಯಿಂದ ಬಂದ ಕುದುರೆಯನ್ನು ಅಶ್ವವಾಟಿಕೆಯಲ್ಲಿ ಕಟ್ಟಿ, ಪರಿವಾರದವರು ಉಪಚರಿಸಿದರು. ಅರ್ಜುನನು ಹಸ್ತಿಪುರವನ್ನು ಮಹಾವಿಭವದಿಂದ ಪ್ರವೇಶಿಸಿ, ಯಾಗಮಂಟಪದಲ್ಲಿದ್ದ ನರನಾರಿಯರ ನಯನಾನಂದ ಭಾಜನನಾದನು.

'ಆಹಾ! ಎಂತಹ ವೀರ! ಎಷ್ಟು ಸಾಹಸ! ಹಿಂದೆ ಸಗರನ ಅಶ್ವರಕ್ಷಕರಾಗಿ ಅರವತ್ತು ಸಾವಿರ ಸುತರು ಹೋದರಂತೆ! ಉನ್ಮತ್ತರಾಗಿ ಕಪಿಲಕೋಪವಹ್ನಿಗೆ ಶಲಭಗಳಾದರಂತೆ! ಇಂದು ಧರ್ಮಜನ ಅಶ್ವಮೇಧದಲ್ಲಿ ಅಶ್ವರಕ್ಷಕನಾಗಿ ಪೋದವನು. ಅರ್ಜುನನೋರ್ವನೇ ! ಅಣ್ಣನ ಆಜ್ಞೆಯಂತೆ ನಯವಿನಯ ಧುರಂಧರನಾಗಿ, ರಾಜ ಹಿಂಸೆ ಮಾಡದೆ, ಎಲ್ಲರನ್ನೂ ಗೆದ್ದು, ಕುದುರೆಯನ್ನು ತಂದಿರುವನು. ಜಗತ್ತಿನಲ್ಲಿ ಗಾಂಡೀವಿಗೆ ಸಮರಾದ ವೀರರುಂಟೇ? ಮಾನುಷ ಪ್ರಯತ್ನಕ್ಕೆ ದೈವವೂ ನೆರವಾಗಿ, ಧರ್ಮರಾಜನ ಯಜ್ಞವು ಸುವರ್ಣದಲ್ಲಿ ರತ್ನವಿಟ್ಟಂತಾಯಿತು. ಭೀಮಸೇನಾದಿ, ಸೋದರರು ಕಾರ್ಯ ನಿರ್ವಹಣವೂ ಪ್ರಂಶಸನೀಯವಾಗಿದೆ' ಇಂತು ನುಡಿವ ಜನರ ಪ್ರಶಂಸಾ ವಚನಗಳನ್ನು ಅನುಮೋದಿಸಿ, ಅಂಬರದ ಸಿದ್ಧಚಾರಣರು, ಆ ಸಂತಸದ ಸುದ್ದಿಯನ್ನು ಎಲ್ಲ ಲೋಕಗಳಲ್ಲಿ ಸಾರಪೋದರು.

'ಮತ್ಸ್ಯ ಯಂತ್ರವನ್ನು ಭೇದಿಸಿ ಮತ್ಸ್ಯನೇತ್ರಿಯನ್ನು ಗೆದ್ದು ತಂದಾ ಮಹಾ

ಧಾನುಷ್ಕನಿವನೇ! ಸುರಸೇನಾಯುತನಾದ ಸುರೇಶನನ್ನೆದುರಿಸಿ ನಿಂತು, ಖಾಂಡವವನ್ನು ಅಗ್ನಿಗಾಹುತಿಯಾಗಿ ಇತ್ತ ವೀರನು ಇವನೇ! ಇಂದ್ರಕೀಲಗಿರಿಯಲ್ಲಿ ಗಿರೀಶನನ್ನು ಕಿರಿನೆವದಿ ಎದುರಿಸಿ ಹೋರಾಡಿದ ಸಾಹಸಿ, ಪಾಶುಪತಾಸ್ತ್ರವನ್ನು ಪಡೆದ ಮಹಾಭಕ್ತನು ಇವನೇ! ಭೀಷ್ಮಾದಿ ಯೋಧವರರಿಂದ ತುಂಬಿದ ಕುರುಸೇನೆಯನ್ನು ಮೂರ್ಛೆಗೊಳಿಸಿ, ಗೋಗಣವನ್ನು ಗೆದ್ದು ತಂದ ರಣನಯಕೋವಿದನಿವನೇ! ಪ್ರತಿಜ್ಞೆ ಮಾಡಿದಂತೆ ಸೈಂಧವನನ್ನು ಸಂಹರಿಸಿದ ದುಷ್ಟ ಶಿಕ್ಷಕನು ಇವನೇ?' ಎಂದು ನಾನಾವಿಧವಾಗಿ ಪೊಗಳುವ ಪ್ರಜಾಸಮುದ್ರದಲ್ಲಿ ಮಹಾಮಕರದಂತೆ, ತೂರಿ ಬಂದು, ಸಂಕ್ರಂದನ ನಂದನನು ಶ್ರೀಕೃಷ್ಣನಿಗೂ, ಭೀಮ ಧರ್ಮರಿಗೂ ವಂದಿಸಿ, ನಿಂತನು. ಧರ್ಮಜನು ಆನಂದದಿಂದ ಅವನನ್ನಪ್ಪಿ, ಮೈದಡವಿ, ತನ್ನ ಸಮೀಪದ ದಿವ್ಯಾಸನದಲ್ಲಿ ಕೂಡಿಸಿಕೊಂಡನು.

ಬಲಭದ್ರ, ಪ್ರದ್ಯುಮ್ನ, ಸಾಂಬ ಗದಾದಿಯಾದವರು, ಬಭ್ರುವಾಹನಾದಿ ರಾಜಕುಮಾರರು ಬರಲು ನೋಡಿ, ಧರ್ಮಜನು ತಾನಾಗಿ ಪೋಗಿ, ಕರೆತಂದು ಸತ್ಕರಿಸಿದನು. ಚಿತ್ರಾಂಗದಾ ನಾಗಪುತ್ರಿಯರು ಕುಂತೀದೇವಿಗೆ ವಂದಿಸಿ, ಸ್ತ್ರೀಜನ ಮಧ್ಯದಲ್ಲಿ ಮಂಡಿಸಿದರು. ಅರ್ಥಿ ಜನರನ್ನು ನಿಯಮಿಸಿ ಧರ್ಮರಾಜನು ಬಂದವರಿಗೆಲ್ಲರಿಗೂ ಉಚಿತ ವಸತಿ ಭೋಜನಾದಿಗಳ ಸೌಕರ್ಯವನ್ನು ಕಲ್ಪಿಸಿದನು. ಶರಧಿಪರೀತ ಭೂಮಂಡಲ ಪ್ರಾಂತಗಳಿಂದ ಸರ್ವ ಜನರು ಆ ಮಹೋತ್ಸವವನ್ನು ನೋಡಲು ಬಂದಿದ್ದರು. ಅಶ್ವಮೇಧವು ಆರಂಭವಾಯಿತು. ಧರ್ಮಜನ ಮನೆಯಲ್ಲಿ ಲಕ್ಷ ಭೂಸುರರ ಭೋಜನವಾದಂತೆ, ಭೇರಿಯು ಮೊಳಗಿ ಸಾರುತ್ತಿತ್ತು. ರಾಜರ ಕಿರೀಟಾಂಗದಾದಿ ಭೂಷಣಗಳ ಘರ್ಷಣದಿಂದ ಜಾರಿದ ನವರತ್ನಗಳ ಚೂರ್ಣವು. ಯಜ್ಞಶಾಲೆಗೆ ರಂಗವಲ್ಲಿಯಾಯಿತು. ರಾಜರು ಏರಿಬಂದ ಮತ್ತೇಭಗಳ ಮದಜಲವು ತಳಿಲನೀರಾಯಿತು. ಅವರ ಧ್ವಜಸಾಹಸ್ರವು ತೋರಣವಾಯಿತು.

ಧೌಮ್ಯಾದಿ ಋತ್ವಿಗ್ವರರು ಕ್ರಮಯುಕ್ತವಾದ ಯಜ್ಞಕ್ರಿಯಾ ಕಲಾಪವನ್ನು ನಡೆಸುತ್ತಿದ್ದರು. ಸ್ಖಲಿತವಾಗದೆ, ಅಪಹುತವಾಗದೆ, ಅನಾಜ್ಞಾತವಾಗದೆ, ಆಜ್ಯಾಹುತಿಗಳು ನಡೆದವು. ಶ್ರೀವೇದವ್ಯಾಸರು ಸದಸಸ್ಪತಿಗಳಾಗಿ ಪರ್ಯವೇಕ್ಷಿಸುತ್ತಿದ್ದರು. ಶ್ರೀಕೃಷ್ಣನು ಅಧ್ಯಕ್ಷನಾಗಿದ್ದನು. ಶ್ರೀಪರಶುರಾಮರು ಹೋತ್ರಾದಿ ನೇತ್ರಾಧಿನಾಯಕರಾಗಿದ್ದರು. ವಿಶ್ವತೈಜಸಪ್ರಾಜ್ಞರೂಪತ್ರಯನಾದ ಶ್ರೀಹರಿಯು ಜಾಗ್ರತ್ಸ್ವಪ್ನಸುಷುಪ್ತಿನಾಮಕ ಅವಸ್ಥಾತ್ರಯ ಪ್ರೇರಕರಾಗಿ, ಜಗದ್ವ್ಯಾಪಾರವನ್ನು ನಡೆಸುತ್ತಿರುವಂತೆ, ಶ್ರೀಕೃಷ್ಣ ಭಾರ್ಗವ ವೇದವ್ಯಾಸ ರೂಪತ್ರಯಯುಕ್ತನಾದ ಶ್ರೀಶನು ಧರ್ಮಜನ ಅಶ್ವಮೇಧವನ್ನು ನಡೆಸುತ್ತಿದ್ದನು. ವಿರಿಂಚನ ಅಶ್ವಮೇಧವೋ,. ಇಂದ್ರನ ತುರಗ ಯಾಗವೋ ಎಂಬಂತೆ ಕಂಗೊಳಿಸುವ ಧರ್ಮಜನ ಅಶ್ವಮೇಧಮಂಟಪದಲ್ಲಿ ದೇವಾನುದೇವತೆಗಳು ಸನ್ನಿಧಿಗೈದಿದ್ದರು. ದೇವ, ಗಂಧರ್ವ, ಮುನಿ, ಸುಜನ, ವಿಭೀಷಣಾದಿ ಸದ್ರಾಕ್ಷಸಗಣ - ಮುಂತಾದ ಮೂರುಲೋಕದ ಶ್ರೀಶಭಕ್ತರೆಲ್ಲರೂ ಅಲ್ಲಿ ನೆರೆದಿದ್ದರು. ಅಲಂಕೃತ ಪತ್ನೀಸಮೇತರಾದ ಅಖಿಲ ದೇವತೆಗಳಿಂದ ಕೂಡಿದ ಯಜ್ಞಶಾಲೆಯು ದೇವಲೋಕವೇ ಯಜ್ಞವೀಕ್ಷಣ ಕುತೂಹಲದಿಂದ ಭುವಿಗೆ ಇಳಿದು ಬಂದಂತೆ ತೋರಿತು.

ಸಭಾಸದರು ಸದಸ್ಸಿನಲ್ಲಿ ಸಂಶಯಗಳನ್ನು ಕೇಳಿ, ಶ್ರೀಕೃಷ್ಣ ಪರಶುರಾಮ, ಸಾತ್ಯವತೇಯರ ಸಮಾಧಾನದಿಂದ ಉಪನಿಷದ್ರಹಸ್ಯ ತತ್ವಗಳನ್ನು ಅರಿತು, ನಿಸ್ಸಂಶಯರಾದರು. ಗಂಧರ್ವರ ಗಾನದೊಡನೆ ನಡೆದ ಅಪ್ಸರೆಯರ ನರ್ತನವು ಸಭಿಕರ ಶ್ರೋತ್ರನೇತ್ರ ಮನೋಹರವಾದವು. ದೇವತೆಗಳಂತೆ ಹಾರಮುಕುಟ ಕುಂಡಲಾದ್ಯಾಭರಣ ಭೂಷಿತರಾದ ರಾಜನ್ಯರನ್ನು ಪ್ರತ್ಯೇಕವಾಗಿ ವಿಚಾರಿಸಿ, ನಾಮಲಕ್ಷಣಗಳಿಂದಲೇ ಮನುಜರೆಂದು ತಿಳಿಯಬೇಕಾಗಿತ್ತು.

ಶ್ರೀಕೃಷ್ಣ ರಮಣಿಯರು ವಿಕಸಿತ ಮುಖ ಕಮಲಗಳಿಂದ ಮಂದಹಾಸ ರುಚಿಯು ಹೊರಸೂಸಿ ಬರುತ್ತಿರಲು, ರತ್ನಾಭರಣಗಳಿಂದ ಮಿಂಚಿನ ಬಳ್ಳಿಗಳಂತೆ, ಬೆಳಗುತ್ತಾ, ದೇವಸ್ತ್ರೀ ತಾರಕಾ ಮಧ್ಯದಲ್ಲಿ ಚಂದ್ರ ಸಹಸ್ರದಂತೆ ಶೋಭಿಸಿದರು. ಎಲ್ಲಿ ನೋಡಿದರೂ ಸಂಭ್ರಮದ ಸಂಚಾರ, ಎಲ್ಲಿ ಕೇಳಿದರೂ ಶ್ರೀಕೃಷ್ಣಚರಿತೆಯಾಗಿ ಯಜ್ಞವಾಟವು ವೈಕುಂಠದಂತಿತ್ತು.

ಶ್ರೀ ಭೀಮಸೇನನು ಸರ್ವರ ಮನೋಭೀಷ್ಟವನ್ನರಿತು, ತಕ್ಕಂತೆ ಕೊಡುತ್ತಿರಲು ಅಲ್ಲಿ ಯಾರೂ ಅಸತ್ಯಕಾಮರಿದ್ದಿಲ್ಲ. ಮುಕ್ತಿಯು ಕೂಡ ಯೋಗ್ಯ ಮುಮುಕ್ಷುಗಳಿಗೆ ಶ್ರೀಕೃಷ್ಣ ಕೃಷ್ಣಭಾರ್ಗವರ ದರ್ಶನದಿಂದಲೇ ಕರತಲಗತವಾಗಿತ್ತು. ಸಂಪತ್ತು ಬೇಕೆಂದರೆ ಅದನ್ನೀವ ಭೀಮಸೇನನ ಕೈ ಹಿಂಜರಿಯುತ್ತಿದ್ದಿಲ್ಲ. ಪ್ರಮಾಣಗಳಿಂದಲು, ಯುಕ್ತಿಗಳಿಂದಲು, ಉಲ್ಲಾಸದಿಂದಲು ವೇದಾದಿ ಸಚ್ಛಾಸ್ತ್ರಗಳನ್ನು ಇದಮಿತ್ಥಂ ಎಂದು ನಿರ್ಣಯಿಸಿ ಪೇಳುವ ಭಗವಂತನ ಮೂರ್ತಿತ್ರಯದಿಂದ ಜಿಜ್ಞಾಸುಗಳೂ ಸತ್ಯಕಾಮರೇ ಆಗುತ್ತಿದ್ದರು. ಷಡ್ರಸೋಪೇತವಾದ ಚತುರ್ವಿಧಾನ್ನವನ್ನು ಯಥೇಚ್ಛವಾಗಿ ಎಲ್ಲೆಡೆಯು, ಯಾವಾಗಲೂ ಕೊಡುವ ಧರ್ಮರಾಜನಿಂದ ಬುಭುಕ್ಷಗಳೂ ಸತ್ಯಕಾಮರೇ ಆಗುತ್ತಿದ್ದರು.

ಆ ಯಜ್ಞವು ಹದಿನೈದು ವರ್ಷಗಳವರೆವಿಗೂ ಸಂತತವಾಗಿ, ವೈಭವೋಪೇತವಾಗಿ ದಾನಸಮೃದ್ಧವಾಗಿ, ಭೂರಿದಕ್ಷಿಣವಾಗಿ ನಡೆಯಿತು. ಲೇಹ್ಯ, ಚೋಷ್ಯ, ಪೇಯ, ಭಕ್ಷ್ಯಗಳು ಸಮೃಧ್ಧವಾಗಿದ್ದವು. ತೈಲಪಕ್ವ, ಮತ್ತು ಘೃತಪಕ್ವ ಭಕ್ಷ್ಯಗಳು ಪರ್ವತಗಳಂತಿದ್ದವು. ಉತ್ತಮ ಶಾಲ್ಯನ್ನಪರ್ವತಗಳು, ಚಿತ್ರಾನ್ನಗಿರಿಗಳು, ದಧ್ಯನ್ನರಾಶಿಗಳು ಕರಗದಂತಿದ್ದವು. ಹಾಲು, ತುಪ್ಪ, ಜೇನು, ಸಕ್ಕರೆಪಾಕಗಳು ನದಿಗಳಾಗಿ ಹರಿದವು. ಅಮೃತಜಲವನ್ನು ಕನಕಪಾತ್ರೆಗಳಲ್ಲಿ ನೀಡುತ್ತಿದ್ದರು.

ದೇವಯೋಗ್ಯವಾದ ಭೋಗಪದಾರ್ಥಗಳೂ ಅಮಿತವಾಗಿದ್ದವು. ಆಯಾಬಣ್ಣದ ಮಣಿಗಳಿಂದ ನಿರ್ಮಿತವಾದ ಕೂಪಶತಗಳಲ್ಲಿ ಕಸ್ತೂರಿ, ಕುಂಕುಮ, ಕೇಸರ, ಹರಿದ್ರಾ, ಶ್ರೀಗಂಧ, ಕೃಷ್ಣಾಗರುಪಂಕ, ರಕ್ತಚಂದನರಸ, ಪಚ್ಚಕರ್ಪೂರ, ಮಲ್ಲಿಕಾಮಾಲತೀ ಕೇತಕೀ ಚಂಪಕ ತೈಲಗಳು ಮುಂತಾದ ದೇವಭೋಗ್ಯ ವಸ್ತುಗಳು ತುಂಬಿಡಲ್ಪಟ್ಟು ಬಿಡದೆ ವ್ಯಯಿಸಿದರೂ ಮತ್ತೆ ಪೂರ್ಣ ಮಾಡಲ್ಪಡುತ್ತಿದ್ದವು. ಶ್ರೀರಾಮ ಶ್ರೀವಿರಿಂಚ, ಇಂದ್ರದೇವ - ಇವರ ಹೊರತು ಇಂತಹ ಶ್ರೇಷ್ಠವಾದ ಅಶ್ವಮೇಧವನ್ನು ನಾವೆಂದೂ ನೋಡಿಲ್ಲ, ಕೇಳಿಲ್ಲವೆಂದು ಜನರು ಪ್ರಶಂಸಿಸಿದರು.

ಇಂತು ಶ್ರೀಕೃಷ್ಣಪ್ರೇರಿತರಾಗಿ ಪಾಂಡವರು ಅಶ್ವಮೇಧವನ್ನು ಶ್ರೀಹರಿ ಪ್ರೀತಿಗಾಗಿ ಮಾಡಿ, ಶ್ರೀಶನಲ್ಲಿ ತತ್ಫಲವನ್ನು ಸಮರ್ಪಿಸಿದರು. ಪ್ರತಿ ದಿನೇ ದಿನೇ ಅಭಿವೃದ್ಧವಾಗುತ್ತಿರುವ ವೈಭವದಿಂದ ಅಶ್ವಮೇಧವು ಮೂರು ವರ್ಷಕ್ಕೊಂದರಂತೆ- ಹದಿನೈದು ವರ್ಷಗಳವರೆಗೂ ನಡೆದು ಅಶ್ವಮೇಧ ಪಂಚಕವಾಯಿತು. ದರ್ಶಪೂರ್ಣಮಾಸ, ಪ್ರಯಾಜ, ಅನುಯಾಜ, ಪೂರ್ವೋತ್ತರ ಇಷ್ಟಿಗಳುಳ್ಳ ಒಂದಶ್ವಮೇಧವನ್ನೊಬ್ಬ ಪಾಂಡುಪುತ್ರನ ಶ್ರೇಯಸ್ಸಿಗೆ ಎಂದು ಸಂಕಲ್ಪಿಸಿ, ಶ್ರೀಶನು ಅವರಿಂದ ಐದು ಯಾಗಗಳನ್ನು ಸಾಂಗವಾಗಿ ಉತ್ತಮ ಕಲ್ಪದಿಂದ ಮಾಡಿಸಿದನು. ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ?

ಶ್ರೀ ವೇದವ್ಯಾಸ ದೇವರು ಒಂದೊಂದು ಯಾಗವನ್ನೂ ಬಹು ಸುವರ್ಣಕವಾಗುವಂತೆ- ಅಂದರೆ ನಿಯತ ದಕ್ಷಿಣೆಗೆ ಮೂರರಷ್ಟು ಹೆಚ್ಚು ದಕ್ಷಿಣೆಯನ್ನು ಪಾಂಡವರಿಂದ ಕೊಡಿಸಿ, ಒಂದೇ ಯಾಗವಾದರೂ ಮೂರು ಯಾಗ ಸಮಫಲಕವಾಗುವಂತೆ ಅನುಗ್ರಹಿಸಿದರು. ಇಂತು ಮಾಡಿ, ಪಾಂಡವರು ಹದಿನೈದು ಅಶ್ವಮೇಧಯಾಗ ಫಲವನ್ನು ಹೊಂದಿ ಶ್ರೀಶಾನುಗ್ರಹ ಮುಖ್ಯಪಾತ್ರರೆನಿಸಿದರು. ಒಂದೊಂದು ವರ್ಷಕ್ಕೆ ಅಶ್ವವನ್ನೊಂದನ್ನು ಒಂದಾಹುತಿಯಂತೆ ಇತ್ತು ಶ್ರೀ ವ್ಯಾಸರು ಪಾಂಡವರನ್ನು ಪಂಚದಶಯಾಗ ಫಲಪಾತ್ರರನ್ನಾಗಿಸಿದರು. ಪ್ರಾಧಾನ್ಯ ವಿವಕ್ಷೆಯಿಂದ ಐದೇ ಆದರೂ ಅವಾಂತರ ವಿಭಾಗದಿಂದ ಒಂದೊಂದು ಮೂರು ಮೂರಾಗಿ, ಎಲ್ಲವು ಸೇರಿ, ಹದಿನೈದು ಯಜ್ಞಗಳ ಫಲವು ಶ್ರೀಶನಿಂದ ಕೊಡಲ್ಪಟ್ಟಿತು.

ಯಜ್ಞವು ಮುಗಿಯುತ್ತಾ ಬಂತು. ಅದರಲ್ಲಿ ಬಂಗಾರದ ಇಟ್ಟಿಗೆಗಳಿಂದ ಗರುಡಾಕಾರ ವಾದ ಯಜ್ಞಕುಂಡವು ನಿರ್ಮಿತವಾಗಿ, ನಿತ್ಯಾಹುತಿಗಳಿಂದ ಜಾಜ್ವಲ್ಯಮಾನವಾಗಿತ್ತು. ಖಾದಿರಗಳಾರು, ಬಿಲ್ವಗಳಾರು, ಪಾಲಾಶಗಳಾರು, ದೇವದಾರುಗಳೆರಡು, ಶ್ಲೇಷಾತ್ಮತರು ಕಲ್ಪಿತವು ಒಂದು ಇಂತು ಇಪ್ಪತ್ತೊಂದು ಯೂಪಗಳ ಮಧ್ಯದಲ್ಲಿ ಅನೇಕ ಕಾಂಚನ ಯೂಪಗಳಿದ್ದವು. ವರಯೂಪ ಯೋಜಿತವಾದ ತುರಂಗದ ಸುತ್ತಲು, ವಿವಿಧ ಪಕ್ಷಿ ಪಶುಗಳನ್ನು ಮೂನ್ನೂರನ್ನು ಯೋಜಿಸಿದ್ದರು. ದಕ್ಷನ ಯಾಗದ ನೆನಪನ್ನೀವ ಮಹಾಯಾಗವು ತಂತ್ರಮಂತ್ರವಾಗಿ ಸಾಗಿತು. ಅಶ್ವಾಲಂಭವನ್ನು ಕೊನೆಗೆ ಮಾಡಿ, ದ್ರೌಪದೀದೇವಿಯ ದಿವ್ಯ ಹಸ್ತದಿ ಮುಟ್ಟಿಸಿ ಆ ಮೇಲೆ ಧರ್ಮಜಾದಿ ಸೋದರರಿಂದ ಆಹುತಿಗಳನ್ನು ಕೊಡಿಸಿ, ಋತ್ವಿಜರು ಪೂರ್ಣಾಹುತಿಯನ್ನು ಹಾಕಿಸಿದರು. ಶ್ರೀಕೃಷ್ಣದ್ವೈಪಾಯನಾದಿ ಮುನಿಗಳು ವೇದೋಕ್ತಾಶೀರ್ವಚನಗಳಿಂದ ಧರ್ಮರಾಜಾದಿಗಳನ್ನು ಅಭಿನಂದಿಸಿದರು.

ಧರ್ಮರಾಜನು ಸತೀ ಸೋದರರಿಂದ ಕೂಡಿ, ಅವಭೃತಸ್ನಾನವನ್ನಾಚರಿಸಿ, ಶ್ರೀವೇದವ್ಯಾಸರ ಚರಣ ಸನ್ನಿಧಿಯಲ್ಲಿ ಸರ್ವಭೂಮಿ ರಾಜ್ಯವನ್ನೂ ರತ್ನ ಕನಕರಾಶಿಗಳನ್ನೂ ಸಮರ್ಪಿಸಿ, ಚರಿತಾರ್ಥನಾದನು. ಎಲ್ಲವೂ ಆ ಶ್ರೀಶನಿತ್ತುದೇ ಆದುದರಿಂದ ಎಲ್ಲವನ್ನೂ ಆತನಿಗೆ ಸಮರ್ಪಿಸಿದುದು ಔಪಚಾರಿಕವಾದರೂ ಶ್ರೀಶನಾವಸ್ತುಗಳನ್ನು ಋತ್ವಿಗಾದಿವಿ ಪ್ರಾರಂಭಮಾಡಿ, ಶೂದ್ರದೀನಾಂತವರಿಗೂ ಇರುವ ಜನರಿಗೆ ತಕ್ಕಂತೆ ಕೊಟ್ಟು ಸತ್ಕರಿಸಲು ಪ್ರಭೋತ್ತಮನೆಂದು ತೋರಿಸಲು, ಮತ್ತೆ ಸಮರ್ಪಿಸಿದನು. ದ್ರೌಪದೀ ದೇವಿಯು ಮಾಂಗಲ್ಯ ವನ್ನುಳಿದು ತನ್ನ ಸರ್ವಾಭರಣವರ ನಿವಹವನ್ನು ಶ್ರೀ ವ್ಯಾಸರಿಗೆ ಸಮರ್ಪಿಸಿದಳು. ದಕ್ಷಿಣಾ

ವಿಭಾಗವು ವೇದವ್ಯಾಸರಿಗೆ ಪ್ರಿಯವು; ಅದನ್ನು ಸರಿಯಾಗಿ ಅವರೇ ಮಾಡಬಲ್ಲರು ಎಂದು ಪಾಂಡವರು ತಿಳಿದು, ಮನಃಪೂರ್ವಕವಾಗಿ ಸರ್ವಸ್ವವನ್ನೂ ಸಮರ್ಪಿಸಿದರು. ಶ್ರೀಹರಿಯೇ ಸರ್ವಋತ್ವಿಗಾದ್ಯಂತರ್ಯಾಮಿಯಾಗಿರುವುದರಿಂದ ಆತನೇ ದಾತನು, ಆತನೇ ಪ್ರತಿಗ್ರಹೀತನು ಎಂದು ಸರ್ವಾತ್ಮಕನಾದ ಶ್ರೀ ವ್ಯಾಸರಿಗೆ ಸಮರ್ಪಿಸಿದರು. ವಿತ್ತವೇ ಅಲ್ಲದೇ ದೇಹೇಂದ್ರಿಯ ಪ್ರಾಣಗಳೆಲ್ಲವೂ ಶ್ರೀಶಾಧೀನವು ಎಂದರಿತು ಸಾಷ್ಟಾಂಗವೆರಗಿ, 'ಹೇ ಪ್ರಭೋ! ಪೃಥ್ವಿ ಮೊದಲಾದ ಚತುರ್ದಶ ಲೋಕಗಳು ನಿನ್ನವು. ನಾವೂ ನಿನ್ನ ಕಿಂಕರರು. ನಮ್ಮದೇನಿದೆ ಕೊಡಲು? ನಾವೇನು ಸ್ವತಂತ್ರರೇ? ಅಲ್ಲ: ಯಾವ ದೇಶದಲ್ಲಿಯು ಯಾವ ಕಾಲದಲ್ಲಿಯು ಯಾವ ವಸ್ತುವೂ ನಮ್ಮದಲ್ಲ; ನಾವು ಸ್ವತಂತ್ರರಲ್ಲ ; ಎಲ್ಲವೂ ಸದಾ ನಿನ್ನದೇ! ನೀನೇ ಸ್ವತಂತ್ರನು. ನೀನೇ ಸರ್ವಕರ್ತನು! ನೀನೇ ಉದ್ಧಾರಕನು, ಗುಣಪೂರ್ಣ! ಶ್ರೀರಮಣ! ನೀನು ಪ್ರೀತನಾಗು!' ಎಂದು ವಂದಿಸಿದರು.

ಆಗ ಶ್ರೀ ವ್ಯಾಸದೇವರು ವಿಭಾಗವನ್ನು ಮಾಡಿ ಸರ್ವರಿಗೂ ಭೂಮ್ಯಾದಿಗಳನ್ನು ಹಂಚಿದರು. ಬ್ರಾಹ್ಮಣರು 'ಧರ್ಮರಾಜ! ಭಗವನ್ ವೇದಪತೇ! ನಮಗೆ ಹಿರಣ್ಯದಿಂದಲೇ ತೃಪ್ತಿಯಾಗಿದೆ! ನಾವು ಭೂಮಿಯನ್ನೊಲ್ಲೆವು. ಭೂಪಾಲನ ವಿಷಯದಲ್ಲಿ ಧರ್ಮಜಾದಿ ರಾಜರೇ ಯೋಗ್ಯರು! ಆದುದರಿಂದ ಭೂಮಂಡಲವನ್ನು ಪಾಂಡವರೇ ಆಳಲಿ!' ಎಂದರು. ಧರ್ಮರಾಜನು ಆ ಮಾತಿಗೊಪ್ಪದೆ, ಶ್ರೀವ್ಯಾಸರಿಗೆ ವಂದಿಸಿ, 'ತಂದೇ! ಧರ್ಮಲಬ್ಧವಾದ ರಾಜ್ಯವನ್ನು ದಿವ್ಯ ಯಜ್ಞದ ದಕ್ಷಿಣೆ ಎಂದು ನಿನಗೆ ಸಮರ್ಪಿಸಿದುದಾಯಿತು. ಇನ್ನು ನಮಗೆ ರಾಜ್ಯಾಶೆಯಿಲ್ಲ. ವನವನ್ನು ಸೇರಿ ತಪಸ್ಸನ್ನು ಮಾಡುವೆವು. ನಮಗೆ ಅಪ್ಪಣೆ ಕೊಡು!' ಎಂದು ಪ್ರಾರ್ಥಿಸಿದನು.

ಬಾದರಾಯಣನು 'ಧರ್ಮರಾಜ! ಹಾಗಲ್ಲ. ಮುನಿಗಳು ರಾಜ್ಯವನ್ನೊಲ್ಲರು. ನೀನೂ ಆಳದಿರೆ ಅರಾಜಕವಾದೀತು! ಋಷಿಗಳ ದ್ರವ್ಯವೆಂದರೆ ಹಿರಣ್ಯವೇ - ರಾಜ್ಯವಲ್ಲ. ನಾನು ಆಜ್ಞಾಪಿಸುತ್ತಿರುವೆನು ನೀವೇ ರಾಜ್ಯವನ್ನಾಳಬೇಕು!' ಎಂದನು.

ಧರ್ಮರಾಜನು 'ಸ್ವಾಮಿನ್! ದತ್ತಾಪಹಾರ ದೋಷದಿಂದ ನಾವು ಪಾರಾಗುವದೆಂತು? ಎಂದು ಕೇಳಲು ಶ್ರೀ ವ್ಯಾಸನಿಂತೆಂದನು: 'ರಾಜನ್! ಸರ್ವದ್ರವ್ಯ ಭೂರತ್ನ ಪ್ರಭುನಾದ ನನ್ನಿಂದ ಸ್ವೀಕರಿಸುವುದು ದತ್ತಾಪಹಾರವಾಗದು. ಮುನಿಗಳು ನನಗೆ ಬಿಟ್ಟಿರುವ ಭೂಮಿಯನ್ನು ನನ್ನ ಮೊಮ್ಮಕ್ಕಳಾದ ನಿಮಗೆ ನಾನು ಕೊಡುತ್ತಿರುವೆನು. ಗುರುದ್ರವ್ಯಕ್ಕೆ ಶಿಷ್ಯನು ಪಾತ್ರನು. ಪಿತಾಮಹನ ಪ್ರೀತಿಯು ರಾಜ್ಯಪ್ರಾಪಕವಾಗಿದೆ ಮತ್ತು ಪ್ರಭುವಿತ್ತಕ್ಕೆ ಭೃತ್ಯನು ಭಾಗಿಯಾಗಿರುವನು. ಇತ್ಯಾದಿ ಲೋಕವೇದ ಸಮ್ಮಿತ ವಚನಗಳಿವೆ! ಆದುದರಿಂದ ನಾನೀವ ರಾಜ್ಯವನ್ನು ವಿಪ್ರರಿಗೆ ಹಿರಣ್ಯರೂಪ ಕ್ರಯ ಧನವನ್ನಿತ್ತು- ಸ್ವೀಕರಿಸು!' ಆ ಮಾತಿನಂತೆ ಧರ್ಮರಾಜನು ಹಿರಣ್ಯ ರಾಶಿಗಳನ್ನು ಸುರಿದು ವ್ಯಾಸರಿಗೆ ಸಮರ್ಪಿಸಿದನು. ಶ್ರೀ ವ್ಯಾಸರು ವಿಪ್ರಾದಿ ಸರ್ವಸುಜನರಿಗೆ ಯಥೇಚ್ಛವಾಗಿ ಕೊಟ್ಟು, ತಮ್ಮ ಭಾಗವನ್ನು ಸೊಸೆಯಾದ ಕುಂತೀ ದೇವಿಗೆ ಅನುಗ್ರಹಿಸಿದರು. ಪತಿರಹಿತಳಾದ ಕುಂತೀದೇವಿಯು ಅದನ್ನು ವಿಪ್ರಪೂಜೆಗೆಂದು ಸ್ವೀಕರಿಸಿದಳು. ಪತ್ನೀಸಮೇತರಾದ ಪಾಂಡವರಿಗೆ ರತ್ನಾಭರಣ, ದುಕೂಲ, ಮಂದಿರಾದಿ

ಗಳನ್ನೂ ಕೊಟ್ಟು ಶ್ರೀ ವ್ಯಾಸರು ಪಾಂಡವರನ್ನೇ ಅಲ್ಲದೆ, ಅಲ್ಲಿದ್ದ ಸರ್ವಜನರನ್ನೂ ಸಂತೋಷ ಪಡಿಸಿದರು.

ಅವಭೃತವನ್ನು ಮಾಡಿ, ವ್ಯಾಸರಿತ್ತ ಸಕಲೈಶ್ವರ್ಯದಿಂದ ಕೂಡಿ ಪಾಂಡವರು ಪಂಚೇಂದ್ರರಂತೆ ಪ್ರಕಾಶಿಸಿದರು. ಶ್ರೀಕೃಷ್ಣನು ಪಂಚೇಂದ್ರಿಯಗಳಿಗೆ ಮನಸ್ಸಿನಂತೆಯು, ಪಂಚೇಂದ್ರರಿಗೆ ಪ್ರಥಮೇಂದ್ರ (ಯಜ್ಞ) ನಂತೆಯು ವಿರಾಜಿಸಿದನು. ಧರ್ಮರಾಜನು ಚಿತ್ತಗತ ಸರ್ವಸಂಶಯ ನಿರ್ಮುಕ್ತನು, ಬಹು ಪುಣ್ಯಯುಕ್ತನು ಆಗಿ ಪರಾಶರನಂದನ ಚರಣಾರವಿಂದ ಸನ್ನಿಧಿಯಲ್ಲಿ ಸರ್ವವನ್ನರ್ಪಿಸಿ ಕೃತಕೃತ್ಯನಾದನು. ಶ್ರೀ ವ್ಯಾಸನು ಶಿಷ್ಯಸಹಿತನಾಗಿ ಅಂತರ್ಧಿತನಾದನು. ಶ್ರೀ ಭಾರ್ಗವನೂ ಅಂತರ್ಧಿತನಾದನು. ಕ್ರತು ವೀಕ್ಷಣಕ್ಕೆಂದು ಬಂದ ರಾಜರು ಧರ್ಮರಾಜನಿಂದ ಸತ್ಕೃತರಾಗಿ ತಂತಮ್ಮ ಪುರಿಗಳಿಗೆ ತೆರಳಿದರು. ಚಿತ್ರಾಂಗದೆಯು ಅರ್ಜುನ ಮಂದಿರದಲ್ಲಿ ನಿಂತಳು ಬಭ್ರುವಾಹನನು ಸತ್ಕೃತನಾಗಿ ತೆರಳಿದನು. ದುಶ್ಶಲಾ ಪೌತ್ರನನ್ನು ಸಿಂಧು ದೇಶಕ್ಕೆ ಅಧಿಪತಿಯಾಗಿ ಅಭಿಷೇಕಿಸಿ ಕಳಿಸಿದ ಧರ್ಮರಾಜನನ್ನು ಪೊಗಳುತ್ತಾ ಸಿಂಧು ದೇಶೀಯರು ದುಶ್ಶಲೆಯೊಡನೆ ತಮ್ಮ ದೇಶಕ್ಕೆ ಹೊರಟರು. ಬಲರಾಮಾದಿ ಯದುವೀರರೂ ಕನಕವಸ್ತ್ರಾದಿ ಸತ್ಕಾರಗಳಿಂದ ಪೂಜಿತರಾಗಿ ದ್ವಾರಕೆಗೆ ಪೋದರು.

ಅಶ್ವಮೇಧಯಾಗದ ಅವಭೃತದ ದಿನದಂದು ವೃಂದಾರಕರು ಅಮಂದಾನಂದದಿಂದ ಮಂದಾರಾದಿ ಸುಮವೃಷ್ಟಿಯನ್ನು ಸುರಿಸಿ, ಧರ್ಮಜನನ್ನೂ ಯಜ್ಞಪತಿಯಾದ ಶ್ರೀಕೃಷ್ಣನನ್ನೂ ಅಭಿನಂದಿಸಿದರು.

## ೧೦. ನಕುಲಾಖ್ಯಾನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್ ! ನಿನ್ನ ಪಿತಾಮಹನಾದ ಧರ್ಮರಾಜನ ಮಹಾಯಜ್ಞದಲ್ಲಿ ಕೊನೆಯ ದಿನದಂದು ನಡೆದ ಒಂದು ಆಶ್ಚರ್ಯಕರ ವೃತ್ತಾಂತವನ್ನರುಹುವೆನು ಕೇಳು! ಧರ್ಮರಾಜನಿತ್ತ ದಾನಾದಿಗಳಿಂದ ಆ ಭೂಪಾಲ ಗೋಪಾಲಾಂತವಾದ ಸರ್ವಜನವು ತೃಪ್ತವಾಗಿ ಆತನನ್ನು ಮನಸಾರ ಪೊಗಳಿತು. ಅವರ ಪ್ರಶಂಸಾನಿನಾದವು ದಶ ದಿಗಂತಗಳಲ್ಲಿ ವ್ಯಾಪ್ತವಾಯಿತು.

ಆಗ ಅಲ್ಲಿಗೆ ಒಂದು ನಕುಲವು ಬಂತು. ಅದರ ಒಂದು ಪಾರ್ಶ್ವವು ಬಂಗಾರ ವಾಗಿತ್ತು. ನೀಲಾಕ್ಷವಾದ ನಕುಲವು ವಜ್ರ ಸಮಗರ್ಜನವನ್ನು ಮಾಡಿ ಸಭಾಸದರ ಮುಂದೆ ನಿಂತು, ಇಂತೆಂದಿತು: 'ಕುರುಕ್ಷೇತ್ರ ನಿವಾಸಿಯು, ಉಂಛವೃತ್ತಿಯು ಆದ ಬ್ರಾಹ್ಮಣೋತ್ತಮನ ಸಕ್ತುಪ್ರಸ್ಥ ದಾನಕ್ಕೆ ಧರ್ಮರಾಜನ ಯಜ್ಞವು ಸಮವಲ್ಲ.' ಆ ಮಾತನ್ನಾಲಿಸಿ ಬ್ರಾಹ್ಮಣವರರು ಆಶ್ಚರ್ಯಭರಿತರಾಗಿ, 'ಎಲವೋ ನಕುಲ! ಯಾರು ನೀನು? ಏನು ವಿದ್ಯಾಪಾಟವವಿದೆ? ಯಾವ ಕಾರಣದಿಂದ ಇಂತಹ ಉತ್ತಮ ಯಜ್ಞವನ್ನಾಕ್ಷೇಪಿಸಿರುವೆ? ವೇದವಿಧಿಯನ್ನು ಸ್ವಲ್ಪವಾದರೂ ಮೀರದೆ ಮಾಡಿದ, ಮತ್ತು ಮಂತ್ರತಂತ್ರಗಳಿಂದ ಲೋಪವೇನೂ ಇಲ್ಲದ, ಉತ್ತಮ ಋತ್ವಿಜರಿಂದ ಕೂಡಿದ, ಭೂರಿದಕ್ಷಿಣೆಗಳಿಂದ ಪರಿಪೂರ್ಣವಾದ, ಪಾಂಡವರಂತಹ ಪರಮವಿಷ್ಣು ಭಕ್ತರಿಂದ ಮಾಡಲ್ಪಟ್ಟ, ಸಾಕ್ಷಾತ್ ಶ್ರೀಕೃಷ್ಣವೇದವ್ಯಾಸ ಭಾರ್ಗವರಾಮರ

ದಿವ್ಯಸನ್ನಿಧಿಯಲ್ಲಿ ನೆರವೇರಿದ, ಇಂತಹ ಉತ್ತಮ ಯಜ್ಞವನ್ನು ಕಡಿಮೆ ಎಂದು ನಿಂದಿಸಲು ಕಾರಣವೇನು ? ದಾನಗಳಿಂದ ವಿಪ್ರರು, ಯುದ್ಧ ಮಾರ್ದವ ಸತ್ಕಾರಗಳಿಂದ ಕ್ಷತ್ರಿಯರು, ಪಾಲನದಿಂದ ವೈಶ್ಯರು, ಕಾಮಿತಗಳಿಂದ ತರುಣಿಯರು, ಅನುಕ್ರೋಶದಿಂದ ಶೂದ್ರರು, ಅನ್ನಪಾನವಸನಗಳಿಂದ ಸರ್ವರು, ಕವ್ಯಗಳಿಂದ ಪಿತೃಗಳು, ಹವ್ಯಗಳಿಂದ ದೇವತೆಗಳು, ಸತ್ಕಾರಗಳಿಂದ ಜ್ಞಾತಿಸಂಬಂದಿಗಳು - ಎಲ್ಲರೂ ತುಷ್ಟರಾಗಿರುವರು. ಇಂತು ಸಾಂಗಸಮಗ್ರವಾದ ಧರ್ಮರಾಜನ ಯಜ್ಞವನ್ನು ದೂಷಿಸಲು ಕಾರಣವೇನು? ತಥ್ಯವನ್ನು ಹೇಳು' ಎಂದರು.

ನಕುಲವಿಂತೆಂದಿತು: 'ನಿಜವನ್ನೇ ಹೇಳುತ್ತಿರುವೆನು. ಬ್ರಾಹ್ಮಣೋತ್ತಮರೇ, ಈ ನಿಮ್ಮ ಯಜ್ಞವು ಸಕುಪ್ರಸ್ಥನ ಯಜ್ಞಸಮನಲ್ಲ. ನಾನು ಕಣ್ಣಾರ ಕಂಡು, ಅನುಭವಿಸಿದುದನ್ನು ನುಡಿಯುತ್ತಿರುವೆನು. ಧರ್ಮ ಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಉಂಛವೃತ್ತಿಯಾದ ಬ್ರಾಹ್ಮಣನೋರ್ವನಿದ್ದನು. ಕಪೋತದಂತೆ ಕಣಕಣವನ್ನು ಆರಿಸಿ ತಂದು, ಅವನು ಪತ್ನಿ, ಮಗ, ಸೊಸೆಯರಿಂದ ಕೂಡಿ ಜೀವಿಸುತ್ತಿದ್ದನು. ಒಂದು ದಿನ ಉಂಡರೆ, ಒಂದು ದಿನ ಉಣ್ಣದೆ, ಉಂಡದಿನವೂ ಷಷ್ಠಕಾಲ (ಸಾಯಂ) ದಲ್ಲಿ ದೇವಪಿತೃಭೂತಾತಿಥಿಗಳಿಗಿತ್ತು ಆ ದ್ವಿಜೋತ್ತಮನು ಕಾಲ ಕಳೆಯುತ್ತಿದ್ದನು. ಇಂತಿರಲು ಆ ದೇಶದಲ್ಲಿ ಕ್ಷಾಮವು ತಲೆತೋರಿ, ಅವನಲ್ಲಿದ್ದ ಸಂಚಯವೆಲ್ಲವೂ ವ್ಯಯವಾಯಿತು. ಧಾನ್ಯವು ಸಿಗದಂತಾಯಿತು. ಜನರು ಆಹಾರವಿಲ್ಲದೆ ಕೃಶ ಪೀಡಿತರೂ ಮೃತರೂ ಆದರು.

ಒಂದು ದಿನ ಆ ವಿಪ್ರನಿಗೆ ಪ್ರಸ್ಥಮಾತ್ರಪರಿಮಿತವಾದ ಯವ ಧಾನ್ಯವು ದೊರಕಿತು ಅದನ್ನು ಸಕುತ್ತುವನ್ನಾಗಿಸಿ, ಆಹ್ನಿಕ ಜಪತಪಾದಿಗಳನ್ನು ಮುಗಿಸಿ ಅಗ್ನಿಗಾಹುತಿಯನ್ನಿತ್ತು, ನಾಲ್ಕು ಜನರಿಗೂ ಹಂಚಿದಾಗ, ಒಬ್ಬೊಬ್ಬರಿಗೆ ಕುಡವ ಪರಿಮಿತವಾದ ಸಕುತ್ತು ಲಭಿಸಿತು. ಅವರದನ್ನು ಸ್ವೀಕರಿಸಬೇಕೆಂದಿರುವಾಗ, ಕ್ಷುಧಾಪೀಡಿತನಾದ ಬ್ರಾಹ್ಮಣನಲ್ಲಿಗೆ ಬಂದನು. ಅವರು ಬಂದ ಅತಿಥಿಗೆ ವಂದಿಸಿ, ಕುಟೀರದಲ್ಲಿ ಕೂಡಿಸಿ, ಅರ್ಘ್ಯಪಾದ್ಯಾದಿಗಳನ್ನಿತ್ತರು. ವಿಪ್ರನು ವಿಶುದ್ಧಮನಸ್ಕನಾಗಿ ತನ್ನಪಾಲಿನ ಸಕುತ್ತುವನ್ನು ಅತಿಥಿಯ ಮುಂದಿಟ್ಟು, 'ಸ್ವಾಮಿನ್ ! ನ್ಯಾಯಾರ್ಜಿತವಾದ ಈ ಆಹಾರವನ್ನು ಸ್ವೀಕರಿಸು' ಎಂದು ಬೇಡಿದನು. ಅತಿಥಿಯು ಅದನ್ನು ತಿಂದನು. ಅವನು ತೃಪ್ತನಾಗದಿರುವುದನ್ನು ತಿಳಿದು, ಬ್ರಾಹ್ಮಣನು ಚಿಂತಾಕ್ರಾಂತನಾದನು. ಆಗ ಅವನ ಸತಿಯು ತನ್ನ ಭಾಗವನ್ನು ಮುಂದಿಟ್ಟು, ಗಂಡನಿಗಿಂತೆಂದಳು: 'ಬಂದ ಅತಿಥಿಯು ತೃಪ್ತನಾಗುವಂತೆ ಮಾಡುವದು ನಮ್ಮೆಲ್ಲರ ಕರ್ತವ್ಯವಾಗಿದೆ. ಈ ಹಿಟ್ಟನ್ನು ಆತನಿಗೆ ಕೊಡು' ಎಂದ ಸತಿಯನ್ನು ನೋಡಿ, ಅವಳೂ ದುರ್ಧರಕ್ಷುಧಾಕರ್ಶಿತಳಾಗಿರುವುದನ್ನು ತಿಳಿದು ವಿಪ್ರನು ಅವಳಿಗಿಂತೆಂದನು: 'ಆಯಿ! ಕೀಟಪತಂಗ ಮೃಗಪಕ್ಷಿಗಳನು ಕೂಡ ತಂತಮ್ಮ ಪತ್ನಿಯರನ್ನು ಸರ್ವ ಪ್ರಯತ್ನದಿಂದ ಸಂರಕ್ಷಿಸುತ್ತಿವೆ. ಸತೀಕೃತೋಪಚಾರಗಳಿಂದ ಪತಿಯು ಪುಷ್ಟನು, ಹೃಷ್ಟನು ಆಗುವನು. ಮನುಜನ ಧರ್ಮಕಾಮಗಳು, ಅರ್ಥ ಕಾರ್ಯಗಳು, ಸಂತಾನ ಸಂಪತ್ತುಗಳು, ಎಲ್ಲವೂ ಗೃಹಿಣಿಯ ಅಧೀನವಾಗಿ ಸುರಕ್ಷಿತವಾಗುವುವು. ಅಂತಹ ದಾರೆಯನ್ನು ಪೋಷಿಸದವನು ಇಹಪರ ಸುಖದೂರನಾಗುವನು. ಅವನು ಅಪಕೀರ್ತಿಯನ್ನು ಹೊಂದಿ, ಮೃತಕಲ್ಪನೆನಿಸುವನು. ನೀನು

ವೃದ್ಧಳಾಗಿರುವೆ; ಹಸಿವೆಯೂ ತೀವ್ರವಾಗಿದೆ. ಎಲುಬು ಚರ್ಮಗಳು ಮಾತ್ರ ಉಳಿದ ದೇಹವು ಕಂಪಿಸುತ್ತಿದೆ. ನಿನ್ನ ಆಹಾರವನ್ನು ಎಂತು ಕಸಿಯಲಿ?'

ಆ ಮಾತಿಗೆ ವಿಪ್ರಪತ್ನಿಯು 'ನಾಥ! ಧರ್ಮಾರ್ಥಗಳಲ್ಲಿ ನಾವು ಸಮಭಾಗಿಗಳು. ಸತ್ಯ, ರತಿ, ಧರ್ಮ, ಕಾಮಾರ್ಥಗಳ ಫಲವು ಸಹಧರ್ಮಚಾರಿಣಿಗಾಗಲಿ, ಪತಿದೂರಳಿಗಿಲ್ಲ. ಪಾಲನದಿಂದ ಪತಿ ಎನಿಸಿ, ಭರಣದಿಂದ ಭರ್ತನೆನಿಸಿ, ಪುತ್ರಧನಾದಿಗಳನ್ನೀಯುವದರಿಂದ ವರನೆನಿಸಿ, ಪರಮ ಪೂಜ್ಯನಾದ ಗಂಡನಕಿಂತಲು ಪ್ರಿಯತರವಿಲ್ಲ ಪತಿವ್ರತೆಯಾದ ಹೆಂಡತಿಗೆ! ಜರಾಪರಿಗತನು, ಕ್ಷುಧಾತುರನು, ಉಪವಾಸಕರ್ಶಿತನು ಆದ ನಿನ್ನನ್ನು ಬಿಟ್ಟು, ನಾನಾದರೂ ಹೇಗೆ ಭುಜಿಸಲಿ? ಕೊಡು ಸಕ್ತುವನ್ನು ಅತಿಥಿ ವಿಪ್ರನಿಗೆ. ಶ್ರೀಶನು ಪ್ರೀತನಾಗಲಿ!' ಎಂದಳು.

ವಿಪ್ರನು ಆ ಸಕ್ತುವನ್ನೂ ಅತಿಥಿಗಿತ್ತನು. ಅದರಿಂದಲೂ ತೃಪ್ತನಾಗದಿರುವ ಅತಿಥಿಯನ್ನು ಕಂಡು ಉಂಛವೃತ್ತಿ ವಿಪ್ರನು ಚಿಂತೆಗೀಡಾದನು. ಆಗ ಮಗನಿಂತೆಂದನು: 'ಪೂಜ್ಯನೇ! ನನ್ನ ಸಕ್ತುಭಾಗವನ್ನೂ ಅತಿಥಿಗೆ ಸಮರ್ಪಿಸು! ಚಿಂತಿಸಬೇಡ! ನಿನ್ನನ್ನು ಕಾಪಾಡುವುದು ನನ್ನ ಧರ್ಮವಾಗಿದೆ. ದಾರಾಸುತರಿಗೂ ತಂದೆ ತಾಯಂದಿರು ಹೆಚ್ಚು ಪೋಷ್ಯರಾಗಿರುವರು. ವೃದ್ಧ ಮಾತಾ ಪಿತೃಗಳಿಗಾಗದ ಸುತನಿದ್ದೇನು ಪ್ರಯೋಜನ? ಪ್ರಾಣವಂತನಿಗೆ ತಪೋದಾನ ಯಜ್ಞಾದಿ ಧರ್ಮಗಳು ಸಾಧ್ಯವಾಗಿವೆ. ಆಹಾರವು ಪ್ರಾಣಧಾರಕವಾಗಿದೆ. ನೀವು ಉಭಯರೂ ನಿರಾಹಾರರಾಗಿರುವಾಗ ನಿಮ್ಮ ಆಹಾರ ಭಾಗವೂ ಸತ್ಪಾತ್ರದಲ್ಲಿ ವಿನಿಯುಕ್ತವಾದಾಗ ಕಂಡು ನಾನು ಅತಿಥಿಪೂಜನ ಪುಣ್ಯಭಾಜನನಾಗಬೇಕೆಂದು ಬಯಸುವುದು ನ್ಯಾಯವಲ್ಲವೇ?' ಎಂದು ತನ್ನ ಪಾಲಿನ ಸಕ್ತುವನ್ನೂ ಕೊಟ್ಟನು. ವಿಪ್ರನು 'ವತ್ಸ! ಸಾವಿರ ವರ್ಷ ಬಾಳು! ಎಷ್ಟು ದೊಡ್ಡವನಾದರೂ ನೀನು ನನಗೆ ಬಾಲನೇ ಸರಿ! ಬಾಲರನ್ನು ಪಡೆದ ಪುರುಷನೇ ಧನ್ಯನೆಂದು ಶ್ರುತಿಯು ಸಾರುತ್ತಿದೆ. ಬಾಲರಿಗೆ ಹಸಿವೆಯನ್ನು ತಡೆಯಲಾಗದು. ವೃದ್ಧನಾಗಿರುವ ನಾನು ಹೇಗಾದರೂ ಪ್ರಾಣಧಾರಣೆ ಮಾಡಿರಬಲ್ಲೆನು. ದೀರ್ಘಕಾಲವಿಂತು ತಪಶ್ಚರಣದಿಂದ ಕಳೆದಿರುವ ನನಗೆ ಮರಣದ ಭಯವಿಲ್ಲ. ನಿನ್ನ ಭಾಗವನ್ನು ನೀನೇ ವಿನಿಯೋಗಿಸು!' ಎಂದನು. ಮಗನಾ ಮಾತಿಗೊಪ್ಪದೆ 'ತಂದೇ? 'ಆತ್ಮಾವೈಪುತ್ರ ನಾಮಾಸಿ' ಎಂದು ವೇದ ವಚನವಿದೆ. ಪುತ್ರನೆಂದರೆ ತ್ರಾತನೆಂದರ್ಥವು ನಿನ್ನನ್ನು ಕಾಪಾಡುವುದು ನನ್ನ ಹೋಣೆಯಾಗಿದೆ. ಅತಿಥಿ ಪೂಜಾಲೋಪವಾಗದಂತೆ, ನನ್ನ ಸಕ್ತುಭಾಗವನ್ನು ಸ್ವೀಕರಿಸು!' ಎಂದನು. ವಿಪ್ರನಾ ಸಕ್ತುವನ್ನು ಅತಿಥಿಗಿತ್ತು, ಅದರಿಂದಲೂ ತೃಪ್ತನಾಗದಿದ್ದುದನ್ನು ಕಂಡು ಮತ್ತೆ ಚಿಂತಿಸತೊಡಗಿದನು.

ಆಗ ಅವನ ಸೊಸೆಯು ತನ್ನ ಸಕ್ತುಭಾಗವನ್ನು ವಿಪ್ರನ ಮುಂದಿಟ್ಟು 'ನಿನ್ನ ಮಗನ ಕೈಪಿಡಿದು ನಿನ್ನ ಮನೆ ಹೊಕ್ಕು, ನಿನ್ನವಳಾದ ನನ್ನ ಭಾಗವನ್ನೂ ಅತಿಥಿಗಿತ್ತು ತೃಪ್ತಿಪಡಿಸು! ನಿನ್ನ ದಯೆಯಿಂದ ನನಗೆ ಅಕ್ಷಯ ಪುಣ್ಯಲೋಕಗಳಾಗುವವು, ಚಿಂತಿಸಬೇಡ!' ಎಂದಳು. ವಿಪ್ರನು, 'ವತ್ಸೇ! ವಾತಾತಪಗಳಿಗೆ ಸಿಕ್ಕು ವಿವರ್ಣಳಾಗಿರುವೆ! ವ್ರತಗಳಿಂದ ಬಡವಾಗಿರುವೆ! ಮೇಲೆ ಹಸಿವಿಗೆ ತಾಳಲಾರದೆ ನರಳುತ್ತಿರುವೆ! ಕಲ್ಯಾಣಿ! ನಿನ್ನ ಸಕ್ತುಭಾಗವನೆಂತು ಕಸಿಯಲಿ? ಅಂತಹ ಧರ್ಮೋಪಘಾತವೆನ್ನಿಂದ ಸಾಧ್ಯವಿಲ್ಲ!' ಎಂದನು. ಸೊಸೆಯು, 'ಗುರುವಾದ ಪತಿಗೆ ಗುರುವೆನಿಸಿ ನನಗೆ ಪರಮಪೂಜ್ಯನಾಗಿರುವೆ! ಮಾವನ ಪೂಜೆಯು ದೇವತಾ ಸತ್ಕಾರ

ವಾಗುವುದೆಂದು ಹಿರಿಯರಿಂದ ಕೇಳಿರುವೆನು. ನಿನ್ನ ಶುಶ್ರೂಷೆಗೇ ನನ್ನ ದೇಹಪ್ರಾಣೇಂದ್ರಿಯ ಗಳು! ನಿನ್ನ ಪ್ರೀತಿಗೇ ನನ್ನ ಧರ್ಮಾಚರಣೆಯು! ನನ್ನ ಚಿಂತೆ ಬಿಡು! ನಾನಾಡುವ ಮಾತು ನಿಷ್ಕಪಟವೆಂದು ನೋಡು! ಸಕ್ತುವನ್ನು ಅತಿಥಿ ವರನಿಗೆ ಕೊಡು!' ಎಂದಳು. ಆ ಮಾತನ್ನಾಲಿಸಿ ವಿಪ್ರನು ಸಕ್ತುವನ್ನು ಅತಿಥಿಗಿತ್ತನು.

ಆಗ ತೃಪ್ತನಾದ ಅತಿಥಿಯು ಧರ್ಮರೂಪನಾಗಿ ಪ್ರತ್ಯಕ್ಷನಾಗಿ ವಿಪ್ರನಿಗಿಂತೆಂದನು: 'ಅಹೋ! ಎಂತಹ ದೀಕ್ಷೆ! ಎಂತಹ ದಾನ! ಎಷ್ಟು ಅನುರೂಪ ಬಂಧು ರಮಣೀಯವಾಗಿದೆ ಈ ನಿನ್ನ ಕುಟುಂಬ! ಪ್ರೀತನಾಗಿರುವೆನು! ನಿನ್ನ ಸರ್ವಸ್ವದಾನದಿಂದ ಪ್ರೀತರಾಗಿರುವರು ದೇವತೆಗಳು! ತತ್ಕಾರಣವಾಗಿ ಅವರು ಸುರಿಸುವ ಪುಷ್ಪವೃಷ್ಟಿಯನ್ನು ನೋಡು! ಬ್ರಹ್ಮರ್ಷಿಗಳು ದೇವಗಂಧರ್ವಾದಿ ಸುರರಿಂದ ಕೂಡಿ, ನಿನ್ನನ್ನು ನೋಡಲೆಂದು ಬಂದು ಅಂಬರದಿ ನಿಂತಿರುವರು. ನಿನ್ನ ಪಿತೃಗಳು ಉದ್ಧೃತರಾದರು. ನಿನ್ನಂತಹ ದಾನಶೀಲರು, ಅತಿಥಿ ಪೂಜಕರು ಮತ್ತಿಲ್ಲ. ನಿನ್ನ ದಾನ, ಬ್ರಹ್ಮಚರ್ಯ, ಯಜ್ಞ, ತಪಸ್ಸು ಅಸಂಕರ ಧರ್ಮ ಇವುಗಳಿಂದ ಸಂಪಾದಿತವಾದ ಪುಣ್ಯ ಲೋಕಗಳು ನಿನಗಾಗಿ ಕಾದಿವೆ. ಶುದ್ಧಮನದಿಂದ, ಮಹಾಪತ್ತಿನಲ್ಲಿಯೂ ಎದೆಗುಂದದೆ, ದರ್ಮವನ್ನು ಬಿಡದೆ ಮಾಡಿದ ಉತ್ತಮ ದಾನದಿಂದ ನೀವೆಲ್ಲರೂ ಸ್ವರ್ಗಲೋಕಾರ್ಹರಾಗಿರುವಿರಿ!

ಹಸಿವೆಯಷ್ಟು ಬಾಧಕವಿಲ್ಲ. ಕ್ಷುದೆಯು ಪ್ರಜ್ಞಾಬಲವನ್ನು ಕುಗ್ಗಿಸುವುದು; ಧರ್ಮಬುದ್ಧಿ ಯನ್ನು ಕೆಡಿಸುವುದು; ಧೈರ್ಯವನ್ನು ನಾಶಮಾಡುವುದು; ವಿವೇಕವನ್ನು ಹಾಳು ಮಾಡುವುದು. ಅಂತಹ ಕ್ಷುತ್ಪಿಪಾಸಾಪಿಶಾಚವನ್ನು ನೀವು ಗೆದ್ದಿರುವಿರಿ! ಹಸಿವೆ ಗೆದ್ದವನು ಹರಿಲೋಕವನ್ನು ಗೆದ್ದನು! ಸತೀಸುತ ಮೋಹವನ್ನೂ, ಸ್ನುಷಾ ಮೋಹವನ್ನೂ, ಆತ್ಮತ್ರಾಣ ಮೋಹವನ್ನೂ ಜಯಿಸಿದೆ! ದಾನ, ಅದಕ್ಕೆ ತಕ್ಕ ಕಾಲ, ಕಾಲದಲ್ಲಿ ಬಂದ ಪಾತ್ರ, ಪಾತ್ರನಲ್ಲಿ ತೋರುವ ಶ್ರದ್ಧೆ, ಇವು ಸ್ವರ್ಗದ್ವಾರವಾಗಿವೆ. ವಿಷಯಾಸಕ್ತಮತಿಗಳಾದ ಮೂರ್ಖರು ಇದನ್ನರಿಯರು. ಅವರಿಗೆ ಆ ದ್ವಾರವು ವಿಹಿತವಾಗಿರುವುದು. ಜಿತಕ್ರೋಧರು, ಜಿತೇಂದ್ರಿಯರು, ತಪೋಯುಕ್ತರು, ಬ್ರಹ್ಮನಿಷ್ಠರು, ಯಥಾಶಕ್ತಿ ದಾತೃಗಳು; ಇಂತಹರಿಗೆ ಸ್ವರ್ಗದ್ವಾರವು ಅಪಾವೃತವಾಗಿದೆ. ರಂತಿದೇವನು ಶ್ರದ್ಧೆಯಿಂದ ಕೊಟ್ಟ ನೀರವೇ ಅವನನ್ನು ಸ್ವರ್ಗದ್ವಾರವನ್ನು ಸೇರಿಸಿತು. ನ್ಯಾಯಲಬ್ಧವು, ಶ್ರದ್ಧಾಪೂತವು ಆದ ದಾನಕ್ಕೆ ಸಮಪುಣ್ಯವಿಲ್ಲ. ಸಾವಿರಾರು ಆಕಳ ದಾನ ಮಾಡಿದ ನೃಗನು ಒಂದಾಕಳನ್ನು ಕೊಡುವಾಗ ಶ್ರದ್ಧೆ ತೋರದೆ ನರಕವನ್ನು (ಕೃಕಲಾಸಯೋನಿ) ಹೊಂದಿದನು. ಶ್ರದ್ಧೆಯಿಂದ ಆತ್ಮಮಾಂಸವನ್ನಿತ್ತ ಶಿಬಿಯು ಸ್ವರ್ಗದಲ್ಲಿ ಸುಖವಾಗಿರುವನು. ಕ್ರೋಧವು ದಾನಫಲವನ್ನು ಕೆಡಿಸುವುದು. ಲೋಭವು ಸ್ವರ್ಗವನ್ನು ದೂರ ಮಾಡುವುದು. ನ್ಯಾಯದಿಂದ ಬಂದ ಧನಾದಿಗಳ ಸ್ವಲ್ಪದಾನವೂ ಸ್ವರ್ಗ ಸಂಪಾದಕವಾಗುವುದು.

ಸಕ್ತುಪ್ರಸ್ಥ! ನಿನ್ನ ಯೋಗ್ಯತೆಗೆ ನೀನು ಮಾಡಿದ ದಾನವು ಅನೇಕ ರಾಜಸೂಯಾಶ್ವ ಮೇಧಗಳಿಗೆ ಮೀರಿದೆ. ದಾರಾಪುತ್ರ ಸ್ನುಷಾ ಸಹಿತನಾಗಿ ಸ್ವರ್ಗವನ್ನು ಸೇರಿ, ಸುಖವಾಗಿರು!'

ಧರ್ಮದೇವನು ಇಂತು ನುಡಿಯುತ್ತಿರಲು, ದಿವ್ಯ ವಿಮಾನವು ಅಲ್ಲಿಗೆ ಬಂತು. ವಿಪ್ರವರನು ತನ್ನ ಸತೀಸುತ ಸ್ನುಷೆಯರಿಂದ ಕೂಡಿ, ಆ ವಿಮಾನವನ್ನು (ದಿವ್ಯ ದೇಹಧಾರಿಗಳಾಗಿ) ಏರಿ,

ಸ್ವರ್ಗವನ್ನು ಸೇರಪೋದನು. ಧರ್ಮನೂ ಅಂತರ್ಧಿತನಾದನು. ವಿಪ್ರರೇ! ನಾನು ಇದೆಲ್ಲವನ್ನೂ ನೋಡುತ್ತಾ, ಮೆಲ್ಲಗೆ ಬಿಲದಿಂದ ಹೊರಬಂದೆನು. ಸಕ್ತುಗಂಧಯುಕ್ತವು, ದಿವ್ಯ ಪುಷ್ಪದಳ ಸಮನ್ವಿತವು ಆದ ಅತಿಥಿ ವಿಪ್ರನ ಪಾದೋದಕ ಸ್ಪರ್ಶದಿಂದ ನನ್ನ ಶಿರಸ್ಸು ಕಾಂಚನಮಯ ವಾಯಿತು. ಎಲ್ಲವೂ ಕಾಂಚನವಾಗಲೆಂಬಾಶೆಯಿಂದ ಅದರಲ್ಲಿ ನಾನು ಹೊರಳಾಡಿದೆನು. ಆಗ ನನ್ನ ಬಲಭಾಗವು ಬಂಗಾರವಾಯಿತು. ಎಡಭಾಗವೂ ಆಗಬೇಕೆಂಬಾಶೆ ಪ್ರಬಲವಾಗಿ ಮತ್ತೆ ಮತ್ತೆ ಹೊರಳಾಡಿದೆನು. ಆದರೂ ನನ್ನ ಎಡಭಾಗವು ಹಾಗೇ ಉಳಿಯಿತು. ನೋಡಿರಿ ಬಲಭಾಗದಿಕಾಂಚನಮಯವಾಗಿರುವ ನನ್ನನ್ನು! ತಿಳಿಯಿರಿ ವಿಪ್ರರ ಯಜ್ಞತಪೋದಾನಗಳ ಮಹಿಮೆಯನ್ನು!

ಆ ಮೇಲೆ ನಾನು ಅನೇಕಾಶ್ರಮಗಳನ್ನು, ಯಜ್ಞಶಾಲೆಗಳನ್ನು ಹೊಕ್ಕು, ಅಲ್ಲಿರುವ ತೀರ್ಥಾದಿಗಳಲ್ಲಿಯೂ, ವಿಪ್ರಪಾದೋದಕಗಳಲ್ಲಿಯೂ ಹೊರಳಾಡಿದೆನು. ಆದರೂ ನನ್ನ ಎಡಭಾಗವು ಬಂಗಾರವಾಗಲಿಲ್ಲ. ಆಗ ನಾನು ಧರ್ಮರಾಜನು ಅಶ್ವಮೇಧವನ್ನು ಮಾಡುತ್ತಿರುವ ನೆಂದು ಕೇಳಿ, ಆಶಾತುರನಾಗಿ ಇಲ್ಲಿಗೆ ಬಂದಿದ್ದೆನು. ಇಲ್ಲಿ ಹದಿನೈದು ಯಜ್ಞಗಳ ಅವಭೃತೋದಕದಲ್ಲಿ ಹೊರಳಾಡಿದರೂ ಉಳಿದ ಎಡಭಾಗವು ಕಾಂಚನವಾಗಲಿಲ್ಲ. ಆದುದರಿಂದ ಈ ಯಜ್ಞವು ಸಕ್ತುಪ್ರಸ್ಥನ ದಾನಕ್ಕೆ ಸಮವಲ್ಲವೆಂದು ನಿಂದಿಸಿದೆನು. ಆ ಯಜ್ಞದ ಕಾಲಂಶಕ್ಕೂ ಇದು ಸಮವಲ್ಲವೆಂದ್ಕೇ ನನ್ನ ಕಾಂಚನವಾಗದ ಎಡ ಪಾರ್ಶ್ವವನ್ನೂ ನೋಡಿ ತಿಳಿದಿರುವೆನು.'

ಇಂತು ನುಡಿದು ನಕುಲವು ಧರ್ಮಜಯಾಗವನ್ನು, ಅಲ್ಲಿದ್ದ ಋತ್ವಿಗ್ಜನರನ್ನೂ ಮತ್ತು ಧರ್ಮರಾಜಾದಿಗಳನ್ನೂ ನಿಂದಿಸಿತು. ಅದರ ನಿಂದೆಯನ್ನು ಕೇಳಿ, ಕೋಪಿಸದೆ, ಋಷಿಜನರು ಮತ್ತು ಶ್ರೀಕೃಷ್ಣನು ಕೇವಲ ಮಂದಹಾಸದಿಂದ ಅದರ ವಾಕ್ಯಗಳನ್ನು ತಿರಸ್ಕರಿಸಿದರು. ಆಗ ನಕುಲವು ಅಲ್ಲಿಂದ ಹೊರಟುಹೋಯಿತು. ಇಂತು ವೈಶಂಪಾಯನನು ನುಡಿಯಲು, ಜನಮೇಜಯನು ಶಂಕಾತಂಕಿತನಾಗಿ ಇಂತು ಪ್ರಶ್ನಿಸಿದನು:

'ವೈಶಂಪಾಯನ! ಯಜ್ಞ ಮಾಡಿದವರು ಬಲು ಧರ್ಮಾತ್ಮಜರು. ಭಗವದ್ಭಕ್ತರು ಆದ ಪಾಂಡವರು. ಮಾಡಿಸಿದವರು ಶ್ರೀ ವೇದವ್ಯಾಸ ಶಿಷ್ಯರಾದ ಋತ್ವಿಗ್ವರರು. ಪರ್ಯವೇಕ್ಷಿಸಿದವರು ಶ್ರೀಕೃಷ್ಣವ್ಯಾಸ ಭಾರ್ಗವರು. ವ್ಯವಸ್ಥಾಪಕರು ಭೀಮಾರ್ಜುನಯಮಳರು; ಕೊಟ್ಟ ದಾನಗಳು ಅನಂತವು. ಶ್ರದ್ಧಾದರಗಳಂತೆ ದಧೀಕ್ಷೀರ ಘೃತಾದಿ ಸ್ರವಂತಿಗಳು ಹರಿದು ಹೋದವು. ಲೋಪ ವೆಂಬುದು ಆ ದಿಕ್ಕಿಗೆ ಸುಳಿದಾಡಲಿಲ್ಲ. ವಿಪ್ರಾದಿ ಸಕಲ ಭೂಜನರು ಸಂತುಷ್ಟರಾಗಿ ನಿಂತು, ಹವಿಃಸ್ವೀಕಾರ ಮಾಡಿ ಸಾರ್ಥಕಗೊಳಿಸಿದರು. ಇಂತಹ ಸಾತ್ವಿಕ ಯಜ್ಞವನ್ನು ನಿಂದಿಸಿದ ಆ ನಕುಲನು ಅಸೂಯಾವಶನಾದ ಯಾವನೋ ದೈತ್ಯನಿರಬೇಕು. ನನ್ನ ಈ ಸಂಶಯವನ್ನು ಬಿಡಿಸು!'

ಆ ಮಾತಿಗೆ ವೈಶಂಪಾಯನನಿಂತೆಂದನು: 'ರಾಜನ್! ನಿಜ! ಆ ನಕುಲನು ಕ್ರೋಧ ಮಾನಿಯಾದ ದೈತ್ಯನೆಂದು ತಿಳಿ! ಅವನು ಯಜ್ಞವನ್ನು ನಿಂದಿಸಿದರೂ ಕೋಪಿಸದೆ, ನಕ್ಕು ಶ್ರೀಕೃಷ್ಣನು ಋಷಿಗಳು ಸುಮ್ಮನಿರಲು ಕಾರಣವಿದೆ. ಅವನು ದೈತ್ಯನಾಗಿ ತಮಸ್ಸನ್ನು

ಸೇರಲರ್ಹನಿರುವುದರಿಂದ ಅಂತಹ ಮಿಥ್ಯಾಜ್ಞಾನಿಗೆ ಯಥಾರ್ಥಜ್ಞಾನವಾಗಬಾರದೆಂಬ ನಿಜಸ್ಥಿತಿಯನ್ನು ಅವರು ವಿಶದಪಡಿಸಲಿಲ್ಲ. ನಗುವುದರಿಂದ ಅವನು ತಾನಾಡಿದುದೆಲ್ಲವೂ ಸತ್ಯವೆಂತಲು ಪಾಂಡವ ಯಜ್ಞವು ಸಕುಪ್ರಸ್ಥಯಾಗ ಸಮವಲ್ಲವೆಂತಲು ತಿಳಿದು ಅವರನ್ನು ನಿಂದಿಸಿ, ತಮಸ್ಸನ್ನು ಸೇರಪೋದನು. ಸದ್ವೈಷ್ಣವರನ್ನು ಅವರ ಸತ್‌ಕರ್ಮವನ್ನೂ ನಿಂದಿಸಿದ ಅವನ ಪಾಪಕುಂಭವು ಆಗ ಪೂರ್ಣವಾಯಿತು. ಅಂತೆಯೇ ಅವನ ಮಿಥ್ಯಾಜ್ಞಾನವನ್ನು ದೃಢೀಕರಿಸಲು ದೇವತೆಗಳು ತಮ್ಮ ವಿಚಿತ್ರ ಶಕ್ತಿಯಿಂದ, ವಿಪ್ರಪಾದೋದಕ ಕ್ಲಿನ್ನವಾದ ನಕುಲನ ಬಲಭಾಗವನ್ನು ಬಂಗಾರವಾಗುವಂತೆ ಮಾಡಿದನು. ತೀರ್ಥಗಳಲ್ಲಿಯು ಅವಭೃತಗಳಲ್ಲಿಯೂ ಬಿದ್ದು ಹೊರಳಾಡಿದರೂ ಇನ್ನೊಂದು ಭಾಗವನ್ನು ಸುವರ್ಣವನ್ನಾಗಿಸದಿರಲು ಕೂಡ ಅವನ ಮಿಥ್ಯಾಜ್ಞಾನವನ್ನು ದೃಢೀಕರಿಸಲೆಂದೇ ಎಂದು ತಿಳಿ! ಸುವರ್ಣೀಕರಣ ಕಾರಣವು ದೇವತೆಗಳ ವಿಚಿತ್ರ ಚೇಷ್ಟೆಯೇ ಆಗಲಿ ವಿಪ್ರಪಾದೋದಕವಲ್ಲ! ಹಾಗಿದ್ದರೆ ಎರಡೂ ಪಕ್ಕೆಗಳು ಬಂಗಾರವಾಗಬೇಕಿತ್ತು!

ಪಾದೋದಕ ಸ್ಪರ್ಶವನ್ನು ಮಾಡಿದ ಉಂಛವೃತ್ತಿ ಬ್ರಾಹ್ಮಣನ ಕೈಗಳು, ಹಾಗೂ ಆ ನೀರಿನಲ್ಲಿ ತೊಯ್ದ ಅಲ್ಲಿಯ ಭೂಮಿಯ ಮಣ್ಣು ಕೂಡ ಬಂಗಾರಮಯವಾಗಬೇಕಲ್ಲವೇ? ಅಲ್ಲಿದ್ದ ಕೀಟಾದಿಗಳೂ ಬಂಗಾರವಾಗಲಿಲ್ಲ. ಉಂಛವೃತ್ತಿ ವಿಪ್ರನು ದಾನವನ್ನು ಮಾಡಿದನಾಗಲಿ, ದಾನಾದ್ಯಂಗಸಹಿತ ಯಜ್ಞವನ್ನಲ್ಲ. ಅಲ್ಲಿ ಪಾದೋದಕವೇ ಆಗಲಿ ಅವಭೃತವಿಲ್ಲ. ಇಂತು ಸರ್ವವಿಧದಿಂದಲು ಶ್ರೇಷ್ಠವಾದ ಪಾಂಡವರ ಯಜ್ಞವೆಲ್ಲಿ? ಸಕುಪ್ರಸ್ಥನ ದಾನವೆಲ್ಲಿ? ಇರಲಿ ಅವನು ಸಾತ್ವಿಕನು. ಅವನಿತ್ತ ಸರ್ವಸ್ವದಾನವು ಉತ್ತಮವು. ಅವನಿಗೆ ಶ್ರೀಹರಿಪ್ರೀತಿಯಿಂದಲು, ಧರ್ಮಾದಿ ದೇವತೆಗಳ ಅನುಗ್ರಹದಿಂದಲು ಉತ್ತಮಗತಿಯಾಯಿತು ನಿಜ! ಆದರೆ ಧರ್ಮಕಾರ್ಯಗಳಲ್ಲಿ ಕರ್ತೃವಿನ ಜ್ಞಾನಭಕ್ತ್ಯಾದಿ ಗುಣಗಳೇ ಉತ್ತಮ ಫಲ ಸಂಪಾದಕವಾಗಲಿ ಕರ್ತೃವಿನ ಅಲ್ಪ ಧನವತ್ವ, ಸರಸ್ವದಾನ, ಮಹಾಧನವತ್ವ, ಅಲ್ಪದಾನಗಳು ಕಾರಣವಲ್ಲ. ಸಜ್ಜನರ ಪ್ರೀತಿಯೇ ಅನಂತಫಲ ಸಂದಾಯಕವಾಗಿದೆ. ಸತ್ = ಎಂದರೆ ಶ್ರೀಕೃಷ್ಣನು. ಓಂ ತತ್ ಸತ್ ಇತಿನಿರ್ದೇಶೋ ಬ್ರಹ್ಮಣಃ ತ್ರಿವಿಧಃ ಸ್ಮೃತಃ ॥ ಸ ದೇವೇದಮಗ್ರ ಆಸೀತ್॥ ಸತ್ ಶಬ್ದ ಉತ್ತಮಂ ಬ್ರೂಯಾತ್॥ ಇತ್ಯಾದಿ ಪ್ರಮಾಣಗಳಿಂದ ಸತ್ ಎಂದರೆ ಶ್ರೀಶನು. ಅವನ ಪ್ರೀತಿಯು ಪಾಂಡವರಲ್ಲಿ ವಿಶೇಷನಾಗಿಯು ಸಂತತವಾಗಿಯು ಇದೆ. ಅಂತು ಪ್ರೀತಿ ಇಲ್ಲದರೆ ತಾನು ಪ್ರತ್ಯಕ್ಷವಾಗಿ ನಿಂತು ಯಜ್ಞವನ್ನು ಮಾಡಿಸುತ್ತಿದ್ದನೇ? ಶ್ರೀ ವ್ಯಾಸ ಭಾರ್ಗವ ಕೃಷ್ಣರೂಪತ್ರಯನಾಗಿ ಶ್ರೀಶನೇ ಮಾಡಿಸಿ, ಫಲವನ್ನು ಸ್ವೀಕರಿಸಿ ಉದ್ಧರಿಸಿದ ಯಜ್ಞವನ್ನು ಸತ್ = ವೈಷ್ಣವ ವರೇಣ್ಯರಾದ ಪಾಂಡವರು - ಧರ್ಮವಾಯು ಶಕ್ರನಾಸತ್ಯದಸ್ರದೇವತಾಂಶರು - ಮಾಡಿದ ಯಜ್ಞವನ್ನು ಸಕಲ ಸುವರ್ಣರತ್ನ ಸರ್ವಭೂಮಂಡಲ ದಾನದಿಂದ ಪಾವನತಮವಾದ ಯಜ್ಞವನ್ನು ನಿಂದಿಸುವವರುಂಟೇ? ನಿಂದಿಸಿದವರು ದೈತ್ಯರೇ ಅಲ್ಲವೇ?

ಧರ್ಮರಾಜನೇ ಅಂದರೆ ಅತಿಥಿಯಾಗಿ ಸಕುಪ್ರಸ್ಥನನ್ನು ಉದ್ಧರಿಸಿದವನೇ ಮಾಡಿದ ಯಜ್ಞವನ್ನು ಹೀಯಾಳಿಸುವುದು ತಮಃ ಸಾಧನವೇ ಸರಿ! ಧರ್ಮರಾಜನ ಯಜ್ಞವು ಹೀನ ಫಲವಾಗಿದ್ದಿದ್ದರೆ, ನಕುಲ ಬಲಪಾರ್ಶ್ವದ ಸುವರ್ಣತ್ವವು ಹಾರಿ ಹೋಗಬೇಕಿತ್ತು. ಸಾಕ್ಷಾದ್ವಿಷ್ಣು

ಪಾದೋದಕವನ್ನು ಬ್ರಹ್ಮದೇವನಿತ್ತಾಗ ಶಿರದಿ ಸ್ವೀಕರಿಸಿದ ಶಿವನು ಶಿವನೇ ಅಂದರೆ ಮಂಗಳಕರನೇ ಆದನಾಗಲಿ, ಆತನ ಜಟೆಯು ಸುವರ್ಣವಾಗಲಿಲ್ಲ; ಎಂದ ಮೇಲೆ ಇತರ ದೇವತೆಗಳ, ಅಥವಾ, ವಿಪ್ರರ ಪಾದೋದಕಗಳಿಗೆ ಸುವರ್ಣೀಕರಣ ಶಕ್ತಿಯು ಇಲ್ಲವೆಂದು ಹೇಳಬೇಕಾಗಿಲ್ಲ. ಹಾಗಿದ್ದರೆ ಪ್ರತ್ಯಬ್ದ ಶ್ರಾದ್ಧವನ್ನು ಮಾಡುವ ಎಲ್ಲ ಯಜಮಾನರ ಕೈಗಳೂ, ಮನೆಯ ಕೆಲದೇಶವೂ ವಿಪ್ರಪಾದೋದಕದಿಂದ ಸುವರ್ಣಮಯವಾಗಿ, ಅವರ ದಾರಿದ್ರ್ಯವೇ ಮಾಯವಾಗಬೇಕಾಗುತ್ತಿತ್ತು.

ಆಗ ಶ್ರೀಕೃಷ್ಣಾನುಮತಿಯಿಂದ ಅಲ್ಲಿದ್ದ ವಿಪ್ರವರರು ಪಾಂಡವರನ್ನೂ, ಅವರ ಅಶ್ವಮೇಧಯಾಗಗಳನ್ನೂ, ಅವರಿತ್ತ ದಾನಾದಿ ವಿಧಿಯನ್ನೂ ಪ್ರಶಂಸಿಸಿ, ನಿಜವಿಷಯವನ್ನು ತಿಳಿಸಿ, ಧರ್ಮಜಾದಿಗಳನ್ನು ಸಂತೋಷಪಡಿಸಿದನು. ಈ ವಿಷಯದಲ್ಲಿ ಪೈಂಗಿ ಶ್ರುತಿಗಳನ್ನು ಅವರು ಉದಾಹರಿಸಿದರು. 'ಅವೈಷ್ಣವರ ಎಲ್ಲ ಕರ್ಮಗಳೂ ವ್ಯರ್ಥವಾಗಿ ಕೆಡುವವು. ವೈಷ್ಣವರಿಂದ ಮಾಡಲ್ಪಟ್ಟುದು ಅನಂತಫಲಪ್ರದವಾಗುವುದು; ಕೊನೆಗೆ ಮೋಕ್ಷವನ್ನು ಕೊಡಿಸುವುದು. ವೈಷ್ಣವರಲ್ಲಿಯೂ ತಾರತಮ್ಯವಿದೆ. ಪರ್ಣಕ್ರಮವಾಗಿ ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣರು, ಅವರಿಗೂ ಗಂಧರ್ವರು, ಆಮೇಲೆ ಶತಶತಗುಣಿತ ಫಲಭಾಜನರಾಗಿ ಕ್ರಮವಾಗಿ ಪಿತೃಗಳು ಮುನಿಗಳು, ದೇವತೆಗಳು, ಇಂದ್ರ, ರುದ್ರ, ಚತುರ್ಮುಖರು ಉತ್ತಮರು. ಬ್ರಹ್ಮದೇವನಿಗೂ ಉತ್ತಮರಿಲ್ಲ; ಅಂದರೆ ಜೀವಕೋಟಿಯಲ್ಲಿ ಅವರೇ ಉತ್ತಮರು. ಓಂ ಇಯದಾಮನನಾತ್ ಓಂ ಎಂಬ ಸೂತ್ರವು ಇದನ್ನೇ ಸಾರುತ್ತಿದೆ. ಎಲ್ಲ ಕರ್ಮವೂ ವಿಷ್ಣುಪ್ರೀತಿಫಲಕವಾಗಿದೆ. ವಿಷ್ಣು ಪ್ರೀತಿಯೇ ಇಲ್ಲದಿರೆ ಫಲವೇ ಇಲ್ಲ. ಇಂತು ಶ್ರೀಕೃಷ್ಣನ ಮುಖ್ಯಪ್ರೀತಿವಿಷಯರಾದ ಭೀಮ ಧರ್ಮಪಾರ್ಥಯಮಳರನ್ನು ಅವರ ಯಾಗವನ್ನು ನಿಂದಿಸಿ, ಕ್ರೋಧನಾಮಕ ದೈತ್ಯನು ಅಂಧಂತಮವನ್ನು ಹೊಂದಿದನು. ಇಂತು ವಿವರಗಳನ್ನು ಶ್ರೀಕೃಷ್ಣನೂ ಪೇಳಲು ತಿಳಿದು ಧರ್ಮರಾಜನು ನಿಶ್ಶಂಕನಾದನು.

ಹಿಂದೆ ನಕುಲರೂಪದಿಂದ ಕ್ರೋಧಾಭಿಮಾನಿ ದೈತ್ಯನು ಜಮದಗ್ನಿಋಷಿಯ ಪಿತೃಶ್ರಾದ್ಧಕ್ಕೆಂದು ಕಾದಿಟ್ಟ ಹಾಲನ್ನು ಎಂಜಲು ಮಾಡಿ ಕೆಡಿಸಿದನು. ಆಗ ಪಿತೃದೇವತೆಗಳು ಕುಪಿತರಾಗಿ, ಅವನು ನಕುಲನೇ ಆಗಿರುವಂತೆ ಶಪಿಸಿದರು. ಶಾಪ ಮೋಕ್ಷವನ್ನು ಬೇಡಲು, ಧರ್ಮಜಯಾಗವನ್ನು ನಿಂದಿಸಿದಾಗ ನಿಜಯೋಗ್ಯ ಮುಕ್ತಿ ಎಂದು ವಿಶಾಪವಿತ್ತರು. ಮುಂದೆ ಯೋಗ್ಯತೆಗೆ ತಕ್ಕಂತೆ ಪರಮ ವೈಷ್ಣವರಾದ ಪಾಂಡವರ ಯಾಗವನ್ನು ಕೀಳೆಂದು ನಿಂದಿಸಿ ಅವನು ಅಂಧಂತಮಸ್ಸನ್ನು ಹೊಂದುವಂತೆ ಕೂಡ ಸಂಭವಿಸಿತು. ಶ್ರಾದ್ಧಕ್ಷೀರದೂಷಣವು ಅಲ್ಪಪಾಪವಾಗಿ ದುರ್ಯೋನಿಯನ್ನು ಸ್ಥಿರವಾಗಿಸಿತು ಮತ್ತು ವಿಷ್ಣುತದ್ಭಕ್ತನಿಂದೆಯು ಮಹತ್ಪಾಪವಾದುದರಿಂದ ಅಂಧಂತಮಸ್ಸನ್ನು ಹೊಂದಿಸಿತು.

ಇನ್ನು ಸಕ್ತುಪ್ರಸ್ಥನು ತನ್ನ ಸರ್ವಸ್ವನ್ನೂ ಶ್ರದ್ಧೆಯಿಂದ ದಾನಮಾಡಿ ಸುಗತಿಯನ್ನು ಪೊಂದಿ, ಚಿರಕೀರ್ತಿಯನ್ನು ಗಳಿಸಿದನು. ಸರ್ವಸಾಧನಹೀನರಾದರೂ ಹರಿಭಕ್ತರು ದಾನಾದಿ ರೂಪ ಯಜ್ಞವನ್ನು ಮಾಡಿ, ಉತ್ತಮಗತಿಯನ್ನು ಹೊಂದಬಲ್ಲರೆಂದು ಈ ಆಖ್ಯಾಯಿಕೆಯು ತಿಳಿಸುತ್ತಿದೆ.

ಅಶ್ವಮೇಧಿಕ ಪರ್ವ ಮುಗಿಯಿತು



# ೧೫. ಆಶ್ರಮವಾಸಿಕ ಪರ್ವ

## ೧. ಧೃತರಾಷ್ಟ್ರ ವಿರಾಗ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ರಾಜನ್ ! ಯಜ್ಞೇಶ್ವರನಾದ ಶ್ರೀಕೃಷ್ಣನ ಪರಮಾನುಗ್ರಹಪಾತ್ರರಾದ ಪಾಂಡವರು ಅಶ್ವಮೇಧ ಯಜ್ಞವು ಸಾಂಗವಾಗಿ, ಸಕಲ ದೇವಗಂಧರ್ವ ಮುನಿವಿಪ್ರಾದಿ ಮಾನವರ ಪ್ರಶಂಸೆಗೆ ಪಾತ್ರವಾಯಿತು. ಅವರು ಯಜ್ಞವನ್ನು ಯಜ್ಞಕರ್ತೃ ಪಾಂಡವರನ್ನು, ಯಜ್ಞಪ್ರಭು ಶ್ರೀಕೃಷ್ಣನನ್ನು ಪೊಗಳುತ್ತಾ ತಂತಮ್ಮ ನಿಲಯಗಳಿಗೆ ತೆರಳಿದರು. ಶ್ರೀಕೃಷ್ಣನೂ ಪಾಂಡವರನ್ನು ಬೀಳ್ಕೊಂಡು ಸಪರಿವಾರನಾಗಿ ದ್ವಾರಕೆಗೆ ಪಯಣಿಸಿದನು.

ಧರ್ಮರಾಜನು ಭೀಮಾದಿ ಸೋದರ ಸಮೇತನಾಗಿ ರಾಜ್ಯವಾಳುತ್ತಾ ಸುಖವಾಗಿದ್ದನು. ಇಂತಿರಲು ಹದಿನೈದು ವರ್ಷಗಳು ಕಳೆದವು. ಒಂದು ದಿನ ನಡುರಾತ್ರಿಯಲ್ಲಿ ಒಬ್ಬ ವಿಪ್ರವರನು ಧರ್ಮರಾಜನನ್ನು ಕಂಡು: 'ರಾಜನ್ ! ಯಜ್ಞವನ್ನು ಮಾಡಲಿರುವೆನು. ನನಗೆ ವಿತ್ತವನ್ನು ಕೊಡು!' ಎಂದು ಬೇಡಿದನು. ಆ ಮಾತನ್ನಾಲಿಸಿ, ಧರ್ಮರಾಜನು, 'ನಡುರಾತ್ರಿಯಾಗಿದೆ ಬೆಳಗಾಗಲಿ! ಆಗ ಕೊಡುವೆನು' ಎಂದು, ಆ ವಿಪ್ರನನ್ನು ಕಳಿಸಿಬಿಟ್ಟನು. ಆತನು ತತ್ ಕ್ಷಣವೇ ಭೀಮಸೇನನ್ನು ಕಂಡು, ಧರ್ಮರಾಜನ ನುಡಿಯನ್ನು ತಿಳಿಸಿ, "ನನಗೆ ಈಗಲೇ ಧನವನ್ನು ಕೊಡು! ನಾಳೆ ಯಜ್ಞವನ್ನಾರಂಭಿಸಬೇಕಾಗಿದೆ" ಎಂದು ಪ್ರಾರ್ಥಿಸಿದನು. ಭೀಮಸೇನನು ಆ ಕ್ಷಣದಲ್ಲಿಯೇ ತನ್ನ ಹಸ್ತಭೂಷಣವನ್ನು ತೆಗೆದು ಅವನಿಗೆ ಕೊಟ್ಟು, ಪೂಜಿಸಿ ಕಳಿಸಿದನು. ಅನರ್ಘಮಣಿಗಣಾಂಚಿತವು, ಕನಕಮಯವು, ಅಗ್ನಿಪ್ರಕಾಶವು ಆದ ಹಸ್ತಭೂಷಣವನ್ನು ಪಡೆದು, ವಿಪ್ರವರನು ಸುಪ್ರೀತನಾಗಿ ಹೊರಟುಹೋದನು.

ಆಗ ಭೀಮಸೇನನು ರಾಜದ್ವಾರದಲ್ಲಿದ್ದ ಆನಂದಭೇರಿಯನ್ನು ದಬದಬ ಹೊಡೆಸಿದನು. ಅಕಾಲದಲ್ಲಿ ಆನಂದಭೇರೀನಿನಾದಕ್ಕೆ ಕಾರಣವನ್ನು ತಿಳಿಯದೆ ಧರ್ಮರಾಜನು ದೂತನನ್ನು ಕಳಿಸಿದನು. ಮತ್ತೊಬ್ಬನನ್ನು ಕಳಿಸಿದನು. ಮೊದಲ ದೂತನು ಭೀಮಸೇನಾಜ್ಞೆಯಿಂದ ನಂದಿ ಘೋಷವಾಯಿತೆಂದು ತಿಳಿದು, ಭೀಮಸೇನನಲ್ಲಿಗೆ ಬಂದು, ಕಾರಣವನ್ನು ತಿಳಿಯಲಿಚ್ಛಿಸುವ ಧರ್ಮಜನ ಸಂದೇಶವನ್ನರುಹಿದನು. ಭೀಮಸೇನನು 'ನಮ್ಮ ಅಣ್ಣನು ವರ್ತ್ಯ ದೇಹದಲ್ಲಿದ್ದರೂ, ನಿಶ್ಚಿತಾಯುನಾಗಿರುವನಲ್ಲ! ನಾಳೆ ಬಾ ಎನಬೇಕಾದರೆ ಅಲ್ಲಿಯವರೆವಿಗೂ ತನ್ನ ಜೀವನವು ನಿರ್ಬಾಧಕವಾಗಿದೆ ಎಂದು ತಿಳಿದಿರುವನೆಂಬ ಹರ್ಷದಿಂದ ನಾನೇ ಆನಂದ ಭೇರಿಯನ್ನು ಹೊಡಿಸಿದೆನು' ಎಂದು ಉತ್ತರವನ್ನು ಹೇಳಿ ಕಳಿಸಿದನು.

ಆ ಮಾತನ್ನು ಕೇಳಿ ಧರ್ಮರಾಜನು 'ಆಹಾ! ಧರ್ಮ ವಿಷಯದಲ್ಲಿ ತ್ವರಾನ್ವಿತನಾಗಿರ ಬೇಕೆಂದು ಭೀಮಸೇನನ ಅಭಿಪ್ರಾಯವೆಂದು ಮನಗಂಡು, ಅಂದಿನಿಂದ ಧರ್ಮವನ್ನು ಬೇಗ ಬೇಗ ಮಾಡುವವನಾದನು. ಧರ್ಮರಾಜನು ಧೃತರಾಷ್ಟ್ರನನ್ನು ರಾಜನೆಂದು ಸಾರಿ, ತಾನು

ಅವನ ಪ್ರತಿನಿಧಿ ಎಂಬಂತೆ ನಡೆದುಕೊಂಡನು. ವಿದುರ ಸಂಜಯರು ಮತ್ತು ವೈಶ್ಯಾಪುತ್ರನಾದ ಯುಯುತ್ಸುವು ಧೃತರಾಷ್ಟ್ರನನ್ನು, ಗಾಂಧಾರಿಯನ್ನು ಉಪಚಾರಿಸುತ್ತಾ, ಆತನ ಪುತ್ರಶೋಕವನ್ನು ಮರೆಸಲು ಹವಣಿಸಿದರು. ಅವರ ಸರ್ವಕಾಮಿತಗಳನ್ನು ಧರ್ಮರಾಜನು ಈಡೇರಿಸುತ್ತಿದ್ದನು. ಭೋಜನ, ವಸನ , ಯಾನ, ಪಾನ, ಆಸನಗಳೆಲ್ಲವೂ ರಾಜಾರ್ಹವಾಗಿರಲು, ವಿದುರ ಸಂಜಯರು ಪರಿಚರಣರಾಗಿರಲು, ವೃದ್ಧ ದಂಪತಿಗಳು ಸುಖವಾಗಿದ್ದು ಕಾಲಕ್ರಮವಾಗಿ ತಮ್ಮ ದುರಂತ ಪುತ್ರಶೋಕಸಾಗರದಲ್ಲಿ ಪಾಂಡವ ದ್ವೀಪವನ್ನು ಸೇರಿದೆವೆಂದು ತಿಳಿದರು. ರಾಜಕಾರ್ಯಗಳನ್ನು ಧೃತರಾಷ್ಟ್ರನಿಗೆ ತಿಳಿಸಿ ನಡೆಸುವ ಧರ್ಮರಾಜನನ್ನು, ಪರಿಚರ್ಯೆಗೈವ ನಕುಲ ಸಹದೇವರನ್ನು , ಗಾಂಧಾರೀ ಸಖಿಯಾಗಿ ನಿರಂತರ ಸೇವಿಸುವ ಕುಂತಿಯನ್ನು ನೋಡಿ, ಅಂಧ ದಂಪತಿಗಳು ತಮ್ಮ ಪುತ್ರಶತವನ್ನು ಮರೆತಂತಾದರು.

ಮೈರೇಯಾದಿ ಪಾನವಿಶೇಷಗಳನ್ನು, ಚಿತ್ರಭಕ್ಷ ವಿವಿಧ ಮಾಂಸಗಳನ್ನು ಕಾಲಕಾಲಕ್ಕೆ ಹಿತವಾಗಿ ಅರ್ಪಿಸುವ ಪಾಚಕರಿಂದಲು, ಕೈಗೆ ಕಾಲಿಗೆ ಒದಗಿ ನಿಂತಿರುವ ಕಿಂಕರರಿಂದಲು, ಧರ್ಮಜನನ್ನು ನೋಡ ಬಂದ ಸಾಮಂತ ರಾಜರ ಕಾಣಿಕೆಗಳಿಂದಲು, ದ್ರೌಪದ್ಯಾದಿ ರಾಜಮಹಿಷಿಯರ ಉಪಚಾರಗಳಿಂದಲು ಗಾಂಧಾರೀ ಧೃತರಾಷ್ಟ್ರರು ಅತ್ಯಂತ ಸುಖವನ್ನು ಹೊಂದಿ, ನಿಶ್ಚಿಂತರಾದರು. ಧೃತರಾಷ್ಟ್ರನು ಅಗ್ರಹಾರಗಳನ್ನಿತ್ತನು; ವಿಪ್ರವರರಿಗೆ ದಾನವಾಗಿ ಕನಕ ರತ್ನ ಧೇನು ವಸ್ತ್ರ ತಿಲ ಭೂಮಿಗಳನ್ನಿತ್ತನು ; ಸೇವಕರನ್ನು ಬಹೂಕರಿಸಿದನು; ಸಾಮಂತರನ್ನು ಸಂಭಾವಿಸಿದನು ; ಬಂಧು ಜನರನ್ನು ಬಲುಪ್ರಿಯವಾಡಿದನು. ಆತನೇನು ಮಾಡಿದರೂ, ಧರ್ಮರಾಜನು ಅದನ್ನು ಅನುಮೋದಿಸುತ್ತಿದ್ದನು. 'ಪುತ್ರಪೌತ್ರ ವಾಧಾರ್ದಿತನಾದ ಧೃತರಾಷ್ಟ್ರನು ಶೋಕಭರದಿಂದ ಸಾಯದೆ ಉಳಿಯುವುದೆಂತೆಂ'ಬ ಚಿಂತೆಯಿಂದ ಧರ್ಮಜನು, ಆತನ ಸಕಲೋಪಚಾರಗಳಲ್ಲಿ ಲೋಪವಾಗದಂತೆ ಆಜ್ಞಾಪಿಸಿದನು. ಗಾಂಧಾರಿಯು ಕ್ರಮವಾಗಿ ಪುತ್ರಶೋಕವನ್ನು ಮರೆತು, ಧರ್ಮರಾಜಾದಿಗಳೇ ತಮ್ಮ ಮಕ್ಕಳೆಂದು ತಿಳಿದಳು. ಧೃತರಾಷ್ಟ್ರನು ಪ್ರಾತರಾಹ್ನಿಕವನ್ನು ಮುಗಿಸಿ, ನಿತ್ಯವೂ 'ಪಾಂಡವರಿಗೆ ಸ್ವಸ್ತಿಯಾಗಲಿ! ' ಎಂದು ಪ್ರಾರ್ಥಿಸುತ್ತಿದ್ದನು.

ಆದರೆ ಆಗಾಗ ಪುತ್ರರನ್ನು ಸ್ಮರಿಸುವ ಧೃತರಾಷ್ಟ್ರನಿಗೆ ಭೀಮಸೇನನಲ್ಲಿ ದ್ವೇಷವು ತಲೆದೋರದಿರಲಿಲ್ಲ. ವೃಕೋದರನು ಅವರ ರಾಗದ್ವೇಷವು ಕೂಡ ಸ್ವಯೋಗ್ಯ ಗತಿಪ್ರಾಪ್ತಿಗೆ ಪ್ರತಿಬಂಧಕವಾಗಿರುವುದರಿಂದ ಅವೆರಡನ್ನೂ ಕಳೆಯಲೆಣಿಸಿದನು. ಭೀಮಸೇನನು ಧೃತರಾಷ್ಟ್ರನಲ್ಲಿ ಅನುಕಂಪಾಯುತನಾಗಿ ನಿಂದಿಸಿದನು. ನಿಂದಿಸದ ಹೊರತು ವಿಷಯ ವಿರಾಗವು ಹುಟ್ಟಲಾರದು; ನಿಂದಿಸಿದರೆ ದ್ವೇಷವು ಹೆಚ್ಚುವುದು ನಿಜ! ಆದರೆ ಅಂತಹ ತಾತ್ಕಾಲಿಕ ಭೀಮ ದ್ವೇಷವು ಮುಂದೆ ವಾನಪ್ರಸ್ಥನಾದಾಗ ನಶಿಸಿ, ಧೃತರಾಷ್ಟ್ರನು 'ಭೀಮಸೇನನು ನನಗೆ ವಿರಾಗವನ್ನು ಉಪದೇಶಿಸಿ ಹಿತಂಕರನಾದನು' ಎಂದು ತಿಳಿದು, ಶುದ್ಧನಾಗುವನು. ಅಂತಾಗಲಿ! ಎಂದೇ ಭೀಮಸೇನನು ಧೃತರಾಷ್ಟ್ರನ ವಿಷಯಾಸಕ್ತಿಯನ್ನು ನಿಂದಿಸಿದನು. ದುರ್ಯೋಧನಾದಿ ಪಾಪಿ ಸಂಗದಿಂದ ಮತಿಗೆಟ್ಟು, ಮಾಧವನ ಮಾತಿನಂತೆ ನಡೆಯದೆ, ಯುದ್ಧವನ್ನೇ ನಿಶ್ಚಯಿಸಿ, ಅನೇಕ ಸಹಾಸ್ರ ರಾಜಾದಿ ಜೀವನಾಶಕನಾಗಿ,

ಪಾಪಿತಮನಾದ ಮಗನಿಗಾಗಿ ಮರುಗುವ ಪಾಪಗಳಿಗೆ ಆಶ್ರಯನಾಗಿರುವ ಧೃತರಾಷ್ಟ್ರನು ವಿರಕ್ತನಾಗಿ, ತೀವ್ರ ತಪವನ್ನು ಮಾಡದಿದ್ದರೆ ಸ್ವಯೋಗ್ಯಗತಿಯು ಅವನಿಗೆ ಆಗದೆ ಹೋದೀತು! ಎಂದರಿತು ಭೀಮಸೇನನು ಧೃತರಾಷ್ಟ್ರನ ಆಜ್ಞೆಯನ್ನು ನಡೆಸ ಪೋಗುವ ಕಿಂಕರರನ್ನು ತಡೆಯುವುದರಿಂದಲು, ತಾನೂ ತಿರಸ್ಕರಿಸುವುದರಿಂದಲು ಭೀಮಸೇನನು ಅಂಧರಾಜನಿಗೆ ವೈರಾಗ್ಯವಂಕುರಿಸುವುದೆಂದು ನೋಡಿದನು.

ಆದರೆ ಪಾಂಡವ ಚತುಷ್ಟಯ ಸತ್ಕಾರ, ಕಿಂಕರ ಪರಿವಾರದ ಉಪಚಾರ, ದ್ರೌಪದ್ಯಾದಿ ಸ್ತ್ರೀ ಜನರ ಸೇವೆ, ಕುಂತೀದೇವಿಯ ಹಿತವಚನ ಇವೆಲ್ಲವೂ ಸಂಪನ್ನವಾಗಿರುವುದರಿಂದ ಧೃತರಾಷ್ಟ್ರನು ವಿರಕ್ತನಾಗಲಿಲ್ಲ. ಪ್ರತ್ಯುತ ಧರ್ಮಜಾರ್ಜುನ ನಕುಲ ಸಹದೇವರನ್ನು ಕಂಡಂತೆ, ಭೀಮಸೇನನನ್ನು ಅಷ್ಟು ಪ್ರೀತಿಯಿಂದ ಕಾಣಲಿಲ್ಲ. ಧೃತರಾಷ್ಟ್ರನಿಗೆ ಭೀಮನ ಪ್ರಭಾವವು ತಿಳಿಯದೆಂದಲ್ಲ. ಸಕಲ ಸಂಹಾರ ಕಾರಣನಾದ ಸಂಕರ್ಷಣನ ಕಾರ್ಯವಿದು. ಭೀಮಸೇನನಿಗೆ ಮಾಡಿದ ದ್ರೋಹದ ಫಲದಿಂದ ದುರ್ಯೋಧನಾದಿ ಸುತರು ಸರ್ವನಾಶವಾದರು ಎಂಬ ಸತ್ಯವನ್ನರಿತಿದ್ದೂ, ಧೃತರಾಷ್ಟ್ರನು 'ಭೀಮಸೇನ! ನೀನು ಅತ್ಯಂತ ಪ್ರಭಾವಬಲವೀರ್ಯಜ್ಞಾನಾದಿ ಗುಣಸಂಪನ್ನನು! ನನ್ನ ಸುತರು ಮಹಾಪಾಪಿಗಳು. ಅವರನ್ನು ನೀನು ಸಂಹರಿಸಿದುದು ನಿಂದನೀಯವಲ್ಲ; ಅಧರ್ಮವಲ್ಲ 'ಎಂದು ಇತ್ಯಾದಿ ಸತ್ಯ ಪ್ರಶಂಸೆಯನ್ನೂ ಮಾಡುತ್ತಿದ್ದಿಲ್ಲ. ಇದನ್ನರಿತು ಭೀಮಸೇನನು ಅವನ ವಿಷಯಾಸಕ್ತಿಯನ್ನೂ, ತನ್ನಲ್ಲಿರುವ ದ್ವೇಷವನ್ನೂ ಕಳೆಯಲೋಸುಗವೇ ನಿಂದಿಸಿದನು ಹೊರತು ಭೀಮನಿಗೆ ದೊಡ್ಡಪ್ಪನಲ್ಲಿ ದ್ವೇಷವಿಲ್ಲ.

ಆತನ ಮನವನ್ನರಿತು ದ್ರೌಪದಿಯು 'ಪಾಪಿಸ್ನೇಹವು ಪಾಪಾಧಿಕ್ಯಕಾರಣವಾಗಿದೆ. ದುರ್ಯೋಧನನನ್ನು ನೆನೆನೆನೆದು ಪಾಪವನ್ನೆಸಗುವಂತಾಗಬಾರದೆ 'ಂದು ಮನಗಂಡು, ಅನುಕಂಪೆಯಿಂದ ಧೃತರಾಷ್ಟ್ರನನ್ನು ಸೇವಿಸುತ್ತಿದ್ದಳು.

ಒಂದು ದಿನ ಭೀಮಸೇನನು ನಕುಲಸಹದೇವರನ್ನು ನೋಡಿ, ಗಾಂಧಾರೀ ಧೃತರಾಷ್ಟ್ರನಿಗೆ ಕೇಳಿಸುವಂತೆ ಇಂತೆಂದನು: ಬಾಹು ಶಬ್ದವನ್ನು ಮಾಡಿ ಭೀಮನು 'ಈ ನನ್ನ ಚಂದನ ರೂಷಿತವಾದ ದಿವ್ಯಬಾಹುದ್ವಯದ ಮಧ್ಯದಲ್ಲಿ ಸಿಕ್ಕು ಅಂಧರಾಜನ ಪುತ್ರ ಶತವು ಪುಡಿಪುಡಿ ಆಯಿತಲ್ಲವೇ? ದುರ್ಯೋಧನಾಪರಾಧದಿಂದಲಲ್ಲವೇ ಈ ಜರಠನಿಗೆ ದಿಕ್ಕಿಲ್ಲದಂತಾಯಿತು?' ಎಂದನು. ಆ ಮಾತನ್ನು ಅನುಮೋದಿಸಿ, ಯಮಳರು ಸುಮ್ಮನಿದ್ದರು. ಕಠಿನ ವಚನಗಳಿಂದ ಅಂಧನು ನೊಂದಾನೆಂದು ನಕುಲ ಸಹದೇವರು 'ಅಹುದೆಂ' ದು ತಲೆಯಾಡಿಸಿದರು. ಇಂತು ನುಡಿವ ಭೀಮಸೇನಾಭಿಪ್ರಾಯವನ್ನು ಪ್ರಾಜ್ಞನಾದ ವಿದುರನು ಕೇಳಿ ತಿಳಿಸಿದನು. ಧರ್ಮರಾಜ, ಕುಂತೀ, ಪಾರ್ಥಾದಿಗಳಿಗೆ ಇದು ಗೊತ್ತಾಗುತ್ತಿದ್ದಿಲ್ಲ.

ವಿದುರನು ಧೃತರಾಷ್ಟ್ರನನ್ನು ಸೇರಿ, ಅವನಿಗೆ ವೈರಾಗ್ಯವನ್ನು ಹುಟ್ಟಿಸಬೇಕೆಂದು ಇಂತೆಂದನು: 'ರಾಜನ್! ಹೊರಡು ಮನೆಯಿಂದ! ಶಾಲಾ, ಧನ, ವನಿತಾದಿ ಐಹಿಕ ವಸ್ತುಗಳು ತಿರವಲ್ಲ. ಪುಟ್ಟಿದೆ ಅಂಧನಾಗಿ! ಪಡದೆ ಕೆಟ್ಟ ಮಕ್ಕಳನ್ನು! ಅವರೂ ತಮ್ಮ ದುರ್ನಯಫಲವಾಗಿ ಸತ್ತರು. ಅವರನ್ನು ಕೊಂದವನೆಂದು ಭೀಮಸೇನನನ್ನು ನಿಂದಿಸ ಬೇಡ! ಅಲ್ಲಿ ಭೀಮಾಪರಾಧವಿಲ್ಲ. ತಿಳಿದು ನೋಡು! ವೈರಾಗ್ಯವನ್ನು ತಾಳು! ಯಾರ

ಮನೆಗೆ ಬೆಂಕಿ ಹಚ್ಚಿದೆಯೋ, ಯಾರ ಅನ್ನದಲ್ಲಿ ವಿಷವಿಟ್ಟೆಯೋ, ಯಾರ ಮಡದಿಯನ್ನು ಗೃಹವಧುವೆಂದು ತಿಳಿದೂ ವಸ್ತ್ರಾಪಕರ್ಷಣ ಕೇಶಾನಮರ್ಶನಾದಿ ಅಪಚಾರಕ್ಕೆ ಗುರಿ ಪಡಿಸಿದೆಯೋ, ಯಾರ ರಾಜ್ಯಧನಗಳನ್ನು ಅನ್ಯಾಯ ದ್ಯೂತದಲ್ಲಿ ಕಸಿದೆಯೊ, ಅಂತಹ ಪಾಂಡವರ ಮನೆಯಲ್ಲಿ, ಅನ್ನಕ್ಕಾಗಿ ಬಿದ್ದಿರುವುದು ಸರಿಯಲ್ಲ. ಭೀಮನು ನಿನ್ನನ್ನು ನಿಂದಿಸಿದನೆಂದರೆ, ಆತನ ತಪ್ಪಲ್ಲ. ಅದು ನಿನ್ನ ದುಷ್ಟಪುತ್ರಾಭಿಮಾನದ ತಪ್ಪು. ಸಾಕು! ಏಳೇಳು! ವನಕ್ಕೆ ಹೋಗೋಣ! ಅಲ್ಲಿ ತೀವ್ರ ತಪದಿಂದಲು, ಪಶ್ಚಾತ್ತಾಪದಿಂದಲು ಶುದ್ಧನಾಗು! ನಿನಗೆ ವೈರಾಗ್ಯವನ್ನು ಪುಟ್ಟಿಸಲು, ತಿರಸ್ಕರಿಸುವ ಭೀಮಸೇನನ ಉಪಕಾರವನ್ನು ವಿಚಾರಿಸಿ ತಿಳಿ! ಆತನಲ್ಲಿ ದ್ವೇಷವನ್ನು ಬಿಡು! ವಿಷಯಗಳಲ್ಲಿಯ ಕಾಮವನ್ನೂ ಬಿಡು! ಶ್ರೀಹರಿಯನ್ನು ಪೂಜಿಸು!' ಎಂದನು.

ಧೃತರಾಷ್ಟ್ರನು ಆ ಮಾತಿನ ಸತ್ಯವನ್ನರಿತನು. 'ದುಷ್ಟಮತಿಯಾದೆನು; ದುಷ್ಟಸಂಗವನ್ನು ಮಾಡಿದೆನು. ದುರ್ಯೋಧನನನ್ನು ಕೌರವ ರಾಜ್ಯದಲ್ಲಿ ಅಭಿಷೇಕ ಮಾಡಿದುದು ಮೊದಲ ತಪ್ಪು. ಸಂದಲ್ಲದ ರಾಜ್ಯವನ್ನು ಕೊಡಲು ನನಗೆ ಅಧಿಕಾರವೇ ಇಲ್ಲದಿರಲು, ಹಾಗೆ ಕೊಟ್ಟ ಲೋಭಿಯಾದ ನನ್ನನ್ನು ನಿಂದಿಸದ ಪಾಂಡವರನ್ನು ವನಕ್ಕಟ್ಟಿದುದು ಎರಡನೆಯ ತಪ್ಪು. ಮನೆ ಸೊಸೆಗೆ ಮಾನಭಂಗವಾಗುವಾಗ ತಡೆಯದೆ ಮಾವನಾಗಿದ್ದುದು ಮೂರನೆಯ ತಪ್ಪು. ಮಾಧವನು ಸ್ವಯಂ ಬಂದು ಮಾನಿತರ ಸಭೆಯಲ್ಲಿ ನಿಂತು 'ಪುತ್ರಸ್ನೇಹವನ್ನು ಬಿಡು! ಪಾಪಿ ದುರ್ಯೋಧನನನ್ನು ಕೊಲ್ಲಿಸು! ಅದಾಗದಿರೆ ವನಕ್ಕೆ ಕಳಿಸು! ಪಾಂಡವರಿಗೆ ಅವರ ಭಾಗದ ರಾಜ್ಯವನ್ನಾದರೂ ಕೊಡು! ಉಳಿಸು ಕುರುಕುಲವನ್ನು!' ಎಂದು ನುಡಿದ ಹಿತೋಪದೇಶವನ್ನು ಕೇಳದಿದ್ದುದು ನಾಲ್ಕನೆಯ ತಪ್ಪು. ಶ್ರೀವ್ಯಾಸ ಪರಶುರಾಮರು, ಭೀಷ್ಮದ್ರೋಣಕೃಪರು, ಸಂಜಯ ವಿದುರರು, ಗಾಂಧಾರಿ ಮುಂತಾದವರ ಹಿತವಚನಗಳನ್ನು ನಡೆಸದೆ, ಯುದ್ಧಸಿದ್ಧನಾದುದು ಐದನೆಯ ತಪ್ಪು. ಇಷ್ಟು ದ್ರೋಹಗಳನ್ನು ಬಗೆದ ನನ್ನನ್ನು ಭೀಮಸೇನನು ನಿಂದಿಸುವುದು ಸರಿಯೇ ಆಗಿದೆ. ನನ್ನ ಅಪಚಾರಗಳೇ ಶಲ್ಯಗಳಾಗಿ ಪೀಡಿಸುತ್ತಿರಲು, ಯಾರನ್ನು ಏನೆಂದು ಫಲವಿಲ್ಲ! ಆಯಿತು, ಹದಿನೈದು ವರ್ಷದ ವಿಷಯಾನುಭವವು! ಅದೆಲ್ಲವೂ ಅಸಾರವು, ಅನಿತ್ಯವೆಂಬ ಜ್ಞಾನವನ್ನು ಪುಟ್ಟಿಸಿದ ಭೀಮಸೇನ ವಿದುರರನ್ನು ಕೃತಜ್ಞನಾಗಿ ಸ್ಮರಿಸಬೇಕು' ಇಂತು ಚಿಂತಿಸಿ ಧೃತರಾಷ್ಟ್ರನು ವಿರಕ್ತನಾದನು.

ನೆಲದಿ ಮಲಗಿ, ಆಹಾರಾದಿಗಳನ್ನು ಸ್ವೀಕರಿಸದೆ, ಧೃತರಾಷ್ಟ್ರನು ಮೂರು ದಿನಗಳನ್ನು ಕಳೆದನು. ಆಗ ಧರ್ಮರಾಜನು ಅಲ್ಲಿಗೆ ಬಂದು ಆಹಾರವನ್ನು ಸ್ವೀಕರಿಸಲು ಬೇಡಿದನು. ಆ ಮಾತಿಗೆ ಧೃತರಾಷ್ಟ್ರನು ಕಣ್ಣೀರಿಡುತ್ತಾ, ಇಂತೆಂದನು: 'ಧರ್ಮರಾಜ! ನಿನಗೆ ಮಂಗಳವಾಗಲಿ! ಕೇಳೆನ್ನ ಮಾತನ್ನು! ನಿನ್ನಿಂದ ಪಾಲಿತನಾಗಿ, ಇಷ್ಟು ಕಾಲವು ಸುಖವಾಗಿ ಕಳೆದವು. ಬೇಕಾದ ದಾನಧರ್ಮಗಳನ್ನು ನಿನ್ನಿಂದ ಮಾಡಿಸಿದೆ! ದ್ರೌಪದೀ ದ್ರೋಹಕಾರಿಯು, ನಿನ್ನ ಐಶ್ವರ್ಯಹಾರಿಯು ಆದ ಪಾಪಿಯು ತನ್ನ ಪಾಪದಿಂದಲೇ ಸಮಿತ್ರಬಾಂಧವನಾಗಿ ರಣನಿಹತನಾದನು. ಅವರಿಗಾಗಿ ನಾನು ಚಿಂತಿಸೆನು. ನನ್ನ ಪರಲೋಕಗತಿಯ ಚಿಂತೆಯಿಂದ

ಬೆಂದು, ವನವನ್ನು ಸೇರಿ, ತಪಗೈದು, ಪಾಪಶುದ್ಧನಾಗಬೇಕೆಂದಿರುವೆನು. ಗಾಂಧಾರಿಯೂ ಅದರಂತೆ ನಿಶ್ಚಯಿಸಿರುವಳು. ಆದುದರಿಂದ ನಮಗೆ ವನಗಮನಕ್ಕಾಗಿ ಅನುಮತಿಯನ್ನು ಕೊಡು! ನೀನು ಧರ್ಮವಂತರಲ್ಲಿ ಅತ್ಯುತ್ತಮನು; ರಾಜನೂ ಅಹುದು. ನನ್ನ ತಪಸ್ಸಿನ ಪುಣ್ಯವು ನಿನಗೂ ಲಭಿಸುವುದು. ವನಗಮನವು ನಮ್ಮ ಪೂರ್ವಿಕರ ಸಂಪ್ರದಾಯವೇ ಆಗಿದೆ. ನಿನ್ನನ್ನು ಮನಸಾರ ಚಿರಕಾಲ ಬಾಳಲೆಂದು ಆಶೀರ್ವದಿಸಿ, ಹೊರಡುವೆನು.'

ಧರ್ಮರಾಜನಾ ಮಾತನ್ನಾಲಿಸಿ ದುಃಖದಿಂದ ಇಂತೆಂದನು: 'ರಾಜನೆ ! ನಿನ್ನ ದುಃಖವನ್ನು ಕಂಡು ನನಗಿನ್ನೇಕೆ ರಾಜ್ಯವೆನಿಸಿದೆ. ರಾಜ್ಯಲೋಭದಿಂದ ಹಿರಿಯರನ್ನು ನೋಯಿಸಿದ ನನಗೆ ಧಿಕ್ಕಾರವಿರಲಿ! ಭೂಶಯನನಾಗಿ, ಉಪವಾಸವಿರುವ ನಿನ್ನ ಯೋಗಕ್ಷೇಮವನ್ನು ವಿಚಾರಿಸದೆ ಅಪರಾಧಗೈದ ನನಗೆ ನಿಷ್ಕೃತಿಯೇ ಇಲ್ಲ ! ನಿನ್ನ ಮಗನಾದ ಯುಯುತ್ಸುವು ರಾಜನಾಗಲಿ! ನನಗೆ ರಾಜ್ಯವು ಬೇಕಾಗಿಲ್ಲ. ಅಪಕೀರ್ತಿ ವಹ್ನಿಯಲ್ಲಿ ಬೆಂದವನನ್ನು ಮತ್ತೆ ವಚನಶೂಲಗಳಿಂದ ತಿವಿಯುವುದು ನಿನಗೆ ನ್ಯಾಯ ವಲ್ಲ. ನಾನು ಮತ್ತೆ ಸತೀಸೋದರ ಸಹಿತನಾಗಿ ವನಕ್ಕೆ ಹೊರಡುವೆನು. ದುರ್ಯೋಧನ ಕೃತಿಯನ್ನು ನೆನೆದು ಆಡುವ ಮಾತಲ್ಲ. ನೀನೇ ನಮಗೆ ತಂದೆಯು: ಗಾಂಧಾರಿಯು ಕುಂತಿಯಂತೆ ನಮ್ಮ ತಾಯಿಯು. ಭವಿತವ್ಯವಿದ್ದಾದುದಾಯಿತು! ನೀನು ನಮ್ಮನ್ನು ಬಿಟ್ಟು ಹೋಗುವುದಾದರೆ, ನಾವೂ ರಾಜ್ಯವನ್ನು ಬಿಟ್ಟು, ನಿನ್ನನ್ನು ಸೇವಿಸುತ್ತಾ ವನದಲ್ಲಿರುವೆವು. ನೀನಿಲ್ಲದ ರಾಜ್ಯವೆನಗೆ ಹಿತವಲ್ಲ. ಮನಸ್ಸಿನ ಶಂಕೆಯನ್ನು ಬಿಡು! ನಿನ್ನ ಅಧೀನರಾಗಿ ನಡೆಯುವೆವು. ಎಂದಿನಂತೆ ಸುಖವಾಗಿರು!'

ಧೃತರಾಷ್ಟ್ರನು ಕಣ್ಣೀರಿಟ್ಟು, ಸಂಜಯಕೃಪರನ್ನು ಕರೆದು, 'ನೀವಾದರೂ ಹೇಳಿ, ಧರ್ಮರಾಜನಿಂದ ವನಗಮನಾನುಜ್ಞೆಯನ್ನು ಕೊಡಿಸಿರಿ! ನನ್ನ ಕಣ್ಣಿಗೆ ಕತ್ತಲು ಕವಿದಿರುವುದೆಂತೂ ಹುಟ್ಟಿನಿಂದಲೇ ಇದೆ. ಈಗ ಮನಸ್ಸೂ ಅವಶವಾಗಿದೆ; ಶರೀರವು ನಡುಗುತ್ತಿದೆ. ಮಾತಾಡಲಾರದಿರುವೆನು' ಎಂದು ಹೇಳಿ, ಮೂರ್ಛೆ ಬಂದಂತಾಗಿ, ಗಾಂಧಾರಿಯನ್ನು ಆಶ್ರಯಿಸಿದನು. ಧರ್ಮರಾಜನದನ್ನು ನೋಡಿ ಭಯದಿಂದ ಬಂದು, ಶಂತಮವಾದ ತನ್ನ ಕರದಿಂದ ದೊಡ್ಡಪ್ಪನ ಮೈಯನ್ನು ತಡವಿ, ಹಿಡಿದೆತ್ತಿ, ಕೂಡಿಸಿದನು. 'ರಾಜನ್ ! ನೀವಿಬ್ಬರು ಉಪವಾಸವಿರುವಾಗ ನನಗೇಕಿನ್ನು ಆಹಾರ? ನನಗೇಕೆ ಬದುಕು? ನಿಮ್ಮಂತೆ ನಾನೂ ಉಪವಾಸವಿರುವೆನು. ಹಾಗಾಗಬಾರದೆಂದಿದ್ದರೆ ಏಳಿ! ಭೋಜನ ಮಾಡಿರಿ!' ಎಂದ ಧರ್ಮರಾಜನಿಗೆ ಧೃತರಾಷ್ಟ್ರನು, 'ತಾತ! ಮತ್ತೊಂದು ಸಲ ಮೈದಡವಿ ಸಂತೈಸು! ಹತ್ತಿರ ಕೂಡು! ನಿನ್ನ ಸ್ಪರ್ಶದಿಂದ ಸಂಜೀವಿತನಾಗಿರುವೆನು' ಎಂದು, ಕರೆದಪ್ಪಿ, ಶೋಕಭರದಿಂದ ರೋದಿಸಿದನು. ವಿದುರಾದಿಗಳೂ ದುಃಖಿತರಾಗಿ ಕಣ್ಣೀರಿಟ್ಟರು.

ಆಗ ಧೃತರಾಷ್ಟ್ರನು ಮತ್ತೆ 'ವನಗಮನಕ್ಕೆ ಅಪ್ಪಣೆ ಕೊಡು!' ಎಂದು ಕೇಳಿದನು. ಮಾತನಾಡದಿದ್ದ ಯುಧಿಷ್ಠಿರನನ್ನು ಕಂಡು, ಅಂಧರಾಜನು 'ನೀನು ವನವಾಸ ಗಮನವನ್ನು ಅಂಗೀಕರಿಸುವವರೆಗೂ ಹೀಗೇ ಉಪವಾಸವಿರುವೆನು' ಎಂದು ಹಠ ತೊಟ್ಟನು.

ಅವರೀರ್ವರಿಗೆ ಪ್ರಾಪ್ತವಾದ ಧರ್ಮಸಂಕಟವನ್ನು ಬಿಡಿಸಬೇಕೆಂದು, ಜಗತ್ಪ್ರಭು ಶ್ರೀವ್ಯಾಸನು ಅಲ್ಲಿಗೆ ಬಂದು, ಅವರಿಗಿಂತೆಂದನು:

'ಧರ್ಮರಾಜ! ಧೃತರಾಷ್ಟ್ರನ ಮಾತನ್ನು ನಡೆಸಿಕೊಡು! ವಿಚಾರ ಬಿಡು! ಕೇಳಿಲ್ಲಿ! ಪುತ್ರಶೋಕದಿಂದ ನೊಂದ ನೃಪನಿಗೆ ಇಲ್ಲಿ ಶಾಂತಿ ಸಿಗಲಾರದು. ವೃದ್ಧನಾಗಿರುವ ಕಾರಣದಿಂದ ಸಂಪ್ರದಾಯದಂತೆ ವನವಾಸಕ್ಕೆಂದು ತೆರಳಲಿಚ್ಛಿಸುವ ಧೃತರಾಷ್ಟ್ರನಿಗೆ ಅಪ್ಪಣೆ ಕೊಡು! ಅವನ ಶ್ರೇಯಸಾಧನೆಗೆ ವಿಘ್ನ ಮಾಡಬೇಡ! ರಾಜರಿಗೆ ಸಮರ ಮೃತ್ಯುವು ಅಥವಾ ವನವಾಸವು ವಿಹಿತವಾಗಿದೆ. ನಿಮ್ಮ ತಂದೆಯಾದ ಪಾಂಡು ರಾಜನು ಅಣ್ಣನನ್ನು ಗುರುವೆಂದು ತಿಳಿದು ಪೂಜಿಸುತ್ತಿದ್ದನು. ನೀವಾದರೂ ಶ್ರದ್ಧಾ ಭಕ್ತಿಗಳಿಂದ ಪರಿಚರ್ಯೆಗೈದಿರುವಿರಿ! ಈಗ ತಪವನ್ನು ಮಾಡಿ, ಪಾಪ ಪಂಕವನ್ನು ತೊಳೆದುಕೊಂಡು, ಸುಗತಿಯನ್ನು ಪೊಂದಲು ತವಕಿಸುವ ಧೃತರಾಷ್ಟ್ರನನ್ನು ತಡೆಯ ಬೇಡ!'

ಶ್ರೀವ್ಯಾಸರ ಮಾತನ್ನು ಕೇಳಿ ಧರ್ಮರಾಜನು ನಿರುತ್ತರನಾದನು. ಅವನನ್ನೊಪ್ಪಿಸಿ, ವ್ಯಾಸರು ತಮ್ಮ ಆಶ್ರಮಕ್ಕೆ ತೆರಳಿದರು. ಆಗ ಧರ್ಮಜನು ಧೃತರಾಷ್ಟ್ರನಿಗಿಂತೆಂದನು: 'ಭಗವಾನ್ ವ್ಯಾಸರು ಹೇಳಿದಂತೆ ನಡೆಯುವೆನು. ನಿನ್ನ ಅಭೀಪ್ಸಿತವು ನೆರವೇರಲಿ! ಮಾನ್ಯರಾದ ಯುಯುತ್ಸು ಸಂಜಯಕೃಪ ವಿದುರರು ಹೇಳಿದಂತೆ ನಿನ್ನನ್ನು ಬೀಳ್ಕೊಡುವೆನು. ಮೊದಲು ಭುಂಜಿಸು! ತಾಯಿಯೂ ಉಣ್ಣಲಿ!' ಎಂದನು.

ಆಗ ಧೃತರಾಷ್ಟ್ರನು ಮೆಲ್ಲನೆ ಎದ್ದು, ತನ್ನ ಮಂದಿರವನ್ನು ಸೇರಿದನು. ಅಲ್ಲಿ ಗಾಂಧಾರೀ ಧೃತರಾಷ್ಟ್ರರು ಪೂರ್ವಾಹ್ಣಿಕವನ್ನು ಮುಗಿಸಿ, ದ್ವಿಜರಿಗೆ ದಾನವಿತ್ತು, ಭುಂಜಿಸಿದರು. ಆಗ ಪರ್ಯವೇಕ್ಷಿಸುತ್ತಿದ್ದ ಧರ್ಮರಾಜನನ್ನು ಅತಿ ಸಮೀಪದಲ್ಲಿ ಕೂಡಿಸಿ ಕೊಂಡು, ಬೆನ್ನ ಮೇಲೆ ಕೈಯಾಡಿಸಿ, ಧೃತರಾಷ್ಟ್ರನು ಇಂತು ಉಪದೇಶಿಸಿದನು.

## ೨. ಧೃತರಾಷ್ಟ್ರ ವನಗಮನ

ಧೃತರಾಷ್ಟ್ರನು ಧರ್ಮಜನಿಗಿಂತು ಉಪದೇಶಿಸಿದನು : 'ಧರ್ಮರಾಜ ! ನಿನಗೆ ತಿಳಿಯದುದಿಲ್ಲ, ಆದರೂ ಹಿರಿಯನೆಂದು ಹೇಳುತ್ತಿರುವೆನು. ನನ್ನ ಮಾತಿನಂತೆ ನಡೆ, ಸುಖವಾಗಿರು. ಸರ್ವಕಾರ್ಯಗಳಲ್ಲಿ ಅಪ್ರಮತ್ತನಾಗಿರು! ರಾಜನು ಪ್ರಜರನ್ನು ಧರ್ಮದಿಂದ ಪಾಲಿಸಿ ಶ್ರೇಯೋಭಾಜನನಾಗುವನು. ವಿದ್ಯಾವೃದ್ಧರನ್ನು ಸೇವಿಸು! ಅವರಿಂದ ಕೇಳಿ, ಅವರಂತೆ ನಡೆ ! ಅವರನ್ನು ಸಮ್ಮಾನಿಸು! ಸಮ್ಮಾನಿತರಾದ ವಿದ್ವಜ್ಜನರು ಹಿತವನ್ನು ಬಚ್ಚಿಡುವುದಿಲ್ಲ, ಇಂದ್ರಿಯಗಳು ಕಟ್ಟ ಕುದುರೆಗಳು. ಅವುಗಳನ್ನು ಮನಸ್ಸೆಂಬ ರಜ್ಜುವಿನಿಂದ ಕಟ್ಟಿ, ಅದನ್ನು ಬುದ್ಧಿ ಸಾರಥಿಯ ಕೈಯಲ್ಲಿಡು!

ದಾಂತರು, ಕುಲೀನರು, ಭಕ್ತರು, ಪರಂಪರಾಗತರು ಆದ ಅಮಾತ್ಯರನ್ನು ಕೂಡಿ, ಮಂತ್ರಾಲೋಚನೆ ಮಾಡಿ, ಅವರ ವಚನದಂತೆ ನಡೆ! ಚಾರಚಕ್ಷುಗಳಲ್ಲವೇ ರಾಜರು,

ಚಾರರೊಡನೆ ಆಲೋಚಿಸುವಾಗ ರಹಸ್ಯವನ್ನು ಕಾಪಾಡು! ಅಂತಃಪುರ ನಾರಿಯರನ್ನು ವೃದ್ಧರು, ಆಪ್ತರು ಆದ ಕಂಚುಕಿ ಸೇವಕ ದಾಸಿಯರನ್ನು ಕಣ್ಣಿಟ್ಟು ನಿರೀಕ್ಷಿಸು! ನಿನ್ನ ಮಂತ್ರಾಲೋಚನೆಯು ಹುಲ್ಲು ಹೊದರುಗಳಿಲ್ಲದ ವನಪ್ರದೇಶದಲ್ಲಾಗಲಿ! ಆಗ ಅಲ್ಲಿರುವ ವಾನರ ಪಿಕಶುಕಾದಿ ಭೂತಜಾಲವನ್ನು ದೂರ ಓಡಿಸಿಬಿಡು! ಜಡ, ಮೂಕ, ಪಂಗು, ಉನ್ಮತ್ತರನ್ನು ಅಲಕ್ಷಿಸಬೇಡ! ಅವರು ಶತ್ರುಚಾರರಿಬಹುದು.

ವ್ಯವಹಾರವು ಧರ್ಮಸಮ್ಮತವಾಗಿರಲಿ! ನ್ಯಾಯಾಧಿಕೃತರಾಗಿ, ವಿದ್ವಾಂಸರನ್ನು, ಕುಲೀನರನ್ನು, ವೃದ್ಧರನ್ನು ನಿಯಮಿಸು! ಕಳ್ಳರು, ಪರದಾರಾವಮರ್ಶಕರು, ಮಿಥ್ಯಾವಚನರು, ಆಕ್ರೋಶಪರರು, ಹಠಶಠರು, ಲುಬ್ಧರು, ಸಾಹಸಪ್ರಿಯರು, ಸಭಾವಿಹಾರ ಮಂದಿರ ದೇವಾಲಯ ಧ್ವಂಸಕರು ಮುಂತಾದ ಅಪರಾಧಿಗಳನ್ನು ದೇಹಾಂತ ಶಿಕ್ಷೆಯನ್ನೋ ಕೊಟ್ಟು ಅಪರಾಧಕ್ಕೆ ತಕ್ಕಂತೆ ದಂಡಿಸು! ನಿನ್ನೆಯ ದಿನದ ಆಯವ್ಯಯವನ್ನು ಇಂದೇ ಪ್ರಾತಃಕಾಲದಲ್ಲಿ ನೋಡಿ, ಲೋಪಾಲೋಪಗಳನ್ನು ಸರಿಪಡಿಸು! ಆಮೇಲೆ ಸ್ನಾನ, ಅಲಂಕಾರ, ವಸನ, ಭೋಜನ ಕಾರ್ಯಗಳನ್ನು ನಡೆಸು! ಮಧ್ಯರಾತ್ರಿಗಳಲ್ಲಿ ವೇಷಾಂತರದಿಂದಲು, ಮಧ್ಯ ದಿನದಲ್ಲಿ ಪ್ರಕಟನಾಗಿಯೂ ಪುರಿಯನ್ನು ಸಂಚರಿಸಿ, ಅಲ್ಲಲ್ಲಿ ನಡೆಯುವ ವೃತ್ತಾಂತವನ್ನು ತಿಳಿ! ರಾಜಕಾರ್ಯದುರಂಧರನಿಗೆ ವಿಶ್ರಾಂತಿಯಿಲ್ಲ ತಿಳಿ! ನೀನು ತಿಳಿದಿದ್ದನ್ನೂ ಚಾರವಚನಗಳನ್ನೂ ಸರಿಪಡಿಸಿಕೊಂಡು, ನಿನಗೆ ತೋರಿದಂತೆ ನಡೆ! ಚಾರವಿಧೇಯನಾಗಬೇಡ!

ಕ್ಲೇಶಸಹರು, ಬಲವಂತರು, ರಾಜಭಕ್ತರು, ದೃಢವ್ರತರು ಆದ ಸೇನಾನಿಗಳನ್ನು ನಿಯಮಿಸು! ಅವರನ್ನು, ಅಮಾತ್ಯರನ್ನು ಚಾರಮುಖದಿಂದ ನಿರೀಕ್ಷಿಸಿ, ಯೋಗ್ಯಾ ಯೋಗ್ಯರನ್ನು ತಿಳಿ! ಯೋಗ್ಯರನ್ನು ಸಭೆಯಲ್ಲಿ ಬಹುಮಾನವಿತ್ತು ಸತ್ಕರಿಸು! ಅಯೋಗ್ಯರನ್ನು ಗೂಢವಾಗಿ ಕೊಲ್ಲಿಸು! ಶತ್ರುಗಳೆತ್ತಿಬಂದಾಗ, ಬಲವಂತನಾದರೆ ಸಂಧಿಯನ್ನೂ, ಬಲಹೀನನಾದರೆ ವಿಗ್ರಹವನ್ನೂ ಮಾಡು! ಸಂಧಿಯಲ್ಲಿ ಕೆಲ ರಾಜ್ಯ ಭಾಗಗಳನ್ನು ಕೊಡಬೇಕಾದಾಗ, ದುರ್ಗ, ನಿಸ್ಸಾರ ಪ್ರದೇಶಗಳನ್ನು ಕೊಡು! ಶತ್ರು ಪುತ್ರನನ್ನು ನಿನ್ನಲ್ಲಿ ಬಹುಮಾನವಾಗಿ ಭೇದಗಳು ನಿಷ್ಫಲವಾದಾಗ ಮಾತ್ರ, ದಂಡವನ್ನುಪಯೋಗಿಸು! ಯುದ್ಧವಾದಾಗ ಜಯಾಪಜಯಗಳ ಶಂಕೆ ಬೇಡ! ಜಯಿಸಿದರೆ ರಾಜ್ಯ ಲಾಭವಿದೆ! ಸೋತರೆ ವೀರಸ್ವರ್ಗವಿದೆ. ಸಿಂಹದಂತೆ ಮೇಲೇರಿ ಹೋಗಿ ಕೊಂದು ಸಾಯಬೇಕಾಗಲಿ, ರಣವಿಮುಖನಾಗುವುದು ವೀರ ಕ್ಷತ್ರಿಯ ಲಕ್ಷಣವಲ್ಲ.

ಕೋಶವನ್ನು ಸದಾ ತುಂಬಿಸಿಡು! ಕೋಟೆಕೊತ್ತಲಗಳನ್ನು ದೃಢಪಡಿಸು! ಚತುರಂಗ ಬಲವು ಅಪ್ರಮತ್ತವಾಗಿರಲಿ! ಆಟವಿಕರನ್ನು, ಬೆಲೆಯಿತ್ತು ಪರದೇಶದವರನ್ನು, ಆಹಾರ ಮಾತ್ರವಿತ್ತು ಸ್ವದೇಶದವರನ್ನು ಸೇರಿಸಿ, ಸೈನ್ಯವನ್ನು ವೃದ್ಧಿಪಡಿಸು! ಷಡೀತಿ ಬಾಧೆಗಳನ್ನು ನಿವಾರಿಸಲು ಬೇಕಾದ ಧಾನ್ಯಜಲಬಲ ಸಂಗ್ರಹವನ್ನು ಮೊದಲೇ ಹೇರಳವಾಗಿ ಮಾಡಿಡು! ಇಂತು ಮಾಡಿದ ರಾಜನು ಇಹದಲ್ಲಿ ಸಂಪತ್ಕೀರ್ತಿ ವಿಜಯಗಳನ್ನೂ ಪರದಲ್ಲಿ ಸ್ವರ್ಗ ಸುಖಗಳನ್ನೂ ಹೊಂದುವನು.

'ರಾಜನ್! ಭೀಷ್ಮನು ನಿನಗೆಲ್ಲ ರಾಜಧರ್ಮಗಳನ್ನೂ ತಿಳಿಸಿರುವನು. ನಾನೂ

ಹೇಳಿರುವೆನು. ಪ್ರೀತಿಯಿಂದಲೇ ಆಗಲಿ ನಿನಗೆ ತಿಳಿಯದೆಂದಲ್ಲ. ಪ್ರಜಾ ರಂಜಕನಾಗಿ ಧರ್ಮವನ್ನು ಬಿಡದೆ ಪಾಲಿಸುವ ರಾಜನು ಅಶ್ವಮೇಧ ಸಹಸ್ರದ ಫಲವನ್ನು ಹೊಂದುವನು.'

ಆ ಮಾತನ್ನು ಕೇಳಿ, ವಿನಯ ಭೂಷಣನಾದ ಧರ್ಮರಾಜನು, 'ತಾತ! ನೀನು ನುಡಿದಂತೆ ನಡೆವೆನು. ನೀನಲ್ಲದೆ ನನ್ನ ಹಿತಚಿಂತಕರಾರಿರುವರು' ಎಂದು ಆತನ ಅಪ್ಪಣೆ ಪಡೆದು, ತನ್ನ ಮಂದಿರಕ್ಕೆ ಪೋದನು. ಆಗ ಧೃತರಾಷ್ಟ್ರನು, 'ಪುತ್ರಪೌತ್ರಮಿತ್ರಾದಿಗಳಿಗೆ ಶ್ರಾದ್ಧವನ್ನು ಮಾಡಬೇಕಾಗಿದೆ; ಧನವನ್ನು ಕೊಡು!' ಎಂದು ವಿದುರನಿಂದ ಹೇಳಿಕಳಿಸಿದನು.

ಆಗ ಕುರುಜಾಂಗಲ ನಿವಾಸಿಗಳಾದ ವಿಪ್ರಾದಿ ಪ್ರಜರು ಧೃತರಾಷ್ಟ್ರನ ವನಗಮನ ವಾರ್ತೆಯನ್ನು ಕೇಳಿ, ಅವನನ್ನು ನೋಡಲು ಬಂದರು. ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಧೃತರಾಷ್ಟ್ರನು ಅವರಿಗಿಂತೆಂದನು: 'ನಾನು ಗಾಂಧಾರೀಸಹಿತನಾಗಿ ಅರಣ್ಯದಲ್ಲಿರಬೇಕೆಂದು ಹೊರಟಿರುವೆನು. ವ್ಯಾಸರು ಮತ್ತು ಧರ್ಮರಾಜನು ನನಗೆ ಅನುಮತಿಯನ್ನಿತ್ತಿರುವರು. ನೀವು ಕೂಡ ಅಪ್ಪಣೆಕೊಡಿ! ಅನ್ಯಥಾ ಆಲೋಚಿಸಬೇಡಿ! ನಮ್ಮಲ್ಲಿ ನಿಮ್ಮ ಪ್ರೀತಿ ಸದಾ ಇರಲಿ! ನಿಮ್ಮನ್ನೂ ನಾವು ಮರೆಯಲಾರೆವು. ನಮ್ಮ ಪೂರ್ವಜರು ನಿಮ್ಮನ್ನು ಧರ್ಮದಿಂದ ರಕ್ಷಿಸಿಕೊಂಡು ಬಂದರು. ನಾನು ದುರ್ಯೋಧನನಿಂದ ಅನೇಕ ಕಷ್ಟಗಳಿಗೊಳಗಾದ ನಿಮ್ಮನ್ನು ರಕ್ಷಿಸಲಾರದೆ ಹೋದೆನು. ಆದರೂ ಸಜ್ಜನರಾದ ನೀವು ಒಂದಿನವಾದರೂ ನನ್ನ ಲೋಪದೋಷಗಳನ್ನು ಎಣಿಸಲಿಲ್ಲ, ನನ್ನ ಪ್ರಮಾದಗಳನ್ನು ದಯಾಳುಗಳಾಗಿ ಮರೆತು, ಅತ್ಯಂತ ಸ್ನೇಹವನ್ನೇ ತೋರಿರುವಿರಿ!

ನಾನು ನಿಮ್ಮ ಆಶ್ರಯವನ್ನು ಪಡೆದು ಬೇಕಾದಷ್ಟು ಪುಣ್ಯಕಾರ್ಯಗಳನ್ನು ಮಾಡಿದೆನು. ಯಜ್ಞಗಳನ್ನು ನೆರವೇರಿಸಿದೆನು. ಕೂಪಾರಾಮ ತಟಾಕ ದೇವಾಲಯಗಳನ್ನು ನಿರ್ಮಿಸಿದೆನು. ನನ್ನ ಮಗನು ಬಲು ದುಷ್ಟನಾಗಿ ಕುಲನಾಶವನ್ನು ಸಾಧಿಸಿದನು. ಅವನಿಂದ ಸರ್ವಕ್ಷತ್ರಿಯ ವೀರರು ನಷ್ಟರಾದರು. ಅತ್ಯಂತ ಶಂಕಾಶೀಲನು, ಮೂಢನು ಆದ ದುರ್ಯೋಧನನು ಹಿರಿಯರ ಮತ್ತು ಗುರುಜನರ ಆಜ್ಞೆಯನ್ನು ತಿರಸ್ಕರಿಸಿ, ಮಹಾನುಭಾವರಾದ ಪಾಂಡವರನ್ನು ದ್ವೇಷಿಸಿ, ನಾನಾ ಹಿಂಸೆಪಡಿಸಿದನು. ಅಂತಹ ಸುಜನದ್ವೇಷಿಯು ಮತ್ತಾರೂ ಸಿಗಲಾರರು. ದುಷ್ಟ ಬುದ್ಧಿಯು, ದುಷ್ಟ ಮಿತ್ರನು ಆಗಿ ದುರ್ಯೋಧನನು ಶ್ರೀಕೃಷ್ಣನಿಗೆ ಅಪ್ರಿಯವಾದ ಕಾರ್ಯಗಳನ್ನು ಬಿಡದೆ ಮಾಡಿ ಕೆಟ್ಟನು. ಅವನು ನಿಮಗೂ ಕರಾದಾನದಿಂದ ಬಲು ದ್ರೋಹ ಬಗೆದಿರುವನು. ಅವನ ಸಹೋದರರು ನನ್ನ ಪಾಪವೆಂತಹದೋ! ಅವನಂತೆ ನಡೆದರು. ಅವರ ಪಾಪವೇ ಅವರನ್ನು ಸಸುತ ಮಿತ್ರಬಂಧುಜನವಾಗಿ ಸಂಹರಿಸಿತು. ಅದರಲ್ಲಿ ಪಾಂಡವರ ಅಪರಾಧವೇನೂ ಇಲ್ಲ.

ನನಗೂ ವಯಸ್ಸಾಯಿತು. ಮಗನ ದುರ್ನಯಗಳನ್ನು ನೆನೆದು ನೆನೆದು ಮನಸ್ಸು ಹುಣ್ಣಾಗಿದೆ. ಅವನ ಸಂಗದಿಂದ ದುಷ್ಟನಾಗಿ ನಾನು ಶ್ರೀಕೃಷ್ಣನ ಆಜ್ಞೆಯನ್ನು ಮೀರಿದೆನು. ಕುಪುತ್ರರಂತೆ ಕುಣಿದು ಪಾಂಡವರ ರಾಜ್ಯವನ್ನು ಅನ್ಯಾಯದ್ಯೂತದಲ್ಲಿ ಅಪಹರಿಸಿದೆನು. ಮನೆ ಸೊಸೆಗೆ ನಡೆದ ಅವಮಾನವನ್ನು ತಡೆಯದೆ ಮಹತ್ಪಾಪವನ್ನು ಮಾಡಿದೆನು. ಈ ಎಲ್ಲ

ಪಾಪಗಳನ್ನು ತಪಸ್ಸು ಮಾಡಿ ಕಳೆದುಕೊಳ್ಳಬೇಕೆಂದು ವನವಾಸಕ್ಕೆ ಹೊರಟಿರುವೆನು. ನೀವೆಲ್ಲರೂ ಸುಮನಸ್ಕರಾಗಿ ನನಗೆ ಅನುಮತಿಯನ್ನು ಕೊಡಿರಿ!

ಪಾಂಡವರು ಎಲ್ಲರೂ ನನ್ನನ್ನು ಗಾಂಧಾರಿಯನ್ನು ತಂದೆ ತಾಯಿಗಳಂತೆ ತಿಳಿದು ಪ್ರೀತಿ ಗೌರವಗಳಿಂದ ರಕ್ಷಿಸಿದರು. ನನ್ನ ಮಕ್ಕಳಿಂದಲೂ ಅಂತಹ ಆದರವನ್ನು ನಾನು ಕಂಡಿದ್ದಿಲ್ಲ. ಮಹಾನುಭಾವರಾದ ಪಾಂಡವರನ್ನು ನೀವು ಪ್ರೀತಿಸಿದರೆ ಸಾಕು, ನನ್ನನ್ನು ಪ್ರೀತಿಸಿದಂತೆಯೇ ಎಂದು ತಿಳಿಯುವೆನು. ಗುಣವಂತರಾದ ಪಾಂಡವರಲ್ಲಿ ಸ್ವಯಂ ನೀವು ಪ್ರೀತಿಯನ್ನು ಮಾಡುವಿರಿ! ಅಂತಹ ಪ್ರೀತಿಯು ಶಾಶ್ವತವಾಗಿರಲಿ! ಆ ಪಾಂಡವರು ಬೇರೆ ಅಲ್ಲ; ನನ್ನ ಮಕ್ಕಳೇ; ಅವರಿಂದಲೇ ನನಗೆ ಇಹಪರ ಸುಖಗಳೆಂದು ನಾನು ನಂಬಿರುವೆನು. ಯುಧಿಷ್ಠಿರನ್ನು ಧರ್ಮಶೀಲನು. ಅವನ ಸೋದರರೂ ದಿಕ್ಪಾಲಸಮ ತೇಜರಾಗಿ ಧರ್ಮಾರ್ಥದರ್ಶಿಗಳಾಗಿರುವಾಗ ನಿಮಗೆಲ್ಲರಿಗೂ ಸುಖವಾಗುವುದು ಸಂಶಯವಿಲ್ಲ. ನಾನು ಮಾಡಿರುವ ಅಪರಾಧಗಳನ್ನು ಕ್ಷಮಿಸಬೇಕೆಂದು ಸಾಂಜಲಿಬಂಧನಾಗಿ ಬೇಡುತ್ತಿರುವೆನು. ವೃದ್ಧನೆಂದು, ಹತಪುತ್ರನೆಂದು ಕರುಣಿಸಿ, ಪೂರ್ವರಾಜನ್ಯರಾದ ಶಂತನು ಭೀಷ್ಮರಂತಹ ಮಹಾನುಭಾವರ ವಂಶಜನೆಂದು ಮನ್ನಿಸಿ, ನನ್ನನ್ನು ಕ್ಷಮಿಸಿ, ಮನಸ್ಸಮಾಧಾನದಿಂದ ಕಳಿಸಿಕೊಡಿ! ಪಾಪ! ಹತಪುತ್ರಳು, ವೃದ್ಧಳು ಆದ ಗಾಂಧಾರಿಯನ್ನೂ ಕ್ಷಮಿಸಿ ಕಳಿಸಿಕೊಡಿರಿ! ನಿಮಗೆ ಶುಭವಾಗಲಿ!

ನಿಮ್ಮ ಕೈಲಿ ಮಗನಾದ ಧರ್ಮರಾಜನನ್ನು ಸಮರ್ಪಿಸಿರುವೆನು. ಅವನಿಗೆ ವಿಧೇಯರಾಗಿ ಧರ್ಮದಿಂದ ನಡೆಯಿರಿ! ಅವನ ಕೈಲಿ ನನ್ನ ಪ್ರಜರಾದ ನಿಮ್ಮನ್ನು ಸಮರ್ಪಿಸುವೆನು: ಅವನೂ ನಿಮ್ಮನ್ನು ಮಕ್ಕಳನ್ನಂತೆ ಸಂರಕ್ಷಿಸುವನು. ನನಗಾಗಿ ಚಿಂತಿಸಬೇಡಿರಿ! ಹೊರಡುವೆನು ಇನ್ನು!' ಆ ಮಾತನ್ನಾಲಿಸಿ, ಪ್ರಜರು ಶೋಕಾರ್ತರಾಗಿ ರೋದಿಸಿದರು. ತಂದೆ ತಾಯಂದಿರನ್ನು ಬಿಟ್ಟಂತೆ ತಿಳಿದು ಮುಖಗಳನ್ನು ವಸ್ತ್ರದಿಂದ ಮುಚ್ಚಿಕೊಂಡು ರೋದಿಸುವ ಪ್ರಜರ ಅನುಮತಿಯನ್ನು ಉಪಲಕ್ಷಿಸಿ, ಶಂಬನೆಂಬ ವಿಪ್ರೋತ್ತಮನು ಧೃತರಾಷ್ಟ್ರನಿಗಿಂತೆಂದನು: 'ರಾಜನ್! ಎಲ್ಲ ಪ್ರಜರ ಅಭಿಪ್ರಾಯವನ್ನರಿತು ನಿವೇದಿಸುತ್ತಿರುವೆನು. ಕೇಳು! ನೀನಾಡಿದುದೆಲ್ಲವೂ ಸತ್ಯವಾಗಿದೆ. ಪ್ರಜಾಪೀಡೆಯನ್ನು ಮಾಡಿದವನೊಬ್ಬನಾಗಲಿ ನಿನ್ನ ವಂಶದಲ್ಲಿಲ್ಲ. ದುರ್ಯೋಧನನು ಮಾಡಿದ ಅಪರಾಧವನ್ನು ನಾವೆಣಿಸುವುದಿಲ್ಲ. ನಿಶ್ಚಿಂತನಾಗಿ, ಶ್ರೀವ್ಯಾಸರ ಆಜ್ಞೆಯಂತೆ ವನಕ್ಕೆ ಹೊರಡು! ಕುಂತೀಸುತನು ಶಂತನು ಭೀಷ್ಮ, ಚಿತ್ರಾಂಗದ, ವಿಚಿತ್ರವೀರ್ಯ ಪಾಂಡುರಾಜರಂತೆ, ನಿನ್ನಂತೆ ಧರ್ಮದಿಂದಲು ಪ್ರೀತಿಯಿಂದಲು ನಮ್ಮನ್ನು ಪಾಲಿಸುವನು. ಇನ್ನು ದರ್ಯೋಧನನ ಅಪರಾಧದಿಂದ ಸರ್ವವೀರ ನಾಶವಾಯಿತೆಂದರೆ ಅದು ದೈವ ಸಂಕಲ್ಪವೆಂದು ತಿಳಿದಿರುವೆವು. ಕೇಳು! ವಿಧಿವಿಲಾಸಕ್ಕೆದುರಿಲ್ಲ. ಹದಿನೆಂಟೇ ದಿನಗಳಲ್ಲಿ ಹದಿನೆಂಟಕ್ಷೌಹಿಣಿಗಳ ಸೇನೆಯು ನಷ್ಟವಾಯಿತಲ್ಲ! ಅದು ದೈವಕೃತವೆಂದು ತಿಳಿ! ಸಂಗ್ರಾಮ ಮರಣವು ಕ್ಷತ್ರಿಯರಿಗೆ ಸ್ವರ್ಗಾಪಾದಕವಾಗಿದೆ. ಬಿಡು ಆ ಚಿಂತೆಯನ್ನು!

ಏಕಾಗ್ರಮನಸ್ಕನಾಗಿ ಶ್ರೀಹರಿಯನ್ನಾರಾಧಿಸು; ಧರ್ಮರಾಜನು ನಮ್ಮನ್ನು ಪುತ್ರರಂತೆ ಪಾಲಿಸುವನು. ಆತನ ಸೋದರರಾಗಲಿ, ದ್ರೌಪದ್ಯಾದಿ ರಾಜರಮಣಿಯರಾಗಲಿ

ಅಧರ್ಮರತರಲ್ಲ. ಅವರಿಂದ ಸಾಧು ಸುಜನರಿಗೆ ಕ್ಷೇಮವು ನಿಶ್ಚಿತವಾಗಿದೆ: ಅಂತೆಯೇ ಪ್ರಜಾಪೀಡಕರಾದ ಚೋರಾದಿ ದುಷ್ಟರನ್ನು ಅವರು ದಂಡಿಸುವುದೂ ನಿಶ್ಚಿತವಾಗಿದೆ. ನಿನ್ನ ಅಭಿಮಾನ ವೃಕ್ಷವನ್ನು ಪಾಂಡವರು ಬೆಳೆಸಿದಾಗ, ಸಂಪದ್ಭರಿತರು, ಶಾಂತರು, ಧರ್ಮಶೀಲರು ಆದ ಪ್ರಜರು ಅದನ್ನು ಮರೆಯಲಾರರು. ನಿನ್ನ ಪಾರಲೌಕಿಕ ಧರ್ಮಕರ್ಮಗಳನ್ನು ನಿರ್ವಹಿಸು! ವನದಲ್ಲಿ ನಿನಗೆ ಶ್ರೆಯಸ್ಸಾಧನವಾಗಲಿ!'

ವಿಪ್ರವರನ ಮಾತನ್ನು ಕೇಳಿ, ಪ್ರಜರೆಲ್ಲರೂ 'ಸಾಧು! ಸಾಧು!' ಎಂದು ಅನುಮೋದಿಸಿದರು. ಧೃತರಾಷ್ಟ್ರನು ಅವರನ್ನು ಬೀಳ್ಕೊಂಡು ಮಂದಿರವನ್ನು ಹೊಕ್ಕನು. ಆಗ ವಿದುರನು ಬಂದು ಶ್ರಾದ್ಧಕ್ಕಾಗಿ ತಂದ ಧನವನ್ನು ಸಮರ್ಪಿಸಿದನು. ಅಲ್ಲಿ ನಡೆದ ವೃತ್ತಾಂತವನ್ನೂ ಹೇಳಿದನು.

ವಿದುರನ ಪ್ರಾರ್ಥನೆಯನ್ನು ಕೇಳಿ ಧರ್ಮರಾಜನು ಧನವನ್ನು ಬೇಕಾದಷ್ಟು ಕೊಡುವಂತೆ ಭೀಮಸೇನನಿಗೆ ಆಜ್ಞಾಪಿಸಿದನು. ಭೀಮಸೇನನು ಕೊಡಲೊಲ್ಲದೆ ಸುಮ್ಮನಿದ್ದನು. ದುರ್ಯೋಧನ ವೈರವನ್ನು ಸ್ಮರಿಸಿ, ಕೊಡಲು ಇಷ್ಟಪಡದವನೆಂದು ತಿಳಿದು ಅರ್ಜುನನು, 'ಭೀಮಸೇನ! ಧೃತರಾಷ್ಟ್ರನು ನಮಗೆ ತಂದೆಯಾಗಬೇಕು. ವನವಾಸಕ್ಕೆಂದು ದೀಕ್ಷಿತನಾಗಿ, ಸರ್ವಸುಹೃದ್ಬಂಧುಗಳಿಗೆ ಶ್ರಾದ್ಧಾದಿ ಕ್ರಿಯಾಕಲಾಪವನ್ನು ನಡೆಸಿ, ಅನೃಣಿಯಾಗಬೇಕೆಂದಿರುವನು. ಹಿಂದೆ ನಾವು ಯಾರನ್ನು ರಾಜ್ಯಭಾಗಕ್ಕಾಗಿ ಬೇಡಿದೆವೋ, ಅಂತಹ ಧೃತರಾಷ್ಟ್ರನಿಂದು ಸತ್ತ ತನ್ನವರ ಶ್ರಾದ್ಧಕ್ಕಾಗಿ ನಮ್ಮನ್ನು ಯಾಚಿಸುತ್ತಿರುವನು. ನೋಡು ಕಾಲ ವಿಪರ್ಯಯವನ್ನು! ಕೊಡು ಧನವನ್ನು! ಕೊಡದಿರೆ ನಮಗೆ ಅಪಕೀರ್ತಿಯು, ಅಧರ್ಮವು ಸಂಭವಿಸುವುದು. ಧರ್ಮರಾಜನೂ ಕೊಡಬೇಕೆಂದೇ ಆಜ್ಞಾಪಿಸಿರುವನು. ಅಂತಹ ಅಣ್ಣನ ಮಾತನ್ನು ಮೀರಲಾಗದು. ದಾನಾದಾನಗಳಿಗೆ ನೀನು ಸಮರ್ಥನಾಗಿರುವೆ! ಕೊಡಲು, ಬಿಡಲು ನಿನ್ನದಾಗಿದೆ.'

ಆ ಮಾತನ್ನು ಧರ್ಮರಾಜನು ಅನುಮೋದಿಸಿದನು. ಭೀಮಸೇನನು ಸಿಟ್ಟಿನಿಂದ ಅರ್ಜುನನನ್ನೂ ಧರ್ಮಜನನ್ನೂ ನೋಡಿ ಇಂತೆಂದನು: 'ಮಧುಸೂದನನಿಗೆ ದ್ವೇಷಿಗಳು, ವಿಷ್ಣು ವೈಷ್ಣವ ದ್ರೋಹಿಗಳು ಆದ ಪರಮಪಾಪಿಗಳಿಗೆ ಪರಲೋಕ ಕರ್ಮಗಳಾದ ಶ್ರಾದ್ಧ ದಾನಾದಿಗಳಿಗೆಂದು ಯಾವ ಧನಾದಿ ಸಹಾಯವನ್ನೂ ಮಾಡಬಾರದು. ಭೀಷ್ಮಾದಿಗಳು ವೈಷ್ಣವ ಸುಜನರು ನಿಜ! ಅವರಿಗೆ ಮಾಡುವನೆಂದು ಕೊಟ್ಟ ದ್ರವ್ಯ, ಧೃತರಾಷ್ಟ್ರನು ದುರ್ಯೋಧನಾದಿ ಪಾಪಿಗಳಿಗೂ ವಿನಿಯೋಗಿಸುವನು. ದುಷ್ಟರ ಶ್ರಾದ್ಧಕ್ಕೆಂದು ದ್ರವ್ಯವನ್ನು ಸಹಾಯ ಮಾಡುವವನಿಗೂ ಮಹಾಪಾಪವು ಸಂಭವಿಸುವುದು. ದುಷ್ಟರಿಗೆ ಪರಲೌಕಿಕ ಸುಖವಾಗದು. ಏಕೆಂದರೆ ಅವರು ಪುಣ್ಯಪಾಪಗಳನ್ನದೆ, ಧರ್ಮಾಧರ್ಮಗಳನ್ನು ತಿಳಿಯದೆ, ತಿಳಿದೂ ನಡೆಸದೆ, ತಮ್ಮ ಸ್ವರ್ಗಾದಿ ಸುಖಗಳಿಗೆ ನಾಸ್ತಿಕರಂತೆಯೇ ವಂಚಿತರಾಗುವರು. ಆದುದರಿಂದ ದುರ್ಯೋಧನಾದಿಗಳೆಲ್ಲರೂ ಕಷ್ಟದಿಂದಲೂ ಅತಿ ಕಷ್ಟವನ್ನು ಹೊಂದಲಿ!

ಭೀಷ್ಮಾದಿಗಳಿಗೆ ಮುಂದೆ ಶ್ರಾದ್ಧಾದಿ ಕರ್ಮಗಳನ್ನು ನಾವೇ ಮಾಡುವವರಿರಲು, ಧೃತರಾಷ್ಟ್ರನಿಗೆ ದ್ರವ್ಯವನ್ನು ಏಕೆ ಕೊಡಬೇಕು? ಅಣ್ಣನಾದ ಕರ್ಣನಿಗೂ ಅವನು

ಕಾನೀನನಾದುದರಿಂದ ನಮ್ಮಿಂದ ಕೂಡಿ ಕುಂತೀದೇವಿಯೇ ಅವನಿಗೆ ಶ್ರಾದ್ಧಾದಿಗಳನ್ನು ಮಾಡುವಳು. ಇನ್ನು ಯಾವ ಕಾರಣದಿಂದ ಧೃತರಾಷ್ಟ್ರನಿಗೆ ಧನವನ್ನು ಕೊಡಬೇಕೋ ನೀವೇ ಹೇಳಿರಿ!'

ಅರ್ಜುನನು 'ವನವಾಸಕ್ಕೆಂದು ಹೋಗುತ್ತಲಿರುವ ವೃದ್ಧರಾಜನ ಯಾಚನೆಯನ್ನು ತಿರಸ್ಕರಿಸಬೇಡ! ಭೀಮಸೇನ! ಆತನ ಬಾಹುಬಲದಿಂದ ಸಂಪಾದಿತವಾಗಿರುವ ಆತನ ಕಾಲದ ಧನವನ್ನು ಧೃತರಾಷ್ಟ್ರನಿಗೆ ಕೊಡು! ವನವನ್ನು ಸೇರಿದ ಮೇಲೆ ಮತ್ತೆ ನಮ್ಮನ್ನು ಯಾಚಿಸುವನೇ ನೋಡು?' ಎಂದನು.

ಧರ್ಮರಾಜನು 'ಭೀಮಸೇನ! ಕೊಡು ನಮ್ಮ ಸ್ವಂತ ಧನವನ್ನು! ಕೋಶ ಧನವನ್ನು ಬೇಡ! ಹಾಗಾದರೆ ನಮಗೆ ಪಾಪವು ಬರುವುದಿಲ್ಲ' ಎಂದನು. ಶುದ್ಧ ಭಾಗವತ ಧರ್ಮದಲ್ಲಿ ನಿರತನಾದ ವೃಕೋದರನು, 'ಅಣ್ಣ! ನಿನಗೆ ತಿಳಿಯದು. ದೌಷ್ಟ್ಯದ ಪರಾಕಾಷ್ಠವನ್ನು ಮುಟ್ಟಿದ ಮಹಾಪಾಪಿಗಳಿಗೆ ಶ್ರಾದ್ಧವೇತಕ್ಕೆ? ದ್ವಾದಶ ವಾರ್ಷಿಕವಾದ ವನವಾಸ ಕ್ಲೇಶವಾರಿಂದಲೋ, ದ್ರೌಪದೀ ಶೋಕವರ್ಧಕವಾದ ಅಜ್ಞಾತವಾಸ ಕ್ಲೇಶವಾರಿಂದಲೋ, ಅಂತಹ ಕೌರವರಿಗೆ ಶ್ರಾದ್ಧವೇಕೆ? ದಾನಗಳೇಕೆ? ಆಗ ಧೃತರಾಷ್ಟ್ರನಿಗೆ ನಮ್ಮಲ್ಲಿ ಸ್ನೇಹವಿತ್ತೇ? ಹೇಳು! ಕೃಷ್ಣಾಜಿನವನ್ನು ಉಟ್ಟು ನೀನು ನಾರ ಸೀರೆಯನ್ನುಟ್ಟು ನಮ್ಮ ಮಡದಿ, ವನವಾಸಕ್ಕೆಂದು ಹೊರಟಾಗ, ಅಂಧರಾಜನ ಸ್ನೇಹವೆಲ್ಲಿ ಅಡಗಿತ್ತು? ದ್ರೋಣ, ಭೀಷ್ಮ, ಬಾಹ್ಲಿಕ, ಸೋಮದತ್ತ, ಭೂರಿಶ್ರವಾದಿಗಳಿಗೆ ನಮ್ಮ ವನವಾಸ ಕ್ಲೇಶಗಳನ್ನು ವಾರಿಸಲಾಗದಿತ್ತೇ? ಅವರೇಕೆ ಸುಮ್ಮನಿದ್ದರು? ಇದೇ ಕುರುಡನು ಈಗ ನಿನಗೆ ದೊಡ್ಡಪ್ಪನಾಗಿರುವನು! ಇವನೇ ಅಲ್ಲವೇ ದ್ಯೂತವಾಡುವಾಗ ಈ ವಿದುರನನ್ನು 'ಕಿಂಜಿತಂ? ಕಿಂಜಿತಂ' ಅಂತ ಕೇಳಿ, ತನ್ನ ಮಕ್ಕಳ ಅನ್ಯಾಯ ಜಯವನ್ನು ಅಭಿನಂದಿಸಿದವನು? ಅವರವರು ಮಾಡಿದ ಪಾಪದ ಫಲವನ್ನು ಅವರೇ ಉಣ್ಣಬೇಕಾಗಿ ಬಂತು, ತಿಳಿ! ದುಷ್ಟರು ಕಷ್ಟಪಡುವುದನ್ನು ಕಂಡು, ಅನುತಾಪಪಡುವವನೂ ದೋಷಭಾಗಿಯಾಗುವನು. ಗೋಘ್ನವಾದ ವ್ಯಾಘ್ರವನ್ನು ಕೊಂದು 'ಅಯ್ಯೋ ಪಾಪ!' ಎನ್ನುವರುಂಟೇ? ಅಂದು ಐದು ಹಳ್ಳಿಗಳನ್ನು ಕೊಡಿಸದವನು, ಇಂದು ಕೈಯೊಡ್ಡಿ ಬೇಡುವನೆಂದು ಕೊಡಬಹುದೇ? ನಾನಂತೂ ಕೊಡಲಾರೆನು' ಎಂದನು.

ಆಗ ಧರ್ಮರಾಜನು 'ಸುಮ್ಮನಿರು!' ಎಂದು ಭೀಮನನ್ನು ಜಬರಿಸಿ ವಿದುರ! ಭೀಮಸೇನನು ಶುದ್ಧ ಭಾಗವತಧರ್ಮನಿರತನಾಗಿ ಇಂತಾಡಿರುವನು. ಅದನ್ನು ನೀನೂ ಅರಿತಿರುವೆ! ಭೀಮಸೇನನಲ್ಲಿ ಕೋಪಿಸಲಾಗದೆಂದು ನಮ್ಮ ತಂದೆಗೆ ತಿಳಿಸು! ಕೋಶದಿಂದ ಬೇರೆಯಾದ ನನ್ನ ಸ್ವಂತ ದ್ರವ್ಯವಿದೆ. ದಾನ ಭೋಗಾದಿಗಳಿಗೆಂದು ತೆಗೆದಿಟ್ಟ ನನ್ನ ಧನ ಎಲ್ಲವನ್ನೂ ಕೊಡುತ್ತಿರುವೆನು. ಕೊಂಡು ಹೋಗಿ ತಂದೆಗೆ ವಂದಿಸಿ ಸಮರ್ಪಿಸು!' ಎಂದನು. ಅರ್ಜುನನೂ ತನ್ನ ದ್ರವ್ಯರಾಶಿಯನ್ನು ಕೊಟ್ಟನು.

ಅದೆಲ್ಲವನ್ನೂ ಸೇವಕರಿಂದ ಹೊರಿಸಿಕೊಂಡು, ವಿದುರನು ಧೃತರಾಷ್ಟ್ರನಲ್ಲಿಗೆ

ಬಂದನು. ಧೃತರಾಷ್ಟ್ರನು ನಡೆದುದೆಲ್ಲವನ್ನೂ ಕೇಳಿ ನಿಟ್ಟುಸಿರಿಟ್ಟು, 'ಅಹುದು! ಭೀಮಸೇನನಾಡಿದುದೆಲ್ಲವೂ ನಿಜ! ಆತನಲ್ಲಿ ನನಗೆ ಸಿಟ್ಟಿಲ್ಲ. ನನ್ನ ಪಾಪಕೃತ್ಯಗಳ ಫಲವಾದ ದುಃಖ ವಿಷಸಮುದ್ರವನ್ನು ನಾನು ಕುಡಿಯದಿರಲಾಗುವುದೇ? ಇರಲಿ! ಕರೆಯಿಸು ಬ್ರಾಹ್ಮಣರನ್ನು! ಮುಂದಿನ ಕಾರ್ಯಗಳನ್ನು ಮಾಡಿ, ವನಕ್ಕೆ ಹೋಗೋಣ!' ಎಂದನು.

ಧೃತರಾಷ್ಟ್ರನು ಕಲ್ಮಾವೇಶ ವಿಯೋಗದಿಂದ ಶುದ್ಧ ಮನಸ್ಕನಾಗಿ ಪಾಪಿ ಪುತ್ರಾದಿಗಳ ಋಣವನ್ನು ಕಡಿದುಬಿಡಬೇಕೆಂದು ನಿಶ್ಚಯಿಸಿ, ಹತ್ತು ದಿನಗಳವರೆವಿಗೂ ನಿರಂತರ ದಾನ ನಿರತನಾದನು. ಅದೆಲ್ಲ ಕರ್ಮವನ್ನೂ ಶ್ರೀಕೃಷ್ಣ ಚರಣಾರವಿಂದಗಳಿಗೆ ಸಮರ್ಪಿಸಿದನು. ಭೀಷ್ಮ, ದ್ರೋಣ (ಗುರು), ಸೋಮದತ್ತ, ಬಾಹ್ಲಿಕ ಮುಂತಾದ ಹಿರಿಯರಿಗೂ, ದುರ್ಯೋಧನ, ದುಶ್ಶಾಸನಾದಿ ಪುತ್ರರಿಗೂ, ಜಯದ್ರಥಾದಿ ಬಂಧುಗಳಿಗೂ ಬೇರೆ ಬೇರೆಯಾಗಿ ಶ್ರಾದ್ಧಗಳನ್ನು ಮಾಡಿ, ಭೂರಿ ದಕ್ಷಿಣೆಗಳನ್ನು ಕೊಟ್ಟನು. ಧೃತರಾಷ್ಟ್ರನು ಹತ್ತು ಕೊಡೆಂದವರಿಗೆ ನೂರನ್ನೂ, ನೂರು ಕೊಡೆಂದವರಿಗೆ ಸಹಸ್ರವನ್ನೂ ಕೊಡಿಸಿ ಧರ್ಮರಾಜನ ಗಣಕ ಲೇಖಕರು ವಿಪ್ರಾದಿಗಳ ಸಂತೋಷವನ್ನು ಧರ್ಮರಾಜನಿಗೆ ನಿವೇದಿಸಿದರು.

ಮೃಷ್ಟಾನ್ನ ಪಾನಗಳನ್ನು, ವಸ್ತ್ರರತ್ನಗಳನ್ನು ಪುಷ್ಕಲವಾಗಿ ದಾನ ಮಾಡಿ ಧೃತರಾಷ್ಟ್ರನು ವಿಪ್ರರನ್ನೇ ಅಲ್ಲದೆ ಅವರ ಆನಂತರದಲ್ಲಿ ಆಚಂಡಾಲಾಂತವಾಗಿ ಸರ್ವಜನರನ್ನು ಸಂತೋಷಪಡಿಸಿದನು. ಕೊನೆಗೆ ತನಗೂ ಗಾಂಧಾರಿಗೂ ಕೂಡ ಪಾರಲೌಕಿಕ ಶ್ರೇಯಸ್ಸೆಂದು ಬೇಕಾದ ಸರ್ವದಾನಗಳನ್ನೂ ಮಾಡಿದನು.

ಮರುದಿನ ಕಾರ್ತಿಕ ಶುದ್ಧ ಪೂರ್ಣಿಮಾ ಸೇಷ್ಟಿಯನ್ನು ಮಾಡಿ, ದೀಕ್ಷೆಯನ್ನು ಧರಿಸಿ, ನಾರುಬಟ್ಟೆಗಳನ್ನು ಗಾಂಧಾರೀ ಧೃತರಾಷ್ಟ್ರರು ಸಂಜಯನು ಮಾರ್ಗವನ್ನು ಸೂಚಿಸುತ್ತಿರಲು ತಮ್ಮ ಭವನದಿಂದ ಹೊರಬಂದರು. ಅಂತಃಪುರದ ನಾರಿಯರು ಅವರ ವಿಯೋಗವನ್ನು ಸಹಿಸಲಾರದೆ ಉಚ್ಚಸ್ವರದಿಂದ ರೋದಿಸಿದರು. ಧೃತರಾಷ್ಟ್ರನು ಅವರನ್ನು ಸಮಾಧಾನಪಡಿಸಿದನು; ಭವನವನ್ನು ಲಾಜಾಸುಮಾಕ್ಷತೆಗಳಿಂದ ಪೂಜಿಸಿದನು; ವಿಪ್ರರನ್ನು ಸಂಭಾವಿಸಿ, ಆಶೀರ್ವಾದಗಳನ್ನು ಪಡೆದನು; ಕಣ್ಣೀರಿಡುತ್ತಾ ನಿಂತಿದ್ದ ಪಾಂಡವರನ್ನು ಕರೆದಪ್ಪಿ, ಅನುನಯಿಸಿದನು.

'ಹಾ ಸಾಧೋ! ನಮ್ಮನ್ನಗಲಿ ಪೋಗುವೆಯಾ?' ಎಂದು ಮೂರ್ಛೆ ಬಿದ್ದ ಧರ್ಮಜನನ್ನು ಅರ್ಜುನನು ಹಿಡಿದು ಕೂಡಿಸಿ, ಉಪಚರಿಸಿದನು. ಧೃತರಾಷ್ಟ್ರನ ಹಿಂದೆಯೇ ಬಾಷ್ಪಕಂಠರಾಗಿ ವೃಕೋದರ, ಅರ್ಜುನ, ನಕುಲ, ಸಹದೇವ, ವಿದುರ, ಸಂಜಯ, ಯುಯುತ್ಸುಗಳು ನಡೆತಂದರು. ಕೃಪಧೌಮ್ಯರು ಅವರನ್ನನುಸರಿಸಿ ಬಂದರು. ಧೃತರಾಷ್ಟ್ರನು ಗಾಂಧಾರಿಯ ಭುಜದಲ್ಲಿ ಕೈಯಿಟ್ಟು ನಡೆಯುತ್ತಿರಲು, ಗಾಂಧಾರಿಯು ಕುಂತಿಯ ಭುಜವನ್ನು ಪಿಡಿದು ನಡೆದಳು. ಬದ್ಧನೇತ್ರಳು ಅಂಧ ರಾಜಯುತಳು ಆದ ಗಾಂಧಾರಿಗೆ ಮಾರ್ಗದರ್ಶಕಳಾಗಿ ಕುಂತೀದೇವಿಯು ಹೊರಟಳು. ಅವಳ ಹಿಂದೆ ದ್ರೌಪದೀ

ಸುಭದ್ರಾ ಚಿಂತ್ರಾಗದಾ ನಾಗ ತರುಣಿಯರು ಮತ್ತು ಪರೀಕ್ಷಿಜ್ಜನನಿಯಾದ ಉತ್ತರೆ- ಇನ್ನು ಮಿಕ್ಕ ರಾಜರಮಣಿಯರು ಖಿನ್ನರಾಗಿ ಬರುತ್ತಿದ್ದರು. ಊರು ಬಿಟ್ಟು ಹೊರಬಂದಾಗ ಅವರ ರೋದನ ಧ್ವನಿಯು ಅಂಬರದಿ ವ್ಯಾಪಿಸಿ, ಹಸ್ತಿನಗರವೇ ಅಳುತ್ತಿರುವಂತೆ ತೋರಿತು. ಅಸೂರ್ಯಂಪಶ್ಯರಾದ ಕೋಮಲಿಯರು ಅಂದು ಅನಾವೃತರಾಗಿ ರಾಜಮಾರ್ಗದಲ್ಲಿ ನಡೆದು ಬಂದರು.

ನಗರದ ವರ್ಧಮಾನದ್ವಾರ ದೇಶದಲ್ಲಿ ಧೃತರಾಷ್ಟ್ರನು ಅವರನ್ನೆಲ್ಲ ಬೀಳ್ಕೊಂಡು, ತನ್ನ ಹಿಂದೆ ವಿದುರ ಸಂಜಯರನ್ನು ಮಾತ್ರ ಕರೆದುಕೊಂಡು ಮುಂದೆ ಸಾಗಿದನು. ಅಳುತ್ತಾ, ಕಾಲಿಗೆ ಬಿದ್ದ ಪಾಂಡವರನ್ನು ಎತ್ತಿ, ಮೈದಡವಿ, ತಲೆಮೂಸಿ, ಕಣ್ಣೀರಿಂದ ಅಭಿಷೇಕಿಸಿ, ಕಳಿಸಿದನು. ಕಂಠದ ಸೆರೆ ಬಿಗಿದು ಮಾತಾಡಲಾರದೆ ಧರ್ಮರಾಜಾದಿಗಳು ಅಳುತ್ತಾ ನಿಂತರು. ಕೃಪಯುಯುತ್ಸುಗಳು ತನ್ನ ಹಿಂದೆ ಬರಲಪೇಕ್ಷಿಸಲು ವಾರಿಸಿ, ಧೃತರಾಷ್ಟ್ರನು, ಅವರನ್ನು ಧರ್ಮರಾಜನ ಕೈಯಲ್ಲಿಟ್ಟನು. ಪೌರಜನರೂ ಖಿನ್ನರಾಗಿ ಹಿಂದಿರುಗಿದರು.

ಧರ್ಮರಾಜನು ಕುಂತೀದೇವಿಯು ಹಿಂದಿರುಗದಿರುವುದನ್ನು ಕಂಡು, 'ಅಂಬ! ನೀನು ಮನೆಗೆ ನಡೆ! ನಾನು ರಾಜನನ್ನು ಕಳಿಸಿ ಬರುವೆನು' ಎಂದನು. ಕುಂತಿಯು, ಮುಂದೆ ಸಾಗುತ್ತಾ ಬಾಷ್ಪಗದ್ಗದಿತ ಕಂಠಳಾಗಿ ಮಗನಿಗಿಂತೆಂದಳು: 'ಮಹಾರಾಜ! ಸಹದೇವನನ್ನು ಚನ್ನಾಗಿ ರಕ್ಷಿಸು! ಅವನು ನನ್ನ ಪ್ರಿಯವತ್ಸನು. ರಣರಂಗ ಚಂಡಕಾಂಡನಾದ ಕರ್ಣನನ್ನು ಮರೆಯಬೇಡ! ರಣನಿಹತನಾದ ಜ್ಯೇಷ್ಠ ಪುತ್ರ ಕರ್ಣನನ್ನು ನೋಡಿ, ಒಡೆಯದಿದ್ದ ಈ ನನ್ನ ಆಯಸ್ಮಯವೆಂದು ತೋರುತ್ತಿದೆ! ಅವನು ಸೂರ್ಯಜನೆಂದು ಪ್ರಕಟಿಸುವ ಧೈರ್ಯವೆನಗೆ ಬರಲಿಲ್ಲ. ಉಭಯಸಂಕಟಕ್ಕೀಡಾಗಿ ಹಾಳು ಮಾಡಿದೆನವನನ್ನು! ನನ್ನ ಪಾಪಕ್ಕೆ ಪ್ರಾಯಶ್ಚಿತ್ತವಾದ ತಪಸ್ಸನ್ನು ಮಾಡಲು, ಭಾವನನ್ನನುಸರಿಸಿ ಪೋಗುತ್ತಿರುವೆನು. ನನ್ನನ್ನು ತಡೆಯಬೇಡ! ತಡೆದರೂ ನಾನು ನಿಲ್ಲುವುದಿಲ್ಲ. ನನ್ನ ಪ್ರೀತಿಯ ಸೊಸೆಯಾದ ದ್ರೌಪದಿಯನ್ನು ಪಟ್ಟ ಕ್ಲೇಶಗಳ ನೆನಪಾಗದಂತೆ- ಕಾಪಾಡು! ಭೀಮಸೇನ! ನಿನ್ನ ಅಣ್ಣ ತಮ್ಮಂದಿರನ್ನು ಎಂದಿನಂತೆ ಎಚ್ಚರದಿಂದ ರಕ್ಷಿಸು!'

ಆ ಮಾತನ್ನಾಲಿಸಿ ಧರ್ಮರಾಜನು ಗರಬಡೆದಂತಾಗಿ ಸುಮ್ಮನೆ ನಿಂತನು. ಎಲ್ಲರೂ ಆಶ್ಚರ್ಯಚಿಂತಾಶೋಕಪರೀತರಾದರು. 'ಅಂಬ! ಏನಿದು? ನಿನ್ನ ನಿಶ್ಚಯವನ್ನು ಬದಲಿಸು! ದಯೆದೋರು ಮಕ್ಕಳಲ್ಲಿ! ನಾನು ಸರ್ವಥಾ ನಿನಗೆ ಅನುಮತಿ ಕೊಡಲಾರೆನು. ವಿದುಲಾಚರಿತವನ್ನು ಶ್ರೀಕೃಷ್ಣನದ್ವಾರಾ ತಿಳಿಸಿ, ನಮ್ಮನ್ನು ಯುದ್ಧಕ್ಕೆಳಿಸಿದೆ! ಈಗ ನಿನ್ನ ಮಕ್ಕಳು ರಾಜರಾಗಿರುವಾಗ ವನವಾಸಕ್ಕೆ ತೆರಳುತ್ತಿರುವೆ! ಇದು ನ್ಯಾಯವಲ್ಲ. ಯಾದವಿಯಾಗಿ, ವೀರಪತ್ನಿಯಾಗಿ, ವೀರಪುತ್ರಿಯಾಗಿ ಕ್ಷೇತ್ರಧರ್ಮವನ್ನು ಬೋಧಿಸಿ ಈಗ ವಿಪ್ರವನಿತೆಯಂತೆ ವಿರಾಗದಿಂದ ವಿಜನವನವನ್ನು ಸೇರಪೋಗುವುದೇ? ಬೇಡ! ನಮ್ಮ ಕೈಬಿಡಬೇಡ!'

ಇಂತು ಪ್ರಾರ್ಥಿಸುವ ಧರ್ಮಜನ ಮಾತಿಗೆ ಕಿವಿಗೊಡದೆ, ಕುಂತಿಯು ಮುಂದೆ ಸಾಗಿದಳು. ಆಗ ಭೀಮಸೇನನು ಆಕೆಗೆ ವಂದಿಸಿ, ಇಂತೆಂದನು:

'ಕುಂತೀದೇವಿ! ಪುತ್ರರನ್ನು ಹುರಿದುಂಬಿಸಿ ಯುದ್ಧದಲ್ಲಿ ಅವರು ಗೆದ್ದ ರಾಜ್ಯವನ್ನು ಅನುಭವಿಸದೆ, ವನಕ್ಕೆ ಹೋಗಬೇಕೆಂಬ ಬುದ್ಧಿಯು ನಿನಗೇಕೆ ಬಂತು? ಪೃಥಿವಿಯ ರಾಜರನ್ನು ನಾವು ಕೊಲ್ಲುವಂತೆ ಏಕೆ ಪ್ರೇರಿಸಿದೆ! ಈಗ ನಮ್ಮನ್ನು ಬಿಟ್ಟು ವನಕ್ಕೆ ಹೋಗಲು ನಾವು ಮಾಡಿದ ಅಪರಾಧವಾದರೂ ಏನು? ಶತಶೃಂಗದಿಂದ ಬಾಲರಾದ ನಮ್ಮನ್ನು ಹಸ್ತಿನಗರಕ್ಕೆ ಕರೆತಂದುದೇತಕ್ಕೆ? ನಿನ್ನ ನಿರ್ಣಯವನ್ನು ಕಂಡು ನಕುಲ ಸಹದೇವರು ದುಃಖಾಕುಲರಾಗಿರುವರು. ವನಕ್ಕೆ ಹೋಗಬೇಡ! ಅಮ್ಮ! ಪ್ರಸನ್ನಳಾಗು! ಭುಜಬಲಾರ್ಜಿತವಾದ ಧರ್ಮರಾಜಸಂಪತ್ತನ್ನು ಅನುಭವಿಸು! ನಿನಗೇನು ಕಡಿಮೆ ಆಗಿದೆ?'

ಇಂತು ಪ್ರಾರ್ಥಿಸುತ್ತಾ ಕಣ್ಣೀರಿಡುವ ಭೀಮಾದಿಗಳನ್ನು ಅಳುತ್ತಾ ಬೇಡುವ ದ್ರೌಪದೀ ಸುಭದ್ರೆಯರನ್ನೂ ಒಮ್ಮೆ ಹಿಂದಿರುಗಿ ನೋಡಿ, ಕುಂತಿಯು ತನ್ನ ಕಣ್ಣಲ್ಲಿ ತುಂಬಿಬರುವ ಬಾಷ್ಪಗಳನ್ನು ತಡೆದು, ಮಾತಾಡದೆ, ಮುಂದೆ ನಡೆದಳು.

ತನ್ನನ್ನು ಬಿಡದೆ ಹಿಂಬಾಲಿಸುವ ಮಕ್ಕಳನ್ನು ನೋಡಿ ಕುಂತಿದೇವಿಯು ಧರ್ಮ ಭೀಮಾದಿಗಳಿಗೆ ಇಂತೆಂದಳು: 'ಅಹುದು! ವಿದುಲಾಖ್ಯಾನದಿಂದ ನಿಮ್ಮನ್ನು ರೇಗಿಸಿದೆನು ನಿಜ! ಮಾಯಾದ್ಯೂತದಲ್ಲಿ ರಾಜ್ಯವನ್ನು ಕಳೆದುಕೊಂಡು, ಜ್ಞಾತಿಪರಿಭೂತರಾದ ನಿಮ್ಮನ್ನು ಕಂಡು, ಶೋಕಾವೇಶದಿಂದ ಛಲ ಪುಟ್ಟಿಸಿದೆನು, ಪಾಂಡುರಾಜರ ಸಂತತಿಯು ಯಶೋಹಾನಿಯನ್ನು ಹೊಂದಿ, ನಷ್ಟವಾಗಬಾರದೆಂದು ರೇಗಿಸಿದೆನು. ಇಂದ್ರ ಸಮವಿಕ್ರಮರಾದ ಪುತ್ರರು ಪರರ ಬಾಗಿಲಲ್ಲಿ ನಿಂತು, ಹಿಡಿಕೂಳಿಗೆ ಕೈಯೊಡ್ಡಬಾರದೆಂದು ರೇಗಿಸಿದೆನು. ವಾಸ ವತುಲ್ಯನಾದ ಅರ್ಜುನನು, ನಾಗಾಯುತ ಬಲ ವಿಕ್ರಮನಾದ ಭೀಮಸೇನನು, ಯಮತುಲ್ಯನಾದ ನೀನು, ಗುರುವಿನೀತರಾದ ಸಹದೇವನ ಕುಲ ಕುಮಾರರು, ಹಸಿವೆಗೆ ಕೃಶರಾಗದಂತೆ - ಮತ್ತೆ ವನವಾಸ ಕ್ಲೇಶಕ್ಕೆ ಗುರಿಯಾಗದಂತೆ, ನಾನು ನಿಮ್ಮಿಂದ ಯುದ್ಧವಾಡಿಸಿದೆನು. ಪದ್ಮಾಯತಲೋಚನೆಯಾದ ಕೃಷ್ಣೆಯು ಕೌರವ ಸಭೆಯಲ್ಲಿ ಪಟ್ಟ ಕಷ್ಟವನ್ನು ನೆನೆದು ಯುದ್ಧವಾಡಿಸಿದೆನು!

ಶುಭಾಂಗಿಯು, ಪತಿವ್ರತೆಯು ಆದ ದ್ರೌಪದಿಯನ್ನು ದುಶ್ಶಾಸನನು ಎಂದು ದಾಸಿಯಂತೆ ಪರಾಭವಿಸಿದನೋ, ಅಂದೇ ಕೌರವ ಕುಲವೆಲ್ಲ ಹಾಳಾಯಿತೆಂದು ತಿಳಿದೆನು. ಭೀಮಸೇನ! ಧೃತರಾಷ್ಟ್ರನೇ ಮೊದಲಾದ ಹಿರಿಯರಿದ್ದೂ, ಹತಬುದ್ಧಿಯಾದ ಪಾಪಿ ದುಶ್ಶಾಸನನು ಸಭೆಯಲ್ಲಿ ಆಕೆಯ ಕೇಶಪಾಶಕ್ಕೆ ಕೈಹಾಕಿದುದನ್ನು ಕಂಡು ನನಗೆ ಮೂರ್ಛೆ ಬಂತು! ಪಾಪಿ ಕೌರವರಿಂದು ಎಲ್ಲರೂ ಸತ್ತಿರುವರು. ಅವರ ಪಾಪರಾಶಿಯು ಘೋರವಾಗಿದೆ! ಅಂತಹ ದುಷ್ಟರಿಗೆ ಎಂದಿಗೂ ಪುಣ್ಯಲೋಕಗಳಾಗುವುದಿಲ್ಲ.

ಅರ್ಜುನ! ನಕುಲಸಹದೇವರೆ! ನಾನೂ ಹಿಂದೆ ಬೇಕಾದ ರಾಜ್ಯಸುಖಗಳನ್ನು

ಅನುಭವಿಸಿರುವೆನು. ನನ್ನ ಪತಿಯಿಂದ ಕೂಡಿ ಯಜ್ಞಗಳನ್ನು ಮಾಡಿರುವೆನು. ವಿಪುಲ ದಾನಗಳನ್ನಿತ್ತಿರುವೆನು. ಈ ಹದಿನೈದು ವರ್ಷಗಳಿಂದ ಮಕ್ಕಳಾದ ನಿಮ್ಮ ಸುಖಸಂಪತ್ತಿಯನ್ನು ಕಂಡು ಹಿಗ್ಗಿ, ನೀವಿತ್ತ ಧನದಿಂದ ದಾನಗಳನ್ನೂ ಮಾಡಿರುವೆನು. ಇನ್ನು ಸಾಕು! ನನಗೆ ಪತಿಲೋಕವಾಗಬೇಕಲ್ಲವೇ? ಅತ್ತೆ ಮಾವಂದಿರಂತಿರುವ ಅಂಥ ದಂಪತಿಗಳ ಸೇವೆಯನ್ನು ನಾನು ಮಾಡಿದಂತೆ ಮತ್ತಾರೂ ಮಾಡಲಾರರು. ನಾನೂ ತಪಗೈದು ಸರ್ವಪಾಪ ಮುಕ್ತಳಾಗುವೆನು! ನನಗೆ ಅಪ್ಪಣೆ ಕೊಡಿರಿ!'

ಆ ಮಾತಿಗೆ ನಿರುತ್ತರರಾಗಿ ಪಾಂಡವರು ನಿಟ್ಟುಸಿರಿಟ್ಟು ಹಿಂದಿರುಗಿದರು. ಕುಂತಿದೇವಿಗೂ, ಗಾಂಧಾರೀ ಧೃತರಾಷ್ಟ್ರರಿಗೂ ಪ್ರದಕ್ಷಿಣಿಸಿ, ವಂದಿಸಿ, ರೋದಿಸುತ್ತಾ ಮರಳುವ ಕುಮಾರರನ್ನು ನೋಡಿ, ಧೃತರಾಷ್ಟ್ರನು ಕುಂತಿಗಿಂತೆಂದನು: "ಪಾಂಡು ಮಹಿಷಿ! ಧರ್ಮಜ ಭೀಮರ ನುಡಿಯು ಸತ್ಯವಾಗಿದೆ. ಪುತ್ರೈಶ್ವರ್ಯವನ್ನು ಭುಂಜಿಸು! ಹಿಂದಿರುಗು! ವನಕ್ಕೆ ಬರಬೇಡ!" ಗಾಂಧಾರಿಯೂ ಅಂತೆಯೇ ನುಡಿದಳು. ಆದರೂ ಕುಂತಿಯು ದೃಢನಿಶ್ಚಯಳಾಗಿ, ವನಕ್ಕೆ ಹೊರಟಳು. ಅದನ್ನು ತಿಳಿದು ಪಾಂಡವರು ದುಃಖಶೋಕಪರೀತ ಚೇತಸ್ಕರಾಗಿ, ದ್ರೌಪದ್ಯಾದಿ ತರುಣಿಯರನ್ನು ಕರೆದುಕೊಂಡು, ಹಸ್ತಿನಪುರವನ್ನು ಪೊಕ್ಕರು.

## ೩. ಧೃತರಾಷ್ಟ್ರನ ಆಶ್ರಮವಾಸ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ಪಾಂಡವರು ಅನಾನಂದವು, ನಿರುತ್ಸವವು ಆದ ಹಸ್ತಿನಪುರವನ್ನು ಹೊಕ್ಕು, ನಿಜಮಂದಿರಗಳಿಗೆ ತೆರಳಿದರು. ಆಕಳನ್ನು ಕಳೆದುಕೊಂಡ ಕರುಗಳಂತೆ ದೀನರಾಗಿ, ಕುಂತೀದೇವಿಯನ್ನು ನೆನೆನೆನೆದು, ನಿರುತ್ಸಾಹರಾಗಿದ್ದರು.

ಧೃತರಾಷ್ಟ್ರನು ಬಲುದೂರ ಪ್ರಯಾಣಿಸಿ, ಭಾಗೀರಥಿಯ ತೀರದಲ್ಲಿದ್ದ ಆಶ್ರಮವನ್ನು ಸೇರಿದನು. ವಿಪ್ರರು ಅಗ್ನಿಹೋತ್ರಗಳಲ್ಲಿ ಆಹುತಿಗಳನ್ನಿತ್ತರು. ವೇದಘೋಷಗಳನ್ನು ಮಾಡುತ್ತಾ ಅಗ್ನಿಹೋತ್ರಗಳ ಸುತ್ತಲು ಕೂತರು. ಧೃತರಾಷ್ಟ್ರನು ಆ ವಿಪ್ರರಿಗೆ ವಂದಿಸುತ್ತಾ ಮುಂದೆ ಸಾಗಿ, ಒಂದೆಡೆ ತಂಗಿದನು. ಅವನು ಅಗ್ನಿಗಳಲ್ಲಿ ಆಹುತಿಯನ್ನಿತ್ತು, ಸಂಧ್ಯಾ ಸಮಯವಾಗಿರುವುದನ್ನು ಕಂಡು, ಸಾಯಂ ಸಂಧ್ಯಾವಂದನಾದಿಗಳನ್ನು ಮಾಡಿದನು.

ವಿದುರ ಸಂಜಯರು ಮೃದುಕುಶಗಳನ್ನಾರಿಸಿ ತಂದು ಶಯ್ಯಾತಲಗಳನ್ನು ನಿರ್ಮಿಸಿದರು. ಗಾಂಧಾರಿಯ ಸಮೀಪದಲ್ಲಿ ಕುಂತಿಯು ಕೂತಳು. ಧೃತರಾಷ್ಟ್ರನು ಅಗ್ನಿಹೋತ್ರಗಳ ಸಮೀಪದಲ್ಲಿ ವಿಪ್ರವರರ ವೇದನಿನಾದವನ್ನು ಕೇಳುತ್ತಾ ಕೂತನು. ಆಮೇಲೆ ಅಲ್ಲೇ ಅವರು ಮಲಗಿದರು. ರಾತ್ರಿಯು ಕಳೆಯಿತು. ಬೆಳಗಾಗುತ್ತಲೇ ಧೃತರಾಷ್ಟ್ರನು ಪ್ರಾತಃಕಾಲ ಕೃತ್ಯಗಳನ್ನು ಮಾಡಿ, ಅಗ್ನಿಗೆ ಆಹುತಿಯನ್ನಿತ್ತನು. ಮತ್ತೆ ಪ್ರಯಾಣಿಸಿ, ಉತ್ತರಾಮುಖವಾಗಿ ಸಾಗಿ ಅವರು ಗಂಗಾತೀರದ ಇನ್ನೊಂದಾಶ್ರಮವನ್ನು

ಸೇರಿದರು. ಅಲ್ಲಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಶೂದ್ರಾದಿ ವನನಿವಾಸಿಗಳು ಅವರನ್ನು ಕಾಣಬಂದರು. ಧೃತರಾಷ್ಟ್ರನು ಅವರನ್ನು ಸತ್ಕರಿಸಿ, ವನ್ಯಫಲಗಳನ್ನು ಸ್ವೀಕರಿಸಿ, ಸಾಯಂಕಾಲವಾಗುವವರೆಗೂ ಪುಣ್ಯಕಥೆಗಳಿಂದ ಕಾಲ ಕಳೆದನು. ಆಗ ತೀರ್ಥವನ್ನು ಸೇರಿ, ಸ್ನಾನಮಾಡಿ, ವಿದುರಸಂಜಯರು, ಧೃತರಾಷ್ಟ್ರನು ತತ್ಕಾಲೀನ ಕೃತ್ಯಗಳನ್ನು, ಜಪತಪಗಳನ್ನು ಮಾಡಿ, ಅಂದು ಅಲ್ಲೇ ಕಳೆದರು.

ಮರುದಿನ ಧೃತರಾಷ್ಟ್ರನು ತನ್ನವರಿಂದ ಕೂಡಿ, ಕುರುಕ್ಷೇತ್ರವನ್ನು ಸೇರಿದನು. ಅಲ್ಲಿ ಶತಯೂಪನೆಂಬ ರಾಜರ್ಷಿಯ ಆಶ್ರಮವಿತ್ತು. ಶತಯೂಪನು ತನ್ನ ಮಗನಿಗೆ (ಕೇಕಯ) ರಾಜ್ಯವನ್ನೊಪ್ಪಿಸಿ, ಅಲ್ಲಿ ವಾನಪ್ರಸ್ಥನಾಗಿರುತ್ತಿದ್ದನು. ಶತಯೂಪನು ಧೃತರಾಷ್ಟ್ರನನ್ನು ವ್ಯಾಸಾಶ್ರಮಕ್ಕೆ ಕರೆದುಕೊಂಡು ಹೋದನು. ಶ್ರೀವ್ಯಾಸರ ಅನುಮತಿ ಪಡೆದು ಶತಯೂಪನು ಧೃತರಾಷ್ಟ್ರನಿಗೆ ವಾನಪ್ರಸ್ಥ ದೀಕ್ಷೆಯನ್ನಿತ್ತು, ಅದರ ನಿಯಮಗಳನ್ನು ತಿಳಿಸಿಕೊಟ್ಟನು. ಶತಯೂಪಾಶ್ರಮದಲ್ಲಿ ಕೆಲಕಾಲವಿದ್ದು, ಧೃತರಾಷ್ಟ್ರನು ತೀವ್ರ ತಪಸ್ಸನ್ನು ಮಾಡಿದನು. ವಿದುರ ಸಂಜಯರೂ ನಿಯಮದಿಂದ ತಪಗೈದರು. ಗಾಂಧಾರಿಯ ಶುಶ್ರೂಷೆಯಿಂದ ಆಕೆಯ ತಪಸ್ಸಿಗೆ ಸಹಾಯಕಳಾಗಿ, ಕುಂತಿಯು ತಾನೂ ತಪೋನಿರತಳಾಗಿದ್ದಳು. ಅವರೆಲ್ಲರೂ ನಾರಸೀರೆಗಳನ್ನುಟ್ಟು ಅಜಿನಗಳನ್ನು ಹೊದ್ದು, ಏಕಾದಶ್ಯಾದಿ ವ್ರತಗಳನ್ನೂ, ಭಗವದ್ಗುಣ ಶ್ರವಣ ಚಿಂತನ ಧ್ಯಾನಗಳನ್ನೂ ಮಾಡಿದರು. ಇಂದ್ರಿಯ ಗ್ರಾಮವನ್ನು ಗೆದ್ದು, ಮನಸ್ಸನ್ನು ವಶಕ್ಕೆ ತಂದು, ಮೋಹ ಶೋಕಗಳಿಗೆಡೆಗೊಡದೆ ತೀವ್ರ ತಪವನ್ನು ಮಾಡುತ್ತಾ ಇದ್ದ ಧೃತರಾಷ್ಟ್ರಾದಿಗಳು ನಿಷ್ಕಲ್ಮಷರಾದರು.

ಒಂದು ದಿನ ಅವರನ್ನು ನೋಡಲೆಂದು ನಾರದ, ಪರ್ವತ, ದೇವಲ, ಶತಯೂಪಾದಿ ಬ್ರಹ್ಮರ್ಷಿ ರಾಜರ್ಷಿಗಳು ಬಂದರು. ಕುಂತಿಯು ಅವರಿಗೆ ಅರ್ಘ್ಯಪಾದ್ಯಗಳನ್ನಿತ್ತು, ಕಂದಮೂಲ ಫಲಗಳನ್ನು ಸಮರ್ಪಿಸಿದಳು. ಮುನಿಗಳು ಧೃತರಾಷ್ಟ್ರನ ಮನಸ್ಸಮಾಧಾನ ಸಂತೋಷಗಳಿಗಾಗಿ ಪುಣ್ಯಕಥೆಗಳನ್ನೂ, ಧರ್ಮಸೂಕ್ಷ್ಮಗಳನ್ನೂ ವಿವರಿಸಿ ಹೇಳತೊಡಗಿದರು.

ನಾರದನು ಇಂತೆಂದನು: 'ಈ ಶತಯೂಪನ ಪಿತಾಮಹನಾದ ಸಹಸ್ರಚೈತ್ಯನು ವಿರಕ್ತನಾಗಿ ಇಲ್ಲಿ ಆಶ್ರಮವನ್ನು ನಿರ್ಮಿಸಿ, ತೀವ್ರ ತಪವನ್ನು ಮಾಡಿದನು. ಆತನು ತಪಃಪಾರವನ್ನು ಕಂಡು, ದಗ್ಧಕಿಲ್ಬಿಷನಾದನು. ಆ ಮಹಾನ್ ರಾಜರ್ಷಿಯನ್ನು ನಾನು ಇಂದ್ರಸದನದಲ್ಲಿ ಕಂಡಿರುವೆನು. ಶೈಲಾಲಯನೆಂಬ ರಾಜನು ಭಗದತ್ತನ ಪಿತಾಮಹನು. ಅವನು ತಪೋಬಲದಿಂದ ಇಂದ್ರಸದನದಲ್ಲಿ ಸುಖವಾಗಿರುವನು. ವಜ್ರಧರ ಸದೃಶನಾದ ಪೃಷಧ್ರನು, ಮಾಂಧಾತೃ ಪುತ್ರನು, ನರ್ಮದಾದೇವಿಯ ಪತಿಯಾದ ಪುರುಕುತ್ಸನು, ಶಶಲೋಮನೆಂಬ ಚಂದ್ರವಂಶಲಲಾಮನು, ಇನ್ನು ಬಲು ರಾಜರ್ಷಿಗಳು ಇಲ್ಲಿ ತಪಗೈದು, ಶ್ರೀದ್ವೈಪಾಯನ ಪ್ರಸಾದದಿಂದ ಜ್ಞಾನಿಗಳಾಗಿ, ಸ್ವರ್ಗಲೋಕವನ್ನು ಸೇರಿ ಸುಖವಾಗಿರುವರು. ಧೃತರಾಷ್ಟ್ರ! ನೀನು ಕೂಡ ದಿವ್ಯ ತಪವನ್ನು ಮಾಡುತ್ತಿರುವೆ! ಇತರ ದುಷ್ಪ್ರಾಪವಾದ ದಿವ್ಯಗತಿಯನ್ನು ಹೊಂದುವೆ! ಗಾಂಧಾರಿಯು ನಿನ್ನೊಡನೆ ಉತ್ತಮ ಗತಿಯನ್ನು

ಹೊಂದುವಳು. ಇಂದ್ರಸಭೆಯಲ್ಲಿ ದೇವಸಖನಾಗಿರುವ ಪಾಂಡುರಾಜನು ಸದಾ ನಿನ್ನನ್ನು ಸ್ಮರಿಸಿ, ನಿನ್ನ ಪುಣ್ಯಗತಿಯನ್ನು ಪ್ರಾರ್ಥಿಸುತ್ತಿರುವನು. ಜಯಕಾಶಿಗಳಾದ ಮಕ್ಕಳನ್ನೂ, ವಿಪುಲೈಶ್ವರ್ಯವನ್ನೂ ತೃಣದಂತೆ ಬಿಟ್ಟು ಬಂದು ನಿಮ್ಮೀರ್ವರನ್ನು ಸೇವಿಸುತ್ತಿರುವ ಕುಂತಿಗೆ ಪತಿಲೋಕವು ಮೀಸಲಾಗಿದೆ. ದಿವ್ಯಚಕ್ಷುಸ್ಸಿನಿಂದ ತಿಳಿದು ಇದನ್ನು ನಿಮಗೆ ಹೇಳುತ್ತಿರುವೆನು. ಸರ್ವಬಂಧವನ್ನೂ ಕಡಿದು, ಶ್ರೀಹರಿಯಲ್ಲಿ ಮನಸ್ಸನ್ನು ಇಡಿ! ವಿದುರನು ಯುಧಿಷ್ಠಿರನಲ್ಲಿ ಸೇರಿಬಿಡುವನು. ಸಂಜಯನಿಗೂ ಯೋಗ್ಯ ಸ್ವರ್ಗವಾಗುವುದು.'

ನಾರದ ವಚನದಿಂದ ಧೃತರಾಷ್ಟ್ರನು ಪ್ರೀತನಾಗಿ, ದೃಢನಿಶ್ಚಯನಾದನು. ಅಲ್ಲಿದ್ದವರೆಲ್ಲರೂ ಪ್ರಹರ್ಷಿತರಾದರು. ಶತಯೂಪನು ನಾರದನನ್ನು ನೋಡಿ, ಇಂತು ಪ್ರಶ್ನಿಸಿದನು: 'ಮಹರ್ಷೇ! ನಿನ್ನ ವಚನಗಳಿಂದ ಕುರುರಾಜನ ಶ್ರದ್ಧೆಯು ವರ್ಧಿತವಾಯಿತು. ನಾವೆಲ್ಲರೂ ಕೂಡ ಶ್ರದ್ಧಾತಿಶಯಯುಕ್ತರಾದೆವು. ಮಹಾತ್ಮನಾದ ನಿನಗೆ ತಿಳಿಯಲಾರದುದಿಲ್ಲ. ಇತರ ರಾಜರ್ಷಿಗಳಿಗಾದ ಇಂದ್ರಲೋಕ ಪ್ರಾಪ್ತಿಯನ್ನು ತಿಳಿಸಿ, ಧೃತರಾಷ್ಟ್ರನಿಗಾಗುವ ಲೋಕವನ್ನು ಹೆಸರಿಸಲಿಲ್ಲ. ಆ ವಿಷಯವನ್ನೂ ಹೇಳು!' ಆ ಮಾತನ್ನು ಕೇಳಿ, ಅವರೆಲ್ಲರ ಅಭಿಪ್ರಾಯವನ್ನು ಅರಿತು ನಾರದನಿಂತೆಂದನು:

"ಒಂದು ಸಲ ಇಂದ್ರಲೋಕಕ್ಕೆ ಹೋಗಿದ್ದೆನು. ಅಲ್ಲಿ ಇಂದ್ರಸಭೆಯಲ್ಲಿ ಪ್ರಾಸಂಗಿಕವಾಗಿ ಧೃತರಾಷ್ಟ್ರನ ತೀವ್ರ ತಪಸ್ಸಿನ ವಿಚಾರವು ಬಂತು. ಆಗ ಸ್ವಯಂ ಇಂದ್ರನು ನುಡಿದಿದ್ದನ್ನು ತಿಳಿಸುವೆನು. ಕೇಳಿ! ಧೃತರಾಷ್ಟ್ರನ ಪರಮಾಯುವಿನ್ನು ಮೂರು ವರ್ಷ ಮಾತ್ರವಿದೆ. ಆಮೇಲೆ ಆತನು ಗಾಂಧಾರೀಸಹಿತನಾಗಿ ಕುಬೇರ ಲೋಕವನ್ನು ಸೇರುವನು. ದೇವಗಂಧರ್ವನಾಗಿ ಧೃತರಾಷ್ಟ್ರನು ದಿವ್ಯ ವಿಮಾನದಿಂದ ಬೇಕಾದೆಡೆ ಸಂಚರಿಸುವನು. ಇದು ದೇವರಹಸ್ಯವು. ನಿಮ್ಮಲ್ಲಿರುವ ಪ್ರೀತಿಯಿಂದ ನಾನು ಪ್ರಕಟಿಸಿರುವೆನು. ತಪಸ್ಸಿನಿಂದ ಪಾಪಗಳನ್ನು ನಾಶಪಡಿಸಿ, ವೇದಾದಿಗಳನ್ನು ಪಠಿಸಿ, ಇಂದ್ರಿಯ ಮನೋವೃತ್ತಿಗಳನ್ನು ನಿಗ್ರಹಿಸಿ, ಶ್ರೀಹರಿಭಕ್ತರಾದ ನಿಮಗೆಲ್ಲರಿಗೂ ಪುಣ್ಯಲೋಕಗಳಾಗುವವು" ಆ ಮಾತನ್ನಾಲಿಸಿ, ಅಲ್ಲಿದ್ದ ಸರ್ವಮುನಿಗಳೂ, ಧೃತರಾಷ್ಟ್ರನೂ ಪ್ರೀತರಾಗಿ ನಾರದನನ್ನು ಸಂಪೂಜಿಸಿದರು.

## ೪. ವಿದುರ = ಧರ್ಮರಾಜ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ಹಸ್ತಿನಾವತಿಯಲ್ಲಿದ್ದ ಪಾಂಡವರಿಗೆ ಧೃತರಾಷ್ಟ್ರ, ಗಾಂಧಾರೀ, ಕುಂತಿಯರು, ವಿದುರ, ಸಂಜಯರು ವನಕ್ಕೆ ಹೋದ ಮೇಲೆ ಬಲು ದುಃಖವಾಯಿತು. ಮಾತೃ ವಿಯೋಗವನ್ನು ಅವರು ತಡೆಯಲಾರದೆ ಹೋದರು. ಕುಂತಿಯು ಹಠದಿಂದ ವನಕ್ಕೆ ಹೋದುದರಿಂದಲು, ಆಕೆಯು ಹಿಂದಿರುಗಿ ಬಾರಳೆಂದು ತಿಳಿದುದರಿಂದಲು, ಅವರ ಮತ್ತು ದ್ರೌಪದ್ಯಾದಿ ಕುರುವನಿತೆಯರ ಶೋಕವಹ್ನಿಯು ಆರದೆ ಉರಿಯುತ್ತಿತ್ತು. ಯಾವಾಗಲೂ

ಪಾಂಡವರು 'ವೃದ್ಧರಾಜನು ಸುಖವಾಗಿದ್ದವನು! ಈಗ ಅರಣ್ಯದಲ್ಲಿ ಎಂತಿರುವನೋ? ಪತಿಯಂತೆ ಇರಲು ಪಟ್ಟಬಂಧವನ್ನು ಕಟ್ಟಿಕೊಂಡು, ಪುತ್ರಶೋಕದಿಂದ ನೊಂದಿರುವ ಗಾಂಧಾರಿಯು ವನದಲ್ಲಿ ಎಷ್ಟು ಕ್ಲೇಶಪಡುವಳೋ? ಇಷ್ಟು ಮಕ್ಕಳಿದ್ದು, ರಾಜ್ಯೈಶ್ವರ್ಯಗಳಿದ್ದು- ಎಲ್ಲವನ್ನೂ ಬಿಟ್ಟು ಹೋದ ಕುಂತಿಯು ಎಂತಿರುವಳೋ? ಸುಖಾರ್ಹರಾಗಿರುವ ಹಿರಿಯರಿಗೆ ಎಂತಹ ಕಷ್ಟವಾಗುತ್ತಿದೆಯೋ? ಅಣ್ಣನ ಸೇವೆಗೈವ ವಿದುರನೆಂತು ಇರುವನೋ? ರಾಜನನ್ನೆಡೆ ಬಿಡದಿರುವ ಸಂಜಯನೆಂತು ಜೀವಿಸುತ್ತಿರುವನೋ?' ಎಂದು ಚಿಂತಿಸುತ್ತಿದ್ದರು. ಶೋಕಭರಿತರಾದ ಪಾಂಡವರಿಗೆ ಪಾನಾಹಾರಾದಿಗಳು ರುಚಿಸುತ್ತಿರಲಿಲ್ಲ. ಘೋರವಾದ ಜ್ಞಾತಿವಧೆಯು ಬಾಲನಾದ ಅಭಿಮನ್ಯುವಿನ ವಿನಾಶವು, ಅಣ್ಣನಾದ ಕರ್ಣನ ಸಂಹಾರವು, ದ್ರೌಪದೇಯರ ಹತ್ಯೆಯು, ನೆನಪಿಗೆ ಬಂದಂತೆ, ಅವರು ರಾಜ್ಯಕಾರ್ಯಗಳಿಗೆ ವಿಮುಖರಾದರು. ವೇದಾಧ್ಯಯನವನ್ನು ಸಹ ಅವರು ನಿರ್ವೇದಸಹಿತರಾಗೇ ಮಾಡಿದರು. ಹತಪುತ್ರರಾದ ದ್ರೌಪದೀ ಸುಭದ್ರೆಯರನ್ನು ಯಾವ ರಾಜ್ಯಭೋಗಗಳು, ವೈಭವಯುತ ಪ್ರಾಸಾದಗಳು, ದಾಸ ದಾಸೀ ಜನವು ಸಂತೋಷಪಡಿಸಲಾರದಾದವು. ಇದೆಲ್ಲ ದುಃಖಗಳ ಅಂಧಕಾರದಲ್ಲಿ ಪಾಂಡವರಿಗೂ, ರಾಜಮಹಿಷಿಯರಿಗೂ ದೀಪದಂತೆ ಉತ್ತರೆಯ ಮಗನಾದ ಪರೀಕ್ಷಿತನು ಬೆಳೆಯುತ್ತಿದ್ದನು. ಆ ಕುಮಾರನನ್ನು ನೋಡಿ ದ್ರೌಪದ್ಯಾದಿಗಳು ತಮ್ಮ ದುಃಖವನ್ನು ಮರೆಯುತ್ತಿದ್ದರು.

ಕುಂತೀದೇವಿಯನ್ನು ನೆನೆದಂತೆ, ಪಾಂಡವರ ಶೋಕವಹ್ನಿಯು ಉದ್ದೀಪಿತವಾಯಿತು. 'ವೃದ್ಧಳು ಪತಿರಹಿತಳು ಆದ ಕುಂತಿಯು ಎಂತು ವೃದ್ಧ ದಂಪತಿಗಳನ್ನು ಸೇವಿಸುವಳೋ? ಹತಪುತ್ರರು, ನಿರಾಶ್ರಯರು ಆದ ವೃದ್ಧದಂಪತಿಗಳು ಶ್ವಾಪದ ಭಯಂಕರ ವನದಲ್ಲಿ ಎಂತು ವಾಸ ಮಾಡುತ್ತಿರುವರೋ? ಅಂಧಪತಿಯನ್ನು ವರಿಸಿ, ತಾನೂ ಅಂಧಳಂತಾದ ಮಹಾ ಪತಿವ್ರತೆ ಗಾಂಧಾರಿಯು ಪುತ್ರಶೋಕದಿಂದ ಎಷ್ಟು ತಪಿಸುವಳೋ? ವಿದುರನೆಂತಿರುವನೋ? ಸಂಜಯನ ಗತಿ ಎಂತೋ?' ಇಂತು ಚಿಂತಿಸುವ ಪಾಂಡವರಿಗೆ ಅವರನ್ನೆಲ್ಲ ಒಂದು ಸಲ ನೋಡಬೇಕೆನಿಸಿತು.

ಒಂದು ದಿನ ಸಹದೇವನು ಧರ್ಮರಾಜನನ್ನು ಸಮೀಪಿಸಿ ಇಂತೆಂದನು: 'ಅಣ್ಣ! ಅಮ್ಮನನ್ನು ನೋಡಬೇಕೆನಿಸುತ್ತಿದೆ. ನಿಮಗೂ ಹಾಗೇ ಅನಿಸುತ್ತಿರಬಹುದು. ಜಟಾಧಾರಿಣಿಯು, ವಲ್ಕಲವಸನೆಯು ಆದ ಕುಂತಿದೇವಿಯು ತಪಗೈದು ಬಲು ಕೃಶಳಾಗಿರಬಹುದು. ಪ್ರಾಸಾದಾಗ್ರಗಳಲ್ಲಿ ವಸಿಸಿದ್ದ ನಮ್ಮ ತಾಯಿಯು ಇಂದು ತಪೋವನದಲ್ಲಿ ತಪಿಸುತ್ತಿರುವಳು. ಮನುಜರ ಸುಖಲೇಶವು ಕೂಡ ಅನಿತ್ಯವು, ದುಃಖಾಂತವು ಆಗಿದೆ.' ಆ ಮಾತಿಗೆ ಬಲವಿತ್ತು ದ್ರೌಪದಿಯು 'ಅಹುದು ರಾಜನ್! ನಮ್ಮ ಅತ್ತೆಯು ವನದಲ್ಲಿ ಎಂತು ಜೀವಿಸಿರುವಳೋ? ಆಕೆಯನ್ನು ನೋಡಬೇಕೆನಿಸಿದೆ! ಧರ್ಮಪ್ರಭುವಾದ ನಿನ್ನಿಂದ ನಮ್ಮ ಶ್ರೇಯಸ್ಸು ಸಾಧಿತವಾಗಬೇಕಲ್ಲವೇ? ಕುಂತೀ ಗಾಂಧಾರಿಯರನ್ನು ನೋಡಬೇಕೆಂಬ ನಮ್ಮ ಪರಿವಾರವು ತುದಿಗಾಲಲ್ಲಿ ನಿಂತು ಬಿಟ್ಟಿದೆ' ಎಂದಳು.

ಧರ್ಮರಾಜನು ಸೇನಾಧ್ಯಕ್ಷರನ್ನು ಕರೆಸಿ ಚತುರಂಗ ಬಲವು ಧೃತರಾಷ್ಟ್ರ ದರ್ಶನಕ್ಕೆಂದು ಹೊರಡಿಸುವಂತೆ ಆಜ್ಞಾಪಿಸಿದನು. ಅಂತಃಪುರಾಧ್ಯಕ್ಷರು ಯಾನ, ವಿಮಾನ, ಪಲ್ಯಂಕಿಕೆಗಳನ್ನು ಸಿದ್ಧಪಡಿಸಿದರು. ಬಂಡಿಗಳಿಗೆ ಕುದುರೆ, ಒಂಟೆ, ಎತ್ತು, ಅಶ್ವತರಗಳು ಕಟ್ಟಲ್ಪಟ್ಟವು. ಕೋಶಪಾಲರು ಧನವಸ್ತ್ರ ರತ್ನಗಳನ್ನು ಹೊರಿಸಿ ತಂದರು. ಅಂತಃಪುರ ವನಿತೆಯರು ಶಿಬಿಕಾರೂಢರಾಗಿ ಹೊರಟರು. ಅವರ ಮುಂದೆ ಚತುರಂಗ ಬಲವೂ, ಹಿಂದೆ ಅಂಗರಕ್ಷಕ ದಳವೂ, ಆಮೇಲೆ ಸೂದಪೌರೋಗವರು ಹೊರಟರು. ವಿವಿಧ ಭಕ್ಷ್ಯಭೋಜ್ಯ ಪಾನೀಯಗಳನ್ನು ತುಂಬಿಕೊಂಡಿದ್ದ ಶಕಟಸಹಸ್ರವು ಹಿಂಬಾಲಿಸಿತು.

ಪ್ರಜರು 'ಯೋಗ! ಮಹಾಯೋಗ!'ವೆಂದು ಹರ್ಷಧ್ವಾನಗಳನ್ನು ಮಾಡಿ, ತಂತಮ್ಮವರಿಂದ ಕೂಡಿ, ಶಕಟ, ತುರಗಾದಿ ವಾಹನಾರೂಢರಾಗಿ ವನಕ್ಕೆ ತೆರಳಿದರು. ಅಲ್ಲಲ್ಲಿ ಬಿಡದಿಗಾಗಿ, ಪಟಕುಟಿಗಳು ನಿರ್ಮಿತವಾಗಿ ಬಂದವರನ್ನು ಸಕಲೋಪಚಾರಗಳಿಂದ ಸಂತೈಸಿದವು. ಎಲ್ಲರ ಮನದಲ್ಲಿ ಮೂಡಿದ ಕೋರಿಕೆ ಎಂದರೆ, ಧೃತರಾಷ್ಟ್ರಾದಿಗಳನ್ನು ನೋಡಬೇಕು ಎಂಬುದೇ ಆಗಿತ್ತು.

ಸೇನಾ ಮಹಾನಾಯಕನಾದ ಕೃಪಾಚಾರ್ಯನು ಸೇನಾ ನಿವಹದಿಂದ ಮುಂದೆ ಸಾಗುತ್ತಿದ್ದನು. ಧರ್ಮರಾಜನು ದ್ವಿಜಪರಿವೃತನಾಗಿ, ಸೂತಮಾಗಧ ವಂದಿಗಳ ಸ್ತುತಿಪಾಠಗಳನ್ನು ಕೇಳುತ್ತಾ, ಶ್ವೇತಚ್ಛತ್ರದ ನೆರಳಲ್ಲಿ ನಡೆದು ಬರುವಾಗ ದ್ವಿಜರಾಜನಂತೆ ಕಂಗೊಳಿಸಿದನು. ಆತನ ರಥವನ್ನು ಅನುಸರಿಸಿ ಭೀಮಾದಿಗಳ ರಥಶತವು ನಡೆದು ಬರುವ ಕಾಂಚನಗಿರಿ ಶತದಂತೆ ಶೋಭಿಸಿತು. ಗಿರಿನಿಭಕರಿನಿಕರ ಪರಿವೃತನಾಗಿ ಪವನಾತ್ಮಜನು ಪಯಣಿಸಿದನು. ರಾಜನ ಅಂಗರಕ್ಷಕರಾಗಿ ಮಾದ್ರೀಪುತ್ರರು ಹಯಾರೂಢರಾಗಿ, ಇಕ್ಕೆಲಗಳಲ್ಲಿ ನಡೆದರು. ಶ್ವೇತವಾಹನನು ಕನಕ ರಥದಿ ಕೂತು ಬರುತ್ತಿದ್ದನು. ದ್ರೌಪದೀ ಸುಭದ್ರಾ ಚಿತ್ರಾಂಗದಾದಿ ರಾಜರಮಣಿಯರು ಪಲ್ಯಂಕಿಕಾಗತರಾಗಿ ತಮ್ಮನ್ನು ನೋಡಬರುವ ಪುರಜನರಿಗೆ ಬಂಗಾರದ ದೀನಾರಗಳನ್ನು ಬೀರಿ ಹಂಚಿದರು.

ವೇಣುವೀಣಾದಿ ಮೃದು ನಿನಾದವನ್ನು ಭೇರಿಪಟಹ ಭಾಂಕಾರವು ಮುಣುಗಿಸಿ, ಮುಗಿಲಿಗೇರಿತು. ಇಂತು ಪಯಣಿಸಿ ಧರ್ಮರಾಜನು ಅಲ್ಲಲ್ಲಿ ನದೀತೀರದಲ್ಲಿಯೂ, ಸರಸ್ತಟದಲ್ಲಿಯೂ ನಿರ್ಮಿತವಾಗಿದ್ದ ಬಿಡದಿಗಳಲ್ಲಿ ಕೆಲಹೊತ್ತು ತಂಗಿ, ಮತ್ತೆ ಮುಂದೆ ಸಾಗುತ್ತಿದ್ದನು. ಯುಯುತ್ಸು ಧೌಮ್ಯರು ನಗರ ರಕ್ಷಾದೀಕ್ಷಿತರಾಗಿ ಹಸ್ತಿನಾವತಿಯಲ್ಲಿ ನಿಂತರು.

ಯುಧಿಷ್ಠಿರನು ಮುಂದೆ ಸಾಗಿ, ಕುರುಕ್ಷೇತ್ರವನ್ನೂ, ಶತಯೂಪಾಶ್ರಮವಿದ್ದ ಯಮುನಾತಟ ವನವನ್ನು ಸೇರಿದನು. ದೂರದಲ್ಲಿದ್ದ ಧೃತರಾಷ್ಟ್ರನ ಆಶ್ರಮವು ಅವರಿಗೆ ಕಾಣ ಬಂದಾಗ, ಎಲ್ಲರೂ ವಾಹನಗಳಿಂದಿಳಿದು, ನಡೆ ತಂದರು. ಕದಲೀವನ ಶೋಭಿತವು, ಮನುಜ ಮಾತ್ರ ದುರ್ಗಮವು, ಮೃಗಗಣಾ ಕೀರ್ಣವು ಆದ ತಪೋವನವು ಹಸ್ತಿನಗರ ನರನಾರಿಯರಿಗೆ ಭಯಾಶ್ಚರ್ಯ ಸಂಭ್ರಮಗಳ ಸಂಪುಟವಾಗಿ ಕಂಡಿತು.

ಪಾಂಡವರನ್ನು ನೋಡಲು ಬಂದ ತಾಪಸೀತಾಪಸರು ಹುಬ್ಬೆತ್ತಿ, ಎವೆಯಿಕ್ಕದೆ

ನೋಡುತ್ತಾ ನಿಂತರು. ಅಭ್ಯಸ್ತತಾಪಸ ಜನವಾದರೂ ನಗರ ನರರನ್ನು ಕಂಡು ಭೀತಿಯಿಂದ ಹರಿಣ ಸಮೂಹವು ತಾಪಸ ಜನರ ಬೆನ್ನು ನಿಂತವು. ಪಿಕಶುಕ ಶಾರಿಕಾದಿ ವಿಹಂಗಗಳ ಕಲರವವು ಸ್ವಾಗತವಿತ್ತಂತಾಯಿತು. 'ಎಲ್ಲಿ? ಮಹಾರಾಜ ಧೃತರಾಷ್ಟ್ರನೆಲ್ಲಿ?' ಎಂದು ಕೇಳಿದ ಧರ್ಮಜನಿಗೆ ಮುನಿಗಳು 'ಯಮುನೆಗೆ ಸಪ್ತಸ್ರೋತೆಯಲ್ಲಿ ಮೀಯಲು ಪೋಗಿರುವ' ನೆಂದು ತಿಳಿಸಿದರು.

ದೊಡ್ಡಪ್ಪನನ್ನು ಕಾಣುವ ತವಕದಿಂದ ಪಾಂಡವರು ತೀರ್ಥಾವತರಣದ ಕಡೆಗೆ ಧಾವಿಸಿದರು. ದೂರದಲ್ಲಿ ನಡೆದು ಬರುವ ಹಿರಿಯರನ್ನೂ, ಅವರು ಪೊತ್ತು ತರುವ ಉದಕುಂಭ, ಕುಸುಮ, ಫಲಗಳನ್ನೂ, ಮಾರ್ಗವನ್ನು ತೋರಿಸುತ್ತಾ, ಕರೆತರುವ ಕುಂತೀದೇವಿಯನ್ನೂ ಕಂಡು, ಪಾಂಡವ ರಮಣಿಯರು ಕಡು ಕರುಣೆಯಿಂದ ಓಡಿ ಬಂದು, ಜಲಪಾತ್ರೆಗಳನ್ನು ಇಳಿಸಿಕೊಂಡರು. ಸಹದೇವನು 'ಅಂಬ! ಅಂಬ!' ಎನ್ನುತ್ತಾ ಕುಂತಿಯ ಕಾಲಿಗೆರಗಿದಾಗ, ಆಕೆಯ ಕಂಬನಿಗಳವನಿಗೆ ಮುತ್ತಿನ ಅಕ್ಷತೆಗಳಾದವು. ಕೈಗಳಿಂದೆತ್ತಿ, ಅಪ್ಪಿ, ರೋದಿಸುತ್ತಾ ಕುಂತಿಯು ಗದ್ಗದಿತಕಂಠಳಾಗಿ, ಸುಮ್ಮನಿದ್ದಳು. ಇತರ ಸುತರು ಬಂದು ವಂದಿಸಿ, ಸೊಸೆಯರಾದಿ ಸುದತಿಯರು ಕಾಲಿಗೆರಗಿ ಕಣ್ಣೀರಿಡುತ್ತಾ ನಿಂತಾಗ ಕುಂತಿಯು ದುಃಖಾವೇಗವನ್ನು ತಡೆಯಲಾಗದೆ ರೋದಿಸಿದಳು.

ಬಂದವರನ್ನು ಗಾಂಧಾರಿಗೆ ತಿಳಿಯ ಹೇಳಿ, ಕುಂತಿಯು ಸರಿದು ನಿಂತಳು. ಆಗ ಧರ್ಮಜಾದಿಗಳು ಧೃತರಾಷ್ಟ್ರನಿಗೂ ಗಾಂಧಾರಿಗೂ ವಂದಿಸಿದರು. ಧೃತರಾಷ್ಟ್ರನು ಅವರನ್ನು ಸ್ವರಭೇದದಿಂದ ಗುರ್ತಿಸಿ, ಕರೆದಪ್ಪಿ, ಮೈದಡವಿ, ಆಶ್ವಾಸಿಸಿದನು. ಧರ್ಮರಾಜನು ನಾಮಗೋತ್ರಗಳಿಂದ ಬಂದ ಜನ ಮುಖ್ಯರನ್ನು ಧೃತರಾಷ್ಟ್ರನಿಗೆ ನಿವೇದಿಸಿದನು. ಆಗ ಧೃತರಾಷ್ಟ್ರನು ತಾನು ಹಿಂದೆ ಹಸ್ತಿನಾವತಿಯಲ್ಲಿದ್ದಂತೆ ಆಯಿತೆಂದು ತಿಳಿದು, ಹರ್ಷ ಬಾಷ್ಪಗಳನ್ನು ಸುರಿಸಿದನು. ಎಲ್ಲರೂ ಆಶ್ರಮಕ್ಕೆ ಬಂದು, ಅಲ್ಲಿ ತರುಮೂಲದ ಶಾದ್ವಲ ತಲದಲ್ಲಿ ಕೂತರು.

ಪುರಜನರಿಂದಲು, ತಾಪಸರಿಂದಲು ತುಂಬಿದ ವನಪ್ರದೇಶವು ತಾರಾಗಣ ಪೂರಿತವಾದ ನಭೋಮಂಡಲದಂತಿತ್ತು. ತಾಪಸಜನರ ಮನೋಭಿಲಾಷೆಯನ್ನು ತಿಳಿದು ಇಂಗಿತಜ್ಞನಾದ ಸಂಜಯನು, ಅವರಿಗೆ ಪಾಂಡವಾದಿಗಳ ಪರಿಚಯವನ್ನು ಮಾಡಿ ಕೊಟ್ಟನು.

'ತಾಪಸವರರೇ! ಬಂದಿರುವವರು ಪಾಂಡವರು. ಆ ಮಹಾನುಭಾವರನ್ನು ತಿಳಿಸಿ ಕೊಡುವೆನು. ಕೇಳಿ! ಜಾಂಬೂನದ ಗೌರಾಂಗನು, ಸಿಂಹ ಮಧ್ಯನು, ಪ್ರಚಂಡ ನಾಸಿಕನು, ದೀರ್ಘಕಾಯನು, ತಾಮ್ರ ವಿಶಾಲನಯನನು ಆದ ಧರ್ಮರಾಜನೀತನು! ಮತ್ತವಾರಣ ರಾಜಗಮನನು, ತಪ್ತಚಾಮೀಕರ ಶುಭ ಶರೀರನು, ವಿಶಾಲಭುಜನು, ದೀರ್ಘಹಸ್ತ ಪ್ರಶಸ್ತನು, ಆದ ವೃಕೋದರನಿವನು! ಮಹಾಧನುರ್ಧಾರಿಯು, ವಾರಣ ರಾಜಸದೃಶನು, ಉನ್ನತಾಂಶನು, ಪದ್ಮ ಸುಂದರ ನೇತ್ರನು, ಧವಳ ಶುಭಗಾತ್ರನು ಆದ ಅರ್ಜುನನಿಲ್ಲಿ ಭೀಮನ ಪಕ್ಕದಲ್ಲಿ ನಿಂತಿರುವನು. ಕುಂತೀದೇವಿಯ ಸಮೀಪದಲ್ಲಿ ಕೂತಿರುವ ನಕುಲ

ಸಹದೇವರನ್ನು ತಿಳಿಯಿರಿ! ರೂಪ ಬಲ ಶೀಲಗಳಿಂದ ಅವರನ್ನು ಪೋಲ್ವ ನರರಿನ್ನಿಲ್ಲ. ಇಲ್ಲಿ ನಿಂತಿರುವ ಪದ್ಮ ದಲಾಯತಾಕ್ಷಿ, ಪ್ರೌಢಮಯಃ ಪರಿಪಾಕ ಮನೋರಮೆ, ನೀಲೋತ್ಪಲ ನಿಭ ದಿವ್ಯಗಾತ್ರಿ, ಎರಡನೇ ಶ್ರೀದೇವಿ ಈಕೆಯೇ ದ್ರೌಪದೀದೇವಿ. ಆಕೆಯ ಪಕ್ಕದಲ್ಲಿರುವ ಕನಕ ಸುಂದರ ದೇಹಳೇ ಸುಭದ್ರೆ. ಚಕ್ರಾಯುಧನ ತಂಗಿಯಾದ ಈ ಮಂಗಳಾಂಗಿಯು ಅರ್ಜುನನ ಪ್ರಿಯದಯಿತೆ. ಜಾಂಬೂನದ ಶುದ್ಧ ಗೌರಾಂಗಿಯಾದ ಈ ನಾಗತನ್ವಂಗಿಯು ಉಲೂಪಿಯು! ಸುವರ್ಣಭೂಷಿತೆಯು, ಮಧೂಕ ಪುಷ್ಪ ಶೋಭೆಯು ಆದ ಈ ತರುಣಿಯೇ ಚಿತ್ರಾಂಗದೆ! ನೀಲೋತ್ಪಲದಳ ಶ್ಯಾಮಳಾದ ಈ ಕಾಳಿದೇವಿಯು ಭೀಮಸೇನ ರಮಣಿ ಎಂದು ತಿಳಿಯಿರಿ! ಮಗಧಾಧಿಪ ಸುತೆಯಾದ ಚಂಪಕಧಾಮ ಗೌರಿಯನ್ನು ಸಹದೇವನ ಮಣಿ ಎಂದು ತಿಳಿಯಿರಿ! ಇಂದೀವರ ಶ್ಯಾಮಳಾದ ಮಾದ್ರವತೀ ಸುತನ ಮಡದಿಯನ್ನಿಲ್ಲಿ ನೋಡಿ! ಈಕೆ ಉತ್ತರೆಯು; ವಿರಾಟ ಸುತೆಯು; ಅಭಿಮನ್ಯು ಸತಿಯು ಆದ ಉತ್ತರಾದೇವಿಯ ಕೈಯಲ್ಲಿರುವವನೇ ಕುರು ವಂಶ ಸುಕುಮಾರಾಂಕುರನಾದ ಪರೀಕ್ಷಿತನು. ಮಿಕ್ಕ ಇಲ್ಲಿರುವ ಸುಂದರಿಯರು ರಣ ನಿಹತರಾದ ಕುರುವೀರರ ಅರ್ಧಾಂಗಿಯರು. ಪಾಪ ! ಇವರು ಹತಪುತ್ರನಾಥರಾಗಿ, ತಪೋನಿರತಿಯಿಂದಿರುವರು.

ಅದನ್ನು ಕೇಳಿ ಆಶ್ರಮವಾಸಿಗಳು ವಿವರಗಳನ್ನು ತಿಳಿದು, ಪ್ರಸನ್ನಚಿತ್ತರಾದರು. ಧೃತರಾಷ್ಟ್ರನು ಎಲ್ಲರ ಕುಶಲವನ್ನು ವಿಚಾರಿಸಿ, 'ಧರ್ಮರಾಜ! ಚೆನ್ನಾಗಿರುವೆಯಾ? ನಿನ್ನವರಿಗೆಲ್ಲ ಕುಶಲವೇ ? ರಾಜರ್ಷಿಗಳ ಚರಿತೆಯನ್ನರಿತು, ಅವರಂತೆ ನಡೆಯುತ್ತಿರುವೆ ಅಲ್ಲವೇ ? ಸಚಿವಾಮಾತ್ಯರು ಅನುಕೂಲರೇ ? ಭೃತ್ಯರು ಸಂಪ್ರೀತಿವಿಧೇಯರೇ ? ಗುರುಜನರನ್ನು ಪೂಜಿಸುತ್ತಿರುವೆಯಾ ? ಪ್ರಜರೆಲ್ಲರು ಧರ್ಮಾನುವೃತ್ತರಾಗಿರುವರೇ ? ಶತ್ರುಮಿತ್ರೋದಾಸೀಜನರನ್ನರಿತು, ತಕ್ಕಂತೆ ವರ್ತಿಸುವೆಯಾ? ವಿಪ್ರರನ್ನು ದಾನಮಾನಾದಿಗಳಿಂದ ಸತ್ಕರಿಸುವೆ ಅಲ್ಲವೇ? ಪಿತೃದೇವ ಕಾರ್ಯಗಳಲ್ಲಿ ಅಪ್ರಮತ್ತನಾಗುವೆಯಾ? ಬಂಧುಗಳನ್ನು ಸತ್ಕಾರದಿಂದ ಸಂಭಾವಿಸುವೆಯಾ? ರಾಜರ್ಷಿ ವಂಶವನ್ನಲಂಕರಿಸಿರುವೆ ! ವತ್ಸ! ಸ್ತ್ರೀಬಾಲ, ವೃದ್ಧರನ್ನು ವೈಶ್ಯಶೂದ್ರಾದಿ ಪ್ರಜಾ ವರ್ಗವನ್ನು! ಪರ್ಜನ್ಯನಂತೆ ಅಭೀಷ್ಟವಿತ್ತು ಸಂತಸಪಡಿಸುವೆ ತಾನೆ! ನಿನ್ನ ಯಶಶ್ಚಂದ್ರಿಕೆಯು ಸತ್ಕುಮುದ ವೃಂದ ನಿತ್ಯಾನಂದ ಸಂಧಾಯಕವಾಗಿದೆ ಅಲ್ಲವೇ ?' ಎಂದು ಕೇಳಿದನು.

ಧರ್ಮರಾಜನು, 'ತಂದೇ ! ಎಲ್ಲವೂ ವಿಹಿತವಾಗಿದೆ. ನಿನ್ನ ಹಿತ ಶಾಸನವನ್ನು ಮೀರದೆ ನಡೆಸುತ್ತಿರುವೆನು. ಇಲ್ಲಿ ನಿನ್ನ ತಪಸ್ಸು ನಿರ್ವಿಘ್ನವಾಗಿ ಸಾಗುವುದೆ? ನಮ್ಮ ತಾಯಿ ಗಾಂಧಾರಿಯು ಪಾಪ ! ವನವಾಸದಿಂದ ಎಷ್ಟು ಕ್ಲೇಶಪಡುತ್ತಿರುವಳೋ ? ಕುಂತೀದೇವಿಯ ಸೇವೆಯಿಂದ ನಮ್ಮ ದ್ರೋಹವಳಿಸಿ, ನಿಮ್ಮ ತಪಸ್ಸು ಬೆಳೆದು, ಪರಲೋಕ ಸಾಧನವಾಗುತ್ತಿದೆ. ಆಕೆಯ ಜನ್ಮವೇ ಧನ್ಯವಾಯಿತು. ಹತಪುತ್ರರಾದ ನಿಮ್ಮ ಮನೋವನದಲ್ಲಿ ಕಾಳ್ಗಿಚ್ಚಿನಂತೆ ಅಡಗಿರುವ ಶೋಕವಹ್ನಿಯು ಆರುವ ಬಗೆಯನ್ನರಸಿ ಕಾಣದೆ ನಾನೂ ದುಃಖಿತನಾಗುತ್ತಿರುವೆನು. ರಾಜನ್! ನಮ್ಮ ಅಪರಾಧಗಳನ್ನು ಕ್ಷಮಿಸು!

ಸಂಜಯನು ಕುಶಲಿಯೇ ತಾನೇ? ಅಲ್ಲ ವಿದುರನೆಲ್ಲಿ? ಆ ಮಹಾನುಭಾವನಿಂದ ನಾವು ಉಳಿದು, ಬೆಳೆದು, ಸಫಲಜೀವನರಾಗಿರುವೆವು. ಅವನನ್ನು ನೋಡಬೇಕೆನಿಸಿದೆ' ಎಂದನು.

ಧೃತರಾಷ್ಟ್ರನು, 'ಧರ್ಮರಾಜ! ವಿದುರನು ಬಲು ಕಠಿಣ ತಪದಲ್ಲಿ ನಿರತನಾಗಿರುವನು. ವಾಯುಮಾತ್ರಾಹಾರನು, ಕೃಶಶರೀರನು ಆದ ವಿದುರನನ್ನು ಆಗಾಗ ವನದಲ್ಲಿ ಕಂಡ ಋಷಿಜನರಿಂದ ಮಾತ್ರ ಅವನ ವಾರ್ತೆಯನ್ನು ಕೇಳುತ್ತಿರುವೆನು' ಎಂದನು. ಆಗ ಅಲ್ಲಿಗೆ ವಿದುರನ ಸಮಾಗಮನವಾಯಿತು. ಆತನು ಅವಧೂತ ವ್ರತದಿಂದ ಸಂಚರಿಸುತ್ತಾ, ಯಾದೃಚ್ಛಿಕವಾಗಿ ಅಲ್ಲಿ ಸ್ವಲ್ಪ ದೂರದಲ್ಲಿ ಕಾಣಿಸಿದನು. ದಿಗಂಬರನು, ಜಟಾಧರನು, ವೀಟಾ (ಕುಂದುಕ) ಮುಖನು, ವರ್ಜಿತ ಸುಖನು; ಧೂಳಿ ಧೂಸರಿತಾಂಗನು, ನಿಸ್ಸಂಗನು, ಪರಮಪವಿತ್ರನು, ಪಾಪಲತಾಲವಿತ್ರನು ಆದ ವಿದುರನು ಅಲ್ಲಿ ನೆರೆದ ಜನಸ್ತೋಮವನ್ನು ನೋಡಿ, ಓಡತೊಡಗಿದನು.

ಧರ್ಮರಾಜನು 'ವಿದುರಾ! ವಿದುರಾ! ಚಿಕ್ಕಾ!' ಎಂದು ಕೂಗುತ್ತಾ, ಅವನನ್ನು ಹಿಂಬಾಲಿಸಿ, ವನಮಧ್ಯವನ್ನು ಏಕಾಕಿಯಾಗಿ ಪ್ರವೇಶಿಸಿದನು. ಅಸ್ಪಷ್ಟಾಕಾರ ವಿಶಿಷ್ಟನಾಗಿದ್ದ ವಿದುರನೊಂದು ಗಿಡವನ್ನವಲಂಬಿಸಿ ನಿಂತನು. ಧರ್ಮರಾಜನು 'ನಾನು! ಧರ್ಮರಾಜನು!' ಎಂದು ತಿಳಿಸಿ ಸಮೀಪಿಸಿದನು.

ಜನಮೇಜಯ! ಆಗ ನಡೆದ ಆಶ್ಚರ್ಯವನ್ನು ಕೇಳು! ವಿದುರನು ಎವೆಯಿಕ್ಕದೆ ನೋಡುತ್ತಾ, ಸ್ವಲ್ಪ ಕಾಲ ನಿಂತು, ಯೋಗಬಲದಿಂದ ಧರ್ಮರಾಜನ ಶರೀರವನ್ನು ಪೊಕ್ಕು, ಅಲ್ಲಿರುವ ಯಮಾಂಶದಿಂದ.....ತಾನೂ ಯಮಾಂಶನಾದುದರಿಂದ ಐಕ್ಯವನ್ನು ಪೊಂದಿದನು. ದೃಷ್ಟಿಯಿಂದ ದೃಷ್ಟಿಯನ್ನೂ, ಪ್ರಾಣಗಳಿಂದ ಪ್ರಾಣಗಳನ್ನೂ ಇಂದ್ರಿಯಗಳಿಂದ ಇಂದ್ರಿಯಗಳನ್ನೂ ಪ್ರವೇಶಿಸಿದ ವಿದುರನ ಶರೀರವು ನಿಶ್ಚೇತನವಾಗಿ ಹಾಗೇ ನಿಂತಿತು. ಧರ್ಮಜನ ತೇಜಃಪ್ರಭಾವಗಳು ಇಮ್ಮಡಿಯಾದವು. ಹಿಂದೆ ಶ್ರೀವ್ಯಾಸರು ತಿಳಿಸಿದಂತೆ ವಿದುರನ ಯೋಗಪ್ರಭಾವ, ವಿದ್ಯಾತಿಶಯ, ವೈರಾಗ್ಯ ಭಕ್ತಿಗಳನ್ನು ನೆನೆದು– ಧರ್ಮರಾಜನು ವಿಸ್ಮಿತನಾದನು.

ವಿದುರ ಶರೀರವನ್ನು ಸಂಸ್ಕರಿಸಲು ತೊಡಗಿದ ಧರ್ಮರಾಜನನ್ನು ವಾರಿಸಿ! ಆಕಾಶವಾಣಿಯು ಇಂತೆಂದಿತು: 'ಭೋರಾಜನ್! ವಿದುರನೆಂಬ ಪೆಸರಿದ್ದ ಈ ಶರೀರವು ಯೋಗಬಲದಿಂದ ತ್ಯಕ್ತವಾಗಿದೆ. ಇದಕ್ಕೆ ಸಂಸ್ಕಾರವನ್ನು ಮಾಡಲೆಣಿಸಬೇಡ! ಅದು ತನ್ನಷ್ಟಕ್ಕೆ ತಾನೇ ಭೂತಲಯವನ್ನು ಹೊಂದುವುದು. ಆ ಮಹಾನುಭಾವನಿಗೆ ದಿವ್ಯಲೋಕಗಳಿವೆ! ಚಿಂತಿಸಬೇಡ, ಯತಿಯಂತೆ ವರ್ತಿಸಿದ ವಿದುರನಿಗಾಗಿ!'

ಆಗ ಧರ್ಮರಾಜನು ಆಶ್ಚರ್ಯಚಕಿತನಾಗಿ, ಹಿಂದಿರುಗಿ ಆಶ್ರಮದವರೆಗೆ ನಡೆದುದನ್ನು ತಿಳಿಸಿದನು. ನೀರಫಲಗಳನ್ನಿತ್ತು ಧೃತರಾಷ್ಟ್ರನು ಬಂದವರಿಗೆ ಸತ್ಕಾರ ನೀಡಿ, ವಿದುರನ ಗುಣಗಣವನ್ನು ನೆನೆಯುತ್ತಾ, ವೃಕ್ಷಮೂಲದಲ್ಲಿಯೇ ಆ ರಾತ್ರಿಯನ್ನು ಪಾಂಡವರಿಂದ ಕೂಡಿ ಕಳೆದನು.

## ೫. ಶ್ರೀವ್ಯಾಸದೇವ ಪ್ರಭಾವ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ರಾಜನ್! ಶಿವಂಕರವು ನಕ್ಷತ್ರಸಂಪನ್ನವು ಆದ ಆ ರಾತ್ರಿಯು ಕಳೆಯಿತು. ಮಾತೆಯನ್ನು ಸುತ್ತುಗಟ್ಟಿ ಪಾಂಡವರು - ತಂದ ಮಹಾರ್ಘ ಶಯನಗಳನ್ನೊಲ್ಲದೆ ನೆಲದಿ ಮಲಗಿದರು. ಧೃತರಾಷ್ಟ್ರನು ಎದ್ದು ಪೂರ್ವಾಹ್ಣಿಕಗಳನ್ನು ನಿರ್ವಹಿಸಿ, ಇತ್ತ ಆಹಾರವನ್ನು ಅವರೂ ಕೃತಾಹ್ಣಿಕರಾಗಿ ಸ್ವೀಕರಿಸಿದರು. ವನ್ಯಾಹಾರವೂ ಅವರಿಗೆ ಅಮೃತಸಮವಾಯಿತು.

ಧರ್ಮರಾಜನು ಆಶ್ರಮ ಮಂಡಲವನ್ನು ನೋಡಬಯಸಿ, ಸಪರಿವಾರನಾಗಿ ತೆರಳಿದನು. ಮುನಿಗಳು ಸ್ನಾತಪೂತರಾಗಿ, ಫಲಮೂಲಗಳಿಂದ ಆತನನ್ನು ಸತ್ಕರಿಸಿದರು. ಅವರ ಅಗ್ನಿಕುಂಡಗಳಿಂದ ಹೊರಸೂಸುವ ಹವಿಃ ಪುಣ್ಯಗಂಧವು, ಅವರಿತ್ತ ಫಲನಿಕರವು, ಅವರ ಹರಿಣೇತರುಣಿಯರ ಮನೋಹರ ದೃಶ್ಯವು, ತರುಗಳಿಂದ ಕೂಗುವ ಕೋಕಿಲಾದಿ ವಿಹಂಗರುತವು, ಅವರ ಮೃದುಮಧುರಾಪಗಳು, ಇಂಪಾಗಿ ಕೇಳಬರುವ ವೇದಘೋಷ, ದ್ವಿಜವನಿತೆಯರು ಜಲಕಲಶಗಳನ್ನು ತರುವ ಸೊಬಗು, ಅಲ್ಲಲ್ಲಿ ಓರಣವಾಗಿ ಇಟ್ಟಿದ್ದ, ಕಲಶ, ಅಜಿನ, ಸ್ರುಕ್, ಸ್ರುವ, ಚಮಸ, ಪೂರ್ಣಕುಂಭಗಳು, ಪೀಠಭಾಜನ ಪಾತ್ರಾದಿಗಳು ಎಲ್ಲವೂ ಸೇರಿ ವನನಿವಾಸಿಗಳ ಸರಳ ಪಾವಿತ್ರ್ಯವನ್ನು ಸಾರುತ್ತಿದ್ದವು. ಧರ್ಮಜನು ಅದನ್ನು ಕಂಡು, ಹಿಂದಿನ ವನವಾಸದ ಋಷಿಜನ ಸಂಗಸುಖವನ್ನು ನೆನೆದು ಪುಲಕಿಸಿದನು.

ಧರ್ಮರಾಜನು ಅಲ್ಲಲ್ಲಿ ತಿರುಗುತ್ತಾ, ಕಂಡ ಮುನಿಜನರಿಗೆ ಬೇಕಾದ ಕಲಶ, ಅಜಿನ, ಪಾತ್ರ, ಕಮಂಡಲು, ಪೀಠ, ಸ್ಥಾಲೀ, ಪಿಠರ, ವಸನ, ವಲ್ಕಲ, ಧಾನ್ಯಾದಿಗಳನ್ನು ಯಥೇಚ್ಛವಾಗಿ ಕೊಟ್ಟು, ದಕ್ಷಿಣೆಗಳಿಂದಲು ಅವರನ್ನು ಸಂತೋಷಪಡಿಸಿದನು. ಹಿಂದಿರುಗಿ, ಧೃತರಾಷ್ಟ್ರನ ಆಶ್ರಮಕ್ಕೆ ಬಂದಾಗ, ಸಂಗಮಕಾಲವಾಗಿತ್ತು. ಶಿಷ್ಟಾಚಾರಪರಿಪಾಲನ ನಿರತಳಾದ ಕುಂತಿಯು ಜಪನಿರತನಾಗಿದ್ದ ಧೃತರಾಷ್ಟ್ರನನ್ನು ಸೇವಿಸುತ್ತಾ, ನಾತಿದೂರದಲ್ಲಿ ಕುಳಿತಿದ್ದಳು. ಹೆಸರನ್ನುಚ್ಚರಿಸಿ 'ಅಹಂಭೋ! ಅಭಿವಾದಯೇ!' ಎಂದು ನಮಿಸಿ, ಕೂಡೆಂದು ಕೈಸನ್ನೆ ಮಾಡಿದ ಧೃತರಾಷ್ಟ್ರನ ಮುಂದೆ, ತನ್ನ ತಾಯಿಯ ಹಿಂದೆ, ಧರ್ಮರಾಜನು ಸೋದರಚತುಷ್ಟಯ ಸಮೇತನಾಗಿ ಉಪವಸಿಸಿದನು. ದೇವಗಣ ಸೇವಿತನಾದ ಬೃಹಸ್ಪತಿಯಂತೆ ಕಂಗೊಳಿಪ ಧೃತರಾಷ್ಟ್ರನು ತತ್ಕಾಲೋಚಿತ ಶ್ರೀಶಕಥಾ ನಿರತನಾಗಿದ್ದನು. ಒಂದು ತಿಂಗಳಿಂತು ಕಳೆಯಿತು.

ಒಂದು ದಿನ ಶ್ರೀವ್ಯಾಸದೇವನು ಅಲ್ಲಿಗೆ ದಯಮಾಡಿಸಿದನು. ಆ ಮಹಾನುಭಾವನನ್ನನುಸರಿಸಿ ಶತಯೂಪಾದಿ ರಾಜರ್ಷಿಗಳು, ನಾರದಾದಿ ಮುನಿವರರೂ ಬಂದರು. ಧರ್ಮಜನು ಭೀಮಸೇನನನ್ನು ಮುಂದಿಟ್ಟುಕೊಂಡು ಶ್ರೀವ್ಯಾಸರಿಗೆ ಎದುರಾಗಿ ಪೋಗಿ, ಅಭಿನಮಿಸಿ ಕರೆತಂದು, ಬೃಸ್ಯಾಸನದಲ್ಲಿ ಕೂಡಿಸಿ, ಮತ್ತೆ ನಮಿಸಿ ನಿಂತನು. ದೇವ ದೇವನ ದಿವ್ಯತೇಜಃ ಪ್ರಭಾವಗಳಿಗೆ ಮುಗ್ಧರಾಗಿ ನಿಂತ ಪಾಂಡವಾದಿ ಸರ್ವರು, ಆತನ ಪ್ರಸನ್ನ ನೇತ್ರಕಟಾಕ್ಷಪಾತ್ರರಾಗಿ, ಕೈಯಿಂದ ತೋರಿದಂತೆ, ಅಲ್ಲಲ್ಲಿ ಕೂತು, ಆ

ಹರಿತೋಪಲಾಭ ದಿವ್ಯದೇಹನ ಮುಖಕಮಲ ಸೌಂದರ್ಯಾಮೃತವನ್ನು ನೇತ್ರದ್ರೋಣಗಳಲ್ಲಿ ತುಂಬಿ ಕುಡಿದರು.

ಶ್ರೀವ್ಯಾಸದೇವನು ಪರಮಪ್ರೀತನಾಗಿ ನಗುತ್ತಾ, ಅವರಿಗಿಂತೆಂದನು: 'ಧೃತರಾಷ್ಟ್ರ! ಮಹಾಬಾಹೋ! ನಿನ್ನ ತಪಸ್ಸು ಚನ್ನಾಗಿ ಸಾಗಿದೆಯಾ? ವನವಾಸ ಕ್ಲೇಶದಿಂದ ನಿನ್ನ ಮನವು ಖಿನ್ನವಾಗಿಲ್ಲ ತಾನೆ? ಪುತ್ರವಿನಾಶದಿಂದ ಆದ ಕ್ಲೇಶವನ್ನು ಮರೆತಿರುವೆ ಅಲ್ಲವೇ? ನಿನ್ನ ಮನೋ ಮುಖೇಂದ್ರಿಯಗಳು ಪ್ರಸನ್ನವಾಗಿವೆಯೇ? ಅರಣ್ಯಕ ವಿಧಿ ನಿಯಮಗಳನ್ನು ಸರಿಯಾಗಿ ಪಾಲಿಸುವೆಯಾ? ಗಾಂಧಾರಿಯ ಶೋಕವಹ್ನಿಯು ಆರಿ, ಶಾಂತ ಮನವನ್ನು ತಪಸ್ಸುಮುಖವನ್ನಾಗಿರಿಸಿದೆಯೇ? ಆಕೆಯು ಮಹಾಪ್ರಾಜ್ಞಳು; ಲೋಕ ವಿಧಿಯನ್ನರಿತಿಹಳು; ಆಗಮೋಪಾಯಿಗಳಾದ ಸುಖ ದುಃಖಗಳ ಉಪಟಳವನ್ನು ಹತ್ತಿಟ್ಟಿರುವಳು; ಕುಂತಿಯು ನಿನ್ನ ಶುಶ್ರೂಷೆಯಲ್ಲಿ ಅಪ್ರಮತ್ತಳಾಗಿರುವಳಲ್ಲವೇ! ಪುತ್ರರಾಜ್ಯ ಸುಖಗಳನ್ನು ಪರಿತ್ಯಜಿಸಿ, ಹಿರಿಯರಾದ ನಿಮ್ಮನ್ನು ಸೇವಿಸುತ್ತಿರುವ ಮಹೋದಾರ ಮನಸ್ಕಳಿಂದ ನಾನು ಪ್ರೀತನಾಗಿರುವೆನು.

ಭೀಮ! ಧರ್ಮರಾಜ! ಅರ್ಜುನ! ನಕುಲ ಸಹದೇವರೇ! ದ್ರೌಪದ್ಯಾದಿ ಪ್ರಿಯ ಸುತೆಯರೇ! ಚನ್ನಾಗಿರುವಿರೇ? ನೀವೆಲ್ಲರೂ ಹಿರಿಯರನ್ನು ಕಾಣಲು ಬಂದುದು ಅತ್ಯಂತ ಸಮೀಚೀನವಾಗಿದೆ. ನಿಮ್ಮನ್ನು ನೋಡಿ ಪ್ರೀತನಾಗಿರುವೆನು.

ಧೃತರಾಷ್ಟ್ರ! ಇವರನ್ನು ಕಂಡು ಶುದ್ಧಭಾವದಿಂದ ಸ್ವಾಗತಿಸಿ, ಮನಸ್ಸಮಾಧಾನದಿಂದಿರುವೆಯಾ? ಸತ್ಯ, ಅಕ್ರೋಧ, ವೈರವರ್ಜನಗಳೆಂಬ ಮೂರು ಗುಣಗಳು ಅಪರೂಪವಾಗಿವೆ! ಭಗವದ್ಭಕ್ತರಿಗಲ್ಲದೆ ಮತ್ತಾರಿಗೂ ಆ ರತ್ನಗಳು ಸಿಗವು ತಿಳಿ! ಮಾಂಡವ್ಯ ಶಾಪದಿಂದ ಯಮನೇ ಒಂದಂಶದಿಂದ ವಿದುರನೆನಿಸಿ, ನಿನ್ನ ತಮ್ಮನಾಗಿದ್ದನು. ಆ ಮಹಾತ್ಮನು ಬಲು ಬುದ್ಧಿವಂತನು; ಮಹಾಭಕ್ತನು. ದೇವತೆಗಳಲ್ಲಿ ಬೃಹಸ್ಪತಿಯಂತೆ, ಅಸುರರಲ್ಲಿ ಶುಕ್ರನಂತೆ, ಆ ಪುರುಷವರನು ನರರಲ್ಲಿ ಬುದ್ಧಿವಂತನೆನಿಸಿ ಮೆರೆದನು. ಅಂತಹ ಯಮನನ್ನು ಶಪಿಸಿ, ಮಾಂಡವ್ಯನು ತನ್ನ ಅಧಿಕ ತಪಃಫಲವನ್ನು ಕಳೆದುಕೊಂಡು, ಸಮನಾದನು. ಬ್ರಹ್ಮದೇವನ ಇಚ್ಛೆಯಂತೆ ನಾನು ವೈಚಿತ್ರ್ಯ ವೀರ್ಯ ಕ್ಷೇತ್ರದಲ್ಲಿ ಆ ಮಹಾಮತಿಯನ್ನು ಸ್ಪರ್ಶಮಾತ್ರದಿಂದ ಪಡೆದೆನು. ಅವನು ಸತ್ಯ, ದಮ, ಶಮ, ಅಹಿಂಸಾ, ದಾನತಪಸ್ಸುಗಳಿಂದ ಬೆಳೆದನು (ಆಹಾರದಿಂದಲ್ಲ). ಅಂತಹವನೇ ಆದ ಈ ಧರ್ಮರಾಜನಿಂದ, ವಹ್ನಿಯು ವಹ್ನಿಯಿಂದಂತೆ, ವಿದುರನು ಐಕ್ಯವನ್ನು ಹೊಂದಿರುವನು. ಧರ್ಮನೇ ವಿದುರನು; ವಿದುರನೇ ಧರ್ಮರಾಜನು; ಅಂತಹ ಧರ್ಮಾತ್ಮನು ನಿನಗೆ ಸೇವೆಗೈಯಲು ಸಿದ್ಧನಾಗಿ ನಿಂತಿರುವನು. ನೀನು ಧನ್ಯನಾದೆ!

ಅಚಿರ ಕಾಲದಲ್ಲಿ ನಿನಗೆ ಶ್ರೇಯಸ್ಸಾಗುವುದು! ಸಂಶಯ ಬೇಡ! ನಿನ್ನ ಸಂಶಯಗಳನ್ನೆಲ್ಲ ಕಿತ್ತೊಗೆಯಲೆಂದೇ ನಾನು ಬಂದಿರುವೆನು. ಹಿಂದೆ ಮಹರ್ಷಿಗಳಾರೂ ತೋರದಿದ್ದ, ಯಾರಿಗೂ ತೋರಲಾಗದ ಆಶ್ಚರ್ಯವನ್ನು ವಿಶ್ವಾಸಜನನಕ್ಕಾಗಿ ತೋರುತ್ತಿರುವೆನು. ಕೇಳು! ಏನನ್ನು ನೋಡಬೇಕೆನಿಸಿದೆ? ಏನನ್ನು ಕೇಳಬೇಕೆನಿಸಿದೆ?

ಕೇಳು! ಕೊಡುವೆನು ನಿನ್ನ ಮನೋಭೀಷ್ಟವನ್ನು! ನಿನ್ನನ್ನು ನೋಡಲು ಬಂದ ಪಾಂಡವರಿಗೆ ಇಲ್ಲಿ ಒಂದು ತಿಂಗಳ ಕಾಲವು ಕಳೆದಿದೆ! ಕಾಲವು ದುರತಿ ಕ್ರಮ ವಲ್ಲವೇ? ಇಲ್ಲಿ ನೆರೆದಿರುವ ನಾರದ, ಪರ್ವತ, ದೇವಲಾದಿ ಮುನಿವರರು ಮತ್ತು ವಿಶ್ವಾವಸು, ತುಂಬುರು, ಚಿತ್ರರಥಾದಿ ಗಂಧರ್ವರು ನಿನ್ನ ಶ್ರೇಯಸ್ಸನ್ನು ಬಯಸಿ, ಇಲ್ಲಿಗೆ ಬಂದು ನಿನಗೆ ದರ್ಶನವಿತ್ತಿರುವರು. ನಿಮ್ಮೆಲ್ಲರ ಮನೋದೋಷಗಳನ್ನು ಕಳೆದು, ಈ ಜನ್ಮದ ಋಣಾನುಬಂಧಗಳನ್ನು ಕಡಿದು, ನಿಮ್ಮನ್ನು ಶುದ್ಧರನ್ನಾಗಿಸಲೆಂದೇ ಬಂದಿರುವ ನನ್ನಿಂದ ನಿನಗೇನು ಬೇಕೋ ಕೇಳು! ಕೇಳಿದ್ದನ್ನು ಪಡೆಯುವೆ! ನಿಮ್ಮೀರ್ವರ ಹೃದಯ ಗುಹೆಯಲ್ಲಡಗಿರುವ ಪುತ್ರಶೋಕ ವಹ್ನಿಯನ್ನು ಜ್ಞಾನಧಾರೆಯಿಂದ ಆರಿಸಿ ಉದ್ಧರಿಸುವೆನು.

ದ್ರೌಪದೀ! ಸುಭದ್ರೆ! ಕುಂತಿ! ಕುಂತೀಸುತರೇ! ನಿಮ್ಮ ನಿಮ್ಮ ಮನಃ ಕ್ಲೇಶವನ್ನಳಿಸಿ, ಸಂಶಯಗಳನ್ನು ಕಳೆಯಲೆಣಿಸಿ ಬಂದಿರುವೆನು. ನನ್ನ ಅನುಗ್ರಹವಿಲ್ಲದಿರೆ ನನ್ನ ಜ್ಞಾನವು ಸಿದ್ಧಿಸಲಾರದು. ನೋಡಿ ತಿಳಿಯಿರಿ ನನ್ನ ತಪೋಮಹಿಮೆಯನ್ನು!'

ಇಂತು ನುಡಿದ ಶ್ರೀಕಾಂತನಿಗೆ ಕೈಮುಗಿದು, ಆನಂದದ ಕಂಬನಿಗಳುದುರುತ್ತಿರಲು, ಧೃತರಾಷ್ಟ್ರನಿಂತೆಂದನು: 'ಧನ್ಯನಾದೆನು! ಅನುಗೃಹೀತನಾದೆನು! ಇಂದೆನ್ನ ಜೀವಿತವು ಸಫಲವಾಯಿತು! ಭಗವಾನ್! ನಿನ್ನ ಅನುಗ್ರಹವೇ ಸಾಕೆನಗೆ! ಪೂಜ್ಯರಾದ ನಿಮ್ಮ ಪರಮಾನುಗ್ರಹದಿಂದ ನನಗೆ ಪರಲೋಕದ ಸುಗತಿಯು ಕಾದಿರಿಸಲ್ಪಟ್ಟಿದೆ. ಅದರ ಭಯವೆನಗಿಲ್ಲ. ಆದರೆ ಮಂದಬುದ್ಧಿಯು, ದುಷ್ಟತಮನು ಆದ ದುರ್ಯೋಧನನ ದ್ರೋಹದಿಂದ ಹತರಾದ ಇತರ ಪುತ್ರರನ್ನೂ ಬಂಧು ಗುರುಗಳನ್ನೂ ನೆನೆದಂತೆ, ನನ್ನ ಶೋಕವಹ್ನಿಯು ಉರಿದೇಳುತ್ತಿದೆ. ಪಾಪಿ ದುರ್ಯೋಧನನಿಂದ ನಿರಪರಾಧಿ ಪಾಂಡವರಿಗಾದ ಪಾಡನ್ನು ನೆನೆದು, ಅದನ್ನು ವಾರಿಸಲಿಲ್ಲವೆಂಬ ಪಶ್ಚಾತ್ತಾಪದಿಂದ ನೊಂದಿರುವೆನು. ಎಷ್ಟು ಸಾವಿರ ರಾಜನ್ಯರು! ಎಷ್ಟು ಲಕ್ಷವೀರರು! ಎಷ್ಟು ಹಯಗಜರಾಜಿ! ಎಲ್ಲವೂ ನನ್ನ ಮಗನಿಗಾಗಿ ಕಡಿದಾಡಿ ಮಡಿದುಹೋದರು. ಪೃಥಿವಿಯು ವೀರ ಶೂನ್ಯವಾಯಿತು! ಅವರಿಗೆ ಯಾವಗತಿ ದೊರಕಿತೋ? ತಾತ ಭೀಷ್ಮ, ಗುರು ದ್ರೋಣ – ಇವರಿಗಾವ ಗತಿಯಾಯಿತೋ? ಇವೆಲ್ಲವೂ ಪೂರ್ವ ವೃತ್ತಾಂತಗಳನ್ನು ನೆನೆವ ನನ್ನ ಮನಸ್ಸಿಗೆ ಸ್ಥಿರಶಾಂತಿಯಿಲ್ಲದಂತಾಗಿದೆ.'

ಆಗ ಗಾಂಧಾರಿಯು ಪುತ್ರರನ್ನು ನೆನೆದು, ಕಣ್ಣೀರಿಡುತ್ತಾ, ನಿಡುಸುಯ್ದು, 'ಪೂಜ್ಯಶ್ವಶುರ! ಭಗವನ್! ಇಂತು ಒಂದೇ ರೀತಿ ಕಣ್ಣೀರಿನ ಕಾಲುವೆ ಹರಿಸುತ್ತಾ ಹದಿನಾರು ವರ್ಷಗಳಾದವು. ಪುತ್ರಶೋಕತಪ್ತರಾದ ನಮಗೆ ಹಗಲು ಆಹಾರವು ರುಚಿಸದು – ರಾತ್ರಿ ನಿದ್ರೆಬಾರದು – ಬೇಕಾದಾಗ ಇಚ್ಛಾಮಾತ್ರದಿಂದ ಲೋಕಗಳನ್ನು ಸೃಜಿಸಿ, ಉತ್ತರಕ್ಷಣದಲ್ಲಿ ನಾಶಗೊಳಿಸಿ, ಮತ್ತೆ ಅಂತೆಯೇ ಸೃಜಿಸಬಲ್ಲ ಬಲ್ಲಿದ ರಮಾವಲ್ಲಭನಾದ ನಿನಗೆ ನಮ್ಮ ಸತ್ತ ಮಕ್ಕಳನ್ನೊಂದು ಸಲ ತಂದು ತೋರಲಾಗುವ

ದಿಲ್ಲವೇ ? ಇಲ್ಲಿರುವ ನಾರಿಯರೆಲ್ಲರೂ ಪುತ್ರಶೋಕದ ವಿಷಫಲವನ್ನು ಉಂಡವರೇ ಆಗಿರುವರು. ಪಂಚಸುತರನ್ನು, ಭ್ರಾತೃಗಣವನ್ನು, ತಂದೆಯನ್ನು ಕಳೆದುಕೊಂಡ ದ್ರೌಪದೀ ಅತಿವೀರನಾದ ಅಭಿಮನ್ಯುನನ್ನು ಕಳೆದುಕೊಂಡ ಸುಭದ್ರೆ, ಭೂರಿಶ್ರವನ ಪತ್ನಿ, ನನ್ನ ಸೊಸೆಯರು, ಎಲ್ಲರೂ ಬಂಧುವಿಯೋಗ ದುಃಖದಿಂದ ಬೆಂದಿರುವರು. ಇವರ ದುಃಖವನ್ನು ಕಂಡ ನನ್ನ ದುಃಖವೂ ಇಮ್ಮಡಿಸಿದಂತಾಗಿದೆ. ನಮ್ಮ ಮತ್ತು ಕರ್ಣಮಾತೆಯಾದ ಕುಂತಿಯ ಶೋಕಸಾಗರವನ್ನು ಹಿಂಗಿಸಿಬಿಡು ! ನಮ್ಮ ಕೈಗೆ ಜ್ಞಾನದೀಪವನ್ನಿತ್ತು ಸಲಹು !' ಎಂದು ಬೇಡಿದಳು.

ಆಗ ಕುಂತಿಯು ಕೈ ಜೋಡಿಸಿ ನಿಂತು 'ಪ್ರಭೋ! ಏನೆಂದುಸುರಲಿ? ಆದಿತ್ಯ ಸನ್ನಿಭನಾದ ಕರ್ಣನನ್ನು ನೆನೆದು ಬಲು ದುಃಖವಾಗಿದೆ. ಕನ್ಯಾದಶೆಯಲ್ಲಿ ಬಲು ಚಾಪಲ್ಯದಿಂದ ಮಂತ್ರವನ್ನು ಪರೀಕ್ಷಿಸಲು ಪೋಗಿ, ಆದಿತ್ಯನಿಂದ ಕರ್ಣನನ್ನು ಪಡೆದುದೊಂದು ದೋಷ! ಪಡೆದ ಮಗನಿವ ನನ್ನವನೆಂದು ಯಾರಿಗೂ ಪೇಳದೆ, ಕೊನೆಗೆ ಒಬ್ಬ ಮಗನಿಂದ ಮತ್ತೊಬ್ಬನನ್ನು ಕೊಲ್ಲಿಸಿದುದು ಎರಡನೆಯ ದೋಷ ! ಈ ಎರಡು ದೋಷಗಳಿಂದ ನನ್ನನ್ನು ಶುದ್ಧೀಕರಿಸಿ, ನನ್ನ ಪುಣ್ಯಲೋಕದ ಸ್ವಭರ್ತೃ ಪ್ರಾಪ್ತಿಯನ್ನು ರಕ್ಷಿಸು !' ಎಂದು ಬೇಡುತ್ತಿರುವೆನು.

ಅತಿ ಕೋಪನನಾದ ದೂರ್ವಾಸನೇಕೆ ಬಂದನು ? ಬಂದನೆನ್ನು ! ಆತನನ್ನು ಸೇವಿಸಲು ನನ್ನನ್ನೇಕೆ ನಿಯಮಿಸಿದನೋ ಭೋಜರಾಜನು ? ನಿಯಮಿಸಲಿ ! ಆ ಹಠಗಾರ ಮುನಿಯು ಪುತ್ರಪ್ರಾಪ್ತಿ ಕಾರಣವಾದ ಮಂತ್ರವನ್ನು ಉಪದೇಶಿಸಬೇಕೇ ? ಉಪದೇಶಿಸಿದರೇನಾಯಿತು ? ಮತಿಗೆಟ್ಟು ನಾನು ಮಾರ್ತಾಂಡನನ್ನು ಕರೆಯುವುದೇ ? ಕರೆದರೆ, ಆತನು ಮೂರ್ತಿಮಂತನಾಗಿ ಇಳಿದು ಬಂದು, ಪುತ್ರನನ್ನಿತ್ತು ಅಂತರ್ಧಿತ ನಾಗುವುದೇ? ಎಲ್ಲವೂ ದೈವಲೀಲೆ! ಮಹಾನುಭಾವ! ನಿನ್ನ ಮುಂದೆ ಬಚ್ಚಿಡಲಾಗದು. ಆದರೂ ಇದ್ದುದನ್ನರುಹುತ್ತಿರುವೆನು. ಕರ್ಣನನ್ನು ಮಂಜೂಷೆಯಲ್ಲಿಟ್ಟು ನದಿಯಲ್ಲಿ ಬಿಟ್ಟು ನಾನು ಯಥಾಪೂರ್ವವಾಗಿ ಕನ್ನಿಕೆಯೇ ಆಗಿರುವುದನ್ನರಿತೆನು. ಇದು ಆ ಮಹಾನುಭಾವ ದುರ್ವಾಸನ ಪ್ರಭಾವವೆಂದರಿತು ಸುಮ್ಮನಾದೆನು. ಪಾಪವೋ, ಅಲ್ಲವೋ ನೀನೇ ಅರಿತಿರುವೆ! ಶರಣಾಗಿ ಕ್ಷಮಿಸೆಂದು ಬೇಡುವುದೊಂದೇ ಮಂದಮತಿ ಜೀವರ ಕರ್ತವ್ಯ! ನನ್ನನ್ನು ಶುದ್ಧಳನ್ನಾಗಿಸಿ, ನಿನ್ನವರಲ್ಲಿಡು! ಪತಿಲೋಕವೆನಗೆ ಕೊಡು!'

ಪಾಂಡವರೈವರು ಕೈಜೋಡಿಸಿ, 'ವಿಜ್ಞಾನಾನಂದ ಮೂರ್ತೇ! ವೇದವ್ಯಾಸದೇವ! ಶ್ರೀರಮಣ! ನಿನ್ನ ಚರಣಗಳಲ್ಲಿ ನಿರಂತರವು, ನಿರ್ವ್ಯಾಜವು ಆದ ಭಕ್ತಿಯನ್ನಿತ್ತು ಸಲಹು!' ಎಂದು ಬೇಡಿದರು. ದ್ರೌಪದ್ಯಾದಿಗಳೂ ಅಂತೆಯೇ ಭಕ್ತಿಯನ್ನೇ ಬೇಡಿದರು.

ಆ ಮಾತುಗಳನ್ನಾಲಿಸಿ ಶ್ರೀವೇದ ವಿದಗ್ರಣಿಯು 'ಸರಿ ! ಕುಂತಿ ! ನಿನ್ನಲ್ಲಿ ಅಪರಾಧವಿಲ್ಲ. ಮತ್ತೆ ಕನ್ಯಾಭಾವದಿಂದ ಪಾಂಡು ಮಹಿಷಿಯಾಗಿರುವೆ! ಅಲ್ಲಿಯು ಪಾಂಡುರಾಜನ ಅನುಮತಿಯಿಂದ ಅವನು ಕರೆ! ಎಂದ ದಿವ್ಯದೇವಪ್ರಭಾವರನ್ನು ಕರೆದು, ಅವರಿಂದ ಅವರನ್ನೇ ಸುತರನ್ನಾಗಿ ಪಡೆದಿರುವೆ! ಇಲ್ಲಿಯೂ ನಿನ್ನ ದೋಷವಿಲ್ಲ.

ಏಕೆಂದರೆ, ಲೋಕೋತ್ತರಮಹಿಮರಾದ ದೇವತೆಗಳು ಸಂಭೋಗವನ್ನು ಅಪೇಕ್ಷಿಸರು. ಅವರು ಸಂಕಲ್ಪದಿಂದ, ವಾಚಾ ವರದಾನದಿಂದ, ದೃಷ್ಟಿಪಾತದಿಂದ, ಸ್ಪರ್ಶದಿಂದ, ಬರಿಯ ಸಂಹರ್ಷದಿಂದ ಇಂತು ಐದು ವಿಧವಾಗಿ ಪುತ್ರ ಪ್ರದಾನ ಸಮರ್ಥರಾಗಿರುವರು. ಆದುದರಿಂದ ನಿನಗೆ ಯಾವ ಪಾಪವೂ ಒದಗಿಲ್ಲ. ಚಿಂತೆ ಬಿಡು! ಧರ್ಮ ಬಲವಂತರಿಗೆ ಎಲ್ಲವೂ ಸರಿಯಾಗೇ ನಡೆಯುವುದು. ಇನ್ನು ಕರ್ಣ ರಹಸ್ಯದ ಪಾಪವನ್ನು ನಾನು ಕಳೆದುಬಿಡುವೆನು. ಅಂತಿತ್ತು ದೈವಸಂಕಲ್ಪ ಇಲ್ಲದಿರೆ ಭೂಭಾರಹರಣ ಧುರೀಣನಾದ ಶ್ರೀಕೃಷ್ಣನ ಅವತಾರ ಪ್ರಯೋಜನವೆಂತಾಗುತ್ತಿತ್ತು? ಇರಲಿ! ಕರ್ಣನನ್ನು ತೋರುವೆನು! ರಣ ಮೃತರಾದವರನ್ನೆಲ್ಲ ವೀರ ಸ್ವರ್ಗದಿಂದ ತರಿಸಿ ತೋರುವೆನು! ಭವಿತವ್ಯವನ್ನು ಮೀರಲಾಗದು. ನಿಮ್ಮ ಮನಸ್ಸಿನಲ್ಲಿ ಸ್ವಪ್ನ ಸಮ್ಮಿತವಾದುದೀ ಸಂಸಾರವೆಂಬ ವೈರಾಗ್ಯವನ್ನು ಪುಟ್ಟಿಸಲು ನಿಮ್ಮವರನ್ನೆಲ್ಲ ಒಂದು ರಾತ್ರಿ ಮಾತ್ರ ಕರೆತಂದು ತೋರುವೆನು.

ಗಾಂಧಾರಿ! ದೇವತೆಗಳು ಅಂತೆಯೇ ಅಸುರರು ಕೂಡ ಮಹೀತಲದಿ ಅವತರಿಸಿದ್ದರು. ಅವರು ದೇವಕಾರ್ಯ ಸಿದ್ಧಿಯಾಗಲು ಭಾರತ ರಣಭೂಮಿಯಲ್ಲಿ ನಿಹತರಾದರು. ಗಂಧರ್ವರಾಜನಾದ ಧೃತರಾಷ್ಟ್ರ (ಹಂಸ)ನೇ ಈ ಧೃತರಾಷ್ಟ್ರನು. ಪಾಂಡುರಾಜನು ಮರುದ್ಗಣ ನಿವಿಷ್ಟನಾದ ಪರಾವಹನು. ಯಮಧರ್ಮರಾಜನ ಅಂಶದಿಂದ ಪುಟ್ಟಿದವರೇ ವಿದುರ ಯುಧಿಷ್ಠಿರರು. ದುರ್ಯೋಧನನು ಕಲಿದೈತ್ಯನು. ಶಕುನಿಯು ದ್ವಾಪರದೈತ್ಯನು. ದುಶ್ಶಾಸನಾದಿಗಳೆಲ್ಲರೂ ರಾಕ್ಷಸರು. ಇವರನ್ನು ಮಟ್ಟಿಕ್ಕಿದ ಮಹಾಬಲ ಭೀಮಸೇನನು ಮುಖ್ಯ ಪ್ರಾಣಾವತಾರನು. ಸುರರಾಜನೇ ಸವ್ಯಸಾಚಿಯು; ಸೂರ್ಯನೇ ಕರ್ಣನು; ನಕುಲ ಸಹದೇವರು ನಾಸತ್ಯದಸ್ರರು; ಶ್ಯಾಮಲಾಶಚೀ ಉಮಾ ಉಷೆಯರಿಂದ ಕೂಡಿ, ಅವರ ಓಲಗವನ್ನು ಕೈಕೊಂಡು, ಅವರಿಗೆ ಅನ್ಯಸಂಗವಾಗದಂತೆ ಕಾಪಾಡಿದ ಭಾರತಿಯೇ ದ್ರೌಪದಿಯು. ಶ್ರೀನಾರಾಯಣನೇ ಶ್ರೀಕೃಷ್ಣನು! ಅಭಿಮನ್ಯುವು ಸೋಮಪುತ್ರಬುಧನು, ಧೃಷ್ಟದ್ಯುಮ್ನನು ಸಾಕ್ಷಾತ್ಪಾವಕನು. ಶಿಖಂಡಿಸ್ಥ ಪುರುಷನು ತುಂಬುರು ಗಂಧರ್ವನು; ಸ್ತ್ರೀಯು ಅಂಬೆಯು; ಆಕೆ ದ್ಯುವಸುವಿನ ಪತ್ನಿಯು; ದ್ಯುವಸುವೇ ಭೀಷ್ಮನು; ಬೃಹಸ್ಪತಿಯೇ ದ್ರೋಣನು; ಮಹಾದೇವನೇ ಅಶ್ವತ್ಥಾಮನು.'

ಇಂತು ನುಡಿದು ಶ್ರೀವ್ಯಾಸನು ಅವರನ್ನು ಗಂಗಾ ತೀರಕ್ಕೆ ಕರೆದುಕೊಂಡು ಪೋದನು. ಎಲ್ಲರೂ ನೋಡ ನೋಡುತ್ತಿರಲು, ಜಲದಿಂದ ತುಮುಲ ಶಬ್ದದೊಡನೆ ಎಲ್ಲ ರಣನಿಹತ ವೀರರು ಎದ್ದು ಬಂದರು. ವಿರಾಟ ದ್ರುಪದರು, ದ್ರೌಪದೀಸುತರು, ಸೌಭದ್ರ, ಘಟೋತ್ಕಚಾಲಂಬುಷರು, ಕರ್ಣ ಭಗದತ್ತರು, ದುರ್ಯೋಧನ ದುಶ್ಶಾಸನರು, ಜಲಸಂಧಭೂರಿಶ್ರವರು, ಶಲ್ಯ ಧೃಷ್ಟದ್ಯುಮ್ನರು, ಲಕ್ಷ್ಮಣ ವೃಷಸೇನರು, ಶಿಖಂಡಿ ಧೃಷ್ಟಕೇತು ಚೇಕಿತಾನರು, ಬಾಹ್ಲಿಕ ಸೋಮದತ್ತರು, ಎಲ್ಲರೂ ಮೇಲೆದ್ದು ಬಂದು ಯಥಾ ಪೂರ್ವವೇಷರಾಗಿ, ತೀರದಲ್ಲಿ ನಿಂತರು. ಧ್ವಜ, ರಥ, ವಾಹನ, ವೇಷಭೂಷಣ ಗಳಿಂದ ಕೂಡಿ, ಜೀವಂತರಾಗಿ ಬಂದ ಬಂಧುಗಳನ್ನು ನೋಡಿ, ಅಲ್ಲಿದ್ದವರ ಮನಸ್ಸು ಆನಂದ ಶೋಕ, ಶಂಕಾ ನಿಶ್ಶಂಕಾ, ವಿಸ್ಮಯಭರಿತವಾಯಿತು. ಕಣ್ಣೀರಿಟ್ಟು, ಕದಲದೆ

ನಿಂತು, ಕೈಚಾಚಿ, ಮಾತಾಡಲು ಬಾರದೆ, ಎವೆಯಿಕ್ಕದೆ ನೋಡಿ, ತತ್ತರಿಸುವ ಬಂಧು ಜನರ ಸಂಭ್ರಮವು ವರ್ಣನಾತೀತವಾಗಿತ್ತು.

ಶ್ರೀವ್ಯಾಸನು ಧೃತರಾಷ್ಟ್ರ ಗಾಂಧಾರೀ ದಂಪತಿಗಳಿಗೆ ದಿವ್ಯ ದೃಷ್ಟಿಯನ್ನಿತ್ತನು. ಅವರೀರ್ವರು ಎಂದೂ ನೋಡದ ಬಂಧು ಸುತಮಿತ್ರಾದಿಗಳನ್ನು ದಿವ್ಯನೇತ್ರದಿಂದ ನೋಡಿ, ಚಿತ್ರಪಟದಲ್ಲಿ ಬರೆದಂತಿದ್ದ ಸಕಲ ಕುರುಸೇನೆಯ ದರ್ಶನದಿಂದ ಆನಂದ ಪಟ್ಟರು. ಆಗ ಅವರಿವರು ಒಂದಾಗಿ ಕಲೆತು ತಂತಮ್ಮವರಿಂದ ಕೂಡಿ ಯುದ್ಧ ಪೂರ್ವಕಾಲದಿ ಎಂಬಂತೆ ಕ್ರೀಡಿಸಿದರು. ಮಾತ್ಸರ್ಯ ಕ್ರೋಧಗಳಿಲ್ಲದೆ ವಿಗತ ಕಲ್ಮಷರಾದ ಬಂಧು ವರ್ಗವು ಪರಸ್ಪರ ಸಮಾಗಮದಿಂದ ಪ್ರಹರ್ಷಿತವಾಯಿತು. ಪಾಂಡವರು ದ್ರೌಪದೇಯ ಘಟೋತ್ಕಚಾಭಿಮನ್ಯು ಕರ್ಣದ್ರೋಣರಿಂದ ವಿಹರಿಸಿದರೆ, ಇತರರು ತಂತಮ್ಮವರಿಂದ ಕೂಡಿ ಆಡಿದರು.

ಒಂದು ರಾತ್ರಿಯಲ್ಲಾದ ಪತಿಪತ್ನಿಗಳ, ಪುತ್ರಪಿತೃಗಳ, ಭ್ರಾತೃಗಳ, ಸಮಾಗಮದ ಮಹೋತ್ಸವದಿಂದ ಕರದೀಪಿಕಾ ಸಹಸ್ರಪ್ರಜ್ವಲಿತವಾದ ಆ ನದೀ ತೀರವು ದ್ವಿತೀಯ ಕರಿಪುರಿಯಂತೆ ಕಂಗೊಳಿಸಿತು.

ಜನಮೇಜಯ! ಆಶ್ಚರ್ಯಪಡಬೇಡ! ಶಂಕೆಯಂತೂ ಸರ್ವಥಾ ಕೂಡದು. ಕೇಳಿಲ್ಲಿ! ಜಗದೇಕಕಾರಣನು ರಮಾರಮಣನು, ಅಘಟಿತ ಘಟನಾ ಸಮರ್ಥನು, ಅಪ್ರಮೇಯ ಮಹಿಮನು, ಜಗಜ್ಜನ್ಮಸ್ಥೇಮ ಪ್ರಳಯರಚನಾ ಚತುರನು, ಲೀಲಾ ಮಾತ್ರ ವಿವಿಧ ಕ್ರಿಯಾಶೀಲನು, ಬ್ರಹ್ಮರುದ್ರೇಂದ್ರಾದಿ ವೃಂದಾರಕ ವಂದ್ಯ ಪಾದಾರವಿಂದನು, ಅಸ್ಮದ್ಗುರುವರನು ಆದ ಶ್ರೀವೇದವ್ಯಾಸದೇವನ ವಿಷಯದಲ್ಲಿ ದುಸ್ಸಾಧವಿಲ್ಲ ತಿಳಿ! ಬಂಧು ಸಮಾಗಮದಿಂದ ಆನಂದತುಂದಿಲರಾದ ನರನಾರಿಯರಿಗೆ ಆ ರಾತ್ರಿಯು ಕ್ಷಣದಂತೆ ಕಳೆದುಹೋಯಿತು. ಆಗ ಬಂದ ವೀರರು ತಂತಮ್ಮವರನ್ನು ಬೀಳ್ಕೊಂಡು, ಬಂದಂತೆಯೇ ಮತ್ತೆ ಗಂಗಾಜಲದಲ್ಲಿ ಅಂತರ್ಹಿತರಾಗಿ ಹೋದರು. ನೋಡುತ್ತಾ ನಿಂತವರಂತೇ ಕಲ್ಲುಗೊಂಬೆಗಳಂತೆ ತೀರದಲ್ಲಿ ನಿಂತೇ ಇದ್ದರು. ಅವರೆಲ್ಲರೂ ದೇವಗಂಧರ್ವ ರಾಕ್ಷಸ ಯಕ್ಷಮಯ, ನರಕ ವಾರುಣಾದಿ ಲೋಕಗಳಿಗೆ ಯಥಾಯೋಗ್ಯವಾಗಿ ತೆರಳಿ ಪೋಗಲು, ಶ್ರೀವ್ಯಾಸನು ದುಃಖಾವಿಲಚಿತ್ತರಾದ ಮತ್ತಕಾಶಿನಿಯರನ್ನವಲೋಕಿಸಿ ಇಂತು ನುಡಿದನು:

'ಪತಿಲೋಕಗಳನ್ನು ಸೇರಲಿಚ್ಛಿಸುವವರು ಬೇಗನೆ ಗಂಗಾ ಪ್ರವೇಶವನ್ನು ಮಾಡಿರಿ! ಸೇರಿರಿ ನಿಮ್ಮ ಪತಿಲೋಕಗಳನ್ನು!' ಆ ಮಾತಿನಂತೆ ಬಲುಜನ ಪತಿವ್ರತೆಯರು ಗಂಗೆಯಲ್ಲಿ ಬಿದ್ದು ತಂತಮ್ಮ ಪತಿಗಳನ್ನು ಅನುಸರಿಸಿ, ಪೋದರು. ಅಹೊ! ಶ್ರೀವ್ಯಾಸದೇವಮಹಿಮೆ!! ಮನುಜದೇಹಗಳನ್ನಿಲ್ಲಿ ಬಿಟ್ಟು, ದಿವ್ಯ ದೇಹಗಳಿಂದ ಪೋದ ಸುಂದರಿಯರನ್ನು ಕಂಡು, ಸಕಲ ಜನರು ಆಶ್ಚರ್ಯಾನಂದ ಭಕ್ತಿಭರಿತರಾಗಿ, ಶ್ರೀವ್ಯಾಸರಿಗೆ ವಂದಿಸಿ, ಸ್ತುತಿಸಿದರು.

ಉತ್ತರಾದೇವಿಯೂ ಅಭಿಮನ್ಯುವಿನನ್ನು ಅನುಸರಿಸಿ ಪೋಗಲೆಣಿಸಿ, ಅವನು 'ಪುತ್ರನನ್ನು ರಕ್ಷಿಸುತ್ತಿರು!' ಎಂದು ಅಪ್ಪಣೆಗೈದಂತೆ, ಸಾಯದೆ ನಿಂತಳು.

ಇಂತು ಶ್ರೀವ್ಯಾಸದೇವನ ಅತಿಮಾನುಷ ದಿವ್ಯ ಮಹಿಮೆಯನ್ನು ನಿನಗೆ ನಿರೂಪಿಸಿ ಧನ್ಯನಾದೆನು. ಜನಮೇಜಯ! ಇದನ್ನು ಶ್ರದ್ಧಾಭಕ್ತಿಗಳಿಂದ ಹೇಳಿದರು, ಕೇಳಿದರು ಕೂಡ, ಉಭಯಲೋಕ ಸುಖಿನಭಾಜನರಾಗುವರು. ವೇದಾಧ್ಯಯನ, ತಪಸ್ಸು, ದಾನ, ಸದಾಚಾರ, ಇಂದ್ರಿಯನಿಗ್ರಹ, ಸಂಸಾರ ನಿಸ್ಸಾರತಾಜ್ಞಾನ, ವೈರಾಗ್ಯ, ದೃಢ ಭಕ್ತಿ, ಅಹಿಂಸೆ ಮುಂತಾದ ಸುಗುಣಗಳನ್ನು ಸತ್ಪುಣ್ಯಗಳನ್ನು ಹೊಂದಬೇಕೆಂದವರು ಈ ಪುಣ್ಯಕಥೆಯನ್ನು ಶ್ರದ್ಧೆಯಿಂದ ಕೇಳಬೇಕು, ಕೇಳಿ ತಿಳಿಯಬೇಕು. ತಿಳಿದು ಅನುಷ್ಠಿಸಬೇಕು. ಅನುಷ್ಠಿಸಿ ಮುಕ್ತರಾಗಬೇಕು. ಶ್ರೀವೇದವ್ಯಾಸಾಯ ನಮೋನಮಃ॥.

ಶೌನಕಾದಿಗಳಿರೇ! ಇಂತು ನುಡಿದ ವೈಶಂಪಾಯನನನ್ನು ನೋಡಿ, ಜನಮೇಜಯನು ಆಶ್ಚರ್ಯಭರಿತನಾಗಿ ಇಂತೆಂದನು: 'ಮಹಾಮುನೇ! ದೇಹವನ್ನು ಬಿಟ್ಟು ಹೋದವರನ್ನು ಧೃತರಾಷ್ಟ್ರಾದಿಗಳು ನೋಡುವುದೆಂತು? ಅಂತಹ ರೂಪಗಳವರಿಗೆಂತು ಬಂದವು? ಪರಮಾಶ್ಚರ್ಯವಾಗಿರುವ ಈ ವಿಷಯವನ್ನು ನನಗೆ ವಿಶದವಾಗಿ ತಿಳಿಸಿ ಕೊಡು!' ಆ ಮಾತಿಗೆ ವೈಶಂಪಾಯನನು ಶ್ರೀವ್ಯಾಸರಿಗೆ ಮನಸಾ ನಮಿಸಿ, ಇಂತೆಂದನು: 'ರಾಜನ್! ಸ್ವಪ್ನದಲ್ಲಿ ನಾನಾದೇಹಗಳನ್ನು ಧರಿಸಿ ವಿವಿಧಾನುಭವಗಳನ್ನು ಪೊಂದುವುದನ್ನು ಕಂಡಿಲ್ಲವೇ? ಮಾನಸಿಕ ಸಂಸ್ಕಾರವೇ ಉಪಾದಾನವಾಗಿ, ಮನಸ್ಸಿನಲ್ಲಿ ತಾತ್ಕಾಲಿಕವಾಗಿ ಸೃಷ್ಟವಾಗಿ ಕಾಣುವ ಸ್ವಾಪ್ನಪದಾರ್ಥಗಳನ್ನು ನೋಡಿ, ಸುಖದುಃಖಾದಿಗಳನ್ನನುಭವಿಸುವುದು ಸತ್ಯವೇ ಎಂದು ತಿಳಿ! ಆದರೆ ಅದು ಜಾಗ್ರತ್ಪದಾರ್ಥಗಳಲ್ಲ. ಮಾನಸಿಕವಾದರೂ ಸತ್ಯಗಳೇ. ಅಂತೆಯೇ ತೈಜಸ ನಾಮಕ ಶ್ರೀಶನು ಉದಾನ ನಾಡೀ ಸಂಸ್ಥನಾಗಿ ತೋರಿಸುವ ಸ್ವಪ್ನವು ತಾತ್ಕಾಲಿಕವು, ಮಾನಸಿಕವು ಆದರೂ ಮಿಥ್ಯಾ ಭೂತವಲ್ಲ. ಅಂತಹ ಸರ್ವಸಮರ್ಥನು ಜಗಜ್ಜನ್ಮಾದಿ ಕಾರಣ ಕಾರಣ ಸ್ವತಂತ್ರಕರ್ತನು, ಅಚಿಂತ್ಯ ವಿಚಿತ್ರ ಮಹಿಮನು. ಶ್ರೀರಮಾ ಬ್ರಹ್ಮಾದಿ ವಂದಿತ ದಿವ್ಯ ಚರಣನಾದ ಶ್ರೀವೇದವ್ಯಾಸದೇವನಿಗೆ ತಾತ್ಕಾಲಿಕ ಸತ್ಯ ಶರೀರಗಳನ್ನು ನಿರ್ಮಿಸಿಕೊಟ್ಟು, ಅದೇ ರೂಪದಿಂದ ಸ್ವರ್ಗಾದಿ ಲೋಕಗಳಲ್ಲಿದ್ದ ವೀರರನ್ನು ತರಿಸಿ ತೋರಿಸುವುದು ಅಸಾಧ್ಯವಲ್ಲ; ಅಂತೆಯೇ ಕಣ್ಮರೆಯಾಗಿಸುವುದೂ ದುಷ್ಕರವಲ್ಲ.

ಮುಕ್ತರು ಪಿತೃಗಳನ್ನು ನೋಡಬೇಕೆಂದರೆ ಅವರ ವಾಂಛಿತ ಪಿತೃಗಳನ್ನಾ ರೂಪದಿಂದ ತೋರಿಸಿ, ಅವರನ್ನು ಸತ್ಯಕಾಮರನ್ನಾಗಿಸುವ, ನಿತ್ಯ ಸತ್ಯಕಾಮನಿಗೆ ಕೇವಲ ಧೃತರಾಷ್ಟ್ರಾದಿಗಳ ತಾತ್ಕಾಲಿಕ ಕಾಮಿತವನ್ನೀಡೇರಿಸಿ, ಅವರನ್ನು ವಿರಾಗವಂತರನ್ನಾಗಿಸುವುದು ಆಶ್ಚರ್ಯವಲ್ಲ.

ಮಹಾಭೂತಗಳೈದೂ ಶ್ರೀಶನ ಅಧೀನವಾಗಿ, ಶರೀರಾದಿಗಳನ್ನು ಸೃಜಿಸುತ್ತಿವೆ. ಶರೀರವು ನಿತ್ಯವಾದರೂ ಮಹಾಭೂತಗಳು ತದಪೇಕ್ಷಯಾ ನಿತ್ಯವಾಗಿವೆ. ಅಂತಹ ಭೂತಗಳಿಂದ ಅಂತಹ ಶರೀರಗಳನ್ನು ಸೃಜಿಸಿ, ಮತ್ತೆ ಅಲ್ಲೇ ಲಯವನ್ನು ಹೊಂದಿಸುವುದು ಶ್ರೀರಮಣನಿಗೆ ದುಷ್ಕರವಲ್ಲ.

ಶ್ರೀಶನು ಇಂತಹ ಮಹಿಮೆಯನ್ನು ತೋರಿಸಿದನೆಂದರೆ ಸ್ವಮಹಿಮಾ

ಸಂಪಾದನೆಗಲ್ಲ. ಅವನು ನಿತ್ಯಾನಂದ ಮಹೋದಧಿಯು, ಸ್ವಯಂಪೂರ್ಣನು ಆಗಿರುವನು. ಆದುದರಿಂದ ಸುಜೀವರಿಗೆ ಸದ್‌ಜ್ಞಾನವಾಗಲೆಂದು ಶ್ರೀಹರಿಯು ಅನಾಯಾಸವಾಗಿ ಲೀಲೆಯಿಂದ ಸೃಷ್ಟಿ ಸಂಹಾರಗಳನ್ನು ಮಾಡುತ್ತಿರುವನು. ಅಸಂಗೋಹಿ ಅಯಂ ಪುರುಷಃ - ಎಂದು ವೇದವು ಸಾರುತ್ತಿದೆ. ದೇಹಾರಂಭಕವಾದ ಕರ್ಮವಿರುವವರೆಗೂ ಆಯಾ ದೇಹಗಳಲ್ಲಿದ್ದು, ಅಲ್ಲಲ್ಲಿ ನಾನು ಎಂಬ ಭ್ರಮೆಯೂ ಇರುವುದು. ಕರ್ಮನಾಶವಾದ ಜೀವರಿಗೆ ಅಭಿಮಾನವಿಲ್ಲ. ಅವರು ಜೀವನ್ಮುಕ್ತರೆನಿಸುವರು. ಕರ್ಮ ವೈಚಿತ್ರ್ಯದಿಂದ ರೂಪ ವೈಚಿತ್ರವೂ ಸಿದ್ಧಿಸುವುದು. ಕರ್ಮ ಸ್ವಾಮಿಯಾದ ಶ್ರೀಶನಿಗೆ ಸರ್ವರೂಪದಾನ ಸಾಮರ್ಥ್ಯ ವಿದೆ; ಆದುದರಿಂದ, ಆತನಿಗೆ ಅಶಕ್ಯವಿಲ್ಲ.

ಮರಣವನ್ನು ಹೊಂದಿದ ಜೀವನನ್ನು ಇಂದ್ರಿಯಗಳು ಬಿಟ್ಟಿರುವುದಿಲ್ಲವೆಂದು ಅಶ್ವಮೇಧದ ಸಂಜ್ಞಪನ ಶ್ರುತಿಯು ಸಾರಿದೆ. ಸ್ವರೂಪೇಂದ್ರಿಯಗಳಿಂದ ಅವು ಸಂಯುಕ್ತವಾಗಿಯೇ ಒಂದು ಭಾಗದಿಂದ ಇದ್ದೇ ಇರುವವು. ಇಲ್ಲದಿರೆ ಜನ್ಮಾಂತರ ಕರ್ಮವಾಸನ, ಅದರಿಂದ ಕರ್ಮಕರಣ, ಫಲಭೋಗಗಳು ಕೂಡದೆ ಹೋದಾವು! ಲಿಂಗ ಶರೀರಭಂಗಪರ್ಯಂತವೂ, ಇಂದ್ರಿಯಗಳು, ಭೂತಗಳು ಸೂಕ್ಷ್ಮಾಂಶದಿಂದ ಮೃತನಿಗೂ ಇರುವವು. ಇಂತು ತಿಳಿದು ಜ್ಞಾನಿಗಳು ದೇಹಾಭಿಮಾನವನ್ನು ಬಿಟ್ಟು, ಕರ್ಮಗಳನ್ನು ನಾಶಗೊಳಿಸಿ (ಶ್ರೀಶನಿಗರ್ಪಿಸಿ) ತಂತಮ್ಮ ಯೋಗ್ಯಗತಿಯನ್ನು ದೇವಯಾನದಿಂದ ಪಯಣಿಸಿ, ಪಡೆಯುವರು. ನೀನಾದರೂ ಜನಮೇಜಯ! ಕರ್ಮಾಧಿಕೃತನಿರುವೆ! ಕರ್ಮ ಫಲವನ್ನು ಶ್ರೀಹರಿಗರ್ಪಿಸು! ಶ್ರವಣ ಚಿಂತನಗಳಿಂದ ನಿಶ್ಚಿತಜ್ಞಾನನಾಗು! ಗುಣಪೂರ್ಣನೆಂದು ಉಪಾಸಿಸಿ, ಶ್ರೀಶನ ಅಪರೋಕ್ಷವನ್ನು ಪಡೆಯಲು ಯತ್ನಿಸು! ಮುಕ್ತಸಂಶಯನಾಗು! ಮುಕ್ತನೂ ಆಗುವೆ!

ಮನಸ್ಸಿನಿಂದ ಮಾಡಿದ ಪಾಪವು ಮಾನಸಿಕ ತಾಪವನ್ನು, ಶರೀರದಿಂದ ಮಾಡಿದ ಪಾಪವು ಶರೀರ ರೋಗಾದಿ ತಾಪವನ್ನು ವಾಕ್ಕಿನಿಂದ ಮಾಡಿದ ಪಾಪವು ದುಷ್ಟ ವಾಗ್ಬಾಣ ತಾಪವನ್ನು ತಂದೊಡ್ಡುವುದು. ಆದುದರಿಂದ ಮನಃಶರೀರ ಚಾಪಲ್ಯಗಳನ್ನು ಬಿಟ್ಟು ವಿರಾಗವಂತನಾಗು! ಶ್ರೀಶನನ್ನು ತ್ರಿಕರಣಶುದ್ಧನಾಗಿ ಭಜಿಸು!'

ಆಗ ಜನಮೇಜಯನಿಂತು ಪ್ರಶ್ನಿಸಿದನು: 'ಸರಿ! ಶ್ರೀವ್ಯಾಸಾನುಗ್ರಹದಿಂದ ಧೃತರಾಷ್ಟ್ರನು ವಿರಾಗದಾರ್ಢ್ಯವನ್ನು ವಿದುರನು ಯೋಗಸಿದ್ಧಿಯನ್ನು ಹೊಂದಿದರು. ಶ್ರೀವ್ಯಾಸರ ದಯದಿಂದ ನಾನೂ ನಮ್ಮ ತಂದೆಯನ್ನು ನೋಡುವಂತಾದರೆ, ಆಗ ನನಗೆ ನಂಬಿಕೆಯು ದೃಢವಾದೀತು!' ಎಂದನು. ತತ್‌ಕ್ಷಣವೇ ಶ್ರೀವ್ಯಾಸದೇವನು ಅವನ ಸಂಶಯವನ್ನು ದೂರೀಕರಿಸಲೆಂದು ದಯಮಾಡಿ, ಅಲ್ಲಿ ಪ್ರತ್ಯಕ್ಷನಾದನು. ಜನಮೇಜಯನ ಪೂಜೆಯನ್ನು ಸ್ವೀಕರಿಸಿ ಶ್ರೀವ್ಯಾಸನು ಅವನಿಗೆ ತನ್ನ ತಪೋಬಲದಿಂದ ವಿಕುಂಠದಿಂದ ಪರೀಕ್ಷಿತನನ್ನೇ ಅಲ್ಲದೆ ಶಮೀಕಶೃಂಗಿ, ಸಚಿವರನ್ನೂ ಕರೆತರಿಸಿ, ತೋರಿಸಿದನು. ಜನಮೇಜಯನು 'ಧನ್ಯನಾದೆನೆಂ'ದು ಅವಭೃಥವನ್ನು ಮಾಡಿ, ಯಜ್ಞವನ್ನು ಮುಗಿಸಿ, ಶ್ರೀವ್ಯಾಸ ಚರಣಾರವಿಂದಗಳಿಗರ್ಪಿಸಿದನು. ಪರೀಕ್ಷಿದಾದಿಗಳು ಅಂತರ್ಧಿತರಾದರು. ಆಗ

ಆಸ್ತಿಕನು 'ಜನಮೇಜಯ! ಅಚ್ಚರಿಪಡಬೇಡ! ಅಚ್ಯುತ ವೇದವ್ಯಾಸನಿಗೆ ಅಶಕ್ಯವಿಲ್ಲ; ತಿಳಿ! ಶ್ರೀವ್ಯಾಸ ಸನ್ನಿಧಾನದಲ್ಲಿ ನಿನ್ನ ಯಜ್ಞವು ಸಾಂಗವಾಯಿತು. ನಿನಗೆ ಉಭಯ ಲೋಕಗಳೂ ಸಫಲ ಸಮೃದ್ಧವಾದವು. ನಿನ್ನ ತಂದೆಗೆ ವಿಕುಂಠಲೋಕವಾಗಿದೆ. ಅವನು ನಿನಗೆ ದರ್ಶನವಿತ್ತು ಶ್ರೀವ್ಯಾಸಾಜ್ಞೆಯಿಂದ ವಿಕುಂಠದ ಅಮುಕ್ತ ಸ್ಥಾನದಲ್ಲಿ ಸುಖವಾಗಿರುವನು. ಸರ್ಪಸತ್ರದ ಸಾಂಗತೆಯು ಸಂಪಾದಿತವಾಯಿತು. ಬಲು ಪುಣ್ಯಕರವಾದ ಭಾರತ ಕಥೆಯನ್ನು ವ್ಯಾಸ ಶಿಷ್ಯರಾದ ವೈಶಂಪಾಯನರಿಂದ ಕೇಳಿ, ಪುನೀತನಾಗಿರುವೆ! ಇನ್ನ ಸಂಶಯವು ದೂರವಾಯಿತಲ್ಲವೇ? ಧರ್ಮವಂತರಾರೋ, ಧರ್ಮಪಕ್ಷಪಾತಿಗಳಾರೋ, ಧರ್ಮಾಚಾರವಂತರಾರೋ, ಅಂತಹ ಸಚ್ಛೀಲರಿಗೆ, ಅಂತಹ ನಿಷ್ಠಾಪರಿಗೆ ಸದಾ ನಮಸ್ಕಾರವಿರಲಿ!'. ಆಗ ಜನಮೇಜಯನು ತಾನು ಕೇಳಿದ ಎಲ್ಲ ವಿಚಿತ್ರಗಳನ್ನೂ ಸತ್ಯವೆಂದು ತಿಳಿದು ವಿಶ್ವಾಸಭರಿತನಾದನು. 'ಭೀಮಸೇನನಿಂದ ಎಸೆಯಲ್ಪಟ್ಟ ಆನೆಗಳು ಅಂತರಿಕ್ಷದಿ ಹಾರಾಡುತ್ತಾ ಇದ್ದವು. ಕುರುಕ್ಷೇತ್ರದಲ್ಲಿ ಬೀಳುತ್ತಲಿರುವವು. ಜಾತ್ಯಂಧನಿಗೆ ದಿವ್ಯದೃಷ್ಟಿಯನ್ನಿತ್ತು ಮೃತರನ್ನು ತೋರಿಸಿದ ಶ್ರೀವ್ಯಾಸರು ಸಾಕ್ಷಾನ್ನಾರಾಯಣನು' ಎಂದಿತ್ಯಾದಿಗಳಲ್ಲಿ ವಿಶ್ವಾಸ ಮಾಡಿದನು.

ಆಸ್ತಿಕನ ಮಾತನ್ನಾಲಿಸಿ, ಜನಮೇಜಯನು ಭಕ್ತಿಭರಿತಚಿತ್ತನಾಗಿ, ಸಾತ್ಯವತೇಯನನ್ನು ಪೂಜಿಸಿದನು. ಆಮೇಲೆ ವೈಶಂಪಾಯನನ್ನೂ ಪೂಜಿಸಿ, ಮುಂದಿನ ವನವಾಸ ಕಥೆಯನ್ನು ಪೇಳೆಂದು ಪ್ರಾರ್ಥಿಸಿದನು.

## ೬. ಧೃತರಾಷ್ಟ್ರ ನಿರ್ಯಾಣ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು: 'ರಾಜನ್! ಇಂತು ಮಹದಾಶ್ಚರ್ಯವನ್ನು ಕಂಡು ಪಾಂಡವಾದಿಗಳೆಲ್ಲರು ಆಶ್ರಮಕ್ಕೆ ಹಿಂದಿರುಗಿ ಬಂದರು. ಧೃತರಾಷ್ಟ್ರನು ವೀತಶೋಕನಾಗಿ, ಲೋಕಪೂಜಿತನಾದ ವ್ಯಾಸದೇವನನ್ನು ಪೂಜಿಸಿದನು. ಶ್ರೀವ್ಯಾಸನು, 'ಧೃತರಾಷ್ಟ್ರ! ಕೇಳು! ವೇದವೇದಾಂಗವಿದರಿಂದ ಬಲು ಕೇಳಿ, ತಿಳಿದಿರುವೆ! ಶೋಕಕ್ಕೆಡೆಗೊಡಬೇಡ! ಅದೃಷ್ಟವನ್ನಾರೂ ಮೀರಲಾರರು. ನಾರದರಿಂದಲು ನನ್ನಿಂದಲು ದೇವರಹಸ್ಯವನ್ನೂ ತಿಳಿದಿರುವೆ! ಧರ್ಮರಾಜನು, ನಿನ್ನಲ್ಲಿ ಅನುರಕ್ತನೂ ವಿಧೇಯನೂ ಆಗಿರುವನು. ಇವನನ್ನಿಲ್ಲಿಂದ ಕಳಿಸಿಬಿಡು! ಅಭಿಮಾನಪಾಶವನ್ನು ಕಡೆದು ಬಿಡು; ಒಂದು ತಿಂಗಳಾಯಿತು ಇವರೆಲ್ಲರು ಇಲ್ಲಿಗೆ ಬಂದು! ಅಲ್ಲಿ ರಾಜ್ಯವನ್ನಾಳಿ, ಪ್ರಜಾರಂಜಕನಾಗುವುದನ್ನು, ಬಿಟ್ಟು ಧರ್ಮಜಾದಿಗಳು ಇಲ್ಲಿರಲಾಗದು. ಇಂದೇ ಕಳಿಸು!' ಎಂದು ಉಪದೇಶಿಸಿ ಅಂತರ್ಹಿತನಾದನು.

ಧೃತರಾಷ್ಟ್ರನು ಧರ್ಮಜನನ್ನು ಕರೆಸಿ, 'ಯುಧಿಷ್ಠಿರ, ನಿನಗೆ ಮಂಗಳವಾಗಲಿ. ನನ್ನ ಶೋಕಮೋಹಗಳು ನಷ್ಟವಾದವು. ನಿನ್ನ ಹದಿನೈದು ವರ್ಷದ ಸೇವೆಯಿಂದ ನಾನು ಪ್ರೀತನಾಗಿರುವೆನು. ನಿನ್ನಿಂದ ಪುತ್ರಫಲವನ್ನು ಕಂಡೆನು. ತಂದೆ ವೇದವ್ಯಾಸರ ದಯದಿಂದ

ಮೋಕ್ಷಫಲವನ್ನೂ ಕಾಣಬೇಕಲ್ಲವೇ? ಇನ್ನು ಹಸ್ತಿನಾವತಿಗೆ ತೆರಳು! ನನ್ನ ತಪಸ್ಸು ನಿರಂತರಾಯವಾಗಿ ಸಾಗಲು ಸಹಕರಿಸು. ನನ್ನ ಜೀವಿತ ಪ್ರಯೋಜನವು ಪೂರ್ಣವಾದಂತಾಗಿದೆ. ಇನ್ನು ಉಗ್ರತಪೋನಿರತನಾಗುವೆನು' ಎಂದನು.

ಆ ಮಾತಿಗೊಪ್ಪದೆ ಧರ್ಮರಾಜನು 'ನಾನೂ ಇಲ್ಲೇ ನಿಂತು ನಿನ್ನ ಸೇವೆಗೈಯುವೆನು. ಮತ್ತು ತಪವನ್ನೂ ಆಚರಿಸುವೆನು. ಮಿಕ್ಕ ನನ್ನ ತಮ್ಮಂದಿರು ಹೋಗಿ ರಾಜ್ಯವಾಳಲಿ! ನನ್ನನ್ನು ಹೋಗೆನ್ನಬೇಡ!' ಎಂದನು. ಗಾಂಧಾರಿಯು 'ಹಾಗಲ್ಲ! ಶ್ರೀಕೃಷ್ಣನ ಅಭಿಪ್ರಾಯದಲ್ಲಿ ಧರ್ಮರಾಜನು ಆಳಬೇಕೆಂದಿದೆ. ಧೃತರಾಷ್ಟ್ರನೂ ನಿನ್ನನ್ನು ಬೀಳ್ಕೊಟ್ಟಿರುವನು. ಹೋಗು, ರಾಜ್ಯವಾಳು. ಪ್ರಜರು ಸುಖಪಡಲಿ, ನಮ್ಮ ಉರ್ಧ್ವಗತಿಗೂ ನೀನೇ ಆಧಾರನಾಗು' ಎಂದಳು. ಧರ್ಮರಾಜನು ಕುಂತಿಯನ್ನು ನೋಡಿ 'ಅಂಬ ನಿನ್ನನ್ನು ಬಿಟ್ಟು ಹೋಗಲಾರದಿರುವೆನು. ನಿನ್ನ ತಪೋವಿಘ್ನವನ್ನು ಮಾಡಲಾಗದು. ತಪಸ್ಸು ಸರ್ವಶ್ರೇಯಸ್ಸಾಧಕವಾಗಿದೆ. ನನಗೂ ತಪಸ್ಸೇ ಬೇಕಾಗಿದೆ. ರಾಜ್ಯದಲ್ಲಿ ನನ್ನ ಮನಸಿಲ್ಲ. ಮಹೀಮಂಡಲವು ವೀರ ಶೂನ್ಯವಾಗಿದೆ. ಬಾಂಧವರು ಕ್ಷೀಣ ರಾಗಿರುವರು. ಪಾಂಚಾಲರಂತೂ ನಷ್ಟಪ್ರಾಯರಾಗಿರುವರು. ಉಳಿದ ಕೆಲರನ್ನು ಅಶ್ವತ್ಥಾಮನು ಕೊಂದು ಕೆಡಹಿದನು. ಚೇದಿ ಮಾತ್ಸ್ಯರೂ ಉಳಿದಿಲ್ಲ. ಶ್ರೀಕೃಷ್ಣ ಭುಜದಂಡ ರಕ್ಷಿತವಾಗಿ ಯಾದವಾನೀಕವು ಮಾತ್ರ ಉಳಿದಿದೆ. ಶ್ರೀಕೃಷ್ಣಾಜ್ಞೆ ಎಂದು ರಾಜ್ಯದಲ್ಲಿರಬೇಕಾಗಿದೆ. ತಾಯೇ, ನಿನ್ನ ಆಶೀರ್ವಚನದಿಂದ ನಮ್ಮನ್ನು ತಂಪಾಯಿಸಿ ಕಳಿಸು' ಎಂದನು.

ಕುಂತಿಯು ಸಹದೇವಾದಿ ಸುತರನ್ನಪ್ಪಿ ರೋದಿಸುತ್ತಾ 'ಪುತ್ರರೇ! ಹೋಗಿ ಸುಖವಾಗಿರಿ, ನಿಮ್ಮ ಪಂಥಾನಿಕರವು ಶಿವಂಕರವಾಗಲಿ ನೀವಿಂತು ಸ್ನೇಹ ದೋಹದರಾಗಿ ಇಲ್ಲಿದ್ದರೆ ನಮ್ಮ ತಪಸ್ಸು ಚೆನ್ನಾಗಿ ಸಾಗದು. ನಮ್ಮ ಕಾಲವೂ ಸಮೀಪಿಸುತ್ತಿದೆ' ಎಂದು ಆಶೀರ್ವದಿಸಿ ಕಳಿಸಿದಳು.

ಧೃತರಾಷ್ಟ್ರನು ವಿಗತ ದೋಷನಾಗಿ ಭೀಮಸೇನನನ್ನು ಕರೆದಪ್ಪಿ, 'ವತ್ಸ! ನಿನ್ನ ಉಪದೇಶದಿಂದ ನನ್ನ ಕುಮತಿಯು ನಷ್ಟವಾಯಿತು. ಚಿರಂಜೀವ ಎಂದು ಧರ್ಮರಾಜಾದಿಗಳನ್ನು ಸಂಭಾವಿಸಿ ಕಳಿಸಿದನು. ಪಾಂಡವರು ಆ ಮೂವರಿಗೆ ಪ್ರದಕ್ಷಿಣೆ ಮಾಡಿ, ವಂದಿಸಿ ಸಹಪರಿವಾರ ತರುಣಿ ಸೂದಸೇನಾ ನಿವಾಹರಾಗಿ ಪ್ರಯಾಣಿಸಿ ಹಸ್ತಿನಗರವನ್ನು ಸೇರಿ ಸುಖದಿಂದಿದ್ದರು.

ಆಮೇಲೆ ವರ್ಷದ್ವಯವು ಕಳೆದು ಕಿಂಚಿತ್ಕಾಲವಾಯಿತು. ಆಗ ಒಂದು ದಿನ ನಾರದನು ಧರ್ಮರಾಜನಲ್ಲಿಗೆ ಬಂದನು. ಬಂದ ದೇವಮುನಿಗೆ ವಂದಿಸಿ ಧರ್ಮಜನು 'ಪೂಜ್ಯನೇ! ನಿನ್ನನ್ನು ಕಂಡು ಬಹುಕಾಲವಾಯಿತು. ಎಲ್ಲಿಂದ ಬಂದೆ? ಏನು ವೃತ್ತಾಂತವು? ನಮ್ಮ ದೊಡ್ಡಪ್ಪನೆಂತಿರುವನು? ಗಾಂಧಾರೀ ಕುಂತಿಯರ ತಪಸ್ಸು ಚೆನ್ನಾಗಿ ಸಾಗಿದೆಯೇ?' ಎಂದು ಕೇಳಿದನು. ನಾರದನು 'ಅಹುದು, ಬಹುಕಾಲವಾಯಿತು; ನೋಡಬೇಕೆಂದೇ ತಪೋವನದಿಂದ ಬಂದಿರುವೆನು. ಸ್ಥಿರಚಿತ್ತನಾಗಿ ಧೃತರಾಷ್ಟ್ರನ

ವಾರ್ತೆಯನ್ನು ಕೇಳು. ಅಲ್ಲಿದ್ದು ನೋಡಿದ ಮುನಿಗಳು ಪೇಳಿದ್ದನ್ನು ತಿಳಿಸುವೆನು. ನಾನು ನೋಡಿದ್ದನ್ನೂ ಅರುಹುವೆನು.

ಧೃತರಾಷ್ಟ್ರನು ಬಂಧುಜನರೆಲ್ಲರೂ ಹಸ್ತಿನಾವತಿಗೆ ತೆರಳಿದ ಮೇಲೆ ತೀವ್ರ ತಪೋನಿರತನಾದನು. ಕಂದುಕವನ್ನು ಬಾಯಲ್ಲಿಟ್ಟು ಮಾತನ್ನು ಆಹಾರವನ್ನೂ ಬಿಟ್ಟು ಆತನು ವಾಯುಮಾತ್ರಾಹಾರನಾಗಿ, ಶ್ರೀಹರಿ ಚರಣಾರವಿಂದ ಸ್ಮರಣಾಮತ್ತನಾದನು. ಕುರುಕ್ಷೇತ್ರವನ್ನು ಬಿಟ್ಟು ಆತನು ಗಂಗಾದ್ವಾರದ ಸಪ್ತಸ್ರೋತೆ ಎಂಬ ತೀರ್ಥವನ್ನು ಸೇರಿ, ಅಲ್ಲಿ ಮತ್ತಿಷ್ಟು ತೀವ್ರವಾದ ತಪಸ್ಸನ್ನು ಮಾಡಿದನು. ಸಂಜಯನೂ ಅವರ ಹಿಂದೆ ಹೋದನು. ಯಾಜಕರೂ ಅಗ್ನಿಹೋತ್ರಗಳನ್ನು ಹೊತ್ತು ಅಲ್ಲೇ ಬಂದು ನೆಲಸಿದರು. ಧೃತರಾಷ್ಟ್ರನ ತಪಸ್ಸು, ಅಲ್ಲಿದ್ದ ಮುನಿಗಳಿಗೂ ಆಶ್ಚರ್ಯಜನಕವಾಯಿತು. ಆತನು ಆರು ತಿಂಗಳಾಗುವಷ್ಟರಲ್ಲಿ ತ್ವಗಸ್ಥಿ ಮಾತ್ರ ಶರೀರನಾದನು. ತಪಸ್ಸು ಬಿಡದೆ ಸಾಗಿತು. ಗಾಂಧಾರಿಯು ಜಲಾಹಾರಿಣಿಯಾದಳು. ಅವರ ಸೇವೆಗೈವ ಕುಂತಿಯು ಮಾಸೋಪವಾಸದಿಂದಿದ್ದಳು. ಸಂಜಯನು ಆರು ದಿನಕ್ಕೊಮ್ಮೆ ಜಲಫಲಗಳನ್ನು ಸ್ವೀಕರಿಸುತ್ತಿದ್ದನು. ಧೃತರಾಷ್ಟ್ರನಿರಲಿ, ಬಿಡಲಿ! ಯಾಜಕರು ಮಾತ್ರ ಹೊತ್ತಿಗೆ ತಪ್ಪಿಸದೆ ಅಗ್ನಿಹೋತ್ರಗಳಿಗೆ ಆಹುತಿಗಳನ್ನು ಕೊಡುತ್ತಿದ್ದರು. ಧೃತರಾಷ್ಟ್ರನು ಅನಿಕೇತನಾಗಿ ಅಂದರೆ ಮನೆಯನ್ನು ಬಿಟ್ಟು, ಅಕಾರವಾಚ್ಯ ವಾಸುದೇವನನ್ನು ಆಶ್ರಯಿಸಿದನು. ಸಂಜಯನು ಅವನ ಹಿಂದೆ ತಿರುಗಿ, ದಾರಿ ತೋರಿ ನಡೆಸುತ್ತಿದ್ದನು. ಕುಂತಿಯು ಗಾಂಧಾರೀ ಮಾರ್ಗದರ್ಶಕಳಾದಳು.

ಒಂದು ದಿನ ಧೃತರಾಷ್ಟ್ರನು ಗಂಗಾನದಿಯಲ್ಲಿ ಮಿಂದು, ಆಶ್ರಮಾಭಿಮುಖವಾಗಿ, ಸಂಜಯನಿಂದ ಕೂಡಿ, ಆಶ್ರಮವನ್ನು ಸೇರಿದನು. ಗಾಂಧಾರೀ ಕುಂತಿಯರೂ ಬಂದರು. ಮಂದಾಕಿನಿಯ ತೀರದ ಸಪ್ತಋಷಿವರರಿಂದ ಪಾವಿತವಾದ ಸಪ್ತಸ್ರೋತಾಶ್ರಮದಲ್ಲಿ ಧೃತರಾಷ್ಟ್ರನು ಉಪಶಾಂತಚಿತ್ತನಾಗಿ ಶ್ರೀಹರಿಯನ್ನು ಧ್ಯಾನಿಸಿದನು.

'ಸರ್ವಜಗತ್ತೂ ವಿರಂಚನ ಅಧೀನವಾಗಿದೆ. ವಿರಿಂಚನು ಶ್ರೀಹರಿಗೆ ಅಧೀನನು. ಶ್ರೀಹರಿಯು ಹೊರಗೆ ಕಾಲರೂಪನಾಗಿಯೂ, ಒಳಗೆ ಪುರುಷರೂಪನೂ ಆಗಿರುವನು. ಶ್ರೀಹರಿಗೆ ಸ್ವಗತಭೇದವಿಲ್ಲ' ಇಂತು ಚಿಂತಿಸುತ್ತಾ ಅವನು ಇಂದಿನಿಂದ ಐದನೆಯ (ಹಿಂದಿನ) ದಿನದಲ್ಲಿ ಧೃತರಾಷ್ಟ್ರನು ಶರೀರವನ್ನು ಬಿಡುವನು; ಅವನ ಶರೀರವು ದಾವಾಗ್ನಿಯಲ್ಲಿ ಭಸ್ಮೀಭೂತವಾಗುವುದು. ಕುಂತೀ ಗಾಂಧಾರಿಯರೂ ತಾವು ಕುಟಿಯಲ್ಲಿ ದಗ್ಧರಾದರು.

ರಾಜನ್! ಜೀವಸರ್ವಸ್ವಗಳಿಗೆ ಸ್ವಾಮಿಯಾದ ಶ್ರೀಹರಿಯ ಲೀಲೆ ಅತಾಶ್ಚರ್ಯಕರವಾಗಿದೆ! ಯಾರಿಗಾಗಿ ಶೋಕಿಸಿ ಏನು ಮಾಡುವುದಿದೆ! ನೀನಾರವರಿಗೆ? ಅಸ್ವತಂತ್ರರಾದ ಜೀವರ ಸಂಯೋಗ ವಿಯೋಗಗಳು ಸರ್ವಪ್ರಭು ಶ್ರೀಹರಿಯ ಇಚ್ಛೆಯಂತೆ ಸಂಭವಿಸುವವು! 'ನಾನಿಲ್ಲದಿರೆ ಮುದುಕರ ಪಾಡೇನು?' ಎಂಬುವ ಅಹಂಕಾರವನ್ನು ಬಿಡು! ಜ್ಞಾನವಂತನಾಗು! ಶ್ರೀಹರಿಯು ಭೂಭಾರಹರಣಕಾರ್ಯಕ್ಕಾಗಿ ಅವತರಿಸಿರುವನು.

ಆಯಿತಿನ್ನವನ ದೇವಕಾರ್ಯ! ಆನಂದಕಂದನೆಂದೀ ಮಹೀಮಂಡಲವನ್ನು ಬಿಡುವನೋ ಪಾಂಡವರೇ? ಎಚ್ಚರದಿಂದಿರಿ' ಇಂತು ನುಡಿದು ನಾರದನು ಅವರ ದುಃಖವನ್ನು ನೋಡಲಾರದೆ, ಹೊರಟುಹೋದನು.

ಆಗ ಸಂಜಯನೂ ಅಲ್ಲಿಗೆ ಬಂದಿದ್ದನು. ಧೃತರಾಷ್ಟ್ರನು ತನ್ನ ಔಪಾಸನಾಗ್ನಿಯನ್ನು ದಾವಾಗ್ನಿಯಲ್ಲಿ ಸಮಾಹಿತಗೊಳಿಸಿ, ದಗ್ಧನಾಗುವುದನ್ನು ಕಂಡು, ಅವನ ಅಪ್ಪಣೆಯಂತೆ ವಾರ್ತೆಯನ್ನರುಹಲು, ಉಳಿದು ಬಂದ ಸಂಜಯನು ಅಳುತ್ತಾ ಧರ್ಮಜನಿಗಿಂತೆಂದನು:

"ಧರ್ಮರಾಜ! ವನವಹ್ನಿ ಉರಿಯುತ್ತಾ ಬಂತು. ಕೆನ್ನಾಲಿಗೆಯಿಂದ ಗಿಡಗಂಟೆ ಮೃಗಗಳನ್ನು ನುಂಗುತ್ತಾ ಬರುವ ದಾವಾಗ್ನಿಯು ಸುತ್ತುಗಟ್ಟಿದಾಗ, ಧೃತರಾಷ್ಟ್ರನು 'ಸಂಜಯ! ತಪ್ಪಿಸಿಕೊಂಡು ಓಡಿಹೋಗು! ಉಳಿದು ವಾರ್ತೆಯನ್ನರುಹು! ನಾವು ಶ್ರೀಶಧ್ಯಾನರತರಾಗಿ ಶ್ರೀಹರಿಲೋಕಗಳನ್ನು ಸೇರುವೆವು. ನಮಗೆ ಮೃತ್ಯುವು ಅನಿಷ್ಟ ವಲ್ಲ. ಸರ್ವಸಂಗವನ್ನು ಬಿಟ್ಟು, ಶ್ರೀಶನಲ್ಲಿ ಮನವಿಟ್ಟ ತಾಪಸರಿಗೆ ಜಲ, ಅಗ್ನಿ, ಅನಶನ, ವಾಯುಗಳಿಂದ ಸಾವು ಪ್ರಶಸ್ತವೇ ಆಗಿದೆ. ಹೊರಡು!' ಎಂದು ನನ್ನನ್ನು ಕಳಿಸಿದನು. ಆತನು ಪ್ರಾಙ್ಮುಖನಾಗಿ ಕೂತನು. ಕುಂತೀ ಗಾಂಧಾರಿಯರೂ ಕುಟಿಯಿಂದ ಕದಲರಾರದೆ, ಅಲ್ಲೇ ಕೂತರು. ಒಂದೇ ಕ್ಷಣದಲ್ಲಿ ನಾನು ಇನ್ನೂ ಉಳಿದಿದ್ದ ಸ್ವಲ್ಪ ಬಲವನ್ನು ಉಪಯೋಗಿಸಿ, ದಾವಾಗ್ನಿಯಿಂದ ಪಾರಾಗಿ ಬಂದೆನು. ಅವರೆಲ್ಲರೂ ದಾವಾಗ್ನಿಯಲ್ಲಿ ಬೆಂದು ಬೂದಿಯಾದ ದುಃಖದ ವಾರ್ತೆಯನ್ನರುಹಲು ಬಂದ ಪಾಪಿ ನಾನು! ಹಿಂದೆ ಯಾಜಕರೂ ಬಂದಿರುವರು" ಇಂತು ನುಡಿದು ಸಂಜಯನು ರೋದಿಸತೊಡಗಿದನು.

ಸಿಡಿಲಂತೆ ಬಡಿದ ವಾರ್ತೆಯನ್ನು ಕೇಳಿ ಧರ್ಮಜಾದಿಗಳು ಮೂರ್ಛಿತ ರಾದರು. ಇಷ್ಟು ಬಂಧು ಜನರಿದ್ದೂ, ಅನಾಥನಂತೆ ವನವಹ್ನಿಗೆ ಸಿಕ್ಕು ಮೃತ ರಾದರಲ್ಲ! ನಮ್ಮ ತಾಯಿತಂದೆಗಳು! ಹಾ! ಎಂತಹ ಕಷ್ಟ! ನೂರು ಜನ ವೀರಸುತರನ್ನು ಪಡೆದ ವೈಚಿತ್ರ್ಯ ವೀರ್ಯನಿಗೆ ಒಬ್ಬ ಸುತನೂ ಉಳಿಯದಂತಾಗಿ ತಾನೂ ದಾವಾಗ್ನಿ ದಗ್ಧನಾಗುವ ಸ್ಥಿತಿ ಬಂತೇ? ಗಾಂಧಾರಿಯು ಹತಪುತ್ರಳಾಗಿದ್ದು ಪತಿಯಂತೆ ತಾನೂ ದಾವಾಗ್ನಿಗೆ ಸಿಲುಕಿ ಸತ್ತಳೆಂದರೆ ಅಷ್ಟು ಶೋಕಪಡಬೇಕಿಲ್ಲ. ಆದರೆ ಪುತ್ರರಿದ್ದು, ಮಮತೆಯಿಂದ ಸೇವಿಸುವ ಸೊಸೆಯರಿದ್ದು ನಮ್ಮ ಕುಂತಿದೇವಿಯು ಅನಾಥಳಾಗಿ ಮೃತಳಾದಳಲ್ಲ ಎಂಬ ಶೋಕವು ಅತ್ಯಂತ ತೀವ್ರವಾಗಿದೆ! ಕಾಲಗತಿಯು ಎಷ್ಟು ಸೂಕ್ಷ್ಮವಾಗಿದೆ! ಇಂತು ಬಂಧುಗಳ ಸಾವನ್ನು ಕೇಳಿಯೂ ಇನ್ನೂ ಬದುಕಿರುವೆವೆಂದರೆ ಧಿಕ್ಕಾರವಿರಲಿ ನಮ್ಮ ಜನ್ಮಕ್ಕೆ! ಧಿಕ್ಕಾರವಿರಲಿ ನಮ್ಮ ಹಿರಿಯರಿ ಗಾಗದ ಸಿರಿಸಂಪತ್ತುಗಳಿಗೆ; ಧರ್ಮ ಭೀಮಾರ್ಜುನರನ್ನು ಪೆತ್ತವಳಂತೆ! ಅನಾಥಳಾಗಿ ಕಾಡು ಕಿಚ್ಚಿಗೆ ತುತ್ತಾದಳಂತೆ! ಎಂತಹ ವಿಧಿಲೀಲೆ! ಅಗ್ನಿಯು ಸುಡುತ್ತಾ ಮೇಲೆರಗಿದಾಗ 'ಹಾ ತಾತ! ಪ್ರಿಯ! ಧರ್ಮಜ್ಞ! ವತ್ಸ! ಭೀಮಸೇನ! ಅರ್ಜುನ! ನಿನ್ನಿಂದ ತರ್ಪಿತನಾಗಿ ಖಾಂಡವವನ್ನು ಭಕ್ಷಿಸಿ ಪ್ರೀತನಾದ ಅಗ್ನಿಯೇ ಇಂದು ಕೃತಜ್ಞನಾಗಿ ನಿನ್ನ ತಾಯಿ ತಂದೆಯರನ್ನು ಸುಡುವುದನ್ನು ನೋಡು! ಭೀಮಸೇನ! ಬೇಗ ಬಾ! ಅರಗಿನ ಮನೆಯ

ಬೆಂಕಿಯಿಂದ ಪಾರು ಮಾಡಿದಂತೆ, ಈಗ ಬಾ ವನವಹ್ನಿಯಿಂದ ರಕ್ಷಿಸು! 'ಎಂದು ಎಷ್ಟು ಆರ್ತನಾದಗೈದಳೋ ನಮ್ಮ ತಾಯಿ! ಹಾ! ಕಷ್ಟಂ!

ಇಂತು ನಾನಾವಿಧ ಪ್ರಲಾಪಗಳಿಂದ ರೋದಿಸುವ ಪಾಂಡವಾದಿಗಳ ಶೋಕವಹ್ನಿಯು ಉದ್ದೀಪಿತವಾಯಿತು. ಅಂತಃಪುರವೆಲ್ಲವೂ ಆರ್ತಮೂರ್ತಿಯಾಯಿತು. ದ್ರೌಪದ್ಯಾದಿ ರಮಣೀ ಜನರ ಆಕ್ರಂದನ ಧ್ವಾನವು ಅತಿ ಕರುಣಾಜನಕವಾಯಿತು. ಆಗ ಧರ್ಮರಾಜನು ಧವಳಾಂಬರ ಸಂವೀತನಾಗಿ ಗಂಗಾತೀರಕ್ಕೆ ತೆರಳಿದನು. ಸೋದರರು, ದಾರೆಯರು ಹಿಂದೆ ಬಂದರು. ಪೌರಜಾನಪದರೂ ಗಂಗೆಯನ್ನು ಸೇರಿ, ರಾಜಭಕ್ತಿ ಪ್ರೇರಿತರಾಗಿ, ಉದಕದಾನದಿಂದ ಧೃತರಾಷ್ಟ್ರಾದಿಗಳನ್ನು ತರ್ಪಿಸಿದರು. ಧರ್ಮರಾಜಾದಿ ಪಾಂಡವರು ಯುಯುತ್ಸುವಿನನ್ನು ಮುಂದಿಟ್ಟುಕೊಂಡು, ಗಾಂಧಾರೀ ಧೃತರಾಷ್ಟ್ರರಿಗೆ ತಕ್ಕ ಕರ್ಮಕಲಾಪಗಳನ್ನು ನಡೆಸಿದರು; ತಾವು ಶ್ರದ್ಧೆಯಿಂದ ಕುಂತಿಗೆ ಮಾಡತಕ್ಕ ಔರ್ಧ್ವ ದೈಹಿಕ ಕಾರ್ಯಗಳನ್ನು ಮಾಡಿ ಮುಗಿಸಿದರು. ಗಂಗಾದ್ವಾರದಲ್ಲಿ ಹನ್ನೆರಡು ದಿನ ಪರ್ಯಂತವು ಅನ್ನ, ಪಾನ, ವಸನ, ಗೋ, ಹಿರಣ್ಯ, ಭೂ, ಶಯ್ಯಾದಿ ದಾನಗಳನ್ನಿತ್ತು ಧರ್ಮರಾಜನು ಯಾಚಕರನ್ನೂ, ವಿಪ್ರರನ್ನೂ ಸಂತೋಷಪಡಿಸಿದನು. ಬೇಡಿದ್ದನ್ನು ಇಲ್ಲವೆನ್ನದೆ ಕೊಟ್ಟು, ಧರ್ಮಜನು ಸಕಲ ಪ್ರಜರಿಗೂ ಪ್ರಶಂಸಾಪಾತ್ರನಾದನು.

ಇಂತು ಧರ್ಮರಾಜನ ನಗರದಲ್ಲಿ ಹದಿನೈದು ವರ್ಷಗಳು ರಾಜನಂತಿದ್ದು, ಧೃತರಾಷ್ಟ್ರನು ಮೂರು ವರ್ಷಗಳು ವನದಲ್ಲಿ ಋಷಿಯಂತಿದ್ದು ತಪಸ್ಸನ್ನು ಮಾಡಿದನು. ಆತನಿಗೆ ದಿವ್ಯ ಗಂಧರ್ವ ಗತಿಯಾಯಿತು. ಪವಿತ್ರತಮವಾದ ತಪಸ್ಸನ್ನು ಮಾಡಿ, ಆತನು ಪರಿಶುದ್ಧನಾದನು. ಪಶ್ಚಾತ್ತಾಪದಿಂದ ಆತನ ಮನಸ್ಸು ನಿಷ್ಕಲ್ಮಷವಾಯಿತು. ಶ್ರೀಶನ ನಿರಂತರ ಧ್ಯಾನದಿಂದ ಧೃತರಾಷ್ಟ್ರನು, ಗಾಂಧಾರಿಯು, ಕುಂತಿಯು, ಸರ್ವಪಾಪ ಮುಕ್ತರಾಗಿ ಸ್ವಯೋಗ್ಯ ಗತಿಯನ್ನು ಪೊಂದಲರ್ಹರಾದರು. ಗೋಪುರಕ್ಕೆ ಕಲಶವಿಟ್ಟಂತೆ ಪಾಂಡವರಂತಹ ಶ್ರೀಶಭಕ್ತರು, ಭಕ್ತಿ ಶ್ರದ್ಧೆಗಳಿಂದ, ಗಂಗಾತೀರದಲ್ಲಿ ಮಾಡಿದ ಉತ್ತರ ಕರ್ಮಕಲಾಪಗಳಿಂದ ಅವರು ಮೂವರು ಉತ್ತಮ ಲೋಕಗಳನ್ನು ಪೊಂದಿದರು. ಧೃತರಾಷ್ಟ್ರನು ಗಂಧರ್ವ ರಾಜನಾದನು. ಗಾಂಧಾರಿಯು ಅಲ್ಲಿಯೂ ಅವನ ಸತಿಯಾದಳು. ಕುಂತಿಯು ಪರಾವಹಿಯಾಗಿ ಪಾಂಡುರಾಜನ (ಪರಾವಹ) ಲೋಕವನ್ನು ಸೇರಿದಳು.

ಸಂಜಯನು ವಿರಕ್ತನಾಗಿ ಶ್ರೀವ್ಯಾಸಾಶ್ರಮವನ್ನು ಸೇರಿ, ಅಲ್ಲಿ ತೀವ್ರತಪಗೈದು, ತುಂಬುರು ಗಂಧರ್ವನಾದನು.

ಧರ್ಮರಾಜನು ನಿಹತಜ್ಞಾತಿ ಬಾಂಧವನು, ಪಿತೃವಿಯುಕ್ತನು ಆದುದರಿಂದ ಅತಿ ಪ್ರೀತನಾಗದೆ, ಪ್ರಜಾರಕ್ಷಣ, ಧರ್ಮಪಾಲನ, ದುಷ್ಟ ಶಾಸನಾದಿ ರಾಜ್ಯಕಾರ್ಯಗಳಲ್ಲಿ ತೊಡಗಿದ್ದರೂ, ಸಂತತವು ಶ್ರೀಕೃಷ್ಣಪಾದಾರವಿಂದ ಚಿಂತನಾಮೃತ ಪಾನರತನಾಗಿ ಹದಿನೆಂಟು ವರ್ಷಗಳ ಕಾಲವನ್ನು ಮತ್ತೆ ಕಳೆದನು.

ರಾಜಸೂಯ ಯಾಗದ ಕಾಲಕ್ಕೆ ಅರ್ಜುನನಿಗೆ ಐವತ್ತೈದು ವರ್ಷಗಳ ವಯಸ್ಸಿತ್ತು. ಆಮೇಲೆ ಒಂದು ವರ್ಷಕ್ಕೆ ರಾಜಸೂಯವು ಮುಗಿಯಿತು (೫೬). ಅದಾದ ನಂತರ

ವನವಾಸಾಜ್ಞಾತಗಳ ಹದಿಮೂರು ವರ್ಷಗಳಾದವು (೬೯). ಆಮೇಲೆ ಯುದ್ಧವಾಗಿ ಪಾಂಡವರು ವಿಜಯವನ್ನು ಗಳಿಸಿ, ಶ್ರೀಶ ದಯದಿಂದ ಅಭಿಷಿಕ್ತರಾದರು. ಅವರು ರಾಜ್ಯವನ್ನಾಳಿದ ಹದಿನೈದು ವರ್ಷಗಳಿಗೆ ಅಶ್ವಮೇಧವು ಮುಗಿಯಿತು (೮೪). ಆಗ ಧೃತರಾಷ್ಟ್ರನು ವಿರಕ್ತನಾಗಿ ವನಕ್ಕೆ ಪೋಗಿ, ಮೂರು ವರ್ಷಗಳಾದ ಮೇಲೆ ಮೃತನಾದನು. (೮೭). ಅನಂತರದಲ್ಲಿ ಪಾಂಡವರು ರಾಜ್ಯವಾಳಿದುದು ಹದಿನೆಂಟು ವರ್ಷಗಳು. ಪಾಂಡವರ ರಾಜ್ಯಕಾಲದ ಮೊತ್ತವು ಮೂವತ್ತಾರು ವರ್ಷವೆಂದು ತಿಳಿ! (೧೦೫).

ಜನಮೇಜಯ! ಆಮೇಲೆ ನಿಮ್ಮ ತಂದೆಯಾದ ಪರೀಕ್ಷಿತನು ರಾಜನಾಗಿ, ಅರವತ್ತು ವರ್ಷ ಕಾಲವಾಳಿ, ತಕ್ಷಕ ದಷ್ಟನಾಗಿ, ದಿವ್ಯಗತಿಯನ್ನು ಪೊಂದಿದನು.

ಇಂತು ಧೃತರಾಷ್ಟ್ರನ ದಿವ್ಯಗತಿಯನ್ನು ಹೇಳಿ, ಕೇಳಿದವರು ವಿಷಯ ವಿರಕ್ತಿ ಶ್ರೀಹರಿ ಭಕ್ತಿಗಳನ್ನು ಹೊಂದಿ, ಉಭಯ ಲೋಕಗಳಲ್ಲಿ ಸುಖಿಸುವರು.

ಆಶ್ರಮವಾಸಿಕ ಪರ್ವ ಮುಗಿಯಿತು



# ೧೬. ಮೌಸಲ ಪರ್ವ

## ೧. ವಿಪ್ರಶಾಪ ಯಾದವ ವಿನಶನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಇಂತು ಪಾಂಡವರು ಶ್ರೀಕೃಷ್ಣಾನುಗ್ರಹದಿಂದ ರಾಜ್ಯ ಸುಖಗಳನ್ನು ಅನುಭವಿಸುತ್ತಾ, ಸುಮಾರು ಹದಿನೆಂಟು ವರ್ಷಗಳನ್ನು ಕಳೆದರು.

ಆಗ ಶ್ರೀಕೃಷ್ಣನು ಕುರುಕ್ಷೇತ್ರವನ್ನು ಸೇರಿ, ಸತ್ರಯಾಗವನ್ನು ಪ್ರಾರಂಭಿಸಿ, ಹನ್ನೆರಡು ವರ್ಷಕಾಲವು ಬಲು ವಿಭವದಿಂದ ನೆರವೇರಿಸಿದನು. ಶ್ರೀಕೃಷ್ಣನು ಯಜಮಾನನಾಗಿ ದೀಕ್ಷಿತನಾದನು. ತಾನೇ ವೇದವ್ಯಾಸ ಪರಶುರಾಮ ರೂಪದಿಂದ ಋತ್ವಿಗ್ಗನ ವಲ್ಲಭನೂ ಆಗಿ ಸಕಲ ಕರ್ಮ ಕೌಶಲವನ್ನು ನಿಯಾಮಿಸುತ್ತಿದ್ದನು. ಸದಸ್ಯನೆಂದರೆ ಯಜ್ಞ ಸಭಾವಿಹಿತ ಕರ್ಮಕಲಾಪ ನಿಯಾಮಕನು. ದಕ್ಷ, ಭೃಗು ಮುಂತಾದವರು ಋತ್ವಿಕ್ಕುಗಳಾದರು. ಆ ಯಜ್ಞವನ್ನು ನೋಡಲು ಬ್ರಹ್ಮರುದ್ರೇಂದ್ರಾದಿ ದೇವತೆಗಳು, ಪಾಂಡವರಾದಿ ರಾಜನ್ಯರು, ಸಕಲ ವರ್ಣದ ಸುಜನರು ಬಂದರು. ಶ್ರೀಹರಿಪಾದ ವಿನಮ್ರರಾದವರೆಲ್ಲರೂ ನಿಂತು, ತಂತಮ್ಮ ಯೋಗ್ಯತೆಗೆ ತಕ್ಕ ವಿಹಿತ ಕರ್ಮವನ್ನು ಮಾಡಿದರು. ನಾರಾಯಣ ಪಾದ ಸಂಶ್ರಯರಾದ ನಾಗಗಂಧರ್ವಯಕ್ಷ ಸಿದ್ಧಸಾಧ್ಯ ಚಾರಣರಾದಿ ಸರ್ವಲೋಕದ ಸುಜನರು ಆ ಯಜ್ಞದಲ್ಲಿ ಭಾಗವಹಿಸಿ, ಅಂತುಗಾಣದ ಆನಂದವನ್ನು ಪೊಂದಿದರು.

ಆ ದಿವ್ಯ ಸಭೆಯಲ್ಲಿ ನಡೆದ ತತ್ತ್ವವಿಚಾರದಲ್ಲಿ ದೇವತೆಗಳು, ಬ್ರಾಹ್ಮಣವರರು. ಕಲೆತು ವಾದವಿವಾದಗಳನ್ನು ಮಾಡಿ, ಅಲ್ಲಿ ಸುಜನರಿಗಿದ್ದ ಸಂಶಯಗಳನ್ನು ನಿವಾರಿಸಿದರು. ಆ ಸಭೆಗೆ ಅಧ್ಯಕ್ಷರಾಗಿ ವಿರಾಜಿಸಿದ ಶ್ರೀವೇದವ್ಯಾಸ ಶ್ರೀಪರಶುರಾಮರೂಪಿ ಶ್ರೀಕೃಷ್ಣನ ವಚನಾಮೃತ ಪಾನಮಾಡಿ, ಸಕಲ ಸುಜನರು ಅಜ್ಞಾನಾನ್ಯಥಾಜ್ಞಾನಗಳನ್ನು ಕಳೆದುಕೊಂಡು, ಮೋಕ್ಷಸಾಧನ ಯಥಾರ್ಥಜ್ಞಾನವನ್ನು ಚೆನ್ನಾಗಿ ಪೊಂದಿ, ಮುಕ್ತರಂತಾದರು. ಜರಾಮರಣಾದಿ ದೋಷರಹಿತ ದೇವತೆಗಳಿಂದ ಕೂಡಿ, ವಿಹರಿಸಿ, ವಿಚಾರಿಸಿ, ವಿನಮಿಸಿ, ಕಾಮಭೋಜನರಾದರು. ಶ್ರೀಶನಿತ್ತ ವಸನದುಕೂಲಗಳನ್ನುಟ್ಟು, ಅವನ ನಿರ್ಮಾಲ್ಯವನ್ನು ಮುಡಿದು, ಅವನಿತ್ತ ದಿವ್ಯಾಲಂಕಾರ ಭೂಷಣಗಳನ್ನು ಧರಿಸಿ, ಅಲ್ಲಿ ನೆರೆದ ಯೋಗ್ಯಜನರು ಮುಕ್ತಪ್ರಾಯರೂ ಆದರು. ಬೇಡಿದ ಯೋಗ್ಯರಿಗೆ ಶ್ರೀಶನು ಮುಕ್ತಿಯನ್ನೂ ಕೊಟ್ಟು ಅನುಗ್ರಹಿಸಿದನು. ಆಗ ಕುರುಕ್ಷೇತ್ರವು ವೈಕುಂಠ ಸದೃಶವಾಯಿತು; ಏಕೆಂದರೆ ಅಲ್ಲಿ ಎಲ್ಲ ಸುಜನರು ಮಾತ್ರ ಕಲೆತು ವಿಹರಿಸಿದರು. ಎಲ್ಲರೂ ಸ್ವಯೋಗ್ಯ ಕಾಮಿತಗಳನ್ನು ಸಂಕಲ್ಪದಿಂದಲೇ ಹೊಂದಿದರು. ಪ್ರಯಾಸವಿಲ್ಲದೆ ಅವರಿಗೆ ನಿತ್ಯವೂ ಶ್ರೀಕೃಷ್ಣನ ದಿವ್ಯದರ್ಶನವಾಗುತ್ತಿತ್ತು.

ಇಂತು ದ್ವಾದಶಾಬ್ದಸಮ್ಮಿತವಾದ ದಿವ್ಯಯಾಗವನ್ನು ಮುಗಿಸಿ, ಶ್ರೀಶನು ಯಮುನೆಯಲ್ಲಿ ಅವಬೃಥವನ್ನು ನೆರವೇರಿಸಿದನು. ಅಲ್ಲಿ ಅವಬೃಥವನ್ನು ಭಗವನ್ಮೂರಿತ್ರಯದಿಂದ ಕೂಡಿ ಮಾಡಿದವರು ವಿರಜಾಸ್ನಾನ ಮಾಡಿದರು. ಅಲ್ಲಿ ಶ್ರೀಶನನ್ನು ಶ್ರೀಮುಖ್ಯ ಪ್ರಾಣವಲ್ಲಭನೆಂದು ನೋಡಿ ತಿಳಿದವರು ಶ್ರೀಬಿಂಬನನ್ನು ತಿಳಿದಂತಾದರು. ಅಲ್ಲಿ ನೆರೆದು ಶ್ರೀಶ ಸೇವೆಗೈದವರು ಸಕಲಸಾಧನ ಸಂಪೂರ್ಣರಾದರು.

ಆಗ ಶ್ರೀಕೃಷ್ಣನು ಎಲ್ಲರನ್ನೂ ಯಥಾ ಯೋಗ್ಯವಾಗಿ ಸತ್ಕರಿಸಿ ಕಳಿಸಿಕೊಟ್ಟನು. ಬಹುಮಾನಗಳನ್ನು ಸ್ವೀಕರಿಸಿ ಬಂದ ಜನರೆಲ್ಲರೂ ಹಿಂದಿರುಗುವುದಕ್ಕೆ ಒಂದು ವರ್ಷವಾಯಿತು. ಇಂತು ಶ್ರೀಕೃಷ್ಣನು ದುಷ್ಟಸಂಹರಣ, ಶಿಷ್ಟಸಂರಕ್ಷಣ, ಯಜ್ಞಾದಿ ಸಕಲ ಧರ್ಮಕರಣ, ಸುಜನ ತತ್ವಜ್ಞಾನ ಧಾರಣಗಳನ್ನು ಮಾಡಿ, ಇನ್ನು ತನ್ನ ಅವತಾರ ಕಾರ್ಯವಾಯಿತೆಂದು ತಿಳಿದನು; ಭೂಮಿಯನ್ನು ಸ್ವಾಮಿಯು ಬಿಡಲೆಣಿಸಿದನು; ಅಂತು ಮಾಡುವುದಕ್ಕೆ ಮುಂಚಿತವಾಗಿ ತನ್ನ ಯಾದವ ಕುಲವನ್ನು ತಾನೇ ಉಪಸಂಹರಿಸಲು ನಿಶ್ಚಯಿಸಿದನು. ಆಗ ಶ್ರೀಶನ ಅವತಾರವಾಗಿ ನೂರ ಏಳನೆಯ ವರ್ಷವು ನಡೆಯುತ್ತಿತ್ತು. ಆ ಕಾಲವನ್ನು ನಿರೀಕ್ಷಿಸಿ ಕಾಲರೂಪಿಯು ಕಾದು, ಪಾಂಡವರಿಂದ ಕೂಡಿ ಭೂಮಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು.

ದುರ್ಯೋಧನನೆಂದು ಬಿದ್ದನೋ, ಅಂದೇ ಕಲಿಯುಗವು ಪ್ರಾರಂಭವಾಯಿತು. ನಿಜ! ಆದರೂ ಶ್ರೀಶ ಶ್ರೀಪಾಂಡವರಿರುವವರೆವಿಗೂ ಅಂದರೆ ಮೂವತ್ತಾರು ವರ್ಷಗಳ ಕಾಲವೂ ಕಲಿಯುಗವು ಕೃತಯುಗ ಸಮವೆನಿಸಿತ್ತು. ಅಲ್ಪಪುಣ್ಯಕ್ಕೆ ಅಧಿಕ ಫಲವಿದ್ದು, ಬಹುಪಾಪಕ್ಕೂ ಸ್ವಲ್ಪ ಫಲವಿರುವುದರಿಂದ, ಒಂದು ರೀತಿಯಾಗಿ ಕಲಿಯು ಕೃತಯುಗವನ್ನೂ ಮೀರಿತ್ತು. ಇಂತು ಸಕಲ ಸುಜನರು ಹರಿಭಕ್ತಿ ಪರಾಯಣರಾಗಿರಲು, ಕಲಿಯುಗದ ಚಿಹ್ನಗಳು ಹಿಂಸಾ, ಅನೃತ, ದಂಭ, ಕಲಹ, ವಂಚನಾದಿಗಳು ತಲೆದೋರದಾದವು, ಕಲಿಯುಗದ ಲಕ್ಷಣಗಳೇ ಇಲ್ಲದಿರೆ, ಕಲಿಯುಗವೇ ಇಲ್ಲದಂತಾದೀತೆಂದು, ಕಾಲನಾಮಕ ಶ್ರೀಶಾನುಮತರಾದ ಬ್ರಹ್ಮ ರುದ್ರೇಂದ್ರಾದಿ ದೇವತೆಗಳೂ, ಕಶ್ಯಪಾದಿ ಮುನಿಗಳೂ ಕಲೆತು, 'ಶ್ರೀಕೃಷ್ಣ! ಅನಿತ್ಯತ್ವ, ದೇವಹಾನಿ, ದುಃಖಪ್ರಾಪ್ತಿ, ಅಪೂರ್ಣತೆಗಳೆಂದು ನಾಲ್ಕು ವಿಧವಾದ ನಾಶವಿಲ್ಲದ ಶ್ರೀಶ! ಅಚ್ಯುತ! ಅನಂತ! ಗೋವಿಂದ! ನಿನ್ನ ಮನಸ್ಸಿಗೆ ಬಂದರೆ ನಿನ್ನ ಲೋಕಕ್ಕೆ ಬಂದುಬಿಡು! ಭೂತಲವನ್ನು ಈ ರೂಪದಿಂದ ಬಿಡು! ನಮ್ಮ ಲೋಕಗಳಿಗೆ ನಿನ್ನ ದಿವ್ಯರೂಪಗಳಿಂದ ಬಂದು, ನಮ್ಮ ಪೂಜೆಯನ್ನು ಸ್ವೀಕರಿಸುವ ಅನುಗ್ರಹವನ್ನು ಮಾಡು! ಸುಜನ ಬಾಹುಲ್ಯದಿಂದ ಕಲಿ ಧರ್ಮಗಳು ಪ್ರವೃತ್ತವಾಗದಂತಿವೆ! ಶ್ರೀಹರೇ! ಯುಗಧರ್ಮ ಪ್ರವರ್ತಕನಾಗು!' ಎಂದು ಪ್ರಾರ್ಥಿಸಿದರು. 'ಓಂ' ಎಂದು ತನ್ನ ಸಮ್ಮತಿಯನ್ನು ತೋರಿ ಶ್ರೀಕೃಷ್ಣನು ಅವರನ್ನು ಸಂಭಾವಿಸಿ, ಕಳಿಸಿದನು.

ಸತ್ಯಸಂಕಲ್ಪನಾದ ಶ್ರೀಶನು ಸ್ವಕುಲವನ್ನು ಉಪಸಂಹರಿಸಲೆಣಿಸಿದನು. ಪರಸ್ಪರರಿಂದಲಲ್ಲದೆ, ಸ್ವವೀರ್ಯಜರು, ಬಲವಂತರು ಆದ ಯಾದವವೀರರು ಸಾಯರೆಂದು, ಶ್ರೀಶನು ವಿಪ್ರಶಾಪವೆಂಬ ವ್ಯಾಜದಿಂದ ಅವರ ನಾಶಬೀಜವನ್ನು ಬಿತ್ತಿದನು. ಆಗ

ದ್ವಾರಕೆಯಲ್ಲಿ ದುಶ್ಶಕುನಗಳು ತಲೆದೋರಿದವು. ಸರ್ವಾನಿಷ್ಟಗಳನ್ನು ಸ್ಮೃತಿಮಾತ್ರದಿಂದ ನಿವಾರಿಸುವ ಮಂಗಳ ದೇವತಾರಮಣನಿರುವಲ್ಲಿ ಅರಿಷ್ಟಗಳು ಮೂಡಿ ಬಂದವೆಂದರೆ, ಅವನ ಸಂಕಲ್ಪದಿಂದಲೇ ಎಂದು ತಿಳಿ! ಕಾಲಾಯ ತಸ್ಮೈನಮಃ!

ಗಾಳಿ ಘರ್ಘರಾರವವಾಗಿ ಬೀಸಿತು. ಅಂಬರದಿಂದ ಉಲ್ಕೆಗಳು ಉದುರಿದವು. ಮರಳಿನ ಮಳೆಗರೆಯಿತು. ಪಕ್ಷಿಗಣವು ಅಪಸವ್ಯವಾಗಿ ತಿರುಗುತ್ತಾ ವಿಕಾರವಾಗಿ ಕೂಗಿದವು. ನದಿಗಳು ಪಂಕಿಲವಾದವು. ದಿಕ್ಕುಗಳಲ್ಲಿ ಕತ್ತಲು ಕವಿಯಿತು. ಆದಿತ್ಯ ಮಂಡಲವು ತೇಜೋಹೀನವಾಯಿತು. ಸೂರ್ಯ ಚಂದ್ರರಿಗೆ ಗೂಡುಕಟ್ಟಿ ನಿಂತವು. ಹೃದಯೋದ್ವೇಗಕರವಾದ ಬಲು ಉತ್ಪಾತಗಳನ್ನು ಕಂಡು ಸಕಲ ಜನರು ಭಯಕಂಪಿತರಾದರು.

ಒಂದು ದಿನ ದ್ವಾರಕೆಯ ಸಮೀಪದ ಪಿಂಡಾರಕ ಕ್ಷೇತ್ರದಿಂದ ಬಂದ ಕಶ್ಯಪ ವಿಶ್ವಾಮಿತ್ರ ಕಣ್ವದುರ್ವಾಸನಾರದಾದಿ ತಪೋಧನರನ್ನು ಕಂಡು, ಅಲ್ಲಿ ವಿಹಾರಪರರಾಗಿದ್ದ ಸಾರಣಗದಸಾಂಬಾದಿ ಯದುವೀರರು, ಕಾಲವಿಹತ ಬುದ್ಧಿಗಳಾಗಿ, ಪರೀಕ್ಷಿಸಲೆಣಿಸಿದರು. ಸಾಂಬನಿಗೆ ಸ್ತ್ರೀವೇಷವನ್ನು ಕೊಟ್ಟು, ಹೊಟ್ಟೆಗೆ ಬಟ್ಟೆಗಳನ್ನು ಇಟ್ಟು, ಕರೆತಂದು 'ಪುತ್ರಕಾಮನಾದ ಬಭ್ರುವಿನ ತರುಣಿ ಇವಳು; ಗರ್ಭಿಣಿಯಾಗಿರುವಳು. ಏನನ್ನು ಹೆರುವಳೋ ತಿಳಿಸಿ!' ಎಂದು ಕುಹಕವಾಡಿದ ದಾಶಾರ್ಹರನ್ನು ನೋಡಿ ಮುನಿಗಳು ಕುಪಿತರಾದರು. 'ಸಾಂಬನಿವನು! ವೃಷ್ಣ್ಯಂಧಕದಾಶಾರ್ಹಕುಲನಾಶಕವಾಗುವ ಮುಸಲವಿವನಿಗೆ ಪುಟ್ಟುವುದು! ರಾಮಕೃಷ್ಣರನ್ನುಳಿದು ನೀವೆಲ್ಲರೂ ಅದರಿಂದ ಕಡಿದಾಡಿ ಸಾಯುವಿರಿ! ಅದರ ಒಂದಂಶದಿಂದ ಶ್ರೀಕೃಷ್ಣನು ಪರಂಧಾಮವನ್ನು ಪೊಂದುವನು!' ಇಂತು ಶಾಪವಿತ್ತು ಮುನಿಗಳು ತೆರಳಿ ಪೋದರು.

ಯದುಕುಮಾರರು ಭೀತರಾಗಿ ಬಿಚ್ಚಿ ನೋಡಿದಾಗ ಸಾಂಬನ ಉದರದಿಂದ ಒಂದು ಅಯಸ್ಮಯವಾದ ಮುಸಲವು ಕೆಳಬಿತ್ತು. ಆ ವೃತ್ತಾಂತವನ್ನು ಕೇಳಿ, ಕೃತಾಂತನನ್ನು ನಿಯಮಿಸಬಲ್ಲವನಾದರೂ, ಶ್ರೀಕೃಷ್ಣನು ಅನ್ಯಥಾ ಮಾಡದೆ, ವಿಪ್ರಶಾಪವೆಂದು ಗೌರವಿಸಿ, ಅನುಮೋದಿಸಿದನು. ಯಮಕಿಂಕರನಂತೆ ಭಯಂಕರವಾದ ಮುಸಲವನ್ನು ಉಗ್ರಸೇನನ ಆಜ್ಞೆಯಂತೆ ಪುಡಿ ಪುಡಿಯಾಗಿ ಅರೆದು ಯಾದವರು ಅದನ್ನು ಸಮುದ್ರದಲ್ಲಿ ಬಿಸುಟಿ ಬಿಟ್ಟರು. 'ಇಂದಿನಿಂದ ಯಾರೂ ಸುರೆಯನ್ನು ಸೇವಿಸಬಾರದು; ಬಲರಾಮ ದೇವನ ಆಜ್ಞೆ! ಉಗ್ರಸೇನ ಮಹಾರಾಜನ ಶಾಸನವಿದು! ತಪ್ಪಿ ಕುಡಿದವರಿಗೆ ಶೂಲಾರೋಪಣವೇ ಶಿಕ್ಷೆ! ತಿಳಿಯಿರಿ!' ಎಂದು ನಗರದಲ್ಲಿ ಸಾರಲಾಯಿತು. ಎಲ್ಲರೂ ಅಪ್ರಮತ್ತರಾಗಿದ್ದರು. ಆದರೂ ಯಮರಾಜನು ಬಿಡದೆ ಅವರೆಲ್ಲರ ಮನೆಗಳನ್ನು ಹೊಕ್ಕು ಇಣಿಕಿಸಿ ನೋಡುತ್ತಿದ್ದನು. ಕರಾಳವದನನು, ದೀರ್ಘರದನನು, ಕೃಷ್ಣಪಿಂಗಳನು, ನೇತ್ರ ರಕ್ತಕಮಲದಳನು ಆದ ಕಾಲಪುರುಷನನ್ನು ಆಗಾಗ ನೋಡಿ, ಪುರಜನರು ಎದೆಗುಂದಿದರು. ಇಲಿಗಳು ಬೀದಿಗಳಲ್ಲಿ ಓಡಾಡಿದವು. ಮನೆಯಲ್ಲಿದ್ದ ಗಡಿಗೆಗಳು ತಾವಾಗಿ ಒಡೆದವು. ಮಲಗಿದವರ ಕೂದಲನ್ನು ಉಗುರನ್ನು ಇಲಿಗಳು ಕಡಿದವು. ಶಾರಿಕೆಗಳು ಪಂಜರದಲ್ಲಿ

ಚೀಚೀ ಎಂದೊದರಿ ಸತ್ತು ಬಿದ್ದವು. ಸಾರಸ ಪಕ್ಷಿಗಳು ಗೂಬೆಗಳಂತೆ ಕೂಗಿದವು. ಮೇಕೆಗಳು ನರಿಗಳಂತೆ ದೀರ್ಘರೋದನಗೈದವು. ನಾಯಿಗಳು ಮುಖವೆತ್ತಿ ಹೋ ಎಂದು ಅತ್ತವು. ಪಾರಿವಾಳಗಳು ಯದುವೀರರ ಮನೆ ಹೊಕ್ಕವು. ಪಾಪವನ್ನು ಮಾಡಿಯೂ ಲಜ್ಜಿತರಾಗದೆ, ದಂಡಿಸುವ ವಿಪ್ರಾದಿಗಳನ್ನು ಯದುಗಳು ದ್ವೇಷಿಸತೊಡಗಿದರು. ದೇವಗುರು ವೃದ್ಧರನ್ನು ಅವಮಾನಿಸುವುದಂತೂ ಅವ್ಯಾಹತವಾಗಿ ಸಾಗಿತ್ತು. ಪತ್ನಿಯರು ಪತಿಗಳಿಗೆ ಮೋಸ ಮಾಡಿದರು. ಪತಿಗಳು ಸತೀವಂಚಕರಾದರು. ಅಗ್ನಿಜ್ವಾಲೆಗಳು ಅಪ್ರದಕ್ಷಿಣವಾದವು. ಇದ್ದಕ್ಕಿದ್ದಂತೆ ಬಡಿಸಿದ ಅನ್ನಾದಿಗಳಲ್ಲಿ ಕ್ರಿಮಿಗಳು ಕಾಣಿಸಿಕೊಂಡವು. ಪುಣ್ಯಾಹ ವಾಚನವಾಗುವಾಗಲು, ಜಪಕಾರ್ಯವು ನಡೆಯುವಾಗಲು, ಯಾರೋ ಓಡಿಬಂದಂತಾಗಿ, ನೋಡಿದರೆ ಯಾರೂ ಕಾಣಬರುತ್ತಿದ್ದಿಲ್ಲ. ಗ್ರಹಯುದ್ಧಗಳು ಸಂತತವಾಯಿತು. ಕತ್ತೆಗಳು ದಾರುಣರವದಿಂದ ಓಡುತ್ತಿದ್ದವು. ಪಾಂಚಜನ್ಯದ ಶಬ್ದ, ಸುದರ್ಶನದ ಸಂಚಾರಗಳು ಅಪರೂಪವಾದವು. ಶ್ರೀಹೃಷೀಕೇಶನು ಎಲ್ಲವನ್ನೂ ನೋಡಿ, 'ಭಾರತರಣದಲ್ಲಾದಂತೆ ಮತ್ತೆ ಹದಿಮೂರೇ ದಿನಗಳ ಕೃಷ್ಣ ಪಕ್ಷವೀಗ ಸಂಭವಿಸಿದೆ ! ಗಾಂಧಾರೀ ಶಾಪವನ್ನೂ, ವಿಪ್ರಗರ್ಗರ ಶಾಪಗಳನ್ನೂ- ನನ್ನ ಇಚ್ಛೆಗೆ ಅನುಕೂಲವಾಗಿರುವುದರಿಂದ- ಸತ್ಯಮಾಡುವ ಕಾಲವು ಬಂದಿದೆ! ಎಂತಹ ಪವಿತ್ರತಮ ಕ್ಷೇತ್ರವಾದರೂ ದ್ವಾರಕೆಯನ್ನು ಬಿಟ್ಟು ದೂರದ ಕ್ಷೇತ್ರಕ್ಕೆ ಹೊರಡುವುದು ಶ್ರದ್ಧಾಜನಕವಾಗಿದೆ; ಸ್ವಗೃಹ ಮರಣಕ್ಕಿಂತಲು ಅಲ್ಪವಾದರೂ ದೂರ ಕ್ಷೇತ್ರದ ಮರಣವು ಪುಣ್ಯತರವಾಗಿದೆ. ಮತ್ತು ನನ್ನಿಂದ ತ್ಯಕ್ತವಾದ ದ್ವಾರಕೆಯನ್ನು ಸಮುದ್ರರಾಜನು ಮತ್ತೆ ನುಂಗಿ ಸ್ವಾಧೀನಪಡಿಸಿಕೊಂಬುವಂತೆ ಆಗಲಿ !' ಎಂದು ಚಿಂತಿಸಿದನು. ಕೇಶವಶಾಸನದಂತೆ ಸರ್ವ್ವಯಾದವರು ಪ್ರಭಾಸಕ್ಕೆಂದು ಹೊರಟರು.

ಕಪ್ಪು ಬಣ್ಣದ, ಕರಾಳವದನದ, ಕೋರೆತೀಡಿದ ನಾರಿಯು ಮಾರಿಯಂತೆ ರಾತ್ರಿ ಸ್ವಪ್ನಗಳಲ್ಲಿ ಯದುತರುಣಿಯರ ಮಂಗಲ ಸೂತ್ರಗಳನ್ನು ಕಿತ್ತು ಹರಿಸುತ್ತಿದ್ದಳು. ರಾಕ್ಷಸಗು ದಂಡೆತ್ತಿ ಬಂದು ಧ್ವಜಚ್ಛತ್ರ ಭೂಷಣಗಳನ್ನು ಕದ್ದೊಯ್ದಂತೆ, ಅಗ್ನಿಹೋತ್ರಗಳಲ್ಲಿ ರಕ್ತವ ಮಳೆಗರೆದಂತೆ ಕನಸಾಗಿ, ಯದುಗಳು ಕಂಗಾಲಾದರು. ಅಗ್ನಿಸಮರ್ಪಿತವು, ಅಯೋಮಯವು, ದೈತ್ಯಭಯಂಕರನು ಆದ ಸುದರ್ಶನ ಚಕ್ರವು ಹಾರಿ ಹೋಯಿತು. ಆದಿತ್ಯವರ್ಣವಾದ ದಿವ್ಯಕನಕರಥವು, ಅದಕ್ಕೆ ಕಟ್ಟಿದ್ದ ಶೈಬ್ಯಸುಗ್ರೀವ ಮೇಘಪುಷ್ಪ ಬಲಹಾ ನಾಮಕ ದಿವ್ಯಾಶ್ವಗಳು, ಛತ್ರ ಧ್ವಜಗಳು, ದಿವ್ಯಾಯುಧಗಳಾದ ನಂದಕ ಶಾರ್ಙ್ಗ ಕೌಮೋದಕೀ ಶತಚಂದ್ರ ಪಾಂಚಜನ್ಯಗಳು, ರಾಮದೇವನ ಮುಸಲಹಲಗಳು ಎಲ್ಲವೂ ಶ್ರೀಕೃಷ್ಣರಾಮರಿಂದ ಸಮರ್ಪಿತವಾಗಿ, ದಾರುಕನು ನೋಡ ನೋಡುತ್ತಿದ್ದಂತೆ ಆಕಾಶಕ್ಕೆ ಹಾರಿ ಅದೃಶ್ಯವಾದವು.

ಆಗ ಇನ್ನಿಲ್ಲಿ ನಿಲ್ಲಬಾರದೆಂದು ತಿಳಿದು, ವೃಷ್ಣಿದಾಶಾರ್ಹಾಂಧಕ ಯದುವರರು ತಂತಮ್ಮ ಪರಿವಾರದಿಂದ ಕೂಡಿ ದ್ವಾರಕೆಯನ್ನು ಬಿಟ್ಟು, ಕೆಲ ತರುಣೀ ಜನರನ್ನು ಪಿಂಡಾರಕಕ್ಕೆ ಕಳಿಸಿ, ಅವರು ಪ್ರಭಾಸಕ್ಕೆ ತೆರಳಿದರು. ಉದ್ಧವನು

ಮಾತ್ರ ಅವರಂತೆ ಕಡಿದಾಡಿ ಸಾಯದೆ, ಉಳಿದು, ಶ್ರೀಶ ಕೃಪೆಯಿಂದ ದಿವ್ಯತತ್ತ್ವಗಳನ್ನು ತಿಳಿದು, ಪಿಪ್ಪಲ ಮೂಲದಲ್ಲಿ ಅಪಿಪ್ಪಲನನ್ನು ಬಿಡಲಾರದೆ ಬಿಟ್ಟು, ಅವನ ಆಜ್ಞೆಯಂತೆ ಬದರಿಕಾಶ್ರಮಕ್ಕೆಂದು ಹೊರಟುಹೋದನು. ವಿಪ್ರಶಾಪವನ್ನು ವ್ಯರ್ಥವಾಗಿಸಲು ಸಮರ್ಥನಾಗಿದ್ದೂ, ಶ್ರೀಕೃಷ್ಣನು ಕಾಲವನ್ನು ಉಪಲಕ್ಷಿಸಿ, ವಿಪ್ರರ ಗೌರವವನ್ನು ಉಳಿಸಿ, ಸರ್ವಯಾದವರನ್ನೂ ನಾಶಪಡಿಸಿದನು.

ಯಾದವರು ಪ್ರಭಾಸವನ್ನು ಸೇರಿ, ಅಲ್ಲಿ ಬೇಕಾದ ದಾನಗಳನ್ನು ಮಾಡಿದರು. ಕೆಲವರು ವಿಪ್ರರಿಗಾಗಿ ತಯಾರಿಸಿದ ಮೃಷ್ಟಾನ್ನವನ್ನು ವಾನರಮಾರ್ಜಾಲ ಶುನಕಗಳಿಗೆ ಚೆಲ್ಲಿದರು. ತೂರ್ಯಗಳು ಮೊಳಗುತ್ತಿರಲು ಮಹಾ ಮೈರೇಯವನ್ನು ಕುಡಿದು, ಅವರು ಮದಮತ್ತರಾಗಿ ಜಗಳವಾಡಿದರು. ರಾಮಕೃಷ್ಣರ ಸನ್ನಿಧಾನದಲ್ಲಿ, ಭಯವಿಲ್ಲದೆ ಕುಡಿದು, ತಿಂದು, ಯುಯುಧಾನ, ಕೃತವರ್ಮ, ಗದ, ಬಭ್ರು, ಸಾರಣ, ಪ್ರದ್ಯುಮ್ನ, ಸಾಂಬಾದಿಗಳು ಮನಬಂದಂತೆ ವರ್ತಿಸಿದರು.

ಸಾತ್ಯಕಿಯು ಕೃತವರ್ಮನನ್ನು ನೋಡಿ, ಅಪಹಸಿಸಿ 'ಎಲವೋ ಯದು ಕುಲಕಲಂಕನೇ! ಮಲಗಿದ್ದವರನ್ನು ಕೊಂದು, ಗೆದ್ದೆನೆಂಬ ನಿನ್ನನ್ನಿಲ್ಲಿ ಯಾರೂ ಮೆಚ್ಚರು ತಿಳಿ!' ಎಂದನು. ಪ್ರದ್ಯುಮ್ನನು 'ಅಹುದಹುದು' ಎಂದು ಅದನ್ನು ಅನುಮೋದಿಸಿದನು. ಸಿಟ್ಟಿಗೆದ್ದ ಕೃತವರ್ಮನು ಎಡಗೈ ಬೆರಳಿಂದ ತೋರುತ್ತಾ 'ಕೈಕಡಿದು ಬಿದ್ದಿದ್ದ ಭೂರಿಶ್ರವಸನನ್ನು ಕೊಂದ ಮಹಾವೀರನಲ್ಲವೇ ನೀನು?' ಎಂದು ಅಧಿಕ್ಷೇಪಿಸಿದನು. ಸ್ಯಮಂತಕ ಮಣಿಯನ್ನು ಶತಧನ್ವನಿಂದ ತರಿಸಿದ ಕಳ್ಳನಿಗೆ ಎಷ್ಟು ಧೈರ್ಯ ಶ್ರೀಕೃಷ್ಣನ ಮುಂದೆ?' ಎನ್ನುತ್ತಾ ಸಾತ್ಯಕಿಯು ಖಡ್ಗವನ್ನೆತ್ತಿ ಕೃತವರ್ಮನ ಶಿರವನ್ನು ಕತ್ತರಿಸಿ ಕೆಡಹಿದನು. ಕಾಲಪರ್ಯಾಯ ಪ್ರೇರಿತರಾಗಿ ಯದುವೀರರು, ಸಾತ್ಯಕಿ ಕೃತವರ್ಮರ ಪಕ್ಷಗಳನ್ನು ಕಟ್ಟಿ, ಶ್ರೀಕೃಷ್ಣನೆಷ್ಟು ವಾರಿಸಿದರೂ ಕೇಳದೆ, ಪರಸ್ಪರವಾಗಿ ಕಡಿದಾಡಿ, ಎಲ್ಲರೂ ನಿಹತರಾದರು. ಕೃಷ್ಣನು ನೋಡುತ್ತಿದ್ದಂತೆ, ಅವರು ತಮ್ಮ ಆಯುಧಗಳೆಲ್ಲವೂ ಮುರಿದು ಬೀಳಲು, ಮುಸಲಚೂರ್ಣಲಿಪ್ತವಾಗಿದ್ದ ಏರಕಗಳನ್ನು ಸಮುದ್ರತೀರದಿಂದ ಕಿತ್ತಿ ಬಡಿದಾಡತೊಡಗಿದರು. ಬಲುಮಂದಿ ವೀರರ ಕೈಲಿ ಸಿಕ್ಕು ಪ್ರದ್ಯುಮ್ನ ಸಾತ್ಯಕಿಯರು ಬಿದ್ದರು. ವಿಪ್ರಶಾಪದಿಂದ ಏರಕಗಳು ವಜ್ರ ಸದೃಶವಾಗಿ, ಸರ್ವ ಯಾದವರನ್ನೂ ನಾಶಗೊಳಿಸಿದವು. ತೃಣವೂ ಮುಸಲವಾಯಿತೆಂದರೆ ಶ್ರೀಶ ಸಂಕಲ್ಪಕ್ಕೆ ಎದುರಿಲ್ಲವೆಂದು ತಿಳಿ! ಬ್ರಹ್ಮದಂಡವು ದುರ್ನಿವಾರವೆಂದೂ ತಿಳಿ! ತಂದೆಯು ಮಗನನ್ನೂ, ಮಗನು ತಂದೆಯನ್ನು, ಇಂತೆಯೇ ಸೋದರರು, ಮಾವ ಅಳಿಯಂದಿರು, ಭಾವ ಮೈದುನರು ಕಡುಕೋಪದಿಂದ ಕಣ್ಣುಗಾಣದೆ ಕಡಿದಾಡಿ, ಮಡಿದು, ಪೊಡವಿಗೆ ಬಿದ್ದರು.

ಆಗ ಬಭ್ರುದಾರುಕರಿಂದ ಚೋದಿತನಾಗಿ ಶ್ರೀಕೃಷ್ಣನು ಬಲರಾಮನನ್ನು ಅರಸುತ್ತಾ ಪೋದನು. ಅಲ್ಲಿ ಪಿಪ್ಪಲದ ಮೂಲದಲ್ಲಿ ರಾಮನನ್ನು ನೋಡಿ, ಆತನ ಪಕ್ಕದಲ್ಲಿ ಕೂತು, ಶ್ರೀಕೃಷ್ಣನು ದಾರುಕನಿಗಿಂತೆಂದನು: 'ಸೂತ! ಇದೆಲ್ಲ ವೃತ್ತಾಂತವನ್ನು ಪಾರ್ಥನಿಗೆ ತಿಳಿಸು, ಅವನೂ ನನ್ನೊಡನೆ ಸೇರ ಬಂದು ದ್ವಾರಕೆಯಲ್ಲೇ ನಿಂತಿರುವನು. ಅವನನ್ನು

ಇಲ್ಲಿಗೆ ಕರೆತಾ! ಬೇಗ ಹೊರಡು!' ಎಂದು ಕಳಿಸಿ, 'ಬಭ್ರೋ, ದ್ವಾರಕೆಯಲ್ಲಿರುವ ಸ್ತ್ರೀ ಜನರನ್ನು ಕಳ್ಳಕಾಕರು ಸುಲಿದು ಕೆಡಿಸದಂತೆ ರಕ್ಷಿಸಲು ಹೋಗು!' ಎಂದು ಬಭ್ರುವಿನನ್ನೂ ಕಳಿಸಿದನು. ಬಭ್ರುವು ಕಣ್ಣೀರಿಡುತ್ತಾ ಬರುವಾಗ ಅಲ್ಲಿದ್ದ ಮುಸಲಯುಕ್ತ ಏರಕವು ತಾನಾಗಿ ಬಡಿಯಿತು. ಬಭ್ರುವೂ ಮೃತನಾಗಿ ಬಿದ್ದನು. ಶ್ರೀರಾಮನನ್ನು ಅಲ್ಲೇ ನಿಲ್ಲಿಸಿ, ಶ್ರೀಶನು ತಾನಾಗಿ ದ್ವಾರಕೆಗೆ ಪೋಗಿ, ವಸುದೇವಾದಿಗಳಿಗೆ ನಡೆದುದೆಲ್ಲನ್ನೂ ತಿಳಿಸಿ 'ನಾನಿಲ್ಲಿ ಇರಲಾರೆನು. ತಪಸ್ಸಿನಿಂದ ದೇಹವನ್ನು ಬಿಡಲು ನಿಶ್ಚಯಿಸಿರುವ ರಾಮನನ್ನು ಸೇರ ಪೋಗುವೆನು. ನಾನೂ ಅವನ ಹಿಂದೆಯೇ ತೆರಳುವೆನು. ಚಿಂತಿಸಬೇಡ! ವಿಧಿಯನ್ನು ತಪ್ಪಿಸಲಾಗದು!' ಎಂದು ಉದ್ಬೋಧಿಸಿದನು. ಆ ಮಾತನ್ನಾಲಿಸಿ ಅಂತಃಪುರವೆಲ್ಲವೂ ದುಃಖಾಕ್ರಾಂತವಾಯಿತು. ಸ್ತ್ರೀ ಕುಮಾರರ ರೋದನ ಧ್ವನಿಯಿಂದ ದ್ವಾರಕೆಯೇ ಶ್ರೀಕೃಷ್ಣವಿರಹದಿಂದ ರೋದಿಸಿದಂತೆ ಇತ್ತು, 'ಅರ್ಜುನನು ನಿಮ್ಮ ಗತಿಯನ್ನು ಕಾಣಿಸುವನು' ಎಂದು ಸಮಾಧಾನಪಡಿಸಿ ಶ್ರೀಕೃಷ್ಣನು ಬೇಗ ಬೇಗ ರಾಮನಿದ್ದಲ್ಲಿಗೆ ಬಂದನು.

ಬಲರಾಮನು ಯೋಗಮಗ್ನನಾಗಿದ್ದನು. ಆತನ ಮುಖದಿಂದ ಸಾವಿರ ಹೆಡೆಯ ಸರ್ಪವು ಹೊರಬಂದು, ಸಾಗರವನ್ನು ಪ್ರವೇಶಿಸಿದಾಗ, ಬಲರಾಮ ದೇಹವು ಕೆಳಗೆ ಬಿತ್ತು. ಶ್ವೇತಪರ್ವತ ಸದೃಶನು, ಮಹಾಭೋಗನು, ರಕ್ತಾನನನು, ಸಹಸ್ರಶೀರ್ಷನು, ಅದ್ವಿತೀಯ ಕರ್ಣಭೂಷನು ಆದ ಶೇಷನನ್ನು ಸಾಗರ ರಾಜನು, ನದೀದೇವತೆಗಳು ದಿವ್ಯನಾಗರು, ದಿಗ್ಗಜಗಳು ಕಲೆತು ಸ್ವಾಗತಿಸಿ, ಕರೆದುಕೊಂಡು ಹೋದರು. ಕರ್ಕಾಟಕ, ವಾಸುಕಿ, ತಕ್ಷಕ, ಧೃತರಾಷ್ಟ್ರ, ಹ್ರಾದ, ಶಿತಿಕಂಠ, ದುರ್ಮುಖ ಮುಂತಾದ ನಾಗರಾಜರಿತ್ತ ಪೂಜೆಯನ್ನು ಸ್ವೀಕರಿಸಿ, ಬಲರಾಮದೇವನು ಶೇಷನಾಗಿ, ಧರಾಭರಣ ಕಾರ್ಯದಲ್ಲಿ ತೊಡಗಿರುವನು.

ಎಲ್ಲ ಯಾದವರೂ ತಂತಮ್ಮ ಗತಿಯನ್ನು ಹೊಂದಿದ್ದನ್ನು ಕಂಡು ಶ್ರೀಕೃಷ್ಣನು, 'ಇನ್ನಾಯಿತೆನ್ನ ಭೂಭಾರಹರಣಲೀಲೆ! ದುರ್ವಾಸಪಾಯಸಲಿಪ್ತವಾಗದ ಪಾದದಿಂದ ದುರ್ವಾಸಗರ್ಗಾದಿ ವಿಪ್ರರ ಶಾಪ ಪ್ರೇರಿತವಾಗಿ, ಜರಾವ್ಯಾಧನಿಂದ ಬಿಡಲ್ಪಡುವ ಮುಸಲಾಯಃಖಂಡವನ್ನು ಸ್ವೀಕರಿಸಿ, ನನ್ನ ಲೋಕವನ್ನು ಪೊಂದುವೆನು. ಬ್ರಹ್ಮರುದ್ರೇಂದ್ರರ ಪೂಜೆಯು ಎನಗಾಗಿ ಕಾದಿದೆ! ಕಲಿಕಾಲವು ಪ್ರವರ್ತಿತವಾಗಲಿ!' ಎಂದು ಚಿಂತಿಸಿದನು.

## ೨. ಶ್ರೀಕೃಷ್ಣ ಪರಂಧಾಮಾಗಮನ

'ರಾಜನ್! ಶ್ರೀಶನು, ಸನಕಾದಿಯೋಗಿ ಜನರಿಗೆ ವಂದ್ಯನು, ಬ್ರಹ್ಮ ರುದ್ರಪೂಜಿತನು ಆಗಿ, ಅವರಿತ್ತ ಪುಷ್ಪವರ್ಷಣದಿಂದ ಅವರಿಗೆ ಹರ್ಷವಿತ್ತು, ತನ್ನ ಭೂಲೋಕ ಸಂತ್ಯಾಗವನ್ನು ಸಂಕಲ್ಪಿಸಿ, ಯೋಗಾರೂಢನಾಗಿದ್ದನು. ಆತನ ಪದ್ಮಸುಂದರ ಪಾದವು ಎಡತೊಡೆಯ ಮೇಲೆ ಆಡುತ್ತಿತ್ತು. ಅದನ್ನು ಜಿಂಕೆ ಎಂದು ಭ್ರಮಿಸಿ, ಜರಾವ್ಯಾಧನು ಮುಸಲಶೇಷಯುಕ್ತ ಬಾಣದಿಂದ, ಕಾಲಹೆಬ್ಬೆರಳಿಗೆ ಹೊಡೆದನು. ಓಡಿ ಬಂದು ನೋಡಿದ

ವ್ಯಾಧನು ಜಿಂಕೆಯನ್ನಲ್ಲದೆ, ಶ್ರೀಕೃಷ್ಣನನ್ನು ಕಂಡು, ಭಯಭರಿತನಾಗಿ, ಗಡಗಡ ನಡುಗಿದನು. ಚತುರ್ಭುಜನು, ಶಂಖ ಚಕ್ರ ಗದಾಪದ್ಮಧರನು, ಪೀತಾಂಬರ ಕಟಿಸೂತ್ರ ಯಜ್ಞೋಪವೀತಾಂಗದ ಮುದ್ರಿಕಾ ಭೂಷಣನು, ಸರೋಜ ಸುಂದರ ನೇತ್ರನು, ಪರಮಪವಿತ್ರನು ಆದ ಶ್ರೀಕೃಷ್ಣನನ್ನು ನೋಡಿ, ಭಯಭಕ್ತಿಗಳಿಂದ ಪಾದತಲದಿ ಬಿದ್ದು, ಕಣ್ಣೀರಿಂದ ಅಭಿಷೇಕಿಸಿದನು. 'ಪ್ರಭೋ! ಶ್ರೀಹರೇ, ಪಾಪಿಯಾದ ನನ್ನನ್ನು ಕೊಂದು ಬಿಡು! ಉಳಿಸಬೇಡ! ಮತ್ತೆ ಇಂತಹ ಮಹದಪಚಾರವೆನ್ನಿಂದಾಗದಂತೆ ಶಿಕ್ಷಿಸು!' ಎಂದು ಬೇಡುವ ವ್ಯಾಧನನ್ನು, ಕರುಣಾಪೂರ್ಣನಾಗಿ ನೋಡಿ, ಶ್ರೀಕೃಷ್ಣನು 'ಜರಾವ್ಯಾಧ, ನಿನ್ನ ತಪ್ಪಿಲ್ಲ. ಏಕೆಂದರೆ ಇದು ನನ್ನ ಇಚ್ಛೆಯೇ ಆಗಿದೆ. ನನ್ನ ಆಜ್ಞೆಯಿಂದ ಸ್ವರ್ಗಲೋಕಕ್ಕೆ ಇದೇ ದೇಹದಿಂದ ಹೋಗು! ಪಶ್ಚಾತ್ತಾಪದಿಂದ ಶುದ್ಧನಾಗಿರುವೆ!' ಎಂದು, ಅವನನ್ನು ಇಂದ್ರಾದಿಗಳು ಕಳುಹಿದ ದಿವ್ಯವಿಮಾನದಲ್ಲಿ ಸ್ವರ್ಗಕ್ಕೆ ಕಳಿಸಿದನು.

ರಾಜನ್! ಆ ವ್ಯಾಧನಾರೆಂದು ತಿಳಿದೆ! ಅವನೇ ಹಿಂದೆ ಪಾದದಿಂದ ಶ್ರೀರಮಣನನ್ನು ತಾಟಿಸಿದ ಭೃಗು ಋಷಿಯು; ಅಂತಹ ನೀಚ ಪಾಪದಿಂದ ಅವನಿಗೆ ಜರಾವ್ಯಾಧ ಜನ್ಮವು ಬಂತು. ಆದರೂ ಸರ್ವೋತ್ತಮತ್ವವನ್ನು ತಿಳಿಸಿ ಕೊಡಲು ಮಾಡಿದ ಪಾದ ಪ್ರಹಾರವು ಸಹ್ಯಪಾಪವಾಗಿ ಶ್ರೀಶನಿಂದ ಕ್ಷಮಿಸಲ್ಪಟ್ಟಿತು. ಈಗ ಮತ್ತೆ ಬಾಣದಿಂದ ಹೊಡೆದ ಪಾಪವು ನೀಚತರವೇ ಸರಿ! ಇಂತಹ ನೀಚನೀಚ ಪಾಪವು ಕೂಡ ಶ್ರೀಶನಿಂದ ಕ್ಷಮಿಸಲ್ಪಟ್ಟಿತು. ಏಕೆಂದರೆ (೧) ಭೃಗುವು ಸಾತ್ವಿಕೋತ್ತಮ ಜೀವನು, (೨) ಅತ್ಯಂತ ಪಶ್ಚಾತ್ತಾಪದಿಂದ 'ಶಿಕ್ಷಿಸು!' ಎಂದು ಬೇಡಿದನು, (೩) ಬಾಣವನ್ನು ಬುದ್ಧಿಪೂರ್ವಕವಾಗಿ ಬಿಡಲಿಲ್ಲ. ಜಿಂಕೆ ಅಲ್ಲವೆಂದು ತಿಳಿದ ಮೇಲೆ ಕಾಲಿಗೆ ಬಿದ್ದನು. ಅವನ ಬಾಣವು ಸುವರ್ಣಪುಷ್ಪದಂತೆ, ಆಯುಃಪುಷ್ಪವೇ ಆಗಿ, ಶ್ರೀಶನು ಅವನ ಭಕ್ತಿಯನ್ನು ಮಾತ್ರ ಗಣಿಸಿ, ಮತ್ತೆ ಭೃಗುಗತಿಯನ್ನು ಅವನಿಗೆ ಕರುಣಿಸಿದನು.

ಆಗ ಶ್ರೀಕೃಷ್ಣನು– ದುಷ್ಟಜನ ಮೋಹನಕ್ಕಾಗಿ ತನ್ನಂತೆ ಕಾಣುವ ಭೌತಿಕ ದೇಹವನ್ನು ಅಲ್ಲಿ ಬಿಟ್ಟು ತಾನು ಸ್ವರೂಪ ದಿವ್ಯಯೋಗ ಶಕ್ತಿಯಿಂದ, ಭೂಲೋಕವನ್ನು ತ್ಯಜಿಸಿದನು. ಆಕಾಶದಲ್ಲಿ ನಿಂತು, ಸ್ತುತಿಸುವ ಬ್ರಹ್ಮೇಂದ್ರ ಚಂದ್ರಾದಿ ದೇವತೆಗಳಿಗೆ ಮಿಂಚು ಹೊಳೆದಂತಾಯಿತು. ಅವರು ವಿಷ್ಣು ಸೂಕ್ತಗಳನ್ನು ಪಠಿಸುತ್ತಾ, ಶ್ರೀಶನನ್ನು ಅನುಸರಿಸಿ, ಹೋದರು. ಶ್ರೀಕೃಷ್ಣನು ದಿವ್ಯತೇಜದಿಂದ ಎಲ್ಲ ಲೋಕಗಳನ್ನೂ ಬೆಳಗುತ್ತಾ, ಕ್ರಮವಾಗಿ ವೈಕುಂಠವನ್ನು ಸೇರಿ, ತಾನು ತಾನೇ ಆದನು.

ಶ್ರೀಕೃಷ್ಣನು ಒಂದು ರೂಪದಿಂದ ಭೂಮಿಯಲ್ಲಿ ಅದೃಶ್ಯನಾಗಿರುವನು. ಗೋಪಾಲಮಂತ್ರವನ್ನು ಉಪಾಸನೆಗೈವ ಭಕ್ತರಿಗೆ ಅವನು ಫಲವನ್ನು ಕೊಡುತ್ತಲಿರುವನು. ಎರಡನೇ ರೂಪದಿಂದ ಸೂರ್ಯಮಂಡಲದಲ್ಲಿ ಸೂರ್ಯಾದಿ ಪೂಜಿತನಾಗಿರುವನು. ಮೂರನೆಯ ರೂಪದಿಂದ ಕೈಲಾಸದಲ್ಲಿ ರುದ್ರ ಶರ್ವಾಣೀ ಪೂಜಿತನಾಗಿರುವನು. ನಾಲ್ಕನೆಯ ರೂಪದಿಂದ ಬ್ರಹ್ಮಲೋಕದಲ್ಲಿ ಬ್ರಹ್ಮಾದಿ ಪೂಜಿತನಾಗಿರುವನು. ಐದನೆಯ ರೂಪವು ಮೂಲರೂಪದಲ್ಲಿ ಐಕ್ಯವನ್ನು ಹೊಂದಿತು. ಅದನ್ನು ಅನುಸರಿಸಿ ಹೋದ

ದೇವತೆಗಳು ತಂತಮ್ಮ ಸ್ವರೂಪಯೋಗ್ಯತಾನುಸಾರವಾಗಿ, ಸಾಗಿ, ಅಲ್ಲಲ್ಲಿ ತಮ್ಮ ಲೋಕದಲ್ಲಿ ನಿಂತು ಕೈ ಮುಗಿದರು. ಗರುಡ ರುದ್ರ ಶೇಷರಿಂದ ಬ್ರಹ್ಮನು ವಿಕುಂಠವನ್ನು ಸೇರಿದನು. ಅಲ್ಲಿ ರಹಸ್ಯವಾಗಿ ಶ್ರೀಶನ ದಿವ್ಯಾಲಿಂಗನವನ್ನು ಪೊಂದಿದ ಹೃಷ್ಟನಾ ಬ್ರಹ್ಮನು 'ದೇವ ! ನಿನ್ನ ಅಂಗಸಂಗದಿಂದ ಪಾವಿತರಾದ ಗೋಪಿಯರಿಗೆ ಉತ್ತಮತರ ಸ್ಥಾನಗಳನ್ನು ಕೊಡುವೆನು' ಎಂದಿತ್ಯಾದಿ ರಹಸ್ಯಗಳನ್ನರುಹಿ, ಹಿಂದಿರುಗಿ, ಗರುಡ ಶೇಷ ರುದ್ರರನ್ನೂ ಕರೆದುಕೊಂಡು ಶ್ರೀಹರಿಯನ್ನು ಸ್ತುತಿಸುತ್ತಾ, ಸತ್ಯಲೋಕವನ್ನು ಸೇರಿದನು.

ಶ್ರೀಕೃಷ್ಣ ರೂಪವು ಮೂಲನಾರಾಯಣರೂಪದಿಂದ ಐಕ್ಯವನ್ನು ಹೊಂದಿಯೂ ಬೇರೆ ಪ್ರತ್ಯೇಕವಾಗಿಯೂ ವಿಕುಂಠಲೋಕದ ಬ್ರಹ್ಮಾದಿ ಸುರರಿಂದ ಪೂಜಿತವಾಗಿದೆ. ಶ್ರೀದೇವಿ ರಮಣನಾದ ಶ್ರೀಕೃಷ್ಣನಿಗೆ ನಮಸ್ಕಾರವು ! ಯಾವ ಅವತಾರದಲ್ಲಿಯು ದೇಹನಾಶವನ್ನು ತೋರಿರದಿದ್ದರೂ, ಇಲ್ಲಿ ಅಸುರಜನ ಮೋಹಕ್ಕಾಗಿ ಶ್ರೀಶನು ಜೀವತ್ಯಕ್ತ ದೇಹದಂತೆ ಬಿದ್ದಿರುವ ದೇಹವನ್ನಲ್ಲಿ, ಪಿಪ್ಪಲಮೂಲದಲ್ಲಿ, ಬಿಟ್ಟು ತಾನು ಸ್ವರ್ಗಾದಿ ಲೋಕಗಳಿಗೆ ವಿಜಯಂಗೈದನು. ದೇವತೆಗಳಿಂದೂ ಸೂರ್ಯಮಂಡಲ ಗತನಾಗಿರುವ ಶ್ರೀಕೃಷ್ಣ ರೂಪವನ್ನು ಉಪಾಸಿಸುತ್ತಿರುವರು.

ಆ ಹೊತ್ತಿಗೆ ಅರ್ಜುನನು ಅಲ್ಲಿಗೆ ಬಂದು, ದಾರುಕನಿಂದ ತೋರಿಸಲ್ಪಟ್ಟ ಯಾದವ ಶರೀರಗಳನ್ನೂ, ಬಲರಾಮ ದೇಹವನ್ನೂ, ಶ್ರೀಕೃಷ್ಣ ಸದೃಶ ದೇಹವನ್ನೂ ನೋಡಿ, ಸಂಸ್ಕರಿಸಿ ದುಃಖವನ್ನು ತಡೆಯಲಾಗದೆ, ಮುಕ್ತಕಂಠನಾಗಿ ರೋದಿಸಿದನು. ಮೃತನಾಥಳಂತಿರುವ ದ್ವಾರಕೆಗೆ ಪೋಗಿ, ಅರ್ಜುನನು ಶ್ರೀಕೃಷ್ಣ ನಿರ್ಯಾಣವನ್ನು ವಸುದೇವ ದೇವಕಿಯರಿಗೆ ತಿಳಿಸಿದನು. ಕೃಷ್ಣನಿಂದಲು ವೀರ ಬಂಧುಗಳಿಂದಲು ರಹಿತರಾದ ಯದುರಮಣಿಯರ ಆಕ್ರಂದನವು ಕಲ್ಲು ಕರಗಿಸುವಂತಿತ್ತು. ಗತ ಶ್ರೀಕವು ನಿರಾನಂದವು ಆದ ದ್ವಾರಕೆಯು ಶಿಶಿರದ ಕಮಲಾಕರದಂತಿತ್ತು. ಸಾತ್ರಾಜಿತಿಯು ರುಕ್ಮಿಣಿಯು ಅರ್ಜುನನನ್ನು ಸುತ್ತುಗಟ್ಟಿ, ಗಟ್ಟಿಯಾಗಿ ರೋದಿಸಿದರು. ಗೋವಿಂದಕಥಾಲಾಪದಿಂದ ಆ ರಾತ್ರಿ ಕಳೆಯಿತು.

ವಸುದೇವನು ಅಶ್ರುಪೂರ್ಣನಯನನಾಗಿ, ಅರ್ಜುನನ್ನಪ್ಪಲು ಹೋಗಿ ಕೈಲಾಗದೆ, ಸುಮ್ಮನೆ ನಿಟ್ಟುಸಿರಿಡುತ್ತಾ 'ಅರ್ಜುನ ! ಎಲ್ಲಿ ನಿನ್ನ ಸಖ ? ಎಲ್ಲಿ ಹೋದನು ಪಾರ್ಥಸಾರಥಿ ? ಹೇಳು ! ಕಂಸನಂತಹ ಪಾಪಿ ದೈತ್ಯನನ್ನು ಕೊಂದು, ಜರಾಸಂಧನನ್ನು ಸೋಲಿಸಿ, ಶಿಶುಪಾಲ, ಸಾಲ್ವ, ಕಾಲಯವನ ಪೌಂಡ್ರಕ, ದಂತವಕ್ತ್ರ, ವಿದೂರಥಾದಿ ದುಷ್ಟರನ್ನು ಮಟ್ಟಿಕ್ಕಿ ಮೆರೆದ ಶ್ರೀಕೃಷ್ಣನು ಈಗ ನಮ್ಮನ್ನು ಕೈಬಿಟ್ಟು ಪೋದನೇ ? ಇನ್ನೇಕೆ ಬದುಕಿರಲಿ ? ಪಾರ್ಥ ! ಗೋವಿಂದನು ನಮ್ಮ ಶ್ರೀಕೃಷ್ಣನು ಸಾಕ್ಷಾನ್ನಾರಾಯಣನೇ ಸರಿ! ನಾವೇನು ಪಾಪ ಮಾಡಿದೆವೋ, ನಮ್ಮನ್ನು ಕಳಿಸಿ, ತಾನು ವಿಕುಂಠಗತನಾಗಲಿಲ್ಲ ! ಜಗತ್ಪ್ರಭುವಿಗೆ ಗಾಂಧಾರೀ ಶಾಪವೇ ? ಬ್ರಹ್ಮವಂದ್ಯನಿಗೆ ವಿಪ್ರಶಾಪವೇ ? ತಾನಾಗಿ ಅಂಗೀಕರಿಸಿ ಅವರನ್ನು ಸತ್ಯವಚನರನ್ನಾಗಿ ಮಾಡಿದ, ಭಕ್ತವತ್ಸಲನನ್ನು ಬಿಟ್ಟು

ನಾವಿನ್ನು ಬದುಕಿರುವೆವೆಂದರೆ, ನಮ್ಮ ಗುಂಡಿಗೆ ಕಲ್ಲಿನಿಂದ ಮಾಡಲ್ಪಟ್ಟಿದೆಯೋ? ಏನು? ಅಶ್ವತ್ಥಾಮನ ಬ್ರಹ್ಮಶಿರದಿಂದ ಸತ್ತ ನಿನ್ನ ಮೊಮ್ಮಗನನ್ನು ಬದುಕಿಸಿಕೊಟ್ಟ ಮುಖ್ಯಪ್ರಾಣವಲ್ಲಭನಿಗೆ ಸಾವಿಲ್ಲ! ಅವನಿಗೆ ಯದುಕುಲವನ್ನು ಉಳಿಸಬೇಕೆಂಬ ಇಚ್ಛೆ ಬರಲಿಲ್ಲ! ನಾನು ರಾಮಕೃಷ್ಣರನ್ನು ಅಗಲಿರಲಾರೆನು. ಕೃಷ್ಣವಚನದಂತೆ ಸ್ತ್ರೀ ಬಾಲವೃದ್ಧರನ್ನು ಪಾಲಿಸು! ಧರ್ಮಜಾದಿಗಳಿಗೆ ಈ ಘೋರ ವಾರ್ತೆಯನ್ನು ತಿಳಿಸು!' ಎಂದು ಅಳತೊಡಗಿದನು.

ಅರ್ಜುನನು ದೀನನಾಗಿ 'ಮಾತುಲ! ಶ್ರೀಕೃಷ್ಣರಹಿತವಾದ ಭೂಮಂಡಲವಿನ್ನು ನಮಗೆ ಬೇಕಿಲ್ಲ. ಕಾಲವನ್ನರಿತು, ನಾವು ಶ್ರೀಶೇಚ್ಛೆಗೆ ಶಿರಬಾಗಿ ನಡೆಯುವೆವು. ಭೀಮ-ಧರ್ಮ-ನಕುಲ-ಸಹದೇವರು, ದ್ರೌಪದಿಯೂ, ಈ ವಾರ್ತೆಯನ್ನು ಕೇಳಿ, ಮಹಾ ಪ್ರಸ್ಥಾನಗೈವರು. ನಾವೆಲ್ಲರೂ ಶ್ರೀಹರಿಲೋಕವನ್ನೇ ಸೇರುವೆವು' ಎಂದು ಸಮಾಧಾನ ಪಡಿಸಿದನು.

ಸಭೆಯನ್ನು ಸೇರಿಸಿ ಪಾರ್ಥನು ವೃದ್ಧಾಮಾತ್ಯರನ್ನು, ಬ್ರಾಹ್ಮಣರನ್ನು ನೋಡಿ, ಕಾಲಕ್ಕೆದುರಿಲ್ಲ. ದೀನರಾಗಿ ಕೂತರೆ ವಿಪನ್ನಿವಾರಣವಾಗದು. ಕೇಳಿ! ಇಂದಿಗೆ ಏಳು ದಿನಕ್ಕೆ ಸಮುದ್ರವು ದ್ವಾರಕಾಪುರಿಯನ್ನು ಕಬಳಿಸಿಬಿಡುವುದು. ಇನ್ನು ಇಲ್ಲಿ ಇರಲಾಗದು. ಎಲ್ಲರೂ ನನ್ನೊಡನೆ ಮಧುರೆಗೆ ಅಥವಾ ಇಂದ್ರಪ್ರಸ್ಥಕ್ಕೆ ಹೊರಡಿ! ಆಲಸ್ಯ ಮಾಡಬೇಡಿ!' ಎಂದು ಆಜ್ಞಾಪಿಸಿದನು.

ಪಾರ್ಥನು ದಾರುಕನಿಂದ ಕೂಡಿ ಪ್ರಭಾಸದ ಪಿಪ್ಪಲವೃಕ್ಷವನ್ನು ಸೇರಿ, ಮೃತ ಶರೀರಗಳಿಗೆ ಯಥಾವಿಧಿ ಸಂಸ್ಕಾರಮಾಡಿದನು. ಬಲರಾಮಾದಿಗಳಿಗೆ ಸಂಸ್ಕಾರವನ್ನು ಮುಗಿಸಿ ಅರ್ಜುನನು ಹಿಂದಿರುಗಿ ದ್ವಾರಕೆಗೆ ಬಂದನು. ದಾರುಕನು ಬಂದಂತೆ, ಶ್ರೀಶನನ್ನು ಧ್ಯಾನಿಸಿ, ಯೋಗಬಲದಿಂದ ವಿಕುಂಠಲೋಕವನ್ನು ಸೇರಿದನು. ಶ್ರೀದೇವೀ ರೂಪರಾದ ರುಕ್ಮಿಣಿ ಸತ್ಯಭಾಮೆಯರು ವಹ್ನಿಯಲ್ಲಿ ಅದೃಶ್ಯತ್ವವನ್ನೂ ತಪೋಬಲಸಿದ್ಧಿಯನ್ನೂ ಕ್ರಮವಾಗಿ ಹೊಂದಿ, ಶ್ರೀಕೃಷ್ಣ ಪಾರ್ಶ್ವದಲ್ಲಿ ನಿಂತರು. ಚಿದಾನಂದ ದೇಹರಾದ ರುಕ್ಮಿಣೀ ಸತ್ಯಾದೇವಿಯರು ದುಷ್ಟ ಮೋಹಕ್ಕಾಗಿ ವಹ್ನಿತಪಗಳಿಂದ ಶರೀರ ಬಿಟ್ಟಂತೆ ನಟಿಸಿದರು.

ಜಾಂಬವತ್ಯಾದಿಗಳು ಅಗ್ನಿಪ್ರವೇಶಮಾಡಿ, ಕೆಲವರು ತಪಸ್ಸಿನಿಂದಲೂ ಶರೀರಗಳನ್ನು ಬಿಟ್ಟು ಶ್ರೀಕೃಷ್ಣನನ್ನೇ ಪೊಂದಿದರು. ಬಲರಾಮಾದಿಗಳ ಭಾರ್ಯೆಯರು ಅಗ್ನಿಯಲ್ಲಿ ಬಿದ್ದು, ತಂತಮ್ಮ ಪತಿಗಳ ಲೋಕವನ್ನು ಹೊಂದಿದರು.

ವಸುದೇವರಾಜನು ದೇವಕಿಯು ಮರುದಿನದ ಸೂರ್ಯೋದಯವನ್ನು ಕಾಣ ಲಿಲ್ಲ. ಅವರು ಶ್ರೀಕೃಷ್ಣ ಭಕ್ತಿಯಿಂದ ಅದಿತಿಯಾಗಿಯು, ಕಶ್ಯಪನಾಗಿಯು ವಿರಾಜಿಸಿದರು. ಮಿಕ್ಕ ರೋಹಿಣೀ ಮದಿರಾದಿ ವಸುದೇವ ಪತ್ನಿಯರು ಚಿತಾರೋಹಣ ಮಾಡಿ ಅಸುನೀಗಿದರು. ಆತನ ಶರೀರವನ್ನು ಅಶ್ವಮೇಧಾಗ್ನಿಯಲ್ಲಿ ಸುಟ್ಟು ಎಲ್ಲರಿಗೂ ವಿಹಿತ

ಕರ್ಮಗಳನ್ನು ನಡೆಸಿ, ದಾನಾದಿಗಳನ್ನಿತ್ತು, ಅರ್ಜುನನು ಮಿಕ್ಕ ಬಾಲ ಸ್ತ್ರೀ ಜನರೊಡನೆ ಇಂದ್ರಪ್ರಸ್ಥಕ್ಕೆ ಹೊರಟನು. ಶ್ರೀಹರಯೇ ನಮಃ.

## ೩. ಅರ್ಜುನ ಪರಾಭವ - ಶ್ರೀವ್ಯಾಸೋಪದೇಶ

ಶ್ರೀವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ಅರ್ಜುನನು ಮಿಕ್ಕ ಸ್ತ್ರೀಜನರನ್ನೂ, ವಜ್ರಾದಿ ಬಾಲರನ್ನೂ, ಇತರ ಪರಿವಾರವನ್ನೂ, ರಥ ಗಜ ತುರಗ ಮಹಾಂಗಗಳಲ್ಲಿ ಕೂಡಿಸಿ, ದ್ವಾರಕೆಯಿಂದ ಹೊರಟನು. ಅಂಧಕ ವೃಷ್ಣಿಪುತ್ರರು ಪಾರ್ಥನನ್ನನುಸರಿಸಿ ನಡೆದರು. ಭೃತ್ಯರು ಅವರನ್ನನುಸರಿಸಿದರು. ಹತನಾಥವಾದ ಯದುಸ್ತ್ರೀಗಣವು ರೋದನಾಕುಲವಾಗಿ ನಡೆದಂತೆ, ಸಾಗರವು ದ್ವಾರಕೆಯನ್ನು ಮುಣುಗಿಸುತ್ತಾ ಮೇಲೇರಿ ಬಂತು.

ಕ್ರಮವಾಗಿ ಸಾಗಿ ಅರ್ಜುನನು ಪಂಚನದ ದೇಶವನ್ನು ಸೇರಿ, ಅಲ್ಲಿ ಒಂದು ದಿನ ವಿಶ್ರಾಂತಿಗಾಗಿ ತಂಗಿದನು. ಅಲ್ಲಿದ್ದ ಆಭೀರಮ್ಲೇಂಚರಾದಿ ಕಾಡುಜನರು ಸಾವಿರಾರು ಮಂದಿ, ಅರ್ಜುನನೋರ್ವನೇ ಅಲ್ಲಿರುವ ಅಪಾರ ತರುಣೀ, ವೃದ್ಧ, ಬಾಲರಿಗೆ ರಕ್ಷಕನಾಗಿರುವುದನ್ನು ಕಂಡು, ಸಾಹಸಿಸಿ, ಮೇಲೇರಿಬಂದರು. ಕೋಲಹಾರಿಗಳನ್ನು ಹಿಡಿದು, ಕೇಕೇ ಹಾಕುತ್ತಾ, ಕವಿದು, ಕಾಂತೆಯರನ್ನು ಅಪಹರಿಸಿ, ಸುಲಿದು, ಕೆಡಿಸಿ, ಹಾಳು ಮಾಡುವ ಕಾಡುಗೊಲ್ಲರನ್ನು ಕಂಡು ಗಾಂಡೀವವನ್ನೆತ್ತಿ, ಧನಂಜಯನು ಅಸ್ತ್ರಗಳನ್ನು ಬಿಡಲೆಣಿಸಿದನು. ಆದರೆ ಅವನಿಗೆ ಒಂದಾದರೂ ಅಸ್ತ್ರವು ಸ್ಮರಣೆಗೆ ಬರಲಿಲ್ಲ. ತೂಣೀರದ್ವಯದಿಂದ ಬಾಣಗಳನ್ನು ಬಿಟ್ಟು, ಒಂದು ಕ್ಷಣಕ್ಕೆ ಅವೂ ಬರಿದಾದುದನ್ನು ಕಂಡು, ಅರ್ಜುನನು ಶೋಕವಿಸ್ಮಯಭರಿತನಾದನು. ಅರ್ಜುನನ ಕಣ್ಣೆದುರಿಗೇ ಕಾಡುಗೊಲ್ಲರು, ಮ್ಲೇಂಛರು ಕೃಷ್ಣಾದಿ ಯದುವೀರರ ಮಡದಿಗಳನ್ನು ಅಪಹರಿಸಿಕೊಂಡು ಓಡಿಹೋದರು. ಅರ್ಜುನನು ನಿಸ್ಸಹಾಯನಾಗಿ, ಸುಮ್ಮನೆ ನೋಡುತ್ತಾ ನಿಂತನು.

ರತ್ನ, ಸ್ತ್ರೀರತ್ನಗಳನ್ನು ಪ್ರಾಯಃ ಕಳೆದುಕೊಂಡು, ಖಿನ್ನನಾಗಿ ಅರ್ಜುನನು, ಉಳಿದವರನ್ನೂ, ಉಳಿದ ಅಲ್ಪ ರತ್ನಾದಿಗಳನ್ನೂ ತೆಗೆದುಕೊಂಡು, ಮುಂದೆ ಸಾಗಿ ಮಾರ್ತಿಕಾವತ ನಗರವನ್ನು ಸೇರಿದನು. ಹದಿನಾರುಸಾವಿರದ ನೂರುಜನ ರಮಣಿಯರು, ತಮ್ಮ ಸೌಂದರ್ಯಕ್ಕೆ ಮೋಹಿತನಾಗಿ, ಶ್ರೀಕೃಷ್ಣನು ತಮ್ಮ ವಶನಾಗಿರುವನೆಂದು ದರ್ಪವತಿಯರಾದುದರಿಂದ, ಕೃಷ್ಣಶಾಪಕ್ಕೆ ಗುರಿಯಾಗಿ ಮ್ಲೇಂಛವಶರಾಗಿ ಹೋದರು. ಗಾಂಡೀವವನ್ನು ಕೋಲಿನಂತೆ ಎತ್ತಿ, ಹೊಡೆಯುತ್ತಾ ಉಳಿದವರನ್ನು ಕರೆದುಕೊಂಡು, ಅರ್ಜುನನು ಕುರುಕ್ಷೇತ್ರದ, ಮಾರ್ತಿಕಾವತದಲ್ಲಿ ಕೃತವರ್ಮತನಯನನ್ನು ಅಭಿಷೇಕಿಸಿ, ಮುಂದೆ ಸಾಗಿ, ಸರಸ್ವತೀತೀರ ದೇಶದಲ್ಲಿ ಸಾತ್ಯಕಿಪುತ್ರನನ್ನು ರಾಜನನ್ನಾಗಿರಿಸಿ, ಮುಂದೆ ಶ್ರೀವ್ಯಾಸರ ಆಶ್ರಮವನ್ನು ಸೇರಿದನು.

ಏಕಾಂತದಲ್ಲಿ ಸಮಾಸೀನನಾದ ಶ್ರೀವ್ಯಾಸರನ್ನು ಕಂಡೊಡನೆ ಅರ್ಜುನನ ದುಃಖದ

ಕೆರೆಯ ಕಟ್ಟೆ ಒಡೆದಂತಾಯಿತು. ಗಟ್ಟಿಯಾಗಿ ಅಳುತ್ತಾ, ಪಾರ್ಥನು ಶ್ರೀಶನ ಕಾಲಿಗೆರಗಿ, ಕಂಬನಿಯಿಂದ ತೊಳೆದು, ನಡೆದ ವೃತ್ತಾಂತವನ್ನು ತಿಳಿಸಿದನು. 'ವಿಶಾಲ ಪಂಕಜ ಲೋಚನನಾದ ಶ್ರೀಕೃಷ್ಣನು ರಾಮನೊಡಗೂಡಿ, ವೈಕುಂಠವನ್ನು ಸೇರಿದನು. ಬ್ರಹ್ಮಶಾಪ ವಿದ್ಧರಾಗಿ ಯಾದವರೆಲ್ಲರೂ ಪ್ರಭಾಸದಲ್ಲಿ ದೇಹಗಳನ್ನು ಬಿಟ್ಟರು. ಐರಕಾಯುಧಗಳಿಂದ ಪರಸ್ಪರವಾಗಿ ಕಡಿದಾಡಿ, ನಿಧನವನ್ನು ಹೊಂದಿದ ಯದುವೀರರ ಚಿಂತೆಗಿಂತಲು, ನನಗೆ ಶ್ರೀಕೃಷ್ಣವಿರಹದ ಚಿಂತೆ ತೀವ್ರತಾಪದಾಯಕವಾಗಿದೆ. ಸರ್ವಜ್ಞ! ಸಾಗರವು ಒಣಗಿದಂತೆ, ಪರ್ವತಗಳು ಪುಡಿಯಾದಂತೆ, ಆಕಾಶವು ಕಳಚಿಬಿದ್ದಂತೆ, ಅಗ್ನಿಯು ತಣ್ಣಗಾದಂತೆ, ಶಾರ್ಙ್ಗಧನ್ವನ ದೇಹತ್ಯಾಗವು ನಂಬದಂತಾಗಿದೆ. ಕೃಷ್ಣರಹಿತರಾಗಿ ನಾವು ಇನ್ನು ಭೂಮಿಯಲ್ಲಿ ಇರಲಾರೆವು. ಇನ್ನೊಂದು ದುರ್ಭರ ದುಃಖವೆಂದರೆ ನಾನು ಕೃಷ್ಣ ಮಹಿಳೆಯರನ್ನು ಕರೆತರುತ್ತಿದ್ದಾಗ, ತುಚ್ಛಮ್ಲೇಂಛರು ಅವರನ್ನು ಕದ್ದೊಯ್ದರು; ಆಗ ಅವರನ್ನು ಶಿಕ್ಷಿಸಲು ಪೋದ ನನ್ನ ಆಯುಧಗಳು ವ್ಯರ್ಥವಾದವು; ಅಸ್ತ್ರಗಳ ನೆನಪಾಗದಾಯಿತು. ಅಕ್ಷಯತೂಣಗಳು ಬರಿದಾದವು. ಅಪ್ರಮೇಯ ಮಹಿಮನು, ಶಂಖ ಚಕ್ರ ಗದಾಧರನು, ಚತುರ್ಭುಜನು, ಪೀತಾಂಬರಧರನು, ಪದ್ಮದಲೇಕ್ಷಣನು ಆದ ಶ್ರೀಕೃಷ್ಣನು ನನ್ನ ಶತ್ರುವೀರರನ್ನು ದೃಷ್ಟಿಪಾತದಿಂದಲೇ ಸುಡುತ್ತಾ ಮುಂದೆ ಸಾಗುತ್ತಿದ್ದನು. ಅವನಿಂದ ನನ್ನ ಜಯವು ಸಾಧಿತವಾಗಿತ್ತು; ಅದೇ ಅರ್ಜುನನಿದ್ದೆನು; ಅಂತಹವೇ ರಥ ವಾಹನಗಳಿದ್ದವು; ಅಂತಹವೇ ಶರಗಳಿದ್ದವು! ಅದೇ ಗಾಂಡೀವವೂ ಇತ್ತು! ಆದರೂ ಅದೆಲ್ಲವೂ ಮ್ಲೇಂಛಬ್ರುವರನ್ನು ಗೆಲ್ಲುವಲ್ಲಿ ವ್ಯರ್ಥವಾದವು. ನನ್ನ ಕಣ್ಣಿಗೆ ಕತ್ತಲು ಕವಿದಂತಾಗಿದೆ. ಬುದ್ಧಿ ಭ್ರಮಿಸುತ್ತಿದೆ! ನಮಗೆ ಶ್ರೇಯಸ್ಸನ್ನು ಉಪದೇಶಿಸು!' ಇಂತು ಬಿನ್ನವಿಸಿ, ಪಾರ್ಥನು ಬಿಕ್ಕಿ ಅಳತೊಡಗಿದನು.

ಶ್ರೀವ್ಯಾಸನಿಂತೆಂದನು: 'ಅರ್ಜುನ! ಶೋಕಿಸಿ ಫಲವಿಲ್ಲ! ಗೀತೆಯನ್ನರಿತ ನಿನಗೆ ಹೇಳಬೇಕಾಗಿಲ್ಲ! ಭವಿತವ್ಯವೇ ಇಂತಿತ್ತು. ಶ್ರೀಕೃಷ್ಣನು ಸರ್ವಸಮರ್ಥನಾಗಿದ್ದೂ, ಏಕೆ ಈ ಸರ್ವನಾಶವನ್ನು ವಾರಿಸಲಿಲ್ಲ? ಸ್ಥಾವರ ಜಂಗಮಾತ್ಮಕವಾದ ತ್ರೈಲೋಕ್ಯವನ್ನು ಒಂದೇ ಕ್ಷಣದಲ್ಲಿ ಸಂಪೂರ್ಣ ನಾಶಗೊಳಿಸಿ, ಉತ್ತರ ಕ್ಷಣದಲ್ಲಿ ಅಂತೆಯೇ ಮತ್ತೊಂದು ಭುವನತ್ರಯವನ್ನು ನಿರ್ಮಿಸಬಲ್ಲ ಸರ್ವೇಶನ ಸಂಕಲ್ಪವನ್ನು ತಿಳಿ! ವಿಪ್ರಶಾಪವನ್ನು ಅನ್ಯಥಾಕರಿಸಲು ಇಷ್ಟವಿಲ್ಲದೆ, ತಾನೇ ಜರಾವ್ಯಾಧ ಬಾಣವಿದ್ಧನಾದನೆಂದರೆ ಆ ಶ್ರೀಶನ ವಿಪ್ರವಾತ್ಸಲ್ಯವನ್ನು ಊಹಿಸು! ನಿನ್ನ ಸ್ನೇಹದಿಂದ ತಾನು ನೃಸಿಂಹನಾಗಿ ನಿನ್ನ ರಥದ ಮುಂದೆ ಸಾಗುತ್ತಾ, ನಿನ್ನ ಶತ್ರುಗಳನ್ನು ನುಂಗಿದ ಶ್ರೀಕೃಷ್ಣನು ಇಂದು ಭೂಭಾರಹರಣವು ಮುಗಿದು, ದೇವತಾಕಾರ್ಯವಾಯಿತೆಂದು ಮತ್ತೆ ತನ್ನ ಲೋಕವನ್ನೈದಿರುವನು. ಭೀಮ ಪ್ರಮುಖರಾದ ನಿಮ್ಮಿಂದಲು ದೇವಕಾರ್ಯವು ನೆರವೇರಿ, ಹರಿಸೇವೆಯಾಯಿತು. ಕೃತಕೃತ್ಯರಾದ ನಿಮಗಿನ್ನು ಇಲ್ಲಿ ಕೆಲಸವಿಲ್ಲ! ನೀನು ಮ್ಲೇಂಛರಿಗೆ ಸೋತಿರುವುದೂ, ಅವನ ಇಚ್ಛೆಯಂತೆಯೇ! ಬುದ್ಧಿ, ತೇಜ, ಜ್ಞಾನ, ವೀರ್ಯಗಳು ಭೂತಗಳಿಗೆ ಅವನಿಂದ

ಸಿಗುವವು ! ಅವನಿಗೆ ಬೇಡವಾದಾಗ ನಷ್ಟವಾಗುವವು. ಕಾಲನಾಮಕ ಶ್ರೀಹರಿಗಿಂತಲು ಬಲವಂತರಿಲ್ಲ. '

ಇಂತು ವ್ಯಾಸರಿಂದ ಸಂತೈಸಲ್ಪಟ್ಟು ಅರ್ಜುನನು, ಅಲ್ಲಿಂದ ತೆರಳಿ, ಹಸ್ತಿನಾವತಿಯನ್ನು ಸೇರಿ, ಧರ್ಮರಾಜನಿಗೆ ಎಲ್ಲ ವೃತ್ತಾಂತವನ್ನೂ ತಿಳಿಸಿದನು. ಮ್ಲೇಂಛಹೃತರಾದ ನಾರಿಯರು ಪಶ್ಚಾತ್ತಾಪದಿಂದ ನೊಂದು ದಾಲ್ಭ್ಯಮುನಿಯ ಉಪದೇಶದಂತೆ ಆಷಾಢಶುದ್ಧೈಕಾದಶಿ (ಗೋವಿಂದೈಕಾದಶಿ) ಯನ್ನು ಪ್ರಾಯಶ್ಚಿತ್ತ ರೂಪವಾಗಿ ಮಾಡಿ ಶುದ್ಧರಾದರು. ಆಮೇಲೆ ಆಕಾಶವಾಣಿಯ ಆಜ್ಞೆ (ವಾಯುದೇವ) ಯಂತೆ ಸರಸ್ವತೀ ಜಲಗಳಲ್ಲಿ ದೇಹಗಳನ್ನು ಬಿಟ್ಟು, ಸ್ವರ್ಗಲೋಕವನ್ನು ಸೇರಿದರು. ಅಪ್ಸರೆಯರಾಗಿ ಶ್ರೀಶ ಸೇವಾನಿರತರಾದರು.

**ಮೌಸಲ ಪರ್ವ ಮುಗಿಯಿತು**



# ೧೭. ಮಹಾಪ್ರಸ್ಥಾನಿಕ ಪರ್ವ

## ೧. ಮಹಾಪ್ರಸ್ಥಾನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ವೃಷ್ಣಿನಾಶವನ್ನು ಕೇಳಿ, ಧರ್ಮರಾಜನು ಮಹಾಪ್ರಸ್ಥಾನಗೈಯಲು ಮನಮಾಡಿ, 'ಅರ್ಜುನ! ಕಾಲವು ಭೂತಗಳೆಂಬ ಧಾನ್ಯವನ್ನು ಭೂತಲವೆಂಬ ಪಾತ್ರೆಯಲ್ಲಿಟ್ಟು, ಕರ್ಮಜಲದಿಂದ ಬೇಯಿಸಿ ತಿನ್ನುತ್ತಿದೆ! ಕಾಲಕ್ಕೆದುರಿಲ್ಲ! ಇನ್ನು ಹೊರಡೋಣ!' ವೆಂದನು. ಭೀಮಾರ್ಜುನ ನಕುಲ ಸಹದೇವರು ಆ ಮಾತನ್ನು ಅನುಮೋದಿಸಿದರು. ಜ್ಞಾನದೃಢವಾದ ವೈರಾಗ್ಯದಿಂದ ಆ ದೇವಕಲ್ಪ ಮಹಾನುಭಾವರು ಈ ಲೋಕವನ್ನು ಬಿಟ್ಟುಬಿಡಲು ಸಂಕಲ್ಪಿಸಿದರು.

ಯುಯುತ್ಸುವಿನನ್ನು ಕರೆಸಿ, ರಾಜ್ಯವನ್ನೂ, ರಾಜನಾದ ಪರೀಕ್ಷಿತನನ್ನೂ ಅವನ ಕೈಲಿಟ್ಟು, ದುಃಖಾರ್ತನಾದ ಧರ್ಮರಾಜನು, 'ಸುಭದ್ರೇ! ಇಂದಿನಿಂದ ಈ ನಿನ್ನ ಪೌತ್ರನು ಕುರುರಾಜ್ಯದಲ್ಲಿ ಚಕ್ರವರ್ತಿಯಾಗಿ, ಅಭಿಷಿಕ್ತನಾಗಿರುವನು. ಯದುಶಿಷ್ಟರಿಗೆ ಅನಿರುದ್ಧ ಸುತನಾದ ವಜ್ರನು ರಾಜನಾಗಿರುವನು, ಅವರೀರ್ವರೂ ಹಸ್ತಿನಾವತಿಯಲ್ಲಿ ಪ್ರಥಮನೂ, ಇಂದ್ರಪ್ರಸ್ಥದಲ್ಲಿ ದ್ವಿತೀಯನೂ ರಾಜರಾಗಿ ಆಳುವರು. ಅವರೀರ್ವರನ್ನು ಧರ್ಮಪಥದಲ್ಲಿಟ್ಟು ನಡೆಸಿ, ರಕ್ಷಿಸುವ ಹೊಣೆ ನಿನ್ನದಾಗಿದೆ! ತಿಳಿ! ಪರೀಕ್ಷಿತನು ಕೃಷ್ಣರಮಣೀ ದೂಷಕರಾದ ಮ್ಲೇಂಛ ಹತಕರನ್ನು ಶಿಕ್ಷಿಸಿ, ನಮ್ಮ ಕರ್ತವ್ಯವನ್ನು ತಾನು ಮಾಡಿ, ಅನೃಣಿಯಾಗಲಿ! ಶ್ರೀಕೃಷ್ಣನಿಲ್ಲದ ಭೂತಲವಿನ್ನು ನಮಗೆ ರಕ್ಷ್ಯವೂ ಅಲ್ಲ; ಭೋಜ್ಯವಂತೂ ಮೊದಲೇ ಅಲ್ಲ. ಮಹಾರಾಜನನ್ನು ಬಿಡದೆ ಭಕ್ತಭೃತ್ಯರು ಪೋಗುವಂತೆ, ನಾವು ಮಹಾಪ್ರಸ್ಥಾನಗೈದು, ಸ್ವಲೋಕಗಳನ್ನು ಸೇರುವೆವು' ಎಂದು ಉಪಸಿಕ್ಷಿಸಿದನು. ಸುಭದ್ರೆಯು ಆರ್ತಳಾಗಿ, ಆ ಮಾತಿನಂತೆ ನಡೆಯಲು ಒಪ್ಪಿದಳು.

ಧರ್ಮರಾಜಾದಿ ಪಾಂಡವರೈವರು ಕಾಳೀದೇವಿಯಿಂದ ಒಂದಾದ ದ್ರೌಪದಿಯಿಂದ ಕೂಡಿ, ರಾಜಚಿಹ್ನಗಳನ್ನು ಬಿಟ್ಟು, ವೀರಾಧ್ವಾನವನ್ನು ಹೊಂದಿದರು. ಬೇಕಾದಷ್ಟು ದಾನಗಳನ್ನಿತ್ತು, ವಸುದೇವಾದಿ ಬಂಧುಗಳಿಗೆ ಶ್ರಾದ್ಧಗಳನ್ನು ಮಾಡಿದರು. ಭಾರದ್ವಾಜ, ಯಾಜ್ಞವಲ್ಕ್ಯ, ಮಾರ್ಕಂಡೇಯ, ನಾರದ, ವ್ಯಾಸ ಶಿಷ್ಯಾದಿಗಳನ್ನು ನಿಮಂತ್ರಿಸಿ, ರತ್ನ, ವಸ್ತ್ರ, ಕನಕ, ಗ್ರಾಮ, ತುರಗ, ಗಜ, ರಥಗಳನ್ನು ದಾನವಾಗಿತ್ತರು. ಕೃಪರನ್ನು ಪೂಜಿಸಿ, ಅವರ ಕೈಲಿ ಪರೀಕ್ಷಿತನನ್ನಿಟ್ಟು, ಕಂಬನಿತಂದು, ರಕ್ಷಿಸಿಕೊಂಡು ಬರಲು ಪ್ರಾರ್ಥಿಸಿದ ಧರ್ಮರಾಜನು, ಪ್ರಜರನ್ನೂ, ಸಾಮಂತರಾಜರನ್ನೂ ಕರೆಸಿ, ಯಥಾಯೋಗ್ಯವಾಗಿ, ಸತ್ಕರಿಸಿ ಅಪ್ಪಣೆ ಪಡೆದನು. ಪೌರ ಜಾನಪದರು ಹೋಗ

ಕೊಡದೆಂದು ಕಣ್ಣೀರಿಟ್ಟು ಬೇಡಿಕೊಂಡರು. ಅಂತು ಮಾಡಲು ಶಕ್ಯವಾಗದೆಂದು ಅವರನ್ನು ಸಮಾಧಾನಪಡಿಸಿ, ಧರ್ಮರಾಜನು ಗಮನೋನ್ಮುಖನಾದನು.

ಕಾಳಿದೇವಿಯು ಶರೀರವನ್ನು ಬಿಟ್ಟು, ಸ್ವಚ್ಛಂದ ವೃತ್ತಿಯಿಂದ ದ್ರೌಪದಿ ದೇವಿಯಲ್ಲಿ ಐಕ್ಯವನ್ನು ಹೊಂದಿದ್ದಳು.

ಪರೀಕ್ಷಿದ್ರಾಜನು ತಾತನ ಅನುಶಾಸನದಂತೆ, ಕೆಲಕಾಲವಾದ ಮೇಲೆ, ಪಂಚನಾದವನ್ನು ಮುತ್ತಿ, ಪರಮಪಾಪಿಗಳಾದ ಮ್ಲೇಂಛರನ್ನೂ, ಆಭೀರರನ್ನೂ ಸಂಪೂರ್ಣವಾಗಿ ನಾಶಪಡಿಸಿದನು.

ಧರ್ಮರಾಜನು, ಭೀಮಾದಿ ಸೋದರಚತುಷ್ಟಯವು, ದ್ರೌಪದಿಯು ವಲ್ಕಲ ಗಳನ್ನುಟ್ಟರು. ಉತ್ಸರ್ಗೇಷ್ಟಿಯನ್ನು ಮಾಡಿ, ಅವರು ಅಗ್ನಿಹೋತ್ರಗಳನ್ನು ತಮ್ಮ ಮನಃಕುಂಡಗಳಲ್ಲಿ ಸಮಾರೋಪಿಸಿ, ಅಗ್ನಿಯನ್ನು ಜಲಗಳಲ್ಲಿ ವಿಸರ್ಜಿಸಿದರು.

ಇಂತು ಮುನಿವೇಷಧರರಾಗಿ, ಐವತ್ತು ವರ್ಷಗಳ ಹಿಂದೆ ಹೋದಂತೆ, ವನಕ್ಕೆ ತೆರಳುವ ಧರ್ಮರಾಜಾದಿಗಳನ್ನು ಕಂಡು, ಪ್ರಜರು ಅತೀವ ಪ್ರೇಮವಿವಶರಾಗಿ ರೋದಿಸಿದರು. ಪಾಂಡವರು, ದ್ರೌಪದಿ ಇಂತು ಆರು ಜನರು ಪುರದಿಂದ ಹೊರಬಂದಾಗ, ಅವರನ್ನನುಸರಿಸಿ ಒಂದು ನಾಯಿಯೂ ಹೊರಟಿತು. ಅವರನ್ನು ಹಿಂದಿರುಗಿಸಲು ಸಾಧ್ಯವಿಲ್ಲವೆಂದರಿತು, ನಗರ ನರನಾರಿಯರು ವ್ಯಸನಾಕ್ರಾಂತರಾಗಿ, ಹಿಂದಿರುಗಿ ಹೋದರು. ಉಲೂಪಿಯು ಗಂಗೆಯನ್ನು ಪ್ರವೇಶಿಸಿ, ನಾಗಲೋಕವನ್ನು ಸೇರಿದಳು. ಚಿತ್ರಾಂಗದೆಯು ಮಣಿಪುರಕ್ಕೆ ತೆರಳಿದಳು. ಇತರರು ಪರೀಕ್ಷಿತನನ್ನು ಆಶ್ರಯಿಸಿ ನಿಂತರು.

ಪಾಂಡವಾದಿ ಸಪ್ತಕವು ಉಪವಾಸ ಮಾಡಿ, ಪ್ರಾಙ್ಮುಖವಾಗಿ ತೆರಳಿತು. ವೈಷ್ಣವಯೋಗವನ್ನವಲಂಬಿಸಿ, ಶ್ರೀಶಧ್ಯಾನರತರಾಗಿ, ಸರ್ವಸ್ವ ತ್ಯಾಗವನ್ನು ಮಾಡಿ, ಬಲುದೇಶಗಳನ್ನು ದಾಟಿ ಪೋದರು. ಈಶಾನ್ಯ ದಿಕ್ಕನ್ನು ಅನುಸರಿಸಿ ಅವರು ಸಮುದ್ರದ ದಡವನ್ನು ಸೇರಿದರು. ಧರ್ಮಜನ ಹಿಂದೆ ಕ್ರಮವಾಗಿ ಭೀಮಸೇನ, ಅರ್ಜುನ, ನಕುಲ, ಸಹದೇವರು, ದ್ರೌಪದಿ, ಆಮೇಲೆ ನಾಯಿಯು ಹೊರಟರು.

ಧನೂರತ್ನವೆಂಬ ಲೋಭದಿಂದ ಅರ್ಜುನನು ಗಾಂಡೀವವನ್ನೂ ಅಕ್ಷಯ ತೂಣಗಳನ್ನೂ ಬಿಡದಿರಲು, ನೋಡಿ, ಅಗ್ನಿದೇವನು ಪುರುಷವಿಗ್ರಹನಾಗಿ ನಿಂತು 'ಪಾಂಡುಸುತರೇ! ನಾನು ಪಾವಕನೆಂದು ತಿಳಿಯಿರಿ! ಖಾಂಡವದಹನ ಕಾಲದಲ್ಲಿ ನಾನು ವರುಣನಿಂದ ಬೇಡಿ ತಂದಿತ್ತ ಧನುಸ್ತೂಣೀರಗಳನ್ನು ಮತ್ತೆ ತಿರುಗಿ ಕೊಡಿಸಿರಿ! ಇನ್ನು ಮಹಾಪ್ರಸ್ಥಾನಗೈಯುವ ನಿಮಗೆ ಅವುಗಳಿಂದ ಪ್ರಯೋಜನವಿಲ್ಲ. ಚಕ್ರರತ್ನವನ್ನು ಕೂಡ ಶ್ರೀಕೃಷ್ಣನು ಬಿಟ್ಟಿರುವಾಗ, ಅರ್ಜುನನಿಗೇಕೆ ಧನುರ್ಲೋಭ ?' ಎಂದು ಬೇಡಿದನು. ಧರ್ಮಜಾದಿಗಳಿಂದ ಪ್ರೇರಿತನಾಗಿ ಅರ್ಜುನನು ಗಾಂಡೀವವನ್ನೂ, ಅಕ್ಷಯತೂಣ ದ್ವಯವನ್ನೂ ಸಮುದ್ರದಲ್ಲಿ ವಿಸರ್ಜಿಸಿ, ಮುಂದೆ ನಡೆದನು. ಇಂತು ಅಗ್ನಿಯು ವರುಣನ ಪ್ರಾತಿಭಾವ್ಯವನ್ನು ಪರಿಹರಿಸಿಕೊಂಡು, ಕೃತಾರ್ಥನಾಗಿ, ಅಂತರ್ಧಿತನಾದನು.

ಮುಂದೆ ಪಾಂಡವರು ಯೋಗಬಲದಿಂದ ಅಂತರಿಕ್ಷ ಮಾರ್ಗದಲ್ಲಿ ಸಾಗಿ, ಏಳು ದಿನಗಳಲ್ಲಿ ಭೂಪ್ರದಕ್ಷಿಣವನ್ನು ಮಾಡಿದರು. ಶ್ರಮವಿಲ್ಲದೆ ಪ್ರದಕ್ಷಿಣಿಸಿ ಅವರು ಪೂರ್ವ ದಕ್ಷಿಣ ಪಶ್ಚಿಮೋತ್ತರ ದಿಕ್ಕುಗಳ ದೇಶಗಳನ್ನು ವೀಕ್ಷಿಸಿ, ಉತ್ತರದ ಗಂಧಮಾದನಗಿರಿಯ ಬದರಿಕಾಶ್ರಮವನ್ನು ಮುಟ್ಟಿದರು. ವಾಲುಕಾರ್ಣವ, ಮೇರು ಗಿರಿಗಳನ್ನು ಕಂಡು, ಗಂಧಮಾದನವನ್ನು ದಾಟಿಪೋಗುವಾಗ, ದ್ರೌಪದಿಯು ಸ್ವಚ್ಛಂದ ವೃತ್ತಿಯಿಂದ ದೇಹವನ್ನು ತ್ಯಜಿಸಿದಳು.

ಭೀಮಸೇನನದನ್ನು ಕಂಡು, 'ಧರ್ಮರಾಜ! ಈ ರಾಜಪುತ್ರಿಯು ಪರಮ ಧರ್ಮಜ್ಞಳು, ಮಹಾಪತಿವ್ರತೆಯು. ಇವಳ ದೇಹವು ಬೀಳಲು ಕಾರಣವಾದ ದೋಷವಾವುದು?' ಎಂದು ಕೇಳಿದನು. ಧರ್ಮರಾಜನು ಸ್ವಲ್ಪ ಆಲೋಚಿಸಿ ದೋಷವನ್ನು ಕಾಣಲಾರದೆ, ಪ್ರಾಯಃ ಇರಬಹುದೆಂದು ಊಹಿಸಿದ ದೋಷಾಲ್ಪವನ್ನು ನುಡಿದನು. 'ಈಕೆಯು ಅರ್ಜುನನಲ್ಲಿ ಹೆಚ್ಚಿನ ಪಕ್ಷಪಾತವನ್ನು ತೋರಿದಳು. ಆದುದರಿಂದ ಬಿದ್ದಳು!' ಎಂದನು.

ಮುಂದೆ ಸಹದೇವನು ಬಿದ್ದನು. 'ಶುಶ್ರೂಷುವು, ನಿರಹಂಕಾರಿಯು ಆದ ಸಹದೇವನೇಕೆ ಬಿದ್ದ' ನೆಂದು ಕೇಳಿದ ಭೀಮನಿಗೆ, ಊಹಿಸಿದ ಕಾರಣವನ್ನು ಧರ್ಮರಾಜನು ನಿರೂಪಿಸಿದನು: 'ತನಗೆ ಸಮಬುದ್ಧಿವಂತರಿಲ್ಲವೆಂದು ಇವನು ಭಾವಿಸಿದ್ದನು' ಎಂದು ಧರ್ಮಜನು ಮುಂದೆ ಸಾಗಿದನು. ಸ್ವಲ್ಪ ದೂರ ಹೋದ ಮೇಲೆ ನಕುಲನು ಬಿದ್ದನು. 'ಅಕ್ಷತ ಧರ್ಮಶೀಲನು, ಸುಂದರನು ಆದ ನಕುಲನೇಕೆ ಬಿದ್ದನು?' ಎಂದ ಭೀಮನಿಗೆ, ಧರ್ಮರಾಜನು, 'ರೂಪದಿಂದ ತನಗೆ ಸಮರಿಲ್ಲವೆಂಬ ಗರ್ವದಿಂದ ನಕುಲನು ಬಿದ್ದ' ನೆಂದು ಸಾಗಿದನು.

ಇನ್ನು ದೂರ ಸಾರಿದಾಗ ಅರ್ಜುನನು ಬಿದ್ದನು. ಭೀಮನು, 'ಧರ್ಮಜ! ಅಪರಾಜಿತನು, ಅನೃತವರ್ಜಿತನು ಆದ ಅರ್ಜುನನೇಕೆ ಬಿದ್ದ?' ನೆಂದನು. ಧರ್ಮಜನು ಮತ್ತೆ ಊಹಿಸಿ, 'ಭೀಮಸೇನ! ಒಂದೇ ದಿನದಲ್ಲಿ ಶತ್ರುಗಳನ್ನೆಲ್ಲ ಕೊಲ್ಲುವೆನೆಂದ ಪಾರ್ಥನು ಹಾಗೆ ಮಾಡಲಾಗದೆ ಅನೃತಪರನಾದುದರಿಂದ ಬಿದ್ದನು' ಎಂದನು.

ಮತ್ತೆ ಪೋಗುತ್ತಿರುವಾಗ ಭೀಮಸೇನ ದೇಹವು ಪತಿತವಾಯಿತು. ಭೀಮನು ನಗುನಗುತ್ತಾ 'ರಾಜನ್! ಈಗ ಹೇಳು! ನಾನೇಕೆ ಬಿದ್ದೆನು?' ಎಂದನು. ಧರ್ಮರಾಜನು ತಡವರಿಸಿ, ಮತ್ತೆ ಮೆಲ್ಲಗೆ 'ಭೀಮಸೇನ! ನಿನ್ನಲ್ಲಿ ಅತಿಭೋಜಿ ಎಂಬ ದೋಷವಿದೆ! ಬಲುಬಲವಂತನೆಂದು ಗರ್ವವಿದೆ. ಆದುದರಿಂದ ಬಿದ್ದೆ!' ಎಂದನು.

ಧರ್ಮರಾಜನು ಮುಂದೆ ಸಾಗಿ ಹೋದನು. ನಾಯಿಯು ಮಾತ್ರ ಬಿಡದೆ ಹಿಂಬಾಲಿಸುತ್ತಿತ್ತು. ಆಗ ದಿಕ್ಕುಗಳಲ್ಲಿ ಪ್ರತಿಧ್ವನಿಸುವ ಕಾಂಚನ ರಥದಲ್ಲಿ ಕೂತು, ಇಂದ್ರನು ಅಲ್ಲಿಗೆ ಬಂದನು. 'ಏರು ರಥವನ್ನು! ಬಾ ಸ್ವರ್ಗಕ್ಕೆ!' ಎಂದ ಇಂದ್ರನಿಗೆ ದೀನವದನನಾಗಿ ಧರ್ಮರಾಜನಿಂತೆಂದನು: 'ಸಹಸ್ರಾಕ್ಷ! ನನ್ನ ಸೋದರ ಸತಿಯರಿಲ್ಲಿ ಬಿದ್ದಿರುವರು. ಅವರನ್ನು ಬಿಟ್ಟು ನಾನು ಸ್ವರ್ಗಕ್ಕೆ ಬರಲಾರೆನು' ಎಂದ ಯುಧಿಷ್ಠಿರನಿಗೆ

ಸುರೇಶನು 'ಅವರೆಲ್ಲರೂ ಶರೀರಗಳನ್ನು ಬಿಟ್ಟು, ಸ್ವರ್ಗವನ್ನು ಮುಟ್ಟಿರುವರು. ಧರ್ಮರಾಜ! ಅವರ ಚಿಂತೆ ಬಿಡು!' ಎಂದನು. ಧರ್ಮರಾಜನು 'ದೇವೇಶ! ಈ ನಾಯಿಯು ಪಾಪ ನನ್ನನ್ನು ಬಿಡದೆ ಬರುತ್ತಿದೆ. ಇದನ್ನೂ ಸ್ವರ್ಗಕ್ಕೆ ಕರೆದುಕೊಂಡು ಹೋಗಲಪೇಕ್ಷಿಸುವೆನು' ಎಂದನು.

'ಅಮರ್ತ್ಯನಂತಾಗಿರುವೆ ಧರ್ಮಜ! ಸಿದ್ಧಿಯನ್ನು ಸಾಧಿಸಿ, ಶ್ರೀಕೀರ್ತಿ ಪುಣ್ಯವಿರಾಜಿತನಾದ ನೀನೆಲ್ಲಿ? ಈ ಕುಹಕ ಶ್ವಾನವೆಲ್ಲಿ? ಬಿಡು ಅದನ್ನು!' ಎಂದ ದೇವೇಂದ್ರನಿಗೆ ಕೈಜೋಡಿಸಿ, ಧರ್ಮರಾಜನು, 'ಆರ್ಯರ ಕುಲದಲ್ಲಿ ಜನಿಸಿ, ಧರ್ಮರಾಜನೆನಿಸಿದ ನಾನು, ಇಂತಹ ನಿರ್ದಯನಾಗಲಾರೆನು! ನನಗೆ ಶ್ವಾನರಹಿತ ಸ್ವರ್ಗವು ರುಚಿಸದು' ಎಂದನು. ಇಂದ್ರನು 'ಹಾಗೆನ್ನಬೇಡ! ಇದು ಅಸ್ಪೃಶ್ಯವು! ಇದನ್ನು ಕರೆತಂದರಿಗೆ ಸ್ವರ್ಗದಲ್ಲಿ ಸ್ಥಳವಿಲ್ಲ. ನಾಯಿಯನ್ನು ಮುಟ್ಟಿ ಮನೆಗೆಲಸುವವನ ಪುಣ್ಯಗಳು ಕ್ರೋಧವಶರೆಂಬ ದಿತಿಜರ ಪಾಲಾಗುವವು. ಬೇಡ! ಇದನ್ನು ಬಿಟ್ಟು ಬಾ!' ಎಂದನು. ಧರ್ಮಜನು 'ಸರೇ! ದೇವೇಂದ್ರ! ಶರಣಾಗತನನ್ನು, ಭೀತನನ್ನು, ಭಕ್ತನನ್ನು ಬಿಡುವುದು ಧರ್ಮವಲ್ಲ. ಮೃತರಾದವರ ಕೂಡ ಅವರಲ್ಲಿ ನಾವು ಮಾಡುವ ಮೈತ್ರಿ ಮತ್ತು ದ್ವೇಷ ಕಳೆದುಹೋಗುವುದು. ಈ ನಾಯಿಯು ಬದುಕಿದೆ! ನನ್ನನ್ನು ಬಿಡದೆ ಬರುತ್ತಿದೆ. ಇದನ್ನು ನಾನು ಬಿಟ್ಟು ಬರುವುದಿಲ್ಲ. ಇದಿಲ್ಲದ ಸ್ವರ್ಗವೆನಗೆ ಬೇಡ!' ಎಂದನು.

ಆಗ ನಾಯಿಯ ರೂಪದಲ್ಲಿದ್ದ ಧರ್ಮನು ಸ್ವರೂಪದಿಂದ ಪ್ರತ್ಯಕ್ಷನಾಗಿ ಸ್ವಾಂಶನಾದ ಧರ್ಮಜನನ್ನು ಮೆಚ್ಚಿ ಇಂತೆಂದನು: 'ರಾಜೇಂದ್ರ! ಪಾಂಡುರಾಜನಿಗೆ ತಕ್ಕ ಪುತ್ರನಿರುವೆ! ದಯಾ ದಾಕ್ಷಿಣ್ಯಗಳಿಂದ ಅಸಮಾನನಾದ ನಿನಗೆ ಮೆಚ್ಚಿ, ಪ್ರೀತನೂ ಆಗಿರುವೆನು. ಹಿಂದೆ ದ್ವೈತವನದಲ್ಲಿ ಸರೋವರದಲ್ಲಿ ಬಕರೂಪನಾಗಿ ಪರೀಕ್ಷಿಸಿದೆನು. ಆಗಲು ನಕುಲನ ಜೀವಿತವನ್ನು ಬೇಡಿ, ನೀನು ನಿನ್ನ ಆನೃಶಂಸ್ಯವನ್ನು ತೋರಿ, ನನ್ನನ್ನು ಮೆಚ್ಚಿಸಿದೆ! ನಿನ್ನ ಲೋಕಗಳು ಅಕ್ಷಯ ಪುಣ್ಯಗಳಾಗಿವೆ! ನಿನ್ನ ಕೀರ್ತಿಯು ಆಚಂದ್ರಾರ್ಕವಾಗಲಿ! ನಡೆ ಸ್ವರ್ಗಕ್ಕೆ ಇದೇ ಶರೀರದಿಂದ!' ಎಂದು, ಶಕ್ರನು ಕಳಿಸಿದ ವಿಮಾನದಲ್ಲಿ ಧರ್ಮಜನನ್ನು ಕೂಡಿಸಿ ಸ್ವರ್ಗಕ್ಕೆ ಕರೆದುಕೊಂಡು ಹೋದನು.

ಧರ್ಮಶಕ್ರಮರುತ್ಪತಿನಾಸತ್ಯದಸ್ರರು ಮತ್ತು ದೇವ ಋಷಿ ಗಂಧರ್ವಾದಿಗಳ ಕೂಡಿ ಬರುತ್ತಿರಲು, ಧರ್ಮಜನು ಊರ್ಧ್ವಗತಿಕ ವಿಮಾನಾರೂಢನಾಗಿ ದಿಕ್ಕುಗಳನ್ನು ಬೆಳಗುತ್ತಾ, ಪಯಣಿಸಿದನು. ಆಗ ನಾರದನು, 'ಅಹೋ! ರಾಜರ್ಷಿ[illegible] ಧರ್ಮರಾಜನಂತಹ ಧರ್ಮವಂತರುಂಟೇ? ಯಾರಿಗೂ ಸಿಕ್ಕಲಾರದ ಪುಣ್ಯ[illegible]ರ್ತಿಗಳನ್ನು ಗಳಿಸಿ, ಈ ಮಹಾನುಭಾವನು ಸ್ವಶರೀರಸಹಿತನಾಗಿ ಸ್ವರ್ಗವನ್ನು ಸೇರಿದನು!' ಎಂದು ಪ್ರಶಂಸಿಸಿ, ಪಾಡಿದನು.

ಆಗ ಧರ್ಮರಾಜನು ದೇವತೆಗಳನ್ನು ಕಂಡು 'ಶಕ್ರ ಪರಿವಾರದವರಲ್ಲವೇ ನೀವು? ನನ್ನ ಸೋದರರೆಲ್ಲಿರುವರು? ಅವರಿರುವ ಲೋಕವು ಪುಣ್ಯಫಲವೋ, ಪಾಪ

ಫಲವೋ ಏನೇ ಆಗಲಿ! ಅದೇ ಲೋಕಕ್ಕೆ ನನ್ನನ್ನೂ ಕರೆದುಕೊಂಡು ಹೋಗಿ!' ಎಂದು ಬೇಡಿದನು. ಇಂದ್ರನು, 'ರಾಜನ್! ನಿನ್ನ ಶುಭಕರ್ಮನಿರ್ಜಿತವಾದ ಲೋಕಗಳು ಸ್ವರ್ಗದಲ್ಲಿ ನಿನಗೆ ಮೀಸಲಾಗಿವೆ! ನಿನ್ನ ಸತೀಸೋದರರ ಚಿಂತೆ ಬಿಡು! ಇನ್ನೂ ಮಾನುಷ ಶರೀರದಲ್ಲಿರುವುದರಿಂದ ನಿನಗೆ ಪೂರ್ವವಾಸನೆಯು ಪೂರಾ ನಷ್ಟವಾಗಿಲ್ಲವೆಂದು ತೋರುತ್ತಿದೆ. ಸಿದ್ಧಿಯನ್ನು ಹೊಂದಿರುವೆ! ನಿನ್ನವರಿಗೆ ಉತ್ತಮ ಲೋಕಗಳಾಗಿವೆ! ನೋಡು ಸ್ವರ್ಗವನ್ನು ಮುಟ್ಟಿರುವೆ! ಸಿದ್ಧರಾದ ದೇವ, ಋಷಿ ಗಂಧರ್ವರನ್ನು ನೋಡು!' ಎಂದು ನುಡಿದನು. ಆದರೂ ಯುಧಿಷ್ಠಿರನು, 'ದೈತ್ಯಮರ್ದನ! ದೇವೇಂದ್ರ! ನನ್ನ ತಮ್ಮಂದಿರಿರದ, ನನ್ನ ಬೃಹತ್ ಪದ್ಮಾಯತಲೋಚನೆ ದ್ರೌಪದಿಯು ಇರದ ಸ್ವರ್ಗವೆನಗೆ ಬೇಡ! ಅವರೆಲ್ಲಿರುವರೋ ಅಲ್ಲಿಗೆ ನನ್ನನ್ನು ಕಳಿಸು!' ಎಂದು ಬೇಡಿದನು.

### ಶುಭಮಸ್ತು

ರಾಜನ್! ಸ್ವಚ್ಛಂದ ಮರಣಶಕ್ತರಾದ, ಮಹಾನುಭಾವರಾದ, ದೇವಾಂಶರಾದ ಪಾಂಡವರಿಗೆ, ಋಷ್ಯಾದಿಗಳಂತೆಯೇ ಸಶರೀರವಾಗಿ, ಸ್ವರ್ಗವನ್ನು ಸೇರುವ ಸಾಮರ್ಥ್ಯವಿದೆ. ಆದುದರಿಂದ ಮನುಷ್ಯರಿಗಂತೆ ಶರೀರಪಾತದಲ್ಲಿ ನಿಮಿತ್ತಗಳಾಗುವ ಪಾಪದೋಷ ಗಳವರಲ್ಲಿಲ್ಲ. ಆದರೂ ಮನುಜ ಶರೀರವನ್ನು ಸ್ವರ್ಗಕ್ಕೆ ಕೊಂಡು ಹೋಗಬಾರದೆಂದೇ ಅವರು, ತಮ್ಮ ಇಚ್ಛೆಯಿಂದಲೇ ಶರೀರಗಳನ್ನು ಬಿಟ್ಟರು. ಭಾರತೀದೇವಿಯೇ ಆದ ದ್ರೌಪದಿಯೂ ಅಷ್ಟೇ ಎಂದು ತಿಳಿ! ಈ ರಹಸ್ಯವನ್ನರಿತಿದ್ದೂ, ಸರ್ವಜ್ಞ ಭೀಮಸೇನನು ಮರಣವಂತರ (ಕಾರಣ) ದೋಷವನ್ನು ಉದ್‌ಘಾಟಿಸುವುದರಿಂದ, ಅವರಿಗಿರುವ ಋಣಮೋಚನವು ಸಾಧಿತವಾಗುವುದೆಂಬ ಶ್ರುತಿಯಂತೆ ದೋಷ ಪ್ರಶ್ನೆಯನ್ನು ಮಾಡಿದನು. ನಿಜವಾದ ದೋಷವನ್ನಂತೂ ಕಾಣದೆ, ಪ್ರಾಯಃ ದೋಷವಿರಬಹುದೆಂದು ಸಂಭಾವಿಸಿ, ಧರ್ಮರಾಜನು, ತನಗೆ ತೋಚಿದ ದೋಷಗಳನ್ನು ಹೇಳಿ, ಋಣಮೋಚನವನ್ನು ಸಾಧಿಸಿದನು.

ದೇವತೆಗಳಿಗೂ ದುರ್ಲಭವಾದ ಉತ್ತಮ ಸ್ಥಾನವನ್ನು ಹೊಂದಿದ ಸ್ವಚ್ಛಂದ ಮೃತ್ಯುಳಾದ ದ್ರೌಪದಿಯೂ, ಜ್ಞಾನಭಕ್ತ್ಯಾದಿ ಉತ್ತಮಗುಣಯುಕ್ತರಾದ ಪಾಂಡವರು ಪಾಪ ಕಾರಣದಿಂದ ದೇಹವನ್ನು ಬಿಟ್ಟರೆಂದು ಸರ್ವಥಾ ತಿಳಿಯಬಾರದು. ಭೀಮಸೇನನು ಇಂತು ಅವರಿವರ ಋಣಗಳನ್ನು ಬಿಡಿಸಿ, ತಾನು ಶ್ರೀಹರಿ ಧ್ಯಾನಯೋಗ ಬಲದಿಂದ ಸ್ವರೂಪ (ಮುಖ್ಯವಾಯು)ವನ್ನು ಹೊಂದಿದನು.

ಭೀಮನನ್ನು ಬಿಟ್ಟು ಅರ್ಜುನನಲ್ಲಿ ಪಕ್ಷಪಾತ ವಿಶೇಷವು ದ್ರೌಪದಿಗೆ ದೋಷಾದಾಯಕವಲ್ಲ; ಪ್ರತ್ಯಕ್ಷ ನ್ಯಾಯವೇ ಆಗಿದೆ. ನೀತಿ ರೂಪ ವೀರ್ಯ ಬಲಗಳಿಂದ ಸಹದೇವ ನಕುಲ ಪಾರ್ಥ ಭೀಮರು ಅಧಿಕರು ಅಹುದೇ ಅಹುದು. ಇದ್ದ ಗುಣವಿದೆ ಎಂದರೆ ದಂಭವಲ್ಲ. ದೋಷವಂತೂ ಅಲ್ಲವೇ ಅಲ್ಲ. ಇಲ್ಲದ ಗುಣಗಳನ್ನು ಉಳ್ಳವನೆಂಬುದೇ ದಂಭವು. ಅದು ಪಾಂಡವರಲ್ಲಿ ಇಲ್ಲ. ಮತ್ತಃ

ಪರತರಂನಾನ್ಯತ್ - ನಾನೇ ಸರ್ವೋತ್ತಮನು ಎಂದು ಉಪದೇಶಿಸಿದ ಕೃಷ್ಣನು ದರ್ಪವಂತನೆಂದು ಹೇಳಬಹುದೇ ?

ಸರ್ವರೂ ಉಣ್ಣುವಾಗ ಕೊಡುವ ಪ್ರಾಣಾಹುತಿಗಳನ್ನೊಟ್ಟುಗೂಡಿಸಿದರೆ ಮೇರುಪರ್ವತವಾದೀತು! ಅಂತಹ ಅನ್ನವನ್ನು ಪ್ರಾಣಪಂಚಕ ರೂಪಕನಾಗಿ ಉಣ್ಣುವ ಭೀಮಸೇನರೂಪೀ ಮುಖ್ಯಪ್ರಾಣನು. ವೃಕ್ಷೋವಪು; ಪಿತುಮಾನ್ ಎಂಬ ಶ್ರುತಿಯಂತೆ ಬಹುಭೋಜಿಯೂ ಅಹುದು. ಉಂಡರೆ ಸಾಲದು; ಅಂತಹ ಜ್ಞಾನವೂ ಇರಬೇಕು. ಬಲ ಜ್ಞಾನ ವಿರಾಗ ಸತ್ಯ ಧರ್ಮ ಮುಖ ಗುಣ ಮಣಿಗಳಿಂದ ಅಸಮಾನ ಜೀವೋತ್ತಮನೆಂದು ಶ್ರೀಶನೇ ಸಾರಿ ಪೊಗಳಿದ ಭೀಮನಂತಹ ಸರ್ವಜ್ಞರು ಜೀವರಾಶಿಯಲ್ಲೆಲ್ಲೂ ಇಲ್ಲ.

ಒಂದು ವೇಳೆ ಸಹದೇವ ನಕುಲ ಪಾರ್ಥರಿಗೆ ಅತಿಮಾನ ದೋಷವು ಕಂಡು ಬಂದಿದ್ದರೂ ಅದು ದೇಹಪಾತ ಕಾರಣವಲ್ಲ. ಆ ದೋಷವು ಮುಕ್ತಿಯಲ್ಲಿ ಸ್ವಸಮಾನ ಜೀವರಿಂದ ಕಿಂಚಿತ್ ಆನಂದಹ್ರಾಸಕ್ಕೆ ಮಾತ್ರ ಕಾರಣವಾದೀತು! ಪ್ರಾರಬ್ಧ ಕರ್ಮಾವಸಾನವೇ ದೇಹಪಾತ ಕಾರಣವಾಗಿರುವ ಧರ್ಮಜಾದಿಗಳಿಗೆ ಯಾವ ದೋಷವೂ ಇದ್ದಿಲ್ಲ. ಇತರ ದೋಷವನ್ನು ತಿಳಿದು, ಧರ್ಮರಾಜನು ತಾನು ನಿರ್ದೋಷನಾಗಿದ್ದನೆಂದರೆ, ಸ್ವರ್ಗಭೋಗವೇತಕ್ಕೆ ಅನುಭವಿಸಲು ಬಾರದಿತ್ತು? ಸ್ವರ್ಗವಾದರೂ, ಪ್ರಾರಬ್ಧವಿತ್ತಾದುದರಿಂದ ಅದು ಮುಗಿದಾಗ, ಆತನಿಗೆ ಮಂದಾಕಿನೀ ಸ್ನಾನದಿಂದ ಮನುಜದೇಹವು ಬಿದ್ದುಹೋಯಿತು. ಆಗ ಸ್ವರ್ಗಾನುಭೂತಿಯ ಕರಗತವಾಯಿತು. ಆದುದರಿಂದ ಪ್ರಾರಬ್ಧ ಕರ್ಮಾವಸಾನವೇ ದೇವಾಂಶರ ಶರೀರಪಾತ ಕಾರಣವಾಗಲಿ, ಯಾವ ದೋಷವೂ ಅಲ್ಲ. ಅತಿ ಮಾನವು ಮುಕ್ತಿಯಲ್ಲಿರತಕ್ಕ ಸುಖವೃದ್ಧಿಗೆ ಹ್ರಾಸವನ್ನು ತಂದೊಡ್ಡುವುದೇ ಆಗಲಿ ದೇಹಪಾತ ಕಾರಣವಲ್ಲ. ಅಥವಾ ಪಾಂಡವರಂತಹ ದೇವಜೀವರ ಅತಿಮಾನವು ಹೆಚ್ಚಾದ ಪುಣ್ಯವನ್ನು ಕಳೆಯುವುದಾಗಲಿ ಕ್ಲೃಪ್ತ ಹಾನಿಗೆ ಕಾರಣವಾಗಲಾರದು. ಅಂತು ದೇಹಾರಂಭಕವಾದ ಪ್ರಾರಬ್ಧಕರ್ಮದ ನಾಶದಿಂದಲೇ ದೇಹಪಾತವೆಂದು ತಿಳಿ!

ಸರ್ವದೋಷರಹಿತರಾದ, ದೇವತೆಗಳಿಗೂ ದೇವತೆಗಳಾದ ಸರ್ವಜೀವರಲ್ಲಿಯೂ ಗುಣೋತ್ತಮರಾದ ಋಜುಗಳೆಂದು ಖ್ಯಾತರಾದವರಿಗೆ ಮುಖ್ಯನಾದ ಮುಖ್ಯಪ್ರಾಣನ ಅವತಾರನಾದ ಭೀಮಸೇನನಿಗೆ ದೋಷಾಶಂಕೆಯೇ ಕೂಡುವುದಿಲ್ಲ. ಶ್ರೀಕೃಷ್ಣನೇ ಭೀಮಸೇನನನ್ನು ಸಹಸ್ರಗುಣಿತವಾದ ಆನಂದ ಜ್ಞಾನಾದಿ ಸದ್ಗುಣ ಖಣಿ ಎಂದು ಪ್ರಶಂಸಿಸಿರುವನು. ಆದರೂ ಅಹಂಕಾರ ಭಯದಿಂದ ಕಡಿಮೆ ಹೇಳಿಕೊಂಡಿದ್ದನ್ನು ಶ್ರೀಕೃಷ್ಣನೇ ಪೊಗಳಿ ತೋರಿಸಿರುವನು. ಧರ್ಮರಾಜನು ದುರ್ಯೋಧನಾದಿ ಸಂಹಾರವನ್ನು ಅಧರ್ಮವೆಂದು ಶಂಕಿಸಿದಂತೆ, ಈಗಲೂ ದೇಹಪಾತ ಕಾರಣವೆಂದು ದೋಷಗಳನ್ನು ಸಂಭಾವಿಸಿ ನುಡಿದಿರುವನು. ವಯೋವೃದ್ಧರಾದ ಧರ್ಮಜಾದಿಗಳಿಕಿಂತಲು ಮುಂಚಿತವಾಗಿ, ತಮಗೇ ಬೇಡವಾಗಿದ್ದ ದೇಹಗಳನ್ನು ತಾವಾಗಿ ಬಿಟ್ಟವರಾಗಲಿ, ದ್ರೌಪದ್ಯಾದಿಗಳು ಪಾಪದಿಂದಲಲ್ಲ; ದೋಷದಿಂದಲೂ ಅಲ್ಲ; ಮೋಕ್ಷೇಚ್ಛೆಯಿಂದಲೇ ಶರೀರಪಾತವಾಗಲಿ

ಪಾಪದಿಂದಲ್ಲ. ಶ್ರೀಕೃಷ್ಣನನ್ನೇ ನಂಬದೆ, ತಾನು ಪಾಪಯುದ್ಧ ಮಾಡಿರುವನೆಂದು ತಿಳಿದ ಧರ್ಮಜನಿಗೆ ಮೊದಲು ದೇಹಪಾತವಾಗಿದ್ದರೆ, ಆಗ ದೋಷದಿಂದ ದೇಹಪಾತವು ಎಂದು ಹೇಳಬಹುದಿತ್ತು. ಹಾಗಿಲ್ಲ ! ಆದುದರಿಂದ ಕರ್ಮಕ್ಷಯದಿಂದಲೇ ದೇಹಪಾತವೆಂದು ಸಿದ್ಧಾಂತವು.

ಇಂತು ಧರ್ಮರಾಜನು ಧರ್ಮಪ್ರಶಂಸೆಗೆ ಪಾತ್ರನಾಗಿ, ಮೇಲೇರಿ ಪೋಗುತ್ತಾ, ಯಮಧರ್ಮ ನಗರದ ರಾಜರನ್ನೂ, ವೀರಸ್ವರ್ಗದಲ್ಲಿರುವ ರಾಜರನ್ನೂ ಮೀರಿ ಇಂದ್ರನ ಕ್ರೀಡಾಸ್ಥಾನವಾದ ಅಮರಾವತಿಯನ್ನಲ್ಲ, ಬೇರೆ ಸ್ವರ್ಗ ಸದೃಶಲೋಕವನ್ನು ಸೇರಿದನು.

ಮಹಾಪ್ರಸ್ಥಾನಿಕ ಪರ್ವ ಮುಗಿಯಿತು



# ೧೮. ಸ್ವರ್ಗಾರೋಹಣ ಪರ್ವ

## ೧. ಸ್ವರ್ಗಾರೋಹಣ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು:

'ರಾಜನ್! ತಿತಿಕ್ಷೆ, ದೈವಭಕ್ತಿ, ರಕ್ಷತಿ ಎಂಬ ವಿಶ್ವಾಸ, ಜ್ಞಾನ ಶ್ರದ್ಧೆ, ತಪಸ್ಸು ವಿರಕ್ತಿ, ದುಷ್ಟಶಿಕ್ಷೆ, ತ್ಯಾಗ, ದಯಾಲುತೆ ಎಂಬ ಸದ್ಗುಣಗಳನ್ನು ಭಾರತದಲ್ಲಿ ನಿರೂಪಿಸಲಾಯಿತು. ಈಗ ಆ ಗುಣಗಳಿಗೆ ಮುಖ್ಯಫಲವಾದ ಮೋಕ್ಷವನ್ನು ನಿರೂಪಿಸುವೆವು ಕೇಳು!

ಧರ್ಮಜನು, ಸ್ವರ್ಗದಂತೆ ಕಾಣುತ್ತಿದ್ದ ಲೋಕದಲ್ಲಿ ಸುಖಭೋಗಾಸಕ್ತನಾಗಿದ್ದ ದುರ್ಯೋಧನನನ್ನು ಕಂಡನು. ಅತ್ಯಂತ ಸುಖಮಯ ಸ್ಥಾನದಲ್ಲಿ ಸಹೋದರರಿಂದ ಕೂಡಿ ಮೆರೆವ ಸುಯೋಧನನನ್ನು ನೋಡಿ, ಧರ್ಮರಾಜನು ಕಣ್ಣುಚ್ಚಿ, ತಟ್ಟನೆ ಹಿಂದಿರುಗಿದನು. 'ಈ ಪಾಪಿಯಿಂದ ಕೂಡಿದ ಲೋಕಗಳನ್ನು ನಾನೊಲ್ಲೆನು. ಇವನು ಅತ್ಯಂತ ದುಷ್ಟನು! ಪೃಥ್ವೀರಾಜರನ್ನೆಲ್ಲ ನಾಶಪಡಿಸಿದ ನಿರ್ದಯನು! ನಿತ್ಯಸಂಶಯನು, ಶ್ರೀಕೃಷ್ಣದ್ವೇಷಿಯು, ಭಗವದ್ಭಕ್ತದ್ವೇಷಿಯು, ನಾಸ್ತಿಕನು, ಕೃತಘ್ನನು, ಮಹಾಧೂರ್ತನು ಆದ ದುರ್ಯೋಧನನು ಉತ್ತಮವಾದ ಸ್ವರ್ಗಲೋಕವನ್ನೆಂತು ಪೊಂದಿದನು? ನಾರಾಯಣ ಪರಾಯಣರು, ಪರಮಧರ್ಮ ನಿರತರು, ನನ್ನ ಪ್ರಿಯತಮರು ಆದ ಭೀಮಾರ್ಜುನ ನಕುಲ ಸಹದೇವರೆಲ್ಲಿ; ದ್ರೌಪದಿ ಎಲ್ಲಿ? ವೀರಕರ್ಣನೂ ಇಲ್ಲಿಲ್ಲವಲ್ಲ! ಧೃಷ್ಟದ್ಯುಮ್ನ ಘಟೋತ್ಕಚ ಅಭಿಮನ್ಯು ಪ್ರಮುಖರೆಲ್ಲಿರುವರು? ಅವರೆಲ್ಲರಿರುವ ಲೋಕಕ್ಕೆ ನನ್ನನ್ನೂ ಕರೆದುಕೊಂಡು ಹೋಗಿ! ನನಗೆ ಈ ಸ್ವರ್ಗವು ಬೇಕಿಲ್ಲ!' ಎಂದ ಧರ್ಮರಾಜನನ್ನು ನೋಡಿ, ದೇವತೆಗಳು 'ರಾಜನ್! ನಿನಗೆ ನಿನ್ನ ಸಹೋದರಾದಿಗಳ ಚಿಂತೆ ಏಕೆ? ಅವರವರ ಕರ್ಮನಿರ್ಮಿತ ಲೋಕಗಳನ್ನವರು ಹೊಂದಿರುವರು. ಒಬ್ಬರ ಕರ್ಮದ ಫಲವನ್ನು ಇತರರು ಉಣ್ಣಲಾಗುವುದೇ? ರಾಜೇಂದ್ರ! ವೀರವರನಾದುದರಿಂದ ದುರ್ಯೋಧನನು ಇಲ್ಲಿಯ ಜನರಿಂದ ಪೂಜಿತನಾಗಿ ಮೆರೆಯುತ್ತಿರುವನು. ಅದನ್ನು ಮನಸ್ಸಿಗೆ ತರಬೇಡ! ಹಿಂದಿನ ವೈರವನ್ನು ಬಿಡು!' ಸ್ವರ್ಗಲೋಕದಲ್ಲಿ ದ್ವೇಷವಿಲ್ಲ; ಪ್ರೀತಿಯೂ ಇಲ್ಲ (ಯೋಗ್ಯತೆಗೆ ಮೀರಿ!)' ಎಂದರು.

ಆ ಮಾತನ್ನಾಲಿಸಿ, ಪ್ರೀತನಾಗದೆ, ನನಗೆ ದುರ್ಯೋಧನ ಲೋಕವು ಬೇಡವಾಗಿದೆ! ಸತ್ಯವಾದಿಗಳು, ಶೂರವರರು, ವಿಷ್ಣುಭಕ್ತರು ಆದವರ ಲೋಕವು ದುಃಖಮಯವೇ ಆಗಿದ್ದರೂ ನನಗೆ ಆಗಲಿ! ಶಸ್ತ್ರನಿಹತರಾದ ವೀರ ಪಾರ್ಥಿವರೇಕಿಲ್ಲ ಇಲ್ಲಿ ಇದು ವೀರಸ್ವರ್ಗವಾದರೆ? ನನಗೆ ನನ್ನವರಿರುವ ಸ್ಥಲವನ್ನು ನೋಡಬೇಕೆನಿಸಿದೆ.

ಕರ್ಣ, ಯುಧಾಮನ್ಯು, ಉತ್ತಮೌಜ, ಚೇಕಿತಾನರು, ಭೀಮಾದಿ ಸೋದರರು, ಅಭಿಮನ್ಯು ಘಟೋತ್ಕಚಾದಿ ಕುಮಾರರು ಎಲ್ಲಿರುವರೋ ನಾನೂ ಅಲ್ಲೇ ಇರುವೆನು. ಭೀಮವಿಕ್ರಾಂತನಾದ ಭೀಮಸೇನನು ನನಗೆ ಪ್ರಾಣಗಳಿಕಿಂತಲು ಪ್ರಿಯತರನಾಗಿರುವನು. ಇಂದ್ರತುಲ್ಯನಾದ ಅರ್ಜುನನು, ಪ್ರಿಯರಾದ ನಕುಲ ಸಹದೇವರು ಯಾರೂ ಇಲ್ಲದ ಈ ಲೋಕವೆನಗೆ ಬೇಡ!' ಎಂದನು.

ದೇವತೆಗಳು ಆಗ ದೇವದೂತನಿಗೆ ಯುಧಿಷ್ಠಿರನನ್ನು ಅವನವರಿದ್ದಲ್ಲಿಗೆ ಸೇರಿಸೆಂದು ಆಜ್ಞಾಪಿಸಿದನು. ದೇವದೂತನು ಅಲ್ಲಿಂದ ಸ್ವಲ್ಪ ದೂರವಾಗಿ ಆತನನ್ನು ಕರೆದುಕೊಂಡು ಹೋದನು. ಅಲ್ಲಿ ಘೋರನರಕವನ್ನು ಕಂಡು, ಧರ್ಮರಾಜನು ಜುಗುಪ್ಸಿತನಾದನು. ಕತ್ತಲು ಕವಿದು ಘೋರದುಃಖ ಸಮನ್ವಿತವಾದ ಆ ಲೋಕವು ದುರ್ಗಂಧದುಸ್ಸಹವಾಗಿತ್ತು. ಮಾಂಸ ರಕ್ತ ಪೂಯೋ ಮೇದಸ್ಸಂಪೂರ್ಣವು, ಕೇಶ ಶೈವಾಲವು, ಅಸ್ಥಿತಟವು ಆದ ವೈತರಣಿಯು ಹರಿಯುತ್ತಿತ್ತು. ದಂಶ ಪತಂಗ ಮಕ್ಷಿಕಾ ವೃಶ್ಚಿಕಾದಿಗಳು ಪೀಡಿಸುತ್ತಿರಲು, ಅಲ್ಲಿ ಬಿದ್ದವರು ಅಳುತ್ತಿದ್ದರು. ಕುಣಪಗಳು ಹರಡಿ ಬಿದ್ದಿದ್ದವು. ವೇದನಾತುರರ ಆರ್ತನಾದಗಳು ಕರ್ಣಕಠೋರವಾಗಿದ್ದವು. ಹೃದಯ ವಿದ್ರಾವಕವು, ಅಮಂಗಲವು ಆದ ನರಕದರ್ಶನದಿಂದ ಧರ್ಮರಾಜನ ಮೈ ಜುಮ್ಮೆಂದಿತು. ಆತನು ಮೂಗು ಮುಚ್ಚಿಕೊಂಡು, 'ಇನ್ನು ಎಷ್ಟು ದೂರ ನಾವು ಹೋಗಬೇಕು? ಇಲ್ಲಿ ಬಿದ್ದು ನರಳುತ್ತಿರುವವರಾರು?' ಎಂದು ಕೇಳಿದನು. ದೇವದೂತನು 'ಇಲ್ಲಿಯವರೆಗೇ ನಾವು ಹೊರಡುವುದು, ನೀನೇ ಬೇಡಿ ಪಡೆದು ಬಂದ ಸ್ಥಾನವಿದು. ನಿನ್ನನ್ನಿಲ್ಲಿ ಬಿಟ್ಟು ನಾನು ಹಿಂದಿರುಗಬೇಕೆಂದು ದೇವತೆಗಳ ಆಜ್ಞೆ!' ಎಂದನು.

ಧರ್ಮರಾಜನು ನಿರ್ವಿಣ್ಣನಾದನು. ಆ ಪೂತಿಗಂಧವು ದುಸ್ಸಹವಾಗಿತ್ತು. ಹಿಂದಿರುಗಬೇಕೆಂದು ನಿಶ್ಚಯಿಸಿದ ಧರ್ಮರಾಜನಿಗೆ ಕೆಲವು ಆರ್ತನಾದಗಳು ಕೇಳಬಂದವು. 'ರಾಜನ್! ಹೋಗಬೇಡ! ಇಲ್ಲೇ ನಿಲ್ಲು! ನೀನಿರುವುದರಿಂದ ನಮಗೆ ಸ್ವಲ್ಪ ದುಃಖ ವಿರಾಮವಾಗುತ್ತಿದೆ. ನಿನ್ನಿಂದ ಸುಗಂಧವು ಸೂಸಿಬಂದು ನಮಗೆ ಘ್ರಾಣತರ್ಪಕವಾಗಿದೆ!' ಎಂದು ಕೂಗುವ ಅವರ ಸ್ವರವು ಭೀಮಾರ್ಜುನ ಕರ್ಣ ಯಮಳರದಂತಿತ್ತು. 'ಏನಿದು? ಎಂತಹ ಕಷ್ಟ? ಯಾರು ನೀವು? ಇಲ್ಲೇಕಿರುವಿರಿ?' ಎಂದು ಕೇಳಿದ ಧರ್ಮಜನಿಗೆ ಅವರೊಮ್ಮೆಗೇ ಉತ್ತರಿಸಿದರು. 'ನಾನು ಕರ್ಣನು! ನಾನು ಭೀಮನು! ಅರ್ಜುನನು ನಾನು! ನಕುಲನೇ ನಾನು! ನಾನು ಸಹದೇವನು! ಧೃಷ್ಟದ್ಯುಮ್ನ ನಾನು!' ಇತ್ಯಾದಿ ದ್ರೌಪದೇಯರು, ದ್ರೌಪದಿ ಎಂಬ ಪೆಸರುಗಳನ್ನಾಲಿಸಿ, ಧರ್ಮಜನು ಮೂರ್ಛಿತನಾದಂತಾದನು. ಆತನಿಗೆ ದಿಗ್ಭ್ರಾಂತಿ ಹಿಡಿಯಿತು.

'ಏನಿದು? ಯಾವ ಪಾಪವನ್ನೂ ಅರಿಯದ ಪುಣ್ಯವಂತರಾದ ನನ್ನವರಿಗೆ ಇಂತಹ ನರಕವೇ? ಧಾರ್ತರಾಷ್ಟ್ರನು ಮಾಡಿರುವ ಪುಣ್ಯವಾದರೂ ಏನಿರಬಹುದು? ಅವನಂತಹ ಪಾಪಿಗೆ ಅಂತಹ ಶ್ರೀ ಸಂಪತ್ತುಗಳು! ಇವರಂತಹ ಸುಜನೋತ್ತಂಸರಿಗೆ ಇಂತಹ ಹೀನನರಕ ದುಃಖಗಳು! ನಾನೇನು ಸ್ವಪ್ನವನ್ನು ಕಾಣುತ್ತಿರುವೆನೋ? ಅಥವಾ

ನಿಜವಾಗಿಯೂ ಇಂತಹ ಭೀಕರ ದೃಶ್ಯವನ್ನು ಅನುಭವಿಸುತ್ತಿರುವೆನೋ? ಅಥವಾ ಚಿತ್ತವಿಭ್ರಮವೋ!' ಇಂತು ಚಿಂತಿಸುವ ಧರ್ಮರಾಜನು, ಧರ್ಮಫಲ ವೈಪರೀತ್ಯವನ್ನು ಕಂಡು, ಕಿಂಚಿತ್‌ಕೋಪ ಸಮನ್ವಿತನಾದನು. ದೇವತೆಗಳನ್ನೂ ಧರ್ಮವನ್ನೂ ಗರ್ಹಿಸಿ ಇಂತೆಂದನು: 'ನೀನಿನ್ನು ಹೊರಡು! ನಾನಿಲ್ಲೇ ನಿಲ್ಲುವೆನೆಂದು ದೇವೇಂದ್ರಾದಿಗಳಿಗೆ ಹೇಳು! ನಾನಿರುವುದರಿಂದ ಇವರಿಗೆ ಸುಖವಾಗುವುದಾದರೆ, ಸಾಕಿದೇ ನನಗೆ ಸ್ವರ್ಗವು!' ಎಂದು ಅವನನ್ನು ಕಳಿಸಿದನು.

ಆಗ ದೇವೇಂದ್ರಾದಿಗಳು ಅಲ್ಲಿಗೆ ಬಂದರು. ಮತ್ತು ಧರ್ಮದೇವನೂ ಅಲ್ಲಿಗೆ ಬಂದನು. ದುರ್ಗಂಧವೆಲ್ಲವೂ ನಾಶವಾಗಿ, ದಿವ್ಯಪರಿಮಳವು ಸೂಸಿಬಂತು, ನೋಡಿದ ನರಕದೃಶ್ಯವೂ ಮಾಯವಾಯಿತು. ಮಂದಮಲಯಾನಿಲವು ಸುಖಸ್ಪರ್ಶವಾಗಿ ಬೀಸಿತು. ಮರುತ್ತಗಳು, ಶಕ್ರಾದಿ ಸುರರು, ಸಿದ್ಧಸಾಧ್ಯ ಚಾರಣ ರುದ್ರಾದಿತ್ಯರು ಅಲ್ಲಿ ಬಂದು, ಧರ್ಮರಾಜನಿಗೆ ದರ್ಶನವಿತ್ತರು.

ಶಕ್ರನು, 'ಧರ್ಮರಾಜ! ನಿನ್ನ ಧರ್ಮದೀಕ್ಷೆಗೆ ಮೆಚ್ಚಿದೆನು. ನಿನಗೆ ಅಕ್ಷಯ ಪುಣ್ಯಲೋಕ ಸುಖಗಳು ಕಾದಿವೆ! ಸಿದ್ಧನಾಗಿರುವೆ! ರಾಜ್ಯಾಂತೇ ನರಕಂ ಧ್ರುವಂ ಎಂಬ ವಚನವು ಸುಳ್ಳಾಗದು. ಶುಭಾಶುಭ ರಾಶಿಗಳೆಲ್ಲ ಜೀವರಿಗಿರುವವು. ಪುಣ್ಯವಂತರು ಸ್ವಲ್ಪ ಪಾಪದ ಫಲವನ್ನು ಅನುಭವಿಸಬೇಕಾಗುವುದು. ಪಾಪಿಗಳು ತಮ್ಮ ಅಲ್ಪ ಪುಣ್ಯಫಲವನ್ನುಂಡು, ಆಮೇಲೆ ನರಕಾದಿ ಅನಂತಾನರ್ಥ ಫಲಗಳನ್ನು ಉಂಬುವರು. ನಿನ್ನ ಶ್ರೇಯಃಕಾಂಕ್ಷಿಗಳಾಗಿ ನಿನಗೆ ಧರ್ಮರಾಜ! ನರಕವನ್ನು ಸೃಜಿಸಿ, ತೋರಿಸಿದೆವು. 'ಅಶ್ವತ್ಥಾಮಾ ಹತಃ ಕುಂಜರಃ' ಎಂಬಲ್ಲಿ ನಿನ್ನಿಂದ ಸ್ವಲ್ಪ ಅನೃತವು ಉಚ್ಚರಿತವಾಯಿತು. ಶ್ರೀಕೃಷ್ಣನು ಸಾಕ್ಷಾನ್ನಾರಾಯಣನು. ಆ ದೇವದೇವನ ವಚನವು ಪರಮಪ್ರಮಾಣವು. ಶ್ರುತಿಪುರಾಣ ವಿರುದ್ಧವೆಂದು ತೋರಿಬಂದರೂ, ಸಾಕ್ಷಾದ್ಭಗವದ್ವಚನವು ಪರಮ ಪ್ರಮಾಣವಾಗಿದೆ. ಅಂತಹ ಶ್ರೀಶವಚನದಲ್ಲಿ ವಿಶ್ವಾಸವಿಟ್ಟಾಡಿದ್ದರೆ ನಿನಗೆ ಅನೃತಫಲವು ಬರುತ್ತಿದ್ದಿಲ್ಲ.

ಭೀಮಸೇನಾದಿಗಳು ಉತ್ತಮ ದೇವತೆಗಳು! ದೇವತೆಗಳಿಗೆ ನರಕವಿಲ್ಲ! ವ್ಯಾಜದಿಂದ ಅಂತಹ ನರಕವನ್ನು ತೋರಿಸಿದೆವು. ಭೀಮಾದಿಗಳ ಸ್ವರದಂತೆ ನುಡಿದದ್ದನ್ನು ಕೇಳಿ, ಭೀಮಾದಿಗಳೆಂದು ತಿಳಿದು, ವ್ಯಸನಪಟ್ಟಿದ್ದರಿಂದ ನಿನ್ನ ಪಾಪ ಫಲವು ಪೂರ್ಣ ನಷ್ಟವಾಯಿತು. ನೋಡಿಲ್ಲಿ! ಕರ್ಣನು ಆದಿತ್ಯಮಂಡಲಗತನಾಗಿರುವನು. ದೇವಾಂಶದಿಂದ ಪುಟ್ಟಿದ ರಾಜನ್ಯರು ಶ್ರೀಕೃಷ್ಣನು ತಮಗೆ ನಿರ್ದೇಶಿಸಿದಲ್ಲಿ ನಿಂತು, ಸೇವೆಗೈದು, ತಂತಮ್ಮ ಮೂಲರೂಪಗಳಲ್ಲಿ ಐಕ್ಯವನ್ನು ಹೊಂದಿರುವರು. ಫಲಾಧಿಕ್ಯದಿಂದ ಪ್ರಾರಬ್ಧ ಪುಣ್ಯವನ್ನು ಮುಗಿಸಲಾಗದ ಪಾಂಡವರು (ನೀವು) ನಿಮ್ಮ ಮೂಲ ರೂಪಗಳೊಡಗೂಡಿ, ಬೇರೆಯಾಗಿ ವಿಹರಿಸುತ್ತಾ, ತತ್ಸಮಭೋಗರಾಗಿರುವರು!

ಧರ್ಮಜ! ರಾಜಸೂಯ ಜಿತಪುಣ್ಯ ಲೋಕಗಳು ನಿನಗೆ ಅಕ್ಷಯ ಭೋಗ ಗಳನ್ನೀಯಲಿವೆ! ಹರಿಶ್ಚಂದ್ರಾದಿ ರಾಜನ್ಯರಂತೆ - ಇನ್ನೂ ಹೆಚ್ಚಾಗಿ ನೀವು ಸುಖ

ಪಡುವಿರಿ! ನಿನ್ನನ್ನು ಕೂಡಿ ಮಾಂಧಾತೃ, ಭಗೀರಥ, ಭರತರಂತಹ ರಾಜನ್ಯರು ವಿಹರಿಸಿ, ಧನ್ಯರಾಗುವರು. ನಿನಗೆ ಮನುಷ್ಯ ದೇಹವಿದೆಯಾಗಿ ಮನುಜಭಾವವು ನಶಿಸಿಲ್ಲ. ಮನುಜ ಸ್ವಭಾವದಿಂದಲೇ ನೀನು ದುರ್ಯೋಧನಾದಿಗಳನ್ನು ದ್ವೇಷಿಸುತ್ತಿರುವೆ! ದೈತ್ಯರಿಗೂ ಪ್ರಾರಬ್ಧಪುಣ್ಯದಿಂದ ಸ್ವರ್ಗಾದಿಗಳಲ್ಲಿ ಭೋಗಗಳಾಗುವವು. ಅದನ್ನೂ ದೇವತೆಗಳು ಕೊಡುವರು. ಆ ವಿಷಯದಲ್ಲಿ ನಿನ್ನಂತೆ ದೇವತೆಗಳಿಗೆ ದ್ವೇಷವಿಲ್ಲ. ಅಂಧಂತಮವನ್ನು ಹೊಂದಿಸುವ ವಿಷಯದಲ್ಲಿ ನಿತ್ಯದ್ವೇಷವಿದ್ದೇ ಇದೆ. ನೀನು ದೇವಮಂದಾಕಿನಿಯಲ್ಲಿ ಸ್ನಾನ ಮಾಡಿ, ನಿನ್ನ ಮನುಜ ದೇಹವನ್ನು ಬಿಡು!' ಎಂದನು.

ಧರ್ಮನು, 'ಧರ್ಮರಾಜ! ಯಕ್ಷಪ್ರಶ್ನೆ ಕಾಲದಲ್ಲಿ ನಕುಲನನ್ನು ಜೀವಿಸಿಕೊಡೆಂದು ಬೇಡಿ, ನಿನ್ನ ನಿಷ್ಪಕ್ಷಪಾತಿತ್ವವನ್ನು ತೋರಿದೆ! ಸ್ವರ್ಗಾರೋಹಣ ಸಮಯದಲ್ಲಿ ನಾಯಿಯನ್ನು ಕೈಬಿಡದೆ ದಯಾಲುತ್ವವನ್ನು ತೋರಿದೆ! ಮತ್ತೆ ಈಗ ಭೀಮಾದಿಗಳಂತಿರುವವರ ಆರ್ತಸ್ವರವನ್ನು ಕೇಳಿ, ಧರ್ಮಪಾಲಕತ್ವವನ್ನು ತೋರಿದೆ! ಮೂರು ಸಲವೂ ನಿನ್ನನ್ನು ನಾನು ಪರೀಕ್ಷಿಸಿದೆನು. ನಾಯಿಯಂತೆ, ಬಕದಂತೆ ಆಗಲು, ಈಗ ತಾತ್ಕಾಲಿಕ ನರಕವನ್ನು ಸೃಷ್ಟಿಸಿಯು ನಿನ್ನ ಸತ್ಯಧರ್ಮಗಳನ್ನು ಅಳೆದು ತಿಳಿದೆನು. ಚಿಂತಿಸಬೇಡ! ಅದು, ದುರ್ಯೋಧನಾದಿ ಪಾಪಿಗಳ ಪ್ರಾರಬ್ಧ ಪುಣ್ಯನಾಶಕ್ಕಾಗಿ ನಿರ್ಮಿತವಾದ ಉಪಸ್ವರ್ಗವೆಂದು ತಿಳಿ! ಈಗ ನೀನು ಸ್ವರ್ಗ ಭೂಮಿಯನ್ನು ಸೇರಿರುವೆ! ಧನ್ಯನಾದೆ! ನನ್ನ ಅಂಶದಿಂದ ಜನಿಸಿದ ನಿನ್ನನ್ನು ಕಂಡು, ಲೋಕಗಳಲ್ಲಿ ನಿನ್ನ ನಿರ್ಮಲಕೀರ್ತಿಯನ್ನು ಬೆಳಗಿಸಿ, ನಾನು ಸುಪ್ರೀತನಾಗಿರುವೆನು' ಎಂದನು.

ಧರ್ಮರಾಜನು ಮಂದಾಕಿನಿಯಲ್ಲಿ ಮಿಂದು, ಮನುಜಶರೀರವನ್ನು ಬಿಟ್ಟು, ಧರ್ಮದೇವರೂಪನಾದನು.

ಜನಮೇಜಯ! ದೇವತೆಗಳಿಗೆ ನಿರಯವಿಲ್ಲ! ಎಂಬ ವಚನದಂತೆ ಸಾಕ್ಷಾತ್ತಾಗಿ ನರಕದುಃಖವನ್ನು ಕೊಡಲಾಗದು. ಹಾಗೆಂದು ಶ್ರೀಕೃಷ್ಣವಚನದಲ್ಲಿ ಅವಿಶ್ವಾಸದಿಂದ ನುಡಿದ ಅನೃತ (ಶ್ರೀಕೃಷ್ಣನಿಗೆ ಅಸಮ್ಮತ) ವನ್ನು ನುಡಿದುದರಿಂದ ದುಃಖವಾಗದೆ ಇರಲೂಬಾರದು. ಆದುದರಿಂದ ದೇವತೆಗಳು ಸ್ವಪ್ನದಂತಿರುವ ತಾತ್ಕಾಲಿಕ ದುರ್ಗಂಧ, ದುಃಖ, ಧ್ವನಿಗಳನ್ನು ಸೃಷ್ಟಿಸಿದರು. ಧರ್ಮರಾಜನು ಸಾಕ್ಷಾತ್ತು ನರಕವೆಂದೇ ಭ್ರಮಿಸಿ, ವ್ಯಸನಪಟ್ಟನು. ಕೆಲವು ಜೀವರನ್ನು ಭೀಮಾದಿ ರೂಪದಿಂದ ಸೃಷ್ಟಿಸಿ, ತೋರಿದುದರಿಂದ – ತನ್ನವರಿಗೆಂದು ತಿಳಿದ ದುಃಖವನ್ನು ನೋಡಿ, ಧರ್ಮರಾಜನು ದುಃಖಪಟ್ಟನು. ಆಗ ಆತನ ಅನೃತದೋಷವು ನಿವೃತ್ತವಾಯಿತು.

ಅಪರೋಕ್ಷಜ್ಞಾನವಾದ ಮೇಲೆ ಸಂಚಿತಾಗಾಮಿಗಳು ನಷ್ಟವಾಗಿ, ಪ್ರಾರಬ್ಧವು ಮಾತ್ರ ಉಳಿಯುವುದು. ಆದುದರಿಂದ ಅಪರೋಕ್ಷಿಗಳಾದ ಪಾಂಡವರಿಗೆ ಆಮೇಲೆ ಮಾಡಿದ ಪುಣ್ಯಪಾಪಗಳ ಸಂಬಂಧವಿರುವುದಿಲ್ಲ. ಪ್ರಬಲ ಪಾಪಗಳನ್ನು ಮಾಡಿದರೆ ಮುಕ್ತಿಯಲ್ಲಿ ಆನಂದವೃದ್ಧಿಗೆ – ಕ್ಲೃಪ್ತಾನಂದಕ್ಕಲ್ಲ – ಹ್ರಾಸವಾಗಬಹುದು ನಿಜ! ಧರ್ಮರಾಜನು ತತ್ತ್ವದೇವತಾಗಣನಿವಿಷ್ಟನಾದುದರಿಂದ ಅಪರೋಕ್ಷವಾಗಿದೆ. ಅಂತಹವನಿಗೆ, ಆಮೇಲೆ

ಮಾಡಿದ ಅನೃತದೋಷದ ಸಂಬಂಧವೆಂತೆಂದರೆ ಕೇಳು! ಆಮೇಲೆ ಮಾಡಿದ ವಿರುದ್ಧ ಕರ್ಮವು ಭೋಗಿಸಲು ಆರಬ್ಧವಾದ ಪಾಪಕ್ಕೆ ಸೂಚಕವಾಗಲಿ - ಅನೃತದೋಷ ಸ್ಪರ್ಶವಿಲ್ಲದಿದ್ದರೂ - ಅನೃತವನ್ನಾಡಲು ಮೊದಲಿದ್ದ ಪ್ರಾರಬ್ಧಪಾಪವೇ ಮುಖ್ಯಕಾರಣವು. ಅನೃತವನ್ನಾಡಿದುದು ನಿಮಿತ್ತಮಾತ್ರವೆಂದು ತಿಳಿ! ಪ್ರಾರಬ್ಧ ಕರ್ಮದಿಂದಲೇ ದುಃಖಾದಿಗಳು ಆಗಲಿ ಅಪರೋಕ್ಷಾನಂತರ ದೋಷಗಳಲ್ಲ. ಪ್ರಾರಬ್ಧ ಪಾಪದಿಂದ, ಜಲಪಾತ ಅಗ್ನಿಪಾತ ಶಸ್ತ್ರಪಾತ ವಿಷಭಕ್ಷಣಗಳನ್ನು ನಿಮಿತ್ತಮಾಡಿಕೊಂಡು ಮರಣವು ಬಂದಂತೆ ಎಂದು ತಿಳಿ! ಇಲ್ಲಿ ವಿಷಾದಿಗಳು ಮಾರಕವಲ್ಲ - ಬಂದ ಮರಣಕ್ಕೆ ಸೂಚಕವು ಮಾತ್ರ! ಇಲ್ಲದಿದ್ದರೆ ವಿಷವನ್ನು ತಿಂದೂ ಬದುಕಿದವರು ಇರುವುದು (ಪ್ರಹ್ಲಾದ) ಅಸಂಗತವಾದೀತು. ಅದೃಷ್ಟನಾಮಕ ಪರಮಾತ್ಮ ಪ್ರೇರಿತಪ್ರಾರಬ್ಧ ಪುಣ್ಯಪಾಪಗಳೇ ಸುಖದುಃಖಾದಿಗಳಿಗೆ ಮೂಲಕಾರಣಗಳು; ಇತರವೆಲ್ಲವು ಆ ಪಾಪ ಸೂಚಕಗಳೆಂದೇ ಸಿದ್ಧಾಂತವು.

ಇಂತಿರಲು ಸರ್ವದಾ ಉತ್ತಮಕರ್ಮರತರು, ಪರಬ್ರಹ್ಮಾಪರೋಕ್ಷಜ್ಞಾನಿಗಳು, ಶ್ರೀಹರಿಯನ್ನು ಆಶ್ರಯಿಸಿದ ಭಕ್ತೋತ್ತಮರು, ಸ್ವಚ್ಛಂದಯೋಗ ವೃತ್ತಿಯಿಂದ ಶರೀರವನ್ನು ಬಿಟ್ಟವರು, ದೇವತಾಶ್ರೇಷ್ಠರು ಆದ ಭೀಮಾದಿ ಪಾಂಡವರಿಗೆ ಎಂದಿಗೂ ದೋಷಸ್ಪರ್ಶವಿಲ್ಲ; ಮತ್ತೂ ದುಃಖವೂ ಇಲ್ಲ. ಪ್ರಾರಬ್ಧ ಪಾಪಪುಣ್ಯಗಳಾರನ್ನೂ ಬಿಡವಾದುದರಿಂದ, ಅವನ್ನು ಮಾತ್ರ ಸ್ವೀಕರಿಸಿ, ನಿರ್ವಿಕಾರರಾದ ಪಾಂಡವರು, ಭೂಭಾರಹರಣಚರಣನಾದ ಶ್ರೀಕೃಷ್ಣನ ಸೇವೆಗೈದು, ಶ್ರೀಶನಲ್ಲಿ ಸರ್ವಸಮರ್ಪಣೆಗೈದು, ಆನಂದಕಂದನಲ್ಲಿ ಬುದ್ಧಿಯನ್ನಿಟ್ಟು ಅವನಿಂದಲೇ ಕೂಡಿಕೊಂಡು, ಸ್ವರ್ಗವನ್ನು ಸೇರಿದರು.

ದುರ್ಯೋಧನಾದಿಗಳು ಪ್ರಾರಬ್ಧಪುಣ್ಯವನ್ನು (ಯಜ್ಞದಾನಾದಿ) ನಿಶ್ಶೇಷವಾಗಿ ಅನುಭವಿಸಿದ ಮೇಲೆ, ಶ್ರೀಶಾಧೀನರಾಗಿ, ನಿತ್ಯದುಃಖಾತ್ಮವು, ಸ್ಮರಣಮಾತ್ರದಿಂದ ಭಯಪ್ರದವು, ಪುನರಾವೃತ್ತಿರಹಿತವು ಆದ ಅಂಧಂತಮಸ್ಸನ್ನು ಹೊಂದುವರು.

ದೇವತೆಗಳ ಅಂಶದಿಂದ ಹುಟ್ಟಿದವರು ಬ್ರಹ್ಮಪ್ರಳಯದಲ್ಲಿ ಮೂಲರೂಪದಿಂದ ಒಂದಾಗಿ, ಸ್ವಯೋಗ್ಯ ಸ್ವರೂಪಾನಂದಾನುಭವರೂಪ ಮೋಕ್ಷವನ್ನು ಹೊಂದಿ ವೈಕುಂಠಾದಿ ಲೋಕಗಳಲ್ಲಿ, ನಿತ್ಯತಾರತಮ್ಯೋಪೇತ ಸುಖವಂತರಾಗಿರುವರು.

ಆಗ ಧರ್ಮರಾಜನು, ದಿವ್ಯ (ಧರ್ಮಸದೃಶ) ದೇಹನಾಗಿ, ಋಷಿ ಸುರ ಗಂಧರ್ವರಿಂದ ಕೂಡಿ, ಸ್ವರ್ಗಲೋಕವನ್ನು ಪ್ರವೇಶಿಸಿದನು. ಅಲ್ಲಿಯೂ ಶ್ರೀಗೋವಿಂದನ ದಿವ್ಯದರ್ಶನವಾದಾಗ, ಧರ್ಮರಾಜನು ಆನಂದತುಂದಿಲನಾದನು. ಶಂಖ ಚಕ್ರ ಗದಾ. ಪದ್ಮಧರನಾದ, ಶ್ರೀಧರನಾದ, ಶ್ರೀಕೃಷ್ಣನನ್ನೂ, ಅವನ ಪಕ್ಕದಲ್ಲಿ ನಿಂತು ಸೇವಿಸುವ ಅರ್ಜುನನನ್ನು ಕಂಡನು. ಅವರೀರ್ವರು ಆತನನ್ನು ಯಥಾಯೋಗ್ಯವಾಗಿ ಸಂಭಾವಿಸಿದರು. ಇನ್ನೊಂದೆಡೆ ಆದಿತ್ಯಸದೃಶನಾದ ಕರ್ಣನನ್ನು ಕಂಡನು. ಬೇರೊಂದೆಡೆ ಮರುದ್ಗಣ ಪರಿವೃಢನಾದ ಭೀಮಸೇನನನ್ನೂ ಕಂಡನು! ಆತನ ಪಾರ್ಶ್ವದಲ್ಲಿ ಎರಡನೆಯ ಶ್ರೀದೇವಿಯಾಗಿ ನಿಂತಿದ್ದ, ಪರಮ ಸುಂದರ ಕಾಂತಿ ರೂಪ ಲಾವಣ್ಯ ಶೋಭಿತೆಯಾದ ದ್ರೌಪದಿಯನ್ನು ಕಂಡನು.

ಸಂಸ್ಕಾರವಶನಾಗಿ ಧರ್ಮರಾಜನು ದ್ರೌಪದೀದೇವಿಯಂತೆ ವಿರಾಜಿಸುವ ಭಾರತೀದೇವಿಯ ಕೈಯನ್ನು ಹಿಡಿಯಲು ಹೋದನು. ಆಗ ದೇವೇಂದ್ರನು ಆತನನ್ನು ತಡೆದು, ಇಂತೆಂದನು: 'ಧರ್ಮಜ! ಸುಜನ ಹಿತಂಕರನಾದ ಜೀವೋತ್ತಮನಾದ, ಸರಸ್ವತ್ಯಾದಿ ದೇವೀ ವಂದ್ಯನಾದ ಶ್ರೀಮುಖ್ಯಪ್ರಾಣನಿಗೆ ಸಾಕ್ಷಾತ್ ಪ್ರಾಣಪ್ರಿಯೆಯಾದ ಈಕೆಯನ್ನು ಮುಟ್ಟಲಾಗದು! ಈಕೆ ಶಂ=ಸುಖರೂಪನಾದ ಮುಖ್ಯವಾಯುವಿನಿಂದ ಕೂಡಿ ರಮಿಸುವ ಭಾರತಿ ಎಂದು ತಿಳಿ! ಆದುದರಿಂದಲೇ ಆಕೆಯನ್ನೂ ಶ್ರೀಃ ಎಂಬರು. ಧರ್ಮ, ವೀರ್ಯ, ರೂಪ, ನೀತಿ ಎಂಬ ನಾಲ್ಕಂಶಗಳಿಂದ ನಿಮ್ಮಲ್ಲಿ ಕ್ರಮವಾಗಿ ನಿಂತು, ನಿಮ್ಮ ಪ್ರೀತಿಗಾಗಿ ಶ್ಯಾಮಲಾ, ಶಚೀ, ಉಷಾದೇವಿಯನ್ನು ತನ್ನಲ್ಲಿಟ್ಟು ಭಾರತೀದೇವಿಯ ಅವತಾರಳಾದ ದ್ರೌಪದಿಯಿಂದ ರಮಿಸಿ, ನಿಮ್ಮನ್ನೂ ನಿಮ್ಮ ಪತ್ನಿಯರನ್ನೂ ಅನ್ಯಸಂಗದಿಂದ ಕಾಪಾಡಿದ ದ್ರೌಪದೀಭೀಮಸೇನರು ಭಾರತೀ ಪ್ರಾಣರೆಂದು ತಿಳಿ! ಆದುದರಿಂದಲೇ ನಿಮ್ಮೆಲ್ಲರಕಿಂತಲು ಭೀಮಸೇನದೇವನಲ್ಲಿ ದ್ರೌಪದಿಯು ವಿಶೇಷಾನುರಕ್ತಳಾಗಿದ್ದುದು ಯೋಗ್ಯವೆಂದೂ ಮನಗಾಣು!

ಈಗ ನಿಮ್ಮಲ್ಲಿ ಮುಖ್ಯಪ್ರಾಣನ ವಿಶೇಷ ಸನ್ನಿಧಾನವಿಲ್ಲ; ಮತ್ತು ದ್ರೌಪದಿಯಲ್ಲಿದ್ದ ನಿಮ್ಮ ಪತ್ನಿಯರು ಬ್ರಹ್ಮಶಾಪ ಮುಕ್ತರಾಗಿ ಸ್ವರೂಪವನ್ನು ಹೊಂದಿರುವುದರಿಂದ, ಅವರ ಸಂಪರ್ಕವು ಭಾರತೀದೇವಿಗೆ ಇಲ್ಲ. ಎಂದೆಂದಿಗೂ ದ್ರೌಪದೀದೇವಿಯನ್ನು ಮುಟ್ಟುವ ಅಧಿಕಾರ ನಿಮಗೆ ಸರ್ವಥಾ ಇಲ್ಲ. ಮನುಜ ದೇಹದಲ್ಲಿ ಹುಟ್ಟಿರುವ ದೇವತೆಗಳಿಗೇ ಮೂಲರೂಪದ ದೇವತೆಗಳನ್ನೂ ತತ್ಪತ್ನಿಯರನ್ನೂ ಮುಟ್ಟಲು ಅರ್ಹತೆ ಇಲ್ಲ! ಎಂದ ಮೇಲೆ ಇನ್ನು ಭಾರತೀದೇವಿಯನ್ನು ಮುಟ್ಟುವುದಂತೂ ಅತ್ಯಂತ ದುಸ್ಸಾಧ್ಯವೆಂದು ತಿಳಿದು, ದೂರ ಸರಿ!'

ಪಾರ್ಥಪಂಚಕವು ತಂತಮ್ಮ ಮೂಲರೂಪದಿಂದ ಕೂಡಿ, ತಮ್ಮ ರೂಪಸದೃಶ ದೇಹಗಳಿಂದಲೂ ವಿರಾಜಿಸಿ, ಒಂದೇ ಆಸನದಲ್ಲಿ ಕುಳಿತುಕೊಂಡಿತು. ಆ ಎರಡೂ ರೂಪಗಳಿಗೂ ಸಮಭೋಗವಾಗುತ್ತಿತ್ತು. ಶ್ರೀಕೃಷ್ಣನೂ ಅದೇ ತನ್ನ ರೂಪದಿಂದ ಸ್ವರ್ಗದ ದೇವವೃಂದ ಪೂಜೆಯನ್ನು ಕೊಳ್ಳುತ್ತಾ, ಪಾಂಡವರಿಂದ ಕೂಡಿ ವಿಹರಿಸುತ್ತಾ, ನೆಲೆಸಿದನು. ಇತರರು ತಂತಮ್ಮ ಮೂಲದೇವ ರೂಪಗಳಿಂದ ಐಕ್ಯವನ್ನು ಹೊಂದಿದರು. ಪಾಂಡವರಿಗೆ ಅಧಿಕ ಪ್ರಾರಬ್ಧಪುಣ್ಯವಿದ್ದು, ಅದು ಮುಗಿವವರೆಗೂ ಬೇರೆ ರೂಪಗಳಿಂದಿದ್ದು, ಅದನ್ನುಂಡು, ಆಮೇಲೆ ಐಕ್ಯಹೊಂದಿ ಮುಕ್ತರಾಗುವರು.

ಧೃತರಾಷ್ಟ್ರನು ತನ್ನಾಮಕ ಗಂಧರ್ವನಲ್ಲಿಯು, ಕರ್ಣನು ಸೂರ್ಯನಲ್ಲಿಯು, ಸಾತ್ಯಕಿ ಪ್ರಮುಖ ಯದುವೀರರು ಮರುದಗ್ನಿ ಸಾಧ್ಯರಲ್ಲಿಯು, ಅಭಿಮನ್ಯುವು ಬುಧನಲ್ಲಿಯು, ಪಾಂಡವರಾಜನು ಪರಾವಹನಲ್ಲಿಯು, ಭೀಷ್ಮನು ದ್ಯುವಸುವಿನಲ್ಲಿಯು ದ್ರೋಣನು ಬೃಹಸ್ಪತಿಯು, ಇನ್ನು ಮಿಕ್ಕವರೆಲ್ಲರು ತಂತಮ್ಮ ಮೂಲದೇವ ಗಂಧರ್ವ ವಹ್ನ್ಯಾದಿ ರೂಪಗಳಲ್ಲಿ ಸೇರಿ, ಐಕ್ಯವನ್ನು ಹೊಂದಿ, ಸುಖವಾಗಿದ್ದರು.

ಎಲ್ಲರೂ ಯಾವ ಯಾವ ಗತಿಯನ್ನು ಹೊಂದಿದರೆಂದು ಹೆಸರಿಸಿ ಗಣಿಸಲು ಶಕ್ಯವಲ್ಲ.

ದಿವ್ಯಚಕ್ಷುವು, ಪುರಾಣಮುನಿಯು, ಭಾರತಗ್ರಂಥ ನಿರ್ಮಾತನು, ಸರ್ವಜ್ಞನು, ಸಾಕ್ಷಾನ್ನಾರಾಯಣಾವತಾರನು ಆದ ಶ್ರೀವೇದವ್ಯಾಸದೇವನೆಲ್ಲವನ್ನು ಅರಿತಿರುವನು. ರಾಜನ್! ಎಲ್ಲರೂ ಕರ್ಮಾಂತವನ್ನು ಹೊಂದಲಾರರು! ಎಲ್ಲರೂ ಮುಕ್ತರಾಗಲಾರರು. 'ಹಾಗಾದರೆ ಸಂಸಾರ ವೃಕ್ಷವಿಚ್ಛೇದನವಾದೀತು. ಯಾರು ವಿಷ್ಣುಪ್ರಸಾದ ಕಾರಣವಾದ ಅತ್ಯಂತ ಜ್ಞಾನಭಕ್ತಿಗಳನ್ನು ಸಾಧಿಸುವರೋ, ಅಂತಹ ಮುಕ್ತಿಯೋಗ್ಯ ಸಾತ್ವಿಕರು ಮಾತ್ರ ಆನಂದರೂಪರಾಗಿ ಮುಕ್ತರಾಗುವರು. ಅಥವಾ ದ್ರೋಹವನ್ನು ಸಾಧಿಸಿರುವರೋ, ಅಂತಹವರು ಅಂಧಂತಮದಲ್ಲಿ ದುಃಖರೂಪರಾಗಿ ಬಿದ್ದಿರುವರು.

ದುರ್ಯೋಧನಾದಿಗಳು ರಾಕ್ಷಸ ರೂಪರಾದರು. ವೀರಸ್ವರ್ಗದ ದಿವ್ಯಭೋಗಗಳನ್ನು ನಾಲ್ಕುಸಾವಿರದ ಮೂರುನೂರು ವರ್ಷಗಳವರೆವಿಗೂ ಅನುಭವಿಸಿ, ಪುಣ್ಯಕ್ಷಯವಾಗಲು, ಭೂಮಿಯಲ್ಲಿ ವಿಪ್ರಾದಿಯೋನಿಗಳಲ್ಲಿ ಹುಟ್ಟಿ, "ಜೀವನೇ ಬ್ರಹ್ಮನು; ಜಗತ್ತು ಮಿಥ್ಯೆ!" ಇತ್ಯಾದಿ ದುಷ್ಟಮತವನ್ನು ಹಬ್ಬಿಸಿ, ತತ್ಫಲವಾಗಿ, ಪ್ರಳಯವಾದಾಗ ಅಂಧಂತಮಸ್ಸನ್ನು ಹೊಂದುವರು. ಅಸುರಾದಿಗಳಲ್ಲಿಯೂ (ದುಃಖದ) ತಾರತಮ್ಯವಿದೆ. ಅವರೆಲ್ಲರಲ್ಲಿಯೂ ಅತ್ಯಂತ ಪರಮಪಾಪಿಯಾದ (ದುರ್ಯೋಧನ) ಕಲಿಗೆ ಪರಮಾವಧಿಯಾದ ನಿತ್ಯದುಃಖವಾಗುವುದು. ಚತುರ್ಮುಖನಿಗೆ ಮುಕ್ತಿಯಲ್ಲಿ ಅತ್ಯಂತ ಸುಖವು ಹೇಗೋ, ಹಾಗೆ ಕಲಿಗೆ ಅತ್ಯಂತ ದುಃಖವೆಂದು ಶ್ರುತಿಸ್ಮೃತಿಗಳು ಸಾರುತ್ತಿವೆ!

ಭೀಮಸೇನನು ಜೀವೋತ್ತಮ ಮುಖ್ಯಪ್ರಾಣನು. ಹನುಮದ್ಭೀಮಮಧ್ವರೆಂಬ ಮುಖ್ಯಾಂಶಗಳಿಂದ ಐಕ್ಯವನ್ನು ಹೊಂದಿದ ಮುಖ್ಯಪ್ರಾಣನು. ಉತ್ತರ ಬ್ರಹ್ಮಕಲ್ಪದಲ್ಲಿ ಬ್ರಹ್ಮದೇವನಾಗುವನು! ದ್ರೌಪದಿಯು ಭಾರತಿಯಿಂದ ಕೂಡಿ ಮುಂದಿನ ಕಲ್ಪದಲ್ಲಿ ಸರಸ್ವತಿದೇವಿ ಆಗುವಳು. ಎಲ್ಲ ಜೀವರಕಿಂತಲು ಅಧಿಕಾನಂದ ರೂಪನಾದ ಸರ್ವಾಂಗಸಾಯುಜ್ಯರೂಪ ಮೋಕ್ಷವನ್ನು ಸರಸ್ವತೀ ಚತುರ್ಮುಖರು ಪೊಂದುವರು. ಭೂಮಿಯಲ್ಲಿ ಹನುಮದಾದಿ ಅವತಾರಗಳನ್ನು ಧರಿಸಿ, ಸ್ವರ್ಗದಲ್ಲಿ ಭಾರತೀಪ್ರಾಣರಾಗಿ, ಮುಕ್ತಿಯಲ್ಲಿಯು ಸರಸ್ವತೀ ಚತುಮುರ್ಖರಾಗಿ ದ್ರೌಪದೀ ಭೀಮಸೇನರು ಶ್ರೀಹರಿಯ ನಿತ್ಯಸೇವೆಗೈದು ಧನ್ಯರಾಗುವರು.

ಭೀಮಸೇನನ ಮಹಿಮೆಯನ್ನು (೧) ಭೂಷನ್ನಯೋಧಿ, (೨) ಬಳಿತ್ಥಾತದ್ವಪುಷೇ, (೩.)ತಾಂಸುತೇ ಕೀರ್ತಿಂ ಮಘವನ್! ಎಂಬಿತ್ಯಾದಿ ವೇದಗಳು ಸಾರುತ್ತಿವೆ.

(೧) ಭೂಮಿಯಲ್ಲಿ ಅವತರಿಸಿದ ಭೀಮಸೇನನು ಪ್ರತಿಹತಿ ಇಲ್ಲದೆ ರಥ ಗಜತುರಗ ಪದಾತಿ ಸೈನ್ಯದಲ್ಲಿ ನಾನಾ ಕಪಿಲ ಪಿಂಗಳವರ್ಣ ವಸ್ತ್ರಾಲಂಕಾರಗಳನ್ನು ಧರಿಸಿದ ಭಟರ ಮಧ್ಯದಲ್ಲಿ, ಮತ್ತೊಬ್ಬರಿಗೆ ಸೋಲದೆ, ಅತಿಶಯ ಸಿಂಹಾರಾವಗಳನ್ನು ಮಾಡುತ್ತಾ ಸಂಚರಿಸುವನು. ಗಣಲ್ ಎಂದು ಗುಟರಿಕ್ಕುವ ವೃಷಭದಂತೆ ಗರ್ಜಿಸುವನು. ಕಾಳೀ ದ್ರೌಪದೀ ಮುಂತಾದ ಪತ್ನಿಯರನ್ನು ಹೊಂದಿ, ರಮಿಸುವನು. ಹನುಮನ್ ಮಧ್ವಾವತಾರಗಳಲ್ಲಿ ಬ್ರಹ್ಮಚಾರಿಯಾಗಿಯೂ, ಸನ್ಯಾಸಿಯಾಗಿಯೂ, ಶ್ರೀಹರಿ ಸೇವೆಗೈದ ಮುಖ್ಯಪ್ರಾಣನೇ, ಭೀಮರೂಪದಲ್ಲಿ ವಿಕ್ರಮಿಸಿ, ಪರ್ವತಸದೃಶ ಗಜಗಳನ್ನು, ಕೈಗಳಿಂದೆತ್ತಿ, ದೂರ ಬಿಸುಡುವನು. (೨) ಮುಖ್ಯಪ್ರಾಣನು ಮೂರು ಅವತಾರಗಳಲ್ಲಿಯು ಶ್ರೀಹರಿ

ಸೇವೆಗೈದಿರುವನು. ಶ್ರೀರಾಮನ ವಚನವನ್ನು ಸೀತಾದೇವಿಗೆ ತಿಳಿಸಿದನು. ಶ್ರೀರಾಮನ ದಿವ್ಯಜ್ಞಾನವನ್ನು ಸುಜನರಿಗೆ ಮಾಡಿಕೊಟ್ಟು, ಉದ್ಧರಿಸಿದನು. ಭೀಮಸೇನನಾಗಿ ಮಣಿಮದಾದಿ ದೈತ್ಯರನ್ನು ವಾದದಲ್ಲಿಯೂ, ಯುದ್ಧದಲ್ಲಿಯೂ ಗೆದ್ದು ಸಂಹರಿಸಿದನು. ಕುರುಕುಲದ ದುರ್ಯೋಧನಾದಿಗಳನ್ನೂ, ಕೀಚಕ, ಬಕ, ಕಿಮ್ಮೀರ, ಜಟಾಸುರ, ಹಿಡಿಂಬ, ಜರಾಸಂಧಾದಿ, ಇತರಾಜೇಯ ದೈತ್ಯರನ್ನೂ ಗೆದ್ದು ಸಂಹರಿಸಿದನು. ಶ್ರೀಕೃಷ್ಣನ ಭೂಭಾರಹರಣಕಾರ್ಯದಲ್ಲಿ ಪ್ರಥಮಾಂಗ ಭೂತನಾಗಿ, ಶ್ರೀಕೃಷ್ಣನ ಅತ್ಯಂತ ಪ್ರೀತಿಗೆ ಪಾತ್ರನಾದನು. ಋಗ್ವೇದಾದಿ ಸಚ್ಛಾಸ್ತ್ರಗಳಲ್ಲಿ ಪ್ರತಿಪಾದಿತನಾಗಿರುವ ಶ್ರೀಶನ ಸರ್ವೋತ್ತಮತ್ವವನ್ನು ಸಾರಿ, ದಶಪ್ರಮತಿ ಎಂದು ಖ್ಯಾತನಾದನು. ಶ್ರೀಮಧ್ವನೆನಿಸಿ ಆನಂದಕರ ಶಾಸ್ತ್ರವನ್ನು ರಚಿಸಿದನು. ದುರ್ವಾದಿಗಳ ಇಪ್ಪತ್ತೊಂದು ಮತಗಳನ್ನು ಅಳಿಸಿದನು, ಶ್ರೀ ಶ್ರೀಶರಾದ ನಂತರ ಸರ್ವೋತ್ತಮ (ಜೀವರಲ್ಲಿ) ನೆಂದು ಖ್ಯಾತನಾಗಿ ಮೆರೆದನು. (೩) ಇಂತಹ ಬಹ್ವನ್ನ ಭೋಜನ ಶಕ್ತನು, ಬಹುಜ್ಞಾನ ನಿಧಿಯು ಆದ ಭೀಮಸೇನನೇ! ನೀನು ಸರ್ವದಾ ರುದ್ರಾದಿ ದೇವತೆಗಳನ್ನು ರಕ್ಷಿಸುತ್ತಿರುವೆ! ದುಷ್ಟಶತ್ರುಗಳನ್ನಂತೆ ದುಷ್ಟವಾದಿಗಳನ್ನೂ ಖಂಡಿಸುತ್ತಿರುವೆ! ಸಜ್ಜನರಿಗೆ ಧರ್ಮವನ್ನು ಉಪದೇಶಿಸಿ, ಅವರನ್ನು ರಕ್ಷಿಸುತ್ತಿರುವೆ! ಶ್ರೀಭೀಮಸೇನ! ನಿನಗೆ ನಮಸ್ಕಾರವು!'

## ೨. ಸರ್ವಸಮರ್ಪಣ ಮಂಗಳ

ಇಂತು ಜನಮೇಜಯ! ಪಾಂಡವರು ಮತ್ತು ಶ್ರೀಕೃಷ್ಣನ ದಿವ್ಯಚರಿತ್ರವಾದ ಶ್ರೀಭಾರತಾಮೃತವನ್ನು ನಿನಗೆ ಉಪದೇಶಿಸಿದೆನು. ಶ್ರೀಭಾರತ ಕಥೆಯ ಮಹಿಮೆಯನ್ನು ವರ್ಣಿಸಿ ಮುಗಿಸಲು ಶೇಷನಿಗಳವಲ್ಲ! ಬ್ರಹ್ಮನಿಗಳವಲ್ಲ! ಸರ್ಪಸತ್ರದ ಹೋಮಕರ್ಮ ಮಧ್ಯಾವಕಾಶ ಗಳಲ್ಲಿ ನಿನಗೆ ಈ ದಿವ್ಯೇತಿಹಾಸವನ್ನು ವರ್ಣಿಸಲೆಂದು ಶ್ರೀವೇದವ್ಯಾಸದೇವನ ಅಜ್ಞೆಯಿಂದ ಬಂದಿರುವೆನು. ಶ್ರೀವೇದವ್ಯಾಸದೇವನ ಅನಂತ ಕರುಣೆಯಿಂದ ಶ್ರೀಭಾರತಾಮೃತ ಗ್ರಂಥವು ಸಂಪೂರ್ಣವಾಯಿತು. ಶ್ರೀವೇದವ್ಯಾಸಾನುಗ್ರಹವೇ ಈ ಗ್ರಂಥವನ್ನು ನನ್ನಿಂದ - ನನ್ನಂತಹ ಪಾಮರನಿಂದ ಕಥಿತವಾಯಿತು. ಧರ್ಮಾರ್ಥ ಕಾಮಮೋಕ್ಷಗಳನ್ನು ಚೆನ್ನಾಗಿ ತಿಳಿಸಿ, ಅತುಲೇತಿಹಾಸಗಳಿಂದ ಬೃಂಹಿತವಾಗಿರುವಂತೆ ಸತ್ಯವಾದಿಯು, ಸರ್ವಜ್ಞನು, ವೇದವಿಧಿವೇತ್ತನು, ನಿರ್ಮಲಚಿತ್ತನು, ಇಂದ್ರಿಯಸ್ವಾಮಿಯು, ಬ್ರಹ್ಮರುದ್ರೇಂದ್ರಾದಿ ಸಮಸ್ತವೃಂದಾರಕ ವಂದಿತ ದಿವ್ಯಚರಣಾರವಿಂದನು ಆದ ಶ್ರೀವೇದವ್ಯಾಸನು ಶ್ರೀಮಹಾಭಾರತವನ್ನು ರಚಿಸಿ, ನನಗೂ, ಮತ್ತು ಶ್ರೀಶುಕನಿಗೂ ಉಪದೇಶಿಸಿದನು.

ಸಾಂಖ್ಯಯೋಗಗಳನ್ನು ಚೆನ್ನಾಗಿ ತಿಳಿದ ಶ್ರೀವ್ಯಾಸನು ಪಾಂಡವರ ಕೀರ್ತಿಯನ್ನು ಲೋಕದಲ್ಲಿ ಚಂದ್ರಿಕೆಯಂತೆ ಹಬ್ಬಿಸಿದನು. ಪಾಂಡವರ ಚರಿತಾಮೃತದಲ್ಲಿ ಶ್ರೀಕೃಷ್ಣನು ಮಧುರ ಪರಿಮಳವನ್ನು ತುಂಬಿ, ಅವರ ಹೃದಯ ಸರಗಳನ್ನು ಆನಂದತುಂದಿಲವನ್ನಾ ಗಿಸಿದನು. ಅಪರಿಚ್ಛಿನ್ನ ದಿವ್ಯಮಹಾಯುಮಂತನಾದ ಶ್ರೀ ಬಾದರಾಯಣನು ದಿವ್ಯದೃಷ್ಟಿಯಿಂದ ಭೂತಭವದ್ಭವಿಷ್ಯಗಳನ್ನು ಪೂರ್ಣವಾಗಿ ತಿಳಿದು, ಶ್ರೀಭಾರತವನ್ನು ಲೋಕಹಿತಕ್ಕೆಂದು ರಚಿಸಿದನು.

ಪರ್ವಕಾಲದಲ್ಲಿ ಇದನ್ನು ಪಠಿಸಿದರೂ, ಕೇಳಿದರೂ, ಮನುಜನು ಸರ್ವ ಪಾಪಮುಕ್ತನಾಗುವನು; ಸ್ವರ್ಗವನ್ನು ಪೊಂದಿ ಸುಖಿಸುವನು: ಮೋಕ್ಷವನ್ನೂ ಪೊಂದಿ ಸ್ವಯೋಗ್ಯ ಸ್ವರೂಪಾನಂದ ಭಾಜನನಾಗುವನು. ವೇದಗತ ಸರ್ವಾರ್ಥ ಸಂಮಿತವಾದ ಶ್ರೀಭಾರತವನ್ನು ಕೇಳಿದವನು ಬ್ರಹ್ಮಹತ್ಯಾದಿ ಪಾಪಕೋಟಿಯಿಂದ ಪರಿಮುಕ್ತನಾಗುವನು. ಶ್ರಾದ್ಧಕಾಲದಲ್ಲಿ ಭಾರತದ ಶ್ಲೋಕವನ್ನು ಅಥವಾ ಪಾದವನ್ನಾದರೂ ಪಠಿಸಿದರೆ, ಶ್ರಾದ್ಧವು ಅಕ್ಷಯ ಪುಣ್ಯವಾಗುವುದು. ರಾತ್ರಿಕೃತ ಪಾಪವೆಲ್ಲವೂ ಪ್ರಾತಃಪಠಿತ ಭಾರತಶ್ಲೋಕ ಶ್ರವಣದಿಂದ ನಷ್ಟವಾಗುವುದು. ಅಹಃಕೃತ ಪಾಪವೆಲ್ಲವೂ ಸಾಯಂಪಠಿತ ಭಾರತಶ್ಲೋಕ ಶ್ರವಣದಿಂದ ನಷ್ಟವಾಗುವುದು.

ಅರ್ಥದಿಂದ ಮಹತ್ತಾಗಿದೆ! ಶಬ್ದದಿಂದಲು ಭಾರವಾಗಿದೆ ಎಂದೇ ಮಹಾಭಾರತ ವೆಂದರು! ಇಂತು ತಿಳಿದವನು ಕೂಡ ಸರ್ವಪಾಪ ಮುಕ್ತನಾಗುವನು.

ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ನಿರೂಪಿಸುವೆಡೆ, ಭಾರತದಲ್ಲಿರುವುದೇ ಇನ್ನೊಂದು ಗ್ರಂಥದಲ್ಲಿದೆ! ಭಾರತದಲ್ಲಿಲ್ಲದುದು ಮತ್ತೆಲ್ಲಿಯೂ ಇಲ್ಲ. ಮೋಕ್ಷವನ್ನು ಬಯಿಸಿ ಕೇಳಬೇಕು. ಜಯ ಎಂದು ಪ್ರಖ್ಯಾತವಾದ ಈ ಇತಿಹಾಸವನ್ನು! ಭಾರತ ಶ್ರವಣದಿಂದ ಸ್ವರ್ಗ, ಮೋಕ್ಷಗಳೇ ಅಲ್ಲದೇ, ಸತ್ಸಂತಾನ, ಸುಖಪ್ರಸವ, ವಾದಜಯ, ಯುದ್ಧಜಯ, ಸತ್ಪತಿ ಮುಂತಾದ ಐಹಿಕ ಕಾಮಿತಗಳನ್ನೂ ಯಥೇಚ್ಛವಾಗಿ ಪಡೆಯುವರು.

ಚತುರ್ವೇದ ಸಂಹಿತೆಯ ಅರ್ಥವನ್ನು ನಿರ್ಣಯಿಸಿ ತಿಳಿಸಲೆಂದೇ ಶ್ರೀವೇದವ್ಯಾಸನು ಭಾರತವನ್ನು ವಿಪುಲವಾಗಿ ಅರವತ್ತು ಲಕ್ಷ ಗ್ರಂಥಗಳಿಂದ ಕೂಡಿರುವಂತೆ ರಚಿಸಿದನು. ಅದರಲ್ಲಿ ಮೂವತ್ತು ಲಕ್ಷವು ದೇವಲೋಕದಲ್ಲಿ ಪ್ರತಿಷ್ಠಿತವಾಗಿದೆ. ಪಿತೃಲೋಕದಲ್ಲಿ ಹದಿನೈದು ಲಕ್ಷವಿದೆ! ಗಂಧರ್ವಯಕ್ಷ ಲೋಕದಲ್ಲಿ ಹದಿನಾಲ್ಕು ಲಕ್ಷವಿದೆ; ಮನುಜಲೋಕದಲ್ಲಿ ಮಿಕ್ಕ ಒಂದು ಲಕ್ಷ ಗ್ರಂಥ ಪರಿಮಿತವಾದುದಿದೆ - ಎಂದು ಪೇಳುವರು. ನಾರದನು ದೇವಲೋಕದಲ್ಲಿಯು, ದೇವಲಾಸಿತನು ಪಿತೃಲೋಕದಲ್ಲಿಯು, ಶುಕನು ಗಂಧರ್ವಯಕ್ಷಲೋಕದಲ್ಲಿಯು, ವೈಶಂಪಾಯನ (ನಾನು) ನು ಮನುಜಲೋಕದಲ್ಲಿಯು, ಈ ಪುಣ್ಯೇತಿಹಾಸವನ್ನು ಸಾರುತ್ತಿರುವೆವು. ಭಾರತವನ್ನು ಬ್ರಾಹ್ಮಣಮುಖದಿಂದ ಕೇಳಿದವನು ಸರ್ವಕಾಮ ಸಮೃದ್ಧಿಯನ್ನೂ, ಕೀರ್ತಿಯನ್ನೂ, ಪರಮಪದವನ್ನೂ ಹೊಂದುವನು. ಮಗನಿಗೆ ಈ ಸಂಹಿತೆಯ ಶ್ಲೋಕಪಾದವನ್ನಾದರೂ ಉಪದೇಶಿಸಿದ ತಂದೆಗೆ, ಶ್ರೀಶುಕ ಜನಕನ ಪ್ರಸಾದ ವಾಗುವುದು.

ಶ್ರೀವ್ಯಾಸದೇವನಲ್ಲಿ ಸರ್ವೋತ್ತಮಹರಿ ಎಂಬ ತತ್ತ್ವಜ್ಞಾನವನ್ನು ಪೊಂದಿ ಭಕ್ತನಾಗಿ ಭಾರತ ಗ್ರಂಥವನ್ನು ಓದಬೇಕು. ಅಂತಹ ಭಕ್ತನಿಂದಲೇ ಭಾರತವನ್ನು ಕೇಳಬೇಕು. ಈಗ ಪಠನಯೋಗ್ಯವಾದ ಭಾರತಸಾರ ಸಂಗ್ರಹವನ್ನು ಚತುಃಶ್ಲೋಕೀರೂಪವಾಗಿ ಪೇಳುವೆನು ಕೇಳು!

ಮಾತಾಪಿತೃ ಸಹಸ್ರರೂ, ಪುತ್ರದಾರಶತರೂ ಜೀವನಿಗೆ ಆಗಿಹೋಗಿರುವರು ; ಆಗಿರುವರು ; ಆಗುವರಿರುವರು. ಶ್ರೀಹರಿಯೇ ನಿತ್ಯಬಂಧುವು. ಇತರರು ಕರ್ಮಾನುಬಂಧ ರೂಪವಾಗಿ ಬಂದಿರುವರು. ಅನಾದ್ಯನಂತ ಕಾಲದಲ್ಲಿ ಪಾಲಿಸಿ ಪೊರೆದ ಪ್ರಭುವಾಗಿ,

ಭಾರತಾದಿ ಸಚ್ಛಾಸ್ತ್ರವನ್ನು ರಚಿಸಿ, ಜ್ಞಾನಪ್ರದನೂ ಆಗಿರುವನು. ಅಂತಹ ಶ್ರೀರಮಣನಿಗೆ ಶಿರಸಾ ವಂದನವು!

ಸಂಸಾರಗಹನ ಮಾರ್ಗದಲ್ಲಿ ಸಾವಿರ ಹರ್ಷಸ್ಥಾನಗಳು, ನೂರಾರು ಶೋಕಸ್ಥಾನಗಳು, ಹತ್ತಾರು ಭಯಸ್ಥಾನಗಳು. ದಿವಸದಿವಸದಲ್ಲಿ ಮೂಢ ಮನುಜನು ಹರ್ಷ ಶೋಕ ಭಯಗಳಿಗೆ ಸಿಕ್ಕು ಉದ್ರೇಕೋದ್ವೇಗಗಳಿಂದ ತತ್ತರಿಸುವನು. ಶ್ರೀಹರಿ ಗುರುಭಕ್ತನಾಗಿ ಅವರನ್ನೇ ನಂಬಿರುವ ಜ್ಞಾನಿಯು ಹರ್ಷಶೋಕಗಳ ಉಪಟಳಕ್ಕೆ ಸಿಕ್ಕದೆ ನಿರ್ವಿಕಾರನು, ಶಾಂತನೂ ಆಗಿರುವನು.

ಶ್ರೀವೇದವ್ಯಾಸದೇವನು 'ಎಲವೋ ಜೀವರೇ! ಎರಡು ಕೈಗಳೆತ್ತಿ, ಕೂಗಿ ಹೇಳುವ ಹಿತವನ್ನು ಕೇಳಿ! ಧರ್ಮದಿಂದಲೇ ಅರ್ಥಕಾಮಗಳು ಸಿಗುತ್ತಿವೆ! ಧರ್ಮದಿಂದಲೇ ಶ್ರೀಹರಿಯು ಪ್ರೀತನಾಗಿ, ಮೋಕ್ಷವನ್ನಿತ್ತು, ಸಲಹುವನು. ಇಂತಿದ್ದೂ ಧರ್ಮವನ್ನೇಕೆ ಸೇವಿಸದಿರುವಿರಿ? ಏಕೆ ನನ್ನ ಹಿತವಚನಗಳಿಗೆ ಕಿವಿಗೊಡದಿರುವಿರಿ? ಕಾಮಕ್ಕಾಗಿ, ಅಥವಾ ಭಯದಿಂದ, ಇಲ್ಲವೆ ಲೋಭದಿಂದ ಕೊನೆಗೆ ಪ್ರಾಣಗಳಿಗಾಗಲಿ, ಧರ್ಮವನ್ನು ಬಿಡವಾರದು. ಧರ್ಮವು ನಿತ್ಯವಾಗಿದೆ. ಸುಖದುಃಖಗಳು ಅನಿತ್ಯವಾಗಿವೆ! ಜೀವನು ನಿತ್ಯನಾಗಿರುವನು! ಕರ್ಮಫಲವಾದ ಶರೀರಗಳು ಅನಿತ್ಯವಾಗಿವೆ! ವಿವೇಕದಿಂದ ಕೂಡಿ, ನಿತ್ಯವಾದುದನ್ನು ಅನಿತ್ಯವಾದುದರಿಂದ ಕೊಂಡುಕೊಳ್ಳಿರಿ! ಶ್ರೀಹರಿ ಪ್ರೀತಿಯನ್ನು ಸಂಪಾದಿಸಿರಿ!' ಎಂದು ಉಪದೇಶಿಸಿರುವನು.

ಇಂತು ಭಾರತವನ್ನು ನಿನಗಾಗಿ ನಿರೂಪಿಸಿದೆನು. ಜನಮೇಜಯ! ಈ ಜಯಾಖ್ಯ ಗ್ರಂಥವು ಮೋಕ್ಷಫಲವಾಗಿದೆ! ಸಮುದ್ರದಂತೆ, ಹಿಮಗಿರಿಯಂತೆ ಭಾರತವು ರತ್ನನಿಧಿಯಾಗ್ರಿದೆ! ಕಬ್ಬಿನಂತೆ ಪ್ರತಿಪರ್ವ ರಸೋದಯವಾಗಿದೆ. ಭಾರತವನ್ನು ಪಠಿಸಿದರೂ, ಕೇಳಿದರೂ ಸರ್ವಾರ್ಥ ಸಿದ್ಧಿಯಾಗುವುದೆಂಬಲ್ಲಿ ಸಂಶಯವಿಲ್ಲ!

ಶ್ರೀದ್ವೈಪಾಯನೋಷ್ಠಪುಟನಿಸ್ಸೃತವು, ಪುಣ್ಯಕರವು, ಪಾಪಹರವು ಪವಿತ್ರ ಶ್ರೀಹರಿ ಪಾಂಡವಾದಿ ಭಕ್ತಸಚ್ಚರಿತ್ರವು, ಮೋಕ್ಷಾದಿ ಪುರುಷಾರ್ಥರಸವಾತ್ರವು, ಪರಮಮಂಗಲವು, ಜ್ಞಾನ ಭಕ್ತಿ ವಿರಕ್ತಿ ರಸಾಲವು ಆದ ಶ್ರೀಭಾರತಾಮೃತವನ್ನು ಪಾನಮಾಡಿದ ಶ್ರೀಹರಿ ಭಕ್ತನಿಗೆ ಪುಷ್ಕರಾದಿ ಸರ್ವಸತೀರ್ಥಗಳ ಸ್ನಾನ ವಿನ್ನೇಕೆ? ಸಮಸ್ತ ಪುರುಷಾರ್ಥಗಳನ್ನೀವ ಶ್ರೀಭಾರತ ಪಾರಿಜಾತವನ್ನು ಕರುಣಿಸಿ ಕೊಟ್ಟ ಶ್ರೀಕೃಷ್ಣದ್ವೈಪಾಯನ ದೇವನಿಗೆ ನಮೋ ನಮಃ!'

ಇಂತು ವೈಶಂಪಾಯನನು ನಿರೂಪಿಸಿದುದನ್ನು ಪೇಳಿ, ಶ್ರೀಸೂತನು ಶ್ರೀಶೌನಕಾದಿಗಳಿಗಿಂತೆಂದನು: 'ಈಗ ಶೌನಕಾದಿ ಮುನಿಪುಂಗವರೇ! ಭಾರತ ಶ್ರವಣ ವಿಧಿಯನ್ನೂ, ಫಲವನ್ನೂ, ಪಾರಾಯಣ ಫಲವನ್ನೂ, ದಾನಕ್ರಮವನ್ನೂ ನಿರೂಪಿಸಿದೆನು. ವಾಚಕನ ವೈಖರಿಯನ್ನೂ ತಿಳಿಸುವೆನು, ಕೇಳಿ!

ವಿಪ್ರವರರೇ! ಶ್ರೀಹರಿ ಸೇವೆಗೈಯಲು ದೇವತೆಗಳು ಮುನಿಗಳು ಭುವಿಗವತರಿಸಿ ಬಂದು, ಶ್ರೀಶ ಸೇವೆಮಾಡಿ, ಸುಜನರಿಗೆ ಸದ್ಭಕ್ತಿಜ್ಞಾನಗಳನ್ನು ತೋರಿ ನಡೆಸಿ, ಮತ್ತೆ ತಂತಮ್ಮ ಲೋಕಗಳನ್ನು ಪೊಂದಿರುವರು. ಆದಿತ್ಯರು, ಅಶ್ವಿನೀ ದೇವರು, ಇಂದ್ರಾದಿ ಲೋಕಪಾಲರು,

ಕಶ್ಯಪಾದಿ ಮಹರ್ಷಿಗಳು, ಗುಹ್ಯಕಗಂಧರ್ವ ವಿದ್ಯಾಧರ ನಾಗಯಕ್ಷರು, ಗಿರಿ ಕಾನನ ನದೀ ಸರೋ ದೇವತೆಗಳು, ಬ್ರಹ್ಮರುದ್ರಗರುಡಶೇಷರು, ಮರುತ್ತುಗಳು, ಮುಖ್ಯಪ್ರಾಣ, ಗ್ರಹಗಳು, ಸಂವತ್ಸರ ಮಾಸಪಕ್ಷ ದಿನ ರಾತ್ರಿಗಳು, ಅಪ್ಸರೆಯರು, ಸ್ಥಾವರ ಜಂಗಮ ಜೀವರು, ಸುರಾಸುರ ಮಾನವಾನೀಕ - ಮುಂತಾದುದೆಲ್ಲವೂ ಶ್ರೀಭಾರತದಲ್ಲಿ ಯಥಾತಥವಾಗಿ ನಿರೂಪಿತವಾಗಿದೆ! ಅವರ ಸ್ವಾಮಿಯಾದ ಶ್ರೀರಮಣ ನಾರಾಯಣ ದೇವನ ಮಹಿಮೆಯನ್ನು ನಿರೂಪಿಸಿಲೆಂದೇ ಶ್ರೀವ್ಯಾಸದೇವನು, ಅವನ್ನೂ ಅವರನ್ನೂ ವರ್ಣಿಸಿರುವನು. ನಾಮ ಕರ್ಮ ಗುಣ ರೂಪಾದಿ ನಿಯಾಮಕನು, ಭಾರತೀರಮಣನ ಅಂತರ್ಯಾಮಿಯು ಸಕಲದೇವತಾ ವಂದ್ಯನು ಆದ ಗೋವಿಂದ ಮಹಿಮೆಯನ್ನು ಪ್ರತಿಪದದಲ್ಲಿ ಸಾರುವ ಶ್ರೀಭಾರತವನ್ನು ಶ್ರದ್ಧೆಯಿಂದ ಕೇಳಿದವನು ಸರ್ವಪಾಪ ನಿರ್ಮುಕ್ತನಾಗುವನು.

ಭಾರತ ಪಾರಾಯಣಪರನಾದ ಸಜ್ಜನನು ಬ್ರಾಹ್ಮಣರನ್ನು ಮೃಷ್ಟಾನ್ನಗಳಿಂದ ತೃಪ್ತಿಪಡಿಸಿ, ಗೋ, ಹಿರಣ್ಯ, ಶಯನ, ವಸ್ತ್ರ, ವಾಹನ, ಭೂ, ತಿಲ, ರತ್ನ, ಕಾಂಸ್ಯ, ಕನ್ಯಾ, ಭವನ, ರಜತಾದಿ ದಾನಗಳನ್ನು ಯಥೇಚ್ಛವಾಗಿ, ಯಥಾಶಕ್ತಿಯಾಗಿ ಕೊಡಬೇಕು. ದಾರಾಸುತರನ್ನು, ಮನೆಮಾರನ್ನು, ಪ್ರಿಯಪ್ರಾಣಗಳನ್ನು ಎಲ್ಲವನ್ನಿತ್ತ ಶ್ರೀಹರಿಗೆ ಸಮರ್ಪಿಸಿ, ಕೊನೆಗೆ 'ದೇವ! ಶ್ರೀನಿವಾಸ! ನಾನು ನಿನ್ನ ದಾಸರ ದಾಸನು! ಸ್ವಾಮಿ! ಯಥಾರ್ಥಜ್ಞಾನ ವನ್ನು, ಭಕ್ತಿಯನ್ನು, ನಿಜವಾದ ವಿರಕ್ತಿಯನ್ನು ಕೊಟ್ಟು ಕಾಪಾಡು! ಸದಾ ನಿನ್ನವನಾಗಿರಿಸಿಕೋ! ಪ್ರಭೋ! ನಿನಗೆ ನಮಸ್ಕಾರವು! ಮತ್ತೆ ನಮಸ್ಕಾರವು' ಎಂದು ಆತ್ಮಸಮರ್ಪಣವನ್ನು ಮಾಡಬೇಕು.

ವಾಚಕನು ಶ್ರದ್ಧಾವಂತನು, ಜಿತಕ್ರೋಧನು, ಶುಚಿಯು, ಸುಸಂಸ್ಕೃತನು, ಸಚ್ಛೀಲನು, ಸದಾಚಾರನು, ಶುಕ್ಲವಾಸನು, ಸರ್ವಶಾಸ್ತ್ರವಿಶಾರದನು, ಅನಸೂಯಕನು, ದಾನಮಾನ ನಿರಪೇಕ್ಷನು, ಅತ್ವರಿತನು, ಧೀರನು ಆಗಿರಬೇಕು. ವಾಚನವು ಅತ್ವರವು, ಅನಾಲಸ್ಯವು, ಸ್ಪಷ್ಟಾಕ್ಷರವು, ಭಾವಸಮನ್ವಿತವು, ತಾಲ್ವಾದಿ ಅಷ್ಟಸ್ಥಾನ ಸಮೀರಿತವು, ಭಕ್ತಿಭರಿತವು ಆಗಿರಬೇಕು.

ಶ್ರೀನಾರಾಯಣನಿಗೆ, ಶ್ರೀಲಕ್ಷ್ಮೀದೇವಿಗೆ, ಮುಖ್ಯಪ್ರಾಣನಿಗೆ, ಭಾರತೀದೇವಿಗೆ (ಶ್ರೀಸರಸ್ವತೀ ಬ್ರಹ್ಮದೇವರಿಗೆ), ಶ್ರೀಶೇಷ ದೇವನಿಗೆ, ಶ್ರೀಪಾರ್ವತೀ ಪರಮೇಶ್ವರರಿಗೆ, ಶ್ರೀವೇದ ಪ್ರತಿಪಾದಿತ ಅಶೇಷತತ್ವದೇವತೆಗಳಿಗೆ, ಸರ್ವವ್ಯಂಜನ ಪ್ರತಿಪಾದಿತರಾದ ಸರ್ವಮಾತೃಕಾ ದೇವತೆಗಳಿಗೆ, ನಿರ್ವಿಘ್ನ ಪರಿಸಮಾಪ್ತಿ ಕಾರಣನಾದ ಶ್ರೀಗಣೇಶನಿಗೆ, ಶ್ರೀಭಾರತಾಮೃತ ಗ್ರಂಥ ವಚನೋದ್ಬೋಧಕನಾದ ಶ್ರೀವೇದವ್ಯಾಸ ದೇವನಿಗೆ ನಮಸ್ಕಾರವು! ಮತ್ತೆ ನಮಿಸಿ ಶ್ರೀಭಾರತ ವನ್ನು ನಿರೂಪಿಸುವುದು! ಜಯವೆಂಬ ಹೆಸರುಳ್ಳ ಶ್ರೀಭಾರತವನ್ನು ಹೇಳಿ, ಬರೆದು, ಓದಿ, ಕೇಳಿದವರು ಅತ್ಯಂತಿಕ ದುಃಖನಿವೃತ್ತಿ ವಿಶಿಷ್ಟ ಅತ್ಯಂತ ಸುಖಾವಾಪ್ತಿ ರೂಪವಾದ ಮೋಕ್ಷವನ್ನು ಹೊಂದುವರು.

ಶ್ರೋತೃಗಳು ಭಕ್ತಿಶ್ರದ್ಧೆಗಳಿಂದ ಅಭಿಮುಖವಾಗಿ ಕೂತು, ವಾಚಕನಲ್ಲಿ ಭಕ್ತಿವಿಶ್ವಾಸ ಗಳನ್ನಿಟ್ಟು ಭಾರತವನ್ನು ಕೇಳಬೇಕು. ಪ್ರಥಮಶ್ರವಣದಿಂದ ಅಗ್ನಿಷ್ಟೋಮ ಫಲವು, ದ್ವಿತೀಯ ಶ್ರವಣದಿಂದ ದಿವ್ಯವಿಮಾನ ಸಂಚರಣಯುತ ಸ್ವರ್ಗವು ಅತಿರಾತ್ರಫಲವು ಸಿಗುವುದು. ತೃತೀಯ

ಪಾರಾಯಣ ಶ್ರವಣಗಳಿಂದ ದ್ವಾದಶಾಹ ಫಲವು, ಚತುರ್ಥದಿಂದ ವಾಜಪೇಯ ಫಲವು ಪಂಚಮದಿಂದ ತದ್ವಿಗುಣ ಫಲವು. ಷಷ್ಠದಿಂದ ಕೈಲಾಸವಾಸ ಸುಖವು, ಲಭಿಸುವುದು. ಸಪ್ತಮ ಪಾರಾಯಣದಿಂದ ಅಶ್ವಮೇಧಫಲವು, ಅಷ್ಟಮದಿಂದ ರಾಜಸೂಯಫಲವು, ನವಮದಿಂದ ವಾಜಿಮೇಧದ್ವಿ ಗುಣಫಲವು, ದಶಮ ಪಾರಣೆಯಿಂದ ಸ್ವರ್ಗಲೋಕದ ಸಕಲ ಸುಖಗಳನ್ನು ಪೊಂದುವನು. ಸರ್ವಾಭರಣಭೂಷಿತನು, ಸೇವಿತ ಸುರವನಿತನು, ಲಬ್ಧಸರ್ವಸ್ವ ಯೋಗ್ಯಕಾಮಿತನು, ಶ್ರೀಹರಿ ಗುರುಭಕ್ತಿಭರಿತನು ಆಗುವನು. ಶ್ರದ್ಧೆಯೇ ಫಲಪ್ರದವಾಗಿದೆ. ಶ್ರದ್ಧೆಯು ಸ್ವಭಾವಾನುಗುಣವಾಗಿದೆ. ಕಾಲಕರ್ಮಸ್ವಭಾವ ಜೀವರು ಶ್ರೀಹರಿಯ ಅಧೀನರಾಗಿರುವರು. ಅಂತಹ ಶ್ರೀಹರಿಯನ್ನು ನಿರೂಪಿಸುವ ಭಾರತವನ್ನು ಪೇಳುವ ವಾಚಕನಿಗೆ ಸುವರ್ಣಕಟಕ ಕುಂಡಲ ಮುದ್ರಿಕಾ ವಸ್ತ್ರಮೌಲ್ಯಗಳನ್ನಿತ್ತು ಪೂಜಿಸಬೇಕು. ಸ್ವಸ್ತಿವಾಚನವನ್ನು ಮಾಡಿ, ಶ್ರೀಹರಿಗೆ ಪುಣ್ಯಫಲವನ್ನರ್ಪಿಸಿ, ವಿಪ್ರಸಹಸ್ರವನ್ನು, ಅಥವಾ ಶತವನ್ನು ಮೃಷ್ಟಾನ್ನ ದಾನದಿಂದಲು, ದಕ್ಷಿಣಾದಿಗಳಿಂದಲು ತಣಿಸಬೇಕು.

ಆದಿಪರ್ವದಲ್ಲಿ ಮೂಲಫಲ ಗುಡೋದನಗಳನ್ನು; ಸಭಾಪರ್ವದಲ್ಲಿ ಮೋದಕಗಳನ್ನು, ಅರಣ್ಯಪರ್ವದಲ್ಲಿ ಮೂಲಫಲಗಳನ್ನು, ವಿರಾಟಪರ್ವದಲ್ಲಿ ಮಧುರಾಪೂಪಗಳನ್ನು, ಉದ್ಯೋಗಪರ್ವದಲ್ಲಿ ಚಿತ್ರಾನ್ನಗಳನ್ನು, ಭೀಷ್ಮಪರ್ವದಲ್ಲಿ ಯಾನಸಮುಲ್ಲಸಿತ ದಿವ್ಯಾನ್ನವನ್ನು, ದ್ರೋಣಪರ್ವದಲ್ಲಿ ಶಯ್ಯಾಸಹಿತ ಪರಮಾನ್ನವನ್ನು, ಕರ್ಣಪರ್ವದಲ್ಲಿ ಸಾರ್ವಕಾಮಿಕ ಭೋಜ್ಯಗಳನ್ನು, ಶಲ್ಯಪರ್ವದಲ್ಲಿ ಮೋದಕಗಳನ್ನು, ಗದಾಪರ್ವದಲ್ಲಿ ಅಪೂಪ ಗುಡೋದನ ಗಳನ್ನು, ಸ್ತ್ರೀಪರ್ವದಲ್ಲಿ ರತ್ನಸಹಿತ ಶರ್ಕರಾನ್ನವನ್ನು, ಸೌಪ್ತಿಕಪರ್ವದಲ್ಲಿ ಘೃತೋದನವನ್ನು, ಶಾಂತಿಪರ್ವದಲ್ಲಿ ಮುದ್ಗಾನ್ನವನ್ನು, ಆನುಶಾಸನಿಕ ಪರ್ವದಲ್ಲಿ ಹವಿಷ್ಯಾನ್ನವನ್ನು, ಆಶ್ವಮೇಧಿಕ ಪರ್ವದಲ್ಲಿ ಗುಡಾಪೂಪಗಳನ್ನು, ಆಶ್ರಮವಾಸಿಕ ಪರ್ವದಲ್ಲಿ ಸಾರ್ವಕಾಮಿಕಾನ್ನ ವನ್ನು, ಮೌಸಲ ಪರ್ವದಲ್ಲಿ ಗಂಧಮಾಲ್ಯಾನುಲೇಪನ ಭಕ್ಷ್ಯಭೋಜ್ಯಗಳನ್ನು, ಮಹಾಪ್ರಸ್ಥಾನಿಕ ಪರ್ವದಲ್ಲಿ ಶರ್ಕರಾಮಂಡಿಕಾದಿಗಳನ್ನು, ಸ್ವರ್ಗಾರೋಹಣ ಪರ್ವದಲ್ಲಿ ಪಾಯಸ ಗುಡೋದನ ಪೋಳಿಕಾದಿಗಳನ್ನು, ಹರಿವಂಶ ಸಮಾಪ್ತಿಯಲ್ಲಿ ಚಿತ್ರಾನ್ನ ಪರಮಾನ್ನಗಳನ್ನು ಸಹಸ್ರಸಂಖ್ಯಾಕ ವಿಪ್ರರಿಗೆ ದಾನಮಾಡಿ, ಸರ್ವದಾ ಪರ್ವಸಮಾಪ್ತಿಗಳಲ್ಲಿ, ಸಮಸ್ತಗುಣಪೂರ್ಣನಾದ ಶ್ರೀ ಶ್ರೀನಿವಾಸದೇವನ ದಿವ್ಯ ಚರಣಾರವಿಂದಗಳಿಗೆ ವಂದಿಸಿ, ಸರ್ವಸಮರ್ಪಣವನ್ನು ಮಾಡಬೇಕು. ಹರಿವಂಶ ಪರ್ವದಲ್ಲಿ ಪಾಯಸವನ್ನು ಕೊಡಬೇಕು.

ಶ್ರೀಭಾರತವನ್ನು ಸುವರ್ಣಸಿಂಹಾಸನದಲ್ಲಿಟ್ಟು ಧವಳದುಕೂಲದಿಂದಲು, ಮಾಲಾತುಲಸೀ ರತ್ನಾಭರಣಗಳಿಂದಲು, ಗಂಧಾಕ್ಷತೆಗಳಿಂದಲು ಪೂಜಿಸಿ, ತತ್ಪ್ರತಿಪಾದ್ಯ ಶ್ರೀಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣವಲ್ಲಭ, ಶ್ರೀ ಶ್ರೀರಮಣ ವೇದವ್ಯಾಸ ದೇವನನ್ನು ನೆನೆದು, ನೈವೇದ್ಯಾದಿಗಳನ್ನು ಮಾಡಬೇಕು. ಯಥಾಶಕ್ತಿವಾಗಿ ಶ್ರೀವಿಷ್ಣು ಪ್ರೀತಿಗಾಗಿ ಬ್ರಾಹ್ಮಣ ಸುವಾಸಿನ್ಯಾದಿ ಸರ್ವಸುಜನರನ್ನು ಮೃಷ್ಟಾನ್ನಪಾನ ದಕ್ಷಿಣೆಗಳಿಂದ ಸನ್ಮಾನಿಸಬೇಕು.

ಶ್ರೋತೃಗಳು ವಾಚಕನನ್ನು ಪೂಜಿಸಿ, ವಸ್ತ್ರ ರತ್ನ ಹಿರಣ್ಯ ಭೂ ಗೋದಾನಗಳನ್ನಿತ್ತು ಸತ್ಕರಿಸಬೇಕು. ವಾಚಕನು ಪ್ರೀತನಾದರೆ ವೇದವ್ಯಾಸನೇ ಪ್ರೀತನಾದಂತೆ! ವಿಪ್ರರು ಪ್ರೀತರಾದರೆ

ವಿಷ್ಣುವು ಪ್ರೀತನಾದಂತೆ! ಭಾರತವನ್ನು ನಿತ್ಯವೂ ಕೀರ್ತಿಸಬೇಕು. ಭಾರತವನ್ನು ಚಿಂತಿಸಬೇಕು. ಭಾರತವಿರುವ ಮನೆಗೆ ಜಯ ಕೀರ್ತಿ ಸಂಪಾದಾರೋಗ್ಯ ಸೌಭಾಗ್ಯ ಸಂತಾನವು ಸಮೃದ್ಧ ವಾಗುವುದು. ಭಾರತವು ಪರಮಪುಣ್ಯವು, ಪವಿತ್ರವು, ದೇವಸೇವಿತವು, ಸರ್ವಶಾಸ್ತ್ರ ಶ್ರೇಷ್ಠವು ಆಗಿದೆ! ಭಾರತ ಲೇಖನದಿಂದ ಮೋಕ್ಷ ಸುಖವಾಗುವುದಿದು ನಿಜ! ಮಹಾಭಾರತವನ್ನು, ಭೂದೇವಿಯನ್ನು, ಗೋವುಗಳನ್ನು, ವೇದವಾಣಿಯನ್ನು, ಬ್ರಾಹ್ಮಣರನ್ನು, ಬ್ರಹ್ಮವಾಣೀ ಪಾರ್ವತೀ ಪರಮೇಶರನ್ನೂ, ಸರ್ವಾಂತರ್ಯಾಮಿ ಸರ್ವೋತ್ತಮ ಶ್ರೀಲಕ್ಷ್ಮೀವೇಂಕಟೇಶನನ್ನೂ ಸ್ಮರಿಸಿದವರು ನಿತ್ಯಸುಖಿಗಳಾಗುವರು. ಭಾರತದಲ್ಲಿ ಆದಿಮಧ್ಯಾಂತರಗಳಲ್ಲಿ ಸರ್ವತ್ರ ಶ್ರೀಹರಿಯೇ ಕೀರ್ತಿತನಾಗಿರುವನು. ಧರ್ಮನಿದರ್ಶನವು, ಪವಿತ್ರವು, ಪುಣ್ಯಪ್ರದವು ಆದ ಶ್ರೀಮಹಾಭಾರತವನ್ನು ಕೇಳಿದವರು, ಹೇಳಿದವರು, ತ್ರಿಕರಣ ಕೃತಪರ್ವ ಪಾಪದೂರರಾಗಿ, ಶ್ರೀಹರಿಲೋಕವನ್ನು ಸೇರುವರು. ಹದಿನೆಂಟು ಪುರಾಣಗಳನ್ನು ಕೇಳಿದ ಫಲವು ಭಾರತಶ್ರವಣ ದಿಂದ ಲಭಿಸುವುದು. ಸ್ತ್ರೀಪುರುಷರಾರೇ ಆಗಲಿ ಭಾರತಶ್ರವಣದಿಂದ ವಿಷ್ಣುಭಕ್ತರಾಗಿ, ವಿಷ್ಣುಲೋಕದಲ್ಲಿ ಸುಖವಾಗಿರುವರು. ಅವರ ಪಿತೃಗಳಿಗೆ ಪುಣ್ಯಲೋಕಗಳಾಗುವವು. ಅವರ ವಂಶಜರೂ ಶ್ರೀ ಕೀರ್ತಿಪುಣ್ಯಾಯುರೈಶ್ವರ್ಯ ಸಂಭವಿತರಾಗಿ, ಚಿರಕಾಲ ಸುಖವಾಗಿರುವರು.

**ಸ್ವರ್ಗಾರೋಹಣಪರ್ವವು ಮುಗಿದುದು**

॥ ಶ್ರೀಮದ್ವೇಶಾರ್ಪಣಮಸ್ತು ॥



# ಉಪಸಂಹಾರ

ಶ್ರೀಕೃಷ್ಣನ ಆಜ್ಞೆಯಂತೆ, ಪಾಂಡವರು ಭೂಲೋಕವನ್ನು ತ್ಯಜಿಸಿ ಹೋದ ಮೇಲೆ ಪರಿಕ್ಷಿದ್ರಾಜನೇ ಮುಂತಾದ ಪಾಂಡವವಂಶದ ರಾಜನ್ಯರು ಶ್ರೀವ್ಯಾಸಶಿಕ್ಷಿತಮಾರ್ಗದಲ್ಲಿ ನಡೆಯುತ್ತಾ, ಪೃಥಿವಿಯನ್ನಾಳಿದರು. ಕ್ಷೇಮಕನೆಂಬ ರಾಜನ ಪರ್ಯಂತವು ಆದ ಸಾವಿರವರ್ಷ ಗಳಲ್ಲಿ ಆಗಿಹೋದ ರಾಜನು, ಭಾರತಾದಿ ಸಚ್ಛಾಸ್ತ್ರಶ್ರವಣಗೈದು, ಧರ್ಮದಿಂದ ಪ್ರಜಾರಂಜಕ ರಾಗಿ ಪಾಲಿಸಿದರು. ಶ್ರೀವ್ಯಾಸಪ್ರಸಾದದಿಂದ ಕಲಿಯುಗವಾದರೂ ಧರ್ಮಜ್ಞಾನಗಳು ನಾಶವಾಗಲಿಲ್ಲ.

ಸಾವಿರ ವರ್ಷವಾದ ಮೇಲೆ ವೇದವ್ಯಾಸರು ಅದರ್ಶನವನ್ನು ಹೊಂದಿದರು. ಅವರನ್ನು ಅನುಸರಿಸಿ ಮುನಿಶ್ರೇಷ್ಠರೂ ಅದೃಶ್ಯರಾದರು. ಆದರೂ ಸಂಪ್ರದಾಯಗತವಾದ ತತ್ತ್ವವಿದ್ಯೆಯು ಚನ್ನಾಗಿತ್ತು. ಅದನ್ನು ಭೂಮಿಯಲ್ಲಿ ಪುಟ್ಟಿದ ತ್ರಿಪುರಾಸುರರೇ ಮುಂತಾದ ತಾಮಸರು ಸ್ವೀಕರಿಸಿ, ಜ್ಞಾನವನ್ನು ಪೊಂದಿದರು. ಅಸುರಸಂಪ್ರದಾಯವು ನಷ್ಟವಾಗಿ ಸತ್ಸಂಪ್ರದಾಯದ ಯಥಾರ್ಥಜ್ಞಾನವೇ ಉಳಿದಿದ್ದುದರಿಂದ, ದೈತ್ಯರೂ ಕೂಡ ತತ್ತ್ವಜ್ಞಾನವನ್ನು ಸಂಪಾದಿಸಿದರು. ಚಂಡಾಲನು ವೇದವನ್ನು ಹೊಂದಿದಂತೆ, ಶುನಕವು ಪುರೋಡಾಶವನ್ನು ತಿಂದಂತೆ, ಅಯೋಗ್ಯರು ದಿವ್ಯಜ್ಞಾನವನ್ನು ಹೊಂದಲು ನೋಡಿ ಸುತರಾಂ ಸಹಿಸದೆ ಸುರರು ವಿರಿಂಚೇಶ್ವರರಿಂದ ಕೂಡಿ; ಕ್ಷೀರೋದಧಿಯ ಉತ್ತರತೀರವನ್ನು ಸೇರಿ, ನೀರಜಾಕ್ಷನನ್ನು ಸ್ತುತಿಸಿದರು. ಅವರಿಗೆ ಶ್ರೀಶನು 'ಸುಜೀವರಿಗೆ ಜ್ಞಾನವನ್ನೂ, ಅಯೋಗ್ಯರಿಗೆ ಅನ್ಯಥಾಜ್ಞಾನವನ್ನೂ ಕೊಡುವೆನು. ಅಸುರರು ಹೊಂದಿರುವ ತತ್ತ್ವಜ್ಞಾನವನ್ನೂ ಅವರಿಂದ ದೂರೀಕರಿಸುವೆನು' ಎಂದು ಅಭಯವನ್ನಿತ್ತು ಕಳಿಸಿದನು.

ತ್ರಿಪುರಾಸುರರಲ್ಲಿ ಪ್ರಥಮನಾದ ವಿರೂಪಾಕ್ಷನು ಭೂಮಿಯಲ್ಲಿ ಶುದ್ಧೋದನನೆನಿಸಿ ಜನಿಸಿದ್ದನು. ಇವನ ಪತ್ನಿಯಾದ ಮಾಯೆ (ಗಯಾ) ಪಡೆದ ಕೂಸನ್ನು ದೂರಮಾಡಿ, ಅಲ್ಲಿ ಶಿಶುರೂಪನಾಗಿ, ಶ್ರೀಹರಿಯೇ ಅವತರಿಸಿದನು. ಆ ಕೂಸನ್ನು ತಮ್ಮದೆಂದು ತಿಳಿದು ಅವರು ಜಾತಕರ್ಮವನ್ನು ಮಾಡಲು ತೊಡಗಿದಾಗ, ಶಿಶುವು ಅಪಹಸಿಸಿ ನಕ್ಕಿತು. 'ಏಕೆ ನಗುವೆ? ನೀನಾರೆಂ'ದು ಕೇಳಿದಾಗ, ಶಿಶುವು 'ನಾನು ಬುದ್ಧನು' ಎಂದು ಹೇಳಿ, ಅವರಿಗೆ ಬುದ್ಧದರ್ಶನವನ್ನು ಉಪದೇಶಿಸಿತು. ಅದನ್ನು ಅವರು ನಂಬಲಿಲ್ಲ.

ಶ್ರೀಶನೇ ಆಗ ದೇವತೆಗಳನ್ನು ನೆನೆದನು. ಆತನ ಮನವನ್ನರಿತು ದೇವತೆಗಳು ತಮ್ಮ ಆಯುಧಗಳನ್ನು ಶಿಶುವಿನ ಮೇಲೆ ಎಸೆದರು. ಬ್ರಹ್ಮರುದ್ರಾದಿಗಳ ಎಲ್ಲ ಆಯುಧಗಳನ್ನು ನುಂಗಿ, ಶ್ರೀಶಿಶು ರೂಪೀ ಬುದ್ಧನು ಕೊನೆಗೆ ತಾನೇ (ವಿಷ್ಣುವು) ಬಿಟ್ಟ ಸುದರ್ಶನವನ್ನು ಕೈಲಿ ಹಿಡಿದನು. ಆ ಚಕ್ರವನ್ನು ಆಸನದಂತೆ ಮಾಡಿ, ಅದರ ಮೇಲೆ ಕುಳಿತ ಬುದ್ಧನಿಗೆ ವಂದಿಸಿ, ದೇವತೆಗಳು ಅಂತರ್ಹಿತರಾದರು. ಶ್ರೀಶನಾಟವು ಸಫಲವಾಗಿ, ದೈತ್ಯರು ವಿಷ್ಣುವಿನಕಿಂತಲು ಬುದ್ಧನೇ ಅಧಿಕನೆಂದು ತಿಳಿದರು. ಅವರು ಮೋಹಿತ ಬುದ್ಧಿಗಳಾಗಿ ಬೌದ್ಧಧರ್ಮವನ್ನು ಅನುಸರಿಸಿದರು!

'ಎಲ್ಲ ಜಗತ್ತೂ ಕ್ಷಣಿಕವಾಗಿದೆ; ಜ್ಞಾನವು ಸ್ವತಲ್ಲ. ಎಲ್ಲವೂ ಶೂನ್ಯವು (ಅಭಾವವು)' ಎಂದು ಧ್ಯಾನಿಸಿ, ಆ ದೈತ್ಯರು ತಮಗೆ ಯೋಗ್ಯವಾದ ಅಂಧಂತಮಸ್ಸನ್ನು ಹೊಂದಿದರು. ಶ್ರೀಶನು ದೇವತೆಗಳಿಗೆ ವಿಷಯವನ್ನು ತಿಳಿಸಿ, ಸಂತೋಷಪಡಿಸಿದನು. ಬುದ್ಧಶಾಸ್ತ್ರದ ನಿಜವಾದ ಅರ್ಥವನ್ನು ದೇವತೆಗಳಿಗೆ ತಿಳಿಸಿಕೊಟ್ಟನು.

ಕ್ಷಣಲವ ಮಂತಾದ ಕಾಲವಿಶೇಷಗಳಲ್ಲಿ ಎಲ್ಲ ಕ್ಷಣಗಳೂ ಕ್ಷಣಮಾತ್ರವಿರುವವು. ಅಂದರೆ ಕ್ಷಣಾಂತರದಲ್ಲಿ ನಾಶವನ್ನು ಹೊಂದುವವು. ಘಟಪಟಾದಿಗಳು ಕ್ಷಣವೃತ್ತಿಗಳು: ಅಂದರೆ ಕ್ಷಣಪದೋಪಲಕ್ಷಿತ ಅಲ್ಪಕಾಲದಲ್ಲಿಯೂ ಇರತಕ್ಕುದು. ಕ್ಷಣಕ್ಕೆ ಕ್ಷಣಾಂತರ ವೃತ್ತಿಯಿಲ್ಲ, ಅಂದರೆ ಉತ್ಪತ್ತಿಕ್ಷಣಕ್ಕೂ, ನಾಶಕ್ಷಣಕ್ಕೂ ಸ್ಥಿತಿಕಾಲತ್ವವಿಲ್ಲ! ಆದುದರಿಂದ ಸ್ಥಿತಿಕಾಲವಲ್ಲಿ ಕ್ಷಣಮಾತ್ರ ವರ್ತಿತ್ವವಿದ್ದೇ ಇದೆ. ಲವನಿಮೇಷ ಯಾಮಾದಿ ರೂಪವಾದ ಕಾಲಾಯವ ಗಳಲ್ಲಿಯೂ ಘಟಾದ್ಯನಿತ್ಯಜಗತ್ತುಗಳಲ್ಲಿಯೂ ಕ್ಷಣಿಕತ್ವವಿದೆ! ಅಂದರೆ ಅಲ್ಪಕಾಲದ ಅವಸ್ಥಿತಿ ಎಂದು ತಿಳಿಯಬೇಕು. ಕ್ಷಣದಲ್ಲಿ ಕ್ಷಣವರ್ತಿತ್ವವರೆಂದರೆ ಆತ್ಮಾಶ್ರಯ ದೋಷವು ಬರುವುದು! ಆದರೂ ಅದನ್ನು ವಿಶೇಷಬಲದಿಂದ ಪರಿಹಾರ ಮಾಡಬಹುದು. ಕ್ಷಣದಲ್ಲಿ ಕ್ಷಣವೃತ್ತಿತ್ವವಿದ್ದು ಬೇರೆ ಕಾಲದಲ್ಲಿ ಅಲ್ಪಕಾಲ ಮಾತ್ರವಾದ ಅವಸ್ಥಿತಿಯೂ ಇದೆ ಎಂದು ಸ್ವನಿರ್ವಾಹಕತ್ವವು ಕೂಡುವುದು. ಜಗತ್ತು ಕ್ಷಣದಲ್ಲಿಯೂ ಮತ್ತು ಸ್ಥಿರಸ್ವರೂಪವೂ ಆಗಿದೆ.

ಜಡಾತ್ಮಕ ಜಗತ್ತು ವಿಜ್ಞಾನರೂಪವಾಗಿದೆ ಎಂದರೆ ವಿಜ್ಞಾನಾರೋಪಿತವೆಂದಲ್ಲ. ಕಿಂತು ಸರ್ವಜ್ಞನಿಂದ ಚೇಷ್ಟೆಯುಳ್ಳದ್ದಾಗಿದೆ ಎಂಬ ಕಾರಣದಿಂದ ಚಿದಾತ್ಮಕವೆಂದು ತಿಳಿಯಬೇಕು. ಇನ್ನು ಚೇತನರು ನಾತ್ಮಕರೆಂದು ಹೇಳುವ ಅವಶ್ಯಕತೆಯೇ ಇಲ್ಲ.

ಉತ್ತಮ ಸುಖರೂಪನಾದುದರಿಂದ ಶ್ರೀಹರಿಗೆ ಶೂ ಎಂದು ಹೆಸರಿದೆ. 'ಶೂ' ನಾಮಕ ಶ್ರೀಶನಿಂದ ನೀಯತೆ ನಡೆಸಲ್ಪಟ್ಟಿದೆ. ಆದುದರಿಂದ ಜಗತ್ತು ಶೂನ್ಯವೆನಿಸಿದೆ.

'ಅ' ಎಂಬ ಪರಮಾತ್ಮನಿಂದ ಸಂಹಾರ್ಯವಾಗಿರುವುದರಿಂದ, ಜಗತ್ತಿಗೆ ಅಸತ್ ಎಂದು ಹೆಸರಿದೆ. 'ಅ' ವಾಸುದೇವನಿಂದ ಭವತಿ – ಹುಟ್ಟುತ್ತದೆ. ಆದುದರಿಂದ ಜಗತ್ತಿಗೆ ಅಭಾವವೆಂದು ಹೆಸರು. ಜಗತ್ತು ಕ್ಷಣಿಕವು, ಶೂನ್ಯವು ಅಭಾವವು, ಅಸತ್ತು ಇತ್ಯಾದಿ ಬುದ್ಧನ ವಚನಗಳಿಗೆ ತೋರುವ ಅರ್ಥವನ್ನಲ್ಲದೆ ಮೇಲೆ ಬರೆದಂತೆ ನಿಜವಾದ ಅರ್ಥವನ್ನು ದೇವತೆಗಳು ತಿಳಿದು ನಿಸ್ಸಂಶಯರಾದರು.

ಜಿನನೆಂಬ ಮತಪ್ರವರ್ತಕನು ಕೂಡ ಬುದ್ಧಮತವನ್ನು ತೋರಿಬರುವ ಅರ್ಥದಂತೆ ಸ್ವೀಕರಿಸಿ, ಜೈನ ಮತಪ್ರವರ್ತಕನಾದನು. ಆಗ ದುಷ್ಟಜೀವರೆಲ್ಲರು ಬುದ್ಧನ ಅಥವಾ ಜಿನನ ಮತವನ್ನು ಪೊಂದಿ, ಅದನ್ನು ಮಿಕ್ಕವರಿಗೆ ಬೋಧಿಸಿದರು. ಆಗ ದೇವತೆಗಳು ದೈತ್ಯರನ್ನು ತದ್ಯೋಗ್ಯಮಾರ್ಗದಲ್ಲಿ ಕೆಡಹಿದ ಬುದ್ಧದೇವನ ಚಾತುರ್ಯವನ್ನು ಕಂಡು, ಸಂತುಷ್ಟರಾದರು. ಬುದ್ಧದೇವನ ಮತಕ್ಕೆ ನಿಜವಾದ ಅರ್ಥವನ್ನು ತಿಳಿದು, ದೇವತೆಗಳು ಅದಕ್ಕೆ ಪ್ರಶಾಂತವಿದ್ಯೆ ಎಂದು ಹೆಸರಿಟ್ಟು, ಅದರ ಮೋಕ್ಷಸಾಧನ ಸಾಮರ್ಥ್ಯವನ್ನು ತಿಳಿದು ಸಂತೋಷಪಟ್ಟರು.

ದೇವತೆಗಳಂತೆ ಋಷಿಗುಳು, ಅವರನ್ನು ಅನುಸರಿಸಿ, ಭಾರತೀಯರಾದ

ಮಾನವೋತ್ತಮರು ಸತ್ಸಂಪ್ರದಾಯವನ್ನು ಹಿಡಿದು, ಭಾರತಾದಿ ಸಚ್ಛಾಸ್ತ್ರವನ್ನು ಗುರುಮುಖದಿಂದ ತಿಳಿದು, ಶ್ರೀಹರಿ ಪ್ರೀತಿಗಾಗಿ ಯಜ್ಞಗಳನ್ನು ಮಾಡಿ, ಅತ್ಯುತ್ತಮ ಗತಿಯನ್ನು ಪೊಂದಿದರು.

ಅದನ್ನು ನೋಡಿ ಸಹಿಸದೆ ಮಣಿಮದಾದಿ ಕ್ರೋಧವಶ ದೈತ್ಯರು ಶಿವನನ್ನು ಕುರಿತು ತೀವ್ರತಪವನ್ನು ಮಾಡಿ, ಅದ್ಭುತ ಶಕ್ತಿಯನ್ನು ಪಡೆದರು. ಅವರು ಜೀವೇಶ್ವರ ಐಕ್ಯವನ್ನೂ, ಜೀವಜೀವೈಕ್ಯವನ್ನೂ ಪೇಳುವ ಮೋಹಕಶಾಸ್ತ್ರವನ್ನು ರಚಿಸಿದರು. ಆ ಶಾಸ್ತ್ರವನ್ನು ತರ್ಕಾಭಾಸಗಳಿಂದ ಉಪಪಾದಿಸಿದರು.

ಆ ಕ್ರೋಧವಶಾದಿ ದೈತ್ಯರನ್ನು ಅವರಿಗೆ ಯೋಗ್ಯವಾದ ಅಂಧಂತಮಸ್ಸಿನಲ್ಲಿ ಕೆಡಹಿ, ಸುಜನರಿಗೆ ಸುಜ್ಞಾನವನ್ನು ಕೊಡಲೆಂದು ಶ್ರೀಹರಿಯ ಆಜ್ಞೆಯನ್ನು ಪೊಂದಿದ ಶ್ರೀಭೀಮಸೇನನೇ ಶ್ರೀಮಧ್ವಾಚಾರ್ಯರಾಗಿ ಅವತರಿಸಿದನು. ಆಮೇಲೆ ದುರ್ಗಾದೇವಿಯೂ ಪಯಸ್ವಿನೀ ತೀರದಲ್ಲಿ ಬ್ರಾಹ್ಮಣಗೃಹದಲ್ಲಿ ಅವತರಿಸಿ ಅಸುರಸಮೂಹವನ್ನು ಸಂಹರಿಸಿದಳು. ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯರು ಸಚ್ಛಾಸ್ತ್ರವನ್ನು ರಚಿಸಿ, ದುಷ್ಟಮತಗಳನ್ನು - ಇಪ್ಪತ್ತೊಂದು ಭಾಷ್ಯಗಳ ಖಂಡನವನ್ನು ಮಾಡಿ, ನಾಶಗೊಳಿಸಿದರು; ಮತ್ತು ಮೋಕ್ಷಾನಂದ ಸಂದಾಯಕವಾದ ತತ್ತ್ವವಾದ ಶಾಸ್ತ್ರವನ್ನು ಮೂವತ್ತೇಳು ಗ್ರಂಥಗಳಲ್ಲಿ ಪ್ರತಿಪಾದಿಸಿ, ಜನರಿಗೆ ಯಥಾರ್ಥಜ್ಞಾನವನ್ನಿತ್ತು, ಉದ್ಧರಿಸಿದರು.

ದುರ್ಗಾವತಾರಾನಂತರದಲ್ಲಿ ಕಲಿಯುಗದ ಸಮಾಪ್ತಿಯಾಗುವುದು. ಆಗ ಮತ್ತೆ ಧರ್ಮ ಜ್ಞಾನ ಭಕ್ತಿ ವಿರಾಗಾದಿ ಸುಗುಣಗಳು ನಷ್ಟಪ್ರಾಯವಾಗುವವು. ಮತ್ತೆ ಬ್ರಹ್ಮ ರುದ್ರೇಂದ್ರಾದಿ ದೇವತೆಗಳು ಕ್ಷೀರನಿಧಿತೀರವನ್ನು ಸೇರಿ, ನೀರಜಾಕ್ಷನನ್ನು ಧರ್ಮರಕ್ಷಣೆಗಾಗಿ ಪ್ರಾರ್ಥಿಸುವರು. ಅಚಿಂತ್ಯಾದ್ಭುತ ಶಕ್ತಿವಂತನಾದ ಭಗವಂತನು ಶಂಭಲವೆಂಬ ಗ್ರಾಮದಲ್ಲಿ ವಿಷ್ಣುಶಯನನೆಂಬ ಮುನಿಯ ಮನೆಯಲ್ಲಿ ಅವತರಿಸುವನು.

ಕಲಿಯನ್ನು ನಿರಾಕರಿಸುವುದರಿಂದ ಕಲ್ಕಿಯೆನಿಸಿ, ಜ್ಞಾನಸುಖಪೂರ್ಣನಾದುದರಿಂದ ಕಲ್ಕಿ ಎನಿಸಿ, ಒಂದೇ ದಿನದಲ್ಲಿ ಎಲ್ಲೆಡೆ ವ್ಯಾಪ್ತನಾಗಿ, ಎಲ್ಲ ದುರ್ಜನರನ್ನೂ ನಾಶಪಡಿಸುವನು. ಅಧರ್ಮರತರನ್ನೂ, ಶ್ರೀಹರಿ ವಿರೋಧಿಗಳನ್ನೂ ನಾಶಪಡಿಸಿ, ಧರ್ಮಸೇತುವನ್ನು ಮತ್ತೆ ಸ್ಥಾಪಿಸುವನು. ಸುಜನರಲ್ಲಿ ಜ್ಞಾನಭಕ್ತಿಗಳನ್ನು ಸ್ಥಾಪಿಸುವನು.

ಇಂತು ಶ್ರೀಹರಿಯ ಮಹಾಮಹಿಮೆಯನ್ನು ಸುಜನರಿಗೆ ತಿಳಿಸಿಕೊಟ್ಟು ಶ್ರೀಮದಾನಂದ ತೀರ್ಥಭಗವತ್ಪಾದಾಚಾರ್ಯರು, 'ಎಲವೋ ಹರಿಭಕ್ತರೇ! ಶ್ರೀಹರಿಯು ಅನಂತಕಲ್ಯಾಣ ಗುಣಪೂರ್ಣನು. ಶ್ರೀಶನ ಕರ್ಮಗಳು ಮತ್ತು ರೂಪಗಳು ಕೂಡ ಅನಂತಗಳೇ! ಅಂತೆಯೇ ಶ್ರೀರಮಣನು ಅನಂತ, ಬ್ರಹ್ಮಪರ ಎಂದು ಕರೆಯಲ್ಪಡುವನು. ನಾವು ಅನಂತಕಲ್ಯಾಣಗುಣನಿಧಿಯಾದ ಶ್ರೀನಾರಾಯಣನನ್ನು ವರ್ಣಿಸುವ ಸದ್ಗ್ರಂಥಗಳನ್ನು ರಚಿಸುವುದು ಕೇವಲ ಶ್ರೀಹರಿ ಪ್ರೀತಿಯನ್ನು ಉದ್ದೇಶಿಸಿ ಎಂದು ತಿಳಿಯಿರಿ!

ಆನಂದತೀರ್ಥ, ಪೂರ್ಣಪ್ರಜ್ಞನೆಂದು ಖ್ಯಾತನಾಗಿ, ಶ್ರೀಬದರಿಕಾಶ್ರಮವನ್ನು ಸೇರಿ, ಶ್ರೀವ್ಯಾಸರೂಪೀ ಶ್ರೀನಾರಾಯಣನಲ್ಲಿ ಸಕಲ ಶಾಸ್ತ್ರಗಳನ್ನೋದಿ, ಆ ಪರಮ ಕರುಣಾನಿಧಿಯ

ಆಜ್ಞೆಯಂತೆ, ಸಚ್ಛಾಸ್ತ್ರವನ್ನು ಆ ಜಗದೇಕಭರ್ತನ ಅನುಗ್ರಹದಿಂದ, ನಾನು ರಚಿಸಿ ಶ್ರೀವೇದವ್ಯಾಸ ದೇವ ಶ್ರೀಚರಣಾರವಿಂದಗಳಿಗೆ ಅರ್ಪಿಸಿರುವೆನು. ವೇದ, ಪಂಚರಾತ್ರ, ಭಾರತಾದಿ ಸದಿತಿಹಾಸ ಗಳು, ಪುರಾಣಗಳು, ಉಪನಿಷತ್ತುಗಳು, ಗೀತೆ, ಮುಂತಾದ ಎಲ್ಲ ಶಾಸ್ತ್ರಗಳನ್ನೂ, ಬ್ರಹ್ಮ ಸೂತ್ರಗಳನ್ನೂ, ಬ್ರಹ್ಮತರ್ಕವನ್ನೂ, ತಂತ್ರಗ್ರಂಥಗಳನ್ನೂ ಕೂಡ ಚನ್ನಾಗಿ, ಅರ್ಥವಿಶಿಷ್ಟವಾಗಿ ಅಧ್ಯಯನ ಮಾಡಿ, ಶ್ರೀಭಾರತ ತಾತ್ಪರ್ಯ ನಿರ್ಣಯವನ್ನು ರಚಿಸಿರುವೆನು. ಈ ಗ್ರಂಥವು ಸರ್ವಶಾಸ್ತ್ರಗಳ ನಿರ್ಣಯ ರೂಪವಾಗಿ, ವಿಶೇಷವಾಗಿ ಶ್ರೀಭಾರತದ ತಾತ್ಪರ್ಯವನ್ನು ತಿಳಿಯ ಹೇಳುತ್ತಿದೆ.

ವೇದಾದಿ ಸಚ್ಛಾಸ್ತ್ರಗಳಲ್ಲಿ ಆಪಾತತಃ ಪರಸ್ಪರ ವಿರೋಧವಿದ್ದಂತೆ ತೋರಿ ಬರುವುದುಂಟು. ಅಂತಹ ವಿಪ್ರತಿಪತ್ತಿಯನ್ನು ಪಾರಿಸುವುದೇ ಈ ಗ್ರಂಥರಾಜದ ಪ್ರಯೋಜನವು. ಇದರಂತೆ ಸದರ್ಥ ನಿರ್ಣಾಯಕವಾದ ಗ್ರಂಥವಿನ್ನೊಂದಿಲ್ಲ. ಬ್ರಹ್ಮಸೂತ್ರಗಳೂ ವೇದಾರ್ಥನಿರ್ಣಾಯಕಗಳೇ ಆದರೂ, ದುರ್ವಾದಿಗಳಿಂದ ರಚಿತವಾದ ಭಾಷ್ಯಗಳಿಂದ, ವೇದವ್ಯಾಸ ದೇವರಿಗೆ ಅಭಿಪ್ರೇತವಾದ ಅರ್ಥವು ಮರ್ಬೋಧವಾಗಿದೆ. ಆ ಸೂತ್ರಗಳಿಗೆ ಮಣಿಮದಾದಿ ದುರ್ಜನರು ಮಾಡಿದ ಭಾಷ್ಯಾಭಾಸಗಳಿಂದ, ಸುಜನರು ಕೂಡ ಪುರುಷೋತ್ತಮತ್ವ , ಸ್ವತಂತ್ರತ್ವ , ಜೀವಭಿನ್ನತ್ವ ಮುತಾದ ಶ್ರೀಹರಿಯ ಕಲ್ಯಾಣಗುಣಗಳ ಜ್ಞಾನವಾಗದಂತೆ, ಆದಾಗ ಶ್ರೀಆನಂದತೀರ್ಥ- ಮಧ್ವ - ಎಂದು ಖ್ಯಾತನಾದೆನು. ಆಭಾಷ್ಯಗಳನ್ನು ಖಂಡಿಸಿ, ವೇದವ್ಯಾಸಾಭಿಪ್ರೇತಾರ್ಥವನ್ನು ಶಿಷ್ಯನಾಗಿ ತಿಳಿದು, ಸಚ್ಛಾಸ್ತ್ರವನ್ನು ರಚಿಸಿರುವೆನು.

ಶ್ರೀವೇದವ್ಯಾಸರ ಆಜ್ಞೆಯಂತೆ ಸದ್ಭಾಷ್ಯವನ್ನು ಬ್ರಹ್ಮಸೂತ್ರಗಳ ಸರಿಯಾದ ಅರ್ಥವನ್ನು ತಿಳಿಸಲು ರಚಿಸಿದೆನು! ಮತ್ತು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದೆನು! ಇತರ ಗ್ರಂಥರಾಜಗಳನ್ನೂ ರಚಿಸಿ, ಶ್ರೀಹರಿಯ ಸರ್ವೋತ್ತಮತ್ವ, ಸ್ವತಂತ್ರತ್ವ, ಜೀವಜಡವಿಲಕ್ಷಣತ್ವ, ಜಗತ್ಸತ್ಯತ್ವ , ತಾರತಮ್ಯ ಮುಂತಾದ ಸತ್ತತ್ವಗಳನ್ನು ಸುಜನತತಿಯ ಉದ್ಧಾರಕ್ಕೆಂದು ಪ್ರತಿಪಾದಿಸಿದೆನು. ಶ್ರೀಭಾರತತಾತ್ಪರ್ಯ ನಿರ್ಣಯದಲ್ಲಿ ಶುಭಕರವಾದ ಶ್ರೀಭಾರತದ ತತ್ತ್ವಾರ್ಥವನ್ನು ನಿರೂಪಿಸಿರುವೆನು. ಉತ್ತಮ ವಿದ್ಯೆಯಾದ ವೇದಭಾರತಾದಿ ಸಚ್ಛಾಸ್ತ್ರದಿಂದಲು, ತನ್ನಿರ್ಣಾಯಕ ಗ್ರಂಥರತ್ನಗಳನ್ನು ರಚಿಸಿದ ನನ್ನಿಂದಲು ಸುಜನರು ದಿವ್ಯಜ್ಞಾನವನ್ನು ಪೊಂದಿ, ಸ್ವಯೋಗ್ಯ ಮುಕ್ತಿಯನ್ನು ಪಡೆದು, ರಮಿಸಲು ನಾನು ಮಧ್ವನೆಂದು ಅವತರಿಸಿರುವೆನು.

ಮುಖ್ಯವಾಯುದೇವರ ತೃತಿಯಾವತಾರವೇ ಮಧ್ವನು. ಆತನು ಶ್ರೀಭೂದುರ್ಗಾದೇವಿಯರ ಪ್ರಿಯಪುತ್ರನು. ಮಧ್ವನೆಂದರೆ ಆನಂದಕರವಾದ ಶಾಸ್ತ್ರವನ್ನು ರಚಿಸಿದವನು. ಜ್ಞಾನದೋಹನಸ್ಯೈವ, ಪರಣಪಾಲನಶೀಲನಾದ ಮುಖ್ಯಪ್ರಾಣನಿಂದ, ಮಧ್ವಾವತಾರದಲ್ಲಿ ರಚಿಸಿದ ಸಚ್ಛಾಸ್ತ್ರಗಳನ್ನು ಕೇಳಿ, ತಿಳಿದು, ಶೇಷರುದ್ರಾದಿ ದೇವತೆಗಳು ಯಥಾರ್ಥ ಜ್ಞಾನಿಗಳೆನಿಸಿ, ಶ್ರೀಹರಿಯ ಪರಮಾನುಗ್ರಹದಿಂದ ಸ್ವಯೋಗ್ಯ ಜ್ಞಾನಾನಂದ ಬಲಗಳನ್ನು ಪೊಂದಿ ಸುಖಿಸಿದರು. ಶ್ರೀಮಧ್ವನೇ ಹೃದಯಗುಹಾಗತನಾದ ಶ್ರೀನಾರಾಯಣನ ಮಹಿಮೆಯನ್ನು ರುದ್ರಾದಿಗಳಿಗೆ ತಿಳಿಸಿಕೊಟ್ಟನು. ಶ್ರೀಮಧ್ವನು ವೇದಭಾರತ ಪಂಚರಾತ್ರಾದಿ

ಸಚ್ಛಾಸ್ತ್ರಗಳನ್ನು ಚನ್ನಾಗಿ ಮಥಿಸಿ, ಅಂದರೆ ವಿಚಾರಮಾಡಿ, ಶ್ರೀಹರಿಯೇ ಸರ್ವೋತ್ತಮನೆಂದು ಸಾರಿ, ಸುಜನರನ್ನು ಜ್ಞಾನಮಾರ್ಗದಲ್ಲಿ ನಡೆಸಿ, ಸುಖವನ್ನಿತ್ತಿರುವನು. ಅಂತಹ ಮಧ್ವನಾದ ನನ್ನಿಂದ ರಚಿತವಾದ ಶ್ರೀಭಾರತ ತಾತ್ಪರ್ಯ ನಿರ್ಣಯವೇ ಪರಮಪ್ರಮಾಣವು! ಅದಕ್ಕೆ ವಿರುದ್ಧವಾಗಿರುವಂತೆ ತೋರಿದರೂ, ಸುಜನರು ಇತರ ಪುರಾಣಾದಿ ವಚನಗಳಿಗೆ ಇದರಂತೆ ಸದರ್ಥವನ್ನು ಮಾಡಿಕೊಂಡು, ಯಥಾರ್ಥಜ್ಞಾನವನ್ನು ಪಡೆಯಬೇಕು. ಶ್ರೀಮಹಾಭಾರತ ತಾತ್ಪರ್ಯನಿರ್ಣಯಕ್ಕೆ ಸಮನಾದ ಗ್ರಂಥವಿಲ್ಲ. ಇದು ಸರ್ವಶಾಸ್ತ್ರನಿರ್ಣಾಯಕವೆಂದು ತಿಳಿಯಿರಿ! ಈ ಗ್ರಂಥ ಶ್ರವಣಮನನಾದಿಗಳಿಂದ, ಧರ್ಮಾದಿ ಮೋಕ್ಷಾಂತ ಪುರುಷಾರ್ಥಪ್ರದನಾದ ಶ್ರೀನಾರಾಯಣನು ಪ್ರೀತನಾಗುವನು! ಶ್ರೀಹರಿ ಪ್ರೀತಿಯೇ ಪ್ರಯೋಜನವಾಗಿರುವ ಈ ಗ್ರಂಥರಾಜಕ್ಕೆ ಇತರ ಫಲಗಳನ್ನು ಹೇಳಬೇಕಿಲ್ಲ. ಸರ್ವ, ಹಸ್ತಿಪದೇ ಮಗ್ನಂ – ಎಂಬಂತೆ ಈ ಗ್ರಂಥಶ್ರವಣ ಫಲದಲ್ಲಿ ಮಿಕ್ಕೆಲ್ಲ ಐಹಿಕಾಮುಷ್ಮಿಕ ಫಲಗಳೂ ಅಡಕವಾಗಿವೆ.

ಶ್ರೀವಾಯುದೇವರ ಅತ್ಯುತ್ತಮಗಳಾದ ಶ್ರೀಹನುಮದ್ಭೀಮ ಮಧ್ವಾಖ್ಯ ಅವತಾರಗಳು ಮೂರೂ, ಬಳಿತ್ಥೇತ್ಯಾದಿ ವೇದವಚನಗಳಿಂದ ಪ್ರತಿಪಾದಿತವಾಗಿವೆ. ಶ್ರೀವಾಯುದೇವನು ಬಲಾತ್ಮಕನು; ಜ್ಞಾನಪೂರ್ಣನು; ಹರಿಪ್ರೀತಿಗೆ ಮುಖ್ಯಪಾತ್ರನು. ಶ್ರೀಮುಖ್ಯಪ್ರಾಣನು ಎಲ್ಲ ಜೀವರ ಹೃದಯ ಗುಹೆಯಲ್ಲಿದ್ದು, ಶ್ರೀಶಾಜ್ಞೆಯಂತೆ, ಅವರನ್ನು ಭರಿಸಿ, ಪೋಷಿಸಿ, ಸಲಹುವನು. ಆತನು ಸರ್ವ ಜೀವೋತ್ತಮನು! ರುದ್ರಾದಿ ದೇವಪೂಜ್ಯನು.

ಶ್ರೀಮುಖ್ಯಪ್ರಾಣನು ಶ್ರೀಹನುಮಂತನಾಗಿ ಶ್ರೀರಾಮರ ಸಂದೇಶವನ್ನು ಸೀತಾ ದೇವಿಯರಿಗೆ ತಿಳಿಸಿದನು. ಮತ್ತು ಶ್ರೀರಾಮ ಮಹಿಮೆಯನ್ನು ಸನಕಾದಿಗಳಿಗೆ ತಿಳಿಸಿದನು. ಇದು ಮೊದಲನೆಯ ಅವತಾರವು! ಎರಡನೇ ಅವತಾರದಲ್ಲಿ ಶ್ರೀಭೀಮಸೇನನಾಗಿ ಕುರುಸೇನೆಯನ್ನು ನಾಶಪಡಿಸಿ, ಶ್ರೀಕೃಷ್ಣನ ಪ್ರೀತಿಗೆ ಮುಖ್ಯಪಾತ್ರನಾದನು. ಮೂರನೇ ಅವತಾರದಲ್ಲಿ ಶ್ರೀಮಧ್ವನಾಗಿ ಶ್ರೀಕೇಶವನ ಪ್ರೀತಿಗಾಗಿ – ಮತ್ತೊಂದು ಪ್ರಯೋಜನವನ್ನು ಅಪೇಕ್ಷಿಸದೆ – ಈ ದಿವ್ಯಗ್ರಂಥಗಳನ್ನು ರಚಿಸಿ, ಸುಜನ ತತಿಯನ್ನು ರಕ್ಷಿಸಿದನು' ಎಂದು ಉಪದೇಶಿಸಿ ಸುಜನರಿಗೆ, ತಮ್ಮಲ್ಲಿ ಪ್ರಾಮಾಣ್ಯ ಬುದ್ಧಿಯನ್ನು ಹುಟ್ಟಿಸಿ, ಅವರನ್ನು ಉದ್ಧರಿಸಿರುವರು. ಶ್ರೀಮದ್ವೇಶಾಯ ನಮಃ

ಓಂ ಯಃ ಸರ್ವಗುಣ ಸಂಪೂರ್ಣಃ ಸರ್ವದೋಷವಿವರ್ಜಿತಃ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್॥

ಇಂತು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವರ್ಯರು ಶ್ರೀಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥರತ್ನವನ್ನು ಶ್ರೀಶನ ಅಡಿದಾವರೆಗಳಲ್ಲಿ ಅರ್ಪಿಸಿರುವರು.



# ಹಿನ್ನುಡಿ

ಶ್ರೀಲಕ್ಷ್ಮೀವೇಂಕಟೇಶನ ದಿವ್ಯಾನುಗ್ರಹದಿಂದಲು ಶ್ರೀಘೂರ್ಣೀ ಪ್ರಾಣೇಶಭಾರತೀರಮಣನ ದಿವ್ಯಕೃಪೆಯಿಂದಲು, ಶ್ರೀರಾಘವೇಂದ್ರತೀರ್ಥ ಗುರುರಾಜರ ಕುರುಣೆಯಿಂದಲು, ಶ್ರೀಸತ್ಯಧ್ಯಾನ ಗುರುವರರ ಆಶೀರ್ಬಲದಿಂದಲು, ಅಸ್ಮದಾಚಾರ್ಯ, ಪೂಜ್ಯಶ್ರೀ ಹುಲಿಗಿ ಹುಚ್ಚಾಚಾರ್ಯರವರ ಅವ್ಯಾಜ ಕೃಪೆಯಿಂದಲು, ಶ್ರೀಭಾರತಾಮೃತ ಗ್ರಂಥವು ಸಂಪೂರ್ಣವಾಯಿತು.

ಶ್ರೀವೈಶಂಪಾಯನ ಶ್ರೀಶುಕರಾದಿ ಮಹಾನುಭಾವರಿಂದ ಅನುವಾದಿಸಲ್ಪಟ್ಟ ಶ್ರೀಭಾರತವನ್ನು ನನ್ನಂತಹ ಪಾಮರನು, ನನ್ನಂತಹ ಮಂದಮತಿಯು ವಚನದಲ್ಲಿ ರಚಿಸುವುದೆಂದರೆ ಅತ್ಯಂತ ಸಾಹಸವೇ ಸರಿ ! ಆದರೂ ಕ್ರಿಮಿಯಿಂದ ರಾಜ್ಯವಾಳಿಸಿದ ಶ್ರೀವೇದವ್ಯಾಸದೇವನ ದಿವ್ಯಕರುಣಾಮೃತಶೀಕರವು ನನ್ನ ಮೇಲೆ ಹರಿದು ಶ್ರೀಭಾರತಾಮೃತವನ್ನು ಬರೆಯಿಸಿತು. ಲೇಖನಿಯು ಬರೆದಂತೆ, ನಾನೂ ಬರೆದಿರುವೆನು. ಅಮೃತವನ್ನು ಬಡಿಸುವ ಸೌಟಿಗೆ ಅಮೃತದ ಸವಿ ಗೊತ್ತೇ ? ಆದರೂ ಆ ಭಾಗ್ಯವನ್ನೆನಗಿತ್ತು, ಸುಜನತತಿಗೆ ಶ್ರೀಭಾರತಾಮೃತವನ್ನು ಉಣಿಸಿದ ಶ್ರೀಹರಿವಾಯು ಗುರುಗಳ ಅಪಾರ ಕರುಣೆಗೆ ಶಿರಬಾಗಿ, ಕೃತಜ್ಞನಾಗಿ ನಮಿಸಿ, ಶ್ರೀಭಾರತಾಮೃತವನ್ನು ನಮ್ಮ ಆಚಾರ್ಯವರರ ಕರಕಮಲಗಳಲ್ಲಿಟ್ಟು ಶ್ರೀಹರಿವಾಯು ಗುರುಗಳಿಗೆ ಸಮರ್ಪಿಸಿರುವೆನು.

ವಿದ್ವಜ್ಜರಿಗೆ ವಿಜ್ಞಾಪಿಸುವುದು, ಅವರ ಜನರಿಗೆ ಉಪದೇಶಿಸುವುದು. ಜ್ಞಾನ ದುರ್ಲಭವಾದ ಕಾಲದಲ್ಲಿ ಕಿಂಚಿತ್ ಆದರೂ ಚಿಂತೆಯಿಲ್ಲ ; ಶ್ರೀವೇದವ್ಯಾಸರ ಸೇವೆಮಾಡುವುದು – ಈ ಉದ್ದೇಶಗಳಿಂದ ರಚಿತವಾದ ಶ್ರೀಭಾರತಾಮೃತವು ಸಹೃದಯ ಸುಜನರ ಮನ್ನಣೆಗೆ– ಕೊನೆಗೆ ಒಪ್ಪಿಗೆಗೆ ಪಾತ್ರವಾದರೆ– ನಾನು ಚರಿತಾರ್ಥನಾದೆನೆಂದು ತಿಳಿಯುವೆನು.

ಬರೆಯಲು ಪ್ರಾರಂಭಿಸಿದುದು ಶ್ರೀ ಶ್ರೀನಿವಾಸನ ಅಡಿದಾವರೆಯ ನೆರಳಲ್ಲಿ ಮುಗಿಸಿದುದೂ ಬೆಟ್ಟದೊಡೆಯನ ದಿವ್ಯಶ್ರೀಚರಣಾರವಿಂದ ಸಾನ್ನಿಧ್ಯದಲ್ಲಿ! ಅರ್ಪಿಸಿದುದೂ ಶ್ರೀ ಶ್ರೀನಿವಾಸ ದಿವ್ಯಶ್ರೀಪಾದ ಪದ್ಮಗಳಲ್ಲಿ, ಬ್ರಹ್ಮೋತ್ಸವದ ಪುಣ್ಯಕಾಲದಲ್ಲಿ (೧೯೭೧). ಬರುವ ಪುಣ್ಯವಿದ್ದರೆ ಅದು ನಮ್ಮ ಪೂಜ್ಯಾ ಆಚಾರ್ಯರ ಹೃದಯಮೂರ್ತಿ, ಶ್ರೀ ಶ್ರೀಸತ್ಯಧ್ಯಾನ ತೀರ್ಥಮಹಾಪ್ರಭುಗಳದು. ಮತ್ತೆ ತಂದಂತರ್ಗತ ಶ್ರೀಮಂತ್ರಾಲಯ ಗುರು ಸಾರ್ವಭೌಮರಿಗೆ ಸೇರಿದ್ದು, ಶ್ರೀಹರಿಗುರುಗಳಲ್ಲಿ ತಲೆಬಾಗಿ ನಿಂತು ಕೈಜೋಡಿಸಿ, 'ಸ್ವಾಮಿನ್ ! ಶ್ರೀನಿವಾಸ ಪ್ರಾಣೇಶ! ಗುರುರಾಜ! ನಮೋ ನಮಃ! ನನ್ನನ್ನು ನಿಮ್ಮ ಅಡಿದಾವರೆಯ ಭಕ್ತರ ಭಕ್ತನನ್ನಾಗಿ ಸ್ವೀಕರಿಸಿ! ಕರುಣಿಸಿ ನನ್ನ ಸರ್ವಾಪರಾಧಗಳನ್ನು ಮನ್ನಿಸಿ! ಜ್ಞಾನ ಭಕ್ತಿ ವೈರಾಗ್ಯ ಭಾಗ್ಯವನ್ನಿತ್ತು ಉದ್ಧರಿಸಿ!' ಎಂದು ಬೇಡುವುದೊಂದೇ ನಮ್ಮದು. ನಮೋ ನಮಃ.

ಈ ಮಹತ್ಕಾರ್ಯವನ್ನು ಸಾಂಗವಾಗಿ ಶ್ರೀಹರಿ ಗುರುಚರಣ ಸರಸಿಜಾರ್ಪಿತವಾಗುವಂತೆ. ನಾಗಗೊಳಿಸಿದ, ಮತ್ತು ಆಶೀರ್ವದಿಸಿದ ಮಹಾನುಭಾವರಿಗೆ ನಾನು ಚಿರಋಣಿಯಾಗಿರುವೆನು.

ಶ್ರೀ ಶ್ರೀಮುಳಬಾಗಲು, ಸಾಗರಕಟ್ಟೆ, ಮಂತ್ರಾಲಯ, ಪೇಜಾವರ, ಫಲಿಮಾರು ಭಂಡಾರಕೇರಿ, ಉತ್ತರಾದಿ ಮಠಗಳ ಶ್ರೀಮಾನ್ ಶ್ರೀಪಾದಂಗಳವರಿಗೆ ಅವರ ಆಶೀರ್ವಾದಗಳಿಗಾಗಿ ಅಭಿನಮಿಸುತ್ತಿರುವೆನು. ಶ್ರೀಗುರುಭ್ಯೋ ನಮಃ.

ಶ್ರೀ M.R.B.ವಿಶ್ವಾಮಿತ್ರರು, ಬೆಂಗಳೂರಿನ ಗೌರವ ಪ್ರತಿನಿಧಿಯಾಗಿ ಸಲ್ಲಿಸಿದ ಸೇವಾಸಹಾಯಗಳು ಅಮೌಲ್ಯವಾಗಿವೆ. ಅಂತೆಯೇ ಮೈಸೂರಿನ ಶ್ರೀ R.ಜಗನ್ನಾಥರಾಯರು, ಅವರ ತಂದೆ ಶ್ರೀ ರಾಮಚಂದ್ರರಾಯರು, ಅಣ್ಣ ಶ್ರೀ ನಾಗರಾಜರಾಯರು, ಶ್ರೀರಂಗಪಟ್ಟಣದ ಶ್ರೀ P.ನಾಗೇಶರಾಯರು, ಮಂಡ್ಯದ ಶ್ರೀ H.R. ನರಸಿಂಹರಾಯರು ಸುಪುತ್ರ ಮಧ್ವೇಶರಾಯರು, K.G.F. ನ ಶ್ರೀಗೋಪಿನಾಥಾಚಾರ್ಯರು, ಶ್ರೀ A.ಕೃಷ್ಣಮೂರ್ತ್ಯಾಚಾರ್ಯರು, ಶಿವಮೊಗ್ಗೆಯ ಶ್ರೀ N.S.ರಾಜಾರಾಯರು, ಶ್ರೀ M.ವೆಂಕೋಬಾಚಾರ್ಯರು, ಭದ್ರಾವತಿಯ ಶ್ರೀ ಶೇಷಗಿರಿಚಾರ್ಯರು, ಶ್ರೀ ನಾರಾಯಣಾಚಾರ್ಯರು, ಸುತ್ತಿಯ ಮೋಹನರಾಯರು, ವಿಜಾಪುರದ ಶ್ರೀ V.B. ನಾಯಕರು, ಶ್ರೀ T.K.ನಾಯಕರು, ಶ್ರೀ S.R.ಕಟ್ಟಿಯವರು, ಹಾವೇರಿಯ ಶ್ರೀ S.G. ಮಧ್ವಾಚಾರ್ಯರು, ಚಿತ್ರದುರ್ಗದ ಶ್ರೀ ಶ್ರೀನಿವಾಸರಾಯರು, ತುಮಕೂರಿನ ಶ್ರೀ ರಾಮಮೂರ್ತ್ಯಾಚಾರ್ಯರು, ಕ್ಯಾತ್ಸಂದ್ರ ಕುಂಡಲಗಿರಿ ಶ್ರೀ ಶ್ರೀನಿವಾಸಾಚಾರ್ಯರು ಇವರೆಲ್ಲರೂ ನನ್ನ ಭಾರತ ಪ್ರಕಾಶನದಲ್ಲಿ ನೆರವಾಗಿ, ಅಮೂಲ್ಯ ಸಹಾಯಗೈದಿರುವರು. ಬಳ್ಳಾರಿಯಲ್ಲಿ ನನಗೆ ಭುಜದ್ವಯದಂತೆ ನಿಂತು ಸಹಕರಿಸಿದ ಶಿಷ್ಯವರರು ಶ್ರೀ ಶಿರೆಕೊಳಂ ಪ್ರಹ್ಲಾದಾಚಾರ್ಯರು, ಶ್ರೀ ಸೊಂಡೂರು ಶ್ರೀನಿವಾಸಚಾರ್ಯರು ಪ್ರಶಂಸನೀಯ ಸಹಾಯ ಗೈದಿರುವರು. ಇವರಿಗೆಲ್ಲರಿಗೂ ಕೃತಜ್ಞನಾಗಿ, ಶ್ರೀಹರಿವಾಯು ಗುರುಗಳಲ್ಲಿ ಅವರ ಸರ್ವತೋಮುಖ ಶ್ರೇಯಸ್ಸಿಗಾಗಿ ಪ್ರಾರ್ಥಿಸಲು ನಮ್ಮ ಆಚಾರ್ಯರನ್ನು ಪ್ರಾರ್ಥಿಸಿರುವೆನು.

ಚಂದಾದಾರರ ಉದಾರ ಸಹಾಯವಂತೂ ಅತ್ಯದ್ಭುತವು, ನಿರಂತರವು, ನಿರ್ಮಲ ಮನಸ್ಸವು ಆಗಿದೆ. ಇಲ್ಲದಿರೆ ಈ ಕಾರ್ಯವು ಜಯವಂತವಾಗುವುದು ದುಸ್ತರವಾಗುತ್ತಿತ್ತು. ಕೆಲವರು ಪೂರಾಚಂದ ಕೊಟ್ಟಿಲ್ಲ! ಆದರೂ ಎಲ್ಲ ಚಂದಾದಾರರಿಗೂ ಶ್ರೀಹರಿವಾಯು ಗುರುಗಳು ಕರುಣಿಸಿ ಸರ್ವಶುಭಗಳನ್ನೀಯಲೆಂದು ಬೇಡುತ್ತಿರುವೆನು.



ಸ್ಮರಂತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ।।
ಸಂತಃ ಪರಾರ್ಥಂ ಕುರ್ವಾಣಾ ನಾಪೇಕ್ಷಂತೇ ಪ್ರತಿಕ್ರಿಯಾಮ್।।
ಸಜ್ಜನರು ಒಳ್ಳೆಯದನ್ನು ಮಾತ್ರ ಸ್ಮರಿಸಿಕೊಳ್ಳುತ್ತಾ ಕೆಟ್ಟದ್ದನ್ನು ಮಾಡಿದ್ದರೂ
ನೆನಪಿಗೆ ತಂದುಕೊಳ್ಳುವುದಿಲ್ಲ. ಅವರು ಪರೋಪಕಾರಕ್ಕಾಗಿ ಕೆಲಸ
ಮಾಡುವರೇ ಹೊರತು ಪ್ರತ್ಯುಪಕಾರವನ್ನು ಬಯಸುವುದಿಲ್ಲ.

ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿನಃ।।
ಉಭಾವಪಿ ಶಠಾವೇತಿ ಕರ್ಮಬುದ್ಧಿ: ಪ್ರಶಸ್ಯತೇ।।
ಲೋಕದಲ್ಲಿ ಯಾವನು ದೈವವನ್ನೇ ನಂಬಿರುವನ್ನೋ, ಯಾವನು ಪೌರುಷವನ್ನೇ
ನಂಬಿ ಹಠವಾದಿಯಾಗಿರುವನೋ, ಅವರಿಬ್ಬರೂ ಮೂರ್ಖರೇ ಸರಿ.
ಇದು ಕರ್ತವ್ಯವೆಂದು ತಿಳಿದು ಕಾರ್ಯತತ್ಪರನಾದವನು ಪ್ರಶಂಸಾರ್ಹ.

ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ।।
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್।।
ಶೂರ, ವಿದ್ಯಾವಂತ ಮತ್ತು ಸೇವಾಕಾರ್ಯದಲ್ಲಿ ದಕ್ಷ ಈ ಮೂವರು
ಭೂಮಿಯೆಂಬ ಲತೆಯಿಂದ ಚಿನ್ನದ ಹೂಗಳನ್ನು ಬಿಡಿಸಿಕೊಳ್ಳುತ್ತಾರೆ.

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ।।
ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್।।
ನಿತ್ಯವೂ ಹಿರಿಯರಿಗೆ ಅಭಿವಾದನ ಮಾಡಿ ಅವರ ಸೇವೆಯನ್ನು ಮಾಡ
ತಕ್ಕವನಿಗೆ ಕೀರ್ತಿ, ಆಯುಸ್ಸು, ಒಳ್ಳೆಯ ಹೆಸರು ಮತ್ತು ಬಲ ಈ ನಾಲ್ಕು
ವರ್ಧಿಸುತ್ತವೆ.

ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಂ।।
ತಯೋರ್ವಿವಾಹಂ ಸಖ್ಯಂ ಚ ನ ತು ಪುಷ್ಟವಿಪುಷ್ಟಯೋಃ।।
ಯಾರಿಗೆ ಹಣ ಮತ್ತು ವಿದ್ಯೆ ಸಮಾನವಾಗಿದೆಯೋ ಅವರ ನಡುವೆ ಮಾತ್ರ
ಮದುವೆಯೂ ಸ್ನೇಹವೂ ಪ್ರಶಸ್ತಿ, ಹೆಚ್ಚು ಕಡಿಮೆ ಇರುವವರಲ್ಲಿ ಪ್ರಶಸ್ತವಲ್ಲ.

– ಮಹಾಭಾರತ




